# ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು

## ದ್ವಿತೀಯ ಸಂಪುಟ

(ಕರ್ನಾಟಕದ ಮಾಜಿ ಸಂಸ್ಥಾನೀ ಪ್ರದೇಶಗಳ ಸ್ಮೃತಿಗಳು)

ಸಂಪಾದಕ

**ಡಾ|| ಸೂರ್ಯನಾಥ ಕಾಮತ್**

ಇತಿಹಾಸ ಅಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ

**ಡಾ|| ರಂ. ರಾ. ದಿವಾಕರ**

ಇವರ ಮುನ್ನುಡಿ



**1977**

ಗೀತಾ ಬುಕ್ ಹೌಸ್

ನ್ಯೂ ಸ್ಟ್ಯಾಚ್ಯು ಸರ್ಕಲ್, ಮೈಸೂರು

*SWATANTRYA SANGRAMADA SMRITIGALU*, Vol. II: A Compilation of Memoirs of Freedom Fighters and Eye-witnesses to the Movement from the Former Princely Areas of Karnataka like Mysore, Hyderabad Karnataka and other Minor States. Editor: Dr. Suryanath U. Kamath, Department of History, Bangalore University, Bangalore. Published by Geetha Book House, New Statue Circle, Mysore 570 001, Pp. vi+964, 1977.







ಮೊದಲನೆಯ ಮುದ್ರಣ : 1977



ಮುದ್ರಕರು :
ಶ್ರೀ ಮೀರಾ ಪ್ರಿಂಟರ್ಸ್, ಮೈಸೂರು–570 001

# ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು

## ದ್ವಿತೀಯ ಸಂಪುಟ

ಸಂಪಾದಕ

**ಡಾ|| ಸೂರ್ಯನಾಥ ಕಾಮತ್**



**ಸಲಹಾ ಮಂಡಳಿ**

ಮೈಸೂರು ಸಂಸ್ಥಾನ :

1. ದಿ|| ಎಚ್. ಕೆ. ವೀರಣ್ಣಗೌಡ (ಮದ್ದೂರು)
2. ಶ್ರೀ ವಿ. ಎಸ್. ನಾರಾಯಣರಾವ್ (ಬೆಂಗಳೂರು)
3. ಶ್ರೀ ಎಚ್. ಎಸ್. ದೊರೆಸ್ವಾಮಿ (ಬೆಂಗಳೂರು)
4. ಶ್ರೀ ಎಂ. ಎನ್. ಜೋಯಿಸ್ (ಮೈಸೂರು)
5. ಶ್ರೀ ಆರ್. ಎಸ್. ಆರಾಧ್ಯ (ತುಮಕೂರು)
6. ಶ್ರೀ ಎಸ್. ವಾಸುದೇವರಾವ್ (ಮೆದೆಕೇರಿಪುರ)
7. ಶ್ರೀ ಬಿ. ಸಂಗಪ್ಪ ನಾಯ್ಕ (ಬೆನ್ನೂರು, ತಾ|| ಸೊರಬ)
8. ಶ್ರೀ ಎಸ್. ಅಣ್ಣಪ್ಪ ಶೆಟ್ಟಿ (ಚಿಕ್ಕಮಗಳೂರು)
9. ಶ್ರೀ ಜಿ. ಎಸ್. ಸಂಪತ್ತಯ್ಯಂಗಾರ್ (ಗೊರೂರು)

ಹೈದರಾಬಾದ್ ಕರ್ನಾಟಕ :

10. ದಿ|| ಜನಾರ್ದನರಾವ್ ದೇಸಾಯಿ (ಹೈದರಾಬಾದ್)
11. ದಿ|| ವೀರಭದ್ರಪ್ಪ ಶಿರೂರ (ಆಡೂರು, ತಾ|| ಯಲಬುರ್ಗಿ)
12. ಶ್ರೀ ರಾಮಚಂದ್ರ ವೀರಪ್ಪ (ಹುಮ್ನಾಬಾದ್)

ಕಿರುಸಂಸ್ಥಾನಗಳು :

13. ಡಾ|| ಜಯದೇವರಾವ್ ಕುಲಕರ್ಣಿ (ಬೆಳಗಾವಿ)



ಸ್ವಾಮಿ ರಮಾನಂದ ತೀರ್ಥ (1903–1972)

ಅ ರ್ಪ ಣೆ

ದಿ|| ಸ್ವಾಮಿ ರಮಾನಂದ ತೀರ್ಥ

ಇವರ ಸ್ಮರಣೆಗೆ

# ಮುನ್ನುಡಿ

ಮಾನವ ಜೀವನಕ್ಕೆ ಪ್ರಾಣವಾಯು ಅವಶ್ಯವಿದ್ದಷ್ಟೇ ಅವನ ಬಾಳಿಗೆ, ಬೆಳವಣಿಗೆಗೆ ಸ್ವಾತಂತ್ರ್ಯ ಅವಶ್ಯ. ಮಾನವಪ್ರಾಣಿಗೆ ಮಾತ್ರವಲ್ಲ ಪ್ರಾಣಿಕುಲಕ್ಕೆ ಇದು ಆವಶ್ಯಕ. ಅಭಿಜಾತ ನಾಗರಹಾವು, ಗಜರಾಜ, ಪಕ್ಷೀಂದ್ರ ಗರುಡಪಕ್ಷಿ ತಮ್ಮನ್ನು ಸೆರೆಹಿಡಿದಾಗ ಆ ಪಾರತಂತ್ರ್ಯವನ್ನು ಸಹಿಸದೆ ತಮ್ಮ ಸ್ವಾತಂತ್ರ್ಯಕ್ಕಾಗಿ ಅಸುನೀಗಿದ ಉದಾಹರಣೆಗಳುಂಟು.

ನೆಮ್ಮದಿಯಾಗಿದ್ದ ಮಾನವಶಿಶು ತನ್ನ ಬೆಳವಣಿಗೆಗೆ ಸ್ವಾತಂತ್ರ್ಯ ಬೇಕೆಂದೇ, ಗರ್ಭದಿಂದ ಹೊರಗೆ ಬರುವದು. ವಯಸ್ಸಿಗೆ ಬಂದ ಮಕ್ಕಳು ಮುಕ್ತಜೀವನಕ್ಕಾಗಿ ತಮ್ಮ ತಂದೆತಾಯಿಗಳನ್ನು ಆಗಲಿ ಸ್ವತಂತ್ರವಾಗಿರಲು ಹವಣಿಸುವವು.

ಇದೇ ಮಾತು ಎಚ್ಚತ್ತ ರಾಷ್ಟ್ರಗಳಿಗೆ, ತನ್ನ ರಾಷ್ಟ್ರೀಯತ್ವದ ಅರಿವು ಉಂಟಾದ ಜನಗಣಕ್ಕೆ ಅನ್ವಯಿಸುವದು. ಪ್ರತಿ ರಾಷ್ಟ್ರವು ಸ್ವತಂತ್ರವಿರಬೇಕೆಂದು ಇಚ್ಛಿಸುವದು ಪ್ರಕೃತಿಸಿದ್ಧವು. ಒಬ್ಬನು ಇನ್ನೊಬ್ಬನನ್ನು ಕೇವಲ ಪಾಶವೀಬಲದಿಂದ ದಾಸ್ಯದಲ್ಲಿಡುವದು ಎಷ್ಟು ಅನೀತಿಕರ ಹಾಗೂ ಅನ್ಯಾಯದ್ದೋ ಅಷ್ಟೇ ಒಂದು ರಾಷ್ಟ್ರವು ಇನ್ನೊಂದನ್ನಾಳುವದು ಅನ್ಯಾಯವಾದ್ದು ಹಾಗೂ ಅಸಹ್ಯವಾದುದು.

ಭಾರತದಲ್ಲಿ ಸ್ಥಾಪಿತವಾದ ಬ್ರಿಟಿಷರ ರಾಜ್ಯವು ಆ ತರಹದ್ದಿತ್ತು. ಸ್ವಾತಂತ್ರ್ಯದ ಬಗ್ಗೆ ಎಚ್ಚರ ಹುಟ್ಟಿದ, ಆ ಬಗ್ಗೆ ಆತುರರಾದ ಭಾರತೀಯರು ವೈಯಕ್ತಿಕವಾಗಿ ಇಲ್ಲವೆ ಸಣ್ಣದೊಡ್ಡ ಗುಂಪುಕಟ್ಟಿ ಬ್ರಿಟಿಷರ ಆಳಿಕೆಯನ್ನೆದುರಿಸುತ್ತಲೇ ಇದ್ದರು. 1857ರಲ್ಲಿ ಶಸ್ತ್ರಾಸ್ತ್ರಗಳಿಂದ ಭಾರತೀಯ ಸೈನಿಕರು, ಹಲಕೆಲವು ಅರಸರು ದೊಡ್ಡ ಬಂಡಾಯವನ್ನೇ ಹೂಡಿದರು. ಹಿಂದೀ ರಾಜಮಹಾರಾಜರು, ಹಿಂದೀ ಸೈನಿಕರನೇಕರು ಈ ಕಾಲಕ್ಕೆ ಬ್ರಿಟಿಷರ ಪರವಾಗಿಯೇ ಹೋರಾಡಿ ಬ್ರಿಟಿಷ್ ಸತ್ತೆಯನ್ನು ಇಲ್ಲಿ ಸ್ಥಿರಗೊಳಿಸಿದರು. ಮುಂದೆ ಸಶಸ್ತ್ರಹೋರಾಟ ಸಾಧ್ಯವಿಲ್ಲವೆಂದು ಮನಗಂಡ ಭಾರತೀಯ ಮುಖಂಡರು ನಿಃಶಸ್ತ್ರಪ್ರತೀಕಾರದ ಮಾರ್ಗವನ್ನು, ಸಾರ್ವಜನಿಕ ಆಂದೋಲನದ ಮಾರ್ಗವನ್ನು ಸ್ವೀಕರಿಸಿದರು. 1919ರಲ್ಲಿ ಮತ್ತು ಮುಂದೆ ಅದಕ್ಕೆ ಅಹಿಂಸಾಮಯ ಅಸಹಕಾರದ, ದುಷ್ಟ ಕಾನೂನುಗಳ ಭಂಗದ, ಕರನಿರಾಕರಣೆಯಂಥ ಉಗ್ರಚಳವಳಿಯ ಹಾಗೂ ವಿವಿಧ ಸತ್ಯಾಗ್ರಹಗಳ ರೂಪವನ್ನು ಕೊಟ್ಟರು.

ಎಂದಿನಂತೆ ಕರ್ನಾಟಕವು ತನ್ನ ವೀರಪರಂಪರೆಗೆ ಸಲ್ಲುವಂತೆ ಆ ಎಲ್ಲ ಗಾಂಧೀ ಪ್ರಣೀತ ಚಳವಳಿಗಳಲ್ಲಿ ಭಾಗವಹಿಸುತ್ತ ಬಂದಿತು. ಆ ಹೋರಾಟದ ಸುಸಂಗತ ಇತಿಹಾಸವನ್ನು ಇನ್ನೂ ಬರೆಯಲಾಗಿಲ್ಲ. ಆಯಾ ಪ್ರಾಂತೀಯ ಜನತೆ ಅದರಲ್ಲಿ

ಭಾಗವಹಿಸಿದ ಕಥೆಯೂ ಉಪಲಬ್ಧವಿಲ್ಲ. ಹೀಗಿದ್ದರೂ ಆಯಾ ಇತಿಹಾಸಕ್ಕೆ ಬೇಕಾದ ಆಧಾರಗಳು, ಸಾಮುಗ್ರಿಸಾಧನಗಳನ್ನು ಕೂಡಿಹಾಕಿ ಅವುಗಳನ್ನೆಲ್ಲ ವ್ಯವಸ್ಥಿತವಾಗಿ ಪ್ರಕಟಿಸುವದು ಒಂದು ದೊಡ್ಡ ಕೆಲಸ. ಈಗಾಗಲೇ ಬರೆಯಲಾದ ಸಣ್ಣಪುಟ್ಟ ಪುಸ್ತಕಗಳು, ಸರಕಾರೀ ರಿಪೋರ್ಟುಗಳು, ಸರಕಾರೀ ಗುಪ್ತಕಾಗದಪತ್ರಗಳು ಇವೆಲ್ಲ ಇತಿಹಾಸ ಸಾಮುಗ್ರಿಗಳೇ ಸೈ. ಆದರೆ ಅವುಗಳಲ್ಲಿ ನಡೆದ ಘಟನೆಗಳ ಬಗ್ಗೆ, ಆಗಿಹೋದ ಸಂಗತಿಗಳ ಬಗ್ಗೆ ಉಲ್ಲೇಖ ಮುಂತಾದವುಗಳು ಮಾತ್ರ ಸಿಗಬಹುದು. 1919–1947ರ ವರೆಗಿನ ವಾತಾವರಣ, ಅದರಲ್ಲಿ ಆದ ಏರಿಳಿತಗಳು, ಹಸಿಬಿಸಿಗಳು, ಜನರ ಮಾನಸದ ಚಿತ್ರ, ವೈಯಕ್ತಿಕ ಹಾಗೂ ಸಾಂಘಿಕ ಪ್ರತ್ಯಕ್ಷ ಅನುಭವ ಮುಂತಾದ ರಸರುಚಿಯುಳ್ಳ ವಿಷಯುಗಳು ಆಯಾ ಶುಷ್ಕವಾದ ಕಾಗದಪತ್ರಗಳಲ್ಲಿ ದೊರೆಯಲಾರವು. ಅದೆಲ್ಲ ನಮಗೆ ತಿಳಿಯಬೇಕಾದರೆ ಆಗಿನ ಕಾರ್ಯಕರ್ತರಲ್ಲಿ ನಡೆದ ಪತ್ರವ್ಯವಹಾರ, ಭೂಗತರಾಗಿ ನಡೆಸಿದ ಪತ್ರಪತ್ರಿಕೆಗಳು, ಕೋರ್ಟುಕಚೇರಿಗಳಲ್ಲಿ ಅವರು ಕೊಟ್ಟ ಹೇಳಿಕೆಗಳು, ಮುಂತಾದವುಗಳ ಸಂಶೋಧನೆ–ಸಮಾಲೋಚನೆ ಅವಶ್ಯ.

ಇವೆಲ್ಲವುಗಳಲ್ಲದೆ ಇನ್ನೂ ಒಂದು ಮಹತ್ವದ ಮೂಲವೆಂದರೆ ಆಯಾ ಕಾಲದಲ್ಲಿ ನಡೆದ ಚಳವಳಿಗಳಲ್ಲಿ, ಘಟನೆಗಳಲ್ಲಿ ಪ್ರತ್ಯಕ್ಷ ಭಾಗವಹಿಸಿ ಅವುಗಳ ಆಗುಹೋಗುಗಳಲ್ಲಿ ಸುಖದುಃಖಗಳಲ್ಲಿ ಪಾಲುಗಾರರಾದವರ ದಿನಚರಿಗಳು, ಸಂದರ್ಶನಗಳು, ಸಂಭಾಷಣಗಳು. ಸ್ವಾತಂತ್ರ್ಯ ಹೋರಾಟ ಮುಗಿದೊಡನೆ ಈ ಬಗೆಯ ಸಾಮುಗ್ರಿಯ ಸಂಗ್ರಹಕಾರ್ಯ ನಡೆಯಬೇಕಾಗಿತ್ತು. ಈಗ ಆ ಮಾತಿಗೆ 28 ವರುಷಗಳಾಗಿಹೋದವು. ತಡವಾದರೂ ಚಿಂತೆಯಿಲ್ಲ. ಆಗತಕ್ಕ ಮತ್ತು ಮಾಡತಕ್ಕ ಕೆಲಸವನ್ನು ಮಾಡಿಯೇ ತೀರಬೇಕು. ಈ ಕಾರ್ಯವನ್ನು ಶ್ರೀ ಸೂರ್ಯನಾಥ ಕಾಮತರಂಥ ಇತಿಹಾಸದೃಷ್ಟಿ ಇದ್ದವರು, ಇತಿಹಾಸ ಸಂಶೋಧನೆ ಅಂದರೆ ಏನು ಹಾಗೂ ಅದನ್ನು ಹೇಗೆ ನಡೆಸಬೇಕು, ಎಂಬುದನ್ನು ತಿಳಿದವರು ಕೈಕೊಂಡದ್ದು ಬಹಳ ಶ್ಲಾಘನೀಯ ಹಾಗೂ ಅನುಕರಣೀಯ. ಆಯಾ ಕಾಲಕ್ಕೆ ನಡೆದ ಚಳವಳಿಗಳಲ್ಲಿ, ಮುಖ್ಯತಃ 1919ರ ನಂತರ ನಡೆದ ಗಾಂಧೀಪ್ರಣೀತ ಚಳವಳಿಗಳಲ್ಲಿ, ಬೇರೆ ಬೇರೆ ರೀತಿಯಿಂದ ಭಾಗವಹಿಸಿದವರನ್ನು ಕಂಡು ಮತ್ತು ಅವರ ಬಾಯಿಂದಲೇ ಬಂದ ಅನುಭವಗಳ ಹೊತ್ತಗೆಗಳನ್ನು ಕರ್ನಾಟಕದ ಜನರಿಗೆ ಒದಗಿಸುವ ಸಾಹಸವನ್ನು ಕೈಕೊಂಡು ಶ್ರೀ ಕಾಮತರು ಈಗಾಗಲೇ ಒಂದು ದೊಡ್ಡ ಪುಸ್ತಕವನ್ನು ಪ್ರಕಟಿಸಿದ್ದಾರೆ. ಆ ಶ್ರೇಣಿಯಲ್ಲಿ ಇದು ಎರಡನೆಯ ಸಂಪುಟ. ಇದರಲ್ಲಿ ಮುಖ್ಯವಾಗಿ ಮೈಸೂರು ಸಂಸ್ಥಾನ ಎಂದು ಕರೆಯಲ್ಪಟ್ಟ ಹಾಗೂ ಕರ್ನಾಟಕದ ಇತರ ಸಂಸ್ಥಾನೀ ಪ್ರದೇಶಗಳ ಮುಖಂಡರು ತಮ್ಮ ಸಂಸ್ಥಾನಗಳಲ್ಲಿ ಹಾಗೂ ಕರ್ನಾಟಕದ ಇತರ ಭಾಗಗಳಲ್ಲಿ ನಡೆಸಿದ ದೇಶಸೇವಾಕಾರ್ಯದ ಸುಂದರವಾದ, ಸ್ಪಷ್ಟವಾದ, ರೋಮಾಂಚಕಾರಿಯಾದ, ದೇಶಭಕ್ತಿ-ಗಾಂಧೀನಿಷ್ಠೆ ಇವುಗಳಿಂದ ಪ್ರೇರಿತವಾದ, ವೀರರಸದಿಂದ ತುಂಬಿದ, ತ್ಯಾಗ-ನಿಶ್ಚಯತೆ ಇವುಗಳಿಂದ ಕೂಡಿದ, ಹೃದಯಂಗಮವಾದ ಚಿತ್ರಣವಿದೆ.

ಇನ್ನು ಇಂಥ ಸಂದರ್ಶನಾದಿಗಳಲ್ಲಿ ಹಲವು ದೋಷಗಳು ಇರಬಲ್ಲವು. ಯಾಕೆಂದರೆ ಅವು ಆಯಾ ವ್ಯಕ್ತಿಯ ಅನುಭವಗಳನ್ನೇ ವ್ಯಕ್ತಗೊಳಿಸುವವು. ಭಾಗವಹಿಸಿದ ವ್ಯಕ್ತಿಗಳಲ್ಲಿ ಶ್ರೇಷ್ಠ, ಸುಬುದ್ಧ, ಅನುಭವಿಕ, ಸಾರ್ವಜನಿಕ ಜೀವನವನ್ನರಿತ ಮುಖಂಡರಿದ್ದಾರೆ. ಭಾವನಾವಶತೆಯಿಂದ ಭಾಗವಹಿಸಿದ ಅನನುಭವಿಕ ತರುಣರೂ ಇರುವರು. ಅದೇ ರೀತಿ ತಮ್ಮ ಅನುಭವಗಳನ್ನು ಹೇಳುವಾಗ ವೈಯಕ್ತಿಕ ಧ್ಯೇಯಗಳು, ವಿಚಾರಗಳು, ಭಾವನೆಗಳು ಪ್ರಧಾನವಾಗಿ ಬರುವದು ಸ್ವಾಭಾವಿಕ. ಆ ಮಟ್ಟಿಗೆ ಅದು ವ್ಯಕ್ತಿಕೇಂದ್ರಿತ ವರ್ಣನೆ ಎನಿಸುವದು. ಇನ್ನೊಂದು ಲಕ್ಷದಲ್ಲಿಡತಕ್ಕ ಮಾತೆಂದರೆ, ಸುಮಾರು 25 ವರುಷಗಳು ಕಳೆದನಂತರ ಆಯಾ ಮನುಷ್ಯನು ತನ್ನ ಸ್ಮರಣಶಕ್ತಿಯ ಮೇಲೆಯೇ ಅವಲಂಬಿಸಿ ತನ್ನ ಅನುಭವವನ್ನು ಮೆಲುಕುಹಾಕುವಾಗ ಅದರಲ್ಲಿ ದೇಶಕಾಲಸಂಖ್ಯೆ ಇತ್ಯಾದಿಗಳ ಬಗ್ಗೆ ದೋಷಗಳು ತಲೆದೋರುವುದು ಸ್ವಾಭಾವಿಕ. ಆದರೆ ತನಗೆ ಆದ ಸ್ಫೂರ್ತಿ, ತಾನು ಅನುಭವಿಸಿದ ಕಷ್ಟನಷ್ಟ, ಆ ಕಾಲದ ವಾತಾವರಣ, ಆಗಿನ ಜನರ ಭಾವನೆಗಳು, ಅವರ ಸಹಾಯಸಹಕಾರ ಇತ್ಯಾದಿಗಳ ಬಗ್ಗೆ ಆಯಾ ವ್ಯಕ್ತಿಯು ಹೇಳುವುದು ನಂಬಲರ್ಹವಾದುದು.

ಏನೇ ಇರಲಿ. ಆಯಾ ಕಾಲದ ವಾತಾವರಣ, ಜನಮಾನಸ, ಸಂಪ್ರೇರಿತ ಭಾವಭಾವನೆಗಳು, ಜನರಿಗೆ ಸರ್ವಸ್ವವನ್ನು ತ್ಯಾಗಮಾಡಲಿಕ್ಕೆ ಪ್ರೇರೇಪಿಸಿದ ಮೂಲಗಳು, ತ್ಯಾಗದ ಪರಮಾವಧಿಯ ಉದಾಹರಣೆಗಳು, ಜನಸಾಮಾನ್ಯರಲ್ಲಿಯ ಉದ್ರೇಕ-ಉತ್ಸಾಹಗಳು, ಅವರ ಸಹಾಯಸಹಕಾರಗಳ ರೀತಿನೀತಿಗಳು, ಹಲವರ ಅನುಪಮ ಸಾಹಸಗಳು, ಇವುಗಳನ್ನು ಅರಿತುಕೊಳ್ಳಲಿಕ್ಕೆ ಈ ಸಂಗ್ರಹವು ಬಹಳೇ ಉಪಯುಕ್ತವು. ಬರೇ ಘಟನಾತ್ಮಕ ಇತಿಹಾಸ ಬರೆಯುವವರಿಗೆ ಸಹ ಅದರ ಹಿನ್ನೆಲೆ ತಿಳಿಯಬೇಕಾದರೆ, ಈ ಬಗೆಯ ಸಂಗ್ರಹವು ಉಪಯುಕ್ತವಾಗುವದೆಂಬಲ್ಲಿ ಸಂಶಯವಿಲ್ಲ.

ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಸತ್ಯಾಗ್ರಹಶಸ್ತ್ರವೆಂಬ ಸಾತ್ವಿಕ ಸಾಧನವನ್ನು ಉಪಯೋಗಿಸುವದು ನಿರ್ಣೀತವಾದ ಬಳಿಕ ಸತ್ಯಾಗ್ರಹಶಾಸ್ತ್ರದ ಜನಕರಾದ ಗಾಂಧೀಜಿ ಅವರನ್ನು ಮುಖಂಡರೆಂದು ಮನ್ನಿಸುವದು ಕ್ರಮಪ್ರಾಪ್ತವಲ್ಲವೆ? ಜಗತ್ತಿನಲ್ಲಿಯೇ ಪ್ರಥಮ ಹಾಗೂ ಅದ್ವಿತೀಯ ಅಹಿಂಸಕ ರಕ್ತರಹಿತ ಸ್ವಾತಂತ್ರ್ಯದ ಹೋರಾಟದಲ್ಲಿ ತ್ಯಾಗಪೂರ್ವಕವಾಗಿ ಭಾಗವಹಿಸಿ ಅದನ್ನು ಯಶಸ್ವಿಯನ್ನಾಗಿ ಮಾಡಿದ ಶಾಂತಿಸೇನಾ ನಾಯಕರು ಹಾಗೂ ಸೈನಿಕರು ಧನ್ಯರಲ್ಲವೆ? ಪ್ರಾತಃಸ್ಮರಣೀಯರಲ್ಲವೆ? ನಮ್ಮ ಕರ್ನಾಟಕದ ವೀರರು ವೀರೆಯರು ತೋರಿದ ನಿಷ್ಠೆ, ಧೈರ್ಯ, ಸಾಹಸ, ದಕ್ಷತೆ, ನಿರ್ಭಯತೆ, ಕರ್ತವ್ಯಪರತೆ, ಇವು ನಮಗೆ ಅಭಿಮಾನಾಸ್ಪದವಲ್ಲವೆ? ಅವರ ವೈಯಕ್ತಿಕ ಅನುಭವಗಳ ಈ ವೀರಚರಿತ್ರೆ ಆಬಾಲವೃದ್ಧರಿಗೂ ಸ್ಫೂರ್ತಿದಾಯಕವಾಗುವದೆಂಬಲ್ಲಿ ಸಂಶಯವಿಲ್ಲ. ವಿಶೇಷತಃ ಕಥೆ ಕಾದಂಬರಿ ಕಾವ್ಯಗಳನ್ನು ಬರೆಯುವವರಿಗೆ ಇದೊಂದು ಕಥಾವಸ್ತುಗಳ ಕಣಿ ಎಂದರೆ ಅತಿಶಯೋಕ್ತಿ ಆಗದು.

ಮೊದಮೊದಲು ಅಹಿಂಸಾತ್ಮಕ ಸಾತ್ವಿಕ ಚಳವಳಿಯಿಂದ ಯಾವ ಪರಿಣಾಮವೂ ಆಗಲಾರದೆಂದು ಅನೇಕರು ಊಹಿಸಿದ್ದರು. ಆದರೆ 1942-43ರಲ್ಲಿ ಭಾರತದಲ್ಲಿಯ ಬ್ರಿಟಿಷ್ ಅಧಿಕಾರಿಗಳು ಇಂಗ್ಲಂಡದ ಮುಖ್ಯ ಪ್ರಧಾನಿಗೆ ಬರೆದ ಪತ್ರವೊಂದರಲ್ಲಿ '1857ರಲ್ಲಿ ನಡೆದ ಬಂಡಾಯಕ್ಕೆ ಸರಿಮಿಗಿಲಾದ (ಆದರೆ ರಕ್ತರಹಿತ) ಉದ್ರೇಕವನ್ನು ನಾವು ಎದುರಿಸುತ್ತಿರುವೆವು !' ಎಂಬ ಉದ್ಗಾರಗಳಿವೆ. ಅದರಮೇಲಿಂದ ಚಳವಳಿಯ ಪರಿಣಾಮಕಾರಿತ್ವವನ್ನು ಊಹಿಸಬಹುದು.

ಈ ಸ್ವಾತಂತ್ರ್ಯದ ಅವರ್ಣನೀಯ ಆಂದೋಲನದಲ್ಲಿ ಭಾಗವಹಿಸುವ ಪ್ರೇರಣೆ ಬೇರೆ ಬೇರೆ ಕಾರ್ಯಕರ್ತರಿಗೆ ಬೇರೆಬೇರೆ ರೀತಿಯಿಂದ ಆಯಿತೆಂಬುದು ನಿಜವಿದ್ದರೂ ಎಲ್ಲರೂ ಟಿಳಕ ಮುಂತಾದ ಮಹನೀಯರ ಚರಿತ್ರೆಯಿಂದ ಹಾಗೂ ಗಾಂಧೀಜಿ ಅವರ ಅಸಂದಿಗ್ಧ ತೇಜಸ್ವೀ ಕರೆಯಿಂದ ಪ್ರಭಾವಿತರಾದರು ಎನ್ನಲು ಅಡ್ಡಿಯಿಲ್ಲ. ಇನ್ನೊಂದು ಬಗೆಯಿಂದ ಪ್ರೇರಿತರಾದವರೂ ಉಂಟು. ಪುರಾವಸ್ತು, ಕಾಗದಪತ್ರ ಮುಂತಾದವುಗಳನ್ನು ಶೋಧಿಸುವ ಕಾರ್ಯದಲ್ಲಿ ತೊಡಗಿದ ಶ್ರೀ ತಿರುಮಲೆ ತಾತಾಚಾರ್ಯರಿಗೆ, 'ಹೊಸ ಇತಿಹಾಸ ಸೃಷ್ಟಿಯಾಗುತ್ತಿದೆ. ಈಗ ನೀನು ಇಲ್ಲಿ ಹಳೆಯ ಇತಿಹಾಸದ ಸಂಗತಿಗಳನ್ನು ಕೆದಕುತ್ತ ಕುಳಿತಿದ್ದೀಯಲ್ಲ', ಎಂಬ ಶ್ರೀ ಟಿ. ಪ್ರಕಾಶಂ ಅವರ ಮಾತೇ ಸಾಕಾಯಿತು. ಸ್ವಲ್ಪೇ ದಿನಗಳಲ್ಲಿ ಆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಶ್ರೀ ಶರ್ಮರು ಪತ್ರಿಕೋದ್ಯಮದ ಮೂಲಕ ಚಳವಳಿಯಲ್ಲಿ ನುಗ್ಗಿದರು.

ಮುಖ್ಯವಾಗಿ ನಿರ್ಭಯತೆ ಎಂಬುದೇ ಚಳವಳಿಗಾರರ ಬಿರುದಾಗಿಬಿಟ್ಟಿತ್ತು. ಬಂದ ಕಷ್ಟನಷ್ಟಗಳನ್ನೆಲ್ಲ ನಿರ್ಭಯತೆಯಿಂದ ಎದುರಿಸಿ ಅದರಲ್ಲಿಯೇ ಧನ್ಯತೆಯ ಅನುಭವ ಮಾಡುವ ಆಧ್ಯಾತ್ಮಿಕ ವೃತ್ತಿಯನ್ನು ಭಾರತೀಯರಿಗೆ ಕಲಿಸಿದವರು ಮಹಾತ್ಮಾ ಗಾಂಧಿಯವರೇ. ಪ್ರಭಾತಫೇರಿಯಲ್ಲಿ ಭಾಗವಹಿಸುವ ಮಕ್ಕಳನ್ನೂ ಮಹಿಳೆಯರನ್ನೂ ಮೊದಲ್ಗೊಂಡು ಎದೆತಟ್ಟಿ ಗುಂಡಿನೆದುರಿಗೆ ನಿಲ್ಲಬಲ್ಲ ಸ್ವಯಂಸೇವಕರವರೆಗೆ ಯಾರಿಗೂ ಲಾಠೀ, ಜೇಲು, ಫಟಕೀ ಶಿಕ್ಷೆ, ಮರಣದಂಡ ಇವುಗಳ ಭಯವೂ ಇರಲಿಲ್ಲ. ಪೋಲೀಸರು ಅನ್ಯಾಯದಿಂದ ಹಾಕಿದ ಕೀಲಿಯನ್ನು ಅವರೆದುರೇ ಮುರಿಯಲು ಸಾಹಸಮಾಡಿದ ಮಾಣುದೇವಿ ಎಂಬ ಹೆಣ್ಣುಮಗಳ ಧೈರ್ಯಕ್ಕೆ ಯಾರು ಸಾಟಿ ?

ಹೋರಾಟಗಾರರಲ್ಲಿ ಅನೇಕರು ಮಾಡಿದ ತ್ಯಾಗಕ್ಕೆ ಮಿತಿ ಇರಲಿಲ್ಲ. ಜೇಲಿಗೆ ಹೋಗುವದು ಸುಲಭ, ಕ್ಷಣಹೊತ್ತು ಲಾಠಿಪೆಟ್ಟು ತಿಂದರೂ ತಿನ್ನಬಹುದು. ಆದರೆ ಕಾಣುತ್ತ ಕಾಣುತ್ತ ತಮ್ಮ ಆಸ್ತಿಪಾಸ್ತಿಗಳನ್ನು ಕಳೆದುಕೊಂಡು ಮಕ್ಕಳುಮರಿಗಳ ಸಹಿತ ಅನ್ನಾನ್ನಗತಿಗೆ ಈಡಾಗುವದು ತ್ಯಾಗದ ಪರಿಸೀಮೆ ಎನ್ನಬಹುದು. ಕರನಿರಾಕರಣೆಮಾಡಿದ ಅಂಕೋಲೆ, ಶಿರಸಿ, ಸಿದ್ದಾಪುರಗಳ ನೂರಾರು ರೈತರು ಈ ಅಗ್ನಿದಿವ್ಯವನ್ನು ಎದುರಿಸಿದರು. ಆಸ್ತಿಯನ್ನು ಕಳಕೊಂಡಿದ್ದಲ್ಲದೆ, ಕಿರಿಮಕ್ಕಳನ್ನುಳಿದು ಮನೆಯವರೆಲ್ಲರೂ ಜೇಲಿಗೆ ಹೋದ ಉದಾಹರಣೆಗಳು ಹಲವಾರು ಇರುವವು.

ಚಳವಳಿಯು ತನ್ನ ಆತ್ಯಂತಿಕ ರೂಪವನ್ನು ಧರಿಸಿದುದು ಕರನಿರಾಕರಣೆಯ ಕ್ಷೇತ್ರದಲ್ಲಿಯೇ. ಆದರೆ ಆ ಕ್ಷೇತ್ರದಲ್ಲಿ ಆಬಾಲವೃದ್ಧರು, ದನಕಾಯುವ ಹುಡುಗರು, ಅಡವಿಯಿಂದ ಉರುವಲು ತಂದು ಮಾರುವವರು, ಅಂಬಿಗರ ಹೆಣ್ಣುಮಕ್ಕಳು ಸಹ ಏಕೋಭಾವ-ಏಕೋಜೀವ-ಏಕೈಕಹಸ್ತವೆಂಬಂತೆ ಗಾಂಧೀ ಚಳವಳಿಯಲ್ಲಿ ಕೆಲಸಮಾಡಿದರು. ಆ ಅಡಿವೆಗಳಲ್ಲಿ ಸುತ್ತಾಡಬೇಕಾದರೆ ಪೋಲೀಸರು ತಮಗೆ ಬೇಕಾದ ಅನ್ನನೀರುಗಳನ್ನು ಸಹ ತಾವೇ ಹೊತ್ತುಕೊಂಡು ಹೋಗಬೇಕಾಗುತ್ತಿತ್ತು.

ಈ ಚಳವಳಿಯಲ್ಲಿ ಮಹಿಳೆಯರು ವಹಿಸಿದ ಭಾಗ ಅದ್ವಿತೀಯವಾಗಿತ್ತು. ಇದಕ್ಕೆ ಇಲ್ಲಿನ ಭಾಗೀರಥೀ ಚಂಗಲಾರಾಧ್ಯ, ಸುಬ್ಬಮ್ಮ ಜೋಯಿಸ್, ಕುಂತಳಾ ಸೇತುರಾವ್, ಬಿ. ಕಾಮಾಕ್ಷಮ್ಮ ಇವರ ಬರಹಗಳೇ ಸಾಕ್ಷಿ. ಕರನಿರಾಕರಣೆ ಕ್ಷೇತ್ರದಲ್ಲಿ ಕಾನಕಾನಹಳ್ಳಿ ಗೌರಮ್ಮ, ಕಮಲಮ್ಮ ಚಂದೂರ್, ಸುಬ್ಬಮ್ಮ, ಬೊಮ್ಮ, ಕಾವೇರಮ್ಮ, ದೇವಿ ಇವರು ಮಾಡಿದ ಸಾಹಸಗಳೂ ಉಲ್ಲೇಖನೀಯ. ಆ ಕಾಲದಲ್ಲಿ ಮಹಿಳೆಯರು ಆಸ್ತಿಪಾಸ್ತಿಗಳ ಲಿಲಾವಿನ ವಿರುದ್ಧ ಹೂಡಿದ ಉಪವಾಸ ಸತ್ಯಾಗ್ರಹ ಚಿರಸ್ಮರಣೀಯವಿರುವದು.

ನಮ್ಮ ಕರ್ನಾಟಕದಲ್ಲಿ ನಡೆದ ಕರನಿರಾಕರಣೆ ಧನಬಲಕ್ಕಿಂತ ಜನಬಲವೇ ಮುಖ್ಯವಾಗಿತ್ತು, ಉಪಕರಣಗಳೂ ಸಾಯಕ್ಲೋಸ್ಟಾಯಿಲ್ ಮುಂತಾದವು ಕೂಡ ಅಷ್ಟಕ್ಕಷ್ಟೇ. ಆದರೆ ಸತ್ಯಾಗ್ರಹ ಕೇಂದ್ರಗಳಿಂದ ಊರೂರಿಗೆ, ಕಾರ್ಯಕರ್ತರಿಗೆ, ರೈತರಿಗೆ, ಜನಸಾಮಾನ್ಯರಿಗೆ ಸುದ್ದಿ ಮುಟ್ಟಿಸುವ ಕೆಲಸ ಹಾಗೂ ಆಯಾ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂಬ ಬಗ್ಗೆ ನಿರ್ದೇಶ ಕಳಿಸುವ ಮಹತ್ವದ ಮಣಿಹ ತಪ್ಪದೇ ನಡೆಯುತ್ತಿತ್ತು. ಆ ಕ್ಷೇತ್ರದಲ್ಲಿ ಕೆಲಸಮಾಡುವವರನೇಕರು ತಲೆಮರೆಸಿ ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡು, ವೇಷಧಾರಿಗಳಾಗಿ ತಿರುಗಾಡಬೇಕಾಗುತ್ತಿತ್ತು. ಜಗತ್ ಪ್ರಸಿದ್ಧವಾದ ಬಾರಡೋಲಿಯಲ್ಲಿ ಸರದಾರ ಪಟೇಲರ ನೇತೃತ್ವದಲ್ಲಿ ನಡೆದ ಕರನಿರಾಕರಣೆಯ (1928) ಆಂದೋಲನದಲ್ಲಿಯೂ ಹಲವು ಕಾರ್ಯಕರ್ತರು ಈ ರೀತಿ ವರ್ತಿಸಬೇಕಾಗುತ್ತಿತ್ತು. ಅದು ಸತ್ಯಾಗ್ರಹದ ಶುದ್ಧರೂಪವಲ್ಲ, ಎಂಬುದು ನಿಜ. ಆ ಬಗ್ಗೆ ಆಗ ಕಾರ್ಯಕರ್ತರಲ್ಲಿ ಹಲವರು ಗಾಂಧೀಜಿ ಕಡೆಗೆ ದೂರು ಒಯ್ದರು. ಭೂಗತ ಕಾರ್ಯಕರ್ತರು ಖಾದೀ ಧರಿಸುವದಿಲ್ಲ, ವೇಷ ಹೆಸರು ಬದಲಾಯಿಸಿ ತಿರುಗಾಡುತ್ತಾರೆ, ಎಂಬುದೇ ಆ ದೂರುಗಳ ಸ್ವರೂಪ. ಆಗ ಗಾಂಧೀಜಿ ಅವರಿಗೆ ಚೇಷ್ಟೆಯಿಂದ ಉತ್ತರ ಕೊಟ್ಟರೆಂದು ಹೇಳಲಾಗಿದೆ. ಅದೇನೆಂದರೆ, ಅದು ಸರದಾರರ ಸತ್ಯಾಗ್ರಹ ! ಕರನಿರಾಕರಣೆಯ ಕ್ಷೇತ್ರಗಳಲ್ಲಿ ಕೆಲಸಕ್ಕೆ ಹೋದವರಲ್ಲಿ ಮೈಸೂರು ಸಂಸ್ಥಾನದವರು ಅನೇಕರು. ಅವರು ಒಳ್ಳೆಯ ಸಾಹಸ ಹಾಗೂ ಬುದ್ಧಿವಂತಿಕೆಯ ಕೆಲಸಗಳನ್ನು ಮಾಡಿದ್ದುಂಟು. ಶ್ರೀ ಎಮ್. ಎಸ್. ಜೋಯಿಸ್, ಶ್ರೀ ವ್ಹಿ. ಎಸ್. ನಾರಾಯಣರಾವ್, ಶ್ರೀ ಕಾನಕಾನಹಳ್ಳಿ ವೆಂಕಟರಾಮಯ್ಯ ಇವರ ಪರಾಕ್ರಮವನ್ನು ನೋಡಿದರೆ ಈ ಮಾತಿನ ಪ್ರತೀತಿ ಆಗುವದು.

ಕಾಲಾಂತರದಿಂದ ಕಾರಣಾಂತರಗಳಿಂದ ಹಾಗೂ ರಾಜಕೀಯ ಅಧಿಕಾರವಶಾತ್ ಕರ್ನಾಟಕವು ಛಿನ್ನವಿಚ್ಛಿನವಾಗಿ ಹತ್ತೊಂಬತ್ತು ಆಡಳಿತಗಳಲ್ಲಿ ಹಂಚಿಹೋಗಿತ್ತೆಂಬುದು ಎಲ್ಲರಿಗೂ ಗೊತ್ತು. ಆದುದರಿಂದ ಕನ್ನಡಿಗರಲ್ಲಿ ತಮ್ಮ ಭಾಷೆಸಂಸ್ಕೃತಿಗಳ ವೈಶಿಷ್ಟ್ಯದ ಜಾಗ್ರತಿ ಆದೊಡನೆ ಭಾರತಾಂತರ್ಗತವಾದ ತಮ್ಮದೊಂದು ಪ್ರತ್ಯೇಕ ಪ್ರಾಂತ-ರಾಜ್ಯ ಇರಬೇಕು ಎಂಬ ಆಕಾಂಕ್ಷೆ ಹುಟ್ಟಿತು. 1916ರಿಂದ ಆ ಆಕಾಂಕ್ಷೆಗೆ ಒಂದು ಸಜೀವ ಆಂದೋಲನದ ಸ್ವರೂಪ ಪ್ರಾಪ್ತವಾಯಿತು.

ಒಂದು ರೀತಿ ನೋಡಿದರೆ ಬ್ರಿಟಿಶರ ಆಡಳಿತಕ್ಕೆ ಒಳಗಾದ ಪ್ರಜೆಗಳು ಒಂದೇ ಆಡಳಿತಕ್ಕೆ ಒಳಗಾಗಿರಬೇಕಾಗಿತ್ತು. ಆದರೆ ದೇಶೀಯ ದಾಸ್ಯದಲ್ಲಿ ವಾಸವಾಗಿದ್ದವರು ಒಂದು ರೀತಿಯ ದ್ವಿಮುಖದಾಸ್ಯದಲ್ಲಿ ಕಾಲಕಳೆಯಬೇಕಾಗುತ್ತಿತ್ತು. ಸಂಸ್ಥಾನಿಕ ಅರಸರ ದಾಸ್ಯ ಒಂದು, ಆ ಅರಸರೇ ಬ್ರಿಟಿಷರಿಗೆ ದಾಸರಾಗಿದ್ದುದರಿಂದ ಆ ದಾಸ್ಯ ಮತ್ತೊಂದು. ಭಕ್ತರು ದೇವರನ್ನುದ್ದೇಶಿಸಿ ಪ್ರಾರ್ಥಿಸುವಾಗ ವಿನಮ್ರಭಾವದಿಂದ 'ನಾನು ದಾಸರ ದಾಸ' ಎಂದು ಆರಾಧಿಸುವದುಂಟು. ಆದರೆ ಸಂಸ್ಥಾನೀ ಪ್ರಜೆಗಳು ನಿಜವಾಗಿಯೂ ಬ್ರಿಟಿಶ್ ಸಾಮ್ರಾಜ್ಯದ ದಾಸರ ದಾಸ್ಯತ್ವದಲ್ಲಿ ತಮ್ಮ ಜೀವನವನ್ನು ಕಳೆಯಬೇಕಾಗುತ್ತಿತ್ತು.

ಕರ್ನಾಟಕದಲ್ಲಿರುವ ದೇಶೀ ಸಂಸ್ಥಾನಗಳೆಲ್ಲ ಬ್ರಿಟಿಶರ ಆಡಳಿತಕ್ಕೆ ಒಳಗಾದ ಭಾಗಗಳಲ್ಲಿಯೇ ಅಂತರ್ಗತವಾದವು. ಮೈಸೂರು ಸಂಸ್ಥಾನ ಹಾಗೂ ಹೈದರಾಬಾದ್ ಬಿಟ್ಟರೆ ಉಳಿದುವೆಲ್ಲ ಚಿಕ್ಕ ಚಿಕ್ಕ ಸಂಸ್ಥಾನಗಳು. ಹೀಗಿರುವದರಿಂದ ಆಡಳಿತಗಳಲ್ಲಿ ಭಿನ್ನತೆ ಇದ್ದರೂ ಜನಸಾಮಾನ್ಯರ ವಿಚಾರಗಳು, ಭಾವನೆಗಳು, ಆಶೋತ್ತರಗಳು ಕರ್ನಾಟಕದ ಎಲ್ಲ ಭಾಗಗಳಲ್ಲಿ ಹೆಚ್ಚುಕಡಿಮೆ ಒಂದೇ ಆಗಿದ್ದವು. ಇಡೀ ಭಾರತದಲ್ಲಿ ಬೀಸಿದ ಸ್ವಾತಂತ್ರ್ಯಪ್ರೇಮದ ಗಾಳಿ ಎಲ್ಲ ಸಂಸ್ಥಾನೀ ಪ್ರಜೆಗಳ ಮನೋಮಂಡಲದಲ್ಲಿ ಕೂಡಲೇ ತುಂಬಿಕೊಂಡಿತು. ಸಂಸ್ಥಾನಗಳ ಅರಸರು, ಆಡಳಿತಗಾರರು ಎಷ್ಟೇ ಬಿಗಿಯಾಗಿ ತಮ್ಮ ಪ್ರಜೆಗಳನ್ನು ಹತ್ತಿಕ್ಕಲು ಪ್ರಯತ್ನಪಟ್ಟರೂ ಅದು ಸಾಧ್ಯವಾಗುವದು ಶಕ್ಯವಿರಲಿಲ್ಲ. ದಾಸ್ಯಶೃಂಖಲೆಗಳು ಅವು ಚಿನ್ನದವು ಇದ್ದರೂ ಅವು ಶೃಂಖಲೆಗಳೇ ಅಲ್ಲವೇ ? ದೇಶೀಯ ಸಂಸ್ಥಾನದ ಅರಸರು ಭಾರತೀಯರೇ ಆದರೂ ಅವರ ನಿರಂಕುಶ ಆಳಿಕೆ ಪ್ರಜೆಗಳಿಗೆ ಅತ್ಯಂತ ದಾರುಣವೇ ಆಗಿತ್ತು. ಆದುದರಿಂದ ಸ್ವಾತಂತ್ರ್ಯಕ್ಕಾಗಿ ತಾವೂ ಹೋರಾಡಬೇಕೆಂಬ ಸಾತ್ವಿಕ ಆವೇಶ ಸಂಸ್ಥಾನೀ ಪ್ರಜೆಗಳಲ್ಲೂ ವಾಯುವೇಗದಿಂದ ಹೆಚ್ಚಿತು.

ಅ.ಭಾ. ರಾಷ್ಟ್ರೀಯ ಕಾಂಗ್ರೆಸ್ಸು ಈ ವಿಷಯದಲ್ಲಿ ಒಂದು ವಿಶಿಷ್ಟ ನೀತಿಯನ್ನು ಕೈಕೊಂಡಿತ್ತು. ಅದೇನೆಂದರೆ, ಸಂಸ್ಥಾನೀ ಪ್ರಜೆಗಳು ವಿಧಾಯಕ ಕ್ರಮಗಳಲ್ಲಿ ಭಾಗವಹಿಸಬೇಕೇ ವಿನಾ ರಾಜಕೀಯ ಚಳವಳಿಗಳಲ್ಲಿ ತಾತ್ಕಾಲಿಕವಾಗಿ ಭಾಗವಹಿಸುವದು ಇಷ್ಟವಿಲ್ಲ. ಇದಕ್ಕೆ ಮಹಾತ್ಮಾ ಗಾಂಧಿ ಮತ್ತು ಸರದಾರ ಪಟೇಲ ಇವರು ಹೇಳಿದ

ಕಾರಣವೇನೆಂದರೆ, 565 ಸಂಸ್ಥಾನಗಳಿದ್ದು ಅವೆಲ್ಲವುಗಳಲ್ಲಿ ಬಗೆಬಗೆಯ ರಾಜ್ಯಪದ್ಧತಿಗಳು ಇವೆ. ರಾಜರೂ ಬೇರೆಬೇರೆ ತರಹದವರು, ವಿವಿಧ ವೃತ್ತಿಯವರು ಇರುವರು. ಆದುದರಿಂದ ಸಂಸ್ಥಾನೀ ಪ್ರಜೆಗಳೂ ವಿಧಾಯಕ ಕಾರ್ಯಗಳಿಂದ ಮೊದಲು ತಮ್ಮ ಆಂತರಿಕ ಶಕ್ತಿಯನ್ನು ಬೆಳೆಸಿಕೊಳ್ಳಲಿ. ಆಮೇಲೆ ಮುಂದಿನ ಹೆಜ್ಜೆಯ ವಿಚಾರ ಮಾಡುವ. ಹರಿಪುರಾ ಕಾಂಗ್ರೆಸ್ಸು ಈ ನೀತಿಗೆ ಬೆಂಬಲವಿತ್ತಿತು. ಸ್ಟೇಟ್ ಪೀಪಲ್ಸ್ ಕಾನ್ಫರೆನ್ಸ್ ಎಂಬ ಒಂದು ಪ್ರತ್ಯೇಕ ಸಂಸ್ಥೆಯನ್ನೂ ನಿರ್ಮಿಸಲಾಯಿತು.

ಈ ಹತೋಟಿ ಬಹುಕಾಲ ನಡೆಯಲಿಲ್ಲ. 1937ರಲ್ಲಿ ಕಾಂಗ್ರೆಸ್ಸು ಏಳು ಪ್ರಾಂತಗಳಲ್ಲಿ ಮಂತ್ರಿಮಂಡಲಗಳನ್ನು ರಚಿಸಿ ಅಧಿಕಾರ ಸ್ವೀಕಾರಮಾಡಿದಮೇಲಂತೂ ಕೋಡಿ ಒಡೆದು ಭೋರ್ಗರೆಯುವ ಜಲಪ್ರವಾಹದಂತೆ ಎಲ್ಲ ಸಂಸ್ಥಾನೀ ಪ್ರಜೆಗಳಲ್ಲಿ ಒಂದು ಹೊಸ ಹುರುಪು ಹುಟ್ಟಿ ಅಲ್ಲಲ್ಲಿ ಆರ್ಥಿಕ ಸುಧಾರಣೆಗಳಾಗಿ, ಆಡಳಿತದಲ್ಲಿ ಭಾಗವಹಿಸುವದಕ್ಕಾಗಿ, ವಿಧಾನಮಂಡಲಗಳನ್ನು ಏರ್ಪಡಿಸುವದಕ್ಕಾಗಿ ಮಿರಜಿಯಂಥ ಒಂದು ಚಿಕ್ಕ ಸಂಸ್ಥಾನ ಮೊದಲುಮಾಡಿಕೊಂಡು ಮೈಸೂರು ಸಂಸ್ಥಾನದವರೆಗೆ ಜನತೆ ತ್ಯಾಗಪೂರ್ವಕವಾಗಿ ಹೋರಾಡಲು ಸಿದ್ಧವಾಯಿತು. ಅಲ್ಲಲ್ಲಿಯ ಸಂಸ್ಥಾನಿಕರು ಈ ಝಂಝಾವಾತದ ಪ್ರಭಾವವನ್ನು, ಪ್ರಜ್ಞೆಯನ್ನು ಕಂಡುಹಿಡಿದು ತಲೆಬಾಗಲು ಆರಂಭಮಾಡಿದರು. ಅದೇ ಸುಳಿವು ಮುಂದೆ ಸಾಗಿ 1947ರ ನಂತರ ಎಲ್ಲ ಸಂಸ್ಥಾನಗಳೂ ಭಾರತದಲ್ಲಿ ವಿಲೀನವಾದುದು ಒಂದು ರಾಜಕೀಯ ಪವಾಡ ಎನಿಸುವಷ್ಟು ಮಹತ್ತರವಾಗಿದೆ.

1905–1906ರ ಸ್ವದೇಶೀ ಚಳವಳಿ ಮೊದಲುಮಾಡಿ 1942ರ ಚಲೇ ಜಾವ್ ಚಳವಳಿವರೆಗೂ ಕರ್ನಾಟಕದಲ್ಲಿಯ ಸಂಸ್ಥಾನೀ ಪ್ರಜೆಗಳು ಎಲ್ಲ ಚಳವಳಿಗಳಲ್ಲಿ ಹೆಚ್ಚು ಕಡಿಮೆ ಭಾಗವಹಿಸಿದ್ದುಂಟು. ಕಾರ್ಯಕರ್ತರ ಸಂದರ್ಶನದ ಈ ಎರಡನೆಯ ಸಂಪುಟದಲ್ಲಿ ಸಂಸ್ಥಾನೀ ಪ್ರಜೆಗಳ ಚಳವಳಿಯ ವಿಚಾರವೇ ಇದೆ. ಕರ್ನಾಟಕದಲ್ಲಿಯ ಕರನಿರಾಕರಣೆಯ ಚಳವಳಿ ಹಾಗೂ ಉಪ್ಪಿನ ಸತ್ಯಾಗ್ರಹದ ಚಳವಳಿ ಇವುಗಳಲ್ಲಿ ಮೈಸೂರು ಭಾಗದ ಸ್ವಯಂಸೇವಕರು ಕೈಕೊಂಡ ಸಾಹಸ ಅದ್ವಿತೀಯವಾದುದು. ಅದೇ ರೀತಿ ಮೈಸೂರಲ್ಲಿ ಪ್ರಜಾಪ್ರಭುತ್ವಕ್ಕಾಗಿ ಹೂಡಿದ ಚಳವಳಿಯಲ್ಲಿ ಅಲ್ಲಿಯ ಮುಖಂಡರು, ಸ್ವಯಂಸೇವಕರು ವ್ಯಕ್ತಪಡಿಸಿದ ನಿರ್ಭಯತೆ, ತ್ಯಾಗ, ಸಹನೆ ಇವು ಅತ್ಯಂತ ಸ್ಫೂರ್ತಿದಾಯಕವಾದವು.

1947ರ ಪಶ್ಚಾತ್, ಸ್ವಾತಂತ್ರ್ಯದನಂತರ, ನಿಜಾಮರ ಹೈದರಾಬಾದ್ ಸಂಸ್ಥಾನವು ತಾನು ಸ್ವತಂತ್ರವಾಗಿ ಉಳಿಯಬೇಕೆಂಬ ಪ್ರಯತ್ನವನ್ನು ಮಾಡಿದ್ದುಂಟು. ಅಲ್ಲಿ ಇತರ ಮರಾಠಿ, ತೆಲುಗು ಮುಖಂಡರೊಡನೆ ಸರಿಮಿಗಿಲಾಗಿ ಸ್ವಾಮೀ ರಮಾನಂದ, ಡಾ|| ಮೇಲುಕೋಟೆ, ಗುಡಗುಂಟಿ ರಾಮಾಚಾರ್ಯ, ಕೃಷ್ಣಾಚಾರ್ಯ ಜೋಶಿ, ಸಿದ್ದಪನಹಳ್ಳಿ ಕೃಷ್ಣಶರ್ಮ ಮುಂತಾದ ಕನ್ನಡಿಗರು ಅತೀವ ಧೈರ್ಯದಿಂದ ಹೋರಾಡಿದ್ದುಂಟು. ಈ ರೀತಿ ಕರ್ನಾಟಕದ ಮೂಲೆಮೂಲೆಗಳಲ್ಲಿಯೂ ಸ್ವಾತಂತ್ರ್ಯ ಸಂಗ್ರಾಮದ ವೀರ ವೀರೆಯರು ತಮ್ಮ ಮಟ್ಟಿಗೆ ಹೋರಾಡಿದುದು ಉಂಟು. ಕರ್ನಾಟಕದ ಇತಿಹಾಸಕಾರರು,

ಲೇಖಕರು, ವಾಚಕರು ಅವರ ಸಾಹಸ, ತ್ಯಾಗ, ದೇಶಭಕ್ತಿ ಇವುಗಳನ್ನು ಎಷ್ಟು ಸ್ಮರಿಸಿದರೂ ಸಾಲದು. ಶ್ರೀ ಸೂರ್ಯನಾಥ ಕಾಮತರು ಸ್ವಾತಂತ್ರ್ಯ ಸಿಕ್ಕು ಇಪ್ಪತ್ತೊಂದು ವರುಷಗಳನಂತರ ಈಗಲಾದರೂ ಈ ಕೆಲಸವನ್ನು ಕೈಕೊಂಡು ಪೂರೈಸುತ್ತಿದ್ದಾರೆ. ಇದು ನಮ್ಮ ಸುದೈವ. ಇದಕ್ಕೆ ತಕ್ಕ ಪ್ರೋತ್ಸಾಹ ದೊರೆತು ಆ ಕೆಲಸವನ್ನು ಪೂರ್ತಿಗೊಳಿಸುವಂತೆ ಆಗುವದವಶ್ಯ. ಎಂದು ಬೇರೆ ಹೇಳಬೇಕಾಗಿಲ್ಲ.

ಆಗಿನ ಚಳವಳಿಯಲ್ಲಿ ಸೇರಿ ಕಾರ್ಯಕರ್ತರು ಪಡೆದ ಕಷ್ಟನಷ್ಟಗಳನ್ನು ಪರಿಶೀಲಿಸಿದರೆ ಈಗಿನ ತರುಣರಿಗೆ ತರುಣಿಯರಿಗೆ ಬಹಳ ಸೋಜಿಗವೆನಿಸಬಹುದು. ಧ್ವಜವಂದನೆ, ಪ್ರಭಾತಫೇರಿ ಮುಂತಾದ ತೀರ ಸಾಮಾನ್ಯವೆನಿಸಬಲ್ಲ ಕಾರ್ಯಕ್ರಮಗಳಲ್ಲಿ ಭಾಗವಹಿಸಿದವರಿಗೂ ಒಮ್ಮೊಮ್ಮೆ ಛಡೀಪೆಟ್ಟು, ಲಾಠಿಹೊಡೆತ, ದಿನಗಟ್ಟಲೆ ಹೇಸಿ ಲಾಕಪ್ಪುಗಳಲ್ಲಿಡುವಿಕೆ, ಕೈಬೇಡಿ ಮುಂತಾದವುಗಳನ್ನು ಹಾಕಿ ಇಲ್ಲವೆ ಟೊಂಕಕ್ಕೆ ಹಗ್ಗ ಬಿಗಿದು ಜೇಲಿಗೆ ಒಯ್ಯುವಿಕೆ, ಲಾರಿಗಳಲ್ಲಿ ತುಂಬಿ ಆಜೆಗಿನ ಕಾಡಿನಲ್ಲಿ ಬಿಟ್ಟುಬಿಡುವಿಕೆ, ಜೇಲಿನಲ್ಲಿ ಅವಮಾನ ಅಪಮಾನ, ಕಠಿಣ ಮತ್ತು ನೀಗಲಾರದ ಕೆಲಸಗಳನ್ನು ಹೇರುವಿಕೆ, ಆಸ್ತಿಪಾಸ್ತಿಗಳ ಮೇಲೆ ಮುಟ್ಟುಗೋಲು, ಮಕ್ಕಳಿಗೆ ಪೀಡೆ, ಒಮ್ಮೊಮ್ಮೆ ಲಾಕಪ್ಪಿನಲ್ಲಿ, ಜೇಲಿನಲ್ಲಿ ಚಿತ್ರಹಿಂಸೆ, ಹೀಗೆ ಒಂದಲ್ಲ ಎರಡಲ್ಲ ಅನೇಕ ಬಗೆಯ ದುಃಖಗಳನ್ನು ಅನುಭವಿಸಬೇಕಾಗುತ್ತಿತ್ತು. ಸಾವಿರಾರು ಕಾರ್ಯಕರ್ತರು ಇಂಥ ಎಲ್ಲ ದಿವ್ಯಗಳೊಳಗಿಂದ ಹಾಯ್ದು ಶುಚಿಯಾಗಿ ಶುದ್ಧರಾಗಿ ದೇಶದ ಸ್ವಾತಂತ್ರ್ಯವನ್ನು ತಂದುಕೊಟ್ಟು ಶಲತಲಾಂತರದವರೆಗೆ ಭಾರತೀಯರನ್ನು ಋಣಿಗಳನ್ನಾಗಿ ಮಾಡಿದ್ದಾರೆ.

ರಾಷ್ಟ್ರವನ್ನು ಪ್ರತಿಯೊಂದು ಕ್ಷೇತ್ರದಲ್ಲಿ ಮುಂದುವರಿಯುವಂತೆ ದುಡಿದೇ ಆ ಋಣವನ್ನು ಈಗಿನವರು ಪೂರೈಸಬೇಕು. ಅದೇ ಆ ಸ್ವಾತಂತ್ರ್ಯ ಹೋರಾಟಗಾರರ ಪುಣ್ಯಸ್ಮರಣ.

ಬೆಂಗಳೂರು
ಸೆಪ್ಟೆಂಬರ್ 7, 1976

**ರಂಗನಾಥ ದಿವಾಕರ**

# ಸಂಪಾದಕನ ಮಾತು

ಈ ಪುಸ್ತಕದ ಮೊದಲ ಸಂಪುಟವು ಮೇ 1974ರಲ್ಲಿ ಪ್ರಕಟವಾದಾಗ ಎರಡನೆಯ ಸಂಪುಟವು ಮುಂದೆ ಒಂದೇ ವರ್ಷದಲ್ಲಿ ಪ್ರಕಟವಾಗಬಹುದೆಂದು ನಾನು ಆಸೆ ಇಟ್ಟು ಕೊಂಡಿದ್ದೆ. ಮತ್ತು ಈ ಬಗ್ಗೆ ಕಾರ್ಯತತ್ಪರನೂ ಆಗಿದ್ದೆ. ಆದರೆ ಹಲವು ಕಾರಣ ಗಳಿಂದ, ಮುಖ್ಯವಾಗಿ ಅಚ್ಚಿನ ಮನೆಯಲ್ಲಿ ಆದ ವಿಳಂಬದಿಂದ ಈ ಸಂಪುಟ ತೀರ ವಿಳಂಬವಾಗಿ ಪ್ರಕಟವಾಗಿದೆ.

ಈ ಸಂಪುಟವು ಮುಖ್ಯವಾಗಿ ಕರ್ನಾಟಕದ ಹಳೆಯ ಸಂಸ್ಥಾನೀ ಪ್ರದೇಶಗಳಿಗೆ ಮೀಸಲು. ಮೈಸೂರು ಸಂಸ್ಥಾನ, ಹೈದರಾಬಾದ್ ಕರ್ನಾಟಕದ ಮೂರು ಜಿಲ್ಲೆಗಳು ಹಾಗೂ ಕಿರುಸಂಸ್ಥಾನಗಳಾದ ಜಮಖಂಡಿ, ಮುಧೋಳ ಇಂಥವುಗಳಲ್ಲಿ ನಡೆದ ಈ ಸ್ವಾತಂತ್ರ್ಯ ಹೋರಾಟದ ಹಾಗೂ ಅದಕ್ಕೆ ಹಿನ್ನೆಲೆಯಾಗಿ ನಡೆದ ಪ್ರಜಾಸಂಘಟನೆಗಳ ಕಥನ ಇಲ್ಲಿನ ಮುಖ್ಯ ವಿಷಯ. ಅನೇಕ ಕಿರುಸಂಸ್ಥಾನಗಳ ಬಗ್ಗೆ ಬಂದ ಲೇಖನಗಳನ್ನು ಸ್ಥಳಾಭಾವದಿಂದ ಮುಂದಿನ ಸಂಪುಟಕ್ಕಾಗಿ ಕಾದಿರಿಸಿದೆ.

ಈ ಸಂಪುಟಕ್ಕೆ ವಿಷಯಸಂಗ್ರಹ ಕೊಂಚ ಕಷ್ಟವೇ ಆಯಿತು. ಮೈಸೂರು, ತುಮಕೂರು, ಚಿತ್ರದುರ್ಗಗಳಿಗೆ ನಾನು ಹೋಗಿ ಬರಬೇಕಾಯಿತು. ಶಿವಮೊಗ್ಗ ಜಿಲ್ಲೆಯಲ್ಲಿ ಸಂಗಪ್ಪ ನಾಯ್ಕ ಬೆನ್ನೂರು ಹಾಗೂ ಸಾಗರದ ಶ್ರೀ ಕೆ.ಎಂ. ನಾರಾಯಣಪ್ಪ ವಿಶೇಷ ಸಹಕಾರ ನೀಡಿದರು. ಶ್ರೀ ಜಿ. ಎಸ್. ಸಂಪತ್ತಯ್ಯಂಗಾರ್ ಗೊರೂರು ಅವರು ಹಾಸನ ಜಿಲ್ಲೆಯ ಅನೇಕ ಬರಹಗಳನ್ನು ತರಿಸಿಕೊಟ್ಟರು. ಶ್ರೀ ಎಸ್. ಅಣ್ಣಪ್ಪಶೆಟ್ಟರು ನೀಡಿದ ಸೂಚನೆಗಳಿಂದ ಚಿಕ್ಕಮಗಳೂರು ಜಿಲ್ಲೆಯ ಹಲವು ಬರಹಗಳನ್ನು ದೊರಕಿಸಿ ಕೊಂಡೆ. ಮಂಡ್ಯ, ಮೈಸೂರು ಜಿಲ್ಲೆಗಳ ಬಗ್ಗೆ ದಿ|| ಎಚ್. ಕೆ. ವೀರಣ್ಣಗೌಡರೂ, ಶ್ರೀ ಎಂ. ಎನ್. ಜೋಯಿಸರೂ ನೀಡಿದ ಸಹಕಾರ ಸ್ಮರಣೀಯ. ಮದ್ದೂರಿಗೆ ತಮ್ಮಲ್ಲಿಗೆ ನಾನು ಬರಬೇಕೆಂದೂ ನನ್ನನ್ನು ಮಂಡ್ಯ ಜಿಲ್ಲೆಯ ಎಲ್ಲ ಯೋಧರ ಬಳಿಗೆ ಕರೆದೊಯ್ಯು ವುದಾಗಿಯೂ ದಿ|| ಎಚ್. ಕೆ. ವೀರಣ್ಣಗೌಡರು ಹೇಳಿದ್ದರಾದರೂ ಹಾಗೆ ಹೋಗಲು ನನಗೆ ಸಾಧ್ಯವಾಗದೆ ಹೋಯಿತು. ಅಲ್ಲದೆ ಮಂಡ್ಯ, ಕೋಲಾರ ಜಿಲ್ಲೆಗಳಿಂದ ಹೆಚ್ಚು ಬರಹಗಳ ಸಂಗ್ರಹ ಸಾಧ್ಯ ಆಗಲಿಲ್ಲ.

ಬೆಂಗಳೂರಲ್ಲಿಯೇ ಇರುವ ಎಂ.ಪಿ.ಸಿ.ಸಿ.ಯ ಚಳವಳಿಯ ಕಾಲದ ಕಾರ್ಯದರ್ಶಿ ಶ್ರೀ ವಿ. ಎಸ್. ನಾರಾಯಣರಾಯರು, ಸ್ವಾತಂತ್ರ್ಯಯೋಧರ ಸಂಘದ ಶ್ರೀ ಕೆ. ಜೀವಣ್ಣರಾಯರು ಹಾಗೂ ಸಂಸ್ಥಾನದೊಳಗಿನ 1942ರ ಬಹುಪಾಲು ಹೋರಾಟಗಾರರ ಪರಿಚಯ ಹೊಂದಿದ ಶ್ರೀ ಎಚ್. ಎಸ್. ದೊರೆಸ್ವಾಮಿ ಅವರು ಇದೇ ರೀತಿ ಅನೇಕರ

ವಿಳಾಸ ನೀಡಿ, ತಾವೂ ಅನೇಕರಿಗೆ ಪತ್ರ ಬರೆದು ಸಹಕರಿಸಿದರು. ಶ್ರೀ ವಿ. ಎಸ್. ನಾರಾಯಣರಾಯರು ಶ್ರೀ ಎಚ್. ಕೆ. ವೀರಣ್ಣಗೌಡರನ್ನು ನಮ್ಮಲ್ಲಿಗೆ ಕರೆದುತಂದು, ಆಗ ನಾನು ಮನೆಯಲ್ಲಿ ಇಲ್ಲದಿರಲು ದೀರ್ಘಕಾಲ ನನಗಾಗಿ ಇಬ್ಬರೂ ಕಾದು ಕುಳಿತುದು ನನಗೆ ಇನ್ನೂ ನೆನಪಿದೆ. ಇದಲ್ಲದೆ ಪತ್ರಕರ್ತರೂ ಸ್ವಾತಂತ್ರ್ಯಯೋಧರೂ ಆದ ಶ್ರೀ ಖಾದ್ರಿ ಶಾಮಣ್ಣ ಅನೇಕರ ವಿಳಾಸ ನೀಡಿದ್ದರು. ಕೋಲಾರ ಜಿಲ್ಲೆಯ ಬಗ್ಗೆ ಪ್ರಜಾವಾಣಿಯ ಶ್ರೀ ಟಿ. ನಾಗರಾಜು ಹಾಗೂ ಚಿತ್ರದುರ್ಗ ಜಿಲ್ಲೆಯ ಬಗ್ಗೆ ಶ್ರೀ ಮ. ಶ್ರೀಧರ ಮೂರ್ತಿ ಇದೇ ರೀತಿ ಮಾಹಿತಿ ನೀಡಿ ಉಪಕರಿಸಿದರು.

ಹೈದರಾಬಾದ್ ಕರ್ನಾಟಕದ ಕೆಲಸ ಶ್ರೀ ಜಯತೀರ್ಥ ರಾಜಪುರೋಹಿತ ಇವರ ಸಹಕಾರ ಇಲ್ಲವಾದಲ್ಲಿ ಸಾಧ್ಯವಾಗುತ್ತಲೇ ಇರಲಿಲ್ಲ. ಇದೇ ರೀತಿ ದಿ|| ವೀರಭದ್ರಪ್ಪ ಶಿರೂರ ಹಾಗೂ ದಿ|| ಜನಾರ್ದನರಾವ್ ದೇಸಾಯಿ ಇವರುಗಳು ನೀಡಿದ್ದ ಕ್ರಿಯಾಶೀಲ ಸಹಕಾರ ಕೂಡ ಗಣನೀಯ. ಶಾಸಕರಾಗಿದ್ದ ಶ್ರೀ ಜಿ. ಒಡೆಯರಾಜ್ ಅವರು ಆ ಭಾಗದ ಅನೇಕರನ್ನು ವೈಯಕ್ತಿಕವಾಗಿ ಕಂಡು ಅವರ ಬರಹಗಳು ಬರುವಂತೆ ಮಾಡಿದರು. ಶ್ರೀ ಆರ್. ವಿ. ಬಿಡಪ ಅವರೂ ಇದೇ ರೀತಿ ನೆರವಿತ್ತರು.

ಸಂಸ್ಥಾನೀ ಪ್ರದೇಶಗಳ ಬಗ್ಗೆ ಬೆಳಗಾವಿಯ ಡಾ|| ಜಯದೇವರಾವ್ ಕುಲಕರ್ಣಿ ಇವರ ಉತ್ಸಾಹದ ಸಹಕಾರ ಸ್ಮರಣೀಯ. ಇಲ್ಲಿ ಕಿರುಸಂಸ್ಥಾನಗಳ ಕುರಿತು ಬಂದಿರುವ ಲೇಖನಗಳಲ್ಲಿ ಹೆಚ್ಚಿನವು ಅವರ ಸಹಕಾರದಿಂದಲೇ ಲಭಿಸಿದವು. ಆ ಪೈಕಿ ಅನೇಕ ಬರಹಗಳನ್ನು ಸ್ಥಳಾಭಾವದಿಂದ, ಮುಂದಿನ ಸಂಪುಟಕ್ಕೆ ಕಾದಿರಿಸಿದೆ. ಅನೇಕ ಭಾವ ಚಿತ್ರಗಳನ್ನು ಅವರೇ ಸಂಗ್ರಹಿಸಿ ಕಳುಹಿಸಿದ್ದು ಅದಕ್ಕಾಗಿ ಆದ ವೆಚ್ಚವೆಷ್ಟೋ ತಿಳಿಯದು. ಅವರಂತೂ ಆ ಬಗ್ಗೆ ಬಿಲ್ ಕೂಡ ಕಳುಹಿಸಿಲ್ಲ! ಪ್ರಜಾವಾಣಿಯ ಸಂಪಾದಕ ಶ್ರೀ ಟಿ. ಎಸ್. ರಾಮಚಂದ್ರರಾಯರು ಕೆಲವು ಸ್ವಾತಂತ್ರ್ಯಯೋಧರ ಭಾವಚಿತ್ರಗಳನ್ನು ಒದಗಿಸಿ ಸಹಕರಿಸಿದ್ದಾರೆ. ಇದೇ ರೀತಿ ಮಿತ್ರರಾದ ಶ್ರೀ ಎಸ್. ಎನ್. ಗುಪ್ತ ಶಿವಪುರ ಹಾಗೂ ವಿದುರಾಶ್ವತ್ಥ ಕಾಂಗ್ರೆಸ್ಸಿನ ಅಮೂಲ್ಯ ಚಿತ್ರಗಳನ್ನು ಒದಗಿಸಿದ್ದಾರೆ. ಅವರಲ್ಲಿ ಇರುವ ಅಕ್ಷಯ ಚಿತ್ರಭಂಡಾರವನ್ನು ಬಳಸುವ ಸಾಮರ್ಥ್ಯವೇ ನಮಗಿರಲಾರದು.

1972ರ ಕೊನೆಗೆ ಈ ಸ್ಮೃತಿಗಳ ಸಂಗ್ರಹಕಾರ್ಯ ಆರಂಭ ಆಗಿತ್ತು. ಆಗಲೇ ಸಂಸ್ಥಾನೀ ಪ್ರದೇಶಗಳಿಂದ ಸುಮಾರು 30-40 ಬರಹಗಳು ಬಂದಿದ್ದವು. ಆದರೆ ಬ್ರಿಟಿಷ್ ಜಿಲ್ಲೆಗಳ ಸಂಪುಟ ಮೊದಲು ಪ್ರಕಟವಾದುದರಿಂದ, ಈ ಬರಹಗಳನ್ನು ಮೊದಲೇ ಕಳುಹಿಸಿದವರು ಈ ಪುಸ್ತಕ ಎಂದು ಬರುವುದೆಂದು ಕಾದು ಕಾದು ದಣಿದರು. ಹೀಗಾದುದು ತೀರ ವಿಷಾದದ ಸಂಗತಿ. ಇದಕ್ಕೆ ಬರಹಗಳನ್ನು ಕಳುಹಿಸಿ ಅನೇಕ ರೀತಿಯಲ್ಲಿ ಸಹಕರಿಸಿದ ಹಲವು ಮಹನೀಯರು ಈ ನಡುವೆ ಕಣ್ಮರೆಯಾದರು. ಈ ಪೈಕಿ ಶ್ರೀ ಸೂರ್ಯನಾರಾಯಣ ಪಂಡಿತ್ (2-10-1975ಕ್ಕೆ ತೀರಿಕೊಂಡರು), ಶ್ರೀ ಜನಾರ್ದನ ರಾವ್ ದೇಸಾಯಿ (20-3-1975), ಮಾಚುಕೊಂಡದ ಶ್ರೀ ಕೆ. ಎಂ. ಪೂರ್ವಾಚಾರಿ

(ನವೆಂಬರ್, 1975), ಶ್ರೀ ವೀರಭದ್ರಪ್ಪ ಶಿರೂರ (18-2-1976) ಹಾಗೂ ಶ್ರೀ ಕಪಟರಾಳ ಕೃಷ್ಣರಾವ್ (9-6-1976) ನನಗೆ ತಿಳಿದಂತೆ ದಿವಂಗತರಾದವರು. ಇನ್ನು ನನ್ನ ಗಮನಕ್ಕೆ ಬಾರದೇ ತೀರಿಕೊಂಡವರೆಷ್ಟೋ ತಿಳಿಯದು. ಅಲ್ಲದೇ ತಮ್ಮ ವಿವರವಾದ ಸ್ಮೃತಿಗಳನ್ನು ಕಳುಹಿಸಲು ಒಪ್ಪಿಕೊಂಡಿದ್ದ ಶ್ರೀ ತಿ. ತಾ. ಶರ್ಮ ಹಾಗೂ ಶ್ರೀ ಕೆ. ಸಿ. ರೆಡ್ಡಿ ಇವರುಗಳೂ ಹಾಗೆ ಮಾಡದೆ ಕಣ್ಮರೆಯಾದರು.

ಅನೇಕ ಹಿರಿಯ ಹೋರಾಟಗಾರರು ನಾನೇ ಅವರಲ್ಲಿಗೆ ಬಂದು ಸ್ಮೃತಿಗಳನ್ನು ಬರೆದುಕೊಂಡು ಹೋಗಬೇಕೆಂದು ವಿಶ್ವಾಸಪೂರ್ವಕ ಆಗ್ರಹಮಾಡಿದ್ದರು. ಮೊದಲ ಸಂಪುಟಕ್ಕೆ ಮುನ್ನುಡಿ ಬರೆದು ಹರಸಿದ್ದ ಶ್ರೀ ಕೆಂಗಲ್ ಹನುಮಂತಯ್ಯ ಅಲ್ಲದೆ ಡಾ|| ಪಾರ್ಥನಾರಾಯಣ ಪಂಡಿತ್ ಈ ಪೈಕಿ ಪ್ರಮುಖರು. ಇಂಥ ಇನ್ನೂ ಅನೇಕರಿದ್ದಾರೆ. ಆದರೆ ಸಮಯಾಭಾವದಿಂದ ಅದು ಸಾಧ್ಯ ಆಗಲಿಲ್ಲ. ಮೂರನೆಯ ಸಂಪುಟದಲ್ಲಾದರೂ ಇಂಥವರುಗಳ ಬರಹಗಳ ಪ್ರಕಟಣೆ ಸಾಧ್ಯವಾದೀತೆಂದು ನಂಬಿದ್ದೇನೆ. ಮೊದಲ ಮತ್ತು ಎರಡನೆಯ ಸಂಪುಟದಲ್ಲಿ ಪ್ರಕಟಿಸಲಾಗದೆ ಉಳಿದಿರುವ ಹಾಗೂ ಕೆಲವು ಹೊಸ ಬರಹಗಳನ್ನು ಮೂರನೆಯ ಸಂಪುಟದಲ್ಲಿ ಪ್ರಕಟಿಸಲಾಗುವುದು.

ಈ ಬರಹಗಳ ಸಂಗ್ರಹದ ಉದ್ದೇಶ, ಉಪಯುಕ್ತತೆ ಹಾಗೂ ಇವುಗಳ ಇತಿಮಿತಿಗಳ ಬಗ್ಗೆ ಒಂದನೆಯ ಸಂಪುಟದ ಆರಂಭದಲ್ಲಿ ಹೇಳಿದ ಮಾತುಗಳನ್ನೇ ಇಲ್ಲಿ ಪುನರುಚ್ಚರಿಸಬೇಕಾಗಿಲ್ಲ. ಅಲ್ಲಿ ಹೇಳಿದ ಮಾತುಗಳೇ ಇಲ್ಲಿಯೂ ಹೊಂದಿಕೊಳ್ಳತಕ್ಕವುಗಳು. ಅನೇಕ ಹಿರಿಯ ಸ್ವಾತಂತ್ರ್ಯಹೋರಾಟಗಾರರೂ ಇತಿಹಾಸ ವಿದ್ವಾಂಸರೂ ಈ ಸಂಗ್ರಹದ ಉಪಯುಕ್ತತೆಯ ಬಗ್ಗೆ ಮೆಚ್ಚಿಕೆಯ ಮಾತುಗಳನ್ನು ಹೇಳಿ ನನ್ನ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಇಷ್ಟು ವಿವರವಾಗಿ ಇಂಥ ವಿಷಯಸಂಗ್ರಹ ಭಾರತದ ಯಾವುದೇ ಭಾಷೆಯಲ್ಲಿ ಆಗಿಲ್ಲವೆಂದು ಹೇಳಿದ್ದನ್ನು ಕೇಳಿದ್ದೇನೆ. ಈ ಸಂಗ್ರಹಕಾರ್ಯ ಕರ್ನಾಟಕದ ಹಾಗೂ ದೇಶದ ವಿವಿಧ ಮುಖಗಳ ಇತಿಹಾಸದ ಸಂಶೋಧನೆಯ ಬಗೆಗಿನ ನನ್ನ ಮನೋದಿಗಂತವನ್ನು ವ್ಯಾಪಕಗೊಳಿಸಿದೆ. ಹೊಸ ಹೊಸ ವಿಷಯಗಳ ಬಗ್ಗೆ ಸುಳಿವು ಪಡೆಯಲು ನೆರವಾಗಿದೆ.

ಡಾ|| ರಂ. ರಾ. ದಿವಾಕರ ಅವರು ಪ್ರಥಮ ಸಂಪುಟದ ಬಗ್ಗೆ ಸಂಯುಕ್ತ ಕರ್ನಾಟಕದಲ್ಲಿ ಒಂದು ಲೇಖನವನ್ನೇ ಬರೆದರಲ್ಲದೆ, ಈ ಸಂಪುಟಕ್ಕೆ ಮುನ್ನುಡಿ ಬರೆದು ನನ್ನನ್ನು ಹರಸಿ ಉಪಕರಿಸಿದ್ದಾರೆ. ಮೂರನೆಯ ಸಂಪುಟಕ್ಕೆ ತಮ್ಮ ಸ್ಮೃತಿಗಳನ್ನೂ ನೀಡಲಿದ್ದಾರೆ. ಅನೌಪಚಾರಿಕವಾದ ಸಲಹಾಮಂಡಳಿಯ ಸದಸ್ಯರಾಗಿರುವ ಹಿರಿಯರಿಗೂ ನನ್ನ ನೆನಕೆಗಳು. ಹೈದರಾಬಾದ್‌ನ ಸ್ವಾಮಿ ರಮಾನಂದ ತೀರ್ಥ ಸ್ಮಾರಕ ಸಮಿತಿಯವರು ಪುಸ್ತಕ ಪ್ರಕಟಣೆಗೆ ಧನಸಹಾಯ ನೀಡಿದ್ದಾರೆ. ಇದಕ್ಕೆ ಕಾರಣಕರ್ತರು ಶ್ರೀ ಜಯತೀರ್ಥ ರಾಜಪುರೋಹಿತ, ದಿ|| ಜನಾರ್ದನರಾವ್ ದೇಸಾಯಿ ಹಾಗೂ ಸಮಿತಿಯ ಕಾರ್ಯದರ್ಶಿ ಶ್ರೀ ದಾಮೋದರ ಪಾಂಗ್ರೇಕರ್. ಇದೇ ರೀತಿ

ಉದಾರ ನೆರವನ್ನಿತ್ತವರು ಶ್ರೀಕ್ಷೇತ್ರ ಧರ್ಮಸ್ಥಳದ ಶ್ರೀ ವೀರೇಂದ್ರ ಹೆಗ್ಗಡೆ ಮತ್ತು ಬೆಳಗಾವಿಯ ಡಾ|| ಜಯದೇವರಾವ್ ಕುಲಕರ್ಣಿ. ಸುಮಾರು 100 ಸ್ವಾತಂತ್ರ್ಯ ಯೋಧರು ಮುಂಗಡವಾಗಿ ಪುಸ್ತಕಕ್ಕೆ ಹಣ ನೀಡಿ ಮುದ್ರಣ ವೆಚ್ಚ ಭರಿಸಲು ನೆರವಾಗಿದ್ದಾರೆ. ಇವರಿಗೆಲ್ಲ ನಾನು ಋಣಿ.

ಮಿತ್ರ ಶ್ರೀ ಹರಿಹರಪ್ರಿಯ, ನನ್ನ ವಿದ್ಯಾರ್ಥಿ ಶ್ರೀ ಎಚ್. ಪಿ. ಶಶಿಧರಮೂರ್ತಿ ಮತ್ತು ನನ್ನ ಸಂಬಂಧಿ ಶ್ರೀ ಎಂ. ಸುರೇಶ ಪ್ರಭು ಬರವಣಿಗೆಯಲ್ಲಿ (ಪ್ರತಿಮಾಡುವುದು, ಇತ್ಯಾದಿ) ನೀಡಿದ ಸಹಕಾರಕ್ಕೆ ಅವರಿಗೆ ನನ್ನ ವಂದನೆಗಳು.

ಪ್ರಕಟಣೆಯ ಬಗ್ಗೆ ಎಂದಿನಂತೆ ಉತ್ಸಾಹದ ಸಹಕಾರ ನೀಡಿದ ಪ್ರಕಾಶಕರಾದ ಶ್ರೀ ಎಂ. ಸತ್ಯನಾರಾಯಣರಾವ್ ಮತ್ತು ಸೋದರರು, ಹಾಗೂ ಕರಡು ತಿದ್ದಿದ ಶ್ರೀ ರಂಗರಾವ್ ರೋಹಿಡೇಕರ್ ಇವರಿಗೂ ನನ್ನ ವಂದನೆಗಳು.

ಈ ಪುಸ್ತಕವನ್ನು ಹೈದರಾಬಾದ್ ಸಂಸ್ಥಾನೀ ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದ ಪುಣ್ಯಶ್ಲೋಕರಾದ ಕನ್ನಡಿಗ ದಿ|| ಶ್ರೀ ಸ್ವಾಮಿ ರಮಾನಂದ ತೀರ್ಥರಿಗೆ ಅರ್ಪಿಸಿದೆ. ಅವರ ಪರಿಚಯ ಲೇಖನ ಈ ಸಂಪುಟದಲ್ಲಿದೆ. ಇಂಗ್ಲಿಷ್‌ನಲ್ಲಿ ಪ್ರಕಟವಾಗಿರುವ ಅವರ ಸ್ಮೃತಿಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಪ್ರತ್ಯೇಕ ಪುಸ್ತಕವಾಗಿ ಪ್ರಕಟಿಸುವ ಭಾರ ನನ್ನ ಮೇಲಿದೆ.

ನನ್ನ ಈ ಉದ್ಯಮದಲ್ಲಿ ಹೃತ್ಪೂರ್ವಕ ಪ್ರೋತ್ಸಾಹ ನೀಡಿದ ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಮುಖ್ಯಸ್ಥರಾದ ಡಾ|| ಕೆ. ನರಸಯ್ಯ ಅವರಿಗೂ ಸಂಶೋಧನಾ ವೆಚ್ಚವನ್ನು ಭರಿಸಲು ನೆರವು ನೀಡಿದ ಬೆಂಗಳೂರು ವಿಶ್ವವಿದ್ಯಾಲಯಕ್ಕೂ ನಾನು ಋಣಿ.

ಮೂರನೆಯ ಸಂಪುಟದ ಪ್ರಕಟಣೆಗಾಗಿ ಈಗಾಗಲೇ ಪುಣೆಯ ಲೋಕಮಾನ್ಯ ಟಿಳಕ್ ಟ್ರಸ್ಟ್ ಫಂಡ್‌ನವರು ಧನಸಹಾಯನೀಡಿ ಅದರ ಪ್ರಕಟಣೆಯನ್ನು ಖಚಿತಗೊಳಿಸಿದ್ದಾರೆ. ಇದಕ್ಕೆ ಕಾರಣರು ಲೋಕಮಾನ್ಯರ ಮೊಮ್ಮಗ ಶ್ರೀ ಜಯಂತರಾವ್ ಟಿಳಕ್, ಎಂ.ಪಿ., ಹಾಗೂ ಟ್ರಸ್ಟಿನ ವಿಶ್ವಸ್ಥರ ಪೈಕಿ ಮುಖ್ಯವಾಗಿ ಶ್ರೀ ಮಧ್ವರಾವ್ ಹಣಮಂತರಾವ್ ಕೌಜಲಗಿ ಅವರ ಹಾಗೂ ಇತರ ವಿಶ್ವಸ್ಥರ ಉಪಕಾರ ಸ್ಮರಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

798, 'ಕೀರ್ತಿ', VI ಕ್ರಾಸ್, XI ಮೇನ್ **ಸೂರ್ಯನಾಥ ಕಾಮತ್**
ಹನುಮಂತನಗರ, ಬೆಂಗಳೂರು–19

# ವಿಷಯಸೂಚಿ ಪುಟ



## I. ಮೈಸೂರು ಸಂಸ್ಥಾನ (ಪುಟ : ೨೩–೭೬೬)

### ಬೆಂಗಳೂರು ಜಿಲ್ಲೆ (ಪುಟ : ೨೫–೨೬೨)

## ಮೈಸೂರು ಜಿಲ್ಲೆ (ಪುಟ : ೨೬೩–೩೭೮)

## ಮಂಡ್ಯ ಜಿಲ್ಲೆ (ಪುಟ : ೩೭೯–೪೦೦)



## ಕೋಲಾರ ಜಿಲ್ಲೆ (ಪುಟ : ೪೦೧–೪೨೬)

## ತುಮಕೂರು ಜಿಲ್ಲೆ (ಪುಟ : ೪೨೭-೫೧೦)

## ಚಿತ್ರದುರ್ಗ ಜಿಲ್ಲೆ (ಪುಟ : ೫೧೧-೫೮೧)

## ಶಿವಮೊಗ್ಗ ಜಿಲ್ಲೆ (ಪುಟ : ೫೮೨–೬೬೭)

## ಚಿಕ್ಕಮಗಳೂರು ಜಿಲ್ಲೆ (ಪುಟ : ೬೬೮-೭೧೪)

## ಹಾಸನ ಜಿಲ್ಲೆ (ಪುಟ : ೭೧೫-೭೬೬)

## II. ಹೈದರಾಬಾದ್ ಕರ್ನಾಟಕ (ಪುಟ : ೭೬೭–೯೨೬)

### ರಾಯಚೂರು ಜಿಲ್ಲೆ (ಪುಟ : ೭೬೯–೮೭೪)

## ಕಲ್ಬುರ್ಗಿ ಜಿಲ್ಲೆ (ಪುಟ : ೮೭೫–೯೦೫)



## ಬಿದರೆ ಜಿಲ್ಲೆ (ಪುಟ : ೯೦೬–೯೨೬)

## III. ಕಿರುಸಂಸ್ಥಾನಗಳು (ಪುಟ : ೯೨೭–೯೬೩)



---

ಮೈ.ಬೆಂ. 1

# ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟದ ಉಗಮ



ಲೇಖಕ : ಕೆ. ಜೀವಣ್ಣರಾವ್

ಮೈಸೂರು ಅಂದು ದೇಶೀಯ ಸಂಸ್ಥಾನ. ಬ್ರಿಟಿಷ್ ಆಡಳಿತದ ಅಂಕುಶ ಮೇಲಿದ್ದ ಕಾಲ. ಆದರೆ ಸ್ವಾತಂತ್ರ್ಯಪ್ರಿಯತೆ, ಸ್ವಾಭಿಮಾನಗಳಲ್ಲಿ ಸಂಸ್ಥಾನದ ಜನತೆ ಹಿಂದುಳಿದಿರಲಿಲ್ಲ. ಇಲ್ಲಿನ ರಾಜರೂ ಪ್ರಜೆಗಳ ಹಿತಾಸಕ್ತಿ ಹಾಗೂ ಆಶೋತ್ತರಗಳನ್ನರಿತು ಧರ್ಮದರ್ಶಿಗಳಂತೆ ಆಡಳಿತ ನಡೆಸಿದ್ದರು. ಜನರ ಇಂಗಿತವನ್ನೂ ಅರಿಯುತ್ತಿದ್ದರು. ರಾಷ್ಟ್ರೀಯ ಭಾವನೆಯಲ್ಲಿ ಬ್ರಿಟಿಷ್ ಪ್ರಾಂತಗಳಿಗಿಂತ ಈ ಸಂಸ್ಥಾನ ಒಂದು ಹೆಜ್ಜೆ ಮುಂದಿತ್ತು. ಇಲ್ಲಿನ ಇತಿಹಾಸ, ಸಂಸ್ಕೃತಿ, ಸಂಸ್ಕಾರಗಳೇ ಇದಕ್ಕೆ ಹಿನ್ನೆಲೆ. ಸಂಸ್ಥಾನವನ್ನು ಹಿರಿಮೆಯ ನಾಡಾಗಿ ಮಾಡಲು ರಾಜರೂ ಆಡಳಿತಗಾರರೂ ಸದಾ ಶ್ರಮಿಸುತ್ತಿದ್ದರು. ಗಾಂಧೀಜಿ ಇದನ್ನು 'ರಾಮರಾಜ್ಯ'ವೆಂದು ಕರೆಯುವಂಥ ಮಾದರಿ ಸಂಸ್ಥಾನ ಇದಾಗಿತ್ತು. "ನೀವು ಎರಡು ವಿಧದಲ್ಲಿ ಅದೃಷ್ಟವಂತರು. ನಿಮ್ಮ ಸುತ್ತಲಿನ ನಿಸರ್ಗ ಅತ್ಯಂತ ಸುಂದರ. ನಿಮ್ಮ ರಾಜರು ಒಳ್ಳೆಯವರು, ಉದಾರಹೃದಯರು. ಸದಾ ಅವರಿಗೆ ಜನರ ಯೋಗಕ್ಷೇಮದ ಚಿಂತೆಯೇ ಚಿಂತೆ" ಎಂದು ಸಂಸ್ಥಾನದಲ್ಲಿ ಪ್ರವಾಸ ಮಾಡಿದ ಗಾಂಧೀಜಿ ಹೇಳಿದ್ದರು.

ಇಲ್ಲಿನ ಪ್ರಜೆಗಳೂ ದೇಶಾಭಿಮಾನಿಗಳೂ ಪ್ರಗತಿಪರರೂ ಆಗಿದ್ದು ಪಾರತಂತ್ರ್ಯದ ಸಂಕೋಲೆಯನ್ನು ಕಿತ್ತೊಗೆಯಬೇಕೆಂದು ತವಕಪಡುತ್ತಿದ್ದರು. ಬ್ರಿಟಿಷ್ ಪ್ರಾಂತಗಳಲ್ಲಿನ ಪ್ರಜೆಗಳ ಮುಕ್ತಿಗಾಗಿ ಕೂಡ ಚಿಂತನೆಮಾಡುತ್ತಿದ್ದು, ಆ ಬಗ್ಗೆ ಅನೇಕ ಬಾರಿ ಕ್ರಿಯಾಶೀಲ ಸಹಾನುಭೂತಿ ತೋರಿದವರು. ರಾಜ-ಪ್ರಜೆಗಳ ಸದ್ಭಾವನೆಯಿಂದಾಗಿ ಇಲ್ಲಿ ದೇಶಭಕ್ತಿ ಬೆಳೆದು ಕ್ರಮೇಣ ಅದು ಹೆಮ್ಮರವಾಯಿತು. ಹಿಂದುಸ್ಥಾನದಲ್ಲಿ ಕಾಂಗ್ರೆಸ್ ಸ್ಥಾಪನೆಯಾಗಿ ಅಲ್ಲಿ ಸ್ವಾತಂತ್ರ್ಯದಾಹವು ಅಧಿಕಗೊಳ್ಳುತ್ತ ನಡೆದಂತೆ, ಅದಕ್ಕೂ ಮೊದಲೇ ಇಲ್ಲಿ ನಡೆದ ಘಟನೆಗಳು, ಅಲ್ಲಿನ ಚಟುವಟಿಕೆಗಳಿಗೆ ಒತ್ತಾಸೆ ನೀಡಿದವು. ದಿವಾನ್ ರಂಗಾಚಾರ್ಲು ಅವರು ಪ್ರಜಾಪ್ರತಿನಿಧಿ ಸಭೆ ಸ್ಥಾಪಿಸಿದ್ದು (1881), ಅಂದು ರಾಜರೂ ದಿವಾನರೂ ತೋರಿದ ಪುರೋಗಾಮಿ ಭಾವನೆ ಇಂಥ

ಘಟನೆಗಳಲ್ಲಿ ಒಂದು. ಅಂದು ಪ್ರಜೆಗಳಿಗೆ ಅವರು ನೀಡಿದ ಅಧಿಕಾರ 'ಕ್ರಾಂತಿಕಾರಕ' ಎಂಬ ಭಾವನೆ ಅನೇಕರಿಗೆ ಬಂತು. ಪ್ರಜಾಭಿಪ್ರಾಯಕ್ಕೆ ನೀಡಿದ ಈ ಪುರಸ್ಕಾರ, ಮುಂದೆ ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆಗಳಲ್ಲಿ ನಡೆದ ಕಾರ್ಯಕಲಾಪ ಇವುಗಳೆಲ್ಲ ಪ್ರಜೆಗಳಲ್ಲಿ ಆಡಳಿತದಲ್ಲಿ ಆಸಕ್ತಿ, ಸ್ವಾತಂತ್ರ್ಯಪ್ರೇಮ ಹೆಚ್ಚಿಸಲು ನೆರವಾದವು.

ಸಂಸ್ಥಾನದ ಆಡಳಿತದಲ್ಲಿ ಪ್ರಜಾಪ್ರತಿನಿಧಿಗಳಿಗೆ ಯೋಗ್ಯ ಪಾಲಿರತಕ್ಕದ್ದು, ಆಡಳಿತ ಮಂಡಳಿಯಲ್ಲಿ ಸ್ಥಾನಮಾನ ಇರತಕ್ಕದ್ದು, ಹಣಕಾಸು ವಿಚಾರದಲ್ಲಿ ನಿರಾತಂಕವಾಗಿ ಮಾತನಾಡುವ ಹಾಗೂ ನಿರ್ದಿಷ್ಟ ನಿರ್ಧಾರಕ್ಕೆ ಬರುವ ಬಾಧ್ಯತೆ ಪ್ರಜಾಪ್ರತಿನಿಧಿಗಳಿಗಿರ ತಕ್ಕದ್ದು, ನ್ಯಾಯಾಂಗ, ಆಡಳಿತಾಂಗ ಬೇರೆಬೇರೆಯಾಗಿರತಕ್ಕದ್ದು, ಮುಂತಾದ ವಿಚಾರಗಳಲ್ಲಿ ಆಗ್ಗೆ ತೀವ್ರಗಾಮಿಗಳೆನಿಸಿದ್ದರೂ ಪ್ರತಿನಿಧಿ ಸಭೆಗಳಲ್ಲಿ ಸದಸ್ಯರು ಅವುಗಳನ್ನು ನಿರ್ಭಯವಾಗಿ ಪ್ರತಿಪಾದಿಸಿದ್ದು ಕಾಣಬರುತ್ತದೆ. ಆಡಳಿತವಾದರೂ ಈ ಭಾವನೆ, ಉದ್ದಿಶ್ಯಗಳನ್ನು ತಪ್ಪಾಗಿ ತಿಳಿಯದೆ, ಸಹಾನುಭೂತಿಯಿಂದ ಕಂಡಿತ್ತು !

ಆಯವ್ಯಯವನ್ನು ವಿಮರ್ಶಿಸುವ ಹಕ್ಕು ತಮಗಿರಬೇಕೆಂದು ಪ್ರತಿನಿಧಿಗಳು ವಾದಿಸಿದಾಗ, ಈ ಬಗ್ಗೆ ಪ್ರತಿನಿಧಿ ಸಭೆಯ ಶಕ್ತಿ, ಸಾಮರ್ಥ್ಯಗಳನ್ನು ಶಂಕಿಸಿ ದಿವಾನರು ಕೆಣಕಿದ ಒಂದು ಪ್ರಸಂಗ—"ಸ್ವಾಮಿ, ನಾವು ಬಡ್ಜೆಟ್ಟನ್ನು ತಯಾರಿಸುವ ಕಾಲ ಬರುತ್ತದೆ, ತಯಾರಿಸುತ್ತೇವೆ, ನಮ್ಮ ಸಾಮರ್ಥ್ಯ ತೋರಿಸುತ್ತೇವೆ" ಅದಕ್ಕೆ ಉತ್ತರ. ಇದು 80 ವರ್ಷಗಳ ಹಿಂದಣ ಪ್ರಸಂಗ; ಆದರೆ ಮುಂದೆ ಅರ್ಧ ಶತಮಾನದಲ್ಲೇ ಆ ಮಾತು ಯಥಾರ್ಥವಾಯಿತು. ಬ್ರಿಟಿಷ್ ಆಡಳಿತದ ಸೊಕ್ಕು ಮುರಿಯಲು ಪ್ರಜಾಪ್ರತಿನಿಧಿ ಸಭೆಯಲ್ಲಿ ಸದಸ್ಯರು ಸಲಹೆ ಸೂಚನೆಗಳನ್ನು ಮಂಡಿಸಿದ ಪ್ರಸಂಗಗಳೂ ಉಂಟು. ಅಂಚೆ ವ್ಯವಸ್ಥೆ ಬ್ರಿಟಿಷರ ಅಧೀನವಾಗಿರದೆ, ಸಂಸ್ಥಾನದ್ದೇ ಆಗಿರಬೇಕು, ರೈಲ್ವೆಯಲ್ಲಿ ಬಿಳಿಯರು, ಭಾರತೀಯರು ಎಂಬ ವರ್ಣಭೇದಕ್ಕೆ ಆಸ್ಪದ ಇರಬಾರದು, ಮುಂತಾದ ನಿರ್ಣಯಗಳ ಮಂಡನೆ ಆದುದುಂಟು. ಬ್ರಿಟಿಷ್ ಕಂಪನಿ ನಡೆಸುತ್ತಿದ್ದ ಕೋಲಾರ ಚಿನ್ನದ ಗಣಿಯನ್ನು ರಾಷ್ಟ್ರೀಕರಿಸಬೇಕೆಂಬ ಬೇಡಿಕೆ ಕೂಡ ಆಗ ಬಂದಿತ್ತು.

ತಮ್ಮಲ್ಲೇ ಒಬ್ಬಿಬ್ಬರನ್ನು ಚುನಾಯಿಸಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಮಹಾರಾಜರ ಮಂತ್ರಿಮಂಡಲಕ್ಕೆ ಕಳುಹಿಸುವ ಅಧಿಕಾರ ನೀಡಬೇಕೆಂಬ ನಿರ್ಣಯ 1890ರಲ್ಲಿ ಮಂಡಿಸಿದಾಗ, ದಿವಾನರು ಈ ಬಗ್ಗೆ ಸಹಾನುಭೂತಿ ತೋರಿ ಪ್ರಜಾಪ್ರತಿನಿಧಿಗಳನ್ನು ಪ್ರಶಂಸಿಸಿದ್ದರು. "ಶ್ರೀಮನ್ಮಹಾರಾಜರ ಮಂತ್ರಿಮಂಡಲವನ್ನು ಸಾರ್ವಜನಿಕವಾದ ಅಸ್ತಿಭಾರದ ಮೇಲೆ ನಿರ್ಮಿಸಬೇಕು. ಮಂತ್ರಿಮಂಡಲಕ್ಕೆ ಸಾರ್ವಜನಿಕ ಪ್ರತಿನಿಧಿಗಳನ್ನು ನೇಮಿಸಬೇಕು" ಎಂಬ ನಿರ್ಣಯವನ್ನು ಎರಡು ವರ್ಷದನಂತರ ತರಲಾಗಿತ್ತು. "ಶ್ರೀಮನ್ಮಹಾರಾಜರ ಮಂತ್ರಿಮಂಡಲಕ್ಕೆ ಇಬ್ಬರು ಮೆಂಬರನ್ನಾದರೂ ಚುನಾಯಿಸಿ ಕಳುಹಿಸಲಿಕ್ಕೆ ಈ ಸಭೆಗೆ ಅಧಿಕಾರ ಕೊಡಬೇಕು" ಎಂಬ ನಿರ್ಣಯ ಮತ್ತೆ 1893ರಲ್ಲಿ ಬಂತು. ಇದನ್ನು ಮಂಡಿಸಿದವರು ಎಂ. ವೆಂಕಟ

ಕೃಷ್ಣಯ್ಯ, ಅನುಮೋದಿಸಿದವರು ಚಿಕ್ಕಮಗಳೂರಿನ ಶ್ರೀನಿವಾಸರಾಯರು. "ಮೈಸೂರು ಪ್ರಗತಿಗಾಮಿ ಎನಿಸಿದ ಸಂಸ್ಥಾನ. ಪ್ರಜ್ಞಾಪೂರ್ಣವೆನಿಸಿಕೊಂಡ ಸಂಸ್ಥಾನ. ಇಂಥ ಸಂಸ್ಥಾನದಲ್ಲಿ ಮಂತ್ರಾಲೋಚನಾಸಭೆಯಲ್ಲಿ ಸಾರ್ವಜನಿಕ ಪ್ರತಿನಿಧಿಗಳು ಇರತಕ್ಕದ್ದು ಯೋಗ್ಯ. ಅದೇ ಲಾಂಛನ" ಎಂದು ಸಿ. ನರಸಿಂಹಯ್ಯನವರು ಕೆಲವು ವರ್ಷಗಳ ತರುವಾಯ ಪ್ರಜಾಪ್ರತಿನಿಧಿ ಸಭೆಯಲ್ಲಿ ವಾದಿಸಿದರು. ಈ ರೀತಿ ಅನೇಕ ಮಹನೀಯರು ಅಂದೇ ಅಭಿಪ್ರಾಯ ವ್ಯಕ್ತಪಡಿಸಿ ಇಂದಿನ ಪೀಳಿಗೆಯ ಕೃತಜ್ಞತೆಗೆ ಅರ್ಹರಾಗಿದ್ದಾರೆ.

ಅಂದಿನ ಪತ್ರಿಕೆಗಳೂ ಸಂಸ್ಥಾನದಲ್ಲಿ ರಾಷ್ಟ್ರೀಯ ಭಾವನೆ ಬೇರುಬಿಡಲು ಸಹಾಯಕವಾದವು. ಬ್ರಿಟಿಷರ ನಿರಂತರ ಪ್ರಭುತ್ವದ ಹಾಲಾಹಲದಲ್ಲಿ, ದಬ್ಬಾಳಿಕೆಯ ಕಾಂಡದಲ್ಲಿ ಸಂಸ್ಥಾನದ ಪತ್ರಿಕೆಗಳು ಅಂಜದೆ ಧೀರಸ್ವಭಾವದಿಂದ ಪ್ರಜಾಸ್ವಾತಂತ್ರ್ಯವನ್ನು ಎತ್ತಿಹಿಡಿದವು. 'ಕರ್ನಾಟಕ ಪ್ರಕಾಶಿಕೆ' 1865ರಲ್ಲಿ ಪ್ರಕಟವಾಗುತ್ತಿದ್ದು ಬ್ರಿಟಿಷ್ ಆಳ್ವಿಕೆಯ ಕುರಿತು ತೀಕ್ಷ್ಣ ಟೀಕೆಗಳನ್ನು ಮಾಡುತ್ತಿತ್ತು. "ಮುಸ್ಲಿಮರ ಪ್ರಭುತ್ವದಲ್ಲಿ ಹಿಂದುಗಳು ರಾಜಕೀಯ ಸ್ಥಾನಮಾನಗಳನ್ನು ಕಳೆದುಕೊಂಡರೆ ಬ್ರಿಟಿಷ್ ಪ್ರಭುತ್ವದಲ್ಲಿ ಭಾರತೀಯರು ತಮ್ಮ ಸರ್ವಸ್ವವನ್ನು ಕಳೆದುಕೊಂಡರು" ಎಂದು ಆ ಪತ್ರಿಕೆ ಒಮ್ಮೆ ಬರೆದಿತ್ತು. ಆಗಿನ ಉರ್ದು ಪತ್ರಿಕೆ 'ಕಾಸಿಂ-ಉಲ್-ಅಕ್ಬಾರ್' ಇನ್ನೂ ತೀಕ್ಷ್ಣ ಹಾಗೂ ಕಠಿಣ ಟೀಕೆ ಬರೆಯಿತು. "ಬ್ರಿಟಿಷ್ ಜನಾಂಗವೆಂದರೆ ಮಿಠಾಯಿ ಮಾರುವ ವರ್ತಕನ ಹಾಗೆ. ಅವನು ಮಿಠಾಯಿಗೆ ಮಾದಕ ದ್ರವ್ಯ ಹಾಕಿ ಅಗ್ಗದ ಬೆಲೆಗೆ ಮಾರುತ್ತಾನೆ. ಮಿಠಾಯಿಗೆ ಆಸೆ ಪಟ್ಟವ ಅದನ್ನು ಕೊಂಡು ಬಾಯಿಗೆ ಹಾಕಿಕೊಂಡು ತಿನ್ನುತ್ತಾನೆ. ತಿಂದ ಕೂಡಲೇ ಆ ಪ್ರಾಣಿಗೆ ಪ್ರಜ್ಞೆ ತಪ್ಪುತ್ತದೆ. ಆಗ ಮಿಠಾಯಿಯ ವ್ಯಾಪಾರಿ ಸ್ಮರಣೆ ತಪ್ಪಿದವನ ಮೈಮೇಲಿನ ಬಟ್ಟೆಬರೆ ಇತ್ಯಾದಿಗಳನ್ನು ಅಪಹರಿಸಲು ಹಿಂತೆಗೆಯುವುದಿಲ್ಲ. ಅವರ ನೀತಿಗನುಸಾರವಾಗಿ ಬ್ರಿಟಿಷರು ನಮ್ಮನ್ನು ಸರ್ವತೋಮುಖವಾಗಿ ಲೂಟಿಮಾಡುತ್ತಾರೆ. ಭಾರತವೆಲ್ಲ ದಿವಾಳಿ ಎದ್ದಮೇಲೆ ಸಾಮ್ರಾಜ್ಯ ಅಂತರಿಸಿದಮೇಲೆ ನಮ್ಮನ್ನೆಲ್ಲ ಹೊಟ್ಟೆಗಿಲ್ಲದ ಪರದೇಶಿಗಳನ್ನಾಗಿ ಮಾಡಿ, ನರಕಯಾತನೆಗೆ ಗುರಿಮಾಡಿ, ತಾವೇ ತಾವಾಗಿ ದೇಶವನ್ನು ಬಿಟ್ಟೋಡುವರು."

ಸಂಸ್ಥಾನದಲ್ಲಿ ರಾಷ್ಟ್ರಾಭಿಮಾನ ಮೂಡಲು ಇನ್ನೂ ಕೆಲ ಘಟನೆಗಳು ಸಹಾಯಕವಾದವು. ರಾಷ್ಟ್ರೀಯ ನಾಯಕರನೇಕರು ಆಗಾಗ ಸಂಸ್ಥಾನಗಳಿಗೆ ಆಗಮಿಸಿ, ತಮ ಭಾಷಣ ಸಂಪರ್ಕಗಳಿಂದ ಜನಜಾಗೃತಿ ಮಾಡುತ್ತಿದ್ದರು. ಇಂಥವರು ಜನತೆ ಮತ್ತು ರಾಜಮನೆತನದವರ ಮೇಲೆ ನೇರಪರಿಣಾಮ ಮಾಡುತ್ತಿದ್ದುದು ಒಂದು ವಿಶೇಷ. ರಾಜಾ ರಾಮಮೋಹನ ರಾಯ್, ರಾಮಕೃಷ್ಣ ಪರಮಹಂಸ, ಶಾರದಾದೇವಿ, ವಿವೇಕಾನಂದ, ದಯಾನಂದ ಸರಸ್ವತಿ ಮುಂತಾದವರ ಭೇಟಿ ನಡೆಯಲಾಗದ ಪ್ರಸಂಗಗಳು. ವಿವೇಕಾನಂದರು ಮೈಸೂರಲ್ಲಿ ತಂಗಿ ತಮ್ಮ ಭಾಷಣಗಳಿಂದ ಜನತೆಯನ್ನೂ ರಾಜಮನೆತನದವರನ್ನೂ ಮೈಮರೆಸಿಬಿಟ್ಟರು. ಅವರ ಚಿಕಾಗೋ ಸಂದರ್ಶನಕ್ಕೆ ಮಹಾರಾಜರಾದ

ಚಾಮರಾಜ ಒಡೆಯರೂ, ದಿವಾನ್ ಶೇಷಾದ್ರಿ ಅಯ್ಯರ್ ಅವರೂ ಸಹಾಯ, ಸಹಕಾರ ನೀಡಿದ್ದು ಸರ್ವವಿದಿತ. ಇದೇ ವೇಳೆಗೆ ಬ್ರಹ್ಮಸಮಾಜ, ಥಿಯಾಸಫಿಕಲ್ ಸೊಸೈಟಿ, ಆರ್ಯಸಮಾಜಗಳೂ ಸಂಸ್ಥಾನದಲ್ಲಿ ಸ್ಥಾಪನೆಗೊಂಡಿದ್ದವು.

ವಂಗಭಂಗದನಂತರ ದೇಶದಲ್ಲಿ ನಡೆದ ತೀವ್ರ ಚಳವಳಿ, ಕ್ರಾಂತಿಕಾರಿಗಳ ಚಟುವಟಿಕೆಗಳು, ತಿಲಕರಿಗೆ 1988ರಲ್ಲಿ ಆದ ತೀವ್ರ ಶಿಕ್ಷೆ, ಲಾಲಾ ಲಜಪತರಾಯರ ಗಡೀಪಾರು ಮುಂತಾದ ಘಟನೆಗಳ ಪರಿಣಾಮದ ಜೊತೆ, ಖ್ಯಾತ ಬಂಗಾಲಿ ದೇಶ ಭಕ್ತರ ಬರಹಗಳ ಬಿಸಿಯೂ ಸಂಸ್ಥಾನದಲ್ಲಿ ತಾಗಿತ್ತು. ಈ ಕಾಲದಲ್ಲಿ ಸಂಸ್ಥಾನದ ಒಬ್ಬಿಬ್ಬರು ವ್ಯಕ್ತಿಗಳು ಕ್ರಾಂತಿಕಾರಿಗಳ ಜೊತೆ ಸಂಪರ್ಕ ಹೊಂದಿದ್ದರೆನ್ನಲಾಗಿದೆ. ಈ ಪೈಕಿ ಒಬ್ಬರು ಶ್ರೇಷ್ಠ ನ್ಯಾಯಾಸ್ಥಾನದ ನ್ಯಾಯಮೂರ್ತಿಗಳಾಗಿದ್ದು ಅವರು ಕ್ರಾಂತಿಕಾರಿಗಳೊಡನೆ ಸಂಪರ್ಕ ಹೊಂದಿದ ಬಗ್ಗೆ ಬ್ರಿಟಿಷ್ ಆಡಳಿತ ಸಂಸ್ಥಾನದ ಆಡಳಿತದ ಜೊತೆ ಅಭ್ಯಂತರ ತೆಗೆದುದರಿಂದ ಆ ನ್ಯಾಯಮೂರ್ತಿಗಳು ತಮ್ಮ ಪದವಿ ತ್ಯಜಿಸಿ ಸಾರ್ವಜನಿಕ ಜೀವನಕ್ಕೆ ಮರಳಿದರೆಂದು ಗೊತ್ತಾಗುತ್ತದೆ. ಇವರೇ ಮುಂದೆ ಬೆಂಗಳೂರು ನಗರದಲ್ಲಿ ಕಾಂಗ್ರೆಸ್ ಸಮಿತಿ ಸ್ಥಾಪಿಸಿ ಸ್ಥಾಪಕರಾದ ಎಸ್. ಎಸ್. ಸೆಟ್ಲೂರರು. ಆ ಕಾಲದಲ್ಲಿ ಅಲ್ಲೋಲಕಲ್ಲೋಲ ಉಂಟುಮಾಡಿದ ಅಸಾಧಾರಣ ಪ್ರಕರಣವಿದು !

ತಿಲಕರ 'ಕೇಸರಿ' 'ಮರಾಠಾ'ಗಳ ಜೊತೆ, ಅರವಿಂದ ಮುಂತಾದವರ ಕೆಲವು ಕ್ರಾಂತಿಕಾರಿ ಪತ್ರಿಕೆಗಳು ಸಂಸ್ಥಾನದಲ್ಲಿ ನುಸುಳಿ ಬರುತ್ತಿದ್ದವು. ಸುಬ್ರಹ್ಮಣ್ಯ ಭಾರತಿ, ವಿ. ಎಸ್. ಅಯ್ಯರ್ ಮುಂತಾದವರ ಪ್ರಭಾವವೂ ಇಲ್ಲಿ ಆಗುತ್ತಿತ್ತು. ಸ್ವದೇಶಿ ಪ್ರಚಾರವೂ ಭರದಿಂದ ಸಾಗಿ ಅನೇಕ ಕಾರ್ಯಕರ್ತರು ಸಂಸ್ಥಾನದಲ್ಲಿ ಇದಕ್ಕಾಗಿ ದುಡಿಯುತ್ತಿದ್ದರು. ವಿದೇಶಿ ಸಕ್ಕರೆಯ ವಿರುದ್ಧವಂತೂ ತೀವ್ರ ಯಶಸ್ವಿಯಾದ ಪ್ರಚಾರದ ಪ್ರಸಂಗವೂ ಬಂದಿತ್ತು. ಸ್ವಾಮಿ.ರಾವ್ ದೇಶಪಾಂಡೆ ಎಂಬ ಕಾರ್ಯಕರ್ತರ ಪ್ರಚಾರದ ಪರಿಣಾಮವಾಗಿ ಮೈಸೂರು ನಗರದಲ್ಲಿ ಭಾರಿ ಘಟನೆಯೊಂದು ನಡೆಯಿತಂತೆ. ಅರಮನೆಯವರು ಪ್ರತಿವರ್ಷದಂತೆ ನಡೆಸುತ್ತಿದ್ದ ವನಭೋಜನಕೂಟದಲ್ಲಿ ದೇಶಪಾಂಡೆ ಯವರ ಪ್ರಚಾರದಿಂದಾಗಿ ಅಲ್ಲೋಲಕಲ್ಲೋಲ ನಡೆದು ವಿದೇಶಿ ಸಕ್ಕರೆಯಿಂದ ಮಾಡಿದ್ದ ಸಿಹಿಪದಾರ್ಥಗಳನ್ನು ಜನರು ಬಹಿಷ್ಕರಿಸಿ ನಾಶಗೊಳಿಸಿಬಿಟ್ಟರೆಂದು ಪ್ರತೀತಿ ಇದೆ. ಮುಂದೆ ಈ ದೇಶಪಾಂಡೆಯವರು ಗಾಂಧೀಜಿಯ ಅಸಹಕಾರ ಚಳವಳಿ, ಖಾದಿ ಪ್ರಚಾರದಲ್ಲೂ ಪಾಲುಗೊಂಡರು. ಹೀಗೆ ಸಂಸ್ಥಾನದಲ್ಲಿ ಬಲವಾದ ರಾಷ್ಟ್ರೀಯ ಚಟು ವಟಿಕೆಗಳನ್ನು ಹತ್ತಿಕ್ಕಲು ಮಹಾರಾಜರಮೇಲೆ ಬ್ರಿಟಿಷ್ ಆಡಳಿತ ಒತ್ತಾಯ ತಂದಿತು. ಸಂಸ್ಥಾನ ಮಣಿಯಬೇಕು; ವಿಧಿಯಿಲ್ಲ. ನಿರ್ಬಂಧಗಳನ್ನು ಹೇರುವ ವಿಚಾರ ಬಂತು. ಪತ್ರಿಕೆಗಳ ಮೇಲೆ ನಿರ್ಬಂಧ ಹೇರುವ 'ಕರಾಳ ಶಾಸನ' ಬಂತು. ಪ್ರಜಾಪ್ರತಿನಿಧಿ ಸಭೆಯಲ್ಲಿ ಈ ಬಗ್ಗೆ ಟೀಕೆ ಬಂತು. ಹೊರಗೂ ಚಳವಳಿ ನಡೆಯಿತು. ಆದರೆ ಶಾಸನ

ಜಾರಿಗೆ ಬಂದು, ಕೆಲವು ಪತ್ರಿಕೆಗಳು ನಿಂತವು. ಓರ್ವ ಸಂಪಾದಕರನ್ನು ಗಡೀಪಾರು ಮಾಡಿ ಅವರ ಮುದ್ರಣಾಲಯವನ್ನು ಮುಟ್ಟುಗೋಲು ಹಾಕಿದರು. ಮತ್ತೊಬ್ಬ ಪ್ರತಿಭಾವಂತ ಪತ್ರಕರ್ತರು ತಾವೇ ಸಂಸ್ಥಾನಭ್ರಷ್ಟರಾಗಿ ಬ್ರಿಟಿಷ್ ಪ್ರಾಂತವನ್ನು ಸೇರಿದರು. ಈ ಶಾಸನ. ಆಡಳಿತದ ಧೋರಣೆಗಳ ಕುರಿತು ಭಾರತದ ಮುಖಂಡರೂ ಖಂಡಿಸಿದರು. ಅ.ಭಾ. ಕಾಂಗ್ರೆಸ್‌ನಲ್ಲೂ ಖಂಡನಾ ನಿರ್ಣಯ ಆಯಿತು. ರಾಷ್ ಬಿಹಾರಿ ಘೋಷರೂ ತಮ್ಮ ಅಸಂತೋಷ ವ್ಯಕ್ತಪಡಿಸಿದರು. ಬ್ರಿಟಿಷ್ ಪ್ರಾಂತಗಳಿಂದೆಲ್ಲ ಸಹಾನುಭೂತಿ ಹರಿದು ಬಂತು. ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆಗಳ ಪ್ರತಿ ಅಧಿವೇಶನದಲ್ಲೂ ಈ ಶಾಸನದ ರದ್ದತಿಗಾಗಿ ನಿರ್ಣಯ ಬರುತ್ತಿತ್ತು. ಕೆಲವು ಪತ್ರಿಕೆಗಳು ಇದಕ್ಕೆ ಬೆಂಬಲ ನೀಡುತ್ತಿದ್ದವು. ಈ ಕುರಿತು ತಗಡೂರು ರಾಮಚಂದ್ರರಾಯರು ಸತ್ಯಾಗ್ರಹ, ನಿಯಮಗಳ ಉಲ್ಲಂಘನೆ ಇವುಗಳನ್ನು ಸತತವಾಗಿ ಕೈಕೊಂಡು, ಸಾರ್ವಜನಿಕರಿಂದ ಹೃತ್ಪೂರ್ವಕ ಸಹಕಾರ ಪಡೆದರು. ಕೆಲವರ್ಷಗಳ ನಂತರ ಈ ಶಾಸನ ರದ್ದಾಯಿತು. ಇದಕ್ಕೆ ಶ್ರಮಿಸಿದ ಪ್ರಜಾಪ್ರತಿನಿಧಿಗಳ ಧೈರ್ಯ, ಶ್ರಮ ಸ್ಮರಣೀಯವಾದದ್ದು.

ದ್ವಿತೀಯ ಮಹಾಯುದ್ಧದ ಕಾಲಕ್ಕೆ ಬೆಸೆಂಟರು ಹೋಂ ರೂಲ್ ಲೀಗ್ ಸ್ಥಾಪಿಸಿದ್ದು, ಆಗಲೇ 'ನ್ಯೂ ಇಂಡಿಯಾ' ಪತ್ರಿಕೆಯ ಮೂಲಕ ಸಂಸ್ಥಾನದಲ್ಲಿ ಜನಪ್ರಿಯರಾಗಿದ್ದ ಅವರು, ತಮ್ಮ ಹೊಸ ಚಳವಳಿಯಿಂದ ರಾಷ್ಟ್ರೀಯ ಭಾವನೆಯು ಸಂಸ್ಥಾನದಲ್ಲಿ ಬೆಳೆಯಲು ಕಾರಣರಾದರು. ಥಿಯಾಸಫಿಕಲ್ ಸೊಸೈಟಿ ಆಗ ಸಂಸ್ಥಾನದಲ್ಲೆಲ್ಲ ಹರಡಿದ್ದರಿಂದ ಆಗಲೇ ಬೆಸೆಂಟರಿಗೆ ಇಲ್ಲಿ ಸಾಕಷ್ಟು ಅನುಯಾಯಿಗಳೂ ಇದ್ದರು. ಅವರ ಅನುಯಾಯಿಗಳ ಬಗ್ಗೆ ಸರಕಾರ ತಳೆದ ನೀತಿಯಿಂದ ಸಂಸ್ಥಾನದಲ್ಲೂ ಬ್ರಿಟಿಷ್ ವಿರೋಧಿ ಭಾವನೆ ಬೆಳೆಯಿತು. ರವೀಂದ್ರನಾಥ ಠಾಕೂರ, ಸಿ. ಎಫ್. ಆಂಡ್ರೂಸ್, ಸಿ. ಪಿ. ರಾಮಸ್ವಾಮಿ ಅಯ್ಯರ್ ಇವರು ಸಂಸ್ಥಾನಕ್ಕೆ ನೀಡಿದ ಭೇಟಿಯೂ ಉಲ್ಲೇಖನಾರ್ಹ ಘಟನೆಗಳಾಗಿ, ಇದರ ಹಿಂದೆಯೇ ದಕ್ಷಿಣ ಆಫ್ರಿಕದಿಂದ ಆದೇ ಮರಳಿದ್ದ ಗಾಂಧೀಜಿ ಸಂಸ್ಥಾನಕ್ಕೆ ನೀಡಿದ ಭೇಟಿ ಚಿರಸ್ಮರಣೀಯ ಘಟನೆಯಾಯಿತು (1915). ಗಾಂಧೀಜಿಯವರ ಮುಂದಿನ ಚಟುವಟಿಕೆಗಳೆಲ್ಲ ಸಂಸ್ಥಾನದ ಜನಗಳ ಮನಸೆಳೆದು ರಾಷ್ಟ್ರೀಯ ಜಾಗೃತಿಗೆ ಹಾದಿಮಾಡಿಕೊಟ್ಟಿತು. ಜಲಿಯನ್‌ವಾಲಾ ಬಾಗ್ ಪ್ರಕರಣ ನಡೆದಾಗ ಇಡೀ ದೇಶದ ಜೊತೆ ಮೈಸೂರು ಕೂಡ ತಲ್ಲಣಿಸಿತೆಂದು ಬೇರೆ ಹೇಳಬೇಕಾಗಿಲ್ಲ. ಟಿಳಕರು ತೀರಿಕೊಂಡಾಗ (1920) ಸಂಸ್ಥಾನದಲ್ಲಿ ಅನೇಕ ಕಡೆ ಸಂತಾಪ ಸೂಚಕ ಸಭೆಗಳಾದುವು. ಬೆಂಗಳೂರಿನ ದೊಡ್ಡಣ್ಣ ಹಾಲ್ ಮೈದಾನದಲ್ಲಿ, ನಿವೃತ್ತ ಚೀಫ್ ಇಂಜಿನಿಯರ್ ಕರ್ಪೂರ ಶ್ರೀನಿವಾಸರಾಯರ ನೇತೃತ್ವದಲ್ಲಿ ಈ ಸಭೆ ಆಯಿತು. ಬೆಂಗಳೂರಲ್ಲಿ ಭಾರಿ ಹರತಾಳ ಆಯಿತು. ಶಾಲೆಗಳನ್ನು ಮುಚ್ಚಿಸಲು ವಿದ್ಯಾರ್ಥಿಗಳು ಶ್ರಮಿಸಿದರು ನಿಧನದ ಹತ್ತನೇ ದಿನ ಕೆಂಪಾಂಬುಧಿಕೆರೆಯಲ್ಲಿ ಟಿಳಕರಿಗೆ ಧರ್ಮೋದಕ

ನನ್ನು ಕರ್ಪೂರ ಅವರ ನೇತೃತ್ವದಲ್ಲಿ ಸಹಸ್ರಾರು ಜನ ಬಿಟ್ಟ ಪ್ರಸಂಗ ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತೆ ಇದೆ. ಮೈಸೂರಲ್ಲೂ ಸಭೆ ಆಗಿತ್ತಷ್ಟೇ ಅಲ್ಲ; 'ತಿಲಕ್ ಯೂನಿಯನ್' ಎಂಬ ಸಂಸ್ಥೆ ಸ್ಥಾಪಿತವಾಯಿತು. ಅದೇ ಮುಂದೆ ಕಾಂಗ್ರೆಸ್ ಆಗಿ ರೂಪ ತಾಳಿತು.

## ಗಾಂಧೀಯುಗ

ಆಗಿನ್ನೂ ನಾನು ನವತರುಣ. ಬೆಂಗಳೂರಲ್ಲಿ ಓದುತ್ತಿದ್ದ ವಿದ್ಯಾರ್ಥಿ. ಮದ್ರಾಸಿನ 'ಹಿಂದೂ' 'ಸ್ವರಾಜ್ಯ' ಪತ್ರಿಕೆಗಳನ್ನು ಓದಿ ಪ್ರಭಾವಿತನಾದವನು. ಅವೇ ಆಗ ಮೈಸೂರಲ್ಲಿ ರಾಷ್ಟ್ರೀಯ ವಿಚಾರಗಳನ್ನು ಬಿಂಬಿಸುತ್ತಿದ್ದ ಪತ್ರಿಕೆಗಳು. ಸಂಸ್ಥಾನದಲ್ಲಿ ಆಗ ಅಂಥ ರಾಷ್ಟ್ರೀಯ ಪತ್ರಿಕೆಗಳಿರಲಿಲ್ಲ. 'ಯಂಗ್ ಇಂಡಿಯಾ' ಕೂಡ ಓದುತ್ತಿದ್ದೆ. ಅದು ನಮಗೆ 'ಗೀತೆ'ಯಂತೆ. ಕೆಲಕಾಲ ಅದರ ಏಜಂಟನೂ ಆಗಿದ್ದೆ. ಮದ್ರಾಸಿನ ಜಿ. ಎ. ನಟೇಶನ್ ಪ್ರಕಟಿಸುತ್ತಿದ್ದ ದೇಶಭಕ್ತರ ಚರಿತ್ರೆಗಳೂ ನನ್ನನ್ನು ಆಕರ್ಷಿಸಿದವು. ಚಳವಳಿ ಸೇರಲು ಉತ್ಸಾಹ ತಂದ ಪ್ರಸಂಗ, 1920ರ ಕೊನೆಯಷ್ಟೊತ್ತಿಗೆ ಬೆಂಗಳೂರಿಗೆ ಗಾಂಧೀಜಿ, ಷೌಕತ್ ಅಲಿ ಇವರ ಭೇಟಿ, ಭಾಷಣ. ಆಗ ದಂಡಿನ ಪ್ರದೇಶದ ಮುಸಲ್ಮಾನರು ಖಿಲಾಫತ್ ಚಳವಳಿಯಲ್ಲಿ ಉತ್ಸಾಹದಿಂದ ಪಾಲುಗೊಂಡರು. ಈ ಉಗ್ರ ಚಳವಳಿಯಲ್ಲಿ ನಗರದ ಹಿಂದುಗಳೂ ಪಾಲುಗೊಂಡಿದ್ದರು. ದಂಡಿನ ರೈಲ್ವೆ ನಿಲ್ದಾಣದ ಬಳಿ ದೊಡ್ಡ ಹೂವಿನ ತೋಪಿನಲ್ಲಿ ಗಾಂಧೀಜಿ ಭಾಷಣ. ಅಸಂಖ್ಯಾತ ಜನ. ಆದರೆ ಶ್ರೇಷ್ಠ ಮಟ್ಟದ ಸಭಾವ್ಯವಸ್ಥೆ. ಆ ಕಾಲದ ಬಹಿರಂಗ ಸಭೆಗಳೆಲ್ಲ ಹೀಗೆ. ಭಾರಿ. ಮುಸಲ್ಮಾನ ಬಾಂಧವರ ಉತ್ಸಾಹ, ಶಿಸ್ತೂ ಅಂತಹದೇ. ಸೇಲಂನಿಂದ ಸಂಜೆ ಗಾಂಧೀಜಿ, ಷೌಕತ್ ಅಲಿ ಬಂದರು. ಅವರಿಗೆ ಅದ್ಭುತ ಸ್ವಾಗತ. ಭಾಷಣಕ್ಕೆ ಮಳೆಯಿಂದ ಅಡ್ಡಿ. ಜನ ಚದರಲಿಲ್ಲ. ಗಾಂಧೀಜಿ ಮಳೆಯಲ್ಲಿ ನೆನೆದೇ ಭಾಷಣಮಾಡಿದರು. ಷೌಕತ್ ಅಲಿ ಅವರದೂ ಭಾಷಣ ಆಯಿತು. ನಾನೂ ಕೆಲ ಸ್ನೇಹಿತರೂ ಈ ಭಾಷಣದಿಂದ ಪ್ರಭಾವಿತರಾಗಿ ಖಿಲಾಫತ್ ಚಳವಳಿಯಲ್ಲಿ ಸೇರಿಕೊಂಡೆವು ರಜ್ವಿ ಸೋದರರೂ ರಾಮಲಾಲ್ ತಿವಾರಿ ಅವರೂ ಖಿಲಾಫತ್ ಚಳವಳಿಯ ಪ್ರಮುಖರು. ನಾಗಪುರ ಕಾಂಗ್ರೆಸ್ಸಿಗೂ ಸಂಸ್ಥಾನದಿಂದ ಒಬ್ಬಿಬ್ಬರು ಪ್ರತಿನಿಧಿಗಳು ಹೋಗಿದ್ದರೆಂದು ಪ್ರತೀತಿ. ಅವರ ಹೆಸರು ತಿಳಿದಿಲ್ಲ. ನಾಗಪುರದಲ್ಲಿ ಕೆ.ಪಿ ಸಿ.ಸಿ. ರಚಿಸಿದ್ದಕ್ಕೆ ಅನುಗುಣವಾಗಿ, ಬೆಂಗಳೂರು ನಗರದಲ್ಲೂ ಕಾಂಗ್ರೆಸ್ ಸಮಿತಿ ರಚಿಸಿದರು. ಕೆಲಕಾಲದ ನಂತರ ಇದು ಜಿಲ್ಲಾ ಸಮಿತಿ, ಮುಂದೆ ಸ್ವತಂತ್ರ ಸಂಸ್ಥಾನೀಯ ಸಮಿತಿ ಆಯಿತು. ಮೈಸೂರು, ತುಮಕೂರು ಮುಂತಾದ ಕಡೆಯೂ ಕೆಲಕಾಲಾನಂತರ ಸಮಿತಿಗಳಾದವು. ಎಸ್. ಎಸ್. ಸೆಟ್ಲೂರ್ ಬೆಂಗಳೂರು ಸಮಿತಿಯ ಸ್ಥಾಪನೆಗೆ ಕಾರಣಕರ್ತರು ಹಾಗೂ ಅದರ ಅಧ್ಯಕ್ಷರು. ನಾನು ಆಗ ಸ್ವಯಂಸೇವಕನಾಗಿದ್ದೆ. 1921ರಲ್ಲಿ ಅಹ್ಮದಾಬಾದ್‌ನಲ್ಲಿ

ನಡೆದ ಕಾಂಗ್ರೆಸ್ಸಿಗೆ ಎಸ್. ಆರ್. ಎಸ್. ರಾಘವನ್ ತೆರಳಿದ್ದರು 1922ರಲ್ಲಿ ಪ್ರಿನ್ಸ್ ಆಫ್ ವೇಲ್ಸ್ ಆಗಮಿಸಿದಾಗ ಬೆಂಗಳೂರಲ್ಲಿ ಪ್ರಚಂಡ ಹರತಾಳ ಆಯಿತು. ಆಗ ದಂಡಿನ ಪ್ರದೇಶದ ಬ್ರಾಡ್‌ವೇಯಲ್ಲಿ ಗೋಳಿಬಾರ್ ಆಗಿ ದಸ್ತಗೀರ್, ಅಬ್ದುಲ್ ರಜಾಕ್ ಎಂಬಿಬ್ಬರು ತರುಣರು ಮೃತಪಟ್ಟರು. ಅನೇಕರಿಗೆ ಗಾಯವಾಯಿತು. ಮೊಕದ್ದಮೆಗಳಾಗಿ ಅನೇಕರಿಗೆ ಶಿಕ್ಷೆ ಆಯಿತು. ಈ ಸ್ಟೈಕಿ ಮಿರ್ ಒಬಿದುಲ್ಲಾ ಎಂಬುವರು ಇನ್ನೂ ಜೀವಂತವಾಗಿದ್ದಾರೆ. ನಗರ ಪ್ರದೇಶದಲ್ಲಿ ಮಾತ್ರ ಹರತಾಳ ಶಾಂತವಾಗಿತ್ತು.

ತಿಲಕರ ನಿಧನದ ವಾರ್ಷಿಕ ದಿನ ಶಾಲೆ, ಕಾಲೇಜುಗಳ ಯಶಸ್ವಿ ಬಹಿಷ್ಕಾರ ಬೆಂಗಳೂರಲ್ಲಿ ಆಯಿತು. ವಕೀಲ ಡಿ॥ ಎಸ್. ಡಿ. ಗಣೇಶರಾವ್, ವೆಂಕಟೇಶಯ್ಯ ಇವರು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದರು. ಆಗ ವೆಸ್ಲಿಯನ್ ಮಿಶನ್ ಶಾಲೆ ಮುಚ್ಚಲು ಕಲ್ಲು ಬೀರಬೇಕಾದ ಪ್ರಸಂಗ ಬಂತು. ಕೊನೆಗೆ ಶಾಲೆ ಮುಚ್ಚಿತು. ಈ ಘಟನೆಯಲ್ಲಿ ಅದೇ ಶಾಲೆಯ ವಿದ್ಯಾರ್ಥಿಯಾಗಿದ್ದ ನಾನೂ ಪಾಲುಗೊಂಡಿದ್ದೆ. ಮೈಸೂರು ನಗರದಲ್ಲೂ ಅಂದು ಹೀಗೆ ಘರ್ಷಣೆ ಆಗಿತ್ತು. ಹೊರಗಿನಿಂದ ಮುಖಂಡರು ಬಂದು ಭಾಷಣ ಮಾಡುವ ಪ್ರಸಂಗಗಳು ನಡೆದಂತೆ, ಬಹುಶಃ 1922ರಲ್ಲಿ ಒಮ್ಮೆ ಸರಕಾರ ನಿಷೇಧಾಜ್ಞೆ (ಸೆ॥ 144) ಜಾರಿಮಾಡಿತು. (ಈ ರೀತಿ ನಿಷೇಧ ಆಗ ಅಪೂರ್ವವಾಗಿ ಬರುತ್ತಿತ್ತು, ಬಂದ ಭಾಷಣಕಾರ ಅಗ್ನಿಭಕ್ಷಕ ಎಂದು ಖ್ಯಾತನಾದರೆ, ಅಥವಾ ರೆಸಿಡೆಂಟರು ಒತ್ತಾಯಿಸಿದರೆ.) ಆಗ ಕಾಂಗ್ರೆಸ್ ಸಮಿತಿ ಹೈಕೋರ್ಟಿನಲ್ಲಿ ಈ ಆಜ್ಞೆಯನ್ನು ಪ್ರಶ್ನಿಸಿತು. ಸೆಟ್ಲೂರ್‌ರದೇ ವಕಾಲತ್ತು. ಆಂಗ್ಲರಾದ ಮುಖ್ಯ ನ್ಯಾಯಮೂರ್ತಿಗಳು, ಎಂದು, ಯಾವ ಸಂದರ್ಭದಲ್ಲಿ 144ನೆಯ ಸೆ॥ ಪ್ರಯೋಗ ಮಾಡಬೇಕು, ಅದರ ವ್ಯಾಪ್ತಿ, ಉದ್ದೇಶ ಏನು ಮುಂತಾದ ಬಗ್ಗೆ ತೀರ್ಪಿತ್ತರು. ಈ ಮಹತ್ವದ ತೀರ್ಪನ್ನು ಇಂಗ್ಲಿಷ್, ಕನ್ನಡ, ಉರ್ದುಗಳಲ್ಲಿ ಅಚ್ಚುಹಾಕಿಸಿ ಕಾಂಗ್ರೆಸ್ ಸಮಿತಿ ಹಂಚಿತ್ತು. 'ಲಾ ರಿಪೋರ್ಟ'ನಲ್ಲೂ ಇದು ಪ್ರಕಟವಾದಂತೆ ನೆನಪು.

ಬೆಂಗಳೂರು ನಗರ ಟೌನ್ ಕಾಂಗ್ರೆಸ್ ಅಧ್ಯಕ್ಷರಾದ ಎಸ್. ಎಸ್. ಸೆಟ್ಲೂರರ ಪರಿಚಯ ಇಲ್ಲಿ ಮಾಡಿಕೊಡಬೇಕು. ಅವರೊಬ್ಬ ಅಸಾಧಾರಣ ವ್ಯಕ್ತಿ. ಪ್ರಸಿದ್ಧ ವಕೀಲರು, ಪಂಡಿತರು, ಸುಸಂಸ್ಕೃತರು, ಉದಾರಿಗಳು, ಪತ್ರಕರ್ತರೂ ಹೌದು. ಲೋಕಮಾನ್ಯರ ನಿಕಟಸಂಪರ್ಕ ಇದ್ದವರು. ವಿದ್ಯಾಪಕ್ಷಪಾತಿಗಳು ಹಾಗೂ ಪರಮ ದೇಶಭಕ್ತರು. ಸಂಸ್ಥಾನದ ಮುಖ್ಯನ್ಯಾಯಾಲಯದ ನ್ಯಾಯಮೂರ್ತಿಗಳಾಗಿದ್ದವರು. ಕ್ರಾಂತಿಕಾರಿ ಅರವಿಂದ ಘೋಷರೊಡನೆ ಸಂಪರ್ಕ ಉಳ್ಳವರೆಂದು ಬ್ರಿಟಿಷ್ ಆಡಳಿತ ಸಂಸ್ಥಾನದ ಆಡಳಿತವನ್ನು ಎಚ್ಚರಿಸಿತ್ತು. ತಮ್ಮ ಸ್ವಾಭಿಮಾನವನ್ನು ಬಲಿಗೊಡಲು ಇಷ್ಟವಿಲ್ಲದ ಇವರು ತಮ್ಮ ಪದವಿಯನ್ನೇ ಬಲಿಗೊಟ್ಟು ತ್ಯಾಗಮೂರ್ತಿಗಳೆನಿಸಿದರು. ಮುಂದೆ ಸ್ವತಂತ್ರ ವಕೀಲಿ ನಡೆಸಿ ಕೀರ್ತಿಗಳಿಸಿದರು. ಮದ್ರಾಸು, ಬೊಂಬಾಯಿಗಳಲ್ಲೂ ಇವರ ಕೀರ್ತಿ ಹೆಚ್ಚಿತು. ಲಂಡನಿನ ಪ್ರಿವಿ ಕೌನ್ಸಿಲ್‌ವರೆಗೂ ಹೋಗಿ ಇವರು

ನಾದಿಸಿದ್ದುಂಟು. 'ಮಿತಾಕ್ಷರ' ಎಂಬ ನ್ಯಾಯಶಾಸ್ತ್ರಗ್ರಂಥದ ಕುರಿತು ವ್ಯಾಖ್ಯಾನ ಬರೆದರು. ಅಲಹಾಬಾದಿನ 'ಲೀಡರ್'ನ ವಿಶೇಷ ಬಾತ್ಮೀದಾರರಾಗಿದ್ದರು. 'ಹಿಂದೂ'ವಿನಲ್ಲಿ ಆಗಾಗ ಲೇಖನ ಬರೆಯುತ್ತಿದ್ದರು. ಮರಾಠಿ ಭಾಷೆಯಲ್ಲೂ ಸುಲಲಿತವಾಗಿ ಮಾತನಾಡಬಲ್ಲವರು. ಕಾಂಗ್ರೆಸ್ ನಾಯಕವರ್ಗದಲ್ಲಿ ಇವರಿಗೆ ಗಣ್ಯಸ್ಥಾನವಿದ್ದು 1921ರಲ್ಲಿ ಧಾರವಾಡದಲ್ಲಿ ನಡೆದ ಗೋಲಿಬಾರ್ ಪ್ರಕರಣದ ವಿಚಾರಣಾ ಸಮಿತಿಯಲ್ಲಿ ಇವರೂ ಸದಸ್ಯರಾಗಿದ್ದರು. ಸ್ವಾಮಿ ವಿವೇಕಾನಂದರು ಅಮೇರಿಕಾಕ್ಕೆ ಹೋಗುವ ಮುನ್ನ ಅವರಿಗೆ ಸೆಟ್ಲೂರ್ ಸತ್ಕಾರವೇರ್ಪಡಿಸಿ ಶುಭ ಕೋರಿದ್ದು ಉಲ್ಲೇಖಾರ್ಹ.

ಸೆಟ್ಲೂರರ ನಾಯಕತ್ವದಲ್ಲಿ ಬೆಂಗಳೂರಲ್ಲಿ ಕಾಂಗ್ರೆಸ್‌ನ ಚಟುವಟಿಕೆ ಮೊದಲಿಡಲು ಅನೇಕ ಯುವಕರು ಅವರ ಜೊತೆ ಸೇರಿಕೊಂಡರು. ಅಂಥವರಲ್ಲಿ ನಾನೂ ಒಬ್ಬನಾಗಿರುವುದು ನನ್ನ ಭಾಗ್ಯ.

ಇದೇ ಕಾಲಕ್ಕೆ ಮೈಸೂರು ನಗರದಲ್ಲಿ ವೆಂಕಟಕೃಷ್ಣಯ್ಯನವರೂ ತುಮಕೂರಿನಲ್ಲಿ ಕೆ. ರಂಗೈಯಂಗಾರ್ ಹಾಗೂ ಅವರ ಮಿತ್ರರೂ ಮಲೆನಾಡಿನ ಹೊಸಕೊಪ್ಪ ಕೃಷ್ಣರಾಯರೂ ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟರೂ ಕಾಂಗ್ರೆಸ್ ಭಕ್ತರಾಗಿ ತಮ್ಮ ಪಾಲಿನ ಸೇವೆಯನ್ನು ಚೆನ್ನಾಗಿಯೇ ಮಾಡಿದರು.

ಬೆಂಗಳೂರಿನ ದಂಡಿನ (ಕಂಟೋನ್‌ಮೆಂಟ್) ಪ್ರದೇಶ ಬ್ರಿಟಿಷ್ ಆಡಳಿತಕ್ಕೇ ಒಳಪಟ್ಟಿದ್ದು ಆ ಕಾಲದಲ್ಲಿ ಖಿಲಾಫತ್ ಚಳವಳಿ ರಭಸದಿಂದ ಹಾಜಿ ಉಸ್ಮಾನ್ ಸೇಠ್ ಎಂಬವರ ನೇತೃತ್ವದಲ್ಲಿ ನಡೆಯುತ್ತಿತ್ತು. ಸೇಠರು ಖಿಲಾಫತ್ ಹಾಗೂ ಕಾಂಗ್ರೆಸ್ ಚಳವಳಿಯಿಂದಾಗಿ ಅಪಾರ ಕಷ್ಟನಷ್ಟ ಅನುಭವಿಸಿದರು. ಅವರೊಬ್ಬ ಗಣ್ಯ ಶ್ರೀಮಂತ ವ್ಯಾಪಾರಿ. ಅಂಗೋರಾ, ಸ್ಮರ್ನಾ ಪರಿಹಾರ ನಿಧಿ, ಬಟ್ಟೆ ಶೇಖರಿಸುವುದು ಅಂದಿನ ಕಾರ್ಯಕ್ರಮಗಳಲ್ಲಿ ಒಂದು. ಈ ಕೆಲಸದಲ್ಲಿ ನಾನೂ ನನ್ನ ಸ್ನೇಹಿತರೂ ಪಾಲುಗೊಳ್ಳುತ್ತಿದ್ದೆವು. ದಂಡಿನ ಮುಸಲ್ಮಾನ್ ಬಂಧುಗಳು ನಗರದಲ್ಲಿ ನಡೆಯುತ್ತಿದ್ದ ರಚನಾತ್ಮಕ ಚಟುವಟಿಕೆಗಳಿಗೂ ಅನೇಕ ಬಗೆಯಿಂದ ನೆರವಾಗುತ್ತಿದ್ದರು. ಮೋದಿ ಅಬ್ದುಲ್ ಗಫೂರ್ ಎಂಬುವರು ನಗರ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದು ತಿಂಗಳಿಗೆ ಐವತ್ತು ರೂ.ನಂತೆ ಕಾಣಿಕೆಯನ್ನು ಕಾಂಗ್ರೆಸ್ಸಿಗೆ ಬಹುಕಾಲ ಕೊಡುತ್ತಿದ್ದರು. ರಜ್ವಿ ಸೋದರರೂ ಇಲ್ಲಿ ಉಲ್ಲೇಖಿಸಬೇಕಾದವರು. ಇವರು ಬೆಂಗಳೂರು ಬಿನ್ನಿ ಮಿಲ್ ಏಜೆಂಟರಾಗಿದ್ದು ಒಳ್ಳೆಯ ವ್ಯಾಪಾರ ಇವರಿಗಿತ್ತು. ಟಿಪ್ಪುಸುಲ್ತಾನ್ ವಂಶೀಕರಾದ ಇವರ ತ್ಯಾಗ ಸಾಮಾನ್ಯವಾದುದಲ್ಲ. ಇವರ ದೇಶಸೇವೆಯಂತೂ ವರ್ಣಿಸಲು ಶಕ್ಯವಿಲ್ಲ. ಖಿಲಾಫತ್ ಚಳವಳಿ, ಕಾಂಗ್ರೆಸ್ ಆಂದೋಲನಗಳಲ್ಲಿ ಇವರ ಪಾತ್ರ ಅನಿರ್ವಚನೀಯವಾದುದು. ದೊಡ್ಡವರಾದ ಎಸ್. ಎನ್. ಎಂ. ರಜ್ವಿ ಸಾತ್ವಿಕ ಸ್ವಭಾವದವರು ; ಕಿರಿಯ ಎಂ. ಎಂ. ರಜ್ವಿ ಉಗ್ರಗಾಮಿಗಳು. ಇಬ್ಬರ ಜೊತೆಗೂ ನಿಕಟವಾಗಿ ದೀರ್ಘಕಾಲ ಸೇವೆಸಲ್ಲಿಸುವ ಭಾಗ್ಯ ನನ್ನದು. ಸುಗುಣಗಳೇ ಅವರ ಜೀವನಸರ್ವಸ್ವವಾಗಿದ್ದವು. ಎಸ್. ಎನ್. ಎಂ.

ರಜ್ವಿ ದೀರ್ಘಕಾಲ ಕಾಂಗ್ರೆಸ್ ಕಾರ್ಯಸಮಿತಿಯ ಕಾರ್ಯದರ್ಶಿಗಳೂ ಮುಂದೆ ಅಧ್ಯಕ್ಷರೂ ಆಗಿದ್ದರು. ಬಾಗಲಕೋಟೆಯಲ್ಲಿ ನಡೆದ ಕರ್ನಾಟಕ ಪ್ರಾಂತೀಯ ರಾಜಕೀಯ ಪರಿಷತ್ತಿಗೆ ಅಧ್ಯಕ್ಷರಾಗಿ ಆಯ್ಕೆಗೊಂಡು, ಅಲ್ಲಿಗೆ ತಲೆಮರೆಸಿಕೊಂಡು ತೆರಳಿ, ಬಂಧಿತ ರಾದುದನ್ನು ಇಲ್ಲಿ ನೆನೆಯಬಹುದು (1932). ಪ್ರಜಾಪ್ರತಿನಿಧಿ ಸಭೆ, ಬೆಂಗಳೂರು ಪೌರಸಭೆ, ಜಿಲ್ಲಾ ಬೋರ್ಡು, ಈ ಸಂಸ್ಥೆಗಳ ಸದಸ್ಯರಾಗಿದ್ದರು. ಎಂ. ಎಂ. ರಜ್ವಿ ಯವರು ಕೆಲಕಾಲದನಂತರ ಬೇರೆ ವ್ಯಾಪಾರ ಆರಂಭಿಸಿ, ಕಡೆಗೆ ಹೈದರಾಬಾದ್ ಸಂಸ್ಥಾನದಲ್ಲಿ ನೆಲಸಿದರು.

ಹಾಜಿ ಉಸ್ಮಾನ್ ಸೇಠರು, ಸರಕಾರಿ ಶಾಲೆಗಳನ್ನು ಬಹಿಷ್ಕರಿಸಿದವರಿಗಾಗಿ 'ಖಿಲಾಫತ್ ರಾಷ್ಟ್ರೀಯ ಶಾಲೆ'ಯನ್ನು ಇದೇ ಕಾಲದಲ್ಲಿ ತೆರೆದರು. ಇದನ್ನು ಸ್ವಂತ ವೆಚ್ಚದಿಂದ ನಡೆಸಿದರು. ನಗರದ ಹಾಗೂ ದಂಡಿನ ಕೆಲವು ವಿದ್ಯಾರ್ಥಿಗಳು ಈ ಶಾಲೆಯನ್ನು ಸೇರಿಕೊಂಡರು. ಇವರ ಪೈಕಿ (ಮುಂದೆ ಬೆಂಗಾಲ್ ಲ್ಯಾಂಪ್ಸ್‌ನ) ಜಿ. ಎ ಆಚಾರ್ಯ ಮತ್ತು ನಾನು ಇದ್ದೆವು. ರಾಘವನ್, ವೆಂಕಟರಾಮ ಶರ್ಮ, ಪಾದ್ರಿ ಶಾಲೆಯ ಉಪಾಧ್ಯಾಯತನವನ್ನು ಬಿಟ್ಟ ಎಸ್. ವೆಂಕಟರಾಮನ್ ಇವರೆಲ್ಲ ಅತ್ಯಲ್ಪ ತಲಬಿನಮೇಲೆ ಉಪಾಧ್ಯಾಯರಾದರು. ಹಣದ ಕೊರತೆಯಿಂದ ಸೇಠರು ಕೆಲಕಾಲದ ನಂತರ ಈ ಶಾಲೆಯನ್ನು ಮುಚ್ಚಿದರು. ಎಸ್. ಆರ್. ಎಸ್. ರಾಘವನ್ ಅವರು ಎಂ.ಎ. ಪದವೀಧರರಾಗಿದ್ದು ಸರಕಾರೀ ನೌಕರಿ ತ್ಯಜಿಸಿ ಕಾಂಗ್ರೆಸ್‌ನ ಕಾರ್ಯದಲ್ಲಿ ಮಗ್ನರಾದರು. ಅಹ್ಮದಾಬಾದ್ ಕಾಂಗ್ರೆಸ್‌ಗೆ ಅವರು ಹೋಗಿದ್ದರು. ಆದರ್ಶವಾದಿ ಗಳಾದ ಇವರು ಪತ್ರಿಕಾವೃತ್ತಿಯಲ್ಲಿ ಮುಂದೆ ನಿರತರಾದರು. ಇವರಂತೆಯೇ ಸಂಸಾರದ ಭಾರವಿದ್ದರೂ, ಅದರ ನಿರ್ವಹಣೆಯ ಬಗ್ಗೆ ಚಿಂತಿಸೂಡದೆ ಟಾಟಾ ವಿಜ್ಞಾನ ಮಂದಿರ ದಲ್ಲಿ ನಡೆಸುತ್ತಿದ್ದ ವ್ಯಾಸಂಗವನ್ನು ತ್ಯಜಿಸಿ ಚಳವಳಿ ಸೇರಿದವರು ಪಾಲ್‌ಘಾಟಿನವರಾಗಿದ್ದ ಆರ್. ವೆಂಕಟರಾಮ ಶರ್ಮ. ಇದೇ ರೀತಿ ಷಾ ಧನ್‌ಜಿ ಜವೇರ್‌ಚಂದ್ ಸೋದರರು ವಿದೇಶೀವಸ್ತ್ರ ವ್ಯಾಪಾರಕ್ಕೇ ತಿಲಾಂಜಲಿ ಇತ್ತವರು. ಗುಜರಾತಿನವರಾದ ಇವರು ಗಾಂಧೀಭಕ್ತರಾಗಿ, ಚರಖಾಗಳನ್ನು ತಯಾರಿಸಿ ಬೆಂಗಳೂರಲ್ಲಿ ಮನೆಮನೆಗೂ ಹಂಚಿ ಖಾದಿ ಪ್ರಚಾರಕ್ಕೆ ನಿಂತರು. ಕೈಮಗ್ಗ ಹಾಕಿ, ಖಾದಿ ಮಳಿಗೆ ನಡೆಸಿದರು. ಕೊನೆಗೆ ಅಪಾರ ನಷ್ಟಕ್ಕೆ ಒಳಗಾಗಿ ತಮ್ಮ ಊರಿಗೆ ವಾಪಸಾದರು. ಕಾಂಗ್ರೆಸ್ ನಿಧಿಗೆ ಅವರು ಅಪಾರ ಕಾಣಿಕೆ ನೀಡಿದವರು. ರಚನಾತ್ಮಕ ಕಾರ್ಯಗಳ ಇತಿಹಾಸದಲ್ಲಿ ಜವೇರ್‌ಚಂದ್ ಅವರ ಸೇವೆ ಅಗ್ರಸ್ಥಾನಕ್ಕೆ ಅರ್ಹವಾಗುತ್ತದೆ. ಅವರ ತ್ಯಾಗಕ್ಕೆ ಸರಿಸಾಟಿ ದೊರಕು ವುದು ದುರ್ಲಭವೇ.

ಉತ್ತರ ಕರ್ನಾಟಕದಿಂದ ಬೆಂಗಳೂರಿಗೆ ಬಂದು ನೆಲೆಸಿದ್ದ ಸುಗಂಧ ವ್ಯಾಪಾರಿ ಜಮಖಂಡಿ ಭೀಮರಾಯರೂ ಆ ಕಾಲದಲ್ಲಿ ತ್ಯಾಗಮೂರ್ತಿಗಳಾದವರು. ತಮ್ಮ ವ್ಯಾಪಾರ ಅಲಕ್ಷಿಸಿ ರಚನಾತ್ಮಕ ಕಾರ್ಯಕ್ಕೆ ನಿಂತವರು. ತಮ್ಮ ಮನೆಯಲ್ಲಿ ಮಗ್ಗ

ಹಾಕಿದ್ದರು. ಬೆಂಗಳೂರು ಮಹಾರಾಷ್ಟ್ರ ಮಂಡಲಿಯ ಮುಖಂಡರಾಗಿದ್ದು ಶಿವಾಜಿ ಉತ್ಸವ, ಗಣೇಶ ಉತ್ಸವಗಳಲ್ಲಿ ಮಹತ್ವದ ಪಾತ್ರವಹಿಸುತ್ತಿದ್ದರು. ಕಾಂಗ್ರೆಸ್‌ನ ಖಜಾಂಚಿಗಳಾಗಿದ್ದ ಇವರು ಬೆಂಗಳೂರು ಗಣಪತಿ ಗಲಭೆಯ (1928) ಹಿನ್ನೆಲೆಯಲ್ಲಿ ಗಣ್ಯಪಾತ್ರ ವಹಿಸಿದರು. ಇವರ ಬೆಂಬಲವಾಗಿದ್ದ ಇನ್ನಿಬ್ಬರು ರಾಮಲಾಲ್ ತಿವಾರಿ ಮತ್ತು ಎಚ್. ವಿ ಸುಬ್ರಹ್ಮಣ್ಯಂ. ಉತ್ತರ ಭಾರತದಿಂದ ಬಂದು ಬೆಂಗಳೂರಲ್ಲಿ ನೆಲೆಸಿ ವ್ಯಾಪಾರನಿರತರಾದ ತಿವಾರಿ ಪೌರಸಭೆಯಲ್ಲಿ ದೀರ್ಘಕಾಲ ಸೇವೆಸಲ್ಲಿಸಿದ್ದರಲ್ಲದೆ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಬೆಂಗಳೂರಿನ ಪ್ರತಿನಿಧಿ ಆಗಿದ್ದರು. ಕಾಂಗ್ರೆಸ್ ಸೇರಿ ಬಹಳ ಕಷ್ಟ ನಷ್ಟ ಅನುಭವಿಸಿದ್ದರು. ಗಣಪತಿ ಗಲಭೆಯ ಹಿನ್ನೆಲೆಯಲ್ಲಿ ಇದ್ದವರು. ರಾಜ್ಯದ ಗಣ್ಯ ಸರಕಾರಿ ನೌಕರರಾಗಿದ್ದ ಎಚ್. ವಿ. ನಂಜುಂಡಯ್ಯನವರ ಮಗ ಎಚ್. ವಿ. ಸುಬ್ರಹ್ಮಣ್ಯಂ ವ್ಯವಸಾಯದಲ್ಲಿ ಆಸಕ್ತರಾಗಿದ್ದು ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿ ಗಳಾಗಿದ್ದರು. ಕಲ್ಕತ್ತಾದಲ್ಲಿ ಸರ್ಕಾರಿ ನೌಕರಿಯಲ್ಲಿದ್ದು, ಅದನ್ನು ತ್ಯಜಿಸಿ ತಮ್ಮ ನಾಡಾದ ಬೆಂಗಳೂರಿಗೆ ಬಂದಿದ್ದ ಎ. ಎಂ. ಟಿ. ಆಚಾರ್ಯರು ಇಲ್ಲಿ ರಚನಾತ್ಮಕ ಕಾರ್ಯ ಕ್ರಮಗಳ ನಿರ್ವಾಹಕರಾಗಿ ಕಾರ್ಯದರ್ಶಿ ಆಗಿ ಇದ್ದರು. ಒಮ್ಮಸದಿಂದ ಬಂದು, ನಗರ ದಲ್ಲಿ ಬಟ್ಟೆವ್ಯಾಪಾರ ಮಾಡುತ್ತಿದ್ದ ಕೆ. ಜಿ. ಪಶುಪತಿ ಅಯ್ಯರ್ ಆಗ್ಗೆ ಕಾಂಗ್ರೆಸ್ ಖಜಾಂಚಿಯಾಗಿ ಇದ್ದರು. ನಾನು, ಜಿ. ಎ ಆಚಾರ್ಯ, ಎಂ. ಶ್ರೀನಿವಾಸಾಚಾರ್ಯ (ಈಗ ಗಣ್ಯವ್ಯಾಪಾರಿಗಳಾಗಿದ್ದಾರೆ) ಇವರೆಲ್ಲ ಆಗ ಉತ್ಸಾಹೀ ಸ್ವಯಂಸೇವಕರಾಗಿದ್ದು ಮನೆಮನೆಗೂ ಹೋಗಿ ತಿಲಕ್ ಸ್ವರಾಜ್ಯ ನಿಧಿಗೆ ಹಣ ಸಂಗ್ರಹಿಸುವುದು, ಸಾರ್ವಜನಿಕ ಸಭೆಗಳಲ್ಲಿ ಹಣ ಸಂಗ್ರಹಿಸುವುದು ಮಾಡುತ್ತಿದ್ದೆವು. ಸಭೆಗಳಲ್ಲಂತೂ ಗಡಿಯಾರ, ಪೆನ್, ಉಂಗುರ, ಇವುಗಳ ಕಾಣಿಕೆಯ ಸುರಿಮಳೆಯೇ ಆಗುತ್ತಿತ್ತು. ಈ ದೃಶ್ಯ ಮರೆಯಲಾಗದ್ದು. ಹೆಂಗಸರೂ ತಮ್ಮ ಆಭರಣಗಳನ್ನು ಕೊಡುತ್ತಿದ್ದರು. ಖಾದಿ ಪ್ರಚಾರವೂ ರಭಸದಿಂದ ಸಾಗಿದ್ದು. ಮನೆಮನೆಗೆ ಚರಖಾ ಮುಟ್ಟಿಸಿ, ಆಗಾಗ ಹಂಜಿ ಗಳನ್ನು ಪೂರೈಸಿ ನೂಲುನಂತೆ ಪ್ರೋತ್ಸಾಹ ನೀಡಲಾಗುತ್ತಿತ್ತು. ನೂಲನ್ನು ಸಂಗ್ರಹಿಸಿ ನೇಯುವ ಏರ್ಪಾಡನ್ನೂ ಮಾಡಲಾಗುತ್ತಿತ್ತು. ಷಾ ಜವೇರ್‌ಚಂದ್ ಈ ಬಗ್ಗೆ ಶ್ರಮ ವಹಿಸಿದ್ದು ಅವರು ಸಂಸ್ಥಾನದಲ್ಲಿ ಖಾದಿ ಚಟುವಟಿಕೆಗೆ ತಳಪಾಯ ಹಾಕಿದರು. ಬಸವನಗುಡಿಯ ಲಕ್ಷ್ಮೀಪತಿ ನಾಯುಡು, ಅವರ ತಮ್ಮ ಸೀತಾಪತಿ ನಾಯುಡು, ಪರಗಿ ಭೀಮಾಚಾರ್ಯ, ರಾಮರಾವ್ ಪೋಳ, ವೆಂಕಟರಾವ್, ಸಟ್ವಾಜಿರಾವ್, ಸುರೇಂದ್ರ ರಾವ್, ಖಾದ್ರಿ ಗುಂಡೂರಾವ್, ಕೆಲಕಾಲ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿ ಆಗಿದ್ದ ವೆಂಕಟವರದ ಅಯ್ಯಂಗಾರ್, ಸಹಕಾರ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದ ವೆಂಕಟರಮಣಯ್ಯ ಖಾದಿಗಾಗಿ ಅಪಾರ ದುಡಿಮೆ ಮಾಡಿದವರು. ಕೊನೆಯವರು ಸದಾ ತಕಲಿಯಿಂದ ನೂಲುತ್ತಿದ್ದು ತಕಲಿ ವೆಂಕಟರಮಣಯ್ಯರೆಂದೇ ಹೆಸರು ಪಡೆದವರು. ಕಾಂಗ್ರೆಸ್ ಸಮಿತಿ ಚಿಕ್ಕಪೇಟೆಯಲ್ಲಿ ಖಾದಿ ಮಳಿಗೆ ತೆರೆದು ಖಾದಿ ಮಾರಾಟ

ಮಾಡುತ್ತಿತ್ತು. ಆಂಧ್ರ, ತಮಿಳುನಾಡಿನಿಂದ ಖಾದಿ ತರುತ್ತಿದ್ದರು. ನಾನಂತೂ ಮನೆಮನೆಗೂ ಖಾದಿ ಹೊತ್ತು ಮಾರುತ್ತಿದ್ದೆವು. ಮೈಸೂರಲ್ಲಿ ತಗಡೂರು ರಾಮ ಚಂದ್ರರಾಯರು ಖಾದಿ ಪ್ರಚಾರ ನಡೆಸಿದ್ದರು. ಮುಂದೆ ಹೊಸಕೊಪ್ಪ ಕೃಷ್ಣರಾಯರು ಅಜ್ಜಂಪುರದಲ್ಲಿ ಖಾದಿ ಕೇಂದ್ರ ಸ್ಥಾಪಿಸಿದರು. ಪಿ. ಸಿ. ರೇ ಅವರನ್ನು ಕರೆಸಿ, ಚಿಕ್ಕ ಮಗಳೂರಲ್ಲಿ ಭಾರಿ ಸ್ವದೇಶವಸ್ತುಗಳ ಪ್ರದರ್ಶನ ಉದ್ಘಾಟಿಸಲು ಕಾರಣಕರ್ತರಾದರು. ಆದರೆ ಆಗಲೇ ಸಂಸ್ಥಾನದಲ್ಲಿ ಖಾದಿಗೆ ಭದ್ರ ತಳಹದಿ, ಗಾಂಧೀಯುಗದ ಆರಂಭದ ವರ್ಷಗಳಲ್ಲೇ ಈ ಎಲ್ಲರ ಯತ್ನದಿಂದ ಬಿದ್ದಿತ್ತು. ಮುಂದೆ ಸಂಸ್ಥಾನೀ ಸರಕಾರವೇ ಬದನವಾಳದಲ್ಲಿ ಖಾದಿ ಕೇಂದ್ರ ತೆರೆದುದು ಗಮನಾರ್ಹ. 1926ರಲ್ಲಿ ಬೆಂಗಳೂರಲ್ಲಿ ಖಾದಿ ಮಳಿಗೆ ಸ್ಥಾಪನೆ ಆಗಿ, ಕರ್ಪೂರ ಶ್ರೀನಿವಾಸರಾಯರು ಇದನ್ನು ಉದ್ಘಾಟಿಸಿದರು. ರಾಜಾಜಿ ಅದು ಯಶಸ್ವಿಯಾಗಲೆಂದು ಹರಸಿದರು. ಈ ಮಳಿಗೆಯ ಸಂಚಾಲಕರು ಟಿ. ಸದಾಶಿವಂ (ಎಂ. ಎಸ್. ಸುಬ್ಬುಲಕ್ಷ್ಮಿ ಅವರ ಪತಿ). 1927ರಲ್ಲಿ ಗಾಂಧೀಜಿ ನ್ಯಾಷನಲ್ ಹೈಸ್ಕೂಲಿನಲ್ಲಿ ದಕ್ಷಿಣ ಭಾರತ ಖಾದಿ ಪ್ರದರ್ಶನ ಉದ್ಘಾಟಿಸಿದರು. ಇದರಿಂದ ಸಂಸ್ಥಾನದಲ್ಲಿ ಖಾದಿಗೆ ಅಪಾರ ಉತ್ತೇಜನ ದೊರೆಯಿತು. ದಂಡಿನ ಪ್ರದೇಶ ದಲ್ಲಿ ಖಾದಿಗಾಗಿ ದುಡಿದ ನಾರಾಯಣ ಶೆಟ್ಟಿ ಅವರನ್ನೂ ನೆನೆಯಬೇಕು.

ಧಾರವಾಡದಿಂದ ಕುಲಕರ್ಣಿ ಎಂಬ ಅಧ್ಯಾಪಕರು ಅಸಹಕಾರದ ಕರೆಗೆ ಓಗೊಟ್ಟು ಸರಕಾರಿ ನೌಕರಿ ತ್ಯಜಿಸಿ ಬೆಂಗಳೂರಲ್ಲಿ ಬಂದು ನೆಲೆಸಿದರು. ನಿಸ್ಸೀಮ ದೇಶಭಕ್ತರೂ ಬ್ರಹ್ಮಚಾರಿಗಳೂ ಆದ ಇವರು ಗಾಂಧೀಜಿಯನ್ನು ದೇವರೆಂದೇ ನಂಬಿದವರು. ಖಾದಿ ಯನ್ನು ಮನೆಮನೆಗೆ ಹೊತ್ತು ಮಾರಾಟಮಾಡುತ್ತಿದ್ದರು. ವಿದೇಶೀ ಬಟ್ಟೆ ಧರಿಸಿದವರನ್ನು ಕಂಡು ಕಿಡಿಕಿಡಿಯಾಗಿ "ಸುಡ್ರಿ ಆ ವಿದೇಶೀ ಬಟ್ಟೆ, ನಾಚಿಗೆ ಆಗೋದಿಲ್ವೆ ನಿಮಗೆ" ಎಂದು ಮೂದಲಿಸುತ್ತಿದ್ದರು. ಖ್ಯಾತ ವಕೀಲ ಕೆ. ಶಂಕರನಾರಾಯಣರಾಯರ ಮನೆಯಲ್ಲೇ ಇವರ ಬಿಡಾರ. ಈ ಮನೆ ದೇಶಭಕ್ತರಿಗೆ ಅನ್ನಸತ್ರ. ವಕೀಲರ ಪತ್ನಿ ಯಂತೂ ಶ್ರೇಷ್ಠ ವ್ಯಕ್ತಿ. ಆಗ ನನ್ನ ಜೊತೆ ಸ್ವಯಂಸೇವಕರಾಗಿ ಕೆಲಸ ಮಾಡುತ್ತಿದ್ದ ಎಚ್. ಲಕ್ಷ್ಮೀನಾರಾಯಣರಾವ್ ವಕೀಲರ ಸೋದರಳಿಯ. ಮೇಲೆ ಹೇಳಿದ ಕುಲಕರ್ಣಿ ತೀರ ಭಾವಪರವಶರಾಗಿದ್ದು, ಯಾವುದೇ ಮುಖಂಡರ ಬಂಧನವಾಯಿತೆಂದು ಕೇಳಿದರೆ ಕೊರಗುತ್ತಿದ್ದರು. ಚಿತ್ತರಂಜನ ದಾಸರ ಮರಣವಾರ್ತೆ ಕೇಳಿ ಭಾವಪರವಶರಾಗಿ ಅಕಾಲಮೃತ್ಯುವನ್ನಪ್ಪಿ ಕಣ್ಮರೆಯಾದರು.

ಖಾದಿ, ಸ್ವದೇಶಿ ವಸ್ತುಗಳ ಪ್ರಚಾರವೈಭವದ ವಿಚಾರ ಇಲ್ಲಿ ಹೇಳಬೇಕು. ಬೀದಿಬೀದಿಗಳಲ್ಲಿ ಸಾರುವುದು, ಸಭೆ ಕೂಡಿಸುವುದು, ಮೆರವಣಿಗೆ ನಡೆಸುವುದು, ರಾಷ್ಟ್ರಗೀತೆ ಹಾಡುತ್ತ ಜನರನ್ನು ಆಕರ್ಷಿಸುವುದು, ಪ್ರಭಾತಫೇರಿ ಇವೆಲ್ಲ ಅಂದಿನ ಪ್ರಚಾರವೈಖರಿ. ಆಗ ಧ್ವನಿವರ್ಧಕವಿಲ್ಲ. ಸೀಮೆ ಎಣ್ಣೆ ಡಬ್ಬ ಬಡಿದು ಜನರನ್ನು ಕೂಡಿಸಿ ಅಲ್ಲಲ್ಲಿ ಪ್ರಚಾರ. ಕನ್ನಡ, ತೆಲುಗು, ತಮಿಳು, ಹಿಂದೀ ಗೀತೆಗಳ ಹಾಡುವಿಕೆ.

"ಅಂತಾ ಗಾಂಧಿಮಯಂ, ಈ ಜಗಮಂತಾ ಗಾಂಧಿಮಯಂ" ಹಾಗೂ "ಮಾಕೊದ್ದು ಈತೆಲ್ಲಿ ದೊರೆತನಮು, ದೇವ. ಮಾಕೊದ್ದೀತೆಲ್ಲಿ ದೊರೆತನಮು" ಮುಂತಾದ ತೆಲುಗು ಹಾಡುಗಳು ಆಗ ಅತ್ಯಂತ ಜನಪ್ರಿಯ. ಸುಬ್ರಹ್ಮಣ್ಯ ಭಾರತಿಯವರ ತಮಿಳು ಹಾಡುಗಳೂ, ಇಕ್ಬಾಲರ "ಸಾರೇ ಜಹಾಸೇ ಅಚ್ಛಾ ಹಿಂದೂಸ್ತಾನ್ ಹಮಾರಾ" ಹಾಡಲಾಗುತ್ತಿತ್ತು. ಇಕ್ಬಾಲರ ಈ ಗೀತೆಯಿಂದ ಮುಸಲ್ಮಾನ್ ಬಂಧುಗಳು ಉಬ್ಬಿ ಹೋಗುತ್ತಿದ್ದರು. ನಾನೂ ನನ್ನ ಜೊತೆಗಾರ ಸ್ವಯಂಸೇವಕರೂ ಬೆಂಗಳೂರು ನಗರ ಪಲ್ಲಿಯೇ ಅಲ್ಲದೆ, ದಂಡು, ಮೈಸೂರು, ತುಮಕೂರುಗಳಿಗೂ ಹೋಗಿ ತಿಲಕ್ ಸ್ವರಾಜ್ಯ ನಿಧಿ ಸಂಗ್ರಹಿಸಿದ್ದೆವು. ಆಗ ಕಾಂಗ್ರೆಸ್ ಸಮಿತಿಯ ಖಜಾಂಚಿಯಾಗಿದ್ದ ಪಶುಪತಿ ಅಯ್ಯರ್ ಅವರೇ ಈ ನಿಧಿಗೆ 1,000 ರೂ. ಕಾಣಿಕೆ ನೀಡಿದ್ದರು. ಸ್ವದೇಶಿ ವಸ್ತ್ರದ ಬಗ್ಗೆ ಪ್ರಚಾರ ನಡೆಸಿ, ಕೊನೆಗೆ ವಿದೇಶಿ ಬಟ್ಟೆಗಳ ಹೋಳಿ ನಡೆಸುತ್ತಿದ್ದೆವು. ಅಂದಿನ ಭಾಷಣ ಕಾರರ ಮಾತುಗಳಿಂದ ಸ್ಫೂರ್ತಿಗೊಂಡ ಜನ ತಮ್ಮ ಮೈಮೇಲಿದ್ದ ವಿದೇಶಿ ವಸ್ತ್ರಗಳನ್ನು ತಾವಾಗಿಯೇ ಅಲ್ಲೇ ಬೆಂಕಿಗೆಸೆಯುತ್ತಿದ್ದರು. ಧರ್ಮಾಂಬುಧಿ ಕೆರೆ ಅಂಗಳ, ದೊಡ್ಡಣ್ಣ ಹಾಲ್ ಮೈದಾನ (ಈಗ ಎಸ್.ಎಲ್.ಎನ್. ಕಾಲೇಜು ಇರುವ ಸ್ಥಳ), ಗಾಂಧೀ ಮೈದಾನ (ಈಗ ಸಾಹಿತ್ಯ ಪರಿಷತ್ತು ಇರುವ ಸ್ಥಳ) ಇಂಥ ಸಭೆಗಳಾಗುತ್ತಿದ್ದ ಸ್ಥಳಗಳು. ಕೆಲವು ಕಾಲ ಇಂಥ ಪ್ರಚಾರ ಎಷ್ಟು ಯಶಸ್ವಿಯಾಯಿತೆಂದರೆ, ಎಲ್ಲರ ತಲೆಯ ಮೇಲೆ ಖಾದಿ ಟೋಪಿ ಬಂದವು. ನಮ್ಮಂಥವರಿಗೆ ಸ್ಫೂರ್ತಿ ನೀಡುತ್ತಿದ್ದ ಸಂಗತಿಗಳೆಂದರೆ, ಆಗಿನ ಮುಖಂಡರ ಭಾಷಣಗಳು. ಆಂಧ್ರದ ನಾನಾಲ ರಾಮಮೂರ್ತಿ ಬೆಂಗಳೂರಿಗೆ ಬಂದು ತಮ್ಮ ತೆಲುಗು ಭಾಷಣಗಳ ವೈಖರಿಯಿಂದ ಜನರನ್ನು ತಲೆದೂಗಿಸಿ, ವಿದೇಶಿ ವಸ್ತ್ರದ ಹೋಳಿಯೊಡನೆ ಭಾಷಣ ಮುಗಿಸುತ್ತಿದ್ದರು. ಕೊಪ್ಪಳದ ಜಯರಾಮಾಚಾರ್ಯರು ಎಂದೆಂದೂ ಮರೆಯಲಾಗದ, ಜನಜಾಗೃತಿಗೆ, ದೇಶಭಕ್ತಿಯ ಪ್ರೇರೇಪಣೆಗೆ ಉನ್ನತ ಮಟ್ಟದಲ್ಲಿ ಸಹಾಯವೆಸಗಿದ, ಹರಿಕಥೆಯ ರೂಪದಲ್ಲಿ ಸ್ಫೂರ್ತಿದಾಯಕ ವಿಚಾರ ಮುಂದಿಡುತ್ತಿದ್ದ ಕನ್ನಡಿಗರು. ಅವರ ಪ್ರಚಾರಕಥಾಕಾಲಕ್ಷೇಪದಿಂದ ಅವರಿಗೆ ಬೆಂಗಳೂರಲ್ಲಿ ಅಪೂರ್ವವಾದ ಮಾನಮನ್ನಣೆಗಳು ದೊರೆತವು. ಇಲ್ಲಿನ ವರ್ತಕ ಮಂಡಳಿಯವರು ಅವರನ್ನು ಸನ್ಮಾನಿಸಿದರು. ಕರ್ಪೂರ ಶ್ರೀನಿವಾಸರಾಯರು ಇವರ ಆಪ್ತರಾಗಿದ್ದು, ಇವರ ನೆರವಿನಿಂದ ಆಚಾರ್ಯರು ಬೆಂಗಳೂರಲ್ಲಿ ಮೊಟ್ಟಮೊದಲ ಹರಿಕಥಾ ಸಮ್ಮೇಳನವನ್ನು ನಿವೃತ್ತ ದಿವಾನ್ ವಿ ಪಿ. ಮಾಧವರಾಯರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದರು. ಉರ್ದು ವಿನಲ್ಲೂ ಆಚಾರ್ಯರು ಲೀಲಾಜಾಲವಾಗಿ ಮಾತನಾಡಬಲ್ಲವರಾಗಿದ್ದು, ಉತ್ತರ ಕನ್ನಡ, ದಕ್ಷಿಣ ಕನ್ನಡ ಹಾಗೂ ಕರ್ನಾಟಕದ ಇತರೆಡೆ ಕೂಡ ಜನಜಾಗೃತಿಗೆ ಕಾರಣರಾಗಿದ್ದರು. ಪೌರಾಣಿಕ ಕಥೆಗಳಿಂದ ಜನಜಾಗೃತಿ ಮಾಡಿದ ಅವರ ವಿಚಾರ ನಮ್ಮಂಥ ಯುವಕರಿಗೆ ಮಾರ್ಗದರ್ಶಕವಾಗಿತ್ತು.

ಉತ್ತರ ಕರ್ನಾಟಕದಿಂದ ಮುದವೀಡು ಕೃಷ್ಣರಾಯರು ಆಗಾಗ ಬಂದು ಭಾಷಣ

ಮಾಡುತ್ತಿದ್ದು, ಸಿಂಹಘರ್ಜನೆಗೆ ಹೋಲುವಂಥ ಅವರ ಧಾಟಿ, ಗಂಡುಶೈಲಿ, ಸುಪ್ತ ಜನರನ್ನು ಬಡಿದೆಬ್ಬಿಸುವಂಥ ಶಬ್ದಗಳ ಜೋಡಣೆ ಇವು ಆ ಕಾಲಕ್ಕೆ ಅಪೂರ್ವ ಕೊಡುಗೆ ಎನಿಸಿದ್ದವು. ಸಂಸ್ಥಾನದಲ್ಲಿ ಎಲ್ಲೆಡೆ ಸುತ್ತಾಡಿ ಅವರು ಜಾಗೃತಿ ಮಾಡುತ್ತಿದ್ದರು. ಅವರ 'ಕರ್ನಾಟಕ ವೃತ್ತ' ಮತ್ತು 'ಧನಂಜಯ' ಸಂಸ್ಥಾನದಲ್ಲಿ ಆಗ ಜನಪ್ರಿಯ ಪತ್ರಿಕೆಗಳು. ಆಬಾಲಸ್ತ್ರೀಪುರುಷರಿಗೆಲ್ಲರಿಗೂ ರಾಷ್ಟ್ರೀಯತೆಯ ಹುಚ್ಚು ಹಿಡಿಸಿದರು. ಭಾಷಣದ ಮಧ್ಯೆ "ಮರೆತೆ ಯಾತಕಯ್ಯಾ ನಿನ್ನ ಮಾತೃಭೂಮಿಯಾ ?" ಎಂಬ ಹಾಡನ್ನು ಸ್ಫೂರ್ತಿಯಿಂದ ಹಾಡುತ್ತಿದ್ದರು. ಇದೇ ರೀತಿ ಕಡಪಾ ರಾಘವೇಂದ್ರ ರಾಯರು ಗಾಂಧೀ ಮೈದಾನದಲ್ಲಿ ಗೀತೆಯ ವಿಚಾರ ಭಾಷಣಮಾಡಿ ಅತ್ತ ಆಧ್ಯಾತ್ಮಿಕ ಭಾವನೆಯ ಜೊತೆ ಇತ್ತ ದೇಶಾಭಿಮಾನವನ್ನೂ ಜಾಗೃತಗೊಳಿಸಿದವರು. ಪಂ|| ತಾರಾನಾಥರು ಆಗ ನೈಜಾಮ ರಾಜ್ಯದಿಂದ ಗಡೀಪಾರಾಗಿ ಬಂದವರು. ತಮ್ಮ ಸ್ಫುರದ್ರೂಪ, ಸಂಗೀತ ಪರಿಣತಿ, ಭಾಷಣದ ನಡುವೆ ಹಾಡುವ ಕಬೀರದಾಸರ ಹಾಡುಗಳ ಪ್ರಭಾವ, ಹಾಗೂ ತಮ್ಮ ಕನ್ನಡ, ತೆಲುಗು, ಹಿಂದಿ, ಉರ್ದು, ಇಂಗ್ಲಿಷ್ ಭಾಷಣಗಳಿಂದ ಬೆಂಗಳೂರು ನಾಗರಿಕರ ಮೇಲೆ ಪ್ರಭಾವ ಬೀರಿದವರು. ಅಮೆಚೂರ್ ನಾಟಕ ಮಂಡಳಿಯಲ್ಲಿ ಒಂದೆರಡು ಬಾರಿ ಪಾತ್ರವಹಿಸಿದ್ದರು. ರಾಷ್ಟ್ರೀಯ ಭಾವನೆಯ ಜೊತೆ ಭಾರತ ಸಂಸ್ಕೃತಿಯ ಬಗ್ಗೆ ಅಚ್ಚಳಿಯದ ಸತ್ಪರಿಣಾಮ ಉಂಟುಮಾಡಿದವರು. ಇವರಲ್ಲದೆ ಶ್ರೀನಿವಾಸರಾವ್ ಕೌಜಲಗಿ, ರಾಮರಾವ್ ಹುಕ್ಕೇರಿಕರ್, ಡಾ|| ಹರ್ಡೀಕರ್, ಬಳ್ಳಾರಿಯ ಸ್ವಾಮಿ ಧರ್ಮಾನಂದ ಆಗಾಗ ಬಂದು ಭಾಷಣ ಮಾಡುತ್ತಿದ್ದರು. ಮದ್ರಾಸಿನಿಂದ ಸತ್ಯಮೂರ್ತಿ, 'ಹಿಂದು'ವಿನ ಕಸ್ತೂರಿ ರಂಗೈಯಂಗಾರ್ ಇಲ್ಲಿನ ಗಾಂಧೀ ಮೈದಾನದಲ್ಲಿ ಭಾಷಣ ಮಾಡಿದರು. ಆಂಧ್ರದಿಂದ ಕೊಂಡಾ ವೆಂಕಪ್ಪಯ್ಯ, ಬುಲುಸು ಸಾಂಬಮೂರ್ತಿ, ಹರಿಸರ್ವೋತ್ತಮರಾವ್, ತಲ್ಲೂರು ಸುಬ್ಬರಾವ್, ದುಪ್ಪೂರಿ ಸುಬ್ಬಮ್ಮ ಬಂದು ಭಾಷಣ ಮಾಡುತ್ತಿದ್ದವರು. ಅಲಿ ಸೋದರರು, ಅವರ ತಾಯಿ ಬೀಯಮ್ಮ ಇವರುಗಳೂ ಇಲ್ಲಿ ಹಿಂದು-ಮುಸ್ಲಿಂ ಐಕ್ಯ ರೂಢಿಸಿದ್ದವರು. ಲಾಲಾ ಲಜಪತ್‌ರಾಯ್ ಕೂಡ ಬಂದಿದ್ದರು. ಮುಂಬೈಯ ತರುಣ ಮುಖಂಡ ಯೂಸುಫ್ ಮೆಹರಾಲಿ ಒಮ್ಮೆ ಬಂದಿದ್ದರು. ಈ ಎಲ್ಲ ನಾಯಕರ ಭಾಷಣ ಏರ್ಪಡಿಸುವುದು ಸ್ವಯಂಸೇವಕರಾದ ನಮ್ಮ ಕರ್ತವ್ಯವಾಗಿದ್ದು ಬಹು ದೂರದಿಂದ ಬೆಂಚು ಹೊತ್ತು ತಂದು ವೇದಿಕೆಯನ್ನು ಏರ್ಪಡಿಸುತ್ತಿದ್ದೆವು. ಮದ್ರಾಸಿನ ಎಸ್. ಶ್ರೀನಿವಾಸಯ್ಯಂಗಾರರಂತೂ (1926ರ ಗೌಹತಿ ಕಾಂಗ್ರೆಸ್ ಅಧ್ಯಕ್ಷ) ಬೇಸಗೆಯ ಮೂರು-ನಾಲ್ಕು ತಿಂಗಳು ಇಲ್ಲಿಯೇ ಕಳೆಯುತ್ತಿದ್ದರು. ಬಸವನಗುಡಿಯಲ್ಲಿ ಅವರದೊಂದು ಬಂಗ್ಲೆ ಇತ್ತು. ಸ್ವರಾಜ್ಯ ಪಕ್ಷದ ನಾಯಕರಾದ ಅವರ ಜೊತೆ ವಿಚಾರವಿನಿಮಯಕ್ಕೆ, ಅವರು ಇಲ್ಲಿ ತಂಗಿದ್ದಾಗ, ನಾಯಕರ ತಂಡವೇ ಬರುತ್ತಿತ್ತು. ಒಮ್ಮೆ, ಚಿತ್ತರಂಜನ ದಾಸರೂ ರಂಗ ಅಯ್ಯರ್ ಅವರೂ ಇವರ ಜೊತೆ ವಿಚಾರವಿನಿಮಯಕ್ಕಾಗಿ

ಬಂದಿದ್ದರು. ಆಗ ನಿರ್ಬಂಧಾಜ್ಞೆ ಇದ್ದುದರಿಂದ ದಾಸರ ಭಾಷಣವನ್ನು ತುಳಸಿ ತೋಟದ ಥಿಯೇಟರಿನಲ್ಲಿ ಟಿಕೆಟ್ ಮೂಲಕ ಪ್ರವೇಶವಿಟ್ಟು ಏರ್ಪಡಿಸಿದ್ದೆವು. ನಗರದ ವಕೀಲರೂ ಇತರ ಗಣ್ಯರೂ ಟಿಕೆಟ್ ಕೊಂಡು ಭಾಷಣಕ್ಕೆ ಕಿಕ್ಕಿರಿದು ನೆರೆದಿದ್ದರು. ಆದರೆ ಟಿಕೆಟ್ ಮೂಲಕ ಭಾಷಣಕ್ಕೆ ಪ್ರವೇಶವಿಟ್ಟ ವಿಚಾರ ದಾಸರಿಗೆ ತಿಳಿದಾಗ, ಅವರಿಗೆ ಅದು ಹಿಡಿಸದೆ, ಒಂದೆರಡು ನಿಮಿಷಗಳಲ್ಲಿಯೇ ಭಾಷಣ ಮುಗಿಸಿದರು. ಎಲ್ಲೆಲ್ಲೂ ಆಶಾಭಂಗ. ಭಾಷಣಕ್ಕೆ ಬಂದವರೆಲ್ಲ ನಮ್ಮನ್ನು ಶಪಿಸಿದರು. ಕೊನೆಗೆ ದಾಸರ ದರ್ಶನ ವಾಯಿತೆಂದು ತೃಪ್ತಿಪಟ್ಟರು.

ಅಂದಿನ ಸಭೆಗಳಲ್ಲಿ ದಂಡಿನ ಪ್ರದೇಶದಿಂದ ಬಂದ ಸಿ.ಐ.ಡಿ.ಗಳು ಹಾಜರಿದ್ದು ಬ್ರಿಟಿಷ್ ಸರಕಾರಕ್ಕೆ ವರದಿ ಮಾಡುತ್ತಿದ್ದರು. ದಂಡಿನ ಪ್ರದೇಶದಲ್ಲಿ ಸಾರ್ವಜನಿಕ ಸಭೆಗಳಿಗೆ ಆಸ್ಪದವೇ ಇರಲಿಲ್ಲ. ಆಗ ನಗರದಲ್ಲಿ ನಿಷೇಧಾಜ್ಞೆ ಜಾರಿ ಮಾಡಿದಲ್ಲಿ ಯಾರೂ ಅದನ್ನು ಭಂಗಿಸುತ್ತಿರಲಿಲ್ಲ. ಸಂಸ್ಥಾನದಲ್ಲಿ ಕಾನೂನು ಭಂಗಕ್ಕೆ ಅವಕಾಶ ವಿರಲಿಲ್ಲ.

ಸಂಸ್ಥಾನದಲ್ಲಿ ಆಗ ರಚನಾತ್ಮಕ ಕಾರ್ಯಗಳು ಉತ್ಸುಕತೆಯಿಂದ ನಡೆಯುತ್ತಿದ್ದು, ಖಾದಿ, ಸ್ವದೇಶಿಪ್ರಚಾರ, ಪಾನನಿರೋಧ ಭರದಿಂದ ನಡೆದಿತ್ತು. ತುಮಕೂರಲ್ಲಿ ಈ ಪೈಕಿ ರಂಗೈಯಂಗಾರ್ ಕೆಲಸ ಉಲ್ಲೇಖನೀಯ. ಮೈಸೂರಿನಲ್ಲಿ ಎಂ. ವೆಂಕಟಕೃಷ್ಣಯ್ಯನವರೇ ಅಲ್ಲದೆ ಬಾಬು ಸುಖಾನಂದ ಸೇಠ್, ತಗಡೂರು ರಾಮಚಂದ್ರರಾವ್ ಗಣ್ಯರು. ಮಲೆನಾಡಿನಲ್ಲಿ ಹೊಸಕೊಪ್ಪ ಕೃಷ್ಣರಾಯರು. ಪ್ರಜಾಪ್ರತಿನಿಧಿ ಸಭೆಯ, ನ್ಯಾಯ ವಿಧಾಯಕ ಸಭೆಯ ಸದಸ್ಯತ್ವಗಳಷ್ಟೇ ಅಲ್ಲ, ಕಡೂರು ಜಿಲ್ಲಾ ಬೋರ್ಡಿನ ಅಧ್ಯಕ್ಷ ತೆಯೂ ಇವರಿಗೆ ಬಂದಿತ್ತು. ಭಾರತಕ್ಕೆ ತಮ್ಮದೇ ಒಂದು ಘಟನೆಯನ್ನು ತಯಾರಿಸಿ ಇವರು ಕಾಂಗ್ರೆಸ್ಸಿಗೆ ಒಪ್ಪಿಸಿದ್ದರು. ಇವರು ಅಸಾಧಾರಣ ವ್ಯಕ್ತಿ ಹಾಗೂ ಮಲೆನಾಡಿನ ಅದ್ವಿತೀಯ ಮುಖಂಡರು. ಪ್ರಜಾಸ್ವಾತಂತ್ರ್ಯ ಪಕ್ಷಪಾತಿಗಳಾದ ಇವರು ಜವಾಬ್ದಾರಿ ಸರ್ಕಾರ, ಪತ್ರಿಕಾಶಾಸನದ ತೊಡೆದುಹಾಕುವಿಕೆಗಳಿಗಾಗಿ ಹೋರಾಡಿದವರು.

ತುಮಕೂರಿನ ರಂಗೈಯಂಗಾರ್ ವಕೀಲರೂ ಪತ್ರಕರ್ತರೂ ಆಗಿದ್ದು ರಚನಾತ್ಮಕ ಕಾರ್ಯದಲ್ಲಿ ಅಪಾರ ಶ್ರದ್ಧೆಯುಳ್ಳವರು. 1922ರಲ್ಲಿ ಗಯಾ ಕಾಂಗ್ರೆಸ್ಸಿಗೆ ನಾನೂ ಕಲಾಮಂದಿರದ ಅ. ನ. ಸುಬ್ಬರಾಯರೂ ಇವರ ಜೊತೆ ಹೋಗಿದ್ದಾಗ, ಇವರ ಚಿನ್ನದ ಕೈಗಡಿಯಾರ, ನಗದು ಹಣ ಫಲ್ಗುಣಿ ನದಿಯಲ್ಲಿ ಸ್ನಾನಮಾಡುವಾಗ ಕಳೆದು ಹೋಯವು. ಸೇವಾದಳದ ಒಂದು ಶಿಬಿರವನ್ನು ತುಮಕೂರಲ್ಲಿ ಏರ್ಪಡಿಸಿ ಮದ್ರಾಸಿನ ಎಸ್. ಶ್ರೀನಿವಾಸಯ್ಯಂಗಾರ್ ಅವರನ್ನು ಆಹ್ವಾನಿಸಿದ್ದರು. ಅಂದಿನ ಸಮಾರಂಭಕ್ಕೆ ನಾನೂ ಹೋಗಿದ್ದೆ. ಪ್ರತಿ ಕಾಂಗ್ರೆಸ್ ಅಧಿವೇಶನಕ್ಕೂ ಅವರು ಪ್ರತಿನಿಧಿಯಾಗಿ ಹೋಗುತ್ತಿದ್ದರು. ಸರಕಾರದ ದಬ್ಬಾಳಿಕೆಗೆ ಒಳಗಾದ ಕಾರ್ಯಕರ್ತರ ಪರ ವಕಾಲತು ವಹಿಸಲು ಇವರು ಸದಾ ಮುಂದು. ಸಹೃದಯರೂ ದೇಶಾಭಿಮಾನಿಗಳೂ ಆದ ಇವರು

ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರಲ್ಲದೆ 'ಮೈಸೂರು ಕ್ರಾನಿಕಲ್' ಎಂಬ ಪತ್ರಿಕೆ ನಡೆಸುತ್ತಿದ್ದರು.

ಚಿತ್ರದುರ್ಗ ಜಿಲ್ಲೆಯ ದಾವಣಗೆರೆ ಕಾಸಲ ಶ್ರೀನಿವಾಸಶೆಟ್ಟರು ಕಾಂಗ್ರೆಸ್ ಸಂದೇಶ ಪ್ರಚಾರ, ಖಾದಿ, ಗೋಸಂರಕ್ಷಣೆಗಳಲ್ಲಿ ಅಪಾರ ಶ್ರದ್ಧೆವಹಿಸಿದವರು. ಸ್ವಾತಂತ್ರ್ಯಕ್ಕಾಗಿ ದುಡಿದು ಕಷ್ಟನಷ್ಟ ಅನುಭವಿಸಿದವರು. ವಿದ್ಯಾಪಕ್ಷಪಾತಿಗಳು. ಕೊಟ್ರಿ ನಂಜಪ್ಪ ರಚನಾತ್ಮಕ ಕಾರ್ಯದಲ್ಲಿ ದುಡಿದ ಶ್ರದ್ಧಾಳುಗಳು. ಹರ್ಡೀಕರ್ ಮಂಜಪ್ಪ ಕಟ್ಟಾ ಗಾಂಧೀವಾದಿ. ಕೆಲಕಾಲ ಬೆಂಗಳೂರು ನಗರದಲ್ಲಿ ಇದ್ದು ಹಸ್ತಪತ್ರಿಕೆಯ ಮೂಲಕ ಗಾಂಧೀಸಂದೇಶ ಸಾರಿದವರು. ಇವರು ಒಂದು ಪತ್ರಿಕೆಯನ್ನೂ ನಡೆಸುತ್ತಿದ್ದರು. ಕೆಲಕಾಲಾನಂತರ ಹರಿಹರದ ಬಳಿ ತುಂಗಭದ್ರಾ ತೀರದಲ್ಲಿ ಆಶ್ರಮ ಸ್ಥಾಪಿಸಿ ಅಲ್ಲಿಂದ ರಚನಾತ್ಮಕ ಕಾರ್ಯ ನಡೆಸಿದರು. ಶುಭ್ರ ಜೀವನ, ಪವಿತ್ರ ನಡೆ ನುಡಿಗಳಿಂದ ಜನತೆಯ ವಿಶ್ವಾಸಕ್ಕೆ ಪಾತ್ರರಾದವರು. ಈ ಜಿಲ್ಲೆಯ ದಿ||ಗಳಾದ ಭೀಮಪ್ಪ ನಾಯ್ಕರು, ಎಸ್. ರಂಗರಾಯರೇ ಅಲ್ಲದೆ ಈಗ ನಮ್ಮ ನಡುವೆ ಇರುವ ಕೆ. ಕೆಂಚಪ್ಪನವರೂ ಚಿರಸ್ಮರಣೀಯರೇ. ಇವರೆಲ್ಲ ವಕೀಲರು. ಕೆಂಚಪ್ಪನವರು ಜಿಲ್ಲಾ ಬೋರ್ಡು ಅಧ್ಯಕ್ಷರೂ ಆಗಿದ್ದರು.

ರಚನಾತ್ಮಕ ಕಾರ್ಯಗಳಲ್ಲಿ ಒಂದಾದ ಹಿಂದೀ ಪ್ರಚಾರಕ್ಕಾಗಿ ದ.ಭಾ. ಹಿಂದೀ ಪ್ರಚಾರ ಸಭೆಯಲ್ಲಿ ತರಪೇತಿಪಡೆದ ಶಿವಮೊಗ್ಗದ ಮಾರ್ತಾಂಡರಾವ್ ಬೆಂಗಳೂರಲ್ಲಿ ಕಾಂಗ್ರೆಸ್ ಕಚೇರಿಯಲ್ಲಿ ತರಗತಿ ತೆರೆದಾಗ ರಾಘವನ್, ನಾನು, ಅ. ನ. ಸುಬ್ಬರಾವ್, ಕ್ಲೋಸ್‌ಪೇಟೆ ಸುಬ್ಬಾಶಾಸ್ತ್ರಿ ಆರಂಭದ ವಿದ್ಯಾರ್ಥಿಗಳು. ಹಿಂದಿ ಬಗ್ಗೆ ಉತ್ಸಾಹ ಬೆಳೆದು ಮಹಿಳೆಯರು ಭಾರಿ ಸಂಖ್ಯೆಯಲ್ಲಿ ವರ್ಗಗಳಿಗೆ ಬರುತ್ತಿದ್ದರು. ಜಮ್ನಾದಾಸ್ ಮುಂತಾದವರು ಬೆಂಗಳೂರಿಗೆ ಬಂದು ಹಿಂದಿ ಪ್ರಚಾರ ನಡೆಸಿದರು.

ಮದ್ಯಪಾನದ ವಿರುದ್ಧ ಕೂಡ ವ್ಯಾಪಕ ಪ್ರಚಾರ, ಪಿಕೆಟಿಂಗ್, ಸರ್ಕಾರದ ಮತ್ತು ಕಂಟ್ರಾಕ್ಟರ್‌ಗಳ ಕೋಪತಾಪ ಎದುರಿಸಿ ನಡೆಯಿತು. ನಾನೂ ಪಿಕೆಟಿಂಗ್‌ನಲ್ಲಿ ಪಾಲುಗೊಂಡಿದ್ದೆ. ದೇವನಹಳ್ಳಿ, ಚಿಂತಾಮಣಿಗಳಲ್ಲಿ ಆಗ ಕಂಟ್ರಾಕ್ಟರುಗಳಿಂದ ಪಿಕೆಟಿಂಗ್ ನಡೆಸುವವರಿಗೆ ಹೊಡೆತ, ಹೆಂಡದ ಅಭಿಷೇಕ ಆದುವು.

ರಜ್ವಿ ಸೋದರರು, ಜಮಖಂಡಿ ಭೀಮರಾವ್, ರಾಮಲಾಲ್ ತಿವಾರಿ, ರಾಘವನ್ ಇವರುಗಳ ಶ್ರಮದಿಂದ ಬೆಂಗಳೂರಲ್ಲಿ ಕಾಂಗ್ರೆಸ್ ಬೆಳೆಯಿತು. ಪಿ. ಆರ್. ರಾಮಯ್ಯನವರು ಆಗ 'ಸ್ವರಾಜ್ಯ'ದಲ್ಲಿ ಇದ್ದ ಹುದ್ದೆ ತ್ಯಜಿಸಿ ಮದ್ರಾಸಿನಿಂದ ಬೆಂಗಳೂರಿಗೆ ಬಂದು 'ಸ್ವರಾಜ್ಯ' 'ಡೇಲಿ ಎಕ್ಸ್‌ಪ್ರೆಸ್'ಗಳ ಬಾತ್ಮೀದಾರರಾಗಿದ್ದು ಕ್ರಮೇಣ ಕಾಂಗ್ರೆಸ್ ಚಟುವಟಿಕೆಗಳಲ್ಲೂ ಪಾಲುಗೊಂಡರು. ಕೆಲಕಾಲ ಕಾಂಗ್ರೆಸ್ ಕಾರ್ಯದರ್ಶಿಗಳಾಗಿದ್ದರಲ್ಲದೆ 'ತಾಯಿನಾಡು' ಪತ್ರಿಕೆ ಆರಂಭಿಸಿ, ದೀರ್ಘಕಾಲ ಸ್ವಾತಂತ್ರ್ಯ ಉದ್ಯಮಕ್ಕೆ ಪ್ರೋತ್ಸಾಹ ನೀಡಿದರು. ರಚನಾತ್ಮಕ ಕಾರ್ಯಗಳಲ್ಲಿ ಪಾಲುಗೊಂಡರಲ್ಲದೆ ಕೆಲವು ದಿನ

ಜೈಲುವಾಸ ಕೂಡ ಅನುಭವಿಸಿದರು. ಆರ್. ಕಲ್ಯಾಣಮ್ಮ, ವೆಂಕಟಮ್ಮ ಎಂಬ ಇಬ್ಬರು ವಿಧವೆಯರಾದ ಮಹಿಳಾ ಕಾರ್ಯಕರ್ತರನ್ನು ರಚನಾತ್ಮಕ ಕಾರ್ಯಗಳಲ್ಲಿ ಉತ್ಸಾಹದಿಂದ ಪಾಲುಗೊಂಡ ಬಗ್ಗೆ (ಬೆಂಗಳೂರಿನಲ್ಲಿ) ಇಲ್ಲಿ ನೆನೆಯಬೇಕು.

ಆ ಕಾಲದಲ್ಲಿ ನಾನು ನ್ಯಾಷನಲ್ ಹೈಸ್ಕೂಲು ವಿದ್ಯಾರ್ಥಿ. ಹೈಸ್ಕೂಲು ವ್ಯಾಸಂಗ ನೆಪಮಾತ್ರ. ಸದಾಕಾಲ ಕಾಂಗ್ರೆಸ್ ಚಟುವಟಿಕೆ. ಖಾದಿ ಬಟ್ಟೆ ಹೊತ್ತು ಮನೆಮನೆಗೆ ಮಾರುತ್ತಿದ್ದೆ. ಅಂದಿನ ಮುಖ್ಯೋಪಾಧ್ಯಾಯರು ದಿ|| ಸಂಪದ್ಗಿರಿರಾಯರು. ರಾಷ್ಟ್ರೀಯ ಭಾವನೆಯವರಾಗಿದ್ದು, ಸೆಂಟ್ರಲ್ ಕಾಲೇಜು ಹುದ್ದೆ ಬಿಟ್ಟು ಈ ಶಾಲೆ ಸೇರಿದವರು. ಶಾಲೆಯ ಶಿಸ್ತು ಕಾಪಾಡಲೆಂದು ಒಮ್ಮೊಮ್ಮೆ ನನಗೆ ಬುದ್ಧಿವಾದ ಹೇಳುತ್ತಿದ್ದರು: "ಕಾಂಗ್ರೆಸ್ ಕೆಲಸ ಒಳ್ಳೆಯದೇ, ಮಾಡು. ಆದರೆ ವ್ಯಾಸಂಗ, ಆ ಕೆಲಸ ಒಂದೇ ವೇಳೆಯಲ್ಲಿ ಬೇಡ. ವ್ಯಾಸಂಗ ಮಾಡಬೇಕೆಂಬ ಇಚ್ಛೆ ಇದ್ದರೆ ಅದಕ್ಕೆ ಗಮನ ಕೊಡು, ಇಲ್ಲವಾದರೆ ಶಾಲೆ ಬಿಡು" ಎಂದು. ಕೆಲವು ತಿಂಗಳನಂತರ ಶಾಲೆಯನ್ನು ಬಿಡಬೇಕಾದ ಪ್ರಸಂಗ ಬಂತು. ನಾನು ಯು.ಸಿ.ಇ. ಸೇರಬೇಕಿತ್ತು. ಇದೇ ಕಾಲಕ್ಕೆ ಶಿಕ್ಷಣವನ್ನು ನಿಲ್ಲಿಸಬೇಕಾದ ಪ್ರಸಂಗ ಕೂಡ ಬಂತು.

## ನಾಗಪುರ ಧ್ವಜ ಸತ್ಯಾಗ್ರಹ

ಬ್ರಿಟಿಷ್ ಪ್ರಾಂತಗಳಲ್ಲಿ ನಡೆದ ಯಾವುದೇ ಚಳವಳಿಯಲ್ಲಿ ಮೈಸೂರು ಸಂಸ್ಥಾನದ ತರುಣರು ಮುನ್ನುಗ್ಗಿ ಭಾಗವಹಿಸಿದ್ದ ಪ್ರಕರಣಗಳು ಅಸಂಖ್ಯ. ಇದಕ್ಕೆ ಆರಂಭ ಆದದ್ದು 1923ರ ನಾಗಪುರ ಧ್ವಜ ಸತ್ಯಾಗ್ರಹದಿಂದಲೇ. (ಐತಿಹಾಸಿಕವಾದ ನಾಗಪುರ ಧ್ವಜ ಸತ್ಯಾಗ್ರಹದ ವಿವರ ಇಲ್ಲಿ ನೀಡುವ ಆವಶ್ಯಕತೆ ಇಲ್ಲ. —ಸಂ||). ನಾಗಪುರದಲ್ಲಿ ಜಮ್ನಾಲಾಲ್ ಬಜಾಜರ ನೇತೃತ್ವದಲ್ಲಿ ನಡೆದ ಈ ಸತ್ಯಾಗ್ರಹದಲ್ಲಿ ಭಾರತಾದ್ಯಂತದಿಂದ ತರುಣರು ಪಾಲುಗೊಂಡು ಅಲ್ಲಿನ ಜೈಲುಗಳನ್ನೆಲ್ಲ ತುಂಬುತ್ತಿದ್ದರು. ನಮ್ಮ ನಾಯಕರಾದ ರಜ್ವಿ ಮತ್ತು ಭೀಮರಾವ್ ಇವರುಗಳು ನಮ್ಮನ್ನು ಪ್ರೋತ್ಸಾಹಿಸಿ, ನನ್ನ ನೇತೃತ್ವದಲ್ಲಿ ತರುಣರ ಒಂದು ತಂಡವನ್ನು ಅಲ್ಲಿಗೆ ಕಳುಹಿಸಿದರು. ನನ್ನ ಜೊತೆ ಬಂದ ಸತ್ಯಾಗ್ರಹಿಗಳೆಂದರೆ, ಟಿ. ಎಸ್. ರಾಮಸ್ವಾಮಿ, ಬಿ. ರಂಗನಾಥರಾವ್, ರಾಮಸ್ವಾಮಿ, ಭಾರದ್ವಾಜ್ ಮತ್ತು ಸಿ. ರಾಜಗೋಪಾಲಾಚಾರ್. ನಾವು ಹೊರಡುವ ಮುನ್ನವೇ ಬಂಧನವಾಗುವ ಸಂಭವವಿದ್ದುದರಿಂದ, ಮನೆಯಲ್ಲೂ ಕೂಡ ಹೇಳದೆ, ಯಶವಂತಪುರ ನಿಲ್ದಾಣದಿಂದ ರೈಲು ಹತ್ತಿದೆವು. ರಾಮಲಾಲ್ ತಿವಾರಿ ನಿಲ್ದಾಣಕ್ಕೆ ನಮ್ಮ ಜೊತೆ ಬಂದಿದ್ದರು. ಸತ್ಯಾಗ್ರಹಕ್ಕೆ ಜನ ಹೋಗುವರೆಂದು ತಿಳಿದು, ನಾಗಪುರಕ್ಕೆ ಟಿಕೆಟ್ ಕೊಡಬಾರದೆಂದು ಸರಕಾರ ಆಜ್ಞೆಯನ್ನು ಮಾಡಿತ್ತು. ಜಮಖಂಡಿ ಭೀಮರಾಯರು. ರೈಲ್ವೆ ಅಧಿಕಾರಿಗಳೊಬ್ಬರ ನೆರವಿನಿಂದ ಟಿಕೆಟ್ ಕೊಡಿಸಿದರು. ಸತ್ಯಾಗ್ರಹಿಗಳೆಂದು ತೋರಿಸಿಕೊಳ್ಳದೆ, ಸಿ.ಐ.ಡಿ.ಗಳ ಕಣ್ಣು ತಪ್ಪಿಸಿ, ಮದ್ರಾಸು ಮೂಲಕ ಹುಟಗಿಗೆ

ಹೋದಾಗ ಬಿಜಾಪುರದಿಂದ ಒಂದು ಸತ್ಯಾಗ್ರಹಿಗಳ ತಂಡ ಬಂತು. ಅವರು ಸತ್ಯಾಗ್ರಹಿಗಳೆಂದು ನನಗೆ ಮನವರಿಕೆ ಆದರೂ ನಾವು ಅವರಲ್ಲಿ ಕೊನೆತನಕ ಮಾತನಾಡಲಿಲ್ಲ. ಸಿ.ಐ.ಡಿ.ಗಳು ಸುಳಿದಾಡುತ್ತಲೇ ಇದ್ದರು. ಅವರಲ್ಲಿ ಬಾಗಲಕೋಟೆಯ ಸೀನಪ್ಪ ನೀರಲಕೇರಿ, ಕೃಷ್ಣರಾವ್ ಜೋರಾಪುರ ಇದ್ದರೆಂದು ಮುಂದೆ ನಮಗೆ ತಿಳಿಯಿತು. ನಾಗಪುರ ನಮಗೆ ಹೊಸದಾಗಿ, ಬೆಳಗ್ಗೆ ನಿಲ್ದಾಣ ತಲುಪಿದಂತೆಯೇ ನಮ್ಮನ್ನು ಪೋಲೀಸರು ಬಂಧಿಸಿದರು. ಉಪಾಯ ಕಾಣದೆ ನಮ್ಮ ಪೆಟ್ಟಿಗೆಯಲ್ಲಿದ್ದ ಧ್ವಜ ತೆಗೆದು ಹಾರಿಸಿ ಘೋಷಣೆ ಕೂಗಿದೆವು. ಬಿಜಾಪುರ ಜಿಲ್ಲೆಯವರೂ ಬಂಧಿತರಾದರು. ಆಗ ನಾವು ಪರಸ್ಪರ ಪರಿಚಯ ಮಾಡಿಕೊಂಡೆವು. ಪೋಲೀಸರು ಕಾಠಿಣ್ಯ ತೋರಲಿಲ್ಲ. ಕೆಲ ತಾಸು ಪೋಲೀಸ್ ಠಾಣೆಯಲ್ಲಿ ಕಳೆದು, ಮುಂದೆ ಲಾಕಪ್ಪಿಗೆ ಒಯ್ದರು. ಅಲ್ಲಿ ಬೇರೆ ಬೇರೆ ಪ್ರಾಂತಗಳಿಂದ ಬಂದ ಸತ್ಯಾಗ್ರಹಿಗಳು ತುಂಬಿದ್ದರು. ಸಂಜೆ ಸೆಂಟ್ರಲ್ ಜೇಲಿಗೆ ಒಯ್ದರು. ಅಲ್ಲಿನ ಕಬ್ಬಿಣದ ಊಟದ ತಟ್ಟೆ, ಜೋಳದ ರೊಟ್ಟಿ, ಹುಳುತುಂಬಿದ ಹುಳಿ ನಮ್ಮಲ್ಲಿ ಕೆಲವರಿಗೆ ಸಂಕಟವನ್ನೇ ತರಿಸಿತು. ಅಲ್ಲಿನ ಶೌಚಕೂಪಗಳಂತೂ ಗೋಪ್ಯವೇ ಇಲ್ಲದೆ ಅಸಹ್ಯವಾಗಿದ್ದುವು. ಸತ್ಯಾಗ್ರಹಿಗಳಿಗೆ ಇದೆಲ್ಲ ಸಹಿಸಲಾಗದ ಅನುಭವ. ನಾವು ಈ ಬಗ್ಗೆ ಲಕ್ಷ್ಯವಿಡದೆ, ನಾವು ಬಂದ ಉದ್ದಿಶ್ಯದತ್ತ ಗಮನವನ್ನಿಟ್ಟೆದ್ದೆವು. ಆಗಲೇ ಜೈಲಿನಲ್ಲಿ ಡಾ|| ಹರ್ಡೀಕರರು ಇದ್ದರು. ಎರಡು ದಿನಗಳನಂತರ ವಿಚಾರಣೆ. ನಮ್ಮಿಂದ ಕ್ಷಮೆ ಕೇಳಿ ಬಿಡುಗಡೆ ಮಾಡಬೇಕೆಂದು ಮ್ಯಾಜಿಸ್ಟ್ರೇಟ್ ಬಹಳ ಯತ್ನಿಸಿದ. ನಾವು ಜಗ್ಗಲಿಲ್ಲ. ನನಗೆ ಒಂದು ವರ್ಷ ಕಠಿಣ ಶಿಕ್ಷೆ ವಿಧಿಸಿದರು. ಜಾಮೀನು ಪಡೆದು ಬೇಕಾದರೆ ಬಿಡುಗಡೆ ಮಾಡುವುದಾಗಿ ಹೇಳಿದರು. "ಯಾರ ಜಾಮೀನೂ ಬೇಡ, ನಿಮ್ಮ ತಲೆಯ ಮೇಲಿನ ಗಾಂಧಿ ಟೋಪಿ ಕೊಟ್ಟರೆ ಸಾಕು" ಎಂದರು ಮ್ಯಾಜಿಸ್ಟ್ರೇಟ್. "ಪ್ರಾಣ ಹೋದರೂ ಚಿಂತೆಯಿಲ್ಲ. ನಾವೆಂದಿಗೂ ಗಾಂಧಿ ಟೋಪಿ ಕೊಡೆವು. ಎಷ್ಟು ಶಿಕ್ಷೆ ಆದರೂ ಸರಿ, ಅನುಭವಿಸಲು ಸಿದ್ಧರಾಗಿಯೇ ಬಂದಿದ್ದೇವೆ" ಎಂದೆವು. ನಮ್ಮನ್ನು ಜೈಲಿಗೆ ಒಯ್ದು ಕೈದಿಗಳಿಗೆ ತಕ್ಕ ಬಟ್ಟೆಬರೆ ನೀಡಿದರು. ಜೈಲಿನ ಆಹಾರ ವಾಕರಿಕೆ ಬರಿಸುತ್ತಿತ್ತು. ವಾರಕ್ಕೊಮ್ಮೆ ಮಾತ್ರ ಅನ್ನ. ನಮಗೆ ಜಿಗುಪ್ಸೆ. ಅನೇಕರು ಕ್ಷಮಾಪಣೆ ಬೇಡಿ ಮರಳಿದರು. ನಾವು ಹಾಗೆ ಮಾಡಲಿಲ್ಲ. ಒಂದು ವಾರದನಂತರ ಅಕೋಲ ಜೈಲಿಗೆ ವರ್ಗಾವಣೆ. ನಾಗಪುರ ಜೈಲು ತುಂಬಿಹೋಗಿತ್ತು. ಅಕೋಲದಲ್ಲಿ ನನಗೆ ಆಮಶಂಕೆ ಆಯಿತು. ಆಸ್ಪತ್ರೆ ಸೇರಿದೆ. ಜೈಲಿನಲ್ಲಿದ್ದಾಗ ಬಿರುಸಿನ ಕರಿಕಲ್ಲು ಒಡೆದು ಜಲ್ಲಿಮಾಡುವುದು, ಕಿತ್ತಾನಾರಿನಿಂದ ಹಗ್ಗ ಮಾಡುವುದು ಕೆಲಸ ಮಾಡಿದ್ದೆ. ಆಗ ಜೈಲಿನಲ್ಲಿ ಎ, ಬಿ, ಸಿ ವರ್ಗ ಇರಲಿಲ್ಲ. ಮುಂದೆ ಸತ್ಯಾಗ್ರಹದ ಬಿರುಸೇನೂ ಕಡಿಮೆ ಆಗದೆ, ಸರಕಾರ ಒಪ್ಪಂದಕ್ಕೆ ಮುಂದಾಗಿ ನಮ್ಮೆಲ್ಲರ ಬಿಡುಗಡೆ ಆದಾಗ ಅಕೋಲದಲ್ಲಿ ನಮಗೆ ಅಪೂರ್ವ ಸ್ವಾಗತ ದೊರೆಯಿತು. ನಾನಾದರೋ ಆಗ ಆಸ್ಪತ್ರೆಯಿಂದ ಹೊರಬಂದೆ. ದಿವಾನರಾಗಿದ್ದ ವಿ. ಪಿ. ಮಾಧವರಾಯರ ಸಂಬಂಧಿ

ಗಳಾಗಿದ್ದ ಮೈಸೂರು ಸಂಸ್ಥಾನದ ವಿಶ್ವನಾಥರಾವ್ ಎಂಬವರು ಬೇರೆ ಪ್ರಾಂತ್ಯದಿಂದ ಸತ್ಯಾಗ್ರಹಕ್ಕೆ ಬಂದು, ಅಲ್ಲಿ ಜೈಲಿನಲ್ಲಿ ಇದ್ದ ವಿಚಾರ ಇಲ್ಲಿ ಹೇಳಬೇಕು. ಇದೇ ರೀತಿ ಬೆಂಗಳೂರು ಪಂಡಿನ ಭೀಮರಾವ್ ಮತ್ತು ಹೊಳೇನರಸೀಪುರದ ಎಚ್. ಎಸ್. ನಂಜುಂಡಯ್ಯ ಇವರಿಬ್ಬರೂ ಪ್ರತ್ಯೇಕವಾಗಿ ಭಾಗವಹಿಸಿ ಅಲ್ಲಿ ಜೈಲಿನಲ್ಲಿ ಇದ್ದರು. ಆಚಾರ್ಯ ವಿನೋಬಾ ಕೂಡ ನಮ್ಮ ಜೊತೆ ಜೈಲಿನಲ್ಲಿ ಇದ್ದವರು. ಅಕೋಲದಲ್ಲಿ ಭಾರಿ ಸಂಭ್ರಮದ ಸತ್ಕಾರದನಂತರ, ಮರುದಿನ ಡಾ|| ಹರ್ಡೀಕರರ ಜೊತೆ ನಾಸಿಕ ತಲಪಿದೆವು. ಅಲ್ಲೂ ವೈಭವದ ಸ್ವಾಗತ, ಸತ್ಕಾರ. ನಾನು ಮಂಗಳೂರಿನ ಮಾರಪ್ಪ ಪಕ್ಕಳರ ಜೊತೆ ಮುಂಬೈಗೆ ಹೋದೆ. ರಾಮಸ್ವಾಮಿ, ಭಾರದ್ವಾಜ್ ದೆಹಲಿ ಕಾಂಗ್ರೆಸ್ ಅಧಿವೇಶನಕ್ಕೆ ಹೋದರು. ರಂಗನಾಥರಾವ್ ಸಬರಮತಿ ಆಶ್ರಮಕ್ಕೆ ಹೋದರು. ನಾನು ಮುಂಬೈಯಲ್ಲಿ ಆಗ ಇದ್ದ ಜಿ. ಎ. ಆಚಾರ್ಯರ ಜೊತೆ ಕೆಲದಿನ ಇದ್ದು ಬೆಂಗಳೂರಿಗೆ ವಾಪಸಾದೆ (ಸತ್ಯಾಗ್ರಹ, ಜೈಲುವಾಸದ ಬಗ್ಗೆ ನೀಡಿದ ಅನೇಕ ವಿವರಗಳನ್ನು ಇಲ್ಲಿ ಕೈಬಿಟ್ಟಿದೆ—ಸಂ||).

## ಸೇವಾದಳ

ನಾಗಪುರ ಜೈಲಿನಲ್ಲಿದ್ದಾಗಲೇ ಡಾ|| ಹರ್ಡೀಕರರಿಗೆ ಸೇವಾದಳ ಸ್ಥಾಪಿಸುವ ಕಲ್ಪನೆ ಬಂದು, ಮುಂದೆ ದೇಶದಲ್ಲೆಲ್ಲ ಕಡೆ ಸಂಚರಿಸಿ, ಎಲ್ಲ ಪ್ರಾಂತಗಳ ಬೆಂಬಲಪಡೆದು, ಹಿಂದೂಸ್ಥಾನಿ ಸೇವಾದಳ ಸ್ಥಾಪಿಸಿದರು. ಆಗ ಅದಕ್ಕೆ ಸೇರಿದ ಅನೇಕ ತರುಣರಲ್ಲಿ ನಾನೂ ಒಬ್ಬ. ಮೈಸೂರು ಸಂಸ್ಥಾನದಲ್ಲಿ ಇದಕ್ಕೆ ಅಪಾರ ಪ್ರೋತ್ಸಾಹ ದೊರೆಯಿತು. ಕಾಕಿನಾಡ ಕಾಂಗ್ರೆಸ್ ಅಧಿವೇಶನದಲ್ಲಿ ಸೇವಾದಳದ ಪ್ರಥಮ ಅಧಿವೇಶನ ಆಯಿತು. ಬೆಳಗಾವಿ ಕಾಂಗ್ರೆಸ್ (1924) ಸೇವಾದಳದ ಪರ್ವಕಾಲ. ಸೇವಾದಳ ಮತ್ತು ಡಾ|| ಹರ್ಡೀಕರರ ಸೇವೆಯನ್ನು ಗಾಂಧೀಜಿ ಮೊದಲ್ಗೊಂಡು ಎಲ್ಲ ಮುಖಂಡರೂ ಮೆಚ್ಚಿ ಪ್ರಶಂಸಿಸಿದರು. ಆಗ ಮೈಸೂರು ಸಂಸ್ಥಾನದ ತಂಡದ ಸುಬೇದಾರ್ ಸ್ಥಾನ ನನಗೆ ಸಂದಿತ್ತು. ಇದಕ್ಕೆ ಮೊದಲು ಬಿಜಾಪುರ ಜಿಲ್ಲೆಯ ಸೀತಿಮನಿಯಲ್ಲಿ ನಡೆದ ತರಬೇತಿ ಶಿಬಿರಕ್ಕೆ ಬೆಂಗಳೂರಿಂದ ನಾನು ಇನ್ನೊಬ್ಬರು (ಹೆಸರು ನೆನಪಾಗುತ್ತಿಲ್ಲ), ಮೈಸೂರಿನಿಂದ ಎಲ್. ಆರ್. ಎಸ್. ಶರ್ಮ ಮತ್ತು ಚಂದ್ರಶೇಖರ ಶಾಸ್ತ್ರಿ ಈ ಶಿಬಿರಕ್ಕೆ ಹೋಗಿದ್ದು ನಮ್ಮ ವೆಚ್ಚವನ್ನು ಸ್ಥಳೀಯ ಕಾಂಗ್ರೆಸ್ ಸಮಿತಿಯವರು ನಿರ್ವಹಿಸಿದ್ದರು. ಅಚ್ಚುಕಟ್ಟಾಗಿ ಅಲ್ಲಿ ನಡೆದ ಶಿಬಿರದಲ್ಲಿ ಶೌಚಕೂಪ ಸ್ವಚ್ಛಮಾಡುವ ಕೆಲಸ ಕೂಡ ಸ್ವಯಂಸೇವಕರದೇ. ನಾವು ಅದನ್ನು ಸಂತಸದಿಂದ ಮಾಡಿದೆವು. ಬೆಳಗಾವಿ ಕಾಂಗ್ರೆಸ್‌ನಲ್ಲೂ ಈ ಕೆಲಸ ನಿರ್ವಹಿಸಿ ಗಾಂಧೀಜಿಯ ಮೆಚ್ಚುಗೆ ಸೇವಾದಳಕ್ಕೆ ಬಂತು. ಸೀತಿಮನಿಯಿಂದ ಬಂದನಂತರ ಬೆಂಗಳೂರು, ಮೈಸೂರುಗಳಲ್ಲಿ ತರಬೇತಿ ಶಿಬಿರ ನಡೆಸಿದೆವು. ಬೆಂಗಳೂರು ನ್ಯಾಷನಲ್ ಹೈಸ್ಕೂಲಿನ ಕೆಲವು ಉಪಾಧ್ಯಾಯರೂ

ವಿದ್ಯಾರ್ಥಿಗಳೂ ಕೂಡ ಈ ಶಿಬಿರದಲ್ಲಿ ಪಾಲುಗೊಂಡರು. ಈಪೈಕಿ ಕೆಲವರು ಮುಂದೆ ಸ್ವಾತಂತ್ರ್ಯ ಚಳವಳಿಯಲ್ಲಿ ಅಮೋಘ ಪಾತ್ರ ವಹಿಸಿದರು. ಅನ್ಯ ಕ್ಷೇತ್ರಗಳಲ್ಲೂ ಪ್ರಸಿದ್ಧರಾದರು. ಸರ್ದಾರ್ ವೆಂಕಟರಾಮಯ್ಯ, ಡಾ|| ಎ. ಎಸ್. ಇ. ಅಯ್ಯರ್ (ಮುಂದೆ ಕಾಫಿ ಬೋರ್ಡ್ ಅಧ್ಯಕ್ಷ), ಖ್ಯಾತ ಸಾಹಿತಿ ಡಾ|| ಅ. ನ. ಕೃಷ್ಣರಾಯರು, ಮುಂದೆ ಜಿಲ್ಲಾಧಿಕಾರಿಯಾದ ಅಬ್ದುಲ್ ಘನಿ, ನ್ಯಾಷನಲ್ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಡಾ|| ಎಚ್. ರಾಮರಾಯರು, ಉಪಾಧ್ಯಾಯರಾದ ಕೆ. ಎಲ್. ಸುಬ್ಬರಾಯರು, ಬದನವಾಳ ಖಾದಿ ಕೇಂದ್ರದ ವ್ಯವಸ್ಥಾಕರಾದ ಎಸ್. ವಿ. ರಾಜಾರಾಮ ಅಯ್ಯಂಗಾರ್, ಎಚ್. ಎಸ್. ರಾಘವೇಂದ್ರರಾವ್ ಮುಂತಾದವರು. ಟಿಪ್ಪು ಸುಲ್ತಾನ್ ಅರಮನೆಯ ಪಕ್ಕದ ಮೈದಾನದಲ್ಲಿ ಕವಾಯತು, ನ್ಯಾಷನಲ್ ಹೈಸ್ಕೂಲಲ್ಲಿ ಕಾಂಗ್ರೆಸ್ ಇತಿಹಾಸ, ಹಿಂದಿ, ಪ್ರಥಮ ಚಿಕಿತ್ಸೆ ತರಪೇತಿ ನಡೆಯುತ್ತಿತ್ತು. ನನ್ನ ನಾಯಕತ್ವದಲ್ಲಿ ಸಂಸ್ಥಾನದ 120 ಸ್ವಯಂಸೇವಕರು ಬೆಳಗಾವಿ ಕಾಂಗ್ರೆಸ್ಸಿಗೆ ಹೋಗಿ ಅಲ್ಲಿನ ಕಾರ್ಯಕ್ರಮಗಳಲ್ಲಿ ಪಾಲುಗೊಂಡು ಸಂಸ್ಥಾನಕ್ಕೆ ಕೀರ್ತಿ ತಂದರು. ರಜ್ವಿ, ಜಮಖಂಡಿ ಭೀಮರಾವ್ ಇದಕ್ಕೆ ಅಪಾರ ಪ್ರೋತ್ಸಾಹ ನೀಡಿದರು. ಸಂಸ್ಥಾನದ ಸ್ಕೌಟು ಸಂಘವೂ ಇದಕ್ಕೆ ಬೆಂಬಲವಾಗಿ ಇತ್ತು. ಅಂದು ಸ್ಕೌಟು ಕಮಿಷನರಾಗಿದ್ದ ಸಿ. ಸುಬ್ಬರಾಯರು, ಪ್ರಮುಖ ಸ್ಕೌಟ್ ಆಗಿದ್ದ ಪಿ. ಶಿವಶಂಕರ್ ತುಂಬಾ ಸಹಾಯ ಮಾಡಿದ್ದರು. ಶಿವಶಂಕರ್ ಬೆಳಗಾಂ ಅಧಿವೇಶನಕ್ಕೆ ಪೋಷಕರಾಗಿ ಬಂದಿದ್ದರು.

ಬೆಳಗಾಂ ಅಧಿವೇಶನಕ್ಕೆ ಸಂಸ್ಥಾನದ ನೆರವು ಅಪಾರ. ಜನ, ಮನ, ಧನ ಎಲ್ಲವೂ ಗಣನೀಯವಾಗಿ ಸಂದವು. ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಸಂಸ್ಥಾನದ್ದೇ ಸಿಂಹಪಾಲು. ಸಂಗೀತ ಸಮ್ಮೇಳನಕ್ಕೆ ಅರಮನೆಯ ಕೊಡುಗೆ ಅಸಾಧಾರಣ. ವಸ್ತು ಪ್ರದರ್ಶನದಲ್ಲಿ ಸಂಸ್ಥಾನದ ಪಾತ್ರ ಪ್ರಧಾನವಾಗಿತ್ತು. ಸಂಸ್ಥಾನೀ ಸರ್ಕಾರ ಉತ್ಸಾಹದಿಂದ ಸಹಕರಿಸಿತ್ತು. ಸಕಲ ಬಗೆಯಿಂದಲೂ ಸಂಸ್ಥಾನ ಬೆಳಗಾಂ ಅಧಿವೇಶನದಲ್ಲಿ ಭಾಗಿಯಾದದ್ದು ರಾಷ್ಟ್ರೀಯ ಭಾವನೆಯ ಜಾಗೃತಿಯ ಸ್ಪಷ್ಟ ಪ್ರತೀಕ. ಕರ್ನಾಟಕದ ಮುಖಂಡರೇ ಅದನ್ನು ಒಪ್ಪಿದ್ದಾರೆ. "ಮೈಸೂರು ಸಂಸ್ಥಾನದಿಂದ ಸಾಕಷ್ಟು ಸಹಾಯ ದೊರೆಯಿತು. ಭಾರತದ ರಾಜಕಾರಣದಲ್ಲಿ ಅಪ್ರತ್ಯಕ್ಷವಾಗಿ ಭಾಗವಹಿಸಿದ ಪ್ರಸಂಗ ಇದೇ ಮೊದಲನೆಯದು. ಅದರಿಂದ ಅವರಿಗೆ ಬಹಳ ಉತ್ಸಾಹವುಂಟಾಯಿತು. ಈ ಕಾಂಗ್ರೆಸ್ಸಿನ ಕಾರಣದಿಂದ ಬ್ರಿಟಿಷ್ ಕರ್ನಾಟಕಕ್ಕೆ ಅವರು ಹೋಗಿಬರುವುದು ಈಗಿನಿಂದಲೇ ಆರಂಭವಾಯಿತು" ಎಂದು ಗಂಗಾಧರರಾವ್ ದೇಶಪಾಂಡೆ ತಮ್ಮ ಆತ್ಮಕಥೆಯಲ್ಲಿ ಹೇಳಿದ್ದಾರೆ. ಇಷ್ಟು ಮಾತ್ರವಲ್ಲ, "1930 ಮತ್ತು ಅನಂತರ ಚಳವಳಿಯಲ್ಲಿ ಅಲ್ಲಿಯ ಜನರು ಸಾಕಷ್ಟು ಭಾಗ ತೆಗೆದುಕೊಂಡರು. ಖಾದಿ ಕಾರ್ಯಕ್ಕೆ ತುಂಬಾ ಸಹಾಯ ಮಾಡಿದರು" ಎಂದೂ ಅವರು ಹೇಳಿದ್ದಾರೆ. ಅಧಿವೇಶನದ ಸ್ವಾಗತ ಸಮಿತಿಯಲ್ಲಿ ಡಿ. ಕೆ. ಭಾರದ್ವಾಜರು ಕಾರ್ಯದರ್ಶಿಗಳಲ್ಲಿ ಒಬ್ಬರಾಗಿದ್ದರು. ಆಗ ಪ್ರಕಟ

ವಾದ ಕರ್ನಾಟಕದ ಬಗೆಗಿನ ಪರಿಚಯ ಗ್ರಂಥವನ್ನು ಪ್ರೊ|| ಸಂಪದ್ಗಿರಿರಾಯರು ಸಂಪಾದಿಸಿ ಪ್ರಕಟಿಸಿದ್ದರು. ಮುಂದೆ ಪ್ರತಿವರ್ಷ ಕಾಂಗ್ರೆಸ್ ಅಧಿವೇಶನ ಕಾಲಕ್ಕೆ ಸೇವಾದಳದ ತರಬೇತಿಗೆ ಕರ್ನಾಟಕದ ಕಾರ್ಯಕರ್ತರು ಹೋಗಬೇಕಾಯಿತು. ಕಾನ್ಪುರ, ಗೌಹತಿ, ಮದ್ರಾಸ್ ಅಧಿವೇಶನಕ್ಕಷ್ಟೇ ಅಲ್ಲ, ಬೇರೆ ಪ್ರಾಂತಗಳಲ್ಲಿ ಸೇವಾದಳವನ್ನು ಕಾಯಂ ಆಗಿ ಸಂಘಟಿಸಲೂ ಕಾರ್ಯಕರ್ತರು ಹೋಗಬೇಕಾಗಿ ಬಂತು. ಕೆ. ಎ. ವೆಂಕಟರಾಮಯ್ಯ, ಕೆ. ಎಸ್. ಇ. ಅಯ್ಯರ್, ಕೆ. ಜಿ. ಕೃಷ್ಣಮೂರ್ತಿ, ದಯಾನಂದ ರಾಜು, ಮೈಸೂರಿನ ಶರ್ಮ ಇವರೆಲ್ಲ ಹೀಗೆ ಹೋದ ಸಂಸ್ಥಾನೀ ಪ್ರದೇಶದ ಕೆಲವು ಕಾರ್ಯಕರ್ತರು. ಸಂಸ್ಥಾನದಲ್ಲೂ ಸೇವಾದಳ ಹಬ್ಬಿತು. ಹಲವಾರು ಕಡೆ ಶಿಬಿರಗಳು ನಡೆದವು. ಕಾಯಿದೇಭಂಗದ ಕಾಲದಲ್ಲಿ ಉಪ್ಪಿನ ಸತ್ಯಾಗ್ರಹ, ಕರನಿರಾಕರಣಗಳು ಕರ್ನಾಟಕದ ಬ್ರಿಟಿಷ್ ಜಿಲ್ಲೆಗಳಲ್ಲಿ ನಡೆದಿರಲು, ಸಂಸ್ಥಾನದ ಸ್ವಯಂಸೇವಕರೇ ಅವರ ನಾಯಕತ್ವ ವಹಿಸಿದರು. ಸಮಾಜ ಸೇವೆಯಲ್ಲೂ ಇವರು ಹಿಂದುಳಿಯಲಿಲ್ಲ.

1925ರಲ್ಲಿ ಕಣಿಯರ ದೇವಾಲಯ ಪ್ರವೇಶಕ್ಕೆ ತಗಡೂರು ರಾಮಚಂದ್ರರಾಯರು ತಿರುಕೊಡ್ಲು ಗುಂಜಾ ನರಸಿಂಹ ದೇವಾಲಯದಲ್ಲಿ ಚಳವಳಿ ಹೂಡಿದರು. ಇದಕ್ಕೂ ಮೊದಲು ಕಣಿಯರಲ್ಲಿ ಜಾಗೃತಿಗಾಗಿ ಕಾವೇರಿ–ಕಪಿಲಾ ಸಂಗಮದಲ್ಲಿ ಎಂ. ವೆಂಕಟಕೃಷ್ಣಯ್ಯ ಅವರ ಅಧ್ಯಕ್ಷತೆಯಲ್ಲಿ ತಗಡೂರರು ಭಾರಿ ಸಮ್ಮೇಳನವನ್ನು ಸಂಘಟಿಸಿ ಅಸ್ಪೃಶ್ಯರೆಂದು ಪರಿಗಣಿಸಲಾದ ಕಣಿಯರನ್ನು ಕೂಡಿಸಿದರು. ಈ ಸಮ್ಮೇಳನದ ಸಂಘಟನೆಗೆ ಬೇಕಾದ ಸ್ವಯಂಸೇವಕರನ್ನು ನಾನೇ ತಯಾರಿಸಿದೆ. ಸಂಸ್ಥಾನದಲ್ಲಿ ಈ ಸಮ್ಮೇಳನ ಮತ್ತು ಸತ್ಯಾಗ್ರಹ ಭಾರೀ ಲವಲವಿಕೆ ಹುಟ್ಟಿಸಿತು. ಸಾಹುಕಾರ್ ಬನುಮಯ್ಯ, ಗೋವಿಂದಾಚಾರ್ಯ ಸ್ವಾಮಿ ಮುಂತಾದ ಮೈಸೂರಿನ ಅನೇಕ ಗಣ್ಯರು ಈ ಸಮ್ಮೇಳನಕ್ಕೆ ನೆರವಾದರು. ಬಾಬು ಸುಖಾನಂದ ಸೇಠ್ ಆಗ ಮೈಸೂರು ನಗರ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದು ಕೆ. ಕೃಷ್ಣಸ್ವಾಮಿರಾವ್ ಕಾರ್ಯದರ್ಶಿ. ವರ್ತಕರಾದ ಸಂಗಪ್ಪ ಕೂಡ ಗಣ್ಯ ಕಾರ್ಯಕರ್ತರು. ತುಮಕೂರಲ್ಲೂ ಕೆ. ರಂಗೈಂಗಾರ್, ಸುಬ್ರಹ್ಮಣ್ಯ ಇವರುಗಳು ಸೇವಾದಳದ ಶಿಬಿರ ನಡೆಸಿದರು. ಆ ಜಿಲ್ಲೆಯಲ್ಲಿ ರಾಷ್ಟ್ರೀಯ ಚಳವಳಿ ಬೆಳೆಯಲು ಈ ಶಿಬಿರ ಕಾರಣವಾಯಿತು.

## ಕಾರ್ಮಿಕ ಜಾಗೃತಿ

ಬಿನ್ನಿ ಮಿಲ್‌ನ ಕಾರ್ಮಿಕರ ಸಂಘದ ಕಾರ್ಯದರ್ಶಿಯಾಗಿದ್ದ ಎ. ಎಂ. ರಾಮಶರ್ಮ ಗಣ್ಯ ಕಾರ್ಮಿಕ ಸಂಘಟಕರಾಗಿದ್ದರಲ್ಲದೆ ಮದ್ರಾಸಿನ 'ಸ್ವದೇಶಮಿತ್ರನ್' ಪತ್ರಿಕೆಯ ಸುದ್ದಿಗಾರರಾಗಿದ್ದರು. ಬಿನ್ನಿ ಮಿಲ್ ಕಾರ್ಮಿಕರ ಸಂಘಟನೆಯಿಂದಲೇ ಕಾರ್ಮಿಕ ಹಿತ ರಕ್ಷಣೆಯ ಹೋರಾಟ ಬೆಂಗಳೂರಲ್ಲಿ ಮೊದಲಾಯಿತು. ರಾಮಶರ್ಮರು ಅನೇಕ ಬಾರಿ ಮಿಲ್ ಅಧಿಕಾರಿಗಳೊಡನೆ ಸೆಣಸಬೇಕಾಯಿತಲ್ಲದೆ ಮುಷ್ಕರಗಳನ್ನೂ ಹೂಡಬೇಕಾಗಿ

ಬಂದಿತು. ಲಾಠಿ ಪ್ರಹಾರ, ಗುಂಡು ಹಾರಿಸೋಣ, ಬಂಧನ, ಶಿಕ್ಷೆ ಮುಂತಾದವುಗಳು ಅನೇಕ ಬಾರಿ ನಡೆದವು. ಕಾರ್ಮಿಕ ಸಂಘದ ಅಧ್ಯಕ್ಷರು ಕೆ. ಟಿ. ಭಾಷ್ಯಂ. ಇವರ ಸಹಾಯ, ಸ್ಫೂರ್ತಿ ಅನುಪಮ. ಭಾಷ್ಯಂ ಸಹ ಪೋಲೀಸರಿಂದ ಚಿತ್ರವಿಚಿತ್ರ ಕಿರುಕುಳ ಗಳಿಗೆ ಪಾತ್ರರಾದವರು. ರಾಷ್ಟ್ರೀಯ ಚಳವಳಿಯಲ್ಲಿ ಬಿನ್ನಿ ಮಿಲ್ ಕಾರ್ಮಿಕರ ಸಹಾಯ ಸಾಮಾನ್ಯವಾದುದೇನಲ್ಲ. ಭಾಷ್ಯಂ ಆಗಲೀ ರಾಮಶರ್ಮರಾಗಲೀ ಕರೆ ಕೊಟ್ಟರೆ ಅಸಂಖ್ಯಾತ ಕಾರ್ಮಿಕರು ಕೆಲಸಗಳಿಗೆ ಸಿದ್ಧ. ರಾಮಶರ್ಮರ ತಮಿಳು ಭಾಷಣದ ಶೈಲಿ ಅಮೋಘವಾದದ್ದು. ಒಮ್ಮೆ ಬಿನ್ನಿ ಮಿಲ್ ಬಳಿ ಪೋಲೀಸರು ಗುಂಡುಹಾರಿಸಿ, ನಾಲ್ವರು ಸತ್ತರು. ಕೆಲವರಿಗೆ ಗಾಯವಾಯಿತು. ಈ ಬಗ್ಗೆ ವಿಚಾರಣಾ ಸಮಿತಿ ಏರ್ಪಡಿಸಲು ಸಾರ್ವಜನಿಕರು ಒತ್ತಾಯಿಸಿದರು. ಸರಕಾರ ಕಿವಿಗೊಡಲಿಲ್ಲ. ಕೆಲವು ಪ್ರಮುಖರು ಖಾಸಗಿ ವಿಚಾರಣಾ ಸಮಿತಿ ನೇಮಿಸಿದರು. ಈ ಸಮಿತಿಗೆ ಸಿ. ವಿ ನರಸಿಂಹಮೂರ್ತಿ (ಖ್ಯಾತ ವಕೀಲರು) ಅಧ್ಯಕ್ಷರು, ಎಸ್. ಆರ್. ಎಸ್. ರಾಘವನ್ ಕಾರ್ಯದರ್ಶಿ. ಸಮಿತಿಯ ಸದಸ್ಯರು ಬಿ. ಜಿ. ರಾಜಗೋಪಾಲ ಮುದಲಿಯಾರ್, ಕಾರ್ಮಿಕ ನಾಯಕ ಹಾಗೂ ಪತ್ರಿಕಾಕರ್ತ ಅರ್ನೆಸ್ಟ್ ಕರ್ಕ್, ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟಿ, ದಂಡಿನ ವಕೀಲ ಮಹಮ್ಮದ್ ಹನೀಫ್. ಒಂದೆರಡು ತಿಂಗಳು ಕಾಲ ನಡೆದ ಈ ಸಮಿತಿಯ ಕಾರ್ಯಕಲಾಪಗಳಲ್ಲಿ ನಾನೂ ನಿಕಟವಾಗಿ ಸಹಕರಿಸಿದ್ದೆ. ಪೋಲೀಸರು ನಿರಾಯುಧರಾದ ಕಾರ್ಮಿಕರ ಮೇಲೆ ಅನವಶ್ಯಕವಾಗಿ ಗುಂಡುಹಾರಿಸಿ ಸಾವುನೋವಿಗೆ ಗುರಿಪಡಿಸಿದ್ದು ತೀರ ಅನ್ಯಾಯ ಎಂಬ ನಿರ್ಣಯಕ್ಕೆ ಸಮಿತಿ ಬಂತು. ಸರ್ಕಾರ ಈ ವರದಿಯನ್ನು ಮಾನ್ಯಮಾಡಲಿಲ್ಲ. ಆದರೆ ಇದರಿಂದ ಕಾರ್ಮಿಕ ಪ್ರಪಂಚ ದಲ್ಲಿ ಉತ್ಸಾಹವೂ ಸ್ಫೂರ್ತಿಯೂ ಜಾಗೃತಿಯೂ ಉಂಟಾಯಿತು. ಅಂದು ಭಾಷ್ಯಂ, ರಾಮಶರ್ಮ ಹಾಕಿದ ಬುನಾದಿಯೇ ರಾಜ್ಯದ ಇಂದಿನ ಕಾರ್ಮಿಕಪ್ರಪಂಚದ ಪ್ರಬುದ್ಧತೆಗೆ ಕಾರಣ. ಸ್ವಾತಂತ್ರ್ಯ ಚಳವಳಿಯಲ್ಲೂ ಕಾರ್ಮಿಕರು ತಮ್ಮ ಪಾಲಿನ ಸೇವೆಯನ್ನು ಉನ್ನತ ದೇಶಾಭಿಮಾನದಿಂದ, ನಿರ್ವಂಚನೆಯಿಂದ ಸಲ್ಲಿಸಿದರಲ್ಲದೆ, ದೇಶಾಭಿಮಾನದ ಪರಿಣಾಮವಾಗಿ ಅನೇಕ ಕಾರ್ಮಿಕರು ಜೈಲುವಾಸವೇ ಮುಂತಾದ ಕಷ್ಟನಷ್ಟಗಳನ್ನು ಅನುಭವಿಸಿದರು. ಒಬ್ಬೊಬ್ಬರು ಸಂಸ್ಥಾನದಿಂದ ಗಡೀಪಾರು ಹೊಂದಿ ದರು. ಒಟ್ಟಿನಲ್ಲಿ ಸ್ವಾತಂತ್ರ್ಯಸಂಪಾದನೆಯಲ್ಲಿ ಕಾರ್ಮಿಕರ ಪಾಲು ಗಣ್ಯವಾದುದೇ ಸರಿ. ವಿ. ವಿ. ಗಿರಿ ಅವರು ಪದೇಪದೇ ಸಂಸ್ಥಾನಕ್ಕೆ ಬಂದು ಕಾರ್ಮಿಕರನ್ನು ಸಂಘಟಿ ಸುತ್ತಿದ್ದರು. ರೈಲ್ವೆ ಕಾರ್ಮಿಕರಲ್ಲಿ ಅವರ ವಿಶೇಷ ಆಸಕ್ತಿ. ಮೈಸೂರು ರೈಲ್ವೆ ವರ್ಕ್‌ಷಾಪ್ ಕಾರ್ಮಿಕರ ಚಳವಳಿ ಬಲವಾದಾಗ ವಿ. ವಿ ಗಿರಿ ಅವರು ಮಧ್ಯೆ ಪ್ರವೇಶಿಸ ಬೇಕಾಯಿತು. ಸರಕಾರ ಇದಕ್ಕೆ ತಡೆಯೊಡ್ಡಿ ಮೈಸೂರಲ್ಲಿ ಪ್ರತಿಬಂಧಕಾಜ್ಞೆ ಹೇರಿದಾಗ, ಊರ ಹೊರಗೆ ಪಶ್ಚಿಮವಾಹಿನಿಯಲ್ಲಿ ಸಭೆಸೇರಿಸಿ ಭಾಷಣಮಾಡಿ ಅವರು ಕಾರ್ಮಿಕರನ್ನು ಹುರಿದುಂಬಿಸಿದರು. ಗಿರಿ ಅವರೊಡನೆ ರೈಲ್ವೆ ಕಾರ್ಮಿಕ ಸಂಘದ ಕಾರ್ಯದರ್ಶಿ

ಗುರುಸ್ವಾಮಿ ಎಂಬುವರೂ ಆಗಾಗ ಸಂಸ್ಥಾನವನ್ನು ಸಂದರ್ಶಿಸುತ್ತಿದ್ದರು.

## ವಕೀಲರ ಪಾತ್ರ

ಜನಜಾಗೃತಿಯಲ್ಲಿ ವಕೀಲರ ಪಾತ್ರವು ಸಾಮಾನ್ಯವೇನಲ್ಲ. ಬೆಂಗಳೂರು, ತುಮಕೂರು, ಚಿತ್ರದುರ್ಗ, ಮೈಸೂರು, ಶಿವಮೊಗ್ಗ ಗಳಲ್ಲಿ ಕೆಲವು ವಕೀಲರು ಮಾರ್ಗ ದರ್ಶಕರಾಗಿದ್ದರು. ಕೆಲವರು ನೇರ ಚಳವಳಿ ಸೇರಿದರೆ, ಇನ್ನು ಕೆಲವರದು ಪರೋಕ್ಷ ಸೇವೆ. ಕಾಂಗ್ರೆಸ್ ಸಮಿತಿಯನ್ನು ಸಂಸ್ಥಾನದಲ್ಲಿ ಸ್ಥಾಪಿಸಿದ ಸೆಟ್ಲೂರ್; ಅವರಲ್ಲದೆ ಭಾಷ್ಯಂ, ಸಂಪಿಗೆ ವೆಂಕಟಪತಯ್ಯ, ಎಂ. ಸಿ. ಸೋಮಶೇಖರರಾಯರು, ಎಸ್. ಕೆ. ವೆಂಕಟರಂಗೈಂಗಾರ್, ಸಿ. ವಿ. ನರಸಿಂಹಯ್ಯಂಗಾರ್, ಕಂದಾಡೆ ಶಾಮಣ್ಣ, ಬಿ. ಎಸ್. ಚಂದ್ರಶೇಖರರಾವ್, ಎಸ್. ವೆಂಕಟಾಚಲ ಅಯ್ಯಂಗಾರ್, ಇವರೆಲ್ಲ ಚಳವಳಿಯ ಪ್ರೋತ್ಸಾಹಕರು. ಕೊನೆಯವರು ಒಮ್ಮೆ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದರು. ಕಂದಾಡೆಯವರು ಕಾರ್ಯದರ್ಶಿಗಳಾಗಿದ್ದರು. ಸಂಪಿಗೆ ವೆಂಕಟಪತಯ್ಯ, ಭಾಷ್ಯಂ ನೇರ ಚಳವಳಿಯಲ್ಲಿ ಪಾಲುಗೊಂಡವರು. ಕೆಲಕಾಲದನಂತರ ಎಲ್. ಎಸ್. ರಾಜು ಮುಂದೆ ಬಂದು ಜನಜಾಗೃತಿ ಸಂಘದ ಆಧಾರಸ್ತಂಭರಾದರು. ಜವಾಬ್ದಾರಿ ಸರ್ಕಾರದ ಚಳವಳಿ ಯಲ್ಲಿ ಪಾಲುಗೊಂಡವರಲ್ಲಿ ಹೆಚ್ಚಿನವರು ವಕೀಲರೇ. ತುಮಕೂರಲ್ಲಿ ರಂಗೈಯಂಗಾರ್, ಎಸ್. ಕೆ. ಸೆಟ್ಲೂರ್, ತಾಳಕೆರೆ ಸುಬ್ರಹ್ಮಣ್ಯಂ ಮುಂತಾದವರು ರಚನಾತ್ಮಕ ಕಾರ್ಯದಲ್ಲಿ ಸಕ್ರಿಯರಾಗಿದ್ದವರು. ಮೈಸೂರಿನಲ್ಲಿ ಅರಕಲಗೂಡು ಸೀತಾರಾಮಯ್ಯ, ಕೆ. ಕೃಷ್ಣ ಸ್ವಾಮಿರಾವ್ ಆರಂಭದ ಗಣ್ಯರು. ಎರಡನೆಯವರು 'ಹಿಂದೂ' ಪತ್ರಿಕೆಯ ಬಾತ್ಮೀ ದಾರರೂ ಕೂಡ. ಚಿತ್ರದುರ್ಗದಲ್ಲಿ ಜವಾಬ್ದಾರಿ ಸರಕಾರದ ಚಳವಳಿ ಕಾಲಕ್ಕೆ ಭೀಮಪ್ಪ ನಾಯಕ್, ಕೆ. ಕೆಂಚಪ್ಪ, ಎಸ್. ರಂಗರಾವ್, ಎಸ್. ನಿಜಲಿಂಗಪ್ಪ ಮುಂತಾದ ವಕೀಲರ ಸೇವೆ ಗಮನಾರ್ಹ. ಪ್ರತಿವರ್ಷ ವಕೀಲರ ಸಮ್ಮೇಳನ ನಡೆದಾಗ ದೇಶದ ಸ್ವಾತಂತ್ರ್ಯದ ಸಂಬಂಧ ನಿರ್ಣಯಗಳಾಗುತ್ತಿದ್ದವು. ದಂಡಿನಲ್ಲಿ ಸುಂದರಂ ಎಂಬ ವಕೀಲರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ, ಪುರಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾಗಿ ಸೇವೆಸಲ್ಲಿಸಿದರು. ಈಗ ಅವರು ಯೋಗಾಚಾರ್ಯರಾಗಿದ್ದಾರೆ. ವಕೀಲರು ಧನಸಹಾಯ ನೀಡಿದ್ದಷ್ಟೇ ಅಲ್ಲ, ಪೋಲೀಸರು ಕಾರ್ಯಕರ್ತರ ಮೇಲೆ ಹೂಡಿದ ಮೊಕದ್ದಮೆಗಳಲ್ಲಿ ಅವರ ಪರ ವಕಾಲತ್ತು ವಹಿಸಿ ಪರಿಹಾರ ಒದಗಿಸಿದರು.

ಆ ಕಾಲದ ಹಿರಿಯ ಪತ್ರಕರ್ತರ ಸೇವೆಯನ್ನು ಇಲ್ಲಿ ಸ್ಮರಿಸಬೇಕು. ವಿದ್ಯಾಭೂಷಣ ವಿ. ಎಸ್. ಸಂಜೀವರಾಯರು ಆ ಕಾಲದಲ್ಲಿ ನಡೆದಾಡುವ ಪತ್ರಿಕೆ ಎನಿಸಿದ್ದರಲ್ಲದೆ, ಬೆಸೆಂಟರ 'ನ್ಯೂ ಇಂಡಿಯಾ'ದ ಸುದ್ದಿಗಾರರಾಗಿದ್ದರು. ಆಗ ಒಂದೇ ದೈನಿಕ ಆಂಗ್ಲ ಪತ್ರಿಕೆ. ಅದೂ ಬ್ರಿಟಿಷ್ ಪರವಾಗಿ, ದಂಡಿನ ಪ್ರದೇಶದಿಂದ ನಡೆಯುತ್ತಿತ್ತು. ಖಾದಿಧಾರಿ ಗಳಾದ ಸಂಜೀವರಾಯರು ದೇಶಭಕ್ತರು; ಲೀಲಾಜಾಲವಾಗಿ ಇಂಗ್ಲಿಷ್ ಮಾತನಾಡ

ಬಲ್ಲವರಾಗಿ ಎಲ್ಲ ಅಧಿಕಾರಿಗಳಿಗೆ ಬೇಕಾದವರು. ಕಷ್ಟದಲ್ಲಿರುವವರಿಗೆ ಸಹಾಯ ಮಾಡುವ ಉದಾರಹೃದಯರು. ಕಾಂಗ್ರೆಸ್ ಪ್ರಚಾರಕಾರ್ಯದಲ್ಲಿ ಅವರಿಗೆ ಅಪಾರ ಆಸಕ್ತಿ. ಹೊಸಕೊಪ್ಪ ಕೃಷ್ಣರಾಯರ ಆಪ್ತಮಿತ್ರರು. ಗಣಪತಿ ಗಲಭೆಯ ಸಂದರ್ಭ ದಲ್ಲಿ ಓರ್ವ ಪೋಲೀಸ್ ಅಧಿಕಾರಿಯ ಕೋಪಕ್ಕೆ ಗುರಿಯಾಗಿ ಅವರಿಗೆ ಜುಲ್ಮಾನೆ ಆಗಿತ್ತು. ವಿ. ಎಸ್. ನಾರಾಯಣರಾಯರು ಇವರ ಮಕ್ಕಳು.

ಬೆಳಗಾಂ ಕಾಂಗ್ರೆಸ್ಸಿನ ಅನಂತರ ಸಂಸ್ಥಾನದಲ್ಲಿ ವಿಶೇಷ ಮಹತ್ವದ ಚಟುವಟಿಕೆ ಯೇನೂ ಇರಲಿಲ್ಲ. ರಚನಾತ್ಮಕ ಚಟುವಟಿಕೆ ಸಾಗಿತ್ತು. ಸಾಯ್‌ಮನ್ ಕಮಿಶನ್ ಬಂದಾಗ, ಕಾಂಗ್ರೆಸ್‌ನ ಕರೆಯಂತೆ ಬೆಂಗಳೂರಲ್ಲಿ ಪೂರ್ಣ ಹರತಾಳ ಆಗಿ ಕೆಲವರ ಬಂಧನ ಕೂಡ ಆಗಿತ್ತು.

## ಕೋಮುಭಾವನೆ

ಈ ಕಾಲದಲ್ಲಿ ದಿವಾನರಾಗಿದ್ದ ಸರ್ ಮಿರ್ಜಾ ಅವರು ಕೋಮುವಾರು ಭಾವನೆ ಯಿಂದ ಕೂಡಿದ ವ್ಯಕ್ತಿ ಎಂಬ ಆಪಾದನೆ ಮುಂದೆ ಬಂತು. ಅವರು ಮುಸಲ್ಮಾನರ ಪಕ್ಷಪಾತಿಯೆಂದು ಆಪಾದಿಸಲಾಯಿತು. ಇದನ್ನು ಉಪಯೋಗಿಸಿಕೊಂಡು ಕೆಲವು ಮುಖಂಡರು ಚಳವಳಿ ಹೂಡಿದರು. ಮಹಾರಾಜರ ವಿಶ್ವಾಸಕ್ಕೆ ಪಾತ್ರರೂ ಅವರ ಸಹಪಾಠಿಗಳೂ. ಆದ ಮಿರ್ಜಾರ ಪದಚ್ಯುತಿ ಈ ಚಳವಳಿಯಿಂದ ಸಾಧ್ಯ ಆಗಲಿಲ್ಲ. ಇದಕ್ಕೆ ಪ್ರತಿಯಾಗಿ ಅವರ ಬಲ ಹೆಚ್ಚಿತು. ದಸರಾ ಮೆರವಣಿಗೆಯಲ್ಲಿ ಅಂಬಾರಿಯಲ್ಲಿ ಮಿರ್ಜಾರನ್ನು ಕೂಡಿಸಿಕೊಂಡು ಸಾಗಲು ಮಹಾರಾಜರು ಆರಂಭಿಸಿದರು. ಒಮ್ಮೆ ದಸರಾ ಮೆರವಣಿಗೆಯ ಕಾಲಕ್ಕೆ ಈ ಕಾರಣಕ್ಕಾಗಿ ಗಲಭೆಯಾಗಿ ಜನರ ಅಸಮಾಧಾನ ಪ್ರಕಟ ಆಯಿತು.

ಗಾಂಧೀಜಿ 1927ರಲ್ಲಿ ನಂದಿಬೆಟ್ಟದಲ್ಲಿ ತಂಗಿದ್ದು ಅವರು ವಾಸವಾಗುವ ಕಾಲದಲ್ಲಿ ಬೆಂಗಳೂರು ನಾಗರಿಕರು ಅವರನ್ನು ಸನ್ಮಾನಿಸಲು ನಿಶ್ಚಯಿಸಿ, ನಿವೃತ್ತ ಕೌನ್ಸಿಲರ್ ಹಂಜಾ ಹುಸೇನರ ಅಧ್ಯಕ್ಷತೆಯಲ್ಲಿ ಸ್ವಾಗತ ಸಮಿತಿ ರಚಿಸಿದರು. ಲಾಲ್‌ಬಾಗ್ ಗಾಜಿನ ಮನೆಯಲ್ಲಿ ನಡೆದ ಅಪೂರ್ವ ಸಮಾರಂಭದಲ್ಲಿ ಸರ್ ಮಿರ್ಜಾ, ಸರ್ ಕೆ. ಪಿ. ಪುಟ್ಟಣ್ಣ ಚೆಟ್ಟಿ, ಸರ್ ಎಂ. ಎನ್. ಕೃಷ್ಣರಾವ್, ಹೈಕೋರ್ಟ್ ನ್ಯಾಯಾಧೀಶರು, ಗಣ್ಯ ಅಧಿ ಕಾರಿಗಳೂ ಹಾಜರಿದ್ದರು. ಕಾರ್ಯಕ್ರಮ ಆರಂಭವಾಗಿ ಹಂಜಾ ಹುಸೇನ್ ಸಾಹೇಬರು ಗಾಂಧೀಜಿಗೆ ಮಾನಪತ್ರ ಒಪ್ಪಿಸಲು ಎದ್ದುನಿಂತೊಡನೆ ಸಭೆಯ ಒಂದು ಮೂಲೆಯಲ್ಲಿ ಗದ್ದಲವೋ ಗದ್ದಲ: ಸಾಹೇಬರು ಸನ್ಮಾನಪತ್ರ ಒಪ್ಪಿಸಬಾರದೆಂದು ಕೂಗು. ಕಾರಣ ಅವರು 'ಕೋಮುಭಾವನೆ'ಯುಳ್ಳವರೆಂದು. ಈ ಕೂಗು ಎಬ್ಬಿಸಿದವರು ಜಮಖಂಡಿ ಭೀಮರಾವ್, ರಾಮಲಾಲ್ ತಿವಾರಿ ಮತ್ತು ಎಚ್. ವಿ. ಸುಬ್ರಹ್ಮಣ್ಯಂ ತ್ರಿಮೂರ್ತಿ ಗಳು ಸಭೆಯಲ್ಲಿ ಅಲ್ಲೋಲಕಲ್ಲೋಲ. ವೇದಿಕೆಯ ಮೇಲೆ ಗಾಂಧೀಜಿ ಹುಸಿನಗೆ ನಗುತ್ತ

ಕುಳಿತಿದ್ದರು. ಕಡೆಗೆ ತ್ರಿಮೂರ್ತಿಗಳನ್ನು ಪೋಲೀಸರು ಸಭೆಯಿಂದ ಹೊರಗೆ ಒಯ್ಯಬೇಕಾಯಿತು. ತರುವಾಯ ಸಭಾಕಲಾಪ ಸಾಂಗವಾಯಿತು. ಗಾಂಧೀಜಿಗೆ 10,000 ರೂ.ಗಳ ನಿಧಿ ಅರ್ಪಿಸಲಾಯಿತು. ಅಂದಿನ ಪ್ರಸಂಗ ಸಂಸ್ಥಾನದಲ್ಲಿ ಕೋಮುವಾರು ಭಾವನೆ ಯಾವ ಬಗೆಯಿಂದ ತಲೆಹಾಕಿತ್ತು, ಅದರ ಪ್ರತಿಕ್ರಿಯೆ ಏನಾಯಿತು, ಎಂಬುದಕ್ಕೆ ಒಂದು ನಿದರ್ಶನ. ಇದರ ಪರಿಣಾಮ ಗಮನಾರ್ಹವೇ ಆಯಿತು.

ಹಂಜಾ ಹುಸೇನರು ಸಂಸ್ಥಾನದ ಮುಸಲ್ಮಾನ ಜನಾಂಗದಲ್ಲಿ ಗಣ್ಯರಾಗಿದ್ದವರು. ದೀರ್ಘಕಾಲ ಸರಕಾರಿ ಹುದ್ದೆಯಲ್ಲಿದ್ದು, ಕೌನ್ಸಿಲರ್, ಹಂಗಾಮಿ ದಿವಾನಪದವಿಗೇರಿ ನಿವೃತ್ತರಾಗಿದ್ದವರು. ಕೋಮುವಾರು ಅಗ್ನಿಭಕ್ಷಕರಾಗಿರಲಿಲ್ಲ. ನಿರ್ಮಲ ಹಾಗೂ ಉದಾರ ಸ್ವಭಾವದವರು.

## ಗಣಪತಿ ಗಲಭೆ

ಕೋಮುವಾರು ಘರ್ಷಣೆಯಿಂದ ಪ್ರಾರಂಭವಾಗಿ, ಕಡೆಗೆ ಪ್ರಜಾಸ್ವಾತಂತ್ರ್ಯದ ಚಳವಳಿಗೆ ಪ್ರೋತ್ಸಾಹವಿತ್ತ ಅತ್ಯಂತ ಮಹತ್ವದ ಘಟನೆ 1928–29ರ ಗಣಪತಿ ಗಲಭೆ. ಪ್ರಜಾಸ್ವಾತಂತ್ರ್ಯವೊಂದೇ ಇಂಥ ಘಟನೆಗಳನ್ನು ತಪ್ಪಿಸಲು ಶ್ರೇಷ್ಠ ಉಪಾಯ ಎಂಬ ಖಚಿತಾಭಿಪ್ರಾಯ ಬರಲು ಒಂದು ಅವಕಾಶ ಆದುದು ಇದರ ದೆಸೆಯಿಂದಲೇ. ಈ ಗಲಭೆ ಆದುದು 1928ರ ನಡುವೆ. ‘ಸುಲ್ತಾನ್‌ಪೇಟೆ ಗಣಪತಿ ಗಲಭೆ’ ಎಂದು ಪ್ರಸಿದ್ಧವಾದ ಇದಕ್ಕೂ ಸುಲ್ತಾನ್‌ಪೇಟೆಗೂ ಯಾವ ಸಂಬಂಧವೂ ಇಲ್ಲ. ಇದು ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯಲ್ಲಿರುವ ಮಾಧ್ಯಮಿಕ ಶಾಲೆಯಲ್ಲಿ ಆರಂಭ ಆದ ಪ್ರಕರಣ. ಈ ಶಾಲೆ ಮುಂಚೆ ಸುಲ್ತಾನ್‌ಪೇಟೆಯಲ್ಲಿದ್ದು, ಈ ಸ್ಥಳಕ್ಕೆ ಅದೇ ಆಗ ವರ್ಗಾಯಿಸಲ್ಪಟ್ಟಿತ್ತು. ಮೊದಲಿದ್ದ ಖಾಸಗಿ ಶಾಲೆ ಆಗ ಸರಕಾರಿ ಶಾಲೆ ಆಗಿತ್ತು. ಈ ಶಾಲಾ ಆವರಣದಲ್ಲಿ ಒಂದು ಮುದ್ದಾದ ಗಣಪತಿ ವಿಗ್ರಹವಿದ್ದು, ಆ ಶಾಲಾ ವಿದ್ಯಾರ್ಥಿಗಳು ಅದಕ್ಕಾಗಿ ಒಂದು ಗೂಡನ್ನು ನಿರ್ಮಾಣಮಾಡಿ ಅದರಲ್ಲಿ ಅದನ್ನು ಸ್ಥಾಪಿಸಿದರು. ದಿನಾ ಪೂಜೆಪುರಸ್ಕಾರ ಆರಂಭ ಆಯಿತು. ಕಾಲ ಕಳೆಯಿತು. ಈ ಶಾಲೆಯ ಎದುರು ಅಬ್ಬಾಸ್‌ಖಾನ್ ಎಂಬೊಬ್ಬ ಗಣ್ಯ ಮುಸಲ್ಮಾನ್ ಮುಖಂಡರ ಮನೆ. ಈ ಮನೆಯ ಹಿಂಭಾಗದಲ್ಲಿ ಮಸೀದಿ ಆಗ ಖಾನರು ಕೋಮುವಾರುಗ್ರಸ್ತರಾಗಿರಲಿಲ್ಲ. ಆದರೆ ಅವರ ಮತಬಾಂಧವರು ಅವರ ಮತಿಗೆಡಿಸಿದರು. ತಮ್ಮ ದೃಷ್ಟಿಗೆ ನೇರ ಕಾಣಿಸುವ ಗಣಪತಿಯನ್ನು ಅಲ್ಲಿಂದ ತಪ್ಪಿಸಬೇಕೆಂಬ ವಿಚಾರ ಬಂದು ಖಾನರು ಆಗ್ಗೆ ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳಾದ ಎನ್. ಎಸ್. ಸುಬ್ಬರಾಯರ ಜೊತೆ ವ್ಯವಹರಿಸಿದರು. ನಗರ ಪೌರಸಭೆಯ ಅಧ್ಯಕ್ಷ, ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆಗಳ ಸದಸ್ಯ ಮುಂತಾದ ಸ್ಥಾನ ಅಲಂಕರಿಸಿದ್ದ ಗಣ್ಯರೂ ಸೆಂಟ್ರಲ್ ಮಹಮಡನ್ ಅಸೋಸಿಯೇಷನ್‌ನ ಪ್ರಮುಖರೂ ಆಗಿದ್ದ ಖಾನರ ಮಾತನ್ನು ಆಕ್ಷೇಪಿಸಲಾಗದೆ ಸುಬ್ಬರಾಯರು

ಗಣಪತಿಯು ಸ್ಥಾನಪಲ್ಲಟ ಮಾಡಿಸಿಬಿಟ್ಟರು. ವಿಗ್ರಹ ಶಾಲೆಯ ಅಜ್ಞಾತ ಸ್ಥಳದಲ್ಲಿ ಕೂತಿತ್ತು. ಇದೇ ಗಲಭೆಗೆ ಮೂಲ ವಿದ್ಯಾರ್ಥಿಗಳಿಗೆ ಅಸಮಾಧಾನವುಂಟಾಯಿತು. ದಿವಾನ್ ಮಿರ್ಜಾರ ಕೈವಾಡ ಇದರಲ್ಲಿ ಉಂಟೆಂಬ ಪ್ರತೀತಿ ಹಬ್ಬಿತು. ಕೆಲವು ಮುಖಂಡರ ಬಲವೂ ಸಿಕ್ಕಿತು. ಇದೇ ಕಾಲಕ್ಕೆ ಜಮಖಂಡಿ ಭೀಮರಾವ್, ರಾಮಲಾಲ್ ತಿವಾರಿ ಮತ್ತು ಎಚ್. ವಿ. ಸುಬ್ರಹ್ಮಣ್ಯಂರು ರಂಗ ಪ್ರವೇಶಿಸಿದರು. ಪ್ರಚಾರ ಬಿರುಸಾಗಿ ಗಣಪತಿಯನ್ನು ಸ್ವಸ್ಥಾನದಲ್ಲಿ ಕೂರಿಸಬೇಕೆಂಬ ಕೂಗೆದ್ದಿತು. ವಿದ್ಯಾ ಇಲಾಖೆಯ ಮುಖ್ಯಾಧಿಕಾರಿಗಳೊಡನೆ ಸಂಧಾನ ಫಲಿಸಲಿಲ್ಲ. ವಿದ್ಯಾರ್ಥಿಗಳು ದಿವಾನರನ್ನು ಕಾಣಲು ಪ್ರಯತ್ನಿಸಿದರೂ ಸಾರ್ಥಕವಾಗಲಿಲ್ಲ. ನಗರದಲ್ಲಿ ಪ್ರಕ್ಷುಬ್ಧ ವಾತಾವರಣ ಏರ್ಪಟ್ಟಿತು. ಕೊನೆಗೆ ಭೀಮರಾವ್, ತಿವಾರಿ, ಸುಬ್ರಹ್ಮಣ್ಯಂರ ಬಂಧನ ಆಯಿತು. ಇದು ವಿಷಾದನೀಯ ಪ್ರಕರಣಕ್ಕೆ ನಾಂದಿ. ನಗರದಲ್ಲಿ ಶಾಂತಿಗಾಗಿ ಮುಂದಾಗಿ ಬೇಲೂರು ಶ್ರೀನಿವಾಸ ಅಯ್ಯಂಗಾರ್, ಪಾಮಡಿ ಸುಬ್ಬರಾಮ ಶೆಟ್ಟಿ ಮುಂತಾದ ಪ್ರಮುಖರು ಸಂಧಾನ ನಡೆಸಿದರು. ಗಣಪತಿಗೆ ಸ್ವಸ್ಥಾನ ಲಭ್ಯವಾಗುವಂತೆ ಮಾಡಿದರು. ಬಂಧನದಲ್ಲಿದ್ದವರ ಬಿಡುಗಡೆಗೂ ಅವಕಾಶವಾಯಿತು. ವಿದ್ಯಾರ್ಥಿಗಳಿಗೆ ಆನಂದವೇ ಆನಂದ. ಗಣಪತಿಗೆ ಅಪರಿಮಿತ ಪೂಜೆಪುರಸ್ಕಾರ. ಇದು ಮುಸಲ್ಮಾನರಿಗೆ ಸಹಿಸದಾಗಿ, ಅಬ್ಬಾಸ್‌ಖಾನರ ಮನೆಯಲ್ಲೂ ಮಸೀದಿಯಲ್ಲೂ ಕೆಲವು ಪುಂಡರು ಸೇರಿಕೊಂಡು ಗಲಭೆಗೆ ಸಮಯ ಕಾಯುತ್ತಿದ್ದರು. ಬಂಧಿತರ ಬಿಡುಗಡೆ ಸಂಜೆಗೆ ಆದಾಗ ಸಹಸ್ರಾರು ಜನ ಜೈಲು ಬಳಿ ಅವರ ಸ್ವಾಗತಕ್ಕೆ ಕಲೆತರು. ಮೆರವಣಿಗೆಯಲ್ಲಿ ಶಾಲೆಯ ಬಳಿ ಕರೆತಂದರು. ಅಷ್ಟೊತ್ತಿಗೆ ಆರ್ಕಾಟ್ ಶ್ರೀನಿವಾಸಾಚಾರ್ ಬೀದಿ ಜನನಿಬಿಡವಾಗಿತ್ತು. ತ್ರಿಮೂರ್ತಿಗಳು ಶಾಲೆಯ ಬಳಿ ಬಂದು ಗಣಪತಿಯ ಪೂಜೆಗೆಂದು ಹೊರಹೊರಡಬೇಕೆಂದಾಗ, ಮುಸಲ್ಮಾನ ಪುಂಡರು ಹಾರಿ ಜನರ ಮೇಲೆ ಬಿದ್ದು, ಗಣಪತಿಯ ಬಳಿ ನುಗ್ಗಿ, ಅದನ್ನು ಕದಲಿಸಿ, ಕ್ಷಣಮಾತ್ರದಲ್ಲಿ ಆನಂದಮಗ್ನರಾಗಿದ್ದ ಸಹಸ್ರಾರು ಹಿಂದೂ ಜನರನ್ನು ಚದುರಿಸಿಬಿಟ್ಟರು. ಸಮೀಪದ ಸೈಕಲ್ ಷಾಪಿನ ಕಡೆಯಿಂದ ಗುಂಡುಹಾರಿಸಲಾಯಿತು. ಚಂದ್ರರಾಜ್ ಎಂಬೊಬ್ಬ ಬಾಲಕನಿಗೆ ಪೆಟ್ಟಾಯಿತು. ದಿಗ್ಭ್ರಾಂತಿಯಿಂದ ಚದುರಿದ ನಿರಾಯುಧ ಜನ ಸೇಡು ತೀರಿಸಲು ಉದ್ಯುಕ್ತರಾದರು. ತಕ್ಕಮಟ್ಟಿಗೆ ಯಶಸ್ವಿಯೂ ಆದರು. ಅಷ್ಟರೊಳಗೇ ಸೈನಿಕರು ಪ್ರವೇಶಮಾಡಿದ್ದರಿಂದ ಭಾರಿ ಪ್ರಮಾದ ಆಗುವುದು ತಪ್ಪಿತು. ಆ ಪ್ರದೇಶ ಸ್ಮಶಾನಸದೃಶವಾಗಿಬಿಟ್ಟಿತು.

ಮುಸಲ್ಮಾನರು ಶಾಲೆಯ ಆವರಣದೊಳಗೆ ನುಗ್ಗಿದಾಗ ಅಲ್ಲಿ ವೀರಕೇಸರಿ ಸೀತಾರಾಮಶಾಸ್ತ್ರಿಗಳು, 'ವಿಶ್ವಕರ್ನಾಟಕ'ದ ತಾತಾಚಾರ್ಯ ಶರ್ಮರು, ಆನೇಕಲ್ಲಿನ ಸರ್ವಾಭಟ್ಟರು ಮುಂತಾದವರಿದ್ದರು. ವಿದ್ಯಾರ್ಥಿಗಳನ್ನೂ ಜನಜಂಗುಳಿಯನ್ನೂ ಹತೋಟಿಯಲ್ಲಿಟ್ಟುಕೊಳ್ಳುವ ಕಾರ್ಯದಲ್ಲಿ ಅವರುಗಳು ನಿರತರಾಗಿದ್ದರು. ಸುದೈವದಿಂದ ಇವರುಗಳು ಮುಸಲ್ಮಾನ್ ಪುಂಡರ ದುಷ್ಕೃತ್ಯಗಳಿಂದ ಪಾರಾದರು. ಈ ಪ್ರಕರಣ ಸ್ವಾಭಾವಿಕ

ವಾಗಿಯೇ ಸಂಸ್ಥಾನದಲ್ಲಿ ರೊಚ್ಚಿನ ಪ್ರತಿಕ್ರಿಯೆಯನ್ನುಂಟುಮಾಡಿತು. ಭೀಮರಾವ್ ತ್ರಿಮೂರ್ತಿಗಳು ಈ ಸಮಯದಲ್ಲಿಯೇ ಮೊಕದ್ದಮೆಗೆ ಒಳಗಾದರು. ಒಂದೆರಡು ಕಡೆಗಳಲ್ಲಿ, ಮುಖ್ಯವಾಗಿ ದಾವಣಗೆರೆಯಲ್ಲಿ ಕೋಮುವಾರು ಗಲಭೆಯುಂಟಾಗಿ ಗೋಲಿಬಾರ್ ಕೂಡ ಆಯಿತು. ಈ ಪ್ರಕರಣಗಳ ಕುರಿತು ತನಿಖೆಯಾಗಬೇಕು, ವಿಚಾರಣಾ ಸಮಿತಿಯಾಗಬೇಕು, ಎಂದು ಕೂಗೆದ್ದಿತು. ಪರಿಣಾಮವಾಗಿ ಸರಕಾರ ವಿಶ್ವೇಶ್ವರಯ್ಯ ವಿಚಾರಣಾ ಸಮಿತಿ ನೇಮಿಸಿತು. ಸಮಿತಿಯಲ್ಲಿ ಮುಸಲ್ಮಾನ್ ಪ್ರಮುಖರೊಬ್ಬರೂ, ಓರ್ವ ಹೈಕೋರ್ಟಿನ ನ್ಯಾಯಮೂರ್ತಿಗಳೂ, ಚಿನ್ನದ ಗಣಿಯ ಆಂಗ್ಲ ಮಹಾಶಯರೊಬ್ಬರೂ, ವಣಿಕ ಪ್ರಮುಖರೊಬ್ಬರೂ, ಒಬ್ಬ ನ್ಯಾಯವಿಧಾಯಕ ಸಭೆಯ ಸದಸ್ಯರೂ, ಸರ್ಕಾರದ ಲಾ ಸೆಕ್ರೆಟರಿಯವರೂ ಸದಸ್ಯರಾಗಿದ್ದರು. ಆಗ 'ವೀರಕೇಸರಿ'ಯ ವರದಿಗಾರನಾಗಿ ನಾನು ಈ ಸಮಿತಿಯ ಕಾರ್ಯಕಲಾಪಗಳನ್ನು ಗಮನಿಸಿದ್ದೆ. ಮೂರು ತಿಂಗಳ ಕಾಲ ವಿಚಾರಣೆ ನಡೆಸಿ, ಮುಂದೆ ಸಂಸ್ಥಾನದಲ್ಲಿ ಇಂಥ ಪ್ರಕರಣಗಳಾಗದಂತಿರಲಿ, ಪ್ರಜಾಸ್ವಾತಂತ್ರ್ಯ ಮುಖ್ಯವೆಂಬ ನಿರ್ಧಾರಕ್ಕೆ ಸಮಿತಿ ಬಂತು. ಆದರೆ ಸಮಿತಿಯ ಕೆಲವು ಸದಸ್ಯರು ಈ ಅಭಿಪ್ರಾಯವನ್ನು ಒಪ್ಪಲಿಲ್ಲ. ಸಮಿತಿಯ ಕಾರ್ಯರೂಪ ಮುಕ್ತಾಯಗೊಂಡ ಕೂಡಲೇ ವಿಶ್ವೇಶ್ವರಯ್ಯನವರು ತಿರುವಾಂಕೂರು ಸಂಸ್ಥಾನದಲ್ಲಿ ನಡೆದ ಸಂಸ್ಥಾನೀ ಪ್ರಜೆಗಳ ಸಮ್ಮೇಳನದ ಅಧ್ಯಕ್ಷರಾಗಿ ಪ್ರಜಾಸ್ವಾತಂತ್ರ್ಯದ ಕಹಳೆಯನ್ನು ಊದಿದರು.

ವಿಚಾರಣೆಯಾಗಬೇಕೆಂದು ನಡೆದ ತೀವ್ರಚಳವಳಿಯ ಕುರಿತು ಪ್ರಗತಿವಿರೋಧಿಗಳು ವಿಚಿತ್ರ ಪ್ರಚಾರ ನಡೆಸಿದರು. ಮಿರ್ಜಾ ಅವರನ್ನು ಉರುಳಿಸಬೇಕೆಂಬ ಫಿತೂರಿ ಇದು, ಎಂದು ಅಂದಿನ ಬ್ರಾಹ್ಮಣೇತರ ಮುಖಂಡರು ಗುಲ್ಲೆಬ್ಬಿಸಿದರು. ಪ್ರಜಾಪ್ರತಿನಿಧಿ ಸಭೆಯಲ್ಲೂ ನ್ಯಾಯವಿಧಾಯಕ ಸಭೆಯಲ್ಲೂ ಈ ವಿಚಿತ್ರ ವಾದ ಹೂಡಿದರು. ಬೆಂಗಳೂರು ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿದ್ದ ಅಬ್ದುರ್ ರಹಮಾನ್ ಎಂಬ ಸುಹೃದಯರು ಕೋಮುವಾರು ಭಾವನೆಯಿಂದ,ದೂರವಾಗಿದ್ದರೂ, ಆ ವಿಚಿತ್ರ ಭಾವನೆಯ ಸುಳಿಗೆ ಸಿಕ್ಕಿ, ಚಳವಳಿ ಬ್ರಾಹ್ಮಣರ ಫಿತೂರಿ, ಎಂದೇ ವಾದಿಸಿ, ಪುಸ್ತಕವೊಂದನ್ನು ಪ್ರಕಟಿಸಿದರು. ಸುಪ್ತವಾಗಿದ್ದ ಬ್ರಾಹ್ಮಣದೂಷಣೆಯ ಚಳವಳಿಯು ಮತ್ತೆ ತಲೆಹಾಕಿತು. ಆದರೆ ಇದೆಲ್ಲ ತಾತ್ಕಾಲಿಕ. ಆಗಲೇ ಜನತೆ ಎಚ್ಚತ್ತಿತ್ತು. ಅಂದು ಯಾರು ಯಾರು 'ಫಿತೂರಿ' ಯ ಗುಲ್ಲನ್ನೆಬ್ಬಿಸಿದ್ದರೋ ಅವರ ಪೈಕಿ ಕೆಲಮಹನೀಯರು ಮುಂದೆ ಜನತಾ ಸ್ವಾತಂತ್ರ್ಯಕ್ಕಾಗಿ ಪಣತೊಟ್ಟಿದ್ದು ಸ್ವಾರಸ್ಯ.

ಸಂಪಿಗೆ ವೆಂಕಟಪತಯ್ಯನವರು ವಿಚಾರಣೆಗಾಗಿ ಪ್ರಬಲ ಚಳವಳಿ ಹೂಡಿದವರು. ಈ ಬಗ್ಗೆ ಸಾರ್ವಜನಿಕಾಭಿಪ್ರಾಯ ರೂಪಿಸಿದವರು. ಅವರು ಬೆಂಗಳೂರಿನ ಖ್ಯಾತ ವಕೀಲರು. ಇದಕ್ಕೂ ಮೊದಲು ಸರ್ಕಾರಿ ನೌಕರರಾಗಿದ್ದು ಪೋಲೀಸ್ ಪ್ರಾಸಿಕ್ಯೂಟಿಂಗ್ ಇನ್‌ಸ್ಪೆಕ್ಟರರಾಗಿದ್ದು, ರಾಜೀನಾಮೆ ಇತ್ತು ಹೊರಬಂದವರು. ಬ್ರಿಟಿಷರ

ವಶದಲ್ಲಿದ್ದ ಕೋಲಾರ ಚಿನ್ನದ ಗಣಿಯ ವಕೀಲರಾಗಿದ್ದವರು. ವಿಶ್ವೇಶ್ವರಯ್ಯ ವಿಚಾರಣಾ ಸಮಿತಿಯ ಸದಸ್ಯರಾಗಿದ್ದ ಜಾನ್ ಟೇಲರ್ ಕಂಪನಿಯ ಪ್ರಮುಖ ಅಧಿಕಾರಿ ರಾಲ್ಫ್ ಎಂಬವರ ಮೇಲೆ ಒತ್ತಾಯ ಹೇರಿ, ಗಣಿಯ ವಕೀಲತನದ ಕೆಲಸದಿಂದ ವೆಂಕಟ ಪತಯ್ಯನವರನ್ನು ತೆಗೆದುಹಾಕುವಂತೆ ಸರ್ಕಾರ ಮಾಡಿತು. ಅದಕ್ಕೆ ಅವರು ಅಳುಕಲಿಲ್ಲ. ಜನತಾಸ್ವಾತಂತ್ರ್ಯದ ಸಲುವಾಗಿ ಮತ್ತಷ್ಟು ಹುರುಪಿನಿಂದ ಸೇವೆಸಲ್ಲಿಸಲು ಇದರಿಂದ ಅನುಕೂಲ ಆಯಿತು. ಗಣಪತಿ ಗಲಭೆಯ ತರುವಾಯ ಹಿಂದೂ ಸಂಘಟನೆಯಲ್ಲಿ ಅವರು ಕೆಲಕಾಲ ದುಡಿದರು. ನಿವೃತ್ತ ಜಿಲ್ಲಾಧಿಕಾರಿ ಎಂ. ಚೆಂಗಯ್ಯಸೆಟ್ಟಿ ಅವರ ಅಧ್ಯಕ್ಷತೆಯಲ್ಲಿ ಹಿಂದೂ ಮಹಾಸಭೆಯನ್ನು ಸ್ಥಾಪಿಸಿದರು. ಬಹುಕಾಲದಿಂದ ನೆಲಸಿ ಬಿಟ್ಟಿದ್ದ ಭೇದಭಾವಗಳು, ಅಂತರಗಳು ಹಿಂದುಗಳಿಂದ ತೊಲಗುವಂತೆ ಶ್ರಮಿಸಿ ಯಶಸ್ವಿ ಯಾದರು. ಒಂದೆರಡು ವರ್ಷಗಳ ತನಕ ಹಿಂದೂ ಜನಾಂಗದ ಐಕ್ಯತೆ, ಶಿಸ್ತು ನಗರದಲ್ಲಿ ಅಖಂಡವಾಗಿತ್ತು. ಮಹಾರಾಷ್ಟ್ರದಲ್ಲಿದ್ದಂತೆ ಗಣಪತಿ ಉತ್ಸವವನ್ನು ಆರಂಭಿಸಿ ವೈಭವ ದಿಂದ ನಡೆಸಿದರು. ಆದರೆ ಈ ಉತ್ಸವ ಬಹುಕಾಲ ನಡೆಯಲಿಲ್ಲ. ಇವರಿಗೆ ಸಾಮುಡಿ ಸುಬ್ಬರಾಮಶೆಟ್ಟರೂ ವಾಜಪೇಯಂ ವೆಂಕಟೇಶಯ್ಯನವರೂ ಬೆಂಬಲಿಗರಾಗಿದ್ದರು. ಕೆಲಕಾಲಾನಂತರ ವೆಂಕಟಪತಯ್ಯನವರು ರಾಜಕೀಯದಲ್ಲಿ ಮುನ್ನುಗ್ಗಿ ಕಾಂಗ್ರೆಸ್ಸಿನ ಸಂದೇಶವನ್ನು ಸಾರುವಲ್ಲಿ ಉತ್ಸಾಹದಿಂದ ತೊಡಗಿದರು. ಉತ್ತರ ಕನ್ನಡ ಜಿಲ್ಲೆಯಲ್ಲಿ ನಡೆದ ಕರನಿರಾಕರಣ ಚಳವಳಿಯಲ್ಲಿ ಇವರ ಸೇವೆ ಅಪಾರ. ಕಡೆಗೆ ಇವರಿಗೆ ಬಂಧನವೂ ಪ್ರಾಪ್ತವಾಯಿತು. ಕರನಿರಾಕರಣೆಯ ಚಳವಳಿಗೆ ಸಂಬಂಧಿಸಿ ಬ್ರಿಟಿಷ್ ಆಡಳಿತದ ದಬ್ಬಾಳಿಕೆಯ ಕಾಂಡವನ್ನು ಸವಿಸ್ತಾರವಾಗಿ ಪ್ರಕಟಿಸಿ, ಲಂಡನ್ನಿನ ಇಂಡಿಯಾ ಲೀಗ್ ಮುಖಂಡರಿಗೆ ಮುಟ್ಟಿಸಿದ ಖ್ಯಾತಿ ಇವರ ಪಾಲಿಗೆ. ಅಲ್ಲಿನ ಪಾರ್ಲಿಮೆಂಟಿನಲ್ಲೂ ಈ ಬಗ್ಗೆ ಚರ್ಚೆ ಆಗಿ ಅಲ್ಲಿ ಕಲ್ಲೋಲ ಆಯಿತು. ಇವರು ಅತಿ ಖಂಡಿತವಾದಿ. ಕೃತ್ರಿಮ ಬುದ್ಧಿಯವರನ್ನು ಕಂಡರೆ ಕಿಡಿಕಿಡಿಯಾಗುತ್ತಿದ್ದರು. ಮುಂಗೋಪಿಗಳಾದರೂ ಸುಹೃ ದಯರು, ಉದಾರಿಗಳು. ಅವರ ಮನೆ ಅನ್ನಛತ್ರದಂತಿತ್ತು. ಅವರ ವಕೀಲವೃತ್ತಿಯ ಸಂಪಾದನೆಯಲ್ಲಿ ಬಹುಪಾಲು ಸ್ವಾತಂತ್ರ್ಯಚಳವಳಿ, ದೀನದಲಿತರ ಕ್ಷೇಮಕ್ಕಾಗಿ ವಿನಿ ಯೋಗವಾಗುತ್ತಿತ್ತು. ಯಾವುದೇ ಅಧಿಕಾರ, ಸ್ವಾರ್ಥ, ಸ್ಥಾನಮಾನಗಳಿಗೆ ಆಸೆಪಡದ, ನಿಷ್ಕಾಮಸೇವೆಯಿಂದ ಪುನೀತರಾದ ವ್ಯಕ್ತಿ ಇವರು.

ಗಣಪತಿ ಗಲಭೆಯಲ್ಲಿ ಶಾಲೆಯ ಆವರಣದಲ್ಲಿದ್ದು ಪಾರಾದ ಆನೆಕಲ್ಲಿನ ಸರ್ವಾ ಭಟ್ಟರ ಬಗ್ಗೆ ಒಂದೆರಡು ಮಾತು. ವೈದಿಕ ಮನೆತನದವರಾದರೂ ದೇಶಭಕ್ತಿಯಲ್ಲಿ ತಲ್ಲೀನರಾದವರು, ಗಾಂಧೀಭಕ್ತರು. ಒಮ್ಮೆ ಆ ತಾಲ್ಲೂಕಿನಲ್ಲಿ ಅವರು ಪೋಲೀಸರೊಡನೆ ವಿರಸಕ್ಕೊಳಗಾಗಿ ದೀರ್ಘಕಾಲ ಒಂದು ಮೊಕದ್ದಮೆಗೆ ಒಳಪಡಬೇಕಾಯಿತು. ಅದನ್ನು ಧೈರ್ಯದಿಂದ ಎದುರಿಸಿ ಜನರ ವಿಶ್ವಾಸ ಸಂಪಾದಿಸಿದರು. ತುಮಕೂರಿನ ರಂಗೈಯಂಗಾರ್ ಕಡೆತನಕ ಇವರಿಗೆ ಸಹಾಯಕರಾಗಿ ನಿಂತವರು.

ವಿದ್ಯಾರ್ಥಿಗಳ ಮುಖಂಡರಾಗಿ ಗಣಪತಿಯ ಪುನಃಸ್ಥಾಪನೆಗೆ ಶ್ರಮಿಸಿದವರು ಕೆ. ಎಲ್. ನಂಜಪ್ಪ, ಅನಂತಪದ್ಮನಾಭರಾವ್. ಮೊದಲನೆಯವರು ಜಪಾನ್ ದೇಶದಲ್ಲಿ ಮುಂದೆ ಶಿಕ್ಷಣಪಡೆದು ಉನ್ನತ ಹುದ್ದೆ ಅಲಂಕರಿಸಿದರು. ಎರಡನೆಯವರು ಸಹಕಾರಿ ಬ್ಯಾಂಕೊಂದರಲ್ಲಿ ಮುಂದೆ ಸೇವೆಸಲ್ಲಿಸಿದರು.

## ಮತ್ತೆ ಗಲಭೆ

ಮರುವರ್ಷ (1929) ಮತ್ತೆ ಸುಲ್ತಾನ್ ಪೇಟೆಯಲ್ಲಿ ಎಂದರೆ ಆರ್ಕಾಟ್ ಶ್ರೀನಿವಾಸಾಚಾರ್ ಬೀದಿಯ ಸಮೀಪದಲ್ಲಿ ಗಲಭೆ ನಡೆಯಿತು. ಓರ್ವ ಪೋಲೀಸ್ ಅಧಿಕಾರಿಯ ಅಚಾತುರ್ಯ, ಅವಿವೇಕದ ನಡವಳಿಕೆ ಇದಕ್ಕೆ ಕಾರಣ. ಗಣಪತಿ ಹಬ್ಬದ ದಿನ ವಿದ್ಯಾರ್ಥಿಗಳು ಗಣಪತಿ ಪೂಜೆ ಮಾಡಲು ಅಣಿ ಆದಾಗ, ಗಲಭೆ ಆದೀತೆಂಬ ನೆಪದಿಂದ ಅಧಿಕಾರಿಗಳು ಶಾಲೆಯ ಒಳಿ ಯಾರನ್ನೂ ಸುಳಿಯಗೊಡಲಿಲ್ಲ. ವಿದ್ಯಾರ್ಥಿಗಳ ಒತ್ತಾಯ ಬಲವಾಯಿತು. ವಿದ್ಯಾರ್ಥಿಮುಖಂಡರಿಗೆ ಮಾತ್ರ ಪೂಜೆ ಮಾಡಲು ಅವಕಾಶ ದೊರೆಯಿತು. ವಿದ್ಯಾರ್ಥಿಗಳೂ ಬೇರೆ ಜನರೂ ಆರ್ಕಾಟ್ ಶ್ರೀನಿವಾಸಾಚಾರ್ ಬೀದಿಯ ಬಾಣೇಶ್ವರ ದೇವಸ್ಥಾನದ ಬಳಿ ಕಲೆತುಬಿಟ್ಟರು. ಮರಿಯಪ್ಪ ಎಂಬ ಪೋಲೀಸ್ ಅಧಿಕಾರಿ ಬೂಟ್ಸ್ ತೊಟ್ಟು ಪೋಲೀಸ್ ಪ್ಯಾದೆಗಳೊಡನೆ ದೇವಸ್ಥಾನದೊಳಗೆ ನುಗ್ಗಿ ವಿದ್ಯಾರ್ಥಿಗಳನ್ನೂ ಮತ್ತಿತರ ಸಣ್ಣಪುಟ್ಟ ಬಾಲಕರನ್ನೂ ಸದೆಬಡಿದು ಘಾಸಿಗೊಳಿಸಿದರು. ಇದು ಸುತ್ತುಮುತ್ತಲಿನ ಜನರನ್ನು ಕೆರಳಿಸಿತು. ಸೇಡು ತೀರಿಸಲು ಜನ ನಿರ್ಧರಿಸಿದರು. ಸಂಜೆ ವೇಳೆಗೆ ಮಿಲ್ ಕಾರ್ಮಿಕರನ್ನೊಳಗೊಂಡ ಜನಜಂಗುಳಿ ಸೇರಿತು. ಗಲಭೆ ಆರಂಭ. ಜನರನ್ನು ಚದರಿಸಲು ಪೋಲೀಸರು ಸರ್ವಸನ್ನಾಹ ನಡೆಸಿದರು. ಸಾರ್ಥಕವಾಗಲಿಲ್ಲ. ಸಂಪಿಗೆ ವೆಂಕಟಪತಯ್ಯ, ವಾಜಪೇಯಂ ವೆಂಕಟೇಶಯ್ಯ, ತಾತಾಚಾರ್ಯ ಶರ್ಮ ಮುಂತಾದವರೊಡನೆ ಸಂಧಾನ ನಡೆಸಿ ಜನಜಂಗುಳಿಯನ್ನು ಚದುರಿಸಲು ಅಧಿಕಾರಿಗಳು ಕೇಳಿಕೊಂಡರು. ಸಿಟಿ ಮ್ಯಾಜಿಸ್ಟ್ರೇಟ್ ನಾರಾಯಣಸ್ವಾಮಿ ನಾಯುಡು ಅವರನ್ನು ಜನರ ಗುಂಪು ಮುತ್ತಿ ಅವರ ರುಮಾಲು, ಚಿತ್ತ ಸೆಳೆದುಕೊಂಡು, ಅವರನ್ನು ಒಂದು ಇಕ್ಕಟ್ಟಾದ ಸ್ಥಳದಲ್ಲಿ ಸಿಕ್ಕಿಸಿ ಘಾತಿಸಬೇಕೆಂದಿದ್ದರು. ಗುಂಪನ್ನು ಚದುರಿಸುತ್ತಿದ್ದ ಮುಖಂಡರ ಪೈಕಿ ಒಬ್ಬರು ನಾರಾಯಣಸ್ವಾಮಿ ನಾಯುಡು ಅವರ ನೆರವಿಗೆ ಬಂದು ಅವರನ್ನು ಉಳಿಸಿದರು ! ಮುಖಂಡರು ಜನರನ್ನು ಸಮಾಧಾನಗೊಳಿಸುತ್ತಿದ್ದಂತೆ, ಜಿಲ್ಲಾ ಮ್ಯಾಜಿಸ್ಟ್ರೇಟ್ ತಾಜ್‌ಪೀರಾನ್ ಗೋಲೀಬಾರ್ ಆಜ್ಞೆ ಇತ್ತರು. ಓರ್ವ ಅಜ್ಞಾತ ಮೃತನಾದ. ಸೈನಿಕರು ಬಂದು ಸ್ಥಿತಿಯನ್ನು ಹತೋಟಿಗೆ ತಂದರು. ಆದರೂ ರಾತ್ರಿಯೆಲ್ಲ ಅಲ್ಲಲ್ಲಿ ಗಲಭೆ ಆಗಿ ಸೈನಿಕರಿಗೂ ಸವಾರರಿಗೂ ಕುದುರೆಗಳಿಗೂ ಘಾಸಿ ಆಯಿತು. ಈ ಗಲಭೆಯ ಪರಿಣಾಮವಾಗಿ ಸುಮಾರು 90 ಜನರ ಮೇಲೆ ಖಟ್ಲೆ. ಸಂಪಿಗೆ ವೆಂಕಟಪತಯ್ಯ, ವಾಜಪೇಯಂ ವೆಂಕಟೇಶಯ್ಯ, ತಾತಾಚಾರ್ಯ ಶರ್ಮ, ಎಚ್. ಕೆ. ವೀರಣ್ಣಗೌಡ.

ನಾನು ಹಾಗೂ ಹಲವು ಕಾರ್ಮಿಕರು ಆಪಾದಿತರಾಗಿದ್ದೆವು. ಒಂದೆರಡು ವರ್ಷಗಳು ಎಳೆದಾಡಿ, ಕಡೆಗೆ 6 ಕಾರ್ಮಿಕರಿಗೆ ಶಿಕ್ಷೆ ಆಗಿ ಮಿಕ್ಕವರ ಖುಲಾಸೆ ಆಯಿತು.

ಈ ಘಟನೆಗಳೆಲ್ಲ ಸಂಸ್ಥಾನದಲ್ಲಿ ಜನತೆಯನ್ನು ಎಚ್ಚರಿಸಿದವು. ಸಂಸ್ಥಾನದ ಹೊರಗೂ ಈ ಬಗ್ಗೆ ಭಾರಿ ಪ್ರತಿಕ್ರಿಯೆ ಬಂತು. ಪ್ರಜಾಸ್ವಾತಂತ್ರ್ಯವೇ ಆಡಳಿತದ ಹುಚ್ಚಾಟಗಳಿಗೆ ಸಿದ್ಧೌಷಧವೆಂಬ ಭಾವನೆ ಬಲವಾಯಿತು. ದೇಶೀಯ ಸಂಸ್ಥಾನಗಳೆಲ್ಲ ಒಂದುಗೂಡಿ ತಮ್ಮ ಸ್ವಾತಂತ್ರ್ಯಕ್ಕಾಗಿ ಶ್ರಮಿಸಬೇಕೆಂದು ದೃಢಸಂಕಲ್ಪ ಮಾಡಲು ಮೈಸೂರು ಸಂಸ್ಥಾನದಲ್ಲಿ ಮೂಡಿದ ಪ್ರಜಾ ಅಸಮ್ಮತಿಯೂ ಒಂದು ಕಾರಣವಾಯಿತು.

ಇಲ್ಲಿಂದ ಮುಂದೆ ಸಂಸ್ಥಾನದಲ್ಲಿ ಸಂಘಟನೆಯ ಕಾರ್ಯ ವಿಧಿವತ್ತಾಗಿ ಆರಂಭವಾದದ್ದು ಗಮನಿಸತಕ್ಕ ವಿಚಾರ. 1928–29ರ ಆದಿಭಾಗದಲ್ಲಿ ಒಂದೆರಡು ಸಂಸ್ಥಾನ ಮಟ್ಟದ ರಾಜಕೀಯ ಸಮ್ಮೇಳನಗಳು ನಡೆದು ಜನತೆಯ ಆಶೋತ್ತರಗಳನ್ನು ಪ್ರತಿಬಿಂಬಿಸುವ ನಿರ್ಧಾರಗಳಾದುವು. 1928ರಲ್ಲಿ ನಡೆದ ಸಮ್ಮೇಳನವನ್ನು ಕಾಂಗ್ರೆಸ್ ಮುಖಂಡ ಸತ್ಯಮೂರ್ತಿ ಉದ್ಘಾಟಿಸಿದರು. ಸಂಸ್ಥಾನದ ಪ್ರಸಿದ್ಧ ವಾಣಿಜ್ಯ ಮುಖಂಡ ಮಾಣಿಕ್ಯವೇಲು ಮೊದಲಿಯಾರ್ ಅವರು ಅಧ್ಯಕ್ಷರಾಗಿದ್ದರು. 1929ರಲ್ಲಿ ನಡೆದ ಮೈಸೂರು ಸ್ಟೇಟ್ ಕಾಂಗ್ರೆಸ್ಸಿನ ಅದ್ದೂರಿಯ ಸಮ್ಮೇಳನ ಎಂ. ವೆಂಕಟಕೃಷ್ಣಯ್ಯ ಅವರ ಅಧ್ಯಕ್ಷತೆಯಲ್ಲಿ ಜರುಗಿತು. ಜನತೆಯ ಉತ್ಸಾಹವಂತೂ ಹೇಳತೀರದು. ಕಾಂಗ್ರೆಸ್‌ನ ಅಧ್ಯಕ್ಷ ಸಿ. ವಿಜಯರಾಘವಾಚಾರ್ಯರು ಆಗಮಿಸಿ ಜನತೆಯ ಬೇಡಿಕೆಗಳನ್ನು ಅಂದು ಹರಸಿದರು. ಈ ಸಮ್ಮೇಳನದಿಂದ ಜನತೆಯ ಬೇಡಿಕೆ ಒಂದು ಕೋಮಿಗೆ ಮೀಸಲಾದದ್ದಲ್ಲ, ಇಡೀ ಜನಸ್ತೋಮದ ಜಾಗೃತಿಯ ಸಂಕೇತ, ಎಂಬುದು ಸ್ಪಷ್ಟವಾಯಿತು. ನಾವೆಲ್ಲ ಈ ಸಮ್ಮೇಳನದಲ್ಲಿ ಸಕ್ರಿಯವಾಗಿ ದುಡಿದಿದ್ದೆವು. ಮರುದಿನ ವಿ. ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ಪ್ರಪ್ರಥಮ ಯುವಕರ ಸಮ್ಮೇಳನವನ್ನೂ ಸಂಭ್ರಮದಿಂದ ನಡೆಸಲಾಯಿತು. ಕೆ. ಟಿ. ಭಾಷ್ಯಂ ಇದರಲ್ಲಿ ಪಾಲುಗೊಂಡಿದ್ದರು. ಇದರ ವ್ಯವಸ್ಥೆಯಲ್ಲಿ ನನ್ನದೂ ಮುಖ್ಯ ಪಾತ್ರ. ಪ್ರಜಾಸ್ವಾತಂತ್ರ್ಯ, ಸಮಾಜಸುಧಾರಣೆಗೆ ಒತ್ತಾಯಿಸಿ ಹಲವಾರು ನಿರ್ಣಯಗಳು ಈ ಸಮ್ಮೇಳನದಲ್ಲಿ ಆದವು. ಸರಕಾರದ ಮೇಲೆ ಈ ಸಮ್ಮೇಳನದ ಪ್ರಭಾವ ಯಾವ ರೀತಿಯಲ್ಲಿಯೂ ಆಗಲಿಲ್ಲ. ಆದರೆ ಜನಜಾಗೃತಿ ಗಣನೀಯವಾಗಿ ಆಯಿತು.

## ರಾಜದ್ರೋಹದ ಮೊಕದ್ದಮೆ

ಇದೇ ವರ್ಷ ಇನ್ನೊಂದು ಘಟನೆ ಆಯಿತು. 'ವೀರಕೇಸರಿ' ಪತ್ರಿಕೆ ಸಂಪಾದಕರಾದ ಸೀತಾರಾಮ ಶಾಸ್ತ್ರಿಗಳ, ಮುದ್ರಕರಾದ ಸಿ. ಅಶ್ವತ್ಥನಾರಾಯಣರಾಯರ ಮೇಲೆ ಸರ್ಕಾರ ರಾಜದ್ರೋಹದ ಮೊಕದ್ದಮೆ ಹೂಡಿತು. ಸಂಸ್ಥಾನದಲ್ಲಿ ರಾಜದ್ರೋಹದ ಮೊದಲ ಮೊಕದ್ದಮೆ ಇದೆಂದು ಹೇಳಲಾಗಿದ್ದು, ಶಾಸ್ತ್ರಿಗಳು ಸರ್ಕಾರವನ್ನು ಮುದ್ದಾನೆಗೆ

ಹೋಲಿಸಿ ಲೇಖನ ಬರೆದು ದ್ರೋಹ ಬಗೆದರೆಂಬ ಆಪಾದನೆ. ಶಾಸ್ತ್ರಿ–ರಾವ್ ಇಬ್ಬರಿಗೂ 9 ತಿಂಗಳ ಕಠಿಣ ಶಿಕ್ಷೆ ಆಯಿತು.

'ವೀರಕೇಸರಿ' ಶಾಸ್ತ್ರಿಗಳ ಸಂಪಾದಕತ್ವದಲ್ಲಿ ಸಂಸ್ಥಾನದಲ್ಲಿ ರಾಜಕೀಯ ಜಾಗೃತಿಗಾಗಿ ಪ್ರಧಾನ ಪಾತ್ರವಹಿಸಿತ್ತು. ಇದು ದೈನಿಕ ಪತ್ರಿಕೆಯಾಗಿದ್ದು ಸಂಸ್ಥಾನದ ಆಗುಹೋಗುಗಳನ್ನು ಪ್ರಸ್ತಾಪಿಸುತ್ತ, ಸರಕಾರದ ಲೋಪದೋಷಗಳನ್ನು ತೀವ್ರವಾಗಿ ಖಂಡಿಸುತ್ತಿತ್ತು. ದಿವಾನ್ ಮಿರ್ಜಾರ ಆತ್ಮೀಯರಾಗಿದ್ದ ಶಾಸ್ತ್ರಿಗಳು ಕಡೆಕಡೆಗೆ ಅವರ ಕೋಪತಾಪಗಳಿಗೆ ಗುರಿಯಾಗಿ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. ಸಂಸ್ಕೃತದಲ್ಲಿ ಉದ್ದಾಮಪಂಡಿತರೂ ಶೃಂಗೇರಿ ಮಠದ ಆಡಳಿತ ಪ್ರಮುಖರಾದ ಶ್ರೀಕಂಠಶಾಸ್ತ್ರಿಗಳ ಸೋದರಳಿಯಂದಿರೂ ಗಣ್ಯವೈದಿಕ ಮನೆತನದವರೂ ಆದ ಶಾಸ್ತ್ರಿಗಳು ರಾಜಕಾರಣದಲ್ಲಿ ಗಣ್ಯಪಾತ್ರವಹಿಸುವಂಥದ್ದು ಆ ಕಾಲದಲ್ಲಿ ಅಚ್ಚರಿಯ ಪ್ರಸಂಗವೇ ಆಗಿತ್ತು. ವೆಂಕಟಕೃಷ್ಣಯ್ಯನವರ ಗರಡಿಯಲ್ಲಿ ಪಳಗಿ, ಮುಂದೆ ಕೆಲಕಾಲದಲ್ಲಿ ಪತ್ರಿಕಾ ಪ್ರಪಂಚಕ್ಕಿಳಿದು, ಕೊನೆಗೆ ರಾಜಕಾರಣವನ್ನೇ ತಮ್ಮ ಜೀವನದ ಉಸಿರಾಗಿ ಮಾಡಿಕೊಂಡರು. 1937ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆಗೆ ನೇಮಿಸಿದ ಕ್ರಿಯಾ ಸಮಿತಿಯಲ್ಲಿ ಅವರೂ ತಗಡೂರರೂ ಟಿ. ಸಿದ್ಧಲಿಂಗಯ್ಯನವರೂ ಇದ್ದರು. ಗಣಪತಿ ಗಲಭೆಯ ವೇಳೆ ಮತ್ತು ನಂತರ ಜನತಾ ಚಳವಳಿಗೆ ಅಪೂರ್ವ ಬೆಂಬಲ ನೀಡಿದರು. ಆ ಸಮಯ ನಾನೂ ವಿ. ಎಸ್. ನಾರಾಯಣರಾಯರೂ ಅವರ ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದೆವು. ಅಬ್ಬಾಸ್ ಖಾನರೊಡನೆ ನಾರಾಯಣರಾಯರು ಭೇಟಿಮಾಡಿ ಗಣಪತಿಯನ್ನು ಕದಲಿಸಿದ ಪ್ರಸಂಗದ ಬಗ್ಗೆ ಅವರ ಅಭಿಪ್ರಾಯಗಳನ್ನು 'ವೀರಕೇಸರಿ'ಯಲ್ಲಿ ಪ್ರಕಟಿಸಿದ ಪರಿಣಾಮವಾಗಿ ಆಂದೋಳನಕ್ಕೆ ಬಿಸಿ ತಟ್ಟಿತ್ತು.

ಶಾಸ್ತ್ರಿಗಳೊಡನೆ ಸಹಭಾಗಿ ಸಿ. ಅಶ್ವತ್ಥನಾರಾಯಣರಾಯರು 'ನವಜೀವನ' ಎಂಬ ದಿನಪತ್ರಿಕೆ ನಡೆಸುತ್ತಿದ್ದರು. ಥಿಯಾಸಫಿಕ್ ಗುಂಪಿನವರಾಗಿದ್ದು ಕಮಲಾದೇವಿ ಚಟ್ಟೋಪಾಧ್ಯಾಯರ ಆಪ್ತಮಿತ್ರರು. ರಾಷ್ಟ್ರೀಯ ಚಳವಳಿಗೆ ಇವರ ಬೆಂಬಲ ಇತ್ತು.

ಸಂಸ್ಥಾನದ ಜನತೆಯ ರಾಜಕೀಯ ಪ್ರಜ್ಞೆ ಬೆಳೆಯಲು ಗ್ರಾಮಾಂತರ ಪ್ರದೇಶದ ಕೆಲವು ಚಳವಳಿಗಳೂ ಕಾರಣವಾದುವು. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾ॥ನ ಶಿರಾಳಕೊಪ್ಪದ ಮರಿಸ್ವಾಮಿ ಹಿರೇಮಠ ಎಂಬ ಕಾಂಗ್ರೆಸ್ ಕಾರ್ಯಕರ್ತರು ರೈತರ ಕಷ್ಟ ಪರಿಹಾರಕ್ಕಾಗಿ ಕರನಿರಾಕರಣ ಚಳವಳಿ ಹೂಡಿದರು. ಮಂಡ್ಯ ಜಿಲ್ಲೆಯ ಇರ್ವಿನ್ (ಈಗ ವಿಶ್ವೇಶ್ವರಯ್ಯ) ನಾಲಾ ಆಶ್ರಯದ ರೈತರಿಗೆ ತೊಂದರೆದಾಯಕವಾಗಿದ್ದ ಬ್ಲಾಕ್ ಸಿಸ್ಟಂ ಬಗ್ಗೆ ಚಳವಳಿ ನಡೆಸಲು ರೈತರ ನಾಯಕತ್ವ ವಹಿಸಿದವರು ಡಾ॥ ಎಚ್. ಕೆ. ವೀರಣ್ಣಗೌಡರು. ಸಹಸ್ರಾರು ರೈತರನ್ನು ಕಾಲ್ನಡಿಗೆಯಿಂದ ಕರೆತಂದು ಅತ್ತಾರಾ ಕಚೇರಿ ಮುಂದೆ ಧರಣಾ ನಡೆಸಿ ಮುಂದಿನ ಆಂದೋಳನಗಳ ದಿಕ್ಸೂಚಿಯಾಗಿ ಚಳವಳಿ

ಮಾಡಿದರು. ಅತ್ಯಂತ ಪರಿಣಾಮಕಾರಿ ಚಳವಳಿ ಇದು.

ಕಾಂಗ್ರೆಸ್ ಸಂಸ್ಥೆ ಸಂಸ್ಥಾನದಲ್ಲಿ ಜನಜಾಗೃತಿಯ ಕೆಲಸವನ್ನು ನಡೆಸಿಯೇ ಇತ್ತು. ವಾರ್ಷಿಕ ಕಾಂಗ್ರೆಸ್ ಅಧಿವೇಶನಗಳಲ್ಲಿ ಆದ ನಿರ್ಣಯಗಳನ್ನು ಜನರಿಗೆ ತಿಳಿಸಿ ಹೇಳುವುದು, ಸಂಸ್ಥಾನಗಳಿಗೆ ಅನ್ವಯವಾಗುವಂಥವನ್ನು ಆಚರಣೆಗೆ ತರಲು ಯತ್ನ ನಡೆದಿತ್ತು. ಲಾಹೋರ್ ಕಾಂಗ್ರೆಸ್‌ನಲ್ಲಿ (1929) ಪೂರ್ಣಸ್ವರಾಜ್ಯದ ಘೋಷಣೆ ಮಾಡಿ, ಜನವರಿ 26ರಂದು ಸ್ವಾತಂತ್ರ್ಯದಿನಾಚರಣೆ ನಡೆಸುವ ಬಗ್ಗೆ ಕರೆಕೊಟ್ಟರಲು ಸಂಸ್ಥಾನದ ಅನೇಕ ಕಡೆ, ಹೆಚ್ಚಾಗಿ ಖಾಸಗಿ ಸ್ಥಳಗಳಲ್ಲಿ 1930ರ ಜನವರಿ 26ರಂದು ಧ್ವಜಾರೋಹಣ ಮಾಡಲಾಗಿತ್ತು. ಸಾರ್ವಜನಿಕ ಸ್ಥಳಗಳಲ್ಲಿ ಮಾಡಿದರೆ ಸರಕಾರ ಪ್ರತಿಬಂಧ ಹೇರೀತೆಂಬ ಭಯ. ಸಂಸ್ಥಾನದಲ್ಲಿ ಪ್ರತಿಬಂಧಕಾಜ್ಞೆ ಭಂಗಿಸಲು ಕಾಂಗ್ರೆಸ್‌ನ ಅನುಮತಿ ಇರಲಿಲ್ಲ. ಒಂದೆರಡು ವರ್ಷ ಈ ಕಾರ್ಯ ಅಡಚಣೆಗಳಿಲ್ಲದೆ ನಡೆದರೂ ಪೋಲೀಸರು ಸಣ್ಣಪುಟ್ಟ ಕೀಟಲೆ ಕೊಡುತ್ತಲೇ ಇದ್ದರು. ಸ್ವಾತಂತ್ರ್ಯದಿನ ಸ್ವಾತಂತ್ರ್ಯ ಪ್ರತಿಜ್ಞೆ ಮಾಡುವ ನಡವಳಿಕೆಯಲ್ಲಿ ಜಿ. ಆರ್. ಸ್ವಾಮಿ ದಸ್ತಗಿರಿಯಾಗಿ, ಈ ಪ್ರಕರಣದ ಪ್ರತಿಧ್ವನಿ ಬ್ರಿಟಿಷ್ ಪಾರ್ಲಿಮೆಂಟಿನಲ್ಲೂ ಕೇಳಿಬಂದುದು ಸ್ವಾರಸ್ಯ. ಬ್ರಿಟಿಷ್ ಪತ್ರಿಕೆಗಳೂ ಸರಕಾರವನ್ನು ಟೀಕಿಸಿದವು.

ಬೆಂಗಳೂರು ದಂಡಿನಲ್ಲಿ ಕಾಂಗ್ರೆಸ್ ಚಟುವಟಿಕೆ ಬಲವಾಗಿ ನಡೆಯಲು ಆಗ ಅಲ್ಲಿಗೆ ಬೊಂಬಾಯಿನಿಂದ ಬಂದು ನೆಲಸಿದ, ತಾತಾ ಕಂಪನಿಯ ಏಜಂಟರಾದ ಆರ್. ಕೃಷ್ಣಯ್ಯರ್ ಅವರು ಕಾರಣ. ರಚನಾತ್ಮಕ ಕಾರ್ಯಗಳಲ್ಲಿ ಇವರಿಗೆ ವಿಶೇಷ ಆಸ್ಥೆ. ಪೌರಸಭಾ ಚುನಾವಣೆಯಲ್ಲಿ ದಂಡಿನ ಪ್ರಜೆಗಳು ಗೆದ್ದು ಒಂದು ವೈಶಿಷ್ಟ್ಯವನ್ನು ಸಾಧಿಸಿದ ಕೀರ್ತಿ ಇವರಿಗೂ ಇವರ ಕೆಲವು ಮಿತ್ರರಿಗೂ ಸಲ್ಲುತ್ತದೆ. ರಾಜರತ್ನಂ ಚೆಟ್ಟಿ, ಅರುಣಾಚಲಂ ಇವರ ಜೊತೆ ದುಡಿದ ನಿಷ್ಠಾವಂತರು.

## ಹರಿಜನೋದ್ಧಾರ

ವಿಧಾಯಕ ಕಾರ್ಯಗಳಲ್ಲಿ ಒಂದಾದ ಅಸ್ಪೃಶ್ಯತಾ ನಿವಾರಣೆಯಲ್ಲಿ ಸಂಸ್ಥಾನ ಮುಂಚೂಣಿಯಲ್ಲಿ ಇತ್ತು. 1906ನೆಯ ಇಸವಿಯಲ್ಲೇ ಅರಮನೆಯ ಕಂಟ್ರೋಲರ್ ಆಗಿದ್ದ ವಿ. ಎನ್. ನರಸಿಂಹ ಅಯ್ಯಂಗಾರ್ ಎಂಬುವರು ಅಸ್ಪೃಶ್ಯರ ಏಳ್ಗೆಯಲ್ಲಿ ಅತ್ಯಂತ ಆಸಕ್ತಿ ತೋರಿದ್ದರು. ಆಗಾಗ್ಗೆ ಅಸ್ಪೃಶ್ಯರ ಕೇರಿಗಳಲ್ಲಿ ಅಡ್ಡಾಡಿ ಅವರಿಗೆ ಹಿತೋಕ್ತಿಗಳನ್ನು ಕೊಡುತ್ತ ಜಿರಿಯುತ್ತಿದ್ದರು. ಕೆಲವು ಸರಕಾರಿ ಅಧಿಕಾರಿಗಳೂ ಈ ಬಗ್ಗೆ ಆಸಕ್ತಿ ವಹಿಸಿದ್ದರು. ವಿಶ್ವೇಶ್ವರಯ್ಯನವರ ದಿವಾನಗಿರಿಯ ಕಾಲದಿಂದಲೇ ಈ ಜನಾಂಗದಲ್ಲಿ ಉನ್ನತಿಗಾಗಿ ಕಾರ್ಯ ಸಾಗಿತ್ತು. ವಿದ್ಯಾಭ್ಯಾಸದಲ್ಲಿ, ಸಮಾಜದಲ್ಲಿ ಸರಿಸಮಾನತೆಯನ್ನು ಉಂಟುಮಾಡುವ ಪ್ರಯತ್ನದಲ್ಲಿ ಪ್ರಗತಿದಾಯಕ ಯತ್ನ ನಡೆದಿತ್ತು. ರಾಜಮನೆತನವೂ ಇದಕ್ಕೆ ಬೆಂಬಲವಾಗಿತ್ತು. ಮುಂದೆ ಗೋವಿಂದಾಚಾರ್ಯ ಸ್ವಾಮಿ

ಮತ್ತು ಇತರ ಕೆಲವು ಖಾಸಗಿ ವ್ಯಕ್ತಿಗಳೂ ತಮ್ಮ ಸಮಯವನ್ನು ಹರಿಜನರ ಅಭ್ಯುದಯ ಕ್ಕಾಗಿ ವ್ಯಯಿಸುತ್ತಿದ್ದರು. ಆರ್. ಗೋಪಾಲಸ್ವಾಮಿ ಅಯ್ಯರ್ ಅವರು ಈ ನಿಟ್ಟಿನಲ್ಲಿ ತಮ್ಮ ಕೆಲಸದಿಂದ 'ಪಂಚಮ ಗೋಪಾಲಸ್ವಾಮಿ ಅಯ್ಯರ್' ಎಂದೇ ಕರೆಯಲ್ಪಟ್ಟರು. ಬೆಂಗಳೂರು ಪೌರಸಭೆ, ನ್ಯಾಯವಿಧಾಯಕ ಸಭೆ ಮತ್ತು ಪ್ರಜಾಪ್ರತಿನಿಧಿ ಸಭೆಯಲ್ಲಿ ಇವರು ಸದಸ್ಯರಾಗಿದ್ದು ಅಸ್ಪೃಶ್ಯರ ಪ್ರತಿನಿಧಿಯೋ ಎಂಬಂತೆ ಅವರ ಕ್ಷೇಮಾಭ್ಯು ದಯಕ್ಕೆ ಹೆಣಗುತ್ತಿದ್ದರು. ಸಂಪ್ರದಾಯಬದ್ಧರ ವಿರೋಧವನ್ನೂ ಅವರು ಲೆಕ್ಕಿಸಲಿಲ್ಲ. ಇವರ ಸ್ಮರಣಾರ್ಥ ಹರಿಜನ ಕಾಲೊನಿ, ಹಾಸ್ಟಲ್ ಮುಂತಾದವು ಸ್ಥಾಪಿತವಾಗಿವೆ. ಅಯ್ಯರರ ಶ್ರಮದಿಂದ ಅನೇಕ ಹರಿಜನರು ಉನ್ನತ ಹುದ್ದೆಗೇರಿ ನಿವೃತ್ತರಾಗಿದ್ದಾರೆ. ಮೈಸೂರಿನ ವಕೀಲ ಕೆ. ಶೇಷಾದ್ರಿ ಅವರೂ ಈ ಕ್ಷೇತ್ರದಲ್ಲಿ ಬಹುಕಾಲದಿಂದ ದುಡಿದವರು. ಕಾಂಗ್ರೆಸ್ ಹಾಗೂ ರಚನಾತ್ಮಕ ಕಾರ್ಯಗಳಲ್ಲಿ ಶ್ರದ್ಧಾಪೂರ್ವಕ ದುಡಿದವರು. ತಗಡೂರು ರಾಮಚಂದ್ರರಾಯರಂತೂ ಹರಿಜನರ ಏಳ್ಗೆಯಲ್ಲಿ ಜೀವಂತ ಆಸಕ್ತಿ ತಳೆದವರು. ತಗಡೂರಿನಲ್ಲಿ ಹರಿಜನ ಆಶ್ರಮವೊಂದನ್ನು ತೆರೆದು ಹರಿಜನ ಬಾಲಕಬಾಲಕಿಯರಿಗಾಗಿ ಶಿಕ್ಷಣ ಮುಂತಾದ ಸೌಕರ್ಯಗಳನ್ನು ಏರ್ಪಡಿಸಿದರು. ಇದರಿಂದ ಆ ಗ್ರಾಮದ ಸವರ್ಣೀಯರ ಆಗ್ರಹಕ್ಕೆ ತುತ್ತಾಗಿ ಕಷ್ಟ ಎದುರಿಸಿದರು. ಗಾಂಧೀಜಿ ತಮ್ಮ ಹರಿಜನ ಪ್ರವಾಸದ ಕಾಲಕ್ಕೆ ತಗಡೂರಿಗೆ ಭೇಟಿ ನೀಡಿ ತಗಡೂರರ ಸೇವೆಯನ್ನು ಪ್ರಶಂಸಿಸಿದರು.

ಗಾಂಧೀಜಿ ಹರಿಜನರ ಏಳ್ಗೆಯ ಸಲುವಾಗಿ ಸಂಸ್ಥಾನದಲ್ಲಿ ಪ್ರವಾಸಮಾಡಿದಾಗ (1934) ಸಹೃದಯರು ತೋರಿದ ಉತ್ಸಾಹ ಪ್ರಶಂಸನೀಯವಾಗಿತ್ತು. ಸಾರ್ವಜನಿಕರೂ ಸರಕಾರವೂ ಒತ್ತಟ್ಟಿಗೆ ಸೇರಿ ಗಾಂಧೀಜಿಯವರ ಸಂದೇಶದಂತೆ ಸಕ್ರಿಯ ಕಾರ್ಯ ನಡೆಸಿದರು. ಅ.ಭಾ. ಹರಿಜನ ಸೇವಾ ಸಂಘದ ಸ್ಥಾಪನೆ ಆದದ್ದು ಈ ಕಾಲದಲ್ಲೇ. ಮಾಜಿ ದಿವಾನ್ ವಿ. ಪಿ. ಮಾಧವರಾಯರು ಪ್ರಪ್ರಥಮ ಅಧ್ಯಕ್ಷರು. ಆಮೇಲೆ ಪಾಮಡಿ ಸುಬ್ಬರಾಮ ಶೆಟ್ಟರು ಅಧ್ಯಕ್ಷರು. ಕೆ. ಟಿ. ಭಾಷ್ಯಂ, ಮನ್ನಾಜಿರಾಯರು, ತಗಡೂರು ರಾಮಚಂದ್ರರಾವ್, ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟಿ, ಶಿವಮೊಗ್ಗದ ವಕೀಲ ಟಿ. ಜಿ. ನಾರಾಯಣ ಅಯ್ಯಂಗಾರ್, ಕೋಲಾರದ ವಕೀಲ ಟಿ. ಶ್ರೀನಿವಾಸಾಚಾರ್, ವಿ. ವೆಂಕಟಪ್ಪ ಮುಂತಾದವರೆಲ್ಲ ಈ ಸಂಘದ ಪ್ರಮುಖ ಕಾರ್ಯಕರ್ತರು, ಕೆಂಗೇರಿಯ ಬ್ರಹ್ಮಚಾರಿ ರಾಮಚಂದ್ರನ್ ಅವರ ಸೇವೆಯನ್ನು ಇಲ್ಲಿ ಮರೆಯಲಾಗದು. ಇಡೀ ಸಂಸ್ಥಾನದಲ್ಲಿ ಹರಿಜನ ಸೇವಾ ಸಂಘವನ್ನು ಸ್ಥಾಪಿಸುವಲ್ಲಿ ಹಾಗೂ ಗಾಂಧೀಜಿಯ ಹರಿಜನ ಪ್ರವಾಸವನ್ನು ಯಶಸ್ವಿಯಾಗಿ ಏರ್ಪಡಿಸುವಲ್ಲಿ ಗಣನೀಯ ಸೇವೆ ಸಲ್ಲಿಸಿದರು. ಬೆಂಗಳೂರಲ್ಲಿ ದೀನ ಸೇವಾ ಸಂಘ. ಕೆಂಗೇರಿಯಲ್ಲಿ ಗುರುಕುಲಾಶ್ರಮ ಸ್ಥಾಪಿಸಿದ ಕೀರ್ತಿ ಇವರ ಪಾಲಿಗೆ. ಬೆಂಗಳೂರಿನಲ್ಲಿ ಗಜಾಂಬಾಳ್ ರಾಮಲಿಂಗಂ ಎಂಬ ಶ್ರೀಮಂತ ಮಹಿಳೆ ಹರಿಜನ ಸೇವಾಕಾರ್ಯದಲ್ಲಿ ತುಂಬಾ ಆಸಕ್ತಿ ತಳೆದಿದ್ದರು. ರಾಜಮನೆತನ, ವಿಶೇಷತಃ ಯುವರಾಜ ಕಂಠೀರವ ನರಸಿಂಹರಾಜ

ಒಡೆಯರ್ ಅವರು ಹರಿಜನ ಕಾರ್ಯದಲ್ಲಿ ಅಪಾರ ಉತ್ಸುಕತೆ ತೋರುತ್ತಿದ್ದುದು ಈ ಕ್ಷೇತ್ರದಲ್ಲಿ ದುಡಿಯುವವರಿಗೆ ಸ್ಫೂರ್ತಿದಾಯಕವಾಗಿತ್ತು. ಅಸ್ಪೃಶ್ಯತೆಗೆ ಶಾಸ್ತ್ರಾಧಾರ ಉಂಟೆಂದು ಕೆಲವು ಸಂಪ್ರದಾಯಸ್ಥರು ವಾದಿಸಿದಾಗ, ಸ್ವತಃ ಮದನಮೋಹನ ಮಾಲವೀಯರು, "ಶಾಸ್ತ್ರಾಧಾರ ಇಲ್ಲ" ಎಂದು ಪ್ರತಿವಾದ ಹೂಡಿದ ಒಂದು ಪ್ರಸಂಗ ಮೈಸೂರಿನ ಪರಕಾಲ ಮಠದಲ್ಲಿ ನಡೆದು, ಅಸ್ಪೃಶ್ಯತೆಯ ಸಮರ್ಥಕ ಸಂಪ್ರದಾಯಸ್ಥರನ್ನು ಕ್ರಾಂತಿಕಾರಕವಾಗಿ ಪರಿವರ್ತನೆಗೊಳಿಸಿತು.

ಗಾಂಧೀಜಿಯ ಭೇಟಿಯ ತರುವಾಯ ಥಕ್ಕರ್ ಬಾಪಾ ಅವರು ಆಗಿಂದಾಗ್ಗೆ ಸಂಸ್ಥಾನಕ್ಕೆ ಭೇಟಿ ಇತ್ತು, ಇದುತನಕ ನಡೆದ ಹರಿಜನ ಸೇವಾಕಾರ್ಯ ಸತತವಾಗಿ ನಡೆಯಲು ಸ್ಫೂರ್ತಿ ನೀಡುತ್ತಿದ್ದರು. 'ತಾಯಿನಾಡು' ಪಿ. ಆರ್. ರಾಮಯ್ಯ ಕೂಡ ಹರಿಜನರ ಏಳ್ಗೆಯ ಕುರಿತು ಆಸ್ಥೆ ತಳೆದಿದ್ದರು. ಸಂಸ್ಥಾನದ ಸ್ವಾತಂತ್ರ್ಯೋದ್ಯಮದಲ್ಲಿ ಈ ಕಾರ್ಯ ಮಹತ್ವದ ಸ್ಥಾನಗಳಿಸಿತ್ತು.

## ತಗಡೂರರ ಸತ್ಯಾಗ್ರಹ

ತಗಡೂರು ರಾಮಚಂದ್ರರಾಯರು ಕೆಲಕಾಲ ಬೆಂಗಳೂರು ನಗರವನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡು ಪತ್ರಿಕಾ ಕಾನೂನನ್ನು ಉಲ್ಲಂಘಿಸುವ ಕಾರ್ಯವನ್ನು ಭರದಿಂದ ಸಾಗಿಸಿದರು. 'ಕಣಿಯರ ಪತ್ರಿಕೆ'ಯನ್ನು ಹೊರಡಿಸಲು ಪರವಾನಗಿಯನ್ನು ಸರಕಾರ ಕೊಡದೇ ನಿರಾಕರಿಸಿದ್ದೇ ಇದಕ್ಕೆ ಮುಖ್ಯ ಕಾರಣ. ಈ ಸತ್ಯಾಗ್ರಹದ ವೈಖರಿ ಅವರ್ಣನೀಯ. ಎಷ್ಟೋ 'ಮುದ್ರಣಾಲಯ'ಗಳು ಮುಟ್ಟುಗೋಲಾದವು. ತಗಡೂರರ ಹೇಳಿಕೆ ನೋಡಿ: "....ಪ್ರೆಸ್ ಆಕ್ಟ್ ಉಲ್ಲಂಘನೆಯನ್ನು ಮಾಡುವ ಸಲುವಾಗಿ ಮುದ್ರಣಾಲಯಗಳನ್ನು ಕೇಳಿದೆ. ಯಾರೂ ಒಪ್ಪಲಿಲ್ಲ. ತುಂಬ ಹೆದರಿದರು....ಸವಕಲು ಮೊಳೆಗಳನ್ನು ಹತ್ತಾರು ಮುದ್ರಣಾಲಯಗಳಿಂದ ಕೇಳಿ ಶೇಖರಿಸಿ ಮುಖಪುಟವನ್ನು ಜೋಡಿಸುತ್ತಿದ್ದೆ. ಅದನ್ನೇ ಕಲ್ಲುಚಪ್ಪಡಿಯ ಮೇಲಿರಿಸಿ, ತೆಂಗಿನ ಕರಟದಲ್ಲಿ ಶೇಖರಿಸುತ್ತಿದ್ದ ಶಾಯಿಯಲ್ಲಿ, ಮುರಿದದ್ದೋ ಏನೋ, ಯಾವುದೋ ಒಂದು ರೋಲಿನಿಂದ ಇರಿಸಿದ್ದ ಕಾಗದದಮೇಲೆ ತೀಡಿ ಪ್ರತಿ ತೆಗೆಯುತ್ತಿದ್ದೆ. ಇಷ್ಟೇ ನನ್ನ ಮುದ್ರಣಾಲಯದ ವಸ್ತುಗಳು......." ಎಂಥ ಮುದ್ರಣಾಲಯ! ಇಂಥದ್ದನ್ನೇ ಒಂದಲ್ಲ. ಸಾಲ್ಕಾರಾವರ್ತಿ ಪೋಲೀಸರು ಮುಟ್ಟುಗೋಲು ಹಾಕಿಕೊಂಡದ್ದು. ಮೈಸೂರು ಸಂಸ್ಥಾನದಾಚೆ ಈ ಪ್ರಕರಣ ತೀವ್ರಪರಿಣಾಮವನ್ನುಂಟು ಮಾಡದೆ ಇರಲಿಲ್ಲ. ಗಾಂಧೀಜಿಯ ಗಮನಕ್ಕೂ ಇದು ಬಂತು. ತಮ್ಮ ಉಡುಪಿನ ಮೇಲೆ ಸುದ್ದಿ ಬರೆದು ಅದನ್ನು ಧರಿಸಿ ತಗಡೂರರು ನಗರದಲ್ಲೆಲ್ಲ ಅಡ್ಡಾಡಿದರು. ಇದರಿಂದ ಮೊಕದ್ದಮೆ. ಪೋಲೀಸರು ರಾಯರ ವಸ್ತ್ರಾಪಹಾರ ಮಾಡಿದರು. ರಾಯರ ಖುಲಾಸೆ ಆಯಿತು. ಸರಕಾರದ ವಿಚಿತ್ರ ನಡವಳಿಕೆಯನ್ನು ಅರಿಯಲು ಜನತೆಗೆ ಅವಕಾಶ

ಆಯಿತು. ಜಾಗೃತಿಯೂ ಮೂಡಿತು. ಇಂಥದ್ದೇ ಎಷ್ಟೋ ಪ್ರಕರಣಗಳನ್ನು ರಾಯರು ನಡೆಸಿದರು. ಅದೆಷ್ಟು ಬಾರಿ ಅವರು ಬಂಧಿತರಾದರೋ ರಾಯರಿಗೆ ನೆನಪಿರಲಾರದು. ಪೋಲೀಸರು ರಾಯರ ಬಗ್ಗೆ ಒಂದೆರಡು ಬಾರಿ ಅಮಾನುಷವಾಗಿ ವರ್ತಿಸಿದ್ದರಿಂದ ರಾಯರ ಜನಪ್ರಿಯತೆ ಹೆಚ್ಚಲು ಅವಕಾಶವಾಯಿತಷ್ಟೇ ಅಲ್ಲ, ಜನತೆಯ ಸ್ವಾತಂತ್ರ್ಯಪ್ರಿಯತೆ ಹೆಚ್ಚಲು ಆಸ್ಪದ ಆಯಿತು. ಬೆಂಗಳೂರಿನ ಜನರೂ ರಾಯರಿಗೆ ಒತ್ತಾಸೆಯಾಗಿ ನಿಂತರು. ಇವರಿಗೆ ಇಬ್ಬರು ಶಿಷ್ಯರು ನೀಡಿದ ನೆರವು ಅತಿಶಯವಾದುದು. ರಾಯರಂತೆ ಇವರೂ ಪೋಲೀಸರ ಉಗ್ರಕೋಪತಾಪಗಳಿಗೆ ಒಳಗಾದರು. ಈ ಪೈಕಿ ಒಬ್ಬರು ಖಾಸಗಿ ಉಪಾಧ್ಯಾಯರಾಗಿದ್ದ ಲಕ್ಷ್ಮೀನರಸಿಂಹಯ್ಯ, ಇನ್ನೊಬ್ಬರು ದರ್ಜಿ ಮನೆತನದ ಸಾಂಬಾಜಿ. ತಗಡೂರರು ಬೆಂಗಳೂರಲ್ಲಿ ಅಖಂಡವಾಗಿ ವಿವಿಧ ಬಗೆಯ ಚಳವಳಿ ಹೂಡಿ ಜನತೆಯನ್ನು ಹುರಿದುಂಬಿಸಿದರು. 1929ರ ಗಣಪತಿ ಗಲಭೆ ಮೊಕದ್ದಮೆಯಲ್ಲೂ ಅವರು ಆಪಾದಿತರಾಗಿದ್ದರು.

ಬ್ರಿಟಿಷ್ ಪ್ರಾಂತಗಳಂತೆ ವ್ಯಾಪಕ ಚಳವಳಿಗೆ ಸಂಸ್ಥಾನದಲ್ಲಿ ಅವಕಾಶವಿರದಿದ್ದರೂ ಸ್ಥಳೀಯ ಸಮಸ್ಯೆಗಳ ಕುರಿತು ಒಂದಲ್ಲ ಒಂದು ರೀತಿಯ ಚಟುವಟಿಕೆ ನಡೆದು ಜನಜಾಗೃತಿ ಮುಂದುವರಿದಿತ್ತು.

## ಸ್ವದೇಶೀ ಪ್ರಚಾರ

ಈ ಅವಧಿಯಲ್ಲಿ (1929-30) ಕಾಂಗ್ರೆಸ್ ಸಮಿತಿ ಸ್ವದೇಶೀ ಪ್ರಚಾರ, ವಿದೇಶೀ ವಸ್ತ್ರಗಳ ಬಹಿಷ್ಕಾರ—ಈ ರಚನಾತ್ಮಕ ಕಾರ್ಯದಲ್ಲಿ ತೊಡಗಿತ್ತು. ಚಿಕ್ಕಪೇಟೆಯಲ್ಲಿ ವಿದೇಶೀ ವಸ್ತ್ರದಂಗಡಿಯ ಮುಂದೆ ಪಿಕೆಟಿಂಗ್ ದೀರ್ಘಕಾಲ ನಡೆದು ಸ್ವಯಂಸೇವಕರೂ ಸ್ವಯಂ ಸೇವಕಿಯರೂ ಅದರಲ್ಲಿ ಪಾಲುಗೊಳ್ಳುತ್ತಿದ್ದರು. ಕಾಂಗ್ರೆಸ್ ಕಚೇರಿಯಿಂದ ಮೆರವಣಿಗೆ ಆರಂಭವಾಗಿ, ಚಿಕ್ಕಪೇಟೆ ತಲಪುವಾಗ ಅಸಂಖ್ಯಾತ ಜನ ಅಲ್ಲಿ ಸೇರುತ್ತಿದ್ದರು. ದೇಶಭಕ್ತಿಗೀತೆಗಳೂ ಜಯಕಾರವೂ ಮುಗಿಲು ಮುಟ್ಟುತ್ತಿತ್ತು. ವಿದೇಶೀ ವಸ್ತ್ರದ ಅಂಗಡಿಗಳ ಮುಂದೆ ಕೈಜೋಡಿಸಿ ನಿಂತು ಸ್ವಯಂಸೇವಕ-ಸೇವಕಿಯರು ವಿದೇಶೀ ಬಟ್ಟೆ ಕೊಳ್ಳದಂತೆ ಜನರನ್ನು ಬೇಡಿಕೊಳ್ಳುತ್ತಿದ್ದರು. ಅಂಗಡಿಗಳ ಮಾಲಿಕರು ಸೌಜನ್ಯದಿಂದ ವರ್ತಿಸುತ್ತಿದ್ದರೇ ವಿನಾ ಧೂರ್ತತನ ಮಾಡುತ್ತಿರಲಿಲ್ಲ. ದೀರ್ಘಕಾಲದ ಪಿಕೆಟಿಂಗ್‌ನಿಂದ ಜನರಲ್ಲಿ ಸ್ವದೇಶೀ ಭಾವನೆಯು ದೃಢವಾಗಿ ನೆಲೆಸಿತು. ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್ ಆಗ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು. ಅವರೇ ಪಿಕೆಟಿಂಗ್ ಕಾರ್ಯಕ್ರಮದ ನಾಯಕರು. ನಾನು ಮತ್ತು ರಾಮಸ್ವಾಮಿ ಭಾರದ್ವಾಜ್ ಕಾರ್ಯದರ್ಶಿಗಳಾಗಿದ್ದೆವು.

ಈ ಕಾಲದಲ್ಲಿ ಅಜ್ಜಂಪುರದಲ್ಲಿ ರಾಜಕೀಯ ಹಾಗೂ ಯುವಕ ಸಮ್ಮೇಳನದ ಏರ್ಪಾಟಾಗಿತ್ತು. ಕೆ. ಟಿ. ಭಾಷ್ಯಂ ಅಧ್ಯಕ್ಷರು ; ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟಿ ಸ್ವಾಗತಾಧ್ಯಕ್ಷರು. ಸಂಸ್ಥಾನದ ಅನೇಕ ಕಡೆಗಳಿಂದ ಯುವಕರು ಅಪಾರಸಂಖ್ಯೆ

ಯಲ್ಲಿ ನೆರೆದಿದ್ದರು. ಸಮ್ಮೇಳನದಲ್ಲಿ ಸ್ವಾಗತಭಾಷಣ ಆಗುತ್ತಿದ್ದಂತೆ ಭಾಷ್ಯಂ ಅವರ ಬಂಧನ ಆಯಿತು. ಆದರೂ ಧೃತಿಗುಂದದೆ ಸಮ್ಮೇಳನ ನಡೆಸಿ ಸರ್ಕಾರದ ದಬ್ಬಾಳಿಕೆ ಖಂಡಿಸುವ ನಿರ್ಣಯಮಾಡಿ ಯುವಕರೆಲ್ಲ ಚದರಿದರು. ಈ ಸಮ್ಮೇಳನದ ವ್ಯವಸ್ಥೆಗೆ ನಾನು ಹೋಗಿದ್ದೆ.

## ಸಂಸ್ಥಾನಿಕ ಪ್ರಜಾಸಮ್ಮೇಳನ

ನಗರದ ಪ್ರಸಿದ್ಧ ವಕೀಲರಾದ ಸಿ. ವಿ. ನರಸಿಂಹಯ್ಯಂಗಾರ್ಯರು ಸ್ವಾಗತಾಧ್ಯಕ್ಷರಾಗಿ ಎಸ್. ಆರ್. ಎಸ್. ರಾಘವನ್ ಕಾರ್ಯದರ್ಶಿಯಾಗಿ ಬೆಂಗಳೂರಲ್ಲಿ ಸಂಸ್ಥಾನಿಕ ಪ್ರಜಾ ಸಮ್ಮೇಳನವನ್ನು ಪ್ರೊ|| ಅಭ್ಯಂಕರ್ ಎಂಬವರ ಅಧ್ಯಕ್ಷತೆಯಲ್ಲಿ ನಡೆಸಿದೆವು. ಸಂಪಿಗೆ ವೆಂಕಟಪತಯ್ಯ, ಎಂ. ಪಿ. ಸೋಮಶೇಖರರಾವ್, ಎಸ್. ವೆಂಕಟರಂಗೈಂಗಾರ್ ಮುಂತಾದವರು ಇದರಲ್ಲಿ ಕಾರ್ಯಶೀಲರಾಗಿದ್ದರಲ್ಲದೆ ನಾನೂ ದುಡಿದಿದ್ದೆ. ಸಂಸ್ಥಾನಿಕ ಪ್ರಜೆಗಳ ದೈವದತ್ತವಾದ ಸ್ವಾತಂತ್ರ್ಯವನ್ನು ರಾಜರುಗಳು ನೀಡಬೇಕೆಂದು ನಿರ್ಣಯ ವನ್ನು ಅಂಗೀಕರಿಸಲಾಯಿತು. ದಕ್ಷಿಣ ಭಾರತದ ಕೆಲವು ಸಂಸ್ಥಾನಗಳ ಪ್ರತಿನಿಧಿಗಳು ಬಂದು ಇದರಲ್ಲಿ ಭಾಗವಹಿಸಿದ್ದರು.

ಹಿಂದುಸ್ತಾನಿ ಸೇವಾದಳವನ್ನು ನಗರದಲ್ಲಿಯೂ ದಂಡಿನಲ್ಲಿಯೂ ಸಂಘಟಿಸ ಲಾಗಿತ್ತು. ಸುಸಂಘಟಿತವಾದ ಈ ಪಡೆಯ ಸತ್ವಪರೀಕ್ಷೆಯ ಕಾಲವು ಎದುರಾಗಿ, ಈ ಪರೀಕ್ಷೆಯಲ್ಲಿ ಕಾಂಗ್ರೆಸ್ ಮತ್ತು ಸೇವಾದಳ ತಕ್ಕಮಟ್ಟಿಗೆ ಯಶ ಕಂಡವು.

ಈ ಸತ್ವಪರೀಕ್ಷೆ ಬಂದುದು 1931ರಲ್ಲಿ ಪಂ|| ನೆಹರೂ ಭೇಟಿಯಿಂದಾಗಿ. ತಮ್ಮ ಪತ್ನಿ ಮತ್ತು ಮಗಳೊಂದಿಗೆ ಮೈಸೂರಿಗೆ ಬಂದ ನೆಹರೂರಿಗೆ ಬೆಂಗಳೂರಲ್ಲಿ ಅದ್ಭುತ ಸ್ವಾಗತ ದೊರೆಯಿತು. ಮಳಿರಾಯನೂ ಈ ಸ್ವಾಗತ ಸಮಾರಂಭದಲ್ಲಿ ಸೇರಿಕೊಂಡ. ಬೆಳಗ್ಗೆ 5ಕ್ಕೆ ರೈಲು ಬಂತು. ಪ್ಲಾಟ್‌ಫಾರಂನಲ್ಲಿ ಸೇರಿದ್ದ ಜನಜಂಗುಳಿ ಸೇವಾದಳದ ಶಿಸ್ತಿನ ನಿಯಂತ್ರಣಕ್ಕೂ ಒಳಗಾಗದಷ್ಟು ಮೇರೆಮೀರಿತ್ತು. ನೆಹರೂ ರೈಲಿನಿಂದ ಇಳಿಯುವುದೂ ಸಾಧ್ಯವಿರಲಿಲ್ಲ. ಸಹನೆಮೀರಿದ ನೆಹರೂ ಕಾಂಗ್ರೆಸ್ ಸಮಿತಿಯವರನ್ನೂ ಸ್ವಯಂಸೇವಕರನ್ನೂ ಶಿಸ್ತಿನ ವ್ಯವಸ್ಥೆ ಇಲ್ಲದ್ದಕ್ಕಾಗಿ ಮನಸಾರೆ ಖಂಡಿಸಿದರು. ಬಹುಶಃ ಇದು ಜನಸ್ತೋಮದ ಮೇಲೆ ಪರಿಣಾಮ ಬೀರಿರಬೇಕು. ಕೂಡಲೇ ಜನರು ಚದರಿ ವ್ಯವಸ್ಥಾಪಕರಿಗೆ ದಾರಿಮಾಡಿಕೊಟ್ಟರು. ನೊಂದುಕೊಂಡ ವ್ಯವಸ್ಥಾಪಕರು ನೆಹರೂ ರನ್ನು ಬರಮಾಡಿಕೊಂಡರು.

ಆ ದಿನ ಸಾರ್ವಜನಿಕವಾಗಿ ಧ್ವಜಾರೋಹಣದ ಕಾರ್ಯಕ್ರಮವಿತ್ತು. ದೊಡ್ಡ ಧ್ವಜಸ್ತಂಭವನ್ನು ನಿಲ್ಲಿಸಲಾಗಿತ್ತು. ನೆಹರೂ ಅವರು ಧ್ವಜಾರೋಹಣ ಮಾಡಿ ಪುಟ್ಟ ಭಾಷಣ ಮಾಡಿದರು. ಸ್ಥಳ ಇಂದಿನ ಸುಭಾಷ್‌ನಗರದ ಕೆರೆಯ ಅಂಗಳ. ಮುಂದೆ ಸಂಜೆ ಸಾರ್ವಜನಿಕ ಭಾಷಣ. ಮಳೆಯಾಗಿ ಕೆರೆಯ ಅಂಗಳವೆಲ್ಲ ಕೊಚ್ಚೆಯಾಗಿದ್ದರೂ

ನಾಗರಿಕರ ಸಹಾಯದಿಂದ ಬಿದಿರು ಚಾಪೆಗಳನ್ನು ಸಾಧ್ಯವಿದ್ದಷ್ಟು ಸಂಗ್ರಹಿಸಿ, ಸ್ವಯಂ ಸೇವಕರು ಶಿಸ್ತು, ಶ್ರಮಗಳಿಂದ ದುಡಿದು, ಸಾವಿರಾರು ಜನ ಸೇರಿದ ಸಭೆಯನ್ನು ಯಶಸ್ವಿಗೊಳಿಸಿದರು. ರಾತ್ರಿ ಪುಣೆಗೆ ಪ್ರಯಾಣ ಮಾಡುವಾಗ, ರೈಲುಗಾಡಿಯ ಬಾಗಿಲಲ್ಲಿ ನಿಂತು, ಬೆಳಗ್ಗೆ ತಾವು ಆಡಿದ ಮಾತಿಗೆ ಪಶ್ಚಾತ್ತಾಪ ಸೂಚಿಸಿ, ನೆಹರೂ ಕೈಮುಗಿದು ಬೀಳ್ಕೊಂಡರು. ತಮಗೆ ನೀಡಿದ ಅಪೂರ್ವ ಸ್ವಾಗತಕ್ಕೆ ಧನ್ಯವಾದವನ್ನು ಅರ್ಪಿಸಿದರು. ಎಲ್ಲರ ಅಂತಃಕರಣ ಕರಗಿ ನೀರಾಗಿ, ಬೆಳಗಿನ ದೃಶ್ಯ ಮರೆಯುವಂತೆ ಆಯಿತು. ಆ ದಿನದ ಸಮಾರಂಭದ ಪರಿಣಾಮ ಅಚ್ಚಳಿಯದ್ದಾಗಿತ್ತು. ಆಗ ಬಿ. ಎಸ್. ರಾಮಸ್ವಾಮಿ ಅಯ್ಯಂಗಾರ್ ಕಾಂಗ್ರೆಸ್‌ನ ಅಧ್ಯಕ್ಷರೂ ನಾನು ಮತ್ತು ರಾಮಸ್ವಾಮಿ ಭಾರದ್ವಾಜ್ ಕಾರ್ಯದರ್ಶಿಗಳೂ ಆಗಿದ್ದೆವು.

ನೆಹರೂ ಮರಳಿದ ಮಾರನೆಯ ದಿನ ಸುಭಾಷ್‌ನಗರದ ಅಂಗಳದಲ್ಲಿ ನೆಟ್ಟ ಭವ್ಯ ಧ್ವಜಸ್ತಂಭವನ್ನು ಆಳರಸರು ಕಿತ್ತೊಗೆದರು. ಈ ಧ್ವಜಸ್ತಂಭ ಬ್ರಿಟಿಷ್ ಅಧಿಕಾರಿಗಳ, ರೆಸಿಡೆಂಟರ ಕಣ್ಣು ಕುಕ್ಕಿಸಿರಬೇಕು. ಬೆಂಗಳೂರು ನಾಗರಿಕರು ರೊಚ್ಚಿಗೆದ್ದರು. ಆದರೆ ಕಾಂಗ್ರೆಸ್‌ನ ಆದೇಶದಂತೆ, ಚಳವಳಿ ಹೂಡಲು ಅವಕಾಶ ಇರಲಿಲ್ಲ. ಕೆ. ಟಿ. ಭಾಷ್ಯಂ ಅವರು ಧ್ವಜಸ್ತಂಭ ಎದ್ದು ನಿಲ್ಲಬೇಕೆಂದು ಉಪವಾಸ ಹೂಡಿದರು. ಕಾರ್ಯಕರ್ತರೇ ಕರ್ತವ್ಯಶೀಲರಾಗಿ ಆ ರಾತ್ರಿಯೇ ಅದೇ ಸ್ಥಳದಲ್ಲಿ ಭವ್ಯ ಧ್ವಜಸ್ತಂಭವನ್ನು ನಿಲ್ಲಿಸಿಬಿಟ್ಟರು. ಮರುದಿನ ಬೆಳಗ್ಗೆ ಭಾಷ್ಯಂ ಅವರು ಧ್ವಜಾರೋಹಣಮಾಡಿ ಉಪವಾಸ ನಿಲ್ಲಿಸಿದರು. ಬಿನ್ನಿ ಮಿಲ್ ಕಾರ್ಮಿಕರು ರಾಮಶರ್ಮ ಅವರ ನೇತೃತ್ವದಲ್ಲಿ ಈ ಪ್ರಸಂಗದಲ್ಲಿ ಅಮೋಘ ಸೇವೆಸಲ್ಲಿಸಿದರು.

ಸಂಸ್ಥಾನದ ಅಧಿಕಾರಿಗಳ ಈ ಕೃತ್ಯವನ್ನು ಇಡೀ ದೇಶದಲ್ಲಿ ಖಂಡಿಸಲಾಯಿತು. ಗಾಂಧೀಜಿ ತನಕ ದೂರು ಹೋಯಿತು. ನೆಹರೂ ಕೂಡ ಈ ಬಗ್ಗೆ ಖಂಡನಾ ಹೇಳಿಕೆ ಇತ್ತರು. ಇದರಿಂದ ಸಂಸ್ಥಾನಕ್ಕೆ ಇನ್ನಷ್ಟು ಪ್ರಸಿದ್ಧಿ ಬಂತು. ನೆಹರೂರ ಆತ್ಮಕಥೆಯಲ್ಲೂ ಈ ವಿಚಾರ ಪ್ರಸ್ತಾಪಿಸಿದ್ದಾರೆ.

ಗಾಂಧೀಜಿ ಉಪ್ಪಿನ ಸತ್ಯಾಗ್ರಹಕ್ಕೆ ಕರೆಕೊಟ್ಟಾಗ, ಸಂಸ್ಥಾನದ ಸುಶಿಕ್ಷಿತ ತರುಣರ ತಂಡವೊಂದು ಬ್ರಿಟಿಷ್ ಕರ್ನಾಟಕಕ್ಕೆ ಹೋಗಲು ಸಿದ್ಧವಾಯಿತು. ಮುಂಬೈಯ ಯುಸೂಫ್ ಮೆಹರಾಲಿ, ಡಾ|| ಹರ್ಡೀಕರ್ ಮುಂತಾದವರು ಈ ವೊದಲೇ ಸಂಸ್ಥಾನಕ್ಕೆ ಭೇಟಿಯಿತ್ತು ಹುರುಪು ತುಂಬಿದ್ದರು. ಗಾಂಧೀಜಿಯ ಬಂಧನ ದಂಡಿಯಲ್ಲಿ ಆದಾಗ ಇಲ್ಲಿನ ಜನರು ಇನ್ನೂ ಉತ್ಸಾಹಗೊಂಡರು. ಚಳವಳಿಗೆ ಜನ, ಧನ ಬೆಂಬಲ ಸಾಕಷ್ಟು ಬಂತು. ಇಲ್ಲಿನ ತರುಣರು ಹುಬ್ಬಳ್ಳಿಗೆ ಹೋಗಿ ಅಲ್ಲಿಂದ ಬೇರೆ ಬೇರೆ ಕಡೆ ಕಳಿಸಲ್ಪಡುತ್ತಿದ್ದರು. ಉಪ್ಪಿನ ಸತ್ಯಾಗ್ರಹ, ಮದ್ಯದ ಅಂಗಡಿ ಪಿಕೆಟಿಂಗ್, ಈಚಲು ಗಿಡ ನಾಶ, ಅರಣ್ಯಸತ್ಯಾಗ್ರಹ ಮುಂತಾದ ಕಾರ್ಯಗಳಲ್ಲಿ ಪಾಲುಗೊಂಡರಲ್ಲದೆ ಸೊಲ್ಲಾಪುರದ ಧ್ವಜಸತ್ಯಾಗ್ರಹದಲ್ಲೂ ಪಾಲುಗೊಂಡು ಸಂಸ್ಥಾನದ ಅನೇಕ ತರುಣರು ಶಿಕ್ಷೆಗೆ ಒಳಗಾದರು. ಕಾರವಾರ, ಯರ

ವಡಾ, ವಿಸಾಪುರ ಜೈಲುಗಳಲ್ಲಿ ಇವರು ಇದ್ದರು. ಈ ಪೈಕಿ ಅನೇಕರು ಈಗ ತೀರಿಕೊಂಡಿದ್ದಾರೆ: ಡಾ|| ಆರ್. ವಿ. ಚಂದ್ರಶೇಖರ್, ಎಚ್. ಆರ್. ಎಸ್. ಶರ್ಮ, ಎನ್. ಎಸ್. ಚಂದೂರ್, ಲಾವಣಿ ರಾಮಸ್ವಾಮಿ, ಲಾವಣಿ ವಿಷಕಂಠರಾವ್ ಮುಂತಾದವರು. ಇಂದು ಜೀವಂತರಾಗಿರುವವರು : ಎಂ. ಆರ್. ವೆಂಕಟರಾಮಯ್ಯ, ಲಾವಣಿ ನೀಲಕಂಠಪ್ಪ, ರುಮಾಲೆ ಚನ್ನಬಸವಯ್ಯ, ಟಿ. ಆರ್. ಶಾಮಣ್ಣ, ಮೇಜರ್ ಡಾ|| ಅಚ್ಯುತ, ಇವರ ಸೋದರ ಗೋವರ್ಧನ್, ಚಂಗಲರಾಯ ಮುದಲಿಯಾರ್, ಸುಬ್ಬರಾವ್ ಉಪಾಧ್ಯಾಯ ಮುಂತಾದವರು. ಗಾಂಧೀ-ಇರ್ವಿನ್ ಒಪ್ಪಂದದಂತೆ ಇವರ ಖುಲಾಸೆ ಆಯಿತು. ಮುಂಬಯಿ, ಬಳ್ಳಾರಿ, ಮಂಗಳೂರು, ಧಾರಸಾನ, ಕೊಯಮುತ್ತೂರುಗಳಿಗೂ ಹೋಗಿ ಇಲ್ಲಿನ ತರುಣರು ಸತ್ಯಾಗ್ರಹದಲ್ಲಿ ಪಾಲುಗೊಂಡರು. ಮುಂದೆ ಕರಾಚಿಯಲ್ಲಿ ನಡೆದ ಕಾಂಗ್ರೆಸ್ಸಿಗೆ ಎಸ್. ಆರ್. ಎಸ್. ರಾಘವನ್, ನಾನು, ಎಂ. ಆರ್. ವೆಂಕಟರಾಮಯ್ಯ, ಕೆ. ಟಿ. ಭಾಷ್ಯಂ, ರಾಮಶರ್ಮ, ಎಲ್. ಎಸ್. ಅಯ್ಯರ್, ಸಿ. ರಾಜಗೋಪಾಲಾಚಾರ್, ಅಚ್ಯುತ, ಗೋವರ್ಧನ್ ಮುಂತಾದವರು ಮುಂಬಯಿಯಿಂದ ಹಡಗೇರಿ ಹೋದೆವು. ಅದೇ ಆಗ ಭಗತ್‌ಸಿಂಗರಾದಿಯಾಗಿ ಕ್ರಾಂತಿಕಾರಿಗಳಿಗೆ ಗಲ್ಲಾಗಿ, ಸುಭಾಷರ ನೇತೃತ್ವದಲ್ಲಿ ಅಧಿವೇಶನಕ್ಕೆ ಬಂದ ಗಾಂಧೀಜಿಗೆ ಈ ಬಗ್ಗೆ ಕಪ್ಪು ಬಾವುಟ ತೋರಿಸಲಾಯಿತು. ಸಮ್ಮೇಳನದಲ್ಲಿ ಭಗತ್‌ಸಿಂಗರ ಮಾತಾಪಿತರು ಬಂದು, ಭಗತ್‌ಸಿಂಗರ ಚಿತಾಭಸ್ಮ ಪ್ರದರ್ಶಿಸಿದಾಗ ಹಾಜರಿದ್ದವರ ಸಂತಾಪ ಅಖಂಡವಾಗಿತ್ತು.

ಇದರ ಹಿಂದೆಯೇ ಮತ್ತೆ 1932ರಲ್ಲಿ ಸತ್ಯಾಗ್ರಹ ಆರಂಭ. ಶಿರಸಿ, ಸಿದ್ದಾಪುರ, ಅಂಕೋಲಾಗಳಲ್ಲಿ ಕರನಿರಾಕರಣವಾದಾಗ, ಅಲ್ಲಿನ ಜನ ತೋರಿದ ಸ್ವಾತಂತ್ರ್ಯಾಭಿಮಾನ, ದೇಶಭಕ್ತಿ ಹಾಗೂ ತ್ಯಾಗ ಅಸಾಧಾರಣ. ಈ ಸತ್ಯಾಗ್ರಹದಲ್ಲಿ ಮೈಸೂರಿನವರದು ಸಿಂಹಪಾಲು. ಸತ್ಯಾಗ್ರಹ ವ್ಯವಸ್ಥೆ, ಜನರನ್ನು ಹುರಿದುಂಬಿಸುವುದು, ಕಷ್ಟಗಳನ್ನು ಅನುಭವಿಸುವುದು, ಇದರಲ್ಲಿ ಸಂಸ್ಥಾನದ ಯುವಕರು ತೋರಿದ ಸಾಹಸ, ಕೆಚ್ಚುಗಳು ಅನುಪಮ. ಮಹಿಳೆಯರೂ ಅಷ್ಟೆ. ಸರ್ದಾರ್ ವೆಂಕಟರಾಮಯ್ಯನವರ ಪತ್ನಿ ಗೌರಮ್ಮ ಇಂದಿಗೂ ಆ ಭಾಗದ ಜನರ ಗೌರವಕ್ಕೆ ಪಾತ್ರರಾಗಿದ್ದಾರೆ. ಆಗ ಅಲ್ಲಿಗೆ ಸಂಸ್ಥಾನದಿಂದ ಜನ, ಧನಸಹಾಯ ಗಣನೀಯವಾಗಿತ್ತು. ಇಲ್ಲಿ ಸಂಪಿಗೆ ವೆಂಕಟಪತಯ್ಯನವರ ಪಾತ್ರ ಸ್ಮರಣೀಯ. ಅಲ್ಲಿ ಸರಕಾರ ನಡೆಸಿದ ದಬ್ಬಾಳಿಕೆಯ ಕತೆಯನ್ನು ಜಗತ್ತಿನ ಮೂಲೆಮೂಲೆಗೂ ತಿಳಿಯಪಡಿಸಿದ ಕೀರ್ತಿ ಅವರಿಗೆ ಸಲ್ಲಬೇಕು. ಆಗ ಸಂಸ್ಥಾನದಿಂದ ಆ ಭಾಗಕ್ಕೆ ಹೋದ ತರುಣರು ನೂರಾರು ಮಂದಿ. ಅವರದೇ ದೀರ್ಘ ಪಟ್ಟಿಯಾದೀತು. ಕೆ. ಟಿ. ಭಾಷ್ಯಂ ನಾಯಕತ್ವದಲ್ಲಿ ಒಂದು ತಂಡ ಹೊರಟಾಗ ಬೆಂಗಳೂರಿನ ವಕೀಲವೃಂದ ಆದಿಯಾಗಿ ಅನೇಕರು ಅವರನ್ನು ನಿಲ್ದಾಣದಲ್ಲಿ ಸಂಭ್ರಮದಿಂದ ಬೀಳ್ಕೊಟ್ಟ ದೃಶ್ಯ ಅಪೂರ್ವ. ಸಂಸ್ಥಾನದ ಯುವಕರು ಅಲ್ಲಿನ ಕರನಿರಾಕರಣದಲ್ಲಿ ಮಾಡಿದ ತ್ಯಾಗ ಆದರ್ಶಮಯ ಹಾಗೂ ಪ್ರಶಂಸನೀಯ.

ಕರನಿರಾಕರಣ ಚಳವಳಿಯಲ್ಲಿ ಪಾಲುಗೊಂಡು ಸೆರೆಮನೆ ಸೇರಿದ ಆ ಭಾಗದ ಜನರ ಮಕ್ಕಳನ್ನು ಪೋಷಿಸಲು ಶಿವಮೊಗ್ಗದಲ್ಲಿ ಪಾರ್ಥನಾರಾಯಣ ಪಂಡಿತರೇ ಮುಂತಾದವರು ಬಾಲಕಾಶ್ರಮವನ್ನು ಯಶಸ್ವಿಯಾಗಿ ನಡೆಸಿದ್ದು ಹೆಮ್ಮೆಯ ಸಂಗತಿ.

ಮೈಸೂರು ಸಂಸ್ಥಾನದ ಸುಮಾರು 300 ತರುಣರು ತಲೆಮರೆಸಿಕೊಂಡು ಪೋಲೀಸರಿಗೆ ಸಿಗದೆ, ಸತ್ಯಾಗ್ರಹಿಗಳನ್ನು ಹುರಿದುಂಬಿಸಿ, ಬುಲಿಟಿನ್ ಪ್ರಕಟಿಸಿ, ಸಂದೇಶವಾಹಕರಾಗಿ, ಕೆಲವರು ಮೈಸೂರು ಗಡಿಯ ಶಿವಮೊಗ್ಗ ಜಿಲ್ಲೆಯಲ್ಲಿಯೇ ನಿಂತು ಪ್ರಚೋದನಾಕಾರ್ಯದಲ್ಲಿ ಮಗ್ನರಾಗಿ, ವಿವಿಧ ರೂಪದಲ್ಲಿ ದುಡಿದು, ಕರನಿರಾಕರಣದ ಯಶಸ್ಸಿನಲ್ಲಿ ಭಾಗಿಗಳಾದ ವಿಚಾರವನ್ನು ಇಡೀ ಕರ್ನಾಟಕವೇ ಗ್ರಹಿಸಿದೆ. ಕರನಿರಾಕರಣ ಸತ್ಯಾಗ್ರಹದ ಚರಿತ್ರೆಯಲ್ಲಿ ಅಲ್ಲಿನ ಜನರ ದೇಶಪ್ರೇಮ, ತ್ಯಾಗದ ಕತೆ ಒಂದು ಗಮನಾರ್ಹ ಭಾಗವಾದರೆ, ಮೈಸೂರಿನ ತರುಣರ ಸಾಹಸ, ಧೈರ್ಯಗಳೂ ಇನ್ನೊಂದು ಭಾಗವಾಗಿ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿ ನಿಲ್ಲುತ್ತವೆ. ಈ ತರುಣರ ಸಾಹಸದ ಕತೆಗಳು ಒಂದಲ್ಲ, ಅನೇಕ.

ಇದೇ ಕಾಲದಲ್ಲಿ ದಂಡಿನ ಪ್ರದೇಶದಲ್ಲಿ ಪ್ರತಿಬಂಧಕಾಜ್ಞೆ ಮುರಿದು ನಗರದ, ದಂಡಿನ ಸುಮಾರು 150 ಜನ ಶಿಕ್ಷಿಸಲ್ಪಟ್ಟರು. ದಂಡಿನ ಕೆಲವರು ಉತ್ತರ ಕನ್ನಡಕ್ಕೂ ಹೋಗಿದ್ದರು. ಈ ಪೈಕಿ ಚಂಗಲರಾಯ ಮುದಲಿಯಾರ್ ಒಬ್ಬರು.

ಕಾಂಗ್ರೆಸ್ಸಿನ ಹೆಸರಲ್ಲಿ ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಗೆ, ಪೌರಸಭೆಗೆ ಅಭ್ಯರ್ಥಿಗಳನ್ನು ನಿಲ್ಲಿಸಿ ಅಪೂರ್ವ ಜಯಗಳಿಸಿದ ಸನ್ನಿವೇಶಗಳೂ ಸಂಸ್ಥಾನದಲ್ಲಿ ಮುಂದೆ ಒದಗಿಬಂದವು. ಕಾಂಗ್ರೆಸ್ಸು ರಚನಾತ್ಮಕ ಕಾರ್ಯದಲ್ಲಿಯಷ್ಟೇ ತೊಡಗಿದ್ದಾಗ ಸರ್ಕಾರ ಸುಮ್ಮನಿತ್ತು. ಬ್ರಿಟಿಷ್ ಪ್ರಾಂತಗಳು ಚಳವಳಿಯಲ್ಲಿ ಕೈಹಾಕಿದಾಗ ನಿರ್ಬಂಧಗಳನ್ನು ತಂದೊಡ್ಡಲಾರಂಭಿಸಿತು. ಕ್ರಮೇಣ ಕಾಂಗ್ರೆಸ್ಸಿನ ಪ್ರಭಾವ ಹರಡಿತು. ರಾಷ್ಟ್ರೀಯ ಮನೋಭಾವ ಬೆಳೆಯಿತು. ಕೇವಲ ಕೋಮುವಾರು ಭಾವನೆಯಿಂದ ನಾಡಿನ ಪ್ರಗತಿ ಸಾಧ್ಯವೆಂದು ನಂಬಿದ್ದ ಕೆಲವರು ನಾಯಕರ ಅಂತರಂಗದಲ್ಲಿ ಮಾರ್ಪಾಟಾಯಿತು. ಚಂಗಲರಾಯ ರೆಡ್ಡಿಯವರ ನೇತೃತ್ವದಲ್ಲಿ ಆಗಲೇ ಪ್ರಗತಿಪರ ಪಕ್ಷವೊಂದು ಸ್ಥಾಪನೆಯಾಗಿ ಸಂಸ್ಥಾನದಲ್ಲಿ ಜನತಾಸ್ವಾತಂತ್ರ್ಯಕ್ಕಾಗಿ ಹೆಣಗಬೇಕೆಂಬ ಆಕಾಂಕ್ಷೆಯಿಂದ ಶ್ರಮಿಸುತ್ತಿತ್ತು. ಅರ್ಥಾತ್ ಕಾಂಗ್ರೆಸ್‌ನ ಧ್ಯೇಯ ಹಾಗೂ ಗುರಿಯನ್ನು ಸಮರ್ಥಿಸುತ್ತಿತ್ತು. ಹೀಗಿರಲು ಪ್ರಜಾಮಿತ್ರಮಂಡಲಿ ಮತ್ತು ಪ್ರಜಾಪಕ್ಷ—ಒಂದು ಕೋಮುವಾರುಪೀಡಿತ, ಮತ್ತೊಂದು ಪ್ರಗತಿಪರ ಭಾವನೆಯ—ಇವೆರಡೂ ಒಂದುಗೂಡಿ ಬೇರೊಂದು ಹೆಸರಿನಿಂದ ಕಾರ್ಯಾರಂಭ ಮಾಡಿದವು. 1936ರಲ್ಲಿ ಚಿತ್ರದುರ್ಗದಲ್ಲಿ, ಅದಕ್ಕೂ ಮುಂಚೆ ಹಾಸನದಲ್ಲಿ, ನಡೆದ ಈ ಪಕ್ಷದ ಸಮಾವೇಶದಲ್ಲಿ ಸಂಸ್ಥಾನದಲ್ಲಿ ಪ್ರಜಾಸ್ವಾತಂತ್ರ್ಯಕ್ಕೆ ಶ್ರಮಿಸಬೇಕೆಂಬ ನಿರ್ಧಾರ ಆಗಿತ್ತು. ಚಿತ್ರದುರ್ಗ ಸಮಾವೇಶಕ್ಕೆ ಕಾಂಗ್ರೆಸ್ಸಿಗರೂ ಹೋಗಿದ್ದರು. ರೆಡ್ಡಿಯವರು ಮೊದಲಿನಿಂದಲೂ ಕೋಮುವಾರು ಪಕ್ಷದಲ್ಲಿ ಮನಸ್ಸಿಡದೆ ಪ್ರಗತಿಪರ ಭಾವನೆಯಿಂದ ಇದ್ದರು. ಚಿತ್ರದುರ್ಗ ಸಮಾವೇಶದನಂತರ ರಾಣೆಬೆನ್ನೂರಲ್ಲಿ ನಡೆದ ಪ್ರಾಂತೀಯ

ಕಾಂಗ್ರೆಸ್ಸಿನ ಸಮ್ಮೇಳನದಲ್ಲಿ ರೆಡ್ಡಿಯವರೇ ಮುಂತಾಗಿ ಎಲ್ಲರೂ ಭಾಗವಹಿಸಿದರು. ಲೀಲಾವತಿ ಮುನ್ಶಿ ಸಮ್ಮೇಳನವನ್ನು ಉದ್ಘಾಟಿಸಿದರು. ಇಲ್ಲಿಂದ ಮುಂದೆ ಸಂಸ್ಥಾನದಲ್ಲಿ ಕಾಂಗ್ರೆಸ್ಸಿನ ಭವಿತವ್ಯ ಸುಸ್ಥಿರವಾಯಿತು.

1936ರಲ್ಲಿ ಮೇ ತಿಂಗಳಲ್ಲಿ ನಂದಿಬೆಟ್ಟಕ್ಕೆ ಗಾಂಧೀಜಿ ವಿಶ್ರಾಂತಿಗೆ ಬಂದಾಗ ಇದರ ಲಾಭ ಕಾಂಗ್ರೆಸ್ಸಿಗೆ ಪೂರ್ಣ ಆಯಿತು. ಅನೇಕ ಪರಪ್ರಾಂತಗಳ ಮುಖಂಡರೂ ಗಾಂಧೀಜಿ ಯವರನ್ನು ಕಾಣಲು ಬರುತ್ತಿದ್ದರು. ಗಾಂಧೀಜಿ ಕೆಲದಿನಗಳು ಸಂಸ್ಥಾನದಲ್ಲಿ ಪ್ರವಾಸ ಮಾಡಿದರು. (1927, 1934ರ ಅನಂತರ ಇದು ಗಾಂಧೀಜಿಯದು ಸಂಸ್ಥಾನದಲ್ಲಿ ಮೂರನೆಯ ವ್ಯಾಪಕ ಪ್ರವಾಸ—ಸಂ|| ). ರಾಷ್ಟ್ರೀಯತೆ ದೃಢವಾಗಿ, ಸ್ವಾತಂತ್ರ್ಯಾಭಿ ಲಾಷೆ ಬಲವಾಗಲು ಇದು ನೆರವಾಯಿತು.

1937 ಸಂಸ್ಥಾನದ ರಾಜಕೀಯದಲ್ಲಿ ಮೈಲುಗಲ್ಲಾಯಿತು. ಕಾಂಗ್ರೆಸ್ಸಿನೊಂದಿಗೆ ಪ್ರಜಾಪಕ್ಷ ಮಿಳಿತವಾಗಿ, ಜನತಾ ಚಳವಳಿಗೆ ಹೆಚ್ಚಿನ ಕಳೆ, ಬೆಂಬಲ ದೊರೆತು, ಆ ತರುವಾಯ ಸಂಸ್ಥಾನದಲ್ಲಿ ನಡೆದ ಜವಾಬ್ದಾರಿ ಚಳವಳಿ, ಆ ಸಂಬಂಧ ಒದಗಿದ ಘಟನೆ ಗಳು, ಸರ್ಕಾರದೊಡನೆ ಉಂಟಾದ ಸಂಘರ್ಷ, ಇತಿಹಾಸಪ್ರಸಿದ್ಧವಾದವು. ಮುಂದೆ ಶಿವಪುರ ಕಾಂಗ್ರೆಸ್ ಒಂದು ಘನಘಟನೆ. ಅದರ ಸಂಘಟನೆಯಲ್ಲಿ ನಾನೂ ಪಾಲುಗೊಂಡೆ. ಮುಂದೆ ಮೈಸೂರಲ್ಲಿ ಜೈಲುವಾಸ ಕೂಡ ಅನುಭವಿಸಿದೆ.

ಗಾಂಧೀಜಿ ಅಸಹಕಾರ ಚಳವಳಿ ಹೂಡಿದಂದಿನಿಂದ ಸಂಸ್ಥಾನದಲ್ಲಿ ಜವಾಬ್ದಾರಿ ಸರಕಾರಕ್ಕೆ ಬಲವಾದ ಚಳವಳಿ ಆರಂಭವಾದುದರ ವರೆಗಿನ 17 ವರ್ಷಗಳ ಕಾಲದಲ್ಲಿ ನಡೆದ ಸಂಗತಿಗಳ, ಅದಕ್ಕೆ ಕಾರಣರಾದ ವ್ಯಕ್ತಿಗಳ ವಿಚಾರ ತಿಳಿಸುವುದೇ ಈ ಲೇಖನದ ಗುರಿ. ಓರ್ವ ಸುವಿಖ್ಯಾತ ಪತ್ರಿಕಾಕರ್ತರು ಹೀಗೆ ಹೇಳಿದ್ದಾರೆ: "ಹದಿನಾರು ಹದಿನೇಳು ವರ್ಷಗಳ ಕಾಲ ಈ ಕಾಂಗ್ರೆಸ್ ಸಂಸ್ಥೆಯು ಸಂಸ್ಥಾನದ ಪ್ರಜಾಹೃದಯವನ್ನು ಆಕರ್ಷಿ ಸಿತು. ಪ್ರಜಾಕೋಟಿಯ ನಾನಾ ಹಂತದ ಜನರನ್ನು ಭಾರತರಾಷ್ಟ್ರದ ಕಡೆಗೆ, ಪೂರ್ಣ ಸ್ವಾತಂತ್ರ್ಯದ ಕಡೆಗೆ ಎಳೆಯಿತು. ವಿದ್ಯಾವಂತರು-ಅವಿದ್ಯಾವಂತರು, ಗಂಡಸರು- ಹೆಂಗಸರು, ಕೃಷಿಕರು-ಕೆಲಸಗಾರರು, ಹರಿಜನರು ಹೀಗೆ ಎಲ್ಲರೂ ರಾಷ್ಟ್ರಹಿತನ ಕರೆಗೆ ಓ ಕೊಟ್ಟರು."

ಆ ಕಾಲದಲ್ಲಿ ಸಂಸ್ಥಾನ ಸ್ವಾತಂತ್ರ್ಯೋದ್ಯಮಕ್ಕೆ ನೀಡಿದ ಒತ್ತಾಸೆಗೆ ಇದಕ್ಕಿಂತ ಬೇರೆ ಪ್ರಶಂಸೆ ಯಾವುದು? ಇದರಲ್ಲಿ ಭಾಗವಹಿಸಿದವರೆಲ್ಲರ ಪಾತ್ರಕ್ಕೆ ಗೌರವ ನೀಡಿಕೆ ಮತ್ತಾವುದು? ಸಂಸ್ಥಾನದ ಪ್ರಜಾಸ್ವಾತಂತ್ರ್ಯಕ್ಕೆ ಭವ್ಯತಳಹದಿ ಹಾಕಿಕೊಟ್ಟ, ಮಾರ್ಗ ದರ್ಶನ ತೋರಿದ ದಿವ್ಯಸೇವೆ ಬೇರೆ ಯಾವುದುಂಟು?

## ಸ್ವವಿಷಯ

1904ರಲ್ಲಿ ಜನಿಸಿದ ನಾನು ವಿದ್ಯಾರ್ಥಿಯಾಗಿದ್ದಾಗಿನಿಂದ ಆರಂಭಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ಮೂರು ದಶಕಗಳ ಕಾಲ ಸತತವಾಗಿ ಸೇವೆಸಲ್ಲಿಸಿದೆ. ಸೆಟ್ಲೂರ್, ರಜ್ವಿ ಮುಂತಾದವರ ನಾಯಕತ್ವದಲ್ಲಿ, ಮೊಟ್ಟಮೊದಲು ಸ್ವಯಂಸೇವಕನಾಗಿದ್ದು ಮುಂದೆ ಸಕ್ರಿಯ ಕಾರ್ಯಕರ್ತನಾದೆ. ಖಿಲಾಫತ್ ಚಳವಳಿ, ರಚನಾತ್ಮಕ ಕಾರ್ಯಗಳಾದ ಖಾದಿ, ಸ್ವದೇಶಿ, ಪಾನನಿರೋಧ ಪ್ರಚಾರಗಳಲ್ಲಿ ತೊಡಗಿದ್ದೆ. ನಾಗಪುರ ಧ್ವಜ ಸತ್ಯಾಗ್ರಹದಲ್ಲಿ ಜೈಲುವಾಸವನ್ನು ಅನುಭವಿಸಿದೆ (1923). ಬೆಳಗಾಂ ಅಧಿವೇಶನದಲ್ಲಿ ಸ್ವಯಂಸೇವಕರ ತಂಡದ ನಾಯಕನಾಗಿ ದುಡಿದೆ. ಬೆಂಗಳೂರು ನಗರ ಕಾಂಗ್ರೆಸಿನ ಕಾರ್ಯದರ್ಶಿಯಾಗಿ ಇದ್ದೆ. ಉತ್ತರ ಕನ್ನಡದ ಉಪ್ಪಿನ ಸತ್ಯಾಗ್ರಹ, ಕರನಿರಾಕರಣ ಗಳಿಗೆ ಬೆಂಬಲವಾಗಿ ಜನ-ಧನಸಹಾಯವನ್ನು ಒದಗಿಸಲು ಸಂಸ್ಥಾನದಲ್ಲಿ ದುಡಿದೆ. ಜವಾಬ್ದಾರಿ ಸರಕಾರದ ಚಳವಳಿಯಲ್ಲಿ ಸಂಸ್ಥಾನದಲ್ಲಿ ಕಾಲ್ನಡೆಯಿಂದ ಸಂಚರಿಸಿ ಪ್ರಚಾರದಲ್ಲಿ ಪಾಲುಗೊಂಡೆ. ಶಿವಪುರ ಕಾಂಗ್ರೆಸ್‌ನಂತರ ಮೈಸೂರು ನಗರದಲ್ಲಿ ಸ್ವತಃ ಏರ್ಪಡಿಸಿದ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸಿದೆ. ರಾಜಕೀಯ ಜೀವನದ ಜೊತೆಯಾಗಿ ಪತ್ರಿಕೋದ್ಯಮಿಯೂ ಆಗಿದ್ದೆ. 'ರಾಜಾಸ್ಥಾನ್' ಎಂಬ ಆಂಗ್ಲ ಪತ್ರಿಕೆಗೆ ಸಂಸ್ಥಾನದ ಸುದ್ದಿಗಳನ್ನು ಕಳುಹಿಸುವ ಬಗೆಯಿಂದ ಪತ್ರಿಕೋದ್ಯಮ ಆರಂಭಿಸಿದೆ. ಕೆಲಕಾಲ ಎಂ. ವೆಂಕಟಕೃಷ್ಣಯ್ಯನವರ ಪತ್ರಿಕಾಲಯದಲ್ಲಿ ಕಾರ್ಯ ಪ್ರವೃತ್ತನಾಗಿದ್ದು (1926), ಮುಂದೆ ಬೆಂಗಳೂರಿನ 'ಈವ್ನಿಂಗ್ ಮೇಲ್' ಎಂಬ ಆಂಗ್ಲ ದ್ವೈವಾರಪತ್ರಿಕೆಯ ಕಾರ್ಯಾಲಯದಲ್ಲಿ ಕೆಲಸ ಮಾಡಿದೆ. ಮುಂದೆ 1927ರಲ್ಲಿ ಸ್ಥಾಪನೆಯಾದ 'ವೀರಕೇಸರಿ' ಸೇರಿದೆ. ಪಿ. ಆರ್. ರಾಮಯ್ಯನವರು ಬೆಂಗಳೂರಿನಿಂದ 'ತಾಯಿನಾಡು' ಆರಂಭಿಸಿದಾಗ ಅಲ್ಲಿ ಕೂಡ ನನ್ನ ಉದ್ಯಮ ನಡೆಯಿತು. ರಾಮಯ್ಯ ನವರು ಕೆಲಕಾಲ ಬೆಂಗಳೂರು ನಗರ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿ ಆಗಿದ್ದಾಗ ಅವರ ಪರಿಚಯ ಬೆಳೆದು, ಮುಂದೆ ಅವರ ಕಾರ್ಯಾಲಯದಲ್ಲಿ ಕಾರ್ಯಶೀಲನಾದೆ. ಏತನ್ಮಧ್ಯೆ ಮೈಸೂರಲ್ಲಿ ಕೆಲವರ್ಷ ಇರಬೇಕಾಗಿ ಬಂದಾಗ, ಅಲ್ಲಿ 'ವೀರಕೇಸರಿ', 'ದೇಶಬಂಧು' ಹಾಗೂ 'ವಿಶ್ವಕರ್ಣಾಟಕ'ಗಳ ಬಾತ್ಮೀದಾರನಾಗಿದ್ದೆ. ಬೆಂಗಳೂರಿಗೆ ಮತ್ತೆ ಬಂದಾಗ 'ಜನವಾಣಿ'ಯ ಉಪಸಂಪಾದಕನಾದೆ. 1942ರಲ್ಲಿ ಬಿ. ಎನ್. ಗುಪ್ತ ಅವರ ಬಂಧನ ಆದಾಗ 'ಪ್ರಜಾಮತ'ದ ಸಂಪಾದಕನಾಗಿಯೂ ಇದ್ದೆ. ಆಗ ಚಳವಳಿಗೆ ಎಲ್ಲ ರೀತಿಯ ಬೆಂಬಲವನ್ನು ಪತ್ರಿಕೆಯ ಮೂಲಕ ನೀಡುವ ಅವಕಾಶ ನನಗೆ ದೊರೆಯಿತು.

ಮುಂದೆ ಸ್ವತಂತ್ರ ಪತ್ರಿಕಾಕರ್ತನಾದಾಗ, ಸಂಸ್ಥಾನದಲ್ಲಿ ಸ್ಥಾಪಿತವಾದ ಪ್ರಜಾ ಸರ್ಕಾರ ನಾನು ಪ್ರಕಟಿಸುತ್ತಿದ್ದ 'ಕಾಲಚಕ್ರ' ಪತ್ರಿಕೆಯ ಮೇಲೆ ಗದಾಪ್ರಹಾರ ಮಾಡಿದ್ದು ಒಂದು ವಿಸ್ಮಯಕಾರಕವಾದ ವಿಷಯವೇ. ಆಗ ಮಂತ್ರಿಗಳಾಗಿದ್ದವರೆಲ್ಲ ಜವಾಬ್ದಾರಿ

ಸರ್ಕಾರದ ಚಳವಳಿಯಲ್ಲಿ ನನ್ನ ಜೊತೆ ಸಹಭಾಗಿಗಳಾದ ಚಿರಪರಿಚಿತರೇ! ನನ್ನ ರಚನಾತ್ಮಕವಾದ, ವ್ಯಕ್ತಿಗತವಲ್ಲದ ಟೀಕೆಯನ್ನೂ ನಮ್ಮ ಸರಕಾರ ಸಹಿಸಲಿಲ್ಲ. ಪತ್ರಿಕೆ ನಿಂತು ನನಗೆ ಭಾರಿ ನಷ್ಟವಾಯಿತು. ಮುಂದೆ 'ಪ್ರೆಸ್ ಸಲಹಾ ಸಮಿತಿ' ಸದಸ್ಯನಾಗಿ ನನ್ನನ್ನು ಸರಕಾರ ನೇಮಿಸಿತು. ಆ ಸಮಿತಿ ದೀರ್ಘಕಾಲ ಕೆಲಸ ಮಾಡಲಿಲ್ಲ. ಮತ್ತೆ 'ಕಾಲಚಕ್ರ' ಹೊರಡಿಸಲು ಯತ್ನಿಸಿ ವಿಫಲನಾದೆ. ಕೆಲಕಾಲ 'ಸತ್ಯ' ಎಂಬ ದಿನಪತ್ರಿಕೆಯ ಸಂಪಾದಕನಾಗಿದ್ದೆ. ಸಂಸ್ಥಾನದ ಪತ್ರಿಕೋದ್ಯೋಗಿಗಳ ಸಂಘದ ಸ್ಥಾಪಕರಲ್ಲಿ ನಾನೊಬ್ಬ. 1951ರಲ್ಲಿ ಮೈಸೂರಲ್ಲಿ ನಡೆದ ಪತ್ರಿಕೋದ್ಯೋಗಿ ಸಮ್ಮೇಳನಕ್ಕೆ ಅಧ್ಯಕ್ಷನಾಗುವ ಸದವಕಾಶ ನನಗೆ ಒದಗಿತ್ತು. ಈಗ ನಿವೃತ್ತನಾಗಿದ್ದೇನೆ. ರಾಜ್ಯ ಸ್ವಾತಂತ್ರ್ಯಯೋಧರ ಕ್ಷೇಮಾಭ್ಯುದಯ ಸಂಘದ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದೇನೆ.

**ಕೆ. ಜೀವಣ್ಣರಾವ್**

(29/30, ಕಾರ್ ಸ್ಟ್ರೀಟ್, ಅಲಸೂರು, ಬೆಂಗಳೂರು-8)

ಮೈ.ಬೆಂ. 2

# ಟಿ. ಸಿದ್ದಲಿಂಗಯ್ಯ

ಜನನ : 898 ಉದ್ಯೋಗ : ವಕೀಲ

---



ದೊಡ್ಡಬಳ್ಳಾಪುರದಲ್ಲಿ ಜನಿಸಿದ ನಾನು ವಿದ್ಯಾರ್ಥಿಯಾಗಿದ್ದಾಗಲೂ, ಮುಂದೆ ವಕೀಲನಾದಾಗಲೂ ಸಂಕಷ್ಟದಲ್ಲಿರುವ ಜನರ ಸ್ಥಿತಿಗತಿಗಳನ್ನು ನೋಡಿ ಕೊರಗುತ್ತಿದ್ದೆ. ನಾನು ಸಮಾಜಸೇವಕನಾಗಬೇಕೆಂದು ಆಸೆ ಇಟ್ಟುಕೊಂಡಿದ್ದೆ. ರಾಜಕೀಯಕ್ಕೆ ಇಳಿಯಬೇಕೆಂಬ ಆಸೆ ನನಗೆ ಇರಲೇ ಇಲ್ಲ. ನಾನು ಬೆಸೆಂಟ್ ಅವರ ಅನುಯಾಯಿಯಾಗಿದ್ದು, ಆರಂಭದಲ್ಲಿ ಗಾಂಧೀ ವಿರೋಧಿಯೇ ಆಗಿದ್ದೆನೆನ್ನಬೇಕು. ಕಾನೂನುಭಂಗದ ಮಾರ್ಗವನ್ನು ಅನುಸರಿಸಬಾರದೆಂದು ಬೆಸೆಂಟ್ ಗಾಂಧೀಜಿಯವರನ್ನು ಎಚ್ಚರಿಸಿದ್ದು, ಶಿಸ್ತಿನ ಬಗ್ಗೆ ಒಲವುಳ್ಳ ನನಗೆ ಸರಿಯೆಂದು ತೋರಿತು. 1929ರಿಂದ ನಾನು ದೊಡ್ಡಬಳ್ಳಾಪುರ ಭಾಗದ ಪ್ರತಿನಿಧಿಯಾಗಿ

ಪ್ರಜಾಪ್ರತಿನಿಧಿಸಭೆಯಲ್ಲಿ ಇದ್ದೆನಾದರೂ ಯಾವುದೇ ರಾಜಕೀಯ ಪಕ್ಷವನ್ನು ಸೇರಿರಲಿಲ್ಲ.

1932ರಲ್ಲಿ ನನ್ನ ಮಿತ್ರ ಶಾಂಪುರ ರಾಮಚಂದ್ರಯ್ಯ ಅವರ ಜೊತೆ ವಿಶ್ವ ಪರ್ಯಟನಕ್ಕೆ ಹೋಗಿ, ಅಮೆರಿಕದ ಕರಾವಳಿ ತಲಪಿದಾಗ, ನಮ್ಮನ್ನು ಕರಾವಳಿಯಿಂದ 15 ಮೈಲಿ ದೂರದ ದ್ವೀಪವೊಂದರಲ್ಲಿ 'ಕ್ವಾರಂಟೈನ್' ಮಾಡಿ ಒಂದೂವರೆ ತಿಂಗಳು ಇಟ್ಟರು. ನಮ್ಮ ತೊಂದರೆಗಳ ವಿಚಾರ ಅಮೇರಿಕದಲ್ಲಿ ಬ್ರಿಟಿಷ್ ಕೌನ್ಸಲ್‌ಗೆ ಪತ್ರ ಬರೆದರೂ ಉಪಯೋಗವಾಗಲಿಲ್ಲ. ಈ ಎಲ್ಲ ಅವಮಾನಗಳಿಗೆ ನಾವು ಗುಲಾಮ ರಾಷ್ಟ್ರವಾಗಿರುವುದೇ ಕಾರಣ, ಹೀಗಾಗಿ ಭಾರತ ಸ್ವತಂತ್ರ ಆಗಬೇಕು, ಎಂಬ ಕಲ್ಪನೆ ಆಗಲೇ ನನಗೆ ಬಂತು. ಹತ್ತು ತಿಂಗಳ ವಿಶ್ವಪರ್ಯಟನದನಂತರ ಊರಿಗೆ ಮರಳಿದಾಗ, ನಾನು ರಾಜಕಾರಣಕ್ಕೆ ಇಳಿಯಬೇಕೆಂದು ನಮ್ಮ ಊರ ಮಿತ್ರರೂ ಒತ್ತಾಯಿಸಿದರು.

ಬಿಳಿಯ ಜನರು ಅಬಿಸೀನಿಯದ ಮೇಲೆ ನಡೆಸಿದ ದಾಳಿ ನನ್ನನ್ನು ಕೆರಳಿಸಿತು. ನನ್ನ ಮಿತ್ರ ರುಮಾಲೆ ಚನ್ನಬಸವಯ್ಯ ಆಗಲೇ ಕಾಂಗ್ರೆಸ್ಸಿನಲ್ಲಿ ಕೆಲಸಮಾಡುತ್ತಿದ್ದವರಾಗಿದ್ದು, ಅವರು ಬಿಳಿಯರ ವಿರುದ್ಧ ಕರಿಯರ ಪ್ರತಿಭಟನೆಯ ಸಲುವಾಗಿ 'ನೀಗಸ್ ಯುತ್ ಲೀಗ್' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅದಕ್ಕೆ ನಾನು ಅಧ್ಯಕ್ಷ; ರುಮಾಲೆ ಕಾರ್ಯದರ್ಶಿ. ಇದು 1935ರಲ್ಲಿ. 1936ರಲ್ಲಿ ಗಾಂಧೀಜಿ ನಂದಿಬೆಟ್ಟಕ್ಕೆ ಬಂದಿದ್ದಾಗ ರುಮಾಲೆ ಆಗಾಗ ಅಲ್ಲಿಗೆ ಹೋಗುತ್ತಿದ್ದು ನಾನೂ ಒಂದೆರಡು ಸಲ ಹೋಗಿದ್ದೆ. ಆಗ ಸರ್ದಾರ್ ಪಟೇಲರು ಅಲ್ಲಿಗೆ ಬಂದಿದ್ದು , ಅವರನ್ನು ದೊಡ್ಡಬಳ್ಳಾಪುರಕ್ಕೆ ಆಮಂತ್ರಿಸಲಾಯಿತು. ಭಾರಿ ಸಭೆಯಲ್ಲಿ ನನ್ನ ಅಧ್ಯಕ್ಷತೆಯಲ್ಲಿ ಪಟೇಲರ ಭಾಷಣವಾಯಿತು. "ಕಾಂಗ್ರೆಸ್‌ನಂಥ ಸಂಸ್ಥೆ ಇರುವಾಗ, ವಿದೇಶಿಯ ಘಟನೆಗಳಿಂದ ಸ್ಫೂರ್ತಿ ಪಡೆದ ನೀಗಸ್ ಲೀಗ್ ಏಕೆ?" ಎಂದು ಅವರು ನನ್ನನ್ನು ಟೀಕಿಸಿ ಕಾಂಗ್ರೆಸ್ ಸೇರಲು ಪ್ರಚೋದಿಸಿದರು. ಇದರ ಹಿಂದೆಯೇ ಡಾ|| ಹರ್ಡೀಕರ್, ಕಮಲಾದೇವಿ ಚಟ್ಟೋಪಾಧ್ಯಾಯ, ಬಿ. ಎನ್. ಗುಪ್ತ ಮುಂತಾದ ನಾಯಕರ ಸಂದರ್ಶನಗಳು ದೊಡ್ಡಬಳ್ಳಾಪುರದ ಜನರಲ್ಲಿ ಭಾರೀ ಉತ್ಸಾಹವನ್ನು ಕೆರಳಿಸಿದವು. ಇದೇ ಕಾಲಕ್ಕೆ ನಮ್ಮ ಅಣ್ಣ ಸಿದ್ದಪ್ಪ, ತಮ್ಮ ಟಿ. ಸಿ. ಸಿದ್ದಲಿಂಗಯ್ಯ ಹಾಗೂ ನಮ್ಮ ಅವಿಭಕ್ತ ಕುಟುಂಬದ ಇತರ ಸದಸ್ಯರೂ ನಾನು ಕಾಂಗ್ರೆಸ್ ಸೇರಬೇಕೆಂದು ಒತ್ತಾಯಿಸಿದರು. ನನ್ನ ಪತ್ನಿ ಪಾರ್ವತಮ್ಮ ಕೂಡ ಇದಕ್ಕೆ ಬೆಂಬಲ ನೀಡಿದಳು. ದೇಶದ ಸ್ವಾತಂತ್ರ್ಯಕ್ಕಾಗಿ ದೇಶದಲ್ಲಿನ ಪ್ರತಿಯೊಂದು ಕುಟುಂಬವೂ ಒಬ್ಬ ಸದಸ್ಯನನ್ನು ನೀಡಬೇಕೆಂಬ ಗಾಂಧೀಜಿಯ ಕರೆಯಂತೆ ಅವರು ಈ ಸಲಹೆ ಮಾಡಿದರು. ನೀಗಸ್ ಲೀಗ್‌ನ ಸದಸ್ಯರೆಲ್ಲ ಅದನ್ನು ವಿಸರ್ಜಿಸಿ ಕಾಂಗ್ರೆಸ್ ಸೇರಲು ನಿರ್ಧರಿಸಿದೆವು.

1937ರ ಜೂನ್‌ನಲ್ಲಿ ನಮ್ಮ ಮುನ್ಸಿಫ್ ತಿಮ್ಮರಾಯಶೆಟ್ಟಿ ಅವರನ್ನು ಕಂಡು, ಇನ್ನುಮುಂದೆ ನಾನು ಕೋರ್ಟಿಗೆ ಬರುವುದಿಲ್ಲವಾಗಿಯೂ ಕಾಂಗ್ರೆಸ್ಸಿನ ಪೂರ್ಣಕಾಲೀನ ಕಾರ್ಯಕರ್ತನಾಗಿರುವುದಾಗಿಯೂ ತಿಳಿಸಿದೆ. ನನಗೂ ಮೊದಲೇ ಖಾದಿ ಧರಿಸುತ್ತಿದ್ದ

ಅವರು ಸಂತುಷ್ಟರಾಗಿ, ಸಂಸ್ಥಾನದಲ್ಲಿರುವ ಎಲ್ಲ ವೈಶ್ಯರೂ ನನ್ನ ಕೆಲಸದಲ್ಲಿ ನೆರವಾಗ ಬೇಕೆಂದು ನನಗೊಂದು ಪರಿಚಯಪತ್ರವನ್ನು ಕೊಟ್ಟರು. ಈ ಬಗ್ಗೆ ನನ್ನ ಮಿತ್ರರೂ ಸಂಬಂಧಿಗಳೂ ಊರ ಜನರೂ ತೀರ ಸಮಾಧಾನ ಸಂತೋಷಗಳನ್ನು ವ್ಯಕ್ತಪಡಿಸಿದರು. ಇದಾಗಿ ಸ್ವಲ್ಪ ಕಾಲದಲ್ಲಿಯೇ (2-8-1937) ಬೆಂಗಳೂರಲ್ಲಿ ಸಂಪಿಗೆ ವೆಂಕಟಪತಯ್ಯ ನವರ ಆಫೀಸಿನಲ್ಲಿ ನಡೆದ ಒಂದು ಸಭೆಯಲ್ಲಿ ಭಾಷ್ಯಂ, ವೀರಕೇಸರಿ, ತಗಡೂರು ರಾಮಚಂದ್ರರಾವ್, ಕೆ. ಟಿ. ಸತ್ಯನಾರಾಯಣ ಶೆಟ್ಟಿ, ಬಿ. ಎನ್. ಗುಪ್ತ, ಸಿ. ಅಶ್ವತ್ಥ ನಾರಾಯಣರಾವ್, ಯತಿರಾಜುಲು ನಾಯ್ಡು, ಭೂಪಾಳಂ ಸೋದರರು, ಇವರೆಲ್ಲ ಸಂಸ್ಥಾನದ ಕಾಂಗ್ರೆಸ್ಸಿನ ಅಧ್ಯಕ್ಷ ನಾನೇ ಆಗಬೇಕೆಂದು ಒತ್ತಾಯಿಸಿದರು. ನಾನು ಒಪ್ಪಿದೆ. ಮಹಾರಾಜರ ನೇತೃತ್ವದಲ್ಲಿ ಜವಾಬ್ದಾರಿ ಸರಕಾರ ಸ್ಥಾಪಿಸಬೇಕೆಂದು ಠರಾವು ಮಾಡಿ, ತಗಡೂರು ರಾಮಚಂದ್ರರಾವ್, ವೀರಕೇಸರಿ ಸೀತಾರಾಮಶಾಸ್ತ್ರಿ ಹಾಗೂ ನಾನು (ಅಧ್ಯಕ್ಷ) ಇರುವ ಒಂದು ಕ್ರಿಯಾಸಮಿತಿಯನ್ನು ರಚಿಸಿದರು. ವಿ. ಎಸ್. ನಾರಾಯಣರಾವ್ ಇದರ ಕಾರ್ಯದರ್ಶಿ. ರಾಜ್ಯದಲ್ಲಿ ಜವಾಬ್ದಾರಿ ಸರಕಾರ ರಚಿಸಬೇಕು, ಇಲ್ಲವಾದರೆ ನಾವು ಚಳವಳಿ ಹೂಡುತ್ತೇವೆ, ಎಂದು ಸರಕಾರಕ್ಕೆ ತಿಳಿಸಿದೆವು. ದಿವಾನರು ಈ ಬಗ್ಗೆ ಗಮನ ನೀಡಲಿಲ್ಲ. ಹೀಗಾಗಿ ಚಳವಳಿ ನಡೆಸುವುದು ಅನಿವಾರ್ಯ ಆಯಿತು.

ನಮ್ಮ ಊರಲ್ಲಿ ಪ್ರಭಾತಫೇರಿಗಳನ್ನು ಆರಂಭಿಸಿದೆವು. ಹಳ್ಳಿಗಳಿಂದ ನೂರಾರು ಜನ ಇದಕ್ಕೆ ಸೇರುತ್ತಿದ್ದರು. ವಕೀಲರು, ವ್ಯಾಪಾರಿಗಳು ಹಾಗೂ ಸರಕಾರೀ ನೌಕರರೂ ಈ ಚಳವಳಿಗೆ ಬೆಂಬಲನೀಡಿದರು. ವಿದ್ಯುತ್ ಇಲಾಖೆಯ ಅಧಿಕಾರಿಯಾದ (ಈಗ ದಿ||) ಎಂ. ಟಿ. ಶ್ರೀನಿವಾಸನ್ ಎಂಬವರು ನಮ್ಮ ಪ್ರಚಾರಪ್ರವಾಸಕ್ಕೆ ತಮ್ಮ ಕಾರನ್ನು ನೀಡಿದರಲ್ಲದೆ ಜಗನ್ನಾಥ್ ಎಂಬ ಇಲಾಖೆಯ ಡ್ರೈವರನ್ನೂ ಒದಗಿಸಿದರು. ಹಾಸ್ಪಿಟಲ್ ರಸ್ತೆಯಲ್ಲಿರುವ ತಮ್ಮ ದೊಡ್ಡ ಮನೆಯನ್ನು ಬೆಂಗಳೂರಿನ ಎನ್. ಕೇಶವ ಅಯ್ಯಂಗಾರ್ ಕಾಂಗ್ರೆಸ್ ಆಫೀಸಿಗಾಗಿ ಕೊಟ್ಟರು. ನಾನೇ ದಿನಾಲು ಬೆಳಗ್ಗೆ, ಸಂಜೆ ಅದನ್ನು ಸ್ವಚ್ಛ ಗೊಳಿಸಿ, ಅಲ್ಲಿ ಹಾಸಿದ ಜಮಖಾನೆಯ ಮೇಲೆ ಕುಳಿತು ಬಂದವರ ಜೊತೆ ವ್ಯವಹರಿಸು ತ್ತಿದ್ದೆ. ನಾನು ಹೀಗೆ ಕುಳಿತುದನ್ನು ಕಂಡ ಧರ್ಮಪ್ರಕಾಶ ಎಂ. ವಿ. ವೀರಪ್ಪ ತಾವಾಗಿ ಆಫೀಸಿಗೆ ಪೀಠೋಪಕರಣಗಳ ಒಂದು ಸೆಟ್ಟನ್ನು ಕಳುಹಿಸಿಕೊಟ್ಟರು. ದಿ|| ವಿ. ಎಸ್. ತಿರುವೆಂಗಡಸ್ವಾಮಿ ಮುದಲಿಯಾರ್ ಕಾಂಗ್ರೆಸ್ ಭವನವೊಂದನ್ನು ಕಟ್ಟಿಕೊಡಲು ಮುಂದಾದರು. ನಾನು ಕೇಳಿದಾಗಲೆಲ್ಲ ಬೇಕಾದಷ್ಟು ಹಣ ಹಾಗೂ ತಮ್ಮ ಕಾರು ಕೊಡಲು ಡಿ. ಆರ್. ಮಾಧವಕೃಷ್ಣಯ್ಯ ಒಪ್ಪಿದರು. ಚಲನಚಿತ್ರೋದ್ಯಮಿ ಬಿ. ಎನ್. ರೆಡ್ಡಿ, ಅಲ್ಲದೆ ಎಲ್. ಎಸ್. ವೆಂಕಾಜಿರಾವ್, ದಿ|| ಬಾಲಕೃಷ್ಣಯ್ಯ (ಆಗ ವಕೀಲರು, ಮುಂದೆ ಹೈಕೋರ್ಟ್ ನ್ಯಾಯಮೂರ್ತಿ) ಇವರೆಲ್ಲ ತಮ್ಮ ಆರ್ಥಿಕ ಕಾಣಿಕೆ ಸ್ವೀಕರಿಸಲು ಕೇಳಿಕೊಂಡರು. ನಾನು ಹಣದ ವೈರಿ; ನನಗೆ ಹಣ ಬೇಕಿರಲಿಲ್ಲ. ಪೆಟ್ರೋಲ್ ಬಂಕ್‌ನವರು ಪುಕ್ಕಟೆಯಾಗಿ ನಮ್ಮ ಟ್ಯಾಂಕ್ ತುಂಬುತ್ತಿದ್ದರು. ಹೊಟೇಲಿನವರು

ನಮ್ಮ ಆಹಾರದ ಬಿಲ್ ಪಡೆಯಲು ನಿರಾಕರಿಸುತ್ತಿದ್ದರು.

ಬೆಂಗಳೂರು ನಗರದಲ್ಲಿ ನಾಲ್ಕು ಧ್ವಜಗಳನ್ನು ಹಚ್ಚಿ ನಾವು ಸುತ್ತಾಡಿ ಪ್ರಭಾತ್ ಫೇರಿ ಹಾಗೂ ಧ್ವಜಾರೋಹಣ ಕಾರ್ಯಕ್ರಮ ಸಂಘಟಿಸಲು ಹೋಗುತ್ತಿದ್ದೆವು. ಕೆ. ಟಿ. ಭಾಷ್ಯಂ ಎಲ್ಲರಿಗಿಂತ ಹೆಚ್ಚು ಸ್ಫೂರ್ತಿನೀಡುವ ವ್ಯಕ್ತಿ. ಭಾಷ್ಯಂ ಅವರ ನೆರೆಯಲ್ಲಿರುತ್ತಿದ್ದ ಜಿ. ಆರ್. ಸ್ವಾಮಿ ಮತ್ತು ಅವರ ಕುಟುಂಬದವರೆಲ್ಲರೂ, ಆರ್. ರಂಗಸ್ವಾಮಿ ಮತ್ತು ಅವರ ಮನೆಯವರು, ಮತ್ತು ಇನ್ನನೇಕರು, ಅವರನ್ನೆಲ್ಲ ನಾನು ಮರೆತಿರುವೆ, 'ವಂದೇ ಮಾತರಂ' ಹಾಡಲು ಬಾಲಕಬಾಲಕಿಯರನ್ನು ಸಂಘಟಿಸುವಲ್ಲಿ ಸದಾ ಮುಂದಿರುತ್ತಿದ್ದರು. ನಗರದಲ್ಲಿನ ಎಲ್ಲ ಸಾರ್ವಜನಿಕ ಸಭೆಗಳ ಪ್ರಚಾರಕಾರ್ಯವನ್ನು ಎಸ್. ಎನ್. ಗುಪ್ತ ಮಾಡುತ್ತಿದ್ದರು. ಇದೇ ಕಾಲಕ್ಕೆ ದೊಡ್ಡಬಳ್ಳಾಪುರದ ಕೆಲವು ತರುಣತರುಣಿಯರು ಸಂಸ್ಥಾನದ ಎಲ್ಲೆಡೆ ಹೋಗಿ ಜವಾಬ್ದಾರಿ ಸರಕಾರದ ಬೇಡಿಕೆಯ ಕುರಿತು ತೀವ್ರ ಪ್ರಚಾರಮಾಡಿದರು. ರುಮಾಲೆ ಸೋದರರು, ನರಸಿಂಹಯ್ಯಂಗಾರ್ ಹಾಗೂ ಅವರ ಪತ್ನಿ, ಮುಗುವಾಳಪ್ಪ, ಎನ್. ನಂಜುಂಡ, ಎಸ್. ಆರ್. ಗುರು, ಎಸ್. ಆರ್. ಚಂದ್ರ, ಹೆಚ್. ಕೇಶವಮೂರ್ತಿ, ಎಸ್. ಪಿ. ತಮ್ಮಯ್ಯ, ಟೇಲರ್ ಸುಬ್ಬರಾವ್, ಪುಂಡಲೀಕರಾವ್ ಮುಂತಾದವರನ್ನು ಇಲ್ಲಿ ಉಲ್ಲೇಖಿಸಬೇಕು. ಎಲ್ಲೆಡೆ ಜನಸಾಮಾನ್ಯರು ಉತ್ಸಾಹಭರಿತರಾದರೂ ಬ್ರಾಹ್ಮಣೇತರ ಸಮಾಜಗಳ ನಾಯಕರು ಮಾತ್ರ ಅಲ್ಪ ಸಂಖ್ಯೆಯಲ್ಲಿ ನಮ್ಮ ಬೇಡಿಕೆಗೆ ಬೆಂಬಲ ನೀಡಲು ಮುಂದೆ ಬಂದರೆಂದು ಹೇಳಬೇಕು.

## ಪ್ರವಾಸ

ಸಂಸ್ಥಾನದ ಎಲ್ಲೆಡೆಗೆ ನಾವು, ಪ್ರತಿಜಿಲ್ಲೆಗೆ 4-5 ದಿನದಂತೆ, ಪ್ರವಾಸಮಾಡಿದೆವು. ತಾರೀಕುಗಳು ಮಾತ್ರ ನನಗೆ ನೆನಪಿಲ್ಲ. ಲಾವಣಿ ವಿಷಕಂಠರಾಯರು ನಮ್ಮ ಜೊತೆ ಇದ್ದು ಎಲ್ಲೆಡೆ ಸಭೆಗಳಲ್ಲಿ ಹಾಡಿ ಸ್ಫೂರ್ತಿ ತುಂಬುತ್ತಿದ್ದರು. ಎಲ್ಲೆಡೆ ಆಗಲೇ ಸರಕಾರ ಪೋಲೀಸರಿಗೆ ಎಚ್ಚರಿಕೆ ನೀಡಲಾಗಿದ್ದು, ಐದಾರು ಪೋಲೀಸರಿದ್ದ ವ್ಯಾನ್ ಒಂದು ಸದಾ ನಮ್ಮ ಹಿಂದೆಯೇ ಬರುತ್ತಿತ್ತು.

ಇದಕ್ಕೂ ಮೊದಲೇ, ಬಹುಶಃ ಜುಲೈ 1937ರಲ್ಲೇ, ನಾನು ದೊಡ್ಡಬಳ್ಳಾಪುರದಿಂದ ಹೊರಟು ನಂದಿಬೆಟ್ಟದ ಕೆಳಗಿನ ಸುಲ್ತಾನಪೇಟೆಗೆ ಹೋಗಿ ಅಲ್ಲಿನ ಆಯುರ್ವೇದ ವೈದ್ಯ ಸುಬ್ಬಣ್ಣಾಚಾರ್ ಅವರನ್ನೂ ಇತರ 20 ಜನರನ್ನೂ ಒಂದು ಗಂಟೆಯ ಅವಧಿಯಲ್ಲಿಯೇ ಕಾಂಗ್ರೆಸ್ ಸದಸ್ಯರನ್ನಾಗಿ ಮಾಡಿದ್ದೆ. ನಂದಿಗ್ರಾಮ, ಚಿಕ್ಕಬಳ್ಳಾಪುರಗಳ ಮೂಲಕ ಶಿಡ್ಲಘಟ್ಟ ತಾಲೂಕಿನ ಮೇಲೂರಿಗೆ ಹೋಗಿ ಅಲ್ಲಿ ನಂಜುಂಡಪ್ಪನವರ ಅಧ್ಯಕ್ಷತೆಯಲ್ಲಿ ರಾತ್ರಿ ಈ ವಾಚನಾಲಯದಲ್ಲಿ ಭಾಷಣಮಾಡಿದೆ. ಮರುದಿನ ಶಿಡ್ಲಘಟ್ಟ, ಚಿಂತಾಮಣಿಗಳನ್ನು ಸಂಪರ್ಕಿಸಿ ಕೋಲಾರಕ್ಕೆ ಹೋದೆ. ಮೋಕ್ಷಗುಂಡಂ ಕೃಷ್ಣಮೂರ್ತಿಯವರು ಆ ಊರ ಗಣ್ಯ ವಕೀಲ ಟಿ. ಶ್ರೀನಿವಾಸಾಚಾರ್ ಅವರಿಗೆ ಆಗಲೇ ಬಂಧು

ಪತ್ರ ಬರೆದಿದ್ದರು. ಅದರಂತೆ ಟಿ. ರಾಮಾಚಾರ್, ಹೋಟೇಲು ಮಾಲಿಕ ಸರ್ವಜ್ಞ ಮೂರ್ತಿ, ಡಾ|| ನಾರಾಯಣ, ರಾಮಕೃಷ್ಣ, ಕೆ. ಪಟ್ಟಾಭಿರಾಮನ್, ಲಿಂಗಾರೆಡ್ಡಿ ಮುಂತಾದವರು ಆಗಲೇ ನ್ಯೂ ಪಾರ್ಕ್‌ನಲ್ಲಿ ಭವ್ಯಸಭೆಗೆ ವ್ಯವಸ್ಥೆ ಮಾಡಿದ್ದರು. ಅದಕ್ಕೆ ಟಿ. ಶ್ರೀನಿವಾಸಾಚಾರ್ ಅಧ್ಯಕ್ಷತೆ ವಹಿಸಿದ್ದರು. ಕೋಲಾರದಿಂದ ಹೊಸಕೋಟೆ ಮೂಲಕ ಬೆಂಗಳೂರಿಗೆ ಹೋಗುತ್ತಿದ್ದಾಗ, ಹೊಸಕೋಟೆಯಲ್ಲಿ ಅಂದು ಸಂತೆಯ ದಿನವಾಗಿ, ಪೇಟೆಯಲ್ಲಿ ಭಾರಿ ಸಭೆ ನಡೆಸಿದರು. ಆ ಊರ ಖ್ಯಾತ ಮಹಾದೇವ ಶಾಸ್ತ್ರಿಗಳೇ ಅಲ್ಲದೆ ಜೆ. ಸಿ. ರುದ್ರಪ್ಪ, ಪತ್ರಕರ್ತ ಶಿವಲಿಂಗಯ್ಯ ನನ್ನನ್ನು ಸ್ವಾಗತಿಸಿದರು.

ನಮ್ಮ ಪ್ರವಾಸ ಆರಂಭ ಆದಾಗ, ಪೋಲೀಸರು ನಮ್ಮ ಕಾರ್ಯಕ್ರಮಗಳನ್ನು ಮೊದಲೇ ತಿಳಿದುಕೊಂಡು, ನಾವು ಹೋಗಲಿರುವ ಊರ ಪೋಲೀಸರಿಗೆ ಮೊದಲೇ ಸುದ್ದಿ ತಿಳಿಸುತ್ತಿದ್ದರು. ಆ ಪೋಲೀಸರು ಊರ ಜನಕ್ಕೆ ನಮ್ಮ ಜೊತೆ ಸಹಕರಿಸಬಾರದೆಂದು ಮೊದಲೇ ಹೇಳಿಡುತ್ತಿದ್ದರು. ಇದು ನಮ್ಮ ಆಗಮನಕ್ಕೆ ಉತ್ತಮ ಹಿನ್ನೆಲೆ ಒದಗಿಸಿ, ನಮಗೆ ಅನುಕೂಲಕರವೇ ಆಗಿತ್ತು.

ಸರ್ದಾರ್ ಕೆ. ಎ. ವೆಂಕಟರಾಮಯ್ಯ ಬೆಂಗಳೂರು ಜಿಲ್ಲೆಯ ಪ್ರವಾಸವನ್ನು ಏರ್ಪಡಿಸಿದರು. ಆನೇಕಲ್‌ಗೆ ಹೋಗುವ ದಾರಿಯಲ್ಲಿ ಅನೇಕ ಗ್ರಾಮಗಳನ್ನು ಸಂದರ್ಶಿಸಿದೆವು. ಆನೇಕಲ್‌ನಲ್ಲಿ ದೇವರಕೊಂಡಪ್ಪ ಮತ್ತು ಕೃಷ್ಣಮೂರ್ತಿ ಇವರ ನಾಯಕತ್ವದಲ್ಲಿ ಸಾರ್ವಜನಿಕ ಸಭೆ ನಡೆಸಿದೆವು. ಹಾರೋಹಳ್ಳಿ ಮುಖಾಂತರ ಕಾನಕಾನಹಳ್ಳಿಗೆ ಹೋಗಿ, ಆ ಭಾಗದ ಗಣ್ಯರೂ ವಿ. ವೆಂಕಟಪ್ಪನವರ ಮಾವಂದಿರೂ ಕೆ. ಜಿ. ತಿಮ್ಮೇಗೌಡರ ತಂದೆಯೂ ಆದ ಗುರಿಕಾರ್ ವೆಂಕಟರಾಮ ಗೌಡರ ಆಶೀರ್ವಾದ ಗಳಿಸಿದೆವು. ನಾವು ಎಸ್. ಕರಿಯಪ್ಪನವರ ಹಾಸ್ಟೆಲ್‌ನಲ್ಲಿ ಉಳಿದುಕೊಂಡು, ಸುಬ್ರಹ್ಮಣ್ಯ ಅಯ್ಯರ್‌ರ ಹೊಟೇಲಿನಲ್ಲಿ ಊಟಮಾಡಿದೆವು. ಬಸ್ ಮಾಲಿಕ ಶ್ರೀಕಂಠಶಾಸ್ತ್ರಿ. ಪೆಟ್ರೋಲ್ ಬಂಕ್ ಮಾಲಿಕ ನಾರಾಯಣರಾವ್, ರಂಗೇಗೌಡ ಮುಂತಾದವರನ್ನು ಭೇಟಿ ಆದೆವು. ಬಹುಶಃ ಅಲ್ಲಿಯೇ ಸರ್ದಾರ್ ವೆಂಕಟರಾಮಯ್ಯನವರ ತಮ್ಮ ಶ್ರೀನಿವಾಸಮೂರ್ತಿಯವರನ್ನು ನಾನು ಕಂಡಿದ್ದು; ಮುಂದೆ ಬಳೇಪೇಟೆ ಕಾಂಗ್ರೆಸ್‌ನ ಕೇಂದ್ರ ಕಾರ್ಯಾಲಯ ನೋಡಿಕೊಳ್ಳಲು ಅವರು ಬಂದರು. ಅಲ್ಲಿಂದ ಚನ್ನಪಟ್ಣ, ಕ್ಲೋಸ್‌ಪೇಟೆಗಳಿಗೆ ಹೋದೆವು. ಕ್ಲೋಸ್‌ಪೇಟೆಯಲ್ಲಿ ಕೆ. ಸುಬ್ಬರಾವ್ ಅವರಲ್ಲಿ ಉಳಿದುಕೊಂಡೆವು. ಅವರೂ ವಿ. ವೆಂಕಟಪ್ಪನವರೂ ಆಗಲೇ ಆ ಭಾಗದಲ್ಲಿ ಗಾಂಧೀವಿಚಾರಗಳ ಪ್ರಸಾರಕ್ಕೆ ಯೋಗ್ಯ ತಳಹದಿ ಒದಗಿಸಿದ್ದರು. ಮಾಗಡಿಯಲ್ಲಿ ಅಲ್ಲಿನ ಪುರಸಭೆಯ ಎಲ್ಲ ಸದಸ್ಯರನ್ನೂ ಕಾಂಗ್ರೆಸ್ ಸದಸ್ಯರಾಗಿ ಸೇರಿಸಿಕೊಂಡೆವು. ಈ ಪೈಕಿ ಪತ್ರಕರ್ತಮಿತ್ರರಾದ ಚಿಕ್ಕೇಗೌಡ, ಹರ್ತಿ ಅದಿರಾಜಯ್ಯ, ಸೋಲೂರು ಸಿದ್ದಪ್ಪ, ನಾರಾಯಣಶೆಟ್ಟಿ, ಸಿಂಗ್ ಮುಂತಾದವರಿದ್ದರು. ಆ ದಿನದ ಕೊನೆಗೆ ನೆಲಮಂಗಲಕ್ಕೂ ಹೋದೆವು. ದೇವನಹಳ್ಳಿ ತಾಲೂಕಿನಲ್ಲಿ 'ಕಾಂಗ್ರೆಸ್ ಜ್ವರ'ವು ಆಗಲೇ ಅನೇಕ ತರುಣರಿಗೆ ತಗಲಿದ್ದು, ಭಾರಿ ಎತ್ತರದ ಗುಡ್ಡದ

ತುದಿ ಹಾಗೂ ಮರಗಳ ಕೊನೆಗೆ, ಪೋಲೀಸರು ಹೋಗಲಾರದೆಡೆಯಲ್ಲೆಲ್ಲ, ಧ್ವಜಗಳನ್ನು ಹಚ್ಚುವ ಸಾಹಸಮಾಡಿದ್ದರು. ಅಲ್ಲಿ ಪ್ರಭಾತಫೇರಿ, ಪ್ರಚಾರ ಸತತವಾಗಿ ಸಾಗಿದ್ದವು. ನನ್ನ ಹೆಂಡತಿಯ ಊರಾದ ವಿಜಯಪುರದಲ್ಲೂ ಗರಿಯಪ್ಪ ಮುಂತಾದವರ ನಾಯಕತ್ವ ದಲ್ಲಿ ಭಾರೀ ರಾಜಕೀಯ ಚಟುವಟಿಕೆ ಸಾಗಿತ್ತು.

ಮೈಸೂರು ಜಿಲ್ಲೆಗೆ ನಾನು ಪ್ರವಾಸ ಹೊರಟಾಗ ಕಾಂಗ್ರೆಸ್ ಕಾರ್ಯದರ್ಶಿ ವಿ. ಎಸ್. ನಾರಾಯಣರಾವ್ (ಅವರನ್ನು ನಾವು 'ಮೈಸೂರಿನ ಕೃಪಾಲನಿ' ಎನ್ನುತ್ತಿದ್ದೆವು) ಅವರು ಅಲ್ಪಕಾಲದಲ್ಲಿಯೇ ಸಾಕಷ್ಟು ಕರಪತ್ರ ಒದಗಿಸಿದರು. ಮೈಸೂರಿನ ದಾರಿಯಲ್ಲಿ ಮಳವಳ್ಳಿ ವೀರಪ್ಪನವರನ್ನು ಕಂಡೇ ಹೋಗುತ್ತಿದ್ದೆ. ರಂಗರಾಮಯ್ಯ, ಎಂ. ಎನ್. ಜೋಯಿಸರು ನನ್ನನ್ನು ಜಿಲ್ಲೆಯ ಸುತ್ತೆಲ್ಲ ಕರೆದೊಯ್ದರು. ಲಾವಣಿ ವಿಷಕಂಠರಾಯರಂತೂ ಜತೆ ಇರಲೇಬೇಕು. ಸುಬ್ಬರಾಯನಕೆರೆ ಮತ್ತು ಓರಿಯಂಟಲ್ ಲೈಬ್ರರಿ ಹಿಂದಣ ಖಾಲಿ ಜಾಗ ಮೈಸೂರಲ್ಲಿ ಅಂದಿನ ಸಭಾಸ್ಥಾನಗಳು. ಅಲ್ಲಿ ನಡೆದ ಒಂದು ಸಭೆಯಲ್ಲಿ ಎಚ್. ಸಿ. ದಾಸಪ್ಪನವರು ಹಾಜರಿದ್ದು ನನ್ನ ಭಾಷಣಕ್ಕಾಗಿ ನನ್ನನ್ನು ಅಭಿನಂದಿಸಿದರು. ಆಗಿನ್ನೂ ಅವರು ಕಾಂಗ್ರೆಸ್ ಸೇರಿರಲಿಲ್ಲ. ಬನ್ನೂರು ಹಾಗೂ ಇತರ ಕಡೆಗಳಲ್ಲಿ ಎಚ್. ಎಂ. ಚನ್ನಬಸಪ್ಪ ಹಾಗೂ ಅವರ ಮಗ ನಟರಾಜ್ ಭಾಷಣ ಮಾಡಿದರು. ಎಂ. ಎನ್. ಜೋಯಿಸರು ಗಣ್ಯ ಕಾರ್ಯಕರ್ತರೇ ಸೈ.

ಮುಂದೆ ತುಮಕೂರು ಜಿಲ್ಲೆಯಲ್ಲಿ ಆದ ಪ್ರವಾಸದ ಕಾಲಕ್ಕೆ ಅಲ್ಲಿನ ಪೋಲೀಸರು ಇತರ ಕಡೆಗಿಂತ ಹೆಚ್ಚು ಸಹಕಾರ ತೋರಿದರು. ಅಮೃತೂರಿನಲ್ಲಿ ರಾಷ್ಟ್ರೀಯವಾದಿ ವೃದ್ಧರಾದ ರಂಗರಾವ್ ನನಗೆ ಸ್ಫೂರ್ತಿನೀಡಿದರು. ಅವರ ಜೊತೆ ಕೆಲವು ವಿದ್ಯಾವಂತರು ಕುಣಿಗಲ್ ತಾಲೂಕಿನಲ್ಲಿ ಗಾಂಧೀವಿಚಾರಗಳ ಪ್ರಚಾರ ನಡೆಸಿದ್ದರು. ಕುಣಿಗಲಿನಲ್ಲಿ ಕೆ. ವಿ. ಸುಬ್ರಹ್ಮಣ್ಯಸ್ವಾಮಿ, ಅವರ ಪತ್ನಿ, ಗೋವಿಂದ ಶೆಟ್ಟಿ, ಲಕ್ಷ್ಮಯ್ಯ ಶೆಟ್ಟಿ ಸಭೆಗೆ ಬೆಂಬಲವಾಗಿದ್ದರು. ತಾವು ಹೊಸದಾಗಿ ಕಟ್ಟಿದ ಸಭಾಭವನವನ್ನು ನನ್ನ ಭಾಷಣ ದಿಂದಲೇ ಮಧುಗಿರಿಯಲ್ಲಿ ನಂಜಯ್ಯ ಶೆಟ್ಟರು ಉದ್ಘಾಟಿಸಿದರು. ಈ ಪ್ರವಾಸದ ಕಾಲಕ್ಕೇ ಮಾಲಿ ಮರಿಯಪ್ಪ, ಹೆಂಜೇರಪ್ಪ, ಶಿವಣ್ಣ, ಗುಬ್ಬಿಯ ಗಟ್ಟಿರೇವಣ್ಣ ಇವರೆಲ್ಲರ ಪರಿಚಯ ಆಯಿತು. ಇವರೆಲ್ಲ ಕಾಂಗ್ರೆಸ್‌ನ ಬೆಂಬಲಿಗರೇ.

ವಾಸ್ತವವಾಗಿ, 16-9-1937ರಲ್ಲಿ ನಮ್ಮ ಕಾರಿನಲ್ಲಿ ದೊಡ್ಡಬಳ್ಳಾಪುರದಿಂದ ಹೊರಟು ತುಮಕೂರಿಗೆ ಹೋದೆವು. ಡಾ|| ಕೆ. ರಂಗಯ್ಯಂಗಾರ್, ಟಿ. ಸುಬ್ರಹ್ಮಣ್ಯಂ, ಅಲ್ಲದೆ ಎಂ. ವಿ. ರಾಮರಾವ್, ಬಿ. ಸಿ. ನಂಜುಂಡಯ್ಯ ಹಾಗು ಇತರರು ಹಾಜರಿದ್ದು ಆಗಲೇ ಸದಸ್ಯರ ನೋಂದಾವಣೆ ಮುಂತಾದ ಕೆಲಸಗಳನ್ನು ಸಮರ್ಪಕವಾಗಿ ಮಾಡಿದ್ದರು. ನನ್ನ ಭೇಟಿ ಕೇವಲ ಔಪಚಾರಿಕವಾಗಿತ್ತು. ಶಿರಾದಲ್ಲಿ ಸದಸ್ಯರನ್ನು ನೋಂದಾಯಿಸಿದೆವು. ಅಲ್ಲಿನ ಜನ ಕೆಲಸಕ್ಕೆ ಸಿದ್ಧರಾಗಿದ್ದರು. ಸಂಜೆ ಚಿತ್ರದುರ್ಗ ಸೇರಿದೆವು. ಅಲ್ಲಿ ನಿಜಲಿಂಗಪ್ಪ ಅವರ ಮನೆಯಲ್ಲಿ ನನ್ನನ್ನು ಅವರ ಮನೆಮಂದಿಯೆಲ್ಲ ಸ್ವಾಗತಿಸಿದರು. ಇಮಾಂ ನಮ್ಮನ್ನು

ಊರಲ್ಲಿ ಎದುರುಗೊಂಡರು. ಎಸ್. ವಾಸುದೇವರಾಯರು ಜಿಲ್ಲಾ ಪ್ರವಾಸದ ಪರಿಪೂರ್ಣ ವ್ಯವಸ್ಥೆಮಾಡಿದ್ದರು. ನಿಜಲಿಂಗಪ್ಪನವರ ಸಹೋದ್ಯೋಗಿ ಸಿ. ಆರ್. ಬಸಪ್ಪ ಅಲ್ಲಿ ಇದ್ದರು. ಸಂಜೆಯ ಸಭೆಗೆ ನಿಜಲಿಂಗಪ್ಪ ಅಧ್ಯಕ್ಷರು. ನಿಜಲಿಂಗಪ್ಪನವರ ತಾಯಿ ಹಾಗೂ ಕುಟುಂಬದ ಇತರರು ನನಗೆ ಪೂರ್ಣ ಬೆಂಬಲದ ಆಶ್ವಾಸನೆ ಇತ್ತರು. ದಾವಣಗೆರೆಯಲ್ಲಿ ಡಿ. ಎಚ್. ಚಂದ್ರಶೇಖರಯ್ಯನವರು, ಕಾಸಲ ಶ್ರೀನಿವಾಸ ಶೆಟ್ಟಿ, ಚೆನ್ನಗಿರಿ ರಂಗಪ್ಪ, ಮಾಗನೂರು ಬಸಪ್ಪ, ಜಂಬಣ್ಣ, ಬಳ್ಳಾರಿ ಸಿದ್ದಮ್ಮ, ಬೋಂದಾಡೆ ಹನುಮಂತರಾವ್ ಮುಂತಾದವರ ಜೊತೆಯಲ್ಲಿ ಸ್ವಾಗತಕ್ಕೆ ಸಿದ್ಧರಾಗಿದ್ದರು. ಊರಲ್ಲೆಲ್ಲ ಮೆರವಣಿಗೆ. ಸಂಜೆ ಚಂದ್ರಶೇಖರಯ್ಯ ಅವರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ. ಆ ಜಿಲ್ಲೆಯ ಕೊಟ್ರಿ ನಂಜಪ್ಪ ಹಾಗೂ ಅವರ ವೃದ್ಧ ತಂದೆ ನಮಗೆ ಸ್ಫೂರ್ತಿನೀಡಿದ ವ್ಯಕ್ತಿಗಳು.

ಶಿವಮೊಗ್ಗದಲ್ಲಿ ಭೂಪಾಲಂ ಸೋದರರು ನನಗೆ ಎಸ್. ವಿ. ಕೃಷ್ಣಮೂರ್ತಿರಾವ್, ಡಾ|| ಪಾರ್ಥ, ರಾಮಕೃಷ್ಣರಾವ್, ಕೆ. ಆರ್. ಮಾಧವರಾವ್, ಹಾಗೂ ಅವರ ಪತ್ನಿ ಮುಂತಾದ ನಿಷ್ಠ ಕಾಂಗ್ರೆಸ್ಸಿಗರ ಪರಿಚಯ ಮಾಡಿಕೊಟ್ಟರು. ಭೂಪಾಲಂ ಸೋದರರ ತಂದೆ ರುಕ್ಮಯ್ಯ ನನ್ನನ್ನು ತಮ್ಮ ದೇವರ ಕೋಣೆಗೆ ಕರೆದೊಯ್ದು ಏಲಕ್ಕಿಮಾಲೆಯನ್ನು ನನ್ನ ಕೊರಳಿಗೆ ಹಾಕಿ ನನ್ನ ಕೆಲಸವನ್ನು ಹರಸಿದರು. ಎಚ್. ಸಿದ್ದಯ್ಯನವರು ನಮಗೆ ಊಟೋಪಚಾರವನ್ನು ಒದಗಿಸಿದರೂ ರಾಜಕೀಯ ಮಾತನಾಡಲು ಬಿಡಲಿಲ್ಲ.

ಚೆನ್ನಗಿರಿಯಲ್ಲಿ ಆ ದಿನ ನಾವು ಸಭೆ ನಡೆಸಬೇಕಾಗಿದ್ದು, ಅಲ್ಲಿನ ಇನ್ಸ್‌ಪೆಕ್ಟರರು ಅಲ್ಲಿ 144ನೇ ಸೆ||ನಂತೆ ಪ್ರತಿಬಂಧಕಾಜ್ಞೆ ಹೊರಡಿಸಿದ್ದರು. ಆ ದಿನ ಅಲ್ಲಿಗೆ ಕೋರ್ಟಿನ ಕೆಲಸಕ್ಕಾಗಿ ಬಂದ ಎಚ್. ಸಿದ್ದಯ್ಯನವರು, ಇದರಿಂದ ರೊಚ್ಚಿಗೆದ್ದು, ಸಂಜೆ ಶಿವಮೊಗ್ಗದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು. ಜಾತಿಮತಭೇದವಿಲ್ಲದೆ ಎಲ್ಲರೂ ಕಾಂಗ್ರೆಸ್ ಸೇರಬೇಕೆಂದು ಅವರು ಭಾಷಣದಲ್ಲಿ ಮನವರಿಕೆ ಮಾಡಿಕೊಟ್ಟರು. ಅಲ್ಲಿಯೇ ನಾನು ಕಡಿದಾಳ ಮಂಜಪ್ಪನವರನ್ನೂ ಭೇಟಿ ಆದೆ.

ಸಾಗರದಲ್ಲಿ, ಊರನ್ನು ಪ್ರವೇಶಿಸುತ್ತಿದ್ದಂತೆ, ಪೋಲಿಸ್ ಇನ್ಸ್‌ಪೆಕ್ಟರ್ ವೆಂಕಟಾಚಾರ್ (ಇವರು ನನ್ನ ಸಹಪಾಠಿಯಾಗಿದ್ದರು) ವಾಹನದಲ್ಲಿದ್ದ ನಾಲ್ಕು ಕಾಂಗ್ರೆಸ್ ಧ್ವಜಗಳನ್ನು ಕಸಿಯಲು, ಇದು ಅಲ್ಲಿ ಕಾಂಗ್ರೆಸ್ಸಿನ ಯಶಸ್ಸಿಗೆ ಒಳ್ಳೆಯ ಪ್ರಚೋದನೆ ಆಯಿತು.

ಹಾಸನದಲ್ಲಿ ನಾನು ಎ. ಜಿ. ರಾಮಚಂದ್ರರಾಯರನ್ನು ಮೊದಲು ಕಂಡೆ. ಅವರು ನನಗೆ ಇನ್ನೊಬ್ಬ ಕ್ರಾಂತಿಕಾರಿ ರಾಜಕಾರಣಿ ಗಣ್ಯ ರಂಗಸ್ವಾಮಿ ಅವರ ಪರಿಚಯ ಮಾಡಿಕೊಟ್ಟರು. ವಾಚನಾಲಯದ ಎದುರು ಅವರು ಏರ್ಪಡಿಸಿದ್ದ ಸಭೆಯಲ್ಲಿ ಭಾರೀ ಜನ ಸೇರಿದ್ದರು. ಅರಸೀಕೆರೆಯಲ್ಲಿ, ದೊಡ್ಡಬಳ್ಳಾಪುರದಲ್ಲಿ ಮುನ್ಸಿಫರಾಗಿದ್ದ ತಿಮ್ಮಯ್ಯ ಶೆಟ್ಟರ ಸಂಬಂಧಿ ಶ್ರೀಕಂಠ ಶೆಟ್ಟರು ನಾಯಕತ್ವ ವಹಿಸಿದ್ದರು. ಒಂದು ತಾಲ್ಲೂಕು ಕೇಂದ್ರದಲ್ಲಿ ನಾನು ಎಂದೂ ನೋಡದಂಥ ಭಾರಿ ಮೆರವಣಿಗೆ ಅಲ್ಲಿ ನಡೆದು, ಮುಂದೆ ಅದರ ಸಾವಿರಾರು ತೆಂಗಿನಕಾಯಿ ಒಡೆದರು. (ಇನ್ನೊಮ್ಮೆ ನಾನು ಡಾ|| ಹರ್ಡೀಕರ್ ಮತ್ತು ಶ್ರೀನಿವಾಸ

ಮಲ್ಯರ ಜೊತೆ ಈ ಜಿಲ್ಲೆಯ ಪ್ರವಾಸಮಾಡಿದಾಗ ಸಕಲೇಶಪುರದಲ್ಲಿ ಆದ ಮೆರವಣಿಗೆ ಭಾರೀ ಆಗಿತ್ತು.) ಹೊಳೆನರಸೀಪುರ, ಅರಕಲಗೂಡುಗಳಿಗೂ ನಾನು ಹೋಗಿದ್ದು ಸೂರ್ಯ ನಾರಾಯಣ ಶೆಟ್ಟಿ, ಹಿಟ್ಟಿನ ಗಿರಣಿಯ ನರಸಯ್ಯ ಇವರುಗಳನ್ನು ಭೇಟಿ ಆದೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿ ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟಿ ಅವರು ಘನವಂತ ಹೊಸಕೊಪ್ಪ ಕೃಷ್ಣರಾಯರ ಜೊತೆಗಾರರಾಗಿದ್ದು, ಅವರ ಮನೆ ಜಿಲ್ಲೆಯ ಕಾಂಗ್ರೆಸ್ ಚಟುವಟಿಕೆಗಳ ಕೇಂದ್ರವೇ ಆಗಿತ್ತು. ಬೀರೂರಿಗೆ ನಾನು ಮೊದಲ ಬಾರಿ ಹೋದಾಗ ಎಚ್. ಎಸ್. ರುದ್ರಪ್ಪನವರ ತಂದೆ ಗಣ್ಯ ವೃದ್ಧ ನಾಯಕ ಹಾಲಪ್ಪನವರು ಇಡೀ ತಾಲೂಕಿನ ಜನರಿಂದ ಕೂಡಿದ ಭಾರಿ ಮೆರವಣಿಗೆ ನಡೆಸಿದ್ದು, ಶ್ರೀಮಂತ ಆಡ್ಯ ಮನೆತನದ ಪತ್ರೆ ಅಡ್ಕೆ ಚೆನ್ನವೀರಪ್ಪನವರೂ ಆಗ ಕೆಲಸಕ್ಕೆ ಮುಂದಾದರು.

ಚಿಕ್ಕಮಗಳೂರಲ್ಲಿ ಊರ ಹೊರಗೇ ಭಾರಿ ಜನಸಮುದಾಯ ನಮ್ಮನ್ನು ಸ್ವಾಗತಿಸಿತಲ್ಲದೆ ಹನುಮಂತಪ್ಪನವರಲ್ಲಿ ನಾವು ಆತಿಥ್ಯವನ್ನು ಸ್ವೀಕರಿಸಿದೆವು. ಅವರ ಮನೆಯಿಂದ ಮೆರವಣಿಗೆ ಹೊರಟಾಗ ನನಗೆ ಪುಷ್ಪಹಾರ ಹಾಕಲು ಭಾರಿ ನೂಕುನುಗ್ಗಲಿತ್ತು. ಇದು ಜನರಲ್ಲಿ ಜಾಗೃತವಾದ ರಾಷ್ಟ್ರೀಯತೆಯ ಸಂಕೇತವಷ್ಟೇ ಆಗಿತ್ತು. ಮಿರ್ಜಾರ ಮಿತ್ರರಾದ ಬಸ್‌ಗಳ ಮಾಲಿಕ ದೇವೇಗೌಡರು, ಕಾಫಿ ಪ್ಲಾಂಟರ್ ಎಂ. ಎಲ್. ನಾಗಪ್ಪ ಶೆಟ್ಟಿ ಇವರು ನನ್ನನ್ನು ಅಭಿನಂದಿಸಿದರು. ಅಂದಿನಿಂದ ಜಿಲ್ಲೆಯಲ್ಲಿನ ಎಲ್ಲ ಬಸ್ಸುಗಳೂ ನಮ್ಮ ಕಾಂಗ್ರೆಸ್ ಕಾರ್ಯಕರ್ತರಿಗೆ ಪುಕ್ಕಟೆ ಸಾರಿಗೆ ಒದಗಿಸಿದವು. ಆಗಲೇ ನಾನು ಬಾಗಮನೆ ದೇವೇಗೌಡ, ಬಿ. ಎಲ್. ಸುಬ್ಬಮ್ಮ, ಸಾವಿತ್ರಮ್ಮ, ಅಣ್ಣಪ್ಪ ಶೆಟ್ಟಿ ಮುಂತಾದವರನ್ನು ಮೊದಲ ಬಾರಿ ಕಂಡೆನು. ಇಲ್ಲಿ ಹೇಳಿದ ಮಹಿಳೆಯರು ಮುಂದೆ ಧೀರಕಾರ್ಯಕರ್ತೆಯರಾಗಿ ಸಭೆಗಳ ಅಧ್ಯಕ್ಷತೆ ಕೂಡ ವಹಿಸುತ್ತಿದ್ದರು. ಸಭೆಗಳಿಗೆ ಜನ ಆಹಾರ, ನಿದ್ರೆ ಮರೆತು ಗಂಟೆಗಟ್ಟಲೆ ಕಾಯುತ್ತಿದ್ದರು. ಮಧ್ಯರಾತ್ರಿಯವರೆಗೂ ಸಭೆಗಳು ನಡೆದುದಿದೆ.

ಈ ಪ್ರವಾಸಕಾಲದ ಒಂದು ಸ್ವಾರಸ್ಯ ಹೇಳಬೇಕು. ಸಿ ಐ.ಡಿ. ಇಲಾಖೆಯವರು ತಿಮ್ಮಯ್ಯ ಎಂಬ ಹೆಸರಿಟ್ಟುಕೊಂಡ ಒಬ್ಬ ವ್ಯಕ್ತಿಯನ್ನು ನನ್ನ ಡ್ರೈವರ್‌ನ ಸಹಾಯಕನಾಗಲು ನುಸುಳಿಸಿಬಿಟ್ಟಿದ್ದರು. ಹೇಗೋ ಈತ ನಮ್ಮ ಡ್ರೈವರ್ ಜಗನ್ನಾಥನ ವಿಶ್ವಾಸಗಳಿಸಿ, ಪ್ರವಾಸದುದ್ದಕ್ಕೂ ನಮ್ಮ ಸೇವಕನಂತೆ ಜೊತೆಗೇ ಇದ್ದ. ಹೀಗಾಗಿ ನಮ್ಮ ಚಲನವಲನವೆಲ್ಲ ಸರಕಾರಕ್ಕೆ ತಿಳಿಯುತ್ತಿತ್ತು. ಇದು ಮುಂದೆ ನನಗೆ ಗೊತ್ತಾಯಿತು.

ಈಗಿನ ಮುಖ್ಯಮಂತ್ರಿ ದೇವರಾಜ ಅರಸರ ಹಳ್ಳಿಗೆ ನಾವು ಹೋಗಿದ್ದಾಗ. ಅವರ ಮನೆಯ ಜಗಲಿಯ ಮೇಲೆ ಅವರಿಗಾಗಿ ಕಾದೆವು. ಒಬ್ಬ ಕೂಲಿಯವನಂತೆ ಒಂದು ನಿಕ್ಕರ್ ತೊಟ್ಟು, ತಮ್ಮ ಕಣದಿಂದ ಮರಳಿದ ಅವರು, ಗಾಂಧೀಜಿಯ ಸೇವಕನಾದ ನನ್ನನ್ನು ಸ್ವಾಗತಿಸಿ ತಾವೂ ಅಂತರಂಗದಲ್ಲಿ ಕಾಂಗ್ರೆಸ್ಸಿನ ಬೆಂಬಲಿಗರೆಂದು ಹೇಳಿದರು.

3-10-1937ರಂದು ಎಲ್ಲ ಜಿಲ್ಲೆಗಳ ವಿವರ ಪ್ರವಾಸ ಮುಗಿಸಿ ನಾನು ದೊಡ್ಡಬಳ್ಳಾಪುರಕ್ಕೆ ವಾಪಸ್ಸಾದೆ. 6-10-1937ರಂದು ಬೆಂಗಳೂರು ಜಿಲ್ಲಾ ಮ್ಯಾಜಿಸ್ಟ್ರೇಟರ

ಮುಂದೆ ಹಾಜರಾಗಲು ಕ್ರಿಯಾಸಮಿತಿಯ ಸದಸ್ಯರಾದ ನಮಗೆ ಸಮನ್ಸ್ ಬಂತು. ಜಾಮೀನು ನೀಡಲು ಒಪ್ಪದ್ದರಿಂದ ನಮಗೆ ಅಲ್ಲಿ ತಲಾ ಒಂದು ವರ್ಷ ಕಠಿಣ ಶಿಕ್ಷೆ ಆಗಿ ಬೆಂಗಳೂರು ಸೆಂಟ್ರಲ್ ಜೈಲಿಗೆ ಕಳುಹಿಸಿದರು. ಜೈಲಿನಲ್ಲಿ ಆಹಾರಾದಿಗಳ ಬಗ್ಗೆ ನಾವು ಪ್ರತಿಭಟನೆ ಸೂಚಿಸಲು, ನನ್ನನ್ನು ಮೈಸೂರು ಜೈಲಿಗೂ ತಗಡೂರ ಮತ್ತು ವೀರಕೇಸರಿಯ ವರನ್ನು ಇತರ ಜೈಲಿಗೂ ವರ್ಗಾಯಿಸಿದರು. ಕೈಕೋಳ ಹಾಕಿ ಕೆಂಗೇರಿ ರೈಲ್ವೆನಿಲ್ದಾಣಕ್ಕೆ ಒಯ್ದು ಮೈಸೂರಿಗೆ ಸಾಗಹಾಕಿದರು. ಸಾಹುಕಾರ ಚನ್ನಯ್ಯ, ರಂಗರಾಮಯ್ಯ ಮುಂತಾದವರಿಗೆ ಇದು ತಿಳಿದು ಅವರು ದೊಡ್ಡ ಗುಂಪಿನ ಸಹಿತ ಅಲ್ಲಿ ನಿಲ್ದಾಣದಲ್ಲಿ ಕಾದಿದ್ದರು. ನನ್ನನ್ನು ಒಂದು ಟಾಂಗಾದಲ್ಲಿ ಸೇರಿಸಿ ಜೈಲಿಗೆ ಸಾಗಿಸಿದರು. ಅಲ್ಲಿ ಒಂದು ಕೊಠಡಿಯಲ್ಲಿ ನನ್ನನ್ನು ಒಬ್ಬನನ್ನೇ ಇಟ್ಟರು.

## ತೀವ್ರ ಜಾಗೃತಿ

ನಮ್ಮ ಬಂಧನದನಂತರ ಸಂಸ್ಥಾನದಲ್ಲಿ ಅನೇಕ ಘಟನೆಗಳಾದುವು. ರಾಜ್ಯದಲ್ಲೆಲ್ಲ ತೀವ್ರಪ್ರತಿಭಟನೆಗಳು ನಡೆದು, ಎಲ್ಲೆಡೆ ಸಭೆ, ಮೆರವಣಿಗೆ, ಪಿಕೆಟಿಂಗ್ ಮುಂತಾದ ಪ್ರದರ್ಶನಗಳಾಗಿ, ಸರಕಾರ ಪ್ರತಿಬಂಧಕಾಜ್ಞೆ ಜಾರಿಮಾಡಿತ್ತು. ಇವುಗಳ ಮುರಿವಿಕೆಯೂ ಆಯಿತು. ನರಿಮನ್ ನಗರಕ್ಕೆ ಬಂದಾಗ, ಅವರನ್ನು ಕೆಟ್ಟ ರೀತಿಯಲ್ಲಿ ನಡೆಸಿಕೊಳ್ಳ ಲಾಗಿತ್ತಲ್ಲದೆ ಅವರ ಬಂಧನವಾಗಿತ್ತು. ಪ್ರಜಾಪ್ರತಿನಿಧಿ ಸಭೆಯ ದಸರಾ ಅಧಿವೇಶನ ನಡೆದು ಸರಕಾರದ ಕೃತಿಯನ್ನು ಅದು ಒಮ್ಮತದಿಂದ ಖಂಡಿಸಿತ್ತು. ಕೊನೆಯದಾಗಿ ಬ್ರಾಹ್ಮಣೇತರ ಪಕ್ಷದ ನಾಯಕರು ಕಾಂಗ್ರೆಸ್ಸಿನೊಡನೆ ಸೇರ್ಪಡೆಯಾಗಲು ಒಮ್ಮತದ ನಿರ್ಧಾರ ಕೈಕೊಂಡಿದ್ದರು. ಮಿರ್ಜಾ–ಸರಕಾರ ಎಲ್ಲ ಮಿತ್ರರನ್ನೂ ಕಳೆದುಕೊಂಡಿತ್ತು. ಎಲ್ಲ ಜೈಲೂ ಕಾಂಗ್ರೆಸ್ಸಿಗರಿಂದ ತುಂಬಿ ತುಳುಕುತ್ತಿದ್ದವು. ಪರಿಸ್ಥಿತಿ ಸರಕಾರದ ಹತೋಟಿ ಮೀರಿಹೋಗಿತ್ತು. ಗಾಂಧೀಜಿಯ ಮಧ್ಯಸ್ಥಿಕೆಗೆ ಸರ್ ಮಿರ್ಜಾ ಮನವಿ ಮಾಡಿ ಕೊಂಡಂತೆ ಅವರು ರಾಜಗೋಪಾಲಾಚಾರಿಯವರನ್ನು ಸಂಸ್ಥಾನಕ್ಕೆ ಕಳುಹಿಸಿದ್ದರು. ನಿಶ್ಶರ್ತವಾಗಿ ಎಲ್ಲ ಸತ್ಯಾಗ್ರಹಿಗಳನ್ನು ಬಿಡುಗಡೆ ಮಾಡುವಂತೆ ರಾಜಾಜಿ ಮಿರ್ಜಾರಿಗೆ ಸಲಹೆ ನೀಡಿದರು. ಹೀಗೆ ಜವಾಬ್ದಾರಿ ಸರಕಾರಕ್ಕಾಗಿ ನಡೆದ ಹೋರಾಟದ ಮೊದಲ ಹಂತವು ಸಂಸ್ಥಾನದಲ್ಲಿ ಕಾಂಗ್ರೆಸ್ಸನ್ನು ಭದ್ರ ತಳಹದಿಯ ಮೇಲೆ ನಿಲ್ಲಿಸುವುದರಲ್ಲಿ ಯಶಸ್ವಿ ಆಯಿತು. ಬಿಡುಗಡೆಯನಂತರ ನಾನು ಹರಿಪುರ ಕಾಂಗ್ರೆಸ್ಸಿಗೆ ಹೋದೆ. ನಮ್ಮ ಊರಿನಿಂದ ರುಮಾಲೆ ಚನ್ನಬಸವಯ್ಯ, ಮುಗುವಾಳಪ್ಪ, ಹಿರಿಯ ರೈತ ಎಚ್. ನರಸಿಂಹಯ್ಯ, ಎಸ್. ಆರ್. ಚಂದ್ರ ಮುಂತಾದವರೂ ಬಂದಿದ್ದರು.

ಸಂಸ್ಥಾನದ ಪ್ರಜೆಗಳು ಚಳವಳಿ ನಡೆಸಲು ಕಾಂಗ್ರೆಸ್ ಅನುಮತಿ ನೀಡಿರಲಿಲ್ಲ. ಹರಿಪುರದಿಂದ ಮರಳುವಾಗ ನಾನು ಭೂಪಾಲಂ ಚಂದ್ರಶೇಖರಯ್ಯ ಹಾಗೂ ಕೆಲ ಮಿತ್ರರೊಡನೆ ಸೇವಾಗ್ರಾಮಕ್ಕೆ ಹೋಗಿ, ಗಾಂಧೀಜಿಯವರನ್ನು ಕಂಡೆ. ಅಖಿಲ ಭಾರತ

ಕಾಂಗ್ರೆಸ್ಸಿನ ಶಾಖೆಯಾಗಿ ಕೆಲಸ ಮಾಡಲು, ಚಳವಳಿ ನಡೆಸಲು ನಮಗೆ ಅನುಮತಿ ಬೇಕೆಂದು ಕೇಳಿದೆ. "ನಾವು ಗುಲಾಮರ ಗುಲಾಮರು. ನಿಜವಾಗಿ ಕಾಂಗ್ರೆಸ್ ದೇಶೀಯ ರಾಜರ ಸಂಸ್ಥಾನಗಳಿಂದ ಸಂಘಟಿತವಾಗಬೇಕು" ಎಂದು ವಾದಿಸಿದೆ. ಆಗ ನಾನು ಸೂಟು, ಟೈ ಧರಿಸಿದ್ದೆ. ಗಾಂಧೀಜಿ ನನ್ನನ್ನು ಗೇಲಿಮಾಡುತ್ತ ಹೇಳಿದರು: "ನೀವು ಇಂಗ್ಲಿಷ್ ನಾಗರಿಕರಂತೆ ಇದ್ದೀರಿ. ಇಂಗ್ಲಿಷರಂತೆ ವಾದಿಸುತ್ತೀರಿ. ನೀವು ಇಂಡಿಯನ್ ಕಾಂಗ್ರೆಸ್ಸಿನ ಇಂಗ್ಲಿಷ್ ನಾಯಕರಾಗಿದ್ದೀರಿ." ಕಾಂಗ್ರೆಸ್ಸನ್ನು ಸ್ಥಾಪಿಸುವ ವಿಚಾರ ಪ್ರಸ್ತಾಪಿಸುತ್ತ, "ರಾಷ್ಟ್ರಧ್ವಜದ ಮಾನ ರಕ್ಷಿಸಲು ನಿಮ್ಮಿಂದ ಆಗಿರಲಿಲ್ಲ" ಎಂದರು. ಹಿಂದೆ ಧರ್ಮಾಂಬುಧಿ ಕೆರೆಯಲ್ಲಿ ನೆಹರೂ ಹಾರಿಸಿದ ಧ್ವಜವನ್ನು ಸರಕಾರ ಕಿತ್ತಿಸಿ ಹಾಕಿದ ಪ್ರಕರಣವನ್ನು ಅವರು ಉಲ್ಲೇಖಿಸುತ್ತಿದ್ದರು.

"ಆ ದಿನಗಳು ಆಗಿಹೋದುವು. ಈಗ ನಾವು ಹೆಚ್ಚು ಧೈರ್ಯಶಾಲಿಗಳಾಗಿದ್ದೇವೆ. ಈಗ ಧ್ವಜದ ಗೌರವ ನಾವು ರಕ್ಷಿಸಬಲ್ಲೆವು!" ಎಂದು ನಾನೆಂದೆ. ಉತ್ತರ ಕನ್ನಡ ಜಿಲ್ಲೆಯ ಕರನಿರಾಕರಣ ಚಳವಳಿಯ ಯಶಸ್ಸಿಗಾಗಿ ಮೈಸೂರಿನ ನೂರಾರು ತರುಣರು ದುಡಿದುದನ್ನು ಅವರಿಗೆ ಜ್ಞಾಪಿಸಿ ಮೈಸೂರವರ ಸಾಮರ್ಥ್ಯದ ವಿಚಾರ ಹೇಳಿದೆ. ನಾವು ಸ್ವಯಂಪ್ರೇರಣೆಯಿಂದ ರಾಜ್ಯದಲ್ಲಿ ಸತ್ಯಾಗ್ರಹ ನಡೆಸಲು ನಿರ್ಧಾರ ಕೈಗೊಂಡ ಬಗ್ಗೆ ಮಹಾತ್ಮರು ಸಂತೋಷ ವ್ಯಕ್ತಪಡಿಸಿದರು. ಗಾಂಧೀಜಿಯವರ ಆಶೀರ್ವಾದ ನಮಗೆ ಬೇಕೆಂದು ಭೂಪಾಲಂ ಕೇಳಿದಾಗ, ನಮ್ಮ ಬೇಡಿಕೆ ಸರಿಯಾದುದೆಂದು ಹೇಳಿದ ಗಾಂಧೀಜಿ, ಮಹಾರಾಜರಿಗೆ ವೈಯಕ್ತಿಕವಾಗಿ ಮುಟ್ಟಿಸಲು ಒಂದು ಪತ್ರವನ್ನು ನನಗೆ ನೀಡಿದರು.

ನಾನು ಆಗ ಊಟಿಯಲ್ಲಿದ್ದ ಮಹಾರಾಜರನ್ನು ಕಾಣಹೋದಾಗ ದಿವಾನ್ ಮಿರ್ಜಾ ಮಹಾರಾಜರ ಭೇಟಿಗೆ ಅವಕಾಶ ನೀಡದೆ, ಪತ್ರವನ್ನು ಮಾತ್ರ ಮಹಾರಾಜರಿಗೆ ಮುಟ್ಟಿಸಿದರು. ಅಲ್ಲಿ ನಾನು ಮಹಾರಾಜರ ಆಪ್ತಕಾರ್ಯದರ್ಶಿ ಸರ್ ಚಾರ್ಲ್ಸ್ ಟಾಡ್‌ಹಂಟರ್‌ರನ್ನು ಕಂಡೆ (ಅವರು ನನಗೆ ಪೂರ್ವಪರಿಚಿತರು). ಮಹಾರಾಜರು ನನ್ನನ್ನು ಭೇಟಿಯಾಗದ ಬಗ್ಗೆ ವಿಷಾದ ಸೂಚಿಸಿದ ಅವರು, ಸಪತ್ನೀಕರಾಗಿ ಕಾರ್‌ನಲ್ಲಿ ಊಟಿ ಬಸ್ ನಿಲ್ದಾಣದವರೆಗೆ ಬಂದು ನನ್ನನ್ನು ಬೀಳ್ಕೊಟ್ಟರು.

## ಶಿವಪುರ ಕಾಂಗ್ರೆಸ್

ಬರಿಗೈಯಿಂದ ನಾನು ಮರಳಿದ್ದರಿಂದ ನಮ್ಮ ಮಿತ್ರರಲ್ಲಿ ತೀವ್ರ ಅಸಂತುಷ್ಟಿ ಆಯಿತು. ಮೈಸೂರಿನಲ್ಲಿ ಮೀರ್ಲೆ ಲಕ್ಷ್ಮೀನಾರಾಯಣಪ್ಪನವರ ಮನೆಯಲ್ಲಿ ಮಾರ್ಚ್ 1938ರಂದು ಸೇಲಂನ ಕಾಂಗ್ರೆಸ್ ನಾಯಕ ಎಸ್. ವೆಂಕಟಪ್ಪ ಚೆಟ್ಟಿಯಾರ್ ಅವರಿಂದ ರಾಷ್ಟ್ರೀಯ ಕಾಂಗ್ರೆಸ್‌ನ ಶಾಖೆಯಾಗಿ ಮೈಸೂರು ಕಾಂಗ್ರೆಸ್‌ನ ಉದ್ಘಾಟನೆ ಮಾಡಿಸಿದೆವು. ಎಚ್. ಸಿ. ದಾಸಪ್ಪ, ಸಾಹುಕಾರ್ ಚನ್ನಯ್ಯ ಮುಂತಾದವರು ಹಾಜರಿದ್ದರು.

ಏಪ್ರಿಲ್‌ನಲ್ಲಿ ಮೈಸೂರು ಕಾಂಗ್ರೆಸ್‌ನ ಮೊದಲ ಸಮ್ಮೇಳನವನ್ನು ನಡೆಸಲು ನಿರ್ಣಯವಾಗಿ ನಾನೇ ಅಧ್ಯಕ್ಷನಾಗಿ ಆಯ್ಕೆ ಆದೆ. ಜವಾಬ್ದಾರಿ ಸರಕಾರದ ಬೇಡಿಕೆ ಮುಂದಿಡಲು ನಿರ್ಣಯವಾಯಿತು.

ಅನಿರೀಕ್ಷಿತವಾಗಿ ಒಬ್ಬ ಧೀರಮನುಷ್ಯ ಸಮ್ಮೇಳನ ನಡೆಸುವ ನಿರ್ಣಯವನ್ನು ಕಾರ್ಯಾಚರಣೆಗೆ ತರಲು ಮುಂದಾದ. ತನ್ನ ಬೌದ್ಧಿಕ ಮತ್ತು ಆರ್ಥಿಕ ಶಕ್ತಿಯನ್ನೆಲ್ಲ ದೇಶದ ಸೇವೆಗಾಗಿ ಮೀಸಲಿಡಲು ಆತ ನಿರ್ಧರಿಸಿದ. ಅವರೆಂದರೆ ದಿ|| ಸಾಹುಕಾರ್ ಚನ್ನಯ್ಯ. ಅವರಿಗೆ 'ಮೈಸೂರಿನ ಜಮ್ನಾಲಾಲ್ ಬಜಾಜ್' ಎಂಬ ಬಿರುದನ್ನು ನಾವು ಕೊಟ್ಟೆವು. ಹರಿಪುರ ಕಾಂಗ್ರೆಸ್ಸಿಗೆ ಬಂದಿದ್ದ ಅವರು ಅಂಥದ್ದೇ ಒಂದು ಕೂಟ ನಡೆಸಲು ಉತ್ಸುಕರಾಗಿದ್ದರು. ಅವರೇ ಶಿವಪುರ ಕಾಂಗ್ರೆಸ್ಸಿನ ಸ್ವಾಗತಾಧ್ಯಕ್ಷರು. ಸರಕಾರ ಈ ಅಧಿವೇಶನ ನಡೆಯಗೊಡದೆಂಬ ಭಯ ಇತ್ತು. ಕಾಂಗ್ರೆಸ್ಸಿನ ಅ.ಭಾ. ನಾಯಕರನ್ನಾರನ್ನೂ ನಾವು ಕರೆಯಬಾರದೆಂದಿದ್ದೆವು. ಆದರೆ ಉತ್ತರ ಕರ್ನಾಟಕದ ನಾಯಕರ ಪ್ರೋತ್ಸಾಹ, ಬೆಂಬಲ ನಮಗಿತ್ತು. ಆಗಲೇ ಸಂಸ್ಥಾನದಿಂದ ಗಡೀಪಾರಾಗಿ ಹುಬ್ಬಳ್ಳಿಯಿಂದ ಪ್ರಜಾಮತವನ್ನು ನಡೆಸುತ್ತಿದ್ದ ಬಿ. ಎನ್. ಗುಪ್ತ ಆಗ ಡಾ|| ಹರ್ಡೀಕರರ ಆಶ್ರಯದಲ್ಲಿದ್ದು ಮಿರ್ಜಾರಿಗೆ ಭಯ ಹುಟ್ಟಿಸುತ್ತಲಿದ್ದರು. ನೆರೆಯ ಮದ್ರಾಸ್, ಮುಂಬೈ ರಾಜ್ಯಗಳಲ್ಲಿ ಕಾಂಗ್ರೆಸ್ ಸಂಪುಟಗಳು ಅಧಿಕಾರಕ್ಕೆ ಬಂದಿದ್ದು ಅಲ್ಲಿನ ಮಂತ್ರಿಗಳಿಗೆ ರಾಜ್ಯದಲ್ಲಿ ಪ್ರವಾಸ ಕೈಗೊಳ್ಳಲು ನಾವು ಕೇಳಿಕೊಂಡಿದ್ದೆವು. ಎಂ. ಪಿ. ಪಾಟೀಲ್, ತಿ. ರು. ನೇಸ್ವಿ, ಬಿ. ಗೋಪಾಲರೆಡ್ಡಿ ಇವರೆಲ್ಲ ಹೀಗೆ ಬಂದು ಪ್ರವಾಸಮಾಡಿ ಹೋದರು. ಅಧಿವೇಶನಕ್ಕೆ ಮೊದಲು ನಾನು ಎಲ್ಲ ಜಿಲ್ಲೆಗಳಲ್ಲಿ ಸಂಚರಿಸಬೇಕೆಂಬ ಸಲಹೆ ಬರಲು, ಅದೇ ನಮ್ಮ (ಶ್ರೀನಿವಾಸನ್‌ರ) ಹಳೆಯ ಕಾರಲ್ಲಿ, ಜಗನ್ನಾಥನೇ ಡ್ರೈವರ್ ಆಗಿ ಸಂಚಾರಮಾಡಿಯೇ ಬಿಟ್ಟೆವು. ಕಾರು ಹಳೆಯದಾದರೂ ನಾವು 'ಪವಿತ್ರ ಧರ್ಮಯುದ್ಧ'ದಲ್ಲಿ ತೊಡಗಿರುವೆವಾಗಿ, ಅದು ಎಂದೂ ಕೈಕೊಡದೆಂದು ಡ್ರೈವರ್ ಜಗನ್ನಾಥ್ ವ್ಯಕ್ತಪಡಿಸಿದ ಆಸೆ, ಸುದೈವದಿಂದ ಎಂದೂ ಸುಳ್ಳಾಗಲಿಲ್ಲ. ದಪ್ಪನೆಯ 10 ಜನ ಕುಳಿತರೂ ಯಾವುದೇ ಕೆಟ್ಟ ರಸ್ತೆಯಲ್ಲಿ ಆ 'ಆಸ್ಟಿನ್ ಮೈನರ್' ನಮ್ಮನ್ನು ಕೈಬಿಡಲಿಲ್ಲ. ಬೆಂಗಳೂರಿನ ವ್ಯಾಪಾರಿಗಳು ಗಾಲಿ, ಟ್ಯೂಬು ಪೂರೈಸುತ್ತಿದ್ದರು. ಎಲ್ಲ ಪೆಟ್ರೋಲು ಬಂಕುಗಳೂ ನಮ್ಮವೇ. ಊಟತಿಂಡಿಗೆ ಎಲ್ಲೆಡೆಯ ಹೋಟೇಲುಗಳ ಔದಾರ್ಯದ ಸ್ವಾಗತ ನಮಗೆ ಸದಾ ಇತ್ತು. ಕಾರ್ಯಕ್ರಮಗಳಿಗೆ ಯಾವ ಸಿದ್ಧತೆಗಳೂ ಬೇಕಾಗಿರಲಿಲ್ಲ. ಹೋದ ಕಡೆ ಸಭೆ ಇದೆಯೆಂದು ತಿಳಿಸಿದರೆ ಜನ ಕೂಡುತ್ತಿದ್ದರು. ಮೈಸೂರು ಜಿಲ್ಲಾ ದೇವನೂರಲ್ಲಿ ಒಮ್ಮೆ ನಾನು ಹೋದೊಡನೆ, ಡಿ. ಎಂ. ಸಿದ್ದಯ್ಯ ಅವರು ವೇದಿಕೆ ರಚನೆಯಲ್ಲಿ ತೊಡಗಿದಾಗ, ಡ್ರೈವರ್ ಜಗನ್ನಾಥ ನನ್ನೊಡನೆ ಊರ ಸುತ್ತ, ಸೀಮೆಎಣ್ಣೆ ಡಬ್ಬ ಬಡಿದು, "ಮಾರ್ಕೆಟ್ ಬಯಲಿನಲ್ಲಿ ಕಾಂಗ್ರೆಸ್ ಅಧ್ಯಕ್ಷರ ಭಾಷಣ ಇದೆ, ಎಲ್ಲರೂ ಬನ್ನಿ" ಎಂದು ಸಾರುತ್ತಾ ನಡೆದ. ಹೊಳೆನರಸೀಪುರದಲ್ಲೂ ಹೀಗೆ ಸಭೆ ಇದೆಯೆಂದು ಪ್ರಕಟಿಸಿದ ಅಲ್ಪಕಾಲದಲ್ಲಿಯೇ

ಸಾವಿರಾರು ಜನ ಹಾಜರಾಗಿದ್ದರು. ಇದು ನಿಜವಾಗಿಯೂ ನನಗೆ ಸ್ಫೂರ್ತಿನೀಡಿದ ಸಂಗತಿ. ಶಿವಪುರ ಕಾಂಗ್ರೆಸ್ಸಿನ ವರೆಗೆ ನಾನು ಸೂಟು, ಟೈ, ಹ್ಯಾಟ್ ತೊಡುತ್ತಿದ್ದೆ. ಶಿವಪುರದಲ್ಲಿ 65 ಜೊತೆ ಎತ್ತುಗಳ ಅಲಂಕೃತ ಬಂಡಿಗಳ ಮೆರವಣಿಗೆ ನಡೆದಾಗಲೂ ಇದೇ ಬಟ್ಟೆ ತೊಟ್ಟಿದ್ದೆ. ಆದರೆ ಅನಂತರ ಖಾದಿ ಟೋಪಿ, ಧೋತರ ತೊಡಲು ಆರಂಭಿಸಿದೆ.

ಇದಕ್ಕೂ ಮೊದಲು ಜನರ ಶಾಂತ ಉತ್ಸಾಹವನ್ನು ಉದ್ರೇಕಿಸುವ ಅನೇಕ ಸಂಗತಿಗಳು ನಡೆದವು. ಕೆ. ಟಿ. ಭಾಷ್ಯಂ, ಎನ್. ಸಿ. ತಿಮ್ಮಾರೆಡ್ಡಿ ಮೊದಲಾದವರ ಬಂಧನ, ನರಿಮನ್‌ರ ಬಂಧನ, ಬಿ. ಎನ್. ಗುಪ್ತ ಅವರ ಗಡೀಪಾರು, ದಿವಾನರು ಊಟಿಯಲ್ಲಿ ಭೇಟಿ ನಿರಾಕರಿಸಿದ್ದು, ನಮ್ಮ ಪ್ರವಾಸದ ಹಿಂದೆಯೇ ದಿವಾನರು ಒಂದು ಡಜನ್ ಕಾರುಗಳ ಜೊತೆ ಎಲ್ಲೆಡೆ ಧೂಳೆಬ್ಬಿಸುತ್ತ ನಡೆದ ಪ್ರತಿಪ್ರವಾಸ, ಹೋದಲ್ಲೆಲ್ಲ ಅವರು ಕಾಂಗ್ರೆಸ್ಸಿನ ಬಗ್ಗೆ ನಡೆಸಿದ ಉದ್ರೇಕಕಾರಿ ಕೀಳು ಟೀಕೆಗಳು, ಮಹಾತ್ಮರ ಪತ್ರಕ್ಕೆ ಮಹಾರಾಜರು ಉತ್ತರ ಕೊಡದಿದ್ದುದು—ಇವೆಲ್ಲವೂ ದಿವಾನರ ನಿಷ್ಠ ಜನರ ಸಹಿತ ಎಲ್ಲರನ್ನೂ ಬಡಿದೆಬ್ಬಿಸಿ, ಶಿವಪುರ ಕಾಂಗ್ರೆಸ್ಸಿನ ಕಾಲಕ್ಕೆ ಸರಕಾರದ ವಿರುದ್ಧ ಹೋರಾಟಕ್ಕೆ ಯೋಗ್ಯ ವಾತಾವರಣ ಸೃಷ್ಟಿಸಿದ್ದವು.

ಶಿವಪುರ ಕಾಂಗ್ರೆಸ್‌ನ ತಯಾರಿ ನಡೆದಂತೆ, ಕಾಂಗ್ರೆಸ್ಸನ್ನು ಹತ್ತಿಕ್ಕಲು ದಿವಾನರು ಎಲ್ಲ ತಯಾರಿ ನಡೆಸಿದರು. ಪೋಲೀಸ್ ಪಡೆಯನ್ನು ಹೆಚ್ಚಿಸಿದರು. ಮದ್ರಾಸಿನಲ್ಲಿನ ಕುವಿಖ್ಯಾತನಾದ ಹ್ಯಾಮಿಲ್ಟನ್ ಎಂಬ ಅಧಿಕಾರಿಯನ್ನು ಇನ್ಸ್‌ಪೆಕ್ಟರ್-ಜನರಲ್ ಆಗಿ ಕರೆತಂದಿದ್ದರು. ಕುರುಕ್ಷೇತ್ರಯುದ್ಧಕ್ಕೆ ತಯಾರಿ ನಡೆದಂತೆ ಇತ್ತು. ಸರಕಾರ ಸೆ|| 144 ಜಾರಿ ಮಾಡಿದ್ದರೂ ಜನರ ಪ್ರವಾಹ ಶಿವಪುರಕ್ಕೆ ಬರುತ್ತಲೇ ಇತ್ತು : ರೈಲು, ಬಸ್ಸು, ಎತ್ತಿನ ಗಾಡಿಗಳಿಂದ. 10-4-1938ರಲ್ಲಿ ಅಧಿವೇಶನ ಗೊತ್ತಾಗಿದ್ದು ಧ್ವಜಾರೋಹಣ ಮೊದಲ ಕಾರ್ಯಕ್ರಮ. ಆಗಲೇ, 6-4-1938ಕ್ಕೆ ನನ್ನ ಭಾಷಣವನ್ನು ಕನ್ನಡ, ಇಂಗ್ಲಿಷ್‌ಗಳಲ್ಲಿ ಮುದ್ರಿಸಿ ಸಿದ್ಧಪಡಿಸಲಾಗಿತ್ತು.

ಅಧಿವೇಶನದ ಹಿಂದಿನ ದಿನ ನಾನು ಶಿವಪುರ ತಲಪಬೇಕೆಂದು ಸೂಚನೆ ಆಗಿದ್ದು, ನನ್ನ ಮಿತ್ರರೂ ಮಿರ್ಜಾರ ಸ್ನೇಹಿತರೂ ಆಗಿದ್ದ ಡಿ.ಎಂ.ಓ. ಡಾ|| ವರದ ಅಯ್ಯಂಗಾರ್ ನನ್ನ ಜೊತೆಯಲ್ಲೆ ಬೆಂಗಳೂರಿನಿಂದ ಶಿವಪುರದವರೆಗೆ ಬಂದರು. ಯಾವುದೇ ರೀತಿಯ ಸಂಘರ್ಷಕ್ಕೆ ಅವಕಾಶವಾಗಬಾರದೆಂಬುದು ಅವರ ಉದ್ದೇಶ. ದಾರಿಯಲ್ಲಿ ಎಲ್ಲೆಡೆ ಸಾರ್ವಜನಿಕರು ನನ್ನನ್ನು ಹರಸಲು ನೆರೆದಿದ್ದರು. ಕೆಂಗಲ್‌ನ ಲೆವೆಲ್ ಕ್ರಾಸಿಂಗ್ ಬಳಿ ಕೆ. ಹನುಮಂತಯ್ಯನವರು ರೈಲಿನಿಂದ ನನ್ನೆಡೆ ಕೈಬೀಸುವುದನ್ನು ಕಂಡೆ. ಶಿವಪುರ ತಲಪಿದಾಕ್ಷಣವೇ ಡಾ|| ವರದ ಅಯ್ಯಂಗಾರ್ ಒಮ್ಮೆಗೇ ನಾಪತ್ತೆ ಆದರು. ಅವರೂ ಆಗಿನ ಮೈಸೂರು ಜಿಲ್ಲಾ ಮ್ಯಾಜಿಸ್ಟ್ರೇಟ್ ಜಿ. ಎಂ. ಮೇಕ್ರಿ ಅವರೂ (ಶಿವಪುರವು ಆಗ ಮೈಸೂರು ಜಿಲ್ಲೆಯಲ್ಲೇ ಇತ್ತು ; ಮಂಡ್ಯ ಜಿಲ್ಲೆ ಆಮೇಲೆ ಆದುದು) ಪರಮಮಿತ್ರರಾಗಿದ್ದು ಮೇಕ್ರಿ ಅಲ್ಲಿ ಹಾಜರಿದ್ದುದರಿಂದ ಇವರು ಅವರಲ್ಲಿಗೆ ಹೋಗಿರಬೇಕು.

ಶಿವಪುರದಲ್ಲಿ ವಾತಾವರಣ ಉದ್ವಿಗ್ನವಾಗಿತ್ತು. 20.000 ಜನ ಆಗಲೇ ಬಂದು ಬಿಟ್ಟಿದ್ದರು. ಮೆರವಣಿಗೆ ನಡೆಯಬೇಕೇ, ಬೇಡವೆ? ಧ್ವಜಾರೋಹಣ ನಡೆಸಬೇಕೇ, ಬೇಡವೇ? ಈ ಬಗ್ಗೆ ತೀವ್ರಚರ್ಚೆ ಆಯಿತು. 144ನೆಯ ಸೆಕ್ಷನ್ ಭಂಗಿಸುವ ವಿಚಾರ ಪರಿಶೀಲನೆ ಆಯಿತು. ಕೆ. ಟಿ. ಭಾಷ್ಯಂ, ಎಚ್. ಸಿ. ದಾಸಪ್ಪ, ಕೆ. ಹನುಮಂತಯ್ಯ, ಕೆ. ಸಿ. ರೆಡ್ಡಿ, ಎಚ್. ಟಿ. ಗುಂಡಪ್ಪಗೌಡ, ವಿ. ವೆಂಕಟಪ್ಪ, ಡಿ. ಎಚ್. ಚಂದ್ರಶೇಖರಯ್ಯ, ಎಚ್. ಸಿದ್ದಯ್ಯ, ಡಿ. ಎಸ್. ಮಲ್ಲಪ್ಪ, ಬಳ್ಳಾರಿ ಸಿದ್ದಮ್ಮ, ಯಶೋಧರಾ ದಾಸಪ್ಪ, ಸುನಂದಾ ನರಸಿಂಹ ಅಯ್ಯಂಗಾರ್, ಪಾರ್ವತಮ್ಮ ಸಿದ್ದಲಿಂಗಯ್ಯ, ತಾಯಮ್ಮ ವೀರಣ್ಣಗೌಡ, ಎಚ್. ಕೆ. ವೀರಣ್ಣಗೌಡ, ಸಾಹುಕಾರ್ ಚನ್ನಯ್ಯ, ಬಂದಿಗೌಡ, ಪುಟ್ಟಸ್ವಾಮಿ, ತಿರುಮಲೆಗೌಡ, ಸ್ವಾಗತ ಸಮಿತಿಯ ಇತರ ಸದಸ್ಯರು ಇವರೆಲ್ಲ ಹಾಜರಿದ್ದರು. ಉದ್ವಿಗ್ನರಾಗಿ ಎಲ್ಲರೂ ಮಾತನಾಡುತ್ತಿದ್ದರು; ಗಂಟೆಗಟ್ಟಲೆ ವಾದಗಳಾದುವು. ಬಹುಪಾಲು ಜನ ಎಚ್ಚರಿಕೆಯ, ಮಂದನೀತಿಯ ಪ್ರತಿಪಾದಕರು. ನನಗೆ ನೆನಪಿರುವಂತೆ ಸ್ತ್ರೀಯರು ತೀವ್ರಗಾಮಿ ನೀತಿಯನ್ನು ಬಲವಾಗಿ ಪ್ರತಿಪಾದಿಸಿ ಮುಂದಾಗಲು, ಪುರುಷರಿಗೆ ಸರಕಾರದ ಆಹ್ವಾನವನ್ನು ಸ್ವೀಕರಿಸುವುದರ ವಿನಾ ಬೇರೆ ಮಾರ್ಗ ಉಳಿಯಲಿಲ್ಲ. ಈ ನಿರ್ಣಯವಾದ ಕೂಡಲೇ ಕೆಲವು ನಾಯಕರು ಶಿಬಿರವನ್ನು ತ್ಯಜಿಸಿಹೋದರೆಂದು ನಾನು ಕೇಳಿದೆ. ಗಾಂಧೀ ಟೋಪಿಯನ್ನು ಮೊದಲ ಬಾರಿ ಹಾಕಿಸಿ ನನ್ನನ್ನು ಮೆರವಣಿಗೆಯಲ್ಲಿ ಕರೆದೊಯ್ದರು. ಎತ್ತಿನ ಗಾಡಿಗಳ ಸಾಲು ಹೊಂದಿದ ಈ ಮೆರವಣಿಗೆ ಅರ್ಧಮೈಲು ಉದ್ದವಿರಬೇಕು. ರಾಷ್ಟ್ರೀಯ ಗೀತೆಗಳೊಡನೆ ಮೆರವಣಿಗೆ ಶಾಂತವಾಗಿ ನಡೆಯಿತು. ಜನ ಜಂಗುಳಿಯ ದಟ್ಟಣೆ ಹಾಗೂ ಆಗಿನ ಅವರ ಶಿಸ್ತನ್ನು ಕಂಡು ಎಲ್ಲರೂ ಅಚ್ಚರಿಪಟ್ಟರು.

ರಾತ್ರಿಯೆಲ್ಲ ಬಂದ ಜನಕ್ಕೆ ಮನಃಶಾಂತಿಯೂ ನಿದ್ರೆಯೂ ಇರಲಿಲ್ಲ. ಆಗಲೇ ಪೋಲೀಸ್ ಪಡೆ—600 ರಿಜರ್ವ್ ಪೋಲೀಸರು, 1,000 ಕಾನ್ಸ್ಟೆಬಲ್‌ಗಳು—ಸಿದ್ಧವಾಗಿತ್ತು. ಗಾಂಧೀಜಿಯ ತತ್ತ್ವವನ್ನು ಸ್ವೀಕರಿಸಿದ ನಾವು, ಪುರುಷರೂ ಸ್ತ್ರೀಯರೂ ಮಕ್ಕಳೂ, ಪ್ರಾಣತ್ಯಾಗಕ್ಕಾದರೂ ಸಿದ್ಧರಾಗಿದ್ದೆವು.

## ಧ್ವಜಾರೋಹಣ

ಮರುದಿನ ಬೆಳಗಿನ ಸನ್ನಿವೇಶ ಗೀತೆಯಲ್ಲಿ ವರ್ಣಿತವಾದ ಪ್ರಸಂಗದಂತೆ ಇತ್ತು. ಉಭಯ ಪಕ್ಷಗಳೂ ಸಿದ್ಧವಾದುವು. ಧ್ವಜಸ್ತಂಭವು ಸಿದ್ಧವಾಗಿದ್ದು ಅದರ ಸುತ್ತ 10 ಅಡಿ ಎತ್ತರದ ವೇದಿಕೆಯನ್ನು ಸ್ಥಾಪಿಸಲಾಗಿತ್ತು. ನೂರಾರು ಸ್ವಯಂಸೇವಕರು ಧ್ವಜದ ಗೌರವರಕ್ಷಣೆಗಾಗಿ ಕಾದಿದ್ದರು. ಅದರ ಸುತ್ತ 50,000 ದೇಶಭಕ್ತ ನಿಷ್ಕಪಟ ಜನ —ಪುರುಷರು, ಸ್ತ್ರೀಯರು, ಮಕ್ಕಳು—ನೋಡುತ್ತ, ಮೌನ ಪ್ರಾರ್ಥನೆ ಮಾಡುತ್ತ, ಮುಂದಿನ ಕ್ಷಣ ಏನಾದೀತೆಂದು ತಳಮಳಿಸುತ್ತ ನಿಂತರು. 8-30ಕ್ಕೆ ಸರಿಯಾಗಿ ಧ್ವಜ ಆರೋಹಿಸಬೇಕು. ನಾನು ಧ್ವಜದ ದಾರವನ್ನು ಸ್ಪರ್ಶಿಸಿದ ತಕ್ಷಣವೇ ಗೋಲೀಬಾರ್

ಆಗುವುದೆಂದು ಬದಂತಿ ! ಎತ್ತೆತ್ತಲೂ ಅನಿಶ್ಚಿತತೆಯ ವಾತಾವರಣ. ನಾನು, ಜಿ.ಓ.ಸಿ. ಎಂ. ಎಸ್. ಜೋಯಿಸರ ಜೊತೆ, ಎಲ್ಲರ ಕಣ್ಣುಗಳು ನಮ್ಮೆಡೆ ಕೇಂದ್ರೀಕೃತವಾಗಿದ್ದಂತೆ, ಧ್ವಜದ ವೇದಿಕೆಯೇರಿ ಧ್ವಜದ ದಾರ ಎಳೆದೆ. ಜೋಯಿಸರು ಧ್ವಜವನ್ನು ಏರಿಸಿದರು. ಸುನಂದಮ್ಮ, ಇಡೀ ಜನಸಮೂಹ ನಿಶ್ಚಲವಾಗಿ ನಿಂತಿರಲು, ತಮ್ಮ ಭವ್ಯ ಮಧುರ ಕಂಠದಿಂದ 'ವಂದೇ ಮಾತರಂ' ಹಾಡಿದರು. ನೆರೆದ ಜನ ಅನಂತರ ಎಷ್ಟೊಂದು ಶಿಸ್ತಿನ ಶಾಂತತೆಯಿಂದ ಕುಳಿತುಕೊಂಡರೆಂದರೆ, ಇತಿಹಾಸದಲ್ಲಿ ಇಂಥ ಘಟನೆಯನ್ನು ನಾನು ಎಲ್ಲೂ ಕಾಣೆ.

ಜಲಿಯನ್‌ವಾಲಾ ಬಾಗ್ ದುರಂತದ ಒಂದು ಪುನರಾವರ್ತನೆ ಆಗದೆಹೋಯಿತು!

ನನ್ನ ಮತ್ತು ಎಂ. ಎಸ್. ಜೋಯಿಸರ ಬಂಧನಕ್ಕೆ ವಾರಂಟ್ ಇರುವುದಾಗಿ ಪೋಲೀಸರು ತಿಳಿಸಿದರು. ಇದು ಪ್ರತಿಬಂಧಕಾಜ್ಞೆಯನ್ನು ಭಂಗಿಸಿದ್ದಕ್ಕಾಗಿ. "ಸಿಟ್ಟಿಗೇಳ ಬೇಡಿ, ಹಿಂಸಾಚಾರಕ್ಕೆ ಕೈಯಿಕ್ಕಬೇಡಿ, ಗಾಂಧೀಜಿಯ ಮಾರ್ಗದಲ್ಲಿ ಧ್ವಜಸತ್ಯಾಗ್ರಹ ಮುಂದುವರಿಸಿ" ಎಂದು ನೆರೆದಿದ್ದ ಜನಸಾಗರವನ್ನು ವಿನಂತಿಸಿ, ನನ್ನ ಅನಂತರ ಎಚ್. ಸಿ. ದಾಸಪ್ಪನವರನ್ನು ನನ್ನ ಉತ್ತರಾಧಿಕಾರಿ ಹಾಗೂ ಪ್ರಥಮ ಡಿಕ್ಟೇಟರ್ ಎಂದು ಘೋಷಿಸಿ ನಾವು ವೇದಿಕೆಯನ್ನು ತ್ಯಜಿಸಿ, ಪೋಲೀಸರ ಕಾವಲಿನಲ್ಲಿ ತೆರಳಲು, ನಮ್ಮನ್ನು ವಾಹನವೇರಿಸಿ ಮಂಡ್ಯ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಒಯ್ದರು. ನಾವು ಅಪಾದನೆಯನ್ನು ಒಪ್ಪಿಕೊಳ್ಳಲು ಆರು ತಿಂಗಳ ಕಠಿಣ ಶಿಕ್ಷೆ ವಿಧಿಸಿದರು. ಜೈಲು ವಾಸವನ್ನು ನಾವು ಮೈಸೂರು ಜೈಲಿನಲ್ಲಿ ಕಳೆದೆವು. ಮುಂದೆ ಎರಡು ವಾರಗಳ ತನಕ ಶಿವಪುರದಲ್ಲಿ ಧ್ವಜಸತ್ಯಾಗ್ರಹ ನಡೆದು ದಾಸಪ್ಪ, ಡಾ|| ಪಾರ್ಥನಾರಾಯಣ ಪಂಡಿತ್, ಕೆ. ಸಿ. ರೆಡ್ಡಿ, ವಿ. ವೆಂಕಟಪ್ಪ, ಕೆ. ಟಿ. ಭಾಷ್ಯಂ ಹಾಗೂ ಇತರರು ಬಂಧಿತರಾದರು. ಏಪ್ರಿಲ್ 27ಕ್ಕೆ ಕೆಂಗಲ್ ಹನುಮಂತಯ್ಯ ಹಾಗೂ ಮಳವಳ್ಳಿ ವೀರಪ್ಪ ಬಂಧಿತರಾದರು. ಇದು ಅಲ್ಲಿನ ಕೊನೆಯ ಘಟನೆ. ಇದರಂತೆ ಎಲ್ಲ ಜಿಲ್ಲೆಗಳಲ್ಲೂ ಧ್ವಜಸತ್ಯಾಗ್ರಹ ನಡೆದು ನೂರಾರು ಜನರು ಬಂಧಿತರಾದರು. ಎಲ್ಲೆಡೆ ಜೈಲುಗಳು ತುಂಬಿ, ಬಯಲು ಜೈಲುಗಳಲ್ಲೂ ಸತ್ಯಾಗ್ರಹಿಗಳನ್ನಿಟ್ಟು ಕೆರೆ ಅಗೆಯಲು ಹಚ್ಚಿದರು. ಸತ್ಯಾಗ್ರಹಿಗಳನ್ನು ಜೈಲರುಗಳು ನಿರ್ದಯವಾಗಿ ಹೊಡೆದರಲ್ಲದೆ, ನೆರಳು, ಬಟ್ಟೆ, ಔಷಧಗಳಿಲ್ಲದೇ ಚಿತ್ರ ಹಿಂಸೆಗೊಳಪಡಿಸಿದರು. ಶಿವಮೊಗ್ಗೆಯ ತರುಣ ಪ್ರಹ್ಲಾದ ಶೆಟ್ಟಿ ಹಾಗೂ ಕಾನಕಾನ ಹಳ್ಳಿ ಸಣ್ಣಹರಪ್ಪ ಜೈಲಿನಲ್ಲಿ ಸತ್ತರು. ಸತ್ಯಾಗ್ರಹವು ಕಾಡುಕಿಚ್ಚಿನಂತೆ ಹಬ್ಬಿತು. ನಿಷೇಧಾಜ್ಞೆ ಹಾಗೂ ಪೋಲೀಸರ ಕ್ರಮಗಳಿಂದ ಜನ ರೊಚ್ಚಿಗೆದ್ದರು. ಸರಕಾರದ ಎಲ್ಲ ಕ್ರೋಧವೂ ಕೇಂದ್ರೀಕೃತವಾಗಿ ವಿದುರಾಶ್ವತ್ಥದಲ್ಲಿ ದುರಂತವಾಗಿ, ಸರಕಾರ ತಲೆ ತಗ್ಗಿಸುವಂತೆ ಆಯಿತು, 20,000 ಜನರಿದ್ದ ಶಾಂತ ಗುಂಪಿನ ಮೇಲೆ ಗುಂಡು ಹಾರಿಸಿದರು (24-4-1938). ಇಡೀ ದೇಶ ಮೈಸೂರು ಸರಕಾರವನ್ನು ಖಂಡಿಸಿತು ; ಮೈಸೂರು ಸರಕಾರದ ವಿರುದ್ಧ ಸಿಡಿದೆದ್ದಿತು. ಈ ಪ್ರಸಂಗದಲ್ಲಿ ಮಹಾತ್ಮರು ರಾಜ್ಯದ

ಪರಿಸ್ಥಿತಿಯ ಪರಿಶೀಲನೆಗೆ ಕೃಪಾಲನಿ ಮತ್ತು ವಲ್ಲಭಭಾಯಿ ಅವರನ್ನು ಕಳುಹಿಸಿದ್ದರು. ಅವರು 6-5-1938ಕ್ಕೆ ಇಲ್ಲಿಗೆ ಬಂದರು. ಶಿವಪುರದಲ್ಲಿ ನಮ್ಮ ಯಶ ಹಾಗೂ ಸರಕಾರದ ಅಪಯಶದಿಂದ ಸರಕಾರಕ್ಕಾದ ಸಿಟ್ಟನ್ನು ಅದು ವಿದುರಾಶ್ವತ್ಥದಲ್ಲಿ ತೀರಿಸಿಕೊಂಡಿತೆಂದು ಪ್ರತಿಯೊಬ್ಬರಿಗೆ ಅನಿಸಿತು.

ಶಿವಪುರದಲ್ಲಿ ಕಾಂಗ್ರೆಸ್ಸಿನ ಯಶಸ್ಸು ಸರ್ಕಾರದ ಪ್ರತಿಷ್ಠೆಗೆ ಭಾರೀ ಏಟಾಗಿ, ಗಾಂಧೀಜಿಯ ಮಾರ್ಗದಲ್ಲಿ ಅತ್ಯಂತ ಶಾಂತಿಯಿಂದ ಸತ್ಯಾಗ್ರಹ ನಡೆಸಿ, ನೆರೆದ ಜನರನ್ನು ಶಿಸ್ತಿನಿಂದ ಹಿಡಿದಿಟ್ಟ ಬಗ್ಗೆ ನಮಗೆ ಎಲ್ಲೆಡೆಯಿಂದ ಅಭಿನಂದನೆಗಳು ಬಂದವು. ಗೋಲೀಬಾರು ಮಾಡಲು ದಿವಾನರು ತಿಳಿಸಿದ್ದರೂ ಹಾಗೆ ಮಾಡದ ಜಿಲ್ಲಾ ಮ್ಯಾಜಿಸ್ಟ್ರೇಟ್ ಮೇಕ್ರಿ ಅವರ ಬಗ್ಗೆ ಮಹಾರಾಜರೂ ಮೆಚ್ಚಿಗೆ ಸೂಚಿಸಿ ಅವರಿಗೆ ಬಂಗಾರದ ಗುಂಡಿಗಳನ್ನು ಮೆಚ್ಚುಕೊಟ್ಟರು.

ಆಗಸ್ಟ್ 1937ರಿಂದ ಏಪ್ರಿಲ್ 1938ರ ಒಳಗಿನ ಅಲ್ಪಕಾಲದಲ್ಲಿ ಕಾಂಗ್ರೆಸ್ಸು ರಾಜ್ಯದಲ್ಲಿ ಭಾರೀ ಪ್ರಗತಿ ಸಾಧಿಸಿ, ಸರಕಾರವು ಎಣಿಕೆಗೆ ತೆಗೆದುಕೊಳ್ಳಬೇಕಾದ ಶಕ್ತಿಯಾಗಿ ನಿಂತಿತ್ತು.

ಗಾಂಧೀಜಿ ಸಂಸ್ಥಾನಗಳಲ್ಲಿ ಚಳವಳಿ ನಡೆಸಲು ವಿರೋಧವಾಗಿದ್ದರು. ರಾಜರುಗಳ ಬಗ್ಗೆ ಅವರಿಗೆ ಒಲವಿದ್ದು, ಮೈಸೂರು ಮಹಾರಾಜರ ಬಗ್ಗೆಯಂತೂ ಈ ಭಾವನೆ ವಿಶೇಷವಾಗಿತ್ತು. ಸಂಸ್ಥಾನಗಳ ಜನ ಚಳವಳಿ ನಡೆಸಲು ಸಮರ್ಥರಾಗಿಲ್ಲವೆಂದು ಅವರು ಭಾವಿಸಿದ್ದರು. ಆದರೆ ಸುಭಾಸ್, ನೆಹರೂ, ಪಟ್ಟಾಭಿ ಮತ್ತು ಇತರ ನಾಯಕರು ವೈಯಕ್ತಿಕವಾಗಿ ಚಳವಳಿ ನಡೆಸುವ ಬಗ್ಗೆ ಅನುಕೂಲಾಭಿಪ್ರಾಯವನ್ನು ಹೊಂದಿದ್ದರು. ನಾವು ಗಾಂಧೀಜಿಯವರನ್ನು ಕಂಡು ಅವರಿಂದ ಮಹಾರಾಜರಿಗೆ ಪತ್ರವನ್ನು ಮುಟ್ಟಿಸಿದಾಗ ಅದಕ್ಕೆ ಉತ್ತರ ಬಾರದಿರಲು, ಸತ್ಯಾಗ್ರಹ ಮಾಡಿದ್ದೆವು. ಇದರಿಂದ ಸಂಸ್ಥಾನಗಳ ಬಗೆಗೆ ಅ.ಭಾ. ಕಾಂಗ್ರೆಸ್ಸಿನ ನೀತಿಯಲ್ಲಿ ಬದಲಾವಣೆಯಾಯಿತು. ದೇಶದ ಎಲ್ಲ ಸಂಸ್ಥಾನಗಳ ಪ್ರಜೆಗಳೂ ಶಿವಪುರ ಕಾಂಗ್ರೆಸ್ಸಿನ ಬಗ್ಗೆ ಸಂತೋಷವನ್ನು ಸೂಚಿಸಿದರು. ಸ್ವಾತಂತ್ರ್ಯದ ಮುಂದಣ ಹೋರಾಟಗಳಲ್ಲಿ ಬ್ರಿಟಿಷ್ ಪ್ರಾಂತಗಳ ಜೊತೆ ಸಮಾನಪಾಲುಗಾರರಾಗಿ ಸಂಸ್ಥಾನದ ಪ್ರಜೆಗಳನ್ನೂ ಸ್ವಾಗತಿಸಲಾಯಿತು.

## ಪಟೇಲ್-ಮಿರ್ಜಾ ಒಪ್ಪಂದ

ವಿದುರಾಶ್ವತ್ಥ ದುರಂತದಿಂದ ದಿವಾನರೂ ಧೃತಿಗೆಟ್ಟು ಮಹಾತ್ಮರ ಮಧ್ಯಸ್ಥಿಕೆಗೆ ಮನವಿ ಸಲ್ಲಿಸುವಂತಾದ ಪ್ರಸಂಗ ಬಂದು, ಕೃಪಾಲನಿ ಮತ್ತು ವಲ್ಲಭಭಾಯಿ ಅವರು ಸಂಸ್ಥಾನಕ್ಕೆ ಬರಲು, ಅವರುಗಳು ದುರಂತ ನಡೆದ ಸ್ಥಳಗಳಿಗೂ ಜೈಲುಗಳಿಗೂ ಭೇಟಿ ನೀಡಿದರಲ್ಲದೆ ಸರಕಾರದ ಗಣ್ಯರನ್ನೂ ಕಾಂಗ್ರೆಸ್‌ನ ನಾಯಕರನ್ನೂ ಕಂಡರು. ಇದು ಮೇ 6ರಿಂದ 9ರ ವರೆಗೆ ಮೂರು ದಿನಗಳಲ್ಲಿ ಆಯಿತು. (ಪಟೇಲರು ಮಿರ್ಜಾರ ಜೊತೆ

5 ಅಂಶಗಳ ಒಪ್ಪಂದ ಒಂದನ್ನು ಮಾಡಿಕೊಂಡರು—ಸಂ||) ಇದರ ಹಿಂದೆಯೇ ಎಲ್ಲ ಕಾಂಗ್ರೆಸ್ಸಿಗರನ್ನೂ 13-5-1938ರಲ್ಲಿ ಬಿಡುಗಡೆಮಾಡಿದರು. ಶಿವಪುರ ಸತ್ಯಾಗ್ರಹವು ಹೀಗೆ ಒಂದು ಭಾರಿ ವಿಜಯವಾಗಿ ಮೈಸೂರು ರಾಜ್ಯವನ್ನು ಎಲ್ಲೆಡೆ ಮೆಚ್ಚುವಂತೆ ಆಯಿತು. ಈ ಕಾಲದಲ್ಲಿ ಪಟೇಲ್ ಮತ್ತು ಮಿರ್ಜಾರ ನಡುವೆ ಆದ ಒಪ್ಪಂದದಂತೆ ಮೈಸೂರು ಕಾಂಗ್ರೆಸ್ಸನ್ನು ಶಾಸನಬದ್ಧ ಪಕ್ಷವಾಗಿ ಮಾನ್ಯಮಾಡಲಾಯಿತಲ್ಲದೆ ಸಾರ್ವಜನಿಕ ಸಮಾರಂಭಗಳಲ್ಲಿ ರಾಷ್ಟ್ರಧ್ವಜವನ್ನೂ ಹಾರಿಸಲು ಅನುಮತಿ ದೊರೆಯಿತು. ಇದು ನಮ್ಮ ಪಾಲಿಗೆ 'ಮ್ಯಾಗ್ನಾ ಕಾರ್ಟಾ' ಇದ್ದಂತೆಯೇ ಇತ್ತು. ನಮ್ಮ ಉತ್ಸಾಹ ಇದರಿಂದ ಹೆಚ್ಚಿತು.

ಇದೇ ಕಾಲಕ್ಕೆ ವಿದುರಾಶ್ವತ್ಥ ದುರಂತದ ವಿಚಾರಣೆಗೆ ಸರಕಾರವು ರಮೇಶಂ ಸಮಿತಿಯನ್ನು ನೇಮಿಸಿತು. ದಿ|| ಎಲ್. ಎಸ್. ರಾಜು ಸಾರ್ವಜನಿಕರ ಪರವಾಗಿ ಖಟ್ಲೆಯನ್ನು ನಡೆಸಿದರಲ್ಲದೆ ಪತ್ರಿಕೆಗಳೂ ಈ ಕುರಿತು ಸಾಕಷ್ಟು ಪ್ರಚಾರ ನೀಡಿದವು. ಆದರೆ ಕೊನೆಗೆ ತಯಾರಾದ ವರದಿ ಎಲ್ಲೆಡೆ ಖಂಡನೆಗೆ ಒಳಗಾಗಿ, ಸರಕಾರದ ನೈತಿಕ ಸ್ಥಾನಮಾನಕ್ಕೆ ಚ್ಯುತಿಬಂದಿತು. ಪಟೇಲ್-ಮಿರ್ಜಾ ಒಪ್ಪಂದದಂತೆ ರಾಜಕೀಯ ಸುಧಾರಣಾ ಸಮಿತಿಯಲ್ಲಿ (ಶ್ರೀನಿವಾಸಯ್ಯಂಗಾರ್ ಸಮಿತಿ—ಸಂ||) 7 ಕಾಂಗ್ರೆಸ್ಸಿಗರಿಗೆ ಸ್ಥಾನ ನೀಡಬೇಕೆಂಬ ಅಂಶವನ್ನು ಸರಕಾರ ಗಮನಿಸಿದ್ದರಿಂದ, ಸಮಿತಿಯಲ್ಲಿದ್ದ ನಮ್ಮ ಪ್ರತಿನಿಧಿಗಳನ್ನು ನಾವು ಹಿಂದೆಗೆದುಕೊಂಡೆವು. ಸರಕಾರವು ಒಪ್ಪಂದವನ್ನು ಮುರಿದರೂ ನಾವು ಅದರ ಪರ ಜನಾಭಿಪ್ರಾಯವನ್ನು ರೂಪಿಸುತ್ತ ನಡೆದೆವು.

ಮೇಯಲ್ಲಿ ನನ್ನ ಬಿಡುಗಡೆ ಆದ ಕೂಡಲೇ, ಶಿವಪುರದ ಕೊನೆಯ ಬಂಧನಗಳ ನಂತರ ಮೈಸೂರು ಕಾಂಗ್ರೆಸ್ಸಿನ ಪ್ರಮುಖರಾಗಿ ನೇಮಿತರಾಗಿದ್ದ ಎಚ್. ಬಿ. ಗುಂಡಪ್ಪ ಗೌಡರಿಂದ ನಾನು ಮತ್ತೆ ಅಧಿಕಾರ ಪಡೆದುಕೊಂಡು 1938-39ಕ್ಕೆ ಈ ಕೆಳಗಿನ ಕಾರ್ಯಸಮಿತಿಯನ್ನು ನೇಮಿಸಿದೆ. ನಾನೇ ಅಧ್ಯಕ್ಷನಾಗಿದ್ದ ಈ ಸಮಿತಿಯಲ್ಲಿ ಸಾಹುಕಾರ್ ಚನ್ನಯ್ಯ (ಕೋಶಾಧಿಕಾರಿ), ವಿ. ಎಸ್. ನಾರಾಯಣರಾವ್, ಎಂ. ಎನ್. ಜೋಯಿಸ್, ಎಚ್. ಸಿದ್ದಯ್ಯ, ಎಚ್. ಕೆ. ವೀರಣ್ಣಗೌಡ, ಕೆ. ಪಟ್ಟಾಭಿರಾಮನ್, ಎಸ್. ನಿಜಲಿಂಗಪ್ಪ, ಡಿ. ಎಸ್. ಮಲ್ಲಪ್ಪ, ತಗಡೂರು ರಾಮಚಂದ್ರರಾವ್, ಕೆ. ಟಿ. ಸತ್ಯನಾರಾಯಣ ಶೆಟ್ಟಿ, ಕೆ. ಚಂಗಲರಾಯ ರೆಡ್ಡಿ (ಕಾರ್ಯದರ್ಶಿ), ಎ. ಜಿ. ರಾಮ ಚಂದ್ರರಾವ್, ಎಚ್. ಆರ್. ಗುರುವಾರೆಡ್ಡಿ—ಇವರುಗಳಿದ್ದರು.

ಇಲ್ಲಿ ಹೊಸದಾಗಿ ಕಾರ್ಯದರ್ಶಿಯಾಗಿ ಆಯ್ಕೆಗೊಂಡ ಕೆ. ಚಂಗಲರಾಯರೆಡ್ಡಿಯವರ ವಿಚಾರ ಸ್ವಲ್ಪ ಹೇಳಬೇಕು. ನಾನು ಅವರನ್ನು ಮೊದಲು ಭೇಟಿಯಾದದ್ದು 1929ರಲ್ಲಿ ಮದ್ರಾಸಿನಲ್ಲಿ. ಆಗಿನ 'ಡಯಾರ್ಕಿ' ಪದ್ಧತಿಯಂತೆ ಆಯ್ಕೆಯಾಗಿ ಮದ್ರಾಸಿನಲ್ಲಿ ಮಂತ್ರಿಯಾಗಿದ್ದ ಬಳ್ಳಾರಿಯ ರಂಗನಾಥ ಮುದಲಿಯಾರ್ ಅವರು, ರೆಡ್ಡಿಯವರನ್ನು ಕುರಿತು, "ನೋಡಿ, ಇವರು ನಮ್ಮ ಮುಂದಿನ ವಿವೇಕಾನಂದ. ತಮ್ಮ ಪತ್ನಿಯ

ಮರಣದಿಂದ ವ್ಯಥಿತರಾಗಿ ಅವರು ಇಲ್ಲಿ ಇದ್ದಾರೆ" ಎಂದು ನನಗೆ ಪರಿಚಯ ಮಾಡಿಸಿ ಕೊಟ್ಟರು. ಆಗಿನಿಂದ ನನ್ನದು ಅವರ ಮೇಲೆ ಪ್ರೇಮ, ವಿಶ್ವಾಸ. ನನ್ನ ಸಹಪಾಠಿ ಗುರುಮಾರೆಡ್ಡಿಯವರ ಮಗಳು ಸರೋಜಮ್ಮನ ಜೊತೆ 1934ರಲ್ಲಿ ಅವರ ಮದುವೆ ಆದಾಗ ನಾನು ಅವರನ್ನು ಮತ್ತೆ ಕಂಡಿದ್ದೆ. ಅವರ ಜೀವನದಲ್ಲಿ ಪ್ರತಿಯೊಂದು ಸಂಗತಿಯೂ ಜ್ಯೋತಿಷ್ಯರಿಂದ ಭವಿಷ್ಯ ಹೇಳಲ್ಪಟ್ಟಂತೆ ನಡೆದಿದೆಯಲ್ಲದೆ ಅವರ ಜೀವನ ಪರಿಪೂರ್ಣ ವಾಗಿದೆ. ಅವರು ದೇವರಲ್ಲಿ ವಿಶ್ವಾಸವುಳ್ಳವರು.

ರೆಡ್ಡಿಯವರು ಕೋಲಾರ ಜಿಲ್ಲಾ ಬೋರ್ಡ್ ಅಧ್ಯಕ್ಷರಾಗಿದ್ದ ಕಾಲದಲ್ಲಿ ನಾನು, ಬಿ. ಎನ್. ಗುಪ್ತ ಮತ್ತು ವೆಂಕಟಪತಯ್ಯನವರು ಅವರನ್ನು ಕಾಂಗ್ರೆಸ್ಸಿನಲ್ಲಿ ಸೇರಿಸಿ ಕೊಳ್ಳಲೆಂದು ನಂದಿ ಬೆಟ್ಟಕ್ಕೆ ಹೋಗಿರಲು, ತಮ್ಮ ಅಣ್ಣನ ಅನುಮತಿ ಪಡೆಯದೆ ತಾವು ಕಾಂಗ್ರೆಸ್ ಸೇರುವುದಿಲ್ಲವಾಗಿ ಅವರು ತಿಳಿಸಿದರು. ಮುಂದೆ ನಾನು ಕ್ಯಾಂಸಬಳ್ಳಿಗೇ ಹೋಗಿ ಅವರ ಅಣ್ಣ ವೆಂಕಟರಾಮ ರೆಡ್ಡಿಯವರ ಅನುಮತಿ ಪಡೆದೆವು. "ನಾನೊಬ್ಬನೇ ಕಾಂಗ್ರೆಸ್ ಸೇರಿದರೆ ಏನು ಪ್ರಯೋಜನ?" ಎಂದು, ಮುಂದೆ ಅವರು ಇಡೀ ತಮ್ಮ ಪಕ್ಷವನ್ನೇ ಕಾಂಗ್ರೆಸ್ಸಿನಲ್ಲಿ ತಂದರು.

ಹೊಸ ಕಾರ್ಯಸಮಿತಿಯ ರಚನೆಯ ನಂತರ ಸರಕಾರದ ಈ ಕೆಳಗಿನ ವಿಫಲತೆಗಳ ವಿರುದ್ಧ ಚಳವಳಿ ಆರಂಭಿಸಿದೆವು :

1. ಬಿ. ಎನ್. ಗುಪ್ತ ಮತ್ತು ಸಿ. ಬಿ. ವೊಣ್ಣಯ್ಯ ಅವರ ವಿರುದ್ಧ ಹೇರಿದ ಗಡೀಪಾರು ಆಜ್ಞೆಯನ್ನು ಹಿಂದೆಗೆಯದ್ದು; 2. ಮೈಸೂರು ನಗರದಲ್ಲಿ ಪ್ರತಿಬಂಧಕ ಆಜ್ಞೆಯನ್ನು ಹಿಂದೆಗೆಯದ್ದು; 3. 'ಪ್ರಜಾಮತ' ಮತ್ತು 'ಪ್ರಜಾಶಕ್ತಿ' ಸಾಪ್ತಾಹಿಕಗಳ ಮೇಲೆ ಪ್ರತಿಬಂಧವನ್ನು ಹೇರಿದ್ದು; 4. ಪತ್ರಿಕಾ ಕಾನೂನು ತಿದ್ದುಪಡಿ ಮಸೂದೆಯನ್ನು ಶಾಸನಸಭೆಯಲ್ಲಿ ಮಂಡಿಸಿದ್ದು; 5. ಪಟೇಲರು, ಶಾನುಭೋಗರು, ಉಪಾಧ್ಯಾಯರುಗಳನ್ನು ರಾಜಕೀಯ ಕಾರಣಗಳಿಗಾಗಿ ಹುದ್ದೆಯಿಂದ ಕಿತ್ತುಹಾಕಿದ್ದು; 6. ರಮೇಶಂ ಸಮಿತಿಯ ಎದುರು ಕಾಂಗ್ರೆಸ್ಸನ್ನು ಟೀಕಿಸಿದ್ದು; 7. ಸುಧಾರಣಾ ಸಮಿತಿಯಲ್ಲಿ ಭೂಪಾಲಂ ಅವರ ಬದಲಿಗೆ ಸಿದ್ದಯ್ಯ ಅವರನ್ನು ಸೇರಿಸದ್ದು; 8. ಮಹಾರಾಜರ ನೇತೃತ್ವದಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆಯ ವಿಚಾರವನ್ನು ಸುಧಾರಣಾ ಸಮಿತಿಯಲ್ಲಿ ಪೂರ್ತಿಯಾಗಿ ಮತ್ತು ಅಡೆತಡೆಯಿಲ್ಲದೆ ಚರ್ಚಿಸಲು ಅವಕಾಶ ನೀಡದ್ದು.

ಸುಧಾರಣಾ ಸಮಿತಿಯನ್ನು ಬಾಯ್‌ಕಾಟ್ ಮಾಡುವುದೂ ನಮ್ಮ ಕಾರ್ಯಕ್ರಮ ಗಳಲ್ಲಿ ಒಂದಾಗಿತ್ತು. ಇದರಿಂದಾಗಿ, ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ, ಜಿಲ್ಲಾ ಬೋರ್ಡು ಮತ್ತು ಮುನಿಸಿಪಾಲಿಟಿಗಳಲ್ಲಿನ ಎಲ್ಲ ಕಾಂಗ್ರೆಸ್ ಸದಸ್ಯರೂ ರಾಜೀನಾಮೆ ನೀಡಲು ಕರೆಕೊಟ್ಟೆವು. ಇದರ ಪರಿಣಾಮವಾಗಿ ಕಾಂಗ್ರೆಸ್ಸಿಗರೇ ಅಲ್ಲದೆ ಅನೇಕ ಕಾಂಗ್ರೆಸ್ಸೇತರರೂ ಸಹಾನುಭೂತಿಪರರಾಗಿ, ರಾಜೀನಾಮೆ ನೀಡಿದರು.

ಹೀಗೆ, ಎಲ್ಲೆಡೆ ಜಿಲ್ಲಾ ಮತ್ತು ತಾಲ್ಲೂಕು ಕಾಂಗ್ರೆಸ್ ಸಮಿತಿಗಳನ್ನು ರಚಿಸಿ ಕಾಂಗ್ರೆಸ್ ಬಲಶಾಲಿಯಾಯಿತು. ಇದಲ್ಲದೆ, ದಿವಾನರ ಸಲಹೆಯಿಂದಾಗಿ ಅಧಿಕಾರಿಗಳು ಕಾಂಗ್ರೆಸ್ಸನ್ನು ಸೋಲಿಸಲು ಎಲ್ಲ ರೀತಿಯಿಂದ ಯತ್ನಿಸಿದರೂ ಕಾಂಗ್ರೆಸ್ಸು ಎಲ್ಲ ಚುನಾವಣೆಗಳಲ್ಲಿ ಜಯಶಾಲಿಯಾಗುತ್ತ ಬಂದಿತು. ಈ ಕಾಲದಲ್ಲಿ ಎಲ್ಲ ರೀತಿಯಿಂದ ಮಾರ್ಗದರ್ಶನ, ನಾಯಕತ್ವ ಒದಗಿಸಿದ ಡಾ|| ಹರ್ಡೀಕರ್, ಕಮಲಾದೇವಿ ಚಟ್ಟೋಪಾಧ್ಯಾಯ ಮತ್ತು ಡಾ|| ಪಟ್ಟಾಭಿ ಸೀತಾರಾಮಯ್ಯ ಮುಂತಾದವರನ್ನು ಇಲ್ಲಿ ನೆನೆಯಬೇಕು.

ನನ್ನ ನಾಯಕತ್ವದ ಈ ಅಲ್ಪಕಾಲದಲ್ಲಿ ನಾನು ಪೂರ್ಣಕಾಲೀನ ಕಾರ್ಯಕರ್ತನಾಗಿದ್ದೆ. ನನಗೆ ಬೇರಾವ ಉದ್ಯೋಗ, ಹವ್ಯಾಸಗಳೂ ಇರಲಿಲ್ಲ. ಇಡೀ ಸಂಸ್ಥಾನದಲ್ಲಿ ಆಗ ಜಾಗೃತಿಯಾಗಿ, ಇದು ಹೈದರಾಬಾದ್, ತಿರುವಾಂಕೂರು ಸಂಸ್ಥಾನಗಳ ಗಮನವನ್ನೂ ಸೆಳೆಯಿತು. ಮೈಸೂರು ಈ ವಿಚಾರದಲ್ಲಿ ಗಳಿಸಿದ ಅಖಿಲ ಭಾರತ 'ಕುವಿಖ್ಯಾತಿ' ಯಿಂದ ನನಗೇ ಅಚ್ಚರಿಯಾಯಿತು. ಸ್ವಾಮಿ ರಮಾನಂದತೀರ್ಥ, ಡಾ|| ಮೇಲುಕೋಟೆ, ಜಿ. ರಾಮಾಚಾರ್, ಜನಾರ್ದನರಾವ್ ದೇಸಾಯಿ ಮುಂತಾದವರೂ ರಾಜಸ್ಥಾನದ ಜಯನಾರಾಯಣ ವ್ಯಾಸ್, ಮೋಹನಲಾಲ್ ಸುಖಾಡಿಯಾ, ಮುಂಬೈಯ ಮಸಾನಿ, ಅಶೋಕ ಮೆಹ್ತಾ ಮುಂತಾದ ನಾಯಕರೂ ಮೈಸೂರಿನವರಾದ ನಮ್ಮ ಕೆಲಸ, ವರ್ತನೆಗಳನ್ನು ಕಂಡು ಮೆಚ್ಚುಗೆ ಸೂಚಿಸುತ್ತಿದ್ದರು. ಆಗ ನಮ್ಮಲ್ಲೆಲ್ಲ ಪೂರ್ಣ ಒಗ್ಗಟ್ಟು, ಸಾಮರಸ್ಯ ಇದ್ದವು.

## ವಿದುರಾಶ್ವತ್ಥ ಕಾಂಗ್ರೆಸ್ (14-4-1939)

ಮೈಸೂರು ಕಾಂಗ್ರೆಸ್ಸಿನ ಮುಂದಿನ ಅಧಿವೇಶನ ವಿದುರಾಶ್ವತ್ಥದಲ್ಲಿ ನಡೆಯಿತು. ಅಲ್ಲಿ ನಡೆದ ಹತ್ಯಾಕಾಂಡದಿಂದಾಗಿಯಷ್ಟೇ ಅಲ್ಲ, ಅಲ್ಲಿ ಇರುವ, ವಿದುರನು ನೆಟ್ಟ ಅಶ್ವತ್ಥ ವೃಕ್ಷದಿಂದಾಗಿ, ತೀರ್ಥಕ್ಷೇತ್ರವೂ ಆದಾಗಿ ಇದ್ದುದರಿಂದ ಅದು ಗಣ್ಯಸ್ಥಾನವಾಗಿತ್ತು. ಎಚ್. ಸಿ. ದಾಸಪ್ಪ ಆ ಅಧಿವೇಶನದ ಅಧ್ಯಕ್ಷರಾಗಿ ಕಾಂಗ್ರೆಸ್ ಧ್ವಜವನ್ನು ಎತ್ತಿ ಹಿಡಿದರು. ಪಟ್ಟಾಭಿ ಸೀತಾರಾಮಯ್ಯನವರು ವಸ್ತುಪ್ರದರ್ಶನವನ್ನು ಆಗ ಉದ್ಘಾಟಿಸಿದರಲ್ಲದೆ ಕಮಲಾದೇವಿಯವರು ಸಮಾಜವಾದಿ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ದಾಸಪ್ಪನವರು ಕಾಂಗ್ರೆಸಿನ ಉತ್ಸಾಹದ ವಾತಾವರಣವನ್ನು ಸಂಸ್ಥಾನದಲ್ಲಿ ಬಲಪಡಿಸಿ ಗಾಂಧೀಜಿಯವರ ವಿಚಾರಗಳನ್ನು ಇನ್ನಷ್ಟು ಪ್ರಚಾರಮಾಡಿದರು.

ನನ್ನ ಅಧ್ಯಕ್ಷತಾ ಅವಧಿ ಮುಗಿದ ಅನಂತರ ನಾನು ಕೆಲಕಾಲ ಮೈಸೂರು ರಾಜಕೀಯದಿಂದ ದೂರವಾದಂತಾದೆ. ಆಗ ದೀರ್ಘಕಾಲ ನಾನು ಧಾರವಾಡದ ಕೆ.ಪಿ.ಸಿ.ಸಿ. ಕಾರ್ಯಾಲಯದಲ್ಲಿರುತ್ತಿದ್ದೆ. ಹೊಸಮನಿ ಸಿದ್ದಪ್ಪನವರು ಆಗ ಕೆ.ಪಿ.ಸಿ.ಸಿ. ಅಧ್ಯಕ್ಷರಾಗಿದ್ದು ನಾನೂ ಕಮಲಾದೇವಿಯವರೂ ಉಪಾಧ್ಯಕ್ಷರೂ ಡಾ|| ಹರ್ಡೀಕರ್

ಮತ್ತು ಶ್ರೀನಿವಾಸ ಮಲ್ಯರು ಕಾರ್ಯದರ್ಶಿಗಳೂ ಆಗಿದ್ದರು. ಹೊಸಮನಿಯವರು ವಯಸ್ಸಾದವರಾಗಿದ್ದು ಅವರ ಕೆಲಸ ನಾನು ಮಾಡಬೇಕಾಗಿತ್ತು. ಅಲ್ಲಿನ ಜನರ ಸಹವಾಸವೂ ನನಗೆ ಆಪ್ಯಾಯಮಾನವಾಗಿತ್ತು.

1939ರ ಸೆಪ್ಟೆಂಬರ್‌ನಲ್ಲಿ ನಾನು ಬೆಂಗಳೂರಿಗೆ ಮರಳಿ ಬಂದು, ದ್ವಿತೀಯ ಮಹಾಯುದ್ಧದಲ್ಲಿ ಪಾಲ್ಗೊಳ್ಳುವುದರ ವಿರುದ್ಧ ಸತ್ಯಾಗ್ರಹವನ್ನು ಬಸಪ್ಪಾ ಪಾರ್ಕಿನಲ್ಲಿ ಉದ್ಘಾಟಿಸಿದೆ. ನಾನು ಮೊದಲ ಡಿಕ್ಟೇಟರ್ ಆಗಿದ್ದು, ಅಲ್ಲಿ ಭಾಷಣಮಾಡಿ ಬಂಧಿತನಾದೆ. ನನಗೆ ಒಂದು ವರ್ಷ ಶಿಕ್ಷೆ ಆಯಿತು. ಅನಂತರ ದಾಸಪ್ಪ ಡಿಕ್ಟೇಟರ್ ಆದರು. ಒಟ್ಟು 25 ಡಿಕ್ಟೇಟರರು ಹೀಗೆ ಬಂಧಿತರಾದರು. ಮುಂದೆ ಜಯಚಾಮರಾಜರ ವಿವಾಹಕಾಲಕ್ಕೆ ಜನವರಿ 1940ರಲ್ಲಿ ನಮ್ಮ ಬಿಡುಗಡೆ ಆಯಿತು. ಮತ್ತೆ ನಾನು ಕೆ.ಪಿ.ಸಿ.ಸಿ. ಕಾರ್ಯಾಲಯಕ್ಕೆ ಮರಳಿದೆ.

## ಕಿರುಸಂಸ್ಥಾನಗಳಲ್ಲಿ

ಮೈಸೂರಿನಲ್ಲಿ ಕಾಂಗ್ರೆಸ್ಸು ಮಾಡಿದ ಸಾಧನೆಗಳಿಂದಾಗಿ, ಕೆ.ಪಿ.ಸಿ.ಸಿ. ಅನ್ಯಸಂಸ್ಥಾನಗಳಲ್ಲೂ ಪ್ರವೇಶಿಸಬಯಸಿತು. ರಾಮದುರ್ಗ, ಮುಧೋಳ, ಸವಣೂರು, ಜಮಖಂಡಿ, ಇಲ್ಲೆಲ್ಲ ಸ್ಥಾನೀಯ ಕಾಂಗ್ರೆಸ್‌ಗಳನ್ನು ಸ್ಥಾಪಿಸಿದೆವು. ಒಟ್ಟು ಹೀಗೆ 17 ಸಂಸ್ಥಾನಗಳು ಕೆ.ಪಿ.ಸಿ.ಸಿ.ಯ ಕಕ್ಷೆಯಲ್ಲಿ ಇದ್ದವು. ಜಮಖಂಡಿಯ ಜನ ಆಗಲೇ ತಮ್ಮ ಸಂಸ್ಥಾನದಲ್ಲಿ ಒಂದು ಕಾಂಗ್ರೆಸ್ ಅಧಿವೇಶನ ಸಂಘಟಿಸಲು ಮುಂದಾಗಿದ್ದರು. ಇದನ್ನು ಸಾವಳಗಿಯಲ್ಲಿ, ಕೃಷ್ಣೆಯ ದಂಡೆಯಲ್ಲಿ, ನಡೆಸಲಾಯಿತು. ಅದರ ಅಧ್ಯಕ್ಷತೆಯನ್ನು ನಾನು ವಹಿಸಿದ್ದು ದಿ|| ಸಾಬಡೆ ಮತ್ತು ಈಗಿನ ಉಪರಾಷ್ಟ್ರಪತಿ ಜತ್ತಿ ಅದರ ಕಾರ್ಯದರ್ಶಿಗಳಾಗಿದ್ದರು.

ಡಾ|| ಹರ್ಡೀಕರ್, ಡಾ|| ಪಾರ್ಥ (ಪಾರ್ಥನಾರಾಯಣ ಪಂಡಿತ್) ಮತ್ತು ನಾನು ಇತರ ಸಂಸ್ಥಾನಗಳನ್ನೂ ಸಂದರ್ಶಿಸಿ ಸಾರ್ವಜನಿಕ ಭಾಷಣಗಳನ್ನು ಮಾಡಿದೆವು. ಈ ಸಂಸ್ಥಾನಗಳಲ್ಲಿ ತಮ್ಮ ಮಂತ್ರಿಮಂಡಲಗಳ ಸಭೆಯನ್ನು ಕರೆದು, ಬೆಳೆಯುತ್ತಿರುವ ಕಾಂಗ್ರೆಸ್ಸನ್ನು ಹತ್ತಿಕ್ಕುವ ಚರ್ಚೆ ಆಗುತ್ತಿತ್ತು. ಆಯಾ ಸಂಸ್ಥಾನದ ಗಡಿಯನ್ನು ನಾವು ತಲಪುತ್ತಿದ್ದಂತೆ, ಆ ಸಂಸ್ಥಾನದ (ರೂ. 40ರಷ್ಟು ಭಾರಿ ಮಾಸಿಕ ತಲಬಿನ) ಐ.ಜಿ.ಪಿ. ನಮ್ಮನ್ನು ನಿಲ್ಲಿಸಿ ನಮ್ಮ ಮೇಲೆ ಒಂದು ನಿಷ್ಕಪಟ ಪ್ರತಿಬಂಧಕಾಜ್ಞೆಯನ್ನು ಜಾರಿಮಾಡಿದ ಪತ್ರ ನೀಡುತ್ತಿದ್ದ. ಮುಂದೆ ಯಾವುದೇ ತೊಂದರೆ ಇರುತ್ತಿರಲಿಲ್ಲ.

ತೀವ್ರ ಪ್ರತಿಭಟನೆ ತೋರಿದ ರಾಮದುರ್ಗ ಸಂಸ್ಥಾನವು ಒಂದು ಸುದ್ದಿಯ ವಿಷಯವಾಗಿ, ಮುಂದೆ ಎಲ್ಲ ಸಂಸ್ಥಾನಗಳ ನಡುವೆ ನಗೆಪಾಟಲಾಯಿತು. ಇಲ್ಲಿಯ ದಿ|| ಮುನವಳ್ಳಿಯವರನ್ನು ಫಾಶಿ ಶಿಕ್ಷೆಗೆ ಗುರಿಪಡಿಸಬೇಕೆಂದು ಇದ್ದರು.

ಆಗಿನ ಕೆ.ಪಿ.ಸಿ.ಸಿ. ರಾಜಕೀಯ ತೀರ ಸ್ವಾರಸ್ಯದ್ದು. ಅಲ್ಲಿ ಅನೇಕ ಒಳಗುಂಪು

ಗಳು. ಹೀಗಾಗಿ ಡಾ|| ಹರ್ಡೀಕರ್, ಆರ್. ಆರ್. ದಿವಾಕರ್, ಕಮಲಾದೇವಿ ಚಟ್ಟೋಪಾಧ್ಯಾಯ, ದಿ|| ಶ್ರೀನಿವಾಸ ಮಲ್ಯ ಮುಂತಾದ ಒಳ್ಳೆಯ ನಾಯಕರು ಕೆ.ಪಿ.ಸಿ.ಸಿ.ಗೆ ತಮ್ಮ ಸ್ವಂತ ಊರುಗಳಿರುವ ಮತಗಟ್ಟೆಗಳಿಂದ ಆಯ್ಕೆಯಾಗಲಾರದೆ, ದೊಡ್ಡಬಳ್ಳಾಪುರ, ದೇವನಹಳ್ಳಿ, ಯಲಹಂಕ ಮತ್ತು ನೆಲಮಂಗಲ ಮುಂತಾದ ಬೆಂಗಳೂರು ಜಿಲ್ಲೆಯ ಪ್ರದೇಶಗಳ ಪ್ರತಿನಿಧಿಗಳಾಗಬೇಕಾಗುತ್ತಿತ್ತು. ಈ ಗೌರವ ಇಂಥ ಊರುಗಳಿಗೆ ಸಲ್ಲುತ್ತಿತ್ತು.

ಕೆ.ಪಿ.ಸಿ.ಸಿ.ಗೆ ನಡೆದ ಇಂಥ ಒಂದು ಚುನಾವಣೆಯಲ್ಲಿ ಮಂಗಳೂರು ಮತದಾರ ಸಂಘದಲ್ಲಿ ಗಣ್ಯರಾದ ಮಲ್ಯ ಮತ್ತು ಕಾರಂತರ ನಡುವೆ ಒಂದು ಚುನಾವಣಾ ತಕರಾರು ಉಂಟಾಗಿ, ಆಗ ಈ ಬಗ್ಗೆ ತೀರ್ಪು ನೀಡಲು ಓರ್ವ ತೂಕದ ವ್ಯಕ್ತಿ ಬೇಕಾಗಿ ಬಂತು. ತಮ್ಮ ನ್ಯಾಯದೃಷ್ಟಿ ಮತ್ತು ಸರಳತೆಗಳಿಗೆ ಖ್ಯಾತರಾದ ಸಭ್ಯ ಎಸ್. ನಿಜಲಿಂಗಪ್ಪನವರು ತೀರ್ಪುಗಾರರಾಗಲು ಒಪ್ಪಿದ್ದಕ್ಕೆ ಎಲ್ಲರಿಗೂ ಹರ್ಷವಾಯಿತು. ನಿಧಾನವಾಗಿ ಅವರು ಎಲ್ಲರ ಮೆಚ್ಚುಗೆಗೆ ಪಾತ್ರರಾಗಿ ಕೆ.ಪಿ.ಸಿ.ಸಿ. ರಾಜಕಾರಣದ ಬಿರುಗಾಳಿಯಲ್ಲಿ ಎಳೆಯಲ್ಪಟ್ಟರು. ನಾನು ರಾಜಕೀಯದಿಂದ ದೂರವಿರಬಯಸಿದರೂ ಮಲ್ಯ, ಗಂಗಾಧರರಾವ್ ದೇಶಪಾಂಡೆ ಇವರುಗಳು ನನ್ನನ್ನು ಇದರಿಂದ ಪಾರಾಗಲು ಬಿಡಲಿಲ್ಲ. ನಾನು ಕೆ.ಪಿ.ಸಿ.ಸಿ. ಅಧ್ಯಕ್ಷನಾಗಬೇಕೆಂದು ಮಲ್ಯರ ಬಯಕೆ. ಕಡೆಗೆ ನಾನು ಒಪ್ಪದೆ, ಈ ಪದವನ್ನು ಡಾ|| ಆರ್. ನಾಗನಗೌಡರ ಮೇಲೆ ಹೇರಲಾಯಿತು.

ಈ ಕಾಲದಲ್ಲಿ ನಾನು, ಕೆ.ಪಿ.ಸಿ.ಸಿ.ಯ ಒಳ ಹಾಗೂ ಹೊರಗಿನ 'ರಾಜಕೀಯ'ದಿಂದ ಬೇಸತ್ತು ರಾಜಕೀಯದಿಂದ ನಿವೃತ್ತನಾಗಬೇಕೆಂದಿದ್ದೆ. ಆದರೆ 1941ರಲ್ಲಿ ಶಿವಮೊಗ್ಗದ ರಾಮಣ್ಣಾ ಪಾರ್ಕಿನಲ್ಲಿ ಮಾಡಿದ ಭಾಷಣಕ್ಕಾಗಿ ನಾನೂ ದಾಸಪ್ಪನವರೂ ಒಂದೂವರೆ ವರ್ಷಗಳ ಶಿಕ್ಷೆಗೆ ಒಳಗಾಗಿ, ನಿವೃತ್ತನಾಗುವ ನನ್ನ ಬಯಕೆಯು ದೂರವಾಯಿತು. ಆಗ ನಾನು ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇದ್ದೆ. ಆಗಲೇ 1942ರ ಕ್ವಿಟ್ ಇಂಡಿಯಾ ಚಳವಳಿ ನಡೆಯಿತು. ಆಗ ನಾವು 'ಈರಪ್ಪನ ಬಾರ್ಯ್ಕೋಸ್' ಎಂದು ಕರೆಯಲಾಗುವ ಯುರೋಪಿಯನ್ ಬರ್‍ಯಾಕ್‌ನಲ್ಲಿ ಇದ್ದೆವು.

1942ರ ಚಳವಳಿಯ ವಿಚಾರ ಸಾಕಷ್ಟು ಪ್ರಕಟಣೆಗಳಾಗಿವೆ. ಆಗಿನ ಜನರ ತ್ಯಾಗ, ಕಷ್ಟಸಂಕಷ್ಟಗಳ ಕತೆ ಪ್ರತ್ಯೇಕವಾಗಿ ಇಲ್ಲಿ ಹೇಳಬೇಕಾಗಿಲ್ಲ. ಪ್ರಕಟವಾಗಿ ಸಭೆ, ಮೆರವಣಿಗೆ, ಲಾಠಿಚಾರ್ಜು, ಗುಂಡುಹಾರಾಟ, ಗಡೀಪಾರು ಇವೆಲ್ಲ ಸಂಸ್ಥಾನದಲ್ಲಿ ನಿತ್ಯದ ಮಾತಾಗಿ, ಕಾರ್ಮಿಕರೂ ವಿದ್ಯಾರ್ಥಿಗಳೂ ಚಳವಳಿಯನ್ನು ಭಾರಿ ಪ್ರಮಾಣದಲ್ಲಿ ಸೇರಿಕೊಂಡು, ಸರಕಾರವನ್ನೇ ಕುಂಟುವಂತೆ ಮಾಡಿದ್ದು ಪರಿಚಿತ ಸಂಗತಿ. ಅನೇಕರು ಭೂಗತವಾಗಿ ಕೆಲಸ ಮಾಡುತ್ತಲೂ ಇದ್ದರು. ಈ ಪೈಕಿ ಬುದ್ಧದಾಸ್, ಕೆ. ವಿ. ವಸಂತಯ್ಯ, ದೇವಯ್ಯ, ಎಂ. ಎಚ್. ಷಾ, ಪರಶುರಾಮ್, ಅಬ್ದುಲ್ ಗಫ಼ೂರ್ (ಈಗ ಎನ್.ಸಿ.ಸಿ.ಯಲ್ಲಿ ಮೇಜರ್), ಶಾರದಾ ಪ್ರಸಾದ್ (ಈಗ ಪ್ರಧಾನಿಗಳ ಆಪ್ತ

ಕಾರ್ಯದರ್ಶಿ), ಖ್ಯಾತರಾದ ಎಂ. ವಿ. ಕೃಷ್ಣಪ್ಪ, ಸವಾಯ್ ಅಶ್ವತ್ಥ್, ಎಸ್. ಡಿ. ಶಂಕರ್, ಸದಾ ಭೂಗತರಾಗಿ ಉಳಿದಿದ್ದ ನಿಟ್ಟೂರು ಶ್ರೀನಿವಾಸರಾವ್ (ಮುಂದೆ ಮೈಸೂರಿನ ಮುಖ್ಯ ನ್ಯಾಯಾಧೀಶರಾದರು) ಹಾಗೂ ಭೂಗತ ಹೋರಾಟದಲ್ಲಿ ಪರಿಣತರಾದ ಸರ್ದಾರ್ ವೆಂಕಟರಾಮಯ್ಯ ಇವರನ್ನು ಇಲ್ಲಿ ಉಲ್ಲೇಖಿಸಬಹುದು. ಇಡಿಯೂರು ಗ್ರಾಮದಲ್ಲಿನ ಬುದ್ಧದಾಸ್ ಅವರ ತೋಟ ನಮ್ಮ ಭೂಗತ ಚಟುವಟಿಕೆಗಳ ಒಂದು ಕೇಂದ್ರಸ್ಥಾನವಾಗಿ ಆಗ ಇತ್ತು.

ಪದ್ಮಶ್ರೀ ಬಿ. ಎಸ್. ಕೇಶವನ್ (ಈಗ ರಾಷ್ಟ್ರೀಯ ಗ್ರಂಥಪಾಲ) ಹಾಗೂ ಅವರ ಪತ್ನಿ ಡಾ॥ ಕೇಸರಿ ಆಗ ತಮ್ಮ ಪ್ರಾಧ್ಯಾಪಕ ಹುದ್ದೆಗಳಿಗೆ ರಾಜೀನಾಮೆ ನೀಡಿದರು.

ಸೆಂಟ್ರಲ್ ಜೈಲಿನಲ್ಲಿ ಆಗ 2,000 ಸತ್ಯಾಗ್ರಹಿಗಳಿದ್ದರು. ನನಗೆ ನೆನಪಿರುವಂತೆ ದೇವರಕೊಂಡಪ್ಪ, ಎಸ್. ಕರಿಯಪ್ಪ, ಎಂ. ಎನ್. ಜೋಯಿಸ್, ಸೀತಾರಾಮಯ್ಯ, ಜಿ. ಆರ್. ಸ್ವಾಮಿ, ಅಜರ್ ಅಲಿ, ದೇವಪಾಲ್, ಎಂ. ಎ. ವಾಸುದೇವರಾವ್, ಎಚ್. ಎಸ್. ದೊರೆಸ್ವಾಮಿ, ಎ. ಜಿ. ರಾಮಚಂದ್ರರಾವ್, ಚಂಗಲಾರಾಧ್ಯ ಹಾಗೂ ಅವರ ಪತ್ನಿ, ಕೋಲಾರದ ಹುಸೇನ್, ಎನ್. ಕೇಶವ, ಕೆ. ಎಸ್. ಕುಮಾರನ್, ಈಗಿನ ಹೈಕೋರ್ಟ್ ನ್ಯಾಯಮೂರ್ತಿ ಡಿ. ಎಚ್. ಚಂದ್ರಶೇಖರಯ್ಯ, ಈಗಿನ ಮಂತ್ರಿ ಕೆ. ಎಚ್. ರಂಗನಾಥ್, ಆಕಾಶವಾಣಿಯ ಈಗಿನ ಉಪನಿರ್ದೇಶಕ ಪಾಂಡುರಂಗ ವಿಠಲ್, ಮೇಜರ್ ವೇಣುಗೋಪಾಲ್ (ಇವರು 1947ರಲ್ಲಿ ಹೈದರಾಬಾದ್ ಗಡಿಯಲ್ಲೂ ಚಳವಳಿಗೆ ಹೋಗಿದ್ದರು), ಈಸೂರಿನ ದೇಶಭಕ್ತರು, ಕಮಲಾದೇವಿ ಚಟ್ಟೋಪಾಧ್ಯಾಯ, ನಾಲ್ಕು ವರ್ಷ ಅಂಡಮಾನ್‌ನಲ್ಲಿ ಇದ್ದ ಕ್ರಾಂತಿಕಾರಿ ಟಿ. ಎಸ್. ಶಿವಂ ಇವರೆಲ್ಲ ಆಗ ಜೈಲಿನಲ್ಲಿ ಇದ್ದವರು. ಕೊನೆಯವರು 1942ರಲ್ಲಿ ಮಿಲಿಟರಿಯಲ್ಲಿ ಇದ್ದಾಗ ಜಾಲಹಳ್ಳಿಯಲ್ಲಿ ಬುಡಮೇಲು ಚಟುವಟಿಕೆ ನಡೆಸಿ, ಕೋರ್ಟ್‌ಮಾರ್ಶಲ್ ಆಗಿ, ನಮ್ಮ ಜೈಲಿಗೆ ಬಂದಿದ್ದರು. ಇದಲ್ಲದೆ ಮುಂದೆ ರಾಷ್ಟ್ರೀಯ ವಿದ್ಯಾಲಯ ಸ್ಥಾಪಿಸಿದ ಡಾ॥ ಶಿವಾನಂದ ಶರ್ಮ, ಮೈಸೂರಿನ ಶಾಂತ ಕಾರ್ಯಕರ್ತ ಟಿ. ಎಸ್. ಸುಬ್ಬಣ್ಣ, ಈಗಿನ ಶಾಸಕ ಕೆ. ಎಸ್. ಕಣ್ಣನ್ ಇವರೂ ಜೈಲಿನಲ್ಲಿ ಇದ್ದರು.

ನಾವು ಜೈಲಿನಲ್ಲಿದ್ದಾಗಲೇ ಈಸೂರ ದೇಶಭಕ್ತರಿಗೆ ಗಲ್ಲಾಯಿತು. ಈ ಕಾಲಕ್ಕೆ ಬೆಂಗಳೂರು ಜೈಲಿನಿಂದ ಕೆ. ಹನುಮಂತಯ್ಯ, ಎಸ್. ನಿಜಲಿಂಗಪ್ಪ ಹಾಗೂ ನನ್ನನ್ನು ಕೆ.ಜಿ.ಎಫ್. ಜೈಲಿಗೆ ವರ್ಗಾಯಿಸಿದರು. ಈ ಗಲ್ಲುಶಿಕ್ಷೆ ನೀಡುವ ಕಾಲಕ್ಕೆ ನಾವು ಗಲಾಟೆಗೆ ಕಾರಣರಾಗಬಹುದೆಂಬ ಕಾರಣದಿಂದ ಹೀಗೆ ಮಾಡಿದ್ದರು. ಅಲ್ಲಿ ನಾವು ಮೂರು ತಿಂಗಳು ಇದ್ದೆವು. ಆ ಕಾಲದಲ್ಲಿ ಕೆಂಗಲ್ಲರು ನಮಗೆ ಭಗವದ್ಗೀತೆ, ಮಹಾಭಾರತಗಳನ್ನು ಓದಿ ಹೇಳುತ್ತಿದ್ದರು. ಪಣಿಬಾಯಿ ಬಾಫ್ನಾ, ರಾಮಕೃಷ್ಣ ಪ್ರಸಾದ್ ಆಗಾಗ ನಮ್ಮನ್ನು ಭೇಟಿಯಾಗಿ ಯೋಗಕ್ಷೇಮ ವಿಚಾರಿಸುತ್ತಿದ್ದರು. 1943ರ ಫೆಬ್ರವರಿಯಲ್ಲಿ ಮತ್ತೆ ಬೆಂಗಳೂರು ಜೈಲಿಗೆ ಬಂದ ನಾನು ಮೇ ತಿಂಗಳಲ್ಲಿ ಬಿಡುಗಡೆಹೊಂದಿದೆ. ಆಗ

ಒಟ್ಟು 18 ತಿಂಗಳು ಜೈಲುವಾಸ ನನಗೆ ಆಗಿತ್ತು.

ಬಿಡುಗಡೆಯ ಅನಂತರ ನನ್ನ ಮಿತ್ರ ರುಮಾಲೆ ಚನ್ನಬಸವಯ್ಯನವರ ಜೊತೆ ಪಂಜಾಬಿನ ಕೊಸಿಕಲಸ್‌ನಲ್ಲಿರುವ ತಪಸ್ವೀ ಮಹಾರಾಜರ 'ವಿಷ್ಣುಧಾಮ' ಎಂಬ ಆಧ್ಯಾತ್ಮಿಕ ಕೇಂದ್ರದಲ್ಲಿ ದೀರ್ಘಕಾಲ ಇದ್ದೆ.

1941ರ ನನ್ನ ಬಂಧನಕ್ಕೂ ಮೊದಲು ನಾವು ಕೈಕೊಂಡ ಒಂದು ಕೆಲಸದ ವಿಚಾರ ಇಲ್ಲಿ ಹೇಳಬೇಕು. ಈ ಕಾಲದಲ್ಲಿ ಖ್ಯಾತ ಅಮೆರಿಕನ್ ಇತಿಹಾಸಕಾರ ವಿಲ್ ಡ್ಯುರಂಟ್ ಬರೆದ 'ಎ ಕೇಸ್ ಫಾರ್ ಇಂಡಿಯಾ' ಪುಸ್ತಕದ ಒಂದು ಪ್ರತಿ ನಮಗೆ ಸಿಕ್ಕಿತು. ಭಾರತಕ್ಕೆ ಸ್ವಾತಂತ್ರ್ಯ ನೀಡಬೇಕೆಂದು ಪ್ರತಿಪಾದನೆಮಾಡಿದ ಈ ಪುಸ್ತಕದ ಮೇಲೆ ಭಾರತದಲ್ಲಿ ಪ್ರತಿಬಂಧವಿತ್ತು. ದೊಡ್ಡಬಳ್ಳಾಪುರದ ನಮ್ಮ ಕಾರ್ಯಕರ್ತರಾದ ಚಂದ್ರ, ಮುಗುವಾಳಪ್ಪ, ಎಚ್. ನರಸಿಂಹಯ್ಯ ಮುಂತಾದವರು, ನಾವು ಇದನ್ನು ಮುದ್ರಿಸಬೇಕೆಂದು ಪಟ್ಟುಹಿಡಿದರು. ಹೊಸಾಳಿ ಪ್ರೆಸ್‌ನ ಶಿವಲಿಂಗಯ್ಯನವರು ಅದನ್ನು ಅಸಲುದರದಲ್ಲಿ ಮುದ್ರಿಸಿ ನೀಡುವ ಧೈರ್ಯ ತೋರಿಸಿದರು. 5,000 ಪ್ರತಿ ಮುದ್ರಣ ವಾಗಿರಲು, ಮಿರ್ಜಾ ಸರಕಾರ 3,500 ಪ್ರತಿಗಳನ್ನು ಮುಟ್ಟುಗೋಲು ಹಾಕಿಕೊಂಡಿತು. ಉಳಿದ 1,500 ಪ್ರತಿಗಳನ್ನು ಹೇಗೋ ಸಾಗಿಸಿ, ಭಾರತದಲ್ಲೆಲ್ಲ ಎಂಟಾಣೆ ಬೆಲೆಗೆ ಮಾರಾಟ ಮಾಡಿದೆವು. ಅನೇಕ ದೇಶಭಕ್ತರಿಗೆ ಸ್ಫೂರ್ತಿ ನೀಡಿದ ಪುಸ್ತಕ ಇದು.

ನಾನು ಪಂಜಾಬಿನಲ್ಲಿ ಇದ್ದ ಕಾಲದಲ್ಲಿ ಮಹಾಯುದ್ಧ ಮುಗಿದು, ಭಾರತಕ್ಕೆ ಸ್ವಾತಂತ್ರ್ಯ ನೀಡುವ ಬಗೆ ಆ್ಯಟ್ಲಿ ಸರಕಾರ ಶ್ವೇತಪತ್ರವನ್ನು ಹೊರಡಿಸಿ ಆಗಿತ್ತು. ಕೇಂದ್ರದಲ್ಲೂ ರಾಜ್ಯಗಳಲ್ಲೂ ತಾತ್ಕಾಲಿಕ ಸರಕಾರಗಳು ಅಸ್ತಿತ್ವಕ್ಕೆ ಬಂದಿದ್ದವು. ಇದೇ ಕಾಲಕ್ಕೆ ದಿವಾನರಾದ ಆರ್ಕಾಟರು ಮಾತ್ರ ತಮ್ಮ ಎದುರಿಗೇ ಮೈಸೂರು ಕಾಂಗ್ರೆಸ್ಸು ಶಾಸನಸಭೆಗಳಲ್ಲಿ ಬಹುಮತ ಪಡೆದುದನ್ನೂ (ಇದು ಚುನಾವಣೆಯ ಕಾಲಕ್ಕೆ ಅವರು ತಮ್ಮ ಅಧಿಕಾರವನ್ನು ಬಳಸಿ ಕಾಂಗ್ರೆಸ್ಸಿನ ವಿರುದ್ಧ ತಂದ ಒತ್ತಡವನ್ನೂ ಮೀರಿ ಆದುದು) ಕಾಂಗ್ರೆಸ್ ನಾಯಕರಾದ ಕೆ. ಹನುಮಂತಯ್ಯ ಮತ್ತು ಕೆ. ಸಿ. ರೆಡ್ಡಿ ಅವರುಗಳು ಶಾಸನಸಭಾಸದನಗಳ ನಾಯಕತ್ವವನ್ನು ವಹಿಸಿದುದನ್ನೂ ಗಮನಿಸದೇ, ಪ್ರತಿಗಾಮಿ ಕ್ರಮಗಳನ್ನು ಕೈಕೊಂಡರು. ಅವರು ಅನೇಕ ವಿಶೇಷಾಜ್ಞೆಗಳನ್ನು ಹೊರಡಿಸಿದರು. ಪಕ್ಷದ ನಾಯಕ ಕೆ. ಹನುಮಂತಯ್ಯನವರನ್ನು ರಾಜದ್ರೋಹಕ್ಕಾಗಿ ಸಾಗರದಲ್ಲಿ ದೀರ್ಘಕಾಲ ವಿಚಾರಣೆಗೊಳಪಡಿಸಿ, ಅವರಿಗೆ ಒಂದು ವರ್ಷ ಶಿಕ್ಷೆ ವಿಧಿಸಿದರು. ಎನ್. ಸಿ. ತಿಮ್ಮಾರೆಡ್ಡಿ ಅವರ ಮೇಲೂ ಖಟ್ಲೆ ಹಾಕಲಾಯಿತು. ಪಂಡಿತ ಆಡಳಿತ ತಜ್ಞ ಆರ್ಕಾಟರು ತಿರುವಾಂಕೂರು, ಹೈದರಾಬಾದುಗಳ ದಿವಾನರುಗಳಂತೆ ವರ್ತಿಸುತ್ತ. ತರುಣ ಸುಶಿಕ್ಷಿತ ಮಹಾರಾಜರ ಮುಂದೆ ದಿನಕ್ಕೊಂದು ಆಸೆ, ಆಮಿಷವನ್ನೊಡ್ಡುತ್ತ, ನಾವು ಚಳವಳಿ ನಡೆಸಿ ಮೈಸೂರು ಅರಮನೆಯ ಬಾಗಿಲವರೆಗೆ 'ದಿಲ್ಲೀ ಚಲೋ' ಎಂದು ಘೋಷಿಸುತ್ತ ಸಾಗುವಂಥ ಪರಿಸ್ಥಿತಿಯನ್ನು ತಂದರು.

ನಮ್ಮೆಲ್ಲರ ಬಂಧನವಾಗಿ, ಮುಂದೆ ಮಹಾರಾಜರು ಒಪ್ಪಂದಕ್ಕೆ ಮುಂದಾದ ಸಂಗತಿ ಸರ್ವವಿದಿತ. ಜೈಲಿನಲ್ಲಿದ್ದಾಗಲೇ ಅಧಿಕಾರಾಕಾಂಕ್ಷಿ ನಾಯಕರ ಚಟುವಟಿಕೆ ಆರಂಭ ಆಗಿತ್ತು. ಪರಿಣತ ರಾಜತಂತ್ರಜ್ಞರಾದ ನನ್ನ ಮಿತ್ರ ಸಾಹುಕಾರ್ ಚನ್ನಯ್ಯ ಅವರು ಈ ಬಗ್ಗೆ ಆಗಲೇ ಹಂಚಿಕೆ ನಡೆಸಿ ಮುಖ್ಯಮಂತ್ರಿ ಪದವಿ ಮತ್ತು ಸಂಸ್ಥಾನದ ಕಾಂ|| ಕ|| (ಎ.ಎಂ.ಸಿ.ಸಿ.)ಗಳ ಅಧ್ಯಕ್ಷಪದವಿಗೆ ವ್ಯಕ್ತಿಗಳನ್ನು ಗೊತ್ತುಮಾಡಿದ್ದರು. ಕೆ. ಸಿ. ರೆಡ್ಡಿ ಮುಖ್ಯಮಂತ್ರಿಗಳಾಗಬೇಕು; ದಾಸಪ್ಪ, ಭಾಷ್ಯಂ ಮಂತ್ರಿಮಂಡಲದಲ್ಲಿರಬೇಕು ಎಂದು ಗೊತ್ತಾಗಿತ್ತು. ಹತ್ತು ಜನರ ಸಂಪುಟದಲ್ಲಿ ತಲಾ ಎರಡೆರಡು ಎರಡು ಜಾತಿಗಳಿಗೂ ಒಂದು ಬ್ರಾಹ್ಮಣರಿಗೂ ಒಂದು ಹರಿಜನರಿಗೂ ಸಲ್ಲಬೇಕು; ಇದು ಕಾಂಗ್ರೆಸ್ಸಿನ ಭಾಗ. ಇತರ ಮೂವರು ಕಾಂಗ್ರೆಸ್ಸೇತರರಿದ್ದು ದಿವಾನರು ವಿಶೇಷ ಮಂತ್ರಿಗಳಾಗುವರೆಂದಾಯಿತು. ನಾನು ಕಾಂಗ್ರೆಸ್ ಅಧ್ಯಕ್ಷನಾಗಬಯಸುವೆನೆಂದು ಸಾಹುಕಾರರಿಗೆ ತಿಳಿಸಿದೆ. ಅವರು ಸಂತಸದಿಂದ ಬೆಂಬಲ ನೀಡುವ ಮಾತುಕೊಟ್ಟರು. ಕಾಂಗ್ರೆಸ್ಸಿನಿಂದ ಎಚ್. ಸಿದ್ದಯ್ಯ ಹಾಗೂ ಕಾಂಗ್ರೆಸ್ಸೇತರರಾದ ಡಿ. ಎಚ್. ಚಂದ್ರಶೇಖರಯ್ಯ ಇವರನ್ನು ಲಿಂಗಾಯತರ ಪೈಕಿ ತೆಗೆದುಕೊಂಡರೆ, ನನ್ನ ಬದಲು ಸಾಹುಕಾರರು ತಮ್ಮ ಶಿಷ್ಯ ಟಿ. ಮರಿಯಪ್ಪನವರನ್ನು ಸಂಪುಟದಲ್ಲಿ ಸೇರಿಸಬಹುದೆಂದು ಹಂಚಿಕೆ ಹಾಕಿದರು.

ಆದರೆ, ಮುಂದೆ ನನಗೆ ಕೊಟ್ಟ ಮಾತನ್ನು ಅಲಕ್ಷಿಸಿ (ರೆಡ್ಡಿಯವರು ಮುಖ್ಯಮಂತ್ರಿ ಆದಾಗ ನನ್ನನ್ನು ಅಧ್ಯಕ್ಷನನ್ನಾಗಿ ಮಾಡುವ ಬದಲು) ಅಧ್ಯಕ್ಷ ಚುನಾವಣೆಯ ವೇಳಾಪಟ್ಟಿಯನ್ನು ಪ್ರಕಟಿಸಿದರು. ಮತ್ತು ನನ್ನ ಮಿತ್ರ ಕೆ. ಹನುಮಂತಯ್ಯನವರನ್ನು ಅಧ್ಯಕ್ಷಪದದ ಅಭ್ಯರ್ಥಿಯೆಂದು ಪ್ರಕಟಿಸಿದರು. ನನ್ನ ಪರಮಮಿತ್ರ ಹನುಮಂತಯ್ಯನವರ ಮನಸ್ಸನ್ನು ಹೇಗೆ ಬದಲಾಯಿಸಿದರೋ ಅಚ್ಚರಿ. ಆದರೆ ನನ್ನ ಆಧ್ಯಾತ್ಮಿಕ ತಾಯಿ ಹನುಮಂತಯ್ಯನವರ ಪೆತ್ತ ತಾಯಿಯವರಲ್ಲಿಗೆ ಹೋಗಿ, ಅವರಿಂದ ಆಶೀರ್ವಾದ ಪಡೆದು, ಚಿತ್ರದುರ್ಗದಲ್ಲಿ ನಡೆದ ಎ.ಎಂ.ಸಿ.ಸಿ.ಯಲ್ಲಿ ನಾನೇ ಅಧ್ಯಕ್ಷನಾಗಿ ಆಯ್ಕೆಗೊಂಡೆ (15-11-1947). ಹನುಮಂತಯ್ಯನವರು ನನಗೇ ಬೆಂಬಲವಿತ್ತರು. ಆಗಿನ ಕೆ.ಪಿ.ಸಿ.ಸಿ. ಅಧ್ಯಕ್ಷ ನಿಜಲಿಂಗಪ್ಪನವರೂ ನನಗೇ ಬೆಂಬವಿತ್ತರು.

ಈ ಎಲ್ಲ ಪ್ರಕರಣಗಳ ಹಿನ್ನೆಲೆಯ ಬಗ್ಗೆ ಚಿಂತಿಸುತ್ತಿದ್ದಂತೆ, ಇಂದಿನ ರಾಜಕೀಯ ರೀತಿನೀತಿಗಳ ಶೈಥಿಲ್ಯ ಕಾಂಗ್ರೆಸ್ಸಿಗೆ ಅಧಿಕಾರವನ್ನು ಹಸ್ತಾಂತರ ಮಾಡಿದಾಗಲೇ ಆರಂಭ ಆಯಿತೆನ್ನಬೇಕು.

ನನ್ನ ಮಿತ್ರ ಕೆ. ಹನುಮಂತಯ್ಯ ದೇಶವನ್ನು ಎತ್ತರಕ್ಕೆ ಒಯ್ಯಬಲ್ಲ ವಿಧಿನಿಯುಕ್ತ ಮಾನವ (ಮ್ಯಾನ್ ಆಫ್ ಡೆಸ್ಟಿನಿ) ಎಂದು ನಾನು ನಂಬಿದ್ದೇನೆ. ಅವರು ಸನಾತನ ಧರ್ಮದಲ್ಲಿ ಅಪಾರನಂಬಿಕೆ ಉಳ್ಳವರು. ಅವರು ಎಲ್ಲ ಕೆಲಸಗಳನ್ನು ಸಮರ್ಥವಾಗಿ ವ್ಯಕ್ತಿನಿರಪೇಕ್ಷವಾಗಿ ಮಾಡುತ್ತಾರೆ. ದೇವರೇ ತಮ್ಮಿಂದ ಕೆಲಸ ಮಾಡಿಸುತ್ತಾನೆಂದು

ಅವರು ನಂಬುತ್ತಾರೆ. ದೇವರು ವಿಶ್ವಾಸಿಕ ಜನರ ಮೂಲಕ ಕೆಲಸ ಮಾಡಿಸುತ್ತಾನೆಂದು ನಾನೂ ನಂಬಿದ್ದೇನೆ. ಇಂಥ ದೇವರ ಸೇವಕರು ಸರಕಾರದಲ್ಲಿರದ್ದರಿಂದಲೇ ದೇಶವು ಅನೇಕ ಕಷ್ಟಸಂಕಟಗಳಿಗೆ ಈಡಾಗಿದೆ. ಅವರು ಎಂದಾದರೂ ಸಿಟ್ಟಿಗೆದ್ದರೆ, ಒಳ್ಳೆಯ ಕೆಲಸ ಚನ್ನಾಗಿ ಮಾಡಬೇಕೆಂಬ ಕಾರಣಕ್ಕಾಗಿ ಅಲ್ಲದೆ. ಯಾರದೇ ವಿರುದ್ಧವಾಗಿ ಅಲ್ಲ.

ನಾನು ಕಾಂಗ್ರೆಸ್ ಅಧ್ಯಕ್ಷನಾಗಿದ್ದಂತೆ ಕೇಂದ್ರ ಘಟನಾ ಸಮಿತಿಯ ಸದಸ್ಯನೂ ಆದೆ. ಎಸ್. ವಿ. ಕೃಷ್ಣಮೂರ್ತಿರಾವ್, ಕೆ. ಹನುಮಂತಯ್ಯ, ಗುರುವಾರೆಡ್ಡಿ ಸಂಸ್ಥಾನವನ್ನು ಪ್ರತಿನಿಧಿಸುತ್ತಿದ್ದ ಇತರ ಸದಸ್ಯರು.

ಹೈದರಾಬಾದಿನಲ್ಲಿ ರಜಕಾರರ ಹಾವಳಿ ನಡೆದಾಗ ಇಲ್ಲಿಂದ ನಮ್ಮ ಸ್ವಯಂಸೇವಕರು ಅಲ್ಲಿನ ಗಡಿ ಹೋರಾಟಕ್ಕಾಗಿ ಕೈಬಾಂಬುಗಳನ್ನು ಒಯ್ಯುತ್ತಿದ್ದರು. ಶ್ರೀರಾಮಪುರದ ಇಂಜಿನಿಯರ್ ದೇವಯ್ಯ ಅವುಗಳನ್ನು ತಯಾರಿಸುತ್ತಿದ್ದರು. (ಈಗ ಗಡಿಭದ್ರತಾ ಪಡೆಯ ಮೇಜರ್ ಆಗಿರುವ) ವೇಣುಗೋಪಾಲ್ ಆಗ ರಜಕಾರರೊಡನೆ ಹೋರಾಟದಲ್ಲಿ ಮಗ್ನರಾಗಿದ್ದರು.

ಈ ಕಾಲದಲ್ಲಿ ಬೆಂಗಳೂರಲ್ಲೂ ರಜಕಾರರ ಹಾವಳಿ ಇತ್ತು. ನಾನು ಕಾಟನ್ ಪೇಟೆಯ ಕಾಂಗ್ರೆಸ್ ಆಫೀಸಿನಿಂದ ರಾತ್ರಿ 10 ಗಂಟೆಗೆ ಲ್ಯಾಂಗ್‌ಫರ್ಡ್ ಗಾರ್ಡನ್‌ಗೆ ನಡೆದು ಹೋಗುತ್ತಿರಲು, ನರಸಿಂಹರಾಜಾ ರಸ್ತೆಯಲ್ಲಿ ಇವರ ಚಟುವಟಿಕೆ ನಡೆದುದನ್ನು ನಿತ್ಯ ಕಾಣುತ್ತಿದ್ದೆ. ಅವರ ಹೊಟೇಲುಗಳಲ್ಲಿ ಪಾಕಿಸ್ತಾನ್ ರೇಡಿಯೋ ಕೂಗುತ್ತಿತ್ತು. ಅಲ್ಲಿ ನಮ್ಮ ಮುಸ್ಲಿಂ ಬಾಂಧವರು ಪಾಕಿಸ್ತಾನದ ನಿರ್ಮಿತಿಯ ಹಾಗೂ ಹೈದರಾಬಾದ್‌ನಲ್ಲಿನ ಘಟನೆಗಳ ಬಗ್ಗೆ ಭಾರೀ ಸಂತೋಷೋತ್ಸಾಹ ಪ್ರದರ್ಶಿಸುತ್ತಿದ್ದರು. ಮೈಸೂರಿನ ಮೇಲೆ ಕಾಸಿಂ ರಜವಿ ದಂಡೆತ್ತಿಬರುವನೆಂದು ಅವರ ನಂಬುಗೆ. ಈ ಬಗ್ಗೆ ಕ್ರಮ ಕೈಗೊಳ್ಳಲು ನಿರ್ಧರಿಸಿ, ನಾನು ಹೈದರಾಬಾದ್‌ನಲ್ಲಿ ಮುನ್ಷಿಯವರನ್ನು ಫೋನ್ ಮೂಲಕ ಸಂಪರ್ಕಿಸಿದೆ. ನನ್ನನ್ನು ಸೊಲ್ಲಾಪುರಕ್ಕೆ ಹೋಗುವಂತೆ ಅವರು ಕೇಳಿಕೊಂಡರು. ಅಲ್ಲದೆ ಬೆಂಗಳೂರಲ್ಲಿನ ರಜಕಾರರ ಬಗ್ಗೆ ಕ್ರಮಕೈಕೊಳ್ಳಲು ಸರ್ದಾರ್ ಪಟೇಲರನ್ನು ಒತ್ತಾಯಿಸಲು ಅವರು ಹೇಳಿದರು. ಮುನ್ಷಿಯವರ ವಿನಂತಿಯಂತೆ ನಾನು ಸೊಲ್ಲಾಪುರಕ್ಕೆ ಹೋಗಿ ಅಲ್ಲಿನ ಲಿಂಗಾಯತ ನಾಯಕ ವಾರದ ಮತ್ತು ರಾ|| ಬ|| ಅಫಜಲ್‌ಪುರಕರ್ ಅವರ ನೆರವಿನಿಂದ, ರಜಕಾರ ಸಂಪುಟದಲ್ಲಿನ ಮಂತ್ರಿ ಆಗಿದ್ದ ಮಲ್ಲಿಕಾರ್ಜುನಪ್ಪ ಅವರು ರಾಜೀನಾಮೆ ಕೊಡಿಸುವಂತೆ ಮಾಡಿದೆ.

ಸೆಪ್ಟೆಂಬರ್, 1948ರಲ್ಲಿ ನಾನು ದೆಹಲಿಯಲ್ಲಿ ಎರಡು ಬಾರಿ ಸ|| ಪಟೇಲರನ್ನು ಕಂಡಿದ್ದೆ. ಮುಂದೆ ಹೈದರಾಬಾದ್‌ನಲ್ಲಿ ಪೋಲೀಸ್ ಕಾರ್ಯಾಚರಣೆ ಆಯಿತು.

(ಇಂಗ್ಲಿಷ್‌ನಲ್ಲಿ ಬರೆದ ಮಾ|| ಲೇಖಕರ ಆತ್ಮಚರಿತ್ರೆಯಿಂದ ಈ ಭಾಗ ಸಂಗ್ರಹಿಸಿದೆ. ಕೆಲವೊಂದು ವಿವರ, ಅವರು ಹೇಳಿದಾಗ ಬರೆದುಕೊಂಡದ್ದು. 1947ರ

ನಂತರ ಎರಡು ಬಾರಿ ಅವರು ಮೈಸೂರು ರಾಜ್ಯದ ಮಂತ್ರಿಗಳಾಗಿ ಸೇವೆಸಲ್ಲಿಸಿದ ಹಾಗೂ ಅನ್ಯಸ್ವಾತಂತ್ರ್ಯೋತ್ತರ ರಾಜಕೀಯದ ವಿವರಗಳನ್ನು ಇಲ್ಲಿ ಕೈಬಿಟ್ಟಿದೆ.—ಸಂ||)

ವೈ.ಚಂ. 3

# ವಿ. ಎಸ್. ನಾರಾಯಣರಾವ್

ಜನನ : 1903 ಉದ್ಯೋಗ : ಪುಸ್ತಕ ವ್ಯಾಪಾರ ವಿಳಾಸ : ವಿಚಾರ ಸಾಹಿತ್ಯಾಲಿ., ಬಳೇಪೇಟೆ, ಬೆಂಗಳೂರು



ನನ್ನ ತಂದೆ ವಿದ್ಯಾಭೂಷಣ ವಿ. ಎಸ್. ಸಂಜೀವರಾವ್ ಮತ್ತು ತಾಯಿ ಗಂಗಾಬಾಯಿ. ಪುರಾಣ ಮತ್ತು ಇತಿಹಾಸಗಳಿಂದ ತಾಯಿ ನನಗೆ ಉದಾತ್ತ ವ್ಯಕ್ತಿಗಳ ಕಥೆ ತಿಳಿಸುತ್ತಿದ್ದರು ; ತಂದೆ ನನಗೆ ಪೂರ್ಣ ಸ್ವಾತಂತ್ರ್ಯ ಕೊಟ್ಟಿದ್ದರು. ಅವರ ಧೈರ್ಯ-ಉತ್ಸಾಹಗಳ ಬದುಕೇ ನನಗೆ ಮಾರ್ಗದರ್ಶನವಾಗಿತ್ತು. ನಮ್ಮ ನಡತೆಯ ಬಗ್ಗೆ ಒಂದು ಮಾತನಾಡಿದರೂ ತುಂಬಾ ಪರಿಣಾಮ ಕಾರಿಯಾಗಿರುತ್ತಿತ್ತು. ಪೋಲೀಸ್ ಇಲಾಖೆಯಲ್ಲಿದ್ದ ಅವರು ಅಲ್ಲಿನ ಜವಾಬ್ದಾರಿ ಬದುಕಿಗೆ ಹೊಂದಿ ಕೊಳ್ಳಲಾರದೆ ಪತ್ರಿಕಾವೃತ್ತಿಗೆ ಸೇರಿದರು. ನಿರ್ದಿಷ್ಟ ವೇತನವಿಲ್ಲ ; ಬಂದರೆ ಬಂತು, ಇಲ್ಲವಾದರೆ ಸೊನ್ನೆ ; ಎಂತೋ ಸಂಸಾರ ಸಾಗುತ್ತಿತ್ತು. ದಿ ಹಿಂದು, ಡೇಲಿ ಪೋಸ್ಟ್, ನ್ಯೂ ಇಂಡಿಯ, ಅಮೃತ ಬಜಾರ್, ವೃತ್ತಾಂತ ಪತ್ರಿಕೆ, ಸಂಪದಭ್ಯುದಯ ಮೊದಲಾದ ಪತ್ರಿಕೆಗಳು ಮನೆಗೆ ಬರುತ್ತಿದ್ದವು. ತಂದೆಯವರನ್ನು ಕಾಣಲು ಸಾರ್ವಜನಿಕರನೇಕರು ನಮ್ಮ ಮನೆಗೆ ಬರುತ್ತಿದ್ದರು. ಅವರಿಗೆ ಯಾರೂ ಅಪರಿಚಿತರಲ್ಲ. ಎಲ್ಲರೊಡನೆಯೂ ಅವರವರ ಅಂತಸ್ತಿಗೆ ತಕ್ಕಂತೆ ನಡೆದುಕೊಳ್ಳುವರು. ನನ್ನನ್ನೂ ಕೆಲಸಮಯ ಜೊತೆಯಲ್ಲೇ ಕರೆದುಕೊಂಡು ಹೋಗುವರು. ವಿದ್ಯಾರ್ಥಿ ದೆಸೆಯಿಂದಲೇ ಪತ್ರಿಕೆಗಳಿಗೆ ಲೇಖನಗಳನ್ನು ಬರೆವ ಅಭ್ಯಾಸ ಪ್ರಾರಂಭವಾಯಿತು.

ಚಾಮರಾಜಪೇಟೆ ಅಪ್ಪಾಜಪ್ಪ ಅಗ್ರಹಾರದಲ್ಲಿದ್ದಾಗ ನೆರೆಯ ಗಾಂಧೀ ಮೈದಾನದ ಸಭೆಯ ವ್ಯವಸ್ಥೆ ನಾನೂ ನನ್ನ ಗೆಳೆಯರೂ ಸೇರಿ ಮಾಡುತ್ತಿದ್ದೆವು. ಎಂ. ಎ. ಶ್ರೀನಿವಾಸ ಅಯ್ಯಂಗಾರರ ಮನೆಯಿಂದ ಕುರ್ಚಿ, ಮೇಜುಗಳನ್ನು ತೆಗೆದುಕೊಂಡು ಹೋಗಿ ಜೋಡಿಸುವುದು, ಹಸ್ತಪ್ರತಿಗಳನ್ನು ಹಂಚುವುದು, ಹುಂಡಿಯಲ್ಲಿ ದುಡ್ಡು ಸಂಗ್ರಹ

ಮಾಡುವುದು ಇವೇ ಮುಂತಾದ ಕಾರ್ಯಗಳನ್ನು ಮಾಡುತ್ತಿದ್ದೆವು. ಬಾಲ್ಯದಿಂದಲೂ ಸಭೆಗಳಿಗೆ ಹೋಗಿ ರಾಷ್ಟ್ರನಾಯಕರ ಭಾಷಣಗಳನ್ನು ಆಲಿಸುತ್ತಿದ್ದೆ. ಮುದವೀಡು ಕೃಷ್ಣರಾವ್, ಕಡಪಾ ರಾಘವೇಂದ್ರರಾವ್, ನಾ. ಸು. ಹರ್ಡೀಕರ್, ಪಂಡಿತ ತಾರಾನಾಥ್, ಸತ್ಯಮೂರ್ತಿ, ಟಿ. ಪ್ರಕಾಶಂ, ಎಸ್. ಶ್ರೀನಿವಾಸಶಾಸ್ತ್ರಿ, ಡಾ|| ಅನ್ನಿ ಬೆಸೆಂಟ್, ಕಮಲಾದೇವಿ ಚಟ್ಟೋಪಾಧ್ಯಾಯ, ಪಟ್ಟಾಭಿ ಸೀತಾರಾಮಯ್ಯ ಮತ್ತು ಇನ್ನೂ ಹಲವು ರಾಷ್ಟ್ರನಾಯಕರ ಭಾಷಣಗಳನ್ನು ತಪ್ಪದೇ ಕೇಳುತ್ತಿದ್ದೆ. ಕೊಪ್ಪಳ ಜಯರಾಮಾಚಾರ್ಯರ ಹರಿಕಥೆಗಳು, ರಾಷ್ಟ್ರಭಕ್ತಿ ಪ್ರಚೋದಕ ಕಥೆಗಳಾತ್ತಿದ್ದವು. ಪದ್ಮಶ್ರೀ ಶಿವಮೂರ್ತಿ ಶಾಸ್ತ್ರಿಗಳು, ಬೇಲೂರು ಕೇಶವದಾಸರು ಸಹ ಇದೇ ರೀತಿಯಲ್ಲಿ ಶಿವಕಥೆ, ಹರಿಕಥೆಗಳನ್ನು ನಡೆಸುತ್ತಿದ್ದರು. ನೋಡಿದ್ದ ರಾಷ್ಟ್ರನಾಯಕರು, ಕೇಳಿದ್ದ ಭಾಷಣಗಳು ಇವನ್ನು ಬರೆಯುತ್ತಾ ಹೋದರೆ ಪುಟಗಟ್ಟಲೆ ಆದೀತು.

ಇವರೆಲ್ಲರಿಗಿಂತಲೂ ನನ್ನ ಮೇಲೆ ಹೆಚ್ಚು ಪ್ರಭಾವ ಬೀರಿದವರು ನನ್ನ ತಾಯಿ, ಗಂಗಾಬಾಯಿ (ಭಾರತಿ ಎಂದೂ ಆಕೆಯ ಹೆಸರು). ರಾಮಾಯಣ, ಭಾರತ ಇವುಗಳಿಂದ ಸತ್ಯ, ನ್ಯಾಯ ಮತ್ತು ಧರ್ಮೋದ್ಧಾರಕ್ಕಾಗಿ ಅನೇಕ ಕಷ್ಟಸಂಕಷ್ಟಗಳನ್ನು ಅನುಭವಿಸಿದವರ ಕಥೆಗಳನ್ನು ವರ್ಣಿಸುತ್ತಿದ್ದರು. ಅಂತೆಯೇ ಇತಿಹಾಸದ ಪೃಥ್ವೀರಾಜ, ಛತ್ರಪತಿ ಶಿವಾಜಿ, ತಿಲಕ್, ವೀರ ಸಾವರ್ಕರ್, ಮಹಾತ್ಮಾ ಗಾಂಧಿ ಇವರ ಕಥೆಗಳನ್ನೂ ತಿಳಿಸುತ್ತಿದ್ದರು. ನನ್ನ ಮನೆಯ ವಾತಾವರಣ, ಈ ರೀತಿಯಲ್ಲಿ, ರಾಷ್ಟ್ರೀಯ ಭಾವನೆ ಹಾಗೂ ದೇಶಭಕ್ತಿ ಬೆಳೆಯಲು ಪೂರಕವಾಗಿದ್ದಿತು.

ಡಾ|| ಅನ್ನಿ ಬೆಸೆಂಟ್, ಪಿಯರ್ಸ್, ಅರುಂಡೇಲ್ ಇವರುಗಳು ಇಂಡಿಯನ್ ಬಾಯ್ ಸ್ಕೌಟ್ ಚಳವಳಿ ಹೂಡಿದಾಗ, ನಮ್ಮ ಅಣ್ಣ ವಿ. ಎಸ್. ರಾಮಚಂದ್ರರಾವ್ ಮೊದಲು ಶಿಕ್ಷಣ ಪಡೆದರು; ಅನಂತರ ನಮಗೂ ಶಿಕ್ಷಣವಿತ್ತರು. ಇದರನಂತರ ಮೈಸೂರು ಸ್ಕೌಟ್ಸ್, ಹಿಂದುಸ್ಥಾನಿ ಸೇವಾದಳ, ಭಾರತ ಸೇವಾದಳ ಎಲ್ಲವರಲ್ಲೂ ಶಿಕ್ಷಣ ಪಡೆದುದಾಯಿತು.

ನಮ್ಮ ತಂದೆಯವರ ಕಾರ್ಯಕ್ಷೇತ್ರ ಮೈಸೂರಿಗೆ ಮಾತ್ರ ಸೀಮಿತವಾಗಿರಲಿಲ್ಲ. ಮದರಾಸ್ ಸರ್ಕಾರ ಹಿಂದೂ ರಿಲಿಜಿಯಸ್ ಎಂಡೋಮೆಂಟ್ ಶಾಸನ ಮಾಡಲು ಉದ್ಯುಕ್ತರಾದಾಗ ಅದನ್ನು ಪ್ರತಿಭಟಿಸಲು ಹಿಂದೂಸ್ಥಾನವಾದ್ಯಂತ ಹಲವಾರು ಬಾರಿ ಪ್ರವಾಸ ಕೈಗೊಂಡರು. ಮಹಮ್ಮದಾಲಿ ಜಿನ್ನಾ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದಾಗ ಬೊಂಬಾಯಿಯಲ್ಲಿ ನಡೆದ ವಿಶೇಷ ಅಧಿವೇಶನಕ್ಕೆ ನನ್ನನ್ನೂ ಕರೆದುಕೊಂಡು ಹೋಗಿದ್ದರು. ಆದರೆ ಉದ್ದೇಶವೇ ಬೇರೆ. ಆಗ ತಾನೇ ಮೈಸೂರು ಸಾಬೂನು ತಯಾರಿಕೆಯ ಪ್ರಾರಂಭವಾಗಿತ್ತು. ಬೆಂಗಳೂರಿನ ಪೆರುಮಾಳ್ ಚೆಟ್ಟಿ ಏಜಂಟ್ ಆಗಿದ್ದರು. ಸ್ವದೇಶೀ ಮೈಸೂರು ಸಾಬೂನನ್ನು ಅವರ ಗಮನಕ್ಕೆ ತರುವುದೇ ಮುಖ್ಯ ಉದ್ದೇಶ. ಲೋಕ

ಮಾನ್ಯರು ಬಿಡಾರ ಮಾಡಿದ್ದ ಸರ್ದಾರ ಭವನದಲ್ಲಿಯೇ ನಾವೂ ಸಹ ಉಳಿದುಕೊಂಡಿದ್ದೆವು. ಅವರನ್ನು ಭೇಟಿಮಾಡಿ ಮೈಸೂರು ಸಾಬೂನು ಅರ್ಪಿಸಿದೆವು. ಅನಂತರ ಹತ್ತಾರು ಕಾಂಗ್ರೆಸ್ ಮಹಾಧಿವೇಶನಗಳಿಗೆ ನಾನು ಹೋಗಿದ್ದೆ. ಬೆಳಗಾವಿ ಕಾಂಗ್ರೆಸ್‌ನಲ್ಲಿ ಸ್ವಯಂಸೇವಕನಾಗಿ ಸೇವೆಸಲ್ಲಿಸಿದೆ. ಅನಂತರ, ಹತ್ತಾರು ಕಾಂಗ್ರೆಸ್ ಮಹಾಧಿವೇಶನಗಳಿಗೆ ಪತ್ರಿಕಾಪ್ರತಿನಿಧಿಯಾಗಿ ಹೋಗಿದ್ದೆ. ಸುಭಾಸ್‌ಚಂದ್ರ ಬೋಸರು ದಳಪತಿಯಾಗಿದ್ದ ಕಲ್ಕತ್ತ ಕಾಂಗ್ರೆಸ್, ಅವರೇ ಅಧ್ಯಕ್ಷರಾಗಿದ್ದ ಹರಿಪುರ, ತ್ರಿಪುರ ಕಾಂಗ್ರೆಸ್ ಅಧಿವೇಶನಗಳು ಮುಖ್ಯವಾದುವು. ಎಸ್. ಶ್ರೀನಿವಾಸ ಅಯ್ಯಂಗಾರರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಅವರೊಡನೆ ಉಡುಪಿಗೆ ಹೋಗಿದ್ದೆ. 1929ರಲ್ಲಿ ಮೈಸೂರು ರಾಜ್ಯ ತರುಣ ಸಮ್ಮೇಳನವನ್ನು ನನ್ನ ಮಿತ್ರರ ನೆರವಿನಿಂದ ಸಂಘಟಿಸಿದೆ; ವಿ. ವೆಂಕಟಪ್ಪ ಅಧ್ಯಕ್ಷರಾಗಿದ್ದರು. ಇದರ ಉದ್ಘಾಟನೆಯನ್ನು ಹೊಸಕೊಪ್ಪ ಕೃಷ್ಣರಾವ್ ನೆರವೇರಿಸಿದರು. ನೆಹರು ಪ್ರಥಮ ಬಾರಿ ಬೆಂಗಳೂರಿಗೆ ಪತ್ನಿ ಮತ್ತು ಪುತ್ರಿಯೊಡನೆ ಬಂದಿದ್ದಾಗ ನಾನು ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿಯಾಗಿದ್ದೆ. ಬಾಬೂ ರಾಜೇಂದ್ರ ಪ್ರಸಾದ್ ಕಾಂಗ್ರೆಸ್ ಅಧ್ಯಕ್ಷರಾಗಿ ಬೆಂಗಳೂರಿಗೆ ಬಂದಿದ್ದಾಗಲೂ ನಾನೇ ಕಾರ್ಯದರ್ಶಿಯಾಗಿದ್ದೆ. ಅವರ ಆತಿಥ್ಯ, ಸಭೆ ಎಲ್ಲವೂ ನನ್ನ ಹೊಣೆಯಾಗಿತ್ತು.

ಮಾಧ್ಯಮಿಕ ಶಾಲೆಯಿಂದಲೂ ನಮ್ಮ ಉಪಾಧ್ಯಾಯರುಗಳು ನೀತಿವಂತರಾಗಿ ನಡೆಯುವಂತೆ ಬೋಧಿಸುತ್ತಿದ್ದವರೇ ಆಗಿದ್ದರು. ಸಾಮಾನ್ಯವಾಗಿ ವಾರಕ್ಕೊಂದಾವರ್ತಿಯಾದರೂ ಶ್ರೀ ರಾಮಕೃಷ್ಣಾಶ್ರಮಕ್ಕೆ ನನ್ನ ಸ್ನೇಹಿತರೊಂದಿಗೆ ಹೋಗುತ್ತಿದ್ದೆ. ವಿವೇಕಾನಂದರ ಪುಸ್ತಕಗಳನ್ನು ಆಸಕ್ತಿಯಿಂದ ಓದುತ್ತಿದ್ದೆ ; ಅವರ ಜೀವನ ನನಗೆ ದಾರಿದೀಪವಾಗಿತ್ತು.

ಒಂದು ವರ್ಷಕಾಲ ನಾನು ನ್ಯಾಷನಲ್ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದೆ. ಕೆ. ಸಂಪದ್ಗಿರಿರಾವ್, ಗೋಪಾಲಸ್ವಾಮಿ ಅಯ್ಯಂಗಾರ್ ಹಾಗೂ ಕೆ. ಎಸ್. ಕೃಷ್ಣ ಅಯ್ಯರ್ ಇವರ ವಿದ್ಯಾರ್ಥಿಯಾಗುವ ಸುಯೋಗ ನನ್ನದಾಗಿತ್ತು. ಆ ಶಾಲೆಯ ಪ್ರಭಾವ, ಸಂಪರ್ಕ ಇನ್ನೂ ಅಳಿದಿಲ್ಲ.

ಮಹಾತ್ಮಾಗಾಂಧೀಜಿಯವರ ಕರೆಯಂತೆ ಸರ್ಕಾರಿ ನೌಕರಿ ತ್ಯಜಿಸಿ, ಬೆಂಗಳೂರು ದಂಡಿನ ಪ್ರವೇಶದ ರಾಷ್ಟ್ರೀಯ ಶಾಲೆಯ ಸ್ಥಾಪಕರಲ್ಲೊಬ್ಬರಾದ ಹಾಗೂ ಕೆಲಕಾಲ ಅಲ್ಲಿಯೇ ಉಪಾಧ್ಯಾಯರಾಗಿದ್ದ, ಎಸ್. ಆರ್. ಎಸ್. ರಾಘವನ್ ಅವರ ಸ್ನೇಹ ಲಭಿಸಿತು. ರಾಷ್ಟ್ರೀಯ ಕಾಂಗ್ರೆಸ್ಸಿನ ಶಾಖೆ ಮೈಸೂರು ಸಂಸ್ಥಾನದಲ್ಲಿ ಮೊಟ್ಟ ಮೊದಲು ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಇದರ ಸ್ಥಾಪನೆಯಲ್ಲಿ ರಾಘವನ್ ಪ್ರಮುಖ ಪಾತ್ರ ವಹಿಸಿದ್ದರು. ಕೆಲಕಾಲಾನಂತರ ಎಸ್. ಎಂ. ರಜ್ಜಿ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ನಾನು ಆಗ ಕಾರ್ಯದರ್ಶಿ. ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ಸಿನಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದವರ ಪರಿಚಯ ಕ್ರಮೇಣ

ಆಗುತ್ತಾ ಬಂದಿತು.

ಮಹಾತ್ಮಾ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ತುಂಬಾ ಆಸಕ್ತ; ಹಳೆಯ ಕೈರಾಟೆಯಿಂದ ನೂಲು ತೆಗೆದು ಸೀಗೇಬೇಲಿಯಲ್ಲಿ ಷಾ ಜವೇರ್‌ಚಂದ್ ಸ್ಥಾಪಿಸಿದ್ದ ಖಾದೀ ಕೇಂದ್ರಕ್ಕೆ ಕೊಡುತ್ತಿದ್ದೆ; ವಿದೇಶೀ ವಸ್ತ್ರದಂಗಡಿಗಳ, ಶೇಂದಿ, ಸರಾಬು ಅಂಗಡಿಗಳ ಪಿಕೆಟಿಂಗ್‌ಗಳನ್ನೇರ್ಪಡಿಸಿ ಭಾಗವಹಿಸುತ್ತಿದ್ದೆ. ಕಾನಕಾನಹಳ್ಳಿ, ಆನೆಕಲ್ ಈ ಊರುಗಳಲ್ಲಿ ಆಕ್ಸ್ಯಾಯ್ ಹರಾಜು ಪಿಕೆಟಿಂಗ್ ಬಹಳ ಯಶಸ್ವಿಯಾಯಿತು.

ಕರ್ನಾಟಕ ಕಾಂಗ್ರೆಸ್ ಸಮಿತಿಯ ಸದಸ್ಯನಾಗಿ ಧಾರವಾಡ, ಹುಬ್ಬಳ್ಳಿಗೆ ಕೆಲವೊಮ್ಮೆ ಹೋಗಿದ್ದೆ. ಇದರಿಂದ ಆ ಪ್ರಾಂತ್ಯದ ಹಲಕೆಲವು ಪ್ರಮುಖರ ಪರಿಚಯವಾಯಿತು.

ಎಸ್. ಆರ್. ಎಸ್. ರಾಘವನ್ ಮತ್ತು ನಾನು ಸೇರಿ 'ಡೆಮೊಕ್ರಾಟ್' ಆಂಗ್ಲ ವಾರಪತ್ರಿಕೆ ನಡೆಸಲು 'ಇಂಡಿಯನ್ ಪ್ರೆಸ್' ಸ್ಥಾಪಿಸಿದೆವು (1930). ನಲವತ್ತು ವರುಷಗಳಿಂದ—ಅನೇಕ ಬಾರಿ ಸರ್ಕಾರದ ಆಗ್ರಹಕ್ಕೆ ತುತ್ತಾದರೂ—'ಇಂಡಿಯನ್ ಪ್ರೆಸ್' ನಡೆದುಬರುತ್ತಿದೆ. ಬೆಂಗಳೂರು ಗಣಪತಿ ಗಲಭೆ ನಡೆದಾಗ 'ವೀರಕೇಸರಿ' ಪತ್ರಿಕೆಗೆ ಆಮೂಲಾಗ್ರವಾಗಿ ವರದಿ ಕೊಡುತ್ತಿದ್ದೆ. ವಿಶ್ವೇಶ್ವರಯ್ಯನವರ ಅಧ್ಯಕ್ಷತೆಯಲ್ಲಿ ವಿಚಾರಣೆ ನಡೆಯುತ್ತಿದ್ದಾಗ ನಾನು ಮತ್ತು ಕೆ. ಜೀವಣ್ಣರಾವ್, ಸರದಿಯಂತೆ, ವರದಿ ಮಾಡುತ್ತಿದ್ದೆವು. ಯೂಸುಫ್ ಮೆಹರ್ ಅಲಿ, ಕಮಲಾದೇವಿ ಚಟ್ಟೋಪಾಧ್ಯಾಯ ಇವರಿಂದ ಪ್ರೇರಿತವಾದ ನಾವು ಕೆಲವು ತರುಣರು ಮೈಸೂರು ಸಂಸ್ಥಾನದ ಯುವಜನ ಸಮ್ಮೇಳನ ನಡೆಸಿದೆವು. ನಾನು ಪ್ರಥಮ ಕಾರ್ಯದರ್ಶಿ. ಮೈಸೂರು ಪಾರ್ಲಿಮೆಂಟರಿ ಬೋರ್ಡ್, ಮೈಸೂರು ಕಾಂಗ್ರೆಸ್ಸಿನ ಪ್ರಥಮ ಕಾರ್ಯದರ್ಶಿಯಾಗಿದ್ದೆ. 1936 ಮತ್ತು 1947ರಲ್ಲಿ ಮೈಸೂರು ಪ್ರದೇಶ ಕಾಂಗ್ರೆಸ್‌ನ ಕಾರ್ಯದರ್ಶಿಯಾಗಿದ್ದೆ. ಸ್ವಾತಂತ್ರ್ಯ ನಂತರ ಉಪಚುನಾವಣೆಯಲ್ಲಿ ಗೆದ್ದು ಸ್ವಲ್ಪಕಾಲ ವಿಧಾನಸಭೆಯ ಸದಸ್ಯನಾಗಿದ್ದೆ.

ಕಾರವಾರ, ವಿಸಾಪುರ, ಬೆಂಗಳೂರು ಸೆಂಟ್ರಲ್ ಜೇಲ್ (4 ಸಾರಿ), ಕೃಷ್ಣರಾಜಪುರ ಕ್ಯಾಂಪ್ ಜೇಲ್, ಉಗಾಂ, ಶಿವಮೊಗ್ಗ, ಶ್ರೀರಂಗಪಟ್ಟಣ, ಈ ಸ್ಥಳಗಳಲ್ಲಿ ಬಂದಿಯಾಗಿದ್ದೆ.

ಭಾರತ ಸೇವಾದಳದ ಕಾರ್ಯದರ್ಶಿಯಾಗಿದ್ದೆ; ಗಾಂಧೀ ಸ್ಮಾರಕ ನಿಧಿ (ಕರ್ನಾಟಕ ಶಾಖೆ) ಸದಸ್ಯನಾಗಿದ್ದೆ ಮತ್ತು ಕರ್ನಾಟಕ ಸರ್ವೋದಯ ಸಂಘದ ಸದಸ್ಯನಾಗಿದ್ದೆ. 1937ರಲ್ಲಿ ಸಂಪಿಗೆ ವೆಂಕಟಪತಯ್ಯನವರ ನಾಯಕತ್ವದಲ್ಲಿ ರೂಪುಗೊಂಡ ಮೈಸೂರ್ ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡಿನ ಕಾರ್ಯದರ್ಶಿಯಾಗಿದ್ದೆ. 1938ರಲ್ಲಿ ಸ್ಥಾಪಿತವಾದ ಮೈಸೂರು ಕಾಂಗ್ರೆಸ್‌ಗೆ ನಾನು ಕಾರ್ಯದರ್ಶಿಯಾಗಿದ್ದೆ; ಟಿ. ಸಿದ್ದಲಿಂಗಯ್ಯ ಅಧ್ಯಕ್ಷರಾಗಿದ್ದರು. 19-8-1939ರಲ್ಲಿ ಕೆ.ಜಿ.ಎಫ್. ಸತ್ಯಾಗ್ರಹದಲ್ಲಿ ಪಾಲ್ಗೊಂಡು,

ಮೂರು ತಿಂಗಳ ಶಿಕ್ಷೆ ಅನುಭವಿಸಿದ್ದೆ. 1942 ಹಾಗೂ 1947ರಲ್ಲಿಯೂ ಬಂಧನಕ್ಕೆ ಒಳಗಾಗಿದ್ದೆ. ಈ ಕಾಲದಲ್ಲಿ ನನ್ನ ಆರೋಗ್ಯ ತೀರ ಕೆಟ್ಟಿತ್ತು.

'ವಿಚಾರ ಸಾಹಿತ್ಯ ಪ್ರೈವೇಟ್ ಲಿಮಿಟೆಡ್' ಸಂಸ್ಥೆಯನ್ನು ಪ್ರಕಟಣೆ ಮತ್ತು ಪುಸ್ತಕ ವ್ಯಾಪಾರಕ್ಕಾಗಿ ಸ್ಥಾಪಿಸಿ (1944) ಇಪ್ಪತ್ತು ವರ್ಷಕಾಲ ಮ್ಯಾನೇಜಿಂಗ್ ಡೈರೆಕ್ಟರಾಗಿ ಕೆಲಸಮಾಡಿರುತ್ತೇನೆ; ದಿ|| ಜಿ. ಎ. ಆಚಾರ್ಯ ದೀರ್ಘಕಾಲ ಅದರ ಛೇರ್‌ಮನ್ ಆಗಿದ್ದರು. ರಷ್ಯದ ಯೋಜನೆ ಸಾಧನೆ, ಗಾಂಧೀವಾದ, ಮೂಲಭೂತ ಹಕ್ಕುಗಳು, ಸುಭಾಷ್‌ಚಂದ್ರ ಬೋಸ್, ಮೋಕ್ಷಗುಂಡಂ ವಿಶ್ವೇಶ್ವರಯ್ಯ, ಹುತಾತ್ಮ ಕಿಂಗ್, ಭಾರತದ ಸಂವಿಧಾನ, ಮತ್ತು ಇಂಗ್ಲೀಷ್‌ನಲ್ಲಿ ಮೋಕ್ಷಗುಂಡಂ ವಿಶ್ವೇಶ್ವರಯ್ಯ ನವರ ಸಮೂಲಾಗ್ರ ಜೀವನ ಚರಿತ್ರೆ ಬರೆದಿರುತ್ತೇನೆ.

ನಾಗಪುರ ಧ್ವಜಸತ್ಯಾಗ್ರಹದಲ್ಲಿ ಪಾಲುಗೊಂಡಿದ್ದ ಸಿ. ರಾಜಗೊಪಾಲಾಚಾರ್ 1932ರಿಂದಲೂ 'ಇಂಡಿಯನ್ ಪ್ರೆಸ್'ನ ಕೆಲಸವನ್ನು ಶ್ರದ್ಧೆಯಿಂದ ನೋಡಿಕೊಳ್ಳು ತ್ತಿರುವುದರಿಂದ ನನಗೆ ಸಾರ್ವಜನಿಕ ಕೆಲಸಕ್ಕೆ ಗಮನ ನೀಡುವುದು ಸಾಧ್ಯ ಆಗಿತ್ತು.

ನಾನು 1932ರಲ್ಲಿ ಅಂಕೋಲಾ ತಾಲ್ಲೂಕಿನ ಕರಬಂದಿ ಚಳವಳಿಯಲ್ಲಿ ವಹಿಸಿದ ಪಾತ್ರದ ಅನುಭವವನ್ನು ಇಲ್ಲಿ ವಿವರವಾಗಿ ತಿಳಿಸುತ್ತೇನೆ.

## ಉತ್ತರ ಕನ್ನಡದಲ್ಲಿ

ಕಾರವಾರ ಜಿಲ್ಲೆಯ ಶಿರಸಿ, ಸಿದ್ದಾಪುರ, ಅಂಕೋಲಾ ಮತ್ತು ಧಾರವಾಡ ಜಿಲ್ಲೆಯ ಹಿರೇಕೆರೂರು ತಾಲ್ಲೂಕುಗಳಲ್ಲಿ ಕರಬಂದಿ ಚಳವಳಿ ಸಾಹಸಮಯವಾಗಿ ಸಾಗುತ್ತಿತ್ತು. ಕನ್ನಡನಾಡಿನ ಹಿರಿಯ ನಾಯಕ ಹರ್ಡೀಕರ್, ದಿವಾಕರ್, ಹುಕ್ಕೇರಿಕರ್, ಕರಮರ ಕರ್, ಕಬ್ಬೂರ್ ಮೊದಲಾದವರು ಸೆರೆಮನೆ ಸೇರಿದ್ದರು. ಡಿ. ಪಿ. ಕರಮರಕರ್, ಪೋಲೀಸರ ಕಣ್ಣುತಪ್ಪಿಸಿ, ಹಳ್ಳಿಯಿಂದ ಹಳ್ಳಿಗೆ ಸಾಗುತ್ತ ಜನರನ್ನು ಪ್ರೋತ್ಸಾಹಿಸು ತ್ತಿದ್ದ ಸಾಹಸಕಾರ್ಯ ಈ ಜಿಲ್ಲೆಯಲ್ಲಿ ಪವಾಡಗಳೆನಿಸಿವೆ.

ನಾನು ಬಾರ್ಡೋಲಿ ಸತ್ಯಾಗ್ರಹದ ಕಥೆ ಓದಿ ತಿಳಿದಿದ್ದೆ. ಕರ್ನಾಟಕದಲ್ಲಿ ನಡೆಯುತ್ತಿದ್ದ ಕರನಿರಾಕರಣ ಚಳವಳಿ ಬಾರ್ಡೋಲಿ ಸತ್ಯಾಗ್ರಹವನ್ನು ಮೀರಿಸಿರುವು ದಾಗಿಯೂ ಅಲ್ಲಿನ ಬಹುಜನರು ಧೈರ್ಯದಿಂದ ಸರಕಾರದ ದಬ್ಬಾಳಿಕೆಯನ್ನು ಎದುರಿಸು ತ್ತಿರುವುದಾಗಿಯೂ ದಾರುಣಕಷ್ಟಸಂಕಟಗಳನ್ನು ಅನುಭವಿಸುತ್ತಿರುವುದಾಗಿಯೂ ಅಲ್ಪ ಸ್ವಲ್ಪ ಸುದ್ದಿ ತಿಳಿಯುತ್ತಿತ್ತು.

1931 ಮತ್ತು 1933ರಲ್ಲಿ ಆ ಜಿಲ್ಲೆಯಲ್ಲಿ ನಡೆದ ಕರನಿರಾಕರಣ ಚಳವಳಿಗೆ ನಿಧಿ ಸಂಗ್ರಹಿಸುವುದಕ್ಕಾಗಿ ಬೆಂಗಳೂರಿನ ಅನೇಕ ಪ್ರಮುಖರೊಡನೆ ಸಹಕರಿಸುತ್ತಿದ್ದೆ. ಮೈಸೂರು ರಾಜ್ಯದ ವಕೀಲರೊಬ್ಬರು (ಈಗ ಮುಖ್ಯನ್ಯಾಯಾಧೀಶರಾಗಿ ನಿವೃತ್ತ ರಾಗಿದ್ದಾರೆ) ನಿಧಿಸಂಗ್ರಹಣೆ ಮತ್ತು ವಿತರಣೆಯ ಹೊಣೆ ಹೊತ್ತಿದ್ದರು. ಈ ಕೆಲಸ

ಬಹಿರಂಗವಾಗಿ ನಡೆಯುವಂತಿರಲಿಲ್ಲ. ಸುಪ್ರಸಿದ್ಧ ವಕೀಲರಾದ ಸಂಪಿಗೆ ವೆಂಕಟಪತಯ್ಯ ನವರು ಅಂತರಂಗವಾಗಿಯೂ ಬಹಿರಂಗವಾಗಿಯೂ ಆಂದೋಲನಕ್ಕೆ ನೆರವು ನೀಡುತ್ತಿದ್ದರು. ಅವರ ಕಚೇರಿಯೇ ಚಳವಳಿಯ ಕೇಂದ್ರವಾಗಿತ್ತು. ಎಷ್ಟು ಕಾಲ ಪೋಲೀಸರ ಗಮನಕ್ಕೆ ಬರದೆ ಕೆಲಸಮಾಡುವುದು ಸಾಧ್ಯ? ಕಡೆಗೆ ಬೊಂಬಾಯಿ ಸರ್ಕಾರ ಮೈಸೂರಿನ ಬ್ರಿಟಿಷ್ ರೆಸಿಡೆಂಟರಿಗೆ ಪತ್ರ ಬರೆದು, "ಬೆಂಗಳೂರಿನಲ್ಲಿ ಕರಬಂದಿ ಚಳವಳಿ ನಡೆಸುತ್ತಿರುವವರ ವ್ಯವಸ್ಥಿತ ಕೇಂದ್ರ ಕಚೇರಿಯಿದೆ; ಸಂಪಿಗೆ ವೆಂಕಟಪತಯ್ಯನವರೇ ಇದರ ಸೂತ್ರಧಾರಿ; ಇವರನ್ನು ಬಂಧಿಸಿ" ಎಂದು ಮೇಲಿಂದಮೇಲೆ ಮೈಸೂರು ಸರ್ಕಾರದ ಮೇಲೆ ಒತ್ತಾಯ ಹೇರಿತು. ಸುಲ್ತಾನ್‌ಪೇಟೆ ಗಣಪತಿ ಗಲಭೆಯಲ್ಲಿ ಇವರು ಮುಖ್ಯ ಪಾತ್ರವಹಿಸಿದ್ದರೆಂಬ ಅರಿವಿದ್ದ ಮೈಸೂರು ಸರ್ಕಾರ ಇವರ ಮೇಲೆ ತನ್ನ ಗಮನವನ್ನು ಇಟ್ಟೇ ಇತ್ತು. ಆಗಸ್ಟ್ 7, 1933ರಲ್ಲಿ ಇವರನ್ನು ಬಂಧಿಸಿ ಕಾರವಾರ ಪೋಲೀಸರ ವಶಕ್ಕೆ ಒಪ್ಪಿಸಿತು.

ಈ ಸಮಯದಲ್ಲಿ ನಾನು ಬೊಂಬಾಯಿನಿಂದ ಪ್ರಕಟವಾಗುತ್ತಿದ್ದ 'ಇಂಡಿಯನ್ ಡೇಲಿ ಮೇಲ್' ಪತ್ರಿಕೆಯ ಮೈಸೂರು ಸಂಸ್ಥಾನದ ಬಾತ್ಮೀದಾರನಾಗಿದ್ದೆ. ಅಲ್ಲದೆ ಬೆಂಗಳೂರಿನಿಂದ ಹೊರಡುತ್ತಿದ್ದ 'ಡೆಮೊಕ್ರ್ಯಾಟ್' ಎಂಬ ಆಂಗ್ಲ ವಾರಪತ್ರಿಕೆಯ ಸಹಸಂಪಾದಕನಾಗಿದ್ದೆ. 'ತಾಯಿನಾಡು' ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದೆ. ಕಾರವಾರದಲ್ಲಿ ನಡೆಯುತ್ತಿದ್ದ ನಿಜ ಸುದ್ದಿಯನ್ನು ಪ್ರತ್ಯಕ್ಷ ಪರಿಶೀಲನೆಯಿಂದ ತಿಳಿದು ಪತ್ರಿಕೆಗಳಲ್ಲಿ ಪ್ರಕಟಿಸಬೇಕೆಂಬ ಉದ್ದೇಶದಿಂದ ಕಾರವಾರಕ್ಕೆ ಹೊರಟೆ (1932).

ಸಾಗರದ ಗಡಿಯ ಒಂದು ಗ್ರಾಮದಲ್ಲಿ ಒಬ್ಬ ಜಮೀನ್ದಾರರ ಮನೆಯಲ್ಲಿ ಕಾರ್ಯಕರ್ತರ ಶಿಬಿರವೊಂದು ನಡೆಯುತ್ತಿತ್ತು. ಪೋಲೀಸರ ಕಣ್ಣುತಪ್ಪಿಸಿ, ಮೈಸೂರಿನ ಕಾರ್ಯಕರ್ತರನ್ನು ಕರನಿರಾಕರಣ ಚಳವಳಿ ನಡೆಯುತ್ತಿದ್ದ ಸ್ಥಳಗಳಿಗೆ ಗುಟ್ಟಾಗಿ ಸಾಗಿಸುವ ಕೇಂದ್ರ ಇದಾಗಿತ್ತು. ಅರಣ್ಯದಿಂದ ಅನತಿದೂರದಲ್ಲಿದ್ದ ಜೊಡ್ಡ ಹಳೆಯ ಕಾಲದ ಮಲೆನಾಡಿನ ಮನೆ. ನೂರು ಜನ ಸಂಸಾರ ಸಾಗಿಸಬಹುದಾದಷ್ಟು ಭಾರಿ ಮನೆ. ಇಲ್ಲಿ ಎರಡು ದಿನ ಇದ್ದು, ಸಾಗರಕ್ಕೆ ಹಿಂತಿರುಗಿ ಬಸ್ಸಿನಲ್ಲಿ ಸಿದ್ದಾಪುರಕ್ಕೆಂದು ಹೊರಟೆ.

ಸಿದ್ದಾಪುರಕ್ಕೆ ಹೋಗುವ ಮಾರ್ಗ ಜೋಗ ಜಲಪಾತದ ಬಳಿ ಹಾದುಹೋಗುತ್ತದೆ. ಮೈಸೂರು ಗಡಿ ದಾಟಿ, ಮುಂಬಯಿ ಸರಹದ್ದು ಪ್ರವೇಶಿಸುವಲ್ಲಿ ಪೋಲೀಸರು ಕರನಿರಾಕರಣ ಚಳವಳಿಯಲ್ಲಿ ಭಾಗವಹಿಸಲು ಹೋಗುವ ಜನರಿಗೋಸ್ಕರ ಶೋಧಿಸುತ್ತಿದ್ದರು; ಸಂದೇಹ ಬಂದವರನ್ನು ಬಂಧಿಸುತ್ತಿದ್ದರು. ನನ್ನ ಗತಿ ? ಪೋಲೀಸರ ದೃಷ್ಟಿ ನನ್ನ ಮೇಲೆ ಬೀಳಲಿಲ್ಲ.

"ಸಿದ್ದಾಪುರದ ಮಾಮಲೇದಾರ್ ತುಂಬಾ ಕಟ್ಟುನಿಟ್ಟಾದ ವ್ಯಕ್ತಿ, ಬಹಳ ಕ್ರೂರಿ; ನೀವು ಸಿದ್ದಾಪುರದಲ್ಲಿ ಇಳಿಯಬೇಡಿ; ಶಿರ್ಸಿಗೆ ಹೊರಟುಹೋಗಿ" ಎಂದು ಸ್ಥಳೀಯ ಕಾರ್ಯಕರ್ತರು ಎಚ್ಚರಿಸಿದರು. ಒಂದು ಕೈ ನೋಡಿಯೇ ಬಿಡೋಣ ಎಂದು ಮನಸ್ಸು

ಮಾಡಿದೆ. ಬಸ್ಸಿನಿಂದ ಇಳಿದು ಕ್ಯಾಮೆರ ಕೈಲಿ ಹಿಡಿದುಕೊಂಡು— ಸಿಂಹವನ್ನು ಅದರ ಗುಹೆಯಲ್ಲಿಯೇ ಎದುರಿಸುವವನಂತೆ—ನೇರವಾಗಿ ಮಾಮಲೇದಾರರ ಕಚೇರಿಗೇ ಹೋದೆ. ಪತ್ರಿಕಾಪ್ರತಿನಿಧಿಯಾಗಿ ಇಲ್ಲಿನ ವಾಸ್ತವಾಂಶಗಳನ್ನು ವರದಿ ಮಾಡಲು ಬಂದಿರುವುದಾಗಿ ಹೇಳಿ ಸಂಪಾದಕರು ಕೊಟ್ಟಿದ್ದ ಅಧಿಕಾರಪತ್ರವನ್ನು ತೋರಿಸಿದೆ. ಮತ್ತು ನಿರ್ಭಯವಾಗಿ, ಪೋಲೀಸರ ಉಪದ್ರವವಿಲ್ಲದೆ, ತಾಲ್ಲೂಕಿನಲ್ಲಿ ಸಂಚರಿಸಿ ಸುದ್ದಿ ಸಂಗ್ರಹಿಸಲು ಅವಕಾಶ ಕೊಡಬೇಕೆಂದು ಕೇಳಿಕೊಂಡೆ. ಆ ವ್ಯಕ್ತಿ ದುರುಗುಟ್ಟಿಕೊಂಡು ಕ್ಷಣಕಾಲ ನನ್ನನ್ನು ದಿಟ್ಟಿಸಿ, "ಹೊರಗಿನಿಂದ ಸಂಶಯಾಸ್ಪದವಾಗಿ ಇಲ್ಲಿಗೆ ಬಂದವನನ್ನು ಕೂಡಲೇ ಬಂಧಿಸುವಂತೆ ಆಜ್ಞೆ ಜಾರಿಯಲ್ಲಿದೆ. ತದ್ವಿರುದ್ಧ, ನೀವು ಅಲ್ಲಿ-ಇಲ್ಲಿ ಅಡ್ಡಾಡುತ್ತಿದ್ದಾಗ ನಿಮ್ಮನ್ನು ಬಂಧಿಸಕೂಡದು ಎಂದು ನಾನು ಹೇಳಲಾರೆ; ಕರ್ತವ್ಯಪಾಲನೆಯಲ್ಲಿ ನಿಮ್ಮನ್ನು ಬಂಧಿಸಿದರೆ ನಾನೇನೂ ಮಾಡಲಾರೆ" ಎಂದು ಹೇಳಿ ಪುನಃ "24 ಘಂಟೆಗಳೊಳಗಾಗಿ ನೀವು ಇಲ್ಲಿಂದ ಕಾಲ್ತೆಗೆಯದಿದ್ದರೆ ನಿಮ್ಮನ್ನು ಬಂಧಿಸುವಂತೆ ಪೋಲೀಸರಿಗೆ ತಿಳಿಸಬೇಕಾದೀತು. ಇಲ್ಲಿಂದ ನೀವು ಕೂಡಲೇ ಹೊರಟುಹೋಗುವುದೇ ಕ್ಷೇಮ" ಎಂದು ಎಚ್ಚರಿಕೆ ನೀಡಿದರು.

ಈಗಿನಂತೆ ಆಗ ತಂತಿ, ಟೆಲಿಫೋನ್ ಸೌಲಭ್ಯಗಳಿರಲಿಲ್ಲ; ಅಲ್ಲದೆ ಅಂದಿನ ವಾತಾವರಣವೂ ನಮಗೆ ಅನುಕೂಲವಾಗಿರಲಿಲ್ಲ. ಈ ಸನ್ನಿವೇಶದಲ್ಲಿ ಬೆಂಗಳೂರು ಅಥವಾ ಮುಂಬಯಿಗೆ ನನ್ನ ಸಂಪಾದಕರಿಗೆ ಸುದ್ದಿ ತಿಳಿಸಿ ಮುಂದಿನ ಹೆಜ್ಜೆ ಇಡುವ ಅವಕಾಶವಿರಲಿಲ್ಲ. ನಾನು ಬಂಧಿತನಾದರೆ ನನ್ನನ್ನು ಬಿಡಿಸಿಕೊಳ್ಳುವ ಹೊಣೆ ಅವರಿಗೆ ಸೇರಿದ್ದು. ನನ್ನ ಕರ್ತವ್ಯಪಾಲನೆಯಲ್ಲಿ ಏನೇ ಅಡಚಣೆ ಬಂದರೂ ಸರಿ ಎದುರಿಸೋಣ, ಪ್ರತಿಭಟಿಸೋಣ ಎಂಬ ಭಾವನೆ ಉತ್ಕಟವಾಗಿತ್ತು. ಆದರೆ ಪ್ರಾರಂಭದಲ್ಲಿಯೇ ಹೀಗಾದರೆ ಉದ್ದೇಶ ಕೈಗೂಡುವುದೆಂತು? ಸದ್ಯ ತಗ್ಗಿ ನಡೆಯುವುದೇ ಮೇಲು, ಉಪಾಯದಿಂದ ಕೆಲಸ ಸಾಗಿಸೋಣ ಎಂದು ತೀರ್ಮಾನಿಸಿ, ಮಾರನೆಯ ಬೆಳಗ್ಗೆಯೇ ಸಿದ್ದಾಪುರದಿಂದ ಶಿರಸಿಗೆ ಹೊರಟೆ. ಮಾರ್ಗದಲ್ಲಿ ಬಸ್ಸು ನಿಂತಲ್ಲೆಲ್ಲ ಪೋಲೀಸರು ಪ್ರಯಾಣಿಕರನ್ನು ಸಂಶಯದ ಕಣ್ಣಿನಿಂದ ನೋಡುತ್ತಿದ್ದರು. ನಾನು ಸಾಮಾನ್ಯವಾಗಿ ಖಾದಿ ಪಾಯಿಜಾಮ, ಷರಟು, ಬಿಳೀ ಟೋಪಿ ಧರಿಸುತ್ತಿದ್ದೆ. ಆ ಕಾಲಕ್ಕೆ ಬಿಳೀ ಗಾಂಧೀ ಟೋಪಿ ಪೋಲೀಸರ ಕಣ್ಣಿಗೆ ಕೆಂಡ! ಆದ್ದರಿಂದ ಬಿಳೀ ಟೋಪಿಗೆ ಬದಲಾಗಿ ಕರಿಯ ಉಣ್ಣೆ ಟೋಪಿ ಧರಿಸಿದೆ. ಶಿರಸಿಯಲ್ಲಿ ಬಹುಜನ ವಿದ್ಯಾರ್ಥಿಗಳ ಮತ್ತು ಮುಸ್ಲಿಂ ತರುಣರ ಉಡುಪು ಇದೇ ಆಗಿತ್ತು. ಶಿರಸಿಯಲ್ಲಿ ಉಳಿದುಕೊಳ್ಳಲು ಒಬ್ಬರ ಮನೆಯಲ್ಲಿ ನನಗೆ ವ್ಯವಸ್ಥೆ ಮಾಡಲಾಗಿತ್ತು. ಹೆಚ್ಚು ಕಾಲ ಮನೆಯಲ್ಲೇ ಇರುತ್ತಾ, ಸಂಜೆ ಪೇಟೆ ಕಡೆ ಹೋಗುತ್ತಿದ್ದೆ. ಕಾಫಿ ಹೊಟೇಲಿಗೆ ಹೋಗಿ ಅಲ್ಲಿ ಬರುತ್ತಿದ್ದವರ ಚಲನವಲನ, ಮಾತುಕತೆಗಳನ್ನು ಗಮನಿಸುತ್ತಿದ್ದೆ. ನಾನೊಬ್ಬ ಮುಸ್ಲಿಂ ವಿದ್ಯಾರ್ಥಿ ಎಂದು ಪೋಲೀಸರು ಭಾವಿಸಿದಂತಿತ್ತು. ಮಕ್ಕಳ ರೋಗಗಳಿಗೆ ನಾಟಿ ಔಷಧಿಯನ್ನು

ಕೊಡುವುದರಲ್ಲಿ ಖ್ಯಾತಿಗಳಿಸಿ ಮಕ್ಕಳತಾಯಿ ಮಂಜುನಾಥ ಹೆಗ್ಗಡೆ ಅವರ ಗ್ರಾಮಕ್ಕೆ ಹೋಗಿ ಬಂದೆ. ಶಿರಸಿಯಲ್ಲೇ ನಾಲ್ಕೈದು ದಿನ ಉಳಿದು ವಿಷಯಸಂಗ್ರಹಣೆ ಮಾಡಿದೆ. ನೇರವಾಗಿ ಹುಬ್ಬಳ್ಳಿಗೆ ಹೋಗಿ ಅಲ್ಲಿದ್ದ ಪ್ರಮುಖ ಕಾರ್ಯಕರ್ತರನ್ನು ಕಂಡು ಮುಂದಿನ ಕಾರ್ಯಕ್ರಮ ನಿರ್ಧರಿಸುವಂತೆ ಶಿರಸಿಯಲ್ಲಿದ್ದವರು ನನಗೆ ಸೂಚಿಸಿದರು. ಕರನಿರಾಕರಣೆಗೆ ಮಾರ್ಗದರ್ಶನ ನೀಡುತ್ತಿದ್ದ ಪ್ರಮುಖರು ಹುಬ್ಬಳ್ಳಿಯಲ್ಲಿದ್ದರು. ಅಂಕೋಲ ಮಾರ್ಗವಾಗಿ ಹುಬ್ಬಳ್ಳಿ ಸೇರಿದೆ.

ಹುಬ್ಬಳ್ಳಿಯಲ್ಲಿ ಜೇಲಿಗೆ ಹೋಗದೆ ಹೊರಗೇ ಉಳಿದಿದ್ದ ಹಲವು ನಿಷ್ಠಾವಂತ ಕಾರ್ಯಕರ್ತರನ್ನು ನೋಡಿದೆ. "ಕರಮರಕರರು ಬಂಧಿತರಾದಮೇಲೆ ಅಂಕೋಲೆಯಲ್ಲಿ ಕೆಲಸ ಮಾಡುವವರು ಇಲ್ಲವಾಗಿದ್ದಾರೆ. ಅಂಕೋಲೆಗೆ ಹೋಗಿ ಅವರು ನಡೆಸುತ್ತಿದ್ದ ಕೆಲಸ ಮುಂದುವರಿಸಿ" ಎಂದು ಒತ್ತಾಯಪಡಿಸಿದರು. ಇಷ್ಟು ದೊಡ್ಡ ಜವಾಬ್ದಾರಿ ವಹಿಸಿಕೊಳ್ಳುವ ಸಾಮರ್ಥ್ಯ, ವಯಸ್ಸು ಮತ್ತು ಅನುಭವ ನನಗಿಲ್ಲ ಎಂದು ಎಷ್ಟೋ ಹೇಳಿದೆ; ಆದರೆ ಅವರು ಕೇಳಲಿಲ್ಲ. "ಕರಮರಕರರು ಅಂಕೋಲೆಯ ಕೆಲಸಗಾರರು. ಅವರ ಗುಣ, ಸ್ವಭಾವ, ಯೋಗ್ಯತೆ, ಧನಸಹಾಯ ಪಡೆಯುವ ಮೂಲ ಎಲ್ಲವನ್ನೂ ಬರೆದಿಟ್ಟಿದ್ದಾರೆ. ಇದರಿಂದ ನಿನ್ನ ಕೆಲಸ ಸುಲಭವಾಗುತ್ತದೆ" ಎಂದು ಪ್ರೇರೇಪಿಸಿದರು. ನನ್ನನ್ನು ಬೆಳಗಾವಿಯಲ್ಲಿದ್ದ ವೃದ್ಧ ದೇಶಭಕ್ತ, ಕರ್ನಾಟಕ ಕೇಸರಿ, ಗಂಗಾಧರರಾವ್ ದೇಶಪಾಂಡೆಯವರಲ್ಲಿಗೆ ಕರೆದೊಯ್ದರು. ಗಾಂಧೀ–ಇರ್ವಿನ್ ಒಪ್ಪಂದದಂತೆ ಅವರು ಬಿಡುಗಡೆಯಾಗಿ ಬಂದಿದ್ದರೆಂದು ನನ್ನ ಜ್ಞಾಪಕ. ಇಳಿವಯಸ್ಸಿನಲ್ಲೂ ಅವರ ಅದಮ್ಯ ದೇಶಭಕ್ತಿ, ಉಜ್ವಲ ಕಾಂತಿ ನನ್ನ ಮೇಲೆ ಬಹಳ ಪರಿಣಾಮ ಬೀರಿತು. "ನಮ್ಮ ಕಾಲ ಮುಗಿಯಿತು; ನಿಮ್ಮಂಥ ತರುಣರು ಮುಂದೆ ಬಾರದಿದ್ದರೆ ದೇಶದ ಗತಿ ಏನು?" ಎಂದು ಹೇಳಿ, ಅಂಕೋಲೆಗೆ ಹೋಗುವಂತೆ ತಿಳಿಸಿದರು. ಕರಮರಕರರು ಸಣ್ಣ ಹಸ್ತಾಕ್ಷರಗಳಲ್ಲಿ ಬರೆದಿದ್ದ ಡೈರಿ ನನ್ನ ಕೈಗೆ ಬಂತು. ಹಿರಿಯರ ಮಾತಿಗೆ ಪ್ರತಿಯಾಡುವುದು ನನಗೆ ಕಠಿಣವಾಗಿತ್ತು. "ಆಗಲಿ, ತಮ್ಮ ಆಣತಿಯಂತೆ ಹೋಗುತ್ತೇನೆ; ತಮ್ಮ ಆಶೀರ್ವಾದವಿರಲಿ" ಎಂದು ನಮಸ್ಕರಿಸಿದೆ.

ಆಗತಾನೆ ಎಸ್. ಆರ್. ಎಸ್. ರಾಘವನ್ ಅವರ ಜೊತೆಗೂಡಿ 'ಇಂಡಿಯನ್ ಪ್ರೆಸ್' ಪ್ರಾರಂಭಿಸಿದ್ದೆ. ಮುಂದೇನು? ಏನೇನೋ ಚಿಂತೆ. ಮಾತು ಕೊಟ್ಟದ್ದಾಯಿತು. ಆದದ್ದಾಗಲಿ ಎಂದು ಸಮಾಧಾನ ತಂದುಕೊಂಡೆ. ಎಷ್ಟೋ ತರುಣರನ್ನು ನಾನೇ ಸತ್ಯಾಗ್ರಹಕ್ಕೆ ಕಳುಹಿಸಿ ಕೊಟ್ಟಿರಲಿಲ್ಲವೇ? ಈಗ ಬಂತು ನನ್ನ ಸರದಿ! ಪೋಸ್ಟ್ ಕಾರ್ಡು ತೆಗೆದುಕೊಂಡು, "ತಾಯಿ, ನಾನು ಸತ್ಯಾಗ್ರಹದ ಸಮರಕ್ಕೆ ಧುಮುಕಲಿದ್ದೇನೆ. ನಿನ್ನ ಮುಖದರ್ಶನ ಮತ್ತೆ ಆದೀತೋ ಇಲ್ಲವೋ ಹೇಳಲಾರೆ. ನಿನ್ನ ಆಶೀರ್ವಾದವಿರಲಿ" ಎಂದು ಬೆಳಗಾವಿಯಿಂದ ಪತ್ರ ಬರೆದು ಟಪಾಲಿಗೆ ಹಾಕಿದೆ.

ಕರನಿರಾಕರಣೆ ನಡೆಯುತ್ತಿದ್ದ ಪ್ರದೇಶಕ್ಕೆ ಸರಿಯಾದ ರಸ್ತೆಯಲ್ಲಿ ನೇರವಾಗಿ

ಹೋಗುವುದರಲ್ಲಿ ಅಡಗಿದ್ದ ಅಪಾಯ ಕುರಿತು ಹಿಂದೆಯೇ ಹೇಳಿದ್ದೇನೆ. ಕಾಡುಮೇಡಿನಲ್ಲಿ ಕಾಲುದಾರಿಗಳಲ್ಲಿ ನಡೆದುಹೋಗುವುದು ಮತ್ತೊಂದು ಕ್ರಮ. ಕಬ್ಬೂರ್ ಮೊದಲಾದ ವರು ನನಗೆ ಇನ್ನೊಂದು ಮಾರ್ಗದಲ್ಲಿ ಹೋಗುವಂತೆ ಸೂಚಿಸಿದರು. ಬೆಳಗಾವಿಯಿಂದ ಮರ್ಮಗೋವಾಕ್ಕೆ ಹೋದೆ. ಅಲ್ಲಿಂದ ತೀರದಲ್ಲಿ ಸಂಚರಿಸುವ ಜಹಜಿನಲ್ಲಿ ಗೋಕರ್ಣಕ್ಕೆ ಪಯಣಿಸಿದೆ. ಗೋಕರ್ಣ ಭಾರತದ ನಾನಾ ಪ್ರದೇಶಗಳಿಂದ ಯಾತ್ರಾರ್ಥಿಗಳನ್ನು ಆಕರ್ಷಿಸುವ ತೀರ್ಥಕ್ಷೇತ್ರ. ಲುಂಗಿ ಉಟ್ಟುಕೊಂಡಿದ್ದೆ. ಯಾರೋ ಯಾತ್ರಾರ್ಥಿ ಎಂದು ಪೋಲೀಸರು ಪ್ರಶ್ನಿಸದೆ ಬಿಟ್ಟರು. ನೆಟ್ಟಗೆ ದೇವಾಲಯಕ್ಕೆ ಹೋದೆ. ಸಮಯ ಸಾಧಿಸಿ ಅಲ್ಲಿನ ಪೂಜಾರಿಗೆ ಸಂಕೇತ ಪದ ಬಳಸಿ ನನ್ನ ಪರಿಚಯ ಮಾಡಿಕೊಟ್ಟೆ. ಅವರು ನನ್ನನ್ನು ಎರಡು ದಿನ ತಮ್ಮ ಮನೆಯಲ್ಲೇ ಉಳಿಸಿಕೊಂಡರು. ಗೋಕರ್ಣದ ವೈದ್ಯ ರೊಬ್ಬರು ಅಂಕೋಲೆಯ ಪ್ರಮುಖರ ಪರಿಚಯವಿಟ್ಟುಕೊಂಡಿದ್ದರು. ನನ್ನ ಆಗಮನ ವನ್ನು ಅವರಿಗೆ ತಿಳಿಸಿ ನನ್ನನ್ನು ಕರೆದುಕೊಂಡು ಹೋಗುವ ವ್ಯವಸ್ಥೆ ಮಾಡಲು ಒಂದು ದಿನ ಹಿಡಿಯಿತು. ಈ ವೈದ್ಯರು ಸಂಪರ್ಕಾಧಿಕಾರಿಯಾಗಿರುವರೆಂದು ಅವರನ್ನು ಗುಮಾನಿಯ ಮೇಲೆ ಬಂಧಿಸಿ ಶಿಕ್ಷೆಗೆ ಗುರಿಮಾಡಿದರು. ನಮ್ಮ ಪತ್ರವ್ಯವಹಾರ ಇವರ ಮೂಲಕವೇ ನಡೆಯುತ್ತಿತ್ತು.

ಮಾರನೆಯ ರಾತ್ರಿ ಸ್ವಲ್ಪದೂರ ನಡೆದು ಗಂಗಾವಳಿ ನದೀತೀರಕ್ಕೆ ಒಬ್ಬ ಮಾರ್ಗ ದರ್ಶಿಯೊಡನೆ ಹೋದೆ. ಅಲ್ಲೊಂದು ಸಣ್ಣ ದೋಣಿ ನಮಗಾಗಿ ಕಾಯುತ್ತಿತ್ತು. ಹಾಲು ಚೆಲ್ಲಿದ ಬೆಳದಿಂಗಳು. ಸಮುದ್ರದ ತಂಗಾಳಿ ಬೀಸುತ್ತಿತ್ತು. ದೋಣಿಯ ಮೇಲೆ ಸುಮಾರು 7 ಮೈಲುಗಳ ದೂರ ಕ್ರಮಿಸಿದೆವು. ಆಗಿಂದಾಗ್ಗೆ ನೀರಿನ ಮೇಲಕ್ಕೆ ಮೀನು ಗಳು ಬೆಳ್ಳಿಯಂತೆ ಥಳಥಳಿಸುತ್ತ ಹಾರಿ ಹಾರಿ ಬೀಳುತ್ತಿದ್ದವು. ಗುಂಪುಗುಂಪಾಗಿ ಮೀನುಗಳು ಚಲಿಸುತ್ತಿದ್ದಾಗ ಹೊಳೆಯ ನೀರೆಲ್ಲಾ ಹೊಳೆಯುತ್ತಿತ್ತು. ಪ್ರಯಾಣ ತುಂಬಾ ಆಹ್ಲಾದಕರವಾಗಿತ್ತು. ಬೆಳಗಿನ ವೇಳೆಗೆ—ನಸುಕು ನಸುಕಾಗಿದ್ದಾಗಲೇ— ಅಂಕೋಲೆ ತಾಲ್ಲೂಕಿನ ಯಾವುದೋ ಒಂದು ಗ್ರಾಮವನ್ನು ಸೇರಿದೆವು.

ನನಗೆ ಮೊದಲೇ ಕೊಡಗಿನ ಎಂ. ಸಿ. ಮಾತಂಡ ಅಲ್ಲಿದ್ದರು. ಇವರು ಹಿಂದುಸ್ತಾನಿ ಸೇವಾದಳದ ಶಿಕ್ಷಣ ಮೊಟ್ಟಮೊದಲು ಪಡೆದ ಎನ್. ಎಸ್. ಹರ್ಡೀಕರರ ನೆಚ್ಚಿನ ಶಿಷ್ಯ ; ಶಿಸ್ತಿನ ಸ್ವಯಂಸೇವಕ ; ಸೊಗಸುಗಾರ. ತನ್ನ ಉಡುಪಿನ ಮೇಲೆ ಪಂಚಪ್ರಾಣ. ಶುಭ್ರವಾದ ಬಿಳಿಯ ಖಾದಿ ಷರಾಯಿ, ಷರಟು ಮತ್ತು ಕೋಟು ಧರಿಸುತ್ತಿದ್ದರು. ಒಗೆದ ಬಟ್ಟೆಗಳನ್ನು ರಾತ್ರಿ ತಲೆಕೆಳಗೆ ಇಟ್ಟುಕೊಂಡು ಮಲಗಿದರೆ ಅದು ಇಸ್ತ್ರಿ ಆಗುವುದು. ತಾನು ಎಲ್ಲಿಗೇ ಹೋದರೂ ಉಡುಪು ತನ್ನ ಬಳಿಯಲ್ಲೇ ಇರಬೇಕು. "ಈ ಉಡುಪು ಧರಿಸುವುದರಿಂದ ಪೋಲೀಸರು ಎಷ್ಟು ದೂರದಿಂದಲೂ ನಿಮ್ಮ ಗುರ್ತು ಹಚ್ಚಬಲ್ಲರು; ಈ ಉಡುಪು ತೊಡಬೇಡಿ" ಎಂದು ರಾಮನಾಯ್ಕರು ಎಷ್ಟು ಹೇಳಿದರೂ ಮಾತಂಡ ಕೇಳ ಲೊಲ್ಲರು. ನಾಡವರು ಲಂಗೋಟಿ ಧರಿಸಿ, ಕಂಬಳಿ ಹೊದ್ದಿರುವರು. ಶ್ರೀಮಂತರ

ಉಡುಪೂ ಇದೇ ! ಅಲ್ಲಿನ ಹವಾಗುಣಕ್ಕೆ ಇದು ಯೋಗ್ಯ. ಅತಿ ಉಷ್ಣ, ಅತಿ ಮಳೆ. ಮಳೆಗಾಲದಲ್ಲಿ ಎಲ್ಲೆಲ್ಲೂ ನೀರೇ. ಕೆಲಬಾರಿ ಕಂಠದವರೆಗೂ ನೀರು ಏರುತ್ತಿದ್ದ ಕಾಲುವೆಯಲ್ಲಿ ಹಾದುಹೋಗಬೇಕು.

ಯಾವುದೋ ಗ್ರಾಮಕ್ಕೆ ಸೇರಿದ ಒಂದು ಗುಡಿಸಿಲಿನಲ್ಲಿ ನಮ್ಮ ವಸತಿಗೆ ಏರ್ಪಾಟಾಗಿತ್ತು. ಇಲ್ಲಿ ಮಾತಂಡ ಕೆಲವು ಸಣ್ಣ ಹುಡುಗರೊಂದಿಗೆ ತಂಗಿದ್ದರು. ಈ ಸಣ್ಣ ಹುಡುಗರು ಕರನಿರಾಕರಣೆಯಲ್ಲಿ ಸರ್ವಸ್ವವನ್ನೂ ಕಳೆದುಕೊಂಡಿದ್ದವರ ಅಥವಾ ಮನೆಯವರೆಲ್ಲರೂ ಜೈಲು ಸೇರಿ ಅನಾಥ, ರಕ್ಷಕರಿಲ್ಲದಂತಾಗಿದ್ದ ಮಕ್ಕಳು. ಎಂಟು–ಹತ್ತು ಹುಡುಗರಿಗೆ ಶಿಬಿರವೇರ್ಪಡಿಸಿ ಊಟದ ವ್ಯವಸ್ಥೆ ಮಾಡಲಾಗಿತ್ತು. ಸಾತು, ವಿಠಲ, ನಾರಾಯಣ, ರಾಮ ಮೊದಲಾದ ಈ ಅನಾಥ ಮಕ್ಕಳೇ ನಮ್ಮ ಸ್ವಯಂಸೇವಕರು, ಅಡುಗೆಭಟ್ಟರು, ಪರಿಚಾರಕರು, ಟಪಾಲುವಾಹಕರು; ಹಳ್ಳಿಯಿಂದ ಹಳ್ಳಿಗೆ, ಸೀಳು ದಾರಿಗಳಲ್ಲಿ ಕರೆದೊಯ್ಯುವ ಮಾರ್ಗದರ್ಶಕರು ; ಪೇಟೆಯಿಂದ ಅಗತ್ಯ ಸಾಮಗ್ರಿಗಳನ್ನು ತರುವವರು ; ಎಲ್ಲವೂ. ಕೆಲವು ಕಾಲ ಐದಾರು ವರ್ಷ ವಯಸ್ಸಿನ ಕೆಳಗಿನ ಮಕ್ಕಳೂ ನಮ್ಮ ಶಿಬಿರದಲ್ಲಿದ್ದರು.

ನಮ್ಮ ಶಿಬಿರದಲ್ಲಿದ್ದವರೆಲ್ಲರೂ ಪುರುಷರು. ತಂದೆತಾಯಂದಿರನ್ನು ಅಗಲಿದ್ದ ಈ ಹಸುಳೆಗಳನ್ನು ಯಾರು ನೋಡಿಕೊಳ್ಳಬೇಕು ? ನಮ್ಮ ಶಿಬಿರಗಳು ಹಳ್ಳಿಯಲ್ಲೇ ಇರುತ್ತಿದ್ದಾಗ ನೆರೆಹೊರೆಯ ತಾಯಂದಿರು ಈ ಸಣ್ಣ ಹಸುಳೆಗಳನ್ನು ನೋಡಿಕೊಳ್ಳುತ್ತಿದ್ದರು. ಅಮ್ಮನನ್ನು ನೆನೆಸಿಕೊಂಡು 'ಅಮ್ಮಾ' ಎಂದು ಈ ಹಸುಮಕ್ಕಳು ಅಳತೊಡಗಿದಾಗ ಅವರನ್ನು ಸಂತೈಸುವುದು ಬ್ರಹ್ಮಚಾರಿಗಳಿಗೆ ಪೀಕಲಾಟವಾಗಿತ್ತು. ಈ ಅನುಭವದಿಂದ ಸಣ್ಣ ಮಕ್ಕಳನ್ನು ನೋಡಿಕೊಳ್ಳಲು ಬೇರೆ ವ್ಯವಸ್ಥೆ ಮಾಡಲಾಯಿತು.

ನಮ್ಮ ಶಿಬಿರಗಳು ತಾಲ್ಲೂಕು ಕೇಂದ್ರವಾದ ಅಂಕೋಲೆಯಿಂದ ಸಾಮಾನ್ಯವಾಗಿ ಐದಾರು ಮೈಲುಗಳ ಆಚೆಯೇ ಇರುತ್ತಿದ್ದವು. ಪೋಲೀಸರ ಶೋಧನೆ ಹೆಚ್ಚಾದಂತೆ, ನಮ್ಮ ಶಿಬಿರಗಳು ಮತ್ತಷ್ಟು ದೂರ—ಕಾಡಿನೊಳಗೆ—ಸರಿಯುತ್ತಿದ್ದವು. ಇದರಿಂದ ನಮ್ಮ ಸ್ವಯಂಸೇವಕರಿಗೆ ತುಂಬಾ ತೊಂದರೆಯಾಗುತ್ತಿತ್ತು. ಪ್ರತಿದಿನ ನಮ್ಮ ಶಿಬಿರದಿಂದ ಟಪಾಲು ಒಯ್ಯಬೇಕು ; ಟಪಾಲು, ವೃತ್ತಪತ್ರಿಕೆಗಳನ್ನು ತರಬೇಕು ; ಅಂಗಡಿಯಿಂದ ಅಡುಗೆ ಸಾಮಾನು ತರಬೇಕು. ನಮ್ಮದು ದಿನದಿನದ ಕಾಲಕ್ಷೇಪ ; ಹೆಚ್ಚು ಸಾಮಾನು ತಂದಿಡಲು ಪೋಲೀಸರ ಭಯ. ಸರದಿಯಂತೆ ಒಬ್ಬೊಬ್ಬರು ಒಂದೊಂದು ದಿನ ಹೋಗಿ ಬರುವರು. ಹೋಗಿಬಂದುದೇ ಕಾಲುನೋವು ಎಂದು ಸಂಕಟಪಡುವರು. ಎಲ್ಲವೂ ನಮ್ಮ ಆರೈಕೆಗಾಗಿ! ನಮ್ಮ ಸೇವೆಗಾಗಿ!

ಮೈಸೂರಿನಿಂದ ಹೋದ ನಮ್ಮೆಲ್ಲರಿಗೂ ಕಾಫಿಯ ಚಟ. ಅಲ್ಲಿಯ ಪದ್ಧತಿಯೇ ಪ್ರತ್ಯೇಕ. ಹೊಂಬೆಸರು ಅಥವಾ ಗಂಜಿ ಊಟ ಬಡವರ ಪದ್ಧತಿ ; ಶ್ರೀಮಂತರು ಮತ್ತು ನಗರವಾಸಿಗಳು ಟೀ ತೆಗೆದುಕೊಳ್ಳುವರು. ಮೊದಲನೆಯದು ಮೈದಾನ ಪ್ರದೇಶದವರಿಗೆ

ಅರಿವಿಲ್ಲದ ಪಾನೀಯ. ರಾತ್ರಿ ಹೆಸರುಕಾಳನ್ನು ನೆನೆಹಾಕುವರು. ಬೆಳಗ್ಗೆ ಅದಕ್ಕೆ ಜೆಲ್ಲ ಸೇರಿಸಿ ರುಬ್ಬುವರು. ರುಬ್ಬಿದಂತೆ ಹೆಸರುಬೇಳೆ ನೊರೆನೊರೆಯಾಗಿ ಹರಡುವುದು. ಇದನ್ನು ಪಾತ್ರೆಯಲ್ಲಿ ಸಂಗ್ರಹಿಸಿ ಒಬ್ಬೊಬ್ಬರು ನಾಲ್ಕೈದು ಲೋಟಗಳಷ್ಟು ಹಸಿವಾಸನೆಯ ರಸವನ್ನು—ಬಹಳ ತಂಪು ದೇಹಕ್ಕೆ ಎಂದು—ಹಾಗೆಯೇ ಸೇವಿಸುವರು. ಕಾಲಕ್ರಮೇಣ ನಾವೂ ಒಂದೆರಡು ಲೋಟಗಳಷ್ಟು ಸೇವಿಸುವ ಅಭ್ಯಾಸ ಮಾಡಿಕೊಂಡೆವು.

ಗಂಜಿ ಊಟ ಉಡುಪಿ ಮತ್ತು ಕೇರಳದ ಬಡವರ ಬೆಳಗಿನ ಉಪಹಾರ. ಹಿಡಿ ಅಕ್ಕಿಗೆ ಸೇರು ನೀರು ಹಾಕಿ ಚೆನ್ನಾಗಿ ಕುದಿಸಿ, ಸ್ವಲ್ಪ ಉಪ್ಪು ಬೆರಸಿ, ಅನ್ನ ಮತ್ತು ಗಂಜಿ ಎರಡನ್ನೂ ಒಟ್ಟಿಗೇ ತೆಗೆದುಕೊಳ್ಳುವರು.

ನಮಗಾಗಿ ಪೋಲ್ಸನ್ ಕಾಫಿ ಪುಡಿ ತರಿಸಿದರು. ತಾವು ಸ್ವತಃ ಕಷ್ಟದಲ್ಲಿದ್ದರೂ ಅತಿಥಿಗಳನ್ನು ತೃಪ್ತಿಪಡಿಸಲು ಕಾಫಿ ವ್ಯವಸ್ಥೆ ಮಾಡಿದರು. ಕರಬಂದಿಯಲ್ಲಿ ಜನ ಕಷ್ಟನಷ್ಟಗಳನ್ನು ಅನುಭವಿಸುತ್ತಿರುವ ಸಮಯದಲ್ಲಿ ಈ ಭೋಗಜೀವನ ತರವಲ್ಲ ಎಂದು ನಾವು ಕಾಫಿ, ಟೀಯನ್ನು ತ್ಯಜಿಸಿದೆವು. ಹೊಳೆ ಬಾಳೇಕಾಯಿ (ಮೀನು) ಇಲ್ಲದೆ ಇಲ್ಲಿ ಊಟವೇ ಇಲ್ಲ. ಅದೇ ಮುಖ್ಯ ತರಕಾರಿ; ಆಹಾರ. ನಮ್ಮ ಶಿಬಿರದ ಹುಡುಗರಿಗೂ, ಶಿಬಿರಕ್ಕೆ ಬರುತ್ತಿದ್ದ ಪ್ರಮುಖರಿಗೂ ಮೀನಿನ ಆಸಿ ಅಥವಾ ಸಾರು ಆಗಲೇಬೇಕು. ನಮಗೆ ಅದನ್ನು ಕಂಡರೇ ಓಕರಿಕೆ. ಅಲ್ಲಿಯ ಜನರ ಅಭ್ಯಾಸದ ಅರಿವಿಲ್ಲದೆ ಮೀನಿನ ಅಡುಗೆ ಮಾಡುವುದನ್ನು ನಾನು ನಿಲ್ಲಿಸಿದೆ. ಇದರಿಂದ ಅವರೆಲ್ಲರಿಗೂ ಅಸಮಾಧಾನವಾಯಿತು. ಅಲ್ಲಿಯ ಪದ್ಧತಿಯ ಅರಿವು ಆದಕೂಡಲೇ ಮೀನಿನ ಅಡುಗೆ ಮಾಡಲು ಪುನಃ ಅವಕಾಶ ಕೊಟ್ಟೆ. ನಮ್ಮ ಅಡುಗೆ ಮಾಡಲು ಪ್ರತ್ಯೇಕ ಅಲ್ಯೂಮಿನಿಯಂ ಪಾತ್ರೆಗಳನ್ನು ತರಿಸಿಕೊಂಡೆ.

ನಾವು ಹೊಸ ತಳಗದ್ದೆಯ ಮಂಚದ ಬಂಡೆಯ ಮೇಲೆ ವಾಸಮಾಡುತ್ತಿದ್ದಾಗ ಕರ್ನಾಟಕ ಕಾಂಗ್ರೆಸ್ಸಿನ ಐದನೆಯ ಸರ್ವಾಧಿಕಾರಿಯಾದ ಹಳ್ಳಿಕೇರಿ ಗುದ್ಲೆಪ್ಪ ಅವರು ಕಾರವಾರದ ಚಳವಳಿ ಯಾವ ರೀತಿ ನಡೆಯುತ್ತಿದೆ ಎಂದು ನೋಡಲು ಬಂದರು. ಅವರೊಡನೆ ಅಂಕೋಲಾದ ಹರಿ ಪೈ ಇದ್ದರು. ನಮ್ಮ ಬಿಡಾರ, ನಗರದಲ್ಲಿ ಸುಖಜೀವನ ನಡೆಸುತ್ತಿದ್ದ ನಾವು ಈ ಬಗೆಯ ಕಷ್ಟಜೀವನ ಸಾಗಿಸುತ್ತಿದ್ದುದನ್ನು ಕಂಡು ಮರುಗಿದರು; ಪ್ರೋತ್ಸಾಹದ ಕೆಲವು ಮಾತುಗಳನ್ನಾಡಿದರು. ಅವರೂ ಸಹ ಪಂಚೆ ಉಟ್ಟು, ಷರಟಿಲ್ಲದೆ ಬಂದಿದ್ದರು.

ನಮಗೆ ಪ್ರತಿತಿಂಗಳೂ ಮುಂಬಯಿ ಮತ್ತು ಮೈಸೂರು ರಾಜ್ಯದಿಂದ ಸುಮಾರು ಎರಡು ಸಾವಿರ ರೂಪಾಯಿಗಳು ಬರುತ್ತಿತ್ತು. ಗುಪ್ತಮಾರ್ಗಗಳಿಂದ ಈ ಹಣ ನಮ್ಮ ಕೈಸೇರುತ್ತಿತ್ತು. ಈ ಹಣವನ್ನು ಸೂರ್ವೆ ಬೊಮ್ಮಯ್ಯನಾಯ್ಕರ ವಶಕ್ಕೆ ಒಪ್ಪಿಸುತ್ತಿದ್ದೆವು. ಇವರು ಕರನಿರಾಕರಣೆಯಲ್ಲಿ ಭಾಗವಹಿಸಿರಲಿಲ್ಲ ; ಆದರೆ ನಂಬಿಕೆಗೆ ಪಾತ್ರರಾದವರು. ನಮ್ಮ ಖಜಾಂಚಿ ನಮ್ಮ ಲೆಕ್ಕಪತ್ರಗಳನ್ನು ನಿಖರವಾಗಿ ಇಡುತ್ತಿದ್ದರು. ಈ

ಹಣವನ್ನು ಚಳವಳಿಯಲ್ಲಿ ಭಾಗವಹಿಸಿ, ಒಪ್ಪತ್ತು ಊಟಕ್ಕೂ ಗತಿ ಇಲ್ಲದಂತಿದ್ದವರಿಗೆ ಹಂಚುತ್ತಿದ್ದೆವು.

ಸ್ಥಳೀಯ ಪರಿಸ್ಥಿತಿಯನ್ನು ಚೆನ್ನಾಗಿ ಬಲ್ಲ ಬಾಸಗೋಡ ರಾಮನಾಯ್ಕ, ಭಾವಿಕೇರಿ ರಾಮನಾಯ್ಕ ಮೊದಲಾದ ಐದಾರು ಗಣ್ಯವ್ಯಕ್ತಿಗಳ ಸಮಿತಿ ಈ ಕಾರ್ಯ ನಡೆಸುತ್ತಿತ್ತು. ದೊಡ್ಡವರಿಗೆ ತಲಾ ನಾಲ್ಕು ರೂ., ಚಿಕ್ಕವರಿಗೆ ತಲಾ ಎರಡು ರೂ.ನಂತೆ ಲೆಕ್ಕಹಾಕಿ ಪ್ರತಿ ತಿಂಗಳೂ ಹಣದ ಬಟವಾಡೆ ಆಗುತ್ತಿತ್ತು. ಇದನ್ನು ಸ್ಥಳೀಯರಿಗೆ ವಹಿಸಿಕೊಟ್ಟು, ನಾವು ಹೊಣೆಹೊತ್ತಿರಲಿಲ್ಲ. ವಿತರಣೆ ಸರಿಯಾಗಿ ನಡೆಯುತ್ತಿದೆಯೋ ಇಲ್ಲವೋ ಎಂದು ನಾನು ಮೇಲ್ವಿಚಾರಣೆ ನಡೆಸುತ್ತಿದ್ದೆ.

ತಿಂಗಳಿಗೆ ಕನಿಷ್ಠ ಪಕ್ಷ ಮೂರು ಸಾವಿರ ರೂಪಾಯಿಗಳನ್ನಾದರೂ ಕಳುಹಿಸಿಕೊಡುವುದಾಗಿ ನಮಗೆ ಭರವಸೆ ಕೊಡಲಾಗಿತ್ತು. ಆದರೆ ಎರಡು ಸಾವಿರವೂ ಸಕಾಲಕ್ಕೆ ಬರುತ್ತಿರಲಿಲ್ಲ. ಬೆಂಗಳೂರು ಮತ್ತು ಮುಂಬಯಿಗೆ ಪತ್ರ ಬರೆದು ಹಣ ತರಿಸುವ ಹೊಣೆ ನನ್ನದು; ಎಸ್. ಕೆ. ಪಾಟೀಲರು ಮುಂಬಯಿಂದ ಹಣ ಸಂಗ್ರಹಿಸಿ ಕಳುಹಿಸಿಕೊಡುವ ಹೊಣೆಹೊತ್ತಿದ್ದರು; ಬೆಂಗಳೂರಿನಿಂದ ಹಣ ಕಳುಹಿಸುವ ವ್ಯವಸ್ಥೆ ಸಂಪಿಗೆ ವೆಂಕಟಪತಯ್ಯ ಅವರದಾಗಿತ್ತು.

ಬಾರ್ಡೋಲಿ ಸತ್ಯಾಗ್ರಹ ಲೋಕಖ್ಯಾತಿ ಗಳಿಸಿದೆ. ಸರ್ದಾರ್ ಪಟೇಲರಂಥ ಅದ್ವಿತೀಯ ನಾಯಕರು ಅಲ್ಲಿ ಚಳವಳಿಯ ನಾಯಕತ್ವ ವಹಿಸಿದ್ದರು. ಹಣದ ಪಾತ್ರವೂ ಕಡಿಮೆ ಏನಿರಲಿಲ್ಲ. ಕುಟುಂಬ ಒಂದಕ್ಕೆ ಎಂಟು-ಹತ್ತು ರೂಪಾಯಿ ಕೊಡುವುದೇ ನಮಗೆ ಅಸಾಧ್ಯವೆನಿಸಿದ್ದಾಗ ಬಾರ್ಡೋಲಿಯಲ್ಲಿ ಅನೇಕ ಕುಟುಂಬಗಳಿಗೆ ಹತ್ತು ಸಾವಿರಕ್ಕೂ ಮೀರಿ ಧನಸಹಾಯ ದೊರಕಿರುತ್ತದೆ. ಭೂಮಿ, ಮನೆ, ದನಕರು, ಪಾತ್ರೆ ಇವುಗಳಲ್ಲಿ ಅವರು ಕಳೆದುಕೊಂಡುದಕ್ಕಿಂತ ಹೆಚ್ಚು ಹಣ ವಿತರಣೆಯಾಗಿರುತ್ತದೆ. ಬಡ ಕರ್ನಾಟಕ ಇಷ್ಟು ಹಣ ನೀಡಲಾರದಾಗಿತ್ತು. ಇಡೀ ಭಾರತದಲ್ಲಿ, ಕನ್ನಡ ನಾಡಿನ ಮೂರು ತಾಲ್ಲೂಕುಗಳಲ್ಲಿ ನಡೆಯುತ್ತಿದ್ದ ಈ ಅಮೋಘ ಹೋರಾಟಕ್ಕೆ ಎಷ್ಟು ಪ್ರೋತ್ಸಾಹ ನೀಡಬೇಕಾಗಿತ್ತೋ ಅಷ್ಟು ಪ್ರೋತ್ಸಾಹ ದೊರೆಯಲಿಲ್ಲ. ಕರ್ನಾಟಕದ ಚಳವಳಿಯೊಡನೆ ಹೋಲಿಸಿ ನೋಡಿದರೆ ಬಾರ್ಡೋಲಿಯಲ್ಲಿ ಹೊನ್ನಿನ ಹೊಳೆಯೇ ಹರಿದು ಹೋಗುತ್ತಿತ್ತು ಎನ್ನಬಹುದು. ಇಲ್ಲಿ ಕರನಿರಾಕರಣೆಯಲ್ಲಿ ಭಾಗವಹಿಸಿದ್ದವರು ಅನುಭವಿಸಿದ ಕಷ್ಟ, ನಷ್ಟಸಂಕಟ ಅಪಾರವಾದುದು. ಇದಕ್ಕೆ ಸಾಟಿ ಬೇರೆಲ್ಲೂ ದೊರೆಯದು. ಆದರೆ ಇದಕ್ಕೆ ಸಾಕಷ್ಟು ಪ್ರಚಾರ ದೊರೆಯಲಿಲ್ಲ.

ತಾನಾಗಿಯೇ ಬರಮಾಡಿಕೊಂಡ ಕಷ್ಟಗಳನ್ನು ಧೈರ್ಯದಿಂದ, ಸಂತೋಷದಿಂದ ಇವರು ಅನುಭವಿಸುತ್ತಿದ್ದಾಗ, ಬೆಂಕಿಗೆ ತುಪ್ಪವನ್ನು ಸುರಿದಂತೆ, ಜನರಿಗೆ ಪೋಲೀಸರು ಕಿರುಕುಳ ಕೊಡುತ್ತಿದ್ದರು. ಮನೆಮಠ ತೊರೆದು ಮರದಡಿಯಲ್ಲಿ ಬೇಯಿಸಿಕೊಂಡು ತಿನ್ನಲು ಪೋಲೀಸರು ಆತಂಕವೊಡ್ಡುತ್ತಿದ್ದರು. ಅನ್ನದ ಪಾತ್ರೆಯನ್ನೇ ಕಾಲಿನಿಂದ

ಒದ್ದು ಕೆಡವುತ್ತಿದ್ದ ಅಮಾನುಷಕೃತ್ಯಗಳು ಒಂದೆರಡಲ್ಲ.

ಹಳ್ಳಿಗಳ ಸಮೀಪದಲ್ಲಿ ನಮ್ಮನ್ನು ಸುರಕ್ಷಿತವಾಗಿ ಇರಿಸುವುದು ಕಷ್ಟವಾಗುತ್ತ ಬಂದಂತೆ, ಬೇರೆ ಉಪಾಯ ಕಾಣದೆ ರಾಮನಾಯ್ಕರು ನಮ್ಮನ್ನು ದೂರ ಪ್ರದೇಶಗಳಿಗೆ ಸಾಗಿಸತೊಡಗಿದರು. ಹೊರಗಿನಿಂದ ಬಂದಿದ್ದ ನಮ್ಮ ನಾಲ್ವರನ್ನೂ ಒಂದೇ ಕಡೆ ಇರಿಸದೆ ಎರಡು ತಂಡಗಳಾಗಿ ಮಾಡಿ ಬೇರೆ ಬೇರೆ ಕಡೆಗೆ ಕಳುಹಿಸಿಕೊಟ್ಟರು.

ಕೂರ್ವೆ, ಗಂಗಾವಳಿ ನದಿ ಸಮುದ್ರಕ್ಕೆ ಸೇರುವ ಮುಖಜ ಭೂಮಿಯಿಂದ ಸುಮಾರು ಎರಡು ಮೈಲು ಮೇಲ್ಭಾಗದಲ್ಲಿ, ನದಿ ಎರಡಾಗಿ ನಿರ್ಮಿತವಾದ ಪುಟ್ಟ ದ್ವೀಪ. ಒಂದು ಮೈಲು ಉದ್ದ, ಅರ್ಧ ಮೈಲು ಅಗಲವಿದ್ದೀತು. ನದಿಯಲ್ಲಿ ಪ್ರವಾಹ ಉಕ್ಕೇರಿ ಬಂದಾಗ, ದ್ವೀಪ ಮುಳುಗಡೆಯಾಗಿ, ವಾಸಕ್ಕೆ ಅನರ್ಹವಾಗುತ್ತದೆ. ಐದಾರು ಬೆಸ್ತರ ಗುಡಿಸಲುಗಳು, ಸೊಂಪಾಗಿ ಬೆಳೆದ ತೆಂಗಿನ ಮರಗಳು, ಒಂದು ಸಿಹಿ ನೀರಿನ ಭಾವಿ—10 ಅಡಿ ಆಳ—ಒಂದು ಕಡೆ ನದಿ ಅರ್ಧ ಮೈಲು ಅಗಲ, ಇನ್ನೊಂದು ಕಡೆ ಎರಡು ಫರ್ಲಾಂಗು ಅಗಲ. ನದಿಯನ್ನು ದಾಟಿ ಅಕ್ಕಪಕ್ಕದ ಹಳ್ಳಿಗಳಿಗೆ ಹೋಗಲು ಎರಡು ಕಡೆಗಳಲ್ಲೂ ಹುಟ್ಟುಹಾಕಿ ನಡೆಸುವ ಹರಿಗೋಲುಗಳೂ ಅಂಬಿಗರೂ ಸದಾ ಸಿದ್ಧ.

ತೀಕ್ಷ್ಣಮತಿ ರಾಮನಾಯ್ಕರು ತುಂಬಾ ಯೋಚಿಸಿ ಇದನ್ನು ನಮ್ಮ ವಾಸಕ್ಕೆ ಯೋಗ್ಯ ಸುರಕ್ಷಿತ ಸ್ಥಳವೆಂದು ಆರಿಸಿದ್ದರು. ಬೆಸ್ತರ ಮನೆಗೆ ಸವರ್ಣ ಹಿಂದೂಗಳು ಕಾಲಿಡರು. ಹೀಗಿರುವಲ್ಲಿ ಹೊರನಾಡಿನಿಂದ ಬಂದ ನಾಗರಿಕರು, ಬ್ರಾಹ್ಮಣರು, ಇಲ್ಲಿ ವಾಸಿಸುತ್ತಿದ್ದುದನ್ನು ಪೋಲೀಸರು ಕನಸಿನಲ್ಲಿಯೂ ಕಾಣರು. ರಾಮನಾಯ್ಕರ ಆಜ್ಞೆಯಂತೆ ಎರಡು ಗುಡಿಸಲುಗಳು ನಮಗಾಗಿ ತೆರವಾದವು. ನಾವು ಒಳಹೊಕ್ಕಾಗ ಹಳೆಯ ಬಿದಿರುಬುಟ್ಟಿಗಳೂ, ಹರಕು ಬಲೆಗಳೂ ಸೂರಿನ ಮೇಲೆ ತೂಗಾಡುತ್ತಿದ್ದವು—ಬೆಸ್ತರ ಬಿಡಾರವೆಂಬ ಚಿಹ್ನೆಯಾಗಿ. ತಲೆತಗ್ಗಿಸಿ ಒಳಗೆ ಪ್ರವೇಶಿಸಬೇಕು; ಮಧ್ಯಭಾಗದಲ್ಲಿ ಮಾತ್ರ ನೆಟ್ಟಗೆ ನಿಲ್ಲಲು ಸಾಧ್ಯ. ಇಕ್ಕಡೆಗಳಿಂದಲೂ ಗುಡಿಸಲುಗಳು ಕಣ್ಣಿಗೆ ಕಾಣಿಸವು. ಅಕಸ್ಮಾತ್ತಾಗಿ ಪೋಲೀಸರು ಬಂದರೂ ತಪ್ಪಿಸಿಕೊಳ್ಳಲು ದ್ವೀಪದ ಇಕ್ಕಡೆಗಳಲ್ಲೂ ವ್ಯವಸ್ಥೆ ಇತ್ತು. ಗಟ್ಟಿಯಾಗಿ ಕೂಗು ಹಾಕಿ ಚಪ್ಪಾಳೆ ತಟ್ಟಿದರೆ ದಡದಿಂದ ಅಂಬಿಗರು ಧಾವಿಸಿ ಬರುವ ವ್ಯವಸ್ಥೆಯಿತ್ತು. ಅಂಬಿಗರ ಹೆಂಡಿರೂ ಹುಟ್ಟುಹಾಕಿ ದೋಣಿ ನಡೆಸುವರು.

ಇಲ್ಲಿದ್ದ ಸುಮಾರು ಹತ್ತು ದಿನಗಳನ್ನು ಸುಖವಾಗಿಯೇ ಕಳೆದೆವು. ನಮ್ಮ ಡೂಪ್ಲಿಕೇಟರನ್ನು ಪಾಳುಬಾವಿಯಲ್ಲಿದ್ದ ದೊಡ್ಡ ಗೂಡಿನಲ್ಲಿ ಸುರಕ್ಷಿತವಾಗಿರಿಸುತ್ತಿದ್ದೆವು. ಒಳಕ್ಕೆ ಇಳಿದು ಯಂತ್ರವನ್ನು ಮೇಲೆ ತರುವ ಕೆಲಸವನ್ನು ಬೆಸ್ತರ ಹೆಂಗಸರೇ ಮಾಡುತ್ತಿದ್ದರು.

ಹರಿಗೋಲು ಹಾಯುತ್ತಿದ್ದ ಮಾರ್ಗ ಕೂರ್ವೆಯಿಂದ ಸುಮಾರು 3 ಫರ್ಲಾಂಗ್ ಮೇಲ್ಭಾಗದಲ್ಲಿತ್ತು. ಗೋಕರ್ಣದಿಂದ ಅಂಕೋಲಾಗೆ ಹೋಗುವ ಮಾರ್ಗವಿದು. ಈ ಮಾರ್ಗದಲ್ಲಿ ವಾಹನಸಂಚಾರವಿರಲಿಲ್ಲ; ಪಾದಚಾರಿಗಳೇ ಹೆಚ್ಚು. ಗಂಗಾವಳಿ ನದಿಯ

ಉತ್ತರದ ಶಾಖೆ ನಮಗೆ ಅತಿ ಸಮೀಪದಲ್ಲಿ ಹರಿಯುತ್ತಿತ್ತು. ಗುಡಿಸಲು ಬಿಟ್ಟು ನಾಲ್ಕು ಹೆಜ್ಜೆ ಇಳಿದರೆ ಹೊಳೆ. ನದಿಯಲ್ಲಿ ಈಜುವುದರಲ್ಲಿಯೂ ಆಡುವುದರಲ್ಲಿಯೂ ಒಂದು ಗಂಟೆಯಾದರೂ ಕಳೆಯುತ್ತಿದ್ದೆವು. ಒಂದೇ ಆಳು ಕುಳಿತು ಹುಟ್ಟು ಹಾಕಿಕೊಂಡು ನದಿಯ ಮೇಲೆ ಹೋಗುವ ದುಂಡನೆಯ ಸಣ್ಣ ದೋಣಿ ನನ್ನನ್ನು ತುಂಬಾ ಆಕರ್ಷಿಸಿತು. ಒಂದು ದಿನ ಈ ಬಗೆಯ ದೋಣಿಯಲ್ಲಿ ಯಾರೋ ಹೋಗುತ್ತಿದ್ದುದು ನನ್ನ ದೃಷ್ಟಿಗೆ ಬಿತ್ತು. ದೂರದಿಂದ ನೋಡಿದರೆ ದೋಣಿ ಕಾಣಿಸುತ್ತಿರಲಿಲ್ಲ. ಯಾರೋ ನದಿಯ ಮೇಲೆ ಪದ್ಮಾಸನ ಹಾಕಿಕೊಂಡು ತೇಲಿಹೋಗುತ್ತಿದ್ದಂತೆ ಭಾಸವಾಗುತ್ತಿತ್ತು. ನನ್ನ ಕೋರಿಕೆಯಂತೆ ರಾಮನಾಯ್ಕರು ಇಂಥ ಕಿರಿಯ ದೋಣಿಯೊಂದನ್ನು ತರಿಸಿಕೊಟ್ಟರು. ಈ ದೋಣಿಯಲ್ಲಿ ನಾವೇ ಹುಟ್ಟುಹಾಕಿಕೊಂಡು ಹೋಗುವ ಅಭ್ಯಾಸವಿರಬೇಕು; ಇಲ್ಲವಾದರೆ ದೋಣಿ ಮಗುಚಿಕೊಳ್ಳುತ್ತದೆ. ಈ ಅಭ್ಯಾಸ ಮಾಡಿಕೊಳ್ಳುವುದೇ ನಮಗೊಂದು ಆಟವಾಯಿತು. ಏಳುವುದು, ನೀರಿನಲ್ಲಿ ಬೀಳುವುದು ಮತ್ತೆ ಏಳುವುದು ಮಾಡುತ್ತಿದ್ದೆವು. ನಾಲ್ಕಾರು ಹುಡುಗರ ಕೂಗು, ನಗು. "ಹರಿಗೋಲಿನಲ್ಲಿ ಹಾಯುವವರಿಗೆ ಕೇಳಿಬರುತ್ತೆ ; ಜೋಕೆ!" ಎಂದು ರಾಮನಾಯ್ಕರು ಎಚ್ಚರಿಸುತ್ತಿದ್ದರು. ಬಿಳಿಯ ಬಟ್ಟೆ ಹಾಕಿಕೊಂಡು ಸಂಚರಿಸುವುದನ್ನು ಅವರು ಸಹಿಸರು.

ಒಂದು ದಿನ ಅವರು ಬಂದಾಗ ಕಾಗದದ ಚೂರುಗಳು ನಮ್ಮ ಗುಡಿಸಲು ಬಳಿ ಹಾರಾಡುತ್ತಿದ್ದವು. ಅನಾಗರಿಕರ ನಡುವೆ ಕಾಗದ ಹೇಗೆ ಬಂತು? ಇದು ದ್ವೀಪಕ್ಕೆ ಬರುವವರ ಕುತೂಹಲ ಕೆರಳಿಸುತ್ತದೆ ಎಂದು ಆ ಕಾಗದದ ತುಣುಕುಗಳನ್ನು ಆಯ್ದು ಸುಟ್ಟರು. ನಮ್ಮ ಇರುವಿಕೆಯು ಯಾರಿಗೂ ತಿಳಿಯಬಾರದೆಂದು ಅವರು ಅಷ್ಟು ಜಾಗರೂಕತೆ ವಹಿಸುತ್ತಿದ್ದರು.

ಹೀಗಿರುವಲ್ಲಿ ಒಂದು ದಿನ ಮೂರುನಾಲ್ಕು ಜನ ಕಂದಾಯ ವಸೂಲಿಗೋ ಬಾಕಿ ವಸೂಲಿಗೋ ದ್ವೀಪಕ್ಕೆ ಬಂದರು. ಆಚೆ ದಡದಿಂದ ಹರಿಗೋಲು ಹಾಯಿಸುವ ಅಂಬಿಗ ಎಚ್ಚರಿಕೆ ಸಿಳ್ಳುಹಾಕಿದ. ಈ ಸಮಯದಲ್ಲಿ ಅಲ್ಲಿ ನಾವಲ್ಲದೆ ಬೇರೆ ಗಂಡಸರು ಯಾರೂ ಇರಲಿಲ್ಲ. ಆದರೇನು ? ಇಬ್ಬರು ಜೆಸ್ತ ಹೆಂಗಸರು ದಕ್ಷಿಣದ ಕವಲಿನ ಗಂಗಾವಳಿಯಲ್ಲಿ ಕಾದಿರಿಸಿದ್ದ ದೋಣಿಗೆ ಧುಮುಕಿ ನಮ್ಮನ್ನೂ ಕೂಡಿಸಿಕೊಂಡು, ಹುಟ್ಟುಹಾಕುತ್ತಾ ನದಿಯ ಕೆಳಭಾಗಕ್ಕೆ ಒಯ್ದು, ಆಚೆ ದಡದಲ್ಲಿದ್ದ ಒಂದು ಸಣ್ಣ ಗುಡ್ಡಕ್ಕೆ ಸೇರಿಸಿದರು. ನಿರ್ಜನಪ್ರದೇಶ ಗುಡ್ಡ. ಹತ್ತಿ ನೋಡಿದರೆ ದೂರದ ಅರಬ್ಬೀ ಸಮುದ್ರದಮೇಲೆ, ತೆರೆ ತೀವಿ ಹೋಗುತ್ತಿದ್ದ ಬೆಸ್ತರ ದೋಣಿಯ ಸಾಲು ನಮ್ಮ ದೃಷ್ಟಿಗೆ ಬಿತ್ತು. ಸಮುದ್ರಕ್ಕೆ ಇಷ್ಟು ಸಮೀಪದಲ್ಲಿದ್ದೇವೆ ಎಂಬ ಅರಿವು ಆಗಲೇ ನಮಗೆ ಆದುದು.

ಇಲ್ಲಿಯೂ ನಾವು ಬಹುಕಾಲ ಇರಲು ಸಾಧ್ಯವಾಗಲಿಲ್ಲ. ವಸೂಲಿಗೆ ಬಂದವರು ಪೋಲೀಸರೇ ಎಂಬ ಶಂಕೆ ರಾಮನಾಯ್ಕರಿಗೆ. ಆದ್ದರಿಂದ ದಕ್ಷಿಣ ದಿಕ್ಕಿನಲ್ಲಿ ಕಾಡಿನ ಅಂಚಿನಲ್ಲಿದ್ದ ಗಮಡಾಮೂಲೆ ಎಂಬ ದುರ್ಗಮಪ್ರದೇಶಕ್ಕೆ ನಮ್ಮ ಕ್ಯಾಂಪ್ ಸಾಗಿತು.

ಸಣ್ಣ ಕಾಡಿನ ಅಂಚಿನಲ್ಲಿ ನಮಗಾಗಿ ದೊಡ್ಡದೊಂದು ಗುಡಿಸಲು ನಿರ್ಮಿತವಾಯಿತು. ಈ ಪ್ರದೇಶ ಸೇರಲು ಐದಾರು ಮೈಲುಗಳ ದೂರ ಸೀಳುದಾರಿಯಲ್ಲಿ ನಡೆಯಬೇಕಾಯಿತು. ನಮ್ಮ ಶಿಬಿರದ ಪಕ್ಕದಲ್ಲಿ ಸಣ್ಣದೊಂದು ತೊರೆ. ಅದರಲ್ಲಿ ಕಾಡುಕುರುಬರ ಎರಡು ಗುಡಿಸಲುಗಳು. ಮತ್ತೊಂದು ಕಡೆ ಉದ್ದವಾಗಿ ನಿಂತಿದ್ದ ಗುಡ್ಡ. ಇದನ್ನು ಇಳಿದು ಹೋದರೆ ಮತ್ತೊಂದು ಕಾಡುಕುರುಬರ ಗುಡಿಸಲು. ದಕ್ಷಿಣಕ್ಕೆ ವನ್ಯಮೃಗಗಳ ಕಾಡು. ಅಲ್ಲಲ್ಲಿ ಮಾವಿನ, ಹಲಸಿನ ಹಾಗೂ ಗೋಡಂಬಿ ಮರಗಳು ಸ್ವೇಚ್ಛೆಯಾಗಿ ಬೆಳೆದಿದ್ದವು. ಮಾವಿನ ಹಣ್ಣಿನ ಕಾಲ. ಬೆಳಗ್ಗೆ-ಸಂಜೆ ಮಾವಿನ ಹಣ್ಣು, ಗೇರುಹಣ್ಣು ಅರಸುತ್ತಾ ಸಂಚರಿಸುವೆವು. ರಾಶಿರಾಶಿಯಾಗಿ ಮಾವಿನ ಹಣ್ಣುಗಳು ನೆಲದ ಮೇಲೆ ಬಿದ್ದಿರುತ್ತಿದ್ದವು. ಗೇರು ಗಿಡ ಹತ್ತಿ ಅಲ್ಲೇ ಕುಳಿತು, ಗಂಟಲು ಕೆರೆಯುವವರೆಗೂ ಹಣ್ಣು ತಿನ್ನಬಹುದಿತ್ತು. ಇದಲ್ಲದೆ ಕಪ್ಪುನೀಲಿ ಬಣ್ಣದ ಹುಳಿಹುಳಿಯಾದ, ಆಕಾರದಲ್ಲಿ ಜಂಬುನೇರಳೆಯಂತಿದ್ದ ಹಣ್ಣು ಬೇರೆ. ಮುಳ್ಳಿನ ಬಳ್ಳಿಯಲ್ಲಿ ಗೊಂಚಲುಗೊಂಚಲಾಗಿ ಬಿಡುತ್ತಿದ್ದ ಮುಳ್ಳು ಹಣ್ಣು. ಬಿಳಿ ಬಣ್ಣದ್ದು. ಸಣ್ಣಗೆ ದುಂಡಗಿದ್ದ ಹಣ್ಣು ತುಂಬಾ ರುಚಿ. ಬಿಡುವಿನ ವೇಳೆಯಲ್ಲಿ ಈ ಹಣ್ಣು ಆಯ್ದು ತೆಗೆದುಕೊಂಡು ಹೋಗುವುದೇ ನನ್ನ ಕೆಲಸ. ಹೊರಕ್ಕೆ ಹೋದಾಗಲೆಲ್ಲ ಹಾವುಗಳ ದರ್ಶನ ತಪ್ಪಿದ್ದಲ್ಲ.

ದಿನಕ್ಕೆ ಹತ್ತಾರು ಹಾವುಗಳನ್ನು ನೋಡುತ್ತಿದ್ದೆವು. ಕೆಲವೊಮ್ಮೆ ಎಲೆಗಳಲ್ಲಿ ಹರಿದುಹೋಗುತ್ತಿದ್ದ ಶಬ್ದ ಕೇಳಿಸುತ್ತಿತ್ತು; ಆದರೆ ನೋಡಲು ಸಾಧ್ಯವಾಗುತ್ತಿರಲಿಲ್ಲ. ನಮ್ಮ ಗುಡಿಸಲು ತೊರೆಯ ಬದಿಯಲ್ಲೇ ಇತ್ತು. ತೇವ, ಹಾವು ಇವುಗಳಿಂದ ನಮ್ಮನ್ನು ರಕ್ಷಿಸಲು ಕವಲುರೆಂಬೆಗಳನ್ನು ನೆಟ್ಟು ಅಡ್ಡಗಳು ಹಾಕಿ ಸೊಪ್ಪು ಹರಡಿ ಮಂಚಗಳನ್ನು ಮಾಡಿದರು. ಇದರ ಮೇಲೆ ನಿದ್ರಿಸುವುದು ಅಸಾಧ್ಯವಾಗಿತ್ತು. ನೆಲದ ಮೇಲೆ ಹುಲ್ಲು ಸೊಪ್ಪು ಹರವಿ ಅದರ ಮೇಲೆ ಕಂಬಳಿ ಹಾಕಿಕೊಂಡು ಮಲಗುತ್ತಿದ್ದೆವು. ಸ್ವಪ್ನದಲ್ಲೂ ಸರ್ಪದ ದರ್ಶನ !

ರಾತ್ರಿವೇಳೆ ಮುಳ್ಳುಹಂದಿಗಳು ಅಲ್ಲಿ ಇಲ್ಲಿ ಬೇಸಾಯ ಮಾಡಿದ್ದ ಬತ್ತದ ಗದ್ದೆ, ಕಬ್ಬಿನ ಗದ್ದೆಗಳನ್ನು ಪ್ರವೇಶಿಸುತ್ತಿದ್ದವು. ರಾತ್ರಿ ಮಿಂಚುಹುಳುಗಳು ಗುಂಪುಗುಂಪಾಗಿ ಹಾರುತ್ತಿದ್ದ ದೃಶ್ಯ ತುಂಬಾ ಅಂದ. ಹುಳುಗಳನ್ನು ಹಿಡಿದು ಪುಸ್ತಕದ ಮೇಲೆ ಬಿಟ್ಟು ಒಂದೆರಡು ಪಂಕ್ತಿಗಳನ್ನು ಓದಲೂ ಸಾಧ್ಯವಾಗುತ್ತಿತ್ತು. ಇದಲ್ಲದೆ ಒಂದೆರಡು ಔನ್ಸ್ ಕೊಡುವ ಸಣ್ಣ ದನಗಳು ನಮ್ಮ ಸಂಗಾತಿಗಳು.

ನೆರೆಯ ಗುಡಿಸಲಿನ ಕಾಡುಕುರುಬರು (ಅಥವಾ ಗೌಡರು) ಎಷ್ಟು ನಾಗರಿಕರೆಂದರೆ ಇವರ ಹೆಣ್ಣುಮಕ್ಕಳಿಗೆ ಕಾಗದ, ಸಕ್ಕರೆ, ಗೋದಿ, ಅಲ್ಯೂಮಿನಿಯಂ ಪಾತ್ರೆ ಸೋಜಿಗದ ವಸ್ತುಗಳು; ನಮ್ಮಲ್ಲಿದ್ದ ಟೈಪ್‌ರೈಟರ್, ಡೂಪ್ಲಿಕೇಟರ್, ಕ್ಯಾಮೆರಾ ಇವೆಲ್ಲವೂ ಅವರಿಗೆ ಅರ್ಥವಾಗದ ವಸ್ತುಗಳು. ಸೋಲಿಗರು, ಲಂಬಾಣಿಗಳಂತೆ ಜೀವನ. ಆದರೆ ಲಂಬಾಣಿಗರಂತೆ ಬಣ್ಣಬಣ್ಣದ ಉಡುಪಿಲ್ಲ; ಸಾಮಾನ್ಯ ಸೀರೆ; ಉಡುವ ಪದ್ಧತಿ

ಪ್ರತ್ಯೇಕ ; ಕತ್ತಿನ ತುಂಬಾ ಕರಿಮಣಿ ಸರಗಳು ; ಸ್ನಾನ ಅಪರೂಪ ; ಭೂತಪ್ರೇತಗಳಲ್ಲಿ ವಿಶ್ವಾಸ; ಬೇಸಾಯ ಮುಖ್ಯ ವೃತ್ತಿ. ಇವರು ನಮಗೆ ಹಾಲು ಒದಗಿಸುತ್ತಿದ್ದರು.

ನಮ್ಮ ಶಿಬಿರದಿಂದ ಒಂದು ಮೈಲು ಕೆಳಭಾಗಕ್ಕೆ ಒಕ್ಕಲಿಗರು ಅಥವಾ ಕಾಡು ಕುರುಬರ ತಾಂಡ್ಯ ; ವಿರಳವಿರಳವಾಗಿ 10–12 ಗುಡಿಸಲುಗಳು. ಗುಡ್ಡ ಕಾಡುಗಳ ನಡುವೆ ವಿಸ್ತಾರವಾದ ಬಯಲು ಪ್ರದೇಶ ಈ ಬೆಳಂಬಾರ. ಇದು ನಮ್ಮ ದ್ಯಾವಯ್ಯ ನವರ ಶಿಬಿರ. ದ್ಯಾವಯ್ಯ ಬಂಧಿತರಾಗಿ ಬಿಡುಗಡೆಯಾದಾಗ ಬೆಂಗಳೂರಿಗೆ ಬಂದು, ದೇವಯ್ಯ ಆದರು. ಚಳವಳಿಗೆ ಧುಮುಕುವ ಮೊದಲು ಇವರು ಮಂಗಳೂರಿನಲ್ಲಿ ಕಾಲೇಜು ವಿದ್ಯಾರ್ಥಿಯಾಗಿದ್ದರು. ಯಂತ್ರೋಪಕರಣಗಳ ಬಳಕೆಯಲ್ಲಿ ಇವರದು ಸಿದ್ಧಹಸ್ತ. ಬೆಂಗಳೂರಿನಲ್ಲಿ 'ಮಾಡೆಲ್ ಮೆಕ್ಯಾನಿಸಂ' ಎಂಬ ಯಂತ್ರೋಪಕರಣದ ಕಾರ್ಖಾನೆ ಸ್ಥಾಪಿಸಿ ನಡೆಸುತ್ತಿದ್ದಾರೆ. ಹೊಸದಾಗಿ ಬೆಂಗಳೂರಿಗೆ ಬಂದ ಇವರು ಕಾರ್ಪೊರೇಷನ್ ಸದಸ್ಯರಾದರು ; ಜನಪ್ರಿಯರಾಗಿ ವಿಧಾನಸಭಾ ಸದಸ್ಯರಾದರು— ನಿಜವಾದ ಜನಸೇವಕರು.

ದೇವಯ್ಯನವರು ಆಕಾರ ಮತ್ತು ರೂಪಿನಲ್ಲಿ ಕಾಡುಕುರುಬರನ್ನೇ ಹೋಲುತ್ತಿದ್ದರು. ಅವರಂತೆಯೇ ಉಡುಪು—ಲಂಗೋಟಿ, ಕಂಬಳಿ ಮತ್ತು ಸೊಂಟದಲ್ಲಿ ಕುಡುಗೋಲು. ಡೂಪ್ಲಿಕೇಟರಿನಿಂದ ಕರಪತ್ರ ತೆಗೆಯುವುದು ಇವರ ಕೆಲಸ. ದಟ್ಟವಾದ ಗೋಡಂಬಿ ಗಿಡದ ಮೇಲೆ ಒಂದು ಮಣೆ ಜೋಡಿಸಿಕೊಂಡು ಬಹಳ ಕಾಲ ಅಲ್ಲಿ ಕಳೆಯುತ್ತಿದ್ದರು ; ಇದ್ದಷ್ಟು ಕಾಲ ಕಾಡುಕುರುಬರ ಸುಧಾರಣೆಗಾಗಿ ಶ್ರಮಿಸಿದರು. ಎರಡು ಸರ ವಿನಾ ಹೆಚ್ಚು ಕರಿಮಣಿಸರ ಹಾಕುವುದನ್ನು ಬಿಡುವಂತೆಯೂ, ಕುಡಿಯುವುದನ್ನು ಬಿಡು ವಂತೆಯೂ ಪ್ರಯತ್ನಿಸಿದರು. ನಾವಿದ್ದ ದೂರದ ಗರುಡಾಮಾಲೆಯಿಂದ ಇವರನ್ನು ನೋಡಲು ಆಗಾಗ್ಗೆ ಬರುತ್ತಿದ್ದೆವು. 'ಬಾಯಿ ತೆರೆದರೆ ಬಣ್ಣಗೇಡು' ಎಂಬಂತೆ ಬಾಯಿ ತೆರೆದುದರಿಂದ ದೇವಯ್ಯನವರು ಪೋಲೀಸರ ವಶರಾದರು. ಒಂದು ದಿನ ಸ್ವಯಂ ಸೇವಕರೊಡನೆ ಡೂಪ್ಲಿಕೇಟರ್ ಯಂತ್ರ ಮತ್ತು ಕಾಗದಪತ್ರಗಳನ್ನು ತೆಗೆದುಕೊಂಡು ತಮ್ಮ ಗುಡಿಸಲಿಗೆ ಹೋಗುತ್ತಿದ್ದಾಗ ಹಠಾತ್ತನೇ ಪೋಲೀಸರು ಬಂದುಬಿಟ್ಟರು. ಸಮೀಪದಲ್ಲಿದ್ದ ಕಸದ ರಾಶಿಯಲ್ಲಿ ಕಾಗದಪತ್ರಗಳನ್ನು ಸೇರಿಸಿಬಿಟ್ಟರು. ಡೂಪ್ಲಿ ಕೇಟರ್ ಗುಡಿಸಲಿನಲ್ಲಿತ್ತು. ಪೋಲೀಸಿನವರು ಬರುತ್ತಿದ್ದ ಸುಳಿವು ತಿಳಿಯುತ್ತಲೇ ಗುಡಿಸಲಿನ ಬಾಗಿಲನ್ನು ಅನಾಮತ್ತಾಗಿ ಅಗಣಿಯಿಂದ ಹೊರತೆಗೆದು ಗೋಡೆಗೆ ತಿರುಗಿಸಿ ಅವರ ಹಿಂದೆ ಡೂಪ್ಲಿಕೇಟರ್ ಇಟ್ಟರು. ಈ ಕೆಲಸ ಮಾಡಿದವರು ಮನೆಯ ಮಾಲಿಕರಾದ ಗೌಡರು. ಬಾಗಿಲ ಹಿಂದೆ ಏನೂ ಇರಲಾರದು ಎಂದು ಪೋಲೀಸರು ಅಲ್ಲಿ ಶೋಧಿಸಲಿಲ್ಲ. ದೇವಯ್ಯನವರನ್ನು ನೋಡಿದ ಪೋಲೀಸರು ಹೊರಗಿನಿಂದ ಬಂದ ಕಾಂಗ್ರೆಸ್ ಕೆಲಸಗಾರರು ಇದ್ದಾರೆಯೇ ಎಂದು ಪ್ರಶ್ನಿಸಿದರು—ಪೋಲೀಸರು ಅವರನ್ನು ಕಾಡುಕುರುಬರೆಂದು ನಂಬಿದ್ದರು. ಇದಕ್ಕೆ ಉತ್ತರಿಸಲು ಅವರು ಬಾಯಿ ತೆರೆದಾಗ,

ಅವರ ಉಚ್ಚಾರದಿಂದಲೇ ಪೋಲೀಸರಿಗೆ ಇವರನ್ನೇ ತಾವು ಅರಸಿಕೊಂಡು ಬಂದಿರುವುದೆಂದು ತಿಳಿದುಹೋಯಿತು. ಕೂಡಲೇ ದೇವಯ್ಯನವರ ಬಂಧನವಾಯಿತು (2-8-1932). ಅವರಿಗೆ ಒಂದು ವರ್ಷದ ಸಶ್ರಮ ಶಿಕ್ಷೆಯಾಯಿತು.

ನಮ್ಮ ಶಿಬಿರಾಭಿಮುಖವಾಗಿ ಅಪರಿಚಿತರಾರಾದರೂ ಬಂದರೆ ನಮಗೆ ಕೂಡಲೇ ಸುದ್ದಿ ಮುಟ್ಟಿಸಬೇಕೆಂದು ದನಗಾಹಿಗಳಿಗೆ ತಿಳಿಸಿದ್ದೆವು. ಎಷ್ಟೋ ಬಾರಿ ಓಡಿಬಂದು ಎಚ್ಚರಿಸುತ್ತಿದ್ದರು; ಎಲ್ಲವೂ ಹುಸಿ. ಅವರೆಲ್ಲಾ ನಮ್ಮವರೇ ಆಗಿರುತ್ತಿದ್ದರು.

ದೇವಯ್ಯನವರ ಬಂಧನಾನಂತರ ಪೋಲೀಸರು ನಮ್ಮ ಶಿಬಿರದತ್ತ ಧಾವಿಸಿದರು. ಆ ದಿನ ಬಾಸಗೋಡು ರಾಮನಾಯ್ಕರು ಮತ್ತು ನಾನು ಶಿಬಿರದಲ್ಲಿದ್ದೆವು. ಪೋಲೀಸರು ಬರುತ್ತಿದ್ದಾರೆ ಎಂಬ ಸುದ್ದಿ ಮುಟ್ಟುವುದರೊಳಗಾಗಿ ಐದಾರು ಪೋಲೀಸರು ನಮ್ಮ ಶಿಬಿರಕ್ಕೆ ಬಂದೇ ಬಿಟ್ಟರು. ರಾಮನಾಯ್ಕರು ಕಂಬಳಿ ಹೊದ್ದುಕೊಂಡು "ನನ್ನ ಹಿಂದೆ ಬನ್ನಿ" ಎಂದು ಹೇಳುತ್ತಾ ಜಿಂಕೆಯಂತೆ ಜಿಗಿದು ತೊರೆಯನ್ನು ಹಾದು ಕ್ಷಣಾರ್ಧದಲ್ಲಿ ಕಣ್ಮರೆಯಾದರು. ಅಲ್ಲಿದ್ದ ಕಾಗದಪತ್ರಗಳನ್ನು ಉಳಿಸಲು ನನಗೆ ಸ್ವಲ್ಪ ಸಮಯ ಹಿಡಿಯಿತು. ಇಷ್ಟುಹೊತ್ತಿಗೆ ಸೂರ್ಯ ಅಸ್ತಂಗತನಾಗಿ ಕತ್ತಲಾವರಿಸಿತ್ತು. ಒಂದು 'ಟಾರ್ಚ್ ಲೈಟ್' ತೆಗೆದುಕೊಂಡು ನಾನು ರಾಮನಾಯ್ಕರನ್ನು ಹಿಂಬಾಲಿಸಿದೆ—ವ್ಯರ್ಥವಾಗಿ.

ವೇಳೆ ದೊರೆತಾಗಲೆಲ್ಲಾ ನಮ್ಮ ಸುತ್ತಮುತ್ತಲ ಸ್ಥಳಪರಿಶೀಲನೆ ನಡೆಸಿದ್ದುದು ನನ್ನ ನೆರವಿಗೆ ಬಂದಿತು. ತೊರೆಯನ್ನು ದಾಟಿ ಪಶ್ಚಿಮದತ್ತ ಹೊರಟೆ. ಇಷ್ಟರಲ್ಲಿ ದಾರಿ ಏನೂ ಕಾಣಿಸದಂತಾಯಿತು; ಮಳೆ ಬೇರೆ ಶುರುವಾಯಿತು. ಶಿಬಿರದಿಂದ ನೂರು ಗಜ ಮಾತ್ರ ಹೋಗಿರಬಹುದು. ಟಾರ್ಚ್‌ಲೈಟ್ ಬೆಳಕು ಬಿಟ್ಟರೆ ಕೆಳಗಿದ್ದವರಿಗೆ ನನ್ನ ಸ್ಥಳ ನಾನೇ ತೋರಿಸಿದಂತಾಗುತ್ತಿತ್ತು. ಕಂಬಳಿಯನ್ನು ಹೊದ್ದುಕೊಂಡು ನೆಲಕ್ಕೆ ಮಾತ್ರ, ಕಂಬಳಿಯ ಮೂಲಕ, ಮುಸುಕುಮುಸುಕಾಗಿ ಬೆಳಕು ಬೀಳುವಂತೆ ಮಾಡಿಕೊಂಡು ಜಾಗರೂಕತೆಯಿಂದ ಸ್ವಲ್ಪ ದೂರ ಸಾಗಿದೆ. ಮಳೆ ಹೆಚ್ಚಾಯಿತು; ಮುಂದೆ ಹೆಜ್ಜೆ ಇಡುವುದು ದುಸ್ತರವಾಯಿತು.

ಒಂದು ಸಣ್ಣ ಮರದ ಕೆಳಗೊಂದು ಪೊದೆಯಿತ್ತು. ಅದರೊಳಕ್ಕೆ ತೂರಿಕೊಂಡೆ. ಮಳೆಯಿಂದಾಗಿ ಬಟ್ಟೆಗಳೆಲ್ಲಾ ತೊಯ್ದುಹೋದುವು. ಚಳಿಯಾಗತೊಡಗಿತು. ನಮ್ಮ ಶಿಬಿರದಲ್ಲಿದ್ದ ಸಾಮಾನುಗಳಲ್ಲಿ ಕೆಲವನ್ನು ಗುಡಿಸಲಿನೊಡತಿ ಸ್ವಲ್ಪಮಟ್ಟಿಗೆ ಸಾಗಿಸಿದ್ದಳು. ಹಿಂದಿನ ದಿನವೇ ಒಂದು ವಾರಕ್ಕಾಗುವಷ್ಟು ಲವಾಜಮೆಯನ್ನು ತರಿಸಿಕೊಂಡಿದ್ದೆವು. ಪೋಲೀಸರು ಒಲೆ ಹೊತ್ತಿಸಿ ಅಡುಗೆ ಮಾಡಿಕೊಂಡರು. ಎಲ್ಲವನ್ನೂ ನಾನು ನೋಡುತ್ತಿದ್ದೆ—ಸಂಕಟದಿಂದ.

ತಲೆಯಲ್ಲಿ ಯೋಜನೆ ಪ್ರಾರಂಭವಾಯಿತು. ಕೆಲವು ದಿನಗಳ ಹಿಂದೆ ಅಖಿಲ ಭಾರತ ಕಾಂಗ್ರೆಸ್ ಕಮಿಟಿಯ ಸರ್ವಾಧಿಕಾರಿ ಆಗಿದ್ದ ಶಾರ್ದೂಲ್‌ಸಿಂಗ್ ರವಿ ಶೇರ್

ಅವರಿಂದ ಸುತ್ತೋಲೆಯೊಂದು ಬಂದಿತ್ತು: ಯಾರೂ ಭೂಗತರಾಗಿ ಕೆಲಸಮಾಡ ಕೂಡದು; ಇದು ಗಾಂಧೀ ತತ್ವಕ್ಕೆ ವಿರುದ್ಧ; ಹೀಗೆ ಅಡಗಿಕೊಂಡಿರುವವರೆಲ್ಲರೂ ಪೋಲೀಸರ ವಶವಾಗಬೇಕು; ನಾನಿಲ್ಲದೆ ಕೆಲಸ ಸಾಗದು ಎಂಬ ತಪ್ಪು ಭಾವನೆಯನ್ನು ಬಿಡಬೇಕು.

ಈ ವಿಷಯದ ಪ್ರಸ್ತಾಪ ರಾಮನಾಯ್ಕರೊಡನೆ ಮಾಡಿದ್ದೆ. ಪೋಲೀಸರ ವಶವಾಗುವ ಮುನ್ನ ಇಚ್ಛೆಯನ್ನು ವ್ಯಕ್ತಪಡಿಸಿದ್ದೆ. “ನೀವು ಹೋದಮೇಲೆ ಯಾರು ಬರುತ್ತಾರೆ? ತಗಡೂರು ರಾಮಚಂದ್ರರಾಯರನ್ನು ಬರಮಾಡಿ ಕೊಡಿ ಅಥವಾ ಬೇರೆ ಯಾರಾದರೂ ಬಂದಮೇಲೆ ನೀವು ಹೋಗಬಹುದು” ಎಂದು ನನ್ನನ್ನು ಸಮಾಧಾನ ಪಡಿಸುತ್ತಿದ್ದರು. “ನಿಮ್ಮ ನಾಯಕತ್ವ ಈ ತಾಲ್ಲೂಕಿಗೆ ಅತ್ಯಗತ್ಯ. ನಾವು ಹೊರಗಿನಿಂದ ಬಂದವರು. ಶ್ರೀ ಪೈ ಅವರ ಮಾತಿನಲ್ಲಿ, ನಾವು ಬಾಡಿಗೆ ಕುದುರೆಗಳು; ಸ್ಥಳೀಯ ವಿದ್ಯಮಾನ ನಮಗೆ ಅಷ್ಟಾಗಿ ತಿಳಿಯದು; ಅವರ ಮೇಲೆ ನಾವು ಬೀರಬಲ್ಲ ಪ್ರಭಾವ ಅತ್ಯಲ್ಪ; ಆದ್ದರಿಂದ ನಮ್ಮನ್ನು ಹೋಗಗೊಡಿ, ನೀವು ಉಳಿದುಕೊಳ್ಳಿ” ಎಂದು ಅವರಿಗೆ ಹೇಳುತ್ತಿದ್ದೆ. ಇದರಂತೆ ಪೋಲೀಸರ ವಶವಾಗಬೇಕು ಎಂಬ ಯೋಚನೆ ಬಂದಿತು. ಕ್ಷಣಾರ್ಧದಲ್ಲಿ, ‘ಶ್ರಮವಹಿಸಿ ತಪ್ಪಿಸಿಕೊಂಡು ಬಂದಿದ್ದೀ. ಈಗ ಅವರ ವಶವಾಗುವುದು ಹೇಡಿತನ, ವ್ಯರ್ಥ. ಇಷ್ಟು ಕಷ್ಟಪಟ್ಟಿರುವೆ. ಹೇಗಾದರೂ ತಪ್ಪಿಸಿ ಕೊಂಡು ಹೋಗು’ ಎಂದು ನನ್ನ ಅಂತರಾತ್ಮ ಹೇಳುತ್ತಿತ್ತು.

ಇದೇ ಸರಿಯೆನಿಸಿತು. ಮಳೆ ನಿಂತಿತ್ತು. ಕೆಳಗಿನ ಬಯಲಿನಲ್ಲಿ ಕಂದೀಲು ಹಿಡಿದು ಕೊಂಡು ಓಡಾಡುತ್ತಿದ್ದ ಹತ್ತಾರು ಜನರ ಗುಂಪು ಕಾಣಿಸಿತು. ಪೋಲೀಸರೇ ನನ್ನನ್ನು ಅರಸುತ್ತಿರಬೇಕೆಂಬ ಭ್ರಮೆ. ಆಮೇಲೆ ತಿಳಿದ ಪ್ರಕಾರ, ಅವರು ನನ್ನನ್ನೇ ಅರಸಿ ಬಂದಿದ್ದ ಜನರಾಗಿದ್ದರು. ಅವರು ಗುಡ್ಡದ ಪೂರ್ವಕ್ಕಿದ್ದರು. ನನ್ನ ಹೆಸರು ಹಿಡಿದು ಕೂಗುತ್ತಿದ್ದರಂತೆ ; ಆದರೆ ಮಳೆಹನಿಗಳು ಎಲೆಗಳ ಮೇಲೆ ಉದುರುತ್ತಿದ್ದಾಗ ಉಂಟಾಗುತ್ತಿದ್ದ ಪಟಪಟ ಶಬ್ದದಲ್ಲಿ ಅವರ ಕೂಗು ಅಡಗಿಹೋಗುತ್ತಿತ್ತು. ನಾನು ಗುಡ್ಡದ ಪಶ್ಚಿಮಕ್ಕೆ ಹೋಗಿ ಇಳಿದೆ. ಬೆಳಕಿನಲ್ಲಿ ಸೀಳುದಾರಿ ಗುರ್ತಿಸಿದೆ. ಅದು ಮತ್ತೊಂದು ಕಾಡುಕುರುಬರ ಮನೆಗೆ ಹೋಗುತ್ತದೆ ಎಂದು ನನಗೆ ತಿಳಿದಿತ್ತು. ಆ ಗುಡಿಸಲಿಗೆ ಅನೇಕ ಸರ್ತಿ ಹೋಗಿದ್ದು ಗಂಡಹೆಂಡಿರ ಪರಿಚಯಮಾಡಿಕೊಂಡಿದ್ದೆ. ಪ್ರಯಾಸದಿಂದ ಗುಡಿಸಲು ಸೇರಿ ಬಾಗಿಲು ತಟ್ಟಿದೆ. ಅವರಿಗೆ ಬಾಗಿಲು ತೆರೆಯಲು ಭಯ. ನಾನು ರಾಮನಾಯ್ಕರ ಕಡೆಯವನೆಂದು ಖಚಿತಮಾಡಿಕೊಂಡು ಬಾಗಿಲು ತೆರೆದರು. ನೆನೆದ ಕಂಬಳಿ, ಬಟ್ಟೆಗಳಿಂದ ನೀರು ತೊಟ್ಟಿಕ್ಕುತ್ತಿತ್ತು. ಬಟ್ಟೆ ತೆಗೆದೆ. ಬೆಂಕಿ ಮಾಡಿರೆಂದು ತಿಳಿಸಿದೆ. ಅವರು ನನಗೇನು ಅತಿಥಿಸತ್ಕಾರ ಮಾಡಿಯಾರು? ಒಂದು ಕಂಬಳಿ ಕೊಟ್ಟು ಅಟ್ಟ ಹತ್ತಿಸಿದರು. ಬಟ್ಟೆ ಒಣಗಿಸುವಂತೆಯೂ, ಬೆಳಗ್ಗೆ ಎಬ್ಬಿಸಿ ರಾಮನಾಯ್ಕರಿರುವ ಯಾವುದಾದರೂ ಹಳ್ಳಿಗೆ ಕರೆದುಕೊಂಡು ಹೋಗ

ಬೇಕೆಂದೂ ತಿಳಿಸಿ ಮಲಗಿದೆ. ಇಲಿಗಳು ನ್ಮೈಮೇಲೆ ಹರಿದಾಡುತ್ತಿದ್ದರೂ ಸೋತ ಪ್ರೈಮಸ ಗಳೆರಡೂ ನಿದ್ರಾದೇವಿಗೆ ಶರಣಾದವು.

ಮುಂಜಾನೆ ಕೋಳಿ ಕೂಗುವ ವೇಳೆಗೆ ಎದ್ದು, ನಾನು ಮತ್ತು ಕರಿಯು ಇಬ್ಬರೂ ಹೊರಟೆವು. ಅವನು ದಾರಿ ತೋರಿಸುತ್ತಾ ಮುಂದೆ ಮುಂದೆ ನಡೆದ. ಸುಮಾರು ಮೂರು ಮೈಲು ನಡೆದು ದೊಡ್ಡ ಗ್ರಾಮಕ್ಕೆ ಬಂದೆವು. ಬಹುಶಃ ಸೂರ್ನೆ ಇರಬಹುದು —ಹೆಸರು ಮರೆತಿದ್ದೇನೆ. ಅದು ಹೇಗೋ ಮೊದಲೇ ನಾನು ಬರುವ ಸುದ್ದಿ ಊರಿಗೆ ಮುಟ್ಟಿತ್ತು. ಊರಿನ ಹೊರವಲಯದಲ್ಲಿ ದನ ಕಾಯುತ್ತಿದ್ದ ಹುಡುಗಿಯರು ಸುದ್ದಿ ಮುಟ್ಟಿಸಿರಬಹುದು. ಊರ ಹೊರವಲಯದಲ್ಲಿ ನನ್ನನ್ನು ಎದುರ್ಗೊಂಡವರು ಬೀರಣ್ಣ ಬೊಮ್ಮಯ್ಯ ನಾಯ್ಕ. ಈತ ಸುಮಾರು 24 ವಯಸ್ಸಿನ ರೂಪವಂತ ತರುಣ; ಆರು ಅಡಿ ಎತ್ತರವಿದ್ದ. ನಮ್ಮ ಕ್ಯಾಂಪಿಗೆ ಆಗಿಂದಾಗ್ಗೆ ಬಂದು ಹೋಗುತ್ತಿದ್ದ.

ನನ್ನನ್ನು ನೋಡಿದವನೇ ಓಡಿಬಂದು ನನ್ನನ್ನು ಅನಾಮತ್ತಾಗಿ ಎತ್ತಿಕೊಂಡು ಆನಂದದಿಂದ ಕುಣಿಯತೊಡಗಿದ. "ಹುಲಿ ಬಾಯಿಂದ ತಪ್ಪಿಸಿಕೊಂಡು ಬಂದ ಧೀರ!" ಎಂದು ಊರವರಿಗೆಲ್ಲಾ ಪರಿಚಯ ಮಾಡಿಸಿದ. ಹಿಂದಿನ ರಾತ್ರಿಯೇ ಊಟ ಮುಗಿಸಿ ಕೊಂಡು ಪೋಲೀಸರು ಹೊರಟುಹೋಗಿದ್ದರು. ಅವರೊಡನೆ ನನ್ನನ್ನು ಕಾಣದೆ ಜನರು ಬಹುಶಃ ನಾನು ಕಾಡುಪ್ರಾಣಿಗಳಿಂದ ತೊಂದರೆಗೆ ಒಳಗಾಗಿರಬಹುದೆಂದು ಊಹಿಸಿ ಗಾಬರಿಗೊಂಡಿದ್ದರು. ಆದ್ದರಿಂದಲೇ ಅರಸುವ ಗುಂಪುಗಳು ನನಗಾಗಿ ಕಂದೀಲು ಹಿಡಿದು ರಾತ್ರಿಯೇ ಹೊರಟಿದ್ದವು. ನಾನು ತಪ್ಪಿಸಿಕೊಂಡು ಬಂದುದು ಅವರಿಗೆ ಆನಂದಾಶ್ಚರ್ಯಗಳನ್ನುಂಟುಮಾಡಿತು. ಈ 'ಧೀರ'ನನ್ನು ಜಯಕಾರ ಮಾಡುತ್ತಾ ಬೀದಿಗಳಲ್ಲಿ ಸಂಭ್ರಮದಿಂದ ಕರೆದೊಯ್ದರು. ಆ ದಿನ ಊರಿಗೇ ಹಬ್ಬ; ಎಲ್ಲರ ಮನೆಯಲ್ಲೂ ಪಾಯಸ. ಎಲ್ಲರೂ "ನಮ್ಮ ಮನೆಗೆ ಬನ್ನಿ, ನಮ್ಮ ಮನೆಗೆ ಬನ್ನಿ" ಎಂದು ಕರೆಯುವವರೇ.

ಬೇರೊಂದೆಡೆ ಶಿಬಿರದ ವ್ಯವಸ್ಥೆಯಾಯಿತು. ಎಂದಿನಂತೆ ಕಾರ್ಯಕ್ರಮಗಳು ಭರದಿಂದ ಸಾಗತೊಡಗಿದವು. ಪ್ರತಿ ಭಾನುವಾರ ಅರಣ್ಯಸತ್ಯಾಗ್ರಹ; ಹುಲ್ಲುಬನ್ನಿ ಕೊಡುವುದಿಲ್ಲ, ಕಂದಾಯ ಕೊಡುವುದಿಲ್ಲ, ಎಂದು ಗ್ರಾಮಸ್ಥರು ಎಷ್ಟು ಬಗೆಯ ಸತ್ಯಾಗ್ರಹ ನಡೆಸಬಹುದೋ ಅಷ್ಟನ್ನೂ ನಡೆಸಿದ್ದಾಯಿತು. ಯಾವ ಶಾಸನಭಂಗ ಕಾರ್ಯಕ್ರಮ ಹಾಕಿಕೊಳ್ಳೋಣ ಎಂದು ಜನ ತಳಮಳಿಸುತ್ತಿದ್ದರು. ಹೊಸಹೊಸ ಚಳವಳಿಗಳನ್ನು ರೂಪಿಸಿ ನಿರ್ಧರಿಸುವುದೇ ಕಷ್ಟವಾಗಿತ್ತು.

ಶಾಸನಭಂಗಮಾಡಲು, ಜನರಿಗೆ ಸಾಕಷ್ಟು ಧೈರ್ಯ ಬಂದಿದೆ ಎಂದು ಖಚಿತ ಮಾಡಿಕೊಂಡು, ದೊಡ್ಡ ಪ್ರಮಾಣದಲ್ಲಿ ಉಪ್ಪು ತಯಾರಿಸುವ ಸಾಣೆಕಟ್ಟೆಯ ಮೇಲೆ ದಾಳಿ ನಡೆಸುವ ಕಾರ್ಯಕ್ರಮವನ್ನು ಹಾಕಿಕೊಂಡೆವು. ನಿರ್ದಿಷ್ಟ ದಿನ, ಐದು ಸಾವಿರ ಜನರು ಸಾಣೆಕಟ್ಟೆ ಕೋಠಿಯ ಮೇಲೆ ಹಲ್ಲೆ ನಡೆಸಿದರು. ಈ ಅಪಾರ ಜನಸಮೂಹವನ್ನು

ತಡೆಯಲಾರದೆ ಪೋಲೀಸಿನವರು ಸುಮ್ಮನಾದರು. ಹೆಗಲ ಮೇಲೆ ಹೊತ್ತಿದ್ದ ಸಾಲದೆ, ಕತ್ತೆಗಳ ಮೇಲೂ ಉಪ್ಪಿನ ಮೂಟೆಗಳು ಸಾಗಿಸಲ್ಪಟ್ಟವು.

ಚಳವಳಿಯ ಪ್ರಮುಖರೆಲ್ಲಾ ಒಂದೆಡೆ ಸೇರಿ ಮತ್ತೇನು ಕಾರ್ಯಕ್ರಮ ಹಾಕಿಕೊಳ್ಳೋಣ, ಎಂದು ಚರ್ಚಿಸಿದೆವು. ಟೆಲಿಗ್ರಾಫ್ ತಂತಿ ಕತ್ತರಿಸುವುದು, ಸೇತುವೆ ನಾಶಪಡಿಸುವುದು, ರಸ್ತೆ ಅಗೆದು ವಾಹನಸಂಚಾರಕ್ಕೆ ಅಡ್ಡಿಪಡಿಸುವುದು ಮುಂತಾದ ಸಲಹೆಗಳು ಬಂದವು. ಸಾರ್ವಜನಿಕ ಆಸ್ತಿ ನಾಶ ಒಳ್ಳೆಯದಲ್ಲ; ಇದು ಸತ್ಯಾಗ್ರಹದ ಮೂಲತತ್ವಕ್ಕೇ ವಿರುದ್ಧ ಎಂದು ಅವರಿಗೆ ಮನವರಿಕೆ ಮಾಡಿಕೊಡುವುದು ಕಷ್ಟಸಾಧ್ಯವಾಗಿತ್ತು.

ವೆಂಕಟರಾಮಯ್ಯನವರು ಸಿದ್ದಾಪುರದಲ್ಲಿ ಕೈಗೊಂಡಿದ್ದ ವಿನೂತನ, ದಿಟ್ಟ ಚಳವಳಿಯ ವಿಧಾನ ತಿಳಿಯಿತು. ಅಲ್ಲಿ ಸರ್ಕಾರವು ಕರನಿರಾಕರಣೆ ಮಾಡಿದವರ ಮನೆಗಳನ್ನು ಮುಟ್ಟುಗೋಲು ಹಾಕಿಕೊಂಡು, ಅಲ್ಲಿ ವಾಸವಾಗಿದ್ದವರನ್ನು ಹೊರಕ್ಕೋಡಿಸುತ್ತಿತ್ತು. ಸತ್ಯಾಗ್ರಹಿಗಳು ಮನೆಯ ಬಾಗಿಲಿಗೆ ಹಾಕಿದ್ದ ಮೊಹರು ಒಡೆದು ಮತ್ತೆ ಮನೆ ಪ್ರವೇಶಿಸುವ ಪ್ರತ್ಯಕ್ಷ ಕಾರ್ಯಕ್ರಮವಿದು. ಸರ್ಕಾರ ಇದನ್ನು ಉಗ್ರವಾಗಿ ಹತ್ತಿಕ್ಕಲು ಯತ್ನಿಸುವುದೆಂದು ಆಗಲೇ ಮನವರಿಕೆ ಮಾಡಿಕೊಟ್ಟೆ.

ಪ್ರಾಯೋಗಿಕವಾಗಿ ಒಂದು ಗ್ರಾಮದಲ್ಲಿ ಈ ಕಾರ್ಯಕ್ರಮ ಪ್ರಾರಂಭಿಸಿದೆವು. ಐದಾರು ಮನೆಗಳ ಮೊಹರು ಒಡೆದು ಹೆಂಗಸರೂ ಮಕ್ಕಳೂ ಪ್ರವೇಶಿಸಿದರು. ಪೋಲೀಸರು ಇವರ ಹಿಂದೆಯೇ ಮನೆಗೆ ನುಗ್ಗಿ ಅಲ್ಲಿದ್ದವರನ್ನೆಲ್ಲಾ ರಟ್ಟೆ ಹಿಡಿದು ದರದರನೆ ಹೊರಕ್ಕೆಳೆದು ಕತ್ತು ಹಿಡಿದು ತಳ್ಳಿದರು; ಮೆಟ್ಟಿನ ಕಾಲಿನಿಂದ ಒದ್ದು ಕೆಡವಿದರು; ಮಕ್ಕಳನ್ನು ಹೊತ್ತು ತಂದು ಬೀದಿಯಲ್ಲಿ ಮಲಗಿಸಿದರು. ಮಾಣುದೇವಿ ಎಂಬಾಕೆ ಬೀರಣ್ಣ ನಾಯ್ಕರ ಮನೆ ಪ್ರವೇಶಿಸಿದಳು. ಪೋಲೀಸರು ಅವಳನ್ನು ಹೊರಕ್ಕಟ್ಟಿದ್ದರು. ಆದರೂ ಅವಳು ಮತ್ತೊಮ್ಮೆ ಮನೆಯೊಳಕ್ಕೆ ನುಗ್ಗಿ ಹೊರಬರುವುದಿಲ್ಲವೆಂದು ಪಟ್ಟು ಹಿಡಿದು ಕುಳಿತಳು. ಪೋಲೀಸರು ಅವಳ ಕೂದಲು ಹಿಡಿದು ದರದರನೆ ಹೊರಗೆಳೆದು ತಂದು ನೆಲಕ್ಕೆ ಕೊಡವಿ ತುಳಿದರು; ಆಗ ಅವಳು ಪ್ರಜ್ಞಾಹೀನಳಾದುದನ್ನು ಕಂಡು ಓಡಿಹೋದರು.

ಇದೇ ಸಮಯದಲ್ಲಿ ಭೂಮಾಲಿಕರಿಗೆ ಗೇಣಿ ಕೊಡುವುದನ್ನು ತಪ್ಪಿಸಿ ಉಳುವವನನ್ನೇ ಭೂಮಾಲಿಕನನ್ನಾಗಿ ಮಾಡುವ ಚಳವಳಿ ಹೂಡಬೇಕೆಂದು ರಾಮನಾಯ್ಕರು ಕಾತರರಾಗಿದ್ದರು. ಅಂಕೋಲಾ ತಾಲ್ಲೂಕು ಕಾಂಗ್ರೆಸ್‌ನ ಪೈ ಇದನ್ನು ವಿರೋಧಿಸುತ್ತಿದ್ದರು. ಸಾಮಾನ್ಯವಾಗಿ ಸಾರಸ್ವತರು ಭೂಮಾಲಿಕರಾಗಿಯೂ, ನಾಡವರು ಮತ್ತು ಒಕ್ಕಲಿಗರು ಗೇಣಿ ಮತ್ತು ಗುತ್ತಿಗೆದಾರರಾಗಿಯೂ ಇರುತ್ತಿದ್ದರು. ಈ ಚಳವಳಿಯಿಂದ ಸಣ್ಣ ರೈತರಿಗೆ, ಗೇಣಿದಾರರಿಗೆ ತುಂಬಾ ಅನುಕೂಲವಾಗುವ ಸಂಭವವಿತ್ತು. ಆದರೆ ಮಹಾತ್ಮಾ ಗಾಂಧಿ ಮತ್ತು ಕಾಂಗ್ರೆಸ್ ಇದಕ್ಕೆ ಸ್ಪಷ್ಟವಾಗಿ ವಿರೋಧ

ವ್ಯಕ್ತಪಡಿಸಿದ್ದರು. ಮೊದಲು ಬ್ರಿಟಿಷರು ಕಾಲ್ತೆಗೆಯುವಂತೆ ಮಾಡಿ, ಅನಂತರ ಈ ವಿಷಯ ತೆಗೆದುಕೊಳ್ಳಬೇಕೆಂದು ಅವರ ಅಭಿಮತವಾಗಿತ್ತು. ಸಂಸ್ಥಾನಗಳಲ್ಲಿ ಚಳವಳಿ ಹೂಡುವುದನ್ನು ಅವರು ಪ್ರೋತ್ಸಾಹಿಸುತ್ತಿರಲಿಲ್ಲ. ದೇಶದ ಜನತೆಯ ಶಕ್ತಿಸಾಮರ್ಥ್ಯ ಗಳೆಲ್ಲವೂ ಸ್ವಾತಂತ್ರ್ಯ ಗಳಿಕೆಗಾಗಿ ವ್ಯಯಿಸಲ್ಪಡಬೇಕು. ಬೇರೆಬೇರೆ ಧ್ಯೇಯ, ಸಾಧನೆ ಗಳಲ್ಲಿ ನಮ್ಮ ಶಕ್ತಿಯನ್ನು ವಿಚ್ಛಿದ್ರಗೊಳಿಸಬಾರದೆಂಬು ಅವರ ಉದ್ದಿಶ್ಯವಾಗಿತ್ತು. ಈ ಬಗೆಯ ಚಳವಳಿಗೆ ಅವಕಾಶ ಕೊಡಲಿಲ್ಲ. ಕರನಿರಾಕರಣೆಯಲ್ಲಿ ಭಾಗವಹಿಸಿದ್ದ ಗೇಣಿ ದಾರರಿಂದ ಬಾಕಿ ವಸೂಲಿಗಾಗಿ ಭೂಮಾಲಿಕರು ಒತ್ತಾಯಪಡಿಸಲಾರರೆಂಬ ವಿಶ್ವಾಸ ನನಗಿತ್ತು.

ಮತ್ತೆಲ್ಲಿಯೋ ನಮ್ಮ ಶಿಬಿರದ ವ್ಯವಸ್ಥೆಯಾಯಿತು. ಇಷ್ಟರಲ್ಲಿ ಲೇಬರ್ ಪಕ್ಷದ ಪಾರ್ಲಿಮೆಂಟ್ ಸದಸ್ಯರ ನಿಯೋಗ ಅಂಕೋಲೆಗೆ ಬಂದಿರುವುದಾಗಿ ಸುದ್ದಿ ಬಂದಿತು. ಕರನಿರಾಕರಣೆ ಪ್ರಾರಂಭವಾದಾಗಿನಿಂದ ಇದುವರೆವಿಗೆ ಚಳವಳಿ ನಡೆದ ರೀತಿನೀತಿ, ಜನರ ಮೇಲೆ ನಡೆದ ದಬ್ಬಾಳಿಕೆ, ಅವರು ಅನುಭವಿಸುತ್ತಿದ್ದ ಕಷ್ಟನಷ್ಟಗಳನ್ನೆಲ್ಲಾ ಒಂದೆಡೆ ಕ್ರೋಢೀಕರಿಸಿ ವರದಿಯೊಂದನ್ನು ಸಿದ್ಧಪಡಿಸಿದೆ. ಇದನ್ನು ಬೇರೊಬ್ಬರ ಮೂಲಕ ನಿಯೋಗಕ್ಕೆ ತಲಪಿಸುವ ವ್ಯವಸ್ಥೆಮಾಡಿದೆ. ಆದರೆ ಅದು ನಿಯೋಗಕ್ಕೆ ತಲಪಿಸಲ್ಪಟ್ಟಿತೋ ಇಲ್ಲವೋ — ಒಂದೂ ತಿಳಿಯಲಿಲ್ಲ.

ಈ ನಿಯೋಗದೊಡನೆ ಸಂಪಿಗೆ ವೆಂಕಟಪತಯ್ಯನವರೂ ಬರಲಿರುವರೆಂದು ತಿಳಿದು ಬಂತು. ಈ ನಿಯೋಗದ ಸದಸ್ಯರನ್ನು ಹೇಗಾದರೂ ಭೇಟಿ ಮಾಡಬೇಕೆಂಬ ಉತ್ಕಟ ಆಸೆ ನನ್ನಲ್ಲಿ ತಲೆದೋರಿತು. ನಿಯೋಗದ ಸಮ್ಮುಖದಲ್ಲಿ ನನ್ನನ್ನು ಬಂಧಿಸಲಾರರು, ಎಂದು ನನ್ನ ಭಾವನೆ. ಅಂಕೋಲೆಯ ಗೆಳೆಯರೊಬ್ಬರು ತಕ್ಕ ವ್ಯವಸ್ಥೆ ಮಾಡಿಕೊಡುವು ದಾಗಿ ಭರವಸೆ ಕೊಟ್ಟಿದ್ದರು.

ಪಾರ್ಲಿಮೆಂಟ್ ನಿಯೋಗ ಸುಮಾರು ಸೆಪ್ಟೆಂಬರ್ 3, 1932ಕ್ಕೆ ಅಂಕೋಲೆಗೆ ಬಂದಿತು. ಅವರು ಬರುವ ದಿನ ದೊಡ್ಡ ಪ್ರಮಾಣದಲ್ಲಿ ಜಂಗಲ್ ಸತ್ಯಾಗ್ರಹ ನಡೆಸುವ ವ್ಯವಸ್ಥೆಮಾಡಲಾಗಿತ್ತು. ಆದರೆ ನಿಯೋಗದವರು ಒಂದು ದಿನ ತಡವಾಗಿ ಬಂದರು. ಸಣ್ಣ ಪ್ರಮಾಣದಲ್ಲಿ ಸತ್ಯಾಗ್ರಹ ನಡೆಯಿತು. ಸುಮಾರು 3,000 ಜನ ನಿಯೋಗದವ ರನ್ನು ಭೇಟಿ ಮಾಡಲು ನೆರೆದಿದ್ದರಂತೆ.

ನನ್ನನ್ನು, ವಿಠೋಬ ಮತ್ತು ಇನ್ನೊಬ್ಬ ಸ್ವಯಂಸೇವಕನನ್ನು ಅಂಕೋಲೆಯ ಗೆಳೆಯರು (ಈಗ ಹೆಸರು ಮರೆತಿದೆ) ಅಂಕೋಲೆಯ ಒಂದು ಮನೆಗೆ ಕರೆದೊಯ್ದರು. ಆ ಮನೆಯಲ್ಲಿ ವಯಸ್ಸಾದ ಇಬ್ಬರು ಹೆಂಗಸರು ಮಾತ್ರ ಇದ್ದರು. ಅವರು ನನ್ನನ್ನು ಮಹಡಿಯ ಮೇಲಿನ ಕೊಠಡಿಗೆ ಸೇರಿಸಿದರು. ವಿಠೋಬ ಉಪಾಹಾರಗೃಹದಿಂದ ಒಬ್ಬ ಮಾಣಿ ಕೈಯಲ್ಲಿ ಚಹ ತರಿಸಿಕೊಂಡು ಬಂದ. ಚಹ ತೆಗೆದುಕೊಳ್ಳುತ್ತಿದ್ದಂತೆ, ಸಮ ವಸ್ತ್ರವಿಲ್ಲದೆ ಪೋಲೀಸರು ಸುಳಿದಾಡುತ್ತಿದ್ದುದು ನನ್ನ ದೃಷ್ಟಿಗೆ ಬಿತ್ತು. ಆ ಕೂಡಲೇ

ವಿಷಯವನ್ನು ಮನೆಯ ಹೆಂಗಸರಿಗೆ ತಿಳಿಸಿದೆ. ನೆರೆಮನೆ ಖಾಲಿಯಾಗಿದೆ; ಅಲ್ಲಿಗೆ ಹೋಗಲು ತಿಳಿಸಿದರು. ಇಲ್ಲಿಗೆ ಬಂದವರು ಅಲ್ಲಿಗೆ ಬಾರದೇ ಹೋಗುವರೇ, ಎಂದು ನಾನು ನಿರಾಕರಿಸಿದೆ. ಇಷ್ಟರಲ್ಲಿ ಶಿರಸಿಯಿಂದ ಕೆ. ಎ. ವೆಂಕಟರಾಮಯ್ಯನವರು ಕಳುಹಿಸಿದ್ದ ಪ್ರಮುಖ ಪತ್ರವನ್ನು ತೆಗೆದುಕೊಂಡು ವಿಠೋಬ ಮತ್ತೆ ಬಂದ. ಪತ್ರ ಓದುತ್ತಿದ್ದಂತೆಯೇ ನಾಲ್ಕೈದು ಪೋಲೀಸರು ಮೆಟ್ಟಲು ಹತ್ತಿ ಬಂದರು. ಅವರನ್ನು ನೋಡುತ್ತಲೇ ಕೈಯಲ್ಲಿದ್ದ ಕಾಗದ ಹರಿದು ಬಾಯಲ್ಲಿ ಹಾಕಿಕೊಂಡು ಜಗಿಯಲು ಪ್ರಯತ್ನಿಸಿದೆ, ಸಾಧ್ಯವಾಗಲಿಲ್ಲ. ನನ್ನ ಕೈಲಿದ್ದ ಹರಿದ ಕಾಗದವನ್ನು ಪೋಲೀಸರು ತೆಗೆದುಕೊಂಡು ಅವರನ್ನು ಹಿಂಬಾಲಿಸುವಂತೆ ತಿಳಿಸಿದರು. ನಾನು ಅವರ ಹಿಂದೆ ಹೊರಟೆ. ಅವರ ಮನೆಯಲ್ಲಿ ನಾನು ಬಂಧಿತನಾದೆನಲ್ಲ ಎಂದು ಮನೆಯ ಹೆಂಗಸರು ಗಟ್ಟಿಯಾಗಿ ರೋದಿಸತೊಡಗಿದರು. "ಉಪಾಯವಿಲ್ಲ, ಬರುತ್ತೇನೆ" ಎಂದು ಹೊರಟೆ.

ನಮ್ಮ ಸ್ವಯಂಸೇವಕರ ಅಜಾಗರೂಕತೆಯಿಂದಲೇ ನನ್ನ ಬಂಧನ ಸಾಧ್ಯವಾಯಿತು ಎಂಬುದರಲ್ಲಿ ಸಂದೇಹವಿಲ್ಲ. ವಿಠೋಬನನ್ನು ಪೋಲೀಸರು ಅನೇಕ ಸಾರಿ ಹಿಡಿದು ಬಿಟ್ಟಿದ್ದರಂತೆ. ಇದು ನನಗೆ ತಿಳಿದಿರಲಿಲ್ಲ. ಅವನು ನಮ್ಮ ಕ್ಯಾಂಪಿನ ಸ್ವಯಂಸೇವಕ ಎಂದು ಪೋಲೀಸರಿಗೆ ತಿಳಿಯಿತು. ಚಹ ತೆಗೆದುಕೊಂಡು ಬಂದ ಹುಡುಗನನ್ನು ಹಿಂಬಾಲಿಸಿ ಬಂದು, ಯಾರೋ ಪ್ರಮುಖರು ಇಲ್ಲಿದ್ದಾರೆ ಎಂದು ಪೋಲೀಸರು ಸುಲಭವಾಗಿ ಊಹಿಸಿರಬೇಕು.

ಪೋಲೀಸರು ನನ್ನನ್ನು ತುಂಬ ಗೌರವದಿಂದ ನೋಡಿಕೊಂಡು ಲಾಕಪ್ಪಿಗೆ ಕರೆದೊಯ್ದರು. ಅಲ್ಲಿ ಶ್ರೀನಿವಾಸರಾವ್ ಬಂಧಿತರಾಗಿದ್ದರು. ಊರಿನವರು ನಮಗೆ ಒಳ್ಳೆಯ ಊಟ-ತಿಂಡಿ ವ್ಯವಸ್ಥೆ ಮಾಡಿಕೊಟ್ಟರು.

ಸಂಜೆವೇಳೆ ಆವರಣದಲ್ಲಿ ತಿರುಗಾಡಲು ಪೋಲೀಸರು ವ್ಯವಸ್ಥೆ ಮಾಡಿಕೊಟ್ಟರು. ಹದಿನೈದು ದಿನಗಳಾದರೂ ನನ್ನನ್ನು ವಿಚಾರಣೆಗೆ ಒಯ್ಯಲಿಲ್ಲ. ಏನು ಕಾರಣ ಎಂದು ವಿಚಾರಿಸಿದೆ. ನನ್ನ ಪರ ಸಂಪಿಗೆ ವೆಂಕಟಪತಯ್ಯನವರು ವಕಾಲತ್ತು ವಹಿಸಲು ಬರಲಿರುವರೆಂದೂ ಅದರಿಂದ ಪೋಲೀಸಿನವರು ಕಾಗದಪತ್ರ ಸರಿಮಾಡಿಕೊಳ್ಳುತ್ತಿದ್ದಾರೆಂದೂ ತಿಳಿಯಿತು.

ಒಂದು ದಿನ ರಾತ್ರಿ ಕಂಬಳಿ ಹೊದ್ದು ಮುಖ ಮರೆಸಿಕೊಂಡಿದ್ದ ಒಬ್ಬ ವ್ಯಕ್ತಿ ನಾನಿದ್ದಲ್ಲಿಗೆ ಬಂದು, ತಾನು ಮ್ಯಾಜಿಸ್ಟ್ರೇಟ್ ಎಂದು ತಿಳಿಸಿ, ನನ್ನೊಡನೆ ಮಾತನಾಡ ಬಯಸಿದರು. ಸೇಂದಿ ಅಂಗಡಿ ಸುಡುವುದು, ತಂತಿ ಕತ್ತರಿಸುವುದು, ಸೇತುವೆ ಉರುಳಿಸುವುದು ಇವೆಲ್ಲವನ್ನು ಖಂಡಿಸಿ ನಾನು ಹೊರಡಿಸಿದ್ದ ಪ್ರಕಟಣೆ ಅವರು ನೋಡಿದ್ದರು. ಅದು ಅವರ ಮೆಚ್ಚುಗೆಗೆ ಪಾತ್ರವಾಗಿತ್ತು. ತಮ್ಮ ಮೆಚ್ಚುಗೆ ನನಗೆ ತಿಳಿಸಲು ಅವರು ಗುಪ್ತವಾಗಿ ಬಂದಿದ್ದರು. ನಾಲ್ಕು ತಿಂಗಳಿನಿಂದ ತಾಲ್ಲೂಕಿನ ಒಳಭಾಗದಲ್ಲಿ ಪೋಲೀಸರ ಕೈಗೆ ಸಿಗದೆ ಇದ್ದುದು ಅವರನ್ನು ಅಚ್ಚರಿಗೊಳಿಸಿತ್ತು. ನೀವು ಚಳವಳಿಗೆ ಉತ್ತಮ

ಮಾರ್ಗದರ್ಶನ ನೀಡುತ್ತಿರುವಿರೆಂದು ನನ್ನನ್ನು ಶ್ಲಾಘಿಸಿದರು.

ವಿಚಾರಣೆಗೆ ತಡವೇಕೆ ಎಂದು ಕೇಳಿದೆ. "ನೀವು ವಕೀಲರನ್ನು ಬೆಂಗಳೂರಿನಿಂದ ಕರೆಸಿಕೊಳ್ಳುವಿರಂತೆ, ನಿಜವೆ?" ಎಂದು ಕೇಳಿದರು. "ಇಲ್ಲ, ಇದು ಗಾಂಧೀಜಿ ಕೊಟ್ಟಿರುವ ಮಾರ್ಗದರ್ಶನಕ್ಕೆ ವಿರುದ್ಧವಾಗುತ್ತದೆ" ಎಂದೆ. "ಹಾಗಾದರೆ ನಾಳೆಯೇ ವಿಚಾರಣೆ ನಡೆಸುತ್ತೇನೆ" ಎಂದರು. ಮತ್ತೊಂದು ವಿಷಯವನ್ನೂ ಅವರು ತಿಳಿಸಿದರು. ಇದುವರೆಗೂ ಅವರು ಲಘುಶಿಕ್ಷೆ ವಿಧಿಸುತ್ತಿರುವುದಾಗಿಯೂ, ದೀರ್ಘಕಾಲದ ಕಠಿಣಶಿಕ್ಷೆ ವಿಧಿಸು ವಂತೆ ಬೊಂಬಾಯಿ ಸರ್ಕಾರದಿಂದ ತಮಗೆ ಸುತ್ತೋಲೆ ಬಂದಿದೆ ಎಂದರು. "ನಿಮಗೆ ದೀರ್ಘಾವಧಿಯ ಕಠಿಣಶಿಕ್ಷೆ ವಿಧಿಸಬೇಕಾದೀತು, ಆದರೆ ಪೂರ್ಣಾವಧಿ ಶಿಕ್ಷೆ ಅನು ಭವಿಸದೆ ನೀವು ಬೇಗನೆ ಬಿಡುಗಡೆಯಾಗುವಿರೆಂದು ನಾನು ಆಶಿಸುತ್ತೇನೆ" ಎಂದರು. ಮ್ಯಾಜಿಸ್ಟ್ರೇಟರಿಗೆ ಗಾಂಧೀ ತತ್ವದಲ್ಲಿದ್ದ ಗೌರವ ಮತ್ತು ಅವರ ದೇಶಭಕ್ತಿ ಇದರಿಂದ ವ್ಯಕ್ತವಾಗುತ್ತದೆ.

ನನ್ನ ವಿಚಾರಣೆ ಸೆಪ್ಟೆಂಬರ್ 22, 1932ರಂದು ನಡೆದು ನಾಲ್ಕು ಅಪರಾಧಗಳಿ ಗಾಗಿ ಒಟ್ಟು ಎರಡು ವರ್ಷಗಳ ಸಶ್ರಮಶಿಕ್ಷೆ ವಿಧಿಸಲ್ಪಟ್ಟಿತು. ಇದೇ ನನ್ನ ಪ್ರಥಮ ಜೈಲುವಾಸದ ಅನುಭವ. ಕಾರವಾರ ಜೈಲಿನಲ್ಲಿ ನಾಲ್ಕು ತಿಂಗಳಿದ್ದೆ. ಅಲ್ಲಿಂದ ವಿಸಾ ಪುರದ ತಾತ್ಕಾಲಿಕ ಜೈಲಿಗೆ ವರ್ಗಾಯಿಸಲ್ಪಟ್ಟೆ. ವಿಸಾಪುರಕ್ಕೆ ರೈಲಿನಲ್ಲಿ ಒಯ್ಯುತ್ತಿ ದ್ದಾಗ, ಇನ್ನೊಬ್ಬ ಸತ್ಯಾಗ್ರಹಿಯ ಮತ್ತು ನನ್ನ ಕೈಗಳನ್ನು ಸೇರಿಸಿ ಬೇಡಿ ತೊಡಿಸಿ, ಪೋಲೀಸರು ಹಿಡಿದುಕೊಳ್ಳಲು ಸರಪಳಿಯನ್ನು ಜೋಡಿಸಿದ್ದರು. ಜಲಬಾಧೆ ತೀರಿಸಿ ಕೊಳ್ಳಲು ಹೋಗಬೇಕಾಗಿದ್ದಾಗಲೂ, ಇಸ್ಪೀಟ್ ಆಟದಲ್ಲಿ ಮಗ್ನರಾಗಿದ್ದ ಪೋಲೀಸರು, ಕೈಕೋಳ ತೆಗೆಯುತ್ತಿರಲಿಲ್ಲ. ತೆಳ್ಳನೆಯ ನನ್ನ ಕೈಗಳಿಂದ ಬಳೆಯಂತೆ ಬೇಡಿಯನ್ನು ನಾನು ತೆಗೆದುಬಿಡುತ್ತಿದ್ದೆ. ನನ್ನ ಪೂರ್ಣಾವಧಿ ಶಿಕ್ಷೆಯನ್ನು ಇಲ್ಲಿಯೇ ಕಳೆದೆ. ಇಲ್ಲಿ ಮುಂಬಯಿ, ಗುಜರಾಥ್, ಮಹಾರಾಷ್ಟ್ರ, ಕರ್ನಾಟಕಕ್ಕೆ ಸೇರಿದ ನೂರಾರು ದೇಶ ಭಕ್ತರ ಪರಿಚಯ ನನಗಾಯಿತು.

ವಿಸಾಪುರದಿಂದ ಬಿಡುಗಡೆಯಾದಾಗ ಬೊಂಬಾಯಿ ಪ್ರಾಂತ್ಯಕ್ಕೆ ನಾನು ಪರಕೀಯ ನೆಂದು ನನ್ನನ್ನು ಗಡೀಪಾರು ಮಾಡಿದರು. ನನ್ನ ದೇಶದಲ್ಲಿಯೇ ನಾನು ಪರಕೀಯ! ಇಬ್ಬರು ಪೋಲೀಸರು ಬೆಂಗಾವಲಾಗಿ ಬೆಂಗಳೂರಿನವರೆಗೂ ಬಂದು ನನ್ನನ್ನು ಇಲ್ಲಿನ ಪೋಲೀಸರ ವಶಕ್ಕೆ ಒಪ್ಪಿಸಿ, ''ಚೋರ, ಪರಕೀಯನನ್ನು ಸುರಕ್ಷಿತವಾಗಿ ಒಪ್ಪಿಸಿದ್ದೇವೆ'' ಎಂದು ರಶೀತಿ ಪಡೆದು ಅವರು ಹಿಂತಿರುಗಿದರು.



ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ, ಅಧ್ಯಕ್ಷ ತಾಳಕೆರೆ ಸುಬ್ರಹ್ಮಣ್ಯರ ಅಧ್ಯಕ್ಷತೆಯಲ್ಲಿ, 18-7-1942ರಂದು ನಡೆದು 'ಕ್ವಿಟ್ ಇಂಡಿಯಾ' ಘೋಷಣೆಯ ಬಗ್ಗೆ ತನ್ನ ನಿಲುವನ್ನು ಕುರಿತು ಚರ್ಚಿಸಿ, ಯುದ್ಧ ಪ್ರಯತ್ನಕ್ಕೆ ಸಂಬಂಧಿಸಿದ ಸರ್ಕಾರದ ಯಾವುದೇ ಕಾರ್ಯಕ್ರಮದಲ್ಲಿ ಕಾಂಗ್ರೆಸ್ ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ ಭಾಗವಹಿಸಕೂಡದೆಂದು ನಿರ್ಣಯ ಕೈಗೊಂಡಿತು.

ಜೀ: ಎಚ್. ಎಸ್. ದೊರೆಸ್ವಾಮಿ

30-7-1942ರಂದು ನ್ಯಾಯಾಂಗ ಸಚಿವ ಎ. ವಿ. ರಾಮನಾಥನ್‌ರವರು ಕಾಂಗ್ರೆಸ್ ಅಧ್ಯಕ್ಷರಿಗೆ ಒಂದು ಪತ್ರ ಬರೆದು ಸದ್ಯದ ರಾಜಕೀಯ ಪರಿಸ್ಥಿತಿಯ ಬಗ್ಗೆ ಮಾತುಕತೆ ನಡೆಸಲು ತಮ್ಮ ಮನೆಗೆ ಬರಬೇಕೆಂದು ಕೋರಿದರು. "ಬೊಂಬಾಯಿಂದ ಹಿಂದಿರುಗಿದನಂತರ ದಿವಾನರು ನಿಮ್ಮನ್ನು ಭೇಟಿ ಮಾಡಲು ಇಚ್ಛಿಸುತ್ತಾರೆ; ಕಾಂಗ್ರೆಸ್‌ನೊಡನೆ ಸ್ನೇಹಭಾವದಿಂದಿರುವುದೇ ಸರ್ಕಾರದ ನೀತಿ" ಎಂದು ರಾಮನಾಥನ್‌ರವರು ಅಧ್ಯಕ್ಷರಿಗೆ ತಿಳಿಸಿದರು. ಕಾಂಗ್ರೆಸ್ ಅಧ್ಯಕ್ಷರು ತಾವು ಬೊಂಬಾಯಿಂದ ಹಿಂದಿರುಗಿದಮೇಲೆ, ದಿವಾನರ ಭೇಟಿಮಾಡಿದ ಮೇಲೆಯೇ ಮುಂದೇನು ಮಾಡಬೇಕೆಂಬ ತೀರ್ಮಾನ ಕೈಗೊಳ್ಳುವುದಾಗಿ ತಿಳಿಸಿದರು. ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸಭೆಗೆ ಅಧ್ಯಕ್ಷರು ಮೊದಲ್ಗೊಂಡು ಎಲ್ಲಾ ನಾಯಕರೂ ಬೆಂಗಳೂರಿನಿಂದ ಬೊಂಬಾಯಿಗೆ ತೆರಳಿದರು.

1942ರ ಆಗಸ್ಟ್ 8ರ ಮಧ್ಯರಾತ್ರಿ ಮಹಾತ್ಮಾ ಗಾಂಧಿ, ಕಾಂಗ್ರೆಸ್ ಅಧ್ಯಕ್ಷ ಅಬ್ದುಲ್ ಕಲಂ ಅಜಾದ್ ಮುಂತಾದ ಎಲ್ಲಾ ಕಾಂಗ್ರೆಸ್ ನಾಯಕರನ್ನೂ ಬೊಂಬಾಯಿ ಯಲ್ಲಿ ಬಂಧಿಸಿದರು. ಮೈಸೂರು ಕಾಂಗ್ರೆಸ್ ಅಧ್ಯಕ್ಷ ಸುಬ್ರಹ್ಮಣ್ಯರವರೂ ಇತರರೂ ಬೆಂಗಳೂರಿಗೆ ವಾಪಸಾಗುವಾಗ ಯಶವಂತಪುರ ರೈಲ್ವೆ ನಿಲ್ದಾಣದಲ್ಲಿಯೇ ಅವರೆಲ್ಲರ (10-8-1942ರಂದು) ದಸ್ತಗಿರಿಯಾಯಿತು. ಜೊತೆಜೊತೆಗೇ ಸಂಸ್ಥಾನಾದ್ಯಂತ ಸಾವಿರಾರು ಜನರ ಬಂಧನವಾಯಿತು. ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿ, ಜಿಲ್ಲಾ ಕಾಂಗ್ರೆಸ್ ಸಮಿತಿಗಳು, ನಗರ ಕಾಂಗ್ರೆಸ್ ಸಮಿತಿಗಳು ಇವೆಲ್ಲಾ ನ್ಯಾಯ ಬಾಹಿರ ಸಂಸ್ಥೆಗಳೆಂದು ಘೋಷಿಸಲ್ಪಟ್ಟುವು.

ಮಹಾತ್ಮಾ ಗಾಂಧಿಯವರ ಮೊದಲ್ಗೊಂಡು, ಈ ಎಲ್ಲಾ ನಾಯಕರ ದಸ್ತಗಿರಿಯಾದ ಸುದ್ದಿ ಕಾಳ್ಗಿಚ್ಚಿನಂತೆ ಹರಡಿತು. ವಿದ್ಯಾರ್ಥಿವಿದ್ಯಾರ್ಥಿನಿಯರು, ಕಾರ್ಮಿಕರು, ಕಾಂಗ್ರೆಸ್ ಕಾರ್ಯಕರ್ತರು, ಪ್ರಜ್ಞಾವಂತ ಪ್ರಜೆಗಳು ಎಲ್ಲರೂ ಈ ಚಳವಳಿಗೆ ನುಗ್ಗಿದರು. ಸಭೆಗಳು, ಮೆರವಣಿಗೆಗಳು ಅಸಂಖ್ಯವಾಗಿ ನಡೆದುವು. ಹಿಂದೆಂದೂ ಕೇಳರಿಯದ ರೀತಿಯಲ್ಲಿ ಚಳವಳಿಯನ್ನು ಹತ್ತಿಕ್ಕಲು ಸರ್ಕಾರ ವಿಶ್ವಪ್ರಯತ್ನ ನಡೆಸಿತು. ದಬ್ಬಾಳಿಕೆ ಹೆಚ್ಚಿದಷ್ಟೂ ಚಳವಳಿ ಉಗ್ರಸ್ವರೂಪ ತಾಳುತ್ತಾ ಬಂದಿತು. ಒಟ್ಟಿನಲ್ಲಿ ಈ ಚಳವಳಿಯಲ್ಲಿ ಧುಮುಕದ ದೇಶಪ್ರೇಮಿ ಒಬ್ಬರೂ ಇಲ್ಲ; ಒಂದಲ್ಲ ಒಂದು ಬಗೆಯಲ್ಲಿ ಪ್ರತಿ ದೇಶಪ್ರೇಮಿ ಭಾರತೀಯನನ್ನೂ ಆಕರ್ಷಿಸಿದ ಪ್ರಚಂಡ ಹೋರಾಟ 1942ರದು. ಈ ಸೆಣಸಾಟದಲ್ಲಿ ಮೈಸೂರಿನ ಜನತೆ ಹಿಂದಿನ ಎಲ್ಲಾ ಅಖಿಲ ಭಾರತ ಹೋರಾಟಗಳಲ್ಲಿ ಭಾಗವಹಿಸಿದ್ದಂತೆ ಸರ್ವಸಮರ್ಪಣಭಾವನೆಯಿಂದ ಧುಮುಕಿತು ; ಭಾರತಮಾತೆಯ ಪಾದಾರವಿಂದದಲ್ಲಿ ತನ್ನ ಅನೇಕ ಪುತ್ರರತ್ನರನ್ನು ಬಲಿದಾನಕೊಟ್ಟಿತು.

ನಾಯಕರ ದಸ್ತಗಿರಿಯ ಸುದ್ದಿ ಬೆಂಗಳೂರಿನ ನಾಗರಿಕರಿಗೆ ಮುಟ್ಟುತ್ತಿದ್ದಂತೆಯೇ ಅವರ ಧಮನಿಧಮನಿಗಳಲ್ಲಿ ರಕ್ತ ಕುದಿಯಲಾರಂಭಿಸಿತು. ಆದರೆ ಅವರಿಗೆ ಮಾರ್ಗದರ್ಶನ ನೀಡುವ ನಾಯಕರೆಲ್ಲಾ ಸೆರೆಮನೆಯಲ್ಲಿದ್ದರು. 'ಗಾಂಧೀಜೀ ಬಂಧನವಾಯಿತು !', 'ಗಾಂಧೀಜೀ ಬಂಧನವಾಯಿತು !' ಎಲ್ಲರ ಬಾಯಲ್ಲೂ ಇದೇ ಮಾತು. ಮೈಸೂರು ಬ್ಯಾಂಕ್ ಚೌಕದಲ್ಲಿ 11ನೇ ತಾರೀಖು ಬೆಳಗಿನಿಂದಲೇ ಬೆಂಗಳೂರಿನ ಜನ ಜಮಾಯಿಸ ತೊಡಗಿದರು. ಸಂಜೆಯ ವೇಳೆಗೆ ಅವರ ಸಂಖ್ಯೆ ಲಕ್ಷಕ್ಕೂ ಮೀರಿತು. ಸರ್ಕಾರವು ಸೈನಿಕರು ಮತ್ತು ಪೋಲೀಸರನ್ನು ಅಲ್ಲಿಗೆ ರವಾನೆ ಮಾಡಿತ್ತು. ಅಶ್ವಾರೂಢ ಸೈನಿಕರು ಬ್ಯಾಟನ್‌ನ್ನು ಬೀಸುತ್ತಾ ಕುದುರೆಗಳನ್ನು ಜನರ ಗುಂಪಿನ ಮೇಲೆ ದೌಡಾಯಿಸಿದರು. ಗುಂಪಿನಲ್ಲಿದ್ದ ಅನೇಕರಿಗೆ ಬ್ಯಾಟನ್ ಏಟು ಬಿದ್ದಿತು ; ಕುದುರೆಗಳ ಪದಾಘಾತಕ್ಕೆ ಸಿಕ್ಕಿ ನಿರಪರಾಧಿ ಜನ ಉರುಳಿಬಿದ್ದರು ; ಗಾಯಗೊಂಡರು. ಜನ ರೊಚ್ಚಿಗೆದ್ದು ಅಡ್ಡದಾರಿ ಹಿಡಿದರು. ಕಲ್ಲು ತೂರಲು ಆರಂಭಿಸಿದರು. ದೊಡ್ಡ ದೊಡ್ಡ ಕಲ್ಲುಗಳನ್ನು ತಂದು ರಸ್ತೆಗೆ ಅಡ್ಡಲಾಗಿ ಇಟ್ಟು ಕುದುರೆಸವಾರರು ಕುದುರೆಗಳನ್ನು ಜನಸಮೂಹದ ಮೇಲೆ ದೌಡಾಯಿಸದಂತೆ ತಡೆಹಿಡಿದರು. ಇಷ್ಟರಲ್ಲಿ ಜನರ ಒಂದು ಗುಂಪು ಅವೆನ್ಯೂ ರೋಡ್ ಅಂಚೆಕಛೇರಿಗೆ ಮುತ್ತಿಗೆಹಾಕಿತು ; ಇನ್ನೊಂದು ಗುಂಪು ಪೋಸ್ಟ್ ಆಫೀಸ್ ಮುಂದಿದ್ದ ಟೆಲಿಫೋನ್ ಕಂಬವನ್ನು ಉರುಳಿಸಿತು. ಪೋಸ್ಟ್ ಆಫೀಸ್ ಬಾಗಿಲು ಮುರಿದು ಒಳನುಗ್ಗಿ ಕಾಗದಪತ್ರಗಳನ್ನು ಚೆಲ್ಲಾಡಿ, ಪೆಟ್ಟಿಗೆ ಒಡೆದು, ಹಣವನ್ನು ದೋಚಿತು. ಅಶ್ವಾರೋಹಿ ಸೈನಿಕರು ಜನರ ಮೇಲೆ ಆವೇಶದಿಂದ ನುಗ್ಗಿದರು. ಆದರೆ ಕಬ್ಬನ್ ಪೇಟೆ ಜನ ಮೊರಗಳಲ್ಲಿ ರಾಗಿ ತಂದು ರಸ್ತೆಯಲ್ಲೆಲ್ಲಾ ಚೆಲ್ಲಾಡಿದರು. ಮುನ್ನುಗ್ಗುತ್ತಿದ್ದ ಅನೇಕ ಅಶ್ವಗಳು ಕಾಲು ಜಾರಿ ಮುಗ್ಗರಿಸಿದವು. ಸವಾರರು ಕುದುರೆಗಳಿಂದ ಬಿದ್ದು ಗಾಯಗೊಂಡರು. ಒಬ್ಬ ಲ್ಯಾನ್ಸರ್ ಸ್ಥಳದಲ್ಲೇ ಬಿದ್ದು ಮೃತಪಟ್ಟ.

ಈ ಘಟನೆಯ ಮೂಲಕ ಬೆಂಗಳೂರಿನಲ್ಲಿ 'ಕ್ವಿಟ್ ಇಂಡಿಯಾ' ಚಳವಳಿಯು ಅಂಕುರಾರ್ಪಣವಾಯಿತು. ತಿಂಗಳುಗಟ್ಟಲೆ ನಡೆದ ಈ ಚಳವಳಿಯಲ್ಲಿ ಅನೇಕ ಬಾರಿ ಪೋಲೀಸರು ಗುಂಡುಹಾರಿಸಿದ್ದರ ಪರಿಣಾಮವಾಗಿ ಬೆಂಗಳೂರೊಂದರಲ್ಲೇ 150 ಜನ ಸತ್ತರು. ಪ್ರತಿಬಂಧಕಾಜ್ಞೆಗಳು, ಜನರ ಮೇಲೆ ಗುಂಡು ಹಾರಿಸುವುದು, ಲಾಠೀಪ್ರಹಾರ, ಅಶ್ರುವಾಯು ಪ್ರಯೋಗಗಳು ದಿನನಿತ್ಯದ ವಾರ್ತೆಗಳಾದವು. ಬೆಂಗಳೂರೊಂದರಲ್ಲೇ ಆಗಸ್ಟ್ 18ನೆಯ ತಾರೀಖು ಮೂರು ಕಡೆ ಗುಂಡು ಹಾರಿಸಬೇಕಾಯಿತು. ಒಬ್ಬ ಡಿ.ಎಸ್.ಪಿ. ಹಾಗೂ 50 ಜನ ಪೋಲೀಸರಿಗೆ ಅಂದು ತೀವ್ರಗಾಯಗಳಾದುವು.

ಇಷ್ಟರಲ್ಲಿ ವಿದ್ಯಾರ್ಥಿಮುಖಂಡ ಕೆ. ವಿ. ವಸಂತಯ್ಯನವರ ನೇತೃತ್ವದಲ್ಲಿ ಭಾರಿ ವಿದ್ಯಾರ್ಥಿಪ್ರದರ್ಶನಗಳು, ಮೆರವಣಿಗೆಗಳು, ಸಭೆಗಳು ರೂಪುಗೊಂಡವು. ವಿದ್ಯಾರ್ಥಿನಿಯರೂ ಶಾಲಾಕಾಲೇಜುಗಳನ್ನು ಸುತ್ತುವರಿದು, ವಿದ್ಯಾರ್ಥಿಗಳು ತರಗತಿಗಳಿಗೆ ಹೋಗದಂತೆ ತಡೆಯತೊಡಗಿದರು. ಮೈಸೂರು ರೈಲ್ವೆಗೆ ಸೇರಿದ ರೈಲುಗಳಲ್ಲೆಲ್ಲಾ ಟಿಕೆಟ್‌ರಹಿತ ಪ್ರಯಾಣ ಅಡೆತಡೆಯಿಲ್ಲದೆ ನಡೆಯಿತು. ಇದರಲ್ಲಿ ವಿದ್ಯಾರ್ಥಿಗಳದೇ ಪ್ರಧಾನಪಾತ್ರ.

ಇದೇ ರೀತಿ ಮೈಸೂರಿನಲ್ಲೂ ವಿದ್ಯಾರ್ಥಿಗಳ ಚಳವಳಿ ಆರಂಭವಾಯಿತು. ಮೈಸೂರಿನಲ್ಲಿ ವಿದ್ಯಾರ್ಥಿ ಮುಖಂಡ ಎಂ. ವಿ. ಕೃಷ್ಣಪ್ಪನವರು, ಬೆಂಗಳೂರಿನಲ್ಲಿ ಕೆ. ವಿ. ವಸಂತ್ ಇವರು ಪೋಲೀಸರ ಕಣ್ಣುತಪ್ಪಿಸಿ, ಆಗಾಗ ಪರಸ್ಪರ ಸಮಾಲೋಚನೆಗಳನ್ನು ನಡೆಸುತ್ತಾ, ಯುವಕ ಸಂಘಟನೆಗೆ ಕಾರ್ಯಕ್ರಮಗಳನ್ನು ರೂಪಿಸುವುದರ ಮೂಲಕ ಹೆಚ್ಚು ಹೆಚ್ಚು ಯುವಕರನ್ನು ಚಳವಳಿಗೆ ಎಳೆದರು. ವಿದ್ಯಾರ್ಥಿಗಳನ್ನು ಪೋಲೀಸರು ನಿರ್ದಯತೆಯಿಂದ ದಂಡಿಸಲು ಆರಂಭಿಸಿದರು. ಆಗ ಸತ್ಯಾಗ್ರಹದ ವಿಧಾನವನ್ನು ಬದಲಾಯಿಸಿ, ಹೆಣ್ಣುಮಕ್ಕಳ ಜಾಥಾಗಳನ್ನು ಸಿದ್ಧಗೊಳಿಸಲಾಯಿತು. ವಿದ್ಯಾರ್ಥಿಚಳವಳಿಯಲ್ಲಿ ಪ್ರಮುಖಪಾತ್ರವಹಿಸಿದವರಲ್ಲಿ ಬೆಂಗಳೂರಿನ ಕೆ. ವಿ. ವಸಂತ್, ಎಂ. ಎ. ವಾಸುದೇವರಾವ್, ಕೆ. ಎಸ್. ದೇವಪಾಲ್, ವಿ. ಪಿ. ದೀನದಯಾಳು ನಾಯ್ಡು, ಎಸ್. ಪ್ರಾಣನಾಥ್, ಸೇತೂರಾವ್, ಎಸ್. ವಿ. ವ್ಯಾಸತೀರ್ಥ, ಎನ್. ವಿ. ಸುಖತೀರ್ಥ, ವೇಣುಗೋಪಾಲ್, ಸೂರ್ಯನಾರಾಯಣ, ವಿ. ಎಸ್. ಕೃಷ್ಣ ಅಯ್ಯರ್, ಎಚ್. ನರಸಿಂಹಯ್ಯ, ಗುರುದಾಸ್, ಎಲ್. ಎಸ್. ಎಸ್. ಚಕ್ರವರ್ತಿ, ಎಸ್. ಜಿ. ಸಿಂಹ ಇವರುಗಳು; ಮೈಸೂರಿನಲ್ಲಿ ಎಂ. ವಿ. ಕೃಷ್ಣಪ್ಪ, ಎಚ್. ವೈ. ಶಾರದಾ ಪ್ರಸಾದ್, ಖಾದ್ರಿ ಶಾಮಣ್ಣ, ಬಿ. ಶ್ರೀಕಂಠಪ್ಪ, ಕೆ. ಕಾಳಯ್ಯ, ಎಂ. ವಿ. ರಾಜಗೋಪಾಲ್, ಎಸ್. ಅನಂತನಾರಾಯಣ ಮುಂತಾದವರು ಮುಖ್ಯರಾದರೆ ವಿದ್ಯಾರ್ಥಿನಿಯರ ಪೈಕಿ ಕಾತ್ಯಾಯಿನಿ, ಪೊನ್ನಮ್ಮ, ಕುಂತಳಾ, ಮೋಹನಾ, ಜಯ, ಜಿ. ವೆಂಕಟಲಕ್ಷ್ಮಿ, ಅಂಬು, ರುಕ್ಮಿಣಿ, ಪದ್ಮ, ಆರ್. ಕೋಮಲ, ವಸಂತಿ, ಮಂಗಳ, ಹಂಸಾ ಮಾನೆ, ಶಕುಂತಳಾ ಮಾನೆ, ಮೈತ್ರೇಯಿ, ವೈದೇಹಿ, ರಮಾಮಣಿ ಇವರದು ಪ್ರಧಾನಪಾತ್ರ.

ವಿದ್ಯಾರ್ಥಿಗಳ ಶಿಸ್ತು ಸ್ತುತ್ಯಾರ್ಹವಾಗಿತ್ತು. ವಿದ್ಯಾರ್ಥಿಸಭೆಗಳಲ್ಲಿ 20 ಸಹಸ್ರಕ್ಕೂ

ಹೆಚ್ಚು ವಿದ್ಯಾರ್ಥಿಗಳು ಇರುತ್ತಿದ್ದರು. ಧ್ವನಿವರ್ಧಕವಿರುತ್ತಿರಲಿಲ್ಲ ; ಸ್ವಯಂಸೇವಕರಾಗಲೀ, ಪೋಲೀಸರಾಗಲೀ ಇರುತ್ತಿರಲಿಲ್ಲ. ಆದರೂ ಅವರು ಶಿಸ್ತಿನಿಂದ ಸಭೆಗಳನ್ನು ನಡೆಸುತ್ತಿದ್ದರು. ಪೋಲೀಸರು ಮೊದಲೆರಡು ದಿನಗಳು ದೂರದಲ್ಲೇ ಇದ್ದು ಸಭೆಗಳನ್ನು ವೀಕ್ಷಿಸುತ್ತಿದ್ದರು. ಇಷ್ಟು ದೊಡ್ಡ ಪ್ರಮಾಣದಲ್ಲಿ ವಿದ್ಯಾರ್ಥಿಗಳು ಸಂಘಟನೆಯಾಗುವರೆಂದು ಅವರು ನಿರೀಕ್ಷಿಸಿರಲಿಲ್ಲ. ದಿಗ್ಭ್ರಮೆಗೊಂಡ ಸರ್ಕಾರ ಮುಂದೆ 144ನೇ ಸೆಕ್ಷನ್ ಜಾರಿಮಾಡಿತು. ಕೂಡಲೇ ಚಳವಳಿಯ ನಾಯಕರು ಪೋಲೀಸರ ಕಣ್ಣುತಪ್ಪಿಸಿ ಓಡಾಡಲಾರಂಭಿಸಿದರು. ಸೆಂಟ್ರಲ್ ಕಾಲೇಜ್ ಹಾಸ್ಟೆಲನ್ನು ಸಮಾಚಾರ ಕೇಂದ್ರವನ್ನಾಗಿ ಬಳಸಲಾಯಿತು. ಬೆಂಗಳೂರು, ಮೈಸೂರುಗಳಲ್ಲಿ ಆಗಸ್ಟ್ 12ರಿಂದ 17ರವರೆಗೆ ಶಾಲಾಕಾಲೇಜುಗಳನ್ನು ಮುಚ್ಚಲು ಇಲಾಖೆಯವರು ಆಜ್ಞೆ ಮಾಡಿದರು. 13ನೇ ತಾರೀಖು ವಿದ್ಯಾರ್ಥಿಮೆರವಣಿಗೆ ನಡೆದು ಬೆಂಗಳೂರಿನಲ್ಲಿ ಅನೇಕ ವಿದ್ಯಾರ್ಥಿಗಳು ಬಂಧಿತರಾದರು.

ಅಲ್ಲಿಂದ ಮುಂದೆ ಸರ್ಕಾರ ವಿದ್ಯಾರ್ಥಿ ಚಳವಳಿಯನ್ನು ಅದುಮಿಡಲು ಸತತ ಯತ್ನ ನಡೆಸಿತು. ಬಸವನಗುಡಿ ನ್ಯಾಷನಲ್ ಹೈಸ್ಕೂಲ್ ಎದುರು ಕರ್ಫ್ಯೂ ಆಜ್ಞೆ ಮುರಿದು ವಿದ್ಯಾರ್ಥಿಗಳು ಸಭೆ ಸೇರಲು ಯತ್ನಿಸಿದರು. ಒಬ್ಬ ವಿದ್ಯಾರ್ಥಿ ಪೋಲೀಸರ ಗುಂಡೇಟಿಗೆ ತುತ್ತಾದ ; ಅನೇಕರು ಗಾಯಗೊಂಡರು. ಎ.ಎಸ್.ಪಿ. ಖಾದರ್ ಆಲಿ ಸತ್ತುಬಿದ್ದ ವಿದ್ಯಾರ್ಥಿಯನ್ನು ಬೂಟ್ ಕಾಲಿನಿಂದ ಒದ್ದು ಸೇಡುತೀರಿಸಿಕೊಂಡರು ! ಹೀಗೆ ತಮ್ಮ ಕರ್ತವ್ಯನಿಷ್ಠೆಗೆ ವಿಪರೀತಾರ್ಥವನ್ನು ಕಲ್ಪಿಸಿಕೊಂಡು ತಲೆಕೆಡಿಸಿಕೊಂಡ ಅಧಿಕಾರಿಗಳಿಗೂ ಈ ಚಳವಳಿಯ ಕಾಲದಲ್ಲಿ ಕೊರತೆ ಇರಲಿಲ್ಲ. 1-9-1942ರಂದು ಮಲ್ಲೇಶ್ವರಂ ಹೆಣ್ಣುಮಕ್ಕಳ ಪ್ರೌಢಶಾಲೆಯ ಬಳಿ ಲಾಠೀ ಚಾರ್ಜ್ ಆಯಿತು. 7-10-1942ರಲ್ಲಿ ಹೆಣ್ಣುಮಕ್ಕಳ ಮೆರವಣಿಗೆಯೊಂದನ್ನು ಪೋಲೀಸರು ತಡೆದರು ; ಒಂಬತ್ತು ವಿದ್ಯಾರ್ಥಿನಿಯರ ದಸ್ತಗಿರಿಯಾಯಿತು.

ಸರ್ಕಾರದ ಈ ದುರ್ವರ್ತನೆಗಳಿಗೆ ಹೇಸಿ ಮಹಾರಾಣಿ ಕಾಲೇಜಿನ ಇಂಗ್ಲಿಷ್ ಪ್ರಾಧ್ಯಾಪಕಿ ಶ್ರೀಮತಿ ಕೇಸರಿ ಕೇಶವನ್, ಹಿಂದೂಸ್ಥಾನ್ ವಿಮಾನ ಕಾರ್ಖಾನೆಯ ಚೀಫ್ ಎಕ್ಸಿಕ್ಯುಟಿವ್ ಆಫೀಸರ್ ಎಂ. ಎಚ್. ಷಾ, ಇಂಜಿನಿಯರ್ ಮೋದಿ, ಇವರುಗಳು ತಮ್ಮ ಹುದ್ದೆಗಳಿಗೆ ರಾಜೀನಾಮೆಯನ್ನು ಇತ್ತರು. ಎಂ. ಎಚ್. ಷಾ ಮುಖಂಡತ್ವದಲ್ಲಿ ಎಚ್.ಎ.ಎಲ್. ಕಾರ್ಮಿಕರ ಬೃಹತ್ ಮೆರವಣಿಗೆ ಬೆಂಗಳೂರಿನಲ್ಲಿ ನಡೆಯಿತು.

ದೇಶೀಯ ವಿದ್ಯಾಶಾಲೆಯಲ್ಲಿ ಅಧ್ಯಾಪಕರಾಗಿದ್ದ ಕೆ. ಶ್ರೀನಿವಾಸರಾಯರು, ಬಿ. ರಾಮಚಂದ್ರರವರನ್ನು ಕೂಡಿಕೊಂಡು ಮೂರು ಭಾಷೆಗಳಲ್ಲಿ ಸೈಕ್ಲೊಸ್ಟೈಲ್ಡ್ ಕರಪತ್ರಗಳನ್ನು ಹೊರತರುತ್ತಿದ್ದರು. ಮಲ್ಲೇಶ್ವರದಲ್ಲಿ ಒಂದು, ಬಸವನಗುಡಿಯಲ್ಲೊಂದು ಸೈಕ್ಲೊಸ್ಟೈಲ್ ಮಶೀನ್ ಕೆಲಸ ಮಾಡುತ್ತಿದ್ದುವು. 'ಕಾಂಗ್ರೆಸ್ ಕಡಲೆಕಾಯಿ

ಬೀಜ' ಮಾರುತ್ತಿದ್ದ ಗೋಖಲೆ ಈ ಕರಪತ್ರಗಳನ್ನು ಸಂಜೆಯ ವೇಳೆ ನ್ಯಾಷನಲ್ ಹೈಸ್ಕೂಲ್ ಬಳಿ ಹಂಚುತ್ತಿದ್ದರು. ಇವರೆಲ್ಲರದೂ ಕಾಲಕ್ರಮದಲ್ಲಿ ದಸ್ತಗಿರಿ ಆಯಿತು.

ಬೆಂಗಳೂರು ಪತ್ರಿಕೆಗಳು 'ಮಾತೃಭೂಮಿ' ಒಂದನ್ನುಳಿದು 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಉಜ್ವಲ ಪಾತ್ರವಹಿಸಿದವು. ನಿರ್ಭಯವಾಗಿ ಸುದ್ದಿಗಳನ್ನು ಪ್ರಕಟಿಸಿ, ಸರ್ಕಾರದ ಹೇಯಕೃತ್ಯಗಳನ್ನು ಬಹಿರಂಗಗೊಳಿಸಿ, ಖಂಡತುಂಡವಾಗಿ ಪೋಲೀಸರ ಅಮಾನುಷ ಕೃತ್ಯಗಳನ್ನು ಖಂಡಿಸಿ, ಹೋರಾಟಕ್ಕೆ ಜಯ ಕೋರಿ ಮಾರ್ಗದರ್ಶನ ಮಾಡುವ ಸಾಹಸಕಾರ್ಯದಲ್ಲಿ ಅವು ತೊಡಗಿದವು. ಸರ್ಕಾರದ ಕಣ್ಣು ಬೇಗನೇ ಈ ಪತ್ರಿಕೆಗಳ ಮೇಲೆ ಬಿದ್ದಿತು. 'ತಾಯಿನಾಡು' ಸಂಪಾದಕರಾದ ಪಿ. ಬಿ. ಶ್ರೀನಿವಾಸನ್, ಮಾಲೀಕರಾದ ಪಿ. ಆರ್. ರಾಮಯ್ಯ, 'ಜನವಾಣಿ' ಮಾಲೀಕರಾದ ಬಿ. ಎಸ್. ಗುಪ್ತ, 'ವಿಶ್ವಕರ್ನಾಟಕ' ದಿನಪತ್ರಿಕೆಯ ಸಂಪಾದಕರಾದ ಸಿದ್ದವನಹಳ್ಳಿ ಕೃಷ್ಣಶರ್ಮ, ಮಾಲೀಕರಾದ ಟಿ. ಟಿ. ಶರ್ಮ ಇವರುಗಳನ್ನು ಬಂಧಿಸಿದ್ದಲ್ಲದೆ, ಈ ಪತ್ರಿಕೆಗಳ ಪ್ರಕಟಣೆ ಯನ್ನೂ ಸರ್ಕಾರ ನಿಷೇಧಿಸಿತು.

ಆಗಸ್ಟ್ 3ನೆಯ ವಾರದ ಕೊನೆಯ ವೇಳೆಗೆ ಚಳವಳಿ ಬೃಹದ್ ರೂಪದಲ್ಲಿ ಮೈಸೂರು ಸಂಸ್ಥಾನದಾದ್ಯಂತವೂ ಆರಂಭವಾಯಿತು. ದಾವಣಗೆರೆ, ಮೈಸೂರು, ತುಮಕೂರು ಮತ್ತು ಹಾಸನಗಳಲ್ಲಿ ಹತೋಟಿಗೆ ಸಿಗದ ಜನರ ಗುಂಪಿನಮೇಲೆ ಪೋಲೀಸರು ಗುಂಡು ಹಾರಿಸಿದರು. ಬೆಂಗಳೂರಿನಲ್ಲಿ ಆದಂತೆ ದಾವಣಗೆರೆಯಲ್ಲೂ ಜನರಿಗೂ ಪೋಲೀಸರಿಗೂ ಒಂದು ರೀತಿಯ ಯುದ್ಧವೇ ನಡೆದುಹೋಯಿತು. ಐದು ಜನ ಈ ಹೋರಾಟದಲ್ಲಿ ಪೋಲೀಸರ ಗುಂಡಿಗೆ ಬಲಿಯಾದರು. ಹಾಸನದಲ್ಲಿ ಮದ್ಯದಂಗಡಿ ಪಿಕೆಟಿಂಗ್ ನಡೆದು, ಗುಂಡು ಹಾರಿಸಿದುದರ ಪರಿಣಾಮವಾಗಿ, ಒಬ್ಬನು ಸತ್ತನಲ್ಲದೆ ಅನೇಕರಿಗೆ ಗಾಯಗಳಾದವು.

ಬೆಂಗಳೂರು-ಹುಬ್ಬಳ್ಳಿ, ಬೆಂಗಳೂರು-ಮೈಸೂರು, ಬೆಂಗಳೂರು-ಗುಂತಕಲ್‌ಗಳ ಮಧ್ಯೆ ಫಿಷ್ ಪ್ಲೇಟ್‌ಗಳನ್ನೂ ರೈಲುಕಂಬಿಗಳನ್ನೂ ಕಿತ್ತು ಹಾಕಿದ ಪ್ರಸಂಗಗಳು ವರದಿಯಾದವು. ಗುಂತಕಲ್‌ಗೆ ಹೋಗುವ ರೈಲುಗಾಡಿಗಳ ಓಡಾಟವನ್ನು 15 ದಿನಗಳ ಕಾಲ ನಿಲ್ಲಿಸಲಾಯಿತು. ದಾವಣಗೆರೆ, ಬಾಣಾವರ, ಹೊಳಲ್ಕೆರೆ, ಹೊಸದುರ್ಗ ಮತ್ತು ತಿಪಟೂರು ರೈಲ್ವೆ ನಿಲ್ದಾಣಗಳಿಗೆ ಅಗ್ನಿಸ್ಪರ್ಶ ಮಾಡಲಾಯಿತು. ಕ್ಯಾತ್ಸಂದ್ರದಲ್ಲಿ ರೈಲ್ವೆ ಹಳಿಗಳನ್ನು ತೆಗೆದುಹಾಕಿದ್ದಕ್ಕಾಗಿ ಕುಂಡಲಗಿರಿ ಶ್ರೀನಿವಾಸಾಚಾರ್ ಮತ್ತು ಇತರ ಕಾಂಗ್ರೆಸ್ ಕಾರ್ಯಕರ್ತರನ್ನು ದಸ್ತಗಿರಿ ಮಾಡಲಾಯಿತು.

ಬೆಂಗಳೂರಿನಲ್ಲಿ ಮಿಲಿಟರಿಗೆ ಸರಬರಾಜಾಗುತ್ತಿದ್ದ ಹಾಲು ಮತ್ತು ತರಕಾರಿಗಳನ್ನು ಒಂದು ವಾರ ಕಾಲ ತಡೆಹಿಡಿಯಲಾಯಿತು. ಶಿವಮೊಗ್ಗ ಜಿಲ್ಲೆಯ 12 ಮಂದಿ ಪಟೇಲರುಗಳು ತಮ್ಮ ಕೆಲಸಗಳಿಗೆ ರಾಜೀನಾಮೆ ನೀಡಿದರು. 'ನ್ಯಾಷನಲ್ ವಾರ್ ಫ್ರಂಟ್', ಎ.ಆರ್.ಪಿ.ಗಳಿಗೆ ದಾಖಲಾಗಿದ್ದ ಅನೇಕರು ರಾಜೀನಾಮೆ ನೀಡಿದರು,

ಎಚ್.ಆರ್. ಗುರುವಾರೆಡ್ಡಿ, ಎ.ಜಿ. ರಾಮಚಂದ್ರರಾವ್, ಕ್ಲೋಸ್ಪೇಟ್ ಸುಬ್ಬರಾಯರು ತಮ್ಮ ವಕೀಲಿಸನ್ನದನ್ನು ವಾಪಸುಮಾಡಿ, ಸರ್ಕಾರದ ದಬ್ಬಾಳಿಕೆಯನ್ನು ಪ್ರತಿಭಟಿಸಿದರು.

ನಾಯಕರ ದಸ್ತಗಿರಿಯನ್ನು ಪ್ರತಿಭಟಿಸಿ ಬೆಂಗಳೂರು ಹಾಗೂ ರಾಜ್ಯಾದ್ಯಂತ ಕಾರ್ಮಿಕರ ಮುಷ್ಕರ ನಡೆಯಬೇಕೆಂದೂ, ಅದರ ಮುಂದಾಳುತನವನ್ನು ಜಿ. ಆರ್. ಚಂಗಲಾರಾಧ್ಯ ಮತ್ತು ಅವರ ಪತ್ನಿ ಭಾಗೀರತಮ್ಮನವರು ವಹಿಸಿಕೊಳ್ಳಬೇಕೆಂದೂ, ಆಗಸ್ಟ್ 13ರಂದು ಕಾಂಗ್ರೆಸ್ ಕಚೇರಿಯಲ್ಲಿ ಸಮಾವೇಶಗೊಂಡ ಕಾರ್ಮಿಕ ಮುಖಂಡರು ನಿರ್ಧರಿಸಿದ್ದರು. ಈ ಸಭೆಗೆ ಕಾರಣರಾದ ಜೆ. ಲಿಂಗಯ್ಯನವರನ್ನು 13ನೇ ತಾರೀಖು ಬೆಳಗಿನ 6 ಘಂಟೆಗೇ ದಸ್ತಗಿರಿಮಾಡಿ ಸೆಂಟ್ರಲ್ ಜೇಲಿಗೊಯ್ದರು.

ಕಾರ್ಮಿಕ ಮುಖಂಡರೂ, ಕಾರ್ಮಿಕ ಪ್ರತಿನಿಧಿಯಾಗಿ ಪ್ರಜಾಪ್ರತಿನಿಧಿಸಭೆಯ ಸದಸ್ಯರಾಗಿದ್ದವರೂ ಆದ ಚಂಗಲಾರಾಧ್ಯರೂ ಅವರ ಪತ್ನಿ ಭಾಗೀರತಮ್ಮನವರೂ 13–8–1942ರಂದು ಬಿನ್ನಿ ಮಿಲ್ ಆವರಣದಲ್ಲಿ ಸಭೆಯನ್ನು ಕರೆದು ಕಾನೂನುಭಂಗ ಚಳವಳಿ ನಡೆಸಲು ಸಿದ್ಧರಾದರು. ಅಂದಿನ ಸಭೆಯಲ್ಲಿ ಚಂಗಲಾರಾಧ್ಯರ ಅಧ್ಯಕ್ಷತೆಯಲ್ಲಿ ಭಾಗೀರತಮ್ಮನವರು ಮಾತನಾಡುವುದಿತ್ತು. ಪೋಲಿಸರು ಸಭೆಯ ಆವರಣವನ್ನು ಸುತ್ತು ಗಟ್ಟಿದರು. ಸಭೆ ನಡೆಯಲು ಅವಕಾಶ ನೀಡಬಾರದೆಂಬುದು ಪೋಲೀಸರ ಉದ್ದೇಶ. 'ಭಾರತಮಾತಾಕೀ ಜೈ' ಎಂಬ ಜಯಕಾರದೊಡನೆ ಚಂಗಲಾರಾಧ್ಯರೂ ಭಾಗೀರತಮ್ಮನವರೂ ಸಭೆಗೆ ನುಗ್ಗಿದರು. ಅವರನ್ನು 10,000 ಮಂದಿ ಕಾರ್ಮಿಕರು ಹಿಂಬಾಲಿಸಿದರು. ಭಾಗೀರತಮ್ಮನವರು ಕಾರ್ಮಿಕರಿಗೆ ಉತ್ಸಾಹ, ಉತ್ತೇಜನ ನೀಡುವ ಭಾಷಣಮಾಡಿದರು. ಮಾರನೇ ದಿನ ಸಭೆ ಚಿಕ್ಕಲಾಲ್‌ಬಾಗ್‌ನಲ್ಲಿ ನಡೆಯುತ್ತದೆಂದು ಘೋಷಿಸಲಾಯಿತು. ಅದರಂತೆ ಮಾರನೇ ದಿನ ಎಲ್ಲಾ ಕೂಲಿಗಾರರೂ ಸೇರಿ ಚಂಗಲಾರಾಧ್ಯರ ಮುಖಂಡತ್ವದಲ್ಲಿ ಬ್ರಿಟಿಷ್ 'ಅಣಕು ಶವ'ವನ್ನು ಚಟ್ಟದಲ್ಲಿ ಮಲಗಿಸಿ ಅದನ್ನು ಹೊತ್ತುಕೊಂಡು ಬೃಹತ್ ಮೆರವಣಿಗೆಯಲ್ಲಿ ಅರಳೇಪೇಟೆಯಿಂದ ಮೆಜೆಸ್ಟಿಕ್‌ವರೆಗೆ ಹೋದರು. ಅಲ್ಲಿ ಪೋಲೀಸರು ಮೆರವಣಿಗೆಯನ್ನು ತಡೆದರು; ಒಂದು ಹೆಜ್ಜೆ ಮುಂದಿಟ್ಟರೂ ಗೋಳೀಬಾರ್ ಮಾಡುವುದಾಗಿ ಎಚ್ಚರಿಕೆ ಇತ್ತರು. ಬೆಳಗ್ಗೆ 11 ಘಂಟೆಯಿಂದ ಸಂಜೆ 5 ಘಂಟೆಯವರೆಗೆ ಬಿದರಪಡೆ ಮೆರವಣಿಗೆಯ ಜನ ಹಾಗೇ ನಿಂತಿದ್ದರು. ವೀರಗೀತೆಗಳನ್ನೂ ರಾಷ್ಟ್ರಭಕ್ತಿಗೀತೆಗಳನ್ನೂ ಹಾಡುತ್ತ ನೆರೆದಿದ್ದ ಜನಸ್ತೋಮಕ್ಕೆ ಉತ್ಸಾಹವನ್ನು ತುಂಬಲಾಗುತ್ತಿತ್ತು. ಒಂದೇ ಸಮನೆ 6 ಘಂಟೆಗಳ ಕಾಲ ಧರಣಿಸತ್ಯಾಗ್ರಹ ಮಾಡುತ್ತಾ ನಿಂತಿದ್ದ ಕಾರ್ಮಿಕರ ದೃಢಸಂಕಲ್ಪವನ್ನು ಮೆಚ್ಚಿದ ಮಹಾಜನರು ಅವರೆಲ್ಲರಿಗೂ ಪಾನೀಯಗಳನ್ನು ತಂದು ಹಂಚಿದರು. ಸಂಜೆ ಐದು ಘಂಟೆಗೆ ಅಲ್ಲೇ ಸಭೆ ನಡೆಸಿ, ಬ್ರಿಟಿಷರ ಬೊಂಬೆಯನ್ನು ಬೆಂಕಿಗೆ ಆಹುತಿ ಕೊಟ್ಟು, ಶಾಂತ ರೀತಿಯಿಂದ ಸಭೆ ಮುಕ್ತಾಯಗೊಂಡಿತು.

ಮಾರನೆ ದಿನ ಚಂಗಲಾರಾಧ್ಯರನ್ನೂ ಭಾಗೀರತಮ್ಮನವರನ್ನೂ ಬಂಧಿಸಲಾಯಿತು. ಅವರಿಗೆ ತಲಾ ಒಂದು ವರ್ಷ ಏಳು ತಿಂಗಳ ಕಠಿಣಸಜ ವಿಧಿಸಲಾಯಿತು. ಇದರೊಡನೆ

ಮೈಸೂರುಸಂಸ್ಥಾನದ ಇತರ ಮಿಲ್ಲುಗಳು ಒಂದೊಂದಾಗಿ ಮುಚ್ಚಲ್ಪಟ್ಟವು. ಬೆಂಗಳೂರಿನ ಕೈಸರ್-ಇ-ಹಿಂದ್ ಮಿಲ್ಸ್ (800 ಮಂದಿ), ಕೃಷ್ಣ ವೀವಿಂಗ್ ಮಿಲ್ಸ್ (1,000), ಮೈಸೂರಿನ ಕೃಷ್ಣರಾಜೇಂದ್ರ ಮಿಲ್ಸ್ (2,300), ದಾವಣಗೆರೆ ಮಿಲ್ಸ್ (1,000), ಬೆಂಗಳೂರಿನ ಸರ್ಕಾರಿ ಎಲೆಕ್ಟ್ರಿಕ್ ಫ್ಯಾಕ್ಟರಿ (500), ಸರ್ಕಾರಿ ಸಾಬೂನು ಕಾರ್ಖಾನೆ, (200), ಗ್ಲಾಸ್ ಫ್ಯಾಕ್ಟರಿ (500), ಭದ್ರಾವತಿ ಕಬ್ಬಿಣ ಕಾರ್ಖಾನೆ (4,500), ಮೈಸೂರು ಪೇಪರ್ ಮಿಲ್ಸ್, ಭದ್ರಾವತಿ (1,200), ಎಚ್.ಎ.ಎಲ್. ಬೆಂಗಳೂರು (6,000), ಕೋಲಾರದ ಚಿನ್ನದ ಗಣಿ (4,000) ಹೀಗೆ ಸಂಸ್ಥಾನದ ಒಟ್ಟು 80,000 ಜನ ಕಾರ್ಮಿಕರ ಪೈಕಿ 32,000 ಕಾರ್ಮಿಕರು ಮುಷ್ಕರ ನಡೆಸಿದರು. ಚಳವಳಿಗೆ ಒಹಳ ಜನಬಲ ಬಂದಂತಾಯಿತು. ಯುದ್ಧರಂಗಕ್ಕೆ ಅವಶ್ಯಕವಾದ ಪದಾರ್ಥಗಳಾದ ಏರೋಪ್ಲೇನ್, ರಾಸಾಯನಿಕ ವಸ್ತುಗಳು, ಎಲೆಕ್ಟ್ರಿಕ್ ಸಾಮಾನುಗಳು ಇವುಗಳನ್ನು ತಯಾರಿಸುವ ಕಾರ್ಖಾನೆಗಳು ಮುಷ್ಕರದಲ್ಲಿ ತೊಡಗಿದ್ದವು.

ಮೈಸೂರು ಕಾಂಗ್ರೆಸ್ಸಿನ ನಾಯಕರೆಲ್ಲರ ಬಂಧನವಾಗಿತ್ತಾಗಿ ಮೈಸೂರು ಸಂಸ್ಥಾನದಲ್ಲಿ 'ಕ್ವಿಟ್ ಇಂಡಿಯಾ' ಚಳವಳಿಯನ್ನು ನಿರ್ದೇಶಿಸಲು ಬೇರೆ ಯಾರಾದರೂ ನಾಯಕರ ಆವಶ್ಯಕತೆ ಇತ್ತು. ಇನ್ನೂ ಬಂಧಿತರಾಗದೆ, ಪೋಲಿಸರ ಕಣ್ಣು ತಪ್ಪಿಸಿ ಓಡಾಡುತ್ತಿದ್ದ ಸರ್ದಾರ್ ಕೆ. ಎ. ವೆಂಕಟರಾಮಯ್ಯ, ಹಾಸನದ ಎ. ಜಿ. ರಾಮಚಂದ್ರರಾವ್ (ಅವರಿಗೆ ಸಹಾಯಕರಾಗಿ ಎಚ್. ಎಸ್. ಸೀತಾರಾಮ್, ಎಚ್. ಎಸ್. ದೊರೆಸ್ವಾಮಿ), ಚಳವಳಿಯ ಮುಂದಾಳುತ್ವವನ್ನು ವಹಿಸಿದರು. ಈ ವೇಳೆಗಾಗಲೇ ಬಂಧಿತರಾಗಿದ್ದು ಕಮ್ಯುನಿಸ್ಟ್ ಎಂಬ ಕಾರಣದ ಮೇಲೆ ಬಿಡುಗಡೆಹೊಂದಿದ್ದ ಕಾರ್ಮಿಕ ಮುಖಂಡ ಎಸ್. ಡಿ. ಶಂಕರ್‌ರವರು 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಭಾಗವಹಿಸುವುದಿಲ್ಲವೆಂದು ನಿರ್ಧರಿಸಿದ್ದರು. ಅವರು ತಮ್ಮ ನಿರ್ಧಾರವನ್ನು ಪುನರ್ವಿಮರ್ಶಿಸುವಂತೆ ಎಚ್. ಎಸ್. ದೊರೆಸ್ವಾಮಿಯವರು ಅವರ ಮೇಲೆ ಒತ್ತಾಯ ತಂದುದರ ಪರಿಣಾಮವಾಗಿ ಅವರು ಕಮ್ಯುನಿಸ್ಟ್ ಪಾರ್ಟಿಗೆ ರಾಜೀನಾಮೆ ಇತ್ತು ಚಳವಳಿಗೆ ಧುಮುಕುವುದಾಗಿ ಘೋಷಿಸಿ ಪೋಲೀಸರ ಕಣ್ಣಿಗೆ ಬೀಳದೆ ತಪ್ಪಿಸಿಕೊಂಡು ಇರತೊಡಗಿದರು. ದೊರೆಸ್ವಾಮಿಯವರು ಭೂಗತರಾಗಿದ್ದ ನಾಯಕರ ಜೊತೆ ಶಂಕರ್‌ರವರ ಭೇಟಿ ಏರ್ಪಡಿಸಿ ಮಿಲ್ ಕಾರ್ಮಿಕ ಮುಖಂಡರನ್ನು ಆ ಸಭೆಗೆ ಬರಮಾಡಿದರು. ಇನ್ನು 2–3 ದಿನಗಳಲ್ಲಿ ಬೆಂಗಳೂರಿನ ಮೂರು ಬಟ್ಟೆ ಗಿರಣಿಗಳು ಮುಷ್ಕರ ಹೂಡತಕ್ಕದ್ದೆಂದು ಈ ಸಭೆಯಲ್ಲಿ ತೀರ್ಮಾನಿಸಲಾಯಿತು. ಪೂರ್ವಭಾವೀ ಸಿದ್ಧತೆಗಳನ್ನೆಲ್ಲಾ ಮಾಡಿಕೊಂಡು. ಕಾರ್ಮಿಕರ ನಾಯಕರು, ಕೆಲಸಗಾರರು ಕೆಲಸಕ್ಕೆ ಹೋಗಕೂಡದೆಂದೂ, ಹಾಗೆ ಹೋಗುವವರನ್ನು ತಡೆಯಬೇಕೆಂದೂ ಕಟ್ಟಾಜ್ಞೆ ಇತ್ತರು. ಅನೇಕ ಗುಂಪುಗಳಲ್ಲಿ ಕಾರ್ಮಿಕರು ಬೇರೆ ಬೇರೆ ಕಡೆ ಇದ್ದು, ಕಾರ್ಮಿಕರ ಐಕಮತ್ಯಕ್ಕೆ ಎಳ್ಳಷ್ಟು ಧಕ್ಕೆ ಬರದಂತೆ ನೋಡಿಕೊಂಡರು. ಸೆಪ್ಟೆಂಬರ್ 19ರಂದು ಆರಂಭವಾದ ಈ ಮುಷ್ಕರ 18 ದಿನಗಳ ಕಾಲ ನಡೆಯಿತು. (ಈ ಮೂರು ಮಿಲ್ಲುಗಳ ಕಾರ್ಮಿಕರ

ಸಂಖ್ಯೆ : ಬಿನ್ನಿ ಮಿಲ್ 7,000, ಮಹಾರಾಜಾ ಮಿಲ್ಸ್ 2,000, ಮಿನರ್ವಾ ಮಿಲ್ಸ್ 1,500) ಕೆಲಸಗಾರರ ಮನೆಯವರ ಊಟಕ್ಕಾಗಿ 2-3 ದಿನಗಳಿಗೊಮ್ಮೆ ಸ್ವಲ್ಪ ಹಣವನ್ನು ಕೊಡಲಾಗುತ್ತಿತ್ತು. ಈ ಕೆಲಸವನ್ನು ವಿದ್ಯಾರ್ಥಿಚಳವಳಿಯ ಮಹಿಳಾ ಕಾರ್ಯಕರ್ತರಾದ ಕುಂತಳಾ ಮತ್ತು ಸಂಗಡಿಗರು ಸದ್ದುಗದ್ದಲವಿಲ್ಲದೆ ವ್ಯವಸ್ಥಿತ ರೀತಿಯಲ್ಲಿ ನಿರ್ವಹಿಸುತ್ತಿದ್ದರು. ಎಚ್. ಎಸ್. ಸೀತಾರಾಂ, ಎಚ್. ಎಸ್. ದೊರೆಸ್ವಾಮಿ, ಕುಂತಳಾ, ಎಂ. ಎಚ್. ಷಾ, ವೈ.ವಿ. ರಾಮಚಂದ್ರನ್, ಬುದ್ಧದಾಸ್, ನಂಜಪ್ಪ ಕೊಟ್ರಿ, ಹನುಮಂತಪ್ಪ, ಪ್ರೇಮ್‌ಚಂದ್, ಕೆ. ಎಲ್. ದೊರೆಸ್ವಾಮಿ, ಟಿ. ಕೃಷ್ಣಯ್ಯಂಗಾರ್, ವಿ. ವೆಂಕಟರಾವ್ ಇವರೆಲ್ಲ 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಸರ್ದಾರ್ ವೆಂಕಟರಾಮಯ್ಯ, ಎ. ಜಿ. ರಾಮಚಂದ್ರರಾವ್ ಇವರಿಗೆ ನೆರವಾದರು. ಬೆಂಗಳೂರಿನ ಕಾರ್ಮಿಕ ಮುಷ್ಕರದ ಯಶಸ್ಸಿಗೆ ಕಾರ್ಮಿಕ ಮುಖಂಡರಾದ ಎನ್. ಡಿ. ಶಂಕರ್, ಕಣ್ಣನ್, ಸಿ. ಮುನಿಸ್ವಾಮಿ, ರಾಮದಾಸ್, ಪ್ರಭುದೇವ್, ಚಂಗಲಾರಾಧ್ಯ, ಭಾಗೀರತಮ್ಮ, ಮಹೇಶ್ವರಿ ಮುಂತಾದವರು ಮುಖ್ಯ ಕಾರಣರು.

ಬೆಂಗಳೂರಿನ ಈ ಮೂರು ಬಟ್ಟೆಗಿರಣಿಗಳ ಮುಷ್ಕರ ಆರಂಭವಾದ್ದರಿಂದ 1942ರ ಚಳವಳಿಗೆ ಒಂದು ಹೊಸ ತಿರುವು ಬಂದಿತು. ಮಿಲ್ ಮುಷ್ಕರ ಆರಂಭವಾಗುವ ಪೂರ್ವದಲ್ಲಿ ವಿದ್ಯಾರ್ಥಿಚಳವಳಿಯೊಂದೇ ಬೆಂಗಳೂರು, ಮೈಸೂರುಗಳಲ್ಲಿ ಚಳವಳಿಯ ಕಾವನ್ನು ಉಳಿಸಿಕೊಂಡು ಬರುವ ಸಾಧನವಾಗಿತ್ತು. ಯಾವಾಗ ಮಿಲ್ಲುಗಳ ಮುಷ್ಕರ ಆರಂಭವಾಯಿತೋ ಆಗ ವಿದ್ಯಾರ್ಥಿಗಳ ಬೆಂಬಲಕ್ಕೆ ಕಾರ್ಮಿಕರೂ ಸೇರಿ ಕೋಲಾಹಲ ಉಂಟಾಯಿತು. ಇದರ ಫಲವಾಗಿ ಚಳವಳಿ ಬಹುಮುಖ ರೂಪತಾಳಿತು. ಪ್ರತಿಯೊಂದು ಊರಿನಲ್ಲೂ ಮುಂದುವರಿಯಲು ಬೆಂಗಳೂರಿನ ಕಾರ್ಮಿಕ ಮುಷ್ಕರ ಇಂಬುಗೊಟ್ಟಿತು.

ಭದ್ರಾವತಿಯಲ್ಲಿ 1942ನೇ ಮೇ ದಿನಾಚರಣೆ ಸಂದರ್ಭದಲ್ಲಿ ಪ್ರತಿಬಂಧಕಾಜ್ಞೆ ಮುರಿದು ಕಾರ್ಮಿಕರು ಸಭೆ, ಮೆರವಣಿಗೆಗಳನ್ನು ಮಾಡಿದ ಕಾರಣ ನಾಯಕರನ್ನು ಬಂಧಿಸಲಾಗಿತ್ತು. ಕಾರ್ಮಿಕರು ತಮ್ಮ ನಾಯಕರಿಗೆ ಹಾರತುರಾಯಿ ಕೊಡಲು ಅವಕಾಶ ಕೊಡಬೇಕೆಂದು ಪೊಲೀಸ್ ಸ್ಟೇಷನ್ ಮುಂದೆ ಬೃಹತ್ ಪ್ರದರ್ಶನ ನಡೆಸಿದರು. ಈ ಪ್ರಸಂಗ ವಿಕೋಪಕ್ಕೆ ತಿರುಗಿ 3-5-1942ರಲ್ಲಿ ಪೋಲೀಸರು ಕಾರ್ಮಿಕರ ಮೇಲೆ ಗುಂಡು ಹಾರಿಸಿದರು. ಇದರಿಂದ ಮೂರು ಜನ ಸತ್ತು, ಅನೇಕರಿಗೆ ಗಾಯಗಳಾದವು. ಕಾರ್ಮಿಕ ಸಂಘದ ಕಾರ್ಯಸಮಿತಿ ಸದಸ್ಯರನ್ನೆಲ್ಲ ಬಂಧಿಸಿ, ಅವರ ಮೇಲೆ ರಾಜದ್ರೋಹ, ಲೂಟಿಗಳ ಆಪಾದನೆ ಹೊರಿಸಿ ಮೊಕದ್ದಮೆ ಹೂಡಿದರು.

ಈ ಅಸಮಾಧಾನಗಳ ಹಿನ್ನೆಲೆಯಲ್ಲಿ 'ಕ್ವಿಟ್ ಇಂಡಿಯಾ' ಚಳವಳಿ ಭದ್ರಾವತಿಯಲ್ಲಿ ಪ್ರಾರಂಭವಾಯಿತು. ಕಾರ್ಮಿಕರು ಕಾರ್ಖಾನೆಗಳನ್ನು ಬಹಿಷ್ಕರಿಸಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲ್ಗೊಂಡರು. ಜಾರಿಯಲ್ಲಿದ್ದ ಪ್ರತಿಬಂಧಕಾಜ್ಞೆಗಳನ್ನು ಮುರಿದು ಸಭೆ, ಮೆರವಣಿಗೆಗಳನ್ನು ನಡೆಸಿದರು. ಕಬ್ಬಿಣ ಕಾರ್ಖಾನೆ ಕಾರ್ಮಿಕ ಸಂಘದ ಅಧ್ಯಕ್ಷ

ಎಸ್. ಎಲ್. ಕೃಷ್ಣನ್, ಕಾರ್ಯದರ್ಶಿ ಪುಟ್ಟಯ್ಯ, ಕಾಗದದ ಕಾರ್ಖಾನೆ ಅಧ್ಯಕ್ಷ ಹಾಲಪ್ಪ, ಕಾರ್ಯದರ್ಶಿ ಶೇಷಗಿರಿ ಶಾಸ್ತ್ರಿ ಮುಂತಾದ ಕಾರ್ಯಸಮಿತಿ ಸದಸ್ಯರನ್ನೆಲ್ಲ ಮೊದಲ ಸುತ್ತಿಗೇ ದಸ್ತಗಿರಿ ಮಾಡಿದರು. ಎಚ್. ಕೆ. ಸುಬ್ಬರಾಯರು, ನರಹರಿಯವರು ಮಾತ್ರ ಪೋಲೀಸರ ಕಣ್ಣು ತಪ್ಪಿಸಿ, ಮುಷ್ಕರ ಹೂಡಿದ್ದ ಕಾರ್ಮಿಕರಿಗೆ ಆರ್ಥಿಕ ಸಹಾಯ ಒದಗಿಸುವ ಕಾರ್ಯದಲ್ಲಿ ತೊಡಗಿದರು. ಭದ್ರಾವತಿಯ 'ತಂಜಾವೂರು ಹೋಟೇಲ್' ಮಾಲಿಕ ದಿ|| ರಾಘವೇಂದ್ರರಾಯರು ತಮ್ಮ ಪತ್ನಿಯ ಚಿನ್ನದ ಕೈಬಳೆಯನ್ನೇ ಈ ನಿಧಿಗೆ ಕಾಣಿಕೆಯಾಗಿ ಕೊಟ್ಟರಲ್ಲದೆ, ತಮ್ಮ ಹೋಟೇಲಿನಲ್ಲಿ ಕಾರ್ಮಿಕರಿಗೆ ಉಚಿತವಾಗಿ ಊಟ ಹಾಕುತ್ತಿದ್ದರು. ಮುಂದೆ ರಾಘವೇಂದ್ರರಾಯರ ಹಾಗೂ ಅವರ ಪತ್ನಿ ಲಕ್ಷ್ಮೀದೇವಿ ಇವರ ಬಂಧನವೂ ಆಯಿತು. ಮುಷ್ಕರ ಹೂಡಿದ್ದ ಕಾರ್ಮಿಕರಿಗೆ ಯಾವುದೇ ರೀತಿಯ ಸಹಾಯವನ್ನು ಯಾರೇ ನೀಡಿದರೂ ಅದು ದಂಡನಾರ್ಹವಾಗಿತ್ತು. ಹೀಗಾಗಿ ವರ್ತಕರು ಸಹಾಯ ಮಾಡಲೂ ಹೆದರುತ್ತಿದ್ದರು. ಅಂಥದರಲ್ಲಿ ವರ್ತಕ ಭೀಮಶೆಟ್ಟರು ಕಾರ್ಮಿಕರಿಗೆ ಕಾಳು ಕಡಿಯ ಸಹಾಯ ಮಾಡುತ್ತಿದ್ದರು; ಅವರ ದಸ್ತಗಿರಿ ಆಯಿತು. ಮುಂದೆ ವರ್ತಕ ಪಾಂಡುರಂಗ ಶೆಟ್ಟರು ಈ ಕೆಲಸ ವಹಿಸಿಕೊಂಡರು; ಅವರ ಬಂಧನವೂ ಆಯಿತು.

ಸ್ವಾತಂತ್ರ್ಯ ಚಳವಳಿಯ ಮುಂದಿನ ಹಂತವನ್ನು ನಿರ್ಧರಿಸಲು ನಿದಿಗೆಯಲ್ಲಿ ಕಾರ್ಮಿಕರ ಸಭೆ ನಡೆಯಿತು. ರತ್ನಮ್ಮ ಮಾಧವರಾವ್ ಸಭೆಯನ್ನುದ್ದೇಶಿಸಿ ಮಾತನಾಡಿದರು. ನಿದಿಗೆ ಸಭೆ ಮುಗಿಸಿ ಮೆರವಣಿಗೆಯಲ್ಲಿ ಶಿವಮೊಗ್ಗಕ್ಕೆ ಹೋಗಿ ಪ್ರದರ್ಶನ ನಡೆಸಿದರು. ರಾಮಣ್ಣ ಪಾರ್ಕಿನಲ್ಲಿ ಸಭೆ ನಡೆಯಿತು. ಭೂಪಾಲಂ ಚಂದ್ರಶೇಖರಯ್ಯನವರು ಕಾರ್ಮಿಕರ ಜಾಥಾಕ್ಕೆ ಊಟ ಒದಗಿಸಿದರು. ಮಧ್ಯರಾತ್ರಿಯಲ್ಲಿ ಪೋಲೀಸರು ನರಹರಿರಾಯರೇ ಮೊದಲಾದ ಕೆಲವರನ್ನು ಬಂಧಿಸಿದರು. ಮುಂದೆ ಒಂದೆರಡು ದಿನಗಳಲ್ಲಿ ಎಚ್. ಕೆ. ಸುಬ್ಬರಾಯರ ಬಂಧನವೂ ಆಯಿತು.

ಶಿವಮೊಗ್ಗ ಟೌನಿನಲ್ಲಿ 'ಕ್ವಿಟ್ ಇಂಡಿಯಾ' ಚಳವಳಿ, ಹೆಂಡದಂಗಡಿ ಪಿಕೆಟಿಂಗ್, ಹೆಂಡದ ಪೀಪಾಯಿಗಳನ್ನು ಒಡೆಯುವುದು, ಶಾಲಾ ಪಿಕೆಟಿಂಗ್‌ಗಳಿಂದ ಆರಂಭವಾಯಿತು. ಪ್ರತಿದಿನ ಪ್ರಭಾತಫೇರಿ ನಡೆಯುತ್ತಿತ್ತು. ಪ್ರತಿದಿನ ರಾಮಣ್ಣಶೆಟ್ಟಿ ಪಾರ್ಕ್ ಎಂಬ ಪ್ರಮುಖ ಚೌಕದಲ್ಲಿ ವಿದ್ಯಾರ್ಥಿಗಳು ಸ್ವಯಂಸೇವಕರು ಮಹಾಜನರು ಸಹಸ್ರಾರು ಸಂಖ್ಯೆಯಲ್ಲಿ ಸೇರುತ್ತಿದ್ದರು. ಒಂದು ದಿನ ಇದ್ದಕ್ಕಿದ್ದಂತೆ ನಾಲ್ಕು ಟ್ರಕ್ ಸೈನಿಕರು, ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್, ಜಿಲ್ಲಾ ಮ್ಯಾಜಿಸ್ಟ್ರೇಟ್ ಸಹಿತ ಪಾರ್ಕಿಗೆ ನುಗ್ಗಿದರು. ಈ ವಿಷಯ ತಿಳಿದ ವಕೀಲ ಸಂಘದ ಸುಬ್ಬಾಶಾಸ್ತ್ರಿಗಳೇ ಮೊದಲಾದ 30 ಜನ ಗಣ್ಯವಕೀಲರು ಕೋರ್ಟ್-ಕಛೇರಿ ಬಿಟ್ಟು ಧಾವಿಸಿ ಬಂದು, ಉಭಯತ್ರರಿಗೂ ಸಮಾಧಾನ ಹೇಳಿ, ಆಗಬಹುದಾಗಿದ್ದ ದುರಂತವನ್ನು ತಪ್ಪಿಸಿದರು. ಚಳವಳಿ ಮಾತ್ರ ಮುಂದುವರಿಯಿತು.

ಬೆಂಗಳೂರು ಜಿಲ್ಲೆಯ ಕನಕಪುರದಲ್ಲಿ 'ಕ್ವಿಟ್ ಇಂಡಿಯಾ' ಚಳವಳಿ ಬಹಳ

ಬಿರುಸಿನಿಂದ ನಡೆಯಿತು. 'ದಯಾನಂದ ಮೈದಾನ' ರಾಷ್ಟ್ರೀಯ ಹೋರಾಟದ ಕೇಂದ್ರವಾಯಿತು. ವಿದ್ಯಾರ್ಥಿಗಳು ಶಾಲೆಗಳನ್ನು ಬಿಟ್ಟುಬಂದು ಕಾನೂನುಭಂಗ ಚಳವಳಿಗೆ ಧುಮುಕಿದರು. ಕರಿಯಪ್ಪನವರೇ ಮೊದಲಾದ ಮುಖಂಡರ ಬಂಧನವಾಯಿತು. ವಿದ್ಯಾರ್ಥಿ ಮುಖಂಡರು ಕೆ. ವಿ. ದಾಸಪ್ಪ, ತಿಮ್ಮಪ್ಪ, ರಾಘವಯ್ಯ, ಕೋದಂಡರಾಮ ಹಾಗೂ ವೆಂಕಟಶಾಮಯ್ಯ ಎಂಬ ಹಿರಿಯರನ್ನೂ, ವಿದ್ಯಾರ್ಥಿಗಳಿಗೆ ಮುಷ್ಕರ ಹೂಡಲು ಪ್ರೇರೇಪಿಸಿದರೆಂಬ ಕಾರಣದಮೇಲೆ ದಸ್ತಗಿರಿಮಾಡಲಾಯಿತು. ವಿದ್ಯಾರ್ಥಿಗಳು ಇದನ್ನು ಪ್ರತಿಭಟಿಸಲು ಶಾಲೆಗಳನ್ನು ಬಿಟ್ಟುಬಂದು, ಆಸ್ಪತ್ರೆ ಕಟ್ಟಡದ ಮೇಲೆ ರಾಷ್ಟ್ರಧ್ವಜ ಹಾರಿಸಿದರು. ಪೇಟೆಬೀದಿಯ ಟಪ್ಪಾಲುಪೆಟ್ಟಿಗೆಯನ್ನು ಒಡೆದರು. ಬೆಂಗಳೂರಿನಿಂದ ಬಂದ ಮೀಸಲು ಪೋಲೀಸ್ ಪಡೆಯವರು ಹುಡುಗರನ್ನು ಥಳಿಸಿದರು. ಈ ಗುಂಪಿನಲ್ಲಿದ್ದ ಕೆ. ವಿ. ಶ್ರೀನಿವಾಸಯ್ಯ, ಡಿ. ಎಂ. ಪುಟ್ಟಸ್ವಾಮಿ, ಕೆ. ಎಂ. ರಾಮಸ್ವಾಮಿ, ವಿ. ಬೋಳೇಗೌಡ, ಪಿಲ್ಲಕೃಷ್ಣಪ್ಪ, ರಾಮಯ್ಯ ಇವರುಗಳನ್ನು ಸಾರ್ವಜನಿಕ ರಕ್ಷಣಾಕಾನೂನಿನನ್ವಯ ದಸ್ತಗಿರಿ ಮಾಡಲಾಯಿತು; ಧ್ವಜಾರೋಹಣ ಮಾಡಿದ ಆಪಾದನೆಮೇಲೆ ದಾಸಪ್ಪ, ನಾರಾಯಣಪ್ಪ, ಮರಿಯಪ್ಪ, ನಂಜುಂಡಪ್ಪ, ಚಿಕ್ಕನರಸಯ್ಯ, ಕೇಶವಯ್ಯ ಇವರುಗಳನ್ನು ದಸ್ತಗಿರಿ ಮಾಡಿದರು.

ಕನಕಪುರದಿಂದ ಕೆ. ಜಿ. ಎಫ್.ಗೆ ಹಾಕಲಾಗಿರುವ ವಿದ್ಯುತ್ ಜಾಲವನ್ನು ಧ್ವಂಸಮಾಡುವ ಕಾರ್ಯಕ್ರಮವನ್ನು ಕ್ಲೋಸ್ಪೇಟೆ ಕೆ. ಸುಬ್ಬರಾಯರ ನೇತೃತ್ವದಲ್ಲಿ ಕೈಗೊಳ್ಳಲಾಯಿತು. ಮರದ ವಿದ್ಯುತ್ ಕಂಬಗಳನ್ನು ನಾಲ್ಕಾರು ಕಡೆ ಒಂದು ದಿನ ಸುಡುವುದೇ ಆ ಕಾರ್ಯಕ್ರಮ. ಆದರೆ ಕಾರ್ಯಕ್ರಮ ಕೈಗೊಳ್ಳುವ ಮೊದಲೇ ಸುಬ್ಬರಾಯರ ದಸ್ತಗಿರಿಯಾದರೂ ಕಾರ್ಯಕ್ರಮವು ಪೂರ್ವನಿಯೋಜಿತ ರೀತಿಯಲ್ಲಿಯೇ ನಡೆದುಹೋಯಿತು.

ಕೆ. ಎ. ವೈ. ಮುದ್ದಪ್ಪ, ಚಂದ್ರಯ್ಯರ್, ಎಸ್. ಎಂ. ಸಿದ್ದೇಗೌಡ, ದಾಸಪ್ಪ, ಎನ್. ಎಂ. ಚಿಕ್ಕಸಿದ್ದೇಗೌಡ, ಎಚ್. ಎಲ್. ಸಂಜುಂಡಸ್ವಾಮಿ ಇವರುಗಳನ್ನು ಈ ಸಂದರ್ಭದಲ್ಲಿ ಬಂಧಿಸಿ, ಕ್ಲೋಸ್ಪೇಟೆ ಪ್ರಥಮ ದರ್ಜೆ ನ್ಯಾಯಾಧೀಶರ ಕೋರ್ಟಿನಲ್ಲಿ ಚಾರ್ಜ್‌ಷೀಟ್ ಹಾಕಲಾಯಿತು. ವೆಂಕಟರಾಯನದೊಡ್ಡಿಯ ಬಳಿ ಹೆಂಡದ ಮಡಿಕೆಗಳನ್ನು ಒಡೆದರೆಂಬ ಕಾರಣಕ್ಕಾಗಿ ಚಲುವನಂಜೇಗೌಡ, ಸಿದ್ದೇಗೌಡ, ರಾಮೇಗೌಡ ಎಂಬುವರನ್ನು ದಸ್ತಗಿರಿ ಮಾಡಲಾಯಿತು. ಡಿ. ರಾಮಯ್ಯನವರು ಪೋಲೀಸರ ಕಣ್ಣು ತಪ್ಪಿಸಿ ತಾಲ್ಲೂಕಿನಾದ್ಯಂತ ಪ್ರಚಾರಕಾರ್ಯ ನಡೆಸುತ್ತಿದ್ದರು. ಅವರನ್ನು ಮುಂದೆ ಬಂಧಿಸಲಾಯಿತು. ಅವರಿಗೆ ಮೂರು ತಿಂಗಳ ಸಜಾ ಹಾಗೂ 150 ರೂ. ಜುಲ್ಮಾನೆ ವಿಧಿಸಲಾಯಿತು. ವಿಧ್ವಂಸಕ ಚಟುವಟಿಕೆಗಳಿಗಾಗಿ ಸೋರೇಕಾಯಿದೊಡ್ಡಿ ಸುತ್ತು ವೆಂಕಟರಾಯನದೊಡ್ಡಿ ಗ್ರಾಮಗಳ ಮೇಲೆ ಸರ್ಕಾರವು ತಲಾ 500 ರೂ.ಗಳ ಸಾಮೂಹಿಕ ಜುಲ್ಮಾನೆ ವಿಧಿಸಿದರು.

15-8-1942ರಂದು ತುಮಕೂರು ವಿದ್ಯಾರ್ಥಿಗಳು ಕೋರ್ಟುಗಳನ್ನು ಪಿಕೆಟ್ ಮಾಡಿದರು ; ಟಿಕೆಟ್‌ರಹಿತ ರೈಲು ಪ್ರಯಾಣದಲ್ಲಿ ಭಾಗವಹಿಸಿದರು. ಅನಿರ್ದಿಷ್ಟ ಕಾಲದವರೆಗೆ ಶಾಲಾಕಾಲೇಜುಗಳನ್ನು ಮುಚ್ಚಲಾಯಿತು. 'ಕ್ವಿಟ್ ಇಂಡಿಯಾ' ಚಳವಳಿ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯಲ್ಲಿ ವ್ಯವಸ್ಥಿತವಾಗಿ ನಡೆಯಿತು. ಸಿ. ಎಚ್. ಲಿಂಗದೇವರು, ಜಿ. ವಿ. ನಾರಾಯಣಮೂರ್ತಿ, ಎಂ. ಎಸ್. ಹನುಮಂತರಾವ್, ಎಸ್. ಮುರುಡಯ್ಯ, ಎಸ್. ಟಿ. ವೆಂಕಟೇಗೌಡ, ಸಿ. ಎಸ್. ತಮ್ಮಯ್ಯ ಹಾಗೂ ಉತ್ಸಾಹೀ ತರುಣರಾದ ಸಿ. ಟಿ. ಈಶ್ವರನ್, ಸಿ. ಎಸ್. ಕೃಷ್ಣ ರಾವ್, ಹುಚ್ಚಣ್ಣ, ನಾರಾಯಣ ಮುಂತಾದವರು ಜನಸಂಘಟನೆಯ ಕಾರ್ಯನಿರ್ವಹಿಸಿದರು. ಎಂ. ಎಸ್. ಹನುಮಂತರಾವ್ 'ಅಗ್ನಿಕುಂಡ' ಎಂಬ ಹಸ್ತಲಿಖಿತ ಹಾಗೂ ಸೈಕ್ಲೋಸ್ಟೈಲ್ಡ್ ಪತ್ರಿಕೆಯೊಂದನ್ನು ಕೆಲಕಾಲ ಗೋಪ್ಯವಾಗಿ ಪ್ರಚುರಪಡಿಸಿದರು. ರಾಣಿಬೆನ್ನೂರಿನಿಂದ ತುಮಕೂರಿನ ಆರ್. ಎಸ್. ಆರಾಧ್ಯರು ಹೊರಡಿಸುತ್ತಿದ್ದ ಹಸ್ತಲಿಖಿತ ಸೈಕ್ಲೋಸ್ಟೈಲ್ಡ್ ಪತ್ರಿಕೆಯ ಸುದ್ದಿಗಳ ಆಧಾರದ ಮೇಲೆ 'ಅಗ್ನಿಕುಂಡ' ಪ್ರಕಟವಾಗುತ್ತಿತ್ತು.

ಕೋಲಾರ ಜಿಲ್ಲೆಯ ಕೆ. ಪಟ್ಟಾಭಿರಾಮನ್, ಕೆ. ಸಂಪಂಗಿ ರಾಮಯ್ಯ, ಬಿ. ಎಲ್. ನಾರಾಯಣಸ್ವಾಮಿ, ಜಿ. ನಾರಾಯಣಗೌಡ ಇವರುಗಳು ಆಗಸ್ಟ್ ಹತ್ತನೇ ತಾರೀಖು ಶ್ರೀನಿವಾಸಪುರದಲ್ಲಿ ಒಂದು ಸಾರ್ವಜನಿಕ ಸಭೆ ನಡೆಸಿ, ಜನತೆಗೆ ಸಂಗ್ರಾಮಕ್ಕೆ ಧುಮುಕಲು ಕರೆ ನೀಡಿ, ಪ್ರವಾಸೀಮಂದಿರದಲ್ಲಿ ತಂಗಿದ್ದಾಗ ಪೋಲೀಸರು ಬಂಧಿಸಿದರು. ಪೋಲೀಸರು ಬಂದ ಸುದ್ದಿ ತಿಳಿದ ಜಿ. ನಾರಾಯಣಗೌಡರು ಮಾತ್ರ ಹಿಂಬಾಗಿಲಿನಿಂದ ಹೊರಬಿದ್ದು 6 ಮೈಲು ದೂರದಲ್ಲಿರುವ ತಮ್ಮೂರಾದ ಹೊಗಳಗೆರೆಗೆ ನಡೆದೇ ಹೋದರು. 11ನೇ ತಾರೀಖು ಬೆಳಗ್ಗೆ ನಾರಾಯಣಗೌಡರು ನಾಲ್ಕೂವರೆ ಘಂಟೆಗೇ ಎದ್ದು ಬೈಸಿಕಲ್ ಮೇಲೆ 20 ಮೈಲು ಪ್ರಯಾಣಮಾಡಿ ಕೋಲಾರ ತಲುಪಿ ಬಿ. ಲಕ್ಷ್ಮಯ್ಯಶೆಟ್ಟರ ಆಶ್ರಯ ಪಡೆದರು. ವಿದ್ಯಾರ್ಥಿ ಚಳವಳಿ ಸಂಘಟಿಸುವ ದೃಷ್ಟಿಯಿಂದ ಸಿ. ನಾರಾಯಣರೆಡ್ಡಿ ಎಂಬ ವಿದ್ಯಾರ್ಥಿಯ ಕೈಗೆ ನಾಲ್ಕು ಕಾಂಗ್ರೆಸ್ ಧ್ವಜಗಳನ್ನು ಕೊಟ್ಟು ಪ್ರೌಢಶಾಲೆಯ ಬಳಿ ಬಾವುಟ ಪ್ರದರ್ಶನ ಮಾಡಿಕೊಂಡು ಜೈಕಾರ ಹಾಕಲು ಹೇಳಿದರು. ಮೂರು ದಿನ ಹೀಗೆ ಮಾಡಲಾಗಿ, ಪ್ರೌಢಶಾಲೆಯ ಹುಡುಗರೆಲ್ಲ ಶಾಲೆಯಿಂದ ಹೊರಗೆ ಬಂದರು. ಈ ಅವಕಾಶವನ್ನು ಉಪಯೋಗಿಸಿಕೊಂಡು, ನಾರಾಯಣಗೌಡರು ಅವರಿಗೆ ಮಾರ್ಗದರ್ಶನ ಮಾಡಲು ಮುಂದೆ ಬಂದರು. ವಿದ್ಯಾರ್ಥಿಗಳ ಶಿಸ್ತಿನ ಮೆರವಣಿಗೆ ಹೊರಟಿತು. ನಾರಾಯಣಗೌಡರು ಮೆರವಣಿಗೆಯ ಮುಂದೆ ನಡೆದರು. ಜೈಕಾರ ಹಾಕುತ್ತಾ ವಿದ್ಯಾರ್ಥಿಗಳು ಮುಂದುವರಿದಂತೆ, ಕೋಲಾರದ ಜನರೆಲ್ಲಾ ಮೆರವಣಿಗೆಯಲ್ಲಿ ಕಲೆತುಕೊಂಡರು. ಮೆರವಣಿಗೆಯಲ್ಲಿ ಸುಮಾರು 500 ಮಂದಿ ಜಮಾಯಿಸಿದರು. ಮೆರವಣಿಗೆ ಕೋಲಾರ ಟೌನ್ ಸುತ್ತಿಬಂತು. ಮೂರು ಘಂಟೆ ವೇಳೆಗೆ ಕಠಾರಿಪಾಳ್ಯದ ವೇಣುಗೋಪಾಲಸ್ವಾಮಿ

ದೇವಸ್ಥಾನದ ಮುಂದೆ ಸಭೆ ನಡೆಯಿತು. ನಾರಾಯಣಗೌಡರು 'ಕ್ವಿಟ್ ಇಂಡಿಯಾ' ಚಳವಳಿಗೆ ಎಲ್ಲರೂ ಸೇರಬೇಕೆಂದೂ, ವಿದ್ಯಾರ್ಥಿಗಳು ಚಳವಳಿಯನ್ನು ಮುಂದುವರಿಸಬೇಕೆಂದೂ ವಿನಂತಿಸಿದರು. 14ನೇ ತಾರೀಖು ಬೆಳಗ್ಗೆ ನಾರಾಯಣಗೌಡರ ದಸ್ತಗಿರಿ ಆಯಿತು.

ಮಂಡ್ಯದ ಪಿ. ವೆಂಕಟಗಿರಿ ಅಯ್ಯನವರು ಕಾಯಿಲೆಯಿಂದ ನರಳುತ್ತಿದ್ದರೂ ಚಳವಳಿಗೆ ಧುಮುಕಿದರು. ಅವರನ್ನು 9-9-1942ರಲ್ಲಿ ದಸ್ತಗಿರಿಮಾಡಲಾಯಿತು. ಬೆಂಗಳೂರು ಸೆಂಟ್ರಲ್ ಜೇಲಿನಲ್ಲಿ ಅವರ ಖಾಯಿಲೆ ಉಲ್ಬಣಗೊಂಡಿತು. ಅವರನ್ನು ಶ್ರೀರಂಗಪಟ್ಟಣ ಜೇಲಿಗೆ ವರ್ಗಾಯಿಸಲಾಯಿತು. ಕಾಯಿಲೆ ಪ್ರಕೋಪಕೆ ತಿರುಗಿ 22-10-1942ರಂದು ಅವರನ್ನು ಮಂಡ್ಯದ ಜಿಲ್ಲಾ ಆಸ್ಪತ್ರೆಗೆ ಸೇರಿಸಲಾಯಿತು. ಮಾರನೆಯ ದಿನ ಅವರು (ತಮ್ಮ 48ನೇ ವಯಸ್ಸಿನಲ್ಲಿ) ತೀರಿಕೊಂಡರು.

ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ 'ಕ್ವಿಟ್ ಇಂಡಿಯಾ' ಚಳವಳಿ ಬಹಳ ವ್ಯವಸ್ಥಿತ ರೀತಿಯಲ್ಲಿ ಸಂಘಟನೆಯಾಯಿತು. ಶಾಲೆಗಳ ಬಹಿಷ್ಕಾರ, ಕರನಿರಾಕರಣೆ, ಸರ್ಕಾರಿ ಕಾರ್ಯಗಳಿಗೆ ಅಡ್ಡಿಪಡಿಸುವುದು, ಸೇಂದಿ ಅಂಗಡಿ ಪಿಕೆಟಿಂಗ್, ಸಂತೆ ಪಿಕೆಟಿಂಗ್ ಇವುಗಳಿಂದ ಆರಂಭವಾಯಿತು. ಮೊದಲು ಅಂಕಂ ಸಂಜೀವಶೆಟ್ಟಿ, ತಿಲಕ್ ಇವರ ದಸ್ತಗಿರಿ ಆಯಿತು. ಅನಂತರ ಸಿ. ಟಿ. ರಾಮಕೃಷ್ಣಶೆಟ್ಟಿ, ಆನೆಕೆರೆ ಕೃಷ್ಣಮೂರ್ತಿ ಇವರು ಚಳವಳಿಯ ಮುಖಂಡತ್ವ ವಹಿಸಿಕೊಂಡರು. ಸೆಪ್ಟೆಂಬರ್ ತಿಂಗಳಲ್ಲಿ ರಾಮಕೃಷ್ಣಶೆಟ್ಟರ ದಸ್ತಗಿರಿಯಾಯಿತು. ತಾಲ್ಲೂಕಿನಲ್ಲೆಲ್ಲಾ ಚಳವಳಿ ಉಗ್ರರೂಪ ತಾಳಿತು. ಅಕ್ಟೋಬರ್‌ನಲ್ಲಿ ಚನ್ನರಾಯ ಪಟ್ಟಣದಲ್ಲಿ ಸಂತೆ ಸೇರಕೂಡದೆಂದು ಸರ್ಕಾರ ಪ್ರತಿಬಂಧಕಾಜ್ಞೆ ಹಾಕಿತು. ಸಂತೆ ಶ್ರವಣಬೆಳಗೊಳಕ್ಕೆ ಹೋಗುವ ರಸ್ತೆಯ ತಿರುವಿನಲ್ಲಿ ಸೇರಿತು. ತಾಲ್ಲೂಕಿನ ಅನೇಕ ಗ್ರಾಮಗಳ ಜನ ತಂಡತಂಡವಾಗಿ ಸಂಜೆಗೆ ಬರಲಾರಂಭಿಸಿದರು. ಹಾಗೆ ಸೇರಿದವರನ್ನೆಲ್ಲಾ ದಸ್ತಗಿರಿ ಮಾಡುವುದಾಗಿ ಪೋಲೀಸರು ಹೆದರಿಸಿದರು. 600 ಜನರನ್ನು ಕೈದುಮಾಡಿ ತಾಲ್ಲೂಕು ಆಫೀಸಿನ ಆವರಣದಲ್ಲಿಟ್ಟರು. ಮಧ್ಯಾಹ್ನದ ವೇಳೆಗೆ ಚಳವಳಿ ಪ್ರಕ್ಷುಬ್ಧಸ್ಥಿತಿಗೆ ಬಂದು ಸುಮಾರು 15,000 ಜನ ತಾಲ್ಲೂಕು ಆಫೀಸಿಗೆ ಹೋಗಿ ಬಂಧನದಲ್ಲಿರುವವರನ್ನು ಬಿಡುಗಡೆ ಮಾಡಲು ಒತ್ತಾಯ ತಂದರು. ಸಬ್‌ಡಿವಿಷನಲ್ ಮ್ಯಾಜಿಸ್ಟ್ರೇಟ್ ಗುಂಡಶೆಟ್ಟರು ಪರಿಸ್ಥಿತಿ ಹತ್ತೋಟಿ ಮೀರುತ್ತಿರುವುದನ್ನು ಗಮನಿಸಿ ಜನರನ್ನು ಸಮಾಧಾನಗೊಳಿಸುವಂತೆ ಆನೆಕೆರೆ ಕೃಷ್ಣಮೂರ್ತಿಗಳನ್ನು ಕೇಳಿಕೊಂಡರು. ಕೃಷ್ಣಮೂರ್ತಿ ಜನರಿಗೆ ಸಮಾಧಾನ ಹೇಳಿ, ಬಂಧಿತರಾಗಿದ್ದವರನ್ನು ಬಿಡುಗಡೆ ಮಾಡಿಸಿ, ಎಲ್ಲರನ್ನೂ ತಮ್ಮ ತಮ್ಮ ಹಳ್ಳಿಗಳಿಗೆ ಹಿಂತಿರುಗುವಂತೆ ಪ್ರಾರ್ಥಿಸಿದರು. ಜನ ಚದುರಿದರು. ಆದರೆ ಅದೇ ಸಂಜೆಗೆ ವಿಶೇಷ ಸಿಬ್ಬಂದಿಯೊಂದಿಗೆ ಬಂದ ಪೋಲೀಸ್ ಸೂಪರಿಂಟೆಂಡೆಂಟ್ ವಿ. ವಿ. ನಾಯಕರು ಊರನ್ನೆಲ್ಲಾ ದಾಂಧಲೆ ನಡೆಸಿ, ಜನರನ್ನು ಸಿಕ್ಕಾಪಟ್ಟೆ ಹೊಡೆಸಿ, ಸಂಜೀವಶೆಟ್ಟರ

ಮನೆಯಲ್ಲಿ ವಿಶ್ರಾಂತಿಪಡೆಯುತ್ತಿದ್ದ ಪರವೂರಿನವರನ್ನು ಥಳಿಸಿ, ಅನೇಕರನ್ನು ವ್ಯಾನಿನಲ್ಲಿ ಹಾಕಿಕೊಂಡು ಹೋದರು. ಹೀಗೆ ದಸ್ತಗಿರಿಯಾದವರ ಮೇಲೆ ಖಟ್ಲೆ ನಡೆಸಲು ಒಂದು ವಿಶೇಷ ನ್ಯಾಯಾಲಯವನ್ನು ಚನ್ನರಾಯಪಟ್ಟಣದಲ್ಲಿ ಸ್ಥಾಪಿಸಲಾಯಿತು. ಆನೆಕೆರೆ ಕೃಷ್ಣಮೂರ್ತಿಗಳು ಹಾಸನದ ಪ್ರಸಿದ್ಧ ವಕೀಲರುಗಳಾದ ಎಚ್. ವಿ. ರಂಗಸ್ವಾಮಿ ಹಾಗೂ ಎಸ್. ವೆಂಕಟೇಶಯ್ಯನವರನ್ನು ಜನತೆಯ ಪರ ವಕಾಲತ್ತುವಹಿಸಲು ಪ್ರಾರ್ಥಿಸಿ ಕೊಂಡರು. ಕೋರ್ಟ್ ನಡೆಯುತ್ತಿದ್ದಾಗ ಒಂದು ದಿನ ಆನೆಕೆರೆ ಕೃಷ್ಣಮೂರ್ತಿ ಯವರ ಬಂಧನ ಕೋರ್ಟಿನ ಮುಂದೆಯೇ ನಡೆಯಿತು.

ಇದಾದ 4-5 ದಿನಗಳಲ್ಲಿ ಶ್ರವಣಬೆಳಗೊಳದಲ್ಲಿ ಸಂತೆ ಪಿಕೆಟಿಂಗ್ ನಡೆಯಿತು. ಜನರಿಗೂ ಪೋಲೀಸರಿಗೂ ಘರ್ಷಣೆ ನಡೆದು, ಪೋಲೀಸರ ಗುಂಡಿನೇಟಿನಿಂದ ನಾಲ್ಕಾರು ಮಂದಿ ಸತ್ತರು; ಹತ್ತಾರು ಮಂದಿಗೆ ಗಾಯಗಳಾದವು. ಸಬ್‌ಡಿವಿಷನ್ ಆಫೀಸರ್, ತಹಸೀಲ್ದಾರ್, ಪೋಲೀಸ್ ಸೂಪರಿಂಟೆಂಡೆಂಟ್ ಎಲ್ಲರಿಗೂ ಕಲ್ಲಿನೇಟುಗಳು ಬಿದ್ದವು. ಒಬ್ಬ ರಿಸರ್ವ್ ಪೋಲೀಸ್ ಸತ್ತುಬಿದ್ದ. ನಗಾರಿಗೌಡ ಎಂಬ ವೃದ್ಧರಿಗೆ ಕಾಲಿಗೆ ಗುಂಡಿನೇಟು ತಗುಲಿದ್ದರೂ ಸೆರೆಮನೆಗೆ ದೂಡಲಾಯಿತು. ಈ ಗಲಾಟೆ ನಡೆದ ಮುಂದಿನ ಭಾನುವಾರ ನಲ್ಲೂರು ಸಂಜೀವಯ್ಯನವರ ಮುಖಂಡತ್ವದಲ್ಲಿ ಚನ್ನರಾಯಪಟ್ಟಣ ತಾಲ್ಲೂಕು ಶ್ರೀನಿವಾಸಪುರದ ಸಂತೆಯ ಪಿಕೆಟಿಂಗ್ ನಡೆಯಿತು. ಸುತ್ತಮುತ್ತಲ ಗ್ರಾಮದ ಮುಖಂಡರು ಈ ಪಿಕೆಟಿಂಗ್‌ನಲ್ಲಿ ಭಾಗವಹಿಸಿದ್ದರು. ಪೋಲೀಸರಿಗೂ ಜನರಿಗೂ ಘರ್ಷಣೆಯಾಯಿತು. ಸ್ಥಳದಲ್ಲೇ ಕೆಲವರ ದಸ್ತಗಿರಿಯಾಯಿತಾದರೂ ಸಂಜೀವಯ್ಯನವರು ಅಲ್ಲಿಂದ ಕಣ್ಮರೆಯಾದರು. ಅವರ ಮೇಲೆ ಪೋಲೀಸ್ ವಾರಂಟ್ ಹೊರಟಿತು. ಅವರನ್ನು ಹಿಡಿದುಕೊಟ್ಟವರಿಗೆ ಸೂಕ್ತ ಬಹುಮಾನ ಕೊಡುವುದಾಗಿ ಜಿಲ್ಲಾಧಿಕಾರಿಗಳು ಆಜ್ಞೆ ಹೊರಡಿಸಿದರು. ಅವರು ಪೋಲೀಸರಿಗೆ ಸಿಗಲೇ ಇಲ್ಲ. ಡಿಸೆಂಬರ್ ತಿಂಗಳಲ್ಲಿ ಕಾಯಿಲೆಯಾಗಿ ನಲ್ಲೂರು ಸಂಜೀವಯ್ಯನವರು ಜಿಲ್ಲಾಧಿಕಾರಿಗಳ ವಶಕ್ಕೆ ತಮ್ಮನ್ನು ಒಪ್ಪಿಸಿಕೊಂಡರು. ಅವರಿಗೆ ಎರಡು ವರ್ಷ ಕಾರಾಗೃಹ ಶಿಕ್ಷೆ ವಿಧಿಸಲಾಯಿತು; ಹೈಕೋರ್ಟ್ ಅದನ್ನು ಒಂದು ವರ್ಷಕ್ಕೆ ಇಳಿಸಿತು. ಚನ್ನರಾಯ ಪಟ್ಟಣದ ಎಚ್. ಎನ್. ನರಸಣ್ಣನವರು ಹೊಳೆನರಸೀಪುರಕ್ಕೆ ಹೋದಾಗ ಅವರನ್ನು ದಸ್ತಗಿರಿ ಮಾಡಿ, ಅವರು ಹೊಳೆನರಸೀಪುರ ಸರಹದ್ದಿನಲ್ಲಿ ಕಾಲಿಡಬಾರದೆಂದು ಆಜ್ಞೆ ಮಾಡಿದರು. ಇದನ್ನು ಮಾನ್ಯಮಾಡದೆ ಇದ್ದುದರಿಂದ ಅವರಿಗೆ ಒಂದೂವರೆ ವರ್ಷ ಶಿಕ್ಷೆಯಾಯಿತು. ಈ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಚನ್ನರಾಯಪಟ್ಟಣ ತಾಲ್ಲೂಕು ಕುಂಬಾರಹಳ್ಳಿ ಜವರೇಗೌಡರು, ನುಗ್ಗೇನಹಳ್ಳಿ ನರಸಿಂಹೇಗೌಡರು, ಹಿರೀಸಾವೆ ರಾಜಪ್ಪನವರು, ಕಾಂತರಾಜಪುರದ ಸೋಮಯ್ಯ ಹಾಗೂ ದೊಡ್ಡಲಕ್ಕಪ್ಪ ನವರು ಅಮೋಘವಾದ ರೀತಿಯಲ್ಲಿ ತಮ್ಮ ಸಹಕಾರ ನೀಡಿದರು.

ಕೋಟ್ರಿ ಸಂಜಪ್ಪ, ರಾಮಗಿರಿ ಗ್ರಾಮದ ಡಿ. ಹನುಮಂತಪ್ಪ, ಅವರ ಪತ್ನಿ

ಗಂಗನ್ನು ಇವರುಗಳು 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಕೈಬಾಂಬುಗಳನ್ನೂ ಟೈಂ ಬಾಂಬ್‌ಗಳನ್ನೂ ಬಂದೂಕಗಳನ್ನೂ ಗೋಪ್ಯವಾಗಿ ಸಂಗ್ರಹಿಸಿ ಸೇತುವೆ ಒಡೆಯುವ, ಪೋಸ್ಟ್ ಬಾಕ್ಸ್ ಸುಡುವ, ತಂತಿ ಕತ್ತರಿಸುವ ಕೆಲಸವನ್ನು ಮಾಡಿದರು. ಇವರೆಲ್ಲ ಚಿತ್ರದುರ್ಗ ಜಿಲ್ಲೆಯ ಹಳೆಯ ಕಾಂಗ್ರೆಸ್ ಕಾರ್ಯಕರ್ತರು. ಡಾ|| ಆರ್. ರಂಗಯ್ಯನವರು ಹಿರಿಯೂರು ತಾಲ್ಲೂಕು ಕಸ್ತೂರಿ ರಂಗಪ್ಪನ ಹಳ್ಳಿಯಿಂದ 1,000 ಸತ್ಯಾಗ್ರಹಿಗಳ ಜಾಥಾ ತೆಗೆದುಕೊಂಡು ಹೋಗಿ ಹಿರಿಯೂರು ತಾಲ್ಲೂಕು ಕಚೇರಿಯ ಮುಂದೆ ಪಿಕೆಟಿಂಗ್ ನಡೆಸಿದರು.

ದಾವಣಗೆರೆಯಲ್ಲಿ ಚಳವಳಿಯ ಉದ್ವೇಗವನ್ನು ತಡೆಹಿಡಿಯಲು ಸಾಧ್ಯವಾಗದೆ, ಸೈನಿಕರ ಸಹಾಯದೊಂದಿಗೆ, ಪೋಲೀಸರು ಜನರ ಮೇಲೆ ಗುಂಡುಹಾರಿಸಿದರು. ಈ ದುರ್ಘಟನೆಯಲ್ಲಿ ಲಿಂಗಪ್ಪನೆಂಬ ಎಳೆಯ ಹುಡುಗ ಹಾಗೂ ನಾಗಪ್ಪ, ವಿರೂಪಾಕ್ಷಪ್ಪ ಎಂಬ ಇಬ್ಬರು ತರುಣರು ಮತ್ತು ಇನ್ನೂ ಮೂರು ಜನರ ಆತ್ಮಾರ್ಪಣೆ ಆಯಿತು; ಕಲ್ಲಪ್ಪನೆಂಬ ಒಬ್ಬ ವಿದ್ಯಾರ್ಥಿಗೆ ಗುಂಡಿನೇಟಿನಿಂದ ಒಂದು ಕಾಲು ಊನವಾಯಿತು; 90 ಮಂದಿ ಈ ಸಂದರ್ಭದಲ್ಲಿ ಗಾಯಗೊಂಡರು. ಮೈಸೂರು ಸಂಸ್ಥಾನದಲ್ಲಿ ನಡೆದ 'ಕ್ವಿಟ್ ಇಂಡಿಯಾ' ಚಳವಳಿಗೆ ಧವಳಪ್ರಾಯವಾಗಿರುವ ಇನ್ನೊಂದು ಕ್ರಾಂತಿಘಟ್ಟ ಈಸೂರು ಪ್ರಕರಣ. ಅಲ್ಲಿ ಆಗಬಾರದ್ದು ಆಗಿಹೋಯಿತು.

ಈಸೂರು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿಗೆ ಸೇರಿದ ಸಂಪದ್ಭರಿತ ಗ್ರಾಮ. ಅಲ್ಲಿಯೂ, ಎಲ್ಲಾ ಕಡೆಯಂತೆ, 'ಕ್ವಿಟ್ ಇಂಡಿಯಾ' ಚಳವಳಿ ಸಣ್ಣ ಪ್ರಮಾಣದಲ್ಲೇ ಆರಂಭವಾಯಿತು. ಊರಿನ ಯುವಕರು, ವಿದ್ಯಾರ್ಥಿಗಳು ಖಾದಿ ಧರಿಸಿ, ಗಾಂಧೀ ಟೋಪಿ ಹಾಕಿಕೊಂಡು, ರಾಷ್ಟ್ರಧ್ವಜ ಹಿಡಿದು, ಜೈಕಾರ ಕೂಗುತ್ತಾ ಮೆರವಣಿಗೆ ನಡೆಸಹತ್ತಿದರು. ಊರ ಮುಂದಿನ ವೀರಭದ್ರ ದೇವಾಲಯದಲ್ಲೇ ಸಭೆಗಳನ್ನು ನಡೆಸುತ್ತಿದ್ದರು. ಸಾಹುಕಾರ್ ಬಸವಣ್ಣಪ್ಪನವರ ಮಗ ಜಯಣ್ಣನನ್ನು ಊರಿನ ಅಮಲ್ದಾರನನ್ನಾಗಿಯೂ, ಅವನ ಆಪ್ತಗೆಳೆಯ ಮಲ್ಲಣ್ಣನನ್ನು ಪೋಲೀಸ್ ಸಬ್ ಇನ್ಸ್‌ಪೆಕ್ಟರ್ ಆಗಿಯೂ ಒಂದು ಸಭೆಯಲ್ಲಿ ಚುನಾಯಿಸಲಾಯಿತು; ಎಲ್ಲರೂ ಅವರಬ್ಬರ ಆದೇಶದಂತೆ ನಡೆಯಬೇಕೆಂದೂ ತೀರ್ಮಾನವಾಯಿತು. ಊರಿನ ಅಗಸೆ ಬಾಗಿಲಲ್ಲಿ 'ಬೇಜವಾಬ್ದಾರಿ ಸರ್ಕಾರದ ಯಾವ ಅಧಿಕಾರಿಯೂ ಊರೊಳಕ್ಕೆ ಬರ ಕೂಡದು' ಎಂಬ ಪ್ರತಿಬಂಧಕಾಜ್ಞೆಯನ್ನು ಬರೆಸಿ ಹಾಕಿದರು. ಈಸೂರಿನ ಪಟೇಲಿಕೆ ಪಕ್ಕದ ಗ್ರಾಮದ ಚನ್ನಬಸಪ್ಪನಿಗೆ ಇತ್ತು. ಅವನು ಕಂದಾಯ ವಸೂಲಿಗಾಗಿ ಈಸೂರಿಗೆ ಬಂದ. ಅವನನ್ನು ವಿದ್ಯಾರ್ಥಿಗಳು ಸುತ್ತುವರಿದು ಪಟೇಲಿಗೆ ರಾಜೀನಾಮೆ ಕೊಡುವಂತೆ ಒತ್ತಾಯಮಾಡಿದರು. ಇದನ್ನು ಪ್ರತಿಭಟಿಸಿದ ಪಟೇಲರಿಂದ ಕಂದಾಯದ ದಫ್ತರ್ ಕಿತ್ತುಕೊಂಡು, ಗಾಂಧೀ ಟೋಪಿ ಹಾಕಿ ಅವರನ್ನು ಮೆರವಣಿಗೆ ಮಾಡಿ, ಅವರಿಂದ 'ಬ್ರಿಟಿಷರೇ! ಭಾರತ ಬಿಟ್ಟು ತೊಲಗಿ', 'ಮಹಾತ್ಮಾ ಗಾಂಧೀಜೀ ಕೀ ಜೈ' ಮುಂತಾದ

ಘೋಷಣೆಗಳನ್ನು ಕೂಗಿಸಲಾಯಿತು. ಕುಪಿತರಾದ ಚನ್ನಬಸಪ್ಪನವರು ಪೋಲೀಸರಿಗೆ ದೂರಿತ್ತರು. ಸೆಪ್ಟೆಂಬರ್ 28ನೇ ತಾರೀಖು ಅಮಲ್ದಾರ್ ಚನ್ನಕೃಷ್ಣಯ್ಯನವರೂ, ಸಬ್‌ಇನ್ಸ್‌ಪೆಕ್ಟರ್ ಕೆಂಚೇಗೌಡರೂ ಈಸೂರಿಗೆ ಕೆಲ ಮಂದಿ ಪೋಲೀಸರನ್ನು ಕರೆದು ಕೊಂಡು ಬಂದರು. ಅಮಲ್ದಾರ್ ಚನ್ನಕೃಷ್ಣಯ್ಯನವರು ಮೃದುಸ್ವಭಾವದವರು; ವಿದ್ಯಾರ್ಥಿಗಳ ಮೇಲೆ ಉಗ್ರಕ್ರಮ ತೆಗೆದುಕೊಳ್ಳಲು ಅವರು ಸುತರಾಂ ಇಷ್ಟಪಡಲಿಲ್ಲ. ಸಬ್‌ಇನ್ಸ್‌ಪೆಕ್ಟರ್ ಕೆಂಚೇಗೌಡರಾದರೋ ಅದಕ್ಕೆ ತದ್ವಿರುದ್ಧವಾದ ಮನೋಭಾವ: ಹುಡುಗರಾದರೇನು, ಅವರಿಗೆ ತಕ್ಕ ಶಾಸ್ತಿ ಮಾಡಿಯೇ ತೀರಬೇಕೆಂಬ ಛಲ ಅವರದು; ಅಗಸೆಬಾಗಿಲಲ್ಲಿ ನೇತುಹಾಕಿದ್ದ ತಡೆಯಾಜ್ಞೆ ಬರಹವನ್ನು ಕಿತ್ತೆಸೆದೇ ಊರಿಗೆ ಪ್ರವೇಶ ಮಾಡಿದರು. ಅವರನ್ನು ಹುಡುಗರೂ, ಊರಿನ ಇತರರೂ ಸುತ್ತುವರಿದು ಕೆಲಸಕ್ಕೆ ರಾಜೀನಾಮೆ ಕೊಡಿರೆಂದು ಕೇಳಿದರು; ಹ್ಯಾಟ್‌ಗಳನ್ನು ತೆಗೆದು ಖಾದೀ ಟೋಪಿಗಳನ್ನು ಹಾಕಿದರು. ಚನ್ನಕೃಷ್ಣಯ್ಯನವರು ನಗುತ್ತಾ ಹುಡುಗರು ಹೇಳಿದಂತೆಯೇ ಮಾಡು ತ್ತಿದ್ದರು; ಪೋಲೀಸ್ ಇನ್ಸ್‌ಪೆಕ್ಟರ್ ಮಾತ್ರ ಕೋಪದ ಆವೇಶಕ್ಕೆ ಒಳಗಾಗಿದ್ದರು. ಜನರ ಗುಂಪಿನ ಮೇಲೆ ಗುಂಡುಹಾರಿಸಲಾಯಿತು. ನಾಲ್ಕು ಜನರಿಗೆ ಗಾಯಗಳಾದುವು. ಯಾರೋ ದೇವಸ್ಥಾನದ ಜಾಗಟೆ ಬಾರಿಸಿದರು. ಊರ ಜನ ಓಡೋಡಿ ಬಂದರು. ಅವರನ್ನು ಪೋಲೀಸರು ಮುಖ ಮೂತಿ ನೋಡದೆ ಥಳಿಸಿದರು. ಕೈಕೈ ಮಿಲಾಯಿಸಿತು; ಕೆಲವರು ಸಬ್‌ಇನ್ಸ್‌ಪೆಕ್ಟರ್ ಕೈಯನ್ನು ಬಲವಾಗಿ ಹಿಡಿದುಕೊಂಡರು. ಕೈಗೆ ಸಿಕ್ಕಿದ ಜೊಂಬು, ಕಟ್ಟಿಗೆ, ಕೊಡಲಿ, ಕುಡುಗೋಲುಗಳನ್ನು ಹಿಡಿದು ನುಗ್ಗಿದರು ಈಸೂರಿನ ಜನ. ಫಣಿಯಪ್ಪಾಚಾರಿ ತೋಳಿನಲ್ಲಿ ಗುಂಡು ತಗುಲಿ ನೆಲಕ್ಕುರುಳಿದ; ಸಂಡದ ಗುರು ಶಾಂತಪ್ಪನ ಬಲಗೆನ್ನೆಯಲ್ಲಿ ಗುಂಡೊಂದು ತೂರಿಹೋಯಿತು; ಇವರೊಂದಿಗೆ ಚನ್ನ ಕೃಷ್ಣಯ್ಯ ಮತ್ತು ಕೆಂಚೇಗೌಡ ಇವರ ಹೆಣಗಳೂ ರಕ್ತದ ಮಡುವಿನಲ್ಲಿ ಬಿದ್ದುವು. ಅಮಲ್ದಾರರನ್ನಾಗಲೀ, ಸಬ್‌ಇನ್ಸ್‌ಪೆಕ್ಟರನ್ನಾಗಲೀ ಕೊಲ್ಲುವ ಉದ್ದೇಶ ಊರಿನ ಜನರಿಗೆ ಇರಲಿಲ್ಲ. ಅಮಲ್ದಾರ್ ಚನ್ನಕೃಷ್ಣಯ್ಯನವರನ್ನಂತೂ ಜನ ಬಹಳ ಅಭಿ ಮಾನದಿಂದ ಕಾಣುತ್ತಿದ್ದರು. ಆದರೂ ಆಗಬಾರದ್ದು ಆಗಿಹೋಯಿತು!

ಈ ದುರ್ಘಟನೆ ಜಿಲ್ಲಾ ಕೇಂದ್ರಕ್ಕೆ ವರದಿಯಾದೊಡನೆ, ಜಿಲ್ಲಾಧಿಕಾರಿಗಳು ಹೆಚ್ಚಿನ ಪೋಲೀಸ್ ಪಡೆಯನ್ನೂ ಮಿಲಿಟರಿಯನ್ನೂ ತೆಗೆದುಕೊಂಡು ಈಸೂರಿಗೆ ಧಾವಿಸಿದರು. ಜೇಕಾದವರು, ಬೇಡದವರು, ಮಿತ್ರರು, ಶತ್ರುಗಳು, ಅಪರಾಧಿಗಳು. ನಿರಪರಾಧಿಗಳು ಎಲ್ಲರನ್ನೂ ಅಪರಾಧಿ ಸ್ಥಾನದಲ್ಲಿ ನಿಲ್ಲಿಸುವ ಸನ್ನಾಹ ನಡೆಯಿತು. ಸಾಹುಕಾರ್ ಬಸವಣ್ಣಪ್ಪನವರನ್ನೇ ಮೊದಲನೇ ಅಪರಾಧಿಯನ್ನಾಗಿ ಮಾಡಲಾಗಿತ್ತು. ಈಸೂರಿನ ಜನ ಭಯಭೀತರಾದರು; ಮನೆಗಳಿಗೆ ಬೀಗ ಹಾಕಿಕೊಂಡು ರಾತ್ರೋರಾತ್ರಿ ಮಕ್ಕಳುಮರಿ ಕಟ್ಟಿಕೊಂಡು ಹತ್ತಿರದ ಅರಣ್ಯದೊಳಗೆ ಬಿಜ್ಜೋಡಿದರು. ಪೋಲೀಸರೂ, ಮಿಲಿಟರಿಯವರೂ ರಾತ್ರಿಯೆಲ್ಲಾ ಅರಣ್ಯದ ಮರಗಳ ಮೇಲೆ ಹತ್ತಿ ಟಾರ್ಚುಗಳನ್ನು

ಬಿಟ್ಟುಕೊಂಡು ಗ್ರಾಮಸ್ಥರನ್ನು ಹುಡುಕಲೆತ್ನಿಸಿದರು. ಸಿಕ್ಕಿದ ಹೆಂಗಸರು, ಮಕ್ಕಳು, ಗಂಡಸರನ್ನು ನಿರ್ದಾಕ್ಷಿಣ್ಯವಾಗಿ ಬಡಿದು ಬಂಧನದಲ್ಲಿಟ್ಟರು; ಪ್ರಾಪ್ತವಯಸ್ಕ ಹೆಣ್ಣು ಮಕ್ಕಳ ಮಾನಭಂಗ ಮಾಡಿದರು. ಊರಿನಲ್ಲಿ ನೆಲೆಸಿದ ಪೋಲೀಸರೂ ಮಿಲಿಟರಿಯವರೂ, ಸಾಹುಕಾರರ ಮನೆ ಮೊದಲ್ಗೊಂಡು, ಎಲ್ಲಾ ಮನೆಗಳ ಬೀಗಗಳನ್ನು ಮುರಿದು ಒಳನುಗ್ಗಿ ಸಿಕ್ಕಿದ್ದನ್ನು ದೋಚಿದರು; ಕೈಗೆ ಸಿಕ್ಕಿದವರನ್ನು ದಸ್ತಗಿರಿಮಾಡಿದರು.

ಮೊಕದ್ದಮೆಯ ವಿಚಾರಣೆಗಾರಂಭವಾಯಿತು. 41 ಜನರ ಮೇಲೆ ದೊಂಬಿ, ಗಲಭೆ, ಅಸಹಕಾರ, ಖೂನಿ ಇತ್ಯಾದಿ ಕ್ರಿಮಿನಲ್ ಮೊಕದ್ದಮೆಗಳನ್ನು ಹೂಡಿದರು. ಸಾಗರದಲ್ಲಿ ಪ್ರಥಮ ದರ್ಜೆ ನ್ಯಾಯಾಧೀಶ ಸುಂದರರಾಜರಾಯರಿಂದ ವಿಚಾರಣೆ ನಡೆಯಿತು. ಈ ಮಧ್ಯೆ, ಪೋಲೀಸ್ ಸ್ಟೇಷನ್‌ನಲ್ಲಿ 41 ಜನರಿಗೂ ಚಿತ್ರಹಿಂಸೆ ಕೊಡಲಾಯಿತು. ಹೆಣ್ಣುಮಕ್ಕಳಿಗಂತೂ ಕೊಡಬಾರದ ಕಷ್ಟ ಕೊಟ್ಟರು. ಜಯಣ್ಣ, ಮಲ್ಲಣ್ಣ ಇಬ್ಬರೂ 'ಮೈನರ್'ಗಳಾದ್ದರಿಂದ ಬಿಡುಗಡೆ ಮಾಡಲ್ಪಟ್ಟರು; ಗುರಪ್ಪ, ಶಂಕರಪ್ಪ, ಮಲ್ಲಪ್ಪ, ಹಾಲಪ್ಪ, ಕಲ್ಕ ನೆ ಸಿದ್ದಲಿಂಗಪ್ಪ, ಪುಣಜಿ ಚನ್ನಬಸಪ್ಪ, ಹುಚ್ಚರಾಯಪ್ಪ, ಗುರುಶಾಂತಪ್ಪ, ಫಣಿಯಪ್ಪಾಚಾರಿ, ನಾಗೇಶಾಚಾರ್, ಸೂರ್ಯನಾರಾಯಣಾಚಾರಿ ಈ ಹನ್ನೊಂದು ಜನಕ್ಕೆ ಮರಣದಂಡನೆ ವಿಧಿಸಲಾಯಿತು; ಉಳಿದವರಿಗೆ ಒಂದು ವರ್ಷದಿಂದ ಹಿಡಿದು ಆಮರಣಾಂತ ಜೀವಾವಧಿ ಶಿಕ್ಷೆ ವಿಧಿಸಲಾಯಿತು; ಕೊಲೆಗೆ ಕಾರಣರಾದವರೆಂಬ ಆಪಾದನೆಯ ಮೇಲೆ ಹಾಲಮ್ಮ, ಸಿದ್ದಮ್ಮ, ಪಾರ್ವತಮ್ಮ ಇವರಿಗೂ ಜೀವಾವಧಿ ಶಿಕ್ಷೆವಿಧಿಸಲಾಯಿತು.

ಹೈಕೋರ್ಟಿಗೆ ಅಪೀಲು ಮಾಡಲಾಯಿತು. ಈಸೂರಿನ ಜನತೆ ಸ್ವಾತಂತ್ರ್ಯ ಹೋರಾಟಗಾರರೇ ಹೊರತು ಕೊಲೆಗಡುಕರಲ್ಲ ಎಂಬುದು ಈ ಅಪೀಲಿನ ಮುಖ್ಯ ವಿಚಾರಸರಣಿಯಾಗಿತ್ತು. ಹೈಕೋರ್ಟಿನ ಮುಖ್ಯ ನ್ಯಾಯಾಧೀಶರು ಗುರಪ್ಪ, ಮಲ್ಲಪ್ಪ, ಶಂಕರಪ್ಪ, ಹಾಲಪ್ಪ ಮತ್ತು ಸೂರ್ಯನಾರಾಯಣಾಚಾರಿ ಈ ಐದು ಮಂದಿಗೆ ಮಾತ್ರ ಮರಣದಂಡನೆ ಕಾಯಂ ಮಾಡಿ ಉಳಿದವರಿಗೆ ಪ್ರಾಣದಾನ ಮಾಡಿದರು; 28 ಮಂದಿಗೆ ಜೀವಾವಧಿ ಶಿಕ್ಷೆ ಸ್ಥಿರಪಡಿಸಿದರು. ಮರಣದಂಡನೆಗೊಳಗಾದವರಿಗೆ ಪ್ರಾಣಭಿಕ್ಷೆ ನೀಡುವಂತೆ ಶ್ರೀಮನ್ಮಹಾರಾಜರಲ್ಲಿ ಸಹಸ್ರಾರುಮಂದಿ ಮಹಾಜನರು ಮನವಿ ಮಾಡಿಕೊಂಡರು. ಬ್ರಿಟಿಷ್ ರೆಸಿಡೆಂಟ್ ಇದಕ್ಕೊಪ್ಪದೆ ಇದ್ದುದರಿಂದ ಏನೂ ಪ್ರಯೋಜನವಾಗಲಿಲ್ಲ. ದಿನಕ್ಕೆ ಇಬ್ಬರಂತೆ ಮೂರು ದಿನಗಳಲ್ಲಿ ಈ ಐವರನ್ನೂ ಬೆಂಗಳೂರು ಸೆಂಟ್ರಲ್ ಜೇಲಿನಲ್ಲಿ ಗಲ್ಲಿಗೇರಿಸಲಾಯಿತು. ಈ ಐವರೂ ಭಾರತಮಾತೆಗೆ ಜೈಕಾರ ಹಾಕುತ್ತಾ ತಮ್ಮ ಪ್ರಾಣಗಳನ್ನು ತೊರೆದರು.

ಇದಾದ ಮೂರು ತಿಂಗಳುಗಳನಂತರ, ತಲೆತಪ್ಪಿಸಿಕೊಂಡು ಓಡಾಡುತ್ತಿದ್ದ ಶಾಂತವೀರಪ್ಪ, ಹೊಳೆಬಸಪ್ಪ, ರಂಗಪ್ಪ ಮುಂತಾದವರನ್ನು ಸೆರೆಹಿಡಿಯಲಾಯಿತು. ಶಿವಮೊಗ್ಗೆಯಲ್ಲಿ ಅವರ ವಿಚಾರಣೆಗಾಗಿ ವಿಶೇಷ ನ್ಯಾಯಾಲಯದ ರಚನೆಯಾಯಿತು.

ಹದಿಮೂರು ಮಂದಿಯನ್ನು ಶಿಕ್ಷೆಗೆ ಗುರಿಪಡಿಸಲಾಯಿತು. ಹೈಕೋರ್ಟ್ ಅಪೀಲಿನಲ್ಲಿ ಈ ಪೈಕಿ ಒಬ್ಬರನ್ನು ನಿರಪರಾಧಿಯೆಂದು ಬಿಡುಗಡೆ ಮಾಡಿ, ಉಳಿದವರ ಶಿಕ್ಷೆಯನ್ನು ನ್ಯಾಯಾಧೀಶರು ತಗ್ಗಿಸಿದರು. ಜನತೆ ಮತ್ತು ಅಧಿಕಾರಿಗಳ ನಡುವೆ ಸಂಭವಿಸಬಹುದಾದ ವಿರಸ ವಿಪರೀತಕ್ಕೆ ಹೋದರೆ ಏನೆಲ್ಲಾ ಅನರ್ಥಗಳಾಗಬಹುದೆಂದು ಈಸೂರಿನ ಪ್ರಕರಣ ಉಭಯತ್ರರಿಗೂ ತೋರಿಸಿಕೊಟ್ಟಿತು.

'ಕ್ವಿಟ್ ಇಂಡಿಯಾ' ಚಳವಳಿಯು ಕಾವು 1942ನೇ ನವೆಂಬರ್ ಕೊನೆಯ ವೇಳೆಗೆ ಮೈಸೂರು ರಾಜ್ಯದಲ್ಲಿ ಇಳಿಮುಖವಾದ್ದನ್ನು ಗಮನಿಸಿ, ಚಳವಳಿಗೆ ಚೇತನ ತುಂಬಲು ಏನು ಮಾಡಬೇಕೆಂಬ ಬಗ್ಗೆ ಸಮಾಲೋಚನೆ ನಡೆದು ಜಿಲ್ಲೆಗಳಲ್ಲಿ, ತಾಲ್ಲೂಕುಗಳಲ್ಲಿ ಸತ್ಯಾಗ್ರಹ ಸಂಘಟನೆ ಮಾಡುತ್ತಿದ್ದ ಅಳಿದುಳಿದ ಕಾರ್ಯಕರ್ತರನ್ನೆಲ್ಲ ಒಂದೆಡೆ ಕಲೆಹಾಕಿ ಒಂದು ಸಂಘಟಿತ ಕಾರ್ಯಕ್ರಮ ರೂಪಿಸತಕ್ಕದ್ದೆಂದು ತೀರ್ಮಾನಿಸಿ, ಅವರೆಲ್ಲರಿಗೂ ಒಂದು ಗೊತ್ತಾದ ದಿನ ಬೆಂಗಳೂರಿಗೆ ಬರಮಾಡಲಾಯಿತು. ಸಭೆ ಮಧ್ಯಾಹ್ನ 12 ಘಂಟೆಯಿಂದ ಬಸವನಗುಡಿ ಸಮೀಪದ ಪುಟ್ಟೇನಹಳ್ಳಿಯಲ್ಲಿ ಬುದ್ಧದಾಸ್‌ರವರ ತೋಟದಲ್ಲಿ ನಡೆಯಿತು. ಸಭೆಗೆ ಸರ್ದಾರ್ ಕೆ. ಎ. ವೆಂಕಟರಾಮಯ್ಯ, ಎ. ಜಿ. ರಾಮಚಂದ್ರ ರಾವ್, ಎಚ್. ಎಸ್. ಸೀತಾರಾಂ, ಎಚ್. ಎಸ್. ದೊರೆಸ್ವಾಮಿ, ಎಂ. ಎಚ್. ಷಾ, ಪ್ರೇಮಚಂದ್, ವೈ. ವಿ. ರಾಮಚಂದ್ರನ್, ಬುದ್ಧದಾಸ್ ಇವರುಗಳು ಬಂದಿದ್ದರು. ಚಿಕ್ಕಮಗಳೂರಿನಿಂದ ಎಂ. ಆರ್. ವೆಂಕಟರಾಮಯ್ಯ, ಕೆ. ದೇವಯ್ಯ; ಚಿತ್ರದುರ್ಗದಿಂದ ಭೀಮಪ್ಪನಾಯಕ್, ಕೊಟ್ರಿ ಸಂಜಪ್ಪ ಮುಂತಾದವರು ಬಂದಿದ್ದರು. 2-3 ಘಂಟೆಗಳ ಕಾಲ ಚರ್ಚೆ ನಡೆದು, ಸತ್ಯಾಗ್ರಹದ ಗತಿಯನ್ನು ತಮ್ಮ ತಮ್ಮ ಸ್ವಕ್ಷೇತ್ರಗಳಲ್ಲಿ ಕೂಡಲೇ ಚುರುಕುಗೊಳಿಸುವ ನಿರ್ಣಯ ಮಾಡಲಾಯಿತು.

ಮುಂದೆ ಕೆಲವೇ ದಿನಗಳಲ್ಲಿ ಎ. ಜಿ. ರಾಮಚಂದ್ರರಾಯರ ತಂದೆಯವರ ನಿಧನವಾದ್ದರಿಂದ ಅವರು ಹಾಸನಕ್ಕೆ ಧಾವಿಸಿದರು. ಪೋಲೀಸರು ಅವರ ಮನೆಯ ಬಳಿ ವ್ಯಾನ್ ಸಮೇತ ಹಾಜರಿದ್ದರು. ರಾಮಚಂದ್ರರಾಯರು ತಮ್ಮ ತಂದೆಯ ಕರ್ಮಗಳು ಮುಗಿದೊಡನೆ ಪೋಲಿಸರ ವಶವಾಗುವುದಾಗಿ ಮುಚ್ಚಳಿಕೆ ಬರೆದುಕೊಟ್ಟರು; ಹಾಗೆಯೇ ಮಾಡಿದರು. ಡಿಸೆಂಬರ್ 20ರ ವೇಳೆಗೆ, ತುಮಕೂರಿನ ಖಾದೀ ಭಂಡಾರದ ಎಸ್. ರಾಮಚಂದ್ರರಾವ್ ಅವರಿಗೆ ನಾಡಬಾಂಬ್‌ಗಳನ್ನು ಸರಬರಾಜು ಮಾಡಿದರೆಂಬ ಕಾರಣದ ಮೇಲೆ ಎಚ್. ಎಸ್. ದೊರೆಸ್ವಾಮಿಯವರ ಬಂಧನವಾಯಿತು. ಮುಂದಿನ 15-20 ದಿನಗಳೊಳಗೆ ಪ್ರಭುದೇವ್, ವೈ. ವಿ. ರಾಮಚಂದ್ರನ್, ಎಂ. ಎಚ್. ಷಾ ಇವರುಗಳ ಬಂಧನವಾಯಿತು. ಎನ್. ಡಿ. ಶಂಕರ್ ಹುಬ್ಬಳ್ಳಿಗೆ ಹೋಗಿ, ಕೆಲದಿನ ಸಂಘಟನಾ ಕಾರ್ಯ ಮಾಡಿ, ಬಂಧಿಸಲ್ಪಟ್ಟರು. ಚಳವಳಿಯ ಕಾವು ಸಂಪೂರ್ಣವಾಗಿ ಆರಿದ ಮೇಲೆ 1943ರ ಏಪ್ರಿಲ್ ತಿಂಗಳಲ್ಲಿ ಎಚ್. ಎಸ್. ಸೀತಾರಾಂ, ಸರ್ದಾರ್ ಕೆ. ಎ. ವೆಂಕಟರಾಮಯ್ಯ ಬಂಧಿತರಾಗಿ ಸೆಂಟ್ರಲ್ ಜೇಲಿಗೊಯ್ಯಲ್ಪಟ್ಟರು.

ಚಳವಳಿ ಸ್ಥಗಿತಕೊಂಡಮೇಲೆ ನ್ಯಾಯವಿಧಾಯಕ ಸಭೆಯ ಕೆಲವು ಸದಸ್ಯರು ಸರ್ಕಾರದೊಡನೆ ರಾಜಿ ಪ್ರಯತ್ನದಲ್ಲಿ ತೊಡಗಿದರು. ಸರ್ಕಾರವೂ ಇದಕ್ಕೆ ಸಿದ್ಧವಿದ್ದಂತೆ ತೋರಿತು. ಸ್ಥಾನಬದ್ಧತೆಯಲ್ಲಿದ್ದ ಎಲ್ಲಾ ಕಾರ್ಯಕಾರಿ ಸಮಿತಿ ಸದಸ್ಯರನ್ನೂ ಬೆಂಗಳೂರು ಸೆಂಟ್ರಲ್ ಜೇಲಿಗೆ ಕರೆತರಲಾಯಿತು. ರಾಜಿ ವಿಷಯವನ್ನು ತೀವ್ರವಾಗಿ ಪರಿಶೀಲಿಸಿ, ಗೌರವಯುತವಾದ ಒಪ್ಪಂದಕ್ಕೆ ಕಾಂಗ್ರೆಸ್ ಸಿದ್ಧವಿದೆ ಎಂದು ನಿಯೋಗದ ಸದಸ್ಯರಿಗೆ ತಿಳಿಸಲಾಯಿತು. ಆದರೆ ಇಷ್ಟರಲ್ಲಿ ಸರ್ಕಾರದ ಮನ ಬದಲಾಗಿತ್ತು.

ಸ್ಥಾನಬದ್ಧತೆಯಲ್ಲಿದ್ದ ಕಾಂಗ್ರೆಸ್ ಅಧ್ಯಕ್ಷರನ್ನೂ ಪ್ರಧಾನಕಾರ್ಯದರ್ಶಿಗಳನ್ನೂ ಇತರ ಕಾರ್ಯಕಾರಿ ಸಮಿತಿ ಸದಸ್ಯರನ್ನೂ 1943ನೇ ಡಿಸೆಂಬರ್ 8ನೇ ತಾರೀಖು, ಒಂದು ವರ್ಷ ನಾಲ್ಕು ತಿಂಗಳನಂತರ, ಬಿಡುಗಡೆ ಮಾಡಲಾಯಿತು; ಅವರ ಜೊತೆಜೊತೆಗೇ ಇತರ ಸ್ಥಾನಬದ್ಧರನ್ನೂ, ದಿನಕ್ಕೆ 30–40 ಜನರಂತೆ, ಬಿಡುಗಡೆ ಮಾಡಲಾಯಿತು; ಆದರೆ ಕಾಂಗ್ರೆಸ್ ಸಂಸ್ಥೆಯ ಮೇಲಿದ್ದ ನಿಷೇಧಾಜ್ಞೆ ಮಾತ್ರ ಹಾಗೇ ಉಳಿಯಿತು. ಅನೇಕರನ್ನು ಗಡೀಪಾರು ಮಾಡಲಾಯಿತು. ಕಾರ್ಮಿಕರ ಪಾಡಂತೂ ಅವರ್ಣನೀಯ ವಾಗಿತ್ತು. ಸ್ಥಾನಬದ್ಧತೆಯಿಂದ ಹೊರಬಂದ ಕಾರ್ಮಿಕರನ್ನು ಕೆಲಸಕ್ಕೆ ತೆಗೆದುಕೊಳ್ಳಲು ಗಿರಣಿಗಳು ಮತ್ತು ಕಾರ್ಖಾನೆಗಳು ನಿರಾಕರಿಸಿದವು.

ಹೀಗೆ 'ಕ್ವಿಟ್ ಇಂಡಿಯಾ' ಚಳವಳಿ ಮೈಸೂರು ಸಂಸ್ಥಾನದಲ್ಲಿ ವ್ಯಾಪಕವಾಗಿ ಪರಿಣಾಮಕಾರಿಯಾಗಿ ನಡೆಯಿತು. ಈ ಹೋರಾಟದಲ್ಲಿ ಮನೆಮಠ ಕಳೆದುಕೊಂಡವರು, ಅಸುನೀಗಿದವರು, ಕೆಲಸಕಾರ್ಯಗಳನ್ನು ಕಳೆದುಕೊಂಡು ಆರ್ಥಿಕ ತೊಂದರೆಗಳಿಗೆ ಒಳಗಾದವರು, ವಿದ್ಯಾಭ್ಯಾಸ ಕೊನೆಗಾಣಿಸಬೇಕಾದವರ ಸಂಖ್ಯೆ ಸಾವಿರಾರು. ಆದರೆ ಯಶಸ್ವೀ ರೀತಿಯಲ್ಲಿ ಚಳವಳಿ ನಡೆಸಿದ ಸಮಾಧಾನ ಇವರೆಲ್ಲರದೂ.

## ಸ್ವವಿಚಾರ

ನಾನು 1919ರಲ್ಲಿ ಬೆಂಗಳೂರಿನಲ್ಲಿ ಹುಟ್ಟಿದೆ. ನಮ್ಮ ಅಣ್ಣ ದಿ|| ಎಚ್. ಎಸ್. ಸೀತಾರಾಂ ಮೊದಲಿನಿಂದಲೂ ಖಾದೀಧಾರಿ, ಹಾಗೂ ಬೆಳಗಾವಿ ಕಾಂಗ್ರೆಸ್ಸಿನಲ್ಲೂ ಗಾಂಧೀಜಿ ಬೆಂಗಳೂರಿಗೆ ಬಂದ ಕಾಲದಲ್ಲೂ ಸ್ವಯಂಸೇವಕರಾಗಿ ದುಡಿದವರು. ನನಗೂ ಬಾಲ್ಯದಿಂದಲೂ ಖಾದೀವ್ರತ ತೊಡಿಸಿದ್ದರು. ದಿ|| ಮುದವೀಡು ಕೃಷ್ಣರಾಯರ ಭಾಷಣ ಹಾಗೂ ನಮ್ಮಲ್ಲಿ ಬರುತ್ತಿದ್ದ 'ಹರಿಜನ' ಪತ್ರಿಕೆ ಕೂಡ ನನ್ನ ಮೇಲೆ ಅಪಾರ ಪ್ರಭಾವ ಬೀರಿದ್ದವು. 'ಹರಿಜನ' ಪತ್ರಿಕೆ ಓದಿದರೆ, ಸ್ವಾತಂತ್ರ್ಯಸಮರ ವಾರವಾರಕ್ಕೂ ಸನ್ನಿಹಿತವಾದಂತೆ ತೋರುತ್ತಿತ್ತು. ಯಾವಾಗ ನಾನು ಈ ಚಳವಳಿಯಲ್ಲಿ ಧುಮುಕಿ ಯೇನು ಎಂಬ ತವಕ ನನ್ನಲ್ಲುಂಟಾಗಿತ್ತು.

1942ರಲ್ಲಿ ಬಿ. ಎಸ್‌ಸಿ. ಮುಗಿಸಿದ ನಾನು ಗಾಂಧೀ ನಗರ ಹೈಸ್ಕೂಲಿನಲ್ಲಿ

ಅಧ್ಯಾಪಕನಾಗಿದ್ದಾಗಲೇ 'ಕ್ವಿಟ್ ಇಂಡಿಯಾ' ಚಳವಳಿ ಆರಂಭವಾಗಿದ್ದು, ವಿದ್ಯಾರ್ಥಿಗಳು ಕೆ. ವಿ. ವಸಂತ್ ಅವರ ನಾಯಕತ್ವದಲ್ಲಿ ಮುನ್ನುಗ್ಗಿದ್ದರು. ಇದೇ ಕಾಲದಲ್ಲಿ ಎ. ಜಿ. ರಾಮಚಂದ್ರರಾಯರೂ ಸರ್ದಾರ್ ಕೆ. ಎ. ವೆಂಕಟರಾಮಯ್ಯನವರೂ ನಮ್ಮ ಮನೆಗೆ ನನ್ನ ಅಣ್ಣನ ಜೊತೆ ವಿಚಾರವಿನಿಮಯಕ್ಕೆ ಬಂದರು. ನಾವು ಮೂಲತಃ ಹಾರೋಹಳ್ಳಿಯವರಾಗಿದ್ದು ವೆಂಕಟರಾಮಯ್ಯನವರು ನಮ್ಮ ಕನಕಪುರ ತಾಲ್ಲೂಕಿನವರು. ಡಾ|| ಹರ್ಡೀಕರರ ನಿಕಟವರ್ತಿಗಳಾಗಿದ್ದ ಅವರು ಹಾಗೂ ಅವರ ಪತ್ನಿ ಗೌರಮ್ಮನವರು ಸಿದ್ದಾಪುರ ತಾ||ನಲ್ಲಿ ಕರನಿರಾಕರಣ ಸಂಘಟಿಸಿ ಖ್ಯಾತರಾದವರು. ಅವರ ಬಗ್ಗೆ ನಮಗೆ ಅಪಾರ ಅಭಿಮಾನ. ತಲೆಮರೆಸಿಕೊಂಡಿದ್ದ ಈ ನಾಯಕರು, ನಾವುಗಳು ಚಳವಳಿಯಲ್ಲಿ ಸಹಕರಿಸಬೇಕೆಂದು ಕೇಳಿಕೊಂಡಾಗ ನಾವಿಬ್ಬರೂ ಒಪ್ಪಿದೆವು. ಇದಾಗಿ 4-6 ದಿನಗಳಲ್ಲೇ ಅವರಿಬ್ಬರ ಮೇಲೂ ವಾರಂಟ್ ಹೊರಟಿತು. ಅವರು ಗುಪ್ತವಾಗಿ ಇರುತ್ತಿದ್ದು ನಾವಿಬ್ಬರೂ ಅವರ ಸಲಹೆಯಂತೆ ಹೊರಗೆ ನಿಂತು ಕೆಲಸಮಾಡುತ್ತಿದ್ದೆವು. ವೈ. ವಿ. ರಾಮಚಂದ್ರನ್, ಬುದ್ಧದಾಸ್, ಎಂ. ಎಚ್. ಷಾ, ದಿ|| ಕೊಟ್ರೆ ನಂಜಪ್ಪ, ಕುಂತಳಾ ಮುಂತಾದವರು ಆಗ ನನ್ನ ಸಹಕಾರಿಗಳು.

ಕಾರ್ಮಿಕ ಮುಷ್ಕರ ಒಂದನ್ನು ಸಂಘಟಿಸಲು ನಿರ್ಣಯಿಸಿದೆವು. ಆಗಲೇ ಕಾರ್ಮಿಕ ಮುಖಂಡರಾದ ಚಂಗಲಾರಾಧ್ಯ, ಡಿ. ವೆಂಕಟೇಶ್, ಫಿಲಿಪ್ಸ್, ರಾಮರಾವ್, ಕೆ. ಎಸ್. ಕುಮಾರನ್, ಚಲ್ಲಂ, ಜೆ. ಲಿಂಗಯ್ಯ ಇವರೆಲ್ಲರ ದಸ್ತಗಿರಿಯಾಗಿತ್ತು. ಎನ್. ಡಿ. ಶಂಕರ್ ಅವರು ದಸ್ತಗಿರಿಯಾಗಿ, ಕಮ್ಯುನಿಸ್ಟ್ ಎಂಬ ಕಾರಣದಿಂದ ಅವರ ಬಿಡುಗಡೆ ಆಗಿತ್ತು. ಶಂಕರ್ ಅವರನ್ನು ಕೆಲಸದಲ್ಲಿ ತೊಡಗಿಸದೆ, ಆಗ ಮಿಲ್‌ಗಳ ಮುಷ್ಕರ ಸಂಘಟನೆ ಅಸಾಧ್ಯವಾಗಿತ್ತು. ಎರಡು ಮೂರು ದಿನ ನಾನು ಈ ಬಗ್ಗೆ ಶಂಕರ್ ಅವರಲ್ಲಿ ಚರ್ಚಿಸಿದೆ. ದೇಶ ಸ್ವಾತಂತ್ರ್ಯ ಪಡೆಯಲು ಕೊನೆಯ ಅವಕಾಶ ಇದು, ಇದನ್ನು ಯಾವುದೇ ಕಾರಣ ಮುಂದೊಡ್ಡಿ ಕಳೆಯುವುದು ಆತ್ಮಘಾತುಕ ಎಂದೆಲ್ಲ ಹೇಳಿ ಅವರ ಮನ ಒಲಿಸಿಕೊಂಡೆ. ಅವರ ಮತ್ತು ವೆಂಕಟರಾಮಯ್ಯನವರ ಭೇಟಿ ಮಾಡಿಸಿದೆ. ತಾವು ಕಮ್ಯುನಿಸ್ಟ್ ಪಾರ್ಟಿಗೆ ರಾಜೀನಾಮೆ ನೀಡಿರುವುದಾಗಿಯೂ ಕ್ವಿಟ್ ಇಂಡಿಯಾ ಚಳವಳಿಗೆ ಧುಮುಕಿರುವುದಾಗಿಯೂ ಒಂದು ಹೇಳಿಕೆಯನ್ನು ಶಂಕರ್ ಪತ್ರಿಕೆಗಳಿಗೆ ಇತ್ತರು. ಅವರನ್ನು ರತ್ನವಿಲಾಸ್ ರಸ್ತೆಯ ಬಿ. ವೆಂಕಟರಾಯರ ಮನೆಯಲ್ಲಿ ಇರಿಸಿದೆ. ಬಿನ್ನಿ ಮಿಲ್, ರಾಜಾ ಮಿಲ್, ಮಿನರ್ವಾ ಮಿಲ್ ಕಾರ್ಮಿಕ ನಾಯಕರನ್ನು ಶಂಕರ್, ಎ.ಜಿ.ಆರ್. ಹಾಗೂ ಸರ್ದಾರ್ ಅವರ ಭೇಟಿಗೆ ಕರೆತಂದೆವು. ಸೆಪ್ಟೆಂಬರ್ 19ರಿಂದ ಮುಷ್ಕರ ಆರಂಭಿಸುವ ನಿರ್ಧಾರ ಆಯಿತು. ಅದರಂತೆ ಈ ಮೂರು ಮಿಲ್ಲುಗಳ 10,000 ಕಾರ್ಮಿಕರು ಶಿಸ್ತಿನಿಂದ ಮುಷ್ಕರಹೂಡಿದರು. ಇದರ ಹಿಂದೆಯೇ ಬೆಂಗಳೂರಿನ ಹಾಗೂ ಸಂಸ್ಥಾನದ ಇತರ ಕಡೆಯ ಕಾರ್ಮಿಕರೂ ಮುಷ್ಕರ ಹೂಡಿದರು (ಈ ವಿಚಾರ ಹಿಂದೆ ಹೇಳಿದೆ). ಈ ಬೃಹತ್ ಪ್ರಮಾಣದ ಮುಷ್ಕರಗಳಿಂದ ಚಳವಳಿಗೆ ಜನಬೆಂಬಲ

ಜೋರೆತಂತೆ ಆಯಿತು. ಇದರಿಂದ ಸಂಸ್ಥಾನದಲ್ಲಿ ಚಳವಳಿ ವ್ಯಾಪಕವಾಗಿ, ಬಹು ಮುಖವಾಗಿ ಹರಡಲು ಕಾರಣವಾಯಿತು.

ಈ ಅವಧಿಯಲ್ಲಿ ನಮ್ಮ ಮನೆಯನ್ನು ಪೋಲೀಸರು 3–4 ಸಲ ಶೋಧನೆಮಾಡಿದರು. ಪೋಲೀಸರಿಗೆ ನನ್ನ ಅಣ್ಣನವರಮೇಲೆ ತುಂಬಾ ಅನುಮಾನವಿದ್ದು ನನ್ನಮೇಲೆ ಅಷ್ಟೊಂದು ಇರಲಿಲ್ಲ. ಕಾರಣ, ನಾನು ತಪ್ಪದೆ ಶಾಲೆಗೆ ಹೋಗುತ್ತಿದ್ದು ದಿನಾ ಹಾಜರಿ ಹಾಕುತ್ತಿದ್ದೆ. (ವಿದ್ಯಾರ್ಥಿ ಮುಷ್ಕರದಿಂದ ಶಾಲೆ ಮಾತ್ರ ನಡೆಯುತ್ತಿರಲಿಲ್ಲ.) ಬೆಳಗ್ಗೆ, ರಾತ್ರಿ ಚಳವಳಿಯ ಕೆಲಸಮಾಡುತ್ತಿದ್ದೆ. 19–12–1942ರಂದು ರಾತ್ರಿ ಪೋಲೀಸರು ನಮ್ಮ ಮನೆಗೆ ಮುತ್ತಿಗೆಹಾಕಿ ಶೋಧನೆ ನಡೆಸಿದರಲ್ಲದೆ ನನ್ನನ್ನು ಬಂಧಿಸಿ, ಸೆನಟಾಫ್ ಪೋಲೀಸ್ ಸ್ಟೇಶನ್‌ಗೆ ಒಯ್ದರು. ತುಮಕೂರಿನ ಖಾದಿ ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದ ರಾಮಚಂದ್ರ ಎಂಬವರನ್ನು ಆಗಲೇ ಬಂಧಿಸಿ ತಂದಿದ್ದರು. ಅವರಿಗೆ ನಾಲ್ಕು ದಿನಗಳ ಹಿಂದೆ ಕೈಬಾಂಬುಗಳನ್ನು ನಾನು ಕೊಟ್ಟಿದ್ದೆ. ಅವರು ಮಾಲು ಸಮೇತ ಸಿಕ್ಕಿಬಿದ್ದಿದ್ದು, ಪೋಲೀಸರು ಬಲಿಹೊಡೆದು ಅವರ ಬಾಯಿಬಿಡಿಸಿದ್ದರು. ಪೋಲೀಸರು ಎಷ್ಟು ಪ್ರಯತ್ನಿಸಿದರೂ ನಾನು ಮಾತ್ರ ಬಾಯಿಬಿಡಲಿಲ್ಲ. ಕೊನೆಗೆ ರಾಮಚಂದ್ರ ಅವರ ಮೇಲೆ ಕೇಸುಹಾಕಿ, ನನ್ನನ್ನು ಒಂದು ವರ್ಷಕಾಲ ಸ್ಥಾನಬದ್ಧತೆಯಲ್ಲಿ ಇಟ್ಟಿದ್ದರು. ಅವರಿಗೆ ಐದು ತಿಂಗಳು ಶಿಕ್ಷೆ ಆಯಿತು.

1947ರಲ್ಲಿ ನಾವು ಕಾಂಗ್ರೆಸ್ಸಿನೊಳಗೆ 'ಪ್ರಗತಿಪಕ್ಷ'ವನ್ನು ಸ್ಥಾಪಿಸಿಕೊಂಡಿದ್ದು ಅದರ ಮುಖಪತ್ರವಾಗಿ 'ಪೌರವಾಣಿ'ಯನ್ನು ಆರಂಭಿಸಿದೆವು. 'ಮೈಸೂರು ಚಲೋ' ಚಳವಳಿಗೆ ಎರಡು ತಿಂಗಳ ಮೊದಲು 'ಪೌರವಾಣಿ' ವಾರಪತ್ರಿಕೆಯಾಗಿದ್ದುದನ್ನು ದಿನಪತ್ರಿಕೆಯಾಗಿ ಮಾಡಿದೆವು. ಎಂ. ಎನ್. ಜೋಯಿಸ್, ಡಿ|| ಭದ್ರಣ್ಣ, ಎಂ. ಎನ್. ಸೀತಾರಾಮಯ್ಯ, ಕೆ. ಎಸ್. ಕುಮಾರನ್, ಕೆ. ಆರ್. ಶ್ರೀಧರ್, ಡಿ|| ಎಸ್. ಎಸ್. ಶಾಸ್ತ್ರಿ ಇವರುಗಳು ಈ ಪತ್ರಿಕೆಗಾಗಿ ಮಾಡಿದ ದುಡಿಮೆ ಅಪಾರ. ನಾನು ಈ ಪತ್ರಿಕೆಯ ಸಂಪಾದಕನಾದೆ. 'ಮೈಸೂರು ಚಲೋ' ಚಳವಳಿ ಆರಂಭವಾಗುವ 10 ದಿನಗಳಿಗೆ ಮೊದಲು ಡಿ|| ಟಿ. ಟಿ. ಶರ್ಮರ ಒಂದು ಲೇಖನಮಾಲೆಯನ್ನು ಅದರಲ್ಲಿ ಆರಂಭಿಸಿದೆವು. ಅವರ ಒಂಬತ್ತನೆಯ ಲೇಖನ ಅಚ್ಚಾಗಬೇಕಾಗಿದ್ದ ರಾತ್ರಿ ಒಂದು 'ಸೆನ್ಸಾರ್ ಆರ್ಡರ್' ಅನ್ನು ಸಂಪಾದಕನಾದ ನನ್ನ ಮೇಲೆ ಜಾರಿ ಮಾಡಿದರು. ಪತ್ರಿಕೆಯಲ್ಲಿ ಯಾವುದೇ ಲೇಖನ, ಅಗ್ರಲೇಖನ ಪ್ರಕಟ ಆಗುವ ಮೊದಲು ಸರ್ಕಾರಕ್ಕೆ ಅದನ್ನು ಕಳುಹಿಸಿ ಒಪ್ಪಿಗೆ ಪಡೆಯಬೇಕೆಂದು ಆ ಆಜ್ಞೆಯಲ್ಲಿ ನಮೂದಿಸಲಾಗಿತ್ತು. ಈ ಆಜ್ಞೆಯನ್ನು ಕಡೆಗಣಿಸಿ, ಶರ್ಮರ 9–10ನೆಯ ಲೇಖನಗಳನ್ನು ಪ್ರಕಟಿಸಿ, ಬೇಜವಾಬ್ದಾರಿ ಸರ್ಕಾರದ ಇಂತಹ ಆಜ್ಞೆಗಳಿಗೆ ತಲೆಬಾಗುವುದಿಲ್ಲವೆಂದು ಸರ್ಕಾರಕ್ಕೆ ತಿಳಿಸಿದೆ. ಮಾರನೆಯ ದಿನ ಮುದ್ರಣಾಲಯ ಮುಟ್ಟುಗೋಲಾಯಿತು.

ನಾನು ಮತ್ತು ಶ್ರೀಧರ್ ಸೆಪ್ಟೆಂಬರ್ 2ಕ್ಕೆ ಹಿಂದೂಪುರಕ್ಕೆ ಹೋದೆವು. ಅಲ್ಲಿನ ಸೇವಾಮಂದಿರ ವಿದ್ಯಾಸಂಸ್ಥೆಯ ಸಂಸ್ಥಾಪಕ ದಿ|| ಲಿಂಗಣ್ಣ ಅವರ ಸಹಾಯದಿಂದ 7-9-1947ರಲ್ಲಿ 'ಪೌರವಾಣಿ'ಯನ್ನು ಮತ್ತೆ ಆರಂಭಿಸಿದೆವು. ಪತ್ರಿಕೆಯು ಅಲ್ಲಿಂದ 38 ದಿನಗಳ ಕಾಲ ಪ್ರಕಟವಾಯಿತು. ಕೆ. ಆರ್. ಶ್ರೀಧರ್, ತುಮಕೂರಿನ ಮುದ್ದಪ್ಪ, ಮಾಣಿಕ್‌ಹಳ್ಳಿಯ ತಿಮ್ಮಾರೆಡ್ಡಿ, ಕಳ್ಳಂಬೆಳ್ಳದ ಬರಗೂರು ರಾಮೇಗೌಡರು, ಕೆ. ಎಲ್. ಶರ್ಮ, ಗೌರಿಬಿದನೂರು ತಾ|| ಮೇಳ್ಯದ ವಿ. ಒ. ನಾರಾಯಣಾಚಾರಿ, ಇವರುಗಳ ಸಹಾಯ, ಸಹಕಾರದಿಂದ ಗೌರಿಬಿದನೂರು, ಮಧುಗಿರಿ, ಪಾವಗಡ, ಸಿರಾ ತಾಲ್ಲೂಕುಗಳ ಸರಹದ್ದಿನ ಹಳ್ಳಿಗಳಲ್ಲಿ ಸತ್ಯಾಗ್ರಹ ಸಂಘಟಿಸಿದೆವು. ಶ್ಯಾನುಭೋಗ, ಪಟೇಲರ ರಾಜೀನಾಮೆ ಪಡೆದು ಅವುಗಳನ್ನು ಚೀಫ್ ಸೆಕ್ರೆಟರಿ ಅವರಿಗೆ ರವಾನಿಸಿದೆವು. ಅಜಾದ್ ಮೈಸೂರು ಸರ್ಕಾರ ಸ್ಥಾಪಿಸಿ, ಮೈಸೂರಿನ ಪ್ರಜೆಗಳ ಪರ ಒಂದು ಪ್ರಸಿದ್ಧಿಪತ್ರಿಕೆ ಹೊರಡಿಸಲಾಯಿತು. ಪ್ರತಿಸರಕಾರದ ಕೂಗು ಅಠಾರಾ ಕಚೇರಿಗೆ ಮುಟ್ಟಲು, ಈ ಸುದ್ದಿ ನಿರಾಧಾರವೆಂದು ದಿವಾನರು ಪತ್ರಿಕಾ ಹೇಳಿಕೆ ನೀಡಿದರು. ಚೀಫ್ ಸೆಕ್ರೆಟರಿ ವೇದವ್ಯಾಸಾಚಾರ್ಯರು ಎರಡು ಬಾರಿ ಗಡಿ ಜಿಲ್ಲೆಗಳಿಗೆ ಭೇಟಿ ಇತ್ತು ಚಳವಳಿ ಹರಡದಂತೆ ತಡಗಟ್ಟಬೇಕೆಂದು ಅಧಿಕಾರಿಗಳಿಗೆ ಸೂಚನೆ ನೀಡಿದರು. ಗೌರಿಬಿದನೂರು ತಾ|| ಮೇಳ್ಯ, ಚಂದನದೂರು, ಹುಣಿಸೇನಹಳ್ಳಿ, ಬೈಚಾಪುರ, ಪಿಳಲೆ, ಬೇಲಾಕುಂಟ, ತುಮಕೂರು ಜಿ|| ಶ್ರಾಮಂಡಹಳ್ಳಿ, ವಿಠಲಾಪುರ, ಓಬಳಾಪುರ, ಪೋಲೇನಹಳ್ಳಿ, ದೊಡ್ಡಧಾಳಿಘಟ್ಟ, ಶಾಮಗಾನಹಳ್ಳಿ, ಕೊಡಿಗೇನಹಳ್ಳಿಗಳ ಜನರು ಅಜಾದ್ ಮೈಸೂರು ಸರಕಾರಕ್ಕೆ ಅಧೀನರಾಗಿರುವುದಾಗಿ ಘೋಷಿಸಿದರು. ಐದೇ ವಾರಗಳ ಅವ್ಯಾಹತ ಹೋರಾಟದನಂತರ ಸರಕಾರ ಮಣಿಯಿತು.

**ಎಚ್. ಎಸ್. ದೊರೆಸ್ವಾಮಿ**
(ಹನುಮಂತನಗರ, ಬೆಂಗಳೂರು_19)

ಮೈ.ಬೆಂ. 5

# ಬಿ. ಎಂ. ವೆಂಕಟೇಶಮೂರ್ತಿ

ಜನನ : 1918 ಉದ್ಯೋಗ : ? ವಿಳಾಸ : 76, II ಮೇನ್, ಚಾಮರಾಜಪೇಟೆ, ಬೆಂಗಳೂರು-18

---



ಎಸ್.ಎಸ್.ಎಲ್.ಸಿ. ಪಾಸಾದನಂತರ ನಾನು ಬಿನ್ನಿ ಮಿಲ್‌ನಲ್ಲಿ ಸೇವೆಸಲ್ಲಿಸುತ್ತಿರಲು, ಆಗ ಕಾರ್ಮಿಕ ನಾಯಕರಾದ ಎನ್. ಡಿ. ಶಂಕರ್, ಕೆ. ಎಸ್. ಕುಮಾರನ್ ಮತ್ತು ಟಿ. ರಾಮರಾವ್ ಕಾರ್ಮಿಕ ಸಂಘಟನೆ ಹಾಗೂ ರಾಷ್ಟ್ರೀಯಜಾಗೃತಿಗೆ ದುಡಿಯುತ್ತಿದ್ದರು. 1940ರಲ್ಲಿ ಬಿನ್ನಿ ಮಿಲ್‌ನಲ್ಲಿ ದೀರ್ಘಕಾಲ ಮುಷ್ಕರವಾಗಿ, ನಮ್ಮ ಬೇಡಿಕೆಗಳು ಯಶ ಕಂಡವು. ನರಸಿಂಹಯ್ಯಂಗಾರ್, ಶಂಕರಪ್ಪ, ಡಿ. ವೆಂಕಟೇಶ್ ಆಗ ನಮ್ಮ ಮಿಲ್‌ನಲ್ಲಿ ನಾಯಕರಾಗಿದ್ದರು. ಮಿನರ್ವಾ ಮಿಲ್‌ನ ಉದ್ಯೋಗಿ ಜೆ. ಲಿಂಗಯ್ಯ ಕೂಡ ಸಹಕರಿಸಿದ್ದರು. 1942ರಲ್ಲಿ ಕೂಡ ದೀರ್ಘಕಾಲ ಮುಷ್ಕರ ಆಯಿತು. ಆಗ ನಮ್ಮ ಮಿಲ್ಲಿನ ಅನೇಕ ಕಾರ್ಮಿಕರನ್ನು ಬಂಧಿಸಿ, ಸುಮಾರು 40 ಕಾರ್ಮಿಕರನ್ನು ಮಾತ್ರ ಒಂದು ವರ್ಷದವರೆಗೆ ಸ್ಥಾನಬದ್ಧತೆಯಲ್ಲಿ ಇಟ್ಟರು. ನಾನು ಬೆಂಗಳೂರು ಮತ್ತು ಮೈಸೂರು ಜೈಲುಗಳಲ್ಲಿ ಒಂದು ವರ್ಷ ಸ್ಥಾನ ಬದ್ಧನಾಗಿ ಇದ್ದೆ. ಇದಲ್ಲದೆ 'ಮೈಸೂರು ಚಲೋ' ಚಳವಳಿಯಲ್ಲೂ ನಾನು ಪಾಲುಗೊಂಡಿದ್ದು, ಆಗ ಬರೆದಿಟ್ಟ ಡೈರಿಯನ್ನು ನಿಮ್ಮಲ್ಲಿ ಪ್ರಕಟಣೆಗೆ ಕಳುಹಿಸಿದ್ದೇನೆ. (ಡೈರಿಯಲ್ಲಿನ ಪ್ರಧಾನ ಅಂಶಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿ ಕೊಟ್ಟಿದೆ—ಸಂ||).

1-9-1947: ಬೆಳಗ್ಗೆ 11ಕ್ಕೆ ಸುಭಾಷ್ ನಗರದಲ್ಲಿ ಧ್ವಜಾರೋಹಣ ಮಾಡಿ ಕೆ. ಸಿ. ರೆಡ್ಡಿಯವರು, "ಮೈಸೂರು ಧ್ವಜವನ್ನು ನಾವು ಗೌರವಿಸುವುದಿಲ್ಲ. ಏಕೆಂದರೆ ಆಗಸ್ಟ್ 15ಕ್ಕೆ ಗೌರ್ನಮೆಂಟ್ ಆಫೀಸುಗಳ ಮೇಲೆ ರಾಷ್ಟ್ರಧ್ವಜ ಹಾರಿಸಲಿಲ್ಲ. ಇಡೀ ಪ್ರಪಂಚವೇ ಭಾರತದ ಸ್ವಾತಂತ್ರ್ಯದಿನ ಆಚರಿಸುವಾಗ, ನಮ್ಮ ಮಹಾರಾಜರೇಕೆ ರಾಷ್ಟ್ರಧ್ವಜವನ್ನು ಹಾರಿಸಲಿಲ್ಲ?" ಎಂದು ಕೇಳಿದರಲ್ಲದೆ, ಸಂಜೆ ಬಸಪ್ಪಾ ಪಾರ್ಕಿನಲ್ಲಿ ಬಹಿರಂಗ ಸಭೆ ನಡೆಸುವುದಾಗಿ ಪ್ರಕಟಿಸಿದರು. ಸುಭಾಷ್‌ನಗರದಿಂದ ಮೆರವಣಿಗೆ ಹೊರಟು ಆನಂದರಾವ್ ಸರ್ಕಲ್‌ನಿಂದ ಮೈಸೂರ್ ಬ್ಯಾಂಕ್ ಸರ್ಕಲಿಗೆ ಬಂದಾಗ ಹಿಂದೂಸ್ತಾನ್ ಏರ್‌ಕ್ರಾಫ್ಟ್‌ನ ಕೂಲಿಕಾರ ಸೋದರರು ಕಾಲುನಡೆಯಲ್ಲಿಯೇ 9 ಮೈಲು ನಡೆದು

ಬಂದು ನಮ್ಮ ಗುಂಪಿಗೆ ಸೇರಿಕೊಂಡರು. ದೊಡ್ಡಪೇಟೆ ಮಾರ್ಗವಾಗಿ ಮಾರ್ಕೆಟ್ ಚೌಕ, ಮಂಡಿಪೇಟೆ, ಪೋಲೀಸ್ ಟ್ರೇನಿಂಗ್ ಸ್ಕೂಲ್‌ನಿಂದ ಅರಳೇಪೇಟೆ ಕಾಂಗ್ರೆಸ್ ಆಫೀಸಿಗೆ ಬಂದು ಮೆರವಣಿಗೆ ಚದರಿತು. ಆಗ ಮಧ್ಯಾಹ್ನ 1 ಗಂಟೆ. ಸಂಜೆ ಪಾರ್ಕಿನಲ್ಲಿ 2 ಲಕ್ಷ ಜನ ಸೇರಿದ್ದರು. ಕೆ. ಸಿ. ರೆಡ್ಡಿ, ಕೆ. ಟಿ. ಭಾಷ್ಯಂ, ಸಿದ್ದಲಿಂಗಯ್ಯ ಭಾಷಣ ಮಾಡಿದರು. 4-9-47ರಂದು ಅಧ್ಯಕ್ಷರ ಮುಖಂಡತ್ವದಲ್ಲಿ ವರ್ಕಿಂಗ್ ಕಮಿಟಿ ಸಮೇತ ಕಾಲುನಡಿಗೆಯಲ್ಲಿ ಹೊರಟು 14-9-47ಕ್ಕೆ ಅರಮನೆ ಮುಂದೆ ಸತ್ಯಾಗ್ರಹ ಮಾಡುವುದಾಗಿ ತಿಳಿಯಬಂತು. 2-9-47ಕ್ಕೆ ಊರಲ್ಲಿ ಅಲ್ಲಲ್ಲಿ ಬಹಿರಂಗ ಸಭೆಗಳಾದವು. 3-9-47ಕ್ಕೆ ಸಂಜೆ ಬಸಪ್ಪಾ ಪಾರ್ಕಿನಲ್ಲಿ ತಾತಾಚಾರ್ಯ ಶರ್ಮ ಅವರ ಭಾಷಣ ಸ್ವಾರಸ್ಯದಿಂದಿತ್ತು. ಎಷ್ಟು ಹೊತ್ತಾದರೂ ಜಾಗ ಬಿಡುವ ಮನಸ್ಸು ಬರಲಿಲ್ಲ. ಮನೆಗೆ ಬಂದು ಮಲಗಿದಾಗ ನನ್ನ ಸ್ನೇಹಿತರಾದ ಮುನಿಯಪ್ಪ ಅವರ ಪತ್ನಿ ಲಕ್ಷ್ಮೀದೇವಿ ಸಮೇತ 8-10 ಜನ ಸತ್ಯಾಗ್ರಹಿಗಳು ಬಂದು ನಮ್ಮ ಮನೆಯಲ್ಲಿ ಮಲಗಿದರು. ಅವರು ಒಂದನೆಯ ತಾರೀಕಿನಿಂದ ಹಳ್ಳಿಹಳ್ಳಿಗಳಲ್ಲಿ ಪ್ರಚಾರಮಾಡಿ 4-9-47ರಲ್ಲಿ ಅಧ್ಯಕ್ಷರನ್ನು ಬೀಳ್ಕೊಡಲು ಬೆಂಗಳೂರಿಗೆ ಬಂದಿದ್ದರು. ರಾತ್ರಿ 2-30ಕ್ಕೆ ಸ್ನೇಹಿತರಾದ ಮೃತುಂಜಯ ಮತ್ತು ನನ್ನ ತಮ್ಮ ಗೋವಿಂದರಾಜು ಬಂದು ಕಾಂಗ್ರೆಸ್ ಆಫೀಸಿನಲ್ಲಿದ್ದ ನಾಯಕರನ್ನೂ ಇತರರನ್ನೂ ದಸ್ತಗಿರಿ ಮಾಡಿದುದಾಗಿ ತಿಳಿಸಿದರು. ಯಲಹಂಕದ ರಂಗಪ್ಪನನ್ನು ಕೇಶವಯ್ಯಂಗಾರರ ಮನೆಗೆ ಕಳುಹಿಸಲು, ಆತ 3-30ಕ್ಕೆ ಸೈಕಲ್‌ನಿಂದ ಹೋಗಿಬಂದು ಅವರದೂ ದಸ್ತಗಿರಿಯಾದ ವಿಚಾರ ತಿಳಿಸಿದ. ನಾನು ಗುಂಡೇನಹಳ್ಳಿ ಸಂಜಪ್ಪನವರಲ್ಲಿ ಹೋಗಿ ಚರ್ಚಿಸಲು, ಅವರು ಅಧ್ಯಕ್ಷರು ಹಾಕಿದ ಕಾರ್ಯಕ್ರಮದ ಮೇರೆಗೆ 9-05ಕ್ಕೆ ಹೊರಡುವವರೆಲ್ಲ ಹೊರಡಿ ಎಂದರು. ನಾನು ಮನೆಗೆ ಬರುವಾಗ 4-30. ನಾವು ಹೊರಡುವ ಸಿದ್ಧತೆ ಮಾಡಿದೆವು. 6-00ಕ್ಕೆ ಮಳವಳ್ಳಿಯಿಂದ ಜೆ. ಲಿಂಗಯ್ಯ ಬಂದರು. ನಮ್ಮಲ್ಲಿದ್ದ ಯಲಹಂಕದವರು ತಾವು ತಮ್ಮ ಊರಲ್ಲೇ ಸತ್ಯಾಗ್ರಹ ಮಾಡುವುದಾಗಿ ಹೇಳಿದರು. ಅಷ್ಟರಲ್ಲಿ ಮನೆ ಮುಂದೆ ಪೋಲೀಸರ ಓಡಾಟ ಶುರು ಆಗಿತ್ತು. ನಾನೂ ಲಿಂಗಯ್ಯ ನನ್ನ ಸ್ನೇಹಿತ ಹೇಮಣ್ಣನವರ ಮನೆಗೆ ಹೋದೆವು. ಹೇಮಣ್ಣ ಹೊರಗೆ ಹೋಗಿ ಸಮಾಚಾರ ತಿಳಿದು ಬಂದರು. ನಮ್ಮಲ್ಲಿದ್ದ ಯಲಹಂಕದವರು ಟ್ಯಾಕ್ಸಿ ಮಾಡಿ ತಮ್ಮ ಊರಿಗೆ ಹೋದರೆಂದು ತಿಳಿಯಿತು. ನಾನೂ ಲಿಂಗಯ್ಯ ಮತ್ತೆ ಮನೆಗೆ ಬಂದು ಸ್ನಾನ, ತಿಂಡಿ ಮುಗಿಸಿ, ನನ್ನ ತಾಯಿಗೆ ನಮಸ್ಕಾರ ಮಾಡಿ 9-05ಕ್ಕೆ ಸರಿಯಾಗಿ 3ನೆಯ ಡಿವಿಜನ್ ಕಾಂ|| ಆಫೀಸಿಗೆ ಹೋಗಲು ಅಲ್ಲಿ ನಮ್ಮನ್ನು ಬೀಳ್ಕೊಡಲು ಸಾವಿರಾರು ಜನ ಸೇರಿದ್ದರು. ನಾವು ಯಲಹಂಕದವರೊಬ್ಬ ಕೂಡಿ. ಭಾಷಣ ಮಾಡಿ ಹೊರಟರಲು, ಹಾರ ಹಾಕಿ. ಜಯಕಾರಮಾಡಿ ಬೀಳ್ಕೊಟ್ಟರು. ನಾವು ಹೊರಟಂತೆ ಡಿ.ಎಸ್.ಪಿ. ಚಾಂಡಿಯವರು ನಮ್ಮನ್ನು ಬಂಧಿಸಿ ಮುನ್ಸಿಫ್ ಕೋರ್ಟಿಗೆ ಒಯ್ದರು. ಮೊದಲೇ ಬಂಧಿತರಾದ ಕೆಲವರು ಅಲ್ಲಿದ್ದರು. ನಾವು

ಒಟ್ಟು 30 ಜನ ಆದೆವು. ನಮ್ಮ ಒಬ್ಬ ಪ್ರಮುಖನನ್ನು ಅಧಿಕಾರಿಗಳ ಬಳಿಗೆ 10–30ಕ್ಕೆ ಕಳುಹಿಸಿ ನಮಗೆ ತಿಂಡಿ ಬೇಕೆಂದು ತಿಳಿಸಿದೆವು. ಉತ್ತರ ಬಾರದಿರಲು ಜಯಕಾರ ಹಾಕತೊಡಗಿದೆವು. 12-45ಕ್ಕೆ ಒಂದು ಲಾರಿಯಲ್ಲಿ ಕಲಸನ್ನ, ಮಜ್ಜಿಗೆ ಅನ್ನ ತಂದು ನಾಯಿಗಳಿಗೆ ಹಾಕಿದಂತೆ ಹಾಕಿದರು. ರಾತ್ರಿ ಇದೇ ರೀತಿ ಇದ್ದಲ್ಲಿ ಊಟಮಾಡುವುದಿಲ್ಲ, ಎಂದು ತಿಳಿಸಿದೆವು. ಊರಲ್ಲೆಲ್ಲ ಜಯಕಾರ ಕೇಳಿಬರುತ್ತಿತ್ತು. ನಮ್ಮನ್ನು ಕಾಯಲು 500 ಪೋಲೀಸು, ಮಿಲಿಟರಿ ಇತ್ತು. ಸಂಜೆ ಏಳರವರೆಗೆ ಹಾಗೇ ಬಿಟ್ಟಿರಲು, ನಮ್ಮನ್ನು ಯಾಕೆ ಇಲ್ಲಿಗೆ ತಂದಿದ್ದೀರಿ, ಎಂದು ಕೇಳಿದೆವು. ಸಿ.ಐ.ಡಿ. ರಾಜಗೋಪಾಲ ಅಯ್ಯಂಗಾರ್ ಬರುತ್ತಾರೆ, ಎಂದರು. 9 ಗಂಟೆಯ ವರೆಗೆ ಊಟ ಬಾರದ್ದರಿಂದ ನಾವೆಲ್ಲ ಊಟಮಾಡಬಾರದೆಂದು ನಿರ್ಧರಿಸಿದೆವು. ಊರಲ್ಲಿ ಗೋಲೀಬಾರಾಗಿ ಕೆಲವರು ಸತ್ತರೆಂದು ವದಂತಿ ಇತ್ತು. ರಾತ್ರೆ 10ಕ್ಕೆ ಊಟಕ್ಕೇಳಿ ಎಂದಾಗ ನಾವು ಊಟ ಮಾಡಲು ನಿರಾಕರಿಸಿದೆವು. ಜೆ. ಲಿಂಗಯ್ಯನವರಿಗೆ ವಾರಂಟ್ ಇದ್ದುದರಿಂದ ಅವರನ್ನು ಇಟ್ಟುಕೊಂಡು, ಉಳಿದವರನ್ನೆಲ್ಲ ಬಸ್ಸು ಹತ್ತಿಸಿ, ರಾತ್ರಿ 12ರ ನಂತರ ಹೊಸೂರು ರೋಡಿನಲ್ಲಿ 12 ಮೈಲಿ ದೂರ ಕಾಡಿನಲ್ಲಿ ಇಳಿಸಿದರು. ನಾವು 14–9-1947ಕ್ಕೆ ಮೈಸೂರಿಗೆ ಹೋಗಲೇಬೇಕೆಂದು ನಿರ್ಧರಿಸಿ, ನಮ್ಮಲ್ಲಿ ಎರಡು ಗುಂಪು ಮಾಡಿದೆವು. ಒಂದು ಗುಂಪಿಗೆ ಶ್ರೀನಿವಾಸಮೂರ್ತಿ, ಇನ್ನೊಂದಕ್ಕೆ ನಾನು ಪ್ರಮುಖರಾಗಿ, ಹಳ್ಳಿ ಹಳ್ಳಿಗಳಲ್ಲಿ ಪ್ರಚಾರ ಮಾಡುತ್ತ ಮೈಸೂರಿಗೆ ಹೋಗುವುದು ಎಂದುಕೊಂಡೆವು. ಬೊಮ್ಮನಹಳ್ಳಿ ರಾತ್ರಿ 3 ಗಂಟೆಗೆ ತಲಪಿದೆವು. ಅಲ್ಲಿ ಒಂದು ಹರಿಕಥೆ ನಡೆದಿದ್ದು ಅದು ಮುಗಿಯುವ ಹೊತ್ತಿಗೆ ನಾವು ಹೋಗಿ ಜಯಕಾರಮಾಡಲು ಪಟೇಲ್ ಬುಳ್ಳಪ್ಪ ನವರು ನಮ್ಮನ್ನು ಸ್ವಾಗತಿಸಿ, ವಿಚಾರವನ್ನೆಲ್ಲ ತಿಳಿದು ಅಡುಗೆ ಮಾಡಿಸುವುದಾಗಿ ಹೇಳಿದರು. ಬೆಂಗಳೂರಲ್ಲಿ ಗೋಲೀಬಾರಲ್ಲಿ ಜನ ಸತ್ತ ಕಾರಣ ನಾವು ಉಪವಾಸ ಮಾಡುವುದಾಗಿ ಹೇಳಿದಾಗ ಅವರು ಮರುಗಿದರು. ಮಲಗಲಿಕ್ಕೆ ಒಂದು ಮನೆ ಕೊಟ್ಟರು. ಬೆಳಗ್ಗೆ (5-9-47) 7ಕ್ಕೆ ಧ್ವಜಾರೋಹಣ ಮಾಡಿ ವಂದೇ ಮಾತರಂ ಹೇಳಿ, ಊಟ ಮುಗಿಸಿ ಮುಂದೆ ಹೊರಟೆವು. ಮಡಿವಾಳದಲ್ಲಿ ಕಾಫಿ, ತಿಂಡಿ ಆತಿಥ್ಯ ಆಯಿತು. ಪ್ರಚಾರ ಮುಗಿಸಿ ಮುಂದೆ ಹೋಗಲು, ದಾರಿಯಲ್ಲಿ ಅಣ್ಣಯ್ಯ ರೆಡ್ಡಿ ಎಂಬುವರು ಒತ್ತಾಯದಿಂದ ಕಾಫಿ ತಿಂಡಿ ಕೊಡಿಸಿ 10 ರೂ. ಕೊಟ್ಟು ಕಳುಹಿಸಿದರು. ಬೊರೆಸಾನಿಪಾಳ್ಯದಲ್ಲಿ ಭಾಷಣ ಮಾಡಿ, ಗೊಟ್ಟಿಗೆರೆಗೆ ಮಧ್ಯಾಹ್ನ ಹೋದೆವು. ಅಲ್ಲಿ ಮನೆಗೊಬ್ಬರಂತೆ ಊಟಕ್ಕೆ ಹೋದೆವು. ಬನ್ನೇರಘಟ್ಟದಲ್ಲಿ ಸತ್ಯಾಗ್ರಹಿಗಳನ್ನು ತಂದುಬಿಟ್ಟ ವಿಚಾರ ತಿಳಿದು ಸಂಗಪ್ಪ ಎಂಬ ಸತ್ಯಾಗ್ರಹಿಯನ್ನು ಅಲ್ಲಿಗೆ ಕಳುಹಿಸಲು, ಅವರು ಬರಲಿಲ್ಲ. ಸುಬ್ಬಯ್ಯ ಎಂಬವರನ್ನು ಕಳುಹಿಸಿದೆವು; ಅವರೂ ಬರಲಿಲ್ಲ. ನಾವು ಸಂಶಯಗೊಂಡು ಮುಂದೆ ಸಾಗಲು, ದಾರಿಯಲ್ಲಿ 4-30ಕ್ಕೆ ಆ ಇಬ್ಬರೂ ಬಂದು ನಮ್ಮನ್ನು ಸೇರಿಕೊಂಡರು. ಬನ್ನೇರಘಟ್ಟದಲ್ಲಿ 40 ಗಂಡಸರು 6 ಹೆಂಗಸರೂ ಇದ್ದು

ಅವರ ಊಟದ ವ್ಯವಸ್ಥೆ ಆಗಲಿಲ್ಲ ಎಂದು ತಿಳಿಯಿತು. ನಮ್ಮ ಕೈಲಾದ ಸಹಾಯ ಅವರಿಗೆ ಕಳುಹಿಸಿ, ನಾವು ಮಾತ್ರ ಕಾಡುಮಾರ್ಗವಾಗಿ ಕಗ್ಗಲಿಪುರಕ್ಕೆ ಹೋದೆವು. ಅಲ್ಲಿ ಒಬ್ಬರು ನಮ್ಮನ್ನು ಊಟಕ್ಕೆ ಕರೆದರು. ಅಲ್ಲಿ 6 ಸತ್ಯಾಗ್ರಹಿಗಳು ನಮ್ಮನ್ನು ಸೇರಿಕೊಂಡರು.

6-9-74: ಬೆಳಗ್ಗೆ ಧ್ವಜಾರೋಹಣಮಾಡಿ ಭಾಷಣಮಾಡುವಾಗ ಇನ್ನೊಂದು ಸತ್ಯಾಗ್ರಹಿಗಳ ತಂಡ ಅಲ್ಲಿಗೆ ಬಂದು ತಲಪಿತು. ಅದರ ನಾಯಕ ಪುಟ್ಟಶಂಕರಪ್ಪ. ಇದೇ ಪುಟ್ಟಶಂಕರಪ್ಪ 1942ರಲ್ಲಿ ಮೋಸಮಾಡಿ, ಸತ್ಯಾಗ್ರಹದ ಬಗ್ಗೆ ಅಪಪ್ರಚಾರದಲ್ಲಿ ತೊಡಗಿದ್ದರು. 1940ರ ಮುಷ್ಕರದಲ್ಲಿ ಅವರೇ ನಮ್ಮ ನಾಯಕರಾಗಿದ್ದು ನನ್ನನ್ನು ಮುಷ್ಕರಕ್ಕೆ ಎಳೆದವರು. ನನಗೆ ಅವರನ್ನು ಕಂಡಾಗ ಕೋಪ ಬಂದರೂ, ಈಗಲಾದರೂ ಸರಿದಾರಿಗೆ ಬಂದರಲ್ಲ, ಎಂದು ಸಮಾಧಾನಪಟ್ಟೆ. ಅವರಿಗೂ ಅಲ್ಲಿ ಸಭೆಯಲ್ಲಿ ಮಾತನಾಡಲು ಬಿಟ್ಟೆ. ಅವರ ಬಳಿ 13 ಜನ ಇದ್ದು ನನ್ನ ಬಳಿ 17 ಜನ ಇದ್ದರು. ನನ್ನ ಗುಂಪಿನ ಇಬ್ಬರನ್ನು ಅವರ ಗುಂಪಿಗೆ ಕೊಟ್ಟು ನಮ್ಮ ಗುಂಪಿನವರು ಬೇರೆ ದಾರಿಯಿಂದ ಹೊರಟು 10-30ಕ್ಕೆ ಸೋಮನಹಳ್ಳಿಗೆ ಹೋದೆವು. ಆಗ ಶನಿವಾರವಾಗಿ ಆಗತಾನೇ ಸ್ಕೂಲು ಮುಗಿದಿದ್ದು, ಹುಡುಗರ ಜೊತೆ ಪ್ರಭಾತಫೇರಿ ಮಾಡಿ ಸ್ಕೂಲಿನ ಹತ್ತಿರ ಭಾಷಣಮಾಡಿದೆವು. ಊರಲ್ಲಿ ಜನ ಊಟ ಹಾಕಿ, ಮುಂದಿನ ಊಟಕ್ಕೆ ಅನ್ನ, ಚಟ್ನಿ ಕಟ್ಟಿಕೊಟ್ಟರು. ಸಂಜೆ ಚಾಕಳ್ಳಿ ಸೇರಿದೆವು. ಶಂಕರಪ್ಪನ ತಂಡ ಅಲ್ಲಿಗೆ ಬಂತು. ನಮ್ಮಲ್ಲಿದ್ದ ಬುತ್ತಿ ಒಟ್ಟಾಗಿ ಉಂಡೆವು. ಊರವರು ಕಾಫಿ ಮಾಡಿ ಕೊಟ್ಟರು. ಬೆಳಗ್ಗೆ ಪ್ರಭಾತಫೇರಿ ಮಾಡಿ ಹರಿಜನ ಕಾಲೊನಿಯಲ್ಲಿ ಪ್ರಚಾರಮಾಡಿ, ಅವರಲ್ಲಿ ನೀರು ಕುಡಿದೆವು. ಊರ ಜನ ಬುತ್ತಿ ಕಟ್ಟಿಕೊಟ್ಟರು. ಪಟೇಲ, ಶಾನುಭೋಗರು ನಾವು ಹೊರಟಾಗ ಕಣ್ಣೀರುಗರೆದರು. ನಮ್ಮ ತಾಯಿತಂದೆಯರು ಸಹ ನಮ್ಮನ್ನು ಆ ರೀತಿಯಾಗಿ ನೋಡಲಾರರೆಂದು ಹೇಳಬೇಕು. ಮೂರು ವರ್ಷದಿಂದ ಅವರು ಬೇಜವಾಬ್ದಾರಿ ಸರ್ಕಾರಕ್ಕೆ ಕಂದಾಯವನ್ನೇ ಕೊಟ್ಟಿಲ್ಲವಂತೆ -37,000 ರೂ.ಬಾಕಿ ಇತ್ತು. ಅವರದಲ್ಲವೇ ಧೈರ್ಯ! ಅವರೇ ಸ್ವತಂತ್ರರೆನ್ನಬೇಕು. 9ಕ್ಕೆ ಗೋಪಳ್ಳಿಯಲ್ಲಿ ಪ್ರಚಾರಮಾಡಿ, ಬಿಲ್ಲೆದೊಡ್ಡಿ ತಲಪಿ ಅಲ್ಲಿ ಭಾಷಣ ಮಾಡುವಾಗ್ಗೆ 11-30. ಆ ಊರಿನವರು ಒಬ್ಬ ಸತ್ಯಾಗ್ರಹಿಯನ್ನು ನಮ್ಮ ಜೊತೆ ಕಳುಹಿಸಿದರು. ಒಂದು ತೋಟದಲ್ಲಿ ಎಳನೀರು ಕೊಟ್ಟರು. ಕೊಟ್ಟಿಕಾಳೂರಲ್ಲಿ ಪ್ರಚಾರಮಾಡಿ 4 ಗಂಟೆಗೆ ಮುದುವಾಡಿ ತಲುಪಿ, ಅಲ್ಲಿ ಕೊಳದಲ್ಲಿ ಸ್ನಾನಮಾಡಿ ಬಟ್ಟೆ ಒಗೆದು 6ಕ್ಕೆ ತಂದ ಬುತ್ತಿ ಉಂಡೆವು. ಊರವರು ಕಾಫಿ ಕೊಟ್ಟರು. ರಾತ್ರಿ ಚಿಕ್ಕನಹಳ್ಳಿಯಲ್ಲಿ ಮನೆಗೊಬ್ಬರಂತೆ ಹೋಗಿ ಉಂಡು ರಾತ್ರಿ ಭಾಷಣಮಾಡಿದೆವು.

8-9 47 ಸೋಮವಾರ ತಿಮ್ಮನಹಳ್ಳಿ ಗೌಡರು ಕಡಲೆಕಾಯಿ ಬೇಯಿಸಿ, ಬೆಲ್ಲ ತರಿಸಿಕೊಟ್ಟರು. ಅದನ್ನು ತಿಂದು ನೀರು ಕುಡಿದು, ಬೇಳಾಕುವಿಗೆ ಹೋಗಲು ಅಲ್ಲಿಯ ಗೌಡರು ರಾಗಿರೊಟ್ಟಿ, ಚಟ್ನಿ, ಹಾಲು ಕೊಟ್ಟರು. ಮುಂದೆ ಸಾಗಿದಾಗ, ನಮ್ಮ ಮತ್ತು

ಶಂಕರಪ್ಪನ ಬ್ಯಾಚಿನಲ್ಲಿ ಕಲಹವಾಗಿ ಶಿಸ್ತು ತಪ್ಪಲು, ನಾನು ಮಧ್ಯಾಹ್ನ 2ರಿಂದ 5ರ ವರೆಗೆ ಮೌನವ್ರತ ಆಚರಿಸುತ್ತೇನೆ. ನೀವುಗಳು ಮತ್ತೂ ಶಿಸ್ತು ತಪ್ಪಿದರೆ ಉಪವಾಸ ಮಾಡುತ್ತೇನೆ, ಎಂದೆ. 2 ಗಂಟೆಯಿಂದ ಮೌನ ಆರಂಭಿಸಿದೆ. ಮೊದಲಿಯಾರ್ ಎಂಬ ಸತ್ಯಾಗ್ರಹಿ ಕೂಡ ಮೌನ ಆಚರಿಸಿದ. ನಮ್ಮ ಬ್ಯಾಚ್‌ನಲ್ಲಿ ಶಾಂತಿ, ಶಿಸ್ತು ಮೂಡಿತು. ದಾರಿಯಲ್ಲಿ ಮೆಣಸಿನಹಳ್ಳಿ ಎಂಬ ಗ್ರಾಮದಲ್ಲಿ ನಮ್ಮನ್ನು ನಿಲ್ಲಿಸಿ ಮಜ್ಜಿಗೆ ಕೊಟ್ಟರು. ಮೌನ ಧರಿಸಿದ ನಾನು ಭಾಷಣ ಮಾಡಲಿಲ್ಲ. ನನ್ನ ಜೊತೆಗಾರರು ಎಲ್ಲಾ ವಿಷಯ ಕೆಲವರಿಗೆ ತಿಳಿಸಿ ಹೇಳಿದರು. ನಾನು 5–10ಕ್ಕೆ ಮೌನ ಮುರಿದೆ. ವರಗಾನಹಳ್ಳಿಯಲ್ಲಿ ಬೆಂಗಳೂರಿನಿಂದ ಬಸ್ಸು ಬರಲು, ಬೆಂಗಳೂರಲ್ಲಿ 8 ಜನ ಸತ್ತು 200 ಜನ ಗಾಯಗೊಂಡರೆಂಬ ವದಂತಿಯನ್ನು ಪ್ರಯಾಣಿಕರು ತಿಳಿಸಿದರು. ವಿರೂಪಾಕ್ಷಿಪುರದಲ್ಲಿ ಜನರಿಗೆ ವಿಷಯ ತಿಳಿಸಿ, ಸಮೀಪದಲ್ಲಿರುವ ಮಹಾರಾಜರ ತೋಟದಲ್ಲಿ ಅಲ್ಲಿನ ರೈತರು ಕೊಟ್ಟ ಎಳನೀರು ಕುಡಿದು ಸಂಜೆ 7ಕ್ಕೆ ಸಂತೆಮುಗೇನಹಳ್ಳಿ ತಲುಪಿ ಅಲ್ಲಿ ಒಂದು ದೇವಾಲಯದಲ್ಲಿ ವಿಶ್ರಾಂತಿಪಡೆದೆವು. ಊರ ವರ್ತಕರೊಬ್ಬರು ಊಟ ಹಾಕಿದರು. ಮಹಾರಾಜರು ಏನೋ ಘೋಷಣೆ ಮಾಡಿದ್ದಾರೆಂಬ ವಾರ್ತೆ ಬಂತು. ಈ ವಿಚಾರ ತಿಳಿಯಲು ಚನ್ನಪಟ್ಟಣಕ್ಕೆ ಸಂಗಪ್ಪ ಎಂಬ ಸತ್ಯಾಗ್ರಹಿಯನ್ನು ಕಳುಹಿಸಿದೆವು.

9–9–47: ಧ್ವಜಾರೋಹಣಾನಂತರ ಹೊಲೇರದೊಡ್ಡಿಗೆ ಹೋಗಿ ಅಲ್ಲಿನ ಹರಿಜನರಿಗೆ ಶುಚಿಯಾಗಿರಬೇಕು, ಮದ್ಯ, ಮಾಂಸ ಭಕ್ಷಿಸಬಾರದು ಎಂದು ಭಾಷಣ ಮಾಡಿ ತಿಳಿಸಿದೆ. ಅವರಲ್ಲಿ ನೀರು ಕುಡಿದು ತಿಂಡಿ ತಿನ್ನಲು ಅವರು ಆಶ್ಚರ್ಯಪಟ್ಟರು. ಆಮೇಲೆ ಸಂತೆಮುಗೇನಹಳ್ಳಿ ಊರಲ್ಲಿ ಬಹಿರಂಗ ಸಭೆ ಮಾಡಿ, ಹರಿಜನರ ಜೊತೆ ಸಹಕರಿಸಲು ತಿಳಿಸಿದೆವು. 10 ಗಂಟೆಗೆ ಚನ್ನಪಟ್ಟಣದಿಂದ ಸಂಗಪ್ಪ ಮರಳಿ ಬಂದು, "ಮಹಾರಾಜರ ಘೋಷಣೆಯಲ್ಲಿ ಯಾವ ವಿಧವಾದ ಪ್ರಯೋಜನವೂ ಇಲ್ಲ, ನೀವು ಮುಂದುವರಿಯಿರಿ" ಎಂದು ವಿ. ವೆಂಕಟಪ್ಪನವರು ಹೇಳಿದ್ದಾರೆ, ಎಂದು ತಿಳಿಸಲು, ಮುಂದೆ ಮುಗೇನಹಳ್ಳಿದೊಡ್ಡಿ ಪಟೇಲರು ಅದೇ ಊರಲ್ಲಿ ಉಣ್ಣಲು ಒತ್ತಾಯಿಸಿದರು. ಉಂಡು 1 ಗಂಟೆಗೆ ಹೊರಟು ಮಳೂರು ಪಟ್ಟಣ ಸೇರಿದಾಗ 3 ಗಂಟೆ. ಅಲ್ಲಿ ಟೀ ಮಾಡಿಸಿ ಕೊಟ್ಟರು. ಭಾಷಣಮಾಡಿ ಚೊಕ್ಕನಹಳ್ಳಿಗೆ ಬರುವಾಗ ಚನ್ನಪಟ್ಟಣದಿಂದ 15 ಜನ ಸತ್ಯಾಗ್ರಹಿಗಳು ಬಂದಿದ್ದರು. ಪರಸ್ಪರ ಪರಿಚಯ ಆಯಿತು. ಅದೇ ಊರ ಹೊಲಗೇರಿಗೆ ಹೋಗಿ ಭಾಷಣಮಾಡಿ, ಅವರಿಂದ ನೀರು ಪಡೆದು ಕುಡಿಯುವಾಗ ಚನ್ನಪಟ್ಟಣದ ಸತ್ಯಾಗ್ರಹಿಗಳಿಗೆ ಆಶ್ಚರ್ಯ ಆಯಿತು. ಅಲ್ಲಿಂದ ನಾವು ಕೊಕ್ಕನೂರಿಗೆ ಹೊರಡಲು ಚನ್ನಪಟ್ಟಣದವರು ನಮ್ಮಿಂದ ಬೀಳ್ಕೊಂಡರು. ಸಂಜೆ 6ಕ್ಕೆ ಕೊಕ್ಕನೂರಲ್ಲಿ ಪ್ರಚಾರಮಾಡಿ, ಬಯಲಗೆರೆಯಲ್ಲಿ ರಾತ್ರಿ ಊಟಮಾಡಿ ಮಲಗಿದೆವು.

10–9–74: ಬೆಳಗ್ಗೆ ಧ್ವಜಾರೋಹಣ ಮಾಡಿ, ಊರಲ್ಲಿ ಪ್ರಚಾರಮಾಡಿ ಆಗನಹಳ್ಳಿ 8 ಗಂಟೆಗೆ ತಲಪಿದೆವು. ಅಲ್ಲಿ ಪ್ರಚಾರವಾದನಂತರ, ಆ ಊರ ಒಬ್ಬ

ವಿದ್ಯಾರ್ಥಿ ನಮ್ಮ ಜೊತೆ ಬರಲು ಒಪ್ಪಲು ನನಗೆ ಸಂತೋಷವಾಯಿತು. ಈ ಮೊದಲು ಅವರು 2-3 ಸಲ ದಸ್ತಗಿರಿ ಆಗಿದ್ದರು. ಮಾಗ್ರಾನಹಳ್ಳಿಯಲ್ಲಿ ಪ್ರಚಾರಮಾಡಿ ಗುರುದೇವನಹಳ್ಳಿ ತಲಪಲು ಅಲ್ಲಿಂದ ಕಾಂಗ್ರೆಸ್ ಭಕ್ತ ಜಿ. ಕೆ. ಕೆಂಪಯ್ಯನವರು ಊರಲ್ಲಿ ಭಾಷಣ ಏರ್ಪಡಿಸಿ ನನಗೆ ಮಜ್ಜಿಗೆ ಕೊಡಿಸಿದರು. ಮುಂದಿನ ಚಿಕ್ಕಅರಸನಕೆರೆ ಮತ್ತು ದೊಡ್ಡಅರಸನಕೆರೆಗಳಲ್ಲಿ ಅವರ ಅಧ್ಯಕ್ಷತೆಯಲ್ಲಿ ಸಭೆ ಆದವು. ಆ ಊರುಗಳಿಂದ ನನಗೆ ಯಥೇಚ್ಛ ಧನಸಹಾಯ ಕೊಡಿಸಿದ್ದಲ್ಲದೆ, ದೊಡ್ಡಅರಸನಕೆರೆಯಲ್ಲಿ ಊಟ ಮಾಡಿ, ಅವರನ್ನು ಬೀಳ್ಕೊಂಡೆವು. ಗೌಡಯ್ಯನದೊಡ್ಡಿ, ಕರಡಿಕೆರೆ, ಚಾಕನಹಳ್ಳಿ, ಕೊತ್ನಳ್ಳಿಗಳಲ್ಲಿ ಪ್ರಚಾರ ಮುಗಿಸಿ, ರಾತ್ರಿ ಕೊತ್ನಳ್ಳಿಯಲ್ಲಿ ಪ್ರಚಾರಮಾಡಿ ಬಂದು ವಿಶ್ರಮಿಸಿದೆವು.

11-9-47 : ಧ್ವಜಾರೋಹಣಾನಂತರ ಬೀಮಣಹಳ್ಳಿಯಲ್ಲಿ ಭಾಷಣಮಾಡಿ 8-45ಕ್ಕೆ ಚಿಕ್ಕಮುದವಾಡಿಗೆ ಹೋಗಲು ಊರ ಜನ ವಿಶೇಷ ಸಹಕರಿಸಲಿಲ್ಲ. ಹೊಟೇಲಲ್ಲಿ ಕಾಫಿ ಮತ್ತು ತಿಂಡಿ ಮುಗಿಸಿದೆವು. ಪ್ರೈಮರಿ ಸ್ಕೂಲು ಉಪಾಧ್ಯಾಯರು ನಮ್ಮನ್ನು ಕರೆದು ಟೀ ಮಾಡಿಸಿಕೊಟ್ಟರು. ಶಾಲಾಬಾಲಕರಿಗೆ ವಂದೇ ಮಾತರಂ ಕಲಿಸಿಕೊಡಲು ಹೇಳಿದಾಗ, ನಾನು ಹೇಳಿಕೊಟ್ಟೆ. ಯಾಚೇನಹಳ್ಳಿಯಲ್ಲಿ ಕೆಂಪಯ್ಯ ಎಂಬವರು ಕಾಫಿ ಮಾಡಿಸಿಕೊಟ್ಟರು. ಹೊಳೆಯಲ್ಲಿ ಸ್ನಾನಮಾಡಿ ಬಟ್ಟೆ ಒಗೆದು, ಕೆಂಪಯ್ಯನವರಲ್ಲಿ ಉಂಡು, ಸಂಜೆ 4ಕ್ಕೆ ಕಾಫಿ ಕೂಡ ಮುಗಿಸಿದೆವು. ರಾತ್ರಿ ಇರಲು ಒತ್ತಾಯಿಸಿದರೂ ಗೌರಿ ಮಟ್ಟುವುದರಿಂದ ಹೊರಟೆವು. ಸಂಜೆ 6ಕ್ಕೆ ಅರಕೆರೆ ತಲಪಲು ನಮಗೂ ಮೊದಲೇ ಅಲ್ಲಿಗೆ ಬಂದಿದ್ದ ಅನೇಕ ಸತ್ಯಾಗ್ರಹಿಗಳು ನಮ್ಮನ್ನು ಸ್ವಾಗತಿಸಿದರು. ಸಂಜೆ ನಡೆದ ಸಭೆಯಲ್ಲಿ ಬಂದೀಗೌಡರ ತಮ್ಮ ಅಧ್ಯಕ್ಷ. ಬೆಂಗಳೂರಿನ ವೆಂಕಟಲಕ್ಷ್ಮಮ್ಮ, ರಾಮಲಿಂಗಂ ಎಂಬ ವಿದ್ಯಾರ್ಥಿ, ನಾನು ಹಾಗೂ ಇತರ ಅನೇಕರು ಭಾಷಣ ಮಾಡಿದರು. ಕಡೆಗೆ ಮಳೆ ಬಂತು. ರಾತ್ರಿ 10ಕ್ಕೆ ಸುಮಾರು 1,000 ಜನಕ್ಕೆ ಊಟ ಹಾಕಿ ಉಪಚರಿಸಿದರು. 1942ರ ಚಳವಳಿಯಲ್ಲಿ ಭಾಗವಹಿಸಿದ್ದ ಕೃಷ್ಣಪ್ಪ ಎಂಬ ನನ್ನ ಮಿತ್ರರ ಮನೆಯಲ್ಲಿ ನನ್ನ ಬ್ಯಾಚಿನವರು ವಸತಿ ಮಾಡಿದೆವು.

12-9-47 : ಬೆಳಗ್ಗೆ ನಮ್ಮ ಬ್ಯಾಚಿನವರು ಧ್ವಜಾರೋಹಣಮಾಡಲು ಉಳಿದ ಸತ್ಯಾಗ್ರಹಿಗಳು ನಮ್ಮ ಶಿಸ್ತು ನೋಡಿ ತಾವೂ ಭಾಗವಹಿಸಿದರು. ಮುಂದಿನ ಊರು ಪಾಳ್ಯದಲ್ಲಿ 500 ಸತ್ಯಾಗ್ರಹಿಗಳಿಗೆ ಮಜ್ಜಿಗೆ ಅನ್ನ ಕೊಟ್ಟರು. ಮುಂದೆ ದೊಡ್ಡಪಾಳ್ಯದಲ್ಲಿ ಮೆರವಣಿಗೆ ಮಾಡಿ, ಸ್ನಾನ ಮುಗಿಸಿದೆವು. ಒಂದು ಮೈದಾನದಲ್ಲಿ ಊಟಕ್ಕೆ ಏರ್ಪಾಟು ಮಾಡಿದ್ದರು. ಊಟಾನಂತರ 3 ಗಂಟೆಗೆ ಸಭೆ. ನಮ್ಮ 17 ತಂಡಗಳ 17 ಪ್ರತಿನಿಧಿಗಳು ಭಾಷಣ ಮಾಡಿದರು. ನಾನೂ ಭಾಷಣ ಮಾಡಿದೆ. ಇದೇ ತಂಡಕ್ಕೆ ನನ್ನನ್ನು ನಾಯಕನಾಗಿ ಒಮ್ಮತದಿಂದ ಆಯ್ಕೆಮಾಡಿದರು. 4-30ಕ್ಕೆ ಗಂಜಾಂ ತಲಪಿ, ಮುಂದೆ ಅಲ್ಲಿ ಮಿತ್ರರು ಏರ್ಪಡಿಸಿದ್ದ ದೋಣಿಗಳಿಂದ ಕಾವೇರಿ ನದಿ ದಾಟಿ 8-30ಕ್ಕೆ

ಶ್ರೀರಂಗಪಟ್ಟಣದೆಡೆ ಮೆರವಣಿಗೆಯಲ್ಲಿ ಸಾಗಿದೆವು. ಒಟ್ಟು 530 ಜನ ನಾವಿದ್ದೆವು. ನಮ್ಮ ಬರವನ್ನು ತಿಳಿದ ಅಧಿಕಾರಿಗಳು ಊರಲ್ಲಿ ನಮಗೆ ಊಟದ ಏರ್ಪಾಡು ಮಾಡಿದ ಸ್ಥಳಕ್ಕೆ ಪೋಲೀಸರಿಂದ ಮುತ್ತಿಗೆಹಾಕಿಸಿದರು. ಊರಲ್ಲಿ ಮೊದಲೇ ಇದ್ದ ಸತ್ಯಾಗ್ರಹಿಗಳನ್ನು ಬಂಧಿಸಿದರು. ಒಬ್ಬ ವಿದ್ಯಾರ್ಥಿ ನಮ್ಮಲ್ಲಿಗೆ ಬಂದು ನಮಗೆ ವಾಪಸ್ ಹೋಗಲು ಹೇಳಿದರು. ಅಂಬಿಗರು ಪಶ್ಚಿಮವಾಹಿನಿ ದಾಟಿಸಲು ಒಪ್ಪಿದರು. ಒಂದೇ ಹರಿಗೋಲಲ್ಲಿ, ರಾತ್ರಿ 10 ರಿಂದ 1ರ ವರೆಗೆ ನಮ್ಮನ್ನು ದಾಟಿಸಿದರು. ಈ ನಡುವೆ ದಣಿದ ಅನೇಕರು ನದೀ ದಂಡೆಯಲ್ಲಿ ನಿದ್ದೆ ಮಾಡುತ್ತಿದ್ದರು. ಮುಂದೆ ನಗುವನಹಳ್ಳಿಯಲ್ಲಿ ಬೆಳಗ್ಗೆ 5 ಗಂಟೆಗೆ ನಮಗೆ ಊಟ ಹಾಕಿದರು. 5-30 ರಿಂದ 6-30ರ ವರೆಗೆ ನಿದ್ದೆ ಮಾಡಿದೆವು.

13-9-47: ಧ್ವಜಾರೋಹಣಾನಂತರ 7-30ಕ್ಕೆ ನಗುವನಹಳ್ಳಿಯಲ್ಲಿ ಬಹಿರಂಗಸಭೆ ಮಾಡಿದೆವು. ನಾನು ಅಧ್ಯಕ್ಷ. ವೆಂಕಟಲಕ್ಷ್ಮಮ್ಮ, ರಾಮಲಿಂಗಂ ಭಾಷಣ ಮಾಡಿದರು. ಸಭೆಯನಂತರ, ನಾವು, ಗುಂಪುಗಳ ಪ್ರತಿನಿಧಿಗಳು ಗುಪ್ತ ಸಭೆ ಸೇರಿ, ಸಂಜೆಯೊಳಗೆ ಗುಟ್ಟಾಗಿ ಮೈಸೂರು ಸೇರಿ, ಮರುದಿನ, 14-9-47ಕ್ಕೆ ಬೆಳಗ್ಗೆ 10 ಗಂಟೆಗೆ ಅರಮನೆ ಮುಂದೆ ಸತ್ಯಾಗ್ರಹ ಮಾಡಬೇಕು. ಮೈಸೂರಿಗೆ ಬಿಡಿಬಿಡಿಯಾಗಿ, ವೇಷ ಮರೆಸಿ ಹೋಗಬೇಕು, ಎಂದು ತೀರ್ಮಾನಿಸಿದೆವು. ಅಷ್ಟರಲ್ಲಿ 4 ಪೋಲೀಸು ವ್ಯಾನುಗಳು ಆ ಊರಿಗೆ ಮಿಲಿಟರಿ ಸಹಿತ ಬಂದವು. ನಾವೆಲ್ಲ ಪ್ರತಿ ಮನೆಯಲ್ಲಿ ಅವಿತುಕೊಂಡೆವು. ಆದರೂ 150 ಜನರನ್ನು ಪೋಲೀಸರು ಬಂಧಿಸಿದರು. ಮಿಕ್ಕವರೆಲ್ಲ ಬೇರೆ ಬೇರೆ ವೇಷದಿಂದ ತಪ್ಪಿಸಿಕೊಂಡು ಮೈಸೂರಿಗೆ ಹೊರಟರು. ನಾನು ಮತ್ತು ವೆಂಕಟಲಕ್ಷ್ಮಮ್ಮ, ಇನ್ನು ಕೆಲವರು ಒಂದು ಮನೆಯಲ್ಲಿ ಇದ್ದೆವು. ವೆಂಕಟಲಕ್ಷ್ಮಮ್ಮನಿಗೆ ಬೇರೆ ಸೀರೆ ಉಡಿಸಿ, ಅವರನ್ನು ಸುರಕ್ಷಿತವಾಗಿ ಮೈಸೂರಿಗೆ ತಲಪಿಸಿದೆವು. ನಾನು, ಸಂಗಪ್ಪನಂತಾದ ಬೇರೆ ಉಡುಗೆ ತೊಟ್ಟು ಹಳ್ಳಿಗಳ ಮಾರ್ಗವಾಗಿ ಸಂಜೆ 5ಕ್ಕೆ ಮೈಸೂರಿನ ನರಸಿಂಹರಾಜ ಮೊಹಲ್ಲಾ ಸೇರಿದೆವು. ಒಬ್ಬ ವ್ಯಕ್ತಿ ನಮಗೆ ಏಳು ಜನರಿಗೆ ತಮ್ಮ ಮನೆಯಲ್ಲಿ ಇರಲು ಒತ್ತಾಯಿಸಿದರು. ರಾತ್ರಿ ಮನೆಯ ಯಜಮಾನ ಬಂದರು. ಅವರ ಮೇಲೆ ನಮಗೆ ಅನುಮಾನ ಬಂತು. ಆದರೆ ರಾತ್ರಿ ಜಡಿಮಳೆ ಇದ್ದು, ಹೊರಹೋಗಲಾರದೇ ಅಲ್ಲೇ ಉಂಡು ಮಲಗಿದೆವು. ರಾತ್ರಿಯೆಲ್ಲಾ ನಿದ್ದೆ ಬರಲಿಲ್ಲ. ಮನೆಯ ಯಜಮಾನ ಹೊರಹೋದವನು ಬೆಳಗ್ಗೆ ಬಂದು, ರಾತ್ರಿಯೆಲ್ಲಾ ತಾನು ಬೇರೆ ಸತ್ಯಾಗ್ರಹಿಗಳ ಊಟದ ವ್ಯವಸ್ಥೆಯಲ್ಲಿ ತೊಡಗಿದ್ದಾಗಿ ಹೇಳಿದ. ನಾವು ಹಿಂದೆ ಬಿಟ್ಟಿರುವ 300 ಸತ್ಯಾಗ್ರಹಿಗಳನ್ನು ಕರೆತಂದಲ್ಲಿ ಇಲ್ಲಿಂದಲೇ ಹೊರಡಬಹುದೆಂದ. ನನ್ನ ಅನುಮಾನ ಬಲವಾಗಿ, ಆತ ಆಚೆ ಹೋದೊಡನೆ ಮನೆ ಬಿಟ್ಟು ಪಾರಾದೆವು.

14-9-47: ಬೆಳಗ್ಗೆ ನಾನಿದ್ದ ಮನೆಯ ಮಹಡಿಯ ಮೇಲೆ ಧ್ವಜಾರೋಹಣ ಮಾಡಿ 8ಕ್ಕೆ ಹೊರಬಂದು ಹೊಟೇಲಲ್ಲಿ ಕಾಫಿ ಕುಡಿದು ಒಕ್ಕಲಿಗರ ಹಾಸ್ಟೆಲನ್ನು

9 ಗಂಟೆಗೆ ತಲಪಿದೆವು. ಅಲ್ಲಿನ ವಿದ್ಯಾರ್ಥಿಗಳ ಸಹಕಾರದಿಂದ, ಅರಮನೆ ಕಡೆ ಹೊರಟು, ದೊಡ್ಡ ಗಡಿಯಾರ ದಾಟಿ, ಜಯಕಾರ ಮಾಡುತ್ತ ಸಾಗಲು ಸ್ಟ್ಯಾಚ್ಯು ಹತ್ತಿರ ಪೋಲೀಸರು ತಡೆದು ಹಿಂದೆ ಹೋಗಲು ಹೇಳಿದರು. ನಾವು ಒಪ್ಪದೆ ಅಲ್ಲೇ ಕುಳಿತು ಕೊಂಡೆವು. ಪೋಲೀಸರು ಲಾಠೀಚಾರ್ಜ ಮಾಡಿ ರೋಡಿನ ಮಧ್ಯೆ ನಾಯಿಗಳನ್ನು ಎಳೆದುಕೊಂಡು ಹೋಗುವಂತೆ ಎಳೆದು ಹ್ಯಾಮಿಲ್ಟನ್ ಬಿಲ್ಡಿಂಗ್‌ನಲ್ಲಿರುವ ಪೋಲೀಸ್ ಸ್ಟೇಶನಿಗೆ ಒಯ್ದು ಒಂದು ಕೊಠಡಿಯಲ್ಲಿ ಸೇರಿಸಿದರು. ಅಲ್ಲಿ ನಮಗೂ ಮೊದಲು 6 ಜನ ಇದ್ದರು. 12 ಗಂಟೆಗೆ, ಹಿಂದಿನ ದಿನ ನಗುವನಹಳ್ಳಿಯಲ್ಲಿ ಬಂಧಿತರಾದವರನ್ನು ಅಲ್ಲಿನ ಲಾಕಪ್ಪಿನಿಂದ ಲಾರಿಗಳಿಗೆ ಸಾಗಿಸುವುದು ಕಾಣಿಸಿತು. 1 ಗಂಟೆಗೆ ನಿಜಲಿಂಗಪ್ಪ ನವರನ್ನು ಬಂಧಿಸಿ ತಂದರು. ಕಾಫಿ ತಿಂಡಿಯನ್ನು ನಾವೇ ಹೋಟೇಲಿಂದ ತರಿಸಿಕೊಂಡೆವು. ಪೋಲೀಸರು ಮಾಣಿಯನ್ನು ಮಾತ್ರ ತಂದು ನಮಗೆ ತೋರಿಸಿಬಿಟ್ಟರು. ಸಂಜೆಯ ವೇಳೆಗೆ ಅಲ್ಲಿ 700 ಸತ್ಯಾಗ್ರಹಿಗಳು ಕೂಡಿದರು. ಕೆಲವರಿಗೆ ಲಾಠಿಯೇಟು ಜೋರಾಗಿ ಬಿದ್ದಿದ್ದು ಅವರನ್ನು ಆಸ್ಪತ್ರೆಗೆ ಒಯ್ದರು. ಪೋಲೀಸಿನವರ ಪೈಕಿ ಮುಸಲ್ಮಾನರೇ ಹೆಚ್ಚಾಗಿ ಹೊಡೆದವರು. ಕೆಲವು ಸತ್ಯಾಗ್ರಹಿಗಳಿಂದ ಅವರಲ್ಲಿದ್ದ ದುಡ್ಡುಗಳನ್ನು ಕಿತ್ತುಕೊಂಡು, ಹೊಡೆದು ತಂದಿದ್ದರು. ರಾತ್ರಿ 8ಕ್ಕೆ ಅರ್ಧಹೊಟ್ಟೆ ಊಟ ಹಾಕಿದರು. ನಮ್ಮಲ್ಲಿದ್ದ ಹಳ್ಳಿಯವರನ್ನು ಧೈರ್ಯಕೆಡಿಸಿ ಹೆದರಿಸಿ ಅಪಾಲಜಿ ಬರೆಸಿ ಹಿಂದೆ ಕಳಿಸಿದರು. ಉಳಿದವರಿಗೆ ಮಲಗಹೇಳಿ, ರಾತ್ರಿ 12 ಗಂಟೆಗೆ ಎಬ್ಬಿಸಿ, ಲಾರಿಗಳಲ್ಲಿ ಹತ್ತಿಸಿ, ರಾತ್ರಿಯೆಲ್ಲ ಪ್ರಯಾಣಮಾಡಿ ದೇಶದ ಮೂಲೆಗಳಲ್ಲಿ ಕಾಡಿನಲ್ಲಿ ಒಯ್ದು ಬಿಟ್ಟರು. ನಮ್ಮನ್ನು ಮೂರು ವ್ಯಾನುಗಳಲ್ಲಿ ಬೆಳಗ್ಗೆ 5ಕ್ಕೆ ಕೇಳರಾಪುರದ ಬಳಿ ಇಳಿಸಿದರು. ನಾವು ನಡೆದು ಕೇರಳಾ ಪುರಕ್ಕೆ ಹೋಗಿ ನದಿಯಲ್ಲಿ ಮುಖ ತೊಳೆದುಕೊಂಡೆವು. ಆ ಊರ ಬಸ್ ಏಜಂಟ್ ತಮ್ಮಯ್ಯನವರು ಒಂದು ಹೊಟೇಲಲ್ಲಿ ತಿಂಡಿ ಕೊಡಿಸಿದರು. ಉಳಿದವರಿಗೆ ಮೈಸೂರಿಗೆ ಹೋಗಹೇಳಿ ನಾನು, ಸಂಗಪ್ಪ ಹಾಸನದ ಬಸ್ಸು ಹತ್ತಿದೆವು. ಬಸ್ಸಿನವರು ನಮ್ಮನ್ನು ಒಯ್ಯಲು ಅನುಮಾನಿಸಿ ಇಳಿಯಹೇಳಿದರೂ ನಾವು ಇಳಿಯಲಿಲ್ಲ. ಸಂಜೆ 7ಕ್ಕೆ ಹಾಸನಕ್ಕೆ ಹೋದೆವು. ಹೊಟೇಲಲ್ಲಿ ತಿಂಡಿ ತಿಂದು ಕಾಂಗ್ರೆಸ್ ಆಫೀಸಿಗೆ ಹೋಗಲು, ಅಲ್ಲಿ ತರೀಕೆರೆಯಿಂದ ಬಂದ 20 ಸತ್ಯಾಗ್ರಹಿಗಳು ಇದ್ದರು. ಅವರಿಗೆ ಕಾಲ್ನಡಿಗೆಯಿಂದಲೇ ಮೈಸೂರಿಗೆ ಹೋಗಲು ಹೇಳಿದೆ.

16-9-47: ನಾವು ಅರಸೀಕೆರೆಗೆ ಹೊರಡಲು ಬಸ್ ಸ್ಟ್ಯಾಂಡಿಗೆ ಹೋದಾಗ ಅಲ್ಲಿ ಚಿಕ್ಕಮಗಳೂರಿನ ಕಾಂಗ್ರೆಸ್ ಕಾರ್ಯಕರ್ತ ನಾರಾಯಣ ನಾಯಕ್ ಸಿಕ್ಕರು. ಅಲ್ಲಿಂದ ಕಾಲುನಡಿಗೆಯಲ್ಲಿ ಅರಸೀಕೆರೆಗೆ ನಾನು, ಸಂಗಪ್ಪ ಇಬ್ಬರೂ ಹೊರಟೆವು. ಒಂಬತ್ತು ಮೈಲಿ ನಡೆದು ದುಗ್ಗಿಯಲ್ಲಿ ಕಾಫಿ ಕುಡಿದೆವು. ಲಾರಿಯೊಂದು ಸಿಗಲು ಸಂಜೆ ಅರಸೀಕೆರೆ ತಲಪಿದೆವು. ಲಾರಿಯವರು ಹಣ ತೆಗೆದುಕೊಳ್ಳಲಿಲ್ಲ ಮಾತ್ರವಲ್ಲ, ಕಾಫಿ ತಿಂಡಿ ಕೊಡಿಸಿದರು. ಸಂಜೆ ಆ ಊರಲ್ಲಿ ಚನ್ನಯ್ಯನವರ ಅಧ್ಯಕ್ಷತೆಯಲ್ಲಿ ಸಭೆ ಇತ್ತು.

ನಾನೂ ಭಾಷಣಮಾಡಿದೆ. ಮಳೆ ಬಂದು ಸಭೆಯನ್ನು ಮರುದಿನಕ್ಕೆ ಮುಂದೂಡಿದರು. ಜನ ಭಾರಿ ಜಯಜಯಕಾರ ಮಾಡಿದರು. ರಾತ್ರಿ ಕಾಂಗ್ರೆಸ್ ಆಫೀಸಿನಲ್ಲಿ ವಿಶ್ರಮಿಸಿದೆ.

17-9-47 : ವಿದ್ಯಾರ್ಥಿ ಕಾಂಗ್ರೆಸ್‌ನವರು ಅರಣ್ಯ ಸತ್ಯಾಗ್ರಹದಲ್ಲಿ ಭಾಗ ವಹಿಸಲು ಕರೆದಾಗ, 10 ಗಂಟೆಗೆ ಒಟ್ಟು 6 ಜನ ಮೆರವಣಿಗೆಯಲ್ಲಿ ಹೊರಟು ಪೋಲೀಸ್ ಸ್ಟೇಶನ್ ಮುಂದಿನಿಂದಲೇ ಹಾಯ್ದು, ದಾರಿಯಲ್ಲಿನ ಹೆಂಡದಂಗಡಿಯ ಪೀಪಾಯಿ ಖಾಲಿಮಾಡಿ, ಮುಂದೆ ಗಂಧದ ಮರ ಕಡಿದು, ಸ್ಟೇಶನ್ ಮುಂದುಗಡೆಯಿಂದಲೇ ಮೆರವಣಿಗೆಯಲ್ಲಿ ಬಂದು, ಕಡಿದ ಮರವನ್ನು ಹರಾಜು ಹಾಕಿದೆವು. ಮಧ್ಯಾಹ್ನ ಊಟಮಾಡಿ ನಡೆದು ನಾನು, ಸಂಗಪ್ಪ ತುಮಕೂರಿಗೆ ಹೊರಟೆವು. ಬಸ್ ಆಗಲೇ ಹೊರಟುಹೋಗಿತ್ತು. ಮೂರು ಮೈಲಿ ನಡೆದಾಗ ಮಳೆ ಬಂತು. ಅಲ್ಲೇ ನಿಂತೆವು. ಕಡೆಗೆ ಒಂದು ಸ್ಪೆಶಲ್ ಬಸ್ ಸಿಗಲು ರಾತ್ರಿ 9-30ಕ್ಕೆ ತುಮಕೂರು ಸೇರಿದೆ. ಊರಲ್ಲಿ ಕರ್ಫ್ಯೂ ಇದ್ದು ಬಸ್ಸಿನಲ್ಲೇ ಮಲಗಿದೆವು. ರಾತ್ರಿ ಮಳೆಯಿದ್ದು, ಬಸ್ಸೂ ಸೋರುತ್ತಿದ್ದು, ನಿದ್ದೆ ಬರಲಿಲ್ಲ.

18-9-47 : ಊರಲ್ಲಿ ಯಾರೂ ಸ್ನೇಹಿತರು ಸಿಗಲಿಲ್ಲ. ಮಧುಗಿರಿಗೆ ಬಸ್ಸಿನಲ್ಲಿ ಹೋಗಿ, ಸಂಜೆ ಹಿಂದೂಪುರ ತಲಪಿದೆವು. ಅಲ್ಲಿ ಎಚ್. ಎಸ್. ದೊರೆಸ್ವಾಮಿ, ಶ್ರೀಧರ್ ಭೇಟಿ ಆದರು. ಸಂಜೆ ನನಗೆ ರಕ್ತಭೇದಿ ಶುರು ಆಯಿತು. ರಾತ್ರೆ 8ಕ್ಕೆ ದೊರೆಸ್ವಾಮಿ ಯವರು ನನ್ನನ್ನು ಸೇವಾಮಂದಿರಕ್ಕೆ ಕರೆದು ಒಯ್ದರು. ಅಲ್ಲಿ ಎಂ. ಎ. ಪರಶುರಾಮ್ ಅವರ ಭೇಟಿ ಆಯಿತು. ನಾನೂ ಅವರೂ 47ರಲ್ಲಿ ಜೈಲಿನಲ್ಲಿ ಕೂಡಿಯೇ ಇದ್ದೆವು ರಾತ್ರಿ ಅಲ್ಲಿ ಊಟ ಆಯಿತು. ಭೇದಿ ಮಾತ್ರ ಆಗುತ್ತಲೇ ಇತ್ತು. 19-9-47ಕ್ಕೆ ಸಂಗಪ್ಪನನ್ನು ಬೆಂಗಳೂರಿಗೆ ಕಳುಹಿಸಿದರು. ನಾನು ವಿಶ್ರಾಂತಿಪಡೆದೆ. 20-9-47ರಂದು ಬೆಳಗ್ಗೆ 8ಕ್ಕೆ ಧ್ವಜವಂದನೆ ಆದಮೇಲೆ ನಾನು ಅಲ್ಲಿನ ಶಿಸ್ತಿನ ಬಾಲಕರ ಮುಂದೆ ಭಾಷಣ ಮಾಡಿದೆ. ಲಿಂಗಣ್ಣ ಎಂಬ ಮಹಾನುಭಾವರು ಈ ಆಶ್ರಮ ನಡೆಸುತ್ತಿದ್ದು, ಅಲ್ಲಿನ ಶಿಕ್ಷಣ ದೇಶಕ್ಕೆ ಉಪಯುಕ್ತ. ಜಾತಿಭೇದವಿಲ್ಲದೆ ಇಲ್ಲಿ ಪ್ರವೇಶವಿದ್ದು ಊಟ ಉಚಿತ. ಆ ದಿನ ನಾನು ಪರಿಗಿಹಳ್ಳಿಗೆ ನನ್ನ ಸಂಬಂಧಿಕರಲ್ಲಿ ಹೋಗಿ, ಮೂರು ದಿನ ಮರಳಿದೆ. ಆಶ್ರಮಕ್ಕೆ ರಾತ್ರಿ ಡಿ. ಎಸ್. ಸುಬ್ಬಣ್ಣ ಬಂದರು. 23ರವರೆಗೆ ನನ್ನ ದೇಹಸ್ಥಿತಿ ಉತ್ತಮ ಇರಲಿಲ್ಲ. ಆ ದಿನ ಸಂಜೆ ಮಾನೆಂಪಲ್ಲಿ ಎಂಬ ಗ್ರಾಮದಲ್ಲಿ ಕಾರ್ಯಕ್ಕೆ ಹೋದೆವು. (ಇಲ್ಲಿ 'ಕಾರ್ಯ' ಎಂದರೆ ವಿಧ್ವಂಸಕ ಕೃತ್ಯಗಳಿರಬೇಕು—ಸಂ||) 25-9-47ರಂದು 10 ಜನ ಗೋಳಾ ಪುರಕ್ಕೆ ಹೋಗಿ ಅಲ್ಲಿ ರಾತ್ರಿ ಕಾರ್ಯಕ್ರಮ ಮಾಡಿ ಅಲ್ಲಿಯೇ ಮಲಗಿದೆವು. 26ರಂದು ಚಿಂತಲಪಳ್ಳಿ, ಮಾನೇಹಳ್ಳಿಗೆ ಹೋದೆವು. 27ರಂದು ಸಂಜೆ ಮಡಕಶಿರ ಬಸ್ಸಿನಿಂದ ಸಂಜೆ 6ಕ್ಕೆ ಆಲೂರು ತಲಪಿ, ರಾತ್ರಿ ಊಟ ಮಾಡಿ ಅಲ್ಲಿನ ಕಾರ್ಯರಂಗಕ್ಕೆ ಒಂದು ತಂಡ ಹೋಯಿತು. ಹಿಂದಿರುಗಲು ರಾತ್ರಿ 2 ಗಂಟೆ ಆಯಿತು. ಅಲ್ಲೇ ಮಲಗಿದೆವು. ಮರುದಿನ ಬೆಳಗ್ಗೆ ಶರ್ಮ ಹಿಂದೂಪುರಕ್ಕೆ ಹೋದರು. ಮಧ್ಯಾಹ್ನ ನಾನೂ, ಶ್ರೀಧರ ಹಿಂದೂಪುರ

ಆಶ್ರಮಕ್ಕೆ ಹೋದೆವು. 1-10-47ರವರೆಗೆ ಆಶ್ರಮದಲ್ಲೇ ಇದ್ದೆವು. ಆ ದಿನ ಮಡಕಶಿರಾ ದಿಂದ ಕರೆಬರಲು ಹೋದೆವು. ಆದರೆ ಅಲ್ಲಿ ಕಾರ್ಯಕ್ಕೆ ಬೇಕಾದ ಸಾಧನಗಳು ಕೈಗೆ ಸಿಗದೆ, ಇಬ್ಬರನ್ನು ಹಿಂದೂಪುರ ಆಶ್ರಮಕ್ಕೆ ಕಳುಹಿಸಿ ನಾವು ಅಲ್ಲೇ ಉಳಿದೆವು. 2-10-47ರಂದು ಮಡಕಶಿರಾದಲ್ಲಿ ಪ್ರಭಾತಫೇರಿ ಇತ್ತು. ಶಾಲೆಯ ಮುಂದೆ ಗಾಂಧೀ ಜಯಂತಿ ಸಭೆಗೆ ಹೋಗಿದ್ದೆ. ಆ ದಿನ ರಾತ್ರಿ ಕಾರ್ಯ ಆಗಲಿಲ್ಲ. 2-10-47ಕ್ಕೆ ಸೇವಾಶ್ರಮಕ್ಕೆ ಮರಳಿದೆ. ಅಲ್ಲಿ ಆ ದಿನ ಪ್ರಭಾಕರ್ ಎಂಬ ಗಾಂಧೀ ಶಿಷ್ಯರು ವರ್ಧಾ ಆಶ್ರಮದ ವಿಚಾರ ಭಾಷಣ ಮಾಡಿದರು. ಅಲ್ಲಿಗೆ ಕಲ್ಲೂರು ಸುಬ್ಬರಾಯರು ಬಂದಿದ್ದರು. ಆ ದಿನ ರಾತ್ರಿ ಮುನಿಯಪ್ಪ ಮತ್ತು ಯಜಮಾನ್ ರಾಜಶೇಖರಪ್ಪ ಕೃಷ್ಣರಾಜಪುರ ಜೈಲಿನಿಂದ ತಪ್ಪಿಸಿಕೊಂಡು ಆಶ್ರಮಕ್ಕೆ ಬಂದಿದ್ದರು.

5-10-47 : ಮಧ್ಯಾಹ್ನ 3ಕ್ಕೆ ಆಶ್ರಮದಲ್ಲಿ ಸತ್ಯಾಗ್ರಹದ ಮೀಟಿಂಗ್ ಆಯಿತು. 100 ಕಾರ್ಯಕರ್ತರಿದ್ದರು. ಅನ್ನಪೂರ್ಣಮ್ಮ, ಅವರ ಸೋದರಿ ಬಂದಿದ್ದರು. ಸಂಜೆ ಹಿಂದೂ ಪುರದಲ್ಲಿ ಕಲ್ಲೂರು ಸುಬ್ಬರಾಯರ ಅಧ್ಯಕ್ಷತೆಯಲ್ಲಿ ಸಾರ್ವಜನಿಕ ಸಭೆ ಆಯಿತು. ಅನ್ನ ಪೂರ್ಣಮ್ಮ, ಲಿಂಗಣ್ಣ, ಎಂ. ಎನ್. ಜೋಯಿಸ್ ಭಾಷಣಮಾಡಿದರು. 6ನೆಯ ತಾ|| ಮಾನೆಂಪಲ್ಲಿಯಲ್ಲಿ ಬಿಡಾರ ಮಾಡಿದೆವು. 7-10-47ಕ್ಕೆ ಹುಣಿಸೇನಹಳ್ಳಿಯಲ್ಲಿ ಪ್ರತಿ ಸರ್ಕಾರ ಸ್ಥಾಪಿಸಿ ರಾತ್ರಿ ಬೈಚಾಪುರದಲ್ಲಿ ಸಭೆ ಮಾಡಿದೆವು. 8ರಂದು ಬೆಳಗ್ಗೆ ಎಳವೆ ಯಲ್ಲಿ ಪ್ರಚಾರ; ರಾತ್ರಿ ಮೇಳ್ಯದಲ್ಲಿ ಸಭೆ. ೯ರಂದು ಮಾನೆಂಪಲ್ಲಿಗೆ ಬಂದೆವು. ಆ ದಿನ ರಾತ್ರಿ 8ಕ್ಕೆ ಮೇಳ್ಯದಲ್ಲಿ ಕೃಷ್ಣಯ್ಯಶೆಟ್ಟಿ ಮತ್ತಿತರರೊಡನೆ ಸಮಾಲೋಚನೆ ಆಯಿತು. 10ನೆಯ ತಾರೀಖು ಚಂದಣದೂರು ಗ್ರಾಮವನ್ನು ಆಜಾದ್ ಸರಕಾರಕ್ಕೆ ಸೇರಿಸಿಕೊಂಡೆವು. ರಾತ್ರಿ ಅಲ್ಲಿ ಸಭೆ ನಡೆಸಿದೆವು. ಮಾನೆಂಪಲ್ಲಿ ನಮ್ಮ ಕೇಂದ್ರವಾಗಿತ್ತು. 11ನೆಯ ತಾರೀಖು ದಿವಾನರ ಭೇಟಿಯ ವಿಷಯ ತಿಳಿಯಿತು. 12ನೆಯ ತಾ|| ಪೇಪರಿನಲ್ಲಿ ಸಂಧಾನವಾದ ವಿಷಯ ತಿಳಿಯಿತು. 13ರ ರಾತ್ರಿ ಮಾನೆಂಪಲ್ಲಿಯಲ್ಲಿ ಎಲ್ಲ ಸತ್ಯಾಗ್ರಹಿಗಳ ಸಭೆ ಕೂಡಿ ಸಿದೆವು. ಸಂಜೆ ಜ್ಞಾಪಕಾರ್ಥ ಭಾವಚಿತ್ರ ತೆಗೆಸಿದೆವು. ರಾತ್ರಿ ಸಭೆಯಲ್ಲಿ ರಾಜಣ್ಣ ಮತ್ತು ವೆಂಕಟನಾರಾಯಣ ಇವರಿಗೆ ಪಂತಿಗೆ ಮಾತಿನಲ್ಲಿ ಜಗಳವಾಯಿತು. ಮರುದಿನ ರಾಜಣ್ಣ ತಪ್ಪು ಒಪ್ಪಿಕೊಂಡರು. ಆ ದಿನ ಮೇಳ್ಯದಲ್ಲಿ ಸಂಜೆ ಬಹಿರಂಗ ಸಭೆಯಲ್ಲಿ ಕೃಷ್ಣಯ್ಯಶೆಟ್ಟರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದೆವು. ರಾತ್ರಿ ಔತಣ ಆಯಿತು. 15ರಂದು ಸೇವಾ ಮಂದಿರಕ್ಕೆ ಹೋದೆವು. ಸಂಜೆ ಅಲ್ಲಿ ಎಲ್ಲರೂ ಫೋಟೋ ತೆಗೆಸಿಕೊಂಡೆವು. ಮುಂದೆ 17-10-47ಕ್ಕೆ ಬೆಂಗಳೂರಿಗೆ ಹೋದೆವು. ಮಧ್ಯಾಹ್ನ ನನ್ನನ್ನು ಕಾಂಗ್ರೆಸ್ ಆಫೀಸಿನಲ್ಲಿ ಯಾರೂ ಸುಲಭವಾಗಿ ಗುರ್ತಿಸಲಿಲ್ಲ. ಗಡ್ಡ ಬಿಟ್ಟು ಸಿಕ್ಕರ ವೇಷದಲ್ಲಿ ಇದ್ದೆ. ಟಿ. ಸಿದ್ದಲಿಂಗಯ್ಯ, ಕೆ. ಆರ್. ಮಾಧವರಾವ್, ಎ.ಜಿ.ಆರ್., ಚೆನ್ನಯ್ಯ. ನಿಜಲಿಂಗಪ್ಪ, ಕೆ. ಸಿ. ರೆಡ್ಡಿ, ಟಿ. ಮರಿಯಪ್ಪ, ಹುಚ್ಚೇಗೌಡ, ಬಂದೀಗೌಡ, ದಾಸಪ್ಪ,

ಚನ್ನಿಗರಾಮಯ್ಯ, ಅಲ್ಲಿ ಇದ್ದರು. 18-10-47ರಂದು ನನ್ನ ಶಪಥ ಮುಕ್ತಾಯ ವಾಯಿತೆಂದು, ಗಡ್ಡ ಬೋಳಿಸಿದೆ.

## ಮೈ.ಚಂ. 6 | "ಚಲೋ ಮೈಸೂರು"

1946ನೆಯ ನವೆಂಬರ್ ಎರಡು ಮತ್ತು ಮೂರನೆಯ ತಾರೀಖುಗಳಲ್ಲಿ ಕೆ. ಸಿ. ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ ಆರನೆಯ ಅಧಿವೇಶನ. "ಪ್ರಜೆಗಳೇ! ಸ್ವಾತಂತ್ರ್ಯಸಮರಕ್ಕೆ ಸಿದ್ಧರಾಗಿ!" ಎಂಬ ಘೋಷಣೆಯಾಯಿತು. ಪ್ರಜಾಪ್ರತಿನಿಧಿ ಸಭೆಯ ಬಹ್ವಂಶ ಸದಸ್ಯರು ಜವಾಬ್ದಾರಿ ಸರಕಾರ ಸ್ಥಾಪಿಸಬೇಕೆಂದು ಮಹಾರಾಜರಿಗೆ ಪ್ರಾರ್ಥನಾಪತ್ರ ಕಳಿಸಿ, ಮೊರೆ ಇಟ್ಟರೂ 'ಪತ್ರ ಬಂತು' ಎನ್ನುವ ಔದಾರ್ಯ ಸಹ ತೋರಿಸಲಿಲ್ಲ. ಕೇಂದ್ರದಲ್ಲಿ ನಡುಗಾಲ ಸರಕಾರ ಸ್ಥಾಪನೆ ಆಯಿತು. ಸಂಸ್ಥಾನಗಳೂ ಸ್ವತಂತ್ರ ಭಾರತದಲ್ಲಿ ಐಕ್ಯವಾಗಬೇಕಾಗಿದೆ ಎಂದು ಸ್ಪಷ್ಟಪಡಿಸಲಾಯಿತು. ಸುಭಾಷ್ ನಗರದ ಕಾಂಗ್ರೆಸ್ ನಿರ್ಣಯಗಳನ್ನು ನೋಡಿ, ರೆಡ್ಡಿಯವರ ವಾದ ಕೇಳಿ, ದಿವಾನ್ ರಾಮಸ್ವಾಮಿ ಮುದಲಿಯಾರರು ಒಂದು ಹೇಳಿಕೆ ಕೊಡುತ್ತಾ "ಕೇಂದ್ರದಲ್ಲಿ ಏನೇನೋ ಆಗುತ್ತಿದೆ; ಪ್ರಾಂತ್ಯಗಳ ಮಾತು ಬೇರೆ; ಮೈಸೂರು ಸಂಸ್ಥಾನದ ಮಾತೇ ಬೇರೆ; ಇನ್ನೂ ಏನೇನಾಗುತ್ತದೋ ನೋಡೋಣ" ಅಂದರು. ಮೈಸೂರು ಸರಕಾರ ಕಿರುಬೆರಳನ್ನೂ ಕದಲಿಸುವ ಸೂಚನೆಗಳು ಕಂಡುಬರಲಿಲ್ಲ. ಆದಕಾರಣ ಮೈಸೂರು ಕಾಂಗ್ರೆಸ್ "ಶಾಸನಬದ್ಧ ಚಳವಳಿಯಿಂದ ಮೈಸೂರು ಸರ್ಕಾರ ದಾರಿಗೆ ಬರುವ ಹಾಗಿಲ್ಲ. ಹೋರಾಟವನ್ನು ತೀಕ್ಷ್ಣಗೊಳಿಸಬೇಕು. ಸತ್ಯಾಗ್ರಹಕ್ಕೆ ಸಿದ್ಧರಾಗಬೇಕು. ಭಾರತದಲ್ಲಿ ಆಗುತ್ತಿರುವ ಕ್ರಾಂತಿಕಾರಕ ಬದಲಾವಣೆಗಳನ್ನು ಮೈಸೂರು ಪ್ರಜೆಗಳು ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕು. ಸ್ವತಂತ್ರ ಭಾರತದಲ್ಲಿ ಮೈಸೂರೂ ಸ್ವತಂತ್ರವಾಗಲು ಶ್ರಮಿಸಬೇಕು! ಸಾವುನೋವುಗಳನ್ನು ಸಹಿಸಬೇಕು! ಬಲಿದಾನಕ್ಕೆ ಸಿದ್ಧರಾಗಬೇಕು!" ಎಂದು ಕರೆಕೊಟ್ಟಿತು.

8-1-1947ನೆಯ ದಿನ ಶ್ರೀಮನ್ಮಹಾರಾಜರು ಪ್ರಜೆಗಳಿಗೆ 'ಸಂದೇಶ' ನಾಮಕ ಘೋಷಣೆ ಮಾಡಿದರು. "ನಾವೆಲ್ಲ ಮಹಾಸಂಗ್ರಾಮದಲ್ಲಿ ಭಾಗಿಗಳಾಗಿದ್ದೆವು. ಅದರ ತಾಪತ್ರಯ ಮುಗಿಯಿತು. ಹೊಸ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಪ್ರಜೆಗಳ ಅಪೇಕ್ಷೆಯೇನೆಂಬುದು ನನಗೆ ಗೊತ್ತಿದೆ. ಅದನ್ನು ಹೇಗೆ ಪೂರೈಸಬೇಕೆಂಬ ವಿಚಾರ ಮಾಡುತ್ತಿದ್ದೇವೆ. ಪರಿಸ್ಥಿತಿಯ ವಿಮರ್ಶೆಮಾಡಿ, ಪರಿವರ್ತನವಾಗುತ್ತಿರುವ ಭಾರತದ

ರಾಜ್ಯಾಂಗದಲ್ಲಿ ಮೈಸೂರು ಹೇಗೆ ವರ್ತಿಸಬೇಕೆಂಬ ವಿಚಾರವಾಗಿ ಸೂಕ್ತಸಲಹೆಗಳನ್ನು ಮಾಡಲು ದಿವಾನರಿಗೆ ಸೂಚನೆ ಮಾಡಿದ್ದೇವೆ. ಪ್ರಜೆಗಳ ಸುಖ, ಪ್ರಜೆಗಳ ತೃಪ್ತಿ ಸಾಧಿಸಲಾಗುತ್ತಿದೆ. ಈ ಪ್ರಯತ್ನಕ್ಕೆ ಪ್ರಜೆಗಳೆಲ್ಲ ನೆರವಾಗಬೇಕು.'' ಇದು ಮಹಾರಾಜರ ಸಂದೇಶದ ಸಾರ !

ಕಾಂಗ್ರೆಸ್ ನಾಯಕರು ಸರಕಾರದ ಶ್ರೇಷ್ಠ ಕಾರ್ಯಕರ್ತರನ್ನು ನೋಡಿದರು ; ಮಾತುಕತೆಗಳಾದವು. 29-4-1927ರಂದು ದಿವಾನರೊಂದು ಹೇಳಿಕೆ ಕೊಟ್ಟು "ಬೇರೆ ಬೇರೆ ಪಕ್ಷಗಳೊಂದಿಗೆ ಸಮಾಲೋಚನೆ ಮಾಡಿ ನನ್ನ ಅಭಿಪ್ರಾಯವನ್ನು ರೂಪುಗೊಳಿಸಬೇಕೆಂದಿದ್ದೇನೆ. ಸಮಾಲೋಚನೆಗಳಿಂದ ಆದಷ್ಟು ಬೇಗ 'ಸರ್ವಸಮ್ಮತ' ಲಭಿಸೀತೆಂದು ನಂಬಿದ್ದೇನೆ. ಈ ಆಲೋಚನೆಗಳ ಪರಿಣಾಮವಾಗಿ ಸಂಸ್ಥಾನದ ಜನರಿಗೆ ಹೊಂದಿಕೆ-ಒಪ್ಪಿಗೆಯಾಗುವ, ಒಂದು ಬಗೆಯ ಜವಾಬ್ದಾರಿ ಸರಕಾರ ರೂಪುಗೊಳ್ಳುವುದೆಂದೂ, ಅದು ಮಹಾರಾಜರ ಪರಮಾಧಿಕಾರಕ್ಕೆ ಅನುಗುಣವಾಗಿರುವುದೆಂದೂ ನಂಬಿದ್ದೇನೆ" ಎಂಬುದಾಗಿ ಹೇಳಿದರು. 'ಒಂದು ಬಗೆಯ ಜವಾಬ್ದಾರಿ ಸರಕಾರ' ಎಂಬುದು ಜನರಿಗೆ ಕೆಣಕು ಕೊಟ್ಟಿತು: ಜನರಿಗೂ ಕಾಂಗ್ರೆಸ್ ನಾಯಕರಿಗೂ ನಿರಾಶೆ ಉಂಟಾಯಿತು. ಮೇ ಒಂದರಿಂದಲೇ ಸತ್ಯಾಗ್ರಹವನ್ನಾಚರಿಸಬೇಕೆಂದಿದ್ದವರು "ದೆಹಲಿಯಿಂದ ದಿವಾನರು ಬರಲಿ" ಎಂದು ಸತ್ಯಾಗ್ರಹವನ್ನು ಮುಂದಕ್ಕೆ ಹಾಕಿದರು.

10-8-1947ರಂದು ಮಹಾರಾಜರು ಭಾರತದ ಒಕ್ಕೂಟ ಸೇರಲು ಒಪ್ಪಿದರು. ಮಹಾರಾಜರ ಘೋಷಣೆ ದಿವಾನರ ಸಂಚಿನ 'ಭರವಸೆ' ಇತ್ಯಾದಿಗಳಿಂದ ಜನರು ಬೇಸತ್ತರು. ಕಾಂಗ್ರೆಸ್ ಪಕ್ಷದವರು ಬಂಗಾರಪೇಟೆಯಲ್ಲಿ ಸತ್ಯಾಗ್ರಹ ಮಾಡಲು ನಿಶ್ಚಯಮಾಡಿದರು. ದಿವಾನರ 'ತಂತ್ರಕೌಶಲ'ದಿಂದ ಕಾಂಗ್ರೆಸ್ಸಿನವರ ಸಹನೆ ಕೆಟ್ಟಿತು. 11-8-1947ರಲ್ಲಿ ಮೈಸೂರು ನಗರದಲ್ಲಿ ಕಾಂಗ್ರೆಸ್ ಪ್ರತಿನಿಧಿಗಳು ಮತ್ತೆ ಸಭೆಸೇರಿ ಸೆಪ್ಟೆಂಬರ್ ಒಂದರಿಂದ ಸತ್ಯಾಗ್ರಹ ಪ್ರಾರಂಭಿಸತಕ್ಕದ್ದೆಂದು ನಿರ್ಣಯವಾಯಿತು ; ರಾಜ್ಯಾದ್ಯಂತ 'ಚಲೋ ಮೈಸೂರ್' ಆರಂಭವಾಯಿತು! ಸರಕಾರದವರೇನು ಸುಮ್ಮನಿದ್ದರೆ ? 'ಪತ್ರಿಕೆಯವರು ಏನು ಪ್ರಕಟಿಸಬೇಕು, ಏನು ಪ್ರಕಟಿಸಬಾರದು' ಎಂದು ಒಂದು ಆಜ್ಞೆ ಮಾಡಿದರು. ಪ್ರಜೆಗಳ ಸ್ವಾತಂತ್ರ್ಯಪ್ರತಿಬಂಧಕರೂಪದ ನಾನಾ ಶಾಸನಗಳನ್ನು ಆಚರಣೆಗೆ ತಂದರು.

ಕಾಂಗ್ರೆಸ್ ಸತ್ಯಾಗ್ರಹವೂ ನಾನಾಮುಖ ತಾಳಿತು ! ಗಂಡಸರು, ಹೆಂಗಸರು, ಮಕ್ಕಳು, ವಿದ್ಯಾರ್ಥಿಗಳು, ಕೂಲಿಗಾರರು, ರೈತರು—ಪ್ರಜಾಸಮಸ್ತರೂ—ಕಟ್ಟಕಡೆಯ ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸಲು ಜೀವದ ಹಂಗುತೊರೆದು ಮುಂದೆ ಬಂದರು ! ದೇಶದಲ್ಲೆಲ್ಲ 'ಚಲೋ ಮೈಸೂರ್' ಗುಡುಗು ಕೇಳಿಬಂತು. ಸತ್ಯಾಗ್ರಹಿಗಳು ಮೈಸೂರಿಗೆ ಪಡೆಪಡೆಗಳಾಗಿ ಹೋಗಿ ಅರಮನೆಯ ಮುಂದೆ ಸತ್ಯಾಗ್ರಹಮಾಡುವ ಸಂಕಲ್ಪಮಾಡಿದರು! ಹರತಾಳಗಳೇನು, ಮುಷ್ಕರಗಳೇನು, ಮೆರವಣಿಗೆಗಳೇನು, ರಾಷ್ಟ್ರಧ್ವಜಾರೋಹಣಗಳೇನು, ಸರ್ವಕಾವಲುಗಳೇನು-ಇವೆಲ್ಲ ದಿನನಿತ್ಯದ ಕ್ರಾಂತಿಕಾರಕ ವ್ಯವಹಾರಗಳಾದವು;

'ಚಲೋ ಮೈಸೂರ್' ಚಳವಳಿ ಬೃಹದ್ರೂಪ ತಾಳಿತು. ಸರಕಾರದವರು ಕಕ್ಕಾಬಿಕ್ಕಿಯಾದರು. ಪ್ರಭುತ್ವಕ್ಕೆ ಬಲವಿದೆ! ದಬ್ಬಾಳಿಕೆ ಆರಂಭವಾಯಿತು. ನಿರ್ಬಂಧಾಜ್ಞೆಗಳಿಗೆ ಕೊನೆಮೊದಲೇ ಇಲ್ಲ! ರಾಜ್ಯದ ಮೂಲೆಮೂಲೆಗಳಲ್ಲೂ ಶಾಸನಭಂಗವೊಂದು ಕಡೆ; ಲಾಠೀ ಪ್ರಯೋಗ, ಬಂದೂಕು ಹಾರಿಸೋಣ, ಜನರನ್ನು ಸೆರೆಮನೆಗಳಲ್ಲಿ ಬಂಧಿಸೋಣ—ಇತ್ಯಾದಿಗಳೊಂದು ಕಡೆ.

ಹೆಂಗಸರೊಂದು ಕಡೆ ಪ್ರತಿಭಟಿಸಿದರೆ ಕೂಲಿಗಾರರು ಇನ್ನೊಂದು ಕಡೆ ಎದ್ದರು! ಬೆಂಗಳೂರು, ಭದ್ರಾವತಿ, ಚಿನ್ನದ ಗಣಿ, ಎಲ್ಲೆಲ್ಲೂ ಮುಷ್ಕರ! ರೈಲ್ವೆ ಮುಷ್ಕರ ಮೊದಲಾಯಿತು. ಬಂಧನಗಳಿಗೆ ತುದಿಮೊದಲೇ ಇಲ್ಲ. ಕಾಲೇಜು ವಿದ್ಯಾರ್ಥಿಗಳ ಮುಷ್ಕರ! ಕಡೆಗೆ ಪೋಲೀಸಿನವರ ಮುಷ್ಕರ! ಈ ಪ್ರಚಂಡ ಸತ್ಯಾಗ್ರಹ ಮೈಸೂರು 'ಆರ್ಕಾಟ್ ನವಾಬ'ರ ಸರಕಾರವನ್ನು ಬಗ್ಗಿಸಿಬಿಟ್ಟಿತು. 6-10-1947ರಂದು ಸರಕಾರ ಬಂದಿಗಳನ್ನೆಲ್ಲ ಬಿಟ್ಟುಬಿಡುವ ನಿಶ್ಚಯಮಾಡಿತು 9-10-1947ನೆಯ ದಿನ ಕೆ. ಸಿ. ರೆಡ್ಡಿಗಳು ದಿವಾನರನ್ನು ನೋಡಿದರು. 11-10-1947ನೆಯ ದಿನ ಸರಕಾರ-ಕಾಂಗ್ರೆಸ್ ಮಧ್ಯೆ ಒಪ್ಪಂದವಾಯಿತು. 12-10-1947ನೆಯ ದಿನ ಕಾಂಗ್ರೆಸ್ ಅಧ್ಯಕ್ಷರೂ, ಆರು ಮಂದಿ ಕಾಂಗ್ರೆಸ್ ನಾಯಕರೂ, ಅರಮನೆಗೆ ಹೋಗಿ ಮಹಾರಾಜರನ್ನು ಭೇಟಿಮಾಡಿದರು. "ಮೈಸೂರು ರಾಜಕೀಯ ಜೀವನದ ಇತಿಹಾಸದಲ್ಲಿ ಹೊಸ ಪ್ರಕರಣವನ್ನು ಆರಂಭಿಸುತ್ತಿದ್ದೇವೆ" ಅಂದರು. ಮಹಾರಾಜರು 13-10-1947ರಂದು ಸರಕಾರ ಆಜ್ಞೆ ಹೊರಡಿಸಿ, "ಪ್ರಜಾಪ್ರತಿನಿಧಿಗಳ ಮಂತ್ರಿಮಂಡಳಿ ಸ್ಥಾಪನೆಯಾಗಿದೆ" ಎಂದು ಸಾರಿತು. ಈ ಸಮಾಚಾರ ಕೇಳಿ ಮಹಾತ್ಮಾ ಗಾಂಧೀಜಿಯವರೂ, ಸರದಾರ್ ಪಟೇಲರೂ ಕಾಂಗ್ರೆಸ್ಸನ್ನೂ, ಮಹಾರಾಜರನ್ನೂ ಅಭಿನಂದಿಸಿದರು.

24-10-1947ನೆಯ ದಿನ ಸಂಸ್ಥಾನದಲ್ಲಿ ಮಹಾದಿನ! ಅಂದು ವಿಜಯದಶಮಿ. ಅಂದೇ ಮೈಸೂರಿನಲ್ಲಿ 'ಆರ್ಕಾಟ್ ನವಾಬ್‌ಷಾಹಿ' ಕೊನೆಗೊಂಡದ್ದು. ಅಂದೇ ಕಾಂಗ್ರೆಸ್ ನಾಯಕರು ಶ್ರೀ ಕೆ. ಸಿ. ರೆಡ್ಡಿಗಳ ಮಂತ್ರಿಮಂಡಲ ಅವತಾರ ಮಾಡಿದ್ದು. ಅಂದೇ ರೆಡ್ಡಿ ಮಂತ್ರಿಮಂಡಲ ಅಠಾರಾ ಕಛೇರಿಗೆ 'ವಿಜಯ ಪ್ರಯಾಣ' ಮಾಡಿ, ರಾಜ್ಯದ ಆಡಳಿತಸೂತ್ರಗಳನ್ನು ವಹಿಸಿಕೊಂಡದ್ದು.

ಅನಂತರ ನಡೆದದ್ದೆಲ್ಲ ಕ್ರಮಪ್ರಾಪ್ತ. ಮಹಾರಾಜರು 26-11-1949ರಂದು ರಾಜಪ್ರಕಟಣೆ ಹೊರಡಿಸಿ, ಭಾರತದ ಸಂವಿಧಾನವೇ ಮೈಸೂರಿನ ಸಂವಿಧಾನವೆಂದು ಸಾರಿದರು. 6-2-1950ನೆಯ ದಿನ ಹೊಸ ಮಂತ್ರಿಮಂಡಲ, ರಾಜ್ಯಾಡಳಿತ ಜವಾಬ್ದಾರಿಯನ್ನು ಪಡೆಯಿತು.

—ದಿ|| ತಿರುಮಲೆ ತಾತಾಚಾರ್ಯಶರ್ಮ

(ಸುಧಾ 13-8-1972ರ ಸಂಚಿಕೆಯಿಂದ. ಮೈಸೂರಿನ ಹೋರಾಟದ ವಿವರ ಚಿತ್ರ ನೀಡಲು ಶರ್ಮಾಜಿ ಒಪ್ಪಿದ್ದರು. ಅವರು ನಿಧನರಾಗಿ ಆ ಕೆಲಸ ಹಾಗೆಯೇ ಉಳಿಯಿತು. ಅವರ ಬಗ್ಗೆ ಬರಹ ಮುಂದೆ ಬಂದಿದೆ—ಸಂ||).

## ಮೈ.ಜಂ. 7 | ಜನತಾ ರಾಜ್ಯವನ್ನು ತಂದ 42 ದಿನಗಳು

ವಿಜಯದಶಮಿ ಮೈಸೂರು ರಾಜ್ಯದ ಇತಿಹಾಸದಲ್ಲಿ ಒಂದು ಮಹತ್ವದ ದಿನ. 1947ನೆಯ ಸಾಲಿನ ವಿಜಯದಶಮಿ ದಿನ ಮೈಸೂರಿನ ಪ್ರಜೆಗಳು ರಾಜಶಾಹಿಯನ್ನು ಕಿತ್ತೊಗೆದು ಪ್ರಜಾರಾಜ್ಯವನ್ನು ಸ್ಥಾಪಿಸಿದ, ಇತಿಹಾಸ ನಿರ್ಮಾಣ ಮಾಡಿದ ದಿನ. ಮೂರು ದಶಕಗಳ ಕಾಲ ರಾಜಮನೆತನದೊಡನೆ ಮತ್ತು ಬ್ರಿಟಿಷ್ ಸಾಮ್ರಾಜ್ಯಶಾಹಿ ಯೊಡನೆ ನಡೆಸಿದ ಹೋರಾಟ ಅಂತ್ಯವಾದ ದಿನ.

ಈ ಇತಿಹಾಸಪೂರ್ಣ ದಿನ ಬರಲು ಮೈಸೂರು ಕಾಂಗ್ರೆಸ್ ಇಡೀ ರಾಜ್ಯದಲ್ಲಿ 42 ದಿನಗಳ ನಿರಂತರ ಶಾಂತಿ, ಅಹಿಂಸೆ, ಸತ್ಯಗಳ ಹೋರಾಟವನ್ನು ನಡೆಸಬೇಕಾ ಯಿತು. ಭಾರತಕ್ಕೆ ಸ್ವಾತಂತ್ರ್ಯವನ್ನು ಇತ್ತ ಬ್ರಿಟಿಷರು, ದೇಶದಲ್ಲಿ ಅಶಾಂತಿ, ಅನೈಕ್ಯತೆ ಗಳು ಮೊಳೆಯಲಿ ಎಂಬ ಆಶಯದಿಂದ ರಾಜಮಹಾರಾಜರುಗಳು ಸ್ವತಂತ್ರವಾಗಿರಲು, ಪಾಕಿಸ್ತಾನ ಅಥವಾ ಹಿಂದೂಸ್ಥಾನ ಆಡಳಿತಕ್ಕೆ ಸೇರಲು ಸ್ವಾತಂತ್ರ್ಯವನ್ನು ಇತ್ತಿದ್ದರು.

ಭಾರತಕ್ಕೆ ಸ್ವಾತಂತ್ರ್ಯ ಬಂದನಂತರ, ದೇಶೀಯ ಸಂಸ್ಥಾನಗಳಲ್ಲೂ ಪ್ರಜಾರಾಜ್ಯ ಗಳು ಸ್ಥಾಪಿಸಲಾಗುವುದೆಂದು ಅಂದು ಎಲ್ಲರೂ ಭಾವಿಸಿದ್ದರು. ಆದರೆ ದೇಶೀಯ ರಾಜ್ಯ ಗಳಲ್ಲಿ ಪ್ರಜಾಪ್ರಭುತ್ವದ ದಾರಿಯಲ್ಲಿ ಬಹಳ ದೂರ ಸಾಗಿದ್ದ ಮೈಸೂರು ಕೂಡ ಅಂದು ಮೈಸೂರಿನ ದಿವಾನರಾಗಿದ್ದ ಸರ್ ಆರ್ಕಾಟ್ ರಾಮಸ್ವಾಮಿ ಮುದಲಿಯಾರ್‌ರವರ ಸಲಹೆಯ ಮೇರೆ, ಜನತೆಗೆ ಅಧಿಕಾರವನ್ನು ವಹಿಸಿಕೊಡಲು ಸಿದ್ಧವಾಗಿರಲಿಲ್ಲ. ಮೈಸೂರು ಕಾಂಗ್ರೆಸ್ಸಿನ ನಾಯಕರು, ದಿವಾನರು ಜನತೆಗೆ ಸರ್ಕಾರವನ್ನು ವಹಿಸಿಕೊಡು ವುದಿಲ್ಲ ಎಂಬುದನ್ನು ತಿಳಿದ ಒಡನೆ ಜವಾಬ್ದಾರಿ ಸರ್ಕಾರ ಪಡೆಯಲು ದೇಶಾದ್ಯಂತ ಸತ್ಯಾಗ್ರಹ ಆಚರಿಸಲು ನಿರ್ಧರಿಸಿದರು.

1947ರ ಆಗಸ್ಟ್ 21ರಂದು ಮೈಸೂರು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಸಭೆ ಸೇರಿ ಚಾರಿತ್ರಿಕ ನಿರ್ಣಯ ಕೈಗೊಂಡಿತು. ಆ ನಿರ್ಣಯದಂತೆ ಕಾಂಗ್ರೆಸ್ಸಿನ ಘಟನೆಯ ನಿಯಮಾವಳಿಗಳನ್ನು ತಾತ್ಕಾಲಿಕವಾಗಿ ರದ್ದುಪಡಿಸಿ, ಸೆಪ್ಟೆಂಬರ್ ಒಂದರಿಂದ ರಾಜ್ಯಾದ್ಯಂತ ಸತ್ಯಾಗ್ರಹ ನಡೆಸಲು, ಕಾಂಗ್ರೆಸ್ ಅಧ್ಯಕ್ಷರನ್ನು ಸರ್ವಾಧಿಕಾರಿಯಾಗಿ

ನೇಮಿಸತಕ್ಕದ್ದು ; ಇಡೀ ರಾಜ್ಯದಲ್ಲಿ ರಾಜಷಾಹಿಯ ಅಂತ್ಯವನ್ನು ಒತ್ತಾಯ ಮಾಡಿ 1947ರ ಸೆಪ್ಟೆಂಬರ್ 1ರಂದು ಹರತಾಳ ಆಚರಿಸತಕ್ಕದ್ದು ; ಸತ್ಯಾಗ್ರಹವು ಪೂರ್ಣವಾಗಿ ಅಹಿಂಸಾಯುತವಾಗಿ ಇರತಕ್ಕದ್ದು ; ಅರಮನೆಯ ಸತ್ಯಾಗ್ರಹವನ್ನು ಶಾಂತಯುತವಾಗಿ ನಡೆಸತಕ್ಕದ್ದು ; ಎಲ್ಲ ಜನರೂ ಈ ಹೋರಾಟದಲ್ಲಿ ಭಾಗವಹಿಸಬೇಕೆಂದು ಮನವಿ ಮಾಡತಕ್ಕದ್ದು ; ಜಯ ಗಳಿಸುವವರೆಗೆ ಹೋರಾಟ ನಡೆಸಬೇಕು ; ಸತ್ಯಾಗ್ರಹವನ್ನು ನಿಲ್ಲಿಸಲು ಕಾರ್ಯಕಾರಿ ಸಮಿತಿಗೆ ಮಾತ್ರ ಅಧಿಕಾರವಿದೆ; ಯಾವ ಸರ್ವಾಧಿಕಾರಿಗೂ ಸತ್ಯಾಗ್ರಹವನ್ನು ನಿಲ್ಲಿಸಲು ಅಧಿಕಾರವಿಲ್ಲ ಎಂದು ತೀರ್ಮಾನಿಸಲಾಯಿತು. ಕಾಂಗ್ರೆಸ್ ತೀರ್ಮಾನವನ್ನು ಮಹಾರಾಜರ ಗಮನಕ್ಕೆ ತರಲು ಒಂದು ಪತ್ರವನ್ನು ಬರೆಯಲೂ ಇದೇ ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಣಯದ ಆಧಾರದಮೇಲೆ ಸತ್ಯಾಗ್ರಹದ ಸರ್ವಾಧಿಕಾರಿಗಳಾಗಿ ಕೆ. ಚಂಗಲರಾಯ ರೆಡ್ಡಿಯವರನ್ನು ನೇಮಿಸಲಾಯಿತು. ಸತ್ಯಾಗ್ರಹಿಗಳು ಬೆಂಗಳೂರು ಮತ್ತು ರಾಜ್ಯದ ಎಲ್ಲಾ ಭಾಗಗಳಿಂದ ಸೆಪ್ಟೆಂಬರ್ 4ರಂದು ಹೊರಟು, ಸೆ. 11ರ ವೇಳೆಗೆ ಮೈಸೂರನ್ನು ತಲುಪಿ, ಅರಮನೆ ಸತ್ಯಾಗ್ರದಲ್ಲಿ ಭಾಗವಹಿಸಲು ತೀರ್ಮಾನ ಕೈಗೊಳ್ಳಲಾಯಿತು.

ಕಾಂಗ್ರೆಸ್ ಸಂಸ್ಥೆ ತನ್ನ ಗುರಿ ಮುಟ್ಟಲು ಪ್ರಯತ್ನ ನಡೆಸಿದ್ದರೆ ಆಡಳಿತಷಾಹಿ ಸುಮ್ಮನೆ ಕುಳಿತಿರಲಿಲ್ಲ. ಈ ಜನತಾ ಆಂದೋಲನವನ್ನು ಹತ್ತಿಕ್ಕಲು ಎಲ್ಲ ಸಿದ್ಧತೆಗಳನ್ನು ಮಾಡುತ್ತಿತ್ತು ; ಸಂಧಾನದ ಮಾತುಗಳನ್ನಾಡುತ್ತಾ ಸಮರಕ್ಕೆ ಸಿದ್ಧತೆಗಳನ್ನು ಮಾಡುತ್ತಿತ್ತು. ಆಗಸ್ಟ್ 28ರಂದು ಸರ್ಕಾರವು ತುರ್ತುಶಾಸನವೊಂದನ್ನು ಘೋಷಿಸಿ, ಪತ್ರಿಕೆಗಳು ಸತ್ಯಾಗ್ರಹಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ಸುದ್ದಿಗಳನ್ನು ಪ್ರಕಟಿಸಬಾರದೆಂದು ಸಾರಿತು. ರಾಷ್ಟ್ರೀಯ ಪತ್ರಿಕೆಗಳು ಸರ್ಕಾರದ ಈ ಕ್ರಮವನ್ನು ಪ್ರತಿಭಟಿಸಿ ಪತ್ರಿಕಾಪ್ರಕಟನೆಯನ್ನೇ ನಿಲ್ಲಿಸಿದವು.

ಸರ್ ಆರ್ಕಾಟ್ ಕಾಂಗ್ರೆಸ್ಸಿನ ಶಕ್ತಿಪರೀಕ್ಷೆಗೆ ನಿಂತಿದ್ದರು. ಕಾಂಗ್ರೆಸ್ ಈ ಸವಾಲನ್ನು ಎದುರಿಸಲು ಸಿದ್ಧವಾಗಿ ನಿಂತಿದ್ದಿತು. ಸರ್ಕಾರ ತುರ್ತುಶಾಸನವನ್ನು ಹೊರಡಿಸಿದ್ದು ಜನತೆಯಲ್ಲಿ ಒಂದು ರೀತಿಯ ಹೊಸ ಹುರುಪಿಗೆ ಪ್ರೇರಕವಾಯಿತು. ರಾಜಷಾಹಿಯನ್ನು ಅಳಿಸಿಹಾಕಲು ಯಾವುದೇ ತ್ಯಾಗಕ್ಕೆ ತಾನು ಸಿದ್ಧವೆಂದು ಜನತೆ ಒಕ್ಕೊರಲಿನಿಂದ ಕೂಗಿತು. ಪ್ರಥಮ ಸರ್ವಾಧಿಕಾರಿ ಕೆ. ಸಿ. ರೆಡ್ಡಿಯವರು ಸೆಪ್ಟೆಂಬರ್ 1ರಂದು ಬೆಂಗಳೂರಿನ ಕಬ್ಬನ್‌ಪೇಟೆಯಲ್ಲಿ ಒಂದು ಬೃಹತ್ ಸಭೆಯನ್ನು ಉದ್ದೇಶಿಸಿ ಮಾತನಾಡಿ ಸತ್ಯಾಗ್ರಹದ ಉದ್ದೇಶ-ಗುರಿಗಳನ್ನು ವಿವರಿಸಿದರು. ಸರ್ಕಾರದ ದಮನ ನೀತಿಗಳಿಗೆ ಹೆದರುವುದಿಲ್ಲ ಎಂದು ಅವರು ಹೇಳಿದಾಗ ಸಾವಿರಾರು ಜನ ಒಕ್ಕೊರಲಿನಿಂದ "ಆರ್ಕಾಟ್-ಬಾಯ್‌ಕಾಟ್ !" ಎಂದು ಕೂಗಿದರು; ನಗರದ ಬೀದಿಗಳಲ್ಲಿ ಘೋಷಣೆಗಳನ್ನು ಕೂಗುತ್ತಾ ನಡೆದರು.

ಸರ್ಕಾರವೂ ಈ ಶಕ್ತಿಪ್ರದರ್ಶನ ಕಂಡು ಕೆರಳಿತು. ಸೆಪ್ಟಂಬರ್ 4ರಂದು

ಅರಮನೆ ಸತ್ಯಾಗ್ರಹಕ್ಕೆ ಬೆಂಗಳೂರಿನಿಂದ ಮೈಸೂರಿಗೆ ಜಾಥಾ ಹೊರಡಬೇಕಾಗಿತ್ತು. ಆದರೆ ಸೆಪ್ಟೆಂಬರ್ 3ರಂದು ರಾತ್ರಿ ಇಡೀ ರಾಜ್ಯದಲ್ಲಿ ಪೋಲೀಸ್ ರಾಜ್ಯ ಸ್ಥಾಪಿತ ವಾಯಿತು. ಸರ್ವಾಧಿಕಾರಿಗಳಾಗಿದ್ದ ಕೆ. ಸಿ. ರೆಡ್ಡಿ, ಟಿ. ಸಿದ್ದಲಿಂಗಯ್ಯ, ಡಾ॥ ಭಾಷ್ಯಂ, ಎಚ್. ಸಿದ್ದಯ್ಯ ಮತ್ತು ಡಾ॥ ಕೆ. ಆರ್. ಮಾಧವರಾವ್, ಟಿ. ಸುಬ್ರಹ್ಮಣ್ಯ ಇವರುಗಳ ದಸ್ತಗಿರಿಯಾಯಿತು. ಈ ದಸ್ತಗಿರಿಗಳಿಂದ ಜನತೆಯ ಉತ್ಸಾಹ ಕುಗ್ಗುವುದರ ಬದಲು ಮೇರೆಮೀರಿತು. ವಿದ್ಯಾರ್ಥಿಗಳೂ ಕಾರ್ಮಿಕರೂ ಹೆಂಗಸರೂ ಎಲ್ಲರೂ ಸತ್ಯಾಗ್ರಹದಲ್ಲಿ ಭಾಗವಹಿಸಲು ಮುಂದಾದರು. ತಮಿಳುನಾಡು, ಆಂಧ್ರ, ಕೇರಳ ಗಳಿಂದಲೂ ಸತ್ಯಾಗ್ರಹಿಗಳು ಮೈಸೂರಿನತ್ತ ಧಾವಿಸಿದರು.

ಸೆಪ್ಟೆಂಬರ್ 14ರಂದು ಎಸ್. ನಿಜಲಿಂಗಪ್ಪನವರನ್ನು ದಸ್ತಗಿರಿ ಮಾಡಲಾಯಿತು. ರಾಜ್ಯದ ಜಿಲ್ಲಾ ಮುಖಂಡರುಗಳನ್ನೆಲ್ಲಾ ಸರ್ಕಾರ ದಸ್ತಗಿರಿ ಮಾಡಲಾರಂಭಿಸಿತು. ತುಮಕೂರು, ಫ್ರೆಂಚ್‌ರಾಕ್ಸ್ (ಪಾಂಡವಪುರ), ಬೆಂಗಳೂರು ಇಲ್ಲೆಲ್ಲ ಲಾಠೀಚಾರ್ಜು ಮತ್ತು ಗೋಳೀಬಾರ್‌ಗಳಾದವು. ಪೋಲೀಸರು ಸತ್ಯಾಗ್ರಹಿಗಳನ್ನು ದಸ್ತಗಿರಿ ಮಾಡಿ ದೂರಪ್ರದೇಶಗಳಲ್ಲಿ ಬಿಟ್ಟು ಬಂದರು. ಕೋಲಾರದಿಂದ ಮೈಸೂರಿಗೆ ಸೆಪ್ಟೆಂಬರ್ 11ರಂದು ಹೊರಟಿದ್ದ ಹತ್ತು ಮಂದಿಯನ್ನು, ಚನ್ನಪಟ್ಟಣದಿಂದ ಮೈಸೂರಿನ ಕಡೆಗೆ ಹೋಗುತ್ತಿದ್ದ 73 ಸತ್ಯಾಗ್ರಹಿಗಳ ತಂಡವನ್ನು ದಸ್ತಗಿರಿ ಮಾಡಿ ಕಾಡಿನಲ್ಲಿ ಬಿಟ್ಟರು. ಆದರೆ ಸತ್ಯಾಗ್ರಹಿಗಳು ಧೃತಿಗೆಡಲಿಲ್ಲ. ಶಿವಮೊಗ್ಗದಲ್ಲಿ ಸತ್ಯಾಗ್ರಹಕ್ಕೆ ಮಹಿಳೆಯರೂ ಸೇರಿದರು. ಶ್ರೀಮತಿಯವರಾದ ಎನ್. ಎಸ್. ಗೌರಮ್ಮ, ಟಿ. ರತ್ನಮ್ಮ, ಕು॥ ಎಸ್. ಪೊನ್ನಮ್ಮ, ಪದ್ಮಾವತಿ ಕೊಲ್ಲೂರಯ್ಯ, ಅಂಬಮ್ಮ, ಎಚ್. ಪದ್ಮಾವತಿ, ಕುಮಾರಿಯ ರಾದ ಇಂದು ಚಲ್ಲಮ್ಮ, ಎಸ್. ಕೆ. ಚಂದ್ರವದನ, ಸುನಂದ, ಕುಸುಮ, ಕೆ. ಜಿ. ರಂಗೂಬಾಯಿ ಮತ್ತು ಆರ್. ಎನ್. ಇಂದಿರಾ ಇವರುಗಳನ್ನು ಕಾಂಗ್ರೆಸ್ ಧ್ವಜ ವನ್ನು ಹಾರಿಸಲು ಪ್ರಯತ್ನಿಸಿದಾಗ ಸೆಪ್ಟೆಂಬರ್ 13ರಂದು ದಸ್ತಗಿರಿ ಮಾಡಲಾಯಿತು.

ಬೆಂಗಳೂರಿನಲ್ಲಿ ಪರಿಸ್ಥಿತಿ ತೀರಾ ವಿಕೋಪಕ್ಕೆ ಹೋಗಿದ್ದಿತು. ಅಲ್ಲಿ ಕರ್ಫ್ಯೂವನ್ನು ವಿಧಿಸಿ ಪರಿಸ್ಥಿತಿಯನ್ನು ಹತೋಟಿಗೆ ತರಲು ಪ್ರಯತ್ನಿಸಲಾಯಿತು. ಸರ್ಕಾರದ ದಮನನೀತಿ ಹೆಚ್ಚಾದಂತೆ ಸತ್ಯಾಗ್ರಹ ಪ್ರಬಲವಾಗತೊಡಗಿತು. ಆರ್ಕಾಟ್‌ರವರನ್ನು ದಿವಾನ್ ಪದವಿಯಿಂದ ಹೊರಹಾಕಬೇಕೆಂದು ಬೇಡಿಕೆ ಬಲವಾಯಿತು. ಕೇವಲ 15 ದಿನಗಳಲ್ಲಿ ಸರ್ಕಾರ ನಿಶ್ಯಕ್ತವಾಗುತ್ತಾ ಬಂದಿದ್ದಿತು. ಸೆಪ್ಟೆಂಬರ್ 15ರಂದು ತುಮಕೂರಿನಲ್ಲಿ ಜಿಲ್ಲಾ ಕಛೇರಿ ಮೇಲೆ ಜನ ದಾಳಿ ಮಾಡಿದರು. ಪೋಲೀಸರು ಗೋಲಿ ಹಾರಿಸಿದಾಗ ಇಬ್ಬರು ಸತ್ತರು. 16ರಂದು ಮಧುಗಿರಿಯಲ್ಲಿ ಗೋಳೀಬಾರು, ಎರಡು ಮರಣ. ಹೀಗೆ ರಾಜ್ಯದ ನಾನಾ ಭಾಗಗಳಲ್ಲಿ ಅಶಾಂತಿ–ಗಲಭೆ–ಗೋಲೀಬಾರ್ –ಮರಣ ನಡೆದವು.

ಅಂದಿನ ಪರಿಸ್ಥಿತಿಯ ಬಗ್ಗೆ 'ಇಂಡಿಯನ್ ಎಕ್ಸ್‌ಪ್ರೆಸ್' ವರದಿಯಂತೆ

"ರಾಜ್ಯದಲ್ಲೆಲ್ಲಾ ಗೆರಿಲ್ಲಾ ಕದನ ನಡೆಯುತ್ತಿತ್ತು. ಸೇತುವೆಗಳನ್ನು ಉರುಳಿಸಿ ಸಂಚಾರವನ್ನು ಪ್ರತಿಬಂಧಿಸಲಾಗಿತ್ತು." ಮತ್ತೊಂದು ವರದಿಯ ಶಿರೋನಾಮೆ ಹೀಗಿತ್ತು : "ಮೈಸೂರು ರಾಜ್ಯದಲ್ಲಿ ಇನ್ನಷ್ಟು ಸೆರೆಮನೆಗಳ ಅಗತ್ಯವಿದೆ." ನಗರದ ಸೆಂಟ್ರಲ್ ಜೈಲಿನಲ್ಲಿ ಕೈದಿಗಳನ್ನು ಇಡಲು ಅವಕಾಶವಿದ್ದುದಕ್ಕಿಂತ 200 ಮಂದಿ ಹೆಚ್ಚು ದಸ್ತಗಿರಿಯಾಗಿದ್ದರು. ಒಟ್ಟು ದಸ್ತಗಿರಿಗಳು ನಗರದಲ್ಲಿ 1093ಕ್ಕೆ ಏರಿದ್ದಿತು. ರಾಜ್ಯದಾದ್ಯಂತ ಸುಮಾರು 4,000 ಜನರು ದಸ್ತಗಿರಿಯಾಗಿದ್ದರು. ಪ್ರವಾಹದಂತೆ ಜನ ಇನ್ನೂ ಸತ್ಯಾಗ್ರಹದಲ್ಲಿ ಭಾಗವಹಿಸಲು ಬರುತ್ತಿದ್ದರು. ತೀರ್ಥಹಳ್ಳಿಯಲ್ಲಿ ಮಹಿಳಾ ಸತ್ಯಾಗ್ರಹಿಗಳ ಮೇಲೆ ಲಾಠೀಛಾರ್ಜು ಮಾಡಲು ಪೋಲೀಸರು ಒಪ್ಪಲಿಲ್ಲ !

ರಾಜ್ಯದ ಸತ್ಯಾಗ್ರಹದ ಭೀಕರತೆಯ ಕಾವು ತಟ್ಟಿದಂತೆ ಮೈಸೂರಿನ ಮಹಾರಾಜರೂ ತಮ್ಮ ಅಧಿಕಾರವನ್ನು ಜನತೆಗೆ ವರ್ಗಾಯಿಸಲು ಕ್ರಮಕೈಗೊಳ್ಳಲಾರಂಭಿಸಿದರು. ದೇಶದ ನಾಯಕರು ಮೈಸೂರಿನ ಮಹಾರಾಜರಿಗೆ ವಿವೇಕವನ್ನು ಹೇಳಿ ಪತ್ರಗಳನ್ನು ಬರೆದರು.

ಸತ್ಯಾಗ್ರಹದ ಬಿರುಸು ಏರುತ್ತಿರುವಾಗ ಸರ್ ಆರ್ಕಾಟ್ ಹೊಸ ಅಸ್ತ್ರ ಪ್ರಯೋಗಿಸಿದರು. ಬ್ರಿಟಿಷರ ಒಡೆದು ಆಳುವ ನೀತಿಯನ್ನು ಅವರು ಅನುಸರಿಸಿದರು. ಮೈಸೂರಿನ ಒಂದು ಕೋಮಿನ ಜನ ಕಾಂಗ್ರೆಸ್ ಸತ್ಯಾಗ್ರಹವನ್ನು ಟೀಕಿಸಿ ಮಹಾರಾಜರ ಆಡಳಿತಕ್ಕೆ ಬೆಂಬಲವಿತ್ತರು. ಆದರೆ ಇವರುಗಳ ಮಾತನ್ನು ಅವರ ವಿನಾ ಕೇಳುವ ಬೇರೆ ಜನ ಇರಲಿಲ್ಲ. ದಮನ ನೀತಿಯ ವಿಫಲತೆ, ಜನತೆಯ ನಿರ್ಧಾರಗಳಿಂದ ಆರ್ಕಾಟ್‌ರ ಕಣ್ಣು ತೆರೆಯಿತು.

ಸೆಪ್ಟೆಂಬರ್ 24ರಂದು ಮಹಾರಾಜರು ಒಂದು ಘೋಷಣೆಯನ್ನು ಹೊರಡಿಸಿ, ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಲು ತೀರ್ಮಾನವನ್ನು ಪ್ರಕಟಿಸಿದರು. ಜೈಲಿನಲ್ಲಿ ಇದ್ದ ನಾಯಕರೊಡನೆ ಸಂಧಾನಗಳು ಆರಂಭವಾದವು. 'ಇಂಡಿಯನ್ ಎಕ್ಸ್‌ಪ್ರೆಸ್' ಮುಂತಾದ ಪತ್ರಿಕೆಗಳ ಮೇಲೆ ಇದ್ದ ನಿರ್ಬಂಧವನ್ನು ತೆಗೆಯಲಾಯಿತು. ಜೈಲುಗಳಲ್ಲಿರುವ ರಾಜಕೀಯ ಕೈದಿಗಳನ್ನೆಲ್ಲ ಬಿಡುಗಡೆ ಮಾಡಲಾಯಿತು. ಹೊಸ ಜನತಾ ಸರ್ಕಾರ ಕೆ. ಚೆಂಗಲರಾಯ ರೆಡ್ಡಿಯವರ ನೇತೃತ್ವದಲ್ಲಿ ಅಕ್ಟೋಬರ್ 27ರಂದು ಕಾರ್ಯವನ್ನು ಆರಂಭಮಾಡಿತು. ಮುಖ್ಯಮಂತ್ರಿ ಕೆ. ಸಿ. ರೆಡ್ಡಿ ಅವರ ಮಂತ್ರಿ ಮಂಡಲ ಅರಳೇಪೇಟೆಯ ಕಾಂಗ್ರೆಸ್ ಭವನದಿಂದ ಅಠಾರಾ ಕಛೇರಿಗೆ ಮೆರವಣಿಗೆಯಲ್ಲಿ ಹೊರಟಾಗ ಅವರನ್ನು ಹಿಂಬಾಲಿಸಿ ಒಂದು ಲಕ್ಷ ಜನ ಹೋಗಿದ್ದರು.

ಕೇವಲ 42 ದಿನಗಳ ಅವಿರತ ಹೋರಾಟದ ಫಲವಾಗಿ ಮೈಸೂರು ರಾಜ್ಯದಲ್ಲಿ ಜನತಾ ಸರ್ಕಾರ ಸ್ಥಾಪಿತವಾಗಿಹೋಯಿತು. ಅಂದಿನಿಂದ ಇಂದಿನವರೆಗೆ ರಾಜ್ಯವು ನಾನಾ ಘಟ್ಟಗಳನ್ನು ಹಾದುಬಂದಿದೆ. ರೆಡ್ಡಿ ಸರ್ಕಾರ ನವೆಂಬರ್ 1ರಂದು ಮೈಸೂರು ಬಿಡುಗಡೆಯ ದಿನವನ್ನು ಆಚರಿಸಲು ಕರೆ ಇತ್ತಿದ್ದಿತು. ಅದೇ ದಿನ 1956ರಲ್ಲಿ ಕನ್ನಡ

ನಾಡಿನ ಜನರೆಲ್ಲಾ ಐಕ್ಯವಾದ ದಿನವೂ ಆದುದು ಒಂದು ಯೋಗಾಯೋಗವೇ ಅಲ್ಲವೆ !

ಸತ್ಯಾಗ್ರಹದ ಕಾಲದಲ್ಲಿ ಅನೇಕ ಘಟನೆಗಳು ನಡೆದವು. ಜೈಲುಗೋಡೆಗೆ ಡೈನಾಮೈಟ್ ಇಡಲಾಯಿತು. ಪೋಲೀಸ್ ವಾಹನಗಳನ್ನು ಘೇರಾವ್ ಮಾಡಲಾಗಿತ್ತು. ಆದರೆ ಒಟ್ಟಿನಲ್ಲಿ ಸತ್ಯಾಗ್ರಹ ಶಾಂತಿ-ಶಿಸ್ತುಗಳಿಂದ ಕೂಡಿತ್ತು. ಜನ ಸಿಡಿದೆದ್ದರೆ ಯಾವ ಮಟ್ಟಕ್ಕೆ ಹೋಗಬಲ್ಲರೆಂಬುದನ್ನು ಅದು ತೋರಿಸಿತ್ತು.

ಪತ್ರಿಕಾಪ್ರಪಂಚದಲ್ಲೂ ಸತ್ಯಾಗ್ರಹದ ಬಿಸಿ ಏರಿದ್ದಿತು. ಸರ್ಕಾರದ ಅನುಮತಿ ಇಲ್ಲದೆ ಪತ್ರಿಕೆಗಳನ್ನು ಪ್ರಕಟಿಸಬಾರದೆಂಬ ನೀತಿಯನ್ನು ಪ್ರತಿಭಟಿಸಿ ಎಂ. ಎಸ್. ಚಿಂತಾಮಣಿ, ಆರ್. ಎಸ್. ನಾರಾಯಣ್, ಎಂ. ಎಸ್. ಶ್ಯಾಮ ಅಯ್ಯಂಗಾರ್ ಮತ್ತು ಪಿ. ಶೇಷಪ್ಪನವರು 'ವಾಹಿನಿ', 'ಕೇಸರಿ', 'ವಿಶ್ವಕರ್ನಾಟಕ' ಮತ್ತು 'ಸ್ವಾತಂತ್ರ್ಯೋದಯ' ಪತ್ರಿಕೆಗಳನ್ನು ಪ್ರಕಟಿಸಿದರು. ಇವರೆಲ್ಲರ ಸಂಯುಕ್ತ ಸಂಪಾದಕತ್ವದಲ್ಲಿ 'ಧಿಕ್ಕಾರ' ಎಂಬ ಪತ್ರಿಕೆಯನ್ನು ಪ್ರಕಟಿಸಲಾಗಿದ್ದಿತು.

**ಡಿ. ಎಸ್. ಶೇಷರಾಘವಾಚಾರ್**

42/1, ಕೃಷ್ಣಾ ಬ್ಲಾಕ್, ಶೇಷಾದ್ರಿಪುರಂ, ಬೆಂಗಳೂರು-20

(ಕನ್ನಡಪ್ರಭ, 28-10-69ರ ಸಂಚಿಕೆಯಿಂದ)

ವೈ.ಬೆಂ. 8

## ಸ್ವಾಮಿ ಬುಧವೀರಾನಂದ (ಎಂ. ಎಚ್. ಷಾ)

ಜನನ : 1902 ಉದ್ಯೋಗ : ಸಮಾಜಸೇವೆ ವಿಳಾಸ : 2, ಲಾಲ್‌ಬಾಗ್ ರಸ್ತೆ, ಬೆಂಗಳೂರು-27



ವಿಜಾಪುರ ಜಿಲ್ಲೆಯ ಇಂಡಿಯಲ್ಲಿ ಜನಿಸಿದ ನಾನು ಪುಣೆಯಲ್ಲಿ ಕಾಲೇಜು ಶಿಕ್ಷಣ ಪಡೆಯುತ್ತಿದ್ದಾಗ ರಾಷ್ಟ್ರೀಯ ವಿಚಾರಗಳಿಂದ ಪ್ರಭಾವಿತನಾದೆ. ರಸ್ಕಿನ್‌ರ ಬರಹಗಳೂ ಗಾಂಧೀಜಿಯವರ 'ಹೋಮ್ ರೂಲ್ ಇನ್ ಇಂಡಿಯಾ' ನನ್ನ ಮೇಲೆ ಆಗ ವಿಶೇಷ ಪ್ರಭಾವ ಬೀರಿದ ಪುಸ್ತಕಗಳು.

ಗಾಂಧೀಜಿಯವರ ಅಸಹಕಾರದ ಕರೆಯಂತೆ 1921ರಲ್ಲಿ ನಾನು ಕಾಲೇಜು ತ್ಯಜಿಸಿದೆ. ಆದರೆ ಆಗಿನ ಮುಂಬೈ ಪ್ರಾಂತದಲ್ಲಿನ ಬ್ರಾಹ್ಮಣೇತರ ಚಳವಳಿಯ ನಾಯಕ ಲಠ್ಠೆ

ಮತ್ತು ಖ್ಯಾತ ಉದ್ಯಮಿ ವಾಲ್‌ಚಂದ್ ಕೊಠಾರಿ ಮತ್ತೆ ಕಾಲೇಜು ಸೇರುವಂತೆ ನನ್ನ ಮನವೊಲಿಸಿದರು. 1924ರಲ್ಲಿ ಯಂತ್ರಶಾಸ್ತ್ರದಲ್ಲಿ ಮುಂಬೈ ವಿಶ್ವವಿದ್ಯಾಲಯ ದಲ್ಲಿ ಸರ್ವಪ್ರಥಮವಾಗಿ ಬಿ.ಇ. ಪದವಿ ಪಡೆದು, ವಿಶೇಷ ಶಿಷ್ಯವೃತ್ತಿ ಗಳಿಸಿ, ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್‌ನಿಂದ ಎ.ಎಂ.ಐ.ಇ. ಉತ್ತೀರ್ಣನಾದೆ. ಮುಂದೆ ಟಾಟಾ ಅಯರ್ನ್ ಅಂಡ್ ಸ್ಟೀಲ್‌ನಲ್ಲಿ ಉದ್ಯೋಗಕ್ಕೆ ಸೇರಲು, 1948ರಲ್ಲಿ ಮುಂಬೈಯ ಅವರ ಕಾರ್ಖಾನೆಯೊಂದಕ್ಕೆ ವರ್ಗಾಯಿಸಿದರು. ಉಪ್ಪಿನ ಸತ್ಯಾಗ್ರಹದ ಕಾಲದಲ್ಲಿ ಜೋರಿವಲಿ ಶಿಬಿರಕ್ಕೆ ಕಂಪನಿಯ ವಾಹನದಲ್ಲೇ ಧಾನ್ಯ, ತರಕಾರಿ ಪೂರೈಸುತ್ತಿದ್ದೆ. ಮುಂದೆ ವಿವಿಧ ಉದ್ಯಮಗಳ ಅಧ್ಯಯನಕ್ಕೆ ಜಾವಾ, ಆಸ್ಟ್ರೇಲಿಯಗಳಿಗೆ ಹೋಗಿದ್ದೆನಲ್ಲದೆ ವಾಲ್‌ಚಂದ್‌ನಗರದ ಸಕ್ಕರೆ ಕಾರ್ಖಾನೆಯ ಪ್ರಧಾನ ಇಂಜಿನಿಯರ್ ಮತ್ತು ಡೆ|| ಮ್ಯಾನೇಜರ್ ಆದೆ.

1936ರಲ್ಲಿ ಈ ಕೆಲಸಕ್ಕೆ ರಾಜೀನಾಮೆ ನೀಡಿ, ಠಕ್ಕರ್‌ಬಾಪಾ ಅವರ ಜೊತೆ ವಿಜಾಪುರ ಜಿಲ್ಲೆಯ ಕ್ಷಾಮಪರಿಹಾರ ಕಾರ್ಯದಲ್ಲಿ ತೊಡಗಿದೆ. ಈ ಕಾಲದಲ್ಲಿ ಹಣಮಂತರಾವ್ ಕೌಜಲಗಿ ಅವರ ಸಂಪರ್ಕ ಬಂತು. ಅವರು ನನ್ನ ರಾಜಕೀಯ ಗುರುಗಳು. ಠಕ್ಕರ್‌ಬಾಪಾ ಮತ್ತು ಕಾಕಾ ಕಾರಖಾನೀಸರು ಸಮಾಜಸೇವೆಗೆ ನನ್ನ ಗುರುಗಳು. ನಾನು ವಿಜಾಪುರದಲ್ಲಿ ನೆಲೆಸಿದ್ದು, ಆ ಕಾಲದಲ್ಲಿ ವಿಜಾಪುರಕ್ಕೆ ನೌಕರಿ ಗೆಂದು ಬಂದ ಒಬ್ಬ ಪದವೀಧರ ಹರಿಜನ ವ್ಯಕ್ತಿಗೆ ಎಲ್ಲೂ ಮನೆ ಸಿಗದಾಗಲು ನಮ್ಮ ಮನೆಯ ಔಟ್-ಹೌಸ್‌ನಲ್ಲೇ ಅವರಿಗೆ ಇರಲು ಕೊಟ್ಟೆ. ಈ ಬಗ್ಗೆ ಅಸಮಾಧಾನ ಗೊಂಡ ನನ್ನ ತಾಯಿ ಅದೇ ದಿನ ನನ್ನ ಮನೆ ಬಿಟ್ಟರು. ಈ ಕಾಲದಲ್ಲಿ ನಾನು ಇಂಡಿ ಟಿ.ಸಿ.ಸಿ. ಅಧ್ಯಕ್ಷನಾದೆ. ಸುರಪುರ ಮಲ್ಲಪ್ಪ ಕಾರ್ಯದರ್ಶಿ ಆಗಿದ್ದರು. ಇದಲ್ಲದೆ ಆಗ ನಾನು ಡಿ.ಸಿ.ಸಿ. ಮತ್ತು ಎ.ಐ.ಸಿ.ಸಿ. ಸದಸ್ಯನೂ ಆಗಿದ್ದೆ.

ಮುಂದೆ 1939ರಲ್ಲಿ ಬೆಂಗಳೂರಲ್ಲಿ ಹಿಂದುಸ್ಥಾನ್ ಏರ್‌ಕ್ರಾಫ್ಟ್ ಫ್ಯಾಕ್ಟರಿ ಆರಂಭವಾಗಲು, "ಐದು ವರ್ಷಕಾಲ ರಾಜಕೀಯದಲ್ಲಿ ಪಾಲುಗೊಳ್ಳಬಾರದು" ಎಂದು ಷರತ್ತು ಹಾಕಿ ನನ್ನನ್ನು ಕಾರ್ಖಾನೆಯ ಸ್ಥಾಪನೆಯ ಜವಾಬ್ದಾರಿಗೆ ವಾಲ್‌ಚಂದ್ ಹಿರಾಚಂದ್ ನೇಮಿಸಿದರು. ಅಲ್ಲಿನ ಡಿಸೈನಿಂಗ್ ಮುಂತಾದ ಕೆಲಸಗಳಿಗೆ ಅಮೆರಿಕನ್ ತಜ್ಞರಿದ್ದು, ಉಳಿದ ವಿಷಯಗಳನ್ನು ನೋಡಿಕೊಳ್ಳಲು ನಾನು ಮ್ಯಾನೇಜರ್ ಆಗಿದ್ದೆ. ಅಲ್ಲಿದ್ದಾಗಲೂ ಮೈಸೂರು ಕಾಂಗ್ರೆಸ್ ಜೊತೆ ಸಂಪರ್ಕವಿರಿಸಿಕೊಂಡಿದ್ದೆ. ಕೆ. ಟಿ. ಭಾಷ್ಯಂ ಅವರ ಮೂಲಕ ಕಾಂಗ್ರೆಸ್ಸಿಗೆ ಆರ್ಥಿಕ ಸಹಾಯ ಒದಗಿಸುತ್ತಿದ್ದೆ. 1942ರಲ್ಲಿ ಸರಕಾರ ಫ್ಯಾಕ್ಟರಿಯನ್ನು ವಹಿಸಿಕೊಂಡಾಗ, ನನ್ನ ಐದು ವರ್ಷ ಸಕ್ರಿಯ ರಾಜಕೀಯ ದಲ್ಲಿ ಪಾಲುಗೊಳ್ಳುವುದಿಲ್ಲವೆಂಬ ಷರತ್ತು ಮುಕ್ತಾಯವಾದಂತೆ ಅನಿಸಿತು.

1942ರ 'ಕ್ವಿಟ್ ಇಂಡಿಯಾ' ಚಳವಳಿ ಆರಂಭ ಆದ ತಕ್ಷಣ ನಾನು ಚಳವಳಿ ಸೇರಲು ನಿರ್ಧರಿಸಿದೆ. ಆಗಲೇ ಫ್ಯಾಕ್ಟರಿಯ ಕಾರ್ಮಿಕರಲ್ಲಿ ಗಾಂಧೀಜಿಯವರ ಬಂಧನದ

ವಿರುದ್ಧ ಅಸಮಾಧಾನ ಮೂಡಿತ್ತು. ಆಗಸ್ಟ್ 11 ಇಲ್ಲವೆ 12ರಂದು ನಾನು ಫ್ಯಾಕ್ಟರಿಯ ಹೊರಗೆ ನಿಂತು, "ಈ ದಿನ ಕೆಲಸವಿಲ್ಲ!" ಎಂದು ಪ್ರಕಟಿಸಿದೆ. ನಮ್ಮ ಕಾರ್ಮಿಕರು ತಂಡತಂಡವಾಗಿ ನನ್ನ ಸುತ್ತು ನೆರೆದರು. ಎಲ್ಲರೂ ಕೆಲಸ ಬಿಟ್ಟು ಮೆರವಣಿಗೆಯಿಂದ ನಗರದೆಡೆ ಬಂದೆವು. 6,000 ಕಾರ್ಮಿಕರಲ್ಲಿ ಒಬ್ಬರೂ ಕೆಲಸಕ್ಕೆ ಹೋಗಲಿಲ್ಲ. ಬಸಪ್ಪ ಪಾರ್ಕಿನಲ್ಲಿ 60,000 ಜನರ ಭಾರಿ ಸಭೆ ಆಯಿತು. ನಮ್ಮ ಹಾಗೂ ಅನ್ಯಕಾರ್ಖಾನೆಗಳ ಕಾರ್ಮಿಕರು ಸಂಪು ಮುಂದುವರಿಸುವ ಪ್ರತಿಜ್ಞೆ ಕೈಗೊಂಡರು.

ಆಗ ಮಹಾಯುದ್ಧ ತೀವ್ರವಾಗಿ ನಡೆದಿತ್ತು. ಸಿಂಗಾಪುರದ ಪತನವಾಗಿತ್ತು. ವಿಮಾನಪಡೆಗೆ ಬೇಕಾದ ವಸ್ತುಗಳನ್ನು ತಯಾರಿಸುವ ನಮ್ಮ ಕಾರ್ಖಾನೆ ಮುಚ್ಚು ವಂತಾದುದು ಬ್ರಿಟಿಷ್ ಸರಕಾರಕ್ಕೆ ತೀವ್ರ ಅಸಮಾಧಾನವನ್ನು ಹುಟ್ಟಿಸುವ ವಿಷಯ. ನನ್ನನ್ನು ಬಂಧಿಸಿ ಫಾಶಿಗೇರಿಸಬೇಕೆಂದು ರೆಸಿಡೆಂಟರು ಆಜ್ಞೆಮಾಡಿದ್ದರಂತೆ. ಆದರೆ ನಮ್ಮ ಕಾರ್ಖಾನೆಯ ಅಮೇರಿಕನ್ ತಜ್ಞ ಮೆಕಾರ್ಥಿ ಅದನ್ನು ತಡೆದರು. ಮತ್ತು, ವಿಮಾನದಳದಲ್ಲಿ ನನ್ನನ್ನು ಲೆಫ್ಟಿನೆಂಟ್ ಕರ್ನಲ್ ಮಾಡಿಸುವುದಾಗಿಯೂ ಚಳವಳಿಗೆ ಸೇರಬಾರದಾಗಿಯೂ ವಿನಂತಿಸಿದರು. ನಾನು ಕೆಲಸಕ್ಕೆ ಮರಳುವುದಿಲ್ಲವೆಂದು ಪ್ರತಿಜ್ಞೆ ಮಾಡಿರುವುದಾಗಿ ಅವರಿಗೆ ತಿಳಿಸಿದೆ. ಇಷ್ಟರಲ್ಲಿ ನನ್ನ ಮೇಲೆ ವಾರಂಟ್ ಹೊರಟ ವಿಚಾರ ಆಗಿನ ಡೆ॥ ಐ.ಜಿ.ಪಿ. ಸಿಂಧ್ಯ ಅವರಿಂದ ನನಗೆ ತಿಳಿದು, ನಾನು ಕಾರಿನಿಂದ ಮುಂಬೈಗೆ ಪಾರಾದೆ. ಅಲ್ಲಿಂದ ನಾನು ಇಲ್ಲಿನ ಕಾರ್ಯಕರ್ತರಿಗೆ ಕಳುಹಿಸಿದ ಸ್ಫೋಟಕ ಗಳಿಂದ ಬೆಂಗಳೂರಲ್ಲಿ ಆಗ ಅನೇಕ ಕಡೆ ಆಸ್ಫೋಟನೆಗಳಾದುವು. ಇದಲ್ಲದೆ ಕೆ. ವಿ. ವೆಂಕಟರಾಮಯ್ಯನವರ ಮುಖಾಂತರ ಸಂಪುಹೂಡಿದ ಕಾರ್ಮಿಕರಿಗೆ ಹಣ ಒದಗಿಸುತ್ತಿದ್ದೆ.

ಬೆಂಗಳೂರಲ್ಲಿ ಆಗ ವೆಂಕಟರಾಮಯ್ಯನವರೇ ಅಲ್ಲದೆ ಕೆ. ವಿ. ವಸಂತಯ್ಯ ಹಾಗು ಎಚ್. ನರಸಿಂಹಯ್ಯ ಚಳವಳಿಯ ಪ್ರಮುಖರು. ನನ್ನ ಅಣ್ಣನ ಮಗ ಕಾಂತಿಲಾಲ್ ಷಾ ಮತ್ತು ಸೋದರಳಿಯ ಜೀವರಾಜ್ ಷಾ ಕೂಡ ಚಳವಳಿಯಲ್ಲಿ ದುಡಿಯುತ್ತಿದ್ದರು.

ನನ್ನ ಬಂಧನಕ್ಕಾಗಿ ವಿಶೇಷ ಪೋಲೀಸರನ್ನು ಮುಂಬೈಗೆ ಕಳುಹಿಸಿದರು. ನಾನು ಗಡ್ಡ ಬೆಳೆಸಿ, ಮೊಹಮ್ಮದ್ ಷಾ ಎಂದು ಹೆಸರಿಟ್ಟುಕೊಂಡು, 15 ದಿನಗಳನಂತರ ಬೆಂಗಳೂರಿಗೆ ಬಂದೆ. ಇಲ್ಲಿ ಮಾಡರ್ನ್ ಹಿಂದೂ ಹೋಟೇಲ್‌ನಲ್ಲಿ ಇದ್ದೆ. ಸಿ.ಐ.ಡಿ.ಗಳು ಬೆನ್ನುಹತ್ತಿದರು. ಆಗ ಮುಸಲ್ಮಾನರಂತೆ ಟೋಪಿ ಧರಿಸಿ, ರಸೆಲ್ ಮಾರ್ಕೆಟ್‌ನಲ್ಲಿ ಒಂದು ಮುಸ್ಲಿಂ ಹೋಟೇಲ್‌ನಲ್ಲಿ ಇರುತ್ತಿದ್ದೆ. ನನಗೆ ಅಸೌಖ್ಯ ಎಂದು ಸೋಗು ಹಾಕಿ, ಇಡೀ ದಿನ ರೂಮಿನೊಳಗೇ ಇರುತ್ತಿದ್ದೆ. ಹಾಲು, ಬ್ರೆಡ್ ಮಾತ್ರ ನನ್ನ ಆಹಾರ. ರಾತ್ರಿಹೊತ್ತು ಮಾತ್ರ ಹೊರಬರುತ್ತಿದ್ದೆ. ಆ ಹೋಟೇಲಿನಲ್ಲಿ ಮುಸಲ್ಮಾನರಾದ ಅನೇಕ ಸಿ.ಐ.ಡಿ.ಗಳು ಇರುತ್ತಿದ್ದು ಅವರಿಂದ ಪೋಲೀಸರ ಚಲನವಲನದ ಎಲ್ಲ ವಿವರ ತಿಳಿಯುತ್ತಿತ್ತು. ಈ ನಡುವೆ, ಆಗಸ್ಟ್‌ನಲ್ಲಿಯೇ ವಿಜಾಪುರಕ್ಕೆ ಹೊರಟು ಹೋಗಿದ್ದ ನನ್ನ ಹೆಂಡತಿಮಕ್ಕಳನ್ನು ಹೋಗಿ ಕಂಡುಬಂದೆ. ಅವರಿಗೂ ನೋಡಲು

ನನ್ನ ಗುರುತು ಸಿಗಲಿಲ್ಲ. ಸಂಸ್ಥಾನದಲ್ಲೆಲ್ಲ ಸಂಚರಿಸಿ ಹಣಸಂಗ್ರಹ, ಚಳವಳಿಗೆ ನೆರವು, ಮಾರ್ಗದರ್ಶನ ನೀಡುತ್ತಿದ್ದೆ. ಮಾರವಾಡಿ ವ್ಯಾಪಾರಿಗಳು ನಾನು ಕೇಳಿದಾಗ ಹಣ ಕೊಡುತ್ತಿದ್ದರು. ಕೆ.ಜಿ.ಎಫ್.ನಲ್ಲಿ ಪೆರುಮಾಳ್ ಆಗ ಪ್ರಮುಖ ಕಾರ್ಯ ಕರ್ತರು. ಭದ್ರಾವತಿಯಲ್ಲಿ (ಮುಂದೆ ಎಂ.ಎಲ್.ಎ. ಆದ) ಒಬ್ಬ ತರುಣ ಕಾರ್ಮಿಕ ನಾಯಕರು ನನ್ನ ಸಂಪರ್ಕಮಾಧ್ಯಮ. ಭದ್ರಾವತಿಯಲ್ಲಿ ಮುಷ್ಕರವನ್ನು ಹೂಡಿದ ಕಾರ್ಮಿಕರಿಗೆ ನಾನು 10,000 ರೂ. ವಿತರಣೆ ಮಾಡಿಸಿದೆ. ಕೆ.ಜಿ.ಎಫ್. ಗಣಿಯಿಂದ ಸ್ಫೋಟಕಗಳನ್ನು ಪಡೆದು, ಎಲ್ಲೆಡೆ ಹಂಚುತ್ತಿದ್ದೆ. ಇದನ್ನು ವಿಧ್ವಂಸಕ ಕೃತ್ಯಗಳಿಗಾಗಿ ಎಲ್ಲೆಡೆ ಬಳಸಲಾಗುತ್ತಿತ್ತು. ಮದ್ರಾಸಿನ ವೆಂಕಟರಾಮನ್‌ರಿಗೂ ಇದನ್ನು ಒದಗಿ ಸುತ್ತಿದ್ದೆ. ಮದ್ರಾಸಿನಲ್ಲಿ ಸುಮಾರು 30 ಲಕ್ಷ ರೂ. ಬೆಲೆಯ ಮಿಲಿಟರಿ ವಸ್ತುಗಳನ್ನು ಆಗ ಆಸ್ಫೋಟಿಸಲಾಗಿತ್ತು. ಚಿತ್ರದುರ್ಗ, ಮೈಸೂರು, ತಿಪಟೂರು, ಅರಸೀಕೆರೆ ಇಲ್ಲೆಲ್ಲ ನಾನು ಹೋಗುತ್ತಿದ್ದೆ. ಮೈಸೂರಲ್ಲಿ ನಾನು ಸನತ್‌ಕುಮಾರ್ ಅವರಲ್ಲಿ ಇರುತ್ತಿದ್ದೆ. ನನ್ನ ಬಂಧನಕ್ಕಾಗಿ ಆಗ ಬಹುಮಾನವನ್ನೂ ಘೋಷಿಸಿದ್ದರು. ಗಾಂಧೀಜಿ 21 ದಿನ ಉಪವಾಸ ಮಾಡಿದಾಗ ನಾನೂ ಉಪವಾಸ ಮಾಡಿದೆ. ಲಾಲ್‌ಬಾಗ್ ಬಳಿಯ ನನ್ನ ಮನೆಯ ಔಟ್‌ಹೌಸ್‌ನಲ್ಲಿ ನಾನು ಉಪವಾಸ ಮಾಡುತ್ತಿರಲು, 10ನೆಯ ದಿನ ನನ್ನ ಬಂಧನ ಆಯಿತು. ನ್ಯಾಷನಲ್ ಹೈಸ್ಕೂಲಿನ ಒಬ್ಬ ಉಪಾಧ್ಯಾಯರು ಈ ಬಂಧನಕ್ಕೆ ಸುಳಿವು ನೀಡಿದ್ದರಂತೆ. ಸುಮಾರು 20 ಜನ ಪೋಲೀಸರು ಶಸ್ತ್ರಸಜ್ಜಿತರಾಗಿ ಬಂದು ನನ್ನನ್ನು ಹಿಡಿದರು. 1943ರ ಕೊನೆಯ ತನಕ ಬೆಂಗಳೂರು ಜೈಲಿನಲ್ಲಿದ್ದೆ. ಮುಂದೆ ನನ್ನನ್ನು ಮೈಸೂರು ಸಂಸ್ಥಾನದಿಂದ ಹೊರದೂಡಿ, ವಿಜಾಪುರ ಜೈಲಿಗೆ ಹಾಕಿದರು. ಅಲ್ಲಿಂದ ಯರವಡಾಕ್ಕೆ ಸಾಗಿಸಿದರು. ಅಲ್ಲಿ 1945ರ ಕೊನೆ ತನಕ ಇದ್ದೆ. ಮುಂದೆ, ಅಸೌಖ್ಯವಾಗಿದ್ದ ನನ್ನ ತಾಯಿಯನ್ನು ಕಾಣಲು ಎರಡು ತಿಂಗಳು ಪೆರೋಲ್‌ನಿಂದ ಬಿಟ್ಟರು. ತಿರುಗಿ 1946ರಲ್ಲಿ ಪೂರ್ತಿ ಜೈಲಿನಲ್ಲಿ ಇದ್ದೆ. ಮುಂಬೈ ಪ್ರಾಂತದಿಂದ ಬಿಡುಗಡೆ ಆದವರಲ್ಲಿ ನಾನೇ ಕೊನೆಯವನು. ಅಷ್ಟರಲ್ಲಿ ನನ್ನನ್ನು ವಿಜಾಪುರದಿಂದ ಮುಂಬೈ ವಿಧಾನಸಭೆಗೆ ಕಾಂಗ್ರೆಸ್ ಅಭ್ಯರ್ಥಿಯಾಗಿ ಆಯ್ಕೆಮಾಡಿದ ವಿಚಾರ ಪತ್ರಿಕೆ ಗಳಲ್ಲಿ ಬಂತು. ನಾನು ಶಾಸಕನಾಗಿ ಚುನಾಯಿತನಾದೆ.

1947ರಲ್ಲಿ ನಾನು ಪ್ರೀಮಿಯರ್ ಆಟೋಮೊಬೈಲ್ಸ್‌ನಲ್ಲಿ ನೌಕರಿಗೆ ಸೇರಿ, ಅವರಿಂದ ಅಮೇರಿಕಕ್ಕೆ ಕಳುಹಿಸಲ್ಪಟ್ಟೆ. ಮರಳಿದನಂತರ ಅವರ ಫ್ಯಾಕ್ಟರಿಯಲ್ಲಿ ಡೆ|| ವರ್ಕ್ಸ್ ಮ್ಯಾನೇಜರ್ ಆಗಿದ್ದೆ. ಇದೇ ಕಾಲಕ್ಕೆ ಶಾಸಕನೂ ಆಗಿದ್ದೆ. 1952ರಲ್ಲಿ ನೌಕರಿಗೆ ರಾಜೀನಾಮೆ ನೀಡಿ ಪೂರ್ಣಕಾಲೀನ ಸರ್ವೋದಯ ಕಾರ್ಯಕರ್ತನಾಗಿ ದುಡಿಯುತ್ತಿದ್ದೇನೆ. ಮೈಸೂರು ರಾಜ್ಯ ಹರಿಜನ ಸೇವಕ ಸಂಘದ ಅಧ್ಯಕ್ಷ, ಖಾದೀ ಗ್ರಾಮೋದ್ಯೋಗ ಸಂಘದ ಉಪಾಧ್ಯಕ್ಷ, ರಾಜ್ಯ ಭಾರತ ಸೇವಕ ಸಮಾಜದ ಕಾರ್ಯದರ್ಶಿ ಮುಂತಾದ ಜವಾಬ್ದಾರಿಗಳನ್ನು ನಿರ್ವಹಿಸಿದ್ದೇನೆ.

1962ರಲ್ಲಿ ಶ್ರವಣಬೆಳಗೊಳದಲ್ಲಿ ನಿರ್ವಾಣಾಶ್ರಮವನ್ನು ಸ್ಥಾಪಿಸಿ ನಿಸರ್ಗ ಚಿಕಿತ್ಸೆ, ಗೋಸೇವೆ, ಗ್ರಾಮೋದ್ಯೋಗಗಳಿಗೆ ಉತ್ತೇಜನ ಮುಂತಾದ ಚಟುವಟಿಕೆಗಳನ್ನು ಸಾಗಿಸುತ್ತಿದ್ದೇನೆ. 1972ರಲ್ಲಿ ನಾನು ಶ್ರವಣಬೆಳಗೊಳದಲ್ಲಿ ಗೊಮ್ಮಟನ ಸನ್ನಿಧಿಯಲ್ಲಿ ಸಂನ್ಯಾಸ ಸ್ವೀಕರಿಸಿ 'ಬುಧವೀರಾನಂದ' ಎಂಬ ಹೆಸರು ಸ್ವೀಕರಿಸಿದ್ದೇನೆ. ನನ್ನ ವಿಧಾಯಕ ಕಾರ್ಯಗಳನ್ನು ಮುಂದುವರಿಸಿದ್ದೇನೆ.

ವ್ಯ.ಬೆಂ. 9

## ಎಂ. ಎ. ಪರಶುರಾಮ್

ಜನನ : 1905 ಉದ್ಯೋಗ : ಬಟ್ಟೆವ್ಯಾಪಾರ ವಿಳಾಸ : 14/1, ಮಾವಳ್ಳಿ ಟ್ಯಾಂಕ್ ಬಂಡ್ ರಸ್ತೆ, ಬೆಂಗಳೂರು-2



ಗಾಂಧೀಜಿಯವರು ಸ್ವಾತಂತ್ರ್ಯಕ್ಕಾಗಿ ನಡೆಸುತ್ತಿದ್ದ ಬಹುಮುಖ ಚಟುವಟಿಕೆಗಳಿಂದ ಆಕರ್ಷಿತನಾಗಿ 1926ರಲ್ಲಿ ನಾನು ಬೆಂಗಳೂರಲ್ಲಿ ಕಾಂಗ್ರೆಸ್ ಸದಸ್ಯನಾದೆ. ಆಗ ಮದ್ರಾಸಿನಿಂದ ಬರುತ್ತಿದ್ದ 'ಸ್ವದೇಶಮಿತ್ರನ್' ಮುಂತಾದ ತಮಿಳು ಪತ್ರಿಕೆಗಳನ್ನು ತಪ್ಪದೇ ಓದುತ್ತಿದ್ದೆನಲ್ಲದೆ ಬೆಂಗಳೂರಲ್ಲಿ ಆಗುತ್ತಿದ್ದ ಕಾಂಗ್ರೆಸ್ಸಿನ ಎಲ್ಲ ಸಭೆಗಳಲ್ಲಿ ತಪ್ಪದೆ ಭಾಗವಹಿಸುತ್ತಿದ್ದೆ. ರಜವಿ, ತಗಡೂರು, ವೀರಕೇಸರಿ, ರಾಮಲಾಲ್ ತಿವಾರಿ ಮುಂತಾದ ನಾಯಕರೊಂದಿಗೆ ಆಗ ನನಗೆ ನಿಕಟಸಂಪರ್ಕ ಬಂತು. ಉಪ್ಪಿನ ಸತ್ಯಾಗ್ರಹದಿಂದ ತೀವ್ರ ಉತ್ಸಾಹಿತನಾದ ನಾನು, ಕಾರ್ಮಿಕರ ವಸತಿಯ ಅರಳೇಪೇಟೆ ವಿಭಾಗದಲ್ಲಿ ಏನಾದರೂ ವಿಧಾಯಕ ಕಾರ್ಯ ನಡೆಸಬೇಕೆಂದು ನಿರ್ಣಯಿಸಿ, 'ದರಿದ್ರನಾರಾಯಣ ಸೇವಾ ಸಂಘ'ವನು ಸ್ಥಾಪಿಸಿದೆ (1933). ನಾನು ಅದರ ಕಾರ್ಯದರ್ಶಿ ಆದೆ. ಡಾ॥ ಪಟ್ಟಾಭಿರಾಮನ್, ಮುನಿಸ್ವಾಮಿ, ಕೃಷ್ಣ, ಜಯರಾಮ್ ಸಂಘದ ಸಹಕಾರ್ಯಕರ್ತರು. ಆಗ ಯಾವುದೇ ಸಂಘಸಂಸ್ಥೆ ಕಟ್ಟುವುದು ತೀರ ಧೈರ್ಯವಂತರ ಕೆಲಸವಾಗಿತ್ತು. ಮದ್ಯಪಾನ ನಿಷೇಧ, ಅಸ್ಪೃಶ್ಯತಾನಿವಾರಣೆ, ಪ್ರಾಣಿಬಲಿ ವಿರುದ್ಧ ಪ್ರಚಾರ ಹಾಗೂ ಖಾದೀಧಾರಣೆ ಬಗ್ಗೆ ಪ್ರಚಾರ, ಇವು ಸಂಘದ ಧ್ಯೇಯಗಳು. ಸಂಘದ ಸದಸ್ಯರೆಲ್ಲ ಖಾದೀಧಾರಿಗಳಾಗಬೇಕು ಹಾಗೂ ಕಾಂಗ್ರೆಸ್ ಸದಸ್ಯರಾಗಿರ

ಬೇಕಾಗಿತ್ತು. ಶುಕ್ರವಾರ ಭಜನೆ, ಭಾನುವಾರ ಮತ್ತು ರಜಾದಿನಗಳಲ್ಲಿ ಪ್ರಚಾರ, ಹರಿಜನ ಕೇರಿಗಳನ್ನು ಸ್ವಚ್ಛಗೊಳಿಸುವುದು, ಸಮಾಜ ಸುಧಾರಣೆಗೆ ಸಂಬಂಧಿಸಿದ ನಾಟಕಗಳನ್ನು ನಡೆಸುವುದು, ವಾರ್ಷಿಕೋತ್ಸವಾದಿ ಪ್ರಸಂಗಗಳಲ್ಲಿ ಕಾಂಗ್ರೆಸ್ ನಾಯಕರ ಭಾಷಣ ಏರ್ಪಡಿಸುವುದು—ಇವು ನಮ್ಮ ಪ್ರಮುಖ ಚಟುಪಟಿಕೆಗಳು. ಆಂಜನೇಯಪ್ಪ ಗಾರ್ಡನ್ಸ್‌ನಲ್ಲಿ ಹರಿಜನರಿಗಾಗಿ ಶಾಲೆ ನಡೆಸುತ್ತಿದ್ದೆವು. ನಾವು ನಡೆಸುತ್ತಿದ್ದ ವಾಚನಾಲಯ ಸದಾ ಜನರಿಂದ ತುಂಬಿರುತ್ತಿತ್ತು.

ಆಗ ನಾನು ಮಿಲ್ ಕಾರ್ಮಿಕನಾಗಿದ್ದೆ. ಕಾಟನ್ ಪೇಟೆಯಲ್ಲಿ ಮಿಲ್ ಮಜೂರರೇ ಆಗ ಕಾಂಗ್ರೆಸ್‌ನ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದು ಅವರಲ್ಲಿ ಹೆಚ್ಚಿನವರು ತಮಿಳರು. ಮದ್ರಾಸ್‌ನಲ್ಲಿ ಆಗುತ್ತಿದ್ದ ರಾಜಕೀಯ ಚಟುವಟಿಕೆಗಳ ಪರಿಣಾಮ ಅವರ ಮೇಲೆ ತೀವ್ರವಾಗಿ ಆಗುತ್ತಿತ್ತು. ಇದೇ ಅವಧಿಯಲ್ಲಿ ಕಾರ್ಮಿಕರ ಸಂಘವು ಕೆ. ಟಿ. ಭಾಷ್ಯಂ ಅವರ ಅಧ್ಯಕ್ಷತೆಯಲ್ಲಿ ಸಂಘಟಿತವಾಯಿತು. ರಾಮಶರ್ಮ ಅದರ ಕಾರ್ಯದರ್ಶಿ. ಇವರುಗಳ ಜೊತೆ ನನ್ನ ನಿಕಟಸಂಬಂಧವಿತ್ತು.

ನಮ್ಮ ದರಿದ್ರನಾರಾಯಣ ಸೇವಾಸಂಘವು ಗಾಂಧೀ ಜಯಂತಿಯಂದು ದೊಡ್ಡ ಮೆರವಣಿಗೆ ನಡೆಸುತ್ತಿತ್ತು. ನಾವುಗಳೇ ಆಗ ಕಾಂಗ್ರೆಸ್‌ನ ಸಭೆಗಳ ವ್ಯವಸ್ಥೆಗಳನ್ನು ಮಾಡುತ್ತಿದ್ದುದು. ಕಾಂಗ್ರೆಸ್ಸಿನ ಗೋಲ್ಡನ್ ಜ್ಯೂಬಿಲಿಯನ್ನು ನಾವು ಬಹಳ ವಿಜೃಂಭಣೆಯಿಂದ ಆಚರಿಸಿ (1935) ಮದ್ರಾಸಿನಿಂದ ಸತ್ಯಮೂರ್ತಿ, ವೈ. ಎಂ. ಕೋದನಾಯಕಿ, ರುಕ್ಮಿಣಿ, ಲಕ್ಷ್ಮೀಪತಿ, 'ಸಂಗು' ಸುಬ್ರಹ್ಮಣ್ಯಂ, 'ದಿನಮಣಿ'ಯ ಚೊಕ್ಕಲಿಂಗಂ ಮುಂತಾದವರನ್ನು ಕರೆಸಿ ಒಂದು ವಾರ ಸಭೆಗಳನ್ನು ನಡೆಸಿದ್ದೆವು. ಕೊನೆಯ ದಿನ ಬೆಂಗಳೂರಿನ ಸುಮಾರು 200 ಭಜನೆ ಸಂಘಗಳವರನ್ನು ಸೇರಿಸಿ ಭಾರಿ ಮೆರವಣಿಗೆ ನಡೆಸಿದೆವು. ಹಿಂದೆಂದೂ ಬೆಂಗಳೂರಲ್ಲಿ ಅಂಥ ಮೆರವಣಿಗೆ ನಡೆದಿರಲಿಲ್ಲ. ಕಾಟನ್‌ಪೇಟೆ ಮೂಲಕ ಮೈಸೂರಿಗೆ ಹೋಗುತ್ತಿದ್ದ ದಿವಾನ್ ಮಿರ್ಜಾ, ಈ ಮೆರವಣಿಗೆಯನ್ನು ಕಂಡು, ಅದರ ಸಂಘಟಕ ನಾನೆಂದು ತಿಳಿದುಕೊಂಡು, ನನ್ನ ಮೇಲೆ ಆಗನಿಂದಲೇ ಕಣ್ಣಿಟ್ಟರು. ಮುಂದೆ ನನ್ನ ಗಡೀಪಾರಿಗೆ ಇದು ಪೀಠಿಕೆ ಆಯಿತು. ಮದ್ರಾಸಿನ ಜೀವಕಾರುಣ್ಯ ಸಂಘದ (ಪ್ರಾಣಿದಯಾ ಸಂಘ) ಜೊತೆ ಸಂಬಂಧವಿರಿಸಿಕೊಂಡಿದ್ದ ನಮ್ಮ ಸಂಘ, ಅದರ ಪ್ರಮುಖರನ್ನು ಕರೆಸಿ ಪ್ರಾಣಿಹಿಂಸೆಯ ವಿರುದ್ಧ ಪ್ರಚಾರ ಮಾಡಿಸುತ್ತಿತ್ತು.

ಆಗ ಕಂಟೋನ್‌ಮೆಂಟ್‌ನಲ್ಲೂ ಕಾಂಗ್ರೆಸ್ ಕಮಿಟಿ ಇದ್ದು ಅದರ ಪ್ರಮುಖರಾದ ಚೆಂಗಲರಾಯ ಮುದಲಿಯಾರ್, ಮುನಿಸ್ವಾಮಿ ಗೌಂಡರ್, ಸುಂದರಂ, ಕೃಷ್ಣಯ್ಯರ್ ಇವರುಗಳ ಜೊತೆಗೆ ಕೂಡ ನನ್ನ ಸಂಪರ್ಕವಿತ್ತು. ವಿ. ಎಸ್. ಸಂಜೀವರಾಯರು ನಮಗೆ ಉಪಯುಕ್ತ ಸಲಹೆ ನೀಡುತ್ತಿದ್ದರು.

ಮೈಸೂರು ಕಾಂಗ್ರೆಸ್ ಆರಂಭ ಆದಾಗ ಅದರ ಸದಸ್ಯನೂ ಆಗಿ ನಾನು ಶಿವಪುರ ಕಾಂಗ್ರೆಸ್ಸಿಗೆ ಪ್ರತಿನಿಧಿಯಾಗಿ ಹೋಗಿದ್ದೆನಲ್ಲದೆ ಕಾಂಗ್ರೆಸ್ ಕಚೇರಿಯ ಜೊತೆ ನಿಕಟ ಸಂಪರ್ಕ ಇರಿಸಿಕೊಂಡಿದ್ದೆ. 1939ರಲ್ಲಿ ಕೆ.ಜಿ.ಎಫ್. ಸತ್ಯಾಗ್ರಹದ ಕಾಲಕ್ಕೆ, ಗಣಿ ಕಾರ್ಮಿಕರು ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವಾಗ ಹಿಂಸೆಗೆ ತೊಡಗದಂತೆ ನೋಡಿ ಕೊಳ್ಳಲು, ನಾನು ಅಲ್ಲಿಗೆ ಹೋಗಬೇಕೆಂದು ಕಾಂಗ್ರೆಸ್ ಆಫೀಸಿನಿಂದ ನನಗೆ ಸೂಚನೆ ಬರಲು, ನಾನೂ ಕುಪ್ಪಸ್ವಾಮಿ ಎಂಬವರು ಅಲ್ಲಿಗೆ ಹೋದೆವು. ಅಲ್ಲಿನ ಅಕ್ಕಿವ್ಯಾಪಾರಿ ಲಕ್ಷ್ಮಣ ಮುದಲಿಯಾರ್ ನಮಗೆ ಬಹಳ ನೆರವಾದರು. ರಾತ್ರಿಹೊತ್ತು (ಹಗಲು ಹೊತ್ತು ತಿರುಗಾಡಲು ಪ್ರತಿಬಂಧವಿತ್ತು) ದೇಶಭಕ್ತ ಕಾರ್ಮಿಕರ ಮನೆಗೆ ನನ್ನನ್ನು ಅವರು ಕರೆದೊಯ್ಯುತ್ತಿದ್ದು, ಆಗ ಸಿಟ್ಟಿನಿಂದ ಕುದಿಯುತ್ತಿದ್ದ ಕಾರ್ಮಿಕರಿಗೆ, ಹಿಂಸೆಗೆ ತೊಡಗಬಾರದೆಂದು ಪ್ರಚಾರವನ್ನು ರಾತ್ರಿಯೇ ಮಾಡಬೇಕಾಗಿತ್ತು. ಕಾರ್ಮಿಕರಲ್ಲಿ ಹಂಚಲೆಂದು ಬೆಂಗಳೂರಿಂದ ಮುದ್ರಿಸಿ ತಂದ ಕರಪತ್ರಗಳನ್ನು ಹಂಚಲು ಯಾರೂ ಸಿದ್ಧರಿರಲಿಲ್ಲ. ರಾತ್ರಿ 12 ಗಂಟೆಗೆ ಶಿಫ್ಟ್ ಬದಲಾಗುವಾಗ, ಕೆಲಸಕ್ಕೆ ಬರುವ ಮತ್ತು ಮನೆಗೆ ಮರಳುವ ಕಾರ್ಮಿಕರಿಗೆ ಸರಿಯಾಗಿ ಸಿಕ್ಕುವಂತೆ, ಗಣಿಗಳ ಮೂರು ಗೇಟುಗಳ ಬಳಿ ಕರಪತ್ರವನ್ನು ದಾರಿಯುದ್ದಕ್ಕೂ ಇಟ್ಟು ಅವುಗಳ ಮೇಲೆ ಕಲ್ಲುಗಳನ್ನು ಇಡುವಂತೆ ತಿಳಿಸಿದೆ. ಕಾರ್ಯಕರ್ತರು ಹಾಗೇ ಮಾಡಲು, ಕೆ.ಜಿ.ಎಫ್.ನಲ್ಲೆಲ್ಲ ತೀವ್ರಪ್ರಚಾರ ಆಗಿ ಸರ್ಕಾರಕ್ಕೆ ದಿಕ್ಕುತೋಚದಂತೆ ಆಯಿತು. ಸಾವಿರಾರು ಕಾಂಗ್ರೆಸ್ ಕಾರ್ಯಕರ್ತರು ಕೆ.ಜಿ.ಎಫ್.ಗೆ ಬಂದಿದ್ದಾರೆ, ಎಂದು ಸರ್ಕಾರ ಭಾವಿಸುವಂತಾಯಿತು. ನಮ್ಮ ಪ್ರಚಾರ ಶಾಂತವಾಗಿ, ಚನ್ನಾಗಿ ನಡೆಯಿತು. ಅಷ್ಟರಲ್ಲಿ ಬೆಂಗಳೂರಿಗೆ ಮರಳಲು ನಮಗೆ ಕರೆ ಬಂದು, ಲಕ್ಷ್ಮಣ ಮುದಲಿಯಾರ್ ಅವರಿಗೇ ಎಲ್ಲ ಜವಾಬ್ದಾರಿಯನ್ನು ವಹಿಸಿ 11-9-1939ಕ್ಕೆ ಬೆಂಗಳೂರಿಗೆ ಬಂದೆ.

ಬೆಂಗಳೂರಲ್ಲಿ ಆಗ ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ನಡೆದು ನೂರಾರು ಜನ ಬಂಧಿತರಾದರು. 30-9-39ರಂದು ನನ್ನ ಮೇಲೆ ಗಡೀಪಾರು ಆಜ್ಞೆ ಹೊರಡಿಸಿ, ಮೈಸೂರು ಸಂಸ್ಥಾನದ ಹೊರಗೆ ಸೇಲಂ ಜಿ|| ಹೊಸೂರಿಗೆ ಒಯ್ದು ಬಿಟ್ಟರು. ನಾನು ಗಡೀಪಾರು ಆಜ್ಞೆ ಮುರಿಯಲು ನಿಶ್ಚಯಿಸಿ, ಅದರಂತೆ 8-10-39ರಂದು ಧರ್ಮಾಂಬುಧಿ ಕೆರೆಯಲ್ಲಿ ಸಭೆ ಏರ್ಪಡಿಸಲು ಬೆಂಗಳೂರು ಕಾಂಗ್ರೆಸ್ ಆಫೀಸಿಗೆ ತಿಳಿಸಿದೆ. ಮಾಗಡಿ ನಾರಾಯಣಶೆಟ್ಟರ ಅಧ್ಯಕ್ಷತೆಯಲ್ಲಿ ಭಾರಿ ಸಭೆ ಆಗಿ, ನನ್ನ ಭಾಷಣದನಂತರ ನನ್ನ ಬಂಧನ ಆಯಿತು. 10-10-39ರಂದು ನನ್ನ ವಿಚಾರಣೆ ಆಗಿ ಒಂದು ವರ್ಷ ಕಠಿಣ ಸಜೆ ವಿಧಿಸಿದರು. "ನಿನಗೇನಾದರೂ ಹೇಳಲುಂಟೇ?" ಎಂದು ನ್ಯಾಯಾಧೀಶರು ಕೇಳಲು, "ಇದು ನ್ಯಾಯಾಲಯವೇ ಅಲ್ಲವೆಂದು ನನ್ನ ಭಾವನೆ ಆಗಿರುವಾಗ ನಾನು ಹೇಳುವುದೇನು ಬಂತು ?" ಎಂದು ಉತ್ತರಿಸಿದೆ. ನ್ಯಾಯಾಧೀಶರ ಮೊದಲುಗೊಂಡು ಎಲ್ಲರೂ ನಕ್ಕು ಬಿಟ್ಟರು. ಶಿಕ್ಷೆ ಮುಗಿಸಿ 14-8-40ರಂದು ನನ್ನ ಬಿಡುಗಡೆ ಆದಾಗ, ಕೆಲವು ದಿನಗಳಲ್ಲಿ

ಬೆಂಗಳೂರು ಟೆಕ್ಸ್‌ಟೈಲ್ ಲೇಬರ್ ಯೂನಿಯನ್‌ಗೆ ನನ್ನನ್ನು ಕಾರ್ಯದರ್ಶಿ ಆಗಿ ಆಯ್ಕೆ ಮಾಡಿದರು. ಕೆ. ಟಿ. ಭಾಷ್ಯಂ ಅಧ್ಯಕ್ಷರಾಗಿದ್ದರು.

ಮದ್ರಾಸಿನಲ್ಲಿ ಪಾರ್ಲಿಮೆಂಟರಿ ಕಾರ್ಯದರ್ಶಿಗಳಾಗಿದ್ದ ಯು. ಕಾಳೇಶ್ವರರಾವ್ ಮತ್ತು ಮಂತ್ರಿಗಳಾಗಿದ್ದ ಬಿ. ಗೋಪಾಲರೆಡ್ಡಿ ಇವರನ್ನು ಭಾಷಣಕ್ಕೆ ಬೆಂಗಳೂರಿಗೆ ಆಹ್ವಾನಿಸಲು, ಅವರು ಭಾಷಣ ಮಾಡದಂತೆ 144ನೆಯ ಸೆಕ್ಷನ್ ಜಾರಿಮಾಡಿದರು. ಅವರನ್ನು ಸಭೆಯಲ್ಲಿ ಹಾಗೆಯೇ ಕುಳ್ಳಿರಿಸಿ, ನಾವು ಭಾಷಣಮಾಡಿದೆವು. ತಕ್ಷಣ, 28-10-40ರಂದು ನಾನು ಸಂಸ್ಥಾನ ಬಿಟ್ಟು ಹೋಗಬೇಕೆಂದೂ ನಾನು ಹೊರಗಿನವ ನೆಂದೂ ಸರ್ಕಾರ ಆಜ್ಞೆ ಮಾಡಿತು. ಗಡೀಪಾರು ಮಾಡಲ್ಪಟ್ಟ ನಾನು 19-3-1941 ರಂದು ಸರಕಾರಕ್ಕೆ ಒಂದು ಕಾಗದ ಬರೆದು, ನಾನು ಹೊರಗಿನವನಲ್ಲವೆಂದೂ ಬೆಂಗಳೂರಿಗೆ ಬರುವೆನೆಂದೂ ತಿಳಿಸಿ, 21-3-1941ರಂದು ಮತ್ತೆ ಬೆಂಗಳೂರಿಗೆ ಬಂದೆ. ನನ್ನ ಬಂಧನ ಆಗಿ ಕೇಸು ಹಾಕಿದರು. ಜಾಮೀನಿನ ಮೇಲೂ ಬಿಡಲಿಲ್ಲ. ನಾನು ಬೆಂಗಳೂರಿನವನೇ ಎಂದು ಸಾಕ್ಷಿಗಳ ಮೂಲಕ ನಿರೂಪಿಸಿದೆ. ನಾನು ಆಗ 6 ತಿಂಗಳು ಜೈಲಿನಲ್ಲಿ ಇದ್ದು, ಮುಂದೆ 3 ತಿಂಗಳು ಶಿಕ್ಷೆ ಆಯಿತು (12-5-1941). ನಾನು ಜೈಲಿನಲ್ಲಿ ಇದ್ದಾಗಲೇ, ನಾನು ಬೆಂಗಳೂರಿನ ಮಿಲಿಟರಿ ಏರಿಯಾ ಪ್ರವೇಶಿಸಬಾರದೆಂದು ಕಂಟೋನ್‌ಮೆಂಟ್ ರೆಸಿಡೆಂಟರು ನಮಗೆ ಆರ್ಡರ್ ಕಳುಹಿಸಿದರು (2-6-41). 7-11-41ರಂದು ಜೈಲುವಾಸ ಮುಗಿಸಿ ಬಿಡುಗಡೆ ಆದ ನನ್ನನ್ನು ಜೈಲಿನಿಂದ ನೇರ ಕರೆದೊಯ್ದು ಜಾಲಾರ್‌ಪೇಟೆ ಹತ್ತಿರ ಬಿಟ್ಟರು. ಆಗ ನಾನು ಸೇಲಂನಲ್ಲಿ ಇದ್ದು ಕೆಲವು ದಿನ ಜಮಖಾನಾ ಫ್ಯಾಕ್ಟರಿಯಲ್ಲಿ ಕೆಲಸಮಾಡುತ್ತಿದ್ದೆ. 1942ರ ಚಳವಳಿ ಶುರು ಆಗಲು, ನನ್ನ ಹೆಂಡತಿ ಏಳು ತಿಂಗಳ ಗರ್ಭಿಣಿ ಆಗಿದ್ದರೂ, ನಾನು ಬೆಂಗಳೂರಿಗೆ ಬಂದೆ. 25-9-1942ರಂದು ಸೆಕ್ರೆಟೇರಿಯೆಟ್ ಮುಂದೆ ಪಿಕೆಟಿಂಗ್ ಮಾಡುವುದಾಗಿ ಮೊದಲೇ ಸರಕಾರಕ್ಕೆ ಪತ್ರ ಬರೆದು, ನಾನು ರೈಲಿನಲ್ಲಿ ಬರುತ್ತಿದ್ದಂತೆ ಬೆಂಗಳೂರು ಮತ್ತು ಕಂಟೋನ್‌ಮೆಂಟ್ ಪೋಲೀಸರು ಒಟ್ಟಾಗಿ, ಡಿಫೆನ್ಸ್ ಆಫ್ ಇಂಡಿಯಾ ಆಕ್ಟ್‌ನಂತೆ ನನ್ನನ್ನು ಬಂಧಿಸಿ ಸೆಂಟ್ರಲ್ ಜೈಲಿನಲ್ಲಿ ಡೆಟಿನ್ಯು ಆಗಿ ಇಟ್ಟರು. ರೆಸಿಡೆಂಟರ್ ಆಜ್ಞೆ ಉಲ್ಲಂಘಿಸಿದ್ದಕ್ಕೆ ಕಂಟೋನ್‌ಮೆಂಟ್ ಪೋಲೀಸರು ಕೇಸುಹಾಕಲು 18-12-1942ರಂದು ಎರಡು ತಿಂಗಳ ಸಾದಾ ಸಜೆ ಆಯಿತು. ಆ ಶಿಕ್ಷೆ ಮುಗಿದ ಮೇಲೆ ಮತ್ತೆ ಡೆಟಿನ್ಯು ಮಾಡಿದರು. ಚಳವಳಿಯ ಕಾವು ಕಡಿಮೆ ಆದಾಗ ಎಲ್ಲ ರಾಜಕೀಯ ಕೈದಿಗಳನ್ನು ಬಿಡುಗಡೆಮಾಡಿದರು (1943ರ ಅಕ್ಟೋಬರ್-ನವೆಂಬರ್ ನಲ್ಲಿ). ಆದರೆ ಕಾರ್ಮಿಕ ಮುಖಂಡರಾದ ಡಿ. ವೆಂಕಟೇಶ್, ಕೆ.ಜಿ.ಎಫ್.ನ ಫಿಲಿಪ್ಸ್ ಮತ್ತು ನನ್ನನ್ನು ಬಿಡುಗಡೆಮಾಡದೆ, 1944ರ ಜನವರಿ 4ರಂದು ರಾತ್ರಿ ಟ್ರೇನ್‌ನಿಂದ ಜಾಲಾರ್ ಪೇಟೆಗೆ ಒಯ್ದು ಬಿಟ್ಟರು. ಈ ಕಾಲದಲ್ಲಿ ನನ್ನ ಆರೋಗ್ಯ ತೀರ ಕೆಟ್ಟಿತ್ತು.

ಈ ಬಾರಿ ನನ್ನ ಗಡೀಪಾರು ಆದಲ್ಲಿ ನಾನು ಹಿಂದೂಪುರ ಸೇವಾಸುಂದಿರದಲ್ಲಿ

ವಿಶ್ರಾಂತಿಪಡೆಯಬೇಕೆಂದು ನನಗೆ ಮೊದಲೇ ಸೂಚಿಸಿದ ಮಾಲಿ ಮರಿಯಪ್ಪ ಮತ್ತು ಎಸ್. ಸಿ. ನಾಗಯ್ಯರೆಡ್ಡಿ ಇವರುಗಳು, ಅದರಂತೆ ಹಿಂದೂಪುರದ ತಮ್ಮ ಮಿತ್ರ ಎ. ಎಂ. ಲಿಂಗಣ್ಣ ಅವರಿಗೆ ಮೊದಲೇ ಪತ್ರ ಬರೆದಿದ್ದರು. ನಾನು ಹಿಂದೂಪುರಕ್ಕೆ ಹೋಗಿ ಆರೋಗ್ಯ ಸರಿಪಡಿಸಿಕೊಂಡೆನಲ್ಲದೆ, ಮುಂದೆ ಲಿಂಗಣ್ಣನವರ ಜೊತೆ ಸೇರಿ ವರ್ಧಾ ಸ್ಕೀಂನಂತೆ ವಿಧಾಯಕ ಕೆಲಸಗಳನ್ನು ಕೈಕೊಂಡೆ. ಅಲ್ಲಿಗೆ ನನ್ನ ಪತ್ನಿಯನ್ನೂ ಕರೆಸಿಕೊಂಡೆ. ಅಲ್ಲಿ ಅವಳು 1944ರಲ್ಲಿ ಹೆತ್ತಾಗ, ಆಕೆಯ ಮಾನಸಿಕ ಸ್ವಾಸ್ಥ್ಯ ತಪ್ಪಿತು. ಅವಳ ಚಿಕಿತ್ಸೆಗಾಗಿ ಬೆಂಗಳೂರಿಗೆ ಬರಲು ಸರಕಾರದ ಅನುಮತಿ ಕೇಳಿದೆ. ರಾಜಕೀಯದಲ್ಲಿ ಭಾಗವಹಿಸಬಾರದೆಂಬ ಷರತ್ತಿನಂತೆ ಅನುಮತಿ ಸಿಕ್ಕಿತು. ಮೆಂಟಲ್ ಹಾಸ್ಪಿಟಲ್‌ನಲ್ಲಿ ಆಕೆಗೆ ಗುಣವಾಗಿ, ಹಿಂದೂಪುರಕ್ಕೆ ಮರಳಿದೆವು.

ಮುಂದೆ ಮೈಸೂರು ಚಲೋ ಚಳವಳಿ ಕಾಲಕ್ಕೆ ಹಿಂದೂಪುರಕ್ಕೆ ಎಚ್. ಎಸ್. ದೊರೆಸ್ವಾಮಿ ಬಂದರು. ಅವರ 'ಪೌರವಾಣಿ' ಪತ್ರಿಕೆ ಆರಂಭಿಸಲು ನಾನೂ ಅವರೂ ಹಿಂದೂಪುರಕ್ಕೆ ಹೋಗಿ ಡಿಕ್ಲರೇಶನ್ ಮಾಡಿಸಿ, ಹಿಂದೂಪುರದ ಸುದರ್ಶನ ಪ್ರೆಸ್‌ನಲ್ಲಿ ಮುದ್ರಣ ಶುರುಮಾಡಿದೆವು. ಕಲ್ಲೂರು ಸುಬ್ಬರಾವ್‌ರ ಅಧ್ಯಕ್ಷತೆಯಲ್ಲಿ ಎ. ಎಂ. ಲಿಂಗಣ್ಣ (ಉಪಾಧ್ಯಕ್ಷ), ಕೆ. ವಿ. ಕೋನಪ್ಪ (ಖಜಾಂಚಿ), ನಾನು (ಕಾರ್ಯದರ್ಶಿ), ದೊರೆಸ್ವಾಮಿ ಇವರನ್ನೊಳಗೊಂಡ ಸತ್ಯಾಗ್ರಹದ ಕಮಿಟಿ ಮಾಡಿದೆವು. ಸುತ್ತಲಿಂದ ಕಾರ್ಯಕರ್ತರ ತಂಡವೇ ಬಂತು. ಶಿಬಿರ ಶುರು ಆಯಿತು. ಗಡಿಭಾಗದಲ್ಲಿ ಅಜಾದ್ ಸರಕಾರದ ಪ್ರಚಾರ, ಜೊತೆಯಲ್ಲಿ ಮೈಸೂರು ಸರಕಾರದ ರಸ್ತೆ, ಬ್ರಿಜ್‌ಗಳ ನಾಶ ಮುಂತಾದ ಚಟುವಟಿಕೆ ಭರದಿಂದ ಸಾಗಿತು. ಮುಂದೆ ಜವಾಬ್ದಾರಿ ಸರಕಾರದ ಘೋಷಣೆ ಆಯಿತು. ಇದಾಗಿ ಸ್ವಲ್ಪ ದಿನದಲ್ಲೇ ಎ. ಎಂ. ಲಿಂಗಣ್ಣ ಅನಾರೋಗ್ಯ ದಿಂದ ತೀರಿಕೊಳ್ಳಲು, ಅಲ್ಲಿನ ಆಶ್ರಮ ನಾನೇ ನಡೆಸಬೇಕಾಯಿತು. 1952ರ ವರೆಗೆ ಅಲ್ಲಿದ್ದೆ. ಮುಂದೆ, ಹಿಂದೂಪುರದ ಕೆಲವು ಮಿತ್ರರ ನೆರವಿನಿಂದ ಬೆಂಗಳೂರಲ್ಲಿ ಒಂದು ಅಂಗಡಿ ತೆರೆದು ವ್ಯಾಪಾರ ಆರಂಭಿಸಿದೆ. ಈ ನಡುವೆ, ಗಾಂಧೀಜಿ ತೀರಿಕೊಂಡ ಸುದ್ದಿ ಬಂದಾಗ ನನ್ನ ಪತ್ನಿಯ ಅಸ್ವಾಸ್ಥ್ಯ ಮರುಕಳಿಸಿ, ಆಕೆ 13ನೆಯ ದಿನ ತೀರಿಕೊಂಡಳು.

ನಾನು ಗಡೀಪಾರಾದಾಗಲೆಲ್ಲ ನಮ್ಮ ಒಡವೆ, ಪಾತ್ರೆಗಳನ್ನು ಮಾರಿಯೇ ಜೀವನ ನಡೆಸಿದೆ. ಯಾರಿಂದಲೂ ಸಹಾಯ ಕೇಳಲಿಲ್ಲ. ತಾವಾಗಿ ಯಾರೂ ಸಹಾಯ ಮಾಡಲೂ ಇಲ್ಲ. 1944ರಲ್ಲಿ ಮಾತ್ರ ಲಿಂಗಣ್ಣ ಅವರ ಸಹಾಯ ದೊರೆಯಿತು.

ನಾನು ತಾಮ್ರಪತ್ರ, ಪೆನ್‌ಶನ್ ಮುಂತಾದ ಸವಲತ್ತುಗಳನ್ನೆಲ್ಲ ನಿರಾಕರಿಸಿದ್ದೇನೆ. ಸ್ವಾತಂತ್ರ್ಯಯೋಧರ ಮಕ್ಕಳಿಗೆ ಲಭ್ಯವಿರುವ ಯಾವುದೇ ಸವಲತ್ತುಗಳನ್ನು ಪಡೆಯಬಾರದೆಂದು ನನ್ನ ಮಕ್ಕಳಿಗೂ ತಿಳಿಸಿದ್ದೇನೆ. ನಾನು ಮಾಡಿದ ದೇಶಸೇವೆಗೆ ಪ್ರತಿಫಲ ಸಿಗಬೇಕೆಂಬ ಆಸೆಯನ್ನು ನಾನು ಇಟ್ಟಿಲ್ಲ.

# ಎ. ಎಂ. ಲಿಂಗಣ್ಣ



ಗಣ್ಯ ಸ್ವಾತಂತ್ರ್ಯ ಹೋರಾಟಗಾರ ಎ. ಎಂ. ಲಿಂಗಣ್ಣ ಶಿರಾ ತಾಲ್ಲೂಕು ತಾವರೆಕೆರೆ ಗಾನಹಳ್ಳಿಯಲ್ಲಿ 10 12-1905ರಲ್ಲಿ ಜನಿಸಿದರು. ತಮ್ಮ ಹದಿನೂರ ನೆಯ ವಯಸ್ಸಿನಿಂದಲೇ ವ್ಯಾಪಾರಕ್ಕಿಳಿದು ಮುಂದುವರಿದರು. 1928ರಲ್ಲಿ 'ಸೋಮೇಶ್ವರ ಕಂಪನಿ' ಎಂಬ ವ್ಯಾಪಾರ ಸಂಸ್ಥೆಯನ್ನು ಸ್ಥಾಪಿಸಿದರು. ಅದು ಬಹಳ ಅಭಿವೃದ್ಧಿ ಹೊಂದಿತು. ಗಾಂಧೀ ತತ್ವಗಳ ಪ್ರಭಾವದಿಂದಾಗಿ, ಸಮತಾವಾದವನ್ನು ಕಾರ್ಯರೂಪಕ್ಕಿಳಿಸಬೇಕೆಂದು ತಮ್ಮ ಕಂಪನಿಯ ಐದು ಗುಮಾಸ್ತರುಗಳನ್ನು ಭಾಗಸ್ಥರನ್ನಾಗಿ ಮಾಡಿದರು.

ತ್ರಿಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿ ಬಂದರು. ಅಂದಿನಿಂದಲೇ ಖಾದೀಧಾರಿಗಳಾದರು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿದ್ದ ನಂಬಿಕೆಯಿಂದಾಗಿ, 1939ರಲ್ಲಿ 'ಹಿಂದೂಪುರದ ಖಾದಿ ಮತ್ತು ಗೃಹಕೈಗಾರಿಕೆಗಳು' ಎಂಬ ಖಾದಿ ಕೇಂದ್ರವನ್ನು ಪ್ರಾರಂಭಿಸಿದರು. 1940ರಲ್ಲಿ ಹಿಂದೂಪುರಕ್ಕೆ 2 ಮೈಲುಗಳ ದೂರದಲ್ಲಿರುವ ಪಿನಾಕಿನಿ ನದೀತೀರದಲ್ಲಿ ಸೇವಾಮಂದಿರವೊಂದನ್ನು ಸ್ಥಾಪಿಸಿದರು. ತಮ್ಮ ಕಂಪನಿಯಿಂದ ಬರುತ್ತಿದ್ದ ಆದಾಯವನ್ನೆಲ್ಲಾ ಇದರ ಏಳ್ಗೆಗಾಗಿ ವಿನಿಯೋಗಿಸಿದರು. 1941ರಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ವ್ಯಕ್ತಿಸತ್ಯಾಗ್ರಹ ಪ್ರಾರಂಭವಾದಾಗ ಅದರಲ್ಲಿ ಭಾಗವಹಿಸಿ ಆರು ತಿಂಗಳ ಶಿಕ್ಷೆಗೂ 300 ರೂ.ಗಳ ಜುಲ್ಮಾನೆಗೂ ಗುರಿಯಾದರು (ಮದ್ರಾಸ್ ಪ್ರಾಂತ್ಯದಲ್ಲಿ).

ಸೆರೆಮನೆಯಿಂದ ಹೊರಗೆ ಬಂದನಂತರ ವಾರ್ಧಾ ವಿಧಾನವನ್ನು ಜಾರಿಗೆ ತರಲೋಸುಗ ಸೇವಾಮಂದಿರದಲ್ಲಿ ಸ್ಕೂಲೊಂದನ್ನು ಸ್ಥಾಪಿಸಿದರು (1944). ಈ ಶಾಲೆಯಲ್ಲಿ ಪಠ್ಯಪುಸ್ತಕ ಬೋಧನೆಯ ಜೊತೆಗೇ ಶ್ರಮಶಿಕ್ಷಣವನ್ನು ಕಾರ್ಯರೂಪಕ್ಕೆ ತರಬೇಕೆಂದು ನೂಲುವುದು, ನೇಯುವುದು, ಬಡಗಿ ಕೆಲಸ ಮುಂತಾದವನ್ನು ಹುಡಗರಿಗೆ ಕಲಿಸಲು ಏರ್ಪಾಡು ಮಾಡಿದರು. 1946ರಲ್ಲಿ ಜಿಲ್ಲಾ ಆಹಾರ ಕಮಿಟಿಗೂ, ತಾಲ್ಲೂಕು ಆಹಾರ ಕಮಿಟಿಗೂ ಚುನಾಯಿತರಾದರು. 1947ರಲ್ಲಿ ಮೈಸೂರು ಕಾಂಗ್ರೆಸ್ ಸತ್ಯಾಗ್ರಹದ ಕಹಳೆಯೂದುತ್ತಲೇ, ತಮ್ಮ ಸ್ನೇಹಿತರೊಡಗೂಡಿ ಸೇವಾಮಂದಿರದಲ್ಲಿ ಸತ್ಯಾಗ್ರಹದ ಕೇಂದ್ರ ಶಿಬಿರವನ್ನು ಪ್ರಾರಂಭಿಸಿದರು, ಗಡಿಗಳಲ್ಲಿ 14 ಶಿಬಿರಗಳನ್ನು

ಸ್ಥಾಪಿಸಲಾಯಿತು. ಕೇಂದ್ರ ಶಿಬಿರವಾದ ಸೇವಾಮಂದಿರದಲ್ಲಿ ಪ್ರತಿಸರ್ಕಾರವೇರ್ಪಡಿಸಿ ಹಲವಾರು ಹಳ್ಳಿಗಳನ್ನು ವಶಪಡಿಸಿಕೊಂಡು ನಿರೀಕ್ಷಿಸಿದ್ದ ಅವಧಿಗೆ ಮುಂಚೆಯೇ ಮಹಾರಾಜರ ಸರ್ಕಾರವು ಕುಸಿದುಬೀಳಲು ಅವರು ಶ್ರಮಿಸಿದರು. ಈ ಹೋರಾಟದಲ್ಲಿ ಅತಿ ಶ್ರಮಪಟ್ಟುದರಿಂದ ಅವರ ಆರೋಗ್ಯ ವಿಷಮಿಸಿ ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಗೆ ಸೇರಿಸಲ್ಪಟ್ಟರು ; ಆದರೆ ವೈದ್ಯರ ಶ್ರಮವೆಲ್ಲಾ ನಿರರ್ಥಕವಾಯಿತು. ಲಿಂಗಣ್ಣನವರು 30-12-1947ರಲ್ಲಿ ದೈವಾಧೀನರಾದರು.

ಬೆಂಗಳೂರು ಕಾಂಗ್ರೆಸ್ ಕಮಿಟಿಯವರು ಅವರ ಪಾರ್ಥಿವ ಶರೀರವನ್ನು ನಗರದ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿ ದಿವಂಗತರೇ ಸ್ಥಾಪಿಸಿದ್ದ ಸೇವಾಮಂದಿರದಲ್ಲಿ ಸಮಾಧಿ ಮಾಡಿದರು.

ವ್ಯ.ಬೆಂ. 10

## ಜಿ. ಲಿಂಗಯ್ಯ

ಜನನ : ? ಉದ್ಯೋಗ : ಸಮಾಜಸೇವೆ ವಿಳಾಸ : 2, ಕುಮಾರ ಪಾರ್ಕ್, ಬೆಂಗಳೂರು–20



ನನಗೆ ಸುಮಾರು ಹದಿನೈದು ವರ್ಷ ವಯಸ್ಸಾಗಿದ್ದಾಗ ನನ್ನ ಇಬ್ಬರು ಅಣ್ಣಂದಿರ ಜೊತೆಯಲ್ಲಿ ಹೊಟ್ಟೆಪಾಡಿಗಾಗಿ ಬೆಂಗಳೂರಿಗೆ ಬಂದೆ. 1932ರ ಪ್ರಾರಂಭದಲ್ಲಿ ನಗರದ ಮಿನರ್ವಾಮಿಲ್ಲಿನಲ್ಲಿ ಕೆಲಸಕ್ಕೆ ಸೇರಿ 1941ರ ಏಪ್ರಿಲ್ 22ರವರೆಗೂ ಅಲ್ಲಿಯೇ ಕಾರ್ಮಿಕನಾಗಿದ್ದೆ.

1935ನೇ ಜೂನ್–ಜುಲೈ ತಿಂಗಳಲ್ಲಿ ವೇತನ ಏರಿಕೆಗಾಗಿ ಮಿನರ್ವಾ ಮತ್ತು ಮಹಾರಾಜ ಮಿಲ್ಲುಗಳ ಕಾರ್ಮಿಕರು ಮುಷ್ಕರ ಹೂಡಿದರು. ಆ ಸಮಯದಲ್ಲಿ ರಾಜ್ಯದಲ್ಲಿ ಕಾರ್ಮಿಕ ಕಲ್ಯಾಣ ಶಾಸನವಾಗಲೀ ಅಥವಾ ಬೇರೆ ವಿಧವಾದ ಅಧಿಕೃತ ಕಾರ್ಮಿಕ ಸಂಘಟನೆಯಾಗಲೀ ಇರಲಿಲ್ಲ. 'ಬೆಂಗಳೂರು ಹತ್ತಿಗಿರಣಿ ಕಾರರ ಸಂಘ' ಎಂಬ ಅನಧಿಕೃತ ಸಂಘವೊಂದಿತ್ತು. ದಿ|| ಕೆ. ಟಿ. ಭಾಷ್ಯಂ ಅವರ ಅಧ್ಯಕ್ಷರಾಗಿಯೂ, ವಕೀಲರಾಗಿದ್ದ ದಿ|| ಚಂದ್ರಶೇಖರಯ್ಯನವರು ಉಪಾಧ್ಯಕ್ಷರಾಗಿಯೂ, ದಿ|| ಪಿ. ಎಂ. ರಾಮಸ್ವಾಮಿಯವರು ಕಾರ್ಯದರ್ಶಿಗಳಾಗಿಯೂ ಕೆಲಸ

ಮಾಡುತ್ತಿದ್ದರು. ಭಾಷ್ಯಂರವರು ರಾಜಕೀಯ ಹಾಗೂ ಕಾರ್ಮಿಕ ರಂಗಗಳೆರಡರಲ್ಲೂ ನನ್ನ ಗುರುಗಳು. ಈ ಸಮಯದಲ್ಲಿ ಬೆಂಗಳೂರಿನಲ್ಲಿ ಮೇಲೆ ಹೆಸರಿಸಿದ ಮಿಲ್ಲುಗಳಲ್ಲದೆ ಬಿನ್ನಿ ಮಿಲ್ಲು ಮತ್ತು ಶ್ರೀಕೃಷ್ಣ ವೀವಿಂಗ್ ಫ್ಯಾಕ್ಟರಿ ಎಂಬೆರಡು ಮಿಲ್ಲುಗಳೂ ಇದ್ದವು. ಮತ್ತಾವುದೇ ದೊಡ್ಡ ಕಾರ್ಖಾನೆಗಳಿರಲಿಲ್ಲ. ಮುಷ್ಕರ ಹೂಡಿದ್ದ ಕಾರ್ಮಿಕರ ಪೈಕಿ ಒಂಬತ್ತು ಕಾರ್ಮಿಕರು ಕೆಲಸ ಕಳೆದುಕೊಂಡರು. ಈ ಘಟನೆ ನನ್ನನ್ನು ಕಾರ್ಮಿಕ ಚಳವಳಿಗೆ ಸೇರಲು ಪ್ರೇರೇಪಿಸಿತು. ಕೂಡಲೇ ನಾನು 'ಹತ್ತಿ ಗಿರಣಿ ಕಾರ್ಮಿಕ ಸಂಘ'ದ (ಎರಡಾಣೆ) ಸದಸ್ಯನಾದೆ. ಕಾರ್ಮಿಕ ಸಂಘಟನೆ ಮತ್ತು ಚಳವಳಿಯಲ್ಲಿ ಸ್ವಲ್ಪ ಹೆಚ್ಚು ಜವಾಬ್ದಾರಿಯುತ ಸ್ಥಾನವನ್ನು ತೆಗೆದುಕೊಳ್ಳಬೇಕೆಂದು ನನ್ನ ಗೆಳೆಯರು ಮತ್ತು ಕೆಲ ಹಿರಿಯ ಕಾರ್ಮಿಕರು ನನ್ನನ್ನು ಒತ್ತಾಯಿಸಿದರು.

ಇದೇ ಸಮಯದಲ್ಲಿ, ಬೆಂಗಳೂರು ನಗರದಲ್ಲಿ ಮೈಸೂರು ಕಾಂಗ್ರೆಸ್ಸಿನ ಚುನಾವಣಾ ಪ್ರಚಾರಕ್ಕಾಗಿ ಕಮಲಾದೇವಿ ಚಟ್ಟೋಪಾಧ್ಯಾಯರನ್ನು ಆಹ್ವಾನಿಸಲಾಗಿತ್ತು. ಆದರೆ ಸರಕಾರವು ಅವರು ರಾಜ್ಯಕ್ಕೆ ಬರಕೂಡದೆಂದು ನಿಷೇಧಾಜ್ಞೆ ವಿಧಿಸಿತು. ಇಷ್ಟೇ ಅಲ್ಲದೆ ಬೊಂಬಾಯಿನ ವೀರ ನರಿಮನ್‌ರವರು ಬೆಂಗಳೂರಿನ ಬಸಪ್ಪಾ ಪಾರ್ಕಿನಲ್ಲಿ ಭಾಷಣ ಮಾಡುತ್ತಿದ್ದಾಗ ಸರ್ಕಾರ ಲಾಠೀ ಛಾರ್ಜ್ ಹಾಗೂ ಗೋಲೀಬಾರು ನಡೆಸಿತು. ಈ ಘಟನೆಗಳು ನನ್ನನ್ನು ಕಾಂಗ್ರೆಸ್ ಧ್ಯೇಯಗಳೆಡೆಗೆ ಆಕರ್ಷಿತನಾಗುವಂತೆ ಮಾಡಿದವು. ಆದರೆ ನಾನು ಕಾಂಗ್ರೆಸ್ ಸೇರದೆ ಕಾರ್ಮಿಕ ಚಳವಳಿಯನ್ನೇ ಮುಂದುವರಿಸಿದೆ. 1938ರಲ್ಲಿ ಭಾಷ್ಯಂರ ಉಪದೇಶ, ಪ್ರಭಾವದಿಂದ ಸಂಪೂರ್ಣ ಕಾರ್ಮಿಕ ಚಳವಳಿಯಲ್ಲಿ ಪಾಲ್ಗೊಳ್ಳಲು ತೊಡಗಿದೆ. 1940ರಲ್ಲಿ ನಾನು ಮೈಸೂರು ಕಾಂಗ್ರೆಸ್‌ನ ಪ್ರಾಥಮಿಕ ಸದಸ್ಯನಾದೆ.

1940ರಲ್ಲಿ ಬಿನ್ನಿ ಮಿಲ್ಲಿನ ಕಾರ್ಮಿಕರು ಡಿವಿಡೆಂಡ್ ಕೊಡಬೇಕೆಂಬ ಕಾರಣದಿಂದ 22 ದಿನಗಳ ಮುಷ್ಕರ ಹೂಡಿದರು. ಭಾಷ್ಯಂರೇ ಆ ಮುಷ್ಕರದ ನಾಯಕರು. ಪ್ರತಿನಿತ್ಯ ಸಭೆ ನಡೆಸಲು ಹಾಗೂ ಕಾರ್ಯಕರ್ತರ ಸಹಾಯಕ್ಕಾಗಿ ಕೆ. ಎಸ್. ಕುಮಾರನ್, ಜಿ. ವಿ. ಚಲಂ, ಎಂ. ಎಸ್. ರಾಮರಾವ್ ಮತ್ತು ಎನ್. ಡಿ. ಶಂಕರ್ ಇವರುಗಳು ಒಂದು ರಿಲೀಫ್ ಸಮಿತಿಯನ್ನು ರಚಿಸಿದರು. ಮಹಾರಾಜಾ ಮತ್ತು ಮಿನರ್ವಾ ಮಿಲ್ಲಿನ ಕೆಲಸಗಾರರು ತಮ್ಮ ಒಂದು ದಿನದ ವೇತನವನ್ನು ಬಿನ್ನಿ ಮಿಲ್ಲಿನ ಮುಷ್ಕರ ಹೂಡಿದ್ದ ಕಾರ್ಮಿಕರಿಗೆ ಕೊಡಲು ಮುಂದೆ ಬಂದರು. ಇದಕ್ಕಾಗಿ ಅವರು ಎರಡೂ ಮಿಲ್ಲುಗಳ ಹನ್ನೆರಡು ಜನರ ಒಂದು ಸಮಿತಿಯನ್ನು ಸಹ ರಚಿಸಿದರು. ಇದರ ನಾಯಕತ್ವದ ಹೊಣೆ ನನ್ನ ಮೇಲೆ ಬಿದ್ದಿತು—ಜೊತೆಗೇ ಮಿಲ್ಲಿನ ಮಾಲಿಕರ ದೃಷ್ಟಿ ಸಹ.

1941ನೇ ಏಪ್ರಿಲ್ 1ರಂದು ಮಹಾರಾಜಾ ಮತ್ತು ಮಿನರ್ವಾ ಮಿಲ್ಲುಗಳ ಕಾರ್ಮಿಕರು ದಿನಗೂಲಿ ಏರಿಕೆಗಾಗಿ ಒತ್ತಾಯಿಸಲು ಒಂದು ದಿನದ 'ಅಸಮಾಧಾನ ಮುಷ್ಕರ' ಹೂಡಿದರು. ಇದು ಶಾಂತ ರೀತಿಯಲ್ಲಿ ನಡೆಯಬೇಕಿತ್ತು. ಆಗ

ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಭಾಷ್ಯಂ, ನಾನು ಮತ್ತು ನನ್ನ 22 ಜನ ಸಹೋದ್ಯೋಗಿಗಳು ಜವಾಬ್ದಾರಿ ಹೊರಬೇಕೆಂದು ನನಗೆ ಆದೇಶ ನೀಡಿದರು. ಆದರೆ ಮಿಲ್ಲಿನ ಮಾಲೀಕರು ಏಪ್ರಿಲ್ 2ರಂದು ಲಾಕ್‌ಔಟ್ ಘೋಷಿಸಿದರು. ದಿವಾನ್ ಮಿರ್ಜಾ ಶೇಷಾದ್ರಿಪುರದ ದೀನ ಸೇವಾ ಸಂಘದ ವ್ಯವಸ್ಥಾಪಕರಾಗಿದ್ದ ಬ್ರಹ್ಮಚಾರಿ ರಾಮಚಂದ್ರನ್‌ರ ಮೂಲಕ ಭಾಷ್ಯಂರವರನ್ನು ಮಾತುಕತೆಗಾಗಿ ಆಹ್ವಾನಿಸಿದರು. ಇಷ್ಟರಲ್ಲಿ ಭಾಷ್ಯಂರವರಿಗೂ ಮತ್ತು ಪಿ. ಎಂ. ರಾಮಶರ್ಮರಿಗೂ ಭಿನ್ನಾಭಿಪ್ರಾಯ ವುಂಟಾಗಿತ್ತು. ಇದರ ಪರಿಣಾಮವಾಗಿ ರಾಮಶರ್ಮ ಹತ್ತಿಗಿರಣಿ ಸಂಘಕ್ಕೆ ರಾಜೀನಾಮೆ ಇತ್ತರು. ಇದೇ ಸಮಯದಲ್ಲಿ ಭದ್ರಾವತಿ ಕಬ್ಬಿಣ ಮತ್ತು ಸಿಮೆಂಟ್ ಕಾರ್ಖಾನೆ ಕೆಲಸಗಾರರ ಮುಷ್ಕರ ಸಹ ನಡೆಯುತ್ತಿತ್ತು. ಸರ್ಕಾರವು ಎನ್. ಡಿ. ಶಂಕರ್, ಕೆ. ಎಸ್. ಕುಮಾರನ್ ಮತ್ತು ಎಂ. ಎಸ್. ರಾಮರಾವ್ ಇವರುಗಳನ್ನು ಗಡೀಪಾರು ಮಾಡಿ ಬೆಂಗಳೂರು, ಶಿವಮೊಗ್ಗ ಮತ್ತು ಕೆ.ಜಿ.ಎಫ್.ಗಳಲ್ಲಿ ಕಾಲಿಡಕೂಡದೆಂದು ನಿರ್ಬಂಧಿಸಿತು.

ಭಾಷ್ಯಂ ತಾವೇ ಮಿರ್ಜಾರನ್ನು ಭೇಟಿ ಮಾಡುವ ಬದಲು ಹದಿಮೂರು ಜನ ಕಾರ್ಮಿಕರ ಒಂದು ನಿಯೋಗವನ್ನು ನನ್ನ ನಾಯಕತ್ವದಲ್ಲಿ ಕಳಿಸಿದರು. ಏಪ್ರಿಲ್ 4ರಂದು ನಡೆದ ದಿವಾನರ ಮತ್ತು ನಮ್ಮ ಭೇಟಿ ಯಶಸ್ವಿಯಾಯಿತು. ಮಾರನೇ ದಿನವೇ ಗಿರಣಿಗಳನ್ನು ತೆಗೆಯುವುದಾಗಿಯೂ, ಆದರೆ ನಮ್ಮ ಕುಂದುಕೊರತೆಗಳನ್ನು ಆಗಿನ ಲೇಬರ್ ಕಮೀಷನರ್ ಅಪ್ಪಾದೊರೆ ಮುದಲಿಯಾರ್ ಮತ್ತು ಲೇಬರ್ ಚೀಫ್ ಕಾನ್ಸಿಲೇಟರ್ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಲ್ಲಿ ನಿವೇದಿಸಬೇಕೆಂದು ಆದೇಶ ನೀಡಿದರು. ಅದರಂತೆಯೇ ಏಪ್ರಿಲ್ ಐದರಿಂದ ಗಿರಣಿಗಳು ಮತ್ತೆ ಪ್ರಾರಂಭವಾದವು. ಅಲ್ಲಿಂದೀಚೆಗೆ ನನ್ನ ಚಟುವಟಿಕೆಗಳು ತೀವ್ರವಾದವು. ಈ ಕಾರಣದಿಂದ 1941ನೇ ಏಪ್ರಿಲ್ 22ರಂದು ಮಿನರ್ವಾ ಮಿಲ್‌ನಿಂದ ನನ್ನನ್ನು ವಜಾ ಮಾಡಿದರು. ಇದಕ್ಕೆ ಸರ್ಕಾರವೂ ಸಮ್ಮತಿಸಿತ್ತು.

ಕಾರ್ಮಿಕರು ಇದನ್ನು ಪ್ರತಿಭಟಿಸಿದರು. ಪರಿಣಾಮವಾಗಿ ನನ್ನ ಜೊತೆಯ ಸುಮಾರು 20 ಕಾರ್ಮಿಕರು ಹತ್ತು ದಿನಗಳ ಸೆರೆವಾಸ ಅನುಭವಿಸಿದರು. 1941ರ ಮೇ 13ರಂದು ನನ್ನನ್ನು ಬೆಂಗಳೂರು ಜಿಲ್ಲೆಗೆ ಒಂದು ವರ್ಷ ಕಾಲ ಕಾಲಿಡದಂತೆ ನಿರ್ಬಂಧಿಸಿದರು. ತುಮಕೂರು ಪೋಲೀಸ್ ಠಾಣೆಯಲ್ಲಿ ಮೂರು ದಿನಗಳನ್ನು ಕಳೆದು ನಂತರ ಮುಳವಳ್ಳಿಯಲ್ಲಿ ನೆಲೆಸಿದೆ. 1941ರ ಜೂನ್ 16ರಂದು ಆರು ವರುಷಗಳ ಕಾಲ ಬೆಂಗಳೂರು ಕಂಟೋನ್ಮೆಂಟ್ ಒಳಗೆ ನನ್ನ ಪ್ರವೇಶವನ್ನು ನಿರ್ಬಂಧಿಸುವ ಆಜ್ಞೆಯನ್ನು ಕಂಟೋನ್ಮೆಂಟ್‌ನ ರೆಸಿಡೆಂಟರು ನನಗೆ ಕಳುಹಿಸಿದರು. ಅಷ್ಟರಲ್ಲಿ ಕೆ. ಟಿ. ಭಾಷ್ಯಂ, ಯಶೋಧರ ದಾಸಪ್ಪ, ಎಚ್. ಸಿ. ದಾಸಪ್ಪ ಇವರುಗಳು ಸರ್ಕಾರ ಮತ್ತು ಮಿಲ್ಲು ಮಾಲೀಕರೊಡನೆ ಸಂಧಾನ ನಡೆಸಿದರು. ಕಾರ್ಮಿಕರ ಬೇಡಿಕೆಗಳನ್ನು ಈಡೇರಿ

ಸುವುದಾಗಿಯೂ, ನನ್ನನ್ನು ವಜಾ ಮಾಡಿದುದರ ಬಗ್ಗೆ ವಿಚಾರಣೆ ನಡೆಸಲು ಒಂದು ಸಮಿತಿಯನ್ನು ನೇಮಕ ಮಾಡುವುದಾಗಿಯೂ ಭರವಸೆಗಳನ್ನು ಕೊಡಲಾಯಿತು. ಮುಷ್ಕರ ಕೊನೆಗೊಂಡಿತು. ಮೈಸೂರಿನ ಸರ್ಕಾರಿ ಅತಿಥಿಗೃಹದಲ್ಲಿ ನನ್ನ ವಿಚಾರಣೆ ನಡೆಸಿ ನನ್ನ ವಿರುದ್ಧ ಮಿಲ್ ಮಾಲೀಕರು ತೆಗೆದುಕೊಂಡ ಕ್ರಮ ಕಾನೂನುಬದ್ಧವೆಂದು ತೀರ್ಮಾನವಾಯಿತು. ಮೈಸೂರಿನ ಪ್ರಜಾಪ್ರತಿನಿಧಿ ಸಭೆಯಲ್ಲಿ ಇದರ ಬಗ್ಗೆ ವೀರಕೇಸರಿ ಸೀತಾರಾಮ ಶಾಸ್ತ್ರಿಗಳಿಂದ ನ್ಯಾಯವಿಧಾಯಕ ಸಭೆಯಲ್ಲಿ ಟಿ. ಮರಿಯಪ್ಪ ಮತ್ತು ಕೆ. ಸಿ. ರೆಡ್ಡಿಯವರಿಂದ ನಿಲುವಳಿಸೂಚನೆಗಳು ಬಂದು ಸಾಕಷ್ಟು ಚರ್ಚೆಯಾಯಿತು.

1942ನೇ ಮೇ 13ರಂದು ನನ್ನ ಗಡೀಪಾರು ಅವಧಿ ಮುಗಿಯಿತು. ಮೈಸೂರು ಪ್ರಜಾಪ್ರತಿನಿಧಿ ಸಭೆಯು ಮೈಸೂರು ಕಾರ್ಮಿಕ ಶಾಸನವೊಂದನ್ನು ಏಪ್ರಿಲ್ 1942ರಲ್ಲಿ ಜಾರಿಗೆ ತಂದಿತು. ಇದರ ಫಲವಾಗಿ, ಬೆಂಗಳೂರು, ಕೆ.ಜಿ.ಎಫ್., ಭದ್ರಾವತಿ, ಮಂಡ್ಯ ಮತ್ತು ಮೈಸೂರುಗಳಲ್ಲಿನ ಪ್ರತಿ ಕಾರ್ಖಾನೆಗಳಲ್ಲೂ ಅಧಿಕೃತ ಕಾರ್ಮಿಕ ಸಂಘಗಳ ಸ್ಥಾಪನೆಯಾಯಿತು. ಇದಕ್ಕಾಗಿ ಭಾಷ್ಯಂ, ಎನ್. ಸಿ. ತಿಮ್ಮಾರೆಡ್ಡಿ, ಕೆ. ಆರ್. ಮಾಧವರಾವ್, ಮಳವಳ್ಳಿ ವೀರಪ್ಪ, ಎಚ್. ಸಿ. ದಾಸಪ್ಪ, ಟಿ. ಮರಿಯಪ್ಪ ಮುಂತಾದವರು ಬಹಳ ಕೆಲಸಮಾಡಿದರು. ಅನೇಕ ಹಿರಿಯ ಕಾಂಗ್ರೆಸ್ಸಿಗರು ಈ ಸಂಘಗಳ ಅಧ್ಯಕ್ಷರಾದರು.

ಮುಂದೆ ಮಿನರ್ವಾ ಮಿಲ್ಲಿನ ಕೆಲಸಗಾರರ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ನಾನು ಆರಿಸಲ್ಪಟ್ಟೆ. ಆದರೆ ವಜಾ ಮಾಡಲ್ಪಟ್ಟ ಕಾರ್ಮಿಕರು ಕಾರ್ಮಿಕ ಸಂಘದ ಅಧಿಕಾರವರ್ಗದಲ್ಲಿರಬಾರದೆಂದು ಕಾರ್ಮಿಕರ ಮಸೂದೆಗೆ ಮತ್ತೊಂದು ತಿದ್ದುಪಡಿಯನ್ನು ಸರಕಾರ ಹೊರಡಿಸಿತು. 13ನೇ 1941ರ ನಂತರವೂ ಮೈಸೂರು ಕಾಂಗ್ರೆಸ್ಸಿನ ಸದಸ್ಯತ್ವ ಮುಂದುವರೆಸಿ, ಭಾಷ್ಯಂರ ಆಶ್ರಯದಲ್ಲಿ ಮೈಸೂರು ಕಾಂಗ್ರೆಸ್ಸಿನ ಕೇಂದ್ರ ಕಚೇರಿಯಲ್ಲಿದ್ದೆ. 1942ನೇ ಆಗಸ್ಟ್ ತಿಂಗಳಲ್ಲಿ ಅಖಿಲ ಭಾರತ ಕಾಂಗ್ರೆಸ್‌ನ ಮಹಾಧಿವೇಶನಕ್ಕಾಗಿ ಮೈಸೂರು ಕಾಂಗ್ರೆಸ್‌ನ ನಾಯಕರೆಲ್ಲರೂ ಮುಂಬೈಗೆ ತೆರಳಿದರು. ಕಾಂಗ್ರೆಸ್ ಕಚೇರಿಯ ವ್ಯವಹಾರವನ್ನು ನಾನೂ, ಚಿಕ್ಕಪಾಪಯ್ಯ ಮತ್ತು ದೊಡ್ಡಪಾಪಯ್ಯ ಎಂಬಿಬ್ಬರು ಕಾರ್ಯಕರ್ತರೂ ನೋಡಿಕೊಳ್ಳುತ್ತಿದ್ದೆವು.

10-8-1942ರಂದು ರಾಜ್ಯದ ಕಾಂಗ್ರೆಸ್ ನಾಯಕರೆಲ್ಲರೂ ಯಶವಂತಪುರದಲ್ಲಿ ದಸ್ತಗಿರಿ ಮಾಡಲ್ಪಟ್ಟರು. ಇದನ್ನು ಪ್ರತಿಭಟಿಸಿ 13ರಂದು ಬೆಂಗಳೂರಿನಲ್ಲಿ ಮತ್ತು ರಾಜ್ಯಾದ್ಯಂತ ಕಾರ್ಮಿಕ ಮುಷ್ಕರ ನಡೆಸಬೇಕೆಂದು ನಿರ್ಧರಿಸಲಾಯಿತು. ಅದರ ಮುಂದಾಳುತನವನ್ನು ಆಗಸ್ಟ್ 12ರಂದು ಜಿ. ಆರ್. ಜಂಗಲಾರಾಧ್ಯ ಮತ್ತು ಭಾಗೀರಥಮ್ಮನವರಿಗೆ ವಹಿಸಲಾಯಿತು.

ನನ್ನನ್ನು 13ನೇ ತಾರೀಖು ಬೆಳಗ್ಗೆ 6 ಘಂಟೆ ಸಮಯದಲ್ಲಿ ನಗರದ ರೈಲು ನಿಲ್ದಾಣದಲ್ಲಿ ಬಂಧಿಸಿ, 14ರಲ್ಲಿ ಸೆಂಟ್ರಲ್ ಜೈಲಿಗೆ ಕರೆದೊಯ್ದರು. ದಂಡು ಪ್ರದೇಶದಲ್ಲಿ

ದಸ್ತಗಿರಿಯಾದವರನ್ನು ಇಟ್ಟಿದ್ದ 'ಎಸ್' ಬ್ಯಾರಕ್‌ಸಲ್ಲಿ ನನ್ನನ್ನೂ ಇಟ್ಟರು. ಮೂರು ದಿನಗಳನಂತರ ನನ್ನನ್ನು ಮೈಸೂರು ಸತ್ಯಾಗ್ರಹಿಗಳಿದ್ದ ಬ್ಯಾರಕ್‌ಗೆ ವರ್ಗಾಯಿಸಿದರು. ಒಂಬತ್ತು ತಿಂಗಳುಗಳ ಜೈಲುವಾಸದಲ್ಲಿ ನಾನು ಸೆಂಟ್ರಲ್ ಜೈಲು, ಶ್ರೀರಂಗಪಟ್ಟಣದ ಸಬ್‌ಜೈಲು ಮತ್ತು ಹುಣಸೂರು ರೋಡ್ ಬಳಿಯ ಕೆಜ್ಜೆಕಟ್ಟೆ ಕ್ಯಾಂಪಿನಲ್ಲಿಯೂ ಇರಬೇಕಾಯಿತು.

1943ನೇ ಏಪ್ರಿಲ್ ತಿಂಗಳಲ್ಲಿ ಉಗಾದಿ ಹಬ್ಬದ ದಿನ ನನ್ನನ್ನು ಬೆಂಗಳೂರಿನ ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. 18-5-1943ರಂದು ನನ್ನ ಬಿಡುಗಡೆಯಾಯಿತು. 1945ರಲ್ಲಿ ತುಮಕೂರಿನಲ್ಲಿ ನಡೆದ ಮೈಸೂರು ಕಾಂಗ್ರೆಸ್ಸಿನ ವಿಶೇಷಾಧಿವೇಶನದಲ್ಲಿ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಸದಸ್ಯನಾಗಿ ಆರಿಸಲ್ಪಟ್ಟು ಪಾಲ್ಗೊಂಡೆ. ಇದಾದ ನಂತರ ಬೆಂಗಳೂರು ನಗರ ಕಾಂಗ್ರೆಸ್ ಸಮಿತಿಯ ಸದಸ್ಯನಾಗಿಯೂ, ನಗರದ ಮೂರನೇ ಡಿವಿಜನ್‌ನ ಕಾಂಗ್ರೆಸ್ ಕಾರ್ಯದರ್ಶಿಯಾಗಿಯೂ ನನ್ನ ಚಟುವಟಿಕೆಗಳನ್ನು ಮುಂದುವರಿಸಿದೆ.

1947ರ 'ಅರಮನೆ ಸತ್ಯಾಗ್ರಹ' ಸಮಯದಲ್ಲಿ ಬೆಂಗಳೂರಿನಲ್ಲಿ ನಡೆಯುತ್ತಿದ್ದ ಎಲ್ಲಾ ಸಭೆಗಳನ್ನೂ ವ್ಯವಸ್ಥೆಮಾಡುವುದು, ಪ್ರಚಾರಮಾಡುವುದು ಮುಂತಾದವನ್ನು ನಗರ ಕಾಂಗ್ರೆಸ್ ಸಮಿತಿ ನಿರ್ವಹಿಸುತ್ತಿತ್ತು. ಇದೇ ಸಮಯದಲ್ಲಿ ನಾನು ಕೆ. ಕಮಲಾ ದೇವಿಯವರ ಜೊತೆಯಲ್ಲಿ ಮಂಡ್ಯ ಜಿಲ್ಲೆ ಪ್ರವಾಸದಲ್ಲಿದ್ದೆವು. ಸತ್ಯಾಗ್ರಹ ಪ್ರಾರಂಭ ವಾಗುವ ಹಿಂದಿನ ರಾತ್ರಿ ಅನೇಕ ಪ್ರಮುಖರೊಡನೆ ನನ್ನ ದಸ್ತಗಿರಿಯಾಯಿತು. ಕೆ.ಆರ್.ಪುರಂ ಕ್ಯಾಂಪಿನಲ್ಲಿ ನಾನು ಸುಮಾರು 45 ದಿನಗಳನ್ನು ಕಳೆದೆ. ಅನಂತರ ನನ್ನ ಬಿಡುಗಡೆಯಾಯಿತು. (ಜೆ. ಲಿಂಗಯ್ಯ ಅವರು 1971ರಲ್ಲಿ ಬೆಂಗಳೂರು ಮೇಯರ್ ಆಗಿದ್ದರು—ಸಂ||).

ಮೈ.ಬೆಂ. 11

## ಸಿ. ಬಿ. ಮೊಣ್ಣಯ್ಯ

ಜನನ : ? ಉದ್ಯೋಗ : ಕೃಷಿ ವಿಳಾಸ: ದೇವಪುರ ಅಂಚೆ, ಕೊಡಗು ಜಿಲ್ಲೆ

(ಕೊಡಗಿಗೆ ಸಂಬಂಧಪಟ್ಟು ಮಾನ್ಯ ಲೇಖಕರ ಸ್ಮೃತಿ ಸಂಪುಟ Iರಲ್ಲಿ ಕೊಡಗು 19 ಆಗಿ ಬಂದಿದೆ.)

1936ರ ನವೆಂಬರ್ ತಿಂಗಳ ಒಂದು ದಿನ ನಾನು ಮತ್ತು ನನ್ನ ಮಿತ್ರರಾಗಿದ್ದ ಮೈಸೂರಿನ ಕೆ. ಶ್ರೀನಿವಾಸಮೂರ್ತಿ, ಬೆಂಗಳೂರಿನ ಎಸ್. ವಿ. ನಾರಾಯಣಮೂರ್ತಿ, 'ತಾಯಿನಾಡು' ಪತ್ರಿಕೆಯಲ್ಲಿ ಉಪಸಂಪಾದಕರಾಗಿದ್ದ ಅನಂತಸುಬ್ಬರಾವ್ ಇವರೆಲ್ಲ

ಮಲ್ಲೇಶ್ವರದ ರೈಲು ನಿಲ್ದಾಣದಲ್ಲಿ ಗುಪ್ತಸಭೆ ಸೇರಿ ಕರ್ನಾಟಕದಲ್ಲಿ ಕಮ್ಯುನಿಸ್ಟ್ ಪಾರ್ಟಿಯ ಪ್ರಥಮ ಸೆಲ್‌ನ್ನು ಸ್ಥಾಪಿಸಿಕೊಂಡೆವು. ನನ್ನನ್ನು ಈ ಗುಪ್ತಸಭೆಗೆ ಆಕರ್ಷಿಸಿ ಕರೆದೊಯ್ದವರು ನನ್ನ ಕಾರವಾರ ಜೈಲಿನ ಸಹವಾಸಿಯಾಗಿದ್ದ ಶ್ರೀನಿವಾಸ ಮೂರ್ತಿಯವರು. ವಾಸ್ತವವಾಗಿ ಶ್ರೀನಿವಾಸಮೂರ್ತಿಯವರು ಪಾರ್ಟಿ ಸೆಲ್ಲಿನ ಕಾರ್ಯ ದರ್ಶಿಯಾಗಬೇಕಿತ್ತು. ಆದರೆ ಅವರು ಆ ಹೊರೆಯನ್ನು ನನ್ನ ಮೇಲೆ ಹಾಕಿದರು. ಕಮ್ಯುನಿಸ್ಟ್ ಪಾರ್ಟಿಯು 1934ರಲ್ಲಿಯೇ ಬ್ರಿಟಿಷ್ ಸರಕಾರದಿಂದ ಅಖಿಲ ಭಾರತ ಮಟ್ಟದಲ್ಲಿ ನಿಷೇಧಿಸಲ್ಪಟ್ಟಿತ್ತು. ಕಾನೂನುಬಾಹಿರವಾದ ಸಂಸ್ಥೆಯ ಅಂಗವನ್ನು ರಚಿಸಿಕೊಂಡು ಹೇಗೆ ದುಡಿಯಬೇಕು ಮತ್ತು ಜನತೆಯನ್ನು ಹೇಗೆ ಆಕರ್ಷಿಸಬೇಕೆಂಬ ಪ್ರಶ್ನೆಯ ವಿಮರ್ಶೆಯಲ್ಲಿಯೇ ಆರೇಳು ತಿಂಗಳು ಕಳೆದೆವು.

ಅಷ್ಟರಲ್ಲಿಯೇ 65 ವರ್ಷದ ವೃದ್ಧರೊಬ್ಬರು 16 ವರ್ಷದ ತರುಣಿಯೊಬ್ಬಳನ್ನು ಬೆಂಗಳೂರಿನಲ್ಲಿ ವಿವಾಹ ಮಾಡಿಕೊಳ್ಳುವ ಘಟನೆಯೊಂದು ತಿಳಿದುಬಂತು. ಅದನ್ನು ನಮ್ಮ ಇತರ ಮಿತ್ರರೊಡನೆ ಸೇರಿ ಪ್ರಬಲವಾಗಿ ಪ್ರತಿಭಟಿಸಿದೆವು. ಇಡೀ ಬೆಂಗಳೂರು ನಗರವೇ ಇಂತಹ ಅಸಮಾನ ಮದುವೆಗಳನ್ನು ಖಂಡಿಸುವಂತೆ ಜನಜಾಗೃತಿಗೊಳಿಸಿದೆವು. ತದನಂತರ 'ಜನಜಾಗೃತಿ ಸಂಘ' (Mass Awakeners' Union) ಎಂಬ ಸಂಸ್ಥೆಯನ್ನು ಕಟ್ಟಿಕೊಂಡೆವು. ಇದರಲ್ಲಿ ಎನ್. ಡಿ. ಶಂಕರ್, ಎಂ. ಎಸ್. ರಾಮ ರಾವ್, ಬಿ. ಎಂ. ಶೀನಪ್ಪ, ಶಿವಾನಂದ ಶರ್ಮ ಮೊದಲಾದವರೂ ಇದ್ದರು. ಇದರ ಕಾರ್ಯದರ್ಶಿತ್ವದ ಜವಾಬ್ದಾರಿಯೂ ನನ್ನದೇ ಆಯಿತು. ಅಂದಿನಿಂದ 'ಜನಜಾಗೃತಿ ಸಂಘ'ವು ಕಮ್ಯುನಿಸ್ಟ್ ಪಕ್ಷದ ಮುಖವಾಡವಾಯಿತು.

ಕೋಲಾರದಲ್ಲಿ ಮೊರೆಸ್ವಾಮಿ ಐಯ್ಯಂಗಾರ್ ಮತ್ತು ಮಿತ್ರರು, ಮೈಸೂರಿನಲ್ಲಿ ಸೋಮಸುಂದರ ಶರ್ಮ ಮತ್ತು ಮಿತ್ರರು ನಮ್ಮ ಬೆಂಬಲಿಗರಾದರು.

ಬೆಂಗಳೂರು ಮುನಿಸಿಪಾಲಿಟಿಯು ಮನೆಗಂದಾಯ ಏರಿಸಿದ್ದನ್ನು ವಿರೋಧಿಸಿ ಹಾಗೂ ಮುನಿಸಿಪಲ್ ಕಾರ್ಮಿಕರ ಅನೇಕ ಪ್ರಶ್ನೆಗಳನ್ನು ಎತ್ತಿಕೊಂಡು 'ಜನಜಾಗೃತಿ ಸಂಘ' ಒಂದು ಆಂದೋಲನವನ್ನೇ ಆರಂಭಿಸಿತ್ತು. ಇದರಿಂದ ರೊಚ್ಚಿಗೆದ್ದ ಮಿರ್ಜಾ ಸರಕಾರವು ಬೆಂಗಳೂರಿನಲ್ಲಿ ಪೋಲೀಸ್ ಕಾಯಿದೆ 45ನೇ ವಿಧಿಯನ್ನು ಜಾರಿಮಾಡಿ ಪ್ರತಿಬಂಧಕಾಜ್ಞೆಯನ್ನು ಹೊರಡಿಸಿತು. ಈ ದಬ್ಬಾಳಿಕೆ ಕ್ರಮವನ್ನು ಮೈಸೂರಿನ ರಾಜಕಾರಣಿಗಳಲ್ಲದೆ ಪಂಡಿತ ನೆಹ್ರೂರವರೂ ಖಂಡಿಸಿದರು. 'ನಾಗರಿಕ ಸ್ವಾತಂತ್ರ್ಯ ಸಂಘ'ವನ್ನು ರಚಿಸಿಕೊಂಡು ಪ್ರತಿಭಟನೆಯನ್ನು ಮುಂದುವರಿಸುವಂತೆ ನೆಹರೂ ಸೂಚಿಸಿದರು. ಅನೇಕ ಗಣ್ಯನ್ಯಾಯವಾದಿಗಳ ಮತ್ತು ಪುರಪ್ರಮುಖರ ಸಭೆ ಸೇರಿಸಿ 'ನಾಗರಿಕ ಸ್ವಾತಂತ್ರ್ಯ ಸಂಘ'ವನ್ನು ಸ್ಥಾಪಿಸಿದೆವು. ನ್ಯಾಯವಾದಿ ಎಲ್. ಎಸ್. ರಾಜುರವರು ಅಧ್ಯಕ್ಷರಾಗಿ ಆಚರಿಸಲ್ಪಟ್ಟರು.

ಆ ದಿನಗಳಲ್ಲಿ ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಬಹು ನಿರ್ಜೀವ ಸಂಸ್ಥೆ

ಯಾಗಿತ್ತು. ಬ್ರಾಹ್ಮಣ-ಬ್ರಾಹ್ಮಣೇತರ ಎಂಬ ಜಾತೀಯ ಭಾವನೆಯು ಅತಿ ಪ್ರಾಧಾನ್ಯ ಪಡೆದಿತ್ತು. 'ಪ್ರಜಾ ಪಾರ್ಟಿ' (ಪೀಪಲ್ಸ್ ಪಾರ್ಟಿ) ಎಂಬ ಬ್ರಾಹ್ಮಣೇತರ ಪಕ್ಷವೊಂದಿತ್ತು. ಎರಡು ಕಡೆಯವರಿಗೂ ತಮ್ಮತಮ್ಮವರಿಗೆ ಸರ್ಕಾರಿ ನೌಕರಿಗಳನ್ನು ಗಿಟ್ಟಿಸಿಕೊಳ್ಳುವ ಮನೋಭಾವವೇ ಪ್ರಾಧಾನ್ಯವಾಗಿತ್ತು. 'ಜವಾಬ್ದಾರಿ ಸರ್ಕಾರ' ಎಂದರೇನೆಂಬುದರ ಸಾಮಾನ್ಯ ಕಲ್ಪನೆ ಕೂಡ ಜನರಿಗೆ ಇಲ್ಲದಿದ್ದರೂ, ಈ ಮುಖಂಡರು 'ಜವಾಬ್ದಾರಿ ಸರ್ಕಾರ' ಸ್ಥಾಪನೆಯ ಮಾತನ್ನಾಡುತ್ತಿದ್ದರು. ಇದೇ ಅವಧಿಯಲ್ಲಿ 'ಜನಜಾಗೃತಿ ಸಂಘ' ಸುಮಾರು 28 ಅಂಶಗಳನ್ನೊಳಗೊಂಡಿದ್ದ 'ಜವಾಬ್ದಾರಿ ಸರ್ಕಾರ' ಎಂಬ ಕಿರುಹೊತ್ತಗೆಯನ್ನು ಪ್ರಕಟಿಸಿತ್ತು. ಎರಡು ಸಾವಿರಕ್ಕೂ ಮಿಕ್ಕಿ ಪ್ರತಿಗಳನ್ನು ಬೆಂಗಳೂರು, ಕೋಲಾರ, ಮೈಸೂರು ಈ ಭಾಗಗಳಲ್ಲಿ ಹಂಚಲಾಯಿತು. ಇವರ ಪರಿಣಾಮವಾಗಿ ಜನತೆಯ ಮನಸ್ಸಿನಲ್ಲಿ ಕಾವೇರಿತ್ತು. ಬೆಂಗಳೂರಿನಲ್ಲಿಯೇ ಪ್ರಕಟವಾಗುತ್ತಿದ್ದ 'ನವಜೀವನ' ದಿನಪತ್ರಿಕೆ ಈ ಹೊತ್ತಗೆಯಲ್ಲಿನ ಅಂಶಗಳನ್ನು ಪೂರ್ಣವಾಗಿ ಪ್ರಕಟಿಸಿದ್ದು ಮಾತ್ರವಲ್ಲದೆ, ಈ ವಿಚಾರವನ್ನು ಜನತೆಗಾಗಿ ನಿರ್ಮಿಸಿದ್ದಕ್ಕಾಗಿ ಸಂಘವನ್ನು ಪ್ರಶಂಸಿಸಿತು. 'ಜನಜಾಗೃತಿ ಸಂಘ' ತನ್ನ ಪ್ರಚಾರಾಂದೋಲನವನ್ನು ಎಡೆಬಿಡದೆ ಸಾಗಿಸಿತ್ತು. ಬೆಂಗಳೂರು ನಗರದಲ್ಲಿ ವಿಧಿಸಲಾಗಿದ್ದ ಪೋ. ಆಕ್ಟ್. 45ನೇ ವಿಧಿಯ ಪ್ರತಿಬಂಧಕಾಜ್ಞೆಯು ಶವಸಂಸ್ಕಾರಕ್ಕೂ ಆತಂಕವೊಡ್ಡಿತ್ತು. ಈ ಆಜ್ಞೆಯ 'ಅಣಕು ಶವ'ವನ್ನು ನಗರದಲ್ಲಿ ಮೆರವಣಿಗೆ ಮಾಡಲಾಯಿತು. ಇದನ್ನು ಹೊತ್ತಿದ್ದವರ ಮೇಲೆ ಸರ್ಕಾರ ಮೊಕದ್ದಮೆ ಹೂಡಿದರೂ ಕೋರ್ಟಿನಲ್ಲಿ ಅದು ವಜಾಮಾಡಲ್ಪಟ್ಟಿತು. ಆ ವರ್ಷದ ಆಗಸ್ಟ್ 8ರಂದು ಭಾರತದಾದ್ಯಂತ 'ಅಂಡಮಾನ್ ಪ್ರಿಸನರ್ಸ್ ದಿನ' ಆಚರಿಸಲು ಕರೆಕೊಡಲಾಗಿತ್ತು. ಈ ಸಂದರ್ಭವನ್ನುಪಯೋಗಿಸಿಕೊಂಡು ಜನಜಾಗೃತಿ ಸಂಘವು ಬೆಂಗಳೂರಿನಲ್ಲಿ, 'ನ್ಯಾಷನಲ್ ಯೂತ್ ಲೀಗ್' ಸಹಕಾರದೊಂದಿಗೆ ಸರ್ಕಾರದ ದಬ್ಬಾಳಿಕೆ ವಿರುದ್ಧ ವಿದ್ಯಾರ್ಥಿಗಳ ಒಂದು ದಿನದ ಸಂಪನ್ನು ಸಜ್ಜುಗೊಳಿಸಿತ್ತು. ಈ ವಿದ್ಯಾರ್ಥಿಮುಷ್ಕರವು ನಿದ್ರಾವಸ್ಥೆಯಲ್ಲಿದ್ದ ಮೈಸೂರು ಜನತೆಯನ್ನೆಚ್ಚರಿಸಿತು. ಈ ಮುಷ್ಕರಕ್ಕೆ ಸಂಬಂಧಿಸಿದಂತೆ, ಜನಜಾಗೃತಿ ಸಂಘದ ಕಛೇರಿಯನ್ನು ಶೋಧಿಸಿದ್ದಲ್ಲದೆ, ಎಸ್. ವಿ. ನಾರಾಯಣಮೂರ್ತಿ, ಸವಾಯ್ ಅಶ್ವತ್ಥರಾವ್ ಮತ್ತು ನನ್ನನ್ನು ದಸ್ತಗಿರಿಮಾಡಿ ಹತ್ತು ದಿನಗಳವರೆಗೆ ಜೈಲಿನಲ್ಲಿಟ್ಟಿದ್ದರು.

ಇದೇ ಸಮಯದಲ್ಲಿಯೇ ಬೆಂಗಳೂರಿನ ಯೂತ್ ಲೀಗ್‌ನ ಆಶ್ರಯದಲ್ಲಿ ಸಭೆಯೊಂದನ್ನು ಅಂದಿನ ಕಾಂಗ್ರೆಸ್ ಸೋಶಲಿಸ್ಟ್ ಪಕ್ಷದ ಎಂ. ಆರ್. ಮಸಾನಿಯವರ ಅಧ್ಯಕ್ಷತೆಯಲ್ಲಿ ಒಕ್ಕಲಿಗರ ಹಾಸ್ಟೆಲ್ ಆವರಣದಲ್ಲಿ ಏರ್ಪಡಿಸಲಾಗಿತ್ತು. ಮಸಾನಿಯವರು ನಗರದಲ್ಲೆಲ್ಲೂ ಭಾಷಣ ಮಾಡದಂತೆ ಸರ್ಕಾರ ಪ್ರತಿಬಂಧಕಾಜ್ಞೆಯನ್ನು ಜಾರಿಮಾಡಿತು. ಆಜ್ಞೆಯ ಪ್ರತಿಯೊಂದನ್ನು ಹಾಸ್ಟೆಲ್ಲಿನ ಭವನದ ಗೋಡೆಗೆ ಅಂಟಿಸಲಾಗಿತ್ತು. ಭಯಗೊಂಡ ಹಾಸ್ಟೆಲ್ಲಿನ ಅಧಿಕಾರಿಗಳು ಸಭೆ ಸೇರಲು ಅವಕಾಶ ಕೊಡಲು ನಿರಾಕರಿಸಿದರು;

ಬೇರೆಲ್ಲಿಯೂ ಸ್ಥಳ ಸಿಗಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಜನಜಾಗೃತಿ ಸಂಘವು ಸಭೆ ನಡೆಸಲು ತನ್ನ ಕಛೇರಿಯ ಆವರಣದಲ್ಲೇ ಅವಕಾಶಮಾಡಿಕೊಟ್ಟಿತು. ಮಸಾನಿ ಯವರ ಪ್ರತಿನಿಧಿಯೇ ಅವರ ಭಾಷಣವನ್ನು ಓದಿದರು ; ಸಮ್ಮೇಳನ ಯಶಸ್ವಿಯಾಯಿತು. (ಈ ಸಮ್ಮೇಳನದ ಬಗ್ಗೆ ಇನ್ನೊಂದು ಹೇಳಿಕೆ ಮೈಸೂರು ಜಿಲ್ಲೆಯಲ್ಲಿ ಎನ್. ಡಿ. ಶ್ರೀರಂಗಾಚಾರ್ ನೀಡಿದ್ದಾರೆ. — ಸಂ||).

ಮಿಂಚಿನ ವೇಗದಲ್ಲಿ ಬೆಳೆಯುತ್ತಿದ್ದ ರಾಜಕೀಯ ಜಾಗೃತಿಯ ಫಲವಾಗಿ 'ಪ್ರಜಾಪಕ್ಷ'ವು ವಿಸರ್ಜಿಸಲ್ಪಟ್ಟು ಕಾಂಗ್ರೆಸ್ಸಿನಲ್ಲಿ ವಿಲೀನಗೊಂಡಿತು.

ಇದೇ ಸಮಯಕ್ಕೆ ಸರಿಯಾಗಿ ಆಲ್ ಇಂಡಿಯಾ ಸ್ಟೇಟ್ ಪೀಪಲ್ಸ್ ಆರ್ಗನೈಜೇಶನ್ ಅಧ್ಯಕ್ಷರಾಗಿದ್ದ ಪಟ್ಟಾಭಿ ಸೀತಾರಾಮಯ್ಯನವರು ಒಂದು ವಾರಕಾಲ ರಾಜ್ಯದಲ್ಲಿ ಪ್ರವಾಸ ನಡೆಸಿ ಮತ್ತಷ್ಟು ಜನಜಾಗೃತಿ ಉಂಟುಮಾಡಿದ್ದರು. ಇವರ ಹಿಂದೆಯೇ ಅಖಿಲ ಭಾರತ ಕಾಂಗ್ರೆಸ್ಸಿನ ಕಾರ್ಯಕಾರೀ ಸಮಿತಿಯ ಸದಸ್ಯರಾಗಿದ್ದ ಕೆ. ಎಫ್. ನರಿಮನ್ನರು ಮೈಸೂರು ಹಾಗೂ ಬೆಂಗಳೂರಿಗೆ ಬಂದಿದ್ದರು. ಕಾಂಗ್ರೆಸ್ಸಿನ ಯುವಕ ವಿಭಾಗ ಮತ್ತು 'ಜನಜಾಗೃತಿ ಸಂಘ' ಮುಂದಾಗಿ ಬಸಪ್ಪಾ ಪಾರ್ಕಿನಲ್ಲಿ ಬಹಿರಂಗ ಸಭೆಯೊಂದನ್ನೇರ್ಪಡಿಸಿದವು. ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಭಾಷಣ ಮಾಡುತ್ತಿದ್ದ ನರಿಮನ್ನನನ್ನು ದಸ್ತಗಿರಿಮಾಡಿ ಜೈಲಿಗೆ ಒಯ್ದರು. ಹತ್ತು ಸಾವಿರಕ್ಕೂ ಮಿಕ್ಕಿ ನೆರೆದಿದ್ದ ಜನರು ರೊಚ್ಚಿಗೆದ್ದರು. ಈ ಪ್ರಸಂಗ 'ನರಿಮನ್ ಗಲಭೆ' ಎಂದೇ ಖ್ಯಾತವಾಗಿದೆ. ನರಿಮನ್ನರನ್ನು ಅಂದು ರಾತ್ರಿಯೇ ಸಂಸ್ಥಾನದಿಂದ ಹೊರಗೆ ಕಳುಹಿಸಲಾಗಿತ್ತು. ಮರುದಿನ ನರಿಮನ್ನರ ದಸ್ತಗಿರಿ ಪ್ರತಿಭಟಿಸಿ ನಗರದಲ್ಲಿ ಹರತಾಳ ಆಚರಿಸಲು, ಜಾಗಟೆ ಬಾರಿಸಿಕೊಂಡು ಹರತಾಳಕ್ಕೆ ಕರೆಕೊಡುತ್ತಿದ್ದಾಗ ನನ್ನ ಬಂಧನ ವಾಯಿತು.

ಈ ಘಟನೆ ನಡೆದ ಕಾಲಕ್ಕೆ ಕಾಂಗ್ರೆಸ್‌ನ ಹಂಗಾಮಿ ಅಧ್ಯಕ್ಷರಾಗಿದ್ದ ಚೆಂಗಲರಾಯರೆಡ್ಡಿಯವರು ಸಂಸ್ಥಾನದ ಹೊರಗೆ ಹೋಗಿದ್ದರು. ಅವರ ಸ್ಥಾನದಲ್ಲಿ ಶಿವಮೊಗ್ಗದ ಮರಿಸ್ವಾಮಿ ಹಿರೇಮಠರೂ, ಶಾಸಕರಾಗಿದ್ದ ಹಾಸನದ ಬೋರಣ್ಣ ಗೌಡರನ್ನೊಳಗೊಂಡು ಇತರ ಹನ್ನೊಂದು ಮಂದಿ ಪ್ರಮುಖರೂ ಬಂಧನಕ್ಕೊಳಗಾದರು. ಹರತಾಳದ ಸಮಯದಲ್ಲಿ ಗಲಭೆಯುಂಟಾಗಿ ಆಗ ನಡೆದ ಗೋಲೀಬಾರಿನಲ್ಲಿ ಒಬ್ಬ ಹುಡುಗ ಮಡಿದನು. ಮಾರನೆಯ ದಿನ ಮತ್ತಷ್ಟು ಗಲಭೆ, ಬಂಧನಗಳಾದವು. ಮೊದಲ ದಿನ ಬಂಧಿತರಾಗಿದ್ದ ನಮ್ಮ ಹನ್ನೆರಡು ಮಂದಿಯ ಮೇಲಿನ ಖಟ್ಲೆಯನ್ನು ಸೆಷನ್ಸ್ ಕೋರ್ಟಿಗೆ ಒಯ್ಯಲಾಯಿತು. ನಾನು ಒಂದನೆಯ ಅಪರಾಧಿಯಾಗಿದ್ದೆನು. ಕೆಳ ಮತ್ತು ಮೇಲು ಕೋರ್ಟುಗಳಲ್ಲಿ ಎರಡು ತಿಂಗಳ ಕಾಲ ಮೊಕದ್ದಮೆ ನಡೆಯಿತು. ಸೆಷನ್ಸ್ ಕೋರ್ಟಿನಲ್ಲಿ ವಕೀಲರನ್ನಿಟ್ಟುಕೊಂಡು ವಾದಿಸಿದ ಪ್ರಯುಕ್ತ ಕೆಲವರ ಬಿಡುಗಡೆಯಾಯಿತು ; ಆದರೆ ನನಗೂ ಮತ್ತೆ ಕೆಲವರಿಗೂ ಆರು ತಿಂಗಳಿಂದ ಮೂರು

ವರ್ಷಗಳವರೆಗೆ ಶಿಕ್ಷೆ ವಿಧಿಸಲಾಯಿತು. ಹೈಕೋರ್ಟಿಗೆ ಅಪೀಲು ಸಲ್ಲಿಸಬೇಕೆಂಬಷ್ಟರಲ್ಲಿಯೇ ಸರ್ಕಾರ ನನ್ನ ಶಿಕ್ಷೆಯನ್ನು ರದ್ದುಗೊಳಿಸಿತು.

1938ರಲ್ಲಿ ಹರಿಪುರದಲ್ಲಿ ಜರುಗಿದ ಕಾಂಗ್ರೆಸ್ ಅಧಿವೇಶನಕ್ಕೆ ಮುಂಚಿತವಾಗಿ ನಡೆದ ಕಾಂಗ್ರೆಸ್ ಸಂಘಟನೆಯ ಚುನಾವಣೆಯಲ್ಲಿ ಕರ್ನಾಟಕ ಪ್ರಾಂತ ಕಾಂಗ್ರೆಸ್ ಸಮಿತಿಗೆ ಬೆಂಗಳೂರು ನಗರದಿಂದ ನಾನೂ ಆರಿಸಲ್ಪಟ್ಟಿದ್ದೆನು. ದೇಶೀ ಸಂಸ್ಥಾನಗಳಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಚಳವಳಿಗಳಲ್ಲಿ ತೊಡಗಕೂಡದು ಎಂದು ಹರಿಪುರ ಕಾಂಗ್ರೆಸ್‌ನ ತೀರ್ಮಾನವಾಗಿತ್ತು. ಅದಕ್ಕನುಗುಣವಾಗಿ, 'ಜವಾಬ್ದಾರಿ ಸರ್ಕಾರ'ದ ಸ್ಥಾಪನೆಗೆ ಆಂದೋಲನವನ್ನು ಮುಂದುವರಿಸಲು ಮೈಸೂರು ಸ್ಟೇಟ್ ಕಾಂಗ್ರೆಸ್ ರಚನೆಯಾಯಿತು. ಇದರ ಪ್ರಥಮ ಅಧಿವೇಶನವು ಶಿವಪುರದಲ್ಲಿ ಜರುಗಿತು. ಕಾಂಗ್ರೆಸ್ಸಿಗರ ಒಳಜಗಳದಿಂದಾಗಿ ಸಮ್ಮೇಳನದ ತೀರ್ಮಾನಗಳು ಒಂದು ರೀತಿಯ ವಾಗುವುದಿತ್ತು. ಆದರೆ ಮಿರ್ಜಾ ಸರ್ಕಾರ ಕಾಂಗ್ರೆಸ್ಸಿನ ಬಾವುಟವನ್ನು ಸಮ್ಮೇಳನ ದಲ್ಲಿ ಹಾರಿಸಕೂಡದೆಂದು ಪ್ರತಿಬಂಧಕಾಜ್ಞೆಯನ್ನು ವಿಧಿಸಿತ್ತು. "ಬಾವುಟವನ್ನು ಹಾರಿಸಲೇಬೇಕು" ಎಂಬ ಕರೆ ನೀಡಿ ಜನಜಾಗೃತಿ ಸಂಘವು ಪರಿಣಾಮಕಾರಿ ಪ್ರದರ್ಶನ ನಡೆಸಿತು. ಇದರ ಫಲವಾಗಿ, ಕಾಂಗ್ರೆಸ್‌ನ ಒಳಕಚ್ಚಾಟ ಪಕ್ಕಕ್ಕೆ ಸರಿಸಲ್ಪಟ್ಟಿತು. ಅಧಿವೇಶನದ ದಿನವೇ 'ಫ್ಲಾಗ್ ಸತ್ಯಾಗ್ರಹ' ನಡೆದು ಅಧ್ಯಕ್ಷರ ಸಹಿತ ಕೆಲವರು ಜೈಲು ಸೇರಿದರು. ಶಿವಪುರ ಕಾಂಗ್ರೆಸ್‌ನಿಂದ ಹಿಂದಿರುಗಿ, ಅಂದು ಮಿರ್ಜಾ ಸರಕಾರವು ನೇಮಿಸಿದ್ದ ಸುಧಾರಣಾ ಸಮಿತಿಯು ಸೇರುವುದಕ್ಕೆ ಮುಂಚೆ ಬೆಂಗಳೂರಿನಲ್ಲಿ ಕಪ್ಪು ಬಾವುಟ ಪ್ರದರ್ಶನ ನಡೆಸಲು 'ಜನಜಾಗೃತಿ ಸಂಘ'ದ ಕಾರ್ಯದರ್ಶಿತ್ವದಿಂದ ತಯಾರಿ ನಡೆಸುತ್ತಿದ್ದೆ.

ಆದರೆ ಮಾರ್ಚ್ 24ರ ರಾತ್ರಿಯೇ ನನ್ನನ್ನು ಬಂಧಿಸಿ ರಾತ್ರೋರಾತ್ರಿ ಯಾರಿಗೂ ತಿಳಿಯದಂತೆ ಮೈಸೂರು ಸಂಸ್ಥಾನದಿಂದ ಗಡೀಪಾರು ಮಾಡಿದರು. ಮಾರನೆಯ ದಿನ ಮಧ್ಯಾಹ್ನ 11 ಘಂಟೆಯ ಸಮಯಕ್ಕೆ ಕುಶಾಲನಗರದ ಹತ್ತಿರ ಕಾವೇರಿ ಸೇತುವೆಯ ಪಕ್ಕದಲ್ಲಿ ಬಿಟ್ಟು, ಮೈಸೂರು ರಾಜ್ಯದೊಳಗೆ ಪ್ರವೇಶಿಸಕೂಡದೆಂದು ಎಚ್ಚರಿಸಿದರು.

ನಾನು ಉಡುಪನ್ನು ಬದಲಾಯಿಸಿ, ಬೆಂಗಳೂರನ್ನು ತಲುಪಿ ಜೊತೆಗಾರರೊಂದಿಗೆ ಆಲೋಚಿಸಿದೆನು. ಅದೇ ಆಗ ನಡೆದಿದ್ದ ವಿದುರಾಶ್ವತ್ಥ ಗೋಲೀಬಾರ್ ಪ್ರಕರಣದ ಬಹಿರಂಗ ವಿಚಾರಣೆ ಹೈಕೋರ್ಟಿನ ಮಾಜಿ ನ್ಯಾಯಾಧೀಶರೊಬ್ಬರಿಂದ ನಡೆಯು ತ್ತಿತ್ತು. ನಾನು ಕೋರ್ಟಿಗೆ ಹಾಜರಾದೆ. ಆಜ್ಞೆಯನ್ನು ಉಲ್ಲಂಘಿಸಿದ್ದ ಪ್ರಯುಕ್ತ ನಾನು ಮತ್ತೊಮ್ಮೆ ದಸ್ತಗಿರಿ ಮಾಡಲ್ಪಟ್ಟು ಮತ್ತೆ ಸಂಸ್ಥಾನದಿಂದ ಗಡೀಪಾರಾದೆ.

ಜನಜಾಗೃತಿ ಸಂಘದ ಆದೇಶದಂತೆ, ಉತ್ತರ ಕರ್ನಾಟಕದ ಹುಬ್ಬಳ್ಳಿಯಲ್ಲಿ ನೆಲೆಸಲು ಯೋಜಿಸಿದ್ದೆನು. ಆದರೆ ಕಾಂಗ್ರೆಸ್ ಮುಖಂಡರಾಗಿದ್ದ ಕಮಲಾದೇವಿ ಚಟ್ಟೋಪಾಧ್ಯಾಯ ಮತ್ತು ಹರ್ಡೀಕರರ ಸಲಹೆಯನ್ನನುಸರಿಸಿ, ಕರ್ನಾಟಕದ

ಜೀವವಿಮಾ ಕಂಪೆನಿಯ ಏಜೆಂಟ್‌ನ ಮುಖವಾಡ ಧರಿಸಿ ರಾಜಕೀಯ ಸಂಘಟನೆ ನಡೆಸಲೆಂದು ಹೈದರಾಬಾದ್ ಕರ್ನಾಟಕಕ್ಕೆ ಹೋದೆ.

ಇಲ್ಲಿ ಹೊಲಸು ರಾಜಕೀಯ ವಾತಾವರಣವಿತ್ತು. ಮುಸಲ್ಮಾನ ಪಾಳೆಯಗಾರಿ ವರ್ಗದ ದರ್ಬಾರು ಅಲ್ಲಿ ಎದ್ದು ಕಾಣುತ್ತಿತ್ತು. ಈ ಸ್ಥಿತಿಯನ್ನು ಭಾರತದ ಜನತೆಗೆ 'ಪೀಪ್ ಟು ಹೈದರಾಬಾದ್' ಎಂಬ ಸಣ್ಣ ಹೊತ್ತಗೆಯ ಮೂಲಕ ತಿಳಿಸಲು ಯತ್ನಿಸಲಾಗಿತ್ತು. ಕರ್ನಾಟಕ ಭಾಗದ ಕಾಂಗ್ರೆಸ್ ಮುಖಂಡರ ಸಂಬಂಧವನ್ನು ಬೆಳೆಸಿಕೊಂಡು ಹೈದರಾಬಾದ್ ಮತ್ತು ಗುಲ್ಬರ್ಗಗಳಲ್ಲಿ ಒಂದೆರಡು ತಿಂಗಳು ಸುತ್ತಾಡಿ ಜನರ ಪರಿಚಯವನ್ನು ಮಾಡಿಕೊಳ್ಳುತ್ತಿದ್ದೆ. ಸಿ.ಐ.ಡಿ. ಖಾತೆಗೆ ನನ್ನ ಸಂಪೂರ್ಣ ಮಾಹಿತಿ ಸಿಕ್ಕಿತ್ತು; ನನ್ನ ದಸ್ತಗಿರಿ ಆಗುವ ಪರಿಸ್ಥಿತಿ ಇತ್ತು. ಆದ್ದರಿಂದ ಅದೇ ಸೆಪ್ಟೆಂಬರ್‌ನಲ್ಲಿ ಮುಂಬಯಿಗೆ ಹೊರಟೆನು.

ಬ್ರಿಟಿಷ್ ಇಂಡಿಯಾದ ಎಲ್ಲ ಪ್ರಾಂತ್ಯಗಳಲ್ಲೂ ಕಾಂಗ್ರೆಸ್ಸಿನ ಸರಕಾರ ರಚಿತವಾಗಿದ್ದು, ಕಮ್ಯೂನಿಸ್ಟ್ ಪಕ್ಷದ ಮೇಲಿದ್ದ ನಿಷೇಧಾಜ್ಞೆ ಸ್ವಲ್ಪಮಟ್ಟಿಗೆ ಸಡಿಲಗೊಂಡಿತ್ತು. ಮುಂಬಯಿಯು ಪಕ್ಷ ಕೇಂದ್ರವಾಗಿದ್ದು, ಕಾಮ್ರೇಡ್ ಪಿ. ಸಿ. ಜೋಶಿಯವರು ಪ್ರಧಾನ ಕಾರ್ಯದರ್ಶಿಯಾಗಿದ್ದರು. 'ನ್ಯಾಷನಲ್ ಫ್ರಂಟ್' ರಚನೆಯು ಪಕ್ಷದ ಕರೆಯಾಗಿದ್ದು, ಆ ಹೆಸರಿನ ಕರಪತ್ರವು ಇಲ್ಲಿಂದ ಹೊರಬರುತ್ತಿತ್ತು.

ಪಾರ್ಟಿ ಕೇಂದ್ರದಲ್ಲಿ ಒಂದು ವಾರವಿದ್ದೆ. ಮಾರ್ಕ್ಸ್‌ವಾದದ ಗಂಧ ಕೂಡ ಹತ್ತಿಲ್ಲವೆಂಬ ಅರಿವು ನನಗೆ ಇಲ್ಲಿ ಬಂದಿತು. ಅವಶ್ಯ ಪುಸ್ತಕಗಳನ್ನು ಶೇಖರಿಸಿಕೊಂಡು ಪೋರ್ತುಗೀಸ್ ಗೋವಾದ ಮಡಗಾಂವ್‌ನಲ್ಲಿ ಹೋಗಿ ಅಭ್ಯಾಸ ಮಾಡತೊಡಗಿದೆ. ಮಡಗಾಂವ್‌ನಲ್ಲಿಯ ಎರಡು ಪ್ರೌಢಶಾಲೆಗಳಲ್ಲಿ ಹಿಂದೀ ಅಧ್ಯಾಪಕನಾಗಿ ಸೇರಿಕೊಂಡು, ಒಂದು ವರ್ಷಕಾಲದಲ್ಲಿ ಮಾರ್ಕ್ಸ್‌ವಾದದ ಕಿಂಚಿತ್ ಅಭ್ಯಾಸ ಮಾಡಿದೆ. ಗೋವಾದ ಅಂದಿನ ಪ್ರಮುಖ ಮುಂದಾಳಾಗಿದ್ದ ಕುನ್ನಾ ಬ್ರಗಾಂಜರ ಸ್ನೇಹ ಸಂಪಾದಿಸಿಕೊಂಡೆ. ನಾವೀರ್ವರೂ ಆಗಿಂದಾಗ್ಗೆ ರಾಜಕೀಯವನ್ನು ಚರ್ಚಿಸುತ್ತಿದ್ದೆವು. 'ಪೀಪ್ ಟು ಹೈದರಾಬಾದ್' ಮಾದರಿಯಲ್ಲಿಯೇ 'ಪೋರ್ತುಗೀಸ್ ಇಂಡಿಯಾ' ಎಂಬ ಕೈಪಿಡಿಯನ್ನು ಇಂಗ್ಲಿಷ್ ಮತ್ತು ಪೋರ್ತುಗೀಸ್ ಭಾಷೆಗಳಲ್ಲಿ ಹೊರತಂದು ಪ್ರಚುರಪಡಿಸುವುದು ಸೂಕ್ತವೆಂದು ತೀರ್ಮಾನಿಸಿದೆವು. ಇದು ಹೊರಬಂದು ಪೋರ್ತುಗೀಸರ ದಬ್ಬಾಳಿಕೆಯ ವಿರುದ್ಧ ಗೋವಾದ ಹೊರಗೂ ಒಳಗೂ ಜನಜಾಗೃತಿಯುಂಟಾಯಿತು.

1939ರ ಮಧ್ಯಭಾಗದಲ್ಲಿ ಹಿಟ್ಲರ್ ಪೋಲೆಂಡ್ ಮೇಲೆ ದಾಳಿ ನಡೆಸಿ ಎರಡನೇ ವಿಶ್ವಯುದ್ಧಕ್ಕೆ ನಾಂದಿ ಹಾಡಿದ್ದನು. ಈ ಸಮಯದಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರಿನಲ್ಲಿ ಚಳವಳಿ ಬಿರುಸಿನಿಂದ ಪ್ರಾರಂಭವಾಗಿತ್ತು. ಸಾವಿರಾರು ಜನ ಸೆರೆಮನೆ ಸೇರಿದ್ದರು. ಆ ವರ್ಷದ ಸೆಪ್ಟೆಂಬರಿನಲ್ಲಿ ಎ.ಐ.ಸಿ.ಸಿ. ಸದಸ್ಯರಾಗಿದ್ದ ಜನಜಾಗೃತಿ ಸಂಘದ ನನ್ನ ಮಿತ್ರ ಎನ್. ಡಿ. ಶಂಕರ್, ಸಮ್ಮೇಳನದಿಂದ ಹಿಂದಿರುಗುತ್ತಿದ್ದಾಗ ಮಡ

ಗಾಂವಿಗೆ ಬಂದು ನಾನು ಮೈಸೂರಿಗೆ ಬಂದು ಗಡೀಪಾರು ಆಜ್ಞೆಯನ್ನುಲ್ಲಂಘಿಸಬೇಕೆಂಬ ಜನಜಾಗೃತಿ ಸಂಘದ—ಕಮ್ಯೂನಿಸ್ಟ್ ಪಕ್ಷದ—ಸಂದೇಶವನ್ನು ನನಗೆ ತಲುಪಿಸಿದರು.

ಅದರಂತೆ ನಡೆದು, ಮೈಸೂರು ನಗರದಲ್ಲಿ ದಸ್ತಗಿರಿ ಮಾಡಲ್ಪಟ್ಟು ಮೂರೂವರೆ ವರ್ಷದ ಕಠಿಣಶಿಕ್ಷೆಗೆ ಗುರಿಯಾಗಿ ಜೈಲಿಗೆ ದಬ್ಬಲ್ಪಟ್ಟೆನು. ಇಲ್ಲಿಯ ಜೈಲು ಅಧಿಕಾರಿಗಳಿಗೆ ಕಂಟಕಪ್ರಾಯನಾಗಿ ಕಂಡುಬಂದ ನನ್ನನ್ನು ಅವರು ಬೆಂಗಳೂರು ಜೈಲಿಗೆ ವರ್ಗಾಯಿಸಿಬಿಟ್ಟರು. ಇಲ್ಲೂ ಜೈಲು ಅಧಿಕಾರಿಗಳು ನನ್ನನ್ನಿಟ್ಟುಕೊಳ್ಳಲು ಸಿದ್ಧರಿರಲಿಲ್ಲ. ಇಲ್ಲಿದ್ದ ಒಂದೆರಡು ವಾರಗಳ ಅವಧಿಯಲ್ಲಿ ಒಮ್ಮೆ ಕ್ರಿಮಿನಲ್ ಕೈದಿಗಳಲ್ಲಿ ಏನೋ ಗಲಭೆ ಸಂಭವಿಸಿ ಅದನ್ನಡಗಿಸಲು ಲಾಠೀ ಪ್ರಹಾರವಾಯಿತು. ಇದರ ಯಾವ ಗೊಡವೆಗೂ ಹೋಗದಿದ್ದ ನಮ್ಮ (ರಾಜಕೀಯ ಕೈದಿಗಳ) ಬ್ಯಾರಕ್ಕಿನೊಳಕ್ಕೆ ಜೈಲ್ ಸೂಪರಿಂಟೆಂಡೆಂಟ್ ಬಂದು ನನ್ನನ್ನು ಆರಿಸಿ ಮೂರು ಲಾಠೀ ಏಟುಗಳನ್ನು ಕೊಡಿಸಿದನು. ಇದರ ಪರಿಣಾಮವಾಗಿ ಇಂದೂ ಸಹ ನನ್ನ ಬಲಗೈ ಊನವಿದ್ದು ನಿಶ್ಶಕ್ತವಾಗಿದೆ.

ಮಾರನೇ ದಿನವೇ ನನ್ನನ್ನು ಕೋಲಾರ ಚಿನ್ನದ ಗಣಿ ಪ್ರದೇಶದ ಚಾಂಪಿಯನ್ ರೀಫ್ ಸ್ಪೆಷಲ್ ಲಾಕಪ್ಪಿಗೆ ಒಯ್ದರು. ರಾಜಕೀಯ ಕೈದಿಯಾಗಿ, ನಾನೊಬ್ಬನೇ ಇಲ್ಲಿ ಹತ್ತು ತಿಂಗಳು ಕಳೆದೆ. ಈ ಕಾಲದಲ್ಲಿ ಚಿನ್ನದ ಗಣಿ ಕಾರ್ಮಿಕರ ಅಂದಿನ ಮುಖಂಡರಾಗಿದ್ದ ಲಕ್ಷ್ಮಣ ಮುದಲಿಯಾರ್ ಎಂಬುವರೊಡನೆ ಗುಪ್ತಸಂಪರ್ಕ ಬೆಳೆಸಿ, ಚಿನ್ನದ ಗಣಿ ಕಾರ್ಮಿಕರ ಸಂಘಟನೆಯು ಅಸ್ತಿತ್ವಕ್ಕೆ ಬರಲು ಸಲಹೆ ನೀಡಿ ನೆರವಾದೆನು. ಕಾರ್ಮಿಕರ ಬೇಡಿಕೆಗಳ ಈಡೇರಿಕೆಗಾಗಿ ಮೂರು ವಾರಗಳ ಕಾಲ ಪ್ರಪ್ರಥಮವಾಗಿ ಸಂಪೂರ್ಣ ಸಂಪು ಜರುಗಿತು. ಇಲ್ಲಿದ್ದ ಕಾಲದಲ್ಲಿ ರಾಜಕೀಯ ಸಿದ್ಧಾಂತಗಳ ಅಧ್ಯಯನವೇ ನನ್ನ ಪರಿಪಾಠವಾಗಿತ್ತು. ಮೈಸೂರಿನ ಕೃಷ್ಣರಾಜ ಒಡೆಯರು ನಿಧನರಾಗಿ, ಜಯಚಾಮರಾಜ ಒಡೆಯರವರು ಗಾದಿಯೇರಿದ ಸಂದರ್ಭದಲ್ಲಿ ಎಲ್ಲ ರಾಜಕೀಯ ಕೈದಿಗಳ ಜೊತೆ ನನ್ನ ಬಿಡುಗಡೆಯಾಯಿತು. ಬೆಂಗಳೂರಿನಲ್ಲಿ ಒಂದು ವಾರ ಕಳೆಯುವಷ್ಟರಲ್ಲಿ ಪುನಃ ಗಡೀಪಾರು ಮಾಡಲ್ಪಟ್ಟೆನು. ಮಹಾಯುದ್ಧ ಯೂರೋಪಿನಲ್ಲಿ ಭಯಂಕರವಾಗಿ ಮುನ್ನಡೆಯುತ್ತಿತ್ತು. ಗಾಂಧೀಜಿಯವರು ಆಗ ವೈಯಕ್ತಿಕ ಸತ್ಯಾಗ್ರಹಕ್ಕೆ ಕರೆ ನೀಡಿದ್ದರು. ವಿಶ್ವದಾದ್ಯಂತ ರೈತಕಾರ್ಮಿಕರು ಈ ಯುದ್ಧವನ್ನು ವಿರೋಧಿಸಬೇಕೆಂದು ಅಂತರರಾಷ್ಟ್ರೀಯ ಕಮ್ಯೂನಿಸ್ಟ್ ಪಕ್ಷಗಳ ಕರೆಯಾಗಿತ್ತು. ಭಾರತ ಕಮ್ಯೂನಿಸ್ಟ್ ಪಾರ್ಟಿ ದೇಶಾದ್ಯಂತ ಯುದ್ಧವಿರೋಧಿ ಚಳವಳಿಯನ್ನು ಘೋಷಿಸಿತ್ತು. ನಾನು ಭೂಗತನಾಗಿ ಚಿನ್ನದ ಗಣಿ ಕಾರ್ಮಿಕರ ಮಧ್ಯದಲ್ಲೂ, ಬೆಂಗಳೂರು, ಮೈಸೂರು ಭಾಗಗಳಲ್ಲೂ 1942ರ ಜೂನ್ ತನಕವೂ ಯುದ್ಧವಿರೋಧಿ ಸಂಘಟನಾ ಕಾರ್ಯವನ್ನು ನಡೆಸುತ್ತಿದ್ದೆನು. ಇದೇ ಕಾಲದಲ್ಲಿ ನಮ್ಮ ತಂದೆಯವರು ತೀರಿಕೊಂಡುದರಿಂದ ಕೊಡಗಿಗೆ ಹೋದವನು ಅಲ್ಲಿ ಆಗಸ್ಟಿನಲ್ಲಿ ಬಂಧಿತನಾದೆ. (ಈ ಎಲ್ಲಾ ವಿವರ ಸಂಪುಟ Iರಲ್ಲಿ ಬಂದಿದೆ.—ಸಂ||).

ವೈ.ಬೆಂ. 12

## ವಿ. ತಿರುಪತಪ್ಪ

ಜನನ : 1916 ಉದ್ಯೋಗ : ಪತ್ರಿಕಾವೃತ್ತಿ ವಿಳಾಸ : 20, ಎಂ. ಸಿ. ಲೇನ್, ಕಿಲಾರಿ ರೋಡ್, ಬೆಂಗಳೂರು–2

---



ನಾನು ಬಾಲಕನಾಗಿದ್ದಾಗ ಗಾಂಧೀಜಿಯವರು ಬೆಂಗಳೂರಿಗೆ ಬಂದಿರಲು ಅವರ ಪ್ರಾರ್ಥನಾಸಭೆಯಲ್ಲಿ ಪಾಲುಗೊಂಡಿದ್ದೆ. ನನ್ನ ಅಣ್ಣ ಟಿ. ಸಿ. ಕೃಷ್ಣಯ್ಯ ಕನ್ನಡ ದಿನಪತ್ರಿಕೆ ಓದಿ ಗಾಂಧೀಜಿಯವರ ಚಟುವಟಿಕೆಗಳ ವಿಚಾರ ತಿಳಿಸುತ್ತಿದ್ದರು. ಉಪ್ಪಿನ ಸತ್ಯಾಗ್ರಹದ ವಿಚಾರ ನಾನು ಕೇಳಿದ್ದೆ. ಬಾಲ್ಯದಿಂದಲೇ ನಾನು ಸ್ವದೇಶೀ ವಸ್ತುಗಳನ್ನು ಬಳಸಲು ಯತ್ನಿಸಿದೆ. ನೆಹರೂ ಅವರು ಬೆಂಗಳೂರಿಗೆ ಬಂದಾಗ (ಅವರ ಪತ್ನಿ ಮತ್ತು ಪುತ್ರಿಯ ಜೊತೆ) ನಮ್ಮ ಅಣ್ಣನವರು ಅವೆನ್ಯೂ ರೋಡಿನಲ್ಲಿ (ಅಲ್ಲೇ ನಮ್ಮ ಮನೆ ಇದ್ದುದು) ಭವ್ಯ ಚಪ್ಪರ ಹಾಕಿಸಿ, ಕಾರಿನಲ್ಲಿ ನೆಹರೂರ ಮೆರವಣಿಗೆ ಬಂದಾಗ ಅವರಿಗೆ ರೇಷ್ಮೆ ಹಾರ ಹಾಕಿದ್ದರು. ನಮ್ಮದು ರೇಷ್ಮೆ ನೇಯ್ಗೆ ನಡೆಸುವ ಮನೆತನ. ಆಗಿನಿಂದಲೇ ನಾನು ತಕಲಿಯಿಂದ ನೂಲು ತೆಗೆಯುತ್ತಿದ್ದೆ. ಖಾದೀ ನಿಕ್ಕರ್, ಟೋಪಿ ಧರಿಸಲು ಆರಂಭಿಸಿದೆ.

ಅವೆನ್ಯೂ ರೋಡ್ ಚಿಂತಲಪಲ್ಲಿ ವೆಂಕಟತಮಣಯ್ಯನವರ ಛತ್ರದಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪಿಸಿ ಟಿ. ಸಿದ್ದಲಿಂಗಯ್ಯನವರು ಅಧ್ಯಕ್ಷರಾಗಿ ಆಯ್ಕೆಗೊಂಡಾಗ ನಾನು ಹಾಜರಿದ್ದೆ. ನರಿಮನ್ ಗಲಾಟೆಗೂ ನಾನು ಪ್ರತ್ಯಕ್ಷದರ್ಶಿ. 1938ರ ಶಿವಪುರ ಕಾಂಗ್ರೆಸ್, 1939ರಲ್ಲಿ ಎಚ್. ಸಿ. ದಾಸಪ್ಪನವರ ಅಧ್ಯಕ್ಷತೆಯಲ್ಲಿ ವಿದುರಾಶ್ವತ್ಥ ಕಾಂಗ್ರೆಸ್, 1940ರಲ್ಲಿ ಭಾಷ್ಯಂ ಅಧ್ಯಕ್ಷತೆಯಲ್ಲಿ ಶಿವಮೊಗ್ಗ ಕಾಂಗ್ರೆಸ್, 1941ರಲ್ಲಿ ಎಚ್. ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ಹರಿಹರ ಕಾಂಗ್ರೆಸ್, 1942ರಲ್ಲಿ ಸುಬ್ರಹ್ಮಣ್ಯ ಅವರ ಅಧ್ಯಕ್ಷತೆಯಲ್ಲಿ ಚನ್ನಪಟ್ಣ ಕಾಂಗ್ರೆಸ್ ನಡೆದವು. ಈ ಕಾಲಕ್ಕೆ ನಮ್ಮ ಕಬ್ಬನ್ ಪೇಟೆ ಭಾಗದಿಂದ ಅನೇಕರು ಡೆಲಿಗೇಟಾಗಿ, ವಾಲಂಟಿಯರ್ ಆಗಿ ಹೋಗಿದ್ದರು. ಕಬ್ಬನ್‌ಪೇಟೆ ಕಾಂಗ್ರೆಸ್ಸಿನ ಕೋಟೆಯಂತೆ ಇತ್ತು. ಕೆ. ರಾಮಸ್ವಾಮಿಯವರು ಕಬ್ಬನ್ ಪೇಟೆಯ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಒಬ್ಬ ಪ್ರಮುಖರು (ಸ್ವಾತಂತ್ರ್ಯಾನಂತರ ಅವರು 4ನೆಯ ವಾರ್ಡ್ ಕಾಂಗ್ರೆಸ್ ಕಮಿಟಿ ಅಧ್ಯಕ್ಷರಾದಾಗ ನಾನು ಕಾರ್ಯದರ್ಶಿ ಆಗಿದ್ದೆ). ಸೇವಾದಳ, ಪಿಕೆಟಿಂಗ್‌ಗಳಲ್ಲೂ ನಾನು ಭಾಗವಹಿಸಿದ್ದೆ.

ದ್ವಿತೀಯ ಮಹಾಯುದ್ಧ ಶುರು ಆದಾಗ ಆಹಾರ ಅಭಾವ, ವಿಮಾನದಾಳಿಯ ಭಯದಿಂದ ಕಬ್ಬನ್‌ಪೇಟೆ ಭಾಗದ ಸೇಕಾರರು ಕಂಗಾಲಾಗಿದ್ದರು. ನೂರಾರು ಜನ ಊರು ಬಿಡುವ ಮನಃಸ್ಥಿತಿಯಲ್ಲಿ ಇದ್ದರು. ಆಗ ಸರಕಾರದವರು ರಂಗಸ್ವಾಮಿ ಬೀದಿಯಲ್ಲಿ ಚರಕ ಕೇಂದ್ರ ಸ್ಥಾಪಿಸಿದರು. ನೂರಾರು ಹೆಂಗಸರು ಅಲ್ಲಿ ನೂಲಲು ಬರುತ್ತಿದ್ದರು. ಅವರಿಗೆ ನೂಲಲು, ಹತ್ತಿ ಬಿಡಿಸುವುದು ಕಲಿಸಲು ನಾನು ಹೋಗುತ್ತಿದ್ದೆ. ಅವರಿಗೆ ದಿನಕ್ಕೆ ಐದು ಆಣೆ ಕೂಲಿ ಸಿಗುತ್ತಿತ್ತು. ಫ್ರೆಡ್‌ಮೆನ್ ಚರಕ ಬಳಸಲಾಗುತ್ತಿತ್ತು. ಪಾಶ್ಚಾತ್ಯರಾದ ಫ್ರೆಡ್‌ಮೆನ್ ರಮಣಮಹರ್ಷಿಗಳ ಭಕ್ತರೂ ಗಾಂಧೀಜಿಯವರ ಮಾರ್ಗದಲ್ಲಿ ವಿಶ್ವಾಸವುಳ್ಳವರೂ ಆಗಿದ್ದು ಸುಮಾರು ಒಂದೂಕಾಲು ರೂ. ಬೆಲೆಯ ಈ ಚರಕ ರೂಪಿಸಿದ್ದರು. ಭಾರತೀಯ ಸಂಸ್ಕೃತಿಯಂತೆ ಜೀವನ ನಡೆಸುತ್ತಿದ್ದ ಇವರು ಮೈಸೂರು ರೋಡು ಸರಕಾರೀ ಬಲ್ಬ್ ಫ್ಯಾಕ್ಟರಿಯಲ್ಲಿ ಇರುತ್ತಿದ್ದಂತೆ ನೆನಪು. ಪಾವಗಡದ ನಿಷ್ಠಾವಂತ ಗಾಂಧೀವಾದಿ ಹನುಮಂತ ಶೆಟ್ಟರು ಬೆಂಗಳೂರಿಗೆ ಬಂದಿದ್ದು, ನೂಲುವ ಕೆಲಸದ ಪ್ರಚಾರಮಾಡುತ್ತಿದ್ದರು. ಹರಿಜನರ ಕೇರಿಗೆ ನನ್ನನ್ನು ಕರೆದೊಯ್ದು ಅಲ್ಲಿ ನೂಲುವುದನ್ನು ಕಲಿಸಲು ನನಗೆ ಹಚ್ಚಿದರು. ಕೈಮಗ್ಗದ ಗೀತೆಗಳನ್ನು ಹೇಳುತ್ತ, ನಿತ್ಯ ಪ್ರಭಾತ ಫೇರಿ ನಡೆಸುತ್ತಲಿದ್ದ ಎಸ್. ವಿಶ್ವಮೂರ್ತಿಗಳಿಗೆ ನಾನು ಹೆಚ್ಚಾಗಿ ನೆರವಾಗುತ್ತಿದ್ದೆ.

1942ರಲ್ಲಿ ಕ್ವಿಟ್ ಇಂಡಿಯಾ ಚಳವಳಿ ಶುರು ಆಗಲು, ಕಬ್ಬನ್‌ಪೇಟೆ, ಅವೆನ್ಯೂ ರೋಡ್ ಚಳವಳಿಯ ಕೇಂದ್ರಗಳೇ ಆಗಿದ್ದು, ಸರಕಾರ ಕರ್ಫ್ಯೂ ಜಾರಿಮಾಡಿ ಮಿಲಿಟರಿಯವರನ್ನು ಸಂದಿಗೊಂದಿಯಲ್ಲಿ ಕಾವಲುಹಾಕಿದ್ದರು. ಶೂಟಿಂಗ್‌ನಿಂದ ಹತ್ತಾರು ಹೆಣ ಬಿದ್ದವು. ಮನೆಗಳ ಬಾಗಿಲು ಒಡೆದು, ಬಾಯೊನೆಟ್‌ನಿಂದ ಇರಿದು ಅನೇಕರನ್ನು ಕೊಂದರು. ಇಂಥ ಗಲಭೆ ಕಾಲಕ್ಕೆ ನಾನೂ ಸತ್ತೆನೆಂದು ಒಂದು ದಿನ ನನ್ನ ಮಿತ್ರರು ಭಾವಿಸಿದ್ದರು.

ಗಾಂಧೀಜಿಯವರ ಬಿಡುಗಡೆ ಆಗಿ ಅವರು ಪಂಚಗಣಿಯಲ್ಲಿ ಇದ್ದಾಗ, ಅವರನ್ನು ಕಾಣಲೆಂದು ನಾನು, ಕಾ. ನಾ. ಲಕ್ಷ್ಮೀಪತಿ (ಇವರು ಚಳವಳಿ ಕಾಲಕ್ಕೆ ಕಾಲೇಜು ತ್ಯಜಿಸಿದ್ದರು), ಕೃಷ್ಣಮೂರ್ತಿ ಮತ್ತು ವಿಶ್ವಮೂರ್ತಿ ಪಂಚಗಣಿಗೆ ಹೋಗಿ, ಪ್ರಾರ್ಥನಾ ಸಭೆಯ ಕಾಲಕ್ಕೆ ಗಾಂಧೀಜಿಯವರ ದರ್ಶನವನ್ನು ಹತ್ತಿರದಿಂದ ಪಡೆದೆವು. ಅಲ್ಲಿಂದ ಪುಣೆ, ಅಹ್ಮದ್‌ನಗರಗಳಿಗೆ ಹೋಗಿ ಮರಳುವಾಗ ವಿಜಾಪುರದಲ್ಲಿ ಪೋಲೀಸರು ರೈಲು ನಿಲ್ದಾಣದಲ್ಲಿ ಬಂಧಿಸಿ, ಸ್ಟೇಶನಿಗೆ ಒಯ್ದರು. ಅಲ್ಲಿ ನಮ್ಮ ಚಹರೆಪಟ್ಟಿ ಬರೆದು ಬಿಟ್ಟರಾದರೂ, ನಾವು ಬೆಂಗಳೂರು ತಲಪುವ ತನಕ ನಮ್ಮನ್ನು ಹಿಂಬಾಲಿಸಿದರು.

1947ರಲ್ಲಿ 'ಚಲೋ ಮೈಸೂರು' ಸಂಬಂಧ ಬೆಂಗಳೂರಲ್ಲಿ ನಗರ ಕಾಂಗ್ರೆಸ್ ಅಧ್ಯಕ್ಷ ಶ್ಯಾಮರಾಜಯ್ಯಂಗಾರರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಾನು ಹಾಜರಿದ್ದೆ. ಸ್ವಾತಂತ್ರ್ಯನಂತರವೂ ನಾನು ಕಾಂಗ್ರೆಸ್ ಕಾರ್ಯಕರ್ತನಾಗಿ ಇದ್ದೇನೆ. ಅನೇಕ ಸಂಘಸಂಸ್ಥೆಗಳಲ್ಲಿ ದುಡಿಯುತ್ತಿದ್ದು, 'ಚೇತನಸ್ಫೂರ್ತಿ' ಪತ್ರಿಕೆ ನಡೆಸುತ್ತಿರುವೆ.

ವೈ.ಬೆಂ. 13

# ಎಸ್. ಗುಂಡೂರಾವ್

ಜನನ : 1916 ಉದ್ಯೋಗ : ? ವಿಳಾಸ : 77, ಗವೀಪುರ,ಬಡಾವಣೆ, III ರಸ್ತೆ, ಬೆಂಗಳೂರು–19

---



ನನ್ನ ವಿದ್ಯಾಭ್ಯಾಸ ಚನ್ನಪಟ್ಣದಲ್ಲಿ ನಡೆವಾಗ ನಾನು ಗಾಂಧೀಜಿಯವರನ್ನು ಕಾಣುವ ಅವಕಾಶ ಸಿಕ್ಕಿತು. ಈ ವೇಳೆಗೆ ನಮ್ಮ ಮನೆಗೆ ಗಡ್ಡಧಾರಿ ಆಗಂತುಕ ನೋರ್ವನ ಆಗಮನವಾಯಿತು. ಅವರಾರು ಎಂದು ತಿಳಿಯಲು ಕೆಲವು ತಿಂಗಳುಗಳೇ ಬೇಕಾಯಿತು. ಅವರ ಬಳಿ ಕೆಲವು ಭಾವಚಿತ್ರಗಳಿದ್ದವು. ಅವು ಉಪ್ಪಿನ ಸತ್ಯಾಗ್ರಹಿಗಳಿಗೆ ಬ್ರಿಟಿಷ್ ಸರಕಾರವಿತ್ತ ಕ್ರೂರಶಿಕ್ಷೆಯ ಚಿತ್ರಗಳು; ಬೆತ್ತಲಾಗಿದ್ದ ಸತ್ಯಾಗ್ರಹಿಗಳ ಕೈಕಾಲುಗಳನ್ನು ಕಟ್ಟಿ ಕಾದ ಮರಳ ಮೇಲೆ ಮಲಗಿಸಿ ಬೆತ್ತದಿಂದ ಬಡಿಯುತ್ತಿದ್ದ ದೃಶ್ಯಗಳು. ಇದನ್ನು ನೋಡಿ ನನ್ನ ಮನ ಬ್ರಿಟಿಷ್ ಸರಕಾರದ ವಿರುದ್ಧ ಕಿಡಿ ಕಾರಿತು. ಆ ಆಗಂತುಕರು ಮೈಸೂರಿನ ಸೂರ್ಯ ನಾರಾಯಣ ಪಂಡಿತರೆಂದು ಅನಂತರ ತಿಳಿಯಿತು. ಅವರು ಕೆಲಕಾಲ ಚನ್ನಪಟ್ಟಣದ ತತ್ವಜ್ಞಾನ ಮಂದಿರದಲ್ಲಿ ಭಗವದ್ಗೀತೆ, ನೂಲುವುದು, ಸೂರ್ಯನಮಸ್ಕಾರ ಮುಂತಾದವು ಗಳನ್ನು ಹೇಳಿಕೊಡುತ್ತಿದ್ದರು. 1935ರಲ್ಲಿ ಕಾರಣಾಂತರದಿಂದ ವಿದ್ಯಾಭ್ಯಾಸ ಕೊನೆ ಗೊಂಡಿತು. ಅನಂತರ ಮದ್ದೂರಿನಲ್ಲಿ ತಾಯಮ್ಮ ವೀರಣ್ಣಗೌಡರಿಂದ ರಸೀತಿ ಪುಸ್ತಕ ವನ್ನು ಪಡೆದು ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯತ್ವವನ್ನು ಕೂಡಿಸುತ್ತಿದ್ದೆ.

ನಾನು ಆಗಾಗ ನಡೆಯುತ್ತಿದ್ದ ಸ್ವಾತಂತ್ರ್ಯ ಸಂಗ್ರಾಮದ ಭಾಷಣಗಳಲ್ಲಿ ಭಾಗವಹಿಸುತ್ತಿದ್ದೆ. ನೆಹರೂನಗರ (ಕಿತ್ತನೂರನಹಳ್ಳಿ) ಚನ್ನಪಟ್ಟಣದ ಬಳಿ ನಡೆದ ಅಧಿವೇಶನ ಮತ್ತು ವಿದುರಾಶ್ವತ್ಥದಲ್ಲಿ ನಡೆದ ಅಧಿವೇಶನದಲ್ಲಿ ಸ್ವಯಂಸೇವಕನಾಗಿ ಸೇವೆಸಲ್ಲಿಸಿದೆ. ಎಂ. ದೊರೆಸ್ವಾಮಿಗಳು ನಮ್ಮ ಜಿ.ಒ.ಸಿ. ಆಗಿದ್ದರು.

1938ನೇ ಏಪ್ರಿಲ್ 28ರಂದು ಧ್ವಜಸತ್ಯಾಗ್ರಹದಲ್ಲಿ ಪಾಲ್ಗೊಂಡು ಉಪ್ಪಾರ ಪೇಟೆ ಪೋಲೀಸರಿಂದ ಬಂಧಿತನಾದೆ. ಅಂದಿನ ಸರಕಾರವು 144ನೇ ಸೆಕ್ಷನ್ ಜಾರಿ ಮಾಡಿ ಸಭೆ, ಮೆರವಣಿಗೆಗಳನ್ನು ನಿಷೇಧಿಸಿತ್ತು. ಅದನ್ನು ಮುರಿಯಲು 27-4-1938 ರಂದು ಚಿಕ್ಕಲಾಲ್‌ಬಾಗ್‌ನಲ್ಲಿ ಎನ್. ಸಿ. ತಿಮ್ಮಾರೆಡ್ಡಿಯವರು ಭಾಷಣ ಮಾಡಿ

ಸತ್ಯಾಗ್ರಹಿಗಳನ್ನು ಹುರಿದುಂಬಿಸಿದರು. ಇದರಿಂದ ಉತ್ತೇಜಿತರಾದ ಯುವಕರನೇಕರು ಧ್ವಜ ಸತ್ಯಾಗ್ರಹಕ್ಕೆ ಸೇರುವುದಾಗಿ ಹೆಸರುಗಳನ್ನು ಕೊಟ್ಟೆವು. ನಮಗೆ ನೀಡಿದ ಆದೇಶದಂತೆ ನಾವೆಲ್ಲರೂ ಮಾರನೇ ದಿನವೇ ಕಾಂಗ್ರೆಸ್ ಆಫೀಸ್ ಬಳಿ ಬೆಳಗಿನ ಜಾವ ಐದು ಘಂಟೆಗೆ ಸೇರಿದೆವು. ನಾವು ಸುಮಾರು 40 ಜನರಿದ್ದೆವು. ಐದೈದು ಜನರ ಸಂಗಡವಲ್ಲಿ ತ್ರಿವರ್ಣಧ್ವಜ ಹಿಡಿದು ಮೆರವಣಿಗೆ ಹೊರಟೆವು. ಘೋಷಣೆಗಳನ್ನು ಕೂಗುತ್ತಾ ಯಾವುದೇ ಕೆರಳಿಕೆಗೂ ಮಣಿಯದೆ, ಶಿಸ್ತು-ಶಾಂತಿಯಿಂದ ಸಾಗಬೇಕಿತ್ತು.

ನಮ್ಮ ಮನೆಯವರಿಗೆ ನಾನು ಸತ್ಯಾಗ್ರಹಿಯಾಗುವ ವಿಷಯ ತಿಳಿದು ನನ್ನನ್ನು ತಡೆಯಲು ಪ್ರಯತ್ನಿಸಿದ್ದರು. ನನ್ನ ಅಕ್ಕ ಮತ್ತು ಅತ್ತಿಗೆಯವರು ನನ್ನಿಂದ ಭಾಷೆಯನ್ನು ತೆಗೆದುಕೊಂಡಿದ್ದಲ್ಲದೆ ರಾತ್ರಿ ಮಲಗುವಾಗ ನನ್ನೆರಡೂ ಕೈಗಳನ್ನು ಹಿಡಿದು ಮಲಗಿದ್ದರು. ಇಷ್ಟಾದರೂ ನಾನು ತಪ್ಪಿಸಿಕೊಂಡು ಓಡಿದ್ದೆ.

ಬೆಳಗ್ಗೆ 7 ಘಂಟೆಗೆ ಮೆರವಣಿಗೆ ಹೊರಟೆವು. ಕಾಂಗ್ರೆಸ್ ಆಫೀಸಿನಿಂದ ಹೊರಟು ಉಪ್ಪಾರಪೇಟೆ ಪೋಲೀಸ್ ಸ್ಟೇಷನ್ ಮುಂದಿನಿಂದ ಟ್ಯಾಂಕ್ ಬಂಡ್ ರಸ್ತೆ ಸೇರಿದೆವು. ನಮ್ಮದು ಆ ದಿನ ಐದನೆಯ ಗುಂಪು. ಬಲವಾದ ಪೋಲೀಸ್ ಬಂದೋಬಸ್ತ್ ಇತ್ತು. ಪೋಲೀಸ್ ಇನ್‌ಸ್ಪೆಕ್ಟರು ಬಂದು, "144ನೇ ಸೆಕ್ಷನ್ ಜಾರಿಯಲ್ಲಿರುವುದು ಗೊತ್ತೆ ?" ಎಂದು ಪ್ರಶ್ನಿಸಿದರು. ಗೊತ್ತೆಂದು ಹೇಳಿದಾಗ ಚದುರಬೇಕೆಂದು ತಿಳಿಸಿದರು. ನಾವು ಮುಂದೆ ಹೋಗಲು ಪ್ರಯತ್ನಿಸಿದಾಗ ಪೋಲೀಸರು ನಮ್ಮನ್ನೆಲ್ಲಾ ಬಂಧಿಸಿ ವ್ಯಾನಿನಲ್ಲಿ ಕೂರಿಸಿಕೊಂಡರು.

ನನ್ನ ಜೊತೆಯಲ್ಲಿ 95 ಕೈದಿಗಳಿದ್ದರು. ನಾವೆಲ್ಲಾ ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿಡಲ್ಪಟ್ಟಿದ್ದೆವು. ಜಿಲ್ಲಾ ಮ್ಯಾಜಿಸ್ಟ್ರೇಟರು 12-5-38ರಂದು ಒಟ್ಟು ಎರಡು ತಿಂಗಳು ಕಠಿಣ ಶಿಕ್ಷೆ, ಎರಡು ವಾರ ಸಾದಾ ಸಜೆ ವಿಧಿಸಿದರು. ಆದರೆ ಶ್ರೀಮನ್ಮಹಾರಾಜ ಜಯಚಾಮರಾಜೇಂದ್ರ ಒಡೆಯರವರ ಎರಡನೆಯ ಮದುವೆ ಸಂದರ್ಭದಲ್ಲಿ (15-5-38) ಬಿಡುಗಡೆಯಾಯಿತು.

ಆ ದಿನಗಳಲ್ಲಿ ವಲ್ಲಭಬಾಯಿ ಪಟೇಲರು ಮೈಸೂರು ಸರ್ಕಾರದೊಡನೆ ಸಂಧಾನಕ್ಕಾಗಿ ಬೆಂಗಳೂರಿಗೆ ಬಂದಾಗ ಸೆಂಟ್ರಲ್ ಜೈಲಿಗೆ ಭೇಟಿಕೊಟ್ಟು ನಮ್ಮ ರಾಜ್ಯದ ರಾಜಕೀಯ ಧುರೀಣರೊಂದಿಗೆ ಸಮಾಲೋಚಿಸಿದ್ದರು. ನಮ್ಮ ಅಂದಿನ ಸತ್ಯಾಗ್ರಹಿಗಳಲ್ಲಿ ಬಹಳ ಮಂದಿ ಕಬ್ಬನ್‌ಪೇಟೆಯವರೇ. ದಿ|| ಕೆ. ರಾಮಸ್ವಾಮಿ, ಪಿ. ರಾಮಸ್ವಾಮಿ, ಸಿಕ್ರಿಯಪ್ಪ, ಕಬ್ಬನ್‌ಪೇಟೆ ನರಸಿಂಹಯ್ಯ (ಸದ್ಯ ಸಿಟಿ ಮಾರ್ಕೆಟ್‌ನಲ್ಲಿ ಕಾಂಡಿಮೆಂಟ್ಸ್ ಸ್ಟೋರ್ಸ್ ಇಟ್ಟಿದ್ದಾರೆ), ಕೃಷ್ಣಮೂರ್ತಿ, ನಾರಾಯಣ ಶೆಟ್ಟಿ (ಚಿಕ್ಕಪೇಟೆಯಲ್ಲಿ ಇವರ ಜವಳಿ ಅಂಗಡಿಯಿತ್ತು), ತಿಮ್ಮರಾಯಪ್ಪ (ಶ್ರೀಗಂಧದ ಸಾಮಾನುಗಳ ಮಾರಾಟ ಮಾಡುತ್ತಿದ್ದರು), ಅಕ್ಕಿಪೇಟೆ ರಾಜು ಟೈಲರ್ (ಈಗ ಚಿಲ್ಲರೆ ಅಂಗಡಿ ನಡೆಸುತ್ತಿದ್ದಾರೆ), ದಿ|| ಸುಬ್ಬರಾವ್ (ಗಣೇಶ ಕಾಫಿ ವರ್ಕ್ಸ್, ಚಿಕ್ಕ

ಪೇಟೆ ಶಾಸ್ತ್ರಿ ಹೊಟೇಲ್ ಎದುರಲ್ಲಿತ್ತು) ಇನ್ನೂ ಬೇರೆ ಸತ್ಯಾಗ್ರಹಿಗಳಿದ್ದರು ಉಳಿದವರ ಹೆಸರು ನನಗೆ ಜ್ಞಾಪಕವಿಲ್ಲ

ನಾನು ಸಾಮಾನ್ಯವಾಗಿ ಪ್ರಭಾತ್‌ಫೇರಿಗಳು ಹಾಗೂ ಸ್ವದೇಶೀ ಚಳವಳಿಗಳಲ್ಲಿ ಭಾಗವಹಿಸುತ್ತಿದ್ದೆ. ವರ್ತಮಾನಪತ್ರಿಕೆಗಳನ್ನು ಸರ್ಕಾರ ಬಹಿಷ್ಕರಿಸಿದ್ದಾಗ, ಪತ್ರಿಕೆಗಳನ್ನು ಸಂಗ್ರಹಿಸಿ, ಕೈಲಿ ಪ್ರತಿಗಳನ್ನು ಮಾಡಿ ಗೋಡೆಗಳ ಮೇಲೆ ಸಾರ್ವಜನಿಕ ಸ್ಥಳಗಳಲ್ಲಿ ಅಂಟಿಸುತ್ತಿದ್ದೆವು.

ಮೈ.ಬೆಂ. 14

## ಕುಂತಳಾ ಸೀತುರಾವ್

ವಯಸ್ಸು : 46 ವರ್ಷ ಉದ್ಯೋಗ : ಸಮಾಜಸೇವಕಿ

ವಿಳಾಸ : 4210, ಸುಬ್ರಹ್ಮಣ್ಯನಗರ, ಬೆಂಗಳೂರು–21

---



ನನ್ನ ತಾತನವರು ಬೆಂಗಳೂರು ಸಂಸ್ಕೃತ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು. ಅವರು ಖದ್ದರ್ ಬಟ್ಟೆಯ ವಿನಾ ಬೇರೆ ಯಾವ ಬಟ್ಟೆಯನ್ನೂ ಧರಿಸುತ್ತಿರಲಿಲ್ಲ. ಅದಕ್ಕೆ ಕಾರಣ ಕೇಳಿದರೆ, ಪುಟ್ಟ ಮಕ್ಕಳಾದ ನಮಗೆ ಗಾಂಧೀ, ನೆಹರೂ, ಲೋಕಮಾನ್ಯ ತಿಲಕ್, ಮಾಲವೀಯ ಇವರುಗಳ ಕಥೆಯನ್ನು ನನ್ನ ಮನಸ್ಸಿಗೆ ನಾಟುವಂತೆ ಹೇಳುತ್ತಿದ್ದರು. ಪರದೇಶಿ ವಸ್ತು, ವಸ್ತ್ರಗಳನ್ನು ಬಹಿಷ್ಕರಿಸಿ, ಸ್ವದೇಶಿ ಬಟ್ಟೆ ವಸ್ತುಗಳನ್ನು ಕೊಂಡರೆ ಬಿಳಿಯರನ್ನು ಭಾರತದಿಂದ ಓಡಿಸಬಹುದೆಂದು ನನಗೆ ಮನಸ್ಸಿನಲ್ಲಿ ಸ್ಥಿರವಾಗುವಂತೆ ಉಪದೇಶ ಮಾಡುತ್ತಿದ್ದರು. ಇವರ ಮುದ್ದಿನ ಮೊಮ್ಮಗಳಾದ ನಾನು ಐದು ವರ್ಷ ಇವರಲ್ಲೇ ಬೆಳೆದೆ.

ನಮ್ಮ ತಂದೆಯ ಮನೆಯಲ್ಲಿ ಸಾಮಾನ್ಯವಾಗಿ ಪ್ರತಿದಿವಸ ರಾತ್ರಿ ಅಂಗಳದಲ್ಲಿ ಕುಳಿತು ಅಂದಿನ ಸುದ್ದಿ ಚರ್ಚಿಸುತ್ತಿದ್ದರು. ಮಹಾತ್ಮ ಗಾಂಧಿ, ಮೋತಿಲಾಲ್ ನೆಹರು, ಬಾಲ ಗಂಗಾಧರ ತಿಲಕ್, ಮದನ ಮೋಹನ ಮಾಳವೀಯ, ಚಿತ್ತರಂಜನ ದಾಸ್, ಪಟೇಲ್, ಸುಭಾಸ್ ಮುಂತಾದ ದೇಶಭಕ್ತರ ಬಗ್ಗೆ ಮಾತನಾಡಿ, ತರ್ಕಿಸಿ, ಅವರವರ ಅಭಿಪ್ರಾಯಗಳನ್ನು ತಿಳಿಸುತ್ತಿದ್ದರು. ಅವರ ಸಂಭಾಷಣೆಯನ್ನು ಆಲಿಸುತ್ತಿದ್ದ ನನಗೆ,

'ಗಾಂಧಿ' ಎಂದು ಯಾರು ಹೇಳಿದರೂ, ಮನಸ್ಸಿಗೆ ಏನೋ ಹಿತವಾದ ಸಂವೇದನೆಯಾಗುತ್ತಿದ್ದು, ಆ ಹೆಸರಿಗೆ ನನ್ನಲ್ಲಿ ಅತಿಯಾದ ವಿಶ್ವಾಸ, ಭಕ್ತಿ, ಗೌರವ ಮೂಡುತ್ತಿತ್ತು. ನಮ್ಮ ಮನೆಯಲ್ಲಿ ಜೈಲು ಸರಳುಗಳ ಮಧ್ಯೆ ಚರಕದಿಂದ ನೂಲುತ್ತಿದ್ದ ಗಾಂಧೀಜಿ ಹಾಗೂ ಚಿತ್ತರಂಜನ ದಾಸ್, ಮಾಳವೀಯ, ಶ್ರೀರಾಮಕೃಷ್ಣ ಪರಮಹಂಸರ ಭಾವಚಿತ್ರಗಳನ್ನು ಹಾಕಿದ್ದರು. ತುಂಡುಪಂಚೆಯನ್ನುಟ್ಟು, ಕೈಯಲ್ಲಿ ಕೋಲು ಹಿಡಿದಿದ್ದ ಗಾಂಧೀಜಿಯ ಚಿತ್ರ ನನಗೆ ಪರಮಪೂಜ್ಯವಾದುದೆನಿಸಿತ್ತು.

ನನ್ನ ಸೋದರಮಾವಂದಿರು ನರಿಮನ್ ಚಳವಳಿಯಲ್ಲಿ ಭಾಗವಹಿಸಿದ್ದರು. ಅವರ ಅನುಭವಗಳನ್ನು ಆಸಕ್ತಿಯಿಂದ ಕೇಳುತ್ತಿದ್ದೆ. ದೇಶಭಕ್ತಿ ಗೀತೆಗಳನ್ನು ಹೇಳಿಕೊಟ್ಟು, ಒಂದು ಪುಟ್ಟ ಸಂಗ್ರಹವನ್ನೂ ತಂದುಕೊಟ್ಟಿದ್ದರು. "ಪರದೇಶಿ ಬಟ್ಟೆ ಸುಟ್‌ಬಿಡ್ರೊ, ಸ್ವದೇಶಿ ಬಟ್ಟೆ ಹಾಕ್ಕೊಳ್ರೊ, ಹೋಷಿಯಾರ್, ಹೋಷಿಯಾರ್" ಮುಂತಾದ ಹಾಡುಗಳನ್ನು ಹೇಳುತ್ತಾ, ನನ್ನ ಜೊತೆ ಮಕ್ಕಳೊಡನೆ ಲೆಫ್ಟ್ ರೈಟ್ ಮಾಡುತ್ತಾ, ಜೈಕಾರ ಮಾಡುತ್ತಾ, ಮನೆಯ ಅಂಗಳದಲ್ಲೆಲ್ಲಾ ಓಡಾಡಿ ಕೊನೆಗೆ ಕರ್ಪೂರದ ಬೊಂಬೆಗೆ ಎಲ್ಲರೂ ಸೇರಿ ಕೋಲಿನಿಂದ ಏಟು ಹೊಡೆಯುತ್ತಿದ್ದೆವು. ಇದರಿಂದ ಬ್ರಿಟಿಷರನ್ನೆಲ್ಲಾ ಹೊಡೆದೋಡಿಸಿದಷ್ಟು ಮನಸ್ಸಿಗೆ ಆನಂದವಾಗುತ್ತಿತ್ತು.

ಈಗಿನ ವಾಣಿವಿಲಾಸ ಆಸ್ಪತ್ರೆ ಇರುವ ಸ್ಥಳದಲ್ಲಿ ಸಂಸ್ಕೃತ ಮಹಾಪಾಠಶಾಲೆ ಇದ್ದಿತು. ಅಲ್ಲಿ ನನ್ನ ತಾತ ಪ್ರಿನ್ಸಿಪಾಲರಾಗಿದ್ದರು. ಒಂದು ಸಲ ಅಲ್ಲಿಗೆ ಗಾಂಧೀಜಿಯವರು ಬಂದಿದ್ದರು. ನಮ್ಮ ತಾಯಿಯವರು ಗಾಂಧೀಜಿಯವರ ಮೇಲೆ ಒಂದು ಗೀತೆಯನ್ನು ರಚಿಸಿ ನಮ್ಮ ಅಕ್ಕನ ಕೈಲಿ ಹಾಡಿಸಿದರು. ಆಗ ಗಾಂಧೀಜಿ ನಗುತ್ತಾ ನಮ್ಮ ಅಕ್ಕನ ಬೆನ್ನುತಟ್ಟಿ ಅವಳಿಗೆ ತಮ್ಮ ಕೊರಳಲ್ಲಿದ್ದ ಹಾರ ಹಾಕಿದ್ದರು. ಇದನ್ನು ನಮ್ಮ ಅಕ್ಕ ಆಗಾಗ ಜಂಬಕೊಚ್ಚಿಕೊಳ್ಳುತ್ತಿದ್ದಳು.

ಮುಂದೆ ಗಾಂಧೀಜಿಯವರು ಮಲ್ಲೇಶ್ವರ ರೀಡಿಂಗ್ ರೂಂಗೆ ಬರುವುದಾಗಿ ಸುದ್ದಿ ತಿಳಿಯಿತು. ಅನೇಕ ಸಂಘ, ಸಮಾಜಗಳು ಅವರಿಗೆ ನಿಧಿ ಅರ್ಪಿಸಲು ನಿರ್ಧರಿಸಿದವು. ಮಲ್ಲೇಶ್ವರದ ಮಹಿಳಾ ಸಮಾಜದ ಕಾರ್ಯದರ್ಶಿನಿ ಜಯಮ್ಮನವರ ನೇತೃತ್ವದಲ್ಲಿ ಒಂದು ಸಮಿತಿ ರಚಿತವಾಯಿತು. ಕೆನರಾ ಯೂನಿಯನ್ನಿನ ಪರವಾಗಿ ಆನಂದೀಬಾಯಿ ಸಂಜೀವರಾವ್, ಶಾಂತಾಬಾಯಿ ನಗರಕರ್, ಶ್ರೀರಾಮಪುರದಿಂದ ಶಾರದಾಂಬ ಶ್ರೀಕಂಠಯ್ಯ (ನನ್ನ ತಾಯಿ), ಟಿ. ಲಕ್ಷ್ಮಮ್ಮನವರು ಹಣ ಸಂಗ್ರಹಿಸುತ್ತಿದ್ದರು. ನಮ್ಮ ತಾಯಿ ಖಾದಿ ಸೀರೆಯುಟ್ಟು ಮನೆಮನೆಗೂ ನಿಧಿ ಸಂಗ್ರಹಣೆಗೆ ಹೋಗುತ್ತಿದ್ದರು. ಕೆಲವರು 'ಗಾಂಧೀ ನಿಧಿ' ಎಂದಕೂಡಲೇ 5-10 ರೂಪಾಯಿಗಳನ್ನು ಸಂತೋಷದಿಂದ ಕೊಡುತ್ತಿದ್ದರು. ಮತ್ತೆ ಕೆಲವರು, "ಜಾತಿ, ನೀತಿ ಇಲ್ದೋನಿಗೆ ದುಡ್ಡ್ಯಾಕೆ ?" ಎಂದು ನಾಲ್ಕಾಣೆ ಕೊಡುತ್ತಿದ್ದರು.

ಶೀಘ್ರವೇ 'ಕ್ವಿಟ್ ಇಂಡಿಯಾ' ಚಳವಳಿ ಆರಂಭವಾಯಿತು. ರಾತ್ರಿಯೆಲ್ಲಾ

ನನಗೆ ನಿದ್ರೆಯೇ ಇಲ್ಲ. ಆದೇ ತಾನೇ 2ನೆಯ ವರ್ಷದ ಇಂಟರ್‌ಮೀಡಿಯೇಟ್‌ಗೆ ಮಹಾರಾಣೀ ಕಾಲೇಜಿನಲ್ಲಿ ಕಾಲಿಟ್ಟಿದ್ದೆ. ಯೋಚಿಸುವಷ್ಟು ಬುದ್ಧಿಯೂ ಬಂದಿತ್ತು. ಎಲ್ಲಾ ಪತ್ರಿಕೆಗಳಲ್ಲೂ ಚಳವಳಿಯ ವಿಚಾರ; ಚಳವಳಿಯಲ್ಲಿ ಎಲ್ಲರೂ ಭಾಗವಹಿಸಲು ನಾಯಕರ ಆದೇಶ.

"ಇವತ್ತು ಕಾಲೇಜುಗಳಲ್ಲಿ ಗಲಾಟೆಗಳಾಗುತ್ತೆ, ನೀನು ಹೋಗಬೇಡಮ್ಮ", ಇದು ತಂದೆಯವರು ನನಗಿತ್ತ ಸಲಹೆ. "ಹೋಗ್ತೀನಿ, ಏನಾದ್ರೂ ಗಲಾಟೆ ಆದ್ರೆ ಬಂದುಬಿಡ್ತೀನಿ, ನೀವೇನೂ ಹೆದರಬೇಡಿ" ನಾನು ಸಂತಯಿಸಿದೆ. ಕಾಲೇಜಿಗೂ ಹೋದೆ. ಆಗ ಬೆಂಗಳೂರು ಮಹಾರಾಣಿ ಕಾಲೇಜಿನಲ್ಲಿ ಮಿಸೆಸ್ ನಿಕಲ್ಸ್ ಪ್ರಿನ್ಸಿಪಾಲರಾಗಿದ್ದರು. ಆ ದಿನ ಪ್ರಿನ್ಸಿಪಾಲರು ಪ್ರತಿ ಕ್ಲಾಸುಗಳಿಗೂ ಬಂದು ಹುಡುಗಿಯರ ಹಾಜರಾತಿ ನೋಡಿ "ಯಾರೂ ಚಳವಳಿಯಲ್ಲಿ ಭಾಗವಹಿಸಕೂಡದು; ನೀವೆಲ್ಲಾ ಇನ್ನೂ ವಿದ್ಯಾರ್ಥಿಗಳು; ಓದಬೇಕು" ಎಂದು ತಿಳಿಸಿ, ಕಾಲೇಜಿನ ಗೇಟಿಗೆ ಬೀಗ ಹಾಕಿಸಿ, ಆಳುಗಳಿಗೆ ಎಚ್ಚರಿಕೆ ಹೇಳಿ ಆಫೀಸ್ ರೂಂಗೆ ಹೋದರು.

ಇತ್ತ ಸೆಂಟ್ರಲ್ ಕಾಲೇಜ್, ಇಂಜಿನಿಯರಿಂಗ್ ಕಾಲೇಜ್, ಇಂಟರ್‌ಮೀಡಿಯೇಟ್ ಕಾಲೇಜಿನ ವಿದ್ಯಾರ್ಥಿಗಳು ನಮ್ಮನ್ನು ಕಾಲೇಜಿನಿಂದ ಆಚೆ ಬರಲು ಕೂಗುತ್ತಿದ್ದರು. ವಿದ್ಯಾರ್ಥಿನಿಯರಿಗೆ ಇದು ಒಂದು ಸೋಜಿಗವಾಗಿತ್ತು; ಹೊಸ ಅನುಭವವಾಗಿತ್ತು. ಆ ದಿವಸ ವಿದ್ಯಾರ್ಥಿನಿಯರು ಬೇಗ ಮನೆಗೆ ಹಿಂದಿರುಗಿದೆವು. ಒಂದೆರಡು ದಿವಸ ಹೀಗೆ ನಡೆಯಿತು. ಅನಂತರ ವಿದ್ಯಾರ್ಥಿಗಳು ಕಾಲೇಜು ಗೇಟು, ಸರ್ಕಲ್ ಬಳಿ ನಿಂತು, ಒಳಗೆ ಹೋಗುವವರನ್ನು ತಡೆಯುತ್ತಿದ್ದರು. ಬರಿಯ ವಿದ್ಯಾರ್ಥಿಗಳಿಂದ ಈ ಹೆಣ್ಣುಮಕ್ಕಳನ್ನು ತಡೆಯುವುದು ಕಷ್ಟವಾಯಿತು. ಪೋಲೀಸಿನವರು ಅವರನ್ನು ಬಂಧಿಸುತ್ತಿದ್ದರು. ಆಗ ಕೆಲವು ವಿದ್ಯಾರ್ಥಿನಿಯರು (ದೊಡ್ಡ ಕ್ಲಾಸಿನವರು) ಧೈರ್ಯ ಮಾಡಿ, ತಾವೂ 'ಪಿಕೆಟ್' ಮಾಡಲು ಹೊರಟರು. ಇದೇ ಸಮಯವೆಂದು ನಾನೂ ಅವರೊಡನೆ ಹೊರಟೆ. 14ನೆಯ ಆಗಸ್ಟ್ ಹೊತ್ತಿಗೆ ಅನೇಕ ವಿದ್ಯಾರ್ಥಿನಿಯರು ಚಳವಳಿಯಲ್ಲಿ ಭಾಗವಹಿಸುತ್ತಿದ್ದರು. ಒಂದು ದಿವಸ ತಲೆನೋವೆಂದು ಬೇಗ ಮನೆಗೆ ಬಂದೆ. ನಮ್ಮ ತಾಯಿಯವರು "ಯಾಕೆ, ಮೆರವಣಿಗೆಗೆ ಹೋಗಲಿಲ್ಲ? ಮಹಾ ನಾಯಕರೆಲ್ಲಾ ಜೈಲಿನಲ್ಲಿ ರಾಗಿ ಬೀಸ್ತಿರ್‍ಲಿ, ನೀವುಗಳು ತಲೇನೋವು, ಮೂಗು ನೋವೂಂತ ನೆಪ ಹೇಳಿ ಮನೆಗೆ ಬನ್ನಿ" ಎಂದು ತೀಕ್ಷ್ಣವಾಗಿ ಮಾತನಾಡಿದರು.

ಆ ದಿವಸವೇ ಕೊನೆ. ಪ್ರತಿದಿವಸ ಪುಸ್ತಕವನ್ನು ತೆಗೆದುಕೊಳ್ಳದೆ ಕಾಲೇಜಿಗೆ ಹೋಗುವುದು; ಕ್ಲಾಸಿಗೆ ಹೋಗುವವರನ್ನು ತಡೆದು ನಿಲ್ಲಿಸುವುದು; ಅನಂತರ ಮೆರವಣಿಗೆಯಲ್ಲಿ ಹೊರಟು ಸೆಂಟ್ರಲ್ ಕಾಲೇಜ್ ಪೆವಿಲಿಯನ್ನಿನಲ್ಲಿ ಸಭೆಸೇರಿ, ವಿಷಯಗಳನ್ನು ವಿದ್ಯಾರ್ಥಿಗಳಿಗೆ ತಿಳಿಸುವುದು ಎಂ. ಎ. ವಾಸುದೇವರಾವ್, ಕೆ. ವಿ. ವಸಂತಯ್ಯ, ಎಲ್. ಎಸ್. ಎಸ್. ಚಕ್ರವರ್ತಿ, ವಿ. ಎಸ್. ಕೃಷ್ಣಯ್ಯರ್, ದೇವಪಾಲ್, ಎಸ್. ಜಿ.

ಸಿಂಹ ಅವರು ಮಾತನಾಡುತ್ತಿದ್ದರು. ವಿದ್ಯಾರ್ಥಿನಿಯರ ಪರವಾಗಿ ಕಾತ್ಯಾಯಿನಿ. ಪ್ರೊಸ್ಸನ್ನ, ನಾನೂ ಮಾತನಾಡುತ್ತಿದ್ದೆವು.

ಬರುಬರುತ್ತಾ ವಿದ್ಯಾರ್ಥಿನಿಯರು ಮನೆಯಲ್ಲಿಯೇ ಉಳಿಯುವಂತಾದರು. ಭಾರೀ ಮೆರವಣಿಗೆ ಸೆಕ್ರೆಟೇರಿಯೆಟ್ ಕಡೆ ಹೊರಟಿತು. ನಮ್ಮನ್ನು ಭಾರೀ ಸಶಸ್ತ್ರ ಪೋಲೀಸ್ ಪಡೆ ಹಿಂಬಾಲಿಸುತ್ತಿತ್ತು. "ಚರಕಾ ಚಲಾ ಚಲಾಕೇ ಲೇಂಗೇ ಸ್ವರಾಜ್ಯ ಲೇಂಗೇ", "ನಾವೆಂತ ಮನುಜರ್ಹೇಳಿ ಸ್ವಾತಂತ್ರ್ಯವಿಲ್ಲದವರು, ಸ್ವರಾಜ್ಯವಿಲ್ಲದವರು, ನೀವಾರು ಎನಲು ಅವರೂ, ನಿಮ್ಮ ದಾಸರೆನ್ನುವವರೂ", ಈ ಕರುಳು ಕತ್ತರಿಸುವ ದೇಶಭಕ್ತಿಗೀತೆಗಳನ್ನು ಹಾಡುತ್ತ ಶಿಸ್ತಿನ ಸಿಪಾಯಿಗಳಂತೆ, ಯಾವ ತೊಂದರೆ, ಅನಾಹುತಗಳಿಗೂ ಆಸ್ಪದ ಕೊಡದೆ ಸಾಗಿದೆವು ಮೆರವಣಿಗೆಯಲ್ಲಿ. ಇದೇ ನಮ್ಮ ಕೊನೆಯ ಮೆರವಣಿಗೆ.

ಸೆಂಟ್ರಲ್ ಕಾಲೇಜು ಪೆವಿಲಿಯನ್ನಿನಲ್ಲಿ ಪೋಲೀಸಿನವರು ಬಿಡಾರ ಬಿಟ್ಟಿದ್ದರು. 144ನೇ ಸೆಕ್ಷನ್ ಜಾರಿಯಲ್ಲಿತ್ತು. ಮುಂದಿನ ಕಾರ್ಯಕ್ರಮಗಳನ್ನು ಚರ್ಚಿಸಲು ಸೆಂಟ್ರಲ್ ಕಾಲೇಜು ಯೂನಿಯನ್ನಿನಲ್ಲಿ ಗುಟ್ಟಾಗಿ ಸೇರುತ್ತಿದ್ದೆವು.

ಒಂದು ಸಂಜೆ ಆರು ಘಂಟೆಗೆ ಮೀಟಿಂಗ್ ಕರೆದಿತ್ತು. ನಾನೂ, ನನ್ನಿಬ್ಬರು ಗೆಳತಿಯರೂ ಪೆವಿಲಿಯನ್ ಮೂಲಕ ಈಗ ಸರ್ಕಾರಿ ಲಾ ಕಾಲೇಜು ಇರುವ ಯೂನಿಯನ್ನಿನ ಕಡೆ ಹೋಗುತ್ತಿದ್ದೆವು. ಇನ್ನೇನು ಗೇಟು ದಾಟಿ ಹತ್ತು ಹೆಜ್ಜೆ ಹೋಗಿರಬಹುದು. ಇದ್ದಕ್ಕಿದ್ದಂತೆಯೇ ದೀಪಗಳೆಲ್ಲಾ ಆರಿಹೋಗಿ ಕತ್ತಲಾಯಿತು. ಮುಂದೆ ಹೆಜ್ಜೆ ಇಡಲೋ ಬೇಡವೋ ಎನ್ನುವಷ್ಟರಲ್ಲಿ 'ಢಂ ಢಂ ಢಂ' ಗುಂಡುಗಳ ಶಬ್ದ, ಎಲ್ಲೆಲ್ಲಿನವರು ಅಲ್ಲಲ್ಲೇ. ಅನೇಕರು ಟ್ರೆಂಚುಗಳಲ್ಲಿ, ಎ.ಆರ್.ಪಿ. ಗೋಡೆಗಳ ಹಿಂದೆ ಅವಿತಿಟ್ಟುಕೊಂಡರು. ನಾನೂ, ನನ್ನ ಗೆಳತಿಯರೂ ಏನು ಮಾಡಲೂ ತೋರದೆ ಚಪ್ಪಲಿಗಳನ್ನು ತೆಗೆದು ಸದ್ದಿಲ್ಲದಂತೆ ಮುಂದೆ ಸಾಗಿದೆವು. "ಯಾರಲ್ಲಿ ?" ಪೋಲೀಸ್ ಪೇದೆ ಅರಚಿದ. ಮತ್ತೆ ತನ್ನ ಕೈಲಿದ್ದ ಟಾರ್ಚನ್ನು ನಮ್ಮ ಮುಖದ ಮೇಲೆ ಬಿಟ್ಟು ನೋಡಿ, "ಯಾರಮ್ಮ ನೀವು ? ಇಲ್ಲಿ ಮೀಟಿಂಗ್ ಮಾಡೋಕೆ ಬಂದ್ರಾ ! ಅತ್ಕಡೆ ಮೈಸೂರು ಬ್ಯಾಂಕ್ ಚೌಕದಲ್ಲಿ ಗುಂಡು ಹಾರಿಸ್ತಿದಾರೆ. ನೀವ್ಯಾಕೆ ಈ ಕಡೆ ಬಂದ್ರಿ? ನಿಮ್ಮನ್ನ ನಾನು ಇಲ್ಲೇ ದಸ್ತಗಿರಿ ಮಾಡ್ತೀನಿ" ಎಂದು ಕೂಗಾಡಿದ. ಅವನಿಗೆ ಏನೋ ಸಮಾಧಾನ ಹೇಳಿ ತಪ್ಪಿಸಿಕೊಂಡೆವು.

ಕಬ್ಬನ್ ಪೇಟೆಯಲ್ಲಿ ಗಲಾಟೆ ಜಾಸ್ತಿಯಾಗಿತ್ತು. ಅಲ್ಲಿ ನನ್ನ ಸಹಪಾಠಿ ಗಿರಿಜಾ ಮನೆ ಇತ್ತು. ಇನ್ನೊಂದು ದಿನ ಸಾಯಂಕಾಲ ಅವರ ಮನೆಯಲ್ಲಿ ಮುಂದಿನ ಕಾರ್ಯಕ್ರಮದ ತೀರ್ಮಾನಕ್ಕೆ ಸಭೆ ಕರೆದಿತ್ತು. ಸುಮಾರು ಸಾಯಂಕಾಲ 5 ಘಂಟೆ ಸಮಯದಲ್ಲಿ ನಾನು ಶ್ರೀರಾಮಪುರದಿಂದ ರೈಲ್ವೆ ಲೈನಿನ ಮೇಲೆ ನಡೆದು ರಾಜಾ ಮಿಲ್ ಕೆರೆ, ಧರ್ಮಾಂಬುಧಿ ಕೆರೆ, ಕಿಲಾರಿ ರೋಡಿನ ಮೂಲಕವಾಗಿ ಏನೂ ತಿಳಿಯದವಳಂತೆ

ನನ್ನ ಗೆಳತಿ ಡಿ॥ ಸುಬ್ಬಮ್ಮನ ಜೊತೆಯಲ್ಲಿ ಹಳ್ಳಿಯವರಂತೆ ಮಾತಾಡುತ್ತಾ, ಕಡಲೆಕಾಯಿ ತಿನ್ನುತ್ತಾ, ಗಿರಿಜಾ ಮನೆ ಸೇರಿದೆ. ಅಲ್ಲಿ ಕೆಲವು ವಿದ್ಯಾರ್ಥಿಗಳೂ, ಕಾರ್ಮಿಕ ಮುಖಂಡರೂ ಮತ್ತು ಅನ್ನಪೂರ್ಣಮ್ಮನವರೂ ಕುಳಿತಿದ್ದರು. ಒಂದು ಕಡೆಯಲ್ಲಿ 'ಕ್ರಾಂತಿ', 'ಹರಿಜನ' ಪತ್ರಿಕೆಗಳೂ ರಾಶಿರಾಶಿಯಾಗಿ ಬಿದ್ದಿದ್ದವು. ಆ ಕಾಲಕ್ಕೆ ಆ ಪೇಪರ್‌ಗಳ ಮೇಲೆ ಪ್ರತಿಬಂಧಕಾಜ್ಞೆ ವಿಧಿಸಿದ್ದರು. ಮುಂದೆ ಚಳವಳಿಯನ್ನು ಹೇಗೆ ನಡೆಸಬೇಕೆಂಬ ಸಂದೇಶವನ್ನು ಆ ಪೇಪರ್‌ಗಳು ಸಾರುತ್ತಿದ್ದವು. ಇದನ್ನು ಮನೆಮನೆಗೂ ಹಂಚಿ ಸುದ್ದಿಯನ್ನು ಪ್ರಚಾರಮಾಡಬೇಕಾಗಿತ್ತು. ಆ ಹಂಚುವ ಕೆಲಸ ನನ್ನ ಪಾಲಿಗೂ ಬಿತ್ತು. ಯಾವತ್ತೂ ಇಂತಹ ಕೆಲಸಗಳನ್ನು ನಾನು ಮಾಡಿರಲಿಲ್ಲ. ಮೇಲಾಗಿ ನನ್ನ ತಂದೆಯವರು ಸರ್ಕಾರಿ ನೌಕರರು. ಮನೆಗೆ ಒಯ್ದರೆ ತಂದೆ ಏನಂತಾರೋ ಎಂದು ಯೋಚಿಸುತ್ತಾ ನನಗೆ ಬೇಕಾದಷ್ಟು ಪೇಪರ್‌ಗಳನ್ನು ಒಂದು ಚೀಲದಲ್ಲಿ ಹಾಕಿಕೊಂಡೆ. ಅಷ್ಟರಲ್ಲಿ 'ಢಂಢಂ' ಗುಂಡುಗಳ ಶಬ್ದ ; ಕುದುರೆಗಳ ಓಡಾಟದ ಶಬ್ದ ; ಎಲ್ಲೆಲ್ಲೂ ಚೀರಾಟ, ಕೂಗಾಟ. ಗುಂಡುಗಳ ಸುರಿಮಳೆ. ನನಗೆ ಒಳಗಿರಲು ಮನಸ್ಸಾಗಲಿಲ್ಲ. ನನ್ನ ಕೈಗೆ ಒಂದು ಗೂಡೆ ತುಂಬ ರಾಗಿ ತುಂಬಿಕೊಟ್ಟು, "ಮಹಡಿ ಮೇಲೆ ಹೋಗಿ, ಬಿಸಿಲುಮಚ್ಚಿನಲ್ಲಿ ನಿಂತು ಇದನ್ನು ಕೆಳಗಡೆ ಚೆಲ್ಲಿ" ಅಂತ ಆ ಮನೆಯವರು ನನಗೆ ಹೇಳಿದರು. ಗಿರಿಜನ ಅಕ್ಕ ಡಬ್ಬದಲ್ಲಿ ಮೆಣಸಿನ ಪುಡಿ ಹಿಡಿದು ಹಿಡಿ ಹಿಡಿ ಕೆಳಗೆ ತೂರುತ್ತಿದ್ದರು.

ಸುಮಾರು ರಾತ್ರಿ 7 ಘಂಟೆಯ ಸಮಯ. ಒಬ್ಬ ಸ್ವಯಂಸೇವಕ (ರಾಮದಾಸ್) ಓಡೋಡಿ ಬಂದು ನನ್ನ ಕೈಲಿ ಒಂದು ಪೆಟ್ಟಿಗೆ ಕೊಟ್ಟು "ಸಿಸ್ಟರ್! ಇದನ್ನು ಹೊರಗೆ ತೆಗೀಬೇಡಿ. ಭದ್ರವಾಗಿ ಯಾರ ಕೈಗೂ ಸಿಕ್ಕದಂತೆ ನಿಮ್ಮ ಮನೇಲಿಡಿ. ನಾಳೆ ಸಾಯಂಕಾಲ ಬಂದು ತೆಗೆದುಕೊಳ್ತೀನಿ. ನೀವು ಮನೆಗೆ ಷೇಖ್‌ಸಾಬೀ ಜಟಕಾ ಗಾಡಿಯಲ್ಲಿ ಹೋಗಿ. ಅವನ ಹತ್ತಿರ ಕರ್ಫ್ಯೂಗೆ ಪಾಸ್ ಇದೆ. ಘೋಷಾ ಹಾಕಿರುತ್ತೆ ಗಾಡಿಗೆ. ಅವನು ತುಂಬಾ ನಂಬಿಗಸ್ಥ. ನೀವು ಈ ಸಾಮಾನುಗಳನ್ನು ಜಾಗ್ರತೆಯಾಗಿ ತೆಗೆದುಕೊಂಡು ಹೋಗಿ. ಅದು ಡೈನಾಮೈಟ್!" ಎಂದು ನನಗೆ ಎಚ್ಚರಿಕೆ ಕೊಟ್ಟ. ನಾವು ಆ ಘೋಷಾ ಹಾಕಿದ ಗಾಡಿಯಲ್ಲಿ ಸುಖವಾಗಿ ಮನೆ ಸೇರುವ ಹೊತ್ತಿಗೆ ಮತ್ತೊಬ್ಬ ಸ್ವಯಂಸೇವಕ ವಿದ್ಯಾರ್ಥಿ, ಆ ದಿವಸ ರಾತ್ರಿಗೆ ನಮ್ಮ ಮನೆ ಸರ್ಚ್ ಮಾಡುವರೆಂದು ಸುದ್ದಿ ತಲುಪಿಸಿದ. 'ಹರಿಜನ', 'ಕ್ರಾಂತಿ' ಪೇಪರ್‌ಗಳ ಕಂತೆ, ಜೊತೆಯಲ್ಲಿ ಡೈನಾಮೈಟ್‌ಗಳು ಬೇರೆ ಮನೆಯಲ್ಲಿ. ಏನು ಮಾಡಲೂ ತೋಚಲೇ ಇಲ್ಲ. ನಮ್ಮ ತಂದೆ, ತಾಯಿಯವರನ್ನು ತರಾಟೆಗೆ ತೆಗೆದುಕೊಂಡರು. "ಇದಕ್ಕೆಲ್ಲಾ ನಿನ್ನ ಉತ್ತೇಜನವೇ ಕಾರಣ. ಹೆಣ್ಣುಮಕ್ಕಳು ಎಷ್ಟರಲ್ಲಿರಬೇಕೋ ಅಷ್ಟರಲ್ಲಿರಬೇಕು, ಡೈನಾಮೈಟ್ ಬೇರೆ ತಂದಿಟ್ಕೊಂಡಿದ್ದಾಳೆ! ಈ ಪೇಪರ್ ಏನ್ ಮಾಡೋದು? ಮನೆ ಬೇರೆ ರಾತ್ರಿ ಶೋಧಿಸುತ್ತಾರಂತೆ. ಪೋಲೀಸಿನವರ ಕೈಗೇನಾದ್ರೂ ಸಿಕ್ಕಿದ್ರೆ ನಮ್ಮನ್ನೆಲ್ಲ

ಜೈಲಿಗ್ಹಾಕಿ, ಕ್ರಿಮಿನಲ್ ಕೇಸ್ ಹಾಕ್ತಾರೆ" ಎಂದು ಏನೇನೋ ಒದರುತ್ತಿದ್ದರು. ಅಷ್ಟುಹೊತ್ತಿಗೆ ನನ್ನ ಪೆಟ್ಟಿಗೆಯಲ್ಲಿ ಡೈನಾಮೈಟ್ ಇದ್ದ ಪೆಟ್ಟಿಗೆ ಇಟ್ಟು, ಅದರ ಮೇಲೆ ನನ್ನ ಲಂಗ, ಸೀರೆ ಮೊದಲಾದವುಗಳನ್ನು ಜೋಡಿಸಿ, ಮೇಲ್ಗಡೆ ಪಠ್ಯಪುಸ್ತಕಗಳನ್ನು ಓರಣವಾಗಿರಿಸಿದೆ. ಪತ್ರಿಕೆಗಳನ್ನು ಒಂದು ಕೈ-ಸೂಟ್‌ಕೇಸಿನಲ್ಲಿಟ್ಟು ಹಿತ್ತಲಿನಲ್ಲಿ ಗಿಡಗಳಿಗೆ ನೀರು ಹಾಕಲು ತೋಡಿದ್ದ ಗುಂಡಿಯಲ್ಲಿ ಸೂಟ್‌ಕೇಸಿಟ್ಟು ಚೆನ್ನಾಗಿ ನೀರು ತುಂಬಿದೆ.

ಸುಮಾರು ರಾತ್ರಿ ಹನ್ನೊಂದೂವರೆ ಇರಬಹುದು. ಬಾಗಿಲು ಬಡಿಯುವ ಶಬ್ದ. ನಾನು ಬಾಗಿಲು ತೆರೆದೆ. ಸಿ.ಐ.ಡಿ. ಇನ್‌ಸ್ಪೆಕ್ಟರ್ ರಾಜಗೋಪಾಲ್, ಮನೆ ಶೋಧಿಸಲು ಅನುಮತಿ ತೋರಿಸಿದರು. "ನೀವ್ಯಾರ‍್ಯಾರು ಮನೇಲಿದ್ದೀರಿ? ಬೇರೆ ಯಾರಾದರೂ ಇದ್ದಾರೆಯೇ?" ಎಂದು ನನ್ನನ್ನು ಕೇಳಿದರು. "ಬೇರೆ ಯಾರ‍್ಯಾರನ್ನ ನಾವೇಕೆ ಇಲ್ಲಿ ಇರಿಸಿಕೊಳ್ಳೋಣ? ನಾನು, ನಮ್ಮ ತಂದೆ, ತಾಯಿ, ತಮ್ಮ, ತಂಗಿ ಹೊರತು ಇನ್ಯಾರೂ ಇಲ್ಲ. ಹಿಂದೆ ಬಾಡಿಗೆ ಮನೆಯವರಿದ್ದಾರೆ. ಬೇಕಾದರೆ ಒಳಗೆ ಬಂದು ನೋಡಿ" ಎಂದೆ. ಸ್ವಲ್ಪ ಹೊತ್ತು ಅವರವರಲ್ಲೇ ಮಾತುಕತೆ, ಚರ್ಚೆ ಆದಮೇಲೆ, ಬಂದ ಪೋಲೀಸ್ ವ್ಯಾನಿನಲ್ಲೇ ಹಿಂದಿರುಗಿದರು. ಆಗಸ್ಟ್ 22, 1942ರಂದು ಎಂ. ಎ. ವಾಸುದೇವರಾವ್, ಅದೇ ದಿನ ಎಲ್. ಆರ್. ರಾಮರಾವ್ (ಇಂಜಿನಿಯರಿಂಗ್ ಕಾಲೇಜ್ ವಿದ್ಯಾರ್ಥಿ) ದಸ್ತಗಿರಿಯಾದರು. 23ನೆಯ ಆಗಸ್ಟ್ 1942ರಂದು ಎಂ. ಎ. ಸೇತೂರಾವ್ ದಸ್ತಗಿರಿಯಾದರು.

ಕಾಲೇಜು, ಸ್ಕೂಲ್‌ಗಳನ್ನು ಸರ್ಕಾರವೇ ಬಂದುಮಾಡಿತು. ಹಾಸ್ಟೆಲ್‌ಗಳೂ ಬಂದ್ ಆದವು. ಚಳವಳಿಯಲ್ಲಿ ಭಾಗವಹಿಸುತ್ತಿದ್ದ ವಿದ್ಯಾರ್ಥಿವಿದ್ಯಾರ್ಥಿನಿಯರಿಗೆ ಊಟ-ವಸತಿಗಳಿಗೆ ಬಹಳ ಕಷ್ಟವಾಯಿತು. ಮಹಾರಾಣಿ ಕಾಲೇಜ್ ಹಾಸ್ಟೆಲಿನಲ್ಲಿದ್ದ ಟಿ. ಎಸ್. ಪೊನ್ನಮ್ಮಾಳ್, ಕೊಡಗಿನ ಮೀನಾಕ್ಷಿ, ಮೈಸೂರಿನಿಂದ ಬಂದ ವಿದ್ಯಾರ್ಥಿ ರಾಮನಾಥ, ವೇಣುಗೋಪಾಲ ಇವರಿಗೆ ಅವರ ಬಳಗವಿದ್ದರೂ ಅವರನ್ನು ಮನೆಗೆ ಸೇರಿಸಲಿಲ್ಲ. ಅವರಿಗೆಲ್ಲಾ ನಮ್ಮ ಮನೆಯಲ್ಲಿ ಆಶ್ರಯ ದೊರೆಯಿತು. ಬಸವನಗುಡಿಯಿಂದ ಆರ್. ಕೋಮಲ, ಮಂಗಳ, ಮೋಹನ, ಜಯ, ಅಂಬು, ಜಿ. ವೆಂಕಟಲಕ್ಷ್ಮಿ, ವಸಂತಿ ಪಿ. ಷಾ, ಶಾಂತಾ, ಹಂಸಾ ಮಾನೆ, ಶಕುಂತಳಾ ಮಾನೆ, ಇಂದಿರಾ ಮಾನೆ, ಕ್ಷಮಾ, ರಾಜಲಕ್ಷ್ಮಿ, ಪದ್ಮಾ, ಗಿರಿಜಾ, ದಿ|| ಮಧುರಾ, ಸರಸ್ವತೀ ಇನ್ನೂ ಅನೇಕರು ಚಳವಳಿಗೆ ಬರುತ್ತಿದ್ದರು. ಪ್ರತಿದಿನ ಒಂದೊಂದು ಕಡೆ ಪಿಕೆಟಿಂಗ್ ನಡೆಸಿ, ಮೆರವಣಿಗೆ ನಡೆಸುತ್ತಿದ್ದೆವು. ನೂರು ಜನರು ದಸ್ತಗಿರಿಯಾದರು. ಮತ್ತೆ ಕೆಲವರು ಕ್ಷಮಾಪಣೆಗೆ ಪತ್ರ ಬರೆದುಕೊಟ್ಟು ವಾಪಸ್ ಬಂದರು. ಮೊದಲ ಬಾರಿ ನಮ್ಮನ್ನು ದಸ್ತಗಿರಿ ಮಾಡಿ ಊರಾಚೆ ಕರೆದೊಯ್ದು ಬಿಟ್ಟರು. ಅನಂತರ ಮೈನರ್ ಗರ್ಲ್ಸ್ ಎಂದು ಬಿಟ್ಟುಬಿಟ್ಟರು.

ಕೊನೆಗೆ ಪೊನ್ನಮ್ಮ, ನಾನು, ಕೋಮಲ, ಅಂಬು, ವೆಂಕಟಲಕ್ಷ್ಮಿ, ಜಯಾ, ಮಂಜುಳ, ತುಳಸಿ ಮಾತ್ರ ಉಳಿದೆವು. ನನ್ನ ತಂಗಿ ವಿಮಲಾ ಆಗತಾನೇ ಮಾಧ್ಯಮಿಕ ಶಾಲೆ ದಾಟಿದ್ದವಳು, ಮೆರವಣಿಗೆಯಲ್ಲಿ ಭಾಗವಹಿಸಿ ಜೈಲು ಸೇರಿದ್ದಳು. ಜೈಲಿನಲ್ಲಿ ಸುಳ್ಳು ಹೆಸರು, ಅಡ್ರೆಸ್, ವಯಸ್ಸು ಕೊಟ್ಟು ಕೊನೆವರೆಗೂ ಜೈಲಿನಲ್ಲಿ ಇದ್ದಳು. ನಮ್ಮ ತಾಯಿ, ತಮ್ಮ ಎಲ್ಲರೂ ಚಳವಳಿಯಲ್ಲಿ ಭಾಗವಹಿಸಿದ್ದರು.

ಕಮಲಾದೇವಿ ಚಟ್ಟೋಪಾಧ್ಯಾಯ, ರತ್ನಮ್ಮ ಮಾಧವರಾವ್ ಇವರು ನಮಗೆ "ನೀವುಗಳು ದಸ್ತಗಿರಿಯಾಗಬೇಡಿರಿ. ಹೇಗಾದರೂ ತಲೆಮರೆಸಿಕೊಂಡು ಈ ಚಳವಳಿಯನ್ನು ಮುಂದುವರಿಸಿ" ಎಂದು ಜೈಲಿನಿಂದ ಹೇಳಿಕಳಿಸಿದ್ದರು.

ಈಗಿನ ಸರ್ಕಾರಿ ವೈದ್ಯಕೀಯ ಕಾಲೇಜು, ಆಗ ಎಲ್.ಎಂ.ಪಿ. ಸ್ಕೂಲಾಗಿತ್ತು. ಅಲ್ಲಿನ ವಿದ್ಯಾರ್ಥಿಗಳು ಈ ಚಳವಳಿಯಲ್ಲಿ ಭಾಗವಹಿಸದೆ, ತರಗತಿಗೆ ಹಾಜರಾಗುತ್ತಿದ್ದರು. ಆ ದಿವಸ ನಾವುಗಳು, ಅನೇಕ ಶಾಲಾಬಾಲಕಬಾಲಕಿಯರೂ, ಎಲ್.ಎಂ.ಪಿ. ಸ್ಕೂಲ್ ಬಳಿ ಪಿಕೆಟಿಂಗ್ ನಡೆಸಿದೆವು. ಪೋಲೀಸ್ ಪಡೆ ಸಿದ್ಧವಾಗಿತ್ತು. ಗುಂಡು ಹಾರಿಸಲು ಆರ್ಡರ್ ಕೊಟ್ಟರು. ಮೊದಲು ಟಿಯರ್ ಗ್ಯಾಸ್ ಬಿಡಲು ಆರ್ಡರ್ ಕೊಟ್ಟರು. ನಮ್ಮ ಕೈಗೆ ಈರುಳ್ಳಿ ಬಂತು. ಯಾವ ತೊಂದರೆಗೂ ಅವಕಾಶ ಕೊಡದೆ ರಾಮಭಜನೆ ಮಾಡುತ್ತಿದ್ದ ನಮ್ಮ ಮೇಲೆ ಯಾವುದೇ ಆರ್ಡರುಗಳನ್ನು ಕೊಡಕೂಡದೆಂದು, ಅಲ್ಲಿ ನಮ್ಮನ್ನು ನೋಡಲು ಬಂದಿದ್ದ ಕೆಲವು ಹಿರಿಯ ವ್ಯಕ್ತಿಗಳು, ವಿಶ್ವೇಶ್ವರಪುರದಲ್ಲಿ ವಾಸಿಸುತ್ತಿದ್ದ ಮಂತ್ರಿ ಎ. ವಿ. ರಾಮನಾಥನ್‌ರಿಗೆ ತಿಳಿಸಿದರು. ಭಜನೆ ಮಾಡುತ್ತಿರುವ ವಿದ್ಯಾರ್ಥಿಗಳ ಮೇಲೆ ಗುಂಡು ಹಾರಿಸಕೂಡದೆಂದು ಅವರಿಂದ ಸಂದೇಶ ಬಂತು. ನಮ್ಮನ್ನು ನೋಡಲು ಫೋರ್ಟ್ ಹೈಸ್ಕೂಲ್ ಆವರಣದಲ್ಲಿ ಭಾರಿ ಗುಂಪು ಸೇರಿತ್ತು. ಇದ್ದಕ್ಕಿದ್ದಂತೆಯೇ ಬೆತ್ತ ಹಿಡಿದ ನೂರಾರು ಪೋಲೀಸರು ಆ ಮಕ್ಕಳನ್ನು ಅಟ್ಟಿಸಿಕೊಂಡು ಹೋದರು. ಪೋಲೀಸಿನವರೊಡನೆ ನಾನೂ ಓಡಿದೆ. ಹೊಡೆಯುವವರಿಗೆ ಅಡ್ಡಲಾಗಿ ನಿಂತೆ. ನನ್ನ ಕೈಗೆ, ತಲೆಗೆ, ಕಾಲಿಗೆ ಬೆತ್ತದ ಹೊಡೆತ ಜೋರಾಗಿ ಬಿತ್ತು. ತಡೆಯಲಾರದೆ ಕೋಪದಿಂದ ಅವನ ಕೈಬೆತ್ತ ಕಿತ್ತುಕೊಂಡು ಹೊಡೆಯಲು ಹೋದೆ. ನಾಲ್ಕೈದು ಏಟು ಆ ಪೋಲೀಸಿನವನಿಗೆ ಹಾಕುವಲ್ಲಿ ವಿ|| ವಿನ್ ಸಾಹೇಬರು ಸ್ಥಳಕ್ಕೆ ಬಂದು ನನ್ನ ಕೈಲಿದ್ದ ಬೆತ್ತವನ್ನು ಕಿತ್ತು, ಪೋಲೀಸಿನವನಿಗೆ ಕೊಡುತ್ತಾ "ಶೇಮ್ ಆನ್ ಯು!" ಎಂದರು. ಈ ಸುದ್ದಿ ಕಾಳ್ಗಿಚ್ಚಿನಂತೆ ಹಬ್ಬಿತು. ಸಾವಿರಾರು ಜನರು ನಮ್ಮನ್ನು ನೋಡಲು ಬಂದರು. ನಾನು ಏಟು ಬಿದ್ದವರಿಗೆ ಪ್ರಥಮ ಚಿಕಿತ್ಸೆ ನಡೆಸುತ್ತಿದ್ದೆ. ಬಂದವರೆಲ್ಲಾ, "ನಿನಗೆಲ್ಲಿ ಏಟು ಬಿತ್ತು? ಪೋಲೀಸಿನವನಿಗೆ ಹೊಡೆಯಲು ನಿನಗೆಷ್ಟು ಧೈರ್ಯ? ಹೀಗಿರಬೇಕು ಹೆಣ್ಣುಮಕ್ಕಳು!" ಮುಂತಾಗಿ ಮಾತನಾಡುತ್ತಿದ್ದರು.

ಆ ದಿನಸ ನಾವುಗಳೆಲ್ಲರೂ (ಪೊನ್ನಮ್ಮ, ಅಂಬು, ರುಕ್ಮಿಣಿ, ಪದ್ಮ, ಕೋಮಲ,

ಮಂಗಳ) ಮತ್ತು ಅನೇಕ ಎಲ್.ಎಂ.ಪಿ. ವಿದ್ಯಾರ್ಥಿಗಳು ಕೋಟೆ ಹೈಸ್ಕೂಲಿನ ಆವರಣದಲ್ಲಿ, ಬಿಸಿಲು ಮಳೆ ಎನ್ನದೆ, ಕುಳಿತ ಸ್ಥಳದಿಂದ ಕದಲದೆಯೇ 'ಉಪವಾಸ ವ್ರತ'ವನ್ನು ಆಚರಿಸಿದೆವು. ಸುಮಾರು ಮಧ್ಯಾಹ್ನ 4 ಘಂಟೆ ಸಮಯದಲ್ಲಿ ನಮ್ಮ ಕಾಲೇಜಿನ ಅಧ್ಯಾಪಕಿ ರತ್ನಮ್ಮ, ಅವರ ಅಕ್ಕ ಡಾ|| ಶಾರದಮ್ಮ, ದೇವುಡು ನರಸಿಂಹಶಾಸ್ತ್ರಿ, ಡಿ. ವಿ. ಗುಂಡಪ್ಪ ಸ್ಥಳಕ್ಕೆ ಬಂದು ನಮಗೆ ಸತ್ಯಾಗ್ರಹ ನಿಲ್ಲಿಸಬೇಕೆಂದೂ, ಅಷ್ಟು ದೊಡ್ಡ ಪೋಲೀಸ್ ಪಡೆಯ ಮುಂದೆ ನಾವು ವೃಥಾ ಶ್ರಮಪಡುತ್ತಿರುವೆ ವೆಂದೂ, ಇದನ್ನು ಬಿಟ್ಟು ಯಾವುದಾದರೂ ರಚನಾತ್ಮಕ ಕೆಲಸ ಮಾಡಬೇಕೆಂದೂ ಉಪದೇಶ ಮಾಡಿದರು. ರತ್ನಮ್ಮನವರು ನಮ್ಮನ್ನೆಲ್ಲಾ ಅವರ ಮನೆಗೆ ಕರೆದುಕೊಂಡು ಹೋಗಿ ಊಟ ಹಾಕಿದರು.

ನಾನು, ಪೊನ್ನಮ್ಮ, ಮೀನಾಕ್ಷಿ, ಕೋಮಲ ತುಮಕೂರಿಗೂ ಹೋಗಿ ಅಲ್ಲಿನ ವಿದ್ಯಾರ್ಥಿನಿಯರನ್ನುದ್ದೇಶಿಸಿ ಮಾತನಾಡಿದೆವು. ಮೈಸೂರಿಗೆ ಹೋಗಿ ಅಲ್ಲಿನ ಮಹಾರಾಣಿ ಕಾಲೇಜಿನಲ್ಲಿ ಪಿಕೆಟ್ ಮಾಡಿದೆವು. ಅಲ್ಲಿ ಯಶೋಧರಮ್ಮ ದಾಸಪ್ಪ ನವರ ಮನೆಗೆ ಹೋಗಿ ಅವರ ಸಲಹೆಗಳನ್ನು ಕೇಳಿದೆವು. ನಮ್ಮ ಮೇಲೆ ದಸ್ತಗಿರಿ ವಾರಂಟ್ ಇದ್ದುದರಿಂದ ನಾವು ತಲೆಮರೆಸಿಕೊಂಡು ಊರಿಂದ ಊರಿಗೆ, ಒಂದು ಮನೆಯಿಂದ ಬೇರೊಂದು ಮನೆಗೆ ಹೋಗುತ್ತಿದ್ದೆವು.

ಕಾರ್ಮಿಕರು ಚಳವಳಿಯಲ್ಲಿ ಸಂಪು ಹೂಡಲು, ಅವರಿಗೆ ಹೊಟ್ಟೆಗಿಲ್ಲದಾಗ, ಸರ್ದಾರ್ ವೆಂಕಟರಾಮಯ್ಯ, ಎನ್. ಡಿ. ಶಂಕರ್, ಅವರ ಮನೆಗಳಿಗೆ ಘೋಷಾ ಗಾಡಿಗಳಲ್ಲಿ ರಾತ್ರಿವೇಳೆ ಹೋಗಿ ಕಾರ್ಮಿಕರಿಗೆ ಹಣ ಹಂಚುವ ಬಗ್ಗೆ ಮತ್ತು ಮುಂದಿನ ಕೆಲಸದ ಬಗ್ಗೆ ತಿಳಿಯುತ್ತಿದ್ದೆವು. ಅವರು ಕೊಟ್ಟ ಸಂದೇಶಗಳನ್ನು ಸೆಂಟ್ರಲ್ ಜೈಲಿನಲ್ಲಿ ಕೈದಿಯಾಗಿದ್ದ ಕಮಲಾದೇವಿ ಚಟ್ಟೋಪಾಧ್ಯಾಯ ಅವರಿಗೆ ತಲುಪಿಸುತ್ತಿದ್ದೆವು. ಆಗ ಕೊಟ್ಟ ಸಲಹೆಗಳನ್ನು ಕಾರ್ಮಿಕ ನಾಯಕರುಗಳಿಗೆ ರಾತ್ರೋರಾತ್ರಿ ಕಾಲ್ನಡಿಗೆಯಲ್ಲಿ ಬಂದು ತಲುಪಿಸುತ್ತಿದ್ದೆವು.

ಒಂದು ತಿಂಗಳವರೆಗೆ ಕಾರ್ಖಾನೆಗಳೆಲ್ಲ ಬಂದಾಗಿತ್ತು. ಕಾರ್ಮಿಕರನ್ನೆಲ್ಲಾ ದಸ್ತಗಿರಿ ಮಾಡಿ ಜೈಲಿನಲ್ಲಿರಿಸಿದ್ದರು. ಆಗ ನಾವು ಪ್ರತಿ ಮನೆಗೂ ಹೋಗಿ ದವಸ ಧಾನ್ಯ, ಹಿಟ್ಟು, ಹಳೇ ಬಟ್ಟೆ ಮುಂತಾದುವುಗಳನ್ನು ಸಂಗ್ರಹಿಸಿ ಕಾರ್ಮಿಕ ಸಂಸಾರ ಗಳಿಗೆ ಹಂಚುತ್ತಿದ್ದೆವು. ಬೊಂಬಾಯಿನಿಂದ ಹಣ ಬರುತ್ತಿದ್ದು, ಎಂ. ಎಚ್. ಷಾ ಅವರು ಕೆಲವು ನಾಯಕರುಗಳ ಕೈಲಿ ಅದನ್ನು ಕೊಟ್ಟು ಕಾರ್ಮಿಕರಿಗೆ ಹಂಚಲು ನಮಗೆ ತಿಳಿಸುತ್ತಿದ್ದರು. ಕಾರ್ಮಿಕ ಮುಖಂಡ, ವಿಧ್ವಂಸಕ ಕೃತ್ಯದಲ್ಲಿ ಪ್ರವೀಣ, ಭಯವರಿಯದ ವೀರ, ಪ್ರಭುದೇವ್ ಕಳುಹಿಸಿದ ಸ್ಫೋಟಕ ವಸ್ತುಗಳನ್ನು, ಡೈನಾ ಮೈಟ್‌ಗಳನ್ನು ಸುರಕ್ಷಿತವಾಗಿರಿಸಿ, ಅದನ್ನು ಎಲ್ಲಿಗೆ ತಲುಪಿಸಬೇಕೋ ಅಲ್ಲಿಗೆ ನಾನು ಒಬ್ಬಳೇ ಹೋಗಿ ತಲುಪಿಸಿ ಬರುತ್ತಿದ್ದೆ.

ಪೋಲೀಸಿನವರು ಪ್ರಭುದೇವ್ ಅವರನ್ನು ದಸ್ತಗಿರಿ ಮಾಡಲು ಊರೆಲ್ಲಾ ಹುಡುಕಾಡುತ್ತಿದ್ದರು. ಒಬ್ಬ ಕಾರ್ಮಿಕನ ಮನೆಯಲ್ಲಿ ಆತ ಅವಿತಿಟ್ಟುಕೊಂಡಿದ್ದಾಗ, ಆ ಮನೆಯನ್ನು ಶೋಧಿಸಲು ಪೋಲೀಸಿನವರು ಬಂದರು. ಆ ಸಮಯದಲ್ಲಿ ನಾನೂ ಅಲ್ಲಿನ ಮೀಟಿಂಗ್‌ನಲ್ಲಿ ಭಾಗವಹಿಸಿದ್ದೆ. ಮನೆಯವರಿಂದ ಒಂದು ಸೀರೆ, ಸ್ವಲ್ಪ ಹೂವು, ಬಳೆ ಪಡೆದು, ಪ್ರಭುದೇವ್ ಅವರಿಗೆ ಹೆಂಗಸಿನಂತೆ ಅಲಂಕರಿಸಲು ತೋರಿಸಿ ಕೊಟ್ಟೆ. ಹಾಗೆಯೇ ನನ್ನ ಸಂಗಡ ಪೋಲೀಸಿನವರ ಎದುರಿನಲ್ಲೇ, ಅವರನ್ನು ನನ್ನ ಗೆಳತಿಯಂತೆ ಕರೆದುಕೊಂಡು ಹೊರಬಂದೆ. ನಮ್ಮ ಮನೆಯಲ್ಲಿ ಒಂದು ದಿನ ಅವರನ್ನು ಇರಿಸಿಕೊಂಡೆ. ಕೆ. ಕಣ್ಣನ್, ಕುಮಾರನ್ ಮತ್ತು ಚೆಲ್ಲಂರವರನ್ನು ಪೋಲೀಸಿನವರು ಬೆನ್ನಟ್ಟಿಬಂದಾಗ ನಾವು ನಮ್ಮ ಮನೆಯಲ್ಲಿ ಅವರಿಗೆ ರಕ್ಷಣೆ ಕೊಟ್ಟೆವು. ಎಚ್. ಸಿ. ವೇಣುಗೋಪಾಲ್‌ರವರು ಯಾರದೋ ಮಿಲಿಟರಿ ಡ್ರೆಸ್ಸಿನಲ್ಲಿ ರಿವಾಲ್ವರ್‌ನೊಂದಿಗೆ, ಜೈಲುಗೋಡೆ ಹಾರಿ ತಪ್ಪಿಸಿಕೊಂಡು ಬಂದಾಗ, ಅವರನ್ನೂ ಮನೆಯಲ್ಲಿರಿಸಿಕೊಂಡು ಪ್ರಾಣಾಪಾಯದಿಂದ ಕಾಪಾಡಿದೆ. ಜೈಲಿನಲ್ಲಿ ಸೆರೆಯಾಗಿದ್ದ ನಮ್ಮ ವಿದ್ಯಾರ್ಥಿಗಳು ಅನೇಕರು ಕ್ಷಮಾಪಣೆ ಪತ್ರ ಬರೆದುಕೊಟ್ಟು ಹೊರಬಂದಾಗ ಉಳಿದವರು ಜೈಲಿನಲ್ಲಿ ಕೆಚ್ಚೆದೆಯಿಂದ ಕೊನೆಯ ತನಕ ಧೀರರಂತಿರಲು, ಅವರಿಗೆಲ್ಲಾ ತಿಂಡಿ, ಕಥೆ ಪುಸ್ತಕ, ಹೂವು, ಹಣ್ಣುಗಳನ್ನು ಪ್ರತಿದಿನಸ ಕಳುಹಿಸಿಕೊಡುತ್ತಿದ್ದೆವು.

ವಿದ್ಯಾರ್ಥಿಗಳು ಮತ್ತೆ ಶಾಲೆಕಾಲೇಜುಗಳಿಗೆ ಹಾಜರಾದರು. ನಾವು ಕೆಲವರು —ಎಂ. ಎ. ವಾಸುದೇವರಾವ್, ಎಂ. ಎ. ಸೇತುರಾವ್, ಎಂ. ಎ. ರಾಜಾರಾವ್, ಎಚ್. ಸಿ. ವೇಣುಗೋಪಾಲ್, ನಾನು, ವಿಮಲ, ಮೀನಾಕ್ಷಿ, ಪೊನ್ನಮ್ಮ, ಅಂಬು, ಕೋಮಲ ಮುಂತಾದವರು ಆ ವರ್ಷಪೂರ್ತಿ ಕಾಲೇಜನ್ನು ಬಹಿಷ್ಕರಿಸಿದ್ದೆವು.

ಇನ್ನೂ ಕಾರ್ಮಿಕರನೇಕರು ಸೆರೆಯಲ್ಲಿದ್ದರು ; ಮತ್ತೆ ಕೆಲವರ ಮೇಲೆ ಕೇಸು ಗಳಿತ್ತು. ಅವರ ಸಂಸಾರ ನಿರ್ವಹಿಸುವುದು ಬಹಳ ಕಷ್ಟವಾಗಿತ್ತು. ಚರಕಗಳನ್ನು ತಂದುಕೊಟ್ಟು, ಕಾರ್ಮಿಕ ಮಹಿಳೆಯರಿಗೆ ನೂಲಲು ಕಲಿಸಲು ಕೆಲವರು ನನಗೆ ಆದೇಶ ಕೊಟ್ಟರು. ಅಲಸೂರುಪೇಟೆಯಲ್ಲಿ ಆಗ ಇದ್ದ 'ಕಲಾ ಮಂದಿರ'ದ ಸುಬ್ಬ ರಾಯರು ಹತ್ತಿ ಹ್ಯಾಂಕರ್‌ಗಳನ್ನು ಒದಗಿಸಿ, ನೂತ ನೂಲಿಗೆ ಹಣ ಕೊಡುತ್ತಿದ್ದರು. ಶ್ರೀರಾಮಪುರದ ಲೇಬರ್ ಕಾಲೊನಿ, ರಾಜಾ ಮಿಲ್ ಗುಡಿಸಲು, ಮುನೇಶ್ವರನ ಗುಡಿ ಸಲು, ಹಳ್ಳದ ಗುಡಿಸಲು, ಸೀಗೆಬೇಲಿ ಗುಡಿಸಲುಗಳಿಗೆ ನಾನು ಮತ್ತು ಪೊನ್ನಮ್ಮ ಹೋಗಿ ಅವರಿಗೆ ನೂಲುವುದನ್ನು ಕಲಿಸಿ, ಅವರು ನೂತ ನೂಲನ್ನು ಕಲಾಮಂದಿರಕ್ಕೊ ಅಥವಾ ಕೋಟೆಯ ಖಾದೀ ಭಂಡಾರಕ್ಕೋ ಕೊಟ್ಟು ಹಣ ಪಡೆದು ಆ ಕಾರ್ಮಿಕ ಸಂಸಾರಕ್ಕೆ ಕೊಡುತ್ತಿದ್ದೆವು. ಅವರಿಗೆ ಆರೋಗ್ಯದ ಬಗ್ಗೆ ತಿಳಿಸುತ್ತಿದ್ದೆವು. ಸುತ್ತ ಮುತ್ತ ನಿರ್ಮಲ ವಾತಾವರಣವಿರಬೇಕೆಂದು ಬೋಧಿಸುತ್ತಿದ್ದೆವು. ಅಕ್ಷರಾಭ್ಯಾಸ ಕೂಡ ಮಾಡಿಸಿದೆವು. 1943ರಲ್ಲಿ ಮತ್ತೆ ಕಾಲೇಜುಗಳಿಗೆ ಹೇಡಿಗಳಂತೆ ಹೋದೆವು.

ಆ ವರ್ಷ 'ವಿದ್ಯಾರ್ಥಿ ಕಾಂಗ್ರೆಸ್' ಎಂಬ ಸಂಸ್ಥೆಯನ್ನು ಪ್ರಾರಂಭಿಸಿ, ಮಹಿಳಾ ಶಾಖೆಗೆ ನಾನೇ ಕಾರ್ಯದರ್ಶಿಯಾದೆ. ಐ.ಎನ್.ಎ.ಗಾಗಿ ಹಣ ಸಂಗ್ರಹಿಸಿಕೊಟ್ಟೆ. ವಿದ್ಯಾರ್ಥಿನಿಯರಲ್ಲಿ ದೇಶದ ಬಗ್ಗೆ ಅಭಿಮಾನ ಮೂಡಲು ನಾನಾ ರೀತಿಯಲ್ಲಿ ಕಾರ್ಯಕ್ರಮ ಮಾಡಿದೆವು. ಡಾ|| ಹರ್ಡೀಕರ್ ಮತ್ತು ಡಾ|| ದಿವಾಕರ್ (ಇವರನ್ನು ವಿದ್ಯಾಸಂಸ್ಥೆಗಳಲ್ಲಿ ಮಾತಾಡಲು ಸರ್ಕಾರ ಅವಕಾಶ ಕೊಡುತ್ತಿರಲಿಲ್ಲ; ಅಂತಹ ಸಮಯದಲ್ಲಿ) ಇವರುಗಳು ಮಹಾರಾಣಿ ಕಾಲೇಜಿನಲ್ಲಿ ಭಾಷಣಮಾಡಲು ಅವಕಾಶ ಕಲ್ಪಿಸಿಕೊಟ್ಟೆ.

1947ರ ಜವಾಬ್ದಾರಿ ಸರ್ಕಾರಕ್ಕೆ ಮನೆಮನೆಗೂ ಅಲೆದಲೆದು ವಿದ್ಯಾರ್ಥಿನಿಯರನ್ನು ಕರೆದುಕೊಂಡು ಒಂದು ದಳವನ್ನೇ ಕಟ್ಟಿದೆ. ಪ್ರತಿದಿವಸ ಪ್ರಭಾತ್‌ಫೇರಿ, ಧ್ವಜಾರೋಹಣ (ಮಲ್ಲೇಶ್ವರ 'ಗಾಂಧೀ ಸಾಹಿತ್ಯ ಸಂಘ'ದ ಪಕ್ಕದ ಮೈದಾನದಲ್ಲಿ) ಶಿಸ್ತಿನ ಸಿಪಾಯಿಗಳಂತೆ ನಡೆಸುತ್ತಿದ್ದೆವು. ಪೋಲೀಸರು ಆಗಾಗ ನಮ್ಮನ್ನು ದಸ್ತಗಿರಿ ಮಾಡಿಬಿಡುತ್ತಿದ್ದರು. ನಾನು, ನನ್ನ ತಂಗಿ ವಿಮಲ, ಮೈತ್ರೇಯಿ, ಮಣಿ, ವೈದೇಹಿ, ರಮಾಮಣಿ ಮತ್ತು ಶಾಂತಾ ಇವರು ಕೋರ್ಟು ಕೆಲಸ ನಡೆಯುತ್ತಿದ್ದಾಗ ಒಳಗೆ ನುಗ್ಗಿ ನ್ಯಾಯಾಧೀಶರಿಗೂ ಪ್ರಮುಖ ಲಾಯರ್‌ಗಳಿಗೂ ಅರಸಿನ, ಕುಂಕುಮ ಹಚ್ಚಿ ಬಳೆ ತೊಡಿಸಿ, ನಮ್ಮ ಧ್ವಜವನ್ನು ಅಲ್ಲಿ ಹಾರಿಸುತ್ತಿದ್ದೆವು. ಪೋಲೀಸರು ನಮ್ಮನ್ನು ದಸ್ತಗಿರಿಮಾಡಿ ಪ್ರತಿನಿತ್ಯ ಮ್ಯಾಜಿಸ್ಟ್ರೇಟರ ಕೋರ್ಟಿನ ಹಿಂಭಾಗದಲ್ಲಿ ಸಂಜೆಯವರೆಗೂ ಅನ್ನ, ನೀರಿಲ್ಲದೆ ಇರಿಸುತ್ತಿದ್ದರು. ಪೋಲೀಸ್ ಕಮಿಷನರ್ ಚಾಂಡಿಯವರು ಪ್ರತಿದಿವಸ ನಮಗೆ ಉಪದೇಶ ಮಾಡಿ "ನಾಳೆಯಿಂದ ಬರಬೇಡಿ" ಎಂದು ಹೇಳುತ್ತಿದ್ದರು.

ನಮ್ಮ ಮನೆ ಎರಡು ಬಾರಿ ಶೋಧಿಸಲ್ಪಟ್ಟಿತು. ನನ್ನ ಕೆಮಿಸ್ಟ್ರಿ, ಬಾಟನಿ ನೋಟ್ಸ್‌ಗಳನ್ನು, ಬಾಂಬ್ ಮಾಡುವ ಪುಸ್ತಕಗಳು ಎಂದು ತೆಗೆದುಕೊಂಡು ಹೋದರು.

ಜವಾಬ್ದಾರಿ ಸರ್ಕಾರ ಬಂದನಂತರ ಮಂತ್ರಿಮಹೋದಯರು ಅಧಿಕಾರವನ್ನು ವಹಿಸಿಕೊಳ್ಳಲು ಹೊರಡುವ ದಿವಸ ಅರಳೇ ಪೇಟೆಯ ಹಳೆಯ ಕಾಂಗ್ರೆಸ್ ಆಫೀಸಿನಲ್ಲಿ ಅವರ ಹಣೆಗೆ ತಿಲಕವಿಟ್ಟು, ಆರತಿ ಬೆಳಗಿ, ಅಭಿನಂದಿಸಿ ಬೀಳ್ಕೊಟ್ಟೆವು. ಆ ಫೋಟೋ ಪೇಪರ್‌ಗಳಲ್ಲಿ ಬಂದಿತ್ತು. ನಾನು, ನನ್ನ ತಂಗಿ ವಿಮಲ, ಮೈತ್ರೇಯಿ, ವೈದೇಹಿ, ಎಂ. ಎಂ. ಸಿ. ಮಣಿ ಎಲ್ಲರೂ ದಿವಾನರ ಆಫೀಸಿಗೆ ಅವರ ಜೊತೆಯಲ್ಲೇ ಆ ದಿನ ಮೆರವಣಿಗೆಯಲ್ಲಿ ಹೋಗಿಬಂದೆವು.

1942ರ ಕಾರ್ಮಿಕರ ಹೋರಾಟದ ಒಂದು ದುರಂತ ಕಥೆ ಇಲ್ಲಿ ಹೇಳಬೇಕು. ಕಾರ್ಮಿಕ ಚಿನ್ನಣ್ಣ ಚಳವಳಿಯಿಂದ ಕೆಲಸ ಕಳೆದುಕೊಂಡ. ಮನೆಯಲ್ಲಿ ವೃದ್ಧ ತಂದೆತಾಯಿಯರಲ್ಲದೆ ಹೆಂಡತಿ, ತಂಗಿ, ತಮ್ಮ, ಮಕ್ಕಳು ಇದ್ದು ಅವರಿಗೆ ಕೂಳಿಗೆ ಕಷ್ಟವಾಯಿತು. ಅವರಿಗೆ ನೂಲಲು ಹೇಳಿಕೊಟ್ಟೆ. ಅಲ್ಪಸ್ವಲ್ಪ ಸಂಪಾದನೆ

ಆಗುವಂತೆ ನೆರವಾಗಿದ್ದೆ. ಚಿನ್ನಕಣ್ಣು ಟೆಲಿಫೋನ್ ತಂತಿ ಕತ್ತರಿಸುವುದು, ಜೈಲು ಗೋಡೆಗೆ ಡೈನಮೈಟ್ ಇಡುವುದು, ಈ ಕೆಲಸ ಮಾಡುತ್ತಿದ್ದ. ಅವನ ಮೇಲೆ ವಾರಂಟ್ ಇದ್ದು ಯಾವ ಕಾರ್ಮಿಕರೂ ಅವನಿಗೆ ಆಸರೆ ನೀಡಲು ಮುಂದಾಗಲಿಲ್ಲ. ಒಂದು ರಾತ್ರಿ ಆತನಿಗೆ ನಮ್ಮ ಮನೆಯ ಹಿತ್ತಲಲ್ಲಿ ಆಶ್ರಯ ನೀಡಿ, ನನಗೆ ಫೀಸ್‌ಗಾಗಿ ಕೊಟ್ಟಿದ್ದ ಐದೂವರೆ ರೂ. ಕೊಟ್ಟು, "ಊರು ಬಿಟ್ಟು ಹೋಗು, ನಾಯಕರ ಬಿಡುಗಡೆ ಆದಮೇಲೆ ಬಾ" ಎಂದು ತಿಳಿಸಿದೆ. ಆಶ್ರಯವಿಲ್ಲದೆ, ಹೊಟ್ಟೆಗೆ ಅನ್ನವೂ ಇಲ್ಲದೆ ಆತ ಗೋಳಾಡುತ್ತಿದ್ದ.

ಇದಾದ ಮೂರು ದಿನದಲ್ಲಿ ವಿ.ಓ.ಪಿ. ಫ್ಯಾಕ್ಟರಿ ಕೆರೆ ಬುರುದೆಯಲ್ಲಿ ಚಿನ್ನಕಣ್ಣುವಿನ ಮೃತದೇಹ ಪತ್ತೆಯಾಯಿತು. ಉಪವಾಸ, ಜ್ವರಗಳಿಂದಾಗಿ ಆತ ಶವವಾಗಿದ್ದ. ಹೋರಾಟದಲ್ಲಿ ದೇಹವಿಟ್ಟ ಇಂಥ ಹೇಳಹೆಸರಿಲ್ಲದ ಹುತಾತ್ಮರು ಎಷ್ಟು ಜನರೋ !

ವ್ಯ.ಚಂ. 15

## ಬಿ. ಕಾಮಾಕ್ಷಮ್ಮ

ಜನನ : 1914 ಉದ್ಯೋಗ : ಹಿಂದೀ ಅಧ್ಯಾಪಕಿ, ವಿಳಾಸ : 8, IX ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು-3

---



ಹನ್ನೊಂದನೇ ವಯಸ್ಸಿನಲ್ಲಿಯೇ ನನ್ನ ವಿವಾಹವನ್ನು ಅದ್ದೂರಿಯಿಂದ ನೆರವೇರಿಸಿದರು. ವರನಿಗೆ ಸುಮಾರು ಹದಿನೇಳು ವರ್ಷಗಳಿರಬಹುದು ಎಂದು ನನ್ನ ನೆನಪು. ಎರಡು ವರ್ಷಗಳನಂತರ ಆತ ಅಕಾಲಮರಣಕ್ಕೆ ತುತ್ತಾದ. ಬಾಲವಿಧವೆಯಾದ ನನಗೆ ಓದುವ ಮನವಿದ್ದರೂ ಲೋಯರ್ ಸೆಕೆಂಡರಿ ಪರೀಕ್ಷೆಗೆ ಸಹ ಹೋಗಗೊಡಲಿಲ್ಲ. ಸಾತ್ವಿಕರಾದ ನನ್ನ ತಂದೆ ಮನೆಯಲ್ಲೇ ನನ್ನಿಂದ ಧಾರ್ಮಿಕ ಗ್ರಂಥಗಳನ್ನೋದಿಸುತ್ತಿದ್ದರು; ಎಲ್ಲಿಗೂ ಹೋಗಲು ಬಿಡುತ್ತಿರಲಿಲ್ಲ.

1930ರಲ್ಲಿ ಮಹಾತ್ಮರ ದಂಡಿ ಸತ್ಯಾಗ್ರಹದ ವಿಚಾರವನ್ನು ದಿನಪತ್ರಿಕೆಗಳಲ್ಲಿ ಓದುತ್ತಿದ್ದೆ. ಈ 'ಕಥೆ' ಹೇಗೆ ಕೊನೆಗೊಳ್ಳುವುದೋ ಎಂಬ ಕುತೂಹಲವಿತ್ತು. ಈ ಘಟನೆ ನಡೆದುಹೋದ 'ಕಥೆ'ಯಲ್ಲ ಎಂಬ ಅರಿವು ಬೇಗನೇ ಉಂಟಾಯಿತು.

ನನ್ನ ತಂದೆ ಸರ್ಕಾರಿ ನೌಕರರು; ಪಾವಗಡ ಎಂಬ ಊರಿಗೆ ಒಮ್ಮೆ ವರ್ಗವಾಗಿತ್ತು. ಅಲ್ಲಿ ಒಮ್ಮೆ ಉಮಾಬಾಯಿ ಕುಂದಾಪುರ ಅವರು ಸಾರ್ವಜನಿಕ ಸಭೆಯಲ್ಲಿ ಭಾಷಣ ಮಾಡಿದರು. ಹೆಣ್ಣೊಬ್ಬಳು ಅಷ್ಟು ಜನರ ಎದುರಿಗೆ ಧೈರ್ಯವಾಗಿ ಮಾತನಾಡಿದುದು ನನ್ನನ್ನು ಬೆರಗುಗೊಳಿಸಿತ್ತು. ಸ್ವರಾಜ್ಯ, ಗಾಂಧಿ ಮುಂತಾದ ವಿಚಾರಗಳು ಆಗ ನನ್ನ ಮನಸ್ಸಿನಲ್ಲಿ ಹೊಕ್ಕವು.

ಹೊತ್ತು ಕಳೆಯುವುದು ಕಷ್ಟವಾಗಿ ಎದುರು ಮನೆಯವರನ್ನು ಒಂದು ಕಥೆ ಪುಸ್ತಕ ಕೇಳಿದೆ. ಅವರು ತಮ್ಮ ಬಳಗದ ಕೆ. ರಂಗಯ್ಯಂಗಾರ್ (ತುಮಕೂರಿನ ಅಡ್ವೋಕೇಟ್) ಮನೆಯಿಂದ 'ಸತ್ಯಶೋಧನೆ' ತರಿಸಿಕೊಟ್ಟರು. ಎಲ್ಲಾ ಭಾಗಗಳನ್ನೂ ಓದಲು ಹಲವು ತಿಂಗಳುಗಳೇ ಹಿಡಿದವು. 1933ರಲ್ಲಿ ಉದ್ಯೋಗದಿಂದ ನಿವೃತ್ತರಾದ ನನ್ನ ತಂದೆಯವರು ಮಲ್ಲೇಶ್ವರಕ್ಕೆ ಬಂದರು. ಕೆಲವು ದಿನಗಳನಂತರ ಹತ್ತಿರವೇ ಇದ್ದ ವಾಚನಾಲಯದ (ಈಗ 7-8ನೇ ಕ್ರಾಸಿನ ಮಧ್ಯೆ ಇರುವ) ಬಳಿಯ ಮೈದಾನದಲ್ಲಿ ಮುಂಜಾನೆ ಗಾಂಧೀಜಿಯವರು ಬರುವ ಸುದ್ದಿ ಕೇಳಿ ಪುಳಕಿತಳಾದೆ. ಎತ್ತರವಾದ ವೇದಿಕೆಯ ಮೇಲೆ ಪೂರ್ವಾಭಿಮುಖವಾಗಿ ಮಹಾತ್ಮರು ಮಂಡಿಸಿದರು. ಅವರ ಹಿಂದೀ ಭಾಷಣವನ್ನು ಒಬ್ಬರು ಕನ್ನಡಕ್ಕೆ ತರ್ಜುಮೆ ಮಾಡಿ ಹೇಳುತ್ತಿದ್ದರು. ಹಿಂದೆಂದೂ ಕಾಣದಿದ್ದ ಸಾದಾ ಉಡುಪಿನ ಪ್ರಭಾವಶಾಲಿ ಪುರುಷನನ್ನು ಕಂಡು ಮುಗ್ಧಳಾದೆ. ಯಾವುದೇ ಗಲಭೆ ಗದ್ದಲವಿಲ್ಲದೆ ಸಭೆ ನಡೆಯುತ್ತಿತ್ತು. ಪಾಶ್ಚಾತ್ಯ ಮಹಿಳೆಯೊಬ್ಬಳು ಹುಂಡಿ ಡಬ್ಬ ಹಿಡಿದು ಚಂದಾ ಎತ್ತಲು ಬಂದಳು. ಕೆಲವು ಮಹಿಳೆಯರು ತಮ್ಮ ಆಭರಣಗಳನ್ನು ನೀಡಿದರು. ಹಣ ತರಲು ಮರೆತಿದ್ದ ನಾನು ಮಹಾತ್ಮರನ್ನು ಕಣ್ಣುತುಂಬಾ ನೋಡಿ, ಅವರ ಗಂಭೀರವಾಣಿಯನ್ನು ಕೇಳಿ ತೃಪ್ತಳಾಗಬೇಕಾಯಿತು.

ಬೆಂಗಳೂರಿಗೆ ಆಗಿಂದಾಗ್ಗೆ ಬರುತ್ತಿದ್ದ ದೇಶದ ಮುಖಂಡರೆಲ್ಲರೂ ಹಿಂದಿಯಲ್ಲೇ ಭಾಷಣ ಮಾಡುತ್ತಿದ್ದರು. ಸರೋಜಿನಿ ನಾಯ್ಡು ಬಂದು ಹಿಂದಿಯಲ್ಲೇ ಭಾಷಣ ಮಾಡಿದರು. ಮಹಾತ್ಮರ ವಿಚಾರಗಳನ್ನು ಅವರಿಂದಲೇ ತಿಳಿಯಬೇಕಾದರೆ ಹಿಂದೀ ಭಾಷೆಯನ್ನು ಕಲಿಯಬೇಕೆಂದು ನನಗೆ ತೋರಿತು. ಮಲ್ಲೇಶ್ವರದ ಸ್ತ್ರೀ ಸಮಾಜದಲ್ಲಿ ಮಹಿಳೆಯೊಬ್ಬರು ನಡೆಸುತ್ತಿದ್ದ ಹಿಂದೀ ತರಗತಿಗೆ ಸೇರಿದೆ. ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆ ಆಗ ಸ್ವದೇಶಿ, ಸ್ವರಾಜ್ಯ, ಗಾಂಧೀಜಿಯ ಮತ್ತು ಇನ್ನೂ ಅನೇಕ ಮಹನೀಯರ ಜೀವನಕ್ಕೆ ಸಂಬಂಧಿಸಿದ ವಿಷಯಗಳನ್ನೊಳಗೊಂಡ ಪಠ್ಯ ಪುಸ್ತಕಗಳನ್ನಿಡುತ್ತಿತ್ತು. ಗಾಂಧೀ ಸಾಹಿತ್ಯದ ಅಧ್ಯಯನ ನನಗೆ ಬಹಳ ನೆಮ್ಮದಿ ಮತ್ತು ಶಾಂತಿಯನ್ನು ತಂದಿತು. ಅವನ್ನು ಧಾರ್ಮಿಕ ಗ್ರಂಥಗಳೆಂದು ನಾನು ಭಾವಿಸುತ್ತಿದ್ದೆ. ನನ್ನಲ್ಲಾದ ಬದಲಾವಣೆ ಅಷ್ಟಿಷ್ಟಲ್ಲ. "ಶರೀರ ಕಾಪಾಡು, ಕೊಬ್ಬಿಸಬೇಡ; ತನಗೆ ತನ್ನಲ್ಲೇ ನಂಬಿಕೆ ಇಲ್ಲದವರನ್ನು ದೇವರೂ ಕಾಪಾಡಲಾರ; ಮಾನಸಿಕ

ಪರಾವಲಂಬನೆ ದೂರಮಾಡು; ನಿನಗೆ ಕೇಡು ಮಾಡಿದವರಿಗೆ ಸಹ ಎಂದೂ ಕೆಡಕು ಬಯಸಬೇಡ; ಅಜ್ಞಾನವೇ ದಾರಿದ್ರ್ಯ; ದುಡಿಮೆಗೇ ಹೆಚ್ಚು ಬೆಲೆ ಕೊಡು; ಭಗವಂತನ ಆವಾಸವಾದ ನಮ್ಮ ದೇಹವನ್ನು ಪರಿಶುದ್ಧವಾಗಿಡಬೇಕು......." ಇತ್ಯಾದಿ ಮಾತು ಗಳು ನಮ್ಮ ಧಾರ್ಮಿಕ ಗ್ರಂಥಗಳಲ್ಲಿದ್ದರೂ ತಮ್ಮ ಜೀವನದಲ್ಲಿ ಅವನ್ನು ಆಚರಿಸ ಬಹುದೆಂದು ತೋರಿದವರು ಮಹಾತ್ಮಾ ಗಾಂಧೀಜೀ. ಅವರ ಸಂದೇಶಗಳು ಒಂದೇ, ಎರಡೇ ? ಸಮುದ್ರ ಹೊಕ್ಕವರು ತಮ್ಮ ಶಕ್ತ್ಯನುಸಾರ ಮುತ್ತುರತ್ನಗಳನ್ನು ಹೆಕ್ಕಿ ಕೊಳ್ಳುವಂತೆ ನಾನೂ ನನ್ನ ಯೋಗ್ಯತಾನುಸಾರ ಸಾಧ್ಯವಾದಷ್ಟನ್ನು ಸಂಗ್ರಹಿಸಿಕೊಂಡೆ. ಅದರಂತೆ ಜೀವನ ರೂಪಿಸಿಕೊಂಡೆ.

ಬೆಂಗಳೂರಿನ ನಗರಭವನದಲ್ಲಿ ರಾಷ್ಟ್ರಭಾಷಾ ಪ್ರಮಾಣಪತ್ರವನ್ನು ಗಾಂಧೀಜಿ ಯವರ ಕೈಯಿಂದ ಪಡೆಯುವ ಭಾಗ್ಯ ನನ್ನದಾಗಿತ್ತು. ಆ ಸಭೆಯಲ್ಲಿ ಹಿಂದೀ ಕಲಿತ ಮಹಿಳೆಯರ ಸಂಖ್ಯೆ ಪುರುಷರಿಗಿಂತ ಹೆಚ್ಚಾಗಿತ್ತು. ಮಹಾತ್ಮರ ಅಮೃತವರ್ಷದಂಥಾ ಮಾತುಗಳು ಈಗಲೂ ನನ್ನ ಕಿವಿಯಲ್ಲಿ ಮೊಳಗುತ್ತಿವೆ. "ಮಹಿಳೆಯರು ಯಾವ ಕೆಲಸದಲ್ಲಿ ಮುಂದಾಗುವರೋ ಅದರ ಭವಿಷ್ಯ ಉಜ್ವಲ ಮತ್ತು ಮಂಗಳಕರ; ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರ ನೆರವನ್ನು ಹೆಚ್ಚಾಗಿ ಬಯಸುತ್ತೇನೆ." ಹೌದೆ? ನಾನೂ ಸಹ ದೇಶಕ್ಕೆ ನೆರವಾಗಬಲ್ಲೆನೆ? ಹೌದೆಂದಾದರೆ ನಾನು ನಿರುಪ ಯೋಗಿಯೇನಲ್ಲ, ಎಂದು ನನ್ನಾತ್ಮ ಚಿಂತಿಸಿತು. ನನ್ನ ವಿಚಾರಶಕ್ತಿಗೆ ಚಾಲನೆ ದೊರಕಿತು.

ಆಗ ನಾನು ಖಾದೀ ಧರಿಸುವುದು, ಹಿಂದೀ ಪ್ರಚಾರ ಮುಂತಾದ ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸಲು ಪ್ರಾರಂಭಿಸಿದೆ. ಅಲ್ಲಲ್ಲಿ ಉಚಿತ ಹಿಂದೀ ತರಗತಿಗಳನ್ನು ನಡೆಸುತ್ತಿದ್ದೆ. ಮಲ್ಲೇಶ್ವರಂ, ಶೇಷಾದ್ರಿಪುರಂ, ಶ್ರೀರಾಮಪುರ, ನಾಗಪ್ಪಾ ಬ್ಲಾಕ್‌ಗೆಲ್ಲ ನಡೆದುಕೊಂಡು ಹೋಗಿ ಹಿಂದೀ ಪಾಠ ಮಾಡಿ ಬರುತ್ತಿದ್ದೆ. ಆಗ ಖಾದಿ ಉಡುಪಿ ನವರ ಮೇಲೆ ಪೋಲೀಸರ ಕಣ್ಣು ಬಹಳ. 1940ರಲ್ಲಿ ಶ್ರೀರಾಮಪುರದಲ್ಲಿ ಹಿಂದೀ ಪ್ರವೇಶಪತ್ರಗಳ ವಿತರಣಾ ಸಮಾರಂಭವೊಂದನ್ನೇರ್ಪಡಿಸಿದ್ದೆವು; ಒಂದುನೂರು ಮಂದಿ ಗಿಂತ ಹೆಚ್ಚು ವಿದ್ಯಾರ್ಥಿಗಳು ಹಾಜರಿದ್ದರು; ಪ್ರಾರ್ಥನೆಯನ್ನು ಬಾಲಕಿಯೊಬ್ಬಳು ಮಾಡುತ್ತಿದ್ದಳು. ಆಗ ಅಲ್ಲಿ ಒಬ್ಬ ಸಿ.ಐ.ಡಿ. ಬಂದು "ಕಾರ್ಯದರ್ಶಿಗಳೆಲ್ಲಿ?" ಎಂದು ಪ್ರಶ್ನಿಸಿದ. "ನಾನೇ" ಅಂದೆನು. ಆತ ಸಭೆಯ ಬಗ್ಗೆ ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರಿಸಿದೆನು. ಅನಂತರ ಇಬ್ಬರು ಪೋಲೀಸರು ಅಲ್ಲಿಯೇ ಸುಳಿದಾಡತೊಡಗಿದರು. ಹೆದರಿಕೆಯಿಂದ ಅನೇಕ ಬಾಲಕಿಯರು ಮನೆಗಳಿಗೋಡಿದರು. ಪ್ರವೇಶ ಪತ್ರಗಳನ್ನು ಮನೆಗಳಿಗೆ ತಲುಪಿಸಿದೆ. ಆದರೆ ಅವರನ್ನೆಲ್ಲಾ ಮಲ್ಲೇಶ್ವರಕ್ಕೆ ಪರೀಕ್ಷೆಯ ದಿನ ಕರೆತರಲು ಪಟ್ಟ ಶ್ರಮ ಹೇಳತೀರದು.

ಸ್ವಾತಂತ್ರ್ಯಸಮರದ ಕಾಲದಲ್ಲಿ ಆಗಾಗ್ಗೆ ನಾನು ಹಿಂದೀ ಪ್ರಚಾರ ಸಭೆಗೆ

ಹೋಗಬೇಕಾಗುತ್ತಿತ್ತು. ಎ. ವಿ. ಶ್ರೀನಿವಾಸಮೂರ್ತಿಗಳು ಸೆಕ್ರೆಟರಿಗಳು. ಬೆಂಗಳೂರಿಗೆಲ್ಲಾ ಇದ್ದುದು ಅದೊಂದೇ ಸಂಸ್ಥೆ. 1942ರ 'ಭಾರತದಿಂದ ತೊಲಗಿ' ಚಳವಳಿ ಉಗ್ರಸ್ವರೂಪ ತಾಳಿತ್ತು. ಆಗ ಮಕ್ಕಳ ಬಾಯಲ್ಲೂ ಅದೇ ಘೋಷಣೆ! ಹಿಂದೀ ಪರೀಕ್ಷೆಗಳೂ ನಡೆಯಲಿಲ್ಲ; ಎಲ್ಲೆಲ್ಲೂ ಹರತಾಳ ನಡೆಯುತ್ತಿತ್ತು. ಮೀಸಲು ಪೋಲೀಸರಲ್ಲದೆ ಕುದುರೆಗಳನ್ನೇರಿದ್ದ ಸೈನಿಕರು ಮೆರವಣಿಗೆ ಹೊರಡದಂತೆ ಜನರನ್ನು ತಡೆಯಲು ಸರ್ಕಾರ ಏರ್ಪಡಿಸಿತ್ತು. ತಮ್ಮ ಪ್ರಾಣದ ಆಸೆತೊರೆದು ಜನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕುತ್ತಿದ್ದರು. 'ಬ್ರಿಟಿಷ್ ಸರಕಾರಕ್ಕೆ ಧಿಕ್ಕಾರ', 'ಚಲೇ ಜಾವ್', 'ಮಾಡು ಇಲ್ಲವೇ ಮಡಿ' ಎಂಬೀ ಘೋಷಣೆಗಳು ಎಲ್ಲೆಲ್ಲೂ ಪ್ರತಿಧ್ವನಿಸುತ್ತಿದ್ದವು. ಈಗ ನಾನೇನು ಮಾಡಬೇಕು ? ಎಂಬ ಪ್ರಶ್ನೆ ಹುಟ್ಟಿತು. ಸರ್ಕಾರದ ಪಿಂಚಣಿದಾರರಾದ ನನ್ನ ತಂದೆ "ನೀನು ಜೈಲಿಗೆ ಹೋದರೆ ಮನೆಗೆ ಸೇರಿಸೋಲ್ಲ" ಎಂದು ಕಟ್ಟುನಿಟ್ಟಾಗೇ ನುಡಿದರು. ಕಲ್ಲಚ್ಚಿನಲ್ಲಿ ತಯಾರಾದ ಹಸ್ತಪತ್ರಿಕೆಗಳನ್ನು ನನ್ನ ಕೈಲಿರಿಸಿ "ಇವನ್ನು ಮನೆಮನೆಗೆ ತಲುಪಿಸಿ" ಎಂದು ಕಾರ್ಯಕರ್ತರು ಆದೇಶಿಸಿದರು. ಪತ್ರಿಕೆಗಳನ್ನು ಚೀಲದಲ್ಲಿ ಮುಚ್ಚಿಟ್ಟುಕೊಂಡು ಮಲ್ಲೇಶ್ವರದ ಬಸ್ ಏರಿದೆ. ಬಹಳ ಮಂದಿ ಪೋಲೀಸರು ಬಸ್‌ನಲ್ಲಿದ್ದರು. ಅವರಿಗೆ ಇದರ ಸುಳಿವು ಹತ್ತಲಿಲ್ಲ. ಮನೆಯಲ್ಲಿ ನಮ್ಮ ತಂದೆಯವರ ಕಣ್ಣಿಗೆ ಕಾಣಿಸದಂತೆ ಗುಟ್ಟಾಗಿರಿಸಿದೆ. ಮಾರನೇ ದಿನ ಮನೆಮನೆಗೆ ಹೋಗಿ ಅವನ್ನು ತಲುಪಿಸಿದೆ. ಅನೇಕರು ಓದಿ ಪುನಃ ನನ್ನ ಕೈಗೇ ಪತ್ರಿಕೆಗಳನ್ನು ವಾಪಸ್ಸು ಕೊಟ್ಟುಬಿಡುತ್ತಿದ್ದರು.

ಸಿದ್ದವನಹಳ್ಳಿ ಕೃಷ್ಣಶರ್ಮರು ಮಲ್ಲೇಶ್ವರದಲ್ಲಿಯೇ ವಾಸಿಸುತ್ತಿದ್ದರು. ಉತ್ಸಾಹಿ ದೇಶಪ್ರೇಮಿಗಳ ತಂಡಕ್ಕೆ ಅವರೇ ನಾಯಕರು. ವಿ. ಎಸ್. ನಾರಾಯಣರಾವ್ ಮೊದಲಿನಿಂದಲೂ ಪತ್ರಿಕೋದ್ಯಮಿ, ದೇಶಭಕ್ತ ಹಾಗೂ ಮಹಾತ್ಮರ ಶಿಷ್ಯರು. ಈ ಇಬ್ಬರ ನಾಯಕತ್ವದಲ್ಲಿ ರಾಷ್ಟ್ರೀಯ ಚಳವಳಿಯ ಮಾರ್ಗದರ್ಶನಕ್ಕೆ ಕೊರತೆ ಇರಲಿಲ್ಲ. ಚಿಕ್ಕ ಬಾಲಕರು, ಯುವಕರು, ಕೊನೆಗೆ ಮುದುಕರೂ ಸಹ ಅವರಿಂದ ಆಕರ್ಷಿತರಾಗುತ್ತಿದ್ದರು. ಸರ್ಕಾರ ಇವರಿಬ್ಬರನ್ನೂ ಆರಂಭದಲ್ಲಿಯೇ ಸೆರೆಗೆ ದೂಡಿತು. ಆದರೆ ಜನರ ಉತ್ಸಾಹ ಕಡಿಮೆಯಾಗಲಿಲ್ಲ. ಪ್ರಭಾತಫೇರಿ, ಶಾಲಾ ಕಾಲೇಜುಗಳಿಗೆ ಬಹಿಷ್ಕಾರ ಮೊದಲಾದವು. ಪ್ರತಿದಿನ ನಾವುಗಳು (ಈಗ ಗಾಂಧೀ ಸಾಹಿತ್ಯ ಸಂಘದ ಕಟ್ಟಡದ) ಮೈದಾನದಲ್ಲಿ ಬಾವುಟ ಹಾರಿಸಿ 'ವಂದೇ ಮಾತರಂ' ಹಾಡುತ್ತಿದ್ದೆವು. ಸ್ವಲ್ಪ ಕಾಲದ ಅನಂತರ ಪೋಲೀಸರು ಬಂದು ಎಲ್ಲರನ್ನೂ ವ್ಯಾನಿನಲ್ಲಿ ತುಂಬಿಕೊಂಡು ಹೋಗಲು ಸುರುಮಾಡಿದರು. ರಾತ್ರಿ ಬಹುದೂರದಲ್ಲಿ ಅವರನ್ನು ಬಿಟ್ಟುಬರುತ್ತಿದ್ದರು. ಹೆಣ್ಣುಮಕ್ಕಳನ್ನು ಸೆಂಟ್ರಲ್ ಜೈಲಿನಲ್ಲಿಟ್ಟಿರುತ್ತಿದ್ದರು. ನಾನು ಚಾಣಾಕ್ಷತನದಿಂದ ತಪ್ಪಿಸಿಕೊಳ್ಳುತ್ತಿದ್ದೆ.

ಶಿವಮೊಗ್ಗೆಯಿಂದ ಕಾನೂನುಭಂಗ ಮಾಡಲೆಂದೇ ಟಿಕೆಟ್ ರಹಿತರಾಗಿ 150

ಮಂದಿ ವಿದ್ಯಾರ್ಥಿಗಳು ಬೆಂಗಳೂರಿಗೆ ರೈಲಿನಲ್ಲಿ ಬಂದರು. ನಾಲ್ಕೈದು ಮಂದಿ ಮಾತ್ರ ಮಲ್ಲೇಶ್ವರದಲ್ಲಿ ಪೋಲೀಸರ ಕೈಗೆ ಸಿಕ್ಕುಬಿದ್ದರು; ಮತ್ತೆ ಕೆಲವರು ಬೇರೊಂದು ರೈಲಿನಲ್ಲಿ ಊಟ ಉಪಚಾರಗಳಿಲ್ಲದೆ ವಾಪಸಾಗಬೇಕಾಯಿತೆಂದು ಸಮಾಚಾರವನ್ನು ಕೇಳಿದೆವು. ಇಬ್ಬರು ಸತ್ಯಾಗ್ರಹಿಗಳನ್ನು (ನನ್ನ ಹಿಂದೀ ವಿದ್ಯಾರ್ಥಿಯಾಗಿದ್ದ) ನಾನು ವಯಸ್ಸಾದ ಹೆಂಗಸೊಬ್ಬರ ಮನೆಗೆ ಊಟಕ್ಕೆ ಕರೆದುಕೊಂಡು ಹೋದೆ. ಆಕೆ ಸಂತೋಷದಿಂದ ಅವರಿಗೆ ಊಟ ಬಡಿಸಿದರು.

ಎಚ್. ಶ್ರೀನಿವಾಸಯ್ಯ (ಈಗ ಎಚ್.ಎ.ಎಲ್.ನಲ್ಲಿ ಎಂಜಿನೀಯರ್) ಆಗ ಕ್ರಾಂತಿಕಾರೀ ವಿದ್ಯಾರ್ಥಿ. ರಾಜಾರಾವ್, ಮೂಗೂರು ಗೌಡ, ಗುಂಡೂರಾವ್ (ಈತ ಎಷ್ಟು ಎತ್ತರವಾದರೂ ಏರಿ ಧ್ವಜ ಕಟ್ಟುತ್ತಿದ್ದರು), ವೆಂಕಟಾಚಲ (ಋಷಿವ್ಯಾಲಿ ಸ್ಕೂಲಿನಲ್ಲಿ ಈಗ ಉದ್ಯೋಗ; ಸುಂದರ ಬರವಣಿಗೆಯಿತ್ತು), ಬಾಬೂ ಸುಬ್ಬರಾವ್ (ಚಂಬಲ್ ಕಣಿವೆಯಲ್ಲಿ ಕೆಲಸಮಾಡುತ್ತಿದ್ದಾರೆ), ಕೃಷ್ಣಸ್ವಾಮಿ (ಬಹು ಇಂಪಾಗಿ ಹಾಡುತ್ತಿದ್ದರು), ನಾಗರಾಜ್, ಮುಕುಂದ ಹಾಗೂ ಇನ್ನು ಅನೇಕ ಹುಡುಗರು ಶ್ರೀರಾಮಪುರದಿಂದ ಬರುತ್ತಿದ್ದರು. ಗಿರಿಜಾ ಹೈಸ್ಕೂಲು ವಿದ್ಯಾರ್ಥಿನಿ; ಅವಳ ತಂಗಿ ಕುಂತಳಾ, ಕಾಲೇಜು ವಿದ್ಯಾರ್ಥಿನಿ; ಆಕೆಯ ತಂಗಿ ವಿಮಲ, ಚಂದ್ರಮಣಿ ಇನ್ನೂ ಹಲವಾರು ಹೆಣ್ಣುಮಕ್ಕಳು ತಪ್ಪದೆ ಪ್ರಭಾತಫೇರಿ, ಧ್ವಜವಂದನೆಗೆ ಹಾಜರಾಗುತ್ತಿದ್ದರು; ಕರಪತ್ರಗಳನ್ನು ಹಂಚುತ್ತಿದ್ದರು. ಹುಡುಗರು ರಾತ್ರಿ ಮರಗಳನ್ನು ಕಡಿದು ರಸ್ತೆಗೆ ಅಡ್ಡಹಾಕುವುದು, ಕಲ್ಲುಗಳನ್ನು ಪೇರಿಸಿ ಪೋಲೀಸ್ ವ್ಯಾನ್‌ಗಳಿಗೆ ತಡೆಹಾಕುವುದು ಮುಂತಾದ ವಿಧ್ವಂಸಕ ಕೃತ್ಯಗಳನ್ನೆಸಗುತ್ತಿದ್ದರು. ಕೆ. ಶ್ರೀನಿವಾಸರಾವ್ (ಈಗ ಗಾಂಧೀ ಭವನದಲ್ಲಿರುವರು) ನೆಲಮಾಳಿಗೆಯಲ್ಲಿ ಕುಳಿತುಕೊಂಡು ಕಲ್ಲಚ್ಚಿನ ಕರಪತ್ರಗಳನ್ನು ಸೃಷ್ಟಿಸುತ್ತಿದ್ದ ಶಾಂತ ಕ್ರಾಂತಿಕಾರಿಯೆಂದು ಅನಂತರ ತಿಳಿಯಿತು. ಬಹಳ ದಿನಗಳವರೆಗೆ ಯಾರಿಗೂ ಅವರನ್ನು ಪತ್ತೆಹಚ್ಚುವುದು ಅಸಾಧ್ಯವಾಗಿತ್ತು.

ಜಿ. ಪಿ ರಾಜರತ್ನಂ ಅವರ ಮುಂದಾಳ್ತನದಲ್ಲಿ ಅಕ್ಟೋಬರ್ 2ರಂದು ಗಾಂಧೀ ಜಯಂತಿಯನ್ನು ಆಚರಿಸಿದೆವು. ಮನೆಮನೆಗೂ ಚಂದಾ ಕೇಳಲು ಹೋಗುತ್ತಿದ್ದೆವು. ಜನರು ಆಸ್ಥೆಯಿಂದಲೂ ಭಕ್ತಿಯಿಂದಲೂ ಚಂದಾ ಕೊಡುತ್ತಿದ್ದರು. ಸಪ್ತಾಹದ ಕೊನೆಯ ದಿನ ಕೃಷ್ಣಶರ್ಮರ ಬಿಡುಗಡೆಯಾಯಿತು.

1943ರ ಫೆಬ್ರವರಿ ತಿಂಗಳಲ್ಲಿ ಮಹಾತ್ಮರು ಜೈಲಿನಲ್ಲಿ ಉಪವಾಸ ಸತ್ಯಾಗ್ರಹ ಹೂಡಿದರು. ಮಲ್ಲೇಶ್ವರದ ಶ್ರೀರಾಮ ಮಂದಿರದಲ್ಲಿ ಜನ ಕಿಕ್ಕಿರಿದು ಸೇರಿದ್ದರು ಕೃಷ್ಣಶರ್ಮರು ಗದ್ಗದ ಸ್ವರದಲ್ಲಿ ಗಾಂಧೀಜಿಯವರ ಅಂದಿನ ಸ್ಥಿತಿಯನ್ನು ವಿವರಿಸಿ ಹೇಳುತ್ತಿದ್ದರು. ಗಾಂಧೀಜಿಯವರನ್ನುಳಿಸೆಂದು ಭಗವಂತನಲ್ಲಿ ಜನರೆಲ್ಲರೂ ಪ್ರಾರ್ಥನೆ ಸಲ್ಲಿಸಿದರು.

ಚಳವಳಿ ನಿಂತಮೇಲೆ ದಿ|| ಕಸ್ತೂರಬಾ ಶಿಕ್ಷಣ ಶಿಬಿರ ಮುಂಬಯಿಯ ಬಳಿ

ಬೋರಿವಲಿಯಲ್ಲಿ ನಡೆಯುವ ಸುದ್ದಿ ಬಂತು. ಪ್ರತಿ ಪ್ರಾಂತ್ಯದಿಂದಲೂ ಹಿಂದೀ ತಿಳಿದ ನಾಲ್ಕು ಮಹಿಳೆಯರು ಭಾಗವಹಿಸಲು ಅವಕಾಶವಿತ್ತು. ನಾನು, ಬಳ್ಳಾರಿ ಸಿದ್ದಮ್ಮ, ತುಕಾಬಾಯಿ, ತಾಯಮ್ಮ ವೀರಣ್ಣಗೌಡ ಅಲ್ಲಿಗೆ ಹೋದೆವು. ನಮ್ಮ ತಂದೆಯ ವಿರೋಧವನ್ನೇ ಲೆಕ್ಕಿಸದೆ ನಾನು ಹೋದೆ. ಅಲ್ಲಿ ಕಂಡ ಪ್ರಾರ್ಥನಾಸಭೆ ನಾನು ಇಡೀ ಜೀವಮಾನದಲ್ಲಿಯೇ ಮರೆಯಲಾಗದಂಥದ್ದು. ಹಾಗೆಯೇ ಮುಂದೆ ಮದ್ರಾಸ್ ಹಿಂದೀ ಪ್ರಚಾರ ಸಭೆಯ ರಜತ ಮಹೋತ್ಸವ ಸಮಾರಂಭ, 10-12 ದಿನಗಳು ಗಾಂಧೀಜಿಯವರ ಸಾನ್ನಿಧ್ಯದಲ್ಲಿರುವ ಸಂಯೋಗ. ಬೋರಿವಲಿಯ ಶಿಕ್ಷಣ ಶಿಬಿರ ಮುಗಿದಿತ್ತು. "ಈಗ ಯಾರ್‍ಯಾರು ಹಳ್ಳಿಗೆ ಕೆಲಸಕ್ಕೆ ಹೋಗುವಿರಿ?" ಎಂದು ಗಾಂಧೀಜಿ ಪ್ರಶ್ನಿಸಿದರು. "ನಾನು ಹೋಗುವೆ" ಎಂದು ವಿನಂತಿಸಿದೆ.

ಅನಂತರ ನಾನು 1946ರ ಮಾರ್ಚ್ ಮೊದಲ ವಾರದಲ್ಲಿ ಹಳೇಹಳ್ಳಿಗೆ ಹೋದೆ. ಕರ್ನಾಟಕದ ಮೊಟ್ಟಮೊದಲ ಕಸ್ತೂರ್‌ಬಾ ಸೇವಾಕೇಂದ್ರ ಅದು. ಮೂಡಿಗೆರೆಗೆ ಸುಮಾರು 25-30 ಮೈಲು ದೂರದ ಕಾಫೀ ತೋಟಗಳನ್ನೊಳಗೊಂಡ ಹಳ್ಳಿಯದು; 'ಭಾರತೀ ಬಯಲು' ಎಂಬ ಹೆಸರಿನ ಒಂದು ಪುಟ್ಟ ಮೈದಾನವಿತ್ತು; ಸುತ್ತಲೂ ಕಾಡಿತ್ತು. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಕೆಲವು ಯೋಧರು ಪೋಲೀಸರ ಕಣ್ಣುತಪ್ಪಿಸಿ ಇಲ್ಲಿ ಅಜ್ಞಾತವಾಸ ಮಾಡುತ್ತಿದ್ದರು. ಇಂತಹ ಸ್ಥಳದಲ್ಲಿ ಕಸ್ತೂರ್‌ಬಾ ಸೇವಾಕೇಂದ್ರದ ಆರಂಭೋತ್ಸವ ನಡೆಯಿತು. ಯಶೋಧರಮ್ಮ ದಾಸಪ್ಪ ಬಂದಿದ್ದರು. ಮಲೆನಾಡಿನವರೇ ಆದ ಪಾರ್ವತಮ್ಮ ಹುಚ್ಚೇಗೌಡ ನನ್ನೊಂದಿಗೆ ಕೆಲದಿನಗಳಿದ್ದು ನೆರವು ನೀಡಿದರು. ಒಂದು ಕಾಫೀ ತೋಟದಲ್ಲಿದ್ದ ಖಾಲಿ ಮನೆಯಲ್ಲಿ ನಾವು ಕೆಲಸ ಆರಂಭಿಸಿದೆವು. 'ಹರಿಜನಕೇರಿ' ನಮ್ಮ ನಿವಾಸಕ್ಕೆ ಸಮೀಪದಲ್ಲಿತ್ತು. ಆ ಜನ ಬಂದರು. ಒಂದೆರಡು ಮೈಲು ಸುತ್ತಳತೆಯಲ್ಲಿದ್ದ ಗೌಡರ ಮನೆಗೆ ಹೋಗಿ ಹೆಣ್ಣುಮಕ್ಕಳನ್ನೂ ಗಂಡುಮಕ್ಕಳನ್ನೂ ಕಳುಹಿಸಿರೆಂದು ಹೇಳಿದೆವು. ಪಾರ್ವತಮ್ಮ ಹೊರಟುಹೋದನಂತರ ಬಸವಾನಿ ಸಾವಿತ್ರಮ್ಮ ರಾಮಶರ್ಮ (ತೀರ್ಥಹಳ್ಳಿ) ಬಂದು ನೆರವು ನೀಡಿದರು. ನನಗೆ ತಿಳಿದಿದ್ದ ಆಯುರ್ವೇದ ಚಿಕಿತ್ಸೆ ಇಲ್ಲಿ ಬಹಳ ಉಪಯೋಗಕ್ಕೆ ಬಂತು. ಹೊಲಿಗೆ, ನೂಲುವುದು, ಪ್ರೌಢಶಿಕ್ಷಣ ನನ್ನ ಮುಖ್ಯ ಕೆಲಸ. ಆರು ತಿಂಗಳನಂತರ ಮಳೆ ಬರುವುದು ವಿಪರೀತ ಹೆಚ್ಚಾಯಿತು. "ನಮಗೀಗ ಗದ್ದೆನಾಟಿ ಮಾಡುವ ಕೆಲಸವಿದೆ; ಕೆಲದಿನ ನಾವು ಬರುವುದು ಸಾಧ್ಯವಿಲ್ಲ" ಎಂದು ಆ ಜನ ಹೇಳಿದರು. ಮೈಸೂರಿನಲ್ಲಿದ್ದ 'ಕಸ್ತೂರ್‌ಬಾ ಗ್ರಾಮ ಸೇವಾ ಕೇಂದ್ರ'ಕ್ಕೆ ವರದಿ ಕಳುಹಿಸಿ ನಾನು ಬೆಂಗಳೂರಿಗೆ ಮರಳಿದೆ.

ನಮ್ಮ ತಲೆಮಾರಿನಲ್ಲಿ ಸ್ವಾತಂತ್ರ್ಯ ಕಾಣಲಾರೆವು ಎಂದು ತಿಳಿದಿದ್ದೆವು. ಆದರೆ ಸ್ವಾತಂತ್ರ್ಯ ಬಂದೇ ಬಿಟ್ಟಿತು!

ನಮ್ಮ ಮನೆಗೇ ಬಂದು ಕೆಲಸಕ್ಕೆ ಕರೆದ ಕಾರಣ (ಇನ್ನು ಮಾಡುವುದಾದರೂ ಏನಿದೆ ಎಂದು) ಕಮಲಾಬಾಯ್ ಸ್ಕೂಲಿಗೆ ಹಿಂದೀ ಪಂಡಿತಳಾಗಿ ಕೆಲಸಕ್ಕೆ ಹೋದೆ. ಕೆಲವೇ ದಿನಗಳಲ್ಲಿ ಜವಾಬ್ದಾರಿ ಸರಕಾರಕ್ಕಾಗಿ 'ಚಲೋ ಮೈಸೂರ್' ಚಳವಳಿ ಮೊದಲಾಯಿತು. ಸ್ಕೂಲಿಗೆ ರಜಾ ಹಾಕಿ ಹೊರಟೆ. ಕೃಷ್ಣಶರ್ಮರ ನೇತೃತ್ವ ; ತರಬೇತಿ ಪಡೆದ ಶಿಷ್ಯರು ಇದ್ದರು. 'ಗಾಂಧೀ ಸಾಹಿತ್ಯ ಸಂಘ'ದ ಚಟುವಟಿಕೆಗಳನ್ನು ಹತ್ತಿಕ್ಕಿ ನಾಯಕರ ಸೆರೆಹಿಡಿಯಿತು ಸರ್ಕಾರ.

'ಮಲ್ಲೇಶ್ವರದ ಚೌಕ' ಅನೇಕ ವರ್ಷಗಳಿಂದ ಸ್ವಾತಂತ್ರ್ಯ ಹೋರಾಟಗಾರರ ಮತ್ತು ಪೋಲೀಸರ ಕದನಕ್ಷೇತ್ರವಾಗಿತ್ತಲ್ಲ ? ಸರ್ಕಾರಿ ಪ್ರೌಢಶಾಲೆಯಿಂದ ವಿದ್ಯಾರ್ಥಿಗಳ ಮೆರವಣಿಗೆ. ಬಾವುಟ ಹಿಡಿದು, ಹಿಂದಿನ ಜನರೊಂದಿಗೆ ಹೊಸಬರೂ ಇದ್ದರು. ನಾನು, ಗಿರಿಜಾಬಾಯಿ, ಕುಂತಳ, ವಿಮಲ ಮುಂತಾದವರು ಇದ್ದೆವು. ಸಂಪಿಗೆ ರಸ್ತೆ ಮಾರ್ಗವಾಗಿ ಹೊರಟೆವು. ಚೌಕದ ಬಳಿ 6ನೇ ಕ್ರಾಸಿಗೆ ಬರುವ ಹೊತ್ತಿಗೆ ಎದುರಾಗಿ, ಪೋಲೀಸರ ದೊಡ್ಡ ಪಡೆ ಎದುರಾಯಿತು. ಹಿಂಬಾಲಿಸಿ ಬರುತ್ತಿದ್ದ ಪೋಲೀಸರ ಅರಿವು ನಮಗಿರಲಿಲ್ಲ. 'ಸರ್ಕಾರಕ್ಕೆ ಧಿಕ್ಕಾರ', 'ಚಲೋ ಮೈಸೂರು', 'ಪೋಲೀಸರಿಗೆ ಧಿಕ್ಕಾರ' ಎಂಬ ಗರ್ಜನೆಯೊಡನೆ ಮುನ್ನುಗ್ಗಿದೆವು. ಬೆತ್ತದ ಪ್ರಹಾರಗಳು ಪಟಪಟನೆ ಬಿದ್ದವು. ಟಿಯರ್ ಗ್ಯಾಸ್ ಬಿಟ್ಟ ಒಡನೇ ಕಣ್ಣು ಕಾಣದೇ ತತ್ತರಿಸುವಂತಾಯಿತು. ನಮ್ಮಲ್ಲಿ ಕೆಲವರು ಪಕ್ಕದ ಗಲ್ಲಿಯಿಂದೋಡಿದೆವು. ನಾನು ಸುತ್ತುಹಾಕಿಕೊಂಡು ಬಂದು ಪೋಲೀಸ್ ಠಾಣೆಯ ಪಕ್ಕದಲ್ಲಿದ್ದ ನಮ್ಮ ಚಿಕ್ಕಮ್ಮನ ಮನೆ ಕಾಂಪೌಂಡಿನಲ್ಲಿ ನುಗ್ಗಿ ಕಲ್ಲುಚಪ್ಪಡಿ ಸಂದಿಯಲ್ಲಿ ನೋಡುತ್ತ ನಿಂತೆ. ಆ ಹೊತ್ತಿಗಾಗಲೆ ಮೆರವಣಿಗೆ ಚದರಿತ್ತು. ಒಂದು ತಂಡದ ಹುಡುಗರು 6ನೇ ಕ್ರಾಸ್‌ನಲ್ಲಿರುವ ಶ್ರೀನಿವಾಸಯ್ಯನವರ ಮನೆಗೆ ನುಗ್ಗಿ ಅವಿತುಕೊಂಡರು. ನಾನು ಕಂಡಂತೆ ಸರ್ಕಲ್‌ನಲ್ಲಿದ್ದ ಸುಮಾರು ನೂರು ಮಂದಿ ಪೋಲೀಸರು ಎರಡು ತಂಡಗಳಾಗಿ ಕನ್ಸರ್‌ವೆನ್ಸಿ ಗಲ್ಲಿಗಳಿಂದ ದಡದಡನೆ ಯಮದೂತರಂತೆ ನುಗ್ಗಿ ಓಡಿದರು.

ತಮ್ಮ ಮನೆಗೆ ನುಗ್ಗಲು ಬಂದ ಪೋಲೀಸರನ್ನು ಶ್ರೀನಿವಾಸಯ್ಯನವರ ತಾಯಿ ತಡೆದು ಹೇಳಿದರು : "ಹುಡುಗರೆಲ್ಲಾ ಹಿಂಬಾಗಿಲಿನಿಂದ ಓಡಿಹೋಗಿದ್ದಾರೆ." ಟಿಯರ್ ಗ್ಯಾಸ್ ಸೂಸಿದಾಗ ಮಲ್ಲೇಶ್ವರಂ ಸರ್ಕಲ್ ಬಳಿಯ ಅಂಗಡಿ ವರ್ತಕರು ಈರುಳ್ಳಿಮೂಟೆ ರಸ್ತೆಗೆ ತಂದು ಸುರಿದರು. ಮತ್ತೆ ಕೆಲವರು ರಾಗಿ ತಂದು ಸುರಿದರು. ಬೂಡ್ಸು ಕಾಲಿನ ಪೋಲೀಸರು ಜಾರಿಬೀಳಲಿ ಎಂದೇನೊ ? ಮಲ್ಲೇಶ್ವರಂ ಮಾರ್ಕೆಟ್‌ನಲ್ಲಿ ತರಕಾರಿ ಮಾರುತ್ತಿದ್ದ ವೆಂಕಟರಮಣಯ್ಯನ ಮಗ ತಿಮ್ಮಯ್ಯನನ್ನು (ತಿರುಮಲಯ್ಯ) ಇನ್‌ಸ್ಪೆಕ್ಟರ್ ಅಟ್ಟಿಸಿಕೊಂಡು ಹೋಗಿ ಗುಂಡಿಟ್ಟು ಕೊಂದಿದ್ದನ್ನು ಕಣ್ಣಾರೆ ಕಂಡರು ನಾರಾಯಣರಾಯರ ತಂಗಿ ತುಳಸಿಬಾಯಿ. ನಾನು ಅವಿತುಕೊಂಡ ಜಾಗದಲ್ಲೂ ಟಿಯರ್ ಗ್ಯಾಸ್‌ನ ಘಾಟು ಬಂದಿತ್ತು. ಸ್ವಲ್ಪ ಹೊತ್ತು ಕಣ್ಣು ಕಾಣದಂತಾಗಿ ಆನಂತರ

ಚೇತರಿಸಿಕೊಂಡು ಮೆಲ್ಲನೆ ಚಿಕ್ಕಮ್ಮನ ಮನೆ ಒಳಗೆ ಹೋದೆ. ಅಂದು ಸುತ್ತಮುತ್ತಲಿನ ಯಾರ ಮನೆಯಲ್ಲೂ ಒಲೆಗೆ ಬೆಂಕಿ ಹಾಕಲಿಲ್ಲ ; ಅಡಿಗೆ ಮಾಡಲಿಲ್ಲ.

ವ್ಯ.ಚಿಂ. 16

## ಕೆ. ಶ್ರೀನಿವಾಸರಾವ್

ಜನನ : ? ಉದ್ಯೋಗ : ಸರ್ವೋದಯ ಕಾರ್ಯ ವಿಳಾಸ : ಗಾಂಧೀ ಭವನ, ಕುಮಾರ ಪಾರ್ಕ್, ಬೆಂಗಳೂರು

---



ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಲು ನನಗೆ ಸುದೀರ್ಘವಾದ ಹಿನ್ನೆಲೆ ಇತ್ತು. ಹುಟ್ಟಿದ ಊರಲ್ಲಿದ್ದ ಶಾಲೆಯ (ಪ್ರಾಥಮಿಕ) ಶಿಕ್ಷಕರು ಮೊದಲನೆಯ ಮಹಾಯುದ್ಧ, ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ಆಗ ತಾನೆ ಹಿಂದಿರುಗಿದ್ದ ಗಾಂಧೀಜಿಯ ಸಮಾಚಾರವನ್ನು ಓದುತ್ತಿದ್ದುದು ನನ್ನ ಕಿವಿಗೆ ಬೀಳುತ್ತಿತ್ತು. ಮುಂದಿನ ನನ್ನ ಕಾರ್ಯಕ್ಕೆ ಈ 'ಗಾಂಧೀ' ಮಾತು ಮಂತ್ರೋಪದೇಶವಾದಂತಾಯಿತು. ಗಾಂಧೀಜಿಯ ಕರೆಗೆ ಅನುಸಾರ ರಾಟೆಯಿಂದ ಸೂತು, ಮಗ್ಗವನ್ನು ಮನೆಯಲ್ಲೇ ಹಾಕಿಸಿ, ನೂಲನ್ನು ನೇಯಿಸಿ, ಆ ಒರಟು ದುಬಟಿ ಬಟ್ಟೆಯನ್ನು ಧರಿಸುವುದರಲ್ಲಿ ಹೆಮ್ಮೆಪಡುತ್ತಿದ್ದ ಆ ಮಾಸ್ತರರ ದೇಶಪ್ರೇಮದ ಗಾಳಿ ನನ್ನ ಮೇಲೂ ಬೀಸಿತು.

1922ರಲ್ಲಿ ಸ್ವಂತ ಊರನ್ನು ಬಿಟ್ಟು, ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿಗೆ ಬಂದು, ಬಳೇಪೇಟೆಯಲ್ಲಿದ್ದ ಆರ್ಯನ್ ಲೋಯರ್ ಸೆಕೆಂಡರಿ ಸ್ಕೂಲ್ (ಆರ್ಯ ವಿದ್ಯಾಶಾಲೆ) ಸೇರಿದೆ. ಆ ಶಾಲೆಯ ಅಧ್ಯಾಪಕ ವರ್ಗದವರೂ ಸಹ ರಾಷ್ಟ್ರೀಯ ಮನೋಭಾವದಿಂದಲೇ ನಮಗೆ ಪಾಠ–ಪ್ರವಚನಗಳನ್ನು ನಡೆಸುತ್ತಿದ್ದರು. 1926ರಲ್ಲಿ ದೇಶಬಂಧು ಚಿತ್ತರಂಜನ ದಾಸ್ ತೀರಿಕೊಂಡಾಗ, ನಮ್ಮ ಮುಖ್ಯೋಪಾಧ್ಯಾಯರಾಗಿದ್ದ ದಿ|| ದೇವುಡು ನರಸಿಂಹ ಶಾಸ್ತ್ರಿಗಳ ಭಾವೋದ್ರೇಕ ಭಾಷಣ ನಮಗೆ ಮತ್ತಷ್ಟು ಸ್ಫೂರ್ತಿಕೊಟ್ಟಿತು. ದೇಶದಲ್ಲಿ ನಡೆಯುತ್ತಿದ್ದ ಘಟನೆಗಳು ನಮ್ಮ ದಿನನಿತ್ಯದ ಪಠ್ಯಕ್ರಮ. ಚರಿತ್ರೆ, ಭೂಗೋಳ, ಪೌರನೀತಿ—ಈ ಎಲ್ಲಾ ಘಟನೆಗಳನ್ನು ಆಧರಿಸಿದ ಕಲಿಕೆ. ಜೀವನ ಶಿಕ್ಷಣಕ್ಕೆ ಬುನಾದಿ ಆಗಿತ್ತು ಈ ಶಾಲೆಯ ಪಾಠಪ್ರವಚನ.

1926ರಲ್ಲಿ ತರಗುಪೇಟೆಯಲ್ಲಿದ್ದ ನ್ಯಾಷನಲ್ ಹೈಸ್ಕೂಲಿಗೆ ಸೇರಿದೆ. ಮತ್ತೆ ಕೇಳುವುದೇನು! ಪರೀಕ್ಷೆಯ ಪಾಠಗಳೊಂದಿಗೆ ಸ್ವಾತಂತ್ರ್ಯಯೋಧರ, ಸತ್ಯಾಗ್ರಹಿಗಳ ತರಪೇತು, ಹಿಂದೀ, ಪೌರನೀತಿ, ಕಾಂಗ್ರೆಸ್ಸಿನ ಇತಿಹಾಸ, ಕರ್ನಾಟಕದ ಇತಿಹಾಸ, ರಾಷ್ಟ್ರನಾಯಕರ ಭೇಟಿ ಮತ್ತು ಭಾಷಣ, ಜಯಂತಿ ಸಮಾರಂಭಗಳ ಮೂಲಕ ಪ್ರತ್ಯಕ್ಷ ಶಿಕ್ಷಣ–ಹಲವಾರು ರೀತಿಗಳಲ್ಲಿ ತರಬೇತಿ. 1924ರಲ್ಲಿ ಬೆಳಗಾಂ ಕಾಂಗ್ರೆಸ್ಸಿನಲ್ಲಿ ದೇಶೀಯ ವಿದ್ಯಾ ಶಾಲೆಯ ಅಧ್ಯಾಪಕ ತಂಡದವರು ಸ್ವಯಂಸೇವಕರಾಗಿ ಕೆಲಸ ಮಾಡಿದ್ದರು. ಹಿಂದೂಸ್ಥಾನೀ ಸೇವಾದಳದ ಶಾಖೆಯೇ ಎಂಬಂತೆ ಬೆಂಗಳೂರು ಸೇವಾದಳದ ಕೇಂದ್ರ ದೇಶೀಯ ವಿದ್ಯಾ ಶಾಲೆಯೇ ಆಗಿತ್ತು. ಸೇವಾದಳದ ಶಿಕ್ಷಣಪಡೆದ ದೇ.ವಿ. ಶಾಲೆಯ ವಿದ್ಯಾರ್ಥಿಗಳು ದೇಶದ ಹಲವಾರು ಕ್ಷೇತ್ರಗಳಲ್ಲಿ ಶ್ಲಾಘನೀಯ ಸೇವೆಸಲ್ಲಿಸಿದ್ದಾರೆಂಬುದು ಗಮನಾರ್ಹ. 1927ರಲ್ಲಿ ಮದರಾಸಿನಲ್ಲಿ ನಡೆದ ಕಾಂಗ್ರೆಸ್ ಮಹಾ ಅಧಿವೇಶನದಲ್ಲಿ ಸ್ವಯಂಸೇವಕರಾಗಿ ಕೆಲಸ ಮಾಡುವ ಸದವಕಾಶ ನನಗೆ, ನನ್ನ ಗೆಳೆಯರಿಗೆ ಒದಗಿತ್ತು. ಗಾಂಧೀಜಿ ಅದೇ ವರ್ಷದಲ್ಲಿ ಖಾದೀಯಾತ್ರೆ ಹೊರಟಿದ್ದು ಬೆಂಗಳೂರಿಗೆ ಬಂದಿದ್ದರು. ದೇ.ವಿ. ಶಾಲೆಯಲ್ಲಿ ದಕ್ಷಿಣ ಭಾರತ ಖಾದೀ ಪ್ರದರ್ಶನ ನಡೆಯಿತು; ಗಾಂಧೀಜಿಯ ಪ್ರಥಮ ದರ್ಶನ, ಪ್ರತ್ಯಕ್ಷ ಸೇವಾಕಾರ್ಯ ಸಾಗಿತು.

1929ರಲ್ಲಿ ದೇ.ವಿ. ಶಾಲೆಯ ಶಿಕ್ಷಣ ಮುಗಿಸಿ, ಗಂಗಾಧರರಾಯರ ಆಶ್ರಮಕ್ಕೆ ಹೊರಟೆ. ಮೂಲ ಉದ್ದೇಶ ಸಬರಮತಿಗೆ—ಗಾಂಧೀಜಿ ಆಶ್ರಮಕ್ಕೆ ಹೋಗಬೇಕೆಂಬುದು. ಅಲ್ಲಿಗೆ ನೇರವಾಗಿ ಹೋಗುವಂತಿರಲಿಲ್ಲ. ದೇಶಪಾಂಡೆ ಗಂಗಾಧರರಾಯರ—ಹುದಲಿ ಬಳಿಯಿದ್ದ ಕುಮರಿ ಆಶ್ರಮದ ಪಾಸ್‌ಪೋರ್ಟ್ ಬೇಕಾಗಿತ್ತು. ಆಗಲೇ ಲಾಹೋರ್‌ನಲ್ಲಿ ಕಾಂಗ್ರೆಸ್ 'ಸಂಪೂರ್ಣ ಸ್ವಾತಂತ್ರ್ಯವೇ ನಮ್ಮ ಗುರಿ' ಎಂಬ ಘೋಷಣೆ ಮಾಡಿತು.

ಮಾರ್ಚ್ 12, 1930ರಂದು ಗಾಂಧೀಜೀ ದಂಡೀಯಾತ್ರೆ ಪ್ರಾರಂಭ. ನಾನು ಮತ್ತು ಕುಮರಿ ಆಶ್ರಮದ ಗೆಳೆಯರು ಬೆಳಗಾವಿ ಜಿಲ್ಲೆಯ ಕುಂದರನಾಡಿನ ಬೇರೆಬೇರೆ ಕ್ಷೇತ್ರಗಳಲ್ಲಿ ಪ್ರಚಾರ ಹಾಗೂ ಸತ್ಯಾಗ್ರಹಕ್ಕಾಗಿ ಹೊರಟೆವು. ಅಕ್ಕತಂಗೇರಹಾಳ, ಗೋಕಾಕ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ ಓಡಾಡಿ ಪ್ರಚಾರಸಭೆಗಳನ್ನು ನಡೆಸುತ್ತಿದ್ದಂತೆಯೇ, ಅವು ಸತ್ಯಾಗ್ರಹಗಳ ಸಭೆಗಳಾಗಿ ಪರಿವರ್ತನೆ ಆದವು. ಸರದಿಯ ಪ್ರಕಾರ ನಾವು ಸಭೆಗಳಲ್ಲಿಯೇ ಉಪ್ಪನ್ನು ತಯಾರಿಸಿ, ಕಾನೂನನ್ನು ಮುರಿದಿದ್ದೇವೆ, ಎಂದು ಸಭೆಯಲ್ಲಿ ಘೋಷಣೆ ಮಾಡುತ್ತಿದ್ದೆವು. ಅತಿಸರಳವಾದ ಸವಿನಯ ಕಾನೂನು ಭಂಗದ ಕಾರ್ಯಕ್ರಮ ಇದು ಆಗಿದ್ದರಿಂದ, ಹಳ್ಳಿಹಳ್ಳಿಯಲ್ಲಿ ಸ್ವಯಂಸೇವಕರು, ಸತ್ಯಾಗ್ರಹಿಗಳು ಮುಂದೆ ಬಂದು ಉಪ್ಪನ್ನು ತಯಾರಿಸಿ, ಅದನ್ನು ಮಾರಿ ಕಾನೂನು ಭಂಗಮಾಡುವ ಕಾರ್ಯಕ್ರಮ ವ್ಯಾಪಕವಾಗಿ ಸಾಗಿತು. ಜೈಲುಗಳು ತುಂಬಿದುವು. ಚಳವಳಿಯನ್ನು ಹತ್ತಿಕ್ಕಲು ಸರಕಾರ ಎಲ್ಲಾ ಬಗೆಯ ದಂಡಶಕ್ತಿಯನ್ನೂ ಬಳಸಿತು. ಸ್ವಾತಂತ್ರ್ಯಪ್ರಾಪ್ತಿಗಾಗಿ ಸರ್ವ ಬಗೆಯಲ್ಲೂ ತ್ಯಾಗ–ಬಲಿದಾನಗಳಿಗೆ ತಯಾರಾಗಿದ್ದ

ಜನರ ಮುಂದೆ ಸರಕಾರದ್ದೇನೂ ಸಾಗಲಿಲ್ಲ. ಈ ಅವಧಿಯಲ್ಲಿ ನನಗೆ ಒಂದು ತಿಂಗಳ ಸಾದಾ ಶಿಕ್ಷೆಯಾಗಿ ಬೆಳಗಾವಿ ಜೈಲಿನಲ್ಲಿದ್ದೆ.

ಒಂದು ವರ್ಷ ಕಳೆಯಿತು. 1932ರಲ್ಲಿ ಮತ್ತೆ ಚಳವಳಿ ಪ್ರಾರಂಭ. ಈ ಚಳವಳಿಯಲ್ಲಿ ಮತ್ತೆ ಅದೇ ಅಕ್ಕತಂಗೇರಹಾಳ ಮತ್ತು ಗೋಕಾಕ ತಾಲ್ಲೂಕಿನ ಹಲವು ಗ್ರಾಮಗಳಲ್ಲಿ ಈಚಲುಗಿಡದ ಸತ್ಯಾಗ್ರಹವನ್ನು ಪ್ರಾರಂಭಿಸಿದೆವು. ಪರಿಚಿತ ಗ್ರಾಮ ಯುವಕರೊಂದಿಗೆ ಸೇರಿ, ಜೈಲಿಗೆ ಹೋಗಲು ಸಿದ್ಧವಿರುವ ಸ್ವಯಂಸೇವಕರನ್ನು ಸಂಘಟಿಸಿ, ಗಾಂಧೀಜಿಯ ಸತ್ಯಾಗ್ರಹದ ಪದ್ಧತಿಯನ್ನು ಅವರಿಗೆ ವಿವರಿಸಿ ಅಹಿಂಸಾ ಮಾರ್ಗದ ಅಗತ್ಯವನ್ನು ಅವರಿಗೆ ಹೇಳುವುದೇ ನನ್ನ ಮುಖ್ಯ ಕಾರ್ಯವಾಗಿತ್ತು. ಮದ್ಯದಂಗಡಿಯ ಪಿಕೆಟಿಂಗ್ ಅಲ್ಲಲ್ಲಿ ನಡೆಸಿದರು. ಪ್ರತಿಯೊಂದು ಊರಿನಿಂದ ಎಷ್ಟು ಜನ ಸತ್ಯಾಗ್ರಹಿಗಳನ್ನು ಕಳುಹಿಸುವುದೆಂಬುದೂ ಹಳ್ಳಿಯವರು ತಾವೇ ತೀರ್ಮಾನಿಸಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುತ್ತಿದ್ದರು. ಕಷ್ಟಕ್ಕೆ, ತ್ಯಾಗಕ್ಕೆ ಸಿದ್ಧರಾಗಬೇಕೆಂಬ ಮನೋಭಾವ, ವಾತಾವರಣ ಮೂಡಿತ್ತು. ಕಾರ್ಯ ಸಾಗುತ್ತಿದ್ದಂತೆಯೇ ಎರಡು ತಾಲ್ಲೂಕುಗಳ ವಾರೆಂಟ್ ಹೊರಟು ಒಟ್ಟು ಮೂರೂವರೆ ವರ್ಷಗಳ ಕಠಿಣ ಶಿಕ್ಷೆ ನನಗಾಯಿತು. ಬೆಳಗಾವಿಯ ಹಿಂಡಲಗಿ ಜೈಲಿನಲ್ಲಿ ಹಲವು ತಿಂಗಳು, ಅನಂತರ ಅಹಮದ್‌ನಗರ ಜಿಲ್ಲೆಯ ವಿಸಾಪುರ ಜೈಲುವಾಸ. ಜೈಲು—ಅದೊಂದು ಬೇರೆಯ ಪ್ರಪಂಚ. ಆದರೂ ನಾವು ರಾಜಕೀಯ ಕೈದಿಗಳಾದುದರಿಂದ, ಅಲ್ಲಿಯೂ ನಮ್ಮ ಚಳವಳಿ—ದಿನನಿತ್ಯದ ಜೀವನಸೌಲಭ್ಯಗಳಿಗಾಗಿ. ಬೆಳಗಾವಿ ಜೈಲಿನಲ್ಲಿ ಮುಂಬಯಿ, ಕರ್ನಾಟಕದ ಮುಖಂಡರೆಲ್ಲ ಇದ್ದರು. ಯುವಕ ಸತ್ಯಾಗ್ರಹಿಗಳು ಜೈಲಿನ ಒಳಗೆ ಶಾಂತಿ ಕಾಪಾಡಬೇಕೆಂದು ಮುಂದಾಳುಗಳ ಪ್ರಯತ್ನ ಸತತವಾಗಿ ಸಾಗಿತ್ತು. ಮುಂಬಯಿಯಲ್ಲಿ ದಸ್ತಗಿರಿಯಾಗಿ ಬೆಳಗಾವಿ ಜೈಲಿಗೆ ಯೂಸೂಫ್ ಮೆಹರಾಲಿ ಬಂದರು. ಅವರು ಬಂದ ಕೂಡಲೇ ಜೈಲಿನ ವಾತಾವರಣವೇ ಬದಲಾಗಿ ಹೋಯಿತು. ಪ್ರತಿಯೊಬ್ಬರಿಗೂ ಓದಲು-ಬರೆಯಲು ಸೌಕರ್ಯ ಸಿಗಬೇಕೆಂದು ಹೋರಾಟ ನಡೆಸಿದರು. ಹೊರಗಿನಿಂದ ಬೇಕಾದಷ್ಟು ಪುಸ್ತಕಗಳನ್ನು ತರಿಸಿದರು. ಜೈಲಿನ ಅಧಿಕಾರಿಗಳಿಗೆ ಈ ರಾಜಕೀಯ ಕೈದಿಗಳನ್ನು ನಿಭಾಯಿಸುವುದು ಕಷ್ಟವಾಯಿತು. ರಾಜಕೀಯ ಬಂಧಿತರೆಲ್ಲರನ್ನೂ ವಿಸಾಪುರ ಸೆರೆಮನೆಗೆ ವರ್ಗಾಯಿಸಿದರು.

ವಿಸಾಪುರದ ಸೆರೆಮನೆಯಲ್ಲಿಯೇ ಹೆಚ್ಚು ಕಾಲ ನಾನು ಕಳೆದೆ. ಸೆರೆಮನೆ ಕಾಲೇಜು ಆಗಿ ಪರಿವರ್ತನೆಗೊಂಡಿತು. ಎಸ್. ಕೆ. ಪಾಟೀಲರು ನಮಗೆ ಪ್ರಪಂಚದಲ್ಲಿದ್ದ ರಾಜಕೀಯ ಪದ್ಧತಿಗಳ ಬಗ್ಗೆ ದೀರ್ಘವಾದ ವ್ಯಾಖ್ಯಾನಮಾಲೆಯನ್ನು ಏರ್ಪಡಿಸಿದರು. ಗುಜರಾತಿನ ನರಹರಿಭಾಯಿ ಪಾರೀಖ್, ಮಹಾರಾಷ್ಟ್ರದ ಎಸ್. ಎಂ. ಜೋಶಿ, ಕರ್ನಾಟಕದ ಟಿ. ಎಸ್. ನಾಯಕ ಮಾಸ್ತರ್ ಮುಂತಾದವರೆಲ್ಲ ನಮ್ಮೊಡನೆ ಇದ್ದುದರಿಂದ ಸಾಮಾನ್ಯ ಕಾರ್ಯಕರ್ತರ ಸರ್ವತೋಮುಖ ವಿಕಾಸಕ್ಕೆ ಅವಕಾಶವಾಯಿತು.

1934ರ ಕೊನೆಯ ಭಾಗಕ್ಕೆ ಬಿಡುಗಡೆ. ಎಂದಿನಂತೆ ರಚನಾತ್ಮಕ ಕಾರ್ಯದಲ್ಲಿ, ಮುಖ್ಯವಾಗಿ ಶಿಕ್ಷಣ ಕ್ಷೇತ್ರದಲ್ಲಿ ಕೆಲಸ ಸಾಗಿತ್ತು.

ಇನ್ನು, 1942ರ 'ಚಲೇ ಜಾವ್' ಚಳವಳಿ. ಸರಕಾರದ ಬಳಿ ಹಿಂದಿನ ಚಳವಳಿಗಳಲ್ಲಿ ಭಾಗವಹಿಸಿದ್ದ ಬಂಡುಕೋರರ ಪಟ್ಟಿ ಇದ್ದೇ ಇತ್ತು. ಆಗಸ್ಟ್ 10ರ ಬೆಳಗ್ಗಿಯಿಂದಲೇ ದೇಶಾದ್ಯಂತ 'ಮಾಡು ಅಥವಾ ಮಡಿ' ಎಂಬ ಘೋಷಣೆಗಳೊಂದಿಗೆ ಚಳವಳಿ ಮಿಂಚಿನ ವೇಗದಲ್ಲಿ ಪ್ರಾರಂಭವಾಯಿತು.

ಎಲ್ಲಿಂದಲೋ ಬರುತ್ತಿದ್ದ ಚಳವಳಿಯ ವಿವಿಧ ಕಾರ್ಯಕ್ರಮಗಳ ರೂಪುರೇಖೆ, ಸೂಚನೆಗಳ ಕರಡುಕರಪತ್ರಗಳನ್ನು 2-3 ಭಾಷೆಗಳಲ್ಲಿ ಸೈಕ್ಲೊಸ್ಟೈಲ್ ಮಾಡಿ ಹಂಚಲು ವಿವಿಧ ಭಾಗಗಳಿಗೆ ಕಳುಹಿಸುವುದೇ ಬೆಂಗಳೂರಿನಲ್ಲಿದ್ದ ನನ್ನ ಮುಖ್ಯಕಾರ್ಯವಾಗಿತ್ತು. ಹಿಂದಿನ ಹಲವಾರು ವರ್ಷಗಳಿಂದ ಸಂಗ್ರಹಿಸಿಟ್ಟಿದ್ದ 'ಯಂಗ್ ಇಂಡಿಯಾ', 'ಹರಿಜನ' ಪ್ರತಿಗಳೊಂದಿಗೆ ಒಂದು ಮಧ್ಯರಾತ್ರಿ ಪೋಲೀಸರು ಬಂದು ನನ್ನನ್ನು ದಸ್ತಗಿರಿಮಾಡಿ, ಚಾಮರಾಜಪೇಟೆ ಪೋಲೀಸ್ ಸ್ಟೇಶನ್ನಿಗೆ ಕೊಂಡೊಯ್ದರು. ಕರಪತ್ರಗಳ ಪುಡಿಕೆಗಳೂ ಸಹ ಸಾಕಷ್ಟು ಅವರಿಗೆ ದೊರೆತವು. ಮೂರು ದಿನ (ಬಹುಶಃ) ಪೋಲೀಸ್ ಸ್ಟೇಷನ್ನಿನಲ್ಲಿಯೇ ಬಿಡಾರ. "ಸೈಕ್ಲೊಸ್ಟೈಲ್ ಯಂತ್ರ ಎಲ್ಲಿದೆ?" ಎಂದು ಕೇಳಿದರು. "ನನಗೆ ತಿಳಿಯದು" ಎಂದು ಹೇಳಿದೆ. ಕಡೆಗೆ ಕೇಸ್ ಮಾಡಿ ಒಂದು ವರ್ಷ ಕಠಿಣ ಸಜಾ ಆಯಿತು.

ಶಿಕ್ಷೆ ಅನುಭವಿಸಿ ಹೊರಗೆ ಬಂದನಂತರವೂ ಗಾಂಧೀ ಹುಚ್ಚಿನ ಜಾಡು ಬಿಡಲಿಲ್ಲ. ಚಳವಳಿಯ ಕಾಲಗಳಲ್ಲಿ ಜೈಲು; ಚಳವಳಿ ಇಲ್ಲದ ಕಾಲದಲ್ಲಿ ಚಳವಳಿಗಾಗಿ ಸಿದ್ಧತೆ, ವಿಧಾಯಕ ಕಾರ್ಯ. ಗಾಂಧೀ ಪಾಠ ಸುಲಭವಾಗಿ ಅರ್ಥವಾಗದು. ರಚನಾತ್ಮಕ ಕಾರ್ಯಕ್ರಮದಲ್ಲಿ—ರಾಷ್ಟ್ರಭಾಷಾ ಪ್ರಚಾರ; ಕಸ್ತೂರ್‌ಬಾ ಸ್ಮಾರಕ ಗ್ರಾಮ ಸೇವಾ ಕೇಂದ್ರಗಳು; ಮೂಲ ಶಿಕ್ಷಣ; ಸೇವಾದಳ; ಈಗ ಭೂದಾನ ಚಳವಳಿ; ಸ್ವಾತಂತ್ರ್ಯ ಪೂರ್ವದಲ್ಲಿ ಆಗಿನ ಸರಕಾರದೊಂದಿಗೇ ಹೋರಾಟ! ಸ್ವಾತಂತ್ರ್ಯಾನಂತರ ನಮ್ಮ ಸರಕಾರದೊಂದಿಗೆ ಚೀರಾಟ! ಜೀವನ ಸಂಗ್ರಾಮಕ್ಕೆ ಕೊನೆಮೊದಲೆಲ್ಲಿ?

ಮೈ.ಚಿಂ. 17

# ಜಿ. ಸುಬ್ರಹ್ಮಣ್ಯಂ

ಜನನ : 1918 ಉದ್ಯೋಗ : ನಿವೃತ್ತ ಜೀವನ ವಿಳಾಸ : 575, XI ಮೇನ್,
V ಬ್ಲಾಕ್, ಜಯನಗರ, ಬೆಂಗಳೂರು 41

---



ನಮ್ಮ ಮನೆಯಿಂದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದವರು ನಾನು ಮತ್ತು ನನ್ನ ಹಿರಿಯ ಅಣ್ಣಂದಿರಿಬ್ಬರು, ಹಾಗೂ ನನ್ನ ಅತ್ತಿಗೆ ದಿ|| ಲಲಿತಮ್ಮ ಜಿ. ಆರ್. ಸ್ವಾಮಿ. ನನ್ನ ಹಿರಿಯಣ್ಣ ಜಿ. ಆರ್. ಸ್ವಾಮಿ ಇವರಿಗೆ 68 ವರ್ಷಗಳು. ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿ ಸುಮಾರು ಮೂರು ವರುಷಗಳ ಕಾಲ ಕಾರಾಗೃಹವಾಸವನ್ನು ಅನುಭವಿಸಿದ್ದಾರೆ. ಬೆಂಗಳೂರು, ಕಲ್ಲಿಕೋಟೆ, ಕೊಯಮುತ್ತೂರು, ಕನ್ನಾನೂರು ಹಾಗೂ ಇನ್ನೂ ಅನೇಕ ಉತ್ತರ ಕರ್ನಾಟಕದ ಜೈಲುಖಾನೆಗಳಲ್ಲಿ ರಾಜಕೀಯ ಬಂದಿಯಾಗಿದ್ದರು. ಇವರಿಗೆ ಕಠಿಣ ಶಿಕ್ಷೆಗಳೇ ವಿಧಿಸಲ್ಪಟ್ಟಿದ್ದವು. ಒಂದು ಜೈಲಿನಲ್ಲಿ ಇವರಿಗೆ ಕಬ್ಬಿಣದ ಸರಪಳಿಯನ್ನು ಹಾಕಿದ್ದರಂತೆ ಮತ್ತು ಹುಳುಮಿಶ್ರಿತ ಆಹಾರವನ್ನು ಕೊಡುತ್ತಿದ್ದರಂತೆ. ಇವರು ಜೈಲುವಾಸವನ್ನು ಮುಗಿಸಿ ಮನೆಗೆ ಹಿಂತಿರುಗಿದಾಗ (1934ರಲ್ಲಿ) ಬಹಳವಾಗಿ ಕುಗ್ಗಿದ್ದರು.

ಇನ್ನೊಬ್ಬರು ನನ್ನ ಹಿರಿಯಣ್ಣ ಜಿ. ಶಾಮಣ್ಣ. ಇವರು 1930 ಮತ್ತು 1939ರಲ್ಲಿ ಕಾರವಾರ ಮತ್ತು ಬೆಂಗಳೂರು ಜೈಲುಗಳಲ್ಲಿದ್ದರು. ಇವರ ಶಿಕ್ಷಾವಧಿ ಆರು ತಿಂಗಳಿಗೂ ಮೇಲ್ಪಟ್ಟಿತ್ತು.

ಮೈಸೂರಿನ ಎಲ್ಲಾ ಸ್ವಾತಂತ್ರ್ಯ ಸಂಗ್ರಾಮಗಳಲ್ಲಿ ಭಾಗವಹಿಸಿದವರೆಂದರೆ ನನ್ನ ಹಿರಿಯ ಅಣ್ಣ ಜಿ. ಆರ್. ಸ್ವಾಮಿ. 1930-32 ಹಾಗೂ 1937ರ ಚಳವಳಿಗಳಲ್ಲಿ ಭಾಗವಹಿಸಿದ್ದರು. 26-1-1937ರ ಸ್ವಾತಂತ್ರ್ಯದಿನಾಚರಣೆಯಲ್ಲಿ ಕಾನೂನು ಉಲ್ಲಂಘನೆ ಮಾಡಿದಾಗ ದಸ್ತಗಿರಿಯಾದರು. ಈ ಘಟನೆಗಳ ಬಗ್ಗೆ ಬ್ರಿಟಿಷ್ ಪಾರ್ಲಿಮೆಂಟ್‌ನಲ್ಲೂ ಸಹ ಚರ್ಚೆಯಾಯಿತು. ಬ್ರಿಟಿಷ್ ಪತ್ರಿಕೆಗಳೂ ಈ ಬಗ್ಗೆ ವರದಿ ಮಾಡಿದ್ದವಂತೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಲು ಇವರಿಗೆ ಸ್ಫೂರ್ತಿನೀಡಿದವರು ಮೈಸೂರಿನ ಎಂ. ವೆಂಕಟಕೃಷ್ಣಯ್ಯನವರು. ಮುಂದೆ ಇವರು

ಸೇವಾದಳ ಸೇರಿ ಡಾ॥ ಎನ್. ಎಸ್. ಹರ್ಡೀಕರ್ ಅವರ ಸಲಹೆಯಂತೆ ಕೆಲಸ ಮಾಡುತ್ತಿದ್ದರು.

ಮತ್ತೊಂದು ಹೆಮ್ಮೆಯ ಸಂಗತಿಯೆಂದರೆ ನಮ್ಮ ಮನೆಗೆ ಸೊಸೆಯಾಗಿ ಬಂದ ಲಲಿತಮ್ಮ ಜಿ. ಆರ್. ಸ್ವಾಮಿ 1938ರಲ್ಲಿ ಬೆಂಗಳೂರಿನಲ್ಲಿ ಧ್ವಜಸತ್ಯಾಗ್ರಹ ಮಾಡಿ ದಸ್ತಗಿರಿಯಾದುದು.

ನಾನು ರಾಜಕೀಯಕ್ಕೆ ಪ್ರವೇಶಿಸಿದ್ದು 1936ರಲ್ಲಿ ಬೆಂಗಳೂರಿನಲ್ಲೇ. ಆದರೆ ನಾನು ಹತ್ತು ವರುಷದವನಿದ್ದಾಗ ಮೈಸೂರಿಗೆ ಬಂದಿದ್ದ ಗಾಂಧೀಜೀ, ಕಸ್ತೂರ್‌ಬಾ ಇವರನ್ನು ಕಂಡಿದ್ದೆ. ನನ್ನ ಜೊತೆಯಲ್ಲಿಯೇ ಬಂದಿದ್ದ ನನ್ನ ಅಕ್ಕ ಹರಿಜನ ಫಂಡಿಗೆ ಒಂದು ಬೆಳ್ಳಿಯ ಪಾವಲಿ ನೀಡಿದ್ದಳು. ಇದಕ್ಕೆ ಮುನ್ನ 1934ರಲ್ಲಿ ಮೈಸೂರಿಗೆ ಬಾಬು ರಾಜೇಂದ್ರ ಪ್ರಸಾದ್‌ರವರು ಭೇಟಿ ಇತ್ತಿದ್ದರು. ಆಗ್ಗೆ ನನಗೆ 16 ವರ್ಷಗಳು. ಇವರು ತಂಗಿದ್ದ ಬಂಗಲೆಯಲ್ಲಿದ್ದ ಪಾಯಖಾನೆ ಹಾಗೂ ಕೊಠಡಿಯನ್ನು ಶುಚಿಯಾಗಿಡುವುದು ನನ್ನ ಕೆಲಸವಾಗಿತ್ತು. ನನ್ನ ಕೆಲಸದ ಬಗ್ಗೆ ಬಾಬು ರಾಜೇಂದ್ರ ಪ್ರಸಾದ್‌ರವರು ಬೆನ್ನುತಟ್ಟಿ ಮೆಚ್ಚುಗೆ ಸೂಚಿಸಿದ್ದರು.

ನನಗೆ ಆಗ ಸ್ವಾತಂತ್ರ್ಯಕ್ಕೆ ದುಡಿಯಲು ಅಗರಂ ರಂಗಯ್ಯನವರು ಮತ್ತು ಕಲಾಭವನಂ ಸೂರ್ಯನಾರಾಯಣರಾಯರು ಮಾರ್ಗದರ್ಶಿಗಳಾಗಿದ್ದರು. ಸೂರ್ಯನಾರಾಯಣರಾಯರು ಸತ್ಯ ಸತ್ಯಾಗ್ರಹಿ. ನನ್ನ ಬೆಂಗಳೂರಿನ ಗುರುಗಳು ವಿ. ಎಸ್. ನಾರಾಯಣರಾಯರು. ಇವರು ಮೈಸೂರು ಕಾಂಗ್ರೆಸ್ಸಿನ ಪ್ರಧಾನ ಕಾರ್ಯದರ್ಶಿಯಾಗಿದ್ದರು. ಇವರಿಗೆ ಅಡ್ಡಹೆಸರು 'ಮೈಸೂರಿನ ಕೃಪಲಾನಿ' ಎಂದು. ಇವರಿಗೆ ಕೆ. ಟಿ. ಭಾಷ್ಯಂ, ವೀರಕೇಸರಿ ಸೀತಾರಾಮಶಾಸ್ತ್ರಿ ಮತ್ತು ತಗಡೂರು ರಾಮಚಂದ್ರರಾಯರು ಆಪ್ತಸ್ನೇಹಿತರಾಗಿದ್ದರು. ಡಾ॥ ಎನ್. ಎಸ್. ಹರ್ಡೀಕರ್‌ರವರಿಗೆ ನಾರಾಯಣರಾಯರೆಂದರೆ ಬಹು ಮಮತೆ.

1937ರಲ್ಲಿ ಸ್ವಾತಂತ್ರ್ಯ ಸಂಗ್ರಾಮ ಮೈಸೂರಲ್ಲಿ ಹಬ್ಬಲು ಕಾರಣರಾದ ಪ್ರಮುಖ ವ್ಯಕ್ತಿ ಎಂದರೆ ಮುಬಯಿಯ ನರಿಮನ್ನರು.

20-10-1937ರಂದು ಬೆಂಗಳೂರಿನ ಬಸಪ್ಪಾ-ಪಾರ್ಕಿನಲ್ಲಿ ಪ್ರಚಂಡ ಸಭೆಯೊಂದರಲ್ಲಿ ಭಾಷಣಮಾಡುತ್ತಿದ್ದಾಗ ನರಿಮನ್ನರು ಬಂಧಿಸಲ್ಪಟ್ಟರು. ಪೋಲೀಸರು ಲಾಠೀಚಾರ್ಜ್ ಮತ್ತು ಗೋಲೀಬಾರ್ ಮಾಡಿದರು. ನಾನು ಬಹಳ ಕಷ್ಟದಿಂದ ಮೂರು ನಾಲ್ಕು ಕಡೆ ಗೋಲೀಬಾರ್‌ದಿಂದ ತಪ್ಪಿಸಿಕೊಂಡು ನನ್ನ ಕೊಠಡಿಯನ್ನು ಸೇರಿದೆ.

ಬಸಪ್ಪಾ ಪಾರ್ಕಿನಲ್ಲಿ ನಡೆದ ಭಾಷಣದ ಏರ್ಪಾಡುಗಳನ್ನು ನಾನು, ನನ್ನ ಮಿತ್ರ ಎಸ್. ಎನ್. ಗುಪ್ತರೊಡನೆ ಮಾಡಿದ್ದೆನು. ನನ್ನನ್ನು 25-10-1937 ರಂದು ದಸ್ತಗಿರಿ ಮಾಡಿದರು. ನನ್ನ ಅಣ್ಣ ಜಿ. ಆರ್. ಸ್ವಾಮಿ, ಎಸ್. ಎನ್.

ಗುಪ್ತ ಮತ್ತು ಇನ್ನೂ ಹಲವರನ್ನು ಬಂಧಿಸಲಾಯಿತು. ಸುಮಾರು ನಾಲ್ಕು ತಿಂಗಳ ಕಾಲ ನಾನು ಬೆಂಗಳೂರಿನ ಕಾರಾಗೃಹದಲ್ಲಿ ಕಳೆಯಬೇಕಾಯಿತು. 1939ರಲ್ಲಿ ಸಹ ನನಗೆ ಆರು ತಿಂಗಳು ಎಂಟು ದಿನಗಳ ಕಾರಾಗೃಹ ಶಿಕ್ಷೆಯಾಗಿತ್ತು.

ನಾನು ಭಾಗವಹಿಸಿದ ಮೈಸೂರು ಕಾಂಗ್ರೆಸ್ ಅಧಿವೇಶನಗಳು: 1938ರಲ್ಲಿ ಶಿವಪುರ; 1940 ಏಪ್ರಿಲ್‌ನಲ್ಲಿ ಶಿವಮೊಗ್ಗ; 1941ರಲ್ಲಿ ಹರಿಹರ ಮತ್ತು 1942ರಲ್ಲಿ ತುಮಕೂರು. ಎಸ್. ಎನ್. ಗುಪ್ತ, ಭೀಮಕುಮಾರ್, ಲಕ್ಷ್ಮೀನಾರಾಯಣರಾವ್, ಲಕ್ಷ್ಮೀನರಸಿಂಹಯ್ಯ, ಎಂ. ರಾಮಮೂರ್ತಿ, ಬಿ. ಎಂ. ಶೀನಪ್ಪ ಮತ್ತು ಜಯಶೀಲನ್ ಇವರುಗಳು ನನ್ನ ಮುಖ್ಯ ಜೊತೆಗಾರರು.

## ಮೈ.ಬೆಂ. 18 | ಬಿ. ವಿ. ಬಾಲಾಜಿ

ಜನನ : ? ಉದ್ಯೋಗ : ವಕೀಲ ವಿಳಾಸ : 200/20, V ಮೇನ್, ವೈಯಾಳಿಕಾವಲ್, ಬೆಂಗಳೂರು-3

---

ನನ್ನ ತಂದೆ ದಿ|| ಬಿ. ಕೆ. ವೆಂಕಟರಮಣ ಅಯ್ಯಂಗಾರ್ಯರು ರೈಲ್ವೆ ಉದ್ಯೋಗದಲ್ಲಿದ್ದರೂ, ನಮ್ಮ ದೇಶದ ಏಳಿಗೆಯಲ್ಲಿ ಬಹಳ ಆಸಕ್ತಿ ವಹಿಸುತ್ತಿದ್ದರು. 1920ರಿಂದ 1928ರ ವರೆಗೆ ಮದ್ರಾಸಿನಲ್ಲೇ ವಾಸಿಸುತ್ತಿದ್ದರು. ಆ ಕಾಲದಲ್ಲಿ ಸೈಮನ್ ಕಮಿಷನ್, ಪ್ರಿನ್ಸ್ ಆಫ್ ವೇಲ್ಸ್‌ರ ಪ್ರವಾಸಗಳ ವಿರುದ್ಧ ಪ್ರತಿಭಟನೆ, ಇತರ ಸ್ವಾತಂತ್ರ್ಯ ಹೋರಾಟಗಳಲ್ಲಿ ಭಾಗವಹಿಸುತ್ತಿದ್ದರು. ಹಾಗೆಯೇ, ಜನವರಿ ಕೊನೆಯ ಭಾಗದಲ್ಲಿ ಪೋಲೀಸರ ಲಾಠೀ ಹೊಡೆತವನ್ನು ತಪ್ಪಿಸಿಕೊಳ್ಳಲು, ಮರೀನ್ ಸಮುದ್ರತೀರದ ಮರಳಿನ ಮೇಲೆ ಓಡಿ, ಅದರಿಂದ ಬಹಳ ಆಯಾಸಪಟ್ಟು 2-3 ದಿನಗಳಲ್ಲಿ ಹೃದಯಾಘಾತದಿಂದ ಅಸು ನೀಗಿದರು. ನಾನು ನನ್ನ ಒಂದನೇ ವಯಸ್ಸಿನಿಂದಲೂ ನಮ್ಮ ಚಿಕ್ಕಪ್ಪ ದಿ|| ಬಿ. ಕೆ. ರಾಮಸ್ವಾಮಿ ಅಯ್ಯಂಗಾರ್ಯರಲ್ಲೇ ಬೆಳೆದವನು. ಅವರು ಮೈಸೂರು ಪೋಲೀಸು ಇಲಾಖೆಯಲ್ಲಿ ಆ ಕಾಲಕ್ಕೆ ಇನ್‌ಸ್ಪೆಕ್ಟರ್ ಆಗಿದ್ದರು. ಅವರೂ ದೇಶಭಕ್ತರು. ಸಾಧ್ಯವಾದಷ್ಟು ದೇಶದ ಏಳಿಗೆಗಾಗಿ ಶ್ರಮಿಸುತ್ತಿದ್ದರು. ಇವರುಗಳ ಪ್ರಭಾವ ನನ್ನ ಮೇಲೆ ಇತ್ತು. ಇದರ ಜೊತೆಗೆ 1929-30ರ ವೇಳೆಗೆ ಮಹಾತ್ಮಾ ಗಾಂಧೀಜಿಯವರ, ದೇಶದ ಸ್ವಾತಂತ್ರ್ಯಕ್ಕಾಗಿ ಹೂಡಿದ ಶಾಂತ ಚಳವಳಿ ಎಲ್ಲರ ಮೇಲೂ, ಅಧಿಕ ಮಟ್ಟದಲ್ಲಿ ಪ್ರಭಾವ ಬೀರಿತ್ತು. ನಾವು ಮೈಸೂರು ರಾಜ್ಯದಲ್ಲಿ ವಾಸಿಸುತ್ತಿದ್ದುದರಿಂದ, ಅಲ್ಲಿಯೇ ಚಳವಳಿ ಹೂಡಲು ಸಾಧ್ಯವಾಗುತ್ತಿರಲಿಲ್ಲ.

ಆದರೂ ನನ್ನ ಕೈಲಾದನುಟ್ಟಿಗೆ ದೇಶಸೇವೆ ಮಾಡಬೇಕೆಂಬ ಆಕಾಂಕ್ಷೆ, ಆತುರಗಳು ಬಹಳವಾಗಿತ್ತು. ಆ ಕಾಲಕ್ಕೆ ಸರಿಯಾಗಿ ಮಹಾತ್ಮಾಜಿಯವರು ಉದ್ಯೋಗಸ್ಥರನ್ನೂ ವಿದ್ಯಾರ್ಥಿಗಳನ್ನೂ ಎಲ್ಲರನ್ನೂ ದೇಶಸೇವೆಗೆ ಕರೆದರು. ಇವೆಲ್ಲಾ ನನ್ನನ್ನು ಕಾಲೇಜು ವ್ಯಾಸಂಗ ತ್ಯಜಿಸಿ, ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಲು ಕಾರಣವಾಯಿತು. ಆ ಕಾಲಕ್ಕೆ ನಮ್ಮ ಮೈಸೂರು ದೇಶದಲ್ಲಿ ಅನೇಕ ಮೇಧಾವಿಗಳೂ ಮಾರ್ಗದರ್ಶಕರೂ ದೇಶಭಕ್ತರೂ ಇದ್ದರು. ಅವರುಗಳಲ್ಲಿ ವೆಂಕಟಪತಯ್ಯ, ಕೆ. ಟಿ. ಭಾಷ್ಯಂ, ಟಿ. ಟಿ. ಶರ್ಮ ಮತ್ತು ಇತರರು ನಮ್ಮನ್ನು ಅಗಲಿರುತ್ತಾರೆ. ಆದರೆ ವಿ. ಎಸ್. ನಾರಾಯಣ ರಾವ್, ಸರ್ದಾರ್ ವೆಂಕಟರಾಮಯ್ಯ ಮತ್ತು ಇತರರು ದೇಶಸೇವೆಯಲ್ಲಿ ಈಗಲೂ ತೊಡಗಿರುತ್ತಾರೆ.

ಸೇವಾದಳವನ್ನು ಸೇರಲು ನಿರ್ಧರಿಸಿ ನಾನು 30-4-30ರಲ್ಲಿ ಸೇರಿಕೊಂಡೆ. ಮೇ 5ನೇ ತಾರೀಖಿನವರೆಗೂ ತರಪೇತು ಪಡೆದು, ಆ ದಿನ ಮಧ್ಯಾಹ್ನ ರೈಲಿನಲ್ಲಿ ಹುಬ್ಬಳ್ಳಿಗೆ, ನಾನು ಮತ್ತು 10-15 ಸೇವಾದಳದ ಸ್ವಯಂಸೇವಕರು ಹೊರಟೆವು. ಅಲ್ಲಿ ನಮ್ಮೆಲ್ಲರಿಗೂ ಡಾ|| ಹರ್ಡೀಕರರ ನೇತೃತ್ವದಲ್ಲಿ ಕ್ಯಾಂಪು ಶಿಕ್ಷಣ ಚೆನ್ನಾಗಿ ದೊರಕಿತು. ನನ್ನನ್ನು ಮತ್ತು ಇನ್ನೂ ಹತ್ತು ಮಂದಿ ಸ್ವಯಂಸೇವಕರನ್ನು 22-5-1930ರಂದು ಬಳ್ಳಾರಿ ಕ್ಯಾಂಪಿಗೆ ಕಳುಹಿಸಿಕೊಟ್ಟರು. ಅಲ್ಲಿ, ಅಲ್ಲಿನ ಮುಂದಾಳಾದ ಟೇಕೂರ್ ಸುಬ್ರಮಣ್ಯಂ ಅವರು ಸಂಚಾಲಕರಾಗಿದ್ದರು. ಅವರ ಅನುಯಾಯಿಗಳಾಗಿ ವೆಂಕೋಬರಾವ್, ಶೇಷಗಿರಿರಾವ್ ಮತ್ತು ಇತರರು ತಮ್ಮ ಉದ್ಯೋಗಗಳನ್ನು ತ್ಯಜಿಸಿ, ಸತ್ಯಾಗ್ರಹ ಚಳವಳಿಯಲ್ಲಿ ಭಾಗವಹಿಸುತ್ತಿದ್ದರು. ನಾನೂ ಅವರೊಡನೆ ಸೇರಿ ಪ್ರತಿದಿನದ ಕಾರ್ಯಾ ಚರಣೆಯಲ್ಲಿ ಭಾಗವಹಿಸುತ್ತಿದ್ದೆ. ವಿದೇಶೀ ವಸ್ತ್ರಗಳ ಬಹಿಷ್ಕಾರ, ಬೀದಿಬೀದಿಗಳಲ್ಲೂ ರಾಷ್ಟ್ರಗೀತೆಯನ್ನು ಹಾಡುತ್ತಾ, ನಮ್ಮಗಳ ಧ್ಯೇಯ, ಗುರಿ ಇವುಗಳ ಪರಿಚಯ, ಸಾಯಂಕಾಲ ಬಹಿರಂಗ ಸಭೆ ಇತ್ಯಾದಿ. ಎರಡು ಕ್ಯಾಂಪುಗಳ ಶಿಸ್ತಿನ ಪ್ರಕಾರ, ಪ್ರತಿ ಸ್ವಯಂಸೇವಕನೂ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ತಕಲಿಯಲ್ಲಿ ನೂಲು ತೆಗೆದು, ಶುಭ್ರಮಾಡಿ ಕೊಡುತ್ತಿದ್ದೆವು. ಆ ಕಾಲದಲ್ಲಿ 15-20 ದಿನಗಳು ನಾನು ಆಸ್ಪತ್ರೆಯಲ್ಲಿ ಇರಬೇಕಾಗಿ ಬಂತು. ಕಾಲಿಗೆ ಜೋಳದ ಕಡ್ಡಿ ನಾಟಿ, ಅದು ವ್ರಣವಾಯಿತು. ಗುಣ ವಾದಮೇಲೆ ಸುತ್ತಮುತ್ತಲಿನ ಹಳ್ಳಿಗಳಿಗೆ ಪ್ರತಿದಿನ ಬೆಳಗ್ಗೆ ಹೋಗಿ, ರಾತ್ರಿಯ ವೇಳೆಗೆ ಬಳ್ಳಾರಿಗೇ ಬಂದುಬಿಡುತ್ತಿದ್ದೆವು. ಹೀಗೆ, ಪ್ರಚಾರ ಸಾಂಗವಾಗಿ ಸಾಗುತ್ತಿತ್ತು. ಆಗಸ್ಟ್ ಮೊದಲನೇ ವಾರದಲ್ಲಿ, ನನ್ನನ್ನು ಮತ್ತು ನನ್ನ ಸ್ನೇಹಿತ ಶೇಷಗಿರಿಯನ್ನು ಹೂವಿನಹಡಗಲಿ, ಉಪ್ಪಿನಮಾಳ, ಮಾಗಳ ಮುಂತಾದ ಹಳ್ಳಿಗಳಲ್ಲಿ ಪ್ರಚಾರ ಮಾಡಲು ಕಳುಹಿಸಿಕೊಟ್ಟರು. ಅದಕ್ಕೆ ಮುಂಚೆ, ಜುಲೈ 15ರಿಂದಲೇ ಹಳ್ಳಿಹಳ್ಳಿಗಳಿಗೆ ನಾವುಗಳೆಲ್ಲಾ ಗುಂಪುಗುಂಪಾಗಿ ಪ್ರಚಾರಭಾಷಣಗಳಲ್ಲಿ ತೊಡಗಿದ್ದೆವು. ನಾಲ್ಕನೇ ಆಗಸ್ಟ್ ಬೆಳಗ್ಗೆ, ಮಾಗಳ ಹಳ್ಳಿಯವರಿಂದ ಕೊಡಲಿ ಪಡೆದು, ಈಚಲು ಗಿಡಗಳನ್ನು

ಕಡಿದೆವು. ನಾವು ಕಡಿದ ಮರಗಳು ಹಳ್ಳಿಹಳ್ಳಿ ಸರಹದ್ದಿನಲ್ಲಿದ್ದವು. ಕೆಲವೇ ಕೆಲವು ಹಳ್ಳಿಯವರು ಸೇರಿದ್ದರು. ಮರುದಿವಸ ನಾವು ಹಡಗಲಿಯನ್ನು ಸೇರಿದೆವು. 4-8-30ರಲ್ಲಿ ಅಲ್ಲಿ ಸೇಂದಿ, ಸಾರಾಯಿ ವ್ಯಾಪಾರಕ್ಕೆ ಹರಾಜು ನಡೆಯುತ್ತಿತ್ತು. ಆಗ್ಗೆ ನಾವಿಬ್ಬರೂ ಹರಾಜಿನಲ್ಲಿ ಭಾಗವಹಿಸಬಾರದೆಂದು, ನಮ್ರತೆಯಿಂದ ಕೈಜೋಡಿಸಿ ಕೇಳಿಕೊಳ್ಳುತ್ತಿದ್ದೆವು. ಅಲ್ಲಿಂದ ಮಸಾಲವಾಡ ಹಳ್ಳಿಗೆ ಹೋಗಿ, 6ನೇ ತಾರೀಖು ಈಚಲಮರಗಳನ್ನು ಕಡಿಯುವುದಕ್ಕೆ ಸಹಾಯ ಕೋರಿದೆವು. ರಾತ್ರಿ ಹಡಗಲಿಗೆ ವಾಪಸ್ಸು ಬಂದು, ಊಟವಾದಮೇಲೆ ದೇವಸ್ಥಾನದಲ್ಲಿ ಮಲಗಿದೆವು. ಬೆಳಗ್ಗೆ ಎರಡು ಘಂಟೆಯ ಸಮಯಕ್ಕೆ ಪೋಲೀಸಿನವರು ಬಂದು ಊರಿನವರನ್ನು ಹೆದರಿಸಿದರು. ನಮ್ಮನ್ನು ನಮ್ಮ ನಮ್ಮ ಊರುಗಳಿಗೆ ವಾಪಸ್ಸು ಹೋಗೆಂದರು. ನಾವುಗಳು ಕೇಳಲಿಲ್ಲ. ಬೆಳಗ್ಗೆ ನಮಗೆ ಕೊಡಲಿಯೇ ಸಿಕ್ಕಲಿಲ್ಲ. ವಾಗ್ದಾನ ಮಾಡಿದ್ದ ಇನ್ನೂರು ಮಂದಿಯಲ್ಲಿ ಐವತ್ತು ಮಂದಿ ಮಾತ್ರ ನಮ್ಮ ಜೊತೆಯಲ್ಲಿ ಹೊರಡಲು ಒಪ್ಪಿಕೊಂಡು ಕೊಡಲಿಗಳನ್ನು ಹಿಡಿದು ಬಂದರು. ಗುಂಪಿನಲ್ಲಿ 5–6 ಜನಗಳ ಹತ್ತಿರ ಮಾತ್ರ ಕೊಡಲಿ ಇತ್ತು ; ನಮ್ಮಿಬ್ಬರಲ್ಲೂ ಇತ್ತು. ಸುಮಾರು 11 ಘಂಟೆಗೆ ಹೊರಟೆವು. ಅಷ್ಟರಲ್ಲಿ ಪೋಲೀಸರು ಬಂದರು. ಊರಿನವರೆಲ್ಲಾ ಓಡಿಹೋದರು. ಪೋಲೀಸರು ನಮ್ಮನ್ನು ತಡೆದರು. ನಾವು ಜಗ್ಗಲಿಲ್ಲ. ಕೊಡಲಿಯನ್ನು ಕೇಳಿದರು, ಕೊಡಲಿಲ್ಲ. ಆಮೇಲೆ ಇಬ್ಬರು ಮೂವರು ಪೋಲೀಸರು, ನಮ್ಮಗಳ ಕೈ ತಿರುಚಿ ಕೊಡಲಿಗಳನ್ನು ಕಿತ್ತುಕೊಂಡರು. ಆ ಕಾಲಕ್ಕೆ ನಾವಿಬ್ಬರೂ ಒಂದು ಮರ ಕಡಿದು, ಎರಡನೇ ಮರ ಕಡಿಯುತ್ತಿದ್ದೆವು. ಮರುದಿವಸ ನಮ್ಮನ್ನು ಅರೆಸ್ಟ್‌ಮಾಡಿ, ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಿದರು. ನನಗೆ ನಾಲ್ಕು ತಿಂಗಳ ಕಠಿಣ ಶಿಕ್ಷೆ ಮತ್ತು 25 ರೂ.ಗಳು ಜುಲ್ಮಾನೆ ; ಜುಲ್ಮಾನೆ ಕೊಡಲು ತಪ್ಪಿದಲ್ಲಿ ಮತ್ತೆ ನಾಲ್ಕು ವಾರಗಳು ಕಠಿಣ ಶಿಕ್ಷೆ ವಿಧಿಸಿ, ನಮ್ಮನ್ನೆಲ್ಲಾ ಬಳ್ಳಾರಿ ಸೆಂಟ್ರಲ್ ಜೈಲಿಗೆ ರವಾನಿಸಿದರು. ನಾವಿಬ್ಬರೂ 'ಸಿ' ದರ್ಜೆಗೆ ಸೇರಿದ ಕೈದಿಗಳಾದೆವು.

ಒಂದು ತಿಂಗಳಾದನಂತರ ನನ್ನನ್ನು ಮತ್ತು ಇನ್ನು ಕೆಲವು ಸತ್ಯಾಗ್ರಹಿಗಳನ್ನು ಮದರಾಸು ಪೆನಿನ್ಸಿಯರಿ ಜೈಲಿಗೆ ವರ್ಗಾಯಿಸಿದರು. ಅಲ್ಲಿನ ಸೂಪರಿಂಟೆಂಡೆಂಟನು ಒಬ್ಬ ಮಿಲಿಟರಿ ಅಧಿಕಾರಿ. ಸತ್ಯಾಗ್ರಹಿಗಳನ್ನು ಬಹಳ ಹೀನಾಯವಾಗಿ ಕಾಣುತ್ತಿದ್ದನು. ಒಬ್ಬೊಬ್ಬರನ್ನು ಒಂದೊಂದು ಕೋಣೆಯಲ್ಲಿ ಕೂಡಿಹಾಕುತ್ತಿದ್ದರು. ಮಲಗಲು ಕಲ್ಲಿನ ಮಂಚ. ದಿಂಬು ಕಲ್ಲಿನದೇ. ಒಂದು ಹೊದಿಕೆ ಮಾತ್ರ ಇತ್ತು. ನಾವುಗಳು ಕಷ್ಟವನ್ನು ಸಂತೋಷದಿಂದಲೇ ಅನುಭವಿಸುತ್ತಿದ್ದೆವು. ಆ ಕಾಲಕ್ಕೆ ಸಿ. ರಾಜಗೋಪಾಲಾಚಾರಿಯವರು ಅದೇ ಜೈಲಿನಲ್ಲಿ ಬಂಧಿತರಾಗಿದ್ದರು. ಅವರು ಆಗಾಗ್ಗೆ ನಮ್ಮನ್ನು ಉಪದೇಶಿಸಿ, ಸತ್ಯಾಗ್ರಹಿಗಳು ಯಾವ ರೀತಿಯಲ್ಲಿ ಕಾರಾಗೃಹವಾಸ ಮಾಡಬೇಕೆಂದು ಸಲಹೆ ನೀಡುತ್ತಿದ್ದರು.

ಅದೇ ವರ್ಷ ನವೆಂಬರ್ 27ನೇ ತಾರೀಖು ಜೈಲಿನಿಂದ ಬಿಡುಗಡೆಯಾಯಿತು. ಪೋಲೀಸರ ಜೊತೆಮಾಡಿ ಬೆಂಗಳೂರಿಗೆ ನನ್ನನ್ನು ಕಳುಹಿಸಿಕೊಟ್ಟರು. ಆದರೆ ಪುನಃ 1937ರ ವರೆಗೆ ನಾನು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಲಾಗಲಿಲ್ಲ. ನಾನು ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರಿಂದ ನನ್ನ ಚಿಕ್ಕಪ್ಪನವರಿಗೆ ಉದ್ಯೋಗದಲ್ಲಿ ಬಹಳ ಕಷ್ಟವಾಗಿ, ಅವರು ಕೊರಗುತ್ತಿದ್ದರು. ಅವರಿಗೆ ನ್ಯಾಯ ರೀತಿಯಲ್ಲಿ ಬರಬೇಕಾಗಿದ್ದ ಬಡ್ತಿ ಕೊಡಲಿಲ್ಲ. ನನ್ನನ್ನು ವಿದ್ಯಾಭ್ಯಾಸದಲ್ಲಿ ಮುಂದುವರಿದು, ಸ್ವಂತ ಕಾಲಿನ ಮೇಲೆ ನಿಂತು, ಅನಂತರ ರಾಜಕೀಯ ಚಳವಳಿಯಲ್ಲಿ ಭಾಗವಹಿಸಬೇಕೆಂದು, ಅವರೂ ಮತ್ತು ಇತರರೂ ಬಹಳ ಒತ್ತಾಯ ಮಾಡಿದರು. ಅದರಂತೆಯೇ 1934ರಲ್ಲಿ ಬಿ.ಎ. ಮಾಡಿಕೊಂಡು, 1935–36ರಲ್ಲಿ ಮುಂಬಯಿಯಲ್ಲಿ ಎಲ್‌ಎಲ್.ಬಿ. ಮಾಡಿಕೊಂಡು, 1937ರಲ್ಲಿ ಜೂನಿಯರಾಗಿ, ಲಾಯರ್ ಉದ್ಯೋಗಕ್ಕೆ ಇಳಿದೆನು. ಆದರೆ ಅದೇ ವರ್ಷ ಬೆಂಗಳೂರು ಕಬ್ಬನ್ ಪಾರ್ಕಿನಲ್ಲಿ ನರಿಮನ್‌ರ ಭಾಷಣದ ಕಾಲದಲ್ಲಿ ಗಲಾಟೆಯಾಗಿ, ಕೋರ್ಟಿನ ಆವರಣದಲ್ಲಿ ಪೋಲೀಸರು ನುಗ್ಗಿ ಗುಂಡು ಹಾರಿಸಿದರು. ಆಗ್ಗೆ ನಾವು ಅನೇಕ ವಕೀಲರುಗಳು ಮೆರವಣಿಗೆ ಹೊರಟು, ಕೋರ್ಟನ್ನು ಒಂದೆರಡು ದಿವಸ ತ್ಯಜಿಸಿದ್ದೆವು.

ಮೈ.ಬೆಂ. 19

## ಎಂ. ಆರ್. ಶೇಷಾದ್ರಿ

ಜನನ: 1910 ಉದ್ಯೋಗ: ಪತ್ರಿಕೋದ್ಯೋಗಿ ವಿಳಾಸ: 727, 45ನೆ ಕ್ರಾಸ್, VIII ಬ್ಲಾಕ್, ಜಯನಗರ, ಬೆಂಗಳೂರು-41

---



ನನಗೆ ಬಾಲ್ಯದಿಂದಲೂ ಓದುವ ಚಪಲ ಬಹಳ. 'ಸಾಧ್ವಿ', 'ಸಂಪದಭ್ಯುದಯ' ಮತ್ತು 'ವಿಶ್ವ ಕರ್ನಾಟಕ' ಇತ್ಯಾದಿ ಪತ್ರಿಕೆಗಳನ್ನೂ ಮಹಾತ್ಮಾ ಗಾಂಧಿಯವರ 'ಯಂಗ್ ಇಂಡಿಯಾ' ಮತ್ತು 'ಹರಿಜನ' ಪತ್ರಿಕೆಗಳನ್ನೂ ಟಿ. ಪ್ರಕಾಶಂರವರ 'ಸ್ವರಾಜ್ಯ', ಹಾಗೂ 'ದಿ ಹಿಂದೂ' ಪತ್ರಿಕೆಗಳನ್ನೂ ಓದುತ್ತಿದ್ದೆ. ಇವು ರಾಷ್ಟ್ರಪ್ರೇಮ ಮತ್ತು ಅಂದಿನ ಭಾರತೀಯ ಪ್ರಜೆಯ ಕರ್ತವ್ಯಗಳ ಕಡೆಗೆ ನನ್ನನ್ನು ಆಕರ್ಷಿಸಿದುವು. ಭಾರತ ಸ್ವಾತಂತ್ರ್ಯಕ್ಕಾಗಿ ಕಾಂಗ್ರೆಸ್ ಸಂಸ್ಥೆ ಮೂಲಕ ಹೋರಾಟ

ನಡೆಸುತ್ತಿದ್ದ ನಾಯಕರುಗಳ ಕಡೆಗೆ ಆಕರ್ಷಿತನಾದೆ. ಡಾ|| ಹರ್ಡೀಕರ್ ಅವರ ನಾಯಕತ್ವದಲ್ಲಿ ಸೇವಾದಳ ಸೇರಿದೆ.

ಮುಡವೀಡು ಕೃಷ್ಣರಾಯ, ಕೆ. ಟಿ. ಭಾಷ್ಯಂ, ವಲ್ಲಭಭಾಯಿ ಪಟೇಲ್, ಸರೋಜಿನಿದೇವಿ, ಮಹಮದಾಲಿ, ಷೌಕತ್ ಅಲಿ ಇವರುಗಳ ಭಾಷಣಗಳೇ ಅಲ್ಲದೆ ರಾಜಾಜಿ, ಜವಾಹರಲಾಲ್ ನೆಹ್ರೂ, ಸುಭಾಸ್ ಇವರುಗಳ ವಾದಸರಣಿಯನ್ನು ಕೇಳಿ ನಾಡಿಗೆ ಕೈಲಾದ ಸೇವೆಸಲ್ಲಿಸಬೇಕೆಂದು ತೀರ್ಮಾನಿಸಿದೆ. ವಿದ್ಯಾರ್ಥಿಗಳು ಶಾಲಾ ಕಾಲೇಜುಗಳನ್ನು ತ್ಯಜಿಸಿ ಸ್ವಾತಂತ್ರ್ಯಸಮರದಲ್ಲಿ ಧುಮುಕಬೇಕೆಂದು ಬಾಪೂಜಿ ಕರೆಯಿತ್ತರು. ನಾನು ಆ ಆಜ್ಞೆಗೆ ತಲೆಬಾಗಿ, 1932ನೇ ಫೆಬ್ರವರಿ 20ನೇ ತಾರೀಖಿನ ದಿನ, ಬೆಂಗಳೂರು ದಂಡಿನ ಪ್ರದೇಶದಲ್ಲಿ ಜಾರಿಯಲ್ಲಿದ್ದ ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಭಾಷಣ ಮಾಡಿದ್ದಲ್ಲದೆ ಹಸ್ತಪತ್ರಿಕೆಗಳನ್ನು ಹಂಚಿದೆ; ಪೋಲೀಸರಿಂದ ಬಂಧಿತನಾದೆ. ನ್ಯಾಯಾಧೀಶರ ಮುಂದೆ ಹಾಜರುಪಡಿಸಿದಾಗ, "ಕೋರ್ಟಿನ ನಡೆವಳಿಕೆಗಳಲ್ಲಿ ಭಾಗವಹಿಸುವುದಿಲ್ಲ" ಎಂದು ಹೇಳಿಕೆ ಇತ್ತೆ. ಹಲವು ಸಾಕ್ಷಿಗಳ ವಿಚಾರಣೆ ನಡೆದಮೇಲೆ, "ಎರಡು ವರ್ಷದ ಕಠಿಣ ಶಿಕ್ಷೆ ವಿಧಿಸಲಾಗಿದೆ" ಎಂದು ತೀರ್ಪಿತ್ತರು. ನಾನು ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುವ ಮುನ್ನ ದಂಡಿನ ಪ್ರದೇಶದ ಹಾಗೂ ಬೆಂಗಳೂರಿನ ನಿವಾಸಿಗಳಾದ ಸುಮಾರು 36 ಜನ ಕಾನೂನುಭಂಗ ಚಳವಳಿಯಲ್ಲಿ ಭಾಗವಹಿಸಿ ತಲಾ ಎರಡೆರಡು ವರ್ಷದ ಕಠಿಣಶಿಕ್ಷೆಗೆ ಗುರಿಯಾಗಿದ್ದರು.

ಈ ಎರಡು ವರ್ಷದ ಸೆರೆಮನೆವಾಸವನ್ನು ಬೆಂಗಳೂರು, ವೆಲ್ಲೂರು, ಕಣ್ಣಾನೂರು, ಮತ್ತು ತಿರುಚನಾಪಳ್ಳಿ ಜೈಲುಗಳಲ್ಲಿ ಕಳೆದು, 29-12-33ರಂದು ತಿರುಚನಾಪಳ್ಳಿಯಿಂದ ಬಿಡುಗಡೆಹೊಂದಿ ಬೆಂಗಳೂರಿಗೆ ಹಿಂತಿರುಗಿದೆ. ವೆಲ್ಲೂರು, ಕಣ್ಣಾನೂರು ಮತ್ತು ತಿರುಚಿನಾಪಳ್ಳಿ ಜೈಲುಗಳಲ್ಲಿ ಎಸ್. ಸತ್ಯಮೂರ್ತಿ, ಸಾಂಬಮೂರ್ತಿ, ಜಿ. ರಾಮಚಂದ್ರನ್ ಮುಂತಾದವರ ಸಲಹೆ ಮತ್ತು ಬುದ್ಧಿವಾದ ಪಡೆಯುವ ಸುಯೋಗ ಲಭ್ಯವಾಯಿತು. ಅಷ್ಟೇ ಅಲ್ಲ. ಅಮರ ಭಗತ್‌ಸಿಂಗ್‌ನ ಜೊತೆಗಾರ ದತ್ ಮತ್ತು ತಿವಾರಿ ಅವರ ಪರಿಚಯ ಸಹ ಆಯಿತು.

ಬಿಡುಗಡೆ ಹೊಂದಿದಮೇಲೆ ಪತ್ರಿಕಾವೃತ್ತಿಯಿಂದ ರಾಷ್ಟ್ರ ಮತ್ತು ಸಮಾಜಸೇವೆ ನಡೆಸಬೇಕೆಂದು 'ವಿಶ್ವಕರ್ನಾಟಕ'ದ ಮೂಲಕ ಸೇವೆಸಲ್ಲಿಸುತ್ತಾ ಬಂದೆ. ಹಣಕಾಸಿನ ಅಭಾವದಿಂದಲೂ, ಜನತೆಯ ತಾತ್ಸಾರದಿಂದಲೂ 'ವಿಶ್ವಕರ್ನಾಟಕ'ದಂತಹ ಅದ್ವಿತೀಯ ಪತ್ರಿಕೆ ಕಣ್ಮರೆಯಾಯಿತು.

ಆಗ ನಗರ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದ ಕೆ. ಆರ್. ಮಾಧವರಾಯರು ಆಗಿನ ಬಿ.ಟಿ.ಸಿ. ಅಧ್ಯಕ್ಷರಾಗಿದ್ದರು. ನನ್ನನ್ನು ವಿಶ್ವಾಸದಿಂದ ಕರೆಸಿಕೊಂಡು ಸಾರಿಗೆ ಸಂಸ್ಥೆಯಲ್ಲಿ ಕೆಲಸಮಾಡುವಂತೆ ವ್ಯವಸ್ಥೆ ಮಾಡಿದರು. ಅವರೇ ಪ್ರಿನ್ಸಿಪಾಲ್ ಆಗಿದ್ದ ಐ.ಟಿ.ಐ.ನಲ್ಲಿ ಗಣಿತ ವಿಭಾಗದ ಅಧ್ಯಾಪಕವೃತ್ತಿಯನ್ನು ಅವಲಂಬಿಸುವಂತೆ ವ್ಯವಸ್ಥೆ

ಮಾಡಿದರು. ಎರಡು ದಶಕಗಳ ಕಾಲ ಎಂ.ಎಸ್.ಆರ್.ಟಿ.ಸಿ.ಯಲ್ಲಿ ಸೇವೆಸಲ್ಲಿಸಿ, 1971ರ ಡಿಸೆಂಬರ್ 10ನೇ ತಾರೀಖು ಅಲ್ಲಿಂದ ನಿವೃತ್ತನಾದೆ.

ಮೈ.ಬೆಂ. 20

## ಎಂ. ಎನ್. ರಾಜಶೇಖರ್

ಜನನ : 1918 ಉದ್ಯೋಗ : ನಿವೃತ್ತಜೀವನ ವಿಳಾಸ : 52/1, V ಕ್ರಾಸ್, I ಮೇನ್ ಚಾಮರಾಜಪೇಟೆ, ಬೆಂಗಳೂರು–18

---



1928ನೇ ನವೆಂಬರ್ ತಿಂಗಳಲ್ಲಿ ಲಾಲಾ ಲಜಪತ್ ರಾಯರು ಅಕಾಲಮೃತ್ಯುವಿಗೆ ತುತ್ತಾದರು. ಆಗ ಮೈಸೂರಿನಲ್ಲಿಯೂ ವಿದ್ಯಾರ್ಥಿಗಳು ಮೆರವಣಿಗೆ ಯನ್ನು ಹೊರಡಿಸಿದರು. ಆ ಮೆರವಣಿಗೆಯಲ್ಲಿ ವೆಸ್ಲಿಯನ್ ಮಿಶನ್ ಹೈಸ್ಕೂಲಿನಲ್ಲಿ ಓದುತ್ತಿದ್ದ ನಾನು ಪ್ರಥಮತಃ ಭಾಗವಹಿಸಿದ್ದೆ. ನಾನು ಓದು ತ್ತಿದ್ದ ಸ್ಕೂಲಿನ ಬೋಧಕರೊಬ್ಬರು ರಾಷ್ಟ್ರೀಯ ಭಾಷೆ ಹಿಂದಿಯನ್ನು ಕಲಿಸುತ್ತಿದ್ದರು. ನಾನೂ ಹಿಂದೀ ಕಲಿಯಲು ಉಪಕ್ರಮಿಸಿದೆನು. ಮುಂದೆ ಹೆಚ್ಚಿನ ಹಿಂದಿಯನ್ನು ಕಲಿಯಲು ಮೈಸೂರು ನಗರದ ಶಿವರಾಂಪೇಟೆಯಲ್ಲಿದ್ದ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಗೆ 1930ರಲ್ಲಿ ಪ್ರವೇಶಿಸಿದೆ. ಅಲ್ಲಿ ಕಲಿಯುತ್ತಿರುವಾಗ, ಆ ಸಂಸ್ಥೆಯ ಹಿರಿಯರು ನನ್ನ ಉತ್ಸಾಹ, ಚುರುಕುತನ ಮತ್ತು ಕಾರ್ಯಪಟುತ್ವವನ್ನು ಗಮನಿಸಿ ಹಲವು ಜವಾಬ್ದಾರಿಗಳನ್ನು ನನ್ನ ಹೆಗಲ ಮೇಲೆ ಹೇರಿದರು. ಅವುಗಳಲ್ಲಿ ಮೊದಲನೆಯದು, ಸಂಸ್ಥೆಯ ಅಂಗವಾದ ಸರಸ್ವತಿ ಪುಸ್ತಕ ಭಂಡಾರದ ಮೇಲ್ವಿಚಾರಣೆ ; ಎರಡನೆಯದಾಗಿ, ನಗರದಲ್ಲಿರುವ ಹಲವಾರು ಹಿಂದೀ ಕೇಂದ್ರಗಳ ಸಂಘಟನೆ ; ಮೂರ ನೆಯದಾಗಿ, ದೊಡ್ಡ ದೊಡ್ಡ ಸಭೆ ಮುಂತಾದವುಗಳ ವ್ಯವಸ್ಥೆ ಮಾಡುವುದು. ಇದೇ ರೀತಿ 1930ರ ವರೆಗೆ ಸೇವೆಸಲ್ಲಿಸಿದೆ. ಈ ಸಮಯದಲ್ಲಿ ರಾಜೇಂದ್ರ ಪ್ರಸಾದ್, ಜೆ. ಬಿ. ಕೃಪಲಾನಿ, ಕಾಕಾಸಾಹೇಬ್ ಕಾಲೇಲ್ಕರ್, ಪಂಡಿತ್ ಸುಂದರ್‌ಲಾಲ್, ಡಾ|| ಹರ್ಡೀ ಕರ್ ಮತ್ತು ಹಿಂದೀ ಭಾಷೆಯ ಸುಪ್ರಸಿದ್ಧ ಕಾದಂಬರಿಕಾರ ಪ್ರೇಮ್‌ಚಂದ್, ಅವರ ಪತ್ನಿ ಶಿವರಾಣೀದೇವಿ ಇವರುಗಳ ಸಂಪರ್ಕ ನನಗೆ ಲಭಿಸಿತು. ಮೇಲ್ಕಂಡ ನಾಯಕರು ಗಳ ಹಾಗೂ ಕೆಲವು ವರ್ಷಗಳ ಹಿಂದೆ ನೇಣುಗಂಬಕ್ಕೆ ಏರಿ ಹುತಾತ್ಮರಾದ ಭಗತ್

ಸಿಂಗ್, ರಾಜ್‌ಗುರು, ಸುಖದೇವ್ ಇವರುಗಳ ಜೀವನ ಆದರ್ಶಗಳ ಬಗ್ಗೆ ಆಳವಾಗಿ ಆಲೋಚಿಸಿ, ಅವರಂತೆ ಸಕ್ರಿಯ ರಾಜಕೀಯಕ್ಕೆ ಇಳಿಯಬೇಕೆಂದು ಬಲವಾದ ಆಸೆ-ಆಕಾಂಕ್ಷೆಗಳು ನನ್ನ ಚಿತ್ತಫಲಕದ ಮೂಡಿತು. ಇದರಿಂದ ಮುಂದಿನ ವಿದ್ಯಾಭ್ಯಾಸಕ್ಕೆ ಶರಣುಹೊಡೆದೆ.

ಹೀಗಿರುವಲ್ಲಿ, ಕೆಲವು ಸ್ನೇಹಿತರನ್ನು ಕಾಣಲು ಬೆಂಗಳೂರಿಗೆ ಹೊರಟೆ. ಆ ಸಮಯದಲ್ಲಿ, 60 ವರ್ಷಕ್ಕೂ ಮೀರಿದ ಮುದುಕನೊಬ್ಬನು ಕೇವಲ 16 ವರ್ಷದ ಕನ್ಯೆಯನ್ನು ಗವೀಪುರದ ಛತ್ರದಲ್ಲಿ ಮದುವೆಯಾಗುತ್ತಾನೆಂದು ವರ್ತಮಾನ ಬಂತು. ಇದರ ಹಿಂದಿನ ದಿನ ಕೆಲವು ಸ್ನೇಹಿತರೊಡನೆ ನಾನು ಈ ಮದುವೆಯನ್ನು ಖಂಡಿಸಿ ನಗರದಲ್ಲೆಲ್ಲಾ ಪ್ರಚಾರ ಮಾಡಿದ್ದೆ. ಮದುವೆ ಪೋಲೀಸ್ ಬಂದೋಬಸ್ತಿನಲ್ಲಿ ನಡೆಯಲು ಏರ್ಪಾಟಾಯಿತು. ಆ ದಿನ ನಾವು ಛತ್ರದ ಬಳಿ ಹೋಗಿ ಮದುವೆಯನ್ನು ಪ್ರತಿಭಟಿಸಿದೆವು. ಆ ಸಂದರ್ಭದಲ್ಲಿ ನನ್ನನ್ನೂ, ನನ್ನ ಸ್ನೇಹಿತ ಕೆ. ಎಸ್. ಮೂರ್ತಿಯವರನ್ನೂ ಪೋಲೀಸರು ಬಂಧಿಸಿ ಠಾಣೆಗೆ ಒಯ್ದರು. ಪ್ರಸಿದ್ಧ ವಕೀಲರಾಗಿದ್ದ ಎನ್. ಬಾಲಕೃಷ್ಣಯ್ಯ ಅವರು (ಮುಂದೆ ಹೈಕೋರ್ಟ್ ಜಡ್ಜ್ ಆದರು) ನಮ್ಮ ಬಂಧನದ ಸಂಗತಿ ತಿಳಿದು ಠಾಣೆಗೆ ಬಂದು, ಪೋಲೀಸರಿಗೆ ಕಾನೂನು ವಿಷಯದಲ್ಲಿ ದಬಾಯಿಸಿ ಬಿಡಿಸಿಕೊಂಡು ಬಂದರು. ಈ ವಿಷಯ—ವಿವಾಹ ಮತ್ತು ನಮ್ಮ ಬಂಧನವನ್ನು ಕುರಿತು— ಕನ್ನಡ ಪತ್ರಿಕೆಗಳು ಅಗ್ರಲೇಖನಗಳನ್ನು ಬರೆದವು. ಈ ಘಟನೆಯೇ ಮುಂದೆ 'ಜನಜಾಗೃತಿ ಸಂಘ' ದ ಸ್ಥಾಪನೆಗೆ ನಾಂದಿಯಾಯಿತು. 'ಜನಜಾಗೃತಿ ಸಂಘ'ವು 1937ನೇ ಮೇ ತಿಂಗಳಲ್ಲಿ ಉದ್ಭವಿಸಿತು. ಸದರಿ ಸಂಘದ ಸ್ಥಾಪಕರಲ್ಲಿ ನಾನೂ ಒಬ್ಬ. ಈ ಸಂಘದ ಧ್ಯೇಯ ಮತ್ತು ಧೋರಣೆಗಳು, ಸಾಮಾಜಿಕ ಹಾಗೂ ರಾಜಕೀಯ ಸಮಸ್ಯೆಗಳನ್ನು ಪರಿಹಾರ ಮಾಡುವುದಾಗಿತ್ತು. ಇದರ ಶಾಖೆಗಳು ಮೈಸೂರು ದೇಶದ ಹಲವಾರು ಕಡೆ ಹರಡುತ್ತಿತ್ತು. ಸದರಿ ಸಂಘದ ಸದಸ್ಯರು ಕಾಂಗ್ರೆಸ್ ಸದಸ್ಯರಾಗಿ ಕಾಂಗ್ರೆಸ್ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುತ್ತಿದ್ದರು. ಸಂಘದ ಸದಸ್ಯರಲ್ಲೊಬ್ಬರಾದ ಎಸ್. ಡಿ. ಶಂಕರ್ ಎ.ಐ.ಸಿ.ಸಿ. ಸದಸ್ಯರಾಗಿಯೂ ಇದ್ದರು. ಸಂಘವು ಕಾರ್ಮಿಕರ, ಯುವಕರ ಸಂಘಟನೆ ನಡೆಸಿತು. ಸರ್ಕಾರ ಸಂಘದವರ ಮೇಲೆ ಸದಾ ಕಣ್ಣಿಟ್ಟಿತ್ತು ಮತ್ತು ಅವರ ದಮನ ಮಾಡಲು ಅನೇಕ ನಿರ್ಬಂಧಗಳನ್ನು ಹೇರಿತ್ತು.

ಜನಜಾಗೃತಿ ಸಂಘದ ಪರವಾಗಿ ಮೈಸೂರು ಸುಬ್ಬರಾಯನ ಕೆರೆ ಮೈದಾನದಲ್ಲಿ ಒಂದು ಕೂಲಿಗಾರರ ಸಭೆಯನ್ನು ಕರೆದಿತ್ತು. ಆ ಸಂದರ್ಭದಲ್ಲಿ, ಸಭೆಯಲ್ಲಿ ಮಾತಾಡಕೂಡದೆಂದು ನನಗೂ ಎಸ್. ಡಿ. ಶಂಕರ್ ಮತ್ತು ತಗಡೂರು ಸುಬ್ಬಣ್ಣನವರಿಗೂ 144ನೇ ಸೆಕ್ಷನ್ ಜಾರಿ ಮಾಡಿದರು. ಇದಾದ 22 ದಿನಗಳಲ್ಲಿ ಮೈಸೂರಿನ ಸುತ್ತಮುತ್ತಲ 15 ಮೈಲಿ ಫಾಸಲೆಯಲ್ಲಿ ಸಭೆ, ಮೆರವಣಿಗೆ ನಡೆಸಬಾರದೆಂದು ಪೋಲೀಸ್ ಕಾಯಿದೆ 45ನೇ ಸೆಕ್ಷನ್ ಪ್ರಕಾರ ಪ್ರತಿಬಂಧಕಾಜ್ಞೆಯನ್ನು ಸಾರಿದರು.

ಸಂಘದ ಸದಸ್ಯರುಗಳು 1938ರಲ್ಲಿ ಶಿವಪುರದಲ್ಲಿ ನಡೆದ ಮೈಸೂರು ಪ್ರಥಮ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದೆವು. 28-4-1938ರಲ್ಲಿ ರಾಜಕೀಯ ಸುಧಾರಣೆಗಳನ್ನು ಖಂಡಿಸುವ ದಿನವನ್ನು ಆಚರಿಸಬೇಕೆಂದು ಮೈಸೂರು ಕಾಂಗ್ರೆಸ್ ದೇಶಕ್ಕೆ ಕರೆಕೊಟ್ಟಿತ್ತು. ಈ ಕರೆಗೆ ಜನಜಾಗೃತಿ ಸಂಘದವರಾದ ನಾವು ಸಮ್ಮತಿ ಪಟ್ಟು, ರೀಫಾರ್ಮ್ಸ್ ಕಮಿಟಿ ಎಂಬ ಒಂದು ದೈತ್ಯಾಕಾರದ ಆಕೃತಿಯನ್ನು ಮಾಡಿ, ಅದನ್ನು ಶವರೂಪದಲ್ಲಿ ಹೊತ್ತುಕೊಂಡು ಹೋಗಲು ಏರ್ಪಾಟಾಯಿತು. ಈ ಸಂದರ್ಭದಲ್ಲಿ, ಮೈಸೂರಿನಲ್ಲಿ ಪೋಲೀಸರು ತಡೆಹಾಕಿದರು. ಅದರ 'ಸಂಸ್ಕಾರ' ಮಾಡಲು ಬಿಡಲಿಲ್ಲ. ಸಂಜೆ ಒಂದು ಬಹಿರಂಗ ಸಭೆಯನ್ನು ಕರೆದು, ಆ ಸಭೆಯನ್ನು ಕರೆದು, ಆ ಸಭೆಯಲ್ಲಿ ಸುಧಾರಣೆಗಳು ಮತ್ತು ವಿದುರಾಶ್ವತ್ಥದಲ್ಲಿನ ದುರಂತವನ್ನು ತಗಡೂರು ಸುಬ್ಬಣ್ಣ ವಗ್ಗೆರೆಯವರು ತೀವ್ರವಾಗಿ ಖಂಡಿಸಿ ಭಾಷಣ ಮಾಡಿದರು. ನಾನೂ ಭಾಷಣಮಾಡಿದೆ. 30-4-1938ರಲ್ಲಿ ನನ್ನನ್ನು, ಸುಬ್ಬಣ್ಣ, ರಂಗಯ್ಯ ನವರನ್ನು ದಸ್ತಗಿರಿ ಮಾಡಿದರು. 13-5-1938ರಲ್ಲಿ ಮೂವರಿಗೂ ಒಂದೊಂದು ವರ್ಷ ಸಾದಾ ಶಿಕ್ಷೆ ವಿಧಿಸಿದರು. ಈ ಅವಧಿಯಲ್ಲಿ ನಮಗಾದುದೇ ಅತಿ ಹೆಚ್ಚಿನ ಶಿಕ್ಷೆ. ಆಗ ಸರ್ ಮಿರ್ಜಾ ಇಸ್ಮಾಯಿಲ್‌ರವರ ಅಪೇಕ್ಷೆಯಂತೆ ಗಾಂಧೀಜಿಯವರು, ವಲ್ಲಭಭಾಯಿ ಪಟೇಲ್ ಮತ್ತು ಕೃಪಲಾನಿಯವರನ್ನು ಸಂಧಾನಕ್ಕೆ ಕಳುಹಿಸಿಕೊಟ್ಟರು. ಸಂಧಾನದಲ್ಲಿ ಆರು ಬೇಡಿಕೆಗಳನ್ನು ಒಪ್ಪಿದರು. ಅದರಲ್ಲಿ 5ನೇ ಬೇಡಿಕೆ ರಾಜಕೀಯ ಕೈದಿಗಳ ಬಿಡುಗಡೆ; ಮೊಕದ್ದಮೆಗಳನ್ನು ಹಿಂದಕ್ಕೆ ತೆಗೆದುಕೊಳ್ಳುವುದು. ಈ ಸಂದರ್ಭದಲ್ಲಿ ನಮ್ಮನ್ನು 15-5-1938ರಂದು ಬಿಡುಗಡೆ ಮಾಡಿದರು. ಈಗಲೂ ನಾನು ಕಾಂಗ್ರೆಸ್ ಸೇವೆಯಲ್ಲಿಯೇ ನಿರತನಾಗಿದ್ದೇನೆ.

## ಕೆ. ಗುರುದತ್

ಮೈ.ಬೆಂ. 21

ಜನನ : 1919 ಉದ್ಯೋಗ : ಪತ್ರಿಕೋದ್ಯೋಗಿ ವಿಳಾಸ : ಪಿ 22, VIII ಕ್ರಾಸ್, ಶ್ರೀರಾಮಪುರಂ, ಬೆಂಗಳೂರು-21

---

ಕೆಂಗೇರಿ ಗುರುಕುಲದಲ್ಲಿ ನನ್ನ ಶಿಕ್ಷಣವಾದುದರಿಂದ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಪಾಲುಗೊಳ್ಳಲು ಸಾಧ್ಯ ಆಯಿತು. 1929ರ ಜುಲೈಯಲ್ಲಿ ಆರಂಭವಾಗಿದ್ದ ಈ ಆಶ್ರಮ ದಲ್ಲಿ ನನ್ನ ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಣ ಆಯಿತು. ಮುಂದೆ ನನ್ನ ಶಿಕ್ಷಣವನ್ನು ಮೊಟಕುಮಾಡಿದೆನಾದರೂ ಸಂಸ್ಥೆಯ ರಚನಾತ್ಮಕ ಕಾರ್ಯಗಳಾದ



ಹರಿಜನಸೇವೆ, ಖಾದಿಕಾರ್ಯಗಳಲ್ಲಿ ಪಾಲುಗೊಂಡೆ. 1934ರಲ್ಲಿ ಗಾಂಧೀಜಿ ಈ ಗುರುಕುಲಾಶ್ರಮಕ್ಕೆ ಭೇಟಿ ನೀಡಿದ್ದರು. ಬ್ರಹ್ಮಚಾರಿ ರಾಮಚಂದ್ರಜಿ ಈ ಸಂಸ್ಥೆ ಸ್ಥಾಪಿಸಿದ್ದರೆಂದು ಕೇಳಿದ್ದೇನೆ. ಸ್ವಾಮಿ ವಿಶ್ವಾನಂದ, ಅವರ ಸೋದರ ಪ್ರಿಯವ್ರತ್ ಇವರೂ ಅಲ್ಲಿ ಕೆಲಸ ಮಾಡಿದವರು. ಶಿವಪುರ ಸತ್ಯಾಗ್ರಹಕ್ಕೆ ನಾನು ಸ್ವಯಂಸೇವಕನಾಗಿ ಹೋಗಿ ಕೆಲಸಮಾಡಿದ್ದೆ. ಅಲ್ಲದೆ ವಿದುರಾಶ್ವತ್ಥ, ಶಿವಮೊಗ್ಗ ಅಧಿವೇಶನಗಳಲ್ಲೂ ಸ್ವಯಂಸೇವಕನಾಗಿದ್ದೆ.

1936ರ ಜೂನ್ ತಿಂಗಳಲ್ಲಿ ಕೆಂಗೇರಿ ಆಶ್ರಮದಲ್ಲಿ ದಕ್ಷಿಣ ಭಾರತ ಹರಿಜನ ಕೆಲಸಗಾರರ ಸಮ್ಮೇಳನ ನಡೆದು ಗಾಂಧೀಜಿ ಅದರಲ್ಲಿ ಪಾಲುಗೊಂಡಿದ್ದರು.

1942–47ರ ನಡುವೆ ಎಲ್ಲ ಚಳವಳಿಗಳಲ್ಲೂ ಪಾಲುಗೊಂಡಿದ್ದೇನೆ. ನನ್ನ ಗುರುಗಳಾದ ಪ್ರಿಯವ್ರತ್ ಅವರೊಡನೆ ಸೇರಿಕೊಂಡು ರಾಷ್ಟ್ರೀಯ ಸಾಹಿತ್ಯದ ಗುಪ್ತ ಪ್ರಚಾರದಲ್ಲಿ ತೊಡಗಿದ್ದೇನೆ. ನನ್ನನ್ನು ಪೋಲೀಸರು ಬಂಧಿಸುತ್ತಿರಲಿಲ್ಲ. ಆಶ್ರಮದ ಸೇವಕ, ಬಡಮಕ್ಕಳ ಶುಶ್ರೂಷೆ ಮಾಡುವವ, ಎಂದೇ ಅವರು ನನ್ನನ್ನು ಚೆನ್ನಾಗಿ ಗುರುತಿಸುತ್ತಿದ್ದರು. ಸಂಶಯ ಬಂದಾಗ ಬಂಧಿಸಿದರೂ ಅನಂತರ ಬಿಟ್ಟು ಬಿಡುತ್ತಿದ್ದರು. ಹೀಗಾಗಿ ನನಗೆ ಜೈಲುವಾಸ ಮಾಡುವ ಪ್ರಸಂಗವೇ ಬರಲಿಲ್ಲ.

ವೈ.ಬಂ. 22

## ಟಿ. ಸಚ್ಚಿದಾನಂದ ಶಿವಂ

ಜನನ : 1910 ಉದ್ಯೋಗ : ನಿವೃತ್ತಜೀವನ ವಿಳಾಸ : 201, ಕ್ಯಾವಲ್ರಿ ರಸ್ತೆ, ಬೆಂಗಳೂರು-42

---

ಮದ್ರಾಸಿನಲ್ಲಿ ಜನಿಸಿದ ನಾನು ತಾರುಣ್ಯದಲ್ಲಿ ಕಾಲಿಡುತ್ತಿದ್ದಂತೆ ಕಾಂಗ್ರೆಸ್‌ನ ಚಟುವಟಿಕೆಗಳಲ್ಲಿ ಪಾಲುಗೊಂಡಿದ್ದೆ. ವಿ. ವಿ. ಗಿರಿ, ಟಿ. ಪ್ರಕಾಶಂ ಮುಂತಾದವರ ನಾಯಕತ್ವದಲ್ಲಿ ಸ್ವಯಂಸೇವಕನಾಗಿ ಕೆಲಸಮಾಡಿದ್ದೆ. ಆದರೆ ಈ ಕಾಲದಲ್ಲಿ ಭಗತ್‌ಸಿಂಗ್ ಮುಂತಾದ ಕ್ರಾಂತಿಕಾರಿಗಳನ್ನು ಫಾಶಿಗೇರಿಸಿದಾಗ ನನ್ನ ರಕ್ತ ಕುದಿಯುತ್ತಿತ್ತು. ಮದ್ರಾಸಿನ 'ಸಂಗು' ಎಂಬ ಪತ್ರಿಕೆಯಲ್ಲಿ ಭಗತ್‌ಸಿಂಗ್, ಸಾವರ್ಕರ್ ಮುಂತಾದ ಕ್ರಾಂತಿಕಾರಿಗಳ ವಿಚಾರ ಲೇಖನ ಬರುತ್ತಿತ್ತು. 1930ರ ಉಪ್ಪಿನ ಸತ್ಯಾಗ್ರಹದ ಕಾಲಕ್ಕೆ ನಾನೂ



ಸ್ವಯಂಸೇವಕನಾಗಿ ಪಾಲುಗೊಂಡಿದ್ದು ಒಂದೆರಡು ಬಾರಿ ಬಂಧನಕ್ಕೆ ಒಳಗಾಗಿ ಬಿಡುಗಡೆ ಹೊಂದಿದ್ದೆ. ಈ ಕಾಲದಲ್ಲಿ ಓರ್ವ ಗಣ್ಯ ಕಾಂಗ್ರೆಸ್ ಕಾರ್ಯಕರ್ತೆಯನ್ನು ಬಂಧಿಸಿದ ಪೋಲೀಸರು ಅವಳ ಜುಟ್ಟು ಹಿಡಿದು ಪೋಲೀಸ್ ವಾಹನದಲ್ಲಿ ತಳ್ಳಿದ್ದು ಕಂಡು ನನಗೆ ತೀವ್ರ ವ್ಯಥೆಯಾಗಿ, ಈ ಹಿಂಸಾತ್ಮಕ ಮಾರ್ಗ ವ್ಯರ್ಥವೆಂದು ದೃಢವಾಗಿ ನಂಬಿದೆ. ಇದಕ್ಕಾಗಿ ಕ್ರಾಂತಿಮಾರ್ಗ ಹಿಡಿಯಬೇಕೆಂದು ಭಗತ್‌ಸಿಂಗ್ ವಾಲಂಟಿಯರ್ಸ್, ಸತ್ಯವೀರದಳ ಎಂಬ ಸಂಘಟನೆಗಳನ್ನು ಮದ್ರಾಸಿನಲ್ಲಿ ಆರಂಭಿಸಿದೆ. ಅನಂತರ 1932ರಲ್ಲಿ ಪಿಕೆಟಿಂಗ್‌ನಲ್ಲಿ ಪಾಲುಗೊಂಡು ನಾನು ಎರಡು ಬಾರಿ ಶಿಕ್ಷೆಗೆ ಒಳಗಾಗಿದ್ದೆ.

ಈ ಕಾಲಕ್ಕೆ ಮದ್ರಾಸಿನಲ್ಲಿ ಅರಣ್ಯ ಇಲಾಖೆಯಲ್ಲಿ ಅಧಿಕಾರಿಯಾಗಿದ್ದ ಪಂಜಾಬಿ ಒಬ್ಬರ ಮಗ ನಿತ್ಯಾನಂದ ಶರ್ಮ ಎಂಬ ಕಾಲೇಜು ವಿದ್ಯಾರ್ಥಿಯ ಜೊತೆ ನನ್ನ ಪರಿಚಯವಾಗಿ, ಅವರ ಮುಖಾಂತರ, ಮದ್ರಾಸಿನಲ್ಲಿ ಕಾರ್ಯನಿರತವಾದ ಉತ್ತರ ಭಾರತೀಯರ ಕ್ರಾಂತಿಕಾರಿ ತಂಡ ಒಂದರ ಸಂಪರ್ಕ ನನಗೆ ಬಂತು. ಇವರು ಹಿಂದುಸ್ತಾನ ಸೋಶಲಿಸ್ಟ್ ರಿಪಬ್ಲಿಕನ್ ಆರ್ಮಿಯ ಸದಸ್ಯರಾಗಿದ್ದ ಶಂಭುನಾಥ ಆಜ಼ಾದ್, ವಲ್ಲಭರಾಯ್, ಪ್ರೇಂಪ್ರಕಾಶ್, ಗೋವಿಂದರಾಮ್, ರೋಷನ್‌ಲಾಲ್, ಬಚ್ಚುಲಾಲ್, ಹಜಾರಾಸಿಂಗ್, ಕೆ. ಆರ್. ಮೆಹ್ತ ಮುಂತಾದವರು ಇದರಲ್ಲಿ ಇದ್ದವರು. ಮದ್ರಾಸಿನ ಲಿಂಗಿಚೆಟ್ಟಿ ಬೀದಿಯ ಒಂದು ಮನೆಯಲ್ಲಿ ಅವರು ಇರುತ್ತಿದ್ದರು. 1933ರ ಮೇ ತಿಂಗಳ ಮಧ್ಯಭಾಗದಲ್ಲಿ ಊಟಿಯಲ್ಲಿ ನಡೆಯಲಿದ್ದ ದಕ್ಷಿಣ ಭಾರತದ ನಾಲ್ವರು ಗವರ್ನರ ಸಭೆಯ ಕಾಲಕ್ಕೆ ಅವರನ್ನು ಕೊಲ್ಲಬೇಕೆಂದೂ, ಅದಕ್ಕೂ ಮೊದಲು ಹಣಕ್ಕಾಗಿ ಊಟಿಯ ಒಂದು ಬ್ಯಾಂಕನ್ನು ದರೋಡೆ ಮಾಡಬೇಕೆಂದೂ ಯೋಜಿಸಿದ್ದರು. ಅಲ್ಲದೆ ಮದ್ರಾಸಿನ ರೊಯಪುರಂನಲ್ಲಿರುವ ಸೀಮೆ ಎಣ್ಣೆ ಟ್ಯಾಂಕನ್ನು ನಾಶಪಡಿಸುವ ಯೋಜನೆ ಇತ್ತು. ಕೈಬಾಂಬು, ಪಿಸ್ತೂಲು, ರಿವಾಲ್ವರ್‌ಗಳನ್ನು ಸಂಗ್ರಹಿಸಲಾಗಿತ್ತು. ನಿತ್ಯಾನಂದ ಶರ್ಮ, ಹಜಾರಾಸಿಂಗ್, ಕೆ. ಆರ್. ಮೆಹ್ತ, ಬಚ್ಚುಲಾಲ್ ಮತ್ತು ಸಿಂಗ್ ಎಂಬ ಒಬ್ಬರು, ಹೀಗೆ ಐದು ಜನ ಊಟಿಗೆ ಹೋದರು.

ಮೇ ಒಂದರಂದು ಮದ್ರಾಸಿನಲ್ಲಿ ರೋಶನ್‌ಲಾಲ್, ಸೀಮೆ ಎಣ್ಣೆ ಟ್ಯಾಂಕ್ ನಾಶಮಾಡಲೆಂದು ಸಂಜೆ ಕೈಬಾಂಬೊಂದನ್ನು, ಹೊಸ ಬೂಟು ಖರೀದಿ ಮಾಡಿದ ರಟ್ಟಿನ ಪೆಟ್ಟಿಗೆಯೊಂದರಲ್ಲಿ ಹಾಕಿಕೊಂಡು ನಡೆದ. ದಾರಿಯಲ್ಲಿ ರೈಲುಕಂಬಿ ದಾಟುವಾಗ ಕತ್ತಲಲ್ಲಿ ಅವನು ಎಡವಿಬಿದ್ದು ಬಾಂಬು ಸ್ಫೋಟಗೊಂಡಿತು. ಅವನು

ತೀವ್ರವಾಗಿ ಗಾಯಗೊಂಡು ಆಸ್ಪತ್ರೆಯಲ್ಲಿ ಸಾವನ್ನಪ್ಪಿದ. ಪಂಜಾಬಿ ಕ್ರಾಂತಿಕಾರಿಗಳು ಬಂದಿದ್ದಾರೆಂಬ ವಿಚಾರ ಪೋಲೀಸರಿಗೆ ತಿಳಿದು ಅವರು ಎಚ್ಚೆತ್ತರು. ಅವರಿಗಾಗಿ ತೀವ್ರಶೋಧ ನಡೆಯಿತು. 2-3 ದಿನಗಳಲ್ಲಿ ಹಾಲು ಮಾರುವವನೊಬ್ಬನು ನೀಡಿದ ಸುಳಿವಿನಿಂದ, ಪೋಲೀಸರು ಲಿಂಗಿಚೆಟ್ಟಿ ಬೀದಿಯ ನಮ್ಮ ಕೇಂದ್ರದ ಪತ್ತೆಹಚ್ಚಿದರು.

ಊಟಿಗೆ ಹೋದವರು ಮೇ 3ರಂದು ಬ್ಯಾಂಕೊಂದನ್ನು ಯಶಸ್ವಿಯಾಗಿ ಲೂಟಿ ಮಾಡಿದರಾದರೂ, ಮುಂದೆ ತಮ್ಮ ಅಜಾಗ್ರತೆಯಿಂದಾಗಿ, ಶೀಘ್ರ ಬಂಧಿತರಾದರು. ಮೇ 7ರಂದು ಭಾರಿ ಪೋಲೀಸು ಪಡೆ ಮದ್ರಾಸಿನ ನಮ್ಮ ಲಿಂಗಿಚೆಟ್ಟಿ ಬೀದಿಯ ಮನೆಗೆ ಮುತ್ತಿಗೆ ಹಾಕಿತು. ನಮ್ಮ ಕಾರ್ಯಕರ್ತರು ರಿವಾಲ್ವಾರಿನಿಂದ ಗುಂಡು ಹಾರಿಸಿ ಪ್ರತಿಭಟಿಸಿದರೂ ಪೋಲೀಸರ ಕೋವಿಗಳ ಮುಂದೆ ನಮ್ಮ ಆಟ ನಡೆಯಲಿಲ್ಲ. ಗೋವಿಂದರಾಂ ಅಲ್ಲಿಯೇ ಸತ್ತರು. ಉಳಿದ ನಮ್ಮೆಲ್ಲರ ಬಂಧನ ಆಯಿತು. ಊಟಿಯಿಂದ ಬಂಧಿತರಾದವರನ್ನು ಮದ್ರಾಸಿಗೆ ತಂದರು. ಆ ಪೈಕಿ ನಿತ್ಯಾನಂದಶರ್ಮ ಅಪ್ರೂವರ್ ಆದ. ಜೂನ್‌ನಲ್ಲಿ ನನಗೆ 35 ವರ್ಷ ಶಿಕ್ಷೆ ಆಯಿತು. ನಮ್ಮನ್ನು ಅಂಡಮಾನ್ ಸೆಲ್ಯುಲರ್ ಜೈಲಿಗೆ ಸಾಗಿಸಿದರು.

ಅಲ್ಲಿ ನಾನು 3 ವರ್ಷ 9 ತಿಂಗಳು ಇದ್ದೆ. ಅಂಡಮಾನ್ ಜೈಲು ನರಕವೆಂದು ಪ್ರಖ್ಯಾತವಾಗಿದ್ದು ಸಾವರ್‌ಕರ್, ಭಾಯಿ ಪರಮಾನಂದರಂಥ ದೇಶಭಕ್ತರು ಅಲ್ಲಿ ಅಪಾರ ಯಾತನೆಗೆ ಒಳಗಾದುದು ಪ್ರಸಿದ್ಧವಿದೆ. ಆದರೆ ನಾವು ಹೋದ ಕಾಲದಲ್ಲಿ ಪರಿಸ್ಥಿತಿ ಸುಧಾರಿಸಿತ್ತು. ನಾನು ಹೋಗುವುದಕ್ಕೆ ಸ್ವಲ್ಪ ಮೊದಲು ಮಹಾವೀರ್ ಸಿಂಗ್ ಎಂಬ ಕೈದಿ ಉಪವಾಸಮಾಡಿ ಪ್ರಾಣ ತ್ಯಜಿಸಿ, ಅಲ್ಲಿ ಅನೇಕ ಸುಧಾರಣೆಗಳಿಗೆ ಕಾರಣನಾಗಿದ್ದ. ನಮಗೆಲ್ಲ ಅಲ್ಲಿ ಸರ್ವ ಅನುಕೂಲತೆಗಳಿದ್ದವು. ನಾರಿನಿಂದ ಹಗ್ಗ ಮಾಡುವುದರ ವಿನಾ ಇನ್ನಾವ ಶ್ರಮವೂ ಇರಲಿಲ್ಲ. ಅಂಡಮಾನ್‌ನಲ್ಲಿ ಆಗ ನನ್ನ ಜೊತೆ (ಮುಂದೆ ಎಂ.ಪಿ. ಆದ) ದಿll ಕಮಲನಾಥ ತಿವಾರಿ, ಶಿವವರ್ಮ, ಕುಂದನಲಾಲ್ ಹಾಗೂ ಭಗತ್‌ಸಿಂಗ್ ಅವರ ಅನೇಕ ಜೊತೆಗಾರರು ಇದ್ದರು. ದಕ್ಷಿಣ ಭಾರತದವರೆಂದರೆ, ಕೋಕನಾಡ ಬಾಂಬ್ ಕೇಸ್‌ನಲ್ಲಿ ಶಿಕ್ಷಿತರಾದ ಪ್ರತಿವಾದಿ ಭಯಂಕರ ವೆಂಕಟಾಚಾರಿ ಮತ್ತು ನಾನು, ಇಬ್ಬರೇ, ಒಟ್ಟು ಆರುನೂರು ರಾಜಕೀಯ ಕೈದಿಗಳು ಅಲ್ಲಿ ಆಗ ಇದ್ದರು. ಮುಂದೆ 1937ರಲ್ಲಿ ನಮ್ಮನ್ನು ಭಾರತಕ್ಕೆ ಕರೆತಂದು, ಅಲ್ಪಕಾಲದಲ್ಲಿ ನನ್ನ ಬಿಡುಗಡೆ ಮಾಡಿದರು. ಮದ್ರಾಸಿನಲ್ಲಿ ನಾನಿದ್ದಾಗ, ಅಲ್ಲಿ ಮುಖ್ಯಮಂತ್ರಿ ಆಗಿದ್ದ ರಾಜಾಜಿಯವರಿಗೂ ನನಗೂ ಜಗಳವಾಗಿ, ಅವರ ಮನೆಯಲ್ಲಿ ಅಕ್ರಮ ಪ್ರವೇಶಮಾಡಿದೆನೆಂದು ನನಗೆ ಒಂದು ವರ್ಷ ಶಿಕ್ಷೆ ಆಯಿತು. ಬಿಡುಗಡೆಯಾದ ಅನಂತರ ಕಾಂಗ್ರೆಸ್ ತ್ಯಜಿಸಿದ್ದ ಸುಭಾಷರನ್ನು ಕಲ್ಕತ್ತಾಕ್ಕೆ ಹೋಗಿ ಕಂಡು, ಸಶಸ್ತ್ರ ಕ್ರಾಂತಿಯ ಬಗ್ಗೆ ಅವರ ಜೊತೆ ಮಾತನಾಡಿದೆ. ಅನಂತರ ನಾನು ಬೆಂಗಳೂರಿಗೆ ಬಂದು (1938) ಭಾಷ್ಯಂ ಮತ್ತು

ಡಿ. ವೆಂಕಟೇಶ್ ಅವರ ಸಹಾಯದಿಂದ ಇಲ್ಲಿ ಇದ್ದು, ಕಾಂಗ್ರೆಸ್ಸಿನ ಕೆಲಸಮಾಡುತ್ತಿದ್ದೆ. ಕಾಂಗ್ರೆಸ್ ಆಫೀಸಿನಲ್ಲಿ (ಕಾಟನ್‌ಪೇಟೆ) ಇರುತ್ತಿದ್ದೆ. ಶೇಷಾದ್ರಿಪುರಂನಲ್ಲಿ ರಾಮ ಚಂದ್ರಜೀ ಅವರ ಸಮಾಜ ಸುಧಾರಣಾ ಸಮಿತಿಯಲ್ಲೂ ಕೆಲಸಮಾಡಿದೆ.

ಮುಂದೆ 1940ರಲ್ಲಿ ನಾನು ಸೇನೆಯ ಸಿಗ್ನಲ್ ಯುನಿಟ್‌ನಲ್ಲಿ ನೌಕರಿಗೆ ಸೇರಿದೆ. ಕಲಾಸಿಪಾಳ್ಯಂನ ಒಂದು ವಿಳಾಸ ಕೊಟ್ಟಿದ್ದೆ. ಪೋಲೀಸರಿಗೆ ನಾನು ಹಿಂದೆ ಚಳವಳಿಯಲ್ಲಿ ಭಾಗವಹಿಸಿದ ವಿಚಾರ ತಿಳಿಯಲೇ ಇಲ್ಲ. ಅಲ್ಲಿ ಎನ್.ಸಿ.ಓ. ಟ್ರೇನೀ ಎಂದು ಆಯ್ಕೆಗೊಂಡು, ಮುಂದೆ ಕೆ.ಸಿ.ಓ. ಆದೆ. ಜಾಲಹಳ್ಳಿಯಲ್ಲಿ ಇರುತ್ತಿದ್ದ ನಾನು ರಜಾಕಾಲಕ್ಕೆ ಕಾಂಗ್ರೆಸ್ ಆಫೀಸಿನಲ್ಲಿ ಬರುತ್ತಲಿದ್ದೆ. ಸಿದ್ದ ಲಿಂಗಯ್ಯ, ಭಾಷ್ಯಂ, ಲಕ್ಷ್ಮಯ್ಯ ಅವರನ್ನು ಭೇಟಿ ಆಗುತ್ತ ಇದ್ದೆ. ಕ್ವಿಟ್ ಇಂಡಿಯಾ ಚಳವಳಿ ಶುರುವಾಗುವಷ್ಟೊತ್ತಿಗೆ, ಸೇನೆಯಲ್ಲಿ ಸಾಕಷ್ಟು ಅಶಾಂತಿ ಬೆಳೆದಿತ್ತು. ನಾನೂ ಅವರನ್ನು, (ಕಾಂಗ್ರೆಸ್ ಆಫೀಸಿನಿಂದ ಒಯ್ದು) ಕರಪತ್ರ ಹಂಚಿ, ಬರ್‍ಯಾಕುಗಳಲ್ಲಿ ಗುಪ್ತ ಸಭೆ ನಡೆಸಿ ಜಾಗೃತಗೊಳಿಸಿದ್ದೆ. ಈ ಬಗ್ಗೆ ಅಧಿಕಾರಿಗಳಿಗೆ ವರದಿಯಾಗಿ ನನಗೆ ಎಚ್ಚರಿಕೆ ನೀಡಿದರೂ ನಾನು ಗಮನಿಸಲಿಲ್ಲ. ಈ ಕಾಲದಲ್ಲಿ ಬೆಂಗಳೂರಲ್ಲಿ ಚಳವಳಿ ಬಲವಾಗಿ, ಸೇನೆಯನ್ನು ಒಯ್ದು ದೇಶ ಭಕ್ತರನ್ನು ಗುಂಡಿಡಲು ಬಳಸಲಾಗಿತ್ತು. ಮೈಸೂರ್ ಬ್ಯಾಂಕ್ ಚೌಕದಲ್ಲಿ ಅನೇಕರು ಸತ್ತಿದ್ದರು. ನನ್ನ ಸಹೋದ್ಯೋಗಿಗಳಲ್ಲಿ ಅಶಾಂತಿ ಹೆಚ್ಚಿತು. ನನ್ನ ಪ್ರೇರೇಪಣೆ ಯಿಂದ ಅವರು ಸೇನಾಸ್ಥಾವರಗಳಿಗೆ ಹಾನಿ, ವಾಹನಗಳಿಗೆ ತೊಂದರೆ ಮಾಡುವ ಬುಡಮೇಲು ಕೃತ್ಯ ಆರಂಭಿಸಿದ್ದರು. ಅಲ್ಲದೆ ಅಗರಂನಲ್ಲಿರುವ ಮದ್ದುಗುಂಡಿನ ಕೋಠಿಯನ್ನು ನಾಶಮಾಡುವ ಯೋಜನೆ ಹಾಕಿದ್ದೆವು. ಕಡೆಗೆ ನನ್ನ ಚಟುವಟಿಕೆಗಳ ಪತ್ತೆಯಾಗಿ ನನ್ನ ಬಂಧನ ಆಯಿತು. ನನ್ನ ಜೊತೆಗಾರರನ್ನೆಲ್ಲ ಬೇರೆಡೆ ವರ್ಗ ಮಾಡಿದರು. ನನ್ನನ್ನು ಮಾತ್ರ ಕೋರ್ಟ್‌ಮಾರ್ಷಲ್‌ಗೆ ಒಳಪಡಿಸಿ, ಅಪರಾಧಿಯೆಂದು ಖಚಿತಪಡಿಸಿ, ಒಂದು ವರ್ಷ ಶಿಕ್ಷೆಗೆ ಗುರಿಮಾಡಿ, ಸಿವಿಲ್ ಅಧಿಕಾರಿಗಳ ಕೈಗೆ ಕೊಟ್ಟರು. ವಾಸ್ತವವಾಗಿ ನಾನು ಮಾಡಿದ ಅಪರಾಧಕ್ಕೆ ಗುಂಡಿಕ್ಕುವುದೇ ಶಿಕ್ಷೆ ಯಾಗಿದ್ದರೂ, ಆಗ ಸೇನೆಯಲ್ಲಿ ಅಶಾಂತಿ ಮೂಡುವ ಭಯವಿದ್ದುದರಿಂದ ಈ ಸೌಮ್ಯ ಶಿಕ್ಷೆ ಆಯಿತು. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ನಾನು ಇತರ ಕೈದಿಗಳ ಜೊತೆ ಇದ್ದೆ (24-8-42 ರಿಂದ 26-7-43). ಆಗ ನನ್ನನ್ನು ಫಾಶಿ ಶಿಕ್ಷೆಗೆ ಒಳಗಾದವರನ್ನು ಇಡುತ್ತಿದ್ದ ಕೊಠಡಿಯಲ್ಲಿ ಏಕಾಂತದಲ್ಲಿ ಇಟ್ಟಿದ್ದರು. ಗಾಂಧೀಜಿ 21 ದಿನಗಳ ಉಪವಾಸ ಮಾಡಿವಾಗ, ನಾನೊಬ್ಬನೇ ಸೆಂಟ್ರಲ್ ಜೈಲಿನಲ್ಲಿ 21 ದಿನ ಉಪವಾಸ ಮಾಡಿದ್ದೆ.

1972ರ ಆಗಸ್ಟ್ 15ಕ್ಕೆ ದೆಹಲಿಯಲ್ಲಿ ನನಗೆ ತಾಮ್ರಪತ್ರ ನೀಡಿ ಗೌರವಿಸ ಲಾಗಿದೆ.

ಮೈ.ಜಿ. 23

# ಬಿ. ಆರ್. ಗೋಪಾಲಾಚಾರ್

ಜನನ : 1915 ಉದ್ಯೋಗ : ನಿವೃತ್ತಜೀವನ ವಿಳಾಸ: ಎಲ್ 6, ಮಿಲ್ ರಸ್ತೆ, ಕಾಟನ್‌ಪೇಟೆ, ಬೆಂಗಳೂರು-3



ನಾನು ಬಿನ್ನಿ ಮಿಲ್ ರಸ್ತೆಯ ಜೆ 108 ನಂ. ಅಂಗಡಿಯಲ್ಲಿ ವ್ಯಾಪಾರಮಾಡುತ್ತಿದ್ದು ಬಹಳ ಹಿಂದಿನಿಂದ ಕಾಂಗ್ರೆಸ್ ಕಾರ್ಯಕರ್ತನಾಗಿದ್ದೆ. ಕೆ. ಟಿ. ಭಾಷ್ಯಂ, ವಿ. ಎಸ್. ನಾರಾಯಣರಾವ್ ಮತ್ತು ಸಾಹುಕಾರ್ ಚನ್ನಯ್ಯನವರು ನಾನು ಕಾಂಗ್ರೆಸ್ ಸೇರಲು ಕಾರಣರು. ಭಾಷ್ಯಂ ಅವರು ಬಿನ್ನಿ ಮಿಲ್ ಬಳಿ ಬಹಿರಂಗ ಸಭೆಯಲ್ಲಿ ಭಾಷಣ ಮಾಡುತ್ತಿದ್ದಾಗ, ಅದನ್ನು ಕೇಳಿ ನಾನು ಸ್ಫೂರ್ತಿಗೊಂಡೆ. ನನ್ನ ಅಂಗಡಿಯಮೇಲೆ ರಾಷ್ಟ್ರಧ್ವಜ ಹಾರಿಸುತ್ತಿದ್ದೆನಲ್ಲದೆ ಕಾಂಗ್ರೆಸ್ಸಿನ ಭಿತ್ತಿಪತ್ರಗಳನ್ನೂ ಸದಾ ಇಡುತ್ತಿದ್ದೆ. ನೂರಾರು ಜನರನ್ನು ಕಾಂಗ್ರೆಸ್ಸಿನ ಸದಸ್ಯರೆಂದು ನೋಂದಾಯಿಸಿದೆ. ನಾನು ಬಾವುಟ ಹಚ್ಚಿಡುತ್ತಿದ್ದ ಬಗ್ಗೆ ಪೋಲೀಸರು ಸ್ಟೇಶನ್ನಿಗೆ ಕರೆದೊಯ್ದು ಕಿರುಕುಳ ಕೊಡುತ್ತಿದ್ದರು. 1936ರಿಂದಲೂ ಕಾಂಗ್ರೆಸ್ಸಿನ ಎಲ್ಲ ಚಟುವಟಿಕೆಗಳಲ್ಲೂ ಭಾಗವಹಿಸುತ್ತ ಬಂದೆ.

1942ರಲ್ಲಿ ಬಸಪ್ಪ ಪಾರ್ಕಿನಲ್ಲಿ ನಾಯಕರೊಬ್ಬರ ಭಾಷಣವಾಗಿ ಅವರ ಬಂಧನ ಆಗಲು, ಮುಂದೆ ಅಲ್ಲಿ ಭಾಷಣ ಮಾಡುವವರು ಯಾರೂ ಇರಲಿಲ್ಲ. ನಾನು "ಮಹಾತ್ಮಾ ಗಾಂಧೀಕೀ ಜೈ" ಎಂದು ಕೂಗಿ ಬಂಧಿತನಾದೆ. ಆಗ ಲಾಠೀಚಾರ್ಜ್ ಆಗಿ ನನಗೆ ಏಟು ಬಿದ್ದು ರಕ್ತ ಸುರಿಯುತ್ತಿದ್ದಂತೆ ಸ್ಟೇಶನ್ನಿಗೆ ಒಯ್ದರು. ಮರುದಿನ ವಿಕ್ಟೋರಿಯಾ ಹಾಸ್ಪಿಟಲ್‌ಗೆ ಒಯ್ದರು. ಆಗಸ್ಟ್ 15ರಂದು ಬಂಧಿತನಾದ ನಾನು ಆಗಸ್ಟ್ 21ರಂದು ಸೆಂಟ್ರಲ್ ಜೈಲಿಗೆ ಡೆಟನ್ಯೂ ಆಗಿ ಒಯ್ಯಲ್ಪಟ್ಟೆ. ಅಲ್ಲಿ 2 ತಿಂಗಳು 2 ದಿನ ಇದ್ದು, ಮುಂದೆ 4 ತಿಂಗಳು 10 ದಿನ ಶ್ರೀರಂಗಪಟ್ಟಣ ಜೈಲಿನಲ್ಲಿ ಇದ್ದೆ. ಆಗ ನನ್ನ ತಾಯಿಗೆ ಅಸೌಖ್ಯವಾಗಿ ಅವರು ತೀರಿಕೊಳ್ಳಲು ನನ್ನನ್ನು ಬಿಡುಗಡೆಮಾಡಿದರು.

1947ರಲ್ಲಿ ಶೇಷಪ್ಪನವರ 'ಕಿಡಿ' ಪತ್ರಿಕೆ ಮಾರಿದ್ದಕ್ಕೆ ನನ್ನನ್ನು ಬಂಧಿಸಿ ಯಲಹಂಕ ಅರಣ್ಯದಲ್ಲಿ ಬಿಟ್ಟರು. ಇದಲ್ಲದೆ ಜಂಗಲ್ ಸತ್ಯಾಗ್ರಹದಲ್ಲಿ ನಾನು ಪಾಲುಗೊಂಡು ಈಚಲ ಮರ ಕಡಿದು ಬಂಧಿತನಾಗಿದ್ದೆ. ಆದರೆ ನನಗೆ ಶಿಕ್ಷೆ ಆಗಲಿಲ್ಲ. ನನಗೆ ತಾಮ್ರಪತ್ರ, ರಾಜ್ಯಸರಕಾರದ ಪೆನ್‌ಶನ್ ಬಂದಿದೆ.

ವೈ.ಚಿ. 24

## ಎಂ. ಎಂ. ದೇವರಾಜ ಚೆಟ್ಟಿಯಾರ್

ಜನನ : 1916   ಉದ್ಯೋಗ : ಮುದ್ರಣಾಲಯ   ವಿಳಾಸ : 40, ಆರ್ಮ್‌ಸ್ಟ್ರಾಂಗ್ ರಸ್ತೆ, ಬೆಂಗಳೂರು–1

---



1934ರಲ್ಲಿ ಮೆಟ್ರಿಕ್ ಪಾಸಾದ ನಾನು ಅದೇ ವರ್ಷ ಕಂಟೋನ್‌ಮೆಂಟ್ ಕಾಂಗ್ರೆಸ್ ಕಮಿಟಿಯಲ್ಲಿ ನಾಲ್ಕಾಣೆ ಸದಸ್ಯನಾದೆ. ಎಸ್. ಸುಂದರಂಅಯ್ಯರ್, ಎಸ್. ಚಂಗಲರಾಯ ಮುದಲಿಯಾರ್, ಡಾ|| ಇ. ಎಸ್. ವೆಂಕಟರಮಣ ಅಯ್ಯರ್, ಎಂ. ಜಯ ಶೀಲನ್, ಪಿ. ಲೋಕನಾಥ್, ಆರ್. ಕೃಷ್ಣ ಅಯ್ಯರ್, ಮುನಿಸ್ವಾಮಿ ಗೌಂಡರ್, ಟಿ. ಎಸ್. ಗ್ನಾನಮೂರ್ತಿ, ಆರ್. ಚೆಲ್ವರಾಜ್, ಎನ್. ನಾರಣಿ ಚೆಟ್ಟಿ, ವಿ. ಕೋದಂಡಪಾಣಿ ಇವರೆಲ್ಲ ಆಗ ಕಂಟೋನ್‌ಮೆಂಟ್‌ನಲ್ಲಿ ಕಾಂಗ್ರೆಸ್ಸಿನ ಪ್ರಮುಖ ಕಾರ್ಯಕರ್ತರು. 1939ರಲ್ಲಿ ನಾನು ಕಂಟೋನ್‌ಮೆಂಟ್ ಡಿ.ಸಿ.ಸಿ.ಯ ಕಾರ್ಯದರ್ಶಿಯಾಗಿ ಆಯ್ಕೆಗೊಂಡೆನಲ್ಲದೆ, ಈ ಸ್ಥಾನ ದಲ್ಲಿ 1942ರ ವರೆಗೆ ಇದ್ದೆ. 1939ರಲ್ಲಿ ಕೆ.ಪಿ.ಸಿ.ಸಿ. ಸದಸ್ಯನಾಗಿ, 1947ರ ವರೆಗೂ ಮುಂದುವರಿದೆ. ಗಾಂಧೀಜಿಯವರ ಕರೆಯಂತೆ ವ್ಯೆಯಕ್ತಿಕ ಸತ್ಯಾಗ್ರಹದಲ್ಲಿ ಪಾಲು ಗೊಂಡ ನಾನು, ಕಂಟೋನ್‌ಮೆಂಟ್‌ನಲ್ಲಿ ಸತ್ಯಾಗ್ರಹ ನಡೆಸಲು ಅನುಮತಿ ಇರದ್ದರಿಂದ, ಧಾರವಾಡಕ್ಕೆ ಹೋಗಿ ಸತ್ಯಾಗ್ರಹಮಾಡಿ, ಬಂಧಿತನಾದೆ. ಏಪ್ರಿಲ್ 1941ರಲ್ಲಿ ನನಗೆ ಎರಡು ವಾರ ಶಿಕ್ಷೆ ಆಗಿ ಧಾರವಾಡ ಜೈಲಿನಲ್ಲಿ ಇದ್ದೆ. ಬಿಡುಗಡೆಯನಂತರ ಮತ್ತೆ ಧಾರವಾಡದಲ್ಲಿ ಸತ್ಯಾಗ್ರಹಮಾಡಿ, ಎರಡು ತಿಂಗಳು ಶಿಕ್ಷೆಗೆ ಒಳಗಾಗಿ, ಬೆಳಗಾವಿ ಸೆಂಟ್ರಲ್ ಜೈಲಿನಲ್ಲಿ ಇದ್ದೆ.

1942ರಲ್ಲಿ ಆಗಸ್ಟ್ 9ರಿಂದ ಫೆಬ್ರವರಿ 1943ರ ವರೆಗೆ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಸ್ಥಾನಬದ್ಧನಾಗಿದ್ದೆ. ಬಿಡುಗಡೆ ಆದಾಗ ಕಂಟೋನ್‌ಮೆಂಟ್ ಪ್ರವೇಶಿಸದಂತೆ ನನ್ನ ಮೇಲೆ ರೆಸಿಡೆಂಟರು ಗಡೀಪಾರು ಆಜ್ಞೆ ಜಾರಿಮಾಡಿದರು. 1946ರ ವರೆಗೆ ಈ ಪ್ರತಿಬಂಧ ಇತ್ತು.

1957ರಲ್ಲಿ ಬೆಂಗಳೂರು ನಗರಸಭೆಗೆ ಆಯ್ಕೆಗೊಂಡ ನಾನು 1960ರಲ್ಲಿ ಡೆ|| ಮೇಯರ್ ಆಗಿದ್ದೆ.

ವ್ಯ.ಸಂ. 25

# ಎಂ. ಎಸ್. ರಾಮರಾವ್

ಜನನ : 1915 ಉದ್ಯೋಗ : ಕಾರ್ಮಿಕ ಸಂಘಟಕ ವಿಳಾಸ : 370, VII ಬ್ಲಾಕ್, 42ನೇ ಕ್ರಾಸ್, ಜಯನಗರ, ಬೆಂಗಳೂರು-41

---



1930-32ರ ಕಾಯಿದೆಭಂಗ ಚಳವಳಿಯಿಂದ ಪ್ರಭಾವಿತನಾಗಿ, 1930-31ರಲ್ಲಿ ನಂಜನಗೂಡಿನಲ್ಲಿ ಎಸ್. ಎಲ್.ಸಿ. ಓದುವಾಗಲೂ 1931-32ರಲ್ಲಿ ಮೈಸೂರಲ್ಲಿ ಇಂಟರ್ ಓದುವಾಗಲೂ ವಿದ್ಯಾರ್ಥಿ ಸಂಘಟನೆ, ರಾಷ್ಟ್ರೀಯ ನಾಯಕರ ಬಂಧನವಾದಾಗ ಪ್ರತಿಭಟನಾಮುಷ್ಕರದ ಸಂಘಟನೆಗಳಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದೆ. ಪ್ರಭಾತಫೇರಿ, ವಿದೇಶೀವಸ್ತ್ರಗಳ ಹೋಳಿಗಳಲ್ಲಿ ಪಾಲುಗೊಳ್ಳುತ್ತಿದ್ದೆನಲ್ಲದೆ ಖಾದಿ ಧರಿಸುತ್ತಿದ್ದೆ. 1932ರಲ್ಲಿ ಕಾಲೇಜು ತ್ಯಜಿಸಿ ರಾಷ್ಟ್ರಭಾಷೆಯಾದ ಹಿಂದೀ ಕಲಿಯಲು ಆರಂಭಿಸಿದೆ. 1934ರಲ್ಲಿ ವಿಶಾರದ ಪದವಿ ಪಡೆದು, 1934-37ರ ನಡುವೆ ನಂಜನಗೂಡು, ಬೆಂಗಳೂರುಗಳಲ್ಲಿ ಹಿಂದೀ ಅಧ್ಯಾಪಕನಾಗಿ ಕೆಲಸಮಾಡಿದೆ. ಆ ಕಾಲದಲ್ಲಿ ಕಾಂಗ್ರೆಸ್ ಸದಸ್ಯರ ನೋಂದಣಿ, ಚುನಾವಣಾಪ್ರಚಾರ ಇವುಗಳನ್ನು ಮಾಡಿದೆ. ಬೆಂಗಳೂರಲ್ಲಿ ಕಾಂಗ್ರೆಸ್ಸಿನ ಎಲ್ಲ ಚಟುವಟಿಕೆಗಳಲ್ಲಿ ಪಾಲುಗೊಂಡೆ.

1936ರ ಕೊನೆ ಹಾಗೂ 1937ರ ಆರಂಭದಲ್ಲಿ ನಾನು ಕಾಂಗ್ರೆಸ್ ಸೋಶಲಿಸ್ಟ್ ಪಕ್ಷ ಮತ್ತು ಆಗ ಪ್ರತಿಬಂಧಿತವಾದ ಭಾರತೀಯ ಕಮ್ಯುನಿಸ್ಟ್ ಪಕ್ಷಗಳ ಕಡೆ ಸೆಳೆಯಲ್ಪಟ್ಟೆ. ಕಮ್ಯುನಿಸ್ಟ್ ಪಾರ್ಟಿ ಪ್ರಕಟಿಸುತ್ತಿದ್ದ ಗುಪ್ತಸಾಹಿತ್ಯವನ್ನು ನಾನು ಓದುತ್ತಿದ್ದೆ. ಮಾರ್ಕ್ಸ್ ಮತ್ತು ಲೆನಿನ್ನರ ಕೆಲವು ಬರಹಗಳನ್ನು ನಾನು ಓದಿದೆ. ಅವು ನನ್ನ ರಾಜಕೀಯ ನಿಲುವಿನ ಮೇಲೆ ಪ್ರಭಾವ ಬೀರಿದವು.

1937ರ ಆರಂಭದಲ್ಲಿ ಸಮಾಜವಾದಿ ವಿಚಾರಗಳ ತರುಣರಾದ ಎನ್. ಡಿ. ಶಂಕರ್, ಸಿ. ಬಿ. ಮೊಣ್ಣಯ್ಯ ಮತ್ತು ನಾನು ಜನಜಾಗೃತಿ ಸಂಘವನ್ನು ಆರಂಭಿಸಿದೆವು. ಮೈಸೂರು, ಕೋಲಾರ, ಶಿವಮೊಗ್ಗಗಳಲ್ಲೂ ಇದರ ಶಾಖೆಗಳನ್ನು ತೆರೆದೆವು. ಸರಕಾರವು ಸಾರ್ವಜನಿಕ ಹಕ್ಕುಗಳನ್ನು ಮೊಟಕುಗೊಳಿಸುತ್ತಿರುವುದರ ವಿರುದ್ಧ ಸಂಘವು ನಡೆಸಿದ ಚಟುವಟಿಕೆಗಳು ಜನತೆಯ ಮೇಲೆ ಭಾರಿ ಪ್ರಭಾವ ಬೀರಿದವಲ್ಲದೆ, ಮುಂದೆ ಮೈಸೂರು ಕಾಂಗ್ರೆಸ್ ಹೂಡಿದ ಸತ್ಯಾಗ್ರಹದಲ್ಲೂ ಶಿವಪುರ ಕಾಂಗ್ರೆಸ್‌ನಲ್ಲೂ ನರಿಮನ್

ಪ್ರಕರಣದಲ್ಲೂ ಜನಾಭಿಪ್ರಾಯ ರೂಪಿಸುವಲ್ಲಿ ಗಣ್ಯಪಾತ್ರ ವಹಿಸಿತು. ಬೆಂಗಳೂರು, ಮೈಸೂರು, ಭದ್ರಾವತಿ, ಕೆ.ಜಿ.ಎಫ್. ಮತ್ತು ಮಂಡ್ಯದ ಕಾರ್ಮಿಕರನ್ನು ಸ್ವಾತಂತ್ರ್ಯ ಹೋರಾಟದೆಡೆ ಸೆಳೆಯಲು ಅದು ಯಶಸ್ವೀ ಯತ್ನ ಮಾಡಿತು. ಜುಲೈ 1937ರಲ್ಲಿ ನಾನು ಕಾಶೀ ವಿದ್ಯಾಪೀಠಕ್ಕೆ ಹೋಗಿ ಶಿಕ್ಷಣ ಮುಂದುವರಿಸಿದೆ. ಅಲ್ಲಿನ ವಾತಾವರಣ ಸ್ಫೂರ್ತಿದಾಯಕವಾಗಿತ್ತು. ಕಟ್ಟಾ ಗಾಂಧೀವಾದಿ, ಕಾಂಗ್ರೆಸ್, ಸೋಶಲಿಸ್ಟ್, ಕಮ್ಯೂನಿಸ್ಟ್, ಫಾರ್ವರ್ಡ್ ಬ್ಲಾಕ್, ರಾಯಿಸ್ಟ್ ಹಾಗೂ ಕ್ರಾಂತಿಕಾರಿ ಮನೋವೃತ್ತಿಯ— ಹೀಗೆ ವಿವಿಧ ರಾಜಕೀಯ ದೃಷ್ಟಿಕೋನದ ಅಧ್ಯಾಪಕರೂ ವಿದ್ಯಾರ್ಥಿಗಳೂ ಅಲ್ಲಿದ್ದರಲ್ಲದೆ, ಆಗ ಪ್ರತಿಬಂಧಿಸಲ್ಪಟ್ಟಿದ್ದ ಮಾರ್ಕ್ಸ್‌ವಾದಿ ಗ್ರಂಥಗಳೂ ಅಲ್ಲಿನ ಗ್ರಂಥಾಲಯದಲ್ಲಿ ಇದ್ದವು. ಶ್ರೀಪ್ರಕಾಶರು ಅಲ್ಲಿ ಪ್ರಿನ್ಸಿಪಾಲರಾಗಿದ್ದು ಆಚಾರ್ಯ ನರೇಂದ್ರ ದೇವ್, ಪ|| ನೆಹರೂ, ಗೋವಿಂದ ವಲ್ಲಭ ಪಂತ್, ಕಿಡ್ವಾಯಿ, ರಾಜೇಂದ್ರ ಪ್ರಸಾದ್, ಡಾ|| ಭಗವಾನ್‌ದಾಸ್ ಮುಂತಾದವರು ವಿದ್ಯಾಪೀಠದ ಜೊತೆ ಸಂಬಂಧಹೊಂದಿದ್ದರು. ನಾನು ಅಲ್ಲಿದ್ದಾಗಲೇ 1937ರಲ್ಲಿ ಕಮ್ಯೂನಿಸ್ಟ್ ಪಕ್ಷಕ್ಕೆ ಸೇರಿ ಅಲ್ಲಿ ನಡೆದ ಪಕ್ಷದ ಎಲ್ಲ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದೆ. 1939ರಲ್ಲಿ ನಾನು ಅಲ್ಲಿ ಮೊಹಲ್ಲಾ ಕಾಂಗ್ರೆಸ್ ಕಮಿಟಿ ಸದಸ್ಯನೂ 1940ರಲ್ಲಿ ಜಿಲ್ಲಾ ಕಮ್ಯುನಿಸ್ಟ್ ಕಮಿಟಿಯ ಸದಸ್ಯನೂ ಆದೆನಲ್ಲದೆ 1938ರಲ್ಲಿ ಹರಿಪುರ ಕಾಂಗ್ರೆಸ್ಸಿಗೂ ಹೋಗಿದ್ದೆ. 1940ರ ಆಗಸ್ಟ್‌ನಲ್ಲಿ ಶಾಸ್ತ್ರಿ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ ನಾನು ಬೆಂಗಳೂರಿಗೆ ಬಂದಿರಲು, ಬಂಧಿತರಾಗಿದ್ದ ಜನಜಾಗೃತಿ ಸಂಘದ ಕಾರ್ಯಕರ್ತರೂ ಆಗಲೇ ಬಿಡುಗಡೆಯಾದರು. ನಾನು, ಎನ್. ಡಿ. ಶಂಕರ್, ಮೊಣ್ಣಯ್ಯ ಕೂಡಿ ಮತ್ತೆ ಕಾರ್ಯಶೀಲರಾದೆವು.

ಬಿನ್ನಿ ಮಿಲ್‌ನ ಕಾರ್ಮಿಕರು ಬೋನಸ್ ಹಾಗೂ ತಮ್ಮ ಸಂಘದ ಮಾನ್ಯತೆಯ ಬೇಡಿಕೆಗಳನ್ನು ಮುಂದಿಟ್ಟು ಡಿಸೆಂಬರ್ 1940ರಲ್ಲಿ ಮುಷ್ಕರ ಹೂಡಿದರು. ಭಾಷ್ಯಂ ಸಂಘದ ಅಧ್ಯಕ್ಷರು. 1926ರ ಇಂಡಿಯನ್ ಟ್ರೇಡ್ ಯೂನಿಯನ್ಸ್ ಆಕ್ಟ್‌ನಂತೆ ಬ್ರಿಟಿಷ್ ಇಂಡಿಯದ ಕಾರ್ಮಿಕರಿಗೆ ಸಂಘಟನಾಧಿಕಾರವಿದ್ದರೂ ಮೈಸೂರಲ್ಲಿ ಈ ಹಕ್ಕು ಇರಲಿಲ್ಲವಷ್ಟೆ. ಅಲ್ಲಿ ಮುಷ್ಕರಗಳಾದಾಗ ಸಭೆಗಳಮೇಲೆ ಪ್ರತಿಬಂಧ ಹೇರಿ, ಗೋಲೀಬಾರು, ಲಾಠೀಚಾರ್ಜು ಮಾಡಿಸುತ್ತಿದ್ದರು. ನಾನು, ಶಂಕರ್ ಮತ್ತು ಕೆ. ಎಸ್. ಕುಮಾರನ್ ಮುಷ್ಕರದ ಸಂಘಟನೆಯ ಜವಾಬ್ದಾರಿ ಹೊತ್ತು, ಭಾಷ್ಯಂ ಅವರ ಅಧ್ಯಕ್ಷತೆಯಲ್ಲಿ ಒಂದು ವಿಶಾಲ ಮುಷ್ಕರ ಸಮಿತಿಯನ್ನು ಸ್ಥಾಪಿಸಿದೆವು. ಮುಷ್ಕರ ನೀಡುವ ವ್ಯವಸ್ಥೆಯನ್ನು ಹಿಂದೆಂದೂ ಬೆಂಗಳೂರಲ್ಲಿ ಆಗದಿದ್ದಷ್ಟು ಬೃಹತ್‌ಪ್ರಮಾಣದಲ್ಲಿ ಏರ್ಪಡಿಸಿದೆವು. ಪ್ರತಿದಿನ ಸಭೆ, ಮೆರವಣಿಗೆ ನಡೆಸುತ್ತಿದ್ದೆವು. ಆಗ ಸೇನಾವಿಭಾಗದ ಮಿಲ್ಲಿಗೆ ಭಾರಿ ಆರ್ಡರುಗಳು ಬಂದಿದ್ದುದರಿಂದ ಈ ಮುಷ್ಕರಕ್ಕೆ ಸಾಮ್ರಾಜ್ಯಶಾಹೀ ವಿರೋಧೀ ಹೋರಾಟದ ಸ್ವರೂಪ ಬಂದು ಕಾರ್ಮಿಕರಲ್ಲಿ ಅಪೂರ್ವ ರಾಜಕೀಯ ಜಾಗೃತಿಯೂ ಆಯಿತು. 23 ದಿನ ನಡೆದ ಈ ಮುಷ್ಕರಕ್ಕೆ ಬೆಂಬಲವಾಗಿ ನಗರದ ಎಲ್ಲ ಕಾರ್ಮಿಕ

ವರ್ಗಗಳ ಬೆಂಬಲವನ್ನೂ ಸಂಘಟಿಸಲಾಯಿತು. ಎಲ್ಲ ವರ್ಗದ ಜನರೂ ನಗದಾಗಿ ಹಾಗೂ ವಸ್ತುರೂಪದಲ್ಲಿ ಕಾರ್ಮಿಕ ಪರಿಹಾರಕ್ಕೆ ಕಾಣಿಕೆ ನೀಡಿದರು. ಪತ್ರಿಕೆಗಳೂ ಹೃತ್ಪೂರ್ವಕ ಬೆಂಬಲ ನೀಡಿದವು. ಯಾವುದೇ ಹಿಂಸಾಚಾರವಾಗಿ, ಪೋಲೀಸರು ಕಾರ್ಮಿಕರನ್ನು ಹಣಿದು ಮುಷ್ಕರ ಮುರಿಯುವುದೆಂದು ಮಾಲಿಕರು ಭಾವಿಸಿದ್ದರು. ಯಾವಾಗಲೂ ಹಾಗೇ ಆಗುತ್ತಿದ್ದರೂ ಈ ಬಾರಿ ಹಾಗಾಗಲಿಲ್ಲ. ಕಡೆಗೆ ಸರಕಾರವೇ, ಶೀಘ್ರ ಕಾರ್ಮಿಕ ರಕ್ಷಣಾಕಾನೂನುಗಳನ್ನು ಜಾರಿಗೆ ತರುವ ಭರವಸೆನೀಡಿ, ಕಾರ್ಮಿಕ ರೊಡನೆ ಮಾತುಕತೆಗೆ ಆರಂಭಿಸಿತು. ಬ್ರಿಟಿಷ್ ರೆಸಿಡೆಂಟ್‌ನ ಒತ್ತಾಯದಿಂದ, ಮುಷ್ಕರದ 23ನೆಯ ದಿನ ನಾನು, ಶಂಕರ್ ಮತ್ತು ಕುಮಾರನ್ ಇವರನ್ನು ಸಾರ್ವಜನಿಕ ಭದ್ರತಾ ಕಾನೂನಿನಂತೆ ಬಂಧಿಸಿ, ಮೂರು ತಿಂಗಳು ಸ್ಥಾನಬದ್ಧತೆಯಲ್ಲಿಟ್ಟಿತು. ಬಿಡುಗಡೆ ಆದಾಗ ಬೆಂಗಳೂರು ನಗರ ಹಾಗೂ ಕಂಟೋನ್ಮೆಂಟನ್ನು ಪ್ರವೇಶಿಸಬಾರದಾಗಿ ನಮ್ಮ ಮೇಲೆ ನಿರ್ಬಂಧ ಹೇರಿದರು. ಏಪ್ರಿಲ್ 1941ರಲ್ಲಿ ಬಿಡುಗಡೆ ಆದ ನಾನು ಜೂನ್‌ನಲ್ಲಿ ಮೈಸೂರು ಜಿಲ್ಲೆಯ ಶಾಲೆಯೊಂದರಲ್ಲಿ ಅಧ್ಯಾಪಕನಾಗಿ ಸೇರಿರಲು, ಮುಂದೆ ಜುಲೈಯಲ್ಲಿ ಭಾರತ ರಕ್ಷಣಾಕಾನೂನಿನಂತೆ ಬಂಧಿಸಿ ಸ್ಥಾನಬದ್ಧತೆಯಲ್ಲಿಟ್ಟರು. ಜೈಲಿನಲ್ಲಿ ನನಗೆ ಅಪಾರ ಹಿಂಸೆ ನೀಡಿ ಜೀವನವೇ ಅಸಹ್ಯವಾಗಿ ಮಾಡಿದರು. ಬೇರೆ ರಾಜಕೀಯ ಕೈದಿಗಳಿರದ್ದರಿಂದ ಪ್ರತಿಭಟನೆಯನ್ನು ಏಕಾಂಗಿಯಾಗಿ ಮಾಡಬೇಕಾಗಿತ್ತು. ಹೊರಗಡೆ ಸಾರ್ವಜನಿಕ ಸಭೆ ಹಾಗೂ ಶಾಸನಸಭೆಗಳಲ್ಲಿ ನನ್ನ ಸ್ಥಿತಿ ಸುಧಾರಣೆಗಾಗಿ ನನ್ನ ಮಿತ್ರರು ಚಳವಳಿ ಹೂಡಿದ್ದರು. 1942ರ ಜುಲೈ ಕೊನೆಗೆ ನನ್ನ ಬಿಡುಗಡೆ ಆಯಿತು. ನನ್ನ ಸ್ಥಾನಬದ್ಧತೆಯ ಕಾಲದಲ್ಲಿ ಬೆಂಗಳೂರಿಂದ ಹೊರದೂಡಲ್ಪಟ್ಟ ಎನ್. ಡಿ. ಶಂಕರ್ ಅವರು ಭದ್ರಾವತಿ ಹಾಗೂ ಮಂಡ್ಯಗಳಲ್ಲಿ ಕಾರ್ಮಿಕ ಸಂಘಟನೆಗಾಗಿ ದುಡಿದರು.

1940ರ ಮುಷ್ಕರದಿಂದಾಗಿ ಕಾರ್ಮಿಕರ ಹಿತರಕ್ಷಣೆಗಾಗಿ ಒಂದು ವಿಶೇಷಾಜ್ಞೆಯನ್ನು ಮೈಸೂರು ಸರಕಾರ ಹೊರಡಿಸಿತಲ್ಲದೆ, ಮುಂದೆ 1942ರ ಮೈಸೂರ್ ಲೇಬರ್ ಆಕ್ಟನ್ನು ಮಂಜೂರುಮಾಡಿತು. ಈ ಕಾನೂನು ತನ್ನದೇ ಇತಿಮಿತಿಗಳನ್ನು ಹೊಂದಿತ್ತಾದರೂ ಅದಕ್ಕಾಗಿ ಹೋರಾಡಿದ ಕಾರ್ಮಿಕರಲ್ಲಿ ಅಪಾರ ರಾಜಕೀಯ ಜಾಗೃತಿ ಆಗಿತ್ತು. ಇದು 1942ರ ಕ್ವಿಟ್ ಇಂಡಿಯಾ ಚಳವಳಿಗೆ ಒಳ್ಳೆಯ ಹಿನ್ನೆಲೆ ಆಯಿತು.

ನನ್ನ ಬಿಡುಗಡೆಯಾಗಿ ಎರಡು ವಾರವಾಗುವಷ್ಟರಲ್ಲಿ, ಆಗಸ್ಟ್ 15ರಂದು ಕೋಲಾರದಲ್ಲಿ ನನ್ನನ್ನು ಬಂಧಿಸಿ. ಬೆಂಗಳೂರು ಸೆಂಟ್ರಲ್ ಜೈಲಿಗೆ ತಂದು ಸ್ಥಾನಬದ್ಧನಾಗಿ ಇಟ್ಟರು. ಜೈಲು ಆಗ ಸತ್ಯಾಗ್ರಹಿಗಳಿಂದ ತುಂಬಿಹೋಗಿತ್ತು. ಮಜೂರರು. ವಿದ್ಯಾರ್ಥಿಗಳು ಎಂದಿಗೂ ಬೃಹತ್ ಪ್ರಮಾಣದಲ್ಲಿ ಮುಷ್ಕರ ಹೂಡಿ ಚಳವಳಿಯಲ್ಲಿ ಪಾಲುಗೊಂಡುದು ಸರ್ವವಿದಿತ. ಎನ್. ಡಿ. ಶಂಕರ್ ಭೂಗತರಾಗಿ ಉಳಿದು ಬೆಂಗಳೂರು, ಭದ್ರಾವತಿ, ಮಂಡ್ಯ, ಹುಬ್ಬಳ್ಳಿಗಳಲ್ಲಿ ಕಾರ್ಯಶೀಲರಾಗಿ ಈ ಚಳವಳಿ

ಸಂಘಟಿಸಿದರು. 1943ರ ಜುಲೈಯಲ್ಲಿ ನನ್ನ ಬಿಡುಗಡೆ ಆಗಿ, ಮುಂದೆ ಎರಡು ವಾರಗಳಲ್ಲೇ ನನ್ನ ಸಂಶಯಾಸ್ಪದ ರಾಜಕೀಯ ಚಟುವಟಿಕೆಗಳಿಗಾಗಿ ಬಂಧಿತನಾದೆ. ಮುಂದೆ ಅಕ್ಟೋಬರ್‌ನಲ್ಲಿ ಇತರ ರಾಜಕೀಯ ಕೈದಿಗಳ ಜೊತೆ ಬಿಡುಗಡೆ ಆದೆ.

ಬಿಡುಗಡೆಯನಂತರ ನಾನು ಬೆಂಗಳೂರು ಜಿ|| ಕಮ್ಯೂನಿಸ್ಟ್ ಪಕ್ಷದ ಕಾರ್ಯದರ್ಶಿ ಆದೆ. ಕಾರ್ಮಿಕ ಸಂಘಟನೆಗಾಗಿ ದುಡಿದೆ. ಆಗ ಎಂ. ಎಸ್. ಕೃಷ್ಣನ್ ಮತ್ತು ಎಂ. ಸಿ. ನರಸಿಂಹನ್ ವಿದ್ಯಾರ್ಥಿಗಳಾಗಿದ್ದು, ವಿದ್ಯಾರ್ಥಿ ಫೆಡರೇಶನ್ ಸಂಘಟನೆಗೆ ದುಡಿದರು. ಕಾಂಗ್ರೆಸ್ಸಿನ ಜವಾಬ್ದಾರಿ ಸರಕಾರ, ಏಕೀಕರಣ ಚಳವಳಿ, ಚುನಾವಣೆಗಳಲ್ಲೂ ಫೆಡರೇಶನ್ ಸಹಕರಿಸಿತು. 1947ರ ಚಳವಳಿಯಲ್ಲಿ 'ಆರ್ಕಾಟ್ ಬಾಯ್ಕಾಟ್' ಎಂಬ ಫೆಡರೇಶನ್‌ನ ಘೋಷಣೆ ತೀರ ಜನಪ್ರಿಯವಾಗಿತ್ತು.

ವ್ಯೈ.ಬೆಂ. 26

## ದಿ|| ಕೆ. ಟಿ. ಭಾಷ್ಯಂ
(1895—1956)



ದೇಶಭಕ್ತ, ರಾಷ್ಟ್ರೀಯ ನಾಯಕ, ದಕ್ಷ ಆಡಳಿತಗಾರ, ಉತ್ತಮ ವಾಗ್ಮಿ, ಕಾರ್ಮಿಕ ಮುಖಂಡ ಹಾಗೂ ಮೈಸೂರು ಕಾಂಗ್ರೆಸ್ಸಿನ ಸ್ಥಾಪಕರಲ್ಲೊಬ್ಬರಾದ ಕೆ. ತುಪ್ಪಲ್ ನರಸಿಂಹ ಅಯ್ಯಂಗಾರ್ ಭಾಷ್ಯಂ 1895ರ ಏಪ್ರಿಲ್ 12ರಂದು ಜನಿಸಿದರು. 1917ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜ್‌ನಲ್ಲಿ ವ್ಯಾಸಂಗ ಮುಗಿಸಿ ಪದವಿಯನ್ನು ಪಡೆದು, 1919ರಲ್ಲಿ ಮದ್ರಾಸಿನಲ್ಲಿ ಲಾ ಡಿಗ್ರಿಯನ್ನು ಪಡೆದರು. ಬೆಂಗಳೂರಿಗೆ ಹಿಂತಿರುಗಿ ಮೈಸೂರು ಸಂಸ್ಥಾನದ ಉನ್ನತ ನ್ಯಾಯಾಲಯದ ಅಡ್ವೋಕೇಟರಾದರು.

ವಿದ್ಯಾರ್ಥಿಯಾಗಿರುವಾಗಲೇ ಭಾರತದ ಸ್ವಾತಂತ್ರ್ಯ ಸಂಗ್ರಾಮದೆಡೆ ಆಕರ್ಷಿತರಾದ ಭಾಷ್ಯಂ 1921ರಿಂದ ಸತ್ಯಾಗ್ರಹ ಚಳವಳಿಯಲ್ಲಿ ಭಾಗವಹಿಸಿದರು. ಅವರ ಚಟುವಟಿಕೆಗಳು ಮೈಸೂರು ಸಂಸ್ಥಾನಕ್ಕೆ ಮಾತ್ರ ಸೀಮಿತವಾಗದೆ ಹೊರಪ್ರಾಂತ್ಯಗಳಲ್ಲೂ ಕಂಡುಬಂತು. ಕೇವಲ ನ್ಯಾಯವಾದಿಗಳಾಗಿಯೇ ಮುಂದುವರಿದಿದ್ದರೆ, ಭಾಷ್ಯಂ ಸಾವಿರಾರು ರೂಪಾಯಿಗಳನ್ನು ಗಳಿಸಬಹುದಾಗಿತ್ತು; ಸುಖಜೀವನ ನಡೆಸಬಹುದಾಗಿತ್ತು. ಆದರೆ ಅಂಥ ಜೀವನಕ್ಕೆ ಆಸೆಪಡದೆ, ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ

ವನ್ನು ಸ್ಥಾಪಿಸುವುದಕ್ಕೆ, ರಾಷ್ಟ್ರದ ಸ್ವಾತಂತ್ರ್ಯವನ್ನು ಗಳಿಸಲಿಕ್ಕೆ ಜೀವನವನ್ನು ಮುಡು ಪಾಗಿಟ್ಟರು.

1926ರಲ್ಲೇ ಭಾಷ್ಯಂ ಪ್ರಜಾಪ್ರತಿನಿಧಿ ಸಭೆಗೆ ಚುನಾಯಿತರಾದರು. 1939ರ ವರೆಗೆ ಆ ಸಭೆಯ ಪ್ರಮುಖ ಸದಸ್ಯರಾಗಿದ್ದು, ಅದರ ಕಾರ್ಯಕಲಾಪಗಳಲ್ಲಿ ಆಸಕ್ತಿ ವಹಿಸಿ, ಹಲವಾರು ಉತ್ತಮ ಸುಧಾರಣೆಗಳನ್ನು ಜಾರಿಗೆ ತರಲು ಶ್ರಮಿಸಿದರು. ಶಾಸಕರಾದ ಭಾಷ್ಯಂ. 1928ರಲ್ಲಿ, 'ಹಿಂದೂ ಕಾನೂನಿನಲ್ಲಿ ಮಹಿಳೆಯರು' ಎಂಬ ಗ್ರಂಥವನ್ನು ಬರೆದರು. ಭಾರತೀಯ ಮಹಿಳೆಯರ ಹಕ್ಕುಬಾಧ್ಯತೆಗಳನ್ನು ಪರಿಶೀಲಿಸಲು ಒಂದು ಸಮಿತಿಯನ್ನು ಸರ್ಕಾರ ನೇಮಿಸಿದ್ದು ಭಾಷ್ಯಂರ ಪ್ರೇರಣೆಯಿಂದಲೇ.

ಪ್ರಜಾಪ್ರತಿನಿಧಿ ಸಭೆಯಲ್ಲಿ ಮಾತ್ರವಲ್ಲದೆ ಕಾರ್ಮಿಕರ, ಕೆಲಸಗಾರರ ಹಿತೈಷಿ ಗಳಾದರು ಭಾಷ್ಯಂ. 1926ರಲ್ಲೇ ಬೆಂಗಳೂರಿನ ಬಿನ್ನಿ ಮಿಲ್ ಕೆಲಸಗಾರರು ತಮ್ಮ ಹಕ್ಕುಗಳಿಗಾಗಿ ನ್ಯಾಯಬದ್ಧ ಚಳವಳಿ ನಡೆಸಿದಾಗ ಭಾಷ್ಯಂ ಅದಕ್ಕೆ ತಮ್ಮ ಬೆಂಬಲ ನೀಡಿದರು. ಅಲ್ಲದೆ, 1929ರಲ್ಲಿ ಬಿನ್ನಿ ಮಿಲ್ ಕಾರ್ಮಿಕ ಸಂಘದ ಅಧ್ಯಕ್ಷರಾದರು. ಬೆಂಗಳೂರಿನಲ್ಲಿ ಮಾತ್ರವಲ್ಲದೆ, ಮೈಸೂರು ಸಂಸ್ಥಾನದ ಎಲ್ಲ ಕಾರ್ಮಿಕರ ಸಂಘಟನೆಗೆ ನೆರವಾದರು; ಮೈಸೂರಿನ ಕಾರ್ಮಿಕರ ಸಂಘಟನೆ ಭಾಷ್ಯಂರ ದುಡಿಮೆಯ ಫಲ. ಸಂಸ್ಥಾನದಲ್ಲಿ ಕಾರ್ಮಿಕ ಚಳವಳಿಯ ಮಾರ್ಗದರ್ಶಕರಾದರು ಅವರು. ಕಾರ್ಮಿಕ ಸಂಘಗಳಿಗೆ ಸರ್ಕಾರ ಮನ್ನಣೆಯನ್ನು ಕೊಡಬೇಕೆಂಬ ಕೆಲಸಗಾರರ ಬೇಡಿಕೆಯನ್ನು ಅವರು ಪ್ರತಿಪಾದಿಸಿದರು. ಅವರ ಸತತ ಪ್ರಯತ್ನದ ಪರಿಣಾಮವಾಗಿ ಮೈಸೂರು ಸರ್ಕಾರವು ಪ್ರಥಮ ಬಾರಿಗೆ, ಬ್ರಿಟಿಷ್ ಪ್ರಾಂತ್ಯಗಳಲ್ಲೂ ಜಾರಿಯಲ್ಲಿಲ್ಲದ 'ಮೈಸೂರು ಕಾರ್ಮಿಕ ಕಾನೂನು' ಜಾರಿಗೆ ತಂದಿತು. ಕೆಲಸಗಾರರ ಚಳವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ್ದಕಾಗಿ, ಅನೇಕ ಬಾರಿ ಕಾರಾಗೃಹವಾಸವನ್ನು ಅವರು ಅನುಭವಿಸಬೇಕಾ ಯಿತು. ಮೈಸೂರು ಸಂಸ್ಥಾನದ ಕಾರ್ಮಿಕ ಚಳವಳಿಯ 'ಪಿತಾಮಹ' ಎನಿಸಿಕೊಂಡರು ಅವರು.

ಭಾಷ್ಯಂ ವಿದ್ಯಾರ್ಥಿಗಳ ನಾಯಕರೂ ಆಗಿದ್ದರು. 1930ರಲ್ಲಿ ಮೈಸೂರು ಸಂಸ್ಥಾನದ ಯುವಕ ಸಮ್ಮೇಳನದ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಅದೇ ವರ್ಷದಲ್ಲಿ 3 ತಿಂಗಳು ಸೆರೆಮನೆ ಸೇರಿದಾಗ ಸೆಂಟ್ರಲ್ ಕಾಲೇಜಿನ ವಿದ್ಯಾರ್ಥಿಗಳು, ಲಂಡನ್ ಮಿಷನ್ ಸ್ಕೂಲ್‌ನ ಹುಡುಗರು ಮತ್ತು ವಾಣೀವಿಲಾಸ ಸ್ಕೂಲಿನ ವಿದ್ಯಾರ್ಥಿನಿಯರು ಬಹಿಷ್ಕಾರ ಹೂಡಿದರು; ಅಲ್ಲದೆ ಬೆಂಗಳೂರು ನಗರ ಹರತಾಳ ಆಚರಿಸಿತು.

ಒಳ್ಳೆಯ ಭಾಷಣಕಾರರಾದ ಭಾಷ್ಯಂ ಪ್ರಸಿದ್ಧ ನ್ಯಾಯವಾದಿಗಳಾಗಿದ್ದರು. ಆದ್ದರಿಂದಲೇ ಅವರು 1938ರಲ್ಲಿ ಮಂಡ್ಯದಲ್ಲಿ ಸೇರಿದ ಮೈಸೂರು ಸಂಸ್ಥಾನದ ನ್ಯಾಯ ವಾದಿಗಳ ಸಮ್ಮೇಳನದ ಅಧ್ಯಕ್ಷರಾಗಿ ಚುನಾಯಿತರಾದರು. 1934ರಿಂದ 1938ರ ವರೆಗೆ ಮೈಸೂರು ವಿಧಾನ ಪರಿಷತ್ತಿನ ಸದಸ್ಯರಾಗಿದ್ದರು. ಅಲ್ಲದೆ, 1930ರಿಂದ 1939ರ

ವರೆಗೆ ಬೆಂಗಳೂರು ಪುರಸಭೆಯ ಸದಸ್ಯರಾಗಿದ್ದು ಬೆಂಗಳೂರು ನಾಗರಿಕರ ಹಿತಕ್ಕಾಗಿ ದುಡಿದರು.

ಮೈಸೂರು ಸಂಸ್ಥಾನದಲ್ಲಿ ಜನಜಾಗೃತಿಯನ್ನು ಉಂಟುಮಾಡಿ ಕಾಂಗ್ರೆಸ್ಸನ್ನು ರೂಪಿಸುವುದರಲ್ಲಿ ಪಾಲುಗೊಂಡವರಲ್ಲಿ ಭಾಷ್ಯಂ ಅಗ್ರಗಣ್ಯರು. ಜನತೆಯ ರಾಜಕೀಯ ಆಕಾಂಕ್ಷೆ, ಆಶೋತ್ತರಗಳನ್ನು ಕ್ರೋಢೀಕರಿಸಿ, ಪ್ರಭಾಯುತ ಶಕ್ತಿಯನ್ನಾಗಿ ಅವರು ಮಾಡಿದರು. 1940ರಲ್ಲಿ ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾದರು. ಆ ಸಮಯದಲ್ಲಿ (1940) ಲೋಕಲ್ ಬೋರ್ಡ್‌ಗಳಿಗೆ ನಡೆದ ಚುನಾವಣೆಗೆ ಕಾಂಗ್ರೆಸ್ ಅಭ್ಯರ್ಥಿಗಳನ್ನು ನಿಲ್ಲಿಸಿ ಸಂಸ್ಥಾನದಲ್ಲಿ ಪ್ರಚಾರ ಪ್ರವಾಸವನ್ನು ಕೈಗೊಂಡು ಚುನಾವಣೆಯಲ್ಲಿ ಭಾರಿ ಜಯವನ್ನು ಗಳಿಸಿಕೊಟ್ಟರು. 173 ಸ್ಥಾನಗಳ ಪೈಕಿ ಮೈಸೂರು ಕಾಂಗ್ರೆಸ್ 119 ಸ್ಥಾನಗಳನ್ನು ಆಗ ಪಡೆಯಿತು. ಅವರಲ್ಲಿ 39 ಅವಿರೋಧ ಆಯ್ಕೆಯಾದವರು. ಮೈಸೂರು ಕಾಂಗ್ರೆಸ್ ಶಿಸ್ತಿನ, ಜನಪ್ರಿಯ ಸಂಸ್ಥೆಯಾಗುವುದರಲ್ಲಿ, ಅದನ್ನು ವ್ಯವಸ್ಥೆಗೊಳಿಸುವುದರಲ್ಲಿ ಭಾಷ್ಯಂ ಪ್ರಮುಖಪಾತ್ರ ವಹಿಸಿದರು; ತಮ್ಮ ಜೀವನದ ಅಂತ್ಯದ ವರೆಗೂ ಅದರ ಮಾರ್ಗದರ್ಶಕರಾಗಿ ಉಳಿದರು.

ಮೈಸೂರು ಕಾಂಗ್ರೆಸ್ಸಿನ ಇತಿಹಾಸದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆಸಿದ ಚಳವಳಿ ಒಂದು ಮುಖ್ಯ ಘಟ್ಟ. ಆ ಚಳವಳಿಯಲ್ಲಿ ಭಾಷ್ಯಂರ ಪಾತ್ರ ಹಿರಿದು. ಚಳವಳಿ ನಾಯಕತ್ವ ವಹಿಸಿ ಹಲವಾರು ಬಾರಿ ಜೈಲುವಾಸ ಅನುಭವಿಸಿದರು. ಚಳವಳಿ ಯಶಸ್ವಿಯಾಗಿ, 1947ರಲ್ಲಿ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿತವಾದಾಗ ಕೆ. ಸಿ. ರೆಡ್ಡಿಯವರ ನಾಯಕತ್ವದ ಪ್ರಥಮ ಜನಪ್ರಿಯ ಮಂತ್ರಿಮಂಡಳದಲ್ಲಿ ಭಾಷ್ಯಂ ಸಹಜವಾಗಿಯೇ ಮಂತ್ರಿಗಳಾದರು. ಕಾನೂನಿನ ವಿಷಯಗಳಲ್ಲಿ, ಕಾರ್ಮಿಕ ಕ್ಷೇತ್ರದಲ್ಲಿ ವಿಶೇಷ ಪರಿಶ್ರಮವನ್ನು ಪಡೆದ ಭಾಷ್ಯಂರಿಗೆ ಕಾನೂನು ಮತ್ತು ಕಾರ್ಮಿಕ ಖಾತೆಗಳನ್ನು ವಹಿಸಿದ್ದು ಅವರು ಪಟ್ಟ ಶ್ರಮಕ್ಕೆ ತಕ್ಕ ಫಲವೆನ್ನಬಹುದು. ಆ ಕ್ಷೇತ್ರದಲ್ಲಿ ಹೆಚ್ಚಿನ ಪ್ರಗತಿ ಸಾಧಿಸುವ ಸುಯೋಗ ಅವರಿಗೆ ದೊರೆಯಿತು. ದುಡಿಯುವ ಜನರಿಗೆ ಸೌಲಭ್ಯವನ್ನು ಕಲ್ಪಿಸುವಂತಹ ಕಾನೂನುಗಳನ್ನು ರಚಿಸಿ ಕಾರ್ಯರೂಪಕ್ಕೆ ತಂದರು. ಐದು ವರ್ಷಗಳ ಕಾಲ (1947-52) ಮಂತ್ರಿಗಳಾಗಿದ್ದು. ಅನೇಕ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಭಾಗವಹಿಸಿದರು. 1952ರಲ್ಲಿ ಮೈಸೂರು ವಿಧಾನ ಪರಿಷತ್ತಿನ ಅಧ್ಯಕ್ಷರಾಗಿ ಅವಿರೋಧವಾಗಿ ಚುನಾಯಿತರಾದರು. ತಮ್ಮ ನಿಷ್ಪಕ್ಷಪಾತ ನೀತಿಯಿಂದ ಪರಿಷತ್ತಿನ ಎಲ್ಲಾ ಪಕ್ಷಗಳ ಸದಸ್ಯರ ಗೌರವ, ಪ್ರೀತಿಗಳಿಗೆ ಪಾತ್ರರಾದರು. ಆ ಕಾಲದಲ್ಲಿ ಅವರು ನೀಡುತ್ತಿದ್ದ ದಿಟ್ಟತನದ ರೂಲಿಂಗ್‌ಗಳು ಇಂದಿಗೂ ಮಾದರಿಯಾಗಿವೆ.

ಭಾಷ್ಯಂರ ಕಾರ್ಯದಕ್ಷತೆಯನ್ನು ಮೆಚ್ಚಿದ ಭಾರತ ಸರ್ಕಾರ 1948ರ ಜೂನ್ ತಿಂಗಳಲ್ಲಿ ಸ್ಯಾನ್‌ಫ್ರಾನ್ಸಿಸ್ಕೊ ನಗರದಲ್ಲಿ ನಡೆದ ಅಂತರರಾಷ್ಟ್ರೀಯ ಕಾರ್ಮಿಕ

ಸಮ್ಮೇಳನಕ್ಕೆ ಭಾರತೀಯ ನಿಯೋಗದ ಸದಸ್ಯರನ್ನಾಗಿ ಆರಿಸಿ ಕಳುಹಿಸಿತು ; ಮತ್ತೆ 1949ರ ಜೂನ್ ತಿಂಗಳಲ್ಲಿ ಜಿನೀವಾದ ಕಾರ್ಮಿಕ ಸಮ್ಮೇಳನದಲ್ಲಿ ಭಾರತವನ್ನು ಪ್ರತಿನಿಧಿಸಿದರು.

ಹೀಗೆ ರಾಷ್ಟ್ರದ, ಸಂಸ್ಥಾನದ ನಾನಾ ಕ್ಷೇತ್ರಗಳಲ್ಲಿ ಸೇವೆಸಲ್ಲಿಸಿದ ಭಾಷ್ಯಂ ಸತ್ಯಕ್ಕೂ 'ಕರ್ಮಯೋಗಿ'. ಆಡಿದಂತೆ ನಡೆಯುವ, ಯಾರನ್ನೂ ದ್ವೇಷಿಸದೆ ಎಲ್ಲರ ಮಿತ್ರನಾಗಿ ಅಜಾತಶತ್ರುವೆನಿಸಿಕೊಂಡರು. ಉಜ್ವಲ ದೇಶಭಕ್ತ, ರಾಷ್ಟ್ರೀಯ ನಾಯಕರಾದ ಭಾಷ್ಯಂ ಒಂದು ಗುಂಪಿಗೆ ಸೇರಿದವರಲ್ಲ ; ಒಂದು ಸಂಸ್ಥಾನಕ್ಕೆ ಸಂಬಂಧಪಟ್ಟವರಲ್ಲ ; ಅವರು ರಾಷ್ಟ್ರದ ಸೊತ್ತಾದರು. ಇಡೀ ರಾಷ್ಟ್ರದ ಪ್ರಗತಿಗೆ ಜೀವನವನ್ನು ಮುಡಿಪಾಗಿಟ್ಟ ಬಹುಮುಖ ಪ್ರತಿಭೆಯ ವ್ಯಕ್ತಿ ಭಾಷ್ಯಂ. ವಿಧಾನ ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿರುವಾಗಲೇ – 1956ರ ಮೇ 24ರಂದು—ಅವರು ದೈವಾಧೀನರಾದರು.

ಕೆ. ಟಿ. ರಾಮಸ್ವಾಮಿ
(ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ)

ಮೈ.ಬೆಂ. 27

## ದಿ|| ತಿರುಮಲೆ ತಾತಾಚಾರ್ಯ ಶರ್ಮ
(1896–1973)



"ಹೊರಗೆ ನಾಡಿನಲ್ಲಿ ಜೀವಂತ ಹೊಸ ಇತಿಹಾಸ ಸೃಷ್ಟಿಯಾಗುತ್ತದೆ. ಈಗ ನೀನು ಇಲ್ಲಿ ಹಳೆಯ ಇತಿಹಾಸದ ಸಂಗತಿಗಳನ್ನು ಕೆದಕುತ್ತ ಕುಳಿತಿದೀಯಲ್ಲ !" ಎಂದರಂತೆ ಆಂಧ್ರಕೇಸರಿ ಟಂಗುಟೂರಿ ಪ್ರಕಾಶಂ ಪಂತುಲು.

1920–21ರ ಸಮಯ. ತಿರುಮಲೆ ತಾತಾಚಾರ್ಯ ಶರ್ಮರು ಪ್ರಾಚ್ಯ ಸಂಶೋಧನಾ ಇಲಾಖೆಯಲ್ಲಿ ನೌಕರಿ ಹಿಡಿದು ಆ ಸಲುವಾಗಿ ಉದಕಮಂಡಲದಲ್ಲಿದ್ದ ಕಾಲ. ಆಗಲೇ ಧರ್ಮ ಕರ್ಮಸಂಯೋಗದಿಂದ ಪ್ರಕಾಶಂ ಸಹ ಅಲ್ಲಿಗೆ ಕೆಲವು ದಿನವಮಟ್ಟಿಗೆ ಬಂದಿದ್ದರು. ಶರ್ಮರು ತಮ್ಮ ಉದಕಮಂಡಲದ ಶಾಸನ ಇಲಾಖಾ ಕಚೇರಿಯಲ್ಲಿ ಹಳೆ ಇತಿಹಾಸದ ಬಗ್ಗೆ ಸಂಶೋಧನೆ ನಡೆಸುತ್ತಿದ್ದರು. ಆಗ ಪ್ರಕಾಶಂ ಅವರ ಪರಿಚಯ ಆಯಿತು.

ಮೇಲೆ ಹೇಳಿದ ಸಂದೇಶವಾಕ್ಯ ಅವರಿಗೆ ದೊರೆಯಿತು. ಶರ್ಮರ ಮನಸ್ಸು ನಿರ್ಧರಿಸಿತು.

ಶರ್ಮರವರು ಮೊದಲಿನಿಂದಲೂ ಸ್ವತಂತ್ರಪ್ರವೃತ್ತಿಯೇ; ಹೋರಾಟದ ಜಾಯಮಾನವೇ. ಹಿಂದೊಮ್ಮೆ ಮದರಾಸಿನಲ್ಲಿದ್ದಾಗ ಹಿರಿಯರಾದ ಬೆನಗಲ್ ರಾಮರಾಯರು ಸರ್ಕಾರದ ಒಂದು ಪ್ರಚಾರಸಾಹಿತ್ಯ ಲೇಖನವನ್ನು ಕೊಟ್ಟು ಕನ್ನಡಕ್ಕೆ ಅನುವಾದಿಸ ಹೇಳಿದರು. ಆಗ ತರುಣ ಶರ್ಮ "ಇದು ವಿದೇಶೀ ಆಳರಸರ ಕೃತ್ಯದ ಪ್ರಚಾರ ಕಾರ್ಯ, ದಾಸ್ಯದ ಪ್ರತೀಕ, ದಾಸ್ಯಶೃಂಖಲೆಯನ್ನು ಭದ್ರಗೊಳಿಸುವ ಕೆಲಸ. ನಾನೊಲ್ಲೆ" ಎಂದುಬಿಟ್ಟಿದ್ದರು. ಬೆನಗಲ್ ರಾಮರಾಯರಲ್ಲಿ ಗೌರವ ಎಷ್ಟೇ ಇದ್ದರೂ, ತಮ್ಮ ಮನಸ್ಸಿಗೆ ಒಗ್ಗದ ಈ ಕೆಲಸವನ್ನು ಮಾಡಲಿಲ್ಲ. ಅಂತಹ ಪ್ರವೃತ್ತಿಯ ಶರ್ಮರಿಗೆ, ಪ್ರಕಾಶಂರವರ ಈ ಮಾತು ಸಾಕಾಯಿತು. ಹಾದಿ ನಿಶ್ಚಯವಾಯಿತು. 1921ರಲ್ಲಿ ಅಹಮದಾಬಾದು ಕಾಂಗ್ರೆಸ್‌ನಲ್ಲಿ ಪತ್ನಿ 'ಭಾರತಿ'ಯ ವೀಣಾವಾದನ ಕಛೇರಿಗೆ ಆಮಂತ್ರಣ ಬಂದಿತು. ತಾನು ಸರ್ಕಾರಿ ನೌಕರ, ಕಾಂಗ್ರೆಸ್‌ಗೆ ಹೋಗುವುದು ಅಪಾಯಕರ ಎಂದು ತಿಳಿದಿದ್ದರೂ ಲೆಕ್ಕಿಸದೆ ಶರ್ಮರು ಆ ಕಾಂಗ್ರೆಸ್‌ಗೆ ಹೋದರು. ಮೊದಲೇ ರಾಷ್ಟ್ರೀಯತೆಯನ್ನು ನಂಬಿಕೊಂಡಿದ್ದವರು, ಈಗ ಪೂರಾ ಅದನ್ನೇ ಮೈಗೂಡಿಸಿಕೊಂಡು ಮರಳಿದರು. ಹಿಂದಕ್ಕೆ ಬಂದವರೇ ಕೆಲಸಕ್ಕೆ ರಾಜೀನಾಮೆ ಇತ್ತರು. ಬೆಂಗಳೂರಿಗೆ ಬಂದು ಸ್ವಾತಂತ್ರ್ಯದ ಕೆಲಸಕ್ಕೆ ನಿಂತರು. ನೆಮ್ಮದಿಯ ಬದುಕನ್ನು ತೊರೆದು, ಅನಿಶ್ಚಿತತೆ, ಅಶಾಂತಿ, ಅಪಾಯ, ಹೋರಾಟಗಳ ಬದುಕನ್ನು ಹಿಡಿದರು. ಬಡತನದ ದೀಕ್ಷೆಯೂ ತಾನೇ ಬಂದಿತು.

1924ರ ಬೆಳಗಾಂ ಕಾಂಗ್ರೆಸ್ ಸಲುವಾಗಿ ಯುವಜನರ ಸಂಘಟನೆ, ಸ್ವಯಂ ಸೇವಕರ ಸಂಗ್ರಹ, ಸಾಹಿತ್ಯಪ್ರಚಾರ ಇವುಗಳಲ್ಲಿ ಮುಳುಗಿದರು ಶರ್ಮಾಜಿ. ಆಗ ತಾನೇ ಆರಂಭವಾಗಿದ್ದ ದೇಶೀಯ ವಿದ್ಯಾಶಾಲೆಯಲ್ಲಿ ಕೆಲವು ದಿನ ಪಾಠ ಹೇಳಿದರು. ಅಲ್ಲೂ ವಿದ್ಯಾರ್ಥಿಗಳಿಗೆ ರಾಷ್ಟ್ರೀಯತೆ, ನವೋದಯಗಳ ಸ್ಫೂರ್ತಿಯನ್ನೇ ಕೊಟ್ಟರು. ಕಂದಾಡೆ ಕೃಷ್ಣಯ್ಯಂಗಾರ್, ಕೋಲಾರ ಸಂಪದ್ಗಿರಿರಾವ್ ಹಾಗೂ ಶರ್ಮಾಜಿ ಸೇರಿ ಬೆಳಗಾಂ ಕಾಂಗ್ರೆಸ್ ಸಮಯಕ್ಕೆ 'ಕರ್ನಾಟಕ ಹ್ಯಾಂಡ್‌ಬುಕ್' ರಚಿಸಿಕೊಟ್ಟರು.

ಬೆಳಗಾಂ ಕಾಂಗ್ರೆಸ್‌ನಿಂದ ಮರಳಿದವರೇ ಪತ್ರಿಕೋದ್ಯಮಕ್ಕೆ ತೊಡಗಿದರು. ಅದೇ ಸಮಯಕ್ಕೆ ಬೆಂಗಳೂರಿನ 'ಮೈಸೂರು ಕ್ರಾನಿಕಲ್' ಎಂಬ ಪತ್ರಿಕೆ ನಾನ್ನೂರು ರೂಪಾಯಿ ಸಾಲದ ಭಾರದ ಅಡಿಯಲ್ಲಿ ಕೊರಗಿ ಕೊನೆಯುಸಿರು ಎಳೆಯುತ್ತಿತ್ತು. ಶರ್ಮರು ಅದನ್ನು ವಹಿಸಿಕೊಂಡರು. 'ವಿಶ್ವಕರ್ನಾಟಕ' ಎಂದು ಹೆಸರು ಬದಲಾಯಿಸಿ ವಾರಪತ್ರಿಕೆ ಆರಂಭಿಸಿದರು (1925). ಕೆಲವು ವರ್ಷಗಳನಂತರ ಅದು ದಿನಪತ್ರಿಕೆಯೂ ಆಯಿತು. ಮುಂದೆ ಸುಮಾರು 24 ವರ್ಷಗಳು 'ವಿಶ್ವಕರ್ನಾಟಕ' ಕರ್ನಾಟಕದಲ್ಲಿ ಸ್ವಾತಂತ್ರ್ಯದ ಹೆಣಕಾರನಾಗಿ ಉಜ್ವಲ ಇತಿಹಾಸವನ್ನು ನಿರ್ಮಿಸಿತು. ರಾಷ್ಟ್ರೀಯ ಜಾಗೃತಿಯ ವಾಣಿ ಆಯಿತು. ಸ್ಫೂರ್ತಿಯ ಸೆಲೆ ಆಗಿತ್ತು. ಸಾವಿರಾರು ಜನರಿಗೆ

ರಾಷ್ಟ್ರದೀಕ್ಷೆಯನ್ನು ಕೊಟ್ಟಿತು.

'ವಿಶ್ವಕರ್ನಾಟಕ'ದ ಬದುಕೇ ಒಂದು ಸಂಗ್ರಾಮ. ದಿನವೂ ಆಡಳಿತದೊಡನೆ ಸೆಣಸು. ದಿವಾನ್ ಮಿರ್ಜಾರಿಗೆ ಶರ್ಮರ ಬಗ್ಗೆ ಗೌರವ, ಆದರ ಇತ್ತು. ಎಷ್ಟೋ ಸಲ ಹೇಳಿಕಳಿಸಿದ್ದೂ ಉಂಟು "ಇಷ್ಟು ಉಗ್ರವಾಗಿ ಬರೆಯಬೇಡಿ" ಎಂದು. ಒಮ್ಮೆ ಮುಖ್ಯ ಕಾರ್ಯದರ್ಶಿ ಮಾಧವರಾಯರೂ ಕರೆಸಿ ಎಚ್ಚರಿಸಿದ್ದರು. "ಶರ್ಮ, ನಿಮ್ಮದು ಅಪಾಯದ ಹಾದಿ, ಜೋಕೆ!" ಶರ್ಮ ಉತ್ತರಿಸಿದ್ದರು: "ನನಗೆ ಯಾವುದರ ಭಯವೂ ಇಲ್ಲ. ಏಕೆಂದರೆ ನಾನು ಯಾವ ಪಾಪವನ್ನೂ ಮಾಡಿಲ್ಲ." "ಭಯ ಬೇಡ" ಎಂಬುದೇ ಗಾಂಧೀಜಿ ಕೊಟ್ಟಿದ್ದ ಸಂದೇಶ. ಗಾಂಧೀಜಿ ನಂದಿಯಲ್ಲಿ ವಿಶ್ರಾಂತಿಗೆ ಬಂದಿದ್ದಾಗ ಶರ್ಮರು ಅವರ ಸೇವೆಗೆ ಸೊಂಟಕಟ್ಟಿ ನಿಂತಿದ್ದರು. ಆಗ ತಮ್ಮ ಪತ್ರಿಕೆಗೆ ಸಂದೇಶ ಬೇಡಿದಾಗ, ಗಾಂಧೀಜಿ ಒಂದು ಸಂದೇಶ ಬರೆದುಕೊಟ್ಟರು: "ನಿರ್ಭೀತಿ, ಪ್ರಾಮಾಣಿಕತೆ ಇವೇ ನಿನ್ನ ದಾರಿದೀಪವಾಗಲಿ." ತಿ. ತಾ. ಶರ್ಮರು ತಮ್ಮ ಬದುಕಿನುದ್ದಕ್ಕೂ ಇವೆರಡನ್ನು ಎಡೆಬಿಡದೇ ನಡೆಸಿದರು.

'ವಿಶ್ವಕರ್ನಾಟಕ'ಕ್ಕೆ ದಿನಗಂಡ, ಕ್ಷಣಗಂಡ! ಅದರಲ್ಲಿ ಬರುತ್ತಿದ್ದ ಫಿರಂಗಿ ಗುಂಡಿನಂತಹ ಮಾತು, ಮಿಂಚಿನ ಗೊಂಚಲಿನಂತಹ ವಾಕ್‌ಸರಣಿ, ರಾಷ್ಟ್ರಪ್ರೇಮವನ್ನು ಉಕ್ಕಿಸುವ ನುಡಿಮುತ್ತುಗಳು, ಲೇಖನಗಳು ಓದುಗರನ್ನು ರೋಮಾಂಚನಗೊಳಿಸಿದವು; ಕೆರಳಿಸಿದವು. ಹುಂಬರಲ್ಲೂ ಹುರುಪನ್ನು ತುಂಬಿದವು. ತರುಣರನ್ನು ರಾಷ್ಟ್ರಕ್ಕಾಗಿ ಬಲಿದಾನ ಮಾಡಲೂ ಸಿದ್ಧಗೊಳಿಸಿದವು. ಸ್ವಾತಂತ್ರ್ಯ ಸಂದೇಶ ದೊಂದಿಗೇ ಸಾಹಿತ್ಯ, ಸಾಮಾಜಿಕ, ಸಾಂಸ್ಕೃತಿಕ ಜಾಗೃತಿಯನ್ನೂ ಪತ್ರಿಕೆ ನಡೆಸಿತು.

1928ರಲ್ಲಿ ಸುಲ್ತಾನ್‌ಪೇಟೆ ಗಣಪತಿ ಉತ್ಸವದ ಗಲಾಟೆಯನ್ನು ಪತ್ರಿಕೆ ಸಮರ್ಥವಾಗಿ ವರದಿಮಾಡಿತು. ಒಮ್ಮೆ ಬಿನ್ನಿ ಮಿಲ್ ಕೆಲಸಗಾರರ ಸಂಪು ನಡೆಯಿತು. ಪತ್ರಿಕೆ ಅವರ ಒಳಗು ಹೊರಗುಗಳನ್ನೆಲ್ಲ ತನಿಖೆಮಾಡಿ ವರದಿಮಾಡಿತು. ಸಾರ್ವಜನಿಕ ಸಮಸ್ಯೆ ಏನೇ ಬರಲಿ ಅದನ್ನು ಪರಾಮರ್ಶಿಸಿ ಸತ್ಯಾಸತ್ಯತೆಗಳನ್ನು ತೂಗಿಹೇಳುತ್ತಿತ್ತು. ಯಾವ ಭೀತಿಯೂ ಇಲ್ಲದೆ, ದಾಕ್ಷಿಣ್ಯಕ್ಕೂ ಒಳಗಾಗದೆ, ಪತ್ರಿಕೆ ಕನ್ನಡ ಇತಿಹಾಸದಲ್ಲೇ ಒಂದು ಸ್ವರ್ಣಾಧ್ಯಾಯವನ್ನು ಸೃಷ್ಟಿಸಿತು.

ಪತ್ರಿಕಾ ಹತೋಟಿ ಶಾಸನ ಜಾರಿಗೆ ಬಂದಾಗ ಅದನ್ನು ಪ್ರತಿಭಟಿಸಿ ಶರ್ಮರು ಅಗ್ರಲೇಖನವನ್ನು ಬರೆಯುವುದೇ ಇಲ್ಲ ಎಂದು ಪಣ ತೊಟ್ಟರು. ಅಗ್ರಲೇಖನದ ಸ್ಥಾನದಲ್ಲಿ "ಮೈಸೂರು ವೃತ್ತಪತ್ರಿಕೆಗಳ ಕರಾಳಶಾಸನವನ್ನು ಶಾಸನಕಡತದಿಂದ ತೊಡೆದುಹಾಕುವವರೆಗೂ ನಾವು ಪ್ರಧಾನ ಲೇಖನವನ್ನು ಬರೆಯುವುದೇ ಇಲ್ಲ— ಎಂಬುದು ನಮ್ಮ ಸತ್ಯಸಂಕಲ್ಪ" ಎಂಬ ಭೀಷ್ಮಪ್ರತಿಜ್ಞಾವಚನವನ್ನು ಮುದ್ರಿಸುತ್ತಿದ್ದರು. ಅದರ ಕೆಳಗೆ, ಸ್ವಾತಂತ್ರ್ಯ, ಪತ್ರಿಕಾಸ್ವಾತಂತ್ರ್ಯ, ಅನ್ಯಾಯಕ್ಕೆ ವಿರೋಧ ಇತ್ಯಾದಿಗಳ ಬಗ್ಗೆ ವಿಶ್ವದ ಮಹಾನುಭಾವರೆಲ್ಲ ಹೇಳಿದ ಉತ್ತಮ ಸೂಕ್ತಿಗಳನ್ನು ಆರಿಸಿ ಮುದ್ರಿಸ

ಲಾಗುತ್ತಿತ್ತು. ಅಗ್ರಲೇಖನ ಬೀರುತ್ತಿದ್ದ ಪರಿಣಾಮಕ್ಕೂ ಮೀರಿದ ಪರಿಣಾಮ ಈ ವಿಧಾನದಿಂದ ಆಯಿತು. ಪುಟ್ಟಪ್ಪನವರ 'ಪಾಂಚಜನ್ಯ' ಮುಂತಾದ ಉಗ್ರಕವನಗಳೂ, ದೇಶವಿದೇಶಗಳ ಸ್ವಾತಂತ್ರ್ಯಯೋಧರ ಚರಿತ್ರೆಗಳೂ ಅದರಲ್ಲಿ ಪ್ರಕಟವಾಗುತ್ತಿದ್ದವು. 'ವಿಶ್ವಕರ್ನಾಟಕ' ಹೀಗೆ ಜನಮಾನಸವನ್ನು ರಾಷ್ಟ್ರೀಯತೆಯಿಂದ ತುಂಬಿಬಿಟ್ಟಿತು.

ಇವೆಲ್ಲದರಿಂದ ಪತ್ರಿಕೆ ಆಳರಸರ ಕೆಂಗಣ್ಣಿಗೆ ಪಕ್ಕಾಯಿತು. ಮಹಾರಾಜರ ಸರ್ಕಾರ ಎಷ್ಟೇ ಸಹಿಸಿದರೂ ಬ್ರಿಟಿಷ್ ರೆಸಿಡೆಂಟ್‌ನ ಒತ್ತಾಯ ವಿಪರೀತವಾಗುತ್ತಿತ್ತು. ದಿನವೂ ಪತ್ರಿಕೆಯ ಲೇಖನಗಳ ಆಂಗ್ಲಾನುವಾದ ಮದರಾಸಿಗೆ ಹೋಗುತ್ತಿತ್ತು. ಅಲ್ಲಿ ಅದರ ತನಿಖೆ ಆದಮೇಲೆ ವೈಸ್‌ರಾಯರಿಗೆ ರವಾನೆ. ಆಂಗ್ಲರ ಕಪ್ಪುಪಟ್ಟಿಯಲ್ಲಿ ಸೇರಿದ ಮೈಸೂರಿನ ಪತ್ರಿಕೆ ಇದೊಂದೇ. ಜೊತೆಗೆ 'ಗಾಂಧೀ ಪತ್ರಿಕೆ' ಎಂಬ ಬಿರುದು ಬೇರೆ! ಎರಡು ಮೂರು ಬಾರಿ ಸರ್ಕಾರ ಪತ್ರಿಕೆಗೆ ದಂಡ ವಿಧಿಸಿತು. ಶರ್ಮರು ತಮ್ಮ ಮನೆಮಠ ಮಾರಿ ದಂಡ ತೆತ್ತರು; ಸಾಲಕ್ಕೆ ತುತ್ತಾದರು. ಸಂಸಾರದ ಕಷ್ಟನಷ್ಟ ಗಳನ್ನು ಲೆಕ್ಕಿಸದೆ ಪತ್ರಿಕೆಗಾಗಿ, ತನ್ಮೂಲಕ ರಾಷ್ಟ್ರಸೇವೆಗಾಗಿ ಹೆಣಗಿದರು. ಎಷ್ಟೋ ತಿಂಗಳು, ತಿಂಗಳಿಗೆ ಹತ್ತೇ ರೂಪಾಯಿ ಅವರ ವರಮಾನ. ನೌಕರರಿಗೆ ಸಂಬಳ ಕೊಡಲು ಹಣ ಇಲ್ಲದೆ ಸಾಲ ಮಾಡಿದ್ದುಂಟು. 1934ರಲ್ಲಿ ಒಮ್ಮೆ ಸರ್ಕಾರ ಪತ್ರಿಕೆಗೆ ಇದ್ದ ಅಂಚೆ ರಿಯಾಯಿತಿಯನ್ನು ರದ್ದುಮಾಡಿತು. ಅಂಚೆವೆಚ್ಚ ಪತ್ರಿಕೆಯ ಬೆಲೆಗಿಂತ ಹೆಚ್ಚಾಯಿತು. ಹದಿಮೂರು ವಾರ ಪತ್ರಿಕೆ ಅಂಚೆಗೆ ಹೋಗಲೇ ಇಲ್ಲಿ. ಮುದ್ದಾಂ ವಿತರಣೆ ಎಷ್ಟೋ ಅಷ್ಟೇ. 16-6-1934ರಿಂದ ವಿಶ್ವಕರ್ನಾಟಕ ದಿನಪತ್ರಿಕೆ ಆಯಿತು. ಆಗಲೂ ಅದರದು ವೀರಪಂಥವೇ, ಗಾಂಧೀ ಸಂದೇಶದ ಅನುಸರಣೆಯೇ.

1942ರಲ್ಲಿ ಸಿದ್ದವನಹಳ್ಳಿ ಕೃಷ್ಣಶರ್ಮರು ಜೊತೆಗೆ ಬಂದು ಸೇರಿದರು. ಆಗ ತಿ. ತಾ. ಶರ್ಮರಿಗೆ ಕಾಯಿಲೆ. ಆಮೇಲೆ ಇಬ್ಬರ ಜೋಡಿ ಅನಿಲಾನಲಸಂಯೋಗ ವಾಯಿತು. ಪತ್ರಿಕೆ ಮತ್ತೂ ವಿಜೃಂಭಣೆಯಿಂದ ಮುಂದುವರಿಯಿತು. ಶರ್ಮರ ಮನೆ ಸ್ವಾತಂತ್ರ್ಯ ಹೋರಾಟಗಾರರ ಸದನವಾಗಿತ್ತು. ಪೋಲೀಸರ ಕಣ್ಣುಮರೆಸಿ ಬಂದ ಸತ್ಯಾಗ್ರಹಿಗಳು ಅಲ್ಲಿರುತ್ತಿದ್ದರು. ಆ ಪೈಕಿ ಸರದಾರ ವೆಂಕಟರಾಮಯ್ಯ ಒಬ್ಬರು. ಸಿದ್ದವನಹಳ್ಳಿಯವರೂ ಹೈದರಾಬಾದಿನಿಂದ ಗಡೀಪಾರಾಗಿ ಬಂದಿದ್ದರು. ಶರ್ಮರ ಮನೆ ಸುತ್ತ ಪೋಲೀಸು ಪಹರೆ, ಗೂಢಚಾರರ ಜಾಲ. ಇದರ ನಡುವೆ ರಾತ್ರಿ ಯೆಲ್ಲ ಮನೆಯಲ್ಲಿ ಹೋರಾಟದ ಪ್ರಕಟನಪತ್ರ, ಭಿತ್ತಿಪತ್ರ, ಇತರ ಸಾಹಿತ್ಯಸೃಷ್ಟಿ, ಕಲ್ಲಚ್ಚು ಕೆಲಸ. ಬೆಳಗ್ಗೆ ಊರಿಗೆ ಪಯಣ ಹೊರಟವರಂತೆ ವೇಷಧಾರಿಗಳು ಹೊರಡು ವರು ಗಂಟುಮೂಟೆ ಹೊತ್ತು, ಗಂಟಿನಲ್ಲಿ ಈ ಸಾಹಿತ್ಯಸಲಕರಣೆಗಳೇ.

1942ರ ಸಂದರ್ಭ. ಒಂದು ರಾತ್ರಿ ಶರ್ಮಾಜಿ ಬಂಧಿತರಾದರು. ಕೆಲ ತಿಂಗಳ ಜೈಲುವಾಸ. ಮುಂದೆ 1947ರ ಮೈಸೂರು ಸತ್ಯಾಗ್ರಹದಲ್ಲೂ ಬಂಧನ. 1944ರಲ್ಲಿ ಸಿದ್ದವನಹಳ್ಳಿ ಕೃಷ್ಣಶರ್ಮರು ಬರೆದ ಲೇಖನಕ್ಕೆ ಕೆರಳಿದ ಸರ್ಕಾರ ಅವರನ್ನು ಬಂಧಿಸಿತು.

ಪತ್ರಿಕೆಯನ್ನು ನಿಲ್ಲಿಸಿ ಮುಟ್ಟುಗೋಲು ಹಾಕಿಕೊಂಡಿತು. 1945ರಲ್ಲಿ ಮತ್ತೆ ಪತ್ರಿಕೆ ಹೊರಟಾಗ ತಿ. ತಾ. ಶರ್ಮರ ಅಳಿಯ ಕೆ. ಶಾಮಯ್ಯಂಗಾರ್ ಸಂಪಾದಕರಾದರು. ಆಗಸ್ಟ್ 1946ರಲ್ಲಿ ತಿ. ತಾ. ಶರ್ಮರ ದಿವಾನ್ ಮಾಧವರಾಯರಿಗೆ ದೊರೆತ ಸೇವಾ ವಿಸ್ತರಣೆಯನ್ನು ಟೀಕಿಸಿ ನಾಲ್ಕು ಲೇಖನ ಬರೆದರು 'ಮಾಡಿದ್ದುಣ್ಣೋ ಮಹಾರಾಯ' ಎಂಬ ಶೀರ್ಷಿಕೆಯಲ್ಲಿ. ಸರ್ಕಾರ ವಿವರಣೆ ಕೇಳಿತು. ಅವರು ಕೊಟ್ಟ ವಿವರಣೆಗೆ ಸರ್ಕಾರದ ಉತ್ತರ, ಪತ್ರಿಕೆಯ ಮುಟ್ಟುಗೋಲು ! ಮನೆಗೆ ಪೋಲೀಸರು ಬಂದು ಸಿಕ್ಕಿದ ಪುಸ್ತಕ ಪತ್ರಿಕೆಗಳನ್ನೆಲ್ಲ ಹೊತ್ತು ನಡೆದರು. ಆದರೆ ಆ ವೇಳೆಗಾಗಲೇ ಲೇಖನವನ್ನು ಒಳಗೊಂಡ ಪತ್ರಿಕೆ ಸಾವಿರಾರು ಸಂಖ್ಯೆಯಲ್ಲಿ ಜನರಲ್ಲಿ ವಿತರಣೆ ಆಗಿಹೋಗಿತ್ತು. ಮುಂದೆ 'ವಿಶ್ವಕರ್ನಾಟಕ' ಕೈಬದಲು ಆದರ ಆಯಿತು, ಹಾದಿಯೂ ಬದಲಾಯಿತು.

ಹೀಗೆ ತಿರುಮಲೆ ತಾತಾಚಾರ್ಯ ಶರ್ಮರು ಸ್ವಾತಂತ್ರ್ಯ ಹೋರಾಟದಲ್ಲಿ ದೇಶವನ್ನು ಜಾಗೃತಗೊಳಿಸುವ ಮಹತ್ಕಾರ್ಯವನ್ನು ಅತ್ಯಂತ ಉನ್ನತ ರೀತಿಯಲ್ಲಿ ಮಾಡಿದರು. ಅವರು ಪತ್ರಿಕಾವೃತ್ತಿಯನ್ನು ವೀರವೃತ್ತಿಯನ್ನಾಗಿಸಿದರು ; ಸ್ವಾತಂತ್ರ್ಯ ಹೋರಾಟಕ್ಕೆ ಮುಡಿಪಾಗಿಟ್ಟರು. ಪತ್ರಿಕೆಯ ಹೋರಾಟವೇ ಶರ್ಮರ ಸ್ವಾತಂತ್ರ್ಯ ಹೋರಾಟ.

(ಶರ್ಮರ ಬಹುಮುಖ ವ್ಯಕ್ತಿತ್ವದ ಒಂದು ಗಣ್ಯಮುಖವಾದ ಸ್ವಾತಂತ್ರ್ಯ ಹೋರಾಟದ ಚಿತ್ರವನ್ನು ಮಾತ್ರ ಇಲ್ಲಿ ನೀಡಿದೆ. 20-10-1973ರಲ್ಲಿ ಅವರು ದಿವಂಗತರಾದರು.—ಸಂ॥)

**ನೀಲತ್ತಹಳ್ಳಿ ಕಸ್ತೂರಿ**

ಮೈ.ಜಿಂ. 28

## ಡಿ॥ ಸಿದ್ದವನಹಳ್ಳಿ ಕೃಷ್ಣಶರ್ಮ
(1904-1973)

1920ರಲ್ಲಿ ಟಿಳಕರು ತೀರಿಕೊಂಡಾಗ ಮೈಸೂರಲ್ಲಿ ನಡೆದ ಮೆರವಣಿಗೆಯಲ್ಲಿ ಪಾಲುಗೊಂಡಾಗಿನಿಂದ ಶರ್ಮಾಜಿಯವರ ಸ್ವಾತಂತ್ರ್ಯ ಹೋರಾಟ ಮೊದಲಾಯಿತು. ಕಾಲೇಜಿನಲ್ಲಿ ಅವರು ತುಂಬಿಕೊಂಡ ಸ್ವಾತಂತ್ರ್ಯಭಾವನೆ, ದೇಶಪ್ರೇಮ ಮುಂದೆ ಬೆಳಗಾಂ ಕಾಂಗ್ರೆಸ್ಸಿನಲ್ಲಿ ಹೊಮ್ಮಿ ಬೆಳೆಯಿತು. ಅಲ್ಲಿ ಅನೇಕ ಮಹಾರಥರ ದರ್ಶನವಾಯಿತು. ಕರ್ನಾಟಕದ ಹಿರಿಯರು ಕೌಜಲಗಿ ಶ್ರೀನಿವಾಸರಾಯರು, ದೇಶಪಾಂಡೆ ಗಂಗಾಧರರಾಯರು, ಕೌಜಲಗಿ ಹಣಮಂತರಾಯರು, ಡಾ॥ ಹರ್ಡೀಕರರು



ಇವರೆಲ್ಲರ ಸಂಪರ್ಕ ; ಬಿಡದೆ ಓದುತ್ತಿದ್ದ 'ಯಂಗ್ ಇಂಡಿಯಾ' ಪತ್ರಿಕೆಯ ಸಂದೇಶಗಳು ; ಇದೆಲ್ಲವೂ ಅಂದಿನ ಯುವಜನರನ್ನು ದೇಶದ ಕೆಲಸಕ್ಕೆ, ಹೋರಾಟದ ಕರೆಗೆ ಸೆಳೆದ ಹಾಗೆಯೇ ಶರ್ಮರನ್ನೂ ಸೆಳೆಯಿತು. ಇದೇ ಸಂಸ್ಕಾರ ಮುಂದೆ ಅವರನ್ನು ವರ್ಧಾಕ್ಕೂ ಕರೆದೊಯ್ದಿತು.

1920ರಿಂದ 42ರ ವರೆಗೂ ನಾಡಿನಲ್ಲಿ ಏನೇ ಸಾರ್ವಜನಿಕ ಚಟುವಟಿಕೆಗಳು ಆಗಲಿ ಎಲ್ಲಕ್ಕೂ ಹಿನ್ನೆಲೆ ಸ್ವಾತಂತ್ರ್ಯದ ಹಂಬಲವೇ. ಸ್ವದೇಶಿ ಚಳವಳಿ, ಹೋಂ ರೂಲ್ ಲೀಗ್, ರಾಷ್ಟ್ರೀಯ ಶಿಕ್ಷಣ, ಕೊನೆಗೆ ಪುರಾಣ, ಪುಣ್ಯಕಥೆ, ಗಣೇಶ ಉತ್ಸವ, ರಾಮನವಮಿ ಇವು ಎಲ್ಲಕ್ಕೂ ಹಿನ್ನೆಲೆ ಸ್ವರಾಜ್ಯದಾಹವೇ. ಕರ್ನಾಟಕದಲ್ಲೂ ಹಾಗೆಯೇ, ಕನ್ನಡ ಚಳವಳಿ ಏನು ನಡೆಯಿತೋ ಅದೂ ಸ್ವಾತಂತ್ರ್ಯ ಸಂಪಾದನೆಯ ಮಾರ್ಗವೇ ಆಯಿತು. ದೇಶೀಯ ವಿದ್ಯಾಶಾಲೆಗಳು, ಗ್ರಾಮಕೈಗಾರಿಕೆಗಳು, ಸಮಾಜಸೇವೆ ಎಲ್ಲವೂ ಹಾಗೆಯೇ. ಶರ್ಮಾಜಿ ಎಲ್ಲದರಲ್ಲೂ ಭಾಗವಹಿಸಿದರು ; ಎಲ್ಲೆಲ್ಲೂ ಸ್ವರಾಜ್ಯದ ಸಂದೇಶವನ್ನು ಸಾರಿದರು.

ತಾರಾನಾಥರ ಪ್ರೇಮಾಶ್ರಮವಾಸ, ಧಾರವಾಡದ ಗೆಳೆಯರ ಗುಂಪಿನ ಸಹವಾಸ ಎಲ್ಲ ಆಗುತ್ತಿದ್ದಂತೆ ವಿವಾಹದ ನಿಮಿತ್ತವಾಗಿ ಶರ್ಮರಿಗೆ ಹೈದರಾಬಾದಿನ ನಂಟು ಬೆಳೆಯಿತು. ಅಲ್ಲಿಗೆ ಹೋದರು. ಆಗ ಅಲ್ಲಿನ ಸ್ಥಿತಿಗತಿ ತುಂಬಾ ಶೋಚನೀಯ; ಸಾರ್ವಜನಿಕ ಪ್ರಜ್ಞೆ, ಸಾಮಾಜಕಾರ್ಯ ಏನೂ ಇರಲಿಲ್ಲ. ನವಾಬರ ಹಿಡಿತದಲ್ಲಿ, ಕೋಮುವಾದಿಗಳ ಸೆಳೆತದಲ್ಲಿ ಸಿಕ್ಕಿಬಿದ್ದಿದ್ದ ನಿಜಾಮರು ಯಾವುದೇ ಸಾಮಾಜಿಕ, ರಾಜಕೀಯ ಕಾರ್ಯವನ್ನೂ ಸಹಿಸುತ್ತಿರಲಿಲ್ಲ. ಈ ಉಸಿರು ಕಟ್ಟಿಸುವಂಥ ಸ್ಥಿತಿ ಶರ್ಮರಿಗೆ ಹಿಡಿಸೀತೇ ? ಅಲ್ಲಿ ತಮ್ಮ ಗರಿಗೆದರಿದರು. ಆ ಮೊದಲೇ ಅವರ ದೂರದ ಬಂಧುಗಳು—ಕೋಲಾರದ ತಾತಾಚಾರ್ಯ ಎಂಬುವರು ಸಿಕಂದರಾಬಾದಿನಲ್ಲಿ ರಾಜಕೀಯ, ಸಾಮಾಜಿಕ ಜಾಗೃತಿಗಾಗಿ ಕೆಲಸ ಆರಂಭಿಸಿದ್ದರು. 'ಡೆಕ್ಕನ್ ಕ್ರಾನಿಕಲ್' ಪತ್ರಿಕೆ ಆರಂಭವಾಗಿತ್ತು. ಸಿಕಂದರಾಬಾದು ನಿಜಾಮರ ಆಡಳಿತದಲ್ಲಿರಲಿಲ್ಲ. ಅದು ಬ್ರಿಟಿಷರ ಪಾಳೆಯಪಟ್ಟು. ಅಲ್ಲಿ ಅವರ ನೇರ ಆಡಳಿತ. ಅಂತೆಯೇ ಅಲ್ಲಿ ನಿಜಾಮರ ಕೈವಾಡ ಕಡಿಮೆ. ಶರ್ಮರೂ ತಾತಾಚಾರ್ಯರೊಂದಿಗೆ ಕೈಗೂಡಿಸಿದರು. ಸಂಘಟನೆ, ಪ್ರಚಾರ ಎಲ್ಲ ಪ್ರಾರಂಭ. ಹೈದರಾಬಾದಿನ ರೆಸಿಡೆನ್ಸಿಯಲ್ಲಿನ ಶಾಲೆಯೊಂದರಲ್ಲಿ ಶರ್ಮಾಜಿ ಮಾಸ್ತರು. ಅದು ನಿಜಾಮರ ಆಳ್ವಿಕೆಗೆ ಹೊರತಾಗಿತ್ತು. ಅಂತೆಯೇ ಶರ್ಮರ ಚಟುವಟಿಕೆಗಳಿಂದ ನಿಜಾಂ ಸರ್ಕಾರಕ್ಕೆ ಮೈಪರಚಿಕೊಳ್ಳುವಂತಾದರೂ, ಏನೂ ನೇರಕ್ರಮ ಸಾಧ್ಯವಾಗಲಿಲ್ಲ.

ಶರ್ಮರು ಯುವಜನರ ಸೂಜಿಗಲ್ಲು. ಅವರ ಸುತ್ತ ಅನೇಕರು ಸೇರಿದರು. ರಾಘವೇಂದ್ರ ಮನಸಬದಾರ್, ಕೊಪ್ಪಳದ ಶಾಸ್ತ್ರಿ ಸೋದರರು, ರಾ. ಗು. ಜೋಶಿ, ಔರಾದಿ, ರಾಮಕೃಷ್ಣ ಧೂತ್, ಬುರಗಲು ರಾಮಕೃಷ್ಣರಾವ್, ಎಂ. ನರಸಿಂಗರಾವ್, ಹೀಗೆ. ಜೊತೆಗೆ ಹಿರಿಯರು, ಕಾಶೀನಾಥ ವೈದ್ಯ, ಗೋವಿಂದರಾವ್ ನಾನಲ್, ಜನಾರ್ದನರಾವ್ ದೇಸಾಯಿ, ಡಾ॥ ಮೇಲುಕೋಟೆ, ಜಿ. ರಾಮಾಚಾರ್, ರವಿನಾರಾಯಣ ರೆಡ್ಡಿ, ದಾಮೋದರ ಮುಂದಡಾ, ಸ್ವಾಮಿ ರಮಾನಂದ ತೀರ್ಥ, ಹೇಡಾ ಮುಂತಾಗಿ ಎಲ್ಲರೂ ಜೊತೆಗೂಡಿದರು. ಮಹಾರಾಷ್ಟ್ರ ಮಂಡಲಿ ಒತ್ತಟ್ಟಿಗೆ; ಆಂಧ್ರ ಮಹಾಸಭೆ ಒಂದು ಕಡೆ; ಮೂರನೆಯದು ಕನ್ನಡ ಸಾಹಿತ್ಯ ಮಂದಿರ. ಮೂರೂ ಭಾಷಿಕರ ಸಂಘಟನೆ. ತೋರಿಕೆಗೆ ಸಾಹಿತ್ಯ, ಕಲೆ, ಭಾಷಾಭಿವೃದ್ಧಿ ಉದ್ದೇಶವಾದರೂ ಒಳಗೆ ಒಂದೇ ಗುರಿ—ಸಾಮಾಜಿಕ, ರಾಜಕೀಯ ಪ್ರಜ್ಞೆಯನ್ನು ಹಬ್ಬಿಸುವುದು; ನಿಜಾಂಷಾಹಿಯ ದಬ್ಬಾಳಿಕೆಗೆ ವಿರೋಧ; ಸ್ವಾತಂತ್ರ್ಯ ಆಂದೋಲನಕ್ಕೆ ಬೆಂಬಲ—ಹೀಗೆ ನಡೆಯಿತು. ಶರ್ಮರ ಮನೆಯಲ್ಲಿ ಎಷ್ಟೋ ಸಭೆ, ಚರ್ಚೆ, ನಿರ್ಣಯ, ಪತ್ರ ವ್ಯವಹಾರ, ಮನವಿ. ಎಲ್ಲದರ ಒಕ್ಕಣೆ ಅವರದೇ. ಎಲ್ಲೂ ಅವರ ಹೆಸರಿಲ್ಲ; ಆದರೆ ಎಲ್ಲದರ ಹಿಂದೆಯೂ ಅವರದೇ ಕೈವಾಡ. ಮನಸಬದಾರರ ನಾಟಕವಾಗಲಿ, ಸಾಹಿತ್ಯ ಮಂದಿರದ ನಾಡಹಬ್ಬವಾಗಲಿ, ಕೃಷ್ಣದೇವರಾಯನ ಸಂಸ್ಮರಣೆಯಾಗಲೀ, 'ಡೆಕ್ಕನ್ ಕ್ರಾನಿಕಲ್' ಬರಹವಾಗಲಿ, ಹರಿಜನ ಕಾರ್ಯವಾಗಲೀ, ಸಮಾಜ ಸುಧಾರಣೆ, ನೃಪತುಂಗ ಶಾಲೆ, ಏನೇ ಆಗಲಿ. ಎಲ್ಲೆಡೆ ಕೃಷ್ಣ ಶರ್ಮರೇ. ಅವರ ಅವ್ಯಕ್ತ ಹಸ್ತದ ಪ್ರಭಾವ ಎಲ್ಲೆಲ್ಲೂ ಸುಸ್ಪಷ್ಟವಾಗಿತ್ತು.

1938ರಲ್ಲಿ ಹೈದರಾಬಾದು ತಂತಿ ಕಚೇರಿಯ ಮುಂದೆ ಮೊದಲ ಸತ್ಯಾಗ್ರಹ ಆಯಿತು. ಮೊದಲ ತಂಡದಲ್ಲಿ ಶರ್ಮರು ಇರಲಿಲ್ಲ. ಆದರೆ ಸಂಘಟನೆಯಲ್ಲಿ ಅವರದೂ ಪಾತ್ರ. ಮುಂದೆ ಮೋತೀಲಾಲ್ ನೆಹರು ನಿಧನದ ಮೊದಲ ವಾರ್ಷಿಕ ಬಂತು. ಭಾರಿ ಮೆರವಣಿಗೆ, ಸಭೆ ಏರ್ಪಾಡಾಯಿತು. ಸಭೆಗೆ ಪದ್ಮಜಾ ನಾಯುಡು ಅಧ್ಯಕ್ಷರು. ದಾಮೋದರದಾಸ ಮುಂದಡಾ, ಸಿದ್ದವನಹಳ್ಳಿ ಕೃಷ್ಣಶರ್ಮ ಅಲ್ಲಿ ಭಾಷಣಕಾರರು. ಸಭೆ ನಡೆದ ಕೆಲವೇ ನಿಮಿಷ ಮುನ್ನ ಸರ್ಕಾರ ಸಭೆಯನ್ನು ಪ್ರತಿಬಂಧಿಸಿತು. ಪೋಲೀಸು ಪಡೆ, ಸೈನ್ಯ ಮೈದಾನವನ್ನು ಸುತ್ತುಗಟ್ಟಿ ನಿಂತಿತ್ತು. ಪದ್ಮಜಾ ಹೆದರಲಿಲ್ಲ. "ನಡೆಯಿರಿ, ಬರುತ್ತೇನೆ; ಏನು ಮಾಡುವರೋ ನೋಡೋಣ" ಎಂದು ಓಡಿಬಂದರು. ಸಭೆ ನಡೆದೇ ಹೋಯಿತು. ಜನ ಸಾವಿರಗಟ್ಟಲೆ ಸೇರಿದ್ದರು. ಸರ್ಕಾರಕ್ಕೆ ತುಂಬ ಅವಮಾನ, ಕಸಿವಿಸಿ, ಆಕ್ರೋಶ ಆಯಿತು. ಅಂದೇ ರಾತ್ರಿ ಸದ್ದುಗದ್ದಲವಿಲ್ಲದೆ ರಾತ್ರಿಯೇ ಶರ್ಮರನ್ನು ದೂರದ ಸಣ್ಣ ನಿಲ್ದಾಣಕ್ಕೆ ಒಯ್ದು ಅಲ್ಲಿ ವಿಶೇಷವಾಗಿ ರೈಲನ್ನು ನಿಲ್ಲಿಸಿ ಹತ್ತಿಸಿ, ಸಂಸ್ಥಾನದಿಂದ ಗಡೀಪಾರು ಮಾಡಿದರು.

ಮುಂದೆ ಶರ್ಮರು ನಾಲ್ಕೈದು ವರ್ಷ ಹೈದರಾಬಾದಿಗೆ ಹೋಗಲಾಗಲಿಲ್ಲ.

ಮಿರ್ಜಾ ಸಾಹೇಬರು ದಿವಾನರಾಗಿ ಹೋದಮೇಲೆಯೇ ಗಡೀಪಾರು ರದ್ದಾಯಿತು. ಆದರೆ ಈ ನಡುವೆ ಶರ್ಮರು ವರ್ಧಾಗೆ ಹೋದರು ; ಗಾಂಧೀಜಿ, ಸರ್ದಾರ್ ಪಟೇಲ ರೊಡನೆ ಸಂಪರ್ಕ ಬೆಳೆಸಿದರು; ಹೈದರಾಬಾದಿನ ವಿದ್ಯಮಾನಗಳನ್ನು ವಿವರಿಸಿದರು. 'ದೇಶೀಯ ಸಂಸ್ಥಾನಗಳಲ್ಲಿ ಕಾಂಗ್ರೆಸ್ಸು ಕೈಹಾಕಬಾರದು' ಎಂಬ ನೀತಿ ಇದ್ದರೂ, ಹೈದರಾಬಾದಿನಲ್ಲಿ ಸಂಸ್ಥಾನ ಕಾಂಗ್ರೆಸ್ ಸ್ಥಾಪಿಸಲು ಒಪ್ಪಿಗೆ, ಆಶೀರ್ವಾದ ಪಡೆದರು. ಹಾಗೆಯೇ ಕಾಂಗ್ರೆಸ್ ಸ್ಥಾಪನೆ ಆಯಿತು. ಮುಂದೆ ಅನೇಕ ಹೋರಾಟ ನಡೆಯಿತು. ಕೊಟ್ಟಕೊನೆಗೆ ಕಾಸಿಂ ರಜ್ವಿಯ ಉಚ್ಚಾಟನೆಯಾಗಿ ಹೈದರಾಬಾದು ಭಾರತದಲ್ಲಿ ಪೂರ್ತಿ ವಿಲೀನವಾಗುವವರೆಗೂ ಶರ್ಮರು ಅಲ್ಲಿನ ಸಂಪರ್ಕ ಇಟ್ಟುಕೊಂಡೇ ಇದ್ದರು. ಅವರ ಆಪ್ತರು ಗುರುಗಂಟಿ ರಾಮಾಚಾರ್, ಬುರಗಲು ರಾಮಕೃಷ್ಣರಾವ್, ತಮಗೆ ಏನೇ ಸಮಸ್ಯೆ ಬರಲಿ, ಏನೇ ತೊಡಕು ಬರಲಿ, ಶರ್ಮರನ್ನು ಕರೆಸುವರು ; ಇಲ್ಲ ಮಾತಾಡು ವರು ; ಬಂದು ನೋಡುವರು. ಹೀಗೆ ನಡೆದಿತ್ತು.

ಈ ನಡುವೆ ಶರ್ಮರ ಪ್ರಖರ ಲೇಖನಿ ಸಾಹಿತ್ಯದ ಕಿಡಿಗಳನ್ನು ಚಿಮ್ಮಿಸುತ್ತಿತ್ತು. 'ಪರ್ಣಕುಟಿ', 'ವರ್ಧಾಯಾತ್ರೆ', 'ದೀಪಮಾಲೆ', ಹಾಗೂ ಗಾಂಧೀ ಸಾಹಿತ್ಯದ ಅನುವಾದ ಎಲ್ಲವೂ ರಾಷ್ಟ್ರೀಯ ಭಾವನೆಯನ್ನು, ಗಾಂಧೀ ವಿಚಾರವನ್ನು, ಸ್ವರಾಜ್ಯ ಸಂದೇಶವನ್ನು ಕರ್ನಾಟಕದಲ್ಲೆಲ್ಲ ಪ್ರಸರಿಸಿದವು. ಅಂದಿನ ಯುವಜನ ಅದನ್ನು ಓದಿ ಪುಳಕಗೊಂಡರು. ಆ ವಿಶಿಷ್ಟ ಶೈಲಿಗೆ ಮಾರುಹೋದರು. ಅವರ ಭಾಷಣಗಳನ್ನು ಕೇಳಿ ತಮ್ಮನ್ನು ತಾವೇ ಮರೆತರು. ನಾಡಿನ ಕಾರ್ಯಕ್ಕೆ ನುಗ್ಗಿದರು.

ತಿ. ತಾ. ಶರ್ಮರು ನಡೆಸುತ್ತಿದ್ದ 'ವಿಶ್ವಕರ್ನಾಟಕ' ಪತ್ರಿಕೆಗೆ ಸ್ವಲ್ಪ ತೊಂದರೆ ಬಂದಾಗ ಶರ್ಮಾಜಿ ಇಲ್ಲಿಗೆ ಬಂದು ಅವರ ನೆರವಿಗೆ ನಿಂತರು. 1942ರ 'ಚಲೇ ಜಾವ್' ಚಳವಳಿಯ ಅಗ್ನಿಕುಂಡ! ಆಗ ಶರ್ಮಾಜಿ ಆ ಪತ್ರಿಕೆಯ ಮೂಲಕ ಹೋರಾಟಕ್ಕೆ ಪುಟಕೊಟ್ಟರು. ಅವರ ಲೇಖನಿ ವಿಜೃಂಭಿಸಿತು. ಸಾವಿರಗಟ್ಟಲೆ ಜನ 'ವಿಶ್ವಕರ್ನಾಟಕ'ದ ಈ ಭೀಷ್ಮ–ದ್ರೋಣರ ಲೇಖನಗಳ ವಿದ್ಯುನ್ಮಾಲೆಯಿಂದ ಪ್ರಭಾವಿತರಾದರು; ಸಾಹಿತ್ಯದೀಕ್ಷೆಯನ್ನು ಕೈಗೊಂಡರು.

ಒಮ್ಮೆ 'ವಿಶ್ವಕರ್ನಾಟಕ'ದಲ್ಲಿ ಕೃಷ್ಣ ಶರ್ಮರು ವೈಸ್‌ರಾಯ್‌ಗೆ ಬಹಿರಂಗಪತ್ರ ವೊಂದನ್ನು ಬರೆದು ಉಗ್ರವಾಗಿ ಟೀಕಿಸಿದರು. ಜೊತೆಗೆ ಗಾಂಧೀಜಿಯವರ 'ಕ್ವಿಟ್ ಇಂಡಿಯಾ' ಭಾಷಣವನ್ನು 'ಇನ್ನು ಸಾಕು' ಎಂದು ಅನುವಾದಿಸಿದರು. ಬೆಂಕಿಯ ಕಿಡಿಗಳವು! ಸರ್ಕಾರಕ್ಕೆ ಅವುಗಳ ಬಿಸಿ ತಾಳಲಾಗಲಿಲ್ಲ. ಶರ್ಮರ ಬಂಧನವಾಯಿತು; ಪುಸ್ತಕ ಜಪ್ತಾಯಿತು. ಕೆಲದಿನ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ, ಕೆಲದಿನ ಹಾಸನದಲ್ಲಿ ಇಡಲಾಯಿತು. ಕ್ಷಿಪ್ರದಲ್ಲಿಯೇ ಬಿಡುಗಡೆಯಾಗಿ ಬಂದ ಶರ್ಮರು ಮತ್ತೆ ಲೇಖನದ ಅಸ್ತ್ರವನ್ನು, ಭಾಷಣದ ಬಾಣಗಳನ್ನು ಪ್ರಯೋಗಿಸಲಾರಂಭಿಸಿದರು.

1947ರಲ್ಲೂ ಅವರು ಬಂಧನಕ್ಕೊಳಗಾದರು. ಸಿದ್ದವನಹಳ್ಳಿ ಕೃಷ್ಣ ಶರ್ಮರು

ತಾವೇ ಜೈಲಿಗೆ ಹೋದುದು, ಹೋರಾಡಿದ್ದು ಹೆಚ್ಚಲ್ಲವಾದರೂ ಎಲ್ಲ ಜನರನ್ನೂ ಜಾಗೃತಗೊಳಿಸಿದರು. ಹುಚ್ಚುಹೊಳೆಯಂತೆ ಹರಿಯುತ್ತಿದ್ದ ಯುವಜನ ಶಕ್ತಿಯನ್ನು ಸಂಘಟಿಸಿ, ರಾಷ್ಟ್ರಸೇವೆಯ ಕಾರ್ಯಕ್ಕೆ ತೊಡಗಿಸಿ, ಸೇವಾದೀಕ್ಷೆ ಇತ್ತು, ರಾಷ್ಟ್ರರಥಕ್ಕೆ ಹೂಡುವುದರಲ್ಲಿ ಶರ್ಮರ ಪ್ರಭಾವ, ಕಾರ್ಯ ಬಹುದೊಡ್ಡದು. ಪತ್ರಿಕೆ, ಪುಸ್ತಕ, ಭಾಷಣ, ಸಂಭಾಷಣೆ, ಸಂಘಟನೆ ಎಲ್ಲದರ ಮೂಲಕ ಜನಸಂಘಟನೆಯನ್ನು, ಜಾಗೃತಿಯನ್ನು, ಸ್ವಾತಂತ್ರ್ಯ ಆಂದೋಲನವನ್ನು ಸಾಧಿಸಿದರು. ತಾವು ನಾಯಕರಾಗಲಿಲ್ಲ; ನಾಯಕತ್ವವನ್ನು ಗುರುತಿಸಿ ಬೆಳೆಸಲು ಹೆಣಗಿದರು.

ಹೈದರಾಬಾದು–ಮೈಸೂರು ಎರಡೂ ಕಡೆ ಸ್ವಾತಂತ್ರ್ಯ ಹೋರಾಟ ಕಾರ್ಯದಲ್ಲಿ ಭಾಗವಹಿಸಿದ ಕೀರ್ತಿ, ವೈಶಿಷ್ಟ್ಯ ಸಿದ್ದವನಹಳ್ಳಿ ಕೃಷ್ಣ ಶರ್ಮಾಜಿಯವರದು. (14–10–1973ರಂದು ಅವರು ದಿವಂಗತರಾದರು.—ಸಂ||).

**ನೀಲತ್ತಹಳ್ಳಿ ಕಸ್ತೂರಿ**
(ಗಾಂಧೀ ಸಾಹಿತ್ಯ ಸಂಘ, ಮಲ್ಲೇಶ್ವರಂ, ಬೆಂಗಳೂರು–3)

ಮೈ.ಬೆಂ. 29

## ಡಾ|| ಪ್ರೊ. ಕೆ. ಸಂಪದ್ಗಿರಿರಾವ್
(1897–1973)



ಉತ್ತಮ ರಾಷ್ಟ್ರಸೇವಕ, ಶ್ರೇಷ್ಠ ವಾಗ್ಮಿ, ಸಮರ್ಥ ಲೇಖಕ ಹಾಗೂ ಶಿಕ್ಷಕ, ಜನಾನುರಾಗಿ ಕೋಲಾರದ ಸಂಪದ್ಗಿರಿರಾಯರು ತಾ|| 4–4–1897 ರಂದು ತಿರುವಣ್ಣಾಮಲೆಯ ಸಮೀಪದಲ್ಲಿ ಇರುವ ಪೋಳೂರಿನಲ್ಲಿ ಜನಿಸಿದರು. 1918ರಲ್ಲಿ ಮದ್ರಾಸಿನ ಕ್ರಿಶ್ಚಿಯನ್ ಕಾಲೇಜ್‌ನಲ್ಲಿ ಬಿ.ಎ. (ಆನರ್ಸ್) ಪದವಿಪಡೆದರು; ಎರಡು ವರ್ಷಗಳ ಬಳಿಕ ಎಂ.ಎ. ಪದವಿಪಡೆದರು.

ಚಿಕ್ಕಂದಿನಿಂದಲೂ ರಾಯರಿಗೆ ದೇಶ ಮತ್ತು ಸಮಾಜಸೇವೆಗಳ ಕಡೆಗೆ ಒಲವು ಬಹಳ. ಕಾಲೇಜಿನಲ್ಲಿ ಓದುತ್ತಿದ್ದಾಗ ಡಾ|| ಅನಿ ಬೆಸೆಂಟ್‌ರವರ 'ಹೋಂ ರೂಲ್' ಚಳವಳಿಯಲ್ಲಿ ಆಸಕ್ತಿ ವಹಿಸಿದ್ದರು. 1916ರಲ್ಲಿ ಗಾಂಧೀಜಿ ದಕ್ಷಿಣ ಆಫ್ರಿಕದ ನಿಧಿ ಕೂಡಿಸಲು ಮದ್ರಾಸಿಗೆ ಬಂದಿದ್ದಾಗ ಸಂಪದ್ಗಿರಿರಾಯರು ಅವರ ಪ್ರಭಾವಕ್ಕೆ ಸಿಲುಕಿದರು; ಮನೆಮನೆಗೂ

ತೆರಳಿ ನಿಧಿ ಸಂಗ್ರಹಿಸಿಕೊಟ್ಟರು. ಅಂದಿನಿಂದಲೇ ಅವರು ಗಾಂಧೀಜಿಯವರ ಉಪದೇಶಗಳನ್ನು ನಿಷ್ಠೆಯಿಂದ ಆಚರಣೆಯಲ್ಲಿ ತರಬೇಕೆಂದು ನಿಶ್ಚಯಿಸಿದರು. ಖಾದೀ ಧರಿಸಲು ಪ್ರಾರಂಭಿಸಿದರು ; ಅಸ್ಪೃಶ್ಯತೆಯ ನಿರ್ಮೂಲನ, ಹಿಂದೀ ಪ್ರಚಾರ, ಖಾದೀ ಗ್ರಾಮೋದ್ಯೋಗ, ರಾಷ್ಟ್ರೀಯ ಶಿಕ್ಷಣ ಇವೇ ಮುಂತಾದ ವಿಧಾಯಕ ಕಾರ್ಯಕ್ರಮಗಳಲ್ಲಿ ಅತ್ಯಾಸಕ್ತಿಯಿಂದ ಪಾಲ್ಗೊಳ್ಳತೊಡಗಿದರು. ಇದಕ್ಕೂ ಮೊದಲೇ ಸಂಪದ್ಗಿರಿರಾಯರ ಮೇಲೆ ಗೋಪಾಲ ಕೃಷ್ಣ ಗೋಖಲೆ, ಟಿಳಕ್ ಮುಂತಾದ ರಾಷ್ಟ್ರಸೇವಕರ ಪ್ರಭಾವ ಬಹಳವಾಗಿ ಬಿದ್ದಿತ್ತು.

ಕುಟುಂಬದ ಹಿರಿಯರ ಇಚ್ಛೆಗೆ ವಿರುದ್ಧವಾಗಿ, ಆದರೆ ಬಾಲ್ಯದಲ್ಲೇ ಬಯಸಿದ್ದಂತೆ, ಸಂಪದ್ಗಿರಿರಾಯರು ಶಿಕ್ಷಕರಾಗಲು ನಿರ್ಧರಿಸಿದರು. ಅದರಂತೆಯೇ ಅವರು 1917ರಲ್ಲಿ ಸ್ಥಾಪಿಸಲ್ಪಟ್ಟಿದ್ದ ಬೆಂಗಳೂರಿನ 'ನ್ಯಾಷನಲ್ ಹೈಸ್ಕೂಲ್'ನಲ್ಲಿ ಅಧ್ಯಾಪಕರಾಗಿ ಸೇರಿದರು (1918). ಕಾರಣಾಂತರದಿಂದ ಮರುವರ್ಷವೇ ಲಂಡನ್ ಮಿಷನ್ ಹೈಸ್ಕೂಲ್‌ನಲ್ಲಿ ಅಧ್ಯಾಪಕರಾಗಿ ಸೇರಿದರು. 1920ರಲ್ಲಿ ಸೆಂಟ್ರಲ್ ಕಾಲೇಜ್‌ನಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಸೇರಿದರು. 1921ರಲ್ಲಿ ಸೆಂಟ್ರಲ್ ಕಾಲೇಜ್‌ನ ಕೆಲಸಕ್ಕೆ ರಾಜೀನಾಮೆ ಇತ್ತು, ದೇಶೀಯ ವಿದ್ಯಾಶಾಲೆಗೇ ಹಿಂತಿರುಗಿದರು ; ತಮ್ಮ ಸ್ವಂತ ಅಭ್ಯುದಯವನ್ನು ರಾಷ್ಟ್ರದ ಏಳ್ಗೆಗಾಗಿ ನಿರ್ಲಕ್ಷಿಸಿದರು. ಇಲ್ಲಿ ಅವರು ಅಧ್ಯಾಪಕರಾಗಿ, ಮುಖ್ಯೋಪಾಧ್ಯಾಯರಾಗಿ 1921 ರಿಂದ 1945ರ ವರೆಗೆ ಅಮೋಘ ಸೇವೆಸಲ್ಲಿಸಿದರು ; ಮತ್ತೆ 1945 ರಿಂದ 1952ರ ವರೆಗೆ ನ್ಯಾಷನಲ್ ಕಾಲೇಜ್‌ನ ಪ್ರಿನ್ಸಿಪಾಲ್ ಆಗಿ ಕಾರ್ಯನಿರ್ವಹಿಸಿದರು.

ಸಂಪದ್ಗಿರಿರಾಯರು ಬೆಂಗಳೂರಿಗೆ ಬರುತ್ತಿದ್ದ ಎಲ್ಲಾ ರಾಷ್ಟ್ರನಾಯಕರನ್ನೂ ತಮ್ಮ ಶಾಲೆಗೆ ಆಮಂತ್ರಿಸಿ ಅವರುಗಳ ಭಾಷಣಗಳನ್ನೇರ್ಪಡಿಸುತ್ತಿದ್ದರು. ಹೀಗೆ ಗಾಂಧೀಜಿ, ರಾಜಾಜಿ, ಸಿ. ಆರ್. ದಾಸ್ ಮತ್ತು ಇನ್ನೂ ಹಲವಾರು ಮುಂದಾಳುಗಳ ವಿಚಾರಗಳನ್ನು, ಸಂದೇಶಗಳನ್ನು ಕೇಳುವ ಅವಕಾಶವನ್ನು ವಿದ್ಯಾರ್ಥಿಗಳಿಗೆ ಒದಗಿಸುತ್ತಿದ್ದರು. ಸಂಪದ್ಗಿರಿರಾಯರು 'ಯಂಗ್ ಇಂಡಿಯಾ', 'ಪ್ರಬುದ್ಧ ಭಾರತ' ಮುಂತಾದ ಪತ್ರಿಕೆಗಳನ್ನು ತಪ್ಪದೆ ಓದುತ್ತಿದ್ದರು. ಅವುಗಳ ಸಂದೇಶಗಳನ್ನು ವಿದ್ಯಾರ್ಥಿಗಳಲ್ಲಿಯೂ ಸಾರ್ವಜನಿಕರಲ್ಲಿಯೂ ಹರಡಲು ಚೈತನ್ಯದಾಯಕ ಭಾಷಣಗಳನ್ನು ಮಾಡುತ್ತಿದ್ದರು. ಈ ರೀತಿಯ ಚಟುವಟಿಕೆಗಳಿಂದ ವಿದ್ಯಾರ್ಥಿಗಳನ್ನು ಸ್ವಾತಂತ್ರ್ಯ ಸಂಗ್ರಾಮದೆಡೆಗೆ ಆಕರ್ಷಿತರಾಗುವಂತೆ ಮಾಡಲು ಶ್ರಮಿಸಿದರು. ರಾಜಕೀಯ ಚಟುವಟಿಕೆಗಳಲ್ಲಿ ರಾಯರು ಅಂಥ ಪ್ರಮುಖ ಪಾತ್ರವನ್ನೇನು ವಹಿಸದಿದ್ದರೂ, ನೂರಾರು ಜನ ದೇಶಪ್ರೇಮಿ ತರುಣರು ಸ್ವಾತಂತ್ರ್ಯಸಂಗ್ರಾಮಕ್ಕೆ ಧುಮುಕಲು ಅವರ ಶ್ರಮ, ಪ್ರೇರಕಶಕ್ತಿ ಕಾರಣ. 1923ರ ನಾಗಪುರ ಧ್ವಜಸತ್ಯಾಗ್ರಹ ಚಳವಳಿಯಲ್ಲಿ ದೇಶೀಯ ಶಾಲೆಯ ನಾಲ್ಕು ಮಂದಿ ತರುಣರು ಭಾಗವಹಿಸಿದರು. ಇವರೇ ಮೈಸೂರು ಸಂಸ್ಥಾನದಿಂದ

ವೊಟ್ಟಮೊದಲು, ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದಕ್ಕಾಗಿ, ಸೆರೆಮನೆವಾಸ ಅನುಭವಿಸಿದ ದೇಶಭಕ್ತರು. ಇದೇ ಮೊದಲ್ಗೊಂಡು ರಾಯರಿಂದ ಸ್ಫೂರ್ತಿಗೊಂಡ ವಿದ್ಯಾರ್ಥಿಗಳನೇಕರು ಸ್ವಾತಂತ್ರ್ಯ ಸಂಗ್ರಾಮದ—ಅದರೊಟ್ಟಿಗೆ ಸಾಗಿದ ಸಮಾಜ ಸುಧಾರಣೆಯ—ಹಂತಹಂತಗಳಲ್ಲೂ ಭಾಗವಹಿಸಿ ದೇಶಕ್ಕಾಗಿ ತನುಮನಧನಗಳನ್ನು ಅರ್ಪಿಸಿ ಧನ್ಯರೆನಿಸಿಕೊಂಡಿದ್ದಾರೆ. ಈ ಕೆಲಸಗಳಿಂದ ದೇಶೀಯ ವಿದ್ಯಾಶಾಲೆ ಭಾರತದಲ್ಲೆಲ್ಲಾ 'ಗಾಂಧೀ ಸ್ಕೂಲ್' ಎಂದೇ ಪ್ರಸಿದ್ಧವಾಯಿತು.

1927ರಲ್ಲಿ ದೇಶೀಯ ವಿದ್ಯಾಶಾಲೆಯಲ್ಲಿ ಸಂಪದ್ಗಿರಿರಾಯರ ಅಧ್ಯಕ್ಷತೆಯಲ್ಲಿ ಬೆಂಗಳೂರು ಸೇವಾದಳವು ಅಸ್ತಿತ್ವಕ್ಕೆ ಬಂದಿತು. ಹಿಂದೂಸ್ಥಾನಿ ಸೇವಾದಳದ ಸ್ಥಾಪಕ-ಮುಖಂಡ ಡಾ|| ಹರ್ಡೀಕರರಿಗೆ ರಾಯರು ಬಹಳವಾಗಿ ಸಹಾಯ ನೀಡುತ್ತಿದ್ದರು. ಸೇವಾದಳದ ಅನೇಕ ಶಿಬಿರಗಳಲ್ಲಿ ಪ್ರತ್ಯಕ್ಷವಾಗಿ ಹಾಜರಿದ್ದು ಉತ್ಸಾಹಪೂರಿತ ಭಾಷಣಗಳನ್ನು ಮಾಡುತ್ತಿದ್ದರು. 1927ರಲ್ಲಿ ರಾಜಾಜಿಯವರು ಪ್ರಥಮ ದಕ್ಷಿಣ ಭಾರತ ಖಾದೀ ಪ್ರದರ್ಶನವನ್ನು ಬೆಂಗಳೂರಿನಲ್ಲಿ ಏರ್ಪಡಿಸಿದಾಗ—ಗಾಂಧೀಜೀ ಇದನ್ನು ಉದ್ಘಾಟಿಸಿದರು—ಸಂಪದ್ಗಿರಿರಾಯರು ಬಹಳವಾಗಿ ಸಹಕರಿಸಿದರು. ಬೆಂಗಳೂರಿನಲ್ಲಿ ನಡೆದ ಪ್ರಥಮ ಹಿಂದೀ ಕಾನ್ಫರೆನ್ಸ್ (1935), ಗಾಂಧೀಜಿಯ ಸನ್ಮಾನಸಮಾರಂಭ ಮುಂತಾದ ಅನೇಕ ಕಾರ್ಯಗಳಲ್ಲಿ ಬೆಂಗಳೂರು ಸೇವಾದಳದ ಸ್ವಯಂಸೇವಕರು ಮರೆಯಲಾಗದ ಸೇವೆ ಸಲ್ಲಿಸಿದರು. ಇದರ ಬಗ್ಗೆ ದಿ|| ಮಹದೇವ ದೇಸಾಯಿಯವರು 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಬರೆದಿರುವ ಮಾತುಗಳು ಇಲ್ಲಿ ಉಲ್ಲೇಖನಾರ್ಹ: "ಬೆಂಗಳೂರಿನ ಸ್ವಯಂಸೇವಕರನ್ನು ಜ್ಞಾಪಿಸಿಕೊಂಡಾಗ ನನಗೆ ಶುದ್ಧ ಅಪರಂಜಿಯ ನೆನಪಾಗುತ್ತದೆ." ಅಂಕೋಲಾ ಉಪ್ಪಿನ ಸತ್ಯಾಗ್ರಹ ಶಿಬಿರದಲ್ಲಿ (1930) ಸ್ವಲ್ಪಕಾಲ ಸಂಪದ್ಗಿರಿರಾಯರು ಕಾರ್ಯಪ್ರವೃತ್ತರಾಗಿದ್ದಂತೆ ಕಂಡುಬರುತ್ತದೆ.

1944ರಲ್ಲಿ ನ್ಯಾಷನಲ್ ಹೈಸ್ಕೂಲ್ ರಜತ ಮಹೋತ್ಸವ ಆಚರಿಸಿದ ಸಂದರ್ಭದಲ್ಲಿ ವಿ. ಎಸ್. ಶ್ರೀನಿವಾಸ ಶಾಸ್ತ್ರಿಗಳು ಸಂಪದ್ಗಿರಿರಾಯರನ್ನು 'ಪ್ರಿನ್ಸ್ ಆಫ್ ಹೆಡ್ ಮಾಸ್ಟರ್ಸ್' ಎಂದು ಕರೆದು ಗೌರವಿಸಿದರು.

ಸ್ವಾತಂತ್ರ್ಯಾನಂತರ ಸಂಪದ್ಗಿರಿರಾಯರು 1952ರಲ್ಲಿ ಮೈಸೂರು ನ್ಯಾಯ ವಿಧಾಯಕ ಮಂಡಲಿಯ ಸದಸ್ಯರಾಗಿ ನೇಮಕಹೊಂದಿ 1954ರವರೆಗೆ ಸೇವೆಸಲ್ಲಿಸಿದರು. 1957ರಲ್ಲಿ ನಿವೃತ್ತರಾದನಂತರ 1958 ರಿಂದ 1960ರ ವರೆಗೆ ರಾಂಚಿಯ ವಿಕಾಸ್ ವಿದ್ಯಾಲಯದ ಆಚಾರ್ಯರಾಗಿ ಸೇವೆಸಲ್ಲಿಸಿದರು. 1967ರಲ್ಲಿ ರಾಜ್ಯ ಸರ್ಕಾರವು ಸಂಪದ್ಗಿರಿರಾಯರಿಗೆ ರಾಜ್ಯಪ್ರಶಸ್ತಿಯನ್ನು ನೀಡಿ ಗೌರವಿಸಿತು.

ರಾಯರು ಕನ್ನಡ ಸಂಸ್ಕೃತಿ, ಸಮಾಜ, ಭಾಷೆ, ಸಾಹಿತ್ಯ, ಪತ್ರಿಕೋದ್ಯಮ

ಮುಂತಾದ ಕ್ಷೇತ್ರಗಳಲ್ಲೂ ಸಲ್ಲಿಸಿರುವ ಕೊಡುಗೆ ಅಪಾರ. 1-5-1973ರಲ್ಲಿ ಅವರು ತೀರಿಕೊಂಡರು.

ಎಚ್. ಪಿ. ಶಶಿಧರಮೂರ್ತಿ
(ಸಂಶೋಧಕ ವಿದ್ಯಾರ್ಥಿ, ಬೆಂಗಳೂರು ವಿಶ್ವವಿದ್ಯಾಲಯ)

ಮೈ.ಬೆಂ. 30

## ದಿ|| 'ವೀರಕೇಸರಿ' ಸೀತಾರಾಮಶಾಸ್ತ್ರಿ



ಎಂ. ಸೀತಾರಾಮಶಾಸ್ತ್ರಿಗಳು ಮದ್ದೂರಿನ ಪ್ರಸಿದ್ಧ ಜೋಯಿಸರ ವಂಶದಲ್ಲಿ ಹುಟ್ಟಿದರು. ಶೃಂಗೇರಿಯಲ್ಲಿ ಅವರು ಶಾಸ್ತ್ರಾಧ್ಯಯನ ಮಾಡಿದರು ಅವರ ಸೋದರಮಾವ ಶೃಂಗೇರಿ ಮಠವಲ್ಲಿ ಸರ್ವಾಧಿಕಾರಿಗಳು. ಶಾಸ್ತ್ರಿಗಳು ಶಾಸ್ತ್ರಾಭ್ಯಾಸ ಮಾಡುತ್ತಿದ್ದ ಕಾಲದಲ್ಲಿ ಲೋಕಮಾನ್ಯ ಬಾಲ ಗಂಗಾಧರ ಟಿಳಕರು —ಯಾವ ಮಗುವನ್ನು ಝಾನ್ಸಿ ರಾಣಿ ಲಕ್ಷ್ಮೀಬಾಯಿ ಬೆನ್ನಿಗೆ ಕಟ್ಟಿಕೊಂಡು ಬ್ರಿಟಿಷರೊಡನೆ ಹೋರಾಡಿದಳೋ ಆ ಬಾಳಾಸಾಹೇಬರೊಡನೆ ಶೃಂಗೇರಿ ಗುರುಗಳ ದರ್ಶನಾರ್ಥವಾಗಿ ಬಂದಿದ್ದರಂತೆ. ಶಾಸ್ತ್ರ ಓದುತ್ತಿದ್ದ ಶಾಸ್ತ್ರಿಗಳು ಅಂದಿನಿಂದಲೇ ರಾಜಕೀಯದ ಅಲೆಗೆ ಸಿಕ್ಕಿದರು. ಆ ಕಾಲದ ಮಹಾನಾಯಕರಾದ ಟಿಳಕರೇ ಶಾಸ್ತ್ರಿಗಳ ಆದರ್ಶ ಗುರುಗಳಾದರು. ಶ್ರೀಮಠದ ಪ್ರಸಿದ್ಧ ವಿದ್ವಾಂಸರಾಗಿ ಬೆಳಗಬೇಕಾಗಿದ್ದ ಶಾಸ್ತ್ರಿಗಳು ರಾಜಕೀಯದ ಬಿರುಗಾಳಿಗೆ ಸಿಕ್ಕಿದರು. ಗುರುಮನೆ–ರಾಜಮನೆತನಗಳ (ಶಾಸ್ತ್ರಿಗಳ ಇನ್ನೊಬ್ಬ ಸೋದರಮಾವ ಅರಮನೆಯಲ್ಲಿ ಧರ್ಮಾಧಿಕಾರಿಗಳಾಗಿದ್ದರು) ಪ್ರತಿಷ್ಠಿತ ಕುಟುಂಬದ ಶಿಶು 'ರಾಜದ್ರೋಹಿ' ಎನಿಸಿಕೊಂಡಿತು. ಕಾಲಕ್ರಮೇಣ, ಶೃಂಗೇರಿ ಮಠದ ಈ ಮೇಧಾವಿ ಬಾಲಕ ಗಾಂಧೀ ಮಠದ ಸತ್ಯಾಗ್ರಹಿಯಾದ. ಇವರು ಸಂಪಾದಿಸಿದ ಪತ್ರಿಕೆಯ ಹೆಸರು 'ವೀರಕೇಸರಿ'. ಮುಂದೆ ಈ ಹೆಸರೇ ಅವರ ಅನ್ವರ್ಥನಾಮವಾಯಿತು. ಗಣಪತಿ ಗಲಾಟೆಯ ಕಾಲಕ್ಕೆ ಶಾಸ್ತ್ರಿಗಳಿಗೆ 'ರಾಜದ್ರೋಹ'ದ ಆಪಾದನೆಯಿಂದ ಶಿಕ್ಷೆ ಆಯಿತು.

ವೀರಕೇಸರಿಯವರು ಮೈಸೂರು ರಾಜಕೀಯಕ್ಕೆ ಪದಾರ್ಪಣೆ ಮಾಡುತ್ತಲೇ

ಶಾಂತಿಗೆ ಹೆಸರಾಗಿದ್ದ ಮೈಸೂರಲ್ಲಿ ಕ್ರಾಂತಿಯ ಪ್ರಾದುರ್ಭಾವವಾಯಿತು. ಭಾರತ ಕಾಂಗ್ರೆಸ್ಸಿನಿಂದ ಸಿಡಿದೆದ್ದ ಶಾಸ್ತ್ರಿಗಳು 'ಮೈಸೂರು ಕಾಂಗ್ರೆಸ್' ಸ್ಥಾಪನೆಯ ಪುರೋಹಿತರಾದರು. ಮೈಸೂರು ಕಾಂಗ್ರೆಸ್ಸಿನ ಸ್ಥಾಪನೆ ಶಿವಪುರ ಅಧಿವೇಶನದಲ್ಲಿ ಇವರ ಭಾಷಣ ಅಪೂರ್ವವಾದುದು. ಶಾಸ್ತ್ರಿಗಳ ಕಂಠಶ್ರೀ ಯಾವ ಧ್ವನಿಸ್ಪರ್ಧಕಕ್ಕೂ ಕಡಿಮೆ ಇರಲಿಲ್ಲ. ಇವರ ಮಾತುಗಳು ಚೂಪಾದ ಬಾಣಗಳಂತೆ ಅಧಿಕಾರಶಾಹಿಯನ್ನು ಚುಚ್ಚುತ್ತಿದ್ದವು. ಶಾಸ್ತ್ರಿಗಳು ಮೈಸೂರಿನಲ್ಲಿ ನೇಕ್‌ಚಾಲ್ ರಾಜದ್ರೋಹದ ಆಪಾದನೆಗಾಗಿ ಕಾರಾಗೃಹ ವಾಸವನ್ನು ಅನುಭವಿಸಿದವರಲ್ಲಿ ಪ್ರಥಮರು. (1937ರಲ್ಲೂ ಕಾಂಗ್ರೆಸ್ ಸ್ಥಾಪಿಸಿದ್ದ ಮೂವರ ಕ್ರಿಯಾಸಮಿತಿಯಲ್ಲಿದ್ದು, ಪ್ರಾಂತವೆಲ್ಲ ಸಂಚರಿಸಿ ಅವರು ಬಂಧಿತರಾದರು. —ಸಂ||).

ಆಗ ರಾಜ್ಯದಲ್ಲಿ ಅತ್ಯಂತ ಬಲಯುತವಾದ ಪಕ್ಷ ಪ್ರಜಾಪಕ್ಷ. ಅಂದಿನ ಪ್ರಜಾಪಕ್ಷದ ಬಹಿರಂಗಸಭೆಗೆ ಶಾಸ್ತ್ರಿಗಳು ಹೋಗಿ ಆ ನಾಯಕರುಗಳನ್ನು ಪ್ರಜಾಪಕ್ಷವನ್ನು ತಮ್ಮ ಮೈಸೂರು ಕಾಂಗ್ರೆಸ್ಸಿನಲ್ಲಿ ವಿಲೀನಗೊಳಿಸಿ ದೇಶಪ್ರೇಮವನ್ನು ಸೂಚಿಸಬೇಕೆಂದು ಅನೇಕ ಬಾರಿ ಪ್ರಾರ್ಥನೆ ಮಾಡಿದರು. ಮುಂದೆ ಪ್ರಜಾಪಕ್ಷದ ನಾಯಕರು ತಮ್ಮ ಪಕ್ಷವನ್ನು ವಿಸರ್ಜಿಸಿ ಕಾಂಗ್ರೆಸ್ ದೀಕ್ಷೆಯನ್ನು ಪಡೆದರು.

ಪರಶುರಾಮನಂತೆ, 'ಸೀತಾರಾಮು'ನು ಸಂಸ್ಥಾನದಲ್ಲೆಲ್ಲ ಸಂಚರಿಸಿ, ಕಾಂಗ್ರೆಸ್ಸಿಗೆ ಹೊಸ ಚೇತನವನ್ನು ತುಂಬಿ ತಾವು ರಾಜಕೀಯ ಸಂನ್ಯಾಸ ಪಡೆದರು. 1947ರಲ್ಲೂ ಅವರು ಬಂಧಿತರಾಗಿದ್ದರು. ಆಗಲೇ ಇವರ ಪುತ್ರ ದಿ|| ಎಂ. ರಾಮಮೂರ್ತಿ ಕೂಡ ಜೈಲು ಕಂಡಿದ್ದರು.

## 'ವೀರಕೇಸರಿ' ಪತ್ರಿಕೆ

'ವೀರಕೇಸರಿ' ಎಂಬ ಹೆಸರು ಮೈಸೂರು ದೇಶದಲ್ಲಿ ಮನೆಮಾತಾಗಿತ್ತು. ಸ್ವಾತಂತ್ರ್ಯ, ಸಮಭಾವ, ದೇಶಸೇವೆ ಮತ್ತು ದೇಶಾಭ್ಯುದಯಗಳೇ ವೀರಕೇಸರಿಯ ಮಹಾವಾಕ್ಯಗಳೆಂದು ಸಾರಿಕೊಂಡಮೇಲೆ ಅದರ ಆದರ್ಶಗಳನ್ನು ಒತ್ತಿಹೇಳಬೇಕಾಗಿಲ್ಲ. 1927ರಲ್ಲಿ ಹೊರಟ ಪತ್ರಿಕೆಯು ತನ್ನ ನಾಲ್ಕು ಆದರ್ಶಗಳನ್ನು ಸಾಧಿಸಲು ಶ್ರಮಿಸಿತೆನ್ನುವುದು ನಿರ್ವಿವಾದ.

ಎಂ. ಸೀತಾರಾಮ ಶಾಸ್ತ್ರಿಗಳು ಶೃಂಗೇರಿಯಲ್ಲಿ ಶಾಸ್ತ್ರಾಧ್ಯಯನ ಮಾಡುತ್ತಿದ್ದ ಕಾಲದಲ್ಲಿ ಅನೇಕ ಮಹಾರಾಷ್ಟ್ರ ವಿದ್ವಾಂಸರುಗಳು ಅಲ್ಲಿ ಇದ್ದರು. ಶಾಸ್ತ್ರಿಗಳು ಆಗಿನ ಕಾಲದಲ್ಲಿ ಬಾಲ ಗಂಗಾಧರ ಟಿಳಕರ 'ಕೇಸರಿ' ಪತ್ರಿಕೆಯನ್ನು ತರಿಸಿ ಮರಾಠಿ ಭಾಷೆಯನ್ನು ತಿಳಿದಿದ್ದ ವಿದ್ವಾಂಸರಿಂದ ಓದಿಸಿ ಕೇಳಿ ಪ್ರಭಾವಿತರಾಗಿದ್ದರಂತೆ. ಟಿಳಕರ 'ಕೇಸರಿ'ಗಿಂತಲೂ ಪ್ರಖರವಾದ ಲೇಖನಗಳನ್ನು ಬರೆಯುವ ಹಂಬಿದ್ದ ಶಾಸ್ತ್ರಿಗಳು ತಮ್ಮ ಪತ್ರಿಕೆಗೆ 'ವೀರಕೇಸರಿ' ಎಂದು ಹೆಸರಿಟ್ಟಿದ್ದು ಅತಿಶಯವಲ್ಲ. ತರ್ಕ, ವೇದಾಂತಗಳ ಬಗ್ಗೆ

ಪುಸ್ತಕಗಳನ್ನು ಬರೆಯುವ ಬದಲು ಪತ್ರಿಕಾವ್ಯವಸಾಯವನ್ನೇ ಸ್ವಧರ್ಮವೆಂದು ಸ್ವೀಕರಿಸಿದರು.

'ವೀರಕೇಸರಿ'ಗೆ ಎಂದೂ ಇತಿಮಿತಿಗಳಿರಲಿಲ್ಲ. ಇದು ಬರೆಯಬಹುದಾದುದು, ಇದು ಬರೆಯಬಾರದು ಎಂಬ ಭೇದಭಾವವೇ ಇರಲಿಲ್ಲ. ಜನಕಲ್ಯಾಣಕ್ಕೆ ಯಾವುದು ಸರಿಯೆಂದು ಶಾಸ್ತ್ರಿಗಳು ಭಾವಿಸುತ್ತಿದ್ದರೋ ಅವೆಲ್ಲವೂ ಪತ್ರಿಕೆಯಲ್ಲಿ ಅಚ್ಚಾಗುತ್ತಿತ್ತು.

ಯಾವುದಾದರೊಂದು ಬಲವಾದ ರಾಜಕಾರಣವಿದ್ದರೆ ವೀರಕೇಸರಿ ಸತ್ವಪೂರ್ಣ ವಾಗಿರುತ್ತದೆಂದು ಶಾಸ್ತ್ರಿಗಳ ಭಾವನೆ. ಯಾವಾಗ ರಾಜಕಾರಣ ರಾಜ್ಯದಲ್ಲಿ ಮಲಗಿರು ತ್ತಿತ್ತೋ ಆಗ 'ವೀರಕೇಸರಿ' ದೀರ್ಘನಿದ್ರೆಯಲ್ಲಿರುತ್ತಿತ್ತು.

ಬೆಂಗಳೂರಿನ ಸುಲ್ತಾನ್‌ಪೇಟೆ ಗಣಪತಿ ಗಲಾಟೆಯಲ್ಲಿ 'ವೀರಕೇಸರಿ' ಪತ್ರಿಕೆ ಯಾವಾಗ ಬರುತ್ತದೋ ಎಂದು ಮಹಾಜನರು ಚಾತಕಪಕ್ಷಿಗಳಂತೆ ಕಾರ್ಯಾಲಯದ ಮುಂದೆ ನಿಂತಿರುತ್ತಿದ್ದರಂತೆ. ಸರ್ಕಾರವು 'ವೀರಕೇಸರಿ'ಯ ಘರ್ಜನೆಯನ್ನು ಕುಂಠಿತ ಗೊಳಿಸಲು ಮಾಡಿದ ಪ್ರಯತ್ನಗಳು ಪುಡಿಪುಡಿಯಾದವು.

ಚಿಂತಾಮಣಿ ಮಹಾಲಕ್ಷ್ಮಮ್ಮ ಕೇಸು ನಡೆಯುತ್ತಿದ್ದ ಕಾಲದಲ್ಲಿ ವೀರಕೇಸರಿಯ ವರದಿಗಳು ಮತ್ತು ಲೇಖನಗಳು ಸರ್ಕಾರ ಮತ್ತು ನ್ಯಾಯಾಧೀಶರುಗಳನ್ನು ತತ್ತರಿಸು ವಂತೆ ಮಾಡಿದವು. ಹಿಂದೂ ಹೆಂಗಸಿನ ಮೇಲೆ ಮುಸ್ಲಿಂ ಯುವಕನು ಅಭಿಚಾರ ಎಸಗಿದನೆಂಬ ಈ ಮೊಕದ್ದಮೆಯು ಮೈಸೂರು ರಾಜ್ಯದ ಇತಿಹಾಸದಲ್ಲಿಯೇ ಮೈ ನವಿರೇಳುವಂತಹ ಮೊಕದ್ದಮೆ.

ಮೈಸೂರು ರಾಜ್ಯದಲ್ಲಿ ನಡೆದ ಸ್ವಾತಂತ್ರ್ಯಸಂಗ್ರಾಮದ ಕಡೆಯ ಹೋರಾಟದಲ್ಲಿ ವೀರಕೇಸರಿ ತನ್ನದೇ ಆದ ಇತಿಹಾಸವನ್ನು ಸ್ಥಾಪಿಸಿತು.

ಆಗ ದಿವಾನರಾಗಿದ್ದ ಆರ್ಕಾಟ್ ರಾಮಸ್ವಾಮಿ ಮುದಲಿಯಾರರು 'ವೀರಕೇಸರಿ' ಪತ್ರಿಕೆಯನ್ನು ಮುಟ್ಟುಗೋಲು ಹಾಕುವರೆಂಬ ವದಂತಿ ಸರ್ಕಾರಿ ವಕ್ತಾರರಿಂದ ತಿಳಿದು ಬಂದಿತು. ರಾತ್ರೋರಾತ್ರಿ ಕನ್ನಡ ಟೈಪುಗಳನ್ನು ದೊಡ್ಡ ದೊಡ್ಡ ಪೆಟ್ಟಿಗೆಗಳಲ್ಲಿ ತುಂಬಿ ಕೊಂಡು ಕಣ್ಣು ಕಾಣದ ಶಾಸ್ತ್ರಿಗಳು ಮದರಾಸು ತಲಪಿದರು. ಅಲ್ಲಿ ಬಹಳ ಕಷ್ಟದಿಂದ ಪತ್ರಿಕೆಯನ್ನು ಡಿಕ್ಲೇರ್ ಮಾಡಿಕೊಂಡು ಅಲ್ಲಿಂದ ವಾರಪತ್ರಿಕೆಯಾಗಿ 'ವೀರಕೇಸರಿ' ಹೊರಡಿಸಿದರು. ಪತ್ರಿಕೆಯಲ್ಲಿ ಆರ್ಕಾಟರಿಗೆ ಬಹಿರಂಗಪತ್ರವನ್ನು ಬರೆದರು. ಕನ್ನಡ ಪತ್ರಿಕಾಪ್ರಪಂಚದಲ್ಲಿ ಬಹಿರಂಗಪತ್ರಗಳನ್ನು ಬರೆದ ಪ್ರಥಮ ಪತ್ರಿಕೆ 'ವೀರಕೇಸರಿ'. ಮಹಾರಾಜರವರಿಗೂ ಬಹಿರಂಗಪತ್ರಗಳನ್ನು ಬರೆದ ಕೀರ್ತಿ ವೀರಕೇಸರಿಯದೇ!

ಮುಂದೆ ಗಾಂಧೀ ಕೊಲೆ ಮೊಕದ್ದಮೆ ಕಾಲದಲ್ಲಿ ಬೆಂಗಳೂರಿನಿಂದ ವೀರಕೇಸರಿ ದಿನಪತ್ರಿಕೆಯಾಗಿ ಮೊಳಗಿತು.

ಹೀಗೆ'ವೀರಕೇಸರಿ ಪಾತ್ರವು' ಮೈಸೂರಿನ ಸ್ವಾತಂತ್ರ್ಯಸಂಗ್ರಾಮ ಇತಿಹಾಸದಲ್ಲಿ ಧೀಮಂತ ಪಾತ್ರವೆಂದು ಹೇಳಿದರೆ ಅತಿಶಯೋಕ್ತಿಯಲ್ಲ.

ಎಂ. ಚಂದ್ರಮೌಳಿ
(ಡೆಕ್ಕನ್ ಹೆರಾಲ್ಡ್, ಬೆಂಗಳೂರು-1)

ಮೈ.ಬೆಂ. 31

## ಅ. ನ. ಸುಬ್ಬರಾವ್

ಜನನ : 1891 ಉದ್ಯೋಗ : ನಿರ್ದೇಶಕ, ಕಲಾಮಂದಿರ ವಿಳಾಸ : ಕಲಾಮಂದಿರ, ಡಾ॥ ಡಿ.ವಿ.ಜಿ. ರಸ್ತೆ, ಬೆಂಗಳೂರು-4

---



ಉಪಾಧ್ಯಾಯ ವೃತ್ತಿ ವ್ಯಾಸಂಗಕ್ಕಾಗಿ 1909ರಲ್ಲಿ ಮೈಸೂರಿಗೆ ಬಂದ ನಾನು, ನಾರ್ಮಲ್ ಹೈಸ್ಕೂಲಿನಲ್ಲಿ ಪ್ರೊ॥ ಎಂ. ಹಿರಿಯಣ್ಣನವರಂಥ ಹಿರಿಯರ ಮಾರ್ಗದರ್ಶನದಲ್ಲಿ ಅಧ್ಯಯನ ಮಾಡುತ್ತಿರುವ ಕಾಲದಲ್ಲಿ ಧಾರವಾಡದಿಂದ ಬಂದ ಸ್ವಾಮಿರಾವ್ ದೇಶಪಾಂಡೆ ಎಂಬವರ ಉಪನ್ಯಾಸ ಕೇಳಿದೆ. ರಾಷ್ಟ್ರೀಯ ವಿಚಾರ ತಿಳಿಸುತ್ತಿದ್ದ ಅವರು ಸಕ್ಕರೆ ವಿದೇಶಿ ವಸ್ತುವೆಂದು ಅದನ್ನು ಬಹಿಷ್ಕರಿಸಲು ಕರೆ ನೀಡಿದರು. ಇದರ ಪರಿಣಾಮವಾಗಿ ಮಹಾರಾಜರು ಮಧುವನದಲ್ಲಿ ನಡೆಸಿದ್ದ ಸಮಾರಾಧನೆಯ ಕಾಲಕ್ಕೆ ನೀಡಲಾದ ಲಾಡು ಉಂಡೆಗಳನ್ನು ಜನರು ಕೋಟೆಬಾಗಿಲ ಬಳಿ ತಂದು ಎಸೆದರಂತೆ. ಈ ವಿಚಾರ ಮಹಾರಾಜರಿಗೆ ತಿಳಿದು ಸ್ವಾಮಿರಾಯರನ್ನು ಬಂಧಿಸಿದ್ದರಂತೆ. ಈ ಉಪನ್ಯಾಸದಿಂದ ಸ್ಫೂರ್ತಿಪಡೆದ ಅನೇಕರಲ್ಲಿ ನಾನೂ ಒಬ್ಬ. (ಈ ಸ್ವಾಮಿರಾಯರ ಪತ್ನಿ ಭಾಗೀರಥೀಬಾಯಿ ಈಗ ನಿರ್ಗತಿಕರಾಗಿ ಬೆಂಗಳೂರಲ್ಲಿ ಇರುವುದು ದುಃಖದ ಸಂಗತಿ). ಈ ಕಾಲಕ್ಕೆ ನಾನು ಕಲಾಶಿಕ್ಷಣವನ್ನು ಪಡೆಯುತ್ತಿದ್ದೆ.

ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ನಮ್ಮ ಶಾಲೆಯ ಎದುರು ಸಂಸ್ಥಾನದ ಆರ್ಥಿಕಾಭಿವೃದ್ಧಿ ಸಮ್ಮೇಳನ ನಡೆದಿರಲು, ವಿದ್ಯಾರ್ಥಿಯಾದ ನಾನು ಸ್ವದೇಶಿ ವಸ್ತುಗಳ ಬಳಕೆ ಮತ್ತು ಉತ್ಪಾದನೆಯ ಸಾಧ್ಯತೆಯ ಬಗ್ಗೆ ಮಾತನಾಡಿದೆ. ಅನೇಕರ ಮೆಚ್ಚುಗೆ ಈ ಭಾಷಣಕ್ಕೆ ಬಂದು, ದಿ॥ ವರ್ಧಮಾನಯ್ಯನವರು ನನ್ನನ್ನು ಪತ್ತೆಹಚ್ಚಿ, ಮುಂದೆ

ಬೆಂಗಳೂರಿಗೆ ಕರೆತಂದು ಎಂ.ವಿ.ಯವರ ಪರಿಚಯವನ್ನು ಮಾಡಿಸಿಕೊಟ್ಟರು. ಇದರ ಪರಿಣಾಮವಾಗಿ ಬೆಂಗಳೂರಲ್ಲಿ ಆರ್. ಕಲ್ಯಾಣಮ್ಮನವರು ನಡೆಸುತ್ತಿದ್ದ ಸ್ತ್ರೀಸಮಾಜದಲ್ಲಿ ಕುಶಲಕಲಾಧ್ಯಾಪಕನಾಗಿ ನನ್ನ ನೇಮಕವು ಆಯಿತು. ಅಲ್ಲಿ ಆರು ತಿಂಗಳು ಲಲಿತಕಲಾ ತರಬೇತಿ ನಡೆಸಿ ಅನೇಕರಿಗೆ ಕೆಲಸಗಳನ್ನು ಕಲಿಸಿದೆ. ಮುಂದೆ ನನಗೆ ಚಿಕ್ಕಮಗಳೂರು ಹೈಸ್ಕೂಲಿಗೆ ವರ್ಗವಾಯಿತು. ಅಲ್ಲಿ ವಿದ್ಯಾರ್ಥಿಗಳಿಗೆ ಕಲೆಯಲ್ಲಿ ಆಸ್ಥೆ ಇರಲಿಲ್ಲ. ಆದರೆ ನನಗೆ ಸಾರ್ವಜನಿಕರ ಸಂಪರ್ಕ ಬೆಳೆಯಿತು. ಡಾ|| ಅನಿ ಬೆಸೆಂಟರ 'ನ್ಯೂ ಇಂಡಿಯಾ', ಎಂ. ವೆಂಕಟಕೃಷ್ಣಯ್ಯನವರ 'ಸಾಧ್ವಿ', 'ಸಂಪದಭ್ಯುದಯ ಪತ್ರಿಕೆ'ಗಳನ್ನು ಓದಿ 'ಹೋಂ ರೂಲ್' ಚಳವಳಿ ವಿಚಾರ ತಿಳಿದುಕೊಂಡೆ. ನೌಕರಿಯಲ್ಲಿ ಬೇಸರಗೊಂಡು ಅದನ್ನು ತ್ಯಜಿಸಿ ಮೈಸೂರಿಗೆ ಬಂದು ವೃತ್ತಿಶಿಕ್ಷಣಶಾಲೆ ನಡೆಸಿದೆ.

ಮುಂದೆ ಎಂ.ವಿ. ಅವರ ಸಲಹೆಯಂತೆ 12-8-1919ರಲ್ಲಿ ಬೆಂಗಳೂರು ಬಳೆಪೇಟೆಯಲ್ಲಿ ಕಲಾಮಂದಿರ ಆರಂಭಿಸಿದೆ. ಮೆಜೆಸ್ಟಿಕ್ ಸಿನಿಮಾ ಎದುರಿನ ಆನಂದಮಹಲ್‌ಗೆ ಅದನ್ನು ಅನಂತರ ವರ್ಗಾಯಿಸಿದೆ. ಈ ಮಂದಿರ ಅನೇಕ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರವಾಗುವುದರ ಜೊತೆ ಸ್ವಾತಂತ್ರ್ಯ ಚಳವಳಿಯ ಕೇಂದ್ರವೂ ಆಯಿತು. 1921ರ ಮಧ್ಯದಲ್ಲಿ ಬೆಂಗಳೂರಲ್ಲಿ ಕಾಂಗ್ರೆಸ್ ಸಮಿತಿ ಸ್ಥಾಪಿತವಾಯಿತು. ಆಗಿನಿಂದಲೂ ನನಗೆ ಕಾಂಗ್ರೆಸ್ ಜೊತೆ ಸಂಬಂಧ. ಸ್ವತಂತ್ರ ಕೈಕಸಬುಗಳಿಗೆ ಪ್ರೋತ್ಸಾಹ, ಸ್ವದೇಶಿ ಭಾವನೆಗಳ ನನ್ನ ಮನೋವೃತ್ತಿಗೆ ಕಾಂಗ್ರೆಸ್ ವಿಚಾರಗಳು ಪೋಷಕವಾಗಿದ್ದವು. ಗಾಂಧೀಜಿ ಇದಕ್ಕೂ ಮೊದಲು ಅಲಿ ಸೋದರರ ಜೊತೆ ಬೆಂಗಳೂರಿಗೆ ಬಂದು ಕಂಟೋನ್ಮೆಂಟ್ ಇದ್‌ಗಾ ಮೈದಾನದಲ್ಲಿ ಹಿಂದೆಂದೂ ಕಾಣದ ಭಾರೀ ಜನಸ್ತೋಮದ ಮುಂದೆ ಭಾಷಣ ಮಾಡಿರಲು, ನಾನು ದೇವದಾಸ ಗಾಂಧಿ ಅವರ ಪಕ್ಕದಲ್ಲಿಯೇ ಕೂತು ಅವರ ಭಾಷಣ ಕೇಳಿದ್ದೆ. 1921ರ ಅಹ್ಮದಾಬಾದ್ ಕಾಂಗ್ರೆಸ್ ನಂತರ ಬೆಂಗಳೂರಲ್ಲಿ ಖಾದೀ ಪ್ರಚಾರ ಬಲವಾಯಿತು. ಗುಂಡೋಪಂತ್ ಬೀದಿಯ ಐರಿಷ್ ಪ್ರೆಸ್ ಮಾಲಿಕರಾದ ಕೃಷ್ಣಯ್ಯರು ಶ್ರೇಷ್ಠ ರಾಷ್ಟ್ರಭಕ್ತರಾಗಿದ್ದು ಅಹಮದಾಬಾದಿನಿಂದ ಖಾದಿ ತಂದು ಇಲ್ಲಿ ಒದಗಿಸುತ್ತಿದ್ದರು. ಅವರಿಂದಲೇ ನಾವೆಲ್ಲ ಖಾದಿ ಕೊಳ್ಳುತ್ತಿದ್ದೆವು. ಅವರ ಕಟ್ಟಡದ ಮಹಡಿಯ ಮೇಲೆ ಮಾರ್ಕಂಡೇಯ ಹಿಂದೀ ತರಗತಿ ಆರಂಭಿಸಿ, ಕೆಲಕಾಲಾನಂತರ ಸಿದ್ಧನಾಥ ಪಂಥರು ಅದನ್ನು ಮುಂದುವರಿಸಿದರು. ಆಗ ನಾನೂ ಒಬ್ಬ ವಿದ್ಯಾರ್ಥಿ. ಆ ತರಗತಿಗೆ ಬರುತ್ತಿದ್ದವರೇ ಮುಂದೆ ನಾಗಪುರ ಧ್ವಜಸತ್ಯಾಗ್ರಹಕ್ಕೆ ಹೊರಟವರಾಗಿದ್ದರು. ಈ ಪೈಕಿ ಜೀವಣ್ಣರಾಯರು, ಬಿ. ರಾಮಸ್ವಾಮಿ, ಬಿ. ರಂಗನಾಥರಾವ್ ಇವರನ್ನು ಹೆಸರಿಸಬೇಕು. ಹೈಕೋರ್ಟು ಜಡ್ಜರ ಕೆಲಸಕ್ಕೆ ರಾಜೀನಾಮೆ ನೀಡಿದ್ದ ಎಸ್.ಎಸ್. ಸೆಟ್ಲೂರರು ನಮ್ಮ ಬೀದಿಯಲ್ಲೇ ನೆಲಸಿದ್ದರು. ಅವರೇ ಮೈಸೂರು ರಾಜ್ಯ ಕಾಂಗ್ರೆಸ್ಸಿನ ಪ್ರಥಮ ಅಧ್ಯಕ್ಷರು. ಎಸ್. ಎಂ. ರಜ್ವಿ ಪ್ರಥಮ ಕಾರ್ಯದರ್ಶಿ. ಎಸ್. ಆರ್. ಎಸ್. ರಾಘವನ್ ಸರಕಾರೀ ಹುದ್ದೆಯನ್ನು ತ್ಯಜಿಸಿ ಚಳವಳಿಗೆ ಧುಮುಕಿದ್ದರು. ತಾತಾ ವಿಜ್ಞಾನ ಮಂದಿರದ ಶರ್ಮ,

ಶ್ರೀನಿವಾಸನ್ ಮುಂತಾದವರು ಖಾದೀಧಾರಿಗಳಾಗಿ ಮನೆಮನೆಗಳಿಗೆ ಚರಕವನ್ನು ಹೊತ್ತು ತೆರಳಿ ಜನರಿಗೆ ನೂಲು ತೆಗೆಯಲು ತಿಳಿಸಿಕೊಳ್ಳುತ್ತಿದ್ದರು. ಬಸವನಗುಡಿಯ ಸೀತಾಪತಿ ನಾಯ್ಡು, ಲಕ್ಷ್ಮೀಪತಿ ನಾಯ್ಡು, ಡಾ|| ಸದಾಶಿವ ಮುದಲಿಯಾರ್, ಶಾಮರಾವ್ ಮುಂತಾದವರೂ ಕಾಂಗ್ರೆಸ್ಸಿಗೆ ನೆರವಾಗುತ್ತಿದ್ದವರು.

1922ರ ಗಯಾ ಕಾಂಗ್ರೆಸ್ಸಿನ ಪ್ರತಿನಿಧಿಯಾಗಿ ನಾನೂ ಹೋಗಿದ್ದು ಜೀವಣ್ಣರಾವ್, ಭೀಮರಾವ್, ಲಕ್ಷ್ಮೀನಾರಾಯಣರಾವ್ ಮುಂತಾದ ಬೆಂಗಳೂರಿನ ಇತರ ನಾಲ್ಕಾರು ಜನರೂ ಬಂದು ಇದ್ದರು. ಆಗ ಖಾದೀ ಪೆಟ್ಟಿಗೆಯನ್ನು ತಯಾರಿಸುವ ಕೈಕೆಲಸ ಕಲಾ ಮಂದಿರದಲ್ಲಿ ನಡೆದಿದ್ದು ಅದರ ಒಂದು ಮಾದರಿಯನ್ನು ನಾನು ಅಲ್ಲಿ ಪ್ರದರ್ಶನದಲ್ಲಿ ಇಟ್ಟಿರಲು ಅದು ಮೆಚ್ಚುಗೆ ಪಡೆಯಿತು. ಪ್ರದರ್ಶನ ಉದ್ಘಾಟಿಸಿದ್ದ ಮೋತೀಲಾಲ್ ನೆಹರೂರಿಗೆ ನಾನು ಬಂದು ಆಫೀಸ್ ಕೈಪೆಟ್ಟಿಗೆಯನ್ನು ಪ್ರೆಸೆಂಟ್ ಮಾಡಿದೆ. ನಾನು ಗಯಾಕ್ಕೆ ಹೋಗುವಾಗ ಮದ್ರಾಸಿನಲ್ಲಿ ಇ. ವಿ. ರಾಮಸ್ವಾಮಿ ನಾಯಕರ್ ನನ್ನ ಜೊತೆ ಸೇರಿಕೊಂಡು ರೈಲಿನಲ್ಲಿ ಒಟ್ಟಿಗೇ ಪ್ರಯಾಣಮಾಡಿದೆವು. ಆಗ ಅವರು 'ನೋ ಚೇಂಜರ್' ಇದ್ದರು. ಮರಳುವಾಗ ಅಲಹಾಬಾದ್‌ನಲ್ಲಿ 'ಆನಂದಭವನ'ವನ್ನು ಪವಿತ್ರಭಾವನೆಯಿಂದ ಸಂದರ್ಶಿಸಿದೆವು. ಮದನ ಮೋಹನ ಮಾಲವೀಯರ ಪರಿಚಯವೂ ಆಗಿ, ನಾನು ಬೆನಾರಸಿನಲ್ಲಿ ಅವರು ಸ್ಥಾಪಿಸಿದ ಯುನಿವರ್ಸಿಟಿಯನ್ನೂ ಕಂಡುಬಂದೆ. ನನ್ನ ಕಲಾ ಮಂದಿರದ ಬಗ್ಗೆ ವಿವರ ತಿಳಿದು ಅವರು ಮೆಚ್ಚುಗೆ ಸೂಚಿಸಿದರು. ಇದಕ್ಕೂ ಮೊದಲೇ ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯನಾಗಿದ್ದ ನಾನು ಮುಂದೆ ಮದ್ರಾಸು, ಬೆಳಗಾಂ ಕಾಂಗ್ರೆಸ್ಸುಗಳಿಗೂ ಹೋಗಿದ್ದೆ. ಬೆಳಗಾವಿಯಲ್ಲಿ ಕನ್ನಡನಾಡಿನ ಕಾಂಗ್ರೆಸ್ ಮುಖಂಡ ರನ್ನೂ ಸಾಹಿತಿಗಳನ್ನೂ ಕಲಾವಿದರನ್ನೂ ಪರಿಚಯಮಾಡಿಕೊಳ್ಳುವ ಅವಕಾಶ ದೊರೆ ಯಿತು. ನನ್ನ ತಮ್ಮ ಎ. ಎನ್. ಸೂರ್ಯನಾರಾಯಣರಾವ್ 1928ರ ವರೆಗೆ ನನ್ನ ಜೊತೆ ಇದ್ದು ಮುಂದೆ ಮೈಸೂರು ಚಾಮುಂಡೀಪುರದಲ್ಲಿ ಕಲಾಭವನವನ್ನು ತೆರೆದು, ಆ ಊರಲ್ಲಿ ಕಾಂಗ್ರೆಸ್ಸಿನ ಪ್ರಮುಖ ಕಾರ್ಯಕರ್ತನಾದೆ.

ತಾಳಕೆರೆ ಸುಬ್ರಹ್ಮಣ್ಯಂ ಮತ್ತು ಕೆ. ಟಿ. ಭಾಷ್ಯಂ ನನ್ನ ಕಲಾಮಂದಿರವ ಸ್ಥಿತಿಗತಿಗನುಗುಣವಾಗಿ, ನನ್ನಿಂದ ರಾಷ್ಟ್ರೀಯ ಕಾರ್ಯ ಮಾಡಿಸಿದರು. ಜೈಲಿಗೆ ಹೋಗುವುದಷ್ಟೇ ಮುಖ್ಯವಲ್ಲ, ಹೊರಗಡೆ ನಿಂತು ಪ್ರಚಾರ, ಭೂಗತ ಕಾರ್ಯಕರ್ತರಿಗೆ ನೆರವು ನೀಡುವುದು, ಗುಪ್ತಪತ್ರಿಕೆಗಳ ವಿವರಣೆ ಮುಂತಾದ ಕಾರ್ಯವೂ ಆಗಬೇಕು, ಎಂದು ಹೇಳಿದರು. ಧಾರವಾಡ, ಕಾರವಾರ, ಬೆಳಗಾಂ ಮುಂತಾದ ಕಡೆ ಗುಟ್ಟಾಗಿ ಹೋಗಿ ಪ್ರಕಟಣೆಗಳನ್ನು ತಲಪಿಸುವುದು ಮತ್ತು ಚಳವಳಿಯ ವಿವರಗಳನ್ನು ಸಂಗ್ರಹಿಸಿ ಬರುವುದು ಮಾಡುತ್ತಿದ್ದೆ. ಕಬ್ಬೂರ ವಕೀಲರಿಗೂ ನಾರಾಯಣರಾಯರಿಗೂ ಇಲ್ಲಿಂದ ಸಂಪಿಗೆ ವೆಂಕಟಪತಯ್ಯನವರಿತ್ತ ಪತ್ರಗಳನ್ನು ಒಯ್ದು ಮುಟ್ಟಿಸಿದ್ದೇನೆ. ವೆಂಕಟ ರಾಮಯ್ಯನವರು ತಂದಿತ್ತ ಪತ್ರಗಳನ್ನು ಬೆಂಗಳೂರು, ತುಮಕೂರು, ಕೋಲಾರಗಳಲ್ಲಿ

ಗುಟ್ಟಾಗಿ ಹಂಚಿದ್ದೇನೆ. ಕಲಾಮಂದಿರ ನಡೆಯುತ್ತಿದ್ದ ಆನಂದಮಹಲ್ ಹತ್ತಾರು ಕೊಠಡಿಗಳ ವಿಶಾಲ ಕಟ್ಟಡವಾಗಿದ್ದು ಗುಪ್ತಸಮಾಲೋಚನೆ, ಕೆಲಸಗಳಿಗೆ ಅನುಕೂಲವಾಗಿತ್ತು. ಪಿ. ಆರ್. ರಾಮಯ್ಯ ನನ್ನ ಬಾಲ್ಯಸ್ನೇಹಿತರು. ವೀರಕೇಸರಿ ಸೀತಾರಾಮಶಾಸ್ತ್ರಿಗಳು ಗಣ್ಯಧುರೀಣರು. ನಾವು ಮೂವರೂ ನಿತ್ಯ ಕೃಷ್ಣ ಭವನದಲ್ಲಿ ಸೇರಿ ಕಾಫಿ ಕುಡಿಯುತ್ತ ರಾಜಕೀಯ ವಿಚಾರ ಚರ್ಚಿಸುತ್ತಿದ್ದೆವು. ಗಣಪತಿ ಗಲಾಟೆ ಕಾಲಕ್ಕೆ ನಮ್ಮ ಮೂವರ ಕುರಿತು ಬಂಡುಕೋರರೆಂದು ವರದಿ ಆಗಲು ಕಲಾಮಂದಿರಕ್ಕೆ ಬರುತ್ತಿದ್ದ ರೂ. 50 ಮಾಸಿಕ ಅನುದಾನವನ್ನು ಆರು ತಿಂಗಳು ಸರಕಾರ ನಿಲ್ಲಿಸಿತ್ತು. ಮುಂದೆ ಸರ್ ಮಿರ್ಜಾ ಅದನ್ನು ಮತ್ತೆ ಕೊಡಮಾಡಿದರು.

ಗಾಂಧೀಜಿಯವರನ್ನು ಪ್ರಥಮತಃ ಬಂಧಿಸಿ ವಿಚಾರಣೆಗೆ ಒಳಪಡಿಸಿದಾಗ ಅವರು ಕೋರ್ಟಿನಲ್ಲಿ ನೀಡಿದ ಹೇಳಿಕೆಯನ್ನು ಕನ್ನಡಕ್ಕೆ ಅನುವಾದಿಸಿ 'ಮಹಾತ್ಮಾ ಗಾಂಧೀ ಮತ್ತು ವಿಚಾರಣೆ' ಎಂಬ ಒಂದು ಕಿರುಹೊತ್ತಿಗೆಯನ್ನು ತಯಾರಿಸಿದೆ. ಅದನ್ನು ಇಲ್ಲಿ ಯಾರೂ ಮುದ್ರಿಸಲು ಮುಂದಾಗದಾಗ, ಧಾರವಾಡಕ್ಕೆ ಒಯ್ದು 2000 ಪ್ರತಿಗಳನ್ನು ಮುದ್ರಿಸಿ, ಎರಡಾಣೆಯಂತೆ ಮಾರಲು, ಮೊದಲ ದಿನವೇ 1000 ಪ್ರತಿ ಖರ್ಚಾದವು. ನನ್ನಲ್ಲಿ ಒಂದು ಪ್ರತಿಯೂ ಉಳಿಯಲಿಲ್ಲ. ಈ ಬಗ್ಗೆ ಮೈಸೂರು ಕಾಂಗ್ರೆಸ್ ನನಗೆ 50 ರೂ. ಮೆಚ್ಚಿಗೆಯ ಹಣ ನೀಡಿದರು.

ಕಲಾಮಂದಿರದ ವಿದ್ಯಾರ್ಥಿಗಳೂ ನಮ್ಮ ಬಂಧುಬಳಗದವರೂ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಸಂತಸದಿಂದ ಪಾಲುಗೊಳ್ಳುತ್ತಿದ್ದು, ದ್ರವ್ಯಸಹಾಯವನ್ನೂ ಮಾಡುತ್ತಿದ್ದರು. ನಮ್ಮ ವಿದ್ಯಾರ್ಥಿಯಾಗಿದ್ದ ರುಮಾಲೆ ಚನ್ನಬಸವಯ್ಯ ಸತ್ಯಾಗ್ರಹ ಚಳವಳಿಯಲ್ಲಿ ಪಾಲುಗೊಂಡು ಖ್ಯಾತರಾದರು. ನಮ್ಮ ವಿದ್ಯಾರ್ಥಿಗಳು ಮೆರವಣಿಗೆ, ಪಿಕೆಟಿಂಗ್, ಸಭೆಗಳ ಏರ್ಪಾಡು, ಖಾದಿ ಮಾರಾಟ ಮುಂತಾದ ಕೆಲಸಗಳಲ್ಲಿ ಪಾಲುಗೊಳ್ಳುತ್ತಿದ್ದರು.

'ಮೈಸೂರು ಚಲೋ' ಚಳವಳಿ ಕಾಲಕ್ಕೆ ನಮ್ಮ ಕಲಾಮಂದಿರ ನಾಗಸಂದ್ರ ರಸ್ತೆಯಲ್ಲಿ ಈಗಿರುವ ಸ್ಥಳಕ್ಕೆ ಬಂದಿರಲು, ಆಗಿನ ಸುಮಾರು 50 ವಿದ್ಯಾರ್ಥಿಗಳು ಚಳವಳಿಯಲ್ಲಿ ಉತ್ಸಾಹದಿಂದ ಪಾಲುಗೊಂಡಿದ್ದರು. ಎ. ಎಲ್. ಶ್ರೀನಿವಾಸಮೂರ್ತಿಯ ನೇತೃತ್ವದಲ್ಲಿ ಎ. ಎಸ್. ಮೂರ್ತಿ, ರಾಮನಾಥ್, ಜನಾರ್ದನ್ ಮುಂತಾದವರು ಕೆಲಸ ಮಾಡಿದರು. ಆರ್ಯ ವಿದ್ಯಾ ಶಾಲೆಯ ವಿದ್ಯಾರ್ಥಿಗಳ ತಂಡವೂ ಇತ್ತು. ಬಾರ್ ಅಸೋಸಿಯೇಶನ್ ಎದುರು ಪಿಕೆಟಿಂಗ್ ಮಾಡಿದವರು ಇವರೇ. ನನ್ನ ಅಳಿಯ ಕೆ. ಸುಬ್ಬಕೃಷ್ಣನ ನೇತೃತ್ವದಲ್ಲಿ ಮಹಿಳೆಯರ ತಂಡ : ಮಾನೆ ನಾಗೇಶರಾಯರ ಮಕ್ಕಳು ಹಂಸ, ಶಕುಂತಳ, ನಿಟ್ಟೂರು ಶ್ರೀನಿವಾಸರಾಯರ ಹೆಣ್ಣುಮಕ್ಕಳು, ರಾಮಸ್ವಾಮಿಯವರ ಮಗಳು, ಇವರೆಲ್ಲ ಚಳವಳಿಯಲ್ಲಿ ಪಾಲುಗೊಂಡರು. ಪ್ರತಿಬಂಧಕಾಜ್ಞೆ ಇದ್ದರೂ ಸಜ್ಜನರಾವ್ ಸರ್ಕಲಿನಲ್ಲಿ ಧ್ವಜವಂದನೆ ಮಾಡಿದರು.

ಸ್ವಾತಂತ್ರ್ಯಸಂಗ್ರಾಮದಲ್ಲಿ ನಿಸ್ವಾರ್ಥಭಾವದಿಂದ ನಾನು ಸಲ್ಲಿಸಿದ ಅಳಿಲುಸೇವೆ ಇದು.

ವ್ಯ.ಬೆಂ. 32

## ಎಸ್. ನಾರಾಯಣರಾವ್

ಜನನ : 1912 ಉದ್ಯೋಗ : ಹೊಲಿಗೆ ಕೆಲಸ ವಿಳಾಸ : 124, IV ಮೇನ್, ಚಾಮರಾಜಪೇಟೆ, ಬೆಂಗಳೂರು–18

---



1938ರ ಸುಮಾರಿಗೆ ಒಮ್ಮೆ ಬೆಂಗಳೂರು ಬಸಪ್ಪಾ ಪಾರ್ಕಿನಲ್ಲಿ ಕೆಂಗಲ್ ಹನುಮಂತಯ್ಯನವರ ಭಾಷಣ ಕೇಳಿ ಪ್ರಭಾವಿತನಾಗಿ, ಅಂದೇ ಕಾಂಗ್ರೆಸ್ ಆಫೀಸಿಗೆ ಹೋಗಿ ಕಾಂಗ್ರೆಸ್ ಸೇರಿದೆ. ಖಾದಿ ತೊಡಲು ಆರಂಭಿಸಿದೆ. ಶಿವಪುರ, ವಿದುರಾಶ್ವತ್ಥ, ಚನ್ನಪಟ್ಣ ಕಾಂಗ್ರೆಸ್ಸುಗಳಿಗೆ ಹೋಗಿದ್ದೆ. 1939ರಲ್ಲಿ ಕೆ. ಜಿ. ಎಫ್. ಸತ್ಯಾಗ್ರಹದಲ್ಲಿ ಪಾಲುಗೊಳ್ಳಲು ಬೆಂಗಳೂರಿನಿಂದ ಕಾಲ್ನಡಿಗೆಯಲ್ಲಿಯೇ ಹೋಗಿದ್ದೆ. ನನ್ನ ಜೊತೆ ಶ್ರೀಧರಮೂರ್ತಿ, ವೆಂಕಟರಮಣಪ್ಪ, ಶಿವಣ್ಣ, ಶಿಖರಪ್ಪ ಇವರೆಲ್ಲ ಬಂದಿದ್ದರು. ಸತ್ಯಾಗ್ರಹ ಮಾಡಿದಾಗ ಬಂಧಿಸಿ, ರಾತ್ರಿ ಬಸ್ಸುಗಳಲ್ಲಿ ನಮ್ಮನ್ನು ದೂರದ ಸಂಗಲಿ ಅಡವಿಗೆ ಒಯ್ದು ಬಿಟ್ಟರು. ಮತ್ತೆ ಕೆ.ಜಿ.ಎಫ್.ಗೆ ಬಂದು ಸತ್ಯಾಗ್ರಹ ಮಾಡಲು ಏಳು ದಿನಗಳ ಸಜಾ ಆಯಿತು. ಶಿಕ್ಷೆ ಮುಗಿಯುವ ಮುಂಚೆ ಬೆಂಗಳೂರು ಸೆಂಟ್ರಲ್ ಜೈಲಿಗೆ ತಂದು ಬಿಡುಗಡೆಮಾಡಿದರು.

1939ರ ನಂತರ ಮೈಸೂರು ಬ್ಯಾಂಕ್ ಹತ್ತಿರದ ಸಂದಿಯಲ್ಲಿ ಹೆಂಡದ ಅಂಗಡಿ ಮುಂದೆ ಪಿಕೆಟಿಂಗ್ ನಡೆಸಿದೆವು. ಬೀರೂರಿನ ಕೆ. ಸತ್ಯನಾರಾಯಣಶೆಟ್ಟಿ ಅದನ್ನು ಸಂಘಟಿಸುತ್ತಿದ್ದರು. 1942ರ ಆಗಸ್ಟ್ 15ಕ್ಕೆ ಸಿಟಿ ಬಸ್‌ನಲ್ಲಿ ಟಿಕೆಟ್ ಇಲ್ಲದೆ ಪ್ರಯಾಣ ಮಾಡಿ ಕಾನೂನು ಮುರಿದು ಬಂಧನಕ್ಕೆ ಒಳಗಾದೆ. ನಾವು ಜೈಲಿನಲ್ಲಿ ಇದ್ದಾಗಲೇ ಊರಲ್ಲಿ ಭಾರಿ ಫೈರಿಂಗ್ ಆದ ವಾರ್ತೆ ತಿಳಿಯಿತು. ಬೆಂಗಳೂರು ಸೆಂಟ್ರಲ್ ಜೈಲಿನಿಂದ ಡಿಸೆಂಬರ್‌ನಲ್ಲಿ ಸಾಗರಕ್ಕೆ ಒಯ್ದರು. ಕೆಲವು ತಿಂಗಳನಂತರ ಮತ್ತೆ ಬೆಂಗಳೂರಿಗೆ ಒಯ್ದು, ಅಲ್ಲಿಂದಲೇ ನನ್ನ ಬಿಡುಗಡೆ ಆಯಿತು. ಆ ಕಾಲದಲ್ಲಿ 9 ತಿಂಗಳು ಸ್ಥಾನಬದ್ಧನಾಗಿದ್ದೆ. ಶಿಕ್ಷೆ ಆಗಿಲ್ಲ.

ವೈ.ಬೆಂ. 33

# ಕೆ. ಸಿ. ಚೌಡಪ್ಪ ರೆಡ್ಡಿ

ವಯಸ್ಸು : 53

ಉದ್ಯೋಗ : ರಾಜ್ಯ ವಾರ್ತಾ ಇಲಾಖೆ ಜಂಟಿ ಡೈರೆಕ್ಟರ್

ವಿಳಾಸ : 485, XI ಮೇನ್, ಹೊಂಬೇಗೌಡನಗರ, ಬೆಂಗಳೂರು-27

---



ನನ್ನ ಬಾಲ್ಯದಿಂದಲೂ ನನಗೆ ಸ್ವಾತಂತ್ರ್ಯ ಚಳವಳಿಯ ಬಗ್ಗೆ ಉತ್ಸಾಹ. ಮಲ್ಲೇಶ್ವರಂ ಮಿಡಲ್ ಸ್ಕೂಲಿನಲ್ಲಿ ಮೂರನೆಯ ತರಗತಿ ಓದುತ್ತಿದ್ದಾಗ 1934ರ ಜನವರಿಯಲ್ಲಿ ಗಾಂಧೀಜಿ ಬೆಂಗಳೂರಿಗೆ ಬಂದಿದ್ದರು. ಆಗ ಮಲ್ಲೇಶ್ವರಂ ರೀಡಿಂಗ್ ರೂಮಿನಲ್ಲಿ ಏರ್ಪಡಿಸಿದ್ದ ಯಾವುದೋ ಒಂದು ಸಭೆಗೆ ಅವರು ಬಂದಾಗ ರೀಡಿಂಗ್ ರೂಂನ ಹಾದಿಯ ಇಕ್ಕೆಲಗಳಲ್ಲಿ ಸಾಲಾಗಿ ನಿಂತು ವಿದ್ಯಾರ್ಥಿಗಳೆಲ್ಲ ಅವರನ್ನು ನಮಿಸಿದೆವು. ಮುಗುಳ್ನಗೆ ಸೂಸುತ್ತ ಬಿರಬಿರನೆ ನಡೆದುಹೋದ ನೋಟ ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಆಗ ನಾನೂ ಜೂಗನಹಳ್ಳಿಯ ಕೆ. ರಾಮಯ್ಯ (ಈಗ ಅ|| ಕಮಿಶನರ್), ಎಂ. ರಾಮಯ್ಯ ಮತ್ತಿತರ ಮಿತ್ರರೊಡನೆ ಬಿಳಿಹಾಳೆಗಳಲ್ಲಿ 'ಬಾಯ್ಕಾಟ್ ಬ್ರಿಟಿಷ್ ಗೂಡ್ಸ್' ಎಂದು ಬರೆದು ಎಲ್ಲ ತರಗತಿಗಳಲ್ಲಿಯೂ ಗೋಡೆಗಳ ಮೇಲೆಯೂ ಅಂಟಿಸಿದ್ದೆವು. ಆಗ ಹೆಡ್ ಮಾಸ್ತರರು ಬಾಸುಂಡೆ ಬರುವಂತೆ ಬಾರಿಸಿದ್ದರಿಂದ ಮೂರುನಾಲ್ಕು ದಿನ ಊಟ ಮಾಡಲಾಗಲಿಲ್ಲ.

1938ರಲ್ಲಿ ನನ್ನ ಹದಿನೈದನೆಯ ವಯಸ್ಸಿನಲ್ಲಿ, ಎಸ್.ಎಸ್.ಎಲ್.ಸಿ. ಓದುತ್ತಿದ್ದಾಗ ಕೇತಮಾರನಹಳ್ಳಿಯಲ್ಲಿ (ಈಗ ರಾಜಾಜಿನಗರ) 'ತಾಯಿನಾಡು' ಸಂಪಾದಕ ಸಿ. ಆರ್. ರಾಮಯ್ಯನವರ ಅಧ್ಯಕ್ಷತೆಯಲ್ಲಿ ಹರಿಜನರ ಸಾಮೂಹಿಕ ದೇವಾಲಯ ಪ್ರವೇಶ ಏರ್ಪಡಿಸಿದ್ದೆ. ಗೋಪಾಲಸ್ವಾಮಿ ಅಯ್ಯರ್ ಮತ್ತು ಡಿ. ಎನ್. ಕೃಷ್ಣಯ್ಯ ಶೆಟ್ಟರೂ ಅಂದು ಮಾತನಾಡಿದ್ದರು. ಊರ ಪ್ರಮುಖರು ನಮ್ಮ ಮನೆಯ ಮೇಲೆ ಬಹಿಷ್ಕಾರ ವಿಧಿಸಿದ್ದರಿಂದ ಹರಿಜನರೊಡನೆ ನಾನೂ ಬಹಳ ಕಿರುಕುಳಕ್ಕೊಳಗಾಗಬೇಕಾಯಿತು. ಆ ವರ್ಷ ಪರೀಕ್ಷೆಗೇ ಕುಳಿತುಕೊಳ್ಳಲಾಗಲಿಲ್ಲ.

1942ರಲ್ಲಿ ನಾನು ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಜ್ಯೂ. ಬಿ.ಎ.ಯಲ್ಲಿ ಓದುತ್ತಿದ್ದೆ. ಗಾಂಧೀಜಿಯವರ ಬಂಧನದ ವಾರ್ತೆ ಆಗಸ್ಟ್ 9ಕ್ಕೆ ತಲುಪಿ, ಆ ದಿನ

ವಿದ್ಯಾರ್ಥಿಗಳು ತರಗತಿಯಿಂದ ಹೊರಬಂದಿದ್ದರು. ಮರುದಿನ ಒಂಟಿಕೊಪ್ಪಲು ಮುಖ್ಯ ಚೌಕದಲ್ಲಿ ಬಹಿರಂಗಸಭೆ ಏರ್ಪಡಿಸಿದೆವು. ಅಧ್ಯಕ್ಷರು ರಾಮಕೃಷ್ಣಾಶ್ರಮದ ಶ್ರೀ ಶಾಂಭವಾನಂದಜಿ. ಭಾಷಣಕಾರರು ಕವಿಪುಂಗವ ಕುವೆಂಪು. ಗಾಂಧೀಜಿಯನ್ನು ಬುದ್ಧ, ಜಿನ, ಕ್ರಿಸ್ತ ಮತ್ತು ಪರಮಹಂಸಸದೃಶರಾದ ಯುಗಪುರುಷರೆಂದು ಬಣ್ಣಿಸಿ ಬರೆದಿದ್ದ ಕವನರತ್ನವನ್ನು ಭಾವಪೂರ್ಣವಾಗಿ ಕುವೆಂಪು ಓದಿದರು. ಸಭೆ ಮಂತ್ರಮುಗ್ಧವಾಯಿತು. ಅನಂತರ ನಾನು ರಚಿಸಿದ, ಜೋಗುಳದ ಧಾಟಿಯ ಗಾಂಧೀಗೀತೆ ಹಾಡಿದೆ. ಅಲ್ಲಿದ್ದವರೆಲ್ಲ ದನಿಗೂಡಿಸಿದರು. ಅದು ಗಾಂಧೀಭಜನೆಯಂತೆ ಆಯಿತು. ಮುಂದೆ ಮೈಸೂರಿನಲ್ಲಿ ಪ್ರಭಾತ್‌ಫೇರಿ, ಮೆರವಣಿಗೆಗಳಲ್ಲಿ ಈ ಗೀತೆ ಹಾಡತೊಡಗಿದರು :

ಜಯ್ ಜಯ್ ಗಾಂಧೀ ಮೋಹನ ಗಾಂಧೀ
ತ್ಯಾಗೀ ಯೋಗೀ ಉದಾರ ಸುಧೀರ || ಪ ||
ದೇಶೋದ್ಧಾರಕ ಸ್ವಾತಂತ್ರ್ಯವೀರ,
ಸತ್ಯ ಅಹಿಂಸಾತ್ಮಕ ದೀನಮಂದಾರ || ಅ.ಪ. ||

ಸತ್ಯಾಗ್ರಹಧರ್ಮದಾಚಾರ್ಯನೆ
ಸ್ವಾತಂತ್ರ್ಯತತ್ವದ ಗುರುವರ್ಯನೆ ||
ಅಹಿಂಸಾವ್ರತ ಸಾರಿ ಮುಂದಾಗುವೆ
ಸ್ವಾತಂತ್ರ್ಯಸಂಗ್ರಾಮಕೆದೆಯೊಡ್ಡುವೆ || ಇತ್ಯಾದಿ.

ಆದರೆ ಅಧ್ಯಕ್ಷತೆ ವಹಿಸಿದ ಸ್ವಾಮಿಜಿಯವರಿಗೆ ಮಾತ್ರ ಭಜನೆಯ ಧಾಟಿಯ ಈ ಹಾಡು ಹಿಡಿಸಲಿಲ್ಲ. ಮುಗ್ಧ ಜನತೆಯಲ್ಲಿ ಭಕ್ತಿಭಾವ ಬಿತ್ತುವ ಭಾವಗೀತೆಗಳ ಬದಲು ವೀರರಸ ಉಕ್ಕಿಸುವ ವೀರಗೀತೆಗಳ ಆವಶ್ಯಕತೆಯನ್ನು ಒತ್ತಿಹೇಳಿದರು. ಅವರ ಈ ಹೇಳಿಕೆಯಿಂದಾಗಿ ಮೂಡಿಬಂದ ಮತ್ತೊಂದು ದೀಕ್ಷಾಗೀತೆ 'ಆರಾಧನೆ' :

ಸ್ವಾತಂತ್ರ್ಯಶಕ್ತಿಯನ್ನೆಂದೆಂದಿಗೂ ನಮ್ಮ
ಸ್ಥೈರ್ಯದಿಂದಿಹ ಹೃದಯಪೀಠದಲ್ಲಿರಿಸಿ,
ದೀನಮಾನವರೆಲ್ಲ ಸೇವಾಸ್ತ್ರವಂ ನಮ್ಮ
ನಿತ್ಯಜೀವನಮಂತ್ರಸೂತ್ರದಿಂ ಧರಿಸಿ,
ಭೀಕರದ ರೌದ್ರತೆಯ ಜೀವನಾಡಿಗೆ ಕಟ್ಟ
ಮಿಥ್ಯತೆಯ ಕುಹಕವಂ ಬರಸೆಳೆದು ದಹಿಸಿ,
ಸತ್ಯದೆರಕವ ಹೊಯ್ದು ಖಡ್ಗದಿಂದೆದೆಯಿರಿದು
ಸಿಡಿಲ ತೀವ್ರತೆ ಬರಿಸಿ ದೀಕ್ಷೆಯಂ ಧರಿಸಿ
ಸ್ವಾತಂತ್ರ್ಯಸಾಮ್ರಾಜ್ಯಲಕ್ಷ್ಮಿಯನ್ನೊಲಿಸಿಟ್ಟು
ಬಿಸಿನೆತ್ತರಲ್ಲಾರಾಧಿಸೆಂ ||

ಮರುದಿನ ಸ್ವಾಮೀಜಿಯವರ ಮುಂದೆ ಈ ಗೀತೆ ಓದಿದಾಗ "ಜನತೆಯನ್ನು ಜಾಗೃತಿಗೊಳಿಸಬಲ್ಲ ಇಂತಹ ವೀರಗೀತೆಗಳು ಹರಿದುಬರಲಿ" ಎಂದು ಆಶೀರ್ವದಿಸಿದರು. ಇಂಥ ಅನೇಕ ಗೀತೆಗಳನ್ನು ನಾನು ರಚಿಸಿದ್ದೆ.

'ಕ್ವಿಟ್ ಇಂಡಿಯಾ' ಚಳವಳಿ ಮೈಸೂರು ನಗರದಲ್ಲಿ ಯಾವ ಬಗೆಯ ಅಹಿತಕರ ಘಟನೆಗಳೂ ಇಲ್ಲದೆ ಯಶಸ್ವಿಯಾಗಬೇಕಾದರೆ ಮುಖ್ಯಕಾರಣ ವಿದ್ಯಾರ್ಥಿನಾಯಕರ ಶಿಸ್ತು, ಸಂಯಮ, ಸಮಯಸ್ಫೂರ್ತಿ, ಮುಂದಾಲೋಚನೆ, ರಹಸ್ಯಪಾಲನೆ, ಕಷ್ಟ ಸಹಿಷ್ಣುತೆ, ಉದಾತ ಸಹಕಾರ, ನಿಷ್ಠಾವಂತ ನಡವಳಿಕೆ, ಮೇಲಾಗಿ ಮಾನವೀಯ ಅನುಕಂಪಗಳು. ಕಠಿಣಹೃದಯಿಗಳೆಂದು ಹೆಸರಾದ ಪೋಲೀಸರೂ ಸ್ವರಾಜ್ಯತತ್ವಕ್ಕೆ ಪರಿವರ್ತನೆಯಾಗುವಷ್ಟು ಪರಿಣಾಮಕಾರಿಯಾಗಿತ್ತು ವಿದ್ಯಾರ್ಥಿಗಳ ಚಳವಳಿ. ಆಗ ಮುಂಚೂಣಿಯಲ್ಲಿದ್ದ ವಿದ್ಯಾರ್ಥಿನಾಯಕರೆಂದರೆ ಎಂ. ವಿ. ಕೃಷ್ಣಪ್ಪ, ಎಚ್. ವೈ. ಶಾರದಾಪ್ರಸಾದ್, ಶ್ರೀಮತಿ ಕಮಲಾ ಶಾರದಾಪ್ರಸಾದ್, ಕೆ. ಭೀಮಯ್ಯ ಮತ್ತು ರಂಗೇಗೌಡ (ಈಗಿನ ಹೈಕೋರ್ಟ್ ನ್ಯಾಯಾಧೀಶರು), ಭೂಪಾಲಂ, ಡಿ. ಎಂ. ಸಿದ್ದಯ್ಯ, ಬಿ. ರಾಚಯ್ಯ, ಕೆ. ಪ್ರಭಾಕರ್ (ಈಗ ವಿಧಾನಸಭಾ ಸದಸ್ಯರು). ಹೆನ್ರಿ ದೇವಿದಾಸ್, ಅಬ್ದುಲ್ ಗಫಾರ್ (ಈಗ ಮೇಜರ್), ವೈ. ಕೆ. ರಾಜಗೋಪಾಲ್ (ಈಗ ಪತ್ರಿಕೋದ್ಯಮಿ), ಶೇಷರಾಘವಾಚಾರ್, ನಾಡಿಗ್, ಮರುಳಸಿದ್ದಯ್ಯ. ಇವರಲ್ಲದೆ 'ಕರಿಕುರಿ'ಗಳಿಗೆ ಬುದ್ಧಿ ಕಲಿಸಲು ದೃಢಕಾಯರ ವಿಶೇಷ ಅಂಗರಕ್ಷಕ ದಳ ಒಂದಿತ್ತು. ಇದರಲ್ಲಿ ಇದ್ದವರು ಕೆಂಗೇಗೌಡ (ಈಗ ಟ್ರಸ್ಟ್ ಬೋರ್ಡ್ ಅಧ್ಯಕ್ಷರು), ಹೊಸಕೋಟೆ ಮುನಿರೆಡ್ಡಿ, ಪೆರಿಯಾಪಟ್ಟಣದ ವೆಂಕಟರಾಂ, ಎಚ್. ಬಿ. ಕೆಂಚೇಗೌಡ (ಶಾಸಕರು), ನಾನಾರಾವ್ (ಈಗ ಪೋಲೀಸ್ ಅಧಿಕಾರಿ), ಶ್ರೀಕಂಠಯ್ಯ ಮತ್ತು ನಾನು. ಸರಕಾರೀ ವಿರೋಧೀ ಚಟುವಟಿಕೆಗಳ ಕಾರಣ ಈ ವಿದ್ಯಾರ್ಥಿಗಳಿಗೆ ಸ್ಕಾಲರ್‌ಶಿಪ್ ವಗೈರೆ ಸೌಲಭ್ಯ ದೊರಕದಂತೆ ಮಾಡಲು ಪ್ರಿನ್ಸಿಪಾಲ್ ರೋಲೋ ಅವರು ಇವರ ಒಂದು 'ಕರೀಪಟ್ಟಿ' ಮಾಡಿಟ್ಟಿದ್ದರು. ಆಂದೋಲನದ ಲಾವಣಿ ಹಾಡುತ್ತಿದ್ದ ಗ. ಸ. ಹಾಲಪ್ಪ ಮತ್ತು ಕೆ. ಆರ್. ಲಿಂಗಪ್ಪ ಅವರುಗಳ ಹೆಸರೂ ಈ ಕರೀಪಟ್ಟಿಯಲ್ಲಿ ಇತ್ತು. ಕಾಲೇಜುಗಳು ಮುಚ್ಚಿದ ಕೂಡಲೇ ಅನೇಕ ಸಿರಿವಂತರ ಮಕ್ಕಳು ತವರಿಗೆ ಮರಳಿದರು; ಕೆಲವರು ಮಾತ್ರ ಉಳಿದರು.

ಮಹಾರಾಜಾ ಕಾಲೇಜು ಹಾಸ್ಟಲಿನ ಗೋಪುರದ ಗಡಿಯಾರದ 'ರೋಲೋ ಕ್ಲಾಕ್' ಎಂಬ ಹೆಸರಿನ ಬರಹವನ್ನು ರಾತ್ರೋರಾತ್ರಿ 'ಆಜಾದ್ ಕ್ಲಾಕ್' ಎಂದು ಬದಲಿಸಿದ ಸಾಹಸದ ಕೆಲಸವಾದಾಗ ಮೇಲೆ ಹೇಳಿದ ಅನೇಕ ವಿದ್ಯಾರ್ಥಿಗಳನ್ನು ಬಂಧಿಸಲು ಆಜ್ಞೆ ಆಗಿದೆಯೆಂದು ಗೊತ್ತಾಯಿತು. ವಿದ್ಯಾರ್ಥಿನಾಯಕರ ಗುಪ್ತಸಭೆ ಆಯಿತು. ಜಿಲ್ಲೆಗೆ ಒಬ್ಬರು, ಇಬ್ಬರಂತೆ ಸಂಚಾಲಕರನ್ನು ಆರಿಸಿ, ಅವರೆಲ್ಲ ನಿಗೂಢರಾಗಿದ್ದು ನಗರ ಮತ್ತು ಗ್ರಾಮಾಣ ಪ್ರದೇಶಗಳಲ್ಲಿ ಆಂದೋಲನವನ್ನು ಮುಂದುವರಿಸಬೇಕೆಂದು

ತೀರ್ಮಾನಿಸಿದರು. ಅದರಂತೆ ನನ್ನ ಪಾಲಿಗೆ ಬಂದುದು ಬೆಂಗಳೂರು ಗ್ರಾಮಾಂತರ ಜಿಲ್ಲೆ.

ರಾಜಧಾನಿಯ ಪಕ್ಕದಲ್ಲಿರುವ ನನ್ನ ಊರು ಕೇತಮಾರನಹಳ್ಳಿಯಲ್ಲಿ ರಾಜಕೀಯ ಜಾಗೃತಿ ಮಂದವೇ; ದೀಪದ ಅಡಿಯ ನೆರಳಿನಂತೆ. ಇದ್ದೊಬ್ಬ ಅಕ್ಷರಸ್ಥ ಊರ ಶ್ಯಾನುಭೋಗನ ನಂಬಿಕೆ ಎಂದರೆ, "ಊರಿಗೆ ರಸ್ತೆ ಆದರೆ, ನಾಗರಿಕತೆ ಹರಿದುಬಂದು ಹಳ್ಳಿ ಹಾಳಾಗುವುದು" ಎಂದು. ಅಲ್ಲದೆ ರಸ್ತೆ ಆದರೆ ಮೇಲಧಿಕಾರಿಗಳ ಕಾಟ ಹೆಚ್ಚು. ರೈತರ ಮಕ್ಕಳು ವಿದ್ಯಾವಂತರಾದರೆ, ಮುಂದಿನ ಪೀಳಿಗೆಯ ಕಾಲಕ್ಕೆ ವ್ಯವಸಾಯಗಾರರೇ ಇಲ್ಲವಾಗಿ, ತನ್ನ ಭೂಮಿ ಎಲ್ಲ ಪಾಳುಬೀಳುವುದೆಂಬ ಭಯ ಕೂಡ ಅವರಿಗೆ. ರಸ್ತೆಯಾಗಬಾರದೆಂಬ ಶ್ಯಾನುಭೋಗರ ಸಿಲವು ಚಳವಳಿಗೆ ಅನುಕೂಲ. ಹಳ್ಳಿಗೂ ನಗರಕ್ಕೂ ನಡುವಿನ ಸರ್ವೇತೋಪು ನಮ್ಮ ಗೂಢಚಟುವಟಿಕೆಗಳ ಕೇಂದ್ರ ವಾಯಿತು. ಅಕ್ಕಪಕ್ಕದ ಎಳೆಂಟು ಹಳ್ಳಿಗಳ ರೈತಪ್ರಮುಖರು ರಾಜಾ, ಮಿನರ್ವಾ, ಬಿನ್ನಿ ಮಿಲ್ಲುಗಳ ಕಾರ್ಮಿಕ ನಾಯಕರು ಅಲ್ಲಿ ಸೇರುತ್ತಿದ್ದರು. ಬೂದಗೆರೆ ಹೊಸಳ್ಳಿಯ ಆರ್. ವೆಂಕಟಸ್ವಾಮಿ (ಈಗ ಇಂಜಿನಿಯರು), ತುರುಕರ ಪಾಳ್ಯದ ಮಹೇಶ್ವರಿ, ಜೂಗನ ಹಳ್ಳಿಯ ಸಂಜೀವಪ್ಪ ಪ್ರಮುಖ ಕಾರ್ಯಕರ್ತರು.

ಅಠಾರಾ ಕಚೇರಿಯ ಮುಂದೆ ಸತ್ಯಾಗ್ರಹ ನಡೆಸಲು ನಿರ್ದಿಷ್ಟಪಡಿಸಿದ ದಿನ ಮೈಸೂರು ಬ್ಯಾಂಕು ಚೌಕದ ಮಾರುತಿ ಗುಡಿಯಿಂದ ಜಾಥಾ ಹೊರಡುವುದೆಂದು ಅರಳೇ ಪೇಟೆ ಕಾಂಗ್ರೆಸ್ ಕಚೇರಿಯಿಂದ ಪ್ರಕಟಣೆ ಬಂತು. ಸರ್ವೇತೋಪಿನಲ್ಲಿ ಯೋಜನೆ ಹಾಕಿದೆವು. ಐದು ಜನಕ್ಕಿಂತ ಹೆಚ್ಚು ಜನ ಒಂದೆಡೆ ಸೇರಬಾರದೆಂದು ಆಜ್ಞೆ ಆಗಿತ್ತು. ಆ ದಿನ ಬೆಳಗ್ಗೆ ಮಾರುತಿ ಗುಡಿ ಮೇಲೆ ಬಾವುಟ ಹಾರಿಸಲು ನನಗೆ ಮತ್ತು ಸೆಂಟ್ರಲ್ ಕಾಲೇಜು ವಿದ್ಯಾರ್ಥಿ ಆವಲಕೊಂಡ ರೆಡ್ಡಿಗೆ ಜವಾಬ್ದಾರಿ ನೀಡಲಾಯಿತು.

ಕೋಟೆಯ ದಕ್ಷಿಣಕ್ಕೆ ಇದ್ದ ಒಕ್ಕಲಿಗ ವಿದ್ಯಾರ್ಥಿನಿಲಯದಲ್ಲಿ ರೆಡ್ಡಿಯವರ ರೂಮಿಗೆ ಹೋದಾಗ ಸುತ್ತ ಪೋಲೀಸರ ಓಡಾಟ. ರಾತ್ರಿ ಮೆಜಿಸ್ಟಿಕ್ ಟಾಕೀಸಿಗೆ ಎರಡನೆಯ ಆಟಕ್ಕೆ ಹೋದೆವು. ಹಾಸ್ಟಲಿನಿಂದ ಅಪರಿಚಿತರು ಇಬ್ಬರು ನಮ್ಮನ್ನು ಹಿಂಬಾಲಿಸಿ ಸಿನೀಮಾಕ್ಕೂ ನಮ್ಮ ಜೊತೆ ಬಂದರು. ಸಿನೆಮಾದ ನಡುವೆ ಅವರ ಕಣ್ಣುತಪ್ಪಿಸಿ ಆಸ್ಪತ್ರೆ ರಸ್ತೆಯಿಂದ ಹಾದು ಮೈಸೂರ್ ಬ್ಯಾಂಕ್ ಚೌಕಕ್ಕೆ ಬಂದೆವು. ಸಿನೆಮಾ ಬಿಟ್ಟು ಜನಸಂಚಾರ ಕಡಿಮೆ ಆದಾಗ, ಮಾರುತಿ ದೇವರ ಗುಡಿಯ ಹಿಂದಣ ಬಂಡೆಮೇರಿ, ಗುಡಿಯ ಛಾವಣಿ ಹತ್ತಿದೆವು. ಆರು ಮೊಳದ ಬಿದಿರು ಗಳ ಆಗಲೇ ಅಲ್ಲಿ ಬಂದು ಸೇರಿತ್ತು. ನನ್ನ ಸೊಂಟದ ಸುತ್ತ ಪಂಚೆಯ ಮರೆಯಲ್ಲಿ ಧ್ವಜವಿತ್ತು. ರಾತ್ರಿ ಎರಡರ ಸುಮಾರಿಗೆ ಜೇಡ ಎಂದರೂ ನಿದ್ದೆ. ನಾಲ್ಕಕ್ಕೆ ತುಂತುರುಮಳೆಯಿಂದಾಗಿ ಎಚ್ಚರ. ಮಳೆ ಕ್ಷಣಿಕ. ಆಗಲೇ ೨೦ ಪೋಲೀಸು ವಾಹನಗಳೂ ಅಶ್ವಾರೋಹಿ ಪೋಲೀಸರೂ ನಿರ್ದೇಶಿತ ಸ್ಥಳಗಳಲ್ಲಿ ನಿಲ್ಲಲಾರಂಭಿಸಿದ್ದರು. ಅಧಿಕಾರಿಗಳಲ್ಲಿ ಇಬ್ಬರು

ಮೂವರು ಆಂಗ್ಲರು.

ಬೆಳಗ್ಗೆ ಐದರ ಸುಮಾರಿಗೆ ಒಬ್ಬಿಬ್ಬರಂತೆ ಆರಂಭವಾಗಿ, ಎಂಟರ ಹೊತ್ತಿಗೆ ಮೂರು-ನಾಲ್ಕರಂತೆ ರೈತರ, ಕಾರ್ಮಿಕರ ಗುಂಪುಗಳು ಕಾಲು ಹಾಕಹತ್ತಿದ್ದವು ಮಾರುತಿ ಗುಡಿ ಬಳಿ. ಕೊಂಚ ಕಾಲದಲ್ಲಿ ವೈದಿಕರಂತೆ ವೇಷ ಧರಿಸಿ, ಕೈಯ ಚೀಲದಲ್ಲಿ ಕೆಳಗಡೆ ರಾಗಿ, ಮೇಲಕ್ಕೆ ಹಣ್ಣುಕಾಯಿ ಇಟ್ಟುಕೊಂಡು ಎಸ್. ಎನ್. ಗುಪ್ತ (ಸೂರ್ಯನಾರಾಯಣ) ಗುಡಿಯೊಳಕ್ಕೆ ಹೊಕ್ಕರು. ಇದೇ ಸಂಕೇತ. ಗುಡಿಯ ಮೇಲೆ ಮಲಗಿದಲ್ಲೇ ಗಳುವಿಗೆ ಬಾವುಟ ಬಿಗಿದು ಕಟ್ಟಿದೆವು. ಚೌಕದ ಸುತ್ತ ಜನಪ್ರವಾಹ ಅವರನ್ನು ಚದರಿಸಲು ಲಾಠೀಧಾರೀ ಪೋಲೀಸರ ಓಡಾಟ, ಕೂಗಾಟ, ಒದರಾಟ. ಗುಡಿಯಲ್ಲಿ ಮಂಗಳಾರತಿ ಆದಂತೆ ಒಳಗಿದ್ದ ಗುಪ್ತ ತೂಗುಗಂಟೆಯನ್ನು ಬಿಡುವು ಬಿಡದೆ ಬಾರಿಸತೊಡಗಿದಾಗ, ಬಾವುಟ ಹಾರಿಸುವ ಸೂಚನೆ. "ಬೋಲೋ ಭಾರತ್ ಮಾತಾಕೀ ಜೈ" ಎಂದು ಗುಡಿಯ ಮೇಲಿದ್ದ ನಾವಿಬ್ಬರೂ ಥಿಗ್ಗನೆದ್ದು ಬಾವುಟವನ್ನು ಮೇಲೆತ್ತಿ ಹಿಡಿದು ಉಚ್ಚಕಂಠದಿಂದ ಕೂಗಿದೆವು. ಎತ್ತಿದ ಬಾವುಟ ಕಂಡು ಹುರುಪು ಗೊಂಡ ಜನ ಪೋಲೀಸರ ಅಡೆತಡೆಗಳನ್ನೂ ಲೆಕ್ಕಿಸದೆ ಪ್ರಳಯಪ್ರವಾಹದಂತೆ ಗುಡಿಯತ್ತ ನುಗ್ಗಿಬಂತು. ಜಿಲ್ಲಾ ಕಚೇರಿ ಆವರಣದಲ್ಲಿ ಸಜ್ಜಾಗಿದ್ದ ಅಶ್ವಾರೂಢಪಡೆ ಮೇಲೇರಿ ಬಂದು ದೊಡ್ಡಪೇಟೆಯತ್ತ ಧಾವಿಸಿತು. ಗುಪ್ತ ಅದಕ್ಕೂ ಮೊದಲೇ ಗುಡಿಯಿಂದ ಹೊರಬಂದು ರಸ್ತೆಗೆಲ್ಲ ರಾಗಿ ಎರಚಿದ್ದರಿಂದ ಕುದುರೆಗಳು ಕಾಲು ಜಾರಿ ಬಿದ್ದು ಅನೇಕ ಸವಾರರ ತೊಡೆ, ತೋಳು, ತಲೆಗಳಿಗೆ ಏಟಾಯಿತಂತೆ.

ಸಬ್‌ಇನ್ಸ್‌ಪೆಕ್ಟರರಿಬ್ಬರು ಗುಡಿಯ ಮೇಲೆ ಹತ್ತಿಬಂದು ಬಾವುಟಸಹಿತ ನಮ್ಮನ್ನು ಕೆಳಕ್ಕಿಳಿಸಿದರು. ಧ್ವಜ ಹಿಡಿದ ಧೈರ್ಯದಿಂದ, ವೀರಾವೇಶದಿಂದ ಮೂರು ಮಾರು ಹೋಗುವಷ್ಟರಲ್ಲಿ ಲಾಠೀಚಾರ್ಜು ಆರಂಭವಾಗಿ, ನನ್ನ ತಲೆಗೆ ಗುರಿಯಿಟ್ಟು ಪೋಲೀಸ ನೊಬ್ಬ ಲಾಠಿ ಬೀರಿದ. ಧ್ವಜದ ಗಳುವಿನಿಂದ ಅಡ್ಡೈಸಿದಾಗ ಪೆಟ್ಟು ಬಲಗೈಮೇಲೆ ಬಿತ್ತು. ಕೈ ಒಡೆದು ರಕ್ತ ಚಿಮ್ಮಿ ಉಟ್ಟ ಬಟ್ಟೆಯನ್ನು ತೋಯಿಸುತ್ತಿದ್ದಂತೆ ಮತ್ತೊಬ್ಬ ಕೊಟ್ಟ ಪೆಟ್ಟು ಕತ್ತಿನ ಹಿಂಭಾಗಕ್ಕೆ ಬಿತ್ತು. ತಲೆಸುತ್ತಿಬಂದು ಕೆಳಗೆ ಬಿದ್ದೆ. ಮುಂದೆ ಗೋಲೀಬಾರ್ ಆಯಿತಂತೆ. ಆವಲಕೊಂಡ ರೆಡ್ಡಿ ನೂಕುನುಗ್ಗಲಲ್ಲಿ ಪಾರಾಗಿ ಹಾಸ್ಟೆಲ್ ಸೇರಿದರಂತೆ.

ಪ್ರಜ್ಞೆ ಬರುತ್ತಿತ್ತು. ರಕ್ತದಿಂದ ಒದ್ದೆಯಾದ ಬಟ್ಟೆಯ ತಣಿವು ಇಳಿದಿತ್ತು. ನಾನು ವಿಕ್ಟೋರಿಯ ಆಸ್ಪತ್ರೆಯಲ್ಲಿ ಸ್ಟ್ರೆಚರಿನ ಮೇಲೆ ಇದ್ದೆ. ನನ್ನ ಪಕ್ಕದಲ್ಲಿ ಗುಂಡೇಟಿಗೆ ಬಲಿಬಿದ್ದವರ ಮೂರು ಹೆಣಗಳು. ಆ ಪೈಕಿ ಒಬ್ಬ 12ರ ಕಂದ. ಸ್ವಾತಂತ್ರ್ಯಲಕ್ಷ್ಮಿಯ ಅಡಿದಾವರೆಗಳಲ್ಲಿ ಅವರು ಪ್ರಾಣಾರ್ಪಣೆ ಮಾಡಿದ್ದರು. ನಾನು ಎದ್ದು ಕುಳಿತಾಗ ಹತ್ತಿರವೇ ಇದ್ದ ಡಾ|| ವೆಂಕಟರಾಮಯ್ಯ 'ದಿಸ್ ಬಾಯ್ ಇಸ್ ಎಲೈವ್ !" ಎಂದು ಅಚ್ಚರಿಯಿಂದ ಕೂಗಿಕೊಂಡರು, ಎರಡು ಬಾರಿ. ನನ್ನನ್ನು ಪ್ರೈಸರ್ ಓ.ಟಿ.ಗೆ ಒಯ್ದು

ಮುಂಗೈಗೆ ಹೊಲಿಗೆ ಹಾಕಿದರು.

ಈಗಲೂ 10-15 ನಿಮಿಷ ಎಡೆಬಿಡದೇ ಬರೆದರೆ ಮುಂಗೈ ಹೆಬ್ಬೆಟ್ಟಿನಲ್ಲಿ ತೀವ್ರ ವೇದನೆ ಆಗುತ್ತದೆ. ಅಲ್ಲಿ ಒಂದು ಮುಖ್ಯ ನರ ಕತ್ತರಿಸಿಹೋಗಿದೆಯೆಂದು ವೈದ್ಯರ ಅಭಿಪ್ರಾಯ. ಮೊದಲು ಲಾಠೀಚಾರ್ಜ್ ಆಗದೇ ಗೋಳಿಬಾರ್ ಆಗಿದ್ದರೆ, ಬಾವುಟ ಹಿಡಿದಿದ್ದ ನಾನೇ ಹುತಾತ್ಮನಾಗುವ ಭಾಗ್ಯ ಪಡೆಯುತ್ತಿದ್ದೆನೋ ಏನೋ.

ವೈ.ಬಂ. 34

## ಮೀನಾಕ್ಷಿ ಗೋವಿಂದ ಭಟ್

ಜನನ : 1923 ಉದ್ಯೋಗ : ಗೃಹಿಣಿ ವಿಳಾಸ : ವಸಂತನಗರ, ಬೆಂಗಳೂರು-52

---

ನನ್ನ ತಂದೆ ದಿ|| ಸಿ. ಎಸ್. ವೆಂಕಪ್ಪಯ್ಯ ಮಡಿಕೇರಿಯ ಹೆಸರಾಂತ ವಕೀಲರಾಗಿದ್ದು ಗಾಂಧೀಜಿಯವರ ಅನುಯಾಯಿಗಳಾಗಿದ್ದವರು. ಕಾಂಗ್ರೆಸ್ಸಿನ ನಾಯಕರೆಲ್ಲ ಕೊಡಗಿಗೆ ಬಂದಾಗ ನಮ್ಮ ಅತಿಥಿಗಳಾಗುತ್ತಿದ್ದರು. ಹೀಗಾಗಿ ನನ್ನ ಎಳೆತನದ ವಾತಾವರಣ ದೇಶಸೇವೆಗೆ ಪೂರಕವಾಗಿತ್ತು. ಮನೆಯಲ್ಲಿ ಎಲ್ಲರೂ ಖಾದೀಧಾರಿಗಳು.

1942ರಲ್ಲಿ ಮಹಾತ್ಮರ ಬಂಧನದ ವಾರ್ತೆ ಕೇಳಿ ಇತರ ಜನರಂತೆ ವಿದ್ಯಾರ್ಥಿಗಳೂ ಸಿಡಿದೆದ್ದರು. ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ನಾನು ಓದುತ್ತಿರಲು, ಸೆಂಟ್ರಲ್ ಕಾಲೇಜು, ಗವರ್ನಮೆಂಟ್ ಕಾಲೇಜಿನ ವಿದ್ಯಾರ್ಥಿಗಳು ಬಂದು ಚಳವಳಿಯಲ್ಲಿ ಭಾಗ ವಹಿಸುವಂತೆ ನಮ್ಮನ್ನು ಹುರಿದುಂಬಿಸುತ್ತಿದ್ದರು. ಹಾಸ್ಟೆಲ್‌ನಲ್ಲಿದ್ದ ನಮಗೆ ಮನಸ್ಸಿನಲ್ಲಿ ತಳಮಳ. ಅತ್ತ ತಂದೆತಾಯಿಂದಿರ ಭಯ, ಇತ್ತ ಸ್ತ್ರೀಸಹಜ ಮಾನಾಪಮಾನದ ಭಯ. ಯಾವುದೋ ಆಂತರಿಕ ಶಕ್ತಿ ನಮಗೆ ಧೈರ್ಯಕೊಡುತ್ತಿತ್ತು. ಒಮ್ಮೆ ಕಾಲೇಜಿಗೆ ಹೋಗದೆ ಹಿಂದೆ ನಿಂತಿರಲು ಸಹೋದರವಿದ್ಯಾರ್ಥಿಗಳ ಮೇಲೆ ಲಾಠೀಪ್ರಹಾರ ನಡೆದ ಅಮಾನುಷ ದೃಶ್ಯ ನಮ್ಮನ್ನು ಕೆರಳಿಸಿತು. ನನಗರಿವಿಲ್ಲದೆ "ಮಹಾತ್ಮಾ ಗಾಂಧೀಕೀ ಜೈ" ಎಂಬ ಘೋಷಣೆ ನನ್ನ ಬಾಯಿಂದ ಹೊರಬಿತ್ತು. ನನ್ನ ನಿಕಟಸಹವರ್ತಿನಿ ಕೊಡಗಿನ ಪೊನ್ನಮ್ಮ, ಬೆಂಗಳೂರಿನ ಕುಂತಳಾ, ವಿಮಲ ಹಾಗೂ ವಾಣೀವಿಲಾಸ ಸ್ಕೂಲಿನ 30 ವಿದ್ಯಾರ್ಥಿನಿಯರ ಸಹಿತ, ಧ್ವಜ, ತಡಿಕೆಗೆ ಅಂಟಿಸಿದ ಪತ್ರಗಳನ್ನು ಹಿಡಿದು ಮಹಾರಾಣಿ ಕಾಲೇಜು ಮುಂಭಾಗದಿಂದ ಮೆರವಣಿಗೆ ಹೊರಟು ಮೈಸೂರು ಬ್ಯಾಂಕಿಗೆ ಬಂದೆವು. ಅಷ್ಟರಲ್ಲಿ ಪೋಲೀಸ್ ವಾಹನ ಬಂದು ನಮ್ಮನ್ನು ಬಂಧಿಸಿ ಸೆಂಟ್ರಲ್ ಜೈಲಿಗೆ ಒಯ್ದರು. ಒಂದು ವಾರ ಜೈಲೇ ನಮ್ಮ ಮನೆಯಾಯಿತು. ಅಲ್ಲಿಯ ಊಟವೋ ಅಸಹ್ಯ. ಅನ್ನದಲ್ಲಿ ಹುಳುಗಳು ಕಂಡದ್ದುಂಟು. ಆದರೆ ವಿದ್ಯಾರ್ಥಿಗಳ ಗುಂಪು ಗುಂಪು

ಜೈಲು ಸೇರಿದ್ದರಿಂದ ವಿಶಿಷ್ಟ ಶುದ್ಧ ಉತ್ಸಾಹದ ವಾತಾವರಣವಿತ್ತು. ಕಮಲಾದೇವಿ ಚಟ್ಟೋಪಾಧ್ಯಾಯ ಅವರೂ ನಮ್ಮೊಡನೆ ಇದ್ದರು.

ಆನಂದ, ಹೆಮ್ಮೆ, ಭಯ, ಉಚಿತವೋ ಅನುಚಿತವೋ ಎಂಬ ಶಂಕೆ; ಬಿಡುಗಡೆಯನಂತರ ಊರಿಗೆ ಹೋದೆ. "ವಿಶಾಲಾಕ್ಷಿ ಜೈಲಿಗೆ ಹೋಗಿ ಬಂದಿದ್ದಾಳೆ" ಎಂದು ನೋಡಬರುವ ಸ್ನೇಹಿತರು, ಬಂಧುಗಳು. ತಂದೆ ನನ್ನ ವರ್ತನೆಗೆ ಆಕ್ಷೇಪಿಸಲಿಲ್ಲ; "ದುಡುಕು" ಎಂದರು. ಮತ್ತೆ ಚಳವಳಿ ಸೇರಬಾರದೆಂದು ಆಶ್ವಾಸನೆ ಪಡೆದು, ರಜೆ ಮುಗಿದಮೇಲೆ ಬೆಂಗಳೂರಿಗೆ ಕಳುಹಿಸಿದರು.

ಎರಡು ತಿಂಗಳನಂತರ ಪುನರಪಿ ಮುಷ್ಕರ, ಮೆರವಣಿಗೆ. ಆಗ ಮಾತ್ರ ನಾನು ತಂದೆತಾಯಿಗೆ ಕೊಟ್ಟ ಮಾತು ಮುರಿಯಲಾರದೆ, ಚಳವಳಿಯಲ್ಲಿ ಸೇರಲಿಲ್ಲ.

ವೈ.ಬೆಂ. 35

## ರುಮಾಲೆ ಚನ್ನಬಸವಯ್ಯ

ಜನನ : ? ಉದ್ಯೋಗ : ಚಿತ್ರಕಲಾವಿದ ವಿಳಾಸ : 674, III ಬ್ಲಾಕ್, ರಾಜಾಜಿನಗರ, ಬೆಂಗಳೂರು–10

---

1930ನೇ ಇಸವಿ. ಭಾರತದ ಎಲ್ಲಾ ಪ್ರಾಂತ್ಯಗಳಲ್ಲಿ ಪ್ರಾಣವನ್ನು ಅರ್ಪಿಸಲು ಸಿದ್ಧರಾಗಿ ಅಹಿಂಸಾತ್ಮಕ ಹೋರಾಟದಲ್ಲಿ ಭಾಗವಹಿಸಲು ಸ್ವಯಂಪ್ರೇರಣೆಯಿಂದಲೇ ಒಪ್ಪಿದ ಜನರಿಂದ ಪ್ರಣಾಳಿಕೆಗೆ ಸಹಿ ಪಡೆಯುವ ಕಾರ್ಯವನ್ನು ಆಯಾ ಪ್ರಾಂತ್ಯದ ಮುಖಂಡರಿಗೆ ಗಾಂಧೀಜಿ ಒಪ್ಪಿಸಿದರು. ಕರ್ನಾಟಕಕ್ಕೆ ಈ ರೀತಿಯ ಒಂದು ಸಹಸ್ರ ಸ್ವಯಂಸೇವಕ ಹಾಗೂ ಸೇವಕಿಯರ ಆವಶ್ಯಕತೆ ಇದೆಯೆಂದು ಡಾ|| ಹರ್ಡೀಕರ್‌ರವರು ಒಂದು ಕರೆ ನೀಡಿದರು. ಈ ಕರೆಗೆ ಮೈಸೂರು ರಾಜ್ಯದ ಸುಮಾರು 300 ಯುವಕರು ಓಗೊಟ್ಟು ಆಶ್ರಿತ ಮೈಸೂರು ರಾಜ್ಯದಿಂದ ಹೊರಗಣ ಬ್ರಿಟಿಷ್ ಕರ್ನಾಟಕ ಭಾಗದ ಸತ್ಯಾಗ್ರಹ ಸಮರದಲ್ಲಿ ಭಾಗಿಯಾದರು.

ಹಳೆಯ ಮೈಸೂರು ರಾಜ್ಯದಲ್ಲಿ ದಿ|| ವೆಂಕಟಪತಯ್ಯ ಹಾಗೂ ವೆಂಕಟರಂಗ ಅಯ್ಯಂಗಾರ್ ಅವರ ಮುಂದಾಳುತನದಲ್ಲಿ ಒಂದು ಸಮಿತಿಯು ಕಾರ್ಯನಿರ್ವಹಣೆ ಮಾಡುತ್ತಿತ್ತು. ಬ್ರಿಟಿಷ್ ಕರ್ನಾಟಕಕ್ಕೆ ಹೋಗಲಿದ್ದ ಸ್ವಯಂಸೇವಕರ ರೈಲ್ವೆ ವೆಚ್ಚ ಮತ್ತು ಸಮವಸ್ತ್ರಗಳನ್ನು ಈ ಸಮಿತಿಯೇ ಕೊಡುತ್ತಿತ್ತು.

ಡಾ|| ಹರ್ಡೀಕರ್‌ರವರ ಮನವಿಯಂತೆ ನಾನೂ ಸ್ವಯಂಸೇವಕನಾಗಿ ಪ್ರಣಾಳಿಕೆಗೆ ಸಹಿ ಮಾಡಲು ಒಪ್ಪಿದೆ. ಈ ನಿರ್ಧಾರವನ್ನು ನನ್ನ ಅಣ್ಣನಿಗೆ (ಡಿ. ಆರ್. ಚನ್ನ

ರುವ್ರಯ್ಯ) ತಿಳಿಸಿದೆ. ಆಗ್ಗೆ ನಾನು ಪೆಯಿಂಟಿಂಗ್‌ನಲ್ಲಿ ಮದರಾಸಿನ ಹೈಯರ್ ಪರೀಕ್ಷೆಗಳಲ್ಲಿ ಉತ್ತೀರ್ಣನಾಗಿದ್ದೆನು. ನನ್ನ ಅಣ್ಣಂದಿರು ನನ್ನ ತೀರ್ಮಾನವನ್ನು ನೇರವಾಗಿ ಬೇಡವೆಂದು ಹೇಳಲಿಲ್ಲ. ಆದರೆ "ದೇಶದಲ್ಲಿ ಕಲಾವಿದರು ಇರುವುದೇ ಕಡಿಮೆ; ಕಲೆಯ ಮೂಲಕ ದೇಶಸೇವೆ ಮಾಡಬಹುದು" ಎಂದರು. ದೇಶದ ಸ್ವಾತಂತ್ರ್ಯಕ್ಕೇ ಗಂಡಾಂತರ ಒದಗಿಬಂದಾಗ ಇಂಗ್ಲೆಂಡ್ ಮೊದಲಾದ ದೇಶಗಳಲ್ಲಿ ಕಲಾವಿದರೂ ಸೈನ್ಯಕ್ಕೆ ಸೇರ್ಪಡೆಯಾಗಿ, ಕಲೆಯನ್ನು ತಾತ್ಕಾಲಿವಾಗಿ ಬದಿಗೆ ಸರಿಸುತ್ತಾರೆ, ಎಂಬ ಅಂಶವನ್ನು ಅವರ ಗಮನಕ್ಕೆ ತಂದಾಗ ಅವರು ಸುಮ್ಮನಾದರು.

ಈ ಸತ್ಯಾಗ್ರಹದಲ್ಲಿ ಭಾಗವಹಿಸುವ ನಿರ್ಧಾರಕ್ಕೆ ತಂದೆತಾಯಿಯರ ಅನುಮತಿ ದೊರಕಲಿಲ್ಲ. ಆದರೂ ಊರು ತ್ಯಜಿಸಿ, ಹುಬ್ಬಳ್ಳಿಯಲ್ಲಿ ಶ್ರೀ ಸಿದ್ಧಾರೂಢಸ್ವಾಮಿಗಳ ಆಶ್ರಮದ ಬಳಿಯಲ್ಲಿ ಸುಮಾರು ಒಂದು ತಿಂಗಳು ಕಾಲ ಸೇವಾದಳ ಶಿಬಿರದಲ್ಲಿ ಶಿಕ್ಷಣ ಪಡೆದೆ. ಧಾರ್ಸನ ಉಪ್ಪಿನ ಸತ್ಯಾಗ್ರಹಕ್ಕೆ ಪ್ರತಿಯೊಂದು ಪ್ರಾಂತ್ಯದಿಂದ ಸ್ವಯಂಸೇವಕರನ್ನು ಆರಿಸಿ ಕಳುಹಿಸಲಾಗಿತ್ತು. ಈ ರೀತಿ ಆರಿಸಲ್ಪಟ್ಟಿದ್ದ ಸುಮಾರು 80 ಸತ್ಯಾಗ್ರಹಿಗಳಿದ್ದರು—ನನ್ನನ್ನೂ ಸೇರಿಸಿ. ಬೊಂಬಾಯಿನ ವಿಲೆಪಾರ್ಲೆಯಲ್ಲಿ ನಮ್ಮನ್ನು ಇರಿಸಿಕೊಳ್ಳಲಾಗಿತ್ತು. ಇನ್ನು ಎರಡು ದಿವಸಗಳಲ್ಲಿ ಕರ್ನಾಟಕದ ಸತ್ಯಾಗ್ರಹಿಗಳ ತಂಡವು ಧಾರ್ಸನ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಲು ತೀರ್ಮಾನಿಸಲಾಗಿದ್ದಿತು. ಇದರಲ್ಲಿ ಸೇರುವ ಸ್ವಯಂಸೇವಕರಲ್ಲಿ ಶೇಕಡ 20ರಷ್ಟಾದರೂ ಪೋಲೀಸರ ಈಟಿ ತಿವಿತದಿಂದ, ಕುದುರೆಗಳ ಕಾಲ್ತುಳಿತದಿಂದ, ಲಾಠೀ ಪೆಟ್ಟಿನಿಂದ ಮರಣವನ್ನಪ್ಪುವುದು ಸಹಜವಿತ್ತು; ಉಳಿದ ಸ್ವಯಂಸೇವಕರೆಲ್ಲರಿಗೂ ಈ ಕ್ರೂರ ದಬ್ಬಾಳಿಕೆಯಿಂದ ಅಂಗಹೀನತ್ವ ಪ್ರಾಪ್ತವಾಗುವುದು ಅನುಭವದ ಸಂಗತಿಯಾಗಿತ್ತು. ನಾವು ಹಿಂಜರಿಯಲಿಲ್ಲ. ಆದರೆ ಇದ್ದಕ್ಕಿದ್ದಂತೆ ಮಳೆ ಬಂದ ಸಲುವಾಗಿ ಧಾರ್ಸನ ಉಪ್ಪಿನ ಮೂಳಗಳು ಕರಗಿಹೋದವು. ಆದ್ದರಿಂದ ಕರ್ನಾಟಕದ ಸತ್ಯಾಗ್ರಹಿಗಳನ್ನು ಸೊಲ್ಲಾಪುರದಲ್ಲಿ ಜರುಗಿಸಲಾಗುತ್ತಿದ್ದ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಲು ಕಳುಹಿಸಲಾಯಿತು. ಈ ಸತ್ಯಾಗ್ರಹದಲ್ಲೂ ನಾನು ಪಾಲ್ಗೊಂಡೆ. ಅನಂತರ ಬಾಗಲಕೋಟೆ ತಾಲ್ಲೂಕಿನಲ್ಲಿ ಸತ್ಯಾಗ್ರಹದ ಪ್ರಚಾರಕಾರ್ಯವನ್ನು ಕೈಗೊಳ್ಳಲಾಯಿತು. ಕರ್ನಾಟಕದ ಮಹಾನಾಯಕರಾದ ಶ್ರೀನಿವಾಸರಾವ್ ಕೌಜಲಗಿ, ಮಂಗಳವೇಢೆ ಶ್ರೀನಿವಾಸರಾವ್ ಮತ್ತು ನಾನು ಹನ್ನೊಂದು ದಿನಗಳು ಅಂಡರ್-ಟ್ರಯಲ್ ಕೈದಿಗಳಾಗಿದ್ದೆವು. ನನ್ನ ಮೇಲೆ ಪೋಲೀಸರು ಹೂಡಿದ್ದ ಮೊಕದ್ದಮೆ ಸುಳ್ಳೆಂದು ನ್ಯಾಯಾಲಯವು ತೀರ್ಪು ನೀಡಲು ನಾನು ಮತ್ತೆ ಪ್ರಚಾರಕಾರ್ಯಗಳಲ್ಲಿ ಉದ್ಯುಕ್ತನಾದೆ. ಇದೇ ಚಳವಳಿಯ ಕಾರಣದಿಂದ ಬಿಜಾಪುರದ ಸೆಂಟ್ರಲ್ ಜೈಲ್ ಮತ್ತು ಅಹ್ಮದ್‌ನಗರದ ಹತ್ತಿರದ ವಿಸಾಪುರ ಜೈಲಿನಲ್ಲಿ ಕಠಿಣ-ಶಿಕ್ಷೆಯನ್ನು ಅನುಭವಿಸುತ್ತಿದ್ದೆನು. ಗಾಂಧೀ–ಇರ್ವಿನ್ ಒಪ್ಪಂದದಿಂದ ಬಿಡುಗಡೆಯಾಯಿತು.

1937ರಿಂದ ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ಕಾರ್ಯದಲ್ಲಿ ಭಾಗವಹಿಸುತ್ತ ಬಂದೆನು. 1939 ರಿಂದ 1940ರ ವರೆವಿಗೆ ಒಂದು ವರ್ಷದ ಕಠಿಣ ಶಿಕ್ಷೆಯನ್ನು, ಬೆಂಗಳೂರು ಸೆಂಟ್ರಲ್ ಜೈಲ್ ಮತ್ತು ಬೈರಮಂಗಲದ ಕ್ಯಾಂಪ್ ಜೈಲುಗಳಲ್ಲಿ ಅನುಭವಿಸಿದೆನು.

ಮೈಸೂರು ಕಾಂಗ್ರೆಸ್ ಅಧಿವೇಶನದ ಕಾಲದಲ್ಲಿ ಚಿತ್ರಕಲಾ ಪ್ರದರ್ಶನವನ್ನು ಏರ್ಪಡಿಸುವ ಜವಾಬ್ದಾರಿಯನ್ನು ಕಾಂಗ್ರೆಸ್ ವರಿಷ್ಠರು ನನಗೆ ವಹಿಸುತ್ತಿದ್ದರು. ಸುಭಾಸ್ ನಗರದಲ್ಲಿ ಕೆ. ಸಿ. ರೆಡ್ಡಿಯವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದಾಗ ಏರ್ಪಡಿಸಿದ ಚಿತ್ರಕಲಾ ಪ್ರದರ್ಶನವು ಉಳಿದೆಲ್ಲ ಪ್ರದರ್ಶನಗಳಿಗಿಂತಲೂ ವೈವಿಧ್ಯಪೂರ್ಣವಾಗಿತ್ತು. ಹಳೆಯ ಮೈಸೂರು ರಾಜ್ಯದ ಸುಮಾರು 65 ಚಿತ್ರಕಲಾವಿದರ ಹಾಗೂ ಶಿಲ್ಪಿಗಳ ಸಂಕ್ಷಿಪ್ತ ಜೀವನಚಿತ್ರವನ್ನು ಒಳಗೊಂಡ 'ನಮ್ಮ ಲಲಿತ ಕಲಾವಿದರು' ಎಂಬ ಪ್ರಕಟಣೆಯನ್ನು ನಾನು ಹೊರತರಲು ಕಾಂಗ್ರೆಸ್ ವಸ್ತುಪ್ರದರ್ಶನ ಸಮಿತಿ ಅವಕಾಶ ನೀಡಿತು.

ಮೈಸೂರು ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆದ ಕಾಲದಲ್ಲಿ 'ವಿಧುರಾಶ್ವತ್ಥದ ಹತ್ಯಾಕಾಂಡ' ಜರುಗಿದಾಗ ನಾನು ಅಲ್ಲಿಯೇ ಇದ್ದೆನು. ಮೈಸೂರು ಕಾಂಗ್ರೆಸ್ಸಿನ ಕೋಲಾರ ಜಿಲ್ಲಾ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿದ್ದ ದಿll ಕೆ. ರಾಮಾಚಾರ್ ಮತ್ತು ನಾನು ಕಾನೂನು ಉಲ್ಲಂಘಿಸಿ ಸಭೆ ಮೆರವಣಿಗೆ ನಡೆಸುವುದರಿಂದ ಪ್ರಮಾದವಾಗಬಹುದೆಂದು ಗ್ರಹಿಸಿ ಅವನ್ನು ತಡೆಯಲು ಯತ್ನಿಸಿದೆವು—ವ್ಯರ್ಥವಾಗಿ.

ಜವಾಬ್ದಾರಿ ಸರ್ಕಾರ ಹೋರಾಟದ ಅಂತಿಮ ದಿನಗಳಲ್ಲಿ ಹಿಂದೂಪುರದ ಸೇವಾ ಮಂದಿರದಲ್ಲಿ ಮೈಸೂರು ಸತ್ಯಾಗ್ರಹಿಗಳ ಶಿಬಿರ ಏರ್ಪಟ್ಟಿದ್ದಿತು. ನಾನು ಅಲ್ಲಿದ್ದು ಸತ್ಯಾಗ್ರಹಕ್ಕೆ ಸಂಬಂಧಿಸಿದ ಕರಪತ್ರಗಳನ್ನು ಸೈಕ್ಲೊಸ್ಟೈಲ್ ಮಾಡಿ ಮೈಸೂರು ರಾಜ್ಯದ ವಿವಿಧ ಭಾಗಗಳಿಗೆ ಕಳುಹಿಸುವ ಕಾರ್ಯದಲ್ಲಿ ನಿರತನಾಗಿದ್ದೆ. ಎಚ್. ಎಸ್. ದೊರೆಸ್ವಾಮಿ, ಪರಶುರಾಮ್ ಇವರೇ ಮುಂತಾದ ಮಿತ್ರರು ಆ ಶಿಬಿರದಲ್ಲಿದ್ದರು.

## ದೊಡ್ಡಬಳ್ಳಾಪುರ

1929ರಿಂದ ಸ್ವಾತಂತ್ರ್ಯ ಹೋರಾಟದ ಸಲುವಾಗಿ ನಮ್ಮ ಊರು ದೊಡ್ಡಬಳ್ಳಾಪುರದಲ್ಲಿ ಆಸಕ್ತಿವಹಿಸಿದ ಮಿತ್ರರುಗಳೆಂದರೆ, ದಿll ಸಿ. ಕೃಷ್ಣಮೂರ್ತಿಗಳು, ದಿll ಆರ್. ವಿ. ಭದ್ರಣ್ಣನವರು, ದಿll ಎಚ್. ಕೇಶವಮೂರ್ತಿಗಳು, ದಿll ಎಸ್. ಪಿ. ತಮ್ಮಯ್ಯನವರು, ಎಚ್. ಮುಗುವಾಳಪ್ಪನವರು, ಎನ್. ನಂಜುಂಡಯ್ಯನವರು ಹಾಗೂ ಎಚ್. ನರಸಿಂಹಯ್ಯನವರು.

1936ರಲ್ಲಿ ಅಬಿಸೀನಿಯಾ ದೇಶವನ್ನು (ಇಥಿಯೋಪಿಯಾ) ಇಟಲಿ ಕಬಳಿಸಿದಾಗ 'ನಿಗರ್ಸ್ ಯೂಥ್ ಲೀಗ್' ಎಂಬುದು ಅಸ್ತಿತ್ವಕ್ಕೆ ಬಂದಿತು (ದೊಡ್ಡಬಳ್ಳಾಪುರದಲ್ಲಿ). ಇದಕ್ಕೆ ಟಿ. ಸಿದ್ದಲಿಂಗಯ್ಯನವರು ಅಧ್ಯಕ್ಷರು ; ನಾನು ಕಾರ್ಯದರ್ಶಿ. 'ನಿಗರ್ಸ್

ಯೂಥ್ ಲೀಗ್' ಎಂಬ ಹೆಸರು ಸರ್ದಾರ್ ಪಟೇಲರಿಗೆ ಹಿಡಿಸದೇ ಟೀಕಿಸಲ್ಪಟ್ಟಿತು. ಅವರು 1936ರಲ್ಲಿ ಗಾಂಧೀಜಿ ನಂದಿಬೆಟ್ಟದಲ್ಲಿದ್ದಾಗ ಅಲ್ಲಿಗೆ ಬಂದಿದ್ದರು.

ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸುಭಾಸ್‌ಚಂದ್ರ ಬೋಸರು ಆಶ್ರಿತ ಸಂಸ್ಥಾನಗಳಲ್ಲಿ ಅಖಿಲ ಭಾರತ ಕಾಂಗ್ರೆಸ್ ಸದಸ್ಯರನ್ನು ಸೇರಿಸಿಕೊಂಡು ಒಂದು ಸಮಿತಿ ರಚಿಸುವ ಅವಕಾಶ ನೀಡಿದರು. ಆಶ್ರಿತ ಸಂಸ್ಥಾನಗಳಲ್ಲಿ ರೂಪುಗೊಂಡ ಈ ಕಾಂಗ್ರೆಸ್ ಸಮಿತಿಗಳು ಬ್ರಿಟಿಷ್ ಪ್ರಾಂತ್ಯದ ರಾಜಕೀಯದಲ್ಲಿ ಭಾಗವಹಿಸುವ ಅವಕಾಶ ಪಡೆದವು. ಮೈಸೂರು ರಾಜ್ಯದಲ್ಲಿ ಡಾ॥ ಎನ್. ಎಸ್. ಹರ್ಡೀಕರ್ ಅವರೂ ಶ್ರೀಮತಿ ಕಮಲಾ ದೇವಿ ಚಟ್ಟೋಪಾಧ್ಯಾಯ ಅವರೂ ಮುಂದಾಳುಗಳಾಗಿ ನಾನಾ ಕಡೆ ಸಂಚರಿಸಿ ಕಾಂಗ್ರೆಸ್ ಸಮಿತಿ ರಚಿಸಲು ನೆರವಾದರು. ಇವರಿಬ್ಬರೂ ಸೇವಾದಳದ ನಾಯಕರುಗಳಾಗಿದ್ದುದರಿಂದ ದೊಡ್ಡಬಳ್ಳಾಪುರಕ್ಕೆ ಆಗಾಗ್ಗೆ ಆಗಮಿಸುತ್ತಿದ್ದರು. 'ಸಿಗರ್ಸ್ ಯೂಥ್ ಲೀಗ್' ನಮ್ಮಂತೆ ಇವರಿಗೂ ಸ್ಫೂರ್ತಿಯ ಹೆಸರಾಯಿತು.

ಅಂದಿನ ಅಖಿಲ ಭಾರತ ಕಾಂಗ್ರೆಸ್ ಸಮಿತಿಗಳೇ ಅನಂತರ ಮೈಸೂರು ಕಾಂಗ್ರೆಸ್ ಸಮಿತಿಗಳಾದವು. ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರು (ಮೈಸೂರು ರಾಜ್ಯಕ್ಕೆ) ಟಿ. ಸಿದ್ದಲಿಂಗಯ್ಯನವರಾಗಿದ್ದು ಅವರೇ ಮೈಸೂರು ಕಾಂಗ್ರೆಸ್‌ನ ಪ್ರಥಮ ಅಧ್ಯಕ್ಷರಾದರು. ಈ ಸಮಯದಲ್ಲಿ ಡಾ॥ ಹರ್ಡೀಕರ್‌ರವರು ಮೂರು ಬಾರಿ ಮೈಸೂರು ಸಂಸ್ಥಾನದ ಎಲ್ಲಾ ಜಿಲ್ಲೆಗಳಲ್ಲಿಯೂ ಪ್ರವಾಸಮಾಡಿ ಟಿ. ಸಿದ್ದಲಿಂಗಯ್ಯನವರ ಮುಖಂಡತ್ವದ ವ್ಯಾಪ್ತಿಯನ್ನು ಹೆಚ್ಚಿಸಲು ನೆರವಾದರು. ನಾನು ಈ ಎಲ್ಲಾ ಪ್ರವಾಸಗಳಲ್ಲಿಯೂ ಅವರೊಂದಿಗಿದ್ದೆ. ಜವಾಬ್ದಾರಿ ಸರ್ಕಾರ ಸ್ಥಾಪನೆಯಾದಮೇಲೂ ಸಹ ಕಾಂಗ್ರೆಸ್ ಸೇವಾದಳ ಮತ್ತು ಭಾರತ ಸೇವಾದಳದ ಸಂಘಟನೆಗಾಗಿ, ಮತ್ತೆ ಮೂರು ಬಾರಿ ಎಲ್ಲಾ ಜಿಲ್ಲೆಗಳಲ್ಲಿಯೂ ಪ್ರವಾಸಮಾಡಿದರು. ಪ್ರಬಲ ರಾಜಕೀಯ ಪಕ್ಷ ಎನಿಸಿದ್ದ 'ಪ್ರಜಾಪಕ್ಷ' ಕಾಂಗ್ರೆಸ್‌ನಲ್ಲಿ ಐಕ್ಯವಾಗಲು ಡಾ॥ ಹರ್ಡೀಕರರೇ ಕಾರಣರು; ಬಿ. ಎನ್. ಗುಪ್ತ ಇವರಿಗೆ ನೆರವಾಗಿದ್ದವರು. ಸರ್ದಾರ್ ವೆಂಕಟರಾಮಯ್ಯನವರು ಡಾ॥ ಹರ್ಡೀಕರ್ ಹಾಗೂ ಟಿ. ಸಿದ್ದಲಿಂಗಯ್ಯನವರ ಮುಖಂಡತ್ವವನ್ನು ಮನಸಾರೆ ಒಪ್ಪಿಕೊಂಡಿದ್ದವರು.

ನಾನು 1931ರಲ್ಲಿ ಚಿತ್ರಕಲಾದೀಕ್ಷೆಯನ್ನು ಸ್ವಾತಂತ್ರ್ಯಹೋರಾಟದ ಸಲುವಾಗಿ ಬಿಟ್ಟೆನು. 1934-1936ರಲ್ಲಿ ಮೈಸೂರು ಚಾಮರಾಜೇಂದ್ರ ವೃತ್ತಿಶಿಕ್ಷಣಾಲಯದಲ್ಲಿ ಚಿತ್ರಕಲಾಭ್ಯಾಸವನ್ನು (ಮುಖ್ಯವಾಗಿ ಆಯಿಲ್ ಕಲರ್ ಪೇಯಿಂಟ್ಸ್) ಮಾಡಿದೆ. 1942ರಿಂದ ಮತ್ತೆ ಕಲಾದೀಕ್ಷೆಯನ್ನು ತೆಗೆದುಕೊಂಡೆ. 1952 ರಿಂದ 1960 ರವರೆಗೆ ವಿಧಾನ ಪರಿಷತ್‌ನಲ್ಲಿ ನಾಮಕರಣ ಸದಸ್ಯನಾಗಿದ್ದೆ. 1956ರಿಂದ ಮೂರೂವರೆ ವರ್ಷ ಕಾಲ 'ತಾಯಿನಾಡು' ಸಂಪಾದಕನಾಗಿದ್ದೆ.

ಮೈ.ಬೆಂ. 36

# ರಾಮಶೆಟ್ಟಿ

ಜನನ : ? ಉದ್ಯೋಗ : ಕೃಷಿ ವಿಳಾಸ : ಗಂಟಿಗಾನಹಳ್ಳಿ, ತಾ॥ ದೊಡ್ಡಬಳ್ಳಾಪುರ

---



ಟಿ. ಸಿದ್ದಲಿಂಗಯ್ಯ, ರುಮಾಲೆ ಚನ್ನಬಸವಯ್ಯ, ಎಚ್. ಮುಗುವಾಳಪ್ಪ ಇವರ ನೇತೃತ್ವದಲ್ಲಿ ಸ್ವಾತಂತ್ರ್ಯಚಳವಳಿ ಪ್ರಾರಂಭವಾಯಿತು. ದೊಡ್ಡಬಳ್ಳಾಪುರದ ಬಳಿ ಈಚಲು ಕಡಿಯುವ ಕೆಲಸದಲ್ಲಿ ನಿರತನಾಗಿದ್ದಾಗ ಬಂಧಿಸಿದರು. ಆಗ ನನ್ನ ಜೊತೆ ಗುಂಡಪ್ಪ, ಎಸ್. ಪಿ. ಚಿಕ್ಕವೀರಣ್ಣ, ರುಮಾಲೆ ಚನ್ನಬಸಪ್ಪನವರು ಇದ್ದರು. 500 ರೂ. ಜುಲ್ಮಾನೆ ವಿಧಿಸಿದರು. 50 ರೂ. ಜುಲ್ಮಾನೆಯನ್ನು ನಮ್ಮ ತಾಯಿಯವರು ಕೊಟ್ಟರು. ಬಾಕಿ ಹಣ ವಸೂಲಾಗದೆ ನಾನು ಆರು ತಿಂಗಳು ಒಂಬತ್ತು ದಿನಗಳು ಜೈಲಿನಲ್ಲಿರಬೇಕಾಯಿತು. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿದ್ದಾಗ ಗಲಭೆ ಉಂಟಾಗಿ ಲಾಠೀಚಾರ್ಜ್ ಮಾಡಿದಾಗ ನನ್ನ ತಲೆಗೆ ಏಟು ಬಿದ್ದು, ಎಡಗಣ್ಣು ಕಾಣಿಸದಂತಾಯಿತು. ಆ ಸಮಯದಲ್ಲಿ ನನಗೆ ಒಂದೂವರೆ ತಿಂಗಳು ಆಸ್ಪತ್ರೆಯಲ್ಲಿ ವೈದ್ಯೋಪಚಾರ ಮಾಡಲಾಯಿತು. ಆರು ತಿಂಗಳು ಒಂಬತ್ತು ದಿನಗಳು ಕಠಿಣ ಶಿಕ್ಷೆಯನ್ನು ಅನುಭವಿಸಿ ಜೈರನುಂಗಲದಿಂದ ಬಿಡುಗಡೆ ಮಾಡಿದರು.

ದೇಶಕ್ಕೆ ಸ್ವಾತಂತ್ರ್ಯವನ್ನು ಪಡೆಯಬೇಕೆಂಬ ರಾಷ್ಟ್ರನಾಯಕರುಗಳ ಕರೆಯ ಮೇರೆಗೆ ಹೋರಾಟದಲ್ಲಿ ಭಾಗವಹಿಸಿದೆನು. ವಿದುರಾಶ್ವತ್ಥ ಕಾಂಗ್ರೆಸ್ ಮೀಟಿಂಗ್‌ನಲ್ಲಿ ಹಾಜರಿದ್ದೆನು. ಆಗ ಫೈರಿಂಗ್ ಆರ್ಡರ್ ಕೊಟ್ಟರು. ಅನೇಕರು ಸತ್ತರು ; ಅನೇಕರಿಗೆ ಏಟುಗಳು ಬಿದ್ದವು. ಅಲ್ಲಿಂದ ತಪ್ಪಿಸಿಕೊಂಡು ಅರ್ಕಾವತಿಯ ಹತ್ತಿರ ಬಂದಾಗ ನನ್ನನ್ನು ಬಂಧಿಸಿದರು. ಒಟ್ಟು 15 ಜನರ ಬಂಧನ ಆಯಿತು. ದೊಡ್ಡಬಳ್ಳಾಪುರದಲ್ಲಿ ನಡೆದ ಎಲ್ಲಾ ಕಾಂಗ್ರೆಸ್ ಚಳವಳಿಗಳಲ್ಲಿ ಭಾಗವಹಿಸಿದ್ದೆನು.

ಮತ್ತೆ 1947ರಲ್ಲಿ ನಡೆದ ಸ್ವಾತಂತ್ರ್ಯಹೋರಾಟದಲ್ಲಿ ಭಾಗವಹಿಸಿ, ಬಂಧಿಸಲ್ಪಟ್ಟು ಒಂದೂವರೆ ತಿಂಗಳು ಜೈಲಿನಲ್ಲಿದ್ದೆನು.

ವ್ಯ.ಬಂ. 37

## ಚಿಕ್ಕಮುನಿಶಾಮಪ್ಪ

ವಯಸ್ಸು : 61 ವರ್ಷ ಉದ್ಯೋಗ : ಕಮ್ಮಾರ ವಿಳಾಸ : ಗಂಟಿಗಾನಹಳ್ಳಿ, ತಾ|| ದೊಡ್ಡಬಳ್ಳಾಪುರ

---



ದೊಡ್ಡಬಳ್ಳಾಪುರದ ಟಿ. ಸಿದ್ದಲಿಂಗಯ್ಯನವರ ಪ್ರೇರಣೆಯಿಂದ ನಾನು ಸ್ವಾತಂತ್ರ್ಯ ಹೋರಾಟಕ್ಕೆ ಸೇರಿದೆ. ತೂಬುಗೆರೆ ಹೋಬಳಿ ಗಂಟಿಗಾನಹಳ್ಳಿಯಲ್ಲಿ ಛೇರ್‌ಮನ್ ರಂಗಪ್ಪನವರ ನೇತೃತ್ವದಲ್ಲಿ ಚಳವಳಿ ಪ್ರಾರಂಭವಾಯಿತು. ದೊಡ್ಡಬಳ್ಳಾಪುರದ ಮುಗುವಾಳಪ್ಪ ಮತ್ತು ಎಸ್. ನಂಜುಂಡಯ್ಯನವರ ನೇತೃತ್ವದಲ್ಲಿ ಸಭೆ ನಡೆಸಿ ಮೆಳೆಕೋಟೆಯಲ್ಲಿ ಸಮ್ಮೇಳನ ನಡೆಸಲಾಯಿತು. ಅನಂತರ ಸತ್ಯಾಗ್ರಹಿಗಳು, ಅಂದರೆ, ನಮ್ಮ ಊರಿನ ಚಿಕ್ಕಮುನಿಶಾಮಪ್ಪ, ಗುಂಡಪ್ಪ, ರಾಮಶೆಟ್ಟಿ, ಮುನಿಯಪ್ಪ ನಾವು ನಾಲ್ಕು ಜನರು ಸೇರಿ ಅರ್ಕಾವತಿ (ದೊಡ್ಡಬಳ್ಳಾಪುರದ ಬಳಿ) ಹತ್ತಿರ ಈಚಲು ಮರ ಕಡಿದೆವು. ಮೆಳೆಕೋಟೆಯಲ್ಲಿ ಹೆಂಡದ ಅಂಗಡಿಗೆ ಬೆಂಕಿಹಚ್ಚಿದೆವು. ಈಚಲು ಮರ ಕಡಿಯುತ್ತಿದ್ದಾಗ ನಮ್ಮನ್ನು ಅರೆಸ್ಟ್ ಮಾಡಿದರು.

ವ್ಯ.ಬಂ. 38

## ಕೆ. ಸುಬ್ಬರಾವ್

ಜನನ : 1903 ಉದ್ಯೋಗ : ವಕೀಲ ವಿಳಾಸ : ರಾಮನಗರಂ

---

ನಾನು ಚನ್ನಪಟ್ಟಣದಲ್ಲಿ ವ್ಯಾಸಂಗ ಮಾಡುತ್ತಿರುವಾಗ ವಿ. ವೆಂಕಟಪ್ಪನವರೂ ಎಚ್. ಕೆ. ವೀರಣ್ಣಗೌಡರೂ ದಿ|| ಟಿ. ಮಾದಯ್ಯಗೌಡರೂ ನನ್ನ ಸಹಪಾಠಿಗಳಾಗಿದ್ದರು. ಅನಂತರ ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ. ವ್ಯಾಸಂಗ ಮಾಡುತ್ತಿದ್ದ ಕಾಲದಲ್ಲಿ ಎಸ್. ನಿಜಲಿಂಗಪ್ಪ, ಎಸ್. ಸಿ. ನಾಗಯ್ಯ ರೆಡ್ಡಿ, ಎ. ಭೀಮಪ್ಪ ನಾಯಕರು ಸಹಪಾಠಿಗಳು ಹಾಗೂ ಪರಮ ಮಿತ್ರರಾಗಿದ್ದರು. ಅನಂತರ ಪುಣೆಗೆ



ಹೋಗಿ ಫರ್ಗೂಸನ್ ಕಾಲೇಜಿನಲ್ಲಿ ಎಂ.ಎ. ವಿದ್ಯಾಭ್ಯಾಸವನ್ನೂ ಮತ್ತು ಲಾ ಕಾಲೇಜಿನಲ್ಲಿ ಎಲ್‌ಎಲ್.ಬಿ. ವಿದ್ಯಾಭ್ಯಾಸವನ್ನೂ ಪ್ರಾರಂಭಿಸಿದೆ.

ಪುಣೆಗೆ ಹೋದವೇಲೆ ಡಾ|| ಎನ್. ಎಸ್. ಹರ್ಡೀಕರ್‌ರವರ ನೇತೃತ್ವದಲ್ಲಿ ಸ್ವಯಂಸೇವಕ ಶಿಕ್ಷಣವನ್ನೂ ಮಿಲಿಟರಿ ಶಿಕ್ಷಣವನ್ನೂ ಪಡೆದೆ.

1924ನೇ ಇಸವಿಯಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಮಹಾಧಿವೇಶನದಲ್ಲಿ ನಾನು ಡಾ|| ಹರ್ಡೀಕರ್‌ರವರ ನೇತೃತ್ವದಲ್ಲಿ ಸ್ವಯಂಸೇವಕನಾಗಿ ಸೇವೆಸಲ್ಲಿಸಿದ್ದೆ. ಈ ಅಧಿವೇಶನದಲ್ಲಿ ಸೇವೆ ಸಲ್ಲಿಸಿದ್ದರಿಂದ ಹಾಗೂ ಮಹಾತ್ಮಾ ಗಾಂಧೀಜಿ ಮತ್ತು ಇತರ ನಾಯಕರ ಭಾಷಣಗಳನ್ನು ಕೇಳಿದ್ದರಿಂದ ನನ್ನ ಮನಸ್ಸು ದೇಶಸೇವೆಯ ಕಡೆಗೆ ಮತ್ತಷ್ಟು ವಾಲಿತು. ಈ ರೀತಿ ದೇಶಸೇವೆಯ ಕಡೆ ಮನಸ್ಸು ಮಾಡಿದ್ದರಿಂದ ಎಂ.ಎ. ಪರೀಕ್ಷೆಗೆ ಕುಳಿತುಕೊಳ್ಳಲು ಆಗಲಿಲ್ಲ. ಎಲ್‌ಎಲ್.ಬಿ. ಪರೀಕ್ಷೆ ಮಾತ್ರ ಪಾಸು ಮಾಡಿದೆ. 1927ರಲ್ಲಿ ರಾಮನಗರದಲ್ಲಿ ವಕೀಲಿವೃತ್ತಿಯನ್ನು ಪ್ರಾರಂಭಿಸಿದೆ. ಜೊತೆಗೆ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಪ್ರಚಾರಕಾರ್ಯದಲ್ಲೂ ತೊಡಗಿದ್ದೆ. ಅನೇಕ ಜನರನ್ನು ರಾಷ್ಟ್ರೀಯ ಕಾಂಗ್ರೆಸ್ಸಿಗೆ ಸದಸ್ಯರನ್ನಾಗಿ ಸೇರಿಸಿದೆ.

1930ನೇ ಇಸವಿ ಸುಮಾರಿನಲ್ಲಿ ನನ್ನ ಸಮೀಪಬಂಧು ಸರ್ದಾರ್ ಕೆ. ಎ. ವೆಂಕಟರಾಮಯ್ಯನವರ ನೇತೃತ್ವದಲ್ಲಿ ನಡೆಯುತ್ತಿದ್ದ ಕರ್ನಾಟಕ ಸತ್ಯಾಗ್ರಹದಲ್ಲಿ ಭಾಗವಹಿಸಲು ಹೋದೆ. ಪೋಲೀಸಿನವರಿಗೆ ಹೇಗೋ ಸುದ್ದಿ ತಿಳಿದು, ಮೈಸೂರಿನ ಪೋಲೀಸಿನವರಿಗೆ ಸುದ್ದಿ ಮುಟ್ಟಿಸಿದ್ದರಿಂದ ಹಳೇ ಮೈಸೂರು ಗಡಿ ದಾಟಿ ಸ್ವಲ್ಪ ದೂರ ಪ್ರಯಾಣ ಮಾಡುವಷ್ಟರಲ್ಲಿಯೇ ನನ್ನನ್ನು ಬಂಧಿಸಿ ಮೈಸೂರು ಗಡಿಗೆ ತಂದುಬಿಟ್ಟರು. ಬೆಂಗಳೂರಿಗೆ ಬಂದವನು ಕರ್ನಾಟಕದ ಸತ್ಯಾಗ್ರಹಕ್ಕೆ ಸಹಾಯವಾಗುವಂತೆ ಹಣ ಶೇಖರಿಸಿ ಗುಪ್ತರೀತಿಯಲ್ಲಿ ಕಳುಹಿಸುತ್ತಿದ್ದೆ. ಈ ಅವಧಿಯಲ್ಲಿ ಪರದೇಶೀವಸ್ತ್ರಗಳನ್ನು ಬಹಿಷ್ಕರಿಸಿ ಜನರಲ್ಲಿ ಖಾದೀಪ್ರೇಮವನ್ನುಂಟುಮಾಡುವ ರಚನಾತ್ಮಕ ಕಾರ್ಯದಲ್ಲಿ ರಾಮನಗರ ಮತ್ತು ಒಂದೆರಡು ಕಡೆಗಳಲ್ಲಿ ಪರದೇಶೀವಸ್ತ್ರಗಳನ್ನು ಸುಟ್ಟುಹಾಕುವ ಕಾರ್ಯಕ್ರಮಗಳನ್ನೂ ಮಾಡಿಸಿದೆ.

1937ರಲ್ಲಿ ಮೈಸೂರು ಕಾಂಗ್ರೆಸ್ ಪರವಾಗಿ ಟಿ. ಸಿದ್ದಲಿಂಗಯ್ಯನವರೂ ಮತ್ತು ಸರ್ದಾರ್ ವೆಂಕಟರಾಮಯ್ಯನವರೂ ಬಂದು ನನ್ನನ್ನು ರಾಮನಗರ ತಾಲ್ಲೂಕಿನ ಕಾಂಗ್ರೆಸ್ ಅಧ್ಯಕ್ಷನನ್ನಾಗಿ ನೇಮಿಸಿ, ಈ ತಾಲ್ಲೂಕಿನಲ್ಲಿ ಸಂಸ್ಥೆಯನ್ನು ಕಟ್ಟುವ ಜವಾಬ್ದಾರಿಯನ್ನೂ ವಹಿಸಿದರು. ನನಗೆ ಇದಕ್ಕೆ ಮುನ್ನವೇ ಚಂಗಲರಾಯ ರೆಡ್ಡಿಯವರು,

ಎಚ್. ಸಿ. ದಾಸಪ್ಪನವರು, ಕೆ. ಟಿ. ಭಾಷ್ಯಂ, ಕೆ. ಹನುಮಂತಯ್ಯ ಮುಂತಾದ ಪ್ರಮುಖ ನಾಯಕರ ನಿಕಟಸಂಪರ್ಕವಿತ್ತು. ಈ ತಾಲ್ಲೂಕಿನ ಎಲ್ಲಾ ಹಳ್ಳಿಗಳಿಗೂ ಹೋಗಿ ಸಭೆಗಳನ್ನು ಮಾಡಿಸಿ, ಕಾಂಗ್ರೆಸ್ ಸಂದೇಶವನ್ನು ಜನರಿಗೆ ತಿಳಿಯಪಡಿಸಿದೆ.

ಶಿವಪುರದಲ್ಲಿ ನಡೆದ ಮೈಸೂರು ಕಾಂಗ್ರೆಸ್ ಅಧಿವೇಶನದಲ್ಲಿ ಎಂ. ಎನ್. ಜೋಯಿಸ್ ಮತ್ತು ವೈ. ಪಾರ್ಥನಾರಾಯಣ ಪಂಡಿತರು ಜಿ.ಓ ಸಿ. ಆಗಿ ದಸ್ತಗಿರಿ ಯಾದನಂತರ ಮೂರನೇ ಜಿ.ಓ.ಸಿ. ಆಗಿ ನೇಮಿಸಲ್ಪಟ್ಟೆ. ದಿ|| ಗುಂಡಪ್ಪಗೌಡರು ಅಧ್ಯಕ್ಷರಾಗಿದ್ದರು. ಅವರೂ ನಾನೂ ಧ್ವಜ ಹಾರಿಸಿದಾಗ ನಮ್ಮಿಬ್ಬರನ್ನು ದಸ್ತಗಿರಿ ಮಾಡದೆ ಬಿಟ್ಟುಬಿಟ್ಟರು. ಅಲ್ಲಿಂದ ಚನ್ನಪಟ್ಟಣದ ಸಮೀಪದಲ್ಲಿರುವ ಮಂಗಳವಾರ ಪೇಟೆ ಎಂಬಲ್ಲಿ ಸಭೆ ಮಾಡಿ ಸರ್ಕಾರಿ ಆಜ್ಞೆಯನ್ನು ಉಲ್ಲಂಘಿಸಿ ಕಾಂಗ್ರೆಸ್ ಧ್ವಜವನ್ನು ಹಾರಿಸಿದೆ. ನನ್ನನ್ನು ದಸ್ತಗಿರಿ ಮಾಡಿ ಮೂರನೇ ದಿನ ಒಂದು ವಾರ ಸಜಾ ವಿಧಿಸಿದರು. ರಾಮನಗರದ ಸಬ್‌ಜೈಲಿನಲ್ಲೇ ಈ ಶಿಕ್ಷೆಯನ್ನು ಅನುಭವಿಸಲು ಇರಿಸಿದ್ದರು. ಇದಾದ ನಂತರ ರಾಮನಗರ, ಚನ್ನಪಟ್ಟಣ ಮತ್ತು ಕನಕಪುರ ತಾಲ್ಲೂಕುಗಳಲ್ಲಿ ಕಾಂಗ್ರೆಸ್ ಸಂಘಟನಾಕಾರ್ಯವನ್ನು ಹುರುಪಿನಿಂದ ನಡೆಸಿದೆವು.

1938-39ರಲ್ಲಿ, ದಿ|| ಟಿ. ಮಾದಯ್ಯಗೌಡರು, ದಿ|| ಓದುಜೈರೇಗೌಡರು, ದಿ|| ಅರೆಹಳ್ಳಿ ಸಿದ್ದೇಗೌಡರು ಮತ್ತು ಹಾಲಿ ಇರುವ ವಿ. ಗಿರಿಯಪ್ಪನವರು, ಈಶ್ವರರಾವ್, ಸಿ. ಎಂ. ವೆಂಕಟಪ್ಪ ಇನ್ನೂ ಹಲವು ಮಿತ್ರರೊಂದಿಗೆ ರಾಮನಗರಂ ತಾಲ್ಲೂಕು, ಕುಂಬಾರದೊಡ್ಡಿ, ಮೆಳೆಹಳ್ಳಿ, ಅಂಕನಹಳ್ಳಿ, ಕರೇನಹಳ್ಳಿ, ಶ್ಯಾನುಮಂಗಲ ಮುಂತಾದ ಕಡೆಗಳಲ್ಲೂ ಮತ್ತು ನೆರೆ ತಾಲ್ಲೂಕಿನ ಮಾಗಡಿಗೆ ಸೇರಿದ ಮಂಚನಬೆಲೆಯಲ್ಲೂ, ಗುಂಪುಗುಂಪಾಗಿ ಹೋಗಿ, ಹೆಂಡದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಿದೆವು. ಕೆಲವು ಕಡೆಗಳಲ್ಲಿ ನಮ್ಮ ಮೇಲೆ ಹೆಂಡವನ್ನು ಸುರಿದುದೇ ಅಲ್ಲದೆ ವಾಚಾಮಗೋಚರ ವಾಗಿ ಬೈದರು. ಆದರೂ ಸಹ ನಾವು ಪದೇ ಪದೇ ಹೋಗಿ ಎಲ್ಲಾ ಕಡೆಗಳಲ್ಲೂ ಪಿಕೆಟಿಂಗ್ ಮಾಡಿದೆವು. ಇದರ ಪರಿಣಾಮವಾಗಿ ಈ ತಾಲ್ಲೂಕಿನ ಬಹುಮಟ್ಟಿನ ಅಂಗಡಿಗಳನ್ನು ಮುಚ್ಚಿಸಿದೆವು. ಇದೇ ಅವಧಿಯಲ್ಲಿ ನನ್ನ ಹಲವು ಮಿತ್ರರೊಂದಿಗೆ ರಾಮನಗರಂ ತಾಲ್ಲೂಕು ಆಫೀಸು ಮತ್ತು ಸಬ್‌ಡಿವಿಜನ್ ಆಫೀಸಿನ ಮೇಲೂ ಕಾಂಗ್ರೆಸ್ ಧ್ವಜವನ್ನು ಹಾರಿಸಿದೆವು. ಮತ್ತು ಈ ತಾಲ್ಲೂಕಿನಲ್ಲಿ ಕೆಲವು ಕಡೆ ಈಚಲು ಮರವನ್ನು ಕಡಿಯುವ ಕಾರ್ಯಕ್ರಮವನ್ನು ಕೈಗೊಂಡೆವು. ಇವೆಲ್ಲದರ ಪರಿಣಾಮವಾಗಿ ನನ್ನನ್ನು ಮತ್ತು ವಿ. ಗಿರಿಯಪ್ಪನವರನ್ನು ಅರೆಸ್ಟ್‌ಮಾಡಿ, ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಡೆಟನ್ಯೂ ಆಗಿ ಸುಮಾರು 3-4 ತಿಂಗಳು ಇಟ್ಟಿದ್ದರು. ಇತರರನ್ನು ದಸ್ತಗಿರಿ ಮಾಡಿ ಕೋಲಾರ ಜಿಲ್ಲೆಯಲ್ಲಿ ಎಲ್ಲಿಯೋ ಬಿಟ್ಟಿರುವರೆಂದು ತಿಳಿದುಬಂತು. ಬಿಡುಗಡೆಯಾಗಿ ಬಂದನಂತರ ಕಾಂಗ್ರೆಸ್ ಕಾರ್ಯಗಳನ್ನು ಮುಂದುವರಿಸುತ್ತಾ ಬಂದೆನು. ಸುಮಾರು 1942ನೇ ಇಸವಿ ಪ್ರಾರಂಭದಲ್ಲಿ ನಾನು, ವಿ. ವೆಂಕಟಪ್ಪನವರು

ಮತ್ತು ಇತರ ಮಿತ್ರರುಗಳು ಸೇರಿ ಐದನೆಯ ಮೈಸೂರು ಕಾಂಗ್ರೆಸ್ ಅಧಿವೇಶನವನ್ನು ಚನ್ನಪಟ್ಟಣ ತಾಲ್ಲೂಕು ತಿಟ್ಟಮಾರನಹಳ್ಳಿಯಲ್ಲಿ ನಡೆಸಲು ವ್ಯವಸ್ಥೆ ಮಾಡಿ, ಯಶಸ್ವಿಯಾಗಿ ನಡೆಸಿದೆವು.

'ಕ್ವಿಟ್ ಇಂಡಿಯಾ' ಚಳವಳಿ ಪ್ರಾರಂಭವಾದಾಗ ಮೈಸೂರು ಕಾಂಗ್ರೆಸ್‌ಗೆ ಒಬ್ಬರು ದಸ್ತಗಿರಿಯಾದನಂತರ ಮತ್ತೊಬ್ಬರು ಡಿಕ್ಟೇಟರ್- ಪ್ರೆಸಿಡೆಂಟ್-ಆಗುವಂತೆ ವ್ಯವಸ್ಥೆಯಾಗಿತ್ತು. ಅದರಂತೆ ನನ್ನ ಹಿಂದಿನವರ ದಸ್ತಗಿರಿಯಾದನಂತರ ನಾನು ಡಿಕ್ಟೇಟರ್-ಪ್ರೆಸಿಡೆಂಟ್ ಆದೆ. ಆಗ ಕೆಲವು ದಿನಗಳು ಪೋಲೀಸಿನವರ ಕೈಗೆ ಸಿಕ್ಕದೆ ತಲೆಮರೆಸಿಕೊಂಡು ಚಳವಳಿಗೆ ಸಂಬಂಧಿಸಿದಂತೆ ಹಲವು ಕಡೆಗಳಲ್ಲಿ ಕೆಲಸಮಾಡುತ್ತಿದ್ದೆ. ಆಗ ನಾನು ಕನಕಪುರದಿಂದ ಕೆ.ಜಿ.ಎಫ್.ಗೆ ಹೋಗುವ ಎಲೆಕ್ಟ್ರಿಕ್ ಲೈನ್ ಕಂಬಗಳನ್ನು (ಮರದ) ಸುಡುವ ಕಾರ್ಯವನ್ನು ಹಾಕಿಕೊಂಡಿದ್ದೆನು. ಇದು ನಡೆಯುವ ಮೊದಲೇ ನಮ್ಮ ಮಿತ್ರರೊಬ್ಬರ ಫಿತೂರಿಯಿಂದ ನನ್ನನ್ನು ದಸ್ತಗಿರಿಮಾಡಿದರು. ಅನಂತರ ಹಲವು ಕನಕಪುರದ ಕಾರ್ಯಕರ್ತರು ಆ ಕಾರ್ಯವನ್ನು ಮಾಡಲು ಹೋಗಿ ದಸ್ತಗಿರಿಯಾದರು. (ಈ ವಿವರಗಳನ್ನೆಲ್ಲಾ ಭಾರತ ರಾಷ್ಟ್ರೀಯ ಸ್ವಾತಂತ್ರ್ಯದ ರಜತ ಮಹೋತ್ಸವದ ಅಂಗವಾಗಿ 1972ರ 'ಸ್ವಾತಂತ್ರ್ಯ ಹೋರಾಟದ ಸಂಕ್ಷಿಪ್ತ ಇತಿಹಾಸ—ಕನಕಪುರ ತಾಲ್ಲೂಕು' ಎಂಬ ಹೆಸರಿನ ಸಣ್ಣ ಹೊತ್ತಿಗೆಯಲ್ಲಿ ಕನಕಪುರ ತಾಲ್ಲೂಕು ಕಾಂಗ್ರೆಸ್ಸಿನವರು ಅಚ್ಚುಮಾಡಿಸಿದ್ದಾರೆ). ಹಿಂದೆ ಹೇಳಿದ್ದಂತೆ ದಸ್ತಗಿರಿಯಾದ ನನ್ನನ್ನು ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ 1942ನೇ ಆಗಸ್ಟ್ ಮಧ್ಯಭಾಗದಿಂದ 1943ನೇ ಅಕ್ಟೋಬರ್ ಮಧ್ಯಭಾಗದವರೆಗೆ ಡೆಟನ್ಯೂ ಆಗಿ ಇಟ್ಟುಕೊಂಡಿದ್ದರು. ಆಗ ಹಲವು ಮಿತ್ರರೊಂದಿಗೆ ನನ್ನನ್ನು ರಾಮನಗರಂ ತಾಲ್ಲೂಕಿನ ಬೈರಮಂಗಲದ ಕೆರೆ-ಕಾಮಗಾರಿ ಕೆಲಸಮಾಡಲು ವರ್ಗಾಯಿಸಿದ್ದರು. ಜೈಲುಶಿಕ್ಷೆ ಅನುಭವಿಸಿ ಬಂದನಂತರ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ಮುಂದುವರಿಸುತ್ತಿದ್ದೆವು.

1938ನೇ ಇಸವಿಯಿಂದ ಈಚೆಗೆ ಕನಕಪುರದಲ್ಲಿ ಸ್ಥಾಪಿತವಾಗಿದ್ದ ಗ್ರಾಮವಿದ್ಯಾ ಪ್ರಚಾರಕ ಸಂಘದ ಅಧ್ಯಕ್ಷನಾಗಿ ಕೆಲಸ ಮಾಡಿದೆ. ಆ ಸ್ಥಳವನ್ನು ಕಾಂಗ್ರೆಸ್ ಹೋರಾಟ ಕ್ಷೇತ್ರವನ್ನಾಗಿಟ್ಟುಕೊಂಡು, ಎಸ್. ಕರಿಯಪ್ಪನವರು, ಡಿ. ವಿ. ಸುಬ್ರಮಣ್ಯ ಅಯ್ಯರ್, ಗುರಿಕಾರ್ ರಂಗೇಗೌಡರು, ಕೆ. ವೈ. ಎ. ಮುದ್ದಪ್ಪ, ಡಿ. ರಾಮಯ್ಯ. ದಿ|| ಡಿ. ವೆಂಕಟಾಚಲಪತಿ ಶೆಟ್ಟರು ಮುಂತಾದವರೊಡನೆ ಆ ತಾಲ್ಲೂಕಿನಲ್ಲೂ ನಡೆಸಿದೆ. ಕಾಂಗ್ರೆಸ್ಸಿನ ಮುಖ್ಯ ಕಾರ್ಯಕ್ರಮಗಳಲ್ಲಿ ಒಂದಾದ ಹರಿಜನೋದ್ಧಾರದ ಅಂಗವಾಗಿ ರಾಮನಗರಂ ತಾ|| ಬಿಡದಿ ಹೋಬಳಿ ರಾಮನಹಳ್ಳಿಯಲ್ಲಿ ಒಂದು ಹರಿಜನ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದೆವು. ಅದಕ್ಕಾಗಿ ಬಹುಮಟ್ಟಿಗೆ ನನ್ನ ಸೇವೆಯನ್ನು ಸಲ್ಲಿಸಿದೆ. ಈಗಲೂ ಅದರ ಅಧ್ಯಕ್ಷನಾಗಿ ಇದ್ದೇನೆ.

ಜವಾಬ್ದಾರಿ ಸರ್ಕಾರದ ಹೋರಾಟವನ್ನು ನಡೆಸುತ್ತಿರುವಾಗ 1947ರಲ್ಲಿ ನನ್ನನ್ನು

ಬಿಡದಿಯಲ್ಲಿ ದಸ್ತಗಿರಿ ಮಾಡಿ ಒಂದು ತಿಂಗಳು ಡಿಟೆನ್ಯೂ ಆಗಿ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇಟ್ಟಿದ್ದರು. ಅಲ್ಲಿಂದ ಬಿಡುಗಡೆಯಾಗಿ ಬಂದನಂತರ ಈ ಊರಿನಲ್ಲಿ ಹೋಂಗಾರ್ಡ್ ನಾಯಕನಾಗಿ ಹಿಂದೂ-ಮುಸ್ಲಿಮ್ ಐಕ್ಯತೆಗಾಗಿ ದುಡಿದೆ. ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯದಲ್ಲಿ ನಿರತನಾಗಿ ಒಂದೇ ಸಮನೆ ಹಲವಾರು ವರುಷಗಳು ತಾಲ್ಲೂಕ್ ಕಾಂಗ್ರೆಸ್ಸಿನ ಅಧ್ಯಕ್ಷನಾಗಿ, ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿ ಮತ್ತು ಅಧ್ಯಕ್ಷನಾಗಿ, ಎಂ.ಪಿ.ಸಿ.ಸಿ. ಸದಸ್ಯನಾಗಿ, ಅದರ ಜಂಟಿ ಕಾರ್ಯದರ್ಶಿಯಾಗಿ, ಡಿ.ಆರ್.ಓ. ಆಗಿ ಮತ್ತು ಪಿ.ಆರ್.ಓ. ಆಗಿ, ಒಮ್ಮೆ ಎ.ಐ.ಸಿ.ಸಿ. ಸದಸ್ಯನಾಗಿ ಕಾಂಗ್ರೆಸ್ಸಿಗೆ ನಿಷ್ಠಾವಂತನಾಗಿ ಸೇವೆಸಲ್ಲಿಸಿದೆ. ಇದಲ್ಲದೆ, ಸ್ಥಳೀಯ ಸಂಸ್ಥೆಗಳು, ವಿಧಾನ ಸಭೆ, ಅನೇಕ ಸಾರ್ವಜನಿಕ ಸಂಸ್ಥೆಗಳಲ್ಲಿ ಜವಾಬ್ದಾರಿ ಸ್ಥಾನಗಳನ್ನು ಹೊಂದಿದ್ದು ನಿಷ್ಠಾವಂತನಾಗಿ ದೇಶವನ್ನು ಕಟ್ಟುವ ಮಹತ್ಕಾರ್ಯದಲ್ಲಿ ನನ್ನ ಕೈಲಾದಮಟ್ಟಿಗೆ ಸೇವೆಸಲ್ಲಿಸಿದ್ದೇನೆ. ಹಾಲಿ ವಿಧಾನ ಪರಿಷತ್ತಿಗೆ 1967ರಿಂದ ಸದಸ್ಯನಾಗಿರುವೆ.

ನಮ್ಮ ಹೋರಾಟದ ಎಲ್ಲಾ ಕಾರ್ಯಗಳಲ್ಲೂ ತಾಲ್ಲೂಕು ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯಳಾಗಿಯೂ ಮತ್ತು ಎಂ.ಪಿ.ಸಿ.ಸಿ. ಸದಸ್ಯಳಾಗಿಯೂ ನನ್ನ ಧರ್ಮಪತ್ನಿ ಲೀಲಾ ಕಮಲಾಕ್ಷಮ್ಮನ ಬೆಂಬಲ, ಸಹಕಾರ, ಸಹಾಯ ನನಗೆ ಅತ್ಯಂತ ಹಿರಿದಾಗಿತ್ತು.

ಮೈ.ಬೆಂ. 39

## ಸಿ. ಎಂ. ವೆಂಕಟಪ್ಪ

ಜನನ : 1914 ಉದ್ಯೋಗ : ತರಕಾರಿ ತೋಟ ವಿಳಾಸ : ಶೆಟ್ಟಿಬಲಿಜ ಬೀದಿ, ರಾಮನಗರಂ

---



ನಾನು ಪ್ರಾಥಮಿಕ ಶಾಲೆಯಲ್ಲಿ ಇದ್ದಾಗ 1927ರಲ್ಲಿ ಗಾಂಧೀಜಿ ನಮ್ಮ ಊರಿಗೆ ಬಂದಿರಲು, ನಮ್ಮ ಅಧ್ಯಾಪಕರು ಮಹಾತ್ಮರ ಸಭೆಯಲ್ಲಿ ಪ್ರಾರ್ಥನೆ ಹೇಳಲು ನನ್ನ ಸ್ನೇಹಿತನ ಜೊತೆ ನಿಲ್ಲಿಸಿದ್ದರು. 'ಜನ್ಮ ವೇತಕೋ ದೇಶಸೇವೆ ಮಾಡದ' ಹಾಗೂ 'ಆಗ್ರಹ ಗೊಳಲೇಕೆ, ಪರರನು ನಿಗ್ರಹಿಸುವುದೇಕೆ?' ಈ ಎರಡು ಹಾಡುಗಳನ್ನು ನಾವು ಹೇಳಿದೆವು. ಅಂದಿನಿಂದಲೇ ನಾನು ಖಾದಿ ಧರಿಸಲಾರಂಭಿಸಿದೆ.

ನಮ್ಮ ತಂದೆ ಕೂಡ ಖಾದಿ ತೊಡುತ್ತಿದ್ದರು. ಆಗಿನಿಂದ ನೂಲಲು ಆರಂಭಿಸಿದೆ. ಮುಂದೆ ಕೆ. ಸುಬ್ಬರಾವ್ ಅವರು 1935-36ರಲ್ಲಿ ಕಾಂಗ್ರೆಸ್ ಸದಸ್ಯನಾಗಿ ನನ್ನನ್ನು ಸೇರಿಸಿಕೊಂಡು ತಾಲೂಕಿನಲ್ಲಿ ಯಾವತ್ತೂ ಕೆಲಸಗಳಿಗೆ ನನ್ನನ್ನು ಜೊತೆಯಾಗಿ ಒಯ್ಯು ತ್ತಿದ್ದರು. ಅವರೇ ನಮ್ಮ ತಾಲೂಕಿನ ಗಣ್ಯ ಕಾರ್ಯಕರ್ತರು. 1938ರಲ್ಲಿ ತಾ|| ತಾಂ|| ಕಮಿಟಿ ಮಾಡಿದಾಗ ನನ್ನನ್ನು ಸದಸ್ಯನಾಗಿ ಮಾಡಿದರು. ಶಿವಪುರ ರಾಷ್ಟ್ರಕೂಟಕ್ಕೂ ನಾನು ಹೋಗಿ ಧ್ವಜರಕ್ಷಕನಾಗಿ ಕೆಲಸವನ್ನು ಮಾಡಿದ್ದೆ. ಟಿ. ಸಿದ್ದಲಿಂಗಯ್ಯ, ಕೆ. ಚೆಂಗಲರಾಯ ರೆಡ್ಡಿ, ಭಾಷ್ಯಂ, ತಗಡೂರು, ವಿ. ವೆಂಕಟಪ್ಪ ಇವರುಗಳೂ ಬಂದು ಊರಲ್ಲಿ ಭಾಷಣ ಮಾಡುತ್ತಿದ್ದರು. ಶಿವಪುರ ಕಾಂಗ್ರೆಸಿನ ನಂತರ ಕೆ. ಹನುಮಂತಯ್ಯ ಈ ಭಾಗದಲ್ಲಿ ವಿಶೇಷ ಮುಂದಾಳುತನ ವಹಿಸಿದರು. ಶಿವಪುರ ಕಾಂಗ್ರೆಸ್ ಅನಂತರ ಸರಕಾರಿ ಕಟ್ಟಡಗಳ ಮೇಲೆ ರಾಷ್ಟ್ರಧ್ವಜ ಹಾರಿಸುವ ಕೆಲಸ ಕೂಡ ಮಾಡಿದೆವು. ಆದಿಕರ್ನಾಟಕರ ಬೀದಿಗೆ ಹೋಗಿ ಅವರನ್ನು ಸದಸ್ಯರಾಗಿ ಮಾಡುವುದು, ಅವರು ಸೇರೆ ಸೇಂದಿ ಕುಡಿಯದಂತೆ ಮನ ಒಲಿಸುವುದು, ರಾತ್ರಿ ಶಾಲೆ ನಡೆಸಿ ಅಕ್ಷರಾಭ್ಯಾಸ ಮಾಡಿಸು ವುದು ನಡೆಸಿದೆವು. ಇದೇ ರೀತಿ ಬೋಯಿಗಳ ನಡುವೆ ಕೂಡ ಕೆಲಸ ಮಾಡಿದೆವು. ನಮ್ಮ ತಾಲೂಕಿನ ಓದೋ ಬೈರಯ್ಯ, ಡಿ. ಭೈರಪ್ಪ, ಶಾಂತಪ್ಪ, ರೇವಣ್ಣ ಇವರೆಲ್ಲ ನಮ್ಮ ಜೊತೆ ಕೆಲಸ ಮಾಡಿದವರಾಗಿದ್ದು ಈಗ ತೀರಿಕೊಂಡಿದ್ದಾರೆ. ಅಲ್ಲದೆ ಎಂ. ಎಸ್. ಈಶ್ವರರಾವ್, ಜಿ. ಭೈರಪ್ಪ ಇವರುಗಳು ಈಗಲೂ ಇದ್ದಾರೆ. ಇವರೆಲ್ಲ ಜೈಲಿಗೂ ಹೋದವರು.

ಮೈಸೂರು ಟೌನ್‌ಹಾಲ್ ಸತ್ಯಾಗ್ರಹದಲ್ಲಿ ಪಾಲುಗೊಳ್ಳಲು ನಾನು ಬೆಂಗಳೂರಿಗೆ ಹೋದೆ. ಜಿ. ಆರ್. ಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ಬನಪ್ಪ ಪಾರ್ಕ್‌ನಲ್ಲಿ ಭಾಷಣ ಮಾಡಿದೆ. ಅಲ್ಲಿಂದ ಮೈಸೂರಿಗೆ ಹೋಗಿ 26-10-1939ರಲ್ಲಿ 144ನೆಯ ಸೆಕ್ಷನ್ ಮುರಿದು ಟೌನ್‌ಹಾಲ್ ಬಳಿ ಭಾಷಣ ಮಾಡಿ ಬಂಧಿತನಾದೆ. ಆರು ತಿಂಗಳು ಶಿಕ್ಷೆ, 50 ರೂ. ಜುಲ್ಮಾನೆ ಆಯಿತು. ನನ್ನ ಮನಸ್ಸು ಒಮ್ಮೆ ನೆಲಕ್ಕೆ ತಾಗಿದಂತಾದರೂ ಧೈರ್ಯಮಾಡಿಕೊಂಡೆನು. ಮೈಸೂರು ಜೈಲಿನಲ್ಲಿ ಜೈಲ್ ಬಟ್ಟೆ ಧರಿಸಿದನಂತರ, ಮಣ್ಣಿನ ಮುಚ್ಚಳ, ಕುಡಿಕೆ ಕೊಟ್ಟರು. ಕಣ್ಣಲ್ಲಿ ನೀರು ಬಂತು. ಆದರೂ ದಿಟ್ಟತನ ದಿಂದ ಮನಸ್ಸಿಗೆ ಧೈರ್ಯ ಹೇಳಿಕೊಂಡೆ. ಜೈಲಿನ ಅನ್ನ ಹೊಟ್ಟೆಗೆ ಸರಿಹೋಗಲಿಲ್ಲ. ಮುಗ್ಗಲು ಅಕ್ಕಿ, ಕಬ್ಬಿಣದ ಪಾತ್ರೆಯ ಅಡಿಗೆ, ಹುಳುಗಳಿರುವ ಅನ್ನ. ಹೊಟ್ಟೆನೋವು, ರಕ್ತಭೇದಿ ಆಯಿತು. ಮುಂದೆ 14-11-1939ರಲ್ಲಿ 100 ಜನರನ್ನು ಶಿವಮೊಗ್ಗಕ್ಕೆ ಸಾಗಿಸಿದರು. ಅಲ್ಲಿ ಕೂಡ ಇದೇ ಸ್ಥಿತಿ. ಎಲ್ಲ ಕೈದಿಗಳೂ ಉಪವಾಸ ಮಾಡಿ, ನಾವೇ ಅಡಿಗೆಮಾಡಿಕೊಳ್ಳುವಂತೆ ವ್ಯವಸ್ಥೆಗೆ ಅಧಿಕಾರಿಗಳನ್ನು ಒಪ್ಪಿಸಿದರು. ನಡುವೆ ಕೆಲಕಾಲ ತೀರ್ಥಹಳ್ಳಿ ಜೈಲಿಗೂ ಒಯ್ದಿಟ್ಟರು. 1940ರಲ್ಲಿ ಬಿಡುಗಡೆ ಆಯಿತು.

ಊರಿಗೆ ಬಂದಾಗ, ನಾನು ಮತ್ತೆ ಜೈಲಿಗೆ ಹೋಗಬಾರದೆಂದು ಭಾವಿಸಿ ತಂದೆ

ತಾಯಿಗಳು ಮದುವೆ ಮಾಡಿಸಿದರು. ಕಾಂಗ್ರೆಸ್ ಕೆಲಸಕ್ಕೆ ಜೊತೆ ಸಿಕ್ಕಂತಾಯಿತೆಂದು ನನ್ನ ಹೆಂಗಸರನ್ನು ಮೆಂಬರು ಮಾಡಿ, ಕೆಲಸಕಾರ್ಯ ಮುಂದುವರಿಸಿದೆವು. 1942ರಲ್ಲಿ ತಾಲೂಕಿನಲ್ಲಿ ಎಲ್ಲೆಡೆ ಸಭೆ, ಮೆರವಣಿಗೆ, ಜನ ಚಳವಳಿ ನಡೆಸುವಂತೆ ಪ್ರೋತ್ಸಾಹ ನೀಡುತ್ತಿರಲು ಬಂಧಿಸಿ ತಿಂಗಳುಗಟ್ಟಲೆ ಕಸ್ಟಡಿಯಲ್ಲಿ ಇಟ್ಟುಕೊಂಡರು. 1947ರ 'ಮೈಸೂರು ಚಲೋ ಚಳವಳಿ' ಕಾಲಕ್ಕೆ ಮೈಸೂರಿಗೆ ಜಾಥಾ ಹೊರಡಿಸುವಾಗ ಊರಲ್ಲೇ ಬಂಧಿಸಿ, ಮುಂದೆ ಬಿಟ್ಟರು. ಎರಡನೆಯ ಸಾರಿ ಚನ್ನಪಟ್ಟಣದವರ ಜೊತೆ ಚನ್ನಪಟ್ಟಣದಲ್ಲಿ ದಸ್ತಗಿರಿ ಮಾಡಿ ಕೆಲಕಾಲ ಡಂಕಣಿಕೋಟೆ, ಹೊಸಕೋಟೆ ಕಸ್ಟಡಿಗಳಲ್ಲಿ ಇಟ್ಟಿದ್ದರು. ಇನ್ನೊಮ್ಮೆ ಚನ್ನಪಟ್ಟಣ, ಕಾನಕಾನಹಳ್ಳಿಯವರ ಜೊತೆ ಬಂಧಿಸಿ ಕೋಲಾರ ಜಿಲ್ಲೆಯ ಕಗ್ಗಾಡಿನಲ್ಲಿ ರಾತ್ರಿ ಬಿಟ್ಟರು. ನಾವು ಕೆಲವರು ಕೋಲಾರ ಸೇರಿದೆವು. ಅಲ್ಲಿ ಸಭೆ ನಡೆಸಿದೆವು. ಮುಂದೆ ಅದೇ ಊರಲ್ಲಿ ಒಂದು ವಾರ ಇದ್ದು ಕೆಲಸ ಮಾಡುತ್ತಿರಲು ಚಳವಳಿ ನಿಂತು ಮೈಸೂರಲ್ಲಿ ಪ್ರಜಾ ಸರಕಾರ ಬಂತು. ಚಳವಳಿಯಲ್ಲಿ ಸೇವೆಸಲ್ಲಿಸುವಂತೆ ಆದುದು ನನ್ನ ಪೂರ್ವಜನ್ಮದ ಪುಣ್ಯವೆಂತ ಭಾವಿಸುತ್ತೇನೆ.

ಮೈ.ಜಿಂ. 40

## ಎಂ. ಎನ್. ಈಶ್ವರರಾವ್

ಜನನ : 1907 ಉದ್ಯೋಗ : ಹೊಲಿಗೆ ವಿಳಾಸ : ಲಕ್ಷ್ಮೀಪುರಂ, ತಾ|| ರಾಮನಗರಂ

---



ಗಾಂಧೀಜಿ ಬೆಂಗಳೂರಿಗೆ ಬಂದು ಧರ್ಮಾಂಬುಧಿ ಕೆರೆಯಲ್ಲಿ ಪ್ರಾರ್ಥನಾ ಭಾಷಣ ಮಾಡುವಾಗ ನಾನು ನಮ್ಮ ಊರಿಂದ ಹೋಗಿ ಅವರನ್ನು ಕಂಡು ಬಂದೆ. ಆಗಲೇ ನಾನು ಗಾಂಧೀಟೋಪಿ ಹಾಕಲು ಆರಂಭಿಸಿದೆ. ಅಲ್ಲಿ ಕೆ. ಟಿ. ಭಾಷ್ಯಂರ ಪರಿಚಯ ಆಯಿತು. ಆಗಸ್ಟ್ 7, 1927 ರಂದು ಗಾಂಧೀಜಿ ರಾಮನಗರಕ್ಕೆ ಬಂದರು. ಕೃಷ್ಣಯ್ಯ ಮಾಸ್ತರು ಸಭೆ ನಡೆಸಿದ್ದರು. ಅಲ್ಲಿಂದ ಗಾಂಧೀಜಿ ಕನಕಪುರಕ್ಕೆ ಹೋದರು. ಆಗಿನಿಂದ ಹಳ್ಳಿಹಳ್ಳಿಗಳಿಗೆ ಹೋಗಿ ಕಾಂಗ್ರೆಸ್ ವಿಚಾರವನ್ನು ತಿಳಿಸಿ ಹೇಳಿದೆ. ರಾಮನಗರದ ವಕೀಲ ಮಾದೇಗೌಡರು, ಸುಬ್ಬರಾಯರು ಇವರಲ್ಲದೆ ಆರ್. ಅಯ್ಯಂಗಾರ್, ಎಲ್. ಕೆ. ಕೃಷ್ಣಸ್ವಾಮಿ ಮುಂತಾದವರು ಕಾಂಗ್ರೆಸ್ ಸೇರಿದರು. ಶಿವಪುರ ಕಾಂಗ್ರೆಸ್ಸಿನ ಕಾಲಕ್ಕೆ ನನಗೆ ಒಂದು

ತಿಂಗಳು ಶಿಕ್ಷೆ ಆಯಿತು. ಇದಲ್ಲದೆ ನಮ್ಮ ಊರಲ್ಲಿ ಎಲ್. ಸಿದ್ದವೀರಪ್ಪ, ವೀರಭದ್ರೇಗೌಡರ ನೆರವಿನಿಂದ 1938ರ ಅಕ್ಟೋಬರ್‌ನಲ್ಲಿ ಭಾರೀ ರೈತ ಸಮ್ಮೇಳನ ನಡೆಸಿದೆವು. ಒಂದು ಸಾವಿರ ಜನ ಸೇರಿದರು. ವಿ. ವೆಂಕಟಪ್ಪನವರ ಅಧ್ಯಕ್ಷತೆ. ಲಕ್ಷ್ಮೀಪುರದಲ್ಲಿ ಸಭೆ ಆಗಲು ಪೋಲೀಸರು ಬಿಡಲಿಲ್ಲ, ಸಂತೆಪ್ಪೈದಾನಿನಲ್ಲಿ ಆಯಿತು.

1939ರ ಆಗಸ್ಟ್ ತಿಂಗಳಲ್ಲಿ ಓದೋ ಬೈರೇಗೌಡ, ಮೆಳೆಹಳ್ಳಿ ಬಿ. ಬೈರಪ್ಪ, ಅಂಕನಹಳ್ಳಿ ಪಟೇಲ್ ಗುಡ್ಡೇಗೌಡ, ಹುಣಸೆದೊಡ್ಡಿ ಬಾಳಪ್ಪ, ಸುಗ್ಗನಹಳ್ಳಿ ಪಟೇಲ್ ಚನ್ನಲಿಂಗಯ್ಯ, ರೇವಣ್ಣ ಮತ್ತು ನಾನು, ಹೀಗೆ ಏಳು ಜನರ ಮೇಲೆ 107ನೆಯ ಸೆಕ್ಷನ್ ಪ್ರಕಾರ ಖಟ್ಲೆ ಹಾಕಿ ಸೇಂದಿ ಅಂಗಡಿ ನಾಶಮಾಡಿದ್ದಾಗಿ ಹೇಳಿದರು. ಐದು ತಿಂಗಳು ವಿಚಾರಣೆ ಆಗಿ ಜೈಲಿನಲ್ಲಿ ಇದ್ದೆವು. ಮುಂದೆ ಒಂದು ವರ್ಷ ಸಜ ಮಾಡಿ ಬೆಂಗಳೂರು ಜೈಲಿಗೆ ಕಳುಹಿಸಿದರು. ಅಲ್ಲಿ ಅಪೀಲು ಮಾಡಿ ಖುಲಾಸೆ ಆಯಿತು. ಅಷ್ಟರಲ್ಲಿ ಏಳು ತಿಂಗಳು 23 ದಿನ ಜೈಲುವಾಸ ಆಗಿತ್ತು.

'ಕ್ವಿಟ್ ಇಂಡಿಯ' ಚಳವಳಿ ಕಾಲಕ್ಕೆ ಮಾಗಡಿ ತಾ|| ವೀರೇಗೌಡನದೊಡ್ಡಿಯಲ್ಲಿ ಆ|| 18ಕ್ಕೆ ನಾನು, ಜಿ. ಮಹದೇವಪ್ಪ, ಹೋಟೆಲು ನಂಜಪ್ಪ, ಶಿವಣ್ಣ, ಮುನಿ ವೆಂಕಟಪ್ಪ, ರುದ್ರಪ್ಪ, ಮಾದಯ್ಯ ಹೀಗೆ ಏಳು ಜನ ಸೇಂದಿ ಅಂಗಡಿಯ ಮುಂದೆ ಪಿಕೆಟಿಂಗ್ ಮಾಡಿದೆವು. ಮುಂದೆ ಮಿಲಿಟರಿ ಬಂದು ನಮ್ಮನ್ನು ಬಂಧಿಸಿ ರಾಮನಗರದಲ್ಲಿ 3 ತಿಂಗಳಿಗೂ ಹೆಚ್ಚು ಕಾಲ ಇಟ್ಟು, ಕಡೆಗೆ ವಿಚಾರಣೆ ಮಾಡಿ, ಸೇಂದಿ ಅಂಗಡಿ ಸುಟ್ಟಿದ್ದೇವೆಂದು ಆಪಾದಿಸಿದರು. ಅಲ್ಲಿಂದ ಬೆಂಗಳೂರು ಅಡಿಶನಲ್ ಕೋರ್ಟಿಗೆ ಸಾಗಿಸಿದರು. ಸೆಂಟ್ರಲ್ ಜೈಲಿನಲ್ಲಿ 3 ತಿಂಗಳು ಇದ್ದೆ. ಕೊನೆಗೆ ಬಿಡುಗಡೆ ಆಯಿತು. ಜೈಲಿನಲ್ಲಿ ಇದ್ದಾಗ ನನ್ನ ಸೊಸೈಟಿ ಸಾಲದ ಬಾಕಿ 11 ರೂಪಾಯಿಗಾಗಿ ನನ್ನ ಹೊಲಿಗೆ ಮಶೀನು ಹರಾಜು ಹಾಕಿದರು. ನನ್ನ ಮಿತ್ರ ಚಿಕ್ಕಭದ್ರೇಗೌಡರು ಅದನ್ನು ಕೊಂಡು ಜೈಲಿನಿಂದ ಬಂದಮೇಲೆ ಕೊಂಡ ಬೆಲೆಗೇ ನನಗೆ ಪರತು ಕೊಟ್ಟರು. ಆದರೂ ಸಾಲ ತೀರಿಸಲು 150 ರೂಪಾಯಿಗೆ ಅದನ್ನು ಮಾರಿದೆ. ಮನೆಯ ಮುಂದಿ ಕೂಲಿ ಮಾಡಬೇಕಾದ ಪ್ರಸಂಗ ಬಂತು. ಜೀವನಕ್ಕೆ ತೊಂದರೆ ಆಯಿತು. ಆಗಿನ ನಮ್ಮ ಕಷ್ಟ ದೇವರೇ ಬಲ್ಲ !

ವ್ಯ.ಚಿಂ. 41

# ವಿ. ಗಿರಿಯಪ್ಪ

ಜನನ : 1907 ಉದ್ಯೋಗ : ಕೃಷಿ ವಿಳಾಸ : ಹಾಗಲಹಳ್ಳಿ, ತಾ॥ ರಾಮನಗರಂ



ನಮ್ಮ ತಾ॥ ಕಾಂಗ್ರೆಸ್ ಅಧ್ಯಕ್ಷ ಕೆ. ಸುಬ್ಬರಾಯರ ಸಂಪರ್ಕದಿಂದಲೂ ತಾಯಿನಾಡು, ವಿಶ್ವಕರ್ನಾಟಕ ಗಳ ಓದಿನಿಂದಲೂ ಕಾಂಗ್ರೆಸ್ ಸೇರಿದೆ. 10-6-1937 ರಲ್ಲಿ ನಮ್ಮ ಕಸಬಾ ಹೋಬಳಿಗೆ ಮಾಡಿದ ಕಾಂಗ್ರೆಸ್ ಸಮಿತಿಗೆ ನಾನೇ ಅಧ್ಯಕ್ಷ. ಲಿಂಗೇಗೌಡನದೊಡ್ಡಿ ಬಸವಲಿಂಗೇಗೌಡರು ಉಪಾಧ್ಯಕ್ಷರು. ಹಾಗಲ ಹಳ್ಳಿಯ ವಿ. ಮೂಡ್ಲಗಿರಯ್ಯ ಹಾಗೂ ಬಿ. ನಂಜಪ್ಪ ಕಾರ್ಯದರ್ಶಿಗಳು. ಎಚ್. ಎನ್. ಕೆಂಪಯ್ಯ ಖಜಾಂಚಿ. ಕಗ್ಗಲಹಳ್ಳಿ ಸಿದ್ದಯ್ಯ ಮತ್ತು ಬೀದಿಮನೆ ಬೈರೇಗೌಡ, ದೇವಿಸಿದ್ದಯ್ಯನ ದೊಡ್ಡಿ ಬೈರಣ್ಣ, ರಾಂಪುರ ಜಿ. ಬೈರಣ್ಣ, ಲಿಂಗೇಗೌಡನದೊಡ್ಡಿ ಸಿ. ಬೋರಯ್ಯ, ಗದಗಯ್ಯನದೊಡ್ಡಿ ವೆಂಕಟಯ್ಯ, ಹನುಮಯ್ಯ ಹಾಗೂ ಹಾಗಲಹಳ್ಳಿಯ ಮೂರ್ತಯ್ಯ. ಎ. ಕೆ. ರಾಚಯ್ಯ ಸದಸ್ಯರು. ಕೆ. ಸುಬ್ಬರಾಯರ ಮುಖೇನ ಈ ಸಮಿತಿ ಆಯಿತು.

ಶಿವಪುರ ಕಾಂಗ್ರೆಸ್ ಕಾಲಕ್ಕೆ 11-4-1938ರಂದು ನನ್ನ ಬಂಧನ ಆಗಿ ಮಂಡ್ಯ ಪೋಲೀಸರು 18 ದಿನ ನನ್ನನ್ನು ಇಟ್ಟುಕೊಂಡು ವಿಪರೀತ ಹೊಡೆದರು. ಮುಂದೆ ನಮ್ಮ ಊರಲ್ಲಿ ಸೇಂದಿ ಕುಡಿಯುವುದರ ವಿರುದ್ಧ ಪ್ರಚಾರ ಆರಂಭಿಸಿ ಕಾಂಗ್ರೆಸ್ ಕಮಿಟಿಯಿಂದ ಮನೆಗೆ 10 ಸೇರು ರಾಗಿ, ಒಂದು ರೂಪಾಯಿ ಕೊಟ್ಟು ಸೇಂದಿ ಕುಡಿಯದಂತೆ ಜನರನ್ನು ಒಲಿಸಿದೆವು. 10-11-1938ರಂದು ಕೆ. ಹನುಮಂತಯ್ಯನವರು ನಮ್ಮ ಊರ ಆಂಜನೇಯ ದೇವಾಲಯದ ಬಳಿ ಸೇರಿದ ಸಭೆಯಲ್ಲಿ ಭಾಷಣಮಾಡಿದರಲ್ಲದೆ ನಮ್ಮ ಕಸಬಾ ಹೋಬಳಿ ಸಮಿತಿಗೆ ಗುಡದಹಳ್ಳಿಯ ಮುನಿಸ್ವಾಮಯ್ಯ, ಚಿಕ್ಕಣ್ಣ ಇವರನ್ನು ಸದಸ್ಯರಾಗಿ ತೆಗೆದುಕೊಳ್ಳುವಂತೆ ಸೂಚನೆ ನೀಡಿದರು. ಆ ದಿನದಿಂದಲೇ ಊರಿನಲ್ಲಿ ಸೇಂದಿ ಕುಡಿಯುವುದರ ವಿರುದ್ಧ ಪ್ರಚಾರ ಆರಂಭಿಸಿ, ಸಭೆಯಲ್ಲಿ ಕೆ. ಹನುಮಂತಯ್ಯ ನವರು ಭಾಷಣ ಮಾಡಿದರು. ಮುಂದೆ ನಮ್ಮ ಗ್ರಾಮಗಳಲ್ಲಿ ಅವರು ಎಂಟು ದಿವಸ ಮನೆಮನೆಗೆ ಹೋಗಿ ಸೇಂದಿ ಕುಡಿಯುವುದರ ವಿರುದ್ಧ ಪ್ರಚಾರಮಾಡಿ ಬಂದರು.

10-9-1939ರಂದು ಮಾನಗಾನಹಳ್ಳಿ ಸ್ಕೂಲಿನಲ್ಲಿ ಸರ್ ಮಿರ್ಜಾರವರು ಬಂದಿರಲು ನನ್ನನ್ನು ಕರೆಸಿ, "ಕಾಂಗ್ರೆಸ್ಸಿಗೆ ಸೇರಬೇಡ" ಎಂದು ಹೇಳಿದರಲ್ಲದೆ ಚನ್ನಪಟ್ಟಣ

ತಾ|| ದೊಂಬರಬೈಲಿನಲ್ಲಿ 10 ಎಕರೆ ಜಮೀನು ಕೊಡುತ್ತೇವೆ, ವ್ಯವಸಾಯಮಾಡಿ ಕೊಂಡು ಸುಖವಾಗಿ ಇರು, ಎಂದರು. ನಾನು ಒಪ್ಪದೆ ಇರಲು ಗದರಿಸಿ, ನಿನಗೆ ತಾಲ್ಲೂಕು ಅಧಿಕಾರಿಗಳಿಂದ ಹಿಂಸೆ ಕೊಡಿಸುತ್ತೇನೆ, ಹಾಗಲಹಳ್ಳಿಯಿಂದ ಊರು ಬಿಡಿಸುತ್ತೇನೆ, ಎಂದು ಕುತ್ತಿಗೆ ಹಿಡಿದು ಹೊರಗೆ ತಳ್ಳಿಸಿದರು. ಅನಂತರ ಅಧಿಕಾರಿಗಳಿಂದ ನನಗೆ ಇಲ್ಲಸಲ್ಲದ ಹಿಂಸೆ ಆರಂಭ ಆಯಿತು. ಆದರೆ ನನಗೆ ಕೆ. ಸುಬ್ಬರಾವ್, ಕೆ. ಹನುಮಂತಯ್ಯ, ವಿ. ವೆಂಕಟಪ್ಪ ಇವರ ಬೆಂಬಲ ಚೆನ್ನಾಗಿತ್ತು.

ನವೆಂಬರ್ 1938ರಲ್ಲಿ ಓಡೋ ಬ್ಯೆರೇಗೌಡರು, ಪಟೇಲ್ ಚನ್ನಲಿಂಗಯ್ಯನವರು (ಸುಗ್ಗನಹಳ್ಳಿ), ರೇವಣ್ಣ ಮುಂತಾದ ಏಳು ಜನ ಚಳವಳಿ ಸಂಬಂಧ ಬಂಧಿತರಾಗಿ ಕ್ಲೋಸ್‌ಪೇಟೆ (ರಾಮನಗರಂ) ಪೋಲೀಸರ ಕಸ್ಟಡಿಯಲ್ಲಿ ಇದ್ದಾಗ, ಚಿಕ್ಕನರಸಿಂಹಯ್ಯ ರೆಡ್ಡಿಯವರ ಮುಖೇನ ನನ್ನಲ್ಲಿ ಇದ್ದ ಆರು ಸವರನ್‌ನ ಬಂಗಾರದ ಕಪ್ಪು ಮಾರಿ 100 ರೂ.ಗಳನ್ನು ಅವರುಗಳ ಊಟ ಮುಂತಾದ ಖರ್ಚಿಗೆ ಕೊಟ್ಟಿರುತ್ತೇನೆ.

ಜೂನ್ 1937ರಲ್ಲಿಯೇ ಸೇಂದಿ ಅಂಗಡಿ ಪಿಕೆಟಿಂಗ್ ಆರಂಭಿಸಿ ಮಾಗಡಿ ತಾ|| ಮಂಚನಬೆಲೆ ಹಾಗೂ ರಾಮನಗರಂ ತಾ|| ಕುಂಬಾರದೊಡ್ಡಿ, ಮೆಳ್ಳೆಹಳ್ಳಿಗಳಲ್ಲಿ ಸೇಂದಿ ಅಂಗಡಿ ಮುಂದೆ ಪಿಕೆಟಿಂಗ್ ಮಾಡಿದೆ. ಮಾಗಡಿ ಪೋಲೀಸರು ಬಂಧಿಸಿ 15 ದಿನ ಇಟ್ಟುಕೊಂಡು ಅಪಾರ ಹಿಂಸೆ ಕೊಟ್ಟರು. ಫೆಬ್ರವರಿ 1938ರಲ್ಲಿ ಮಂಚನಬೆಲೆ, ಕುಂಬಾರದೊಡ್ಡಿ, ಕರೇನಹಳ್ಳಿ, ಮೆಳ್ಳೆಹಳ್ಳಿ, ಅಂಕನಹಳ್ಳಿ, ಶ್ಯಾನುಮಂಗಲಗಳಲ್ಲಿ ಸೇಂದಿ ಅಂಗಡಿ ಮುಂದೆ ಪಿಕೆಟಿಂಗ್ ಮಾಡಿಸಿದೆ. ಈ ಬಗ್ಗೆ ಅನೇಕ ಜನರಿಗೆ ಸ್ವಂತ ಹಣದಿಂದ ಊಟದ ಖರ್ಚು ಕೊಟ್ಟು ಪಿಕೆಟಿಂಗ್‌ಗೆ ಹಚ್ಚಿದೆ. ಇದು ತಿಂಗಳಾನುಗಟ್ಲೆ ನಡೆಯಿತು. ಅಲ್ಲಿನ ಸೇಂದಿ ಅಂಗಡಿಗಳು ಮುಚ್ಚಿಹೋದವು. 29-7-1939ರಲ್ಲಿ ಮೆಳ್ಳೆಹಳ್ಳಿ ಸೇಂದಿ ಅಂಗಡಿ ಮುಂದೆ ಪಿಕೆಟಿಂಗ್ ನಡೆದಾಗ ನನ್ನನ್ನು ರಾಮನಗರಂ ಪೋಲೀಸರು ಬಂಧಿಸಿ, ರಾಮನಗರಂ ಸ್ಟೇಶನ್ನಿನಲ್ಲಿ 21 ದಿನ ಇಟ್ಟುಕೊಂಡು ವಿಪರೀತವಾಗಿ ಹೊಡೆದು ಗಾಯಗೊಳಿಸಿ ರಾತ್ರಿಹೊತ್ತು ದೂರದ ಕಾಡಿಗೆ ಒಯ್ದು ಬಿಟ್ಟರು. ಈ ರೀತಿ ಅನೇಕ ಸಲ ಮಾಡಿದರು. ಸೆಪ್ಟೆಂಬರ್ 1939ರಲ್ಲಿ ಒಮ್ಮೆ ಬಂಧಿಸಿ ನಾಲ್ಕೈದು ದಿನ ಊಟ ಹಾಕದೆ ಇಟ್ಟು, ನಮ್ಮನ್ನು 4-5 ಜನರನ್ನು ದೂರದ ಅಡವಿಯಲ್ಲಿ ರಾತ್ರಿ ಬಿಟ್ಟರಲು, ಬಿಡುವಾಗ ನನ್ನ ಡೈರಿ, ಪೆನ್, ಹಣದ ಪಾಕೆಟು, ಬಂಗಾರದ ಉಂಗುರ ಸಹ ಕಸಿದುಕೊಂಡರು. ನಾವು ಕಷ್ಟಪಟ್ಟು ವೇಲೂರು ಗ್ರಾಮಕ್ಕೆ ಬಂದು, ಅಲ್ಲಿನ ಕಾಂಗ್ರೆಸ್ ಕಾರ್ಯಕರ್ತರ ಸಹಾಯದಿಂದ ಬೆಂಗಳೂರಿಗೆ ತಲಪಿದೆವು. ಮುಂದೆ ಅಕ್ಟೋಬರ್ 1939ರಲ್ಲಿ ನನ್ನ ಬಂಧನ ಆಗಿ ಎರಡು ತಿಂಗಳು ಒಂಬತ್ತು ದಿನ ಜೈಲು ಹಾಗೂ ಜುಲ್ಮಾನೆ ಆದ ಕಾಲಕ್ಕೆ ಮನೆಯಲ್ಲಿನ ಕಾಳುಕಡಿ, ಹುಲ್ಲಿನ ಮೇದೆ ಜಪ್ತಿಮಾಡಿ ಜುಲ್ಮಾನೆ ಹಣ ಹರಾಜಿನಿಂದ ವಸೂಲು ಮಾಡಿದರು. ಅನಂತರ 25-8-1942ರಲ್ಲಿ ಬಂಧನ ಆದಾಗ ಬೆಂಗಳೂರಲ್ಲಿ ನನ್ನ ಹೆಸರನ್ನು ತಪ್ಪಾಗಿ ಕೊಟ್ಟು ಜಪ್ತಿ ಆಗದಂತೆ

ತಪ್ಪಿಸಿಕೊಂಡೆ. ಆಗಲೂ ಮೂರು ತಿಂಗಳು ಶಿಕ್ಷೆ ಆಯಿತು.

'ಮೈಸೂರು ಚಲೋ' ಚಳವಳಿ ಕಾಲಕ್ಕೂ 1-9-1947ರಂದು ಎರಡು ತಿಂಗಳು ಶಿಕ್ಷೆ ಆಗಿತ್ತು. ಆದರೆ ಬೇಗನೇ ಬಿಡುಗಡೆಯಾಯಿತು. ಹೀಗೆ 1937ರಿಂದ 1947ರವರೆಗೆ ಚಳವಳಿಯಲ್ಲಿ ಪಾಲುಗೊಳ್ಳುತ್ತ ಇದ್ದೆನಲ್ಲದೆ ನಮ್ಮ ಊರಲ್ಲಿ ಪ್ರತಿವರ್ಷ ಹನುಮಂತ ದೇವರ ಗುಡಿ ಬಳಿ ಸಭೆ ಏರ್ಪಡಿಸಿದ್ದೇನೆ. ಈ ಸಂಬಂಧ ಅಪಾರ ಆರ್ಥಿಕ ನಷ್ಟಕ್ಕೆ ಒಳಪಟ್ಟು ಏಳು ಕಡೆ ಬೇರೆಬೇರೆ ಸರ್ವೆ ನಂಬರುಗಳಲ್ಲಿರುವ ಒಟ್ಟು 18 ಎಕ್ರೆ 12 ಗುಂಟೆ ಜಮೀನನ್ನೂ ಮಾರಾಟ ಮಾಡಿದ್ದು ರಾಮನಗರಂ ಸಬ್‌ರಿಜಿಸ್ಟ್ರಾರ್ ಆಫೀಸಿನ ದಾಖಲೆಗಳಿಂದ ತಿಳಿಯಬಹುದು. ಈಗಲೂ ಸುತ್ತಲ ಹಳ್ಳಿಗಳಲ್ಲಿ ಜನರು ನನ್ನನ್ನು 'ಕಾಂಗ್ರೆಸ್ ಗಿರಿಯಪ್ಪ' ಎಂದೇ ಕರೆಯುತ್ತಿದ್ದಾರೆ.

ಮೈ.ಬೆಂ. 42

## ಎಚ್. ಆರ್. ಶೀನಪ್ಪ

ಜನನ : 1914 ಉದ್ಯೋಗ : ಕೃಷಿ ವಿಳಾಸ : ಹಾರೋಹಳ್ಳಿ, ತಾ॥ ಕನಕಪುರ



ನಾನು 1931ರಿಂದ 1934ರ ವರೆಗೆ ಚನ್ನಪಟ್ಟಣ ಸರ್ಕಾರಿ ಪ್ರೌಢಶಾಲೆಯಲ್ಲಿ ಓದುತ್ತಿದ್ದೆ. ಭಾರತದಲ್ಲಿ ಸ್ವಾತಂತ್ರ್ಯ ಚಳವಳಿ ಬಿರುಸಾಗಿ ಸಾಗಿತ್ತು. ಸಹಸ್ರಾರು ಮಂದಿ ಜೇಲಿಗೆ ಹೋಗುತ್ತಿದ್ದರು. ಇದನ್ನೆಲ್ಲಾ ಪತ್ರಿಕೆಗಳ ಮೂಲಕ ತಿಳಿಯುತ್ತಿದ್ದೆ. ಅನೇಕ ವಿದ್ಯಾರ್ಥಿಗಳ ಮೇಲೆ ಬಿದ್ದಂತೆ ನನ್ನಮೇಲೂ ಪ್ರಭಾವ ಬಿದ್ದಿತು. ನಮ್ಮ ಪ್ರೌಢಶಾಲೆಯಲ್ಲಿ ಕನ್ನಡ ಪಂಡಿತರಾಗಿದ್ದ ಚಕ್ರವರ್ತಿ ಐಯ್ಯಂಗಾರ್ ಎಂಬುವರು ನಮಗೆ ಸತ್ಯಾಗ್ರಹದ ವಿಚಾರಗಳನ್ನು ತಿಳಿಸುತ್ತಿದ್ದರು. ಸೈಮನ್ ಕಮಿಶನ್ ಬಂದಾಗ ಶಾಲೆಯನ್ನು ಬಹಿಷ್ಕರಿಸಿ ಮೆರವಣಿಗೆ ನಡೆಸಿದ್ದೆವು. ರಾಮ್ಸೆ ಮ್ಯಾಕ್ಡೊನಾಲ್ಡ್‌ರು ಹರಿಜನರು ಹಿಂದುಗಳಲ್ಲವೆಂದು ಅವರಿಗೇ ಬೇರೆ ಅವಾರ್ಡ್ ಕೊಟ್ಟಾಗ ಮಹಾತ್ಮಾಜಿಯವರು ಇದನ್ನು ಪ್ರತಿಭಟಿಸಿ ಪುಣೆಯಲ್ಲಿ ಆಮರಣಾಂತ ಉಪವಾಸದಲ್ಲಿ ತೊಡಗಿದ್ದರು. ಕೊನೆಗೆ ಡಾ॥ ಅಂಬೇಡ್ಕರ್‌ರೊಂದಿಗೆ ಅವಾರ್ಡ್ ರದ್ದುಗೊಳಿಸುವ ಒಪ್ಪಂದವಾದಾಗ ಅವರ ಉಪವಾಸ ನಿಂತಿತ್ತು. ಆ ಕಾಲದಲ್ಲಿ ಪುಣೆಯಲ್ಲಿ ಲಾ ವಿದ್ಯಾರ್ಥಿಯಾಗಿದ್ದು ಶಿಕ್ಷಣ ಮುಗಿಸಿ ಬಂದಿದ್ದ ಕೆ. ಹನುಮಂತಯ್ಯನವರು

ಗಾಂಧೀಜಿಯವರನ್ನು ಭೇಟಿಮಾಡಿ ಬಂದಿದ್ದರು. ಅವರು ಚನ್ನಪಟ್ಟಣದಲ್ಲಿ ವಿದ್ಯಾರ್ಥಿಗಳನ್ನುದ್ದೇಶಿಸಿ ಭಾಷಣಮಾಡಿ ಪುಣೆ ಒಪ್ಪಂದವನ್ನೂ, ಬ್ರಿಟಿಷರ ಕುಟಿಲತೆಯನ್ನೂ ವಿವರಿಸಿದಾಗ ನನ್ನ ರಾಷ್ಟ್ರೀಯ ಭಾವನೆ ಉಕ್ಕಿ ಹರಿಯಿತು. ಇದಾದ ಸ್ವಲ್ಪವೇ ಕಾಲಕ್ಕೆ, ಅಂದರೆ 1934ರ ಜನವರಿಯಲ್ಲಿ, ಗಾಂಧೀಜಿಯವರು ದೇಶದಲ್ಲೆಲ್ಲಾ ಪ್ರವಾಸ ಮಾಡಿ ಬಂದು ಚನ್ನಪಟ್ಟಣದಲ್ಲಿ ಭಾರಿ ಬಹಿರಂಗ ಸಭೆಯನ್ನುದ್ದೇಶಿಸಿ ಭಾಷಣಮಾಡಿದರು. ಅವರು ವಿಶ್ರಾಂತಿ ತೆಗೆದುಕೊಂಡ ಕುಟೀರದಲ್ಲಿ ಸ್ವಯಂಸೇವಕನಾಗಿ ಕೆಲಸ ಮಾಡುವ ಭಾಗ್ಯ ನನ್ನದಾಗಿತ್ತು. ಈ ಹಿಂದೆಯೇ 1927ರಲ್ಲಿ, ಮಹಾತ್ಮಾಜಿಯವರು ಕಾನಕಾನಹಳ್ಳಿಗೆ ಬಂದಿದ್ದಾಗಲೂ ಅವರನ್ನು ಕಾಣುವ ಸುಯೋಗ ಒದಗಿತ್ತು. ಚನ್ನಪಟ್ಟಣದಲ್ಲಿ ವಿ. ವೆಂಕಟಪ್ಪ ಪ್ರಮುಖ ನಾಯಕರಾಗಿದ್ದರು. ಅಬ್ಬೂರು ಗೋಪಣ್ಣ, ಡಿ. ಆರ್. ಲಿಂಗಯ್ಯ, ವೆಂಕಟರಮಣ ರೆಡ್ಡಿ, ಪದ್ದು, ಅಶ್ವತ್ಥನಾರಾಯಣರಾವ್, ಅಬ್ಬೂರು ಕೃಷ್ಣಮೂರ್ತಿ ಮುಂತಾದವರು ಇವರ ಜೊತೆಯಲ್ಲಿ ದುಡಿಯುತ್ತಿದ್ದರು.

1934ರ ಮಾರ್ಚ್ ಕೊನೆಯಲ್ಲಿ ನನ್ನ ವಿದ್ಯಾಭ್ಯಾಸ ಮುಗಿದು ನನ್ನ ಸ್ವಸ್ಥಳವಾದ ಹಾರೋಹಳ್ಳಿಗೆ ಬಂದು ಕಾಂಗ್ರೆಸ್ ಸೇರಿ ಕೆಲಸಮಾಡಲಾರಂಭಿಸಿದೆ. ನಾನು ಪ್ರೌಢಶಾಲೆ ಸೇರಿದ ಪ್ರಾರಂಭದಲ್ಲಿಯೇ ಖಾದಿ ತೊಡಲು ಆರಂಭಿಸಿದ್ದೆ. ಆ ಕಾಲದಲ್ಲಿ ಖಾದಿ ತೊಟ್ಟು ಗಾಂಧೀಟೋಪಿ ಧರಿಸುವುದು ಅಪರಾಧವೆನಿಸಿತ್ತು. ಇಂತಹವರನ್ನು ಸರಕಾರಿ ಅಧಿಕಾರಿಗಳೂ, ಪೋಲೀಸರೂ ಸಂಶಯದಿಂದ ಕಾಣುತ್ತಿದ್ದುದೇ ಅಲ್ಲದೆ ಅವರ ಮೇಲೆ ಹೆಚ್ಚು ನಿಗಾ ಇಟ್ಟಿರುತ್ತಿದ್ದರು. ಆಗ ನಮ್ಮ ಊರಿನಲ್ಲಿ ಕಾಂಗ್ರೆಸ್‌ಗೆ ಸದಸ್ಯರನ್ನು ಸೇರಿಸುವುದು, ಮದ್ಯಪಾನ ನಿರೋಧ ಪ್ರಚಾರಮಾಡುವುದು, ಚರಖದಿಂದ ನೂಲು ತೆಗೆಯುವುದನ್ನು ಕಲಿಸುವುದು, ಹಿಂದೀ ತರಗತಿಗಳನ್ನು ನಡೆಸುವುದು ಮುಂತಾದ ರಚನಾತ್ಮಕ ಕಾರ್ಯಗಳಲ್ಲದೆ ಆಗಾಗ ಕಾಂಗ್ರೆಸ್ ಮುಖಂಡರುಗಳಿಂದ ಭಾಷಣ ಏರ್ಪಾಡುಗೊಳಿಸುತ್ತಿದ್ದೆ.

1938ರಲ್ಲಿ ಶಿವಪುರ ಕಾಂಗ್ರೆಸ್‌ಗೆ ಪ್ರತಿನಿಧಿಯಾಗಿ ತೆರಳಿದ್ದೆನು. 1939ರ ವಿದುರಾಶ್ವತ್ಥ ಅಧಿವೇಶನ ಹಾಗೂ 1941ರ ಏಪ್ರಿಲ್‌ನಲ್ಲಿ ನಡೆದ ಚನ್ನಪಟ್ಟಣ ಅಧಿವೇಶನಗಳಲ್ಲಿ ಪ್ರತಿನಿಧಿಯಾಗಿ ಭಾಗವಹಿಸಿದ್ದೆ.

ನಮ್ಮ ಊರಿನಲ್ಲಿ 1942ರಿಂದ 1947ರವರೆಗೆ ಕಾಂಗ್ರೆಸ್ ಬಹಿರಂಗ ಸಭೆಗಳು ನಡೆಯುತ್ತಲೇ ಇರುತ್ತಿದ್ದವು. ನಮ್ಮ ತಾಲ್ಲೂಕಿನ ಮುಖಂಡರಾದ ಎಸ್. ಕರಿಯಪ್ಪ, ಕೆ. ಸುಬ್ಬರಾವ್, ಗುರಿಕಾರ ರಂಗೇಗೌಡ ಮತ್ತು ದಿ|| ಡಿ. ವೆಂಕಟಾಚಲಪತಿ ಶೆಟ್ಟಿ ಆಗಾಗ್ಗೆ ಬಹಿರಂಗ ಸಭೆಗಳನ್ನುದ್ದೇಶಿಸಿ ಭಾಷಣ ಮಾಡುತ್ತಿದ್ದರು. ಹಿರಿಯ ಮುಖಂಡರಾದ ವಿ. ವೆಂಕಟಪ್ಪ, ಕೆ. ಹನುಮಂತಯ್ಯ, ಟಿ. ಸಿದ್ದಲಿಂಗಯ್ಯ, ಕೆ. ಟಿ. ಭಾಷ್ಯಂ, ಎಚ್. ಸಿ. ದಾಸಪ್ಪ, ಕೆ. ಸಿ. ರೆಡ್ಡಿ ಇನ್ನೂ ಅನೇಕರನ್ನು ನಮ್ಮೂರಿಗೆ ಕರೆಯಿಸಿ ಭಾಷಣ ಮಾಡಿಸುತ್ತಿದ್ದೆವು. ಅನೇಕ ವರ್ಷಕಾಲ ನಾನೇ ಇಲ್ಲಿಯ ಕಾಂಗ್ರೆಸ್ ಸಮಿತಿ ಅಧ್ಯಕ್ಷ

ಆಗಿದ್ದೆ. ಉಡುಪಿಯ ಕಡೆಯಿಂದ ಬಂದು ಈಗಲೂ ಇಲ್ಲಿಯೇ ನೆಲೆಸಿರುವ ಎಸ್. ರಾಮದೇವ ಹೊಳ್ಳರು ಚಟುವಟಿಕೆಯಿಂದ ಇರುತ್ತಿದ್ದರೇ ವಿನಹ ಹೇಳಿಕೊಳ್ಳುವಂತಹ ಕಾರ್ಯಕರ್ತರೂ ಇರಲಿಲ್ಲ. ಅನೇಕರು ಸಹಾನುಭೂತಿ, ಸಹಕಾರ ಕೊಡುತ್ತಿದ್ದರು. ಎಚ್. ಕೆ. ಜಟ್ಟಪ್ಪ ಎಂಬುವರು ದಸ್ತಗಿರಿಯಾಗಿ ಮೂರು ತಿಂಗಳು ಸಜಾ ಅನುಭವಿಸಿದರು. ಇನ್ನೊಬ್ಬ ಮಿತ್ರ ಬೋಳೇಗೌಡ 1942ರಲ್ಲೂ, 1947ರಲ್ಲೂ ದಸ್ತಗಿರಿಯಾಗಿ ಏಳೆಂಟು ತಿಂಗಳು ಜೈಲುವಾಸ ಅನುಭವಿಸಿದರು. ಇವರ ಕಾರ್ಯಕ್ಷೇತ್ರ ಕನಕಪುರಕ್ಕೆ ಮಾತ್ರ ಸೀಮಿತವಾಗಿತ್ತು. ನಮ್ಮೂರಿನವರಾಗಿರುವ ಎಚ್. ಎಸ್. ದೊರೆಸ್ವಾಮಿಯವರೂ ಸಹ ಇಲ್ಲಿಗೆ ಬಂದು ಅನೇಕ ಬಾರಿ ತಮ್ಮ ಮಿತ್ರರೊಂದಿಗೆ ಕಾಂಗ್ರೆಸ್ ಬಹಿರಂಗ ಸಭೆಗಳನ್ನುದ್ದೇಶಿಸಿ ಭಾಷಣ ಮಾಡಿದ್ದಾರೆ.

1942ರಲ್ಲಿ ಮೈಸೂರಿಗೆ ಹೊರಟಿದ್ದ ನನ್ನನ್ನು ಪೋಲೀಸರು ಚನ್ನಪಟ್ಟಣದಲ್ಲಿ ತಡೆದು ಊರಿಗೆ ವಾಪಸ್ಸು ಕಳುಹಿಸಿದರು. ಆದರೆ ದಸ್ತಗಿರಿ ಮಾಡಲಿಲ್ಲ. ನಂತರ 1947ರ ಚಳವಳಿಯಲ್ಲಿ (ಸೆಪ್ಟೆಂಬರ್) ಭಾಗವಹಿಸಿದ್ದು ಮೈಸೂರಿಗೆ ಹೊರಟಿದ್ದ ಸುಮಾರು 30 ಮಂದಿ ಇದ್ದ ನಮ್ಮ ತಂಡವನ್ನು ಕನಕಪುರದ ಬಳಿ ತಡೆದು ದಸ್ತಗಿರಿ ಮಾಡಿ ಹೊಸಕೋಟೆ ತಾಲ್ಲೂಕಿನ ನಂದಗುಡಿಯಲ್ಲಿ ಬಿಟ್ಟರು. ಆ ರಾತ್ರಿ ನಾವು ಆ ಹಳ್ಳಿಯಲ್ಲಿ ಭಾಷಣಮಾಡಿದುದರಿಂದ ರಾತ್ರಿ 12 ಘಂಟೆ ಸಮಯದಲ್ಲಿ ಪುನಃ ದಸ್ತಗಿರಿ ಮಾಡಿ ಲಾರಿಯಲ್ಲಿ ತುಂಬಿಕೊಂಡು ಮೈಲಿಗೊಬ್ಬರಂತೆ ಬಿಡುತ್ತಾ ಬಂದರು. ಆ ರಾತ್ರಿ ಬಿಟ್ಟ ನಮ್ಮ ತಂಡದವರು ಅನೇಕ ಕಷ್ಟಗಳನ್ನನುಭವಿಸಿ ಪುನಃ ಮೂರನೇ ದಿನ ಒಟ್ಟುಗೂಡಿ ಹೊಸಕೋಟೆಯಲ್ಲಿ ಸೇರಿ ಪ್ರಚಾರಭಾಷಣ ಮಾಡಿದೆವು. ನಮ್ಮ ಈ ತಂಡಕ್ಕೆ ಕನಕಪುರದ ಕೆ. ಎನ್. ನರಸಿಂಹಶಾಸ್ತ್ರಿಗಳು ನಾಯಕರಾಗಿಯೂ ನಾನು ಉಪನಾಯಕನಾಗಿಯೂ ಇದ್ದೆವು.

ಮೈ.ಬೆಂ. 43

## ಶಿವರಾಮ ಸಿಂಗ್

ಜನನ : 1907 ಉದ್ಯೋಗ : ಕೃಷಿ ವಿಳಾಸ : ಮಾಗಡಿ ಅಂಚೆ

---

ನಾನು ಮೊದಲಿನಿಂದಲೂ ಪತ್ರಿಕೆಗಳನ್ನು ಓದುತ್ತಿದ್ದೆನು. ನಮ್ಮ ದೇಶ ಅನೇಕ ಬಾರಿ ಪರಾಧೀನವಾಗಲು ನಮ್ಮಲ್ಲಿದ್ದ ಪರಂಪರಾನುಗತ ಅನೈಕಮತ್ಯವೇ ಕಾರಣವೆಂದು ಚರಿತ್ರೆಯಲ್ಲಿ ಓದಿ ತಿಳಿದಿದ್ದೆ. ನಾನು ಒಬ್ಬ ರಜಪೂತ; ನನಗೆ ತುಂಬಾ ದೇಶಾಭಿಮಾನ ಇತ್ತು. ದೇಶದ ದಾಸ್ಯವಿಮೋಚನೆಗಾಗಿಯೇ ಕಾಂಗ್ರೆಸ್ ಪಕ್ಷದ ಜನನವಾದಂತಿತ್ತು.

ದೇಶದ ಅಖಂಡ ಜನಕೋಟಿಯು ಜಾತಿ-ಭೇದ, ಪಕ್ಷ-ಭೇದಗಳನ್ನು ತೊರೆದು ಗಾಂಧೀಜಿಯವರನ್ನು ಹಿಂಬಾಲಿಸುತ್ತಿದ್ದರು. ಕರ್ಲಮಂಗಲ ಕೃಷ್ಣಮೂರ್ತಿ, ಎಲ್. ರಾಮಚಂದ್ರರಾವ್ ನಮ್ಮ ಊರಲ್ಲಿ ಸೇಂದಿ, ಸಾರಾಯಿ ಮಾರಾಟದ ವಿರುದ್ಧ 1929ಕ್ಕೆ ಮೊದಲೇ ಪಿಕೆಟಿಂಗ್ ನಡೆಸುತ್ತಿದ್ದರು. ನಾನೂ ಸಹ ಸ್ವಾತಂತ್ರ್ಯಕ್ಕಾಗಿ ನಮ್ಮ ತಾಲ್ಲೂಕಿನಲ್ಲಿ ದುಡಿಯಲು ಸಂಕಲ್ಪಮಾಡಿದೆನು.

ಅಂತೆಯೇ ನಾನು 1929ರಿಂದ ಖಾದಿ ಧರಿಸಿ ಹೋರಾಟದಲ್ಲಿ ಭಾಗವಹಿಸಿದೆ. ಗಾಂಧೀಜಿಯವರ ಮತ್ತು ಕಾಂಗ್ರೆಸ್ಸಿನ ಸಂದೇಶಗಳನ್ನು ತಾಲ್ಲೂಕಿನ ಹಳ್ಳಿಹಳ್ಳಿಗಳಲ್ಲಿಯೂ ಪ್ರಚಾರಮಾಡುವ ಕಾರ್ಯ ಸತತವಾಗಿ ನಡೆಯುತ್ತಿತ್ತು. ಪ್ರಚಾರಕ್ಕೆ ಅವಕಾಶ ಕೊಡದೆ ಅಡಚಣೆ ಉಂಟುಮಾಡಲು ಸಭೆ ಮೆರವಣಿಗೆಗಳಿಗೆ ಬಹಿಷ್ಕಾರ ಹಾಕಲಾಗಿತ್ತು. ಮೈಸೂರಲ್ಲಿ ರಂಗಾಚಾರ್ಲು ಮೆಮೋರಿಯಲ್ ಹಾಲ್ ಮೈದಾನದಲ್ಲಿ ಯಾರೂ ಸಭೆ ಸೇರಿ ಭಾಷಣಮಾಡಬಾರದೆಂದು 144ನೇ ಸೆಕ್ಷನ್ ಜಾರಿ ಮಾಡಿದ್ದರು. ನಾನೂ ಸಹ ಆ ಪ್ರತಿಬಂಧಕಾಜ್ಞೆಯನ್ನು ಮುರಿಯುವ ಸಲುವಾಗಿ ಮಾಗಡಿಯಿಂದ ಪೋಲೀಸರಿಗೆ ಸುಳಿವು ಕೊಡದಂತೆ ಹೊರಟೆನು. ನನ್ನ ಜೊತೆಯಲ್ಲಿ ಮಾರಣ್ಣ, ಚಿಕ್ಕೇಗೌಡ, ಶಾರದಮ್ಮ, ಚನ್ನಪ್ಪ, ಕೆ. ನಾರಾಯಣಶೆಟ್ಟಿ ಮತ್ತು ಹರ್ತಿ ಆದಿರಾಜಯ್ಯ ಇದ್ದರು. ನಾನು 1-10-1939ರ ದಿನ ಮೇಲೆ ಹೆಸರಿಸಿದ ಮೈಸೂರಿನ ಮೈದಾನದಲ್ಲಿ ಮಾತನಾಡಿ ಕಾನೂನನ್ನು ಮುರಿದೆನು. ನನ್ನ ದಸ್ತಗಿರಿಯಾಗಿ ಏಳು ತಿಂಗಳು ಕಠಿಣ ಸಜವನ್ನು ಮ್ಯಾಜಿಸ್ಟ್ರೇಟರು ವಿಧಿಸಿದರು ಮತ್ತು ಮೈಸೂರು ಜೈಲಿನಲ್ಲಿ ಇಟ್ಟರು. ಜೈಲಿನಲ್ಲಿ ಊಟೋಪಚಾರದ ವ್ಯವಸ್ಥೆ ಸರಿಯಾಗಿರಲಿಲ್ಲ. ಮೂರನೇ ದಿನವೇ ಮತ್ತೆ ಕೆಲವರ ಸಹಿತ ನನ್ನನ್ನು ಶಿವಮೊಗ್ಗ ಜೈಲಿಗೆ ಒಯ್ದರು. ಶಿವಮೊಗ್ಗ ಜೈಲಿನಲ್ಲೂ ಸಹ ಸರಿಯಾದ ವ್ಯವಸ್ಥೆ ಇರಲಿಲ್ಲ. ಇದರಿಂದ ನನಗೆ ರಕ್ತಭೇದಿ, ವಾಂತಿ, ಜ್ವರ ಉಂಟಾಗಿ ಆಸ್ಪತ್ರೆಗೆ ಸೇರಿಸಿದರು. ಅಲ್ಲಿಂದ ಪುನಃ ಜೈಲಿಗೆ ಬಂದಮೇಲೆ ನನ್ನನ್ನು ತೀರ್ಥಹಳ್ಳಿ ಜೈಲಿಗೆ ವರ್ಗಾಯಿಸಿದರು. 3-5-1940ರಲ್ಲಿ ಬಿಡುಗಡೆ ಮಾಡಲ್ಪಟ್ಟೆನು.

ಬಿಡುಗಡೆಯಾಗಿ ಬಂದನಂತರವೂ ನನಗೆ ದೇಶದ ಕಾರ್ಯದ ವಿನಾ ಮತ್ತಾವ ಹವ್ಯಾಸವೂ ಇರಲಿಲ್ಲ. ಗಾಂಧೀಜಿಯವರು 1942ರಲ್ಲಿ 'ಕ್ವಿಟ್ ಇಂಡಿಯಾ' ಚಳವಳಿಯನ್ನು ಸಾರಿದರು. ತಕ್ಷಣ ನಮ್ಮ ಊರಲ್ಲಿ ಚಿಕ್ಕೇಗೌಡ, ಆದಿರಾಜಯ್ಯ ಇವರನ್ನು ಬಂಧಿಸಿದರು. ಮುಂದೆ 20-8-1942ರಲ್ಲಿ ನನ್ನನ್ನೂ ಬಂಧಿಸಿ ಬೆಂಗಳೂರು ಸೆಂಟ್ರಲ್ ಜೈಲ್‌ಗೆ ಒಯ್ದರು. 8-10-1943ರಲ್ಲಿ ಬಿಡುಗಡೆ ಆಯಿತು. ಮತ್ತೆ ಪ್ರಚಾರ ಕಾರ್ಯ ಮುಂದುವರೆಯಿತು. 1947ರಲ್ಲಿ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಚಳವಳಿ ಪ್ರಾರಂಭವಾಯಿತು. ಎಲ್ಲೆಲ್ಲಿಯೂ 'ಅರಮನೆ ಸತ್ಯಾಗ್ರಹ' ಕ್ಕೆ ಸೇರಲು 'ಮೈಸೂರು ಚಲೋ' ಜಾಥಾಗಳು ಸಿದ್ಧವಾದವು. ಮಾಗಡಿಯಿಂದಲೂ— ನನ್ನ ಮತ್ತು ಎ. ಕೆ. ಭಾರದ್ವಾಜ್ ನಾಯಕತ್ವದಲ್ಲಿ— ಒಂದು ಜಾಥಾ ಕಾಲುನಡಿಗೆ

ಯಲ್ಲೇ ಹೊರಟಿತು. ಈ ತಂಡದಲ್ಲಿ ಸುಮಾರು 20 ಸಣ್ಣಪುಟ್ಟ ಬಾಲಕರೂ ಉತ್ಸಾಹದಿಂದ ಸೇರಿದರು. ಮಂಡ್ಯ, ಶ್ರೀರಂಗಪಟ್ಟಣ ಮಾರ್ಗವಾಗಿ ಬಹಿರಂಗ ಸಭೆಗಳನ್ನು ನಡೆಸಿ ಜನಜಾಗೃತಿ ಉಂಟುಮಾಡುತ್ತಾ ಸಾಗಿದೆವು. ಶ್ರೀರಂಗಪಟ್ಟಣದ ಬಳಿ ಜಿಲ್ಲಾಧಿಕಾರಿಗಳು ರಾತ್ರಿ ಎರಡು ಘಂಟೆ ಸಮಯದಲ್ಲಿ ರಸ್ತೆಯಲ್ಲೇ ಎಲ್ಲರನ್ನೂ ಬಂಧಿಸಿ ಲಾಕಪ್‌ನಲ್ಲಿ ಡೆಟನ್ಯೂ ಆಗಿ ಇರಿಸಿದರು. ಆದರೆ ಬೇಗನೇ ಜವಾಬ್ದಾರಿ ಸರ್ಕಾರ ಸ್ಥಾಪಿಸಲ್ಪಟ್ಟು ನಮ್ಮೆಲ್ಲರ ಬಿಡುಗಡೆ ಆಯಿತು.

ನಾನು ಈ ಹೋರಾಟದಲ್ಲಿ ಭಾಗವಹಿಸಿದಾಗ ನನ್ನ ಜೀವನಾಧಾರವಾಗಿದ್ದ ಜಮೀನನ್ನು ಕಂದಾಯದ ಬಾಕಿಗಾಗಿ ಸರ್ಕಾರದವರು ಹರಾಜುಮಾಡಿ ಮಾಗಡಿ ಟೌನ್ ಕೋ-ಆಪರೇಟಿವ್ ಸೊಸೈಟಿಗೆ ಒಳಪಡಿಸಿದರು. ಏಳೆಂಟು ವರ್ಷಗಳ ಕಾಲ ನಾನು, ನನ್ನ ತಾಯಿ ಹೊಟ್ಟೆಬಟ್ಟೆಗಿಲ್ಲದೇ ತೊಳಲಿದೆವು. ಸೊಸೈಟಿಯವರು, ನಾನು ಕೊಡಬೇಕಾಗಿದ್ದ ನೂರು ರೂಪಾಯಿಗಳಿಗಾಗಿ ಶಿವಮೊಗ್ಗ ಜೈಲಿನಲ್ಲಿದ್ದ ನನಗೆ ಸಮನ್ಸ್ ಕಳಿಸಿದರು (1939).

ಹಲವಾರು ವರ್ಷಗಳ ಹೋರಾಟದನಂತರ ಹೊಟ್ಟೆಗಿಲ್ಲದೇ ನೊಂದೆನು. ನನ್ನ ಜೊತೆಯ ಇತರ ಕಾರ್ಯಕರ್ತರು ಹೋರಾಟದಲ್ಲಿ ಹಿಂದುಳಿದರು. ನಾನೊಬ್ಬ ಕೊನೆಯವರೆಗೂ ಹೋರಾಡಿದೆನು. ಅಧಿಕಾರಿಗಳ, ಸರ್ಕಾರದ, ಪೋಲೀಸರ ತೀವ್ರ ಕಿರುಕುಳಗಳಿಗೂ ತಲೆಬಾಗಲಿಲ್ಲ. ನನಗೆ ಪೌರಸಭೆ ಮುಂತಾದ ಚುನಾವಣೆಗೆ ನಿಲ್ಲಲೂ ಆಗಿನ ಸರ್ಕಾರ ಅವಕಾಶ ಕೊಡಲಿಲ್ಲ. ನಾನು ಸರ್ಕಾರದಿಂದ ಯಾವ ಆರ್ಥಿಕ ಸಹಾಯವನ್ನೂ ಪಡೆದಿಲ್ಲ. ಕಾಂಗ್ರೆಸ್ ಶುದ್ಧೀಕರಣಕ್ಕಾಗಿ ನಾನು 1950ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ಕೊಟ್ಟೆನು.

ಆಗಿನ ಸರ್ಕಾರ ನನ್ನ ಚಟುವಟಿಕೆಗಳನ್ನು ಗಮನಿಸಿ ವರದಿ ಒಪ್ಪಿಸಬೇಕೆಂದು ನಾಲ್ಕಾರು ವರ್ಷ ಸ್ಥಳೀಯ ಪೋಲೀಸರಿಂದ ವರದಿ ತರಿಸಿಕೊಳ್ಳುತ್ತಿತ್ತು. ಪೋಲೀಸರು ನನ್ನ ಮೇಲೆ ಸದಾ ಕಾವಲಿದ್ದರು. ನಾನು ಯಾವ ಕಷ್ಟನಷ್ಟಗಳಿಗೂ ಹೆದರದೇ ದುಡಿದೆನು. ಸ್ವಾತಂತ್ರ್ಯಾನಂತರ 25 ವರ್ಷಗಳಾದಮೇಲೆ ತಾಮ್ರಪತ್ರ ಪಡೆಯಲು ಕೆಲವರ ಸಂಗಡ ದೆಹಲಿಗೆ ಕಳುಹಿಸಿಕೊಟ್ಟರು—ಮೈಸೂರಿನಿಂದ (1972).

ನಾನು ಮಾಗಡಿ ತಾಲ್ಲೂಕ್ ಕಾಂಗ್ರೆಸ್ ಕಾರ್ಯದರ್ಶಿಯಾಗಿಯೂ ಅಧ್ಯಕ್ಷನಾಗಿಯೂ ಜಿಲ್ಲಾ ಕಮಿಟಿಯಲ್ಲೂ ಎಂ.ಪಿ.ಸಿ.ಸಿ. ಸದಸ್ಯನಾಗಿಯೂ ಹರಿಜನ ಸಂಘ, ಮಾಗಡಿ ತಾಲ್ಲೂಕಿನ ಎಲ್ಲಾ ಸಂಘಸಂಸ್ಥೆಗಳಲ್ಲೂ ಪಂಚಾಯಿತಿಗಳಲ್ಲೂ ಸೇವೆಸಲ್ಲಿಸಿದ್ದೇನೆ. ಮಾಗಡಿ ಪುರಸಭೆಯಲ್ಲಿ ಹಲವಾರು ವರ್ಷ ಸದಸ್ಯನಾಗಿಯೂ ಉಪಾಧ್ಯಕ್ಷ ಹಾಗೂ ಅಧ್ಯಕ್ಷನಾಗಿಯೂ ಸೇವೆಮಾಡಿದ್ದೇನೆ. ಇಂದು ನಿಷ್ಠ ಕಾರ್ಯಕರ್ತರಿಗೆ ಯಾವುದೇ ಅವಕಾಶ ಇಲ್ಲದಂತಾಗಿದೆ.

ಮೈ.ಮೈ. 1

# ಅಗರಂ ರಂಗಯ್ಯ

ಜನನ : 1901 ಉದ್ಯೋಗ : ಪತ್ರಕರ್ತ ವಿಳಾಸ : 323, ಡಿ. ಸುಬ್ಬಯ್ಯ ರಸ್ತೆ, ಮೈಸೂರು



ನಮ್ಮ ವಿದ್ಯಾಭ್ಯಾಸಕ್ಕಾಗಿ ನಮ್ಮ ತಂದೆ ಮೈಸೂರಿನಲ್ಲೊಂದು ಮನೆಮಾಡಿ ನಮ್ಮನ್ನು ಅಲ್ಲಿ ಇಟ್ಟರು. ನಾನು ದಳವಾಯಿ ಶಾಲೆ, ಮರಿಮಲ್ಲಪ್ಪನವರ ಶಾಲೆ ಮತ್ತು ಮಹಾರಾಜ ಕೊಲಿಜಿಯಟ್ ಹೈಸ್ಕೂಲ್‌ನಲ್ಲಿ ಅಭ್ಯಾಸಮಾಡಿದೆ. ಮರಿಮಲ್ಲಪ್ಪನವರ ಶಾಲೆಯಲ್ಲಿ ರಾಮರಾವ್ ಎಂಬ ಉಪಾಧ್ಯಾಯರಿದ್ದರು. ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರು ಮುಖ್ಯೋಪಾಧ್ಯಾಯರಾಗಿದ್ದರು —ಇವರುಗಳು ಪಾಠಪ್ರವಚನಗಳ ಜೊತೆಯಲ್ಲೇ ದೇಶಪ್ರೇಮ ಮತ್ತು ಧಾರ್ಮಿಕ ವಿಷಯಗಳ ಬಗೆಗೆ ಮಕ್ಕಳಿಗೆ ಮನಮುಟ್ಟುವಂತೆ ಬೋಧಿಸುತ್ತಿದ್ದರು. ಇದರ ಪರಿಣಾಮ ನನ್ನ ಮೇಲೆ ಆಯಿತು. ಒಮ್ಮೆ ಮೈಸೂರಿನಲ್ಲಿ ಬಾಲ ಗಂಗಾಧರ ಟಿಳಕರ ಹುಟ್ಟುಹಬ್ಬದಿನಾಚರಣೆ ನಡೆಯಿತು (1920). ಆಗ ಎಂದೂ ಕಾಣದಿದ್ದ ಉತ್ಸಾಹ ಮೈಸೂರಿನ ಜನಸಾಮಾನ್ಯರಲ್ಲಿ ಕಂಡುಬಂದಿತು. ಇದರ ಪರಿಣಾಮವು ನನ್ನ ಮೇಲೆ ಸಹ ಆಗದೇ ಇರಲಿಲ್ಲ.

ನಾನು ಮೆಟ್ರಿಕ್ಯುಲೇಷನ್ ಮುಗಿಸಿದೆ; ಸ್ವತಂತ್ರ ಜೀವನ ಮಾಡುವ ಹಂಬಲ ನನ್ನದು. ಆದ್ದರಿಂದ ಡಾ|| ಅನಿ ಬೆಸೆಂಟ್‌ರವರು ಮದ್ರಾಸಿನ ಅಡ್ಯಾರ್‌ನಲ್ಲಿ ಸ್ಥಾಪಿಸಿದ್ದ ನ್ಯಾಷನ್ ವಿಶ್ವವಿದ್ಯಾನಿಲಯ ಸೇರಿದೆ. ಅದರ ಅಂಗವಾಗಿದ್ದ ಮದನಪಲ್ಲಿ ಕಾಲೇಜಿನಲ್ಲಿ ಪತ್ರಿಕೋದ್ಯಮ ತೆಗೆದುಕೊಂಡು ಅಭ್ಯಾಸ ನಡೆಸಿದೆ. ಅನಿ ಬೆಸೆಂಟ್ ಪ್ರೊ-ಛಾನ್ಸಲರ್, ರವೀಂದ್ರನಾಥ ಠಾಕೂರ್ ಛಾನ್ಸಲರ್, ಸಿ. ಪಿ. ರಾಮಸ್ವಾಮಿ ಅಯ್ಯರ್ ವೈಸ್-ಛಾನ್ಸಲರ್, ಜಿ. ಎಸ್. ಅರುಂಡೇಲ್ ರಿಜಿಸ್ಟ್ರಾರ್, ಹಾಗೂ ಜೆ. ಎಚ್. ಕಸಿನ್ಸ್ ನಮ್ಮ ಪ್ರಿನ್ಸಿಪಾಲರಾಗಿ ಈ ವಿಶ್ವವಿದ್ಯಾನಿಲಯದ ಕಾರ್ಯನಿರ್ವಹಣೆ ಮಾಡುತ್ತಿದ್ದರು. ನಾನು ಇಲ್ಲಿ ಬಿ.ಎ. ಪದವಿ ಪಡೆದು ಮೈಸೂರಿಗೆ ಹಿಂತಿರುಗಿದೆ. ಅಲ್ಲಿಯ ವಾತಾವರಣ ನನ್ನ ಮೇಲೆ ಬೀರಿದ ಪ್ರಭಾವದ ವಿಚಾರ ಬೇರೆ ಹೇಳಬೇಕಾಗಿಲ್ಲ.

ವೃದ್ಧ ಪಿತಾಮಹ ವೆಂಕಟಕೃಷ್ಣಯ್ಯನವರು ಮೈಸೂರಿನ ಸಾರ್ವಜನಿಕ ಜೀವನಕ್ಕೆ ಬುನಾದಿಯಂತಿದ್ದರು. ಅವರು ನಾಲ್ಕಾರು ವೃತ್ತಪತ್ರಿಕೆಗಳನ್ನು ನಡೆಸುತ್ತಿದ್ದರು. ಅಡ್ಯಾರ್ ಕಾಲೇಜಿನವರು ನಾನು ಅಲ್ಲಿ ಓದುತ್ತಿದ್ದಾಗ ಮದ್ರಾಸಿನ 'ನ್ಯೂ ಇಂಡಿಯಾ' ಪತ್ರಿಕಾಲಯದಲ್ಲಿ ಪ್ರಾಕ್ಟಿಕಲ್ ಟ್ರೇನಿಂಗ್ ವ್ಯವಸ್ಥೆ ಮಾಡಿದ್ದರು. ಇದರಿಂದ ನನಗೆ ಪತ್ರಿಕಾಲಯದ ಅನುಭವ ಆಗಿತ್ತು. ಮೈಸೂರಿನಲ್ಲಿ ತಾತಯ್ಯನವರ ಪತ್ರಿಕಾಲಯ ವನ್ನು ಸೇರಿ ಸ್ವಲ್ಪ ಕಾಲ ಕೆಲಸ ಮಾಡಿದೆ. ತಾತಯ್ಯನವರನ್ನು ನೋಡುವುದಕ್ಕೆ ಬರುತ್ತಿದ್ದ ಧಾರ್ಮಿಕ, ಶೈಕ್ಷಣಿಕ, ರಾಜಕೀಯ ಮತ್ತು ಸಾರ್ವಜನಿಕ ಜೀವನದಲ್ಲಿದ್ದ ಮುಖಂಡರ ಪರಿಚಯ ನನಗಾಯಿತು. ಈ ವೇಳೆಗೆ ಮೈಸೂರಿನಲ್ಲಿ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧ್ಯಕ್ಷರಾಗಿ ಅಡ್ವೊಕೇಟ್ ವಿ. ಸೀತಾರಾಮಯ್ಯನವರೂ ಕಾರ್ಯದರ್ಶಿಯಾಗಿ ಅಡ್ವೊಕೇಟ್ ಕೆ. ಕೃಷ್ಣಸ್ವಾಮಿಯವರೂ ಕಾರ್ಯನಿರ್ವಹಿಸು ತ್ತಿದ್ದರು. ಬೆಳಗಾವಿ ರಾಷ್ಟ್ರೀಯ ಕಾಂಗ್ರೆಸ್ಸಿಗೆ ಪ್ರತಿನಿಧಿಗಳನ್ನು ಚುನಾಯಿಸುವ ಕೆಲಸ ನನ್ನ ಮತ್ತು ತಗಡೂರು ರಾಮಚಂದ್ರರಾಯರ ಪಾಲಿಗೆ ಬಂತು. ಈ ಕಾರ್ಯವನ್ನು ನಾವು ಯಶಸ್ವಿಯಾಗಿ ಮಾಡಿ ಮುಗಿಸಿದೆವು. ಬೆಳಗಾವಿ ಕಾಂಗ್ರೆಸ್‌ನ 'ಸಾಂಸ್ಕೃತಿಕ ಕಾರ್ಯಕ್ರಮ'ದಲ್ಲಿ ಕಲಾವಿದ ವೆಂಕಟಪ್ಪ, ವೀಣೆ ಶೇಷಣ್ಣ ಮೊದಲಾದ ಸಂಗೀತಗಾರ ರನ್ನು ಭಾಗವಹಿಸುವಂತೆ ಮಾಡಿದ್ದು ಒಂದು ಹೆಮ್ಮೆಯ ವಿಷಯ. ಬೆಳಗಾವಿ ಕಾಂಗ್ರೆಸ್ಸಿನ ಅಧ್ಯಕ್ಷರಾದ ಮಹಾತ್ಮಾ ಗಾಂಧಿಯವರು ವೈಣಿಕಶಿಖಾಮಣಿ ಶೇಷಣ್ಣ ನವರಿಗೆ ತಮ್ಮ ಮುಂದೆ ವೀಣೆ ನುಡಿಸಲು ಕೇವಲ ಐದು ನಿಮಿಷಗಳು ಮಾತ್ರ ಕಾಲಾವ ಕಾಶ ಕೊಟ್ಟಿದ್ದರು. ಶೇಷಣ್ಣನವರು ಐದು ನಿಮಿಷನಂತರ ನಿಲ್ಲಿಸಿಬಿಟ್ಟರು. ಚರಕಾದಲ್ಲಿ ನೂಲು ತೆಗೆಯುತ್ತಾ ಕೇಳುತ್ತಿದ್ದ ಗಾಂಧೀಜಿ, "ಏಕೆ ನಿಲ್ಲಿಸಿರಿ ?" ಎಂದು ಕೇಳಿದರು. ಹತ್ತಿರದಲ್ಲಿದ್ದವರು, "ಐದು ನಿಮಿಷವಾಯ್ತು" ಎಂದು ಹೇಳಿದರು. ಆಗ ಮಹಾತ್ಮರು, "ಬಹಳ ಚೆನ್ನಾಗಿದೆ ; ಇನ್ನೂ ನುಡಿಸಿ" ಎಂದು ಹೇಳಿ ಅರ್ಧಗಂಟೆ ಕಾಲ ಕೇಳಿದರು. ಈ ವಿಷಯವನ್ನು ಶೇಷಣ್ಣನವರು ಸ್ನೇಹಿತರಲ್ಲಿ ತಮ್ಮ ಜೀವಮಾನದ ದೊಡ್ಡ ಘಟನೆ ಎಂದು ಹೇಳಿಕೊಳ್ಳುತ್ತಿದ್ದರು.

ತಗಡೂರು ರಾಮಚಂದ್ರರಾಯರು ಬೆಳಗಾಂ ಕಾಂಗ್ರೆಸ್ಸಿಗೆ ಬಂದಿದ್ದ ಮುಖಂಡರು ಗಳನ್ನು ಭೇಟಿಮಾಡಿ ತಾವು ಪಾದ್ರಿಗಳ ಹಾವಳಿ ತಪ್ಪಿಸಲು ಮೈಸೂರಿನಲ್ಲಿ ನಡೆಸು ತ್ತಿರುವ ಕಾರ್ಯಕ್ರಮಗಳನ್ನು ಮತ್ತು ಹರಿಜನೋದ್ಧಾರಕ್ಕಾಗಿ ಮಾಡುತ್ತಿರುವ ಕಾರ್ಯ ಗಳನ್ನು ವಿವರಿಸಿದರು. ಪಂಡಿತ ಮದನ ಮೋಹನ ಮಾಲವೀಯರು, "ಇಂಥ ಒಳ್ಳೆ ಕೆಲಸಗಳು ಇನ್ನು ಯಾವ ದೇಶೀಯ ಸಂಸ್ಥಾನದಲ್ಲೂ ನಡೆಯುತ್ತಿಲ್ಲ ; ತಗಡೂರರು ಕರ್ನಾಟಕದ ಒಬ್ಬ ಹೆಮ್ಮೆಯ ಪುರುಷ" ಎಂದರು. ಇಷ್ಟೇ ಅಲ್ಲದೆ, ತಗಡೂರರನ್ನು ಕಾಂಗ್ರೆಸ್ಸಿನ ವೇದಿಕೆಯ ಮೇಲೆ ಕರೆಯಿಸಿ ಅವರ ಕಾರ್ಯಚಟುವಟಿಕೆಗಳ ಬಗೆಗೆ ಅವರಿಂದಲೇ ಒಂದು ದೀರ್ಘವಾದ ಭಾಷಣವನ್ನು ಮಾಡಿಸಿದರು.

ಮುಂದೆ ಮೈಸೂರು ಜಿಲ್ಲಾ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯದರ್ಶಿತ್ವದ ಹೊಣೆಗಾರಿಕೆಯನ್ನು ನನಗೇ ವಹಿಸಿದರು. ಈ ಕೆಲಸವನ್ನು ಮಾಡಲು ನನ್ನ ಸಹಾಯಕ್ಕೆ ಒದಗಿಬಂದ ಜನರ ಪೈಕಿ ಎನ್. ಡಿ. ಶ್ರೀರಂಗಾಚಾರ್, ಎಲ್. ವಿ. ರಾಜಗೋಪಾಲ್, ಅಗರಂ ಸೂರ್ಯನಾರಾಯಣ ಪಂಡಿತ್, ತಗಡೂರು ರಾಮಚಂದ್ರರಾವ್, ಎಸ್. ರಂಗರಾಮಯ್ಯ ಹಾಗೂ ಎಂ. ಎನ್. ಜೋಯಿಸ್ ಇವರುಗಳನ್ನು ಸ್ಮರಿಸಬಹುದು. ಜೀವನ ನಿರ್ವಹಣೆಗಾಗಿ ನಾನು 'ಶ್ರೀರಾಮ ಪ್ರೆಸ್' ಎಂಬ ಮುದ್ರಣಾಲಯವನ್ನು ಸ್ಥಾಪಿಸಿದೆ. ಅದು ಇನ್ನೂ ನಡೆಯುತ್ತಾ ಬಂದಿದೆ.

ಕಾಂಗ್ರೆಸ್‌ನ್ನು ಸಂಘಟಿಸುವ ಕಾರ್ಯ ಅದರ ಕಾರ್‍ಯದರ್ಶಿಯಾದ ನನ್ನದಾಗಿತ್ತು. ಉತ್ತರ ಕರ್ನಾಟಕದ ಮುಖಂಡರುಗಳಾಗಿದ್ದ ಗಂಗಾಧರರಾವ್ ದೇಶಪಾಂಡೆ, ಮುದವೀಡು ಕೃಷ್ಣರಾಯರು, ಡಾ|| ಹರ್ಡೀಕರ್, ಆರ್. ಆರ್. ದಿವಾಕರ್, ಹುಕ್ಕೇರಿಕರ್, ಹಣಮಂತರಾವ್ ಕೌಜಲಗಿ, ಕೊಪ್ಪಳದ ಜಯರಾಮಾಚಾರ್ ಇನ್ನೂ ಹಲವರು ಬೆಳಗಾಂ ಕಾಂಗ್ರೆಸ್‌ಗೆ ಮೊದಲು ಮತ್ತು ನಂತರ ಮೈಸೂರು ಸಂಸ್ಥಾನಕ್ಕೆ ಭೇಟಿಯಿತ್ತು ಕಾಂಗ್ರೆಸ್ಸಿನ ಕಾರ್ಯಚಟುವಟಿಕೆಗಳ ಬಗೆಗೆ ಸಾರ್ವಜನಿಕ ವೇದಿಕೆಗಳಿಂದ ಪ್ರಚಾರ ಮಾಡುತ್ತಿದ್ದರು. ಮೈಸೂರಿನಲ್ಲಿ ಈ ಚಟುವಟಿಕೆಗಳಿಗೆ ಪೂರ್ವಭಾವೀ ಸಿದ್ಧತೆಗಳನ್ನು ಮಾಡುವ ಕಾರ್ಯ ನನ್ನದಾಗಿತ್ತು. ಇದಕ್ಕೆ ಬೇಕಾದ ಸ್ವಯಂಸೇವಕರುಗಳನ್ನು ತರಬೇತಿ ಮಾಡಿ ಶ್ರೀರಂಗಾಚಾರ್ಯರು ಅವರ ಸ್ಟೂಡೆಂಟ್ಸ್ ಯೂನಿಯನ್‌ನಿಂದ ಕಳುಹಿಸಿಕೊಡುತ್ತಿದ್ದರು. ಈ ಸ್ವಯಂಸೇವಕರ ತರಬೇತಿ ಕಾರ್ಯವನ್ನು ಎಲ್. ವಿ. ರಾಜಗೋಪಾಲ್, ರಂಗನಾಥ ನಾಯಕ್ ಮತ್ತು ಎಂ. ಎನ್. ಜೋಯಿಸ್ ನಡೆಸುತ್ತಿದ್ದರು. ಜನರಲ್ಲಿ ಕಂಡ ಉತ್ಸಾಹ ಬತ್ತಿಹೋಗದಂತೆ ನೋಡಿಕೊಳ್ಳಬೇಕಾದುದು ನನ್ನ ವಿಶೇಷ ಜವಾಬ್ದಾರಿ. ಇದಕ್ಕಾಗಿ ಆಗಾಗ್ಗೆ ಒಂದಲ್ಲ ಒಂದು ಕಾರ್ಯಕ್ರಮ ನಡೆಸಬೇಕಾಗಿತ್ತು. ಆ ಕಾಲದಲ್ಲಿ (1923–30ರ ವರೆಗೆ) ಮೈಸೂರು ಸಂಸ್ಥಾನದಲ್ಲಿ ನೇರವಾದ ಚಳವಳಿಗಳು ನಡೆಯುತ್ತಿರಲಿಲ್ಲ. ಬ್ರಿಟಿಷ್ ಇಂಡಿಯಾದಲ್ಲಿ ನಡೆಯುತ್ತಿದ್ದ ಚಳವಳಿಗಳ ಬಗ್ಗೆ ನಾವುಗಳು ಸಹಜವಾದ ಸಹಾನುಭೂತಿ ತೋರಿಸುವ ಕಾರ್ಯ ಮಾತ್ರ ಸಾಗುತ್ತಿತ್ತು. ಇದು ಸಹಜವಾಗಿಯೇ ಭಾಷಣಗಳು, ಮೆರವಣಿಗೆಗಳು, ಹರತಾಳ ಮುಂತಾದ ರೀತಿಯಲ್ಲಿರುತ್ತಿದ್ದುವು. ಸರ್ಕಾರದಿಂದ ಆಗಾಗ್ಗೆ ಅಡ್ಡಿ ಆತಂಕಗಳು ಬರುತ್ತಿದ್ದುವು. ಪ್ರತಿಬಂಧಕಾಜ್ಞೆಗಳನ್ನು ನಾವು ಮುರಿಯುತ್ತಿರಲಿಲ್ಲ. ರಾಜಿ, ಸಂಧಾನಗಳ ಮೂಲಕ ಕಾರ್ಯಗಳನ್ನು ಸಾಗಿಸುತ್ತಿದ್ದೆವು. ಒಮ್ಮೆ ಸುಬ್ಬರಾಯನ ಕೆರೆಯಲ್ಲಿ ರಾಷ್ಟ್ರೀಯ ಧ್ವಜವಂದನೆಯ ಏರ್ಪಾಡು ನಡೆಸಿದ್ದೆವು (ಬಹುಶಃ ಜನವರಿ 26, 1930ರಲ್ಲಿ). ನನ್ನನ್ನು ಮತ್ತು ಎಲ್. ವಿ. ರಾಜಗೋಪಾಲ್ ಅವರನ್ನು ಧ್ವಜವಂದನೆ ನಡೆಸಕೂಡದೆಂದು ಪೋಲೀಸರು ಒತ್ತಾಯಪಡಿಸಿದರು; ನಾವು ಜಗ್ಗದಿದ್ದಾಗ ದಸ್ತಗಿರಿ ಮಾಡಿದರು. ಧ್ವಜವನ್ನು ಮಾತ್ರ ಕಿತ್ತುಕೊಂಡು ಹೊರಟುಹೋದರು.

ಕೋರ್ಟಿನಲ್ಲಿ ನನ್ನ ವಿರುದ್ಧ ಮೊಕದ್ದಮೆ ಹೂಡಿ, ಸ್ವಲ್ಪ ಕಾಲಾನಂತರ ಅದನ್ನು ವಾಪಸ್ಸು ಪಡೆದುದಲ್ಲದೇ ಧ್ವಜವನ್ನೂ ಹಿಂತಿರುಗಿಸಿದರು. ಆ ಕಾಲದ ಜನರಿಗೆ ಈ ಧ್ವಜಾರೋಹಣವೇ ಒಂದು ರೋಮಾಂಚಕಾರೀ ವಿಷಯವಾಗಿತ್ತು.

ಮೇಲೆ ಹೇಳಿದ ಕಾರ್ಯಕ್ರಮಗಳಲ್ಲದೆ ಕೆಲವು ರಚನಾತ್ಮಕ ಕಾರ್ಯಗಳನ್ನು ಮಾಡುತ್ತಿದ್ದೆವು. ಮನೆಮನೆಗೆ ಖಾದೀ ಬಟ್ಟೆಯನ್ನು ಹೊತ್ತುಕೊಂಡು ಹೋಗಿ ಮಾರುವ ಕೆಲಸವನ್ನು ಚುರುಕಿನಿಂದ ಮಾಡುತ್ತಿದ್ದೆ. ಈ ಕೆಲಸವನ್ನು ನಾನು ಮತ್ತು ನನ್ನ ಸ್ನೇಹಿತರು ಪ್ರತಿ ಭಾನುವಾರವೂ ಮಾಡುತ್ತಿದ್ದೆವು. ಗಾಂಧೀ ಟೋಪಿಗೆ ಬಹಳ ಮಹತ್ವವಿದ್ದ ಕಾಲವದು. ಈ ಕಾರ್ಯಗಳಿಗೆಲ್ಲಾ ಸಂತೇಪೇಟೆಯ ವರ್ತಕರಾದ ಧರ್ಮ ಪ್ರಕಾಶ ಬನುಮಯ್ಯನವರು ಮತ್ತು ಪಿ. ಎನ್. ಸಂಗಪ್ಪನವರು ನಮಗೆ ಸಹಕಾರ ನೀಡುತ್ತಿದ್ದರು. ಬನುಮಯ್ಯನವರು ಪರದೇಶೀ ಟೋಪಿಯನ್ನು ಬಿಟ್ಟುಕೊಟ್ಟ ಎಲ್ಲ ಹುಡುಗರಿಗೆ ಪುಕ್ಕಟೆ ಗಾಂಧೀಟೋಪಿ ಕೊಡಲು ತಗಲುವ ವೆಚ್ಚವನ್ನು ಭರಿಸುತ್ತಿದ್ದರು. ಮೈಸೂರಿನಲ್ಲಿ "ಹಳೇ ಪರದೇಶೀ ಟೋಪಿಗೆ ಬದಲು ಹೊಸ ಗಾಂಧೀ ಟೋಪಿ!" ಎಂಬ ಘೋಷಣೆ ಬಹಳ ಕಾಲ ಜನಪ್ರಿಯವಾಗಿತ್ತು. ಈ ರೀತಿ ನಾನಾ ಕಾರ್ಯಕ್ರಮಗಳಿಂದ ಕಾಂಗ್ರೆಸ್ ಜನರ ಮನಸ್ಸನ್ನು ತನ್ನೆಡೆಗೆ ಒಲಿಸಿಕೊಂಡಿತು.

1930ರ ಚಳವಳಿ ಮೈಸೂರು ಸಂಸ್ಥಾನಕ್ಕೆ ನೇರವಾಗಿ ಸಂಬಂಧಪಡದಿದ್ದರೂ ಬ್ರಿಟಿಷ್ ಕರ್ನಾಟಕದ ಜನರಿಗೆ ಸಹಾಯ ನೀಡುವ ಉದ್ದೇಶದಿಂದ ಸಂಸ್ಥಾನದ ಎಲ್ಲ ಕಡೆಗಳಲ್ಲೂ ಸ್ವಯಂಸೇವಕ ಶಿಬಿರಗಳನ್ನು ಸ್ಥಾಪಿಸಿ ಸತ್ಯಾಗ್ರಹಿಗಳನ್ನು ಅಲ್ಲಿಗೆ ಕಳು ಹಿಸುವ ವ್ಯವಸ್ಥೆ ಮಾತ್ರ ಸಾಗಿತ್ತು. ಈ ಕಾರ್ಯದಲ್ಲಿ ನನ್ನ ಪಾತ್ರ ಸಾಕಷ್ಟಿತ್ತು. ಗಾಂಧಿ-ಇರ್ವಿನ್ ಒಪ್ಪಂದವಾಯಿತು (1931). ಆಗತಾನೇ ಜೈಲಿನಿಂದ ಬಿಡುಗಡೆ ಯಾಗಿದ್ದ ಜವಾಹರ್‌ಲಾಲ್ ನೆಹರೂ ಮೈಸೂರಿಗೆ ಭೇಟಿಕೊಟ್ಟರು. ಆಗ ಮಹಾರಾಜರೇ ಅವರನ್ನು ತಮ್ಮ ಅತಿಥಿಯಂತೆ ನಡೆಸಿಕೊಂಡದ್ದು ಅತ್ಯಂತ ಸ್ಮರಣಾರ್ಹ.

1931ರ ಒಪ್ಪಂದ ಮುರಿದುಬಿತ್ತು ; ಸತ್ಯಾಗ್ರಹವು ಪುನಃ ಆರಂಭವಾಯಿತು. ಬೆಂಗಳೂರಿನ ಅಡ್ವೊಕೇಟ್ ಸಂಪಿಗೆ ವೆಂಕಟಪತಯ್ಯನವರು, ನಿಟ್ಟೂರು ಶ್ರೀನಿವಾಸ ರಾಯರು, ಎಸ್. ಕೆ. ವೆಂಕಟರಂಗಯ್ಯಂಗಾರ್ ಅವರನ್ನೊಳಗೊಂಡ ಗುಪ್ತ ಸಮಿತಿ ಯೊಂದರ ರಚನೆಯಾಯಿತು. ಶಿರಸಿ, ಸಿದ್ದಾಪುರ ಮತ್ತು ಅಂಕೋಲಾಗಳಲ್ಲಿ ನಡೆಯು ತ್ತಿದ್ದ ಕರನಿರಾಕರಣೆ ಸತ್ಯಾಗ್ರಹಕ್ಕಾಗಿ ಜನ ಮತ್ತು ಧನಸಹಾಯ ಒದಗಿಸುವುದೇ ಈ ಗುಪ್ತ ಸಮಿತಿಯ ಉದ್ದೇಶ. ಅಲ್ಲಿ ನಡೆಯುತ್ತಿದ್ದ ಸತ್ಯಾಗ್ರಹದ ವಿವರಗಳು ವೃತ್ತಪತ್ರಿಕೆ ಗಳಲ್ಲಿ ಬರದಂತೆ ಬ್ರಿಟಿಷ್ ಸರ್ಕಾರ ಅಡ್ಡಿಪಡಿಸಿತ್ತು. ನಾನು ಇಲ್ಲಿಯ ಜನರಿಂದ ಹಣ ವಸೂಲು ಮಾಡುವುದು, ಸ್ವಯಂಸೇವಕರನ್ನು ಕೂಡಿಸಿ ಕಳುಹಿಸುವುದು, ಕರಪತ್ರ ಗಳನ್ನು ಹಂಚುವುದು ಇತ್ಯಾದಿ ಕಾರ್ಯಕ್ರಮಗಳಲ್ಲಿ ಮುಖ್ಯಪಾತ್ರ ವಹಿಸಿದ್ದೆ. ರಾಜ ಗೋಪಾಲ್, ಸುಬ್ರಾವ್ ಉಪಾಧ್ಯಾಯ, ಎಂ. ಎನ್. ಜೋಯಿಸ್, ಸುಬ್ಬಮ್ಮ

ಜೋಯಿಸ್, ಅಗರಂ ಸೂರ್ಯನಾರಾಯಣ ಪಂಡಿತ್, ಹುಣಸೂರು ಸೀತಾರಾಂ ಇವರುಗಳನ್ನು ಸ್ಮರಿಸಬಹುದು. ಈ ಸಂದರ್ಭದಲ್ಲಿ, ಸತ್ಯಾಗ್ರಹ ನಡೆಯುವವರೆಗೆ ಮಾಹೆಯಾನ 200 ರೂಪಾಯಿಗಳನ್ನು ಕೊಡುತ್ತಿದ್ದ ಸಾಹುಕಾರ್ ಬಸಪ್ಪನವ ರನ್ನು ನೆನೆಯುವುದು ಉಚಿತವಾಗಿದೆ. ಸಂತೆಪೇಟೆ ವರ್ತಕರೆಲ್ಲಾ ಸೇರಿ ಮಾಹೆಯಾನ 1000 ರೂ.ಗಳನ್ನು ಸತ್ಯಾಗ್ರಹಕ್ಕಾಗಿ ಕೊಡುತ್ತಿದ್ದರು.

ಕರ್ನಾಟಕದ ಚಳವಳಿಯ ಸುದ್ದಿ ಪತ್ರಗಳನ್ನು ನನ್ನ ಶ್ರೀರಾಮ ಪ್ರೆಸ್ಸಿನಲ್ಲಿ ಮುದ್ರಿಸುತ್ತಿದ್ದೆ ; ಪೋಲೀಸರ ಕಣ್ಣು ಸದಾ ನನ್ನ ಮೇಲೇ ಇತ್ತು. ವೃದ್ಧಪಿತಾಮಹ ವೆಂಕಟಕೃಷ್ಣಯ್ಯನವರು ತಮ್ಮ ನಾಲ್ಕಾರು ಪತ್ರಿಕೆಗಳಲ್ಲಿ ಜನರ ಆಶೋತ್ತರಗಳನ್ನು ಈಡೇರಿಸುವಂತೆ ಸರ್ಕಾರಕ್ಕೆ ತಿಳಿಸುತ್ತಿದ್ದರು. ಸರ್ಕಾರವು ನಾಲ್ಕು ವರ್ಷಗಳ ಕಾಲ ಅವರ ಪತ್ರಿಕೆಗಳನ್ನು ನಿಲ್ಲಿಸಿಬಿಟ್ಟಿತು. ಅವರ ಜೊತೆಯಲ್ಲಿ ಕೆಲಸಮಾಡುತ್ತಿದ್ದ ನನಗೆ, ನಾನೇ ಒಂದು ಪತ್ರಿಕೆ ಹೊರಡಿಸಬೇಕೆಂಬ ಹಂಬಲ ಹುಟ್ಟಿತು. ಅವರೊಡನೆ ಈ ವಿಷಯವಾಗಿ ಚರ್ಚಿಸಿದೆ. 1933ರಲ್ಲಿ ಅವರು ದೈವಾಧೀನರಾದರು ; ತಮ್ಮ ಕೊನೆ ಉಸಿರೆಳೆಯುವವರೆಗೂ ಪತ್ರಿಕೆಗಳ ಬಗ್ಗೆ ಮಾತನಾಡುತ್ತಿದ್ದರು. ಸ್ವಲ್ಪಕಾಲಾನಂತರ ನಾನು 'ಸಾಧ್ವಿ' ಪತ್ರಿಕೆಯನ್ನು ಆರಂಭಿಸಿದೆ. ತಾತಯ್ಯನವರು ಈ ಹೆಸರಿನ ಪತ್ರಿಕೆ ಪತ್ರಿಕೆಯನ್ನು ಬಹಳ ಕಾಲ ನಡೆಸಿದ್ದರು; ಅದು ಬಹಳ ಜನಪ್ರಿಯವಾಗಿತ್ತು. 'ಸಾಧ್ವಿ' ಯನ್ನು ವಾರಪತ್ರಿಕೆಯಾಗಿ ಆರಂಭಿಸಿದ್ದೆ. ಎಚ್ಚರಗೊಂಡಿದ್ದ ಮೈಸೂರು ಜನರ ಆಸೆ ಆಕಾಂಕ್ಷೆಗಳನ್ನು ಎತ್ತಿಹಿಡಿಯುವುದರಲ್ಲಿ 'ಸಾಧ್ವಿ' ಹಿಂದೆ ಬೀಳಲಿಲ್ಲ. ಇದರಿಂದಾಗಿ ಸರ್ಕಾರದ ಗದಾಪ್ರಹಾರಕ್ಕೆ ಸಿಕ್ಕಬೇಕಾಯಿತು. 1941ರಲ್ಲಿ ಮೈಸೂರು ಸಂಸ್ಥಾನದ ವೃತ್ತಪತ್ರಿಕಾ ಕಾನೂನು ಮಾರ್ಪಾಡಾಯಿತು. ಇದರಿಂದ 'ಸಾಧ್ವಿ' ಮತ್ತೆ ಜೀವಂತ ವಾಯಿತು. ದಿ॥ ಎನ್. ಸುಬ್ರಹ್ಮಣ್ಯ ಸಂಪಾದಕರಾಗಿದ್ದರು. ಎರಡು ಬಾರಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರ ಅನುಮತಿ ಪಡೆದೇ ಸಾಧ್ವಿಯಲ್ಲಿ ಸುದ್ದಿಯನ್ನು ಅಚ್ಚುಮಾಡ ಬೇಕೆಂದು ಸರ್ಕಾರ ಆಜ್ಞೆ ಮಾಡಿತ್ತು. ಈಗ 'ಸಾಧ್ವಿ' ಈ ಎಲ್ಲಾ ಎಡರುತೊಡರು ಗಳನ್ನು ದಾಟಿ, ದಿನಪತ್ರಿಕೆಯಾಗಿ ಜನಸೇವೆಯನ್ನು ಮಾಡುತ್ತಿದೆ ಎಂದು ಹೇಳಲು ನನಗೆ ಹೆಮ್ಮೆಯೆನಿಸುತ್ತದೆ.

ನನ್ನ ಸಾರ್ವಜನಿಕ ಜೀವನವು ನನ್ನ ಪತ್ರಿಕೋದ್ಯಮದ ಜೊತೆಗೆ ಬೆಸೆದು ಕೊಂಡಿತ್ತು. ನಾನು ಸಂಸ್ಥಾನದಲ್ಲಿ ನಡೆದ ಎಲ್ಲಾ ರಾಜಕೀಯ ಚಳವಳಿಗಳಲ್ಲೂ ಭಾಗವಹಿಸಿದೆ; ಆದರೆ ಪ್ರತಿಬಂಧಕಾಜ್ಞೆ ಅಥವಾ ಇನ್ನಾವುದೇ ಕಾಯಿದೆಭಂಗ ಚಳವಳಿ ಗಳಲ್ಲಿ ಪ್ರತ್ಯಕ್ಷ ಪಾತ್ರವಹಿಸುವ ಉತ್ಸಾಹ ನನಗಿರಲಿಲ್ಲ. ಇಂತಹ ಚಳವಳಿಗಳಲ್ಲಿ ನನ್ನ ಪಾತ್ರ ಅಪ್ರತ್ಯಕ್ಷವಾದುದಾಗಿತ್ತು. ನನ್ನ ಈ ಸೀಮಿತ ಕಾರ್ಯಕ್ರಮದಲ್ಲಿ ಬಂದ ಕಷ್ಟ ನಷ್ಟಗಳನ್ನು ಸಂತೋಷದಿಂದ ಅನುಭವಿಸಿದ್ದೇನೆ. 1935ಕ್ಕೆ ಮೊದಲು ನನ್ನನ್ನು ಮತ್ತು ತಗಡೂರರನ್ನು ಅನೇಕ ಸರ್ತಿ ಪೋಲೀಸರು ಕೈದುಮಾಡಿ ಆಮೇಲೆ ಬಿಡುಗಡೆ

ಮಾಡಿದ್ದುಂಟು ; ಕೋರ್ಟಿನಲ್ಲಿ ವ್ಯವಹಾರ ಹೂಡಿ ದಂಡ ಹಾಕಿದ್ದುಂಟು. ಈ ಸಣ್ಣ ಕೋಟಲೆಗಳ ಜೊತೆಗೆ 1939ರಲ್ಲಿ ನಾನು ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಇರಕೂಡದೆಂಬ ಆಜ್ಞೆಯು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಿಂದ ನನಗೆ ಬಂದಿತು. ನನ್ನ ಸ್ನೇಹಿತರುಗಳಾಗಿದ್ದ ಬಿ. ನಾರಾಯಣಸ್ವಾಮಿ, ಪಾಲಹಳ್ಳಿ ಸೀತಾರಾಮಯ್ಯ, ಎಂ. ಆರ್. ಎನ್. ಶಾಸ್ತ್ರಿ, ಎಂ. ಶಂಕರಯ್ಯ, ಕೃಷ್ಣಪ್ಪಗೌಡ ಮತ್ತು ಶಿವನಂಜೇಗೌಡ ಮೊದಲಾದವರನ್ನು ಮೈಸೂರು ಡಿಸ್ಟ್ರಿಕ್ಟಿನಿಂದ 'ಪಬ್ಲಿಕ್ ಸೆಕ್ಯೂರಿಟಿ ಆಕ್ಟ್' ಮೇರೆಗೆ ಹೊರದೂಡಿದರು. ಈ ಕಾಲದಲ್ಲಿ ನಾವು ಹಾಸನ ಜಿಲ್ಲೆಯಲ್ಲೆಲ್ಲಾ ಕಾಂಗ್ರೆಸ್ ಪ್ರಚಾರ ಮಾಡಿದೆವು. ಕೆಲವು ತಿಂಗಳುಗಳನಂತರ ಈ ಆಜ್ಞೆಯ ಅವಧಿ ತೀರಿತು ; ಮೈಸೂರಿಗೆ ಹಿಂತಿರುಗಿದೆ ; ನನ್ನ ಮಾಮೂಲು ಕಾರ್ಯಕ್ರಮವನ್ನು ಮುಂದುವರಿಸಿದೆ.

1942ರ ಆಗಸ್ಟಿನಿಂದ ಹದಿನೈದು ತಿಂಗಳ ಕಾಲ ಸ್ಥಾನಬದ್ಧತೆಯಲ್ಲಿರಬೇಕಾಯಿತು. ಜೈಲಿನಿಂದ ಹೊರಬಂದಮೇಲೆ ಸುಮಾರು 9 ವರ್ಷಗಳ ಕಾಲ ಮೈಸೂರು ಸಿಟಿ ಮುನಿಸಿಪಲ್ ಕೌನ್ಸಿಲರ್ ಆಗಿದ್ದೆ. ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಬಿರುಸಿನ ಪ್ರಚಾರ ನಡೆಸುತ್ತಿದ್ದೆ. 1947ರ 'ಅರಮನೆ ಚಲೋ' ಚಳವಳಿಯಲ್ಲಿ ಭಾಗವಹಿಸಿದೆ ; ಕೈದು ಮಾಡಿ ಜೈಲಿನಲ್ಲಿಟ್ಟರು. ಚಳವಳಿಗಳು ನಿಂತಮೇಲೆ ನನ್ನ 'ಸಾಧ್ವಿ' ಪೇಪರಿನ ಕೆಲಸದಲ್ಲಿ ಮಗ್ನನಾದೆ.

ನನ್ನ ರಾಜಕೀಯ ಜೀವನದೊಡನೆ ಅನೇಕ ಸಾರ್ವಜನಿಕ ಸಂಸ್ಥೆಗಳೊಡನೆ ಸಂಬಂಧ ಹೊಂದಿದ್ದೆ. ಮೈಸೂರಿನ ಆ ಸಂಸ್ಥೆಗಳ ಹೆಸರುಗಳನ್ನು ಮತ್ತು ನನ್ನ ಸಂಬಂಧವನ್ನು ಇಲ್ಲಿ ಕೊಡಲು ಇಚ್ಛಿಸುತ್ತೇನೆ: (1) ಅನಾಥಾಲಯ, ಮೈಸೂರು (ಸಮಿತಿಯ ಸದಸ್ಯ) ; (2) ಸದ್ವಿದ್ಯಾ ಪಾಠಶಾಲಾ (ಕಾರ್ಯದರ್ಶಿ) ; (3) ಪತ್ರಿಕೋದ್ಯೋಗಿಗಳ ಸಂಘ (ಎಂಟು ವರ್ಷಗಳ ಕಾಲ ಅಧ್ಯಕ್ಷ) ; (4) ಬ್ರಾಹ್ಮಣ ಧರ್ಮ ಸಹಾಯ ಸಭೆ (ಅಧ್ಯಕ್ಷ) ; (5) ವೇದಶಾಸ್ತ್ರ ಪೋಷಣ ಸಭೆ (ಸಮಿತಿಯ ಸದಸ್ಯ) (6) ಶಂಕರ ಸಮಿತಿ (ಸಮಿತಿಯ ಸದಸ್ಯ) ; (7) ಜಗದಂಬಾ ಶಿಶುವಿಹಾರ (ಅಧ್ಯಕ್ಷ) (8) ಉಡುಪಿ ಕೃಷ್ಣ ಮಂದಿರ (ಉಪಾಧ್ಯಕ್ಷ) ; (9) ಬಿಳಿಗಿರಿ ರಂಗನಾಥಸ್ವಾಮಿ ದೇವಸ್ಥಾನ (ಧರ್ಮದರ್ಶಿ) ; (10) ಭೂಮಾಲೀಕರ ಸಂಘ (ಉಪಾಧ್ಯಕ್ಷ) ; (11) ರಾಮೇಶ್ವರಸ್ವಾಮಿ ದೇವಸ್ಥಾನ, ಅಗರ (ಧರ್ಮದರ್ಶಿ) ಇತ್ಯಾದಿ.

ನನ್ನ ರಾಜಕೀಯ ಮತ್ತು ಸಾರ್ವಜನಿಕ ಜೀವನ—ಐವತ್ತು ವರ್ಷಗಳ ಹಿಂದೆ ಆರಂಭವಾದುದು—ಇಂದಿಗೂ ಸಾಗುತ್ತಿರುವುದು ಜನಸಾಮಾನ್ಯರ ವಿಶ್ವಾಸ ಮತ್ತು ಹಿರಿಯರ ಆಶೀರ್ವಾದದ ಫಲ ಎಂದು ನನ್ನ ನಂಬಿಕೆ.

# ಡಾ|| ಎಚ್. ಸಿ. ದಾಸಪ್ಪ
(1894-1964)



ಹಿರೆಳ್ಳಿ ಚನ್ನಯ್ಯ ದಾಸಪ್ಪನವರು 5-12-1894 ರಂದು ಮಡಿಕೇರಿಯಲ್ಲಿ ಜನಿಸಿದರು. ಇವರು ವಿದ್ಯಾವಂತ ಒಕ್ಕಲಿಗ ಮನೆತನಕ್ಕೆ ಸೇರಿದವರಾಗಿದ್ದು, ಅವರ ತಂದೆ ರಾವ್‌ಸಾಹೇಬ್ ಹಿರೆಳ್ಳಿ ಚನ್ನಯ್ಯನವರು ಸಬ್‌ಜಜ್ ಪದವಿಗೇರಿದವರೂ ರಾಮಕೃಷ್ಣ ಮಿಷನ್‌ನೊಡನೆ ಸಂಬಂಧವಿಟ್ಟುಕೊಂಡವರೂ ಆಗಿದ್ದರು. ಮೈಸೂರಿನ ಮಹಾರಾಜರು ಅವರಿಗೆ 'ಲೋಕಸೇವಾನಿರತ' ಎಂಬ ಬಿರುದನ್ನು ಕೊಟ್ಟು ಗೌರವಿಸಿದ್ದರು.

ದಾಸಪ್ಪನವರು ತಮ್ಮ ಇಂಟರ್‌ಮೀಡಿಯೆಟ್ ಪರೀಕ್ಷೆಯನ್ನು ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಮುಗಿಸಿ ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ತಮ್ಮ ಬಿ.ಎ. ಪದವಿಯನ್ನು ಪಡೆದರು. ಮುಂಬಯಿನ ಸರ್ಕಾರಿ ಲಾ ಕಾಲೇಜಿನಲ್ಲಿ ಎಲ್‌ಎಲ್.ಬಿ ಪದವಿಯನ್ನು ಗಳಿಸಿದರು. 1919ರಿಂದ ವಕೀಲಿ ವೃತ್ತಿ ಆರಂಭಿಸಿದರು. ಮದರಾಸಿನ ಮುದಲಿಯಾರ್ ಸಹೋದರರ ಪ್ರಭಾವಕ್ಕೆ ಒಳಗಾಗಿದ್ದ ಅವರು ಪ್ರಜಾ ಪಕ್ಷಕ್ಕೆ ಸೇರಿದಂದಿನಿಂದ ಅವರ ಸಾರ್ವಜನಿಕ ಜೀವನ 1924ರಲ್ಲಿ ಪ್ರಾರಂಭವಾಯಿತು. ಹಳೇ ಮೈಸೂರು ರಾಜ್ಯದಲ್ಲಿ ಈ ಪಕ್ಷ ಸಾಮಾನ್ಯ ಜನರ ಆಸೆ ಆಕಾಂಕ್ಷೆಗಳನ್ನು ಈಡೇರಿಸಲು ಸ್ಥಾಪಿಸಿದ ಪಕ್ಷವಾಗಿತ್ತು. 1927ರಿಂದ 1938ರ ವರೆಗೆ ಇವರು ಮೈಸೂರು ಶಾಸನಸಭೆಯ ಸದಸ್ಯರಾಗಿ ಸೇವೆಸಲ್ಲಿಸಿದರು.

1926ರಲ್ಲಿ ಮೈಸೂರು ರಾಜ್ಯದ ಸಹಕಾರಿ ಸಂಘಗಳ ರಿಜಿಸ್ಟ್ರಾರ್‌ರವರಾದ ಕೆ. ಎಚ್. ರಾಮಯ್ಯನವರ ಮಗಳು ಯಶೋದರಮ್ಮನವರನ್ನು ದಾಸಪ್ಪನವರು ವಿವಾಹವಾದರು. ಯಶೋದರಮ್ಮನವರು ವಿವಾಹಕಾಲಕ್ಕೆ 21 ವರ್ಷ ವಯಸ್ಸಿನವರಾಗಿದ್ದು ವಿದ್ಯಾವಂತರಾಗಿದ್ದರು. ಸಮಾಜ ಕಲ್ಯಾಣ ಚಟುವಟಿಕೆಗಳಲ್ಲಿ ಆಸಕ್ತರಾಗಿದ್ದು, ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಭಾಗವಹಿಸಿದ್ದರು. ಇವರ ಪ್ರಭಾವದಿಂದಲೇ ದಾಸಪ್ಪನವರು ಕಾಂಗ್ರೆಸ್ ಪಕ್ಷಕ್ಕೆ ಸೇರಿದರು. ದಾಸಪ್ಪನವರ ಸ್ವಾತಂತ್ರ್ಯ ಹೋರಾಟದ ಕಾರ್ಯದಲ್ಲಿ ಯಶೋದರಮ್ಮನವರ ಸಹಕಾರ ಬಹಳವಿತ್ತು.

ದಾಸಪ್ಪನವರು 1937ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸೇರಿ ಪ್ರಜಾ ಪಕ್ಷವು ಕಾಂಗ್ರೆಸ್

ಪಕ್ಷದಲ್ಲಿ ವಿಲೀನವಾಗುವುದಕ್ಕೆ ಶ್ರಮಿಸಿದರು. 1939ರಲ್ಲಿ ವಿದುರಾಶ್ವತ್ಥದಲ್ಲಿ ನಡೆದ ದ್ವಿತೀಯ ಮೈಸೂರು ಕಾಂಗ್ರೆಸ್ ಸಮ್ಮೇಳನದ ಅಧ್ಯಕ್ಷರಾಗಿದ್ದರು. ತಮ್ಮ ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ನಾಲ್ಕು ಬಾರಿ ಜೈಲುವಾಸವನ್ನು ಅನುಭವಿಸಿದರು. 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಸತತವಾಗಿ 18 ತಿಂಗಳ ಕಾಲ ಜೈಲುವಾಸವನ್ನು ಅನುಭವಿಸಿದರು. ದಾಸಪ್ಪನವರು ತಮ್ಮ ಪತ್ನಿ ಯಶೋಧರಮ್ಮನವರೊಡನೆ ಎರಡು ಬಾರಿ 'ಸೇವಾಗ್ರಾಮ'ವನ್ನು ಭೇಟಿ ಮಾಡಿ ಅಲ್ಲಿ ಹೆಚ್ಚು ಕಾಲ ತಂಗಿದ್ದರು. ಸರ್ಕಾರದ ವಿರುದ್ಧ ಅವರು ನಡೆಸುತ್ತಿದ್ದ ಚಳವಳಿಗಾಗಿ ಮೈಸೂರು ಸರ್ಕಾರ ಅವರ ಹೆಸರನ್ನು ವಕೀಲರ ಪಟ್ಟಿಯಿಂದ ತೆಗೆದುಹಾಕಿತು. ಕರ್ನಾಟಕದ ಎಲ್ಲ ಪ್ರದೇಶಗಳ ಸ್ವಾತಂತ್ರ್ಯ ಹೋರಾಟಗಾರರಿಗೂ ಅವರು ಉತ್ತೇಜನವಿತ್ತರು. ಜಮಖಂಡಿ ರಾಜ್ಯ ಪ್ರಜಾ ಪಕ್ಷದ ಅಧ್ಯಕ್ಷರಾಗಿ ಮೂರು ವರ್ಷಗಳ ಕಾಲ ಸೇವೆಸಲ್ಲಿಸಿದರು.

ಸ್ವಾತಂತ್ರ್ಯೋತ್ತರ ಕಾಲದಲ್ಲಿ, ಕೆ. ಸಿ. ರೆಡ್ಡಿಯವರ ಮಂತ್ರಿಮಂಡಲದಲ್ಲಿ (1947–52) ಅವರು ಮೈಸೂರಿನ ಹಣಕಾಸಿನ ಮತ್ತು ಕೈಗಾರಿಕಾ ಸಚಿವರಾಗಿ ಸೇವೆ ಸಲ್ಲಿಸಿದರು ಇದೇ ಕಾಲದಲ್ಲಿ ಹಳೇ ಮೈಸೂರು ರಾಜ್ಯದ ಕೈಗಾರಿಕಾ ವಿಸ್ತರಣೆಯ ಕರಡನ್ನು ತಯಾರಿಸಿ ರಾಜ್ಯಕ್ಕೆ ಗಣ್ಯಸೇವೆಸಲ್ಲಿಸಿದರು. ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ವಿಸ್ತರಣೆ, ಬೆಂಗಳೂರು ರಾಜಾಜಿನಗರ, ಜಯನಗರಗಳ ವಿಸ್ತರಣೆ ಹಾಗೂ ಬೆಂಗಳೂರು ನಗರಾಭಿವೃದ್ಧಿ ಮಂಡಲಿಯನ್ನು ಉತ್ತಮ ರೀತಿಗೆ ತಂದದ್ದು ಅವರ ಕೆಲವು ಸಾಧನೆಗಳು. ಯೂರೋಪು ಮತ್ತು ಅಮೇರಿಕ ಖಂಡದಲ್ಲಿ ಪ್ರವಾಸ ಮಾಡಿ ಮೈಸೂರಿನಲ್ಲಿ ಕೈಗಾರಿಕಾಭಿವೃದ್ಧಿಯ ಸಾಧ್ಯತೆಗಳನ್ನು ಅವರು ಅರಿತರು.

ದಾಸಪ್ಪನವರು 1952ರಲ್ಲಿ ಎರಡನೇ ಬಾರಿಗೆ ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿಯೂ, 1954ರಲ್ಲಿ ರಾಜ್ಯಸಭೆಯ ಸದಸ್ಯರಾಗಿಯೂ ಆಯ್ಕೆಗೊಂಡಿದ್ದರು. ಅನಂತರ 1957 ಮತ್ತು 1962ರಲ್ಲಿ ಎರಡು ಬಾರಿ ಲೋಕಸಭಾ ಸದಸ್ಯರಾಗಿ ಆಯ್ಕೆ ಗೊಂಡರು. 1962ರಲ್ಲಿ ಕಾಂಗ್ರೆಸ್ ಪಕ್ಷದ ಉಪನಾಯಕರಾಗಿ ಆಯ್ಕೆಗೊಂಡರು. 1963ರಲ್ಲಿ ರೈಲ್ವೆ ಮಂತ್ರಿಯಾಗಿ ಹಾಸನ–ಮಂಗಳೂರು ರೈಲ್ವೆ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕೆ ಕಾರಣರಾದರು. ಲಾಲ್‌ಬಹದ್ದೂರ್ ಶಾಸ್ತ್ರಿ ಮಂತ್ರಿ ಮಂಡಲದಲ್ಲಿ ದಾಸಪ್ಪನವರು ನೀರಾವರಿ ಮತ್ತು ವಿದ್ಯುಚ್ಛಕ್ತಿ ಖಾತೆಯ ಸಚಿವರಾಗಿದ್ದರು. ಜಾಂಬಿಯಾ ದೇಶಕ್ಕೆ, ಆ ದೇಶದ ಸ್ವಾತಂತ್ರ್ಯದಿನಾಚರಣೆಯ ಸಂದರ್ಭದಲ್ಲಿ ಭಾರತ ದೇಶದ ಪ್ರತಿನಿಧಿಯಾಗಿ ಹೋಗಿದ್ದು ಆಗ ಕೆನ್ಯಾ ಮತ್ತು ಉಗಾಂಡ ರಾಷ್ಟ್ರಗಳಲ್ಲಿಯೂ ಕೂಡ ಪ್ರವಾಸಮಾಡಿದ್ದರು.

ಆಫ್ರಿಕಾ ಖಂಡದಿಂದ ಹಿಂದಿರುಗಿದನಂತರ ದಾಸಪ್ಪನವರು 1964ನೇ ಇಸವಿ ಅಕ್ಟೋಬರ್ 29ನೇ ದಿನಾಂಕ ದೆಹಲಿಯಲ್ಲಿ ಹೃದಯಾಘಾತದಿಂದ ಅಸು ನೀಗಿದರು.

ದಾಸಪ್ಪನವರು ಅಪ್ಪಟ ಗಾಂಧೀವಾದಿ ಮತ್ತು ಹಳೇ ಮೈಸೂರು ರಾಜ್ಯದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರು. ಅವರು ರಚನಾತ್ಮಕ ಕಾರ್ಯಗಳಾದ ಖಾದಿ-ಗ್ರಾಮೋದ್ಯೋಗ, ಹಿಂದಿ ಭಾಷೆಯನ್ನು ಹರಡುವಿಕೆ ಮತ್ತು ಹರಿಜನೋದ್ಧಾರ ದಲ್ಲಿ ಜನರ ನಂಬಿಕೆಯನ್ನು ಹೆಚ್ಚಿಸಲು ಶ್ರಮಿಸಿದರು. ಮೈಸೂರು ರಿಯಾಸತ್ ಹಿಂದೀ ಪ್ರಚಾರ ಸಮಿತಿಯನ್ನು ಸ್ಥಾಪಿಸುವಲ್ಲಿ ಅವರು ಪ್ರಮುಖಪಾತ್ರ ವಹಿಸಿದರು. ಅವರು ಹರಿಜನ ಬಾಲಕಿಯೊಬ್ಬಳನ್ನು ದತ್ತು ತೆಗೆದುಕೊಂಡು ಸಾಕಿದ್ದರು. ಅಹಿಂಸಾತತ್ವದಲ್ಲಿ ಅವರಿಗೆ ಅಪಾರ ನಂಬಿಕೆಯಿತ್ತು. ಚಿತ್ರದುರ್ಗ ಜಿಲ್ಲೆಯಲ್ಲಿ ಕ್ಷಾಮ ಬಂದಾಗ ಅದರ ನಿವಾರಣಾಕಾರ್ಯದಲ್ಲಿ ಅವರು ದುಡಿದರು. ದಾಸಪ್ಪನವರು ತಮ್ಮ ತಂದೆಯಂತೆಯೇ ರಾಮಕೃಷ್ಣ ಮಿಷನ್‌ನೊಡನೆ ನಿಕಟಸಂಬಂಧವಿರಿಸಿದ್ದರು. ವಿನಯಶೀಲತೆ ಮತ್ತು ಸರಳ ಜೀವನ ಅವರಿಗೆ ಜನಾನುರಾಗವನ್ನು ಗಳಿಸಿಕೊಟ್ಟಿದ್ದವು.

ಪುಟ್ಟೇಗೌಡ
(ಸಂಶೋಧನ ಸಹಾಯಕ, ಇತಿಹಾಸ ವಿಭಾಗ,
ಬೆಂಗಳೂರು ವಿಶ್ವವಿದ್ಯಾಲಯ)

ಮೈ.ಮೈ. 3

## ೮|| ಸಾಹುಕಾರ್ ಚನ್ನಯ್ಯ

(1902–71)



ಮೈಸೂರು ಕಾಂಗ್ರೆಸ್ಸಿನ 'ಕಿಂಗ್ ಮೇಕರ್', 'ನಜರ್‌ಬಾದ್ ನವಾಬರು' ಎಂದೆಲ್ಲ ವಿಶೇಷಣ ಗಳಿಂದ ಕರೆಯಲ್ಪಡುತ್ತಿದ್ದ ಸಾಹುಕಾರ್ ಚನ್ನಯ್ಯ ನವರು ಮೈಸೂರು ಕಾಂಗ್ರೆಸ್ಸಿನ ಆಧಾರಸ್ತಂಭಗಳಲ್ಲಿ ಒಬ್ಬರು. ಮೇಲೆ ಹೇಳಿದ ವಿಶೇಷಣಗಳೇ ಸೂಚಿಸಿರು ವಂತೆ, ಅವರ ಹುಕುಂನಂತೇ ಕಾಂಗ್ರೆಸ್ಸಿನ ಕೆಲಸ ಕಾರ್ಯಗಳು ಆ ಕಾಲದಲ್ಲಿ ನಡೆಯುತ್ತಿದ್ದವು. ಅವರು ಶ್ರೀಮಂತ ಮನೆತನದಲ್ಲಿ ಹುಟ್ಟಿ ವ್ಯಾಪಾರ, ವ್ಯವಸಾಯದಲ್ಲಿ ಪೂರ್ಣವಾಗಿ ಮಗ್ನರಾಗಿದ್ದರು. ಖುಷಿಗೋಸ್ಕರ ಆಗಾಗ ರಾಜಕೀಯಪಟುಗಳಾದ ಎಚ್. ಸಿ. ದಾಸಪ್ಪನವರ ಜತೆಯಲ್ಲಿ ರಾಜಕೀಯ ಸಭೆಗಳಿಗೆ ಬರುತ್ತಿದ್ದರು. ಆದರೆ ವಿಧಿ ಅವರನ್ನು ಖಾಯಂ ಆಗಿ ರಾಜಕೀಯಕ್ಕೇ ಎಳೆದುಕೊಂಡಿತು.

ಮೈಸೂರು ಜಿಲ್ಲೆಯ—ಆಗ ಮೈಸೂರು ಜಿಲ್ಲೆ ಈಗಿನ ಮಂಡ್ಯ ಜಿಲ್ಲೆಯನ್ನೂ ಒಳಗೊಂಡಿತ್ತು—ಕಾಂಗ್ರೆಸ್ ಮುಖಂಡರು ಸಭೆ ಸೇರಿ, ಒಂದು ರಾಷ್ಟ್ರಕೂಟವನ್ನು ನಡೆಸಬೇಕೆಂದೂ, ಅಲ್ಲಿ ಕಾಂಗ್ರೆಸ್ ಸಂಸ್ಥೆಯೊಂದನ್ನು ವಿಧ್ಯುಕ್ತವಾಗಿ ಆರಂಭಿಸಬೇಕೆಂದೂ ನಿರ್ಧರಿಸಿದರು. ಸ್ವಲ್ಪ ಜಿಜ್ಞಾಸೆಯಾದಮೇಲೆ ಈ ರಾಷ್ಟ್ರಕೂಟವನ್ನು ಮದ್ದೂರು ತಾಲೂಕಿನ ಶಿವಪುರದಲ್ಲಿ ನಡೆಸಬೇಕೆಂದು ತೀರ್ಮಾನವಾಯಿತು. ಈ ಜವಾಬ್ದಾರಿಯನ್ನು ಮದ್ದೂರಿನ ಎಚ್. ಕೆ. ವೀರಣ್ಣಗೌಡರು ವಹಿಸಿಕೊಂಡು ಅವರು ಮತ್ತು ಎ. ಜಿ. ಬಂಡಿಗೌಡರು ಕಾರ್ಯದರ್ಶಿಗಳಾದರು. ಸ್ವಾಗತ ಸಮಿತಿಯ ಅಧ್ಯಕ್ಷತೆಗೆ ಯಾರನ್ನು ನೇಮಿಸಬೇಕೆಂದು ವಿಚಾರ ಮಾಡಿದಾಗ ಚನ್ನಯ್ಯನವರು ಒಪ್ಪಿದರೆ ಅವರಿಂದ ತುಂಬಾ ಸಹಾಯವಾಗುವುದೆಂದು ಅನೇಕರು ಅಭಿಪ್ರಾಯಪಟ್ಟರು. ಈ ವಿಷಯವನ್ನು ದಾಸಪ್ಪನವರಲ್ಲಿ ಪ್ರಸ್ತಾಪ ಮಾಡಿದಾಗ ಅವರು "ಚನ್ನಯ್ಯನವರು ವ್ಯಾಪಾರಿಗಳು; ಅವರನ್ನು ಇದಕ್ಕೆ ಎಳೆಯಬೇಡಿ" ಎಂದರು. ಆದರೂ ವೀರಣ್ಣಗೌಡರು ಒತ್ತಾಯ ಮಾಡಿ ಚನ್ನಯ್ಯನವರನ್ನು ಸ್ವಾಗತ ಸಮಿತಿಯ ಅಧ್ಯಕ್ಷರಾಗಲು ಒಪ್ಪಿಸಿದರು.

ಶಿವಪುರದ ರಾಷ್ಟ್ರಕೂಟ ಬಹು ಯಶಸ್ವಿಯಾಗಿ ನಡೆಯಿತು. ಅದರ ಯಶಸ್ಸಿಗೆ ವೀರಣ್ಣಗೌಡ ಮತ್ತು ಸಾಹುಕಾರ್ ಚನ್ನಯ್ಯನವರ ದುಡಿಮೆ ಕಾರಣವೆಂಬುದನ್ನು ಯಾರೂ ಮರೆಯಲಾರರು. ಅದಕ್ಕೂ ಮೊದಲು ಅವರು ಹರಿಪುರ ಕಾಂಗ್ರೆಸಿಗೆ ಹೋಗಿದ್ದರು. 1938ರಲ್ಲಿ ಹೀಗೆ ಅಕಸ್ಮಾತ್ ಕಾಂಗ್ರೆಸ್ ಪ್ರವೇಶ ಮಾಡಿದ ಚನ್ನಯ್ಯನವರು 1966ರ ವರೆಗೆ ಏಕನಿಷ್ಠೆಯಿಂದ ಸಂಸ್ಥೆಯ ಪ್ರಗತಿಗಾಗಿಯೇ ದುಡಿದರು. ಇವರಿಗೆ ವಿದ್ಯಾಭ್ಯಾಸ ಹೆಚ್ಚಾಗಿರಲಿಲ್ಲವಾದರೂ ರಾಜಕೀಯದಲ್ಲಿ ಚಾಣಾಕ್ಷರಾಗಿದ್ದರು. ದಕ್ಷ ರಾಜಕಾರಣಿಯಾಗಿದ್ದರು. ತಮ್ಮ ಮಾತು ನಡೆಯಬೇಕು ಎಂಬ ಛಲದಂಕಮಲ್ಲರು. ಅದನ್ನು ಹೇಗೋ ಸಾಧಿಸಿಯೇ ಬಿಡುತ್ತಿದ್ದರು.

ವಿದ್ಯಾವಂತರೂ ಅನುಭವಿಗಳೂ ಆದ ಕೆ. ಸಿ. ರೆಡ್ಡಿ, ಕೆ. ಟಿ. ಭಾಷ್ಯಂ ಇವರೆಲ್ಲ ಅವರಿಗೆ ಎದುರು ನಿಲ್ಲಲು ಹಿಂದೇಟು ಹಾಕುತ್ತಿದ್ದರು; ಅಷ್ಟೇ ಅಲ್ಲ, ತಮಗಿಷ್ಟವಿರಲಿ ಇಲ್ಲದಿರಲಿ, ಅವರು ಹೇಳಿದ ರೀತಿಯಲ್ಲಿಯೇ ನಡೆಯುತ್ತಿದ್ದರು. ಇದರಿಂದ ಇವರುಗಳಿಗೆ ಎಷ್ಟೋ ಸಲ ಕೆಟ್ಟ ಹೆಸರೂ ಬಂತು. ಚನ್ನಯ್ಯನವರು ಮನಸ್ಸುಮಾಡಿದ್ದರೆ ಎಂದೋ ಕಾಂಗ್ರೆಸ್ ಅಧ್ಯಕ್ಷರಾಗಬಹುದಿತ್ತು, ಮಂತ್ರಿಯಾಗಬಹುದಿತ್ತು. ಶಾಸನಸಭೆಯ ಸದಸ್ಯತ್ವವನ್ನು ಕೂಡ ಅವರು ಆಶಿಸಿದವರಲ್ಲ; ಬಹುಶಃ ಅದೇ ಅವರ ಶಕ್ತಿಯ 'ಟ್ರಂಪ್ ಕಾರ್ಡ್' ಆಗಿತ್ತೋ ಏನೋ !

ಅವರಿಗೆ ಕಾಂಗ್ರೆಸ್ಸಿನ ಅನಭಿಷಿಕ್ತ ಚಕ್ರವರ್ತಿಯಾಗಿ ಉಳಿಯುವುದೇ ಹೆಚ್ಚು ಪ್ರಿಯವೆನಿಸಿತ್ತು. ಮೈಸೂರು ನಗರ ಕಾಂಗ್ರೆಸ್ ಸಮಿತಿಗೆ ಖಾಯಂ ಅಧ್ಯಕ್ಷರಾಗಿರುವುದರಲ್ಲೇ ಅವರು ತೃಪ್ತಿಪಟ್ಟುಕೊಂಡಿದ್ದರು. ಸ್ವಾತಂತ್ರ್ಯಪೂರ್ವದಲ್ಲಿ ಸರ್ಕಾರ

ದೊಡನೆ ಸೆಣಸಾಟ ಮಾಡುವುದರಲ್ಲಿ, ಕಾಂಗ್ರೆಸ್ಸಿನ ಘನತೆಗೌರವಗಳನ್ನು ಎತ್ತಿಹಿಡಿಯುವುದರಲ್ಲಿ, ಅವರು ಛಲದಂಕಮಲ್ಲರಂತೆ ಹೋರಾಡುತ್ತಿದ್ದರು. ಸೆರೆಮನೆ ವಾಸಕ್ಕೆ ಎಂದೂ ಹೆದರದವರಲ್ಲ; ಬೇಸರಿಸಿದವರಲ್ಲ. 1956ರಲ್ಲಿ ಅವರು ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷಗದ್ದುಗೆಯನ್ನು ಏರಿದರು.

ಮುಂದೆ ಕೆ. ಹನುಮಂತಯ್ಯನವರು ಮುಖ್ಯಮಂತ್ರಿಯಾದಮೇಲೆ ಚನ್ನಯ್ಯನವರ ವರ್ಚಸ್ಸು ಕಾಂಗ್ರೆಸ್ ಸಂಸ್ಥೆಯಲ್ಲಿ ಇಳಿಮುಖವಾಗುತ್ತಬಂತು. ಕರ್ನಾಟಕ ಏಕೀಕರಣವಾದಮೇಲೆ, ಹಳೆ ಮೈಸೂರಿನ ಒಕ್ಕಲಿಗ ನಾಯಕರಲ್ಲಿ ಭಿನ್ನಾಭಿಪ್ರಾಯ ಬಂದು ಅವರ ಸಂಘಟನೆ ಒಡೆಯಿತು. ಆಗ ಬಿ. ಡಿ. ಜತ್ತಿ ಮುಖ್ಯಮಂತ್ರಿ ಆಗಿದ್ದರು. ಇದರ ಫಲವಾಗಿ ಚನ್ನಯ್ಯನವರು ತಾವು ನಿಷ್ಠೆಯಿಂದ ಕಟ್ಟಿ ಬೆಳೆಸಿದ ಕಾಂಗ್ರೆಸ್ ಸಂಸ್ಥೆಯನ್ನು ಬಿಟ್ಟು ಹೊರಬೀಳಬೇಕಾಯಿತು. ಅವರು ಟಿ. ಸುಬ್ರಹ್ಮಣ್ಯಂರೊಡನೆ ಕೂಡಿಕೊಂಡು ಜನತಾ ಪಕ್ಷವನ್ನು ಆರಂಭಿಸಿದರು. 1967ರ ಚುನಾವಣೆಯಲ್ಲಿ 'ಜನತಾ ಪಕ್ಷ'ದ ಅಭ್ಯರ್ಥಿಯಾಗಿ, ಮೈಸೂರಿನಿಂದ ಶಾಸನಸಭೆಗೆ ಆರಿಸಿ ಬಂದರು.

1902ರಲ್ಲಿ ಜನಿಸಿದ ಅವರು 1942ರಲ್ಲೂ 1947ರಲ್ಲೂ ಬಂಧನಕ್ಕೆ ಒಳಗಾಗಿ, ಒಟ್ಟು ಒಂದು ವರ್ಷಕ್ಕೂ ದೀರ್ಘಕಾಲ ಸ್ಥಾನಬದ್ಧತೆಯಲ್ಲಿದ್ದರು. 1960ರಿಂದ 1966ರ ವರೆಗೆ ಎಂ.ಎಲ್.ಸಿ. ಆಗಿದ್ದರು. ಸ್ವಾತಂತ್ರ್ಯ ಚಳವಳಿಯಲ್ಲಿ ಅವರು ಮಾಡಿದ ತ್ಯಾಗ, ವೆಚ್ಚಮಾಡಿದ ಹಣ ಅಪಾರ. 20-11-1971ರಲ್ಲಿ ಅವರು ದಿವಂಗತರಾದರು.

**ಎಚ್. ಎಸ್. ದೊರೆಸ್ವಾಮಿ**

ಮೈ.ಮೈ. 4

## ಎಂ. ಎನ್. ಜೋಯಿಸ್

ಜನನ : 1905 ಉದ್ಯೋಗ : ನಿವೃತ್ತಜೀವನ ವಿಳಾಸ : ಸೋನಾರ್ ಬೀದಿ, ಮೈಸೂರು

---

ಮೈಸೂರು ಸಿಟಿ ಹಿಂದೆ, ಅಂದರೆ ಸ್ವಾತಂತ್ರ್ಯಪೂರ್ವಕ್ಕೆ, ಮೈಸೂರಿನ ರಾಜಧಾನಿಯಾಗಿತ್ತು. ಇಲ್ಲಿ ಮೈಸೂರು ಸಂಸ್ಥಾನದ ಕಾಯಿದೆ ಕೌನ್ಸಿಲುಗಳು ಆಗಾಗ್ಗೆ ನಡೆಯುತ್ತಿದ್ದವು. ಸಂಸ್ಥಾನದ ಮುಖಂಡರು ಎಲ್ಲ ಕಡೆಯಿಂದ ಬಂದು ಸೇರುವ ಸನ್ನಿವೇಶ ಇದಾಗಿತ್ತು. ಆಗಿನ ಬ್ರಿಟಿಷ್ ಹಿಂದೂಸ್ಥಾನದಲ್ಲಿ ನಡೆಯುತ್ತಿದ್ದ ಸ್ವದೇಶೀ ಮತ್ತು ಸ್ವರಾಜ್ಯ ಚಳವಳಿಗಳ ಬಗ್ಗೆ ಈ ಮುಖಂಡರುಗಳು ಸಾರ್ವಜನಿಕ ವೇದಿಕೆಗಳಿಂದ ಜನರಿಗೆ ತಿಳುವಳಿಕೆ ಕೊಡುತ್ತಿದ್ದ ಒಂದು ವಿಶೇಷ ಸೌಲಭ್ಯ ಮೈಸೂರಿನ ನಾಗರಿಕರಿಗೆ ಇತ್ತು. ಇವುಗಳನ್ನು ಕೇಳುತ್ತಿದ್ದ ಕೆಲವಾರು ಮಂದಿ, ಮೈಸೂರಿನಲ್ಲೂ



ಕಾಂಗ್ರೆಸ್ ಸಂಸ್ಥೆ ಸ್ಥಾಪಿಸಿ, ಅದರ ಮೂಲಕ ಸಂಸ್ಥಾನದ ಪ್ರಗತಿಯನ್ನು ಸಾಧಿಸಬೇಕೆಂದು ಬಯಸಿದರು. ಅಗರಂ ರಂಗಯ್ಯನವರು ಮತ್ತು ತಗಡೂರು ರಾಮಚಂದ್ರರಾಯರು ಈ ವಿಷಯದಲ್ಲಿ ಬಹಳ ಉತ್ಸುಕರಾಗಿದ್ದರು. ಇವರು ವೃದ್ಧಪಿತಾ ಮಹ ಎಂ. ವೆಂಕಟಕೃಷ್ಣಯ್ಯನವರ ಸಹಕಾರದಿಂದ ಸುಮಾರು 1920ನೇ ಇಸವಿಯಲ್ಲಿ ಮೈಸೂರು ಪ್ರಾಂತೀಯ ಸಮಿತಿಯ ಒಂದು ಡಿಸ್ಟ್ರಿಕ್ಟ್ ಶಾಖೆಯನ್ನು ಸ್ಥಾಪಿಸಿದರು. ಇದಕ್ಕೆ ಮೊದಲೇ 'ತಿಲಕ ಸಂಘ' ಎಂಬ ಹೆಸರಿನಿಂದ ಒಂದು ಸಂಘವು ಕೆಲಸ ಮಾಡುತ್ತಿತ್ತು. ಆ ಕಾಲದಲ್ಲಿ ಬಾಲ ಗಂಗಾಧರ ಟಿಳಕರ ಪ್ರತಿಭೆ ಮತ್ತು ಪ್ರಭಾವ ಹಿಂದುಸ್ಥಾನವನ್ನೆಲ್ಲಾ ಆವರಿಸಿತ್ತು. ಈ ಸಂಘದ ಮುಖ್ಯ ಸ್ಥರು ಸ್ವಾಮಿರಾವ್, ರಾಮಸ್ವಾಮಿ ಅಯ್ಯಂಗಾರ್ ಮತ್ತು ಜಿ. ವಿರೂಪಾಕ್ಷ ಎಂದು ನನ್ನ ಜ್ಞಾಪಕ. ಮೇಲೆ ಹೇಳಿದ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಎಂ. ವೆಂಕಟ ಕೃಷ್ಣಯ್ಯನವರೂ, ಅದರ ಸಂಚಾಲಕರಾಗಿ ಅಗರಂ ರಂಗಯ್ಯನವರೂ ಇದ್ದರು. ಈ ಸಮಿತಿ ವಿಶೇಷವಾಗಿ ಸ್ವದೇಶೀ ಪ್ರಚಾರದಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸಿ ಕೆಲಸ ಮಾಡುತ್ತಿತ್ತು. 1924ರಲ್ಲಿ ಬೆಳಗಾಂ ಕಾಂಗ್ರೆಸ್ ಅಧಿವೇಶನ. ಆ ಸಂದರ್ಭದಲ್ಲಿ ಕರ್ನಾಟಕದ ನಾಯಕರು ಮೈಸೂರು ಸಂಸ್ಥಾನದಲ್ಲಿ ಶ್ರದ್ಧೆಯಿಂದ ಅಡ್ಡಾಡಿದರು. ಈ ಸಂದರ್ಭವನ್ನು ನಮ್ಮ ಊರಿನ ಕಾಂಗ್ರೆಸ್ ತಾನು ಬಲಗೊಳ್ಳುವುದಕ್ಕೆ ಉಪಯೋಗಿಸಿ ಕೊಂಡಿತು. ಸುಮಾರು ಇದೇ ಸಂದರ್ಭದಲ್ಲಿ ತಗಡೂರಿನಲ್ಲಿ ರಾಮಚಂದ್ರರಾಯರು ಖಾದಿ ಕೇಂದ್ರವನ್ನು ಸ್ಥಾಪಿಸಿದರು. 'ಸತ್ಯಾಗ್ರಹ ಆಶ್ರಮ' ವೆಂದು ಪರಿವರ್ತಿತವಾದ ಈ ಕೇಂದ್ರ ಗ್ರಾಮೋದ್ಯೋಗ, ಹರಿಜನಸೇವೆ, ಹಿಂದಿ ಇತ್ಯಾದಿ ಕಾರ್ಯಕ್ರಮಗಳನ್ನು ಸುತ್ತಮುತ್ತ ಲಿನ ಹಳ್ಳಿಗಳಲ್ಲಿ ಪ್ರಾರಂಭಿಸಿತು. ಇದರ ಪರಿಣಾಮವಾಗಿ ಮೈಸೂರು ಜಿಲ್ಲೆಯ ನೆರೆ ಹೊರೆಯ ತಾಲ್ಲೂಕುಗಳಾದ ನಂಜನಗೂಡು. ಗುಂಡ್ಲುಪೇಟೆ. ಚಾಮರಾಜನಗರ, ಟಿ. ನರಸೀಪುರ ಮುಂತಾದ ಒಳನಾಡಿನಲ್ಲಿ ಕಾಂಗ್ರೆಸ್ಸಿನ ಚಟುವಟಿಕೆಗಳು ಕಾಣಿಸಿಕೊಂಡವು. ಕಾಲಕ್ರಮದಲ್ಲಿ ನೆರೆಹೊರೆಯ ರಾಜ್ಯಗಳ ಕಾಂಗ್ರೆಸ್ಸಿನ ಚಟುವಟಿಕೆಗಳು ತಮ್ಮ ಪ್ರಭಾವ ವನ್ನು ನಮ್ಮ ಊರಿನಲ್ಲೂ ಬೀರಿದ ಪರಿಣಾಮವಾಗಿ ನಮ್ಮ ಊರಿನ ಕಾಂಗ್ರೆಸ್ ಬಲ ಗೊಂಡು ಇಂಡಿಯಾ ದೇಶದ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದೇ ಅಲ್ಲದೆ ಮೈಸೂರಿನಲ್ಲಿ ಜವಾಬ್ದಾರಿ ಸರಕಾರದ ಸ್ಥಾಪನೆಯ ಹೊಣೆ ಹೊತ್ತು, ಈ ಉದ್ದೇಶ ವನ್ನು ಸಾಧಿಸಿ ಯಶಸ್ಸುಪಡೆಯಲು ತನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಿತು. ನನ್ನ ಊರಿನಲ್ಲಿ ಕಾಂಗ್ರೆಸ್ ಬಾಲ್ಯಾವಸ್ಥೆಯಲ್ಲಿದ್ದಾಗ ಅದನ್ನು ಬಲಪಡಿಸಲು ಮೈಸೂರು

ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಹಲವರು ಸಹಾಯಕರಾದರು. ಅವರಲ್ಲಿ ಕೆಲವರ ಹೆಸರುಗಳನ್ನು ಇಲ್ಲಿ ಸೂಚಿಸಬಯಸುತ್ತೇನೆ. ಗಂಗಾಧರರಾವ್ ದೇಶಪಾಂಡೆಯವರು ಮೈಸೂರಿನಲ್ಲಿ ಪ್ರವಾಸ ಮಾಡಿದಾಗ ಭಾಷಣಗಳನ್ನು ಮಾಡಿದ್ದಲ್ಲದೆ, ಊರಿನ ಹಲವಾರು ಮುಖಂಡರನ್ನು ಖಾಸಗಿಯಾಗಿ ಭೇಟಿಮಾಡಿ ಕಾಂಗ್ರೆಸ್ಸಿನ ಕಡೆಗೆ ಅವರ ಮನ ಒಲಿಯು ವಂತೆ ಮಾಡಿದರು. ಮುದವೀಡು ಕೃಷ್ಣರಾಯರು ಮಾಡಿದ ಪ್ರಚಾರ ಭಾಷಣದ ಫಲವಾಗಿ ಅನೇಕ ಜನಸಾಮಾನ್ಯರು ಸ್ವದೇಶೀ ವ್ರತವನ್ನು ಕೈಗೊಂಡರು. ಡಾ|| ಹರ್ಡೀಕರ್‌ರವರು ಯುವಕರಲ್ಲಿ ಕಲೆತು ಬೆರೆತು ಅವರಲ್ಲಿ ಸೇವಾದಳ ಪ್ರಜ್ಞೆ ಉಂಟು ಮಾಡಿದರು. ಆಲೂರ ವೆಂಕಟರಾಯರು, ಕಡಪಾ ರಾಘವೇಂದ್ರರಾಯರು ಮತ್ತು ಮದರಾಸಿನ ಎಸ್. ಸತ್ಯಮೂರ್ತಿಯವರನ್ನು ನಾವು ಈ ಸಂದರ್ಭದಲ್ಲಿ ಸ್ಮರಿಸಬಹುದು.

ಮೈಸೂರಿನ ಮರಿಮಲ್ಲಪ್ಪನವರ ಶಾಲೆಯಲ್ಲಿ ನನ್ನ ವ್ಯಾಸಂಗ. ಆ ಹೈಸ್ಕೂಲಿನ ಮುಖ್ಯೋಪಾಧ್ಯಾಯರು ವೃದ್ಧಪಿತಾಮಹ ದಿ|| ಎಂ. ವೆಂಕಟಕೃಷ್ಣಯ್ಯನವರು; ಅವರು ಹುಡುಗರಿಗೆ ಪಾಠ ಹೇಳುವಾಗ ದೈವಭಕ್ತಿ, ದೇಶಭಕ್ತಿಗಳನ್ನು ಬೆರೆಸಿ ಹೇಳುವುದು ವಾಡಿಕೆ. ಆಗಾಗ್ಗೆ ಹುಡುಗರಿಗೆ ಕ್ಲಾಸಿನಲ್ಲಿ ಅಬ್ರಹಾಂ ಲಿಂಕನ್ ಮೊದಲಾದವರ ಕಥೆಗಳನ್ನು ಮತ್ತು ನಮ್ಮ ದೇಶದ ಪ್ರಸಿದ್ಧರಾದ ಸಾರ್ವಜನಿಕ ಮುಖಂಡರ ವಿಷಯ ಗಳನ್ನು ಹೇಳುತ್ತಿದ್ದರು. ಸಣ್ಣ ವಯಸ್ಸಿನ ಹುಡುಗರ ಮನಸ್ಸಿನ ಮೇಲೆ ಇದರ ಪರಿಣಾಮ ಸಾಕಷ್ಟು ಆಗುತ್ತಿತ್ತು. ಮೇಲೆ ಹೇಳಿದ ಅಗರಂ ರಂಗಯ್ಯನವರು ಮತ್ತು ತಗಡೂರು ರಾಮಚಂದ್ರರಾಯರು ಇದೇ ಶಾಲೆಯ ವಿದ್ಯಾರ್ಥಿಗಳು. ನಮ್ಮ ಊರಿನ ಕಾಂಗ್ರೆಸ್ ಆಫೀಸು ಇದ್ದುದು ಅಗರಂ ರಂಗಯ್ಯನವರ ಮನೆ ಮಹಡಿಯಲ್ಲಿ. ನಮ್ಮ ಮನೆ ಇದಕ್ಕೆ ಸಮೀಪದಲ್ಲಿ ಇತ್ತು. ನಮ್ಮೂರಿನಲ್ಲಿ ಕಾಂಗ್ರೆಸ್ಸಿನ ಚಟುವಟಿಕೆಗಳು ಟೌನ್ ಹಾಲ್ ಮೈದಾನದಲ್ಲಿ ನಡೆಯುತ್ತಿತ್ತು. ಈ ಮೈದಾನವು ಮೈಸೂರು ರಾಜರ ಅರಮನೆಯ ಪಕ್ಕದಲ್ಲಿದೆ. ಆದ್ದರಿಂದ ರಾಜಕೀಯ ಚಟುವಟಿಕೆಗಳಿಗೆ ಸರ್ಕಾರವು ಆಗಾಗ್ಗೆ ಪ್ರತಿಬಂಧಕ ತರುತ್ತಿತ್ತು. ಇಲ್ಲಿ ಭಾಷಣ ಮಾಡಲು ಅವಕಾಶ ಕೊಡುತ್ತಿರ ಲಿಲ್ಲ. ಆಗ ಸುಬ್ಬರಾಯನ ಕೆರೆಯ ಅಂಗಳದಲ್ಲಿ ಭಾಷಣಗಳು ನಡೆಯುತ್ತಿದ್ದವು. ಈ ಕೆರೆಯ ಅಂಗಳವೂ ನಮ್ಮ ಮನೆಗೆ ಸಮೀಪ. ಇದರಿಂದಾಗಿ ಕಾಂಗ್ರೆಸ್ಸಿನ ಚಟುವಟಿಕೆ ಗಳನ್ನೆಲ್ಲ ನೋಡುವ, ಕೇಳುವ ಸೌಭಾಗ್ಯ ನನ್ನದಾಗಿತ್ತು. ಆಗಾಗ್ಗೆ ಕಾಂಗ್ರೆಸ್ ಆಫೀಸಿಗೆ ಹೋಗಿ ಬರುವುದು, ಅಲ್ಲಿನ ಚರ್ಚೆಗಳಲ್ಲಿ ಭಾಗವಹಿಸುವುದು, ಮುಖಂಡರ ಸಂಪರ್ಕ ಬೆಳೆಯಲು ಅವಕಾಶ, ಕಾಂಗ್ರೆಸ್ಸಿನ ಸಣ್ಣಪುಟ್ಟ ಕೆಲಸಗಳನ್ನು ಮಾಡುವ ಹವ್ಯಾಸ ಎಲ್ಲಾ ಆರಂಭವಾಯಿತು. ಹೀಗೆ ಒಂದು ದಿವಸ ನನ್ನ ಮತ್ತು ಡಾ|| ಹರ್ಡೀಕರ್‌ರವರ ಪರಿಚಯ ಆಯಿತು. ಸ್ವಲ್ಪಕಾಲದಮೇಲೆ ಹಿಂದೂಸ್ಥಾನೀ ಸೇವಾ ದಳವ ಕಾರ್ಯಕರ್ತನಾದೆ. ತಿಂಗಳಿನ ಕೊನೆಯ ಭಾನುವಾರ ರಾಷ್ಟ್ರೀಯ ಧ್ವಜವಂದನೆ ಮಾಡುವ ಪದ್ಧತಿ ಇತ್ತು. ಇದನ್ನು ಕ್ರಮವಾಗಿ ನಡೆಸುವ ಹೊಣೆ ನನ್ನದಾಗಿತ್ತು.

ಇವಕ್ಕೆ ಬೇಕಾದ ಧ್ವಜಸ್ತಂಭ, ಹಗ್ಗ, ಗೂಟಗಳು ಮತ್ತು ಬಾವುಟ ನಮ್ಮ ಮನೆಯಲ್ಲಿ ಇರುತ್ತಿತ್ತು. ನನ್ನ ಮನೆಯ ಪಕ್ಕದ್ದೆ ಥಿಯೋಸಾಫಿಕಲ್ ಸೊಸೈಟಿ' ಯಾಗಿದ್ದಿತು. ಅಲ್ಲಿ ಕೆಲವು ವಿದ್ಯಾರ್ಥಿಗಳು ವಾಸಮಾಡುತ್ತಿದ್ದರು. ರಂಗನಾಥ, ಅಪ್ಪಾರಾವ್, ಚಂದ್ರಶೇಖರ, ಸುಂದರ, ಬಾಟನಿ ಕೃಷ್ಣರಾವ್, ಬಾಟನಿ ಲಕ್ಷ್ಮಣರಾವ್ ಮೊದಲಾದ ವಿದ್ಯಾರ್ಥಿಗಳು ತಮ್ಮ ಪೂರ್ಣ ಸಹಕಾರದಿಂದ ಈ ಧ್ವಜವಂದನಾ ಕಾರ್ಯಕ್ರಮಕ್ಕೆ ನೆರವಾಗುತ್ತಿದ್ದರು. ಹಲವಾರು ವಿಶೇಷ ಸಂದರ್ಭಗಳಲ್ಲಿ ಸರ್ಕಾರದವರು ಧ್ವಜವಂದನೆ ಆಗಬಾರದೆಂದು ಪ್ರತಿಬಂಧಕಾಜ್ಞೆಯನ್ನು ವಿಧಿಸುತ್ತಿದ್ದರು. ಆ ಸಂದರ್ಭದಲ್ಲಿ ನನ್ನ ಮನೆಯ ಹಿಂದಿನ ಅಂಗಳದಲ್ಲಿ ಧ್ವಜವಂದನೆ ನಡೆಯುತ್ತಿತ್ತು. ಈ ಧ್ವಜವಂದನಾ ಕಾರ್ಯಕ್ರಮದ ಯಶಸ್ಸಿಗೆ ಎಲ್. ವಿ. ರಾಜಗೋಪಾಲರ ಉತ್ಸಾಹ ಮತ್ತು ಕಾರ್ಯ ತತ್ಪರತೆ ಬಹಳ ಸಹಾಯಕವಾಗಿದ್ದವು. ಅನೇಕ ವರ್ಷಗಳಿಂದ ಕಾಂಗ್ರೆಸ್ಸಿನ ಸಂಚಾಲಕರಾಗಿದ್ದ ಅಗರಂ ರಂಗಯ್ಯನವರು ನನ್ನನ್ನು ಸಂಚಾಲಕನನ್ನಾಗುವಂತೆ ಪ್ರೇರೇಪಿಸಿದರು. ಇಷ್ಟು ಹೊತ್ತಿಗೆ ಅಡ್ವೊಕೇಟ್‌ರಾದ ರಂಗರಾಮಯ್ಯ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು. ಬೆಳಗಾಂನಲ್ಲಿ ಕಾಂಗ್ರೆಸ್ ಅಧಿವೇಶನವಾದನಂತರ ಹೆಚ್ಚು ಹೆಚ್ಚಿಗೆ ಪ್ರಚಾರಕಾರ್ಯಕ್ಕಾಗಿ ಬೇರೆ ಪ್ರಾಂತ್ಯದ ಜನರನ್ನು ಕರೆಸುವುದು ರೂಢಿಗೆ ಬಂದಿತ್ತು. ಇವರುಗಳು ಮೈಸೂರಿನಲ್ಲಿ ಇರುವಷ್ಟು ಕಾಲ ಊಟ, ತಿಂಡಿ, ಬಿಡಾರ ವ್ಯವಸ್ಥೆ ಮಾಡುವ ಭಾರ ಕಾಂಗ್ರೆಸ್ಸಿನ ಸಂಚಾಲಕನಾಗಿದ್ದ ನನ್ನದಾಗಿತ್ತು. ಅಗರಂ ರಂಗಯ್ಯನವರ ಮಹಡಿಯಲ್ಲಿದ್ದ ಕಾಂಗ್ರೆಸ್ ಕಛೇರಿ ನನ್ನ ಮನೆಯ ಅಂಗಳದಲ್ಲಿದ್ದ ಕೋಣೆಗೆ ವರ್ಗಾಯಿಸಲ್ಪಟ್ಟಿತು. ಸುಮಾರಾಗಿ ಮೈಸೂರಿಗೆ ಕಾಂಗ್ರೆಸ್ ಕಾರ್ಯಕರ್ತರಿಗೆಲ್ಲ ಈ ಕೋಣೆಯೇ ಬಿಡಾರವೂ ಆಗುತ್ತಿತ್ತು. ಕಾಂಗ್ರೆಸ್ ಕಾರ್ಯಗಳಿಗೆ ತಗಲುತ್ತಿದ್ದ ವೆಚ್ಚವನ್ನು ಬಹಳ ಮಟ್ಟಿಗೆ ಮೈಸೂರಿನ ಹಲವಾರು ಗಣ್ಯ ವಕೀಲರು, ಎಂ. ಲಕ್ಷ್ಮೀನಾರಾಯಣರಾವ್, ಎಸ್. ಶ್ರೀರಂಗಾಚಾರ್, ಎಂ. ಎ. ದೊರೆಸ್ವಾಮಿ ಅಯ್ಯಂಗಾರ್, ಎಸ್. ಸುಬ್ಬರಾವ್, ಸಿ. ನರಸಿಂಹಯ್ಯ, ಪಾಲಹಳ್ಳಿ ಸೀತಾರಾಮಯ್ಯ ಮತ್ತು ಹಲವು ವರ್ತಕ ಮುಖಂಡರೂ ಸಾಹುಕಾರ್ ಬಸಪ್ಪಯ್ಯ, ಪಿ. ಎನ್. ಸಂಗಪ್ಪ ಮೊದಲಾದವರೂ ತುಂಬಿಕೊಡುತ್ತಿದ್ದರು.

ಮೈಸೂರು ಬ್ರಿಟಿಷರ ಆಶ್ರಿತಸಂಸ್ಥಾನವಾಗಿತ್ತು. ಆದ್ದರಿಂದ ಇಂಗ್ಲಿಷ್ ಜನರ ಪ್ರಭಾವ ಸಾಕಷ್ಟು ಸರ್ಕಾರದ ಮೇಲೆ ಇರುತ್ತಿತ್ತು. ಇದನ್ನು ಇಂಗ್ಲಿಷ್ ಪಾದ್ರಿಗಳು ದುರುಪಯೋಗಪಡಿಸಿಕೊಂಡು ಇಲ್ಲಿನ ಜನರನ್ನು ಕ್ರೈಸ್ತಮತಕ್ಕೆ ಸೇರಿಸುವ ಸಾಹಸದಲ್ಲಿ ತೊಡಗಿದ್ದರು. ಅದರಲ್ಲೂ ಬಡವರಾದ ಹಳ್ಳಿಯ ಜನರಲ್ಲಿ ಈ ಪಾದ್ರಿಗಳ ಪ್ರಭಾವ ಹೆಚ್ಚಾಗಿರುತ್ತಿತ್ತು. ಹಲವು ತಾಲ್ಲೂಕುಗಳಲ್ಲಿ ಸರ್ಕಾರಿ ಅಧಿಕಾರಿಗಳೂ ಕೂಡ ಪಾದ್ರಿಗಳಿಗೆ ಈ ಕೆಲಸದಲ್ಲಿ ನೆರವಾಗುತ್ತಿದ್ದರು. ಬ್ರಿಟಿಷರೆಲ್ಲ ಕ್ರೈಸ್ತರು; ಅವರು ಸಾಮ್ರಾಜ್ಯದ ಜನರನ್ನು ಕ್ರೈಸ್ತರನ್ನಾಗಿ ಮಾಡಿದರೆ ಈ ಕ್ರೈಸ್ತರೆಲ್ಲರೂ ಕೂಡ ರಾಜನಿಷ್ಠೆ ತಮ್ಮದೆಂದು ತಿಳಿದುಕೊಂಡು, ಸಾಮ್ರಾಜ್ಯದ ಅಸ್ತಿತ್ವಕ್ಕೆ ಸಹಕಾರ

ಕೊಡುವರೆಂದು ಬ್ರಿಟಿಷ್ ಸರ್ಕಾರದ ಆಗಿನ ಧೋರಣೆ. ಇದಕ್ಕೋಸ್ಕರ ಪಾದ್ರಿಗಳಿಗೆ ನಾನಾ ರೂಪದಲ್ಲಿ ಧನಸಹಾಯ ಮಾಡುತ್ತಿದ್ದರು. ಈ ಮತಾವಲಂಬನೆಯಲ್ಲಿ ಇದ್ದ ರಾಜಕೀಯವನ್ನು ಕಂಡುಕೊಂಡವರಲ್ಲಿ ಮೊದಲಿಗರು ತಗಡೂರು ರಾಮಚಂದ್ರರಾಯರು. ಇವರು ಈ ಪಾದ್ರಿಗಳ ವಿರುದ್ಧ ಒಂದು ಹೋರಾಟವನ್ನೇ ಆರಂಭಿಸಿದರು. ನಾನೂ ಇವರ ಜೊತೆ ಕೂಡಿಕೊಂಡಿದ್ದೆ. ಪಾದ್ರಿಗಳು ಪ್ರಚಾರ ನಡೆಸುವ ಊರುಗಳಿಗೆ ಹೋಗಿ ನಾವುಗಳು ವಿರುದ್ಧ ಪ್ರಚಾರವನ್ನು ಕೈಗೊಳ್ಳುತ್ತಿದ್ದೆವು. ಈ ಸಂದರ್ಭದಲ್ಲಿ ಸರಕಾರವು ನಮ್ಮ ಪ್ರಚಾರಕ್ಕೆ ಅಡ್ಡಿ ತರಲು ಪ್ರತಿಬಂಧಕಾಜ್ಞೆಗಳನ್ನು ಎಷ್ಟೋ ಬಾರಿ ಜಾರಿ ಮಾಡಿತ್ತು. ಇದನ್ನು ಅನೇಕ ಬಾರಿ ನಾವು ವಿರೋಧಿಸಲೂ ಬೇಕಾಯಿತು. ಕ್ರೈಸ್ತ ಮತಾವಲಂಬಿಗಳನ್ನು ಹಿಂದೂ ಧರ್ಮಕ್ಕೆ ಮತ್ತೆ ಸೇರಿಸಿಕೊಳ್ಳುವ ಕಾರ್ಯಕ್ರಮವನ್ನು ನಾವು ಇಟ್ಟುಕೊಂಡಿದ್ದೆವು. ಈ ಶುದ್ಧೀಕರಣಕ್ಕೆ ಬೇಕಾದ ಹೋಮಹವನಗಳನ್ನು ಅಡ್ವೊಕೇಟ್ ಕೆ. ಶೇಷಾದ್ರಿಯವರು ನಡೆಸಿಕೊಡುತ್ತಿದ್ದರು. ಇದರಿಂದಾಗಿ ಪಾದ್ರಿಗಳ ಹಾವಳಿ ಸುಮಾರಾಗಿ ನಮ್ಮ ಜಿಲ್ಲೆಯಲ್ಲಿ ಕಡಿಮೆಯಾಯಿತು.

ಮೈಸೂರಿನ 'ಥಿಯೊಸಾಫಿಕಲ್ ಸೊಸೈಟಿ'ಯವರು ಗಾಂಧೀಜಿಯವರಿಗಿಂತ ಮೊದಲೇ ಹರಿಜನೋದ್ಧಾರ ಕಾರ್ಯಕ್ರಮವನ್ನು ನಡೆಸುತ್ತಿದ್ದರು. ಇವರ ಜೊತೆಯಲ್ಲಿ ನಾನೂ ಮೈಸೂರು ಸಿಟಿಯ ದೊಡ್ಡ ಹೊಲೆಗೇರಿಗೆ ಒಂದೊಂದು ಭಾನುವಾರವೂ ಹೋಗುತ್ತಿದ್ದೆ. ಆ ಕೇರಿಯ ಜನರೆಲ್ಲಾ ಸ್ನಾನಮಾಡಿ, ಶುಭ್ರವಾದ ಬಟ್ಟೆಯನ್ನು ಧರಿಸಿಕೊಂಡು ನಾವುಗಳು ಮಾಡುವ ಪೂಜೆಯಲ್ಲಿ ಭಾಗವಹಿಸಬೇಕೆಂಬ ಪ್ರಚಾರವನ್ನು ರಂಗಧಾಮಯ್ಯ ಎಂಬ ಅದೇ ಜಾತಿಯ ಮುಖಂಡರು ಮಾಡುತ್ತಿದ್ದರು. ನಾವು ಅಲ್ಲಿ ಭಾರತ ಸಮಾಜ ಪೂಜೆಯೆಂಬ ಒಂದು ವಿಧಾನದ ಪೂಜೆಯನ್ನು ಆ ಕೇರಿಯವರೊಡನೆ ನಡೆಸುತ್ತಿದ್ದೆವು. ಇದಕ್ಕೆ ಗೋಪಾಲಸ್ವಾಮಯ್ಯರ್ ಎಂಬ ಖ್ಯಾತ ಹರಿಜನ ಸೇವಕರು ನಮಗೆ ಪೂರ್ಣ ಬೆಂಬಲ ಕೊಡುತ್ತಿದ್ದರು. ಹರಿಜನರನ್ನು ಸ್ಕೂಲುಗಳಿಗೆ ಸೇರಿಸುವ ಮುಂಜಾಗ್ರತೆ ಪ್ರಚಾರವನ್ನು ಮಾಡುತ್ತಿದ್ದೆವು.

ತಗಡೂರು ರಾಮಚಂದ್ರರಾಯರು ಹಿಂದುಳಿದ ವಂಗಡದವರ ವಿಷಯದಲ್ಲಿ ಅನೇಕ ಪ್ರಕಟನೆಗಳನ್ನು ಹೊರಡಿಸುತ್ತಿದ್ದರು. ಕಣಿಯರು ಜಾತಿಯ ಜನರನ್ನು ದೇವಸ್ಥಾನಕ್ಕೆ ಬಿಡಬೇಕೆಂದು ಒಂದು ದೊಡ್ಡ ಆಂದೋಲನವನ್ನೇ ಎಬ್ಬಿಸಿದರು. ಇದಕ್ಕೆ ಗೋವಿಂದಾಚಾರ್ಯಸ್ವಾಮಿ ಎಂಬ ವೈಷ್ಣವ ಸ್ವಾಮಿಗಳ ಪೂರ್ಣ ಬೆಂಬಲವಿತ್ತು. ಮೈಸೂರು ಸರ್ಕಾರದವರು ಇದನ್ನು ವಿರೋಧಿಸಿದರು. ಇದು ಕಾರ್ಯಗತವಾಗದಂತೆ ತಡೆಯಲು ಅನೇಕ ನಿಷೇಧಾಜ್ಞೆಗಳನ್ನು ಹೊರಡಿಸಿದರು. ಈ ಚಳವಳಿಯು ವಿಶೇಷವಾಗಿ ಟಿ. ನರಸೀಪುರ ತಾಲ್ಲೂಕಿನಲ್ಲಿ ಪ್ರಬಲವಾಗಿ ನಡೆಯಿತು.

ಈ ವೇಳೆಗೆ ಗಾಂಧೀಜಿಯವರು ಆರಂಭಿಸಿದ ಹರಿಜನ ಸೇವಕ ಸಂಘದ ಪ್ರಭಾವ ನಮ್ಮೂರಿನಲ್ಲಿ ಬೆಳೆಯಿತು. ಕಾಂಗ್ರೆಸ್ಸಿನವರು ಮತ್ತು ಇತರರು ಈ ಚಳುವಳಿಗೆ ಬೆಂಬಲ

ಕೊಡುತ್ತಿದ್ದರು. ಅಡ್ವೊಕೇಟ್ ಕೆ. ಶೇಷಾದ್ರಿಯವರು ಹರಿಜನ ಸೇವಕ ಸಂಘದ ಅಧ್ಯಕ್ಷರಾಗಿದ್ದರು. ನಂಜನಗೂಡು ಶ್ರೀಕಂಠೇಶ್ವರನ ದೇವಸ್ಥಾನದಲ್ಲಿ ಹರಿಜನರ ಪ್ರವೇಶಕ್ಕೆ ಅವಕಾಶ ಕೊಡಬೇಕೆಂಬ ಚಳವಳಿ ನಡೆಯಿತು. ಊರಿನ ಜನರು ಬಹಳವಾಗಿ ಪ್ರತಿಭಟಿಸಿ ಚಳವಳಿಕಾರರ ಮೇಲೆ ಬಹಳ ಹಲ್ಲೆ ನಡೆಸಿದರು. ಆದರೂ ಚಳವಳಿಯು ಬಿರುಸಿನಿಂದ ಸಾಗಿತ್ತು. ದೇವಸ್ಥಾನದ ಅಧಿಕಾರಿಗಳಿಗೂ ಚಳವಳಿಗಾರರಿಗೂ ಒಂದು ಒಪ್ಪಂದವಾಗಿ ಚಳವಳಿಯು ಯಶಸ್ಸನ್ನು ಹೊಂದಿ ನಿಲ್ಲಿಸಲ್ಪಟ್ಟಿತು. ಇದರಲ್ಲಿ ನನ್ನ ಸಕ್ರಿಯ ಪಾತ್ರವಿತ್ತು.

ತಗಡೂರಿನ ಆಶ್ರಮದಲ್ಲಿ ಖಾದಿ ಕೈಗಾರಿಕೆಯು ಬೆಳೆಯುತ್ತ ಬಂದಂತೆ ಅದಕ್ಕೆ ಒಂದು ಸರಿಯಾದ ಕೊಳ್ಳುವ ಸಂಸ್ಥೆಯ ಆವಶ್ಯಕತೆ ಇತ್ತು. ಮೈಸೂರು ಸಿಟಿಯಲ್ಲಿ ಅದಕ್ಕಾಗಿ 'ಖದ್ದರ್ ಪರಸ್ಪರ ಸಹಾಯ ಸಂಘ'ವನ್ನು ಸ್ಥಾಪಿಸಿದೆವು. ಈ ಸಂಘಕ್ಕೆ ಬೇಕಾಗುವ ಮೂಲಧನವನ್ನು ಎಂ. ಲಕ್ಷ್ಮೀನಾರಾಯಣರಾವ್, ಎಸ್. ಶ್ರೀರಂಗಾಚಾರ್, ಎಂ. ಎ. ದೊರೆಸ್ವಾಮಿ ಅಯ್ಯಂಗಾರ್ ಮೊದಲಾದ ಅಡ್ವೊಕೇಟರುಗಳೂ ಪಿ. ಗೋಪಾಲ ಕೃಷ್ಣ ಶೆಟ್ಟಿ, ಪಿ. ಎನ್. ಸಂಗಪ್ಪ, ಸಾಹುಕಾರ್ ಬಸುಮಯ್ಯ ಮೊದಲಾದ ವರ್ತಕರೂ ಶೇಖರಿಸಲು ಸಹಾಯ ಮಾಡಿದರು. ಎಂ. ಲಕ್ಷ್ಮೀನಾರಾಯಣರಾವ್ ಈ ಸಂಘದ ಅಧ್ಯಕ್ಷರಾಗಿ ಬಹಳ ಕಾಲ ಇದ್ದರು. ಈ ಸಂಘ ತರಿಸಿದ ಖಾದೀ ಬಟ್ಟೆಗಳನ್ನು ಸಿಟಿ ಮತ್ತು ತಾಲ್ಲೂಕುಗಳಲ್ಲಿ ಮನೆಮನೆ ಬಾಗಿಲಿಗೆ ಹೊತ್ತು ತಿರುಗಿ ಬಟ್ಟೆಯ ಮಾರಾಟವನ್ನು ಮಾಡುವ ಚಳವಳಿ ಆಗಿನ ಕಾಲದಲ್ಲಿ ಅವಶ್ಯವಾಗಿತ್ತು. ಇಷ್ಟು ವರ್ಷಗಳ ಮೇಲೆ ಈ ಕಾರ್ಯದ ಹೊಣೆಯನ್ನು ಹೊತ್ತಿದ್ದ ನಾನು ಆಗ ಯಶಸ್ವಿಯಾಗಿ ವಹಿಸಿದ ಪಾತ್ರವನ್ನು ನೆನೆಸಿಕೊಂಡರೆ ನನಗೆ ಅಮಿತ ಆನಂದವಾಗುತ್ತದೆ. ಈ ಕಾರ್ಯಕ್ಕೆ ತಾಲ್ಲೂಕುಗಳಿಗೆ ಭೇಟಿ ಕೊಟ್ಟಾಗ ನಮಗೆ ಅಮೂಲ್ಯ ಸಹಾಯ ಮಾಡಿದವರು ಹುಣಸೂರಿನಲ್ಲಿ ಎಂ. ಎ. ಶ್ರೀನಿವಾಸ ಅಯ್ಯಂಗಾರ್ ಮತ್ತು ಕೃಷ್ಣಮೂರ್ತಿಗಳು; ಕೃಷ್ಣರಾಜನಗರದಲ್ಲಿ ನಂಜುಂಡಪ್ಪ ಮತ್ತು ಸುಬ್ಬರಾವ್; ಟಿ. ನರಸೀಪುರದಲ್ಲಿ ರಾಮರಾವ್ ಮತ್ತು ಅವರ ಸ್ನೇಹಿತರುಗಳು; ನಂಜನಗೂಡಿನಲ್ಲಿ ನಮ್ಮ ಎಲ್ಲಾ ಚಳವಳಿಗೂ ಭಾಗಸ್ಥರಾಗಿದ್ದವರು ವಿಶ್ವೇಶ್ವರಗೌಡರು ಮತ್ತು ಎಸ್. ನಾರಾಯಣರಾಯರು.

ಈ ಕಾರ್ಯಕ್ರಮಗಳಿಂದ ಮೈಸೂರಿನ ಜನರು ಎಚ್ಚೆತ್ತರು. ರಾಷ್ಟ್ರೀಯ ಭಾವನೆ ಜನರಲ್ಲಿ ಬಹಳಮಟ್ಟಿಗೆ ಮೂಡಿತು. ಹಿಂದೂಸ್ಥಾನದ ನಾನಾ ಭಾಗಗಳಿಂದ ಗಾಂಧೀಜಿಯವರೇ ಮೊದಲಾದ ಅನೇಕ ರಾಷ್ಟ್ರೀಯ ಮುಖಂಡರು ನಮ್ಮ ಊರಿಗೆ ಭೇಟಿ ಕೊಟ್ಟು ಭಾಷಣಗಳ ಮೂಲಕ ಜನರನ್ನು ಎಚ್ಚರಿಸಿದರು. ಈ ವಾತಾವರಣವನ್ನು ಉಪಯೋಗಿಸಿಕೊಂಡು ನಾವು ಸ್ವದೇಶೀ ವಸ್ತುಪ್ರದರ್ಶನವನ್ನು ಆರಂಭಿಸುವ ತೀರ್ಮಾನ ಮಾಡಿದೆವು. ಈ ಕಾರ್ಯದಲ್ಲಿ ಎಲ್ಲ ಜನರ ಸಹಾಯವನ್ನು ಪಡೆಯುವ ಯೋಜನೆ ನಮ್ಮದಾಗಿತ್ತು. ಆದ್ದರಿಂದ ನಿವೃತ್ತ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೋಲೀಸ್

ಎ. ಸುಬ್ರಮಣ್ಯ ಅಯ್ಯರ್ ಅವರನ್ನು ಅಧ್ಯಕ್ಷರನ್ನಾಗಿ ಮಾಡಿ ಒಂದು ಸಮಿತಿ ರಚಿಸಿದೆವು. ನಾನು ಮತ್ತು ಜಿ. ಎ. ಆಚಾರ್ಯ (ಬೆಂಗಾಲ್ ಬಲ್ಬ್) ಇಬ್ಬರೂ ಸಂಚಾಲಕರಾಗಿದ್ದೆವು. ಸಾಹುಕಾರ್ ಬಸಮಯ್ಯನವರ ಹೈಸ್ಕೂಲಿನಲ್ಲಿ ಮೊದಲ ಪ್ರದರ್ಶನ ನಡೆಯಿತು. ಮೈಸೂರು ಅರಮನೆಯವರು ತಮ್ಮ ಸಹಕಾರವನ್ನು ನೀಡಿದರು. ಅರಮನೆಗೆ ಸೇರಿದ ಕರುಹಟ್ಟಿಯಲ್ಲಿ ಮುಂದಿನ ಪ್ರದರ್ಶನಗಳೆಲ್ಲ ನಡೆಯಲು ಅವಕಾಶ ಮಾಡಿಕೊಟ್ಟರು. ಮೈಸೂರು ಮಹಾರಾಜರ ವರ್ಷಂಪ್ರತಿ ನಡೆಯುತ್ತಿದ್ದ ವೈಭವದ ವರ್ಧಂತಿಯ ಒಂದು ಅಂಗವಾಗಿ ಇವನ್ನು ಪರಿಗಣಿಸಿದರು. ವಸ್ತುಪ್ರದರ್ಶನಗಳ ಆರಂಭೋತ್ಸವಗಳನ್ನು ಸೇಲಂ ವಿಜಯರಾಘವಾಚಾರ್ಯರೇ ಮೊದಲಾದವರು ನಡೆಸಿ ಕೊಡುತ್ತಿದ್ದರು. ಈ ಎಲ್ಲಾ ಕಾರ್ಯಕ್ರಮಗಳು ನಮ್ಮೂರಿನಲ್ಲಿ ನಡೆದು ಜನರ ರಾಷ್ಟ್ರೀಯ ಪ್ರೇಮ ಬೆಳೆಯುವ ಹೊತ್ತಿಗೆ ಗಾಂಧೀಜಿಯವರು 1930ರಲ್ಲಿ ದಾಂಡೀ ಯಾತ್ರೆಯ ಮೂಲಕ ದೇಶದ ಸ್ವಾತಂತ್ರ್ಯ ಆಂದೋಲವನನ್ನು ಆರಂಭಿಸಿದರು. ಮೈಸೂರಿನವರೂ ನಾನಾ ಬಗೆಯಿಂದ ಈ ಕಾರ್ಯದಲ್ಲಿ ತಮ್ಮ ಪಾತ್ರವನ್ನು ಯಶಸಿ ಯಾಗಿ ವಹಿಸಿದರು.

ಮೈಸೂರಿನಲ್ಲಿ 1937–38ಕ್ಕೆ ಮೊದಲು ಸ್ವಾತಂತ್ರ್ಯ ಆಂದೋಲನದ ನೇರವಾದ ಕಾರ್ಯಕ್ರಮ ಇರಲಿಲ್ಲ. ಇಲ್ಲಿನ ಅನೇಕ ಯುವಕರು ಸ್ವಯಂಸೇವಕರಾಗಿ ಹೊರಗಣ ಕರ್ನಾಟಕಕ್ಕೆ ಹೋಗಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದರು. ಈ ಸಂದರ್ಭದಲ್ಲಿ ಟಿ. ಎಸ್. ಸುಬ್ಬಣ್ಣ, ಎನ್. ಡಿ. ಶ್ರೀರಂಗಾಚಾರ್, ಎಲ್. ವಿ. ರಾಜಗೋಪಾಲ್ ಮೊದಲಾದವರನ್ನು ಸ್ಮರಿಸಬಹುದು. ಅಗರಂ ರಂಗಯ್ಯನವರ ನೇತೃತ್ವದಲ್ಲಿ ಕರ್ನಾಟಕದ ಚಳವಳಿಗೆ ಸಹಾಯ ಮಾಡುವುದಕ್ಕಾಗಿ ಒಂದು ಸಮಿತಿ ಇದ್ದಿತು. ಈ ಸಮಿತಿಯ ಸಕ್ರಿಯ ಕಾರ್ಯಕರ್ತರಲ್ಲಿ ನಾನೊಬ್ಬನಾಗಿದ್ದೆ. 1932ರ ಅನಂತರ ಕರ್ನಾಟಕದಲ್ಲೂ ಬಹಳ ದೊಡ್ಡ ಆಂದೋಲನವು ನಡೆಯಿತು. ಇದಕ್ಕೆ ಜನ, ಧನ ಮತ್ತು ಮಾರ್ಗ ದರ್ಶನ ನೀಡುವ ಹೊಣೆ ಮೈಸೂರು ದೇಶದ ಜನರ ಮೇಲೆ ಬಿದ್ದಿತು. ಇದಕ್ಕೋಸ್ಕರ ಎಸ್. ವೆಂಕಟಪತಯ್ಯನವರು, ನಿಟ್ಟೂರು ಶ್ರೀನಿವಾಸರಾಯರು, ಎಸ್. ಕೆ. ವೆಂಕಟ ರಂಗಯ್ಯಂಗಾರ್ಯರೇ ಮೊದಲಾದವರನ್ನೊಳಗೊಂಡ ಒಂದು ಗುಪ್ತ ಸಮಿತಿಯ ರಚನೆ ಆಯಿತು. ಆ ಸಮಿತಿಯ ಆದೇಶದ ಪ್ರಕಾರ ನಾನು ಕಾರವಾರ ಜಿಲ್ಲೆಯಲ್ಲಿ ಕೆಲಸ ಮಾಡಲು ಮೈಸೂರಿನಿಂದ ಹೊರಡಬೇಕಾಯಿತು.

ಗಾಂಧೀ–ಇರ್ವಿನ್ ಒಪ್ಪಂದವಾದಮೇಲೆ ನೆಹರೂ ಅವರು ಒಂದು ದಿನ ಮೈಸೂರಿಗೆ ಭೇಟಿಕೊಡಲು ಒಪ್ಪಿರಲು, ಈ ಭೇಟಿಯ ಕಾಲಕ್ಕೆ ಅರಮನೆಯ ಅತಿಥಿಯಾಗಿರುವಂತೆ ಮಹಾರಾಜರು ನೆಹರೂರಿಗೆ ಪತ್ರ ಬರೆದರು. ಸ್ಥಳೀಯ ಕಾಂಗ್ರೆಸ್ ಕಮಿಟಿಯನ್ನು ಸಂಪರ್ಕಿಸಲು ನೆಹರೂರಿಂದ ಉತ್ತರ ಬಂತು. ಅರಮನೆ ಅಧಿಕಾರಿಗಳು ಕಾಂಗ್ರೆಸ್ ಸಂಚಾಲಕನಾಗಿದ್ದ ನನ್ನಲ್ಲಿ ಬಂದು ಕಾರ್ಯಕ್ರಮ ಸಿದ್ಧಪಡಿಸಿಕೊಂಡು ಹೋದರು.

ನೆಹರೂ ಮೈಸೂರಲ್ಲಿ ರಾಜಾತಿಥಿ ಆಗಿದ್ದಾಗ ಅಗ ನಡೆಯುತ್ತಿದ್ದ ಪ್ರಜಾಪ್ರತಿನಿಧಿ ಸಭೆಗೂ ದಿವಾನ್ ಮಿರ್ಜಾ ನೆಹರೂರನ್ನು ಆಮಂತ್ರಿಸಿದರು. ನನ್ನನ್ನು ನೆಹರೂ ತಮ್ಮ ಜೊತೆ ಸಭೆಗೆ ಕರೆದೊಯ್ದಿರಲು, ಅಲ್ಲಿ ಗದ್ದಿಗೆಯ ಮೇಲೆ ಒಂದೇ ಕುರ್ಚಿ ಇತ್ತು. ನೆಹರೂ ನನ್ನನ್ನು ಆ ಕುರ್ಚಿಯ ಮೇಲೆ ಕುಳ್ಳಿರಿಸಿ ತಾವು ನಿಂತರು. ಅಧಿಕಾರಿಗಳ ಪರದಾಟ ಹೇಳತೀರದು. ಬೇರೆ ಆಸನ ತಂದು ನೆಹರೂರನ್ನು ಕೂರಿಸುವ ತನಕ ದಿವಾನರು ನಿಂತೇ ಇರಬೇಕಾಯಿತು! ಕಾಂಗ್ರೆಸ್ ನಾಯಕರು ತಾವು ಸಂಚಾರಕ್ಕೆ ಹೋದೆಡೆಯಲ್ಲೆಲ್ಲ ಸ್ಥಳೀಯ ಕಾಂಗ್ರೆಸ್ಸಿನ ಮತ್ತು ಕಾರ್ಯಕರ್ತರ ಪ್ರತಿಷ್ಠೆ, ಪ್ರಭಾವ ಹೆಚ್ಚಿಸಲು ಸಹಾಯಕರಾಗುತ್ತಿದ್ದರು.

ನಾನು ಶಿರ್ಸಿ, ಸಿದ್ದಾಪುರ, ಅಂಕೋಲಾ ತಾಲ್ಲೂಕುಗಳಲ್ಲಿ ಗುಪ್ತವಾಗಿ ಕೆಲಸ ಮಾಡಲು ಹೋದೆನು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕರ್ನಾಟಕವು ಧೀರಪಾತ್ರ ವಹಿಸಿತ್ತು. ಅಂಕೋಲಾ ಜನರ ಸ್ವಾರ್ಥತ್ಯಾಗದಿಂದ ಕರ್ನಾಟಕದ ಕೀರ್ತಿ ಉನ್ನತ ಶಿಖರಕ್ಕೇರಿತು. ಸತ್ಯಾಗ್ರಹದಲ್ಲಿ ಕರನಿರಾಕರಣೆ ಒಂದು ಹರಿತವಾದ ಅಸ್ತ್ರ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಜನತೆಯ ಪ್ರಾಣ ಕಳೆದುಕೊಳ್ಳಬಹುದು. ಆದರೆ ಆಸ್ತಿ ಕಳೆದು ಕೊಳ್ಳಲು ತಯಾರಿರುವುದಿಲ್ಲ. ಆಸ್ತಿ ಕಳೆದುಕೊಳ್ಳುವುದು ತ್ಯಾಗದ ಪರಮಾವಧಿ. ಇಂತಹ ಕಾರ್ಯವನ್ನು ಮೇಲೆ ಹೇಳಿದ ತಾಲ್ಲೂಕಿನ ಜನರು ಮಾಡಿ ತೋರಿಸಿದರು. ಕರ್ನಾಟಕದ ಧುರೀಣರಾದ ಗಂಗಾಧರರಾವ್ ದೇಶಪಾಂಡೆ, ಆರ್. ಆರ್. ದಿವಾಕರ್, ಹಣಮಂತರಾವ್ ಕೌಜಲಗಿ, ಡಿ. ಪಿ. ಕರಮರಕರ್, ಕೆ. ಎ. ವೆಂಕಟರಾಮಯ್ಯ, ಡಾ|| ಹರ್ಡೀಕರ್ ಮೊದಲಾದವರ ಜತೆ ಸ್ಥಳೀಯ ಪ್ರಭಾವಶಾಲಿಗಳಾದ ದೊಡ್ಡ ಮನೆ ನಾಗೇಶ ಹೆಗ್ಗಡೆ, ಕೆಳಗಿನಮನೆ ನಾಗೇಶ ಹೆಗ್ಗಡೆ, ಕೊಳಗಿ ರಾಮಭಟ್ಟರು, ಶಂಕರರಾವ್ ಗುಲವಾಡಿ, ಅನಂತ ಮಹಾಲೆ, ಬಾಸ್ಗೋಡು ರಾಮನಾಯಕ, ಹಂಪನ ಕಟ್ಟೆ ರಾಮ ನಾಯಕ ಮೊದಲಾದವರು ತಾಲ್ಲೂಕಿನ ಹಳ್ಳಿಹಳ್ಳಿಗಳನ್ನು ಭೇಟಿಮಾಡಿ ಚಳವಳಿಗೆ ಜನರ ಪೂರ್ಣ ಸಹಕಾರವನ್ನು ದೊರಕಿಸಿಕೊಂಡಿದ್ದರು. ಅಂಕೋಲಾದಲ್ಲಿ ಉಪ್ಪಿನ ಸತ್ಯಾಗ್ರಹ ಭರದಿಂದ ಸಾಗಿತು. ಶಿರ್ಸಿ ಮತ್ತು ಸಿದ್ದಾಪುರಗಳಲ್ಲಿ ಜಂಗಲ್ ಸತ್ಯಾಗ್ರಹ ಮತ್ತು ಹುಲ್ಲುಬನ್ನಿ ಸತ್ಯಾಗ್ರಹ ಸಾಗಿತು. ಈ ಎಲ್ಲ ಕಡೆಗಳಲ್ಲೂ ಪ್ರತಿಬಂಧಕಾಜ್ಞೆಗಳನ್ನು ಮುರಿಯುವುದು ದೈನಂದಿನ ಕಾರ್ಯಕ್ರಮವಾಗಿತ್ತು. ಹೀಗೆ ಕಾಯಿದೆಭಂಗ ಮಾಡಿದವರ ಮೇಲೆ ಸರ್ಕಾರದ ದಬ್ಬಾಳಿಕೆ ಸಾಕಷ್ಟು ಇತ್ತು. ಜನರ ಈ ಅಮಿತ ಉತ್ಸಾಹವನ್ನು ಕಂಡು ಇಲ್ಲಿ ಕರನಿರಾಕರಣೆಯ ಸತ್ಯಾಗ್ರಹಕ್ಕೆ ಯಶಸ್ಸು ಸಿಗುವುದೆಂದು ನಂಬಿ ಕರ್ನಾಟಕ ಕಾಂಗ್ರೆಸ್ ಈ ಸತ್ಯಾಗ್ರಹವನ್ನು ಇಲ್ಲಿ ಆರಂಭಿಸಿತು. ಈ ಕಾರ್ಯದಲ್ಲಿ ತಾಲ್ಲೂಕುಗಳ ಜನರು ಬಹಳ ಹುರುಪಿನಿಂದ ಭಾಗವಹಿಸಿದರು. ಅನೇಕ ಕಾರ್ಯಕರ್ತರು ಬಂಧಿಸಲ್ಪಟ್ಟರು. ನಾನು ಆ ತಾಲ್ಲೂಕು ಗಳಲ್ಲಿ ಕೆಲಸ ಮಾಡಲು ಹೋದಾಗ ಈ ಎಲ್ಲ ಕಾರ್ಯಕ್ರಮಗಳು ಬಿರುಸಿನಿಂದ

ಸಾಗಿದ್ದವು. ಕರಪತ್ರಗಳನ್ನು ಬರೆದು ಅಚ್ಚುಹಾಕಿಸುವ ವ್ಯವಸ್ಥೆ ನೋಡಿಕೊಳ್ಳುವುದು ನನ್ನ ಮುಖ್ಯ ಕೆಲಸವಾಗಿತ್ತು. ಈ ಕಾರ್ಯವನ್ನು ನಾನು ಸಾಗರ, ಸೊರಬ ತಾಲ್ಲೂಕುಗಳ ಗಡಿಹಳ್ಳಿಗಳಿಂದ ನಿರ್ವಹಿಸುತ್ತಿದ್ದೆ. ನಮ್ಮ ಕ್ಯಾಂಪುಗಳು ಬೇರೂರಿ ಒಂದು ಜಾಗದಲ್ಲಿ ಇರಲು ಸಾಧ್ಯವಿರಲಿಲ್ಲ. ಇದಕ್ಕೆ ಮುಖ್ಯ ಕಾರಣ ಬೊಂಬಾಯಿ ಮತ್ತು ಮೈಸೂರಿನ ಪೋಲೀಸರು ನಮಗಾಗಿ ಹಳ್ಳಿಹಳ್ಳಿಗಳನ್ನು ಶೋಧಿಸುತ್ತಿದ್ದರು. ಈ ಗಡಿನಾಡಿನ ಹಳ್ಳಿಯ ಜನರು ನಮಗೆ ವಿಶಿಷ್ಟರೀತಿಯ ಸಹಕಾರ ವನ್ನು ಕೊಡುತ್ತಿದ್ದರು. ನನ್ನ ಕೆಲಸಕ್ಕೆ ಸಹಾಯಕರಾಗಿ ಬಾಗಿಲುಕೋಟೆಯ ದೀಕ್ಷಿತರು, ವಿಜಾಪುರದ ದೇಶಪಾಂಡೆ ಮತ್ತು ಸಿದ್ದಾಪುರದ ಜಟ್ಟಿಂಗ ಇದ್ದರು. ಕಂತನಹಳ್ಳಿ, ಮುಟುಕುಪ್ಪೆ, ಹರೀಶೆ, ಕೆರೆಮನೆ, ಮಂಗಳೂರು, ತಡಗಳಲೆ, ಕೆಳದಿ, ಕಾಂದಲೆ, ಪರುವಗೋಡು ಮುಂತಾದ ಸ್ಥಳಗಳಲ್ಲಿ ನಮ್ಮ ಕ್ಯಾಂಪ್ ಇತ್ತು. ಇದೆಲ್ಲಾ ಗುಡ್ಡಗಾಡು ಪ್ರದೇಶವಾದುದರಿಂದ ನಮಗೆ ಸೂಚನೆ ಇಲ್ಲದೆ ಪೋಲೀಸರು ಬರಲು ಸಾಧ್ಯವಿರಲಿಲ್ಲ. ನಮಗೆ ಈ ಸ್ಥಳಗಳಲ್ಲಿ ಪೂರ್ಣ ಸಹಕಾರ ಕೊಟ್ಟವರೆಂದರೆ ಹೊಸಬಾಳೆ ಪುಟ್ಟಪ್ಪ, ಮಂಗಳೂರು ಸಣ್ಣಯ್ಯ, ಕೆರೆಮನೆ ಲಕ್ಷ್ಮಮ್ಮ, ತಡಗಳಲೆ ವೆಂಕಪ್ಪಯ್ಯ, ಪಡುವ ಗೋಡು ರುದ್ರಪ್ಪಗೌಡ, ಕಾಂದಲೆ ಪುಟ್ಟಪ್ಪ, ಕೆಳದಿಯ ರಾಮಭಟ್ಟ, ನಾಡಿಗ ಲಕ್ಷ್ಮೀನಾರಾಣಪ್ಪ ಮೊದಲಾದವರನ್ನು ಸ್ಮರಿಸಬಹುದು. ಇಲ್ಲಿ ನಡೆದ ಚಳವಳಿಗಳಲ್ಲಿ ಹೆಂಗಸರಿಗೆ ಮಾರ್ಗದರ್ಶಕರಾಗಿರಲು ನಮ್ಮೊಡನೆ ಕಾನಕಾನಹಳ್ಳಿ ಕಾವೇರಮ್ಮ, ಬೆಂಗಳೂರಿನ ಕಮಲಮ್ಮ ಚಂದೂರ್, ಮೈಸೂರಿನ ಸುಬ್ಬಮ್ಮ ಜೋಯಿಸ್, ಬಂದಿದ್ದರು. ನಡೆದ ಚಳವಳಿಗಳ ನಾನಾ ಸ್ವರೂಪವನ್ನು, ರೀತಿನೀತಿಗಳನ್ನು ವರ್ಣಿ ಸುವುದು ನನ್ನ ಉದ್ದೇಶವಲ್ಲ. ಇಲ್ಲಿ ನಡೆದ ತಿಗಣೆ ಉಪವಾಸ ಸತ್ಯಾಗ್ರಹ ಉಲ್ಲೇಖನೀಯ (ಇದರ ವರ್ಣನೆ ಸುಬ್ಬಮ್ಮ ಜೋಯಿಸ್ ನೀಡಿದ್ದಾರೆ). ತಿಗಣೆಯ ಗದಿಗೆಪ್ಪಗೌಡರು ಉಪವಾಸದನಂತರ ಸತ್ಯಾಗ್ರಹಿಗಳೊಡನೆ ರಾಜಿಯಾದರು. ಆದರೂ ಪೋಲೀಸಿನವರು ಸತ್ಯಾಗ್ರಹಿಗಳನ್ನು ಶಿರ್ಸಿ ಲಾಕಪ್ಪಿಗೆ ಒಯ್ದಿಟ್ಟರು. ಆ ಲಾಕಪ್ಪಿನಲ್ಲಿ ಇವರಿದ್ದ ಸಮಯದಲ್ಲಿ ಇಂಗ್ಲೆಂಡ್ ಪಾರ್ಲಿಮೆಂಟ್ ಮೆಂಬರಾದ ಎಲ್. ಡಬ್ಲ್ಯು. ಪ್ಯಾಟರ್ಸ್ ಇವರನ್ನು ಭೇಟಿಯಾಗಿ ಇಂಡಿಯಾ ಸರ್ಕಾರದ ದೌರ್ಜನ್ಯದ ಸ್ವರೂಪವನ್ನು ಕೇಳಿ ತಿಳಿದುಕೊಂಡರು. ಇದಾದ ಕೆಲವು ದಿನಗಳಾದ ಮೇಲೆ ಅಂಕೋಲಾ ತಾಲ್ಲೂಕಿನ ಮುಖ್ಯಕಾರ್ಯಕರ್ತರಾಗಿದ್ದ ಬೆಂಗಳೂರಿನ ವಿ. ಎಸ್. ನಾರಾಯಣರಾಯರ ಬಂಧನ ಆಯಿತು. ಶಿರ್ಸಿ, ಸಿದ್ದಾಪುರ ತಾಲ್ಲೂಕಿನಲ್ಲಿ ಕೆಲಸಮಾಡುತ್ತಿದ್ದ ನಾನು ಅಂಕೋಲೆ ತಾಲ್ಲೂಕಿಗೆ ಹೋಗಬೇಕಾಯಿತು.

ಮೇಲೆ ಹೇಳಿದ ರೀತಿಯಲ್ಲಿ ಅಂಕೋಲಾ ತಾಲ್ಲೂಕಿನಲ್ಲಿಯೂ ಕಾನೂನುಭಂಗ ಚಳವಳಿ ಉಗ್ರರೂಪದಲ್ಲಿ ನಡೆಯುತ್ತಿತ್ತು. ಜಂಗಲ್ ಸತ್ಯಾಗ್ರಹ, ಕರನಿರಾಕರಣೆ, ಮೆರವಣಿಗೆಗಳು, ಪ್ರತಿಭಟನಾ ಸಭೆಗಳ ಜತೆಗೆ ಸಮುದ್ರತೀರದಲ್ಲಿ ಸುಂಕ ಕೊಡದೆ

ಉಪ್ಪು ಮಾಡಿ ತರುವ ಚಳವಳಿಯೂ ನಡೆದಿತ್ತು. ಅಂಕೋಲಾ ಘಟ್ಟದ ಕೆಳಗಿನ ಸೀಮೆ, ಕರಾವಳಿಯಲ್ಲಿರುವ ತಾಲ್ಲೂಕು. ಸುತ್ತಮುತ್ತಲಿನ ಪ್ರದೇಶವೆಲ್ಲ ಬೊಂಬಾಯಿಗೆ ಸೇರಿತ್ತು. ಆದ್ದರಿಂದ ಗುಪ್ತವಾಗಿ ಕೆಲಸ ಮಾಡುವ ನಾವು ಬ್ರಿಟಿಷ್ ಇಂಡಿಯಾ ರಾಜ್ಯದಲ್ಲೇ ಅಡಗಿಕೊಳ್ಳಬೇಕಾದ್ದು ಅನಿವಾರ್ಯ. ನಮ್ಮ ಕ್ಯಾಂಪುಗಳನ್ನು ನಾವು ಕಾಡಿನಲ್ಲಿ ನಡೆಸುತ್ತಿದ್ದೆವು. ನಾವು ನಡೆಸುತ್ತಿದ್ದ ಕ್ಯಾಂಪುಗಳ ತಪಾಸಣೆಗೋಸ್ಕರ ಬೊಂಬಾಯಿಯ ಪೋಲೀಸರು ಅರಣ್ಯ ಶಾಖೆಯ ಸಿಬ್ಬಂದಿಯೊಡನೆ ಕಾಡಿನಲ್ಲಿ ಅಡ್ಡಾಡುತ್ತಿದ್ದರು. ಎಷ್ಟೋ ಬಾರಿ ಮರದ ಮೇಲಿನ ಅಟ್ಟಣೆಗಳಲ್ಲಿದ್ದು ಕೆಲಸ ಸಾಧಿಸಬೇಕಾಗಿತ್ತು. ನಮ್ಮ ಕರಪತ್ರ ಯಂತ್ರಗಳನ್ನು ಕೊರಕಲುಗಳಲ್ಲಿದ್ದ (ಸಮುದ್ರದ) ದೋಣಿಗಳಲ್ಲಿ ಅಡಗಿಸಿಟ್ಟು ಕಾರ್ಯ ಸಾಗಿಸುತ್ತಿದ್ದೆವು. ಹೀಗೆ ಕಾಡಿನ ಮಧ್ಯೆ ಇದ್ದುಕೊಂಡು ತಾಲ್ಲೂಕಿನ ಎಲ್ಲ ಕಡೆ ನಡೆಯಬೇಕಾದ ಚಳವಳಿಯನ್ನು ನಿರ್ದೇಶಿಸುವುದಕ್ಕೆ ಮತ್ತು ಅದರ ಸ್ವರೂಪವನ್ನು ಬೇರೆ ಜನರಿಗೆ ತಿಳಿಯಪಡಿಸಲು ಒಂದು ವ್ಯವಸ್ಥೆ ಅವಶ್ಯವಿತ್ತು. ಕಾಡಿನಿಂದ ಸೌದೆ ಹೊತ್ತು ಮಾರುವ ಹೆಂಗಸರು, ದನಕಾಯುವ ಮಕ್ಕಳು ನಮಗೆ ಸುದ್ದಿ ತರುವ ಮತ್ತು ನಮ್ಮ ಕಾಗದಪತ್ರಗಳನ್ನು ತೆಗೆದುಕೊಂಡು ಹೋಗುವ ಅಂಚೆ ಸಿಬ್ಬಂದಿಗಳು. ನಮ್ಮ ಕಾಗದಪತ್ರಗಳು ಅಕಸ್ಮಾತ್ ಪೋಲೀಸಿನವರ ಕೈಗೆ ಸಿಕ್ಕದೆ ಪತ್ರ ಹೊರಟ ಊರು ಮತ್ತು ತಲಪುವ ಸ್ಥಳ ಗೊತ್ತಾಗಬಾರದೆಂದು ನಮ್ಮ ಎಲ್ಲ ಕ್ಯಾಂಪುಗಳಿಗೆ ಕ್ರಮಸಂಖ್ಯೆಗಳನ್ನು ಕೊಟ್ಟಿದ್ದೆವು. ಯಾರಿಂದ ಬಂತು, ಯಾರಿಗೆ ಮುಟ್ಟಿಸಬೇಕು ಎಂಬುದು ತಿಳಿಯದಿರಲು ಅಂಚೆಯನ್ನು ಮರದ ಬುಡದಲ್ಲೋ, ಪೊದೆಯಲ್ಲೋ, ಭೂಮಿಯಲ್ಲಿ ಹುಗಿದೋ ಇಟ್ಟುಬಿಡುತ್ತಿದ್ದೆವು. ತೆಗೆದುಕೊಂಡು ಹೋಗುವವರು ಇವುಗಳನ್ನು ತೆಗೆದುಕೊಂಡು ನಿರ್ದಿಷ್ಟ ಸ್ಥಳದಲ್ಲಿ ಹೋಗಿ ಇವುಗಳನ್ನು ಇಟ್ಟು ಅಲ್ಲಿದ್ದ ಕಾಗದಗಳನ್ನು ತಂದು ಹಿಂದಿನ ನಿರ್ದೇಶಿತ ಸ್ಥಳದಲ್ಲಿ ಇಟ್ಟುಹೋಗುವ ಪದ್ಧತಿ. ಹೀಗೆ ಶಿರ್ಸಿ, ಸಿದ್ದಾಪುರ, ಅಂಕೋಲೆಗಳಲ್ಲಿ ನಡೆಯುತ್ತಿದ್ದ ಚಳವಳಿಯ ವರದಿಯನ್ನು ಎಲ್ಲ ಕಡೆಯಿಂದ ಸಂಗ್ರಹಿಸಿ ಕಳುಹಿಸುವ ಕಾರ್ಯ ಶಿವಮೊಗ್ಗ ಕ್ಯಾಂಪಿನಲ್ಲಿ ಇದ್ದ ಸಿ. ಎಸ್. ಮಣಿಯಮ್, ಮಂಜಪ್ಪಗೌಡ, ಮಾದಪ್ಪ, ಡಾ|| ದತ್ತಾತ್ರೇಯ ಇವರುಗಳ ಜವಾಬ್ದಾರಿಯಾಗಿತ್ತು.

ಚಳವಳಿ ಮುಂದುವರಿದ ಹಾಗೆ ಚಳವಳಿಯಲ್ಲಿ ಭಾಗವಹಿಸಿದ ಚಿಕ್ಕಪುಟ್ಟ ಮಕ್ಕಳು ಪಾಲಕರಿಲ್ಲದೇ ಸಂಕಟದಲ್ಲಿರುತ್ತಿದ್ದರು. ಆ ಮಕ್ಕಳ ಪಾಲನೆಗಾಗಿ ಒಂದು ಬಾಲಕಾಶ್ರಮವನ್ನು ಶಿವಮೊಗ್ಗದಲ್ಲಿ ತೆರೆಯಲಾಗಿತ್ತು. ಇಲ್ಲಿನ ಮೇಲ್ವಿಚಾರಣೆಯನ್ನು ಶಿವಮೊಗ್ಗದ ನಾಗರಿಕರು ನೋಡಿಕೊಳ್ಳುತ್ತಿದ್ದರು. ಈ ಆಶ್ರಮದ ದಿನಚರಿ, ನಡೆಯಬೇಕಾದ ನೇರ ಕೆಲಸಗಳನ್ನು ಗೌರಮ್ಮ ವೆಂಕಟರಾಮಯ್ಯ, ಸುಬ್ಬಮ್ಮ ಜೋಯಿಸ್, ಕಾವೇರಮ್ಮ ಮತ್ತು ಎಸ್. ವಿ. ಮಾತಂಡ್ ನೋಡಿಕೊಳ್ಳುತ್ತಿದ್ದರು. ಹಳ್ಳಿಗಳಲ್ಲಿ ಉಳಿದಿದ್ದ ವಯಸ್ಸಾದವರಿಗೆ, ಅಂಗವಿಕಲರಿಗೆ, ಖಾಯಿಲೆಯವರಿಗೆ, ಬೇಕಾದ ಊಟದ

ಪದಾರ್ಥಗಳನ್ನು ಆಗಾಗ್ಗೆ ಸ್ವಯಂಸೇವಕರು ಮುಟ್ಟಿಸುತ್ತಿದ್ದರು. ಹೀಗೆ ಒಂದು ವ್ಯವಸ್ಥಿತ ರೀತಿಯಲ್ಲಿ ಹುರುಪಿನಿಂದ ಸ್ವಾತಂತ್ರ್ಯಸಂಗ್ರಾಮವು ಇಲ್ಲಿ ನಡೆಯುತ್ತಿತ್ತು.

ಸರಕಾರವು ಚಿರ-ಸ್ಥಿರಸ್ವತ್ತುಗಳನ್ನು ಸ್ವಾಧೀನಪಡೆದುಕೊಂಡು ಸತ್ಯಾಗ್ರಹಿಗಳ ಮಾಲನ್ನು ಹರಾಜುಮಾಡಿ ಮಾರುವ ಪದ್ಧತಿ ಇತ್ತು. ಇದನ್ನು ಎದುರಿಸಲು ಉಪವಾಸ ಸತ್ಯಾಗ್ರಹ ಮಾಡಿದುದನ್ನು ಹಿಂದೆಯೇ ತಿಳಿಸಿದ್ದೇನೆ. ತೋಟದಲ್ಲಿದ್ದ ಅಡಿಕೆಯನ್ನು ಶಿರ್ಸಿ ಪೇಟೆಯಲ್ಲಿ ಮಾರಿ ಸರಕಾರ ಹಣ ಪಡೆಯುವ ಪ್ರಯತ್ನ ಮಾಡಿತ್ತು. ಇದರ ಬಗ್ಗೆ ಶಿರ್ಸಿಯ ಜನ ನಡೆಸಿದ ತೀವ್ರಸ್ವರೂಪದ ಚಳವಳಿಯಿಂದ ಶಿರ್ಸಿಯ ವರ್ತಕರು ಮಾಲನ್ನು ಕೊಳ್ಳಲು ನಿರಾಕರಿಸಿದರು. ಬ್ಯಾಡಗಿಯಿಂದ ದಳ್ಳಾಳಿಗಳು ಮಾಲನ್ನು ಕೊಳ್ಳಲು ಮುಂದೆ ಬಂದರು. ಇದರ ಬಗ್ಗೆ ಬ್ಯಾಡಗಿಯ ದಳ್ಳಾಳಿ ವರ್ತಕರ ಅಂಗಡಿಗಳ ಮುಂದೆ ಸ್ವಯಂಸೇವಕರು ಪಿಕೆಟಿಂಗ್ ನಡೆಸಿದರು. ಬೊಂಬಾಯಿಯಲ್ಲಿ ಅಲ್ಲಿಯ ಅಡಿಕೆ ವರ್ತಕರಲ್ಲಿ ಈ ವಿಷಯವನ್ನು ತಿಳಿಸಲು ಅಲ್ಲಿಯ ದಳ್ಳಾಳಿಗಳು ಸತ್ಯಾಗ್ರಹಿಗಳ ಅಡಿಕೆಯನ್ನು ನಾವು ಕೊಳ್ಳುವುದಿಲ್ಲವೆಂದು ಘೋಷಿಸಿದರು. ಇದರಿಂದಾಗಿ ಬ್ಯಾಡಗಿಯ ಅಡಿಕೆ ಮಾರ್ಕೆಟ್ ಸ್ತಬ್ಧವಾಯಿತು.

ಸರ್ಕಾರದವರು ಇಂಥ ಸತ್ಯಾಗ್ರಹಿಗಳ ಮನೆಗಳನ್ನು ವಶಪಡಿಸಿಕೊಂಡು ಬೀಗ ಹಾಕುತ್ತಿದ್ದರು. ಸ್ತ್ರೀಸತ್ಯಾಗ್ರಹಿಗಳು ಬೀಗವನ್ನು ಒಡೆದು ಒಳಗೆ ಹೋಗುತ್ತಿದ್ದರು. ಈ ಸಂದರ್ಭದಲ್ಲಿಯೂ ಪೋಲೀಸರ ದಬ್ಬಾಳಿಕೆ ಸತ್ಯಾಗ್ರಹಿಗಳ ಮೇಲೆ ಇರುತ್ತಿತ್ತು. ಬೊಮ್ಮಯ್ಯ ನಾಯಕರ ಮನೆಗೆ ಸರಕಾರದವರು ಬೀಗಮುದ್ರೆ ಹಾಕಿದ್ದರು. ಮಾಣಿದೇವಿಯ ನೇತೃತ್ವದಲ್ಲಿ ಸ್ತ್ರೀಯರು ಬೀಗ ಒಡೆದರು. ಪೋಲೀಸರು ಎಲ್ಲರನ್ನೂ ಥಳಿಸಿ ಇವರು ಒಳಗೆ ಹೋಗದಂತೆ ಅಡ್ಡಿ ಮಾಡಿದರು. ಆದರೂ ಮಾಣಿದೇವಿ ಒಳಕ್ಕೆ ನುಗ್ಗಿದಳು. ಪೋಲೀಸರು ಅವಳ ಕೂದಲನ್ನು ಹಿಡಿದು ಜಗ್ಗಿದರು ; ನೆಲಕ್ಕೆ ಕೆಡವಿದರು ; ಬೂಟು ಕಾಲಿನಿಂದ ಒದ್ದರು. ಅವಳಿಗೆ ಪ್ರಜ್ಞೆ ತಪ್ಪಿದಾಗ ಪೋಲೀಸರು ಇವಳು ಸತ್ತಿರಬಹುದೆಂದು ಭಾವಿಸಿ ಪರಾರಿಯಾದರು. ಜತೆ-ಸತ್ಯಾಗ್ರಹಿಗಳಾದ ಜಂಭುಗೌಡ, ಪರಮೇಶ್ವರಿ, ಸಾಕಮ್ಮ ಮುಂತಾದವರು ಮನೆಗೆ ಕರೆತಂದು ಉಪಚರಿಸಿದರು. ಕೆಲ ದಿನಗಳ ಬಳಿಕ ಮಾಣಿದೇವಿ ಸೆಟ್ಟಗಾದಳು. ಅದೇ ಮನೆಯ ಬೀಗಮುದ್ರೆ ಮುರಿದು ಒಳಗೆ ಹೋಗಲು ಪ್ರಯತ್ನಿಸಿದಳು. ಪೋಲೀಸರು ಬಂಧಿಸಿ ಜೈಲಿಗೆ ಕಳುಹಿಸಿದರು. ಅಂಕೋಲೆಯ ನಾಡವರುಗಳಲ್ಲಿ ಹುದುಗಿದ್ದ ಧೈರ್ಯ, ಸ್ಥೈರ್ಯ, ರಾಷ್ಟ್ರೀಯ ಪ್ರೇಮಕ್ಕೆ ಇದು ಒಂದು ಉದಾಹರಣೆ.

ಒಮ್ಮೆ ಮುಂಬೈ ಗವರ್ನರು ಕಾರವಾರಕ್ಕೆ ಆಗಮಿಸಿದರು. ಸತ್ಯಾಗ್ರಹಿಗಳು ಕಪ್ಪು ಬಾವುಟಗಳನ್ನು ಹಿಡಿಯಬೇಕೆಂಬ ಆದೇಶದಂತೆ ಒಂದು ಗುಂಪಾಗಿ ಹೊರಟರು. ದಾರಿಯಲ್ಲಿ ಪೋಲೀಸರು ಇವರನ್ನೆಲ್ಲಾ ಬಂಧಿಸಿದರು. ಆದರೆ ಆ ಗುಂಪಿನಲ್ಲಿದ್ದ ಶಿರೂರ್ ಎಂಬ ಸ್ವಯಂಸೇವಕನು ಮತ್ತು ಬೊಮ್ಮಿ ಎಂಬುವಳು ಪೋಲೀಸರ ಕೈಗೆ ಸಿಕ್ಕದ

ಗುಡ್ಡ ಸೇರಿದರು. ಅಡ್ಡದಾರಿಯಲ್ಲಿ ಅಡವಿಯ ಮುಖಾಂತರ ಕಾರವಾರ ತಲುಪಿದರು. ಸೌನ್ಸರ್ ಬಂದ ಕೂಡಲೇ ಹುದುಗಿಟ್ಟಿದ್ದ ಕಪ್ಪು ಧ್ವಜವನ್ನು "ಗಾಂಧೀಕೀ ಜೈ" ಎಂದು ಕೂಗಿ ಜೋನ್ನು ಎತ್ತಿ ಹಿಡಿದಳು. ಅದೇ ಸಮಯಕ್ಕೆ ಮರದ ಮೇಲೆ ಅಡಗಿ ಕುಳಿತಿದ್ದ ಶಿರೂರ್ ಕರಪತ್ರಗಳ ಮಳೆಯನ್ನು ಸುರಿಸಿದನು. ಅಧಿಕಾರಿಗಳು ದಿಗ್ಭ್ರಾಂತರಾದರು! ಅಲ್ಲಿದ್ದ ಜನ "ಭಾರತ ಮಾತೆಗೆ ಜೈ" ಎಂದು ಕೂಗಿದರು. ಸತ್ಯಾಗ್ರಹಿಗಳ ಕಾರ್ಯತತ್ಪರತೆಗೆ ಇದೊಂದು ನಿದರ್ಶನ.

ಕೆಳಗಿನಮನೆ ಹರಿಜನರ ದೇವಿಯ ದೇಶಭಕ್ತಿಯ ಘಟನೆ ಇಲ್ಲಿ ಉಲ್ಲೇಖಿಸಬೇಕು (ಇದರ ವಿವರ I ಸಂಪುಟದಲ್ಲಿ ಬಂದಿದೆ—ಸಂ॥) ಒಡೆಯನ ಸ್ವತ್ತನ್ನು ಮರಳಿಸಿದ ದೇವಿ ಮತ್ತು ಅವಳ ಮಗುವೂ ಹೆಗಡೆಯವರ ಸಂಸಾರದಲ್ಲಿ ಅವಿಚ್ಛಿನ್ನವಾದ ಒಂದು ಭಾಗವಾದರು. ಸತ್ಯಾಗ್ರಹಿಗಳ ವಿಷಯದಲ್ಲಿ ಜನಸಾಮಾನ್ಯಕ್ಕೆ ಇದ್ದ ಮನೋಭಾವ ವನ್ನು ದೇವಿಯು ತನ್ನ ಕೃತಿಯಿಂದ ತೋರಿಸಿ ಎಲ್ಲರ ಮೆಚ್ಚುಗೆಗೆ ಪಾತ್ರಳಾದಳು. ಮುಂದೆ ಗಾಂಧೀಜಿಯವರು ಸಿದ್ದಾಪುರಕ್ಕೆ ಭೇಟಿಕೊಟ್ಟ ಸಮಯದಲ್ಲಿ ಅಲ್ಲಿಯ ಜನರು ದೇವಿಯನ್ನು ಮೆರವಣಿಗೆಯಲ್ಲಿ ಕರೆತಂದು ವಿಷಯವನ್ನು ಗಾಂಧೀಜಿಯವರಿಗೆ ನಿವೇದಿಸಿ ದರು. ಗಾಂಧೀಜಿಯವರು ಭುಜತಟ್ಟಿ ದೇವಿಯನ್ನು ಹರಸಿದರು.

ಅಂಕೋಲಾದಲ್ಲಿ ನಡೆಯುತ್ತಿದ್ದ ಚಳವಳಿಯ ಪ್ರಭಾವ ಪಕ್ಕದ ತಾಲ್ಲೂಕಾದ ಯಲ್ಲಾಪುರಕ್ಕೂ ಹರಿಯಿತು. ಅಲ್ಲಿಯ ಜನ ತಾವೂ ಚಳವಳಿಗೆ ಸೇರಬೇಕೆಂದು ನಿರ್ಧರಿಸಿ ನನ್ನನ್ನು ಗೋಕರ್ಣದಲ್ಲಿ ಭೇಟಿಯಾದರು. ಈ ಭೇಟಿಯನ್ನು ಗೋಕರ್ಣದ ಕೃಷ್ಣಭಟ್ಟರು, ಡಾ॥ ಮಾಸೂರ್‌ಕರ್‌ರೂ ಮತ್ತು ಬೆಂಕಿಕೊಡ್ಲ ಬಾಬೂರಾಯರು ಏರ್ಪಡಿಸಿದ್ದರು. ಒಂದು ನೆಲಮಾಳಿಗೆಯಲ್ಲಿ ಈ ಭೇಟಿ ನಡೆಯಿತು. ನಾನೇ ಹೋಗಿ ಒಂದು ಗುಪ್ತ ಸಭೆಯಲ್ಲಿ ಯಲ್ಲಾಪುರದ ಕಾಡಿನಲ್ಲಿ ಅಲ್ಲಿನ ಮುಖಂಡರನ್ನು ಕಂಡು ಮುಂದಿನ ಕಾರ್ಯ ಕ್ರಮ ನಿರ್ಧರಿಸಬೇಕೆಂದು ತೀರ್ಮಾನವಾಯಿತು. ಈ ಬಗ್ಗೆ ಹೆಚ್ಚು ಸಮಾಲೋಚನೆ ನಡೆಸಲು ಒಂದು ದಿನ ರಾತ್ರಿ ಬೆಂಕಿಕೊಡ್ಲಕ್ಕೆ ಬಾಬೂರಾಯರ ಭೇಟಿಗಾಗಿ ಹೋಗಿದ್ದೆ. ಅಲ್ಲಿಂದ ಹಿಂತಿರುಗುವಾಗ ಒಂದು ಕೋಣೆಯಲ್ಲಿ ನನ್ನನ್ನು ಪೋಲೀಸರು ಕೈದುಮಾಡಿದರು. ನನ್ನ ಬಗ್ಗೆ ಶಿರ್ಸಿ ಮೆಜಿಸ್ಟ್ರೇಟರು, ಸಿದ್ದಾಪುರದ ಮಾಮಲೇದಾರರು, ಅಂಕೋಲಾ ಪೋಲೀಸರು ಮತ್ತು ಕಾರವಾರದ ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟರು ವಾರಂಟನ್ನು ಹೊರಡಿಸಿದ್ದರು. ನನ್ನನ್ನು ಪೋಲಿಸರು ಕಾರವಾರಕ್ಕೆ ಕರೆದುಕೊಂಡುಹೋಗಿ ಅಲ್ಲಿ ಪೋಲಿಸ್ ಡಿಸ್ಟ್ರಿಕ್ಟ್ ಸೂಪರಿಂಟೆಂಡೆಂಟ್‌ರ ಬಂಗಲೆಯಲ್ಲಿ ಅವರ ಭೇಟಿಮಾಡಿಸಿದರು. ಪೋಲೀಸರು ನನ್ನ ವಿಷಯದಲ್ಲಿ ಹೇಳಬೇಕಾದ ಮಾಹಿತಿಯನ್ನೆಲ್ಲಾ ಅವರಿಗೆ ತಿಳಿಸಿದರು. ಅವರ ಅಪ್ಪಣೆಗಾಗಿ ಕಾದುನಿಂತಿದ್ದ ಪೋಲೀಸ್ ಇನ್‌ಸ್ಪೆಕ್ಟರನ್ನು ಸ್ವಲ್ಪಹೊತ್ತು ಹೊರಗೆ ಕೂಡಬೇಕೆಂದು ಸೂಪರಿಂಟೆಂಡೆಂಟರು ಆಜ್ಞಾಪಿಸಿದರು. ಅನಂತರ ನಾನು ಸೂಪರಿಂಟೆಂಡೆಂಟರು ಇಬ್ಬರೇ ಸ್ವಲ್ಪಕಾಲ ಇದ್ದೆವು. ಇವರು ನನ್ನೊಡನೆ ಕುಶಲ ಸಂಭಾಷಣೆ ನಡೆಸಿದರು. ನನ್ನಿಂದ

ನಮ್ಮ ಚಳವಳಿಯ ಪ್ರಗತಿಯನ್ನು ಕೇಳಲು ಅಪೇಕ್ಷಿಸಿದರು. ಹೇಳಬಹುದಾದುದ್ದನ್ನು ಮತ್ತು ಹೇಳಬಹುದಾದಷ್ಟನ್ನು ವಿವರಿಸಿ ಹೇಳಿದೆ. ಈ ಸಂದರ್ಭದಲ್ಲಿ ನಡೆದ ಮಾತು ಕತೆಗಳ ಬಗ್ಗೆ ಒಂದನ್ನು ಮಾತ್ರ ಇಲ್ಲಿ ಹೇಳಬಯಸುತ್ತೇನೆ.

ಪ್ರಶ್ನೆ: ನೀವು ಗಾಂಧೀಶಿಷ್ಯರು, ಸತ್ಯಾಗ್ರಹವನ್ನು ಆರಂಭಿಸಿದ್ದೀರಿ, ಗುಪ್ತವಾಗಿ ಕೆಲಸ ಮಾಡುವುದು ಗಾಂಧೀಜಿಯವರ ಸತ್ಯಾಗ್ರಹದ ನೀತಿಗೆ ವಿರುದ್ಧ, ಈ ರೀತಿ ಮಾಡಿದ ನೀವು ಗಾಂಧಿಗೆ ದ್ರೋಹಮಾಡಿದಂತೆ ಅಲ್ಲವೇ ?

ಉತ್ತರ: ಬ್ರಿಟಿಷ್ ಪಾರ್ಲಿಮೆಂಟಿನವರು ಇಂಡಿಯಾ ದೇಶವನ್ನು ಆಳಲು ಒಂದು ವ್ಯವಸ್ಥೆ ಮಾಡಿದ್ದಾರೆ. ಅದೇ ಸರಕಾರ ಎನಿಸಿಕೊಳ್ಳುವುದು. ಈ ಸರ್ಕಾರದ ಆಡಳಿತ ನಿರ್ವಹಿಸುವ ಬಗ್ಗೆ ರೀತಿನೀತಿಗಳನ್ನು ಸ್ಪಷ್ಟಪಡಿಸಿದ್ದಾರೆ. ಕಾನೂನಿನ ರೀತಿಯಂತೇ ಆಳಬೇಕೆಂದು ವಿಧಿಸಿದ್ದಾರೆ. ಆಡಳಿತಗಾರರಾದ ನೀವು ಕಾನೂನಿನ ಪ್ರಕಾರ ತಪ್ಪು ಮಾಡಿದವರಿಗೆ ಅದೇ ಕಾನೂನಿನ ಪುಸ್ತಕದಲ್ಲಿ ಹೇಳಿರುವ ಶಿಕ್ಷೆಯ ವಿಧಿಕ್ರಮವನ್ನು ಪಾಲಿಸದೇ ಕಾನೂನು ಉಲ್ಲಂಘಿಸಿ ಸತ್ಯಾಗ್ರಹಿಗಳನ್ನು ಬಡಿಯುವುದು, ಹೊಡೆಯುವುದು, ಬೂಟುಕಾಲಿನಲ್ಲಿ ತುಳಿಯುವುದು, ಹೀಗೆ ಮಾಡುತ್ತಿರುವುದರಿಂದ ಪಾರ್ಲಿಮೆಂಟಿಗೆ ಅಪಚಾರ ಮಾಡುತ್ತಿಲ್ಲವೇ ? ಹೀಗೆಂದಮಾತ್ರಕ್ಕೆ ನೀವೆಲ್ಲಾ ಬ್ರಿಟಿಷ್ ದ್ರೋಹಿಗಳೆಂದು ಸರಕಾರ ಪರಿಗಣಿಸುವುದಿಲ್ಲ. ಗುರಿಯನ್ನು ಮುಟ್ಟಲು ರೀತಿನೀತಿಗಳು ಒಂದು ಮಾರ್ಗ ಹಾಗೂ ಸಾಧನ. ಈ ಸಾಧನವನ್ನು ಮನುಷ್ಯನು ಆತನ ಶಕ್ತಿಗೆ ಅನುಗುಣವಾಗಿ ಗುರಿಮುಟ್ಟಲು ಬಳಸಿಕೊಳ್ಳುತ್ತಾನೆ. ಈ ಮಾರ್ಗದಲ್ಲಿ ಹೋಗುವಾಗ ಎಡರುತೊಡರುಗಳನ್ನು ದಾಟಲು ತನ್ನ ಸ್ವಂತ ಬುದ್ಧಿಶಕ್ತಿಯನ್ನು ಅವಲಂಬಿಸುತ್ತಾನೆ.

ಹೀಗೆ ಸಂಭಾಷಣೆ ನಡೆಯುತ್ತಿರಲು ಅವರ ಪತ್ನಿಯವರು ಬಂದರು. ಪತಿಯ ಅಪ್ಪಣೆ ಬೇಡಿ ಸಂಭಾಷಣೆಯಲ್ಲಿ ಸೇರಿದರು. ಸ್ವಲ್ಪ ವೇಳೆಯನಂತರ ಚಹ, ಬಿಸ್ಕತ್ ಕೊಟ್ಟರು. ಇದಾದಮೇಲೆ ಪೋಲೀಸ್ ಸಾಹೇಬರು ಇನ್‌ಸ್ಪೆಕ್ಟರರನ್ನು ಕರೆದರು. ಅದಾದಮೇಲೆ ಶ್ರೀಮತಿಯವರು, "ನಾವು ಐರಿಶರು, ಸ್ವಾತಂತ್ರ್ಯಕ್ಕಾಗಿ ಹೊಡೆದಾಡಿದ ರಕ್ತ ನಮ್ಮ ನಾಳಗಳಲ್ಲಿದೆ. ನಿಮ್ಮೊಡನೆ ಸಹಾನುಭೂತಿ ನಮಗುಂಟು" ಎಂದು ಹೇಳಿ ಕೆಲವು ಪುಸ್ತಕಗಳನ್ನು ಕೊಟ್ಟು, ಓದಿದಮೇಲೆ ಹಿಂತಿರುಗಿಸಲು ಹೇಳಿದರು. ಪೋಲೀಸ್ ಇನ್‌ಸ್ಪೆಕ್ಟರರು ಬಂದರು. ನನ್ನನ್ನು ಹುಷಾರಾಗಿಯೂ, ಸುಖವಾಗಿರುವಂತೆಯೂ ನೋಡಿಕೊಳ್ಳಬೇಕೆಂದು ಸಾಹೇಬರು ಹೇಳಿದರು. ನಾನು ಲಾಕಪ್ಪಿನಲ್ಲಿರುವವರೆಗೆ ಕಷ್ಟವಿಲ್ಲವಂತೆ ನನ್ನನ್ನು ಪೋಲೀಸರು ಕಂಡರು. ಈ ಪೋಲೀಸ್ ಇನ್ಸ್‌ಪೆಕ್ಟರ್ ಹೆಸರು ಕಬಾಡಿ ಮತ್ತು ಸೂಪರಿಂಟೆಂಡೆಂಟರ ಹೆಸರು ಕಾಲಿನ್ಸ್ ಎಂದು ನನಗೆ ಜ್ಞಾಪಕ.

ಅಂಕೋಲ ಮ್ಯಾಜಿಸ್ಟ್ರೇಟರು ನನಗೆ 18 ತಿಂಗಳ ಶಿಕ್ಷೆವಿಧಿಸಿದರು ಕಾರವಾರ ಜೈಲಿನಲ್ಲಿ ಕೆಲವು ಕಾಲ ಇದ್ದೆ. ಆಗಿನ ಜೈಲುಗಳಲ್ಲಿ ರಾಜಕೀಯ ಕೈದಿಗಳು ಮತ್ತು ಇತರರು ಎಂಬ ವಿಭಾಗವಿರಲಿಲ್ಲ. ಆದ್ದರಿಂದ ನಾವೆಲ್ಲರೂ ಕದ್ದು ಖೂನಿಮಾಡಿ ಜೈಲ

ಕೈದಿಗಳೊಡನೆ ಇದ್ದು ಕೆಲಸಮಾಡಬೇಕಾಗಿತ್ತು. ತೋಟ ಅಗಿಯುವುದು, ರಸ್ತೆಗೆ ಜಲ್ಲಿ ಹಾಕುವುದು, ದಪ್ಪ ಕಲ್ಲುರೋಲರನ್ನು ಎತ್ತಿಗೆ ಬದಲಾಗಿ ನಾವೇ ಎಳೆಯುವುದು ಇತ್ಯಾದಿ ಕೆಲವು ಶ್ರಮದ ಕೆಲಸಗಳನ್ನು ಕಾರವಾರ ಜೈಲಿನಲ್ಲಿ ಮಾಡಬೇಕಾಯಿತು. ನನ್ನನ್ನು ಈ ಜೈಲಿನಿಂದ ಅಹಮದನಗರ ಡಿಸ್ಟ್ರಿಕ್ಟ್ ವಿಸಾಪುರ ಜೈಲಿಗೆ ವರ್ಗಾಯಿಸಿದರು. ಅಲ್ಲಿ ಬೊಂಬಾಯಿ, ಗುಜರಾತ್ ಮತ್ತು ಕರ್ನಾಟಕದ ಸತ್ಯಾಗ್ರಹಿಗಳು ಎರಡು ಸಾವಿರ ಜನ ಇದ್ದೆವು. ಅದು ಪೂರ ಒಂದು ರಾಜಕೀಯ ಬಂದಿಗಳ ಜೈಲಾಗಿತ್ತು. ಇದರ ಮುಖ್ಯಸ್ಥ ಇಂಗ್ಲಿಷರವನು. ಈತ ಬಹಳ ನೀಚ. ನಮಗೆಲ್ಲ ತೊಂದರೆ ಕೊಡುವುದೇ ಅವನ ಉದ್ದೇಶ. ಸಣ್ಣಪುಟ್ಟ ತಪ್ಪುಗಳಿಗೆಲ್ಲಾ ಭಾರಿ ಶಿಕ್ಷೆ. ಕೆಲವು ಕಾಲ ರಾತ್ರಿ ಹೊತ್ತು ಮಲಗುವಾಗ ಸರಪಳಿಯನ್ನು ಒಬ್ಬರ ಕಾಲಿನಿಂದ ಮತ್ತೊಬ್ಬರ ಕಾಲಿಗೆ ಕಟ್ಟಿ ಮಲಗಿಸುತ್ತಿದ್ದದುಂಟು. ಇದರ ಪ್ರತಿಭಟನೆಗೆ ನಾವೆಲ್ಲ ಬಂಡಾಯ ಮಾಡಬೇಕಾಯಿತು. ಅಧಿಕಾರಿಗಳ ದಬ್ಬಾಳಿಕೆ ಉಪಯೋಗವಿಲ್ಲದೇ ಹೋಯಿತು. ಕಡೆಯಲ್ಲಿ ಸಾಹೇಬನು ಕೈದಿಗಳಾಗಿದ್ದ ಬೊಂಬಾಯಿಯ ಎಸ್. ಕೆ. ಪಾಟೀಲ್, ಡಿ. ಪಿ. ಕರಮರ್‌ಕರ್ ಮೊದಲಾದವರೊಡನೆ ಸಂಧಿ ಮಾಡಿಕೊಂಡು ಜೈಲಿನ ಆಡಳಿತವನ್ನೆಲ್ಲಾ ಒಂದು ಕೈದಿಗಳ ಕಮಿಟಿಗೆ ವಹಿಸಿದನು. ಎಸ್. ಕೆ. ಪಾಟೀಲ್ ಅದರ ಅಧ್ಯಕ್ಷರಾಗಿದ್ದರು. ನಾನೂ ಆ ಕಮಿಟಿಯಲ್ಲಿ ಮೆಂಬರಾಗಿದ್ದೆ. ಕಕ್ಕಸು ತೊಳೆಯುವುದರಿಂದ ಅಡಿಗೆ ಮಾಡುವವರೆಗೆ ಎಲ್ಲ ಕಾರ್ಯಗಳನ್ನೂ ನಾವೇ ಮಾಡಿಕೊಳ್ಳುತ್ತಿದ್ದೆವು. ಶಾಲೆಗಳನ್ನು ಕೂಡ ನಡೆಸುತ್ತಿದ್ದೆವು. ಹೀಗೆ ನನ್ನ ಪೂರ್ಣ ಅವಧಿಯ ಶಿಕ್ಷೆಯನ್ನು ಅನುಭವಿಸಿ ಬಿಡುಗಡೆಯಾದೆ. ಜೈಲಿನಿಂದ ಹೊರಬಂದ ಕೂಡಲೇ ಬ್ರಿಟಿಷ್ ಹಿಂದೂಸ್ಥಾನಕ್ಕೆ ನಾನು ಪ್ರವೇಶಿಸಬಾರದೆಂಬ ಆಜ್ಞೆಯನ್ನು ಪೋಲೀಸರು ಜಾರಿಮಾಡಿ ನನ್ನನ್ನು ಅವರ ಜತೆಯಲ್ಲೇ ಮೈಸೂರಿಗೆ ಕರೆದುಕೊಂಡು ಬಂದು ಬಿಟ್ಟು ಹೋದರು. ಅಂದಿನಿಂದ ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗುವವರೆಗೆ ಪೋಲೀಸ್ ಸಿ.ಐ.ಡಿ.ಗಳ ಕಾಟ ಇತ್ತು. 1933ನೇ ಕಾಂಗ್ರೆಸ್ ಸರ್ವಾಧಿಕಾರಿಯಾದ ಮಾಧವರಾವ್ ಆಣೆಯವರು ಸತ್ಯಾಗ್ರಹವನ್ನು ನಿಲ್ಲಿಸುವಂತೆ ದೇಶಕ್ಕೆ ಆಣತಿ ಇತ್ತರು. ಅದರಂತೆ ಶಿರ್ಸಿ, ಸಿದ್ದಾಪುರ, ಅಂಕೋಲೆಗಳಲ್ಲಿಯೂ ಸತ್ಯಾಗ್ರಹವು ನಿಂತಿತು.

1934ನೆಯ ಇಸವಿಯಲ್ಲಿ ನನ್ನ ಬಿಡುಗಡೆಯಾಯಿತು. ಮೈಸೂರು, ಮಂಡ್ಯ ಜಿಲ್ಲೆಗಳಲ್ಲಿ ಸುಮಾರು ಒಂದೂವರೆ ವರ್ಷಕಾಲ ಹರಿಜನ ಸಮಿತಿ ಪ್ರಚಾರ, ಕಾಂಗ್ರೆಸ್ ಶಾಖೆಗಳನ್ನು ಸ್ಥಾಪಿಸುವುದು ಇತ್ಯಾದಿ ಪ್ರಚಾರಕಾರ್ಯಗಳಲ್ಲಿ ತೊಡಗಿದ್ದಾಯಿತು. ಮೈಸೂರು ನಾಡಿನಲ್ಲೂ ಕಾಂಗ್ರೆಸ್‌ಪತಿಯಿಂದ ಹುರಿಯಾಳುಗಳನ್ನು ಶಾಸನ ಕೌನ್ಸಿಲ್‌ಗಳಿಗೆ ನಿಲ್ಲಿಸಬೇಕೆಂಬ ತರ್ಕವು ನಡೆಯುತ್ತಿತ್ತು. ಮೈಸೂರು ನಾಡಿನಲ್ಲಿ ಆಗ 'ಪ್ರಜಾ ಪ್ರತಿನಿಧಿ ಸಭೆ' ಮತ್ತು 'ನ್ಯಾಯ ವಿಧಾಯಕ ಸಭೆ'ಗಳೆರಡೂ ಇದ್ದವು. 1936ರ ವೇಳೆಗೆ ಹಿಂದೂಸ್ಥಾನದಲ್ಲಿ ಕಾಂಗ್ರೆಸ್ ಶಾಸನ ಕೌನ್ಸಿಲ್‌ಗಳಲ್ಲಿ ಪ್ರವೇಶಿಸುವ ನಿರ್ಧಾರ

ವಾಗಿತ್ತು. ಆದರೆ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಯು ಈ ಧೋರಣೆಯನ್ನು ಮೈಸೂರು ದೇಶದ ಬಗೆಗೆ ತೋರಲಿಲ್ಲ. ಇದಕ್ಕೆ ಕಾರಣ ಹಲವಾರು.

ಸ್ವಾತಂತ್ರ್ಯ ಚಳವಳಿಯ ಇತಿಹಾಸದಲ್ಲಿ ಫೈಜಪುರದಿಂದ ಮುಂದಿನ ಒಂದು ದಶಕದ ಕಥಾನಕವು ದೇಶೀಯ ಸಂಸ್ಥಾನಗಳಿಗೆ ಒಂದು ಮಹತ್ವದ ಘಟ್ಟ ; ಮೈಸೂರಿಗಂತೂ ಇದು ಐತಿಹಾಸಿಕ ಮಹತ್ವದ್ದು. ಜವಾಬ್ದಾರಿ ಸರ್ಕಾರಕ್ಕಾಗಿ ಸಮಗ್ರ ಜನತೆ ಏಕಪುರುಷನಂತೆ ಎದ್ದುನಿಂತ ಕಾಲ ಇದೇ. ಮೈಸೂರಿನ ಚಳವಳಿಯ ಮೊದಲ ದಿನಗಳಲ್ಲಿ ಅಖಿಲ ಭಾರತ ನಾಯಕರ ಆಶೀರ್ವಾದ ನಮಗಿರಲಿಲ್ಲ. ಇಲ್ಲಿನ ರಾಜ್ಯವನ್ನು 'ರಾಮರಾಜ್ಯ' ಎಂದು ಮಹಾತ್ಮರೇ ವರ್ಣಿಸಿದ್ದರು.

ನಾನು ಮತ್ತು ತಗಡೂರು ರಾಮಚಂದ್ರರಾಯರು ನೆಹ್ರೂ, ಪಟೇಲ್ ಮತ್ತು ಗಾಂಧೀಜಿಯವರನ್ನು (1936ರ ಫೈಜಪುರ ಕಾಂಗ್ರೆಸ್‌ನಲ್ಲಿ) ಭೇಟಿ ಮಾಡಿದೆವು. ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಪ್ರಾಪ್ತಿಗಾಗಿ ಹೋರಾಟ ನಡೆಸಲು ಅನುಮತಿ ಕೋರಿದೆವು. ಅವಕಾಶ ದೊರಕಲಿಲ್ಲ. "ಕಾಂಗ್ರೆಸ್ ಹೆಸರಿನಲ್ಲಿ ಚಳವಳಿಯಾದಲ್ಲೆಲ್ಲಾ ನಾವು ಹೋಗಬೇಕಾಗುವುದು ; ಐದುನೂರು ಅರವತ್ತೆರಡು ದೇಶೀ ಸಂಸ್ಥಾನಗಳಿವೆ; ಈ ಕಾರ್ಯಕ್ರಮಕ್ಕೆ ತೊಡಗಿದರೆ ಬ್ರಿಟಿಷರನ್ನು ಎದುರಿಸುವ ನಮ್ಮ ಮುಖ್ಯ ಕಾರ್ಯಕ್ರಮಕ್ಕೆ ಅಡ್ಡಿ ಬಂದು ಹೋಗುವುದು ; ಆದ್ದರಿಂದ ನೀವೇ ನಿಮ್ಮ ಚಳವಳಿ ನಡೆಸಿ; ನಮ್ಮ ಸಹಾನುಭೂತಿ ಇದೆ" ಎಂದರು.

ಆಗ ಒಂದೊಂದು ದೇಶೀ ಸಂಸ್ಥಾನವೂ ಒಂದೊಂದು ಕರಾರನ್ನು ಬ್ರಿಟಿಷರೊಡನೆ ಹೊಂದಿತ್ತು. ಬ್ರಿಟಿಷ್ ಪ್ರಾಂತ್ಯಗಳ ಆಡಳಿತಕ್ಕೂ, ಸಂಸ್ಥಾನಗಳ ಆಡಳಿತಕ್ಕೂ ಸಂಬಂಧವಿರಲಿಲ್ಲ. ಅಂತೆಯೇ ಮೈಸೂರು ಒಂದು ಪ್ರತ್ಯೇಕ ಘಟಕವಾಗಿತ್ತು. ಇಷ್ಟಾದರೂ ಇಲ್ಲಿನ ಜಿಲ್ಲಾ ಕಾಂಗ್ರೆಸ್ ಸಮಿತಿಗಳು ಧಾರವಾಡದಲ್ಲಿದ್ದ ಕಾಂಗ್ರೆಸ್ ಸಮಿತಿಯ ಶಾಖೆಗಳಾಗಿದ್ದವು. ಇಲ್ಲಿ ಕಾಂಗ್ರೆಸ್ ಪತಿಯಿಂದ ಮಾಡುವ ಯಾವುದೇ ಕಾರ್ಯಕ್ರಮ ಧಾರವಾಡದಲ್ಲಿದ್ದ ಪ್ರಾಂತೀಯ ಕಾಂಗ್ರೆಸ್‌ನ ಅನುಮತಿಯಿಂದಲೇ ನಡೆಯಬೇಕಿತ್ತು. ಇದಕ್ಕಾಗಿ ಮೈಸೂರು ದೇಶದಲ್ಲಿ ಒಂದು ಬೇರೆ ಪಾರ್ಲಿಮೆಂಟರಿ ಬೋರ್ಡ್ ಸ್ಥಾಪಿಸಿ ಅದರ ಮೂಲಕ ಕಾಯಿದೆ ಕೌನ್ಸಿಲ್‌ಗಳಿಗೆ ಹುರಿಯಾಳುಗಳನ್ನು ನಿಲ್ಲಿಸುವ ಕಾರ್ಯ ಆರಂಭವಾಯಿತು. ಇದರ ಬಗ್ಗೆ ಬಿರುಸಿನ ಪ್ರಚಾರ ಆರಂಭವಾಯಿತು —ನಮ್ಮ ಜಿಲ್ಲೆಯಲ್ಲೂ ಸಹ. ಈ ಪ್ರಚಾರಕಾರ್ಯಕ್ಕೆ ಸರ್ಕಾರದವರು ಆತಂಕಗಳನ್ನೊಡ್ಡಿದರು. ಆದರೂ ನಮ್ಮ ಹುರಿಯಾಳುಗಳು ಸ್ವಲ್ಪಮಟ್ಟಿಗೆ ಜಯಗಳಿಸಿ ಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳನ್ನು ಪ್ರವೇಶಿಸಿದರು. ಕೆ. ಟಿ. ಭಾಷ್ಯಂ ಈ ಗುಂಪಿನ ಮುಖ್ಯರು. 1937ರ ವೇಳೆಗೆ ಮೈಸೂರು ನಾಡಿನಲ್ಲಿದ್ದ ಕಾಂಗ್ರೆಸ್ ವಿರೋಧಿ ಪಕ್ಷಗಳು ಅರಸೊತ್ತಿಗೆಯ ಸಂಕುಚಿತ ನೀತಿಯನ್ನು ಕಂಡು ಜಿಗುಪ್ಸೆಗೊಂಡವು. ಅದೇ ವರ್ಷದ ಅಕ್ಟೋಬರ್ ತಿಂಗಳಲ್ಲಿ 'ಪ್ರಜಾ ಸಂಯುಕ್ತ ಪಕ್ಷ' ಕಾಂಗ್ರೆಸ್ಸಿನೊಡನೆ

ವಿಲೀನವಾಗಲು ನಿರ್ಧರಿಸಿತು. ಈ ತೀರ್ಮಾನವನ್ನು ಮೈಸೂರು ಸಿಟಿ ಟೌನ್‌ಹಾಲ್‌ನಲ್ಲಿ ಕೈಗೊಳ್ಳಲಾಯಿತು.

ಇದರಿಂದ ಕಾಂಗ್ರೆಸ್ಸಿನ ಬಲ ಹೆಚ್ಚಿತು. ಕೆ. ಸಿ. ರೆಡ್ಡಿಯವರು ನಾಯಕತ್ವ ವಹಿಸಿದರು. ಮೈಸೂರು ಮಾಡರ್ನ್ ಹೋಟೆಲ್‌ನಲ್ಲಿ ಭಾಷ್ಯಂರವರ ದಸ್ತಗಿರಿಯಾಯಿತು. ಮೈಸೂರು ನಗರದಲ್ಲಿ ಯಶಸ್ವೀ ಹರತಾಳ ನಡೆಯಿತು. ಇದರ ಪರಿಣಾಮವಾಗಿ ಕಾಂಗ್ರೆಸ್ಸಿನವರು ಒಂದು 'ಕೌನ್ಸಿಲ್ ಆಫ್ ಆಕ್ಷನ್' ಸ್ಥಾಪಿಸಿದರು. ಟಿ. ಸಿದ್ದ ಲಿಂಗಯ್ಯನವರು ಅದರ ಅಧ್ಯಕ್ಷರು. ವೀರಕೇಸರಿ ಸೀತಾರಾಮಶಾಸ್ತ್ರಿ ಮತ್ತು ತಗಡೂರು ರಾಮಚಂದ್ರರಾಯರು ಇದರ ಸದಸ್ಯರು. ಸಂಸ್ಥಾನದಲ್ಲೆಲ್ಲಾ ಸರ್ಕಾರದ ದಬ್ಬಾಳಿಕೆ ಯನ್ನು ಖಂಡಿಸುವ ತೀರ್ಮಾನವಾಯಿತು. ಮುಖಂಡರ ದಸ್ತಗಿರಿ ಆಯಿತು. ನನ್ನನ್ನು ದೇಶದ್ರೋಹಕ್ಕಾಗಿ ಬಂಧಿಸಿದರು. ನವಮ್ಮೂರಿನ ರಂಗರಾಮಯ್ಯನವರನ್ನು ರಾಜ ದ್ರೋಹಕ್ಕಾಗಿ ಬಂಧಿಸಿದರು. ಚಳವಳಿಯ ಕಾವು ಸರ್ಕಾರಕ್ಕೆ ತಟ್ಟಿತು. ಕಾಂಗ್ರೆಸ್ಸೂ ಸರ್ಕಾರವೂ ಒಂದು ಒಪ್ಪಂದಕ್ಕೆ ಬಂದವು. ಇದಕ್ಕೆ ಗಾಂಧಿಯವರ ಮಧ್ಯಸ್ಥಿಕೆ ಕಾರಣವೆಂದು ನನ್ನ ಭಾವನೆ. ನಾನು ಮೊದಲೇ ಹೇಳಿದ್ದಂತೆ ನಮ್ಮ ಚಳವಳಿ ಯನ್ನು ನಾವೇ ನಡೆಸಿಕೊಳ್ಳಲು ಒಂದು ಸಂಸ್ಥೆಯನ್ನು ಸ್ಥಾಪಿಸಿಕೊಳ್ಳುವ ಕಾಲ ಸನ್ನಿಹಿತವಾಯಿತು.

ಮೈಸೂರು ಸಿಟಿ ಅಡ್ವೊಕೇಟ್ ಎಂ. ಲಕ್ಷ್ಮೀನಾರಾಯಣರಾಯರ ಮನೆಯಲ್ಲಿ ಮುಖಂಡರ ಸಭೆ ಸೇರಿತು. 'ಮೈಸೂರು ಕಾಂಗ್ರೆಸ್' ಎಂಬ ಸ್ವತಂತ್ರ ರಾಜಕೀಯ ಸಂಸ್ಥೆಯನ್ನು ಸ್ಥಾಪಿಸಬೇಕೆಂಬ ನಿರ್ಧಾರವಾಯಿತು. ದೇಶದ ಜನರಿಗೆ ಇದರ ಉದ್ದೇಶ ವನ್ನು ವಿವರಿಸುವ ಸಲುವಾಗಿ ಒಂದು ಪ್ರಚಾರ ಸಮಿತಿಯೂ ಆಯಿತು. ಅದರಲ್ಲಿ ನಾನೂ ಇದ್ದೆ. ದೇಶದಲ್ಲೆಲ್ಲಾ ಅಡ್ಡಾಡಿ ಪ್ರಚಾರಕಾರ್ಯ ನಡೆಸಿದೆ. ಹೀಗೆ ಈ ಹೊಸ ಸಂಸ್ಥೆಯ ಅಂಗರಚನೆ ರಚಿಸುವುದಕ್ಕೋಸ್ಕರ ಅಡ್ವೊಕೇಟ್ ಎಂ.ಎ. ದೊರೆಸ್ವಾಮಿಯ್ಯಂಗಾರ್‌ರ ನ್ನೊಳಗೊಂಡ ಒಂದು ಸಮಿತಿಯು ರಚನೆಯಾಯಿತು. ಮಂಡ್ಯ ಜಿಲ್ಲೆಯ ಮದ್ದೂರಿನ ಬಳಿ ಇರುವ ಶಿವಪುರ ಗ್ರಾಮದಲ್ಲಿ ಮೈಸೂರು ಕಾಂಗ್ರೆಸ್ ಅಧಿವೇಶನವು 1938ನೇ ಏಪ್ರಿಲ್‌ನಲ್ಲಿ ಸೇರಬೇಕೆಂದು ತೀರ್ಮಾನವಾಯಿತು; ಇನ್ನು ಸಿದ್ಧತೆ.

ದೊಡ್ಡಬಳ್ಳಾಪುರದಲ್ಲಿ ಒಂದು ಸಾರ್ವಜನಿಕ ಸಭೆ ಏರ್ಪಡಿಸಿದ್ದರು. ಅಲ್ಲಿ ನನ್ನ ಭಾಷಣವಾಗಬೇಕಿತ್ತು. ಬೆಂಗಳೂರಿಂದ ದೊಡ್ಡಬಳ್ಳಾಪುರಕ್ಕೆ ಹೋಗುವಾಗ ನನ್ನನ್ನು ಪೋಲೀಸರು ಬಂಧಿಸಿದರು. ಬೆಂಗಳೂರು ಸೆಂಟ್ರಲ್ ಪೋಲೀಸ್ ಸ್ಟೇಷನ್‌ಗೆ ನನ್ನನ್ನು ಕರೆತಂದರು. ಕೆಲದಿನಗಳ ಹಿಂದೆ ನಾನು ಮೈಸೂರು ಜಿಲ್ಲೆಯ ಟಿ. ನರಸೀಪುರದಲ್ಲಿ ಮಾಡಿದ ಭಾಷಣ ರಾಜದ್ರೋಹಕರವೆಂದು ಪರಿಗಣಿಸಿ ನನ್ನ ಬಂಧನವಾಯಿತೆಂದು ತಿಳಿಯಿತು. ನನ್ನ ಮತ್ತು ರಾಮರಾಯರ (ನನ್ನನ್ನು ಬಂಧಿಸಿದ ಪೋಲೀಸ್ ಸರ್ಕಲ್ ಇನ್ಸ್‌ಪೆಕ್ಟರ್) ನಡುವೆ ಸ್ವಲ್ಪ ಹೊತ್ತು ಮಾತುಕತೆಯಾಯಿತು. ರಾಮರಾಯರಿಗೆ

ಇಲಾಖೆಯಲ್ಲಿ 25-30 ವರ್ಷಗಳ ಸೇವೆಯಾಗಿತ್ತು. ಅವರು ನನ್ನನ್ನು ಮೈಸೂರು ಕೋರ್ಟಿಗೆ ಕರೆದೊಯ್ಯಬೇಕಿತ್ತು. ಆ ಕೆಲಸವನ್ನು ಬೇರೆಯವರಿಗೆ ವಹಿಸಿದರು. ನಾನು ಮೈಸೂರಿಗೆ ಹೊರಡುವ ಮುನ್ನ ಅವರು ಈ ರೀತಿಯ ಮಾತುಗಳನ್ನು ನನಗೆ ಹೇಳಿದರು: "ಸ್ವಾಮೀ, ಜೋಯಿಸರೇ, ಹೋಗಿ ಬನ್ನಿ; ನಿಮಗೆ ಜಯವಾಗಲಿ; ನಿಮ್ಮೊಡನಿದ್ದ ಕೆಲಕಾಲ ನನ್ನ ಜೀವಮಾನದ ರಸನಿಮಿಷಗಳು; ನನ್ನ ಕಣ್ಣು ತೆರೆಯಿತು; ನಾನು ಇಲಾಖೆಗೆ ಸೇರಿದ್ದು ಕಳ್ಳರು, ಕೊರಮರು, ಖೂನಿಕಾರರು, ದರೋಡೆಗಾರರು ಮುಂತಾದ ಸಮಾಜಘಾತುಕರನ್ನು ಹಿಡಿದು ಸಮಾಜದ ಅನಿಷ್ಟ ನಿವಾರಿಸುವುದಕ್ಕೆ —ನಿಮ್ಮಂಥ ದೇಶಸೇವಕರನ್ನು ಬಂಧಿಸಲು ಅಲ್ಲ. ಇನ್ನುಮುಂದೆ ಕೆಲಸದಲ್ಲಿದ್ದರೆ ಈ ಅನಿಷ್ಟಕಾರ್ಯ ಮಾಡಬೇಕಾಗುವುದು! ನಾನು ರಿಟೈರ್ ಆಗಲು ನಿರ್ಧರಿಸಿದ್ದೇನೆ. ನನ್ನಿಂದ ಈ ಕೆಲಸ ಸಾಧ್ಯವಿಲ್ಲ; ಈಗ ನಾನಿರುವ ಪರಿಸ್ಥಿತಿಯಲ್ಲಿ ನಿಮಗೆ ತೋರಿಸಬಹುದಾದ ಸಹಾನುಭೂತಿಯೆಂದರೆ ಎರಡು ತೊಟ್ಟು ಕಣ್ಣೀರು ಮಾತ್ರ!" ಎಂದು ಕಣ್ಣೀರಿಟ್ಟರು. ಮುಂದೆ ಅವರು ಅದರಂತೆಯೇ ನಡೆದರು.

ಶಿವಪುರ ಅಧಿವೇಶನದ ಮೊದಲ ಕಾರ್ಯಕ್ರಮ ಧ್ವಜಾರೋಹಣ. ಧ್ವಜಾರೋಹಣ ಮಾಡಕೂಡದೆಂದು ಪ್ರತಿಬಂಧಕಾಜ್ಞೆ ಇತ್ತು.

ಮೈಸೂರು ದೇಶದ ನಾನಾ ಭಾಗಗಳಿಂದ ಬಂದಿದ್ದ ಜನರು ಹತ್ತಾರು ಎಕರೆ ವಿಸ್ತೀರ್ಣವಿದ್ದ ಮೈದಾನದಲ್ಲಿ ಕಿಕ್ಕಿರಿದು ನೆರೆದಿದ್ದರು. ಮೈದಾನದ ಪಕ್ಕದಲ್ಲೇ ಮೈಸೂರು-ಬೆಂಗಳೂರು ಮಾರ್ಗ. ರಸ್ತೆಯ ಇನ್ನೊಂದು ಪಕ್ಕದಲ್ಲಿ ಪೋಲೀಸರೂ ಅಧಿಕಾರಿಗಳೂ ಶಸ್ತ್ರಸಜ್ಜಿತ ಪಡೆಗಳೂ ಬಿಡಾರಮಾಡಿದ್ದರು. ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್ ಆಗಿದ್ದ ಮೇಕ್ರಿ ಸಾಹೇಬರು ಈ ಪಡೆಗಳ ಮುಖ್ಯಸ್ಥರು. ಧ್ವಜಸ್ತಂಭದ ಅಡಿಯಲ್ಲಿ ಮೈಸೂರು ಕಾಂಗ್ರೆಸ್‌ನ ಮುಖಂಡರುಗಳಾದ ಎಚ್. ಸಿ. ದಾಸಪ್ಪ, ಗುಂಡಪ್ಪಗೌಡ, ಕೆ. ಟಿ. ಭಾಷ್ಯಂ, ಎಚ್. ಸಿದ್ದಯ್ಯ ಮುಂತಾದವರಿದ್ದರು. ಸಾವಿರಾರು ಮಹಿಳೆಯರೂ ಮೈದಾನದಲ್ಲಿದ್ದರು. ನಿಯೋಜಿತ ಕಾಲಕ್ಕೆ ಸರಿಯಾಗಿ ಅಧಿವೇಶನದ ಅಧ್ಯಕ್ಷರಾದ ಟಿ. ಸಿದ್ದಲಿಂಗಯ್ಯನವರನ್ನು ಸ್ವಯಂಸೇವಕ ದಳದವರು ಮೆರವಣಿಗೆಯಲ್ಲಿ ಧ್ವಜಸ್ತಂಭದ ವೇದಿಕೆಗೆ ತಂದರು. ಸ್ವಯಂಸೇವಕ ದಳದ ನಾಯಕನಾದ ನಾನು ಧ್ವಜಾರೋಹಣ ಮಾಡುವಂತೆ ಅವರನ್ನು ಕೇಳಿದೆ. ಅಷ್ಟರಲ್ಲೇ ಪೋಲೀಸ್ ಅಧಿಕಾರಿಗಳು ಅವರ ಮೇಲೆ ಧ್ವಜಾರೋಹಣ ಮಾಡಕೂಡದೆಂದು ಆಜ್ಞೆ ಜಾರಿಮಾಡಿದರು. ಅವರು ಆಜ್ಞೆಯನ್ನು ಪಾಲಿಸುವುದಿಲ್ಲವೆಂದು ಹೇಳಿ ಬಂಧಿತರಾದರು. ಆದರೆ ನಾನು ಕಾಲಕ್ಕೆ ಸರಿಯಾಗಿ ಧ್ವಜಾರೋಹಣವನ್ನು ಮಾಡಿಬಿಟ್ಟೆ! ಅಲ್ಲಿ ನೆರೆದಿದ್ದ ಸಹಸ್ರಾರು ಜನರ ಹರ್ಷಧ್ವನಿ ಕಿವಿಗಡಚಿಕ್ಕುವಂತಿತ್ತು. ಕೂಡಲೇ ನನ್ನ ಬಂಧನವೂ ಆಯಿತು. ಪೋಲೀಸರಿಗೂ ಜನರಿಗೂ ತಿಕ್ಕಾಟ ಆರಂಭವಾಯಿತು. ಮೇಕ್ರಿಯಂಥವರಂಥ ದಕ್ಷ, ಸಹೃದಯಿ ಅಧಿಕಾರಿ ಅಲ್ಲಿಲ್ಲದಿದ್ದರೆ ನೂರಾರು ಜನ ಪೋಲೀಸರ ಗುಂಡಿಗೆ ಬಲಿಯಾಗಬೇಕಾಗಿತ್ತು. ಮೇಕ್ರಿ

ಅವರೇ ಜನರ ಮಧ್ಯೆ ಪ್ರವೇಶಿಸಿ ಸಮಾಧಾನ ಹೇಳಿದರು. ಜನರನ್ನು ಸಮಾಧಾನ ಪಡಿಸಲು ನಾಲ್ಕಾರು ಮಾತುಗಳನ್ನು ಹೇಳಿ ಎಂದು ನಮಗೆ ಸೂಚಿಸಿದರು. ಇಷ್ಟೆಲ್ಲಾ ಆದಮೇಲೆ ಜನ ನಮ್ಮನ್ನು ಪೋಲೀಸ್ ಕಾರಿಗೆ ತಾವೇ ತಂದು ಒಪ್ಪಿಸುವುದಾಗಿ ಹೇಳಿದರು. ಅದರಂತೆಯೇ ಮಾಡಿದರು. ಮಂಡ್ಯ ಕೋರ್ಟಿನಲ್ಲಿ ನಮಗೆ ಶಿಕ್ಷೆಯಾಗಿ ಮೈಸೂರು ಜೈಲಿಗೆ ಕಳುಹಿಸಲ್ಪಟ್ಟೆವು.

ಶಿವಪುರದಲ್ಲಾದರೋ ಧ್ವಜಸತ್ಯಾಗ್ರಹ ಪ್ರಾರಂಭವಾಯಿತು. ದಿನಕ್ಕೊಬ್ಬರಂತೆ ಧ್ವಜಾರೋಹಣಮಾಡಿ ಜೈಲಿಗೆ ಹೋಗಬೇಕೆಂಬ ತೀರ್ಮಾನವನ್ನು ಕೈಕೊಂಡರು. ಅದೇ ರೀತಿಯಲ್ಲಿ ನಡೆಯಲುಪಕ್ರಮಿಸಿದತು. ಅನಂತರ ದೇಶದಲ್ಲೆಲ್ಲಾ ಧ್ವಜಸತ್ಯಾಗ್ರಹದ ಕಾವು ತಟ್ಟಿ ಅದು ಚಳವಳಿಯ ರೂಪು ತಾಳಿತು.

ಸ್ವಲ್ಪಕಾಲಾನಂತರ ಸರ್ಕಾರಕ್ಕೂ ಮೈಸೂರು ಕಾಂಗ್ರೆಸ್ಸಿಗೂ ಸಂಧಾನವಾಗಿ ರಾಜಕೀಯ ಬಂದಿಗಳೆಲ್ಲರ ಬಿಡುಗಡೆಯಾಯಿತು.

ಇದಾದ ಕೆಲತಿಂಗಳುಗಳ ತರುವಾಯ ಮೈಸೂರಿನಲ್ಲಿ ಸೆಂಟ್ರಲ್ ಪೋಲೀಸ್ ಸ್ಟೇಷನ್‌ಗೆ ಪೋಲೀಸ್ ಮುಖ್ಯಾಧಿಕಾರಿಯಾಗಿದ್ದ ಹ್ಯಾಮಿಲ್ಟನ್‌ರ ಅಂಕಿತವನ್ನು ಮಾಡಿದರು. ಇವರು ಪೋಲೀಸ್ ಮುಖ್ಯಾಧಿಕಾರಿಯಾಗಿ ಮೈಸೂರು ದೇಶದಲ್ಲಿ ನಡೆದ ಅನೇಕ ಹತ್ಯಾಕಾಂಡಗಳಿಗೆ ಕಾರಣವೆಂಬ ಭಾವನೆ ಇತ್ತು. ಅವರ ಗೌರವಾರ್ಥ ಕಟ್ಟಡವನ್ನು 'ಹ್ಯಾಮಿಲ್ಟನ್ ಬಿಲ್ಡಿಂಗ್' ಎಂದು ಕರೆದುದಕ್ಕೆ ಮೈಸೂರು ನಗರದ ಜನತೆಯ, ಅದರಲ್ಲೂ ಸಾರ್ವಜನಿಕ ಜೀವನದಲ್ಲಿದ್ದವರ, ಮೂಗು ಕೊಯ್ದಂತೆ ಎಂಬ ಭಾವನೆ ಬೆಳೆಯಿತು. ಈ ಹೆಸರಿಡಕೂಡದೆಂದು ಸಾರ್ವಜನಿಕರ ಮನವಿ, ಪ್ರತಿಭಟನಾ ಸಭೆ, ಮೆರವಣಿಗೆಗಳು ನಡೆದವು. ಸರ್ಕಾರ ಇದೊಂದನ್ನೂ ಲೆಕ್ಕಿಸಲಿಲ್ಲ. ತಗಡೂರು ರಾಮಚಂದ್ರರಾಯರು ಇದಕ್ಕಾಗಿ ಒಂದು ಚಳವಳಿಯನ್ನೇ ಆರಂಭಿಸಬೇಕೆಂದು ಅನುಮತಿ ಬೇಡಿದರು. ಹಿರಿಯರು ಒಪ್ಪಲಿಲ್ಲ; ಆದರೆ ಮೈಸೂರು ಕಾಂಗ್ರೆಸ್ಸಿನ ಸದಸ್ಯರು ಚಳವಳಿಯನ್ನು ನಡೆಸಲು ಅಡ್ಡಿ ಇಲ್ಲವೆಂದು ಹೇಳಿದರು. ನಾನೂ ತಗಡೂರು ರಾಮಚಂದ್ರರಾಯರೂ ಒಂದು ಚಳವಳಿ ನಡೆಸಲು ವ್ಯವಸ್ಥೆಮಾಡಿದೆವು.

ಕಾಂಗ್ರೆಸ್ ಕಾರ್ಯಕರ್ತರು ಒಂದು ಬಿದಿರು ಗಳುವನ್ನು ತೆಗೆದುಕೊಂಡು ಅದರ ತುದಿಗೆ ಒಂದು ಈಚಲ ಪೊರಕೆಯನ್ನು ಕಟ್ಟುವುದು; ಒಂದು ಮಡಕೆ, ಅದರಲ್ಲಿ ಸುಣ್ಣ ಅಥವಾ ಕಪ್ಪು ಬಣ್ಣ ಇಟ್ಟುಕೊಳ್ಳುವುದು; ನಿಯೋಜಿಸಿದ ಸತ್ಯಾಗ್ರಹಿಯು ಈ ಗಳು ಮತ್ತು ಮಡಕೆಗಳನ್ನು ತೆಗೆದುಕೊಂಡು ಹ್ಯಾಮಿಲ್ಟನ್ ಬಿಲ್ಡಿಂಗಿನ ಬಳಿ ಹೋಗಿ ಕಟ್ಟಡದ ಮೇಲ್ಭಾಗದಲ್ಲಿದ್ದ ಹೆಸರಿನ ಮೇಲೆ ಮಸಿ ಬಳಿಯತಕ್ಕದ್ದು. ಅದರಂತೆಯೇ ಸುಬ್ರಾಯ ಉಪಾಧ್ಯಾಯರು ಮೊದಲ ಸತ್ಯಾಗ್ರಹಿಯಾಗಿ ಹೋಗಿ ಬಂಧಿಸಲ್ಪಟ್ಟರು. ಹೀಗೇ ನೂರಾರು ಜನ ಸತ್ಯಾಗ್ರಹಿಗಳು ಬಂಧಿಸಲ್ಪಟ್ಟರು. ಇಷ್ಟರಲ್ಲೇ ಮೈಸೂರಿನ ಟೌನ್‌ಹಾಲ್ ಮೈದಾನದಲ್ಲಿ ಸಾರ್ವಜನಿಕ ಸಭೆಗಳನ್ನು ಮಾಡಬಾರದೆಂಬ ನಿಷೇಧಾಜ್ಞೆ

ಯಿಂದ ಜನ ರೊಚ್ಚಿಗೆದ್ದರು. ಇದರ ವಿಷಯದಲ್ಲಿ ಮೈಸೂರು ಕಾಂಗ್ರೆಸ್ ತೀರ್ಮಾನವನ್ನು ಕೈಗೊಳ್ಳಬೇಕೆಂದು ಮನವಿ ಮಾಡಿದರು. ಈ ಮಧ್ಯದಲ್ಲಿ 'ಹ್ಯಾಮಿಲ್ಟನ್ ಬಿಲ್ಡಿಂಗ್' ಸತ್ಯಾಗ್ರಹ ನಿಲ್ಲಬೇಕೆಂದು ತೀರ್ಮಾನವಾಯಿತು. ಇಷ್ಟರಲ್ಲೇ ನಾನೂ ತಗಡೂರು ರಾಮಚಂದ್ರರಾಯರೂ ಬಂಧಿಸಲ್ಪಟ್ಟು ಒಂದು ವರ್ಷಕಾಲ ಜೈಲಿನಲ್ಲಿ ಇರುವಂತಾಯಿತು.

ಜೈಲುವಾಸ ಮುಗಿಸಿ ಹೊರಬರುವ ವೇಳೆಗೆ ವಿದುರಾಶ್ವತ್ಥದಲ್ಲಿ ಮೈಸೂರು ಕಾಂಗ್ರೆಸ್ ಅಧಿವೇಶನ ಮುಗಿದಿತ್ತು. ಅಲ್ಲಿ ಆದ ಗೊತ್ತುವಳಿಯಂತೆ ಸರ್ಕಾರದೊಡನೆ ಸಂಧಾನಪ್ರಯತ್ನ ಮುರಿದುಬಿದ್ದಿತ್ತು. ದೇಶಾದ್ಯಂತ ಚಳವಳಿ ಶುರುವಾಗಿ ಜೈಲಿನಲ್ಲಿ ಸತ್ಯಾಗ್ರಹಿಗಳು ತುಂಬುತ್ತಿದ್ದರು. ಈ ವೇಳೆಗೆ, ಗಾಂಧೀಜಿಯವರು ಮೈಸೂರು ಕಾಂಗ್ರೆಸ್ ಚಳವಳಿ ನಿಲ್ಲಿಸಿ ಅದರ ಜನತಾಶಕ್ತಿಯನ್ನು ಕಾಯ್ದು ಕೌನ್ಸಿಲ್‌ಗಳ ಪ್ರವೇಶದ ಮೂಲಕ ಸರ್ಕಾರಕ್ಕೆ ತೋರುವುದೇ ಮೇಲೆಂದು ಬುದ್ಧಿವಾದ ಹೇಳಿದರು. ಅದರಂತೆಯೇ ಮೈಸೂರು ಕಾಂಗ್ರೆಸ್ ಚಳವಳಿಯನ್ನು ನಿಲ್ಲಿಸಿತು. ಇದೆಲ್ಲಾ ನಡೆದದ್ದು 1940ರಲ್ಲಿ ಎಂದು ನನ್ನ ಜ್ಞಾಪಕ. ಅಂದಿನಿಂದ ಮೈಸೂರು ಕಾಂಗ್ರೆಸ್ ಜಿಲ್ಲಾ ಬೋರ್ಡ್, ಮುನಿಸಿಪಾಲಿಟಿ, ಪ್ರಜಾ ಪ್ರತಿನಿಧಿ ಸಭೆ ಮತ್ತು ನ್ಯಾಯ ವಿಧಾಯಕ ಸಭೆಗಳಿಗೆ ಪ್ರವೇಶಿಸಲು ತೀರ್ಮಾನಿಸಿತು. ಜೈಲಿನಲ್ಲಿದ್ದ ಸತ್ಯಾಗ್ರಹಿಗಳ ಬಿಡುಗಡೆಯಾಗಲಿಲ್ಲ; ಕಾಂಗ್ರೆಸ್ ಪ್ರಚಾರಕಾರ್ಯಕ್ಕೆ ಅಡ್ಡಿ ಆತಂಕಗಳು ಒಡ್ಡಲ್ಪಟ್ಟವು. ಸಭೆಮೆರವಣಿಗೆಗಳು ನಡೆಯಕೂಡದೆಂದು ನಿಷೇಧಾಜ್ಞೆಗಳು ಹೊರಟವು. ಕಾಂಗ್ರೆಸ್‌ನವರು ಮನೆಮನೆಗಳಿಗೆ ಹೋಗಿ ಪ್ರಚಾರ ನಡೆಸುವುದು, ಖಾಸಗಿ ಸ್ಥಳಗಳಲ್ಲಿ ಸಣ್ಣ ಸಣ್ಣ ಸಭೆಗಳನ್ನು ಸೇರಿಸಿ ಭಾಷಣ ಮಾಡುವುದು ಮುಂತಾದ ಕಾರ್ಯಕ್ರಮಗಳನ್ನು ಅನುಸರಿಸಿದೆವು. ಈ ಕಾರ್ಯದಲ್ಲಿ ನನ್ನ ಪಾಲಿನ ಕರ್ತವ್ಯವನ್ನು ವಿಶೇಷವಾಗಿ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಪ್ರವಾಸಮಾಡಿ ನಿರ್ವಹಿಸಿದೆ. ಚುನಾವಣೆಗಳಲ್ಲಿ ಕಾಂಗ್ರೆಸ್ಸಿಗೆ ಪ್ರಚಂಡ ಜಯ ದೊರೆಯಿತು. ಈ ಮೇಲೆ ಹೇಳಿದ ಕಾರ್ಯಕ್ರಮಗಳಿಗೆಲ್ಲ ಶಿಸ್ತಿನಿಂದ ಕೆಲಸ ಮಾಡುವ ಸ್ವಯಂಸೇವಕರ ಆವಶ್ಯಕತೆ ಇತ್ತು. ಮಂಡ್ಯ ಜಿಲ್ಲೆಯ ಉಮ್ಮಡಹಳ್ಳಿಯಲ್ಲಿ ಸ್ವಯಂಸೇವಕರ ಶಿಬಿರವನ್ನು ಸ್ಥಾಪಿಸಿದೆವು. ನಾನೇ ಅದರ ಮುಖ್ಯಾಧಿಕಾರಿ. ದೇಶದ ಎಲ್ಲ ಜಿಲ್ಲೆಗಳಿಂದ ಸ್ವಯಂಸೇವಕರನ್ನು ಬರಮಾಡಿಕೊಂಡು ಅವರಿಗೆ ಸ್ವಯಂಸೇವಕರನ್ನು ತರಬೇತಿ ಮಾಡುವ ಶಿಕ್ಷಣವನ್ನು ಕೊಡಲಾಯಿತು. ಸುಮಾರು 40 ಮಂದಿ ಈ ಶಿಕ್ಷಣವನ್ನು ಪಡೆದರು. ಸುಬ್ರಹ್ಮಣ್ಯಂ ಮತ್ತು ರಾಘವೇಂದ್ರರಾವ್ ನನಗೆ ಸಹಾಯಕರಾಗಿದ್ದರು. ಇಲ್ಲಿ ಶಿಕ್ಷಣ ಪಡೆದವರೆಲ್ಲಾ ಅವರವರ ಜಿಲ್ಲೆಗಳಲ್ಲಿ ಶಿಕ್ಷಣ ಶಿಬಿರಗಳನ್ನು ಸ್ಥಾಪಿಸಿ ಅಲ್ಲಿಯ ಯುವಕರಿಗೆ ಶಿಕ್ಷಣ ಕೊಟ್ಟರು. ಇದರಿಂದಾಗಿ ಇಡೀ ಮೈಸೂರು ದೇಶದ ಎಲ್ಲಾ ಮುಖ್ಯ ಊರುಗಳಲ್ಲಿ ಸ್ವಯಂಸೇವಕರು ಕಾಂಗ್ರೆಸ್ಸಿನ ಕಾರ್ಯಗಳಲ್ಲಿ ಸಹಕರಿಸಲು ಸಹಾಯವಾಯಿತು. ಈ ಕಾಲದಲ್ಲಿ ಮೈಸೂರಿನ ಮಹಾರಾಜರಾದ

ಕೃಷ್ಣರಾಜ ಒಡೆಯರವರು ಗತಿಸಿದರು. ಕಾಂಗ್ರೆಸ್ಸಿನವರಾದ ನಾವೂ ಕೂಡ ಅವರ ಬಗ್ಗೆ ನಮ್ಮ ನಿಷ್ಠೆ ಮತ್ತು ಗೌರವಗಳನ್ನು ತೋರಿಸಿದೆವು. 1941ರಲ್ಲಿ ದಿವಾನ್ ಮೀರ್ಜಾರವರು ನಿವೃತ್ತರಾದರು. ಹೊಸ ಮಹಾರಾಜ ಜಯಚಾಮರಾಜ ಒಡೆಯರ್ ಬಂದಿದ್ದಾಯಿತು. ಎನ್. ಮಾಧವರಾಯರು ದಿವಾನರಾದರು. ಏನೇ ಆದರೂ ಕಾಂಗ್ರೆಸ್ಸಿನ ಬಗ್ಗೆ ಸರ್ಕಾರದ ಧೋರಣೆ ಬದಲಾಗಲಿಲ್ಲ. ಶಾಂತಿದೂತರಾಗಿ ಕಾಂಗ್ರೆಸ್ಸಿಗೂ ಸರ್ಕಾರಕ್ಕೂ ಮಧ್ಯೆ ಅಡ್ಡಾಡಿದವರ ಪ್ರಯತ್ನ ವಿಫಲವಾಯಿತು. ನಾವಾದರೋ ಯಾವ ಚಳವಳಿಯನ್ನೂ ಪ್ರತ್ಯಕ್ಷವಾಗಿ ನಡೆಸದಿದ್ದರೂ, ವ್ಯಕ್ತಿಗೌರವಕ್ಕೆ ಹಾನಿ ತರುವಂಥ ಆಜ್ಞೆಗಳನ್ನು ಸರ್ಕಾರದವರು ವ್ಯಕ್ತಿಗಳ ಮೇಲೆ ಹೇರಿದರೆ, ಆ ವ್ಯಕ್ತಿಗಳು ಅದನ್ನು ಉಲ್ಲಂಘಿಸುತ್ತಿದ್ದರು. (ಉದಾಹರಣೆಗೆ, ಮನೆ ಬಿಟ್ಟು ಬರಬಾರದು, ಹಳ್ಳಿ ಬಿಟ್ಟು ಬರಬಾರದು ಎಂಬ ಆಜ್ಞೆಗಳು.)

ಇಷ್ಟು ಹೊತ್ತಿಗೆ 1942ರ ಚಳವಳಿ ಆರಂಭವಾಯಿತು. ಮೈಸೂರು ಕಾಂಗ್ರೆಸ್ಸಿನವರು ಆ ಚಳವಳಿಯಲ್ಲಿ ಯಾವ ರೀತಿ ಪಾಲ್ಗೊಳ್ಳಬೇಕೆಂದು ಚರ್ಚಿಸುವ ಸಲುವಾಗಿ ಕಾಂಗ್ರೆಸ್ ಮುಖಂಡರನ್ನು ಭೇಟಿ ಮಾಡಲು ನಮ್ಮ ಮುಖಂಡರು ಬೊಂಬಾಯಿಗೆ ಹೋಗಿದ್ದರು. ಅವರು ಹಿಂತಿರುಗಿ ಬಂದು ಮೈಸೂರು ದೇಶದ ಎಲ್ಲೆಯಾದ ಹರಿಹರವನ್ನು ಮುಟ್ಟಿದ ಕೂಡಲೇ ಅವರುಗಳನ್ನು ಬಂಧಿಸಲಾಯಿತು. ಈ ಸರ್ಕಾರದ ದೌರ್ಜನ್ಯದ ಕಾರ್ಯವೇ ಮೈಸೂರಿನಲ್ಲಿ ನಡೆದ 'ಕ್ವಿಟ್ ಇಂಡಿಯಾ' ಚಳವಳಿಗೆ ನಾಂದಿಯಾಯಿತು. ನನ್ನನ್ನು ಆಗಸ್ಟ್ ತಿಂಗಳಲ್ಲಿ ನಮ್ಮ ಮನೆಗೆ ಬಂದು ಮಧ್ಯರಾತ್ರಿಯಲ್ಲಿ ಬಂಧಿಸಿದರು. ಹೀಗೆ ಅಗರಂ ರಂಗಯ್ಯ, ರಂಗರಾಮಯ್ಯ, ತಗಡೂರು ರಾಮಚಂದ್ರರಾವ್, ಸೂರ್ಯನಾರಾಯಣ ಪಂಡಿತ್, ಎಸ್. ಚನ್ನಯ್ಯ ಮೊದಲಾದವರನ್ನು ಬಂಧಿಸಿದರು. ಬಹುಶಃ 10 ಅಥವಾ 11ರಂದು ನನ್ನ ಬಂಧನವಾಯಿತು. ಆದ್ದರಿಂದ 1942ರ ಚಳವಳಿಯಲ್ಲಿ ಕ್ರಿಯಾತ್ಮಕವಾದ ಯಾವ ಭಾಗವನ್ನೂ ನನಗೆ ವಹಿಸಲಾಗಲಿಲ್ಲ. 1943ನೇ ಅಕ್ಟೋಬರ್ ವೇಳೆಗೆ ನನ್ನ ಬಿಡುಗಡೆಯಾಯಿತು. ಮೈಸೂರು ಕಾಂಗ್ರೆಸ್‌ನ ಆಗಿನ ಧೋರಣೆಯಾಗಿದ್ದ ಕಾಯಿದೆ ಕೌನ್ಸಿಲ್‌ಗಳ ಪ್ರವೇಶ ಬದಲಾಗಿರಲಿಲ್ಲ. ನಾನೂ ಸಹ ಸಿಟಿ ಮುನಿಸಿಪಾಲಿಟಿ, ಅಸೆಂಬ್ಲಿ ಮತ್ತು ನ್ಯಾಯ ವಿಧಾಯಕ ಸಭೆಗಳಿಗೆ ಚುನಾಯಿತನಾಗಿ ಹಲವಾರು ವರುಷಗಳಿದ್ದೆ.

ಕಾಯಿದೆ ಕೌನ್ಸಿಲ್‌ಗಳನ್ನು ಕಾಂಗ್ರೆಸ್ ಪ್ರವೇಶ ಮಾಡಿದಮೇಲೆ ಆ ಸಭೆಗಳಲ್ಲಿ ಕಾಂಗ್ರೆಸ್ ಪಕ್ಷವನ್ನು ಸ್ಥಾಪಿಸಿತು. ಅಸೆಂಬ್ಲಿ ಕೌನ್ಸಿಲ್‌ಗಳಲ್ಲಿ ಕೈಗೊಳ್ಳಬೇಕಾದ ಕಾರ್ಯಕ್ರಮವನ್ನು ಪಕ್ಷದ ಸಭೆಯಲ್ಲಿ ತೀರ್ಮಾನಿಸಲಾಗುತ್ತಿತ್ತು. ಅಸೆಂಬ್ಲಿ ಮತ್ತು ಕೌನ್ಸಿಲ್‌ಗಳಲ್ಲಿ ಸರ್ಕಾರದ ಧೋರಣೆಗಳ ಬಗೆಗೆ ತೀವ್ರಪ್ರತಿಭಟನೆ ತೋರುತ್ತಿತ್ತು. ಕಾಂಗ್ರೆಸ್‌ನ 'ಪಕ್ಷ'ವು ಬಹುಮತವನ್ನು ಹೊಂದಿದ್ದರೂ ಸರ್ಕಾರವು ಮಾತ್ರ ಅದರ ಅಭಿಪ್ರಾಯಕ್ಕೆ ಮನ್ನಣೆ ಕೊಡುತ್ತಿರಲಿಲ್ಲ. ಈ ಕಾಂಗ್ರೆಸ್ ಪಕ್ಷದ ಸೆಕ್ರೆಟರಿಯಾಗಿಯೂ

ಮತ್ತು ಮುಖ್ಯ ಸಂಚಾಲಕನಾಗಿಯೂ (ಚೀಫ್ ವ್ಹಿಪ್) ನಾನು ಕಾರ್ಯನಿರ್ವಹಿಸಿದೆ. ಹೀಗೆ ಮೈಸೂರಿನ ರಾಜಕೀಯವು ಸರ್ಕಾರದೊಡನೆ ಪ್ರತ್ಯಕ್ಷವಾಗಿ ಅಸೆಂಬ್ಲಿ, ಕೌನ್ಸಿಲ್, ಜಿಲ್ಲಾ ಬೋರ್ಡುಗಳಲ್ಲಿ ಅವ್ಯಾಹತವಾಗಿ ನಡೆಸಿಕೊಂಡು ಹೋಗುತ್ತಿದ್ದಂತೆ 1947ನೇ ಆಗಸ್ಟ್ 15ರಲ್ಲಿ ಹಿಂದೂಸ್ಥಾನಕ್ಕೆ ಸ್ವಾತಂತ್ರ್ಯವು ಲಭಿಸಿತು. ಆದರೂ ಮೈಸೂರಿನ ಜನರು ಜವಾಬ್ದಾರಿ ಸರ್ಕಾರವನ್ನು ಹೋರಾಟದಿಂದಲೇ ಪಡೆಯಬೇಕಾಯಿತು.

ಮೇಲೆ ಹೇಳಿರುವಂತೆ ಸುಮಾರು 1941 ರಿಂದ 1947ನೇ ಸೆಪ್ಟೆಂಬರ್‌ವರೆಗೆ ಮೈಸೂರು ಕಾಂಗ್ರೆಸ್ಸಿನ ರಾಜಕೀಯ ವಿಶೇಷವಾಗಿ ಕಾಯಿದೆ ಕೌನ್ಸಿಲ್ ಒಳಗಿನ ಆರ್ಭಟ, ವಿರೋಧ ಮತ್ತು ರೀತಿನೀತಿಗಳ ಪ್ರತಿಪಾದನೆಯಲ್ಲಿತ್ತು. ಮೈಸೂರು ಕಾಂಗ್ರೆಸ್ಸಿನ ಅಸೆಂಬ್ಲಿ ಪಕ್ಷವು ಬಹಳ ಶಿಸ್ತಿನಿಂದ ಕೆಲಸಮಾಡುತ್ತಿತ್ತು. ಸದಸ್ಯರು ಮಾತನಾಡಬೇಕಾದುದನ್ನು ಮೊದಲೇ ತೀರ್ಮಾನಿಸಲಾಗುತ್ತಿತ್ತು. ಆಯಾ ದಿನಗಳಲ್ಲಿ ಸಭೆಯಲ್ಲಿ ಮಾತನಾಡತಕ್ಕವರ ಹೆಸರುಗಳನ್ನು ಪಕ್ಷದ ಸಭೆಯಲ್ಲಿ ತೀರ್ಮಾನಿಸಲಾಗುತ್ತಿತ್ತು. ಪಕ್ಷದ ಸದಸ್ಯರಿಗೆ ಚರ್ಚಿಸಬೇಕಾದ ವಿಷಯಗಳ ಬಗೆಗೆ ಮಾಹಿತಿ ಕೊಡಲೂ ವಿಷಯಗಳನ್ನು ಸಂಗ್ರಹಿಸಿಕೊಡಲೂ ಬಿ. ಎನ್. ಗುಪ್ತ, ಟಿ. ಎಸ್. ರಾಜಗೋಪಾಲ್ ಅಯ್ಯಂಗಾರ್, ದೊರೆಸ್ವಾಮಿ ಅಯ್ಯಂಗಾರ್ ಹಾಗೂ ನಾನು ಇದ್ದ ಸಮಿತಿಯೊಂದು ಕೆಲಸಮಾಡುತ್ತಿತ್ತು. ಹೀಗಾಗಿ ಅಸೆಂಬ್ಲಿಯಲ್ಲಿ ಚರ್ಚೆಯ ಮಟ್ಟ ಉತ್ತಮವಾಗಿತ್ತೆಂದು ಹೇಳಬಹುದು. ಒಮ್ಮೆ ದಿವಾನ್-ಪ್ರೆಸಿಡೆಂಟ್ ಎನ್. ಮಾಧವರಾಯರು ಒಂದು ಕ್ರಿಯಾಲೋಪದ ಮೇಲೆ ತೀರ್ಪನ್ನು ಕೊಟ್ಟರು; ಅದು ನಮಗೆ ಸರಿಯೆನಿಸಲಿಲ್ಲ. ಅಸೆಂಬ್ಲಿ ಆಗಿನ ಕಾಲದಲ್ಲಿ ಮೈಸೂರಿನಲ್ಲಿ ಕೂಡುತ್ತಿತ್ತು. ಅಸೆಂಬ್ಲಿಯಲ್ಲಿ ನಡೆದ ಕಾರ್ಯಕಲಾಪಗಳನ್ನು ನಿತ್ಯವೂ ಜನರಿಗೆ ವಿವರಿಸಲು ಸಾಯಂಕಾಲ ಸಭೆ ಜರುಗುತ್ತಿತ್ತು. ಅಂಥ ಒಂದು ಸಭೆಯಲ್ಲಿ ನಮ್ಮ ಪಕ್ಷದ ನಾಯಕರಾಗಿದ್ದ ಕೆ. ಸಿ. ರೆಡ್ಡಿಯವರು ಈ ಕ್ರಿಯಾಲೋಪದ ಬಗ್ಗೆ ಮಾತನಾಡಿದರು. ಮಾರನೇ ದಿನದ ಅಸೆಂಬ್ಲಿಯಲ್ಲಿ ಮದ್ದೂರಿನ ಮೆಂಬರಾದ ಎಸ್. ಸಿ. ಮಲ್ಲಯ್ಯ ಮತ್ತು ಇತರರು ದಿವಾನರ ತೀರ್ಪನ್ನು ಟೀಕಿಸುವುದರ ಮೂಲಕ ಕೆ. ಸಿ. ರೆಡ್ಡಿಯವರು ಸಭಾ ಅವಹೇಳನ ಮಾಡಿದ್ದಾರೆ; ಇದು ಅಸೆಂಬ್ಲಿ ಪ್ರತಿಷ್ಠೆಗೆ ಧಕ್ಕೆತಂದಿದೆ ಎಂಬ ಸೂಚನೆ ಇಟ್ಟರು. ಇದರ ಬಗ್ಗೆ ಎರಡು ದಿವಸಗಳ ವಾದವಿವಾದಗಳಾದವು. ಕಡೆಗೆ ದಿವಾನ್ ಪ್ರೆಸಿಡೆಂಟರು ಅದನ್ನು ಚರ್ಚೆಯಲ್ಲೇ ಮುಗಿಸಿದರು. ಅಂದು ಮಧ್ಯಾಹ್ನ ಪ್ರೆಸಿಡೆಂಟರು ತಮ್ಮ ಜೊತೆಗೆ ಟೀಗೆ ಬರುವಂತೆ ನನಗೆ ಆಹ್ವಾನ ಕಳಿಸಿದರು. ಆ ಸಂದರ್ಭದಲ್ಲಿ ಮಾತನಾಡುತ್ತಿದ್ದಾಗ ಅವರು ಚರ್ಚೆ ನಡೆದ ಮಟ್ಟದ ವಿಷಯದಲ್ಲಿ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು. ತಾವು ಹತ್ತಾರು ವರ್ಷಗಳಿಂದ ಅಸೆಂಬ್ಲಿಯಲ್ಲಿ ಇರುವುದಾಗಿಯೂ, ಕಾಂಗ್ರೆಸ್ ಪಕ್ಷ ಬಂದಮೇಲೆ ಚರ್ಚೆಯ ಮಟ್ಟ ಉನ್ನತವಾಗಿರುವುದಾಗಿಯೂ ಹೇಳಿದರು. ಅಲ್ಲದೆ,

ಇಂದಿನ ಚರ್ಚೆಯು ಮಟ್ಟವು ಪ್ರಪಂಚದ ಯಾವುದೇ ದೇಶದ ಪಾರ್ಲಿಮೆಂಟಿನ ಚರ್ಚೆಗೆ ಕಡಿಮೆಯಾಗಿರಲಿಲ್ಲವೆಂದೂ ಸಹ ನುಡಿದರು.

ನಾನು ಭಾಷಣ ಮಾಡಿದ ಸಭೆಗಳಲ್ಲಿ ಚಿಕ್ಕವೂ ದೊಡ್ಡವೂ ಸೇರಿದರೆ ಸಾವಿರವಾಗಬಹುದು ; ಮೆರವಣಿಗೆಗಳು ನೂರಾರಾಗಬಹುದು. ನಾನು ಹೋದೆಡೆಯಲ್ಲೆಲ್ಲ ಜನರಲ್ಲಿ ಅಪರಿಮಿತವಾದ ಉತ್ಸಾಹ ಕಂಡುಬರುತ್ತಿತ್ತು ; ರಾತ್ರಿಹಗಲೆನ್ನದೆ ಸಭೆಗಳಿಗೆ ಜನ ಸೇರುತ್ತಿದ್ದರು. ನಾನು ಮೈಸೂರು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿಯೂ ಪ್ರಚಾರ ಕಾರ್ಯಕ್ಕಾಗಿ ಸಂಚರಿಸಿದ್ದೇನೆ. ಉತ್ತರ ಕರ್ನಾಟಕದಲ್ಲಿಯೂ ಸಹ ಆಗಿನ ಪ್ರಚಾರ ಸಭೆಗಳಲ್ಲಿ ಭಾಷಣ ಮಾಡಿದ್ದೇನೆ.

ಒಮ್ಮೆ ಕೆ. ಸಿ. ರೆಡ್ಡಿಯವರು ಮತ್ತು ನಾನು ಹುಬ್ಬಳ್ಳಿಯಲ್ಲಿ ಭಾಷಣ ಮಾಡಿದೆವು. ರಾತ್ರಿ ಹನ್ನೊಂದು ಘಂಟೆಯಾಗಿದ್ದರೂ ಹತ್ತಾರು ಸಾವಿರ ಜನ ಸೇರಿದ್ದರು. ಅಂದಿನ ಸಭೆಗೆ ಅಧ್ಯಕ್ಷರಾಗಿದ್ದವರು ಡಾ|| ಹರ್ಡೀಕರ್. ಹೀಗೆಯೇ ಒಮ್ಮೆ ನಾನು ಭಾಷ್ಯಂ ಮತ್ತು ದಾಸಪ್ಪನವರು ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಚಾರಕ್ಕೆ ಹೊರಟೆವು. ಬೆಂಗಳೂರಿನಿಂದ ಹೊಸದುರ್ಗಕ್ಕೆ ರಾತ್ರಿ ರೈಲಿನಲ್ಲಿ ಪ್ರಯಾಣ. ರಾತ್ರಿ ಎರಡು ಘಂಟೆಗೆ ಹೊಸದುರ್ಗದಲ್ಲಿಳಿದೆವು. ನೇರ ನೆರೆದಿದ್ದ ಜನಸ್ತೋಮದ ಮುಂದೆ ಭಾಷಣ ಆರಂಭಿಸಿದೆವು. ವ್ಯವಸ್ಥಾಪಕರಾದ ಎಸ್. ವಾಸುದೇವರಾಯರು ಎರಡು ಕಾರುಗಳನ್ನು ಸಿದ್ಧ ಮಾಡಿದ್ದರು. ಮೊದಲು ಭಾಷ್ಯಂರವರು ಭಾಷಣ ಮಾಡಿದರು. ದಾಸಪ್ಪನವರ ಭಾಷಣ ಆರಂಭವಾದ ಕೂಡಲೇ ಭಾಷ್ಯಂರನ್ನು ಮುಂದಿನ ಊರಿಗೆ ಒಂದು ಕಾರಿನಲ್ಲಿ ಕರೆದುಕೊಂಡು ಹೋದರು. ನಾನೂ ದಾಸಪ್ಪನವರೂ ಭಾಷಣ ಮುಗಿಸಿಕೊಂಡು ಮುಂದಿನ ಊರಿಗೆ ಹೋಗುವಷ್ಟರಲ್ಲಿ ಭಾಷ್ಯಂರ ಭಾಷಣ ಮುಕ್ತಾಯವಾಗಿತ್ತು. ನಮ್ಮ ಭಾಷಣ ಆರಂಭವಾದಂತೆ ಮುಂದಿನ ಊರಿಗೆ ಭಾಷ್ಯಂರ ಪ್ರಯಾಣ. ಹೀಗೆ ಬೆಳಗಿನ ಜಾವ ಎರಡು ಘಂಟೆಯಿಂದ ರಾತ್ರಿ ಏಳು ಘಂಟೆಯವರೆಗೆ ಹತ್ತಾರು ಸಭೆಗಳನ್ನು ಮುಗಿಸಿಕೊಂಡು ರಾತ್ರಿ ಎಂಟು ಘಂಟೆಗೆ ರೈಲಿನಲ್ಲಿ ಬೆಂಗಳೂರಿಗೆ ಹಿಂತಿರುಗಿದೆವು. ಹೋದ ಕಡೆಗಳಲ್ಲೆಲ್ಲ ಎತ್ತಿನ ಗಾಡಿಗಳಲ್ಲಿ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗುತ್ತಿದ್ದುದುಂಟು. ಈ ಸಂದರ್ಭದಲ್ಲಿ ಚನ್ನಪಟ್ಟಣದಲ್ಲಿ ಭೈರಾಪಟ್ಟಣದ ಗ್ರಾಮಸ್ಥರು ನಡೆಸಿದ ವೈಭವೋಪೇತವಾದ ಮೆರವಣಿಗೆ ಸ್ಮರಣಾರ್ಹ.

ದಾಸಪ್ಪನವರು ರಾಜದ್ರೋಹಕ್ಕೆ ಬಂಧಿಸಲ್ಪಟ್ಟಿದ್ದರು. ವಿಚಾರಣೆಗೆ ಮ್ಯಾಜಿಸ್ಟ್ರೇಟರ ಕೋರ್ಟಿಗೆ ಅವರನ್ನು ಕರೆತರಲಾಗಿತ್ತು. ಅಕ್ಕಪಕ್ಕದ ಊರಿನ ಹಳ್ಳಿ ಜನರ ಸಂದಣಿ ಕೋರ್ಟ್ ಬಳಿ ಅಪಾರವಾಗಿತ್ತು ; ಈ ಜನರನ್ನು ಹತೋಟಿಯಲ್ಲಿಡುವುದು ಪೋಲೀಸರಿಗೆ ಕಷ್ಟವಾಗಿತ್ತು. ಈ ಜನರು ಹಾರಗಳನ್ನು ತಂದು ದಾಸಪ್ಪನವರಿಗೆ ಅರ್ಪಿಸಬೇಕೆಂದಿದ್ದರು. ಕೊನೆಗೆ ನಮ್ಮ ಮತ್ತು ಪೋಲೀಸರ ಸಮ್ಮತಿಯಿಂದ, ಜನರೆಲ್ಲಾ ಸಾಲಾಗಿ ನಿಲ್ಲಬೇಕೆಂದೂ, ದಾಸಪ್ಪನವರು ಸಾಲಿನಲ್ಲಿ ಬಂದಾಗ ಆಯಾ ಸಾಲಿನ ಜನ

ಅವರಿಗೆ ಗೌರವವನ್ನು ಸೂಚಿಸಬಹುದೆಂದೂ ತೀರ್ಮಾನವಾಯಿತು. ಅದರಂತೆ ಒಂದು ಸುತ್ತು ಮುಗಿಸಿಕೊಂಡು ಬರಲು ಸುಮಾರು ಎರಡು ಘಂಟೆ ಹಿಡಿಯಿತು.

ಹೀಗೆ ಅನೇಕ ಸಂದರ್ಭಗಳನ್ನು ಜನರ ಉತ್ಸಾಹದ ನಿದರ್ಶನವಾಗಿ ಹೇಳಬಹುದು. ಓಗೆಯೇ ಶಿವಪುರದ ಧ್ವಜಸತ್ಯಾಗ್ರಹ ಕಾಲದಲ್ಲಿ ಶಿಕ್ಷೆಪಡೆದಿದ್ದ ಸತ್ಯಾಗ್ರಹಿಗಳನ್ನು ಮೈಸೂರು ಜೈಲಿನಿಂದ ಬಿಡುಗಡೆ ಮಾಡಿದರು—ಆ ಜನರಲ್ಲಿ ನಾನೂ ಇದ್ದೆನು. ಜನರು ನಮ್ಮನ್ನು ಮೆರವಣಿಗೆಯಲ್ಲಿ ಕರೆದುಕೊಂಡು ಹೋದರು. ಕ್ಲಾಕ್ ಟವರ್‌ವರೆಗೆ ಒಂದೇ ಸಮನೆ ಅಖಂಡ ಜನಸಮುದಾಯವಿತ್ತು. ಜನ ನಮಗೆ ತೋರಿದ ಆದರವಿಶ್ವಾಸಗಳಿಗೆ ಪ್ರತಿಯಾಗಿ ನಾವು ಅವರಿಗೆ ಏನು ಮಾಡಿದ್ದೇವೆ ?—ಎಂದು ಅನಿಸುತ್ತಿತ್ತು.

ಶಿರ್ಸಿ, ಸಿದ್ದಾಪುರ, ಅಂಕೋಲಾ ತಾಲ್ಲೂಕುಗಳಲ್ಲಿ ಕೆಲಸ ಮಾಡುತ್ತಿರುವಾಗ ಗುಪ್ತವಾಗಿ ನಡೆದುಕೊಳ್ಳಬೇಕಾಗಿತ್ತು. ಶಿರ್ಸಿ ತಾಲ್ಲೂಕಿನಲ್ಲಿ ಅಡ್ಡಾಡುವಾಗ ಹವೀಕ ಬ್ರಾಹ್ಮಣನಂತಿರುತ್ತಿದ್ದೆ ; ಸಿದ್ದಾಪುರದಲ್ಲಿ ಜಂಗಮಯ್ಯನಾಗಿರುತ್ತಿದ್ದೆ. ಒಮ್ಮೆ ನಾನ ಪಡವಗೋಡು ರುದ್ರಪ್ಪಗೌಡರ ಮನೆಯಲ್ಲಿ ಆಶ್ರಯಪಡೆದಿದ್ದೆ. ಇದು ಪೋಲೀಸರಿಗೆ ತಿಳಿದು ಅವರು ಮನೆಯನ್ನು ಮುತ್ತಿದರು. ನಾನು ಅವರ ಮನೆಯಲ್ಲಿ ದೇವರ ಕೋಣೆಯಲ್ಲಿ ಜಂಗಮಯ್ಯನಾಗಿ ಶಿವಪೂಜೆ ಮಾಡುತ್ತಿದ್ದೆ ; ಪೋಲೀಸರು ಜಂಗಮಯ್ಯನಿಗೆ ನಮಸ್ಕರಿಸಿ ಹೋದರು. ಮತ್ತೊಮ್ಮೆ ಕಾಸಲೆಯಲ್ಲಿ ಪುಟ್ಟಪ್ಪನವರ ಮನೆಯಲ್ಲಿದ್ದೆ. ಅಲ್ಲಿಗೂ ಪೋಲೀಸರು ಬಂದರು. ಅಲ್ಲೇ ಇದ್ದ ಗಣಪತಿ ಗುಡಿಗೆ ಅಭಿಷೇಕಕ್ಕೆ ನೀರು ತರುವ ದೇವಸ್ಥಾನದ ಹವೀಕ ಪರಿಚಾರಕನಾದೆ. ಪೋಲೀಸರು ಹಿಂತಿರುಗಿದರು. ಮತ್ತೊಮ್ಮೆ ಹರೀಶೆ, ಕೆರೆಮನೆ, ಮಂಗಳೂರು ಹಳ್ಳಿಗಳನ್ನು ಒಮ್ಮೆಲೇ ಪೋಲೀಸರು ಸುತ್ತುವರಿದರು. ಆಗ್ಗೆ ಕೆರೆಮನೆ ನಮ್ಮ ಕೇಂದ್ರ ಕಛೇರಿಯಾಗಿತ್ತು. ಸುದ್ದಿ ತಿಳಿದ ಕೂಡಲೇ ಸಂಬಂಧಪಟ್ಟ ಕಾಗದಪತ್ರಗಳನ್ನು ಹತ್ತಿರವೇ ಇದ್ದ ತೋಟದಲ್ಲಿ ಬಚ್ಚಿಡಲಾಯಿತು. ನಾನು ದನಕಾಯುವ ದೀವ ಜನಾಂಗದವನಾದೆ. ಲಕ್ಷ್ಮಮ್ಮನವರ ಮನೆಯ ದನಗಳನ್ನು ಬಿಟ್ಟರು. ಅವುಗಳನ್ನು ಅಟ್ಟಿಕೊಂಡು ಎದುರಿಗೆ ಬರುತ್ತಿದ್ದ ಪೋಲೀಸರ ಸಮ್ಮುಖದಲ್ಲೇ ಗುಡ್ಡಕ್ಕೆ ಹೋದೆ. ಪೋಲೀಸರ ಕೆಲಸ ನಿರರ್ಥಕವಾಯಿತು.

ಒಮ್ಮೆ ಕುಪ್ಪಳ್ಳಿ ಗ್ರಾಮದಲ್ಲಿ ವೆಂಕಟರಾಮಯ್ಯನವರಿದ್ದರು. ಅವರನ್ನು ಭೇಟಿ ಮಾಡಲು ಹೋದೆ ; ಅವರಿದ್ದ ಮನೆಗೆ ಹೋಗಿ ವಿಚಾರಿಸಿದೆ. ವೆಂಕಟರಾಮಯ್ಯನವರಿಲ್ಲವೆಂದು ಹೇಳಿದರು. ಆದರೂ ಸ್ವಲ್ಪ ಕೆದಕಿ ಕೇಳಿದೆ. ಮನೆಯ ಯಜಮಾನರಾದ ವೆಂಕಟೇಗೌಡರು ಹೊರಟುಹೋಗೆಂದು ಅಬ್ಬರಿಸಿದರು. ಅವರ್ಯಾರಿಗೂ ನನ್ನ ಪರಿಚಯವಿರಲಿಲ್ಲ. ನನ್ನನ್ನು ಅವರಲ್ಲಿಗೆ ಕರೆದೊಯ್ಯಬೇಕಾಗಿದ್ದ ಸ್ವಯಂಸೇವಕನು ತೀರ್ಥಹಳ್ಳಿ ಪೋಲೀಸರಿಗೆ ಸೆರೆ ಸಿಕ್ಕಿದ್ದರಿಂದ ನಾನೊಬ್ಬನೇ ಕುಪ್ಪಳ್ಳಿಗೆ ಹೋಗಬೇಕಾಯಿತು. ನಾನು ಒಬ್ಬ ಸಿ.ಐ.ಡಿ. ಎಂದು ತಿಳಿದು, ಗೌಡರು ನಿಜ ಹೇಳದಿದ್ದರೆ ಸುಟ್ಟುಬಿಡುವುದಾಗಿ ಹೇಳುತ್ತಾ ಕೋವಿಯನ್ನು ತಂದೇ ಬಿಟ್ಟರು. ಮಹಡಿಯ ಮೇಲಿದ್ದ ವೆಂಕಟರಾಮಯ್ಯ

ಅವರು ಈ ಗಲಾಟೆಯನ್ನು ಕೇಳಿಸಿಕೊಂಡು ಕೆಳಗಿಳಿದು ಬಂದರು; ಗೌಡರಿಗೆ ನನ್ನ ಪರಿಚಯ ಮಾಡಿಸಿದರು. ಆಗ ಗೌಡರು, "ನಾವು ಆಶ್ರಯ ಕೊಟ್ಟವರನ್ನು ನಮ್ಮ ಪ್ರಾಣ ಇರುವವರೆಗೆ ಪೋಲೀಸರ ಕೈಗೆ ಕೊಡುವುದಿಲ್ಲವೆಂಬ ಸಿದ್ಧಾಂತಕ್ಕೆ ಬಂದಿದ್ದೇವೆ. ಆದ್ದರಿಂದ ನಿಮ್ಮ ಬಗ್ಗೆ ಈ ಕಠಿಣ ರೀತಿಯಲ್ಲಿ ವರ್ತಿಸಿದೆ" ಎಂದು ಹೇಳಿದರು.

ಅಂಕೋಲದಲ್ಲಿ ಇದ್ದಾಗ ಗೋಕರ್ಣದ ಭಟ್ಟನಾಗಿಯೂ, ನಾಡವನಾಗಿಯೂ ಅಡ್ಡಾಡುತ್ತಿದ್ದೆ. ವಿಶೇಷವಾಗಿ ಇಲ್ಲಿ ನಮ್ಮ ಕ್ಯಾಂಪುಗಳು ಕಾಡಿನಲ್ಲೇ ಇರುತ್ತಿದ್ದವು. ಎಷ್ಟೋ ಬಾರಿ ಪೋಲೀಸರಿಂದ ತಪ್ಪಿಸಿಕೊಳ್ಳಲು ದೋಣಿಗಳಲ್ಲೇ ಇರಬೇಕಾಗುತ್ತಿತ್ತು. ರಾತ್ರಿವೇಳೆ ಸಂಚರಿಸುವಾಗ ಒಂಟಿಮರ ಹಾಕಿರುವ ಸಂಕಗಳ ಮೇಲೆ ಅಡ್ಡಾಡಬೇಕಿತ್ತು. ಬಿಕ್ಕಿನ ಮೇಲೆ, ಊರಿಂದ ಊರಿಗೆ, ಕಾಡಿನಲ್ಲೇ ಮರದ ರೆಂಬೆಗಳನ್ನು ಕಡಿದುಕೊಂಡು ನಮ್ಮದೇ ದಾರಿ ಮಾಡಿಕೊಂಡು ಹೋಗಿಬರುತ್ತಿದ್ದೆವು. ಈ ಕಾರ್ಯದಲ್ಲಿ ನನಗೆ ಸಹಾಯಕನಾಗಿ ಜಟ್ಟಿಂಗ ಎಂಬ ಸ್ವಯಂಸೇವಕನಿದ್ದನು.

ಮೇಲೆ ಹೇಳಿದಂತೆ ಮೈಸೂರು ಕಾಂಗ್ರೆಸ್ಸಿಗೂ ಸರ್ಕಾರಕ್ಕೂ ಒಡಂಬಡಿಕೆ ಆಗಲಿಲ್ಲ. ಈ ಸಮಯದಲ್ಲಿ ಹೊಳೆನರಸೀಪುರದಲ್ಲಿ ನಡೆದ ಅಖಿಲ ಮೈಸೂರು ಕಾಂಗ್ರೆಸ್ಸಿನ ಸಭೆಯಲ್ಲಿ ಒಂದು ಗುಂಪಿನವರು ಚಳವಳಿಯನ್ನು ಉಗ್ರರೂಪದಲ್ಲಿ ನಡೆಸಬೇಕೆಂಬ ಬಗ್ಗೆ ಒತ್ತಾಯಪಡಿಸಿದರು. ಅವರಿಗೆ ಜಯ ಸಿಗಲಿಲ್ಲ. ಆದ್ದರಿಂದ ಅವರು 'ಪ್ರಗತಿ ಪಕ್ಷ' ಎಂಬ ಪಕ್ಷವನ್ನು ಕಾಂಗ್ರೆಸ್ಸಿನೊಳಗೆ ಸ್ಥಾಪಿಸಿದರು. ಶಿಸ್ತಿನಿಂದ ಕಾಂಗ್ರೆಸ್ಸಿನ ಅಧಿವೇಶನಗಳಲ್ಲಿ ತಮ್ಮ ಧೋರಣೆಯನ್ನು ಒತ್ತಾಯಿಸುತ್ತಿದ್ದರು. 'ಪೌರವಾಣಿ' ಎಂಬ ಪತ್ರಿಕೆಯನ್ನು ಆರಂಭಿಸಿದರು. ಈ ಕೆಲಸಕಾರ್ಯಗಳಲ್ಲೆಲ್ಲಾ ಬಹಳವಾಗಿ ಸಹಕರಿಸುತ್ತಿದ್ದವರು ಭದ್ರಣ್ಣ, ದೊರೆಸ್ವಾಮಿ, ಶ್ರೀಧರ್, ಶರ್ಮ, ಕುಮಾರನ್ ಮುಂತಾದ ಪ್ರಗತಿಗಾಮಿಗಳು. ನಾನು 'ಪೌರವಾಣಿ' ಮುದ್ರಕನಾಗಿದ್ದೆ; ಭದ್ರಣ್ಣನವರು ಜೀವಂತ ಇರುವವರೆಗೆ ಸಂಪಾದಕರಾಗಿದ್ದರು. ಹೀಗೆ ಸರ್ಕಾರಕ್ಕೂ ಮೈಸೂರು ಕಾಂಗ್ರೆಸ್ಸಿಗೂ ಅವ್ಯಾಹತವಾಗಿ ಚಳವಳಿ ಇಲ್ಲದಿದ್ದರೂ ಸೆಣಸಾಟ ಸಾಗಿತ್ತು. ಶೇಕಡಾ 75ರಷ್ಟು ಶಾಸಕರು ಜವಾಬ್ದಾರಿ ಸರ್ಕಾರದ ಬಗ್ಗೆ ಮಹಾರಾಜರಲ್ಲಿ ಬಿನ್ನವಿಸಿದರು; ಏನೂ ಪ್ರಯೋಜನವಾಗಲಿಲ್ಲ. ಶಾಸನಸಭೆಯಲ್ಲಿ ಸರ್ಕಾರಕ್ಕೆ ಸೋಲು ಉಂಟಾದರೂ ಏನೂ ಪ್ರಯೋಜನವಾಗಲಿಲ್ಲ. ಭಾರತ ಸ್ವತಂತ್ರವಾದಾಗ ದಿವಾನರು ಹೊರಡಿಸಿದ ಸುಧಾರಣಾ ನಿರೂಪವು ಕಾಂಗ್ರೆಸ್ಸಿಗೆ ಒಪ್ಪಿಗೆಯಾಗಲಿಲ್ಲ. ಆದ್ದರಿಂದ 'ಮೈಸೂರು ಚಲೋ' ಚಳವಳಿಯನ್ನು ಕಾಂಗ್ರೆಸ್ ಆರಂಭಿಸಿತು. ಈ ಕಾಲದಲ್ಲಿ ನಾನು ಭೂಗತನಾಗಿ ಕೆಲಸ ಮಾಡುತ್ತಿದ್ದೆ. ಮೈಸೂರಿನಲ್ಲಿಯ ಚಳವಳಿಯ ರೂಪುರೇಷೆಗಳನ್ನು ಅಂದಾಜುಮಾಡಿ ವಿದ್ಯಾರ್ಥಿಕಾರ್ಯಕರ್ತರ ಕೈಗೆ ಒಪ್ಪಿಸಿ ಹಿಂದೂಪುರಕ್ಕೆ ಹೋದೆ. ಇಲ್ಲಿ ನನ್ನ ಹಾಗೇ ಗುಪ್ತವಾಗಿದ್ದ ದೊರೆಸ್ವಾಮಿ, ಶ್ರೀಧರ್ ಮೊದಲಾದವರು ಲಿಂಗಣ್ಣನವರ ಸೇವಾಶ್ರಮದಲ್ಲಿ ಒಂದು ಸತ್ಯಾಗ್ರಹ ಶಿಬಿರವನ್ನು ಸ್ಥಾಪಿಸಿದ್ದರು.

ತಿರುಮಲೆ ತಾತಾಚಾರ್ಯ ಶರ್ಮ ಬರೆದಿದ್ದ ಕೆಲವು ಲೇಖನಗಳನ್ನು ಪ್ರಕಟಿಸ ಕೂಡದೆಂದು ಸರ್ಕಾರ 'ಪೌರವಾಣಿ'ಯ ಮೇಲೆ ಪ್ರತಿಬಂಧಕಾಜ್ಞೆಯನ್ನು ಹೇರಿತ್ತು. ಆದರೆ ಪತ್ರಿಕೆ ಅದನ್ನು ಮಾನ್ಯಮಾಡಲಿಲ್ಲ. ಅದಕ್ಕಾಗಿ ಪತ್ರಿಕೆಯನ್ನು ಸರ್ಕಾರವು ಮುಟ್ಟುಗೋಲು ಹಾಕಿಕೊಂಡಿತು. 'ಪೌರವಾಣಿ' ಪತ್ರಿಕೆಯನ್ನು ಹಿಂದೂಪುರದಿಂದ ಹೊರಡಿಸಿ ಚಳವಳಿಗೆ ಆಗಬೇಕಾಗಿದ್ದ ಕಾರ್ಯವನ್ನು ನಡೆಯಿಸಲಾಯಿತು. ಈ ಪತ್ರಿಕೆಗೆ ಬೇಕಾಗಿದ್ದ ಮುದ್ರಣ-ಕಾಗದ 'ದಿ ಹಿಂದೂ' ಮತ್ತು 'ಇಂಡಿಯನ್ ಎಕ್ಸ್‌ಪ್ರೆಸ್' ಗಳಿಂದ ಪುಕ್ಕಟೆಯಾಗಿ ಒದಗಿಸಲ್ಪಡುತ್ತಿತ್ತು. ನಾನು ಹಿಂದೂಪುರದಲ್ಲಿ ಆಗಬೇಕಾದ ಸಂಘಟನಾಕಾರ್ಯ, ಪ್ರಚಾರಕಾರ್ಯಗಳನ್ನು ಮುಗಿಸಿಕೊಂಡು ಹುಬ್ಬಳ್ಳಿ ಮತ್ತು ಮದ್ರಾಸಿಗೆ ಹೋಗಿ ಆ ಪ್ರಾಂತ್ಯದ ಜನರ ಸಹಾಯ-ಸಹಕಾರ ಪಡೆಯುವ ಕಾರ್ಯ ದಲ್ಲಿ ಸ್ವಲ್ಪಕಾಲ ಮಗ್ನನಾಗಿದ್ದೆ : ಇದು ನಮಗೆ ಹೇರಳವಾಗಿ ದೊರೆಯಿತು ; ಮೈಸೂರಿನ ಹಳ್ಳಿಗಳಲ್ಲಿ ಶ್ಯಾನುಭೋಗರೂ ಪಟೇಲರೂ ರಾಜೀನಾಮೆಯನ್ನು ಕೊಟ್ಟು ಚಳವಳಿಗೆ ಧುಮುಕಬೇಕೆಂಬ ಕಾರ್ಯಕ್ರಮ ಹಾಕಲಾಯಿತು. ಸದರಿ ಗ್ರಾಮಾಧಿಕಾರಿಗಳು ಆಜಾದ್ ಮೈಸೂರು ಸರ್ಕಾರಕ್ಕೆ ಮನ್ನಣೆ ಕೊಡಬೇಕೆಂದು ತೀವ್ರಪ್ರಚಾರ ನಡೆ ಯಿತು. ಗುಪ್ತವಾಗಿದ್ದ ಕಾರ್ಯಕರ್ತರು ಆಜಾದ್ ಮೈಸೂರು ಸರ್ಕಾರ ಸ್ಥಾಪಿಸಿ ದರು. ಈ ಬಗ್ಗೆ ಶಿರಾ ತಾಲ್ಲೂಕಿನಲ್ಲಿಯೂ ಪಾವಗಡ ತಾಲ್ಲೂಕಿನಲ್ಲಿಯೂ ತೀವ್ರತರ ಚಳವಳಿ ನಡೆದವು. ಅನೇಕ ಗ್ರಾಮಾಧಿಕಾರಿಗಳು ರಾಜೀನಾಮೆ ಸಲ್ಲಿಸಿದರು. ತಿರುಮಣಿ ಎಂಬ ಗ್ರಾಮದ ಜನರು ರಾಷ್ಟ್ರಧ್ವಜ ಹಾರಿಸಿ ಮೈಸೂರು ಸರ್ಕಾರಕ್ಕೆ ತಮ್ಮ ಊರಿನ ಮನ್ನಣೆ ಇಲ್ಲವೆಂದು ಸಾರಿದರು. ಹೀಗೆ ಒಂದು ಕಡೆ ಚಳವಳಿ ನಡೆಯು ತ್ತಿದ್ದರೆ, ಇನ್ನೊಂದೆಡೆ ತಂಡತಂಡವಾಗಿ ಮೈಸೂರಿಗೆ ನಾನಾ ಕಡೆಗಳಿಂದ ಜನರು ಹೊರಡುತ್ತಿದ್ದರು.

ಒಮ್ಮೆ ಎಸ್. ಎನ್. ಗುಪ್ತ ಮದ್ರಾಸಿನಲ್ಲಿ ಕಾಂಗ್ರೆಸ್ ಕಾರ್ಯಕ್ರಮದ ಲಕ್ಷಗಟ್ಟಲೆ ಭಿತ್ತಿಪತ್ರಗಳನ್ನು ಅಚ್ಚು ಹಾಕಿಸಿದ್ದರು ; ಅವನ್ನು ಮೈಸೂರಿನ ಜನಕ್ಕೆ ಮುಟ್ಟಿಸಬೇಕಾಗಿತ್ತು. ಮೈಸೂರು ಗಡಿಯಲ್ಲಿ ಬಲವಾದ ಕಾವಲಿದ್ದುದರಿಂದ ಇದು ಕಷ್ಟವಾಗಿತ್ತು. ಆ ವೇಳೆಗೆ ಮೈಸೂರು ಅರಮನೆಗೋಸ್ಕರ ಒಂದು ಹೊಸ ಕಾರನ್ನು ಅರಮನೆಯಿಂದ ಬಂದಿದ್ದ ನೌಕರರು ಕಂಪನಿಯಿಂದ ಪಡೆದರು. ಆ ಕಾರಿನಲ್ಲಿ ಹೋಗು ತ್ತಿದ್ದ ಅವರು ಮೌಂಟ್ ರೋಡ್ ಹತ್ತಿರ ನಮ್ಮನ್ನು ಕಂಡು ಕಾರು ನಿಲ್ಲಿಸಿದರು. ಅವರ ಸಹಾಯದಿಂದ ಭಿತ್ತಿಪತ್ರಗಳೆಲ್ಲವೂ ಮೈಸೂರಿನಲ್ಲಿ ಸೇರಬೇಕಾದ ಸ್ಥಳಗಳಿಗೆ ಸೇರಿದವು. ಹೀಗೆ ಅರಮನೆಯ ನೌಕರರಿಂದಲೇ ಚಳವಳಿಗೆ ಸಹಾಯ ದೊರೆಯಿತು. ಚಳವಳಿಯು ಕಾವು ವಿಪರೀತವಾಗಿ, ಸರ್ಕಾರವು ರಾಜಿಗೆ ಸಿದ್ಧವೆಂದು ಘೋಷಿಸಿ, ಬಂಧಿಗಳನ್ನು ಬಿಡುಗಡೆಗೊಳಿಸಿತು.

ಮೈ.ಮೈ. 5

# ಸುಬ್ಬಮ್ಮ ಜೋಯಿಸ್

ಜನನ : 1910  ಉದ್ಯೋಗ : ಗೃಹಿಣಿ  ವಿಳಾಸ : ಸೋನಾರ್ ಬೀದಿ, ಮೈಸೂರು



1930ರಲ್ಲಿ ನನ್ನ ಪತಿಯನ್ನು ಹಿಂಬಾಲಿಸಿ ಶಿರ್ಸಿ, ಸಿದ್ದಾಪುರಕ್ಕೆ ನಾನು ಹೊರಟೆ. ಅಲ್ಲಿ ಆರೇಳು ತಿಂಗಳು ಕಾಲ ಭೂಗತ ಚಟುವಟಿಕೆಯಲ್ಲಿ ಭಾಗ ವಹಿಸಿದ್ದೆ. ನಾನು ಹೋದಾಗ ಮೊದಲು ಕರಪತ್ರ ಗಳನ್ನು ಪ್ಯಾಕ್‌ಮಾಡಿ ಬೇರೆ ಊರಿಗೆ ಕಳುಹಿಸು ವುದನ್ನು ಮಾಡುತ್ತಿದ್ದೆ. ಅನಂತರ ಹಳ್ಳಿಗಳಿಗೆ ಹೋಗಿ ಜಂಗಲ್ ಸತ್ಯಾಗ್ರಹ, ಮೆರವಣಿಗೆ ಮುಂತಾ ದುವುಗಳಲ್ಲಿ ಜನರು ಭಾಗವಹಿಸುವಂತೆ ಪ್ರಚಾರ ಮಾಡುತ್ತಿದ್ದೆ. ಕರನಿರಾಕರಣೆ ಜೊತೆಗೆ ಸಿದ್ದಾಪುರ ತಾಲ್ಲೂಕಿನಲ್ಲಿ ಜಂಗಲ್ ಸತ್ಯಾಗ್ರಹ, ಮೆರವಣಿಗೆಗಳು ಹುರುಪಿನಿಂದ ಜರುಗುತ್ತಿದ್ದವು. ಆದರೆ ಶಿರ್ಸಿಯಲ್ಲಿ ಕರನಿರಾಕರಣೆ ಬಹಳ ಯಶಸ್ವಿಯಾಗಲಿಲ್ಲ ; ಆದರೂ ಅಲ್ಲಿ ಪ್ರಭಾತ್‌ಫೇರಿ, ಧ್ವಜವಂದನೆ, ಜಂಗಲ್ ಸತ್ಯಾಗ್ರಹ ಮೊದಲಾದ ಕಾಯಿದೆ ಉಲ್ಲಂಘನಾ ಚಳವಳಿಗಳು ಯಶಸ್ವಿಯಾಗಿ ಜರುಗಿದವು. ಈ ಸಂದರ್ಭದಲ್ಲಿ ಸೋಂದೆ ಗ್ರಾಮದಲ್ಲಿ ನಡೆದ ಧ್ವಜವಂದನೆಯಲ್ಲಿ ಸ್ತ್ರೀಯರ ಪಾತ್ರ ಗಣನೀಯವಾಗಿತ್ತು. ಪೋಲೀಸರ ದಬ್ಬಾಳಿಕೆಯೂ, ನೂರಾರು ಜನರ ದಸ್ತಗಿರಿಗಳೂ ಆದವು. ನಾನು ಭೂಗತ ಚಟುವಟಿಕೆಯಲ್ಲಿದ್ದುದರಿಂದ ಯಾವ ಮೆರವಣಿಗೆಯಲ್ಲೂ ಭಾಗವಹಿಸಲಾಗಲಿಲ್ಲ. ತಕ್ಕಮಟ್ಟಿಗೆ ಇವುಗಳ ವ್ಯವಸ್ಥೆ ಮಾಡುತ್ತಿದ್ದೆ.

ಸಿದ್ದಾಪುರ ತಾಲ್ಲೂಕಿನಲ್ಲಿ ಸುಮಾರು 500 ಖಾತೆದಾರರು ಕರವನ್ನು ಕೊಡಲು ನಿರಾಕರಿಸಿದ್ದರು ; ಮತ್ತು ಸುಮಾರು 1000 ಒಕ್ಕಲುಗಳು ಸತ್ಯಾಗ್ರಹದಲ್ಲಿ ಸೇರಿದ್ದರು. ಹೀಗೆ ಎಷ್ಟೋ ಮನೆಗಳಲ್ಲಿ ಗಂಡಸರು, ಹೆಂಗಸರು ಎಲ್ಲರೂ ಚಳವಳಿಯಲ್ಲಿ ಭಾಗ ವಹಿಸಿದ್ದರಿಂದ ಅವರೆಲ್ಲ ಜೈಲಿಗೆ ಹೋಗಬೇಕಾಯಿತು. ಮತ್ತೆ ಹಲವೆಡೆ ದುಡಿಯುವ ಮನುಷ್ಯರಿಲ್ಲದೇ ಮನೆಯಲ್ಲಿದ್ದ ಜನರ ಜೀವನ ದುಸ್ತರವಾಯಿತು. ಈ ಸಂದರ್ಭದಲ್ಲಿ ಇಂತಹ ಪ್ರಕ್ಷುಬ್ಧ ಸ್ಥಿತಿಯಲ್ಲಿದ್ದವರಿಗೆ ಅಕ್ಕಿ ಹಂಚುವ ವ್ಯವಸ್ಥೆ ಇತ್ತು. ಅದರಲ್ಲಿ ನನ್ನ ಸಕ್ರಿಯ ಪಾತ್ರ ಸ್ವಲ್ಪಮಟ್ಟಿಗೆ ಇತ್ತು. ಸತ್ಯಾಗ್ರಹ ಮಾಡಿದವರ ಆಸ್ತಿಪಾಸ್ತಿಗಳನ್ನು ಸರ್ಕಾರವು ಜಪ್ತಿಮಾಡುತ್ತಿತ್ತು. ಇದನ್ನು ಜನರು ಕೊಂಡುಕೊಳ್ಳದೇ ಇರುವಂತೆ ಮಾಡಲು ಆ ಮಾಲನ್ನು ಕೊಂಡವರ ಮನೆ ಮುಂದೆ ಉಪವಾಸ ಸತ್ಯಾಗ್ರಹ ನಡೆಸುವ

ಪದ್ಧತಿ ಇತ್ತು. ಈ ಸತ್ಯಾಗ್ರಹದಲ್ಲಿ ವಿಶೇಷವಾಗಿ ಸ್ತ್ರೀಯರು ಪಾಲುಗೊಂಡಿದ್ದರು. ಈ ವ್ಯವಸ್ಥೆಯನ್ನು ಕೆ. ಎ. ವೆಂಕಟರಾಮಯ್ಯನವರ ಪತ್ನಿ ಗೌರಮ್ಮ ಬಹಳ ಯಶಸ್ವಿಯಾಗಿ ನಡೆಸುತ್ತಿದ್ದರು. ಹೆಚ್ಚೆ ಸತ್ಯಾಗ್ರಹ, ಅಕ್ಕುಂಜಿ ಸತ್ಯಾಗ್ರಹ, ಮಾವಿನಗುಂಡಿ ಸತ್ಯಾಗ್ರಹಗಳು ಹೆಸರುವಾಸಿಯಾಗಿದ್ದವು. ಮಾಲನ್ನು ಕೊಂಡವರು ಅದನ್ನು ಹಿಂದಿರುಗಿಸಬೇಕೆಂದೂ ಇನ್ನುಮುಂದೆ ಅಂತಹ ಮಾಲನ್ನು ಕೊಳ್ಳುವುದಿಲ್ಲವೆಂಬ ಪ್ರಜ್ಞೆ ಜನರಲ್ಲಿ ಮೂಡಿಸಬೇಕೆಂದೂ ಉಪವಾಸದ ಮೂಲಕ ಭಗವಂತನಲ್ಲಿ ನಮ್ಮ ಪ್ರಾರ್ಥನೆ. ಇದೇ ಉಪವಾಸ ಸತ್ಯಾಗ್ರಹದ ಮೂಲ ಉದ್ದೇಶ. ಇಂಥ ಒಂದು ಸತ್ಯಾಗ್ರಹವು ಶಿರ್ಸಿ ತಾಲ್ಲೂಕು ತಿಗಣೆಯಲ್ಲಿ ನಡೆಯಿತು. ತಿಗಣೆಯಲ್ಲಿ ಗದಿಗೆಪ್ಪಗೌಡರು ಸರ್ಕಾರದಿಂದ 3 ಎಮ್ಮೆಗಳನ್ನು ಕೊಂಡರು. ನಾಗವೇಣಿಬಾಯಿ, ಮಹಾಲಕ್ಷ್ಮಿ, ಬೆಳ್ಳೀಕೇರಿ ಎಂಬ ಸತ್ಯಾಗ್ರಹಿಗಳು ಎಮ್ಮೆಗಳನ್ನು ಮರಳಿ ಪಡೆಯಲು ಅನ್ನಸತ್ಯಾಗ್ರಹ ಮಾಡಿದರು. ಗೌಡರು ಅವರನ್ನು ಒತ್ತಾಯದಿಂದ ಓಡಿಸಲು ಯತ್ನಿಸಿದರು. ಸತ್ಯಾಗ್ರಹಿಗಳು ಸ್ಥಳ ಬಿಟ್ಟು ಕದಲಲಿಲ್ಲ. ಅನಂತರ ನಾಗವೇಣಿಬಾಯಿ ಮತ್ತು ಸೀತಾಬಾಯಿ ಗಣೇಶ ಹೆಗಡೆ ಬಂದು ಗೌಡರ ಮನೆಯ ಮುಂದೆ ಸತ್ಯಾಗ್ರಹ ಪ್ರಾರಂಭಿಸಿದರು. ಪೋಲೀಸರು ಇವರನ್ನು ಬಂಧಿಸಿದರು. ಅನಂತರ ಕಮಲಾದೇವಿ ಮತ್ತು ಗಂಗಮ್ಮ ಇವರು ಸತ್ಯಾಗ್ರಹವನ್ನು ಮುಂದುವರಿಸಿದರು. ಅವರ ಬಂಧನವೂ ಆಯಿತು. ಇದಾದಮೇಲೆ ಗೌಡರು ಮನೆಯ ಅಂಗಳವನ್ನು ಅಗೆಯಿಸಿ ಕೊಟ್ಟಿಗೆಯ ಮತ್ತು ಮನೆಯ ಕೊಳೆನೀರು ಅಲ್ಲಿಗೆ ಬಂದು ಕೆಸರಾಗುವಂತೆ ಮಾಡಿದರು. ಕೆಸರಿನಲ್ಲಿ ಮುಳ್ಳು, ಗಾಜುಗಳನ್ನು ಬೆರೆಸಿದರು. ಹೀಗಿದ್ದ ಸ್ಥಳದಲ್ಲಿ ವೆಂಕೂಬಾಯಿ ಮತ್ತು ಪರಮೇಶ್ವರಮ್ಮ ಇಬ್ಬರೂ ಸತ್ಯಾಗ್ರಹವನ್ನು ಮುಂದುವರಿಸಿದರು. ಮೂರು ದಿನಗಳು ಕಳೆದವು. ರಾತ್ರಿ ವಿಪರೀತ ಮಳೆ ಆರಂಭವಾಯಿತು. ಈ ಸಂದರ್ಭದಲ್ಲಿ ಹತ್ತಿರ ಇದ್ದ ಮಾರೀ ಗುಡಿಯಲ್ಲಿ ಆಶ್ರಯಪಡೆದರು. ಹೊಳೆಯಪ್ಪ ಎಂಬವನ ಸಂಗಡ ಕೆಲವು ಪುಂಡರು ಬಂದು ಸತ್ಯಾಗ್ರಹಿಗಳನ್ನು ನೆಲಕ್ಕೆ ಅಪ್ಪಳಿಸಿದರು. ವೆಂಕೂಬಾಯಿಯನ್ನು ಬಡಿದರು. ಪರಮೇಶವರಮ್ಮನ ಮಾನಕಳೆಯಲು ಪ್ರಯತ್ನಿಸಿದರು. ಆಕೆ ತನ್ನ ಮಾನರಕ್ಷಣೆಗೆ ಇಟ್ಟುಕೊಂಡ ಚೂರಿಯನ್ನು ತೆಗೆದು ತಿವಿದುಕೊಳ್ಳಲು ಪ್ರಯತ್ನಿಸಿದಳು. ಈ ಜಂಜಾಟದಲ್ಲಿ ಪುಂಡರು ಬೆದರಿ ಓಡಿದರು. ಚೂರಿಯ ತಾಗಿ ಪರಮೇಶ್ವರಮ್ಮನ ಕೈಗೆ ಗಾಯವಾಯಿತು. ಸತ್ಯಾಗ್ರಹ ನಿಲ್ಲಿಪೇ ಮುಂದುವರಿಯುವುದು ನಮ್ಮ ತತ್ವ. ಬೇರೆ ಸತ್ಯಾಗ್ರಹಿಗಳು ಸ್ವಲ್ಪ ಗಾಬರಿಗೊಂಡಿದ್ದರು. ಅವರಿಗೆ ಧೈರ್ಯ ತುಂಬುವ ಸಲುವಾಗಿ ಮತ್ತು ಕರ್ತವ್ಯದೃಷ್ಟಿಯಿಂದ ನಾನೇ ಗೌಡರ ಮನೆ ಮುಂದೆ ಸತ್ಯಾಗ್ರಹ ಮಾಡಲು ಹೊರಟೆ. ನನ್ನ ಜೊತೆಯಲ್ಲಿ ಕಾವೇರಮ್ಮ ಮತ್ತು ಕಮಲಮ್ಮ ಬಂದು ಸೇರಿದರು. ನಮ್ಮ ಸಹಾಯಕ್ಕೆ ಗಣೇಶ ಹೆಗಡೆಯೂ ಸೇರಿಕೊಂಡರು. ನಾವು ಬನೂರಿನಿಂದ ತಿಗಣೆಗೆ ಹೋಗುವಾಗ ಹಳ್ಳ ದಾಟಬೇಕಿತ್ತು. ಹಳ್ಳದಲ್ಲಿ ಪೂರಾ ನೀರು ಹರಿಯುತ್ತಿತ್ತು. ಅಲ್ಲಿದ್ದ ನಾವೆಯಮನು ಇರಲಿಲ್ಲ; ನಾವೆ ಮಾತ್ರ ಇತ್ತು; ಹುಟ್ಟೂ

ಇರಲಿಲ್ಲ. ಆದರೆ ಕೃಷ್ಣಭಟ್ಟರು ತಮ್ಮ ಕೈಯನ್ನೇ ಹುಟ್ಟಾಗಿ ಮಾಡಿಕೊಂಡು ನಮ್ಮನ್ನು ಆಚೆಯ ದಡಕ್ಕೆ ತಲುಪಿಸಿದರು. ದೇಶಕಾರ್ಯದಲ್ಲಿ ಸಹಾಯಕರಾಗಿ ನಿಂತಿದ್ದ ಇಂತಹ ಧೈರ್ಯಸ್ಥರನ್ನೂ ವೀರರನ್ನೂ ನೆನೆಯುವುದೇ ಸುದಿನ. ಗೌಡರ ಮನೆಯ ಮುಂದೆ ಸತ್ಯಾಗ್ರಹಕ್ಕೆ ಆ ಕೊಳಚೆಯಲ್ಲೇ ಕುಳಿತೆವು. ಕಾವೇರಮ್ಮನ ಹಸುಗೂಸು ತಾಯಿಯ ತೊಡೆಯ ಮೇಲೆ ಸತ್ಯಾಗ್ರಹದಲ್ಲಿ ಪಾಲ್ಗೊಂಡಿತ್ತು. `ಇದನ್ನೆಲ್ಲಾ ಎರಡನೆಯ ದಿವಸ ಗೌಡರ ಹೆಂಡತಿ ಗೌರಮ್ಮ ನೋಡಿ ನೊಂದರು. ಎಮ್ಮೆ ಮರಳಿ ಕೊಡಬೇಕೆಂದೂ ಇಲ್ಲವಾದರೆ ಸತ್ಯಾಗ್ರಹದಲ್ಲಿ ತಾವು ಸೇರಿಸಿಕೊಳ್ಳುವುದಾಗಿ ಬೆದರಿಕೆ ಹಾಕಿದರು. ಗೌಡರು ಮನಸ್ಸಿಲ್ಲದ ಮನಸ್ಸಿನಲ್ಲಿ ಕೊಡುವುದಾಗಿ ಒಪ್ಪಿದರು. ಸತ್ಯಾಗ್ರಹದ ಮೂರನೇ ದಿನ ಶಿರ್ಸಿ ಸಿದ್ದಾಪುರಗಳಿಗೆ ಇಂಗ್ಲೆಂಡಿನ ಪಾರ್ಲಿಮೆಂಟ್ ಮೆಂಬರಾದ ಮ್ಯಾಟರ್ಸ್‌ರವರು ಬರುವರೆಂದು ಸುದ್ದಿ ಬಂದಿತು. ಅವರು ಬರುವ ವೇಳೆಗೆ ಎಲ್ಲೂ ಸತ್ಯಾಗ್ರಹವಿರಬಾರದೆಂದು ನಮ್ಮನ್ನು ಪೋಲೀಸರು ದಸ್ತಗಿರಿಮಾಡಿ ಶಿರ್ಸಿ ಲಾಕಪ್ಪಿನಲ್ಲಿಟ್ಟರು. ಮ್ಯಾಟರ್ಸ್‌ರವರು ಬಂದ ಕಾಲದಲ್ಲಿ ಶಿರ್ಸಿ, ಸಿದ್ದಾಪುರಗಳಲ್ಲಿ ಅವ್ಯಾಹತವಾಗಿ ಚಳವಳಿ ಮಾಡಬೇಕೆಂದು ಕಾಂಗ್ರೆಸ್ ತೀರ್ಮಾನಿಸಿ ಹಿಂದಿನ ದಿವಸದಿಂದಲೇ ಕಾರ್ಯಾಚರಣೆ ಆರಂಭವಾಗಿತ್ತು. ಜಂಗಲ್ ಸತ್ಯಾಗ್ರಹ, ಪ್ರಭಾತ್‌ಫೇರಿ, ಮೆರವಣಿಗೆ ಇತ್ಯಾದಿಗಳು, ನಾನಾ ದಿಕ್ಕುಗಳಿಂದ ಶಿರ್ಸಿ, ಸಿದ್ದಾಪುರಗಳಿಗೆ ಪ್ರವಾಹದಂತೆ ಬಂದು ಸೇರುತ್ತಿದ್ದವು. ಇದನ್ನು ಅಡ್ಡಿಪಡಿಸುವ ಸಲುವಾಗಿ ಪೋಲೀಸರು ಬಂದು ದಬ್ಬಾಳಿಕೆಯನ್ನೇ ಆಚರಿಸಿದರು. ಮ್ಯಾಟರ್ಸ್ ಬಂದಾಗ ಅವರಲ್ಲಿ ಜನ ಈ ವಿಷಯವನ್ನು ನಿವೇದಿಸಿದರು. ಹೊಡೆದ ಗಾಯಗಳನ್ನು, ಛಡಿ ಏಟಿನ ಬಾಸುಂಡೆಗಳನ್ನು ಜನರು ತೋರಿಸಿದ್ದಲ್ಲದೇ, ಹೊಟ್ಟೆಗಿಲ್ಲದೇ ಇದ್ದ ಜನರಿಗೆ ಕೊಡುತ್ತಿದ್ದ ಸೇರು ಎರಡು ಸೇರು ಅಕ್ಕಿಯನ್ನೂ ಜಪ್ತಿಮಾಡಿರುವುದನ್ನು ಅವರ ಗಮನಕ್ಕೆ ತಂದರು. ಶಿರ್ಸಿಯ ಲಾಕಪ್ಪಿನಲ್ಲಿ ಇದ್ದ ನಮ್ಮನ್ನೂ ಅವರು ಬಂದು ಭೇಟಿಯಾದರು. ಇವರ ಜೊತೆಯಲ್ಲಿಯೇ ಬೆಂಗಳೂರಿನ ಅಡ್ವೊಕೇಟರಾದ ಎಸ್. ವೆಂಕಟಪತಯ್ಯನವರೂ ಬಂದಿದ್ದರು. ನಮ್ಮಿಂದ ಸತ್ಯಾಗ್ರಹದ ವಿಷಯವನ್ನು ತಿಳಿದುಕೊಂಡು ವೆಂಕಟಪತಯ್ಯನವರು ಅವರಿಗೆ ಇಂಗ್ಲಿಷ್‌ನಲ್ಲಿ ತರ್ಜುಮೆಮಾಡಿದರು. ಲಾಕಪ್ಪಿನಲ್ಲಿದ್ದ ಕಾವೇರಮ್ಮನ ಒಂದು ವರ್ಷದ ಹಸುಳೆಯನ್ನು ಕಂಡು ಎಂ.ಪಿ.ಗಳು ಮರುಗಿ ಕಣ್ಣೀರಿಟ್ಟರು.

ಈ ಚಳವಳಿಯ ಕಾಲದಲ್ಲಿ ಪೋಲೀಸರ ಕಾಟದಿಂದ ನಾವು ತಪ್ಪಿಸಿಕೊಳ್ಳಬೇಕಾಗಿತ್ತು. ಒಂದೇ ಕಡೆ ಇರಲು ಸಾಧ್ಯವಾಗುತ್ತಿರಲಿಲ್ಲ. ಕೆಳದಿ, ಹಾರೆಕೊಪ್ಪ, ಕಂತನಹಳ್ಳಿ, ಮುಂಡಗೇಸರ, ಹೊಸಬಾಳೆ, ಬಸೂರು ಮೊದಲಾದ ಕಡೆಗಳಲ್ಲಿ ನಮ್ಮ ಕ್ಯಾಂಪ್ ಇರುತ್ತಿತ್ತು. ನಮಗೆ ಆ ಊರಿನ ಜನ ಬಹಳ ವಿಶೇಷ ರೀತಿಯಿಂದ ಸಹಾಯ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಕೆಳದಿಯ ಲಕ್ಷ್ಮಮ್ಮ, ಹಾರೆಕೊಪ್ಪದ ರಾಮಭಟ್ಟರು, ಹೊಸಬಾಳೆ ಪುಟ್ಟಪ್ಪನವರು, ಶಂಕರಮಠದ ಅನಂತ ಭಟ್ಟರು, ಸಾಗರದ ಬಾಪಟ್‌ರವರನ್ನು ನೆನಪು ಮಾಡಿಕೊಳ್ಳುತ್ತೇನೆ. ತಿಮ್ಮಪ್ಪ ಎಂಬ ಸ್ವಯಂಸೇವಕನು

ನನ್ನ ಎಲ್ಲ ಕಾರ್ಯದಲ್ಲಿ ನೆರವು ನೀಡುತ್ತಿದ್ದ.

ಶಿರ್ಸಿ ಮ್ಯಾಜಿಸ್ಟ್ರೇಟರು ನನಗೆ 6 ತಿಂಗಳ ಶಿಕ್ಷೆವಿಧಿಸಿದರು. ನಾನು ಸ್ವಲ್ಪ ದಿವಸ ಕಾರವಾರ ಜೈಲಿನಲ್ಲಿದ್ದೆ. ಅಲ್ಲಿಂದ ಹಿಂಡಲಗಿ ಜೈಲಿಗೆ ವರ್ಗಾಯಿಸಿದರು. ಅಲ್ಲಿ ನನ್ನ ಕುತ್ತಿಗೆಯಲ್ಲಿದ್ದ ಮಂಗಲಸೂತ್ರವನ್ನು ಅದು ಚಿನ್ನದ್ದೆಂದೂ ಮತ್ತು ನನ್ನ ಕನ್ನಡಕವನ್ನೂ 'ಸಿ'ಕ್ಲಾಸ್ ಕೈದಿಗೆ ಆ ಸೌಲಭ್ಯದ ಹಕ್ಕಿಲ್ಲವೆಂದೂ ಜೈಲಿನ ಅಧಿಕಾರಿಗಳು ತೆಗೆದು ಕೊಂಡರು. ಈ ಬಗ್ಗೆ ಜೈಲಿನಲ್ಲಿ ಕೈದಿಗಳ ಒಂದು ಚಳವಳಿಯೇ ಆಯಿತು. ಅದೇ ಜೈಲಿನಲ್ಲಿದ್ದ ಶ್ರೀಮತಿ ಕಮಲಾದೇವಿ ಚಟ್ಟೋಪಾಧ್ಯಾಯ, ಮಣಿಬೆನ್ ಪಟೇಲ್, ಲೀಲಾವತಿ ಮುನ್‌ಶಿ ಇವರುಗಳ ಸಂಧಾನದಿಂದ ಮಂಗಲಸೂತ್ರವನ್ನು ಕೊಟ್ಟರು; ಕನ್ನಡಕವನ್ನು ಕೊಡಲಿಲ್ಲ. ಇದರಿಂದಾಗಿ ನನ್ನ ಕಣ್ಣಿಗೆ ಬಹಳ ಘಾಸಿಯಾಯಿತು. ಅದರ ಪರಿಣಾಮವಾಗಿ ನಾನು ಜೈಲಿನಿಂದ ಬಂದಮೇಲೆ ಮೈನಸ್ 20ರ ಕನ್ನಡಕವನ್ನು ಉಪಯೋಗಿಸುತ್ತಿದ್ದೇನೆ. ಈ ಕನ್ನಡಕವನ್ನು ನನಗೆ ಹಾಕಿಕೊಳ್ಳಲು ಸಲಹೆ ಮಾಡಿದ ಬೆಂಗಳೂರಿನ ಆಸ್ಪತ್ರೆಯ ಡಾ|| ಬಿ. ಕೆ. ನಾರಾಯಣರಾಯರು, ಇನ್ನೂ ಕೆಲವು ದಿನಸಗಳು ಕನ್ನಡಕವಿಲ್ಲದೇ ಇದ್ದಿದ್ದರೆ ನಿಮ್ಮ ಕಣ್ಣು ಪೂರ್ತಿ ಹೋಗುತ್ತಿತ್ತೆಂದು ಹೇಳಿದರು.

ಜೈಲಿನಿಂದ ಬಿಡುಗಡೆಯಾಗಿ ಬಂದೆ. ಮೈಸೂರು ದೇಶವನ್ನು ಬಿಟ್ಟು ಬ್ರಿಟಿಷ್ ಇಂಡಿಯಾಕ್ಕೆ ಬರಬಾರದೆಂದು ಪ್ರತಿಬಂಧಕಾಜ್ಞೆ ಜಾರಿಯಾಯಿತು. ಶಿವಮೊಗ್ಗಕ್ಕೆ ಬಂದು ಅಲ್ಲಿನ ಬಾಲಿಕಾಶ್ರಮದಲ್ಲಿ ಇದ್ದೆ. ಶಿರ್ಸಿ, ಸಿದ್ದಾಪುರ, ಅಂಕೋಲೆಗಳಲ್ಲಿ ಚಳವಳಿಯಲ್ಲಿ ಭಾಗವಹಿಸಿದ್ದವರ ಸಣ್ಣ ಮಕ್ಕಳ ಪಾಲನೆಗಾಗಿಯೇ ಈ ಆಶ್ರಮವು ಸ್ಥಾಪಿತವಾಗಿತ್ತು. ಇಲ್ಲಿ ಶ್ರೀಮತಿ ಗೌರಮ್ಮನವರು, ಕಾವೇರಮ್ಮನವರು ಇದ್ದರು. ಕೊಡಗಿನ ಮಾತಂಡರು ಮೇಲ್ವಿಚಾರಕರಾಗಿದ್ದರು. ಅಡಿಗೆ ಮಾಡುವುದರಿಂದ ಕಸ ಗುಡಿಸುವವರೆಗೆ ಎಲ್ಲಾ ಕೆಲಸಗಳನ್ನು ನಾವೇ ಮಾಡಿಕೊಳ್ಳುತ್ತಿದ್ದೆವು. ಇಲ್ಲಿ ಸುಮಾರು ಒಂದೂವರೆ ವರ್ಷಕಾಲ ಇದ್ದು ಆನಂತರ ವಿಸಾಪುರ ಜೈಲಿನಿಂದ ಬಿಡುಗಡೆಯಾಗಿ ಬಂದಿದ್ದ ನನ್ನ ಯಜಮಾನರ ಜೊತೆಯಲ್ಲಿ ಮೈಸೂರಿಗೆ ಹೋದೆ.

ಜೈಲಿಗೆ ಹೋಗಿ ಬಂದವರಾದ್ದರಿಂದ ನಮ್ಮ ವಿಷಯದಲ್ಲಿ, ನಮ್ಮ ಬಂಧುಗಳಲ್ಲಿ ಅಸಮಾಧಾನ. ಒಂದು ರೀತಿಯ ಬಹಿಷ್ಕಾರ. ನಮ್ಮ ಅತ್ತೆಮಾವಂದಿರು ವೈದಿಕ ಮನೆತನಸ್ಥರು. ನಾವು ಅವರಲ್ಲಿಗೆ ಹೋಗಿ ಬರುವ ಇಚ್ಛೆ ಅವರಿಗಿರಲಿಲ್ಲ. ನಮ್ಮ ತಂದೆ ಸರ್ಕಾರಿ ನೌಕರಿಯಲ್ಲಿದ್ದು, ಕಾಂಗ್ರೆಸ್ಸಿನವಳಾದ ನನ್ನ ಸಹವಾಸದಿಂದ ಕೆಲಸ ಹೋಗುವುದೆಂಬ ಹೆದರಿಕೆ. ಅವರಿಗೂ ನಾನು ಬೇಡವಾದೆ! ಹೀಗೆ ಕೆಲವು ವರ್ಷಗಳನ್ನು ಕಳೆಯಬೇಕಾಯಿತು.

ಬ್ರಿಟಿಷ್ ಇಂಡಿಯಾದಲ್ಲಿ ಕಾಯಿದೆ ಕೌನ್ಸಿಲುಗಳಿಗೆ ಕಾಂಗ್ರೆಸ್ಸು ಪ್ರವೇಶಿಸಬೇಕೆಂದು ತೀರ್ಮಾನಿಸಿತು. ಮೈಸೂರಿನಲ್ಲಿ ಆ ಗಾಳಿ ಬೀಸಿತು. ಮೈಸೂರಿನ ಪ್ರಜಾಪ್ರತಿನಿಧಿ

ಸಭೆ ಮತ್ತು ನ್ಯಾಯ ವಿಧಾಯಕ ಸಭೆಗೆ ಉಮೇದುವಾರರನ್ನು ನಿಲ್ಲಿಸುವ ಬಗ್ಗೆ ಹಂಚಿಕೆಯಾಯಿತು. ಇದರ ಬಗ್ಗೆ ಪ್ರಚಾರಗಳು ನಡೆಯುತ್ತಿದ್ದವು. ನಾನು, ಉಮಾಬಾಯಿ ಕುಂದಾಪುರ, ಕೃಷ್ಣಾಬಾಯಿ ಪಂಜೀಕರ್, ಕಮಲಾದೇವಿ, ತಾಯಮ್ಮ, ವೀರಣ್ಣಗೌಡ ಮೊದಲಾದವರೊಡನೆ ಪ್ರಚಾರಕಾರ್ಯದಲ್ಲಿ ಪಾಲ್ಗೊಂಡಿದ್ದೆ. ಹೋದ ಸ್ಥಳದಲ್ಲೆಲ್ಲಾ ವೈಭವದ ಸ್ವಾಗತ ದೊರೆಯುತ್ತಿತ್ತು. ಅದರಲ್ಲಿ ಕೃಷ್ಣರಾಜನಗರ, ಹುಣಸೂರು, ನಾಗಮಂಗಲ ತಾಲ್ಲೂಕುಗಳಲ್ಲಿನ ಸಂಭ್ರಮ ವಿಶೇಷ ರೀತಿಯದಾಗಿತ್ತು. ಆದರೂ ಒಂದೆರಡು ಕಡೆ ಕಹಿಪ್ರಸಂಗಗಳು ನಡೆದದ್ದೂ ಉಂಟು. ಯಳಂದೂರು ತಾಲ್ಲೂಕಿನಲ್ಲಿ ಸಂತೆಮರಹಳ್ಳಿಯಲ್ಲಿ ಭಾಷಣ ಮಾಡಲು ನಿಂತಾಗ ಕಲ್ಲುಗಳು ತೂರಿ ಬರುತ್ತಿದ್ದವು. ಪೆಟ್ಟಿನಿಂದ ನಾಲ್ಕಾರು ತೊಟ್ಟು ರಕ್ತ ಬಳ್ಳಾರಿ ಸಿದ್ದಮ್ಮನವರ ತಲೆಯಿಂದ ಬಿದ್ದಿತು. ಆದರೂ ರಕ್ತ ಹರಿಯುತ್ತಿದ್ದರೂ ಭಾಷಣಮಾಡುತ್ತಿದ್ದ ಸಿದ್ದಮ್ಮನ ಕಡೆಗೆ ಜನರು ಒಲಿದರು. ಹೀಗೆ ಕಾಂಗ್ರೆಸ್ಸಿನ ಕಾರ್ಯಚಟುವಟಿಕೆಗಳಲ್ಲಿ ನನ್ನ ಭಾಗ ನಡೆಯುತ್ತಿತ್ತು. ಮುಂದೆ ಶಿವಪುರದಲ್ಲಿ ಮೈಸೂರ್ ಕಾಂಗ್ರೆಸ್ ಅಧಿವೇಶನ ನಡೆಯಿತು. ಇದಕ್ಕೆ ಕೆಲ ತಿಂಗಳುಗಳ ಹಿಂದೆ ಅಂದರೆ, 1938ನೇ ಇಸವಿ ಜನವರಿ 26ರ ದಿನ ಮೈಸೂರಿನ ಸುಬ್ರಾಯನ ಕೆರೆಯಲ್ಲಿ ಪ್ರತಿಬಂಧಕಾಜ್ಞೆಯನ್ನು ಉಲ್ಲಂಘಿಸಿ ಧ್ವಜಾರೋಹಣ ಮಾಡಿ ಬಂಧಿತಳಾದೆ. ಜೈಲಿಗೆ ಹೋದಮೇಲೆ ಮೈಸೂರು ದೇಶದಲ್ಲಿ ರಾಜಕೀಯ ಬಂದಿಯಾಗಿ ಬಂದಿರುವ ಮಹಿಳೆ ನೀನೊಬ್ಬಳೇ ಎಂದು ಅಲ್ಲಿಯ ಅಧಿಕಾರಿಗಳು ಆಡಿಕೊಳ್ಳುತ್ತಿದ್ದರು.

ಜೈಲಿನಿಂದ ಬಿಡುಗಡೆಯಾಗಿ ಶಿವಪುರ ಮಹಾಧಿವೇಶನದ ಪ್ರಚಾರಕ್ಕೆ, ನಾನು ಮೈಸೂರು ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಸಂಚರಿಸಿ ಪ್ರಚಾರಭಾಷಣ ಮಾಡಿದೆ. ಮಿರ್ಲೆ, ಸಾಲಿಗ್ರಾಮ, ಕೆ. ಆರ್. ನಗರ, ಹುಣಸೂರು, ಹೊಸ ಅಗ್ರಹಾರ, ಗುಂಡ್ಲುಪೇಟೆ, ನಂಜನಗೂಡು ಮೊದಲಾದ ಸ್ಥಳಗಳಲ್ಲಿ ಇದಕ್ಕಾಗಿ ಭಾಷಣ ಮಾಡಿದ್ದು ನನಗೆ ಜ್ಞಾಪಕ. ಶಿವಪುರ ಅಧಿವೇಶನದಲ್ಲಿ ಸ್ವಯಂಸೇವಕಿಯಾಗಿ ಕೆಲಸ ಮಾಡಿದೆ. ಅನಂತರ ಮೈಸೂರಿನ ಟೌನ್‌ಹಾಲ್ ಮೈದಾನದಲ್ಲಿ ಪ್ರತಿಬಂಧಕ ಆಜ್ಞೆ ಮುರಿದು ಜೈಲು ಸೇರಿದೆ. 1940ರಿಂದ ಮೈಸೂರಿನಲ್ಲಿ ಕಾಂಗ್ರೆಸ್ಸಿನವರು ಚುನಾವಣೆ ರಂಗಕ್ಕೆ ಇಳಿಯುವ ಸನ್ನಾಹದಲ್ಲಿದ್ದರು. 1942ರ ಚಳವಳಿ ಬಂತು. ದೇಹಾಲಸ್ಯದಿಂದ ಈ ಚಳವಳಿಯಲ್ಲಿ ಪಾತ್ರವಹಿಸಲಾಗಲಿಲ್ಲ. ಆದರೂ ಕೂಡ ಅಪ್ರತ್ಯಕ್ಷ ರೀತಿಯಿಂದ ಸ್ವಲ್ಪಮಟ್ಟಿಗೆ ಕೆಲಸ ಮಾಡಿದೆ. ಅಲ್ಲಿಂದ ಮುಂದೆ ಮೈಸೂರು ಕಾಂಗ್ರೆಸ್ಸಿನವರು ಶಾಯಿದೆ ಕೌನ್ಸಿಲ್ಲುಗಳನ್ನು ಪ್ರವೇಶಿಸಿದರು. ಕಾಂಗ್ರೆಸ್ಸಿನ ಪ್ರಚಾರ ಕಾರ್ಯಕ್ಕೆ ಸರ್ಕಾರದವರು ಪ್ರತಿಬಂಧಕಾಜ್ಞೆಗಳ ಮೂಲಕ ಅಡ್ಡಿಮಾಡಿದ್ದರು. ನಾನು ಮಹಿಳಾ ಸದನಗಳು, ಸಮಾಜಗಳು ಮುಂತಾದ ಕಡೆಗಳಲ್ಲಿ ಹೋಗಿ ಪ್ರಚಾರಕಾರ್ಯ ನಡೆಸಿದೆ. ಹಲವಾರು ಕೇರಿಗಳಿಗೆ ಹೋಗಿ, ಯಾರೊಬ್ಬರ ಮನೆಯಲ್ಲಿಯಾದರೂ ಆ ಕೇರಿಯ

ಜನರನ್ನು ಕೂರಿಸಿ ಪ್ರಚಾರ ನಡೆಸಿದೆ. ಹೀಗೆ ನೂರಾರು ಕಡೆಗಳಲ್ಲಿ ಮಾಡಿರಬಹುದೆಂದು ನನಗೆ ಅನ್ನಿಸುತ್ತದೆ. ಒಮ್ಮೆ ಮುಸಲ್ಮಾನರ ಕೇರಿಯಲ್ಲಿ ಇಂತಹ ಸಭೆಯನ್ನು ನಡೆಸಿ ಕಾಂಗ್ರೆಸ್ಸಿಗೆ ವಿರೋಧಿಗಳಾಗಿದ್ದ ಮುಸಲ್ಮಾನರನ್ನು ಪರಿವರ್ತಿಸಲು ಯತ್ನಿಸಿದೆ. ಮುಸಲ್ಮಾನ್ ಮಹಿಳೆಯರ ಓಟುಗಳು ಆ ಕೇರಿಯ ಬೂತಿನಲ್ಲಿ ಬಹಳವಾಗಿ ಕಾಂಗ್ರೆಸ್ಸಿಗೆ ಬಿದ್ದವು.

1947ರಲ್ಲಿ 'ಮೈಸೂರು ಚಲೋ' ಚಳವಳಿ ಆರಂಭವಾಯಿತು. ಮೈಸೂರಿನ ಎಲ್ಲ ಮುಖಂಡರ ಬಂಧನವಾಯಿತು. ಮೈಸೂರಿನ ಬೀದಿಬೀದಿಗಳಲ್ಲಿ ಎಲ್ಲರ ಮನೆ ಮೇಲೂ ರಾಷ್ಟ್ರೀಯ ಧ್ವಜವು ಎದ್ದುಕಾಣುತ್ತಿತ್ತು. ಹೆಂಗಸರು, ಹುಡುಗರು, ಮಕ್ಕಳು— ಎಲ್ಲರೂ ಚಳವಳಿಯ ಮಾತನ್ನೇ ಆಡುತ್ತಿದ್ದರು. ನಾನು ಗುಪ್ತಗಾಗಿ ಈ ಚಳವಳಿಗೆ ಸಹಾಯ ಮಾಡುವ ಉದ್ದೇಶದಿಂದ ಪ್ರತ್ಯಕ್ಷವಾಗಿ ಯಾವ ಕಾರ್ಯಕ್ರಮದಲ್ಲೂ ಕೆಲಕಾಲ ಭಾಗವಹಿಸಲಿಲ್ಲ. ಈ ಚಳವಳಿಗೆ ಸಂಬಂಧಪಟ್ಟ ಕರಪತ್ರಗಳು ಹಿಂದೂಪುರ, ಹುಬ್ಬಳ್ಳಿ ಮತ್ತು ಮದ್ರಾಸಿನಲ್ಲಿ ಅಚ್ಚಾಗಿ, ಮಡಿಕೇರಿಯ ಮುಖಾಂತರ ಮೈಸೂರನ್ನು ತಲಪುವ ವ್ಯವಸ್ಥೆಯಿತ್ತು. ಈ ಕಾರ್ಯದಲ್ಲಿ ಮೈಸೂರಿನ ಇ. ಪಿ. ಪಾಲಂಜಿಯವರು ನಮಗೆ ನೆರವಾಗಿದ್ದರು. ಪಾಲಂಜಿಯವರು ಮೈಸೂರು ಸರ್ಕಾರದ ಮಡಿಕೇರಿ ಔಟ್ ಏಜನ್ಸಿಯ ಕಂಟ್ರಾಕ್ಟರ್ ಆಗಿದ್ದರು. ಅವರ ಲಾರಿಗಳು, ಬಸ್ಸುಗಳು ಮೈಸೂರು–ಮಡಿಕೇರಿಗೆ ಓಡಾಡುತ್ತಿದ್ದವು. ಇವುಗಳ ಮೂಲಕ ನಮ್ಮ ಭಿತ್ತಿಪತ್ರಗಳು ಬರುತ್ತಿದ್ದವು. ಅವುಗಳನ್ನು ಪಡೆದು ಎಂ. ಎನ್. ಕೃಷ್ಣಮೂರ್ತಿಯವರ ಮುಖಾಂತರ ಹಂಚಿಕೆಯ ವ್ಯವಸ್ಥೆಮಾಡಿದ್ದೆ. ಕೆಲವು ದಿವಸಗಳ ಮೇಲೆ ನನಗೆ ಸಿ.ಐ.ಡಿ.ಗಳ ಕಾಟವು ಬಹಳವಾಯಿತು. ಹೊರಗಡೆ ಇದ್ದು ಕೆಲಸಮಾಡಲು ಸಾಧ್ಯವಿಲ್ಲವಾಯಿತು. ನಾನು ಈ ಕಾರ್ಯವನ್ನು ಕೃಷ್ಣಮೂರ್ತಿ ಮತ್ತು ಅವರ ಸಂಗಡಿಗರಿಗೆ ವಹಿಸಿ ಚಳವಳಿಯಲ್ಲಿ ಪ್ರತ್ಯಕ್ಷವಾಗಿ ಧುಮುಕಲು ನಿರ್ಧರಿಸಿದೆ. ಈ ಬಗ್ಗೆ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್‌ರವರಿಗೆ ಪತ್ರ ಬರೆದೆ. ಮರುದಿನ ಮನೆಯಲ್ಲಿದ್ದವಳನ್ನು ಪೋಲೀಸರು ಬಂಧಿಸಿ ಜೈಲಿಗೆ ಒಯ್ದರು. ಕೆಲವು ದಿವಸಗಳನಂತರ ಕಾಂಗ್ರೆಸ್ಸಿಗೂ ಸರ್ಕಾರಕ್ಕೂ ಒಪ್ಪಂದವಾಯಿತು. ಎಲ್ಲಾ ರಾಜಕೀಯ ಬಂದಿಗಳ ಬಿಡುಗಡೆಯಾಯಿತು.

ನಾನು 1930ರಿಂದ 1947ರವರೆಗೆ ಭಾಷಣ ಮಾಡಿದ ಸಭೆಗಳ ಅಂಕೆ ನನಗೆ ನೆನಪಿಲ್ಲ. ಮೆರವಣಿಗೆಗಳೂ ಹೀಗೆಯೆ. ಇದನ್ನೆಲ್ಲಾ ವಿಸ್ತರಿಸುವುದು ಸಾಧ್ಯವಿಲ್ಲದ ಕೆಲಸ. ಸಾವಿರಾರು ಜನ ಸೇರಿದ ನೂರಾರು ಸಭೆಗಳಲ್ಲಿ ಭಾಷಣ ಮಾಡಿದ್ದೇನೆ. ಮೆರವಣಿಗೆಗಳಲ್ಲಿ ಪಾಲ್ಗೊಂಡಿದ್ದೇನೆ. ಮುಖ್ಯವಾಗಿ 1938ರ ಜನವರಿ 26ನೇ ತಾರೀಖು ಮೈಸೂರಿನ ಸುಬ್ರಾಯನ ಕೆರೆಯ ಮೈದಾನದ ಸಭೆ. ಮಂಜು ಬೆರೆಸಿದ ಬಿಸಿಲು, ಹತ್ತಾರು ಸಾವಿರ ಜನ ಇವರ ಮಧ್ಯದಲ್ಲಿ 'ಧ್ವಜವಂದನೆ'ಯ ಕಾರ್ಯಕ್ರಮ. ನನ್ನ ಯಜಮಾನರು ಎಂ. ಎನ್. ಜೋಯಿಸರು ಪ್ರತಿವರ್ಷ ಜನವರಿ 26ರಂದು 'ಸ್ವಾತಂತ್ರ್ಯ ದಿನಾಚರಣೆ'

ಯನ್ನು ರಾಷ್ಟ್ರಧ್ವಜದಡಿಯಲ್ಲಿ ನಡೆಸಿಕೊಂಡುಬರುತ್ತಿದ್ದರು. ಆದರೆ ಆ ಜನವರಿಯಲ್ಲಿ (1938) ರಾಜದ್ರೋಹದ ಆಪಾದನೆಗಾಗಿ ಅವರು ಜೈಲಿನಲ್ಲಿದ್ದರು. ಅದು ನನ್ನ ಪಾಲಿನ ಕರ್ತವ್ಯವೆಂದು ಮುಂದಾದೆ. ಮೈಸೂರಿನಲ್ಲಿ ಧ್ವಜ ಹಾರಿಸಬಾರದೆಂಬ ಕಟ್ಟಾಜ್ಞೆ ಬೇರೆ. ಅದುವರೆಗೆ ಮೈಸೂರಿನಲ್ಲಿ ರಾಜಕೀಯ ಚಳವಳಿಯಲ್ಲಿ ಭಾಗವಹಿಸಿ, ಕಾನೂನನ್ನು ಉಲ್ಲಂಘಿಸಿದ ಮಹಿಳೆ ಯಾರೂ ಇರಲಿಲ್ಲ. ಇದಕ್ಕಾಗಿ ಹೆಂಗಸರು ಸಾವಿರಗಟ್ಟಲೆಯಲ್ಲಿ ಬಂದಿದ್ದರು. ಎಂಟು ಘಂಟೆಗೆ ಸರಿಯಾಗಿ ಸ್ವಯಂಸೇವಕ ತಗಡೂರು ರಂಗಯ್ಯನವರು ಧ್ವಜ ಹಾರಿಸಬೇಕೆಂದು ಹೇಳಿದರು. ಕಂಕುಳಲ್ಲಿದ್ದ ನನ್ನ ಒಂದೂವರೆ ವರ್ಷದ ಮಗು ಜಯಸಿಂಹನನ್ನು ಪಕ್ಕದವರ ಕೈಗೆ ಕೊಟ್ಟು ಹೋಗಿ ಧ್ವಜ ಹಾರಿಸಿದೆ. ಕೂಡಲೇ ಪೋಲೀಸರು ನನ್ನನ್ನು ಬಂಧಿಸಿದರು. ನನ್ನ ಮಗುವನ್ನು ಎತ್ತಿಕೊಂಡು ಬರುವುದಾಗಿ ಹೇಳಿದೆ. ಪೋಲೀಸರು ಅದಕ್ಕೆ ಅಡ್ಡಿಪಡಿಸಿದರು. ಪೋಲೀಸರಿಗೂ ಜನರಿಗೂ ತಿಕ್ಕಾಟ ಪ್ರಾರಂಭವಾಯಿತು. ಮಗುವನ್ನು ಎತ್ತಿಕೊಂಡು ಕೋರ್ಟಿಗೆ ಹೋಗಿ ಮ್ಯಾಜಿಸ್ಟ್ರೇಟರ ತೀರ್ಪಿನಂತೆ ನಡೆದುಕೊಳ್ಳಬೇಕೆಂಬ ಒಪ್ಪಂದವಾಯ್ತು. ಮ್ಯಾಜಿಸ್ಟ್ರೇಟರು ತಾಯಿಯೊಡನೆ ಮಗು ಹೋಗತಕ್ಕದ್ದೆಂದು ತೀರ್ಪಿತ್ತರು. ಕೋರ್ಟಿನ ಹತ್ತಿರ ಕಿಕ್ಕಿರಿದ ಜನಸಂದಣಿಯ ಜಯಘೋಷಗಳು ಆಕಾಶವನ್ನು ಮುಟ್ಟುತ್ತಿದ್ದವು. ಸರ್ಕಾರಕ್ಕೆ ಧಿಕ್ಕಾರ! ಎಂಬ ಕೂಗು ಎಲ್ಲೆಡೆ ವ್ಯಾಪಿಸಿತ್ತು. ಈ ಸಭೆಗೆ (ನಾನು ಹಿಂದೆಯೇ ಹೇಳಿದಂತೆ) ನಮಗೆ ಬಹಿಷ್ಕಾರ ಹಾಕಿದ್ದ ನನ್ನ ಅತ್ತೆ ನಂಜಮ್ಮನವರು ಬಂದಿದ್ದರು, ಕಣ್ಣೀರಿಟ್ಟರು. ಸಮಾಜದಲ್ಲಿ ಆಗುತ್ತಿದ್ದ ಬದಲಾವಣೆಗಳು ಅರವತ್ತರ ಮುದುಕಿಯಾದ ತನಗೆ ಗೊತ್ತಾಗಲಿಲ್ಲವೆಂದು ಪಶ್ಚಾತ್ತಾಪ ಪಟ್ಟರು. ಆ ಧಿಕ್ಕಾರದ ಸಭೆಯಲ್ಲಿ ಆ ಮುದುಕಿಯೂ ಭಾಷಣ ಮಾಡಿದರು. ಸ್ವಾತಂತ್ರ್ಯಸಮರಕ್ಕೆ ತನ್ನ ಮಕ್ಕಳನ್ನೆಲ್ಲ ಮುಡಿಪು ಇಟ್ಟಿರುವುದಾಗಿ ಘೋಷಿಸಿದರು. ಅಂದಿನಿಂದ ನನ್ನ ಯಜಮಾನರ ತಮ್ಮಂದಿರಾದ ಎಂ. ಎನ್. ರಾಮಚಂದ್ರ ಜೋಯಿಸ್, ಎಂ. ಎನ್. ಕೃಷ್ಣಮೂರ್ತಿ ಮತ್ತು ತಂಗಿಯಾದ ಬಾಲಸುಂದರಮ್ಮ ಇವರುಗಳು ಕಾಂಗ್ರೆಸ್ಸಿನ ನಿಷ್ಠಾವಂತ ಸೇವಕರಾದರು. ಅಂದಿನಿಂದ ನನ್ನ ಮೇಲಿದ್ದ ಬಹಿಷ್ಕಾರವು ತೊಲಗಿತು.

ಶಿವಪುರದ ಸತ್ಯಾಗ್ರಹದಲ್ಲಿ ಬಂದಿಯಾಗಿದ್ದವರನ್ನು ಸರ್ಕಾರ ಬಿಡುಗಡೆ ಮಾಡಿತು. ಮೈಸೂರಿನಲ್ಲಿ ನನ್ನ ಬಿಡುಗಡೆ ಆಯಿತು. ಸಾವಿರಾರು ಜನ ಜೈಲಿನ ಬಳಿ ಕಾದಿದ್ದರು. ರಸ್ತೆಯುದ್ದಕ್ಕೂ ಹಾರಗಳನ್ನು ಅರ್ಪಿಸುತ್ತಿದ್ದರು. ಆರತಿಯನ್ನು ಬೆಳಗುತ್ತಿದ್ದರು. ಅಂದು ಮೈಸೂರಿನ ಜನ ನಮ್ಮನ್ನೆಲ್ಲಾ ಮೆರವಣಿಗೆಯಲ್ಲಿ ಮೆರೆಸಿದರು. ನನ್ನೊಡನೆ ಜೈಲಿನಲ್ಲಿದ್ದ ನನ್ನ ಮಗು ಜಯಸಿಂಹನನ್ನು ಸಾವಿರಗಟ್ಟಲೆ ತಾಯಂದಿರು ಮುದ್ದಾಡಿ ಹರಸಿದ ದೃಶ್ಯ ಅವರ್ಣನೀಯ.

ಮೈ.ಮೈ. 6

# ಎನ್. ಡಿ. ಶ್ರೀರಂಗಾಚಾರ್

ಜನನ : 10-7-1912 ಉದ್ಯೋಗ : ಅಧ್ಯಾಪಕ ವಿಳಾಸ : ಪ್ರಿನ್ಸಿಪಾಲ್, ಅಮರ್ ಸ್ಕೂಲ್, ಪುಂಜಗುತ್ತ ಮಾರ್ಕೆಟ್, ಹೈದರಾಬಾದ್

---



1930ರ ಮಾರ್ಚ್ ತಿಂಗಳಲ್ಲಿ ನನ್ನ ಜೂನಿಯರ್ ಇಂಟರ್‌ಮಿಡಿಯೆಟ್ ಪರೀಕ್ಷೆ ಮುಗಿದು ಉತ್ತೀರ್ಣನಾದೆ. ಜೂನ್ ತಿಂಗಳಲ್ಲಿ ಕಾಲೇಜು ತೆರೆಯಿತು. ನಾನು ಮೈಸೂರು ಮಹಾರಾಜಾ ಕಾಲೇಜಿಗೆ ಹೋಗಲಾರಂಭಿಸಿದೆ.

ಬ್ರಿಟಿಷ್ ಇಂಡಿಯಾದಲ್ಲಿ ಆಗ ಆಂದೋಲನ ಬಿಸಿಬಿಸಿಯಾಗಿತ್ತು. ಅಖಿಲ ಭಾರತ ಕಾಂಗ್ರೆಸ್ಸಿನ ಪ್ರಮುಖರನ್ನು ದಸ್ತಗಿರಿ ಮಾಡುವುದು ; ಸತ್ಯಾಗ್ರಹಿಗಳ ಮೇಲೆ ಅನೇಕ ವಿಧವಾದ ಅತ್ಯಾಚಾರ, ಪರದೇಶೀ ವಸ್ತುವಿನ ಬಾನ್ ಫೈರ್ ಇವುಗಳು ಪ್ರತಿದಿನದ ಸಮಾಚಾರಗಳಾದವು. ಇದರ ಪ್ರಭಾವ ಸಂಸ್ಥಾನದಲ್ಲೂ ಮೂಡಿತ್ತು. ಹರತಾಳ ಮತ್ತು ಬಾನ್‌ಫೈರ್ ಇಲ್ಲಿಯೂ ಪ್ರಾರಂಭವಾದವು. 1930ರ ಆಗಸ್ಟ್ ತಿಂಗಳ ಸಾಯಂಕಾಲ ಕಾಲೇಜಿನಿಂದ ಬಂದಾಗ ಟೌನ್‌ಹಾಲ್ ಮೈದಾನದಲ್ಲಿ ದೊಡ್ಡ ಗುಂಪು ಕಾಣಿಸಿತು. ಅಲ್ಲಿ ಏನು ನಡೆಯುತ್ತಿದೆ, ನೋಡೋಣ, ಎಂಬ ಕುತೂಹಲವಾಯಿತು. ಕಾಂಗ್ರೆಸ್ ಮುಖಂಡರೊಬ್ಬರು ಭಾಷಣ ಮಾಡುತ್ತಿದ್ದರು. ಅವರು ಡಾ|| ಪಾರ್ಥನಾರಾಯಣ ಪಂಡಿತರೆಂದು ತಿಳಿಯಿತು. ಬ್ರಿಟಿಷ್ ಇಂಡಿಯಾದಲ್ಲಿ ಭಾರತೀಯರ ಮೇಲೆ ಮಾಡುತ್ತಿರುವ ಅತ್ಯಾಚಾರಗಳ ವರ್ಣನೆಯು ಬಹಳ ಪ್ರಭಾವಶಾಲಿಯಾಗಿತ್ತು. ಭಾಷಣ ಕೇಳುತ್ತ ನಿಂತಿರುವ ಅನೇಕ ಜನಗಳ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲ ಪ್ರಾರಂಭಿಸಿತು. ಅಷ್ಟುಹೊತ್ತಿಗೆ ನನಗೂ ತಿಳಿಯದ ಹಾಗೆ ಆವೇಶವು ಬಂದುಬಿಟ್ಟಿತು. ಸಭೆಯಾದ ಅನಂತರ ಪರದೇಶೀ ಬಟ್ಟೆಗಳ ಬಾನ್‌ಫೈರ್ ನಡೆಯಿತು. ಮೈಮೇಲಿದ್ದ ಅಂಗಿಯನ್ನು ತೆಗೆದು ಉರಿಯಲ್ಲಿ ಹಾಕಿದೆನು. ಅಂದಿನಿಂದ ದೇಶದ ಸ್ವಾತಂತ್ರ್ಯಕ್ಕಾಗಿ ನಾನೂ ದುಡಿಯಬೇಕು ; ಈ ಕೆಲಸದಲ್ಲಿ ಯಾವ ಅಡಚಣೆಗಳನ್ನೂ ಲಕ್ಷ್ಯಮಾಡದೇ ಸರ್ವತ್ಯಾಗ ಮಾಡಲು ಸಿದ್ಧನಾಗಬೇಕೆಂದು ಮನಸ್ಸಿನಲ್ಲಿ ಶಪಥ ಮಾಡಿದೆನು.

ಮನೆಗೆ ಹಿಂದಿರುಗಿ ತಂದೆಯವರಿಗೆ ಟೌನ್ ಹಾಲ್ ಸಭೆಯಲ್ಲಿ ಜರುಗಿದ ಸಂಗತಿ

ಯನ್ನು ತಿಳಿಸಿದೆನು. ಸ್ವಲ್ಪ ಹೊತ್ತು ಸುಮ್ಮನಿದ್ದು, ನೀನು ಮಾಡಿದ ಕೆಲಸವು ಶ್ಲಾಘನೀಯವಾದುದೆಂದು ಪ್ರೋತ್ಸಾಹಿಸಿದರು. ಕೆಲವು ದಿನಗಳಲ್ಲಿ ಮನೆಯಲ್ಲಿದ್ದ ಪರದೇಶೀ ಬಟ್ಟೆಗಳೆಲ್ಲಾ ಬೆಂಕಿಯ ಪಾಲಾದವು. ಖಾದೀ ಬಟ್ಟೆ ಹಾಕಿಕೊಳ್ಳಲು ಆರಂಭಿಸಿದೆವು. ಆ ದಿನದಿಂದ ಕಾಲೇಜಿನಲ್ಲಿ ಕೂಡ ಅದರ ಪ್ರಭಾವ ಆಗದೇ ಇರಲಿಲ್ಲ. ಚಿಕ್ಕ ಚಿಕ್ಕ ವಿದ್ಯಾರ್ಥಿಸಭೆಯಲ್ಲಿಯೂ, ವಿದ್ಯಾರ್ಥಿ ವಸತಿಗೃಹಗಳಲ್ಲಿಯೂ ಸಭೆ ನಡೆಸಿ ವಿದ್ಯಾರ್ಥಿಗಳಲ್ಲಿ ಹುಮ್ಮಸ್ಸು ಹುಟ್ಟಿಸಿದೆನು. ಈ ಕೆಲಸದಲ್ಲಿ ಮಾಜಿ ಮಂತ್ರಿಗಳು ಕೆ. ಪುಟ್ಟಸ್ವಾಮಿ ಮತ್ತು ಎ. ಸಿ. ಬೈರಪ್ಪನವರು (ಒಕ್ಕಲಿಗರ ಸಂಘ) ಬಹಳ ಸಹಾಯ ಮಾಡಿದರು. ಬ್ರಿಟಿಷ್ ಇಂಡಿಯಾದಲ್ಲಿ ಪ್ರಮುಖರು ಹಿಡಿಯಲ್ಪಟ್ಟರೆ, ಗೋಲೀಬಾರ್ ಮುಂತಾದ ಅತ್ಯಾಚಾರಗಳು ಪ್ರಜೆಗಳ ಮೇಲೆ ನಡೆದರೆ, ಮೈಸೂರಿನಲ್ಲಿಯೂ ಹರತಾಳ. ವಿದ್ಯಾರ್ಥಿಗಳು ಈ ಚಳವಳಿಯಲ್ಲಿ ಸೇರಿದನಂತರ ಪ್ರತಿಯೊಂದು ಮೆರವಣಿಗೆಯಾಗಲೀ ಸಭೆಯಾಗಲೀ, ಜನರು ತಂಡೋಪತಂಡವಾಗಿ ಭಾಗವಹಿಸುತ್ತಿದ್ದರು. ಮೈಸೂರಿನ ರೀತಿಯೇ ಬದಲಾಯಿಸಿತು. ಪ್ರತಿ ಭಾನುವಾರ ಸುಬ್ಬರಾಯನಕೆರೆ ಮೈದಾನದಲ್ಲಿ ಝಂಡಾವಂದನೆ ಮಾಡಲಾರಂಭಿಸಿದೆವು. ಈ ವಿದ್ಯಾರ್ಥಿ ನವಚೇತನಕ್ಕೆ ಒಂದು ರೂಪಕೊಡಲು 'ಮೈಸೂರು ಸಿಟಿ ವಿದ್ಯಾರ್ಥಿ ಸಂಘ'ವನ್ನು ಸ್ಥಾಪಿಸಿ ಅದಕ್ಕೆ ನಾನು ಅಧ್ಯಕ್ಷನಾದೆನು.

ಅದುವರೆಗೂ ಮೈಸೂರಿನಲ್ಲಿ ತಗಡೂರು ರಾಮಚಂದ್ರರಾವ್, ಅಗರಂ ರಂಗಯ್ಯ, ಎಸ್. ರಂಗರಾಮಯ್ಯನವರುಗಳು ಕಾಂಗ್ರೆಸ್ ಮುಖಂಡರಾಗಿದ್ದರು. ನನ್ನ ಕಾರ್ಯ ಕಲಾಪಗಳನ್ನು ನೋಡಿ ವಿಶ್ವವಿದ್ಯಾನಿಲಯದ ಅಧಿಕಾರಿಗಳಲ್ಲಿಯೂ ಕೂಡ ಒಂದು ವಿಧವಾದ ಬಿಕ್ಕಟ್ಟು ಏರ್ಪಟ್ಟಿತು. ಮೈಸೂರು ಬ್ರಿಟಿಷರ ಕೈಕೆಳಗಿನ ಸಂಸ್ಥಾನವಾದ್ದ ರಿಂದ ವಿದ್ಯಾರ್ಥಿಗಳು ಇಷ್ಟು ಗಲಾಟೆ ಮಾಡುತ್ತಿದ್ದರೆ ಹೇಗೆ ಸುಮ್ಮನಿರಲು ಸಾಧ್ಯ? ಹಾಗೂ ಹೀಗೂ ನವಂಬರ್ ತಿಂಗಳು (1930) ಬಂತು. ಆ ತಿಂಗಳು 14ನೇ ತಾರೀಖು ಸುಬ್ಬರಾಯನ ಕೆರೆಯಲ್ಲಿ ಝಂಡಾವಂದನೆ, ದೊಡ್ಡ ಮೆರವಣಿಗೆ ಏರ್ಪಾಡು ಮಾಡ ಲಾಗಿತ್ತು. ನವಂಬರ್ 13ರಂದು ಸಾಯಂಕಾಲ ಪೋಲೀಸರು ನಮ್ಮ ಮನೆಗೆ ಬಂದು ಪೋಲೀಸ್ ಆಕ್ಟ್ ಪ್ರಕಾರ ಒಂದು ವಾರದವರೆಗೆ ಯಾವುದೇ ಬಹಿರಂಗ ಸಭೆಯಾಗಲೀ, ಝಂಡಾವಂದನೆಯಲ್ಲಾಗಲೀ ನಾನು ಪಾತ್ರವಹಿಸಬಾರದೆಂದು ಹುಕುಂ ಜಾರಿ ಮಾಡಿ ದರು. ಕೂಡಲೇ ಕಾಂಗ್ರೆಸ್ ಆಫೀಸಿಗೆ ಹೋದೆ. ಆ ನೋಟೀಸನ್ನು ಅಗರಂ ರಂಗಯ್ಯ, ಎಸ್. ರಂಗರಾಮಯ್ಯನವರಿಗೂ ಸಹ ಜಾರಿಮಾಡಿದ್ದಾರೆಂದು ತಿಳಿಯಿತು. ನಾನು ಕಾರ್ಯಕರ್ತರ ಸಭೆಯಲ್ಲಿ ಮಾರುದಿವಸದ ಕಾರ್ಯಕಲಾಪಗಳಲ್ಲಿ ಭಾಗವಹಿಸಬೇಕೆಂದು ನಿರ್ಣಯವಾಯಿತು.

1930ರ ನವಂಬರ್ 14ಕ್ಕೆ ಸುಬ್ಬರಾಯನ ಕೆರೆ ಮೈದಾನದಲ್ಲಿ ಬೆಳಗ್ಗೆ ಜನಗಳ ದೊಡ್ಡ ಗುಂಪು ಸೇರಿತು. ನಮ್ಮ ಮೇಲೆ ನೋಟೀಸು ಜಾರಿ ಮಾಡಿದ ಸಂಗತಿ

ಊರಲೆಲ್ಲಾ ಹರಡಿತ್ತು. ಏನಾಗುತ್ತದೆಯೋ ನೋಡೋಣವೆಂಬ ಕುತೂಹಲ ಬೇರೆ. ರ್ಯಾಂಡಾ ವಂದನೆ ಯಾವ ಅಡಚಣೆಯೂ ಇಲ್ಲದೆ ನಡೆಯಿತು. ಅದಾದನಂತರ ಮೆರವಣಿಗೆ ಹೊರಟಿತು. ಯಾವ ವೇಳೆಯಲ್ಲಿ ಏನಾಗುತ್ತದೆಯೋ ಎಂದು ಎಲ್ಲರಿಗೂ ಆತುರ. ಆದರೆ ಪೋಲೀಸಿನವರು ಬಹಳ ಚಾತುರ್ಯದಿಂದ ವರ್ತಿಸಿದರು. ಯೂನಿಫಾರ್ಮ್ ಇಲ್ಲದ ಪೋಲೀಸಿನವರನ್ನು ಎಸ್. ರಂಗರಾಮಯ್ಯ, ಅಗರಂ ರಂಗಯ್ಯ ಮತ್ತು ನನ್ನ ಕಡೆಗೆ ಕಳುಹಿಸಿದರು. ಇನ್‌ಸ್ಪೆಕ್ಟರ್‌ರವರು ನಮ್ಮ ಜೊತೆ ಮಾತಾಡಲು ಇಷ್ಟಪಡುತ್ತಾರೆಂದು ಹೇಳಿದರು. ನನ್ನನ್ನು ಮೋಟಾರಿನಲ್ಲಿ ಕೂರಿಸಿಕೊಂಡು ಪೋಲೀಸ್ ಸ್ಟೇಷನ್ನಿಗೆ ಒಯ್ದಾಗ, ಅಲ್ಲಿ ಎಸ್. ರಂಗರಾಮಯ್ಯ ಮತ್ತು ಅಗರಂ ರಂಗಯ್ಯನವರು ಇದ್ದರು. ನಮ್ಮನ್ನು ಯುಕ್ತಿಯಿಂದ ದಸ್ತಗಿರಿ ಮಾಡಿದ್ದಾರೆಂದು ಆಗ ತಿಳಿಯಿತು. ಮರುದಿನ ನಮಗೆ ಜಾಮೀನಿನ ಮೇಲೆ ಬಿಡುಗಡೆ ಮಾಡಿದರು. ಬ್ರಿಟಿಷ್ ಇಂಡಿಯಾದಲ್ಲಿ ನಡೆಯುತ್ತಿದ್ದಂತೆ, ಚಳವಳಿಕಾರರು ಬಿಡುಗಡೆಗೆ ಯತ್ನಿಸದೆ, ಖಟ್ಲೆಯಲ್ಲೂ ವಾದಿಸದೆ, ಜೈಲಿಗೆ ಹೋಗಬೇಕೆಂದು ನಾನು ವಾದಿಸಿದಾಗ ಇತರರು ಒಪ್ಪಲಿಲ್ಲ. ಈ ನಿರ್ಣಯದಿಂದ ಕಾಂಗ್ರೆಸ್ಸಿನಲ್ಲಿ ಭಿನ್ನಾಭಿಪ್ರಾಯ ಬಂದು, ಯುವಜನರೆಲ್ಲ 'ಯುವಜನ ಸಂಘ'ವನ್ನು ಸ್ಥಾಪಿಸಿ, ಅದಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಮಾಡಿದರು. ಆದರೆ ಕಾಂಗ್ರೆಸ್ ಚಳವಳಿಯಲ್ಲಿ ಲವಲೇಶವೂ ಕುಂದುಕೊರತೆ ಬರಲಿಲ್ಲ.

ಬಹುಶಃ ಜನವರಿ 1931. ಸುಬ್ಬರಾಯನ ಕೆರೆ ಮೈದಾನದಲ್ಲಿ ಒಂದು ಭಾರೀ ಬಹಿರಂಗ ಸಭೆ ಏರ್ಪಾಟಾಗಿತ್ತು ; ಅದರಲ್ಲಿ ನಾನು ಭಾಷಣ ಮಾಡಬೇಕಾಗಿತ್ತು ; ಆದರೆ ಹಿಂದಿನ ದಿವಸ ನನಗೆ ಪೋಲೀಸರು ನೋಟೀಸು ಜಾರಿ ಮಾಡಿದ್ದರು ; ನಾನು ಬೆದರಲಿಲ್ಲ. ಮೈದಾನಕ್ಕೆ ಹೋಗುವ ಮುನ್ನವೇ ನನ್ನನ್ನು ದಸ್ತಗಿರಿ ಮಾಡಿದರು. ಮೂರನೇ ದಿನ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಕರೆದುಕೊಂಡು ಹೋದರು. ಅನೇಕ ಮುಖಂಡ ಸ್ನೇಹಿತರು ಜಾಮೀನು ಕೊಡಲು ತಯಾರಾದರು ; ಆದರೆ ನಾನು ಒಪ್ಪಲಿಲ್ಲ. ನನಗೆ ಒಂದು ತಿಂಗಳ ಸಾಧಾರಣ ಶಿಕ್ಷೆ ವಿಧಿಸಿ ಜೈಲಿಗೆ ಕಳುಹಿಸಿದರು. ಜೈಲಿನಿಂದ ಬಿಡುಗಡೆಯಾಗಿ ಬಂದನಂತರ ವಾರ್ಷಿಕ ಪರೀಕ್ಷೆ ಪ್ರಾರಂಭವಾಯಿತು. ನಾನು ಇಂಗ್ಲಿಷ್ ಮೊದಲನೆಯ ಪೇಪರನ್ನು ತೆಗೆದುಕೊಂಡು ಹತ್ತು ನಿಮಿಷ ಬರೆದಿರಬಹುದು. ಕಾಲೇಜು ಜವಾನ ಬಂದು ಸೂಪರಿಂಟೆಂಡೆಂಟ್‌ರು ಕರೆಯುತ್ತಾರೆಂದು ಕರೆದುಕೊಂಡು ಹೋದನು. ಸೂಪರಿಂಟೆಂಡೆಂಟ್ ಎಸ್. ವಿ. ಕೃಷ್ಣಸ್ವಾಮಯ್ಯಂಗಾರ್‌ರವರು ನನ್ನನ್ನು ಕುರ್ಚಿಯಲ್ಲಿ ಕುಳಿತುಕೊಳ್ಳಲು ಹೇಳಿದರು. ಮೈಸೂರು ವಿಶ್ವವಿದ್ಯಾನಿಲಯದವರು ನನ್ನನ್ನು ಕಾಂಗ್ರೆಸ್ ಆಂದೋಲನದ ಕಾರಣ ವಿಶ್ವವಿದ್ಯಾನಿಲಯದಿಂದ ಹೊರಹಾಕಲು ನಿರ್ಧರಿಸಿದ್ದು, ಈ ನಿರ್ಣಯದಲ್ಲಿ ತಮ್ಮ ಪಾತ್ರ ಏನೂ ಇಲ್ಲವೆಂದು ಕಣ್ಣೀರಿಟ್ಟು ತಿಳಿಸಿ, ನನ್ನ ದೇಶಸೇವೆ ಉದ್ಯಮದಲ್ಲಿ ಯಶಸ್ಸು ಸಂಪಾದಿಸಬೇಕೆಂದು ಹಾರೈಸಿ, ನನ್ನ ಕೈಯಲ್ಲಿ ವಿಶ್ವವಿದ್ಯಾನಿಲಯದ ಆರ್ಡರ್ ಕೊಟ್ಟು ಕಳುಹಿಸಿದರು.

ಒಂದು ವಿಧದಲ್ಲಿ ನನ್ನನ್ನು ವಿಶ್ವವಿದ್ಯಾನಿಲಯದಿಂದ ತೆಗೆದುಹಾಕಿದ್ದು ಒಳ್ಳೆಯದೇ ಆಯಿತು. ಈಗ ನನಗೆ ಕಾಂಗ್ರೆಸ್ ಚಳವಳಿಯಲ್ಲಿ ಪೂರ್ತಿಯಾಗಿ ಭಾಗವಹಿಸಲು ಅವಕಾಶ ದೊರೆಯಿತು. ಆದರೆ ಇತರ ಅಡಚಣೆಗಳು ಬಂದು ಸೇರಿದವು. ವಿಶ್ವವಿದ್ಯಾನಿಲಯದ ಅಧಿಕಾರಿಗಳು ನನ್ನ ಅತ್ತೆಯವರಿಗೂ ದೊಡ್ಡಪ್ಪನವರಿಗೂ ಸ್ನೇಹಿತರು. ಅವರ ಮುಖಾಂತರವಾಗಿ ಕಾಂಗ್ರೆಸ್ ಚಳವಳಿಯಿಂದ ಹಿಂತಿರುಗಿಸಿ ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂದು ಪ್ರಯತ್ನಪಟ್ಟರು. ಕಾರಣ ನನ್ನ ಬಂಧುಗಳು ಸರ್ಕಾರಿ ಉಚ್ಚ ಅಧಿಕಾರಿಗಳಾಗಿದ್ದರು. ಎರಡನೆಯದಾಗಿ, ನಾನು ಕಾಲೇಜಿನಲ್ಲಿದ್ದಾಗ ಒಳ್ಳೆಯ ಆಟಗಾರನಾಗಿದ್ದೆನು. ಫುಟ್‌ಬಾಲ್, ಕ್ರಿಕೆಟ್ ಮತ್ತು ಹಾಕಿ ಆಟಗಳಲ್ಲಿ ಕಾಲೇಜಿನ ಪರವಾಗಿ ಆಡುತ್ತಿದ್ದೆನು. ಮಹಾರಾಜಾ ಕಾಲೇಜಿನ ಮುಖ್ಯೋಪಾಧ್ಯಾಯರು ನನ್ನನ್ನು ಬರಹೇಳಿದರೆಂದು ಒಂದು ದಿನ ಮನೆಗೆ ಸೂಚನೆ ಬಂತು. ನಾನು ಅವರ ಮನೆಗೆ ಹೋದೆನು. ನಾನು ಬಹಳ ಬುದ್ಧಿಶಾಲಿಯೆಂದೂ, ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸಬೇಕಾದರೆ ವಿದ್ಯೆ ಅತ್ಯಾವಶ್ಯಕವೆಂದೂ, ಆದುದರಿಂದ ನಾನು ಕಾಂಗ್ರೆಸ್ ಬಿಟ್ಟರೆ ತಾವು ನನ್ನ ಪರವಾಗಿ ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಶಿಫಾರಸು ಮಾಡಿ ಕಾಲೇಜಿಗೆ ಪುನಃ ಸೇರುವಂತೆ ಮಾಡುವರೆಂದೂ ; ಮತ್ತು ನಾನು ಉತ್ತೀರ್ಣನಾದ ಅನಂತರ ತಾವೇ ಇಂಗ್ಲೆಂಡಿಗೆ ಉಚ್ಚವಿದ್ಯಾಭ್ಯಾಸಕ್ಕಾಗಿ ಕಳುಹಿಸಿಕೊಡುವುದಾಗಿಯೂ ಮುಖ್ಯೋಪಾಧ್ಯಾಯರು ಹೇಳಿದರು. ಆದರೆ ನಾನು ನನ್ನ ಮನಸ್ಸಿನಲ್ಲಿ ದೃಢಸಂಕಲ್ಪ ಮಾಡಿದ್ದೆನು. ನನ್ನ ವಿಷಯದಲ್ಲಿ ಇಷ್ಟು ಶ್ರದ್ಧೆವಹಿಸಿದ್ದಕ್ಕೆ ಅವರನ್ನು ಅಭಿನಂದಿಸಿ, ಅವರು ಹೇಳಿದ್ದಕ್ಕೆ ನನ್ನ ಸಮ್ಮತಿ ಸಿಗಲಾರದೆಂದು ಹೇಳಿ ಮನೆಗೆ ಬಂದೆ.

ಗಾಂಧೀ–ಇರ್ವಿನ್ ಒಪ್ಪಂದವಾಗಿ ಚಳವಳಿ ನಿಂತಾಗ ಗಾಂಧಿಯವರ ರಚನಾತ್ಮಕ ಕಾರ್ಯಕ್ರಮವನ್ನು ಅನುಸರಿಸುವ ಅವಕಾಶ ನನಗೆ ದೊರಕಿತು. ಯುವ ಜನಸಂಘದ ಆಶ್ರಯದಲ್ಲಿ ಒಂದು ಸ್ವಯಂಸೇವಕದಳವನ್ನು ರಚಿಸಿ, ದಿನವೂ ಖಾದಿ ಬಟ್ಟೆಯನ್ನು ಭುಜದ ಮೇಲೆ ಹೊತ್ತು ಪ್ರಚಾರಮಾಡಲಾರಂಭಿಸಿದೆನು. ಈ ಪ್ರಚಾರದಿಂದ ಬಹಳ ಜನ ದೇಶಾಭಿಮಾನಿಗಳು ಖಾದೀ ಬಟ್ಟೆಯನ್ನು ಉಪಯೋಗಿಸಲು ಆರಂಭಿಸಿದರು. ಇಷ್ಟರಲ್ಲಿ ಮೈಸೂರು ಸಿಟಿ ಕಾಂಗ್ರೆಸ್ ಕಮಿಟಿ ಅಧಿಕಾರಿಗಳ ಚುನಾವಣೆ ನಡೆದವು. ನಾನು ಬಹುಮತದಿಂದ ಕಾರ್ಯದರ್ಶಿಯಾಗಿ ಆಯ್ಕೆಯಾದೆನು. ಈ ಅವಧಿಯಲ್ಲಿ ಹಳ್ಳಿಹಳ್ಳಿ ತಿರುಗಿ ಕಾಂಗ್ರೆಸ್ ಮತ್ತು ಖಾದೀ ಪ್ರಚಾರ ಎಡೆಬಿಡದೇ ಮಾಡಿದೆನು. 1932ರಲ್ಲಿ ಕರನಿರಾಕರಣೆಯನ್ನು ಕರ್ನಾಟಕದಲ್ಲಿ ಆರಂಭಿಸಿದರು. ಈ ಸಂದರ್ಭದಲ್ಲಿ ಸ್ವಯಂಸೇವಕರ ಆವಶ್ಯಕತೆಯು ಬಹಳವಾಯಿತು. ಮುಖಂಡರೆಲ್ಲರೂ ಕಾರಾಗೃಹವಾಸಿಗಳಾದರು ; ಉತ್ತರ ಕರ್ನಾಟಕದಿಂದ ಸ್ವಯಂಸೇವಕರಿಗಾಗಿ ಕಾಗದಗಳು ಬಂದವು. ನಾನೂ, ನನ್ನ ಇತರ ಸ್ನೇಹಿತರೂ ಕೂಡಿ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನಲ್ಲಿ ಕೆಲಸ ಮಾಡಲು ಹೊರಟೆವು. ವೇಷ ಬದಲಿಸಿ ದಾವಣಗೆರೆಗೆ

ಹೋಗಿ, ಅಲ್ಲಿಂದ ಮತ್ತೆ ವೇಷ ಬದಲಾಯಿಸಿ ಧಾರವಾಡದ ಕರ್ನಾಟಕ ಕಾಲೇಜಿಗೆ ಹೋಗಿ, ಅಲ್ಲಿಂದ ರಾತ್ರಿ ಪ್ರಯಾಣಮಾಡಿ ವಾಸರೆ ಎಂಬ ಗ್ರಾಮಕ್ಕೆ ಸೇರಿದೆವು. ಡಿ. ಪಿ. ಕರಮರಕರ್ ಕರ್ನಾಟಕದ ನಾಲ್ಕನೇ ಡಿಕ್ಟೇಟರ್ ಆಗಿ ಕೆಲಸಮಾಡುತ್ತಿದ್ದರು. ನಮ್ಮ ಕಾರ್ಯಾಚರಣೆಯೆಲ್ಲಾ ರಾತ್ರಿ ಹೊತ್ತೇ ನಡೆಸಬೇಕಾಗಿತ್ತು. ಆ ಘಾಟ್ ಪ್ರಾಂತ್ಯದಲ್ಲಿ ಈ ವಿಧವಾಗಿ ಸುಮಾರು ಆರು ತಿಂಗಳು ಕೆಲಸ ಮಾಡಿದೆವು. ಒಂದು ರಾತ್ರಿ ಗಂಗಾವಳೀ ನದಿ ದಾಟುತ್ತಿರುವಾಗ ಎದುರಿನಿಂದ ಪೋಲೀಸು ಪಡೆ ಬರುತ್ತಿರುವುದನ್ನು ನಾನು ಗಮನಿಸಲಿಲ್ಲ. ಅವರು ನಮ್ಮ ಹತ್ತಿರ ಬಂದು ನನ್ನ ಬಳಿ ಖಾದೀ ಬಟ್ಟೆಯನ್ನು ನೋಡಿ ಸಂದೇಹಪಟ್ಟು ಅನೇಕ ರೀತಿ ಪ್ರಶ್ನಿಸಿದರು. ನನ್ನ ಭಾಷೆ ಶುದ್ಧ ಮೈಸೂರಿನದು. ಆದ್ದರಿಂದ ನನ್ನನ್ನು ಕೂಡಲೇ ದಸ್ತಗಿರಿ ಮಾಡಿದರು. ನನ್ನ ಸ್ನೇಹಿತರಾದ ಟಿ. ಎಸ್. ಸುಬ್ಬಣ್ಣನವರೂ ಜೊತೆಯಲ್ಲಿ ಇದ್ದರು. ಮಾರನೇ ದಿನ ಅಂಕೋಲಾ ಮ್ಯಾಜಿಸ್ಟ್ರೇಟ್ ಕೋರ್ಟಿಗೆ ಕರೆದುಕೊಂಡು ಹೋದರು. ಅಲ್ಲಿ ನಮಗೆ 13 ತಿಂಗಳ ಕಾರಾಗೃಹ ಶಿಕ್ಷೆ ವಿಧಿಸಲಾಯಿತು. ನಮ್ಮನ್ನು ಕೆಲವು ದಿನಗಳು ಕಾರವಾರ ಜೈಲಿನಲ್ಲಿ ಇಟ್ಟಿದ್ದರು. ಆದರೆ ಆ ಜೈಲಿನಲ್ಲಿ ಪ್ರತಿದಿನವೂ ಬರುತ್ತಿದ್ದ ತಂಡೋಪತಂಡ ಕೈದಿಗಳನ್ನು ಇಡಲು ಜಾಗವಿಲ್ಲದೆ, ಸ್ವಲ್ಪಕಾಲದನಂತರ ವಿಸಾಪುರ ಟೆಂಪರರಿ ಜೈಲಿಗೆ ನನ್ನ ಸಹಿತ ಸುಮಾರು 200 ಮಂದಿ ಕೈದಿಗಳನ್ನು ಕಳುಹಿಸಿಕೊಟ್ಟರು. ಈ ಜೈಲಿನಲ್ಲಿ ಅನೇಕ ರಚನಾತ್ಮಕ ಕಾರ್ಯಗಳು ನಡೆಯುತ್ತಿದ್ದವು. ಭಾರತ ದೇಶದ ಪ್ರತಿಯೊಂದು ಪ್ರಾಂತ್ಯ ಮತ್ತು ಭಾಷೆಯ ಜನರು ಅಲ್ಲಿ ಸೇರಿದ್ದರು. ಅಲ್ಲಿನ ವಾತಾವರಣ ಒಂದು ವಿಶ್ವವಿದ್ಯಾನಿಲಯದ ಹಾಗಿತ್ತು. ಅಲ್ಲಿ ನನ್ನ ಸಹಕೈದಿಗಳಾಗಿದ್ದ ಕೆಲವರ ಹೆಸರುಗಳು : ಡಿ. ಪಿ. ಕರಮರಕರ್, ವಿ. ಎಸ್. ನಾರಾಯಣರಾವ್, ಎಸ್. ಕೆ. ಪಾಟೀಲ್, ಸಿ. ಜೆ. ಅಂಬಲಿ, ಡಿ. ವಿ. ಶೆಟ್ಟಿ, ಬಾಬೂಭಾಯಿ ಪಟೇಲ್, ಪೂಲ್‌ಚಂದ್‌ಭಾಯಿ, ಸರ್ದಾರ್ ತಮನ್ ಸಿಂಗ್, ಅರಾನ್ಹಾ, ಹೊದಿಕೆ ಮಾಸ್ತರ್, ನಾಯಕ್ ಮಾಸ್ತರ್, ಚಂಗಲಾರಾಧ್ಯ.

ಒಮ್ಮೆ ಜೈಲಿನಿಂದ ನಾನು ಮತ್ತಿತರ 9 ಮಂದಿಕೈದಿಗಳನ್ನು ಸೂಪರಿಂಟೆಂಡೆಂಟ್‌ರ ಮನೆಯ ಟೆನ್ನಿಸ್ ಕೋರ್ಟ್ ಗುಡಿಸುವುದಕ್ಕೆ ಕರೆದುಕೊಂಡು ಹೋದರು. ನಾನು ಅದನ್ನು ವಿರೋಧಿಸಿದೆ. ಜೈಲಿನೊಳಗೆ ಯಾವುದೇ ಕೆಲಸ ಮಾಡಲು ಸಿದ್ಧನೆಂದೂ, ಆದರೆ ಜೈಲು ಅಧಿಕಾರಿಗಳ ಮನೆ ಕೆಲಸ ಮಾಡಲಾಗದೆಂದೂ ಹೇಳಿದೆನು. ಅದಕ್ಕೆ ನನಗೆ ಎಂಟು ದಿನಗಳ ಸಾಲಿಟರಿ ಸೆಲ್ ಶಿಕ್ಷೆ ವಿಧಿಸಿದರು. ಆದರೆ ಒಂದು ಘಂಟೆಯೊಳಗೆ ಸರ್ದಾರ್ ತಮನ್ ಸಿಂಗ್ ಮತ್ತಿತರರು ಸೂಪರಿಂಟೆಂಡೆಂಟರ ಹತ್ತಿರ ಹೋಗಿ ನನ್ನನ್ನು ಸಾಲಿಟರಿ ಸೆಲ್‌ನಲ್ಲಿಟ್ಟರೆ ಅವರಿಗೂ ಆ ಶಿಕ್ಷೆಕೊಡಬೇಕಾಗುತ್ತದೆಂದು ಹೋರಾಡಿದರು. ಅದರ ಫಲವಾಗಿ ನನ್ನನ್ನು ಸೆಲ್‌ನಿಂದ ಬಿಡುಗಡೆ ಮಾಡಿದರು. ಆಗ ಅಲ್ಲಿಂದ ನನ್ನ ಬ್ಯಾರಕ್ಕಿಗೆ ಮತ್ತೆ ಕರೆದುಕೊಂಡು ಹೋದ ಚಿತ್ರ ಈಗಲೂ ನನ್ನ ಕಣ್ಣುಮುಂದೆ

ಇದ್ದಹಾಗಿದೆ. ಅದು ಒಂದು ದೊಡ್ಡ ಮೆರವಣಿಗೆಯಾಗಿತ್ತು! ಹದಿಮೂರು ತಿಂಗಳು ಕಾರಾಗೃಹವಾಸದನಂತರ ನನ್ನನ್ನು ಮೈಸೂರಿಗೆ ಗಡೀಪಾರು ಮಾಡಿದರು. ಆದರೆ ಮೈಸೂರಿಗೆ ಬಂದು ಸೇರಿದ ಕೂಡಲೇ ಮತ್ತೆ ಕಾರಾಗೃಹಪ್ರವೇಶ ಮಾಡಬೇಕಾಯಿತು. ಮೈಸೂರಿನಲ್ಲಿ ಮೊದಲನೆಯ ದಸ್ತಗಿರಿ ಸಂಬಂಧದ ಬಗ್ಗೆ ನ್ಯಾಯಾಸ್ಥಾನದಲ್ಲಿ ಕೇಸು ನಡೆಯುತ್ತಿತ್ತು. ಆಗ ನಾನು ಉತ್ತರ ಕರ್ನಾಟಕದ ಜೈಲಿನಲ್ಲಿ ಇದ್ದೆ. ನನ್ನ ಗೈರು ಹಾಜರಿಯಲ್ಲಿ ಶಿಕ್ಷೆವಿಧಿಸಿ ದಸ್ತಗಿರಿ ವಾರಂಟ್ ಕೊಟ್ಟಿದ್ದರು. ಆದುದರಿಂದ ವಿಸಾಪುರದಿಂದ ಬಂದ ಮಾರನೇ ದಿನವೇ ನೆಟ್ಟಗೆ ಮ್ಯಾಜಿಸ್ಟ್ರೇಟ್‌ರವರ ಕೋರ್ಟಿಗೆ ಹೋದೆನು. ಅಲ್ಲಿಂದ ನನ್ನನ್ನು ಜೈಲಿಗೆ ರವಾನಿಸಿದರು.

ಬಿಡುಗಡೆಯನಂತರ ನಾನೂ ನನ್ನ ಮಿತ್ರರೂ ಸೇರಿ ಖಾದೀ ಪ್ರಚಾರ ಮತ್ತು ಹರಿಜನ ಕೇರಿಗಳಲ್ಲಿ ವಿದ್ಯಾಭ್ಯಾಸ ಪ್ರಚಾರವನ್ನು ಮಾಡತೊಡಗಿದೆವು.

1933ರಿಂದ 35ರ ನಡುವೆ ಮಹಾತ್ಮಾಗಾಂಧಿ ಮತ್ತು ಕಾಂಗ್ರೆಸ್ ಅಧ್ಯಕ್ಷ ಬಾಬೂ ರಾಜೇಂದ್ರ ಪ್ರಸಾದ್‌ರವರು ಮೈಸೂರಿಗೆ ಭೇಟಿ ಕೊಟ್ಟರು. ದೈವವಶಾತ್ ಗಾಂಧೀಜಿಯವರು ಬಂದಾಗ ಸರ್ ಮಿರ್ಜಾ ಇಸ್ಮಾಯಿಲ್‌ರವರು ಗಾಂಧಿಯವರನ್ನು ರಾಜ ಅತಿಥಿಗಳನ್ನಾಗಿ ಆಹ್ವಾನಿಸಿ, ಅವರ ವಸತಿ ಏರ್ಪಡಿಸಿ, ನಮಗಾದ ಸಂಕಟ ನಿವಾರಿಸಿದರು. ಆದರೆ ರಾಜೇಂದ್ರ ಪ್ರಸಾದರು ಬಂದಾಗ ನಾವು ದೊಡ್ಡ ಪೀಕಲಾಟದಲ್ಲಿ ಬಿದ್ದೆವು. ಯಾರೂ ಅವರನ್ನು ಅತಿಥಿಗಳನ್ನಾಗಿ ಇಟ್ಟುಕೊಳ್ಳಲು ಒಪ್ಪಲಿಲ್ಲ. ಆದರೆ ತುರುವೇಕೆರೆ ದೇವರಾಜರಸು ತಮ್ಮ ಮನೆಯನ್ನೇ ನಮಗೆ ಖಾಲಿ ಮಾಡಿ ಕೊಟ್ಟರು. ಅವರು ರಾಜರ ಸಂಬಂಧಿಗಳಾದರೂ ಉಚ್ಚದೇಶಾಭಿಮಾನವನ್ನು ತೋರಿದರು.

ಗಾಂಧಿಯವರ ಹುಟ್ಟಿದ ದಿನ ಆಚರಿಸಬೇಕಾಗಿತ್ತು. ಆಗ ಮೈಸೂರು ಮುನಿಸಿಪಲ್ ಕೌನ್ಸಿಲ್ ಅಧ್ಯಕ್ಷರು ಎಂ. ಎ. ಶ್ರೀನಿವಾಸನ್‌ರವರು. ಆ ಹುದ್ದೆ ಆಗಿನ ಕಾಲದಲ್ಲಿ ಸರ್ಕಾರಿ ಅಧಿಕಾರವಾಗಿತ್ತು. ಕುತೂಹಲದಿಂದ ನಾನು ಅವರ ಹತ್ತಿರ ಹೋಗಿ, ಗಾಂಧಿಯವರ ಹುಟ್ಟಿದ ಹಬ್ಬಕ್ಕೆ ಅವರು ಅಧ್ಯಕ್ಷತೆ ವಹಿಸಬೇಕೆಂದು ಕೇಳಿಕೊಂಡೆ. ಒಡನೆಯೇ ಅವರು ಒಪ್ಪಿಕೊಂಡರು. ಅವರು, ಗಾಂಧಿಯವರು ಕೇವಲ ರಾಜಕೀಯ ಮುಖಂಡರಲ್ಲ; ದೇಶದ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆಗಳಿಗಾಗಿಯೂ ದುಡಿಯುತ್ತಿದ್ದಾರೆ; ನಾನು ಆರ್ಥಿಕ ಮತ್ತು ಸಾಮಾಜಿಕ ರಂಗದ ವಿಷಯವಾಗಿಯೇ ಮಾತನಾಡುವೆ ಎಂದರು. ಸಭೆ ಟೌನ್‌ಹಾಲಿನಲ್ಲಿ ನಡೆಯಿತು. ಹಾಲ್ ಪೂರ್ತಿ ತುಂಬಿ ಜನಗಳಿಗೆ ಜಾಗ ಸಾಲದೆ ಅಕ್ಕಪಕ್ಕದಲ್ಲಿ ಕೂಡಿಸಿದರು. ಎಂ. ಎ. ಶ್ರೀನಿವಾಸನ್‌ರವರ ಭಾಷಣ ಮಹಾಪ್ರಭಾವಶಾಲಿಯಾಗಿತ್ತು.

1936ರಲ್ಲಿ ನಾನು ಬೆಂಗಳೂರಿನಲ್ಲಿ ನೆಲೆಸಬೇಕಾಗಿ ಬಂತು. ಅಲ್ಲಿ ಕೂಡ ಅರಳೇಪೇಟೆಯಲ್ಲಿರುವ 'ದರಿದ್ರನಾರಾಯಣ ಸೇವಾ ಸಂಘ'ವೆಂಬ ಸಾಮಾಜಿಕ ಸಂಸ್ಥೆಗೆ ಉಪಾಧ್ಯಕ್ಷನಾಗಿ ಚುನಾಯಿಸಲ್ಪಟ್ಟೆ. ಅದರ ಅಧ್ಯಕ್ಷರು ವಾಜಪೇಯಂ ವೆಂಕಟೇಶಯ್ಯ

ನವರು. ಅದು ಬಿನ್ನಿ ಮಿಲ್ ಕೆಲಸಗಾರರ ವಸತಿಯಾದ್ದರಿಂದ ಅವರ ಸೇವೆಯಲ್ಲಿ ಕಾಲಹರಣ ಮಾಡುತ್ತಿದ್ದೆ.

1937ರ ಡಿಸೆಂಬರ್ ತಿಂಗಳಲ್ಲಿ ಅಖಿಲ ಕರ್ನಾಟಕ ವಿದ್ಯಾರ್ಥಿ ಸಮ್ಮೇಳನವು ಬೆಂಗಳೂರು ಒಕ್ಕಲಿಗರ ಸಂಘದಲ್ಲಿ ನಡೆಯಬೇಕಾಗಿತ್ತು. ಅದಕ್ಕೆ ಎಂ. ಆರ್. ಮಸಾನಿ ಅಧ್ಯಕ್ಷತೆ ವಹಿಸುವವರಾಗಿದ್ದರು. ಸ್ವಾಗತಸಮಿತಿಯ ಅಧ್ಯಕ್ಷರು ಪ್ರೊ|| ಸಂಪದ್‌ಗಿರಿ ರಾವ್‌ರವರು; ಉಪಾಧ್ಯಕ್ಷರು ವಿ. ಎಸ್. ನಾರಾಯಣರಾವ್. ಮಸಾನಿಯವರು ಮೈಸೂರು ಗಡಿಯ ಮೇಲೆ ಕಾಲಿಟ್ಟೊಡನೆಯೇ ಅವರ ಮೇಲೆ ನೋಟೀಸು ಜಾರಿ ಮಾಡಿ ಯಾವ ಸಭೆಸಮ್ಮೇಳನದಲ್ಲಿಯೂ ಭಾಗವಹಿಸಕೂಡದೆಂದು ಸರ್ಕಾರವು ತಡೆ ಗಟ್ಟಿತು. ಅದನ್ನು ನೋಡಿ ಒಕ್ಕಲಿಗರ ಸಂಘದವರು ಅವರ ಹಾಲ್‌ನ್ನು ಕೊಡಲು ನಿರಾಕರಿಸಿದರು. ಆಗ ಸಮ್ಮೇಳನವನ್ನು ಯುವಕ ಸಂಘದಲ್ಲಿ ನಡೆಸಬೇಕಾಯಿತು. ಅಲ್ಲಿ ಸೇರಿದ್ದ ಪ್ರತಿನಿಧಿಗಳು ನನ್ನನ್ನು ಅಧ್ಯಕ್ಷಪದವಿ ವಹಿಸಬೇಕೆಂದು ಓಟು ಮಾಡಿದರು. ಸಮ್ಮೇಳನವು ಆರಂಭವಾಗುವ ಮುನ್ನ ಒಂದು ಸಮಸ್ಯೆ ಬಂದಿತು. ಮಸಾನಿಯವರು ಮೈಸೂರು ಸರ್ಕಾರದ ಆಜ್ಞೆಯನ್ನು ಉಲ್ಲಂಘಿಸಬೇಕೇ, ಬೇಡವೇ ? ಮಸಾನಿಯವರು ತಾವು ಸಮ್ಮೇಳನದ ಅತಿಥಿಗಳೆಂದೂ, ಅವರು ಹೇಗೆ ಹೇಳಿದರೆ ಹಾಗೆ ಮಾಡಲು ಸಿದ್ಧ ರೆಂದೂ ತಿಳಿಸಿದರು. ಬ್ರಿಟಿಷ್ ಇಂಡಿಯಾದಲ್ಲಿ ಕಾಂಗ್ರೆಸ್ ಅಧಿಕಾರ ನಡೆಯುತ್ತಿತ್ತು. ಯಾವ ಆಂದೋಲನವೂ ಆಗ ಇರಲಿಲ್ಲ. ಹೀಗಾಗಿ ಆಜ್ಞೆಯನ್ನು ಉಲ್ಲಂಘಿಸಕೂಡ ದೆಂದು ತೀರ್ಮಾನವಾಯಿತು. ಆದರೆ ಸಮ್ಮೇಳನದ ಕಾರ್ಯಕಲಾಪಗಳು ನಡೆಯು ತ್ತಿರುವಾಗ ಇನ್ನೊಂದು ಬಿಕ್ಕಟ್ಟು ಏರ್ಪಟ್ಟಿತು. ಪ್ರತಿನಿಧಿಗಳಲ್ಲಿ ಕೆಲವರು ಕಮ್ಯೂನಿಸ್ಟ್ ಪಕ್ಷದವರೂ ಇದ್ದರು. ಅವರು ಒಂದು ಪ್ರಸ್ತಾಪವನ್ನು ತಂದು ಸಂಸ್ಥಾನದಲ್ಲಿಯೂ ಆಂದೋಲನವನ್ನು ಮಾಡಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಬೇಕೆಂದು ವಾದಿಸಿದರು. 1939ರಲ್ಲಿ ಈ ವಿಧವಾದ ಪ್ರಸ್ತಾಪ ಅನೇಕರಿಗೆ ಅನುಚಿತವೆಂದು ತೋರಿತು. ಮುಖ್ಯ ವಾಗಿ ಆಗ ಮಹಾತ್ಮಾ ಗಾಂಧಿಯವರ ಪ್ರಭಾವ ಪ್ರಬಲವಾಗಿತ್ತು. ಕಮ್ಯೂನಿಸಮ್ ಹೆಸರಿಗೇ ನಾವು ವಿರೋಧಿಗಳು. ಕಮ್ಯೂನಿಸ್ಟ್ ಸಹಾನುಭೂತಿಯುಳ್ಳ ಅಶ್ವತ್ಥ ನಾರಾಯಣರಾವ್ ತಮ್ಮ ಪ್ರಸ್ತಾಪವನ್ನು ಮಂಡಿಸಿದಾಗ 100–120 ಪ್ರತಿನಿಧಿಗಳಲ್ಲಿ ಕೇವಲ 10–12 ವಿನಾ ಮತ್ತೆಲ್ಲರೂ ಅದನ್ನು ವಿರೋಧಿಸಿದರು. ಸಮ್ಮೇಳನದ ಕಾರ್ಯ ಕಲಾಪಗಳು ಸುಸೂತ್ರವಾಗಿ ನಡೆದವು.

1939ರಲ್ಲಿ ಪ್ರಪಂಚದ ಎರಡನೇ ಮಹಾಯುದ್ಧ ಪ್ರಾರಂಭವಾಯಿತು. ಅಧಿಕಾರ ಬಿಡುವುದೇ ಬೇಡವೇ ಎಂಬ ಭಿನ್ನಾಭಿಪ್ರಾಯಗಳು ಕಾಂಗ್ರೆಸ್ಸಿನಲ್ಲಿ ಬಂದವು. ಕೊನೆಗೆ ಅಧಿಕಾರ ತ್ಯಜಿಸಿ, ಗಾಂಧಿಯವರ ನೇತೃತ್ವದಲ್ಲಿ ಮತ್ತೆ ಆಂದೋಲನ ಆರಂಭವಾಯಿತು. ದೇಶಪ್ರೇಮಿಯಾದರೂ ಕಾಂಗ್ರೆಸ್ಸಿನವರು ಅಧಿಕಾರ ಬಿಡುವುದು ನನಗೆ ಸರಿತೋರದೇ ಇದ್ದುದರಿಂದ ನಾನು ಈ ಆಂದೋಲನದಲ್ಲಿ ಭಾಗವಹಿಸಲಿಲ್ಲ.

ವೈ.ವೈ. 7

# ಎಚ್. ವಿ. ಸುಬ್ಬರಾಮಯ್ಯ

ಜನನ : 1920 ಉದ್ಯೋಗ : ಮುದ್ರಣಾಲಯ ವಿಳಾಸ : 162, ರಮಾವಿಲಾಸ ರಸ್ತೆ, ಮೈಸೂರು

---



ನಮ್ಮ ಮನೆ ಮೈಸೂರಿನ ಚಾಮರಾಜ ಮೊಹಲ್ಲಾದಲ್ಲಿ ಸೋನಾರ್ ಬೀದಿಯಲ್ಲಿತ್ತು. ಆಗಿನ ಕಾಲಕ್ಕೆ ಚಾಮರಾಜ ಮೊಹಲ್ಲಾ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗೆ ಆಗರವಾಗಿತ್ತು. ಇಲ್ಲಿ ಸತ್ಯಾಗ್ರಹಾಶ್ರಮ, ಕಾಂಗ್ರೆಸ್ ಕಛೇರಿ, ವೆಂಕಟಕೃಷ್ಣಯ್ಯನವರು ಪ್ರಕಟಿಸುತ್ತಿದ್ದ 'ಸಂಪದಭ್ಯುದಯ' ಪತ್ರಿಕಾ ಕಛೇರಿ, ಅನಂತರ ಪ್ರಕಟವಾದ 'ತಾಯಿನಾಡು' ಪತ್ರಿಕಾ ಕಛೇರಿ—ಆಗಿನ ಕಾಲಕ್ಕೆ ರಾಜಕೀಯದಲ್ಲಿ ಇರಬೇಕಾಗಿದ್ದ ಎಲ್ಲವೂ ಇದ್ದು ಸಾರ್ವಜನಿಕ ಕ್ಷೇತ್ರದಲ್ಲಿ ಓಡಾಡುತ್ತಲಿದ್ದವರೆಲ್ಲರೂ ಚಾಮರಾಜ ಮೊಹಲ್ಲಾದಲ್ಲೇ ಹೆಚ್ಚಾಗಿ ವಾಸವಾಗಿದ್ದರು. ಇವರೆಲ್ಲರೂ ಭಾಷಣಮಾಡುವುದು, ಮೆರವಣಿಗೆ ಹೊರಡುವುದು ಎಲ್ಲವೂ ಈ ಮೊಹಲ್ಲಾದಲ್ಲಿರುವ ಸುಬ್ಬರಾಯನ ಕೆರೆಯಿಂದಲೇ ಪ್ರಾರಂಭ. ನಮ್ಮ ಮನೆಯಿಂದ ನೂರು ಗಜ ದೂರದಲ್ಲಿ ಶೇಷಾದ್ರಿ ಹೌಸ್ ಎಂಬ ಅತಿಥಿಗೃಹವಿತ್ತು. 1927ರಲ್ಲಿ ಗಾಂಧೀಜಿ ಮೈಸೂರಿಗೆ ಬಂದಾಗ ಇಲ್ಲಿ ತಂಗಿದ್ದರು. ನಮ್ಮ ತಂದೆಯವರೊಡನೆ ನಾನೂ ಸಹ ಶೇಷಾದ್ರಿ ಹೌಸ್‌ಗೆ ಅವರನ್ನು ನೋಡಿದ್ದೆ. ಇದಾದ 2–3 ತಿಂಗಳನಂತರ ನಮ್ಮ ತಂದೆಯವರು ಖದ್ದರ್ ಪರಸ್ಪರ ಸಹಾಯ ಸಂಘಕ್ಕೆ ತೆರಳಿ ಎರಡು ಕೋಟಿನ ಬಟ್ಟೆಯನ್ನು ತೆಗೆದುಕೊಂಡರು. ನನಗೂ ಒಂದು ಷರಟಿನ ಬಟ್ಟೆಯನ್ನು ತೆಗೆದು ಹೊಲಿಸಿಕೊಟ್ಟರು. ಈ ಬಟ್ಟೆ ಈಗಿನಂತೆ ಮಡಿಯಾಗಿ ಇರದೆ ಆಗಿನ ಕಾಲದ ಗ್ರಾಮಸ್ಥರು ಧರಿಸುತ್ತಿದ್ದ ಉಡುಪಿನ ಬಟ್ಟೆಯಂತೆ ಇತ್ತು. ನಾನು ಕೆಂಪಾಗಿದ್ದ ಹಾಸನದ ಟೋಪಿಯನ್ನು ಧರಿಸುತ್ತಿದ್ದೆ. ನನ್ನ ಷರಟು ಮತ್ತು ಟೋಪಿಯನ್ನು ನೋಡಿ ನನ್ನನ್ನು ಹಳ್ಳಿಯವ ಎಂದು ನಮ್ಮ ಬೀದಿಯಲ್ಲಿ ಕೂಗುತ್ತಿದ್ದರು. ಇದಾದ ಕೆಲವು ವರ್ಷಗಳನಂತರ ಲಾಲಾ ಲಜಪತರಾಯರವರ ನಿಧನಕ್ಕೆ ಮಹಾರಾಜಾ ಕಾಲೇಜಿನಿಂದ ಒಂದು ಮೆರವಣಿಗೆ ಹೊರಟಿತು. ಈಗಿನಂತೆ ಅದು ಒಂದು ಸಾಲಿನ ನಾಲ್ಕು ಜನರಂತೆ ಶಿಸ್ತಿನಿಂದ ಕೂಡಿರಲಿಲ್ಲ. ಆ ಮೆರವಣಿಗೆಯಲ್ಲಿ ನಾನೂ ಸೇರಿದ್ದೆ. ಮೂರನೆಯ ದಿನ ನಾನು 'ತಾಯಿನಾಡು' ಪತ್ರಿಕೆಯಲ್ಲಿ ಈ ಮೆರವಣಿಗೆ ಏಕೆ

ಆಯಿತು ಎನ್ನುವುದನ್ನು ತಿಳಿದೆ. ಮೆರವಣಿಗೆ ದಿನ ಎಲ್ಲಾ ಸ್ಕೂಲನ್ನು ಬಿಟ್ಟಿದ್ದರು. ಮರಿಮಲ್ಲಪ್ಪನವರ ಹೈಸ್ಕೂಲನ್ನು ಮಾತ್ರ ಬಿಟ್ಟಿರಲಿಲ್ಲ. ಸುಮಾರು ನಾಲ್ಕು ಘಂಟೆ ವೇಳೆಗೆ ಮೆರವಣಿಗೆ ಇಲ್ಲಿಗೆ ಬಂದು ಸ್ಕೂಲನ್ನು ಬಿಡುವಂತೆ ಹೆಡ್ಮಾಸ್ಟರ್‌ರವರನ್ನು ಕೇಳಿಕೊಂಡಿತು. ಅವರು ಸ್ಕೂಲ್ ಮುಚ್ಚಲಿಲ್ಲ. ಈ ಗಲಾಟೆ ತಿಳಿದು ರಿಸರ್ವ್ ಪೋಲೀಸ್‌ನವರು ಸುಮಾರು 20-25 ಜನ ಅಲ್ಲಿಗೆ ಬಂದರು. ಹುಡುಗರು ಇವರನ್ನು ಕೀಟಲೆಮಾಡಿ ಕಲ್ಲೆಸೆದರು. ಅನಂತರ ಪೋಲೀಸರು ಎಲ್ಲರಿಗೂ ತಮ್ಮ ಕೈಲಿದ್ದ ಬಂದೂಕನ್ನು ತಿರುಗಿಸಿದ ಬಟ್ಟಿನಿಂದ ಹೊಡೆದರು. ಯುವಕ ಸಂಘದ ಶ್ರೀರಂಗಾಚಾರ್ ಎಂಬುವವರಿಗೆ ಅಸಾಧ್ಯವಾಗಿ ಏಟು ಬಿತ್ತು. ನಾನು ಎ. ಸೂರ್ಯನಾರಾಯಣ ಪಂಡಿತರ ಮನೆ ಜಗಲಿಯಲ್ಲಿ ನೋಡುತ್ತಾ ನಿಂತಿದ್ದೆ. ನನಗೂ ಒಂದು ಏಟು ಬಿತ್ತು. ಅದರ ಗಾಯ ಇನ್ನೂ ನನ್ನ ಕಾಲಿನ ಮೇಲೆ ಗೋಚರಿಸುತ್ತಿದೆ.

1934ರಲ್ಲಿ ಗಾಂಧೀಜಿಯವರು ಎರಡನೇ ಸಲ ಮೈಸೂರಿಗೆ ಬಂದವರು ಅದೇ ಶೇಷಾದ್ರಿ ಹೌಸ್‌ಗೆ ಬಂದರು. ಆಗ ತುಂಬಾ ಜನರು ಅವರ ದರ್ಶನಕ್ಕೆ ಕಾದಿರುತ್ತಿದ್ದರು. ಎರಡನೆಯ ಸಲ ಗಾಂಧೀಜಿ ಬಂದಾಗ ನನ್ನ ತಂದೆಯವರು ನನ್ನನ್ನು ಮತ್ತೆ ಕರೆದುಕೊಂಡು ಹೋದರು. ಅನಂತರ ಗಾಂಧೀಜಿಯವರು ವಿದ್ಯಾರ್ಥಿಗಳನ್ನುದ್ದೇಶಿಸಿ ಕಾಲೇಜು ಪೆವಿಲಿಯನ್‌ನ ಬಳಿ ಮಾತಾಡಿದರು. ನಾವು ಅಲ್ಲಿಗೂ ಹೋಗಿದ್ದೆವು. ಟೌನ್‌ಹಾಲಿನ ಮೈದಾನದಲ್ಲಿ ಬಹಿರಂಗ ಸಭೆ ನಡೆಯಿತು. ಟೌನ್‌ಹಾಲ್ ಒಳಗೆ ಹೆಂಗಸರ ಸಭೆ ನಡೆಯಿತು. ನಮ್ಮ ಮನೆಯ ಬಳಿ ಇದ್ದ ಶ್ರೀರಾಮದೇವರ ದೇವಾಲಯದ ಹಿಂಭಾಗದ ರೂಮುಗಳಲ್ಲಿ ಹಿಂದೀ ತರಗತಿ ಪ್ರಾರಂಭವಾಯಿತು. ಬೊಂಬಾಯಿ ಆನಂದ ಭವನ್ ಹೋಟಲಿನವರು ಹಿಂದೀ ಕಲಿಯುವವರಿಗೆ ಉಚಿತವಾಗಿ ಪುಸ್ತಕಗಳನ್ನು ಕೊಡುತ್ತಿದ್ದರು. ನಾನೂ ಸಹ ಹೋಗಿ ಉಚಿತ ಪುಸ್ತಕ ಪಡೆದು ಹಿಂದೀ ತರಗತಿಗೆ ಸೇರಿದೆ. ಪ್ರಾಥಮಿಕ ಪರೀಕ್ಷೆಯಲ್ಲಿ ಉತ್ತೀರ್ಣನಾದೆ. ಈ ತರಗತಿಯಲ್ಲಿ ಎಲ್ಲಾ ಉಪಾಧ್ಯಾಯರೂ ಬೆಳಗ್ಗೆ ಸುಬ್ಬರಾಯನ ಕೆರೆಗೆ ಧ್ವಜಾರೋಹಣಕ್ಕೆ ಬರಬೇಕು ಎಂದು ತಿಳಿಸುತ್ತಿದ್ದರು. ಅನೇಕರು ಅಲ್ಲಿಗೆ ಹೋಗುತ್ತಿದ್ದೆವು. ಅಲ್ಲಿ ಕೆಲವರು ಕವಾಯಿತ ಮಾಡುತ್ತಿದ್ದರು. ಅನಂತರ ಬಾವುಟ ಹಾರಿಸುತ್ತಿದ್ದರು. ಎಲ್ಲರೂ ಧ್ವಜಗೀತೆ ಹಾಡುತ್ತಿದ್ದರು. ಇದೆಲ್ಲ ಏಕೆಂದು ನನಗೆ ತಿಳಿಯದು. ಸುಮ್ಮನೆ ಹೋಗುತ್ತಿದ್ದೆ. ಒಂದು ಸಂಜೆ ಸಾಧ್ವಿ ಪತ್ರಿಕೆ ಕಛೇರಿಯಿಂದ 20 ಜನರು ಸಾಲಾಗಿ ಮೆರವಣಿಗೆ ಹೊರಟರು. ಇವರ ಬಳಿ ಹಾಸಿಗೆ, ಸ್ಕೌಟ್ ದೊಣ್ಣೆ, ಲಾಂದ್ರ ಇದ್ದವು. ಹಿಂದೀ ಮೇಸ್ಟ್ರು ತಿಳಿಸಿದ್ದಂತೆ ನಾನೂ, ಇನ್ನು ಕೆಲವು ಹುಡುಗರೂ ಮೆರವಣಿಗೆಯಲ್ಲಿ ರೈಲ್ವೆ ಸ್ಟೇಷನ್‌ಗೆ ತೆರಳಿದೆವು. ರಸ್ತೆಯಲ್ಲಿ ಹಿಂದೀ ಮೇಸ್ಟ್ರು 'ಬೋಲೋ ಗಾಂಧೀಜೀ ಕೀ ಜೈ' ಎನ್ನುತ್ತಿದ್ದರು. ನಾವು ಜೈ ಎನ್ನುತ್ತಿದ್ದೆವು. ಸಂಜೆ ಅರಸೀಕೆರೆ ರೈಲಿಗೆ ಖಾದಿಯ ಖಾಕಿ ವಸ್ತ್ರ ಧರಿಸಿದ್ದವರು 20 ಜನ ತೆರಳಿದರು. ಮಾರನೆಯ ದಿನ ಮೇಷ್ಟರು ಹೇಳಿದರು,

ಅವರೆಲ್ಲಾ ಸತ್ಯಾಗ್ರಹಕ್ಕೆ ಹೋದರು ಎಂದು. ನಮ್ಮ ಸೋದರಮಾವ ಎಂ. ಎನ್. ಜೋಯಿಸ್ ಮತ್ತು ನಮ್ಮ ಸೋದರತ್ತೆ ಸುಬ್ಬಮ್ಮನವರು ಜೈಲಿನಲ್ಲಿದ್ದಾರೆ ಎಂದು ನಮ್ಮ ತಂದೆತಾಯಿ ಮಾತನಾಡಿಕೊಳ್ಳುತ್ತಿದ್ದರು. ನಾನು ಅವರನ್ನು 'ಏಕೆ ಜೈಲಿನಲ್ಲಿದ್ದಾರೆ ?' ಎಂದು ಕೇಳಿದ್ದಕ್ಕೆ ಅವರು ಸತ್ಯಾಗ್ರಹಕ್ಕೆ ಹೋಗಿದ್ದಾರೆ ಎಂದರು. ಇವೆಲ್ಲವೂ ನನಗೆ ರಾಷ್ಟ್ರೀಯಭಾವನೆ ಉಂಟುಮಾಡುವುದಕ್ಕೆ ಸಹಾಯಕವಾದ ಸಂಗತಿಗಳು.

1937ರ ವೇಳೆಗೆ ಡಿ. ಸುಬ್ಬಯ್ಯ ರಸ್ತೆಯಲ್ಲಿದ್ದ ಕಾಂಗ್ರೆಸ್ ಕಛೇರಿ ನಮ್ಮ ಕಿರಿಯ ಸೋದರಮಾವಂದಿರು ಎಂ. ಎನ್. ಜೋಯಿಸರ ಮನೆಗೆ ಬಂದಿತ್ತು. ಇಲ್ಲಿ ಒಂದು ಗರಡಿ, ಥಿಯಾಸಾಫಿಕಲ್ ಲಾಡ್ಜ್, ಉಚಿತ ವಾಚನಾಲಯ ಇದ್ದು ಇಲ್ಲಿಗೆ ಹೋಗಿಬರಲು ಪ್ರಾರಂಭಮಾಡಿದೆ. ಇಲ್ಲಿಗೆ ಡಾ|| ಹರ್ಡೀಕರ್, ಕಮಲಾದೇವಿಯವರು ಬಂದಿದ್ದರು. ಈ ಮನೆ ನಮ್ಮ ವಾಸದ ಮನೆಗೆ ನೂರು ಗಜ ದೂರದಲ್ಲಿತ್ತು. 1938, 1939, 1940 ಈ ಮೂರು ಇಸವಿಗಳಲ್ಲಿ ಜರುಗಿದ ಬಹಿರಂಗ ಸಭೆಯ ನೋಟೀಸು ಹಂಚುವುದು, ಕೆಲವು ರಸ್ತೆಗಳಲ್ಲಿ ನೋಟೀಸನ್ನು ಇಡುವುದು, ಕೆಲವು ರಸ್ತೆಗಳಲ್ಲಿ ಸೀಮೆಸುಣ್ಣದಿಂದ ಬರೆಯುವುದು, ಬಹಿರಂಗ ಸಭೆಗೆ 'ರಜನೀಕಾಂತ' ದೀಪ ತರುವುದು, ಪ್ಲಾಕಾರ್ಡ್ಸ್ ಹಿಡಿದುಕೊಂಡು ಹೋಗುವುದು ಇವುಗಳನ್ನು ನಾನು ಮಾಡುತ್ತಿದ್ದೆ. 1938ರಲ್ಲಿ ಶಿವಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ನನ್ನ ಸೋದರಮಾವ ಜಿ.ಓ.ಸಿ. ನನ್ನನ್ನು ಸ್ವಯಂ ಸೇವಕನನ್ನಾಗಿ ಕರೆದುಕೊಂಡು ಹೋದರು. 1939ರಲ್ಲಿ ತಡಗೂರ್‌ರವರು ಮತ್ತೆ ಕೆಲವು ಕಾಂಗ್ರೆಸ್ಸಿಗರು ಸೇರಿ ಹ್ಯಾಮಿಲ್ಟನ್ ಬಿಲ್ಡಿಂಗ್ ಸತ್ಯಾಗ್ರಹ ಪ್ರಾರಂಭಿಸಿದರು. ಈ ಸತ್ಯಾಗ್ರಹಕ್ಕೆ ಪೊರಕೆ, ಮಡಕೆ, ಸುಣ್ಣ ಬೇಕಾಗಿತ್ತು. ನಾನು, ಎಸ್. ಎ. ಕೃಷ್ಣನ್, ಎಂ. ಎನ್. ಕೃಷ್ಣಮೂರ್ತಿ ಈ ಮೂರು ಸಾಮಗ್ರಿಗಳನ್ನು ಅಂಗಡಿಯಿಂದ ಪ್ರತಿನಿತ್ಯ ಸಂಜೆವೇಳೆ ತಂದು ಕಾಂಗ್ರೆಸ್ ಕಛೇರಿಯಲ್ಲಿಟ್ಟು ಮಾರನೇ ದಿನ ಸತ್ಯಾಗ್ರಹಿಗಳ ಹಿಂದೆ ಹೋಗುತ್ತಿದ್ದೆವು.

1936ರಲ್ಲಿ ಎಂದು ತೋರುತ್ತದೆ, ನ್ಯಾಯವಿಧಾಯಕ ಸಭೆಗೆ ಒಂದು ಚುನಾವಣೆ ನಡೆಯಿತು. ಕಾಂಗ್ರೆಸ್ ಪರವಾಗಿ ವಿ. ಲಿಂಗಪ್ಪಯ್ಯ ಉಮೇದುವಾರರು; ಎಚ್. ಸಿ. ದಾಸಪ್ಪನವರು ಕಾಂಗ್ರೆಸ್ ವಿರೋಧ ಪಕ್ಷದ ಉಮೇದುವಾರರು. ಆಗ ಈಗಿನಂತೆ ಎಲ್ಲರೂ ಓಟುದಾರರಲ್ಲ. 20 ರೂ. ಮೇಲ್ಪಟ್ಟು ಕಂದಾಯ ಕೊಡುವವರು, ಪದವೀಧರರು ಮುಂತಾದವರು ಮಾತ್ರ ಮತದಾರರು. ಪ್ರತಿ ಮನೆಗೂ ಹೋಗಿ ನೋಟೀಸ್ ಹಂಚಿ ಓಟು ಮಾಡಲು ತಿಳಿಸಿ ಬರುತ್ತಿದ್ದೆವು. ನಾವು ಸೋತೆವು. ಈ ಚುನಾವಣೆಯಲ್ಲಿ 30-40 ಜನರು ತುಂಬಾ ಶ್ರಮಪಟ್ಟೆವು. ಆಗ ಯಾರಿಗೂ ಯಾವ ವಿಧವಾದ ಆಮಿಷ ಗಳಿರಲಿಲ್ಲ. ಇದಾದ ಮಾರನೆಯ ವರ್ಷ ನಡೆದ ನ್ಯಾಯವಿಧಾಯಕ ಸಭೆ ಚುನಾವಣೆ ಯಲ್ಲಿ ಕಾಂಗ್ರೆಸ್ ಪರವಾಗಿ ಯಶೋಧರಮ್ಮನವರು ಉಮೇದುವಾರರು. ದಿವಾನರಾಗಿದ್ದ ಮಿ.ಜ಼ರ್ಾನರ ಬೆಂಬಲಪಡೆದ ಮುನಿವೆಂಕಟಪ್ಪ ಕಾಂಗ್ರೆಸ್ ವಿರೋಧಿಗಳಾಗಿ ನಿಂತರು.

ಕಾಂಗ್ರೆಸ್ಸಿನವರು ಗೆದ್ದರು. ಈ ಚುನಾವಣೆಯಲ್ಲಿ ಪ್ರಚಾರ ಜೋರಾಗಿ ನಡೆಯಿತು. ವಿದ್ಯಾರ್ಥಿಗಳಿಂದ ಸೈಕಲ್ ಮೆರವಣಿಗೆ, ಬಾಲಕರಿಂದ ರಸ್ತೆಗಳಲ್ಲಿ ಚುನಾವಣಾ ಪ್ರಚಾರದ ಕೂಗಾಟ ನಡೆಯುತ್ತಿತ್ತು. ಕಾಂಗ್ರೆಸ್ ವಿರೋಧಿಗಳಿಗೆ ಆಗ ವಿದ್ಯಾರ್ಥಿಗಳ ಸಹಾಯ ಸಿಗುತ್ತಿರಲಿಲ್ಲ. ಈ ವೇಳೆಯಲ್ಲಿ ನಾನು 30 ಬಾಲಕರ ಒಂದು ಗುಂಪಿಗೆ ಕ್ಯಾಪ್ಟನ್ ಆಗಿ ಪ್ರತಿನಿತ್ಯವೂ (5-6 ದಿನಗಳ ಕಾಲ) ಮೆರವಣಿಗೆ ನಡೆಸಿದೆವು. 1938ರಿಂದ 1940ರ ಒಳಗೆ ಮೈಸೂರು ನಗರದಲ್ಲಿ ವಿದ್ಯಾರ್ಥಿ ಫೆಡರೇಷನ್ನಿನ ಸ್ಥಾಪನೆ ಆಗಿ ಆಗ ನಡೆದ ಸಮ್ಮೇಳನಕ್ಕೆ ಶರತ್ ಚಂದ್ರ ಬೋಸರು ಬಂದು ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಮನೋಭಾವ ಬೆಳೆಸಲು ಸಹಾಯಕರಾದರು. ಈ ಸಮ್ಮೇಳನದಲ್ಲಿ ನಾನು ಸ್ವಯಂಸೇವಕನಾಗಿ ಕೆಲಸಮಾಡಿದೆ.

1937ರಲ್ಲಿ ಬ್ರಿಟಿಷ್ ಪ್ರಾಂತ್ಯಗಳಲ್ಲಿ ಪ್ರಾಂತೀಯ ಸ್ವಾಯತ್ತತೆ ಬಂದು ಕಾಂಗ್ರೆಸ್ ಸರ್ಕಾರ ಭಾರತದ ಹನ್ನೊಂದು ಪ್ರಾಂತ್ಯದಲ್ಲಿ ಸ್ಥಾಪನೆ ಆಯಿತು. ಮದರಾಸಿನಿಂದ ರಾಜಾಜಿ, ವಿ. ವಿ. ಗಿರಿ, ಗೋಪಾಲರೆಡ್ಡಿ, ಓಮಂಡೂರು ರಾಮಸ್ವಾಮಿ ರೆಡ್ಡಿಯಾರ್, ಡಾ|| ಪಿ. ಸುಬ್ಬರಾಯನ್ ಇವರು ಮೈಸೂರಿಗೆ ಬಂದು ವಿದ್ಯಾರ್ಥಿಗಳ ಸಭೆಯಲ್ಲಿ ಭಾಗವಹಿಸಿ ಭಾಷಣ ಮಾಡಿದರು. ಇವರಲ್ಲದೆ ಡಾ|| ಪಟ್ಟಾಭಿ ಸೀತಾರಾಮಯ್ಯ, ಬಲವಂತರಾಯ ಮೆಹ್ತ, ಪ್ರೊ|| ಎನ್. ಜಿ. ರಂಗಾ ಮುಂತಾದವರು ಬಹಿರಂಗ ಸಭೆಗಳಲ್ಲಿ ಮಾತನಾಡುತ್ತಿದ್ದರು. ಇವೆಲ್ಲವೂ ವಿದ್ಯಾರ್ಥಿಗಳು ರಾಜಕೀಯದಲ್ಲಿ ಪಾಲುಗೊಳ್ಳಲು ಸಹಾಯಕವಾಗಿದ್ದವು. ಹೈಸ್ಕೂಲು ಮತ್ತು ಕಾಲೇಜುಗಳಲ್ಲಿ ಗಾಂಧೀ ಜಯಂತಿ ವಿಜೃಂಭಣೆಯಿಂಧ ನಡೆಯುತ್ತಿತ್ತು.

ನಾನು ವಿದ್ಯಾರ್ಥಿಯಾಗಿದ್ದಾಗ ಶಾರದಾ ವಿಲಾಸ ಹೈಸ್ಕೂಲಿನಲ್ಲಿ ಗಾಂಧೀ ಜಯಂತಿಯನ್ನು ಆಚರಿಸಲಾಯಿತು. ಸಮಾರಂಭಕ್ಕೆ ಆಗ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕೆ. ಚಂಗಲರಾಯ ರೆಡ್ಡಿಯವರನ್ನು ಆಹ್ವಾನಿಸಲಾಗಿತ್ತು. ಅವರೊಡನೆ ಎಸ್. ನಿಜಲಿಂಗಪ್ಪನವರೂ ಬಂದಿದ್ದರು. ಇಲ್ಲಿ ಖಾದೀ ಮಾರಾಟದ ವ್ಯವಸ್ಥೆಯನ್ನು ನಾನು ಮಾಡಿದ್ದೆ. ನಮ್ಮ ಶಾಲೆಯ ಅನೇಕ ವಿದ್ಯಾರ್ಥಿಗಳು ಖಾದಿ ಟೋಪಿ, ಕರ್ಚೀಫ್, ಟವೆಲ್ಲುಗಳನ್ನು ಕೊಂಡುಕೊಂಡಿದ್ದರು. ಇದನ್ನು ನೋಡಿದ ಅತಿಥಿಗಳು ವಿದ್ಯಾರ್ಥಿಗಳನ್ನು ಅಭಿನಂದಿಸಿದರು. ಖಾದೀ ಮಾರಾಟದ ವ್ಯವಸ್ಥೆ ಮಾಡಿದ್ದ ನನಗೆ ಶಹಬಾಸ್‌ಗಿರಿ ಕೊಟ್ಟರು. ನಿಜಲಿಂಗಪ್ಪನವರು ಆತ್ಮೀಯವಾಗಿ ನನ್ನನ್ನು ತಬ್ಬಿಕೊಂಡರು. ಇದಲ್ಲದೆ ಕಾಂಗ್ರೆಸ್ ಸಮಿತಿ ಖದ್ದರ್ ಪರಸ್ಪರ ಸಹಾಯ ಸಂಘದವರು ನಡೆಸಿದ್ದ ಖಾದೀ ಮಾರಾಟದ ಕಾರ್ಯಕ್ರಮದಲ್ಲಿ ಭಾಗವಹಿಸಿ ಮನೆಮನೆಗೂ ಖಾದಿಯನ್ನು ಹೊತ್ತುಕೊಂಡೊಯ್ದು ಮಾರಲಾಯಿತು.

ವಿಶ್ವವಿದ್ಯಾನಿಲಯದ ಯೂನಿಯನ್‌ನವರು ವಯಸ್ಕರಿಗೆ ಅಕ್ಷರ ಕಲಿಸುವ ಕಾರ್ಯವನ್ನು ಕೈಗೊಂಡರು. ಇದು 1941ರಲ್ಲಿ ಎಂದು ತೋರುತ್ತದೆ. ಆಗ ನಾನು ಅಶೋಕ

ಪುರಂನಲ್ಲಿ ಒಂದು ತರಗತಿಯಲ್ಲಿ ಉಚಿತವಾಗಿ ಪಾಠವನ್ನು ಸುಮಾರು ಆರು ತಿಂಗಳ ಕಾಲ ಹೇಳಿದೆ. ನನ್ನ ಮನೆಗೂ ಈ ತರಗತಿ ನಡೆಯುವ ಸ್ಥಳಕ್ಕೂ ಒಂದೂವರೆ ಮೈಲಿ. ಪ್ರತಿನಿತ್ಯವೂ ಕಾಲುನಡಿಗೆಯಲ್ಲೇ ಹೋಗಿ ಬರುತ್ತಿದ್ದೆ. ಅನಂತರ ಈ ತರಗತಿಗಳನ್ನು ನಡೆಸಲು ವಯಸ್ಕರ ಶಿಕ್ಷಣ ಸಮಿತಿಯವರು ಪ್ರಾರಂಭಿಸಿ ಸಂಭಾವನೆ, ಉಪಾಧ್ಯಾಯರ ಅಗತ್ಯ ಹಾಜರಾತಿ ಪುಸ್ತಕಗಳನ್ನು ತಂದರು. ನಾನು ಇದರಿಂದ ವಿರಮಿಸಿದೆ.

ಮೈಸೂರು ನಗರ ಕಾಂಗ್ರೆಸ್ ಸಮಿತಿಯವರು ಮದ್ಯಪಾನ ನಿರೋಧದ ಕಾರ್ಯಕ್ರಮಗಳನ್ನು ನಿರೂಪಿಸಿದರು. ಇದರ ಅಂಗವಾಗಿ 3-4 ಸಭೆಗಳು ಅಶೋಕಪುರಂನಲ್ಲಿ ನಡೆಯಿತು. ಎಸ್. ರಂಗರಾಮಯ್ಯ ಮತ್ತು ಕೆ. ಶೇಷಾದ್ರಿಯವರು ಸಭೆಗಳಲ್ಲಿ ಭಾಷಣ ಮಾಡಿದರು. ಹರಿಜನ ಸೇವಕ ಸಂಘದವರು ಪ್ರಕಟಿಸಿದ್ದ ನೋಟೀಸುಗಳನ್ನು ಹಂಚಲಾಯಿತು.

1940ರಲ್ಲಿ ಗಾಂಧೀಜಿಯವರು ವೈಯಕ್ತಿಕ ಸತ್ಯಾಗ್ರಹ ಚಳವಳಿಯನ್ನು ಪ್ರಾರಂಭಿಸಿದರು. ಒಂದು ದಿನ ನಾನು, ಎಂ. ಎನ್. ಕೃಷ್ಣಮೂರ್ತಿ, ಎಸ್. ಎ. ಕೃಷ್ಣನ್ ಮೂರು ಜನರೇ ಒಂದು ತಟ್ಟೆಯ ಮೇಲೆ ಭಿತ್ತಿಪತ್ರಗಳನ್ನು ಬರೆದುಕೊಂಡು ಮೈಸೂರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಟೆವು. ಸೀತಾವಿಲಾಸ ಅಗ್ರಹಾರ, ರಮಾವಿಲಾಸ ಅಗ್ರಹಾರ, ಸಯ್ಯಾಜಿರಾವ್ ರಸ್ತೆಯಲ್ಲಿ ಹೋಗಿ ಇರ್ವಿನ್ ರಸ್ತೆ, ಅಶೋಕ ರಸ್ತೆ ಮೂಲಕ ನಮ್ಮ ಮನೆಗೆ ಬಂದೆವು. ನಾಲ್ಕೈದು ಮೈಲಿ ದೂರ ಮೆರವಣಿಗೆ ಮಾಡಿದಂತೆ ಆಯಿತು. ಕೊನೆಯಲ್ಲಿ ಪೋಲೀಸರು ಬಂದು ನಮ್ಮ ವಿಳಾಸವನ್ನು ಬರೆದುಕೊಂಡು ಹೋದರು. ಭಿತ್ತಿಪತ್ರದಲ್ಲಿದ್ದ ಅಂಶ: 'ಬ್ರಿಟಿಷರ ವಿರುದ್ಧ ವೈಯಕ್ತಿಕ ಸತ್ಯಾಗ್ರಹ ಆರಂಭ—ಮಹಾತ್ಮಾ ಗಾಂಧೀ ಕೀ ಜೈ'.

ಮೈಸೂರು ನಗರದಲ್ಲಿ ಆಗ ರಾಷ್ಟ್ರೀಯ ಭಾವನೆಯ ಸುದ್ದಿ ಪ್ರಕಟಿಸುತ್ತಿದ್ದ ಪತ್ರಿಕೆ 'ಸಾಧ್ವಿ'. ಗಾಂಧೀ ಜಯಂತಿ, ಕಾಂಗ್ರೆಸ್ ಸಮಿತಿಯ ಕಾರ್ಯಕಲಾಪಗಳು, ಅ.ಮೈ.ಕಾಂ.ಕಾ. ಸಭೆಯ ವರದಿಗಳು, ಪ್ರಜಾಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದ ಸಭೆ ವರದಿ, ಶಾಸನಸಭೆಯ ವರದಿಗಳನ್ನೆಲ್ಲಾ ಅದಕ್ಕಾಗಿ ನಾನು ಬರೆಯುತ್ತಿದ್ದೆ. ಅನಂತರ 1943ರಿಂದ ಸಾಧ್ವಿ ಪತ್ರಿಕಾ ಕಾರ್ಯಾಲಯದಲ್ಲಿ ಸ್ವಲ್ಪ ಸಂಭಾವನೆ ಪಡೆದು ಕೆಲಸ ಮಾಡುತ್ತಿದ್ದೆ.

1942ರ ಚಳವಳಿಯಲ್ಲಿ ನಾನು ಖಾಸಗಿಯಾಗಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿ ಚಳವಳಿ ಪ್ರಾರಂಭವಾದಾಗ ವಿದ್ಯಾರ್ಥಿಗಳು ಔಷಧ ಸಾಮಗ್ರಿ, ಹಣ ಮುಂತಾದುವುಗಳನ್ನು ಕೂಡಿಸಿ ಮುಂಬಯಿಯ ಕಾಂಗ್ರೆಸ್ ಅಂಬುಲೆನ್ಸ್ ಪಡೆಗೆ ಕಳುಹಿಸಿಕೊಟ್ಟರು. ನಾನು ಈ ಕಾರ್ಯದಲ್ಲಿ ಭಾಗವಹಿಸುತ್ತಿದ್ದೆ. ಅನಂತರ ನನ್ನನ್ನು ದಸ್ತಗಿರಿ ಮಾಡಿ ಮೈಸೂರು ಜೈಲಿನಲ್ಲಿಟ್ಟರು. ಇಲ್ಲಿ ಯಾರ ಮಾತನ್ನು ಯಾರೂ

ಕೇಳುತ್ತಿರಲಿಲ್ಲ. ಬರೀ ಗೊಂದಲ. ಜೈಲಿನಲ್ಲಿ ವಿದ್ಯಾರ್ಥಿಗಳನ್ನು ನೋಡಿ ಶಿಸ್ತನ್ನು ಪರಿಪಾಲಿಸುವಂತೆ ತಿಳಿಸುವ ಮುಖಂಡರಾರೂ ಇರಲಿಲ್ಲ. ತತ್ಪರಿಣಾಮವಾಗಿ ಜೈಲಿನಲ್ಲಿ ಲಾಠೀಚಾರ್ಜಾಯಿತು. ಅನೇಕ ವಿದ್ಯಾರ್ಥಿಗಳು ಏಟು ತಿಂದರು. ಆಗ ಶಂಕರಪ್ಪ ತೀರಾ ಪೆಟ್ಟು ತಿಂದು ಹುತಾತ್ಮನಾದ. ಇದರಿಂದ ವಿದ್ಯಾರ್ಥಿಗಳಲ್ಲಿ ಅಧೈರ್ಯ ಮೂಡಿ ಅನೇಕ ವಿದ್ಯಾರ್ಥಿಗಳು ಕ್ಷಮಾಪಣೆ ಕೇಳಿ ಹೊರಟುಹೋದರು. 1942ರ ಈ ಚಳವಳಿ ಬಹಳ ಅದ್ದೂರಿಯಿಂದ ಒಂದೂವರೆ ತಿಂಗಳು ನಡೆಯಿತು. ಎಲ್ಲಿ ನೋಡಿದರೂ ಮೆರವಣಿಗೆ, ಸರಕಾರಕ್ಕೆ ಪ್ರತಿಭಟನೆ, ಬಂದ್‌ಗಳು, ಲಾಠೀ ಪ್ರಹಾರ, ಪ್ರತಿಬಂಧಕಾಜ್ಞೆಗಳ ಉಲ್ಲಂಘನೆ ಇವೇ ಮುಂತಾದವು ನಡೆಯಿತು. ಆಗಸ್ಟ್‌ನಲ್ಲಿ ಪ್ರಾರಂಭವಾದ ಚಳವಳಿ ನವೆಂಬರ್ ವೇಳೆಗೆ ಮೊದಲಿನ ಹುರುಪನ್ನು ತೀರಾ ಕಡಿಮೆ ಗೊಳಿಸಿತು. ಅನೇಕ ವಿದ್ಯಾರ್ಥಿಗಳು ಕಾಲೇಜು, ಹೈಸ್ಕೂಲುಗಳಿಗೆ ಹೋಗಲು ಪ್ರಾರಂಭಿಸಿದ್ದರು. ನವೆಂಬರ್ ವೇಳೆಗೆ ಜೈಲಿನಲ್ಲಿ ವಿದ್ಯಾರ್ಥಿಗಳ ಸಂಖ್ಯೆ 60ಕ್ಕೆ ಇಳಿಯಿತು. ನಮ್ಮಲ್ಲಿ ನಾಲ್ಕೈದು ಜನ ಕಲೆತು ಚಳವಳಿಯನ್ನು ಮೊದಲಿನ ಹುರುಪಿನಂತೆ ನಡೆಸಲು ಸಾಧ್ಯವೇ ಎಂದು ಯೋಚಿಸಿದೆವು. ನಮ್ಮೊಂದು ಐದು ಜನ ಕ್ಷಮಾಯಾಚನೆ ಮಾಡಿ ಹೊರಗಡೆ ಬಂದು ಮತ್ತೆ ವಿದ್ಯಾರ್ಥಿಗಳನ್ನು ಭೇಟಿ ಮಾಡಿದೆವು. ಕೆಲವು ವಿದ್ಯಾರ್ಥಿಗಳು ಚಳವಳಿ ಪ್ರಾರಂಭಿಸಲು ಒಪ್ಪಿದರು. ಬಹುಶಃ ನವೆಂಬರ್ ಮಾಹೆಯಲ್ಲಿ ಜೈಲಿನಲ್ಲಿದ್ದ ಎಲ್ಲಾ ವಿದ್ಯಾರ್ಥಿಗಳನ್ನು ಬಿಡುಗಡೆ ಮಾಡಿದರು. ಪೋಲೀಸರು ವಿದ್ಯಾರ್ಥಿಗಳ ಕಡೆ ಮೊದಲಿನಷ್ಟು ಗಮನಹರಿಸಲಿಲ್ಲ, ಜೈಲಿನಿಂದ ಹೊರಗೆ ಬಂದವರಿಗೆ ಮತ್ತು ಚಳವಳಿ ಮುಂದುವರಿಸಬೇಕು ಎನ್ನುವವರಿಗೆ ಮಾರ್ಗದರ್ಶನ ನೀಡಲು ಹಿರಿಯ ಮುಖಂಡರಾರೂ ಈಚೆ ಇರಲಿಲ್ಲ. ನಾನು ಮತ್ತು ನನ್ನ ಸ್ನೇಹಿತರು ಆರು ಜನ ಶ್ರೀರಂಗಪಟ್ಟಣ, ಅರಕೆರೆ, ಬನ್ನೂರು, ಚನ್ನರಾಯಪಟ್ಟಣ, ಹಾಸನ, ಹೆಗ್ಗಡದೇವನಕೋಟೆ, ಚಾಮರಾಜನಗರಕ್ಕೆ ತಲುಪಿದೆವು. ಇಲ್ಲಿನ ಅನೇಕ ಜನರನ್ನು ಭೇಟಿಮಾಡಿದೆವು. ಪ್ರೋತ್ಸಾಹ ದೊರಕಲಿಲ್ಲ. ನಾವು ಸುಮ್ಮನಿರಬೇಕಾಯಿತು. ವಿದ್ಯಾರ್ಥಿಗಳಲ್ಲಿ ಅನೇಕರು ಪರೀಕ್ಷೆಯ ಬಗ್ಗೆ ಯೋಚಿಸುತ್ತಿದ್ದರು. ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಆನರ್ಸ್ ತರಗತಿಯ ಅನೇಕ ವಿದ್ಯಾರ್ಥಿಗಳು, ಬಿ.ಎ. ತರಗತಿಯ ಫೈನಲ್ ಕ್ಲಾಸಿನವರು "ಮುಷ್ಕರ, ಚಳವಳಿಯ ಮಾತೇ ಬೇಡ. ಪರೀಕ್ಷೆ ಯಲ್ಲಿ ಉತ್ತೀರ್ಣರಾದರೆ ಸಾಕು" ಎಂದು ತಿಳಿಸಿ ಚಳವಳಿಗೆ ಪ್ರೋತ್ಸಾಹ ಕೊಡ ಲಿಲ್ಲ. ಹೈಸ್ಕೂಲುಗಳಲ್ಲಿಯೂ ಸಹ ಎಸ್.ಎಸ್.ಎಲ್.ಸಿ. ತರಗತಿಯ ವಿದ್ಯಾರ್ಥಿ ಗಳು ವ್ಯಾಸಂಗದ ಕಡೆ ಗಮನಹರಿಸಿದರು. ವಿಧಿಯಿಲ್ಲದೆ ನಾವು ಚಳವಳಿಯಿಂದ ದೂರವಾದೆವು. 1942ರ ಚಳವಳಿಯ ಪ್ರಾರಂಭಕ್ಕೆ ಅರಕೆರೆ, ಶ್ರೀರಂಗಪಟ್ಟಣ, ಕೆ.ಆರ್. ನಗರದ ಹೆಬ್ಬಾಳುವಿನಲ್ಲಿ ಭಾಷಣ ಮಾಡಿದ್ದೆ. ಅನಂತರ ನಾನು 1943ರಲ್ಲಿ ಖದ್ದರ್ ಪರಸ್ಪರ ಸಹಾಯ ಸಂಘದಲ್ಲಿ ನೌಕರಿಗೆ ಸೇರಿದೆ. ವಾಣೀವಿಲಾಸ ಮೊಹಲ್ಲಾ

ದಲ್ಲಿ ಕೆಲವು ವಿದ್ಯಾರ್ಥಿಗಳು ಸೇರಿ ತಿಲಕ್ ಸಂಘವನ್ನು ಸ್ಥಾಪಿಸಿದ್ದರು. ಇದರ ವಾರ್ಷಿಕೋತ್ಸವ ಸಮಾರಂಭದ ಅಂಗವಾಗಿ ಖಾದಿ ಮಾರಾಟ, ನೂಲುವ ಪ್ರದರ್ಶನ ಏರ್ಪಡಿಸಿತ್ತು. ವಾಣೀವಿಲಾಸ ಮೊಹಲ್ಲಾದ ಅನೇಕ ಜನರು ಇಲ್ಲಿಗೆ ಭೇಟಿಕೊಟ್ಟು ಖಾದಿ ಕೊಂಡುಕೊಂಡರು. ಖದ್ದರ್ ಪರಸ್ಪರ ಸಹಾಯ ಸಂಘಕ್ಕೆ ಆಗಿನ ಕಾಲಕ್ಕೆ ಇಬ್ಬರು ಕಾರ್ಯಕರ್ತರು ಮತ್ತು ಒಬ್ಬ ಅಟೆಂಡರ್‌ನನ್ನು ಕಾಪಾಡುವಷ್ಟು ವ್ಯಾಪಾರ ದಿಂದ ಲಾಭ ಬರಲಿಲ್ಲ. ಡೈರೆಕ್ಟರುಗಳ ಸಭೆಯಲ್ಲಿ ಇದಕ್ಕೆ ಪರಿಹಾರವೇನು ಎಂದು ಯೋಚಿಸುತ್ತಿದ್ದರು. ಆಗ ನಾನಾಗಿಯೇ ಕೆಲಸಕ್ಕೆ ರಾಜೀನಾಮೆ ಕೊಡುವುದಾಗಿ ತಿಳಿಸಿದೆ. ಇದರಿಂದ ಸಂಘಕ್ಕೆ ತಿಂಗಳಿಗೆ 20 ರೂ. ಉಳಿತಾಯವಾಗಿ ನಷ್ಟದ ಅಂಶ ವರ್ಷಕ್ಕೆ 240 ರೂ. ಕಡಿಮೆಯಾಯಿತು. ಅನಂತರ ನಾನು ರಾಷ್ಟ್ರೀಯ ಭಾವನೆಯ ಸಾಹಿತ್ಯ ಪ್ರಸಾರಕ್ಕೆ ಪ್ರಾರಂಭಿಸಿದೆ. ಮಂಗಳೂರು, ಮಡಿಕೇರಿ, ಧಾರವಾಡ, ಹುಬ್ಬಳ್ಳಿ, ಗದಗ್, ಬೆಳಗಾಂ, ಮದರಾಸು ಈ ಭಾಗಗಳಲ್ಲಿ ಪ್ರವಾಸಮಾಡಿದೆ. ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದ್ದ ಅನೇಕರನ್ನು ಭೇಟಿಮಾಡಿದೆ. ರಾಷ್ಟ್ರೀಯ ಭಾವನೆಗೆ ಪೂರಕವಾದ ಪುಸ್ತಕಗಳನ್ನು ವ್ಯಾಪಾರ ಮಾಡುತ್ತಿದ್ದೆ. ಜೊತೆಗೆ ಮೈಸೂರು ನಗರದ ಕಾಂಗ್ರೆಸ್ ಕಾರ್ಯಕರ್ತನಾಗಿದ್ದೆ. ಡಿ.ಸಿ.ಸಿ. ಸದಸ್ಯ, ಉಪಚುನಾವಣಾ ಅಧಿಕಾರಿ, ಚುನಾವಣಾಧಿಕಾರಿ (ಡಿ.ಆರ್.ಓ.) ಆಗಿ ಕೆಲಸಕಾರ್ಯ ನಡೆಸಿದ್ದೆ. ಇದಲ್ಲದೆ ಎಂ.ಪಿ.ಸಿ.ಸಿ. ಸದಸ್ಯನಾಗಿದ್ದೆ.

1947ರಲ್ಲಿ 'ಪ್ಯಾಲೇಸ್ ಚಲೋ' ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಆಗ 1943ರಿಂದ 47ರ ವರೆಗೆ ಮೈಸೂರು ರಾಜ್ಯದಲ್ಲಿ ಕಾಂಗ್ರೆಸ್ಸಿನೊಳಗೆ ಪ್ರಗತಿಪಕ್ಷವೆಂಬ ಒಂದು ಗುಂಪು ಇದ್ದು, ಆ ಗುಂಪಿನವರ ಪೈಕಿ ನಾನೊಬ್ಬ. ಈ ಗುಂಪು 'ಪೌರವಾಣಿ' ಎಂಬ ಪತ್ರಿಕೆಯನ್ನು ಮೊದಲು ವಾರಪತ್ರಿಕೆ, ಅನಂತರ ದಿನಪತ್ರಿಕೆಯಾಗಿ ಹೊರಡಿಸು ತ್ತಿತ್ತು. ಈ ಪತ್ರಿಕೆ ರಾಷ್ಟ್ರೀಯ ಸುದ್ದಿಗೆ ಹೆಸರುವಾಸಿಯಾಗಿತ್ತು. ಈ ಗುಂಪು 'ಪ್ಯಾಲೇಸ್ ಚಲೋ' ಸತ್ಯಾಗ್ರಹಕ್ಕೆ ಬೆಂಬಲ ನೀಡುವುದು, ಪ್ರಕಟಣೆ ಕೊಡುವುದು, ಜನರನ್ನು ಹುರಿದುಂಬಿಸುವುದು ಈ ಕಾರ್ಯವನ್ನು ಪತ್ರಿಕೆಯ ಮೂಲಕ ಕೈಗೊಂಡಿತ್ತು. 1947ರಲ್ಲಿ ಈ ಸತ್ಯಾಗ್ರಹಕ್ಕೆ ಪೂರ್ವಭಾವಿಯಾಗಿ ಕೆಲವು ಮುಖಂಡರ ಮತ್ತು ಕೆಲವು ವಿದ್ಯಾರ್ಥಿಗಳ ದಸ್ತಗಿರಿಯಾಯಿತು. ಮಾರನೇ ದಿನ ಮೆರವಣಿಗೆ ಸುಬ್ಬರಾಯನ ಕೆರೆಯಿಂದ ಹೊರಟು ಮೈಸೂರು ನಗರದಲ್ಲೆಲ್ಲಾ ನಡೆಯಿತು. ಇದಕ್ಕೆ ವಿರುದ್ಧವಾಗಿ ಮಹಾರಾಜರ ಫೋಟೊ, ಗಂಡಭೇರುಂಡ ಧ್ವಜಗಳೊಂದಿಗೆ ಒಂದು ಮೆರವಣಿಗೆಯೂ ಬಂತು. ಇವರು "ಮೈಸೂರಿಗೆ ಮಹಾರಾಜರೇ ಅರಸಾಗಲಿ, ಜವಾಬ್ದಾರಿ ಸರ್ಕಾರ ಬೇಡ" ಎಂದು ಕೂಗುತ್ತಿದ್ದರು. ಈ ಎರಡು ಮೆರವಣಿಗೆಗಳು ಈಗ ಹೊಸದಾಗಿ ಕಟ್ಟಿರುವ ಸ್ಟ್ಯಾಚೂ ಬಳಿ ಬಂದಾಗ ಘರ್ಷಣೆ ಆಗದಿರಬೇಕೆಂದೋ ಏನೋ ನಮ್ಮ ಮೆರವಣಿಗೆಯ ಮೇಲೆ ಲಾಠಿಛಾರ್ಜ್ ಆಯಿತು. ಇದರಲ್ಲಿ ತುಂಬಾ ಜನರು ಗಾಯ

ಗೊಂಡರು. ನನಗೂ ಲಾಠೀ ಏಟು ಬಿತ್ತು. ತೊಡೆಗೆ ಪೆಟ್ಟು ಬಿದ್ದಿತು ; ಕುಂಟುತ್ತಲಿದ್ದೆ. 2-3 ದಿನ ಬಿಟ್ಟು ಮನೆಯಿಂದ ಈಚೆಗೆ ಬಂದೆ. ಪೋಲೀಸ್ ಇನ್‌ಸ್ಪೆಕ್ಟರ್ ಎದುರಿಗೆ ಸಿಕ್ಕಿದರು. ನನ್ನನ್ನು ನೋಡಿ ಹತ್ತು ನಿಮಿಷದನಂತರ ಮನೆಗೆ ಬರಲು ತಿಳಿಸಿದರು. ನಾನು ಅವರ ಮನೆಗೆ ಹೋದೆ. ಬೆಂಗಳೂರಿನಿಂದ ಒಂದು ಚೀಟಿ ಬಂದಿತ್ತು. ಅದರಲ್ಲಿ 'ಕೂಡಲೇ ಬೆಂಗಳೂರಿಗೆ ಬರುವುದು' ಎಂದು ಮಾತ್ರ ಬರೆದಿತ್ತು. ಅನಂತರ ಬಸ್ಸಿನಲ್ಲಿ ಬೆಂಗಳೂರಿಗೆ ತೆರಳಿದೆ. ನಾನು ಬೆಂಗಳೂರಿಗೆ ತೆರಳಿದಾಗ ಇಲ್ಲಿನ ನಮ್ಮ ಪಕ್ಷದ ಎಲ್ಲ ಮಿತ್ರರೂ ಹಿಂದೂಪುರಕ್ಕೆ ತೆರಳುವುದಾಗಿಯೂ ಅಲ್ಲಿಗೆ ನಾನೂ ಬರಬೇಕೆಂದೂ ಮಾರ್ಕೆಟ್ಟಿನ ಅಂಗಡಿಯಲ್ಲಿ ಸಮಾಚಾರ ತಿಳಿಯಿತು. ನಾನೂ ಹಿಂದೂಪುರಕ್ಕೆ ಹೋಗಿ ಅಲ್ಲಿನ ಸತ್ಯಾಗ್ರಹಾಶ್ರಮ ಮತ್ತು ಪತ್ರಿಕೆ ಕಾರ್ಯ ಮಾಡುತ್ತಿದ್ದೆ.

ಬೆಂಗಳೂರು ನಗರ ಅಪಾಯಕಾರಿ ಸ್ಥಳ ಎಂದು ಅರಿತು ಈ ಪತ್ರಿಕೆಯನ್ನು ಹಿಂದೂಪುರದಿಂದ ಹೊರಡಿಸುತ್ತಿದ್ದೆವು. ಮೈಸೂರಿನ ಸತ್ಯಾಗ್ರಹಕ್ಕೆ ಬೆಂಬಲ ಕೊಡಲು, ಪತ್ರಿಕೆಗೆ ಧನಸಹಾಯ ಮಾಡಲು ಹಿಂದೂಪುರದಲ್ಲಿ ಒಂದು ಸಮಿತಿ ರಚನೆ ಆಯಿತು. ಆ ಸಮಿತಿಯ ಪತ್ರವ್ಯವಹಾರವನ್ನು ನಾನು ಬೆಳಗಿನ ವೇಳೆಯಲ್ಲಿ ಮಾಡುತ್ತಿದ್ದೆ. ಮಧ್ಯಾಹ್ನ ಮತ್ತು ರಾತ್ರಿ ಎಂಟರವರೆಗೆ ಪೌರವಾಣಿ ಪತ್ರಿಕೆಗೆ ವಿಳಾಸ ಬರೆಯುವುದು, ಸ್ಟಾಂಪ್ ಅಂಟಿಸುವುದು, ಪ್ಯಾಕ್ ಮಾಡುವುದು, ಪೋಸ್ಟಾಫೀಸಿಗೆ ತಲುಪಿಸುವುದು ಈ ಕೆಲಸಗಳನ್ನು ಮಾಡುತ್ತಲಿದ್ದೆ. ಸತ್ಯಾಗ್ರಹ ಸಮಿತಿ ಆಶ್ರಯದಲ್ಲಿ ಹ್ಯಾಂಡ್ ಗ್ರೆನೈಡ್ಸ್ ತಯಾರಿಸುವುದು, ಸೈಕ್ಲೊಸ್ಟೈಲ್ ಮೂಲಕ ಸತ್ಯಾಗ್ರಹದ ಸುದ್ದಿ ಪ್ರಕಟನೆ ಕಾರ್ಯ ನಡೆಸುತ್ತಿದ್ದೆವು. ಆಗ ಪೌರವಾಣಿ ಪತ್ರಿಕೆ ಮೈಸೂರು ದೇಶದಾದ್ಯಂತ ಪ್ರಸಾರ ಹೊಂದಿದ್ದು ಒಂದು ದಿನಕ್ಕೆ 8,000 ಪತ್ರಿಕೆಗಳನ್ನು ಕಳುಹಿಸುತ್ತಿದ್ದೆವು. ಮುಂದೆ ಚಳವಳಿ ನಿಂತಿತು.

ವೇಳೆಗೆ ಸರಿಯಾಗಿ ಹೈದರಾಬಾದ್ ಕಾಂಗ್ರೆಸ್ ಸಂಸ್ಥೆಯವರು ಜವಾಬ್ದಾರಿ ಸರ್ಕಾರದ ಚಳವಳಿ ಪ್ರಾರಂಭಿಸಿದ್ದರು. ಹೈದರಾಬಾದ್ ಕಾಂಗ್ರೆಸ್ ಸಂಸ್ಥೆಯ ಕಛೇರಿಯನ್ನು ಗದಗ್‌ಗೆ ವರ್ಗಾಯಿಸಲಾಗಿತ್ತು. ಈ ಕಛೇರಿಗೆ ಅಷ್ರಾಫ್ ಎಂಬುವರು ಆಫೀಸು ಸೆಕ್ರೆಟರಿಗಳಾಗಿದ್ದರು. ಹಿಂದೂಪುರದ ಸತ್ಯಾಗ್ರಹ ಶಿಬಿರದಲ್ಲಿ ಉಳಿದುಹೋದ ಹ್ಯಾಂಡ್ ಗ್ರೆನೈಡ್‌ಗಳು ಮತ್ತು ಹುಬ್ಬಳ್ಳಿಯಲ್ಲಿ ತಯಾರಿಸಲಾಗುತ್ತಿದ್ದ ಎಲ್ಲಾ ಹ್ಯಾಂಡ್ ಗ್ರೆನೈಡ್‌ಗಳನ್ನು ಸುಮಾರು ಮೂರು ಟ್ರಂಕ್‌ನಷ್ಟು ತೆಗೆದುಕೊಂಡು ಗದಗ್ ಸ್ಟೇಷನ್‌ನಲ್ಲಿ ಇಳಿದೆ. ಮೈಸೂರು ಮತ್ತು ಹೈದರಾಬಾದಿಗೆ ಹ್ಯಾಂಡ್ ಗ್ರೆನೈಡ್ ತಯಾರಿಸುವ ವ್ಯವಸ್ಥೆಯನ್ನು ಹುಬ್ಬಳ್ಳಿಯಲ್ಲಿ ಮೈಸೂರಿನ ರಾಘವೇಂದ್ರರಾಯರು ಕೈಗೊಂಡಿದ್ದರು. ಇಲ್ಲಿಗೆ ಹೈದರಾಬಾದಿನ ರಾಘವೇಂದ್ರರಾವ್ ಜಹಗೀರ್‌ದಾರರು ಆಗಾಗ್ಗೆ ಬರುತ್ತಿದ್ದರು. ಒಬ್ಬ ಪೋಲೀಸ್ ಅಧಿಕಾರಿಗಳು ಬಂದು ಗದಗಿನಲ್ಲಿ "ನಿಮ್ಮ ಟ್ರಂಕುಗಳ ಶೋಧ ಮಾಡಬೇಕು, ನಿಮ್ಮ ದಸ್ತಗಿರಿಯಾಗಿದೆ" ಎಂದರು. ನಾನು,

'ನನ್ನ ಟ್ರಂಕಿನಲ್ಲಿ ರಾಷ್ಟ್ರೀಯ ಸಾಹಿತ್ಯವಿದೆ, ಇನ್ನೇನೂ ಇಲ್ಲ" ಎಂದು ಹೇಳಿ ಪುಸ್ತಕವಿದ್ದ ಟ್ರಂಕಿನ ಬಾಗಿಲು ತೆರೆದು ತೋರಿಸಿದೆ. ಪೋಲೀಸರು "ದಯವಿಟ್ಟು ಇನ್ನುಳಿದ ಟ್ರಂಕ್ ತೋರಿಸಿ" ಎಂದರು. ಒಂದರ ಬಾಗಿಲು ತೆರೆದೆ. ಅದನ್ನು ನೋಡಿ ಪೋಲೀಸರು "ಎಲ್ಲವನ್ನೂ ಜೀಪಿನಲ್ಲಿಡಿ" ಎಂದರು. ನಾನು ಮಾತಾಡದೆ ಟ್ರಂಕನ್ನು ಜೀಪಿನಲ್ಲಿಟ್ಟೆ. ಜೀಪು ಹೈದರಾಬಾದ್ ಕಾಂಗ್ರೆಸ್ ಕಛೇರಿ ಇದ್ದೆಡೆಗೆ ಬಂತು! "ನೀವು ಇಲ್ಲಿ ಇಳಿಯಿರಿ, ನಾವು ಮತ್ತೆ ಬರುತ್ತೇವೆ" ಎಂದು ಹೇಳಿದರು. ಟ್ರಂಕನ್ನು ಆಫೀಸರ ವಶ ಕೊಟ್ಟೆ. ಆನಂತರ ನಾನು ಆ ಕ್ಯಾಂಪಿನಲ್ಲಿಯೇ ಮಲಗಿದೆ. ಮಾರನೇ ದಿನ ನನ್ನ ಸಾಹಿತ್ಯದ ಟ್ರಂಕನ್ನು ತೆಗೆದುಕೊಂಡು ಗದಗಿನಲ್ಲೆಲ್ಲಾ ಸುತ್ತಾಡಿ 3-4 ರೂ.ಗಳ ಪುಸ್ತಕ ಮಾರಾಟ ಮಾಡಿದೆ. ಗದಗ್‌ನಿಂದ ಗ್ರೆನೈಡ್‌ಗಳೂ, ಸತ್ಯಾಗ್ರಹಿಗಳೂ ಮುಂಡರಗಿ ಮೂಲಕ ಹೈದರಾಬಾದಿಗೆ ತೆರಳುತ್ತಿದ್ದವು.

ಇದಾದನಂತರ ಮೈಸೂರು ನಗರದಲ್ಲಿ ಕಾಂಗ್ರೆಸ್ ಕಛೇರಿಯ ಕಾರ್ಯದರ್ಶಿಯಾಗಿ ಈ ದಿನದವರೆಗೂ ಇದ್ದೇನೆ. ಈಗ ಸಂಸ್ಥಾ ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ, ಸ್ವಾತಂತ್ರ್ಯ ಹೋರಾಟಗಾರರ ಕಾರ್ಯಕಾರಿ ಸಮಿತಿಯ ಸದಸ್ಯನಾಗಿ, ಖದ್ದರ್ ಪರಸ್ಪರ ಸಹಕಾರ ಸಂಘದ ಡೈರೆಕ್ಟರಾಗಿ, ಜಯನಗರದ ತೆರಿಗೆದಾರರ ಸಂಘ, ಶ್ರೀರಾಮ ಮಂದಿರ ಕಟ್ಟಡ ಸಮಿತಿಯ ಕಾರ್ಯದರ್ಶಿಯಾಗಿದ್ದೇನೆ.

ಮೈ.ಮೈ. 8

## ಜಿ. ಸುಬ್ಬರಾವ್ ಉಪಾಧ್ಯ

ಜನನ : 1910 ಉದ್ಯೋಗ : ಪತ್ರಿಕೋದ್ಯಮಿ ವಿಳಾಸ : 1950, ಕೊತ್ವಾಲ ರಾಮಯ್ಯ ಬೀದಿ, ಮೈಸೂರು–1

---



ನನ್ನ ಬಾಲ್ಯದ ದಿನಗಳಲ್ಲಿ ನಮ್ಮ ಮನೆಯಲ್ಲಿ ಪೇಪರುಗಳನ್ನು ಓದಿ ವಿಷಯಗಳನ್ನು ಚರ್ಚಿಸುತ್ತಿದ್ದರು. ಅದು ನನ್ನ ಕಿವಿಯ ಮೇಲೆ ಬೀಳುತ್ತಿತ್ತು. ಬೆಂಗಳೂರಿನ ಗಣಪತಿ ಗಲಾಟೆ ವಿಷಯ ಕೇಳಿದ್ದೆ. ಆನಂತರ ವಿಚಾರವಿಮರ್ಶೆಯಲ್ಲಿ ಭಾರತದ ಸ್ಥಾನ, ರಾಜಕೀಯ ಗುರಿ ಇತ್ಯಾದಿಗಳನ್ನು ಕೇಳಿದೆನು. ಆಗ 'ಡೊಮಿನಿಯನ್ ಸ್ಟೇಟಸ್' ಎಂಬ ಪದವು ವಿಶೇಷವಾಗಿ ಬಳಸಲ್ಪಡುತ್ತಿತ್ತು. ಅದರ ಅರ್ಥ ಏನೆಂದು ತಿಳಿಯದಿದ್ದರೂ, ಆ ಪದದ ಬಗ್ಗೆ

ಯಾವುದೋ ಅವರ್ಣನೀಯ ಆಕರ್ಷಣೆಯಾಯಿತು. ಅನಂತರ 'ಇಂಡಿಪೆಂಡೆನ್ಸ್' ಎಂಬ ಪದ ಕೇಳಿ ಮತ್ತಷ್ಟು ಆ ಪದದ ಮೇಲೆ ಸಹ ವ್ಯಾಮೋಹವೇ ಹುಟ್ಟಿತು.

1929ರಲ್ಲಿ ನಮ್ಮ ಊರಾದ ಸಕಲೇಶಪುರದಿಂದ ಮೈಸೂರಿಗೆ ಬಂದೆ. ಇಲ್ಲಿಗೆ ನಮ್ಮ ತಂದೆತಾಯಿಗಳು ನನಗಿಂತ ಮೊದಲೇ ವಲಸೆ ಬಂದು ಬಿಟ್ಟಿದ್ದರು. ಅವರು ಇದ್ದಲ್ಲಿ ಇರಬೇಕೆಂಬ ಹಂಬಲ; ಮುಂದೆ ಕಾಲೇಜು ಹತ್ತಬೇಕೆಂಬ ಆಸೆ. ಆದರೆ ನಾನು ಬಂದಾಗ ದಸರಾ ಹಬ್ಬದ ಉತ್ಸವಗಳು ನಡೆಯುತ್ತಿದ್ದವು. ಆಗ ಅಲ್ಲಿ ಶ್ರೀರಾಮ ಪೇಟೆಯಲ್ಲಿ 'ಹಿಂದೀ ಪ್ರೇಮಿ ಮಂಡಲಿ' ಎಂಬ ಸಂಸ್ಥೆಯೊಂದಿತ್ತು. ಅಲ್ಲಿ ಹಿಂದಿಯನ್ನು ಹೇಳಿಕೊಡುವ ಏರ್ಪಾಡಾಗಿತ್ತು. ಸರಿ, ಮುಂದೆ ರಾಷ್ಟ್ರಭಾಷೆಯಾಗಲಿರುವ ಹಿಂದಿ ಯನ್ನು ಕಲಿಯಬೇಕೆಂಬ ಆಸೆ ಹುಟ್ಟಿ ಸೇರಿಕೊಂಡೆ. ಪ್ರಥಮಾ ಪರೀಕ್ಷೆಯನ್ನು ಮಾಡಿದೆ. ಆ ಪರೀಕ್ಷೆಯಲ್ಲಿ ನಾನೇ ಮೈಸೂರು ದೇಶಕ್ಕೆ ಪ್ರಥಮವೆಂದು ಹೇಳಿ ನನಗೆ 5 ರೂ. ಬಹುಮಾನ ಕೊಟ್ಟರು.

ಆ ಸಮಯದಲ್ಲಿ ಸದರಿ ಸಂಸ್ಥೆಯನ್ನು ನೋಡಿಕೊಳ್ಳುತ್ತಿದ್ದ ಜಮುನಾಪ್ರಸಾದ್ ಎಂಬುವರ ಬದಲು ಸಿದ್ಧನಾಥ ಪಂತರು ಬಂದರು. ಅವರಿಗೂ ನನಗೂ ಸ್ನೇಹವಾಯಿತು. ಈ ಕಾಲದಲ್ಲಿಯೇ ಲಾಹೋರ್ ಕಾಂಗ್ರೆಸ್ ಅಧಿವೇಶನ ನಡೆದು ನಾಡಿಗೆ ಪೂರ್ಣ ಸ್ವಾತಂತ್ರ್ಯದ ಘೋಷಣೆಯಾಯಿತು. ಅದು ದೇಶವನ್ನೆಲ್ಲಾ ಹುರಿದುಂಬಿಸಿದಂತೆ ನನ್ನನ್ನೂ ಹುರಿದುಂಬಿಸಿತು. ಮುಂದಿನ ಗುರಿಯ ಸಾಧನೆಯ ಬಗ್ಗೆ ನಾಯಕರು ಮಾಡುತ್ತಿದ್ದ ಕೆಲಸಗಳನ್ನು ವೃತ್ತಪತ್ರಿಕೆಗಳ ಮೂಲಕ ಓದಿ ತಿಳಿದುಕೊಳ್ಳುವುದೇ ಒಂದು ವಿಶೇಷ ಕೆಲಸವಾಯಿತು. ಆಗ ಸೈಮನ್ ಕಮಿಷನ್ ವಿರೋಧದ ಚಳವಳಿ, ಭಗತ್‌ಸಿಂಗ್, ಜತೀನದಾಸ್‌ರವರ ದಿಟ್ಟತನದ ಹೋರಾಟ ಮುಂತಾದ ಘಟನಾವಳಿಗಳು ಒಂದರ ಮೇಲೊಂದು ನಡೆದವು. ಗಾಂಧೀಜಿಯವರ ದಾಂಡೀಯಾತ್ರೆ, ಉಪ್ಪಿನ ಸತ್ಯಾಗ್ರಹ ಇತ್ಯಾದಿ ಮಾತುಗಳನ್ನು ಕೇಳಿ ಯಾವುದೋ ಒಂದು ಬಗೆಯ ಶಕ್ತಿಯ ಅಲೆಗೆ ನಾನು ಸಿಕ್ಕಿಕೊಂಡಂತೆ ಭಾಸವಾಯಿತು. ಆದರೆ ನಾನು ಮಾಡಬೇಕಾದುದು ಏನೂ ಇದ್ದಂತೆ ಕಾಣಲಿಲ್ಲ. ಈ ಮಧ್ಯೆ 1930ರ ಏಪ್ರಿಲ್ ತಿಂಗಳಲ್ಲಿ ಗಾಂಧೀಜಿಯವರ ಬಂಧನವಾಯಿತು. ಈ ಸುದ್ದಿಯು ಎಲ್ಲಾ ಕಡೆಗೂ ಹರಡಿತು. ಹಿಂದೀ ವ್ಯಾಸಂಗ ಮಾಡುತ್ತಿದ್ದ ಮತ್ತು ಹೇಳಿಕೊಡುತ್ತಿದ್ದವರ ಮೇಲೂ ಅದರ ಪ್ರಭಾವ ಬೀಳದೆ ಹೋಗ ಲಿಲ್ಲ. ಪಂಡಿತ ಸಿದ್ಧನಾಥ ಪಂತರು ಅದೊಂದು ದಿನ ಸಂಜೆ ಮಾತನಾಡುತ್ತಾ, "ಏನು, ಈ ಊರಿನಲ್ಲಿ ಗಾಂಧೀಜಿಯವರ ದಸ್ತಗಿರಿಯ ಬಗ್ಗೆ ಯಾವ ಪ್ರತಿಕ್ರಿಯೆಯೂ ಕಾಣುತ್ತಿಲ್ಲವಲ್ಲ?" ಎಂದು ಹೇಳಿ, ಇಲ್ಲಿ ಏನಾದರೂ ಮಾಡಿ ಜನರ ಮನಸ್ಸಿನ ತಳ ಮಳವನ್ನು ಹೊರಹಾಕಬೇಕೆಂದು ನಮಗೆ ಕರೆ ಕೊಟ್ಟರು. ನನಗೂ ಈ ವಿಷಯದಲ್ಲಿ ಆಸಕ್ತಿ ಉಂಟಾಯಿತು. ನಾವು ಹಲವರು ಅಂದೇ ಮಾತನಾಡಿಕೊಂಡೆವು. ಮಾರನೇ ದಿನ ಊರಿನಲ್ಲಿ ಮೆರವಣಿಗೆ ಮತ್ತು ಟೌನ್‌ಹಾಲ್ ಮೈದಾನದಲ್ಲಿ ಬಹಿರಂಗ ಸಭೆ

ನಡೆಸಲಾಯಿತು. ಅಲ್ಲಿ ಭಾಷಣಗಳೂ ಆದವು.

ಅದಾದಮೇಲೆ ನಾಡಿನಾದ್ಯಂತ—ಅಂದರೆ ಆಗಿನ ಬ್ರಿಟಿಷ್ ಭಾರತದಲ್ಲೆಲ್ಲಾ ನಡೆಯುತ್ತಿದ್ದ ಉಪ್ಪಿನ ಸತ್ಯಾಗ್ರಹದ ಚಳವಳಿಯಲ್ಲಿ ಮೈಸೂರು ದೇಶದವರು ಯಾವ ರೀತಿಯಲ್ಲಾದರೂ ಭಾಗವಹಿಸಬೇಕೆಂದು ಮನಸ್ಸಿನಲ್ಲಿ ಬಂದಿತು. ಇಲ್ಲಿಂದ ಸತ್ಯಾಗ್ರಹಿಗಳ ತಂಡವೊಂದನ್ನು ಮುಂಬಯಿ ಆಧಿಪತ್ಯಕ್ಕೆ ಸೇರಿದ್ದ ಕರ್ನಾಟಕದ ಭಾಗಕ್ಕೆ ಕಳುಹಿಸಬೇಕೆಂದು ಗೊತ್ತುಮಾಡಲಾಯಿತು. ಸ್ಥಳೀಯ ಕಾಂಗ್ರೆಸ್ಸಿನ ಪ್ರಮುಖರ ಸಹಕಾರದಿಂದ ಸತ್ಯಾಗ್ರಹಿಗಳ ತಂಡವೊಂದು ಸಹ ಸಿದ್ಧವಾಯಿತು. ತಗಡೂರು ರಾಮಚಂದ್ರರಾಯರ ಸತ್ಯಾಗ್ರಹ ಆಶ್ರಮದಲ್ಲಿ ಶಿಬಿರವೊಂದನ್ನು ಏರ್ಪಡಿಸಿ, ಸತ್ಯಾಗ್ರಹಿಗಳಿಗೆ ಬೆಂಗಳೂರಿನ ಎಚ್. ರಾಮರಾಯರ ನೇತೃತ್ವದಲ್ಲಿ ಶಿಕ್ಷಣವನ್ನು ಕೊಡಲಾಯಿತು. ಈ ತಂಡವು 1930ರ ಜೂನ್ ಅಥವಾ ಜುಲೈನಲ್ಲಿ ಹುಬ್ಬಳ್ಳಿಗೆ ಪ್ರಯಾಣಹೊರಟಿತು. ಹಾಗೆ ಹೋದವರಲ್ಲಿ ಸೇರಬೇಕಾಗಿದ್ದ ನಾನು ಖಾಯಿಲೆಯಿಂದಾಗಿ ಅಂದೇ ಹೋಗಲಾಗದೆ 10-12 ದಿನ ತಡವಾಗಿ ಇನ್ನೂ ಹಲವು ಮಿತ್ರರೊಡನೆ ಹೋದೆನು. ಅಲ್ಲಿ ಒಂದು ಸತ್ಯಾಗ್ರಹಿಗಳ ಶಿಬಿರವು ಏರ್ಪಟ್ಟಿತ್ತು. ವಿ. ಟಿ. ಮಾಗಡಿಯವರು ಅದರ ಮೇಲ್ವಿಚಾರಕರಾಗಿದ್ದರು. ಕೆಲವು ದಿನಗಳು ಅಲ್ಲಿದ್ದನಂತರ ನಾನು ಶಿರಸಿಗೆ ಕಳುಹಿಸಲ್ಪಟ್ಟೆನು. ಅಲ್ಲೂ ಸತ್ಯಾಗ್ರಹಿಗಳ ಶಿಬಿರವು ಏರ್ಪಟ್ಟಿತ್ತು. ಕೆ. ಎ. ವೆಂಕಟರಾಮಯ್ಯನವರು ಆ ಶಿಬಿರವನ್ನು ನೋಡಿಕೊಳ್ಳುತ್ತಿದ್ದರು. ಆ ಶಿಬಿರದಿಂದ 'ಸತ್ಯಾಗ್ರಹ ಬುಲೆಟಿನ್' ಎಂಬ ಒಂದು ಹಾಳೆಯ ಕರಪತ್ರ ನನ್ನ ಹೆಸರಿನಲ್ಲಿ ಹೊರಡುತ್ತಿತ್ತು.

ಬಹುಶಃ ಜುಲೈ ಕೊನೆ ಅಥವಾ ಆಗಸ್ಟ್ ಆದಿಯಲ್ಲಿ ಶಿರಸಿಯಲ್ಲಿ ಸತ್ಯಾಗ್ರಹವೊಂದನ್ನು ಅಣಿಮಾಡಲಾಯಿತು. ದೇಶದ ಇತರ ಕರಾವಳಿ ಪ್ರದೇಶಗಳಲ್ಲಿ ಉಪ್ಪನ್ನು ತಯಾರಿಸುವುದೇ ಮುಂತಾದ ಸತ್ಯಾಗ್ರಹಗಳು ನಡೆಯುತ್ತಿದ್ದವು. ಇತರ ಕಡೆ ಪ್ರತಿಬಂಧಕಾಜ್ಞೆಗಳನ್ನು ಉಲ್ಲಂಘನೆ ಮಾಡಿ ಅನೇಕರು ಸೆರೆಮನೆಗೆ ತೆರಳಿದ್ದರು. ಶಿರಸಿಯಲ್ಲೂ ಸಹ ಅರಣ್ಯಸತ್ಯಾಗ್ರಹವನ್ನು ನಡೆಸಲಾಯಿತು. ಸಾವಿರಗಟ್ಟಲೆಯಲ್ಲಿ ಜನರು ಕೊಡಲಿ ಹಿಡಿದು ಊರಿನ ಆಚೆ ಹೋಗಿ ಕಾಡು ಕಡಿಯುವ ಶಾಂತಿಯುತ ಸತ್ಯಾಗ್ರಹ ಮಾಡಲು ಅಣಿಯಾಗಿ ಶಿಸ್ತಿನಿಂದ ಹೋದರು. ಕಾಡಿನ ಸಮೀಪದಲ್ಲಿ ಈ ಭಾರಿ ಜನಸ್ತೋಮವನ್ನು ಪೋಲೀಸರು ತಡೆದರು. ಕಾನೂನು ಉಲ್ಲಂಘನೆ ಮಾಡಿ ಸೌದೆ ತರುವುದಾಗಿ ಒತ್ತಾಯಪಡಿಸಿದಾಗ ಅಲ್ಲಿನ ಫೌಜದಾರರು ಹಲವರನ್ನು ಬಂಧಿಸಿದರು. ಈ ರೀತಿ ಬಂಧಿಸಲ್ಪಟ್ಟವರಲ್ಲಿ ನಾನೂ ಇದ್ದೆ. ನಮ್ಮ ಮೇಲೆ ಖಟ್ಲೆ ಹೂಡಲಾಯಿತು. ನನಗೆ ಶಿರಸಿ ನ್ಯಾಯಾಧೀಶರು—ಅಕ್ರಮ ಕೂಟಕ್ಕಾಗಿ ಒಂಬತ್ತು ತಿಂಗಳು, ಅರಣ್ಯಶಾಸನದ ವಿಧಿ ಉಲ್ಲಂಘನೆಗೆಂದು ಮೂರು ತಿಂಗಳು—ಒಟ್ಟು ಒಂದು ವರ್ಷ ಸಶ್ರಮ ಶಿಕ್ಷೆಯನ್ನು ವಿಧಿಸಿದರು. ಅನಂತರ ನನ್ನನ್ನೂ ಇತರ ಶಿಕ್ಷೆಗೊಳಗಾದ ಸತ್ಯಾಗ್ರಹಿಗಳನ್ನೂ ಕಾರವಾರ ಜಿಲ್ಲಾ ಬಂದೀಖಾನೆಗೆ ಒಯ್ದರು. ಅಲ್ಲಿ ಆಗಳೇ

ಕುಮಟಾ, ಅಂಕೋಲಾ, ಯಲ್ಲಾಪುರ ಮುಂತಾದ ಕಡೆಗಳಿಂದ ಶಿಕ್ಷೆಯಾಗಿ ಬಂದಿದ್ದ ಅನೇಕರಿದ್ದರು. ಅವರಲ್ಲಿ ಕೆಲವರ ಹೆಸರನ್ನು ಕೇಳಿ ಬಲ್ಲೆ. ನಾನು 'ಸಿ' ಕ್ಲಾಸ್ ಖೈದಿಯಾಗಿದ್ದೆ. ಕೆಲವು ದಿನಗಳನಂತರ ಶಿವಮೊಗ್ಗದಲ್ಲಿದ್ದ ವೈ. ಪಾರ್ಥನಾರಾಯಣ ಪಂಡಿತರಿಗೆ ಶಿಕ್ಷೆಯಾಗಿ ಅಲ್ಲಿಗೆ ಬಂದರು. ಮುಂದೆ ನನ್ನನ್ನೂ ಇತರ ಹಲವರನ್ನೂ ಬೆಳಗಾಂ ಸೆಂಟ್ರಲ್ ಜೈಲಿಗೆ ಒಯ್ದರು. ಅಲ್ಲಿ ಸುಮಾರು ಐದು ತಿಂಗಳು ಇದ್ದಿರಬಹುದು. ಆಮೇಲೆ ಧಾರವಾಡ ಜಿಲ್ಲೆಗೆ ನನ್ನನ್ನು ರವಾನಿಸಿದರು. ನನ್ನ ಶಿಕ್ಷೆಯು ಒಟ್ಟು ಏಳು ತಿಂಗಳು ಮುಗಿದಾಗ ನನ್ನನ್ನು ಬಿಡುಗಡೆಮಾಡಿ ಇಲ್ಲಿಗೆ ಕಳುಹಿಸಿದರು. ನನ್ನ ಮೇಲೆ ಫಾರಿನರ್ಸ್ ಆಕ್ಟ್ ಪ್ರಯೋಗಿಸಿ ಮುಂಬಯಿ ಪ್ರಾಂತ್ಯಕ್ಕೆ ಬರದಂತೆ ನೋಟೀಸು ಜಾರಿಮಾಡಿದರು. ಅವಧಿಗೆ ಮುಂಚೆ ನನ್ನ ಬಿಡುಗಡೆ ಆಗಲು ಗಾಂಧೀ-ಇರ್ವಿನ್ ಒಪ್ಪಂದವೇ ಕಾರಣ.

ಇದಾದಮೇಲೆ ಮೈಸೂರಿನಲ್ಲಿ 'ಜಿಲ್ಲಾ ಯೂಥ್ ಲೀಗ್' ಎಂಬ ಸಂಸ್ಥೆಯ ಕಾರ್ಯದರ್ಶಿಯಾಗಿ ಕೆಲಸ ನಿರ್ವಹಿಸಿದೆನು. ಆ ಮೊದಲು ಎಲ್. ವಿ. ರಾಜಗೋಪಾಲ್‌ರವರು ಆಸ್ಥಾನದಲ್ಲಿದ್ದರು. ಅದೇ ಸಮಯದಲ್ಲಿ ಇಲ್ಲಿ ಸ್ವಯಂಸೇವಕರ ಶಿಬಿರವೊಂದನ್ನು ನಡೆಸಿದೆವು. ಒಂದೂವರೆ ತಿಂಗಳ ಕಾಲ ತರಬೇತಿ; ಸುಮಾರು ಮೂವತ್ತು ಮಂದಿ ಭಾಗವಹಿಸಿದ್ದಂತೆ ನೆನಪು. ಅದರ ಮುಕ್ತಾಯ ಸಮಾರಂಭವನ್ನು ಇಲ್ಲಿಗೆ ಬಂದಿದ್ದ ಪಂಡಿತ ಜವಾಹರಲಾಲ್ ನೆಹರೂರವರು ನೆರವೇರಿಸಿದರು. ಇದು 1931ರಲ್ಲಿ ನಡೆಯಿತು. ಆರ್. ಆರ್. ನಾಯಕ್‌ರವರು ಶಿಬಿರಾಧಿಪತಿಗಳಾಗಿದ್ದರು.

ಇನ್ನು ಎರಡನೆಯ ದುಂಡು ಮೇಜು ಪರಿಷತ್ತು ವಿಫಲವಾಗಿ, ಕಾನೂನುಭಂಗ ಚಳವಳಿಯು 1932ರಲ್ಲಿ ಮತ್ತೆ ನಡೆಯಿತು. ಆಗ ನಾನು ಮತ್ತೆ ಕರ್ನಾಟಕಕ್ಕೆ ಹೋಗಲಿಲ್ಲ. ಕಾರಣ ಆಗಿನ ಧುರೀಣ ಸಂಪಿಗೆ ವೆಂಕಟಪತಯ್ಯನವರು ನನ್ನನ್ನು ಅಲ್ಲಿಗೆ ಹೋಗದಂತೆ ತಡೆದರು. ಎಲ್ಲರೂ ಸತ್ಯಾಗ್ರಹಕ್ಕೆ ತೆರಳಿದರೆ ಹಿಂದೆ ನಿಂತು ಕೆಲಸ ಮಾಡುವವರಾರೆಂದು ಅವರ ವಿಚಾರ. ಆದ್ದರಿಂದ ನಾನು ಕಾಂಗ್ರೆಸ್ ಚಳವಳಿಗೆ ಸಂಬಂಧಪಟ್ಟ ಬೇರೆ ಕಾರ್ಯಗಳಲ್ಲಿ ನಿರತನಾಗಬೇಕಾಯಿತು. ಸಂಪಿಗೆಯವರು ನನ್ನನ್ನು ಹೊಸಕೊಪ್ಪಕ್ಕೂ ಮತ್ತು ಮಡಿಕೇರಿಗೂ ಅಲ್ಲಿನ ಪ್ರಮುಖರನ್ನು ಭೇಟಿಮಾಡಿ ಅವರ ನೆರವನ್ನು ಪಡೆಯಲು ಕಳುಹಿಸಿದ್ದರು. ಅದಾದಮೇಲೆ ಸಂಪಿಗೆಯವರು ಶಿರಸಿ, ಸಿದ್ದಾಪುರದ ಕರನಿರಾಕರಣೆ ಚಳವಳಿಯ ಬಗ್ಗೆ ಒಂದು ದೊಡ್ಡ ವರದಿಯನ್ನು ಬ್ರಿಟಿಷ್ ಪಾರ್ಲಿಮೆಂಟಿಗೆ ಒಪ್ಪಿಸಲು ಈ ದೇಶಕ್ಕೆ ಬಂದಿದ್ದ ಲಿಯೋನಾರ್ಡ್ ಮ್ಯಾಟರ್ಸ್ ಎಂಬ ಎಂ.ಪಿ.ಗೆ ಕೊಡಲು ಕೊಟ್ಟು ಕಳುಹಿಸಿಕೊಡುವುದರಲ್ಲಿ ಯಶಸ್ವಿಯಾದರು. ಇದರ ತಯಾರಿಕೆಯಲ್ಲಿ ನನ್ನ ಪಾಲೂ ಇದ್ದಿತು.

ಮೈಸೂರಿನಲ್ಲಿ ಕೆ.ಪಿ.ಸಿ.ಸಿ.ಯ ಅಂಗಸಂಸ್ಥೆಯಾಗಿ ಒಂದು ಜಿಲ್ಲಾ ಕಾಂಗ್ರೆಸ್ ಸಮಿತಿ ಇದ್ದಿತು. ಸಮಿತಿಯಲ್ಲಿ ರಂಗರಾಮಯ್ಯ, ಅಗರಂ ರಂಗಯ್ಯನವರೇ ಮುಂತಾದ

ಹಿರಿಯರು ಇದ್ದರು.

ಕೆಲವು ಕಾಲಾನಂತರ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ನನ್ನನ್ನು ಆರಿಸಲಾಯಿತು. ಹಲವಾರು ವರ್ಷಗಳು ಅಂದರೆ ಮೈಸೂರು ಸಂಸ್ಥಾನದಲ್ಲಿ ಪ್ರತ್ಯೇಕವಾದ ಕಾಂಗ್ರೆಸ್ ಸಂಸ್ಥೆಯು ಸ್ಥಾಪನೆಯಾದ ಕೆಲವು ಕಾಲ ಅದೇ ಸ್ಥಾನದಲ್ಲಿದ್ದೆ. ರಾಣೆಬೆನ್ನೂರು ಮತ್ತು ಹುಬ್ಬಳ್ಳಿ ಮುಂತಾದ ಕಡೆ ನಡೆದ ಕೆ.ಪಿ.ಸಿ.ಸಿ. ಸಭೆಗಳಲ್ಲಿ ಭಾಗವಹಿಸುತ್ತಿದ್ದೆ. ಇಲ್ಲಿ ಖಾದೀಪ್ರಚಾರ ಇತ್ಯಾದಿ ಕಾರ್ಯಗಳನ್ನು ನಿರ್ವಹಿಸಬೇಕಾಗಿತ್ತು.

ಮೈಸೂರು ರಾಜ್ಯದಲ್ಲಿದ್ದ ಕಾಂಗ್ರೆಸ್ ಸಮಿತಿಗಳು ಸೇರಿ ಇಲ್ಲಿನ ರಾಜಕೀಯದಲ್ಲಿ ಪ್ರವೇಶಿಸಲು ನಿರ್ಧರಿಸಿದವು. ನ್ಯಾಯವಿಧಾಯಕ ಸಭೆಗೆ ಕಾಂಗ್ರೆಸ್ ಪರವಾಗಿ ಉಮೇದುವಾರರನ್ನು ನಿಲ್ಲಿಸಲಾಯಿತು. ಅದಾದಮೇಲೆ ಕಾಂಗ್ರೆಸ್‌ನಲ್ಲಿ ಪ್ರಜಾ ಸಂಯುಕ್ತ ಪಕ್ಷವು ಐಕ್ಯಗೊಂಡು ಇಲ್ಲಿ ಮಹಾರಾಜರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟಗಳು ನಡೆದವು. ಆಗಲೇ ಹರಿಪುರದಲ್ಲಿ ಸುಭಾಸ್ ಚಂದ್ರ ಬೋಸರ ಅಧ್ಯಕ್ಷತೆಯಲ್ಲಿ 1938ರಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿದ್ದೆನು. ಅಲ್ಲಿ ದೇಶೀಯ ಸಂಸ್ಥಾನಗಳಲ್ಲಿ, ಕಾಂಗ್ರೆಸ್ಸಿನ ಹೆಸರಿನಲ್ಲಿ ಯಾವ ಚಳವಳಿಯನ್ನೂ ನಡೆಸಬಾರದೆಂಬ ನಿರ್ಧಾರವನ್ನು ಕೈಗೊಳ್ಳಲಾಯಿತು. ಇದು ಸಂಸ್ಥಾನದವರಾದ ನಮಗೆ ಖೇದ, ಆಶ್ಚರ್ಯ ಮತ್ತು ಉದ್ರೇಕವನ್ನುಂಟುಮಾಡಿತು. ದೇಶೀಯ ಸಂಸ್ಥಾನದಲ್ಲಿ ಚಳವಳಿ ನಡೆಸಲು ಅವಕಾಶವಿರಬೇಕೆಂದು ಧಾರವಾಡದ ಡಾ|| ಎನ್. ಬಿ. ಕಬ್ಬೂರ್ ಅವರು ತಿದ್ದುಪಡಿ ತಂದರು. ಅದಕ್ಕೆ ಬಹಳ ಮಟ್ಟಿನ ಬೆಂಬಲವೂ ಸಿಕ್ಕಿತು; ಆದರೆ ಹಿರಿಯ ಕಾಂಗ್ರೆಸ್ ನಾಯಕರು ಮಾತ್ರ ದೃಢವಾದ ನಿಲುವನ್ನು ತಾಳಿದರು. ಅಲ್ಲಿಂದ ಹಿಂದಿರುಗಿದಮೇಲೆ ಮೈಸೂರು ಸಂಸ್ಥಾನದಲ್ಲಿ ಮೈಸೂರು ಕಾಂಗ್ರೆಸ್ ಎಂಬ ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಆಗ ಕಾಂಗ್ರೆಸ್ ಸಮಿತಿಗಳನ್ನು ರಚಿಸಲಾಯಿತು. ಶಿವಪುರ ಕಾಂಗ್ರೆಸ್ಸಿನನಂತರ 'ಧ್ವಜಸತ್ಯಾಗ್ರಹ' ನಡೆಸಲಾಯಿತು. ಮೈಸೂರಿನಲ್ಲೂ 'ಧ್ವಜಸತ್ಯಾಗ್ರಹ' ಆಚರಿಸಲು ಕಾರ್ಯಕ್ರಮ ಹಾಕಿಕೊಂಡೆವು. ನಾನು ಧ್ವಜ ಹಾರಿಸಬೇಕೆಂದು ನಿರ್ಧಾರವಾಯಿತು. ಚಾಮುಂಡೀಪುರದ ಶಾಲೆಯ ಬಳಿ ಮೈದಾನದಲ್ಲಿ ರಾಷ್ಟ್ರಧ್ವಜವನ್ನು ಹಾರಿಸಲು ಯತ್ನಿಸಿದ್ದಕ್ಕಾಗಿ ನನ್ನನ್ನೂ ನನ್ನ ಸಂಗಡಿಗರಾದ ಕೆ. ಜೀವಣ್ಣರಾವ್, ಎ. ಎನ್. ಸೂರ್ಯನಾರಾಯಣರಾವ್ ಮತ್ತು ಟಿ. ರಾಜನ್‌ರವರನ್ನು ಬಂಧಿಸಿ ಶಿಕ್ಷೆ ವಿಧಿಸಲಾಯಿತು. ನನಗೆ ಮೂರು ತಿಂಗಳ ಕಠಿಣ ಸಜ ಮತ್ತು 500 ರೂ. ಜುಲ್ಮಾನೆ ಬಿತ್ತು. ಆದರೆ ಕೆಲವೇ ದಿನಗಳಿಗೆ ನಮಗೆಲ್ಲಾ ಕ್ಷಮೆ ತೋರಿ ಬಿಡುಗಡೆ ಮಾಡಿದರು.

ಇದಾದನಂತರ 'ಹ್ಯಾಮಿಲ್ಟನ್ ಬಿಲ್ಡಿಂಗ್' ಸತ್ಯಾಗ್ರಹವನ್ನು ಆಚರಿಸಲಾಯಿತು. ನಿಮಿರಾಶ್ವತ್ಥ ಗೋಲೀಬಾರಿಗೆ ಕಾರಣರಾದ ಈ ಪೋಲೀಸು ಅಧಿಕಾರಿಯ ಹೆಸರನ್ನು

ಮೈಸೂರಿನ ಪೋಲೀಸು ಠಾಣೆಗೆ ಇಡಲು ಹೊರಟಿದ್ದುದು ತೀವ್ರವಿರೋಧಕ್ಕೆ ಎಡೆ ಕೊಟ್ಟಿತು. ಇದನ್ನು ತಡೆಯಲು ತಗಡೂರು ರಾಮಚಂದ್ರರಾಯರು ಸತ್ಯಾಗ್ರಹ ನಡೆಸಬೇಕೆಂದು ಸಂಕಲ್ಪಿಸಿದರು. ಅವರು ಮತ್ತು ನಾನು ಮೊದಲನೆಯ ದಿನವೇ ಸತ್ಯಾಗ್ರಹ ನಡೆಸಬೇಕೆಂದು ಗೊತ್ತಾಯಿತು. ಸತ್ಯಾಗ್ರಹ 1939ರ ಫೆಬ್ರವರಿ 15 ರಂದು ಆರಂಭವಾಗಬೇಕೆಂದು ತೀರ್ಮಾನವಾಯಿತು. ಅದಕ್ಕೆ ಎರಡು ದಿನ ಮುಂಚೆ ರಾಮಚಂದ್ರರಾಯರನ್ನು ಬಂಧಿಸಲಾಯಿತು. ಆದಾದನಂತರ ನಾನು ಸತ್ಯಾಗ್ರಹದ ಸಮಿತಿಯ ಸಂಚಾಲಕನಾದೆ. ನನ್ನೊಡನೆ ಶಾಮರಾವ್ ಎಂಬ ಒಬ್ಬ ತರುಣನು ಬಂದನು. ಅಂದು ಸತ್ಯಾಗ್ರಹಕ್ಕಾಗಿ ಸತ್ಯಾಗ್ರಹ ಕಛೇರಿಯಿಂದ ಹೊರಟು ಒಂದೂವರೆ ಮೈಲಿ ದೂರವಿರುವ ಪೋಲೀಸು ಠಾಣೆಗೆ ಹೋದೆವು. ಅಲ್ಲಿ ಭಾರಿ ಜನಸಂದಣಿಯೇ ಸೇರಿತ್ತು; ಪೋಲೀಸರು ಹೆಚ್ಚಿನ ಸಂಖ್ಯೆಯಲ್ಲಿ ಸಜ್ಜಾಗಿದ್ದರು; ಸಿಟಿ ಮ್ಯಾಜಿಸ್ಟ್ರೇಟರು ಖುದ್ದಾಗಿ ಹಾಜರಿದ್ದರು. ನಮ್ಮನ್ನು ಪೋಲೀಸರು ಒಳಗೆ ಬಿಡುವುದಿಲ್ಲವೆಂದು ತಡೆದರು. ಆಗ ಅಲ್ಲೇ ಒಂದು ಪಕ್ಕದಲ್ಲಿ ಸಂಜೆಯವರೆಗೆ ಕುಳಿತುಬಿಟ್ಟೆವು. ಇದಾದ ಮೇಲೆ ಪ್ರತಿದಿನ ಇಬ್ಬರನ್ನು ಕಳುಹಿಸಲಾಯಿತು. ಇದು ಮಾರ್ಚ್ ಕೊನೆಯವರೆಗೂ ನಡೆಯಿತು. ಇದರಲ್ಲಿ ನನ್ನನ್ನು, ಸತ್ಯಾಗ್ರಹ ಸಮಿತಿಯ ಇತರ ಸದಸ್ಯರಾದ ಎ. ಎನ್. ಸೂರ್ಯನಾರಾಯಣರಾವ್, ಎಂ. ಎನ್. ಜೋಯಿಸ್, ಟಿ. ರಾಜನ್ ಅವರನ್ನು ಬಂಧಿಸಿ, ನಮಗೆ ಒಳ್ಳೆಯ ನಡತೆ ಕಾರಣಕ್ಕಾಗಿ ಕೇವಲ ಒಂದು ವರ್ಷ ಸಜಾ ವಿಧಿಸಲಾಯಿತು. ಹಾಗೆಯೇ ರಾಮಚಂದ್ರರಾಯರಿಗೂ ಶಿಕ್ಷೆವಿಧಿಸಲಾಯಿತು. ಈ ಸತ್ಯಾಗ್ರಹದಲ್ಲಿ ಸುಮಾರು 70 ಮಂದಿ ಭಾಗವಹಿಸಿ ಜೈಲುವಾಸವನ್ನು ಅನುಭವಿಸಿದರು. ಹಲಕೆಲವು ಮಹಿಳೆಯರೂ ಸತ್ಯಾಗ್ರಹ ನಡೆಸಿದರು. ಮಂಗಳದ್ರವ್ಯಗಳನ್ನು ಅವರಿಗೆ ಸಮರ್ಪಿಸಲಾಯಿತು. ನಮ್ಮ ಬಿಡುಗಡೆಯು ಮಾರನೆಯ ವರ್ಷ, ಅಂದರೆ 1940ರಲ್ಲಿ ಆಯಿತು. ಅಷ್ಟುಹೊತ್ತಿಗೆ ಮೈಸೂರು ರಾಜ್ಯದಲ್ಲಿ ಅರಸೀಕೆರೆ ಸಮ್ಮೇಳನದ ನಿರ್ಧಾರದಂತೆ ಸತ್ಯಾಗ್ರಹ ನಡೆದು ಅನೇಕರು ಜೈಲಿಗೆ ಬಂದಿದ್ದರು. ನಾನು ಸೆಂಟ್ರಲ್ ಜೈಲಿನಲ್ಲಿದ್ದಾಗ ರಾಜದ್ರೋಹದ ಆಪಾದನೆಗಾಗಿ ಶಿಕ್ಷಿಸಲ್ಪಟ್ಟ ಎಚ್. ಸಿದ್ದಯ್ಯ ಮತ್ತು ಟಿ. ಸುಬ್ರಹ್ಮಣ್ಯರವರು ಇದ್ದರು. ಅನಂತರ ಟಿ. ಸಿದ್ದಲಿಂಗಯ್ಯ, ಕೆ. ಹನುಮಂತಯ್ಯ ಮುಂತಾದವರು ನಮ್ಮ ಬ್ಯಾರಕ್ಕಿಗೆ ಬಂದು ಜೈಲುವಾಸವನ್ನು ಅನುಭವಿಸಿದರು.

ಮುಂದೆ 1942ರ ಆಗಸ್ಟ್‌ನಲ್ಲಿ ನಾನು, ತಗಡೂರು ರಾಮಚಂದ್ರರಾಯರು ಮತ್ತು ಎ. ಎನ್. ಸೂರ್ಯನಾರಾಯಣರಾಯರು ಮುಂಬಯಿ ಎ.ಐ.ಸಿ.ಸಿ. ಸಭೆಗಾಗಿ ಹೋದೆವು. ಅಲ್ಲಿಗೆ ಮೈಸೂರಿನ ಮುಖಂಡರುಗಳಾದ ಕೆ. ಟಿ. ಭಾಷ್ಯಂ, ನಿಜಲಿಂಗಪ್ಪ, ಸುಬ್ರಹ್ಮಣ್ಯ, ಎಸ್. ಚನ್ನಯ್ಯ ಮುಂತಾದವರು ಬಂದಿದ್ದರು. ಆಗಸ್ಟ್ 8ರ ರಾತ್ರಿ ಹನ್ನೊಂದು ಘಂಟೆ ಸಮಯದಲ್ಲಿ ಗಾಂಧೀಜಿಯವರು 'ಮಾಡು ಅಥವಾ ಮಡಿ' ಎಂದು

ಕರೆಯಿತ್ತರು. ಅಂದು ಒಂದು ಅಪೂರ್ವವಾದ ಸನ್ನಿವೇಶವೊಂದನ್ನು ನಾನು ಅಲ್ಲಿ ಕಂಡೆ. ಅದೇನೆಂದರೆ ಗಾಂಧೀಜೀ ಭಾಷಣ ಮಾಡುತ್ತಿದ್ದಾಗ ಅವರ ಶಿರಸ್ಸಿನ ಹಿಂಭಾಗದಲ್ಲಿ ತೇಜೋಮಂಡಲ ಒಂದು ಉಂಟಾಯಿತು. ನನ್ನ ಕಣ್ಣುಗಳನ್ನು ನಾನು ನಂಬಲಿಲ್ಲ; ಮತ್ತೆ ಕಣ್ಣು ತಿಕ್ಕಿ ದಿಟ್ಟಿಸಿನೋಡಿದೆ; ಆಗಲೂ ಇದೇ ಪ್ರಭೆ ಉಳಿದಿತ್ತು; ಸ್ವಲ್ಪ ಹೊತ್ತಿನ ಮೇಲೆ ಕಾಣಲಿಲ್ಲ. ಇಂಥ ಪ್ರಭಾವಳಿ ದಿವ್ಯಪುರುಷರ ಚಿತ್ರದಲ್ಲಿ ಇರುವುದನ್ನು ನೋಡಿದ್ದೇನೆ.

'ಕ್ವಿಟ್ ಇಂಡಿಯಾ' ಘೋಷಣೆಯಾದ ಮಾರನೇ ಬೆಳಗ್ಗೆ ನಾನು ಮಾತುಂಗಕ್ಕೆ ಹೋಗಿದ್ದೆ. ಅಲ್ಲಿ ಗಾಂಧೀಜಿ ಮತ್ತು ವರ್ಕಿಂಗ್ ಕಮಿಟಿ ಸದಸ್ಯರ ಬಂಧನ ವಾರ್ತೆಯನ್ನು ರೇಡಿಯೋ ಬಿತ್ತರಿಸಿತು. ಕೂಡಲೇ ನಾನಿದ್ದ ಹೋಟೆಲಿಗೆ ಹಿಂದಿರುಗಿ ಹೊರಟೆ. ಸ್ವಲ್ಪ ದೂರದಲ್ಲೇ ಟ್ರಾಂಗಳು ನಿಲ್ಲಿಸಲ್ಪಟ್ಟಿದ್ದವು. ಜನಸಮೂಹದ ಮೇಲೆ ಪೋಲೀಸರು ಲಾಠೀ ಪ್ರಹಾರ ಮಾಡುತ್ತಿದ್ದರು; ಟ್ರಾಂಗಳ ಮೇಲೆ ಕಲ್ಲು ಬೀಳಲಾಗುತ್ತಿತ್ತು. ನಾನು ಟ್ರಾಂ ಇಳಿದು ಬೇರೊಂದು ತೊಂದರೆಯಿಲ್ಲದ ಮಾರ್ಗದಲ್ಲಿ ನಡೆದು, ಮತ್ತೊಂದು ಟ್ರಾಂನಲ್ಲಿ ಕುಳಿತು ಮೈಸೂರು ಪ್ರತಿನಿಧಿಗಳ ಬಿಡಾರ ಮಾಡಿದ್ದ ಸ್ಥಳಕ್ಕೆ ಬಂದೆನು. ಅಲ್ಲಿ ಪರಿಸ್ಥಿತಿಯ ಬಗ್ಗೆ ಚರ್ಚೆ ನಡೆಯಿತು. ಅವರಲ್ಲಿ ಕಮಲಾದೇವಿ ಚಟ್ಟೋಪಾಧ್ಯಾಯರೂ ಸೇರಿದ್ದರು. ಎಲ್ಲರೂ ಆ ಕ್ಷಣಕ್ಕೆ ಹಿಂದಕ್ಕೆ ವಾಪಸ್ಸು ಹೋಗಬೇಕೆಂದು ನಿರ್ಧಾರವಾಯಿತು. ಸರಿ, ಹೊರಟೆ. ವಾಪಸ್ಸು ಹೋಗುವಾಗ ನಾನು ರಾಮಚಂದ್ರರಾಯರ ಜೊತೆ ಹೋಗಲು ರೈಲು ತಪ್ಪಿತು; ಆದ್ದರಿಂದ ಬೆಂಗಳೂರಿನ ಕಡೆಗೆ ಬರುವ ಗುಂತಕಲ್ ರೈಲನ್ನು ಹಿಡಿದೆ. ಅಲ್ಲಿಗೆ ಮೈಸೂರಿನ ಮುಖಂಡರೆಲ್ಲರೂ ಬಂದಿದ್ದರು. ಪ್ರಯಾಣ ಮಾಡುತ್ತಿದ್ದಾಗ ದಾರಿಯಲ್ಲೇ ಸ್ಟೇಷನ್ನುಗಳಲ್ಲಿ ಅನೇಕರನ್ನು ದಸ್ತಗಿರಿ ಮಾಡಲಾಯಿತು. ಅನಂತಪುರದಲ್ಲಿ ಎನ್. ಸಂಜೀವರೆಡ್ಡಿಯವರು ಬಂಧಿತರಾದರು. ನಾವು ದೊಡ್ಡಕುರುಗೋಡು ತಲುಪಿದಾಗ ಮೈಸೂರಿನಲ್ಲಿ ಟಿ. ಮರಿಯಪ್ಪ ಮುಂತಾದವರ ಬಂಧನದ ಸುದ್ದಿ ಕೇಳಿಬಂತು. ಮುಂದೆ ಯಶವಂತಪುರದಲ್ಲಿ ಭಾಷ್ಯಂ ಮುಂತಾದವರ ಬಂಧನವಾಯಿತು. ನಾನು ಈ ಗಾಡಿ ಬಿಟ್ಟು ಬೇರೆ ಗಾಡಿಯಲ್ಲಿ ಕುಳಿತುಬಿಟ್ಟೆ. ಆದ್ದರಿಂದ ಅಲ್ಲಿ ನನ್ನ ಬಂಧನವಾಗಲಿಲ್ಲ. ಬೆಂಗಳೂರಿಗೆ ಬಂದಮೇಲೆ ಅಲ್ಲಿ ಚಳವಳಿ ಜೋರಾಗಿದ್ದುದನ್ನು ಕಂಡೆ. ಅಶ್ವಾರೋಹಿ ಪೋಲೀಸರು ಜನರನ್ನು ಚದುರಿಸುತ್ತಿದ್ದರು. ನಾನು ಅಲ್ಲಿ ಒಂದೆರಡು ದಿನಗಳಿದ್ದು ಮೈಸೂರಿಗೆ ಬಂದೆ. ಅಷ್ಟುಹೊತ್ತಿಗೆ ಇಲ್ಲಿದ್ದವರೆಲ್ಲರನ್ನೂ ಬಂಧಿಸಿದ್ದರು. ಕಾಂಗ್ರೆಸ್ ಕಛೇರಿ ತೆರವಾಗಿತ್ತು. ಮುಂದೆ ಮಾಡತಕ್ಕ ವಿಚಾರವನ್ನು ಕುರಿತು ದಸ್ತಗಿರಿಯಾಗದೆ ಇದ್ದ ಕೆಲವು ಪ್ರಮುಖರೊಡನೆ ಮಾತುಕತೆ ನಡೆಸಿದೆ. ನಾನು ಬಂದ ಸುಳಿವು ಗೊತ್ತಾಗಿ ಪೋಲೀಸರು ನನ್ನನ್ನು ಹಿಡಿದರು. ಹದಿನಾಲ್ಕು ತಿಂಗಳು ಡಿಟೆನ್ಷನ್ ಆಯಿತು.

ನಾನು ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದ ಸಮಯದಲ್ಲಿ ಆರ್. ಎಸ್. ಹುಕ್ಕೇರಿಕರ್ ಅನಂತರ ಗುದ್ಲೆಪ್ಪ ಹಳ್ಳಿಕೇರಿಯವರೂ ಪ್ರಾಂತೀಯ ಕಾಂಗ್ರೆಸ್ ಕಾರ್ಯದರ್ಶಿಗಳಾಗಿದ್ದರು. ಆ ಅವಧಿಯಲ್ಲಿ ನಾಡಿನ ಕೆಲವು ಪ್ರಮುಖರು ಇಲ್ಲಿಗೆ ಬಂದಿದ್ದರು. ಅವರಲ್ಲಿ ರಾಮದಾಸ್ ಪಂತುಲು, ಮೌಲನಾ ಜಾಫರ್ ಅಲಿ ಖಾನ್, ಪಂಜಾಬಿನ ಅರ್ವಿನ್ ಮುಂತಾದವರು ಇದ್ದರು. ಅವರುಗಳ ಭಾಷಣವನ್ನು ಏರ್ಪಡಿಸಿದ್ದೆ. ಮೈಸೂರಿನಲ್ಲಿ ಕಾಂಗ್ರೆಸ್ ರಾಜಕೀಯ ಚಟುವಟಿಕೆಗಳಲ್ಲಿ ಪ್ರವೇಶಿಸ ಬೇಕೆಂದು ಗೊತ್ತಾದ ಕೂಡಲೇ ಇಲ್ಲಿ 'ತ್ರಿಮೂರ್ತಿ'ಗಳ ಸಮಿತಿಯೊಂದನ್ನು ಸ್ಥಾಪಿಸ ಲಾಯಿತು. ಅವರ ಪ್ರಚಾರವು ಸರ್ಕಾರಕ್ಕೆ ಹಿಡಿಸಲಿಲ್ಲವಾಗಿ ಅವರನ್ನು ಬಂಧಿಸ ಲಾಯಿತು. ಅನಂತರ ಕೆ. ಟಿ. ಭಾಷ್ಯಂರವರನ್ನು ಸರ್ವಾಧಿಕಾರಿಯನ್ನಾಗಿ ಮಾಡ ಲಾಯಿತು. ಅವರನ್ನು ಪ್ರಜಾಪ್ರತಿನಿಧಿ ಸಭೆ ಸೇರಿದ್ದ ಕಾಲದಲ್ಲಿ ಬಂಧಿಸಲಾಯಿತು. ಆ ದಿನವೇ ಪ್ರಜಾ ಸಂಯುಕ್ತ ಪಕ್ಷದವರು ವಿಧಿವತ್ತಾಗಿ ಕಾಂಗ್ರೆಸ್ಸಿಗೆ ಸೇರಲು ನಿರ್ಧರಿಸಿದರು. ಆ ಸಭೆಯಲ್ಲಿ ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದ ನಾನು ಭಾಗವಹಿಸಿದ್ದೆನು. ಕೆ. ಚಂಗಲರಾಯ ರೆಡ್ಡಿಯವರ ಅಧ್ಯಕ್ಷತೆಯಲ್ಲಿ ಮೈಸೂರು ಕಾಂಗ್ರೆಸ್ ಬೋರ್ಡನ್ನು ಸ್ಥಾಪಿಸಲಾಯಿತು. ಅದರಲ್ಲಿ ಮೈಸೂರಿನ ಪರವಾಗಿ ಆರಿಸಲ್ಪಟ್ಟ ಇಬ್ಬರು ಪ್ರತಿನಿಧಿಗಳಲ್ಲಿ ನಾನೂ ಒಬ್ಬನಾಗಿದ್ದೆ. ಅಲ್ಲಿ 'ತ್ರಿಮೂರ್ತಿ'ಗಳನ್ನು ಬಿಡುಗಡೆ ಮಾಡುವವರೆಗೆ ಸರ್ಕಾರದೊಡನೆ ಸಂಧಾನ ನಡೆಸಕೂಡದೆಂದು ವಾದಿಸಿದ್ದೆ. ಮುಂದೆ ಚಳವಳಿ ತೀವ್ರಗೊಂಡು ಎಚ್. ಸಿ. ದಾಸಪ್ಪನವರು ಮೊದಲಾದ ಮುಖಂಡರು ದಸ್ತಗಿರಿಯಾದರು. ಅವರುಗಳೆಲ್ಲಾ ಕೆಲವು ಕಾಲದನಂತರ ಬಿಡುಗಡೆಯಾದರು. ಅನಂತರ ಹರಿಪುರ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿದ್ದೆನು.

'ಕ್ವಿಟ್ ಇಂಡಿಯಾ' ಚಳವಳಿಯ ಡಿಟೆನ್ಷನ್ ಮುಗಿದಮೇಲೆ ವಿಶೇಷವಾದ ಚಟುವಟಿಕೆಗಳು ನಡೆಯಲಿಲ್ಲ. ಭಾರತಕ್ಕೆ ಬ್ರಿಟನ್ ಸ್ವಾತಂತ್ರ್ಯ ಕೊಟ್ಟಿತು. 'ಮೈಸೂರ್ ಚಲೋ', 'ಅರಮನೆ ಸತ್ಯಾಗ್ರಹ' ನಡೆದವು. ಆ ಚಳವಳಿಯನ್ನು ಮುಂದುವರಿಸಲು ರಾಜ್ಯದ ಹೊರಗೆ ಹೋಗುವ ಉದ್ದೇಶದಿಂದ ನಾನು ಮೈಸೂರಿನಿಂದ ಹೋಗಿದ್ದೆ. ಅಷ್ಟರಲ್ಲೇ ಜವಾಬ್ದಾರಿ ಸರ್ಕಾರ ಬಂದಿತು.

ನಾನು ಹುಟ್ಟಿದ ಸ್ಥಳ ಸಕಲೇಶಪುರ; ವ್ಯಾಸಂಗ ಮಾಡಿದ್ದು ಹಾಸನ; ಸೇರಿದ್ದು ಮೈಸೂರು; ವೃತ್ತಿ ಪತ್ರಿಕೋದ್ಯಮ.—1933–34ರಲ್ಲಿ ನವಜೀವನ ಪತ್ರಿಕೆಯಲ್ಲಿ ಕೆಲವು ಕಾಲ ಉಪಸಂಪಾದಕನಾಗಿದ್ದೆ. ಅದಾದಮೇಲೆ ಮೈಸೂರಿನಲ್ಲಿ ಇಂಡಿಯನ್ ಎಕ್ಸ್ ಪ್ರೆಸ್ ಪತ್ರಿಕೆಯ ಬಾತ್ಮೀದಾರನಾಗಿದ್ದೆ. ನಾನು ಹ್ಯಾಮಿಲ್ಟನ್ ಸತ್ಯಾಗ್ರಹದಲ್ಲಿ ಭಾಗ ವಹಿಸಬೇಕಾಗಿದ್ದುದರಿಂದ ಆ ಪತ್ರಿಕೆಯ ಕೆಲಸವನ್ನು ಮತ್ತೊಬ್ಬ ಸ್ನೇಹಿತನಿಗೆ ವಹಿಸಿ ಕೊಟ್ಟೆ. ಮುಂದೆ ಮತ್ತೆ ಅದರ ಗೊಡವೆಗೆ ಹೋಗಲಿಲ್ಲ. ಈಗ 'ಸಾಧ್ವಿ' ಪತ್ರಿಕೆಯಲ್ಲಿ ಇದ್ದೇನೆ. ಮಧ್ಯೆ ಕೆಲವು ದಿನಗಳವರೆಗೆ 'ಜನಧ್ವನಿ' ಎಂಬ ವಾರಪತ್ರಿಕೆಯ ಸಂಪಾದಕ

ಆಗಿದ್ದೆ. ಆ ಮೊದಲು ಸ್ವಂತ ಪತ್ರಿಕೆ ಹೊರಡಿಸಲು ಪ್ರಯತ್ನಿಸಿದ್ದೆ. ಆದರೆ ಸರ್ಕಾರದ ಅನುಮತಿ ದೊರೆಯಲಿಲ್ಲ.

ಮೈ.ಮೈ. 9 | ## ಎಂ. ಆರ್. ವೆಂಕಟರಾಮಯ್ಯ

ವಯಸ್ಸು : 65  ಉದ್ಯೋಗ : ಸರ್ವೋದಯ ಸಂಘದಲ್ಲಿ  ವಿಳಾಸ : 70/1, ಮಾಡೆಲ್ ಹೌಸ್ ಬೀದಿ, ಬಸವನಗುಡಿ, ಬೆಂಗಳೂರು–4

---



ಮಂಡ್ಯ ತಾಲ್ಲೂಕು ಮುದಗಂದೂರು ಗ್ರಾಮದಲ್ಲಿ ಹುಟ್ಟಿದ ನಾನು ಮೈಸೂರು ಪಟ್ಟಣದಲ್ಲಿ ವಿದ್ಯಾಭ್ಯಾಸ ಮಾಡಿದೆ. ಸ್ಕೂಲ್ ಫೈನಲ್ ಅನಂತರ ಕಾಲೇಜಿಗೆ ಸೇರದಿದ್ದುದಕ್ಕೆ ಬಡತನವೇ ಪ್ರಮುಖ ಕಾರಣ. ಹೈಸ್ಕೂಲಿನಲ್ಲಿದ್ದಾಗಲೇ ವೈಯಕ್ತಿಕ ಹಾಗೂ ದೇಶದ ಬಡತನದ ಚಿಂತೆ. ಇವೆಲ್ಲಕ್ಕೂ ಮಾತೃಭೂಮಿಯ ಪಾರತಂತ್ರ್ಯವೇ ಕಾರಣವೆಂದು ನಂಬಿಕೆ. ಸ್ವಾತಂತ್ರ್ಯಕ್ಕಾಗಿ ರಾಷ್ಟ್ರೀಯ ಆಂದೋಲನ, ಜನಜಾಗೃತಿಗಾಗಿ ನಡೆಯುತ್ತಿದ್ದ ಅನೇಕ ಚಳವಳಿಗಳು, ದೇಶಭಕ್ತರನೇಕರ ಭಾಷಣಗಳು ಇವುಗಳಿಂದ ಸ್ಫೂರ್ತಿ ; ಸ್ವದೇಶಿ, ಖಾದಿ ಚಳವಳಿ—ಇವೇ ನಮ್ಮ ಜನಗಳ ಉನ್ನತಿಗೆ ಏಕೈಕಮಾರ್ಗವೆಂದು ಚಿಂತನೆ. ಇವೆಲ್ಲಾ ನನ್ನ ಮನಃಪರಿವರ್ತನೆಗೆ ಕಾರಣ.

1928ರಲ್ಲಿ ಓದು ಬಿಟ್ಟನಂತರ ದೇಶಕಾರ್ಯಕ್ಕಾಗಿ ದುಡಿಯಲು ಸಂಕಲ್ಪಿಸಿದ್ದರೂ, ಜೀವನನಿರ್ವಹಣೆಗಾಗಿ ದಿ|| ವೀರಕೇಸರಿ ಸೀತಾರಾಮಶಾಸ್ತ್ರಿಗಳ ಪತ್ರಿಕಾ ಸಂಸ್ಥೆಯಲ್ಲಿ ಕೆಲಸಕ್ಕೆ ಸೇರಿದೆನು. ಅಲ್ಲಿನ ವಾತಾವರಣ, ಮಾರ್ಗದರ್ಶನಗಳು ನನ್ನ ಧ್ಯೇಯಕ್ಕೆ ಅನುಗುಣವಾಗಿದ್ದುದರಿಂದ ಬಿಡುವಿನ ಕಾಲದಲ್ಲಿ ಸಾರ್ವಜನಿಕ ಕೆಲಸಕ್ಕೆ ಅವಕಾಶ ಸಿಕ್ಕಿತು. ಅಖಿಲ ಮೈಸೂರು ಯುವಜನ ಸಮ್ಮೇಳನದಲ್ಲಿ ಸ್ವಯಂಸೇವಕನಾಗಿ ಕೆಲಸಮಾಡಿದ್ದೆ. ಕಾಂಗ್ರೆಸ್ ಕಛೇರಿಯಲ್ಲೂ ಸೇವೆ ಸಲ್ಲಿಸುತ್ತಲಿದ್ದೆ. 1930ರಲ್ಲಿ ಅಸಹಕಾರ ಚಳವಳಿ, ಉಪ್ಪಿನ ಸತ್ಯಾಗ್ರಹದ ಕಾಲದಲ್ಲಿ ಬ್ರಿಟಿಷ್ ಇಂಡಿಯಾ ಪ್ರಾಂತ್ಯಕ್ಕೆ ಹೋಗಿ ಭಾಗವಹಿಸಲು ಮೂರು ನಾಲ್ಕು ಜನ ಸ್ವಯಂಸೇವಕರೊಡನೆ ಹುಬ್ಬಳ್ಳಿಗೆ ಹೋದೆನು. ಅಲ್ಲಿ ಡಾ|| ಹರ್ಡೀಕರ್‌ರವರ

ಸೂಚನೆಯಂತೆ ಹಳೇಹುಬ್ಬಳ್ಳಿ ಶಿಬಿರದಲ್ಲಿ ಕೆಲವು ಕಾಲವಿದ್ದೆ. ಗುಜರಾತಿನ ಧಾರ್ಸನ ಉಪ್ಪಿನ ಕೋಠಿಗೆ ಮುತ್ತಿಗೆಹಾಕಲು ಹೋಗುವ ಸಲುವಾಗಿ ನಡೆಸಿದ್ದ (ಡಾ|| ಕಬ್ಬೂರ್, ಕೆರಮರಕರ್ ಮುಂತಾದವರ ಮೇಲ್ವಿಚಾರಣೆ) ಧಾರವಾಡದ ಶಿಬಿರದಲ್ಲಿ ವಾರವಿದ್ದೆ. ಅಷ್ಟರಲ್ಲಿ ಮುತ್ತಿಗೆ ಕಾರ್ಯಕ್ರಮ ನಿಂತಿದ್ದರಿಂದ ಈಚಲ ಮರ ಕಡಿಯುವ ಕಾರ್ಯದಲ್ಲಿ ಅದೇ ಜಿಲ್ಲೆಯ ಹಳ್ಳಿಗಳಲ್ಲಿ ಭಾಗವಹಿಸಿದ್ದೆವು. ಜಿಲ್ಲಾಧಿಕಾರಿಯು ಬಂದು 10-15 ಜನರನ್ನು ಬಂಧಿಸಿದರು. ನಂತರ ನಮ್ಮೆಲ್ಲರನ್ನೂ ಧಾರವಾಡಕ್ಕೆ ಕರೆದುಕೊಂಡು ಬಂದು ಬಿಡುಗಡೆ ಮಾಡಿದರು. ಅಷ್ಟರಲ್ಲಿ ಸೊಲ್ಲಾಪುರದಲ್ಲಿ ಮಾರ್ಶಲ್ ಲಾ ಜಾರಿಗೆ ಬಂದಿತ್ತು, ಆ ಕಾಯಿದೆಯನ್ನು ಮುರಿಯುವ ಕಾರ್ಯಕ್ರಮದಂತೆ ಮೂರುನಾಲ್ಕು ಜನರ ತಂಡದೊಡನೆ ಬಿಜಾಪುರಕ್ಕೆ ಹೋದೆನು. ಡಿ|| ಕೌಜಲಗಿ ಶ್ರೀನಿವಾಸರಾಯರ ನಿರ್ದೇಶನದ ಪ್ರಕಾರ ಅಲ್ಲಿಯೇ ವಿಠೋಬ ದೇವಸ್ಥಾನದಲ್ಲಿ ಒಂದು ಶಿಬಿರ ತೆಗೆದು ಸ್ವದೇಶಿ ಪ್ರಚಾರ, ಮದ್ಯಪಾನ ನಿರೋಧ ಚಳವಳಿ, ಈಚಲು ಕಡಿಯುವ ಕಾರ್ಯಕ್ರಮ, ಪ್ರಭಾತ್‌ಫೇರಿ, ಸಭೆ ಮುಂತಾದ ಕಾರ್ಯಕ್ರಮಗಳನ್ನು ನಡೆಸುತ್ತಿದ್ದೆವು. ಆ ಸಂದರ್ಭದಲ್ಲಿ ನನಗೆ ಸೇಂದಿ ಗಿಡ ಕಡಿಯಲು ಪ್ರೋತ್ಸಾಹ ಕೊಟ್ಟು, ಸರ್ಕಾರದ ಆಸ್ತಿ ಪಾಸ್ತಿಗಳಿಗೆ ನಷ್ಟಮಾಡಿದೆನೆಂದು ಐದೂವರೆ ತಿಂಗಳ ಕಾಲ ಶಿಕ್ಷೆ ಆಯಿತು ; ದಂಡವೂ ವಿಧಿಸಲ್ಪಟ್ಟಿತು. ಆದರೆ ದಂಡ ಕೊಡಲಿಲ್ಲ. ವಿಜಾಪುರ ಜೈಲಿನಲ್ಲಿ ಕೆಲವು ದಿನದನಂತರ ಸುಮಾರು ನೂರು ಜನ ಬಂದಿಗಳ ಜೊತೆ ಯರವಾಡ ಸೆಂಟ್ರಲ್ ಬಂದೀಖಾನೆಗೆ ಕಳುಹಿಸಿದರು. ಆಗ ಆ ಜೈಲಿನಲ್ಲಿ ಮಹಾತ್ಮಾ ಗಾಂಧಿ, ವಲ್ಲಭಭಾಯಿ ಪಟೇಲ್, ಸರೋಜಿನಿ ನಾಯಿಡು ಮುಂತಾದ ದೇಶದ ನಾಯಕರುಗಳಿದ್ದುದರಿಂದ ಅಲ್ಲಿನ ವಾತಾವರಣ ನಮ್ಮೆಲ್ಲರಿಗೂ ಉತ್ತೇಜನಕರವಾಗಿತ್ತು. ವಿನಾಕಾರಣ ದಂಡಾಬೇಡಿ, ಏಕಾಂತ ಕೊಠಡಿ ವಾಸ ಮುಂತಾದ ಶಿಕ್ಷೆಗಳನ್ನು ನನಗೆ ವಿಧಿಸಿ ಇತರ ಬಂದಿಗಳ ಸಹವಾಸದಿಂದ ಕೆಲಕಾಲ ದೂರವಿಟ್ಟರು. ಮೈಸೂರು ಸಂಸ್ಥಾನದಿಂದ ನನ್ನಂತೆ ಸ್ವಯಂಸೇವಕರಾಗಿ ಬಂದಿದ್ದ 20-30 ಜನರೊಡನೆ ಅಲ್ಲಿ ಸೇರಿಕೊಂಡೆನು. ಹಾಲಿ ವಿಧಾನಸಭಾ ಸದಸ್ಯ ಟಿ. ಆರ್. ಶಾಮಣ್ಣ, ಅಲ್ಲದೆ ರುಮಾಲೆ ಚನ್ನಬಸವಯ್ಯ, ಚಂಗಲ್ವರಾಯ, ಮೊದಲಿಯಾರ್, ಪ್ರೊ|| ಎಲ್. ವಿ. ರಾಜಗೋಪಾಲ್, ಟಾಮ್ಸೊ ಕಂಪನಿಯ ನಾರಾಯಣಮೂರ್ತಿ, ನ್ಯಾಷನಲ್ ಸ್ಕೂಲಿನ ಸಂಸ್ಕೃತ ಪಂಡಿತ ಗೊ.ರಾ. ಮುಂತಾದವರಿದ್ದರು. ಅಲ್ಲಿಂದ ವಿಸಾಪುರದ ಕ್ಯಾಂಪ್ ಜೈಲಿಗೆ ನಮ್ಮನ್ನು ವರ್ಗಾಯಿಸಿದರು. ಜೈಲುಶಿಕ್ಷೆ ಪೂರೈಸಿದನಂತರ ನನ್ನನ್ನು ಮತ್ತೆ ಬೆಂಗಳೂರಿಗೆ ಕರೆದುಕೊಂಡು ಬಂದುಬಿಟ್ಟರು.

1931ನೇ ಮಾರ್ಚ್ ತಿಂಗಳ ಕೊನೆಯಲ್ಲಿ ಕರಾಚಿಯಲ್ಲಿ ನಡೆದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್ ಸಮ್ಮೇಳನಕ್ಕೆ ಮೈಸೂರಿನಿಂದ ಪ್ರತಿನಿಧಿಯಾಗಿ ಹೋಗಿದ್ದೆನು. ನನ್ನ ಜೊತೆ ಕೆ. ಜೀವಣ್ಣರಾವ್, ಸಿ. ರಾಜಗೋಪಾಲ್, ಅಚ್ಯುತನ್, ಗೋವರ್ಧನ್,

ಎಲ್. ಎಸ್. ಅಯ್ಯರ್, ಕೆ. ಟಿ. ಭಾಷ್ಯಂ ಮತ್ತು ಎಸ್. ಆರ್. ಎಸ್. ರಾಘವನ್ ಮುಂತಾದವರು ಬಂದಿದ್ದರು. ಮುಂಬೈನಿಂದ ಕರಾಚಿಗೆ ಹಡಗಿನಲ್ಲಿ ಹೋದೆವು. ಆಗ ಮಾರ್ಚ್ 21. ಭಗತ್‌ಸಿಂಗ್, ಸುಖ್‌ದೇವ್, ರಾಜಗುರು ಇವರುಗಳಿಗೆ 'ಫಾಶಿ' ಶಿಕ್ಷೆ ಕೊಟ್ಟರೆಂದು ವರ್ತಮಾನ ಬಂತು; ಹಡಗಿನಲ್ಲೇ ಸಂತಾಪಸೂಚಕ ಸಭೆ ನಡೆಸಿದೆವು. ಇದಕ್ಕೆ ಮೈಸೂರು ಪ್ರತಿನಿಧಿಗಳೇ ಕಾರಣ. ಕರಾಚಿ ಕಾಂಗ್ರೆಸ್ ನಂತರ ಬೆಂಗಳೂರಿಗೆ ಬಂದು ತಾಯಿನಾಡು ರಾಮಯ್ಯನವರ ಜೊತೆ ಕೆಲಕಾಲ ಕೆಲಸಮಾಡಿದೆ.

ಕರ್ನಾಟಕ ಚರಕಾ ಸಂಘದ ಕಾರ್ಯದರ್ಶಿಯಾಗಿದ್ದ ದಿ|| ಕೌಜಲಗಿ ಹಣ ಮಂತರಾಯರ ಪ್ರೇರಣೆ, ವಿಶ್ವಾಸದಿಂದ ಅಖಿಲ ಭಾರತ ಚರಕಾ ಸಂಘದ ಬೆಂಗಳೂರು ಕೋಟೆ ಖಾದೀ ವಸ್ತ್ರಾಲಯದಲ್ಲಿ ಕೆಲಸಮಾಡಲು ಸೇರಿದೆ. 1932ರಿಂದ ಚಿಕ್ಕ ಮಗಳೂರು ಶಾಖೆಯಲ್ಲಿ ಕೆಲಸಮಾಡುತ್ತಿದ್ದೆ. ಆಗ ಮುಖ್ಯವಾದ ಖಾದಿ ಕೆಲಸದ ಜೊತೆಗೆ ಕಾಂಗ್ರೆಸ್ ಕೆಲಸದಲ್ಲಿ ಅಂದರೆ ಬ್ರಿಟಿಷ್ ಇಂಡಿಯಾದಲ್ಲಿ ನಡೆಯುತ್ತಿದ್ದ ಚಳವಳಿಗೆ ಬೆಂಬಲಿಗನಾಗಿರುತ್ತಿದ್ದೆ. 1933ರಲ್ಲಿ ದಿ|| ಹೊಸಕೊಪ್ಪ ಕೃಷ್ಣರಾಯರು ಕಡೂರು ಜಿಲ್ಲಾ ಬೋರ್ಡ್ ಪರವಾಗಿ ಪ್ರಥಮ ಬಾರಿ ನಡೆಸಿದ ಅ.ಭಾ. ಖಾದೀ ಗ್ರಾಮೋದ್ಯೋಗ ಪ್ರದರ್ಶನದಲ್ಲಿ ಖಾದೀ ವಿಭಾಗದಲ್ಲಿ ಮೇಲ್ವಿಚಾರಕನಾಗಿದ್ದೆ. ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ ಕಮಿಟಿಗಳಿರಲಿಲ್ಲ. ಮೆಂಬರುಗಳನ್ನು ಮಾಡಿಸಿ ಧಾರವಾಡದಲ್ಲಿನ ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿ ಆಫೀಸಿನ ಮೂಲಕ ಕಾಂಗ್ರೆಸ್ ಕೆಲಸವನ್ನು ಆ ಜಿಲ್ಲೆಯಲ್ಲಿ ನಡೆಸುತ್ತಿದ್ದೆನು. ಸಂಸ್ಥಾನ ಸರ್ಕಾರಕ್ಕೆ ವಿರೋಧವಾಗಿ ರಾಜಕೀಯ ಕೆಲಸಗಳನ್ನು ಮಾಡಲು ಬಹಳ ಕಷ್ಟವಾಗುತ್ತಿತ್ತು. ಅನೇಕ ಸಾರಿ ವೈಯಕ್ತಿಕ 144ನೇ ಸೆಕ್ಷನ್ ಪ್ರಕಾರ ನೋಟೀಸುಗಳನ್ನು ನನ್ನ ಮೇಲೆ ಜಾರಿಮಾಡಿದ್ದರು. ಮುಂದೆ ಬಿಹಾರದಲ್ಲಿ ಭೂಕಂಪವಾದಾಗ ಪರಿಹಾರನಿಧಿಯನ್ನು ಚಿಕ್ಕಮಗಳೂರಿನಲ್ಲಿ ಸಂಗ್ರಹಿಸಿ ಸುಮಾರು ನಗದು 10,000 ರೂ. ಮತ್ತು ನೂರು ಚೀಲಪಷ್ಟು ಉಡುಪು ಇವುಗಳನ್ನು ಸಂಗ್ರಹಿಸಿ ಪರಿಹಾರ ಸಮಿತಿಗೆ ಕಳುಹಿಸಿಕೊಟ್ಟೆವು. ಬೆಂಗಳೂರು ಬಿಟ್ಟರೆ ಆ ಜಿಲ್ಲೆಯದೇ ಹೆಚ್ಚು ಮೊತ್ತವಾಗಿತ್ತು. ಅನಂತರ ಬಾಬೂ ರಾಜೇಂದ್ರ ಪ್ರಸಾದರು ಕಾಂಗ್ರೆಸ್ ಅಧ್ಯಕ್ಷರಾಗಿ, ಕಾರ್ಯದರ್ಶಿ ಕೃಪಲಾನಿಯವರೊಡನೆ ಮಂಗಳೂರಿನಿಂದ ವಾಪಸ್ಸು ಹೋಗುವಾಗ ಚಿಕ್ಕಮಗಳೂರಿಗೆ ಬಂದು, ನಮ್ಮ ಖಾದೀ ವಸ್ತ್ರಾಲಯಕ್ಕೆ ಭೇಟಿಕೊಟ್ಟು, ಸಂತೋಷಪಟ್ಟರು.

ಮುಂದೆ ಫೈಜಪುರ್ ಕಾಂಗ್ರೆಸ್ಸಿಗೆ ಪ್ರತಿನಿಧಿಯಾಗಿ ಹೋಗಿದ್ದೆ. ರಾಣೆಬೆನ್ನೂರಿನಲ್ಲಿ ನಡೆದ ಕೆ.ಪಿ.ಸಿ.ಸಿ. ಅಧಿವೇಶನದಲ್ಲಿ ಭಾಗವಹಿಸಿದ್ದೆ. ಬ್ರಿಟಿಷ್ ಇಂಡಿಯಾದಲ್ಲಿ ಸಂಯುಕ್ತ ಸರಕಾರ ಬಂದನಂತರ ಮೈಸೂರು ಸಂಸ್ಥಾನದ ಜವಾಬ್ದಾರಿ ಸರ್ಕಾರದ ಚಳವಳಿಯಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಪಾಲ್ಗೊಂಡು, ಅನೇಕ ಹೊರಗಿನ ಕಾಂಗ್ರೆಸ್ ನಾಯಕರುಗಳು ಬಂದಾಗಲೆಲ್ಲಾ, ಅವರ ಸ್ಥಾನಿಕ ಕಾರ್ಯಕ್ರಮಗಳಿಗೆ ಸಹಾಯಕನಾಗಿ

ಇರುತ್ತಿದ್ದೆ. ಮೈಸೂರು ಕಾಂಗ್ರೆಸ್ ಸ್ಥಾಪನೆಯಾದಾಗ (1938) ಅದರ ಘಟಕಗಳ ಕೆಲಸಕ್ಕೆ ಸಹಕಾರ ಕೊಡುತ್ತಿದ್ದೆ.

'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ನನ್ನನ್ನು ಚಿಕ್ಕಮಗಳೂರಿನಿಂದ ಐದು ಮೈಲಿ ಬಿಟ್ಟು ದೂರ ಹೋಗಬೇಕೆಂದೂ, ಆದರೆ ಆ ತಾಲ್ಲೂಕಿನಿಂದಾಚೆಗೆ ಹೋಗಕೂಡದೆಂದೂ ಸರ್ಕಾರ ಒಂದು ವಿಚಿತ್ರ ಆಜ್ಞೆ ಹೊರಡಿಸಿತ್ತು. ಆಜ್ಞೆಯನ್ನು ಪಾಲಿಸಲಿಲ್ಲವಾಗಿ ನನ್ನ ಮೇಲೆ ಖಟ್ಲೆ ಹಾಕಿ ಎರಡು ತಿಂಗಳು ಕಾರಾಗೃಹವಾಸದನಂತರ ಬೆಂಗಳೂರು ಜೈಲಿನಿಂದ ಬಿಡುಗಡೆ ಆಯಿತು.

ಪುನಃ ಚರಖಾ ಸಂಘದಲ್ಲಿ ಖಾದೀ ಕೆಲಸ ಮುಂದುವರಿಸಿದೆ. 1958ರಿಂದ ಕರ್ನಾಟಕ ಸರ್ವೋದಯ ಸಂಘದಲ್ಲಿ ಸಹಕಾರ್ಯದರ್ಶಿ ಮತ್ತು ಖಜಾಂಚಿಯಾಗಿ ಖಾದೀ ಕೆಲಸ ಮುಂದುವರಿಸುತ್ತಿದ್ದೇನೆ. ನಮ್ಮ ಸಂಘದಲ್ಲಿ ಖಾದಿ ಪ್ರಚಾರದ ಜೊತೆಗೆ ಸಾಹಿತ್ಯಪ್ರಚಾರ, ಹರಿಜನೋದ್ಧಾರ ಕಾರ್ಯ ಮುಂತಾದುವುಗಳು ನಡೆಯುತ್ತಿವೆ. ನನ್ನ ಮತ್ತು ನನ್ನ ತಮ್ಮಂದಿರ ಅಲ್ಪ ದೇಶಸೇವಾಕಾರ್ಯಕ್ಕೆ ನಮ್ಮ ಮಾತಾಪಿತೃಗಳ ಪ್ರೋತ್ಸಾಹ, ಸಹಕಾರವೇ ಕಾರಣವೆಂದು ಮತ್ತೊಮ್ಮೆ ಸ್ಮರಿಸಿಕೊಳ್ಳುತ್ತೇನೆ.

ಮೈ.ಮೈ. 10

## ಎಸ್. ರಜತಾದ್ರಿ

ಜನನ : 1921 ಉದ್ಯೋಗ : ರಾಜ್ಯ ವಯಸ್ಕರ ಶಿಕ್ಷಣ ಸಮಿತಿ



ಬಾಪೂರವರ 'ಭಾರತ ಬಿಟ್ಟು ತೊಲಗಿ' ಕರೆಗೆ ಓಗೊಟ್ಟು ಇಡೀ ಜನತೆ ಸರ್ಕಾರದ ವಿರುದ್ಧ ಎದ್ದು ನಿಂತಿತು. ಭಾರತದಲ್ಲಿ ಸ್ವಾತಂತ್ರ್ಯಕ್ಕೆ ಅಡ್ಡಿಯಾಗಿದ್ದವರಲ್ಲಿ ಅಧಿಕಾರಿಗಳೇ ಹೆಚ್ಚಾಗಿದ್ದರು "ಎರಡಾಣೆ ಬಿಳಿಟೋಪಿ ಹಾಕಿಕೊಂಡು ಗಾಂಧೀಜೀ ಕೀ ಜೈ ಎಂದು ಕೂಗಿದರೆ ಸ್ವಾತಂತ್ರ್ಯ ಬಂದುಬಿಡುತ್ತದೆ ....ಮಾಡೋಕೆ ಕೆಲಸವಿಲ್ಲ !" ಎಂದು ಅವರು ಮೂಗುಮುರಿಯುತ್ತಿದ್ದರು. ನಾನು ಆಗ ಮೈಸೂರಿನಲ್ಲಿ ವಿದ್ಯಾರ್ಥಿಯಾಗಿದ್ದೆ.

ಕೈಯಲ್ಲಿ ತಕಲಿ ಹಿಡಿದು ದಾರ ತೆಗೆಯುತ್ತಾ, ಒರಟಾದ ಖಾದಿ ಬಟ್ಟೆಗಳನ್ನು

ಧರಿಸಿ 'ಯಂಗ್ ಇಂಡಿಯಾ' ಪತ್ರಿಕೆ ಹಿಡಿದು ಸದಾ ಓದುತ್ತಿದ್ದ ನಾನು ಗ್ರಾಮದ ಜನರಿಗೆ ವಿಚಿತ್ರ ವ್ಯಕ್ತಿಯಾಗಿದ್ದೆ. ಅಸ್ಪೃಶ್ಯತೆ, ಪಾನನಿರೋಧ, ಖಾದಿ ಮತ್ತು ಸ್ವದೇಶೀ ಚಳವಳಿಗಳ ಬಗೆಗೆ ನನ್ನ ಅಭಿಪ್ರಾಯಗಳನ್ನು ಅವರು ಪುರಸ್ಕರಿಸುತ್ತಲೂ ಇರಲಿಲ್ಲ ; ತಿರಸ್ಕರಿಸುತ್ತಲೂ ಇರಲಿಲ್ಲ.

1942ರಲ್ಲಿ ವಿದ್ಯಾರ್ಥಿಗಳ ಉಗ್ರ ಚಳವಳಿಯಿಂದ ಮೈಸೂರಿನ ಕಾಲೇಜು ವಿದ್ಯಾರ್ಥಿನಿಲಯಗಳು ಬಂದ್ ಆದವು. ಅದರ ಫಲವಾಗಿ ಅನೇಕ ತೊಡಕುತೊಂದರೆಗಳನ್ನು ಅನುಭವಿಸಬೇಕಾಯಿತು. ಬಾಡಿಗೆ ಕೊಠಡಿಯೊಂದರಲ್ಲಿ ಸ್ವತಃ ಅಡಿಗೆ ಮಾಡಿಕೊಂಡು ಬೆಳಗಿನಿಂದ ಸಂಜೆಯವರೆಗೆ ಸ್ನೇಹಿತರೊಡನೆ ಚಳವಳಿಯಲ್ಲಿ ಭಾಗವಹಿಸುತ್ತಿದ್ದೆ. ಎಲ್ಲಿ ಗಲಭೆಯಾಗುತ್ತದೋ, ಎಲ್ಲಿ ಲಾಠಿ ಹೊಡೆತ ಬೀಳುತ್ತದೋ, ಎಲ್ಲಿ ಗುಂಡಿನೇಟು ಬೀಳುತ್ತದೋ—ಒಂದೂ ನಿಶ್ಚಿತವಾಗಿ ತಿಳಿಯದಾಗಿತ್ತು. ಆಗ ನಾನು ಸೀನಿಯರ್ ಇಂಟರ್‌ಮೀಡಿಯೆಟ್‌ಗಾಗಿ ಓದುತ್ತಿದ್ದೆ. ಕಾಲೇಜ್ ಮೈದಾನದಲ್ಲಿ ಜರುಗಿದ ವಿದ್ಯಾರ್ಥಿಗಳೇ ಹೆಚ್ಚಾಗಿದ್ದ ಬೃಹತ್ ಸಭೆಯೊಂದರಲ್ಲಿ ನಾನು ಇಪ್ಪತ್ತೆರಡು ಅಂಶಗಳ ಕಾರ್ಯಕ್ರಮವೊಂದನ್ನು ಮಂಡಿಸಿದೆ. ಅವುಗಳಲ್ಲಿ ಕೆಲವು ಭಯೋತ್ಪಾದಕ ಕಾರ್ಯಕ್ರಮಗಳಾಗಿದ್ದವು. ಅದರ ಫಲವಾಗಿ ಸಭೆ ಮುಗಿಯುತ್ತಿದ್ದಂತೆ ನನ್ನನ್ನು ದಸ್ತಗಿರಿ ಮಾಡಿದರು. ಮೈಸೂರು ಸಬ್ ಜೈಲ್‌ನಲ್ಲಿ ಡೆಟಿನ್ಯೂ ಆಗಿ ಇಟ್ಟಿದ್ದರು.

ಸೆರೆಮನೆಯಲ್ಲಿ ಸುಮಾರು 300 ವಿದ್ಯಾರ್ಥಿಗಳಿದ್ದರು. ಅಲ್ಲಿ ವಿದ್ಯಾರ್ಥಿಗಳು ತಮ್ಮದೇ ಆದ ಒಂದು ವಿದ್ಯಾ ಸಂಸ್ಥೆಯನ್ನು ನಿರ್ಮಿಸಿದ್ದರು. ವ್ಯಾಸತೀರ್ಥ ಮತ್ತು ಶಾರದಾ ಪ್ರಸಾದ್ ಮುಂತಾದ ಪ್ರತಿಭಾನ್ವಿತ ವಿದ್ಯಾರ್ಥಿಗಳು ಮುಖಂಡತ್ವ ವಹಿಸಿದ್ದರು. ಪ್ರತಿ ವಾಸದ ಕೊಠಡಿಗೂ ಒಬ್ಬ ರಾಷ್ಟ್ರವೀರನ ಹೆಸರನ್ನು ಕೊಟ್ಟಿದ್ದರು. ಟಿಳಕ, ನೆಹರು, ಗಾಂಧೀ, ಬೋಸ್, ಪಟೇಲ್, ವಿವೇಕಾನಂದ ಮುಂತಾದವರ ಹೆಸರುಗಳನ್ನು ಕೊಠಡಿಗಳ ದ್ವಾರದಲ್ಲಿ ಬರೆಯಲಾಗಿತ್ತು. ತರುಣ ಕಲಾವಿದನೊಬ್ಬ ಅವರ ಸುಂದರ ಭಾವಚಿತ್ರಗಳನ್ನು ಗೋಡೆಗಳ ಮೇಲೆ ಮೂಡಿಸಿದ್ದ. ಆಶ್ರಮದ ಮಾದರಿಯಲ್ಲಿ ಪ್ರಾರ್ಥನೆ, ವ್ಯಾಯಾಮ, ಉಪನ್ಯಾಸಗಳು, ವಿಚಾರಗೋಷ್ಠಿಗಳು ಜರುಗುತ್ತಿದ್ದವು. ಯುವಕರು ಶಿಸ್ತಿನಿಂದ ನಡೆದುಕೊಳ್ಳುತ್ತಿದ್ದರಲ್ಲದೆ ಇದ್ದುದರಲ್ಲಿಯೇ ತೃಪ್ತಿಯಿಂದಿದ್ದರು.

ಒಮ್ಮೆ ಸೆರೆಮನೆಯ ಆಂಗ್ಲೋ-ಇಂಡಿಯನ್ ಅಧಿಕಾರಿ ಜೈಲಿಗೆ ಭೇಟಿಕೊಟ್ಟುದೇ ಅನೇಕ ದುರಂತ ಘಟನಾವಳಿಗಳಿಗೆ ನಾಂದಿಯಾಯಿತು. "ಈ ಹುಡುಗರು ಎಷ್ಟು ಲವಲವಿಕೆಯಿಂದ ಇದ್ದಾರೆ! ಇವರಿಗೆ ಬೆಳಗಿನ ತಿಂಡಿ ಕಡಿಮೆ ಮಾಡಿ" ಎಂದು ಅಧಿಕಾರಿ ವ್ಯಂಗ್ಯವಾಗಿ ಟೀಕಿಸಿದ. ವಿದ್ಯಾರ್ಥಿಗಳು ಪ್ರತಿಭಟಿಸಿದರು. ಜೈಲಿನ ಮಗ್ಗುಲಲ್ಲಿ ಇದ್ದ ಮುಸಾಫಿರ್‌ಖಾನೆಯನ್ನೇ ಬಂಧಿತರ ವಿಚಾರಣೆಗಾಗಿ ವಿಶೇಷ ನ್ಯಾಯಾಲಯವನ್ನಾಗಿ ಪರಿವರ್ತಿಸಿದರು. ವಿದ್ಯಾರ್ಥಿಗಳು ನ್ಯಾಯಾಲಯವನ್ನೇ ಬಹಿಷ್ಕರಿಸಿದರು. ಬಾಗಿಲಲ್ಲಿ

ಧರಣಿ ಮುಷ್ಕರ ಹೂಡಿದರು. ಪರಿಸ್ಥಿತಿ ವಿಕೋಪಕ್ಕೆ ಹೋಯಿತು. ಸರ್ಕಾರವು 300 ಮಂದಿ ರಿಸರ್ವ್ ಪೋಲೀಸ್ ದಳವನ್ನು ತಂದರು. ಪೋಲೀಸ್‌ನವರನ್ನು ವಾಪಸ್ ಕರೆಸಿಕೊಳ್ಳಬೇಕೆಂದು ವಿದ್ಯಾರ್ಥಿಗಳು ಒತ್ತಾಯ ಮಾಡಿದರು. ರಾತ್ರಿ ಏಳೂವರೆ ವೇಳೆಗೆ ಲಾಠೀಛಾರ್ಜ್ ಆಜ್ಞೆ ಬಂದಿತು. ಬೋನಿನಿಂದ ಬಿಟ್ಟ ಕಾಡುಮೃಗಗಳಂತೆ ರಿಸರ್ವ್ ಪೋಲೀಸರು ವಿದ್ಯಾರ್ಥಿಗಳ ಮೇಲೆರಗಿದರು. ನಿರಾಯುಧರಾಗಿದ್ದ ವಿದ್ಯಾರ್ಥಿಗಳನ್ನು ಓಡಿಸಿಕೊಂಡು ಹೋಗಿ ಲಾಠಿಗಳಿಂದ ಬಡಿದರು. ಎಡಭಾಗದಿಂದ ಸುತ್ತಿ ಹೋಗುವ ಮಾರ್ಗದಲ್ಲಿ ನಾನಿದ್ದೆ. ಬೆನ್ನಿನ ಮೇಲೆ ಎರಡು ಏಟುಗಳು ಬಿದ್ದವು. ಪಕ್ಕದ ಕೊಠಡಿಯಲ್ಲಿ ಸೆರೆಯಿದ್ದ ಹಿರಿಯ ಕಾಂಗ್ರೆಸ್ ನಾಯಕರೊಬ್ಬರು ನನ್ನ ತೋಳು ಹಿಡಿದು ಕೊಠಡಿಯೊಳಗೆ ಎಳೆದುಕೊಂಡರು. "ನಿನಗೆ ಗೊತ್ತಿಲ್ಲವೆ ? ಅತ್ತಕಡೆಯಿಂದ ಲಾಠೀಛಾರ್ಜ್ ಆಗುತ್ತಿದೆ. ನೀನು ಎದುರಾಗಿ ಹೋಗುತ್ತಿದ್ದೀಯೆ. ಫೈರಿಂಗ್ ಆಗುವ ಸಂಭವವುಂಟು" ಎಂದು ಗದರಿದರು. ಎಲ್ಲವೂ ಮುಗಿದು ಶಾಂತವಾಗಲು ರಾತ್ರಿ 12 ಘಂಟೆಯಾಯಿತು. ಬೆಳಗಿನ ಧರಣಿ ಮುಷ್ಕರದಿಂದಾಗಿ ಊಟವಿರಲಿಲ್ಲ. ಪೋಲೀಸರ ದಾಳಿಯಿಂದ ಏನಾಗಿದೆಯೋ ಎಂಬ ಭಯ ಅವರಿಗಿತ್ತು. ನಮ್ಮನ್ನು ಅಲ್ಲಿಯೇ ಕೂಡಿ ಹಾಕಲಾಗಿತ್ತು.

ಬೆಳಗ್ಗೆ ನಾನು ಕಂಡಿದ್ದು ಯುದ್ಧರಂಗದ ದೃಶ್ಯವಾಗಿತ್ತು. ನನ್ನ ಕೊಠಡಿಯೇ ಮೊದಲನೆಯದು. ಪೋಲೀಸರು ಒಳನುಗ್ಗಿ ಸಿಕ್ಕಾಪಟ್ಟೆ ಹೊಡೆದಿದ್ದರು. ಅಲ್ಲಿದ್ದವರಲ್ಲಿ ಹೆಚ್ಚು ಮಂದಿಗೆ ಘಾಸಿಯಾಗಿತ್ತು. ಕೊಠಡಿಯಲ್ಲಿದ್ದ 22 ಮಂದಿಯಲ್ಲಿ ಮೂರು ಮಂದಿಗೆ ತಲೆ ಒಡೆದಿತ್ತು. ಬ್ಯಾರಕ್‌ನ ಎರಡೂ ಕಡೆ ರಕ್ತ ಹೆಪ್ಪುಗಟ್ಟಿ ನಿಂತಿತ್ತು. ಸೆರೆಮನೆಯ ಆಸ್ಪತ್ರೆಯಲ್ಲಿ ಸುಮಾರು 60 ಮಂದಿಗೆ ಚಿಕಿತ್ಸೆ ಮಾಡಿದರು. ತಲೆಯೊಡೆದಿದ್ದವರಿಗೆ ಹೊಲಿಗೆ ಹಾಕಿದ್ದರು. ಬೇರೆ ಕೊಠಡಿಯಲ್ಲಿದ್ದ ನನ್ನ ಮಿತ್ರ ಶಂಕರಪ್ಪನಿಗೆ ಹೆಚ್ಚು ಅಪಾಯವಾಗಿದೆ ಎಂದು ತಿಳಿಯಿತು. 8 ಘಂಟೆಗೆ ನನಗೆ ಕರೆ ಬಂದಿತು. ಶಂಕರಪ್ಪನ ಸ್ಥಿತಿ ಚಿಂತಾಜನಕವಾಗಿತ್ತು. ಮಾತನಾಡಲಾಗದಷ್ಟು ಕೆಮ್ಮು, ಎದೆ ನೋವು ; ರಕ್ತವನ್ನೇ ಕಕ್ಕುತ್ತಿದ್ದನು. ನಾನು ಭಯದಿಂದ ನಡುಗಿದೆ. ರಾತ್ರಿಯೆಲ್ಲಾ ನನ್ನನ್ನೇ ಕುರಿತು ಪ್ರಶ್ನಿಸುತ್ತಿದ್ದನಂತೆ. ನಾನು ತುಂಬಾ ಕೃಶಕಾಯದವನಾದುದರಿಂದ ನನ್ನ ಕ್ಷೇಮದ ಬಗೆಗೆ ಆತ ತುಂಬಾ ಚಡಪಡಿಸಿದ್ದನು.

ಸಿ. ಶಂಕರಪ್ಪನ ಸ್ಥಳ ಕೃಷ್ಣರಾಜ ಸಾಗರ ತಾಲ್ಲೂಕು ಕೋಳೂರು ಗ್ರಾಮ. ಅವನ ತಂದೆ ಚನ್ನಪ್ಪನವರು ಗ್ರಾಮದ ಹಿರಿಯ ವ್ಯಕ್ತಿಗಳಲ್ಲೊಬ್ಬರು. ತುಂಬಿದ ಮನೆ, ಬೇಸಾಯ ಕಸುಬು. ಬಡವರಲ್ಲದಿದ್ದರೂ ಹಣವಂತರೇನಲ್ಲ. ನಾನು ಮತ್ತು ಶಂಕರಪ್ಪ ಒಂದೇ ಶಾಲೆಯಲ್ಲಿ ಓದಿದ್ದೆವು. ಆತ ತುಂಬಾ ಸ್ಫುರದ್ರೂಪಿ; ಎತ್ತರವಾದ, ಆಕರ್ಷಕ ವ್ಯಕ್ತಿತ್ವದ ಹುಡುಗ ; ಹಳದಿ ಮಿಶ್ರಿತ ಕೆಂಪು ಮೈಬಣ್ಣ, ವಯಸ್ಸು ಇಪ್ಪತ್ತೆರಡು ; ಎತ್ತರ 5½ ಅಡಿಗಳು. ಮನೆಗೆಲಸದಲ್ಲಿ ಎತ್ತಿದ ಕೈ. ಅವನ ಗುಣ ಬಂಗಾರದಂತಹುದು,

ಮುಖದಲ್ಲಿ ಸರಳತೆ, ಮುಗ್ಧತೆ ಸಾಕಾರಗೊಂಡಿದ್ದವು. ಮೈಸೂರಿನಲ್ಲಿ ಕಷ್ಟಪಟ್ಟು ಓದಿ ಎಸ್ ಎಸ್.ಎಲ್.ಸಿ. ಮುಟ್ಟಿದ್ದ. ರಜಾ ಕಾಲದಲ್ಲಿ ದೂರದ ಹಳ್ಳಿಯಲ್ಲಿ ಶಾಲಾ ಮಾಸ್ತರನಾಗಿ ಕೆಲಸಮಾಡಿದ್ದ. ನಾನು ಸೆರೆಮನೆಗೆ ಬಂದ ಎರಡು ತಿಂಗಳ ನಂತರ ಶಂಕರಪ್ಪನ ದಸ್ತಗಿರಿಯಾಯಿತು. ನಾನಿದ್ದ ಸೆರೆಮನೆಗೇ ಬಂದ. ಶಂಕರಪ್ಪ ಒಳಗೆ ಬಂದಾಗ ತುಂಬಾ ಉತ್ಸಾಹದಿಂದ ನನ್ನನ್ನು ತಬ್ಬಿಕೊಂಡ. "ನಮ್ಮನ್ನೆಲ್ಲಾ ಜೈಲಿಗೆ ಕಳುಹಿಸಿ ನೀನು ಇದುವರೆಗೆ ಸುಖವಾಗಿದ್ದೆಯಾ ?" ಎಂದು ನಾನು ಅಣಕ ಮಾಡಿದೆ. "ಇಲ್ಲಯ್ಯಾ, ಈಗ ಬಂದಿದ್ದೇನೆ ನೋಡು" ಎಂದು ಅವನು ಕೊಟ್ಟ ಉತ್ತರ ಈಗಲೂ ಸ್ಥಿರವಾಗಿ ನನ್ನ ಮನದಲ್ಲಿ ಬೇರೂರಿದೆ.

ಸುಮಾರು ಹತ್ತು ಘಂಟೆಯ ವೇಳೆಗೆ ಶಂಕರಪ್ಪನ ಸ್ಥಿತಿ ವಿಷಮಿಸಿತು. ಒಂದು ಪೋಸ್ಟ್‌ಕಾರ್ಡ್ ತಂದು, ತುಂಬಾ ಖಾಯಿಲೆಯಾಗಿದೆ ಎಂದೂ, ಕೂಡಲೇ ಬರಬೇಕೆಂದೂ ಅವನ ತಂದೆಗೆ ಕಾಗದ ಬರೆದು ಸೆರೆಮನೆಯಿಂದ ಹೊರಗೆ ಹೋಗುವವರ ಕೈಯಲ್ಲಿ ಗುಟ್ಟಾಗಿ ಕೊಟ್ಟು ಕಳುಹಿಸಿ ಪೋಸ್ಟ್ ಮಾಡಿಸಿದೆ.

ಸರ್ಕಾರದವರು ಒಬ್ಬ ಯೂರೋಪಿಯನ್ ಡಾಕ್ಟರನ್ನು ಕರೆಯಿಸಿದರು. ಅವರು ಶಂಕರಪ್ಪನನ್ನು ಪರೀಕ್ಷಿಸಿ ಎದೆಯ ಮೇಲೆ ಬಲವಾದ ಏಟುಗಳು ಬಿದ್ದಿವೆಯೆಂದೂ, ಕೂಡಲೇ ಕೆ.ಆರ್. ಆಸ್ಪತ್ರೆಗೆ ಸಾಗಿಸಬೇಕೆಂದೂ ತಿಳಿಸಿದರು. ಅವನ ಎದೆಯ ಮೇಲೆ ಬೂಟ್ ಕಾಲಿನಿಂದ ತುಳಿಯಲಾಗಿತ್ತು ; ರಕ್ತ ನೀಲವರ್ಣಕ್ಕೆ ತಿರುಗಿತ್ತು. ಮತ್ತೆಲ್ಲಿಯೂ ಗಾಯಗಳಾಗಿರಲಿಲ್ಲ. ಅಂದು ಬೆಳಗ್ಗೆ ಯಾರೂ ತಿಂಡಿ ತಿನ್ನಲಿಲ್ಲ. ಎಲ್ಲರ ಮುಖಗಳಲ್ಲಿಯೂ ದುಗುಡ, ಕೋಪ ತುಳುಕುತ್ತಿದ್ದುವು. ಶಂಕರಪ್ಪನನ್ನು ಬೀಳ್ಕೊಡಲು ಅಂಗಳದಲ್ಲಿ ವಿದ್ಯಾರ್ಥಿಗಳ ಸಭೆ ಏರ್ಪಾಡಾಯಿತು. ಅವನನ್ನು ಸ್ಟ್ರೆಚರ್ ಮೇಲೆ ಮಲಗಿಸಿಯೇ ಹೊರತಂದರು. ಎಲ್ಲರೂ ಅವನ ಆರೋಗ್ಯಕ್ಕಾಗಿ ಪ್ರಾರ್ಥಿಸಿದರು. ಶಂಕರಪ್ಪ ಎಲ್ಲರಿಗೂ ಕೈಮುಗಿದು "ಗುಡ್ ಬೈ !" ಎಂದನು. ಹನ್ನೊಂದು ಘಂಟೆಗೆ ಪೋಲೀಸರು ಅವನನ್ನು ಆಸ್ಪತ್ರೆಗೆ ಸೇರಿಸಿದರು. ಚಿಕಿತ್ಸೆ ಫಲಕಾರಿಯಾಗಲಿಲ್ಲ. ಸುಮಾರು 1 ಘಂಟೆಯ ಸಮಯದಲ್ಲಿ ಶಂಕರಪ್ಪ ಸ್ವಾತಂತ್ರ್ಯದೇವಿಗೆ ಬಲಿಯಾದ ! ಅಮರನಾದ !

ಸರ್ಕಾರದವರು ಶಂಕರಪ್ಪನಿಗೆ ಕ್ಷಯರೋಗ ತಟ್ಟಿತ್ತೆಂದು ಸುಳ್ಳು ಹೇಳಿಕೆ ಹೊರಡಿಸಿ ಜನರ ಕಣ್ಣೊರಸಲೆತ್ನಿಸಿ ವಿಫಲರಾದರು. ಅವನ ಊರಿನಲ್ಲಿಯೇ ಶವಸಂಸ್ಕಾರವಾಯಿತು. ಅವನ ಸ್ನೇಹಿತರಿಗಂತೂ 10–12 ದಿನಗಳು ಊಟ ಸೇರಲಿಲ್ಲ ; ನಿದ್ರೆ ಹತ್ತಲಿಲ್ಲ.

ನಾವಿದ್ದ ಬ್ಯಾರಕ್‌ನಲ್ಲಿ ಒಡೆದ ತಲೆಗಳಿಂದ ಸೋರಿದ್ದ ರಕ್ತ ಹೆಪ್ಪುಗಟ್ಟಿತ್ತು. (ರಕ್ತದ ಚಕ್ಕೆಯೊಂದನ್ನು ಸ್ವಾತಂತ್ರ್ಯವೀರನ ನೆನಪಿಗಾಗಿ ಅನೇಕ ವರ್ಷಗಳವರೆಗೆ ಸಂಗ್ರಹಿಸಿ ಇಟ್ಟಿದ್ದೆ.) ಅದರ ಕಟುವಾಸನೆ, ಮತ್ತೊಂದು ಕಡೆ ನಿರ್ಲಕ್ಷಿಸಿ ಬಿಟ್ಟಿದ್ದ ಮಲ

ಮೂತ್ರಗಳ ಮಡಕೆಗಳಿಂದ ಬರುತ್ತಿದ್ದ ದುರ್ಗಂಧಗಳಿಂದ ನಮ್ಮ ವಾಸ ನರಕಸದೃಶ ವಾಗಿತ್ತು. ನಮ್ಮ ಚಲನವಲನಗಳ ಮೇಲೂ ನಿರ್ಬಂಧನನ್ನು ಹೇರಲಾಗಿತ್ತು.

ನನ್ನ ಇನ್ನೊಬ್ಬ ಮಿತ್ರ ಯಡಿಯೂರ ಶೆಟ್ಟಿ ಎಂಬುವವನು ತಲೆಯೊಡೆದು ಅಪಾರ ನೋವಿನಿಂದ ನರಳಹತ್ತಿದ್ದ. ತಲೆಯ ಎಡಭಾಗದಲ್ಲಿ ಏಳೆಂಟು ಕಡೆ ಹೊಲಿಗೆ ಹಾಕಿದ್ದರು. ನಾವು ತುಂಬಾ ಗಾಬರಿಗೊಂಡೆವು. ನನ್ನ ಅಣ್ಣನವರು ಶಂಕರಪ್ಪನ ದುರಂತವನ್ನು ಕೇಳಿ ಮೈಸೂರಿಗೆ ಬಂದರು; ಜೇಲಿನಲ್ಲಿ ನನ್ನನ್ನು ಕಂಡು ಕಣ್ಣೀರ್ಗರೆದರು. ಆಪ್ತಮಿತ್ರರೆಲ್ಲರೂ ಕಲೆತು ವಿಚಾರ ನಡೆಸಿದೆವು. ಗಾಯಗೊಂಡವರಿಗೆ ಶೀಘ್ರ ಚಿಕಿತ್ಸೆ ಅಗತ್ಯವಾಗಿತ್ತು. ಗ್ರಾಮಗಳಲ್ಲಿ ಪ್ರಚಾರ ಮಾಡಬೇಕೆಂದೂ ನಿರ್ಧರಿಸಿದೆವು. ಅಧಿಕಾರಿಗಳಿಗೆ ನಮ್ಮನ್ನು ಸ್ನೇಹಿತರ ಶುಶ್ರೂಷೆಗಾಗಿ ಬಿಟ್ಟುಕೊಡಬೇಕೆಂದು ಕೇಳಿಕೊಂಡೆವು. ಇದಾದ ಕೆಲವು ದಿನಗಳಲ್ಲಿ ಎಲ್ಲಾ ವಿದ್ಯಾರ್ಥಿಗಳೂ ಬಿಡುಗಡೆ ಮಾಡಲ್ಪಟ್ಟರು.

ಮೈ.ಮೈ. 11

## ಬಿ. ಆರ್. ಪ್ರಾಣೇಶರಾವ್

ಜನನ : 1927 ಉದ್ಯೋಗ : ಅಧ್ಯಾಪಕ ವಿಳಾಸ : ಸವಿಾರ, 221–ಎ, XII ಮೇನ್, ಸರಸ್ವತಿಪುರ, ಮೈಸೂರು

---



1942ರ 'ಚಲೇ ಜಾವ್' ಚಳವಳಿ ನನ್ನನ್ನು ಬಹಳ ವಾಗಿ ಆಕರ್ಷಿಸಿತು. ನಾನು ಆಗ ಮೈಸೂರಿನಲ್ಲಿ ಮಹಾಜನ ಹೈಸ್ಕೂಲಿನಲ್ಲಿ ಓದುತ್ತಿದ್ದೆ. ಆಗ ನನಗೆ 15 ವರ್ಷ ವಯಸ್ಸು. ಆಗಸ್ಟ್ 9ರ ಬೆಳಗ್ಗೆ ವಿದ್ಯಾರ್ಥಿಗಳ ಭಾರಿ ಮೆರವಣಿಗೆ ಏರ್ಪಟ್ಟಿತ್ತು. ನಾಯಕರ ದಸ್ತಗಿರಿಯನ್ನು ಪ್ರತಿಭಟಿಸಲು ಪ್ರದರ್ಶನಗಳು ನಡೆದವು. ಭಾರತದ ರಾಷ್ಟ್ರೀಯ ಕಾಂಗ್ರೆಸ್ ಅಂಗೀಕರಿಸಿದ್ದ 'ಬ್ರಿಟಿಷರೇ, ಭಾರತವನ್ನು ಬಿಟ್ಟು ತೊಲಗಿ' ಎಂಬ ನಿರ್ಣಯವು ಸಫಲವಾಗುವವರೆಗೆ ಚಳವಳಿಯನ್ನು ಶತಾಯಗತಾಯ ನಡೆಸಲೇಬೇಕೆಂದು ಮೈಸೂರಿನ ವಿದ್ಯಾರ್ಥಿಸ್ತೋಮ ನಿರ್ಧರಿಸಿತು. ಆಗಸ್ಟ್‌ನಲ್ಲಿ ಆರಂಭವಾದ ಮುಷ್ಕರ ಮತ್ತು ಪ್ರದರ್ಶನಗಳ ಕಾರ್ಯಕ್ರಮ ಹಲವಾರು ವಾರಗಳ ಕಾಲ ಬಹಳ ಬಿರುಸಾಗಿ ನಡೆಯಿತು. ಅನಂತರ ಚಳವಳಿಯು ಕಾವು ಕಡಿಮೆಯಾಗತೊಡಗಿತು.

ಯುವಕರಲ್ಲೂ ವಿದ್ಯಾರ್ಥಿಗಳಲ್ಲೂ ಜಾಗೃತಿಯನ್ನುಂಟು ಮಾಡಲು ಕೆಲವು ವಿಧಾಯಕ ಕಾರ್ಯಕ್ರಮಗಳನ್ನು ನಾವು ಕೈಗೊಂಡೆವು. ಮೈಸೂರಿನ ವಾಣಿವಿಲಾಸ ಮೊಹಲ್ಲಾದಲ್ಲಿ ಟಿಳಕ್ ಸಂಘವೆಂಬ ಸಂಸ್ಥೆ ಸ್ಥಾಪಿತವಾಯಿತು. ಅದರ ಪ್ರಧಾನ ಕಾರ್ಯಕರ್ತರಲ್ಲಿ ನಾನೂ ಒಬ್ಬನಾಗಿದ್ದೆ. ರಾಷ್ಟ್ರೀಯ ಸಾಹಿತ್ಯ ಭಂಡಾರ ಮತ್ತು ನೂಲುವ ತರಗತಿಯನ್ನು ನಾವು ಆರಂಭಿಸಿದೆವು. ಪ್ರತಿವಾರವೂ ಸಭೆಗಳನ್ನು ಏರ್ಪಡಿಸಿ ರಾಷ್ಟ್ರೀಯ ಚಳವಳಿಯ ಮಾಹಿತಿಯನ್ನು ತಿಳಿಯಪಡಿಸಲಾಗುತ್ತಿತ್ತು. ಜಯಪ್ರಕಾಶ, ಅಚ್ಯುತ ಪಟವರ್ಧನ್, ಲೋಹಿಯಾ, ಅರುಣಾ ಅಸಫ್ ಆಲಿಯವರು ಭೂಗತರಾಗಿದ್ದು ಕೊಂಡು ಚಳವಳಿಗೆ ಮಾರ್ಗದರ್ಶನ ನೀಡುತ್ತಿದ್ದರು. ದೆಹಲಿಯಿಂದ ಆರಂಭಿಸಲಾಗಿದ್ದ 'ಜನತಾ' ಪತ್ರಿಕೆಯಲ್ಲಿ ಭೂಗತರಾಗಿದ್ದ ನಾಯಕರು ಬೇರೆ ಬೇರೆ ಹೆಸರುಗಳಲ್ಲಿ ಲೇಖನಗಳನ್ನು ಬರೆದು ಪ್ರಕಟಿಸುತ್ತಿದ್ದರು. 'ಜನತಾ' ಪತ್ರಿಕೆಯನ್ನು ನಮ್ಮ ಅಧ್ಯಯನ ಕೂಟಗಳಲ್ಲಿ ಓದುತ್ತಿದ್ದೆವು. ನಮ್ಮ ಸ್ನೇಹಿತರುಗಳಲ್ಲೇ ಪ್ರಸಾರಕ್ಕಾಗಿ ಕೈಬರಹದ ಮಾಸಪತ್ರಿಕೆಯೊಂದನ್ನು ನಡೆಸುತ್ತಿದ್ದೆವು.

1945ರಿಂದ 1947ರ ಮಧ್ಯೆ ವಿದ್ಯಾರ್ಥಿಗಳ ಮತ್ತು ಕಾರ್ಮಿಕರ ನಡುವೆ ಕೆಲಸವನ್ನು ತೀವ್ರವಾಗಿ ಮಾಡಿದೆನು. ಆ ಅವಧಿಯಲ್ಲಿ ನಾನು ಮೈಸೂರು ನಗರದ ವಿದ್ಯಾರ್ಥಿ ಕಾಂಗ್ರೆಸ್‌ನ ಕಾರ್ಯದರ್ಶಿಯಾಗಿ ಎರಡು ವರ್ಷ ಕೆಲಸ ಮಾಡಿದೆ. ಅನಂತರ ವಿದ್ಯಾರ್ಥಿ ಕಾಂಗ್ರೆಸ್ಸಿನ ಅಧ್ಯಕ್ಷನಾಗಿದ್ದೆ. ಪ್ರತಿವರ್ಷ ಆಗಸ್ಟ್ 9, ಜನವರಿ 26, ಅಕ್ಟೋಬರ್ 2 ಮತ್ತಿತರ ಚರಿತ್ರಾರ್ಹ ದಿನಗಳಲ್ಲಿ ವಿದ್ಯಾರ್ಥಿಗಳ ಸಂಪು ನಡೆಸುತ್ತಿದ್ದೆವು. ಸರ್ಕಾರದವರು ಹಾಕುತ್ತಿದ್ದ ಪ್ರತಿಬಂಧಕಾಜ್ಞೆಗಳನ್ನು ಮುರಿದು ಸಭೆ, ಮೆರವಣಿಗೆಗಳನ್ನು ನಡೆಸುವುದು ನಮ್ಮ ಪರಿಪಾಠವಾಗಿತ್ತು.

1945ರಲ್ಲಿ ನಂಜನಗೂಡಿನಲ್ಲಿ ನಡೆದ ಅಖಿಲ ಮೈಸೂರು ವಿದ್ಯಾರ್ಥಿ ಕಾಂಗ್ರೆಸ್ ಸಮ್ಮೇಳನಕ್ಕೆ ನೂರಾರು ಪ್ರತಿನಿಧಿಗಳು ಬಂದಿದ್ದರು. ಮೈಸೂರು ನಗರ ವಿದ್ಯಾರ್ಥಿ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿ ನಾನು ಸಮ್ಮೇಳನದಲ್ಲಿ ಸಕ್ರಿಯ ಪಾತ್ರವಹಿಸಿದ್ದೆ. 1946ರ ಆಗಸ್ಟ್‌ನಲ್ಲಿ ಧಾರವಾಡದಲ್ಲಿ ಅಖಿಲ ಕರ್ನಾಟಕ ವಿದ್ಯಾರ್ಥಿ ಸಮ್ಮೇಳನ ನಡೆಯಿತು. ಮೈಸೂರಿನ ಪ್ರತಿನಿಧಿಯಾಗಿ ಆ ಸಮ್ಮೇಳನದಲ್ಲೂ ನಾನು ಭಾಗವಹಿಸಿದೆ. ಅದೇ ವರ್ಷ ಡಿಸೆಂಬರ್‌ನಲ್ಲಿ ಶಿವಮೊಗ್ಗದಲ್ಲಿ ನಡೆದ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ಸಿನ ಸಮ್ಮೇಳನ ಐತಿಹಾಸಿಕವಾಗಿತ್ತು. ಮೈಸೂರು ಮಹಾರಾಜರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸುವುದೇ ತನ್ನ ಉದ್ದೇಶವೆಂದು ಆಗಿನ ಮೈಸೂರು ಕಾಂಗ್ರೆಸ್ ಸಾರುತ್ತಿತ್ತು. ಈ ಧ್ಯೇಯವನ್ನು ವಿದ್ಯಾರ್ಥಿ ಸಮೂಹವು ಒಪ್ಪುವುದಿಲ್ಲವೆಂದೂ ಮೈಸೂರಿನ ಅರಸೊತ್ತಿಗೆ ಅಳಿಯಬೇಕೆಂದೂ ಕನ್ನಡ ಮಾತನಾಡುವ ಎಲ್ಲ ಭಾಗಗಳನ್ನೂ ಒಳಗೊಂಡ ಕರ್ನಾಟಕದ ರಚನೆಯೇ ವಿದ್ಯಾರ್ಥಿಗಳ ಗುರಿಯೆಂದೂ ಆ ಸಮ್ಮೇಳನ ಘೋಷಿಸಿತು. ಆ ಸಮ್ಮೇಳನದ ಕಾರ್ಯಕಾರಿ ಮಂಡಲಿಯ ಸದಸ್ಯರಲ್ಲಿ ನಾನೂ ಒಬ್ಬನಾಗಿದ್ದೆ.

1947ನೇ ಆಗಸ್ಟ್ 15ರಂದು ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಮೈಸೂರು ಸಂಸ್ಥಾನದಲ್ಲಿ ಪ್ರಜಾತಂತ್ರದ ಸ್ಥಾಪನೆಗೆ ಮಹಾರಾಜರ ಸರ್ಕಾರ ಸಿದ್ಧವಿರಲಿಲ್ಲ. ಮೈಸೂರು ಅರಮನೆಯ ಮುಂದೆ 1947ನೆಯ ಸೆಪ್ಟಂಬರ್ 1ರಂದು ವಿದ್ಯಾರ್ಥಿಗಳ ಸತ್ಯಾಗ್ರಹ ಆರಂಭವಾಗುವುದೆಂದು ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ ಘೋಷಿಸಿತು. ಮೈಸೂರು ನಗರದ ವಿದ್ಯಾರ್ಥಿ ಕಾಂಗ್ರೆಸ್ಸಿನ ಅಧ್ಯಕ್ಷನೂ, ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ ಸಮಿತಿಯ ಕಾರ್ಯಕಾರಿ ಸಮಿತಿ ಸದಸ್ಯನೂ ಆಗಿದ್ದ ನಾನು ಮೊದಲನೆಯ ದಿನದ ಸತ್ಯಾಗ್ರಹದ ತಂಡದಲ್ಲಿ ಭಾಗವಹಿಸಲು ನಿರ್ಧಾರವಾಗಿತ್ತು.

ಈ ಮಧ್ಯೆ ಮೈಸೂರು ಸಂಸ್ಥಾನದ ಕಾಂಗ್ರೆಸ್ ನಾಯಕರಾದ ಕೆ. ಸಿ. ರೆಡ್ಡಿಯವರ ನಾಯಕತ್ವದಲ್ಲಿ ಬೆಂಗಳೂರಿನಿಂದ ಪಾದಯಾತ್ರೆ ಹೊರಟು ಮೈಸೂರು ನಗರಕ್ಕೆ ಬಂದು ಅರಮನೆ ಮುಂದೆ ಸತ್ಯಾಗ್ರಹ ನಡೆಸುವ ಕಾರ್ಯಕ್ರಮವನ್ನು ಪ್ರಕಟಿಸಿದರು. ತಕ್ಷಣ ಕೆ. ಸಿ. ರೆಡ್ಡಿ ಮತ್ತಿತರ ನಾಯಕರುಗಳನ್ನು ಬೆಂಗಳೂರಿನಲ್ಲಿ ದಸ್ತಗಿರಿ ಮಾಡಲಾಯಿತು. ಅದೇ ದಿನ ಮೈಸೂರಿನಲ್ಲಿ ದಸ್ತಗಿರಿಯಾದ 13 ಮಂದಿಯಲ್ಲಿ ನಾನೂ ಒಬ್ಬನಾಗಿದ್ದೆ. ಅನಂತರ ಅನೇಕರ ದಸ್ತಗಿರಿಯಾಯಿತು. ಎಚ್. ಸಿ. ದಾಸಪ್ಪ, ಟಿ. ಮರಿಯಪ್ಪ, ಅಗರಂ ರಂಗಯ್ಯ, ಬಿ. ನಾರಾಯಣಸ್ವಾಮಿ, ಕೆ. ಪುಟ್ಟಸ್ವಾಮಿ, ಎಚ್. ಕೆ. ಕುಮಾರಸ್ವಾಮಿ, ಟಿ. ವೆಂಕಟರಮಣಯ್ಯ ಮತ್ತು ಟಿ. ಸಿ. ಶಾಂತರಾಜು ಮುಂತಾದವರ ಜೊತೆ ನಾನು ಜೈಲಿನಲ್ಲಿದ್ದೆ. ಸ್ವಲ್ಪ ದಿನಗಳನಂತರ ನಮ್ಮನ್ನು ಶಿವಮೊಗ್ಗ ಜೈಲಿಗೆ ವರ್ಗಾಯಿಸಿದರು. ಅಲ್ಲಿ ಕಡಿದಾಳ ಮಂಜಪ್ಪ, ಕೆ. ಜಿ. ಒಡೆಯರ್ ಮುಂತಾದ ನಾಯಕರುಗಳಿದ್ದರು; ಅನೇಕ ವಿದ್ಯಾರ್ಥಿಗಳೂ ಇದ್ದರು.

ಸುಮಾರು ಎರಡು ತಿಂಗಳ ಕಾರಾಗೃಹವಾಸ ಮುಗಿಸಿ ಶಿವಮೊಗ್ಗದಿಂದ ನಾನು ಮೈಸೂರಿಗೆ ಹಿಂದಿರುಗಿದೆನು. ಕೆಲವು ವರ್ಷಗಳನಂತರ ಶಿಕ್ಷಣ ಮುಂದುವರಿಸಿ ಎಂ.ಎ. ಪದವಿ ಪಡೆದೆ. ರಚನಾತ್ಮಕ ಕಾರ್ಯ ಮುಂದುವರಿಸಿದೆ. 1952ರಿಂದ 1958ರ ವರೆಗೆ ಮೈಸೂರು ರಾಜ್ಯದ ಕಸ್ತೂರ್‌ಬಾ ಟ್ರಸ್ಟ್ ಮತ್ತು ಗಾಂಧೀ ಸ್ಮಾರಕ ನಿಧಿಯ ಕಾರ್ಯದರ್ಶಿಯಾಗಿದ್ದೆ. 1961ರಿಂದ ಶಾರದಾ ವಿಲಾಸ ಕಾಲೇಜಿನಲ್ಲಿ ಅರ್ಥ ಶಾಸ್ತ್ರದ ಅಧ್ಯಾಪಕನಾಗಿ ಕೆಲಸ ಮಾಡುತ್ತಿದ್ದೇನೆ.

ಮೈ.ಮೈ. 12

# ಪಾಲಹಳ್ಳಿ ಸೀತಾರಾಮಯ್ಯ

ಜನನ : 1892 ಉದ್ಯೋಗ : ವಕೀಲ ವಿಳಾಸ : 1785, ಹೊಸಕೇರಿ, ಸೀತಾರಾಮರಾವ್ ರಸ್ತೆ, ಮೈಸೂರು

---



ಮೈಸೂರಿನಲ್ಲಿ ವೃದ್ಧಪಿತಾಮಹ ವೆಂಕಟಕೃಷ್ಣಯ್ಯನವರ ಮರಿಮಲ್ಲಪ್ಪ ಹೈಸ್ಕೂಲಲ್ಲಿ ಇಂಗ್ಲಿಷ್ ಶಿಕ್ಷಣ ಪಡೆದ ನಾನು ಮದ್ರಾಸಿನಲ್ಲಿ ಪದವಿ ಮತ್ತು ಕಾನೂನು ಶಿಕ್ಷಣ ಪಡೆದು ವಕೀಲಿವೃತ್ತಿಯನ್ನು ಮೈಸೂರಲ್ಲಿ ಆರಂಭಿಸಿದೆ. ಮೈಸೂರು ಕಾಂಗ್ರೆಸ್ ನತಿಯಿಂದ ಪ್ರಜಾಪ್ರತಿನಿಧಿ ಸಭೆಗೂ ಆರಿಸಿಬಂದೆ. ಸಭೆಯು ಮುಂದೆ ಬಂದ ಸರಕಾರಿ ಬಿಲ್ಲುಗಳನ್ನೆಲ್ಲ ಪ್ರತಿನಿಧಿಗಳು ನಿರಾಕರಿಸಿ ದಿವಾನ್ ಮಾಧವರಾಯರ ದಿವಾನಗಿರಿಯನ್ನು ಕೊನೆಮುಟ್ಟಿಸಿದ್ದು ಆಗಿನ ಒಂದು ಘಟನೆ.

ಶಿವಪುರ ಕಾಂಗ್ರೆಸ್ಸಿನಲ್ಲಿ ನಾನೂ ನನ್ನ ಪತ್ನಿ ಪಾಲುಗೊಂಡು ಪ್ರಧಾನ ಪಾತ್ರ ವಹಿಸಿದ್ದೆವು. ನನ್ನ ಪತ್ನಿ ವೆಂಕಮ್ಮ ಸ್ವಯಂಸೇವಿಕೆಯರ ದಳದ ಪ್ರಮುಖಳಾಗಿದ್ದಳು. ಇದಕ್ಕೆ ಪೂರ್ವದಲ್ಲಿ ಮತ್ತು ಅನಂತರ ನನ್ನ ಮೇಲೆ ಅನೇಕ ಪ್ರತಿಬಂಧಕಾಜ್ಞೆಗಳನ್ನು ಸರಕಾರವು ಹೇರಿತ್ತು. ನಾನು ಮೈಸೂರು ಪಟ್ಟಣದಿಂದ ಗಡೀಪಾರು ಮಾಡಲ್ಪಟ್ಟ ಉದಾಹರಣೆಗಳೂ ಉಂಟು. ವಿ. ವಿ. ಗಿರಿಯವರು ಮೈಸೂರು ರೈಲ್ವೆ ಕಾರ್ಮಿಕರ ಯೂನಿಯನ್‌ನ ಅಧ್ಯಕ್ಷರಾಗಿಯೂ ನಾನು ಉಪಾಧ್ಯಕ್ಷನಾಗಿಯೂ ಇದ್ದಾಗ ಗಿರಿಯವರು ಮೈಸೂರು ನಗರ ಪ್ರವೇಶಿಸಬಾರದೆಂದು ಪ್ರತಿಬಂಧ ಹೇರಿರಲು ರೈಲ್ವೆ ನೌಕರರನ್ನು ಶ್ರೀರಂಗಪಟ್ಟಣಕ್ಕೆ ಕರೆದೊಯ್ದು ಅಲ್ಲಿ ಗಿರಿಯವರ ಭಾಷಣ ಏರ್ಪಡಿಸಿದ್ದೆವು.

ಆಂಧ್ರಕೇಸರಿ ಟಿ. ಪ್ರಕಾಶಂ ಅವರ 'ಸ್ವರಾಜ್ಯ' ಪತ್ರಿಕೆಗಾಗಿ 25,000 ರೂ. ನಿಧಿಯನ್ನು ಮೈಸೂರಿನಲ್ಲಿ ಸಂಗ್ರಹ ಮಾಡಿದ್ದೆವು. ವಿದುರಾಶ್ವತ್ಥ ದುರಂತದ ಅನಂತರ ನನ್ನನ್ನು ಮೈಸೂರು, ಶ್ರೀರಂಗಪಟ್ಟಣ, ಹಾಸನ, ಬೆಂಗಳೂರು ಮುಂತಾದ ಜೈಲುಗಳಲ್ಲಿ ಎರಡು ವರ್ಷಕ್ಕೂ ದೀರ್ಘಕಾಲ ನಿರ್ಬಂಧದಲ್ಲಿ ಇಡಲಾಗಿತ್ತು. ಕ್ವಿಟ್ ಇಂಡಿಯಾ ಚಳವಳಿ ಕಾಲದಲ್ಲಿ ಮತ್ತೆ ಬಂಧಿಸಿ ಕಾರಾಗೃಹದಲ್ಲಿ ಇಡಲಾಗಿತ್ತು. ನನ್ನ ಅನಾರೋಗ್ಯದ ಕಾರಣ ಹೆಚ್ಚು ವಿವರಗಳನ್ನು ಬರೆಯಲಾರೆ. ಒಟ್ಟಿನಲ್ಲಿ ಹೇಳುವುದಾದರೆ ನನ್ನ

ಸ್ವಾತಂತ್ರ್ಯ ಹೋರಾಟವು ಅನೇಕ ಬಾರಿ ಜೈಲುವಾಸದಲ್ಲಿ ಕಳೆದು ನನ್ನ ವಕೀಲಿಗೂ ನಾನು ಶರಣು ಹೊಡೆಯುವ ಪ್ರಸಂಗ ನನಗೆ ಬಂತು.

ವ್ಯ.ವ್ಯ. 13

## ಡಿ|| ಸೂರ್ಯನಾರಾಯಣ ಪಂಡಿತ



(ಶ್ರೀ ಪಂಡಿತರು 1974ರ ಅಕ್ಟೋಬರ್‌ನಲ್ಲಿ ತೀರಿಕೊಂಡರು. ಅದಕ್ಕೂ ಮೊದಲೇ ಕಳುಹಿಸಿದ ಸ್ಮೃತಿಯನ್ನು ಇಲ್ಲಿ ಕೊಟ್ಟಿದೆ. 1973ರಲ್ಲಿ ಬರೆದ ಈ ಸ್ಮೃತಿಯಲ್ಲಿ ತಮ್ಮ ವಯಸ್ಸು 73 ವರ್ಷ ಎಂದು ಅವರು ತಿಳಿಸಿದ್ದಾರೆ—ಸಂ||).

ಯಳಂದೂರು ತಾ|| ಅಗರ ಗ್ರಾಮದವನಾದ ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ಲೋಕಮಾನ್ಯ ಟಿಳಕರು ತೀರಿಕೊಳ್ಳಲು ಆ ದಿನ ವಿದ್ಯಾರ್ಥಿಗಳಿಂದ ಮುಷ್ಕರ ಮಾಡಿಸಿದೆ. ಬೆಂಗಳೂರಲ್ಲಿ ಮುದವೀಡಕರ ಕೃಷ್ಣರಾವ್, ಕಡಪಾ ರಾಘವೇಂದ್ರರಾವ್ ಮುಂತಾದವರ ಭಾಷಣ ಕೇಳಿ ಬೆಂಗಳೂರಲ್ಲಿ ಸಿಟಿ ಕಾಂಗ್ರೆಸ್ಸಿಗೆ ಮೆಂಬರಾಗಿದ್ದೆ. ಮುಂದೆ ಮೊದಲ ವರ್ಷ ಬಿ.ಎ.ಗೆ ಶಿಕ್ಷಣ ತ್ಯಜಿಸಿ, ನಮ್ಮ ಊರಲ್ಲಿ ವ್ಯವಸಾಯಕ್ಕೆ ತೊಡಗಿ, ಬಿಡುವಿನ ವೇಳೆ ಮೈಸೂರಿಗೆ ಬಂದು ಕಾಂಗ್ರೆಸ್ಸಿನ ಕೆಲಸ ಮಾಡುತ್ತಿದ್ದೆ. ಮೈಸೂರಿನಲ್ಲಿ ಕಾಂಗ್ರೆಸ್‌ನ ಚಟುವಟಿಕೆಗಳಿಗೆ ಪೂರಕವಾಗಿ ಕೆಲಸಮಾಡಿದ ಸಂಸ್ಥೆಗಳೆಂದರೆ ಡೈಮಂಡ್ಸ್ ಲೀಗ್, ಸ್ಟೂಡೆಂಟ್ಸ್ ಲೀಗ್, ಟಿಳಕ್ ಸಂಘ ಮುಂತಾದ ಸಂಘಸಂಸ್ಥೆಗಳು. ಡೈಮಂಡ್ಸ್ ಲೀಗ್‌ಗೆ ಅಧ್ಯಕ್ಷರಾಗಿದ್ದವರು ಶ್ರೀನಿವಾಸಮೂರ್ತಿಗಳು. ಅವರು ಮುಂದೆ 'ವಿಶ್ವಕರ್ನಾಟಕದಲ್ಲಿ' ಬೆಂಗಳೂರು ನಗರಪ್ರತಿನಿಧಿಯಾಗಿ ಕೆಲಸಮಾಡಿದ್ದರು. ಕಲಾಭವನದ ಸೂರ್ಯನಾರಾಯಣರಾಯರಿಗೂ ಇದರ ಜೊತೆ ಸಂಬಂಧವಿತ್ತು. ಉಪ್ಪಿನ ಸತ್ಯಾಗ್ರಹಕ್ಕೆ ಈ ಸಂಸ್ಥೆಯಿಂದ ಸ್ವಯಂ ಸೇವಕರನ್ನು ಕರೆಸಲಾಗಿತ್ತು. ಇದಲ್ಲದೆ ಸ್ಟೂಡೆಂಟ್ಸ್ ಲೀಗ್‌ಗೆ (ಈಗ ಹೈದರಾಬಾದಿನಲ್ಲಿ ಇರುವ) ಶ್ರೀರಂಗಾಚಾರ್ಯರು ಅಧ್ಯಕ್ಷರಾಗಿದ್ದು ಅವರೂ ಉಪ್ಪಿನ ಸತ್ಯಾಗ್ರಹಕ್ಕೆ ಅನೇಕರನ್ನು ಕಳುಹಿಸಿದ್ದರು. ಡಿ|| ಎಂ. ವೆಂಕಟಕೃಷ್ಣಯ್ಯ, ಅಗರಂ ರಂಗಯ್ಯ ಹಾಗೂ ತಗಡೂರು ರಾಮಚಂದ್ರರಾಯರು ನನಗೆ ಸಾರ್ವಜನಿಕ ಚಟುವಟಿಕೆಗಳಲ್ಲಿ, ವಿಶೇಷತಃ ಭಾಷಣಮಾಡಲು ಬಹಳ ಪ್ರೋತ್ಸಾಹ ನೀಡಿದವರು. ತಗಡೂರರು ನಡೆಸಿದ ಪ್ರೆಸ್

ಸತ್ಯಾಗ್ರಹ, ಹರಿಜನ ಚಳವಳಿ ಮುಂತಾದವುಗಳನ್ನು ನಡೆಸಿದಾಗ ನಾಸು. ವಕೀಲ ಕೆ. ಶೇಷಾದ್ರಿ ಹಾಗೂ ಎಂ. ಎನ್. ಜೋಯಿಸರು ಅವರಿಗೆ ನೆರವಾಗುತ್ತಿದ್ದೆವು. ಪ್ರೆಸ್ ಸತ್ಯಾಗ್ರಹ ಬೆಂಗಳೂರಲ್ಲಿ ನಡೆದಾಗ ಬಿ. ಎನ್. ಗುಪ್ತ ಮತ್ತು ಅಶ್ವತ್ಥನಾರಾಯಣ ರಾಯರು ಅವರಿಗೆ ನೆರವಾಗಿದ್ದರು.

1931ರಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಚಳವಳಿಯಲ್ಲಿ ಭಾಗವಹಿಸಲು ನನಗೆ ಸಂಪಿಗೆ ವೆಂಕಟಪತಯ್ಯನವರು ಕಳುಹಿಸಿಕೊಟ್ಟರು. ಶಿವಮೊಗ್ಗದಲ್ಲಿ 'ಹಿಂದು' ಪತ್ರಿಕಾ ಪ್ರತಿನಿಧಿ ಮಣಿ ಅಯ್ಯರ್ ಮತ್ತು ಅಡಿಕೆ ವರ್ತಕ ಮಾನಪ್ಪನವರಲ್ಲಿ ಕಳುಹಿಸಿದರು. ಅಲ್ಲಿಂದ ಸಾಗರದ ವಕೀಲ ಚಾಪಟರಲ್ಲಿಗೆ ಕಳುಹಿಸಲು ಅವರು ಬೈಲೂರು ವಾಸುದೇವ ರಾಯರಲ್ಲಿಗೆ ಒಯ್ದರು. ಮುಂದೆ ಪವಕಿ ಕೃಷ್ಣಮೂರ್ತಿಗಳು ನನ್ನನ್ನು ಕೆಳದಿಗೆ ಕರೆ ದೊಯ್ಯಲು ಸರ್ದಾರ್ ವೆಂಕಟರಾಮಯ್ಯನವರು ದೇಶಪಾಂಡೆ ಎಂಬವರ ಜೊತೆ ಗೋಕರ್ಣಕ್ಕೆ ಕಳುಹಿಸಿದರು. ಅಲ್ಲಿ ಗೋಪ್ಯವಾಗಿ ಭಟ್ಟರ ಮನೆಯಲ್ಲಿ ಇದ್ದೆ. ಒಂದು ದೊಡ್ಡ ಮನೆಗೆ ಹೊರಗಿನಿಂದ ಬೀಗಹಾಕಿದ್ದು, ಒಳಗೆ ನಾನು ಕೆಲಸಮಾಡುತ್ತಿದ್ದೆ. ಅಂಬಿಗರ ಹುಡುಗರು 'ಬಾಂಬೆ ಕ್ರಾನಿಕಲ್' ಮುಂತಾದ ಪತ್ರಿಕೆ ತಂದುಕೊಡುತ್ತಿದ್ದು ಅದನ್ನೂ ಅನ್ಯಪತ್ರಗಳನ್ನೂ ಬಳಸಿ ಸುದ್ದಿಗಳನ್ನು ಕನ್ನಡದಲ್ಲಿ ಬರೆದುಕೊಡುತ್ತಿದ್ದೆ. ಅಂಬಿಗರ ಹೆಂಗಸರು ನದಿಯ ನಡುವಣ ದ್ವೀಪದಲ್ಲಿ ಅದನ್ನು ಸೈಕ್ಲೋಸ್ಟೈಲ್ ಮಾಡುತ್ತಿದ್ದರು. ಈ ಯಂತ್ರಗಳನ್ನು ಉಳಿದ ಹೊತ್ತು ನದಿಯಲ್ಲಿ ದೋಣಿಗಳ ತಳದಲ್ಲಿ ತೂಗುಹಾಕಿ ನೀರಿನಲ್ಲಿ ಅಡಗಿಸಿಡುತ್ತಿದ್ದರು. ನನ್ನ ಬಂಧನ ಆದಾಗ ನನ್ನ ಹೆಸರನ್ನು ಸುಳ್ಳಾಗಿ ಹೇಳಿ 2 ತಿಂಗಳು ಕಾರವಾರ ಜೈಲಿನಲ್ಲಿ ಇದ್ದೆ. ವಿ. ಎಸ್. ನಾರಾಯಣ ರಾವ್, ರಾಮಸ್ವಾಮಿ, ಅಶ್ವತ್ಥನಾರಾಯಣರಾವ್ ಆಗ ಜೈಲಿನಲ್ಲಿ ಇದ್ದರು. ಬಿಡುಗಡೆ ನಂತರ ಚೆನ್ನಪಟ್ಣಕ್ಕೆ ಕರೆತಂದು ಬಿಟ್ಟರು.

1937ರ ಕೊನೆಗೆ ನಾನು ಎಚ್. ಕೆ. ವೀರಣ್ಣಗೌಡ ಮತ್ತು ತಾಯಮ್ಮ ವೀರಣ್ಣ ಗೌಡರ ಜೊತೆ ಕಾಂಗ್ರೆಸ್ಸಿನ ಪ್ರಚಾರಕ್ಕಾಗಿ ಮೈಸೂರು ಸಂಸ್ಥಾನದ ಎಲ್ಲ ತಾಲ್ಲೂಕು ಗಳಲ್ಲೂ ಊರೂರಿಗೆ ಹೋಗಿ ಭಾಷಣ ಮಾಡಿದೆವು. ಮುಂದೆ ದೊಡ್ಡಬಳ್ಳಾಪುರದಲ್ಲಿ ನಾನು ಮಾಡಿದ ಒಂದು ಭಾಷಣಕ್ಕಾಗಿ ಪಬ್ಲಿಕ್ ಸೆಕ್ಯೂರಿಟಿ ಆ್ಯಕ್ಟನಂತೆ ನನ್ನನ್ನು ಬಂಧಿಸಿ ಅನಂತರ ಮಹಾದೇವ ದೇಸಾಯಿಯವರು ಬಂದಾಗ ನನ್ನ ಬಿಡುಗಡೆ ಆಯಿತು. ಟೌನ್‌ಹಾಲ್ ಸತ್ಯಾಗ್ರಹದ ಕಾಲಕ್ಕೆ ಗುಪ್ತವಾಗಿ ಕರಪತ್ರ ಹಂಚುತ್ತಿದ್ದೆವು. ಬೀದಿ ಗುಡಿಸುವವರ ವೇಷದಲ್ಲಿ ಸ್ವಯಂಸೇವಕರು ಕರಪತ್ರಗಳನ್ನು ರಾತ್ರಿ ಹಂಚುತ್ತಿದ್ದರು. ಉಪಾಧ್ಯಾಯರಾದ ಶ್ರೀನಿವಾಸಾಚಾರ್, ಟಿ. ಎಸ್. ಸುಬ್ಬಣ್ಣ ಇವರೆಲ್ಲಿ ಕರಪತ್ರ ಹಂಚಲು ಹೋಗುತ್ತಿದ್ದರು. ಒಂದು ಕರಪತ್ರದಲ್ಲಿ ಹೀಗಿತ್ತು : "ಮಿರ್ಜಾ ಥಿಯಿಟ್ರಿಕಲ್ ಕಂಪೆನಿ : ಹೊಸ ಸೀನರಿ, ಹೊಸ ಡ್ರೆಸ್. ದೃಶ್ಯ : ಮಂತ್ರಿಯ ಕೈಗೆ ಸಿಕ್ಕಿಬಿದ್ದ ಕೃಷ್ಣರಾಜೇಂದ್ರ ಭೂಪಾಲ. ಹೊಗಳುಭಟ್ಟರ ಪಾತ್ರ ಮನೋಹರ. ಪ್ರಜಾಪ್ರತಿನಿಧಿ

ಸಭೆಗೆ ಹೋಗಿ ಎಲ್ಲರೂ ಸಂತೋಷ ಪಡಿ." 2-12-1939ರಿಂದ ಪ್ರಜಾಪ್ರತಿನಿಧಿ ಸಭೆ ಮುಗಿಯುವ ತನಕ ಈ ಸತ್ಯಾಗ್ರಹ ನಡೆದು ಎ. ರಾಮಣ್ಣ, ದಿ|| ಎಂ. ಶಂಕರಯ್ಯ, ಚಾಮುಂಡಯ್ಯ, ಕಂಟ್ರಾಕ್ಟರ್ ವಿ. ಎನ್. ದಾಸಪ್ಪ ಮೊದಲಾದವರು ದಸ್ತಗಿರಿ ಆದರು. ಈ ಕಾಲದಲ್ಲಿ ನಾನು ಕೊಳ್ಳೆಗಾಲದಲ್ಲೂ ನಂಜನಗೂಡಿನಲ್ಲಿ ವಿಶ್ವೇಶ್ವರಗೌಡರ ಮನೆಯಲ್ಲೂ ಇದ್ದು ಕರಪತ್ರಗಳನ್ನು ಸಿದ್ಧಪಡಿಸುತ್ತಿದ್ದೆ. ಅಸೆಂಬ್ಲಿ ಸಭಾಂಗಣದಲ್ಲೂ ಆಗ ಕರಪತ್ರಗಳನ್ನು ಹಂಚಲಾಗುತ್ತಿತ್ತು.

1942ರಲ್ಲಿ ಚಳವಳಿ ಆರಂಭ ಆದ ತಕ್ಷಣ ನನ್ನನ್ನು ಬಂಧಿಸಿ ಸೆಂಟ್ರಲ್ ಜೈಲಿನಲ್ಲಿ ಇಟ್ಟರು. ಅಲ್ಲಿ ಇದ್ದಾಗ ನಾನು ಕುಮಾರವ್ಯಾಸ ಭಾರತ ಓದುತ್ತಿದ್ದು ಕಾನಕಾನಹಳ್ಳಿ ಸುಬ್ಬರಾಯರು ಅರ್ಥ ಹೇಳುತ್ತಿದ್ದರು. ಕೈಲಾಸಂರ ನಾಟಕಗಳು, ಪುಟ್ಟಪ್ಪನವರ 'ರಕ್ತಾಕ್ಷಿ', ದ್ವಿಜೇಂದ್ರಲಾಲರ 'ಮೇವಾಡಪತನ' ಮುಂತಾದವನ್ನು ಆಡುತ್ತಿದ್ದೆವು. ಎಚ್. ಎಸ್. ದೊರೆಸ್ವಾಮಿ, ಎಂ. ಎನ್. ಜೋಯಿಸ್, ದಿ|| ಎಸ್. ಎಸ್. ಶಾಸ್ತ್ರಿ, ಶ್ರೀಧರ, ಚಾಮರಾಜನಗರದ ವೆಂಕಟರಾವ್, ಕೋಲಾರದ ಸರ್ವಜ್ಞಮೂರ್ತಿ ಹಾಗೂ ನಾನು ಪಾತ್ರಧಾರಿಗಳು. ವಿದ್ಯಾರ್ಥಿಗಳಿಗೆ ಎಂ. ವಿ. ರಾಮರಾವ್, ಭಾಷ್ಯಂ, ನಿಜಲಿಂಗಪ್ಪ ಇವರು ಪಾಠ ಹೇಳಿಕೊಡುತ್ತಿದ್ದರು.

'ಮೈಸೂರು ಚಲೋ' ಸತ್ಯಾಗ್ರಹದ ಕಾಲಕ್ಕೆ ನಾನು ಅಪಾಯಸ್ಥಳದ ಹತ್ತಿರ ಆಪರೇಷನ್ ಮಾಡಿಸಿಕೊಂಡು, ಕಾಲನ್ನು ಮಂಚಕ್ಕೆ ಕಟ್ಟಿ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಮಲಗಿರಲು, ಆಸ್ಪತ್ರೆಯ ಮೇಲೆ ಯಾರೋ ರಾಷ್ಟ್ರಧ್ವಜ ಹಾರಿಸಿದರು. ಆಗ ಸಶಸ್ತ್ರ ಪೋಲೀಸರು ಆಸ್ಪತ್ರೆಗೆ ಬಂದು, ನನ್ನನ್ನು ಕಂಡು ಬಂಧಿಸಲು ಮುಂದಾದರು. ಅಲ್ಲಿದ್ದ ಸರ್ಜನರು, "ಕೈಕಾಲು ಕಟ್ಟಿರುವ ಇವರನ್ನು ಹೇಗೆ ದಸ್ತಗಿರಿ ಮಾಡುವಿರಿ ?" ಎಂದರು. ಕಡೆಗೆ ಪೋಲೀಸರು ಸುಮ್ಮನಾದರು.

## ಮೈ.ಮೈ. 14 | ಬಿ. ನಾರಾಯಣ ಸ್ವಾಮಿ

ಜನನ : 1901 ಉದ್ಯೋಗ : ವಕೀಲ ವಿಳಾಸ : 1054, ಚಾಮುಂಡಿಪುರಂ, ಮೈಸೂರು-4

---

ಬಾಲ್ಯದಲ್ಲಿ ನಾನು ಮೈಸೂರಲ್ಲಿ ಓದುತ್ತಿದ್ದಾಗ ಟಿಳಕರ ಹಾಗೂ ಗಂಗಾಧರರಾವ್ ದೇಶಪಾಂಡೆಯವರ ವಿಚಾರ ಕೇಳಿ ಸ್ಫೂರ್ತಿಪಡೆದಿದ್ದೆ. 1920ರಲ್ಲಿ ಗಾಂಧೀಜಿ ಶೌಕತ್ ಆಲಿಯವರ ಜೊತೆ ಬೆಂಗಳೂರಿಗೆ ಬಂದಾಗ ನಾನು ಅವರ ಭಾಷಣ ಕೇಳಲು ಗೆಳೆಯರ



ಜೊತೆ ಹೋಗಿದ್ದೆ. ಆದರೆ ವಾಸ್ತವವಾಗಿ ಚಳವಳಿಯಲ್ಲಿ ನಾನು ಆಸಕ್ತನಾದುದು 1927ರ ಮದ್ರಾಸ್ ಕಾಂಗ್ರೆಸ್‌ನಿಂದ. ಆಗ ನಾನು ಅಲ್ಲಿ ಕಾನೂನು ವಿದ್ಯಾರ್ಥಿ ಆಗಿದ್ದೆ. ಅಲ್ಲಿ ದೇಶದ ಹಿರಿಯ ನಾಯಕರನೇಕರ ದರ್ಶನಪಡೆದೆ. 1930ರಲ್ಲಿ ಮೈಸೂರಿನಲ್ಲಿ ಪ್ರಾಕ್ಟಿಸ್ ಆರಂಭಿಸಿದಾಗ ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯನಾದೆ. 1938ರಲ್ಲಿ ಕೆ. ಟಿ. ಭಾಷ್ಯಂ, ಎಚ್. ಸಿ. ದಾಸಪ್ಪ, ಎಚ್. ಸಿದ್ದಯ್ಯ, ರಂಗರಾಮಯ್ಯ ಮುಂತಾದವರ ವಕೀಲಿ ಸನದನ್ನು ಹೈಕೋರ್ಟು ರದ್ದುಮಾಡಿದಾಗ ಸುಬ್ರಾಯನ ಕೆರೆಯಲ್ಲಿ ನಡೆದ ಪ್ರತಿಭಟನಾ ಸಭೆಯಲ್ಲಿ ಎಚ್. ಸಿ. ದಾಸಪ್ಪನವರ ಪ್ರೇರಣೆಯಲ್ಲಿ ಭಾಷಣಮಾಡಿದೆ. ರಂಗರಾಮಯ್ಯ, ದಾಸಪ್ಪ ಮುಂತಾದವರೂ ಭಾಷಣಮಾಡಿದರು. ಅಂದಿನಿಂದಲೇ ನಾನು ಪೋಲೀಸರ ಕಣ್ಣಿಗೆ ಬಿದ್ದೆ. ಆಗ ನಾನು ಕಾಂಗ್ರೆಸ್ ನಗರ ಸಮಿತಿಯ ಸದಸ್ಯನಾಗಿದ್ದೆ. 1938ರಲ್ಲಿ ನನ್ನ ಮೇಲೆ ಪೋಲೀಸ್ ಆ್ಯಕ್ಟಿನಂತೆ ಒಂದು ಕೇಸ್ ಹಾಕಿದರು. ಮಿರ್ಜಾರ ಪರ ಪತ್ರಿಕೆಯೊಂದರ ಕಾರ್ಯಾಲಯದ ಮುಂದೆ ಪ್ರತಿಭಟನೆಗಾಗಿ ನೆರೆದಿದ್ದ ವಿದ್ಯಾರ್ಥಿಗಳನ್ನು ಆ ದಾರಿಯಿಂದ ಹಾದು ಹೋಗುತ್ತಿದ್ದ ನಾನು ಸಮಾಧಾನ ಮಾಡಿ ಚದರಿಸಿದ್ದೇ ಈ ಮೊಕದ್ದಮೆಗೆ ಕಾರಣ. ನನ್ನ ಜೊತೆ ಟಿ. ಎಸ್. ಸುಬ್ಬಣ್ಣ, ಎ. ಎನ್. ಸೂರ್ಯನಾರಾಯಣರಾವ್ ಮುಂತಾಗಿ ಒಟ್ಟು ಎಂಟು ಆಪಾದಿತರಿದ್ದರು. ಇದು ನನ್ನ ಮೇಲಿನ ಮೊದಲ ರಾಜಕೀಯ ಮೊಕದ್ದಮೆ. ಅಡ್ವೊಕೇಟ್ಸ್ ಅಸೋಸಿಯೇಷನ್ ಅಧ್ಯಕ್ಷ ಲಕ್ಷ್ಮೀನಾರಾಯಣರಾವ್ ಮುಂತಾದ ಹಿರಿಯರು ನಮ್ಮ ಪರ ವಕೀಲಿ ನಡೆಸಿದರು. ಮುಂದೆ ಪಟೇಲ್–ಮಿರ್ಜಾ ಒಪ್ಪಂದ ಆದಾಗ ಈ ಖಟ್ಲೆಯನ್ನು ಹಿಂದೆಗೆದರು.

1939ರಲ್ಲಿ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿ ಎರಡು ತಿಂಗಳು ಡಿಟೆನ್‌ಶನ್‌ನಲ್ಲಿ ಇದ್ದೆ. 1942ರಲ್ಲಿ ಆಗಸ್ಟ್ 9ರ ರಾತ್ರಿ ನನ್ನನ್ನು ಬಂಧಿಸಿ 17 ತಿಂಗಳು ಡಿಟೆನ್‌ಶನ್‌ನಲ್ಲಿ ಇಟ್ಟಿದ್ದರು. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇದ್ದೆ. 1947ರಲ್ಲಿ ಕೆ. ಹನುಮಂತಯ್ಯನವರ ನೇತೃತ್ವದಲ್ಲಿ 'ಅರಮನೆ ಚಲೋ' ಸತ್ಯಾಗ್ರಹದಲ್ಲಿ ಮೈಸೂರಲ್ಲಿ ಘೋಷಣೆಮಾಡುತ್ತ ಹೊರಟು ಬಂಧಿತನಾದೆ. ಶಿವಮೊಗ್ಗ ಜೈಲಿನಲ್ಲಿ ಇಟ್ಟಿದ್ದರು.

ಮೈ.ಮೈ. 15 | ## ಕೆ. ಎಂ. ಶಿವಲಿಂಗಯ್ಯ (ಕಿತ್ತೂರು)

ಜನನ : ?  ಉದ್ಯೋಗ : ಕೃಷಿ  ವಿಳಾಸ : 788/52, IX ಕ್ರಾಸ್, ರಾಮಾನುಜ ರಸ್ತೆ, ಮೈಸೂರು

---



ಎಚ್. ಸಿ. ದಾಸಪ್ಪ, ಟಿ. ಮರಿಯಪ್ಪ, ಸಾ|| ಚನ್ನಯ್ಯ ಇವರುಗಳು ನಮ್ಮ ಹೆಗ್ಗಡದೇವನ ಕೋಟೆ ತಾ|| ಭೀಮನಕೊಲ್ಲಿ ಜಾತ್ರೆಯಲ್ಲಿ ಭಾಷಣ ಮಾಡಿದರು. ಇದು 1938ರ ಆರಂಭ. ಆಗಿನಿಂದ ನಮ್ಮ ತಾಲ್ಲೂಕಿನಲ್ಲಿ ರಾಷ್ಟ್ರಪ್ರೇಮ ಬೆಳೆಯಲು ನಾಂದಿ ಆಯಿತು. ಶಿವಪುರ ರಾಷ್ಟ್ರ ಕೂಟ, ವಿದುರಾಶ್ವತ್ಥ ದುರಂತದ ಘಟನೆಗಳ ವರದಿಗಳು ನನ್ನ ನೆನಪಿನ ಪಟದ ಮೇಲೆ ಅಚ್ಚಳಿಯದೆ ಉಳಿದಿವೆ. ಆಗಿನ್ನೂ ನಾನು ವಿದ್ಯಾರ್ಥಿ. ಲೋವರ್ ಸೆಕೆಂಡರಿ ಪರೀಕ್ಷೆ ಪಾಸಾಗಿ ಮೈಸೂರಿಗೆ ಓದಲು ಹೋದಾಗ ಆನಂದಾಶ್ರಮ ಎಂಬ ವಿದ್ಯಾರ್ಥಿನಿಲಯದಲ್ಲಿ ಆಸರೆ ಸಿಕ್ಕಿತು. ಅದರ ಆಚಾರ್ಯರು ಕಟ್ಟಾ ಗಾಂಧೀ ಭಕ್ತರಾದ ವೈ. ಎಂ. ಗಂಗಾಧರಪ್ಪ ಮತ್ತು ಟಿ. ಎಸ್. ಸುಬ್ಬಣ್ಣ. ನನಗೆ ಸ್ಕೂಲಿಗೆ ಹೋಗುವಲ್ಲಿ ಆಸೆ ಇರಲಿಲ್ಲ. ಕಾಂಗ್ರೆಸ್ ಸಭೆಗಳು ಎಲ್ಲಿ ನಡೆಯುತ್ತವೆಂದು ಹುಡುಕುವುದೇ ನನ್ನ ಕೆಲಸ. ಅಠಾರಾ ಕಚೇರಿ ಮೈದಾನಿಗೆ ಆಗ ಓವಲ್ ಗ್ರೌಂಡ್ಸ್ ಎಂದು ಹೆಸರು. ಚೀನಾದ ಮೇಲೆ ಜಪಾನ್ ಯುದ್ಧ ಘೋಷಿಸಿದಾಗ ಜ|| ಚಿಯಾಂಗ್ ಕೈಷೇಕರಿಗೆ ಬೆಂಬಲ ಸೂಚಿಸಿ ಬಹಿರಂಗ ಸಭೆ ಅಲ್ಲಿ ನಡೆದು ಭಾಷ್ಯಂರ ಭಾಷಣವಾಗಿತ್ತು. ಟರ್ಕಿಯ ಕೆಮಾಲ್ ಅಟಾಟರ್ಕ್ ನಿಧನದ ಸಂಬಂಧ ಸಭೆಯಲ್ಲೂ ಭಾಷ್ಯಂರ ಭಾಷಣ. ಇವೆಲ್ಲ ನಡೆಯುವುದು ಇದೇ ಮೈದಾನದಲ್ಲಿ.

ನಮ್ಮ ಆನಂದಾಶ್ರಮದಲ್ಲಿ ಇದ್ದ ಅಮೂಲ್ಯ ಗ್ರಂಥ ಭಂಡಾರದಲ್ಲಿನ ಅನೇಕ ರಾಜಕೀಯ ಗ್ರಂಥಗಳನ್ನು ಪಠಿಸಿದೆ. 'ದೇಶೀಯ ರಾಜರುಗಳ ಭವಿಷ್ಯ' ನಾನು ಓದಿದ ಮೊದಲ ಪುಸ್ತಕ. ಭಾರತದ ಅನೇಕ ಕ್ರಾಂತಿಕಾರಿಗಳ ಕತೆ ಕೂಡ ಓದಿದೆ. ಕಾರ್ನಾಡ್ ಸದಾಶಿವರಾಯರು ಅದೇ ತೀರಿಕೊಂಡಿದ್ದು ಅವರ ಬಗ್ಗೆ ಕೂಡ ಇದ್ದ ಪುಸ್ತಕ ಪಠಿಸಿದೆ. ಹರ್ಡೀಕರ್ ಮಂಜಪ್ಪನವರ 'ಶರಣಸಂದೇಶ' ಪತ್ರಿಕೆಯ ಅಂಕಗಳು ನನ್ನ ಸ್ಫೂರ್ತಿಯನ್ನು ಹೆಚ್ಚಿಸಿದವು. ಹೈದರಾಬಾದ್ ಸರ್ಕಾರದಿಂದ ಕಿರುಕುಳಕ್ಕೊಳಗಾದ ಸ್ವಾಮಿ ರಮಾನಂದ

ತೀರ್ಥ, ತಿರುವಾಂಕೂರಿನಲ್ಲಿ ಹಿಂಸೆಗೊಳಗಾದ ಪಟ್ಟಂಥಾನು ಪಿಳ್ಳೈ, ಮೈಸೂರು ಸಂಸ್ಥಾನದ ಮುರಿಸ್ವಾಮಿ ಹಿರೇಮಠ ಇವರುಗಳ ಸ್ಮರಣೆ ನನಗೆ ಮಾರ್ಗದರ್ಶಿಯಾಯಿತು. ನನ್ನ ಉಪಾಧ್ಯಾಯ ಕೇಶವ ಐಯ್ಯಂಗಾರ್ ಹೇಳುತ್ತಿದ್ದ ದೇಶಭಕ್ತಿಪರ ಕತೆಗಳು ನನ್ನ ಅಲ್ಪಸ್ವಲ್ಪ ರಾಷ್ಟ್ರಸೇವೆಗೆ ನನ್ನನ್ನು ಅಣಿಮಾಡಿದವು. 1938ರ ದಸರೆಯಲ್ಲಿ ಮೈಸೂರಿನಲ್ಲಿ ನಡೆದ ವಿದ್ಯಾರ್ಥಿ ಸಮ್ಮೇಳನಕ್ಕೆ ಬಾಬು ಶರತ್‌ಚಂದ್ರ ಬೋಸರ ಅಧ್ಯಕ್ಷತೆ. ಇದರಲ್ಲಿ ನನ್ನದು ಗಣ್ಯಪಾತ್ರ.

ಮೈಸೂರಿನ ಸುಬ್ಬರಾಯನ ಕೆರೆಯಲ್ಲಿ ಈ ಅವಧಿಯಲ್ಲಿ ಟಿ. ಸಿದ್ದಲಿಂಗಯ್ಯ, ವೀರಕೇಸರಿ, ತಗಡೂರು, ಎಚ್. ಸಿ. ದಾಸಪ್ಪ, ಎಸ್. ಎಸ್. ಮಿರಜ್‌ಕರ್, ಎಸ್. ಗುರುಸ್ವಾಮಿ, ವಾಸವಾಡಾ, ಟಿ. ಆರ್. ನೇಸ್ವಿ, ಡಾ|| ಹರ್ಡೀಕರ್, ಕರಮರಕರ್, ಟಿ. ಸುಬ್ರಹ್ಮಣ್ಯ, ಎಚ್. ಸಿದ್ದಯ್ಯ, ಕೆ. ಟಿ. ಭಾಷ್ಯಂ, ಮಳವಳ್ಳಿ ವೀರಪ್ಪ, ಆರ್. ಆರ್. ದಿವಾಕರ್, ರಂಗರಾಮಯ್ಯ, ಜಿ. ವಿ. ಹಳ್ಳಿಕೇರಿ, ಹೊಸಮನಿ ಸಿದ್ದಪ್ಪ ಹೀಗೆ ಅಸಂಖ್ಯರು ರಣಘೋಷಮಾಡಿದ ಸ್ಥಳ. ಲಾವಣಿ ವಿಷಕಂಠರಾವ್ ಮತ್ತು ಗೂಳೀಶ ದೇಶಭಕ್ತಿಯ ಲಾವಣಿಗಳನ್ನು ರಚಿಸಿ ದೇಶಪ್ರೇಮ ಉಕ್ಕುವಂಥ ಕೆಲಸ ಮಾಡಿದ್ದು ಇಲ್ಲಿಯೇ. ಹ್ಯಾಮಿಲ್ಟನ್ ಸತ್ಯಾಗ್ರಹದಲ್ಲಿ ಪಾಲುಗೊಂಡು ನಾನು ಮೊದಲ ಬಾರಿ ಜೈಲು ಕಂಡೆ. ತಗಡೂರು, ಜವರಪ್ಪಗೌಡ, ಸೂರ್ಯನಾರಾಯಣರಾವ್, ಸುಬ್ಬರಾವ್ ಉಪಾಧ್ಯ, ಜೋಯಿಸ್ ಈ ಚಳವಳಿಯ ಪ್ರಮುಖರು. 1939ರ ಏಪ್ರಿಲ್‌ನಲ್ಲಿ ವಿದುರಾಶ್ವತ್ಥದಲ್ಲಿ ದಾಸಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ಸಿನ ಎರಡನೆಯ ಅಧಿವೇಶನಕ್ಕೂ ನಾನು ಹೋಗಿದ್ದೆ. ದೊಡ್ಡಕುರುಗೋಡಿನಲ್ಲಿ ರೈಲು ನಿಲ್ಲದಂತೆ ಮಾಡಿ ಸರಕಾರ ಕಿರುಕುಳ ಕೊಟ್ಟಿತು. ದೀಪ, ನೀರಿನ ಸೌಲಭ್ಯ ಒದಗಿಸಲಿಲ್ಲ. ಆದರೆ ಎನ್. ಸಿ ತಿಮ್ಮಾರೆಡ್ಡಿಯವರ ದಿಟ್ಟತನದಿಂದ ಅಧಿವೇಶನ ಯಶಸ್ವಿ ಆಯಿತು. ಕೋಲಾರದ ಟಿ. ರಾಮಾಚಾರ್ ಅವರನ್ನೂ ಇಲ್ಲಿ ನೆನೆಯಬೇಕು. ವಿದುರಾಶ್ವತ್ಥ ಮರಂತದ ವಿಚಾರಣೆ ಕಾಲಕ್ಕೆ ರಮೇಶಂ ಸಮಿತಿಯ ಮುಂದೆ ದಿಟ್ಟತನದಿಂದ ವಾದಿಸಿದ ಎಲ್. ಎಸ್. ರಾಜು, ಸಂಪಿಗೆ ವೆಂಕಟಪತಯ್ಯ, ಡಿ. ಶ್ಯಾಮರಾವ್ ಇವರೆಲ್ಲರಿಗೂ ಮೈಸೂರಿನಲ್ಲಿ ಭಾರಿ ಸತ್ಕಾರ ಮಾಡಲಾಯಿತು. ರಮೇಶಂ ಸಮಿತಿಯ ಶಿಫಾರಸಿನಂತೆ ಜಾರಿಗೆ ಬಂದ ಪಬ್ಲಿಕ್ ಸೆಕ್ಯುರಿಟಿ ಆಕ್ಟಿಗೆ ಮೊದಲ ಆಹುತಿ ಮಳವಳ್ಳಿ ವೀರಪ್ಪ, ಎನ್. ಸಿ. ತಿಮ್ಮಾರೆಡ್ಡಿ, ಜೋರಣ್ಣಗೌಡ ಇವರುಗಳು. ಚಿನ್ನದ ಗಣಿ ಪ್ರದೇಶದಲ್ಲಿ ಟಿ. ಸಿದ್ದಲಿಂಗಯ್ಯನವರನ್ನುಳಿದು ಕಾಂ|| ಕಾರ್ಯಸಮಿತಿಯ ಎಲ್ಲ ಸದಸ್ಯರ ಬಂಧನ. ಅತ್ತ ಎರಡನೆಯ ಮಹಾಯುದ್ಧದ ಘೋಷಣೆ; ಇತ್ತ ಟಿ. ಸಿದ್ದಲಿಂಗಯ್ಯನವರಿಂದ ಸ್ವಾತಂತ್ರ್ಯ ಯುದ್ಧದ ಘೋಷಣೆ. ವಾಸಪ್ಪ ಗೋಗಿ, ಮೂಡ್ಲಗಿರಿ ಗೌಡ, ಡಿ. ವಿ. ರಾಮಸ್ವಾಮಿ, ಎ. ಜಿ. ಬಂದೀಗೌಡ, ಬಿ. ಸಿ. ಬಸಪ್ಪಶೆಟ್ಟಿ, ಕೆ. ವಿಶ್ವೇಶ್ವರಗೌಡ— ಹೀಗೆ ಡಿಕ್ಟೇಟರುಗಳ ದಸ್ತಗಿರಿ. ಸಹಸ್ರಾರು ಸತ್ಯಾಗ್ರಹಿಗಳಿಗೆ ಶಿಕ್ಷೆ. ಜೈಲು ಸೇರದೆ

ಕಾಡಿನಲ್ಲಿ ಬಿಡಲ್ಪಟ್ಟವರು ಅನೇಕರು. ಅನ್ನ-ನೀರು ಕೊಡದಿದ್ದ ಸರ್ಕಾರ ಕೈದಿಗಳಿಗೆ ಮೂತ್ರ ಕುಡಿಸಲು ಮುಂದಾಯಿತು! ಜೈಲಿನಲ್ಲಿ ಸತ್ತವರೂ ಅನೇಕರು—ಪ್ರಹ್ಲಾದ ಶೆಟ್ಟಿ, ಸಿರಾದ ಉಗ್ರಪ್ಪ, ಕಸ್ತೂರಿರಂಗಪ್ಪನ ಹಳ್ಳಿಯ ಹನುಮಂತಪ್ಪ, ನೆಲಮಂಗಲದ ಕೃಷ್ಣಮೂರ್ತಿ, ಹೀಗೆ ಹುತಾತ್ಮರಾದರು. ಬೈರಾಪಟ್ಣ, ತುರುವನೂರಿನ ಜನರು ಪುಂಡುಗಂದಾಯ ತೆರಬೇಕಾಯಿತು. ಈ ರುದ್ರನಾಟಕ ವೀಕ್ಷಣೆಗೆ ಮಹಾದೇವ ದೇಸಾಯಿ ಮಹಾತ್ಮರ ರಾಯಭಾರಿ ಆಗಿ ಬಂದು, ಜೈಲಿಗೆ ಭೇಟಿನೀಡಿ, ಎಲ್ಲರಿಂದ ವರದಿ ಪಡೆದು ಈ ಹೃದಯವಿದ್ರಾವಕ ಘಟನೆಗಳ ವರದಿಯನ್ನು ಗಾಂಧೀಜಿಗೆ ನೀಡಿದರು. ಎಲ್ಲ ಸತ್ಯಾಗ್ರಹಿಗಳ ಬಿಡುಗಡೆ ಆಗುತ್ತಿದ್ದಂತೆ ಎಚ್. ಸಿದ್ದಯ್ಯ, ಟಿ. ಸುಬ್ರಹ್ಮಣ್ಯಂ ಇವರನ್ನು ಸರಕಾರ ಜೈಲಿಗೆ ಹಾಕಿತು.

1940ರ ಏಪ್ರಿಲ್‌ನಲ್ಲಿ ಭಾಷ್ಯಂ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ಸಿನ ಮೂರನೇ ಅಧಿವೇಶನದಲ್ಲೂ ನಾನು ಭಾಗವಹಿಸಿದ್ದು, ಅಲ್ಲಿ ಆದ ನಿರ್ಣಯದಂತೆ ಚುನಾವಣೆಗಳಲ್ಲಿ ಪಾಲುಗೊಳ್ಳಲು ಕಾಂಗ್ರೆಸ್ ತನ್ನ ಶಕ್ತಿ ಕೇಂದ್ರೀಕರಿಸಿತು. ನಂಜನಗೂಡಿನಲ್ಲಿ ನಡೆದ ಜಿ|| ಬೋ|| ನೂತನ ಸದಸ್ಯರ ಸಭೆಯ ಕಾಲಕ್ಕೆ ಕಾಂ|| ಅಧ್ಯಕ್ಷರ ಮೇಲೆ ಹೇರಿದ ಪ್ರತಿಬಂಧಕಾಜ್ಞೆಯಿಂದ ಶಾಸನೋಲ್ಲಂಘನೆಯ ಪ್ರಸಂಗ ಬಂದಿತ್ತು. ಕೋರ್ಟಿನಿಂದನೆಯ ಮೊಕದ್ದಮೆ ಹಾಕಿ ಅನೇಕ ಮುಖಂಡರ ವಕೀಲಿ ಸನ್ನದನ್ನು ಕಿತ್ತುಕೊಳ್ಳುವ ಆಜ್ಞೆ ನೀಡಿತು ಸರ್ಕಾರ. ಇದರ ಹಿಂದೆಯೇ ಶ್ರೇಷ್ಠ ನ್ಯಾಯಾಧೀಶರಾದ ರೈಲಿಯವರು "ಈ ದೇಶದಲ್ಲಿ ಸತ್ಯ ಬಹಳ ಕೆಳಮಟ್ಟಕ್ಕೆ ಹೋಗಿದೆ" ಎಂದು ಹೇಳಿದ್ದರ ಪ್ರತಿಭಟನಾರ್ಥ 1-8-1940ರಂದು 'ದೇಶಗೌರವ' ದಿನಾಚರಣೆಯನ್ನು ಎಲ್ಲೆಡೆ ಆಚರಿಸಲಾಯಿತು. ಜಯಚಾಮರಾಜ ಒಡೆಯರಿಗೆ ಪಟ್ಟವಾದ ಸಂದರ್ಭದಲ್ಲಿ ರಾಜಬಂದಿಗಳೆಲ್ಲರ ಬಿಡುಗಡೆ ಆದರೂ ಎಚ್. ಸಿದ್ದಯ್ಯ, ಟಿ. ಸುಬ್ರಹ್ಮಣ್ಯಂರ ಬಿಡುಗಡೆ ಆಗಲಿಲ್ಲ. ಮೈಸೂರು, ಬೆಂಗಳೂರು ಪುರಸಭೆಗಳಲ್ಲಿ ಕಾಂಗ್ರೆಸ್ ಜಯಭೇರಿ ಬಾರಿಸಿ, 1941ರ ಫೆಬ್ರವರಿಯಲ್ಲಿ ನಡೆದ ಮಹಾಚುನಾವಣೆಯಲ್ಲಿ ಜಯಭೇರಿ ಬಾರಿಸಿತು. ಚುನಾವಣೆಯಲ್ಲಿ ಅಹರ್ನಿಶಿ ದುಡಿದ ನಾನು ಮುಂದೆ ನಾನಾ ರೀತಿಯ ಅನಾರೋಗ್ಯದಿಂದ ಬಳಲಿದೆ. ಸಿದ್ದಯ್ಯ, ಸುಬ್ರಹ್ಮಣ್ಯಂರ ಬಿಡುಗಡೆ ಆದರೂ ದಾಸಪ್ಪ, ಸಿದ್ದಲಿಂಗಯ್ಯ ಜೈಲು ಸೇರಿದರು. ಎಲ್ಲೆಡೆ ಖಂಡನಾಸಭೆ ಆದವು. ಎಚ್. ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ಹರಿಹರ ಬಳಿ ವಿನೋಬಾನಗರದಲ್ಲಿ ನಡೆದ ಕಾಂಗ್ರೆಸ್ಸಿಗೆ ಹೋಗಿದ್ದೆ. ನಿಜಲಿಂಗಪ್ಪ ಸ್ವಾಗತಾಧ್ಯಕ್ಷರು. ಡಾ|| ರಾಜೇಂದ್ರಬಾಬುರ ಭಾಷಣ ಕಾರ್ಯಕರ್ತರಲ್ಲಿ ನವಚೈತನ್ಯ ಹುಟ್ಟಿಸಿತು.

ಎನ್. ಮಾಧವರಾಯರ ದಿವಾನಗಿರಿ ಅಧ್ಯಕ್ಷ ಸಿದ್ದಯ್ಯನವರ ಮೇಲೆ ಪ್ರತಿಬಂಧಕಾಜ್ಞೆ ಹೇರಿ ಆರಂಭ ಆಯಿತು. ಕೂಲಿಕಾರರ ಸಂಘಟನೆ ಮಾಡಿದ್ದಕ್ಕೆ ಭಾಷ್ಯಂ, ತಿಮ್ಮಾರೆಡ್ಡಿಗಳ ಬಂಧನ ಆಯಿತು. ಏಪ್ರಿಲ್‌ನಲ್ಲಿ (1942) ಚನ್ನಪಟ್ಣದಲ್ಲಿ ನಡೆದ ಕಾಂಗ್ರೆಸ್ಸಿನ ಐದನೆಯ ಅಧಿವೇಶನಕ್ಕೆ ಟಿ. ಸುಬ್ರಹ್ಮಣ್ಯಂ ಅಧ್ಯಕ್ಷರು. ಸಿದ್ದಲಿಂಗಯ್ಯ,

ದಾಸಪ್ಪ, ಹನುಮಂತಯ್ಯ, ಮಳವಳ್ಳಿ ವೀರಪ್ಪ ಇವರ ಬಂಧನವನ್ನು ವಿಮರ್ಶಿಸಿ, ಸರ್ಕಾರದ ದಬ್ಬಾಳಿಕೆಯ ವಿರುದ್ಧ ಮತ್ತೊಂದು ಹೋರಾಟಕ್ಕೆ ಕರೆಕೊಡುವ ನಿರ್ಣಯ ಘೋಷಿತವಾಯಿತು.

1942ರ ಕ್ರಾಂತಿ ಆರಂಭ ಆಗಲು ಸಂಸ್ಥಾನದ ಪತ್ರಿಕಾಸಂಪಾದಕರೂ ಸೆರೆಮನೆ ಕಂಡರು. ಹೆಗ್ಗಡದೇವನಕೋಟೆ ಪ್ರದೇಶದಲ್ಲಿ ಅಡವಿಯಲ್ಲಿ ಅಡಗಿದ್ದು ಬೊಮ್ಮೇಗೌಡ, ಪುಟ್ಟೇಗೌಡ, ದೊಡ್ಡೇಗೌಡ, ಸಂಜೀವಯ್ಯ ಇವರುಗಳ ಜೊತೆ ಅನೇಕ ಭೂಗತ ಕಾರ್ಯಗಳಾದವು. ಈಸೂರು, ಶ್ರವಣಬೆಳಗೊಳ, ತಿಪಟೂರುಗಳಲ್ಲಿ ಇದೇ ಕಾಲಕ್ಕೆ ರಕ್ತಪಾತವಾಗಿತ್ತು. ಕ್ರಾಂತಿಕಾರಿಗಳ ಕೇಂದ್ರ ಸಮಿತಿ ತನ್ನ 'ರಣಭೇರಿ' ಪತ್ರದ ಮೂಲಕ ಕ್ರಾಂತಿಕಾರ್ಯ ತ್ಯಜಿಸಿ ಜೈಲು ಸೇರಲು ಆದೇಶವಾದಂತೆ ನಾವು ಬಂಧಿತರಾದೆವು. ನಾವು ಜೈಲಿನಲ್ಲಿದ್ದಾಗಲೇ ಈಸೂರ ವೀರರಿಗೆ ಗಲ್ಲುಶಿಕ್ಷೆ ಆಗಿತ್ತು. ಇದನ್ನು ತಪ್ಪಿಸಲು ಡಿ. ಎಂ. ಸಿದ್ದಯ್ಯ, ಶಾಂತವೇರಿ ಗೋಪಾಲಗೌಡ ಅಪಾರ ಶ್ರಮ ಮಾಡಿದ್ದರು. ಕ್ವಿಟ್ ಇಂಡಿಯಾ ಚಳವಳಿಗೆ ಮೊದಲೇ ಬಂಧಿತರಾದ ದಾಸಪ್ಪ, ಸಿದ್ದಲಿಂಗಯ್ಯ ಬಿಡುಗಡೆ ಆಗಲು, ಹೊರಗಡೆ ಆಹಾರಾಭಾವ ಸ್ಥಿತಿ. ಹೊರಗಿದ್ದ ಕಾರ್ಯಕರ್ತರ ನೆರವಿನಿಂದ ಆಹಾರ ಸಮ್ಮೇಳನವನ್ನು ನಡೆಸಿ ಉಪಯುಕ್ತ ಸಲಹೆ ಕೊಟ್ಟರು ಈ ನಾಯಕರು. ಈ ಸಮ್ಮೇಳನದಲ್ಲಿ ನನ್ನ ಪಾತ್ರವೂ ಇತ್ತು. ಅನಂತರ ಒದಗಿದ ಜಿ|| ಬೋ|| ಚುನಾವಣೆಯಲ್ಲೂ ಕಾಂಗ್ರೆಸ್ಸಿನ ಗೆಲವಿಗೆ ದುಡಿದೆ. ಕಸ್ತೂರ್‌ಬಾ ಸ್ಮಾರಕ ನಿಧಿ ಸಂಗ್ರಹಕ್ಕೆ ಠಕ್ಕರ್ ಬಾಪಾರ ಜೊತೆ ಕೆಲಸಮಾಡಿದೆ. ಹನುಮಂತಯ್ಯ, ತಿಮ್ಮಾರೆಡ್ಡಿಗಳ ಬಂಧನ, ಅಧ್ಯಕ್ಷ ಸುಬ್ರಹ್ಮಣ್ಯರ ವಿರುದ್ಧ ಪ್ರತಿಬಂಧಕಾಜ್ಞೆಗಳ ಪ್ರತಿಭಟನಾಸಭೆಗಳ ಸಂಘಟನೆಗೂ ದುಡಿದೆ. ನಿಜಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ತುಮಕೂರಲ್ಲಿ ನಡೆದ ಕಾಂಗ್ರೆಸ್ ವಿಶೇಷಾಧಿವೇಶನಕ್ಕೂ ಹೋಗಿದ್ದೆ. ನಂಜನಗೂಡಿನಲ್ಲಿ 1946ರ ಡಿಸೆಂಬರ್‌ನಲ್ಲಿ ನಡೆದ ವಿದ್ಯಾರ್ಥಿ ಪರಿಷತ್ತಿನಲ್ಲಿ ಭಾಷಣಮಾಡಿದ ಲೋಹಿಯಾ, ಅಚ್ಯುತ ಪಟವರ್ಧನರಿಗೆ ರಾಜದ್ರೋಹದ ಆಪಾದನೆಯ ಮೇಲೆ ಗಡೀಪಾರಾಯಿತು. ಸರ್ಕಾರದ ಈ ಕ್ರಮದ ಬಗ್ಗೆ ಖಂಡನಾ ನಿರ್ಣಯಗಳಾದವು. ಈ ಕಾಲದಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ "Good Maharaja spoiled by bad government" ಎಂದು ಕೆ. ಹನುಮಂತಯ್ಯನವರು ಟೀಕೆಮಾಡಲು, ಅದನ್ನು ಹಿಂದೆ ಪಡೆಯಬೇಕೆಂದು ದಿವಾನರ ಆಜ್ಞೆ. ಆಕಾಶ ಕಳಚಿಬಿದ್ದರೂ ಹಿಂದೆಗೆಯೆ, ಎಂದರು ಹನುಮಂತಯ್ಯ. ರಾಜದ್ರೋಹದ ಆಪಾದನೆ ಹೊರಿಸಿ ಹನುಮಂತಯ್ಯನವರಿಗೆ ಕಠಿಣಶಿಕ್ಷೆ ವಿಧಿಸಲಾಯಿತು. ಮುಂದೆ ಸುಭಾಷ್‌ನಗರದಲ್ಲಿ ನಡೆದ ಆರನೆಯ ಕಾಂಗ್ರೆಸ್ ಅಧಿವೇಶನದಲ್ಲಿ ಕೆ. ಸಿ. ರೆಡ್ಡಿ ಅಧ್ಯಕ್ಷರು. ಉಗ್ರಚಳವಳಿಗೆ ಕಾಂಗ್ರೆಸ್‌ನ ಆದೇಶ. ದೇಶ ಸ್ವತಂತ್ರ ಆದಾಗ 'ಮೈಸೂರು ಚಲೋ' ಚಳವಳಿ ನಡೆದು, ಮೈಸೂರಲ್ಲಿ ರಾಮಸ್ವಾಮಿ ಹುತಾತ್ಮನಾದ. ಬಾಲಕ ಚಂದ್ರಶೇಖರ (ಗಾರೆಕೆಲಸದವನಂತೆ ಸೋಗುಹಾಕಿ) 14-9-1947ರಂದು ಅರಮನೆಯ

ಮೇಲೆ ರಾಷ್ಟ್ರಧ್ವಜ ಏರಿಸಿದ. ತಾಳ್ಮೆಗೆಟ್ಟ ಪೋಲೀಸರು ಅವನ ಕೈಗಳನ್ನು ಜಜ್ಜಿದರು. ಪೋಲೀಸಿನವನೊಬ್ಬ ಹೊಡೆದ ಗುಂಡು ಚಂದ್ರಶೇಖರನ ತಲೆಯನ್ನು ಹಾದುಹೋದರೂ ಅವನು ಜೀವದಿಂದ ಉಳಿದ. ಮದ್ರಾಸಿನ ಜಯರಾಂ ಮೈಸೂರು ಕೋರ್ಟಿನ ಮೇಲೆ ಧ್ವಜ ಹಾರಿಸಿದರು.

ಮೈಸೂರು ಜೈಲಿನಲ್ಲಿ ನಾವಿದ್ದಾಗ ಆಗ ನಮ್ಮ ಜೊತೆ ಈಸೂರಿನ ವೀರರು ಸ್ವ|| ಎ. ವಿ. ನರಸಿಂಹರೆಡ್ಡಿ, ನಿಜಲಿಂಗಪ್ಪ, ಪಾರ್ಥನಾರಾಯಣ ಪಂಡಿತ್, ಎಂ. ಎಲ್. ನಂಜರಾಜೇ ಅರಸ್ ಮುಂತಾದ ಪ್ರಮುಖರಿದ್ದರು. ನಾವು ಅಲ್ಲಿ 800 ಜನರಿದ್ದೆವು. ಕೊಣನೂರಿನ ರಾಮಶೆಟ್ಟಿ ಆಮಶಂಕೆಯಿಂದ 28-9-1947ರಂದು ಅಲ್ಲಿ ನಿಧನರಾದದ್ದು ಆಗಿನ ಒಂದು ದುರಂತ ಘಟನೆ.

ಮೈ.ಮೈ. 16

# ವಿ. ಎಸ್. ವೆಂಕೋಬರಾವ್

ಜನನ : 1924 ಉದ್ಯೋಗ : ಕಾಂಗ್ರೆಸ್ ಆಫೀಸಿನಲ್ಲಿ ವಿಳಾಸ : 6, ಎಡ್ವರ್ಡ್ ರಸ್ತೆ, ಬೆಂಗಳೂರು-1

---



ಡಿ ವಿ ಜಿಯವರ ಬರಹಗಳನ್ನು ಓದುತ್ತಿದ್ದ ನಾನು ಎಸ್.ಎಸ್.ಎಲ್.ಸಿ.ಯಲ್ಲಿ ಓದುತ್ತಿದ್ದಾಗ 'ಪೇಟ್ರಿಯಟ್' ಎಂಬ ಹಾಡಿನಿಂದ ತೀರ ಪ್ರಭಾವಿತನಾಗಿದ್ದೆ. 1937ರಲ್ಲಿ ಮೈಸೂರಿನ ಟೌನ್‌ಹಾಲ್ ಬಳಿ ನರಿಮನ್ನರ ಭಾಷಣ ಕೇಳಿ ಉತ್ಸ್ಫೂರ್ತನಾದೆ. ಅದೇ ರೀತಿ ಮುಂದೆ ಪಟ್ಟಾಭಿ ಸೀತಾರಾಮಯ್ಯ, ರಾಜಕುಮಾರಿ ಅಮೃತ್ ಕೌರ್ ಇವರ ಭಾಷಣಗಳನ್ನೂ ಕೇಳಿದೆ. 1942ರ ಚಳವಳಿ ಶುರು ಆದಾಗ ಟಿ. ನರಸೀಪುರ, ಬನ್ನೂರು ಮುಂತಾದ ಸುತ್ತಲ ಹಳ್ಳಿಗಳಲ್ಲಿ ಬ್ರಿಟಿಷ್‌ವಿರೋಧಿ ಘೋಷಣೆ ಪ್ರಚಾರಮಾಡುತ್ತ ನಾವು 8-10 ಜನರು ತಿರುಗಾಡಿದೆವು. ಪಪಮಾಸ, ಟಿ. ಆರ್. ವರಾಹಮೂರ್ತಿ, ಎಸ್. ನಾಗಭೂಷಣ, ನಾಗಪ್ಪ, ಕೃಷ್ಣಯ್ಯಂಗಾರ್ ಇತ್ಯಾದಿ ಜನರು ಇದ್ದೆವು. ಮೂಗೂರು ಬಳಿ ನಮ್ಮನ್ನು ಬಂಧಿಸಿ ಮೈಸೂರು ಜೈಲಿಗೆ ತಂದರು. ಅಲ್ಲಿ 3-9-1942ರಿಂದ 18-10-1942ರ ವರೆಗೆ ಇದ್ದೆವು. ಆಗ ಜೈಲಿನಲ್ಲಿ ಲಾಠೀಚಾರ್ಜು ಆಗಿ ನಮ್ಮಲ್ಲಿ ಅನೇಕರನ್ನು ಕೆಬ್ಬೇಕಟ್ಟೆ ಜೈಲಿಗೆ ವರ್ಗಾಯಿಸಿದರು.

ಅಲ್ಲಿಂದ ನಾವು 3-4 ಜನ ತಪ್ಪಿಸಿಕೊಂಡು ಹೋದೆವು. ಟಿ. ಆರ್. ವರಹಾಮೂರ್ತಿ, ಕಾಮತ್ ಮತ್ತು ನಾನು ಮಂಗಳೂರು, ಕೇರಳ ಸುತ್ತಿ ಮೈಸೂರಿಗೆ ಬಂದೆವು. ಹೋದಲ್ಲೆಲ್ಲಾ ಟೆಲಿಫೋನ್ ತಂತಿ ಕತ್ತರಿಸುತ್ತಿದ್ದೆವು. ಮೈಸೂರಿಗೆ ಬಂದಾಗ 1943ರ ಅಕ್ಟೋಬರ್‌ನಲ್ಲಿ ಗಾಂಧೀಜಯಂತಿ ಆಚರಿಸಿ ಮೆರವಣಿಗೆ, ಖಾದೀಮಾರಾಟ ಮಾಡಿದೆವು. ಎಚ್. ವೈ. ಶಾರದಾಪ್ರಸಾದ್ ಮತ್ತು ನನ್ನ ಮೇಲೆ ಪೋಲೀಸರು ಈ ಬಗ್ಗೆ ಕೇಸು ಹಾಕಿ ಒಂದು ವರ್ಷ ಅಲೆಸಿ, ಕೊನೆಗೆ ಬಿಟ್ಟುಬಿಟ್ಟರು. ಲಾಯರ್ ಶ್ರೀರಂಗಾಚಾರ್, ನಾರಾಯಣಾಚಾರ್ ನಮ್ಮ ಪರ ವಾದಿಸಿದರು. ಈ ಕಾಲದಲ್ಲಿ ಎಂ. ವಿ. ಕೃಷ್ಣಪ್ಪ, ಶಾರದಾಪ್ರಸಾದ್ ವಿದ್ಯಾರ್ಥಿಗಳ ನಾಯಕರು.

ನಾನು, ಟಿ. ಆರ್. ವರಾಹಮೂರ್ತಿ, ಎಸ್. ಸಂಜುಂಡರಾವ್ ಈ ಮೂವರನ್ನು 1946ರಲ್ಲಿ ಎಚ್. ಸಿ. ದಾಸಪ್ಪನವರು ರಾಜಾಜಿಯವರ ತಿರುಚಂಗೋಡು ಆಶ್ರಮದಲ್ಲಿ ಆರು ತಿಂಗಳ ಶಿಕ್ಷಣ ತರಬೇತಿಗೆ ಕಳುಹಿಸಿದರು. ಮರಳಿ ಬಂದಮೇಲೆ ಕೆಂಗೇರಿ ಗುರುಕುಲ ಆಶ್ರಮದಲ್ಲಿ ಮೂಲಶಿಕ್ಷಣದ ಉಪಾಧ್ಯಾಯನಾಗಿದ್ದೆ. ಮುಂದೆ 'ಮೈಸೂರು ಚಲೋ' ಚಳವಳಿ ಶುರು ಆಗಲು, ನಾನೂ ಪ್ರಿಯವ್ರತ ಅವರೂ ನಿತ್ಯ ಕೆಂಗೇರಿಯಲ್ಲಿ ಭಾಷಣ ಮಾಡುತ್ತಿದ್ದೆವು. ಕಡೆಗೆ ನಾನು 200-300 ಸತ್ಯಾಗ್ರಹಿಗಳ ಜೊತೆ ಮೈಸೂರಿಗೆ ಸಾಗಿದೆ. ಕುಂಬಳಗೋಡು ಬಳಿ ನಮ್ಮನ್ನು ಸಶಸ್ತ್ರ ಪೋಲೀಸರು ತಡೆದು ವ್ಯಾನಿನಲ್ಲಿ ತುಂಬಿ ಬನ್ನೇರುಘಟ್ಟದ ಬಳಿ ಅಡವಿಯಲ್ಲಿ ಬಿಟ್ಟರು. ಅಲ್ಲಿಂದ ಬಿಡದಿಗೆ ಬಂದು ಮತ್ತೆ ಸತ್ಯಾಗ್ರಹ ಮುಂದುವರಿಸಲು, ರಾಮನಗರದ ಬಳಿ ಪೋಲೀಸರು ಲಾಠೀ ಚಾರ್ಜ ಮಾಡಿ ವಾಹನದಲ್ಲಿ ತುಂಬಿ ಕಾನಕಾನಹಳ್ಳಿ ಕಾಡಿನಲ್ಲಿ ಬಿಟ್ಟರು. ಅಲ್ಲಿಂದ ಹಳ್ಳಿಗಳಿಂದ ಹಾದು ಮಂಡ್ಯಕ್ಕೆ ಬಂದೆವು. ರಾತ್ರಿ ಮಂಡ್ಯದಲ್ಲಿ ತಂಗಿ ಮಾರನೆಯ ದಿನ ಮೈಸೂರಿಗೆ ಸಾಗಿದೆವು. ಹೊಟ್ಟೆಗನಹಳ್ಳಿ ಎಂಬಲ್ಲಿ ತೆಂಗಿನ ತೋಪಿನಲ್ಲಿ ಮರಕ್ಕೆ ಕಟ್ಟಿದ ಹೆಂಡದ ಮಡಿಕೆಗಳನ್ನು ಕಲ್ಲೆಸೆದು ನಾವು ಒಡೆಯಲು ಹೆಂಡದ ಕಂಟ್ರಾಕ್ಟರ್ ಬಂದೂಕು ಎತ್ತಿ ಹೊಡೆಯಲು ಬಂದನು. ಆದರೆ ಬೈರಾಪಟ್ಟಣದ ಪಟೇಲರು ಕಂಟ್ರಾಕ್ಟರನ್ನು ಗದರಿಸಿ ವಾಪಸ್ಸು ಕಳಿಸಿ ಅದೇ ತೋಟದಿಂದ ನಮಗೆ ಎಳನೀರು ಕೊಡಿಸಿದನು. ಅನಂತರ ಅರಕೆರೆಗೆ ಬಂದೆವು. ಅಲ್ಲಿ ಭಾರೀ ಬಹಿರಂಗ ಸಭೆಯಲ್ಲಿ ನಾನು ಭಾಷಣಮಾಡಿದೆ. ಮುಂದೆ ಶ್ರೀರಂಗಪಟ್ಟಣ. ಅಲ್ಲಿ ನದಿಯ ಸೇತುವೆಯ ಮೇಲೆ ಸೈನಿಕರ ಕಾವಲು ಇರಲು, ನದಿಯನ್ನು ರಾತ್ರಿ ಅಂಬಿಗರ ನೆರವಿನಿಂದ ದಾಟಿ ಸೆಪ್ಟೆಂಬರ್ 14ಕ್ಕೆ ಮೈಸೂರು ಸೇರಿದೆವು. ಊರಲ್ಲಿ ಕರ್ಫ್ಯೂ ಇತ್ತು. ಒಂಟಿಕೊಪ್ಪಲಲ್ಲಿ ಪೋಲೀಸರು ಸುತ್ತುವರಿದು ಲಾಠಿಯಿಂದ ಹೊಡೆದರು. ಪುನಃ ಲಾರಿಯಲ್ಲಿ ನಮ್ಮನ್ನು ತುಂಬಿ ಕೋಲಾರ ಗಡಿಯಲ್ಲಿ ಬಿಟ್ಟರು. ನಾನು ಆಗ ಎಂ. ವಿ. ಕೃಷ್ಣಪ್ಪನವರ ಗುಂಪಿಗೆ ಸೇರಿಕೊಂಡೆ. ಅಂದಿನಿಂದ ತಲೆಮರೆಸಿಕೊಂಡು ಕೆಲಸಮಾಡುತ್ತಿದ್ದೆ.

ಮೈ.ಮೈ. 17

# ಕೆ. ಸುಬ್ಬಕೃಷ್ಣಯ್ಯ

ಜನನ : 1925

ಉದ್ಯೋಗ : ವಿದ್ಯಾ ಇಲಾಖೆಯಲ್ಲಿ ಕಾರಕೂನ

ವಿಳಾಸ : 1405/2, V ಕ್ರಾಸ್, ಕೆ.ಎಂ. ಪುರಂ, ಮೈಸೂರು

---



1942ರಲ್ಲಿ ಮೈಸೂರಲ್ಲಿ ಹೈಸ್ಕೂಲು ವಿದ್ಯಾರ್ಥಿಯಾಗಿದ್ದ ನಾನು ಗಾಂಧೀಜಿಯವರ ಕರೆಯಂತೆ ಸಭೆ, ಮೆರವಣಿಗೆ, ಪಿಕೆಟಿಂಗ್‌ಗಳಲ್ಲಿ ಪಾಲುಗೊಳ್ಳುತ್ತಿದ್ದೆ. ಎಂ. ವಿ. ಕೃಷ್ಣಪ್ಪ, ಶಾರದಾಪ್ರಸಾದ್, ಗಫಾರ್‌ಖಾನ್, ಹೆನ್ರಿ ದೇವಿದಾಸ್, ಭೂಪಾಳಂ ವಾಸುದೇವ, ಬಾ. ಸು. ಕೃಷ್ಣಮೂರ್ತಿ ಹಾಗೂ ಇನ್ನೂ ಅನೇಕ ವಿದ್ಯಾರ್ಥಿಗಳು ಆಗ ಚಳವಳಿಯಲ್ಲಿ ಮುಂದೆ ಇದ್ದವರು. 2–9–1942ರಂದು ಮಹಾರಾಣಿ ಹೈಸ್ಕೂಲಿನ ಮುಂದೆ ನನ್ನ ಬಂಧನವಾಗಿ 28–10–1942ರಂದು ಜೈಲಿನಲ್ಲೇ ವಿಚಾರಣೆ ಆಗಿ ಒಂದು ವರ್ಷ ಕಠಿಣಶಿಕ್ಷೆ ವಿಧಿಸಿದರು. ಆದರೆ ಮುಂದೆ 29–12–1942ರಲ್ಲಿ ಬೇಷರತ್ತಾಗಿ ನಮ್ಮ ಬಿಡುಗಡೆ ಆಯಿತು.

ಬಿಡುಗಡೆಯನಂತರ ಬಡತನದ ಕಾರಣದಿಂದ ನಾನು ಮೈಸೂರು ತ್ಯಜಿಸಿ ಬೆಂಗಳೂರಿಗೆ ಹೋಗಿ ಅಲ್ಲಿ ನನ್ನ ಮಾವ ಕಲಾಮಂದಿರದ ಅ. ನ. ಸುಬ್ಬರಾಯರ ಆಸರೆಯಲ್ಲಿದ್ದು ಆರ್ಯ ವಿದ್ಯಾಶಾಲೆಗೆ ಸೇರಿ ಶಿಕ್ಷಣ ಮುಂದುವರಿಸಿರಲು 1947ರ 'ಮೈಸೂರು ಚಲೋ' ಚಳವಳಿ ಬಂತು. ಈ ಚಳವಳಿ ಕಾಲಕ್ಕೆ ಬೆಂಗಳೂರಲ್ಲಿ ಕೆಲಸ ಮಾಡಿದವರೆಂದರೆ ಎಂ. ವಿ. ವಸಂತಯ್ಯ, ರಾಮಚಂದ್ರ ಶರ್ಮ, ವಿ. ಎಸ್. ಕೃಷ್ಣ ಅಯ್ಯರ್, ವಿ. ಅಣ್ಣಯ್ಯ, ಬಾ. ಸು. ಕೃಷ್ಣಮೂರ್ತಿ, ಎನ್. ಡಿ. ಶಂಕರ್, ಕೆ. ಆರ್. ಶ್ರೀಧರ್, ಶಾಮರಾಜ ಅಯ್ಯಂಗಾರ್, ಎನ್. ವ್ಯಾಸತೀರ್ಥ, ಇ. ಆರ್. ಸೇತುರಾಂ, ವರದರಾಜ್, ಎ. ಎಲ್. ಶ್ರೀನಿವಾಸ್, ಶೇಷಶಾಯಿ, ರಾಮಲಿಂಗೇಗೌಡ. ಮಹಿಳೆಯರಲ್ಲಿ ಎಲ್. ಜಿ. ಸುಮಿತ್ರ, ಎಲ್. ವಿ. ಶಾರದ, ಶಾಂತ, ವಿಮಲ, ವೃಂದ ಇನ್ನನೇಕರು.

ಮೈಸೂರಿಗೆ ಒಂದು ಜಾಥಾ ಕೆ. ಟಿ. ಭಾಷ್ಯಂರ ಮನೆಯಿಂದ ಹೊರಟಿರಲು ಅದರಲ್ಲಿ ನಾನೂ ಇದ್ದೆ. 200–300 ಜನರ ಈ ತಂಡ ಬ್ರಿಯಾಂಡ್ ಚೌಕದಲ್ಲಿ ಲಾಠೀ ಛಾರ್ಜ್ ತಪ್ಪಿಸಿಕೊಂಡು ನಾಯಂಡನಹಳ್ಳಿಯವರಿಗೆ ತಲುಪಿಸಲು, ಆ ಪೈಕಿ 25

ವಿದ್ಯಾರ್ಥಿಗಳು ಹಾಗೂ ಆ ಮಹಿಳೆಯರನ್ನು ಅಲ್ಲಿ ಬಂಧಿಸಿ ಒಂದು ದಿನ ಬಸ್ಸಿನಲ್ಲಿ ಇಟ್ಟುಕೊಂಡು, ಮಾರನೆ ದಿನ ಲಾಲ್‌ಬಾಗ್ ಬಳಿ ತಂದುಬಿಟ್ಟರು. ಈ ತಂಡದಲ್ಲಿ ನಾನೂ ಇದ್ದೆ. ಮುಂದೆ ಆಚಾರ್ಯ ಪಾಠಶಾಲಾ, ನ್ಯಾಷನಲ್ ಕಾಲೇಜ್, ಗಾಂಧೀ ಬಜಾರ್ ಈ ಪ್ರದೇಶಗಳಲ್ಲಿ ಸಭೆ, ಮೆರವಣಿಗೆ ನಡೆಸುತ್ತಿದ್ದರು. ಆಗ ನಾನು ಮರೆಯಾಗಿದ್ದು ಕೆಲಸಮಾಡುತ್ತಿದ್ದೆ. ಡಾ|| ಆರ್. ಎನ್. ಮೂರ್ತಿ ಅವರಲ್ಲಿ ಇದ್ದೆ. ಮುಂದೆ ನನ್ನನ್ನು ಹಿಡಿದು ಬಂಧಿಸಿ ಸೆಂಟ್ರಲ್ ಜೈಲಿನಲ್ಲಿ ಇಟ್ಟರು. ಜೈಲಿನಲ್ಲಿ ಟಿ. ಟಿ. ಶರ್ಮ, ಭಾಷ್ಯಂ, ಟಿ. ಸುಬ್ರಹ್ಮಣ್ಯ ಮುಂತಾದ ಅನೇಕ ನಾಯಕರಿದ್ದರು.

1958ರಿಂದ ವಿದ್ಯಾ ಇಲಾಖೆಯಲ್ಲಿ ಸೇವೆಸಲ್ಲಿಸುತ್ತಿರುವೆ.

ಮೈ.ಮೈ. 18

## ಎಚ್. ಕೆ. ಸುಬ್ಬರಾವ್

ಜನನ : 1916 ಉದ್ಯೋಗ : ಮುದ್ರಣಾಲಯ ವಿಳಾಸ : 240, ಜ್ಯುಬಿಲಿ ರಸ್ತೆ, ಹುಣಸೂರು

---



ನಮ್ಮೂರು ಹೊಳೇನರಸೀಪುರ ತಾ||ನ ಹಿರಿಹಳ್ಳಿಗೆ 2 ಮೈಲಿ ದೂರದಲ್ಲಿ ಬ್ಯಾಗತಹಳ್ಳಿ ಎಂಬಲ್ಲಿ ಪ್ರಾಥಮಿಕ ಶಾಲೆ ಇತ್ತು. ಅಲ್ಲಿಯೇ ನನ್ನ ಪ್ರಾರಂಭಿಕ ವಿದ್ಯಾಭ್ಯಾಸ. ಸುಬ್ರಹ್ಮಣ್ಯಂ ಎಂಬುವರು ಅಲ್ಲಿ ಹಂಗಾಮಿ ಅಧ್ಯಾಪಕರಾಗಿದ್ದು, ಪೂರ್ಣ ಖಾದೀ ಧಾರಿಗಳಾಗಿದ್ದರು. ಅಷ್ಟೇ ಅಲ್ಲ. ಅವರು ರಾಟೆಯಿಂದ ನೂಲುತ್ತಿದ್ದರು. ಅನಂತರ ಸರ್ಕಾರದಿಂದ ನಡೆಸುತ್ತಿದ್ದ ಖಾದೀ ಕೇಂದ್ರಗಳಾದ ಕೋಲಾರ ಉಣ್ಣೆ ಕೇಂದ್ರ, ಬದನವಾಳು, ಹೊಳಲ್ಕೆರೆ, ಹೊಳೆನರಸೀಪುರ ಇತ್ಯಾದಿ ಕೇಂದ್ರಗಳ ವ್ಯವಸ್ಥಾಪಕರೂ ಆಗಿದ್ದರು. ಅವರು ನೂಲುತ್ತಿದ್ದುದನ್ನು ನೋಡಿ ನನಗೂ ಅವರಂತೆ ನೂಲಬೇಕೆಂಬಾಸೆ. ಆದರೆ 45 ರೂ. ಬೆಲೆಬಾಳುವ ರಾಟೆ ನನಗೆಲ್ಲಿಂದ ಬರಬೇಕು? ಅದಕ್ಕೆ ಬದಲು ಬಳಪದ ಕಲ್ಲು ಮತ್ತು ಬಿದಿರುಕಡ್ಡಿಯಿಂದ (ಜನಿವಾರಕ್ಕೆ ದಾರ ತೆಗೆಯಲು ನಮ್ಮ ತಂದೆಯವರು ಮಾಡಿಕೊಂಡಿದ್ದ) ತಕಲಿ ಮಾಡಿಕೊಂಡು ದಾರ ತೆಗೆಯಲು ಪ್ರಾರಂಭಿಸಿದೆ.

ಪ್ರಾಥಮಿಕ ಶಾಲಾಭ್ಯಾಸ ಮುಗಿದನಂತರ ಮಾಧ್ಯಮಿಕ ಶಾಲೆಗೆ ನಾಲ್ಕು ಮೈಲಿ

ದೂರದ ಹೊಳೆನರಸೀಪುರಕ್ಕೆ ಹೋಗಬೇಕಿತ್ತು. ಪ್ರತಿನಿತ್ಯ 8 ಮೈಲಿ ನಡೆದು ಹೋಗಿ ಬರುತ್ತಿದ್ದೆ. ಆ ಕಾಲಕ್ಕೆ ಗಾಂಧೀಜಿ ಆ ಊರಿಗೆ ಬಂದು ಸಾರ್ವಜನಿಕರನ್ನುದ್ದೇಶಿಸಿ ಭಾಷಣ ಮಾಡಿದರು. ಅಂದು (ದಿನಾಂಕ ನೆನಪಿಲ್ಲ) ಗಾಂಧೀಜಿಯವರ ದರ್ಶನಭಾಗ್ಯ ದೊರೆಯಿತಲ್ಲದೆ, ಅವರ ಅಮೃತವಾಣಿ ಕೇಳುವ ಅವಕಾಶ ದೊರೆಯಿತು. ಅಂದು ಮೊಳಗಿದ ಜೈಕಾರದಲ್ಲಿ ನನ್ನದೂ ಒಂದು ಪುಟ್ಟ ಕಂಠ ಸೇರಿದ್ದಿತು.

ಬಿಡುವಿನ ವೇಳೆಯಲ್ಲಿ ಕೃಷ್ಣಮೂರ್ತಿ ಎಂಬುವರಿಂದ ಹಿಂದೀ ಹೇಳಿಸಿಕೊಳ್ಳಲೂ ಪ್ರಾರಂಭಿಸಿದೆ. ಮನೆಯ ಅಟ್ಟದಲ್ಲಿದ್ದ ಮರದ ತೊಟ್ಟಿಲನ್ನು ಖಾಲಿ ಮಾಡಿ ಅದರ ಪಟ್ಟಿಗಳನ್ನು ಕಳಚಿ, ದನದ ಕೊಟ್ಟಿಗೆಯಲ್ಲಿ ಸದ್ದಿಲ್ಲದೆ ಮಚ್ಚಿನಿಂದ ರಾಟೆ ಮಾಡಲು ಪ್ರಾರಂಭಿಸಿದೆ. ಇದು ಹೇಗೋ ನಮ್ಮ ತಾಯಿಯವರಿಗೆ ತಿಳಿದು ನನ್ನನ್ನು ಚೆನ್ನಾಗಿ ಬೈದು ಥಳಿಸಿದರು. ಆ ವೇಳೆಗಾಗಲೇ ತೊಟ್ಟಿಲಿನ ರೂಪ ಮಾಯವಾಗಿ ರಾಟೆಯಾಗಿತ್ತು. ನಾನೇ ಮಾಡಿದ ರಾಟೆಯಲ್ಲಿ ದಾರ ತೆಗೆಯುವ ಕನಸು ನನಸಾದಾಗ ತಾಯ್ತಂದೆಗಳಿಂದ ತಿಂದ ಬೈಗುಳ, ಏಟು ಲೆಕ್ಕಕ್ಕೆ ಬರಲಿಲ್ಲ. ಅಂದು ಗಾಂಧೀಜಿ ಹಿಡಿಸಿದ ಖಾದೀ ಹುಚ್ಚು ಮುಂದೆ ನಾನಾ ರೂಪ ತಾಳಿ ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸಿ ನನ್ನ ಅಳಿಲು ಸೇವೆಯನ್ನು ಸಲ್ಲಿಸುವ ಸೌಭಾಗ್ಯ ಲಭಿಸುವಂತೆ ಮಾಡಿತು.

ಅನಂತರ ನನ್ನ ಹೈಸ್ಕೂಲು ವಿದ್ಯಾಭ್ಯಾಸ ಮೈಸೂರಲ್ಲಿ ಪ್ರಾರಂಭವಾಯಿತು. ಶಾಲೆಯ ಕಲಿಕೆಯ ಜೊತೆಗೆ ಹಿಂದೀ ಪ್ರಚಾರ ಸಭೆಗೆ ಹೋಗಿ ಹಿಂದೀ ವ್ಯಾಸಂಗವೂ ಮುಂದುವರಿದು 'ರಾಷ್ಟ್ರಭಾಷಾ ವಿಶಾರದ' ಪರೀಕ್ಷೆಯಲ್ಲಿ ತೇರ್ಗಡೆಯಾಯಿತು. ಈ ವೇಳೆಗೆ ಹೈಸ್ಕೂಲು ವಿದ್ಯಾಭ್ಯಾಸವು ಮುಗಿಯಿತು.

ಮೇಲಿನ ಕಲಿಕೆ ದಿನಗಳಲ್ಲೂ ಎಲ್ಲಿ ಕಾಂಗ್ರೆಸ್ ಸಭೆ, ಮೆರವಣಿಗೆಗಳು ನಡೆದರೂ ತಪ್ಪದೇ ಭಾಗವಹಿಸುತ್ತಿದ್ದೆ. ಟಿಳಕರು ನಿಧನರಾದಾಗ ಶೋಕ ಮೆರವಣಿಗೆಯಲ್ಲಿ ಹೊಳೇನರಸೀಪುರದಲ್ಲಿ ಭಾಗವಹಿಸಿದ್ದು ನೆನಪಿದೆ; ಮತ್ತೆ ಮೈಸೂರಿಗೆ ಗಾಂಧೀಜಿಯವರು ಬಂದಾಗ್ಯೂ ಅವರ ದರ್ಶನಪಡೆಯುವ ಅವಕಾಶ ದೊರೆಯಿತು. ಇಂದಿನ ಟೌನ್‌ಹಾಲ್ ಮೈದಾನದಲ್ಲೇ ಸಾರ್ವಜನಿಕ ಸಭೆಯನ್ನುದ್ದೇಶಿಸಿ, ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಭಾಷಣ ಮಾಡಿದರು. ನಾನು ಒಂದು ಲಡಿ ಚರಕದ ದಾರವನ್ನು ಅವರಿಗೆ ಹಾರವಾಗಿ ಅರ್ಪಿಸಿದೆ.

ಸ್ವಾತಂತ್ರ್ಯಸಂಗ್ರಾಮದ ಕರೆಗೆ ಓಗೊಡಲು ನಾನು ಪಡೆದ ಹಿಂದೀ ಶಿಕ್ಷಣವೂ ಒಂದು ಕಾರಣ. ಹೇಗೆಂದರೆ ಹಿಂದೀ ಪಠ್ಯಪುಸ್ತಕಗಳಲ್ಲಿ ಭಾರತದ ಸ್ವಾತಂತ್ರ್ಯಕ್ಕಾಗಿ ದುಡಿದು ಮಡಿದ ಮಹಾನುಭಾವರ ವಿಷಯಗಳೇ ಹೆಚ್ಚಾಗಿದ್ದವು. ಅಷ್ಟೇ ಅಲ್ಲ. ಗಾಂಧೀಜಿಯವರು ಹೊರಡಿಸುತ್ತಿದ್ದ ಹಿಂದೀ 'ಹರಿಜನ ಸೇವಕ' ಮತ್ತು ಮಾತೃ ಭಾಷೆಯಲ್ಲಿ ಹೊರಡಿಸುತ್ತಿದ್ದ 'ವಿಶ್ವಕರ್ನಾಟಕ' ಪತ್ರಿಕೆಯೂ ಸ್ಫೂರ್ತಿಕೊಟ್ಟವು. ಹಿಂದೀ ಭಾಷೆ ಕಲಿತ ನಾನು ಹಿಂದೀ ಶಿಕ್ಷಣವನ್ನು ಮುಫತ್ತಾಗಿ ಬೋಧಿಸುವುದೇ ನನ್ನ

ಪಾಲಿನ ರಚನಾತ್ಮಕ ಕೆಲಸವೆಂದು ಆರಿಸಿಕೊಂಡೆ. ರಾಮನಗರದಲ್ಲಿ, ಒಂದು ಪುಟ್ಟ ವ್ಯಾಪಾರೀ ಸಂಸ್ಥೆಯಲ್ಲಿ, ಕಾರಕೂನನಾಗಿ ಮಾಹೆಯಾನ 30 ರೂ. ವೇತನದ ಮೇಲೆ ಕೆಲಸಕ್ಕೆ ಸೇರಿದೆ. ಅಲ್ಲಿ ನಿಯಮಿತ ವೇಳೆಯಲ್ಲಿ ಕೆಲಸಮಾಡಿ ಬಿಡುವಿನ ಸಂಜೆ ಹಾಗೂ ಬೆಳಗಿನ ವೇಳೆಗಳಲ್ಲಿ ಮುಫತ್ತಾಗಿ ಹಿಂದೀ ಬೋಧಿಸಲು ಪ್ರಾರಂಭಿಸಿದೆ. ಈ ರೀತಿ ಒಂದು ವರ್ಷಕಾಲ ನೂರಾರು ಬಾಲಕಬಾಲಕಿಯರಿಗೆ ಹಿಂದೀ ಶಿಕ್ಷಣ ಕೊಡುತ್ತಿದ್ದೆ. ಕೆಲಸಕ್ಕಿದ್ದ ವ್ಯಾಪಾರೀ ಸಂಸ್ಥೆಯ ಮಾಲೀಕರಿಗೆ ನಾನು ನನ್ನ ಬಿಡುವಿನ ವೇಳೆಯಲ್ಲಿ ತಮ್ಮ ಸಂಸ್ಥೆಗೆ ಏಕೆ ಮುಫತ್ತಾಗಿ ದುಡಿಯಬಾರದೆಂಬ ಆಶಯ. ನನ್ನ ಹಿಂದೀ ಪ್ರಚಾರದ ಕಾರ್ಯವನ್ನು ಗುರುತಿಸಿಕೊಂಡು ನನ್ನ ಕೆಲಸದ ವೇಳೆಯನ್ನು ಅದೇ ಸಮಯಕ್ಕೆ ಬದಲಾಯಿಸಿದರು. ನಾನು ಹಿಂದೀ ಪ್ರಚಾರ ಕೈಬಿಡಲು ಸಿದ್ಧನಾಗದೆ, ಅವರ ಕೆಲಸಕ್ಕೆ ರಾಜೀನಾಮೆ ಕೊಟ್ಟೆ. ಅನಂತರ ಒಂದು ತಿಂಗಳಕಾಲ ಹಿಂದೀ ಪ್ರಚಾರ ಮುಂದುವರಿಯಿತು. ಬೇರೆಲ್ಲಿಯೂ ಆ ಊರಿನಲ್ಲಿ ನನಗೆ ಉದ್ಯೋಗ ದೊರೆಯಲಿಲ್ಲವಾದಕಾರಣ ನಾನು ಆ ಊರನ್ನೇ ಬಿಟ್ಟೆ. ಉದ್ಯೋಗವನ್ನರಸಿಕೊಂಡು 1940ರಲ್ಲಿ ಭದ್ರಾವತಿಗೆ ಹೋದೆ. ಅಲ್ಲಿಯೂ ಒಂದೆರಡು ತಿಂಗಳುಗಳು ನನಗೆ ಹೊಂದಿಕೆಯಾಗುವ ಕೆಲಸ ಸಿಗಲಿಲ್ಲ. ಈ ವೇಳೆಗೆ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಕೂಲಿಗಾರರ ಸಂಘಕ್ಕೆ ಒಬ್ಬರು ಆಫೀಸ್ ಮ್ಯಾನೇಜರು ಬೇಕೆಂದು ತಿಳಿದು ಅಂದಿನ ಅಧ್ಯಕ್ಷರಾಗಿದ್ದ ಎಸ್. ಎಲ್. ಕೃಷ್ಣರನ್ನು ಕಂಡು ಕೆಲಸಕ್ಕೆ ಸೇರಿದೆ. ಕೂಲಿಗಾರರ ಸಂಘದ ಪಕ್ಕದ ಮಹಡಿಯ ಮೇಲೆ ಒಂದು ರೂಮನ್ನು ಬಾಡಿಗೆಗೆ ಪಡೆದು ಇರತೊಡಗಿದೆ. ಕೆಲವು ದಿನಗಳಲ್ಲಿಯೇ ಸಂಘದ ಎಲ್ಲರ ಸದಸ್ಯರ ಪರಿಚಯವೂ ಆಯಿತು. ಸರದಿಯ ಮೇಲೆ ಕೆಲಸಕ್ಕೆ ತೆರಳುವ ಕೂಲಿಗಾರರಿಗೆ ರಾಷ್ಟ್ರಭಾಷೆ ಹಿಂದೀಯನ್ನು ಬೋಧಿಸಬೇಕೆಂಬ ಹಂಬಲಿಸುತ್ತಿದ್ದಂತೆಯೇ, ಅವರ ಸಹಕಾರವೂ ದೊರೆತು 'ಹಿಂದೀ ಮಿತ್ರ ಗೋಷ್ಠಿ' ಎಂಬ ಹೆಸರಿನ ಪ್ರಚಾರ ಸಂಸ್ಥೆಯೊಂದು ಸ್ಥಾಪಿತವಾಯಿತು. ಕೂಲಿಗಾರರ ಸಂಘದ ಕೆಲಸ ನಿರ್ವಹಿಸಿಕೊಂಡು ಉಳಿದ ವೇಳೆಯನ್ನೆಲ್ಲಾ ಕೂಲಿಗಾರರಿಗೆ ಹಿಂದೀ ಬೋಧನೆಗಾಗಿ ವಿನಿಯೋಗಿಸುತ್ತಿದ್ದೆನು. ಈ ನನ್ನ ಚಟುವಟಿಕೆಗಳು 1942ರ ಆಗಸ್ಟ್‌ವರೆಗೂ ಮುಂದುವರಿಯಿತು.

1940 ರಿಂದ 1942ರ ವರೆಗಿನ ಎರಡು ವರ್ಷಗಳ ಕಾಲ ನನ್ನ ಹಿಂದೀ ಪ್ರಚಾರ ಮುಂದುವರಿದಿದ್ದಷ್ಟೇ ಅಲ್ಲದೆ, ಕೂಲಿಗಾರ ಸಂಘದ ಚಟುವಟಿಕೆಗಳಲ್ಲೂ ಅತಿ ಉತ್ಸಾಹದಿಂದ ಭಾಗವಹಿಸುತ್ತಿದ್ದೆ. ಸಂಘದವರೂ ನಾನೊಬ್ಬ ತಮ್ಮ ಸಂಘದ ನೌಕರನೆಂದು ಭಾವಿಸಿರಲಿಲ್ಲ. ನನಗೂ ಸಂಬಳಕ್ಕಾಗಿದ್ದೇನೆಂಬ ಭಾವನೆಯೂ ಇರಲಿಲ್ಲ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕೂಲಿಗಾರರ ಸಂಘಟನೆಯೂ ಮುಖ್ಯ ಜೀವಾಳ ಎಂಬ ಭಾವನೆಯಿಂದ ಕೆಲಸ ಮಾಡುತ್ತಿದ್ದೆನು.

ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ ನೌಕರರು ಸಂಘದ

ಮೂಲಕ ತಮ್ಮ ನ್ಯಾಯಯುತ ಬೇಡಿಕೆಗಳನ್ನು, ಕಾರ್ಖಾನೆಯ ಆಡಳಿತದ ಮುಂದೆ ಇಡುತ್ತಾ ಬಂದಿದ್ದರು. ಆದರೆ ಅಂದಿನ ಸರ್ಕಾರ ಅಷ್ಟು ಸುಲಭವಾಗಿ ಅವನ್ನು ಈಡೇರಿಸುತ್ತಿರಲಿಲ್ಲ. ಆದಕಾರಣ ಕಾರ್ಮಿಕರಿಗೆ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಮುಷ್ಕರ ಹೂಡದೆ ಗತ್ಯಂತರವಿರಲಿಲ್ಲ. ಕಾರ್ಮಿಕರ ಒಗ್ಗಟ್ಟನ್ನು ಒಡೆದು ಕಾರ್ಖಾನೆಯನ್ನು ನಡೆಸುವುದೇ ಸರ್ಕಾರದ ದಬ್ಬಾಳಿಕೆಯ ತಂತ್ರವಾಗಿದ್ದಿತು. ಅದಕ್ಕಾಗಿ ಕಾನೂನಿನ ಮಂತ್ರ 144ನೇ ಸೆಕ್ಷನ್, ಒಂದು ವರ್ಷಕಾಲ ಜಾರಿಯಲ್ಲಿದ್ದು ಮುಂದುವರಿಯುತ್ತಲೇ ಬಂತು. ಕಾರ್ಮಿಕರು ಯಾವ ಸಭೆ, ಮೆರವಣಿಗೆಯನ್ನು ನಡೆಸಲೂ ಪ್ರತಿಬಂಧಕವಿದ್ದಿತು. ಈ ದಬ್ಬಾಳಿಕೆಯ ಕಾನೂನನ್ನು ಹಿಂತೆಗೆದುಕೊಳ್ಳಲು ಸಂಘದವರು ಸರ್ಕಾರವನ್ನು ಒತ್ತಾಯಪಡಿಸುತ್ತಲೇ ಬಂದಿದ್ದರೂ ಸರ್ಕಾರ ಅದಕ್ಕೆ ಕಿವಿಗೊಡಲೇ ಇಲ್ಲ. 1941ನೇ ಮೇ ಒಂದರಂದು ಕೂಲಿಗಾರರ ದಿನವನ್ನಾಚರಿಸುವುದು ಕಾರ್ಮಿಕರ ಹಕ್ಕೆಂದು ಹೇಳಿ ಅಂದು ಪ್ರತಿಬಂಧಕಾಜ್ಞೆಯನ್ನು ಹಿಂತೆಗೆದುಕೊಳ್ಳಬೇಕೆಂದು ಬೇಡಿದರು. ಆ ಬೇಡಿಕೆಗೂ ಸರ್ಕಾರ ಮಣಿಯಲಿಲ್ಲ. ಮೇ ಒಂದರಂದು ಕಾರ್ಮಿಕರೂ ಕೆಲಸಕ್ಕೆ ಹೋಗದೆ ರಜಾ ಅರ್ಜಿ ಹಾಕಬೇಕೆಂದೂ, ಅಂದು ಪ್ರತಿಬಂಧಕ ಆಜ್ಞೆಯನ್ನು ಉಲ್ಲಂಘಿಸಿ ಸಭೆ, ಮೆರವಣಿಗೆಯನ್ನು ನಡೆಸಬೇಕೆಂದೂ ತೀರ್ಮಾನಿಸಲಾಯಿತು. 1941ರ ಮೇ ಒಂದರಂದು ಪ್ರಾತಃಕಾಲ 6 ಸಾವಿರ ಕಾರ್ಮಿಕರ ಮೈಲಿ ಉದ್ದದ ಮೆರವಣಿಗೆ ಊರಲ್ಲೆಲ್ಲ ಬಾವುಟ ಜೈಕಾರಗಳೊಡನೆ ಮೆರೆಯಿತು. ಸಂಜೆ ಕಾರ್ಖಾನೆ ಮುಂದಿನ ಮೈದಾನದಲ್ಲೇ ಪ್ರಚಂಡ ಸಭೆ ನಡೆಯಿತು. ಕಾರ್ಮಿಕ ಮುಖಂಡರು ಭಾಷಣ ಮಾಡಿದರು. ಅಂದು ಯಾರೊಬ್ಬರನ್ನೂ ಬಂಧಿಸಲಿಲ್ಲ. ಪೋಲೀಸು ಬಂದೋಬಸ್ತು ಇದ್ದಾಗ್ಯೂ ಯಾವ ಅಹಿತಕರವಾದ ಘಟನೆಗಳೂ ನಡೆಯದೆ ಕಾರ್ಮಿಕರು ಶಾಂತಿ, ಶಿಸ್ತು ಮತ್ತು ಸಂಯಮದಿಂದ ವರ್ತಿಸಿದರು. ಆದ್ದರಿಂದ ಸಾರ್ವಜನಿಕರ ನೆಮ್ಮದಿಗೆ ಯಾವ ಭಂಗವೂ ಬರಲಿಲ್ಲ. ಆದಾಗ್ಯೂ ಮರುದಿನ ಬೆಳಗ್ಗೆ ಕಾರ್ಮಿಕ ಮುಖಂಡರೂ ಸಂಘದ ಅಧ್ಯಕ್ಷರೂ ಆದ ಎಸ್. ಎಲ್. ಕೃಷ್ಣ, ಹಾಲಪ್ಪ ಮತ್ತು ಶೇಷಗಿರಿ ಶಾಸ್ತ್ರಿ, ಪುಟ್ಟಯ್ಯ ಮುಂತಾದವರನ್ನು ಒಬ್ಬೊಬ್ಬರನ್ನಾಗಿ ಹುಡುಕಿ ಪಬ್ಲಿಕ್ ಸೆಕ್ಯುರಿಟಿ ಆ್ಯಕ್ಟ್ ಪ್ರಕಾರ ದಸ್ತಗಿರಿ ಮಾಡಿದರು. ಈ ಸುದ್ದಿ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರಿಗೆ ತಿಳಿಯಿತು. ಅವರೆಲ್ಲ ತಕ್ಷಣ ಕೆಲಸ ನಿಲ್ಲಿಸಿ ಹೊರ ಬಂದು, ತಮ್ಮ ಮುಖಂಡರನ್ನು ಪೋಲೀಸ್ ಠಾಣೆಯಲ್ಲಿಟ್ಟಿರುವುದನ್ನು ತಿಳಿದು ಠಾಣೆಯನ್ನು ಸುತ್ತುವರಿದು ತಮ್ಮ ಮುಖಂಡರಿಗೆ ಹಾರವನ್ನರ್ಪಿಸಲು ಮನವಿ ಮಾಡಿಕೊಂಡರು. ಆದರೆ ಪೋಲೀಸರು ಅದಕ್ಕೆ ಅವಕಾಶ ಕೊಡಲಿಲ್ಲ. ಹಿಂದಿನ ದಿನ ಸಭೆ ಮೆರವಣಿಗೆ ಎಷ್ಟು ಶಾಂತಿ ಶಿಸ್ತಿನಿಂದ ನಡೆಯಿತೋ, ಅಷ್ಟೇ ಶಾಂತಚಿತ್ತರಾಗಿ ಹಾರವನ್ನು ಅರ್ಪಿಸಲು ಠಾಣೆಯ ಸುತ್ತಲೂ ಬೆಳಗಿನಿಂದ ಮಧ್ಯಾಹ್ನ ಎರಡು ಘಂಟೆಯವರೆಗೆ ಊಟ ತಿಂಡಿಗಳಿಗೂ ಹೋಗದೆ ಕಾರ್ಮಿಕರು ನಿಂತಿದ್ದರು. ಅದನ್ನು ನೋಡಿದರೆ ನಿಜ

ನಾಗಿಯೂ ಅಹಿಂಸಾತ್ಮಕ ಸತ್ಯಾಗ್ರಹವೆಂದೇ ಹೇಳಬೇಕು. ಆದರೆ ಎಲ್ಲಿಂದಲೋ ಒಂದು ಸ್ಲ್ಯಾಗ್ ಚೂರು ಸಿಡಿದು ಬಂದೂಕುಧಾರಿಗಳ ಮಧ್ಯೆ ನಿಂತಿದ್ದ ಡಿ.ಎಸ್.ಪಿ. ಸಾಹೇಬರ ಹ್ಯಾಟನ್ನು ಹಾರಿಸಿತು. ಹ್ಯಾಟು ಹಾರಿದ್ದೇ ತಡ, ಗುಂಡು ಹಾರಿಸಲು ಆಜ್ಞೆಯಾಗಿ ಢಬ್‌ಢಬಾರ್ ಶಬ್ದ ಕೇಳಿಸಿತು. ಶಬ್ದ ಕೇಳಿ ಬೆಚ್ಚಿಬಿದ್ದ ಕಾರ್ಮಿಕರು ಸ್ವಲ್ಪ ದೂರ ಚದುರಿದರು. ಹತ್ತಿರ ಮಾರು ದೂರದಲ್ಲಿ ರೈಲ್ವೆ ಲೈನಿನಲ್ಲಿ ಬಿದಿರು ತುಂಬಿದ್ದ ರೈಲು ನಿಧಾನವಾಗಿ ಚಲಿಸುತ್ತಿತ್ತು. ರೈಲು ಡ್ರೈವರನ್ನು ರೈಲು ನಿಲ್ಲಿಸಿ ಕೆಳಗಿಳಿಯುವಂತೆ ಮಾಡಿದರು. ರೊಚ್ಚಿಗೆದ್ದ ಪ್ರತಿಯೊಬ್ಬ ಕಾರ್ಮಿಕನೂ ಒಂದೊಂದು ಬಿದಿರನ್ನೆಳೆದು ಕೊಂಡು ದೊಣ್ಣೆವರಸೆಯ ದಂಡೋ ಎಂಬಂತೆ ಮತ್ತೆ ಪೋಲೀಸ್ ಠಾಣೆಯನ್ನು ಮುತ್ತುತ್ತಾ ಬಂದರು. ಪುನಃ ಗುಂಡು ಹಾರಿಸಲು ಪೋಲೀಸರ ಬಳಿ ಮದ್ದೇ ಇರಲಿಲ್ಲ. ದೊಣ್ಣೆವರಸೆಯ ಭೀಷಣದೃಶ್ಯವನ್ನು ನೋಡಿ ಪೋಲೀಸರಿಗೆ ಪ್ರಾಣಭಯವಾಯಿತು. ಕಾರ್ಮಿಕ ಮುಖಂಡರ ಕಾಲುಕಟ್ಟಿಕೊಂಡು ಕೋಪೋದ್ರಿಕ್ತ ಕಾರ್ಮಿಕರನ್ನು ಸಾಂತ್ವನ ಗೊಳಿಸಬೇಕೆಂದು ಬೇಡಿಕೊಂಡರು. ಮೊದಲು ಗುಂಡುಹಾರಿಸಿದ ಪರಿಣಾಮವಾಗಿ ಕಾರ್ಮಿಕರಾದ ನಿಂಗಯ್ಯ, ಪುಟ್ಟಯ್ಯ ಹಾಗೂ ಸುಮಾರು 1½ ಫರ್ಲಾಂಗ್ ದೂರದ ಓಲ್ಡ್ ಟೌನಿನಲ್ಲಿ ಚರಂಡಿಯ ಬಳಿ ಆಟವಾಡುತ್ತಿದ್ದ 6 ವರ್ಷದ ಸರೋಜ ಎಂಬ ಬಾಲಿಕೆ ಬಲಿಯಾದರು. ಕಾರ್ಮಿಕರ ರೋಷಾವೇಶವನ್ನು ಕಾರ್ಮಿಕ ಮುಖಂಡರು ಹೊರಬಂದು ತಡೆಯದಿದ್ದರೆ, ಪೋಲೀಸ್ ಪ್ಯಾದೆಗಳೊಬ್ಬರೂ ಉಳಿಯುವುದಿರಲಿ, ಠಾಣೆಯ ಒಂದು ಚೂರು ಇಟ್ಟಿಗೆಯೂ ಸಹ ಸಿಗುತ್ತಿರಲಿಲ್ಲ; ಮೂವರ ಬಲಿ ತೆಗೆದು ಕೊಂಡುದರ ಬದಲು ನೂರಾರು ಪೋಲೀಸರು ಹತರಾಗುತ್ತಿದ್ದರು. ಹಿಂಸೆಗೆ ಪ್ರತಿಹಿಂಸೆ ತಕ್ಕುದಲ್ಲ ಎಂದು ಬಗೆದು ಕಾರ್ಮಿಕ ಮುಖಂಡರು ಹೊರಬಂದು ಸಮಾಧಾನ ಹೇಳಿದರು. ಗುಂಡಿಗೆ ಬಲಿಯಾದವರು ಹುತಾತ್ಮರು. ಅವರ ಆತ್ಮಕ್ಕೆ ಶಾಂತಿ ದೊರೆಯಲು ಶಾಂತ ರೀತಿಯಿಂದ ಶೋಕವನ್ನಾಚರಿಸಬೇಕೆಂದೂ ಸರ್ಕಾರದ ದಬ್ಬಾಳಿಕೆಯನ್ನು ಖಂಡಿಸಿ ಕಾರ್ಮಿಕರಿಗೆ ನ್ಯಾಯ ದೊರೆಯುವವರೆಗೆ ಮುಷ್ಕರ ಹೂಡಬೇಕೆಂದೂ ಉಪದೇಶಿಸಿದರು. ತಮ್ಮ ಮುಖಂಡರ ಅಣತಿಯಂತೆ ಕಾರ್ಮಿಕರು ಹುತಾತ್ಮರನ್ನು ಹೊತ್ತು ಊರಲ್ಲೆಲ್ಲಾ ಮೆರವಣಿಗೆ ನಡೆಸಿ ಅಂತ್ಯಕ್ರಿಯೆ ನಡೆಸಿದರು. ಶೋಕಪೂರ್ವಕವಾಗಿ ಕಪ್ಪುಬಾವುಟ ಪ್ರದರ್ಶಿಸಿ ಕೆಲಸಕ್ಕೆ ಹೋಗದೇ ಶೋಕದಿನವನ್ನಾಚರಿಸಿದರು. ಮರು ದಿನದಿಂದ ಸರ್ಕಾರ ಸೈನ್ಯವನ್ನು ಕರೆಯಿಸಿ ಕಾವಲು ಹಾಕಿದರು; ಕರ್ಫ್ಯೂ ವಿಧಿಸಿದರು; ಮುಷ್ಕರ ಕಾನೂನುಬಾಹಿರವೆಂದು ಸಾರಿದರು. ಕಾರ್ಮಿಕ ಸಂಘದ ಕಾರ್ಯಸಮಿತಿ ಸದಸ್ಯರು, ಹಾಗೂ ಆಫೀಸ್ ಮ್ಯಾನೇಜರ್ ಆದ ನನ್ನನ್ನು ಬಂಧಿಸಿ, ಬಿಡುಗಡೆಮಾಡಿ ಪ್ರತಿಬಂಧಕಾಜ್ಞೋಲ್ಲಂಘನೆ, ರಾಜದ್ರೋಹದ ಆಪಾದನೆ ಹೊರೆಸಿ, ದೊಂಬಿ ಲೂಟಿ ನಡೆಸಿದರೆಂದು ಹಲವು ಹತ್ತು ಕಾನೂನುಗಳನ್ನು ಅನ್ವಯಿಸಿದರು. ಶಿವಮೊಗ್ಗ ಕೋರ್ಟಿನಲ್ಲಿ ಮೊಕದ್ದಮೆ ಹೂಡಿದರು. ಸುಮಾರು ಒಂದೂವರೆ ವರ್ಷಕಾಲ ವಿಚಾರಣೆ

ಮುಂದುವರಿಯಿತು. ಕಾಂಗ್ರೆಸ್ ಮುಖಂಡರೂ, ವಕೀಲರೂ ಆದ ದಿ|| ಮಾಧವ ರಾಯರು ನನ್ನ ಪರ ವಕಾಲತ್ತು ವಹಿಸಿದರು.

ಬಂಧನಕ್ಕೊಳಗಾದ ಮುಖಂಡರನ್ನು ಹದಿನೈದು ದಿವಸಗಳ ಕಾಲ ಸೆರೆಯಲ್ಲಿಟ್ಟು ಶಿವಮೊಗ್ಗ ಜಿಲ್ಲೆಯಿಂದ ಹೊರದೂಡಿದರು. ಸರ್ಕಾರದ ಕಿರುಕುಳ, ಕೆಲಸ ಕಳೆದು ಕೊಳ್ಳುವ ಭೀತಿ, ವೇತನವಿಲ್ಲದೆ ಉಪವಾಸ ಮಾಡುವಂತಹ ಪರಿಸ್ಥಿತಿ ಸಹಿಸಲಾರದೆ ದಿನೇ ದಿನೇ ಕೆಲಸಕ್ಕೆ ಹಾಜರಾಗುವ ಕಾರ್ಮಿಕರ ಸಂಖ್ಯೆ ಅಧಿಕವಾಯಿತು. ಆದರೆ ಸರ್ಕಾರದ ದಬ್ಬಾಳಿಕೆ ಬಗ್ಗೆ ಅಶಾಂತಿ, ಅತೃಪ್ತಿ ಕಡಿಮೆಯಾಗಲಿಲ್ಲ. ಜಿಲ್ಲೆಯಿಂದ ಹೊರದೂಡಿದ್ದ ಮುಖಂಡರನ್ನು ಹಿಂದಕ್ಕೆ ಕರೆಯಿಸಿಕೊಳ್ಳುವ ಪ್ರಯತ್ನ ಸಫಲವಾಗಲು ಆರು ತಿಂಗಳು ಹಿಡಿಯಿತು. ಆದರೆ ಸಭೆ ಮತ್ತು ಮೊಕದ್ದಮೆಗಳು ಮುಂದುವರಿಯುತ್ತಲೇ ಬಂದವು. ಕಾರ್ಮಿಕರ ಸಂಘಟನೆಯು ಕುಂದದಂತೆ ಆಗಾಗ್ಗೆ ಕಾರ್ಮಿಕರ ಸಭೆಯನ್ನು ಭದ್ರಾವತಿಯಿಂದ ನಾಲ್ಕು ಮೈಲಿ ದೂರದಾಚೆಯ ನಿದಿಗೆ ಗ್ರಾಮದಲ್ಲಿ ನಡೆಸುತ್ತಿದ್ದೆವು. ಅದೇ ಗ್ರಾಮದ ರುದ್ರಪ್ಪನವರು ಕಾರ್ಮಿಕರ ಪರ ಸಹಾನುಭೂತಿಯುಳ್ಳವರಾಗಿದ್ದುದೇ ಅಲ್ಲಿ ಸಭೆ ನಡೆಸಲು ಕಾರಣ.

ಈ ರೀತಿ ಕಾರ್ಮಿಕರಲ್ಲಿ ಅತೃಪ್ತಿ, ಅಸಮಾಧಾನಗಳು ಮುಂದುವರಿಯುತ್ತಿರುವ ಕಾಲದಲ್ಲೇ 'ಕ್ವಿಟ್ ಇಂಡಿಯಾ' ಚಳವಳಿ ಪ್ರಾರಂಭವಾಯಿತು. 'ಮಾಡು ಅಥವಾ ಮಡಿ' ಎಂಬ ಕರೆ ಕಾರ್ಮಿಕರಿಗೆ ಹೊಸ ಚೇತನ ತಂದಿತು; ಮುಖಂಡರು ಹಾಗೂ ಕಾರ್ಮಿಕರು ಕೆಲಸಕ್ಕೆ ಹೋಗದೆ ನೇರವಾಗಿ ಸ್ವಾತಂತ್ರ್ಯಸಂಗ್ರಾಮದಲ್ಲಿ ಸೇರಿದರು. ಸಭೆ, ಮೆರವಣಿಗೆಗಳನ್ನು ಒಂದೇ ಸಮನೆ ನಡೆಸಲಾಯಿತು. ಮುಷ್ಕರ ಹೂಡಿದ್ದ ಕಾರ್ಮಿಕರನ್ನು ಹಸಿವಿನಿಂದ ಪಾರುಮಾಡುವುದು ನಮ್ಮ ಕರ್ತವ್ಯವಾಗಿತ್ತು. ಕಾರ್ಮಿಕ ಸಂಘದ ಅಧ್ಯಕ್ಷರಾದ ಎಸ್. ಎಲ್. ಕೃಷ್ಣ, ಕಾರ್ಯದರ್ಶಿ ಪುಟ್ಟಯ್ಯ, ಕಾರ್ಯಕಾರೀ ಸಮಿತಿಯ ಸದಸ್ಯರುಗಳಿಂದ ಗುರುನಾಥ ಪಿಳ್ಳೆ, ಚಿದಂಬರಂ, ದೇಶಿಕನ್, ಸುಬ್ರಹ್ಮಣ್ಯ ಪಿಳ್ಳೆ, ಬಾಲಾಜಿ ಸಿಂಗ್ ಇವರುಗಳನ್ನು ಬಂಧಿಸಿ ಶಿವಮೊಗ್ಗ ಜೈಲಿನಲ್ಲಿಡಲಾಯಿತು. ಬಂಧನಕ್ಕೊಳಗಾಗದೆ ತಪ್ಪಿಸಿಕೊಂಡಿದ್ದ ನಾನು ಮತ್ತು ಏಕೈಕ ಕಾರ್ಯಕಾರಿ ಸಮಿತಿ ಸದಸ್ಯ ನರಹರಿಯವರು ಮುಂದಾಳುತ್ವವನ್ನು ವಹಿಸಿಕೊಂಡೆವು.

ನಮ್ಮ ಚಳವಳಿಗಾಗಿ ಧನಸಹಾಯ ನೀಡಲು ಈ ಸಂದರ್ಭದಲ್ಲಿ ಸರ್ದಾರ್ ವೆಂಕಟರಾಮಯ್ಯನವರು ಇನ್ಶೂರೆನ್ಸ್ ಏಜೆಂಟ್ ವೇಷದಲ್ಲೂ, ಎಂ. ಎಚ್. ಪಾ ಪುರೋಹಿತರಂತೆಯೂ ಬಂದಿದ್ದರು. ಮುಷ್ಕರಹೂಡಿದ್ದ ಕಾರ್ಮಿಕರಿಗೆ ಯಾವುದೇ ರೀತಿ ಸಹಾಯ ಮಾಡಿದರೂ ಅವರು ದಂಡನಾರ್ಹರೆಂದು ಕಾನೂನು ಇದ್ದ ಕಾರಣ ವರ್ತಕರು ಆಹಾರಧಾನ್ಯ ಮಾರಲೂ ಹೆದರುತ್ತಿದ್ದರು. ಎಲ್ಲಿ ನೋಡಿದರೂ ಮಿಲಿಟರಿ ಪೋಲೀಸರು ಗಸ್ತು ತಿರುಗುತ್ತಿದ್ದರು ; ಗುಪ್ತಚಾರರ ಜಾಲವನ್ನೇ ಹೆಣೆಯಲಾಗಿತ್ತು. ಹೀಗಿರುವಾಗ ನಾವು ಸಹಾನುಭೂತಿಯುಳ್ಳವರೂ, ಸ್ವಲ್ಪ ಉದಾರಿಗಳೂ ಆದ ಭೀಮಶೆಟ್ಟರೆಂಬ

ವರ್ತಕರನ್ನು ಸಂಧಿಸಿದೆವು. ನಮ್ಮಲ್ಲಿದ್ದ ಹಣವನ್ನು ಅವರಿಗೆ ಕೊಟ್ಟು ನಾವು ಗುರ್ತಿನ ಚೀಟಿ ಕೊಟ್ಟು ಕಳುಹಿಸಿದವರಿಗೆ ಇಂತಿಷ್ಟು ಸಾಮಾನು ಕೊಡಬೇಕೆಂದು ಪ್ರಾರ್ಥಿಸಿದೆವು. ಅವರ ಅಂಗಡಿ ಭವಾನಿ ಓಲ್ಡ್ ಟೌನ್ ಸೇತುವೆಯಾಚೆ ಇತ್ತು. ಒಪ್ಪೊಬ್ಬರೇ, ಅದೂ ಅವೇಳೆಯಲ್ಲಿ, ಹೋಗಿ ಆಹಾರಸಾಮಗ್ರಿ ಪಡೆಯಬೇಕೆಂಬ ಷರತ್ತಿನ ಮೇಲೆ ಒಪ್ಪಿದರು. ಕೆಲವು ದಿನಗಳು ಮಾತ್ರ ಹೀಗೆ ನಡೆದು, ಸಿ.ಐ.ಡಿ.ಗಳಿಗೆ ಸುಳಿವು ಸಿಕ್ಕಿ ಭೀಮಶೆಟ್ಟರನ್ನು ಬಂಧಿಸಿ, ಅವರ ಅಂಗಡಿ ಮುಚ್ಚಿಸಿದರು. ಅನಂತರ ಪಾಂಡುರಂಗ ಶೆಟ್ಟರೆಂಬುವವನ್ನು ಹಿಡಿದೆವು. ಅಲ್ಲಿಯೂ ಸುಳಿವು ಸಿಕ್ಕಿ, ಅವರ ಬಂಧನವೂ ಆಯಿತು. ಇದಾದನಂತರ ನಾವೇ ಸಣ್ಣ ಸಣ್ಣ ಚೀಲಗಳಲ್ಲಿ ಆಹಾರಧಾನ್ಯ ಹೊತ್ತು ಕಾರ್ಮಿಕರ ನಿವಾಸಗಳಿಗೆ ಹೋಗಿ ಸ್ಮಶಾನಶಾಂತಿಯಿದ್ದ ಅವೇಳೆಯನ್ನು ಲೆಕ್ಕಿಸದೆ ಹಂಚಿದೆವು. ಹಾಗೂ ಹೀಗೂ ಹದಿನೈದು ಇಪ್ಪತ್ತು ದಿನಗಳ ಕಾಲ ಮುಷ್ಕರ ಮುಂದುವರಿಸಿದೆವು. ಚಳವಳಿಯ ಮುಂದಿನ ಕಾರ್ಯಕ್ರಮ ನಿರ್ಧರಿಸಲು ನಿದಿಗೆ ಬಳಿ ಕಾರ್ಮಿಕರ ಸಭೆಯನ್ನು ಏರ್ಪಡಿಸಿದೆವು. ಕಾರ್ಮಿಕರು ಕಾಲ್ನಡಿಗೆಯಲ್ಲೇ ಬಂದು ಸೇರಿದರು. ಸ್ವಾತಂತ್ರ್ಯ ಲಭಿಸುವವರೆಗೆ ತಮ್ಮ ಹೋರಾಟವನ್ನು ಮುಂದುವರಿಸಬೇಕೆಂಬ ನಿರ್ಣಯವು ರತ್ನಮ್ಮ ಮಾಧವರಾವ್ ಅವರ ನೇತೃತ್ವದಲ್ಲಿ ಸರ್ವಾನುಮತದಿಂದ ಕೈಗೊಳ್ಳಲಾಯಿತು. ಪ್ರತಿ ಕಾರ್ಮಿಕರೂ ತಮ್ಮ ಕೆಲಸಕ್ಕೆ ರಾಜೀನಾಮೆ ಸಲ್ಲಿಸಬೇಕೆಂಬ ನಿರ್ಣಯವಾಯಿತು. ಅಂತೆಯೇ ಸಾವಿರಾರು ರಾಜೀನಾಮೆ ಪತ್ರಗಳಿಗೆ ಸಹಿ ಹಾಕಿಸಿ ಕಾರ್ಖಾನೆ ಮ್ಯಾನೇಜರಿಗೆ ಕಳುಹಿಸಲಾಯಿತು.

ನಿದಿಗೆಯಲ್ಲಿ ಕಾರ್ಮಿಕರ ಸಭೆ ಮುಗಿದನಂತರ ಶಿವಮೊಗ್ಗಕ್ಕೆ ಕಾರ್ಮಿಕರ ಜಾಥಾ ಹೊರಟಿತು. ಶಿವಮೊಗ್ಗ ಶಹರಿನಲ್ಲೆಲ್ಲಾ ಬೃಹತ್ ಕಾರ್ಮಿಕರ ಮೆರವಣಿಗೆಯಾಯಿತು. ಸಂಜೆ ಪಾರ್ಕಿನಲ್ಲಿ ಸಾರ್ವಜನಿಕ ಸಭೆ ನಡೆದು ನಾನಾ ಮುಖಂಡರ ಭಾಷಣಗಳಾದವು. ಜಾಥಾ ಬಂದಿದ್ದ ಕಾರ್ಮಿಕರಿಗೆ ಭೂಪಾಳಂ ಚಂದ್ರಶೇಖರಯ್ಯನವರು ಊಟ ಒದಗಿಸಿದರು. ರಾತ್ರಿ ಕಾರ್ಮಿಕರೆಲ್ಲರೂ ತೋಟದಪ್ಪನ ಛತ್ರದಲ್ಲಿ ಮಲಗಿದ್ದರು. ನಡುರಾತ್ರಿಯಲ್ಲಿ ಟಾರ್ಚ್ ಹಿಡಿದು ಕೆಲ ಮುಖ್ಯ ಕಾರ್ಮಿಕರನ್ನು ಬಂಧಿಸಿದರು. ಅದರಲ್ಲಿ ನನ್ನ ಜೊತೆ ಸಹಕರಿಸಿದ ಉಳಿದಿದ್ದ ಕಾರ್ಯಕಾರೀ ಸಮಿತಿಯ ಸದಸ್ಯ ನರಹರಿಯವರೂ ಬಂಧನಕ್ಕೊಳಗಾದರು. ಚಳವಳಿ ಪ್ರಾರಂಭವಾದಾಗಿನಿಂದ ನನ್ನ ಮೇಲೂ ವಾರಂಟ್ ಇದ್ದಿತು. ಹಾಗೂ ಹೀಗೂ ತಪ್ಪಿಸಿಕೊಂಡು ಯಾರಿಗೂ ಕಾಣದೆ ಭಾಗವಹಿಸಿದ್ದೆನು.

1942ರ 15 ಆಗಸ್ಟ್ ಚಳವಳಿ ಪ್ರಾರಂಭವಾದ ಒಂದೆರಡು ದಿವಸಗಳಲ್ಲಿ ನನ್ನನ್ನು ಬೆಂಗಳೂರಿಗೆ ಕಳುಹಿದ್ದರು. ಏಕೆಂದರೆ ಬೆಂಗಳೂರು ಬಿನ್ನಿ ಮಿಲ್ಸ್, ರಾಜಾ ಮಿಲ್ಸ್ ಕೆಲಸಗಾರರ ಮುಷ್ಕರ ಹಾಗೂ ಅವರ ಕಾರ್ಯಕ್ರಮಗಳೇನು? ಮುಷ್ಕರ ಎಷ್ಟರ ಮಟ್ಟಿಗೆ ಯಶಸ್ವಿಯಾಗಿ ನಡೆಯುತ್ತಿದೆ. ಎಂದು ತಿಳಿದುಬರುವ ಉದ್ದೇಶವಿದ್ದಿತು. ಅಂದು ಬೆಂಗಳೂರಿನಲ್ಲಿ ಎಲ್ಲಿ ನೋಡಿದರೂ ಮಿಲಿಟರಿ ರಾಜ್ಯ. ಚಳವಳಿಯನ್ನು ತಡೆ

ಯಲು ಅವಿನ್ಯೂ ರಸ್ತೆ ಉದ್ದಕ್ಕೂ ಮಿಲಿಟರಿ ಇದ್ದಿತು. ಅದರ ಸಂದಿಗೊಂದಿಗಳಿಂದ ಪ್ರದರ್ಶನಕಾರರು ಕಲ್ಲು ತೂರುತ್ತಿದ್ದರು. ಸೋಡಾ ಬಾಟಲ್ ಎಸೆಯುತ್ತಿದ್ದರು. ಅವರನ್ನಟ್ಟಿಸಿಕೊಂಡು ಮಿಲಿಟರಿಯವರು ಗಲ್ಲಿ ಬೀಳುತ್ತಿದ್ದರು. ಅಲ್ಲಿ ಒಬ್ಬೊಬ್ಬರೇ ಪೋಲೀಸರು ಸಿಕ್ಕಿದರೆ ಅವರ ಬಂದೂಕನ್ನು ಕಸಿದುಕೊಂಡು, ಅವರ ವರ್ದಿಯನ್ನು ಕಿತ್ತುಕೊಂಡು ಕಳುಹುತ್ತಿದ್ದರು; ಅಲ್ಲಲ್ಲಿ ಪೋಲೀಸು ವ್ಯಾನುಗಳಿಗೆ ಬೆಂಕಿ ಹಚ್ಚು ತ್ತಿದ್ದರು; ಬೆಂಕಿ ಆರಿಸಲು ಬಂದ ಫೈರ್ ಬ್ರಿಗೇಡ್ ವ್ಯಾನನ್ನು ಸಹ ಧ್ವಂಸಗೊಳಿಸು ತ್ತಿದ್ದರು. ಅಷ್ಟೇ ಅಲ್ಲ. ಮಿಲಿಟರಿ ಪೋಲೀಸ್ ವಾಹನಗಳು ಮುಂದೆ ಚಲಿಸದಂತೆ ಟೆಲಿಗ್ರಾಫ್ ಮತ್ತು ಲೈಟ್ ಕಂಬಗಳನ್ನು ರಸ್ತೆಗಡ್ಡವಾಗಿ ಬಗ್ಗಿಸುತ್ತಿದ್ದರು. ಈ ಪೈಕಿ ಅಕ್ಕಿಪೇಟೆಯದು ಒಂದು ಅಪೂರ್ವ ದೃಶ್ಯ; ಮತ್ತು ಕಾಟನ್‌ಪೇಟೆ ಪೋಸ್ಟ್ ಆಫೀಸನ್ನೂ, ಅಲ್ಲಿನ ಕಾಗದಪತ್ರಗಳನ್ನೂ ಸುಟ್ಟು ಬೂದಿ ಮಾಡಿದ್ದು ಇನ್ನೊಂದು ಮುಖ್ಯ ದೃಶ್ಯ. ಕಾಟನ್‌ಪೇಟೆಯಲ್ಲಿದ್ದ ಕಾಂಗ್ರೆಸ್ ಆಫೀಸನ್ನು ಸೇರಲು ಈ ಚಳವಳಿ ಗೊಂದಲದಲ್ಲಿ ಸೇರಲು ನನಗೆ ಯಾವ ಸುತ್ತು ಬಳಸುದಾರಿಯಿಂದಲೂ ಸಾಧ್ಯವಾಗಲಿಲ್ಲ. ಈ ಪ್ರಯತ್ನದಲ್ಲಿ ಗಲ್ಲಿಬಿದ್ದು ಸಾಗುತ್ತಿದ್ದಾಗ ಕೆಂಗೇರಿ ಗೇಟ್ ಪೋಲೀಸ್ ಸ್ಟೇಷನ್ನಿಗೆ ನನ್ನನ್ನು ಎಳೆದೊಯ್ದರು. ಅಂದು ಸುಮಾರು ಆ ಸ್ಟೇಷನ್ನಿನಲ್ಲಿ ಒಂದು ಪುಟ್ಟ ಕೋಣೆ ಯಲ್ಲಿ 400-500 ಜನರನ್ನು ತುಂಬಿದ್ದರು. ಯಾರನ್ನೇ ಸ್ಟೇಷನ್ನಿಗೆ ಎಳೆತಂದರೂ ಮೊದಲು ಅವರಿಗೆ ಪೋಲೀಸಿನವರ ಕಾಲಿನ ಒದೆತ, ಬೆಲ್ಟಿನ ಮತ್ತು ದೊಣ್ಣೆಯ ಹೊಡೆತ ಬಿದ್ದೇ ಬೀಳುತ್ತಿತ್ತು. ಆ ಒದೆತ ಹಾಗೂ ಅದರ ಸವಿಯನ್ನು ಜೀವಮಾನದಲ್ಲೇ ಮರೆಯುವಂತಿಲ್ಲ. ನಾನೂ ಖಾದೀ ವೇಷಧಾರಿಯಾಗಿದ್ದುದರಿಂದ ನನ್ನನ್ನೂ ಒಬ್ಬ ಚಳವಳಿಕಾರರ ಮುಂದಾಳೆಂದೇ ಬಂಧಿಸಿದ್ದರು. ಆದರೆ ನಾನು ಹೇಗಾದರೂ ಭದ್ರಾವತಿ ಮುಟ್ಟಬೇಕೆಂದು ಕಾತರನಾಗಿದ್ದೆ. ಸಬ್ ಇನ್‌ಸ್ಪೆಕ್ಟರೊಡನೆ "ನನಗೂ ಈ ಚಳವಳಿಗೂ ಏನೂ ಸಂಬಂಧವಿಲ್ಲ; ನಾನು ಖಾದೀ ಧರಿಸುವುದು ಗ್ರಾಮೋದ್ಯೋಗಕ್ಕೆ ಪ್ರೋತ್ಸಾಹವೇ ಹೊರತು ಚಳವಳಿಗಾರರ ವರ್ದಿಯಲ್ಲ; ನಾನು ಬೆಂಗಳೂರಿಗೆ ಬಂದಿರುವುದು ವಿಕ್ಟೋ ರಿಯಾ ಆಸ್ಪತ್ರೆಗೆ; ನನ್ನ ಅಡಿನೈಡ್ ಮೂಗುಬೇನೆಯನ್ನು ವಾಸಿಮಾಡಿಕೊಳ್ಳಬೇಕು" ಎಂದು ಹೇಳಿ ಸಂಜೆಯ ವೇಳೆಗೆ ಹಸಿದ ಹೊಟ್ಟೆಯಲ್ಲಿ ಬಿಡುಗಡೆ ಹೊಂದಿದೆ.

ಅಲ್ಲಿಂದ ಹೊರಟವನೇ, ಇನ್ನು ಬೆಂಗಳೂರಿನಲ್ಲಿ ಸ್ವಲ್ಪ ಕಾಲವಿದ್ದರೂ ನಿರಾಯಾಸ ವಾಗಿ ಕರ್ತವ್ಯ ನಿರ್ವಹಿಸದೇ ಬಂಧನಕ್ಕೊಳಗಾಗಬೇಕೆಂದು ಭಾವಿಸಿ ನೇರವಾಗಿ ರೈಲ್ವೆ ಸ್ಟೇಷನ್ ತಲುಪಿ, ಭದ್ರಾವತಿಗೆ ವಾಪಸಾಗಲೆತ್ನಿಸಿದೆನು. ನೇರ ಭದ್ರಾವತಿಗೆ ರೈಲ್ವೆ ಟಿಕೇಟು ದೊರಕದೆ ತಿಪಟೂರಿನವರೆಗೆ ಮಾತ್ರ ಪ್ರಯಾಣಿಸಬಹುದೆಂದು ತಿಳಿಯಿತು. ಆದರೆ ಮೈಸೂರು ಮಾರ್ಗ ಅರಸೀಕೆರೆಗೆ ಹೋಗಿ ಭದ್ರಾವತಿ ಮುಟ್ಟಬಹುದೆಂದು ಖಚಿತ ವಾಯಿತು. ಮೈಸೂರನ್ನು ತಲುಪಿ ಅಲ್ಲಿಂದ ಭದ್ರಾವತಿಗೆ ಟಿಕೆಟ್ ತೆಗೆದುಕೊಂಡೆ. ಅರಸೀಕೆರೆ ತಲುಪುವ ವೇಳೆಗೆ ಬೀರೂರಿನಿಂದ ಮುಂದಕ್ಕೆ ಚಳವಳಿಕಾರರು ರೈಲು ಕಂಬಿ

ಕಿತ್ತಿರುವುದರಿಂದ ಬೀರೂರಿನಿಂದ ಮುಂದಕ್ಕೆ ಹೋಗಲಾಗುವುದಿಲ್ಲವೆಂದು ತಿಳಿಯಿತು. ಬೀರೂರಿನಲ್ಲಿಳಿದು ಮುಂದಕ್ಕೆ ರೈಲುಮಾರ್ಗವನ್ನೇ ಹಿಡಿದು ನಡೆದೇ ಭದ್ರಾವತಿಯನ್ನು ಮರುದಿನ ಹೋಗಿ ಸೇರಿದೆನು. ಈಗ ಹಗಲು ವೇಳೆ ಹೊರಹೊರಡುವಂತೆಯೇ ಇರಲಿಲ್ಲ. ನನ್ನ ಹಿಂದೀ ಮಿತ್ರಗೋಷ್ಠಿ ಕಾರ್ಯಾಲಯದ ಮುಂದಿನ ಬಾಗಿಲಿಗೆ ಬೀಗ ಹಾಕಿದ್ದು ಹಿಂದಿನ ಬಾಗಿಲಿನಿಂದಲೇ ಹೊರಗೆ ಹೋಗುವ ವ್ಯವಸ್ಥೆ ಮಾಡಿಕೊಂಡಿದ್ದೆ. ನನ್ನನ್ನು ಬಂಧಿಸಲು ನನ್ನ ಕೊಠಡಿಯ ಬಾಗಿಲಲ್ಲೇ ಗುಪ್ತಚಾರರು ಕಾಯುತ್ತಿದ್ದರು. ಪಕ್ಕದಲ್ಲೇ ಇದ್ದ ಹೋಟೆಲಿಗೆ ಸಂಜೆ ಏಳು ಘಂಟೆ ಸಮಯದಲ್ಲಿ ಊಟಮಾಡಲು ಹಿಂಬಾಗಿಲಿನಿಂದಲೇ ಹೋದೆ. ಮೊದಲು ಶೌಚಗೃಹಕ್ಕೆ ಹೋಗಿ ಹೊರಬಂದರೆ ನನ್ನ ಮುಂದೆ ಯಮ ದೂತರಂತೆ ಗುಪ್ತಚಾರನೊಬ್ಬ ನನ್ನನ್ನು ಬಂಧಿಸಲು ವಾರೆಂಟ್ ಸಹಿತ ಕಾದಿದ್ದನು. ನನ್ನ ಬಟ್ಟೆಬರೆಗಳನ್ನು ತೆಗೆದುಕೊಳ್ಳಲೂ ಬಿಡದೆ ಉಟ್ಟ ಬಟ್ಟೆಯಲ್ಲೇ ಪೋಲೀಸ್ ವ್ಯಾನ್‌ನಲ್ಲಿ (3-9-1942) ಸಂಜೆ ಏಳು ಘಂಟೆ ಸಮಯ ಪೋಲೀಸ್ ಸ್ಟೇಷನ್ನಿಗೆ ಕರೆದೊಯ್ದರು. ಮರುದಿನ ಹತ್ತು ಘಂಟೆಗೆ ಶಿವಮೊಗ್ಗ ಲಾಕಪ್ಪಿಗೆ ದಬ್ಬಿದರು.

ಶಿವಮೊಗ್ಗ ಲಾಕಪ್ಪಿನಲ್ಲಿ ಆ ವೇಳೆಗೆ ಕೇವಲ 13 ಜನ ಇದ್ದರು. ಅವರ ಪೈಕಿ ಎಚ್. ಸಿ. ದಾಸಪ್ಪನವರೂ ಒಬ್ಬರು. ಆ ಲಾಕಪ್ಪಿನಲ್ಲಿ ಸೊಳ್ಳೆಯ ಕಾಟ ಜಾಸ್ತಿ. ಹಾಸಿ ಹೊದೆಯಲು ನನ್ನ ಉಟ್ಟ ಬಟ್ಟೆಯೇ—ಜೈಲಿನಲ್ಲಿ ಕೊಟ್ಟ ಕಂಬಳಿ ತಾಟುಗಳು ಮುಟ್ಟಲೂ ಯೋಗ್ಯವಿರಲಿಲ್ಲ. ಒಂದು ವಾರದನಂತರ ನನ್ನ ಹಾಸಿಗೆ ಬಟ್ಟೆಗಳನ್ನು ತರಿಸಿಕೊಳ್ಳಲು ಸಾಧ್ಯವಾಯಿತು. ಸೊಳ್ಳೆಯ ಕಡಿತದಿಂದಾಗಿ ಮಲೇರಿಯಾ ರೋಗಕ್ಕೆ ತುತ್ತಾದೆನು.

ಮೆಗಾನ್ ಆಸ್ಪತ್ರೆಯಲ್ಲಿ ಔಷಧಿ ಇಂಜೆಕ್ಷನ್‌ಗಳನ್ನು ಕೊಟ್ಟರು; ಪ್ರತ್ಯೇಕ ವಾರ್ಡಿನಲ್ಲಿಟ್ಟು ಉಪಚರಿಸಿದರು. ಚಳಿಜ್ವರ ನಿಲ್ಲಲಿಲ್ಲ. ಆಗ ಅಲ್ಲಿನ ಡಾಕ್ಟರು "ಅಪಾಲಜಿ ಕೊಟ್ಟು ಜೈಲಿನಿಂದ ಬಿಡುಗಡೆಯಾಗದಿದ್ದರೆ ನೀವು ಬದುಕುವ ಭರವಸೆ ಇಲ್ಲ" ಎಂದರು. ನಾನು, "ದೇಶದ ಸ್ವಾತಂತ್ರ್ಯಕ್ಕಾಗಿ ದುಡಿಯುವುದು ಅಪರಾಧವೂ ಅಲ್ಲ; ಅದಕ್ಕೆ ಕ್ಷಮೆ ಕೇಳಬೇಕಾಗಿಯೂ ಇಲ್ಲ; ಪ್ರಾಣ ಹೋದರೂ ಚಿಂತೆಯಿಲ್ಲ; ಪ್ರತಿಜ್ಞೆಯನ್ನು ಬಿಡಲಾಗುವುದಿಲ್ಲ" ಎಂದು ಉತ್ತರಿಸಿದೆ.

ಆಸ್ಪತ್ರೆಯಲ್ಲಿ ಇದ್ದಾಗ ಒಬ್ಬ ವಾರ್ಡರ್‌ನನ್ನು ನನ್ನ ಕಾವಲಿಗಾಗಿ ಹಾಕಿದ್ದರು. ಆಗಾಗ್ಗೆ ಆತ ಅಲ್ಲಿ ಇಲ್ಲಿ ಹೋಗಿ ಬರುತ್ತಿದ್ದ. ಮುಷ್ಕರ ಹೂಡಿದ್ದ ಕಾರ್ಮಿಕರ ಸ್ಥಿತಿ ಏನಾಯಿತು? ಸ್ವಾತಂತ್ರ್ಯ ಚಳವಳಿ ಜೀವಂತವಾಗಿದೆಯೇ? ತಿಳಿಯುವ ಕುತೂಹಲದಿಂದ ಸಂಜೆ 6 ಘಂಟೆನಂತರ—ಹಾಸಿಗೆಯ ಮಧ್ಯೆ ದಿಂಬಿಟ್ಟು, ಕೆಂಪು ರಗ್ ಹೊದಿಸಿ, ಮುಸುಕು ಹಾಕಿಕೊಂಡು ನಿದ್ರಿಸುತ್ತಿರುವಂತೆ ಕಾಣಿಸುವಂತೆ ಮಾಡಿ—ಬಾಡಿಗೆ ಸೈಕಲ್ ಪಡೆದು ಭದ್ರಾವತಿಗೆ ತೆರಳಿ ಬೆಳಗಿನ ವೇಳೆಗೆ ಆಸ್ಪತ್ರೆ ಹಾಸಿಗೆಯ ಮೇಲೆ ಇರುತ್ತಿದ್ದೆನು. ಹೀಗೆ ನಾಲ್ಕಾರು ಸಲ ಹೋಗಿ ಬಂದನಂತರ, ಒಂದು ಸಂಜೆ ಅಸಿಸ್ಟೆಂಟ್ ಸರ್ಜನ್

ಪಂಡಿತ್ ಎಂಬುವರು ಪೇಟೆಬೀದಿಯಲ್ಲಿ ಬೈಸಿಕಲ್ ಮೇಲೆ ನನ್ನನ್ನು ಕಂಡರು. ಮರು ದಿನವೇ ನನ್ನನ್ನು ಜೈಲಿಗೆ ಮರಳಿಸಿ ಮೈಸೂರು ಡಿಟೆನ್ಷನ್ ಕ್ಯಾಂಪ್‌ಗೆ ವರ್ಗಾಯಿಸಿದರು. ಇಲ್ಲಿ ನನಗೆ ಅಂಟಿದ್ದ ಮಲೇರಿಯಾ ರೋಗದ ನಿವಾರಣೆಯಾಯಿತು. ಮೈಸೂರು ಕೆಬ್ಬೆಕಟ್ಟೆ ಕ್ಯಾಂಪ್‌ನಲ್ಲಿ ಸುಮಾರು ನೂರು ಜನ ರಾಜಕೀಯ ಕೈದಿಗಳಿದ್ದರು. ಹಿಂದೀ ಬಾರದವರಿಗೆಲ್ಲಾ ಹಿಂದೀ ಕಲಿಸಲು ಸುರುಮಾಡಿದೆ. ಅವರ ಪೈಕಿ ಪ್ರಮುಖರಾದವರು ಕಡಿದಾಳ್ ಮಂಜಪ್ಪ, ವರ್ಕಿಂಗ್ ಕಮಿಟಿ ಸದಸ್ಯರಾಗಿದ್ದ ಎ. ಜಿ. ಬಂದೀಗೌಡ, ಎಚ್. ಎಸ್. ರುದ್ರಪ್ಪ, ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪಗೌಡ ಮತ್ತು ಹೊಳಲ್ಕೆರೆ ಈಶ್ವರಪ್ಪ ಮುಂತಾದ ಯುವಕರು. ಇವರುಗಳು ಜೈಲಿನಲ್ಲಿಯೇ ಹಿಂದೀ ನಾಟಕವೊಂದನ್ನು ಪ್ರದರ್ಶಿಸಿದರು. ಉತ್ಸಾಹೀ ಯುವಕರ ಓದುಬರಹಕ್ಕೆ ಇಂಥ ಪುಸ್ತಕಗಳ ಆವಶ್ಯಕತೆಯಿತ್ತು. ದಿನದಿನಕ್ಕೆ ಅವರ ಬೇಡಿಕೆಗಳು ಹೆಚ್ಚಿದ್ದರಿಂದ ಜೈಲು ಅಧಿಕಾರಿಗಳಿಗೆ ನಾನೊಂದು ಸಮಸ್ಯೆಯಾದೆ. ನನ್ನನ್ನು ಮೈಸೂರು ಸಬ್–ಜೈಲಿಗೆ ವರ್ಗಾಯಿಸಿದರು. ಅಲ್ಲಿಯೂ ನನ್ನ ಈ ಕಾರ್ಯಕ್ರಮ ಯಥಾ ಪ್ರಕಾರ ಸಾಗಿತು. ಆದ್ದರಿಂದ ನನ್ನನ್ನು ಡೆಟೆನ್ಯೂ ಕ್ಯಾಂಪಿಗೆ ವರ್ಗಾಯಿಸಿದರು. ಆ ಕ್ಯಾಂಪ್‌ನ್ನು ಮುಚ್ಚಿದಾಗ ಎಲ್ಲರನ್ನೂ ಬೆಂಗಳೂರು ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. ಇಲ್ಲಿಯೂ ನನ್ನ ಹಿಂದೀ ಬೋಧನೆ ಮತ್ತು ಚರಕದಿಂದ ನೂಲು ತೆಗೆಯುವುದನ್ನು ಕಲಿಸುವ ಕೆಲಸ ನಿಲ್ಲಲಿಲ್ಲ. ಇಲ್ಲಿ ನನ್ನ ಬಳಿ ಚರಕ ಇರಲಿಲ್ಲ. ನನಗೆ ಸಾಬೂನು ಸರಬರಾಜು ಮಾಡಿ ಖಾಲಿಯಾದ ಪೆಟ್ಟಿಗೆಯಿಂದಲೇ ಸ್ವತಃ ಯರವಾಡ ಚರಕ ಮಾಡಿಕೊಂಡಿದ್ದೆ. ಇಂದೂ ಅದು ನನ್ನ ಬಳಿ (ಜೈಲುವಾಸದ ಜ್ಞಾಪಕಾರ್ಥವಾಗಿ) ಕೆಲಸ ಮಾಡುತ್ತಿದೆ.

ಸುದೀರ್ಘಕಾಲ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿದ್ದ ಕಾರಣ, ಹಿಂದೀ ಕಲಿಕೆ ಮುಂದುವರಿಸಿದವರಿಗೆ ಪ್ರಥಮಾ, ಮಧ್ಯಮಾ ಹಾಗೂ ರಾಷ್ಟ್ರಭಾಷಾ ಪರೀಕ್ಷೆಗೆ ಕಟ್ಟಿಸಬೇಕೆಂದು, ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಗೆ ಬೆಂಗಳೂರು ಸೆಂಟ್ರಲ್ ಜೈಲ್‌ಗೆ ಒಂದು ಪರೀಕ್ಷಾಕೇಂದ್ರ ಕೊಡಬೇಕೆಂದು ಪ್ರಾರ್ಥಿಸಿದೆ. ಅವರೂ ಒಪ್ಪಿದ್ದರು. ಅಷ್ಟರಲ್ಲಿ (10–10–1953) ಎಲ್ಲರ ಬಿಡುಗಡೆ ಆಗಿಹೋಯಿತು.

ನಮ್ಮಲ್ಲಿ ಕೆಲವರನ್ನು, ಅಂದರೆ ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಕೆಲಸಗಾರರ ಸಂಘದ ಅಧ್ಯಕ್ಷರು, ಕಾರ್ಯದರ್ಶಿಗಳು, ಕಾರ್ಯಕಾರೀ ಸಮಿತಿಯ ಸದಸ್ಯರು ಮತ್ತು ನನ್ನ ಗೆಳೆಯರಾದ ಎಸ್. ಎನ್. ಎಸ್. ಐಯ್ಯರ್ ಹಾಗೂ ಆಫೀಸ್ ಮ್ಯಾನೇಜರ್ ಆಗಿದ್ದ ನಾನು, ಶಿವಮೊಗ್ಗ ಜಿಲ್ಲೆ ಪ್ರವೇಶಿಸದಂತೆ ಅನಿರ್ದಿಷ್ಟ ಕಾಲದವರೆಗೆ (ಬೇರೆ ಆಜ್ಞೆ ಬರುವವರೆಗೆ) ಪ್ರತಿಬಂಧಕಾಜ್ಞೆಯನ್ನು ಜಾರಿ ಮಾಡಿದರು. ಈ ಆಜ್ಞೆ 1947ರ ಜವಾಬ್ದಾರಿ ಸರ್ಕಾರದ ಹೋರಾಟ ಮುಕ್ತಾಯವಾಗುವವರೆಗೂ ಜಾರಿಯಲ್ಲಿದ್ದಿತು.

ಚಳವಳಿಯಲ್ಲಿ ನನ್ನ ಕಾರ್ಯಕ್ಷೇತ್ರವಾಗಿದ್ದ ಭದ್ರಾವತಿಯಿಂದ ಹೊರದೂಡಲ್ಪ

ಟ್ಟಾಗ ನನ್ನ ಜೆಸಿ ನೀರಿನಿಂದ ಹೊರಹಾಕಿದ ಮೀನಿನಂತಾಯಿತು. ಎಲ್ಲಿಗೆ ಹೋಗು ವುದು ? ಏನು ಮಾಡುವುದು ? ದಿಕ್ಕೇ ತೋಚಲಿಲ್ಲ. ಕೊನೆಗೆ ಮೈಸೂರು ಶಹರಿನಲ್ಲಿ ಉಳಿಯುವಂತಾಯಿತು. ಜೀವನ ನಿರ್ವಹಣೆಗಾಗಿ 'ಪೌರವಾಣಿ' ಪತ್ರಿಕೆ ಏಜೆನ್ಸಿ ಮತ್ತು ಹಂಚಿಕೆ ಕೆಲಸ ಕೈಕೊಂಡೆ. ಚಂದಾದಾರರಿಂದ ಪತ್ರಿಕೆಯವರಿಗೆ ಕೊಡಬೇಕಾ ಗಿದ್ದ ಬಾಕಿ ಹಣ ವಸೂಲಾಗವೆ ನನ್ನ ಏಕೈಕಜೀವನಮಾರ್ಗವಾಗಿದ್ದ ಬೈಸಿಕಲ್ಲನ್ನೇ ಮಾರಿಬಿಟ್ಟೆ. ಕೆಲಕಾಲ ಆಗ ಆರಂಭಿಸಿದ್ದ ವೈ. ಪಾರ್ಥನಾರಾಯಣ ಪಂಡಿತರ ಅಭಯಾ ಆಯುರ್ವೇದ ಸಂಸ್ಥೆಯಲ್ಲೂ, ಕೆಲಕಾಲ ವಯಸ್ಕರ ಶಿಕ್ಷಣ ಸಮಿತಿಯ ಸೂಪರ್‌ವೈಸರಾಗಿಯೂ ನಂತರ ಎಚ್. ಎಸ್. ದೊರೆಸ್ವಾಮಿಯವರ ಸಾಹಿತ್ಯಮಂದಿರ ದಲ್ಲಿಯೂ ಕೆಲಸಮಾಡಿದೆನು. ಏನಾದರೂ ಒಂದು ಸ್ವಂತ ಉದ್ಯೋಗ ಮಾಡಿದರೆ ಸ್ವಾತಂತ್ರ್ಯಚಳವಳಿಯಲ್ಲಿ ಸ್ವೇಚ್ಛೆಯಾಗಿ ಭಾಗವಹಿಸುವುದು ಸಾಧ್ಯವಾಗುವುದೆಂದು, ಮೈಸೂರು ಸುಬ್ಬರಾಯನ ಕೆರೆ ರಾಘವೇಂದ್ರಸ್ವಾಮಿಗಳ ಮಠದ ಹಿಂಭಾಗದಲ್ಲಿ ಸೌದೆ ಡೀಪೊ ನಡೆಸಲು ಸುರು ಮಾಡಿದೆ.

ಈ ಸಂದರ್ಭದಲ್ಲಿ, ಗಾಂಧೀಜೀಯ ಮೊಮ್ಮಗ ಕಾಂತಿಲಾಲ್ ಗಾಂಧೀ (ಎಂ.ಬಿ.ಬಿ.ಎಸ್. ವ್ಯಾಸಂಗ ಮಾಡುತ್ತಿದ್ದರು) ಅವರ ಪರಿಚಯವಾಯಿತು. ಅವರ ನೇತೃತ್ವದಲ್ಲಿ ಗಾಂಧೀ ಸೇವಾ ಸಂಘ ಎಂಬ ಸಂಸ್ಥೆಯನ್ನು ಪ್ರಾರಂಭಿಸಿದೆವು. ಸಂಘದ ಕಾರ್ಯಕ್ರಮವೆಂದರೆ : ಪ್ರತಿ ಭಾನುವಾರ ಗಾಂಧೀವಾದಿಗಳು ಸಭೆಸೇರಿ ಪ್ರಾರ್ಥನೆ, ಸೂತ್ರಯಜ್ಞ ನಡೆಸುವುದು. ಗಾಂಧೀವಾದದ ಬಗ್ಗೆ ಚರ್ಚೆ, ವಿಚಾರವಿನಿಮಯ ನಡೆಸುವುದು. ಈ ಗೋಷ್ಠಿಯಲ್ಲಿ ನನ್ನ ಅಂತರಂಗಿಕ ಗೆಳೆಯ ದಿ|| ಎಸ್. ಎಸ್. ಶಾಸ್ತ್ರಿ ಗಳು, ಚೇತನ ನಾರಾಯಣಸ್ವಾಮಿ, ಪ್ರಿಯವ್ರತರು, ಕಲಾಭವನಂ ಎಂ. ಎಸ್. ಸೂರ್ಯನಾರಾಯಣರಾಯರು, ಶ್ವೇತಾದ್ರಿ ಹಾಗೂ ನಾನು ಭಾಗವಹಿಸುತ್ತಿದ್ದೆವು. ಅಷ್ಟೇ ಅಲ್ಲ, ಎಲ್ಲೆಲ್ಲಿ ಕಾಂಗ್ರೆಸ್ ಸಭೆ, ಮೆರವಣಿಗೆ ಕಾರ್ಯಕ್ರಮ ಏರ್ಪಟ್ಟರೂ ಅಲ್ಲಿ ನಾನು ಮತ್ತು ಎಸ್. ಎಸ್. ಶಾಸ್ತ್ರಿಗಳು ಹಾಜರಿರುತ್ತಿದ್ದೆವು. ಕಾಂತೀಲಾಲ್ ಗಾಂಧಿಯವರು ತಮ್ಮ ವ್ಯಾಸಂಗದ ಕಡೆ ಗಮನ ಕೊಡಬೇಕಾಗಿದ್ದುದರಿಂದ ಗಾಂಧೀ ಸೇವಾ ಸಂಘದ ಕಾರ್ಯದರ್ಶಿತ್ವವನ್ನು ನನಗೊಪ್ಪಿಸಿದರು. ಚರಕಾ ಪ್ರಚಾರ ಮಾಡ ಬೇಕೆಂಬ ಉದ್ದಿಶ್ಯದಿಂದ ಯರವಾಡ ಚರಕಾ, ಧನುಷ್‌ತಕುವ ಮುಂತಾದುವನ್ನು ಸಂಘದ ಪರವಾಗಿ ತಯಾರಿಸಲು ಪಾರಂಭಿಸಿದೆವು. ಜೆ. ಬಿ. ಕೃಪಲಾನಿ ಮತ್ತು ಸುಚೇತಾ ಕೃಪಲಾನಿಯವರು ಮತ್ತು ಎಂ. ಎಚ್. ಷಾ ಸಂಘಕ್ಕೆ ಭೇಟಿಕೊಟ್ಟು ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.

'ಆಗಸ್ಟ್ 15' ಪತ್ರಿಕೆಯನ್ನು ಜಯಪ್ರಕಾಶ ನಾರಾಯಣ್ ಹೊರಡಿಸುತ್ತಿದ್ದರು. ಈ ಪತ್ರಿಕೆ ಸರ್ಕಾರದ ನಿಷೇಧಕ್ಕೊಳಗಾಗಿತ್ತು. ಪತ್ರಿಕೆಯ ಪ್ರತಿಗಳನ್ನು ಗುಪ್ತವಾಗಿ ತರಿಸಿಕೊಂಡು ಹಂಚುವುದು ಈ ಮಧ್ಯೆ ನನ್ನ ಕಾರ್ಯಕ್ರಮದಲ್ಲಿ ಒಂದಾಗಿದ್ದಿತು.

1944ರಲ್ಲಿ ಮೈಸೂರು ಸಂಸ್ಥಾನದಲ್ಲಿ ಎನ್. ಮಾಧವರಾಯರು ದಿವಾನರಾಗಿದ್ದರು. ಆಗ ಕಾಂಗ್ರೆಸ್ಸಿನ ಯಾವ ರೀತಿಯ ಚಟುವಟಿಕೆಗಳೂ ಕಾಣಬರುತ್ತಿರಲಿಲ್ಲ. ಕಾಂಗ್ರೆಸ್ ಸಂಸ್ಥೆಯ ಉತ್ಸಾಹೀ ಕಾರ್ಯಕರ್ತರಿಗೆ ಇದು ಬೇಸರವುಂಟು ಮಾಡಿದ್ದಿತು. ಹೇಗಾದರೂ ಸಂಸ್ಥೆಗೆ ಜೀವಕಳೆ ಮರಳಿ ತರಬೇಕೆಂಬ ಉದ್ದೇಶದಿಂದ 'ಪೌರವಾಣಿ' ಪತ್ರಿಕೆಯ ಸಂಪಾದಕರಾಗಿದ್ದ ಎಂ. ಎನ್. ಸೀತಾರಾಮಯ್ಯನವರು, ಭದ್ರಣ್ಣ, ಕೆ. ಎನ್. ಕುಮಾರನ್, ವಿ. ಎಸ್. ಕೃಷ್ಣಯ್ಯರ್, ಎಸ್. ಎಸ್. ಶಾಸ್ತ್ರಿಗಳು, ಶ್ರೀಧರ್ ಹಾಗೂ ನಾನು ಬೆಂಗಳೂರಿನಲ್ಲೊಮ್ಮೆ ಸಭೆ ಸೇರಿದ್ದೆವು (ದಿನಾಂಕ ನೆನಪಿಲ್ಲ). ಉಕ್ತ ಸಭೆಯಲ್ಲಿ ಕಾಂಗ್ರೆಸ್ ಪಕ್ಷದಲ್ಲಿಯೇ 'ಪ್ರಗತಿ ಪಕ್ಷ'ವನ್ನು ರಚಿಸಿ ಸ್ವಾತಂತ್ರ್ಯ ಸಂಗ್ರಾಮವನ್ನು (ಜವಾಬ್ದಾರಿ ಸರ್ಕಾರಕ್ಕಾಗಿ) ಚುರುಕುಗೊಳಿಸಬೇಕೆಂದು ತೀರ್ಮಾನಿಸಿದೆವು. ತಿಂಗಳನಂತರ ಮತ್ತೊಮ್ಮೆ ಮೈಸೂರಿನಲ್ಲಿ ಪಕ್ಷದ ಸಭೆ ಕರೆಯಲಾಯಿತು. ಸಭೆಯ ಮುಖ್ಯ ನಿರ್ಣಯವೇನೆಂದರೆ : ಮೈಸೂರು ಕಾಂಗ್ರೆಸ್ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟವನ್ನು ಅಂತಿಮವಾಗಿ ಕೈಗೊಳ್ಳದಿದ್ದರೆ, ಪ್ರಗತಿ ಪಕ್ಷವು ತನ್ನದೇ ಆದ ರೀತಿಯಲ್ಲಿ ಸತ್ಯಾಗ್ರಹ ಹೂಡುವುದು ; ಪ್ರಗತಿ ಪಕ್ಷದ ಉದ್ದಿಶ್ಯಗಳನ್ನು ಜನತೆಗೆ ತಿಳಿಸಲು ಅಲ್ಲಲ್ಲಿ ಸಭೆ ಕೂಟಗಳನ್ನು ನಡೆಸಬೇಕು. ಈ ಕಾರ್ಯದಲ್ಲಿ ಎಸ್. ಎಸ್. ಶಾಸ್ತ್ರಿಗಳು ನನ್ನ ಜೊತೆ ಸೇರಿದ್ದರು. 1947ನೇ ಸೆಪ್ಟೆಂಬರ್‌ನಲ್ಲಿ 'ದೊರೆತನಕ ದೂರು' ಹೊತ್ತು 'ಅರಮನೆ ಸತ್ಯಾಗ್ರಹ' ನಡೆಸಲು ಕಾಂಗ್ರೆಸ್ ಸಂಸ್ಥೆಯೇ ನಿರ್ಣಯಿಸಿದ ಕಾರಣ ಅದರಲ್ಲಿ ಭಾಗವಹಿಸಲು ಸತ್ಯಾಗ್ರಹಿಗಳ ತಂಡವನ್ನು ಸಂಘಟಿಸಿ ಕಳುಹಿಸಲಾಯಿತು.

1947ರ ಜವಾಬ್ದಾರಿ ಸರ್ಕಾರ ಚಳವಳಿಗೆ ಆರು ತಿಂಗಳು ಮುಂಚೆ, ನಾನು ಮತ್ತು ಎಸ್. ಎಸ್. ಶಾಸ್ತ್ರಿ ಕೂಡಿ ಮುಂಬರುವ ಚಳವಳಿಯಲ್ಲಿ ನಮ್ಮ ಪಾತ್ರಗಳ ಬಗ್ಗೆ ಹಲವಾರು ರೀತಿಯಲ್ಲಿ ವಿವೇಚಿಸಿದ್ದೆವು. ಆದರೆ ನಾವೆಣಿಸಿದಂತೆ ಜೊತೆಗೂಡಿ ಕೆಲಸ ಮಾಡುವುದು ಸಾಧ್ಯವಾಗಲಿಲ್ಲ. ಸತ್ಯಾಗ್ರಹ ಹೂಡುವುದಕ್ಕೆ ಮೂರು ನಾಲ್ಕು ದಿನಗಳ ಮುನ್ನ, ತಮ್ಮ ಕಾರ್ಯಗೌರವ ನಿಮಿತ್ತ, ಬೆಂಗಳೂರಿಗೆ ಹೋದ ಶಾಸ್ತ್ರಿಗಳು ಚಳವಳಿ ಕೊನೆಗೊಳ್ಳುವವರೆಗೂ ಮೈಸೂರಿಗೆ ಹಿಂತಿರುಗಲಾಗಲಿಲ್ಲ.

ಪ್ರತಿಬಂಧಕಾಜ್ಞೆ ಕಾರಣ ಚಳವಳಿ ಕಾಲದಲ್ಲಿ ಯಾವ ಸಮಾಚಾರ ಪತ್ರಿಕೆಯೂ ಹೊರಬರುತ್ತಿರಲಿಲ್ಲ. ಚಾಮುಂಡಿ ಎಕ್ಸ್‌ಟೆನ್‌ಷನ್ ಒಂದು ಮೂಲೆಯಲ್ಲಿದ್ದ ಗಾಂಧೀ ಸೇವಾಸಂಘವನ್ನೇ ನನ್ನ ಕಾರ್ಯಕ್ಷೇತ್ರವಾಗಿಟ್ಟುಕೊಂಡು ರಹಸ್ಯವಾಗಿ 'ಜನಧ್ವನಿ' (ಕಲ್ಲಚ್ಚಿನ) ಪತ್ರಿಕೆಯನ್ನು ಪ್ರತಿದಿನ ಮುದ್ರಿಸಿ ರಾತ್ರಿ ಅವೇಳೆಯಲ್ಲಿ ನಾನಾ ಕಡೆ—ಗೋಡೆಗಳ ಮೇಲೆ, ರಸ್ತೆಯಲ್ಲಿ ಮತ್ತು ವಿದ್ಯುತ್ ಕಂಬಗಳ ಮೇಲೆ—ಅಂಟಿಸುತ್ತಿದ್ದೆವು. ವೇದಾಂತ ಹೆಮ್ಮಿಗೆಯವರು ನನ್ನ ಜೊತೆಗೂಡಿ ಕೆಲಸಮಾಡಿದರು. ಗುಂಡ್ಲುಪೇಟೆ, ಹೆಗ್ಗಡದೇವನಕೋಟೆ, ಚಾಮರಾಜನಗರ, ಬೀರೂರು, ಟಿ. ನರಸೀಪುರ ಮುಂತಾದ

ಕಡೆಗಳಿಂದ ಸತ್ಯಾಗ್ರಹಕ್ಕಾಗಿ ಬಂದ ಸ್ವಯಂಸೇವಕರಿಗೆ ಉಪಾಹಾರ ಅಥವಾ ಊಟ ಹಾಕಿಸಿ, ಅವರ ಕೈಗೆ ಪ್ಲೆಕಾರ್ಡ್ ಕೊಟ್ಟು ಆ ತಂಡದ ಛಾಯಾಗ್ರಹಣ ತೆಗೆದು ಕೊಂಡು ಜೈಕಾರಗಳೊಡನೆ ಕಳುಹುತ್ತಿದ್ದೆವು. ಸತ್ಯಾಗ್ರಹಿಗಳನ್ನು ನಡುದಾರಿಯಲ್ಲೇ ಹೊಡೆದು ಬಡಿದು ಲಾರಿಗಳ ಮೇಲೆ ತುಂಬಿಕೊಂಡು ಹೋಗಿ ಎಲ್ಲೋ ದೂರದ ಕಾಡಿಗೆ ಬಿಟ್ಟುಬರುತ್ತಿದ್ದರು. ಇದೇ ಸಮಯದಲ್ಲಿ ನನ್ನ ಬಂಧನವೂ ಸಹ ಆಯಿತು. ಆಗ ನನ್ನ ಬಳಿ ಸತ್ಯಾಗ್ರಹಿಗಳಾಗಿ ಬಂದ ನೂರಾರು ಸ್ವಯಂಸೇವಕರ ಹೆಸರು ಹಾಗೂ ಸಹಿ ಪಡೆದ ಪುಸ್ತಕಗಳಿದ್ದವು; ಫೋಟೋ ತೆಗೆದ ಫಿಲ್ಮ್ ರೋಲುಗಳಿದ್ದವು; ಕ್ಯಾಮರಾ ದಲ್ಲಿಯೂ ಒಂದು ರೋಲಿದ್ದಿತು; ನಾನಾ ಕಡೆಗಳಿಂದ ಸುದ್ದಿಯು ಬಂದ ಕಾಗದ ಗಳಿದ್ದವು; ಸೈಕ್ಲೋಸ್ಟೈಲ್ ಮುದ್ರಣ ಸಲಕರಣೆಗಳು; ರೀಮುಗಟ್ಟಲೆ ಕಾಗದ ಇದ್ದವು. ಇವೆಲ್ಲಾ ನನ್ನ ಬಂಧನದನಂತರ ಶೋಧನೆಯಾಗಿ ಪೋಲೀಸರ ವಶವಾದವು. ಈ ಫೋಟೋಗಳ ಪೈಕಿ ಒಂದೇ ಒಂದು ಫೋಟೊ ಉಳಿದಿದ್ದಿತು. ಅದು ವಿ. ಎಸ್. ದಾಸಪ್ಪನವರು (ಮಾಜಿ ಮೈಸೂರು ಮ್ಯುನಿಸಿಪಲ್ ಕೌನ್ಸಿಲರ್) ಸತ್ಯಾಗ್ರಹಿಗಳ ಒಂದು ತಂಡದ ಮುಖಂಡತ್ವ ವಹಿಸಿದ್ದು. ಅದು ಇಂದೂ ಅವರ ಮನೆಯಲ್ಲಿ ಇದೆ.

ಬಿಡುಗಡೆಯಾದನಂತರ ಹಿಂದಿರುಗಿ ಪೋಲೀಸ್ ಸ್ಟೇಷನ್ನಿನಿಂದ ಬಂದುದು ಕೇವಲ ಸೈಕ್ಲೋಸ್ಟೈಲ್ ಮತ್ತು ಕ್ಯಾಮರಾ ಮಾತ್ರ. ಚಳವಳಿ ಪ್ರಾರಂಭವಾದನಂತರ ಇಪ್ಪತ್ತು ದಿವಸಗಳವರೆಗೆ ನಾನು ಪೋಲೀಸರ ಕಣ್ಮರೆಯಲ್ಲೇ ವೇಷ ಮರೆಸಿಕೊಂಡು ಕೆಲಸಮಾಡಲು ಸಾಧ್ಯವಾಯಿತು. ನನ್ನ ಬಂಧನ 27ನೇ ಸೆಪ್ಟಂಬರ್ 1947ರ ಸಂಜೆ ಏಳು ಘಂಟೆ ಸಮಯದಲ್ಲಾಯಿತು. ಅಂದು ಸಂಜೆ ನಾನು, ಬಂಧನಕ್ಕೊಳಗಾಗದೆ ಹೊರಗುಳಿದಿದ್ದ ವೈ. ಪಾರ್ಥನಾರಾಯಣ ಪಂಡಿತರು ಮತ್ತು ಎಂಜಿನಿಯರ್ ರಾಮ ಸ್ವಾಮಿಯವರೊಡನೆ ತಣ್ಣಗಾಗುತ್ತಿದ್ದ ಚಳವಳಿಯನ್ನು ಚುರುಕುಗೊಳಿಸುವ ಬಗ್ಗೆ ಸಮಾಲೋಚಿಸಿ ಸಲಹೆ ಪಡೆಯಲು ಹೊರಟಿದ್ದೆ. ಸಂಜೆ ಶ್ರೀರಾಮಪೇಟೆಯಲ್ಲಿದ್ದ ಚಾಮುಂಡೇಶ್ವರಿ ಭವನದಲ್ಲಿ ಕಾಫಿ ಕುಡಿಯಲು ಸೈಕಲ್ ಹೊರಗಿಟ್ಟು ಮಹಡಿಯ ಮೇಲೆ ಹೋದಾಗ ನನ್ನನ್ನು ಹಿಂಬಾಲಿಸುತ್ತಿದ್ದ ಸಿ.ಐ.ಡಿ. ಇನ್‌ಸ್ಪೆಕ್ಟರ್ ಕೈಗೆ ಸಿಕ್ಕಿ ಬಿದ್ದು ಬಂಧನಕ್ಕೊಳಗಾದೆನು. ನನ್ನ ಬಳಿ ಇದ್ದ ಗಾಂಧೀ ಸೇವಾ ಸಂಘದ ಬೀಗದ ಕೈಯನ್ನು ನನ್ನೊಡನೆ ಮಿತ್ರರಂತೆ ಖಾದಿ ಧರಿಸಿದ್ದವರ ಕೈಗೆ ಕೊಟ್ಟು ಅಲ್ಲಿದ್ದ ಸಾಮಾನುಗಳನ್ನು ಬೇರೆಡೆಗೆ ಬದಲಾಯಿಸಲು ಹೇಳಿದೆ. ಆದರೆ ಆ ಮಹಾಶಯರು ಪೋಲೀಸರೆದುರಿಗೇ ಬೀಗದ ಕೈಯನ್ನು ನನಗೆ ವಾಪಸ್ಸು ಕೊಟ್ಟುಬಿಟ್ಟರು. ಆಗ ನನ್ನ ಗುಟ್ಟೆಲ್ಲಾ ರಟ್ಟಾಯಿತು. ನನ್ನ ಮೇಲೆ ರಾಜದ್ರೋಹ, ಬುಡಮೇಲು ಚಳವಳಿಗಾರ, ಕಾನೂನುಬಾಹಿರ ಪತ್ರಿಕಾ ಪ್ರಕಟನೆ ಇತ್ಯಾದಿಯಾಗಿ ಐದು ಅಪಾದನೆಗಳನ್ನು ಹೊರಿಸಿ ಅಂಡರ್‌ಟ್ರಯಲ್ ಆಗಿ ಒಂದೂವರೆ ತಿಂಗಳು ಮೈಸೂರು ಜೈಲಿನಲ್ಲಿಟ್ಟಿದ್ದರು.

ನನ್ನನ್ನು ಬಂಧಿಸಿದ ದಿನ ಪೋಲೀಸ್ ಸ್ಟೇಷನ್ನಿನಲ್ಲಿ ಕೂರಿಸಿಕೊಂಡು ಸ್ನೇಹವಾಗಿ

ಹ್ಯಾಮಿಲ್ಟನ್ ಬಿಲ್ಡಿಂಗ್ ಕೇಂದ್ರ ಪೋಲೀಸ್ ಠಾಣೆಗೆ ಕರೆದುಕೊಂಡು ಹೋದರು. ಒಳಗೆ ಹೋದಕೂಡಲೇ ಕತ್ತುಹಿಡಿದು ಒಳಗೆ ದಬ್ಬಿದರು. ಒಬ್ಬೊಬ್ಬ ಕಾನ್‌ಸ್ಟೇಬಲ್ಲನೂ ಬೆಲ್ಟಿನಿಂದ, ಲಾಠಿಯಿಂದ, ಬೂಡ್ಸಿನಿಂದ ಹೊಡೆತಗಳನ್ನು ಕೊಡಲಾರಂಭಿಸಿದರು. ಅನಂತರ ದುರ್ವಾಸನೆ ಹೊಡೆಯುತ್ತಿದ್ದ ಕಕ್ಕಸು ಪಕ್ಕದ ಕೋಣೆಯಲ್ಲಿ ನನ್ನನ್ನು ದಬ್ಬಿ ಬೀಗ ಹಾಕಿದರು. ಸುಮಾರು ನಾಲ್ಕು ಘಂಟೆಯನಂತರ ಅಂದರೆ ರಾತ್ರಿ ಸುಮಾರು ಹನ್ನೊಂದು ಘಂಟೆ ಸಮಯದಲ್ಲಿ ನನ್ನನ್ನು ಲಾಕಪ್ಪಿನ ಬಾಗಿಲು ತೆಗೆದು ಹೊರಗೆ ಎಳೆದು ಕೊಂಡು ಡಿ.ಎಸ್.ಪಿ.ಯವರ ಮುಂದೆ ಒಯ್ದು ನಿಲ್ಲಿಸಿದರು. "ನಿನ್ನ ಸ್ನೇಹಿತ ಶಾಸ್ತ್ರಿ ಎಲ್ಲಿ ? ಕಾಳಯ್ಯ ಎಲ್ಲಿ ? ನೀನು ಎಲ್ಲಿದ್ದಿ ? ನಿನ್ನ ಪತ್ರಿಕೆ ಹೊರಡಿಸುವ ಸಾಮಾನೆಲ್ಲಿದೆ?" ಇತ್ಯಾದಿ ಪ್ರಶ್ನೆಗಳ ಸುರಿಮಳೆಯೇ ಆಯಿತು. ಇದೆಲ್ಲದಕ್ಕೂ "ನನಗೆ ಏನೂ ಗೊತ್ತಿಲ್ಲ" ಎಂಬುದೇ ನನ್ನ ಉತ್ತರವಾಗಿತ್ತು.

ಇನ್ನೇನು ಚಳವಳಿ ಒಂದು ವಾರದಲ್ಲಿ ಪ್ರಾರಂಭವಾಗುವುದರಲ್ಲಿದ್ದಾಗ ಸೌದೆ ಡಿಪೋದಲ್ಲಿ ಲಾರಿ ನಿಲ್ಲಿಸಿಬಿಟ್ಟಿದ್ದೆ. ಜೈಲಿನಿಂದ ಹೊರಬಂದು ನೋಡಿದರೆ ಲಾರಿ ನಿಂತ ಲ್ಲಿಯೇ ನಿಂತಿದ್ದರೂ ಅದರ ಎಷ್ಟೋ ಯಂತ್ರಭಾಗಗಳು ಕಳುವಾಗಿದ್ದವು. ಬಿಡಿಭಾಗ ಗಳನ್ನು ಜೋಡಿಸಿ, ಲಾರಿ ಓಡಿಸುವ ಸ್ಥಿತಿಯಲ್ಲಿ ನಾನಿರಲಿಲ್ಲ. ಆದಕಾರಣ ಆ ಫೋರ್ಡ್ ಲಾರಿಯನ್ನು ಟ್ಯಾಕ್ಸ್ ಕಟ್ಟಲಾರದೆ ಗುಜರಿಗೆ ಕೇವಲ 500 ರೂ.ಗಳಿಗೆ ಮಾರಿಬಿಟ್ಟೆ.

ಹ್ಯಾಮಿಲ್ಟನ್ ಪೋಲೀಸ್ ಸ್ಟೇಷನ್ನಿನಲ್ಲಿ ಪ್ರಶ್ನಿಸಿದನಂತರ ನನ್ನನ್ನು ಪೋಲೀಸ್ ವ್ಯಾನಿನಲ್ಲಿ ಬಂದೂಕುಧಾರಿಗಳ ಮಧ್ಯೆ ಕೂರಿಸಿಕೊಂಡು ರಾತ್ರಿ ಹನ್ನೆರಡು ಘಂಟೆ ವೇಳೆ ಯಲ್ಲಿ ಗಾಂಧೀ ಸೇವಾ ಸಂಘದ ಬೀಗ ತೆಗೆದು ಸೈಕ್ಲೊಸ್ಟೈಲ್, ಕ್ಯಾಮರಾ, 'ಜನಧ್ವನಿ' ಪತ್ರಿಕೆಯ ಪ್ರತಿಗಳು, ಇತರ ಕಾಗದಗಳನ್ನೆಲ್ಲಾ ಮೂಟೆ ಕಟ್ಟಿ ವ್ಯಾನಿಗೆ ಹಾಕಿಕೊಂಡು ಹೊರಟರು. ನನ್ನ ಗೆಳೆಯ ಶಾಸ್ತ್ರಿಗಳ ಮನೆಯ ಬಳಿ ವ್ಯಾನ್ ನಿಂತಿತು. ನನ್ನನ್ನು ಕೆಳಗಿಳಿಯಲು ಬಿಡಲಿಲ್ಲ. ಶಾಸ್ತ್ರಿಗಳ ಮನೆಯ ಹೆಂಗಸರು ಮಕ್ಕಳೆಲ್ಲಾ ಗಾಬರಿಗೊಂಡು ಹಲುಬುತ್ತಿದ್ದುದು ಕೇಳಿಬರುತ್ತಿತ್ತು. ಅವರ ಮನೆಯಲ್ಲಿ 'ಹರಿಜನ' ಪತ್ರಿಕೆ ಇತ್ಯಾದಿ ಯಾವಯಾವುದೋ ಕಾಗದಗಳನ್ನು ಕಟ್ಟಿ ತಂದು ವ್ಯಾನಿನಲ್ಲಿ ಹಾಕಿಕೊಂಡರು. ಅನಂತರ ಅಲ್ಲಿಂದ ದೇಶೀಯ ವಿದ್ಯಾಶಾಲೆಯ ಬಳಿ ಹೋಗಿ ಬಾಗಿಲು ಬೀಗ ಒಡೆದು (ಕಾಳಯ್ಯನವರ ಕಾರ್ಯಕ್ಷೇತ್ರ) ನಾಲ್ಕೈದು ಫೈಲುಗಳನ್ನು ತಂದು ವ್ಯಾನಿಗೆ ಹಾಕಿ ಕೊಂಡು ಅನಂತರ ನನ್ನ ಸೌದೆ ಡಿಪೊ ಬಾಗಿಲು ತೆಗೆದು ನನ್ನ ಚರಕ ಮತ್ತು ಅಲ್ಲಿದ್ದ ಯಾವ್ಯಾವುದೋ ಕಾಗದಗಳನ್ನೆಲ್ಲಾ ಕಟ್ಟಿಕೊಂಡು ವ್ಯಾನಿನಲ್ಲಿ ಹಾಕಿಕೊಂಡು ಪುನಃ ಸುಮಾರು ರಾತ್ರಿ ಎರಡು ಘಂಟೆ ವೇಳೆಗೆ ಹ್ಯಾಮಿಲ್ಟನ್ ಪೋಲೀಸು ಠಾಣೆಗೆ ಕರೆತಂದು ಯಥಾಪ್ರಕಾರ ದುರ್ನಾತದಿಂದ ತುಂಬಿದ, ಶೌಚಗೃಹದ ಪಕ್ಕದ ಕೋಣೆಗೆ ನನ್ನನ್ನು ತಳ್ಳಿ, ಬೀಗಹಾಕಿದರು. ಸೊಳ್ಳೆಯ ಕಾಟ ಬೇರೆ; ನಿದ್ದೆಯಿಲ್ಲ. ಆ ನರಕಯಾತನೆಯಲ್ಲೇ ಮಾರನೆದಿನ ಬೆಳಗ್ಗೆ ಹತ್ತು ಘಂಟೆವರೆಗೂ ಹೊಟ್ಟೆಗೂ ಇಲ್ಲದೆ ಕಳೆದನಂತರ ಮೈಸೂರು

ಜೈಲಿಗೆ ಕರೆದುಕೊಂಡು ಹೋಗಿ ಅಂಡರ್‌ಟ್ರಯಲ್ ಕೈದಿಯಾಗಿ ದಾಖಲುಮಾಡಿದರು. ಒಂದೂವರೆ ತಿಂಗಳ ಕಾಲ ಜೈಲಿನಲ್ಲಿದ್ದು ಬಿಡುಗಡೆಯಾಗಿ ಬಂದನಂತರದ ಜೀವನದ ಕಷ್ಟಕಾರ್ಪಣ್ಯಗಳನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ, ಪ್ರತಿಸಲ ಜೈಲಿನಿಂದ ಹೊರಬಂದಾಗಲೂ ಪುನರ್ಜನ್ಮ; ನೆಲೆ ಇಲ್ಲದ ಹೊಸ ಜೀವನವೆಂದರೆ ಅತಿಶಯೋಕ್ತಿಯಾಗಲಾರದು.

ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಕೈಗೊಂಡಿದ್ದ ಕೆಲವು ಪ್ರತಿಜ್ಞೆಗಳೆಂದರೆ: ಸ್ವದೇಶೀ ವಸ್ತುಗಳ ಬಳಕೆ; ಸತತ ಖಾದೀಧಾರಣೆ; ಭಾರತಕ್ಕೆ ಸ್ವಾತಂತ್ರ್ಯ ಲಭಿಸುವವರೆಗೆ ಬ್ರಹ್ಮಚರ್ಯವ್ರತ, ಅಪರಿಗ್ರಹ, ಅಸಂಗ್ರಹ, ಆಡಂಬರವಿಲ್ಲದ ಪರಿಶ್ರಮದ ಜೀವನ. ಈ ವ್ರತನಿಯಮಗಳನ್ನು ಸ್ವಯಂಪ್ರೇರಣೆಯಿಂದ ಅನುಸರಿಸಿಕೊಂಡು ಬಂದಿದ್ದೇನೆಂಬ ಆತ್ಮತೃಪ್ತಿ ಇದೆ.

ಮೈ.ಮೈ. 19

## ಸಿ. ಗೋಪಾಲರಾವ್

ಜನನ: 1913 ಉದ್ಯೋಗ: ಖಾದಿ ಡಿಪೊ ವಿಳಾಸ: ಭ್ರಮರಾಂಬ ಬಡಾವಣೆ, ಚಾಮರಾಜನಗರ

---



ನನ್ನ ಮೂರನೆಯ ವರ್ಷದ ವಯಸ್ಸಿನಲ್ಲಿಯೇ ನನ್ನ ತಂದೆತಾಯಿ ತೀರಿಕೊಂಡದ್ದರಿಂದ ನಾನು ಬೀದಿಪಾಲಾಗಿ, ಹೊಟ್ಟೆಪಾಡಿಗಾಗಿ ಎಲ್ಲ ರೀತಿಯ ಕೆಲಸ ಮಾಡುತ್ತ ದೊಡ್ಡವನಾದೆ. ಇದರಿಂದ ಯಾವ ಕೆಲಸಕ್ಕೂ ಹಿಂದುಮುಂದು ನೋಡದೆ ಮುನ್ನುಗ್ಗುವ ಸ್ವಭಾವ ನನ್ನದಾಯಿತು. ತುಂಟರ ತಂಡ ಒಂದನ್ನು ಕಟ್ಟಿಕೊಂಡು ಯಾವುದೇ ಉತ್ಸವ, ಸಂತೆ, ಜಾತ್ರೆಗಳಲ್ಲಿ ನನ್ನ ಗುಂಪು ಹಾಜರಿದ್ದು ತನ್ನ ಪ್ರಾಧಾನ್ಯ ಸಾಧಿಸುತ್ತಿತ್ತು. ಸುಮಾರು 1926-27ರಿಂದ ಮೈಸೂರಿನ ಕೆಲವು ಪ್ರಮುಖರಾದ ಡಿ|| ರಂಗರಾಮಯ್ಯ, ಸಂಪಿಗೆ ವೆಂಕಟಪತಯ್ಯ, ತಗಡೂರು ರಾಮಚಂದ್ರರಾವ್, ಎಂ. ಎನ್. ಜೋಯಿಸ್, ಸೂರ್ಯನಾರಾಯಣ ಪಂಡಿತ್, ಆಗರಂ ರಂಗಯ್ಯ ಮುಂತಾದವರ ರಾಷ್ಟ್ರೀಯ ಚಟುವಟಿಕೆಗಳಿಂದ, ಮುಖ್ಯವಾಗಿ ತಗಡೂರರ ಚಟುವಟಿಕೆಗಳಿಂದ ನಾನು ಆಕರ್ಷಿತನಾದೆ. 1935ರಲ್ಲಿ ನಾನು ಚಾಮರಾಜನಗರದಲ್ಲಿ ಒಂದು

ಬೀಡಿ ಅಂಗಡಿ ಹಾಕಿ ಇರುತ್ತಿರಲು ಗಾಂಧೀಜಿಯವರ 'ಹರಿಜನ' ಪತ್ರಿಕೆ ಮತ್ತು 'ಹಿಂದ್ ಸ್ವರಾಜ್' ಎಂಬ ಅವರ ಹೊತ್ತಿಗೆಯನ್ನು ಓದಿ ವಿಶೇಷವಾಗಿ ಪ್ರಭಾವಿತನಾದೆ.

1937ರಲ್ಲಿ ಮೈಸೂರು ಕಾಂಗ್ರೆಸ್ಸಿನ ಮುಖಂಡರಾದ ಟಿ. ಮರಿಯಪ್ಪ, ಎಂ. ಎನ್. ಜೋಯಿಸ್, ಯಶೋಧರಾ ದಾಸಪ್ಪ, ಎಚ್. ಸಿ. ದಾಸಪ್ಪ, ಟಿ. ಸಿದ್ದಲಿಂಗಯ್ಯ, ಭಾಷ್ಯಂ ಮುಂತಾದವರು ಈ ಪ್ರಾಂತದ ಸಂಚಾರ ಕೈಕೊಂಡು ನಮ್ಮ ಊರಲ್ಲಿ ಕಾಂಗ್ರೆಸ್ಸಿನ ಶಾಖೆ ಆರಂಭಿಸಿದರು. ದಿ|| ಬಿ. ನಾರಾಯಣ್ ಅವರು ಅಧ್ಯಕ್ಷರಾಗಿದ್ದು ನಾನು ಕಾರ್ಯದರ್ಶಿ ಆದೆ. ಈ ಸ್ಥಾನದಲ್ಲಿ 1948ರ ವರೆಗೆ ಇದ್ದೆ. ಈ ಊರ ಇತರ ಪ್ರಮುಖರೆಂದರೆ ಗುಂಡಪ್ಪನವರು, ಎಚ್.ಕೆ. ಕುಮಾರಸ್ವಾಮಿ, ಕೆ.ವಿ. ಕೃಷ್ಣಮೂರ್ತಿ, ಯತಿರಾಜಯ್ಯ, ಎಸ್. ವೆಂಕಟರಾವ್, ಡಿ. ಶಂಕರಪ್ಪ ಮುಂತಾದ ಅನೇಕರು. ಜಾತೀಯ ಭಾವನೆ ಮತ್ತು ಸರ್ ಮಿರ್ಜಾರ ಅನುಯಾಯಿಗಳಾಗಿದ್ದ ಅನೇಕ ಗ್ರಾಮಮುಖಂಡರ ನಿಲುವಿನಿಂದ ಅನೇಕ ಗ್ರಾಮಗಳಲ್ಲಿ ನಮಗೆ ಆಗ ಪ್ರವೇಶ ಕೂಡ ಸಿಗದಂತಾಗಿತ್ತು. ಆದರೂ ಆರು ತಿಂಗಳ ಅವಧಿಯಲ್ಲಿ ಸುಮಾರು 1000 ಸದಸ್ಯರನ್ನು ತಾಲ್ಲೂಕಿನಲ್ಲಿ ಕೂಡಿಸಿದೆವು. ಶಿವಪುರ ಧ್ವಜಸತ್ಯಾಗ್ರಹ, ಹ್ಯಾಮಿಲ್ಟನ್ ಬಿಲ್ಡಿಂಗ್ ಸತ್ಯಾಗ್ರಹ ವಿದುರಾಶ್ವತ್ಥ ದುರಂತ, ವಿದುರಾಶ್ವತ್ಥ ಕಾಂಗ್ರೆಸ್ ಇವುಗಳಲ್ಲಿ ನಾನು ಪಾಲುಗೊಂಡಿದ್ದೆ. ನಮ್ಮ ತಾಲ್ಲೂಕಿನಿಂದ ಅನೇಕರು ಈ ಚಳವಳಿಗಳಲ್ಲಿ ಪಾಲುಗೊಂಡು ಶಿಕ್ಷೆ ಅನುಭವಿಸಿದ್ದಾರೆ. ಅವರಲ್ಲಿ ಕೆಲವರ ಹೆಸರುಗಳನ್ನು ಕೊನೆಗೆ ಕೊಟ್ಟಿದೆ.

1942ರಲ್ಲಿ ಚಾಮರಾಜನಗರದಲ್ಲಿ ಚಳವಳಿ ಬಲವಾಗಿ ಆಯಿತು. ಗಾಂಧೀಜಿಯವರ ಬಂಧನ ಆದಕೂಡಲೆ ನಾವು ಸಭೆ ಸೇರಿ 18 ದಿನಗಳವರೆಗೆ ಸತತವಾಗಿ ಯಾರು ಯಾರು ಬಂಧಿತರಾಗಬೇಕೆಂದು ನಿಶ್ಚಯಿಸಿದೆವು. 9-8-1942ರಂದು ಸಂಜೆ ಬಸ್ ನಿಲ್ದಾಣದ ಬಳಿಯ ಮೈದಾನದಲ್ಲಿ ಆಗಿನ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾದ ಮಲ್ಲಿಯೂರಿನ ದಿ|| ಚಿಕ್ಕಲಿಂಗಪ್ಪನವರು ಭಾಷಣಮಾಡಿ ಬಂಧಿತರಾದರು. ನಾನು ಭೂಗತನಾಗಿ ಚಳವಳಿಗೆ ನಿರ್ದೇಶನ ನೀಡುತ್ತಿದ್ದೆ. ದಿನವಹಿ ಸಂಜೆ ಒಬ್ಬೊಬ್ಬರ ಬಂಧನ ಆಗುತ್ತಿತ್ತು. ಸಂಜೆಯ ಸಭೆಗೆ ಭಾರೀ ಜನ ಬರುತ್ತಿದ್ದರು. ಆದರೆ ಪೋಲೀಸರು ಒಬ್ಬರನ್ನು ಮಾತ್ರ ಹಿಡಿಯುತ್ತಿದ್ದರು. ಕೆಲದಿನ ನಾನು ಕೊಳ್ಳೆಗಾಲದಲ್ಲಿ ಪ್ರಭು ಅವರ ಆಶ್ರಯದಲ್ಲಿ ಇದ್ದೆ. ಕಡೆಗೆ 18-8-1942ರಂದು ರಾತ್ರಿ 10 ಗಂಟೆಗೆ ನಾನು ಪೋಲೀಸರ ಕಣ್ಣುತಪ್ಪಿಸಿ ಬಂದು ನಮ್ಮ ಊರಲ್ಲಿ ಭಾರೀ ಸಭೆಯಲ್ಲಿ ಭಾಷಣ ಮಾಡಿದೆ. ಸಭೆಯ ನಂತರ ಪೋಲೀಸರು ನನ್ನನ್ನು ಬಂಧಿಸಲು ಮುಂದಾಗಲು, ಜನ ಮೆರವಣಿಗೆ ನಡೆಸಿ ನಂತರ ಬಂಧಿಸಲು ಒತ್ತಾಯಮಾಡಿದರು. ಬೆಳಗಿನ ಐದು ಗಂಟೆಯವರೆಗೆ ಈ ಮೆರವಣಿಗೆ ಆಯಿತು. ನನಗೆ ಅಂದು ಹಾಕಿದ ಹೂವಿನ ಹಾರಗಳೇ ಎರಡು ಗಾಡಿಯಷ್ಟು ಆದುವು! ಬೆಳಗ್ಗೆ ನನ್ನನ್ನು ಬಂಧಿಸಿದರು. 18-10-1943ರ ವರೆಗೆ ನಾನು ಡೆಟಿನ್ಯು ಆಗಿ ಬೆಂಗಳೂರು ಜೈಲಿನಲ್ಲಿ ಇದ್ದೆ. ನನ್ನ ಬಂಧನಾನಂತರ ಕೂಡ ಊರಲ್ಲಿ ಚಳವಳಿ ಸಾಗಿತು.

ವಿಧ್ವಂಸಕ ಕೃತ್ಯಗಳನ್ನು ಮಾತ್ರ ಮಾಡಲಿಲ್ಲ.

1947ರಲ್ಲಿ ನಾನು ಒಂದು ತಿಂಗಳು ಜೈಲಿನಲ್ಲಿ ಇದ್ದೆ. ನಮ್ಮ ತಾಲ್ಲೂಕಿನಿಂದ ಚಳವಳಿಯಲ್ಲಿ ಪಾಲುಗೊಂಡ ಇತರರು: ಕೆ. ವಿ. ಕೃಷ್ಣಮೂರ್ತಿ, ಎಸ್. ವೆಂಕಟರಾವ್, ಸಿ. ರಂಗಸ್ವಾಮಿ, ರಂಗಸ್ವಾಮಿ ನಾಯ್ಕ, ಸಿ. ಎಸ್. ಪದ್ಮರಾಜ ಪಂಡಿತ್, ಎಂ. ನಾಗೇಶರಾವ್, ಎಸ್. ನಾಗರಾಜು, ಕೆ. ಎಂ. ಪುಟ್ಟಸ್ವಾಮಿ, ಯತಿರಾಜಯ್ಯ, ಸಿ. ಎಸ್. ಬಸವರಾಜು (ಇವರೆಲ್ಲ ಚಾಮರಾಜನಗರದವರು. ಈ ಪೈಕಿ ಪದ್ಮರಾಜ ಪಂಡಿತರು 1942ರಲ್ಲೂ ಉಳಿದವರು 1942 ಮತ್ತು 1947ರಲ್ಲೂ ಶಿಕ್ಷೆಗೆ ಒಳಗಾಗಿದ್ದಾರೆ.) ಇದಲ್ಲದೆ ಪುಣಜನೂರಿನ ಡಿ. ಜೆ. ಶಂಕರಪ್ಪ ಹಾಗೂ ಕುದೇರುವಿನ ಪುಟ್ಟಸ್ವಾಮಿ ಇವರಿಗೂ 1942ರಲ್ಲಿ ಶಿಕ್ಷೆ ಆಗಿತ್ತು. ಇದಲ್ಲದೆ ನಮ್ಮ ಊರ ಎಂ. ಮಾದಯ್ಯ, ಎನ್. ರಂಗಸ್ವಾಮಿ, ರಾಮು, ಸಿ. ಎಸ್. ವರದರಾಜು, ಆರ್. ಮಹಾದೇವಯ್ಯ, ಚಂದ್ರಶೆಟ್ಟಿ, ಎಸ್. ವೆಂಕಟಸುಬ್ಬಶೆಟ್ಟಿ, ಸಿದ್ದನಾಯ್ಕ, ಮಹದೇವ, ಡಿ. ಬಸವಯ್ಯ, ಬಿ. ಎಸ್. ಸುಬ್ಬರಾವ್, ಗಜಲಕ್ಷ್ಮೀಬಾಯಿ, ಸುಬ್ಬರಾವ್, ಕೆ. ವಿ. ಕೃಷ್ಣಪ್ಪ, ಎಂ. ಶ್ರೀನಿವಾಸಮೂರ್ತಿ, ಸಿ. ಕೆ. ಗಜೇಂದ್ರ, ಕೆಂಪಶೆಟ್ಟಿ, ತಮ್ಮಯ್ಯ, ರಾಮಸ್ವಾಮಿ, ಕೆ. ಎಂ. ತೋಟಯ್ಯ, ಸಿ. ಎಸ್. ಕೃಷ್ಣ, ಮಾಧು, ಸಿ. ಎನ್. ತಂಬಿಶೆಟ್ಟಿ, ಚಿಕ್ಕನಂಜಯ್ಯ, ಸಿ. ಎಸ್. ರೇಣುಕಾರಾಧ್ಯ, ವಿ. ವೆಂಕಟಶೆಟ್ಟಿ, ಟಿ. ದಾಸಶೆಟ್ಟಿ, ತಿರುಮಲನಾಥಜಿ, ಲಲಿತಾಜಿ ನಾಗರಾಜು, ವಿ. ಬಾಲಕೃಷ್ಣ, ಸಿ. ಪಿ. ಮಹಾದೇವನ್, ಎಸ್. ನಾರಾಯಣಸ್ವಾಮಿ, ಎನ್. ವೆಂಕಟಸುಬ್ಬಶೆಟ್ಟಿ, ಸುಮಿತ್ರಾಬಾಯಿ ಸತ್ಯ ನಾರಾಯಣರಾವ್, ಬಸವಶೆಟ್ಟಿ, ಸಿ. ಕೆ. ಲಕ್ಷ್ಮಣಶೆಟ್ಟಿ, ಸಿ. ವೆಂಕಟಸುಬ್ಬಶೆಟ್ಟಿ, ಪಿ. ಆರ್. ನಾಗರಾಜಶೆಟ್ಟಿ, ಭದ್ರಕಾಳಮ್ಮ ಸೋಮಣ್ಣ, ಸಿದ್ದಯ್ಯ, ಎಂ. ರಾಮೇಗೌಡ, ಆರ್. ಲಿಂಗಣ್ಣ, ಬಸವಣ್ಣ, ಕೆ. ಎಂ. ಪುಟ್ಟಸ್ವಾಮಿ, ಎಸ್. ಜಿ. ವೆಂಕಟಶೆಟ್ಟಿ, ನಂಜುಂಡೇಗೌಡ, ಜಿ. ಎಸ್. ನಾರಾಯಣಶೆಟ್ಟಿ, ಸಿ. ಎಸ್. ವಿಷಕಂಠಯ್ಯ, ಪರ ಶಿವಮೂರ್ತಿ, ಸಿ. ಕೆ. ಧರ್ಮಾಜೆಟ್ಟಪ್ಪ, ಎಸ್. ವೆಂಕಟಸುಬ್ಬಶೆಟ್ಟಿ, ಪಿ. ಪರಶುರಾಮ್, ಜಿ. ಆರ್. ರಂಗಶೆಟ್ಟಿ ಮತ್ತು ಜವರಶೆಟ್ಟಿ ಇವರಿಗೆಲ್ಲ 1947ರಲ್ಲಿ ಒಂದು ತಿಂಗಳು ಮತ್ತು ಅದಕ್ಕೂ ಹೆಚ್ಚು ದಿನ ಶಿಕ್ಷೆ ಆಯಿತು. ಇದಲ್ಲದೆ ದೊಡ್ಡರಾಯಪೇಟೆಯ ಜಿ. ಸುಬ್ಬಪ್ಪ ಮತ್ತು ಎಸ್. ಎಲ್. ಮಹಾದೇವಯ್ಯ, ಕಾಳನಹುಂಡಿಯ ಕೆ. ಸಿ. ಪುಟ್ಟಸುಬ್ಬಯ್ಯ, ಕುದೇರುವಿನ ಕೆ. ಎಸ್. ಕುಮಾರಸ್ವಾಮಿ, ಮಾದಾಪುರದ ಎಸ್. ಪುಟ್ಟನಂಜಪ್ಪ, ಮಲೆಯೂರಿನ ಪಣ್ಯದ ಸಿದ್ದಪ್ಪ ಹಾಗೂ ದಿ|| ಎಂ. ಚಿಕ್ಕಲಿಂಗಪ್ಪ ಮತ್ತು ಕರಿಯನಕಟ್ಟೆಯ ಕೆ. ಪಿ. ನಾಗಣ್ಣ ಇವರುಗಳೂ ಇದೇ ರೀತಿ 1947ರಲ್ಲಿ ಶಿಕ್ಷೆಗೆ ಒಳಗಾದರು. ಇಡೀ ತಾಲ್ಲೂಕಿನಲ್ಲಿ ಒಟ್ಟು 80-85 ಜನ ಕಾರಾಗೃಹವಾಸ ಅನುಭವಿಸಿದ್ದು ಕೆಲವರ ಹೆಸರು ಈಗ ಮರೆತಿವೆ. ಕೆಲವರು ತೀರಿಕೊಂಡಿದ್ದಾರೆ.

ವೈ.ವೈ. 20

# ಡಿ. ಜೆ. ಶಂಕರಪ್ಪ

ಜನನ : 1906 ಉದ್ಯೋಗ : ವ್ಯವಸಾಯ ವಿಳಾಸ : ಪುಣಜನೂರು, ತಾ॥ ಚಾಮರಾಜನಗರ



ಬಾಲ್ಯದಿಂದಲೂ ನನಗೆ ವರ್ತಮಾನ ಪತ್ರಿಕೆಗಳನ್ನು ಓದುವ ಅಭ್ಯಾಸವಿತ್ತು. ವಿಶ್ವಕರ್ನಾಟಕ ಪತ್ರಿಕೆ ನಾನು ಕಾಂಗ್ರೆಸ್ಸಿಗೆ ಸೇರಲು ಕಾರಣ. 1935ರಲ್ಲಿ ತಮಿಳು ನಾಡು ಕಾಂಗ್ರೆಸ್ಸಿನಲ್ಲಿ ಸ್ವಯಂಸೇವಕನಾಗಿ, ಮಹಾ ಚುನಾವಣೆಯಲ್ಲಿ ಭಾಗವಹಿಸಿದ್ದ ಕಾಂಗ್ರೆಸ್ ಪರ ಹುರಿಯಾಳಾಗಿದ್ದ ಡಿ. ಶ್ರೀನಿವಾಸ ಅಯ್ಯರ್ ಅವರ ಪರ ತಾಳವಾಡಿ ಪೋಲಿಂಗ್ ಬೂತಿನಲ್ಲಿ ಏಜೆಂಟ್ ಆಗಿ ಕೆಲಸ ಮಾಡಿದೆನು. ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಗಳಲ್ಲಿ ಕೆಲವನ್ನು ಮಾತ್ರ ನನ್ನ ಕೈಲಾದಮಟ್ಟಿಗೆ ಮಾಡುತ್ತಾ ಇದ್ದೆನು. 1942ರ 'ಚಲೇ ಜಾವ್' ಚಳವಳಿಯ ಸಂದೇಶವು ರಾಷ್ಟ್ರದಾದ್ಯಂತ ಹರಡಿತು. ಸ್ವಾತಂತ್ರ್ಯ ಹೋರಾಟಗಾರರನ್ನೆಲ್ಲಾ ಹಿಡಿದು, ಅನೇಕ ವಿಧವಾದ ಕಿರುಕುಳ ಕೊಡುತ್ತಿದ್ದ ಬ್ರಿಟಿಷ್ ಸರಕಾರದ ರಾಕ್ಷಸೀಕೃತ್ಯವನ್ನೂ, ಭಾರತವನ್ನು ಹೇಳದೆ ಕೇಳದೆ ಯುದ್ಧಕ್ಕೆ ತಳ್ಳಿದ ಬ್ರಿಟಿಷ್ ಸರ್ಕಾರದ ಸರ್ವಾಧಿಕಾರ ನೀತಿಯನ್ನೂ, ನಮ್ಮ ಪ್ರಾಂತ್ಯದಲ್ಲಿನ ನನ ಸಂಗಡಿಗರೊಡನೆ ಜನತೆಗೆ ಪ್ರಚಾರ ಮಾಡುತ್ತಿದ್ದುದೇ ನನ್ನ ಬಂಧನಕ್ಕೆ ಕಾರಣ. 13-9-1942ರಲ್ಲಿ ದೊಡ್ಡರಾಯನಪೇಟೆಯಲ್ಲಿ ನನ್ನ ಬಂಧನ ಆಯಿತು. ನನ್ನ ಸಂಗಡಿಗರ ಪೈಕಿ ಕೆಲವರನ್ನು ಸ್ಥಾನಬದ್ಧತೆಗೂ, ಮತ್ತೆ ಕೆಲವರನ್ನು ಕೋರ್ಟ್ ವಿಚಾರಣೆಗೂ ಒಳಪಡಿಸಿ ಶಿಕ್ಷೆ ಕೊಟ್ಟರು. ಶಿಕ್ಷೆಗೊಳಪಟ್ಟವರಲ್ಲಿ ದಿ|| ಮಲೆಯೂರು ಚಿಕ್ಕಲಿಂಗಪ್ಪನವರು ಆಗ ಎಂ.ಆರ್.ಎ. ಆಗಿದ್ದರು. ಇವರಲ್ಲದೆ, ನನ್ನ ಜೊತೆ ಜೈಲಿನಲ್ಲಿ ಎಸ್. ನಾಗರಾಜು (ತಾಲ್ಲೂಕು ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿ—ಚಾಮರಾಜನಗರ), ಯತಿರಾಜು (ಚಾಮರಾಜನಗರ), ಪುಟ್ಟಸ್ವಾಮಿ (ಕುದೇರು), ನಾಗೇಶ್ (ಚಾಮರಾಜನಗರ), ಸಿ. ಗೋಪಾಲರಾವ್ (ತಾಲ್ಲೂಕು ಕಾಂಗ್ರೆಸ್ ಕಮಿಟಿ ಸದಸ್ಯರು, ಚಾಮರಾಜನಗರ), ಎಸ್. ವೆಂಕಟರಾವ್ (ಟಿ.ಸಿ.ಸಿ. ಮೆಂಬರು, ಚಾಮರಾಜನಗರ) ಇವರಲ್ಲದೆ ಚಾಮ ರಾಜನಗರದ ಕೆ. ವಿ. ಕೃಷ್ಣಮೂರ್ತಿ, ಟೈಲರ್ ರಂಗಸ್ವಾಮಿ, ರಂಗಸ್ವಾಮಿ ನಾಯ್ಕರು, ಪದ್ಮರಾಜ ಪಂಡಿತರು ಇವರೆಲ್ಲ ಇದ್ದರು. ನಾನು ಬೆಂಗಳೂರು ಸೆಂಟ್ರಲ್ ಜೈಲು,

ಹಾಸನ ಜೈಲುಗಳಲ್ಲಿ ಇದ್ದು 19-9-1943ರಲ್ಲಿ ಬಿಡುಗಡೆಯಾದೆ. ನಮ್ಮ ಗ್ರಾಮದಲ್ಲಿ (ದೊಡ್ಡರಾಯಪೇಟೆ) ನಾಯಕರಾಗಿದ್ದವರು : ಯು. ಚ. ಲಿಂಗಪ್ಪ, ಸಿ. ಲಿಂಗಪ್ಪ, ಮಲ್ಲಿಕಾರ್ಜುನಪ್ಪ, ಪಟೇಲ್ ವೆಂಕಟಸುಬ್ಬಶೆಟ್ಟರು, ಸುಬ್ಬಶೆಟ್ಟರು, ಹುಚ್ಚಶೆಟ್ಟರು, ದಾಸಶೆಟ್ಟರು, ಡಿ. ಪುಟ್ಟಶೆಟ್ಟರು, ಚಿಟಗೇಗೌಡ, ನಂಜೇಗೌಡ, ದಿ|| ಮಾದೇಗೌಡ, ಕರಗಪ್ಪನವರ ಲಿಂಗಪ್ಪ, ಮುಂಡಯ್ಯನವರು. ಚಾಮರಾಜನಗರದಲ್ಲಿ ನಾಯಕರಾಗಿದ್ದವರು : ಸಿ. ಜಿ. ರಾಜಶೇಖರ (ಬ್ಯಾಂಕರ್), ಬಿ. ಎಸ್. ವೆಂಕಟನಾಗಪ್ಪಶೆಟ್ಟಿ, ವೆಂಕಟಸುಬ್ಬಶೆಟ್ಟಿ (ಎಂ.ಆರ್.ಎ.), ಸಿ. ಗೋಪಾಲರಾವ್, ಕೆ. ವಿ. ಕೃಷ್ಣಮೂರ್ತಿ, ಎಸ್. ನಾಗರಾಜು. ವಾಸುದೇವರಾವ್, ವೆಂಕಟೇಶ.

ಮೈಸೂರಿನಲ್ಲಿ ನಡೆದ ಹ್ಯಾಮಿಲ್ಟನ್ ಬಿಲ್ಡಿಂಗ್ ಸತ್ಯಾಗ್ರಹದಲ್ಲಿ ಒಂದು ದಿನ ಮಾತ್ರ ಭಾಗವಹಿಸಿದ್ದೆನು. 1947ರಲ್ಲಿ ನಡೆದ ಚಳವಳಿಯಲ್ಲಿ ಭಾಗವಹಿಸಿದ್ದೆನು.

ಮೈ.ಮೈ. 21

## ಬಿ. ನಂಜಾಚಾರ್

ಜನನ : 1922 ಉದ್ಯೋಗ : ಅಧ್ಯಾಪಕ ವಿಳಾಸ : ಹೊಸೂರು, ಕೆ.ಆರ್. ನಗರ ತಾ||

ನಾನು ನಾಲ್ಕನೇ ತರಗತಿಯಲ್ಲಿದ್ದಾಗಲೇ ನಮ್ಮ ಊರಾದ ದೊಡ್ಡಕೊಪ್ಪಲಿನ ಶಾಲೆಗೆ ಬರುತ್ತಿದ್ದ ಪ್ರಜಾಮತ ಮುಂತಾದ ಪತ್ರಿಕೆಗಳನ್ನು ಓದುತ್ತಿದ್ದೆನು. ಅವುಗಳಲ್ಲಿ ಆಗಾಗ ಬರುತ್ತಿದ್ದ ಗಾಂಧೀಜಿ, ನೆಹರು, ಪಟೇಲ್, ಸುಭಾಸರ ಫೋಟೋಗಳನ್ನು ಕತ್ತರಿಸಿ ನನ್ನ ಪೆಟ್ಟಿಗೆಯಲ್ಲಿ, ಪುಸ್ತಕಗಳ ಮಧ್ಯೆ ಜೋಪಾನವಾಗಿ ಇಟ್ಟುಕೊಳ್ಳುತ್ತಿದ್ದೆನು. 1935 ರಿಂದ 1939ರವರೆಗೂ ನಾನು ಹೊಸೂರು ಮಿಡ್ಲ್ ಸ್ಕೂಲಿನಲ್ಲಿ ವ್ಯಾಸಂಗ ಮಾಡಿದೆನು. ಆ ಕಾಲದಲ್ಲಿ ಎಚ್. ಸಿ. ದಾಸಪ್ಪ, ಯಶೋಧರಾ ದಾಸಪ್ಪ, ಎಂ. ಎನ್. ಜೋಯಿಸ್, ಕೆ. ಸಿ. ರೆಡ್ಡಿ ಮೊದಲಾದವರ ಭಾಷಣಗಳಿಂದ ಪ್ರಭಾವಿತನಾದೆನು.

1940ರಲ್ಲಿ ನಾನು ಹಾಸನದಲ್ಲಿ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ಕೆ. ಟಿ. ಭಾಷ್ಯಂರವರ ಭಾಷಣವನ್ನು ಬೂವನಹಳ್ಳಿಯಲ್ಲಿ ಕೇಳಿದೆನು. ನಮಗೆ ಸ್ವಾತಂತ್ರ್ಯ ಲಭಿಸಬೇಕಾದರೆ ನಮ್ಮಲ್ಲಿ ತ್ಯಾಗ, ಸೇವೆ, ಭಕ್ತಿ, ಪ್ರೇಮ ಇವು ಬೆಳೆಯಬೇಕು ಎಂದು ಅವರು ನುಡಿದರು. ಆ ಮಾತುಗಳು ಇಂದಿಗೂ ನನ್ನ ಹೃದಯದಲ್ಲಿ ಮಾರ್ದನಿಯಾಗುತ್ತಿವೆ. ನಾನೂ ದೇಶಕ್ಕಾಗಿ ತ್ಯಾಗಮಾಡಬೇಕು; ಸೇವೆಮಾಡಬೇಕು ಎಂದು ಅಂದೇ ಮನಸ್ಸಿನಲ್ಲಿ ನಿಶ್ಚಯ ಮಾಡಿದೆನು; ಅಂದಿನಿಂದ ಎಲ್ಲಿ ಭಾಷಣ ನಡೆದರೂ ಅಲ್ಲಿ ನಾನು ಶಾಲೆಯನ್ನು ಬಿಟ್ಟು ಹಾಜರಾಗುತ್ತಿದ್ದೆನು; ಅಂದಿನಿಂದಲೇ ಮಾನಸಿಕವಾಗಿ

ಸ್ವಾತಂತ್ರ್ಯಯೋಧನಾದೆನು. 1938ರಿಂದಲೇ ಖಾದೀ ಬಟ್ಟೆಯನ್ನು ಧರಿಸಲು ಪ್ರಾರಂಭಿಸಿದ್ದೆನು.

1942ರಲ್ಲಿ ನನಗೆ ಎಸ್.ಎಸ್.ಎಲ್.ಸಿ. ಮೊದಲನೆ ವಾರ್ಷಿಕ ಪರೀಕ್ಷೆ ಪ್ರಾರಂಭವಾಯಿತು (ಆಗಸ್ಟ್ ತಿಂಗಳಿನಲ್ಲಿ). ಆ ದಿನವೇ ನಮ್ಮ ಶಾಲಾ ಮೈದಾನದಲ್ಲಿ ಗೊರೂರ್ ರಾಮಸ್ವಾಮಿ ಅಯ್ಯಂಗಾರ್‌ರವರ ಭಾಷಣವಿತ್ತು. ನಾನು ಪರೀಕ್ಷೆಯನ್ನೇ ಮರೆತು ಆ ಸಭೆಯಲ್ಲಿ ಭಾಗವಹಿಸಿದೆ. ಆ ದಿನ ಪರೀಕ್ಷೆಯೂ ನಡೆಯಲಿಲ್ಲ. ಅನೇಕ ವಿದ್ಯಾರ್ಥಿಗಳು ಆ ಸಭೆಯಲ್ಲಿ ಭಾಗವಹಿಸಿದ್ದುದೇ ಅದಕ್ಕೆ ಕಾರಣವಾಯಿತು. ಮರುದಿನವೂ ಶಾಲೆಗೆ ಬಹುಭಾಗ ವಿದ್ಯಾರ್ಥಿಗಳು ಹಾಜರಾಗಲಿಲ್ಲ. ನಮ್ಮ ಶಾಲೆಯ ಸುಮಾರು 200 ವಿದ್ಯಾರ್ಥಿಗಳು ಸಾಲುಸಾಲಾಗಿ ರಸ್ತೆಯಲ್ಲಿ ಜಯಕಾರ ಮಾಡುತ್ತಾ ಅರಸೀಕೆರೆಗೆ ಹೋಗುತ್ತಿದ್ದರು. ನಾನೂ ಅವರ ಜೊತೆ ಸೇರಿದೆ. ಎಲ್ಲರೂ ಹಾಸನದಿಂದ ಅರಸೀಕೆರೆಗೆ ಹೋಗುವ ಅಂದಿನ ರೈಲಿನಲ್ಲಿ ಹೊರಟೆವು. ಮೊದಲನೇ ದರ್ಜೆಯ ಗಾಡಿಯಲ್ಲೆ ಕುಳಿತೆವು. ಒಬ್ಬರೂ ಟಿಕೆಟ್ ಪಡೆದಿರಲಿಲ್ಲ. ರೈಲು ಹೊರಟಿತು. ವಿದ್ಯಾರ್ಥಿಗಳು ಕೂಗಲು ಪ್ರಾರಂಭಿಸಿದರು : "ರೈಲು ಯಾರದು ?— ನಮ್ಮದು !", "ದೇಶ ಯಾರದು ?— ನಮ್ಮದು !"

ರೈಲು ಅರಸೀಕೆರೆ ರೈಲ್ವೆ ನಿಲ್ದಾಣವನ್ನು ಸೇರಿತು. ವಿದ್ಯಾರ್ಥಿಗಳೆಲ್ಲ ಕೆಳಗಿಳಿದರು ; ಸಾಲುಸಾಲಾಗಿ ನಿಂತರು. ಮೊದಲನೆ ಸಾಲಿನಲ್ಲಿದ್ದವನು ಒಂದು ರಾಷ್ಟ್ರಧ್ವಜವನ್ನು ಹಿಡಿದಿದ್ದನು. ವಿದ್ಯಾರ್ಥಿಗಳು ಘೋಷಣೆ ಕೂಗತೊಡಗಿದರು. ಆ ಶಬ್ದವನ್ನು ಕೇಳಿ ಅರಸೀಕೆರೆಯ ಪುರಜನರು ರೈಲುನಿಲ್ದಾಣಕ್ಕೆ ಗುಂಪುಗುಂಪಾಗಿ ಬಂದು ಸೇರಿದರು. ಅಲ್ಲಿ 8-10 ಜನರ ಒಂದು ಮಿಲಿಟರಿ ಗುಂಪಿತ್ತು. ಆ ಗುಂಪಿನ ಕರ್ನಲ್ ಆಂಗ್ಲೋ-ಇಂಡಿಯನ್ ಯುವಕ ನಮ್ಮ ಗುಂಪಿನ ಮುಖಂಡನನ್ನು "ಟಿಕೆಟ್ ಎಲ್ಲಿ ?" ಎಂದು ಕೇಳಿದನು. ಮುಖಂಡನು "ಇಲ್ಲ" ಎಂದು ಉತ್ತರಿಸಿದನು. "ನಿಮ್ಮನ್ನು ಊರೊಳಗೆ ಬಿಡುವುದಿಲ್ಲ" ಎಂದು ಕರ್ನಲ್ ಹೇಳಿದನು. ಅವರ ಕೈಗಳಲ್ಲಿ ಬಂದೂಕುಗಳಿದ್ದವು. 10-15 ನಿಮಿಷ ಕಳೆದ ನಂತರ "ನೀವೆಲ್ಲರೂ ಗಲಾಟೆ ಮಾಡದೆ ಒಳಗೆ ಹೋಗಬಹುದು ; ಆದರೆ ವಾಪಸ್ ಹಾಸನಕ್ಕೆ ಹೋಗುವಾಗ ಟಿಕೆಟ್ ಪಡೆದು ಹೋಗಬೇಕು" ಎಂದು ಹೇಳಿದನು. ಆದರೂ ನಾವೆಲ್ಲರೂ ಸಾಲಾಗಿ ಶಿಸ್ತು, ಶಾಂತಿಯಿಂದ ಊರೊಳಗೆ ಹೋದೆವು. ಅಲ್ಲಿ ದೊಡ್ಡ ಮೈದಾನದಲ್ಲಿ ಸಭೆ ಸೇರಿದೆವು. ನಮ್ಮ ಗುಂಪಿನ ಐದಾರು ವಿದ್ಯಾರ್ಥಿಗಳು ಭಾಷಣ ಮಾಡಿದರು. ಆ ಊರಿನ ಪ್ರಮುಖರೂ, ಇತರರೂ ನಮ್ಮನ್ನು ಬಹಳ ವಿಶ್ವಾಸ, ಮರ್ಯಾದೆಯಿಂದ ಕಂಡರು. ಆ ಊರಿನ ಧರ್ಮಶಾಲೆಯಲ್ಲಿ ನಮಗೆಲ್ಲಾ ಊಟ ಹಾಕಿಸಿದರು. ಆ ರಾತ್ರಿ ಅಲ್ಲಿಯೇ ಮಲಗಲು ಹಾಸಿಗೆ ಒದಗಿಸಿಕೊಟ್ಟರು. ಮರುದಿನ ಬೆಳಗ್ಗೆ ಕಾಫಿ ತಿಂಡಿಯನಂತರ ಹಾಸನಕ್ಕೆ ಹೊರಟೆವು. ಅನೇಕರು ರೈಲು ಟಿಕೆಟ್ ಪಡೆದು ಗಾಡಿಯಲ್ಲಿ ಕುಳಿತರು. ಕೆಲವರು ಹಾಗೆಯೇ ನಡೆದುಕೊಂಡು ದಾರಿಯುದ್ದಕ್ಕೂ

ಸಿಕ್ಕಿದ ಗ್ರಾಮಗಳಲ್ಲಿ ಕಾಂಗ್ರೆಸ್ ಪ್ರಚಾರ ಮಾಡುತ್ತಾ ಹಾಸನ ಸೇರಿದರು.

1942ರಲ್ಲಿ ನಾನು ಶಾಲೆಯನ್ನು ಬಿಟ್ಟು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಲು ಪ್ರಾರಂಭಿಸಿದೆನು. ಎಲ್ಲಿ ಭಾಷಣಗಳಾದರೆ ಅಲ್ಲಿ ನಾನು ಹಾಜರಾಗುತ್ತಿದ್ದೆ. ಎಷ್ಟು ದೂರವಾದರೂ ಸರಿ, ಊಟ ನಿದ್ರೆಯಿಲ್ಲದಿದ್ದರೂ, ಕೈಲಿ ಕಾಸಿಲ್ಲದಿದ್ದರೂ, ಹತ್ತಾರು ಮೈಲಿ ನಡೆಯುವಂತಿದ್ದರೂ ನಾನು ಗಮನಿಸುತ್ತಿರಲಿಲ್ಲ. ನಮ್ಮ ತಂದೆ ಈ ವಿಚಾರದಲ್ಲಿ ಎಂದೂ ಅಡ್ಡ ಬಂದವರಲ್ಲ; ಆದರೆ ವಿಚಾರಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು; ಹಾಗೂ ಸಂತೋಷಪಡುತ್ತಿದ್ದರು.

ಒಂದು ದಿನ ನಾವು ಐದಾರು ಹುಡುಗರು ಸೇರಿ ಆಗಸ್ಟ್ 1942ರಲ್ಲಿ ಚುಂಚನಕಟ್ಟೆ ಬಳಿಯಿದ್ದ ಹೆಂಡದ ಗುಡಿಸಲಿಗೆ ಬೆಂಕಿ ಹಚ್ಚಿದೆವು. ಮತ್ತೊಂದು ದಿನ ನಮ್ಮೂರಿನಲ್ಲೇ —ದೊಡ್ಡಕೊಪ್ಪಲಿನಲ್ಲಿ—ನಾವು (ಬಿ. ನಂಜಾಚಾರ್, ಎಲ್. ರಾಮಯ್ಯ, ಡಿ. ದೇವಯ್ಯ) ಭಾಷಣಮಾಡಿದೆವು. "ಸರ್ಕಾರದ ಕಾನೂನುಗಳನ್ನು ಪಾಲಿಸಬೇಡಿರಿ; ಸರ್ಕಾರಕ್ಕೆ ಕಂದಾಯ ಕೊಡಬೇಡಿರಿ; ಬ್ರಿಟಿಷ್ ಸರ್ಕಾರ ಹೋಗಿ ಸ್ವತಂತ್ರ ಭಾರತ ಸರ್ಕಾರ ಬರಬೇಕು; ನಾವು ಸ್ವತಂತ್ರರಾಗಬೇಕು"—ಇದು ನಮ್ಮ ಅಂದಿನ ಭಾಷಣದ ಮುಖ್ಯ ಸಾರಾಂಶವಾಗಿತ್ತು. ಹೀಗೆಯೇ ನಾವು 8–10 ಗ್ರಾಮಗಳಲ್ಲಿ ಸಭೆಗಳಲ್ಲಿಯೂ ಮೆರವಣಿಗೆಗಳಲ್ಲಿಯೂ ಭಾಗವಹಿಸಿ ಜನರಲ್ಲಿ ಪ್ರಚಾರ ಮಾಡಿದೆವು. ನಾವು ಹೋದ ಕಡೆಗಳಲ್ಲೆಲ್ಲಾ ನಮ್ಮನ್ನು ಪೋಲೀಸರು ಹಿಂಬಾಲಿಸುತ್ತಿದ್ದರು. ಒಂದು ದಿನ ನಮ್ಮ ಊರಿನಲ್ಲಿ ನಾನು ಮತ್ತು ಡಿ. ದೇವಯ್ಯ ಭಾಷಣ ಮಾಡುತ್ತಿದ್ದಾಗ ನಮ್ಮನ್ನು ಪೋಲೀಸರು ಬಂಧಿಸಿದರು. ಕೆ. ಆರ್. ನಗರದ ಪೋಲೀಸ್ ಸ್ಟೇಷನ್ನಿಗೆ ಕರೆದೊಯ್ದರು. ಅಲ್ಲಿದ್ದ ಅಧಿಕಾರಿಗಳು "ನೀವಿನ್ನೂ ಹುಡುಗರು; ನಿಮಗೆ ಸ್ವಾತಂತ್ರ್ಯದ ಅರ್ಥ ಗೊತ್ತಿಲ್ಲ; ಸುಮ್ಮನೆ ಮನೆಗೆ ಹೋಗಿರಿ; ಇನ್ನುಮೇಲೆ ಇಂತಹ ಕಾರ್ಯದಲ್ಲಿ ಭಾಗವಹಿಸಬೇಡಿ" ಎಂದರು. "ನಿಮ್ಮ ಬುದ್ಧಿವಾದ ಕೇಳಲು ನಾವಿಲ್ಲಿ ಬಂದಿಲ್ಲ" ಎಂದು ಹೇಳಿದೆವು. ಕೂಡಲೇ ಬಸ್ಸಿನಲ್ಲಿ ಮೈಸೂರು ಪೋಲೀಸ್ ಠಾಣೆಗೆ ನಮ್ಮನ್ನು ಕಳುಹಿಸಿದರು. ಅಲ್ಲಿ ಸುಮಾರು 15 ನಿಮಿಷ ಸಣ್ಣ ಕೋಣೆಯಲ್ಲಿ ನಮ್ಮಿಬ್ಬರನ್ನು ಕೂಡಿಟ್ಟರು. ಆಮೇಲೆ ಪೋಲೀಸ್ ವ್ಯಾನಿನಲ್ಲಿ ಮೈಸೂರು ಜೈಲಿಗೆ ಸಾಗಿಸಿದರು. ಅಂದು ಗೌರೀ ಹಬ್ಬದ ದಿನ. ಮಧ್ಯಾಹ್ನ 2 ಘಂಟೆಗೆ ಸರಿಯಾಗಿ ಅಲ್ಲಿಗೆ ಸೇರಿದೆವು. ಅಲ್ಲಿ ನಮಗಿಂತ ಮೊದಲೇ ನಮ್ಮ ತಾಲ್ಲೂಕಿನ ಅನೇಕ ವಿದ್ಯಾರ್ಥಿಗಳೂ ಸೇರಿದ್ದರು. ಎಲ್. ರಾಮಯ್ಯ, ಎಸ್. ಎ. ಸಣ್ಣಹಲಗೇಗೌಡ, ಎಸ್. ಕೆ. ರಾಮಯ್ಯ, ಎಸ್. ಎನ್. ನಾಭಿರಾಜಯ್ಯ (ಸಾಲಿಗ್ರಾಮ), ಎಸ್. ರಂಗಯ್ಯ ಮೊದಲಾದವರಿದ್ದರು.

ಮೈಸೂರು ಜೈಲಿನಲ್ಲಿ ನಾವು ಸುಮಾರು ಮುನ್ನೂರು ವಿದ್ಯಾರ್ಥಿಗಳಿದ್ದೆವು. ಅದೇ ನಮಗೆ ಒಂದು ಕಾಲೇಜಿನಂತಿತ್ತು. ಅಲ್ಲಿ ಎಸ್. ನಿಜಲಿಂಗಪ್ಪ, ಎಚ್.ಸಿ. ದಾಸಪ್ಪ ಮುಂತಾದವರಿದ್ದರು. ಅವರು ಮೂರುನಾಲ್ಕು ದಿನಗಳು ಮಾತ್ರ ಅಲ್ಲಿದ್ದರು; ಆನಂತರ

ಅವರನ್ನು ಬೆಂಗಳೂರು ಸೆಂಟ್ರಲ್ ಜೈಲಿಗೆ ಸಾಗಿಸಿದರು. ಜೈಲಿನಲ್ಲಿ ನಮಗೆ ಇಬ್ಬರು ಮುಖಂಡರಿದ್ದರು—ಅವರು ಎಚ್. ವೈ. ಶಾರದಾ ಪ್ರಸಾದ್ ಮತ್ತು ವ್ಯಾಸತೀರ್ಥ. ಅವರಿಬ್ಬರೂ ಕಾಲೇಜು ವಿದ್ಯಾರ್ಥಿಗಳಾಗಿದ್ದರು. (ಈಗ ಎಚ್. ವೈ. ಶಾರದಾಪ್ರಸಾದರು ಡೈರೆಕ್ಟರ್ ಆಫ್ ಇನ್‌ಫರ್‌ಮೇಶನ್ ಟು ದಿ ಪ್ರೈಮ್ ಮಿನಿಸ್ಟರ್, ನ್ಯೂ ಡೆಲ್ಲಿ. ತೀರ್ಥರು ಮುಂದೆ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪ್ರೊಫೆಸರ್ ಆಗಿದ್ದರು.) ಜೈಲಿನಲ್ಲಿ ಪ್ರತಿದಿನ ಸಾಯಂಕಾಲವೂ ಅವರ ಭಾಷಣವಿರುತ್ತಿತ್ತು. ಅವು ನಮ್ಮ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡಿವೆ. ನಾವು ಎಂದಿಗೂ ಮರೆಯಲಾಗದ ಬಂಧು, ಮಿತ್ರ, ಗುರು ಅವರು. ಇವರ ಭಾಷಣ, ಅಲ್ಲಿನ ಓದು ಇವುಗಳಿಂದ ನನ್ನಲ್ಲಿ ದೇಶಭಕ್ತಿ, ಸ್ವಾತಂತ್ರ್ಯಹೋರಾಟದಲ್ಲಿ ಆಸಕ್ತಿ ಇನ್ನೂ ಹೆಚ್ಚಾಯಿತು. ದೇಶಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ನಾನು ಪ್ರಾಣಬಿಡಲು ಸಿದ್ಧ ಎನ್ನುವ ಮಟ್ಟಿಗೆ ನನ್ನ ಧೈರ್ಯ, ಸ್ಥೈರ್ಯ ಬೆಳೆಯಿತು.

ಒಂದು ರಾತ್ರಿ ವಿದ್ಯಾರ್ಥಿಗಳೆಲ್ಲರೂ ಶಿಸ್ತುಶಾಂತಿಯಿಂದ ಯಾವುದೋ ಕಾರಣಕ್ಕೆ ಜೈಲಿನ ಆವರಣದಲ್ಲಿ ಸತ್ಯಾಗ್ರಹ ಹೂಡಿದರು. ರಾತ್ರಿ 10ರಿಂದ 12 ಘಂಟೆಯವರೆಗೆ ಹಾಗೆಯೇ ಕುಳಿತಿದ್ದರು. ಆದರೆ ಇದ್ದಕ್ಕಿದ್ದಂತೆ ಸುಮಾರು 300 ಜನ ರಿಸರ್ವ್ ಪೋಲೀಸರು ಒಳಗಡೆ ಬಂದು ಸಾಲಾಗಿ ನಿಂತರು. ಲೈಟುಗಳ ಬೆಳಕಿನಲ್ಲಿ ಅವರು ಕಪ್ಪಾಗಿ ಕಾಣುತ್ತಿದ್ದರು. ಅವರ ಕಪ್ಪುಮುಖ, ಮೀಸೆ, ಬಿಳುಪಾದ ಕಣ್ಣುಗಳನ್ನು ನೋಡಿದರೆ ಅವರೆಲ್ಲಾ ಯಮದೂತರಂತೆ ಕಾಣುತ್ತಿದ್ದರು. ಅವರ ಕೈಗಳಲ್ಲಿ ಮಾರುದ್ದದ ಲಾಠಿಗಳಿದ್ದವು. ಅವರೆಲ್ಲಾ ಚೆನ್ನಾಗಿ ಕುಡಿದು ಬಂದಿದ್ದರು. "ಗಲಾಟೆ ಮಾಡದೆ ನೀವೆಲ್ಲಾ ಹೋಗಿ" ಎಂದು ಪೋಲೀಸ್ ಅಧಿಕಾರಿಗಳು ನಮಗೆ ತಿಳಿಸಿದರು. ವಿದ್ಯಾರ್ಥಿಗಳೆಲ್ಲಾ ಸಂತೋಷದಿಂದ ಮಾತಾಡಿಕೊಳ್ಳುತ್ತಾ ನಿಧಾನವಾಗಿ ಅವರವರ ರೂಮುಗಳಿಗೆ ಹೋಗುತ್ತಿರುವಾಗಲೇ "ಲಾಠೀ ಛಾರ್ಜ್! ಲಾಠೀ ಛಾರ್ಜ್!" ಎಂದು ಪೋಲೀಸ್ ಅಧಿಕಾರಿಗಳು ಕೂಗಿದರು. ಲಾಠಿ ಏಟುಗಳು ಕೂಡಲೇ ಪ್ರಾರಂಭವಾದವು. ಅನೇಕ ಹುಡುಗರು ಅವರವರ ರೂಮುಗಳಿಗೆ ಹೋದರು. ಕೆಲವರು ಮರ ಹತ್ತಿ ಕುಳಿತರು. ಕೆಲವರು ಕಕ್ಕಸುಗಳ ಒಳಗಡೆ ಅಡಗಿಕೊಂಡರು. ಕೆಲವರು ತರಕಾರಿ ಗಿಡಗಳ ಅಡಿಯಲ್ಲಿ ಅವಿತುಕೊಂಡರು. ಉಳಿದವರು ಲಾಠಿ ಏಟಿಗೆ ಸಿಕ್ಕಿದರು. ನಾನು ಓಡಿಹೋಗಿ ರೂಂ ಸೇರಿದೆನು. ಹೊರಗೆ ಜೈಲಿನ ಆವರಣದಲ್ಲಿ ದೊಣ್ಣೆಗಳ ಲಟ್‌ಪಟ್ ಶಬ್ದ ಕೇಳುತ್ತಿತ್ತು. ಕೆಲವು ಹುಡುಗರು "ಅಯ್ಯೋ! ಅಮ್ಮ!" ಎನ್ನುತ್ತಿದ್ದರು. ರಾತ್ರಿ 12 ಘಂಟೆಯಿಂದ 1 ಘಂಟೆಯವರೆಗೆ ಲಾಠೀ ಛಾರ್ಜ್ ನಡೆಯಿತು. ಅಂದಿನ ರಾತ್ರಿ ಒಂದು ಘಂಟೆಯಲ್ಲೇ ಜೈಲು ನರಕವಾಯಿತು. ಅನೇಕರಿಗೆ ಅನೇಕ ತರಹ ಗಾಯಗಳಾದವು. ಶಂಕರಪ್ಪ ಎಂಬುವನಿಗೆ ಬೂಟಿನಿಂದ ಒದ್ದ ಬಲವಾದ ಏಟು ಬಿದ್ದಿತ್ತು. ಆವನನ್ನು ಕೆ.ಆರ್. ಆಸ್ಪತ್ರೆಗೆ ಸೇರಿಸಿದರು. ಆದರೇನು. ಶಂಕರಪ್ಪನ ಪ್ರಾಣಪಕ್ಷಿ ಹಾರಿಹೋಗಿತ್ತು. ದೇಶದ

ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತ ಶಂಕರಪ್ಪನ ಕೀರ್ತಿ ಉಳಿಯಿತು ; ನಶ್ವರ ದೇಹ ಮಾತ್ರ ಅಳಿಯಿತು ! ಶಂಕರಪ್ಪನ ಮರಣವಾರ್ತೆ ಜೈಲಿನಲ್ಲಿದ್ದ ವಿದ್ಯಾರ್ಥಿಗಳಿಗೆಲ್ಲಾ ತಿಳಿಯಿತು. ಸೋದರ ಶಂಕರಪ್ಪನನ್ನು ಕಳೆದುಕೊಂಡ ವಿದ್ಯಾರ್ಥಿಗಳೆಲ್ಲರೂ ಗೋಳಾಡಿದರು. ಆ ದಿನ ಪೂರ್ತಾ ಜೈಲಿನಲ್ಲಿದ್ದ ವಿದ್ಯಾರ್ಥಿಗಳಲ್ಲಿ ಯಾರೊಬ್ಬರೂ ಊಟ ಮಾಡಲಿಲ್ಲ. ತಿಂಡಿ ತಿನ್ನಲಿಲ್ಲ; ಕಾಫಿ, ಟೀ ಕುಡಿಯಲಿಲ್ಲ. ಈ ದುರ್ಘಟನೆ ನಡೆದ 2-3 ದಿನಗಳಲ್ಲಿಯೇ ಜೈಲಿನಿಂದ ನಮ್ಮೆಲ್ಲರ ಬಿಡುಗಡೆಯಾಯಿತು.

ಮೈ.ಮೈ. 22

## ಹೆಜ್ಜಿಗೆ ಲಿಂಗಣ್ಣ

ಜನನ : ?   ಉದ್ಯೋಗ : ವಕೀಲ   ವಿಳಾಸ : ನಂಜನಗೂಡು

---

ನಾನು ಮಾಧ್ಯಮಿಕ ಶಾಲಾ ಕೊನೆಯ ಹಂತದಲ್ಲಿದ್ದೆ. ಪ್ರತಿದಿನ ಹೆಜ್ಜಿಗೆಯಿಂದ ನಂಜನಗೂಡು ಪಾಠಶಾಲೆಗೆ ಬರುವ ಪರಿಪಾಠ. ಅಂದು ದೇಶಾದ್ಯಂತ ಪರಕೀಯ ವಸ್ತುಗಳ ಬಾಯ್‌ಕಾಟ್ ಚಳವಳಿ ನಡೆದಿತ್ತು. ನಮ್ಮ ಪಾಠಶಾಲೆ ಮತ್ತು ಪ್ರೌಢಶಾಲೆ ವಿದ್ಯಾರ್ಥಿಗಳ ತಂಡ ಪರಕೀಯ ವಸ್ತುಗಳನ್ನು ಧಿಕ್ಕಾರ ಮಾಡಿರೆಂದು ಕೂಗುತ್ತಾ ಬಂದರು. ನಾವೆಲ್ಲರೂ ಅವರೊಡನೆ ಸೇರಿ ಜೈಕಾರಮಾಡಿ ಮೆರವಣಿಗೆ ಹೊರಟೆವು. ಗೌರೀಭಟ್ಟರ ಬೀದಿಯಲ್ಲಿ ಎಲ್ಲರೂ ಸೇರಿ ಪರಕೀಯ ವಸ್ತುಗಳ 'ಕಾಮದಹನ' ನಡೆಸಿದೆವು. ನಮ್ಮಲ್ಲಿದ್ದ ಪರದೇಶೀ ಟೋಪಿಗಳು ಅಗ್ನಿಗೆ ಆಹುತಿಯಾದವು. ಆ ಬೆಂಕಿಯಲ್ಲಿ ನಮ್ಮ ಭಾವ ವಿಲೀನಗೊಂಡು ಏನೋ ಒಂದು ಮಹತ್ಕಾರ್ಯವೆಸಗಿದವರ ಹುಮ್ಮಸ್ಸು ನಮ್ಮಲ್ಲಿ ತುಂಬಿತು. ಗಾಂಧೀಜಿಯವರ ಹೆಸರು ಜನಜನಿತವಾದ ಕಾಲವದು. ಅವರ ವ್ಯಕ್ತಿತ್ವ ಇಡೀ ನಾಡಿನಾದ್ಯಂತ ಪಸರಿಸಿ ಹಿರಿಯ ಕಿರಿಯರೆಲ್ಲರಲ್ಲಿದ್ದ ಸುಪ್ತದೇಶಭಕ್ತಿಯನ್ನು ಬಡಿದೆಬ್ಬಿಸಿತು.

ಪ್ರೌಢಶಾಲೆಯಲ್ಲಿ ನಾನಾಗ ಮುಖಂಡನಾಗಿದ್ದೆ. ಬೆಂಗಳೂರಿನ 'ಸರಿಮನ್ ಗಲಾಟೆ'ಯ ಸಂದರ್ಭದಲ್ಲಿ ಊರೆಲ್ಲೆಲ್ಲಾ ಮೆರವಣಿಗೆ ಮಾಡಿ ಖಂಡನಾಸಭೆಯನ್ನು ಮಾಡಿಸಿದೆ. ಅನಂತರ 1942ರ ಚಳವಳಿಯಲ್ಲಿ ಭೂಗತನಾಗಿ ಕೆಲಸಮಾಡಿದೆ. ಮುಂದೆ ಬೆಳಗಾವಿ ಲಾ ಕಾಲೇಜಿಗೆ ಹೋದೆ. ಅನಂತರ 'ಮೈಸೂರು ಚಲೋ' ಹೋರಾಟ.

'ಮೈಸೂರು ಚಲೋ' ಹೋರಾಟ ಅತಿಬಿರುಸಿನಿಂದ ನಡೆದಿತ್ತು. ನಂಜನಗೂಡು ಕೂಡ ಈ ಹೋರಾಟದಲ್ಲಿ ಹಿಂದೆ ಬೀಳಲಿಲ್ಲ. ತಾಲ್ಲೂಕಿನಲ್ಲಿ ಹೇರಿದ ಪೋಲೀಸ್ ಕಾಯಿದೆಯನ್ನು ಮುರಿಯಲು ಕಾಂಗ್ರೆಸ್ಸಿಗರೆಲ್ಲಾ ಸನ್ನದ್ಧರಾದರು. ಇಲ್ಲಿನ ಹಿರಿಯ

ನಾಯಕ ವಿಶ್ವೇಶ್ವರಗೌಡರಿಗೆ ಈ ಕಾಯಿದೆ ಮುರಿದ ಮೊದಲ ಪಟ್ಟಕಟ್ಟಬೇಕೆಂದು ನಾವೆಲ್ಲ ಬಯಸಿದೆವು. ಅವರು ಅದಕ್ಕೊಪ್ಪದೆ ಲಿಂಗಣ್ಣನೇ ಮೊದಲಿಗನಾಗಬೇಕೆಂದು ಹಟಹಿಡಿದರು. ನಾನಂತೂ ಅದಕ್ಕೊಪ್ಪದೆ ಕುಳಿತೆ. ಕೊನೆಗೆ ರಾಜಿ ಆಗಿ ನಾವಿಬ್ಬರೂ ಒಟ್ಟಿಗೇ ಕಾನೂನುಭಂಗಮಾಡಲು ತೀರ್ಮಾನವಾಯಿತು. ಅವರ ಅಧ್ಯಕ್ಷತೆಯಲ್ಲಿ ನನ್ನ ಭಾಷಣ ಆಯಿತು. ಪೋಲೀಸರು ನನ್ನನ್ನು ಹಿಡಿದರು. ತಾಲ್ಲೂಕು ಕಚೇರಿಯ ಮುಂದೆ ಜನರ ಜಾತ್ರೆಯಾಯಿತು. ಅವರ ಉಕ್ಕಿ ಹರಿಯುವ ಉತ್ಸಾಹವನ್ನು ಪೋಲೀಸರು ಹತ್ತಿಕ್ಕಲಾಗದೆ ನನಗೆ ಶರಣು ಬಂದರು. ನಾನು ಅವರನ್ನು ಕುರಿತು ಮಾತಾಡಿ, ಶಾಂತಿಯಿಂದ ಅಹಿಂಸಾತ್ಮಕ ಚಳವಳಿಯನ್ನು ಮುಂದುವರಿಸಿರೆಂದೂ ಭಾವೋದ್ವೇಗ, ಹಿಂಸೆಗೆ ಎಡೆಕೊಡಬಾರದೆಂದೂ ವಿನಂತಿಸಿದೆ.

ಅನಂತರ ನಮ್ಮನ್ನು ಮೈಸೂರು ಜೈಲಿಗೆ ಕರೆದೊಯ್ಯುವ ಏರ್ಪಾಟು ನಡೆಯಿತು. ಯಾವುದೋ ಲಾರಿಯೊಂದರಲ್ಲಿ ನಮ್ಮನ್ನು ಪೋಲೀಸರು ಮೈಸೂರು ಜೈಲಿಗೆ ಕರೆದೊಯ್ದರು. ಸಹಸ್ರಾರು ಸತ್ಯಾಗ್ರಹಿಗಳ ತಂಡ ಆಗಲೇ ಅಲ್ಲಿ ಬಂದು ಸೇರಿತ್ತು. ಅಂಡರ್ ಟ್ರಯಲ್ಸ್ ಮತ್ತು ಡೆಟಿನ್ಯೂಗಳು ಬೇರೆಬೇರೆ ಇಡಲ್ಪಟ್ಟಿದ್ದರು. ನಾನೂ, ಗೌಡರೂ ಒಂದು ಬ್ಯಾರಕ್ಕನ್ನು ಸೇರಿದೆವು. ಅಲ್ಲಿ ನಮ್ಮದು 50 ಜನರ ತಂಡ. ವಯಸ್ಕರೂ ವಿದ್ಯಾರ್ಥಿಗಳೂ ಮುಂತಾದವರ ತಾಳಮೇಳವಿಲ್ಲದ ತಂಡ. ಮೈಸೂರು ಜೈಲಿನಲ್ಲಿ ಸುಮಾರು ಸಾವಿರಕ್ಕೂ ಮೇಲ್ಪಟ್ಟು ಅಂಡರ್ ಟ್ರಯಲ್ಸ್ ಬಿಡಾರ. ಆಗ ಅಂಡರ್ ಟ್ರಯಲ್ಸ್ ಎಲ್ಲರೂ ಸೇರಿ ನನ್ನನ್ನು ಅಧ್ಯಕ್ಷನನ್ನಾಗಿ ಚುನಾಯಿಸಿದರು.

ಅಲ್ಲಿ ನಾನು ದಿನಕ್ಕೊಂದು ಕಾರ್ಯಕ್ರಮವನ್ನು ಮೊದಲುಮಾಡಿದೆ. ಪ್ರಚಲಿತ ರಾಜಕೀಯದ ಬಗ್ಗೆ ಚರ್ಚಾಕೂಟವು ದಿನವಹಿ ನಡೆಯುತ್ತಿತ್ತು. ಸಾಯಂಕಾಲ ಮನ ರಂಜನಾ ಕಾರ್ಯಕ್ರಮವೂ ಇತ್ತು. ಜೈಲಿನಲ್ಲಿ ಆರ್ಕಾಟ್ ಮೊದಲಿಯಾರರ ಬಹಿರಂಗ ವಿಚಾರಣಾ ಗೋಷ್ಠಿಯೊಂದನ್ನು ಏರ್ಪಡಿಸಿ ಸತ್ಯಾಗ್ರಹಿಗಳಲ್ಲಿ ಸ್ವಂಕಾಗಿ ಮುದುಡಿ ಹೋಗುತ್ತಿದ್ದ ಶ್ರದ್ಧೆಯನ್ನು ಪುನಶ್ಚೇತನಗೊಳಿಸಿದೆ. ಅಂಡರ್ ಟ್ರಯಲ್ಸ್‌ಳಿಗೆಲ್ಲಾ ಬೆಳಗ್ಗೆ ಸಾಯಂಕಾಲ ಕಾಫಿ ಏರ್ಪಾಡುಮಾಡಿದೆ. ಕೈಯಲ್ಲಿ ಕಾಸಿಲ್ಲ. ಎಲ್ಲವೂ ಹೊರಗಿನಿಂದ ಸಾಲ. ಜೈಲಿನ ಸುಪರಿಂಟೆಂಡೆಂಟ್ ಅಮೀರರು ತುಂಬಾ ಒಳ್ಳೆಯವರು. ಎಲ್ಲವೂ ಅವರ ನೆರವಿನಿಂದ ನಡೆಯುತ್ತಿತ್ತು. ಕೊನೆಗೊಮ್ಮೆ ನಮ್ಮ ಅಣ್ಣ ಹೆಜ್ಜಿಗೆ ಮಾದಪ್ಪನವರು ಊರಿಗೆ ಪೋಲೀಸ್ ಪೇದೆಯನ್ನು ಕಳುಹಿಸಿ, ಹಣ ತರಿಸಿ ಕಾಫಿ ತಿಂಡಿಯ ಸಾಲವನ್ನು ತೀರಿಸಿದರು.

ನ್ಯಾಯಾಧೀಶ ರುದ್ರಪ್ಪನವರು ನಮ್ಮನ್ನು ವಿಚಾರಣೆ ಮಾಡಿ ನನ್ನನ್ನು, ವಿಶ್ವೇಶ್ವರಗೌಡ, ಎಸ್. ಡಿ. ಸುಬ್ಬಣ್ಣ ಮತ್ತು ನನ್ನ ಅಣ್ಣ ಮಾದಪ್ಪನವರನ್ನು 'ಎ' ತರಗತಿಯ ಕೈದಿಗಳನ್ನಾಗಿ ಪರಿಗಣಿಸಿ ತಲಾ ಹದಿನೈದು ದಿನದ ಶಿಕ್ಷೆ ಕೊಟ್ಟರು. ಶೀಘ್ರವೇ ಒಪ್ಪಂದವಾಗಿ ನಮ್ಮ ಬಿಡುಗಡೆ ಆಯಿತು.

ಮೈ. ಮೈ. 23

## ಎಚ್. ಕೆ. ತಿಮ್ಮಯ್ಯ

ಜನನ : 1911 ಉದ್ಯೋಗ : ವ್ಯವಸಾಯ ವಿಳಾಸ : ಹೊಮ್ಮರಗಳ್ಳಿ, ತಾ॥ ಹೆಗ್ಗಡದೇವನಕೋಟೆ

ನಾನು 1937ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಉಮೇದುವಾರನಾಗಿ ನಿಂತೆ. ಯಶೋಧರಾ ದಾಸಪ್ಪ, ಎಚ್. ಸಿ. ದಾಸಪ್ಪ, ಟಿ. ಸಿದ್ದಲಿಂಗಯ್ಯ, ಚಂಗಲರಾಯ ರೆಡ್ಡಿ ಇವರು ಮೈಸೂರು ಜಿಲ್ಲಾ ಹೆಗ್ಗಡದೇವನಕೋಟೆ ತಾಲ್ಲೂಕಿಗೆ ಪ್ರಚಾರಕಾರ್ಯಕ್ಕಾಗಿ ಬಂದರು. ಹೊಮ್ಮರಗಳ್ಳಿ, ಮಾದಾಪುರ ಗ್ರಾಮಗಳಲ್ಲಿ ಸಭೆಗಳನ್ನುದ್ದೇಶಿಸಿ ಮಾತನಾಡಿದರು. ನನ್ನನ್ನು ಮತ್ತು ಮುಳಲಿ ಗ್ರಾಮದ ಎಚ್. ಡಿ. ಶಿವಪ್ಪನವರನ್ನು ಕಾಂಗ್ರೆಸ್ ಉಮೇದುವಾರರಾಗಿ ನಿಲ್ಲಿಸಿದರು. ನಾನು ಅದರಲ್ಲಿ ಜಯಗಳಿಸಿದೆ. ತತ್ಪರಿಣಾಮವಾಗಿ ವಂಶ ಪಾರಂಪರ್ಯವಾಗಿ ಬಂದ ಗ್ರಾಮಾಧಿಕಾರಿ (ಪಟೇಲ್) ಕೆಲಸದಿಂದ ಸರ್ಕಾರವು ನನ್ನನ್ನು ತೆಗೆದುಹಾಕಿತು. ನಾನು ಕಾಂಗ್ರೆಸ್ ತತ್ತ್ವ, ಧ್ಯೇಯಧೋರಣೆಗಳಿಗನುಗುಣ ವಾಗಿ ಕೆಲಸ ಮಾಡುತ್ತಿದ್ದು, ಕೆ. ಟಿ. ಭಾಷ್ಯಂರ ಸಲಹೆಯಂತೆ ಮುಂದೆ ಪ್ರಜಾಪ್ರತಿನಿಧಿ ಸಭೆಗೆ ರಾಜೀನಾಮೆ ಸಲ್ಲಿಸಿದೆ.

1942ರ 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಭಾಗವಹಿಸಿ ಕೆಲಸಮಾಡುತ್ತಿದ್ದೆ. ಆಗ, ನನ್ನನ್ನೂ ನನ್ನ ಸಹೋದ್ಯೋಗಿಗಳನ್ನೂ ಹೆಗ್ಗಡದೇವನಕೋಟೆ ಪೋಲೀಸ್ ಠಾಣೆಯಲ್ಲಿ ಮೂರು ದಿನ ಬಂಧಿಸಿದ್ದರು. 1944ರಲ್ಲಿ ನಾನು ಮತ್ತು ಚಕ್ಕೂರು ಸಿ. ಎಚ್. ಸುಬ್ಬಣ್ಣ ಜಿಲ್ಲಾ ಬೋರ್ಡಿಗೆ ಕಾಂಗ್ರೆಸ್ ಉಮೇದುವಾರರಾಗಿ ನಿಂತು ಗೆದ್ದೆವು.

1947ರಲ್ಲಿ 'ಚಲೋ ಮೈಸೂರ್' ಸತ್ಯಾಗ್ರಹದಲ್ಲಿ ನಾನು, ಜೆ. ಸಿ. ಚಂದ್ರ ಶೇಖರಾಧ್ಯರು (ಜಿನ್ನಹಳ್ಳಿ), ಸಿ. ಎಚ್. ಸುಬ್ಬಣ್ಣ (ಚಕ್ಕೂರು), ಎಂ. ಎಸ್. ಪುಟ್ಟಸ್ವಾಮಿ (ಮಾದಾಪುರ), ಎಚ್. ಬಿ. ಲಿಂಗಣ್ಣಯ್ಯ (ಹೆಗ್ಗಡದೇವನಕೋಟೆ), ಸಿ. ಪಿ. ಅಪ್ಪ (ಸರಗೂರು), ಕೆ. ಎಂ. ಶಿವಲಿಂಗಯ್ಯ (ಕಿತ್ತೂರು) ಮತ್ತು ಎಂ. ಡಿ. ಶಿವಪ್ಪ (ಮುಳಲಿ) ಪ್ರಚಾರಕಾರ್ಯ ಕೈಗೊಂಡು ಅಲ್ಲಲ್ಲಿ ಸಭೆಗಳನ್ನು ನಡೆಸಿ ಹೆಗ್ಗಡದೇವನ ಕೋಟೆಗೆ ಬಂದೆವು. ಇಲ್ಲಿನ ಪೋಲೀಸ್ ಠಾಣೆಯಲ್ಲಿ ಒಂದು ರಾತ್ರಿ ಬಂಧಿಸಲ್ಪಟ್ಟೆವು. ಮಾರನೆಯ ದಿನ ಬೆಳಗ್ಗೆ ಮೈಸೂರಿಗೆ ಜಾಥಾ ಹೊರಟೆವು. ಸಬ್-ಇನ್ಸ್‌ಪೆಕ್ಟರೂ ಪೋಲೀಸ್ ಪೇದೆಗಳೂ ಹ್ಯಾಂಡ್‌ಪೋಸ್ಟ್‌ವರೆಗೂ ನಮ್ಮನ್ನು ಹಿಂಬಾಲಿಸಿದರು. ಅಲ್ಲಿ ಸಭೆಯೊಂದನ್ನು ಕರೆದು ಭಾಷಣ ಮಾಡಿದವೇಳೆ ನಮ್ಮೆಲ್ಲರನ್ನೂ ಮೈಸೂರು ಸೆಂಟ್ರಲ್ ಪೋಲೀಸ್ ಠಾಣೆಗೆ ಒಯ್ದು ಮೂರು ದಿನಗಳು ಇಟ್ಟುಕೊಂಡಿದ್ದು ನಾಲ್ಕನೆಯ ದಿನ

ಕೋರ್ಟ್‌ಗೆ ಕರೆದುಕೊಂಡು ಹೋದರು. ಅಲ್ಲಿ ನನ್ನ ಮೇಲೆ ಕೇಸು ದಾಖಲ್ಮಾಡಿ ಸೆರೆಮನೆಗೆ ಕೊಂಡೊಯ್ದರು. ಅಲ್ಲಿ ನಾವುಗಳು ಒಂದು ತಿಂಗಳವರೆಗೆ ಇದ್ದೆವು.

ಮೈ.ಮೈ. 24

## ಜೆ. ಸಿ. ಚಂದ್ರಶೇಖರ ಆರಾಧ್ಯ

ಜನನ : 1907 ಉದ್ಯೋಗ : ವ್ಯವಸಾಯ ವಿಳಾಸ : ಚಿನ್ನಹಳ್ಳಿ, ತಾ॥ ಹೆಗ್ಗಡದೇವನಕೋಟೆ

---



1939ರಲ್ಲಿ ದೇಶಾದ್ಯಂತ ನಡೆದ ಪರದೇಶೀ ವಸ್ತ್ರ ಬಹಿಷ್ಕಾರ ಹಾಗೂ ಖಾದೀ ವಸ್ತ್ರ ಧಾರಣೆಯ ಆಂದೋಲನದ ಬಗ್ಗೆ ವೃತ್ತಪತ್ರಿಕೆಗಳಲ್ಲಿ ಬರುತ್ತಿದ್ದ ಸಮಾಚಾರಗಳನ್ನು ನೋಡಿದ್ದೆ. ಮೈಸೂರು ಟೌನ್ ಹಾಲ್ ಮೈದಾನದಲ್ಲಿ ನಡೆಯುತ್ತಿದ್ದ ಬಹಿರಂಗ ಸಭೆಗಳಲ್ಲಿ ಭಾಗವಹಿಸುತ್ತಿದ್ದೆ. ದೇಶಭಕ್ತರ ಭಾಷಣಗಳನ್ನು ಕೇಳಿ ನನ್ನಲ್ಲೂ ದೇಶಪ್ರೇಮ ಅಂಕುರಿಸಿತು. ದಿ॥ ವೀರಕೇಸರಿ ಸೀತಾರಾಮಶಾಸ್ತ್ರಿಗಳ ಅಮೋಘ ಭಾಷಣವೇ ನನ್ನನ್ನು ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸುವಂತೆ ಮಾಡಿದ್ದು.

1942ರಲ್ಲಿ ನಾನು ಮೈಸೂರು ತಾಲ್ಲೂಕು ಇಲವಾಲ ಗ್ರಾಮದಲ್ಲಿ ಪ್ರಾಥಮಿಕ ಶಾಲಾ ಉಪಾಧ್ಯಾಯನಾಗಿದ್ದೆ. ನನ್ನ ತಾಯಿಯವರನ್ನೂ ಹೆಂಡತಿಯನ್ನೂ ಬಂಧುಬಳಗವನ್ನೂ ಮನೆಯಲ್ಲಿ ಬಿಟ್ಟು ಸ್ವಾತಂತ್ರ್ಯಸಂಗ್ರಾಮದಲ್ಲಿ ಪಾಲ್ಗೊಳ್ಳಬೇಕೆಂಬ ಇಚ್ಛೆಯಿಂದ ತಾ॥ 16–10–1942ರಂದು ಮುಖ್ಯೋಪಾಧ್ಯಾಯರಿಗೆ ನನ್ನ ರಾಜೀನಾಮೆ ಪತ್ರವನ್ನು ಸಲ್ಲಿಸಿ ಹೊರಬಂದೆ. ಮೈಸೂರಿನಲ್ಲಿ ಸಾಯಂಕಾಲ ಟೌನ್‌ಹಾಲ್ ಮೈದಾನದಲ್ಲಿ ನಡೆಯುತ್ತಿದ್ದ ಬಹಿರಂಗ ಸಭೆಯಲ್ಲಿ 144ನೇ ಸೆಕ್ಷನ್ ಮುರಿದು ಭಾಷಣ ಮಾಡಿದೆ. ಅಂದು ನಾನು ಪೋಲೀಸರ ವಶವಾಗದೆ ತಪ್ಪಿಸಿಕೊಂಡು 24–10–1942ರ ವರೆಗೂ ಗುಪ್ತವಾಗಿ ಕೆಲಸಮಾಡುತ್ತಿದ್ದೆ. ಎಂ. ವಿ. ಕೃಷ್ಣಪ್ಪನವರ ಸಲಹೆಯಂತೆ ವಿದ್ಯಾರ್ಥಿಗಳು ಚಳವಳಿಯಲ್ಲಿ ಹೇಗೆ ಕೆಲಸಮಾಡಬೇಕೆಂಬ ತಿಳುವಳಿಕೆಯನ್ನು ಕೊಡುತ್ತಾ ಮಂಡ್ಯ ಪ್ರಾಂತ್ಯದಲ್ಲಿ ಸಂಚಾರವನ್ನು ಮುಗಿಸಿ ನಮ್ಮ ಸಂಕೇತ ಸ್ಥಳವಾದ ಮೈಸೂರು ಚೆಟ್ಟಿಪುರದ ಹಾಸ್ಟೆಲಿಗೆ ಬಂದೆ. ನಮ್ಮ ಜೊತೆಯಲ್ಲಿ ವಿದ್ಯಾರ್ಥಿಗಳೂ ಕಾರ್ಮಿಕರೂ ಸರಕಾರಿ ಕೆಲಸದಲ್ಲಿದ್ದವರೂ ಸಹ ಉತ್ಸಾಹದಿಂದ ದುಡಿಯುತ್ತಿದ್ದರು.

ಸುಬ್ಬರಾಯನಕೆರೆ ಮೈದಾನದಲ್ಲಿ ಆಗಾಗ್ಗೆ ಸಣ್ಣಪುಟ್ಟ ಬಹಿರಂಗ ಸಭೆಗಳು ನಡೆಯುತ್ತಿದ್ದವು. 25-10-1942ರಂದು ದೊಡ್ಡ ಸಭೆಯೊಂದು ಏರ್ಪಟ್ಟಿತು. ಅಲ್ಲಿನ ಜಾರುಗುಪ್ಪೆಮೇಲೆ ನಿಂತು ಒಬ್ಬರು ಲಾವಣಿ ಹಾಡಿದರು; ಮತ್ತೊಬ್ಬರು ಕಾರ್ಪೆಂಟರಿ ಕಲಿಯುವ ವಿದ್ಯಾರ್ಥಿಗಳು, ಭಾಷಣ ಮಾಡಿದರು. ಕೊನೆಗೆ ನನ್ನ ಸರದಿ ಬಂತು. ನಾನು ದೀರ್ಘಕಾಲ—ಎರಡು ಘಂಟೆಗಳಿಗೂ ಹೆಚ್ಚು ಕಾಲ—ಭಾಷಣ ಮಾಡಿದೆ. ಇಬ್ಬರು ಸಬ್-ಇನ್ಸ್‌ಪೆಕ್ಟರ್‌ಗಳು ನನ್ನನ್ನು ರಾತ್ರಿ ಸುಮಾರು 10 ಘಂಟೆ ಸಮಯದಲ್ಲಿ ತಮ್ಮೊಡನೆ ಲಕ್ಷ್ಮೀಪುರಂ ಪೋಲೀಸ್ ಠಾಣೆಗೆ ಕರೆದೊಯ್ದರು. ಮೊದಲು ಮಾತನಾಡಿದ ಸ್ನೇಹಿತರಿಬ್ಬರೂ ಸಹ ಅಲ್ಲಿಯೇ ಇದ್ದರು. 26-10-1942ರ ದಿನ ವಿದ್ಯಾರ್ಥಿಮುಖಂಡ ರಾದ ಶಾರದಾಪ್ರಸಾದರೊಡನೆ ವಿದ್ಯಾರ್ಥಿಗಳು ತಂಡೋಪತಂಡವಾಗಿ ಅಲ್ಲಿಗೆ ಬಂದರು. ಹೀಗೆ ಒಂದು ವಾರದವರೆಗೂ ದೇಶಭಕ್ತರು ಸೆರೆಮನೆಗೆ ಬಂದು ಸೇರುತ್ತಿದ್ದರು. ಸುಮಾರು 800 ಮಂದಿ ಜೈಲು ಭರ್ತಿ ಮಾಡಿದರು.

ಕೆಲವು ಕಾಲದಲ್ಲಿಯೇ ವಿದ್ಯಾರ್ಥಿಗಳೆಲ್ಲರ ಬಿಡುಗಡೆಯಾಯಿತು. ಅಲ್ಪಸ್ವಲ್ಪ ಕಾಲ ಶಿಕ್ಷೆ ವಿಧಿಸಲ್ಪಟ್ಟವರೂ ಹೊರಟುಹೋದರು. ಎಷ್ಟೋ ಮಂದಿ ಕ್ಷಮಾಪಣೆ ಪತ್ರ ಬರೆದುಕೊಟ್ಟು ಹೊರಗೆ ಬಂದರು. ನ್ಯಾಯಾಲಯದಲ್ಲಿ ನನಗೆ 6 ತಿಂಗಳು ಕಠಿಣ ಶಿಕ್ಷೆ ಮತ್ತು 50 ರೂಪಾಯಿಗಳ ದಂಡ, ದಂಡ ಕೊಡದಿದ್ದರೆ ಮತ್ತೆ ಒಂದು ತಿಂಗಳು ಶಿಕ್ಷೆ—ಹೀಗೆ ಎರಡು ಆಪಾದನೆಗಳ ಮೇಲೆ 14 ತಿಂಗಳು ಶಿಕ್ಷೆಯನ್ನು ಒಟ್ಟಿಗೆ ಅನುಭವಿಸ ಬೇಕೆಂದು ತೀರ್ಪಿತ್ತರು. ಅಪೀಲಜಿ ಬರೆದುಕೊಟ್ಟು ಮತ್ತೆ ಕೆಲಸಕ್ಕೆ ಹೋಗಿರೆಂದು ಸ್ನೇಹಿತರು ಒತ್ತಾಯ ಮಾಡಿದರು. ನಾನು ಅದಕ್ಕೆ ಒಪ್ಪಲಿಲ್ಲ. ಹದಿನಾಲ್ಕು ತಿಂಗಳ ಶಿಕ್ಷೆಯನ್ನು ಪೂರ್ಣ ಅನುಭವಿಸಿಯೇ ಹೊರಬಂದೆ.

ಜೈಲಿನಿಂದ ಹೊರಬಂದು ನನ್ನ ಹುಟ್ಟೂರಾದ ಜಿನ್ನಹಳ್ಳಿಯಲ್ಲಿ ನೆಲೆಸಿದೆ. (1943). ನನ್ನ ಸ್ನೇಹಿತರಾಗಿದ್ದ ಹೊಸ್ಸೂರಹಳ್ಳಿ ಎಚ್. ಕೆ. ತಿಮ್ಮಯ್ಯನವರ ಮತ್ತು ಇತರ ಕಾಂಗ್ರೆಸ್ಸಿಗರ ಸಲಹೆಯಂತೆ ರಚನಾತ್ಮಕ ಕಾರ್ಯಗಳಲ್ಲಿ ತೊಡಗಬೇಕೆಂದು, ಹೊನ್ನೂರಹಳ್ಳಿಯಲ್ಲಿ ಒಂದು ಚರಖಾ ಸಂಘ ಮತ್ತು ಖಾದಿ ಭಂಡಾರವನ್ನು ತೆರೆಯಲು ತೀರ್ಮಾನಿಸಿದೆವು. ನಾನು ತಗಡೂರಿಗೆ ಹೋಗಿ ರಾಮಚಂದ್ರರಾಯರ ಸಲಹೆ ಪಡೆದು ಬಂದೆ. ಎಂ. ವಿ. ಕೃಷ್ಣಪ್ಪನವರ ಕಡೆಯಿಂದ ಕೆಲವು ರಾಟೆಗಳನ್ನೂ ಅರಳೆಯಿಂದ ಹಂಜಿ ಮಾಡುವವರೆಗೆ ಆಗಬೇಕಾದ ಎಲ್ಲಾ ಸಲಕರಣೆಗಳನ್ನೂ ಒದಗಿಸಿದ್ದಾಯಿತು. ಖಾದಿ ಭಕ್ತರಲ್ಲಿಯೇ ಒಡಕು ಉಂಟಾಗಿ ಚರಖಾ ಸಂಘವನ್ನು ತೆರೆಯಲಾಗಲಿಲ್ಲ. ಅನಂತರ ನಾನು ಹುಣಸೂರು ತಾಲ್ಲೂಕಿನ ದಳ್ಳಾಳು ಗ್ರಾಮಕ್ಕೆ ಹೋಗಿ ನೆಲೆಸಿ ಬೇಸಾಯದಿಂದ ಜೀವನ ನಡೆಸುವ ಸ್ಥಿತಿಯೊದಗಿತು.

1947ರಲ್ಲಿ ನಡೆದ 'ಚಲೋ ಮೈಸೂರು' ಸತ್ಯಾಗ್ರಹದಲ್ಲಿ ಭಾಗವಹಿಸಲು ನನ್ನ ಸ್ವಂತ ತಾಲ್ಲೂಕಾದ ಹೆಗ್ಗಡದೇವನಕೋಟೆಗೆ ಹೋಗಿ ಪ್ರಚಾರಕಾರ್ಯದಲ್ಲಿ ತೊಡಗಿದ್ದ

ನನ್ನ ಸ್ನೇಹಿತರನ್ನು ಸೇರಿದೆನು. ಎಂ. ಡಿ. ಶಿವಪ್ಪ (ಮಳಲಿ), ಸಿ. ಪಿ. ಅಪ್ಪ (ಸರಗೂರು), ಎಚ್. ಬಿ. ಲಿಂಗಣ್ಣಯ್ಯ (ಹೆಗ್ಗಡದೇವನಕೋಟೆ), ಪುಟ್ಟಸ್ವಾಮಪ್ಪ (ಮಾದಾಪುರ), ಸಿ. ಎಚ್. ಸುಬ್ಬಣ್ಣ (ಚಕ್ಕೂರು), ಕೆ. ಎಂ. ಶಿವಲಿಂಗಯ್ಯ (ಕಿತ್ತೂರು), ಎಚ್. ಕೆ. ತಿಮ್ಮಯ್ಯ (ಹೊಮ್ಮರಹಳ್ಳಿ) ಮತ್ತು ನಾನು ಮೈಸೂರಿಗೆ ಜಾಥಾ ಹೊರಟೆವು. ಪೋಲೀಸರು ನಮ್ಮನ್ನು ಹಿಂಬಾಲಿಸಿದರು. ಹ್ಯಾಂಡ್‌ಪೋಸ್ಟ್ ಬಳಿ ಬಂದು ಸೇರಿ ಸಭೆ ಕರೆದು ಭಾಷಣ ಮಾಡಿ ಮುಗಿಸಿದಮೇಲೆ ನಮ್ಮನ್ನು ಬಂಧಿಸಿ ಮೈಸೂರಿಗೆ ಕರೆದೊಯ್ದು ಸೆಂಟ್ರಲ್ ಪೋಲೀಸ್ ಠಾಣೆ ಮಹಡಿ ಮೇಲೆ ಮೂರು ದಿನ ಕೂಡಿಹಾಕಿದ್ದು, ಬಳಿಕ ಕೋರ್ಟಿಗೆ ಕರೆದುಕೊಂಡು ಹೋಗಿ ಕೇಸು ದಾಖಲ್ಮಾಡಿ ಸೆರೆಮನೆಗೊಯ್ದರು. ಅಲ್ಲಿ ಒಂದು ತಿಂಗಳು ಕಳೆಯಿತು. ಅಷ್ಟರಲ್ಲಿ ಚಳವಳಿ ನಿಂತಿತು.

1950ರಲ್ಲಿ ಟಿ. ಸಿದ್ದಲಿಂಗಯ್ಯನವರು ವಿದ್ಯಾಮಂತ್ರಿಗಳಾಗಿದ್ದಾಗ ನನಗೆ ಪುನಃ ಕೆಲಸ ದೊರೆಯಿತು; 1965ರಲ್ಲಿ ನಿವೃತ್ತನಾದೆ.

ಮೈ.ಮೈ. 25

## ಎಂ. ಎನ್. ಸಿದ್ದಯ್ಯ

ಜನನ : 1906 ಉದ್ಯೋಗ : ನಿವೃತ್ತ ಜೀವನ

ವಿಳಾಸ : 550/A, VI ಮೇನ್, ಹನುಮಂತನಗರ, ಬೆಂಗಳೂರು–19

---



ಟಿ. ನರಸೀಪುರ ತಾ|| ರಂಗಸಮುದ್ರದವನಾದ ನಾನು 1930ರಿಂದಲೂ ಖಾದಿ ಧರಿಸುತ್ತಿದ್ದೆ. ವೃತ್ತಾಂತಪತ್ರಿಕೆ, ವಿಶ್ವಕರ್ನಾಟಕ, ತಾಯಿನಾಡು ಪತ್ರಿಕೆಗಳನ್ನು ಓದಿ ರಾಷ್ಟ್ರೀಯ ವಿಚಾರಗಳನ್ನು ತಿಳಿದುಕೊಂಡೆ. 1937ರಲ್ಲಿ ಕಾಂಗ್ರೆಸ್‌ನ ಸದಸ್ಯನೂ ಆದೆ. 4-11-1939ರಲ್ಲಿ ಮೈಸೂರಿನಲ್ಲಿ ನಡೆದ ಟೌನ್‌ಹಾಲ್ ಸತ್ಯಾಗ್ರಹದಲ್ಲಿ ನನ್ನ ಮಿತ್ರರಾದ ನಮ್ಮ ಊರ ಪಾಪಯ್ಯನ ಸಿದ್ದೇಗೌಡ, ಬಿ. ಬೋರಯ್ಯ, ಜವರೇಗೌಡನ ಲಿಂಗೇಗೌಡ ಹಾಗೂ ಶ್ರೀರಂಗಪಟ್ಟಣ ತಾ|| ಶ್ರೀನಿವಾಸ ಅಗ್ರಹಾರದ ಸಿ. ನರಸೇಗೌಡ ಹಾಗೂ ಮುದಿಯಪ್ಪಗೌಡ ಇವರುಗಳುಳ್ಳ ಗುಂಪಿನ ನಾಯಕನಾಗಿ ಪಾಲುಗೊಂಡು ಶಿಕ್ಷಿತನಾದೆ. ಒಟ್ಟು ಏಳು ತಿಂಗಳು ಕಠಿಣಶಿಕ್ಷೆ ಆಯಿತು (5-11 1939). ಲಾಕಪ್ಪಿನಲ್ಲಿ ತೀರ ಅಸಹ್ಯ ಪರಿಸ್ಥಿತಿಯಲ್ಲಿ ನಮ್ಮನ್ನು ಇಟ್ಟಿದ್ದರು. ಕ್ಷಮೆ ಬೇಡಲು ಪ್ರಚೋದನೆ ನೀಡಿದರು. ನಾವು

ಜಗ್ಗಲಿಲ್ಲ. ಮೈಸೂರು, ಶಿವಮೊಗ್ಗ, ತೀರ್ಥಹಳ್ಳಿ ಜೈಲುಗಳಲ್ಲಿ ಶಿಕ್ಷೆ ಅನುಭವಿಸಿದೆವು. ಈ ಕಾಲದಲ್ಲಿ ಕೃಷ್ಣ ಎಂಬ ನಾಲ್ಕು ವರ್ಷದ ನನ್ನ ಮಗ ಅಸೌಖ್ಯದಿಂದ ಔಷಧೋಪಚಾರ ಇಲ್ಲದೆ ಮನೆಯಲ್ಲಿ ತೀರಿಕೊಂಡ. 1940ರ ಜೂನ್‌ನಲ್ಲಿ ಬಿಡುಗಡೆ ಆದೆವು.

ಟಿ. ನರಸೀಪುರ ತಾ|| ಕಾಂಗ್ರೆಸ್ ಆಫೀಸನ್ನು 1940ರಲ್ಲಿ ಬನ್ನೂರಲ್ಲಿ ಸ್ಥಾಪಿಸಿ ತಾಲ್ಲೂಕಿನಲ್ಲಿ 5,000ಕ್ಕೂ ಮೇಲ್ಪಟ್ಟ ಸದಸ್ಯರನ್ನು ಸಂಗ್ರಹಿಸಿದೆವು. ತಾಲೂಕಿನ ಎಲ್ಲ ಹಳ್ಳಿಗಳಿಂದ ಸದಸ್ಯರನ್ನು ಮಾಡಲಾಗಿತ್ತು. ನಮ್ಮ ಸದಸ್ಯಬಲದಿಂದ ಎ.ಎಂ.ಸಿ.ಸಿ ಗೆ 20 ಜನ ಪ್ರತಿನಿಧಿಗಳು ನಮ್ಮ ತಾಲೂಕಿನಿಂದಲೇ ಹೋಗುತ್ತಿದ್ದರು. ಮುನಿಸಿಪಾಲಿಟಿ ಮುಂತಾದ ಸಂಸ್ಥೆಗಳಲ್ಲಿ ಕಾಂಗ್ರೆಸ್ಸಿನದೇ ಮೇಲುಗೈ.

1942ರಲ್ಲಿ ನಾವು ತೀವ್ರತರ ಚಟುವಟಿಕೆಗಳನ್ನು ಮಾಡಿ ನಮ್ಮ ಜಾಗದಲ್ಲಿ ಎಲೆಕ್ಟ್ರಿಕ್ ಮತ್ತು ಟೆಲಿಫೋನ್ ತಂತಿ ಕತ್ತರಿಸಿದೆವಲ್ಲದೆ ಪಿಕೆಟಿಂಗ್ ಮಾಡಿದೆವು. 8-9-1942ರಲ್ಲಿ ನಮ್ಮವರಲ್ಲಿ ಕೆಲವರನ್ನು ಬಂಧಿಸಿದಾಗ ಬನ್ನೂರು ಪೋಲೀಸ್ ಸ್ಟೇಶನ್ ಹೊರಗಡೆ ಸಾವಿರಾರು ಜನ ಸೇರಿದರು. ನೂರಾರು ರಿಜರ್ವ್ ಪೋಲೀಸರೂ ವ್ಯಾನ್‌ಗಳಲ್ಲಿ ಬಂದರು. ನಾನು ಸ್ಟೇಶನ್‌ನಿಂದ ಹೊರಗೆ ಬಂದು ಜನರನ್ನು ಸಮಾಧಾನ ಮಾಡಿದೆ. ಶಾಂತ ರೀತಿಯಿಂದ ಚಳವಳಿ ನಡೆಸುವಂತೆ ವಿನಂತಿಸಿದೆ ನಮ್ಮನ್ನು ಮಾರು ದಿವಸ ಬೆಂಗಳೂರು ಸೆಂಟ್ರಲ್ ಜೈಲಿಗೆ ತಂದರು. ಮುಂದಕ್ಕೂ ನಮ್ಮೂರ ಜನ ಚಳವಳಿ ಮುಂದುವರಿಸಿ ಅನೇಕರು ಜೈಲು ಕಂಡರು. ಈ ಕಾಲದಲ್ಲಿ ಬಂಧಿತರಾದ ಇತರರೆಂದರೆ ಕೆಂಚೇಗೌಡ, ಟೈಲರ್ ಕೃಷ್ಣ, ವೆಂಕಟರಾಮು, ಬಿ. ವಿ. ಕೃಷ್ಣ, ನಾಗೇಶ್, ಟಿ. ರಾಮಲಿಂಗಪ್ಪ, ಕೃಷ್ಣೋಜಿರಾವ್, ಸಿದ್ಧೋಜಿರಾವ್ ಇವರು. ತುಮಕೂರು, ಹಾಸನ, ಶಿವಮೊಗ್ಗ ಜೈಲುಗಳಿಗೆ ವರ್ಗಾಯಿಸಿ, ಒಂದು ವರ್ಷ ಒಂದು ತಿಂಗಳನಂತರ ನನ್ನ ಬಿಡುಗಡೆ ಆಯಿತು. ಈ ಕಾಲದಲ್ಲಿ ಮನೆಯಲ್ಲಿ ಶ್ರೀಕಂಠ ಎಂಬ ನನ್ನ ಮೂರು ವರ್ಷದ ಮಗ ಅಸೌಖ್ಯದಿಂದ ತೀರಿಕೊಂಡ.

1947ರಲ್ಲಿ ಅರಕೆರೆಯ ಎ. ಕೆಂಚಪ್ಪ ಮತ್ತು ಎಂ. ಪುಟ್ಟೇಗೌಡ, ಗಂಜಾಂನ ಜಿ. ಪಾಪಣ್ಣ ಹಾಗೂ ಮೈಸೂರಿನ ಪಾಪಯ್ಯ ಇವರುಗಳ ಜೊತೆ ಸತ್ಯಮಂಗಲಕ್ಕೆ ಹೋಗಿ ಅಲ್ಲಿನ ಕ್ಯಾಂಪ್‌ನಿಂದ ಕೆಲಸಮಾಡುತ್ತಿದ್ದೆ. ನಮಗೆ ನೇರವಾಗಿ ನಂಜನಗೂಡು ತಾ|| ಹುಲ್ಲಹಳ್ಳಿಯಲ್ಲಿ ಅಕ್ಕಿಗಿರಣಿ ನಾಗಣ್ಣನವರಲ್ಲಿ ಡಿ. ಎಂ. ಸಿದ್ದಯ್ಯನವರು ಕ್ಯಾಂಪ್ ಮಾಡಿ ಕೆಲಸಮಾಡುತ್ತಿದ್ದರು. ಮೆಟ್ಟುಪಾಳಯಂನ ಎಚ್. ಎಲ್. ಲಿಂಗೇಗೌಡ ಅವರಲ್ಲಿ ನಾವು ಕ್ಯಾಂಪ್ ಮಾಡಿದ್ದೆವು. ನೀಲಗಿರಿಯ ಎಂ.ಎಲ್.ಎ. ಜೋಕ್ಕಪ್ಪ ಅವರ ಸಹಾಯವೂ ಇತ್ತು. ಸತ್ಯಮಂಗಲದ ನಟೇಶಗೌಂಡರ್ ಅವರದೂ ಸಹಾಯವಿತ್ತು. ಅಲ್ಲಿಂದ ಸ್ವಯಂಸೇವಕರನ್ನು ಸಂಘಟಿಸಿ ಚಾಮರಾಜನಗರ, ಗುಂಡ್ಲುಪೇಟೆ, ಹೆಗ್ಗಡದೇವನಕೋಟೆ ತಾಲೂಕು ಟ್ರೆಜರಿಗಳನ್ನು ಲೂಟಿಮಾಡಬೇಕೆಂದು ಯೋಜನೆ ಹಾಕಿಕೊಂಡಿದ್ದೆವು. ಅಷ್ಟರಲ್ಲಿ ಸರಕಾರಕ್ಕೂ ಕಾಂಗ್ರೆಸ್‌ಗೂ ಒಪ್ಪಂದ ಆಗಿ ಚಳವಳಿ ನಿಂತಿತು.

ವೈ.ಮಂ. 1

# ಎಚ್. ಕೆ. ವೀರಣ್ಣಗೌಡ

ಜನನ : 1889 ಉದ್ಯೋಗ : ಕೃಷಿ ವಿಳಾಸ : ತೋಟದಮನೆ, ಮದ್ದೂರು



ಚನ್ನಪಟ್ಟಣದಲ್ಲಿ ಹೈಸ್ಕೂಲಿನಲ್ಲಿ ಓದುತ್ತಿದ್ದಾಗಲೇ ನನ್ನ ಸಾರ್ವಜನಿಕ ಜೀವನದ ತಳಹದಿ ಆಯಿತು. ತಿಟ್ಟಮಾರನಹಳ್ಳಿ ವಿ. ವೆಂಕಟಪ್ಪ ನನ್ನ ಸಹಪಾಠಿಗಳು. ಸಂಸ್ಥಾನದಲ್ಲಿಯೇ ಗಣ್ಯವ್ಯಕ್ತಿಗಳೂ ನಮ್ಮ ಸಂಬಂಧಿಗಳೂ ಥಿಯಾಸಫಿಸ್ಟರೂ ಆದ ಕೆ. ಎಚ್. ರಾಮಯ್ಯನವರು ನನ್ನ ಸಾರ್ವಜನಿಕ ಚಟುವಟಿಕೆಗಳಿಗೆ ಗುರುಗಳಾಗಿದ್ದರು. ಹೀಗಾಗಿ ನನ್ನ ಮತ್ತು ವಿ. ವೆಂಕಟಪ್ಪನವರ ಮೇಲೆ ಥಿಯಾಸಫಿಕ್ ವಿಚಾರಗಳ ಪ್ರಭಾವ ಬಿದ್ದಿತ್ತು. ಬಾಲ್ಯದಲ್ಲಿ ನಮ್ಮ ತಂದೆ, ಅಕ್ಷರ ತಿದ್ದಿಸಲೆಂದು ಮೈಸೂರು ವೃತ್ತಾಂತಪತ್ರಿಕೆ, ಮೈಸೂರ್ ಸ್ಟಾರ್, ಕನ್ನಡ ಧುರೀಣ ಮುಂತಾದ ನಮ್ಮಲ್ಲಿ ಬರುತ್ತಿದ್ದ ಪತ್ರಿಕೆಗಳನ್ನು ಕಾಪಿಮಾಡಲು ಹಚ್ಚುತ್ತಿದ್ದರು. ಹೀಗಾಗಿ ದೇಶದ ಸ್ಥಿತಿಗತಿಗಳ ವಿಚಾರ ಚೆನ್ನಾಗಿ ತಿಳಿದಿತ್ತು. ಆಗಿನಿಂದಲೂ ನನಗೆ ಗೋಖಲೆಯವರ ಬಗ್ಗೆ, ಬೆಸೆಂಟ್‌ರ ಬಗ್ಗೆ ಆಕರ್ಷಣೆ. ಗೋಖಲೆಯವರ ಚಿತ್ರ ಒಂದನ್ನು ಪೆಟ್ಟಿಗೆಗೆ ಅಂಟಿಸಿ ಇಟ್ಟುಕೊಂಡಿದ್ದೆ. ಯತಿರಾಜುಲು ನಾಯ್ಡು ಎಂಬ ಮಾಧ್ಯಮಿಕ ಶಾಲಾ ಅಧ್ಯಾಪಕರು ಒಮ್ಮೆ ಕ್ಲಾಸಿನಲ್ಲಿ ಗಾಂಧೀಜಿಯವರನ್ನು ಹೊಗಳಿ ಮಾತನಾಡಿದರು. ಗೋಖಲೆಪ್ರಿಯನಾದ ನಾನು ಗಾಂಧೀಜಿಯವರ ವಿಚಾರಗಳನ್ನು ಖಂಡಿಸಿದೆ. ಅವರ ಜೊತೆ ಎರಡು ದಿನ ವಾದವಿವಾದಗಳಿಗಾಗಿ, ಕಡೆಗೆ ಗಾಂಧೀಜಿಯವರ ಬಗ್ಗೆ ಒಲವು ಮೂಡಿತು. ಹೈಸ್ಕೂಲಲ್ಲಿದ್ದಾಗಲೇ ಸ್ಕೌಟ್ ಚಳವಳಿಯಲ್ಲಿ ವಿಶೇಷ ತರಬೇತಿಪಡೆದು, ಸ್ಕೌಟ್ ಟ್ರೂಪ್ ತೆಗೆದು ಕೆಲಸಮಾಡಿದ್ದೆ. ಇದಲ್ಲದೆ ಚನ್ನಪಟ್ಟಣದಲ್ಲಿ ಒಕ್ಕಲಿಗರ ವಿದ್ಯಾರ್ಥಿ ಯೂನಿಯನ್ ಆರಂಭಿಸಿ ಭಾರಿ ಸಭೆ ಏರ್ಪಡಿಸಿದ್ದೆವು. ನಾನೂ ವೆಂಕಟಪ್ಪನವರೂ ಅದೇ ರೀತಿ ಮುಂದೆ ಮೈಸೂರಿನಲ್ಲಿ ಓದುತ್ತಿದ್ದಾಗ ಒಕ್ಕಲಿಗರ ವಿದ್ಯಾರ್ಥಿಗಳ ರಾಜ್ಯ ಸಮ್ಮೇಳನ ಕೂಡ ಭಾರಿ ಪ್ರಮಾಣದಲ್ಲಿ ಏರ್ಪಡಿಸಿದ್ದೆವು. ಚನ್ನಪಟ್ಟಣ, ಮೈಸೂರು, ಹಾಸನ ಮುಂತಾದ ಕಡೆ ಒಕ್ಕಲಿಗರ ಹಾಸ್ಟಲ್ ಕೂಡ ತೆರೆದೆವು. ಭಾಷಣ ಸ್ಪರ್ಧೆ, ಬರೆವಣಿಗೆ ಮುಂತಾದ ಸಕಲ ಚಟುವಟಿಕೆಗಳಲ್ಲೂ

ಪಾಲುಗೊಳ್ಳುತ್ತಿದ್ದೆ. ನಾನು 18 ವಯಸ್ಸಿನವನಿದ್ದಾಗ (ಸರ್ ಎಂ. ವಿ. ಅವರ ಪ್ರೇರಣೆಯಂತೆ ನಡೆಯುತ್ತಿದ್ದ) ಹೋಬಳಿ ಮಟ್ಟದ ಆರ್ಥಿಕ ಸಮ್ಮೇಳನ ನಮ್ಮ ಊರಿನಲ್ಲಿ ಆದಾಗ 'ರೈತನಿಗೆ ವಿದ್ಯಾಭ್ಯಾಸದ ಆವಶ್ಯಕತೆ' ಎಂಬ ವಿಷಯದ ಬಗ್ಗೆ ಭಾಷಣ ಮಾಡಿದೆ. ಅಲ್ಲಿ ಹಾಜರಿದ್ದ ಅಧಿಕಾರಿಗಳು ಐದು ರೂ. ಬಹುಮಾನ ನೀಡಿದರು. ಮುಂದೆ ತಾಲ್ಲೂಕು ಮಟ್ಟದ ಆರ್ಥಿಕ ಸಮ್ಮೇಳನಕ್ಕೆ ಬರುವಂತೆ ನನಗೆ ಆಹ್ವಾನ ಬಂತು. ಅಲ್ಲಿ ಕೂಡ ನನ್ನ ಭಾಷಣ ಆಯಿತು. ಇದಲ್ಲದೆ, 'ಕರ್ನಾಟಕ ವಿದ್ಯಾರ್ಥಿ' ಎಂಬ ದ್ವೈಮಾಸಿಕ ಪತ್ರಿಕೆಯನ್ನು ಎರಡು ವರ್ಷ ನಡೆಸಿದೆವು. ಆ ಪತ್ರಿಕೆಗೆ ನಾನು ಉಪಸಂಪಾದಕನಾಗಿದ್ದೆ; ಟಿ. ಮಾದೇಗೌಡರು ಸಂಪಾದಕರು.

ಮೈಸೂರಿಗೆ ಕಾಲೇಜಿಗೆ ಬಂದಾಗಲೂ ಸಕಲ ವಿಧದ ಸಾರ್ವಜನಿಕ ಚಟುವಟಿಕೆಗಳನ್ನು ನಡೆಸಿದ್ದೆ. ಈ ಕಾಲಕ್ಕೆ ಹೊಸಪೇಟೆಯ ಹನುಮಂತಗೌಡ ಎಂಬ ರಾಷ್ಟ್ರೀಯ ನಾಯಕರೂ ಮುದವೀಡು ಕೃಷ್ಣರಾಯರೂ ಮಾಡಿದ ಭಾಷಣಗಳನ್ನು ಕೇಳಿದೆ. 1921ರಲ್ಲಿ ಮುದವೀಡ್ಕರ್‌ರವರು ಮಾಡಿದ ಭಾಷಣದಿಂದ ತೀರಾ ಪ್ರಭಾವಿತನಾದೆ. ಅಸಹಕಾರದ ಕಡೆ ಒಲವಾಯಿತು. ಆಗ ಮೊದಲ ವರ್ಷ ಬಿ.ಎ.ಯಲ್ಲಿ ಓದುತ್ತಿದ್ದ ನಾನು ಕಾಲೇಜು ತ್ಯಜಿಸಿದೆ. ಅವರ ಅಸಹಕಾರ ನನಗೊಂದು ನೆಪಮಾತ್ರವಾಗಿತ್ತು; ಕಾಲೇಜು ತ್ಯಜಿಸಲು ನನಗೆ ಕಾಲೇಜು ಜೀವನ ಬೇಡವಾಗಿತ್ತು. ಕೆಲವರು ಕೆಲಕಾಲ ಕಾಲೇಜು ತ್ಯಜಿಸಿ ಮತ್ತೆ ಸೇರಿದರು; ನಾನು ಸೇರಲಿಲ್ಲ. ಮುಂದೆ 1924ರಲ್ಲಿ ನಾನು, ವಿ. ವೆಂಕಟಪ್ಪ, ವಿ. ಎಲ್. ರಾಮಯ್ಯ, ಎಚ್. ಪಿ. ಲಿಂಗಯ್ಯ ಇವರೆಲ್ಲ ಕೂಡಿ ಬೆಳಗಾವಿ ಕಾಂಗ್ರೆಸ್ಸಿಗೂ ಹೋಗಿದ್ದೆವು. ಮುಂದೆ 3-4 ವರ್ಷ ರೂರಲ್ ಮಿಡ್ಲ್ ಸ್ಕೂಲಿನಲ್ಲಿ ಹೆಡ್‌ಮಾಸ್ಟರಾಗಿ ಕೆಲಸಮಾಡಿದೆ. ವೃತ್ತಾಂತಪತ್ರಿಕೆ, ಅರ್ಥಸಾಧಕ ಪತ್ರಿಕೆ, ಡಿ. ಕೆ. ಭಾರದ್ವಾಜರ ರಂಗಭೂಮಿ ಮುಂತಾದ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತಿದ್ದೆ. 1927ರಲ್ಲಿ ಬೆಂಗಳೂರು ಒಕ್ಕಲಿಗರ ಸಂಘದ ಪತ್ರಿಕೆಯಲ್ಲಿ ಸಂಪಾದಕನಾಗಿ ಸೇರಿದೆ. ಆ ಕಾಲದಲ್ಲಿ ಪತ್ರಿಕೆಯ ಪ್ರಸಾರ 600ರಿಂದ 2600ಕ್ಕೆ ಏರಿತು. ಪತ್ರಿಕೆಯಲ್ಲಿ ದಿವಾನ್ ಮಿರ್ಜಾರನ್ನು ಖಂಡಿಸಿ, ರಾಷ್ಟ್ರೀಯ ವಿಚಾರ ಪ್ರತಿಪಾದಿಸಿ ಬರೆಯುತ್ತಿದ್ದೆ. ಇದಕ್ಕೆ ಒಕ್ಕಲಿಗರ ಸಂಘದ ಅಧ್ಯಕ್ಷರ ವಿರೋಧ ಇರುತ್ತಿತ್ತು. ಕೊನೆಗೊಮ್ಮೆ 1928ರಲ್ಲಿ ನನ್ನ ಹುದ್ದೆಗೆ ರಾಜೀನಾಮೆ ನೀಡಬೇಕಾಗಿ ಬಂದಿತು. ವಿ. ವೆಂಕಟಪ್ಪನವರ ಜಾಮೀನಿನ ಮೇಲೆ ಮೈಸೂರು ಬ್ಯಾಂಕಿನಿಂದ 4,000 ರೂ. ಸಾಲ ಪಡೆದು ಆರ್ಕಾಟ್ ಶ್ರೀನಿವಾಸಾಚಾರ್ ಸ್ಟ್ರೀಟ್‌ನಲ್ಲಿ ಗ್ರಾಮಸೇವಾ ಮುದ್ರಣಾಲಯವನ್ನು ತೆರೆದೆ. ಆಗತಾನೇ ಬೆಂಗಳೂರಿಗೆ ಬಂದಿದ್ದ ಬಿ. ಎನ್. ಗುಪ್ತರ ಪ್ರೋತ್ಸಾಹದಿಂದ 1928ರ ಡಿಸೆಂಬರ್‌ನಲ್ಲಿ ಚಿತ್ರಗುಪ್ತ ದಿನಪತ್ರಿಕೆ ಆರಂಭಿಸಿದೆ. 1929ರಲ್ಲಿ ಎರಡನೆಯ ಬಾರಿ ಗಣಪತಿ ಗಲಾಟೆ ಆದಾಗ ಪತ್ರಿಕೆಯಲ್ಲಿ ಸರಿಯಾಗಿ ವರದಿ ಪ್ರಕಟಿಸಿದೆ. ಆಗ ಆರ್ಕಾಟ್ ಶ್ರೀನಿವಾಸಾಚಾರ್ ಸ್ಟ್ರೀಟಿನಲ್ಲಿ ನೆರೆದ ಭಾರಿ ಜನಜಂಗುಳಿಯನ್ನು ಚದುರಿಸಲು ಅಧಿಕಾರಿಗಳು [illegible].

ನಾನು ಜನರ ನಡುವೆ ಹೋಗಿ ಶಾಂತಿಯಿಂದ ಇರಹೇಳಿ, ಅವರನ್ನು ಚಿಕ್ಕಪೇಟೆ ಪೋಸ್ಟ್ ಆಫೀಸ್ ತನಕ ತಳ್ಳಿಸಿದೆ. ಅಷ್ಟರಲ್ಲಿ ಪೋಲೀಸರು ಆರು ರೌಂಡ್ ಗುಂಡು ಹಾರಿಸಿ, ತಮ್ಮಲ್ಲಿದ್ದ ಮದ್ದು ತೀರಿದ್ದರಿಂದ ಓಡಲಾರಂಭಿಸಿದರು. ಮ್ಯಾಜಿಸ್ಟ್ರೇಟರಾಗಿದ್ದ ನಾರಾಯಣಸ್ವಾಮಿ ನಾಯ್ಡು ಎಂಬುವರಿಗೆ ತಲೆಗೆ ಏಟು ಬಿತ್ತು. ಅವರನ್ನು ನನ್ನ ಆಫೀಸಿಗೆ ಕರೆತಂದು ರಕ್ತ ತೊಳೆದು ಬ್ಯಾಂಡೇಜ್ ಮಾಡಿಸಿ ಆಸ್ಪತ್ರೆಗೆ ಕಳುಹಿಸಿದೆ. ಟಿ. ಟಿ. ಶರ್ಮ, ಪಿ. ಆರ್. ರಾಮಯ್ಯ ಹಾಗೂ ನಾನು ಸೇರಿ 15 ಜನರ ಮೇಲೆ ಕಲ್ಲು ತೂರಿ ದೊಂಬಿ ಮಾಡಿದರೆಂದು ಒಂದು ಖಟ್ಲೆ ಹಾಕಿದರು. ಇತರ 95-100 ಜನರ ಮೇಲೆ ಇನ್ನೊಂದು ಖಟ್ಲೆ ಹಾಕಿದರು. ಇದು ಬಹಳ ದಿನ ನಡೆಯಿತು. ಆಗ ಪತ್ರಿಕೆಯಲ್ಲಿ ಸರಕಾರದ ನೀತಿಯನ್ನು ಕಟುವಾಗಿ ಟೀಕಿಸಿ ಬರೆಯುತ್ತಿದ್ದೆ. ಸರಕಾರ ಗಣಪತಿ ಗಲಾಟೆಗೆ ಸಂಬಂಧಿಸಿ ನೇಮಿಸಿದ್ದ ಸರ್ ವಿಶ್ವೇಶ್ವರಯ್ಯ ವಿಚಾರಣಾ ಸಮಿತಿ ವರದಿಯನ್ನು ಸರಕಾರ ಬಹಿರಂಗಪಡಿಸದಿರಲು, ನಾನು ಅದನ್ನು ಆ ಕಮಿಟಿಯ ಒಬ್ಬ ಸದಸ್ಯರಿಂದ ಪಡೆದು ಪತ್ರಿಕೆಯಲ್ಲಿ ಪ್ರಕಟಿಸಿ ಗೌಪ್ಯ ಸ್ಫೋಟ ಮಾಡಿದೆ. ಈ ಎಲ್ಲ ಕಾರಣಗಳಿಂದ ಸರಕಾರ ಸಿಟ್ಟಾಗಿ ಪತ್ರಿಕೆಗೆ ಕೊಡುತ್ತಿದ್ದ ಜಾಹೀರಾತುಗಳನ್ನು ನಿಲ್ಲಿಸಿತು ಮಾತ್ರವಲ್ಲ ಮಿರ್ಜಾ ಅವರ ಸೂಚನೆಯಂತೆ, ಪ್ರೆಸ್‌ಗಾಗಿ ಸಾಲ ನೀಡಿದ್ದ ಮೈಸೂರು ಬ್ಯಾಂಕ್ ಸಾಲ ತೀರಿಸಲು ತಗಾದೆ ಮಾಡಿತು. ಏಜಂಟರು ಸರಿಯಾಗಿ ಹಣ ಕಳುಹಿಸದ್ದರಿಂದಲೂ, ಪತ್ರಿಕೆಗೆ ನೆರವು ನೀಡಲು ಮಾತುಕೊಟ್ಟ ಸ್ನೇಹಿತರು ಕೈಬಿಟ್ಟದ್ದರಿಂದಲೂ ಪತ್ರಿಕೆಯನ್ನು ನಿಲ್ಲಿಸಬೇಕಾಗಿ ಬಂತು. ಹೊಸಕೊಪ್ಪ ಕೃಷ್ಣರಾಯರ ಭಾಷಣವನ್ನು ಒಮ್ಮೆ ವರದಿ ಮಾಡಿದ ಬಗ್ಗೆ ಸ್ನೇಹಿತರೊಬ್ಬರು ಸಿಟ್ಟಾಗಿ, ತಾವು ನೀಡುತ್ತಿದ್ದ ಸಹಾಯವನ್ನೂ ನಿಲ್ಲಿಸಿದರು. 1930ರ ನಂತರ ದಿನಪತ್ರಿಕೆಯಾಗಿರದೆ, ಆಗಾಗ ಮಾತ್ರ ಚಿತ್ರಗುಪ್ತ ಬರುತ್ತಿತ್ತು. ಇದೇ ಕಾಲಕ್ಕೆ ನನಗೆ ಡಾ|| ಹರ್ಡೀಕರ್, ಕಮಲಾದೇವಿ ಚಟ್ಟೋಪಾಧ್ಯಾಯ, ಸಿದ್ದಪ್ಪ ಹೊಸಮನಿ, ಸ|| ವೀರನಗೌಡ ಪಾಟೀಲ, ದಿವಾಕರ ಮುಂತಾದವರ ಸಂಪರ್ಕ ಬಂದು, ನಾನು ಕಾಂಗ್ರೆಸ್‌ನ ಪರ ಬರೆಯುತ್ತಲಿದ್ದೆ. ಮುಂದೆ ನನಗೆ ಕಾಮಾಲೆ ಆಗಿ ಆಸ್ಪತ್ರೆ ಸೇರಿದೆ. 1931ರಲ್ಲಿ ಪೇಪರ್ ಪೂರ್ತಿ ನಿಂತಿತು. ಅದೇ ವರ್ಷ ಬಾಲವಿಧವೆ ತಾಯಮ್ಮನ ಜೊತೆ ನನ್ನ ಮದುವೆ ಆಯಿತು. ಮಾವನ ಮನೆಯಲ್ಲಿ ಮದ್ದೂರಿನಲ್ಲಿ ಇದ್ದಾಗ, ಅಲ್ಲಿನ ಇರ್ವಿನ್ ನಾಲಾ ರೈತರ ಸಂಘಟನೆಗೆ ಎಳೆಯಲ್ಪಟ್ಟೆ. ಆ ರೈತರ ಸಂಘಕ್ಕೆ ನಾನು ಅಧ್ಯಕ್ಷನಾದೆ; ಎಚ್. ಕೆ. ಪುಟ್ಟಣ್ಣ ಕಾರ್ಯದರ್ಶಿ. ಆ ರೈತರ ಸಂಕಟವನ್ನು ಸರಕಾರಕ್ಕೆ ನಿವೇದಿಸಲು 4,000 ರೈತರ ಜಾಥಾ ಸಹಿತ 60 ಮೈಲಿ ಕಾಲ್ನಡಿಗೆ ಮಾಡಿ ಬೆಂಗಳೂರಿಗೆ ಬಂದೆವು. ದಿವಾನರಿಗೆ ವಿಷಯ ತಿಳಿಸಿ, ರೈತರಿಗೆ ರಿಯಾಯಿತಿ ನೀಡಲು ಒತ್ತಾಯಿಸಿದೆ. ಇದರಿಂದ ರೈತರಿಗೆ ಒಂದು ಕೋಟಿ ರೂಪಾಯಿಯಷ್ಟು ಲಾಭ ಆಯಿತು. ಮುಂದೆ 1933ರಲ್ಲಿ ಪ್ರಜಾಪ್ರತಿನಿಧಿ ಸಭೆಗೆ ನಿಂತು ಸೋತರೂ 1934ರಲ್ಲಿ ಪ್ರಜಾಮಿತ್ರ ಮಂಡಲಿಯ ಎಂ. ಸಿ. ಲಿಂಗೇಗೌಡರನ್ನು

ಸೋಲಿಸಿ ಡಿ.ಎಲ್.ಬಿಗೆ ಆಯ್ಕೆಯಾದೆ. ಮುಂದೆ ಮದ್ದೂರು ಮುನಿಸಿಪಾಲಿಟಿಯ ಉಪಾಧ್ಯಕ್ಷನಾದೆ ಎಸ್. ಸಿ. ಮಲ್ಲಯ್ಯನವರನ್ನು ಸೋಲಿಸಿ ಪ್ರಜಾಪ್ರತಿನಿಧಿ ಸಭೆಗೆ ಆರಿಸಿ ಬಂದೆ. ಮದ್ದೂರು ಭಾಗದ ಗಣ್ಯ ನಾಯಕನೆನಿಸಿದೆ (1937). ಇದೆಲ್ಲವೂ ಕಾಂಗ್ರೆಸ್ಸಿನ ಹೆಸರಿನಲ್ಲಿ ನಡೆಸಿದ ಸ್ಪರ್ಧೆ. ಇದಕ್ಕೂ ಮೊದಲೇ ನಾನು ಬೆಂಗಳೂರಿನಲ್ಲಿ ಡಿ.ಸಿ.ಸಿ. ಕಾರ್ಯದರ್ಶಿ ಆಗಿದ್ದೆ. ಡಾ|| ಎಲ್. ಎಸ್. ರಾಜು ಅಧ್ಯಕ್ಷರು. ನಡುವೆ 1929–30ರ ಸುಮಾರಿಗೆ ಮೈಸೂರು ಕಾಂಗ್ರೆಸ್ಸಿಗೆ ಪುನರ್ಜನ್ಮ ನೀಡಿ ಎಂ. ವೆಂಕಟ ಕೃಷ್ಣಯ್ಯ ಅಧ್ಯಕ್ಷರಾಗಿ, ನಾನು ಕಾರ್ಯದರ್ಶಿ ಆಗಿ ಆಯ್ಕೆಗೊಂಡೆವು. ಈ ಸಂಸ್ಥೆ ಸರಿಯಾಗಿ ಕಾರ್ಯ ಮಾಡಲಾಗಲಿಲ್ಲ. 1936ರಲ್ಲಿ ಸಂಪಿಗೆ ವೆಂಕಟಪತಯ್ಯ ಅಧ್ಯಕ್ಷರಾಗಿ ಮತ್ತೆ ಮೈಸೂರು ಕಾಂಗ್ರೆಸ್ ಚುನಾವಣೆ ಸಜ್ಜಾಯಿತು. 1937ರ ಚುನಾವಣೆಯಲ್ಲಿ ನಾನು ಕಾಂಗ್ರೆಸ್ ಪರ ಪ್ರಚಾರಕ್ಕೆ ಹೋಗಿದ್ದೆ. ಮೈಸೂರಿನಲ್ಲಿ ಭಾಷಣ ಮಾಡಿದ್ದೆ. ಮೈಸೂರಿಂದ ರಂಗರಾಮಯ್ಯ, ಬೆಂಗಳೂರಿಂದ ಭಾಷ್ಯಂ ಹೀಗೆ 39 ಜನ ಪ್ರಜಾಪ್ರತಿನಿಧಿ ಸಭೆಗೆ ಕಾಂಗ್ರೆಸ್‌ನವರು ಆಗ ಆರಿಸಿಬಂದರು. ಆಗ ಭಾಷ್ಯಂ ಅಸೆಂಬ್ಲಿ ಪಾರ್ಟಿ ನಾಯಕರು; ನಾನು ಕಾರ್ಯದರ್ಶಿ. ಇದೇ ಕಾಲಕ್ಕೆ ಸ್ತ್ರೀಮತದಾರ ಸಂಘದಿಂದ ನಾಕಮ್ಮ ಅವರನ್ನು ಸೋಲಿಸಿ ನನ್ನ ಪತ್ನಿ ಗೆದ್ದುಬಂದಳು. ಇದೇ ಕಾಲದಲ್ಲಿ ಚುನಾವಣೆಯಲ್ಲಿ ಸೋತ ಸಂಪಿಗೆ ವೆಂಕಟಪತಯ್ಯ ಅಧ್ಯಕ್ಷಪದಕ್ಕೆ ರಾಜೀನಾಮೆ ಕೊಡಲು ಟಿ. ಸಿದ್ದಲಿಂಗಯ್ಯ ಅಧ್ಯಕ್ಷರಾದರು. ವಿ. ಎಸ್. ನಾರಾಯಣರಾಯರು ಕಾರ್ಯದರ್ಶಿ; ಕಾರ್ಯಕಾರಿ ಸಮಿತಿಯಲ್ಲಿ ನಾನೂ ಇದ್ದೆ. ಕಾಂಗ್ರೆಸ್ಸಿನ ಕಾರ್ಯವಿಸ್ತರಣೆಗೆ ತ್ರಿಮೂರ್ತಿಗಳ ಕ್ರಿಯಾಸಮಿತಿಯೊಂದನ್ನು ನೇಮಿಸಿದರು. ಅದರಲ್ಲಿ ಟಿ. ಸಿದ್ದಲಿಂಗಯ್ಯ, ತಗಡೂರು ಮತ್ತು ವೀರಕೇಸರಿ ಇದ್ದರು. ಇವರ ಪ್ರವಾಸ ನಡೆದಂತೆ ಇವರ ಬಂಧನ ಆಯಿತು. ಇದರ ಹಿಂದೆ ಪ್ರಜಾಪ್ರತಿನಿಧಿ ಸಭೆ ನಡೆದಾಗ ಭಾಷ್ಯಂ ಅವರ ಬಂಧನ ಆಯಿತು. ಇವೆಲ್ಲದರ ಪರಿಣಾಮವಾಗಿ ಪ್ರಜಾಪಕ್ಷ ಮತ್ತು ಕಾಂಗ್ರೆಸ್‌ಗಳ ಐಕ್ಯವಾಗಿ ಮೈಸೂರು ಕಾಂಗ್ರೆಸ್ ರೂಪ ತಾಳಿತು (16–10–1937). ದಿವಾನರ ದಬ್ಬಾಳಿಕೆಯ ಫಲ ಅದು. ಪ್ರಜಾಪಕ್ಷ ಮತ್ತು ಕಾಂಗ್ರೆಸ್‌ಗಳ ಐಕ್ಯಕ್ಕಾಗಿ ನಾನು ಬಹಳ ಯತ್ನಿಸಿದ್ದೆ. 1937ರ ಚುನಾವಣೆಗೆ ಮೊದಲು ಕೋಲಾರದಲ್ಲಿ ನಡೆದ ಪ್ರಜಾಪಕ್ಷದ ಸಮ್ಮೇಳನಕ್ಕೂ ನಾನು ಕೆಲ ಕಾಂಗ್ರೆಸ್ ಮಿತ್ರರ ಜೊತೆ ಹೋಗಿ, ಸಂಧಾನ ನಡೆಸಿದ್ದೆ. ಆಗ ಯಶಸ್ಸು ಸಿಕ್ಕಿರಲಿಲ್ಲ.

ಈ ಐಕ್ಯದನಂತರ ಕಾಂಗ್ರೆಸ್ ಪ್ರಚಾರಕ್ಕಾಗಿ ನಾನು ನನ್ನ ಪತ್ನಿ ತಾಯಮ್ಮ, ಸೂರ್ಯನಾರಾಯಣ ಪಂಡಿತ್, ಕ್ಲೀನರ್ ತಮ್ಮಯ್ಯ ಸಹಿತ ನಂಜನಗೂಡು ದೇವಾಲಯದಲ್ಲಿ ಪ್ರಾರ್ಥನೆ ಆರಂಭಿಸಿ, ಸಂಸ್ಥಾನದಲ್ಲಿ ಬಿರುಸಾದ ಪ್ರವಾಸ ನಡೆಸಿದೆವು. ಎರಡೂವರೆ ತಿಂಗಳು ಸತತವಾಗಿ ಜಿಲ್ಲಾ ಕೇಂದ್ರ, ತಾಲ್ಲೂಕು ಕೇಂದ್ರ, ದೊಡ್ಡ ಊರುಗಳಿಗೆಲ್ಲ ಕಾರಿನಲ್ಲಿ ಸುತ್ತಿ ಭಾಷಣ, ಮಾತುಕತೆ ಮಾಡಿದೆವು. ನನ್ನ ತಂಗಿಯ

ಮದುವೆಗೂ ನಾನು ಬರಲಿಲ್ಲ. ಹಿಂದೆ 1934-35ರಲ್ಲಿ ಒಕ್ಕಲಿಗರ ಸಂಘದ ಕೆಲಸಕ್ಕಾಗಿ ಪ್ರವಾಸಮಾಡಿ, ಎಲ್ಲೆಡೆ ಪರಿಚಯ, ಸಂಪರ್ಕ ಇದ್ದುದರಿಂದ ಆ ಮಿತ್ರರ ಬಳಕೆ ಎಲ್ಲೆಡೆ ಕಾಂಗ್ರೆಸ್ ವಿಸ್ತರಣೆಗೆ ಸಹಾಯ ಆಯಿತು. ಹೊಳೆನರಸೀಪುರದಲ್ಲಿ ಸೂರ್ಯನಾರಾಯಣ ಶೆಟ್ಟಿ, ಖಂಡೇರಾಯ ಶೆಟ್ಟಿ, ಹಾಸನದಲ್ಲಿ ಗುಂಡಪ್ಪಗೌಡ, ಎ. ಜಿ. ರಾಮಚಂದ್ರರಾಯರು, ಎಸ್. ರಂಗಸ್ವಾಮಿ, ಚನ್ನರಾಯಪಟ್ಟಣದಲ್ಲಿ ಅಂಚೆಂ ಸಂಜೀವಶೆಟ್ಟಿ ಇವರು ಕಾಂಗ್ರೆಸ್ಸಿನ ಕೆಲಸಮಾಡುತ್ತಿದ್ದವರು. ಚಿತ್ರದುರ್ಗ ಜಿಲ್ಲೆಯಲ್ಲಿ ಬಳ್ಳಾರಿ ಸಿದ್ದಮ್ಮ ನಮ್ಮ ಜೊತೆ ಎಲ್ಲಾ ಕಡೆ ಬಂದರು. ಎಸ್. ನಿಜಲಿಂಗಪ್ಪ, ಭೀಮಪ್ಪ ನಾಯಕ, ವಾಸುದೇವರಾವ್ ಚಿತ್ರದುರ್ಗದ ಪ್ರಮುಖರು. ಶಿವಮೊಗ್ಗದಲ್ಲಿ ಭೂಪಾಳಂ ಸೋದರರು, ಕಡಿದಾಳ್, ಕೆ. ಆರ್. ಮಾಧವರಾವ್, ಎಸ್. ವಿ. ಕೃಷ್ಣಮೂರ್ತಿರಾವ್ ನೆರವಾದರು. ತುಮಕೂರು ಜಿಲ್ಲೆಯಲ್ಲಿ ಖಾದೀ ಭಂಡಾರದ ನೀಲಕಂಠರಾವ್, ಕುಣಿಗಲ್ಲಲ್ಲಿ ದಿ|| ರಂಗಶೆಟ್ಟಿ ನೆರವಾದರು. ಬಿ. ಸಿ. ನಂಜುಂಡಯ್ಯ, ಮಾಲಿ ಮರಿಯಪ್ಪ, ಅಡ್ವೋಕೇಟ್ ರಾಜಗೋಪಾಲಾಚಾರ್, ಕೆ. ವಿ. ಸುಬ್ರಹ್ಮಣ್ಯಸ್ವಾಮಿ, ಬ್ರಹ್ಮಪ್ಪ, ರಾಮೇಗೌಡ (ಪಾವಗಡ), ಸಿ. ಜೆ. ಮುಕ್ಕಣ್ಣಪ್ಪ, ತಾರೇಗೌಡ, ಹೆಂಜೇರಪ್ಪ ಇವರದೂ ಸಹಕಾರವಿತ್ತು. ಕೋಲಾರದಲ್ಲಿ ಟಿ. ರಾಮಾಚಾರ್ಯ, ಸಂಸಂಗಿ ರಾಮಯ್ಯ, ಪಟ್ಟಾಭಿರಾಮನ್ ನಮ್ಮ ಜೊತೆ ಬಂದರು. ಬೆಂಗಳೂರಿನಲ್ಲಿ ಆಗ ಸಂಪಿಗೆ ವೆಂಕಟಪತಯ್ಯ, ರಜ್ವಿ, ವಿ. ಎಸ್. ನಾರಾಯಣರಾವ್, ಭಾಷ್ಯಂ, ಡಬ್ಲ್ಯು. ಎಚ್. ಹನುಮಂತಪ್ಪ, ವೆಂಕಟರಂಗಯ್ಯಂಗಾರ್, ಎಲ್. ಎಸ್. ರಾಜು ಮುಂತಾದವರು ಗಣ್ಯರು. ಆದರೆ ಬೆಂಗಳೂರಿನಲ್ಲಿ ಆಗ 'ಬಿಜಿ ಬಾಡಿ'ಗಳೇ ಹೆಚ್ಚಾಗಿ, ಚಿಕ್ಕಬಳ್ಳಾಪುರದಿಂದ ಸಂಪಂಗಿ ರಾಮಯ್ಯ, ದೊಡ್ಡಬಳ್ಳಾಪುರದಿಂದ ಟಿ. ಸಿದ್ದಲಿಂಗಯ್ಯ, ವೀರಭದ್ರಯ್ಯ ಮುಂತಾದವರು ಬಂದು ಬೆಂಗಳೂರಿನ ಕಾಂಗ್ರೆಸ್ ಕೆಲಸಕ್ಕೆ ನೆರವಾಗುತ್ತಿದ್ದರು. ದೇವನಹಳ್ಳಿ ನಾರಾಯಣಪ್ಪ, ಮಾಗಡಿಯ ಟಿ. ಡಿ. ಮಾರಣ್ಣ, ಸೋಲೂರು ಸಿದ್ದಪ್ಪ, ಕನಕಪುರ ಎಸ್. ಕರಿಯಪ್ಪ, ಮಂಡ್ಯದಲ್ಲಿ ಹೊನ್ನಯ್ಯ, ಚುಂಚನಕಟ್ಟೆಯಲ್ಲಿ ಆಶ್ರಮದ ಪುಟ್ಟಣ್ಣ, ಮೈಸೂರಿನಲ್ಲಿ ರಂಗರಾಮಯ್ಯ, ಅಗರಂ ರಂಗಯ್ಯ, ಎಂ. ಎನ್. ಜೋಯಿಸ್, ಪಾಲಹಳ್ಳಿ ಸೀತಾರಾಮಯ್ಯ ಪ್ರಮುಖರು. ಬೀರೂರಿನ ಸತ್ಯನಾರಾಯಣ ಶೆಟ್ಟಿ 'ಚಿತ್ರಗುಪ್ತ'ದ ಕಾಲದಿಂದ ಪರಿಚಿತರಾಗಿದ್ದು ಕಾಂಗ್ರೆಸ್ ಕೆಲಸ ಮಾಡುತ್ತಿದ್ದರು. ಇದು 1937-38ರ ಸ್ಥಿತಿ. ಶಿವಮೊಗ್ಗದಿಂದ ಎಚ್. ಸಿದ್ದಯ್ಯ, ದಾವಣಗೆರೆಯಿಂದ ಡಿ. ಎಚ್. ಚಂದ್ರಶೇಖರಯ್ಯ ಮೊದಲ ಬಾರಿ ಶಿವಪುರ ಕಾಂಗ್ರೆಸ್ ಕಾಲಕ್ಕೆ ಬಂದು ಕಾಂಗ್ರೆಸ್ ಕಾರ್ಯದಲ್ಲಿ ಸೇರಿದರು. ಹೀಗೆ ಯಶಸ್ವೀ ದಿಗ್ವಿಜಯವಾಯಿತು. ಇದು ಸಂಯೋಜಿತ ಕಾರ್ಯಕ್ರಮವಾಗಿತ್ತು. ಕಮಿಟಿ ಇಲ್ಲದಲ್ಲಿ ಕಮಿಟಿ ಮಾಡಿಸಿವು. ಇದರ ಹಿಂದೆಯೇ ಶಿವಪುರ ಕಾಂಗ್ರೆಸ್‌ನ ಸಿದ್ಧತೆ. ಮೈಸೂರು ಜಿಲ್ಲೆಯವರೇ ಪ್ರಥಮ ಅಧಿವೇಶನವನ್ನು ನಡೆಸಬೇಕೆಂದಾಯಿತು. ನಂಜನಗೂಡಿನಲ್ಲಿ

ಮಾಡೋಣವೇ ಎಂದಾಗ ವಿಶ್ವೇಶ್ವರಗೌಡರು ಸಾಧ್ಯವಿಲ್ಲ ಎಂದರು. ಪತ್ತಿನಮಾರಿಹಿಸಿಯ ವಿಚಾರ ಬಂದಾಗ ವಕೀಲ ಬಂದೀಗೌಡರು ತನ್ನ ಕೈಲಿ ಆಗದೆಂದರು. ಕಡೆಗೆ ನಾನೇ ಅದರ ಭಾರ ಒಪ್ಪಿಕೊಂಡೆ. ನನ್ನನ್ನು ಅಧಿವೇಶನದ ಸರ್ವಾಧಿಕಾರಿಯಾಗಿ ಮಾಡಿದರು. ಸಾಹುಕಾರ್ ಚನ್ನಯ್ಯನವರನ್ನು ಸ್ವಾಗತಾಧ್ಯಕ್ಷರಾಗಿ ಮಾಡಿದೆ. ಸಿ. ತಿರುಮಲೇಗೌಡ ಉಪಾಧ್ಯಕ್ಷರು. ಮದ್ದೂರಿನ ಅವರ ಮನೆಯನ್ನು ಸ್ವಾಗತ ಸಮಿತಿ ಕಾರ್ಯಾಲಯ ಮಾಡಿದೆವು. ಅವರ ಜಮೀನೇ ಕಾಂಗ್ರೆಸ್ ನಡೆದ ಸ್ಥಳ. ನಾನೂ ಬಂದೀಗೌಡರೂ ಕಾರ್ಯದರ್ಶಿಗಳು. ವಿಶ್ವೇಶ್ವರಗೌಡ ಸಮಿತಿ ಸದಸ್ಯರಲ್ಲಿ ಒಬ್ಬರು. ಶಿವಪುರ ಕಾಂಗ್ರೆಸ್ಸೆಂದರೆ ಬಿಳಿಟೋಪಿಗಳ ಸಾಗರವೇ. 40-50,000 ಜನರು ಬಂದಿದ್ದರು. ನಮಗೆ ಒಟ್ಟು 10,000 ರೂ. ಖರ್ಚು ಬಂದಿತು. ಶಿವಪುರ ಕಾಂಗ್ರೆಸ್ಸಿನ ಕಾಲದಲ್ಲಿ ನನ್ನ ಬಂಧನ ಆಗಲಿಲ್ಲ. ಆಗ ನನ್ನನ್ನು ಮೈಸೂರು ಕಾಂಗ್ರೆಸ್‌ನ ವ್ಯವಸ್ಥಾಪಕ ಕಾರ್ಯದರ್ಶಿ ಎಂದು ಆಯ್ಕೆಮಾಡಿದರು. ಮುಂದೆ 1939ರಲ್ಲಿ ಕೋಲಾರ ಜಿಲ್ಲೆಯ ಸ್ವರ್ಣಕುಪ್ಪಂನಲ್ಲಿ ಕಾರ್ಯಸಮಿತಿ ಸದಸ್ಯರೊಡನೆ ಹೋದಾಗ, ಪ್ರತಿಬಂಧಕಾಜ್ಞೆ ಮುರಿದ ಬಗ್ಗೆ ಬಂಧನ ಆಯಿತು. ಕೆ. ಸಿ. ರೆಡ್ಡಿ, ಪಟ್ಟಾಭಿರಾಮನ್, ಸಂಪಂಗಿ ರಾಮಯ್ಯ, ವಿ. ವೆಂಕಟಪ್ಪ, ಭಾಷ್ಯಂ, ಎಚ್. ಸಿದ್ದಯ್ಯ ಮುಂತಾದವರ ಬಂಧನ ಆಗಿ, ನಮಗೆಲ್ಲ ಕೆ.ಜಿ.ಎಫ್. ನಲ್ಲಿ ಮೂರು ತಿಂಗಳ ಕಠಿಣ ಶಿಕ್ಷೆ ಆಯಿತು. ಇದೇ ನನ್ನ ಮೊದಲ ಜೈಲುವಾಸ. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿದ್ದೆ. ಜೈಲಿನಲ್ಲಿ ರಾಗಿ ಬೀಸಿದೆ, ಬಟ್ಟೆ ಹೊಲಿದೆ; ಏಕೆಂದರೆ ನನಗಾದುದು ಸಶ್ರಮ ಶಿಕ್ಷೆ. ಬಿಡುಗಡೆಯನಂತರ ಚುನಾವಣೆ ಆಯಿತು. ಮದ್ದೂರಿಂದ ನಾನು ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆ ಆದೆ.

1942ರ ಚಳವಳಿ ಕಾಲಕ್ಕೆ ಮೈಸೂರಿನಲ್ಲಿ ಭಾಷಣ ಮಾಡಿ ಬಂಧಿತನಾದೆ (8-9-1942). ಎಂ. ವಿ. ಕೃಷ್ಣಪ್ಪ ಆಗ ಮೈಸೂರಿನಲ್ಲಿ ಚಳವಳಿಯ ಸಂಘಟಕರು. ಮುಂದೆ 15 ದಿನ ಮೈಸೂರು ಸಬ್ ಜೈಲಿನಲ್ಲಿದ್ದೆ. ಅನಂತರ ಬೆಂಗಳೂರು, ಕರುಹಟ್ಟಿ, ಶ್ರೀರಂಗಪಟ್ಟಣಗಳಿಗೆ ಸ್ಥಾನಾಂತರ ಆಯಿತು. 1943ರ ಕೊನೆಯ ತನಕ ಜೈಲಿನಲ್ಲಿಯೇ ಇದ್ದೆ. ಇದು ನನಗೆ ದುಃಖದ ಕಾಲ. ಆಗಲೇ ಮಹದೇವ ದೇಸಾಯಿ, ಕಸ್ತೂರಿಬಾ, ಪಂ॥ ತಾರಾನಾಥ ಹಾಗೂ ನನ್ನ ತಾಯಿಯ ಅಣ್ಣನ ಮಗ ಎಸ್. ಎಲ್. ಕೆಂಚೇಗೌಡ ಇವರ ಸಾವಿನ ವಾರ್ತೆಗಳು ನನಗೆ ತಿಳಿಯಿತು. ಕೊನೆಯಾತ ಪೋಲೀಸ್ ಸಬ್ ಇನ್‌ಸ್ಪೆಕ್ಟರ್ ಆಗಿದ್ದು, ಈಸೂರು ದುರಂತದಲ್ಲಿ ಜನರ ಆಗ್ರಹಕ್ಕೆ ತುತ್ತಾಗಿ, ಅಮಲ್ದಾರ್ ಮುದ್ದುಕೃಷ್ಣ ಅವರ ಜೊತೆ ಅಸು ನೀಗಿದ. ಕೊನೆಗೆ ಮತ್ತೆ ಬೆಂಗಳೂರು ಜೈಲಿನಲ್ಲಿ ಇದ್ದು 1943ರ ಅಂತ್ಯದ ಹೊತ್ತಿಗೆ ಬಿಡುಗಡೆ ಆದೆ. ಮುಂದೆ 1944ರಲ್ಲಿ ನಿಜಲಿಂಗಪ್ಪನವರು ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದಾಗ ನನ್ನನ್ನು ಪ್ರಧಾನ ಕಾರ್ಯದರ್ಶಿ ಆಗಿ ಆಯ್ಕೆಮಾಡಿದರು. 1946ರ ಸುಮಾರಿಗೆ ಬೆಂಗಳೂರಿನಲ್ಲಿ 'ವಾರ್ತಾ' ಎಂಬ ದಿನಪತ್ರಿಕೆಗೆ ನಾನು ಸಂಪಾದಕನಾಗಿದ್ದೆ. ಅದು ಒಂದು ಕಂಪನಿ ನಡೆಸುತ್ತಿದ್ದ

ಪತ್ರಿಕೆ. ಕಂಪನಿಯಲ್ಲಿ ಎಸ್. ಚನ್ನಯ್ಯ, ಎಲ್. ಎಸ್. ವೆಂಕಾಜಿರಾವ್, ರಾಮ ಕೃಷ್ಣರಾವ್ ಮುಂತಾದವರಿದ್ದರು. ಜಿ. ನಾರಾಯಣ ಮ್ಯಾನೇಜರ್ ಆಗಿದ್ದರು. ಜವಾಬ್ದಾರಿ ಸರಕಾರ ಬರುವ ತನಕ ಪತ್ರಿಕೆ ನಡೆಯಿತು. 1947ರಲ್ಲಿ ಬೆಂಗಳೂರಿನಲ್ಲೇ ನನ್ನ ಬಂಧನ ಆಯಿತು ಆರು ವಾರ ಜೈಲಿನಲ್ಲಿದ್ದೆ. ಮುಂದೆ ಚಿತ್ರಗುಪ್ತ ದಿನಪತ್ರಿಕೆ ಆರಂಭಿಸಿದೆ. ಅದಕ್ಕೆ ಟೆಲಿಪ್ರಿಂಟರ್ ವ್ಯವಸ್ಥೆ ಹೊಂದಿಸಿದ್ದೆ. ಒಂದು ವರ್ಷದನಂತರ ಅದನ್ನು ಮಾರಿದೆ. ಎಂ. ಎಸ್. ಭಾರದ್ವಾಜರು ಅದನ್ನು ಸಾಪ್ತಾಹಿಕವಾಗಿ ಮಾಡಿದರು.

ಚಳವಳಿಯ ಕಾಲಕ್ಕೆ ನನ್ನ ಜೊತೆ ಎಲ್ಲ ರೀತಿಯಿಂದ ಹೃತ್ಪೂರ್ವಕ ಸಹಕರಿಸಿದ ನನ್ನ ಪತ್ನಿಯನ್ನು ಇಲ್ಲಿ ಉಲ್ಲೇಖಿಸಲೇಬೇಕು. ಆಕೆ ನನ್ನ ಜೊತೆ ಎಲ್ಲೆಡೆ ಪ್ರವಾಸಕ್ಕೆ ಎಷ್ಟು ತೊಂದರೆ ಆದರೂ ಬರುತ್ತಿದ್ದಳು. 2–3 ಕಡೆ ಭಾಷಣ ಕೂಡ ಮಾಡಿದ್ದಳು. 1952ರಲ್ಲಿ ನಾನು ಎಂ.ಪಿ.ಸಿ.ಸಿ. ಅಧ್ಯಕ್ಷನಾಗಿ ಆಯ್ಕೆಗೊಂಡೆ. 1956ರಲ್ಲಿ ನಿಜಲಿಂಗಪ್ಪ ಸಂಪುಟದಲ್ಲಿ ಕಾಮಗಾರಿ ಹಾಗೂ ವಿದ್ಯುತ್ ಇಲಾಖಾ ಸಚಿವನಾಗಿದ್ದೆ. 1958ರಲ್ಲಿ ನವಮೈಸೂರು ಕಾಂಗ್ರೆಸ್ ಅಧ್ಯಕ್ಷನಾಗಿದ್ದೆ. 1959ರಲ್ಲಿ ಜತ್ತಿ ಸಂಪುಟದಲ್ಲಿ ಮತ್ತೆ ಮಂತ್ರಿಯಾದೆ. 1964ರಿಂದ 1967ರ ವರೆಗೆ ಲೋಕಸಭಾ ಸದಸ್ಯನೂ ಆಗಿದ್ದೆ. ಇತ್ತೀಚಿಗೆ ನನ್ನ ಆತ್ಮಚರಿತ್ರೆ 'ಬದುಕು–ಮೆಲುಕು' ವಿವರವಾಗಿ ಬರೆದು ಪ್ರಕಟಿಸಿರುವೆ. ಮಿತ್ರರಾದ ಕೆ. ಹನುಮಂತಯ್ಯ, ಎಸ್. ನಿಜಲಿಂಗಪ್ಪ, ವಿ. ವೆಂಕಟಪ್ಪ, ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮುಂತಾದ ಮಿತ್ರರು ಹಾಜರಿದ್ದು ಬಿಡುಗಡೆ ಸಮಯದಲ್ಲಿ ನನಗೆ ಶುಭಹಾರೈಕೆ ಮಾಡಿದ್ದು ಸ್ಮರಣೀಯ ಪ್ರಸಂಗ. 1975ರ ಮಕರಸಂಕ್ರಾಂತಿಯಂದು ಸಾಹಿತ್ಯ ಪರಿಷತ್ತಿನಲ್ಲಿ ಜಿ. ನಾರಾಯಣ ಅವರು ಈ ಕಾರ್ಯಕ್ರಮವನ್ನು ಏರ್ಪಡಿಸಿದ್ದರು.

ಮೈ.ಮಂ. 2

## ಎ. ಕೆಂಚಪ್ಪ

ಜನನ : 1916 ಉದ್ಯೋಗ : ವ್ಯವಸಾಯ ವಿಳಾಸ : ಅರಕೆರೆ, ತಾ॥ ಶ್ರೀರಂಗಪಟ್ಟಣ

---

ಮೈಸೂರಿನಲ್ಲಿ ಪ್ರೌಢಶಾಲೆಯಲ್ಲಿ ವ್ಯಾಸಂಗಮಾಡುತ್ತಿದ್ದಾಗ ನರಿಮನ್ ಮತ್ತು ಶರತ್ ಚಂದ್ರ ಬೋಸ್ ಮೈಸೂರಿನಲ್ಲಿ 'ವಿದ್ಯಾರ್ಥಿ ಕಾನ್‌ಫರೆನ್ಸ್'ನಲ್ಲಿ ಭಾಗವಹಿಸಿದರು. ಆಗಿನಿಂದ ನಾನು ರಾಷ್ಟ್ರೀಯ ಚಳವಳಿಯ ಕಡೆ ಆಕರ್ಷಿತನಾದೆ. ಅಂದಿನಿಂದ ನಾನು ಸತತ ಖಾದೀಧಾರಿಯಾಗಿರುತ್ತೇನೆ. ಶ್ರೀರಂಗಪಟ್ಟಣ ತಾಲ್ಲೂಕು ಕಾಂಗ್ರೆಸ್ ಕಮಿಟಿಯ ಸದಸ್ಯನಾಗಿ ಮತ್ತು ಅದರ ಸೆಕ್ರೆಟರಿಯಾಗಿಯೂ ಆಗ ಕೆಲಸ ಮಾಡಲಾರಂಭಿಸಿದೆ. 1937–38ರಿಂದಲೂ ಹಳ್ಳಿಗಳಲ್ಲಿ ಕಾಂಗ್ರೆಸ್ ಪ್ರಚಾರ ಕೈಗೊಂಡು ಕಾಂಗ್ರೆಸ್ ಸದಸ್ಯ



ರನ್ನು ಮಾಡಿಸುತ್ತಾ ಬಂದೆ. (ಆಗ ಕಾಂಗ್ರೆಸ್ ಸದಸ್ಯರಾಗಲು ಜನರಿಗೆ ತುಂಬಾ ಹೆದರಿಕೆ ಇತ್ತು.)

ಶಿವಪುರ ಮತ್ತು ವಿದುರಾಶ್ವತ್ಥ ಕಾಂಗ್ರೆಸ್ ಅಧಿವೇಶನಗಳಲ್ಲಿ ಸ್ವಯಂಸೇವಕನಾಗಿ ಕೆಲಸ ಮಾಡಿರುತ್ತೇನೆ. 9-10-1939ರಲ್ಲಿ ಮೈಸೂರು ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್‌ರವರು 144ನೇ ಸೆಕ್ಷನ್ ಪ್ರಕಾರ ಮೈಸೂರಿನ ಟೌನ್‌ಹಾಲ್‌ನಲ್ಲಿ ಮತ್ತು ಅದರ ಸುತ್ತ ಮುತ್ತಲಿನ ಸ್ಥಳಗಳಲ್ಲಿ ಯಾವ ಮೆರವಣಿಗೆ ಮತ್ತು ಸಭೆಗಳನ್ನು ನಡೆಸಕೂಡದೆಂದು ಪ್ರತಿಬಂಧ ಜಾರಿ ಮಾಡಿದ್ದಾಗ ನಾನು ಈ ಆಜ್ಞೆ ಉಲ್ಲಂಘಿಸಿ ನನ್ನ ಸ್ನೇಹಿತರಾದ ದಿ|| ಎ. ಜಿ. ಲಿಂಗಪ್ಪ, ಪಿ. ಚನ್ನಪ್ಪ, ಪಿ. ಕೃಷ್ಣಪ್ಪ, ಬಿ. ಕೆ. ಪುಟ್ಟೇಗೌಡ ಇವರುಗಳ ಜೊತೆ ಟೌನ್‌ಹಾಲ್ ಮೈದಾನದಲ್ಲಿ ದೊಡ್ಡ ಸಭೆ ಸೇರಿಸಿ ಭಾಷಣ ಮಾಡಿದಾಗ ಪೋಲೀಸರು ನಮ್ಮನ್ನು ಕೈದುಮಾಡಿದರು. ಬೆಳ್ಳಿಕೆರೆಯ ಬಿ. ಎಂ. ಕಾಳಯ್ಯ, ದೊಡ್ಡಪಾಳ್ಯದ ಪಿ. ಚನ್ನಪ್ಪ, ಕೃಷ್ಣಪ್ಪ ಇವರೂ ಸತ್ಯಾಗ್ರಹಮಾಡಿದರು. ಅನಂತರ ಮೈಸೂರು ಸಿಟಿ ಮ್ಯಾಜಿಸ್ಟ್ರೇಟ್ ಕೋರ್ಟಿನಲ್ಲಿ ಆರು ತಿಂಗಳ ಕಠಿಣ ಸಜ ಮತ್ತು ಐವತ್ತು ರೂ. ಜುಲ್ಮಾನೆ; ಜುಲ್ಮಾನೆ ಕೊಡದಿದ್ದರೆ ಮತ್ತೊಂದು ತಿಂಗಳು ಕಠಿಣ ಸಜ ವಿಧಿಸಿದರು. ಏಳು ತಿಂಗಳ ಶಿಕ್ಷೆಯನ್ನು ಮೈಸೂರು ಜೈಲಿನಲ್ಲಿ ಅನುಭವಿಸಿರುತ್ತೇನೆ. ಸತ್ಯಾಗ್ರಹದ ಎಲ್ಲಾ ಏರ್ಪಾಡನ್ನೂ ಸಾಹುಕಾರ್ ಚನ್ನಯ್ಯ ಮೈಸೂರಿನಲ್ಲಿ ಮಾಡಿದ್ದರು.

1942ರಲ್ಲಿ 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಪೋಲೀಸರ ಕೈಗೆ ಸಿಗದೆ ಹಳ್ಳಿಗಳಲ್ಲಿ ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ಜನರಿಗೆ ಸೇಂದಿಯನ್ನು ಕುಡಿಯಬಾರದೆಂದು ಹೇಳುವುದು, ಪರದೇಶೀ ವಸ್ತುಗಳ ಬಹಿಷ್ಕಾರ, ಪ್ರಭಾತ್‌ಫೇರಿ ಮುಖೇನ ಪ್ರಚಾರ ಮತ್ತು ಕಂದಾಯ ವಗೈರೆ ಯಾವ ತೆರಿಗೆಯನ್ನೂ ಕೊಡಬೇಡಿ ಎಂಬುದಾಗಿ ತಿಳಿಸುವುದು ಮುಂತಾದ ಮಾರ್ಗಗಳಿಂದ ಕಾಂಗ್ರೆಸ್ ಚಳವಳಿಯಲ್ಲಿ ಕೆಲಸ ಮಾಡಿದೆ. ಬೆಳ್ಳಿಕೆರೆ, ನೇರಲಕೆರೆ, ತದಗವಾಡಿ, ಕೊಡಿಯಾಲ, ಕೊಡಗಹಳ್ಳಿ, ಬನ್ನೂರು, ಅಂಗರಹಳ್ಳಿ, ಅರಸಟ್ಟಿಗೆ ಕೊಪ್ಪಲಿಗಳಲ್ಲಿ ಪ್ರಚಾರ ನಡೆಸಿದೆವು. ಕೊನೆಯ ಮೂರು ಊರುಗಳಲ್ಲಿ ಸೇಂದಿ ಅಂಗಡಿ ನಾಶ ಮಾಡಿದೆವು. ಆಗ ಎ. ಜಿ. ಲಿಂಗಪ್ಪ, ಯು. ಕೆಂಚಪ್ಪ, ಎಂ. ಪುಟ್ಟೇಗೌಡ, ಎ. ಸಿ. ಮಾದೇಗೌಡ ನಮ್ಮ ಜೊತೆ ಇದ್ದರು.

1947ರ ಕಾಂಗ್ರೆಸ್ ಚಳವಳಿಯಲ್ಲೂ ಸಹ ಅನೇಕ ವಿಧಗಳಲ್ಲಿ ಅಂದರೆ, ಸೇಂದಿ ಅಂಗಡಿಗಳಿಗೆ ಬೆಂಕಿ ಹಾಕುವುದು, ಕಾಂಗ್ರೆಸ್ ಚಳವಳಿಗೆ ಹಣ ಶೇಖರಿಸುವುದು ಮುಂತಾದ ಕೆಲಸ ಮಾಡಿ ದೇಶದ ಸ್ವಾತಂತ್ರ್ಯ ಗಳಿಕೆಯಲ್ಲಿ ದುಡಿದಿರುತ್ತೇನೆ. ನಮ್ಮ ಊರ ಪ್ರಮುಖ ಕಾಂಗ್ರೆಸ್ ಕಾರ್ಯಕರ್ತರೆಂದರೆ ಎ. ಜಿ. ಬಂದೀಗೌಡರು (ಮಾಜಿ

ವಿಧಾನಸಭಾ ಸದಸ್ಯ), ಶ್ರೀರಂಗಪಟ್ಟಣ ತಾಲ್ಲೂಕು ಬೋರ್ಡ್ ಸದಸ್ಯರಾದ ಪಿ. ಕೆಂಪಯ್ಯ, ಮಾಜಿ ವಿಧಾನಸಭಾ ಸದಸ್ಯರಾದ ಎ. ಜಿ. ಬಂಡೀಗೌಡರು, ಎ. ಸಿ. ಕೃಷ್ಣಪ್ಪ ಮತ್ತು ಸಿ. ಕರಿಪುಟ್ಟೇಗೌಡರು. ಶ್ರೀರಂಗಪಟ್ಟಣದಲ್ಲಿ ದಿ|| ಚಂದ್ರಶೇಖರಯ್ಯ, ಡಾ|| ಸಿ. ಬಂದೀಗೌಡರು, ಅಗ್ರಹಾರದ ನರಸಪ್ಪ ಮತ್ತು ಜವರಪ್ಪನವರು ಕಾಂಗ್ರೆಸ್ ಕಾರ್ಯಕರ್ತರಾಗಿದ್ದರು.

ನಮ್ಮ ಊರಿನಲ್ಲೂ ಅನೇಕ ಸಾರಿ ಸಭೆ ಮತ್ತು ಮೆರವಣಿಗೆಗಳನ್ನು ಸಾಹುಕಾರ್ ಎಸ್. ಚನ್ನಯ್ಯ, ಎಚ್. ಸಿ. ದಾಸಪ್ಪ, ಪಾಲಹಳ್ಳಿ ಸೀತಾರಾಮಯ್ಯ, ರಂಗರಾಮಯ್ಯ, ಎಂ. ಎನ್. ಜೋಯಿಸ್, ಎಚ್. ಕೆ. ವೀರಣ್ಣಗೌಡ, ಎಚ್. ಸಿದ್ದಯ್ಯ, ಕೆ. ಟಿ. ಭಾಷ್ಯಂ, ಟಿ. ಸುಬ್ರಹ್ಮಣ್ಯಂ, ಕೆ. ಹನುಮಂತಯ್ಯ, ವಿ. ವೆಂಕಟಪ್ಪ ಇವರುಗಳು ಬೇರೆಬೇರೆ ಕಾಲದಲ್ಲಿ ಬಂದು ನಡೆಸಿಕೊಟ್ಟಿದ್ದಾರೆ.

ಮೈ ಮಂ. 3

## ಎಂ. ಪುಟ್ಟೇಗೌಡ

ಜನನ : ? ಉದ್ಯೋಗ : ಕೃಷಿ ವಿಳಾಸ : ಅರಕೆರೆ, ತಾ|| ಶ್ರೀರಂಗಪಟ್ಟಣ



ನಾನು ನಮ್ಮ ಹಳ್ಳಿ ಅರಕೆರೆಯಲ್ಲಿ ವ್ಯಾಸಂಗ ಮುಗಿಸಿಕೊಂಡು ಮುಂದೆ ಓದಲು ಮೈಸೂರಿಗೆ ಹೋದೆ. 1930ನೇ ಇಸವಿಯಲ್ಲಿ ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹ ಸುರುವಾಗಿ ಗಾಂಧೀಜಿಯವರನ್ನು ಅರೆಸ್ಟ್ ಮಾಡಿದರು. ಆಗ ವಿದ್ಯಾರ್ಥಿಗಳ ನಾಯಕ ಎನ್. ಡಿ. ಶ್ರೀರಂಗಾಚಾರ‍್ರ ನೇತೃತ್ವದಲ್ಲಿ ಎಲ್ಲಾ ಹೈಸ್ಕೂಲ್ ಮತ್ತು ಕಾಲೇಜ್ ವಿದ್ಯಾರ್ಥಿಗಳು ಒಂದು ದಿನದ ಮಟ್ಟಿಗೆ ಸ್ಕೂಲ್ ಮತ್ತು ಕಾಲೇಜುಗಳನ್ನು ಬಹಿಷ್ಕರಿಸಿದರು. ನಾನು ಮತ್ತು ನನ್ನ ಸ್ನೇಹಿತ ದಿ|| ಎ. ಸಿ. ಬೈರಪ್ಪ (ಮುಂದೆ ಅಡ್ವೊಕೇಟ್) ಅದರಲ್ಲಿ ಭಾಗವಹಿಸಿದ್ದೆವು. ಅಂದಿನಿಂದ ನಾವು ಪರದೇಶದ ಬಟ್ಟೆಯನ್ನು ತಿರಸ್ಕರಿಸಿ ಖಾದಿ ಧರಿಸಲು ಪ್ರಾರಂಭ ಮಾಡಿದೆವು.

ಗಾಂಧೀಜಿಯವರು 1934ನೇ ಇಸವಿಯಲ್ಲಿ ಮೈಸೂರಿಗೆ ಬಂದಿದ್ದರು. ನಾನು ಮತ್ತು ನನ್ನ ಸ್ನೇಹಿತ ದಿ|| ಎ. ಸಿ. ಬೈರಪ್ಪನವರು ಸ್ವಯಂಸೇವಕರಾಗಿ ಕೆಲಸ ಮಾಡಿ

ದೆವು. ಮುಂದೆ ಜಿಲ್ಲಾ ಬೋರ್ಡ್ ಎಲೆಕ್ಷನ್ ಬಂದಿತು (1940). ಮಂಡ್ಯ ಮತ್ತು ಮೈಸೂರು ಒಂದೇ ಜಿಲ್ಲೆಯಾಗಿದ್ದವು. ದಿ|| ಎಚ್. ಸಿ. ಮಲ್ಲಯ್ಯ ಮತ್ತು ಎಂ. ಸಿ. ಲಿಂಗೇಗೌಡರು ಆ ಕಾಲದಲ್ಲಿ ಸರ್ ಮಿರ್ಜಾರವರ ಪಟ್ಟಶಿಷ್ಯರಾಗಿದ್ದು ಉಮೇದುವಾರ ರಾಗಿ ನಿಂತರು. ಇವರ ವಿರುದ್ಧ ಕಾಂಗ್ರೆಸ್ ಅಭ್ಯರ್ಥಿಗಳಾಗಿ ದಿ|| ತಿರುಮಲೇಗೌಡ ಮತ್ತು ಕುದುರೆಗೊಂಡಿ ಮರಿಯಪ್ಪ ಇವರನ್ನು ನಿಲ್ಲಿಸಿದರು. ನಾವುಗಳೆಲ್ಲರೂ ಸ್ವಯಂ ಸೇವಕರಾಗಿ ಕೆಲಸ ಮಾಡಿದೆವು. ಕಾಂಗ್ರೆಸ್ ಜಯ ಗಳಿಸಿತು.

ಇದಕ್ಕೂ ಮೊದಲು ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ನಾನು ಮತ್ತು ನನ್ನ ಸ್ನೇಹಿತರುಗಳಾದ ದಿ|| ಯು. ಕೆಂಚಪ್ಪ, ಕೆ. ಪುಟ್ಟಸ್ವಾಮಿ, ಎ. ಕೆಂಚಯ್ಯ ಮತ್ತು ಎ. ಸಿ. ಮಾದೇಗೌಡ ಸ್ವಯಂಸೇವಕರಾಗಿ ಕೆಲಸಮಾಡಿದೆವು. ಹುಚ್ಚಮಾಸ್ತಿಗೌಡರು ಸಹ ಆಗ ಸ್ವಯಂಸೇವಕರಾಗಿದ್ದರು. ಜಿ.ಓ.ಸಿ. ಆಗಿದ್ದ ಪಾರ್ಥನಾರಾಯಣ ಪಂಡಿತರು ನನ್ನನ್ನೂ ಮತ್ತು ಹುಚ್ಚಮಾಸ್ತಿಗೌಡರನ್ನೂ ಧ್ವಜ ಕಾಯಲು ಹಾಕಿದ್ದರು.

ನಾನು ಮಂಡ್ಯದಲ್ಲಿ ವಾಸಮಾಡಲು ಬಂದು ಸಿಟಿ ಕಾಂಗ್ರೆಸ್ ಕಾರ್ಯದರ್ಶಿಯಾಗಿ ಕೆಲಸ ಮಾಡಿದೆ. ಮಹಾಬಲರಾವ್, ಪಶುಪತಿರಾಯರು ಮತ್ತು ವೆಂಕಟಗಿರಿಯಪ್ಪ ನವರು ಮಂಡ್ಯ ಕಾಂಗ್ರೆಸ್ಸಿನಲ್ಲಿ ಬಹುಮುಖ್ಯ ವ್ಯಕ್ತಿಗಳಾಗಿದ್ದರು.

1942ರಲ್ಲಿ ಗಾಂಧೀಜಿಯ ಬಂಧನ ಆದನಂತರ ನಾನು ನನ್ನ ಸ್ನೇಹಿತ ಪಿ. ಎನ್. ಜವರಪ್ಪಗೌಡ, ಸಿದ್ಧರಾಮಯ್ಯ ಮತ್ತು ಕೆಂಪಯ್ಯನವರು ಜನರನ್ನು ಆಂಗ್ಲ ಆಳ್ವಿಕೆಯ ವಿರುದ್ಧ ಎತ್ತಿಕಟ್ಟಲು ಶುರು ಮಾಡಿದೆವು. ಮಂಡ್ಯದಲ್ಲಿ ಹರತಾಳ, ಪಬ್ಲಿಕ್ ಮೀಟಿಂಗ್ ನಡೆದವು. ಬೇರೆ ಯಾವ ನಾಯಕರೂ ಮುಂದಾಗಿ ಬರಲಿಲ್ಲ. ನಮ್ಮ ಮೇಲೆ ಅರೆಸ್ಟ್ ವಾರೆಂಟ್ ಹೊರಟಿತ್ತು. ಪಿ. ಎನ್. ಜವರಪ್ಪಗೌಡ, ಸಿದ್ಧರಾಮಯ್ಯ, ಕೆಂಪಯ್ಯ ಇವರುಗಳನ್ನು ಅರೆಸ್ಟ್ ಮಾಡಿದರು. ನಾನು ಮಾತ್ರ ತಪ್ಪಿಸಿಕೊಂಡು ಪ್ರಚಾರಕ್ಕಾಗಿ ಟಿ. ನರಸೀಪುರ ತಾಲ್ಲೂಕು ಬನ್ನೂರಿಗೆ ಹೋದೆ. ಅಲ್ಲಿ ನನ್ನ ಸ್ನೇಹಿತ ರನ್ನು ಚಳವಳಿ ಮಾಡುವಂತೆ ಪ್ರೇರೇಪಣೆ ಮಾಡಿದೆ. ಎಂ. ಎನ್. ಸಿದ್ದಯ್ಯ ಮತ್ತು ಇತರ ಸ್ನೇಹಿತರ ಸಹಾಯದಿಂದ ಹಳ್ಳಿಹಳ್ಳಿಗಳನ್ನು ಸುತ್ತಿ ಜನಗಳನ್ನು ಹುರಿದುಂಬಿಸಿದೆ. ಈ ಕೆಳಗಿನ ಹಳ್ಳಿಗಳಲ್ಲಿ ಕಾರ್ಯಕ್ರಮ ಆದವು :

ಚಾಮನಹಳ್ಳಿಯಲ್ಲಿ (ಸಿದ್ದೇಗೌಡರ ಬೆಂಬಲದಿಂದ) ಭಾಷಣ ಮಾಡಿದೆವು ; ಬೀಡನಹಳ್ಳಿ (ಬೆಟ್ಟೇಗೌಡರ ಬೆಂಬಲ) ; ತೋಪಿನಕೊಪ್ಪಲು (ಟಿ. ಪಿ. ಬೋರಯ್ಯ, ಮಾಜಿ ಎಂ.ಎಲ್.ಎ. ಅವರ ಬೆಂಬಲ) ; ಅತ್ತಳ್ಳಿ, ಬೇವಿನಹಳ್ಳಿ, ಬನ್ನೂರು, ರಂಗಸಮುದ್ರ, ಹಿಟ್ಟುವಳ್ಳಿ, ಇನ್ನೂ ಅನೇಕ ಗ್ರಾಮಗಳಲ್ಲಿ; ಬನ್ನೂರಿನಲ್ಲಿ ಸಾರ್ವ ಜನಿಕ ಸಭೆಯನ್ನುದ್ದೇಶಿಸಿ ಭಾಷಣಮಾಡುತ್ತಿದ್ದಾಗ ಸುಮಾರು 5,000 ಜನರ ಮುಂದೆ

ನಾನು ಬಂಧಿಸಲ್ಪಟ್ಟೆ. ಮೂರನೇ ದಿನ ನಾಗೇಶ್, ಕೃಷ್ಣ, ಎಂ. ಎಸ್. ಸಿದ್ದಯ್ಯ, ವೆಂಕಟಪ್ಪ ಮುಂತಾದ ಸುಮಾರು ಇಪ್ಪತ್ತು ಜನ ಬಂಧಿಸಲ್ಪಟ್ಟರು. ಬನ್ನೂರಿನಲ್ಲಿ ಬಹುಮುಖ್ಯರು ಕೆಂಚೇಗೌಡ, ರಾಮು ಮತ್ತು ಕೃಷ್ಣ ಸೋದರರು.

ಎ. ಜಿ. ಬಂದೀಗೌಡ, ವೀರಣ್ಣಗೌಡ ಮತ್ತು ಕೃಷ್ಣಪ್ಪಗೌಡರನ್ನು ಸೇರಿಸಿ ಕೊಂಡು ನಾವು ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಎರಡು ತಿಂಗಳು ಹನ್ನೊಂದು ದಿವಸ ಇದ್ದೆವು. ಅಲ್ಲಿಂದ ಶ್ರೀರಂಗಪಟ್ಟಣ ಜೈಲಿಗೆ ಕರೆದೊಯ್ದರು. ಅಲ್ಲಿ ಎ. ರಾಮಣ್ಣ, ಶಿವಣ್ಣ, ದಿ॥ ಮರಿಯಪ್ಪ, ಟಿ. ಎಸ್. ರಾಜಗೋಪಾಲಯ್ಯಂಗಾರ್, ಎಚ್. ಕೆ. ವೀರಣ್ಣಗೌಡರು, ಅನೇಕ ಹುಣಸೂರಿನ ಸ್ನೇಹಿತರು, ಎ. ಜಿ. ನಿಂಗಪ್ಪ, ಸಿದ್ಧರಾಮಯ್ಯ ಇನ್ನೂ ಮುಂತಾದವರು ಇದ್ದರು. ಕೆಲತಿಂಗಳುಗಳ ಮೇಲೆ ನಮ್ಮೆಲ್ಲರನ್ನೂ ಬಿಡುಗಡೆ ಮಾಡಿದರು.

ಅನಂತರ ಮೈಸೂರು ಕಾಂಗ್ರೆಸ್ಸಿನಲ್ಲಿ ನಾನೊಬ್ಬ ಸದಸ್ಯನಾದೆ; ಎಂ.ಸಿ.ಸಿ. ಮೆಂಬರ್ ಕೂಡ ಆದೆ; ಜಿಲ್ಲಾ ಕಾಂಗ್ರೆಸ್ ಕಮಿಟಿಯಲ್ಲಿ ಕೆಲಸಮಾಡಿದೆ.

'ಮೈಸೂರು ಚಲೋ' ಚಳವಳಿಯಲ್ಲಿ ಭಾಗವಹಿಸಿದೆ. ಆ ಕಾಲದಲ್ಲಿ ಎಂ. ಎಸ್. ಸಿದ್ದಯ್ಯ, ಎ. ಕೆಂಚಯ್ಯ, ಯು. ಕೆಂಚಪ್ಪ ಮುಂತಾದ ಒಟ್ಟು ಹನ್ನೆರಡು ಮಂದಿ ನಮ್ಮ ಪ್ರಾಂತ್ಯವನ್ನು ಬಿಟ್ಟು ಪಕ್ಕದ ಮದ್ರಾಸ್ ಪ್ರಾಂತ್ಯದ ಕಾಂಗ್ರೆಸ್ಸಿನ ಜನಗಳ ಸಹಾಯವನ್ನು ಪಡೆದು ಚಾಮರಾಜನಗರ ಮತ್ತು ಯಳಂದೂರು ತಾಲ್ಲೂಕು ಆಫೀಸುಗಳನ್ನು ನಮ್ಮ ಸ್ವಾಧೀನಕ್ಕೆ ತೆಗೆದುಕೊಳ್ಳಬೇಕೆಂದು ಪ್ರಯತ್ನ ನಡೆಸಿದೆವು. ಅಷ್ಟರಲ್ಲಿ ಚಳವಳಿ ಮುಗಿಯಿತು. ನಮ್ಮ ನಾಯಕರು ಮಂತ್ರಿಗಳೂ ಆದರು. ಆಗ ನಾವು ಮದ್ರಾಸ್ ಪ್ರಾಂತ್ಯದ ಸತ್ಯಮಂಗಲದಲ್ಲಿ ಬಿಡಾರ ಮಾಡಿದ್ದೆವು. ಅಲ್ಲಿಯ ಕೃಷ್ಣೇಗೌಡ ಎಂಬುವರು ನಮಗೆ ಬೆಂಬಲವಿತ್ತಿದ್ದರು. ಶಿಬಿರದಲ್ಲಿ ಹನ್ನೆರಡು ಜನರಿದ್ದೆವು. ಎಂ. ಎಸ್. ಸಿದ್ದಯ್ಯ, ದಿ॥ ಯು. ಕೆಂಚಪ್ಪ, ಎ. ಕೆಂಚಪ್ಪ ಇವರು ಶಿಬಿರದ ಮುಖ್ಯಸ್ಥರಾಗಿದ್ದರು. ಈ ಶಿಬಿರಕ್ಕೆ (ಮಾಜಿ ಎಂ.ಎಲ್.ಎ.) ಟಿ. ಪಿ. ಬೋರಯ್ಯನವರ ಬೆಂಬಲ ಬಹು ಮುಖ್ಯವಾಗಿತ್ತು (ಟಿ. ನರಸೀಪುರ ತಾಲ್ಲೂಕಿನ ಮಾಜಿ ವಿಧಾನಸಭಾ ಸದಸ್ಯರು) ಮೇಲ್ಕಂಡ ಶಿಬಿರದ ಮೇಲ್ವಿಚಾರಣೆ ನನ್ನದಾಗಿದ್ದಿತು. ಇದರ ಪ್ರಚಾರ ಊಟಿವರೆಗೆ ನಡೆದಿತ್ತು. ಅಲ್ಲಿ ಆಗಿನ ಕಾಂಗ್ರೆಸ್ ಕಮಿಟಿಯ ಸಹಾಯ ದಿಂದ ಗೋಬಿಚೆಟ್ಟಿಪಾಳೆಯದವರೆಗೂ ಹೋಗಿದ್ದೆವು. ಗೋಬಿಚೆಟ್ಟಿಪಾಳೆಯಂನಲ್ಲಿ ಅಲ್ಲಿಯ ಕಾಂಗ್ರೆಸ್ ಸಮಿತಿಯವರ ಸಹಾಯದಿಂದ ಗುಟ್ಟಾದ ಮೀಟಿಂಗ್ ಸೇರಿ ಮೇಲೆ ಹೇಳಿದ ತಾಲ್ಲೂಕು ಕಚೇರಿ ವಶಪಡಿಸುವ ಕಾರ್ಯಕ್ರಮ ಹಾಕಿದ್ದೆವು.

ವ್ಯ.ಸಂ. 4

# ಎಂ. ಆರ್. ಎನ್. ಶಾಸ್ತ್ರಿ

ಜನನ : 1912 ಉದ್ಯೋಗ : ಪತ್ರಕರ್ತ ವಿಳಾಸ : ನಾಗಮಂಗಲ

---



ಪ್ರೌಢಶಾಲಾ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ನಮ್ಮ ಊರಿಗೆ ವಾಪಸಾಗುವ ಹೊತ್ತಿಗೆ ಸರಿಯಾಗಿ ರಾಷ್ಟ್ರದಲ್ಲಿ ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹ ನನ್ನನ್ನು ಆಕರ್ಷಿಸಿತು. 1935ರಲ್ಲಿ ಮೈಸೂರು ಸಂಸ್ಥಾನದಲ್ಲೂ ಕಾಂಗ್ರೆಸ್ ಚಳವಳಿಯು ತೀವ್ರಗತಿಯಲ್ಲಿ ಮುಂದೆ ಸಾಗುತ್ತಿರಲು ನಾನೂ ಕೂಡ ಕಾಂಗ್ರೆಸ್ ಸದಸ್ಯತ್ವ ಪಡೆದು ಸ್ವದೇಶಿ ಚಳವಳಿಯಲ್ಲಿ ಭಾಗವಹಿಸಿ ಪ್ರತಿವರ್ಷವೂ ಮಹಾತ್ಮಾ ಗಾಂಧೀಜಿಯವರ ಜಯಂತಿಯನ್ನು ನಾಗಮಂಗಲದಲ್ಲಿ ಆಚರಿಸುವುದರ ಮೂಲಕ ರಾಜಕೀಯ ರಂಗಕ್ಕೆ ಪ್ರವೇಶಿಸಿದೆ. ಅದೇ ಸಮಯಕ್ಕೆ ಸರಿಯಾಗಿ ಕಾಂಗ್ರೆಸ್ ಸಂಘಟನೆಗಾಗಿ ನಾಗಮಂಗಲಕ್ಕೆ ಆಗಮಿಸಿದ್ದ ಎಚ್. ಕೆ. ವೀರಣ್ಣಗೌಡ ಮುಂತಾದವರು ತಾಲ್ಲೂಕಿನಲ್ಲಿ ಒಂದು ಕಾಂಗ್ರೆಸ್ ಸಮಿತಿಯನ್ನು ರಚಿಸಿ, ಅದಕ್ಕೆ ನನ್ನನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಿಸಿದರು. 1938ರಿಂದ 1960ರ ವರೆಗೆ ಸತತವಾಗಿ ತಾಲ್ಲೂಕ್ ಕಾಂಗ್ರೆಸ್ ಸಮಿತಿ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದೇನೆ. 1939ರಲ್ಲಿ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳೊಳಗೆ ಇರಕೂಡದೆಂದು ನನ್ನನ್ನು ಗಡೀಪಾರು ಮಾಡಿದ್ದ ಅವಧಿಯಲ್ಲಿ, ಸತ್ಯಾಗ್ರಹದ ಕಾರಣದಿಂದ ನಾಯಕರೆಲ್ಲಾ ದಸ್ತಗಿರಿಯಾಗಿದ್ದ ವೇಳೆಯಲ್ಲಿ, ಬೆಂಗಳೂರಿನ ಕೇಂದ್ರ ಕಾಂಗ್ರೆಸ್ ಸಮಿತಿಯ ಹಂಗಾಮಿ ಕಾರ್ಯದರ್ಶಿಯಾಗಿ ಕೆಲವು ಕಾಲ ದುಡಿದೆ. ಆಗ ಬೆಂಗಳೂರಿನಲ್ಲಿ ನಡೆಯುತ್ತಿದ್ದ ಸತ್ಯಾಗ್ರಹ, ಕೆ.ಜಿ.ಎಫ್.ನ ಸತ್ಯಾಗ್ರಹ, ಹೆಂಡದ ಅಂಗಡಿ ಪಿಕೆಟಿಂಗ್ ಮುಂತಾದ ಸತ್ಯಾಗ್ರಹಗಳ ನಿರ್ದೇಶಕ, ಮೇಲ್ವಿಚಾರಕನಾಗಿ ದುಡಿದೆ. ಈ ಸತ್ಯಾಗ್ರಹಗಳ ಯಶಸ್ಸಿಗೆ ಬೆಂಗಳೂರಿನ ಡಾ|| ಕೆ. ಚಾಮರಾಜಯ್ಯಂಗಾರ್, ಡಿ. ಎ. ಕೃಷ್ಣಯ್ಯಶೆಟ್ಟಿ, ಮೈಸೂರಿನ ಯಶೋಧರಮ್ಮ ದಾಸಪ್ಪ ಮುಂತಾದವರು ನನಗೆ ಮಾರ್ಗದರ್ಶನ ಮಾಡಿದರು.

ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯನಾಗಿ ಫೈಜ್‌ಪುರ ಕಾಂಗ್ರೆಸ್ ಹಾಗೂ ಮೈಸೂರಿನಲ್ಲಿ ನಡೆದ ಮೈಸೂರು ಕಾಂಗ್ರೆಸ್ಸಿನ ಎಲ್ಲಾ ಅಧಿವೇಶನಗಳಲ್ಲಿಯೂ ಸಕ್ರಿಯವಾಗಿ ಪಾತ್ರವಹಿಸಿದ್ದೇನೆ. ಮೈಸೂರು ಕಾಂಗ್ರೆಸ್‌ನಲ್ಲಿಯೇ ಒಂದು ಪ್ರಗತಿಪರ

ಗುಂಪನ್ನು ಸ್ಥಾಪಿಸಿ, ಜವಾಬ್ದಾರಿ ಸರ್ಕಾರದ ಹೋರಾಟವನ್ನು ತೀವ್ರಗೊಳಿಸಲು ಆ ಪಕ್ಷವನ್ನು ಸಂಘಟಿಸಿದವರ ಪೈಕಿ ನಾನೂ ಒಬ್ಬ.

1939ರ ಧ್ವಜಸತ್ಯಾಗ್ರಹ, 1942ರ 'ಕ್ವಿಟ್ ಇಂಡಿಯಾ' ಚಳವಳಿ, 1947ರ ಜವಾಬ್ದಾರಿ ಸರ್ಕಾರದ ಹೋರಾಟ ಇವೆಲ್ಲದರಲ್ಲೂ ಭಾಗವಹಿಸಿ, ಒಟ್ಟು ಎರಡು ವರ್ಷಗಳ ಅವಧಿಯ ಕಾರಾಗೃಹವಾಸವನ್ನು ಅನುಭವಿಸಿರುತ್ತೇನೆ.

ಸ್ವಾತಂತ್ರ್ಯಾನಂತರ ಸಮಾಜ ಕಾರ್ಯಕರ್ತನಾಗಿ, ಪುರಸಭೆ, ತಾಲ್ಲೂಕ್ ಬೋರ್ಡ್, ಸಹಕಾರ ಸಂಘ, ಖಾದಿ ಬೋರ್ಡ್ ಮುಂತಾದ ಅನೇಕ ಸಂಘಸಂಸ್ಥೆಗಳಲ್ಲಿ ಕೆಲಸ ಮಾಡಿರುತ್ತೇನೆ. ನಾಗಮಂಗಲದಲ್ಲಿರುವ 'ಮಾಡೆಲ್ ಎಜುಕೇಷನ್ ಸೊಸೈಟಿ' ಯಲ್ಲಿ ಗೌರವ ಕಾರ್ಯದರ್ಶಿಯಾಗಿಯೂ, ಹಿಂದೀ ಪ್ರಚಾರ ಸಮಿತಿ, ಸಾರ್ವಜನಿಕ ಪುಸ್ತಕ ಭಂಡಾರ, ಕನ್ನಡ ಕಲಾ ಸಂಘ, ಶ್ರೀರಾಮ ಸೇವಾ ಮಂಡಲಿ ಇವುಗಳ ಅಧ್ಯಕ್ಷನಾಗಿದ್ದೇನೆ.

## ದಿ|| ಟಿ. ಎನ್. ಮಾದಪ್ಪಗೌಡ

1910ನೇ ಇಸವಿಯಲ್ಲಿ ನಾಗಮಂಗಲ ತಾಲ್ಲೂಕ್ ತಟ್ಟಿಕೆರೆ ಗ್ರಾಮದ ನಂಜಪ್ಪ ಮೇಸ್ತ್ರಿಗಳ ಜ್ಯೇಷ್ಠಪುತ್ರರಾಗಿ ಇವರು ಜನಿಸಿದರು. ತಟ್ಟಿಕೆರೆ ಕೂಲಿ ಮಠದಲ್ಲಿ, ನಾಗಮಂಗಲ ಮಾಧ್ಯಮಿಕ ಶಾಲೆಯಲ್ಲಿ ವಿದ್ಯಾಭ್ಯಾಸ ಮುಗಿಸಿಕೊಂಡು ಮೈಸೂರಿನಲ್ಲಿ ಪ್ರೌಢ ಮತ್ತು ವಿಶ್ವವಿದ್ಯಾಲಯ ವ್ಯಾಸಂಗ 1936ರ ವರೆಗೆ ಮಾಡಿದರು. ಕಾಲೇಜು ವ್ಯಾಸಂಗ ಮಾಡುತ್ತಿದ್ದಾಗ ರಾಷ್ಟ್ರೀಯ ಆಂದೋಲನದತ್ತ ಆಕರ್ಷಿತರಾಗಿ ಸ್ವದೇಶಿ ಚಳವಳಿ, ಸಾರಕ್ಷತಾಪ್ರಚಾರ, ಸಾಹಿತ್ಯಸಂಘದ ಚಟುವಟಿಕೆ ಇವೇ ಮೊದಲಾದವುಗಳಲ್ಲಿ ಆಸಕ್ತಿವಹಿಸಿದ್ದರು. 1937ರಲ್ಲಿ ಜವಾಬ್ದಾರಿ ಸರ್ಕಾರಕ್ಕೆ ಹೋರಾಟ, ಸ್ವಾತಂತ್ರ್ಯ ಚಳವಳಿ ಇವುಗಳು ಬಿರುಸಾದಾಗ ಅದರಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಅದೇ ಸಮಯದಲ್ಲಿ ನಡೆದ ಸತ್ಯಾಗ್ರಹದಲ್ಲಿ ಭಾಗವಹಿಸಿ ಕಾರಾಗೃಹವಾಸವನ್ನು ಅನುಭವಿಸಿದರು.

ತಮ್ಮ ಹಿರಿಯ ಮಗ ಪದವೀಧರನೂ ಆಗದೆ, ರಾಜಕೀಯಕ್ಕೆ ಇಳಿದು ಚಳವಳಿ ಯಲ್ಲಿ ಭಾಗವಹಿಸುವುದು ಅವರ ತಂದೆಗೆ ಹಿಡಿಸಲಿಲ್ಲ. ಇದರಿಂದ ಮಾದಪ್ಪಗೌಡರ ಭವಿಷ್ಯವೇ ಹಾಳಾಗುತ್ತದೆ ಎಂದು ಅಭಿಪ್ರಾಯಪಟ್ಟು ಅವರನ್ನು 1939ರಲ್ಲಿ ನೀಲಗಿರಿ ಕಾಫಿ ತೋಟಕ್ಕೆ ಕರೆದುಕೊಂಡು ಹೋಗಿ ಕೆಲಸಕ್ಕೆ ಸೇರಿಸಿದರು. ಅವರು 1939ರಿಂದ 1946ರ ವರೆಗೆ ಕಾಫಿ ತೋಟದಲ್ಲಿ ಕೆಲಸದಲ್ಲಿ ಇದ್ದರು. ಕಾಫಿ ತೋಟದ ಭಾರತೀಯ ಕೂಲಿಗಾರರು ಒಂದು ಗೊತ್ತಾದ ಮಾದರಿಯಲ್ಲಿಯೇ ಉಡುಪನ್ನು ಹಾಕಿಕೊಳ್ಳಬೇಕೆಂಬ ನಿಬಂಧನೆ ಇತ್ತು. ಅದನ್ನು ಪ್ರತಿಭಟಿಸಿ ಚಳವಳಿ ಮಾಡಿ ಆ ನಿಬಂಧನೆಯನ್ನು ರದ್ದು ಪಡಿಸಿದರು. ಆಗ ನೀಲಗಿರಿಯು ಮದ್ರಾಸ್ ಪ್ರಾಂತ್ಯಕ್ಕೆ ಸೇರಿತ್ತು. ಅವರು ಅಲ್ಲಿಯ ಕಾಂಗ್ರೆಸ್ ಸದಸ್ಯರಾಗಿ, ಕಾಂಗ್ರೆಸ್ ಸದಸ್ಯರನ್ನು ಕೂಡಿಸುತ್ತಿದ್ದರು.

1946ರಲ್ಲಿ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಸ್ವಂತ ಊರಾದ ನಾಗಮಂಗಲ ತಾಲ್ಲೂಕಿನ ತಟ್ಟೆಕೆರೆ ಗ್ರಾಮಕ್ಕೆ ಬಂದು ನೆಲಸಿದನಂತರ ಪೂರ್ಣಕಾಲದ ಸಮಾಜ ಸೇವಾಕಾರ್ಯಕರ್ತರಾಗಿ ಕಾಂಗ್ರೆಸ್ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಪ್ರಾರಂಭ ಮಾಡಿದರು. 1947ರಲ್ಲಿ ನಡೆದ ಮೈಸೂರಿನ ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ಭಾಗವಹಿಸಿ ಕಾರಾಗೃಹವಾಸವನ್ನು ಅನುಭವಿಸಿದರು.

1962ರಲ್ಲಿ ಕಾಂಗ್ರೆಸ್ಸಿನ ರೀತಿನೀತಿಗಳಿಂದ ಬೇಸತ್ತು, ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟು, ಸ್ವತಂತ್ರವಾಗಿ ನಾಗಮಂಗಲ ತಾಲ್ಲೂಕ್ ವಿಧಾನಸಭಾ ಚುನಾವಣೆಯಲ್ಲಿ ಸ್ಪರ್ಧಿಸಿ ಜಯಶಾಲಿಗಳಾದರು. ತಾಲ್ಲೂಕ್ ಬೋರ್ಡ್‌ನ ಪ್ರಥಮ ಅಧ್ಯಕ್ಷರನ್ನಾಗಿ ಇವರನ್ನು ನೇಮಿಸಲಾಗಿತ್ತು.

1972ರಲ್ಲಿ ನಡೆದ ಮಹಾಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ ಅಭ್ಯರ್ಥಿಯಾಗಿ ನಾಗಮಂಗಲ ತಾಲ್ಲೂಕಿನಿಂದ ವಿಧಾನ ಸಭೆಗೆ ಮತ್ತೊಮ್ಮೆ ಆಯ್ಕೆಯಾದರು. 28-7-1972ರಂದು ಮಾದಪ್ಪಗೌಡರು ದಿವಂಗತರಾದರು.

ವ್ಯ.ಮಂ. 5

## ಪಿ. ಎನ್. ನರಸಿಂಹಯ್ಯ

ಜನನ : 1912 ಉದ್ಯೋಗ : ಕೃಷಿ ವಿಳಾಸ : ಪಾಲಗ್ರಹಾರ, ತಾ॥ ನಾಗಮಂಗಲ



1938ರ ಅಕ್ಟೋಬರ್ ತಿಂಗಳು ; ಮೈಸೂರಿನಲ್ಲಿ ದಸರಾ ; ಆಗ ರಂಗರಾಮಯ್ಯನವರನ್ನು ಅಸೆಂಬ್ಲಿಯಿಂದ ಹೊರಗೆ ಹಾಕಿದ ದಿನ ; ಊರಲ್ಲಿ ನರಿಮನ್‌ರ ಭಾಷಣ ; ಅದರ ಅನುವಾದ ತಿಪ್ಪೂರಸಹಳ್ಳಿ ವಿ. ವೆಂಕಟಪ್ಪನವರಿಂದ ; ಅವರ ಭಾಷಣ ನನ್ನನ್ನು ಆಕರ್ಷಿಸಿತು. ಅನಂತರ ನಾವು ನಮ್ಮ ಗ್ರಾಮದಲ್ಲಿ ಶಿವಾನಂದ ಸ್ವಾಮಿಯವರ ಅಧ್ಯಕ್ಷತೆಯಲ್ಲಿ, ಪಿ. ಎಸ್. ಜವರಪ್ಪಗೌಡ ಮತ್ತು ಎಂ. ಆರ್. ಎಸ್. ಶಾಸ್ತ್ರಿಗಳಿಂದ ಭಾಷಣ ಮಾಡಿಸಿದೆವು.

ನನ್ನನ್ನು ಮೈಸೂರಿನಲ್ಲಿ ಕಾಂಗ್ರೆಸ್ ಸದಸ್ಯನನ್ನಾಗಿ ಎಚ್. ಸಿ. ದಾಸಪ್ಪನವರು ಮಾಡಿಸಿದ್ದರು. ಅದೇ ದಿನ ಮೈಸೂರಿನಲ್ಲಿ ಖಾದೀ ಟೋಪಿ ಸಹ ಹಾಕಿಸಿದರು. ಖಾದೀ ಬಟ್ಟೆ ಸಹ ಅದೇ ದಿನವೇ ಹಾಕಿದ್ದು ; ನನ್ನ ವಿದೇಶೀ ಬಟ್ಟೆಗಳನ್ನು ಅದೇ ದಿನ ಬೆಂಕಿಗೆ

ಹಾಕಿದೆ. ಟಿ. ಮರಿಯಪ್ಪನವರು ಮತ್ತು ಕೆ. ಎಂ. ಕೃಷ್ಣಪ್ಪಗೌಡರ ಮಾರ್ಗದರ್ಶನ ನಮಗೆ ತುಂಬಾ ಹಿಡಿಸಿತು. ನಾಗಮಂಗಲ ತಾಲ್ಲೂಕಿನಲ್ಲಿ ಕಾಂಗ್ರೆಸ್ ಬೆಳೆಯಲು ಪ್ರಾರಂಭವಾದ್ದು ಅಂದಿನಿಂದಲೇ. ನಾನು ಹಳ್ಳಿಗಳಿಗೆ ಹೋಗಿ ಕಾಂಗ್ರೆಸ್ಸಿಗೆ ಸದಸ್ಯರನ್ನು ಮಾಡಿಸುತ್ತಿದ್ದೆ. ತಾಲ್ಲೂಕು ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದವರು ಎಂ.ಆರ್.ಎನ್. ಶಾಸ್ತ್ರಿಗಳು.

1939ರಲ್ಲಿ ಮೈಸೂರಿನಲ್ಲಿ ಸತ್ಯಾಗ್ರಹ ಪ್ರಾರಂಭವಾಯಿತು. ನಾನು 15-9-1939 ರಂದು ಮೈಸೂರಿಗೆ ಹೋದೆ. ಕಾಂಗ್ರೆಸ್ ಆಫೀಸಿನಲ್ಲಿ ಇಳಿದುಕೊಂಡಿದ್ದೆ. ತೊಗರಿ ಬೀದಿಯಲ್ಲಿ ಚೌಡಯ್ಯನವರ ಮನೆಗೆ ನನ್ನನ್ನು ಊಟಕ್ಕೆ ಕರೆದುಕೊಂಡು ಹೋದರು. ನಾನು ವಾಪಸ್ಸು ಬರುವ ಹೊತ್ತಿಗೆ ಕಾಂಗ್ರೆಸ್ ಆಫೀಸಿನಲ್ಲಿದ್ದ ಸ್ವಯಂಸೇವಕರನ್ನು ಪೋಲೀಸರು ವ್ಯಾನಿನಲ್ಲಿ ಕರೆದುಕೊಂಡು ಹೋಗಿದ್ದರು. ನಾನು ಬಂದು ನೋಡಿದಾಗ ನನ್ನ ಸ್ನೇಹಿತರು ಇರಲಿಲ್ಲ. ನನಗೆ ಬಹಳ ಗಾಬರಿಯಾಯಿತು. ಅಷ್ಟರಲ್ಲಿ ಗೋಪಾಲ ನಾಯ್ಡು ಎಂಬ ಸ್ವಯಂಸೇವಕರು ಬಂದು "ನೀವು ಇಲ್ಲಿ ಇರಬೇಡಿ, ನಿಮ್ಮನ್ನೂ ಕರೆದು ಕೊಂಡು ಹೋಗುತ್ತಾರೆ" ಎಂದು ಹೇಳಿದರು. ಸ್ವಲ್ಪ ಹೊತ್ತಿನಲ್ಲಿ ಅಂದರೆ ರಾತ್ರಿ ಒಂದು ಘಂಟೆ ಇರಬಹುದು, ನಾಲ್ಕು ಜನ ಸ್ವಯಂಸೇವಕರು ಹಾಜರಾದರು. ಅವರನ್ನು ಪೋಲೀಸರು ಕಾಡಿನಲ್ಲಿ ಬಿಟ್ಟುಬಂದಿದ್ದರು. ಅವರು ಯಾರದೋ ಕಾರಿನಲ್ಲಿ ಮೈಸೂರು ಕಾಂಗ್ರೆಸ್ ಆಫೀಸಿಗೆ ವಾಪಸ್ಸು ಬಂದಿದ್ದರು. ಪ್ರತಿದಿನ ಸಾಯಂಕಾಲ ಟೌನ್‌ಹಾಲ್ ಮೈದಾನದಲ್ಲಿ 144ನೇ ಸೆಕ್ಷನ್ ಮುರಿಯಲು ಜನ ಬೇಕಾಗಿತ್ತು. ಪ್ರತಿದಿನ ಎರಡು ಅಥವಾ ಮೂರು ಜನ ಭಾಗವಹಿಸಲು ಏರ್ಪಾಡಾಗುತ್ತಿತ್ತು. 18-9-1939ರಲ್ಲಿ ನನ್ನನ್ನು, ನಂಜುಂಡಯ್ಯ, ಗೋಪಾಲ ನಾಯ್ಡು ರವರನ್ನು ಪೋಲೀಸರು ಬಂಧಿಸಿ ರಾತ್ರಿ ಎಂಟೂವರೆಗೆ ವ್ಯಾನಿನಲ್ಲಿ ಕೂರಿಸಿಕೊಂಡು ಹೋಗಿ ಕಾಕನಕೋಟೆ ಕಾಡಿನಲ್ಲಿ ನನ್ನೊಬ್ಬ ನನ್ನೇ ಇಳಿಸಿದರು. ಮುಂದೆ ವ್ಯಾನ್ ಹೊರಟಿತು. ಭಯಂಕರ ರಾತ್ರಿ. ಸ್ವಲ್ಪ ಹೊತ್ತಿನಲ್ಲಿ ವ್ಯಾನ್ ವಾಪಸ್ಸು ಬಂತು; ನಾನು ಒಂದು ಮರದ ಮರೆಯಲ್ಲಿ ನಿಂತುಕೊಂಡೆನು. ವ್ಯಾನ್ ಬಹಳ ಜೋರಾಗಿ ಹೊರಟುಹೋಯಿತು. ಕಾಡಿನಲ್ಲಿ ಭಯಂಕರವಾದ ಘರ್ಜನೆ ಕೇಳಿಸಿತು. ನನಗೆ ಮೈನಡುಕ ಹತ್ತಿತು. ಅಷ್ಟರಲ್ಲಿ ಯಾರೋ ಕೂಗಿದ ಶಬ್ದವಾಯಿತು. ಹದಿನೈದು ನಿಮಿಷದಲ್ಲಿ ನಂಜುಂಡಯ್ಯ ರಸ್ತೆಯಲ್ಲಿ ಓಡಿಬಂದ. "ಗೋಪಾಲ ನಾಯ್ಡು ಎಲ್ಲಿ?" ಎಂದು ಕೇಳಿದೆ. ಅವನನ್ನು ಇನ್ನೂ ಮುಂದಕ್ಕೆ ಕರೆದುಕೊಂಡು ಹೋದರೆಂದು ತಿಳಿಸಿದ. "ನೀವು ಹೆದರುತ್ತೀರೆಂದು ಓಡಿಬಂದೆ; ನಾವಿಬ್ಬರೂ ಇಲ್ಲೇ ಕುಳಿತಿರೋಣ; ಗೋಪಾಲ ನಾಯ್ಡು ಬರಲಿ" ಎಂದು ಹೇಳಿದ. ನಾವಿಬ್ಬರೂ ಆಚೆಯ ಮಾರ್ಗವಾಗಿ ಹೋದೆವು. ನಮಗೆ ಎದುರಾಗಿ ಒಂದು ಲಾರಿ ಬರುತ್ತಿತ್ತು. ನಮ್ಮನ್ನು ಕಂಡು ಲಾರಿ ನಿಲ್ಲಿಸಿದರು. ಗೋಪಾಲ ನಾಯ್ಡು ಅದರಲ್ಲಿ ಬಂದಿದ್ದರು. ನಮ್ಮನ್ನೂ ಲಾರಿಯಲ್ಲಿ ಕೂರಿಸಿಕೊಂಡು ಬಂದು ಮೈಸೂರಿನ ಮಧುವನದ ಪಕ್ಕದಲ್ಲಿ ಇಳಿಸಿ ನಮಗೆ ತಲಾ

ಎರಡೆರಡು ರೂಪಾಯಿಗಳನ್ನು ಕೊಟ್ಟು ಹೋದರು. ನಾವು ನಡೆದುಕೊಂಡು ಕಾಂಗ್ರೆಸ್ ಆಫೀಸಿಗೆ ಬಂದು ಮಲಗಿದೆವು. ಮೈಸೂರಿನಲ್ಲಿ ಬೆಳಗ್ಗೆ ಪ್ರಭಾತ್ ಫೇರಿ ; ಸಾಯಂಕಾಲ ಮೆರವಣಿಗೆಯಿಂದ ಟೌನ್ ಹಾಲ್ ಮೈದಾನಕ್ಕೆ ಬರುವುದು ; ಅಲ್ಲಿ ಸಭೆ ನಡೆಯುವುದು ; ಪೋಲೀಸರಿಂದ ದಸ್ತಗಿರಿ—ಹೀಗೆ ಪ್ರತಿದಿನ ನಡೆಯುತ್ತಿತ್ತು. ರಾತ್ರಿ ದಸ್ತಗಿರಿಯಾದವರನ್ನು ಲಾಕಪ್ಪಿನಲ್ಲಿಡುತ್ತಿದ್ದರು. ಪೋಲೀಸರ ಕಿರುಕುಳ ಎಷ್ಟು ಜಾಸ್ತಿಯಾಯಿತೆಂದರೆ, ಸೀಸೆಯಲ್ಲಿ ಮೂತ್ರವಿಸರ್ಜನೆ ಮಾಡಿ ದಸ್ತಗಿರಿಯಾದವರ ಬಾಯಿಗೆ ಸುರಿಯುವ ತನಕ ನಡೆಯಿತು.

21-9-1939ರಂದು ರಾತ್ರಿ ನಾನು ಭಾಷಣ ಮಾಡಿ 144ನೇ ಸೆಕ್ಷನ್ ಮುರಿಯಬೇಕೆಂದು ನನ್ನ ಹೆಸರು ತಿಳಿಸಿದರು. ಆ ದಿನ ಶುಕ್ರವಾರ. ಬೆಳಗ್ಗೆ ಶನಿವಾರ ರಜಾ ; ನನ್ನನ್ನು ಪೋಲೀಸರು ಲಾಕಪ್ಪಿನಲ್ಲೇ ಇಡುತ್ತಾರೆ, ಎಂದು ನನಗೆ ಭಯವಾಯಿತು. ಪೋಲೀಸರಿಂದ ಕಿರುಕುಳ ಅನುಭವಿಸಬೇಕು. ಆ ದಿನ ಮೆರವಣಿಗೆಯಲ್ಲಿ ನನ್ನನ್ನು ಕರೆದುಕೊಂಡು ಹೋದರು ; ನನ್ನ ಭಾಷಣವೂ ಆಯಿತು. ಬಹಳ ಜನ ಬಂದಿದ್ದರು. ಆ ದಿನ ಇನ್ನೂ ಮೂರುನಾಲ್ಕು ಜನ ಭಾಷಣಕಾರರು ಇದ್ದರು. ಅವರು ಭಾಷಣ ಮಾಡುತ್ತಿದ್ದಂತೆ ನಾನು ಜನಗಳ ಮಧ್ಯೆ ನುಸುಳಿಕೊಂಡು ವೀರನಗೆರೆಗೆ ಬಂದುಬಿಟ್ಟೆ. ನನಗೆ ಎದುರಾಗಿ ಪೋಲೀಸ್ ಪೇದೆ ಬರುತ್ತಿದ್ದ. ನಾನು ಹಾಗೆಯೇ ಪಕ್ಕದ ಮನೆಗೆ ಹೋಗಿ ರಕ್ಷಣೆ ಕೇಳಿದೆ. ಒಬ್ಬ ಮುದುಕರು ನನ್ನನ್ನು ಬರಮಾಡಿಕೊಂಡು ಹಾಲು, ಬ್ರೆಡ್ ಕೊಟ್ಟರು. ರಾತ್ರಿ ಅಲ್ಲಿಯೇ ಮಲಗಿದ್ದೆ. ಸುಮಾರು ಮೂರು ಘಂಟೆಗೆ ಮುದುಕರು ನನ್ನನ್ನು ಎಬ್ಬಿಸಿ ಕಾಫಿ ಕೊಟ್ಟರು. "ನೀವು ರಸ್ತೆಯಲ್ಲಿ ಹೋಗಿ ಬಿಡಿ ; ಸೋಮವಾರ ಕೋರ್ಟಿಗೆ ಹಾಜರಾಗಿ" ಎಂದು ಹೇಳಿದರು. ನಾನು ಅದೇ ರೀತಿ ರಸ್ತೆಯಲ್ಲಿ ಶ್ರೀರಂಗಪಟ್ಟಣಕ್ಕೆ ಬಂದೆನು. ಅಲ್ಲಿ ಬಸ್ಸಿನಲ್ಲಿ ಕುಳಿತು ನಾಗಮಂಗಲಕ್ಕೆ ಬಂದೆ. ಪಾಲಗ್ರಹಾರಕ್ಕೆ ಹೋಗಿ ಪಿ. ಕೆ. ವೆಂಕಟಾಚಲ ಶೆಟ್ಟರನ್ನು ಸತ್ಯಾಗ್ರಹಕ್ಕೆ ಹೊರಡಿಸಿ, ನಾನು ಸೋಮವಾರ ಮೈಸೂರಿಗೆ ಬೆಳಗಿನ ಗಾಡಿಯಲ್ಲಿ ಹೊರಟು, ವೀರನಗೆರೆಯಲ್ಲಿ ಇಳಿದು ಒಂದು ಕುದುರೆಗಾಡಿಯಲ್ಲಿ ಕುಳಿತು ಕೋರ್ಟಿಗೆ ಹೊರಟೆ. ಕೋರ್ಟಿನೊಳಕ್ಕೆ ಹೋಗುವಾಗ ಪೋಲೀಸರು ಹಿಡಿದರು. ನಾನು ದಕ್ಕದೆ ಒಳಕ್ಕೆ ಎಳೆದುಕೊಂಡು ಹೋದೆನು. ಕೋರ್ಟಿನಲ್ಲಿ ಸಿಟಿ ಮ್ಯಾಜಿಸ್ಟ್ರೇಟರು ಮೂರು ತಿಂಗಳು ಕಠಿಣ ಸಜಾ ಮತ್ತು 25 ರೂ. ಜುಲ್ಮಾನೆ, ದಂಡ ಕೊಡಲು ತಪ್ಪಿದರೆ ಒಂದು ತಿಂಗಳು ಕಠಿಣ ಸಜಾ ವಿಧಿಸಿದರು. ಅಷ್ಟರಲ್ಲಿ ಟಿ. ಮರಿಯಪ್ಪ ಮತ್ತು ಸಾಹುಕಾರ್ ಚನ್ನಯ್ಯನವರನ್ನು ಕೋರ್ಟಿನೊಳಗೆ ಕರೆದುಕೊಂಡು ಬಂದರು. ಅಲ್ಲಿಂದ ನಮ್ಮನ್ನು ಮೈಸೂರು ಜೈಲಿಗೆ ಕರೆದುಕೊಂಡು ಹೋದರು. ಜೈಲಿನಲ್ಲಿ ಸುಮಾರು ಒಂದು ತಿಂಗಳು ಇರಬಹುದು—ತಾರೀಕು ನೆನಪಿಲ್ಲ. ಆ ದಿವಸಗಳಲ್ಲಿ ಮಹದೇವ ದೇಸಾಯಿ ಮೈಸೂರು ಜೈಲಿಗೆ ಮಹಾತ್ಮ ಗಾಂಧಿಯವರ ಆದೇಶದಂತೆ ಬಂದಿದ್ದರು. ಜೊತೆಯಲ್ಲಿ ಎಚ್. ಸಿ. ದಾಸಪ್ಪ

ನವರೂ ಇದ್ದರು. ಜೈಲಿನಲ್ಲಿ ನಮಗೆ ಊಟ ಸರಿಯಾಗಿ ಇರಲಿಲ್ಲ; ಅನ್ನದಲ್ಲಿ ಹುಳು, ಕಸಕಡ್ಡಿ ಬೇಕಾದಷ್ಟು ಇರುತ್ತಿತ್ತು. ನನಗೆ ಊಟವೇ ಸೇರುತ್ತಿರಲಿಲ್ಲ. ಆನುಶಂಕೆ ಪ್ರಾರಂಭವಾಯಿತು. ನನ್ನನ್ನು ಕೃಷ್ಣರಾಜೇಂದ್ರ ಆಸ್ಪತ್ರೆಗೆ ದಾಖಲುಮಾಡಿದರು. ಕೆಲವು ದಿನಗಳನಂತರ ಗುಣವಾಯಿತು. ನಾವು ರಾಗಿ ಬೀಸುವುದು, ಬತ್ತ ಕುಟ್ಟುವುದು ಮತ್ತು ಜೈಲಿನಲ್ಲಿ ದಾರಿಗೆ ಜೆಲ್ಲಿ ಹಾಕಿ ರೋಣಗಲ್ಲು ಎಳೆಯುವ ಕೆಲಸವನ್ನು ಮಾಡಬೇಕಾಗಿತ್ತು. 1940ನೇ ಜನವರಿ 24ರಂದು ನನ್ನನ್ನು ಬಿಡುಗಡೆ ಮಾಡಿದರು. ಆನಂತರ ನಾನು ಊರಿಗೆ ಬಂದೆ. ನಾನು ಪ್ರೋತ್ಸಾಹಮಾಡಿದ್ದ ಪಿ. ಕೆ. ವೆಂಕಟಾಚಲ ಶೆಟ್ಟರು ಐದು ತಿಂಗಳು ಕಠಿಣ ಸಜಾ ಅನುಭವಿಸಿ ಊರಿಗೆ ಬಂದರು. ಅನಂತರ ನಮ್ಮಿಬ್ಬರ ಕೆಲಸಕಾರ್ಯಗಳು ಜಾಸ್ತಿಯಾಯಿತು. ನಮ್ಮ ಗ್ರಾಮದಲ್ಲಿ ಗ್ರಾಮ ಕಾಂಗ್ರೆಸ್ ಕಮಿಟಿ ಪ್ರಾರಂಭ ಮಾಡಿದೆವು. ಕಾಂಗ್ರೆಸ್ ಮುಖಂಡರನ್ನು, ಮೈಸೂರು ಕಾಂಗ್ರೆಸ್ ಅಧ್ಯಕ್ಷರನ್ನು ನಮ್ಮ ಗ್ರಾಮಕ್ಕೆ ಪ್ರತಿವರ್ಷವೂ ಕರೆಸುತ್ತಾ ಇದ್ದೆವು. ನಮ್ಮ ತಂದೆ ನರಸಿಂಹೇಗೌಡರು ಕಾಂಗ್ರೆಸ್ಸಿನಲ್ಲಿ ಬಹುವಾಗಿ ದುಡಿಯುತ್ತಿದ್ದರು. ನಾವು ಕರೆಸುವ ಮುಖಂಡರಿಗೂ ಕಾಂಗ್ರೆಸ್ ಕೆಲಸಗಾರರಿಗೂ ಎಲ್ಲಾ ವ್ಯವಸ್ಥೆಯನ್ನು ಮಾಡುತ್ತಿದ್ದರು. ಎಲ್ಲಾ ಮುಖಂಡರೂ ನಮ್ಮ ಪಾಲಗ್ರಹಾರಕ್ಕೆ ಬರುತ್ತಿದ್ದರು.

ತಾಲ್ಲೂಕು ಕಾಂಗ್ರೆಸ್ ಸಮಿತಿ ಸದಸ್ಯನಾಗಿ, ಕಾರ್ಯದರ್ಶಿಯಾಗಿ ಕೆಲಸ ಮಾಡಿದೆ. 1942ರ 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಮಹಾತ್ಮ ಗಾಂಧಿಯವರು ದಸ್ತಗಿರಿಯಾದ ಬೆಳಗ್ಗೆ ನಮ್ಮ ಗ್ರಾಮದಲ್ಲಿದ್ದೆ. ಸುಮಾರು ಒಂಬತ್ತೂವರೆ ಘಂಟೆಗೆ ಯಾರೋ ಒಬ್ಬರು ಒಂದು ಕಾಗದ ಕೊಟ್ಟರು. ಅದರಲ್ಲಿ ನಾವು ಮಾಡಬೇಕಾದ ಕೆಲಸಗಳ ಪಟ್ಟಿ, 'ಮಾಡು ಅಥವಾ ಮಡಿ' ಎಂಬ ಘೋಷಣೆ ಇತ್ತು. ಆ ದಿನ ಪ್ರಾಯಶಃ ಆಗಸ್ಟ್ 9ನೆಯ ತಾರೀಕು ಇರಬಹುದು. ರಾತ್ರಿ ಸಭೆ ಸೇರಿದೆವು. ಗೌಪ್ಯವಾಗಿ ಊರಿನ ಹೊರಗಡೆ ಹೊಲಮಾಳದಲ್ಲಿ ಸುಮಾರು ಇಪ್ಪತ್ತೈದು ಜನಗಳು ಚಳವಳಿಯ ಬಗ್ಗೆ ತೀರ್ಮಾನ ಕೈಗೊಂಡೆವು. ಅದೇ ದಿನ ರಾತ್ರಿ ಹನ್ನೆರಡೂವರೆಗೆ ಚೌಡೇನಹಳ್ಳಿ ಹತ್ತಿರ ಟೆಲಿಗ್ರಾಫ್ ಕಂಬ ಮತ್ತು ತಂತಿ ಕತ್ತರಿಸಲಾಯಿತು. ನಾವು ಹುಡುಗರಾಗಿದ್ದೆವು. ವೀರಪ್ಪ ಪೂಜಾರಿ ಎಂಬುವರು ದೊಡ್ಡವರಿದ್ದರು. ಅವರ ಸಹಾಯದಿಂದ ಕತ್ತರಿಸಲಾಯಿತು. ತಂತಿಗಳನ್ನು ಬಾವಿಯಲ್ಲಿ ಬಿಸಾಕಲಾಯಿತು. ಬೆಳಗ್ಗೆ ನಮ್ಮನ್ನು ವಾರೆಂಟ್ ಇಲ್ಲದೆ ದಸ್ತಗಿರಿಮಾಡಿ ಪೋಲೀಸರು ಮಂಡ್ಯಕ್ಕೆ ಕರೆದೊಯ್ದರು. ಮಂಡ್ಯ ಜಿಲ್ಲೆಯಲ್ಲಿ ಎಚ್. ಕೆ. ವೀರಣ್ಣಗೌಡರು ಬಹಳ ಚೆನ್ನಾಗಿ ಹಳ್ಳಿಹಳ್ಳಿಯಲ್ಲಿ ಚಳವಳಿಗೆ ವ್ಯವಸ್ಥೆಮಾಡಿದ್ದರು. 12-8-1942ರಂದು ನನ್ನನ್ನು ಮೈಸೂರು ಜೈಲಿಗೆ ಕರೆದುಕೊಂಡು ಹೋದರು. ಅಷ್ಟರಲ್ಲಿ ನಮ್ಮ ಪಾಲಗ್ರಹಾರದಿಂದ ಪಿ. ಕೆ. ವೆಂಕಟಾಚಲ ಶೆಟ್ಟರು, ಪಿ. ಎನ್. ಜವರಪ್ಪಗೌಡ, ಪಿ. ಬಿ. ಓಬೇಗೌಡ, ಪಿ. ಟಿ. ಕೃಷ್ಣಪ್ಪ ಇವರನ್ನು ಮೈಸೂರು ಜೈಲಿಗೆ ಕರೆದುಕೊಂಡು ಬಂದು ಪೋಲೀಸರು ಟೆಲಿಗ್ರಾಫ್ ತಂತಿ ಮತ್ತು ಕಂಬ

'ಮುರಿದ ಕೇಸನ್ನು ಹಾಕಲು ಸತತ ಪ್ರಯತ್ನ ಮಾಡಿದರು. ನಮ್ಮ ತಾಲ್ಲೂಕಿನಲ್ಲಿ ಸಾಕ್ಷಿ ಹೇಳಲು ಒಬ್ಬರೂ ಮುಂದೆ ಬರಲಿಲ್ಲ. ನಮ್ಮನ್ನು 16-11-1942ರಂದು ಶ್ರೀರಂಗಪಟ್ಟಣ ಜೈಲಿಗೆ ಕಳುಹಿಸಿದರು. ಅಲ್ಲಿಂದ ಮುಂದೆ ನಮ್ಮನ್ನು 15-5-1943 ರಂದು ಚಿಕ್ಕಮಗಳೂರು ಜೈಲಿಗೆ ವರ್ಗಾಯಿಸಿದರು. 19-5-1943ರಂದು ಜೈಲಿನಿಂದ ಬಿಡುಗಡೆ ಮಾಡಿದರು.

1947ನೇ ಇಸ್ವಿಯ ಜವಾಬ್ದಾರಿ ಸರ್ಕಾರದ ಹೋರಾಟದಲ್ಲಿ ನಮ್ಮಗಳ ಕಾರ್ಯ ಬಹಳ ಚುರುಕಾಗಿತ್ತು. ನಾನು, ಎಂ. ಆರ್. ಎನ್. ಶಾಸ್ತ್ರಿ, ಕಪನೀಗೌಡರು ಮೂರು ದಿವಸಗಳವರೆಗೆ ಪೋಲೀಸರಿಗೆ ಸಿಕ್ಕಲಿಲ್ಲ. ಕೊನೆಗೆ ಕಡಬಹಳ್ಳಿ ಸಂತೆಯಲ್ಲಿ 7-9-1947 ರಂದು ನಾವು ಮೂರು ಜನರನ್ನೂ ದಸ್ತಗಿರಿ ಮಾಡಿ ಮಂಡ್ಯ ಜೈಲಿನಲ್ಲಿ ಸೇರಿಸಿದರು. ತಾರೀಕು 14-9-1947ರಂದು ಬೆಂಗಳೂರು ಸೆಂಟ್ರಲ್ ಜೈಲಿಗೆ ಕರೆದೊಯ್ದರು. ಅಲ್ಲಿಂದ ಕೃಷ್ಣರಾಜಪುರದ ಡಿಟನ್ಯೂ ಕ್ಯಾಂಪಿನಲ್ಲಿ ಇದ್ದೆವು. ಒಂದು ತಿಂಗಳು ಮೂರು ದಿನ ಮಾತ್ರ 1497ರಲ್ಲಿ ಜೈಲುವಾಸ ಅನುಭವಿಸಿದೆವು.

ಮೈ.ಮಂ. 6

## ಪಿ. ಎನ್. ಜವರಪ್ಪಗೌಡ

ಜನನ : 1916 ಉದ್ಯೋಗ : ಕೃಷಿ ವಿಳಾಸ : ಪಾಲಗ್ರಹಾರ, ತಾ॥ ನಾಗಮಂಗಲ



1938ನೇ ಫೆಬ್ರವರಿಯಲ್ಲಿ ಶಿವಪುರ ಕಾಂಗ್ರೆಸ್ ಅಧಿವೇಶನದಲ್ಲಿ ನಾನು ಸ್ವಯಂಸೇವಕನಾಗಿ ಕೆಲಸ ಮಾಡಿದೆ. 1939ರ ಫೆಬ್ರವರಿಯಲ್ಲಿ ಮೈಸೂರಿನಲ್ಲಿ ನಡೆದ 'ಹ್ಯಾಮಿಲ್ಟನ್ ಸತ್ಯಾಗ್ರಹ'ದಲ್ಲಿ ಪಾಲ್ಗೊಂಡು ರಾಜದ್ರೋಹದ ಭಾಷಣ ಮಾಡಿದೆವೆಂದು (124 ಎ) ಸೆಕ್ಷನ್ ಪ್ರಕಾರ ಮೊಕದ್ದಮೆ ಹೂಡಿದರು. ಒಂದು ವರ್ಷ ಶಿಕ್ಷೆಗೆ ಗುರಿಯಾದೆ. ಮೈಸೂರು, ಶಿವಮೊಗ್ಗ ಮತ್ತು ತೀರ್ಥಹಳ್ಳಿ ಜೈಲುಗಳಲ್ಲಿ ಶಿಕ್ಷೆ ಅನುಭವಿಸಿ 1940ರ ಮಾರ್ಚ್ ತಿಂಗಳ ಅಂತ್ಯದಲ್ಲಿ ಬಿಡುಗಡೆಯಾದೆ. 1942ರವರೆಗೆ ನಡೆದ ಶಾಸನಸಭೆ ಮತ್ತು ಜಿಲ್ಲಾ ಬೋರ್ಡ್ ಚುನಾವಣೆಗಳಲ್ಲಿ ಕಾಂಗ್ರೆಸ್ ಪರ ಕೆಲಸ ಮಾಡುತ್ತಿದ್ದೆ.

'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಭಾಗವಹಿಸಿ ದಸ್ತಗಿರಿಯಾಗಿ ಬೆಂಗಳೂರು ಮತ್ತು ಶ್ರೀರಂಗಪಟ್ಟಣ ಜೈಲುಗಳಲ್ಲಿ 11 ತಿಂಗಳು ಜೈಲುವಾಸ ಅನುಭವಿಸಿದೆ. 1947ರಲ್ಲಿ 'ಜವಾಬ್ದಾರಿ ಸರ್ಕಾರ'ಕ್ಕಾಗಿ ನಡೆದ ಹೋರಾಟದಲ್ಲಿ ಭಾಗವಹಿಸಿ ಬೆಂಗಳೂರು, ಮಂಡ್ಯ ಮತ್ತು ಕೃಷ್ಣರಾಜಪುರ ಜೈಲುಗಳಲ್ಲಿ ಒಂದೂವರೆ ತಿಂಗಳು ಕಾಲ ಸೆರೆಯಲ್ಲಿದ್ದೆ.

ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿ ಸದಸ್ಯನಾಗಿ, ಮಂಡ್ಯ ಜಿಲ್ಲಾ ಕಾಂಗ್ರೆಸ್ ಸಮಿತಿಯ ಉಪಾಧ್ಯಕ್ಷನಾಗಿ ಹಾಗೂ ಪ್ರಧಾನ ಕಾರ್ಯದರ್ಶಿಯಾಗಿ, ನಾಗಮಂಗಲ ತಾಲ್ಲೂಕ್ ಕಾಂಗ್ರೆಸ್ ಸಮಿತಿ ಅಧ್ಯಕ್ಷನಾಗಿ ಸೇವೆಸಲ್ಲಿಸಿದ್ದೇನೆ. ಈಗ ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ದುಡಿಯುತ್ತಿದ್ದು 1974ರಲ್ಲಿ ರಾಜ್ಯ ಸಮಿತಿಯ ಅಧ್ಯಕ್ಷನಾಗಿ ನೇಮಕಗೊಂಡೆ.

ಮೈ.ಮು. 7

## ಕೆ. ಆರ್. ಗುಂಡುರಾವ್

ಜನನ : 1912 ಉದ್ಯೋಗ : ಕೃಷಿ, ಹೊಲಿಗೆ ವಿಳಾಸ : ಕೊಪ್ಪ, ತಾ॥ ಮದ್ದೂರು



ನಾನು ವಿದ್ಯಾರ್ಥಿಯಾಗಿದ್ದಾಗ ಪತ್ರಿಕೆಗಳನ್ನು ಓದುವ ಹಂಬಲ ಬಹಳವಾಗಿತ್ತು. ನಾನು 'ವಿಶ್ವ ಕರ್ನಾಟಕ', 'ಲೋಕಹಿತೈಷಿ', 'ಪ್ರಜಾಮತ'ಗಳನ್ನು ಆಸಕ್ತಿಯಿಂದ ಓದುತ್ತಿದ್ದೆ. ಬೆಂಗಳೂರು 'ಸುಲ್ತಾನ್‌ಪೇಟೆ ಗಣಪತಿ ಗಲಾಟೆ' ವಿಚಾರ ತಿಳಿದಾಗ ಬೆಂಗಳೂರಿಗೆ (58 ಮೈಲು ದೂರ) ನಡೆದುಕೊಂಡೇ ಹೊರಟು ಬಂದು ಗಲಾಟೆಯಲ್ಲಿ ಭಾಗವಹಿಸಿದೆ. ಆಗ ಕೆ. ಟಿ. ಭಾಷ್ಯಂ, ವೀರಕೇಸರಿ ಸೀತಾರಾಮಶಾಸ್ತ್ರಿಗಳು, ವಿ. ಎಸ್. ನಾರಾಯಣ ರಾವ್, ಸರದಾರ್ ವೆಂಕಟರಾಮಯ್ಯ ಮತ್ತು ಬೆಂಗಳೂರು ಖಾದೀ ವಸ್ತ್ರಾಲಯದ ಎಂ. ಆರ್. ವೆಂಕಟರಾಮಯ್ಯ ಇವರುಗಳ ನಿಕಟ ಪರಿಚಯವಾಯಿತು. ಇದರ ಪರಿಣಾಮವಾಗಿ ನಾನು ಕಾಂಗ್ರೆಸ್ ಚಳವಳಿಗಳಲ್ಲಿ ಭಾಗವಹಿಸಿ ಮನೆಮನೆಗೂ ಖಾದಿ ಮಾರಾಟ, ಪ್ರಭಾತ್‌ಫೇರಿ ಮತ್ತು ಕಾಂಗ್ರೆಸ್ ಮೀಟಿಂಗ್‌ಗಳಲ್ಲಿ ಆಸಕ್ತಿ ವಹಿಸಿದೆನು. ಮೂರು ತಿಂಗಳಾದಮೇಲೆ ಊರಿಗೆ ಹಿಂತಿರುಗಿದೆ.

1930ನೇ ಇಸವಿಯಲ್ಲಿ ತುಮಕೂರಿನಲ್ಲಿ ಕೆ. ರಂಗಅಯ್ಯಂಗಾರ್‌ರವರ ಜೊತೆಯಲ್ಲಿ ಖಾದೀ ಪ್ರಚಾರದಲ್ಲಿ ತೊಡಗಿದೆನು. ಅನಂತರ ಚಿಕ್ಕಬಳ್ಳಾಪುರಕ್ಕೆ ಬಂದು ಮದ್ಯಪಾನ ನಿರೋಧದ ಅಂಗವಾಗಿ ಸಂಪಂಗಿ ರಾಮಯ್ಯನವರ ಜೊತೆಗೂಡಿ ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್, ಖಾದೀ ಪ್ರಚಾರ ಇವುಗಳಲ್ಲಿ ತೊಡಗಿದೆನು. ಭಗತ್‌ಸಿಂಗ್, ರಾಜಗುರು ಮತ್ತು ಸುಖದೇವ್ ಇವರಿಗೆ ಮರಣದಂಡನೆ ವಿಧಿಸಿದುದರಿಂದ ಚಳವಳಿಗಳು ಪ್ರಕೋಪ ತಾಳಿದಾಗ ಸಭೆ, ಹರತಾಳ, ಪಿಕೆಟಿಂಗ್ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದೆ. ಭಾಷ್ಯಂರ ನಿರ್ದೇಶನದಂತೆ 'ಈಚಲು ಮರ ಸತ್ಯಾಗ್ರಹ'ಕ್ಕೆ ಬೆಳಗಾವಿ, ಕಾರವಾರಗಳಲ್ಲಿ ಸಂಚಾರ ಮಾಡಿ, ಸರದಾರ್ ವೆಂಕಟರಾಮಯ್ಯನವರ ಮುಖಂಡತ್ವದಲ್ಲಿ ಈಚಲು ಮರಗಳನ್ನು ಕಡಿಯುವ ಮತ್ತು ಭೂಗತ ಚಟುವಟಿಕೆಗಳಲ್ಲಿ ನಿರತನಾಗಿದ್ದೆ. 1931ರಲ್ಲಿ ಕೊಪ್ಪಕ್ಕೆ ಹಿಂತಿರುಗಿದೆನು. ಏಪ್ರಿಲ್ ತಿಂಗಳಲ್ಲಿ ನಮ್ಮ ತಂದೆಯವರು ಮರಣಹೊಂದಿದರು.

ಜೂನ್ ಮಾಹೆಯಲ್ಲಿ ಪುನಃ ಬೆಂಗಳೂರಿಗೆ ಬಂದೆನು. ಸುಮಾರು ಒಂದು ತಿಂಗಳ ಕಾಲ ಬಟ್ಟೆ ಹೊಲಿದು ಬಳೆಪೇಟೆ ಕಮಲಾಲಯ ಛತ್ರ, ಶ್ರೀನಿವಾಸ ಮಂದಿರ ಗಳಲ್ಲಿ ರಾತ್ರಿಯನ್ನು ಕಳೆಯುತ್ತಿದ್ದೆನು. ಆಮೇಲೆ ತಗಡೂರು ರಾಮಚಂದ್ರರಾಯರ ಭೇಟಿಯಾಯಿತು. ಆಗ ಅವರು ವಿದೇಶೀವಸ್ತ್ರಬಹಿಷ್ಕಾರ ಚಳವಳಿಯಲ್ಲಿ ನಿರತರಾಗಿ ದ್ದುದರಿಂದ ನಾನೂ ಕೂಡ ಹೋರಾಟದಲ್ಲಿ ಅವರ ಜೊತೆ ಸೇರಿದೆ.

ಈ ಆಂದೋಲನ ನಡೆದ ವಿಧಾನ ಸ್ವಾರಸ್ಯಕರವಾಗಿದೆ. ತಗಡೂರರು ಮೊದಲು ತಮ್ಮ ಉಟ್ಟ ಬಟ್ಟೆಯ ಮೇಲೆ ಹೇಳಿಕೆ ಬರೆಯಿಸಿ ಪ್ರಚಾರಮಾಡಿದರು. ಪೋಲೀಸಿನವರು ಇವರ ಬಟ್ಟೆ ಕಸಿದುಕೊಂಡಾಗ ಕೇವಲ ಕೌಪೀನಧಾರಿಗಳಾಗಿ, ತಮ್ಮ ಮೈಮೇಲೆಲ್ಲ "ವಿದೇಶೀ ವಸ್ತ್ರ ತ್ಯಜಿಸಿ", "ಸರ್ಕಾರೀ ಘೋರಣೆಗೆ ಧಿಕ್ಕಾರ........!" ಎಂಬ ಘೋಷಣೆ ಗಳನ್ನು ಬರೆಸಿಕೊಂಡು ರೈಲು ನಿಲ್ದಾಣ ಮತ್ತು ಸಭೆಗಳಲ್ಲಿ ಪ್ರಚಾರ ಮಾಡಿದರು. 1931ನೇ ಅಕ್ಟೋಬರ್ 18ರಲ್ಲಿ ಮದ್ರಾಸಿಗೆ ಚಳವಳಿಯಲ್ಲಿ ಭಾಗವಹಿಸಲು ಹೋದೆನು. ಮದ್ರಾಸಿನ ರೈಲುನಿಲ್ದಾಣದಲ್ಲಿ ಅಂದೇ ನನ್ನ ಜೊತೆಯಲ್ಲಿದ್ದ ಮಂಗಳೂರಿನವರೊಬ್ಬ ರೊಡನೆ ನನ್ನನ್ನೂ ಬಂಧಿಸಿದರು. ಅಲ್ಲಿ ದಿ|| ರಾಜಗೋಪಾಲಾಚಾರಿಯವರ ಪರಿಚಯ ವಾಯಿತು. ನಾನು ಮೂರು ದಿನಗಳು ಜೈಲಿನಲ್ಲಿದ್ದು 21ನೇ ತಾರೀಕು ಬಿಡುಗಡೆ ಮಾಡಲ್ಪಟ್ಟು ಮದ್ರಾಸಿನ ಕಾಂಗ್ರೆಸ್ ಆಫೀಸನ್ನು ಸೇರಿದೆನು. ಸ್ವಯಂಸೇವಕನಾಗಿ ಮದ್ರಾಸಿನಲ್ಲಿ ಚಳವಳಿಗಾರರಿಗೆ ನೀರು ಸರಬರಾಜು ಮಾಡುವುದು, ಜವಳಿ ಅಂಗಡಿ (ಚೆಲ್ಲಾರಾಂ ಅಂಡ್ ಕೋ.) ಮುಂದೆ ಬಾಯ್‌ಕಾಟ್ ಮುಂತಾದ ಕೆಲಸ ಮಾಡಿದೆ.

ಮದ್ರಾಸಿನಲ್ಲಿ ಒಂದು ತಿಂಗಳು ಕಳೆದನಂತರ ಅಲ್ಲಿನ ಭಾಷೆ ಮತ್ತು ಆಹಾರ ಸೇರದ್ದರಿಂದ ನೇರವಾಗಿ ನನ್ನ ಸ್ವಗ್ರಾಮಕ್ಕೆ ಬಂದು, ಕಾಂಗ್ರೆಸ್ ಕಾರ್ಯಾಲಯವನ್ನು ಪ್ರಾರಂಭಮಾಡಿ, ನನ್ನ ಜೀವನೋಪಾಯಕ್ಕಾಗಿ ವ್ಯವಸಾಯ ಮತ್ತು ಹೊಲಿಗೆ ಕೆಲಸಗಳನ್ನು ಮಾಡಲಾರಂಭಿಸಿದೆನು. ಅಲ್ಲದೆ ಕಾಂಗ್ರೆಸ್ ಕಾರ್ಯಕರ್ತನಾಗಿ ನಮ್ಮ

ತಾಲ್ಲೂಕಿಗೆ ಸೇರಿದ ಶಿವಪುರದಲ್ಲಿ ನಡೆದ ಮೊದಲನೆಯ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದೆ. ಆಗ ಮೈಸೂರು ಕಾಂಗ್ರೆಸ್ ಮುಖಂಡರೆಲ್ಲರ ಪರಿಚಯವಾಯಿತು. ನಮ್ಮ ಜಿಲ್ಲೆಗೆ ಸಂಬಂಧಪಟ್ಟ ಪ್ರಮುಖ ಕಾರ್ಯಕರ್ತರೆಂದರೆ : ಎಚ್. ಕೆ. ವೀರಣ್ಣಗೌಡ, ತಿರುಮಲೇಗೌಡ, ಕೊಪ್ಪದ ಜೋಗೀಗೌಡ, ಎ. ಜಿ. ಬಂದೀಗೌಡ, ದೊಡ್ಡಬಿಳೀಗೌಡ (ಅವ್ವೇರಹಳ್ಳಿ), ಇಂಡುವಾಳ ಹೊನ್ನಯ್ಯ ಮುಂತಾದವರು.

11-8-1937ರಲ್ಲಿ ಕೊಪ್ಪ ಗ್ರಾಮದಲ್ಲಿ ಹಿಂದೀ ಸೇವಾ ಮಂಡಲಿಯ ಹೆಸರಿನಲ್ಲಿ, ದಕ್ಷಿಣ ಭಾರತದಲ್ಲಿ ಹಿಂದೀ ಕೇಂದ್ರವನ್ನು ಪ್ರಾರಂಭಿಸಿದೆನು. ಅನೇಕರು ಇದರ ಪ್ರಯೋಜನ ಪಡೆದರು. ಖಾದಿ ಬಟ್ಟೆಗಳನ್ನು ಮುಫತ್ತಾಗಿ ಜನರಿಗೆ ಹೊಲಿದು ಕೊಡುತ್ತಿದ್ದೆ.

16-10-1939ರಲ್ಲಿ 'ಮೈಸೂರು ಟೌನ್‌ಹಾಲ್ ಸತ್ಯಾಗ್ರಹ'ದಲ್ಲಿ (144ನೇ ಸೆಕ್ಷನ್ ಮುರಿದು) ನಾನು, ಮಂಡ್ಯದ ಎಂ. ಆರ್. ಕೃಷ್ಣಮೂರ್ತಿ ಮತ್ತು ಬಿದಿರುಕೋಟೆ ತಮ್ಮೇಗೌಡ ಹೀಗೆ ಹದಿನೈದು ಮಂದಿ ಭಾಗವಹಿಸಿ ಬಂಧಿತರಾದೆವು. 'ಆರು ತಿಂಗಳು ಕಠಿಣ ಸಜೆ ಮತ್ತು ಐವತ್ತು ರೂ. ಜುಲ್ಮಾನೆ, ಜುಲ್ಮಾನೆ ತಪ್ಪಿದರೆ ಒಂದು ತಿಂಗಳು ಕಠಿಣ ಸಜೆ' ಎಂಬ ತೀರ್ಪಿನಂತೆ ಒಟ್ಟು ಏಳು ತಿಂಗಳು ಕಾಲ ಮೈಸೂರು ಸೆಂಟ್ರಲ್ ಜೈಲಿನಲ್ಲಿ ಶಿಕ್ಷೆ ಅನುಭವಿಸಿದೆನು. 1947ನೇ ಸೆಪ್ಟಂಬರ್ ತಿಂಗಳಲ್ಲಿ ಮಂಡ್ಯದ ಸಬ್‌ಜೈಲಿನಲ್ಲಿ ಡೆಟನ್ಯೂ ಆಗಿ ಒಂದು ತಿಂಗಳು ಇದ್ದೆನು. ಅನಂತರ ನಾನು 1947ರಲ್ಲಿ ಊರನ್ನು ಸೇರಿದೆ. 16-8-1947ರಿಂದ ಮಹಾತ್ಮಾಜಿಯವರ ಆದೇಶದಂತೆ ಕಾಂಗ್ರೆಸ್ ಸಂಸ್ಥೆಯಿಂದ ನಿವೃತ್ತನಾದರೂ ದೇಶದ ಏಳಿಗೆಗೆ ನನ್ನ ಆತ್ಮತೃಪ್ತಿಯಾಗುವಂತೆ ದುಡಿಯುತ್ತಿದ್ದೇನೆ.

ಮೈ.ಮಂ. 8

## ಎಚ್. ಕೆ. ರಾಮಚಂದ್ರಯ್ಯ

ಜನನ : 1920 ಉದ್ಯೋಗ : ಕೃಷಿ ವಿಳಾಸ : ಮುಳವಳ್ಳಿ



ನಾನು ಸ್ವಾತಂತ್ರ್ಯ ಹೋರಾಟದಲ್ಲಿ ಜೈಲು ಕಂಡವನಲ್ಲವಾದರೂ ಚಳವಳಿಯಲ್ಲಿ ಯಥಾಶಕ್ತಿ ಪಾಲುಗೊಂಡಿದ್ದೆ. 1934ರಲ್ಲಿ ರಂಗಾಚಾರ್ಲು ಭವನ, ಮೈಸೂರಿನಲ್ಲಿ ಗಾಂಧೀಜಿಯವರ ಭಾಷಣ ಆಗಿರಲು ಅದನ್ನು ವಿ. ವೆಂಕಟಪ್ಪ ಭಾಷಾಂತರ ಮಾಡಿದ್ದರು. ನಾನು ಅಲ್ಲಿಗೆ ತೆರಳಿದ್ದೆ. ಆಗಿನಿಂದ ಗಾಂಧೀಜಿಯವರ ಮೇಲೂ ದೇಶದ ಬಗೆಗೂ ಭಕ್ತಿ ಮೂಡಿತು; ಸ್ವಾತಂತ್ರ್ಯ ಹೋರಾಟದ ಪ್ರಜ್ಞೆ ಮೂಡಿತು. ಮುಂದಿನ ಕೆಲವು ವರ್ಷಗಳಲ್ಲಿ

ಎಚ್. ಕೆ. ವೀರಣ್ಣಗೌಡ, ದಾಸಪ್ಪ, ಶ್ರೀರಂಗಪಟ್ಟಣದ ಎ. ಜಿ. ಬಂದೀಗೌಡ ಇವರೆಲ್ಲ ಬಂದು ಮಳವಳ್ಳಿಯಲ್ಲಿ ಪ್ರಚಾರ ಮಾಡಿದ್ದರು. ಮಳವಳ್ಳಿಯಲ್ಲಿ ಪುಟ್ಟಸ್ವಾಮಿಗೌಡ, ಕೆ. ವಿ. ವೀರಪ್ಪ, ಸುಬ್ಬಯ್ಯ, ಮುತ್ತರಾಮಶೆಟ್ಟಿ ಇವರೆಲ್ಲ ಕಾಂಗ್ರೆಸ್ಸಿನ ಕೆಲಸಮಾಡುತ್ತಿದ್ದವರು. ಶಿವಪುರ ಕಾಂಗ್ರೆಸ್ಸಿಗೆ ನಾನು ಮಳವಳ್ಳಿ ಪುಟ್ಟಸ್ವಾಮಿಗೌಡರ ಜೊತೆಗೆ ಹೋಗಿದ್ದೆ. ಕಾಂಗ್ರೆಸ್ ನಡೆದ ನಿವೇಶನ ಪಿ. ತಿರುಮಲೇಗೌಡರದು. ಅವರು ಎಕ್ಸೈಸ್ ಕಂಟ್ರಾಕ್ಟರಾಗಿದ್ದು ನಮ್ಮ ಸಂಬಂಧಿಗಳಾಗಿದ್ದರು. ಅವರಿಗೆ ಅಧಿವೇಶನಕ್ಕೆ ಜಾಗ ಕೊಡಬಾರದೆಂದು ಸರ್ ಮಿರ್ಜಾ ಹೇಳಿದ್ದರು. ಅವರ ಮಾತು ಮೀರಿದ್ದಕ್ಕೆ ಸೇಂದಿ ಕಂಟ್ರಾಕ್ಟು ರದ್ದುಪಡಿಸಿ ತೊಂದರೆ ಕೊಟ್ಟಿದ್ದರು. ಆಗಲೇ ಕೆ. ವಿ. ವೀರಪ್ಪನವರು ನನ್ನನ್ನು ಕಾಂಗ್ರೆಸ್ ಸದಸ್ಯನನ್ನಾಗಿ ಮಾಡಿದ್ದರು.

1942ರಲ್ಲಿ ನಾನು ಮೈಸೂರಿನಲ್ಲಿ ಕಾಲೇಜು ಓದುತ್ತಿರಲು ಎಂ. ವಿ. ಕೃಷ್ಣಪ್ಪನವರ ಸೂಚನೆಯಂತೆ ಚಳವಳಿಯಲ್ಲಿ ಪಾಲುಗೊಂಡೆ. ಸೈಕಲ್‌ಗೆ ಧ್ವಜ ಕಟ್ಟಿ ಮೆರವಣಿಗೆಯಲ್ಲಿ ಪಾಲುಗೊಳ್ಳುತ್ತಿದ್ದೆ. ಸುಬ್ಬರಾಯನ ಕೆರೆಯಲ್ಲಿ ಸಂಜೆಯ ಸಭೆಗೂ ಹೋಗುತ್ತಿದ್ದೆ. ಒಮ್ಮೆ ಮೆಡಿಕಲ್ ಕಾಲೇಜ್ ವಿದ್ಯಾರ್ಥಿನಿ ಮನೋರಮಾಬಾಯಿ ಭಾಷಣಮಾಡುವಾಗ ಮಳೆ ಬಂತು. ಆದರೆ ವಿದ್ಯಾರ್ಥಿಗಳು ಯಾರೂ ಕದಲಲಿಲ್ಲ. ಈ ಕಾಲದಲ್ಲಿ ನಾನು ಪೋಲೀಸರ ಕೈಗೆ ಮಾತ್ರ ಸಿಗಲಿಲ್ಲ. 1944ರಲ್ಲಿ ಮಳವಳ್ಳಿ ತಾ|| ಸಮಿತಿ ಸದಸ್ಯನಾಗಿ ಆಯ್ಕೆ ಆದೆ. ಎಚ್. ವಿ. ವೀರೇಗೌಡರು ಅಧ್ಯಕ್ಷರು. 1947ರ ಚಳವಳಿಯಲ್ಲಿ ಇವರ ಜೊತೆ ಕೆಲಸಮಾಡಿದ್ದೇನೆ. ಕೆ. ವಿ. ವೀರಪ್ಪ, ಪುಟ್ಟಪ್ಪಗೌಡ, ಪುಟ್ಟಸ್ವಾಮಿಗೌಡ, ಎಚ್. ವಿ. ವೀರೇಗೌಡ, ಎಂ. ವಿ. ವೆಂಕಟಪ್ಪ ಇವರೆಲ್ಲ ಆಗ ತಾಲೂಕಿನ ಪ್ರಮುಖ ಕಾಂಗ್ರೆಸ್ಸಿಗರು. ದಿ|| ಮಳವಳ್ಳಿ ಪುಟ್ಟಸ್ವಾಮಿ, ಹಲಗೂರು ರಾಮಚಂದ್ರೇಗೌಡ, ಆಗಸನಪಾಳ್ಯ ಎ. ಎಲ್. ಲಿಂಗೇಗೌಡ, ಸಿ. ಕೆ. ಚಿಕ್ಕೇಗೌಡ, ಎಂ. ಮಲ್ಲಿಕಾರ್ಜುನಸ್ವಾಮಿ, ಎಚ್. ಕೆ. ನಾರಾಯಣಸ್ವಾಮಿ ಇವರು ವಿದ್ಯಾರ್ಥಿ ಕಾಂಗ್ರೆಸ್ಸಿನ ಪ್ರಮುಖರಾಗಿದ್ದರು ಮತ್ತು ಮಳವಳ್ಳಿ ಮುತ್ತರಾಮಶೆಟ್ಟಿ ವಿದ್ಯಾರ್ಥಿ ಕಾಂಗ್ರೆಸ್ಸಿನ ಸಂಚಾಲಕರಾಗಿದ್ದರು.

ಮೈ.ಕೋ. 1

## ಜಿ. ನಾರಾಯಣಗೌಡ

ಜನನ: 1910 ಉದ್ಯೋಗ: ವ್ಯವಸಾಯ ವಿಳಾಸ: ಹೊಗಳಗೆರೆ, ತಾ॥ ಶ್ರೀನಿವಾಸಪುರ



1930ರಲ್ಲಿ ಬಿ.ಎ. ಪದವೀಧರನಾದ ನಾನು ಹೊಗಳಗೆರೆಯಲ್ಲಿ ಕೃಷಿಕಾರ್ಯದಲ್ಲಿ ತೊಡಗಿರಲು, ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹ ಹಾಗೂ 1932ರ ಸತ್ಯಾಗ್ರಹಗಳ ವಾರ್ತೆಗಳಿಂದ ಪ್ರಭಾವಿತನಾಗಿ 1933ರಲ್ಲಿ ಕಾಂಗ್ರೆಸ್ಸಿನ ಪ್ರಾಥಮಿಕ ಸದಸ್ಯನಾದೆ. 1937ರಲ್ಲಿ ಮೈಸೂರು ಕಾಂಗ್ರೆಸ್ಸಿನ ಕ್ರಿಯಾಶೀಲ ಸದಸ್ಯನಾದೆನಲ್ಲದೆ 1938ರಲ್ಲಿ ಶಿವಪುರ ಕಾಂಗ್ರೆಸ್ಸಿಗೆ ಹೋಗಿದ್ದೆ. ಮುಂದೆ ಧ್ವಜಸತ್ಯಾಗ್ರಹದಲ್ಲಿ ಪಾಲುಗೊಂಡು ಮೂರು ದಿನ ಬಂಧಿತನಾಗಿದ್ದೆ. 1938-39ರಲ್ಲಿ ಕೋಲಾರ ತಾಲ್ಲೂಕು ಕಾಂ॥ ಸ॥ ಕಾರ್ಯದರ್ಶಿಯಾಗಿಯೂ 1940ರಲ್ಲಿ ಇದೇ ಸಮಿತಿಯ ಅಧ್ಯಕ್ಷನಾಗಿಯೂ 1941ರಲ್ಲಿ ಕೋ॥ ಜಿ॥ ಕಾಂ॥ ಸ॥ ಅಧ್ಯಕ್ಷನಾಗಿಯೂ ಆಯ್ಕೆಗೊಂಡು ಆಯಾ ಜವಾಬ್ದಾರಿಗಳನ್ನು ನಿರ್ವಹಿಸಿದ್ದೆ. 1938ರಿಂದ ಕೆಲವರ್ಷ ಕೆ. ಸಿ. ರೆಡ್ಡಿ ಅವರೇ ಕೋಲಾರ ಡಿ.ಸಿ.ಸಿ. ಅಧ್ಯಕ್ಷರಾಗಿದ್ದರು. ಇದಲ್ಲದೆ 1938ರಿಂದಲೂ ಅ॥ ಮೈ॥ ಕಾಂ॥ ಸ॥ ಸದಸ್ಯನಾಗಿದ್ದೆ. 1941ರಲ್ಲಿ ನಾನು ಪ್ರಜಾಪ್ರತಿನಿಧಿ ಸಭೆಯ ಸದಸ್ಯನಾಗಿ ಕಾಂಗ್ರೆಸ್ಸಿನಿಂದ ಆಯ್ಕೆಗೊಂಡಿದ್ದೆ.

1939ರಲ್ಲಿ ಕೆ.ಜಿ.ಎಫ್.ನಲ್ಲಿ ಮೈ॥ ಕಾಂ॥ನ ನಾಯಕರು ಸಾರ್ವಜನಿಕ ಸಭೆಯೊಂದನ್ನು ನಡೆಸುತ್ತಿರಲು ಕೆ. ಸಿ. ರೆಡ್ಡಿ, ಕೆ. ಪಟ್ಟಾಭಿರಾಮನ್, ಕೆ. ಟಿ. ಭಾಷ್ಯಂ, ಎಚ್. ಸಿ. ದಾಸಪ್ಪ, ಎಚ್. ಸಿದ್ದಯ್ಯ ಮುಂತಾದವರನ್ನು ಬಂಧಿಸಲು, ಈ ಕ್ರಮದ ಪ್ರತಿಭಟನಾರ್ಥ ಪ್ರಸಿದ್ಧ ಕೆ. ಜಿ. ಎಫ್. ಸತ್ಯಾಗ್ರಹವನ್ನು ಸಂಘಟಿಸಲಾಯಿತು. ಕೋಲಾರ ಡಿ.ಸಿ.ಸಿ.ಯವರು ಬಂಗಾರುಪೇಟೆಯಲ್ಲಿ ಒಂದು ಸತ್ಯಾಗ್ರಹ ಶಿಬಿರವನ್ನು ತೆರೆದಿದ್ದು ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿ ಎಂ. ದೊರೆಸ್ವಾಮಿ ಅವರು ಅದರ ಮೇಲ್ವಿಚಾರಣೆಯನ್ನು ನಡೆಸುತ್ತಿದ್ದರು. ನಾನೂ ಈ ಕಾಲದಲ್ಲಿ ಬಂಧಿತನಾಗಿ ಮೂರು ತಿಂಗಳು ಶಿಕ್ಷೆಗೆ ಒಳಗಾದೆ. ಈ ಕಾಲದಲ್ಲಿ ಪೋಲೀಸರು ಅಪಾರ ದಬ್ಬಾಳಿಕೆ ನಡೆಸಿದರು. ಇದರ ಪ್ರತಿಭಟನಾರ್ಥ ಶ್ರೀನಿವಾಸಪುರ ತಾ॥ ಕೆಲವು ಪಟೇಲರು ರಾಜೀನಾಮೆ ಕೊಡು

ವುದಾಗಿ ಬೆದರಿಕೆ ಹಾಕಿದರು. ವಿದುರಾಶ್ವತ್ಥದ ಗೋಲೀಬಾರಿನ ಅನಂತರ ಮಹದೇವ ದೇಸಾಯಿ ಸಂಸ್ಥಾನಕ್ಕೆ ಬಂದಿರಲು ಮೇಲೂರಿನಲ್ಲಿ (ತಾ॥ ಶಿಡ್ಲಘಟ್ಟ) ಅವರಿಗೆ ಭಾರೀ ಸ್ವಾಗತ ನೀಡಲಾಯಿತು. ಅವರ ಭೇಟಿಯನಂತರ ಬಂಧಿತರೆಲ್ಲರನ್ನೂ ಬಿಡುಗಡೆ ಮಾಡಲಾಯಿತು.

1942ರಲ್ಲಿ ಗಾಂಧೀಜಿಯವರ ಬಂಧನದ ಪ್ರತಿಭಟನಾರ್ಥ ಆಗಸ್ಟ್ 11ರಂದು ಶ್ರೀನಿವಾಸಪುರದಲ್ಲಿ ನಡೆದ ಸಭೆಯಲ್ಲಿ ಭಾಷಣಮಾಡಿ ಕೆ. ಪಟ್ಟಾಭಿರಾಮನ್, ಕೆ. ಸಂಪಂಗಿರಾಮಯ್ಯ ಮುಂತಾದವರು ಬಂಧಿತರಾದರು. ನಾನು ಆ ದಿನ ಬಂಧಿತ ನಾಗದೇ ತಪ್ಪಿಸಿಕೊಂಡು, ಮರುದಿನ ಕೋಲಾರ ಸೇರಿದೆ. ಅಲ್ಲಿ ಪಿ. ನಾರಾಯಣ ರೆಡ್ಡಿ ಅವರನ್ನು ಸಂಪರ್ಕಿಸಿ ಅವರಿಗೆ ವಿದ್ಯಾರ್ಥಿಗಳ ಪ್ರತಿಭಟನಾ ಮುಷ್ಕರವನ್ನು ಸಂಘಟಿಸಲು ಪ್ರೇರಣೆ ನೀಡಿದೆ. ಮೂರು ದಿನಗಳ ತೀವ್ರಪ್ರಯತ್ನದ ಅನಂತರ ಆಗಸ್ಟ್ 15ರಂದು ವಿದ್ಯಾರ್ಥಿಗಳ ಭಾರೀ ಮೆರವಣಿಗೆ ಆಯಿತು. ಮಾಧ್ಯಮಿಕ ಹಾಗೂ ಹೈಸ್ಕೂಲಿನ ವಿದ್ಯಾರ್ಥಿಗಳು ಸುಮಾರು 7–8 ಸಾವಿರ ಜನ ವರ್ಗಗಳನ್ನು ತ್ಯಜಿಸಿ ಹೊರಬಂದರು. ಅವರಿಗೆ ಮರೆಯಲ್ಲಿದ್ದ ನಾನು ಪ್ರಕಟವಾಗಿ ಮೆರವಣಿಗೆಯಲ್ಲಿ ಪಾಲುಗೊಂಡೆ. ಕಟಾರಿ ಪಾಳ್ಯದ ವೇಣುಗೋಪಾಲಸ್ವಾಮಿ ಮಂದಿರದ ಎದುರು ಸಭೆ ನಡೆಸಿ ಅಲ್ಲಿ ನನ್ನ ಭಾಷಣ ಆಯಿತು. ಅನಂತರ ನನ್ನ ಬಂಧನ ಆಗಿ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಹದಿನೆಂಟುವರೆ ತಿಂಗಳು ಕಾಲ ಸ್ಥಾನಬದ್ಧನಾಗಿದ್ದೆ. ಇದೇ ರೀತಿ 1947ರ 'ಚಲೋ ಮೈಸೂರು' ಚಳವಳಿಯ ಕಾಲಕ್ಕೂ ನಾನು 42 ದಿನ ಸ್ಥಾನಬದ್ಧತೆಯಲ್ಲಿ ಇದ್ದೆ.

ಸ್ವಾತಂತ್ರ್ಯಾನಂತರವೂ ನಾನು ಮೈಸೂರು ವಿಧಾನಸಭಾ ಸದಸ್ಯನಾಗಿದ್ದೆನಲ್ಲದೆ (1948–1951 ; 1962–1971 ) 1962ರಿಂದ ರಾಜ್ಯ ವ್ಯವಸಾಯ ಮಂತ್ರಿಯಾಗಿ, 1967ರಿಂದ ಸಮಾಜಕಲ್ಯಾಣ ಸಚಿವನಾಗಿ ಇದ್ದೆ. 1961ರಲ್ಲಿ ಎಲದೂರಲ್ಲಿ ಒಂದು ಹೈಸ್ಕೂಲನ್ನು ಆರಂಭಿಸಿದ್ದು ಅದರ ಆಡಳಿತ ಮಂಡಳಿಗೆ ನಾನು ಅಧ್ಯಕ್ಷನಾಗಿರುವೆ.

1947ರಲ್ಲಿ ಆ. 14ರಂದು ನಮ್ಮ ಊರಲ್ಲಿ ಸಾರ್ವಜನಿಕ ಬಾವಿಯನ್ನು ಹರಿಜನ ರಿಗೆ ತೆರವು ಮಾಡಿಸಲು ಶ್ರಮಿಸಿ ಯಶಸ್ವಿಯಾದೆ. ಈ ಕೆಲಸದ ಬಗ್ಗೆ ಸವರ್ಣೀಯರ ಅನುಮತಿಗೆ ಶ್ರಮಿಸುವಷ್ಟೇ ಹರಿಜನರಿಗೆ ಧೈರ್ಯತುಂಬುವ ಕೆಲಸವೂ ಮುಖ್ಯವಾಗಿತ್ತು. ತಾವು ಸಾರ್ವಜನಿಕ ಬಾವಿಯಿಂದ ನೀರು ಸೇದಿದರೆ ತಮಗೆ ಕೇಡುಬರುವುದೆಂಬ ಭೀತಿ ಹರಿಜನರ ಮನದಲ್ಲಿ ಇತ್ತು. ಇದಲ್ಲದೆ ಹರಿಜನರಿಗೆ ಸಾಧ್ಯವಿದ್ದಲ್ಲೆಲ್ಲ ಭೂಮಿಯನ್ನು ಕೊಡಿಸಲು ಕೂಡ ನಾನು ಶ್ರಮಿಸಿದ್ದೆ.

ವ್ಯ.ಕೋ. 2

# ಬಿ. ವೆಂಕಟರಾಯಪ್ಪ

ಜನನ : ? ಉದ್ಯೋಗ : ವ್ಯವಸಾಯ ವಿಳಾಸ : ಭಕ್ತರಹಳ್ಳಿ, ಮೇಲೂರು ಅಂಚೆ ತಾ|| ಶಿಡ್ಲಘಟ್ಟ

---



ನಾನು ಮಿಡ್ಲ್ ಸ್ಕೂಲಿನಲ್ಲಿ ವ್ಯಾಸಂಗ ಮಾಡುತ್ತಿದ್ದ ಸಮಯದಲ್ಲಿ (1938 ರಿಂದ 1941) ನನ್ನ ಸ್ವಗ್ರಾಮವಾದ ಭಕ್ತರಹಳ್ಳಿಯಲ್ಲಿ (1800 ಜನ ಸಂಖ್ಯೆ) ಬಂಡಿ ನಾರಣಪ್ಪನವರ ಮುಂದಾಳುತನದಲ್ಲಿ ಕಾಂಗ್ರೆಸ್ ಚಳವಳಿಗೆ ಸಾಕಷ್ಟು ಸಿದ್ಧತೆಗಳಾಗುತ್ತಿದ್ದವು. ಈ ಕಾಂಗ್ರೆಸ್ ಚಟುವಟಿಕೆಗಳ ವಿಚಾರ ನನ್ನ ಕುತೂಹಲ ಕೆರಳಿಸಿತು. ದಿ|| ಮಳಮಾಚನಹಳ್ಳಿ ದ್ಯಾವಪ್ಪ, ಮೇಲೂರಿನ ಎಂ. ಎಸ್. ವೀರಪ್ಪ, ಕೆ. ಎಂ. ನಂಜುಂಡಪ್ಪ, ಬಿ. ಸಿ. ಮುನಿಶ್ಯಾಮಯ್ಯ, ಮಳ್ಳೂರಿನ ಜಿ. ಪಾಪಣ್ಣ (ಮಾಜಿ ಶಾಸಕ), ಅವರ ಮಿತ್ರರು ಮುಂತಾದವರು ಶಿಡ್ಲಘಟ್ಟ ತಾಲ್ಲೂಕಿನಲ್ಲಿ ಆಗ ಕೆಲಸ ಮಾಡುತ್ತಿದ್ದರು.

1942ರ ಚಳವಳಿಯಲ್ಲಿ ಕೋಲಾರ ಜಿಲ್ಲಾ ನಾಯಕರಾದ ಕೆ. ಸಿ. ರೆಡ್ಡಿ, ಕೆ. ಪಟ್ಟಾಭಿರಾಮನ್, ಜಿ. ನಾರಾಯಣಗೌಡ, ಎನ್. ಸಿ. ನಾಗಯ್ಯ ರೆಡ್ಡಿ, ಟಿ. ರಾಮಾಚಾರ್ ಮುಂತಾದ ಅನೇಕ ಗಣ್ಯರ ನೇತೃತ್ವದಲ್ಲಿ ನಡೆಯುತ್ತಿತ್ತು. ಎಲ್ಲ ಪಾಠಶಾಲೆಗಳ ಬಹುತೇಕ ವಿದ್ಯಾರ್ಥಿಗಳು ಶಾಲೆಗಳನ್ನು ಬಹಿಸ್ಕರಿಸಿ ಚಳವಳಿಯಲ್ಲಿ ಭಾಗವಹಿಸುತ್ತಿದ್ದ ಕಾಲ. ಕೋಲಾರ ಪ್ರೌಢಶಾಲೆಯ ಮೊದಲನೆಯ ತರಗತಿಯ ವಿದ್ಯಾರ್ಥಿಯಾದ ನಾನೂ ಶಾಲೆಯನ್ನು ಬಹಿಷ್ಕರಿಸಿ, ನನ್ನ ಅನೇಕ ಮಿತ್ರರೊಂದಿಗೆ ಚಳವಳಿಯಲ್ಲಿ ಸೇರಿದೆ. ಸುಮಾರು ಎರಡುಮೂರು ವಾರಗಳ ಕಾಲ ಪಾಠಶಾಲೆಗಳಿಗೆ ವಿದ್ಯಾರ್ಥಿಗಳು ಹಾಜರಾಗಲಿಲ್ಲ. ಆ ಸಮಯದಲ್ಲಿ ಕೋಲಾರ ಟೌನ್‌ನಲ್ಲಿ ಪ್ರತಿನಿತ್ಯ ಬೆಳಗ್ಗೆ ಮತ್ತು ಸಾಯಂಕಾಲ ಪ್ರಭಾತ್‌ಫೇರಿ, ಅನಂತರ ರಾತ್ರಿ ಸಭೆಗಳ ಮೂಲಕ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಜನರಲ್ಲಿ ತಿಳಿವಳಿಕೆ ಮೂಡಿಸುತ್ತಿದ್ದೆವು.

'ಕ್ವಿಟ್ ಇಂಡಿಯಾ' ಚಳವಳಿ ನಿಂತ ಅನಂತರ ಪಾಠಶಾಲೆಗೆ ಹಾಜರಾಗಿ 1945ಕ್ಕೆ ನನ್ನ ಎಸ್.ಎಸ್.ಎಲ್.ಸಿ. ವ್ಯಾಸಂಗವನ್ನು ಪೂರ್ಣಗೊಳಿಸಿ, ಸ್ವಂತ

ಊರಾದ ಭಕ್ತರಹಳ್ಳಿಗೆ ಬಂದು ವ್ಯವಸಾಯದ ಕಾರ್ಯಗಳಲ್ಲಿ ನಿರತನಾದೆ. ಅನಂತರ ಹಳ್ಳಿ ಮತ್ತು ತಾಲ್ಲೂಕಿನ ರಾಜಕೀಯದಲ್ಲಿ ಸಕ್ರಿಯಪಾತ್ರವನ್ನು ವಹಿಸಿದೆ. ತಾಲ್ಲೂಕಿನ ಕಾಂಗ್ರೆಸ್ ಕೆಲಸಗಾರರ ಅಪೇಕ್ಷೆಯಂತೆ 1946ರಲ್ಲಿ ಶಿಡ್ಲಘಟ್ಟ ತಾಲ್ಲೂಕು ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ದುಡಿದೆ. ಕಾಂಗ್ರೆಸ್ಸಿಗೆ ಸದಸ್ಯರನ್ನು ಸೇರಿಸುವುದು, ಸ್ವಾತಂತ್ರ್ಯದ ಬಗ್ಗೆ ಜನರಲ್ಲಿ ತಿಳಿವಳಿಕೆ ಮೂಡಿಸುವುದು ಮುಂತಾದ ಕೆಲಸಗಳನ್ನು ಮಾಡುತ್ತಲಿದ್ದೆ.

1947ರಲ್ಲಿ ಶಿಡ್ಲಘಟ್ಟ ತಾಲ್ಲೂಕ್ ಆಫೀಸಿನ ಮುಂಭಾಗದಲ್ಲಿ ಸತ್ಯಾಗ್ರಹವನ್ನು ಪ್ರಾರಂಭಿಸಿದೆವು. ತಾಲ್ಲೂಕು ಕಾಂಗ್ರೆಸ್ ಸಮಿತಿಗೆ ನಾಯಕರಾದ ಮೇಲೂರಿನ ಎಂ. ಸಿ. ವೀರಪ್ಪನವರು ಅಧ್ಯಕ್ಷರಾಗಿದ್ದರು. ಅಲ್ಲಿ ಪ್ರತಿನಿತ್ಯವೂ ನೂರಾರು ಜನ ಸತ್ಯಾಗ್ರಹಿಗಳು ಬಂದು ಸತ್ಯಾಗ್ರಹದಲ್ಲಿ ಪಾಲ್ಗೊಳ್ಳುತ್ತಿದ್ದರು. ಆ ಸಮಯದಲ್ಲಿ ತಾಲ್ಲೂಕು ಆಫೀಸಿನ ಅನೇಕ ಕೆಲಸಕಾರ್ಯಗಳು ಪೂರ್ಣವಾಗಿ ನಿಂತು ಅಧಿಕಾರಿಗಳು ಸ್ತಬ್ಧರಾದರು. ಈ ಚಳವಳಿಯಲ್ಲಿ ಮುಖ್ಯವಾಗಿ ತಾಲ್ಲೂಕಿನ ಅನೇಕ ಗ್ರಾಮಗಳಿಂದ ಅಂದರೆ ಮೇಲೂರಿನಿಂದ ದಿ|| ಎಂ. ಎಸ್. ಭೈರಪ್ಪ, ಬಿ. ಸಿ. ಮುನಿಶಾಮಯ್ಯ, ಮಳ್ಳೂರಿನ ಮಾಜಿ ಶಾಸಕ ಜಿ. ಪಾಪಣ್ಣ, ಕೋಟೆ ನಾರಾಯಣಸ್ವಾಮಿ, ಕೆ. ಮುನಿ ಶಾಮಯ್ಯ, ಎಸ್. ಸೊಣ್ಣಪ್ಪ, ಬಿ. ಎನ್. ಪುಟ್ಟಣ್ಣ, ಬಿ. ಎಸ್. ಬಚ್ಚೇಗೌಡ, ಎಚ್. ಕಾಳಪ್ಪ, ಮಳಮಾಚನಹಳ್ಳಿಯ ಎಂ. ಬಿ. ಕೆಂಪಯ್ಯ, ದಿ|| ದ್ಯಾವಪ್ಪ, ಭಕ್ತರಹಳ್ಳಿ ದಿ|| ಬಂಡಿ ನಾರಾಯಣಪ್ಪ, ಶಿಡ್ಲಘಟ್ಟ ಟೌನಿನ ದಿ|| ಜಿ. ಚೌಡಪ್ಪ, ಕೆ. ಪಿ. ಶ್ರೀನಿವಾಸಮೂರ್ತಿ, ಚಿಟ್ಲೂರು ರಾಮಲಿಂಗಯ್ಯ ಶೆಟ್ಟಿ, ಸೀತಾರಾಮ ಶೆಟ್ಟಿ, ಎನ್. ನಂಜುಂಡಪ್ಪ, ಬಿ. ಕೇಶವಪ್ಪ, ಸಿ. ಎನ್. ಮರಿಯಪ್ಪ, ಕೊತ್ತನೂರಿನ ಕೆ. ನಂಜರೆಡ್ಡಿ ಮತ್ತು ಕೆ. ಎಂ. ಪಾಪಣ್ಣ, ಬೋದಗೂರಿನ ಮಕ್ಕರೇಗೌಡ, ಕೆ. ಮುತ್ತಗದಹಳ್ಳಿಯ ಎಂ. ಬಿ. ನಾರಾಯಣಗೌಡರು ಮುಂತಾದವರು ಚಳವಳಿಯ ಮುಖಂಡತ್ವವನ್ನು ವಹಿಸಿದ್ದರು. ಈ ಚಳವಳಿಯನ್ನು ದಮನಮಾಡಲು ಕೋಲಾರ ಜಿಲ್ಲಾಧಿಕಾರಿಗಳು ಅನೇಕ ರಿಸರ್ವ್ ಪೋಲೀಸರೊಂದಿಗೆ ಶಿಡ್ಲಘಟ್ಟಕ್ಕೆ ಬಂದು ಸತ್ಯಾಗ್ರಹ ನಡೆಯದಂತೆ ಎಲ್ಲ ಪ್ರಯತ್ನಗಳನ್ನೂ ಮಾಡಿದರು. ಆದರೆ ಇಲ್ಲಿಯ ಜನರ ಧೈರ್ಯ ಸಾಹಸಗಳನ್ನು ನೋಡಿ ಅಧಿಕಾರಿಗಳು ಸಹಿಸಲಾರದೆ ಸೇಡಿನ ಮನೋಭಾವದಿಂದ ಸತ್ಯಾಗ್ರಹಿಗಳನ್ನು ನೋಡುತ್ತಿದ್ದರು. ದಿನೇದಿನೇ ಚಳವಳಿ ಪ್ರಬಲವಾಗುತ್ತ ಬಂದು ಸತ್ಯಾಗ್ರಹಿಗಳ ಸಂಖ್ಯೆ ಸಾವಿರಾರಾಗಿ ತಾಲ್ಲೂಕ್ ಆಫೀಸಿನ ಕೆಲಸ ನಿಂತುಹೋಯಿತು. ಜಿಲ್ಲಾಧಿಕಾರಿಗಳಿಗೆ ದಿಕ್ಕುತೋಚದಾಯಿತು.

1947ರ ಸೆಪ್ಟಂಬರ್ ತಿಂಗಳು ಶಿಡ್ಲಘಟ್ಟ ತಾಲ್ಲೂಕಿನ ಸತ್ಯಾಗ್ರಹಿಗಳಿಗೆ ಕರಾಳ ದಿನ. ತಾಲ್ಲೂಕಿನ ತಿಪ್ಪೇನಹಳ್ಳಿ ಗ್ರಾಮದವರು ಸತ್ಯಾಗ್ರಹಿಗಳಿಗಾಗಿ ಸಿದ್ಧಪಡಿಸಿದ್ದ ಊಟವನ್ನು ಕೆಲವು ಎತ್ತಿನ ಗಾಡಿಗಳಲ್ಲಿ ತುಂಬಿಕೊಂಡು ಸತ್ಯಾಗ್ರಹ ಮಾಡುತ್ತಿದ್ದ

ತಾಲ್ಲೂಕ್ ಆಫೀಸಿನ ಬಳಿಗೆ ಬಂದರು. ಸತ್ಯಾಗ್ರಹಿಗಳನ್ನು ದಮನಮಾಡಲು ಬಂದಿದ್ದ ಜಿಲ್ಲಾಧಿಕಾರಿಗಳು ಮೊದಲಾದ ಕೆಲವು ಅಧಿಕಾರಿಗಳು ಇದನ್ನು ನೋಡಿ ಸಹಿಸಲಾರದೆ ಹೋದರು. ಪೋಲೀಸಿನವರು ಮೊದಲು ಸತ್ಯಾಗ್ರಹಿಗಳ ಮೇಲೆ ಲಾಠೀ ಪ್ರಹಾರ ನಡೆಸಿದರು. ಅನಂತರ ಗುಂಡಿನ ಸುರಿಮಳೆಯಾಯಿತು. ಲಾಠೀ ಪ್ರಹಾರದಲ್ಲಿ ಏಟು ತಿಂದವರು ಅದೆಷ್ಟು ಜನರೋ. ನನ್ನ ಗ್ರಾಮವಾದ ಭಕ್ತರಹಳ್ಳಿಯ ಕುಂಬಾರದೊಡ್ಡಿ ನಾರಾಯಣಪ್ಪ ಮತ್ತು ನಾರಾಯಣಪ್ಪ ಎಂಬುವರು ಗುಂಡಿನೇಟಿನಿಂದ ಗಾಯಗೊಂಡು ಮೃತರಾದರು. ಅವರ ಶವವನ್ನು ಭಕ್ತರಹಳ್ಳಿಗೆ ತಂದು ಸಾವಿರಾರು ಜನ ಮೆರವಣಿಗೆ ನಡೆಸಿ, ಸಂಸ್ಕಾರ ಮಾಡಿದರು. ಶಿಡ್ಲಘಟ್ಟದಲ್ಲಿ 144ನೇ ಸೆಕ್ಷನ್ ಜಾರಿ ಮಾಡಿದರು. ಮುಂದೆ ಚಳವಳಿ ನಿಂತು ನಮಗೆ ಜಯವಾದ ವಿಚಾರ ಸರ್ವವಿದಿತ. ಕೆಲಕಾಲ ಶಾಸನಸಭಾಸದಸ್ಯನಾಗಿದ್ದು ಅನ್ಯಕ್ಷೇತ್ರಗಳಲ್ಲೂ ಇಂದಿಗೂ ಸಮಾಜ ಸೇವೆ ಮಾಡು ತ್ತಿದ್ದೇನೆ.

ಮೈ.ಕೋ. 3

## ಕೆ. ವೆಂಕಟರಾಯಪ್ಪ

ಜನನ : 1908 ಉದ್ಯೋಗ : ? ವಿಳಾಸ : ಚಾಮರಾಜಪೇಟೆ, ಚಿಕ್ಕಬಳ್ಳಾಪುರ

---



ಗಾಂಧೀಜಿಯವರ ವಿಚಾರಗಳನ್ನು ಪತ್ರಿಕೆಗಳಲ್ಲಿ ಓದಿ ಚಳವಳಿಯ ಕಡೆ ಆಕರ್ಷಿತನಾಗಿ ಬ್ರಿಟಿಷ್ ಕರ್ನಾಟಕದಲ್ಲಿ ನಡೆಯುತ್ತಿರುವ ಚಳವಳಿಗೆ ನೆರವು ನೀಡುತ್ತಿದ್ದೆ. ನನ್ನ ಜೊತೆಯಲ್ಲಿ ಓದುತ್ತಿದ್ದ ಕೆಲವು ವಿದ್ಯಾರ್ಥಿಗಳು ಈ ಚಳವಳಿಯಲ್ಲಿ ಪಾಲ್ಗೊಳ್ಳು ತ್ತಲೂ ಇದ್ದರು. ಮೈಸೂರು ಕಾಂಗ್ರೆಸ್ಸಿನ ಸ್ಥಾಪನೆ ಆದಾಗ (1937) ನಮ್ಮ ಜಿಲ್ಲೆಯ ಎನ್. ಸಿ. ನಾಗಯ್ಯ ರೆಡ್ಡಿ, ಕೆ. ಸಿ. ರೆಡ್ಡಿ ಮುಂತಾದವರು ಮೈಸೂರು ಕಾಂಗ್ರೆಸ್ಸಿಗೆ ಸೇರಿ ನಮ್ಮ ಊರಿಗೂ ಬಂದು ನಮ್ಮನ್ನು ಸದಸ್ಯರಾಗಿ ಸೇರಿಸಿಕೊಂಡರು. ಮುಂದೆ ಶಿವಪುರ ಕಾಂಗ್ರೆಸ್ಸಿಗೂ ನಾನು ಹೋಗಿದ್ದೆ. ಅದರನಂತರ ಎಲ್ಲೆಡೆ ಧ್ವಜ ಸತ್ಯಾಗ್ರಹ ನಡೆಸಲು ಕಾಂಗ್ರೆಸ್ಸು ಕರೆ ನೀಡಿರಲು ವಿದುರಾಶ್ವತ್ಥದಲ್ಲಿ ಜಾತ್ರೆಕಾಲಕ್ಕೆ ಟಿ. ರಾಮಾಚಾರ್ ಅವರ ನೇತೃತ್ವದಲ್ಲಿ ಸಾರ್ವಜನಿಕ ಸಭೆ ನಡೆಸಲು, ಗೋಳೀಬಾರ್

ಆಗಿ ಅನೇಕರು ಸತ್ತರು. ಅಲ್ಲಿಂದ ಬಂದಮೇಲೆ ನಮ್ಮ ಊರ ಕೃಷ್ಣಾ ಟಾಕೀಸ್ ಕಟ್ಟಡದ ಮೇಲೆ ಧ್ವಜ ಹಾರಿಸಿ ನಾನು ಬಂಧಿತನಾದೆ. ಆಗ ನಾನು ತಾ|| ಕಾಂ|| ಕ|| ಅಧ್ಯಕ್ಷನಾಗಿದ್ದೆ. ನನಗೆ ಎಂಟು ತಿಂಗಳ ಕಾಲ ಶಿಕ್ಷೆ ಆಯಿತು. ಮುಂದೆ ಬೇಗನೇ ಪಟೇಲ್-ಮಿರ್ಜಾ ಒಪ್ಪಂದ ಆಗಿ ನನ್ನ ಬಿಡುಗಡೆ ಆಯಿತು.

1938ರಲ್ಲಿ ಜೈಲಿನಿಂದ ಬಿಡುಗಡೆ ಆಗಿ ಬಂದಮೇಲೆ ಮುನಿಸಿಪಲ್, ಜಿಲ್ಲಾ ಬೋರ್ಡ್ ಹಾಗೂ ಅಸೆಂಬ್ಲಿ ಚುನಾವಣೆಗಳಲ್ಲಿ ಕಾಂಗ್ರೆಸ್ಸಿನ ಪರ ಪ್ರಚಾರಕ್ಕೆ ದುಡಿದೆ. ಕೋಲಾರ ಜಿಲ್ಲಾ ಬಂಗಾರ ಗಣಿ ಸತ್ಯಾಗ್ರಹ, ಮೈಸೂರಿನ ಹ್ಯಾಮಿಲ್ಟನ್ ಬಿಲ್ಡಿಂಗ್ ಸತ್ಯಾಗ್ರಹಗಳಲ್ಲೂ ಭಾಗವಹಿಸಿದೆ. ನಾನು ಬಂಗಾರದ ಗಣಿ ಸತ್ಯಾಗ್ರಹಕ್ಕೆ 50 ಜನ ಸತ್ಯಾಗ್ರಹಿಗಳ ಜೊತೆ ಹೋಗಿದ್ದೆ. ನಾನು ಹೋದ ಹಿಂದಿನ ದಿನವೇ ಬಂಗಾರುಪೇಟೆ ಶಿಬಿರವನ್ನು ಸರಕಾರ ಮುಚ್ಚಿತ್ತು. ನಾವೆಲ್ಲ ಬಂಧಿತರಾದೆವು. ಬಂಧಿತರನ್ನು ಉಪವಾಸ ಕೆಡವಿ, ನೀರೆಂದು ಲೀಸೆಸ್ ಕುಡಿಸಿ, ಭಯ ಹುಟ್ಟಿಸಿ, ಅಪಾಲಜಿಯನ್ನು ಬರೆಸಿಕೊಂಡು ಬಿಡುತ್ತಿದ್ದರು. ನಾನಾ ರೀತಿಯ ಹಿಂಸೆ ಕೊಡುತ್ತಿದ್ದರು. ನಮ್ಮನ್ನು ಬಂಧಿಸಿ ವ್ಯಾನಿನಲ್ಲಿ ಹಾಕಿ ಕತ್ತಲಲ್ಲಿ ಮಾಗಡಿ ಕಾಡಿನಲ್ಲಿ ಒಬ್ಬೊಬ್ಬರನ್ನೇ ದೂರದೂರ ಇಳಿಸಿ ಬಿಟ್ಟರು. ಒಬ್ಬಂಟಿಗನಾಗಿ ಕಾಡಿನಲ್ಲಿ ನನಗೆ ಭಯ ಆಯಿತು. ಬೆಳಕು ಹರಿಯುವ ವೇಳೆಗೆ ಎಲ್ಲ ಸತ್ಯಾಗ್ರಹಿಗಳು ಒಟ್ಟುಗೂಡಿ, ಬೆಂಗಳೂರು ಕಡೆ ಹೊರಟೆವು. ದಾರಿಯ ಊರ ಜನ ನಮಗೆ ತಿಂಡಿ, ನೀರು ಕೊಡಲು ಕೂಡ ಹೆದರುತ್ತಿದ್ದರು. ನಾವು ನಡೆದೇ ಬೆಂಗಳೂರಿಗೆ ಬಂದೆವು. ಅಲ್ಲಿ ಕಾಂಗ್ರೆಸ್ ಆಫೀಸಿನಲ್ಲಿ ಸುಧಾರಿಸಿಕೊಂಡು ಮತ್ತೆ ಬಂಗಾರದ ಗಣಿಗೆ ಹೋದೆವು. ಆಗ ಬಂಧಿಸಿ ಶಿಕ್ಷೆ ವಿಧಿಸಿದರು. ನಾವಿದ್ದ ಜೈಲಿನಲ್ಲಿ ಎಷ್ಟು ಜನ ಇರಬೇಕೋ ಅದರ ಮೂರುನಾಲ್ಕರಷ್ಟು ಜನರನ್ನು ಇಟ್ಟಿದ್ದರು. ಅಲ್ಲಿ ನಾವು ಅನ್ನಸತ್ಯಾಗ್ರಹ ಮಾಡಿದೆವು. ಆರನೆಯ ದಿನ ಬೆಂಗಳೂರು ಸೆಂಟ್ರಲ್ ಜೈಲಿಗೆ ಕಳುಹಿಸಿದರು. ಬಿಡುಗಡೆ ಆಗಿ ಊರಿಗೆ ಬಂದಾಗ ನಮಗೆ ಆಗಿದ್ದ ಜುಲ್ಮಾನೆಗಾಗಿ ಮನೆಯಲ್ಲಿನ ಸಾಮಾನು ಹರಾಜು ಮಾಡಿ ನಮಗೆ ಅವಮಾನ ಮಾಡಿದರು. ಮುಂದೆ ತಾಲ್ಲೂಕಿನಲ್ಲೆಲ್ಲ ಸಂಚರಿಸಿ, ಸತ್ಯಾಗ್ರಹಿಗಳನ್ನು ತಯಾರು ಮಾಡಿ ಕಳುಹಿಸುತ್ತಿದ್ದೆ. ಮುಂದೆ ಶಿಡ್ಲಘಟ್ಟ ತಾಲ್ಲೂಕಿನಲ್ಲಿ ಇದ್ದಾಗ ಸೆಕ್ಯೂರಿಟಿ ಆಕ್ಟ್ ಪ್ರಕಾರ ಬಂಧನಕ್ಕೆ ವಾರಂಟ್ ಇದ್ದ ವಿಚಾರ ತಿಳಿಸಿ, ಗುಪ್ತವಾಗಿ ಆಯಾ ತಾಲ್ಲೂಕುಗಳಲ್ಲಿ ಸಂಚರಿಸಿ, ಸತ್ಯಾಗ್ರಹಿಗಳನ್ನು ಕಳುಹಿಸುತ್ತಿದ್ದೆ. ಚಿಂತಾಮಣಿ, ಶಿಡ್ಲಘಟ್ಟ, ಚಿಕ್ಕಬಳ್ಳಾಪುರ ತಾಲ್ಲೂಕುಗಳಲ್ಲಿ ರಾತ್ರಿ 12 ರಿಂದ 4 ಘಂಟೆ ವರೆಗೆ ಸಂಚರಿಸುತ್ತಿದ್ದೆ. ಜನರ ಸಹಾಯವೂ ಚೆನ್ನಾಗಿತ್ತು. ಗುಡಿಬಂಡೆ, ಬಾಗೇಪಲ್ಲಿ, ಗೌರಿಬಿದನೂರು, ತಾಲ್ಲೂಕುಗಳಲ್ಲಿ ಆಗಾಗ ಹೋಗಿಬರುತ್ತಿದ್ದೆ. ಎಂಟು ಅಥವಾ ಹತ್ತು ತಿಂಗಳು ಹೀಗೆ ಸಂಚರಿಸುತ್ತ ವಾರಕ್ಕೆ ಒಮ್ಮೆ ಸ್ವಂತ ಮನೆಗೆ ಹೋಗುತ್ತಿದ್ದೆ. ನನ್ನ ಬಂಧನಕ್ಕಾಗಿ ಸರಕಾರ 500 ರೂ. ಬಹುಮಾನವನ್ನು ಘೋಷಿಸಿತ್ತು. ಮುಂದೆ

ಚಳವಳಿಯ ಶಕ್ತಿ ಕುಂದಿ ನನಗೆ ಬೇಜಾರಾಗಿ, ನಾನೇ ಬಂಧಿತನಾಗಬೇಕೆಂದು ಚಿಕ್ಕ ಬಳ್ಳಾಪುರದಲ್ಲಿ ಸಭೆ ಕರೆದು ಭಾಷಣ ಮಾಡಿದೆ. ಆದರೆ ಆಗ ಪಟೇಲ್ ಮಿರ್ಜಾ-ಒಪ್ಪಂದವಾಗಿ ನನ್ನ ಬಂಧನ ಆಗಲಿಲ್ಲ.

1942ರಲ್ಲಿ ತಂತಿ, ರೈಲ್ವೆ ಕಂಬಿ ಕೀಳುವುದು, ಪೋಸ್ಟಾಫೀಸಿಗೆ ಹಾನಿ ಮಾಡುವುದು ಮುಂತಾದ ವಿಧ್ವಂಸಕ ಕೃತ್ಯಗಳನ್ನು ಊರಲ್ಲಿ ನಡೆಸಿದೆವು. 6-9-1942ಕ್ಕೆ ನನ್ನ ಬಂಧನ ಆಗಿ 13 ತಿಂಗಳು ಜೈಲಿನಲ್ಲಿ ಇದ್ದೆ.

1947ರಲ್ಲಿ ಕಳವರ ನಂಜಪ್ಪ ಪ್ರಜಾಪ್ರತಿನಿಧಿ ಸಭಾಸದಸ್ಯರವರ ಜೊತೆಯಲ್ಲಿ ತಾಲ್ಲೂಕಿನಲ್ಲಿ ಪ್ರಚಾರಕ್ಕೆ ಹೋದೆವು. ಆಗಲೇ ಸರಕಾರದವರು ಪ್ರಚಾರಮಾಡಿ ಭಯ ಹುಟ್ಟಿಸಿದ್ದರಿಂದ ಹೋದಲ್ಲಿ ನಮಗೆ ತಿಂಡಿ, ನೀರು ಸಹ ಸಿಗುತ್ತಿರಲಿಲ್ಲ. ಅಡವಿಯ ಹಣ್ಣು ಹಂಪಲು ತಿಂದು ಒಂದು ವಾರ ಜವಾಬ್ದಾರಿ ಸರಕಾರದ ಬಗ್ಗೆ ಪ್ರಚಾರಮಾಡಿ ಬಂದೆವು. ಮುಂದೆ ನನ್ನ ಬಂಧನ ಆಯಿತು. ಬೆಂಗಳೂರು ಜೈಲು, ಕೃಷ್ಣರಾಜಪುರಂ ಕ್ಯಾಂಪಿನಲ್ಲಿಟ್ಟರು.

ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷ, ಡಿ.ಸಿ.ಸಿ. ಸೆಕ್ರೆಟರಿ ಹಾಗು ನಾನಾ ಸಾಮಾಜಿಕ ಹಾಗು ಸಹಕಾರಿ ಸಂಸ್ಥೆಗಳಲ್ಲಿ ಇಂದಿನ ವರೆಗೂ ನಿಸ್ವಾರ್ಥದಿಂದಲೇ ದುಡಿಯುತ್ತ ಬಂದಿದ್ದೇನೆ.

ಮೈ.ಕೋ. 4

## ಎ. ಮುನಿಯಪ್ಪ

ಜನನ : 1912 ಉದ್ಯೋಗ : ವ್ಯವಸಾಯ ವಿಳಾಸ : ಚಿಕ್ಕಬಳ್ಳಾಪುರ



1938ರಲ್ಲಿ ಧ್ವಜ ಸತ್ಯಾಗ್ರಹ ಪ್ರಾರಂಭವಾಗಿ, ವಿದುರಾಶ್ವತ್ಥದಲ್ಲಿ 1938ರ ಏಪ್ರಿಲ್ ತಿಂಗಳು 25ರಂದು ರಾಷ್ಟ್ರೀಯ ಧ್ವಜ ಆರೋಹಣ ಮಾಡುತ್ತಿದ್ದಾಗ ಸಾವಿರಾರು ಜನ ಸೇರಿದ್ದ ಬಹಿರಂಗ ಸಭೆಯ ಮೇಲೆ ಪೋಲೀಸರು ಗುಂಡುಗಳನ್ನು ಹಾರಿಸಿದಾಗ, ವಿದುರನಾರಾಯಣಸ್ವಾಮಿ ಸನ್ನಿಧಿಯಲ್ಲಿ ಪ್ರದಕ್ಷಿಣೆ ಮಾಡುತ್ತಿದ್ದ ಗರ್ಭಿಣಿ ಹೆಣ್ಣು ಮಗಳಾದ ಗೌರಮ್ಮ ಎಂಬುವರಿಗೆ ಗುಂಡಿನೇಟು ಬಿದ್ದು ಆ ಪುಣ್ಯಕ್ಷೇತ್ರದಲ್ಲಿಯೇ ಮರಣಹೊಂದಿದರೆಂಬ ವಾರ್ತೆಯೊಂದು ಕೋಲಾರ ಜಿಲ್ಲೆಯಲ್ಲಿ

ಎಲ್ಲಾ ಕಡೆ ಹರಡಿ ಜಿಲ್ಲಾದ್ಯಂತ ಪ್ರತಿ ಸ್ಕೂಲುಗಳ ವಿದ್ಯಾರ್ಥಿಗಳೂ ಮುಷ್ಕರ ನಡೆಸಿ ಆ ಭೀಕರ ಕೊಲೆಯನ್ನು ಖಂಡಿಸಿದರು. ಆ ಸಂಬಂಧವಲ್ಲಿ ಚಿಕ್ಕಬಳ್ಳಾಪುರದಲ್ಲಿ ಅದೇ ದಿನ ಆ ಊರ ಕಾಂಗ್ರೆಸ್ ಮುಖಂಡರಾದ ಕೆ. ವೆಂಕಟರಾಯಪ್ಪ, ಕೆ. ಸಂಪಂಗಿ ರಾಮಯ್ಯ, ಕೆ. ವೆಂಕಟಕೃಷ್ಣಪ್ಪ, ಸಂಪತ್ ಕುಮಾರನ್, ಯೆಲ್ಲೂರ್ ನರಸಿಂಹಯ್ಯ, ಎ. ಸಿ. ಹನುಮಂತಪ್ಪ ಇನ್ನೂ ಇತರರ ಮುಖಂಡತ್ವದಲ್ಲಿ ಧ್ವಜಸತ್ಯಾಗ್ರಹದಲ್ಲಿ ನಾನು ಪಾಲ್ಗೊಂಡು 144ನೇ ಸೆಕ್ಷನ್ ಜಾರಿಮಾಡಿದ್ದನ್ನೂ ಮುರಿದು ಮೂರು ತಿಂಗಳು ಕಾರಾಗೃಹವಾಸಕ್ಕೆ ಹೋದೆ. ಜೈಲುಶಿಕ್ಷೆಯನ್ನು ಅನುಭವಿಸಿ ವಾಪಸ್ ಬರುವುದರ ಒಳಗಾಗಿ ಕೆ.ಜಿ.ಎಫ್.ನಲ್ಲಿ ಸತ್ಯಾಗ್ರಹ ಶುರುವಾಗಿತ್ತು. ಅಲ್ಲಿಂದ ಕೆ.ಜಿ.ಎಫ್.ನಲ್ಲಿ ಮೂರು ಸಲ ಶಿಕ್ಷೆಯನ್ನು ಅನುಭವಿಸಿ (ಒಟ್ಟು ಆರು ತಿಂಗಳು) ಚಿಕ್ಕಬಳ್ಳಾಪುರಕ್ಕೆ ವಾಪಸ್ಸು ಬಂದೆ. ಆಗ ಬೆಂಗಳೂರು, ಮೈಸೂರುಗಳಲ್ಲಿ ಸತ್ಯಾಗ್ರಹ ನಡೆಯುತ್ತಾ ಇರುವುದನ್ನು ನೋಡಿ, ಮೈಸೂರಿನಲ್ಲಿ ರಂಗಾಚಾರ್ಲು ಪುರಭವನದಲ್ಲಿ 144ನೇ ಸೆಕ್ಷನ್ ಮುರಿದು ಏಳು ತಿಂಗಳು ಕಠಿಣ ಶಿಕ್ಷೆಯನ್ನು ಅನುಭವಿಸಿರುತ್ತೇನೆ. ಅಲ್ಲಿಂದ 1942ರ ಸತ್ಯಾಗ್ರಹದಲ್ಲಿ ಪಬ್ಲಿಕ್ ಸೆಕ್ಯೂರಿಟಿ ಆಕ್ಟ್ ಪ್ರಕಾರ ನನ್ನನ್ನು ಬಂಧಿಸಿ ಆರು ತಿಂಗಳು ವಿಚಾರಣೆ ಇಲ್ಲದೆ ಇಟ್ಟು ಕಡೆಗೆ ಬಿಡುಗಡೆ ಮಾಡಿದರು. ಆಮೇಲೆ 'ಕ್ವಿಟ್ ಇಂಡಿಯಾ' ನಿರ್ಣಯದ ಮೇಲೆ ಬೆಂಗಳೂರು ಸುಭಾಸ್ ನಗರದಲ್ಲಿ 144ನೇ ಸೆಕ್ಷನ್ ಮತ್ತು ಪೋಲೀಸ್ 39ನೇ ಸೆಕ್ಷನ್ ಮುರಿದ ಬಗ್ಗೆ ಶಿಕ್ಷೆಗೆ ಗುರಿಯಾಗಿ ಏಳು ತಿಂಗಳು ಜೈಲುವಾಸವನ್ನು ಅನುಭವಿಸಿದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ನನ್ನ ಒಟ್ಟು ಜೈಲುವಾಸ ಎರಡು ವರ್ಷ ಎರಡು ತಿಂಗಳು ಆಗಿರುತ್ತದೆ. ಬೇರೆ ಬೇರೆ ಕಾಲದಲ್ಲಿ ಜೈಲುಗಳಲ್ಲಿ ನನ್ನ ಜೊತೆ ಕೋಲಾರ ಜಿಲ್ಲೆಯ ಕೆ. ಪಟ್ಟಾಭಿರಾಮನ್, ರಾಮಾಚಾರ್, ಎನ್. ಸಿ. ನಾಗಯ್ಯ ರೆಡ್ಡಿ, ಎನ್. ಸಿ. ತಿಮ್ಮಾರೆಡ್ಡಿ, ಆವಲರೆಡ್ಡಿ, ಟಿ. ಕೆ. ಗಂಗ ರೆಡ್ಡಿ, ಅಪ್ಪಸ್ವಾಮಿ ರೆಡ್ಡಿ, ಎಂ. ಕೆ. ನಾರಾಯಣಪ್ಪ, ಬಿ. ಎಲ್. ನಾರಾಯಣಸ್ವಾಮಿ, ಸುಬ್ಬರಾವ್, ರಾಯಲ್ ಪಾಂಡುರಂಗ ರೆಡ್ಡಿ, ಎಂ. ವಿ. ಕೃಷ್ಣಪ್ಪ, ವೆಂಕಟರಾಮಪ್ಪ, ಸರ್ವಜ್ಞಮೂರ್ತಿ, ಕೋದಂಡರಾಮಯ್ಯ ಶೆಟ್ಟಿ, ಪೈಲ್ವಾನ್ ರಾಮಚಂದ್ರಪ್ಪ, ಕೆ.ಜಿ.ಎಫ್.ನ ಜಯಚಂದ ಬಾಫ್ನ, ಎಂ. ಸಿ. ಪೆರುಮಾಳ್, ಷಣ್ಮುಗಂ; ಮಾಲೂರಿನ ಎಚ್. ಸಿ. ಲಿಂಗಾ ರೆಡ್ಡಿ, ಆವತಿ ಹನುಮಂತರಾಯಪ್ಪ, ಸೂರಂ ರಾಮಯ್ಯ ಇವರೆಲ್ಲ ಇದ್ದರು. ನಾನು 1952, 1957, 1967 —ಹೀಗೆ ಮೂರು ಸಲ ಶಾಸನಸಭೆಯ ಸದಸ್ಯನಾಗಿ ಸೇವೆಸಲ್ಲಿಸಿದ್ದೇನೆ.



ದಿ॥ ಜಸ್ಟಿಸ್ ಎಸ್. ಎಸ್. ಸೆಟ್ಲೂರ (1860–1930) ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಪ್ರಥಮ ಅಧ್ಯಕ್ಷರು (1921)



ಬೆಂಗಳೂರಿನಲ್ಲಿನ ಆರಂಭದ ಗಣ್ಯ ಕಾಂಗ್ರೆಸ್ ಕಾರ್ಯಕರ್ತರು (ಎಡದಿಂದ ಬಲಕ್ಕೆ) : ಜಮುಖಂಡಿ ಭೀಮರಾವ್, ಎಚ್. ವಿ. ಸುಬ್ರಹ್ಮಣ್ಯಂ, ರಾಮುಲಾಲ್ ತಿವಾರಿ

ಶಿವಪುರ ಸತ್ಯಾಗ್ರಹಾಶ್ರಮ (1938)—ಆಶ್ರಮದ ಉದ್ಘಾಟನೆ. (ಎಡದಿಂದ) : ನಂಜನಗೂಡು ಶ್ರೀಕಂಠಯ್ಯ, ಎಚ್. ಕೆ. ವೀರಣ್ಣಗೌಡ, ಎ. ಜಿ. ಬಂದೀಗೌಡ, ಎಚ್. ಬಿ. ಗುಂಡಪ್ಪಗೌಡ, ಎ. ಭೀಮಪ್ಪನಾಯಕ, ಕೆ. ಸಂಪಂಗಿರಾಮಯ್ಯ, ಎನ್. ಸಿ. ತಿಮ್ಮಾರೆಡ್ಡಿ, ಟಿ. ಸುಬ್ಬಣ್ಣ

[ಚಿತ್ರಗಳು : ಶ್ರೀ ಎಸ್. ಎನ್. ಗುಪ್ತ, ಕಟಕ ಪಬ್ಲಿಸಿಟಿ ಇವರ ಕೃಪೆ

ಕಬ್ಬನ್‌ಪೇಟೆ ರಾಮಸ್ವಾಮಿ, ಬಳ್ಳಾರಿ ಸಿದ್ದಮ್ಮ: ಶಿವಪುರ ಸತ್ಯಾಗ್ರಹದ ಕಾಲಕ್ಕೆ (1938)
ಧ್ವಜಾರೋಹಣಕ್ಕೆ ತೆರಳುತ್ತಿರುವುದು

ನಾಯಕರ ಬಂಧನ—ಶಿವಪುರ ಕಾಂಗ್ರೆಸ್ (1938): ಪೋಲಿಸ್ ವ್ಯಾನ್ ಬಳಿ—(ಎಡದಿಂದ):
ಕೆ. ಸಿ. ರೆಡ್ಡಿ, ಎಚ್. ಸಿ. ದಾಸಪ್ಪ, ವಿ. ವೆಂಕಟಪ್ಪ

[ಚಿತ್ರಗಳು: ಶ್ರೀ ಎಸ್. ಎನ್. ಗುಪ್ತ, ಕಟಿಕ ಪಬ್ಲಿಸಿಟಿ, ಇವರ ಕೃಪೆ



ವಿದುರಾಶ್ವತ್ಥ (1939) : ಅಧ್ಯಕ್ಷರ ಮೆರವಣಿಗೆ

[ಚಿತ್ರ : ಎಸ್. ಎನ್. ಗುಪ್ತ, ಕಟಕ ಪಬ್ಲಿಸಿಟಿ, ಇವರ ಕೃಪೆ



ವಿದುರಾಶ್ವತ್ಥ (1939) : ಮಹಾರಾಜರ ಜೊತೆ ಆದ ಒಪ್ಪಂದದಂತೆ ಎರಡು ಧ್ವಜಗಳ
ಹಾರಾಟ—ತ್ರಿವರ್ಣ ಹಾಗೂ ಸಂಸ್ಥಾನೀ ಧ್ವಜಗಳು

[ಚಿತ್ರ : ಶ್ರೀ ಎಸ್. ಎನ್. ಗುಪ್ತ, ಕಟಕ ಪಬ್ಲಿಸಿಟಿ ಇವರ ಕೃಪೆ

ವ್ಯ.ಕೋ. 5

# ಜಿ. ವಿ. ವೆಂಕಟಸ್ವಾಮಿ

ಜನನ : 1915 ಉದ್ಯೋಗ : ವ್ಯವಸಾಯ ವಿಳಾಸ : 44, ಮಹಾಲಕ್ಷ್ಮೀಪುರಂ, ಬೆಂಗಳೂರು-22



1927ರಲ್ಲಿ ಗಾಂಧೀಜಿ ಏಪ್ರಿಲ್ 20ಕ್ಕೆ ನಂದಿ ಬೆಟ್ಟಕ್ಕೆ ವಿಶ್ರಾಂತಿಗೆಂದು ಬಂದಿರಲು ನಮ್ಮ ಹಿರಿಯರೇ ಅಲ್ಲಿನ ವ್ಯವಸ್ಥೆಗಳ ಜವಾಬ್ದಾರಿ ಹೊತ್ತಿದ್ದು, ಅಲ್ಲಿ ಬಾಲಕನಾದ ನನ್ನನ್ನೂ ಸ್ವಯಂಸೇಕನಾಗಿ ಕೆಲಸಕ್ಕೆ ನೇಮಿಸಿದ್ದರು. ಅಂದಿನಿಂದಲೇ ನಾನು ಖಾದೀಧಾರಿಯಾದೆ. 1937ರಲ್ಲಿ ಮೈಸೂರು ಕಾಂಗ್ರೆಸ್ ಆರಂಭ ಆಗಲು ನಾನು ತಾಲ್ಲೂಕು ಹಾಗೂ ಟೌನ್ ಕಾಂಗ್ರೆಸ್ ಕಮಿಟಿ ಸದಸ್ಯನಾಗಿ ಆಯ್ಕೆಗೊಂಡು ಅನೇಕ ವರ್ಷ ಆ ಕೆಲಸ ಮಾಡಿದೆ. ತಾ|| ಕಮಿಟಿಗೆ ಕೆ. ವೆಂಕಟರಾಯಪ್ಪ ಖಜಾಂಚಿಯಾಗಿಯೂ ಕೆ. ಎಂ. ಪುಟ್ಟಸ್ವಾಮಿ, ಎ. ಸಿ. ಹನುಮಂತಪ್ಪ, ಕೆ. ವೆಂಕಟಕೃಷ್ಣಪ್ಪ (ಕಳವರ), ಟೈಲರ್ ಚನ್ನಬಸಪ್ಪ, ವಂಕಾಯಿಲು ವೆಂಕಟರಾಯಪ್ಪ, ಬಡ್ಡಿಪಲ್ಲಿ ವೆಂಕಟರಾಯಪ್ಪ, ಕೆ. ಎನ್. ತಿಮ್ಮಯ್ಯ (ಕಳವರ), ಕೆ. ನಂಜಪ್ಪ (ಕಳವರ), ಕೆ. ಸಂಪತ್ಕುಮಾರನ್ ಮುಂತಾದವರು ಸದಸ್ಯರಾಗಿದ್ದರು. ಕಳವರ, ಮೈಲಪ್ಪನಹಳ್ಳಿ, ಮುಂಡಿಕಲ್ಲು, ಹಿರಿದಾಗವಲೆ, ಕಮತನಹಳ್ಳಿ ಮುಂತಾದ ಹಳ್ಳಿಗಳಲ್ಲಿ ಕಾಂಗ್ರೆಸ್ ಕಮಿಟಿ ಸ್ಥಾಪಿಸಿದೆವು. ಇದಲ್ಲದೆ ವಿದ್ಯಾರ್ಥಿಗಳ, ಕಾರ್ಮಿಕರ, ರೈತರ ಸಂಘಟನೆಗಳನ್ನೂ ಮಾಡಿ ಅವುಗಳ ಪದಾಧಿಕಾರಿಯಾಗಿ ನಾನು ಇದ್ದೆನು. ಇದಲ್ಲದೆ ಖಾದಿಪ್ರಚಾರ, ಚರಕಾಪ್ರಚಾರ ಮುಂತಾದ ಅನೇಕ ಚಟುವಟಿಕೆಗಳನ್ನು ನಡೆಸುವುದರ ಜೊತೆ ಅನೇಕ ವೃತ್ತಪತ್ರಿಕೆಗಳ ಬಾತ್ಮೀದಾರನಾಗಿದ್ದು ಅವುಗಳಿಗೆ ವರದಿಗಳನ್ನು ಕಳುಹಿಸುತ್ತಿದ್ದೆನು. ರೈಲು ವ್ಯವಸ್ಥೆ, ಅಂಚೆ ವ್ಯವಸ್ಥೆ, ಆಹಾರ ಸರಬರಾಜು, ಕಟ್ಟುಕಾಲುವೆ ವಿಷಯ ಮುಂತಾದ ಸಂಗತಿಗಳ ಬಗ್ಗೆ ಜನರ ಕುಂದುಕೊರತೆಗಳನ್ನು ನಿವಾರಿಸಲು ಹೆಣಗುವುದನ್ನು ನಡೆಸಿದ್ದೆನು. ಹಳ್ಳಿಹಳ್ಳಿಗೆ ಕಾಲ್ನಡೆಯಿಂದ ತಿರುಗಿ ಕೆಲಸ ಮಾಡುತ್ತಿದ್ದೆನು. ಪಟ್ಟಾಭಿ ಸೀತಾರಾಮಯ್ಯನವರು (1938 ಅಥವಾ 39) ನಮ್ಮ ಊರಿಗೆ ಬಂದಾಗ ಕೋಟೆ ಮೈದಾನಿನಲ್ಲಿ ಅವರ ಸಭೆ ಏರ್ಪಡಿಸಿದ್ದೆವು.

1939ರ ಕೆ.ಜಿ.ಎಫ್. ಸತ್ಯಾಗ್ರಹದ ಕಾಲಕ್ಕೆ ಚಿಕ್ಕಬಳ್ಳಾಪುರದಿಂದ 20 ಜನ

ಬೌರಿಂಗ್‌ಪೇಟೆ ಶಿಬಿರಕ್ಕೆ ಹೋಗಿದ್ದೆವು. ನಮ್ಮ ಊರ ಮುನಿನಾಗಪ್ಪ, ಶಿವರುದ್ರಯ್ಯ ಮುಂತಾದವರಿದ್ದರು. ಎಂ. ದೊರೆಸ್ವಾಮಿ ಶಿಬಿರದ ವ್ಯವಸ್ಥಾಪಕರು. ನನ್ನ ಜೊತೆ 40 ಜನವನ್ನು ಜೇತಮಂಗಲಕ್ಕೆ ಸತ್ಯಾಗ್ರಹಕ್ಕೆ ಕಳುಹಿಸಿದರು. ಅಲ್ಲಿ ಎಂಟು ದಿನ ಒಂದು ಹಳಿಮನೆಯಲ್ಲಿ ಶಿಬಿರ ನಡೆಸಿದೆವು. ಆ ಊರ ಜನ ಎಲ್ಲ ಅನುಕೂಲಮಾಡಿ ಕೊಟ್ಟರು. ಮುಂದೆ ಮತ್ತೆ ಬೌರಿಂಗ್‌ಪೇಟೆಗೆ ಬಂದೆವು. ಅಲ್ಲಿಂದ 6-7 ಜನರ ತಂಡ ಸಹಿತ ನನ್ನುನ್ನು ಕೆ.ಜಿ.ಎಫ್.ಗೆ ಕಳುಹಿಸಿದರು. ಶಿವರುದ್ರಯ್ಯ, ಟಿ. ರುದ್ರಪ್ಪ ನನ್ನ ಜೊತೆ ಇದ್ದರು. ಕೆ.ಜಿ.ಎಫ್.ನಲ್ಲಿ ರೈಲಿನಿಂದ ಇಳಿಯುತ್ತಿದ್ದಂತೇ ಬಂಧಿಸಿ ರಾತ್ರಿ ಚಿತ್ತೂರು ಕಾಡಿಗೆ ವಾಹನದಲ್ಲಿ ಒಯ್ದು ಒಬ್ಬೊಬ್ಬರನ್ನು ಒಂದೊಂದು ಸ್ಥಳದಲ್ಲಿ ಬಿಟ್ಟರು. ಮರುದಿನ ಬೆಳಗ್ಗೆ ಎಲ್ಲರೂ ಒಟ್ಟಾಗಿ ಶ್ರೀನಿವಾಸಪುರಕ್ಕೆ ಬಂದೆವು. ಆ ಊರ ಜನ ನಮ್ಮ ಮೆರವಣಿಗೆ ಮಾಡಿದರು. ಊಟೋಪಚಾರಮಾಡಿ ಮತ್ತೆ ಬೌರಿಂಗ್‌ಪೇಟೆಗೆ ಕಳುಹಿಸಿದರು. ಮರುದಿನ ಮತ್ತೆ ಕೆ.ಜಿ.ಎಫ್.ನಲ್ಲಿ ಸತ್ಯಾಗ್ರಹಮಾಡಲು ಏಳು ದಿನದ ಸಾದಾ ಶಿಕ್ಷೆ ಆಯಿತು. ಜೈಲಿನಲ್ಲಿ ಮಾತ್ರ ನಾನಾರೀತಿಯ ಹಿಂಸೆ ಕೊಟ್ಟರು. ಅಮೇಧ್ಯ ಬೆರೆತ ನೀರನ್ನು ಬಾಟ್ಲಿಯಲ್ಲಿ ತುಂಬಿ ಬಲಾತ್ಕಾರದಿಂದ, ಎದೆಮೇಲೆ ಕೂತು ಕುಡಿಸಿದರು. ಬೂಟ್ಸುಗಾಲಿಂದ ಸಾಕಷ್ಟು ಒದ್ದರು.

ಮೈಸೂರು ಟೌನ್‌ಹಾಲ್ ಸತ್ಯಾಗ್ರಹದಲ್ಲಿ ಪಾಲುಗೊಂಡಾಗ ಏಳು ತಿಂಗಳು ಕಠಿಣ ಶಿಕ್ಷೆ ಕೊಟ್ಟರು. ಈ ಶಿಕ್ಷೆ ಪೂರ್ತಿ ಅನುಭವಿಸಿ 9-5-1940ರಲ್ಲಿ ಬಿಡುಗಡೆ ಆದೆ. ಈ ನಡುವೆ ನಮ್ಮ 30 ಎಕರೆ ಜಮೀನನ್ನು ಮುಟ್ಟುಗೋಲು ಹಾಕಿ ಪರಭಾರೆ ಮಾಡಿ ತೊಂದರೆ ಕೊಟ್ಟರು. 1942ರ ಚಳವಳಿ ಕಾಲಕ್ಕೆ ಸತ್ಯಾಗ್ರಹಿಗಳನ್ನು ಜಮಾಯಿಸಿ ಅವರಿಗೆ ತಿಂಡಿ ವಗೈರೆ ಏರ್ಪಾಡುಮಾಡುತ್ತಿದ್ದೆ. 1947ರ ಸತ್ಯಾಗ್ರಹದ ಕಾಲಕ್ಕೆ ನಮ್ಮ ಮನೆಯಲ್ಲೇ ಗುಪ್ತವಾಗಿ ಶಿಬಿರ ನಡೆಸುತ್ತಿದ್ದೆ. ಈ ಕಾಲಕ್ಕೆ ಕೆಲವು ಪೋಲೀಸರು ಬಾತ್ಮಿಗಳನ್ನು ಕೊಡುತ್ತಿದ್ದರು. ಈ ಕಾಲದಲ್ಲಿ ನನ್ನ ಜವಳಿ ಅಂಗಡಿ ಲೈಸೆನ್ಸನ್ನು ಕಾರಣವಿಲ್ಲದೆ ಕಿತ್ತುಕೊಂಡು ತೊಂದರೆ ಕೊಟ್ಟರು. ಮುಂದೆ ಜೀವನೋಪಾಯಕ್ಕೆ ತೊಂದರೆ ಆಗಿ 1957ರಲ್ಲಿ ಬೆಂಗಳೂರಿಗೆ ಬಂದು ಸಂಸಾರವನ್ನು ಸಲಹಲು ಪಡಬಾರದ ಪಾಡು ಪಡುತ್ತಿರುವೆ.

1938ರಲ್ಲಿ ಚಿಕ್ಕಬಳ್ಳಾಪುರ ಬಳಿಯ ಕಳವರ, ಪೆರೆಸಂದ್ರಗಳಲ್ಲಿ ಸರಕಾರೀ ಪ್ಲ್ಯಾಂಟೇಶನ್‌ಗಳಲ್ಲಿ ಅರಣ್ಯಸತ್ಯಾಗ್ರಹ ಮಾಡಿದ್ದೆವು. ಆ ಕಾಲಕ್ಕೆ ನಮ್ಮ ಊರಿಂದ ಕೆ. ವೆಂಕಟರಾಮಪ್ಪ, ಪಂಕಾಯಲು ವೆಂಕಟರಾಯಪ್ಪ ಇವರು ಎ.ಐ.ಸಿ.ಸಿ. ಸದಸ್ಯ ರಾಗಿದ್ದರು. ಚಳವಳಿ ಕಾಲಕ್ಕೆ ನನಗೆ ಒಟ್ಟು ಏಳು ತಿಂಗಳು ಏಳು ದಿನ ಶಿಕ್ಷೆ ಆಗಿದೆ.

ವೈ.ಕೋ. 6

# ಟಿ. ಕೆ. ಗಂಗಿ ರೆಡ್ಡಿ

ಜನನ : 1924 ಉದ್ಯೋಗ : ಕೃಷಿ ವಿಳಾಸ : ಚಿಂತಾಮಣಿ



ಹೈಸ್ಕೂಲ್ ಸೆಕೆಂಡ್ ಫಾರ್ಮ್‌ನಲ್ಲಿ ನಾನು ವ್ಯಾಸಂಗ ಮಾಡುತ್ತಿದ್ದ ಸಮಯದಲ್ಲಿ ವ್ಯಕ್ತಿಗತ ಸತ್ಯಾಗ್ರಹ ಆರಂಭವಾಗಿ ವಿನೋಬಾಜೀಯವರನ್ನು ಪ್ರಪ್ರಥಮ ಸತ್ಯಾಗ್ರಹಿಯನ್ನಾಗಿ ಗಾಂಧೀಜಿ ಆರಿಸಿದರು. ಅನೇಕ ನಾಯಕರುಗಳೊಂದಿಗೆ ಅವರು ಬಂದಿಯಾದರು. ಈ ವಿಚಿತ್ರವಾದ ಸತ್ಯಾಗ್ರಹದ ಪರಿಣಾಮ ನನ್ನ ಮೇಲೆ ಆಗಿ ನಾನೂ ರಾಷ್ಟ್ರೀಯ ಹೋರಾಟಗಳಲ್ಲಿ ಭಾಗವಹಿಸಬೇಕೆಂಬ ಇಚ್ಛೆಯಿಂದ ಶಾಲೆಗೆ ಹೋಗುವುದನ್ನು ನಿಲ್ಲಿಸಿ ತಂದೆ ತಾಯಿಗಳಿಗೆ ಹೇಳದೆ ಕೇಳದೆ ಗಾಂಧೀಜಿ ವಾಸವಾಗಿದ್ದ ವರ್ಧಾಕ್ಕೆ ಹೊರಟೆ. ಹೆಚ್ಚಿನ ರೀತಿಯಲ್ಲಿ ಗಾಂಧೀಜಿಯವರ ಸಿದ್ಧಾಂತಗಳನ್ನು ಅಭ್ಯಾಸ ಮಾಡಬೇಕೆಂಬ ಹಂಬಲದಿಂದ ಸ್ವತಃ ಅವರನ್ನೇ ಕಂಡು ಅಲ್ಲಿಯೇ ಇದ್ದು ಆಶ್ರಮ ಜೀವನವನ್ನೂ ಅನುಭವಿಸಿದ ನಂತರ ಸ್ವಾತಂತ್ರ್ಯಸಂಗ್ರಾಮದಲ್ಲಿ ಧುಮುಕಬೇಕೆಂದು ನಿಶ್ಚಯಿಸಿದೆ. ಮೋಟಾರು, ರೈಲು, ಸೈಕಲ್ ವಗೈರೆ ವಾಹನ ಯಾವುದನ್ನೂ ಉಪಯೋಗಿಸದೆ ಕಾಲ್ನಡಗೆಯಲ್ಲಿಯೇ ಯಾತ್ರೆಮಾಡಿ ವರ್ಧಾ ತಲುಪಬೇಕೆಂದು ದೃಢಸಂಕಲ್ಪಮಾಡಿ ದಾರಿಯನ್ನು ಅರಿಯದಿದ್ದರೂ ಒಂದು ತಿಂಗಳು ಹದಿನೇಳು ದಿನಗಳು ನಡೆದು 1800 ಮೈಲು ದೂರದ ವರ್ಧಾವನ್ನು ಮುಂಬೈ ಮುಖೇನ ಹೋಗಿ ಸೇರಿದೆ.

ಕಲ್ಕತ್ತೆಗೆ ಭೇಟಿ ಕೊಟ್ಟಿದ್ದ ಚೀಣಾದ ಮಾರ್ಷಲ್ ಚಿಯಾಂಗ್ ಕೈ ಷೇಕ್‌ರನ್ನು ಸಂಧಿಸಲು ಹೊರಟಿದ್ದ ಗಾಂಧಿಯವರು ಆಶ್ರಮದಲ್ಲಿ ಇರದೇ ಇದ್ದುದರಿಂದಲೂ ಅಲ್ಲಿರಲು ಯಾರಿಗೂ ಅವಕಾಶವಿಲ್ಲವಾದ್ದರಿಂದಲೂ ಕಷ್ಟವಾಗಿ ಕೊನೆಗೂ ನನ್ನ ಹಟಮಾರಿತನದಿಂದ ಅವಕಾಶ ಕಲ್ಪಿಸಿಕೊಂಡೆನು. ಆದರೆ ಅವರ ನಿತ್ಯಜೀವನದ ಸಿದ್ಧಾಂತಗಳ ಮನನಮಾಡಿಕೊಳ್ಳಲು ಕಷ್ಟವೆನಿಸಿತು.

ಆಶ್ರಮದಲ್ಲಿರುವ ಅವಕಾಶವನ್ನು ದೊರಕಿಸಿಕೊಂಡ ನಾನು ನೂಲುವ ಕೇಂದ್ರದಲ್ಲಿರಬೇಕಾಯಿತು. ಆರು ತಿಂಗಳು ನೂಲುವ ಕೇಂದ್ರದಲ್ಲಿ ಉಳಿದ ನಾನು ಅಖಿಲ ಭಾರತ ಗ್ರಾಮಕೈಗಾರಿಕಾ ಕೇಂದ್ರವಾದ ಮಗನ್ವಾಡಿ ಮತ್ತು ನಲ್ವಾಡಿ ವಿನೋಬಾ

ಆಶ್ರಮಗಳಲ್ಲಿನ ಕಾರ್ಯಕಲಾಪ, ಗಾಂಧೀಜಿಯವರ ಪ್ರಾರ್ಥನಾಸಭೆ, ನಿತ್ಯಜೀವನದ ಕಾರ್ಯಕಲಾಪಗಳನ್ನೇ ವೀಕ್ಷಿಸುತ್ತಿದ್ದೆ. ಸ್ವಲ್ಪಮಟ್ಟಿಗೆ ವಿಷಯ ಸಂಗ್ರಹಣೆ ಮಾಡಿದೆ.

ರಾಷ್ಟ್ರವು ಪರಕೀಯರೊಡನೆ ಅಂತಿಮ ಹೋರಾಟಕ್ಕೆ ಸಿದ್ಧಮಾಡಿಕೊಳ್ಳುತ್ತಿದ್ದು 1942ರಲ್ಲಿ ಸೇವಾಗ್ರಾಮದಿಂದ ವಾಪಸ್ಸಾಗಿ, "ಇದೇ ಕಡೇ ಹೋರಾಟ, ಈ ಹೋರಾಟದಲ್ಲಿ ದುಡಿಯಬೇಕು ಇಲ್ಲವೇ ಮಡಿಯಬೇಕು" ಎಂಬುದಾಗಿ ಗಾಂಧೀಜಿ ತಿಳಿಸಲು ನಾನು ಊರಿಗೆ ಮರಳಿದೆ. ಆಗಸ್ಟ್ 15, 1942ರಲ್ಲಿ ಸಹೋದ್ಯೋಗಿಗಳಲ್ಲಿ ಹನ್ನೆರಡು ಮಂದಿಯೊಂದಿಗೆ ನನ್ನನ್ನು ಪಬ್ಲಿಕ್ ಸೆಕ್ಯೂರಿಟಿ ಆರ್ಡರ್ ಮೇರೆಗೆ 20 ದಿನಗಳು ಬಂಧಿಸಿದರು. ಮತ್ತು ಮುಂದೆ ಮೂರು ದಿನಗಳ ಕಾಲ ಸಜೆಯನ್ನು ವಿಧಿಸಿದರು. ಪುನಃ ಜೈಲಿನಲ್ಲಿಟ್ಟು, 1943ರ ಅಂತ್ಯದಲ್ಲಿ ಬಿಡುಗಡೆಮಾಡಿದರು. ಜೈಲಿನಲ್ಲಿದ್ದ ಸಮಯದಲ್ಲಿ ನನಗಾಗಿ ಕೊರಗಿ ಕೊರಗಿ ಮರಣಾವಸ್ಥೆಯಲ್ಲಿದ್ದ ತಂದೆತಾಯಿಗಳನ್ನು ನೋಡಲು ಬಿಡದೆ ತಂದೆತಾಯಿಗಳ ಮರಣಾನಂತರ, ಹದಿನೈದು ದಿನಗಳು ಕಳೆದನಂತರ, ಪೆರೋಲಿನ ಮೇಲೆ ಬಿಡುಗಡೆ ಮಾಡಿ ಮತ್ತೆ ಜೈಲಿಗೆ ಬರುವಂತೆ ಆಜ್ಞೆ ಮಾಡಿದರು.

ಬಿಡುಗಡೆ ಆದನಂತರ ನಾನು ಸದಾಕಾಲವೂ ರಾಜಕೀಯ ಚಟುವಟಿಕೆಗಳಲ್ಲಿ ಮುಖ್ಯ ಪಾತ್ರ ವಹಿಸುತ್ತಾ ವಯಸ್ಕರ ಶಿಕ್ಷಣ, ಹಿಂದೀ ಪ್ರಚಾರಗಳಿಗೆ ಉತ್ತೇಜನ ನೀಯುತ್ತಿದ್ದು, ಗ್ರಾಮಗಳಲ್ಲಿ ಮಲೇರಿಯಾ ಅಂಟುರೋಗದಿಂದ ಸಾವಿಗೀಡಾಗುತ್ತಿದ್ದ ಜನರಿಗೆ ಔಷಧಿಯನ್ನು ಸರಬರಾಜು ಮಾಡುತ್ತಾ ಬಹುಜನರ ವಿಶ್ವಾಸ ಗಳಿಸಿದೆ.

1947ರ 'ಮೈಸೂರು ಚಲೋ' ಹೋರಾಟದಲ್ಲಿ ಮುಖ್ಯಪಾತ್ರವಹಿಸಿದ ನಾನು ಅನೇಕ ವಿದ್ಯಾರ್ಥಿಗಳ ಸಹಕಾರದಿಂದ ಡೈನಾಮೈಟ್ ಮತ್ತು ಇತರೆ ಸಾಧನಗಳಿಂದ ಮೋರಿಗಳನ್ನು ಹೊಡೆದುರುಳಿಸಿ ಸಾರಿಗೆಸಂಪರ್ಕಗಳಿಗೆ ಅಡಚಣೆಯನ್ನೂ ಉಂಟುಮಾಡಿದೆನು ಮತ್ತು ಕೈಬಾಂಬುಗಳನ್ನು ತಯಾರುಮಾಡುತ್ತಿದ್ದೆನು. ಆಂಧ್ರ ಗಡಿಯಲ್ಲಿ ಉಳಿದುಕೊಂಡು ಮೈಸೂರು ಸರ್ಕಾರಕ್ಕೆ ಕಿರುಕುಳ ಕೊಟ್ಟೆ. ಶ್ರೀನಿವಾಸಪುರ ತಾಲ್ಲೂಕಿನ ರಾಯಲ್ಪಾಡು ಪೋಲೀಸ್ ಠಾಣೆ ಲೂಟಿ ಮಾಡಿದೆ. ಆಂಧ್ರದ ಕೆಲ ಹೋರಾಟಗಾರರನ್ನು ತಯಾರಿಸಿಕೊಂಡು 'ಮೈಸೂರು ಚಲೋ' ಸತ್ಯಾಗ್ರಹಕ್ಕೂ ಕಳುಹಿಸಿಕೊಡುತ್ತಿದ್ದೆ. 'ಮೈಸೂರು ಚಲೋ' ಎಂಬ ಪತ್ರಿಕೆಯನ್ನು ಅಚ್ಚುಹಾಕಿಸಿ ಹಂಚಿಸುತ್ತಿದ್ದೆ. ಆದರೆ ಜೈಲಿಗೆ ಹೋಗದೆ ತಪ್ಪಿಸಿಕೊಂಡೆ. 40 ದಿನಗಳ ಅವಧಿಯಲ್ಲಿ ನಮಗೆ ಸ್ವಾತಂತ್ರ್ಯ ಲಭಿಸಿ ಎಲ್ಲ ಹೋರಾಟಗಳೂ ನಿಂತವು.

ಭೂಹೀನ ಬಡರೈತರಿಗೆ ಭೂಮಿ ಹಂಚುವುದರಲ್ಲಿ ವಿಶೇಷ ಪಾತ್ರವಹಿಸಿ ಜೋಡಿ ಗ್ರಾಮಗಳು, ಪಾಳೇಗಾರಿ ಭೂಮಾಲೀಕ ಪದ್ಧತಿ ರದ್ದಾಗಬೇಕೆಂದು ಹೋರಾಟ ಮಾಡುತ್ತಾ ಬಂದೆನು. ಸ್ವಾತಂತ್ರ್ಯಕ್ಕಾಗಿ ಸಾಮೂಹಿಕ ಹೋರಾಟ ಸಾಲದು, ವರ್ಗಹೋರಾಟ ಅನಿವಾರ್ಯ, ಸಂಘಟಿತ ಶ್ರಮಜೀವಿ ಹೋರಾಟದಿಂದ ನಿಜವಾದ ಸ್ವಾತಂತ್ರ್ಯ ದೊರೆಯುವುದು ಎಂದು 1942ರಿಂದ 1947ರ ವರೆಗೆ ನಡೆಸಿದ ಹೋರಾಟ

ಗಳಿಂದ ನನಗೆ ಮನವರಿಕೆಯಾಯಿತು. (1967ರಲ್ಲಿ ನಾವು ಕಮ್ಯುನಿಸ್ಟ್ ಪಕ್ಷದ ಅಭ್ಯರ್ಥಿಯಾಗಿ ಶಾಸನಸಭೆಗೆ ಗಂಗಿ ರೆಡ್ಡಿ ಆಯ್ಕೆಯಾಗಿದ್ದರು—ಸಂ||).

ವೈ.ಕೋ. 7

## ಪಿ. ಎನ್. ಲಕ್ಷ್ಮಣರಾವ್

ವಯಸ್ಸು : 51 ಉದ್ಯೋಗ : ವ್ಯವಸಾಯ ವಿಳಾಸ : ಲಕ್ಷ್ಮೀಪುರ, ಪುಲಿಗಲ್ ಅಂಚೆ, ತಾ|| ಬಾಗೇಪಲ್ಲಿ

---



ನಾನು ಬಾಗೇಪಲ್ಲಿ ತಾಲ್ಲೂಕು ಪುಲ್ಲಿಗಲ್ಲು ಊರಿನವನು. ನನ್ನ ತಂದೆತಾಯಿಗಳೂ ಸ್ವಾತಂತ್ರ್ಯಪ್ರೇಮಿಗಳು. ನಾನು ಬಹಳ ಚಿಕ್ಕ ವಯಸ್ಸಿನಲ್ಲಿದ್ದಾಗಲೇ ಮಹಾತ್ಮಾ ಗಾಂಧಿಯವರ ಶಾಂತಿಯುತ ಹೋರಾಟಕ್ಕೆ ಮಾರು ಹೋಗಿದ್ದೆ. ಪ್ರತಿದಿನವೂ ಪೇಪರು ಓದುವ ಚಟ. ಬೆಂಗಳೂರಿನಲ್ಲಿ ನಾನು ಬಾಲಕನಾಗಿದ್ದಾಗ ಬಹುಶಃ ಏಪ್ರಿಲ್ 29, 1938ರಲ್ಲಿ ಭಾಷ್ಯಂ ಪಾರ್ಕಿನಲ್ಲಿ ನಡೆದ ಧ್ವಜಸತ್ಯಾಗ್ರಹದಲ್ಲಿ ಹುರುಪಿನಿಂದ ಪಾಲ್ಗೊಂಡೆನು. ಆಗ ಅದರ ನಾಯಕರು ಕೆ. ಟಿ. ಭಾಷ್ಯಂ ಅಯ್ಯಂಗಾರ್, ಸಿದ್ಧಲಿಂಗಯ್ಯ, ವೀರಕೇಸರಿ ಸೀತಾರಾಮಶಾಸ್ತ್ರಿ. ಸ್ವಯಂಸೇವಕ ದಳದ ಕೋಲಾರ ಡಿಸ್ಟ್ರಿಕ್ಟಿನ ವಿದ್ಯಾರ್ಥಿನಾಯಕನಾದ ನನ್ನನ್ನು ಚೆನ್ನಾಗಿ ಲಾಠಿಯಿಂದ ಬಡಿದು, ಬೆಂಗಳೂರು ಸೆಂಟ್ರಲ್ ಜೈಲಿಗೆ ಒಯ್ದರು. ಅಲ್ಲಿ ನಮ್ಮಿಂದ ರಾಗಿ ಬೀಸಿಸುತ್ತಿದ್ದರು, ಗಿಡಗಳಿಗೆ ನೀರು ಹಾಕಿಸುತ್ತಿದ್ದರು. ಸರದಿಯ ಪ್ರಕಾರ ಸಾಮೂಹಿಕ ಕಕ್ಕಸ್ಸುಗಳಲ್ಲಿನ ಮಲವನ್ನೂ ಎತ್ತಿಸುತ್ತಿದ್ದರು, ಗಾಣಗಳಿಗೆ ಕಟ್ಟಿ ಎಳೆಸುತ್ತಿದ್ದರು. ತಿರುಗಿಬಿದ್ದ ಯಾರಿಗಾದರೂ ದೊಣ್ಣೆ ಏಟು ತಪ್ಪಿದ್ದಲ್ಲ. ಇಷ್ಟಾದರೂ ಮರಳು ಬೆರೆಸಿದ, ಹುಳುಗಳು ಬಿದ್ದಿರುವ ಹಿಟ್ಟಿನ ಮುದ್ದೆಗಳನ್ನು ಊಟಕ್ಕೆ ಬಡಿಸುತ್ತಿದ್ದರು. ನಾನು ನಾಯಕರುಗಳ ಜೊತೆ ಇಪ್ಪತ್ತು ದಿನಗಳು ಬೆಂಗಳೂರು ಜೈಲಿನಲ್ಲಿದ್ದೆನು. ಪುನಃ ನನ್ನನ್ನು ಖುಲಾಸೆ ಮಾಡಿದರು. ಆಮೇಲೆ ಮತ್ತೆ ಸ್ಕೂಲಿಗೆ ಸೇರಿದೆ. ಬೆಂಗಳೂರಿನಲ್ಲಿ ಪಾಲ್ ಚಿನ್ನಪ್ಪ ಹೈಸ್ಕೂಲಿನಲ್ಲಿ (ಓಲ್ಡ್-ನ್ಯೂ ಹೈಸ್ಕೂಲ್, ವಿಶ್ವೇಶ್ವರಪುರಂ) ಇದ್ದಾಗ ಓದನ್ನು ನಿರ್ಲಕ್ಷಿಸಿ ಫೇಲ್ ಆದೆನು. ನನ್ನ ತಂದೆಯವರು ಓದನ್ನು ಬಿಡಿಸಿದರು. ಎರಡು ವರ್ಷ ನನ್ನ ವಿದ್ಯಾಭ್ಯಾಸ ಮೊಟಕುಗೊಂಡಿತು. ಪುನಃ

ಹೇಗೋ ನನ್ನ ತಂದೆಯವರನ್ನು ಒಪ್ಪಿಸಿ ನನ್ನ ಊರಿಗೆ ಹತ್ತಿರವಾದ ಚಿಂತಾಮಣಿಯಲ್ಲಿ ಮುನಿಸಿಪಲ್ ಹೈಸ್ಕೂಲಿನಲ್ಲಿ ಎಸ್.ಎಸ್.ಎಲ್.ಸಿ. ಕ್ಲಾಸಿಗೆ ಸೇರಿದೆ. 1942 ಆಗಸ್ಟ್ 9ರಿಂದ ನನ್ನ ಸ್ವಾತಂತ್ರ್ಯಸಂಗ್ರಾಮ ಮತ್ತೆ ಪ್ರಾರಂಭವಾಯಿತು. ನಾನು ಪ್ರಪ್ರಥಮ ವಾಗಿ ಚಿಂತಾಮಣಿಯಲ್ಲಿ ಕಾಂಗ್ರೆಸ್ಸು ಸ್ಥಾಪಿಸಿದವನಾಗಿದ್ದೆ. ಪ್ರತಿದಿನವೂ ಬೆಳಗ್ಗೆ ಏಳು ಗಂಟೆಗೆ ಕಾಂಗ್ರೆಸ್ಸು ಆಫೀಸಿನಿಂದ ಪ್ರಾರಂಭವಾಗುವ ಪ್ರಭಾತ್‌ಫೇರಿ ಹತ್ತು ಗಂಟೆಗೆ ಮುಗಿಯುತ್ತಿತ್ತು. ಹತ್ತರಿಂದ ಹನ್ನೆರಡರವರೆಗೆ ಭಾಷಣಗಳು. ಊಟವಾದ ಮೇಲೆ ಮಧ್ಯಾಹ್ನ 3 ಘಂಟೆಯವರೆಗೆ ಕಾಗದಪತ್ರಗಳ ಸೂಕ್ಷ್ಮ ಪರಿಚಯ, ಜೊತೆಯ ಕಾರ್ಯಕರ್ತರ ಸಂಶಯ ಪರಿಹಾರಗಳು. ಮೂರರಿಂದ ಪುನಃ ಮೆರವಣಿಗೆ, ಸಾಯಂಕಾಲ ಐದರಿಂದ ಎಂಟರವರೆಗೆ ಭಾಷಣಗಳು. ಕೆಲವು ದಿನಗಳಲ್ಲಿ ಪಾಠಶಾಲೆಗಳ ಹತ್ತಿರ ಪಿಕೆಟಿಂಗ್ ಮತ್ತು ಮದ್ಯಪಾನದ ಅಂಗಡಿಗಳ ಹತ್ತಿರ ಪಿಕೆಟಿಂಗ್ ನಡೆಸುತ್ತಿದ್ದೆವು. ಸಿ. ಶೀತಪ್ಪ, ಪಿ. ಎಲ್. ರಾಮಕೃಷ್ಣ, ಎನ್. ಎಸ್. ಸತ್ಯನಾರಾಯಣ ಇವರೆಲ್ಲರೂ ನನ್ನ ಜೊತೆಗಾರರು. ನಮ್ಮ ದಿನವಹಿ ಕಾರ್ಯಕ್ರಮಗಳು ಶಿಸ್ತಿನಿಂದ, ಶಾಂತಿಯಿಂದ ನಡೆಯುತ್ತಿದ್ದುದರಿಂದ ಚಿಂತಾಮಣಿಯ ಪೌರರೆಲ್ಲರೂ ಸಂಪೂರ್ಣ ಸಹಕಾರವನ್ನು ಕೊಡುತ್ತಿದ್ದರು. ಆ ಪೈಕಿ ಪ್ರಮುಖರೆಂದರೆ ವರ್ತಕರಾದ ದೇವಳಂ ವೆಂಕಟಶಾಮಿ, ಕೃಷ್ಣಯ್ಯ ಶೆಟ್ಟಿ, ಬೈರಸಂದ್ರದ ಮುನಿಶಾಮಿ, ಗಂಗರೆಡ್ಡಿ ಮುಂತಾದವರು. ಆದರೆ ಅಂದಿನ ತಹಶೀಲ್‌ದಾರರಿಗೆ ಮಾತ್ರ ನನ್ನನ್ನು ಕಂಡರೆ ಭಯ, ಕ್ರೋಧ. ಹೇಗಾದರೂ ಮಾಡಿ ನನ್ನನ್ನು ದಸ್ತಗಿರಿ ಮಾಡಿದರೆ, ಚಿಂತಾಮಣಿಯಲ್ಲಿ ನೆಮ್ಮದಿ ಉಂಟಾಗಿ ಈ ಆಂದೋಲನವನ್ನು ಹತ್ತಿಕ್ಕಬಹುದೆಂದು ಅವರ ಇಚ್ಛೆ. ಆದರೆ ಪುರಪೌರರ ಬೆಂಬಲ, ವಿದ್ಯಾರ್ಥಿಗಳ ಸಹಕಾರಗಳಿಂದ ಆತನ ಇಚ್ಛೆ ಈಡೇರಲಿಲ್ಲ. ನನ್ನನ್ನು, ಮತ್ತಿತರ ಮೂವರನ್ನು ಬೆದರಿಸಲಿಕ್ಕಾಗಿ ಚಿಂತಾಮಣಿಯಲ್ಲಿದ್ದ ಪೋಲೀಸಿನವರು ಜೀಪಿನಲ್ಲಿ ಕೂರಿಸಿ ಕೊಂಡು ಪಲಮನೇರು ಪಂಗನೂರು ಮಾರ್ಗವಾಗಿ ವಾನಿಯಂಬಾಡಿ, ಗುಡಿಯಾತ್ತಂ ಹತ್ತಿರ ಇವ್ವ ಬೆಟ್ಟಗಳ ಹತ್ತಿರ ನನ್ನ ಕಣ್ಣುಗಳನ್ನು ಬಟ್ಟೆಗಳಿಂದ ಬಿಗಿಯಾಗಿ ಕಟ್ಟಿ ಅರ್ಧರಾತ್ರಿಯ ಸಮಯದಲ್ಲಿ ಘೋರಾರಣ್ಯದಲ್ಲಿ ಬಿಟ್ಟುಬಂದರು. ಮಾರನೆಯ ದಿನ ಬೆಳಗ್ಗಿನವರೆಗೂ ಆ ಘೋರಾರಣ್ಯದ ಕಾರ್ಗತ್ತಲಿನಲ್ಲಿ ಚಳಿಗೆ, ಗುಹೆಗಳಲ್ಲಿ ಸರದಿಯ ಪ್ರಕಾರ ಮಲಗಿದ್ದು ಆಮೇಲೆ ಗುಡಿಯಾತ್ತಂ ಊರಿನಲ್ಲಿ ನಮ್ಮ ಹಾಗೆ ಸತ್ಯಾಗ್ರಹ ಚಳವಳಿ ಮಾಡುತ್ತಿದ್ದ ಸ್ವಾತಂತ್ರ್ಯವೀರರ ಧನಸಹಾಯದಿಂದ ಕೋಲಾರ ಮಾರ್ಗವಾಗಿ ರೈಲಿನಲ್ಲಿ ಚಿಂತಾಮಣಿಯನ್ನು ಸೇರಿದೆವು. ಮತ್ತೆ ಪುನಃ ನಮ್ಮ ಸತ್ಯಾಗ್ರಹ ಚಳವಳಿ ಪ್ರಾರಂಭಿಸಿದೆವು. ಪ್ರತಿದಿನವೂ ನಾನು ಭಾಷಣ ಮಾಡುತ್ತಿದ್ದೆ.

ನಾವು ನಮ್ಮ ದೇಶಕ್ಕಾಗಿ ಆ ರೀತಿಯಲ್ಲಿ ನನ್ನ ಅಳಿಲುಸೇವೆಯನ್ನು 20 ದಿನ ನಡೆಸಿದೆನು. ನನಗೆ ದಸ್ತಗಿರಿ ವಾರಂಟ್ ಬಂದರೂ ಕೂಡ ಪೋಲೀಸ್ ಅಧಿಕಾರಿಗಳಿಗೆ ದಸ್ತಗಿರಿ ಮಾಡಲು ಸುತರಾಂ ಧೈರ್ಯವಿರಲಿಲ್ಲವೆಂದರೆ, ಆ ಪುರಪ್ರಜೆಗಳ, ವಿದ್ಯಾರ್ಥಿಗಳ

ಸಹಕಾರ ನನಗೆ ಎಷ್ಟು ಇತ್ತು ಎಂದು ತಿಳಿಯುವುದು. ಎರಡು ದಿನಗಳ ಕಾರ್ಯ ಕ್ರಮಗಳಲ್ಲಿ ಕೋಲಾರದಿಂದ ಬೆಂಗಳೂರಿಗೆ ಹೋಗತಕ್ಕ ಎರಡು ರೈಲುಗಳನ್ನು ನಿಲ್ಲಿಸಿ. ಅದರಲ್ಲಿದ್ದ ಡಿ.ಎಸ್.ಪಿ., ಸರ್ಕಲ್ ಇನ್‌ಸ್ಪೆಕ್ಟರ್, ಸಬ್ ಇನ್‌ಸ್ಪೆಕ್ಟರ್; ಇತರೇ ಕಾನ್‌ಸ್ಟೇಬಲ್‌ಗಳಿಗೆ ಹ್ಯಾಟುಗಳನ್ನೂ, ರುಮಾಲುಗಳನ್ನೂ ತೆಗೆಯಿಸಿ, ಗಾಂಧೀ ಟೋಪಿಗಳನ್ನು ಹಾಕಿಸಿ, ಗಾಂಧೀಜೀಕೀ ಜೈ, ಭಾರತಮಾತಾಕೀ ಜೈ ಎಂದು ಅವರ ಬಾಯಲ್ಲಿ ಹೊರಡಿಸಿದ್ದುಂಟು. ಇದಲ್ಲದೆ ಕೆಲವು ಸ್ಯಾಬಟೇಜು ಕೆಲಸಗಳನ್ನು ಮಾಡಲಾಗುತ್ತಿತ್ತು. (ಅಂದರೆ ರೈಲು ತಂತಿಗಳನ್ನು ಕತ್ತರಿಸಿ ಹಾಕುವುದು, ರೈಲು ಕಂಬಿಗಳನ್ನು ಕಿತ್ತುಹಾಕುವುದು ವಗ್ಗೈರೆ).

ಇಷ್ಟೆಲ್ಲಾ ಆದಮೇಲೆ ನನ್ನನ್ನು ಭೇದೋಪಾಯದಿಂದ ಅರೆಸ್ಟು ಮಾಡಲು ಧೈರ್ಯವಿಲ್ಲದೆ, ನಮ್ಮ ತಂದೆಯವರನ್ನು ಕರೆಯಿಸಿ, ಬಲವಂತದಿಂದ ನನ್ನನ್ನು ನನ್ನ ಗ್ರಾಮಕ್ಕೆ ಕಳುಹಿಸಿಕೊಟ್ಟರು. ನನ್ನ ತಂದೆಯ ಮಾತನ್ನು ಮೀರಲಾರದೆ ತಾತ್ಕಾಲಿಕ ವಾಗಿ ನನ್ನ ಊರಿಗೆ ಹೋಗಿ, ಪುನಃ ನನ್ನ ತಂದೆಯವರಲ್ಲಿ "ಓದಿಕೊಳ್ಳುವುದಕ್ಕೆ ಹೋಗುತ್ತೇನೆ, ಈ ಚಳವಳಿಯಲ್ಲಿ ಇನ್ನು ಭಾಗವಹಿಸುವುದಿಲ್ಲ" ಎಂದು ನೆಪ ಹೇಳಿ ಚಿಂತಾಮಣಿಗೆ ಬಂದು ನನ್ನ ಮಾಮೂಲಿನ ದೇಶಸೇವೆಯ ಕರ್ತವ್ಯವನ್ನು ಮತ್ತಷ್ಟು ತೀವ್ರವಾಗಿ ಪ್ರಾರಂಭಿಸಿದೆನು. ಪೋಲೀಸ್ ಅಧಿಕಾರಿಗಳು ನನ್ನನ್ನು ದಸ್ತಗಿರಿ ಮಾಡಲೇ ಬೇಕೆಂದಿದ್ದರೂ ನನ್ನ ಮಿತ್ರರು ನನ್ನನ್ನು ಒಂದು ನಿಮಿಷವೂ ಒಬ್ಬಂಟಿಗನಾಗಿ ಬಿಡುತ್ತಿರಲಿಲ್ಲ. ನನ್ನ ಮೇಲೆ ಜನರಿಗೆ ಇದ್ದ ಅನುರಾಗ ಪ್ರೇಮದ ಕಾರಣ, ಸಾವಿರಾರು ಜನರ ನಾಯಕನಾಗಿ, ಅವರ ಮಧ್ಯೆ ಇರುತ್ತಿದ್ದ ನನ್ನನ್ನು ದಸ್ತಗಿರಿ ಮಾಡಲು ಹಿಂಜರಿಯುತ್ತಿದ್ದರು. ರಾತ್ರಿಯ ಹೊತ್ತೂ ನನ್ನ ರೂಮಿನಲ್ಲಿರುತ್ತಿರಲಿಲ್ಲ. ಒಂದೊಂದು ದಿನ ಒಬ್ಬೊಬ್ಬ ಗೃಹಸ್ಥರ ಮನೆಗಳಲ್ಲಿ ಮಲಗುತ್ತಿದ್ದೆ. ಸೆಪ್ಟಂಬರ್ 1ನೇ ತಾರೀಖು (1942) ರಾತ್ರಿ ಹೋಟಲಿನಲ್ಲಿ ಊಟಮಾಡಿ, ರೂಮಿಗೆ ಹೊರಟಾಗ ಪೋಲೀಸಿನವರು ಬಂದು, "ನಿಮಗೆ ಅರೆಸ್ಟು ವಾರೆಂಟಿದೆ, ದಯವಿಟ್ಟು ಟ್ರಾವಲರ್ಸ್ ಬಂಗಲೆಗೆ ಬರಬೇಕು" ಅಂದರು. ಅಷ್ಟುಹೊತ್ತಿಗೆ ನಾನು ಅರೆಸ್ಟಾದ ಸಮಾಚಾರ ಚಿಂತಾಮಣಿ ಊರಿನಲ್ಲಿ ಕಾಡ್ಗಿಚ್ಚಿನಂತೆ ಹಬ್ಬಿತು. ಪುರಪೌರರು, ವಿದ್ಯಾರ್ಥಿಗಳು ನನ್ನನ್ನು ಬಹಳ ವಿಜೃಂಭಣೆ ಯಿಂದ ಊರಿನಲ್ಲೆಲ್ಲಾ ಮೆರವಣಿಗೆ ಮಾಡಿಸಿ ಅವರ ಪ್ರೀತಿಯನ್ನು ತೋರಿಸಿದರು. ಆ ದಿನ ರಾತ್ರಿಯಲ್ಲಿ ನಡೆದ ಮೆರವಣಿಗೆ (ನನ್ನ ಮುಖ ಕಾಣದ ಹಾಗೆ ಹೂವಿನ ಹಾರ ಹಾಕಿದ್ದರು) ನನ್ನ ಜನ್ಮದಲ್ಲಿ ಮರೆಯಲಾರೆ. ಅದೆಲ್ಲಾ ಆಗ ಪ್ರಜೆಗಳಿಗೆ ಸ್ವಾತಂತ್ರ್ಯದ ಮೇಲೆ ಇದ್ದ ಅತೀವ ಹಂಬಲ ಮತ್ತು ನನ್ನ ನಾಯಕತ್ವದಲ್ಲಿದ್ದ ಅವರ ನಂಬಿಕೆಯ ಉದಾಹರಣೆ. ಆ ದಿನ ರಾತ್ರಿ ಮೂರು ಗಂಟೆಗೆ ವ್ಯಾನಿನಲ್ಲಿ ನನ್ನನ್ನು ಬೆಂಗಳೂರು ಸೆಂಟ್ರಲ್ ಜೈಲಿಗೆ ರವಾನಿಸಿದರು. ಜೈಲು ಸೇರಿದಾಗ ಬೆಳಗ್ಗೆ ಆರು ಗಂಟೆ. ಅಂದಿನಿಂದ ನನ್ನ ಜೈಲುವಾಸ ಮೂರು ತಿಂಗಳು ಮೂರು ದಿನಗಳು. ಅಲ್ಲಿ ಆಗಲೇ 1800 ಜನ

ಸ್ವಾತಂತ್ರ್ಯವೀರರು ದಸ್ತಗಿರಿ ಆಗಿದ್ದರು. 19 ದಿನವಾದಮೇಲೆ ನಮ್ಮಲ್ಲಿ ನನ್ನನ್ನೂ ವಿ. ಶೀತಪ್ಪನವರನ್ನೂ ಸೇರಿಸಿ 200 ಜನ ಸತ್ಯಾಗ್ರಹಿಗಳನ್ನು ಮೈಸೂರು ಜೈಲಿಗೆ ಕಳಿಸಿದರು. ಅಲ್ಲಿ ನಾನಿದ್ದ ಅವಧಿ 2 ತಿಂಗಳು 13 ದಿನಗಳು.

ಇದೇ ಕಾಲಕ್ಕೆ ಜೈಲಿನಲ್ಲಿ ಒಮ್ಮೆ ಕೈದಿಗಳಿಗೂ ಜೈಲಧಿಕಾರಿಗಳಿಗೂ ಘರ್ಷಣೆಯಾಗಿ ನಮಗೆ ಕೆಲವರಿಗೆ ತಲಾ 24 ಛಡಿ ಏಟು ಕೊಟ್ಟರು. ರೂಮು ಬಾಗಿಲು ಒಡೆದು ಹಾಕಿ ಛಡಿ ಏಟುಗಳನ್ನು ತಿಂದು ಗೋಳಾಡುತ್ತಿದ್ದ ನಮ್ಮನ್ನು ಹೊರಕ್ಕೆ ಹಾಕಿದರು. ಅಶ್ರುವಾಯುವನ್ನು ಪ್ರಯೋಗಿಸಿದರು. ಛಡಿ ಏಟುಗಳು ಕುಂಡಿಯ ಮೇಲೆ ತಿಂದು ರಕ್ತಸ್ರಾವವಾಗುತ್ತಿದ್ದರೂ ಟಿಯರ್ ಗ್ಯಾಸಿನಿಂದ ಓಡಿಹೋಗಲು ಕಣ್ಣುಗಳು ಕಾಣದಾಯಿತು. ಬಹಳ ಜನ ಕೆಳಗೆ ಬಿದ್ದೆವು. ಕೆಳಗೆ ಬಿದ್ದಿದ್ದ ನಮ್ಮ ಮೇಲೆ ಪೋಲೀಸಿನವರು ಓಡಾಡಿದರು. ಬೂಡ್ಸ್ ಕಾಲಿನ ಕೆಳಗೆ ಜಜ್ಜಿ ಬಜ್ಜಿಯಾದೆವು. ಮೂರ್ಛೆಹೋದವರು ಬಹಳ ಮಂದಿ. ನಮ್ಮೆಲ್ಲರನ್ನೂ ಪ್ರಥಮ ಚಿಕಿತ್ಸೆಗೆ ಆಸ್ಪತ್ರೆಗೆ ಸೇರಿಸಲಾಯಿತು. ಬಹಳವಾಗಿ ಏಟು ತಿಂದಿದ್ದ ನಮ್ಮ ಪೈಕಿ ಶಂಕರಪ್ಪ ರಾತ್ರಿ 12 ಘಂಟೆಗೆ ಕೊನೆ ಉಸಿರು ಎಳೆದನು. ಮುಂದೆ ನಾವೆಲ್ಲಾ ಇನ್ನೂ ಆಸ್ಪತ್ರೆಯಲ್ಲಿದ್ದಾಗಲೇ ಸರ್ಕಾರದವರು ಶಂಕರಪ್ಪ ಜ್ವರದಿಂದ ಸತ್ತನೆಂದು ಸುಳ್ಳು ಸುದ್ದಿಯನ್ನು ಪತ್ರಿಕೆಯಲ್ಲಿ ಪ್ರಕಟಿಸಿದರು. ಎರಡುಮೂರು ದಿನ ಜೈಲಿನಲ್ಲಿ ಆದ ದೌರ್ಜನ್ಯವನ್ನು ಹೊರಗಿನ ಪ್ರಪಂಚಕ್ಕೆ ತಿಳಿಯಗೊಡಲಿಲ್ಲ. ಜೈಲಿನಲ್ಲಿ ಸ್ವಲ್ಪ ಶಾಂತ ವಾತಾವರಣ ಮೂಡಿದ ಮೇಲೆ, ಜೈಲಿನಿಂದ ಗುಪ್ತವಾಗಿ ನಮ್ಮ ಗೆಳೆಯರು ಜೈಲಿನಲ್ಲಿ ನಡೆದ ಹತ್ಯಾಕಾಂಡವನ್ನು ವಿವರಿಸಿ ಕಾಗದಗಳಲ್ಲಿ ಬರೆದು, ಕಲ್ಲುಗಳಿಗೆ ಆ ಕಾಗದಗಳನ್ನು ಕಟ್ಟಿ, ಗೋಡೆಗಳ ಆಚೆಗೆ ಎಸೆದೆವು. ಆ ಕಾಗದಗಳು ಹೊರಗಿನ ಸಾರ್ವಜನಿಕರಿಗೆ ಸಿಕ್ಕಿದಮೇಲೆ ಮೈಸೂರು ನಗರದಲ್ಲಿ ಆ ವಿಷಯ ಪ್ರಚಾರವಾಯಿತು. ವಿಚಾರಣಾ ಸಮಿತಿ ಏರ್ಪಡಿಸಿದರು. ವಿಚಾರಣೆಯಲ್ಲಿ ಸರ್ಕಾರದವರು ತಪ್ಪೆಲ್ಲವೂ ಸತ್ಯಾಗ್ರಹಿಗಳದು ಎಂದು ಹೇಳಿ ನುಸುಳಿಕೊಂಡರು. ಇದೆಲ್ಲಾ ನಡೆದ ಹತ್ತು ದಿನಗಳು ನಾನು ಆಸ್ಪತ್ರೆಯಲ್ಲಿದ್ದೆನು. ನಡುವು ಸುತ್ತಲೂ ಛಡಿ ಏಟುಗಳಿಂದ ಆದ ಘಾಯಗಳ ಬಾಧೆ ಒಂದೆಡೆ; ಕೆಪ್ಸ್ಯರ್ ಗ್ಯಾಸು ಅಶ್ರುವಾಯುವಿನಿಂದ ಕಣ್ಣುಗಳು ಊದಿಕೊಂಡು ಕಣ್ಣು ಕಾಣದಾಗಿದ್ದು ಇನ್ನೊಂದೆಡೆ. ಈ ಎರಡು ಬಾಧೆಗಳಿಂದ ನಾನು ಆಸ್ಪತ್ರೆಯಲ್ಲಿದ್ದ ಹತ್ತು ದಿನಗಳು ಅನುಭವಿಸಿದ ಯಾತನೆ ಅಷ್ಟಿಷ್ಟಲ್ಲ. ನನಗೆ ಇಬ್ಬರು ಪೋಲೀಸು ಕಾನ್ಸ್‌ಟೇಬಲುಗಳನ್ನು ಕಾವಲು ಹಾಕಿದ್ದರು. ಆಸ್ಪತ್ರೆಯಲ್ಲಿ ನನಗೆ ಶುಶ್ರೂಷೆ ಮಾಡಿ, ಸೇವೆ ಮಾಡಿದ ನರ್ಸ್ ಪುನೀತ ಎಂಬುವಳು ನನ್ನನ್ನು ಮಗನಂತೆ ನೋಡಿ ಕಾಪಾಡಿದಳು. ಅಲ್ಲಿಂದ ಪುನಃ ನನ್ನನ್ನು ಜೈಲಿಗೆ ರವಾನಿಸಿದರು. ಆದಾದ ಹತ್ತು ದಿನಗಳನಂತರ ನನ್ನ ಕಣ್ಣುಗಳಿಗೆ ಕಟ್ಟಿದ್ದ ಕಪ್ಪು ಬಟ್ಟೆಯನ್ನು ತೆಗೆದು ಹಾಕಿದರು. ಇಪ್ಪತ್ತು ದಿನಗಳನಂತರ ನನಗೆ ಮಾಮೂಲು ಕಣ್ಣುಗಳು ಬಂದವು. ಆದರೂ ನೀರು ಸುರಿಯುತ್ತಲೇ ಇತ್ತು. ನೇತ್ರ ವೈದ್ಯರನ್ನು

ಜೈಲಿನವರೇ ಕರೆಯಿಸಿ ಪರೀಕ್ಷೆ ನಡೆಸಿ ಪ್ರಥಮವಾಗಿ ನನಗೆ ಕನ್ನಡಕಗಳನ್ನು ಕೊಟ್ಟರು. ಅಂದಿನಿಂದ ಇಂದಿನವರೆಗೂ ನಾನು ಕನ್ನಡಕಗಳನ್ನು ಉಪಯೋಗಿಸುತ್ತಾ ಇದ್ದೇನೆ.

ಇದಾದಮೇಲೆ ನಮ್ಮ ತಂದೆ, ಅಣ್ಣನವರೂ ಸಹ ಮೈಸೂರು ಜೈಲಿಗೆ ನನ್ನನ್ನು ನೋಡಲು ಬಂದರು. ನನ್ನ ತಂದೆ ಮತ್ತು ಅಣ್ಣ "ಅಪಾಲಜಿ ಬರೆದುಕೊಡು, ಊರಿಗೆ ಹೋಗೋಣ" ಎಂದು ಹೇಳಿದರು. "ನನ್ನ ಪ್ರಾಣ ಹೋದರೂ ಸಹ ನಾನು ಅಪಾಲಜಿ ಬರೆದು ಕೊಡಲಾರೆ, ಅಂಥ ಹೇಡಿಯಲ್ಲ!" ಎಂದು ಹೇಳಿದಮೇಲೆ ನನ್ನ ತಂದೆ, ಅಣ್ಣ ಊರಿಗೆ ವಾಪಸ್ಸು ಹೋದರು. ಅದಾದಮೇಲೆ ನನ್ನನ್ನು ಶಿರಹಟ್ಟಿ ಡಿಟೆನ್ಯೂ ಕ್ಯಾಂಪಿಗೆ ರವಾನಿಸಿದರು. ಅಲ್ಲಿ 15 ದಿನಗಳು ಜೈಲುವಾಸವನ್ನು ಅನುಭವಿಸಿದಮೇಲೆ ನನ್ನನ್ನು ಬಿಡುಗಡೆ ಮಾಡಿದರು (5-12-1942). ಚಿಂತಾಮಣಿಗೆ ಬಂದು ಪುನಃ ನನ್ನ ಕ್ಲಾಸಿಗೆ ಹಾಜರಾದೆ. ಆದರೂ ನನ್ನ ತಲೆಯಲ್ಲಿ ಸತ್ಯಾಗ್ರಹ ಚಳವಳಿಯ ಗುಂಗು ಇದ್ದೇ ಇತ್ತು. ಮುಂದೆ ನನ್ನ ತಂದೆಯವರು ವಿದ್ಯಾಭ್ಯಾಸಕ್ಕೆ ಕಳುಹಿಸಲಿಲ್ಲ. ಈ ಸತ್ಯಾಗ್ರಹ ಚಳವಳಿಯಿಂದಾಗಿ ನನ್ನ ಓದು ನಿಂತಿತು. ಆದರೂ ಮುಂದೆ ದೇಶ ಸ್ವತಂತ್ರವಾದ ಬಗ್ಗೆ ಸಮಾಧಾನವಿದೆ.

ಮೈ.ಕೋ. 8

## ಪಿ. ಪುಷ್ಪಂ

ಜನನ : 1920 ಉದ್ಯೋಗ : ಚಿನ್ನದ ಗಣಿಯಲ್ಲಿ ನಿವಾಸ : ಆಂಡರ್ಸನ್‌ಪೇಟೆ, ಕೆ.ಜಿ.ಎಫ್.

---



1936ರಲ್ಲಿ ನಾನು ವಿದ್ಯಾರ್ಥಿ ಆಗಿದ್ದಾಗ ಗಾಂಧೀಜಿ ರಾಬರ್ಟ್‌ಸನ್‌ಪೇಟೆಗೆ ಬಂದು ಜಾರ್ಜ್ ಹಾಲ್‌ನಲ್ಲಿ ಭಾಷಣಮಾಡಿದರು. ಆಗಿನಿಂದ ನಾನು ಖಾದೀ ಧರಿಸಲು ಪ್ರಾರಂಭಿಸಿದೆ. ಕೋಲಾರ ಚಿನ್ನದ ಗಣಿ ಪ್ರದೇಶದಲ್ಲಿ ಬಹಳಷ್ಟು ಐರೋಪ್ಯರು ವಾಸಮಾಡುತ್ತಿದ್ದು ಇಲ್ಲಿನ 21,000 ಕೂಲಿಗಾರರಿಂದ ಬಂಗಾರವನ್ನು ಗಣಿಯಿಂದ ಪಡೆದು ಇಂಗ್ಲೆಂಡಿಗೆ ಕಳುಹಿಸುತ್ತಿದ್ದರು. ಬ್ರಿಟಿಷರು ಇಲ್ಲಿ ತಮ್ಮದೇ ಕಾನೂನನ್ನು (ಆಕ್ಟ್ 17) ಹೊಂದಿದ್ದು ಅದರಿಂದ ಕಾರ್ಮಿಕರ ಸಂಘಟನೆಯನ್ನೂ ರಾಷ್ಟ್ರೀಯ ಚಳವಳಿಯನ್ನೂ ಹತ್ತಿಕ್ಕುತ್ತಿದ್ದರು. ಯಾರನ್ನಾದರೂ ಈ ಪ್ರದೇಶದಿಂದ 24 ಗಂಟೆಗಳ

ನೋಟೀಸು ಕೊಟ್ಟು ಗಡೀಪಾರು ಮಾಡಬಹುದಾಗಿತ್ತು. ರಾಷ್ಟ್ರೀಯ ನಾಯಕರು ಈ ಪ್ರದೇಶಕ್ಕೆ ಪ್ರವೇಶಿಸದಂತೆ ಪ್ರತಿಬಂಧ ಹೇರಬಹುದಾಗಿತ್ತು.

ಈ ಕಷ್ಟಕರ ಪರಿಸ್ಥಿತಿಯಲ್ಲಿ ನಮ್ಮ ಸ್ನೇಹಿತರಾದ ಲಕ್ಷ್ಮಣನ್, ಫಿಲಿಪ್ಸ್ ಮತ್ತು ಮಹಿಮಾನಾಥನ್ ಕಾರ್ಮಿಕ ಸಂಘ ಒಂದನ್ನು ಸಂಘಟಿಸಿದರು. ಆದರೆ ಅದು ಯಶ ಕಾಣಲಿಲ್ಲ. ಮುಂದೆ 1939 ಸೆಪ್ಟಂಬರ್‌ನಲ್ಲಿ ಕೆ.ಜಿ.ಎಫ್.ನಿಂದ ಐದು ಮೈಲು ದೂರದ ಒಂದು ಊರಲ್ಲಿ ವಿ. ವಿ. ಗಿರಿ, ಪಿ. ಆರ್. ಕೆ. ಶರ್ಮ ಮತ್ತು ಸುಂದರರಾಜ ಅಯ್ಯಂಗಾರರ ನಾಯಕತ್ವದಲ್ಲಿ ಒಂದು ಕಾರ್ಮಿಕ ಸಂಘವನ್ನು ಸ್ಥಾಪಿಸಲಾಯಿತು. ಮುಂದೆ 1940ರಲ್ಲಿ ಗೋವಿಂದನ್, ಕೇಶವುಲು ಮತ್ತು ಪೆರುಮಾಳ್ ಇವರ ನೆರವಿನಿಂದ ನಾನು ಕಾರ್ಯದರ್ಶಿ ಆಗಿರುವ ಆಜಾದ್ ಯುತ್ ಲೀಗ್‌ನ್ನು ಸ್ಥಾಪಿಸಿ, ಎಂ. ಭಕ್ತವತ್ಸಲಂ (ಮದ್ರಾಸ್) ಮತ್ತು ಶಿವಜ್ಞಾನ ಗ್ರಾಮಣಿ ಅವರ ಹಿರಿತನದಲ್ಲಿ ಉದ್ಘಾಟಿಸಿದೆವು.

1942ರಲ್ಲಿ ಚಳವಳಿ ಆರಂಭ ಆದಾಗ ಬೆಂಗಳೂರಿನಿಂದ ಗುಪ್ತ ಕರಪತ್ರಗಳನ್ನು ಪಡೆದು, ಭೂಗತನಾಗಿ ಪ್ರಚಾರಮಾಡುತ್ತಿದ್ದೆ. ಒಂದು ತಿಂಗಳನಂತರ ನನ್ನ ಬಂಧನ ಆಯಿತು. ನನ್ನನ್ನು ಬೆಂಗಳೂರು ಜೈಲಿಗೆ ಕಳುಹಿಸಿದರು. ಜೈಲಿನಲ್ಲಿ ಆಗ ಇದ್ದ ನಮ್ಮ ಊರನವರೆಂದರೆ ಜೈಚಂದ ಬಾಫ್ನಾ, ಶಾಂತಿಲಾಲ್, ಎಂ. ಸಿ. ಪೆರುಮಾಳ್, ಅಣ್ಣಾಮಲೈ ಚೆಟ್ಟಿಯಾರ್, ಮಹಿಮಾನಾಥನ್, ಪೆರುಮಾಳ್, ಸ್ವಾಮಿನಾಥನ್, ಆರೋಗ್ಯಸ್ವಾಮಿ, ರಾಜಪ್ಪನ್, ಚೌದ್ರಿ, ಲಕ್ಷ್ಮಣ್, ಫಿಲಿಪ್ಸ್, ಅರುಳ್‌ದಾಸ್, ದಕ್ಷಿಣಾಮೂರ್ತಿ, ಸುಬ್ರಮಣಿ, ತಂಗವೇಲು, ಜಾನಕೀಶನ್, ಎಸ್. ಆರ್. ಷಣ್ಮುಗಂ ಮುಂತಾದವರು. 16-5-1943ರಲ್ಲಿ ನನ್ನ ಬಿಡುಗಡೆ ಆದಾಗ ನನಗೆ ಗಡೀಪಾರು ಆಜ್ಞೆ ಆಗಿ 1944ರಲ್ಲಿ ನಾನು ಕೆ.ಜಿ.ಎಫ್.ಗೆ ಒಂದು ವರ್ಷದನಂತರ ಮರಳಿದೆ.

ವೈ.ಕೋ. ೨

## ಜಿ. ಎಸ್. ಚಿಕ್ಕವೀರಪ್ಪ

ಜನನ : 1908 ಉದ್ಯೋಗ : ವ್ಯಾಪಾರ ವಿಳಾಸ : ಬಂಗಾರುಪೇಟೆ

---

1935ರಿಂದಲೂ ನನಗೆ ದೇಶದ ಸ್ವಾತಂತ್ರ್ಯದ ಬಗ್ಗೆ ಪ್ರೀತಿ ಬೆಳೆಯಿತು. ಪತ್ರಿಕೆಗಳಲ್ಲಿ ಗಾಂಧೀಜಿಯವರ ವಿಚಾರಗಳನ್ನು ಓದಿ ಖಾದಿ ಧರಿಸಲು ಆರಂಭಿಸಿದೆ. 1937ರಲ್ಲಿ ಟಿ. ಸಿದ್ದಲಿಂಗಯ್ಯನವರು ನಮ್ಮ ಊರಿಗೆ ಬಂದು ಪ್ರಚಾರಮಾಡಲು ಚಳವಳಿ ಬಗ್ಗೆ ಪ್ರೀತಿ, ವಿಶ್ವಾಸ ಹೆಚ್ಚಿತು. 1939ರಲ್ಲಿ ನಮ್ಮ ಊರಲ್ಲಿ ಕೆ.ಜಿ.ಎಫ್. ಸತ್ಯಾಗ್ರಹ ಶಿಬಿರ ನಡೆಸಿದೆವು. ಸರ್ದಾರ್ ವೆಂಕಟರಾಮಯ್ಯ, ಸಾಹುಕಾರ್ ಚನ್ನಯ್ಯ ಇವರ

ಬಗ್ಗೆ ಪ್ರಚಾರಮಾಡಿದರು. ಪ್ರತಿನಿತ್ಯ 500 ರಿಂದ 1000 ಜನ ಸತ್ಯಾಗ್ರಹಿಗಳಿಗೆ ಊಟ ಉಪಚಾರ ಮಾಡುತ್ತಿದ್ದೆವು. ಆದಿನಾರಾಯಣ ಶೆಟ್ಟಿ, ಬಿ. ಜಿ. ಚಿಕ್ಕಸಿದ್ದಪ್ಪ, ಕೋಲಾರದ ದೊರೆಸ್ವಾಮಿ ಇವರುಗಳ ಜೊತೆ ನಾನೂ ಶಿಬಿರದಲ್ಲಿ ದುಡಿಯುತ್ತಿದ್ದು ಆ ಬಗ್ಗೆ ನಮ್ಮ ಕೆಲಸ ಮುಖಂಡರ ಮೆಚ್ಚುಗೆ ಪಡೆಯಿತು. ಈ ಸತ್ಯಾಗ್ರಹದಲ್ಲಿ ನನಗೂ ಎರಡು ತಿಂಗಳು ಶಿಕ್ಷೆ ಆಯಿತು. 1940ರಿಂದ 5 ವರ್ಷಕಾಲ ಟೌನ್ ಕಾಂ|| ಸ|| ಅಧ್ಯಕ್ಷನಾಗಿ ಇದ್ದೆ. 1942ರಲ್ಲಿ ನನ್ನನ್ನು ಬಂಧಿಸಿ ಬೆಂಗಳೂರಲ್ಲಿ ಒಂದು ತಿಂಗಳು ಡೆಟೆನ್ಯು ಅಂತ ಇಟ್ಟರು. ಬಿಡುಗಡೆಯನಂತರ ಮತ್ತೆ ಬಂಧಿಸಿ ಕೋಲಾರ ಸಬ್ ಜೈಲ್‌ನಲ್ಲಿ ಎರಡು ತಿಂಗಳು ಇಟ್ಟರು. ಆದಿನಾರಾಯಣ ಶೆಟ್ಟರು, ಕೋಲಾರದ ಬಿ. ವಿ. ಕೋದಂಡರಾಮಯ್ಯ ಮುಂತಾದವರು ಅಲ್ಲಿ ಜೊತೆಯಲ್ಲಿದ್ದರು. 1947ರಲ್ಲೂ ಚಳವಳಿ ಸಂಬಂಧ ಸುಮಾರು ಒಂದು ತಿಂಗಳು ಕೋಲಾರ ಹಾಗೂ ಬೆಂಗಳೂರು ಸೆಂಟ್ರಲ್ ಜೈಲ್‌ನಲ್ಲಿ ಬಂಧಿತನಾಗಿದ್ದೆ.

ಮೈ.ಕೋ. 10

## ಬಿ. ಜಿ. ಚಿಕ್ಕಸಿದ್ದಪ್ಪ

ಜನನ : 1909 ಉದ್ಯೋಗ : ವ್ಯಾಪಾರ ವಿಳಾಸ : ಬಂಗಾರುಪೇಟೆ



ಸಮಾಜಸೇವೆ ರಕ್ತಗತ ಗುಣವೋ ಎಂಬಂತಿದ್ದ ನಾನು 1932ರಲ್ಲಿ ಗ್ರಾಮಪಂಚಾಯಿತಿ ಸದಸ್ಯನಾಗಿ ಆಯ್ಕೆಗೊಂಡಿದ್ದೆ. ಮೈಸೂರು ಕಾಂಗ್ರೆಸ್ಸು ಸ್ಥಾಪನೆಗೊಂಡಾಗ ನಾನು ನಮ್ಮ ಊರಲ್ಲಿ ಆದ ತಾ|| ಕಾಂ|| ಸಮಿತಿಯ ಕಾರ್ಯದರ್ಶಿ ಆಗಿ ಕೆಲಸ ಮಾಡಿದೆ. 1939ರಲ್ಲಿ ಕೆ.ಜಿ.ಎಫ್. ಬಳಿ ಮೈಸೂರು ಕಾಂಗ್ರೆಸ್ ನಾಯಕರನ್ನು ಬಂಧಿಸಿದ ಸಂಬಂಧ ಸಂಘಟಿಸಿದ್ದ ಸತ್ಯಾಗ್ರಹಕ್ಕೆ ಬಂಗಾರುಪೇಟೆಯಲ್ಲಿ ಶಿಬಿರವನ್ನು ಸಂಘಟಿಸಿದೆವು. ಆದಿನಾರಾಯಣಶೆಟ್ಟಿ, ಜಿ. ಎಸ್. ಚಿಕ್ಕವೀರಪ್ಪ, ಆರ್. ಎಚ್. ರಾಮಕೃಷ್ಣಪ್ಪ ಇವರು ಈ ಕೆಲಸದಲ್ಲಿ ನನ್ನ ಸಹಕಾರಿಗಳು. ಈ ಬಗ್ಗೆ 27–9–1939ರಂದು ಚಿಕ್ಕವೀರಪ್ಪ, ನಾನು, ನಾರಾಯಣ ಶೆಟ್ಟಿ, ರಾಮಕೃಷ್ಣಪ್ಪ ಇವರನ್ನು ಬಂಧಿಸಿ ಎರಡು ತಿಂಗಳ ಕಾಲ ಕೆ.ಜಿ.ಎಫ್. ಜೈಲಿನಲ್ಲಿ ಸ್ಥಾನಬದ್ಧರಾಗಿ ಇಟ್ಟರು. 1941ರಲ್ಲಿ ಕಾಂಗ್ರೆಸ್ ಪರವಾಗಿ ಪ್ರಜಾಪ್ರತಿನಿಧಿ ಸಭೆಗೆ

ಆರಿಸಿಬಂದು 1947ರವರೆಗೂ ಈ ಸ್ಥಾನದಲ್ಲಿ ಇದ್ದೆ. 1942ರಲ್ಲಿ 'ಕ್ವಿಟ್ ಇಂಡಿಯಾ' ಕರೆಯಂತೆ ಬಹಿರಂಗ ಸಭೆ, ಪ್ರಭಾತ್‌ಫೇರಿ, ಪಿಕೆಟಿಂಗ್ ಸಂಘಟಿಸಿದೆ. 16-9-1942 ರಂದು ಈ ಬಗ್ಗೆ ನನ್ನ ಬಂಧನ ಆಗಿ ಡಿಸ್ಟ್ರಿಕ್ಟ್ ಲಾಕಪ್‌ನಲ್ಲಿ ಇಟ್ಟರು. 15-10-1942ಕ್ಕೆ ಬೆಂಗಳೂರಿಗೆ ವರ್ಗಾಯಿಸಿದರು. ಅನಂತರದ ಜನವರಿ 15ಕ್ಕೆ ಬಿಡುಗಡೆ ಆಯಿತು.

1944ರಲ್ಲಿ ಆದಿನಾರಾಯಣ ಶೆಟ್ಟರ ಮುಂದಾಳುತನದಲ್ಲಿ ನಮ್ಮ ಊರಿನ ಅವರ ತೋಟದಲ್ಲಿ ಎಂ.ಪಿ.ಸಿ.ಸಿ. ಅಧಿವೇಶನ ನಡೆಸಿದೆವು. ನಾನು ಸ್ವಾಗತ ಸಮಿತಿ ಕಾರ್ಯದರ್ಶಿ ಆಗಿದ್ದೆ. 1947ರಲ್ಲಿ ಮೈಸೂರಿಗೆ ತೆರಳುವ ಸತ್ಯಾಗ್ರಹಿಗಳಿಗಾಗಿ ಬಂಗಾರುಪೇಟೆಯಲ್ಲಿ ಶಿಬಿರವನ್ನು ತೆರೆದೆ. ಅನೇಕರು ಅಲ್ಲಿಂದ ಮೈಸೂರಿಗೆ ಹೋದರು. ಈ ಬಗ್ಗೆ 16-9-1947 ರಂದು ಬಂಧನ ಆಗಿ 10-10-1947ರವರೆಗೆ ಕೈದಿನಲ್ಲಿ ಇಟ್ಟಿದ್ದರು. ನಮ್ಮ ಊರ ಅನೇಕ ಸಾಮಾಜಿಕ, ಧಾರ್ಮಿಕ, ಸಂಸ್ಥೆಗಳಲ್ಲಿ ದುಡಿದಿರುವೆ. ಕೋಲಾರ ಜಿ|| ಬೋ|| ಸದಸ್ಯನಾಗಿ ಸ್ವಾತಂತ್ರ್ಯಪೂರ್ವದಲ್ಲಿ ಇದ್ದೆ. ಹರಿಜನ ವಿದ್ಯಾರ್ಥಿನಿಲಯದ ಕಾರ್ಯದರ್ಶಿ ಆಗಿ ಇದ್ದೆ. ಇಂದಿಗೂ ಕೈಲಾದ ಸಮಾಜಸೇವೆ ಮಾಡುತ್ತಿರುವೆ.

ಮೈ.ಕೋ. 11

## ಪಿ. ರಾಮೇಗೌಡ

ಜನನ : 1916 ಉದ್ಯೋಗ : ಕೃಷಿ ವಿಳಾಸ : ಪದಕಾಷ್ಠಿ, ಕನ್ನಸಂದ್ರ ಅಂಚೆ ತಾ|| ಮುಳಬಾಗಲು

---



ನಾನು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಇಳಿಯಲು ಕಾರಣ 1938ರ ಸುಮಾರಿನಲ್ಲಿ ಎಚ್. ಸಿ. ದಾಸಪ್ಪ, ಯಶೋಧರಮ್ಮ ಜೈಲಿನಿಂದ ಬಿಡುಗಡೆ ಹೊಂದಿ ಮುಳಬಾಗಲು ತಾಲ್ಲೂಕು ಆವನಿ ಗ್ರಾಮಕ್ಕೆ ಬಂದಿದ್ದಾಗ ನೀಡಿದ ಭಾಷಣ. ಭಾಷಣ ಕೇಳಿ ನನಗೂ ಸಂಗ್ರಾಮದಲ್ಲಿ ಕೆಲಸ ಮಾಡಬೇಕೆಂಬ ಮನಸ್ಸಾಯಿತು. ನಾನು ಮತ್ತು ನನ್ನ ಗೆಳೆಯ ಬಲ್ಲಂ ಪುಟ್ಟಣ್ಣನವರೂ ಸೇರಿ ಹಳ್ಳಿಹಳ್ಳಿಗೂ ಹೋಗಿ ನಾಲ್ಕಾಣೆ ಮೆಂಬರುಗಳನ್ನು ಮಾಡುತ್ತಿದ್ದೆವು. ಇದು ಪೋಲೀಸರಿಗೆ ತಿಳಿದು ಇಬ್ಬರು ಪೋಲೀಸರು ನಾವು ಹೋದ ಕಡೆಯಲ್ಲೆಲ್ಲಾ ಕಾವಲಾದರು. ಆಗಿನ ಜನ ಪೋಲೀಸರೆಂದರೆ ಬಹಳ ಭಯಪಡುತ್ತಿದ್ದರು. ನಾವು

ಹೋದ ಕಡೆ ಜನ ಪೋಲೀಸರನ್ನು ನೋಡಿ ನಮ್ಮ ಸಂಗಡ ಮಾತಾಡಲೂ ಸಹ ಹಿಂಜರಿಯುತ್ತಿದ್ದರು. ಇದರಿಂದ ನಮ್ಮ ಕೆಲಸಕ್ಕೆ ತುಂಬ ಅಡ್ಡಿಯಾಯಿತು. ಆದ್ದರಿಂದ ನಾವು ಆಗಿನ ನಾಯಕರಾಗಿದ್ದ ಕೆ. ಚೆಂಗಲರಾಯ ರೆಡ್ಡಿ, ಕೆ. ಪಟ್ಟಾಭಿರಾಮನ್, ಟಿ. ರಾಮಾಚಾರ್ಯರು, ಎನ್. ಸಿ. ನಾಗಯ್ಯ ರೆಡ್ಡಿ ಇವರುಗಳನ್ನು ಕರೆಯಿಸಿ ಹಳ್ಳಿ ಹಳ್ಳಿಗಳಲ್ಲೂ ಸಾರ್ವಜನಿಕ ಸಭೆಗಳನ್ನು ನಡೆಯಿಸಿದೆವು. ಈ ಸಭೆಗಳಿಗೂ ಪೋಲೀಸ್ ಕಾವಲು ಇತ್ತು. ಆದರೆ ಜನ ಸ್ವಲ್ಪ ಧೈರ್ಯ ತಂದುಕೊಂಡು ನಮ್ಮ ಈ ಕೆಲಸಗಳಿಗೆ ಬೆಂಬಲಿಗರಾದರು. ಅನಂತರ ಆಗಿನ ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕೆ. ಟಿ. ಭಾಷ್ಯಂರನ್ನು ಕರೆಯಿಸಿ ನನ್ನ ಸ್ವಂತ ಗ್ರಾಮವಾದ ಪದಕಾಷ್ಠಿಯಲ್ಲಿ ಭಾರೀ ಸಾರ್ವಜನಿಕ ಸಭೆ ಮತ್ತು ಹನ್ನೆರಡು ಜೊತೆ ಎತ್ತಿನ ರಥದಲ್ಲಿ ಅಧ್ಯಕ್ಷರ ಮೆರವಣಿಗೆಯನ್ನು ಎಂ. ವಿ. ಕೃಷ್ಣಪ್ಪನವರ ಆದೇಶದಂತೆ ಏರ್ಪಡಿಸಲಾಯಿತು. ಪೋಲೀಸ್ ಇನ್‌ಸ್ಪೆಕ್ಟರ್ ಮತ್ತು ಆಗಿನ ಅಮಲ್ದಾರರು ಪದಕಾಷ್ಠಿ ಗ್ರಾಮಕ್ಕೆ ಬಂದು ಹಾಕಿದ್ದ ಚಪ್ಪರ ತೆಗೆಯಲು ಒತ್ತಾಯಮಾಡಿದರು. ಚಪ್ಪರ ತೆಗೆಯಲು ಅವಕಾಶ ಕೊಡದೆ ಇದ್ದುದರಿಂದ ಅವರು ಹೊರಟುಹೋದರು. ನಮ್ಮ ಸಭೆ, ಮೆರವಣಿಗೆ ಸಾಂಗವಾಗಿ ನಡೆಯಿತು. ಇದನ್ನೆಲ್ಲ ನೋಡಿದ ಅಧಿಕಾರಿಗಳು ನನ್ನ ಮೇಲೆ ಇಲ್ಲಸಲ್ಲದ ಆರೋಪಗಳನ್ನು ಹೊರಿಸಿ ಒಂದು ಕೇಸ್ ಹಾಕಿ ಅದಕ್ಕಾಗಿ 50 ರೂ.ಗಳ ದಂಡ ವಿಧಿಸಿ, ಅದರ ವಸೂಲಿಗಾಗಿ ನನ್ನ ಮನೆ ಜಪ್ತಿ ಮಾಡಲು ಬಂದರು. ಬಂದ ಅಧಿಕಾರಿಗಳಿಗೆ ನಾನು ಮತ್ತು ಜನ ಅವಕಾಶ ಕೊಡದೆ ಇದ್ದುದರಿಂದ ಅವಮಾನಿತರಾಗಿ ಹೊರಟುಹೋದರು. ಆಗಿನಿಂದ ಮುಂದೆ ನನ್ನ ಮೇಲೆ ಕಣ್ಣಿಟ್ಟಿದ್ದರು.

ಮುಂದೆ ಕೋಲಾರ ತಾಲ್ಲೂಕು ಎಲಗಲಬುರ್ರ ಗ್ರಾಮದ ಪಕ್ಕದಲ್ಲಿರುವ ಮುಳ್ಳಪಳ್ಳಿ ಟ್ರೈನಿಂಗ್ ಕ್ಯಾಂಪಿಗೆ ಬರುವಂತೆ ನನಗೂ ಆದೇಶ ಬಂದಿದ್ದರ ಮೇರೆ ನಾನು ಹೋಗಿ 10 ದಿವಸ ಭಾಗವಹಿಸಿದೆ. ಇದರ ಕೊನೆ ದಿನದ ಸಮಾರಂಭಕ್ಕೆ ಟಿ. ಸುಬ್ರಮಣ್ಯಂ ಬಂದಿದ್ದರು. 1942ನೆಯ 'ಕ್ವಿಟ್ ಇಂಡಿಯ' ಚಳವಳಿಯ ಸಮಯದಲ್ಲಿ 29-8 1942ರಂದು ನನ್ನನ್ನು ಅರೆಸ್ಟ್ ಮಾಡಿ ಕೆ.ಜಿ.ಎಫ್. ಲಾಕಪ್ಪಿನಲ್ಲಿ ಒಂದು ದಿನ ಇಟ್ಟಿದ್ದು, ಅನಂತರ ಕೋಲಾರ ಸಬ್ ಜೈಲಿನಲ್ಲಿ ಆರು ದಿನಗಳು ಇಟ್ಟಿದ್ದು 5-9-1942ರಂದು ನನ್ನನ್ನು ಬೆಂಗಳೂರು ಸೆಂಟ್ರಲ್ ಜೈಲಿಗೆ ಕರೆದುಕೊಂಡು ಹೋದರು. ಕೆಲವು ದಿನಗಳ ಅನಂತರ, ಅಂದರೆ 14-9-1942ರಂದು ನನ್ನನ್ನೂ ಸೇರಿ 10 ಮಂದಿಯನ್ನು ಶ್ರೀರಂಗಪಟ್ಟಣದ ಡೆಟೆನ್ಯೂ ಕ್ಯಾಂಪಿಗೆ ತೆಗೆದುಕೊಂಡು ಹೋದರು. ಅಲ್ಲಿನ ವಾತಾವರಣ ಸರಿಹೋಗದೆ ಪುನಃ ಬೆಂಗಳೂರಿಗೆ ವರ್ಗಾಯಿಸಲ್ಪಟ್ಟೆವು. ಇದೇ ಸಮಯದಲ್ಲಿ ಮಲೇರಿಯಾ ಅಟ್ಯಾಕ್ ಆಗಿ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಒಂದು ತಿಂಗಳು ಇದ್ದು ಮತ್ತೆ ಜೈಲಿಗೆ ವಾಪಸ್ಸಾದೆ. 1943ರಲ್ಲಿ ಜನರಲ್ ರಿಲೀಜ್ ಆದಾಗ ನಾನೂ 9-10-1943ರಂದು ರಿಲೀಜ್ ಆಗಿ ನನ್ನ ಸ್ವಂತ ಊರಿಗೆ ವಾಪಸಾದೆ.

ಮೈಸೂರು ಪ್ರದೇಶದಲ್ಲಿ ಮತ್ತೆ 1947ರಲ್ಲಿ ಚಳವಳಿ, ಹೆಂಡದ ಅಂಗಡಿಗಳನ್ನು ಲೂಟಿ ಮಾಡುವುದು, ಹೆಂಡ ಊರಿಂದೂರಿಗೆ ಸಾಗದಂತೆ ರಸ್ತೆಯ ಮೋರಿಗಳನ್ನು ಒಡೆಯುವುದು, ಟ್ರೆಜರಿಗಳನ್ನು ಲೂಟಿಮಾಡುವುದು ಮುಂತಾದ ಕಾರ್ಯಗಳು ಭರದಿಂದ ಸಾಗಿದ್ದವು. ಇದರ ಮುಖಂಡತ್ವವನ್ನು ಎಂ. ವಿ. ಕೃಷ್ಣಪ್ಪನವರು ವಹಿಸಿದ್ದರು. ಅವರ ಮೇಲೆ ಪೋಲೀಸ್ ವಾರೆಂಟ್ ಇದ್ದುದರಿಂದ ಈಗಿನ ಆಂಧ್ರಪ್ರದೇಶಕ್ಕೆ ಸೇರಿರುವ ರಾಜಪೇಟೆ ಎಂಬಲ್ಲಿ ಕ್ಯಾಂಪ್ ಮಾಡಿ ಅಲ್ಲಿಂದ ಒಂದು ಚಳವಳಿ ನಡೆಸುತ್ತಿದ್ದರು. ಈ ಕ್ಯಾಂಪ್ ನಡೆಯಲು ಅವರಿಗೆ ರೇಷನ್ ಮತ್ತು ಹಣ ಬೇಕೆಂದು ನಮಗೆ ಆದೇಶ ಬಂದಿದ್ದರ ಮೇಲೆ ಊರೂರು ಸುತ್ತಿ ಚಂದಾ ವಸೂಲಿ ಮಾಡಿ ಕಳುಹಿಸುತ್ತಲಿದ್ದೆವು. ನಾವು ಎರಡು ಮೋರಿಗಳನ್ನು ಒಡೆದುಹಾಕಿದ ಸಂಬಂಧ ಕೆಲವು ನಿರಪರಾಧಿ ಓದುವ ಹುಡುಗರನ್ನು ಹಿಡಿದು ಪೋಲೀಸ್ ಸ್ಟೇಷನ್ನಿನಲ್ಲಿ ಆಗ ಸಿಕ್ಕಾಪಟ್ಟೆ ಹೊಡೆದಿದ್ದರು. ಇದು ನಮಗೂ ನನ್ನ ಪರಿವಾರದವರಿಗೂ ಗೊತ್ತಾಯಿತು. ನಮ್ಮ ಗ್ರಾಮದ ಹತ್ತಿರದಲ್ಲಿದ್ದ ಕುರುಬಚದನಹಳ್ಳಿ ಎಂಬಲ್ಲಿ ಈಚಲ ಮರದ ಅಡವಿಯಲ್ಲಿ ಹೆಂಡ ತೆಗೆಯುತ್ತಿದ್ದರು. ಕಾವಲಿಗಾಗಿ ಇಬ್ಬರು ಕಾನ್‌ಸ್ಟೇಬಲ್‌ಗಳು ಇದ್ದರು. ನಾವು ಸುಮಾರು 300 ಜನರ ಗುಂಪು ಹೋಗಿ ಪೋಲೀಸಿನವರನ್ನು ಮರಕ್ಕೆ ಕಟ್ಟಿಹಾಕಿ ಮರಗಳಿಂದ ಶೇಖರಣೆಮಾಡುತ್ತಿದ್ದ ಹೆಂಡದ ಮಡಿಕೆಗಳನ್ನು ಒಡೆದುಹಾಕಿ, ಅಲ್ಲಿ ಶೇಖರಿಸಿದ್ದ ಹೆಂಡದ ಪೀಪಾಯಿಗಳನ್ನು ಒಡೆದುಹಾಕಿ, ಪೋಲೀಸಿನವರನ್ನು ಹಳ್ಳಿಯ ಚಾವಡಿಯ ಹತ್ತಿರ ತಂದು, ಇವರ ಯೂನಿಫಾರಂನ್ನು ಬಿಚ್ಚಿಸಿ ಇವರಿಗೆ ಖಾದಿ ಜುಬ್ಬಾ, ಖಾದಿ ಟೋಪಿ ಹಾಕಿಸಿ, ಯೂನಿಫಾರಂಗಳನ್ನು ಸುಟ್ಟು, ಅವರನ್ನು ಮುಳಬಾಗಿಲುವರೆಗೂ ಬಿಟ್ಟು ಬಂದೆವು. ಇದಾದ ಮೂರುನಾಲ್ಕು ದಿನಗಳ ಒಳಗಾಗಿ ನಮ್ಮ ನಾಯಕರಿಂದ ಕೂಡಲೇ ಚಳವಳಿ ನಿಲ್ಲಿಸಬೇಕೆಂದು ಆದೇಶ ಬಂದಿದ್ದರಿಂದ ಚಳವಳಿಯನ್ನು ನಿಲ್ಲಿಸಬೇಕಾಯಿತು.

ಮೈ.ಕೋ. 12

## ಪಿ. ವಿ. ಸೀತಾರಾಮ ಶಾಂತಾನಂದಜಿ

ಜನನ : 1921 ಉದ್ಯೋಗ : ಹಿಂದೀ ಅಧ್ಯಾಪಕ ವಿಳಾಸ: 36, I ಮೇನ್, ಗವೀಪುರ ಬಡಾವಣೆ, ಬೆಂಗಳೂರು

---

ನಾನು ವಿದ್ಯಾರ್ಥಿಯಾಗಿದ್ದಾಗ, ಬೆಂಗಳೂರಿನ ಚಿಕ್ಕಲಾಲ್‌ಬಾಗ್‌ನಲ್ಲಿ ವಿದುರಾಶ್ವತ್ಥ ಹತ್ಯಾಕಾಂಡದ ಬಗ್ಗೆ ನಡೆದ ಪ್ರತಿಭಟನಾಸಭೆಯಲ್ಲಿ ಕೆ. ಸಿ. ರೆಡ್ಡಿ ಎನ್. ಸಿ. ತಿಮ್ಮಾರೆಡ್ಡಿ ಇವರುಗಳು ಭಾಷಣ ಮಾಡಿರಲು, ನಾನೂ ಅಲ್ಲಿ ಪ್ರೇಕ್ಷಕನಾಗಿದ್ದು ಅಂದು ನಡೆದ



ಲಾಠೀಚಾರ್ಜ್‌ನಲ್ಲಿ ಏಟು ತಿಂದಿದ್ದೆ. ನಮ್ಮ ಊರು ಬಂಗಾರುಪೇಟೆ ತಾ|| ಪಿಲ್ಲಗುಂಡ್ಲಹಳ್ಳಿ. ಇದರ ದಕ್ಷಿಣಕ್ಕೆ ನಾಲ್ಕು ಮೈಲಿ ದೂರದಲ್ಲಿ ಕೆ. ಸಿ. ರೆಡ್ಡಿ ಅವರ ಊರು ಕ್ಯಾಸಂಬಳ್ಳಿ, ಹಾಗೂ ಮೂರು ಮೈಲಿ ಉತ್ತರಕ್ಕೆ ಎಂ. ವಿ. ಕೃಷ್ಣಪ್ಪನವರ ಊರು ಮೋತಕಹಳ್ಳಿ. ನಾನು ಸ್ವಾತಂತ್ರ್ಯಸಂಗ್ರಾಮದಲ್ಲಿ ಭಾಗವಹಿಸಲು ಹೆಚ್ಚು ಪ್ರೇರಣೆ ಕೊಟ್ಟವರು ಎಂ. ವಿ. ಕೃಷ್ಣಪ್ಪನವರು ; ಎರಡನೆಯವರು ಕೆ. ಸಿ. ರೆಡ್ಡಿಯವರು.

1938ರಿಂದ 1942 ರವರೆಗೆ ನಾನು ರಾಷ್ಟ್ರಭಾಷೆ ಹಿಂದಿಯಲ್ಲಿ ಉತ್ತಮ ಶಿಕ್ಷಣ ಪಡೆಯಲು ಪ್ರಯಾಗದಲ್ಲಿ ವಾಸವಾಗಿರಲು, ಆ ಕಾಲದಲ್ಲಿ ಮೋತಿಲಾಲ ನೆಹರೂ ಅವರ ಸ್ವರಾಜ್ಯಭವನದಲ್ಲಿ ಅ.ಭಾ. ಕಾಂ|| ಸಮಿತಿಯ ಸಭೆ ಸೇರಿದಾಗ ಎಲ್ಲ ನಾಯಕರ ದರ್ಶನ ಪಡೆದೆನಲ್ಲದೆ ಅಲ್ಲಿ ಸ್ವಯಂಸೇವಕನಾಗಿ ಭಾಗವಹಿಸಿದ್ದೆ. 1942ರಲ್ಲಿ ಚಳವಳಿಯಲ್ಲಿ ಪಾಲುಗೊಳ್ಳಲು ಎಂ. ವಿ. ಕೃಷ್ಣಪ್ಪನವರ ಕರೆಯಂತೆ ಮೈಸೂರು ರಾಜ್ಯಕ್ಕೆ ವಾಪಸ್ಸು ಬಂದೆ. ಆಗಿನ ಭೂಗತ ಚಟುವಟಿಕೆಗಳಲ್ಲಿ ಭಾಗವಹಿಸಿದ ಪರಿಣಾಮವಾಗಿ ನಾನು ಖಾಯಿಲೆ ಮಲಗಬೇಕಾಗಿ ಬಂದು, ನಾನು ಆ ಕಾಲದಲ್ಲಿ ಹೆಚ್ಚಿನ ಸೇವೆ ಮಾಡಲಾರದೆ ಹೋದೆ.

1946ರ ಹೊತ್ತಿಗೆ ದೇಶಕ್ಕೆ ಸ್ವಾತಂತ್ರ್ಯ ದೊರೆಯುವ ವಿಚಾರ ಸ್ಪಷ್ಟವಾದರೂ ಮೈಸೂರಲ್ಲಿ ಪರಿಸ್ಥಿತಿ ಹೇಗಾದೀತೆಂದು ಸ್ಪಷ್ಟತೆ ಇರಲಿಲ್ಲ. ಈ ಬಗ್ಗೆ ಪೂರ್ವತಯಾರಿ ಎಂದೇ ಯುವಕರ ತರಬೇತಿಗೆಂದು ಎಂ. ವಿ. ಕೃಷ್ಣಪ್ಪನವರು ಬಂಗಾರುಪೇಟೆ ತಾ|| ಗುಟ್ಟಹಳ್ಳಿ (ಈಗ ಬಂಗಾರು ತಿರುಪತಿ) ವೆಂಕಟರಮಣ ದೇವಸ್ಥಾನದಲ್ಲಿ 40 ದಿನಗಳ ಒಂದು ಶಿಕ್ಷಣ ಶಿಬಿರವನ್ನು ಏರ್ಪಡಿಸಿದ್ದು ಅದರಲ್ಲಿ ಜಿಲ್ಲೆಯ 50ಕ್ಕೂ ಹೆಚ್ಚಿನ ಯುವಕರು ಭಾಗವಹಿಸಿದ್ದರು. ಉದ್ಘಾಟನಾ ಸಮಾರಂಭಕ್ಕೆ ಕೆ. ಪಟ್ಟಾಭಿರಾಮನ್, ಕೆಂಗೇರಿ ಗುರುಕುಲದ ಸ್ವಾಮಿ ವಿಶ್ವಾನಂದಜೀ ಬಂದಿದ್ದರು. ನಾನು ಅಲ್ಲಿ ತರಬೇತಿ ಪಡೆದಿದ್ದೆ.

1947ರ ಆಗಸ್ಟ್ 15ರಂದು ಎಂ. ವಿ. ಕೃಷ್ಣಪ್ಪನವರ ಊರಾದ ಮೋತಕಹಳ್ಳಿಯಲ್ಲಿ ಕೆ. ಪಟ್ಟಾಭಿರಾಮನ್‌ರ ಅಧ್ಯಕ್ಷತೆಯಲ್ಲಿ ಭಾರಿ ಬಹಿರಂಗ ಸಭೆಯಾಗಿ 'ಮೈಸೂರು ಚಲೋ' ಚಳವಳಿ ಆರಂಭಿಸಿದೆವು. ಸರಹದ್ದಿನ ಜಿಲ್ಲೆಯವರು ಸರಕಾರೀ ಯಂತ್ರವನ್ನು ಧ್ವಂಸಮಾಡುವ ಕ್ರಮದಲ್ಲಿ ತೊಡಗಬೇಕೆಂದು ಎಂ. ವಿ. ಕೃಷ್ಣಪ್ಪನವರು ಕೆ. ಸಿ. ರೆಡ್ಡಿಯವರಾದಿಯಾಗಿ ನಾಯಕರ ಜೊತೆ ಚರ್ಚಿಸಿ ತೀರ್ಮಾನಿಸಿದರು. ಸೆಪ್ಟಂಬರ್ ಮೊದಲ ವಾರದಲ್ಲಿಯೇ ಮದ್ರಾಸ್ ರಾಜ್ಯದ ಕೃಷ್ಣಗಿರಿಯಲ್ಲಿ ತಮ್ಮ ಕಾರ್ಯಾಲಯವನ್ನು ಎಂ. ವಿ. ಕೃಷ್ಣಪ್ಪನವರು ಆರಂಭಿಸಿ, ಜೈಲಿಗೆ ಹೋಗದೆ ತಪ್ಪಿಸಿಕೊಂಡು ಅಲ್ಲಿಗೆ

ಬರುವಂತೆ ನನಗೆ ಪತ್ರಮೂಲಕ ಆದೇಶ ನೀಡಿದರು. ಈ ಪತ್ರ ನನಗೆ ರಾತ್ರಿ 12ಕ್ಕೆ ತಲುಪಿತು. ನಾನು ನನ್ನ ಪತ್ನಿಗೆ ನನ್ನ ಚಿಕ್ಕ ಮಗು ಲೀಲಾ ಜೊತೆ ಬೆಂಗಳೂರಲ್ಲಿ ತವರು ಮನೆಗೆ ಹೋಗುವಂತೆ ತಿಳಿಸಿದೆ. ಮಿತ್ರರೊಬ್ಬರನ್ನು ತಕ್ಷಣ ಕರೆಸಿ ನನ್ನ ಜಮೀನಿನಲ್ಲಿ ಇದ್ದ ಹೊಂಗೇ ಮರಗಳನ್ನು ಮಾರಾಟಮಾಡಿ ಅದರಿಂದ ಹಣ ಪಡೆದು ರಾತ್ರಿಯೇ ಕಾಲುನಡಿಗೆಯಲ್ಲಿ ಮೈಸೂರು ಗಡಿ ದಾಟಿ ನಮ್ಮ ಊರಿಗೆ ನಾಲ್ಕು ಮೈಲಿ ದೂರದ ಮದ್ರಾಸ್ ರಾಜ್ಯದ ವೆಂಕಟಗಿರಿಕೋಟೆ ತಲುಪಿದೆ. ಅಲ್ಲಿಂದ ಕೃಷ್ಣಗಿರಿ ಸೇರಿದಾಗ ಕೃಷ್ಣಪ್ಪನವರು ಮದ್ರಾಸಿಗೆ ಹೋಗಿ ಅಲ್ಲಿ ಪೃಥ್ವೀ ಇನ್ಶ್ಯೂರೆನ್ಸ್ ಕಟ್ಟಡದಲ್ಲಿ ಒಂದು ಕಾರ್ಯಾಲಯ ತೆರೆದಿರುವುದಾಗಿ ತಿಳಿಯಿತು. ನನಗೆ ಕುಪ್ಪಂ ತಾ॥ ರಾಜಪೇಟೆಗೆ ಹೋಗಬೇಕೆಂದು ಸೂಚನೆ ಕೊಟ್ಟಿದ್ದರು. ಇದು ಮೈಸೂರು ಗಡಿಯಿಂದ ಒಂದು ಮೈಲಿ ಆಚೆಗಿರುವ ಹಳ್ಳಿ. ಅಲ್ಲಿ ಕೆ. ಸಿ. ರೆಡ್ಡಿಗಳ ಸಂಬಂಧಿಗಳಾದ ಪಿಲ್ಲಾ ರೆಡ್ಡಿ, ಶ್ರೀನಿವಾಸ ರೆಡ್ಡಿ, ಕೃಷ್ಣಾರೆಡ್ಡಿ, ಜಯರಾಮ ರೆಡ್ಡಿ ಮುಂತಾದವರಿದ್ದು ಅವರೆಲ್ಲ ನಮಗೆ ಅಪಾರ ಸಹಕಾರ ನೀಡಿದರು. ಅಲ್ಲಿಗೆ ಆಗಲೇ ಕೋಲಾರ, ಮುಳಬಾಗಲು, ಕೆ.ಜಿ.ಎಫ್. ಚಿಂತಾಮಣಿ, ಚಿಕ್ಕಬಳ್ಳಾಪುರ, ಬೆಂಗಳೂರು ಮುಂತಾದ ಕಡೆಗಳಿಂದ ನಮ್ಮ ಗುಟ್ಟಹಳ್ಳಿ ಶಿಬಿರದಲ್ಲಿ ತಯಾರಾಗಿದ್ದ ಯುವಕರು ಬಂದಿದ್ದರು. 2–3 ದಿನಗಳಲ್ಲಿ ಇವರ ಸಂಖ್ಯೆ 250–300 ಆಯಿತು. ಅದೇ ದಿನ ರಾತ್ರಿ ಕೃಷ್ಣಪ್ಪನವರು ಅಲ್ಲಿಗೆ ಬಂದು 'ಮೈಸೂರು ರಾಜ್ಯ ಜನತಾ ಸರಕಾರ' ರಾಜಪೇಟೆಯಲ್ಲಿ ಸ್ಥಾಪಿಸಿದ್ದಾಗಿ ಪ್ರಕಟಿಸಿ, ನನಗೆ 'ಆಹಾರ ಮಂತ್ರಿ ಶಾಖೆ' ವಹಿಸಿದರು. ಬಿ. ವಿ. ಚನ್ನೇಗೌಡ ನನಗೆ ಸಹಕಾರಿಗಳು. ಶಿಬಿರಕ್ಕೆ ದಿನಂಪ್ರತಿ 300–400 ಜನ ಬಂದು ಹೋಗುತ್ತಿದ್ದು ಇವರಿಗೆ ಆಹಾರಸಾಮಗ್ರಿಗಳನ್ನು ಒದಗಿಸುವ ಜವಾಬ್ದಾರಿ ನನ್ನದಾಗಿತ್ತು. ಅನೇಕ ಹಳ್ಳಿಗಳನ್ನು ಸುತ್ತಾಡಿ ಆಹಾರ ಸಾಮಗ್ರಿ ಶೇಖರಿಸುತ್ತಿದ್ದೆ. ಆದರೆ ಈ ಸಂಗ್ರಹ 10 ದಿನಕ್ಕೆ ಮಾತ್ರ ಸಾಲುವಂತಾಯಿತು. ಆಗ ರಾತ್ರಿಕಾಲದಲ್ಲಿ ಮೈಸೂರು ರಾಜ್ಯದಲ್ಲಿನ ಸರಕಾರಿ ಆಹಾರಧಾನ್ಯಗಳ ಡಿಪೋ ಲೂಟಿ ಮಾಡಬೇಕೆಂದು ನಿರ್ಣಯಿಸಿ, ಕೆ. ಸಿ. ರೆಡ್ಡಿಯವರ ಕ್ಯಾಸಂಬಳ್ಳಿಗೇ ಮೊದಲು ಸಾಗಿದೆವು. ಸುಮಾರು 300 ಜನ ಯುವಕರು ಕೃಷ್ಣಪ್ಪನವರ ನಾಯಕತ್ವದಲ್ಲಿ ಲಾರಿ, ಪೆಟ್ರೋಮ್ಯಾಕ್ಸ್ ಲೈಟು, ಸೀಮೆಎಣ್ಣೆ, ಪಂಜು ಸಮೇತ ಹೋಗಿ ಲೂಟಿ ಕಾರ್ಯದಲ್ಲಿ ಯಶಸ್ವಿ ಆದೆವು. ಹದಿನೈದು ಮೂಟೆ ಅಕ್ಕಿ. ಕೆಲವು ಮೂಟೆ ಸಕ್ಕರೆ, ಬೇಳೆ, ಗೋದಿ ನಮ್ಮ ಕೈಗೆ ಬಂತು. ಇದರಂತೆ ಅನೇಕ ಡಿಪೋಗಳ ಲೂಟಿಮಾಡಲಾಯಿತು.

ನಮ್ಮ ನಾಯಕರ ಆದೇಶದಂತೆ ಮೈಸೂರು ಸಂಸ್ಥಾನದಲ್ಲಿನ ಪೋಲೀಸ್ ಸ್ಟೇಶನ್ ಲೂಟಿ ಮಾಡಿ ಅಲ್ಲಿರುವ ಸಾಮಾನುಗಳ ಸಮೇತ ಪೋಲೀಸಿನವರನ್ನು ವಶಪಡಿಸಿ ಕೊಳ್ಳುವ ಕೆಲಸ ಕೈಕೊಂಡೆವು. ನಮ್ಮ ಕ್ಯಾಂಪ್‌ಗೆ ನಾಲ್ಕು ಮೈಲಿ ದೂರದ ಒಂದು ಸ್ಟೇಶನ್‌ನ ಲೂಟಿ ಯಶಸ್ವಿಯಾಗಿ ಆಯಿತು. ಮಾರನೆಯ ದಿನ ಬೇತಮಂಗಲ ಸ್ಟೇಶನ್ ಸಬ್ ಇನ್ಸ್‌ಪೆಕ್ಟರರು ಕೆಲವು ಪೋಲೀಸರೊಡನೆ ವ್ಯಾನ್‌ನಲ್ಲಿ ನಮ್ಮ ಕ್ಯಾಂಪ್‌ಗೆ ಬರಲು,

ಅವರ ವ್ಯಾನ್ ತಡೆಹಿಡಿದು ಪೋಲೀಸರನ್ನೆಲ್ಲ ಬಂಧಿಸಿ ರೂಮುಗಳಲ್ಲಿ ಕೂಡಿ ಬೀಗ ಹಾಕಿದೆವು. ಅವರನ್ನು ಸೌಜನ್ಯದಿಂದ ನೋಡಿಕೊಳ್ಳಬೇಕೆಂದು ನಮಗೆ ಕೃಷ್ಣಪ್ಪನವರು ಅಪ್ಪಣೆ ಮಾಡಿದರು. ಎರಡನೆಯ ದಿನ ಕೆ.ಜಿ.ಎಫ್.ನಿಂದ ಸರ್ಕಲ್ ಇನ್ಸ್‌ಪೆಕ್ಟರರು, ಪೋಲೀಸ್ ಸೂಪರಿಂಟೆಂಡೆಂಟ್ ಮುಂತಾದ ಅಧಿಕಾರಿಗಳೊಡನೆ ಸುಮಾರು 200 ಪೋಲೀಸರು ಶಸ್ತ್ರಸಜ್ಜಿತರಾಗಿ ನಮ್ಮ ರಾಜಪೇಟೆ ಶಿಬಿರವನ್ನು ಮುತ್ತಿದರು. ಈ ವಿಚಾರ ನಮಗೆ ಮೊದಲೇ ಗೊತ್ತಿದ್ದುದರಿಂದ, ನಮ್ಮ ಶಿಬಿರದ ಯುವಕರನ್ನೆಲ್ಲ ಕೃಷ್ಣಪ್ಪನವರು ಒಂದು ಲಾರಿಯಲ್ಲಿ ತುಂಬಿ 15 ಮೈಲಿ ದೂರದ ಭೂಮಂಡಲಪುರದ ಒಂದು ಕಾಡಿನಲ್ಲಿ ಬಿಟ್ಟರು. (ಲಾರಿ ಚಲಿದಗಾನಹಳ್ಳಿ ಸುಬ್ಬಾರೆಡ್ಡಿ ಅವರದು.) ರಾತ್ರಿ 9 ಗಂಟೆಗೆ ಅವರು ಬಂದಿದ್ದರು. ನಾನೂ ಇತರ ಮೂವರು ಸ್ನೇಹಿತರೂ ಆಗ ಶಿಬಿರದೊಳಗೆ ಇರಲಿಲ್ಲ. ಪೋಲೀಸ್ ವ್ಯಾನುಗಳು ಬರುವುದನ್ನು ನೋಡಿ ನಾನು ಶಿಬಿರದಿಂದ ಒಂದು ಫರ್ಲಾಂಗ್ ದೂರದ ಒಂದು ಮರವೇರಿ ಅವಿತುಕೊಂಡೆ. ರಾತ್ರಿ 12 ಗಂಟೆತನಕ ಶಿಬಿರದ ಸುತ್ತ ಹುಡುಕಾಡಿ ಪೋಲೀಸರು ಹೊರಟುಹೋದರು. ಆಮೇಲೆ ಮರದಿಂದ ಇಳಿದು ಮದ್ರಾಸ್ ದಾರಿ ಹಿಡಿದು, ಮರುದಿನ 20 ಮೈಲು ದೂರದ ನಾರಾಯಣಪುರ ತಲಪಿದೆ. ಅಲ್ಲಿ ಶಿಬಿರದ ಉಳಿದ ಸತ್ಯಾಗ್ರಹಿಗಳನ್ನು ಸೇರಿಕೊಂಡೆ. ಕೃಷ್ಣಪ್ಪನವರೂ ಕೆ. ಸಿ. ರೆಡ್ಡಿಯವರ ಅಣ್ಣನ ಮಗ ಆರ್. ಕೆ. ಪ್ರಸಾದ್ ಅವರೂ ಮದ್ರಾಸಿಗೆ ಹೋಗಿ ಅಲ್ಲಿನ ಗೃಹಮಂತ್ರಿ ಡಾ|| ಸುಬ್ಬರಾಯನ್‌ರನ್ನು ಭೇಟಿಮಾಡಿ ಮೈಸೂರಿನ ಪೋಲೀಸರು ನಮ್ಮ ಶಿಬಿರಕ್ಕೆ ನುಗ್ಗದಂತೆ ಮದ್ರಾಸ್ ಪೋಲೀಸರ ರಕ್ಷಣೆ ಸಿಗುವಂತೆ ವ್ಯವಸ್ಥೆ ಮಾಡಿದರು. ಮುಂದಿನ 5-6 ದಿನ ನಾನಯಂಬಾಡಿ, ಅಂಬೂರು, ಚಿತ್ತೂರುಗಳಲ್ಲಿ ಸಂಚಾರಮಾಡಿ ಶಿಬಿರಕ್ಕಾಗಿ ಹಣ ಮತ್ತು ಇತರೇ ಸಹಾಯ ಸಂಪಾದಿಸಿಕೊಂಡು ಬಂದೆವು. ಆರ್ಕಾಟ್ ರಾಮಸ್ವಾಮಿಯವರ ಸ್ವಂತ ಗ್ರಾಮದಲ್ಲೂ ಸತ್ಯಾಗ್ರಹಕ್ಕೆ ಸಹಾಯ ಪಡೆದೆವು. ಎಲ್ಲೆಡೆ ನಮಗೆ ಅಭೂತಪೂರ್ವ ಸ್ವಾಗತ, ಸಹಕಾರ ಲಭಿಸಿತು. ಚಿತ್ತೂರಿನಿಂದ ಲಾರಿಗಳಲ್ಲಿ ಮತ್ತೆ ರಾಜಪೇಟೆ ಶಿಬಿರ ತಲಪಿದೆವು.

ಶ್ರೀನಿವಾಸಪುರ ತಾ|| ರಾಯಲ್‌ಪಾಡು ಪೋಲೀಸ್ ಲೂಟಿ ನಮ್ಮ ಮುಂದಿನ ಕಾರ್ಯಕ್ರಮ. ಸುಮಾರು 600 ಸ್ಥಳೀಯ ರೈತರ ಸಹಕಾರದಿಂದ ಅಲ್ಲಿನ 18 ಜನ ಪೋಲೀಸರು, ಅವರ ಎಲ್ಲ ಆಯುಧ, ಕಾಗದಪತ್ರ ಇವನ್ನೆಲ್ಲ ವಶಪಡಿಸಿಕೊಂಡೆವು. ಅಲ್ಲಿ ದೊರೆತ ಸಮವಸ್ತ್ರ, ಶಸ್ತ್ರಗಳಿಂದ ನಮಗೆ ಪೋಲೀಸು ವೇಷಹಾಕಿಕೊಂಡು ಕೆಲಸ ಮಾಡಲು ಅನುಕೂಲವಾಯಿತು. ಈ ಕ್ರಮಗಳಿಂದ ಭಯಗೊಂಡ ಮೈಸೂರು ಸರ್ಕಾರ ಕೋಲಾರ ಜಿಲ್ಲೆಯ ಎಲ್ಲೆಗಳಲ್ಲಿ ಇದ್ದ ಪೋಲೀಸ್ ಸ್ಟೇಶನ್‌ಗಳನ್ನೇ ರದ್ದುಮಾಡಿತು. ಮುಂದೆ ನಮ್ಮ ಶಿಬಿರವನ್ನು ನಾವು ಕೆ.ಜಿ.ಎಫ್.ನಿಂದ 5-6 ಮೈಲಿ ದೂರದಲ್ಲಿ ಇರುವ ಗುದಿಪಲ್ಲಿ-ಕಾಡೇಪಲ್ಲಿ ಪ್ರದೇಶಕ್ಕೆ ಸಮೀಪದ ಒಂದು ಬೆಟ್ಟದಲ್ಲಿನ ರಾಳ್ಳ ಗಂಗಮ್ಮನ ದೇವರ ಗುಡಿಗೆ ಬದಲಾಯಿಸಿದೆವು. ಈ ಊರಲ್ಲಿ ನನ್ನ ತಂಗಿಯ ಮನೆಯೂ

ಇತ್ತು. ಅಲ್ಲಿಗೆ ಮದ್ರಾಸ್ ರಾಜ್ಯದಿಂದ ಸ್ವಯಂಸೇವಕರು ಬಂದು ಅಲ್ಲಿಂದ ಮೈಸೂರು ರಾಜ್ಯದಲ್ಲಿ ನುಗ್ಗಿ ಸತ್ಯಾಗ್ರಹ ಮಾಡುತ್ತಿದ್ದರು ರೈಲ್ವೆ ಸ್ಟೇಶನ್ ಕೂಡ ಆ ಊರಿಗೆ ಸಮೀಪದಲ್ಲಿ ಇತ್ತು. ಮದ್ರಾಸ್‌ನಿಂದ ಆಂಧ್ರಪ್ರಭ ಮತ್ತು ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಗಳನ್ನು ರೈಲಿನಲ್ಲಿ ತರಿಸಿಕೊಂಡು ಅಲ್ಲಿಂದ ನಮ್ಮ ಸಂಸ್ಥಾನದ ಮುಖ್ಯ ಸ್ಥಳಗಳಿಗೆ ಅವುಗಳನ್ನು ಕಳುಹಿಸುವ ಏರ್ಪಾಡು ಮಾಡುತ್ತಿದ್ದೆವು. ಈ ಪತ್ರಿಕೆಗಳಿಗೆ ಆಗ ಸಂಸ್ಥಾನದಲ್ಲಿ ಪ್ರತಿಬಂಧವಿತ್ತು. ನಮ್ಮ ಮದ್ರಾಸು ಆಫೀಸಿನಲ್ಲಿ ಎಸ್. ಎನ್. ಗುಪ್ತ ಕೆಲವು ದಿನ ಇದ್ದು ಪತ್ರಿಕೆಗಳಿಗೆ ಸತ್ಯಾಗ್ರಹದ ಸಮಾಚಾರ ಮತ್ತು ಚಿತ್ರಗಳನ್ನು ಕೊಡುತ್ತಿದ್ದರು. ನಾನು ಒಮ್ಮೆ ರಾಮನಾಥ ಗೋಯೆಂಕಾ ಮತ್ತು ಚಂದಮಾಮಾದ ಮಾಲಿಕ ನಾಗಿರೆಡ್ಡಿ ಇವರನ್ನು ಕಂಡು ಸತ್ಯಾಗ್ರಹಕ್ಕೆ ಅವರ ಸಹಕಾರ ಪಡೆದಿದ್ದೆ.

ಸತ್ಯಾಗ್ರಹ ಶುರು ಆದ 15 ದಿನಗಳಲ್ಲಿ ಪತ್ರಿಕೆಗಳ ವ್ಯವಸ್ಥೆಗೆ ನಮಗೆ ತೀರ ಹಣದ ಅಡಚಣೆ ಆಗಲು, ಬೆಂಗಳೂರಿನ ಸಜ್ಜನರಾವ್ ಅವರ ಅಳಿಯ ರಾಮಕೃಷ್ಣರಾವ್ ಅವರಿಂದ ಬೇಕಾದಾಗ ಹಣ ತರಲು ಕೆ. ಸಿ. ರೆಡ್ಡಿ ತಿಳಿಸಿಬಿಟ್ಟಿದ್ದರು. ರೆಡ್ಡಿಯವರ ಅಣ್ಣನ ಮಗ ಆರ್. ಕೆ. ಪ್ರಸಾದರನ್ನು ಈ ಕೆಲಸಕ್ಕೆ ಕಳುಹಿಸಲು, ಬೆಂಗಳೂರಿನಲ್ಲಿ ರೈಲಿನಿಂದ ಇಳಿದಾಗಲೇ ಅವರ ಬಂಧನ ಆಯಿತು. ಈ ಸಂಗತಿ ತಿಳಿದಾಗ ನನಗೇ ಈ ಕೆಲಸಕ್ಕಾಗಿ ಬೆಂಗಳೂರಿಗೆ ಹೋಗಲು ಕೃಷ್ಣಪ್ಪ ತಿಳಿಸಿದರು. ನಾನು ಮಾರು ವೇಷದಲ್ಲಿ ಕುಪ್ಪಂನಿಂದ ಹೊರಟು, ಕೃಷ್ಣರಾಜಪುರ ಸ್ಟೇಶನ್‌ನಲ್ಲಿ ಇಳಿದು ಬೆಂಗಳೂರಲ್ಲಿ ರಾಮಕೃಷ್ಣರಾಯರನ್ನು ಕಂಡು ಕೃಷ್ಣಪ್ಪನವರ ಪತ್ರ ಅವರಿಗೆ ತಲಪಿಸಿದೆ. ತಾವೇ ಹಣವನ್ನು ವಿಮಾನದಲ್ಲಿ ಮದ್ರಾಸಿಗೆ ಒಯ್ದು ಕೃಷ್ಣಪ್ಪನವರಿಗೆ ತಲುಪಿಸಲು ಕೇಳಿ ಕೊಂಡು, ಮಾವಳ್ಳಿಯ ನನ್ನ ಮಾವನ ಮನೆ ಸೇರಿದೆ. ಮರುದಿನ ರೈಲಿನಿಂದ ನನ್ನ ಶಿಬಿರವನ್ನು ಸೇರಿದೆ.

ಗುಡಿಪಲ್ಲಿಯಿಂದ ಮರುದಿನ ಮದ್ರಾಸ್ ಪ್ರಾಂತದ 100 ಜನ ಸತ್ಯಾಗ್ರಹಿಗಳನ್ನು ಕೋಲಾರ ತಲಪಿಸುವ ಕಾರ್ಯ ನನ್ನದಾಗಿತ್ತು. ಕುಪ್ಪಂನಿಂದ ರಾಜಪೇಟೆ ಮೂಲಕ ಕೋಲಾರ ಮಾರ್ಗ ಹಿಡಿದೆವು. ಸುತ್ತಲ ಪ್ರದೇಶವೆಲ್ಲ ನನಗೆ ಪರಿಚಿತವಾಗಿದ್ದುದರಿಂದ ದಾರಿಯಲ್ಲಿ ಯಾವ ತೊಂದರೆಯೂ ಆಗಲಿಲ್ಲ. ಕೋಲಾರಕ್ಕೆ ಐದು ಮೈಲಿ ದೂರ ದಲ್ಲಿದ್ದಾಗ ಪೊಲೀಸರು ನಮ್ಮ ಬಂಧನಕ್ಕೆ ಕಾದಿರುವ ವಿಚಾರ ತಿಳಿಯಿತು. ಎಲ್ಲ ಸತ್ಯಾಗ್ರಹಿಗಳ ಬಂಧನ ಆಯಿತು. ನಾನು ಮಾತ್ರ ಸಿಗಲಿಲ್ಲ. ರಾತ್ರಿ ಆವನಿ ಹತ್ತಿರದ ಒಂದು ಹಳ್ಳಿಗೆ ಹೋಗಿ ಕೃಷ್ಣಪ್ಪನವರ ಬಂಧುವೊಬ್ಬರ ಮನೆಯಲ್ಲಿ ಉಳಿದು ಮರುದಿನ ಶಿಬಿರ ಸೇರಿದೆ. ಮುಂದೆ ಕಾಮಸಂದ್ರ ಪೋಲೀಸ್ ಸ್ಟೇಶನ್ ಮೇಲೆ ದಾಳಿಮಾಡಿ ಕೆ.ಜಿ.ಎಫ್. ಪ್ರದೇಶದಲ್ಲಿ ಕ್ರಾಂತಿ ನಡೆಸಬೇಕೆಂಬ ತಯಾರಿಯಲ್ಲಿದ್ದಾಗ ಸರಕಾರಕ್ಕೂ ಕಾಂಗ್ರೆಸ್ಸಿಗೂ ಒಪ್ಪಂದ ಆಯಿತು. ಆ ರಾತ್ರಿ ನಾವು ಕೆ.ಜಿ.ಎಫ್.ಗೆ ಹೋದಾಗ ಅಲ್ಲಿ ಕೃಷ್ಣಪ್ಪನವರಿಗೆ ಅದ್ಭುತ ಸ್ವಾಗತ. ನನ್ನ ಮೇಲೆ 14 ಜನ ಪೋಲೀಸು ಕೇಸು ಇದ್ದವು.

ವೈ.ತು. 1

## ಬಿ. ಸಿ. ನಂಜುಂಡಯ್ಯ

ಜನನ : 1913 ಉದ್ಯೋಗ : ಕೃಷಿ ವಿಳಾಸ : ಗಾರ್ಡನ್ ಹೌಸ್, ತುಮಕೂರು

ವಿದ್ಯಾರ್ಥಿಯಾಗಿದ್ದಾಗಲೇ ನಾನು ರಾಷ್ಟ್ರೀಯ ಚಳವಳಿಯ ಕಡೆ ಆಕರ್ಷಿತನಾಗಿದ್ದು 'ಹಿಂದೂ' ಪತ್ರಿಕೆ ಓದಿ ಪ್ರಭಾವಿತನಾಗಿದ್ದೆ. 1920ರಲ್ಲಿ ಲೋಕಮಾನ್ಯರು ತೀರಿ ಕೊಂಡಾಗ ಇಲ್ಲಿನ ನಾಟಕದ ಥಿಯೇಟರ್‌ನಲ್ಲಿ ಸಂತಾಪಸೂಚಕ ಸಭೆ ನಡೆದಿದ್ದು ಕೆ. ರಂಗಯ್ಯಂಗಾರ್, ಸೆಟ್ಲೂರ, ಟಿ. ಸುಬ್ರಹ್ಮಣ್ಯಂ ಹಾಗೂ ಜಿ. ರಾಜಗೋಪಾಲಾ ಚಾರ್ ಭಾಷಣಮಾಡಿದ್ದರು. 1923-24ರಲ್ಲಿ ರಂಗಯ್ಯಂಗಾರ್ 'ಮೈಸೂರ್ ಕ್ರಾನಿಕಲ್' ಎಂಬ ಪತ್ರಿಕೆಯನ್ನು ನಡೆಸಿ ರಾಷ್ಟ್ರೀಯ ವಿಚಾರ ಪ್ರಚುರಪಡಿಸಿದರು. 1924ರ ಬೆಳಗಾವಿ ಕಾಂಗ್ರೆಸ್ಸಿಗೆ ರಂಗಯ್ಯಂಗಾರರು ಹೋಗಿದ್ದು ಆಗಿನಿಂದಲೇ ಖಾದಿ ತೊಡುತ್ತಿದ್ದರು. 1927ರಲ್ಲಿ ಗಾಂಧೀಜಿ ತುಮಕೂರಿಗೆ ಬಂದಾಗ ಟೌನ್‌ಹಾಲ್ ಎದುರುಗಡೆ ಸಭೆಯಾಗಿತ್ತು. 1928ರ ಸುಮಾರಿಗೆ ನಮ್ಮ ಊರಲ್ಲಿ ಸೇವಾದಳದ ಒಂದು ಶಿಬಿರ ನಡೆಯಿತು. ನಾನು ಅದರಲ್ಲಿ ಪಾಲುಗೊಂಡಿದ್ದೆ. ಮುಂದೆ ಅಂಕೋಲಾ ದಲ್ಲಿ ನಡೆದ ಉಪ್ಪಿನ ಸತ್ಯಾಗ್ರಹಕ್ಕೆ ಟಿ. ಎಲ್. ಸಂಗಣ್ಣ, ಟಿ ಎನ್. ಚನ್ನಪ್ಪ, ಪುಟ್ಟಯ್ಯ, ವಜ್ರಂಶೆಟ್ಟಿ (ಈಗ ಕ್ವಾಲಿಟಿ ಬಿಸ್ಕಿಟ್ ಮಾಲೀಕರು) ಮುಂತಾದ 7-8 ಜನ ಇಲ್ಲಿಂದ ಹೋದಂತೆ ನನ್ನ ನೆನಪು.

ಉಪ್ಪಿನ ಸತ್ಯಾಗ್ರಹದ ಅನಂತರ 1931ರ ಅಕ್ಟೋಬರ್-ನವೆಂಬರ್‌ನಲ್ಲಿ ತುಮಕೂರಿನಲ್ಲಿ ಇಡೀ ಮೈಸೂರು ಸಂಸ್ಥಾನದಲ್ಲಿಯೇ ಮೊದಲ ಬಾರಿ ಪಾನನಿರೋಧ ಚಳವಳಿ ಆರಂಭಿಸಿದೆವು. ತಾಳಕೆರೆ ಸುಬ್ರಹ್ಮಣ್ಯಂ ಇದರ ಪ್ರಮುಖರು. ನಾನು ಆಗ ಅವರ ಬಲಗೈಯಂತೆ ಕೆಲಸಮಾಡಿದೆ. ಎಂ. ಎನ್. ವಿಠೋಬರಾವ್, ಎ. ರೇವಣ್ಣ, ಟಿ. ಎಲ್. ನಿಂಗಣ್ಣ ಮುಂತಾದವರು ಇದರಲ್ಲಿ ಪಾಲುಗೊಂಡರು. ಹೆಂಡದ ಅಂಗಡಿ ಮುಂದೆ ಪಿಕೆಟಿಂಗ್ ತುಮಕೂರಿಗೆ ನೂರು ಮೈಲು ದೂರದ ಮಧುಗಿರಿ ರಸ್ತೆಯಲ್ಲಿನ ಎಲ್ಲಾಪುರದ ಅಂಗಡಿ ಮುಂದೆ ಮೊದಲು ನಡೆಸಿದೆವು. ಜನ ಹೆಂಡದ ಸೀಸೆಗಳನ್ನು ನೆಲಕ್ಕೆ ಕುಕ್ಕಿ ಎಂದೆಂದಿಗೂ ಕುಡಿಯದಂತೆ ಆಣೆ ಇಟ್ಟು ಹೋದರು. ದಿನಕ್ಕೆ ನಾಲ್ವರಂತೆ ಸುಮಾರು 120 ಜನರು ಈ ಪಿಕೆಟಿಂಗ್‌ನಲ್ಲಿ ಪಾಲುಗೊಂಡರು. ಗಣನೀಯವಾಗಿ ಕುಡುಕರ ಸಂಖ್ಯೆ ಇಳಿಯಿತು. ಅಂಗಡಿ ಮಾಲೀಕನ ಕಣ್ಣು ರಿಯಿತು. ಚಳವಳಿಗಾರರ ಮೇಲೆ ರಾತ್ರಿ ಮಾರ್ಗಮಧ್ಯದಲ್ಲಿ ಅಂಗಡಿ ಮಾಲೀಕನಿಂದ ಉತ್ತೇಜನಗೊಂಡ ಗೂಂಡಾ

ಜನರ ಹಲ್ಲೆ ನಡೆಯಿತು. ಚಳವಳಿಗಾರರ ಮುಖದ ಮೇಲೆ ಮೊಟ್ಟೆ ಎಸೆದರು. ಬಾಯಿಗೆ ಬಲಾತ್ಕಾರವಾಗಿ ತುಕ್ಕ ತೂರಿದರು. ತಲೆಯ ಮೇಲೆ ಹೆಂಡ ಸುರಿದರು. ಬೈದರು; ಅವಮಾನಗೊಳಿಸಿದರು. ಚಳವಳಿಗಾರರ ತಲೆ ಒಡೆದವು, ಕೈಕಾಲುಗಳು ಮುರಿದವು. ಇದುವರೆಗೆ ಪ್ರೇಕ್ಷಕನಂತೆ ಇದ್ದ ಸರಕಾರ 'ಬಂಡಾಯ ಹತ್ತಿಕ್ಕುವ' ನೆಪದಲ್ಲಿ ಲಾಠೀ ಚಾರ್ಜ್, ದಸ್ತಗಿರಿ ಆರಂಭಿಸಿತು. ಈವರೆಗೆ ಪ್ರೇಕ್ಷಕರಾಗಿದ್ದದವರು ಈಗ ಚಳವಳಿಯಲ್ಲಿ ಪಾಲ್ಗೊಂಡರು. ಅನೇಕರಿಗೆ ಶಿಕ್ಷೆವಿಧಿಸಿದರು. 120 ಜನರ ದಸ್ತಗಿರಿ ತುಮಕೂರಲ್ಲಿ ಆಯಿತು. ನನ್ನ ಸಹಿತ ಅನೇಕರಿಗೆ ಎರಡು ತಿಂಗಳ ಶಿಕ್ಷೆ ಆಯಿತು. ಈ ಖಟ್ಲೆ ಹೈಕೋರ್ಟಿಗೂ ಹೋಗಿ, ನ್ಯಾಯಮೂರ್ತಿ ಕೆ. ಶಂಕರನಾರಾಯಣರಾಯರು "ಶಾಂತಿಯುತ ಪಿಕೆಟಿಂಗ್ ಅಪರಾಧವಲ್ಲ" ಎಂದು ತೀರ್ಮಾನವಿತ್ತರು. ಈ ನಡುವೆ ಎಲ್ಲೆಡೆ ಈ ಬಗ್ಗೆ ಕ್ಷೋಭೆಯಾಗಿ, ಸರ್ಕಾರ ಕಾಂಗ್ರೆಸ್ಸಿನ ಜೊತೆ ಮಾತುಕತೆಗೆ ಮುಂದಾಯಿತು. ಕೆ.ಪಿ.ಸಿ.ಸಿ. ಅಧ್ಯಕ್ಷ ಕಾರ್ನಾಡು ಸದಾಶಿವರಾಯರಿಗೂ ಮಿರ್ಜಾರಿಗೂ ಸರ್ದಾರ್ ಪಟೇಲರ ಪ್ರೇರಣೆಯಿಂದ ಒಪ್ಪಂದವಾಗಿ ಖಟ್ಲೆಗಳನ್ನು ಸರಕಾರ ಹಿಂತೆಗೆದುಕೊಂಡಿತು.

1932ರ ಕರನಿರಾಕರಣ ಚಳವಳಿ ಕಾರವಾರ ಜಿಲ್ಲೆಯಲ್ಲಿ ನಡೆದಿರಲು ಇಲ್ಲಿಂದಲೇ ಬುಲೆಟಿನ್‌ಗಳನ್ನು ಸೈಕ್ಲೊಸ್ಟೈಲ್ ಮಾಡಿ ಕಳುಹಿಸಲಾಗುತ್ತಿತ್ತು. 1930ರಿಂದ 34ರ ವರೆಗೆ 3–4 ವರ್ಷ ಖಾದೀಪ್ರಚಾರ, ಹರಿಜನೋದ್ಧಾರ, ಹಿಂದೀಪ್ರಚಾರ, ಹಿಂದು–ಮುಸ್ಲಿಂ ಐಕ್ಯ ಮುಂತಾದ ಚಟುವಟಿಕೆಗಳ ಬಗ್ಗೆ ಪ್ರಚಾರ ನಡೆಸುತ್ತಿದ್ದೆವು. ಮಧುಗಿರಿ, ತಿಪಟೂರುಗಳಲ್ಲಿ ಈ ಚಟುವಟಿಕೆಗಳು ಆಗುತ್ತಿದ್ದವು. ಮಧುಗಿರಿಯಲ್ಲಿ ನಂಜಯ್ಯಶೆಟ್ಟರು 'ಟಿಳಕ್ ಹಾಲ್' ಎಂಬ ಸಭಾಭವನವನ್ನು ಕಟ್ಟಿದ್ದರು. ಮಿಡಿಗೇಶಿ, ಪಾವಗಡ, ಇಟ್ಟಿಗೆ ದಿಬ್ಬಹಳ್ಳಿಗಳಲ್ಲಿ ಖಾದಿ ಉತ್ಪಾದನಾಕೇಂದ್ರಗಳು ಸ್ಥಾಪನೆಗೊಂಡವು.

1933ರಲ್ಲಿ ನಾನು ಪುರಸಭೆಗೆ ನಿಂತು ಆರಿಸಿಬಂದೆ. ಆಗ ನನಗೆ 21 ವರ್ಷವಷ್ಟೇ. ಮುಂದೆ 1951ರ ವರೆಗೂ ಪುರಸಭಾ ಸದಸ್ಯನಾಗಿದ್ದೆ. ಆದರೆ 1933ರಲ್ಲಿ ಕಾಂಗ್ರೆಸ್ಸು ಚುನಾವಣೆಗೆ ನಿಂತಿರಲಿಲ್ಲ. 1937ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆ ಆದಾಗ ನಾನು ಪ್ರಜಾಪ್ರತಿನಿಧಿ ಸಭೆಗೆ ಕಾಂಗ್ರೆಸ್‌ನಿಂದ ನಿಂತು ಅವಿರೋಧವಾಗಿ ಆಯ್ಕೆಗೊಂಡೆ. 1938ರ ಏಪ್ರಿಲ್‌ನಲ್ಲಿ ಧ್ವಜಸತ್ಯಾಗ್ರಹವನ್ನು ತುಮಕೂರಲ್ಲಿ ನಡೆಸಿ ನಾನು 2 ತಿಂಗಳು ಶಿಕ್ಷೆಗೆ ಒಳಗಾದೆ. ತುಮಕೂರಲ್ಲಿ ನಾನೇ ಪ್ರಥಮ ಸತ್ಯಾಗ್ರಹಿ. ಕುಣಿಗಲ್‌ನಲ್ಲಿ ಕೆ. ವಿ. ಸುಬ್ರಹ್ಮಣ್ಯಸ್ವಾಮಿ, ಮಧುಗಿರಿಯಲ್ಲಿ ಟಿ. ತಾರೇಗೌಡ ಇವರ ನೇತೃತ್ವದಲ್ಲಿ ಧ್ವಜಸತ್ಯಾಗ್ರಹವಾಗಿ ಅನೇಕರ ಬಂಧನ ಆಯಿತು.

1939ರ ಅರಣ್ಯಸತ್ಯಾಗ್ರಹದಲ್ಲಿ ತುಮಕೂರು ಜಿಲ್ಲೆಯಲ್ಲಿ 470 ಜನ ಬಂಧಿತರಾಗಿ 5 ತಿಂಗಳಿಂದ ಒಂದು ವರ್ಷದವರೆಗೆ ಶಿಕ್ಷೆಗೆ ಒಳಗಾದರು. ಶಿರಾ ಈ ಸತ್ಯಾಗ್ರಹದ ಕೇಂದ್ರವಾಗಿತ್ತು. ನಾನು, ಎಂ. ನೀಲಕಂಠರಾವ್, ಮಾಲಿ ಮರಿಯಪ್ಪ ಇವರುಗಳು ಆಗ

ಶಿಕ್ಷೆಗೆ ಒಳಗಾದ ಕೆಲವರು. ಇದಕ್ಕೂ ಮೊದಲೇ ತಾಳಕೆರೆ ಅವರು ರಾಜದ್ರೋಹದ ಆಪಾದನೆಯಿಂದ ಜೈಲು ಸೇರಿದ್ದರು. ಈ ಅವಧಿಯಲ್ಲಿ ಸರಕಾರ ನಡೆಸಿದ ದಬ್ಬಾಳಿಕೆಯ ಪರಿಶೀಲನೆಗೆ ಬಂದ ಮಹದೇವ ದೇಸಾಯಿ ಅವರು ಆಗ ಜೈಲಿನಲ್ಲಿದ್ದ ನನ್ನ ಮನೆಗೂ ಭೇಟಿ ನೀಡಿದ್ದರು.

1942ರಲ್ಲಿ ಮುಂಬಯಿ ಎ.ಐ.ಸಿ.ಸಿ.ಯಿಂದ ಮರಳಿದ ನಾನು ವೀರಶೈವ ಹಾಸ್ಟೆಲ್‌ನಲ್ಲಿ ಸಾರ್ವಜನಿಕ ಸಭೆ ಕರೆದು, "ಗಾಂಧೀಜಿ ಹಿಂಸಾಚಾರವನ್ನು ಪ್ರತಿಪಾದಿಸಿಲ್ಲ, ಅದಕ್ಕೆ ಪ್ರೋತ್ಸಾಹ ಕೊಡಬಾರದು" ಎಂದು ಭಾಷಣಮಾಡಿ ತಿಳಿಸಿದೆ. ಆಗಲೇ ನನ್ನ, ತಾಳಕೆರೆ ಮತ್ತು ಆರ್. ಎಸ್. ಆರಾಧ್ಯರ ಬಂಧನಕ್ಕೆ ಸೂಚನೆ ಬಂದಿದೆಯೆಂದು ತಿಳಿಯಿತು. ನಾನು ಆಗಸ್ಟ್ 17–18ರ ಸುಮಾರಿಗೆ ಹುಡುಗಿಯರ ಶಾಲೆಯ ಮುಂದೆ ಪಿಕೆಟಿಂಗ್ ಏರ್ಪಡಿಸಿ, ಒಂದು ಫರ್ಲಾಂಗ್ ದೂರದಿಂದ ಸೂಚನೆ ನೀಡುತ್ತಿದ್ದೆ. ಆಗ ನನ್ನ ಬಂಧನ ಆಯಿತು. ನನಗೆ 18 ತಿಂಗಳು ಜೈಲುವಾಸವಾಯಿತು.

1947ರ 'ಮೈಸೂರು ಚಲೋ' ಚಳವಳಿ ಕಾಲಕ್ಕೆ ನನಗೆ 2 ತಿಂಗಳ ಶಿಕ್ಷೆ ಆಯಿತು. ಆಗ ಮಧುಗಿರಿಯಲ್ಲಿ ಗೋಳೀಬಾರ್ ಆಗಿ ಅಲ್ಲಿ ಇಬ್ಬರೂ ತುಮಕೂರಿನಲ್ಲಿ ಮೂವರೂ ಸತ್ತರು. ತುಮಕೂರಿನಲ್ಲಿ ಮೃತರಾದವರ ಪೈಕಿ ಗೊರೂರು ರಾಮಸ್ವಾಮಿ ಅಯ್ಯಂಗಾರರ ಮಗ ಕಾಲೇಜು ವಿದ್ಯಾರ್ಥಿ ರಾಮಚಂದ್ರ ಒಬ್ಬ. ತಾಳಕೆರೆಯವರಲ್ಲದೆ ತುಮಕೂರಲ್ಲಿ ಎಂ. ನೀಲಕಂಠರಾವ್ (ಖಾದಿ ಭಂಡಾರ) ಮತ್ತು ದಿ|| ಮಾಲಿ ಮರಿಯಪ್ಪ ಪ್ರಮುಖ ಕಾರ್ಯಕರ್ತರಾಗಿದ್ದರು.

1944ರಲ್ಲಿ ಜಿಲ್ಲೆಯಲ್ಲಿ ನಡೆದ ಸ್ಥಳೀಯ ಸಂಸ್ಥೆಯ ಚುನಾವಣೆಗಳಲ್ಲಿ ಕಾಂಗ್ರೆಸ್ ಯಶಸ್ವಿಯಾಗಿತ್ತು. 1946ರಲ್ಲಿ ನಾನು ತುಮಕೂರು ಪುರಸಭೆ ಅಧ್ಯಕ್ಷನಾಗಿದ್ದೆ. ಅಲ್ಲದೆ 1944ರಿಂದ ಪ್ರಜಾಪ್ರತಿನಿಧಿಸಭೆಗೆ ಸದಸ್ಯನಾಗಿದ್ದೆ. ತಿರುಗಿ 1948ರಿಂದ 56ರ ವರೆಗೆ ಎಂ.ಎಲ್.ಎ. ಆಗಿದ್ದೆ. 1957ರಿಂದ 1966ರ ವರೆಗೆ ಲೋಕಸಭಾ ಸದಸ್ಯನೂ ಆಗಿದ್ದೆ. 1969ರಿಂದ ಸಕ್ರಿಯ ರಾಜಕಾರಣದಿಂದ ನಿವೃತ್ತನಾದೆ. ಧಾರವಾಡದ ದ.ಭಾ. ಹಿಂದೀ ಪ್ರಚಾರ ಸಭೆಗೆ ನಾನು ಅಧ್ಯಕ್ಷನಾಗಿರುವೆ.

ವ್ಯ.ತು. 2

## ಜಿ. ವಿ. ನಾರಾಯಣ ಮೂರ್ತಿ

ವಯಸ್ಸು : 54 ಉದ್ಯೋಗ : ವಿಧಾಯಕ ಕಾರ್ಯ ವಿಳಾಸ : ಚಿಕ್ಕನಾಯಕನಹಳ್ಳಿ



ಬೆಂಗಳೂರು, ಮೈಸೂರು ನಗರಗಳನ್ನು ಬಿಟ್ಟರೆ, ಇಡಿಯ ರಾಜ್ಯಕ್ಕೆ ತುಮಕೂರು ಒಳ್ಳೆಯ ರಾಜಕೀಯ ಪ್ರಜ್ಞೆಯಿಂದ ಕೂಡಿದ್ದಿತು. ಅಂದು ಅಲ್ಲಿನ ನಾಯಕರಾಗಿದ್ದ ದಿ|| ಕಡಬಾ ರಂಗೈಯ್ಯಂಗಾರ್ಯರು ಮತ್ತು ಆಗತಾನೆ ವಕೀಲಿಯನ್ನು ಆರಂಭಿಸಿದ್ದ ತಾಳೆಕೆರೆ ಸುಬ್ರಹ್ಮಣ್ಯಂ ರಾಜಕೀಯ ಹಾಗೂ ರಾಷ್ಟ್ರೀಯ ಪ್ರಜ್ಞೆಯ ಕಾರಂಜಿಯಂತಿದ್ದರು. ಅವರ ಪ್ರಯತ್ನದಿಂದ ಭಾರತೀಯ ಕಾಂಗ್ರೆಸ್ ಸೇವಾದಳದ ಒಂದು ಶಿಬಿರ, ಸೇವಾದಳದ ಜನಕ ಡಾ|| ಹರ್ಡೀಕರರ ನಾಯಕತ್ವದಲ್ಲಿ 1926ರಲ್ಲಿ ನಡೆಯಿತು. ಆ ಶಿಬಿರ ಅನೇಕ ಸ್ವಾತಂತ್ರ್ಯ ಹೋರಾಟಗಾರರನ್ನು ಸೃಷ್ಟಿಸಿದ ಕೀರ್ತಿಗೆ ಕಾರಣವಾಯಿತು. ಆ ಶಿಬಿರ ಸೇರಿದ್ದ ನನಗೆ ಆಗ 14 ವರ್ಷ ವಯಸ್ಸು. ಆ ಶಿಬಿರದ ಶಿಸ್ತಿನ ಜೀವನ, ರಾಷ್ಟ್ರೀಯ ನಾಯಕರ ಆದರ್ಶ ಜೀವನದ ಬಗೆಗೆ ಶ್ರವಣ, ಸ್ವಯಂಸೇವಕ ಕವಾಯಿತು ಇವುಗಳೆಲ್ಲ ರಾಷ್ಟ್ರೀಯ ಪ್ರಜ್ಞೆಯ ಸೊಡರನ್ನು ನನ್ನ ಮನೋಮಂದಿರದಲ್ಲಿ ಹಚ್ಚಿದುವು. ಅವು ಸೇವಾಜೀವನ ದೀಕ್ಷೆಯನ್ನು ಅಗೋಚರವಾಗಿ ನೀಡಿದುವು.

ಲೋಕಮಾನ್ಯ ಬಾಲ ಗಂಗಾಧರ ಟಿಳಕರು ಕಾಲವಾಗಿ ಏಳು ವರ್ಷಗಳಾಗಿದ್ದುವು. ಆಗಸ್ಟ್ 1 ಅವರ ಪುಣ್ಯತಿಥಿ. ಮೂವರು ಗೆಳೆಯರಾದ ನಾವು (ಆ. ತಿ. ಶಾಮಾಚಾರ್– ಬೆಂಗಳೂರಿನಲ್ಲಿ ಶಾಂತಿ ಸಮಿತಿಯ ಅಧ್ಯಕ್ಷರಾಗಿದ್ದಾರೆ; ಅಳಿಲುಘಟ್ಟದ ನರಸಿಂಹಮೂರ್ತಿ ತಮ್ಮ ಊರಿನಲ್ಲಿ ಜಮೀನುದಾರರಾಗಿದ್ದಾರೆ) ಪುಣ್ಯದಿನ ಆಚರಿಸಲು ನಿರ್ಧಾರ ಮಾಡಿದೆವು. ಟಿಳಕರ ಚಿತ್ರ ಹಿಡಿದು ಶಾಲೆಯಿಂದ ಶಾಲೆಗೆ ಹೋದೆವು, ವಿದ್ಯಾರ್ಥಿಗಳ ತಂಡ ಕಟ್ಟಿಕೊಂಡು. ಮಧ್ಯಾಹ್ನ 1 ಗಂಟೆಯ ಸಮಯವಿರಬೇಕು. ಪೋಲೀಸ್ ಸಬ್-ಇನ್‌ಸ್ಪೆಕ್ಟರ್ ನಮ್ಮನ್ನು ಮುಂದೆ ಹೋಗಬಾರದೆಂದು ತಡೆದು, ಠಾಣೆಗೆ ಕರೆದುಕೊಂಡು ಹೋದರು. ರಾತ್ರಿ 9ರ ವರೆಗೂ ನಮ್ಮನ್ನು ಅಲ್ಲಿಯೇ ಇಟ್ಟುಕೊಂಡಿದ್ದು ಮನೆಗೆ ಕಳಿಸಿದರು. ನಮ್ಮ ಅಂದಿನ ಹೆಮ್ಮೆಗೆ ಪಾರವೇ ಇಲ್ಲ. 'ನಾವೂ ಸೆರೆಮನೆ ಕಂಡೆವಲ್ಲಾ' ಎಂಬ ಒಂದೇ ಹಿಗ್ಗು. ನಮ್ಮ ಬಂಧನದ ಕಾರಣದಿಂದ ಅಂದು ಸಂಜೆ

ಏರ್ಪಡಿಸಿದ್ದ ಸಭೆ ನಡೆಯಲು ಅಡ್ಡಿಯಾಯಿತು. ಮರುದಿನ ಸಂಜೆ ಮಾರುಕಟ್ಟೆಯ ಮುಂಭಾಗದ ದಿಬ್ಬದ ಮೇಲೆ ಸಭೆ ನಡೆಸಿದೆವು. ನಾವು ಸ್ವಾತಂತ್ರ್ಯ ಯೋಧರು ಎಂದುಕೊಂಡೆವು.

ಮುಂದಿನ ವರ್ಷ ಬಾಪೂ ಖಾದೀ ಪ್ರಚಾರಕ್ಕಾಗಿ ರಾಜ್ಯಾದ್ಯಂತ ಸಂಚಾರ ಮಾಡಿ ತುಮಕೂರಿಗೂ ಬಂದರು. ರೆಡ್ ಕ್ರಾಸ್ ವಾಹನದ ಮೇಲೆ ಕುಳಿತು, ತುಮಕೂರು ಹೈಸ್ಕೂಲಿನ ಮೈದಾನದಲ್ಲಿ ನೆರೆದಿದ್ದ ದೊಡ್ಡ ಸಭೆಯನ್ನು ಉದ್ದೇಶಿಸಿ ಭಾಷಣ ಮಾಡಿದರು. ಅವರ ಒಂದೊಂದು ಮಾತೂ—ಆಗ ಹಿಂದೀ ನಮಗೆ ಅರ್ಥ ವಾಗದಿದ್ದರೂ—ಮನಸ್ಸಿನಲ್ಲಿ ನೆಲೆನಿಂತವು. ಅವರ ಭವ್ಯವ್ಯಕ್ತಿಚಿತ್ರ ಹೃತ್ಪಟಲದಲ್ಲಿ ಕಡೆದುನಿಂತಿತು. ಶಿರಾ ತಾಲ್ಲೂಕಿನ ಸಿ. ಟಿ. ಹನುಮಂತಯ್ಯ ಎಂಬ ಹರಿಜನ ಬಂಧುವೊಬ್ಬರು ಅವರಿಗೆ ಕಡಲೆಕಾಯಿಸಿಪ್ಪೆಯ ಸರ ಅರ್ಪಿಸಿದುದು ಎಂದಿಗೂ ಮರೆಯ ದಂಥದು. ಅದೊಂದು ಪಾವನದರ್ಶನ. ತ್ಯಾಗ, ಸರಳತೆಗಳ ಮೂರ್ತಿವೆತ್ತ ರೂಪ ಬಾಪೂವಿನದು.

1930–31: ನನ್ನ ಇಂಟರ್‌ಮೀಡಿಯೆಟ್ ಕಾಲೇಜ್ ವ್ಯಾಸಂಗ ಮುಂದುವರಿ ಯುತ್ತಿತ್ತು. ಭಾರತದಾದ್ಯಂತ ಪಾನನಿಷೇಧ ಕಾರ್ಯಕ್ರಮ, ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್, ವಿದೇಶೀವಸ್ತ್ರದಹನ ನಡೆದಿತ್ತು. ತುಮಕೂರಿನಲ್ಲಿಯೂ ಇದು ಭರದಿಂದ ಸಾಗಿದ್ದಿತು—ತಾಳಿಕೆರೆ ಸುಬ್ರಹ್ಮಣ್ಯಂರ ನಾಯಕತ್ವದಲ್ಲಿ. ಒಂದು ದಿನ ಸಂಜೆ ಸೇಂದಿ ಅಂಗಡಿಯ ಮುಂದೆ ಸರ್ಪಕಾವಲು ಶಾಂತಿಯುತವಾಗಿ ಮುಂದುವರಿ ದಿದ್ದಿತು. ಅಂಗಡಿಯ ಮಾಲೀಕರೂ ಪೋಲೀಸರೂ ಒಂದಾಗಿ, ಕೆಲವರು ಗೂಂಡಾ ಗಳಿಗೆ ಕುಡಿಸಿ, ಸರ್ಪಕಾವಲಿದ್ದ ಸ್ವಯಂಸೇವಕರ ಮೇಲೆ ಹಲ್ಲೆಮಾಡಿಸಿದರು. ಆದರೂ ರಾತ್ರಿ 9 ಗಂಟೆ ವರೆಗೂ ಸರ್ಪಕಾವಲು ಮುಂದುವರಿಯಿತು. ಈ ಅತ್ಯಾಚಾರವನ್ನು ಖಂಡಿಸುವ ಸಲುವಾಗಿ ಸ್ವಯಂಸೇವಕರು ರಾತ್ರಿ 9½ ಮೇಲೆ, ಮಾರುಕಟ್ಟೆಯ ಮುಂದಿನ ದಿಬ್ಬದ ಮೇಲೆ ಸಭೆ ಸೇರಿದರು. ನಾಯಕರೆಲ್ಲರೂ ಬಂದಿದ್ದರು.

ಸ್ವಲ್ಪ ದೂರದಲ್ಲಿ ಜಿಲ್ಲೆಯ ಪೋಲೀಸ್ ಸೂಪರಿಂಟೆಂಡೆಂಟ್ ಹೈದರ್ ಅಲೀ 10–15 ಮಂದಿ ಪೋಲೀಸ್ ಪ್ಯಾದೆಗಳ ಸಹಿತ ಸಿದ್ಧವಾಗಿ ನಿಂತಿದ್ದರು. ಗುಂಪು ಚದುರಬೇಕೆಂದೂ, ಸಭೆಯನ್ನು ಮುಂದುರಿಸಬಾರದೆಂದೂ ಸೂಚನೆಯಿತ್ತರು. ಸಭೆ ನಡೆಯುತ್ತಲೇ ಇದ್ದಿತು. ಅವರು ಸಂಜ್ಞೆ ಕೊಟ್ಟುದೇ ತಡ ಪೋಲೀಸರ ದೌರ್ಜನ್ಯ ಯುತ ಹಲ್ಲೆ ಅವ್ಯಾಹತವಾಗಿ ಸಾಗಿತು. ಆಗ ಆ ಸ್ಥಳದಲ್ಲಿ ಈಗಿನಂತೆ ಸಾಕಷ್ಟು ಬೆಳಕು ಇರಲಿಲ್ಲ. ತೆರೆಮರೆಯ ಕತ್ತಲಿನಲ್ಲಿ 'ಮುಸುಕಿನ ಗುದ್ದು' ಯಾರಾರಿಗೆ ಬಿದ್ದಿತೋ! 'ಗಾಂಧೀಜೀಕೀ ಜೈ, ನೆಹರೂಜೀಕೀ ಜೈ' ಎಂಬ ಉದ್ಘೋಷ ಕೇಳಿ ಬರುತ್ತಿತ್ತು. ಹಿರಿಯರಾದ ರಂಗೈಯ್ಯಂಗಾರ್ಯರಿಗೂ ಸುಬ್ರಹ್ಮಣ್ಯರಿಗೂ ಏಟು ಬಿದ್ದಿತು.

ನನಗೂ ಬಲವಾದ ಏಟು ಬಿದ್ದಿತು. ಹೀಗೆ ಏಟು ಬಿದ್ದುದು ನಮ್ಮ ಉತ್ಸಾಹವನ್ನು ಇಮ್ಮಡಿ ಹೆಚ್ಚಿಸಿತು.

ಅದೇ ವರ್ಷ ನಾನು ಇಂಟರ್‌ಮೀಡಿಯೆಟ್ ಪರೀಕ್ಷೆಗಾಗಿ ಬೆಂಗಳೂರಿಗೆ ಹೋಗಿದ್ದೆ. ಪರೀಕ್ಷೆ ಮುಗಿದಿತ್ತು. ಜವಾಹರಲಾಲ್ ಬೆಂಗೂರಿಗೆ ಬರುವ ಕಾರ್ಯ ಕ್ರಮವಿತ್ತು. ನನ್ನ ಗೆಳೆಯನೊಬ್ಬ ಶಿರಸಿ–ಸಿದ್ದಾಪುರ ಕರನಿರಾಕರಣ ಚಳವಳಿಯಲ್ಲಿ ಭಾಗವಹಿಸಿ ಕಾರಾಗೃಹ ಶಿಕ್ಷೆ ಮುಗಿಸಿಕೊಂಡು ಆಗತಾನೆ ಊರಿಗೆ ಬಂದಿದ್ದ. ಬೆಂಗಳೂರು ನಗರ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿದ್ದ ದಿವಂಗತ ವಿ. ಸಂಜೀವರಾಯರ ಮನೆಗೆ ನನ್ನನ್ನೂ ಕರೆದುಕೊಂಡು ಹೋದ. ಅವರು ಆ ಸ್ವಯಂಸೇವಕ ಸತ್ಯಾಗ್ರಹಿ ಯನ್ನು ಕಂಡೊಡನೆ ಬಿಗಿದಪ್ಪಿದರು. "ನಾಳೆ ಸಂಜೆ ಕಾಂಗ್ರೆಸ್ ಭವನದಲ್ಲಿ ಜವಾಹರ ಲಾಲ್ ಅವರು ಭಾಷಣ ಮಾಡುತ್ತಾರೆ, ನಿನ್ನ ಸ್ನೇಹಿತನನ್ನೂ ಕರೆದುಕೊಂಡು ಬಾ. ಇಬ್ಬರೂ ಸ್ವಯಂಸೇವಕರಾಗಿ ಕಾಯಕ ನಿರ್ವಹಿಸುವಿರಂತೆ" ಎಂದರು. ಜನಸಂದಣಿ ಅಸಾಧ್ಯವಾಗಿದ್ದಿತು. ಸ್ವಯಂಸೇವಕರ ಶಿಸ್ತು ಏನೂ ನಡೆಯಲಿಲ್ಲ. ಗೋಡೆ ಹಾಕಿ ದಂತೆ ಜನ ಅವರ ಮುಂದೆ ನಿಂತುಬಿಟ್ಟರು. ಆಗಾಗ ಅವರಿವರು ಜವಾಹರಲಾಲರ ಹಸ್ತಾಕ್ಷರಕ್ಕಾಗಿ ಪುಸ್ತಕ ನೀಡುತ್ತಿದ್ದರು. ನನಗೂ ಆ ಹುಚ್ಚು ಇದ್ದಿತು. ನಾನು ಜನಗಳ ಸಂದಿಯಲ್ಲಿಯೇ ನನ್ನ ಹಸ್ತಾಕ್ಷರ ಪುಸ್ತಕವನ್ನು ಜವಾಹರಲಾಲರ ಮುಂದೆ ಹಿಡಿದಿದ್ದೆ. ಅವರು, "**What is this? I see no head but a hand**" ಎಂದು ನನ್ನ ಕೈ ಹಿಡಿದರು. ನನ್ನಲ್ಲಿ ಒಂದು ಬಗೆಯ ವಿದ್ಯುತ್ ಸಂಚಾರವಾದಂತಾ ಯಿತು. ಭಾರತಾಂಬೆಯ ಆ ಧನ್ಯ ವೀರಪುತ್ರನ ಹಸ್ತಸ್ಪರ್ಶ ಇಂದಿಗೂ ಈಗ ಆದಂತಿದೆ. ನನ್ನ ಬದುಕಿನಲ್ಲಿ ಅದೊಂದು ದಿವ್ಯಗಳಿಗೆ.

ಅನನುಕೂಲದಿಂದ ಬಿ.ಎ. ವ್ಯಾಸಂಗವನ್ನು ಕೊನೆಯ ವರ್ಷದಲ್ಲಿ ತ್ಯಜಿಸಿದ್ದ ನಾನು ಅಂದು ಅಸ್ತಿತ್ವದಲ್ಲಿದ್ದ 'ನವಜೀವನ' ಪತ್ರಿಕೆ ಮತ್ತು 'ಮಕ್ಕಳ ಪುಸ್ತಕ' ಸಂಪಾದಕ ವರ್ಗದಲ್ಲಿ ಕೆಲಸಮಾಡುತ್ತಿದ್ದೆ. 1937ರ ಕಾಲ. ನಂಜನಗೂಡಿನಲ್ಲಿ ಸ್ಥಳೀಯ ಸಂಸ್ಥೆಗಳ ಸಮ್ಮೇಳನವೊಂದು ನಡೆಯಿತು. ಆಗ ಬೊಂಬಾಯಿ ಮಹಾನಗರದ ಮೇಯರ್ ಆಗಿದ್ದ ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಮಂಡಲಿಯ ಸದಸ್ಯ ರಾಗಿದ್ದ ಸುಪ್ರಸಿದ್ಧ ಕಾಂಗ್ರೆಸ್ ನಾಯಕ ನರಿಮನ್‌ರು ಅಧ್ಯಕ್ಷತೆ ವಹಿಸಿದ್ದರು. ಸಮ್ಮೇಳನ ಮುಗಿದಿತ್ತು. ನರಿಮನ್‌ರು ರಾಜ್ಯದ ಹತ್ತಾರು ಕಡೆ ಸಂಚಾರಮಾಡಿ, ಕಾಂಗ್ರೆಸ್ಸಿನ ಸಂದೇಶವನ್ನೂ, ಸ್ವಾತಂತ್ರ್ಯ ಹೋರಾಟದ ರೀತಿನೀತಿಗಳನ್ನೂ ತಿಳಿಸಿ ಬಂದಿದ್ದರು. ಬೆಂಗಳೂರಿನ ಬನಪ್ಪಾ ಪಾರ್ಕಿನಲ್ಲಿ, ಒಂದು ಸಂಜೆ 4 ಗಂಟೆಗೆ ಅವರ ಭಾಷಣ ಏರ್ಪಟ್ಟಿತ್ತು. ಸುಮಾರು 3 ಗಂಟೆಯ ವೇಳೆಗೆ ನಗರ ನ್ಯಾಯಾಧೀಶರು ಅವರು ಭಾಷಣ ಮಾಡುವುದಕ್ಕೆ ಪ್ರತಿಬಂಧಕಾಜ್ಞೆ ಹೊರಡಿಸಿ, ನರಿಮನ್ನರ ಮೇಲೆ ಜಾರಿ ಮಾಡಿದ್ದರು. ನರಿಮನ್ನರು ತಾವು ರಾಜಕೀಯ ಭಾಷಣ ಮಾಡುವುದಿಲ್ಲವೆಂದೂ

ಕೇವಲ ವಿದ್ಯಾರ್ಥಿಗಳನ್ನು ಮಾತ್ರ ಉದ್ದೇಶಿಸಿ ಮಾತನಾಡುವುದಾಗಿಯೂ ತಿಳಿಸಿದ್ದರು. ಸಭೆಯು ನಡೆಯಬೇಕಾಗಿದ್ದ ವೇಳೆಗೆ 20,000ಕ್ಕೆ ಮೇಲ್ಪಟ್ಟ ಜನ, ಬನಪ್ಪಾ ಪಾರ್ಕಿನಲ್ಲೂ, ಸುತ್ತಮುತ್ತಲ ಮನೆಗಳ ಮೇಲೂ ದಟ್ಟವಾಗಿ ನೆರೆದಿದ್ದರು. ಪೋಲೀಸರ ಪಡೆಗಳು ಆಗಾಗ ಅಲ್ಲಲ್ಲಿ ಆಯಕಟ್ಟಿನ ಜಾಗಗಳಲ್ಲಿ ಗಸ್ತು ತಿರುಗುತ್ತಿದ್ದುವು. ಜನ ಜಗ್ಗದೆ ನಿಂತಿತ್ತು. ನಾಲ್ಕು ಗಂಟೆಗೆ ಐದು ನಿಮಿಷವಿರಬೇಕು. ನರಿಮನ್ ಬಂದೇ ಬಿಟ್ಟರು. ಜನದ ಉತ್ಸಾಹ ಹೆಚ್ಚಿತು. ಪಾರ್ಕಿನ ಮಧ್ಯದಲ್ಲಿದ್ದ ಅರಳೀಕಟ್ಟೆ ಮೇಲೆ ವೇದಿಕೆ ಇತ್ತು. ನರಿಮನ್ನರು ವೇದಿಕೆ ಹತ್ತಿದರು. ಧ್ವನಿವರ್ಧಕದ ಮುಂದೆ ನಿಂತು, "ನಿಮ್ಮ ಸರಕಾರದ ವಿಚಿತ್ರ ವರ್ತನೆ ನನಗೆ ಅರ್ಥವಾಗುವುದಿಲ್ಲ. ಈ ಮೂರುನಾಲ್ಕು ದಿನಗಳಿಂದ ನಿಮ್ಮ ರಾಜ್ಯದಲ್ಲಿ ಹತ್ತಾರು ಕಡೆ ಸಂಚಾರಮಾಡಿ, ರಾಜಕೀಯ ಭಾಷಣ ಮಾಡಿ ಬಂದಿದ್ದೇನೆ. ಒಂದು ಕಡೆಯೂ ನನಗೆ ಪ್ರತಿಬಂಧಕಾಜ್ಞೆ ಜಾರಿಮಾಡಲಿಲ್ಲ. ಇಲ್ಲಿ ವಿದ್ಯಾರ್ಥಿಗಳನ್ನು ಕುರಿತು ಮಾತನಾಡುವವನಿದ್ದೇನೆ. ಇದು ರಾಜಕೀಯ ಭಾಷಣವಲ್ಲದಿದ್ದರೂ ನಿಮ್ಮ ಸರಕಾರಕ್ಕೆ ಬೇಡವಾಗಿದೆ—" ಎನ್ನುತ್ತಿದ್ದಂತೆಯೇ ಪಕ್ಕದಲ್ಲಿಯೇ ನಿಂತಿದ್ದ ಪೋಲೀಸ್ ಸಬ್-ಇನ್‌ಸ್ಪೆಕ್ಟರ್ ಧ್ರುವರಾವ್ ಎನ್ನುವವರು, "ನಿಮ್ಮ ಭಾಷಣವನ್ನು ನಿಲ್ಲಿಸಿ" ಎಂದು ಹೇಳುತ್ತಾ ಅವರನ್ನು ಕೈಹಿಡಿದು ಜಗ್ಗಿದರು. ಉಳಿದ ಪೋಲೀಸರು ಅವರನ್ನು ಸುತ್ತುಗಟ್ಟಿದರು. ಈ ದಬ್ಬಾಳಿಕೆಯನ್ನು ಕಂಡ ಜನ ಸಮೂಹ ಹಿಂಸಾತ್ಮಕ ರೀತಿಯಲ್ಲಿ ಪ್ರತಿಭಟಿಸಿದ್ದರೆ ಪೋಲೀಸರ ಗತಿ ಏನಾಗುತ್ತಿತ್ತೊ ? 'ಅಪಮಾನ' 'ಅಪಮಾನ' ಎಂಬ ಕೂಗು ಆಕಾಶವನ್ನು ಮುಟ್ಟಿತು. ಅದೆಷ್ಟು ಚಪ್ಪಲಿಗಳೋ ಪೋಲೀಸರ ಕಡೆ ತೂರಾಟವಾದುವು. ಐದು ನಿಮಿಷಕಾಲ ಆಕಾಶದಲ್ಲಿ ಹಕ್ಕಿಗಳ ಸಮೂಹ ಹಾರಾಡಿದಂತೆ ಕಂಡುಬಂದಿತು. ಪತ್ರಿಕೋದ್ಯಮಿಗಳಾದ ತಿ. ತಾ. ಶರ್ಮ, ಪಿ. ಆರ್. ರಾಮಯ್ಯ ಇವರುಗಳು "ಇದು ಸಲ್ಲದು, ಇದು ಗೌರವ ತರದು" ಎನ್ನುತ್ತಿದ್ದರು. ಅವರ ಪಕ್ಕದಲ್ಲಿಯೇ ಇದ್ದ ನನಗೂ ಅವರಿಗೂ ಪಾದರಕ್ಷೆಗಳ ಪೆಟ್ಟು ಬಿಡಿಯಿತು.

ಪೋಲೀಸರ ಈ ಅತ್ಯಾಚಾರದಿಂದ ನಗರದಲ್ಲಿ ಪ್ರಕ್ಷುಬ್ಧ ಪರಿಸ್ಥಿತಿ ಏರ್ಪಟ್ಟಿತು. ಮೂರು ದಿನಗಳ ಕಾಲ ನಗರದ ಜೀವನವೆಲ್ಲ ಅಸ್ತವ್ಯಸ್ತವಾಯಿತು. ಮರುದಿನ ಪೋಲೀಸರು ಗುಂಡು ಹಾರಿಸಿದ ಪರಿಣಾಮವಾಗಿ ಜನ ರೊಚ್ಚಿಗೆದ್ದರು. ನಗರ ನ್ಯಾಯಾಧೀಶರಾಗಿದ್ದ ಗುರುದತ್ ಸಭೆಗಳ ಮೇಲೆ ಹೊರಡಿಸಿದ್ದ ಪ್ರತಿಬಂಧಕಾಜ್ಞೆಯು ಜನರಲ್ಲಿ ಯಾವ ಭೀತಿಯನ್ನೂ ಉಂಟುಮಾಡಲಿಲ್ಲ. ಸಹಸ್ರಾರು ಜನ ಜಿಲ್ಲಾಧಿಕಾರಿಗಳ ಕಾರ್ಯಾಲಯದ ಆವರಣದಲ್ಲಿ ಮತ್ತು ಸುತ್ತಮುತ್ತಲಿನ ಪ್ರದೇಶದಲ್ಲಿ ಸದಾ ನೆರೆದಿರುತ್ತಿದ್ದರು. ಪೋಲೀಸರನ್ನು ಕಂಡರೆ ಕೆರಳುತ್ತಿದ್ದರು.

ಸುಮಾರು 1 ಗಂಟೆಯ ಸಮಯ. ಬಿಸಿಲು ಕಾಯುತ್ತಿತ್ತು. ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟರ ಕಾರ್ಯಾಲಯದ ಮುಂದೆ ಒಂದು ತುಕಡಿ ಪೋಲೀಸರು ಪಹರೆ

ಕಾಯುತ್ತಿದ್ದರು. ಇದನ್ನು ಕಂಡ ಜನ, ಅವರತ್ತ ಉದ್ರೇಕದಿಂದ ಧಾವಿಸಿದರು. ಪೋಲೀಸರು ಹಿಂದುಹಿಂದಕ್ಕೆ ಸರಿಯುತ್ತಾ ಎರಡು ಗೋಡೆಗಳ ಮಧ್ಯೆ ಮೂಲೆಯಲ್ಲಿ ಸಿಕ್ಕಿಬಿದ್ದರು. ಅವರ ಮುಂದೆ ಮಾವಿನ ಮರಗಳಿದ್ದುವು. ಜನ ಅವರ ಕಡೆ ಬಿಡದೆ ಕಲ್ಲನ್ನೂ, ಇಟ್ಟಿಗೆ ಚೂರನ್ನೂ ತೂರುತ್ತಿದ್ದರು. ಸದ್ಯ, ಅವರ ಅದೃಷ್ಟ, ಅವರಿಗೆ ರಕ್ಷಣೆಯೋ ಎಂಬಂತೆ ಎದುರಿಗೆ ಆ ಮಾವಿನ ಮರಗಳಿದ್ದುವು.

ಈ ವೇಳೆಗೆ ನಗರ ನ್ಯಾಯಾಧೀಶರು ಸ್ಥಳಕ್ಕೆ ಬಂದರು. ಅವರು ಗುಂಡು ಹಾರಿಸಲು ಆಜ್ಞೆ ನೀಡಲು ಹಿಂದೆಮುಂದೆ ನೋಡುತ್ತಿದ್ದರು. ಪೋಲೀಸರ ಮತ್ತು ಜನಸಮೂಹದ ನಡುವಿನ ಈ ನೂಕಾಟದ ಹೋರಾಟ, ಆಗಾಗ ಕಲ್ಲು ಬೀರುವಿಕೆ, ನಿಲ್ಲದೆ ನಡೆದಿತ್ತು. ಪೋಲೀಸ್ ತುಕಡಿ ಸಮಾಧಿಯಾಗಿಬಿಡುವುದೋ ಎನ್ನುವಂತಿತ್ತು. ಸುದ್ದಿ ತಿಳಿದ ಐ.ಜಿ.ಪಿ. ಹ್ಯಾಮಿಲ್‌ಟನ್ ಧಾವಿಸಿ ಬಂದರು. ಪರಿಸ್ಥಿತಿಯನ್ನು ಗಮನಿಸಿದ ಅವರು, "ನಾಲ್ಕಾರು ಜನರನ್ನು ಕೊಂದು ಪರಿಸ್ಥಿತಿಯನ್ನು ಹತೋಟಿಗೆ ತರುತ್ತಿದ್ದೆ" ಎಂದು ವೀರವಾಕ್ಯ ನುಡಿದು, ಗುಂಡು ಹಾರಿಸಲು ಆಜ್ಞೆ ನೀಡ ಬೇಕೆಂದು ನಗರ ನ್ಯಾಯಾಧೀಶರಿಗೆ ಪ್ರೇರೇಪಿಸಿದರು. ಕೊನೆಗೂ ನ್ಯಾಯಾಧೀಶರು ಮನಸ್ಸಿಲ್ಲದೆಯೇ ಗುಂಡು ಹಾರಿಸುವ ಆಜ್ಞೆ ನೀಡಿದರು. ಮೂರುನಾಲ್ಕು ಗುಂಡುಗಳನ್ನು ಆಕಾಶದ ಕಡೆ ಹಾರಿಸಿದಾಗ, ಜನಸಮೂಹ ಸರಿಯತೊಡಗಿತು. ಪೋಲೀಸ್ ತುಕಡಿ ಬಚಾವಾಯಿತು. ಐ.ಜಿ.ಪಿ. ಅವರ ಮಾತನ್ನು ನಗರದ ನ್ಯಾಯವಾದಿಗಳ ಸಂಘ ಖಂಡಿಸಿ ಹೇಳಿಕೆ ನೀಡಿತು. ಮುಂದೆರಡು ದಿನಗಳು ನಗರದ ಸ್ಥಿತಿ ಅತಿ ಘೋರವಾಯಿತು. ಪೋಲೀಸರೇ ಸರಕಾರದ ಆಜ್ಞೆಯಿಂದ ಹಠಾತ್ತನೆ ಹಿಂದೆಗೆದರು. ಪರಿಸ್ಥಿತಿ ತಿಳಿ ಯಾಯಿತು. ಸರಕಾರದ ದಬ್ಬಾಳಿಕೆಯ ಕೃತ್ಯಗಳನ್ನು ಪ್ರತಿಭಟಿಸುವ ಶಕ್ತಿ ಜನತೆಯಲ್ಲಿ ತುಂಬಿ ಬಂದಿತ್ತು. ಜೀವದ ಮೇಲಿನ ಹಂಗು ದೂರವಾಗಿತ್ತು.

1936ರ ವೇಳೆಗೆ ನನ್ನ ಬದುಕು ಬೇರೊಂದು ದಿಕ್ಕಿಗೆ ಚಲಿಸಿತು. ಚಿಕ್ಕ ವಯಸ್ಸಿನಿಂದಲೂ ಗಾಂಧೀಜಿಯ ನಿರ್ಮಾಣ ಕಾರ್ಯಕ್ರಮದ ಬಗೆಗೆ ನನಗೆ ಒಲವು ಇತ್ತು. ಗಾಂಧೀಜಿ ಲೋಕಕ್ಕೆ ಕೊಟ್ಟ ಮಹಾ ಕೊಡುಗೆಗಳಲ್ಲಿ ಮೂಲಶಿಕ್ಷಣ ಅತಿಮುಖ್ಯ; ಅದೇ ಕಡೆಯದು. ಕನಕಪುರದ ನನ್ನ ಹಿರಿಯ ಗೆಳೆಯರಾದ ಎಸ್. ಕರಿಯಪ್ಪ ನವರು ನನಗೊಂದು ಪತ್ರ ಬರೆದು: "ಮೂಲಶಿಕ್ಷಣ ಕಾರ್ಯ ಮಾಡೋಣ ಬನ್ನಿ" ಎಂದು ಆಹ್ವಾನಿಸಿದರು. ಅವರಾಗಲೇ 'ದಯಾನಂದ ವಿದ್ಯಾರ್ಥಿನಿಲಯ'ವೆಂಬ ಸಂಸ್ಥೆಯನ್ನು ಸ್ಥಾಪಿಸಿದ್ದರು. 1939ರಿಂದ ತಿಪಟೂರಿನಲ್ಲಿ ವಕೀಲಿವೃತ್ತಿ ಆರಂಭಿಸ ಬೇಕೆಂದು ಅಣಿಯಾಗಿದ್ದ ನನಗೆ, ರಾಷ್ಟ್ರೀಯ ಶಿಕ್ಷಣದ ಕರೆ ಪ್ರಬಲವಾಗಿ, ಕನಕಪುರಕ್ಕೆ ಹೋದೆ. ಇಬ್ಬರೂ ಸೇರಿ 'ದಯಾನಂದ ವಸತಿ ವಿದ್ಯಾಲಯ'ವನ್ನು ಸ್ಥಾಪಿಸಿದೆವು. ಅದಕ್ಕೆ ಸರಕಾರದ ಮನ್ನಣೆ ಸುಲಭವಾಗಿ ದೊರಕಲಿಲ್ಲ. ವಿದ್ಯಾರ್ಥಿಗಳನ್ನು ಸೇವಾದೇವದ ಶಿಸ್ತಿನಲ್ಲಿ ಬೆಳಸಲು ನಾನು ಪಡೆದಿದ್ದ ತರಬೇತು ಆದು ನೆರವಾಯಿತು. ಸಂಸ್ಥೆಯ

ಸಮಸ್ತ ಕಾರ್ಯಗಳೂ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ಸಹಬಾಳ್ವೆಯಿಂದ, ಸಾಹಚರ್ಯದಿಂದ ನಡೆಯುತ್ತಿತ್ತು. ಕೈಕಾಗದ ತಯಾರಿಕೆ, ಜೇನು ಸಾಕಾಣಿಕೆ, ನೂಲುವುದು, ತರಕಾರಿ ಬೆಳೆಯುವುದು, ಅಡಿಗೆ ಮಾಡುವುದು ಇತ್ಯಾದಿ ಎಲ್ಲ ಕಾರ್ಯಗಳೂ ನಿಯೋಜಿತ ರೀತಿಯಲ್ಲಿ ನಡೆಯುತ್ತಿದ್ದುವು. ಅದೊಂದು ವಿಸ್ತೃತ ಕುಟುಂಬದಂತೆ ಇದ್ದಿತು. ಸುಮಾರು 200 ವಿದ್ಯಾರ್ಥಿಗಳು. ಆರು ಮಂದಿ ಸೇವಾನಿಷ್ಠ ಅಧ್ಯಾಪಕರು ಜತೆಗೂಡಿದೆವು. ಇದೊಂದು 'ಸೇವಾಗ್ರಾಮ' ಆಗಬೇಕೆಂಬುದು ಅಂದಿನ ನಮ್ಮ ಕನಸು.

ಮೈಸೂರಿನಲ್ಲಿ ರಾಜಕೀಯ ಹೋರಾಟ ಭರದಿಂದ ಸಾಗಿದ್ದಿತು. ನರಿಮನ್ನರ ಪ್ರಕರಣದಿಂದ ಹೊಸ ಜಾಗೃತಿಯುಂಟಾಯಿತು. ಮೈಸೂರು ಕಾಂಗ್ರೆಸ್ ಒಂದು ಪ್ರಬಲ ಜನಪಕ್ಷವಾಗಿ ಆರಂಭವಾಗಿ, ಜವಾಬ್‌ದಾರಿ ಸರಕಾರದ ಹೋರಾಟ ನಡೆಸುತ್ತಿತ್ತು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಅದಕ್ಕೆ ನೈತಿಕ ಬೆಂಬಲ ನೀಡಿದ್ದಿತು. ಅದೇ ಕಾಲದಲ್ಲಿ ಕೆ.ಜಿ.ಎಫ್.ನಲ್ಲಿ ಕಾಂಗ್ರೆಸ್ ಕಾರ್ಯಕಾರಿ ಮಂಡಲಿಯ ಸಾಮೂಹಿಕ ಬಂಧನವಾಯಿತು. ಬೇರೆ ಬೇರೆ ಕಡೆಗಳ ನಾಯಕರುಗಳು ಸಂಸ್ಥೆಯ ಭಾರ ಹೊತ್ತು ಗುಪ್ತವಾಗಿ ಹೋರಾಟ ನಡೆಸುತ್ತಿದ್ದರು. ಅವರನ್ನು 'ಸರ್ವಾಧಿಕಾರಿ' ಎಂದು ಕರೆಯಲಾಗುತ್ತಿತ್ತು. ಕೆ. ಸುಬ್ಬರಾಯರು (ವಸತಿವಿದ್ಯಾಲಯದ ಅಧ್ಯಕ್ಷರು ಸಹ) 13ನೆಯ ಸರ್ವಾಧಿಕಾರಿಯಾಗಿ ನೇಮಿಸಲ್ಪಟ್ಟು, ಸುರಂಗವಾಸ ಮಾಡುತ್ತಾ, ಪೋಲೀಸರಿಗೆ ಸೆರೆ ಸಿಕ್ಕದೆ ಇದ್ದರು. ಅವರು ನಮ್ಮ ಸಂಸ್ಥೆಯ ಅಧ್ಯಕ್ಷರಾಗಿದ್ದುದರಿಂದಲೂ, ನಾವೆಲ್ಲಾ ಸಕ್ರಿಯ ಕಾಂಗ್ರೆಸ್ ಸದಸ್ಯರಾಗಿದ್ದುದರಿಂದಲೂ ರಾಜ್ಯದ ಗುಪ್ತಕಾರ್ಯವೆಲ್ಲ ನಮ್ಮ ಸಂಸ್ಥೆಯ ಮೂಲಕವೇ ನಡೆಯುತ್ತದೆಂಬ ವದಂತಿ ಹೇಗೋ ಹಬ್ಬಿದುದರಿಂದಲೂ ಪೋಲೀಸರ ಕೆಟ್ಟ ಕಣ್ಣು ನಮ್ಮ ಮೇಲೆ ಬಿದ್ದಿತು. ವಿದ್ಯಾಲಯದ ಮುಂಭಾಗದ ರಸ್ತೆಯ ಪಕ್ಕದಲ್ಲಿ ಒಬ್ಬ ಪೋಲೀಸ್ ಪ್ಯಾದೆ ಸದಾ ಪಹರೆ. ಅವನು ವಿದ್ಯಾಲಯಕ್ಕೆ ಬರುವವರು ಯಾರು, ಹೋಗುವವರು ಯಾರು, ಎಂಬುದನ್ನೆಲ್ಲ ವರದಿ ಮಾಡಬೇಕಾಗಿತ್ತು. ಹೀಗಾಗಿ ಹೊರಗಿನಿಂದ ಯಾರೂ ವಿದ್ಯಾಲಯಕ್ಕೆ ಬರುತ್ತಿರಲಿಲ್ಲ. ಪಕ್ಕದ ಹಳ್ಳಿಗಳ ರೈತರು ಬಾಲಕರಿಗೆ ದಿನವೂ ಗಡಿಗೆಗಟ್ಟಲೇ ಮಜ್ಜಿಗೆ ಒದಗಿಸುತ್ತಿದ್ದರು. ಮೂರುನಾಲ್ಕು ದಿನ ಇದರ ಸರಬರಾಜು ನಿಂತುಹೋಯಿತು. ಆದರೆ ರಾಷ್ಟ್ರೀಯ ಪ್ರಜ್ಞೆ ಕೆರಳಿದ್ದ ನಮ್ಮ ಬಾಲಕರು ನಮಗೆ ತಿಳಿಸದೆಯೇ ರಾತ್ರಿವೇಳೆ ಯಾವುದಕ್ಕೂ ಅಂಜದೆ, ತುಂಬು ಪ್ರವಾಹ ಬಂದಿದ್ದ ಅರ್ಕಾವತಿ ನದಿಯನ್ನು ಈಜಿಕೊಂಡು ಆಚೆ ದಂಡೆಗೆ ಹೋಗಿ, ಪಕ್ಕದ ಹಳ್ಳಿಗಳಾದ ಬೂದುಗುಪ್ಪೆ, ಆಡಿನಗುಪ್ಪೆ, ಮರಳಾಳು ಇತ್ಯಾದಿ ಗ್ರಾಮಗಳ ರೈತರ ಮನೆಗಳಿಂದ ಮಜ್ಜಿಗೆ ತರಲು ಸಿದ್ಧರಾದರು. ಮೊದಮೊದಲು ರೈತರು ಇದನ್ನು ಕೊಡುವುದಕ್ಕೂ ಅಂಜುತ್ತಿದ್ದರು.

ಪೋಲೀಸ್ ಇನ್‌ಸ್ಪೆಕ್ಟರ್ ಸಮ್ಮದ್‌ಖಾನ್ ಒಬ್ಬ ದಕ್ಷ, ಸರಕಾರಿ ಸೇವಾನಿಷ್ಠ ಅಧಿಕಾರಿಯಾಗಿ 'ಜನಮರ್ದಕ'ರೆಂದು ಹೆಸರಾಗಿದ್ದರು. ಕಲ್ಲುಹಳ್ಳಿ ಜಾತ್ರೆಯಲ್ಲಿ

ಅವರು ಮಾಡಿದ ಅತ್ಯಾಚಾರ ರಾಜ್ಯದ ಪ್ರಜಾಪ್ರತಿನಿಧಿ ಸಭೆಯಲ್ಲಿ ಕೋಲಾಹಲ ಎಬ್ಬಿಸಿದ್ದಿತು. ದಿ|| ಬೇಲೂರು ಶ್ರೀನಿವಾಸೈಂಗಾರ್ಯರು ಅಂದಿನ ನ್ಯಾಯವಿಧಾಯಕ ಸಭೆಯಲ್ಲಿ ಪ್ರಶ್ನೆ ತಂದು ಸರಕಾರವನ್ನು ಕಟುವಾಗಿ ಟೀಕಿಸಿದ್ದರು. ಆ ಅಧಿಕಾರಿ ಏನು ಮಾಡಿಯಾರು? ಅವರು ಸರಕಾರ ಯಂತ್ರದ ಒಂದು ತಿರುಪಳಿ ತಾನೆ? ಇದೆಲ್ಲದರ ಪರಿಣಾಮವಾಗಿ ಎಸ್. ಕರಿಯಪ್ಪನವರ ಬಂಧನವಾಯಿತು. ನನಗೂ ಇದರ ಕಾವು ತಟ್ಟಿತು. ಅಂದು ರಾಷ್ಟ್ರೀಯ ಶಿಕ್ಷಣ ಕಾರ್ಯ ಒಂದು ಮಹಾ ಅಪರಾಧವೇ ಆಗಿದ್ದಿತು.

ಆ ಕಾಲದ ಇನ್ನೊಂದು ಪ್ರಸಂಗ ಅವಿಸ್ಮರಣೀಯ. ಕೆ.ಜಿ.ಎಫ್.ನಲ್ಲಿ ಅಂದಿನ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಎಚ್. ಸಿ. ದಾಸಪ್ಪನವರ ನೇತೃತ್ವದಲ್ಲಿ ಎಲ್ಲ ಕಾರ್ಯಕಾರಿ ಮಂಡಲಿ ಸದಸ್ಯರ ಬಂಧನವಾಗಿದ್ದುದನ್ನು ಆಗಲೇ ಹೇಳಿದೆ. ಅವರ ಸಂಚಾರ ಕಾರ್ಯಕ್ರಮದ ಪ್ರಕಾರ ಒಂದು ದಿನ ಕನಕಪುರಕ್ಕೆ ಬರಬೇಕಾಗಿದ್ದಿತು. ಆದರೆ ಎಲ್ಲರೂ ತುರಂಗದಲ್ಲಿದ್ದರು. ಇದನ್ನು ಪ್ರತಿಭಟಿಸುವ ಸಲುವಾಗಿ ದಯಾನಂದ ಮೈದಾನದಲ್ಲಿ ಬೃಹತ್ ಸಭೆ ಸೇರಿತು. ಧಾರವಾಡದ ಮಿಂಚಿನಬಳ್ಳಿ ಸಂಪಾದಕರಾದ ಬರ್ಲಿ ಬಿಂದುಮಾಧವ ಮತ್ತು ಕನಕಪುರದವರೇ ಆದ ಸುಪ್ರಸಿದ್ಧ ಸೇವಾದಳ ಕಾರ್ಯ ಕರ್ತರೂ ಖಾದೀ ಕಾರ್ಯಕರ್ತರೂ ಆದ ಸರ್‌ದಾರ್ ವೆಂಕಟರಾಮಯ್ಯನವರೂ ಬಂದಿದ್ದರು. ಸಭೆಗೆ ಪ್ರತಿಬಂಧಕಾಜ್ಞೆ ಇರಲಿಲ್ಲ. ಆದರೂ ನಮ್ಮೆಲ್ಲರ ಬಂಧನವಾಗುವು ದೆಂಬ ಸಂದೇಹವಿತ್ತು. ಸರಕಾರದ ಪ್ರಜ್ಞೆಯ ಅರಿವು ಯಾರಿಗುಂಟು? ಯಾರ ಬಂಧನವೂ ಆಗಲಿಲ್ಲ. ಸಭೆ ಮುಗಿದು ನಾವು ವಿದ್ಯಾರ್ಥಿನಿಲಯದ ಕಡೆ ಹೋಗುತ್ತಿ ದ್ದೆವು. ಹುಡುಗರೆಲ್ಲ ಊಟಕ್ಕೆ ಕುಳಿತಿದ್ದರು. ನಕ್ಷತ್ರದ ಬೆಳಕು ಮಾತ್ರ; ಅದೂ ಅಲ್ಲೊಂದು ಇಲ್ಲೊಂದು ನಕ್ಷತ್ರ. ಜೊತೆಗೆ ತೆಳುಮೋಡ ಆಗಸವನ್ನು ಮುಸುಗಿತ್ತು. ನಾನು ಮುಂದೆ, ಬರ್ಲಿಯವರು ಹಿಂದೆ. ಅವರಿಗೆ ಬೆಂಗಾವಲಾಗಿ ಕರಿಯಪ್ಪನವರು, ಇನ್ನೂ ನಾಲ್ಕಾರು ಮಿತ್ರರು ಜೊತೆಯಲ್ಲಿ ಹೋಗುತ್ತಿದ್ದೆವು. ಕರಿಯಪ್ಪನವರು 'ನಿಲ್ಲಿ' ಎಂದು ಬರ್ಲಿಯವರನ್ನು ಹಿಡಿದು ನಿಲ್ಲಿಸಿದರು. ಏಕೆಂದು ಆಶ್ಚರ್ಯಪಡುತ್ತಾ ನಾನು ನಿಂತಲ್ಲಿಯೇ ನಿಂತು ಹಿಂದೆ ನೋಡಿದೆ. ಕರಿಯಪ್ಪನವರು ಹೀರೆ ಚಪ್ಪರದ ದಡಿಯೊಂದನ್ನು ಹಿರಿದುಕೊಂಡು ನೆಲದ ಮೇಲೆ ಅಪ್ಪಳಿಸಿ ಮೂರು ಏಟು ಹೊಡೆದರು. ಆ ವೇಳೆಗೆ ಯಾರೋ ದೀಪ ತಂದರು. ನೋಡಿದರೆ ಭಾರಿ ನಾಗಸರ್ಪ. ಸಾವಿನ ಉಸಿರನ್ನು ಬಿಡು ತ್ತಿತ್ತು. ಬರ್ಲಿಯವರು ಇನ್ನೊಂದು ಹೆಜ್ಜೆ ಇಟ್ಟಿದ್ದರೆ, ಅದು ನಾಗನ ಹೆಡೆಯ ಮೇಲೆ ಇರುತ್ತಿತ್ತು. ಇಂದಿಗೂ ಆ ಚಿತ್ರ ಮನಸ್ಸಿನಲ್ಲಿ ಸುಳಿದಾಗ, ಮೈ ನಡುಗುತ್ತದೆ.

1940-41ರ ವೇಳೆಗೆ ನನ್ನ ಜೀವನ ಧುರಿ ಅನಿವಾರ್ಯವಾಗಿ ಮತ್ತೆ ಬದಲಾಯಿ ಸಿತು. ನನ್ನ ಸಮೀಪ ಬಂಧುವೊಬ್ಬರು ಕಾಲವಾದುದರಿಂದ ನಾನು ಚಿಕ್ಕನಾಯಕನ ಹಳ್ಳಿಯಲ್ಲಿ ನನ್ನ ಅಕ್ಕನವರ ಮನೆಯಲ್ಲಿ ನೆಲಸಬೇಕಾಯಿತು. ತುಮಕೂರಿನ ಒಬ್ಬ

ಹಿರಿಯ ವಕೀಲರ ಅನುಮತಿಯನ್ನು ಪಡೆದು, ಮೊಕದ್ದಮೆ ನಡೆಸುವ ಬಗೆಗೆ ಪರಿಶ್ರಮ ಪಡೆಯಲು ಯತ್ನಿಸಿದ್ದೆ.

ಆಗ ನಮ್ಮ ತಾಲ್ಲೂಕಿಗೆಲ್ಲ 8-10 ಮಂದಿ ಮಾತ್ರ ಖಾದೀಧಾರಿಗಳು ; ಕಾಂಗ್ರೆಸ್ಸಿಗರು. ಉಳಿದ ಕೆಲವರು ಗಣ್ಯರು ಹಿಂಬದಿಯಿಂದ ನೆರವು ನೀಡುತ್ತಿದ್ದರು. ಕಾಂಗ್ರೆಸ್ಸಿಗರೆಂದು ಹೇಳಿಕೊಳ್ಳಲು ಅಂಜುತ್ತಿದ್ದರು. ಎಂ. ಎಸ್. ಹನುಮಂತರಾವ್, ಎನ್. ಟಿ. ವೆಂಕಟೇಗೌಡರು, ಸಿ. ಎಸ್. ತಮ್ಮಯ್ಯನವರು ಕಾಂಗ್ರೆಸ್ಸಿನ ಬೀಜ ಬಿತ್ತಿದ್ದರು. ಹನುಮಂತರಾಯರು ಶಿರಾದ ಬಳಿ ದಿವಂಗತ ಮಾಲಿ ಮರಿಯಪ್ಪನವರ ನಾಯಕತ್ವದಲ್ಲಿ ನಡೆದ ಅರಣ್ಯಸತ್ಯಾಗ್ರಹದಲ್ಲಿ ಭಾಗವಹಿಸಿ, ಕೆಲವು ಕಾಲ ಕಾರಾಗೃಹವಾಸ ಅನುಭವಿಸಿ ಬಂದಿದ್ದರು. ಗಣ್ಯವ್ಯಕ್ತಿಯೂ ನನ್ನ ಪರಮ ಗೆಳೆಯರೂ ಆಗಿದ್ದ ದಿವಂಗತ ಸಿ. ಎಚ್. ಲಿಂಗದೇವರು ಅಂದು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. ಕಾಂಗ್ರೆಸ್ ಪಕ್ಷ ಸೇರಿ, ಚಿಕ್ಕನಾಯಕನಹಳ್ಳಿ ಪುರಸಭೆಯ ಸದಸ್ಯರನ್ನು ಪೂರ್ಣವಾಗಿ ಕಾಂಗ್ರೆಸ್ಸಿಗರನ್ನಾಗಿ ಮಾಡಿಬಿಟ್ಟಿದ್ದರು. ಅವರು ತಮಗೆ ವಂಶಪಾರಂಪರ್ಯವಾಗಿ ಬಂದಿದ್ದ ಪಟೇಲಿ ಹಕ್ಕಿಗೆ ರಾಜೀನಾಮೆ ಇತ್ತಿದ್ದರು. ಅವರು ಕಾಂಗ್ರೆಸ್ ಸೇರಿದಮೇಲೆ ಇಡಿಯ ತಾಲ್ಲೂಕಿನಲ್ಲಿ ಕಾಂಗ್ರೆಸ್ಸಿಗೆ ಒಳ್ಳೆ ಬಲ ಬಂದಿತು. ಅವರ ಜನಾನುರಾಗ, ಗಂಭೀರ ವ್ಯಕ್ತಿತ್ವ, ನಿಗರ್ವಿ ನಡವಳಿಕೆ ಇವು ನಮಗೆಲ್ಲ ಒಂದು ಹೆಮ್ಮೆಯಾಗಿತ್ತು. ವಯಸ್ಸಿನಲ್ಲಿ ನನಗಿಂತ ಚಿಕ್ಕವರಾದರೂ ಅವರ ವ್ಯವಹಾರ ಆದರ್ಶ, ಬಹಳ ಶ್ಲಾಘನೀಯ.

ತುಮಕೂರಿನ ಆರ್. ಎಸ್. ಆರಾಧ್ಯರು ಭೂಗತರಾಗಿ, ರಾಜ್ಯದ ಗಡಿಯಾಚೆಯಿಂದ (ರಾಣೆಬೆನ್ನೂರು) ಗುಪ್ತ ಚಟುವಟಿಕೆಗಳಲ್ಲಿ ತೊಡಗಿದ್ದರು. ಒಂದು ಪತ್ರಿಕೆಯನ್ನು ಹೊರಡಿಸಿ, ಹೋರಾಟದ ಬಗೆಗೆ ಮಾಹಿತಿಗಳನ್ನು ಪ್ರಚಾರಮಾಡುತ್ತಿದ್ದರು. ಇದು ನಮ್ಮ ಕೈಗೆ ತಲುಪಿದಾಗ—ಯಾವುದೋ ರೀತಿಯಲ್ಲಿ—ನಾನು ಮತ್ತು ಹನುಮಂತರಾಯರು ಸೇರಿ, ಕೆಲವು ವಾರಗಳು ಹಸ್ತಲಿಖಿತ ಪ್ರತಿಗಳನ್ನು ಮಾಡಿ, ಅವುಗಳನ್ನು ಗುಪ್ತವಾಗಿ ಹಂಚುತ್ತಿದ್ದೆವು. ಕೆಲವು ಕಾಲ ಸೈಕ್ಲೋಸ್ಟೈಲ್ ಮಾಡಿ ಹಂಚುತ್ತಿದ್ದೆವು. ಇದರಿಂದ ಪೋಲೀಸರ ಕಣ್ಣು ಯಾವಾಗಲೂ ನಮ್ಮ ಮೇಲೆ ಇರುತ್ತಿತ್ತು.

ನಲವತ್ತೆರಡರ ಆಗಸ್ಟ್ ಕ್ರಾಂತಿಯ ಕಾಲಕ್ಕೆ ಹನುಮಂತರಾಯರು ಸ್ನೇಹಿತರ ಸಹಾಯದಿಂದ ಅಂಚೆ ತಂತಿಗಳನ್ನು ಕತ್ತರಿಸುವ ಪ್ರಯತ್ನ ಮಾಡಿದರು. ವಿದ್ಯಾರ್ಥಿಗಳ ಪೈಕಿ ಹುಚ್ಚಣ್ಣ, ನಾರಾಯಣ ಎಂಬಿಬ್ಬರು (ಇವರನ್ನು ನಾವು ಯಮಳರು ಎನ್ನುತ್ತಿದ್ದೆವು) ಬಹಳ ಉತ್ಸಾಹದಿಂದ ಕೆಲಸ ಮಾಡುತ್ತಿದ್ದರು.

ಒಂದು ಸಲ ಸೇಂದಿ ಹೊತ್ತು ತರುತ್ತಿದ್ದ ಲಾರಿಯನ್ನು ತಡೆದು ನಿಲ್ಲಿಸಿ, ಅದರ ಟೈರಿಗೆ ಚಾಕು ಹಾಕಲು ಹುಡುಗರು ನಿಶ್ಚಯಿಸಿದ್ದರು. ಇದಕ್ಕಾಗಿ ರಸ್ತೆಯ ನಡುವೆ ಅಡಚಣೆ ಒಡ್ಡಲು ದೊಡ್ಡ ಕಲ್ಲುಬಂಡೆಗಳನ್ನು ಹೊತ್ತುತಂದು ಇಟ್ಟಿದ್ದರು. ಹಾಗೆಯೇ ಮುಳ್ಳು ಕಡಿದು ತಂದು ಹಾಕಿದ್ದರು. ರಸ್ತೆ ಪಕ್ಕದಲ್ಲಿ ರಸ್ತೆ ಸಮಮಾಡುವ ಒಂದು

ಭಾರಿ ಕಲ್ಲುಗುಂಡು ಇತ್ತು. ಹುಡುಗರೆಲ್ಲರೂ ಸೇರಿ, ಅದನ್ನು ಅದರ ಸ್ಥಾನದಿಂದ ಉರುಳಿಸಿದ್ದರು. ಆ ರೀತಿ ಉರುಳಿಸಿದ ರಭಸಕ್ಕೆ ಅದರ ಬುಡದಲ್ಲಿ ಬೆಳೆದಿದ್ದ ಹುಲ್ಲಿನಲ್ಲಿ ಸೇರಿಕೊಂಡಿದ್ದ ಭಾರಿ ನಾಗರಹಾವು ಜಜ್ಜಿಹೋಗಿದ್ದಿತು. ಲಾರಿ ಬಂದಿತು. ಇದನ್ನೆಲ್ಲ ಕಂಡ ಚಾಲಕ ಮತ್ತಿತರರು ಹುಡುಗರ ಮೇಲೆ ದೌರ್ಜನ್ಯ ನಡೆಸಲು ಸಿದ್ಧರಾಗಿದ್ದರು. ಅವರಲ್ಲಿ ಒಬ್ಬನ ಹತ್ತಿರ ಒಂದು ಪಿಸ್ತೂಲು ಸಹ ಇದ್ದಿತು. ಅವನು ಅದನ್ನು ಹುಡುಗರ ಕಡೆ ಆಡಿಸುತ್ತಾ ಅತ್ತಿತ್ತ ಓಡಾಡುತ್ತಿದ್ದನು. ಹುಡುಗರೂ ಬಿಡದೆ ಅವನನ್ನು ಚುಡಾಯಿಸುತ್ತಿದ್ದರು. ಈ ದೃಶ್ಯ ನೋಡಿದ ಯಾರೋ ಪೋಲೀಸರಿಗೆ ವರದಿ ನೀಡಿದ್ದರು. ಶಸ್ತ್ರ ಸಜ್ಜಿತರಾದ ಪೋಲೀಸರು ಸ್ಥಳಕ್ಕೆ ಧಾವಿಸಿ ಬರುತ್ತಿದ್ದರು. ಊರಾಚೆ ಮೆಣಸಿನ ಸಿದ್ದಪ್ಪನ ತೋಪಿನ ಮುಂದಿನ ರಸ್ತೆಯೇ ಈ ಹೋರಾಟದ ಕಣ ಆಗಿದ್ದಿತು. ಇದನ್ನು ನನಗೆ ಯಾರೋ ತಿಳಿಸಿದರು. ನಾನು ಸ್ಥಳಕ್ಕೆ ಹೋಗುವ ವೇಳೆಗೆ ಹುಡುಗರು ಪೋಲೀಸರನ್ನು ಸುತ್ತುಗಟ್ಟಿಕೊಂಡು ರೇಗಿಸುತ್ತಿದ್ದರು. ನನ್ನನ್ನು ಕಂಡ ಪೋಲೀಸರು "ಇವರನ್ನು ಸಮಾಧಾನ ಮಾಡಿ" ಎಂದರು. "ನೀವೆಲ್ಲ ಸುಮ್ಮನೇ ಹೊರಟುಹೋಗಿ. ಹುಡುಗರೂ ತಾವಾಗಿಯೇ ಸುಮ್ಮನಾಗುತ್ತಾರೆ" ಎಂದೆ. ಅವರು ಇನ್ನೇನು ಹೊರಡುವ ಸ್ಥಿತಿಯಲ್ಲಿದ್ದಾಗ ಯಾರೋ ಒಬ್ಬ ಹುಡುಗ ಪೋಲೀಸ್ ದಫೇದಾರನ ಟೋಪಿಯನ್ನು ಹಾರಿಸಿಬಿಟ್ಟ. ಇತರರು ಅದನ್ನು ಚೆಂಡಿನಂತೆ ಮುಂದೆ ಮುಂದೆ ಹಾರಿಸಿ, ಎಲ್ಲಿಂದ ಸಿದ್ಧಮಾಡಿಕೊಂಡಿದ್ದರೋ, ಪೆಟ್ರೋಲ್ ಸುರಿದು ಅದಕ್ಕೆ ಬೆಂಕಿಹಚ್ಚಿಬಿಟ್ಟರು. ಇದರಿಂದ ಪೋಲೀಸರ ಕೋಪಕ್ಕೆ ಮೇರೆ ಇಲ್ಲವಾಯಿತು. ಅವರು ಲಾಠೀ ಬೀಸತೊಡಗಿದ್ದರು. ಹುಡುಗರು ಸಿಕ್ಕಬೇಕಲ್ಲ? ಕೇಕೆ ಹೊಡೆದು ಓಡಿಬಿಟ್ಟರು. ನಾನು ಅವರನ್ನು ಸಮಾಧಾನ ಮಾಡಿ ಕಳಿಸುವುದು ದುಸ್ತರವಾಯಿತು.

ಆ ದಿನಗಳಲ್ಲಿ ಇನ್ನೊಂದು ದಾರುಣಪ್ರಸಂಗ ಒದಗಿಬಂದಿತು. ತುಮಕೂರು ಕಾಲೇಜಿನ ವಿದ್ಯಾರ್ಥಿಗಳ ಒಂದು ತಂಡ ಗ್ರಾಮದಿಂದ ಗ್ರಾಮಕ್ಕೆ ಹೋಗುತ್ತಾ ಸರಕಾರದ ಯುದ್ಧೋದ್ಯಮಕ್ಕೆ ನೆರವು ನೀಡಬಾರದೆಂದು ಪ್ರಚೋದಿಸುತ್ತಿದ್ದರು. ಒಂದು ಗುಂಪು (ಸುಮಾರು 25 ಮಂದಿ) ನಮ್ಮೂರಿಗೆ ಬಂದಿತು. ಪೋಲೀಸರೂ ಅವರನ್ನು ಹಿಂಬಾಲಿಸುತ್ತಿದ್ದರು. ಕಾವಲುಪಡೆಯ ವ್ಯಾನ್ ಬಂದಿತು. ಹುಡುಗರು ಒಬ್ಬರೂ ಇಲ್ಲ. ಕಣ್ಣು ಮುಚ್ಚಿ ತೆರೆಯುವುದರೊಳಗೆ ಎಲ್ಲ ಮಂಗಮಾಯ! ಎಲ್ಲೆಲ್ಲೋ ದೂರದ ಕುರಿಯ ಕೊಪ್ಪ, ಹುಲ್ಲುಮೆದೆ ಇವುಗಳಲ್ಲಿ ಅವರು ಅಡಗಿಕೊಂಡರು. ನಾಲ್ಕು ಮಂದಿ ಶೆಟ್ಟೀಕೆರೆ ಗ್ರಾಮದಲ್ಲಿದ್ದಾರೆಂದೂ ಅವರು ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದ್ದಾರೆಂದೂ ಪೋಲೀಸರಿಗೆ ತಿಳಿದುಬಂದಿತು. ಕಾವಲುಪಡೆಯ ವ್ಯಾನ್ ಅತ್ತ ತಿರುಗಿತು. ಇನ್ನೇನು ಅನಾಹುತವಾದೀತೋ ಎಂದುಕೊಂಡು ನಾನು, ಹನುಮಂತರಾವ್ ಇಬ್ಬರೂ ಅತ್ತ ಹೊರಟೆವು. ಆ ವೇಳೆಗಾಗಲೇ ಪೋಲೀಸರು ಹುಡುಗರನ್ನು ಹಿಡಿಯಲು ಬಂದಿದ್ದಾರೆಂಬ ಸುದ್ದಿ ದಟ್ಟವಾಗಿ ಹಬ್ಬಿ, ಸಾಲುಹಳ್ಳಿಗಳ ಜನರು ಮಹಾನವಮಿಯ ಮಂಟಪದ ಬಳಿ

ಸೇರುತ್ತಿದ್ದರು. ನಾವೂ ಅಲ್ಲಿಗೆ ತಲುಪಿದೆವು. ಆ ಗುಂಪು ರಸ್ತೆಗೆ ಅಡ್ಡವಾಗಿ ನಿಂತು, ಶೆಟ್ಟೀಕೆರೆಯ ಕಡೆಗೆ ದಾರಿ ಬಿಡದಂತೆ, ಗೋಡೆಯಂತೆ ನೆರೆದಿದ್ದಿತು. ಏನಾಗುವುದೋ, ಗೋಲೀಬಾರ್ ಆದೀತೋ ಎಂದು ನಮಗೆ ತವಕ ಬಂದು ಮುಂದೆ ಹೋದೆವು. ಅದೇನು ಅನಿಸಿತೊ ಪೋಲೀಸರಿಗೆ, ಅವರೆಲ್ಲ ಇದ್ದಕ್ಕಿದ್ದಂತೆ ವ್ಯಾನ್ ಹತ್ತಿ ಹಿಂದಕ್ಕೆ ತಿರುಗಿಬಿಟ್ಟರು. ಅಂತೂ ಗೋಲೀಬಾರ್ ಆಗುವುದು ಆಕಸ್ಮಿಕವಾಗಿ ತಪ್ಪಿತು.

ಜನತೆಯಲ್ಲಿ ರಾಷ್ಟ್ರೀಯಪ್ರಜ್ಞೆ ಸಾಲದೆಂದೂ ಅದನ್ನು ಭಾವೀ ಜನಾಂಗವಾಗುವ ವಿದ್ಯಾರ್ಥಿಗಳಲ್ಲಿ ಮೂಡಿಸುವ ದೃಷ್ಟಿಯಿಂದಲೂ, ನಾನು ಮತ್ತು ಲಿಂಗದೇವರು ಕೂಡಿಕೊಂಡು, 'ದೇಶೀಯ ವಿದ್ಯಾಪೀಠ' ಎಂಬ ಸಾರ್ವಜನಿಕ ಶಿಕ್ಷಣ ಸಂಸ್ಥೆಯನ್ನು 1943ರಲ್ಲಿ ಸ್ಥಾಪಿಸಿದೆವು. ಇದು ಒಳ್ಳೆಯ ಜನಶಿಕ್ಷಣ ಸಂಸ್ಥೆಯಾಯಿತು. ಪ್ರೌಢ ಶಾಲೆಯೊಂದರ ಜತೆಗೆ ಊರಿನ ಯುವಕರಿಗೆ ಸೇವಾದಳ ಕವಾಯಿತು, ರಾಷ್ಟ್ರಗೀತೆಗಳ ಅಭ್ಯಾಸ, ಪ್ರಭಾತ್‌ಫೇರಿ, ಗಾಂಧೀ ಜಯಂತಿ ಸಪ್ತಾಹ ಇತ್ಯಾದಿ ಕಾರ್ಯಕ್ರಮಗಳಿಂದ ಒಂದು ಹೊಸ ಸತ್ವ ಮೂಡತೊಡಗಿತು. ಒಳ್ಳೆಯ ಸ್ವಯಂಸೇವಕರ ಪಡೆ ಸಿದ್ಧವಾಯಿತು. ಪ್ರೌಢಶಾಲೆಗೆ ಸರಕಾರದ ಅನುಮತಿ ದೊರಕುವುದೂ ಕಷ್ಟವಾಯಿತು. ನಾವು ಅದನ್ನು ಶಾಂತಿನಿಕೇತನಕ್ಕೆ ಅಂಗಸಂಸ್ಥೆಯನ್ನಾಗಿ ಸೇರಿಸುವ ಯೋಚನೆಯನ್ನೂ ಮಾಡಿದ್ದೆವು.

ಅಂದಿನ ಯುವಕರಲ್ಲಿ ರಾಷ್ಟ್ರಸೇವೆ ಮಾಡಬೇಕೆಂಬ ಲವಲವಿಕೆ ಉತ್ಕಟವಾಗುವಂತೆ ಶ್ರಮಿಸುವ ನಿಷ್ಠಾವಂತ ಅಧ್ಯಾಪಕರು ದೊರಕಿದುದು ಒಂದು ಸುಯೋಗ ಎನ್ನಬೇಕು. ಸಹಕಾರ ಇಲಾಖೆಯಲ್ಲಿ ಇನ್‌ಸ್ಪೆಕ್ಟರ್ ನೌಕರಿಯಲ್ಲಿದ್ದ ಚಿ. ಕ. ಈಶ್ವರನ್ ತಮ್ಮ ಕೆಲಸಕ್ಕೆ ರಾಜೀನಾಮೆಯಿತ್ತು ಬಂದರು. ಎರಡನೆಯ ವರ್ಷ ಚಿ. ನ. ಕೃಷ್ಣರಾಯ (ಇದೇ ಊರಿನವರು) ಜೊತೆಗೂಡಿದರು. ಅಧ್ಯಾಪಕರಾಗಿ ಖಾದೀ ಪ್ರಚಾರ, ಹಿಂದೀ ಪ್ರಚಾರ, ಸ್ವಯಂಸೇವಕ ದಳದ ಕವಾಯಿತು ಇವುಗಳನ್ನೆಲ್ಲ ಕ್ರಮಬದ್ಧವಾಗಿ ನೀಡಲು ಅವಕಾಶವಾಯಿತು. ಇದರಿಂದ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಬಗೆಗೆ ಸಾಮುದಾಯಿಕ ಪ್ರಜ್ಞೆ ಕಳಕಳಿಯಿಂದ ಜನಿಸಿತು.

1946ರಲ್ಲಿ ಬಂಧನದಿಂದ ಬಿಡುಗಡೆಯಾಗಿದ್ದ ಜಿಲ್ಲೆಯ ಮತ್ತು ರಾಜ್ಯದ ಹಲವಾರು ನಾಯಕರು ಟಿ. ಸುಬ್ರಹ್ಮಣ್ಯಂ, ಕೆ. ರಂಗೈಯ್ಯಂಗಾರ್ಯರು, ಎಂ. ವಿ. ರಾಮರಾವ್, ಕೋಲಾರದ ಪಟ್ಟಾಭಿರಾಮನ್, ವಿ. ಟಿ. ಮಾಗಡಿ, ಎಚ್. ಸಿ. ದಾಸಪ್ಪ, ಟಿ. ಮರಿಯಪ್ಪ, ಕೆ. ಟಿ. ಭಾಷ್ಯಂ ಮುಂತಾದವರು ಆಗಾಗ ಊರಿಗೂ ಸಂಸ್ಥೆಗೂ ಭೇಟಿ ನೀಡಿದುದರ ಪರಿಣಾಮವಾಗಿ, ತಾಲ್ಲೂಕಿನಲ್ಲೆಲ್ಲ ರಾಷ್ಟ್ರೀಯ ಜಾಗೃತಿ ಎದ್ದು ಕಾಣುವಂತಾಯಿತು.

1947ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ ಎಲ್ಲ ದೇಶೀಯ ರಾಜ್ಯಗಳಲ್ಲಿಯೂ ಸ್ವಾತಂತ್ರ್ಯದ ಇಚ್ಛೆ ಬಲವಾಯಿತು. ಕೆ. ಸಿ. ರೆಡ್ಡಿಯವರು ಮೈಸೂರು ರಾಜ್ಯ ಕಾಂಗ್ರೆಸ್ ಅಧ್ಯಕ್ಷರಾದಮೇಲೆ, ರಾಜ್ಯಾದ್ಯಂತ ಮಿಂಚಿನ ವೇಗದಿಂದ ಸಂಚರಿಸಿ,

ಹೋರಾಟದ ಗತಿಯನ್ನು ವೃದ್ಧಿಗೊಳಿಸಿದರು. ಸಾರ್ವಜನಿಕ ಸಭೆಗಳಲ್ಲಿ, ವೃತ್ತ ಪತ್ರಿಕೆಗಳಲ್ಲಿ ಪ್ರಜಾ ಆಕಾಂಕ್ಷೆಯು ಸ್ಪಷ್ಟವಾಗಿ ರೂಪುಗೊಂಡಿತು. ಅದೇ ತಿಂಗಳಿನಲ್ಲಿ ಅಧ್ಯಕ್ಷರು ನಮ್ಮ ಊರಿಗೂ ಬಂದು ಸೆಪ್ಟಂಬರ್ 1ರಿಂದ 'ಜವಾಬ್ದಾರಿ ಸರಕಾರ ದಿನಾಚರಣೆ' ಮತ್ತು ಸತ್ಯಾಗ್ರಹವನ್ನು ರಾಜ್ಯಾದ್ಯಂತ ಆರಂಭಿಸಬೇಕೆಂಬ ಪ್ರಜಾ ಸಂಕಲ್ಪವನ್ನು ಬಿತ್ತರಿಸಿದರು. ಅವರ ಜತೆಯಲ್ಲಿ ಬಂದಿದ್ದ ನಮ್ಮ ಜಿಲ್ಲೆಯ ನಾಯಕ ದಿ|| ತಾಳಿಕೆರೆ ಸುಬ್ರಹ್ಮಣ್ಯಂ ಅಂದು ಮಾಡಿದ ಭಾಷಣ ಚಿರಸ್ಮರಣೀಯ.

ನಾವು ತಾಲ್ಲೂಕಿನಾದ್ಯಂತ ಸಭೆಗಳನ್ನು ಏರ್ಪಡಿಸಿ, ಸತ್ಯಾಗ್ರಹಕ್ಕೆ ಸಿದ್ಧತೆ ನಡೆಸಿದೆವು. ಆ ವೇಳೆಗೆ ಕಾಂಗ್ರೆಸ್ಸನ್ನು ಸೇರಿದ್ದ ಎಸ್. ಮುರುಡಯ್ಯನವರ ಉತ್ಸಾಹ ಅದಮ್ಯ. ಅವರನ್ನು ಎಲ್ಲರೂ 'ಸರ್‌ದಾರ್' ಎನ್ನುತ್ತಿದ್ದರು. ಅವರು, ನಾನು, ಹನುಮಂತರಾವ್ ಗ್ರಾಮದಿಂದ ಗ್ರಾಮಕ್ಕೆ ಹೋಗುತ್ತಾ ಜನತೆಯನ್ನು ಹೋರಾಟಕ್ಕೆ ಸಿದ್ಧಗೊಳಿಸಿದೆವು.

ಸೆಪ್ಟಂಬರ್ 1ರಂದು ಸಾರ್ವತ್ರಿಕ ಹರತಾಳದಿಂದ ಸತ್ಯಾಗ್ರಹ ಆರಂಭವಾಯಿತು. ರಾಜ್ಯ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಎಲ್ಲ ಸದಸ್ಯರ ಬಂಧನವಾಯಿತು. ನಾವೂ ಅಂದು ಹರತಾಳ ಆಚರಿಸಿ, ತಾಲ್ಲೂಕು ಕಛೇರಿಗೆ ಮುತ್ತಿಗೆ ಹಾಕಿದೆವು. ನೂರಾರು ಜನ ಸತ್ಯಾಗ್ರಹಿಗಳು ಬೆಳಗ್ಗೆ 8ರಿಂದ ಸಂಜೆ 5ರ ವರೆಗೂ ಕಛೇರಿಯ ಮುಂದೆ ಧರಣಿ ಕುಳಿತು, ಅಧಿಕಾರಿಗಳನ್ನು ಒಳಕ್ಕೂ ಹೊರಕ್ಕೂ ಬಿಡದಂತೆ ಸರ್ಪಕಾವಲಿನ ವ್ಯವಸ್ಥೆಯಾಗಿತ್ತು. ಬೆಳಗ್ಗೆ ಪ್ರಾರ್ಥನೆಯಿಂದ ಆರಂಭ; ಸಂಜೆ ಪ್ರಾರ್ಥನೆಯಿಂದ ಮುಕ್ತಾಯ. ಮಧ್ಯೆಮಧ್ಯೆ ರಾಮ್‌ಧುನ್—ಆಡಳಿತ ಯಂತ್ರವನ್ನು ಪೂರ್ಣವಾಗಿ ಸ್ಥಗಿತಗೊಳಿಸಲು ನಡೆಸಿದ ಅಹಿಂಸಕ ತಂತ್ರವದು. ಅದು ಬಹಳ ಶಾಂತಿಯುತವಾಗಿ, ಬಹಳ ಶಿಸ್ತಿನಿಂದ ನಡೆಯಿತು. ಸಾವಿರಾರು ಜನ ಕಛೇರಿಯ ಸುತ್ತ ನೆರೆದು, ಸಂಜೆಯ ತರುವಾಯ ತಮ್ಮ ತಮ್ಮ ಮನೆಗಳಿಗೆ ತೆರಳುತ್ತಿದ್ದರು. ಸೇಂದಿ ಅಂಗಡಿಗಳಲ್ಲಿ ವ್ಯಾಪಾರವೆಲ್ಲ ಸಂಪೂರ್ಣವಾಗಿ ನಿಂತುಹೋಯಿತು. ತಾಲ್ಲೂಕಿನ ತಹಸೀಲದಾರರ ಕಛೇರಿಯ ಕೆಲಸ ವಿರಾಮ ಕಂಡಿತ್ತು.

ತಾ|| 6ರಂದು ಪ್ರಾತಃಕಾಲ 6ಕ್ಕೆ ಪೋಲೀಸ್ ಆಕ್ಟಿನ ವಿಧಿ 45 ಜಾರಿಗೆ ಬಂದಿತು. ಸಭೆ ಸೇರುವಂತಿರಲಿಲ್ಲ. ಇದು ನಮಗೆ ಮುಂಚೆಯೇ ಗೊತ್ತಾಗಿ, ಯಾವ ಗಳಿಗೆಗೆ ನನ್ನ ಮತ್ತು ಹನುಮಂತರಾಯರ ಬಂಧನವಾಗುವುದೋ ಎಂದು ಹಾಸಿಗೆ ಕಟ್ಟಿ ಸಿದ್ಧವಾಗಿದ್ದೆವು. ಸತ್ಯಾಗ್ರಹಿಗಳಲ್ಲಿ ಬಹಳ ಮಂದಿ 5ನೆಯ ತಾರೀಖಿನ ಇಡೀ ರಾತ್ರಿ ನಮ್ಮ ಮನೆಯಲ್ಲಿಯೇ ಕಳೆದರು. ನಮ್ಮ ಯುವಕರು ಆಗಾಗ ಪೋಲೀಸರ ಚಲನ ವಲನಗಳನ್ನು ವರದಿ ಮಾಡುತ್ತಿದ್ದರು. ಬೆಳಕು ಹರಿಯುವ ವೇಳೆಗೆ ಪೋಲೀಸ್ ಬಂದೋಬಸ್ತು ಸಿದ್ಧವಾಗಿದ್ದಿತು. ಮರುದಿನ ನನ್ನ ಬಂಧನವಾದರೆ ಸತ್ಯಾಗ್ರಹ ಹೇಗೆ ಮುಂದುವರಿಯಬೇಕೆಂಬುದನ್ನು ವ್ಯವಸ್ಥೆಗೊಳಿಸಿದೆವು. ಯಾರು ಯಾರು ಯಾವಾಗ

ಶಾಸನಭಂಗಮಾಡಿ ಬಂಧಿತರಾಗಬೇಕೆಂಬ ಪಟ್ಟಿ ಸಿದ್ಧವಾಯಿತು. ಬೆಳಗ್ಗೆ 10 ಗಂಟೆಗೆ ನಾನು, ಮುರುಡಯ್ಯ, ನಾಗಣ್ಣ ಶಾಸನಭಂಗ ಮಾಡಿದೆವು. ಪೋಲೀಸರು ನಮ್ಮನ್ನು ಬಂಧಿಸಿದರು. ಅಂದು ನೆರೆದಿದ್ದ ಜನಸಮೂಹ, ಅವರ ಉತ್ಸಾಹ ಇವುಗಳನ್ನು ಕಂಡು ನನ್ನ ಕಣ್ಣು ತೇವವಾಯಿತು. ಇಷ್ಟು ಜನಜಾಗೃತಿ, ಪ್ರಜ್ಞೆ, ಸ್ವಾತಂತ್ರ್ಯದ ಬಗೆಗೆ ಶ್ರದ್ಧೆ ಬಂದುದಕ್ಕೆ ಭಗವಂತನನ್ನು ಮೌನವಾಗಿ ವಂದಿಸಿದೆ. ತಿಪಟೂರಿನ ನ್ಯಾಯಾಸ್ಥಾನಕ್ಕೆ ನಮ್ಮನ್ನು ಕರೆದುಕೊಂಡು ಹೋದರು. ನಾವು ಶಾಸನಭಂಗ ಮಾಡಿದುದನ್ನು ಒಪ್ಪಿಕೊಂಡು ಅದು ನಮ್ಮ ಕರ್ತವ್ಯವಾಗಿತ್ತೆಂದು ಹೇಳಿಕೆ ಕೊಟ್ಟೆವು. ನ್ಯಾಯಾಧೀಶರು ಶಿಕ್ಷೆವಿಧಿಸಿದರು.

ಇದರ ತರುವಾಯ, ಸರದಿಯ ಪ್ರಕಾರ, ಲಿಂಗದೇವರು, ಹನುಮಂತರಾವ್, ಲಲಿತಾ ಪಂಡಿತರು, ಶಂಕರಲಿಂಗಪ್ಪ ಇತ್ಯಾದಿ ಹತ್ತಾರು ಸತ್ಯಾಗ್ರಹಿಗಳು ಬಂಧಿತರಾಗಿ ಶಿಕ್ಷೆಗೊಳಗಾದರು. ಬೆಂಗಳೂರಿನ ಸೆಂಟ್ರಲ್ ಕಾರಾಗೃಹದಲ್ಲಿ ನನ್ನ ಜತೆ ಸೇರಿದರು.

ಕಚೇರಿಯ ಮುತ್ತಿಗೆಯ ಕಾರ್ಯ ನಡೆದಿತ್ತು. ಆದರೆ ಕೆಲವು ದಿನಗಳ ಮೇಲೆ ಯಾರ ಬಂಧನವೂ ಆಗಲಿಲ್ಲ. ಅದು ಸರಕಾರದ ತಂತ್ರವಾಗಿತ್ತು. ಆ ಕಾಲದಲ್ಲಿ ನಮ್ಮ ಯಮುಳರು (ಕಚೇರಿಯ ಮುಂದಿದ್ದ) ಗಂಧದ ಮರವನ್ನು ಕಡಿಯಲು ಯತ್ನಿಸಿ, ಶಿಕ್ಷೆಗೊಳಗಾದರು. ಕುಮಾರಿ ಅನ್ನಪೂರ್ಣಮ್ಮ ರಾಷ್ಟ್ರಧ್ವಜವನ್ನು ಕಚೇರಿಯ ಮೇಲೆ ಹಾರಿಸುವ ಧೀರತನ ತೋರಿದಳು. ಶ್ರೀಮತಿಯರಾದ ಗೌರಮ್ಮ, ಭಾಗಮ್ಮ, ನಾಗಮ್ಮ ಇತ್ಯಾದಿ ಮಹಿಳೆಯರು ಈ ಕಾರ್ಯಗಳಲ್ಲೆಲ್ಲ ಉತ್ಸಾಹದಿಂದ ಭಾಗವಹಿಸಿದರು.

ಗಾಂಧೀ ಜಯಂತಿಯ ಏರ್ಪಾಡು ನಡೆಸುತ್ತಿದ್ದ ಈಶ್ವರನ್ ಮತ್ತು ಕೃಷ್ಣರಾವ್ ಮುಂತಾದವರು ಹಿಂಬದಿಯ ಕೆಲಸಗಾರರೆಂದು ಬಂಧಿತರಾಗಿ ಸೆರೆಮನೆ ಸೇರಿದರು. ಕಾಯಿ ಲಿಂಗಣ್ಣ ಮತ್ತಿತರ ಮಿತ್ರರು ಹಿಂಬದಿಯಲ್ಲಿದ್ದು, ಸರಕಾರಕ್ಕೂ ಕಾಂಗ್ರೆಸ್ಸಿಗೂ ಒಪ್ಪಂದವಾಗಿ ಶಾಂತಿ ಸ್ಥಾಪನೆಯಾಗುವವರೆಗೂ ಆಂದೋಲನವನ್ನು ನಡೆಸಿಯೇ ಇದ್ದರು. ಕೆ. ಎಸ್. ರಾಮಚಂದ್ರರಾವ್ ಎಂಬ ಸತ್ಯಾಗ್ರಹಿ ಮತ್ತು ಅವರ ಜೊತೆ ಸೇರಿದ ಇತರರು ಮೈಸೂರಿನಲ್ಲಿ 'ಅರಮನೆ ಸತ್ಯಾಗ್ರಹ' ನಡೆಸಲು ಹೊರಟು, ಪಾಂಡವಪುರ ಮತ್ತು ಶ್ರೀರಂಗಪಟ್ಟಣಗಳಲ್ಲಿ ಪೋಲೀಸರ ದೌರ್ಜನ್ಯವನ್ನು ಎದುರಿಸಿ, ಅನುಭವಿಸಿದ ಕಥೆ ಒಂದು ಕರುಣ ಕಥೆ.

ತಿಪಟೂರು, ಚಿಕ್ಕನಾಯಕನಹಳ್ಳಿ, ತುರುವೇಕೆರೆ ಈ ತಾಲ್ಲೂಕುಗಳ ಸತ್ಯಾಗ್ರಹಿಗಳೆಲ್ಲ ಸೆಂಟ್ರಲ್ ಜೈಲಿನಲ್ಲಿ ಒಂದೇ ಕಡೆ ಇದ್ದೆವು. ನಮ್ಮ 'ಗಾಂಧೀ ಶಿಬಿರ' ಇಡೀ ಜೈಲಿನ 3,000 ಸತ್ಯಾಗ್ರಹಿಗಳಿಗೆಲ್ಲ ಆದರ್ಶವಾಗಿದ್ದಿತು. ನಾವು ನಡೆಸುತ್ತಿದ್ದ ಉಪನ್ಯಾಸಗಳು, ವಿಚಾರಗೋಷ್ಠಿಗಳು ಶಿಸ್ತಿನ ಜೀವನ ಎಲ್ಲರಿಗೂ ಮಾರ್ಗದರ್ಶಕವಾಗಿದ್ದುವು.

ಸೆರೆಮನೆಯಲ್ಲಿ ನಮ್ಮ ಜೀವನದ ಕಥೆಯೇ ಬೇರೆ. ಅದೆಂಥ ಅಪೂರ್ವ ಸೋದರ ಭಾವ! ಜಾತಿ-ಕುಲ-ಮತ ಯಾವ ವ್ಯತ್ಯಾಸವೂ ನಮ್ಮಲ್ಲಿ ಉಳಿದಿರಲಿಲ್ಲ. ನಮ್ಮಲ್ಲಿ

ಆದರ್ಶವಿತ್ತು, ನಿಷ್ಠೆಯಿತ್ತು, ತ್ಯಾಗಭಾವವಿತ್ತು. ಗಾಂಧೀಜಿ, ಕಾಂಗ್ರೆಸ್ ಈ ಎರಡರ ಪ್ರಭಾವ ನಮ್ಮನ್ನು ಕೆಲವು ಕಾಲ ಉದಾತ್ತಹೃದಯರನ್ನಾಗಿ ಮಾಡಿದ್ದಿತು.

ಮೈ.ತು. 3

## ಕೆ. ವಿ. ಸುಬ್ರಹ್ಮಣ್ಯಸ್ವಾಮಿ

ಜನನ : 1900 ಉದ್ಯೋಗ : ವಕೀಲ, ಅಧ್ಯಾಪಕ ವಿಳಾಸ : ಸೋಮೇಶ್ವರ ಬಡಾವಣೆ, ತುಮಕೂರು

---

1921ರಲ್ಲಿ ಮುಂಬೈಗೆ ಪ್ರಿನ್ಸ್ ಆಫ್ ವೇಲ್ಸ್ ಭೇಟಿ ನೀಡಿದಾಗ ಅಲ್ಲಿದ್ದ ನಾನು ಅಲ್ಲಿ ನಡೆದ ಅಪೂರ್ವ ಪ್ರತಿಭಟನಾ ಪ್ರದರ್ಶನವನ್ನು ಕಂಡಿದ್ದೆ. ಆಗ ಅಲ್ಲಿ ಗೋಲೀಬಾರ್ ಆಯಿತು. ಚರ್ನಿ ರೋಡ್ ಬಳಿ ವಿದೇಶೀವಸ್ತ್ರದ ಹೋಳಿ ಆಯಿತು. ಅಂದಿನಿಂದಲೇ ನಾನು ಖಾದಿ ಧರಿಸಲು ಆರಂಭಿಸಿದೆ. ಆಗ ಮೈಸೂರು ರಾಜ್ಯದಲ್ಲಿ ಖಾದಿ ಟೋಪಿ ಧರಿಸುತ್ತಿದ್ದವರೆಂದರೆ ಮೂವರೇ—ಬೆಂಗಳೂರಿನ ಜನುಖಂಡಿ ಭೀಮರಾವ್, ರಜ್ವಿ ಹಾಗೂ ಮೂರನೆಯವನು ನಾನು. 1923ರಲ್ಲಿ ಕುಣಿಗಲಿಗೆ ಮರಳಿದ ನಾನು ಕೃಷಿಕಾರ್ಯದಲ್ಲಿ ತೊಡಗಿದೆ. ಬಾಂಬೇ ಕ್ರಾನಿಕಲ್, ಫ್ರೀ ಪ್ರೆಸ್ ಜರ್ನಲ್ ತರಿಸುತ್ತಿದ್ದೆ. ಆಗಾಗ ಮುಂಬೈಗೆ ಹೋಗಿಬರುತ್ತಿದ್ದೆ. 1928ರಲ್ಲಿ ಕುಣಿಗಲಲ್ಲಿ ಕಾಂಗ್ರೆಸ್ ಕಮಿಟಿ ಸ್ಥಾಪಿಸಿದೆ. ನಾನೇ ಅಧ್ಯಕ್ಷ. 1930ರಲ್ಲಿ ಮುಂಬೈಯಲ್ಲಿ ಚಳವಳಿ ಬಲವಾಗಿರಲು ನನ್ನ ಖಾದಿ ಬಟ್ಟೆ ಕಂಡು ಬಂಧಿಸಿ ನಾಸಿಕ ಜೈಲಿನಲ್ಲಿಟ್ಟರು. ಕಡೆಗೆ ಹರಿಹರಕ್ಕೆ ತಂದು ಬಿಟ್ಟುಬಿಟ್ಟರು.

1934ರಲ್ಲಿ ನಾನು ಕಾಂಗ್ರೆಸ್ ಪರವಾಗಿ ಪ್ರಜಾಪ್ರತಿನಿಧಿ ಸಭೆಗೆ ಸ್ಪರ್ಧಿಸಿ ಆಯ್ಕೆಗೊಂಡೆ. ಚಿತ್ರದುರ್ಗದಿಂದ ಎಸ್. ರಂಗರಾವ್, ಭೀಮಪ್ಪ ನಾಯಕ ಇವರೂ ಆರಿಸಿ ಬಂದಿದ್ದರು. ಭಾಷ್ಯಂ ಅವರಲ್ಲದೆ ಮೈಸೂರಿನ ಒಬ್ಬ ವಕೀಲರೂ ಆರಿಸಿಬಂದ ನೆನಪು. ಆಗ ಕಾಂಗ್ರೆಸ್ಸಿನವರು ಒಟ್ಟು 8 ಜನ ಸದಸ್ಯರಿದ್ದರು 1937ರಲ್ಲಿ ಮೈಸೂರು ಕಾಂಗ್ರೆಸ್ ಬೋರ್ಡ್ ಆರಂಭಿಸಲು ಟಿ. ಸಿದ್ದಲಿಂಗಯ್ಯ ಹಾಗೂ ವೀರಣ್ಣಗೌಡರ ಜೊತೆ ನಾನೂ ಸಂಸ್ಥಾನದಲ್ಲಿ ಸಂಚರಿಸಿದ್ದೆ. ಇದೆಲ್ಲದರ ಫಲಶ್ರುತಿ ಮೈಸೂರು ಕಾಂಗ್ರೆಸ್ ಸ್ಥಾಪನೆ.

ಧ್ವಜಸತ್ಯಾಗ್ರಹವನ್ನು ಘೋಷಿಸಿದಾಗ ಕುಣಿಗಲಿನಲ್ಲಿ ನಾನು ಸತ್ಯಾಗ್ರಹಮಾಡಿ ಬಂಧಿತನಾದೆ. ಇದರನಂತರವೂ ಅಲ್ಲಿ ಸತ್ಯಾಗ್ರಹ ಆಗಿ ಮೂರು ದಿನಗಳಲ್ಲಿ ಸುಮಾರು 60 ಜನರ ಬಂಧನ ಆಯಿತು. ಇದರ ವಾರ್ತೆ ಕೇಳಿ ದಾವಣಗೆರೆಯಲ್ಲೂ ಭಾರೀ ಸತ್ಯಾಗ್ರಹ ಆಯಿತು. 1939ರಲ್ಲಿ ಎಸ್. ಸಿ. ತಿಮ್ಮಾರೆಡ್ಡಿ, ಅನ್ನಪೂರ್ಣಮ್ಮ ಹಾಗೂ

ನನ್ನ ಮೇಲೆ 124ಎ ವಿಧಿಯಂತೆ ಖಟ್ಲೆ ಹಾಕಿದ್ದರು. ಮುಂದೆ ಅದನ್ನು ಹಿಂದೆಗೆದು ಕೊಂಡರು.

1942ರಲ್ಲಿ ಆಗಸ್ಟ್ ಕೊನೆಗೆ ಸೊಸೈಟಿ ಬಿಲ್ಡಿಂಗ್‌ನಲ್ಲಿ ಸಭೆ ನಡೆಸುವುದಾಗಿ ಹಾಗೂ ಬ್ರಿಟಿಷ್ ರಾಜನ ಚಿತ್ರ ಸುಡುವುದಾಗಿ ಪ್ರಕಟಿಸಿದೆ. ಒಂದು ಸಾವಿರ ಜನ ನೆರೆದಿರಲು ಭಾಷಣಮಾಡಿ ಬಂಧಿತನಾದೆ. ಮರುದಿನ ಊರಲ್ಲಿ ಬಾಲಕರ ಗಲಾಟೆ, ಫೈರಿಂಗ್ ತುಮಕೂರಲ್ಲಿ ಆಯಿತು. ಒಬ್ಬ ವಿದ್ಯಾರ್ಥಿ ತೀರಿಕೊಂಡನೆಂದು ನೆನಪು. 1944ರ ಕೊನೆಯವರೆಗೆ ಸೆಂಟ್ರಲ್ ಜೈಲ್‌ನಲ್ಲಿ ಸ್ಥಾನಬದ್ಧನಾಗಿದ್ದೆ. 1947ರಲ್ಲೂ ಬಂಧಿತನಾಗಿದ್ದೆ.

1952ರಲ್ಲಿ ಜನಸಂಘದ ವತಿಯಿಂದ ಲೋಕಸಭೆಗೆ ಸ್ಪರ್ಧಿಸಿ ಸೋತೆ. ಅನಂತರ ನಾಲ್ಕು ಬಾರಿ ಚುನಾವಣೆಗೆ ಸ್ಪರ್ಧಿಸಿದ್ದೇನೆ. 1960ರಲ್ಲಿ ಲಾ ಕಾಲೇಜು ಆರಂಭಿಸಿ ಅದರ ಪ್ರಿನ್ಸಿಪಾಲ್ ಆಗಿ ಸೇವೆಸಲ್ಲಿಸುತ್ತಿರುವೆ.

ವೈ.ತು. 4

# ಆರ್. ಎಸ್. ಆರಾಧ್ಯ

ಜನನ : 1915 ಉದ್ಯೋಗ : ಸಾಮಾಜಿಕ ಕಾರ್ಯಕರ್ತ ವಿಳಾಸ : ಕೃಷ್ಣಾ ಬಡಾವಣೆ, ತುಮಕೂರು

---



ರಾಜಕೀಯಕ್ಕೆ ನಾನು ಇಳಿದಿದ್ದು 1937ರಲ್ಲಿ. 1938ರಲ್ಲಿ ಶಿವಪುರ ಕಾಂಗ್ರೆಸ್ ಅಧಿವೇಶನಕ್ಕೆ ಭಾಗವಹಿಸಲು ಹೋಗಿದ್ದು ಅಲ್ಲಿನ ವಾತಾವರಣ ನನ್ನ ಮನಸ್ಸಿನ ಪೂರ್ಣ ಬದಲಾವಣೆಗೆ ಅವಕಾಶ ಮಾಡಿತು. ಅಲ್ಲಿ ಸತ್ಯಾಗ್ರಹ ಮಾಡಲು ನಾನೂ ಸಿದ್ಧನಾದೆ. ಶಾಂತ ರೀತಿಯಲ್ಲಿ ಹಲವು ಹಿರಿಯರನ್ನು ಮಾತ್ರ ಅಲ್ಲಿ ದಸ್ತಗಿರಿಮಾಡಿದರು. ಯುವಕರನ್ನು ದಸ್ತಗಿರಿ ಮಾಡಲಿಲ್ಲ. ನಾನು ನಿರಾಶನಾಗಿ ಹಿಂತಿರುಗಿದೆ.

1939ರಲ್ಲಿ ಅರಣ್ಯಸತ್ಯಾಗ್ರಹ ಮುಂತಾದ ಕಾನೂನುಭಂಗ ಚಳವಳಿಗಳು ಆರಂಭವಾದವು. ಆಗ ನಾನು ಪತ್ರಿಕೆ ಮತ್ತು ಬುಲೆಟಿನ್‌ಗಳನ್ನು ಮುದ್ರಿಸಿ ದೇಶದಲ್ಲೆಲ್ಲಾ ಪ್ರಚಾರಮಾಡಲು ಏರ್ಪಾಡುಮಾಡುತ್ತಿದ್ದೆನು. ಆ ಬುಲೆಟಿನ್‌ಗಳು ಎಲ್ಲಿ

ಮುದ್ರಣವಾಗುತ್ತಿದ್ದವು, ಹೇಗೆ ಹಂಚಲ್ಪಡುತ್ತಿದ್ದವು ಎಂಬುದು ಪೋಲೀಸಿನವರಿಗೆ ಒಂದು ಸಮಸ್ಯೆಯಾಗಿತ್ತು.

ಕೆಲದಿನಗಳನಂತರ ಯಾವ ಮುದ್ರಣಾಲಯದವರೂ ನನಗೆ ಮುದ್ರಿಸಿಕೊಡಲು ಮುಂದೆ ಬರಲಿಲ್ಲ; ಅಧೈರ್ಯಪಟ್ಟರು. ಇದಕ್ಕೆ ಕಾರಣ ಆ ಪತ್ರಿಕೆಗಳನ್ನು ಮುದ್ರಿಸುವ, ಪ್ರಕಟಿಸುವ ಮತ್ತು ಓದುವವರ ಮೇಲೆ ಕ್ರಮ ಜರುಗಿಸುವುದು, ಮುದ್ರಣಾಲಯಗಳನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಮುಂತಾದ ತೀವ್ರಕಾರ್ಯಕ್ರಮ ಸರ್ಕಾರ ಇಟ್ಟುಕೊಂಡಿತ್ತು. ಒಂದು ಪತ್ರಿಕೆ ಮುಟ್ಟುಗೋಲು ಹಾಕಿಕೊಂಡರೆ ಇನ್ನೊಂದು ಹೆಸರಿನಲ್ಲಿ ಪತ್ರಿಕೆ ಬರುತ್ತಿತ್ತು. 'ತ್ರಿಶೂಲ', 'ಕ್ರಾಂತಿ', 'ಸಮರ', 'ಕಹಳೆ' ಮುಂತಾದ ಹೆಸರಿನ ಪತ್ರಿಕೆಗಳು ಆಗ ಪ್ರಚಾರದಲ್ಲಿದ್ದವು. ಮುದ್ರಣಾಲಯಗಳು ಸಿಗಲಿಲ್ಲವೆಂದು ನಾವು ಹಿಂತೆಗೆಯಲಿಲ್ಲ. ಸೈಕ್ಲೊಸ್ಟೈಲ್ ಮೆಷಿನ್ ತಂದು ಪ್ರಕಟಣೆಮಾಡಲು ಆರಂಭಿಸಿದೆವು. ನನ್ನ ಜೊತೆಯಲ್ಲಿದ್ದ ಅನೇಕ ಮಿತ್ರರು ಒಬ್ಬೊಬ್ಬರಾಗಿ ದಸ್ತಗಿರಿಯಾದರು. ಅಂತಹ ಸಮಯದಲ್ಲಿ ಕೆಲವು ಹೆಣ್ಣುಮಕ್ಕಳು ಮುಂದೆ ಬಂದು ಗುಪ್ತವಾಗಿ ಸೈಕ್ಲೊಸ್ಟೈಲ್ ಮಾಡಿ ನೂರಾರು ಪ್ರತಿಗಳನ್ನು ಹಂಚಲು ನೆರವಾದರು.

ಇಂತಹ ಕಾರ್ಯವನ್ನು ಬೇರೆಬೇರೆ ಹೆಸರಿನಲ್ಲಿ ಬೆಂಗಳೂರು ಮತ್ತು ತುಮಕೂರುಗಳಲ್ಲಿ ನಾನು ನಡೆಸಿಕೊಂಡು ಹೋಗುತ್ತಿದ್ದೆ. 'ಸುಮಾರು ಎರಡು ತಿಂಗಳೊಳಗಾಗಿ ನನ್ನನ್ನೂ ಸೈಕ್ಲೊಸ್ಟೈಲ್ ಮೆಷಿನ್ನಿನೊಂದಿಗೆ ದಸ್ತಗಿರಿಮಾಡಿ ವೃತ್ತಪತ್ರಿಕಾ ಕಾನೂನು ಪ್ರಕಾರ ಮೊಕದ್ದಮೆ ಹೂಡಿ ಆರು ತಿಂಗಳ ಕಾಲ ಸೆರೆಮನೆವಾಸಕ್ಕೆ ಕಳುಹಿಸಿದರು. ಸೆರೆಮನೆವಾಸವನ್ನು ಸೆಂಟ್ರಲ್ ಜೈಲಿನಲ್ಲಿ ಕಳೆದೆ.

ಆಗಿನ ಸೆರೆಮನೆವಾಸ ಕಷ್ಟಕರವಾದ್ದೇ ಆಗಿತ್ತು. ದಿನಕ್ಕೆ ಎರಡು ಬಾರಿ—ಬೆಳಗ್ಗೆ 7 ಗಂಟೆಗೆ ಮತ್ತು ಸಂಜೆ 5 ಗಂಟೆಗೆ ತಕ್ಕಡಿಯಲ್ಲಿ ತೂಕಮಾಡಿ ಹಿಟ್ಟು, ಅನ್ನ, ಸಾರುಗಳನ್ನು ಒಂದೇ ಮಣ್ಣಿನ ತಟ್ಟೆಯಲ್ಲಿ ಕೊಡುತ್ತಿದ್ದರು. ಅದು ಬೆಂದಿರಲಿ, ಮುದ್ದೆಯಾಗಿರಲಿ ಕೊಟ್ಟದ್ದನ್ನು ತಿನ್ನಬೇಕಾಗಿತ್ತು. ವಾರಕ್ಕೆ ಎರಡು ಹೊತ್ತು ಮಾತ್ರ ತೆಳ್ಳಗಿರುವ ಮಜ್ಜಿಗೆಯನ್ನು ಸ್ವಲ್ಪವೇ ಕೊಡುತ್ತಿದ್ದರು. ನಮಗೆ ಯಾವಾಗಲಾದರೂ ಒಂದು ಹಸಿ ಈರುಳ್ಳಿ ಅಥವಾ ಒಂದು ಚಮಚ ಎಣ್ಣೆ ಸಿಕ್ಕಿದರೆ ಪಂಚಾಮೃತವೇ ಸಿಕ್ಕಿದಂತೆ ಆಗುತ್ತಿತ್ತು. ರಾಗಿ ಬೀಸುವುದು, ನೆಲ ಅಗೆಯುವುದು, ತರಕಾರಿ ಬೆಳೆಯುವುದು ಮುಂತಾದ ಕೆಲಸಗಳನ್ನು, ಜೈಲಿನಿಂದ ಹೊರಗಡೆ ಕರೆದುಕೊಂಡು ಹೋಗಿ ಕ್ಯಾಂಪ್ ಜೈಲುಗಳಲ್ಲಿ ಕೆರೆ ಕಟ್ಟುವ, ನಾಲೆ ಕಟ್ಟುವ ಕೆಲಸಗಳನ್ನು ಸಹ ನಮ್ಮಿಂದ ಮಾಡಿಸಲಾಗುತ್ತಿತ್ತು. ಸಣ್ಣಸಣ್ಣ ಕಾಗದಗಳಲ್ಲಿ ಬರೆದು ಒಳಗಿನ ವಿಚಾರಗಳನ್ನು ಕಳ್ಳತನದಿಂದ ಹೊರಕ್ಕೆ ಕಳುಹಿಸುವ ಮತ್ತು ಹೊರಗಡೆ ಪ್ರಚಾರವಾಗುವ ಏರ್ಪಾಟುಮಾಡಿದ್ದೆ. ಆದರೆ ಒಂದು ದಿನ ಚೀಟಿಯೊಂದನ್ನು ಹೊರಗೆ ತೆಗೆದುಕೊಂಡು ಹೋಗುತ್ತಿದ್ದ ಜೈಲ್

ಸಿಪಾಯಿ ಸಿಕ್ಕಿಬಿದ್ದನು. ನಾನು ಬರೆದುಕೊಟ್ಟೆನೆಂದು ಅವನು ತಿಳಿಸಿದನು. ಕೂಡಲೆ ಜೈಲ್ ಸೂಪರಿಂಟೆಂಡೆಂಟರು ನನ್ನನ್ನು ಕರೆಯಿಸಿ ಈ ಕೆಲಸಕ್ಕೆ ಸಹಾಯಕರಾದವರ ಹೆಸರನ್ನೆಲ್ಲ ಹೇಳಬೇಕೆಂದು ಒತ್ತಾಯಪಡಿಸಿದರು. ಆ ಚೀಟಿಯಲ್ಲಿ ಇಬ್ಬರ ಹಸ್ತಾಕ್ಷರಗಳು ಇತ್ತು. ಆ ಇನ್ನೊಬ್ಬರು ಯಾರು ? ಅವರ ಹೆಸರೇನು ? ಎಂದು ಕೇಳಿದರು. ನನ್ನ ಸ್ನೇಹಿತನ ಹೆಸರನ್ನು ಹೇಳಲು ನಿರಾಕರಿಸಿದೆ. ಯಾವ ಶಿಕ್ಷೆಯನ್ನು ಕೊಟ್ಟರೂ ನಾನೊಬ್ಬನೇ ಅನುಭವಿಸುತ್ತೇನೆಂದು ತಿಳಿಸಿದೆನು. ಇದರಿಂದ ಕುಪಿತರಾಗಿ ಎರಡು ದಿನಗಳ ಪರ್ಯಂತರ ನನಗೆ ಎರಡು ಕೈಗಳನ್ನೂ ಕಟ್ಟಿ ನೇಣುಹಾಕುವಂತಹ 'ನಿಲವು ಬೇಡಿ ಶಿಕ್ಷೆ'ಯನ್ನು ವಿಧಿಸಿದರು. ಆ ಶಿಕ್ಷೆಯನ್ನು ಅನುಭವಿಸುವ ಕಾಲದಲ್ಲಿ ನಾನು ಪಟ್ಟ ಯಮಯಾತನೆಯನ್ನು ಹೇಳಲಸಾಧ್ಯ.

'ನಿಲವು ಬೇಡಿ ಶಿಕ್ಷೆ' ಎಂದರೆ ಎರಡು ಕೈಗಳಿಗೂ ಕಳ್ಳರಿಗೆ ಹಾಕುವಂತಹ ಕಬ್ಬಿಣದ ಕೈಬೇಡಿಗಳನ್ನು ಹಾಕಿ, ಆ ಬೇಡಿಯು ನೆಲದಿಂದ ಸುಮಾರು $6\frac{1}{2}$ ಅಡಿ ಎತ್ತರದಲ್ಲಿ ಗೋಡೆಗೆ ಹಾಕಿರುವ ಕಬ್ಬಿಣದ ಬಳೆಯೊಂದರೊಳಗೆ ತೂರಿಬರುವಂತೆ ಮಾಡುತ್ತಾರೆ. ಆ ಶಿಕ್ಷೆ ಅನುಭವಿಸುವವನು ಗೋಡೆಯ ಕಡೆ ಮುಖಮಾಡಿಕೊಂಡು ತನ್ನ ಕೈಗಳನ್ನು ಎತ್ತಿಕೊಂಡೇ ನಿಂತಿರಬೇಕು. ನಾನು ಸ್ವಲ್ಪ ಗಿಡ್ಡ ಮನುಷ್ಯನಾದುದರಿಂದ ನನ್ನ ಕಾಲಿನ ಮುಂಬೆರಳುಗಳು ಮಾತ್ರ ನೆಲಕ್ಕೆ ತಗಲುತ್ತಿತ್ತು. ಶರೀರವೆಲ್ಲಾ ಕೈಗಳಿಂದ ಜೋತುಬಿದ್ದಿರುತ್ತಿತ್ತು.

ಈ ಶಿಕ್ಷೆಯನ್ನು ಬೆಳಗ್ಗೆ 6 ಗಂಟೆಯಿಂದ ಸಂಜೆ 6 ಗಂಟೆವರೆಗೂ ಕೊಟ್ಟಿರುತ್ತಾರೆ. ಬೆಳಗ್ಗೆ 6 ಗಂಟೆಗೆ ಮುಂಚೆ ಒಂದು ತಟ್ಟೆಯಲ್ಲಿ ಹಿಟ್ಟು, ಸಾರು, ಒಂದು ಹಿಡಿ ಅನ್ನ ಕೊಡುತ್ತಾರೆ. ಅದನ್ನು ತಿಂದು ಶಿಕ್ಷೆಗೆ ನಿಲ್ಲಬೇಕು. ಆ ರೀತಿ ಜೋತುಬಿದ್ದ ಒಂದು ಗಂಟೆಯೊಳಗೆ ಕೈಯ ನರಗಳು, ಬೆನ್ನಿನ ಮತ್ತು ಹಿಂಗಾಲ ನರಗಳಲ್ಲೆಲ್ಲಾ ಹೊಡೆತ ಆರಂಭವಾಗುತ್ತದೆ. ಸುಮಾರು 2–3 ಗಂಟೆಯ ಅನಂತರ ಮೂರ್ಛೆ ಬಂದಂತೆ ಆಗುತ್ತದೆ. ನರಗಳ ಮಾಂಸಖಂಡಗಳ ಹೊಡೆತದಿಂದ ನೋವು ಹೆಚ್ಚಾಗಿ, ಕೂಗಿಕೊಳ್ಳುವಂತೆ ಆಗುತ್ತಿತ್ತು. ಈ ಶಿಕ್ಷೆ ಕೊಟ್ಟ ಕಾಲದಲ್ಲಿ ನೀರು ಕುಡಿಯಬೇಕಾದರೆ "ಅಯ್ಯಾ, ನೀರು ತಂದು ಕೊಡಿ, ಬಾಯಾರಿಕೆ" ಎಂದು ಕೂಗಿಕೊಂಡರೆ, ಜೈಲು ಸಿಪಾಯಿಗಳು ಒಂದು ಮಣ್ಣಿನ ಕುಡಿಕೆಯಲ್ಲಿ ನೀರು ತಂದು ಅವರೇ ನನ್ನ ಬಾಯಿಗೆ ತೊಟ್ಟು ಹಾಕುತ್ತಿದ್ದರು.

ಹನ್ನೆರಡು ಗಂಟೆಗಳ ಕಾಲ ಈ ರೀತಿ ಜೋತುಬಿದ್ದಿರುವ ಅಥವಾ ಮುಂಗಾಲು ಬೆರಳುಗಳ ಮೇಲೆ ನಿಂತಿರುವ ನನಗೆ ಜಲಬಾಧೆ ಮತ್ತು ಮಲಬಾಧೆ ಮಾಡಬೇಕಾದರೂ ಕೂಗಿಕೊಳ್ಳಬೇಕು. ಜಲಬಾಧೆ ತೀರಿಸಲು ಒಂದು ಮಡಿಕೆ ನನ್ನ ಕಾಲಿನ ಸಂದಿನಲ್ಲಿ ಇಡುತ್ತಿದ್ದರು. ಹಾಗೆ ನಿಂತಿದ್ದಂತೆಯೇ ನಾನು ಆ ಮಡಿಕೆಯೊಳಗೆ ಜಲಬಾಧೆ ತೀರಿಸುತ್ತಿದ್ದೆ.

ಒಂದೊಂದು ವೇಳೆ ನರಗಳ ನೋವು, ಬೆನ್ನಿನ ಹೊಡೆತ ತಾಳಲಾರದೆ ಕಿರುಚಿಕೊಳ್ಳುವಂತೆ ಆಗುತ್ತಿತ್ತು. ಬಹಳ ದುಃಖಪಡುತ್ತಿದ್ದೆ. ಕಣ್ಣಿನಲ್ಲಿ ನೀರು ಧಾರಾಕಾರವಾಗಿ ಬರುತ್ತಿತ್ತು. ಆಗ ನನ್ನ ತಲೆಯಲ್ಲಿ ತಾಯ್ನಾಡಿಗಾಗಿ ಗುಂಡಿನೇಟಿನಿಂದ ನರಳಿದ, ಲಾಠೀಪ್ರಹಾರದಿಂದ ನೊಂದ, ಬೆಂಕಿಯಲ್ಲಿ ಬೆಂದ, ಗಲ್ಲಿಗೆ ಏರಿಸಿಕೊಂಡ ರಣಧೀರರ, ಸ್ವಾತಂತ್ರ್ಯ ಹೋರಾಟಗಾರರ ಚಿತ್ರಗಳು ಓಡಾಡುತ್ತಿದ್ದವು. ಎಂತೆಂತಹ ಕ್ರೂರ ಶಿಕ್ಷೆಗಳನ್ನೊ. ಯಮಹಿಂಸೆಗಳನ್ನೊ ಅನುಭವಿಸಿದ ದೇಶಪ್ರೇಮಿಗಳ ಸತ್ಯಕಥೆಗಳು ಸ್ಮೃತಿಪಥದ ಮುಂದೆ ಬಂದು ಹೋಗುತ್ತಿದ್ದವು. ‘ಅವರೆಲ್ಲ ಅಷ್ಟೊಂದು ಹಿಂಸೆಗಳನ್ನು ಸಹಿಸಿರುವಾಗ ನೀನು 2 ದಿನ ಈ ಶಿಕ್ಷೆಯನ್ನು ಅನುಭವಿಸಲು ಸಾಧ್ಯವಿಲ್ಲವೆ ?’ ಎಂದು ಹೃದಯ ಕೇಳುತ್ತಿತ್ತು. ನೋವು ಸಹಿಸುತ್ತಿದ್ದೆ ; ಧೈರ್ಯ ಮಾಡುತ್ತಿದ್ದೆ. ಆದರೆ “ನೀವು ಕ್ಷಮಾಯಾಚನೆ ಮಾಡಿದರೆ ಈ ಶಿಕ್ಷೆಯನ್ನು ತಪ್ಪಿಸಿ, ನಿಮ್ಮನ್ನು ಜೈಲಿನಿಂದ ಹೊರಕ್ಕೆ ಬಿಡುತ್ತಾರೆ. ಏಕೆ ಆ ರೀತಿ ಮಾಡಬಾರದು ?” ಎಂದು ಜೈಲಿನ ಸಿಪಾಯಿಗಳು ಪುಸಲಾಯಿಸುತ್ತಿದ್ದರು. ಅಂತಹ ಹೇಡಿಯಾಗಬಾರದೆಂದು ಮನಸ್ಸುಮಾಡಿದೆ.

ಮೊದಲನೆಯ ದಿನ ಸಂಜೆ 6 ಗಂಟೆಗೆ ನನ್ನನ್ನು ‘ನಿಲವು ಬೇಡಿ ಶಿಕ್ಷೆ’ಯಿಂದ ಬಿಚ್ಚಿದ ತಕ್ಷಣ ಕುಸಿದು ನೆಲಕ್ಕೆ ಬಿದ್ದೆ. ಕೈಕಾಲುಗಳೆಲ್ಲಾ ವಿಪರೀತ ನೋವಾಗಿ ಬಹಳ ಬಾಧೆಯಾಗುತ್ತಿತ್ತು. ಜೈಲಿನ ಸಿಪಾಯಿಗಳು ಕೈ ಹಿಡಿದು ಪಕ್ಕದಲ್ಲೇ ಇದ್ದ ಕತ್ತಲು ಕೋಣೆಗೆ ಹಾಕಿ ಒಂದು ತಟ್ಟೆಯಲ್ಲಿ ಹಿಟ್ಟು, ಸಾರು, ಅನ್ನ ಹಾಕಿ ಅದನ್ನೂ ಒಳಗೆ ಇಟ್ಟು ಬೀಗ ಹಾಕಿಕೊಂಡು ಹೋದರು. ನನಗಾಗುತ್ತಿದ್ದ ಅತೀವ ವೇದನೆ ಒಮ್ಮೊಮ್ಮೆ ಕ್ಷಮಾಯಾಚನೆಯ ಕಡೆ ಮನಸ್ಸು ಹೊರಳುತ್ತಿತ್ತು. ಆದರೆ ಅಂತಹ ಹೇಡಿತನದ ಕಾರ್ಯ ಮಾಡಬಾರದೆಂದು ಮನಸ್ಸಿನಲ್ಲಿಯೇ ನಿಶ್ಚಯಿಸಿಕೊಂಡಿದ್ದೆ. ಆ ದಿನ ರಾತ್ರಿ ಮೈಕೈ ನೋವಿನಿಂದ ನಿದ್ದೆ ಬರಲಿಲ್ಲ. ರಾತ್ರಿ ಅನೇಕವೇಳೆ ದುಃಖಿಸಿದೆ ; ಅತ್ತುಬಿಟ್ಟೆ.

ನನಗೆ ಇಂತಹ ದುಸ್ತರ ಶಿಕ್ಷೆ ಕೊಟ್ಟಿರುವುದನ್ನು ಪ್ರತಿಭಟಿಸಲು ನನ್ನ ಜೊತೆಯ ರಾಜಕೀಯ ಕೈದಿಗಳೆಲ್ಲ ಉಪವಾಸ ಮಾಡುತ್ತೇವೆಂದು ಜೈಲ್ ಸೂಪರಿಂಟೆಂಡೆಂಟರಿಗೆ ತಿಳಿಸಿದರು. ಎರಡನೆಯ ದಿನ ಬೆಳಗ್ಗೆ 6 ಗಂಟೆಗೆ ನನ್ನನ್ನು ‘ನಿಲವು ಬೇಡಿ ಶಿಕ್ಷೆ’ಗೆ ಗುರಿ ಮಾಡಿದರು. ಊಟದ ವೇಳೆಗೆ ಜೈಲ್ ಸೂಪರಿಂಟೆಂಡೆಂಟರು ನನ್ನ ಜೊತೆಯ ರಾಜಕೀಯ ಕೈದಿಗಳ ಮುಖಂಡರಲ್ಲೊಬ್ಬರಾದ ಮಾಲಿ ಮರಿಯಪ್ಪನವರನ್ನು ಕರೆಯಿಸಿ, “ನೀವೆಲ್ಲಾ ಹೀಗೆ ಪ್ರತಿಭಟಿಸದೆ ಇದ್ದರೆ ಶಿಕ್ಷೆ ಕಡಿಮೆ ಮಾಡುತ್ತೇನೆ” ಎಂದು ಹೇಳಿ ಅವರ ಉಪವಾಸ ಸತ್ಯಾಗ್ರಹವನ್ನು ತಡೆದರು. ಅಂದು ನನ್ನ ಶಿಕ್ಷೆ ಸಂಜೆ 6 ಗಂಟೆಗೆ ಮುಗಿಯಬೇಕಿದ್ದುದನ್ನು, 4 ಗಂಟೆಗೇ ಮುಗಿಸಿದರು.

ನನ್ನನ್ನು ಶಿಕ್ಷೆಗೆ ಗುರಿಮಾಡಿದ್ದ ಸ್ಥಳದಿಂದ ನಾನು ಮೊದಲು ಇದ್ದ ಕೊಠಡಿಗೆ ನಡೆಯಲು ಶಕ್ತಿಯಿಲ್ಲದೆ, ಜೊತೆಗೆ ನೋವಿನ ಬಾಧೆಯಿಂದ ಅಲ್ಲೇ ಕುಳಿತುಬಿಟ್ಟೆ. ಈ ಸಮಾಚಾರ ಜೈಲರಿಗೆ ತಿಳಿದು, “ಒಬ್ಬ ಸಿಪಾಯಿಯ ಜೊತೆಯಲ್ಲಿ ನಡೆದುಕೊಂಡು

ನಿಮ್ಮ ಕೊಠಡಿಗೆ ಹೋಗಬೇಕು. ನಿಮ್ಮನ್ನು ಹೊತ್ತುಕೊಂಡು ಹೋಗಲು ನಿಮ್ಮವರಾರಿಗೂ ಅವಕಾಶ ಕೊಡುವುದಿಲ್ಲ. ನಮ್ಮ ಸಿಪಾಯಿಗಳೂ ಸಹ ನಿಮ್ಮನ್ನು ಹೊತ್ತುಕೊಂಡು ಹೋಗುವುದಿಲ್ಲ" ಎಂದು ತಿಳಿಸಿದರು. ಆ ಸಹಿಸಲಾರದ ವೇದನೆಯಲ್ಲೇ ನಿಧಾನವಾಗಿ ಹೆಜ್ಜೆಯ ಮೇಲೆ ಹೆಜ್ಜೆ ಹಾಕಿಕೊಂಡು, ನನ್ನ ಕೊಠಡಿಗೆ ಸೇರಿಕೊಂಡೆ. ಸುಮಾರು 4-5 ದಿನಗಳ ಪರ್ಯಂತ ನನ್ನ ಮಿತ್ರರೆಲ್ಲರೂ ನನ್ನ ಮೈಕೈ ಮುಟ್ಟಿನೋಡಿ ಸಂಕಟಪಡುತ್ತಿದ್ದರು. ಇಂತಹ ಶಿಕ್ಷೆಯನ್ನು ಮತ್ತಿನ್ನಾವ ರಾಜಕೀಯ ಕೈದಿಗೂ ಕೊಟ್ಟಿರಲಿಲ್ಲ. ನನ್ನ ಜೀವಮಾನದಲ್ಲಿ ಅದೊಂದು ಮರೆಯಲಾರದ ಮಹಾಪ್ರಸಂಗ.

ಈ ಸಮಯದಲ್ಲಿ ನನಗೆ ಆರು ತಿಂಗಳು ಶಿಕ್ಷೆ ವಿಧಿಸಲಾಗಿತ್ತು. ಅದನ್ನು ಸಂಪೂರ್ಣವಾಗಿ ಅನುಭವಿಸಿ ಹೊರಗೆ ಬಂದೆನು.

1942ನೇ ಇಸವಿಯಲ್ಲಿ ನಡೆದ ಆಂದೋಲನದಲ್ಲಿ ಮೊದಲೇ ಗೊತ್ತುಪಡಿಸಿಕೊಂಡಂತೆ ಭೂಗತಕಾರ್ಯದಲ್ಲಿ ಅನುಭವಿಗಳಾದ ನಾವು ಕೆಲವರು ತಲೆಮರೆಸಿಕೊಂಡು ಪೋಲೀಸಿನವರ ಕೈಗೆ ಸಿಕ್ಕದೆ, ಆಗಸ್ಟ್ 10ನೆಯ ತಾರೀಕು ಪಲಾಯನಮಾಡಿದೆವು. ಆ ಗುಂಪಿನಲ್ಲಿ ಎ. ಜಿ. ರಾಮಚಂದ್ರರಾವ್, ಸರ್ದಾರ್ ವೆಂಕಟರಾಮಯ್ಯ, ಎಂ. ವಿ ಕೃಷ್ಣಪ್ಪ, ಬುದ್ಧದಾಸ್, ಎಚ್. ಎಸ್. ದೊರೆಸ್ವಾಮಿ, ಎಂ. ಎಚ್. ಷಾ ಮುಂತಾದ ಅನೇಕ ಜನರೂ ಇದ್ದರು. ತಲೆಮರೆಸಿಕೊಂಡಿದ್ದ ಈ ಕಾಲದಲ್ಲಿ ನಡೆಸಿದ ಕೆಲವು ಕಾರ್ಯಗಳಲ್ಲಿ ಅಹಿಂಸೆಯ ಹಾದಿಯನ್ನು ಬಿಟ್ಟಿದ್ದೆವು. ಕೆಲವು ಕೈಬಾಂಬುಗಳನ್ನು ತಯಾರಿಸಿ ಅಲ್ಲಲ್ಲಿ ಬೆದರಿಕೆಯ ಸಲುವಾಗಿ ಪ್ರಯೋಗ ಮಾಡಿದೆವು. ಬೆಂಗಳೂರು ರೈಲ್ವೆ ಸ್ಟೇಷನ್‌ನಲ್ಲಿ ಒಂದು ಸಣ್ಣ ಕೈಬಾಂಬನ್ನು ತುಮಕೂರಿನವರಾದ ನಾವೇ ಹೋಗಿ ಹಾಕಿ ಬಂದೆವು,

ಅದಾದ ತರುವಾಯ ನಾನು ಬೆಂಗಳೂರು, ತುಮಕೂರು, ಮೈಸೂರು, ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ ಮುಂತಾದ ಕಡೆಗಳಲ್ಲೆಲ್ಲ ತಲೆಮರೆಸಿಕೊಂಡು ಬೇರೆ ಬೇರೆ ವೇಷ ಹಾಕಿಕೊಂಡು ನಮ್ಮ ಕಾರ್ಯಕ್ರಮಗಳನ್ನು ಮುಂದುವರಿಸಲು ಸೂಚನೆ ಕೊಟ್ಟು ಬಂದೆನು. ಈ ಕಾರ್ಯವನ್ನು ನಾನೇ ಮಾಡಬೇಕೆಂದು ಆಗಿನ ನಮ್ಮ ಗುಪ್ತಮಂಡಲಿಯ ಸಂಚಾಲಕರಾಗಿದ್ದ ವಿ. ಎಸ್. ನಾರಾಯಣರಾಯರ ಮತ್ತು ನಿಟ್ಟೂರು ಶ್ರೀನಿವಾಸರಾಯರ ಆಜ್ಞೆ ಆಗಿತ್ತು. ಶಿವಮೊಗ್ಗದಲ್ಲಿ ಕಡಿದಾಳ ಮಂಜಪ್ಪನವರನ್ನು ಭೇಟಿ ಮಾಡಿದ ಮೇಲೆ ಪೋಲೀಸರ ಕೈಗೆ ಸಿಗುವಂತಾಗಿತ್ತು. ಅನೇಕ ಮಿತ್ರರು ನನಗೆ ರಕ್ಷಣೆಕೊಟ್ಟು ಮುಂದೆ ಸಾಗಿಸುತ್ತಿದ್ದರು. ದಾವಣಗೆರೆಯಲ್ಲಿ ಪೋಲೀಸ್ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದ ಕೃಷ್ಣಮೂರ್ತಿ ಎಂಬುವರು ನನ್ನನ್ನು ಗುರುತು ಹಿಡಿದರೂ ಸಹ, ತೊಂದರೆ ಕೊಡದೆ, ಆ ದಿನವೇ ದಾವಣಗೆರೆಯನ್ನು ಬಿಟ್ಟು ಮುಂದೆ ಸಾಗುವಂತೆ ನನಗೆ ಸೂಚನೆ ಕೊಟ್ಟರು.

ಕೆಲವು ಕಡೆಗಳಲ್ಲಿ ನಮ್ಮಲ್ಲಿದ್ದ ಕೈಬಾಂಬುಗಳನ್ನು ಇಟ್ಟುಕೊಂಡಿರಲು ಧನಾ

ಪ್ರಯೋಗಿಸಲು ನಮ್ಮ ಮಿತ್ರರನೇಕರು ಭಯಪಡುತ್ತಿದ್ದರಿಂದ ಕೆಲವನ್ನು ಮರಳಿ ತರಬೇಕಾಯಿತು. ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವ ಕಾರ್ಯವನ್ನು ತೋರಿಸಿ ಮುಂದುವರಿಸಲು ತಿಳಿಸಿ ಬಂದೆನು. ರೈಲುಗಳನ್ನು ಉರುಳಿಸುವ ಕಾರ್ಯಕ್ರಮವನ್ನು ಮಾಡಬೇಕೆಂಬ ಉತ್ಸುಕತೆ ಕೆಲವರಿಗೆ ಇದ್ದರೂ ಅನೇಕ ನಿರಪರಾಧಿ ಜನರು ಸಾಯುವರೆಂದು ನಾನು ಅದಕ್ಕೆ ಪ್ರೋತ್ಸಾಹ ಕೊಡಲಿಲ್ಲ. ಅಂತಹ ಕಾರ್ಯಕ್ರಮ ಗಳನ್ನು ಕೈಗೊಳ್ಳುತ್ತೇವೆಂಬ ಭಯ ಹುಟ್ಟಿಸಲು ತುಮಕೂರಿನ ಹತ್ತಿರ 1-2 ರೈಲು ಸೇತುವೆಗಳ ಮೇಲೆ ಇರುವ ಮರದ ದಿಮ್ಮಿಗಳಿಗೆ ಸ್ವಲ್ಪ ಬೆಂಕಿ ಹಾಕಿ ಹಬ್ಬಿಸಿದೆವು. ರೈಲು ಓಡಾಟಕ್ಕೆ ತೊಂದರೆಯನ್ನು ಉಂಟುಮಾಡಲಿಲ್ಲ. ಆದರೆ ಕ್ಯಾತ್ಸಂದ್ರದ ಹಲವು ಮಿತ್ರರು ಒಂದು ಗೂಡ್ಸ್ ಗಾಡಿಯನ್ನು ಉರುಳಿಸಬೇಕೆಂದು ನಿಶ್ಚಯಿಸಿ ಅದೇ ರೀತಿ ಒಂದು ರೈಲು ಎಂಜಿನ್ ಉರುಳಿಸಿ ಭಾರೀ ನಷ್ಟವನ್ನುಂಟುಮಾಡಿದರು.

ಭೂಗತ ಕಾರ್ಯಕ್ರಮದಲ್ಲಿ ತಲೆಮರೆಸಿಕೊಂಡು ತಿರುಗುವ ದಿನಗಳು ಕಳೆದಂತೆಲ್ಲ ಕಷ್ಟಗಳು ಹೆಚ್ಚಾಗುತ್ತ ಬಂತು. ಆದರೂ ಕರ್ತವ್ಯನಿರ್ವಹಣೆಯಲ್ಲಿ ಹಿಂದುಳಿಯಬಾರ ದೆಂದು ಕೆಲಸಗಳನ್ನು ಮಾಡುತ್ತಲೇ ಇದ್ದೆನು. ಈ ಸಲದ ಸತ್ಯಾಗ್ರಹದಲ್ಲೂ ಬುಲೆಟಿನ್ ಪ್ರಕಟಣೆಗಳನ್ನು ಬಿಟ್ಟಿರಲಿಲ್ಲ. ಈ ಕಾರ್ಯಗಳಲ್ಲೆಲ್ಲ ನನಗೆ ಪೂರ್ಣ ನೆರವು ಕೊಡುತ್ತಿ ದ್ದವರ ಪೈಕಿ ತುಮಕೂರಿನ ಖಾದೀ ಭಂಡಾರದ ಸಂಜಪ್ಪನವರನ್ನು ಮರೆಯುವಂತಿಲ್ಲ.

ಒಮ್ಮೆ ಈ ರೀತಿ ಸೈಕ್ಲೋಸ್ಟೈಲ್ ಮಾಡಿಕೊಡುತ್ತಿದ್ದ ಕೆ. ವಿ. ಸುಬ್ರಮಣ್ಯ ಸ್ವಾಮಿಯವರ ಮನೆಗೆ ಹೋಗಿ ಅವರೊಡನೆ ಮಾತನಾಡಿಕೊಂಡು ಬರಬೇಕಾದ ಪ್ರಸಂಗ ಬಂದಿತು. ಅದೇ ರೀತಿ ಅಲ್ಲಿಗೆ ಹೋಗಿ ಕೊಡಬೇಕಾಗಿದ್ದ ಸೂಚನೆಗಳನ್ನು ಕೊಟ್ಟು ಅಲ್ಲಿಂದ ಗುಪ್ತವಾಗಿ ಹೊರಡಬೇಕೆನ್ನುವಷ್ಟರಲ್ಲಿ ಹೊರಗಡೆ ಸಿ.ಐ.ಡಿ.ಗಳು ಕಾಯುತ್ತಿರು ವರೆಂದು ಗೊತ್ತಾಯಿತು. ನನ್ನ ಕೈಚೀಲದಲ್ಲಿದ್ದ ಬಿಳಿ ಸೀರೆಯೊಂದನ್ನು ಉಟ್ಟುಕೊಂಡು ಜೊತೆಗೆ ಬಸವರಾಜ್ ಎಂಬುವರನ್ನು ಕರೆದುಕೊಂಡು ಸಣ್ಣಗೆ ಮಳೆಹನಿ ಇದ್ದುದರಿಂದ ಕೊಡೆ ಹಿಡಿದುಕೊಂಡು ಆ ಮನೆಯಿಂದ ಹೊರಹೊರಟೆನು. ಸಂಜೆ ಸುಮಾರು 7 ಗಂಟೆಯಾದ್ದರಿಂದ ಹೊಂಚುಕಾಯುತ್ತಿದ್ದ ಸಿ.ಐ.ಡಿ.ಗಳಿಗೆ ನಾನು ಸೀರೆಯುಟ್ಟಿರ ಬಹುದೆಂದು ಊಹಿಸಲಾಗಲಿಲ್ಲ. ಸ್ವಲ್ಪ ದೂರ ನಮ್ಮ ಹಿಂದೆ ಬಂದು ಮತ್ತೆ ಅದೇ ಮನೆಯ ಕಡೆ ಹಿಂದಿರುಗಿದರು. ಅರ್ಧಗಂಟೆಯೊಳಗಾಗಿ ಪೋಲೀಸಿನವರು ಆ ಮನೆಯ ಶೋಧ ಮಾಡಿ ನಿರಾಶರಾದರು.

ಅಲ್ಲಲ್ಲಿ ಕೈಬಾಂಬುಗಳ ಗಲಾಟೆ, ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವುದು ಮುಂತಾದವುಗಳ ಕಿರಿಕಿರಿ ಹೆಚ್ಚಾಗುತ್ತ ಬಂದಂತೆ ಪೋಲೀಸರು ನಮ್ಮ ಹಿತೈಷಿಗಳಿಗೆ ಕಿರುಕುಳ ಕೊಡಲಾರಂಭಿಸಿದರು. ಇದನ್ನರಿತು ಒಂದು ದಿನ ರಾತ್ರಿ ಪೋಲೀಸ್ ಸಬ್-ಇನ್ಸ್‌ಪೆಕ್ಟರ್ ಮನೆಯ ಹಿಂಭಾಗದ ಕಾಂಪೌಂಡಿನಲ್ಲಿ ಒಂದು ಕೈಬಾಂಬನ್ನು ಹಾಕಿ, ಸತ್ಯಾಗ್ರಹಿಗಳನ್ನು ದಸ್ತಗಿರಿ ಮಾಡುವುದನ್ನು ಬಿಟ್ಟು ಬೇರೆ ಯಾವ ಕಿರುಕುಳವನ್ನೂ

ಕೊಡಕೂಡದೆಂದು ದೊಡ್ಡದಾಗಿ ಬರೆದು ಅವರ ಮನೆ ಗೋಡೆಯ ಮೇಲೆ ಪೋಸ್ಟರ್ ಅಂಟಿಸಿ ಬಂದೆವು. ಅಂದಿನಿಂದ ಆ ಸಬ್-ಇನ್ಸ್‌ಪೆಕ್ಟರ ಕಿರುಕುಳ ಕಡಿಮೆಯಾಯಿತು. ಅವರು ಎಷ್ಟು ಶ್ರಮವಹಿಸಿದರೂ ನನ್ನನ್ನು ಪತ್ತೆಮಾಡುವುದು ಸಾಧ್ಯವಾಗಲಿಲ್ಲ. ಆದ್ದರಿಂದ ನನ್ನನ್ನು ಹಿಡಿದು ತಂದವರಿಗೆ ಬಹುಮಾನ ಕೊಡುವುದಾಗಿ ಪೋಲೀಸ್ ಗೆಜೆಟ್‌ನಲ್ಲಿ ಪ್ರಕಟಿಸಿ ಸಂಸ್ಥಾನದ ಎಲ್ಲಾ ಪೋಲೀಸ್ ಠಾಣೆಗಳಿಗೂ ಹಂಚಿಸಿದ್ದರು. ಇಂಥ ಸನ್ನಿವೇಶದಲ್ಲೇ ಎರಡನೇ ಬಾರಿ ಮೈಸೂರಿಗೆ ಹೋಗಿ ಯಶೋಧರಮ್ಮನವರನ್ನು ಭೇಟಿಮಾಡಿ, ತಲೆಮರೆಸಿಕೊಂಡು ಕೆಲಸಮಾಡುತ್ತಿದ್ದ ಎಂ. ವಿ. ಕೃಷ್ಣಪ್ಪನವರೊಡನೆ ಚರ್ಚಿಸಿ ಮುಂದಿನ ಕ್ರಮಗಳನ್ನು ಗೊತ್ತುಮಾಡಿಕೊಂಡು ಬಂದೆನು.

ಇಂತಹ ಸಮಯದಲ್ಲಿ ತುಮಕೂರು ನಗರದ ವರ್ತಕರು, ವಕೀಲರು, ವಿದ್ಯಾರ್ಥಿಗಳು ಮತ್ತು ಜನತೆ ಚಳವಳಿಗೆ ಇತ್ತ ನೆರವನ್ನು ನಾವು ಮರೆಯುವಂತಿಲ್ಲ. ವಾಣಿಜ್ಯ ಮುಖಂಡರಾದ ಕೆಂಪಹೊನ್ನಯ್ಯ, ಟಿ. ಅನಂತರಾಮ ಶೆಟ್ಟಿ ಇವರನ್ನು ದಸ್ತಗಿರಿಮಾಡಿ ಜೈಲಿಗೆ ದಬ್ಬಿದ್ದರು. ಲಾಠೀ ಪ್ರಹಾರ, ಗುಂಡು ಹಾರಿಸುವುದು ಪ್ರಕರಣಗಳಲ್ಲಿ ಅನೇಕರು ಗಾಯಗೊಂಡರು.

ಸತ್ಯಾಗ್ರಹ ಆರಂಭವಾಗಿ ಸುಮಾರು 3 ತಿಂಗಳಾಗಿತ್ತು. ನಮ್ಮ ಮನೆಯವರಿಗೆಲ್ಲಾ ಪೋಲೀಸಿನವರು ಬೆದರಿಕೆ ಹಾಕಿದ್ದರು. 'ಆತನು ಸಿಕ್ಕಿದೊಡನೆ ಗುಂಡಿಟ್ಟು ಕೊಲ್ಲಲು ಸರ್ಕಾರದ ಆಜ್ಞೆಯಾಗಿದೆ' ಎಂದು ಪ್ರಚಾರವೆಬ್ಬಿಸಿದ್ದರು. ಆದ್ದರಿಂದ ನಮ್ಮ ತಂದೆತಾಯಿಯವರಿಗೆ ಸಮಾಧಾನ ಹೇಳಲು ಗೌಪ್ಯವಾಗಿ ಒಂದು ದಿನ ಮನೆಗೆ ಬಂದು ಸೇರಿದೆ. 3 ತಿಂಗಳಿಂದ ತಿರುಗಿ ತಿರುಗಿ ಕಂಗಾಲಾಗಿದ್ದ ನನ್ನನ್ನು ನೋಡಿ, ಅಭ್ಯಂಜನ ಮಾಡಿಕೊಂಡೇ ಹೋಗಬೇಕೆಂಬ ತಾಯಿಯ ಬಲವಂತವಾದ್ದರಿಂದ, ಮಧ್ಯಾಹ್ನ 4 ಗಂಟೆಗೆ ಮೈಗೆಲ್ಲ ಎಣ್ಣೆಯನ್ನು ಸವರಿಕೊಂಡು ಸ್ನಾನಕ್ಕೆ ಸಿದ್ಧವಾಗುತ್ತಿದ್ದಂತೆ 50 ಜನ ರಿಸರ್ವ್ ಪೋಲೀಸಿನವರು ನಮ್ಮ ಮನೆಯನ್ನು ಸುತ್ತುಗಟ್ಟಿದರು.

ಈ ರೀತಿ ಪೋಲೀಸರು ಮನೆಯನ್ನು ಸುತ್ತುಗಟ್ಟುತ್ತಿರುವರೆಂಬುದನ್ನು ನಮ್ಮ ತಾಯಿಯವರು ನನಗೆ ತಿಳಿಸಿದರು. ಆಗ ನಾನು ಮೈತುಂಬಾ ಎಣ್ಣೆಯನ್ನು ಹಚ್ಚಿಕೊಂಡು ಮಹಡಿಯ ಮೇಲೆ ಓಡಾಡುತ್ತಿದ್ದೆ. ನಮ್ಮ ಮನೆ ಒಳಗಡೆ ಇದ್ದ ಹಳೆಯ ಬಾವಿಯೊಳಗೆ ಇಳಿದುಬಿಡಬೇಕೆಂದು ತೀರ್ಮಾನಿಸಿದೆ. ಆದರೆ ಮಹಡಿಯಿಂದ ಕೆಳಕ್ಕೆ ಇಳಿದುಬರಲು ಅವಕಾಶವಿಲ್ಲದಂತೆ ಪೋಲೀಸ್ ದಫೇದಾರನೊಬ್ಬ ಮಹಡಿಯ ಮೆಟ್ಟಿಲ ಬಳಿ ಬಂದು ನಿಂತಿದ್ದ. ಅಷ್ಟುಹೊತ್ತಿಗೆ ಪೋಲೀಸ್ ಇನ್ಸ್‌ಪೆಕ್ಟರ್‌ರವರು ಅಮಲ್ದಾರ್, ಮ್ಯಾಜಿಸ್ಟ್ರೇಟರನ್ನು ಕರೆದುಕೊಂಡು ರಿವಾಲ್ವರ್ ಸಹಿತ ನಮ್ಮ ಮನೆಯೊಳನುಗ್ಗಿದರು. ನನ್ನ ಬಳಿ ಪಿಸ್ತೂಲ್ ಅಥವಾ ಬಂದೂಕು ಇರಬಹುದೆಂಬ ಶಂಕೆ ಅವರಿಗೆ ಇತ್ತು. ವಿಧ್ವಂಸಕ ಕಾರ್ಯದಲ್ಲಿ ನನಗೆ ಮರಣದಂಡನೆಯನ್ನು ವಿಧಿಸುವರೆಂಬ ಅಪಪ್ರಚಾರ ಆರಂಭವಾಗಿ ಊರಿನಲ್ಲೆಲ್ಲ ಭಯವನ್ನುಂಟುಮಾಡಿತ್ತು. ಅನೇಕ ನಮ್ಮ ಬಂಧುಗಳು

ಚಿಂತೆಗೊಳಗಾಗಿದ್ದರು. ನನ್ನನ್ನು ಹಿಡಿದಮೇಲೆ ಬಹಳ ಎಚ್ಚರಿಕೆಯಿಂದ ಹೆಚ್ಚಿನ ಪೋಲೀಸ್ ಸಿಬ್ಬಂದಿಯೊಡನೆ ತುಮಕೂರಿನಿಂದ ಅಕ್ಟೋಬರ್ 10ನೇ ತಾ॥ ಹಾಸನದ ಜೈಲಿಗೆ ಸಾಗಿಸಿ, ಡಿಟೆನ್ಷನ್ ಕಾನೂನು ಪ್ರಕಾರ ಬಂಧನದಲ್ಲಿ ಇರಿಸಿದರು. ಕೆಲವು ದಿನಗಳ ಮೇಲೆ ಅಲ್ಲಿಂದ ಸಾಗರಕ್ಕೂ, ಆಮೇಲೆ ಬೆಂಗಳೂರು ಜೈಲಿಗೂ ಸಾಗಿಸಿದರು.

ಜೈಲುವಾಸದಲ್ಲಿ ಒಮ್ಮೆ ತುಮಕೂರು ಜೈಲುಗೋಡೆಗಳನ್ನು ಹತ್ತಿ ಹೊರಗೆ ಹೋಗಿ ಬೇರೆಬೇರೆ ಚಟುವಟಿಕೆಗಳಲ್ಲಿ ಭಾಗವಹಿಸಿ, ಕೆಲವರಿಗೆ ತಿಳುವಳಿಕೆ ಕೊಟ್ಟು ಎರಡು ದಿನಗಳನಂತರ ವಾಪಸ್ಸು ಜೈಲಿಗೆ ಬಂದು ಸೇರಿಕೊಂಡೆನು. ಇದಕ್ಕೆ $6\frac{1}{4}$ ಅಡಿ ಎತ್ತರದ ನನ್ನ ಸಹೋದ್ಯೋಗಿ ಆದಿರಾಜಯ್ಯನವರ ನೆರವು ಇತ್ತು. ಅವರ ಬೆನ್ನಿನ ಮೇಲೆ ಹತ್ತಿ ಹಗ್ಗದಿಂದ ಹೊರಗಡೆ ಭಾಗಕ್ಕೆ ಇಳಿದು ಜೈಲಿನಿಂದ ಪಾರಾಗಿದ್ದೆ. ಇದು ಜೈಲಿನ ಅಧಿಕಾರಿಗಳಿಗೆ ಗೊತ್ತಾಲಿಲ್ಲ. ಎಲ್ಲರನ್ನೂ ಸರ್ಕಾರ ಬಿಡುಗಡೆ ಮಾಡಿದಾಗ, 1944 ಜನವರಿಯಲ್ಲಿ (15 ತಿಂಗಳನಂತರ) ಸೆಂಟ್ರಲ್ ಜೈಲಿನಿಂದ ಬಿಡುಗಡೆಯಾದೆನು.

1947ರಲ್ಲಿ 'ಮೈಸೂರು ಚಲೋ' ಸತ್ಯಾಗ್ರಹ ಆರಂಭವಾಯಿತು. ಮೊದಲೇ ಗೊತ್ತುಪಡಿಸಿದಂತೆ ನಾನು ಪೋಲೀಸರ ಕೈಗೆ ಸಿಕ್ಕದಂತೆ ಹುಬ್ಬಳ್ಳಿಗೆ ಹೋಗಿ ಸತ್ಯಾಗ್ರಹ ಶಿಬಿರದ ಸಂಚಾಲಕತ್ವವನ್ನು ವಹಿಸಿಕೊಳ್ಳಬೇಕಾಗಿತ್ತು. ಆದರೆ ನಮ್ಮ ನಿರೀಕ್ಷೆಗೆ ಮುಂಚೆಯೇ ಬೆಂಗಳೂರಿನಲ್ಲಿ ಕಾಂಗ್ರೆಸ್ ಅಧ್ಯಕ್ಷರಾದ ಕೆ. ಸಿ. ರೆಡ್ಡಿ ಮುಂತಾದ ಎಲ್ಲ ನಾಯಕರ ದಸ್ತಗಿರಿಯಾಯಿತು. ಅದೇ ರಾತ್ರಿ ನನ್ನನ್ನು ದಸ್ತಗಿರಿ ಮಾಡಲು ರಾತ್ರಿ 12 ಗಂಟೆಗೆ ನಮ್ಮ ಮನೆಗೆ ಪೋಲೀಸ್ ಇನ್ಸ್‌ಪೆಕ್ಟರ್ ವ್ಯಾನಿನೊಂದಿಗೆ ಬಂದು ನಮ್ಮ ಮನೆಬಾಗಿಲು ತಟ್ಟಿದರು. ಈ ವೇಳೆಗೆ ಪೋಲೀಸರು ಬಿ. ಸಿ. ನಂಜುಂಡಯ್ಯನವರನ್ನು ದಸ್ತಗಿರಿಮಾಡಿ ವ್ಯಾನಿನಲ್ಲಿ ತಂದಿದ್ದರು. ಬಾಗಿಲು ತಟ್ಟಿದವರಾರೆಂದು ನೋಡಲು ನಿದ್ದೆಯಿಂದ ಎದ್ದು ಹೊರಗೆ ಬಂದೆ. ಪೋಲೀಸ್ ಇನ್ಸ್‌ಪೆಕ್ಟರ್ ಮತ್ತು ಪೋಲೀಸರು ವ್ಯಾನಿನೊಂದಿಗೆ ಸಿದ್ಧವಾಗಿ ನಿಂತಿದ್ದರು. "ನಿಮ್ಮನ್ನು ದಸ್ತಗಿರಿ ಮಾಡಿದ್ದೇವೆ. ನೀವು ಬರಬೇಕು" ಎಂದರು. "ಈಗಲೇ ಬರಬೇಕೆ? ಹೀಗೆಯೇ ಬರಲೇ ಅಥವಾ ಬಟ್ಟೆ ಬದಲಾಯಿಸಿ ಬರಲೆ?" ಎಂದೆ. ನಿಕ್ಕರ್ ಧರಿಸಿದ್ದ ನನಗೆ "ಬೇರೆ ಬಟ್ಟೆ ಹಾಕಿಕೊಂಡು ಬನ್ನಿ" ಎಂದು ಇನ್ಸ್‌ಪೆಕ್ಟರು ಹೇಳಿದರು.

ನಾನು ಒಳಗೆ ಹೋಗಿ ಬಟ್ಟೆ ಬದಲಾಯಿಸಿ ಹಿಂಭಾಗದ ಕಾಂಪೌಂಡ್ ಹಾರಿ ತಪ್ಪಿಸಿಕೊಂಡೆನು. ಸುಮಾರು 5-6 ನಿಮಿಷದ ಮೇಲೆ ಇನ್ಸ್‌ಪೆಕ್ಟರ್ ನನ್ನ ಹೆಸರನ್ನು ಕೂಗಿ "ಬೇಗನೇ ಬನ್ನಿ" ಎಂದರಂತೆ. ನನ್ನ ಮಡದಿ "ಅವರು ಬಟ್ಟೆ ಹಾಕಿಕೊಂಡು ಹಿಂದುಗಡೆ ಕಾಂಪೌಂಡ್ ಹಾರಿ ಪರಾರಿಯಾಗಿದ್ದಾರೆ" ಎಂದಳಂತೆ. ಕುಪಿತರಾದ ಇನ್ಸ್‌ಪೆಕ್ಟರ್ ಮನೆಯೊಳನುಗ್ಗಿ, ಪರೀಕ್ಷಿಸಿ, ನಿರಾಶರಾಗಿ ಹಿಂತಿರುಗಿದರಂತೆ.

ಆಗ ರಾತ್ರಿ 12 ಗಂಟೆ ಮೀರಿದ್ದರಿಂದ ಆ ದಿನ ನಾನು ಹುಬ್ಬಳ್ಳಿಗೆ ಹೋಗುವ ಪ್ರಯತ್ನವನ್ನು ಕೈಬಿಟ್ಟು ಕೂಡಲೇ ಮಿತ್ರರೊಬ್ಬರ ಮನೆಯನ್ನು ಸೇರಿದೆ. ಮರುದಿನ

ಸಂಜೆಯಾಗುವವರೆಗೂ ಇದ್ದು, ಸಂಜೆ 7 ಗಂಟೆಗೆ ಒಂದು ಸೈಕಲ್ ತೆಗೆದುಕೊಂಡು ಮನೆಗೆ ಬಂದು ವೇಷ ಬದಲಾಯಿಸಿ, ಪಟೇಲ್ ಸ್ಟೈಲಿನಲ್ಲಿ ಬಾಣಸಂದ್ರಕ್ಕೆ ಬಂದು ಮತ್ತೆ ಮೇಲ್ ಗಾಡಿಯನ್ನು ಹತ್ತಿ, ಮರುದಿವಸ ಹುಬ್ಬಳ್ಳಿ ಸೇರಿದೆ. ಬಿಜಾಪುರಕ್ಕೆ ಹೋಗಿದ್ದ ನಿಜಲಿಂಗಪ್ಪನವರು ಹುಬ್ಬಳ್ಳಿಗೆ ಬಂದು, ಅಲ್ಲಿ ಮೈಸೂರು ಸತ್ಯಾಗ್ರಹಿಗಳ ಶಿಬಿರದ ಕಚೇರಿಯನ್ನು ಪ್ರಾರಂಭಿಸಿ, ಅದಕ್ಕೆ ನನ್ನನ್ನು ಸಂಚಾಲಕನನ್ನಾಗಿ ನೇಮ. ಮಾಡಿ ಬೆಂಗಳೂರಿಗೆ ಹೊರಟರು. ಆಗ ಅವರೇ ಸರ್ವಾಧಿಕಾರಿಯಾಗಿ ನೇಮಿಸಲ್ಪಟ್ಟಿದ್ದರುಕ

ಈ ವೇಳೆಗೆ ಸರಿಯಾಗಿ ಹೈದರಾಬಾದ್ ಸಂಸ್ಥಾನದಲ್ಲಿ ರಜಕಾರರ ಚಳವಳಿ ಬಿರುಸಾಯಿತು. ಆದ್ದರಿಂದ ಹೈದರಾಬಾದ್ ಮತ್ತು ಮೈಸೂರು ಸಂಸ್ಥಾನಗಳ ಚಳವಳಿಗಾಗಿ ಉತ್ತರ ಕರ್ನಾಟಕದ ಜನತೆ ಹಣ ಕೊಡಿಸಲು ಮತ್ತು ಸತ್ಯಾಗ್ರಹಿಗಳನ್ನು ಕಳುಹಿಸಲು ಆರಂಭಿಸಿದರು. ಹೈದರಾಬಾದ್ ಚಳವಳಿ ಉಗ್ರಸ್ವರೂಪವಾದ್ದರಿಂದ ಅವರಿಗೆ ಹಣದ ಶೇಖರಣೆಯಲ್ಲಿನ ಮುಕ್ಕಾಲು ಭಾಗವನ್ನು, ಮೈಸೂರಿಗೆ ಕಾಲುಭಾಗ ವನ್ನು ಹಂಚಿಕೊಡಲು ತೀರ್ಮಾನಿಸಿದ್ದರು. ಅದೇ ರೀತಿ ನಮ್ಮ ಪಾಲಿಗೆ ಬಂದ ಸ್ವಲ್ಪ ಹಣದಲ್ಲೇ ಹಳೇ ಮೈಸೂರಿನ ಉತ್ತರ ಗಡಿಯಲ್ಲಿ ಸುಮಾರು 9 ಕಡೆ ಸತ್ಯಾಗ್ರಹ ಶಿಬಿರ ಸ್ಥಾಪಿಸಿ ಸತ್ಯಾಗ್ರಹಿಗಳನ್ನು ಮೈಸೂರು ಪ್ರಾಂತ್ಯದೊಳಗೆ ಕಳುಹಿಸಲು ಆರಂಭಿಸಿದೆವು. ಅವರೆಲ್ಲರೂ ಮೈಸೂರಿನ ಗಡಿಯೊಳಗೆ ಸತ್ಯಾಗ್ರಹವನ್ನು ಮಾಡಿ ಜೈಲು ತುಂಬಲು ಆರಂಭಿಸಿದರು. ಈ ಎಲ್ಲ ಸತ್ಯಾಗ್ರಹ ಶಿಬಿರಗಳಿಗೆ ರಾಣೆಬೆನ್ನೂರು ಶಿಬಿರವನ್ನು ಕೇಂದ್ರ ಶಿಬಿರವನ್ನಾಗಿ ಮಾಡಿಕೊಂಡಿದ್ದೆವು. ಪ್ರತಿದಿನ 9-10 ಶಿಬಿರಗಳಿಂದ ಸಾವಿರಾರು ಸತ್ಯಾಗ್ರಹಿಗಳು ಮೈಸೂರಿನೊಳಕ್ಕೆ ನುಗ್ಗಿ ದಾಂಧಲೆ ಮಾಡಲು ಆರಂಭಿಸಿದರು. ಮೈಸೂರು ಪೋಲೀಸರು ಅನೇಕರನ್ನು ಹಿಡಿದು ಜೈಲಿಗೆ ಸಾಗಿಸಿ ಮತ್ತೆ ಕೆಲವರನ್ನು ಉತ್ತರ ಕರ್ನಾಟಕದ ಸರಹದ್ದಿಗೆ ತಂದುಬಿಡುತ್ತಿದ್ದರು.

ಒಮ್ಮೆ ದಾವಣಗೆರೆಯಿಂದ 69-70 ಜನ ಸತ್ಯಾಗ್ರಹಿಗಳನ್ನು ಎರಡು ಲಾರಿಯಲ್ಲಿ ಗಡಿಯಾಚೆಗೆ ಹಿಡಿದು ತಂದ 22 ಜನ ಪೋಲೀಸರನ್ನು, ನಮ್ಮ ಸತ್ಯಾಗ್ರಹಿಗಳು ರಾಣೆಬೆನ್ನೂರಿನ ಶಿಬಿರದವರೆಗೂ ಉಪಾಯದಿಂದ ಕರೆದುಕೊಂಡು ಬಂದು, ಅಲ್ಲಿ ಆ ಪೋಲೀಸರ ಕೈಯಲ್ಲಿದ್ದ ಬಂದೂಕುಗಳನ್ನು ಕಿತ್ತುಕೊಂಡು ಸಾಯಂಕಾಲದವರೆಗೂ ಅವರನ್ನೆಲ್ಲ ಒಂದೆಡೆ ಬಂಧನದಲ್ಲಿರಿಸಿದರು. ಈ ಸಮಾಚಾರ ಮೈಸೂರು ಸರ್ಕಾರದಿಂದ ಧಾರವಾಡ ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟರಿಗೆ ಬಂದು ಅವರು ನನ್ನೊಡನೆ ಚರ್ಚಿಸಿ ಅವರೇ ರಾಣೆಬೆನ್ನೂರಿಗೆ ಬಂದು 22 ಜನ ಮೈಸೂರು ಪೋಲೀಸರನ್ನು ಬಿಡುಗಡೆ ಮಾಡಿಸಿ ವಾಪಸ್ಸು ಕಳುಹಿಸಿದರು.

ಕೆಲವು ಸತ್ಯಾಗ್ರಹಿಗಳ ತಂಡಗಳು ಹರಿಹರ ಮತ್ತು ದಾವಣಗೆರೆ ಪೋಲೀಸ್ ಸ್ಟೇಷನ್ ಮತ್ತು ಟ್ರೆಜರಿಗಳನ್ನು ಮುತ್ತಿಗೆಹಾಕಿ ಗಲಾಟೆ ಮಾಡಿದವು. ಇದೇ ರೀತಿ ನ್ಯಾಮತಿ, ಶಿಕಾರಿಪುರ, ಶಿರಾಳಕೊಪ್ಪ ಮುಂತಾದ ಕಡೆ ಸತ್ಯಾಗ್ರಹಿಗಳ ತಂಡ ನುಗ್ಗಿ

ದಾಂಧಲೆ ನಡೆಸಿದವು. ಈ ಸತ್ಯಾಗ್ರಹ ಬಹಳ ದಿವಸ ನಡೆಯಲು ಅವಕಾಶ ಕೊಡಲಿಲ್ಲ. ಆಗಿನ ದಿವಾನ್ ಮೊವಲಿಯೂರವರು ಉತ್ತರ ಕರ್ನಾಟಕದ ಸತ್ಯಾಗ್ರಹಿಗಳ ಪ್ರಚಂಡ ಪ್ರವಾಹ, ಹಿಂದೂಪುರದ ಕಡೆಯಿಂದ ಕನ್ನಡ ಹಿತೈಷಿಗಳ ನುಗ್ಗಾಟ, ಸಂಸ್ಥಾನದ ಒಳಗಡೆ ಪ್ರಚಂಡ ಚಳವಳಿ ನೋಡಿ ಚಿಕ್ಕಸ ಬಿಗಾದರು. ಬೇರೆ ಮಾರ್ಗವಿಲ್ಲದೆ ಜವಾಬ್ದಾರಿ ಸರ್ಕಾರ ಘೋಷಣೆಮಾಡುವಂತೆ ಮಹಾರಾಜರಿಗೆ ಶಿಫಾರಸು ಮಾಡಿದರು.

## ದಿ|| ತಾಳಕೆರೆ ಸುಬ್ರಹ್ಮಣ್ಯಂ (1897—1971)



ತುಮಕೂರು ಜಿಲ್ಲೆಯ ತುರುವೇಕೆರೆ ತಾ|| ತಾಳಕೆರೆಯಲ್ಲಿ ಜನಿಸಿದ ಸುಬ್ರಹ್ಮಣ್ಯಂ ಕೂಲಿ ಮಠದಲ್ಲಿ ಅಕ್ಷರಾಭ್ಯಾಸ ಮಾಡಿ ಮೈಸೂರು ಮತ್ತು ತುಮಕೂರಿನಲ್ಲಿ ಹೈಸ್ಕೂಲು ವಿದ್ಯಾಭ್ಯಾಸ ಮುಂದುವರಿಸಿದರು. ಬೆಂಗಳೂರಲ್ಲಿ ಬಿ.ಎ. ಆಗಿ ಮುಂಬೈಯಲ್ಲಿ ಲಾ ಮುಗಿಸಿದರು. ಆಗಲೇ ಅವರಿಗೆ (ಮುಂಬೈಯಲ್ಲಿ) ರಾಷ್ಟ್ರ ಸೇವಾಕಾರ್ಯದಲ್ಲಿ ಅಭಿರುಚಿ ಉಂಟಾದುದು. ಲಾ ಓದುತ್ತಿದ್ದಾಗ ಮಹಾತ್ಮರು ಅಸಹಕಾರ ಚಳವಳಿ ಆರಂಭಿಸಲು ಅದರಲ್ಲಿ ಸೇರಿ, ಲಾ ಶಿಕ್ಷಣ ತ್ಯಜಿಸಿದರೂ ಮುಂದೆ ಮಹಾತ್ಮರು ಚಳವಳಿ ಹಿಂದೆಗೆದಾಗ ಮತ್ತೆ ಶಿಕ್ಷಣ ಮುಂದುವರಿಸಿದರು. ವಕೀಲಿವೃತ್ತಿಯನ್ನು ತುಮಕೂರಲ್ಲಿ ಆರಂಭಿಸಿದಾಗ ಆರಂಭದಲ್ಲಿ ಕೆಲವರ್ಷ ಪಕ್ಕಾ ಜೂಜುಕೋರರಿದ್ದು ಕುದುರೆಜೂಜು, ಇಸ್ಪೇಟ್ ಆಡುತ್ತಿದ್ದರು. ಮುಂದೆ ಚಳವಳಿಯಲ್ಲಿ ತೊಡಗಿದಾಗ ಎಲ್ಲವನ್ನೂ ತ್ಯಜಿಸಿದರು. 1931ರಲ್ಲಿ ತುಮಕೂರಲ್ಲಿ ತೀವ್ರಪಾನನಿರೋಧ ಚಳವಳಿಯನ್ನಾರಂಭಿಸಿ 100ಕ್ಕೂ ಹೆಚ್ಚು ಜನ ಬಂಧಿತರಾಗಲು, ಈ ಚಳವಳಿಯ ಕಾರಣಕರ್ತರು ಇವರು ಹಾಗೂ ರಂಗಯ್ಯಂಗಾರರು. ಆಗ ಇವರಿಗೆ ಮೂರು ತಿಂಗಳ ಶಿಕ್ಷೆ ಆಯಿತು. 1932ರಲ್ಲಿ ಬಾಗಲಕೋಟೆಯಲ್ಲಿ ನಡೆದ ಕರ್ನಾಟಕ ಪ್ರಾಂತೀಯ ಪರಿಷತ್ತಿನ ಅಧ್ಯಕ್ಷರಾಗಿ ಆಯ್ಕೆಗೊಂಡು, ಪ್ರತಿಬಂಧಿತವಾದ ಈ ಸಭೆಗೆ ಹೋಗಿ ಬಂಧಿತರಾಗಿ ಆರೂವರೆ ತಿಂಗಳ ಶಿಕ್ಷೆಯನ್ನು ಬಿಜಾಪುರ ಜೈಲಿನಲ್ಲಿ ಅನುಭವಿಸಿದರು. ಮುಂದೆ ಮೈಸೂರು ಕಾಂಗ್ರೆಸ್ಸಿನಲ್ಲಿ ಇವರು ಗಣ್ಯನಾಯಕರೆನಿಸಿದರು. 1937 ಹಾಗೂ 1938ರಲ್ಲಿ ಇವರ ಮೇಲೆ ರಾಜದ್ರೋಹದ ಮೊಕದ್ದಮೆ ಹಾಕಿ, ಕಡೆಗೆ ಹಿಂದೆಗೆದುಕೊಳ್ಳಲಾಯಿತು. ಇವರ ಮೇಲೆ ಹಾಕಿದಷ್ಟು ರಾಜದ್ರೋಹದ

ಮೊಕದ್ದಮೆಗಳನ್ನು ಇನ್ನಾರ ಮೇಲೂ ಹಾಕಿಲ್ಲ. 1939ರಲ್ಲಿ ಇಂಥದೇ ಮೊಕದ್ದಮೆ ಆಗಿ ಅವರಿಗೆ ಒಂದು ವರ್ಷ ಶಿಕ್ಷೆಯಾಯಿತು; 300 ರೂ. ದಂಡ ಕೂಡ ಹೇರಿದರು. ದಂಡ ವಸೂಲಿಗಾಗಿ ಮನೆ ಸಾಮಾನು ಜಪ್ತಾಯಿತು.

1942ರಲ್ಲಿ ಚನ್ನಪಟ್ಟಣದಲ್ಲಿ ನಡೆದ ಮೈಸೂರು ಕಾಂಗ್ರೆಸ್ ಅಧಿವೇಶನಕ್ಕೆ ಅವರು ಅಧ್ಯಕ್ಷರಾಗಿ ಆಯ್ಕೆಗೊಂಡು ಆ ಸ್ಥಾನದಲ್ಲಿ 1945ರ ವರೆಗೆ ಮುಂದುವರಿದರು. 1942ರಲ್ಲಿ ಬಂಧಿತರಾಗಿ 16 ತಿಂಗಳು ಸ್ಥಾನಬದ್ಧರಾಗಿದ್ದರು. 1947ರಲ್ಲಿ ಮೈಸೂರು ಘಟನಾಸಭೆಯ ಅಧ್ಯಕ್ಷರಾಗಿದ್ದರು. 1954ರಲ್ಲಿ ವಿಧಾನಪರಿಷತ್ತಿನ ಅಧ್ಯಕ್ಷರಾದರು. ಜತ್ತಿ ಸಂಪುಟದಲ್ಲಿ ಪೌರಾಡಳಿತ ಸಚಿವರಾಗಿದ್ದರು. 1965–66ರಲ್ಲಿ ಸಾಹುಕಾರ್ ಚನ್ನಯ್ಯನವರ ಜೊತೆ ಸೇರಿ ಜನತಾ ಪಕ್ಷವನ್ನು ಕಟ್ಟಿದರು. ಬೆಂಗಳೂರಲ್ಲಿ ಕಾಂಗ್ರೆಸ್ ವಿರೋಧಿ ಪೌರಸಮಿತಿ ಕಟ್ಟಿದರು. 1971ರಲ್ಲಿ ಡಿಸೆಂಬರ್ 4ಕ್ಕೆ ವಾಹನಾಪಘಾತದಲ್ಲಿ ತೀರಿಕೊಂಡರು. ಹಿಂದಿ, ಮದ್ಯಪಾನ ನಿರೋಧ, ಖಾದಿ, ಹರಿಜನೋದ್ಧಾರಗಳಲ್ಲಿ ಅವರಿಗೆ ಆಸೆ. ಹರಿಜನ ಕಾರ್ಯಕರ್ತರಿಗೆ ತುಮಕೂರಲ್ಲಿ ಅಡಿಗೆಮನೆಯಲ್ಲೇ ತಮ್ಮ ಜೊತೆಯೇ ಊಟಕ್ಕೆ ತೆರೆದ ಬಾಗಿಲು. ಸಾಹಿತ್ಯದಲ್ಲಿ ಅಪಾರ ಆಸ್ಥೆ. 'ಗುಂಡುಗೊಡಲಿ' ನಾಟಕ ಅವರಿಗೆ ಕಂಠಪಾಠ; ಬೇಕಾದಾಗ ಅದರ ಏಕಪಾತ್ರಾಭಿನಯ.

ಅವರ ಮಾತಿನಲ್ಲಿ ಮೋಹನಾಸ್ತ್ರ. ಕನ್ನಡ, ಇಂಗ್ಲಿಷ್‌ಗಳೆರಡರಲ್ಲೂ ವಕ್ತೃತ್ವ. ಖ್ಯಾತ ಕ್ರಿಮಿನಲ್ ವಕೀಲರಾದರೂ ಅವರು ಗಳಿಸಿ ಉಳಿಸಿದ್ದು ಅಲ್ಪವೇ. ಎಲ್ಲವೂ ದೇಶಕಾರ್ಯಕ್ಕಾಗಿ ವೆಚ್ಚ. ಬಲವಾದ ಮೈಕಟ್ಟು, ವಿಶಾಲವಾದ ಎದೆ, ಪ್ರಧಾನವಾದ ಹಣೆ, ತುಂಬಿದ ಕೆನ್ನೆ, ಕಾಬೂಲಿವಾಲಗಳಂತಿರುವ ಎತ್ತರದ ದೇಹ. ಸರಳಹೃದಯ, ಸರಳಜೀವನ, ತತ್ವನಿಷ್ಠ ನಿಲುವು. ತುಮಕೂರಿನ ಅನೇಕ ಕಾರ್ಯಕರ್ತರೆಲ್ಲ ನಾವು ಅವರ ಶಿಷ್ಯರೇ.

ಮೈ.ತು. 5

## ಎಸ್. ವಿ. ಆಚಾರ್

ಜನನ : 1911 ಉದ್ಯೋಗ : ? ವಿಳಾಸ : ಆಚಾರ್ಯ ಬೀದಿ, ತುಮಕೂರು

---

1931ನೇ ಇಸ್ವಿಯಲ್ಲಿ ತುಮಕೂರಿನಲ್ಲಿ ಟಿ. ಸುಬ್ರಹ್ಮಣ್ಯಂರ ನೇತೃತ್ವದಲ್ಲಿ ಸೇಂದಿ ಪಿಕೆಟಿಂಗ್ ನಡೆದಾಗ ನಾನೂ ಸಹ ಭಾಗವಹಿಸಿದ್ದೆ. ಕೆ. ರಂಗ ಅಯ್ಯಂಗಾರ್, ಗುಬ್ಬಿ ರಾಜಗೋಪಾಲಾಚಾರ್, ಹೇರೂರು ವೆಂಕಟರಾಮಯ್ಯನವರು, ರಾಮರಾಯರು

ಮುಂತಾದ ಲಾಯರುಗಳು, ಇವರಲ್ಲದೆ ಬಿ. ಸಿ. ನಂಜುಂಡಯ್ಯ, ಯು. ಎನ್. ವಿಠೋಬರಾವ್, ಮಂಡಿ ರೇವಣ್ಣ, ಟಿ. ಎಲ್. ಸಂಗಣ್ಣ ಮುಂತಾದವರೂ ಪಿಕೆಟಿಂಗ್‌ನಲ್ಲಿ ಇರುತ್ತಿದ್ದರು. ಆಗ ಇನ್ನೂ ಮೈಸೂರು ಕಾಂಗ್ರೆಸ್ ಸ್ಥಾಪಿತವಾಗಿರಲಿಲ್ಲ.

1937ರಲ್ಲಿ ಎಚ್. ಕೆ. ವೀರಣ್ಣಗೌಡರು ಮತ್ತು ತಾಯಮ್ಮ ವೀರಣ್ಣಗೌಡರು ಭಾರತ ಮತ್ತು ಮೈಸೂರು ಕಾಂಗ್ರೆಸ್ ಮೆಂಬರ್‌ಷಿಪ್ ಮಾಡಿಸಲಿಕ್ಕಾಗಿ ನಮ್ಮ ಜಿಲ್ಲೆಯಲ್ಲಿ ಪ್ರವಾಸ ಮಾಡಿದರು. ಆವಾಗ ನಾನೂ ಸಹ ಕಾಂಗ್ರೆಸ್ ಮೆಂಬರಾದೆ ಮತ್ತು ಖಾದಿ ಬಟ್ಟೆ ಧರಿಸಲು ಶುರುಮಾಡಿದೆ.



1938ರಲ್ಲಿ ಶಿವಪುರದಲ್ಲಿ ಮೈಸೂರು ಕಾಂಗ್ರೆಸ್ ಮೊದಲನೆ ಅಧಿವೇಶನ ಸೇರಿದಾಗ ಧ್ವಜಸತ್ಯಾಗ್ರಹ ನಡೆಯಿತು. ಆಗ ನಾನು ತುಮಕೂರು ಟೌನ್ ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದೆ. ಅಧ್ಯಕ್ಷರು ಗುಬ್ಬಿ ರಾಜಗೋಪಾಲಾಚಾರ್. ಇತರ ಸದಸ್ಯರು: ಬಿ. ಸಿ. ನಂಜುಂಡಯ್ಯ, ಯು. ಎನ್. ವಿಠೋಬರಾವ್, ಎಂ. ನೀಲಕಂಠರಾವ್, ಎ. ಎಸ್. ನಂದೀಶ್ (ಈಗ ಎಂ.ಎಲ್.ಸಿ.), ಟಿ. ಪಿ. ಕೃಷ್ಣಪ್ಪ, ಟಿ. ಎಲ್. ಸಂಗಣ್ಣ, ಮಂಡಿ ದೇವಣ್ಣ ಹೀಗೆ ಒಟ್ಟು 15 ಜನ ಇದ್ದೆವು. ಶಿವಪುರಕ್ಕೆ ಡೆಲಿಗೇಟಾಗಿ ಹೋಗಿದ್ದೆ. ಧ್ವಜಸತ್ಯಾಗ್ರಹದಲ್ಲಿ ಭಾಗಿಯಾಗಿ ಧ್ವಜದ ರಕ್ಷಕನಾಗಿದ್ದೆ. ಶಿವಪುರ ಕಾಂಗ್ರೆಸ್ ಅಧಿವೇಶನದಿಂದ ಬಂದನಂತರ ನಮ್ಮೂರಲ್ಲಿ ಸೇವಾದಳದ ಶಿಕ್ಷಕನಾಗಿ, ಹುಡುಗರಿಗೆ ಸೇವಾದಳದ ಶಿಕ್ಷಣ ಕೊಡುತ್ತಿದ್ದೆ ಮತ್ತು ಬೆಳಗ್ಗೆ ನಾಲ್ಕು ಘಂಟೆಯಿಂದ ಬಹಳ ಜನರೊಡಗೂಡಿ ಪ್ರಭಾತ್‌ಫೇರಿ ಮಾಡಿಸುತ್ತಿದ್ದೆ. ಅಲ್ಲದೆ ಗಾಂಧೀ ಜಯಂತಿಯಂದು ಧ್ವಜಾರೋಹಣ ಮಾಡುತ್ತಲಿದ್ದೆ. 1931ರಲ್ಲಿ ಡಾ|| ಹರ್ಡೀಕರ್ ಬಂದು ಇಲ್ಲಿ ಸೇವಾದಳದ ಆವಶ್ಯಕತೆ ಇದೆ ಎಂದು ಹೇಳಿ ಹೊರಟುಹೋದರು. ಮೈ|| ಕಾಂ|| ಸೇವಾದಲ ಕ್ಯಾಂಪನ್ನು ಮಂಡ್ಯ ಜಿಲ್ಲಾ ಉಮ್ಮಡಿಹಳ್ಳಿಯಲ್ಲಿ ಸೇರಿಸಿ ಶಿಕ್ಷಣ ಕೊಡುತ್ತಿದ್ದರು. ನನ್ನ ಜಿಲ್ಲೆಯಿಂದ ಟಿ. ಎಲ್. ಸಂಗಣ್ಣನವರನ್ನು ಕಳುಹಿಸಿದ್ದೆವು. ಅವರು ಬಂದಮೇಲೆ ನಮಗೆಲ್ಲ ಟ್ರೈನಿಂಗ್ ಕೊಟ್ಟರು.

1939ರಲ್ಲಿ ಸತ್ಯಾಗ್ರಹ ತುಮಕೂರಿನಲ್ಲಿ ಮೊದಲು ಶುರುವಾಯಿತು. ಸರ್ಕಾರದವರು 39ನೇ ಸೆಕ್ಷನ್ ಜಾರಿಮಾಡಿ, ಸಭೆ, ಮೆರವಣಿಗೆ ಇತ್ಯಾದಿಗಳನ್ನು ನಡೆಸಕೂಡದೆಂದು ಆಜ್ಞೆ ಹೊರಡಿಸಿದ್ದರು. ಆಗ ಮೈಸೂರು ಕಾಂಗ್ರೆಸ್ ತುಮಕೂರಿನಲ್ಲಿ 39ನೇ ಸೆಕ್ಷನ್‌ನನ್ನು ಉಲ್ಲಂಘಿಸಬೇಕೆಂದು ಅಲ್ಲಿಂದಲೇ ಸತ್ಯಾಗ್ರಹ ಶುರು ಮಾಡಬೇಕೆಂದು ತೀರ್ಮಾನಿಸಿ ಅಧ್ಯಕ್ಷರಾದ ಟಿ. ಸಿದ್ದಲಿಂಗಯ್ಯನವರನ್ನು ಡಿಕ್ಟೇಟರಾಗಿ

39ನೇ ಸೆಕ್ಷನ್ ಉಲ್ಲಂಘಿಸಬೇಕೆಂದು ತುಮಕೂರಿಗೆ ಕಳುಹಿಸಿದರು. ಅವರ ಜೊತೆ ಕೆ. ಹನುಮಂತಯ್ಯನವರೂ ಬಂದರು. ನಾನು ತುಮಕೂರು ಟೌನ್ ಕಾಂ|| ಕ|| ಕಾರ್ಯದರ್ಶಿಯಾಗಿದ್ದೆ. ನಾನು ಎತ್ತಿನ ಗಾಡಿ ಮೇಲೆ ಸಿಂಹಾಸನ (ನಾಟಕದ್ದು) ಕಟ್ಟಿ ಅವರಿಬ್ಬರನ್ನೂ ಕೂರಿಸಿ ಮೆರವಣಿಗೆ ಹೊರಡಿಸಿದಾಗ ಟಿ. ಸಿದ್ದಲಿಂಗಯ್ಯ ಮತ್ತು ಕೆ. ಹನುಮಂತಯ್ಯನವರನ್ನು ಬಂಧಿಸಿದರು. ಅವರ ಜೊತೆ ನನ್ನನ್ನೂ ಬಂಧಿಸಿ ಜೈಲಿಗೆ ಕಳುಹಿಸಿದರು. ಆಗ ನಾನು 3 ತಿಂಗಳ ಜೈಲುಶಿಕ್ಷೆ ಅನುಭವಿಸಿದೆ.

ಟಿ. ಸುಬ್ರಹ್ಮಣ್ಯಂ, ಎಂ. ವಿ. ರಾಮರಾವ್, ಮಾಲಿ ಮರಿಯಪ್ಪ, ಬಿ. ಸಿ. ನಂಜುಂಡಯ್ಯ ಮತ್ತು ಎನ್. ಹುಚ್ಚಮಾಸ್ತಿಗೌಡ, ಕೆ. ರಂಗಯ್ಯಂಗಾರ್ ನಮಗೆ ಮುಖಂಡರಾಗಿದ್ದರು. ನಾನು ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿ ಮತ್ತು ಟ್ರೆಜರರ್ ಆಗಿ ಕೆಲಸಮಾಡಿರುತ್ತೇನೆ.

1942ರಲ್ಲಿ 'ಕ್ವಿಟ್ ಇಂಡಿಯಾ' ಚಳವಳಿ ನಡೆದಾಗ ನಾನು ಸಭೆ, ಮೆರವಣಿಗೆ ಇತ್ಯಾದಿಗಳನ್ನು ಏರ್ಪಾಡು ಮಾಡುತ್ತಿದ್ದೆ. ಸರ್ಕಾರದವರು ನನ್ನನ್ನು ಭಾರತ ರಕ್ಷಣಾ ಕಾನೂನು ಮೇಲೆ ಅರೆಸ್ಟ್‌ಮಾಡಿ ಬೆಂಗಳೂರು ಸೆಂಟ್ರಲ್ ಜೈಲಿಗೆ ಕಳುಹಿಸಿದರು (22 9-1942). ಆಗ ನಾನು ಒಂದು ವರ್ಷ ಎರಡು ತಿಂಗಳು ಹದಿನೇಳು ದಿನಗಳ ಜೈಲುವಾಸವನ್ನು ಅನುಭವಿಸಿದೆ.

ಮೊದಲನೇ ದಿನ ತಾಳಕೆರೆ ಸುಬ್ರಹ್ಮಣ್ಯಂ, ಬಿ. ಸಿ. ನಂಜುಂಡಯ್ಯ, ಎಂ. ವಿ. ರಾಮರಾವ್ ಅರೆಸ್ಟಾದರು. ನಾನು ಹೊರಗಡೆ ಇದ್ದು ಸ್ವಲ್ಪ ದಿನ ಕೆಲಸಮಾಡಬೇಕಾಯಿತು. ಇವರು ಅರೆಸ್ಟಾದ ಬೆಳಗ್ಗೆ ಬೃಹತ್ ಮೆರವಣಿಗೆಯನ್ನು ವಿದ್ಯಾರ್ಥಿಗಳ ಮತ್ತು ಊರಿನ ಜನ ನಡೆಸಿದರು. ಬೀದಿಗಳಲ್ಲಿ ಪೋಲೀಸರ ವ್ಯಾನ್ ಬರದಂತೆ ಕಲ್ಲು ಗುಂಡುಗಳನ್ನು ಜನ ಎಳೆದಿದ್ದರು. ಆ ದಿನ ಕಾಲೇಜ್ ಮೈದಾನದಲ್ಲಿ ಭಾರೀ ಬಹಿರಂಗ ಸಭೆಯಲ್ಲಿ ಈಗಿನ ಸುಪ್ರಸಿದ್ಧ ಕಾದಂಬರಿಕಾರರಾದ ತ. ರಾ. ಸುಬ್ಬರಾವ್ ಅದ್ಭುತ ಭಾಷಣಮಾಡಿ ಸೆರೆಮನೆ ಸೇರಿದರು. ಅವರು ನಮ್ಮೂರಿನ ಕಾಲೇಜಿನಲ್ಲಿ ಓದುತ್ತಿದ್ದರು. ಅನಂತರ ನಾರಾಯಣರಾವ್ ಎಂಬ ವಿದ್ಯಾರ್ಥಿ ಭಾಷಣಕಾರನಾಗಿ ಒಂದೇ ವೇದಿಕೆ ಮೇಲೆ 8 ದಿನ ಭಾಷಣಮಾಡಿ, ಅನಂತರ ಪೋಲೀಸರಿಗೆ ಸಿಕ್ಕಿದ. ಆರ್. ಎಸ್. ಆರಾಧ್ಯರು ಪೋಲೀಸರ ಕಣ್ಣು ತಪ್ಪಿಸಿ ಇದ್ದು ಸಂಜೆ ಸಭೆಗಳನ್ನು ಏರ್ಪಾಡುಮಾಡಿಸುತ್ತಿದ್ದರು. ಕೆಲವು ದಿನಗಳವರೆಗೆ 15-20 ಜನರ ಗುಂಪುಕಟ್ಟಿ ಸುತ್ತಲ ರಸ್ತೆಗಳಲ್ಲಿ ತಂತಿ ಕತ್ತರಿಸುತ್ತಿದ್ದೆವು.

1947ರಲ್ಲಿ 'ಮೈಸೂರು ಚಲೋ' ಸತ್ಯಾಗ್ರಹದಲ್ಲಿ ಭಾಗಿಯಾಗಿ ಭಾರತ ರಕ್ಷಣಾ ಕಾನೂನಿನಂತೆ 2 ತಿಂಗಳು ಜೈಲುವಾಸವನ್ನು ಅನುಭವಿಸಿರುತ್ತೇನೆ. ಆಗ ನಾನು ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿ ಆಗಿದ್ದೆ.

ವೈ.ತು. 6

# ಟಿ. ಕೆ. ಗೋವಿಂದರಾಜು

ವಯಸ್ಸು : 52 ಉದ್ಯೋಗ : ಸರಕಾರಿ ನೌಕರಿ ವಿಳಾಸ : 473, ಪಾಂಡುರಂಗ ನಗರ, ತುಮಕೂರು

---



1942ರ ಆಗಸ್ಟ್‌ನಲ್ಲಿ ನಾನಿನ್ನೂ 17–18ರ ಪ್ರಾಯದವ. 'ಭಾರತ ಬಿಟ್ಟು ತೊಲಗಿ' ಆಂದೋಲನದ ಕಹಳೆಯ ಕೂಗು ಕೇಳಿದಾಕ್ಷಣ ಹುಟ್ಟಿದೂರಾದ ತುಮಕೂರಿನ ಪ್ರೌಢಶಾಲೆಯ ಎಸ್.ಎಸ್.ಎಲ್.ಸಿ. ತರಗತಿಯಲ್ಲಿನ ವಿದ್ಯಾಭ್ಯಾಸ ತ್ಯಜಿಸಿ, ಹಿರಿಯ ಸ್ವಾತಂತ್ರ್ಯಯೋಧರಾದ ನೀಲಕಂಠರಾಯರು ಮತ್ತು ಎಸ್. ವಿ. ಆಚಾರ್‌ರವರ ನೇತೃತ್ವದ ಪ್ರಭಾತ್‌ಫೇರಿಯಲ್ಲಿ ಹೊರಟೆ. ವಿದ್ಯಾರ್ಥಿ ಚಳವಳಿಯಲ್ಲಿ ಆಸಕ್ತಿ ವಹಿಸಿ ಶಾಲಾ ಬಹಿಷ್ಕಾರ, ಟಿಕೆಟ್‌ರಹಿತ ರೈಲ್ವೆ ಪ್ರಯಾಣ, ಸೇಂದಿ ಅಂಗಡಿಗಳ ಪಿಕೆಟಿಂಗ್ ಇತ್ಯಾದಿ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದೆ. ಹಿರಿಯ-ಧುರೀಣರಾದ ಆರ್. ಎಸ್. ಆರಾಧ್ಯರು ಅಜ್ಞಾತದಲ್ಲಿ ಒದಗಿಸುತ್ತಿದ್ದ ಕೈಯಚ್ಚಿನ ಪ್ರತಿಗಳ ಹಂಚುವಿಕೆ, ಪ್ರಚಾರದಲ್ಲಿ ಓರ್ವ ಸ್ಪರ್ಧೆಗಾರನಂತೆಯೇ ಉಳಿದೆ. ನನ್ನ ತಂದೆ ಜೀವನದಲ್ಲಿ ಜಿಗುಪ್ಸೆಗೊಂಡ ಒಬ್ಬ ಬಡ ವಿಧುರ ಕುಶಲಕರ್ಮಿಯಾಗಿದ್ದು, ನನ್ನ ಇಬ್ಬರು ತಮ್ಮಂದಿರು ಆರ್ಥಿಕ ದುರವಸ್ಥೆಯಿಂದಾಗಿ ಊರು ಬಿಟ್ಟು ದೂರದ ಪ್ರಾಂತ್ಯಗಳಲ್ಲಿ ಕೆಲಸವನ್ನರಸಿ ಹೋಗಿದ್ದರು. ನನ್ನ ವಿದ್ಯಾಭ್ಯಾಸದ ವೆಚ್ಚವನ್ನು ನನ್ನ ತಂದೆಯವರಿಗೆ ವಹಿಸಲಸಾಧ್ಯವಾಗಿದ್ದು, ಅನ್ನ ಬಟ್ಟೆ ಪುಸ್ತಕಗಳನ್ನು ತಿರುಪೆಯೆತ್ತಿ ಓದುತ್ತಿದ್ದ ವಿದ್ಯಾರ್ಥಿ ನಾನಾಗಿದ್ದನಾಗಿ ಆಗಿನ ರಾಜಕೀಯ ಆಂದೋಲನದಲ್ಲಿ ನಾನು ಸ್ವತಂತ್ರನಿದ್ದೆ. ತುಮಕೂರಿನಲ್ಲೇ ಸುಮಾರು 3 ತಿಂಗಳ ಕಾಲ ನನ್ನ ಗೆಳೆಯರ ನೆರಳಿನಲ್ಲಿ ರಾಷ್ಟ್ರೀಯ ಚಳವಳಿ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಜಿಲ್ಲಾದ್ಯಂತ, ಅದೇಕೆ, ಸಂಸ್ಥಾನಾದ್ಯಂತ ವಿದ್ಯಾರ್ಥಿ ಚಳವಳಿಗಳನ್ನು ಸಂಘಟಿಸುವುದರಲ್ಲೂ ಪ್ರಚಾರಕಾರ್ಯದಲ್ಲೂ ಹಳ್ಳಿಹಳ್ಳಿಗಳ ಪ್ರವಾಸವನ್ನು ವಿದ್ಯಾರ್ಥಿ ಮುಖಂಡರ ಆದೇಶಗಳಿಗನುಸಾರವಾಗಿ ಮುಂದುವರಿಸಿದೆ. ಹೀಗೆ ನಮ್ಮೆಲ್ಲರ ಪ್ರವಾಸದ ಹಾದಿಯಲ್ಲಿ ಪಟ್ಟ ಶ್ರಮ ಅದೆಷ್ಟೋ. ಹಳ್ಳಿಹಳ್ಳಿಗಳಲ್ಲಿ ಪ್ರಭಾತ್‌ಫೇರಿ, ಮೆರವಣಿಗೆ, ಭಾಷಣಗಳು, ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್, ವಿದೇಶೀ ವಸ್ತುಗಳ ದಹನ, ದಾರಿಯಲ್ಲಿ ಸಿಕ್ಕ ಟೆಲಿಗ್ರಾಫ್ ತಂತಿಗಳಿಗೆ ಕತ್ತರಿ ಪ್ರಯೋಗ

ಮುಂತಾದ ಕಾರ್ಯಗಳನ್ನು ಕೈಗೊಂಡು, ಪೋಲೀಸರ ಕಣ್ಣುತಪ್ಪಿಸಿ, ಒಂದೊಂದು ಊರು, ಹಳ್ಳಿಯಲ್ಲೂ ನನ್ನ ಹೆಸರನ್ನು ಬದಲಾಯಿಸುತ್ತ ದೇಶಾಭಿಮಾನಿ ಜನತೆಯ ಮಧ್ಯೆ ಬ್ರಿಟಿಷ್ ಸರ್ಕಾರದ ಬುಡಮೇಲು ಕಾರ್ಯದಲ್ಲಿ ಶ್ರದ್ಧಾಸಕ್ತಿ ವಹಿಸಿದೆ. ಸೆಪ್ಟಂಬರ್ 1942ರ ಅಂತ್ಯದ ವೇಳೆಗೆ ನಮ್ಮ ವಿದ್ಯಾರ್ಥಿ ತಂಡದ ತಾತ್ಕಾಲಿಕ ಕೇಂದ್ರ ಸ್ಥಾನ ಇದೇ ಜಿಲ್ಲೆಯ ತಿಪಟೂರಿನ ತಾಲ್ಲೂಕು ಕಾಂಗ್ರೆಸ್ ಕಚೇರಿಯಾಯಿತು. ಆ ಊರಿನ ನಿಷ್ಠಾವಂತ ಗಾಂಧೀವಾದಿ ಮರಿಯಪ್ಪನವರು ಯುವಕ ಮುಂದಾಳುಗಳಾದ ಮೂರ್ತಿ, ಕೇಶವಮೂರ್ತಿ ಹಾಗೂ ವಿದ್ಯಾರ್ಥಿಗೆಳೆಯರಾದ ಟಿ. ಕೆ. ರಾಮಚಂದ್ರಯ್ಯ, ಪಾರ್ಶ್ವನಾಥಯ್ಯ, ಸಿದ್ದಪ್ಪ, ದೇವರಹಳ್ಳಿಗೌಡ, ಶಾಂಬೇಗೌಡ, ಕಾಂತರಾಜ ಇವರ ಬೆಂಬಲದೊಡನೆ ರೈತಮುಖಂಡರಾದ ರಂಗೇಗೌಡ, ದೊಡ್ಡಯ್ಯನವರೇ ಮುಂತಾದವರ ಸಹಕಾರದೊಂದಿಗೆ ಅಜ್ಞಾತವಾಸದ ಬುಡಮೇಲು ಕೃತ್ಯಗಳು ತಿಪಟೂರು ತಾಲ್ಲೂಕಿನ ಆದ್ಯಂತ ಮುಂದುವರಿದವು. ಪೋಸ್ಟ್ ಆಫೀಸಿನ ಪೆಟ್ಟಿಗೆಗಳಿಗೆ ಬೆಂಕಿ ಹೊತ್ತಿಸುವುದು, ಸರ್ಕಾರಿ ಕಚೇರಿಗಳ ರೆಕಾರ್ಡುಗಳಿಗೆ ಬೆಂಕಿ ತಗಲಿಸುವುದು, ಟೆಲಿಗ್ರಾಫ್ ಟೆಲಿಫೋನ್ ತಂತಿಗಳನ್ನು ಕತ್ತರಿಸುವುದು, ರೈಲ್ವೆ ಸೇತುವೆಗಳಿಗೆ ಡೈನಾಮೈಟ್ ಇಡುವುದು, ರೈಲ್ವೆದಾರಿಯಲ್ಲಿ ಕೂಡಿಹಾಕಿದ್ದ ಮರದ ಹಲಗೆಗಳನ್ನು ಸುಡುವುದು ಇತ್ಯಾದಿ ಕೆಲಸಗಳು ನಡೆದವು. ನನ್ನ ಹೆಸರನ್ನು ತಿಪಟೂರು ಮೊಕ್ಕಾಂ ಪೂರೈಸುವವರೆಗೂ 'ಓಬಳಯ್ಯ' ಎಂದು ಇಟ್ಟುಕೊಂಡು ಪೋಲೀಸರ ಕಣ್ಣುತಪ್ಪಿಸಿ ಹುಟ್ಟೂರಿಗೆ ಧಾವಿಸಿಬಂದು ಮತ್ತೊಂದು ವಿದ್ಯಾರ್ಥಿ ತಂಡ ಸೇರಿದೆ. ಜೊತೆಯಲ್ಲಿದ್ದ ವಿದ್ಯಾರ್ಥಿಗಳನೇಕರ ಹೆಸರುಗಳನ್ನು ಮರೆತಿದ್ದರೂ ಗೆಳೆಯ ಶ್ರೀನಿವಾಸಯ್ಯಂಗಾರ್ ಬಹು ಹುರುಪಿನ ಸಂಗಾತಿ. ಅವರೆಲ್ಲಿಯೇ ಇರಲಿ ರಾಷ್ಟ್ರಧ್ವಜ ಅವರ ಸಂಗಡವಿರುತ್ತಿತ್ತು. ತುಮಕೂರಿನಲ್ಲಿ ಕಾಂಗ್ರೆಸ್ ಚಳವಳಿಯ ಬಿಸಿ ಏರಿತ್ತು. ಲಾಠೀ ಛಾರ್ಜು, ಬೆದರು ಗುಂಡು ಹಾಗೂ ಮೂರನೆಯ ಬಾರಿ ಗುಂಡೇಟಿನಿಂದ ಚಳವಳಿ ತಗ್ಗದೆ ಉದ್ರೇಕಗೊಂಡಿತ್ತು. ಹೆಸರಾಂತ ಸ್ಥಳೀಯ ಧುರೀಣರಾದ ಟಿ. ಸುಬ್ರಹ್ಮಣ್ಯಂ, ಎಂ. ವಿ. ರಾಮರಾವ್, ಹರ್ತಿ ಆದಿರಾಜಯ್ಯ, ಕೆ. ವಿ. ಸುಬ್ರಹ್ಮಣ್ಯಸ್ವಾಮಿ, ಕೆ. ರಂಗಯ್ಯಂಗಾರ್ ಮುಂತಾದವರ ಭಾಷಣಗಳು ನನ್ನ ಮೇಲೆ ಅತಿಹೆಚ್ಚಿನ ಪರಿಣಾಮ ಉಂಟುಮಾಡಿ, ಒಬ್ಬರಾದಮೇಲೊಬ್ಬರಂತೆ ಅವರ ಬಂಧನವಾದನಂತರ ನಮ್ಮ ತಂಡ ಪುನಃ ಬೇರೆ ತಾಲ್ಲೂಕುಗಳಿಗೆ ಹೊರಡುವಂತಾಯಿತು. ಕೊರಟಗೆರೆ, ಮಧುಗಿರಿ ತಾಲ್ಲೂಕುಗಳಲ್ಲಿ ನಮ್ಮ ತಂಡದ ಪ್ರಚಾರಕಾರ್ಯದನಂತರ ವಿದುರಾಶ್ವತ್ಥದ ಮಾರ್ಗವಾಗಿ ರಮಾಪುರವನ್ನು ತಲಪಿದೆವು. ನಮ್ಮ ಪ್ರಯಾಣವೆಲ್ಲ ಮುಕ್ಕಾಲುಭಾಗ ಕಾಲ್ನಡಿಗೆಯಲ್ಲೇ ಆಯಿತು. ದಾರಿಯುದ್ದಕ್ಕೂ ದೇಶಪ್ರೇಮಿ ಜನಸಮೂಹ ನಮಗೆ ಆಶ್ರಯವೀಯುತ್ತಿತ್ತು. ರಮಾಪುರದ ಮುಖ್ಯ ಗಂಡಸರೆಲ್ಲ ಆಗಲೇ ಚಳವಳಿಯಲ್ಲಿ ಕೈದುಮಾಡಲ್ಪಟ್ಟಿದ್ದರು. ರಾತ್ರಿ ಊರಿನಲ್ಲೆಲ್ಲ ಮೆರವಣಿಗೆ, ಸಭೆಗಳಾದವು. ಊರಿನವರೆಲ್ಲ ಸೇರಿ ದೇವಸ್ಥಾನದ

ವರಾಂಡ ಒಂದರಲ್ಲಿ ಔತಣವೇರ್ಪಡಿಸಿದ್ದರು. ನಮ್ಮ ಜೊತೆಯಲ್ಲಿ ಬಡಬಗ್ಗರಾದಿಯಾಗಿ ಊಟಮಾಡಿದನಂತರ ನಾವು ಬಿಡಾರವೊಂದರಲ್ಲಿ ನಿದ್ದೆಹೋದೆವು. ಬೆಳಗ್ಗೆ ಸುಮಾರು 7 ಘಂಟೆಯಿರಬಹುದು. ಮೊದಲು ನನಗೆ ಎಚ್ಚರವಾಯಿತು. ಎದ್ದು ಕಿಟಕಿಯಲ್ಲಿ ಹೊರನೋಡಿದಾಗ ಪೋಲೀಸಿನವರು ಕಣ್ಣಿಗೆಬಿದ್ದರು. ಬಸ್ಸೊಂದು ನಮಗಾಗಿ ಕಾದಿತ್ತು. ಮಲಗಿದ್ದ ಸ್ನೇಹಿತರಿಗೆಲ್ಲ ಸುದ್ದಿ ತಿಳಿಸಿದೆ. ಅವರೆಲ್ಲಾ ಪೋಲೀಸಿನವರನ್ನು ಇನ್ನೂ ಹೆಚ್ಚುವೇಳೆ ಕಾಯಿಸುವ ಉದ್ದೇಶದಿಂದ ಮಲಗಿದರು. ಸುಮಾರು 10 ಗಂಟೆಯವರೆಗೂ ಕಾಯಿಸಿ ನಾವೆಲ್ಲ ಹೊರಬಂದೆವು. ಪೋಲೀಸ್ ದಫೇದಾರರೊಬ್ಬರು ನಮಗೆದುರಾಗಿ ನಾವೆಲ್ಲರೂ ಬಸ್ಸಿನಲ್ಲಿ ಕುಳಿತುಕೊಳ್ಳಬೇಕೆಂದು ಹೇಳಿದರು. ನಾವೆಲ್ಲ ಮುಖ ತೊಳೆದ ನಂತರ ಪೋಲೀಸಿನವರಿಂದ ಒತ್ತಾಯಪೂರ್ವಕವಾಗಿ ತಿಂಡಿ ಕಾಫಿ ಪಡೆದು ಬಸ್ಸಿನಲ್ಲಿ ಕುಳಿತೆವು. ನಮ್ಮನ್ನು ಗೌರಿಬಿದನೂರಿಗೆ ಕರೆದುಕೊಂಡು ಹೋಗಿ ಪೋಲೀಸ್ ಠಾಣೆಯಲ್ಲಿಟ್ಟರು. ನಾವು ವಿದುರಾಶ್ವತ್ಥಕ್ಕೆ ಹೋಗಬೇಕೆಂದು ಹೇಳಲು ಅದಕ್ಕವರು ಒಪ್ಪದೆ ಸಾಯಂಕಾಲದವರೆಗೂ ನಮ್ಮನ್ನು ಪೋಲೀಸ್ ಠಾಣೆಯಲ್ಲಿ ಇಟ್ಟು ಬಸ್ಸೊಂದರಲ್ಲಿ ಮಧುಗಿರಿಗೆ ತಂದು ಬಿಟ್ಟುಹೋದರು. ನಮ್ಮ ತಂಡ ವಾಪಸ್ ತುಮಕೂರಿಗೆ ಬಂದು ಎರಡುಮೂರು ದಿನಗಳನಂತರ ಪುನಃ ತಿಪಟೂರನ್ನು ಸೇರಿತು. ಅಲ್ಲಿ ಪುನಃ ನಮ್ಮ ಕಾರಸ್ಥಾನ ಪ್ರಾರಂಭವಾಯಿತು. ನವೆಂಬರ್ ತಿಂಗಳ ಮೊದಲನೆಯ ವಾರದಲ್ಲಿ ನಮ್ಮ ಚಟುವಟಿಕೆಗಳು ಬಿರುಸಿನಿಂದ ಸಾಗಿದವು. ಅದೊಂದು ದಿನ ತಿಪಟೂರು ತಾ|| ಕರಡಿ ರೈಲ್ವೆ ನಿಲ್ದಾಣವನ್ನು ಸುಡುವ ಪ್ರಯತ್ನದಲ್ಲಿ ಗೆಳೆಯರಾದ ಕೇಶವಮೂರ್ತಿ ಮತ್ತು ಶಂಜೇಗೌಡರು ಪೋಲೀಸರ ಕೈಗೆ ಸಿಕ್ಕಿಹಾಕಿಕೊಂಡರು. ನಾನು ಪೋಲೀಸರ ಕಣ್ಣು ತಪ್ಪಿಸಿ ಆಗತಾನೇ ರೈಲ್ವೆ ನಿಲ್ದಾಣಕ್ಕೆ ಬಂದ ರೈಲಿನ ಡಬ್ಬಿಯೊಂದರ ಒಳಹೊಕ್ಕೆ. ಗೆಳೆಯರಾದ ಶಂಜೇಗೌಡ ಮತ್ತು ಕೇಶವಮೂರ್ತಿಯವರು ನಾನು ನೋಡುತ್ತಿದ್ದಂತೆಯೇ ಪೋಲೀಸಿನವರ ಒದೆತ, ದೊಣ್ಣೆ ಬಡಿತಗಳಿಂದ ನಜ್ಜುಗುಜ್ಜಾದರು. ಅದೃಷ್ಟವಶಾತ್ ನನ್ನ ರೈಲ್ವೆ ಟಿಕೆಟ್ ನನ್ನ ಬಳಿಯೇ ಇದ್ದು ತಿಪಟೂರು ತಲುಪಿ ಕಾಂಗ್ರೆಸ್ ಕಚೇರಿ ಒಳಹೊಕ್ಕೆ. ಸಿಕ್ಕಿದ ಗೆಳೆಯರಿಬ್ಬರನ್ನೂ ಆ ಅವಸ್ಥೆಯಲ್ಲಿಯೇ ರೈಲ್ವೆ ಪೋಲೀಸಿನವರು ಅರಸೀಕೆರೆ ಪೋಲೀಸ್ ಠಾಣೆಗೆ ಒಯ್ದುಬಿಟ್ಟರು. ನಡೆದ ವಿಚಾರವೆಲ್ಲವನ್ನೂ ಕಾಂಗ್ರೆಸ್ ಕಚೇರಿಯಲ್ಲಿದ್ದ ಗೆಳೆಯರಾದ ಸಿದ್ದಪ್ಪ, ರಾಮಚಂದ್ರಯ್ಯ, ಪಾರ್ಶ್ವನಾಥ ಮತ್ತು ದೇವರಹಳ್ಳಿ ಗೌಡರಿಗೆ ತಿಳಿಸಲು ಅವರು "ಈಗಾಗಲೇ ರಾತ್ರಿ 12 ಗಂಟೆಯಾಗಿದೆ, ಬೆಳಗ್ಗೆ ಮೊದಲ ಬಸ್ಸಿಗೆ ನೀನು ತುಮಕೂರಿಗೆ ಹೋಗಿಬಿಡು" ಎಂದು ಹೇಳಿದರು. ಬೆಳಗ್ಗೆ ಏಳುವ ಹೊತ್ತಿಗಾಗಲೇ ಪೋಲೀಸಿನವರು ಅರೆಸ್ಟ್ ವಾರಂಟ್ ತಂದು ಕಾದಿದ್ದರು. ನಾವೆಲ್ಲ ಲಾಕಪ್ ಸೇರಿದೆವು. ನಮ್ಮ ಮೇಲೆ, ನಿಷಿದ್ಧ ಆಯುಧಗಳನ್ನು ಹೊಂದಿದ್ದರೆಂದೂ, ಬುಡಮೇಲುಕೃತ್ಯಗಳಲ್ಲಿ ತೊಡಗಿದ್ದರೆಂದೂ ಕೋರ್ಟಿನಲ್ಲಿ ದಾವಾ ಹೂಡಿದರು. ನನ್ನ ಹೆಸರು ಓಬಳಯ್ಯ ಎಂದೇ ಸೇರಿಸಿದರು. ಗೆಳೆಯರಾದ ಶಂಜೇಗೌಡರು ಮತ್ತು

ಕೇಶವಮೂರ್ತಿಗಳ ವಿಚಾರಣೆ ಅರಸೀಕೆರೆಯಲ್ಲಿ ಪೋಲೀಸಿನವರಿಂದ ನಡೆದಿತ್ತು. ನನ್ನ ತಪಾಸಣೆಗಾಗಿ ಅವರಿಗೆ ಹಿಂಸೆ ಕಿರುಕುಳಗಳು ಪೋಲೀಸಿನವರಿಂದ ನಡೆದಿದೆಯೆಂಬ ಸಮಾಚಾರ ತಿಳಿದುಬಂತು. ಕರಡಿ ಸ್ಟೇಶನ್‌ನಲ್ಲಿ ಸಿಕ್ಕಿಬಿದ್ದ ನನ್ನ ಗೆಳೆಯರು ನನ್ನ ಹೆಸರು 'ಓಬಳಯ್ಯ' ಎಂದೇ ಹೇಳಿದ್ದರು. ತಿಪಟೂರು ಕಾಂಗ್ರೆಸ್ ಆಫೀಸಿನಲ್ಲಿಯ ನನ್ನ ಬಂಧನದ ಕೇಸು ತಿಪಟೂರಿನ ಕೋರ್ಟಿನಲ್ಲಿ ನಡೆದು ವಜಾ ಆಗಿಹೋಯಿತು. ಆದರೂ ಬಿಡುಗಡೆ ಆಗಲಿಲ್ಲ. ನನ್ನ ಮೇಲೆ ಸ್ಥಾನಬದ್ಧತೆಯ ವಾರಂಟ್ ಜಾರಿಯಾಗಿ ನಾನು 'ಓಬಳಯ್ಯ ಉರ್ಫ್ ಟಿ. ಕೆ. ಗೋವಿಂದರಾಜು' ಎಂಬ ಹೆಸರಿನಿಂದ ತುಮಕೂರು ಜಿಲ್ಲಾ ಲಾಕಪ್ ಸೇರಬೇಕಾಯಿತು (ತಾ|| 2-12-1942). ಅಲ್ಲಿದ್ದಾಗ ನನ್ನ ಮೇಲೆ ಕರಡಿ ರೈಲ್ವೆ ಫಿಲ್ದಾಣ ಸುಡುವ ಯತ್ನದ ಖಟ್ಲೆ ದಾಖಲಾಗಿ ಪುನಃ ತಿಪಟೂರಿನಲ್ಲಿ ಕೇಸು ನಡೆಸಲ್ಪಟ್ಟು ನನಗೆ ಒಂದು ವರ್ಷದ ಕಠಿಣ ಶಿಕ್ಷೆ ವಿಧಿಸಲ್ಪಟ್ಟಾಗ ನನ್ನನ್ನು ಪೋಲಿಸರು ಬೆಂಗಳೂರು ಸೆಂಟ್ರಲ್ ಜೈಲಿಗೆ ಕರೆದುಕೊಂಡುಹೋಗಿ ತಾ|| 19-6-43ರಲ್ಲಿ ದಾಖಲ್ ಮಾಡಿದರು. ಅಲ್ಲಿ ಬಂಧನದಲ್ಲಿದ್ದ ಸ್ವಾತಂತ್ರ್ಯಯೋಧ ವಕೀಲ ಕೆ. ವಿ. ಸುಬ್ರಹ್ಮಣ್ಯಸ್ವಾಮಿಯವರು ನನ್ನ ಶಿಕ್ಷಾವಧಿ ಹೆಚ್ಚಿನದೆಂದು ಅಪೀಲು ಹೂಡಿದರು. ನನ್ನ ಶಿಕ್ಷೆ 3 ತಿಂಗಳಿಗಿಳಿಯಿತು. ಅಪೀಲು ಪೂರೈಸುವುದರೊಳಗಾಗಿ ನನ್ನ ಶಿಕ್ಷಾವಧಿ ಮೂರು ತಿಂಗಳು ಮುಗಿದಿತ್ತು. ಆದರೂ ನನ್ನನ್ನು ಅಲ್ಲಿಯೇ ಸ್ಥಾನಬದ್ಧತೆಯಲ್ಲಿಟ್ಟರು. ಜೈಲಿನಲ್ಲಿನ ಅಧಿಕಾರಶಾಹಿದರ್ಪದ ವಿರುದ್ಧವೂ ಅನ್ಯಾಯ, ಅನಾಚಾರಗಳ ವಿರುದ್ಧವೂ ನಾನೂ ಕಾರ್ಮಿಕ ಮುಖಂಡರಾದ ಪ್ರಭುದೇವ್, ಈಗಿನ ಕಮ್ಯುನಿಸ್ಟ್ ಪಾರ್ಟಿ ಮುಖಂಡರುಗಳಾದ ಎನ್. ಎಲ್. ಉಪಾಧ್ಯಾಯ, ಎಂ. ಎಸ್. ರಾಮರಾವ್ ಹಾಗೂ ಕುಮಾರ ವೆಂಕಣ್ಣ, ಪಕ್ಕಾ ಗಾಂಧೀವಾದಿ ಶ್ರೀನಿವಾಸರಾವ್ ಇವರ ಜೊತೆಲ ದಿಂದ ಹೋರಾಡಬೇಕಾದ ಪ್ರಸಂಗಗಳೆಷ್ಟೋ ಆಗಿಹೋದವು. ಕೊನೆಗೆ ನನ್ನ ಬಿಡುಗಡೆ ಸುಮಾರು ಒಂದು ವರ್ಷದನಂತರ ತಾ|| 17-12-1943ರಲ್ಲಿ ಆಯಿತು. ಈ ಬಿಡುಗಡೆ ಒಂದು ವಿಚಿತ್ರ ಪ್ರಸಂಗ. ಏಕೆಂದರೆ ಮೈಸೂರು ಪ್ರದೇಶ ಕಾಂಗ್ರೆಸ್ ಅಧ್ಯಕ್ಷರನ್ನೊಳಗೊಂಡು ಎಲ್ಲ ರಾಜಕೀಯ ಮುಖಂಡರನ್ನೂ ರಾಜಕೀಯ ಕೈದಿಗಳನ್ನೂ ವಿದ್ಯಾರ್ಥಿಗಳನ್ನೂ ಬಿಡುಗಡೆ ಮಾಡಿದರೂ ನನ್ನನ್ನು ಬಿಡುಗಡೆ ಮಾಡಲಿಲ್ಲ. ಕಾರಣ ಇಷ್ಟೆ: ಸರ್ಕಾರದವರು ನನ್ನ ಮೇಲಿನ ಸ್ಥಾನಬದ್ಧತೆ ವಾರೆಂಟ್‌ನ್ನು ಸರಿಯಾಗಿ ಪರಿಶೀಲಿಸದೆ ಉಪೇಕ್ಷಿಸಿದ್ದರು. ಜೈಲಿನಿಂದ ಹೊರಗಡೆ ನನ್ನ ಬಿಡುಗಡೆಯ ಬಗ್ಗೆ ಮುಖಂಡರ ಒತ್ತಡ ಅನಿವಾರ್ಯವಾಗಿ ಕೊನೆಗೆ ಪತ್ರಿಕೆಗಳಲ್ಲಿನ ಸಂಪಾದಕೀಯ ಲೇಖನಗಳಿಂದ ನನ್ನ ಬಿಡುಗಡೆಯು ತಡವಾಗಿಯಾದರೂ ತಾ|| 17-12-1943ರಲ್ಲಿ ಆಯಿತು. ಬಂಧನದಲ್ಲಿದ್ದಾಗ ನಾನು ಅನುಭವಿಸಿದ ಯಾತನೆ ಬಹಳವಿದ್ದರೂ ನನ್ನ ಬಿಡುಗಡೆಯನಂತರ ದೇಶಸೇವೆಗೆ, ಜನತಾಸೇವೆಗೆ ಹೊಸ ಸ್ಫೂರ್ತಿ ಹುಟ್ಟಿತ್ತು. ಸ್ವಾರ್ಥರಾಜಕಾರಣಿಗಳ ಬಗ್ಗೆ ಕಠೋರತೆ ಉದ್ಭವಿಸಿತು. ನನ್ನ ಧ್ಯೇಯವೇ ಬದಲಾಗಿ ಸಮತಾವಾದ, ಸಮಾಜವಾದಗಳು

ನನ್ನ ಹೃದಯವನ್ನಾಕರ್ಷಿಸಿದ್ದುವು. ಜೈಲಿನಿಂದ ಹೊರಬಂದಾಗ ನನ್ನ ವಿದ್ಯಾಭ್ಯಾಸ ಒಂದು ವರ್ಷ ಹಾಳಾಗಿಹೋದದ್ದು ಜ್ಞಾಪಕ ಬಂತು. ವಿದ್ಯಾಭ್ಯಾಸ ಮುಂದುವರಿಸಿ ವಿದ್ಯಾರ್ಥಿಸಂಘಟನೆ ಚಳವಳಿಯಲ್ಲಿ ಭಾಗವಹಿಸುತ್ತ ಬಂದೆ. ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ 2 ವರ್ಷದ ವ್ಯಾಸಂಗ ಮಾಡುತ್ತಿದ್ದಾಗ ನನ್ನ ಕುಟುಂಬದ ದಾರಿದ್ರ್ಯ ದಿಂದಾಗಿ ವಿದ್ಯಾಭ್ಯಾಸ ನಿಲ್ಲಿಸಿ ವ್ಯವಸಾಯ ಇಲಾಖೆಯಲ್ಲಿ ತಾ|| 14-7-1947ರಲ್ಲಿ 2ನೇ ದರ್ಜೆ ಗುಮಾಸ್ತನಾಗಿ ಸೇರಿದೆ. 1947ರ ಚಳವಳಿಯಲ್ಲಿ ಸರ್ಕಾರದ ನೌಕರ ನಾಗಿದ್ದಾಗ್ಯೂ ಆಗಿನ ಸರ್ಕಾರದ ವಿರುದ್ಧವಾದ ಚಳವಳಿಯಲ್ಲಿ ಪರೋಕ್ಷವಾಗಿ ಕೆಲಸ ಮಾಡಿ, 1947ರ ಆಗಸ್ಟ್‌ನಲ್ಲಿ ಸ್ವಾತಂತ್ರ್ಯೋತ್ಸವವನ್ನು ನೋಡಿ ನನ್ನ ಸೇವೆ ಸಾರ್ಥಕ ಎಂದುಕೊಂಡೆ. ಈಗ ನಾನು ಅದೇ ವ್ಯವಸಾಯ ಇಲಾಖೆಯಲ್ಲಿ ತುಮಕೂರಿನ ಡೆಪ್ಯುಟಿ ಡೈರೆಕ್ಟರವರ ಕಛೇರಿಯಲ್ಲಿ ಆಫೀಸ್ ಸೂಪರಿಂಟೆಂಡೆಂಟ್ ಕೆಲಸ ಮಾಡು ತ್ತಿದ್ದೇನೆ. ಕರ್ನಾಟಕ ರಾಜ್ಯ ಸರ್ಕಾರೀ ನೌಕರರ ತುಮಕೂರು ಜಿಲ್ಲಾ ಶಾಖೆಯ ಪ್ರಧಾನ ಕಾರ್ಯದರ್ಶಿಯಾಗಿ ನೌಕರಬಾಂಧವರ ಏಳಿಗೆಗೂ ದುಡಿಯುತ್ತಿದ್ದೇನೆ.

ವ್ಯ. ತು. 7

## ಜಿ. ಸಿ. ಭಾಗೀರಥಮ್ಮ

ಜನನ : 1922 ಉದ್ಯೋಗ : ಗೃಹಿಣಿ ವಿಳಾಸ : ಸರಪಣಿ ಮಠದ ಬಳಿ, ತುಮಕೂರು

---



ನನ್ನ ಮದುವೆ 1941ರ ನವೆಂಬರ್‌ನಲ್ಲಿ ಬೆಂಗಳೂರಿನ ಜಿ. ಆರ್. ಚಂಗಲಾರಾಧ್ಯ ಅವರೊಂದಿಗೆ ಆಯಿತು. ರಾಷ್ಟ್ರಪ್ರೇಮಿಗಳು, ಸತ್ಯಾಗ್ರಹಿಗಳು, ಬಿನ್ನಿ ಮಿಲ್ಲಿನಲ್ಲಿ ಕೆಲಸ ಮಾಡುತ್ತಿದ್ದವರೂ ಆದ ಅವರು ನನ್ನ ಮದುವೆಗೆ ಮುಂಚೆಯೇ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಎರಡು ಬಾರಿ ಸೆರೆಮನೆವಾಸ ಅನುಭವಿಸಿದವರಾಗಿದ್ದರು. ಮದುವೆಗೆ ಮುಂಚೆಯೇ ಸ್ವಾತಂತ್ರ್ಯಕ್ಕಾಗಿ ತಮ್ಮ ಜೊತೆಯಲ್ಲಿ ತ್ಯಾಗಮಾಡಲು ಸಿದ್ಧಳಾಗಿರಬೇಕೆಂದು ನನ್ನಿಂದ ವಚನವನ್ನು ತೆಗೆದುಕೊಂಡರು.

ಜೀವನದಲ್ಲಿ ಹೊಸ ಪುಟವನ್ನು ಪ್ರಾರಂಭಿಸಿ ಎಂಟು ತಿಂಗಳಾಗಿರಬಹುದು. 'ಕ್ವಿಟ್ ಇಂಡಿಯಾ' ಚಳವಳಿ ನಡೆಸಲು ಕರೆ ಬಂದಿತು. ಜನಸೇವೆಗೇ ಜೀವನ

ಮುಡುಪಾಗಿಟ್ಟಂಥ ಯಜಮಾನರು ಈ ಸಂದರ್ಭದಲ್ಲಿ ನಾನು ಕೊಟ್ಟ ವಚನವನ್ನು ಎಚ್ಚರಿಸಿದರು. ಚಳವಳಿಯಲ್ಲಿ ಭಾಗವಹಿಸಲು ಧೈರ್ಯ ತುಂಬಿದರು. ಆಗಾಗ್ಗೆ ಗಾಂಧೀಜಿಯವರು ಧ್ಯೇಯ, ದೇಶದ ಪರಿಸ್ಥಿತಿ, ಖಾದಿ ಇವುಗಳ ಬಗ್ಗೆ ವಿಚಾರಗಳನ್ನು ತಿಳಿಸುತ್ತಿದ್ದರು. ಅವರು ಕೈಕೊಳ್ಳುವ ಕಾರ್ಯದಲ್ಲಿ ನಾನೂ ಭಾಗಿಯಾಗಿ ತ್ಯಾಗ ಮಾಡಲು, ಶ್ರಮಿಸಲು ಸಿದ್ಧಳಾದೆನು. ಕೂಲಿಗಾರರ ಮುಖಂಡರಾಗಿದ್ದ ಹಾಗೂ ಕೂಲಿಗಾರರಿಂದ ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರಾಗಿ ಆರಿಸಿ ಬಂದಿದ್ದ ಯಜಮಾನರು ತಾ|| 5-9-1942ರಂದು ಬಿನ್ನಿ ಮಿಲ್ ಆವರಣದಲ್ಲಿ ಸಭೆಯನ್ನು ಕರೆದು ಕಾನೂನು ಭಂಗ ಚಳವಳಿಯನ್ನು ಮಾಡಲು ಸಿದ್ಧರಾದರು. ಅಂದಿನ ಸಭೆಯಲ್ಲಿ ನನ್ನ ಭಾಷಣ ವನ್ನು ಏರ್ಪಡಿಸಿದ್ದರು. ಸಂಜೆ 4 ಗಂಟೆಯೊಳಗಾಗಿ ಸಭೆ ನಡೆಯಬೇಕಾಗಿದ್ದ ಸ್ಥಳದ ಸುತ್ತಲು ಪೋಲಿಸಿನವರು ಸುತ್ತುವರಿದು ಸಭೆ ನಡೆಸಲು ಅವಕಾಶ ಕೊಡದ ರೀತಿಯಲ್ಲಿ ಏರ್ಪಾಡುಮಾಡಿದ್ದರು. ಭಾಷಣ ಮಾಡಲು ಅಲ್ಲಿಗೆ ಹೋದ ನನಗೆ ಬಂದೂಕು ಧಾರಿಗಳಾದ ಪೋಲೀಸಿನವರನ್ನು ನೋಡಿ ಎದೆ ಝಲ್ಲೆಂದಿತು. ಆದರೆ "ಜೈ ಭಾರತ್ ಮಾತೆ" ಎಂಬ ಜಯಕಾರದೊಂದಿಗೆ ನಾನು ಮತ್ತು ಯಜಮಾನರು ಒಳನುಗ್ಗಿದೆವು. ನಮ್ಮ ಹಿಂದೆ ಇದ್ದ ಸುಮಾರು 10 ಸಾವಿರ ಕೂಲಿಗಾರರು ನಮ್ಮನ್ನು ಹಿಂಬಾಲಿಸಿದರು. ಅನಂತರ ಅಲ್ಲಿ ಸಭೆಸೇರಿ ಕೂಲಿಗಾರರ- ಸೋದರರಿಗೆ ಉತ್ಸಾಹ ಉತ್ತೇಜನ ಮೂಡುವಂತೆ ಭಾಷಣಗಳನ್ನು ಮಾಡಲಾಯಿತು. ಮತ್ತೊಮ್ಮೆ ಚಿಕ್ಕಲಾಲ್‌ಬಾಗ್‌ನಲ್ಲಿ ಏರ್ಪಡಿಸಿದ್ದ ಬಹಿರಂಗ ಸಭೆಯಲ್ಲಿ ಮಾತನಾಡಿದೆನು. ಎರಡುಮೂರು ಕಡೆ ಬಹಿರಂಗ ಸಭೆಯಲ್ಲಿ ಮಾತನಾಡಿದಮೇಲೆ ಆಗಿನ ಸರ್ಕಾರದ ವರ್ತನೆಯು ಅರಿವಾದಾಗ ನಾನು ಒಬ್ಬ ಸತ್ಯಾಗ್ರಹಿಯಾಗಲು ಪೂರ್ಣ ನಿರ್ಧಾರ ಕೈಗೊಂಡು 'ದುಡಿ ಇಲ್ಲವೆ ಮಡಿ' ಎಂಬ ಮಹಾತ್ಮರ ವಾಕ್ಯದಲ್ಲಿ ನಂಬಿಕೆಯನ್ನಿಟ್ಟವಳಾದೆ.

ತಾರೀಕು 6 9-1942ರಂದು ಬೆಂಗಳೂರಿನ ಎಲ್ಲಾ ಕೂಲಿಗಾರರೂ ಸೇರಿ ಬೃಹತ್ ಮೆರವಣಿಗೆಯನ್ನು ನಡೆಸಬೇಕೆಂದು, ಚಟ್ಟ ಕಟ್ಟಿ ಅದರಲ್ಲಿ ಬ್ರಿಟಿಷ್ ಗೊಂಬೆ ಯನ್ನು ಇಟ್ಟು ಮೆರವಣಿಗೆಯಲ್ಲಿ ಅದನ್ನು ಕೊಂಡೊಯ್ದು ಸುಡಬೇಕೆಂದು ಏರ್ಪಾಡು ನಡೆದಿತ್ತು. ಆದರಂತೆ ಮೆರವಣಿಗೆಯ ಮುಂದೆ ಚಟ್ಟವನ್ನು ನಾನು ಮತ್ತು ಯಜಮಾನರು ಹೊತ್ತುಕೊಂಡು ಬೆಳಗ್ಗೆ 8 ಗಂಟೆಗೆ ಆಗಿನ ಕಾಂಗ್ರೆಸ್ ಆಫೀಸಿದ್ದ ಅರಳೇಪೇಟೆಯಿಂದ ಹೊರಟು ಮೆಜೆಸ್ಟಿಕ್‌ಗೆ 11 ಗಂಟೆಗೆ ಬರುವ ವೇಳೆಗೆ ಶಸ್ತ್ರಸಜ್ಜಿತ ಪೋಲೀಸ್ ದಳದವರು ಅಧಿಕ ಸಂಖ್ಯೆಯಲ್ಲಿ ನಮ್ಮನ್ನು ತಡೆದರು. "ಸಭೆಯನ್ನು ಚದುರಿಸಿ ಮನೆಗೆ ಹೋಗಿರಿ; ಇಲ್ಲವೆ ಇಲ್ಲಿಂದ ಒಂದು ಹೆಜ್ಜೆ ಮುಂದಿಟ್ಟರೂ ಗೋಲೀ ಬಾರ್ ಮಾಡಬೇಕಾಗುತ್ತದೆ" ಎಂದು ಬೆದರಿಸಿದರು. ಆದರೆ ಈ ಬೆದರಿಕೆಗೆ ನಾವು ಜಗ್ಗಲಿಲ್ಲ. ಗುಂಡಿಗೆ ಎದುರಾಗಿ ನಿಂತಿರುವ ನಮಗೆ ಜೀವದ ಆಸೆ ಇರಲಿಲ್ಲ. 'ದುಡಿ ಇಲ್ಲವೇ ಮಡಿ' ಎಂಬ ಮಂತ್ರ ಒಂದೇ ನಮ್ಮ ಗುರಿಯಾಗಿದ್ದ ನಾವು ಮೆರವಣಿಗೆಯನ್ನು

ಅಲ್ಲೇ ನಿಲ್ಲಿಸಿ ಸಂಜೆ 5 ಗಂಟೆಯಾದರೂ ಕದಲದೆ ಹಾಗೆಯೇ ನಿಂತುಕೊಂಡೆವು. ವೀರಗೀತೆಗಳನ್ನೂ ರಾಷ್ಟ್ರಪ್ರೇಮಗೀತೆಗಳನ್ನೂ ಹಾಡುತ್ತಾ ವೀಕ್ಷಿಸುತ್ತಿದ್ದ ಜನತೆಯ ಮನಃಪರಿವರ್ತನೆಯಾಗುವಂತೆ ಮಾಡಿದೆವು. ಬಿಸಿಲಿನಲ್ಲಿ ಒಂದೇ ಸಮ 6 ಗಂಟೆಗಳ ಕಾಲ ನಿಂತಿದ್ದ ನನ್ನ ಕೂಲಿಗಾರ-ಸೋದರರಿಗೆ ಜನತೆ ತಂಪಾದ ಪಾನೀಯಗಳನ್ನು ನೀಡುವುದರ ಮೂಲಕ ಉಪಚರಿಸಿದರು. ಸಂಜೆ 5 ಗಂಟೆಗೆ ಅದೇ ಸ್ಥಳದಲ್ಲಿ ಬಹಿರಂಗ ಸಭೆಸೇರಿ ಬ್ರಿಟಿಷ್ ಗೊಂಬೆಯನ್ನು ಚಟ್ಟಸಮೇತ ಬೆಂಕಿಗೆ ಆಹುತಿ ಮಾಡಿ ಅಂದಿನ ನಮ್ಮ ಕಾರ್ಯವನ್ನು ಶಾಂತ ರೀತಿಯಿಂದ ನಡೆಸಿದೆವು. ಇವರೆಲ್ಲರ ಜೊತೆಯಲ್ಲಿ ನಾನು ಕಳೆದ ದಿನಗಳನ್ನು ನನ್ನ ಜನ್ಮದಲ್ಲಿ ಎಂದೂ ಮರೆಯಲಾರೆ.

ತಾರೀಖು 9-9-1942ರಂದು ನನ್ನನ್ನೂ ನನ್ನ ಪತಿಯವರನ್ನೂ ವಾರಂಟ್ ತೆಗೆದುಕೊಂಡು ಬಂದು ಬಂಧಿಸಿದರು. ಅದೇ ದಿನ ನನ್ನ ತವರುಮನೆಯವರು ಗೌರಿ ಹಬ್ಬಕ್ಕೆ ಮದುವೆಯಾದ ಮೊದಲನೆ ವರ್ಷದ ಬಾಗಿನ ಕೊಡಿಸುವುದಕ್ಕಾಗಿ ಕರೆಯಲು ಬಂದಿದ್ದರು. ಇತ್ತ ಸಂಬಂಧದ ತವರುಮನೆ, ಅತ್ತ ದೇಶದ ಸೆರೆಮನೆ! ಎಲ್ಲಿಗೆ ಹೋಗಬೇಕೆಂದು ಮನಸ್ಸು ಚಂಚಲವಾಯಿತು. ಕೊನೆಗೆ ಮನಸ್ಸು ಸಂತೋಷಪಡುವ ತವರುಮನೆಗಿಂತ ದೇಶದ ಸ್ವಾತಂತ್ರ್ಯಪಡೆಯುವ ಸೆರೆಮನೆ ಲೇಸೆಂದು ತೀರ್ಮಾನಿಸಿ ಬಂಧಿಸಲು ಬಂದಿದ್ದ ಪೋಲೀಸಿನವರನ್ನು ಹಿಂಬಾಲಿಸಿ ಹೋದೆನು. ಸಂಜೆಯವರೆಗೂ ಪೋಲೀಸ್ ಠಾಣೆಯಲ್ಲಿ ಕೂರಿಸಿಕೊಂಡು ಸಂಜೆ ಜೈಲಿಗೆ ಕರೆದುಕೊಂಡು ಹೋದರು. ಜೈಲಿನಲ್ಲಿ ನಮ್ಮಿಬ್ಬರನ್ನೂ ಒಂದೇ ಕಡೆ ಇಡುವರೆಂಬ ಭಾವನೆ ನನಗಿತ್ತು. ಆದರೆ ಒಳಗೆ ಹೋದಮೇಲೆ ಅವರನ್ನು ಬೇರೆ, ನನ್ನನ್ನು ಬೇರೆ ಕರೆದುಕೊಂಡು ಹೋದರು. ಒಳಗೆ ಹೋಗಿ ಕಂಬಿಗಳ ಮಧ್ಯದಲ್ಲಿ ನಿಂತು ನನ್ನನ್ನು ನೋಡುತ್ತಿದ್ದ ಕೈದಿಗಳನ್ನು ನೋಡಿ ಮತ್ತು ಅಲ್ಲಿನ ಮೇಲಧಿಕಾರಿಣಿ ನನಗಾಗಿ ಕೊಟ್ಟ ಒಂದು ಮಣ್ಣಿನ ಮಗೆ, ಮುಚ್ಚಳ ಮತ್ತು ಎರಡು ಕರಿಕಂಬಳಿ ಇವುಗಳನ್ನು ನೋಡಿ ನನ್ನ ಮನಸ್ಸಿಗೆ ತುಂಬಾ ವ್ಯಥೆಯಾಯಿತು. ನಿರಾಶಳಾಗಿ ಕಣ್ಣಿನಲ್ಲಿ ನೀರು ಹರಿಯಿತು. ಆದರೆ ಆಗ ಸ್ಥಾನಬದ್ಧರಾಗಿದ್ದ ಕಮಲಾದೇವಿ ಚಟ್ಟೋಪಾಧ್ಯಾಯ ನನ್ನ ಪರಿಸ್ಥಿತಿಯನ್ನು ನೋಡಿ ತುಂಬ ಆದರದಿಂದ ಮಾತನಾಡಿಸಿ ಧೈರ್ಯ ಹೇಳಿ ತಮ್ಮ ಕೋಣೆಯಲ್ಲಿಯೇ ನನ್ನನ್ನು ಇಟ್ಟುಕೊಂಡು ತಮಗೆ ಕೊಡುತ್ತಿದ್ದ ಊಟತಿಂಡಿಗಳನ್ನು ನನಗೂ ಕೊಟ್ಟು ಸಮಾಧಾನ ಮಾಡಿದರು. ಸೆರೆಮನೆ ಸೇರಿ ಒಂದು ವಾರ ಕಳೆದರೂ ನನ್ನ ಮನಸ್ಸಿನ ಅಸಮಾಧಾನ, ಜಿಗುಪ್ಸೆ ಹೋಗಲಿಲ್ಲ.

ಎಂಟು ದಿನಗಳಾದಮೇಲೆ ಕೋರ್ಟಿಗೆ ಹಾಜರುಪಡಿಸಲು ನಮ್ಮನ್ನು ಕರೆದುಕೊಂಡು ಹೋದರು. ಕೋರ್ಟಿನ ಆವರಣದಲ್ಲಿ ನನ್ನ ತಂದೆತಾಯಿಗಳೊಂದಿಗೆ ಅನೇಕ ಬಂಧುಗಳು ಮತ್ತು ಕೂಲಿಗಾರರು ಇರುವುದನ್ನು ನೋಡಿ ನನ್ನ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಸ್ಮರಿಸಿಕೊಂಡರೆ ಈಗಲೂ ಕಣ್ಣಲ್ಲಿ ನೀರು ಬರುತ್ತದೆ. ತಂದೆತಾಯಿ,

ಬಂಧುಗಳ ಕಂಬನಿಯ ಮಧ್ಯದಲ್ಲಿ ನನ್ನ ಪರಿಸ್ಥಿತಿ ಹೇಗಿತ್ತೆಂದು ವರ್ಣಿಸಲಸಾಧ್ಯ. ತವರುಮನೆಯಲ್ಲಿ ಸುಖವಾಗಿ ಬೆಳೆದ ಕೇವಲ 20 ವರ್ಷದ ನನಗೆ ಸೆರೆಮನೆಯಲ್ಲಿ ಏನೇನು ಕಷ್ಟಗಳು ಬರುವುದೋ ಎಂದು ಮರುಗಿದರು. ಜ್ಞಾನಿಯಾದ ನಮ್ಮ ತಾಯಿ ಧೈರ್ಯ ಹೇಳಿದರು: "ದೇಶಕ್ಕಾಗಿ ತ್ಯಾಗಮಾಡಿ ಸುಖವಾಗಿ ಬಾಳು, ಮಗಳೇ" ಎಂದು ತುಂಬುಹೃದಯದಿಂದ ಕಂಬನಿಯ ಕಣ್ಣುಗಳಿಂದ ಹರಸಿದರು. ತಂದೆಯವರು ತಲೆಯನ್ನು ನೇವರಿಸುತ್ತ, "ನೀನು ಭಾಗ್ಯಶಾಲಿ. ಇದು ನಿನ್ನ ಸುಕೃತದ ಫಲ" ಎಂದು ಧೈರ್ಯ ಹೇಳಿದರು. ಪತಿಯವರು ನನ್ನ ಹಿಂದಿತ್ತ ವಚನದ ಕಡೆ ಮತ್ತೊಮ್ಮೆ ಎಚ್ಚರಿಸಿದರು. ಕೂಲಿಗಾರ-ಸೋದರರು ಜಯಕಾರ ಹಾಕುತ್ತ ಧೈರ್ಯ ನೀಡಿದರು. ಇವರೆಲ್ಲರ ಆಶೀರ್ವಾದಪಡೆದು ಒಂದು ವರ್ಷ ಏಳೂವರೆ ತಿಂಗಳ ಕಠಿಣ ಸಜವನ್ನು ಅನುಭವಿಸಲು ಸೆರೆಮನೆಗೆ ಹಿಂತಿರುಗಿದೆನು. ಎಂಟು ದಿನಗಳೊಳಗಾಗಿ ಮೊದಲ ದಿನ ಕಂಡು ಹೆದರಿದ ಕೈದಿಗಳು ನನ್ನ ಸ್ನೇಹಿತರಾದರು. ನನ್ನನ್ನು ತುಂಬ ವಿಶ್ವಾಸ, ಆದರದಿಂದ ನೋಡಿ ಕೊಳ್ಳಲು ಆರಂಭಿಸಿದರು. ಒಂದು ತಿಂಗಳ ಅನಂತರ ಶಿವಮೊಗ್ಗದಲ್ಲಿ ಬಂಧಿತರಾದ ರತ್ನಮ್ಮ ಮಾಧವರಾವ್, ಭದ್ರಾವತಿ ಕಾರ್ಖಾನೆಯ ಕೂಲಿಗಾರರಾದ ಕೃಷ್ಣಪ್ಪನವರ ಪತ್ನಿ ಕಮಲ ಮತ್ತು ಅವರ ಎರಡು ವರ್ಷದ ಮಗು ಮತ್ತು ಅವರ ತಾಯಿ ಲಕ್ಷ್ಮಮ್ಮ, ಹಾಲಪ್ಪನವರ ಪತ್ನಿ ಗೌರಮ್ಮ ಮತ್ತು ಭದ್ರಾವತಿಯ ತಂಜಾವೂರು ಹೋಟೇಲ್ ಮಾಲೀಕರಾದ ರಾಘವೇಂದ್ರರಾವ್ ಅವರ ಪತ್ನಿ ಲಕ್ಷ್ಮೀದೇವಿ ಇವರೆಲ್ಲರನ್ನು ಸ್ಥಾನ ಬದ್ಧತೆಯ ಕಾನೂನಿನ ಪ್ರಕಾರ ಬಂಧಿಸಿಕೊಂಡು ಬಂದರು. ಇವರೆಲ್ಲರ ಆಗಮನ ವನ್ನು ನೋಡಿ ನನ್ನ ಧೈರ್ಯ ಹೆಚ್ಚಿತು. ನಾವೆಲ್ಲರೂ ಒಂದೇ ಮನೆಯವರಂತೆ ಕೂಡಿಕೊಂಡೆವು. ಹೊರಗಡೆ ಚಳವಳಿಯು ಬಹಳ ಬಿರುಸಿನಿಂದ ಸಾಗಿತ್ತಾದ್ದರಿಂದ ಹೆಣ್ಣುಮಕ್ಕಳ ಪಾತ್ರ ಜಾಸ್ತಿಯಾಗಿದ್ದುದರಿಂದ ನಿತ್ಯ ಸಂಜೆ ಒಂದು ವ್ಯಾನ್ ಹೆಣ್ಣು ಮಕ್ಕಳನ್ನು ಬಂಧಿಸಿ ತರುವುದು, ಬೆಳಗಾದಮೇಲೆ ಅವರ ಮನೆಯವರು ಬಿಡಿಸಿಕೊಂಡು ಹೋಗುವುದು—ಹೀಗೆ ನಡೆದಿತ್ತು. ಈ ವಾತಾವರಣದಲ್ಲಿ ನಾನು ಸೆರೆಮನೆಯಲ್ಲಿರುವೆನೆಂಬ ಭಾವನೆಯೇ ಮರೆತುಹೋದಂತಿತ್ತು. ನನಗೆ ಕಠಿಣ ಸಜ ವಿಧಿಸಿದ್ದರಿಂದ ನನ್ನನ್ನು ಕೈದಿಗಳ ಜೊತೆಯಲ್ಲಿ ಲಾಕಪ್‌ನಲ್ಲಿ ಹಾಕಬೇಕೆಂದು, ಅವರಿಗೆ ಕೊಡುವಂತೆ ಕೂಳದ ಅನ್ನವನ್ನು ಕೊಡಬೇಕೆಂದು ಮತ್ತು ಜೈಲ್ ಬಟ್ಟೆಗಳನ್ನು ಧರಿಸಬೇಕೆಂದು ಒತ್ತಾಯ ಮಾಡಿದರು. ಆದರೆ ಅದನ್ನು ಪ್ರತಿಭಟಿಸಲು 8 ದಿನ ಉಪವಾಸ ಸತ್ಯಾಗ್ರಹವನ್ನು ಕೈಕೊಂಡು ಲಾಕಪ್‌ನಲ್ಲಿ ಹಾಕದಂತೆ, ನನಗೆ ಪ್ರತ್ಯೇಕ ಊಟ ಬರುವಂತೆ ಏರ್ಪಾಡು ಮಾಡಲಾಯಿತು.

ಎರಡು ತಿಂಗಳು ಕಳೆದನಂತರ ಕಂಟೋನ್‌ಮೆಂಟಿನ ರಾಮಕೃಷ್ಣಪ್ಪನವರ ಪತ್ನಿ ಪಾಪಮ್ಮ, ಮುನಿಸ್ವಾಮಿ ಗೌಂಡರ್ ಪತ್ನಿ ದೈವಯಾಣಮ್ಮ, ಚಂಗಲ್ವರಾಯ ಮೊದಲಿಯಾರರ ಪತ್ನಿ ನಾಗಭೂಷಣಮ್ಮ ಮತ್ತು ನರಸಪ್ಪನವರ ಪತ್ನಿ ಲಕ್ಷ್ಮೀದೇವಮ್ಮ

ಇವರುಗಳನ್ನು ಬಂಧಿಸಿಕೊಂಡು ಬಂದರು. ಇವರುಗಳು 6 ತಿಂಗಳ ಕಾಲ ಸಾದಾ ಸಜ ಅನುಭವಿಸಿ ಹೊರಗೆ ಹೋಗಿ ಪುನಃ ಬಂಧಿತರಾಗಿ ಒಳಗೆ ಬಂದು ಇನ್ನು 6 ತಿಂಗಳು ಬಂಧಿತರಾಗಿದ್ದರು. ಇತರರಿಗೆ ಓದುಬರಹ ಕಲಿಕೆ, ನೂಲುವುದು, ನಾಟಕಗಳನ್ನು ಜೈಲಿನಲ್ಲಿ ನಡೆಸುತ್ತಿದ್ದೆವು. ಜೈಲಿನ ವಿಕಟ ವಾತಾವರಣದಲ್ಲೂ ಆದಷ್ಟು ಸಂತಸದಿಂದ, ತೃಪ್ತಿಯಿಂದ ಇದ್ದೆವು.

ಸೆರೆಮನೆಯಲ್ಲಿ ಇದ್ದಾಗ ಮರೆಯಲಾಗದ ಒಂದು ಸನ್ನಿವೇಶ. 1942ರಲ್ಲಿ ನಡೆದ ಈಸೂರು ಪ್ರಕರಣ. ಇದರಲ್ಲಿ ಬಂಧಿತರಾಗಿ ಬಂದಿದ್ದ ಸೋದರಿಯರಾದ ಈಸೂರು ಸಾಹುಕಾರರ ಪತ್ನಿ ಹಾಲಮ್ಮ, ಪಾರ್ವತಮ್ಮ ಮತ್ತು ಸಿದ್ದಮ್ಮ ಇವರಿಗೆ 20 ವರ್ಷ ಕಠಿಣ ಶಿಕ್ಷೆಯನ್ನು ವಿಧಿಸಿದ್ದರು. ಇದೇ ಈಸೂರು ಪ್ರಕರಣದಲ್ಲಿ ಐದು ಜನರನ್ನು ಗಲ್ಲಿಗೇರಿಸಲಾಯಿತು. ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ ಈಸೂರು ವೀರರನ್ನು ತ್ಯಾಗಮಾಡಿದ ಆ ವೀರರ ಧರ್ಮಪತ್ನಿ ಮತ್ತು ಮಾತೆಯರನ್ನು ನಾವೆಂದಿಗೂ ಮರೆಯಲಾಗುವುದಿಲ್ಲ. ಅವರನ್ನು ಗಲ್ಲಿಗೇರಿಸುವ ಹಿಂದಿನ ದಿನ ಅವರ ಪತ್ನಿ ಮತ್ತು ಮಾತೆಯರು ಸೆರೆಮನೆಯಲ್ಲೇ ಅವರನ್ನು ಕರಿಕಂಬಳಿಯ ಮೇಲೆ ಕೂರಿಸಿ ದೀಪ ಹಚ್ಚಿಟ್ಟು ಹಣೆಗೆ ಅಕ್ಷತೆ ಇಟ್ಟು ಆರತಿ ಬೆಳಗಿ, "ದೇಶಕ್ಕಾಗಿ ಪ್ರಾಣ ನೀಡಿದ ವೀರಭಾರತೀಯನಾಗಿ ಸ್ವರ್ಗವನ್ನು ಸೇರು" ಎಂದು ತುಂಬು ಹೃದಯದಿಂದ, ಕಣ್ಣೀರಿನಿಂದ ಆಶೀರ್ವದಿಸಿದ ದೃಶ್ಯವನ್ನು ಜೀವನದಲ್ಲಿ ಎಂದೆಂದಿಗೂ ಮರೆಯಲಾರೆ! ಬೆಳಗಿನ ಜಾವ ಅವರನ್ನು ಗಲ್ಲಿಗೇರಿಸುತ್ತಿದ್ದಾಗ ಹೊರಗಡೆ ಪತ್ನಿ ಮತ್ತು ಮಾತೆಯರು ಜೈಕಾರಗಳನ್ನು ಹೇಳಿಕೊಂಡು ಪಾರ್ಥಿವ ಶರೀರಕ್ಕಾಗಿ ಕಾಯುತ್ತಿದ್ದರು. ಇಂಥ ಒಂದು ದುರ್ಘಟನೆಯ ಸನ್ನಿವೇಶವನ್ನು ಸೆರೆಮನೆಯಲ್ಲಿದ್ದಾಗ ನೋಡಬೇಕಾಯಿತು. ಆ ಮೂವರು ಈಸೂರು ಮಹಿಳೆಯರಂತೂ ನನ್ನನ್ನು ಅವರ ಮಗಳಂತೆ ಅಕ್ಕರೆಯಿಂದ ಸಲಹಿದರು. ಅವರ ಜೀವನ ಕಥೆಯನ್ನು ಕೇಳಿ ಮನನೊಂದಿತು.

14-2-1944ರಂದು ನನಗೆ ಬಿಡುಗಡೆಯಾಯಿತು. ಒಂದೂವರೆ ವರ್ಷಕಾಲ ನನ್ನ ಅಕ್ಕತಂಗಿಯರಂತಿದ್ದವರನ್ನು ಬಿಟ್ಟುಬರಲು ನನಗೂ ತುಂಬ ದುಃಖವಾಯಿತು. ಅವರಂತೂ ಎಂಟು ದಿನಗಳ ಹಿಂದಿನಿಂದಲೂ ನನ್ನನ್ನು ಎಡೆಬಿಡದೆ ತಮ್ಮ ದುಃಖವನ್ನು ತೋಡಿಕೊಳ್ಳುತ್ತಿದ್ದರು. ನನ್ನದಂತೂ ಜೀವನದಲ್ಲಿ ಮರೆಯಲಾಗದ ಜೈಲಿನ ಅನುಭವ. ಬಿಡುಗಡೆಯ ದಿನ ನನ್ನ ಆಗಮನಕ್ಕಾಗಿ ಜೈಲಿನ ಹೊರಗಡೆ ನನ್ನ ಅನೇಕ ಬಂಧುಮಿತ್ರರು ಕಾದು ನಿಂತಿದ್ದರು. ಅವರೆಲ್ಲರನ್ನೂ ನೋಡಿ ನನಗೆ ಹರ್ಷದ ಕಣ್ಣೀರು ಸುರಿಯಿತು. ಆಗ ನನ್ನ ತೂಕ ಮಾತ್ರ 10 ಪೌಂಡು ಹೆಚ್ಚಾಗಿತ್ತು.

ಕೆಲಸವನ್ನು ಕಳೆದುಕೊಂಡು ಜೈಲಿನಿಂದ ಹೊರಬಂದ ಪತಿಯೊಂದಿಗೆ ಜೀವನದ ಮಾರ್ಗವನ್ನು ಹುಡುಕಬೇಕಾಯಿತು. ತಂದೆಯವರು ಧೈರ್ಯ ಹೇಳಿ ಆಶ್ರಯ ನೀಡಿ ನನ್ನನ್ನು ಜೀವನದ ಮಾರ್ಗಕ್ಕೆ ಹಚ್ಚಿದರು.

ಹೊಸ ಜೀವನವನ್ನು ಪ್ರಾರಂಭಿಸಿ ಇನ್ನೂ ಮೂರು ವರ್ಷಗಳಾಗಲಿಲ್ಲ, ಮತ್ತೆ ಬಿರುಗಾಳಿ! 1947ರ ಚಳವಳಿ; ಮತ್ತೆ ಪತಿಯವರ ಬಂಧನ. ನಾನು, ಟಿ. ಸುಬ್ರಹ್ಮಣ್ಯಂರ ಪತ್ನಿ ಸುಶೀಲಮ್ಮ ಇನ್ನು ಕೆಲವರು ತುಮಕೂರಲ್ಲಿ ಕೋರ್ಟ್ ಪಿಕೆಟಿಂಗ್‌ನಲ್ಲಿ ಭಾಗ ವಹಿಸಿದೆವು. 5 ತಿಂಗಳ ಕೂಸನ್ನು ಬಿಟ್ಟು ಚಳವಳಿಯಲ್ಲಿ ಭಾಗವಹಿಸುತ್ತಿದ್ದೆನು. ಆದರೆ ಆಗ ನನ್ನನ್ನು ಬಂಧಿಸಲಿಲ್ಲ. ಅಲ್ಲಿಗೆ ನಮ್ಮ ಭಾರತ ಸ್ವಾತಂತ್ರ್ಯವನ್ನು ಪಡೆದು ನಾವು ಸಹಿಸಿದ ಮತ್ತು ಅನುಭವಿಸಿದ ಎಲ್ಲ ಕಷ್ಟಗಳ ಪರಿಹಾರವಾಯಿತೆಂದು ಹಿಗ್ಗಿದೆವು.

ಅಂದಿನಿಂದ ಕಾಂಗ್ರೆಸ್ ಸಂಸ್ಥೆಯಲ್ಲಿ ಸಕ್ರಿಯ ಸದಸ್ಯಳಾಗಿ, ಮಹಿಳಾ ವಿಭಾಗದ ಸಂಚಾಲಕಳಾಗಿ ಸಮಾಜಸೇವೆ ಕಾರ್ಯದಲ್ಲಿ ನಿರತಳಾದೆ. ಗೃಹಕೃತ್ಯದಲ್ಲಿ 7 ಮಕ್ಕಳ ತಾಯಿಯಾಗಿ ಸಮಾಜ ಸೇವೆಯನ್ನು ಮಾಡಿಕೊಂಡು ಬರುತ್ತಿದ್ದೇನೆ. 1960ರಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಲಿಗೆ ತುಮಕೂರು ತಾಲ್ಲೂಕಿನಲ್ಲಿ ಹೆಚ್ಚಿನ ಮತ ಗಳಿಸಿ ಚುನಾಯಿತಳಾದೆ. 1962ರಲ್ಲಿ ವಿಧಾನಸಭೆಗೆ ಚುನಾಯಿತಳಾದೆ. ಭಾರತೀ ಸ್ತ್ರೀ ಸಮಾಜ, ಮಕ್ಕಳ ಪುರೋಭಿವೃದ್ಧಿ ಸಮಿತಿ, ಬಾಪೂಜಿ ವಿದ್ಯಾಸಂಸ್ಥೆಯ ಸ್ಥಾಪಕ-ಅಧ್ಯಕ್ಷಿಣಿಯಾಗಿ ಸೇವೆಸಲ್ಲಿಸುತ್ತಿದ್ದೇನೆ.

ವ್ಯ.ತು. 8

## ಜಿ. ಆರ್. ಚಂಗಲಾರಾಧ್ಯ

ಜನನ : 1906 ಉದ್ಯೋಗ : ಹೊಟೇಲು ಮಾಲಿಕ ವಿಳಾಸ : ಸರಪಣಿ ಮಠದ ಬಳಿ, ತುಮಕೂರು

---



1928ರಲ್ಲಿ ಬಿನ್ನಿ ಮಿಲ್ಲಿನಲ್ಲಿ ದಿನಕ್ಕೆ 9 ಆಣೆ 3 ಪೈಸೆ ಕೂಲಿಯಾಗಿ ಸೇರಿ ಕೆಲಸ ಮಾಡುತ್ತಿದ್ದು 1930ನೇ ಇಸವಿಯಲ್ಲಿ ಸರ್ದಾರ್ ವೆಂಕಟರಾಮಯ್ಯನವರಿಂದ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಿತನಾಗಿ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಹುಬ್ಬಳ್ಳಿ ಸೇವಾದಳದ ಕ್ಯಾಂಪಿನಲ್ಲಿ ಇದ್ದೆ. ಅನಂತರ ಡಾ|| ಕಬ್ಬೂರ, ಮುದವೀಡು ಕೃಷ್ಣರಾವ, ಹೊಸಮನಿ ಸಿದ್ದಪ್ಪ, ಕರಮರಕರ, ಬುರ್ಲಿ ಬಿಂದುಮಾಧವ ಮತ್ತು ಗುದ್ಲೆಪ್ಪ ಹಳ್ಳಿಕೇರಿಯವರ ಜೊತೆಯಲ್ಲಿ ಧಾರವಾಡ ದಲ್ಲಿ ಕೆಲಸಮಾಡಿದೆ. ಅಲ್ಲಿಂದ ಧರಾಸನಾ ಉಪ್ಪಿನ ವಖಾರಕ್ಕೆ ನುಗ್ಗಲು ಬೊಂಬಾಯಿಗೆ ಹೊರಟು ವಿಲೇ ಪಾರ್ಲೆ ಕ್ಯಾಂಪಿನಲ್ಲಿ ಇದ್ದೆ. ಅಲ್ಲಿಂದ ಸೊಲ್ಲಾಪುರ ಮಾರ್ಷಲ್ ಲಾ ಮುರಿಯಲು ಕಳುಹಿಸಿದರು. ಅನಂತರ ಅಲ್ಲಿಂದ ಕಾರವಾರ ಜಿಲ್ಲೆಯಲ್ಲಿ ಕೆಲಸಮಾಡಲು

ಬನವಾಸಿಯಲ್ಲಿ ಅರೆಸ್ಟ್ ಆಯಿತು. ಒಂದು ತಿಂಗಳು ಶಿಕ್ಷೆ ಆಗಿ, ಅದು ಪೂರೈಸಿದ ಮೇಲೆ (ಫಾರಿನರ್ ಆಕ್ಟ್ ಪ್ರಕಾರ) ನನ್ನನ್ನು ಬೆಂಗಳೂರಿಗೆ ತಂದುಬಿಟ್ಟರು. ಮತ್ತೆ 1932ರಲ್ಲಿ ಕರನಿರಾಕರಣೆ ಚಳವಳಿಯಲ್ಲಿ ಶಂಕರರಾವ್ ಗುಲವಾಡಿಯವರ ಜೊತೆಯಲ್ಲಿದ್ದು ಸಿದ್ಧಾಪುರದ ತಾಲ್ಲೂಕಿನಲ್ಲಿ ಅರೆಸ್ಟಾಗಿ ಒಂದು ವರುಷ ಒಂದು ತಿಂಗಳು ಕಠಿಣ ಶಿಕ್ಷೆ ಅನುಭವಿಸಿದಮೇಲೆ ಮತ್ತೆ ಬೆಂಗಳೂರಿಗೆ ತಂದುಬಿಟ್ಟರು.

1934ರಲ್ಲಿ ಮತ್ತೆ ಬಿನ್ನಿ ಮಿಲ್ಲಿನಲ್ಲಿ ಕೂಲಿಯಾಗಿ ಸೇರಿ ನೇಯ್ಗೆ ವಿಭಾಗದಲ್ಲಿ ಮೇಲಿಂದಮೇಲೆ ಬಡ್ತಿ ಪಡೆದು ಮೇಸ್ತ್ರಿಯಾಗಿದ್ದಾಗ 1941ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ಕೂಲಿಕಾರರ ಪ್ರತಿನಿಧಿಯಾಗಿ ಕೂಲಿಕಾರರ ಕ್ಷೇತ್ರದಿಂದ ಚುನಾಯಿತನಾದೆ. ಅದೇ ಕಾಲದಲ್ಲಿ ಮೈಸೂರು ದೇಶದ ಕೂಲಿಕಾರರ ರಚನಾಕಮಿಟಿಯಲ್ಲಿ ಸದಸ್ಯನಾಗಿದ್ದೆ. 1942ರ ಚಳವಳಿಯಲ್ಲಿ ಭಾಗವಹಿಸಿದ್ದಕ್ಕೆ ನನಗೂ ನನ್ನ ಕುಟುಂಬವಾದ ಜಿ. ಸಿ. ಭಾಗೀರಥಮ್ಮನಿಗೂ ನಾಲ್ಕು ಬೇರೆಬೇರೆ ಅವಧಿ ಶಿಕ್ಷೆಯ ಜೊತೆಗೆ ದಂಡ, ದಂಡ ತೆರಲು ತಪ್ಪಿದರೆ ಶಿಕ್ಷೆ— ಹೀಗೆ ಒಬ್ಬೊಬ್ಬರಿಗೂ ಒಟ್ಟು ಮೂವತ್ತೊಂದು ತಿಂಗಳ ಶಿಕ್ಷೆ ಕೊಟ್ಟರು. ಈ ಶಿಕ್ಷೆ ಒಟ್ಟಿಗೆ ಅನುಭವಿಸುವಂತೆ ಆಜ್ಞೆ ಆಗಲು ಒಟ್ಟು ಒಂದು ವರ್ಷ ಏಳು ತಿಂಗಳು ಹದಿನೈದು ದಿವಸ ಶಿಕ್ಷೆ ಆಯಿತು. ಮತ್ತೆ 1946ರಲ್ಲಿ ನನ್ನ ಕುಟುಂಬ ಜಿ. ಸಿ. ಭಾಗೀರಥಮ್ಮ ಬಿನ್ನಿ ಕೂಲಿಕಾರರ ಸಂಘದ ಅಧ್ಯಕ್ಷೆಯಾಗಿದ್ದರು. 1947ರ ಚಳವಳಿಯಲ್ಲಿ ಸರ್ಕಾರದವರು ನನ್ನ ಹೊಟೇಲ್ ಉದ್ಯಮವನ್ನು ಮುಚ್ಚಿ ನನ್ನನ್ನು 22 ದಿನ ಸ್ಥಾನಬದ್ಧನನ್ನಾಗಿಟ್ಟರು.

## ಮೈ.ತು. 9 | ಪಾಂಡುರಂಗ ಹುಚ್ಚಪ್ಪ ಶಿರಹಟ್ಟಿ

ಜನನ : 1931 ಉದ್ಯೋಗ : ? ವಿಳಾಸ : ಶಿಗ್ಗಿ, ಜಿ॥ ಧಾರವಾಡ



1947ರಲ್ಲಿ 'ಮೈಸೂರು ಚಲೋ' ಚಳವಳಿಯಲ್ಲಿ ಭಾಗವಹಿಸಲು ನಾನು ಹಾಗೂ ನಮ್ಮ ಊರ ಪಾಂಡುರಂಗ ಕಡಗಂಟಿ ಕೂಡಿ ಕೆ.ಪಿ.ಸಿ.ಸಿ.ಆಫೀಸ್ ಹುಬ್ಬಳ್ಳಿಗೆ ಹೋದೆವು. ಅಲ್ಲಿಂದ ನಮ್ಮನ್ನು ರಾಣೆಬೆನ್ನೂರ ಶಿಬಿರಕ್ಕೆ ತಿಕೀಟು ತೆಗೆಸಿ ಕಳುಹಿಸಿದರು. ಅಲ್ಲಿನ ಶಿಬಿರದವರು ಚಳಗೇರಿಗೆ ತಿಕೀಟು ತೆಗೆಸಿ ಕಳುಹಿಸಿದರು. ಅಲ್ಲಿಂದ ಕಾಲ್ನಡೆಯಲ್ಲಿ ಹರಿಹರವನ್ನು ಸೇರಿದೆವು. ಆ ಊರ ಕಾಂಗ್ರೆಸ್ ಕಮಿಟಿಯವರು ಊಟೋಪಚಾರಮಾಡಿ ದಾವಣಗೆರೆಗೆ ಕಳುಹಿಸಿ

ಕೊಟ್ಟರು. ಅಲ್ಲಿ ಇದ್ದ ರಾಣೆಬೆನ್ನೂರ ಸತ್ಯಾಗ್ರಹಿಗಳ ಗುಂಪನ್ನು ಸೇರಿಕೊಂಡೆವು. ಅವರ ಜೊತೆ ಚಿತ್ರದುರ್ಗಕ್ಕೆ ಹೋಗಿ ಅಲ್ಲಿ ಮೂರು ದಿನ ಸತ್ಯಾಗ್ರಹ ಮಾಡಿದೆವು. ಬಂಧನ ಆಗದಿರಲು ತರೀಕೆರೆಗೆ ಹೋದೆವು. ಅಲ್ಲಿ ಒಂದು ದಿನ ಸತ್ಯಾಗ್ರಹಮಾಡಿದೆವು. ಅಲ್ಲಿಂದ ನಮ್ಮನ್ನು ಉರುಕೇರಿಗೆ ಕಳುಹಿಸಿದರು. ಅಲ್ಲಿ ನಮ್ಮ ಜೊತೆ ತುಮಕೂರವರು ಇಬ್ಬರು ಕೂಡಿಕೊಂಡರು. 31–9–1947ರಂದು ಕಾಲ್ನಡೆಯಿಂದ ತುಮಕೂರಿಗೆ ಹೋದೆವು. ಮರುದಿನ ಬೆಳಗ್ಗೆ ತುಮಕೂರಲ್ಲಿ ಹಾಡು ಹೇಳುತ್ತ ಪ್ರಭಾತ್‌ಫೇರಿ ಮಾಡಿದೆವು. ಆಗ ಪೋಲೀಸು ಜೀಪು ನಮ್ಮನ್ನು ತರುಬಿ ಅರೆಸ್ಟ್‌ಮಾಡಿದವು. ಪೋಲೀಸ್ ವಾಹನ ತಂದು ನಮ್ಮನ್ನು ಆಫೀಸಿಗೆ ಒಯ್ದು ಸಾಲಾಗಿ ನಿಲ್ಲಿಸಿ ಹೊಡೆದರು. ಹನ್ನೊಂದು ಗಂಟೆಗೆ ಕೋರ್ಟಿಗೆ ಒಯ್ಯಲು ನಮಗೆ ತಲಾ ಮೂರು ತಿಂಗಳು ಕಠಿಣ ಶಿಕ್ಷೆ 100 ರೂ. ದಂಡ ಹಾಕಿದರು. ಸಂಜೆ ಜೈಲಿಗೆ ಒಯ್ದರು. ಮರುದಿನ ಜೈಲಿನಲ್ಲೇ ಗಾಂಧೀ ಜಯಂತಿ ಮಾಡಿದೆವು. ಅಲ್ಲಿಂದ 8–10–1947ಕ್ಕೆ ನನ್ನನ್ನೂ ನನ್ನ ಜೊತೆಯ ಎಂಟು ಜನರನ್ನೂ ಚಿಕ್ಕಮಗಳೂರು ಜೈಲಿಗೆ ಒಯ್ದರು. ಅಲ್ಲಿಂದ 16–10–1947ಕ್ಕೆ ನಮ್ಮ ಬಿಡುಗಡೆ ಆಯಿತು. ಊರ ಜನರು ಉತ್ಸಾಹದಿಂದ ನಮ್ಮ ಮೆರವಣಿಗೆ ಮಾಡಿದರು. ಅಲ್ಲಿಂದ ನಾವು ಬೆಂಗಳೂರಲ್ಲಿ ಮುಖ್ಯಮಂತ್ರಿ ಕೆ. ಸಿ. ರೆಡ್ಡಿಯವರನ್ನು ಕಂಡೆವು. ಅವರು ಊಟೋಪಚಾರಮಾಡಿಸಿ ರಾಣೆಬೆನ್ನೂರಿಗೆ ತಿಕೀಟು ತೆಗೆಸಿ ಕಳುಹಿಸಿದರು.

ನನ್ನ ಜೊತೆ ಸತ್ಯಾಗ್ರಹಮಾಡಿ ಶಿಕ್ಷಿತರಾದವರು; ನಾರಾಯಣಪ್ಪ ಸರದಾರ, ಕೊಟ್ರಪ್ಪ ಉಳ್ಳೇರ, ಶಂಕರಪ್ಪ ದೇವಗಿರಿ, ಕನ್ನಪ್ಪ ಮಾಸ್ತರ, ಶಂಕರಪ್ಪ ಹಾವನೂರ, ಕಲಾಲ, ಶಿವಪ್ಪ ನೇಕಾರ, ಸಂಜೀವಪ್ಪ ನೇಕಾರ, ಶಿವಪ್ಪ ಅಸುಂಡಿ, ತಮ್ಮಣ್ಣ ಗುತ್ತಲ. ಕೊನೆಯವರು ನಮ್ಮ ಕ್ಯಾಂಪಿನ ಲೀಡರ್ ಇದ್ದರು. ಇದಲ್ಲದೆ ಚಿದಾನಂದ ಕೋಪರ್ಡೆ, ನಾರಾಯಣ ಪಾಟೀಲ, ಪಾಂಡುರಂಗ ಕಡಗಂಟಿ, ಹನುಮಂತಪ್ಪ ಅಸುಂಡಿ ಹಾಗೂ ಬಸಪ್ಪ ಕದರಮಂಡಲಗಿ ಎಂಬ ಶಿಗ್ಲಿಯ ತರುಣರು ಮೈಸೂರಲ್ಲಿ ಸತ್ಯಾಗ್ರಹಮಾಡಿದರೂ ಇವರನ್ನು ಹೊಡೆದು ಗಡೀಪಾರು ಮಾಡಿದ್ದರು. ಆದರೆ ಶಿಕ್ಷೆ ಆಗಲಿಲ್ಲ.

ವ್ಯ.ತು. 10

## ಜಿ. ಎನ್. ಶಿವಣ್ಣ

ವಯಸ್ಸು : 46 ಉದ್ಯೋಗ : ? ವಿಳಾಸ : ದ್ವಾರಾ : ಡಾ|| ರೈಯಾಜ್, 42, ರೇಸಾದಾರ್ ಬೀದಿ, ಶೇಷಾದ್ರಿಪುರಂ, ಬೆಂಗಳೂರು– 20

---

ತುಮಕೂರು ಜಿಲ್ಲೆಯ ಗುಬ್ಬಿ ಊರಲ್ಲಿ ಜನಿಸಿದ ಜಿ. ಎನ್. ಶಿವಣ್ಣನಾದ (ಉ|| ಶಿವಕುಮಾರ್) ನಾನು 1939ರಲ್ಲಿ (ಆಗ ನನಗೆ 10 ವರುಷ) ಸ್ವಾತಂತ್ರ್ಯಸಂಗ್ರಾಮ ದಲ್ಲಿ ಧುಮುಕಿದೆನು.



ಆಗ ನಾನು ಪ್ರೈಮರಿ 4ನೇ ತರಗತಿಯಲ್ಲಿ ವ್ಯಾಸಂಗಮಾಡುತ್ತಿದ್ದೆ. ಆ ಎಳೆಹರೆಯದಲ್ಲಿಯೇ ನಮ್ಮ ಉಪಾಧ್ಯಾಯರಾದ ಸಂಪತ್ತಯ್ಯಂಗಾರ್ ದೇಶಭಕ್ತಿ ವಿಚಾರಗಳನ್ನು ಚೆನ್ನಾಗಿ ಮನವರಿಕೆ ಮಾಡಿಸಿದ್ದರು. ನಮ್ಮ ಊರಿನಲ್ಲಿಯೂ ಸಹ ಸ್ವಾತಂತ್ರ್ಯ ಚಳವಳಿಯ ಅಂಗವಾಗಿ ಜೈಕಾರ ಕೂಗುತ್ತಿದ್ದಾಗ ನನ್ನ ನರನಾಡಿಗಳಲ್ಲಿಯೂ ಸಹ ಆ ಹೆಮ್ಮೆಯ ಜೈಕಾರಗಳೇ ಪ್ರತಿಧ್ವನಿಸುತ್ತಿದ್ದವು. ಒಂದು ಎರಡು ದಿನಗಳು ಆ ದೇಶಪ್ರೇಮಿಗಳ ಗುಂಪಿನ ಜೈಕಾರ ಮತ್ತು ಧಿಕ್ಕಾರಗಳನ್ನು ಕೇಳುತ್ತ ನಿಂತು ನೋಡುತ್ತಿದ್ದೆನು. ರಾತ್ರಿ ಮಲಗಿದ್ದಾಗ ಸಹ ಧಿಕ್ಕಾರ ಮತ್ತು ಜೈಕಾರಗಳೇ ನನ್ನ ಕಿವಿಯಲ್ಲಿ ಘೋರ್ಗರೆಯುತ್ತಿದ್ದವು.

ಮೂರನೇ ದಿನ ನಾನು ಸ್ಕೂಲಿಗೆ ಹೋಗುವುದನ್ನು ಬಿಟ್ಟು ಆ ದೇಶಪ್ರೇಮಿಗಳ ಗುಂಪಿನಲ್ಲಿ ಸೇರಿಕೊಂಡೆ. ಆ ದಿನವೇ ನನ್ನ ಮನೆಯಲ್ಲಿ ನನ್ನ ತಂದೆಯಿಂದ ನನಗೆ ಧಿಕ್ಕಾರವಾಗಿ, ಮನೆಯನ್ನೇ ತ್ಯಜಿಸಬೇಕಾಯಿತು. ಸ್ಕೂಲಿನಲ್ಲಿ ಉಪಾಧ್ಯಾಯರಿಂದ ಧಿಕ್ಕಾರವಾಗಿ ನನ್ನ ವಿದ್ಯಾಭ್ಯಾಸವೇ ಮಣ್ಣುಪಾಲಾಯಿತು.

ಚಳವಳಿಯಲ್ಲಿ ಭಾಗವಹಿಸಿದ್ದ ಕಿರಿಯರನ್ನೆಲ್ಲ ಪೋಲೀಸಿನವರು ವ್ಯಾನಿನಲ್ಲಿ ತುಂಬಿಕೊಂಡು ಕಾಡುಗಳಿಗೆ ಬಿಟ್ಟು ಬಂದರು. ಆಗ ನಮ್ಮ ಅವಸ್ಥೆಗಳನ್ನು ವರ್ಣಿಸುವುದಕ್ಕೆ ಅಸಾಧ್ಯ. ಪಡಬಾರದ ಕಷ್ಟಗಳನ್ನು ಪಟ್ಟು, ಅನ್ನ ಆಹಾರಗಳಿಲ್ಲದೆಯೇ ಸ್ವಗ್ರಾಮಕ್ಕೆ ಬಂದರೆ, ಸ್ವಜನರಿಂದಲೂ ಕೆಟ್ಟ ಮಾತುಗಳನ್ನು ಕೇಳಬೇಕಾಯಿತು. ಒಟ್ಟಿನಲ್ಲಿ ಸಮಾಜದಲ್ಲಿ ಬೆಲೆ ಇಲ್ಲದಂತಾಯಿತು. ಊರಿನ ಜನರ ನಿಂದೆಗೆ ರೋಸಿ, ಸ್ವಗ್ರಾಮವನ್ನೇ ಬಿಡಬೇಕಾಯಿತು.

1942ರಲ್ಲಿ ಕೋಲಾರದಿಂದ ಪುನಃ ಸ್ವಗ್ರಾಮಕ್ಕೆ ಬಂದು ಚಳವಳಿಯಲ್ಲಿ ಭಾಗವಹಿಸಿ ಕಾಡುಮೇಡುಗಳ ವಾಸವನ್ನು ಅನುಭವಿಸಲಾಯಿತು. ಅನೇಕ ಬಾರಿ ಪೋಲೀಸರು ದೂರದ ಕಾಡಿಗೆ ಬಿಟ್ಟು ಬಂದರು. ಮೈನರ್ ಎಂದು ಶಿಕ್ಷೆ ಆಗಲಿಲ್ಲ.

1947ರಲ್ಲಿ ಭಾರಿ ಹೋರಾಟ ನಡೆಯಿತು. ಆಗ ನನಗೆ ಎರಡು ತಿಂಗಳು ಶಿಕ್ಷೆ ಆಗಿ ಕಡೆಗೆ ಒಂದು ತಿಂಗಳು 11 ದಿನಕ್ಕೆ ಬಿಡುಗಡೆ ಆಯಿತು. ಚಳವಳಿಯ ಕಾಲಕ್ಕೆ ಮನೆಮಠ, ಶಿಕ್ಷಣ ತ್ಯಜಿಸಿದ ನಾನು ಇಂದಿಗೂ ಅಲೆಮಾರಿಯಾಗಿದ್ದೇನೆ. ಜೀವನವೇ ಕತ್ತಲಾಗಿದೆ!

## ಮೈ.ತು. 11 | ಡಿ|| ಮೂಲಿ ಮರಿಯಪ್ಪ (1911-1968)



ಮೂಲಿ ಮುದ್ದಪ್ಪ, ತಿಮ್ಮಕ್ಕ ಇವರ ಮಗನಾಗಿ ಶಿರಾದಲ್ಲಿ 18-4-1911ರಂದು ಜನಿಸಿದ ಮರಿಯಪ್ಪನವರು ಶಿರಾದಲ್ಲಿ ಪ್ರಾಥಮಿಕ, ಮಾಧ್ಯಮಿಕ ಶಿಕ್ಷಣವನ್ನೂ ಮೈಸೂರಿನಲ್ಲಿ ಹೈಸ್ಕೂಲು, ಕಾಲೇಜು ಶಿಕ್ಷಣವನ್ನೂ ಪುಣೆಯಲ್ಲಿ ಕಾನೂನು ಶಿಕ್ಷಣವನ್ನೂ ಮುಗಿಸಿದರು. ಮೈಸೂರಲ್ಲಿ ತಾತಯ್ಯ ಮತ್ತು ತಗಡೂರರ ಚಟುವಟಿಕೆಗಳಿಂದ ಅವರು ರಾಷ್ಟ್ರೀಯ ಚಟುವಟಿಕೆಗಳ ಕಡೆ ಎಳೆಯಲ್ಪಟ್ಟರು. 1927ರಲ್ಲಿ ಮಧುಗಿರಿಯಲ್ಲಿ ಗಾಂಧೀಜಿಯವರ ದರ್ಶನಪಡೆದು ಪ್ರಭಾವಿತರಾದರು. ಡಾ|| ಕುಮಾರಪ್ಪನವರ ಬರಹಗಳಿಂದ ಗಾಂಧೀ ವಿಚಾರಗಳಿಗೆ ಮಾರುಹೋದರು. ಪುಣೆಯಲ್ಲಿ ನಡೆಯುತ್ತಿದ್ದ ಚಳವಳಿಗಳಿಂದ ಭಾರತಾಂಬೆಯ ಬಂಧ ವಿಮೋಚನೆಯ ದೀಕ್ಷೆತೊಟ್ಟರು. ಗಾಂಧೀಜಿಯವರ ಯರವಡಾ ಜೈಲಿನ ಉಪವಾಸದಿಂದ ಅಚಲ ಗಾಂಧೀವಾದಿಗಳಾದರು. ಹರಿಜನರ ಉದ್ಧಾರ, ಪಾನನಿರೋಧಗಳ ಉತ್ತೇಜಕರಾದರು.

ಮಧುಗಿರಿಗೆ ಬಂದು ವಕೀಲಿ ಆರಂಭಿಸಿ ಅಲ್ಲಿನ ರಾಷ್ಟ್ರೀಯವಾದಿ ತರುಣರಿಗೆ ನಾಯಕರಾಗಿ, ಉದಾರಿಗಳಾದ ವರ್ತಕರ ಔದಾರ್ಯವನ್ನು ರಾಷ್ಟ್ರೀಯ ಚಟುವಟಿಕೆಗಾಗಿ ಬಳಸಿಕೊಂಡರು. ವಿವೇಕಾನಂದ ಸಾರ್ವಜನಿಕ ವಿದ್ಯಾರ್ಥಿನಿಲಯ ಸ್ಥಾಪಿಸಿದರು. ಹಂಪೆಯಲ್ಲಿ ನಡೆದ ವಿಜಯನಗರ ಷಟ್‌ಶತಮಾನೋತ್ಸವದಲ್ಲಿ ಪಾಲುಗೊಂಡು ಹಂಪೆಯ ಅವಶೇಷಗಳಿಂದ ಮನನೊಂದವರಾದರು. ಅಲ್ಲಿಂದಲೇ ಫೈಜಪುರ ಕಾಂಗ್ರೆಸ್ಸಿಗೂ ಹೋದರು. ಅಧ್ಯಕ್ಷ ಜವಾಹರ್‌ಲಾಲರ ಭಾಷಣದಿಂದ ತೀರ ಪ್ರಭಾವಿತರಾದರು. ಗ್ರಾಮಾಭಿವೃದ್ಧಿಗೆ ಆದ್ಯತೆ ನೀಡಬೇಕು ಎಂಬ ವಿಚಾರ ಅವರಿಗೆ ಚನ್ನಾಗಿ ಅಲ್ಲಿ ಮನದಟ್ಟಾಯಿತು. ಪಂಡಿತ್‌ಜೀಯವರು 'ಪರಾಧೀನ ಭಾರತದಲ್ಲಿ ಅಧಿಕಾರ ಹಂತವನ್ನು ಹತ್ತದಿರುವ ಬಗ್ಗೆ' ಮಾತನಾಡುತ್ತ 1935ರ ಕಾನೂನಿನಂತೆ ನಡೆಯುವ ಚುನಾವಣೆಗಳಲ್ಲಿ ಪಾಲುಗೊಳ್ಳಬಾರದೆಂದು ವಾದಿಸಿದ ವಿಚಾರದಿಂದ ಪ್ರಭಾವಿತರಾಗಿ, ಭಾರತ ಸ್ವತಂತ್ರವಾಗುವವರೆಗೆ ಯಾವುದೇ ಚುನಾವಣೆಯಲ್ಲಿ ಮರಿಯಪ್ಪನವರು ಸ್ವತಃ ಸ್ಪರ್ಧಿಸಲಿಲ್ಲ.

ಅಲ್ಲಿಂದ ಮರಳಿದನಂತರ ಶಿರಾದಲ್ಲಿ ಕಾಂಗ್ರೆಸ್ ಸಮಿತಿ ಸ್ಥಾಪಿಸಿ ತಾವೇ ಅದರ ಕಾರ್ಯದರ್ಶಿ ಆದರು. ನ್ಯಾಯವಾದಿಗಳಾಗಿದ್ದರೂ ಎಷ್ಟೋ ಖಟ್ಲೆಗಳನ್ನು ಪಂಚಾಯಿತಿಯಿಂದಲೇ ತೀರಿಸಿ ಅನೇಕ ಕುಟುಂಬಗಳ ಕೃತಜ್ಞತೆಗೆ ಪಾತ್ರರಾದರು. ಶಿರಾ, ಮಧುಗಿರಿ, ಕೊರಟಗೆರೆ, ಪಾವಗಡ ತಾಲ್ಲೂಕುಗಳಲ್ಲಿ ಕಾಂಗ್ರೆಸ್‌ನ ಸ್ಥಾಪನೆಗೆ ದುಡಿದರು. ಶಿವಪುರ ಧ್ವಜಸತ್ಯಾಗ್ರಹದಲ್ಲಿ ಪಾಲುಗೊಂಡಿದ್ದರಲ್ಲದೆ, ಅಲ್ಲಿಂದ ಮರಳಿದನಂತರ ಜಿಲ್ಲೆಯಲ್ಲಿ ಧ್ವಜಸತ್ಯಾಗ್ರಹ ಸಂಘಟಿಸುವ ವಿಚಾರವನ್ನು ಅದೇ ದಿನ ರಾತ್ರಿ ಚರ್ಚಿಸಿದರು. ಶಿರಾ ಮತ್ತು ಮಧುಗಿರಿಗಳಲ್ಲಿ ಸತ್ಯಾಗ್ರಹವನ್ನು ಅವರೇ ನಿರ್ದೇಶಿಸಿದರು. ಬಂಧಿತರ ಪರವಾಗಿ ತಾವೇ ಕೋರ್ಟಿನಲ್ಲಿ ವಾದಿಸಿದರು. ಮುಂದೆ ಅರಣ್ಯಸತ್ಯಾಗ್ರಹ ಆರಂಭ ಆದಾಗ 9-9-1939ರಂದು ಅವರನ್ನು ಬಂಧಿಸಿ ಯೋಗ್ಯ ರುಜುವಾತು ಇಲ್ಲದೆ ಬಿಡುಗಡೆ ಮಾಡಿದರೂ ತುಮಕೂರು ಜಿಲ್ಲಾ ಪ್ರಥಮ ಸರ್ವಾಧಿಕಾರಿಯಾದ ಅವರು 28-9-1939 ರಂದು ತಾವರೆಕೆರೆಯಲ್ಲಿ ಈಚಲವನದಲ್ಲಿ ಸತ್ಯಾಗ್ರಹ ಮಾಡಿ ಬಂಧಿತರಾದರು. ಆರು ತಿಂಗಳ ಕಠಿಣ ಸಜೆ, 150 ರೂ. ದಂಡ, ದಂಡ ತೆರದಲ್ಲಿ ಮತ್ತೆ ಒಂದೂವರೆ ತಿಂಗಳ ಕಠಿಣ ಸಜೆ ಅವರಿಗೆ ಆಯಿತು. ರಾಜ್ಯದಲ್ಲಿ 1238 ಮಂದಿ ಬಂಧಿತರಾದಲ್ಲಿ ಆ ಪೈಕಿ 340 ಜನ ತುಮಕೂರು ಜಿಲ್ಲೆಯವರೇ. ಇದಕ್ಕೆ ಮರಿಯಪ್ಪನವರ ಶ್ರಮವೇ ಕಾರಣ. ಜೈಲಿನಲ್ಲಿದ್ದಾಗ ಇವರನ್ನು ಜೈರಮಂಗಲ ನಾಲೆ ಅಗೆಯುವ ಕೆಲಸಕ್ಕೆ ಹಚ್ಚಿದ್ದರು. ಅಲ್ಲಿನ ಕೂಲಿಗಳ ಕುಡಿತದ ಚಟ ತಪ್ಪಿಸಲು ಇವರು ಅಲ್ಲಿಯೂ ಶ್ರಮಿಸಿದರು.

ಸೆರೆಯಿಂದ ಮರಳಿದ ಅನಂತರ ಅವರು ಡಿ.ಸಿ.ಸಿ. ಅಧ್ಯಕ್ಷರಾದರು. ಮುಂದೆ 1940-41ರಲ್ಲಿ ನಡೆದ ಚುನಾವಣೆಗಳಲ್ಲಿ ಜಿಲ್ಲೆಯಿಂದ ಪ್ರತಿನಿಧಿ ಸಭೆಗೆ 25ರಲ್ಲಿ 20, ನ್ಯಾಯ ವಿಧಾಯಕ ಸಭೆಯ ಎರಡು ಸ್ಥಾನಗಳೂ ಜಿಲ್ಲಾ ಬೋರ್ಡಿಗೆ 19ರಲ್ಲಿ 17 ಸ್ಥಾನಗಳೂ ಕಾಂಗ್ರೆಸ್ಸಿಗೆ ದಕ್ಕಲು ಮರಿಯಪ್ಪನವರ ಶ್ರಮವೇ ಕಾರಣ. 1942ರ ಆಗಸ್ಟ್ 9ರ ರಾತ್ರಿಯೇ ಅವರ ಬಂಧನ ಆಯಿತು. ಜೈಲಿನಲ್ಲಿ ಇದ್ದಾಗ ಘಟಿಕಿ ಮುಂತಾದ ತೀಪ್ರತಿಕ್ಷೆಗೆ ಅವರು ಗುರಿಯಾದಾಗ, "ಅವರು ತೋರಿಸಿದ ಧೈರ್ಯ, ಸ್ಥೈರ್ಯ, ಶಾಂತಿಯನ್ನು ನಾನು ಎಂದಿಗೂ ಮರೆಯಲಾರೆ" ಎಂದು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹೇಳಿದ್ದಾರೆ. 1944ರಲ್ಲಿ ಅವರ ಬಿಡುಗಡೆ ಆಯಿತು. 1947ರಲ್ಲೂ ಅವರು ಬಂಧಿತರಾಗಿ ಒಂದು ತಿಂಗಳು ಜೈಲಿನಲ್ಲಿದ್ದರು.

1948ರ ರಾಜ್ಯಾಂಗ ರಚನಾ ಸಭೆಗೂ 1952 ಮತ್ತು 1957ರಲ್ಲಿ ಶಾಸನಸಭೆಗೂ ಅವರು ಆಯ್ಕೆ ಆದರು. 1962ರಲ್ಲಿ ಶಿರಾದಿಂದ ಸ್ಪರ್ಧಿಸಿ ಸೋತರು. ಜತ್ತಿ ಸಂಪುಟದಲ್ಲಿ ಸಹಕಾರ, ಸಣ್ಣ ಕೈಗಾರಿಕೆ ಮತ್ತು ಗ್ರಾಮೋದ್ಯೋಗ ಮಂತ್ರಿಯಾಗಿದ್ದರು. 1965ರಲ್ಲಿ ತುಮಕೂರು ಕ್ಷೇತ್ರದಿಂದಲೂ 1967ರಲ್ಲಿ ಮಧುಗಿರಿಯಿಂದಲೂ ಲೋಕಸಭೆಗೆ ಆಯ್ಕೆಗೊಂಡರು. 1968ರ ಮೇ 25ರಂದು ಹೃದಯಾಘಾತದಿಂದ ತೀರಿಕೊಂಡರು.

ಅಧಿಕಾರಸ್ಥರ ಮೇಲೆ ಭ್ರಷ್ಟಾಚಾರದ ಆರೋಪ ಮಾಡುವುದು ಸರ್ವೇಸಾಮಾನ್ಯ

ವಾಗಿದೆ. ಆದರೆ ಮಾಲಿ ಮರಿಯಪ್ಪನವರು "ಪತ್ನಿ-ಪುತ್ರರಿಗೆ ಬಿಟ್ಟು ಹೋಗಿರುವ ಭಾರಿ ಆಸ್ತಿಯೆಂದರೆ ಅರವತ್ತಾರು ಸಾವಿರ ರೂಪಾಯಿಗಳ ಸಾಲ!"

ಮಾಲಿ ಮುದ್ದಣ್ಣ
(ರಾಜ್ಯಶಾಸ್ತ್ರದ ರೀಡರ್, ಸರಕಾರಿ ಕಲಾ ಕಾಲೇಜು, ಬೆಂಗಳೂರು)

ವೈ.ತು. 12

## ಕೆ. ಹೆಂಜೇರಪ್ಪ

ಜನನ : 1905 ಉದ್ಯೋಗ : ವಕೀಲ ವಿಳಾಸ : ಮಧುಗಿರಿ



1920ರಲ್ಲಿ ನಾನು ಬೆಂಗಳೂರು ಸರ್ಕಾರಿ ಪ್ರೌಢ ಶಾಲೆಯಲ್ಲಿ ವಿದ್ಯಾರ್ಥಿಯಾಗಿದ್ದಾಗಿನಿಂದ ಆಗಾಗ್ಗೆ ಉತ್ತರ ಕರ್ನಾಟಕದಿಂದ ಬಂದ ಕಾಂಗ್ರೆಸ್ ನಾಯಕರ ಸಭೆಗಳಿಗೆ ಹೋಗಿ ನಡೆಯುತ್ತಿದ್ದ ಮೆರವಣಿಗೆಗಳಲ್ಲಿ ವಿದೇಶೀ ಬಟ್ಟೆಗಳನ್ನು ಸುಡುವ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದು ಕಾಂಗ್ರೆಸ್ ಅಭಿಮಾನಿಯಾಗಿದ್ದೆ. ಅಲ್ಲಿಂದ ಬಿ.ಎ. ಮತ್ತು ಮದ್ರಾಸಿನಲ್ಲಿ ಬಿ.ಎಲ್. ಪರೀಕ್ಷೆಗಳಲ್ಲಿ ತೇರ್ಗಡೆಯಾಗುವವರೆಗೂ ಪ್ರತಿದಿನವೂ ವೃತ್ತಪತ್ರಿಕೆಗಳನ್ನು ಓದುತ್ತ ಕಾಂಗ್ರೆಸ್ ಮುಖಂಡರ ಭಾಷಣ ಮತ್ತು ಕಾರ್ಯಕ್ರಮಗಳಿಂದ ತುಂಬಾ ಪ್ರಭಾವಿತನಾಗಿದ್ದೆ; ಕಾಂಗ್ರೆಸ್ ಸಂಸ್ಥೆಯ ಸ್ವಾತಂತ್ರ್ಯ ಚಳವಳಿಯ ಕಡೆಗೆ ನನ್ನನ್ನು ಆಗಲೇ ಆಕರ್ಷಿಸಿತ್ತು.

ನಾನು 1928ನೇ ಸಾಲಿನಲ್ಲಿ ಮಧುಗಿರಿಗೆ ನ್ಯಾಯವಾದಿಯಾಗಿ ಬಂದು ನೆಲೆಸಿದೆ. ಒಂದೆರಡು ವರ್ಷಗಳಲ್ಲಿ ರಾಜಕೀಯದ ಕಡೆಗೆ ನನ್ನ ಮನಸ್ಸು ವಾಲಿಸಿತು. 1930ರಿಂದ ನಾನು ಸ್ಥಳೀಯ ಪೌರಸಭೆ, ತುಮಕೂರು ಜಿಲ್ಲಾ ಬೋರ್ಡ್, ಜಿಲ್ಲಾ ಸ್ಕೂಲ್ ಬೋರ್ಡ್ ಮುಂತಾದ ಸಂಸ್ಥೆಗಳಿಗೆ ಚುನಾಯಿತ ಸದಸ್ಯನಾಗಿ ಕೆಲಸಮಾಡಿದೆ. 1933ರಲ್ಲಿ ನಡೆದ ಹಳೇ ಮೈಸೂರಿನ ನ್ಯಾಯವಿಧಾಯಕ ಸಭೆಗೆ ತುಮಕೂರು ಜಿಲ್ಲೆಯಿಂದ ಚುನಾಯಿತನಾದೆ. 1936ರಿಂದ 1939ರವರೆಗೆ ತುಮಕೂರು ಜಿಲ್ಲಾ ಬೋರ್ಡ್‌ನ ಚುನಾಯಿತ ಉಪಾಧ್ಯಕ್ಷನಾಗಿ ಕೆಲಸಮಾಡಿದೆ.

ನಾನು ರಾಜಕೀಯಕ್ಕೆ ಸೇರಿದಾಗ ಮೈಸೂರು ಸಂಸ್ಥಾನದಲ್ಲಿ ಮೈಸೂರು ಕಾಂಗ್ರೆಸ್ ಪಕ್ಷವಿರಲಿಲ್ಲ. ರಾಜಕೀಯದಲ್ಲಿ ಆಗ್ಗೆ ಪ್ರಮುಖರಾಗಿದ್ದ ಎಚ್. ಸಿ. ದಾಸಪ್ಪ, ಸುಬ್ಬರಾವ್‌ಶೆಟ್ಟರು, ಕೆ. ಸಿ. ರೆಡ್ಡಿ, ಎಚ್. ಸಿದ್ದಯ್ಯ, ಎಚ್. ಬಿ. ಗುಂಡಪ್ಪಗೌಡ, ಬಿ ಎನ್. ಗುಪ್ತ, ಎಚ್. ಚಂದ್ರಶೇಖರಯ್ಯ, ಡಿ. ಎಸ್. ಮಲ್ಲಪ್ಪ ಮುಂತಾದವರು ಆಗಿನ ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆ, ಜಿಲ್ಲಾ ಬೋರ್ಡ್‌ಗಳಲ್ಲಿ ಚುನಾಯಿತ ಸದಸ್ಯರಾಗಿ ಪ್ರಜಾಪಕ್ಷವೆಂಬ ರಾಜಕೀಯ ಪ್ರಮುಖ ಸಂಸ್ಥೆಯನ್ನು ನಡೆಸುತ್ತಿದ್ದರು. ತುಮಕೂರು ಜಿಲ್ಲೆಯಿಂದ ನಾನೂ ದಿವಂಗತ ಡಿ. ಎಸ್. ಮಲ್ಲಪ್ಪ ನವರೂ ಆ ಪ್ರಮುಖ ಸಂಸ್ಥೆಗೆ ಸದಸ್ಯರಾಗಿ ಸೇರಿದೆವು. 1937ರಲ್ಲಿ ಈ ಪಕ್ಷವೂ ಆಗ್ಗೆ ಇದ್ದ ನ್ಯಾಷನಲ್ ಕಾಂಗ್ರೆಸ್ ಸಂಸ್ಥೆಯೂ ಸೇರಿ ಮೈಸೂರು ಕಾಂಗ್ರೆಸ್ ಪಕ್ಷವನ್ನು ಸ್ಥಾಪಿಸಿ ಕಾಂಗ್ರೆಸ್ ಸಂಸ್ಥೆಯನ್ನು ಬಲಪಡಿಸಲಾಯಿತು. ಈ ಕಾಂಗ್ರೆಸ್ ಸಂಸ್ಥೆಯು ಜವಾಬ್ದಾರಿ ಸರ್ಕಾರವನ್ನು ಸ್ಥಾಪಿಸಲು ಭಾರತಕ್ಕೆ ಸ್ವಾತಂತ್ರ್ಯವನ್ನು ತರಲು ಶ್ರಮವಹಿಸಿ ಕೆಲಸಮಾಡಲು ಪ್ರಾರಂಭಿಸಿತು.

1937ರಲ್ಲಿ ಮೈಸೂರು ಕಾಂಗ್ರೆಸ್ ಸಂಸ್ಥೆ ಸ್ಥಾಪನೆಯಾಗುವುದಕ್ಕೆ ಸ್ವಲ್ಪ ಮುಂಚೆಯೇ ಆಗಿನ ಕಾಂಗ್ರೆಸ್ ಮುಖಂಡರಾಗಿದ್ದ ಟಿ. ಸಿದ್ದಲಿಂಗಯ್ಯನವರು ತಮ್ಮ ಕಾಂಗ್ರೆಸ್ ಚಳವಳಿ ಪ್ರವಾಸದಲ್ಲಿ ನಮ್ಮ ಮಧುಗಿರಿಗೆ ಬಂದು ಕಾಂಗ್ರೆಸ್ ಸಂಸ್ಥೆಯ ಶಾಖೆಯನ್ನು ಸ್ಥಾಪಿಸಬೇಕೆಂದು ಹೇಳಿ ಹೋದಮೇಲೆ ಮಧುಗಿರಿಯಲ್ಲಿ ನಾನೂ ಮಾಲಿ ಮರಿಯಪ್ಪನವರೂ ಟಿ. ತಾರೇಗೌಡರೂ ವರ್ತಕಪ್ರಮುಖ ನಂಜಯ್ಯ ಶೆಟ್ಟರೂ ಇತರ ವರ್ತಕಪ್ರಮುಖರೂ ತಾಲ್ಲೂಕಿನ ರೈತಬಾಂಧವರೂ ಸೇರಿ ಇಲ್ಲಿ ಒಂದು ತಾಲ್ಲೂಕು ಕಾಂಗ್ರೆಸ್ ಸಂಸ್ಥೆಯನ್ನು ಸ್ಥಾಪಿಸಿ ನನ್ನನ್ನು ಅದರ ಅಧ್ಯಕ್ಷನನ್ನಾಗಿಯೂ ಟಿ. ತಾರೇಗೌಡರನ್ನು ಉಪಾಧ್ಯಕ್ಷರನ್ನಾಗಿಯೂ ನಂಜಯ್ಯ ಶೆಟ್ಟರನ್ನು ಕೋಶಾಧ್ಯಕ್ಷರನ್ನಾಗಿಯೂ ಮಾಲಿ ಮರಿಯಪ್ಪನವರನ್ನು ಕಾರ್ಯದರ್ಶಿಯಾಗಿಯೂ ಚುನಾಯಿಸಲಾಗಿತ್ತು. ನಾನು 1938ರಿಂದ 1947ರವರೆಗೆ ಎಂ.ಪಿ.ಸಿ.ಸಿ. ಸದಸ್ಯನಾಗಿದ್ದೆ. ಹಾಗೂ 2–3 ವರ್ಷ ತುಮಕೂರು ಡಿ.ಸಿ.ಸಿ. ಅಧ್ಯಕ್ಷನಾಗಿಯೂ ಎಲ್ಲ ಸತ್ಯಾಗ್ರಹಗಳ ಕಾಲದಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯನಾಗಿಯೂ ಇದ್ದೆ.

1938ರಲ್ಲಿ ಶಿವಪುರದಲ್ಲಿ ನಡೆದ ಧ್ವಜಸತ್ಯಾಗ್ರಹವು ಯಶಸ್ವಿಯಾಗಿ, ಮುಂದೆ ಮಧುಗಿರಿಯಲ್ಲಿಯೂ ಪ್ರಾರಂಭವಾಯಿತು. ಮೊದಲನೆಯ ವಾರ ಟಿ. ತಾರೇಗೌಡ, ರಾಮಚೈತನ್ಯ, ಶಿರಾ ಕಬ್ಬಿಣದಂಗಡಿ ಕರಿಬಸಪ್ಪ ಧ್ವಜ ಹಾರಿಸಿ, ಶಿಕ್ಷೆಗೆ ಗುರಿಯಾಗಿ ಬಂದೀಖಾನೆ ಸೇರಿದರು. ಎರಡನೆಯ ವಾರ ನಾನು ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿ ಸೇರಿದ್ದ ಭಾರಿ ಸಭೆಯಲ್ಲಿ ಭಾಷಣ ಮಾಡಿ ರಾಷ್ಟ್ರಧ್ವಜವನ್ನು ಹಾರಿಸಿದೆ. ಆದರೆ ನನ್ನ ದಸ್ತಗಿರಿ ಮಾಡಲಿಲ್ಲ. ಮಹಾತ್ಮಾ ಗಾಂಧೀಜಿಯವರು ಸರ್ದಾರ್ ಪಟೇಲರನ್ನು, ಕೃಪಲಾನಿಯವರನ್ನು ಮೈಸೂರು ದಿವಾನರಲ್ಲಿ ಧ್ವಜಸತ್ಯಾಗ್ರಹದ ಬಗ್ಗೆ ಸಂಧಾನ

ನಡೆಸಲು ಕಳುಹಿಸಿರುವುದರಿಂದ ದಸ್ತಗಿರಿ ಮಾಡಕೂಡದೆಂದು ಸರ್ಕಾರದಿಂದ ಆಜ್ಞೆ ಬಂದಿದೆ ಎಂದು ಸಭೆ ಮುಗಿದಮೇಲೆ ಪೋಲಿಸರಿಂದ ಗೊತ್ತಾಯಿತು. ಧ್ವಜಸತ್ಯಾಗ್ರಹ ನಿಂತಿತು. ಆದರೆ ಸರ್ಕಾರಕ್ಕೂ ಸರ್ದಾರ್ ಪಟೇಲರಿಗೂ ಆದ ಒಪ್ಪಂದವನ್ನು ಆಗಿನ ಮೈಸೂರು ಸರ್ಕಾರ ಪಾಲಿಸಲಿಲ್ಲವಾಗಿ ಪುನಃ ಕಾಂಗ್ರೆಸ್‌ನವರಿಗೆ ಕಿರುಕುಳ ಕೊಡಲು ಪ್ರಾರಂಭಿಸಿ ದಸ್ತಗಿರಿಮಾಡುವುದು, ಪ್ರತಿಬಂಧಕಾಜ್ಞೆ ಹೊರಡಿಸಿ ಕಿರುಕುಳ ಕೊಡುವುದು ಪ್ರಾರಂಭಿಸಿದರು. ಮೈಸೂರು ಕಾಂಗ್ರೆಸ್‌ನ ಹೋರಾಟ ಪ್ರಾರಂಭಿಸಿದ್ದಲ್ಲದೆ ನ್ಯಾಯ ವಿಧಾಯಕ ಸಭೆ, ಪ್ರಜಾಪ್ರತಿನಿಧಿ ಸಭೆ, ಜಿಲ್ಲಾ ಬೋರ್ಡ್ ಮುಂತಾದ ಸಂಸ್ಥೆಗಳಿಗೆ ಕಾಂಗ್ರೆಸ್ ಸದಸ್ಯರು ರಾಜೀನಾಮೆ ಕೊಟ್ಟು ಹೋರಾಡಬೇಕೆಂದು ತೀರ್ಮಾನಿಸಿತು. ಅದರಂತೆ ನ್ಯಾಯವಿಧಾಯಕ ಸಭೆ ಮತ್ತು ಜಿಲ್ಲಾ ಬೋರ್ಡಿಗೆ ರಾಜೀನಾಮೆ ಕೊಟ್ಟೆ.

ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯರು ಮೂರು ಗುಂಪಾಗಿ ಸಂಸ್ಥಾನದ ಆದ್ಯಂತ ಪ್ರಚಾರನಡೆಸಿ ಕೊನೆಗೆ ಸತ್ಯಾಗ್ರಹ ನಡೆಸಲು ಚಿನ್ನದಗಣಿಯಲ್ಲಿ ಸೇರಬೇಕೆಂದು ತೀರ್ಮಾನವಾದಂತೆ ನಾನು, ಕೆ. ಸಿ. ರೆಡ್ಡಿಯವರು, ಎಂ. ಗೋವಿಂದ ರೆಡ್ಡಿಯವರು ತುಮಕೂರು, ಚಿತ್ರದುರ್ಗ ಮತ್ತು ಕೋಲಾರ ಜಿಲ್ಲೆಗಳಲ್ಲಿ ಪ್ರಚಾರಕಾರ್ಯ ನಡೆಸಿ ಕೋಲಾರದ ಚಿನ್ನದ ಗಣಿ ಪ್ರದೇಶಕ್ಕೆ 14-8-1939 ರಲ್ಲಿ ಬಂದು ಸರ್ಕಾರ ಅಲ್ಲಿ ವಿಧಿಸಿದ ಪ್ರತಿಬಂಧಕಾಜ್ಞೆಯನ್ನು ನಾನು ಮತ್ತು ಇತರ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರು ಉಲ್ಲಂಘಿಸಿದ್ದರಿಂದ ದಸ್ತಗಿರಿಯಾಗಿ ನಮ್ಮೆಲ್ಲರಿಗೂ ಮೂರು ತಿಂಗಳ ಕಠಿಣಶಿಕ್ಷೆ ವಿಧಿಸಲಾಯಿತು. ಅಲ್ಲಿಂದ ನಮ್ಮನ್ನು ಬೆಂಗಳೂರು ಸೆಂಟ್ರಲ್ ಜೈಲಿಗೆ ವರ್ಗಾಯಿಸಿ, ಸ್ವಲ್ಪ ದಿವಸಗಳಾದಮೇಲೆ ನನ್ನನ್ನೂ ಇತರ ಮೂವರು ಸದಸ್ಯರನ್ನೂ ಮೈಸೂರು ಜೈಲಿಗೆ ವರ್ಗಾಯಿಸಲಾಯಿತು. ಕಠಿಣಶಿಕ್ಷೆಗೆ ಗುರಿಯಾಗಿದ್ದ ನಮಗೆ ಶ್ರಮದ ಕೆಲಸ ವಹಿಸಲಾಯಿತು. ಆಗಾಗ್ಗೆ ರಾಗಿ ಬೀಸಲು ಹಾಕುತ್ತಿದ್ದರು. ನಾವೆಲ್ಲ ಸೆರೆಮನೆಯಲ್ಲಿದ್ದಾಗಲೇ ಮೈಸೂರು ದೇಶದಲ್ಲಿ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾಗಿ ಅರಣ್ಯಸತ್ಯಾಗ್ರಹ ಇತ್ಯಾದಿ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಅದರಲ್ಲೂ ನಮ್ಮ ತುಮಕೂರು ಜಿಲ್ಲೆಯಲ್ಲಿ ಅರಣ್ಯಸತ್ಯಾಗ್ರಹ ತುಂಬ ಯಶಸ್ವಿಯಾಗಿ ನಡೆದು ಬಹುಮಂದಿ ಸೆರೆಮನೆಗೆ ಹೋದರು. ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರು ಸೆರೆಮನೆಗಳಿಂದ ವಾಪಸಾದಮೇಲೆ ಮೈಸೂರು ಸರ್ಕಾರದವರು ಕೆ. ಸಿ. ರೆಡ್ಡಿ, ಎಂ. ಗೋವಿಂದ ರೆಡ್ಡಿ, ಕೆ. ಪಟ್ಟಾಭಿರಾಮನ್, ರಂಗರಾಮಯ್ಯ, ಕೆ. ಟಿ. ಭಾಷ್ಯಂ, ಎಚ್. ಸಿದ್ದಯ್ಯ, ಟಿ. ರಾಮಾಚಾರ್ ಇನ್ನು ಮುಂತಾದವರ ಮೇಲೆ ನಾವು ಕೋರ್ಟು ಗಳಲ್ಲಿ ನ್ಯಾಯವಾದಿಗಳಾಗಿ ಕೆಲಸ ಮಾಡದಂತೆ ನಮ್ಮ ಸನ್ನದುಗಳನ್ನು ರದ್ದುಪಡಿಸ ಬೇಕೆಂದು ದೂರು ಕೊಟ್ಟಿದ್ದರಿಂದ ಹೈಕೋರ್ಟಿನ ಮುಖ್ಯನ್ಯಾಯಾಧೀಶರು ಈ ಎಲ್ಲ ನ್ಯಾಯವಾದಿಗಳ ಸನ್ನದನ್ನು ರದ್ದುಪಡಿಸಿದರು. ನಾನು ಚಿಕ್ಕವಯಸ್ಸಿನವನಾಗಿದ್ದುದ ರಿಂದ ನನ್ನ ಸನ್ನದನ್ನು ಒಂದು ವರ್ಷಕಾಲ ಮಾತ್ರ ರದ್ದುಪಡಿಸಿದ್ದರು.

'ಕ್ವಿಟ್ ಇಂಡಿಯಾ' ಚಳವಳಿ ಕಾಲಕ್ಕೆ 10-8-1942ರಂದು ನಾಯಕರ ಬಂಧನ ಪ್ರತಿಭಟಿಸಿ ಮಧುಗಿರಿಯಲ್ಲಿ ಹರತಾಳವಾಗಿ, ಸಂಜೆ ನಾನೂ ಮಾಲಿ ಮರಿಯಪ್ಪನವರೂ ಸಭೆಯಲ್ಲಿ ಭಾಷಣ ಮಾಡಿ ಚಳವಳಿ ಸಾಗಿಸಲು ಕರೆ ಇತ್ತೆವು. ಅಂದೇ ರಾತ್ರಿ ಇಬ್ಬರನ್ನೂ ಬಂಧಿಸಿ ತುಮಕೂರು, ಮುಂದೆ ಹಾಸನ ಜೈಲಿಗೆ ಒಯ್ದರು. ಮಧುಗಿರಿಯಲ್ಲಿ ಚಳವಳಿ ಸಾಗಿ, ಬಂಧಿತರಲ್ಲಿ ಒಬ್ಬ ಹೈಸ್ಕೂಲು ವಿದ್ಯಾರ್ಥಿ ಬೆಂಗಳೂರು ಜೈಲಿನಲ್ಲಿ ತೀರಿಕೊಂಡ. ಮುಂದೆ ಇತರ ಕಾರ್ಯಸಮಿತಿ ಸದಸ್ಯರ ಜೊತೆಗೆ ನಾನೂ ಬಿಡುಗಡೆ ಆದೆ.

'ಮೈಸೂರು ಚಲೋ' ಚಳವಳಿ ಕಾಲಕ್ಕೆ 1-9-1947ರಲ್ಲಿ ಸಂಪೂರ್ಣ ಹರತಾಳ ವನ್ನು ಮಧುಗಿರಿಯಲ್ಲಿ ಆಚರಿಸಿ ಸಾಯಂಕಾಲ ಭಾರಿ ಬಹಿರಂಗ ಸಭೆಯಲ್ಲಿ ನಾನೂ ಮಾಲಿ ಮರಿಯಪ್ಪನವರೂ ಸತ್ಯಾಗ್ರಹವನ್ನು ಮುಂದುವರಿಸಬೇಕೆಂದು ಭಾಷಣ ಮಾಡಿ ಆ ರಾತ್ರಿ ಸಭೆ ಸೇರಿ ಮುಂದಿನ ಕಾರ್ಯಕ್ರಮಗಳನ್ನು ನಡೆಸುವ ಬಗ್ಗೆ ಚರ್ಚಿಸಿ ತೀರ್ಮಾನಿಸಿ ನಾನು ಮನೆಗೆ ಊಟಕ್ಕೆ ಬಂದ ಕೂಡಲೇ ಸ್ಥಳೀಯ ಪೋಲೀಸರು ನನ್ನನ್ನೂ ನಂತರ ಮಾಲಿ ಮರಿಯಪ್ಪನವರನ್ನೂ ದಸ್ತಗಿರಿಮಾಡಿ, ಇಬ್ಬರನ್ನೂ ರಾತ್ರಿಯೇ ತುಮಕೂರು ಸೆರೆಮನೆಗೆ ಸಾಗಿಸಿ ಅಲ್ಲಿಂದ ಬೆಂಗಳೂರು ಸೆಂಟ್ರಲ್ ಜೈಲಿಗೆ ಸಾಗಿಸಿದರು. ಅಲ್ಲಿಂದ ನನ್ನನ್ನು ಮತ್ತು ಇತರ ಕೆಲವರನ್ನು ಮಿಲಿಟರಿ ಕ್ಯಾಂಪಿಗೆ ಸಾಗಿಸಿ ಅಲ್ಲಿ ಚಳವಳಿ ಮುಗಿಯುವವರೆಗೆ ಬಂಧನದಲ್ಲಿಟ್ಟರು.

ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾದಮೇಲೆ ಮೈಸೂರಿಗೆ ಬಂದು ರಾಜ್ಯಾಂಗಶಾಸನ ಇರಬೇಕೆಂದು ತೀರ್ಮಾನಿಸಿ ಇದನ್ನು ರಚಿಸಲು ಒಂದು ಶಾಸನಾಂಗ ವನ್ನು ಚುನಾಯಿಸಲಾಯಿತು. ಅದಕ್ಕೆ ನಾನು ಚುನಾಯಿತನಾದೆ. ಈ ಸಭೆ ನಡೆಯುತ್ತಿರುವಾಗಲೇ ಮುಖ್ಯಮಂತ್ರಿ ಕೆ. ಸಿ. ರೆಡ್ಡಿಯವರು ನನ್ನನ್ನು ಕರೆಯಿಸಿ ಉನ್ನತ ಸರ್ಕಾರಿ ಹುದ್ದೆಯನ್ನು ಸ್ವೀಕರಿಸಬೇಕೆಂದು ಸೂಚಿಸಿದ್ದರಿಂದ ನಾನು ಹಿರಿಯರ ಮತ್ತು ಹಿತೈಷಿಗಳ ಸೂಚನೆಯಂತೆ ಒಪ್ಪಿಕೊಂಡೆ. ನನ್ನನ್ನು ಲಂಚನಿರೋಧ ಶಾಖೆ ಮತ್ತು ಆಡಳಿತ ತನಿಖಾ ಮುಖ್ಯಾಧಿಕಾರಿಯಾಗಿ ನೇಮಿಸಲಾಯಿತು. 1948ರ ಆಗಸ್ಟ್ ತಿಂಗಳಿಂದ ಸುಮಾರು ನಾಲ್ಕು ವರ್ಷ ಆ ಅಧಿಕಾರದಲ್ಲಿದ್ದು ಮುಂದೆ ಸುಮಾರು ಒಂದು ವರ್ಷಕಾಲ ಬೆಂಗಳೂರು ಗೃಹನಿರ್ಮಾಣ ಸಮಿತಿಯ ಅಧ್ಯಕ್ಷನಾಗಿ, ಅನಂತರ ಮೂರು ವರ್ಷ ಬೆಂಗಳೂರು ನಗರಸಭೆಯ ಕಮೀಷನರ್ ಆಗಿ, ಸುಮಾರು ನಾಲ್ಕು ವರ್ಷ ರಸ್ತೆಸಾರಿಗೆ ಶಾಖೆಯ ಕಮೀಷನರ್ ಮತ್ತು ಸಂಸ್ಥಾನದ ಸಾರಿಗೆ ಸಮಿತಿಯ ಅಧ್ಯಕ್ಷನಾಗಿ, ಕೊನೆಯ ಒಂದೂವರೆ ವರ್ಷ ಸಂಸ್ಥಾನದ ದೇವಸ್ಥಾನ ಮತ್ತು ಧರ್ಮ ಸಂಸ್ಥೆಗಳ ಕಮೀಷನರ್ ಮತ್ತು ಪ್ರವಾಸ ಶಾಖೆಯ ಡೈರೆಕ್ಟರಾಗಿಯೂ ಕೆಲಸಮಾಡಿ ತಾರೀಕು 15-10-1960ರಲ್ಲಿ ನಿವೃತ್ತನಾಗಿರುತ್ತೇನೆ.

ವೈ.ತು. 13

# ಎಂ. ಜಿ. ನಾರಾಯಣರಾವ್

ಜನನ : ? ಉದ್ಯೋಗ : ಅಧ್ಯಾಪಕ ವಿಳಾಸ : ಬ್ಯಾಲ್ಯ, ತಾ॥ ಮಧುಗಿರಿ



ಮಧುಗಿರಿಯ ಹೆಂಜೇರಪ್ಪ, ಮಾಲಿ ಮರಿಯಪ್ಪ ಹಾಗೂ ತಾ॥ ಕಾಂ॥ ಅಧ್ಯಕ್ಷ ಎಸ್. ನಂಜಯ್ಯ ಶೆಟ್ಟರು 1942ರಲ್ಲಿ ನಮ್ಮ ಊರಿಗೆ ಬಂದು ಅಹಿಂಸಾತ್ಮಕ ಹೋರಾಟಕ್ಕೆ ಸಭೆಯಲ್ಲಿ ಕರೆ ಕೊಟ್ಟರು. ನಮ್ಮ ಊರವರು ಪಾನನಿರೋಧ ಚಳವಳಿ ನಡೆಸುವ ಕಾರ್ಯಕ್ರಮ ರೂಪಿಸಿ ಹೆಂಡದ ಅಂಗಡಿ ಮುಂದೆ ಭಜನೆ ಹೇಳುತ್ತ ಪಿಕೆಟಿಂಗ್ ಆರಂಭಿಸಿದರು. ಸಂಜೆ ಚಳವಳಿಗಾರರಿಗೆ ಹೆಂಡದಿಂದ ಸ್ನಾನಮಾಡಿಸಿ ಕುಡುಕರು ಬೈಯಲಾರಂಭಿಸಿ, ಹಾರ್ಮೋನಿಯಂ, ತಬಲ ಒಡೆದುಹಾಕಿದರು. ಈ ಘಟನೆಯಿಂದ ನೊಂದ ನಮ್ಮ ಯುವಕ ಸಂಘದವರು ಹೆಂಡದಂಗಡಿಯನ್ನು ಸುಟ್ಟು, ಅಲ್ಲಿನ ಕಟ್ಟಿಗೆ ಪೀಪಾಯಿಗಳನ್ನು ಒಡೆದುಹಾಕಿದೆವು. ಅದೇ ರೀತಿ ನೆರೆಯ ಪುರವರ, ನಿಟ್ರಹಳ್ಳಿಯ ಅಂಗಡಿಗಳನ್ನೂ ಧ್ವಂಸಮಾಡಿದೆವು. ಸಾರಾಯಿ ಸಾಗಿಸುವಾಗ ಕಾದು ಕುಳಿತು ದಾರಿಯಲ್ಲಿ ಪೀಪಾಯಿಗಳನ್ನು ಹೊರಗೆಳೆದು ಚೂರುಮಾಡಿದೆವು. ಮದ್ಯದ ಮಾರಾಟ ಸ್ತಬ್ಧವಾಯಿತು.

ಕಂಟ್ರಾಕ್ಟುದಾರರು ನಮ್ಮಗಳ ಕುಲಗೋತ್ರಾದಿ ವಿವರಗಳ ಸಹಿತ ಸರಕಾರಕ್ಕೆ ತಕರಾರು ಕಳುಹಿಸಿದರು. 1942ರ ಸೆಪ್ಟಂಬರ್ ತಿಂಗಳ ಗೌರಿಹಬ್ಬದ ದಿನ ಬೆಳಗ್ಗೆ ನಾಲ್ಕೂವರೆಗೆ ಊರಿಗೆ ಪೋಲೀಸರು ಮುತ್ತಿಗೆ ಹಾಕಿದರು. ಅನೇಕರ ಬಂಧನ ಆಗಿ, ಮಧುಗಿರಿ ಲಾಕಪ್ಪಿಗೆ ಒಯ್ದರು. ಅಲ್ಲಿ ನಾನು, ಬಿ. ಕೆ. ಹೆಂಜಾರಪ್ಪ, ಎ. ಕೃಷ್ಣಶೆಟ್ಟಿ ಇವರುಗಳ ಮೇಲೆ 4–5 ಕೇಸುಗಳನ್ನು ಹಾಕಿದರು. ಉಳಿದವರ ಮೇಲೂ ಚಾರ್ಜ್ ಷೀಟ್ ಹಾಕಿದರು. 10–10–1942ರಂದು ಜಜ್‌ಮೆಂಟ್ ಆಗಿ ಮೂರು ಮಂದಿಗೆ ತಲಾ ಒಂದು ವರ್ಷ ಎಂಟು ತಿಂಗಳ ಶಿಕ್ಷೆ. 500 ರೂ. ದಂಡಹಾಕಿದರು. ಉಳಿದ 19 ಜನಕ್ಕೆ ಬೇರೆ ಬೇರೆ ಅವಧಿಯ ಶಿಕ್ಷೆ ಆಯಿತು. ಉಳಿದ ಶಿಕ್ಷಿತರೆಂದರೆ ಅಜ್ಜೇಗೌಡ, ಡಿ. ನಂಜುಂಡಯ್ಯ, ಕೆ. ಎಸ್. ವೆಂಕಟರಾಮಯ್ಯ ಶೆಟ್ಟಿ. ಲಕ್ಷ್ಮೀನಾರಾಯಣ ಶೆಟ್ಟಿ, ಚಿಕ್ಕಹನುಮಂತ ರೆಡ್ಡಿ, ಹನುಮಂತ ಶೆಟ್ಟಿ, ಬಿ. ರಾಮಸ್ವಾಮಯ್ಯ, ಶ್ರೀಕಂಠ ಶೆಟ್ಟಿ, ನಾರಾಯಣ ರೆಡ್ಡಿ, ಶ್ರೀನಿವಾಸಮೂರ್ತಿ, ನಾಗರಾಜಯ್ಯ, ಹನುಮಂತಯ್ಯ, ಲಕ್ಷ್ಮಯ್ಯ, ಶಾಂತಮೂರ್ತಿ ಶೆಟ್ಟಿ, ಜಗತ್ಪಾಲಯ್ಯ, ಕೇಶವಯ್ಯ, ಕನಕಪ್ಪ, ಕದುರಪ್ಪ. ಭಾಸ್ಕರಯ್ಯ,

ಮಧುಗಿರಿ ಲಾಕಪ್ಪಿನ ನರಕದಿಂದ ತುಮಕೂರಿನ ಜೈಲು ಸೇರಿದೆವು. ಅವಧಿ ಮುಗಿದಮೇಲೆ ಬಿಡುಗಡೆ ಆದರೂ ಜುಲ್ಮಾನೆ ವಸೂಲಿ ಯತ್ನಕ್ಕೆ ಪೋಲೀಸರ ಓಡಾಟ ಶುರು ಆಯಿತು. ದಿ॥ ಮೂಲಿ ಮರಿಯಪ್ಪನವರು ಕೇಸು ನಡೆಸಿ ಬಿಡಿಸಿಕೊಟ್ಟರು.

1947ರಲ್ಲಿ ನಮ್ಮ ಗ್ರಾಮದವರು ತಮಟೆ, ಕಹಳೆ ವಾದ್ಯಗಳಸಹಿತ ಸತ್ಯಾಗ್ರಹಕ್ಕೆ ಮಧುಗಿರಿ ಊರಿಂದ ಆಹ್ವಾನ ಬಂದಿತ್ತು. ನಮ್ಮ ಊರ ಅಜ್ಜೇಗೌಡ, ಅರೇಲಿಂಗಯ್ಯ. ಬಿ. ನಾಗರಾಜು, ಸತ್ಯನಾರಾಯಣ ಶೆಟ್ಟಿ, ಹಂದ್ರಾಳ ಗ್ರಾಮದ ನಂಜುಂಡಪ್ಪ ಇವರೆಲ್ಲ 10 ಮೈಲು ನಡೆದು ಸಾಗಿದರು. ಸಹಸ್ರಾರು ಸಂಖ್ಯೆಯಲ್ಲಿ ಮಧುಗಿರಿಗೆ ನಾಗರಿಕರು ಊರ ಹೊರಗೆ ಬಂದು ಸ್ವಾಗತಿಸಿದರು. ಕುಡಿದು ಮತ್ತರಾದ ಪೋಲೀಸರು ಲಾಠೀ ಪ್ರಹಾರ ಮಾಡಿದರು. ಜನರ ನೂಕುನುಗ್ಗಲು ಹೆಚ್ಚಿ ಅಧಿಕಾರಿಗಳು ಭಯಭೀತರಾದರು. ಗುಂಡಿನ ಸುರಿಮಳೆಯಾಯಿತು. ಹಂದ್ರಾಳ್ ನಂಜುಂಡಪ್ಪ ಗುಂಡಿನೇಟಿಗೆ ಮಧುಗಿರಿಯ ಚೌಕ ಒಂದರಲ್ಲಿ ಮಲಗಿದ. ಅಜ್ಜೇಗೌಡ, ಅರೆಲಿಂಗಯ್ಯ, ನಾರಾಯಣರೆಡ್ಡಿ, ಚೌಡಪ್ಪ ಲಾಕಪ್ ಸೇರಿದರು. 15 ದಿನಗಳನಂತರ ಚಳವಳಿ ನಿಂತಮೇಲೆ ಇವರ ಬಿಡುಗಡೆ ಆಯಿತು.

ಹುತಾತ್ಮ ನಂಜುಂಡಯ್ಯನ ದೇಹವನ್ನು ಸ್ವಗ್ರಾಮಕ್ಕೆ ತಂದು ಅಂತ್ಯಕ್ರಿಯೆ ಮಾಡಿದರು. ಹೆಂಡತಿ, ಎಳೆಮಕ್ಕಳು, ವೃದ್ಧ ತಾಯಿ ದುಃಖದಲ್ಲಿ ಮುಳುಗಿದರು. 10 ವರ್ಷಗಳ ಕಾಲ ಮೃತನ ಹೆಂಡತಿ ನರಸಮ್ಮನಿಗೆ ರೂ. 15 ಮಾಸಾಶನ ನೀಡುತ್ತಿದ್ದರು. ಈಗ ನಿಂತುಹೋಗಿದೆ! ಮಕ್ಕಳಿಗಾಗಿ ಸರಕಾರ ಮಂಜೂರುಮಾಡಿದ ಜಮೀನನ್ನು ಕೆಲವು ಸ್ವಾರ್ಥಿಗಳು ತಕರಾರುಮಾಡಿ ಕಬಳಿಸುವ ಯೋಚನೆಯಲ್ಲಿದ್ದಾರೆ!

ಮೈ.ತು. 14

## ಟಿ. ತಾರೇಗೌಡ

ಜನನ: 1909 ಉದ್ಯೋಗ: ವಕೀಲ ವಿಳಾಸ: ತಾವರೆಕೆರೆ, ತಾ॥ ಶಿರಾ

---



1924ರಲ್ಲಿ ನಾನು ತುಮಕೂರು ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಬೆಳಗಾವಿ ಕಾಂಗ್ರೆಸ್ಸಿಗೆ ಹೋಗಿಬಂದ ಮಹನೀಯರ ಭಾಷಣಗಳನ್ನು ಕೇಳಿದೆನು. ಅಲ್ಲದೆ ಜಯರಾಮಾಚಾರ್ಯರ ಹರಿಕಥೆಗಳನ್ನೂ ಆಲಿಸಿದೆನು. ಚಳವಳಿಯನ್ನು ಬಲಗೊಳಿಸಿದರೆ ದೇಶಕ್ಕೆ ಸ್ವಾತಂತ್ರ್ಯ ದೊರೆಯುವುದು ಖಚಿತವೆಂದು ನನಗೆ ಮನವರಿಕೆ ಆಯಿತು. ಹರಿಕಥೆಯಲ್ಲಿ ಟಿಟ್ಟಿಭ ಹಕ್ಕಿಯು ಸಮುದ್ರವನ್ನು ಶೋಷಣೆಮಾಡಿದ ಕಥೆಯನ್ನು

ಜಯರಾಮಾಚಾರ್ಯರು ಚೆನ್ನಾಗಿ ವಿವರಿಸಿ ಹೇಳಿ, ಭಾರತೀಯರಲ್ಲಿ ಭರವಸೆ ಮೂಡಿಸುತ್ತಿದ್ದರು.

1927ರಿಂದ 29ರ ನಡುವೆ ಬೆಂಗಳೂರಲ್ಲಿ ಓದುತ್ತಿದ್ದಾಗ ಕೆ. ಹನುಮಂತಯ್ಯನವರೂ ವಿದ್ಯಾರ್ಥಿಯಾಗಿದ್ದು ನಾನೂ ಅವರೂ ಬೆಂಗಳೂರಲ್ಲಿ ನಡೆಯುವ ರಾಷ್ಟ್ರೀಯ ಮುಖಂಡರ ಭಾಷಣಗಳಿಗೆಲ್ಲ ತಪ್ಪದೆ ಹೋಗುತ್ತಿದ್ದೆವು. ಕೆ. ಹನುಮಂತಯ್ಯನವರಿಂದ ಸ್ಫೂರ್ತಿಗೊಂಡು ಆಗಿನಿಂದಲೇ ಖಾದೀಧಾರಿಯಾಗಿದ್ದೇನೆ. 1927ರಲ್ಲಿ ಗಾಂಧೀಜಿಯವರ ಭಾಷಣವನ್ನು ಬೆಂಗಳೂರಲ್ಲಿ ಕೇಳಿದ್ದೇನೆ. ಅಲ್ಲದೆ ರಾಜಾಜಿ, ರಾಜೇಂದ್ರಬಾಬು, ಸರ್ದಾರ್ ಪಟೇಲ್ ಇವರ ಭಾಷಣ ಕೂಡ ಕೇಳಿದ್ದೇನೆ. 'ಹರಿಜನ' ಪತ್ರಿಕೆ ತಪ್ಪದೆ ಓದುತ್ತಿದ್ದೆ. ಮದ್ರಾಸಿನಲ್ಲಿ ಲಾ ಶಿಕ್ಷಣ ಪಡೆಯುವಾಗಲೂ ಅನೇಕ ನಾಯಕರ ಭಾಷಣ ಕೇಳುವ ಪ್ರಸಂಗ ಬಂತು. ಮೈಸೂರಿನ ನಾಯಕರಾದ ಹನುಮಂತಯ್ಯ, ಭಾಷ್ಯಂ, ತಾಳಕೆರೆ, ಸಿದ್ದಲಿಂಗಯ್ಯ, ರಂಗಯ್ಯಂಗಾರ್, ಎಂ. ವಿ. ರಾಮರಾವ್, ಎಚ್. ಸಿ. ದಾಸಪ್ಪ, ಯಶೋಧರಮ್ಮ, ಕೆ. ಸಿ. ರೆಡ್ಡಿ, ಮಾಲಿ ಮರಿಯಪ್ಪ, ಕೆ. ಪಟ್ಟಾಭಿರಾಮನ್ ಇವರ ಪ್ರಭಾವವೂ ನನ್ನ ಮೇಲೆ ಆಗಿದೆ. ಶಿವಪುರ ಕಾಂಗ್ರೆಸ್ಸಿನ ರಣರಂಗದ ನೋಟ ಕಂಡುಬಂದು ನಾನೂ ನನ್ನ ಸ್ಥಳಕ್ಕೆ ಮರಳಿ ಮಧುಗಿರಿಯಲ್ಲಿ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿ ಮೂರು ತಿಂಗಳು ಶಿಕ್ಷೆಗೆ ಒಳಗಾದೆ. ಮಧುಗಿರಿಯಲ್ಲಿ ರಾಮಚೈತನ್ಯ ಅವರು ನನ್ನ ಜೊತೆ ಬಂಧಿತರಾಗಿದ್ದರು. ಕೆ. ಹೆಂಜೇರಪ್ಪ, ಮಾಲಿ ಮರಿಯಪ್ಪ, ಎಸ್. ನಂಜಯ್ಯ ಶೆಟ್ಟಿ, ಕೆ. ಈಶ್ವರ ಶೆಟ್ಟಿ ಇವರೆಲ್ಲ ಮಧುಗಿರಿಯಲ್ಲಿ ಆಗ ಗಣ್ಯ ಕಾಂಗ್ರೆಸ್ ಕಾರ್ಯಕರ್ತರು. 1938ರಿಂದಲೇ ನಾನು ಶಿರಾ ತಾ|| ಕಾಂ|| ಸಮಿತಿ ಅಧ್ಯಕ್ಷನಾಗಿದ್ದು 1947ರ ವರೆಗೆ ಆ ಸ್ಥಾನದಲ್ಲಿ ಇದ್ದೆ.

1939ರಲ್ಲಿ ಶಿರಾ ತಾಲ್ಲೂಕಿನ ತಾವರೆಕೆರೆ, ಒಡ್ಡನಳ್ಳಿ ಮತ್ತು ಯಲಿಯೂರುಗಳಲ್ಲಿ ಭಾರಿ ಜಂಗಲ್ ಸತ್ಯಾಗ್ರಹ ನಡೆಸಿದೆವು. ನಾನು ಆಗ ಅಸ್ತಮಾದಿಂದ ನರಳುತ್ತಿದ್ದು ಸತ್ಯಾಗ್ರಹ ಮಾಡಲಿಲ್ಲ. ತಾವರೆಕೆರೆಯಲ್ಲಿ ಶಿಬಿರವ್ಯವಸ್ಥೆ, ಅಲ್ಲಿಯ ಊಟೋಪಚಾರಗಳನ್ನು ಮಿತ್ರರಾದ ಗಿರಿಯಪ್ಪನವರ ನೆರವಿನಿಂದ ಮಾಡುತ್ತಿದ್ದೆ. ಮಾಲಿ ಮರಿಯಪ್ಪನವರು ಪ್ರಥಮ ಸತ್ಯಾಗ್ರಹಮಾಡಿ ತಾವರೆಕೆರೆಯಿಂದ ದಸ್ತಗಿರಿ ಆದರು. ಎಚ್. ಆರ್. ದಾಸೇಗೌಡ, ಬಿ. ಕೆಂಚಣ್ಣ, ತಾವರೆಕೆರೆ ಬಸವಯ್ಯ, ಚಿಕ್ಕಭೈರಪ್ಪ, ಬಾಲಯ್ಯ, ಸಂಜೀವಪ್ಪ, ಗಿರಿಯಪ್ಪ, ಕುಣಿಗಲ್ ಶೇಷಾದ್ರಿ ಅಯ್ಯಂಗಾರ್, ಸಂಪಿಗೆ ರಾಮಸ್ವಾಮಿ ಅಯ್ಯಂಗಾರ್, ಮೊಸರಕುಂಟೆ ರಾಮಕೃಷ್ಣಪ್ಪ, ತುಮಕೂರು ಟಿ. ಎಲ್. ಸಂಗಣ್ಣ, ತಾವರೆಕೆರೆ ಎ. ಡಿ. ಗೋವಿಂದಪ್ಪ, ದ್ವಾರಾಳು ಹನುಮಂತಪ್ಪ, ಕಳ್ಳಂಬೆಳ್ಳ ವಿ. ಎಂ. ಕಾಮೇಗೌಡ, ಹುಣಿಸೆಹಳ್ಳಿ ಗೋವಿಂದಪ್ಪ ಮುಂತಾದವರು ತಾವರೆಕೆರೆಯಿಂದ ಬಂಧಿತರಾದ ಪ್ರಮುಖರು. ಇವರಿಗೆಲ್ಲ ಶಿಕ್ಷೆ ಆಯಿತು. ಅದೇ ರೀತಿ ಯಲಿಯೂರಲ್ಲಿ ಶಿರಾದ ಎ. ಗುಂಡೂರಾವ್, ಯಲಿಯೂರ ಸಿದ್ದಲಿಂಗಪ್ಪ, ವೀರಭದ್ರಯ್ಯ,

ಹನುಮಂತಪ್ಪ, ಶಿರಾದ ಸಿದ್ದಪ್ಪ, ಕ್ಯಾತ್ಸಂದ್ರದ ಕೆ. ಎಲ್. ನರಸಿಂಹಯ್ಯ ಇವರುಗಳು ಒಡ್ಡನಹಳ್ಳಿಯಲ್ಲಿ ಕೆ. ಹೆಂಜಾರಪ್ಪ, ಕಳ್ಳಂಬೆಳ್ಳದ ಎಚ್. ಮೂರ್ಕಣ್ಣಪ್ಪ, ಮಲ್ಲಯ್ಯ, ಕೆಂಚಪ್ಪ, ಕ್ಯಾತ್ಸಂದ್ರದ ಕುಂಡಲಗಿರಿ ಶ್ರೀನಿವಾಸಾಚಾರ್, ಗುಬ್ಬಿಯ ಪುಟ್ಟರೇವಣ್ಣ, ತುಮಕೂರಿನ ಬಿ. ಸಿ. ನಂಜುಂಡಯ್ಯ, ವಿಠೋಬರಾವ್, ಎಂ. ನೀಲಕಂಠರಾವ್, ಡಿ. ಆರ್. ಮುದ್ದಪ್ಪ, ಚಿಕ್ಕವಾಳಪಟ್ಟ ನರಸೇಗೌಡ, ಜೀವಿನಹಳ್ಳಿ ಕರೇಗೌಡ, ಹುಣಿಸೇಹಳ್ಳಿ ನರಸಿಂಹಯ್ಯ ಬಂಧಿತರಾದ ಗಣ್ಯರು. ಈ ತಾಲ್ಲೂಕಿನಿಂದ ಸುಮಾರು 300 ಜನಕ್ಕೆ ಶಿಕ್ಷೆ ಆಯಿತು.

ಮದ್ರಾಸ್‌ನಲ್ಲಿ ನಡೆದ ಅ.ಭಾ. ಕಾಂಗ್ರೆಸ್‌ಗೂ ಶಿವಪುರ, ವಿದುರಾಶ್ವತ್ಥ, ಹರಿಹರ, ಶಿವಮೊಗ್ಗ, ಮೈಸೂರು, ಚಿತ್ರದುರ್ಗಗಳಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಗಳಿಗೂ ಹೋಗಿದ್ದೆ. ಗುಬ್ಬಿಯ ಘಟ್ಟ ರೇವಪ್ಪ, ತಾವರೆಗೆರೆ ಗಿರಿಯಪ್ಪ, ಚಿಕ್ಕಭೈರಪ್ಪ, ಬಸವಯ್ಯ, ಲಕ್ಷ್ಮೀಸಾಗರದ ದಾಸೇಗೌಡ, ಬರಗೂರು ರಾಮೇಗೌಡ, ಶಿರಾದ ಗುಂಡೂರಾವ್, ಸಿದ್ದಪ್ಪ, ಕರಿಬಸಪ್ಪ, ನಾಗವಲ್ಲಿಯ ಮೂಡಲಗಿರಿಗೌಡ ಇವರುಗಳೆಲ್ಲ ಈ ಭಾಗದ ಕೆಲವು ಉಲ್ಲೇಖನೀಯ ಕಾರ್ಯಕರ್ತರು.

ಅಸ್ತಮಾ ಕಾಯಿಲೆಯಿಂದ ನನಗೆ 1942ರ ಚಳವಳಿಯಲ್ಲಿ ಜೈಲಿಗೆ ಹೋಗುವುದಾಗಲಿಲ್ಲ. ಆದರೆ ಇತರೇ ಚಟುವಟಿಕೆಗಳಿಗೆಲ್ಲ ಸಹಾಯ ಮಾಡುತ್ತ ಬಂದೆ. 1947ರಲ್ಲಿ ಗ್ರಾಮಾಧಿಕಾರಿಗಳ ಸಾಮೂಹಿಕ ರಾಜೀನಾಮೆ ಕಾರ್ಯಕ್ರಮ ಸಂಘಟಿಸಲು ನೆರವಾದೆ. ತಾವರೆಕೆರೆಯಲ್ಲಿ ನನ್ನ ದೊಡ್ಡಪ್ಪ ದಿ|| ದೊಡ್ಡರಂಗೇಗೌಡರೇ ಪಟೇಲರಾಗಿದ್ದು ಅವರಿಗೆ ರಾಜೀನಾಮೆ ನೀಡಲು ಮನವೊಲಿಸಿ ಪ್ರಥಮವಾಗಿ ರಾಜೀನಾಮೆ ನೀಡಿಸಿದೆ. ಶ್ಯಾನುಭೋಗರಾದ ಭೀಮಸೇನರಾಯರೂ ರಾಜೀನಾಮೆ ಕೊಡುವಂತೆ ಪ್ರೇರೇಪಿಸಿದೆ. ಉಳಿದವರು ರಾಜೀನಾಮೆ ನೀಡುವುದು ಇದರಿಂದ ಸುಲಭವಾಯಿತು. ಹೀಗಾಗಿ ತಾಲ್ಲೂಕಿನಲ್ಲಿ ಈ ಚಳವಳಿ ಯಶಸ್ವಿ ಆಯಿತು.

ಇದಲ್ಲದೆ ಜಿಲ್ಲಾ ಬೋರ್ಡ್ ಚುನಾವಣೆಗೆ ಕಾಂಗ್ರೆಸ್‌ನಿಂದ 1940ರಲ್ಲಿ ಸ್ಪರ್ಧಿಸಿ ಗೆದ್ದು 1940ರಿಂದ 43ರವರೆಗೆ ಉಪಾಧ್ಯಕ್ಷನಾಗಿಯೂ 1943ರಿಂದ 44ರವರೆಗೆ ಹಂಗಾಮಿ ಅಧ್ಯಕ್ಷನಾಗಿಯೂ ಇದ್ದೆ. 1940ರಿಂದ 44 ರ ವರೆಗೆ ನ್ಯಾಯವಿಧಾಯಕ ಸಭೆಗೂ 1946ರಿಂದ 49ರ ವರೆಗೆ ಪ್ರಜಾಪ್ರತಿನಿಧಿಸಭೆಗೂ ಸದಸ್ಯನಾಗಿದ್ದೆ. ವಿಧಾಯಕ ಕಾರ್ಯ, ಖಾದಿ, ಹರಿಜನೋದ್ಧಾರಗಳಲ್ಲೂ ಆಸ್ಥೆಯನ್ನು ತಳೆದಿದ್ದೇನೆ. 1947ರ ಡಿಸೆಂಬರ್‌ನಲ್ಲಿ ತಾವರೆಕೆರೆ ಈಶ್ವರ ದೇವಸ್ಥಾನ, ಬಂಡೆ ರಂಗನಾಥ ದೇವಸ್ಥಾನಗಳಿಗೆ ಆಗಿನ ಶಿಕ್ಷಣ ಮಂತ್ರಿ ಚನ್ನಿಗರಾಮಯ್ಯನವರ ನೇತೃತ್ವದಲ್ಲಿ, ಊರವರ ಪ್ರೇರಣೆಯಿಂದಲೇ ಹರಿಜನರ ಪ್ರವೇಶಮಾಡಿಸಿದೆವು.

1957ರಿಂದ 62ರ ವರೆಗೆ ಶಿರಾದಿಂದ ಶಾಸನಸಭೆಗೆ ಆಯ್ಕೆಗೊಂಡೆ. ಮತ್ತೆ 1972ರಲ್ಲಿ ಕಳ್ಳಂಬೆಳ್ಳದಿಂದ ಆಯ್ಕೆಗೊಂಡೆ. ಆಡಳಿತ ಕಾಂಗ್ರೆಸ್ ಡಿ.ಸಿ.ಸಿ. ಉಪಾಧ್ಯಕ್ಷನಾಗಿದ್ದೇನೆ.

ವ್ಯ.ತು. 15

# ಸಿ. ಟಿ. ಹನುಮಂತಯ್ಯ

ಜನನ: 1910 ಉದ್ಯೋಗ: ಸಮಾಜ ಸೇವಕ ವಿಳಾಸ: ಹಳೇ ಸಂತೇಪೇಟೆ, ಶಿರಾ



ಸರಕಾರದ ಕೃಷಿ ಇಲಾಖೆಯಲ್ಲಿ ಫೀಲ್ಡ್‌ಮನ್ ಆಗಿದ್ದ ನಾನು 1934ರಲ್ಲಿ ತುಮಕೂರಲ್ಲಿ ಗಾಂಧೀಜಿಯವರು ಬಂದಾಗ ಅವರಿಗೆ ನೆಲಗಡಲೆಯ ಹಾರ ಅರ್ಪಿಸಲು, ಅವರು ನನ್ನನ್ನು 'ಮೈಸೂರು ಹನುಮಾನ್' ಎಂದು ಕರೆದರಲ್ಲದೆ ಬಡವರ ಸೇವೆಯನ್ನು ಹನುಮಂತನಂತೆ ಮಾಡಲು ಹೇಳಿದರು. ಅಂದಿನಿಂದ ಖಾದಿ ಧರಿಸಿ ರಾಜಕೀಯಕ್ಕಿಳಿದ ನಾನು ಮುಂದೆ ನನ್ನ ನೌಕರಿಯನ್ನು ಕಳೆದುಕೊಂಡೆ. ಕೋಡಿಹಳ್ಳಿ ಹರಿಜನ ಮಠದ ಸರ್ವಾಧಿಕಾರಿಯಾಗಿ ನೇಮಿಸಲ್ಪಟ್ಟ ನಾನು ಹರಿಜನರ ಹಿತರಕ್ಷಣೆಗಾಗಿ ಸಮ್ಮೇಳನಗಳನ್ನು ಸಂಘಟಿಸಿ ಸಂಸ್ಥಾನದ ಕಾಂಗ್ರೆಸ್ ನಾಯಕರಾದ ಕೆ. ಸಿ. ರೆಡ್ಡಿ, ಡಿ|| ದಾಸಪ್ಪ, ಎಚ್. ಸಿದ್ದಯ್ಯ, ಮಾಲಿ ಮರಿಯಪ್ಪ ಹಾಗೂ ಕೆ. ಹನುಮಂತಯ್ಯ ಇವರುಗಳ ಸಹಕಾರ ಪಡೆಯುತ್ತಿದ್ದೆ. 1934–35ರಲ್ಲಿ ನನ್ನ ಹರಿಜನ ಸಮಾಜದ ಜನರ ಜೊತೆ ತುಮಕೂರು, ಸೀಬಿ ನರಸಿಂಹಸ್ವಾಮಿದೇವಾಲಯ, ಗುಬ್ಬಿಯಪ್ಪನ ದೇವಾಲಯ, ಬ್ಯಾಲ್ಯ ಹನುಮಂತರಾಯ ದೇವಾಲಯ, ಗೂಳೂರು ವಿನಾಯಕ ದೇವಾಲಯಗಳನ್ನು ಪ್ರವೇಶಿಸಿದೆ. ಹರಿಜನರು ಇತರ ಹಿಂದೂಗಳಿಗೆ ಸಮಾನರೆಂದು ಗೂಳೂರಲ್ಲಿ ನಾನು ವಾದಿಸಿದೆ. ಅಲ್ಲಿ ನನ್ನ ಮೇಲೆ ಕೈಮಾಡಿದರು. 1936ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ನಡೆದ ಹರಿಜನ ಸಮ್ಮೇಳನದಲ್ಲಿ ನನಗೆ 'ಹರಿಜನ ಸಹಾಯಕ ಕೇಸರಿ' ಎಂಬ ಬಿರುದಿತ್ತು, ಬಂಗಾರದ ಪದಕ ನೀಡಿ ಗೌರವಿಸಿದರು.

1939ರಲ್ಲಿ ಜಂಗಲ್ ಸತ್ಯಾಗ್ರಹಕ್ಕಾಗಿ ನನ್ನನ್ನು ಬಂಧಿಸಿದ್ದರು. 1932ರಿಂದ 47ರ ವರೆಗೆ ಮೈಸೂರು ಹರಿಜನ ಸೇವಕ ಸಂಘದಲ್ಲಿ ನಾನು ದುಡಿದೆ. ಮದ್ಯಪಾನದ ವಿರುದ್ಧ ಅವರಲ್ಲಿ ಪ್ರಚಾರಮಾಡಿದೆ. ತುಮಕೂರು, ಸಿರಾಗಳಲ್ಲಿ ಹರಿಜನ ವಿದ್ಯಾರ್ಥಿಗಳಿಗಾಗಿ ಹಾಸ್ಟೆಲ್‌ಗಳನ್ನು ತೆರೆದೆ. 1941ರಲ್ಲಿ ತುಮಕೂರು ತಾಲ್ಲೂಕಿನಿಂದ ಕಾಂಗ್ರೆಸ್ ಪರ ಸ್ಪರ್ಧಿಸಿ ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆಗೊಂಡೆ. ಮುಂದೆ 1945ರಲ್ಲೂ ಅದೇ ರೀತಿ ಚುನಾಯಿತನಾದೆ. 1942ರಲ್ಲಿ 'ಕ್ವಿಟ್ ಇಂಡಿಯಾ' ಚಳವಳಿಯ ಪರ ಪ್ರಚಾರಭಾಷಣಗಳನ್ನು ಮಾಡಿದೆ. 1947ರಲ್ಲಿ ಜವಾಬ್ದಾರಿ ಸರಕಾರದ ಕಾಲಕ್ಕೆ ಬಂಧಿತನಾಗಿ ಚಿತ್ರದುರ್ಗ ಜೈಲಿನಲ್ಲಿದ್ದೆ.

ಸ್ವಾತಂತ್ರ್ಯನಂತರ 1951-52ರಲ್ಲಿ ಭಾರೀ ಬಹುಮತದಿಂದ ಮೈಸೂರು ಶಾಸನಸಭೆಗೆ ಆಯ್ಕೆಗೊಂಡೆ.

ವ್ಯ.ಕು. 16

## ಟಿ. ಆರ್. ಚನ್ನಪ್ಪ

ಜನನ : 1930 ಉದ್ಯೋಗ : ಕೃಷಿ ವಿಳಾಸ : ತೀತ, ತಾ॥ ಕೊರಟಗೆರೆ



ಬೆಂಗಳೂರಿನ ದೊಡ್ಡಣ್ಣ ಹೈಸ್ಕೂಲಿಗೆ 1937ರಲ್ಲಿ ಸೇರಿದ ನಾನು 2-3 ತಿಂಗಳಲ್ಲಿ ಬೆಂಗಳೂರಿನ ವಾತಾವರಣವನ್ನು ಪರಿಚಯ ಮಾಡಿಕೊಂಡೆ. ಪತ್ರಿಕೆಗಳನ್ನು ಓದುತ್ತಾ, ರಾಷ್ಟ್ರೀಯ ಭಾವನೆಗಳಿಂದ ಪ್ರೇರಿತನಾದೆ. ಬೆಂಗಳೂರಲ್ಲಿ ಹೊಸದಾಗಿ ರಚಿತವಾದ ವಿದ್ಯಾರ್ಥಿ ಫೆಡರೇಷನ್‌ಗೆ, ನಮ್ಮ ಊರ ಹೈಸ್ಕೂಲ್‌ನ ಪ್ರತಿನಿಧಿಯಾಗಿ ಆರಿಸಲ್ಪಟ್ಟೆ. ಈ ಸಂಸ್ಥೆಯ ಸಂಪರ್ಕದಿಂದ ವಾರಕ್ಕೊಮ್ಮೆ ಕೆಂಗೇರಿ ಗುರುಕುಲಾಶ್ರಮಕ್ಕೆಹೋಗುವ ಅಭ್ಯಾಸವಾಯಿತು. ಅಲ್ಲಿ ಅಧ್ಯಾತ್ಮಕ್ಕೆ ಸಂಬಂಧಿಸಿದ ವಿಚಾರಗಳ ಚರ್ಚೆ ನಡೆಯಿಸುವ ಪದ್ಧತಿ ಇತ್ತು. ನನಗೆ ಅಷ್ಟಾಗಿ ಅಧ್ಯಾತ್ಮದ ನಿಜ ಅರಿವು ಇಲ್ಲದಿದ್ದರೂ ಚರ್ಚೆಯಲ್ಲಿ ತೊಡಗುವ ಸಾಹಸವನ್ನು ಬಿಡದೆ ಮಾಡುತ್ತಿದ್ದೆ. ಆ ಸಂದರ್ಭದಲ್ಲಿ ಶೈತಾನ್ ಎಂಬೊಬ್ಬ ಅಮೇರಿಕನ್ ಶುದ್ಧ ಖಾದೀಧಾರಿಯಾಗಿ, ತನ್ನ ಮಕ್ಕಳಿಗೆ ಭಾರತೀಯ ಉಡುಪು ಹಾಕಿ, ತಾನೂ ಭಾರತೀಯತ್ವದಲ್ಲಿದ್ದುದು ಅಪೂರ್ವ ನೋಟ. ಅಲ್ಲಿ ಸಭೆಗಳಲ್ಲಿ ಕುಳಿತು ಚರ್ಚಿಸಲು ಅಗತ್ಯವಾದ ಭಾಷಾಲಾಲಿತ್ಯ, ಸಭಾಕಂಪನ ನಿವಾರಣೆ ತಕ್ಕಮಟ್ಟಿಗೆ ಆಯಿತು. ಇಂತಹ ಅವಧಿಯಲ್ಲಿ ರಜಾವೇಳೆಯಲ್ಲಿ ನನ್ನ ಹುಟ್ಟೂರಾದ ತೀತ ಗ್ರಾಮಕ್ಕೆ ಬಂದಾಗ ಅಲ್ಲಿನ ಬಾಲಮಂಡಲಿಯಲ್ಲಿ ನಾನೊಬ್ಬನೇ ಬೆಂಗಳೂರು ಹೈಸ್ಕೂಲ್‌ನಲ್ಲಿ ಓದುವ ಹುಡುಗನಾಗಿದ್ದೆನಾದ್ದರಿಂದ ನಾನು ಹೇಳುವ ಒಂದೊಂದು ಸುದ್ದಿಗೂ ಆ ಬಾಲಸಭೆಯಲ್ಲಿ ಪ್ರಾಮುಖ್ಯತೆ ಇರುತ್ತಿತ್ತು. ಆಗ್ಗೆ ನಾನು ಕೆಲವು ವರ್ತಮಾನಪತ್ರಿಕೆಗಳನ್ನು ಸಂಗ್ರಹಿಸಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸೆಣಸುತ್ತಿರುವ ಗಾಂಧೀಜಿ, ನೆಹರು, ಸುಭಾಸ್ ಚಂದ್ರ ಬೋಸ್, ಸ॥ ವಲ್ಲಭಭಾಯಿ ಪಟೇಲ್ ಮುಂತಾದವರ ವಿಚಾರದಲ್ಲಿ

ಹುರುಪು ಹುಟ್ಟುವಂತೆ ಮಾತನಾಡಿ, ನಾವೂ ಅವರಂತೆ ದೇಶಕ್ಕೆ ದುಡಿಯಬೇಕು ಎಂಬ ತೀರ್ಮಾನಕ್ಕೆ ಬಂದೆವು. ಇದಕ್ಕೆ ನನಗೆ ದೊರೆತ ಸಂಗಾತಿಗಳೆಂದರೆ ಶಂಕರಪ್ಪ, ಟಿ. ರಂಗಯ್ಯ, ಕೆಂಪಯ್ಯ, ನರಸಪ್ಪ, ಜಯರಾಮಯ್ಯ ಮತ್ತು ಹುಟ್ಟುಕುರುಡನಾದ ಟಿ. ಕಾಮಣ್ಣನೆಂಬೊಬ್ಬ ಹುಡುಗ. ಇವರೆಲ್ಲಾ ಸ್ವಲ್ಪ ಹೆಚ್ಚುಕಡಿಮೆ ನನ್ನಷ್ಟೇ ವಯಸ್ಸಿನವರು. ನಾವೆಲ್ಲ ಸಭೆಸೇರಿ ನಮ್ಮೂರಿನಲ್ಲಿ ಒಂದು ಕಾಂಗ್ರೆಸ್ ಧ್ವಜ ಸದಾ ಹಾರಾಡುವಂತೆ ಮಾಡಬೇಕೆಂದು ತೀರ್ಮಾನವನ್ನು ಕೈಗೊಂಡು, ಎರಡು ರೂಪಾಯಿ ಚಂದಾ ಸಂಗ್ರಹಿಸಿ, ಒಂದು ಬಾವುಟ ತಂದೆವು. ಆಗ ಕಾಂಗ್ರೆಸ್ ಸಂಸ್ಥೆ ಜನಾನುರಾಗಿಯಾಗಿರಲಿಲ್ಲ. ಸರ್ಕಾರದ ಅಧಿಕಾರಿಗಳು ವಕ್ರದೃಷ್ಟಿಯಲ್ಲಿ ನೋಡುತ್ತಿದ್ದರು. ಇದರ ಕಾರಣ ಆಸ್ತಿವಂತರೂ, ವ್ಯಾಪಾರಿಗಳೂ ಆ ಕಡೆ ದೃಷ್ಟಿ ಸಹ ಹಾಯಿಸುತ್ತಿರಲಿಲ್ಲ. ಇಂಥದರಲ್ಲಿ ಒಂದು ಕೀಲೆಣ್ಣೆ ಲಾಂದ್ರದ ಬೆಳಕಿನಲ್ಲಿ ಊರ ಮಧ್ಯೆ ಇರುವ ಒಂದು ಮನೆ ಹಜಾರದಲ್ಲಿ ನಮ್ಮ ಸಭೆ ನಡೆಯುತ್ತಿತ್ತು. ಊರಲ್ಲೆಲ್ಲ ಜೈಕಾರ ಹಾಕಿಕೊಂಡು ಹೋಗಿ, ಬಾಲದಳವನ್ನು ಕೂಡಿಸಿಕೊಂಡು ಸಭೆ ನಡೆಸುತ್ತಿದ್ದೆವು. ಇಂತಹ ಸಭೆಗೆ ಅಧ್ಯಕ್ಷತೆಗೆ ದೊರಕುತ್ತಿದ್ದವರೆಂದರೆ ನಮ್ಮ ತಂದೆ ಒಬ್ಬರೇ. ಬೇರೆಯವರ ದೃಷ್ಟಿಯಲ್ಲಿ ಅದು ನಗೆಪಾಟಲಾದರೂ, ಮಗನ ವ್ಯಾಮೋಹಕ್ಕೆ ಅವರ ಸಮ್ಮತಿಯಿರುತ್ತಿತ್ತು. ಎಲ್ಲ ಸಭೆಗಳಲ್ಲಿಯೂ ಉಪಯೋಗಿಸುವ ಒಂದೇ ನೂಲಿನ ಹಾರ ನಮ್ಮ ಈ ಬಾಲ ಮಂಡಲಿಯ ಆಸ್ತಿಗಳಲ್ಲಿ ಮುಖ್ಯವಾದುದು. ಇದು ರಜಾದಿನದ ಕಾಯಕ.

ಬೊಂಬಾಯಿಂದ ಬಂದ ನರಿಮನ್‌ರ ಭಾಷಣವನ್ನು ಸರ್ಕಾರ ತಡೆಹಿಡಿಯುವ ಸುದ್ದಿ ಬೆಂಗಳೂರು ವಿದ್ಯಾರ್ಥಿಗಳಲ್ಲಿ ತುಂಬಾ ಕುತೂಹಲವನ್ನು ಕೆರಳಿಸಿತ್ತು. ಅಂತೂ ಅದೇ ಪ್ರಥಮವಾಗಿ ವಿದ್ಯಾರ್ಥಿಗಳ ಮುಷ್ಕರದ ಕರೆ ಕೊಡಲಾಯಿತು. ಶಾಲಾ ಕಾಲೇಜುಗಳಿಂದ ವಿದ್ಯಾರ್ಥಿಗಳು ಹೊರಬಂದರು. ಬೆಂಗಳೂರು ಮಾರ್ಕೆಟ್ ಚೌಕದಲ್ಲಿರುವ ನಮ್ಮ ಶಾಲೆಯಿಂದ ಹೊರಬಂದಮೇಲೆ ಪುಟ್ಟಣ್ಣಶೆಟ್ಟರ ಟೌನ್‌ಹಾಲ್ ಕಡೆ ಓಡತೊಡಗಿದೆವು. ಯುನೈಟೆಡ್ ಮಿಶನ್ ಹೈಸ್ಕೂಲಿನಲ್ಲಿನ ವಿದ್ಯಾರ್ಥಿಗಳನ್ನು ಕರೆದು, ನಮ್ಮ ಗುಂಪಿಗೆ ಸೇರಿಸಿಕೊಂಡೆವು. ಅಲ್ಲಿಂದ ಮಾರ್ಥಾ ಆಸ್ಪತ್ರೆಯ ಮುಂದಣಿಂದ ಮೈಸೂರು ಬ್ಯಾಂಕ್ ಚೌಕಕ್ಕೆ ಸೇರಲು ನಮ್ಮ ಸೈನ್ಯ ಪ್ರಯಾಣ ಬೆಳೆಸಿತು. ಆದರೆ ಮ್ಯಾಜಿಸ್ಟ್ರೇಟ್ ಕೋರ್ಟ್ ಎದುರಿನಲ್ಲಿ ಪೋಲೀಸರು ವಿದ್ಯಾರ್ಥಿಗಳನ್ನು ತಡೆದು ಲಾಠೀ ಚಾರ್ಜ್ ಮಾಡಿದರು. ನನಗೆ ತಿಳಿದಂತೆ ವಿದ್ಯಾರ್ಥಿಗಳು ಯಾವುದೇ ಹಿಂಸಾತ್ಮಕ ಕಾರ್ಯದಲ್ಲಿ ತೊಡಗಿರಲಿಲ್ಲ. ಸರಕಾರದ ವಿರುದ್ಧವಾಗಿ ಮತ್ತು ಗಾಂಧಿ, ನೆಹರು, ನರಿಮನ್ ಮುಂತಾದವರ ಹೆಸರುಗಳನ್ನು ಕುರಿತಾಗಿ ಜೈಕಾರ ಮಾತ್ರ ಹಾಕುತ್ತಿದ್ದರು. ಅಂದು ಚೆನ್ನಾಗಿ ಚುರುಕು ಮುಟ್ಟುವಂತೆ ಪೆಟ್ಟು ತಿಂದವರಲ್ಲಿ ನಾನೂ ಒಬ್ಬ. ಅಲ್ಲಿಂದ ಚದುರಿ ಬನಪ್ಪಾ ಪಾರ್ಕ್ ಮೂಲಕ ಹಾದು ಮುಂದೆ ಸಾಗಿಹೋಗಿ ಮೈಸೂರು ಬ್ಯಾಂಕ್ ಚೌಕ ಸೇರಲು ನಮ್ಮಲ್ಲಿ ಕೆಲವರು ತೊಡಗಿದೆವು. ಅಷ್ಟರಲ್ಲಿ

ಗುಂಡು ಹಾರಿಸಿದರು. ಆಗತಾನೆ ನೆಯ್ಗೆ ಕೆಲಸ ನಿಲ್ಲಿಸಿ, ಈ ಗಲಭೆ ಸುದ್ದಿ ತಿಳಿಯುವ ಕುತೂಹಲದಿಂದ ಹೊರಬಂದು ನನ್ನ ಎಡಭಾಗಕ್ಕೆ ಕೇವಲ ಹತ್ತು ಗಜ ದೂರದಲ್ಲಿ ಒಂದು ಬಾಡಿ, ನಿಕ್ಕರ್ ಮಾತ್ರ ಧರಿಸಿ ನಿಂತಿದ್ದ ಅಣ್ಣಯ್ಯಪ್ಪ ಎಂಬಾತನಿಗೆ ಗುಂಡು ತಗುಲಿ ಆತ ಅಸುನೀಗಿದ್ದ. ನನ್ನ ಜೀವನದಲ್ಲಿ ಪ್ರಥಮ ಬಾರಿಗೆ ನೋಡಿದ ಆ ನೋಟ ದಿಗ್ಭ್ರಾಂತಿಯನ್ನುಂಟುಮಾಡಿತು. ಅನೇಕ ವಿದ್ಯಾರ್ಥಿಗಳು ವಾತ್ಸಲ್ಯದಿಂದ ಆತನ ದೇಹವನ್ನು ಹಿಡಿದೆತ್ತಿ ಪಕ್ಕದಲ್ಲಿದ್ದ ವಾಹನಕ್ಕೆ ಇಟ್ಟರು. ನನ್ನ ಎರಡು ಪುಟ್ಟ ಕೈಗಳೂ ಒಮ್ಮೆ ಅದಕ್ಕೆ ಕೈಹಾಕಿದಾಗ ಕೈಗೆ ಸೋರಿದುಕೊಂಡ ಆತನ ರಕ್ತ ದೇವರ ತೀರ್ಥವನ್ನು ಮುಟ್ಟಿದ ತೃಪ್ತಿಯನ್ನು ತಂದಿತು.

ಈ ಘಟನೆ ನನ್ನಲ್ಲಿ ರಾಷ್ಟ್ರೀಯತೆಯನ್ನು ಬಲಗೊಳಿಸಿದ್ದಲ್ಲದೆ ಆಂಗ್ಲರ ಬಗ್ಗೆ ದ್ವೇಷದ ಭಾವನೆಯನ್ನು ಬೆಳೆಸಿತು. ಅನಂತರದ ರಜೆಯಲ್ಲಿ, ನಮ್ಮೂರಿಗೆ ಬಂದಾಗ್ಗೆ ನಮ್ಮ ಬಾಲಸಭೆಯನ್ನು ತೀತಾ ಕಾಂಗ್ರೆಸ್ ಸಂಸ್ಥೆಯಾಗಿ ಪರಿಗಣಿಸಿ ಕೊರಟಗೆರೆ ಕಾಂಗ್ರೆಸ್ ಕಚೇರಿಯಲ್ಲಿದ್ದ ಜಿ. ಎನ್. ಕೃಷ್ಣಮೂರ್ತಿಯವರಿಂದ ಸದಸ್ಯತ್ವದ ಪುಸ್ತಕ ತಂದು ನೂರಾರು ಸದಸ್ಯರನ್ನು ಮಾಡಿದೆವು. ಈ ವೇಳೆಗೆ ನಮ್ಮ ಹಿಂಬಾಲಕರ ಸಂಖ್ಯೆ 500ಕ್ಕೂ ಹೆಚ್ಚಿದ್ದಿತು. ನನ್ನ ಶಾಲೆಗೆ ರಜ ದೊರೆತಾಗಲೆಲ್ಲ ನಮ್ಮೂರ ಕಾಂಗ್ರೆಸ್ ಕಾರ್ಯ ಚಟುವಟಿಕೆಗಳು ಸಾಗುತ್ತಿದ್ದವು. ಅಷ್ಟರಲ್ಲಿ ಧ್ವಜಸತ್ಯಾಗ್ರಹ ಪ್ರಾರಂಭವಾಗಿ ಕೊರಟಗೆರೆಯಲ್ಲಿ ಆ ಸಂಬಂಧ ನಡೆದ ಸಭೆಗಳಲ್ಲಿ ತುಮಕೂರಿನಿಂದ ರಂಗೈಯಂಗಾರ್, ಬಿ. ಸಿ. ನಂಜುಂಡಯ್ಯ, ಆರ್. ಎಸ್. ಆರಾಧ್ಯ ಇವರುಗಳು ಬಂದು ನಮ್ಮ ತಾಲ್ಲೂಕಿನ ಗಣ್ಯವ್ಯಕ್ತಿಯಾದ ಸೋಂಪುರದ ಎಸ್. ಹನುಮಂತರಾಯಪ್ಪನವರೊಂದಿಗೆ ಕಾರ್ಯ ಕಲಾಪಗಳು ಜರುಗುತ್ತಿದ್ದವು. ಆಗ ಮೈಸೂರು ಕಾಂಗ್ರೆಸ್ ಪ್ರಚಾರದ ಅಂಗವಾಗಿ ಕೆ. ಸಿ. ರೆಡ್ಡಿ, ಎಚ್. ಸಿ. ದಾಸಪ್ಪ, ವೀರಣ್ಣಗೌಡ, ಎಚ್. ಸಿದ್ದಯ್ಯ, ಎಸ್. ನಿಜಲಿಂಗಪ್ಪ, ಟಿ. ಸುಬ್ರಹ್ಮಣ್ಯಂ, ತಾಯಮ್ಮ, ಯಶೋಧರಮ್ಮ ಮುಂತಾದವರು ಕೊರಟಗೆರೆ ಪ್ರವಾಸ ಬಂದಾಗ ಅವರುಗಳಿಗೆ ಆಕರ್ಷಣೀಯ ಸ್ವಾಗತ ತೀತಾ ಗ್ರಾಮದಲ್ಲಿ ದೊರೆಯುತ್ತಿತ್ತು. ಆಗ ನಾನು ಕೇಂದ್ರವ್ಯಕ್ತಿಯಾಗಿ ಸ್ವಾಗತ ನೀಡುತ್ತಿದ್ದೆ. ಮಿಕ್ಕ ಗ್ರಾಮಗಳಲ್ಲಿ ಕಾಂಗ್ರೆಸ್ ಚಟುವಟಿಕೆಗಳು ಅಷ್ಟೊಂದು ಇರಲಿಲ್ಲ. ಹೆಚ್ಚುಕಡಿಮೆ ಮೈಸೂರು ಕಾಂಗ್ರೆಸ್ ಮುಂದಾಳುಗಳೆಲ್ಲ ನಮ್ಮೂರಿಗೆ ಭೇಟಿ ಕೊಟ್ಟಿದ್ದಾರೆ. ಹೀಗೆ ಭೇಟಿನೀಡಿದಾಗಲೆಲ್ಲ ಸಾಲುಜೊಡಿ ಎತ್ತುಗಳನ್ನು ಕಟ್ಟಿ ಗಾಡಿಯ ಮೇಲೆ ಕೂಡಿಸಿ, ವಾದ್ಯಸಮೇತ ಮೆರವಣಿಗೆ, ಊಟೋಪಚಾರಗಳನ್ನೂ ನಡೆಯಿಸುತ್ತಿದ್ದೆವು.

ಮೈಸೂರು ಕಾಂಗ್ರೆಸ್ ಕರೆಯಂತೆ ಜರುಗಿದ ಧ್ವಜಸತ್ಯಾಗ್ರಹದಲ್ಲಿ ನಾನೂ ಪಾಲ್ಗೊಂಡೆ ; ದಸ್ತಗಿರಿಯಾಗಲಿಲ್ಲ. ಒಟ್ಟಾರೆ ತೀತಾ ಗ್ರಾಮವೆಂದರೆ ಕಾಂಗ್ರೆಸ್ ಉಪಟಳದ ಗ್ರಾಮ, ಟಿ. ಆರ್. ಚನ್ನಪ್ಪ ಕ್ರಾಂತಿಕಾರಿ ಎಂಬ ಪ್ರತೀತಿ ಹರಡಿತ್ತು. 1939ರಲ್ಲಿ ಅರಣ್ಯಸತ್ಯಾಗ್ರಹ ಪ್ರಾರಂಭವಾಯಿತು. ನಾನು ಆ ವರ್ಷ ಖಾಯಿಲೆಯಿಂದ

ಇಡೀ ವರ್ಷ ಶಾಲೆಗೆ ಹೋಗಲೇ ಇಲ್ಲ. ಬಿಡುವಿನ ಆ ಅವಧಿಯಲ್ಲಿ ಕಾಂಗ್ರೆಸ್ ಕಲಾಪಗಳು, ಈ ದಿಸೆಯಲ್ಲಿ ಪತ್ರಿಕೆಗಳನ್ನು ಓದಿ ಹೇಳಿ ಯುವಕರನ್ನು ಪ್ರಚೋದಿಸುವುದು, ರಾಷ್ಟ್ರೀಯ ಕಾಂಗ್ರೆಸ್ ಮುಂದಾಳುಗಳ ಹೋರಾಟವನ್ನು ಬಣ್ಣಿಸಿ ಹೇಳುವುದು, ರಾತ್ರಿಕಾಲದಲ್ಲಿ ಪಾಠಶಾಲೆಮಾಡಿ, ಅನಕ್ಷರಸ್ಥರಿಗೆ ಅಕ್ಷರಾಭ್ಯಾಸ ಮಾಡಿಸುವುದು ಮುಂತಾದುವು ನನ್ನ ಪ್ರಧಾನಕಾರ್ಯಗಳಾಗಿದ್ದವು. ಕೆಲವು ಯುವಕರು ತಂಡತಂಡವಾಗಿ ಶಿರಾ ಕ್ಯಾಂಪ್‌ನಲ್ಲಿ ಅರಣ್ಯಸತ್ಯಾಗ್ರಹಕ್ಕೆ ಹೊರಡತಕ್ಕದ್ದೆಂದೂ ನಾನು ಮತ್ತು ನನ್ನ ತಂದೆ ಇಲ್ಲಿಯೇ ಉಳಿದು ಸೂಕ್ತ ಸಲಹೆ, ಪ್ರೋತ್ಸಾಹಗಳನ್ನು ನೀಡತಕ್ಕದ್ದೆಂದೂ ತೀರ್ಮಾನವಾಯಿತು. ಅದರಂತೆ 2–3 ತಂಡಗಳಲ್ಲಿ ಹೋಗಿ ಕೆಲವರು ದಸ್ತಗಿರಿಯಾಗಿ, ನಾನಾ ಅವಧಿಗೆ ಶಿಕ್ಷೆಗೊಳಗಾದರು. ಅವರಲ್ಲಿ ಮುಖ್ಯರು: ಎಸ್. ಶಂಕರಪ್ಪ, ನರಸಪ್ಪ, ಡಿ. ಕೆಂಪಯ್ಯ, ಜಯರಾಮಯ್ಯ ಮತ್ತು ಇತರ 20–25 ಜನ. ಇವರು ದಸ್ತಗಿರಿಯಾದನೇಲೆ ಪೋಲೀಸ್ ಸಬ್ ಇನ್ಸ್‌ಪೆಕ್ಟರು ಜುಲ್ಮಾನೆ ವಸೂಲಿಗೆ ಆಸ್ತಿ ಜಪ್ತಿಮಾಡಲು ಬಂದರು. ಎಸ್. ಶಂಕರಪ್ಪನ ಮನೆಗೆ ಮುತ್ತಿಗೆಯನ್ನು ಹಾಕಿ ಸಾಮಾನುಗಳನ್ನು ಹೊರತೆಗೆದರು. ಆಗ ಅಧಿಕಾರಿಗೆ ಇದೇ ಊರಿನ ಒಬ್ಬ ಭಾರೀ ಜಮೀನ್ದಾರರು ಕುಮ್ಮಕ್ಕಾಗಿ ನಿಂತರು. ಅಷ್ಟರಲ್ಲಿ ಉಳಿದವರ ಮನೆಗಳಲ್ಲಿ ಏನೂ ದೊರಕದಂತೆ ಮಾಡಿ, ಅವರ ತಂದೆತಾಯಿಗಳಿಗೆ ಸಮಾಧಾನ ಹೇಳಲಾಯಿತು. ಇದಿಷ್ಟು ಅನರ್ಥಕ್ಕೂ ನನ್ನನ್ನೂ ನನ್ನ ಕುಟುಂಬಸ್ಥರನ್ನೂ ಕಾರಣರನ್ನಾಗಿ ಮಾಡಿ, ಜನರ ಕ್ರೋಧಾಗ್ನಿ ನಮ್ಮ ಕಡೆಗೆ ಬೀಸುವಂತಾಯಿತು. ಅಂತೂ ಅದನ್ನು ಸಹಿಸಿದ್ದಾಯಿತು. ಸತ್ಯಾಗ್ರಹಿಗಳಲ್ಲಿ ಬಿಡುಗಡೆ ಹೊಂದಿ ಮನೆಗೆ ಬಂದಮೇಲೆ, ಕಾಂಗ್ರೆಸ್ ಚಟುವಟಿಕೆ ನಿಲ್ಲಿಸಲೇ ಇಲ್ಲ. ಆಗಾಗ್ಗೆ ರಾಷ್ಟ್ರೀಯ ಮುಂದಾಳುಗಳ ಭೇಟಿ, ಕಾಂಗ್ರೆಸ್ ಪ್ರಚಾರಕಾರ್ಯಗಳು ಜರುಗುತ್ತಲೇ ಇದ್ದವು. 'ಕ್ವಿಟ್ ಇಂಡಿಯಾ' ಚಳವಳಿ ಪ್ರಾರಂಭ ಆದಾಗ ನಾನು ಎಸ್.ಎಸ್.ಎಲ್.ಸಿ. ಪಾಸಾಗಿದ್ದೆ. ನಮ್ಮ ತಂದೆ ಹೊಲಿಗೆ ಕೆಲಸದಲ್ಲಿ ದೇಹ ಸವೆದು ಹಾಸಿಗೆ ಹಿಡಿದು ಮಲಗಿದ್ದರು. ಹಾಸಿಗೆಯ ಮೇಲೆಯೇ ಮಲಮೂತ್ರ ವಿಸರ್ಜನೆ ಆಗುತ್ತಿತ್ತು. ಗಂಟೆಗಂಟೆಗೂ ಬಟ್ಟೆಗಳನ್ನು ಬದಲಿಸಿ ಒಗೆದು ತರಬೇಕಿತ್ತು. ನನ್ನ ತಾಯಿ ಏಳನೆಯ ಮಗುವಿನ ಗರ್ಭಿಣಿಯಾಗಿ ತಿಂಗಳು ತುಂಬಿತ್ತು. ಇಂತಹ ವೇಳೆಯಲ್ಲಿ, ತುಮಕೂರು ಕಡೆಯಿಂದ ಯುವಕರ ತಂಡವೊಂದು, ಚಳವಳಿಯ ಘೋಷಣೆಯೊಂದಿಗೆ ಊರಿಗೇ ಬಂದಿತು. ನಮಗೆಲ್ಲ ಮತ್ತೆ ರೋಮಾಂಚನವಾಗಹತ್ತಿತು. ಮನೆಯ ಕಾರ್ಪಣ್ಯಗಳೆಲ್ಲ ಮರೆತುಹೋದವು. ಹೇಗೋ ಬಂದವರಿಗೆಲ್ಲ ಆತಿಥ್ಯಮಾಡಿ ಪಕ್ಕದ ಸಂತೆ ಕೇಂದ್ರ ಮಾವತ್ತೂರಿಗೆ ಹೋದೆವು. ಆ ದಿನ ಅಲ್ಲಿ ಸಂತೆ ; ಸೇಂದಿಯ ದೊಡ್ಡ ಸಂಗ್ರಹ ಅಲ್ಲಿತ್ತು. ಅದನ್ನೆಲ್ಲ ಮಣ್ಣುಪಾಲು ಮಾಡಿ, ಸೇಂದಿ ಅಂಗಡಿ ಸುಟ್ಟಾಯಿತು. ಮತ್ತೆ ಆ ರಾತ್ರಿ ನಮ್ಮೂರಾದ ತೀತದಲ್ಲಿ ಸಾರ್ವಜನಿಕ ಸಭೆ, ನನ್ನ ತಂಗಿ ಪುಟ್ಟಮ್ಮಯ್ಯ ಪ್ರಾರ್ಥನೆ ಮಾಡುವವಳು.

ಅವಳ ಪ್ರಿಯವಾದ ಹಾಡು 'ಭಾರತಮಾತೆಯೆ, ಭಾರತಮಾತೆಯೆ ಎಂದು ನೀ ತಲೆ ಎತ್ತುವೆ? ಎಂದು ಲೋಕದ ಜನರ ಹೃದಯದಿ ನಿನ್ನ ಮಹಿಮೆಯ ಬಿತ್ತುವೆ?' ಇದನ್ನು ಮತ್ತೆ ಮತ್ತೆ ಹೇಳಿಸಿ ಕೇಳಿತು ಜನತೆ.

ನಮ್ಮ ತಂದೆ ಹಾಸಿಗೆ ಹಿಡಿದಿದ್ದ ಕಾರಣ, ನಾನೇ ಆ ದಿನದ ಅಧ್ಯಕ್ಷತೆ ವಹಿಸ ಬೇಕಾಯಿತು. ಅಂತೂ ಆ ದಿನ ರಾತ್ರಿ ನಮಗೆ ಎಲ್ಲಿಲ್ಲದ ವಿಜಯೋತ್ಸಾಹ. ಬಂದಿದ್ದ ಪೋಲೀಸರಿಗೂ ಅನ್ನ ಹಾಕಿ ಅವರೆದುರಿನಲ್ಲೇ ಸರ್ಕಾರವನ್ನು ಬೈದು ತೃಪ್ತಿಪಟ್ಟೆವು. ಅದುವರೆಗೆ ನಮ್ಮ ಹಿಂಬಾಲಕರ ಸಂಖ್ಯೆ ಗಣನೀಯ ಮಟ್ಟದಲ್ಲಿ ಏರಿದ್ದಿತು.

ಅದಾದ ಒಂದು ವಾರಕ್ಕೆ ಉದಯದಲ್ಲೇ ಎದ್ದು ತೀರ ಸುಸ್ತಾಗಿದ್ದ ನನ್ನ ತಂದೆ ಯನ್ನು ಸತ್ಕರಿಸಿ ಹಾಸಿಗೆಮೇಲೆ ಹಾಸಿದ್ದ ಬಟ್ಟೆಗಳನ್ನು ತೊಳೆದು ತರಲು ನಾನು ನದಿಯ ಕಡೆ ಹೋಟೆ. ಮನೆಯಲ್ಲಿ ಉಳಿದಿದ್ದವರು ನನ್ನ ತಾಯಿ, ನಾಲ್ಕು ಜನ ತಂಗಿಯರು ಮತ್ತು ಒಂದು ಮಗು. ಹಾದಿಯಲ್ಲಿ ಶಾಲೆಯ ಬಳಿ ಕುಳಿತಿದ್ದ ಸಬ್-ಇನ್ಸ್‌ಪೆಕ್ಟರ್ ನನ್ನನ್ನು ದಸ್ತಗಿರಿ ಮಾಡಿದರು. ಮನೆಗೇ ಬಿಡಲಿಲ್ಲ. ಹಾಗೂ ಚಂಡಿ ಹಿಡಿದು ಮನೆಗೆ ಹೋಗಿ ಬರಲೇಬೇಕೆಂದು ಕೇಳಿದಾಗ ಪೋಲೀಸ್ ಕಾವಲಲ್ಲಿ ಬಿಟ್ಟರು. ಆದರೆ ನನ್ನ ತಾಯಿಗೆ ಹೆರಿಗೆ ನೋವು ಪ್ರಾರಂಭವಾಗಿತ್ತು. ಅದಕ್ಕಾಗಿ ಸೂಲಗಿತ್ತಿಯನ್ನು ಕರೆತರಲು ಮತ್ತು ಇತರ ವಿಚಾರಕ್ಕೂ ನನ್ನ ಆಗತ್ಯ ತುಂಬಾ ಇತ್ತು. ನನ್ನ ತಂದೆ ಪ್ರಜ್ಞಾ ಶೂನ್ಯರಾಗಿದ್ದರು. ಇಂತಹ ಸ್ಥಿತಿಯಲ್ಲಿ ಬಳೆ ಹಾಕಿ ಪೋಲೀಸರು ನನ್ನನ್ನು ಹಿಡಿ ದಿದ್ದಾಗ ಉಳಿದ ನಾಲ್ಕು ಜನ ನನ್ನ ತಂಗಿಯರ ಸ್ಥಿತಿ ಏನಾಗಿರಬೇಡ? ನನ್ನನ್ನು ಬಿಡಲೇ ಇಲ್ಲ. ಕೊರಟಗೆರೆ ಲಾಕಪ್ಪಿಗೆ ನನ್ನನ್ನು ಸಾಗಿಸಿದರು. ನನ್ನ ಜತೆಗೆ ಮತ್ತೆ ಐದು ಜನರನ್ನು ಹಿಡಿದು ತಂದರು. ಅವರೆಂದರೆ ಕುರುಡ ಕಾಮಣ್ಣ, ಎಸ್. ಶಂಕರಪ್ಪ, ಟಿ. ರಂಗಯ್ಯ, ಟಿ. ನರಸಪ್ಪ, ಮುದ್ದುರಾಮಯ್ಯ (ನಡ್ಡಗೆರೆ). ಮೂರು ದಿನಗಳನಂತರ ಮಧುಗಿರಿ ಲಾಕಪ್ಪಿಗೆ ಸಾಗಿಸಿದರು. ಆರು ಜನರನ್ನೂ ಒಂದು ಸಣ್ಣ ಕೋಣೆಯಲ್ಲಿ ಕೂಡಿ ಬೀಗ ಹಾಕಿ, ಮೂತ್ರವಿಸರ್ಜನೆಗೆ ಒಂದು ಮಡಕೆ ಮಾತ್ರ ಕೊಟ್ಟಿದ್ದರು. ಅದನ್ನು ದಿನಾ ಒಬ್ಬರಂತೆ ಸರದಿಯ ಮೇಲೆ ತೊಳೆದು ಶುದ್ಧಿ ಮಾಡುತ್ತಿದ್ದೆವು. ಮಧು ಗಿರಿಯ ಮುಖ್ಯಸ್ಥರಾದ ನಂಜಯ್ಯ ಶೆಟ್ಟರು, ಕೆ. ಹೆಂಜಾರಪ್ಪ, ಮಾಲಿ ಮರಿಯಪ್ಪ ಸ್ಥಾನಬದ್ಧತೆಯಲ್ಲಿದ್ದರು. ಹೀಗಾಗಿ ಅಲ್ಲೂ ನಮ್ಮನ್ನು ವಿಚಾರಿಸುವವರು ಯಾರೂ ಇರಲಿಲ್ಲ. ಈ ಲಾಕಪ್ಪನ್ನು ನಾವು ಸೇರಿದುದು 2-9-1942ರಲ್ಲಿ. ನಮ್ಮ ಮೇಲೆ ಸಿ ಸಿ. ನಂ.147 48/42-43ನೇ ಕೇಸು ಹಾಕಿ 12-11-42ರ ತನಕ ಅಲ್ಲೇ ಇಟ್ಟಿದ್ದು ಐ.ಪಿ.ಸಿ. 436-147-114ನೇ ವಿಧಿಯ ರೀತ್ಯ ಸೆಷನ್ ಕಮಿಟ್ ಮಾಡಿ, ತುಮಕೂರಿಗೆ ರವಾನಿಸಿದರು. ಇದಕ್ಕೂ ಒಂದು ಕಾರಣವಿತ್ತು. ಈ ನ್ಯಾಯಾಲಯಕ್ಕೆ ಲಗತ್ತಾಗಿ ಮಧುಗಿರಿ ಸಬ್‌ಡಿವಿಜನ್ ಕಚೇರಿಯಿದೆ. ಈ ರೆವಿನ್ಯೂ ಸಬ್‌ಡಿವಿಷನ್ ಸಾಹೇಬರು ಕಂದಾಯ ವಸೂಲಿಗೆ ಬಂದಾಗ ಪಿಕೆಟ್ ಮಾಡಿ, ಇಡೀ ನಮ್ಮ ಕೋಳಾಲ ಹೋಬಳಿ

ಯಲ್ಲಿ ಎಲ್ಲೂ ಅವರ ವಸೂಲಿ ಕೆಲಸ ಸಾಗದಂತೆ ಮಾಡಿದ್ದೆವು. ಇದರ ಆಗ್ರಹ ಅವರಿಗೆ ತುಂಬಾ ಇತ್ತು. ಶೀತದ ಹೆಸರು ಹೇಳುತ್ತಲೆ 'ಪುಂಡರ ಗ್ರಾಮ' ಎಂದು ಮ್ಯಾಜಿಸ್ಟ್ರೇಟರಿಗೆ ಹೇಳಿದ್ದರೆಂದೂ ವದಂತಿ. ಮಧುಗಿರಿ ಲಾಕಪ್‌ನಲ್ಲಿದ್ದ ಎರಡು ತಿಂಗಳು ಹತ್ತು ದಿನಗಳ ಅವಧಿಯಲ್ಲಿ ಒಂದೇ ಒಂದು ಬಾರಿ ಸ್ನಾನ ಮಾಡಲೂ ಸಾಧ್ಯವಾಗಲಿಲ್ಲ. ಮೈಗೆ ಕೊಳೆ ಹತ್ತಿ ಅಸಹ್ಯವಾಗುತ್ತಿತ್ತು. ಕೂರೆ ತಗಣೆಗಳಂತೂ ನಮ್ಮ ಪರಿಚಿತ ಪ್ರಾಣಿಗಳಾಗಿ ಬಿಟ್ಟವು. ಅಲ್ಲಿನ ದಫೇದಾರ್ ಲಾಠಿಯ ದೊಣ್ಣೆಯೊಡನೆ ಪ್ರತಿದಿನ ಬೆಳಗ್ಗೆ, ಮಲ ವಿಸರ್ಜನೆಗೆ ಬಿಟ್ಟಾಗ ಬಳೆ ಹಾಕಿ ಸಾಗಿಸುತ್ತ ತಲೆ ಮೇಲೆ ಲಟ್‌ಲಟ್ ಎಂದು ಕುಟುಕಿಸಿ ನಮ್ಮ ಎಣಿಕೆ ಮಾಡುತ್ತಿದ್ದ. ಮೊದಲ ನಾಲ್ಕೈದು ದಿನ ಆಹಾರ ತಿನ್ನಲಾಗಲಿಲ್ಲ. ಅನ್ನದಲ್ಲಿ ಅಗುಳಿಗಿಂತಲೂ ಕಲ್ಲು ನೆಲ್ಲಿನ ಸಂಖ್ಯೆಯೇ ಜಾಸ್ತಿಯಿರುತ್ತಿತ್ತು. ಅಷ್ಟರಲ್ಲಿ ಮಧುಗಿರಿ ತಾಲ್ಲೂಕು ಬ್ಯಾಲ್ಯ ಗ್ರಾಮದಿಂದ ನಲವತ್ತು ಜನರನ್ನು ಹಿಡಿದು ತಂದರು. ಅವರು ರಾಜಕೀಯ ಕೈದಿಗಳೇ. ಆಗ ನಮ್ಮ ಗುಂಪು ಬಲವಾಗಿದ್ದು ಒತ್ತಾಯ ಹಾಕಿದ ಫಲವಾಗಿ, ನಾವೇ ಅಡಿಗೆ ಮಾಡಿಕೊಳ್ಳಲು ಅನುಮತಿ ನೀಡಿದರು. ಆದರೆ ಯಾರಿಗೂ ಅನುಭವವಿಲ್ಲ. ಆದರೂ ನಾನೇ ಧೈರ್ಯಮಾಡಿ 60 ಜನ ರಾಜಕೀಯ ಕೈದಿಗಳಿಗೂ ಅಡಿಗೆಮಾಡಿ ಹಾಕಿದೆ. ಅಲ್ಲಿಂದಾಚೆಗೆ ಅಕ್ಕಿ ಜಾಲಿಸಿ ಹಾಕಿ ಬೇಯಿಸುತ್ತಿದ್ದುದರಿಂದ ಎಲ್ಲರಿಗೂ ಊಟದಲ್ಲಿ ಕೊಂಚ ತೃಪ್ತಿ ಉಂಟಾಗತೊಡಗಿತು. ಅದರಲ್ಲೂ ಮಧುಗಿರಿ ತಾಲ್ಲೂಕು ನಿಟ್ರಹಳ್ಳಿ ಗ್ರಾಮದ ಗುರುಪಾದಪ್ಪ ಎಂಬ ವಯಸ್ಕರೊಬ್ಬರು ಶಿವಪೂಜಾನಿಷ್ಠರು. ಮಗ ರುದ್ರಾರಾಧ್ಯನೊಂದಿಗೆ ದಸ್ತಗಿರಿಯಾಗಿ ಬಂದಿದ್ದರು. ಅವರಿಗಂತೂ ಈ ನೂತನ ವ್ಯವಸ್ಥೆಯು ಆಹಾರ ಸೇವಿಸಲು ಮಾರ್ಗ ಮಾಡಿಕೊಟ್ಟರು. ಉಳಿದೆಲ್ಲ ಕಿರುಕುಳಗಳು ಕಡಿಮೆಯಾಗಲೇ ಇಲ್ಲ. ಒಂದು ದಿನ ಲಾಕಪ್ ಆಫೀಸರಾಗಿದ್ದ ಅಲ್ಲಿನ ಸಬ್-ರಿಜಿಸ್ಟ್ರಾರ್‌ರವರನ್ನು ಸ್ನಾನಮಾಡಲು ಮತ್ತು ಪೋಲೀಸರಿಂದ ಆಗುತ್ತಿದ್ದ ಕಿರುಕುಳದಿಂದ ಪಾರುಗಾಣಿಸಲು ಅವಕಾಶ ಮಾಡಿಕೊಡಬೇಕಾಗಿ ಕೇಳಿಕೊಂಡಾಗ "ಇದನ್ನೆಲ್ಲ ಬಯಸುವವರು ಇಂತಹ ಪುಂಡಾಟಿಕೆ ಕೆಲಸಕ್ಕೆ ಬರಬಾರದ್ರೀ. ನಾವೇನೂ ಮಾಡ್ಲಿಕ್ ಬರೊಲ್ಲ" ಎಂದರು. ಆ ದಿನದಿಂದಾಚೆಗೆ ಎಣಿಸುವಾಗ ತಲೆ ಮೇಲೆ ಬೀಳುತ್ತಿದ್ದ ಲೊಟಿಕ್ ಪೆಟ್ಟು ಹೆಚ್ಚು ನೋವು ಕೊಡತೊಡಗಿತು. ನಮಗಿಂತ ಮುಂದೆ ಬ್ಯಾಲ್ಯದ ಜನ ತುಮಕೂರು ಜೈಲ್ ಸೇರಿದ್ದರು. ನಮ್ಮ ಪೈಕಿ ಕಾಮಣ್ಣನು ಊರ ಜಮೀನ್‌ದಾರರ ತಮ್ಮನಾಗಿದ್ದುದರಿಂದ ಕೋರ್ಟಿಗೆರೆಯಿಂದಲೇ ಜಾಮೀನ್ ಮೇಲೆ ಅವನನ್ನು ಬಿಡಿಸಿಕೊಂಡುಹೋಗಿದ್ದರು. ಇನ್ನುಳಿದ ನಮ್ಮನ್ನು ತಾ|| 12-11-1942 ರಂದು ತುಮಕೂರು ಜೈಲಿಗೆ ಸೇರಿಸಿದರು.

ಅಲ್ಲಿ ಈ ರೀತಿಯ ಕಿರುಕುಳವಿರಲಿಲ್ಲ. ಜೈಲಿನ ತುಂಬ ರಾಜಕೀಯ ಕೈದಿಗಳೇ. ಅದೂ ಸಾವಿರ ಸಂಖ್ಯೆಯಲ್ಲಿ. ತಿಪಟೂರು, ಗೌರಿಬಿದನೂರು, ಶಿರಾ, ಗುಬ್ಬಿ, ತುಮಕೂರು ಮತ್ತು ಎಲ್ಲಾ ಕಡೆಯ ಕೈದಿಗಳು ಅಲ್ಲಿದ್ದರು. 17-12-1942ರಲ್ಲಿ

ನಮ್ಮ ಮೇಲೆ ಹಾಕಿದ್ದ ಕೇಸು ವಜಾ ಆಗಿ ನಮ್ಮನ್ನು ಬಿಟ್ಟುಬಿಟ್ಟರು. ಅಂದು ರಾತ್ರಿ 22 ಮೈಲಿ ನಡೆದುಕೊಂಡೇ ಊರಿಗೆ ಮನೆಗೆ ಬಂದಾಗ ಯಾರಿಗೂ ನನ್ನ ಮೇಲೆ ಮಮಕಾರವಿಲ್ಲವಾಯಿತು. ಇದನ್ನು ಅರ್ಥಮಾಡಿಕೊಂಡು, ನಾನು ಕೆಲತಿಂಗಳನಂತರ ಮನೆ ಬಿಟ್ಟು ಹೊರಟೆ, ಬೆಂಗಳೂರು ಸೇರಿದೆ. ವಿಮಾನ ಕಾರ್ಖಾನೆಯ ಕಡೆ ಹೋಗಿ ಉದ್ಯೋಗಾರ್ಥಿಗಳ ಸಾಲಿನಲ್ಲಿ ನಿಂತೆ. ನನ್ನನ್ನು ಆಯ್ಕೆಮಾಡಿಕೊಂಡರು. ವಾಚ್ ಅಂಡ್ ವಾರ್ಡ್ ಇಲಾಖೆಯಲ್ಲಿ ಗಾರ್ಡ್ ಎಂದು ನೇಮಿಸಿ, ಒಂದು ಬ್ಯಾಡ್ಜ್ ಕೊಟ್ಟರು. ಇದಾದುದು 14-5-1943ರಲ್ಲಿ. ಸಂಬಳ ಮಾಹೆಯಾನ ಅಲೋಯನ್ಸ್ 14 ರೂ. ಸೇರಿ 44 ರೂ. ಆಗ್ಗೆ ಅದು ಅತಿ ಉತ್ತಮ ಸಂಬಳ. ಅಂದು ನನ್ನ ಜೊತೆಯಲ್ಲಿ ಅಲ್ಲಿ ಕೆಲಸಕ್ಕೆ ಸೇರಿದವರು ಇಂದೂ ಇದ್ದಾರೆ. ಅವರ ಸಂಬಳ ಈಗ 800 ರೂ.

ಹೀಗೆ ಪ್ರಾರಂಭವಾದ ನನ್ನ ಸರ್ಕಾರಿ ಜೀವನದಲ್ಲಿ ಮಾಹೆಯಾನ ಸ್ವಲ್ಪ ಉಳಿಸಿ ಮನೆಗೆ ಕಳಿಸಬೇಕೆಂದು ನಿಶ್ಚಯಿಸಿದ್ದೆ. ಆದರೆ ತಾ|| 19-6-1943ರಲ್ಲಿ ನನ್ನನ್ನು ಕೆಲಸದಿಂದ ತೆಗೆದುಹಾಕಿದರು. ಕಾರಣ, ನನ್ನ ನಡತೆಯ ಮಾಹಿತಿ ಕೋರಿ ನಮ್ಮ ತಾಲ್ಲೂಕು ಪೋಲೀಸ್ ಸಬ್-ಇನ್ಸ್‌ಪೆಕ್ಟರಿಗೆ ಕಾರ್ಖಾನೆಯವರು ಪತ್ರ ಬರೆದಿದ್ದರು. ಅದಕ್ಕೆ ಉತ್ತರವಾಗಿ, ಅವರು "**He and his father are staunch Congressites**" ಎಂದು ಬರೆದಿದ್ದರು. ಅದನ್ನೇ ನಮೂದಿಸಿ ನನ್ನನ್ನು ಕೆಲಸದಿಂದ ತೆಗೆದರು. ಆ ಪತ್ರ ಕಳೆದುಹೋಯಿತು. (ಇತ್ತೀಚೆಗೆ ಎಚ್.ಎ.ಎಲ್.ಗೆ ಹೋಗಿ ಅರ್ಜಿ ಕೊಟ್ಟು ಕೇಳಲಾಗಿ ಸದರಿ ಫೈಲು ಇನ್ನೂ ಇದೆ. ಆದರೆ ಆ ಪತ್ರದ ನಕಲನ್ನು ಕೊಡುವುದಿಲ್ಲವೆಂದು ಹೇಳಿ ಸರ್ವಿಸ್ ಸರ್ಟಿಫಿಕೇಟ್ ಮಾತ್ರ ಕೊಟ್ಟರುತ್ತಾರೆ.) ಹೀಗಾಗಿ ನನ್ನ ನೌಕರಿಯೂ ಹೋಯಿತು. ಮತ್ತೆ ತೀತಕ್ಕೇ ಬಂದು ಸ್ವಂತ ಹೊಲಿಗೆ ಕೆಲಸಮಾಡಲು ತೊಡಗಿದೆ. ರಾಜಕೀಯ ಹವ್ಯಾಸದವನಿಗೆ ಸ್ಥಿರತೆಯೆಲ್ಲಿ? ಹಾಗೂ ಹೀಗೂ ಕಂಟ್ರಾಕ್ಟರನಾದೆ. ಇನ್‌ಶೂರೆನ್ಸ್ ಏಜೆಂಟನಾದೆ. ಇವಾವುವೂ ನನ್ನ ಬಡತನವನ್ನು ಬಗೆಹರಿಸದಾದವು. ಕಾರಣ ಆ ಉದ್ಯಮಗಳಿಗೆ ಅಗತ್ಯವಾದ ಕೆಲವು ಗುಣಗಳು ನನ್ನಲ್ಲಿ ಇಲ್ಲದಿದ್ದುದು. ಮತ್ತೆ 1947ರಲ್ಲಿ 'ಚಲೋ ಮೈಸೂರ್' ಚಳವಳಿ ಪ್ರಾರಂಭವಾಯಿತು. ಆರ್. ಚೆನ್ನಿಗರಾಮಯ್ಯನವರು ಆಗತಾನೇ ಕಾಂಗ್ರೆಸ್ ಸೇರಿದ್ದರು. ತಾಲ್ಲೂಕಿನ ಪ್ರಮುಖ ಲಾಯರು ರಾಮಯ್ಯನವರು ಸೇರುವ ಬಯಕೆ ತೋರಿದರು. ಚಳವಳಿ ನಡೆದಾಗ ಒಂದು ದಿನ ನಾನು ಕೊರಟಗೆರೆಗೆ ಏನೋ ಕಾರ್ಯನಿಮಿತ್ತ ಹೋಗಿದ್ದೆ. ಅಂದಿನ ತಹಸೀಲ್ದಾರ್, ಪೋಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಇವರುಗಳು ನನ್ನನ್ನು ಹಿಡಿದು ಲಾಕಪ್ಪಿಗೆ ಹಾಕಿಸಿದರು. ಕ್ರಾಂತಿಕಾರಕ ಊರೆಂದು ಪ್ರತೀತಿಯಾಗಿದ್ದ ಕಾರಣ ನಮ್ಮೂರಿಗೆ ಬರಲು ಅವರಿಗೆ ದಿಗಿಲು! ಆ ರಾತ್ರಿಯೇ ತಮ್ಮೆಲ್ಲ ಸಿಬ್ಬಂದಿಯೊಂದಿಗೆ ಪೋಲಿಸ್ ಸ್ಟೇಷನ್ನಿನಲ್ಲಿ ನನ್ನನ್ನು ಲಾಠಿಯಿಂದ ಚೆನ್ನಾಗಿ ಹೊಡೆದು ಸೊರಗಿಸಿದರು. ನನ್ನನ್ನು ನಡೆಬಿಡಿಸು ಭಯವುಂಟುಮಾಡುವುದು ಅವರ ಗುರಿ. ಅದರಂತೆ ಮಾಡಿದರು.

ಅವರಿಗೆ ಕಾರಣ ಕೊಡುವ ಸೌಜನ್ಯವಾಗಲಿ, ಒಳ್ಳೆಯ ಭಾಷೆಯಾಗಲಿ ಬರಲಿಲ್ಲ. ಊರವರಾರೂ ನನ್ನ ರಕ್ಷಣೆಗೆ ಬರಲಿಲ್ಲ. 2 ದಿನ ಹಾಗೇ ಇಟ್ಟಿದ್ದು, ಬೇರೊಂದೆಡೆ ಇಟ್ಟಿದ್ದ ಸಣ್ಣ ವಿದ್ಯಾರ್ಥಿಗಳ ತಂಡವೊಂದನ್ನು ಜತೆಗೂಡಿಸಿ, ಬಸ್ಸಿನಲ್ಲಿ ಕೂಡಿಸಿ ಕೊಂಡು 'ಅಕ್ಕಾಜಹಳ್ಳಿಗಿಡ' ಎಂಬ ಒಂದು ಕಾಡಿಗೆ ಬಿಡಲು ತೊಡಗಿದರು. ಆಗ ಪೋಲಿಸರ ಸಂಖ್ಯೆ ಕಡಿಮೆ ಇತ್ತು. ನಾವೇ ಅವರನ್ನು ಬೆದರಿಸಿ ಕಾಡಿನಲ್ಲಿ ಇಳಿಸಿ ಬಿಟ್ಟು, ಅದೇ ಬಸ್ ತಿರುಗಿಸಿಕೊಂಡು ಕೊರಟಗೆರೆಗೆ ಬಂದೆವು. ಎಲ್ಲಾ ಕಡೆಗೂ ಸುದ್ದಿ ಕಳಿಸಿದೆವು. ಐದಾರುಸಾವಿರ ಜನ ಎಲ್ಲ ಕಡೆಯಿಂದ ಧಾವಿಸಿದರು. ಶಾಂತ ರೀತಿಯಿಂದ ಕೊರಟಗೆರೆ ತಾಲ್ಲೂಕು ಆಫೀಸ್ ಸುತ್ತ ಜನರನ್ನು ಕೂಡಿಸಿ, ನಮ್ಮಿಂದ ಆ ಮುಂಚೆ ವಶಪಡಿಸಿಕೊಂಡಿದ್ದ ಬಾವುಟ ಕೊಡಲು ಕೇಳಿದೆವು. ಅವರು ಒಪ್ಪಲಿಲ್ಲ. 5 ಗಂಟೆತನಕ ತಾಲ್ಲೂಕು ಆಫೀಸಿನ ಒಳಕ್ಕಾಗಲಿ, ಹೊರಕ್ಕಾಗಲಿ ಯಾರನ್ನೂ ಬಿಡದೆ, ಸತ್ಯಾಗ್ರಹಿಗಳನ್ನು ಕೂಡಿಸಿದೆವು. ಎರಡು ದಿನಗಳ ಹಿಂದೆ ನನ್ನನ್ನು ಹೊಡೆದಿದ್ದ ಪೋಲಿಸರು ತಲೆಮರೆಸಿಕೊಂಡರು. ಸುಮಾರು 4 ಗಂಟೆಗೆ, ಬಾವುಟವನ್ನು ಅಧಿಕಾರಿ ಗಳಿಂದ ಕಸಿದುಕೊಂಡು, ತಾಲ್ಲೂಕು ಆಫೀಸಿನ ಮೇಲೆ ಅಧಿಕೃತವಾಗಿ ಹಾರಿಸಿದೆವು ಸ್ವಾತಂತ್ರ್ಯಘೋಷಣೆಗಳನ್ನು ಕೂಗಿದನಂತರ ನಾನು ಊರನ್ನು ಸೇರಿದೆ. ಆ ದಿನ ರಾತ್ರಿಯೇ ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಘೋಷಣೆಯಾಯಿತು. ಒಂದು ವಾರದೊಳಗಾಗಿ ಬಂಧಿತರೆಲ್ಲರ ಬಿಡುಗಡೆಯಾಯಿತು. ಈ ವೇಳೆಗೆ ಸತ್ಯಾಗ್ರಹಿಗಳ ಚಟುವಟಿಕೆಗಳು ಹಿಂದಿನಂತಿರದೆ ಹೊಸ ರೀತಿಯದಾಗಿ ಕಾಣುತ್ತಿತ್ತು; ತಮ್ಮ ಕೈಗೆ ದೊರಕುವ ಅಧಿಕಾರವನ್ನು ಹೇಗೆ ಹಂಚಿಕೊಳ್ಳುವ ಲೆಕ್ಕಾಚಾರದ ಗುಂಗಿನಿಂದಕೂಡಿತ್ತು.

ಮೈ.ತು. 17

## ಎಸ್. ಆರ್. ವೀರಶೆಟ್ಟಪ್ಪ

ಜನನ : 1920 ಉದ್ಯೋಗ : ಅಧ್ಯಾಪಕ ವಿಳಾಸ : ಸೋಂಪುರ, ತಾ|| ಕೊರಟಗೆರೆ



ತುಮಕೂರಲ್ಲಿ ನಾನು ಶಿಕ್ಷಣ ಪಡೆಯುತ್ತ ಇದ್ದಾಗಲೇ ದಿ|| ತಾಳಿಕೆರೆ ಸುಬ್ರಹ್ಮಣ್ಯಂ, ಬಿ. ಸಿ. ನಂಜುಂಡಯ್ಯ ಇವರುಗಳ ಭಾಷಣ ಹಾಗೂ 1934ರಲ್ಲಿ ಆದ ಗಾಂಧೀಜಿಯವರ ಕಾರ್ಯಕ್ರಮ ಗಳಿಂದ ರಾಷ್ಟ್ರೀಯ ವಿಚಾರಗಳನ್ನು ತಳೆದೆ. 1938ರಲ್ಲಿ ಕೊರಟಗೆರೆಯಲ್ಲಿ ಸೋಂಪುರದ ದಿ|| ಎಸ್. ಹನುಮಂತರಾಯರ ನೇತೃತ್ವದಲ್ಲಿ ಕೊರಟಗೆರೆಯ ದಿ|| ನಂಜುಂಡಯ್ಯ, ವೈ. ಎಸ್. ರಾಜಶೇಖರಪ್ಪ,

ಮೊಗ್ಗನಹಳ್ಳಿ ದೊಡ್ಡಯ್ಯ, ನಾನು ಹಾಗೂ ಕೊರಟಗೆರೆಯ ಟೈಲರ್ ಚಂದ್ರಣ್ಣ ಇವರುಗಳು ಧ್ವಜಸತ್ಯಾಗ್ರಹ ಮಾಡಲು, ಈ ಪೈಕಿ ಮೊದಲ ನಾಲ್ಕು ಜನರನ್ನು ಮಾತ್ರ ಪೋಲಿಸಿನವರು ಬಂಧಿಸಿ ಸೆಂಟ್ರಲ್ ಜೈಲಿಗೆ ರವಾನಿಸಿದರು. ಆಗ ಕೊರಟಗೆರೆಯ ಅನೇಕ ಗಣ್ಯರನ್ನೂ ವರ್ತಕರನ್ನೂ ಪೋಲಿಸರು ಸ್ಟೇಶನ್ನಿಗೆ ಕರೆದೊಯ್ದು ಅನೇಕ ರೀತಿಯ ದೌರ್ಜನ್ಯ ನಡೆಸಿ, ಥಳಿಸಿ ಕಾಂಗ್ರೆಸ್ ಬಗ್ಗೆ ಭಯ ಹುಟ್ಟಿಸಿದರು.

ಆದರೂ ನಾವು ಕೆಲ ಕಾರ್ಯಕರ್ತರು ಬೆದರದೆ ನಾನು, ಚಿಕ್ಕನಹಳ್ಳಿಯ ಸಿ. ಪಿ. ಹನುಮಂತಯ್ಯ, ಸೋಂಪುರದ ಎಸ್. ಹನುಮಂತಪ್ಪ (ಇವರು ಲಾವಣಿಕಾರರು) ಹಾಗೂ ಈಚಲಹೊಸಳ್ಳಿಯ ಬಸವಾರಾಧ್ಯ ಕೂಡಿಕೊಂಡು ನಮ್ಮ ತಾಲ್ಲೂಕಿನ ಅಕ್ಕಿರಾಂಪುರ, ಸೋಂಪುರ, ಅರಶಾಪುರ, ಚಿಕ್ಕನಹಳ್ಳಿ, ಈಚಲಹೊಸಹಳ್ಳಿ, ಮಧುಗಿರಿ ತಾ|| ಕೊಂಡವಾಡಿ ಹಾಗೂ ಗೋರಿಬಿದನೂರು ತಾ|| ಕುರೂಡಿಗಳಲ್ಲಿ ಆ ವರ್ಷ ಪ್ರಚಾರಸಭೆ ಮಾಡಿದೆವು. ಗಾಂಧೀಜಿ ಮುಂತಾದ ನಾಯಕರ ಭಾವಚಿತ್ರಸಹಿತ ಮೆರವಣಿಗೆಯನ್ನೂ ಮಾಡಿದೆವು. ಆದರೆ ನಾವು ಹೋದಲ್ಲೆಲ್ಲ ಪೋಲಿಸರು ನಮ್ಮ ಹಿಂದೇ ಇರುತ್ತಿದ್ದರು. ಹಳ್ಳಿಗರಲ್ಲಿ ಭಯ ಹುಟ್ಟಿಸುತ್ತಿದ್ದರು. ಸಭೆಗೆ ಬರಲೂ ಕೂಡ ಜನ ಹೆದರುವ ಸ್ಥಿತಿ ಇತ್ತು. ಇದಾದನಂತರ ಭಾಷ್ಯಂ ಅವರು ನಮ್ಮ ತಾಲ್ಲೂಕಿನ ಹೊಳವನಹಳ್ಳಿ, ಸೋಂಪುರ, ಅಕ್ಕಿರಾಮಪುರ ಮುಂತಾದ ಗ್ರಾಮಗಳಿಗೆ ಭೇಟಿಕೊಟ್ಟು ಭಾಷಣ ಮಾಡುತ್ತಿದ್ದರು. ಮುಂದೆ ನಿಜಲಿಂಗಪ್ಪ ಹಾಗೂ ತಾಳಕೆರೆ ಅವರು ನಮ್ಮ ತಾಲ್ಲೂಕಿಗೆ ಬಂದಾಗ ತಾಲ್ಲೂಕಿನ ಅನೇಕ ಹಳ್ಳಿಗಳಲ್ಲಿ ಅವರ ಭಾಷಣ ಮಾಡಿಸಿದೆವು. ಈ ಸಭೆಗಳಲ್ಲಿ ಶಾಲಾಮಕ್ಕಳು ಪಾಲ್ಗೊಂಡರೆ ಪೋಷಕರಿಗೂ ಅಧ್ಯಾಪಕರಿಗೂ ಪೋಲಿಸರು ಬೆದರಿಕೆ ಹಾಕುತ್ತಿದ್ದರು. 1939ರಲ್ಲಿ ಚಿಕ್ಕನಹಳ್ಳಿಯ ಸಿ. ಪಿ. ಹನುಮಂತಯ್ಯನವರ ನಾಯಕತ್ವದಲ್ಲಿ ಬಸವಾರಾಧ್ಯ ಹಾಗೂ ದಿ|| ಸಾತಣ್ಣನವರು ಸೋಂಪುರ, ಅಕ್ಕಿರಾಮಪುರ, ಅರಶಾಪುರ, ಮಾವತ್ತೂರುಗಳಲ್ಲಿ ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಿದರು. ನಾನೂ ಅವರ ಜೊತೆ ಇರುತ್ತಿದ್ದೆ. ಎಲ್ಲಿ ಹೋದರೂ ಪೋಲಿಸರು ಬೆನ್ನುಹತ್ತುತ್ತಿದ್ದರು. ಸೋಂಪುರ, ಅಕ್ಕಿರಾಂಪುರ ಹಾಗೂ ಚಿಕ್ಕನಳ್ಳಿಗಳಿಗೆ ರಿಜರ್ವ್ ಪೋಲೀಸರು ಬಂದು ಜನರಲ್ಲಿ ಭಯ ಹುಟ್ಟಿಸಿದರು. ಇದರ ಹಿಂದೆಯೇ ವಿದುರಾಶ್ವತ್ಥ ಕಾಂಗ್ರೆಸ್ಸಿಗೂ ಹೋಗಿದ್ದೆ. ಈ ಕಾಲದಲ್ಲಿ ವಡ್ಡಗೆರೆಯ (ಈಗಿನ ಶಾಸಕ) ಮುದ್ದುರಾಮಯ್ಯ ಮತ್ತು ಇತರ ಕೆಲವರನ್ನು ಬಂಧಿಸಿ ಯಾವ ರೀತಿಯ ಕೇಸನ್ನೂ ಹಾಕದ ಲಾಕಪ್ಪಿನಲ್ಲಿಯೇ ಏಳೆಂಟು ತಿಂಗಳು ಇರಿಸಿಕೊಂಡರು.

1939ರಲ್ಲಿ ಆರ್. ಎಸ್. ಆರಾಧ್ಯರು 'ಗುರುದತ್‌ಕೇ ದರ್ಬಾರ್' ಎಂಬ ಒಂದು ಸೈಕ್ಲೋಸ್ಟೈಲ್ಡ್ ಪತ್ರಿಕೆಯನ್ನು ಆಗಿನ ಜಿಲ್ಲಾಧಿಕಾರಿ ಕೆ. ಗುರುದತ್ ಅವರನ್ನು ಹೀಯಾಳಿಸಿ ಪ್ರಕಟಿಸಿದ್ದರು. 'ಸರ್ ಮಿರ್ಜಾ ಎಂಬ ಸಮುದ್ರದಲ್ಲಿ ಗುರುದತ್ ಎಂಬ ಕಪ್ಪೆಯು ವಾಸಮಾಡುತ್ತ ಸತ್ಯಾಗ್ರಹಿಗಳ ಮೇಲೆ ಮನಸೇಚ್ಛೆ ಅಧಿಕಾರ ಚಲಾಯಿ

ತ್ತಿದೆ' ಎಂದು ಬರೆದಿದ್ದು ಅದನ್ನು ನಾವು 29-9-1939ರ ಸುಮಾರಿಗೆ ಹಳ್ಳಿಹಳ್ಳಿಯಲ್ಲಿ ಹಂಚಿದೆವು. ಆರಾಧ್ಯರನ್ನು ಈ ಬಗ್ಗೆ ಬಂಧಿಸಿ ಸೆಂಟ್ರಲ್ ಜೈಲಿನಲ್ಲಿ ಸಿಲುಜೇಡಿ ಶಿಕ್ಷೆ ವಿಧಿಸಿದ್ದರು. ಮುಂದೆ ಅಕ್ಟೋಬರ್ ತಿಂಗಳಲ್ಲಿ ತಾವರೆಕೆರೆ, ಒಡ್ಡನಹಳ್ಳಿ, ಯಲಿಯೂರುಗಳಲ್ಲಿ ಅರಣ್ಯಸತ್ಯಾಗ್ರಹ ಆಯಿತು. ತಾವರೆಕೆರೆಯಲ್ಲಿ ನನ್ನ ನಾಯಕತ್ವದಲ್ಲಿ ತೀತದವರಾದ ದಿ॥ ಉದಂಡಪ್ಪ, ದಿ॥ ಚಿಕ್ಕಹನುಮಯ್ಯ, ತಿಮ್ಮಾಭೋವಿ ಹಾಗೂ ಮಾವತ್ತೂರಿನ ಕೆ. ಎಂ. ಶಿವಣ್ಣ ಇವರುಗಳ ಜೊತೆ ಸತ್ಯಾಗ್ರಹ ಆಯಿತು. ಮೊದಲ ಬಾರಿ ಬಂಧಿಸಿ ಅರ್ಧರಾತ್ರಿಯಲ್ಲಿ ಕುದುರೆಕಣಿವೆ ಅರಣ್ಯಕ್ಕೆ ಬಿಟ್ಟುಬಂದರು. ಇದೇ ರೀತಿ ಎರಡನೆಯ ಸಲ ಬುಕ್ಕಾಪಟ್ಣ ಕಾಡಿಗೆ ಒಯ್ದು ಬಿಟ್ಟರು. ಯಲಿಯೂರಿಗೆ ಹೋಗಿ ಒಂದು ಈಚಲ ಮರ ಕಡಿದು ಮೆರವಣಿಗೆಮಾಡಿ ಶಿರಾ ಪೋಲಿಸ್ ಸ್ಟೇಷನ್ ಎದುರು ಒಯ್ದು ಅಲ್ಲಿ ಸರ್ಕಾರವನ್ನು ಕಟುವಾಗಿ ಟೀಕಿಸಿ ಭಾಷಣಮಾಡಿದೆನು. ಅಲ್ಲಿ ಬಂಧನವಾಗಿ ನಮಗೆಲ್ಲ ಏಳು ತಿಂಗಳು ಏಳು ದಿನ ಶಿಕ್ಷೆ ಆಯಿತು. (ಖಟ್ಲೆ ನಂ. ಸಿ.ಸಿ. 201/39/ಯು.ಎಸ್. 143, 426 ಪ್ರಕಾರ). ನಾವು ಶಿವಮೊಗ್ಗ ಜೈಲಿನಲ್ಲಿದ್ದೆವು.

1942ರಲ್ಲಿ ಕೊರಟಗೆರೆ ತಾ॥ನಲ್ಲಿ ಹಳ್ಳಿಹಳ್ಳಿಗಳಲ್ಲಿ ಪ್ರಚಾರಸಭೆ, ಮೆರವಣಿಗೆ ಮಾಡಿದೆವು. ಸೈಕ್ಲೋಸ್ಟೈಲ್ಡ್ ಬುಲೆಟಿನ್‌ಗಳನ್ನು ಹಂಚುತ್ತಿದ್ದೆವು. ಅದೇ ರೀತಿ 1947ರಲ್ಲಿ ಆಗಸ್ಟ್ 15ಕ್ಕೆ ಕೊರಟಗೆರೆ ತಾ॥ ಕಚೇರಿ ಮೇಲೆ ಧ್ವಜ ಹಾರಿಸಿದೆವು. ನನ್ನ ಜೊತೆ ಕೊರಟಗೆರೆಯ ಟೈಲರ್ ಚಂದ್ರಣ್ಣ, ತೀತದ ಶಂಕರಪ್ಪ, ಕಾಮಣ್ಣ ಹಾಗೂ ಇನ್ನೂ ಅನೇಕರಿದ್ದರು. ತಾಲ್ಲೂಕಿನಲ್ಲಿ ತೆರಿಗೆ ಕೊಡಬಾರದೆಂದು ಪ್ರಚಾರಮಾಡಿದೆವು.

11-8-1949ರಿಂದ ನನಗೆ ಪ್ರಾಥಮಿಕ ಶಾಲಾ ಶಿಕ್ಷಕನೆಂದು ನೇಮಕವಾಯಿತು. ಅಂದು ದುಡಿದವರನ್ನು ಇಂದು ಮರೆಯಲಾಗುತ್ತಿದೆ. ಅಂದು ದಬ್ಬಾಳಿಕೆ ನಡೆಸಿದ ಅಧಿಕಾರಿಗಳು ಇಂದು ಇನ್ನೂ ಉನ್ನತ ಸ್ಥಾನದಲ್ಲಿ ಇದ್ದಾರೆ. ಇದು ನಿಜವಾಗಿ ದುರ್ದೈವದ ಸಂಗತಿ.

ವೈ.ತು. 18

## ಕೆ. ಎನ್. ರಂಗಪ್ಪ

ಜನನ : ? ಉದ್ಯೋಗ: ನಿವೃತ್ತ ಜೀವನ ವಿಳಾಸ : ತಿಪಟೂರು

---

ತಿಪಟೂರಿನಲ್ಲಿ ಜವಳೀ ವ್ಯಾಪಾರ ನಮ್ಮ ಹಿರಿಯರ ಕಾಲದಿಂದ ಇದೆ. 1927ರಲ್ಲಿ ಗಾಂಧೀಜಿಯವರು ಇಲ್ಲಿಗೆ ಬಂದಿರಲು, ಭಾಷಣ ಕೇಳಿದೆ. 1930ರಲ್ಲಿ ನಮ್ಮ ಊರಲ್ಲಿ ನಮ್ಮ ಜವಳಿ ಅಂಗಡಿ ಎದುರಿಗೇ ಖಾದೀ ಭಂಡಾರ ತೆರೆದೆ. ತುಮಕೂರು ಡಿ.ಸಿ.ಸಿ. ಕಾರ್ಯದರ್ಶಿ ಎಂ. ನೀಲಕಂಠರಾವ್ ಅವರ ಪ್ರೇರಣೆಯೇ ಇದಕ್ಕೆ ಕಾರಣ. 1931ರಲ್ಲಿ



ತುಮಕೂರಲ್ಲಿ ತಾಳೀಕೆರೆ, ರಂಗಯ್ಯಂಗಾರ್, ಸೆಟ್ಲೂರ್ ಮುಂತಾದ ವಕೀಲರು ಜೋರಾಗಿ ಪಿಕೆಟಿಂಗ್ ನಡೆಸಿರಲು ನಾವೂ ನಮ್ಮ ಊರಲ್ಲಿ 1932ರಲ್ಲಿ ಪಿಕೆಟಿಂಗ್ ಮಾಡಿದೆವು. ಶಿಂಗರಿ ಲಿಂಗಪ್ಪ, ಎಲ್. ಸಿದ್ದಪ್ಪ ವಾಲಂಟಿಯರ್ ಆಗಿದ್ದರು. ಆಗ ಕುಡುಕನೊಬ್ಬ ನನ್ನ ಎಡಭುಜವನ್ನು ಕಡಿದುದರ ಗುರುತು ಈಗಲೂ ಇದೆ. ನಮ್ಮ ಊರಲ್ಲಿ ಕಾಂಗ್ರೆಸ್ ಚಟುವಟಿಕೆ ಆರಂಭಿಸಿದ್ದು ನಾನೇ. ಎಸ್. ಮಲ್ಲಪ್ಪನವರೂ ಕೆಲಸಮಾಡುತ್ತಿದ್ದರು. ಡಾ|| ಹರ್ಡೀಕರರು ನಮ್ಮ ಊರಿಗೆ ಬಂದಿದ್ದರಲ್ಲದೆ ಕೆ. ಪಟ್ಟಾಭಿರಾಮನ್, ಸಿದ್ದಲಿಂಗಯ್ಯ ಇವರೂ ಬಂದು ಭಾಷಣ ಮಾಡಿದ್ದರು.

ಶಿವಪುರ ಕಾಂಗ್ರೆಸ್‌ಗೆ ಹೋಗಿದ್ದ ನಾನು, ಅನಂತರ ವಿದುರಾಶ್ವತ್ಥದಲ್ಲಿ ಟಿ. ರಾಮಾಚಾರ್ ಅವರ ಅಧ್ಯಕ್ಷತೆಯಲ್ಲಿ ಧ್ವಜಸತ್ಯಾಗ್ರಹ ಆದಾಗ ಹೋಗಿದ್ದೆ. 144ನೆಯ ಸೆಕ್ಷನ್ ಮುರಿದ ಬಗ್ಗೆ ಫಯರಿಂಗ್ ಆಯಿತು. ನನ್ನ ಪಕ್ಕದಲ್ಲಿ ಇದ್ದ ಗೌರೀಬಿದನೂರ ಅಶ್ವತ್ಥನಾರಾಯಣ ಶೆಟ್ಟರು ಗುಂಡು ತಗಲಿ ಸತ್ತರು. ಹೋಟೆಲಿನಲ್ಲಿ ಉಪಾಹಾರ ಮಾಡುತ್ತಿದ್ದ ಗುಡಿಬಂಡೆಯ ಲಕ್ಷ್ಮಯ್ಯ ಗುಂಡುತಗಲಿ ಸತ್ತರು. ಅಶ್ವತ್ಥ ವೃಕ್ಷದ ಪ್ರದಕ್ಷಿಣೆ ಮಾಡುತ್ತಿದ್ದ ಗರ್ಭಿಣಿ ಸ್ತ್ರೀ ಗೌರಮ್ಮ ಎಂಬಾಕೆ ಅಲ್ಲಿಯೇ ಸತ್ತರು. ದನಗಳೂ ಗುಂಡು ತಗಲಿ ಸತ್ತವು. ಜನರ, ದನಗಳ ಆರ್ತನಾದ ಹೇಳಿ ತೀರದ್ದು. ನಾನು ಈ ಹತ್ಯಾಕಾಂಡದ ಪ್ರತ್ಯಕ್ಷದರ್ಶಿ.

ಕೆ.ಜಿ.ಎಫ್. ಸತ್ಯಾಗ್ರಹಕ್ಕೆ ನಮ್ಮ ಊರಿಂದ ನಾನು, ಎಲ್. ಸಿದ್ದಪ್ಪ, ಕೊಪ್ಪದ ತಮ್ಮಯ್ಯ, ಎಂ. ಎನ್. ಜಯರಾಂ, ಎಸ್. ಆರ್. ಮಲ್ಲಪ್ಪ ಮುಂತಾದ 10 ಜನ ಹೋಗಿದ್ದೆವು. ಬೆಂಗಳೂರಲ್ಲಿ ಎನ್. ಕೇಶವಯ್ಯಂಗಾರರ ಮನೆಯಲ್ಲಿ ಶಿಬಿರ ಇತ್ತು. ಆರನೆಯ ಡಿಕ್ಟೇಟರ್ ಜಿ. ವೆಂಕಟಸ್ವಾಮಿಗೌಡರ ನೇತೃತ್ವದಲ್ಲಿ 151 ಜನ ಕಾಲುನಡಿಗೆಯಲ್ಲಿ ಒಂದು ವಾರ ಸಾಗಿ ಕೆ.ಜಿ.ಎಫ್. ತಲಪಿದೆವು. ಅಲ್ಲಿ ನಮ್ಮನ್ನು ಬಂಧಿಸಿ, ರಾತ್ರಿ ಆಂಧ್ರದ ಗಡಿಯಲ್ಲಿ ಒಬ್ಬೊಬ್ಬರನ್ನೇ ವ್ಯಾನ್‌ನಲ್ಲಿ ದಾರಿಯುದ್ದಕ್ಕೂ ಇಳಿಸಿದರು. ಅಲ್ಲಿ ಮತ್ತೆ ಒಟ್ಟುಗೂಡಿ ಹಳ್ಳಿಗರ ಸಹಾಯದಿಂದ ಕೆ.ಜಿ.ಎಫ್.ಗೆ ಬಂದು ಮತ್ತೆ ಬಂಧಿತರಾದೆವು. ಒಂದು ತಿಂಗಳು ಕಠಿಣ ಶಿಕ್ಷೆ, 50 ರೂ. ಜುಲ್ಮಾನೆ, ಜುಲ್ಮಾನೆ ಕೊಡದಿದ್ದರೆ ಒಂದು ವಾರ ಶಿಕ್ಷೆ ವಿಧಿಸಿದರು. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇದ್ದೆ. ಆಗ ನನಗೂ ಗುಬ್ಬಿ ಹೊಸಳ್ಳಯ್ಯನವರಿಗೂ ಪೋಲಿಸ್ ಇನ್ಸ್‌ಪೆಕ್ಟರ್ ಒಬ್ಬರು ಬೂಟುಗಾಲಿನಿಂದ ಒದ್ದರು.

1939ರ ಡಿಸೆಂಬರ್‌ನಲ್ಲಿ ಅರಸೀಕೆರೆ ಬಳಿ ಉಳ್ಳಿಭಾವಿಯಲ್ಲಿ ಹುಂಡೇಕಾರಿ ಬಸಪ್ಪ

ಅವರ ಅಧ್ಯಕ್ಷತೆಯಲ್ಲಿ ಅರಣ್ಯಸತ್ಯಾಗ್ರಹದ ಸಂಬಂಧ ಸಭೆ ಆಗಿ, ಅನಂತರ ಸತ್ಯಾಗ್ರಹ ಆಯಿತು. ನನ್ನ ಬಂಧನ ಆಗಲಿಲ್ಲ. ಈ ನಡುವೆ ನಮ್ಮ ಊರ ಎಂ. ಆರ್. ಎ. ಶಿವಬಸಪ್ಪನವರು, ನಾನು ಕಾಂಗ್ರೆಸ್ ಬಿಡಬೇಕೆಂದು, ತುಂಬಾ ಒತ್ತಾಯ ತಂದರು. ಆದರೆ ನಾನು ಜಗ್ಗಲಿಲ್ಲ.

1942ರಲ್ಲಿ ಮಹದೇವ ದೇಸಾಯಿ ಅವರು ತೀರಿಕೊಂಡ ಬಗ್ಗೆ ಆಗಸ್ಟ್ 20ಕ್ಕೆ ಸಂತಾಪಸೂಚಕ ಮೆರವಣಿಗೆಯನ್ನು ಊರಲ್ಲಿ ಮಾಡಲಾಯಿತು. ರೈಲ್ವೆ ಸ್ಟೇಶನ್‌ನಲ್ಲಿ ಭಾರಿ ಗಲಾಟೆ ಆಯಿತು. ಅಷ್ಟರಲ್ಲಿ ಅಲ್ಲಿಗೆ ಬಂದ ಮಿಲಿಟರಿ ಟ್ರೇನ್‌ನಿಂದ ಫಯರಿಂಗ್ ಆಯಿತು. ಮಾದನಗೇರಿ ಊರ ರೈತ ಸಿದ್ದಪ್ಪ ಎಂಬಾತ ಗುಂಡು ತಗಲಿ ಸತ್ತ. ಒಬ್ಬ ಕ್ರಿಶ್ಚನ್ ಟೈಲರ್ ನಿಂತು ನೋಡುತ್ತಿದ್ದವನಿಗೆ ಗಾಯವಾಯಿತು. ಜನ ಪ್ಲಾಟ್‌ಫಾರ್ಮ್‌ನಲ್ಲಿ ಮಲಗಿಕೊಂಡಿದ್ದರಿಂದ ಬದುಕಿದರು; ಇಲ್ಲವಾದರೆ ಅನೇಕರು ಸಾಯುತ್ತಿದ್ದರು. ಮಿಲಿಟರಿ ಟ್ರೇನ್ ಹಾಗೆಯೇ ಮುಂದೆ ಹೋಗಲು ಜನ ಸಿಟ್ಟಿಗೆದ್ದು ಸ್ಟೇಶನ್, ಗೂಡ್ಸ್ ಶೆಡ್ ಸುಟ್ಟರು. ಗೂಡ್ಸ್ ರೈಲು ಕೊಳ್ಳೆಹೊಡೆದರು. ಸಂಜೆ ತುಮಕೂರಿಂದ ರಿಸರ್ವ್ ಪೋಲಿಸರು ಬಂದು 42 ಜನರನ್ನು ಬಂಧಿಸಿದರು. ಆ ಪೈಕಿ ವಿ. ರಂಗಯ್ಯ, ವಿ. ವೆಂಕಟಸ್ವಾಮಿ, ವಿ. ಬೋರಶೆಟ್ಟಿ (ಮೂವರೂ ಸೋದರರು), ಮೌಲ್ವಿ ಹಸನುದ್ದೀನ್ ಸಾಹೇಬ್, ಎಂ. ಆರ್. ರಂಗಪ್ಪ, ಬೇಲೂರಯ್ಯ, ಶಿವಣ್ಣ, ಚನ್ನಪ್ಪ, ಎಂ. ಶೆಟ್ಟಪ್ಪ, ದಾಸಪ್ಪ, ಬೋರಯ್ಯ, ಫೈಟರ್ ನಂಜಪ್ಪ, ಬಿ. ವಿಶ್ವನಾಥಯ್ಯ, ಎಲ್. ಅಶ್ವತ್ಥನಾರಾಯಣ ಶೆಟ್ಟಿ, ವೆಂಕಟಾಚಲಯ್ಯ ಮುಂತಾದ ಜನರ ಬಂಧನ ಆಗಿತ್ತು.

ನಾವು ಕೆಲವರು ಭೂಗತರಾಗಿ ಕೆಲಸ ಮುಂದುವರಿಸಿದೆವು. ಆಗ ಕಲ್ಕತ್ತದಲ್ಲಿ ಓದುತ್ತಿದ್ದ ಡಿ. ಎಸ್. ಮಲ್ಲಪ್ಪನವರ ಮಗ ಚಂದ್ರಶೇಖರ್ (ಈಗ ಹೈಕೋರ್ಟ್ ಜಸ್ಟಿಸ್) ನಮ್ಮ ಜೊತೆ ಬಂದು ಸೇರಿಕೊಂಡರು. ಆ ಕಾಲದಲ್ಲಿ ಸಿದ್ದಾಪುರ, ಹಳೇ ಪಾಳ್ಯ, ಕರಡಿ ಮುಂತಾದ ಕಡೆ ಸೇಂದಿ ಅಂಗಡಿ ಸುಟ್ಟೆವು. ಟೆಲಿಗ್ರಾಫ್ ತಂತಿ ಎಲ್ಲೆಡೆ ಕತ್ತರಿಸಿದೆವು. ಆಗ ಒಮ್ಮೆ ಕಂಬದಿಂದ ಬಿದ್ದು ನನ್ನ ನಾಲ್ಕೈದು ಹಲ್ಲುಗಳು ಮುರಿದವು. ಮುಂದೆ ನವೆಂಬರ್ 6ಕ್ಕೆ ಡಿ. ಎಂ. ಚಂದ್ರಶೇಖರ್, 8ಕ್ಕೆ ನಾನು, 9ಕ್ಕೆ ಎಲ್. ಸಿದ್ದಪ್ಪ ಬಂಧಿತರಾದೆವು. 1943ರ ಆಗಸ್ಟ್‌ನಲ್ಲಿ ಬಿಡುಗಡೆ ಆಯಿತು. ಆ ವರ್ಷ ನಡೆದ ಚುನಾವಣೆಯಲ್ಲಿ ಅಂಕಂ ಸಂಜೀವ ಶೆಟ್ಟಿ, ನಂಜೇಗೌಡರ ಪರವಾಗಿ ಚನ್ನರಾಯಪಟ್ಟಣ, ಸಿ. ಎಚ್. ಲಿಂಗದೇವರ ಪರ ಚಿಕ್ಕನಾಯ್ಕನಹಳ್ಳಿಗೂ ಪ್ರಚಾರಕ್ಕೆ ಹೋಗಿದ್ದೆ. ತಿಪಟೂರಲ್ಲಿ ಕಾಂಗ್ರೆಸ್‌ನಿಂದ ಚುನಾವಣೆಗೆ ಸ್ಪರ್ಧಿಸುವವರೇ ಇರಲಿಲ್ಲ. ಅನುಕೂಲವಂತರೂ ಶ್ರೀಮಂತರೂ ಆಗ ಕಾಂಗ್ರೆಸ್‌ನಿಂದ ದೂರವೇ ಇದ್ದರು.

1944ರ ನಂತರ ಊರಲ್ಲಿ ಪ್ರಭಾತ್‌ಫೇರಿ, ಸಭೆ ನಡೆಸುತ್ತಲೇ ಇದ್ದೆವು. ಅನೇಕ ನಾಯಕರು ಭಾಷಣಕ್ಕೆ ಬಂದರು. 1940ರಲ್ಲಿ ಎಂ.ಪಿ.ಸಿ.ಸಿ. ಆಗಬೇಕಿತ್ತು. ಆದರೆ

ಮಹಾರಾಜರ ನಿಧನದಿಂದಾಗಿ ಅರ್ಧಕ್ಕೇ ನಿಂತಿತು. ಮುಂದೆ ಭಾಷ್ಯಂ ಅಧ್ಯಕ್ಷರಾಗಿದ್ದಾಗ ನಮ್ಮ ಊರ ಕಾಶೀಪತಿ ಸಂಜುಂಡಯ್ಯನವರ ಛತ್ರದಲ್ಲಿ ಈ ಸಭೆ ಆಗಿತ್ತು.

1947ರಲ್ಲಿ ನಮ್ಮ ಊರಿಂದ 100 ಜನ ಮೈಸೂರಿಗೆ ಚಳವಳಿಗೆ ಸಾಗಿದ್ದರು. ಅಲ್ಲವೆ ಮುನ್ಸಿಪಲ್ ಪಾರ್ಕ್‌ನಲ್ಲಿ 144ನೆಯ ವಿಧಿ ಮುರಿದು ನಾನು, ಎ. ಆರ್. ರಂಗಪ್ಪ, ಎಚ್. ತಿಮ್ಮಪ್ಪ, ಎಸ್. ಆರ್. ಮಲ್ಲಪ್ಪ ಬಂಧಿತರಾದರು. ನಮ್ಮನ್ನು ಸೆಂಟ್ರಲ್ ಜೈಲಿಗೆ ಬೆಂಗಳೂರಿಗೆ ಒಯ್ದರು. ವಿದ್ಯಾರ್ಥಿಗಳು ಭಾರಿ ಉತ್ಸಾಹ ತೋರಿದರು. ರೈಲಿನಲ್ಲಿ ಟಿಕೆಟಿಲ್ಲದೆ ಅರಸೀಕೆರೆ, ಮೈಸೂರಿಗೆ ಪ್ರಯಾಣಮಾಡಿ ಅನೇಕರ ಬಂಧನ ಆಯಿತು. ನನ್ನ ಅಣ್ಣನ ಮಕ್ಕಳಾದ ಜಿ. ವಿ. ಲಕ್ಷ್ಮೀನಾರಾಯಣ ಮತ್ತು ಜಿ. ವಿ. ಶ್ರೀರಾಮುಲು ಇವರ ಬಂಧನ ಆಗಿತ್ತು. ಶ್ರೀರಾಮುಲುಗೆ ನಾಲ್ಕು ತಿಂಗಳು ಶಿಕ್ಷೆ ವಿಧಿಸಿದ್ದರು. ಇದಲ್ಲದೆ ಪಿ. ಶ್ರೀನಿವಾಸಯ್ಯ, ಕಾಳಾಚಾರ್ ಮುಂತಾದವರು ಇಲ್ಲಿ ಅಂಡರ್ ಟ್ರಯಲ್ ಇದ್ದ 50–60 ಜನರಲ್ಲಿ ಕೆಲವರು.

ಕೋಲಾರದ ಎನ್. ಸಿ. ತಿಮ್ಮಾರೆಡ್ಡಿ ನಮ್ಮ ಊರ ಶಾಲೆಯಲ್ಲಿ ಅಧ್ಯಾಪಕರಾಗಿದ್ದು ಮುಂದೆ ರಾಜೀನಾಮೆ ಕೊಟ್ಟು ಚಳವಳಿ ಸೇರಿದ್ದರು. ಟಿ. ಎಸ್. ರಾಜಾರಾವ್ ಎಂಬುವರು ನಮ್ಮ ಊರಲ್ಲಿ ಹೋಟೆಲು ಇಟ್ಟುಕೊಂಡಿದ್ದು 1942ರಿಂದ 47ರ ವರೆಗೆ ಸತ್ಯಾಗ್ರಹಿಗಳಿಗೆಲ್ಲ ಎಲ್ಲ ವಿಧದ ಆತಿಥ್ಯ ನೀಡಿದ್ದರು. (ಈಗ ಅವರು ಬೆಂಗಳೂರಲ್ಲೇ ಇದ್ದಾರೆ.) ಚಿಕ್ಕನಾಯಕನಹಳ್ಳಿ ಕುಪ್ಪೂರು ಗೋಪಾಲ ನಮ್ಮ ಊರಲ್ಲಿ ವಿದ್ಯಾರ್ಥಿ ಆಗಿ ಬಹಳ ಕೆಲಸಮಾಡಿದ್ದರು. 1942ರಲ್ಲಿ ನನ್ನ ಬಂಧನಕ್ಕೆ ಮುಂಚೆ, ನಟಭಯಂಕರ ಗಂಗಾಧರರಾಯರು ನಮಗೆ ಒಂದು ಬೆನಿಫಿಟ್ ಶೋ ಕೊಟ್ಟಿದ್ದರು. ಒಂದು ಸಾವಿರ ರೂ. ಇದರಿಂದ ಸಂಗ್ರಹವಾಯಿತು. ಅವರು ಮಹಾದೇಶಭಕ್ತರಿದ್ದರು. (ಅದರಿಂದ ಸಂಗ್ರಹವಾದ ಹಣ ನನ್ನ ಕೈತಪ್ಪಿ ಚಳವಳಿಯ ಖರ್ಚಿಗೆ ಬಾರದೇ ಹೋಯಿತು.)

ವ್ಯ.ತು. 19

## ಎಂ. ಎಸ್. ಹನುಮಂತರಾವ್

ಜನನ : 1920

ಉದ್ಯೋಗ : ಜನರಲ್ ಇನ್ಶೂರೆನ್ಸ್ ನೌಕರ

ವಿಳಾಸ : ಸೋಮೇಶ್ವರ ಬಡಾವಣೆ, ತುಮಕೂರು

---

ಚಿಕ್ಕನಾಯಕನಹಳ್ಳಿಯವನಾದ ನಾನು ವಿಶೇಷ ವಿದ್ಯಾವಂತನಲ್ಲವಾದರೂ ಓದುಬರಹ ಚೆನ್ನಾಗಿ ಬಲ್ಲವನಾಗಿದ್ದು ಸುಬೋಧಕುಸುಮಾಂಜಲಿಯ ಕಿರುಹೊತ್ತಿಗೆಗಳಲ್ಲಿ ಬರುತ್ತಿದ್ದ ಮಹಾಪುರುಷರ ಜೀವನಚರಿತ್ರೆಗಳನ್ನೂ, ಗಳಗನಾಥರ ಕಾದಂಬರಿಗಳು (ವಿಶೇಷವಾಗಿ



'ಮಾಧವಕರುಣಾವಿಲಾಸ') ಬಿ. ವೆಂಕಟಾಚಾರ್ಯರ 'ಆನಂದಮಠ' ಇವುಗಳನ್ನು ಓದಿ ಸ್ಫೂರ್ತಿಪಡೆದೆ. ನನ್ನ ಅಣ್ಣ ನಾರಾಯಣರಾವ್ ಚಿಕ್ಕನಾಯಕನ ಹಳ್ಳಿಯಲ್ಲಿ ಒಂದು ಹೋಟೆಲು ನಡೆಸುತ್ತಿದ್ದು ಅಲ್ಲಿ ಅನೇಕ ರಾಜಕೀಯ ವಿಚಾರಗಳ ಬಗೆಗೆ ಚರ್ಚೆ ನಡೆಯುತ್ತಿತ್ತು. ಬೆಂಗಳೂರಿನ ಅಶ್ವತ್ಥನಾರಾಯಣ ರಾಯರ 'ನವಜೀವನ' ಹಾಗೂ 'ವಿಶ್ವಕರ್ನಾಟಕ' ಪತ್ರಿಕೆಗಳನ್ನು ಓದಿ ಸಂಜೆಯಾಗುತ್ತಲೂ ಊರ ಶಾನುಭೋಗರಾದ ಡಿ. ವೆಂಕಟೇಶ, ಅವರ ಮಿತ್ರ ಲಿಂಗದೇವರು ಇವರೆಲ್ಲ ಹೋಟೆಲಿನಲ್ಲಿ ಚರ್ಚೆ ನಡೆಸುತ್ತಿದ್ದರು. ಇದರಿಂದ ರಾಜಕೀಯ ವಿದ್ಯಮಾನಗಳೆಲ್ಲ ತಿಳಿಯುತ್ತಿದ್ದವು. ಊರಲ್ಲಿ ಇದ್ದ ಥಿಯೊಸಫಿಕಲ್ ಲಾಜ್ ಕೂಡ ಪರೋಕ್ಷವಾಗಿ ರಾಷ್ಟ್ರೀಯ ಜಾಗೃತಿಗೆ ಸಹಕಾರಿಯಾಗಿತ್ತು. ಮೋತೀಲಾಲರು ತೀರಿಕೊಂಡಾಗ ನಮ್ಮ ಊರಲ್ಲಿ ಹರತಾಳ ಆಚರಿಸಿದ್ದು ಥಿಯೊಸಫಿಸ್ಟರಾದ ಸಿ. ಎಸ್. ತಮ್ಮಯ್ಯ, ಪ್ರಾಣೇಶ್ ಎಂಬ ವಿದ್ಯಾರ್ಥಿ ಇದರ ಸಂಘಟನೆಗೆ ಶ್ರಮಿಸಿದ್ದರು.

ಈ ಕಾಲದಲ್ಲಿ ನಮ್ಮ ಊರಲ್ಲಿ ಕಳ್ಳಿ ತಿಪ್ಪಣ್ಣಶಾಸ್ತ್ರಿ, ಬೇಲೂರು ಕೇಶವದಾಸರ ಹರಿಕಥೆಗಳು, ಥಿಯೊಸಫಿಸ್ಟರಾದ ಅರುಂಡೇಲ್, ಜೆ. ಕೃಷ್ಣಮೂರ್ತಿ ಹಾಗೂ ಡಾ|| ಹರ್ಡೀಕರ, ರಂಗಯ್ಯಂಗಾರ್, ತಾಳಿಕೆರೆ ಇವರ ಭಾಷಣಗಳು ಊರಲ್ಲಿ ರಾಷ್ಟ್ರೀಯ ಜಾಗೃತಿಗೆ ಕಾರಣ. ತಾರುಣ್ಯದಲ್ಲಿಯೇ ನಾನು ಖಾದಿ ಧರಿಸಲಾರಂಭಿಸಿದೆನಲ್ಲದೆ ತುಮಕೂರಲ್ಲಿ ನೀಲಕಂಠರಾಯರಿಂದ ಖಾದಿ ಪಡೆದು ನಮ್ಮ ಊರಲ್ಲಿ ಮಾರುತ್ತಿದ್ದೆ.

ನಮ್ಮ ಊರ ಸಹಕಾರ ಸಂಘದ ಸಭೆಗೆ ಹೊರಗಿನಿಂದ ಅತಿಥಿಗಳನ್ನು ಕರೆಸುವ ಪರಿಪಾಠವಿದ್ದು ಒಮ್ಮೆ ತಿಪಟೂರಿನ ಡಿ. ಎಸ್. ಮಲ್ಲಪ್ಪನವರು ಬಂದು ಸಂಘದ ಸಭೆಯನಂತರ ಪ್ರತ್ಯೇಕ ಸಭೆ ನಡೆಸಿ ಕಾಂಗ್ರೆಸ್ ಸದಸ್ಯರನ್ನು ನೋಂದಾಯಿಸಿದರು. ಕೆ.ಪಿ.ಸಿ.ಸಿ. ಮತ್ತು ಮೈಸೂರು ಕಾಂಗ್ರೆಸ್ ಎರಡಕ್ಕೂ ಸದಸ್ಯರನ್ನು ನೋಂದಾಯಿಸಿದರು. ಶಿವಪುರ ಕಾಂಗ್ರೆಸ್ಸಿಗೆ 20 ಡೆಲಿಗೇಟುಗಳನ್ನು ಸೇರಿಸಿದರು. ಈ ಪೈಕಿ ಸಿ. ಎಸ್. ಮುಲಿಯಪ್ಪ, ಸಿ. ವಿ. ವೆಂಕಟರಾಮಯ್ಯ, ಸಿ. ಎಸ್. ತಮ್ಮಯ್ಯ, ನಮ್ಮ ಅಣ್ಣ ನಾರಾಯಣರಾವ್ ಮುಂತಾದವರು ಇದ್ದರು. ಅಲ್ಲಿಂದ ಬಂದನಂತರ ಊರಲ್ಲಿ ಪ್ರಭಾತ್‌ಫೇರಿ ನಡೆಸಿದೆವು. ಧ್ವಜ ಹಾರಿಸಬೇಕೆಂದಿದ್ದಾಗ ಊರ ಕೆಲ ಹಿರಿಯರು ವಿರೋಧಮಾಡಿದರು. ಅನಂತರ ಸಿ. ಎಸ್. ತಮ್ಮಯ್ಯನವರ ಅಧ್ಯಕ್ಷತೆಯಲ್ಲಿ ತಾ|| ಕಾಂಗ್ರೆಸ್ ಕಮಿಟಿ ಮಾಡಲಾಯಿತು. ಸಿ. ಪಿ. ಚಿದಂಬರ ಶೆಟ್ಟಿ ಕಾರ್ಯದರ್ಶಿ, ಡಿ. ಸುಬ್ಬಣ್ಣ, ಲಿಂಗಣ್ಣ ಕ್ರಿಯಾಶೀಲ ಕಾರ್ಯಕರ್ತರು. ಇವರಿಬ್ಬರು ಒಳ್ಳೆಯ ಭಾಷಣ ಕಾರರು. ರಾಜ್ಯದಲ್ಲಿ ಮೊದಲ ಬಾರಿ ಮುನಿಸಿಪಲ್ ಚುನಾವಣೆಯಲ್ಲಿ ಸ್ಪರ್ಧಿಸಿ

(ಬಹುಶಃ 1949) ಚಿಕ್ಕನಾಯಕನಹಳ್ಳಿಯಲ್ಲಿ 15ರಲ್ಲಿ 14 ಸ್ಥಾನಗಳನ್ನು ಗೆದ್ದೆವು. ಈ ವಿಚಾರ ಡಾ|| ಪಟ್ಟಾಭಿ ಸೀತಾರಾಮಯ್ಯನವರ 'ಇಂಡಿಯನ್ ಸ್ಟೇಟ್ಸ್' ಪತ್ರಿಕೆಯಲ್ಲೂ ವರದಿಯಾಗಿತ್ತು. ಮಲಿಯಪ್ಪ ಆಗ ಉಪಾಧ್ಯಕ್ಷರಾಗಿ ಚುನಾಯಿತರಾದರು. ಆದರೆ ಮುಂದೆ ಸರ್ಕಾರದ ಒತ್ತಡದಿಂದಾಗಿ ಕೆಲಸದಸ್ಯರು ಕಾಂಗ್ರೆಸ್ಸಿಗೆ ರಾಜೀನಾಮೆ ನೀಡಿದ ವಿಚಿತ್ರ ಘಟನೆ ನಡೆಯಿತು. ಡಿ.ಸಿ.ಸಿ. ಸ್ಥಾಪನೆ ಆದಾಗ ನಾನು ಅದರ ಸದಸ್ಯನಾಗಿದ್ದೆನಲ್ಲದೆ ಎ ಎಂ.ಸಿ.ಸಿ. ಸದಸ್ಯನೂ ಆಗಿದ್ದೆ. ಕೆ.ಜಿ.ಎಫ್. ಸತ್ಯಾಗ್ರಹಕ್ಕೆ ಮೊದಲು ಕೆ ಸಿ. ರೆಡ್ಡಿ, ಭಾಷ್ಯಂ, ರಂಗಯ್ಯಂಗಾರ್, ಎಂ. ಗೋವಿಂದ ರೆಡ್ಡಿ, ಟಿ. ಸುಬ್ರಹ್ಮಣ್ಯಂ, ಬಿ. ಸಿ. ನಂಜುಂಡಯ್ಯ ಮುಂತಾದವರು ತಾಲ್ಲೂಕಿನಲ್ಲೆಲ್ಲ ಪ್ರವಾಸ ಮಾಡಿ ಜಾಗೃತಿಮಾಡಿದ್ದರು. ಜಯಚಾಮರಾಜಪುರ (ಅಲ್ಲಿ ತಾಳಿಕೆರೆಯವರ ಕಕ್ಷಿದಾರರಿದ್ದರು), ಹುಳಿಯಾರು (ಆ ಊರಲ್ಲಿ ಬಾಲಸುಂದರರಾಜ್, ತಾ. ರಾ. ನಾಗರಾಜ, ಲಿಂಗಾಚಾರ್, ಡಾ|| ಕೃಷ್ಣಯ್ಯಂಗಾರ್ ಪ್ರಮುಖರು) ಮುಂತಾದೆಡೆ ಅವರ ಕಾರ್ಯಕ್ರಮ ಆದುವು.

ಶಿರಾ ಜಂಗಲ್ ಸತ್ಯಾಗ್ರಹಕ್ಕೆ ಊರ 7-8 ಜನರ ಜೊತೆ ನಾನೂ ಹೋಗಿದ್ದೆ. ಬಂಡಿಹಳ್ಳಿ ವೆಂಕಟರಾಮಯ್ಯ, ಚಿಕ್ಕಣ್ಣ, ಎಚ್ ಎಂ. ರಾಮಯ್ಯ ನನ್ನ ಜೊತೆ ಇದ್ದು ನಾನೂ ಕ್ಯಾಂಪ್ ಸೇರಿದೆ. ಶಿರಾದಲ್ಲಿ ನೀಲಕಂಠರಾವ್, ಎ. ಗುಂಡುರಾವ್, ವಿ. ರೇವಣ್ಣ, ಸಿ. ಜೆ. ಮುಕ್ಕಣ್ಣಪ್ಪ ಇವರೆಲ್ಲ ಆಗಲೇ ಬಂಧಿತರಾಗಿದ್ದರು. ಟೇಲರ್ ಗಂಗಾಧರರಾವ್, ವ್ಯಾಪಾರಿ ಹೊನ್ನಗಂಗಪ್ಪ ಇವರೆಲ್ಲ ಶಿಬಿರದ ಕೆಲಸಕ್ಕೆ ನೆರವಾಗುತ್ತಿದ್ದರು. ಮಾಲಿ ಮರಿಯಪ್ಪನವರದೂ ಬಂಧನ ಆಗಿತ್ತು. ಶಿಬಿರ ಒಂದು ತಿಂಗಳು ನಡೆದು, ನಾನು ಕಡೆತನಕ ಕ್ಯಾಂಪ್‌ನಲ್ಲೇ ಇದ್ದೆ. ಮುಂದೆ ತಾವರೆಕೆರೆಗೆ ಹೋಗಿ ಜಂಗಲ್ ಸತ್ಯಾಗ್ರಹ ಮಾಡಿದೆ. ತೀತದ 4-5 ಜನರ ಸಹಿತ ಎಂಟು ಜನರ ಬಂಧನ ಆಯಿತು. ಟಿ. ತಾರೇಗೌಡರು ಆಗ ಸತ್ಯಾಗ್ರಹಕ್ಕೆ ಪರೋಕ್ಷ ನೆರವು ನೀಡಿದ್ದರು. ಶಿರಾ ಲಾಕಪ್‌ನಲ್ಲಿ ಇಟ್ಟು, ರಾತ್ರಿ ಹೆಂಡದ ಲಾರಿಯಲ್ಲಿ ಕೂರಿಸಿ ಹುಳಿಯಾರು ಬಳಿ ಕುದುರೆಕಣಿವೆ ಅಡವಿಯಲ್ಲಿ ಇಳಿಸಿ ಹೋದರು. ಆಗ 18 ವರುಷದ ಎಳೆಯನಾದ ನಾನು ತೀರ ಗಾಬರಿಪಟ್ಟೆ. ರಾತ್ರಿ ನಡೆದುಕೊಂಡು ಎರಡು ಮೈಲು ಜಯಕಾರಹಾಕುತ್ತ ಬಂದೆವು. ಅಷ್ಟರಲ್ಲಿ ನಮ್ಮ ಊರ ಒಂದು ಗಾಡಿ ಆ ಮಾರ್ಗದಲ್ಲಿ ಹೋಗುತ್ತಿದ್ದು ಅದರ ಹಿಂದೆಯೇ ನಡೆದು ಕೆಂಕೆರೆಗೆ ಬಂದೆವು. ಆ ದಿನ ವಿಜಯದಶಮಿ ಆಗಿದ್ದು ಆ ಊರ ಅಣ್ಣಯ್ಯ ಆತಿಥ್ಯ ನೀಡಿ ಊರಲ್ಲಿ ಸಭೆ ಏರ್ಪಡಿಸಿದ್ದರು. ಅಷ್ಟುಹೊತ್ತಿಗೆ ಶಿರಾದಿಂದ ನಮ್ಮನ್ನು ಹುಡುಕಲು ಎಲ್ಲೆಡೆಗೆ ಸೈಕಲ್‌ನಲ್ಲಿ ಜನರನ್ನು ಕಳುಹಿಸಿದ್ದರು. ಬಿ. ಎನ್. ರಾಮೇಗೌಡ, (ಡಾ||) ಭಗವಾನ್ ಹುಳಿಯಾರಿಗೆ ಬಂದು ನಮ್ಮನ್ನು ಶಿರಾಕ್ಕೆ ಕರೆದೊಯ್ದರು. ಹನುಮಾನ್ ಮೋಟರ್ ಸರ್ವೀಸ್‌ನವರು ಬಿಟ್ಟಿಯಾಗಿ ತೆಗೆದುಕೊಂಡು ಹೋದರು. ಶಿರಾದಿಂದ ಒಂದು ಮೈಲು ದೂರದಲ್ಲಿ ನಮ್ಮನ್ನು ಇಳಿಸಿ, ಸಾವಿರಾರು

ಜನ ನಮ್ಮನ್ನು ಸ್ವಾಗತಿಸಿ, ಹೊತ್ತುಕೊಂಡು ಊರಲ್ಲಿ ಕರೆದೊಯ್ದು ಮೆರವಣಿಗೆ ಮಾಡಿದರು. ಆಗ ಊರಲ್ಲಿ ಪೋಲಿಸರು ನಾಪತ್ತೆ ಆಗಿದ್ದರು. ಮತ್ತೆ ನಾನು ಶಿಬಿರದಲ್ಲಿ ಇದ್ದೆ. ಎರಡೇ ದಿನಗಳಲ್ಲಿ ಶಿಬಿರದ ಎಲ್ಲರನ್ನೂ ಬಂಧಿಸಿ ಶಿಬಿರದ ಕಟ್ಟಡಕ್ಕೆ ಬೀಗಮುದ್ರೆ ಹಾಕಿದರು. ನನ್ನ ಜೊತೆ ಕೊಡಿಗೇನಹಳ್ಳಿ ಪುಟ್ಟಸ್ವಾಮಿ ಜೋಯಿಸ್, ಸಿದ್ದಪ್ಪ, ರಾಮೇಗೌಡ, ರಂಗನಾಥ್ ಮುಂತಾದವರ ಬಂಧನ ಆಯಿತು. 20 ದಿನ ಮಧುಗಿರಿ ಲಾಕಪ್‌ನಲ್ಲಿ ಇದ್ದು, ಕಡೆಗೆ ಏಳೂವರೆ ತಿಂಗಳ ಶಿಕ್ಷೆ ಆಯಿತು. 24-11-1939ರಲ್ಲಿ ಬಿಡುಗಡೆ ಆದೆ. ಬಿಡುಗಡೆಯ ಅನಂತರವೂ ವಿದುರಾಶ್ವತ್ಥ, ಅರಸೀಕೆರೆ, ಹರಿಹರ ಕಾಂಗ್ರೆಸ್‌ಗಳಿಗೂ ಹೋಗಿದ್ದೆ.

1941ರಲ್ಲಿ ಕೆ. ಆರ್. ತಿಮ್ಮದಾಸಯ್ಯ ಕಾಂಗ್ರೆಸ್‌ನಿಂದ ಪ್ರಜಾಪ್ರತಿನಿಧಿ ಸಭೆಗೆ ಆರಿಸಿಬಂದರು. ನಮ್ಮ ಊರಲ್ಲಿ ಕುರುಬರದೇ ಬಹುಮತವಿದ್ದು ಪ್ರತಿಸ್ಪರ್ಧಿಯಾದ ವ್ಯಕ್ತಿ ಕುರುಬ ಜಾತಿಯವರು, ದೀರ್ಘಕಾಲದಿಂದ ಪ್ರತಿನಿಧಿ ಸಭೆಯ ಸದಸ್ಯರೂ ಆಗಿದ್ದರೂ ಕುರುಬರು ಕಾಂಗ್ರೆಸ್ಸಿಗೇ ಬೆಂಬಲನೀಡಿದರು. ಬಳ್ಳಾರಿ ಸಿದ್ದಮ್ಮ, ವೀರಣ್ಣ ಗೌಡ, ತಾಯಮ್ಮ ಇವರೆಲ್ಲ ಆಗ ಪ್ರಚಾರಕ್ಕೆ ಬಂದಿದ್ದರು.

1942ರಲ್ಲಿ ನನ್ನ ಮೇಲೆ ವಾರಂಟ್ ಬಂದರೂ ತಹಶೀಲ್‌ದಾರರ ಅನುನಯದಿಂದ ಯಾರದೂ ಬಂಧನ ಆಗಲಿಲ್ಲ. ಶೆಟ್ಟಿಕೆರೆಯಲ್ಲಿ ಮಾತ್ರ ಎ. ಬಿ. ಮರಿಯಪ್ಪ ಮುಂತಾದ ಕೆಲವರ ಬಂಧನ ಆಯಿತು. ನಾನು ತುಮಕೂರಿಗೆ ಹೋಗಿ ಖಾದಿಭಂಡಾರದ ಮ್ಯಾನೇಜರ್ ರಾಮಚಂದ್ರರಾವ್ ಅವರ ರೂಮಿನಲ್ಲಿ ವಾಸವಾಗಿದ್ದೆ. ಖಾದಿ ಭಂಡಾರದ ನಂಜಪ್ಪ, ಪ್ರಹ್ಲಾದರಾವ್, ವಾಸು ಮುಂತಾದ 10-20 ಜನ ಭೂಗತ ಚಟುವಟಿಕೆ ನಡೆಸಿದೆವು. 'ತ್ರಿಶೂಲ', 'ಡಮರುಗ' ಇತ್ಯಾದಿ ಬುಲೆಟಿನ್ ಹೊರಡಿಸುತ್ತಿದ್ದೆವು. ಡಾಬಸ್‌ಪೇಟೆ ಬಳಿ ಬ್ರಿಜ್ ಒಡೆಯಲು ಸಂಚು ನಡೆಸಿ ಕಂಟ್ರಾಕ್ಟರ್ ಒಬ್ಬರಿಂದ ಡೈನಾಮೈಟ್ ಪಡೆದಿದ್ದೆವು. ಧೋಬಿ ಸಂಗಪ್ಪನ ಮನೆಯಲ್ಲಿ ಡೈನಾಮೈಟ್ ಸಿಕ್ಕಿ ಆತನಿಗೆ ಎರಡು ವರ್ಷ ಶಿಕ್ಷೆ ಆಯಿತು. ಕ್ಯಾತಸಂದ್ರದಲ್ಲಿ ಆಗ ಅಲ್ಲಿಯವರು ಟ್ರೇನ್ ಒಂದನ್ನು ಕೆಡವಿದ್ದರು. ತುಮಕೂರು ಮೆಥಡಿಸ್ಟ್ ಶಾಲೆಗೆ ಬೆಂಕಿ ಹಚ್ಚಿದೆವು. ಅಲ್ಲಿದ್ದ ಫರ್ನಿಚರ್ ಮಾತ್ರ ಸುಟ್ಟಿತು. ಜೆ. ಎ. ಪ್ರೆಸ್‌ನ ಕೆ. ಪ್ರಹ್ಲಾದ ಆಗ ಪ್ರಮುಖ ಕಾರ್ಯಕರ್ತರಾಗಿದ್ದು ನಾನು ಅವರ ಜೊತೆ ಸಾಕಷ್ಟು ಕೆಲಸಮಾಡಿದ್ದೆ..ಎಚ್. ಎಸ್. ದೊರೆಸ್ವಾಮಿ ಆಗಾಗ ಬೆಂಗಳೂರಿನಿಂದ ಬರುತ್ತಿದ್ದರು. ನನ್ನ ಬಂಧನ ಆಗ ಆಗಲಿಲ್ಲ.

1943ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ಇದ್ದ ಕೆ. ಎಸ್. ರಾಮಚಂದ್ರ ಅವರ ಹೊಟೇಲಿನ ಮೇಲಿನ ರಾಷ್ಟ್ರಧ್ವಜವನ್ನು ಬಲಾತ್ಕಾರದಿಂದ ಇಳಿಸಿದ್ದರ ಪರಿಣಾಮವಾಗಿ ಹಿಂದು-ಮುಸ್ಲಿಂ ದಂಗೆ ಪರಿಸ್ಥಿತಿ ಉಂಟಾಯಿತು. ಪೋಲೀಸ್ ಸಬ್-ಇನ್ಸ್‌ಪೆಕ್ಟರ್ ಮುಸ್ಲಿಂ ಆಗಿದ್ದುದರಿಂದ ಈ ಪರಿಸ್ಥಿತಿ ಒದಗಿ, ಈ ಬಗ್ಗೆ ಪತ್ರಿಕೆಗಳಲ್ಲಿ ವರದಿ, ಅಸೆಂಬ್ಲಿಯಲ್ಲಿ ಚರ್ಚೆ ಕೂಡ ಆಯಿತು. ಮುಂದೆ ಊರಲ್ಲಿ ಶಾಂತಿ ಸಮಿತಿ ಸ್ಥಾಪಿಸಿದರು.

1944-45ರಲ್ಲಿ ಊರಲ್ಲಿ ದೇಶೀಯ ವಿದ್ಯಾಪೀಠವನ್ನು ಜಿ. ವಿ. ನಾರಾಯಣ ಮೂರ್ತಿ ಅವರ ನೇತೃತ್ವದಲ್ಲಿ ಸ್ಥಾಪಿಸಲಾಯಿತು. 1947ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ನನ್ನ ಬಂಧನ ಆಗಿ 100 ರೂ. ದಂಡ, ದಂಡ ತೆರಲು ತಪ್ಪಿದರೆ ನಾಲ್ಕು ತಿಂಗಳ ಶಿಕ್ಷೆ ಆಯಿತು. ನನ್ನ ಜೊತೆಯೇ ಲಿಂಗದೇವರಿಗೂ ಶಿಕ್ಷೆ ಆಯಿತು. ನನಗೂ 2 ದಿನ ಮುಂಚೆ ಜಿ. ವಿ. ನಾರಾಯಣಮೂರ್ತಿ ಅವರ ಬಂಧನ ಆಗಿತ್ತು. ಇವರಲ್ಲದೆ ಸಿ. ಜಿ. ಗೋವಿಂದಪ್ಪ. ಶಂಕರಲಿಂಗಪ್ಪ, ಸಿ ಟಿ. ಈಶ್ವರನ್, ಸಿ. ಎನ್. ಕೃಷ್ಣರಾವ್ ಅಲ್ಲದೆ 30-40 ವಿದ್ಯಾರ್ಥಿಗಳೂ ಬಂಧಿಸಲ್ಪಟ್ಟಿದ್ದರು. ಕುಪ್ಪೂರು ಗೋಪಾಲ್ ಅ ಪೈಕಿ ಒಬ್ಬರು. 14-10-1947ಕ್ಕೆ ನಮ್ಮ ಬಿಡುಗಡೆ ಆಯಿತು.

ನಮ್ಮ ತಾಲ್ಲೂಕಿನಲ್ಲಿ ಜಯಚಾಮರಾಜಪುರದಲ್ಲಿ ಎಸ್. ಟಿ. ವೆಂಕಟೇಗೌಡ (ಇವರು ಲಿಂಗದೇವರ ಸಂಬಂಧಿ) ತಿಮ್ಮಪ್ಪ ಪ್ರಮುಖ ಕಾರ್ಯಕರ್ತರಾಗಿದ್ದರು. ಶೆಟ್ಟಿಕೆರೆಯಲ್ಲಿ ಎಸ್. ಕೆ. ಗಂಗಣ್ಣ, ಎಸ್. ಕೆ. ರುದ್ರಪ್ಪ ಮತ್ತು ದಿ|| ಎಸ್. ಕೆ. ಚನ್ನವೀರಪ್ಪ ಪ್ರಮುಖರು. ಕುಪ್ಪೂರಲ್ಲಿ ಗದ್ದಿಗೆಮಠದ ಚಂದ್ರಶೇಖರಸ್ವಾಮಿಗಳು ಬಹಳ ಸಹಕಾರ ನೀಡುತ್ತಿದ್ದರಲ್ಲದೆ ಚಳವಳಿಗಾರರಿಗೆ ಆತಿಥ್ಯ, ಧನಸಹಾಯ ನೀಡುತ್ತಿದ್ದರು ತಿಮ್ಮನಹಳ್ಳಿಯಲ್ಲಿ ದಿ|| ಟಿ. ಪುರದಪ್ಪ, ಕರೇರಂಗಪ್ಪ, ಬಂಡೀಮನೆ ಕೆಂಚೇಗೌಡ ಪ್ರಮುಖರು. ಜಿನಕನಕಟ್ಟೆಯಲ್ಲಿ ಶಂಕರಲಿಂಗಪ್ಪ, ಸಣ್ಣರಂಗಯ್ಯ ಉತ್ಸಾಹೀ ಕಾರ್ಯ ಕರ್ತರು. ಕೆಂಕೆರೆಯಲ್ಲಿ ಅಣ್ಣಯ್ಯ, ಚನ್ನಬಸವಯ್ಯ. ಮರುಳಪ್ಪ, ಗಾಣದಾಳುವಿನಲ್ಲಿ ಸಿದ್ದಲಿಂಗಪ್ಪ ಇವರೆಲ್ಲ ಆಗ ಕೆಲಸಮಾಡುತ್ತಿದ್ದವರು.

ವ್ಯ.ತು. 20

## ಕುಪ್ಪೂರು ಗೋಪಾಲ

ಜನನ : 1927 ಉದ್ಯೋಗ : ಪತ್ರಕರ್ತ ವಿಳಾಸ : ಚಿಕ್ಕನಾಯಕನಹಳ್ಳಿ



ವಿದ್ಯಾರ್ಥಿದೆಸೆಯಿಂದಲೂ ಪತ್ರಿಕಾ ಮಾರಾಟದ ವ್ಯವಸಾಯ ಮಾಡುತ್ತಿದ್ದ ನಾನು ಸಂಯುಕ್ತ ಕರ್ನಾಟಕ, ವೀರಕೇಸರಿ, ತಾಯಿನಾಡು, ಇಂಡಿಯನ್ ಎಕ್ಸ್‌ಪ್ರೆಸ್ ಓದಿ ಬಾಪೂಜಿಯ ವೀರ ವಾಣಿಯನ್ನು ಮನನ ಮಾಡಿಕೊಂಡೆ. 1942ರಲ್ಲಿ ನಮ್ಮ ಊರ ನಾಯಕರೆಂದರೆ ದಿ|| ಸಿ. ಎಚ್. ಲಿಂಗದೇವರು. ದಿ|| ಎಸ್. ಮುರುಡಯ್ಯ ಅವರ ಜೊತೆ ಸರಿಜೋಡಿಯಿದ್ದವರು. ಆ ಕಾಲದಲ್ಲಿ ಹೆಂಡ

ತುಂಬಿ ಬರುತ್ತಿದ್ದ ಲಾರಿಯ ತಿತ್ತಿ ಕಿತ್ತು ಪೋಲೀಸಿನವರಿಂದ ಒದೆಸಿಕೊಂಡೆ. ದಫೇದಾರ ರೊಬ್ಬರ ಪೇಟ ಕಿತ್ತು ಅರ್ಧಳೀವರದ ಕೆಳಗೆ ವಿದ್ಯಾರ್ಥಿಗಳ ಎದುರು ಸುಟ್ಟೆ. ಈ ಬಗ್ಗೆ ಪೋಲೀಸರಿಗೆ ತಿಳಿಸಿ ಹೊಡೆಸಿದ ಮುಖಂಡರೊಬ್ಬರು ಈಗ ರಾಜ್ಯದಲ್ಲಿ ಮುಖ್ಯಸ್ಥಾನ ದಲ್ಲಿ ವಿರಾಜಮಾನರಾಗಿದ್ದಾರೆ. ಮುಂದೆ ತಿಪಟೂರಲ್ಲಿ ಸರ್ಕಾರಿ ಹೈಸ್ಕೂಲು ಸೇರಿದೆ. ಜಿ. ವಿ. ನಾರಾಯಣಮೂರ್ತಿ, ಎಂ. ವಿ. ರಾಮರಾವ್, ತಾಳಕೆರೆ, ರಂಗಯ್ಯಂಗಾರ್ ನಮಗೆ ಸ್ಫೂರ್ತಿ ನೀಡಿದವರು. ಅಲ್ಲಿ ವಿದ್ಯಾರ್ಥಿ ಕಾಂಗ್ರೆಸ್ ಸಂಘಟಿಸಿ ನಾನೇ 1944ರಲ್ಲಿ ಪ್ರಥಮಾಧ್ಯಕ್ಷನಾಗಿ ಆಯ್ಕೆಗೊಂಡೆ. ಮುಂದೆ ಎರಡು ವರ್ಷವೂ ನಾನೇ ಪುನರಾಯ್ಕೆಯಾದೆ. ಸುಂದರೇಶ್ ಕಾರ್ಯದರ್ಶಿ, ದಾಸಪ್ಪ, ಗೋವಿಂದರಾಜು ದಂಡಾಧಿಪತಿಗಳು. ನಮ್ಮದು 30 ಜನರ ಬಲಿಷ್ಠ ಗುಂಪು. ವಿಮಲಾಬಾಯಿ ದಾತಾರ್ ಮಹಿಳಾ ವಿಭಾಗದ ಪ್ರಮುಖಳು. ಎಲ್ಲ ಚಳವಳಿಯಲ್ಲೂ ಧ್ವಜ ಹಿಡಿದು ಮುಂದೆ ನಿಲ್ಲುವ ಈ ಕ್ರಾಂತಿಕನ್ಯೆಗೆ 'ರಾಣಿ ಲಕ್ಷ್ಮಿ' ಎಂದು ಕರೆಯುತ್ತಿದ್ದರು. ರೈಲು ಸೇತುವೆ ಅಡಿಯಲ್ಲಿ ನಮ್ಮ ಸಭೆಗಳನ್ನು ನಡೆಸುತ್ತಿದ್ದೆವು. ವಾರಕ್ಕೊಮ್ಮೆ ಊರಲ್ಲಿ ಮೆರವಣಿಗೆ. ನಾವು ಜಯಕಾರ ಕೂಗಿದರೆ ವಿದ್ಯಾರ್ಥಿಗಳೆಲ್ಲ ತರಗತಿ ಬಿಡುವ ವ್ಯವಸ್ಥೆ. ತಿಪಟೂರಿನ ಎಲ್ಲ ರಾಜಕೀಯ ಚಟುವಟಿಕೆಗಳಿಗೆ ನಮ್ಮ ಸಂಘವೇ ಬಂಡವಾಳ.

1947ರ ಚಳವಳಿಯಲ್ಲೂ ನಾವೇ ಮುಂದು. ವಿದ್ಯಾರ್ಥಿನಿಯರಿಂದಲೂ ರಕ್ತಾಂಕಿತ ಪ್ರತಿಜ್ಞೆ. ಬಿ. ಆರ್. ಜಯರಾಮ್, ಕುಪ್ಪೂರು ನರಸಿಂಹಮೂರ್ತಿ, ಲಿಂಗಪ್ಪ, ಖಾದಿ ರಂಗಪ್ಪ, ಹೋಟೆಲು ಮಾಲೀಕ ರಾಜಾರಾವ್, ಸೈಯದ್ ಸಾಹೇಬ್ ಆಗ ಚಳವಳಿಯ ಪ್ರಮುಖರು. ಆಗಸ್ಟ್ 15ರಂದು ವಿಜೃಂಭಣೆಯಿಂದ ಉತ್ಸವ ಆಚರಿಸಿದೆವು. ಸೆಪ್ಟಂಬರ್‌ನಲ್ಲಿ ಊರಲ್ಲಿ ಮೊದಲ ಬಂಧನ ಆದುದು ನನ್ನದೇ ; ನಾಲ್ಕು ತಿಂಗಳ ಶಿಕ್ಷೆ. ವಿದ್ಯಾರ್ಥಿಗಳು ಪೋಲಿಸರ ಜೀಪು ತಡೆದರು. ನ್ಯಾಯವಾದಿಗಳ ಮನೆಮುಂದೆ ಸತ್ಯಾಗ್ರಹ ಮಾಡಿದರು. ಎಲ್ಲ ಕಚೇರಿಗಳ ಬಾಗಿಲು ಮುಚ್ಚಿಸಿದರು.

ಚಿಕ್ಕನಾಯಕನಹಳ್ಳಿಯ ದಿ|| ಲಿಂಗದೇವರು ಅಸಮಾನ ವ್ಯಕ್ತಿತ್ವದ ಏಕೈಕ ನಾಯಕರು. ಶೈಕ್ಷಣಿಕ, ಸಹಕಾರ ರಂಗದಲ್ಲಿ ದುಡಿದು, ಮುಂದೆ ಶಾಸಕರೂ ಆದ ನಿಸ್ಸ್ವಾರ್ಥಸೇವಕರು. ಪ್ರಿನ್ಸಿಪಾಲ್ ಸಿ. ಟಿ. ಈಶ್ವರನ್, ಸಿ. ಎಸ್. ಕೃಷ್ಣರಾವ್, ಕೆ. ಎಸ್. ರಾಮಚಂದ್ರರಾಯರು ಅನ್ಯಕಾರ್ಯಕರ್ತರು. ಎಂ. ಎಸ್. ಹನುಮಂತ ರಾಯರು 1937ರಿಂದ ಚಳವಳಿಯಲ್ಲಿದ್ದು ಹೆಚ್ಚು ಕಾಲ ಜೈಲು ಅನುಭವಿಸಿ ಆಸ್ತಿ, ಮನೆಮಠ ಕಳೆದುಕೊಂಡವರು. ನಾನು ಪೆನ್‌ಶನ್ ವಗೈರೆ ಸವಲತ್ತು ಪಡೆಯುತ್ತಿಲ್ಲ.

ಮೈ.ಹು. 21

# ಎಸ್. ಕೆ. ಗಂಗಣ್ಣ

ಜನನ : 1918 ಉದ್ಯೋಗ : ವ್ಯವಸಾಯ ವಿಳಾಸ : ಶೆಟ್ಟಿಕೆರೆ, ತಾ॥ ಚಿಕ್ಕನಾಯಕನಹಳ್ಳಿ



ನಾನು ತಿಪಟೂರಲ್ಲಿ ಮಿಡ್ಲ್ ಸ್ಕೂಲಲ್ಲಿ ಓದುತ್ತಿದ್ದಾಗ ಲಕ್ಷ್ಮೀಪತಯ್ಯ ಎಂಬ ಉಪಾಧ್ಯಾಯರು ರಾಷ್ಟ್ರೀಯ ಜಾಗೃತಿಗೆ ಕಾರಣ. ನಾನು ಅದೇ ಊರಲ್ಲಿ ಐದನೆಯ ಫಾರ್ಮ್‌ನಲ್ಲಿ ಇದ್ದಾಗ ಪತ್ರಿಕೆಗಳನ್ನು ಓದಿ, ರಾಷ್ಟ್ರೀಯ ಚಟುವಟಿಕೆಗಳ ಬಗೆ ಗಮನ ಹೆಚ್ಚಾಯಿತು. ಓದನ್ನು ತ್ಯಜಿಸಿದೆ. ಶಿವಪುರ ಕಾಂಗ್ರೆಸ್ಸಿಗೆ, ಒಂದು ತಿಂಗಳ ಮೊದಲೇ ಮನೆಯಲ್ಲಿ ತಿಳಿಸದೇ, ಅಲ್ಲಿಗೆ ಸ್ವಯಂಸೇವಕನಾಗಿ ಹೋದೆ. ಅಧಿವೇಶನದ ತಯಾರಿಗೆ ಎಂ. ಎಸ್. ಜೋಯಿಸರ ಕೈಕೆಳಗೆ ದುಡಿದೆ. ನಾನೇ ಅಲ್ಲಿಗೆ ತಲಪಿದ ಮೊದಲ ಸ್ವಯಂಸೇವಕ. ತಿರುಮಲೇಗೌಡರ ಮನೆಯಲ್ಲಿ ನಮ್ಮ ಊಟೋಪಚಾರ. ಅಧಿವೇಶನದ ಉತ್ಸಾಹದ ವಾತಾವರಣ ಇಂದಿಗೂ ನನ್ನ ಕಣ್ಣಮುಂದಿದೆ. ಅಲ್ಲಿಂದ ಬರುವಾಗ ಚಿಕ್ಕನಾಯಕನಹಳ್ಳಿಯಲ್ಲಿ ಎಂ. ಎಸ್. ಹನುಮಂತರಾಯರ ಮನೆಯಲ್ಲಿ ಒಂದು ವಾರ ಇದ್ದು, ಊರಲ್ಲಿ ಪ್ರಭಾತ್‌ಫೇರಿ, ಅಧಿವೇಶನದ ವಿಚಾರ ಎಲ್ಲರಿಗೂ ತಿಳಿಸುವುದು ಮಾಡಿದೆ.

ಅನಂತರ ನಮ್ಮ ಊರು ಶೆಟ್ಟಿಕೆರೆ ಹಾಗೂ ಅಜುಬಾಜು ಗ್ರಾಮಗಳಲ್ಲಿ ಹುಡುಗರನ್ನು ಸೇರಿಸಿ ಚಳವಳಿ ಮಾಡಿದೆ. ಈಗಲೂ ಇಲ್ಲೆಲ್ಲ ನನ್ನನ್ನು 'ಕಾಂಗ್ರೆಸ್ ಗಂಗಣ್ಣ' ಎನ್ನುತ್ತಾರೆ. ಭಾಷ್ಯಂ, ಎಚ್. ಸಿದ್ದಯ್ಯ, ತಾಳಕೆರೆ, ಎಂ. ವಿ. ರಾಮರಾವ್ ಇವರೆಲ್ಲ ಈ ಭಾಗಕ್ಕೆ ಬಂದಾಗ ಸಭೆ ಏರ್ಪಾಡು. ಸದಸ್ಯತಾಸಂಗ್ರಹ ಮಾಡುತ್ತಿದ್ದೆ. ವಿದುರಾಶ್ವತ್ಥ ಕಾಂಗ್ರೆಸ್ಸಿಗೂ ಸ್ವಯಂಸೇವಕನಾಗಿ ಹೋಗಿದ್ದು ಆಗ ದೊರೆಸ್ವಾಮಿ ನಮ್ಮ ಪ್ರಮುಖರು. ಸ॥ ವೆಂಕಟರಾಮಯ್ಯನವರ ಪರಿಚಯ ಅಲ್ಲಿ ನನಗೆ ಆಯಿತು. ಪಟ್ಟಾಭಿ ಸೀತಾರಾಮಯ್ಯ ಬಂದಿದ್ದರು. ನನ್ನ ಆಯುಷ್ಯವೆಲ್ಲ ಕಾಂಗ್ರೆಸ್ ಕೆಲಸದಲ್ಲಿ ಹೋಯಿತು.

1942ರಲ್ಲಿ ನಮ್ಮ ಊರಿಗೆ ಎರಡು ಮೈಲು ದೂರದ ಸಿದ್ದರಾಮನಗರದಲ್ಲಿ ಶೇಂದಿ ಪಿಕೆಟಿಂಗ್‌ನಲ್ಲಿ ಎ. ಕೆ. ಸಿದ್ದಬಸಪ್ಪ (ಈಗ ತುಮಕೂರಿನಲ್ಲಿ ವಿದ್ಯುತ್ ಇಲಾಖಾ ಇಂಜಿನಿಯರ್), ಎಸ್. ಶಿವಣ್ಣ (ನಮ್ಮ ಊರ ಬಟ್ಟೆವ್ಯಾಪಾರಿ), ಶಾಲಾಧ್ಯಾಪಕರಾಗಿ

ಈಗ ಇರುವ ವಿ. ಎಚ್ ಸಿದ್ದಪ್ಪ ಇವರಿಗೆ ಶಿಕ್ಷೆ ಆಗಿತ್ತು. 1942ರಲ್ಲಿ ನಮ್ಮ ಊರ ಎಸ್. ಸಿ. ರಾಮಲಿಂಗಪ್ಪ ತಿಪಟೂರಲ್ಲಿ ಗೂಡ್ಸ್ ಶೆಡ್ಡಿಗೆ ಬೆಂಕಿ ಇಟ್ಟು ಬಂಧಿತರಾಗಿ ಒಂದೂವರೆ ತಿಂಗಳು ಶಿಕ್ಷೆಗೆ ಒಳಗಾಗಿದ್ದರು.

ವೈ.ತು. 22

## ಕೆ. ವಿ. ಕೃಷ್ಣಸ್ವಾಮಿ

ಜನನ : 1908 ಉದ್ಯೋಗ : ಮೋಟರ್ ಮೆಕ್ಯಾನಿಕ್ ವಿಳಾಸ : ಕುಣಿಗಲು



ನಾನು ರಾಷ್ಟ್ರೀಯ ಚಳವಳಿಯ ಕಡೆ ಆಕರ್ಷಿತ ನಾದುದಕ್ಕೆ ವಿಶೇಷ ಕಾರಣಗಳೇನೂ ಇಲ್ಲ. ನನ್ನ ಸ್ವಭಾವವೇ ಸ್ವಾತಂತ್ರ್ಯಪ್ರಿಯತೆ. ಸುಮಾರು 13-14ನೇ ವಯಸ್ಸಿನಲ್ಲೇ ಶಾಲೆಗೆ ಹೋಗುತ್ತಿದ್ದಾಗ, ನನ್ನ ವಯಸ್ಸಿನವರು ಕೂಲಿನಾಲಿ ಮಾಡಿ ತಮ್ಮ ಜೀವನ ನಡೆಸಿಕೊಂಡು ನಲಿಯುತ್ತಿದ್ದ ದೃಶ್ಯದಿಂದ ಪ್ರಭಾವಿತನಾಗಿ, ನಾನೂ ಯಾಕೆ ಅವರಂತೆ ಸ್ವತಂತ್ರವಾಗಿ ಜೀವಿಸಬಾರದೆಂಬ ಭಾವನೆಯು ಮೂಡಿ ಮನೆ, ಓದು ಎಲ್ಲವನ್ನೂ ತ್ಯಜಿಸಿ, ಸ್ವತಂತ್ರವಾಗಿ ಜೀವಿಸಲು ಹೊರಟುಬಿಟ್ಟೆ. ಸುಮಾರು ಹತ್ತು ವರ್ಷಗಳ ಕಾಲದನಂತರ (ನನಗಾಗಲೇ 24 ವರ್ಷ ವಯಸ್ಸಾಗಿತ್ತು) ಮನೆಗೆ ಮರಳಿದೆ.

1938ರ ವೇಳೆಗಾಗಲೇ ನನ್ನ ಅಣ್ಣನವರಾದ ಕೆ. ವಿ. ಸುಬ್ರಹ್ಮಣ್ಯಸ್ವಾಮಿ ಯವರು ಈ ಪ್ರದೇಶದಲ್ಲಿ ಕಾಂಗ್ರೆಸ್ಸಿಗರಾಗಿ ಖ್ಯಾತ ವ್ಯಕ್ತಿಯಾಗಿದ್ದರು. ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ 1934ರಲ್ಲೇ ಚುನಾಯಿತರಾಗಿದ್ದರು. ಇವರು 1937ರಲ್ಲೇ ವಕೀಲಿವೃತ್ತಿಗಾಗಿ ತಮ್ಮನ್ನು ತುಮಕೂರಿಗೆ ವರ್ಗಾಯಿಸಿಕೊಂಡಿದ್ದರೂ ಸಹ ಇವರ ಪ್ರಭಾವ ನಮ್ಮ ಊರಲ್ಲಿ ಚೆನ್ನಾಗಿ ಪಸರಿಸಿದ್ದಿತು. ಏಪ್ರಿಲ್ 18ಕ್ಕೆ ಧ್ವಜಸತ್ಯಾಗ್ರಹದ ಘೋಷಣೆ ಆಗಿದ್ದು, ಅದೇ ದಿನದಿಂದಲೇ ನಿಷೇಧಾಜ್ಞೆಯನ್ನು ಪೋಲಿಸರು ಪ್ರಕಟಿಸಿದ್ದರು.

17-4-1938ರ ಸಂಜೆ 7 ಗಂಟೆ ಸುಮಾರಿನಲ್ಲಿ ಮಾರನೇ ದಿನವಿದ್ದ ನಿಷೇಧ ಆಜ್ಞೆಯನ್ನು ಪ್ರತಿಭಟಿಸುವ ಉದ್ದೇಶದಿಂದ ಧ್ವಜದೊಂದಿಗೆ ಕುಣಿಗಲಿನಲ್ಲಿ ಮೆರವಣಿಗೆ ಯನ್ನು ಹೊರಡಿಸಲಾಯಿತು. ನಿಷೇಧಾಜ್ಞೆಯು ತಾರೀಖು 18-4-1938 ರಿಂದ ಎಂದಿದ್ದರೂ ಪೋಲಿಸರು 17-4-1938ರ ಸಂಜೆಯೇ 17 ಜನರನ್ನು ಬಂಧಿಸಿದರು.

17 ಜನರನ್ನು ಬಂಧಿಸುವಷ್ಟು ಪೋಲಿಸ್ ಪಡೆಯಿಲ್ಲದಿದ್ದರೂ ಸತ್ಯಾಗ್ರಹಿಗಳು 'ಬಂಧನ' ಎಂದರೆ ತಾವೇ ಪೋಲಿಸ್ ಠಾಣೆಗೆ ಹೋಗುತ್ತಿದ್ದರು. ಈ 17 ಜನರಲ್ಲಿ ನನ್ನ ಅಣ್ಣ ನವರು, ನಾನು, ಮತ್ತಿತರರು ಸಿ. ಕೆ. ರಂಗಪ್ಪ, ಹುಚ್ಚಣ್ಣ, ಚಿಕ್ಕಣ್ಣ, ಕೆ. ಸಂಜಯ್ಯ, ಯಜಮಾನ್ ಮರಿಯಪ್ಪ, ಸಂಜೀವಯ್ಯ, ಕೃಷ್ಣಶೆಟ್ಟಿ, ವೆಂಕಟದೇಶಿಕರು, ವೆಂಕಟ ಕೃಷ್ಣ, ಕಾಂತರಾಜ, ಜನಾರ್ಧನ, ಕೃಷ್ಣಮೂರ್ತಿ, ಸುಬ್ಬಣ್ಣ, ಮಲ್ಲಯ್ಯ ಮತ್ತು ಪುಟ್ಟರೇವಣ್ಣ ಇದ್ದೆವು. ನಮ್ಮೆಲ್ಲರನ್ನು ರಾತ್ರಿಯೇ ತುಮಕೂರಿಗೆ ಸಾಗಿಸಿದರು.

ನಮ್ಮಗಳ ಬಂಧನದ ಸುದ್ದಿ ಬೆಳಗಿನ ವೇಳೆಗಾಗಲೇ ಹತ್ತಿರದ ಹಳ್ಳಿಗಳಿಗೆ ಹಬ್ಬಿತು. 18-4-1938ರ ಬೆಳಗ್ಗೆ 8 ಗಂಟೆಯ ವೇಳೆಗೆ ಹಳ್ಳಿಗರೇ ಸಾವಿರಾರು ಜನರು ಮೆರವಣಿಗೆಯಲ್ಲಿ ಭಾಗವಹಿಸಿದರು. ಬಿದನಗೆರೆ ಎಂಬ ಗ್ರಾಮದವರದೇ ಹೆಚ್ಚಿನ ಪಾತ್ರ. ಈ ರೀತಿ ಸಾವಿರಗಟ್ಟಲೆಯಲ್ಲಿ ಜನ ನೆರೆಯುತ್ತಿದ್ದಾರೆಂಬ ಸುದ್ದಿಯು ತುಮಕೂರಿನ ಮೇಲಧಿಕಾರಿಗಳಿಗೆ ತಿಳಿದ ತಕ್ಷಣವೇ ಅವರು ಕುಣಿಗಲಿಗೆ ಧಾವಿಸಿದರು. ಅವರೆಗಾಗಲೇ ಹದಿನಾರು ಜನರ ಬಂಧನವಾಗಿತ್ತು. ಮೇಲಧಿಕಾರಿಗಳು ಬಂದವರೇ ಬಂಧನವನ್ನು ಅಲ್ಲಿಗೇ ತಡೆದು, "ಏನಾದರೂ ಕೂಗಿಕೊಂಡು ಹೋಗಲಿ, ಸುಮ್ಮನೇ ಇದ್ದು ಬಿಡಿ" ಎಂದರು. ಬಂಧಿತರಾದ ಹದಿನಾರು ಜನರನ್ನು ತುಮಕೂರಿಗೆ ಕರೆತಂದಾಗ ನಮಗೆ ಈ ಸುದ್ದಿ ತಿಳಿಯಿತು. ಈ ಸತ್ಯಾಗ್ರಹದಲ್ಲಿ ಬಂಧಿತರಾಗಿದ್ದ 33 ಜನರಲ್ಲಿ ಬಿದನ ಗೆರೆಯ ರಾಮಣ್ಣಗೌಡ ಎಂಬುವರೊಬ್ಬರು ಮಾತ್ರ ಶ್ರೀಮಂತ ಭೂಮಿದಾರರಾಗಿದ್ದರೇ ಹೊರತು ಉಳಿದವರೆಲ್ಲ ಬಡವರೇ. ಕೆಲವರಂತೂ ಅಂದಂದಿನ ಕೂಲಿಯಿಂದ ಜೀವಿಸು ತ್ತಿದ್ದವರು. 22-4-1938ರಂದು 33 ಜನರಿಗೂ ಎರಡು ವಾರಗಳಿಂದ ಆರು ವಾರಗಳ ಅವಧಿಯವರೆಗಿನ ಸಾದಾ ಶಿಕ್ಷೆಯನ್ನು ವಿಧಿಸಲಾಯಿತು. ಎಲ್ಲರನ್ನೂ ತುಮಕೂರು ಜಿಲ್ಲಾ ಲಾಕಪ್‌ನಲ್ಲಿ ಇಡಲಾಯಿತು. ಇಲ್ಲಿ ಇನ್ನೂ ಜಿಲ್ಲೆಯ ನಾನಾ ಕಡೆಯ ಸತ್ಯಾ ಗ್ರಹಿಗಳನ್ನೂ ಇಟ್ಟಿದ್ದರು. 5-6 ದಿನಗಳನಂತರ ತಿಂಡಿ ವ್ಯವಸ್ಥೆಯು ಸರಿಯಿಲ್ಲದ್ದರಿಂದ ಗಲಾಟೆ ಪ್ರಾರಂಭವಾಯಿತು. ಕೆಲವರನ್ನುಳಿದು ಉಳಿದೆಲ್ಲರನ್ನೂ ಬೇರೆ ಬೇರೆ ಸ್ಥಳದ ಜೈಲು ಲಾಕಪ್‌ಗಳಿಗೆ ವರ್ಗಾಯಿಸಿದರು. ನನ್ನ ಅಣ್ಣನವರನ್ನು ಅನಾಮತ್ತು ಹೊತ್ತು ಕೊಂಡು ಹೋಗಿ ವ್ಯಾನಿನಲ್ಲಿ ಹಾಕಿದರು. ನನ್ನನ್ನೂ ಮತ್ತೊಬ್ಬ ನಾರಾಯಣ ಎಂಬು ವನನ್ನೂ ಪಾವಗಡ ತಾಲ್ಲೂಕ್ ಲಾಕಪ್ಪಿಗೆ ಹಾಕಿದರು. ನಮಗೆ ಶಿಕ್ಷೆಯಾಗಿದ್ದುದು 3 ವಾರಗಳ ಅವಧಿಯಾಗಿತ್ತಾದರೂ ಪಾವಗಡ ತಾಲ್ಲೂಕು ಅಧಿಕಾರಿಗಳು ನಮ್ಮನ್ನು ಮೂರು ವಾರಗಳಾದನಂತರ ಬಿಡಲು ಕೇಳಿದರೆ, "ನಮಗೆ ಬಿಡುವುದಕ್ಕೆ ತಿಳಿಸಿಲ್ಲ. ಬರೆದು ತಿಳಿದು ಬಿಡುತ್ತೇವೆ" ಎಂದು ಹೇಳಿದರು. ಅಂತೂ ನಮ್ಮ ಬಿಡುಗಡೆಯಾದದ್ದು 27-5-1938ರಂದು.

1938ರ ಕೊನೆಯ ತಿಂಗಳುಗಳಲ್ಲಿ ಅಖಿಲ ಮೈಸೂರು ಕಾಂಗ್ರೆಸ್ ಸಮಿತಿಯ ಅಧಿವೇಶನ ತುಮಕೂರಿನಲ್ಲಿ ದಿವಂಗತ ರೇವಣ್ಣನವರ ಅಕ್ಕಿಗಿರಣಿ ಆವರಣದಲ್ಲಿ ಸೇರಿತ್ತು.

ಅಲ್ಲಿಗೆ ಸ್ವಯಂಸೇವಕರ ಅಗತ್ಯದ ಕರೆಗೆ ಕುಣಿಗಲಿನಿಂದ 12 ಜನರನ್ನು ಕರೆದೊಯ್ದೆ. ಈ ಅಧಿವೇಶನ ಕಾಲದ ಮೂರು ದಿನಗಳಲ್ಲಿ 12 ಜನರೂ ನಿದ್ದೆಯಿಲ್ಲದೆ ರಾತ್ರಿ ಶ್ರಮಿಸಿದೆವು. ಸುಮಾರು 300 ಜನರಿಗೆ ಸ್ನಾನಕ್ಕೆ ಬಿಸಿನೀರು ಕಾಯಿಸುವುದು, ನೀರನ್ನು ಕೈಪಂಪಿನ ಮೂಲಕ ಎತ್ತುವುದು, ತರಕಾರಿ ಹೆಚ್ಚುವುದು, ಊಟ ಬಡಿಸುವುದು, ಚೊಕ್ಕಟ ಮಾಡುವುದು, ಪಾತ್ರೆ ತೊಳೆಯುವುದು, ಬಿಡಾರಗಳ ಕಾವಲು, ಎಲ್ಲ ಕೆಲಸ ಈ 12 ಜನರೇ ನಿಭಾಯಿಸಿದ್ದು. ಅಧಿವೇಶನ ಪೂರೈಸುವ ವೇಳೆಗೆ ಸ್ವಯಂಸೇವಕರ ಪೈಕಿ 3 ಜನರು ತೀರ ಅಸ್ವಸ್ಥರಾಗಿದ್ದರು; ಅಂದರೆ ಅಷ್ಟು ಶ್ರಮಪಟ್ಟಿದ್ದರು.

ಈ ಚಳವಳಿಯಲ್ಲಿ ಭಾಗವಹಿಸಿದ್ದರಿಂದ ನಾನು ಅವಿದ್ಯಾವಂತನಾಗಿರುವುದು ಎಂಥ ದೌರ್ಬಲ್ಯವೆಂಬುದು ಅರ್ಥವಾಯಿತು. ಪ್ರತಿದಿನವೂ ಎರಡು ಹಾಳೆ ಇಂಗ್ಲಿಷಿನಲ್ಲಿ ಬರೆದ ಹೊರತು ಮಲಗುತ್ತಿರಲಿಲ್ಲ. ಅದೂ ಆಂಗ್ಲ ಭಾಷೆಯನ್ನೇ. ಹೀಗೆ ನನ್ನ ವಿದ್ಯೆಯ ಕಲಿಕೆ. ಇದಕ್ಕೆ ಅನುಕೂಲವೆಂಬಂತೆ ಸೆರೆಮನೆವಾಸವೂ ಸಹಾಯ ಮಾಡಿತು.

1939ರಲ್ಲಿ ಅರಣ್ಯಸತ್ಯಾಗ್ರಹ. ತುಮಕೂರು ಜಿಲ್ಲೆಯ ತಿರಾ ತಾಲ್ಲೂಕಿನಲ್ಲಿ ಕಾಳೇಗೌಡ, ಮಾಲಿ ಮರಿಯಪ್ಪ ಮುಂತಾದವರು ಶಿಬಿರ ನಡೆಸುತ್ತಿದ್ದರು. ನಾನು ಮತ್ತು ಶಿದ್ದಪ್ಪ ಎಂಬುವರು ಮಾತ್ರ ಅಲ್ಲಿಗೆ ಹೋಗಿದ್ದೆವು. 14-10-1939ರಂದು ನಮ್ಮ ಬಂಧನವಾಯಿತು. 16-10-1939ರಂದು ಒಟ್ಟು ಮೂರು ತಿಂಗಳು ಮತ್ತು ದಂಡ ತೆರದಿದ್ದರೆ 9 ವಾರಗಳ ಕಠಿಣ ಶಿಕ್ಷೆಯನ್ನು ಮಧುಗಿರಿ ಮ್ಯಾಜಿಸ್ಟ್ರೇಟ್ ಕೋರ್ಟ್ ವಿಧಿಸಿತು. ಎಲ್ಲರನ್ನೂ ಸೆಂಟ್ರಲ್ ಜೈಲ್ ಬೆಂಗಳೂರಿಗೆ ಕರೆದೊಯ್ದರು. ವಿಧಿಸಿದ್ದ ದಂಡವನ್ನು ತೆರಲಿಲ್ಲವಾಗಿ ಮನೆ ಜಪ್ತಿಯಾಯಿತು. ಆದರೆ ಸರ್ಕಾರದವರು ಜಪ್ತಿಗೆ ಬರುವುದಕ್ಕೆ ಮುಂಚೆಯೇ ಮನೆಯ ಉತ್ತರ ಭಾಗದ ಗೋಡೆ ಬಿದ್ದುಹೋಗಿತ್ತಾಗಿ ಮನೆಯ ಸಾಮಾನನ್ನೆಲ್ಲ ಸ್ನೇಹಿತರು ಬೇರೆ ಕಡೆಗೆ ಸಾಗಿಸಿದ್ದರು. ಜಪ್ತಿಗೆ ಏನೂ ಇರಲಿಲ್ಲ.

ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಆಗ ಸರಿಸುಮಾರು 850 ಜನ ಸ್ವಾತಂತ್ರ್ಯ ಹೋರಾಟಗಾರ ಬಂದಿಗಳ ಜೊತೆ ಸೇರಿಕೊಂಡೆ. ಈ ಜೈಲಿನಲ್ಲಿ ನನಗೆ ರಾಯ್‌ವಾದಿಗಳ (ಶಿವಮೊಗ್ಗ ಕಡೆಯ ಕೃಷ್ಣಮೂರ್ತಿ ಮುಂತಾದವರು) ಮತ್ತು ಮಾರ್ಕ್ಸ್‌ವಾದಿಗಳ (ಸಿ. ಬಿ. ಮೊಣ್ಣಯ್ಯ ವಗೈರೆ) ಪರಿಚಯವಾಯಿತು. ನನ್ನ ಓದಿಗೆ ಕೆಲವು ಪುಸ್ತಕಗಳು ದೊರೆಕಿದುವು. ಅವುಗಳಲ್ಲಿ ನನ್ನ ಮೇಲೆ ಅತಿಯಾಗಿ ಪ್ರಭಾವ ಬೀರಿದ್ದು ಟಾಲ್‌ಸ್ಟಾಯ್ ಅವರ ಕೃತಿ 'What Then Must We Do ?'. ಇದು ನನ್ನ ಜೀವನ ಹೋರಾಟಕ್ಕೆ ಸಹಾಯ ಮತ್ತು ಧೈರ್ಯವನ್ನು ತುಂಬಿಕೊಟ್ಟಿತು. ಇಲ್ಲಿನ ಅಡಿಗೆ ಕೆಲಸ ನಾನು ಮಾಡುತ್ತಿದೆ.

ಫೆಬ್ರವರಿ ತಿಂಗಳಿನಲ್ಲಿ ಬಹುಮಂದಿ ಸತ್ಯಾಗ್ರಹಿಗಳನ್ನು ಬೇರೆ ಬೇರೆ ಜೈಲುಗಳಿಗೂ ಕ್ಯಾಂಪ್ ಜೈಲುಗಳಿಗೂ ವರ್ಗಾಯಿಸಲಾಯಿತು. ನಾನೂ ಸೇರಿದಂತೆ 200 ಜನ

ಸತ್ಯಾಗ್ರಹಿಗಳನ್ನು ಜೈರಮಂಗಲ ಕ್ಯಾಂಪ್ ಜೈಲಿಗೆ ಹಾಕಿದರು. ಇಲ್ಲಿ ಒಂದು ಅಣೆಕಟ್ಟು ಕೆಲಸ ನಡೆಯುತ್ತಿತ್ತು. ಇದಕ್ಕೆ ಸಂಬಂಧಪಟ್ಟಂತೆ ಒಂದು ಕಾಲುವೆ ತೋಡುವ ಕೆಲಸ ಸತ್ಯಾಗ್ರಹಿಗಳಿಗೆ. ಯಾರಿಗೂ ಹಾರೆ ಗುದ್ದಲಿ ಹಿಡಿದು ಕೆಲಸಮಾಡಿದ ರೂಢಿಯಿಲ್ಲದ್ದು, ಮತ್ತೆ ಕಬ್ಬಿಣದ ಬಾಣಲೆಗಳಲ್ಲಿ ತಲೆಗೆ ಸಿಂಬಿಯೂ ಇಲ್ಲದೆ ಮಣ್ಣು ಹೊರಬೇಕಾಗಿದ್ದುದು, ಜತೆಗೆ ಮಾರ್ಚ್-ಏಪ್ರಿಲ್ ಮಾಹೆಯ ಬಿಸಿಲು ಎಲ್ಲವೂ ಸಹ ಸತ್ಯಾಗ್ರಹಿಗಳಿಗೆ ಉತ್ತಮ ಪಾಠವೇ ಆಗಿತ್ತೆನ್ನೋಣ.

ಜೈಲಿನಿಂದ ಬಿಡುಗಡೆಯಾದವನು ಕುಣಿಗಲಿಗೆ ಬಂದೆ. ಬಿದ್ದ ಮನೆಯನ್ನು ಕಟ್ಟಿಸಲು ಹಣವಿಲ್ಲ; ವ್ಯವಸಾಯ ಮಾಡಲು ಬಂಡವಾಳವಿಲ್ಲ; ಸಾಲ ಕೊಡುವವರಿಲ್ಲ; ಹಣಗಾರರ ಅಭಿಪ್ರಾಯದಲ್ಲಿ, "ಇವನು ಬೆಳಗೆದ್ದು ಚಳವಳಿ, ಜೈಲು! ಇವನು ಜೈಲಿಗೆ ಹೋದರೆ ಕೊಟ್ಟ ಗಂಟನ್ನು ಯಾರಲ್ಲಿ ವಸೂಲ್ಮಾಡುವುದು?" ಹೀಗೆ ನಿಸ್ಸಹಾಯಕನಾಗಿ ಒಂದು ತೀರ್ಮಾನಕ್ಕೆ ಬಂದೆ. ಅಂದರೆ "ಸಾಲ ಮಾಡುವುದಕ್ಕಿಂತ ಕೂಲಿ ಮಾಡುವುದು ಲೇಸು." ಆದರೆ ಎಂಥ ಕೂಲಿ? ಅದೊಂದು ಕಸಬಾಗಿರಬೇಕು, ಎಲ್ಲಿ ಹೋದರಲ್ಲಿ ಆ ಕೆಲಸಕ್ಕೆ ಬೇಡಿಕೆಯಿರಬೇಕು. ಹೀಗೆ ಯೋಚನೆಮಾಡಿ ಮೋಟಾರ್ ವಾಹನಗಳ ರಿಪೇರಿ ಕಲಿಯಲು ನಿರ್ಧರಿಸಿಕೊಂಡೆ. ಕೊನೆಗೆ ಕುಣಿಗಲು ಬಿಟ್ಟು ಗೋವಾಕ್ಕೆ ಹೋದೆ. ಇಂಗ್ಲಿಷ್ ಕಲಿತಿದ್ದುದರಿಂದ ಈ ಸಂಬಂಧ ಪುಸ್ತಕಗಳನ್ನೋದಿಯೇ ಹೆಚ್ಚು ಸಹಾಯ ಪಡೆದುಕೊಂಡೆ.

1945ರಲ್ಲಿ ಕಾರಣಾಂತರ ಬೆಂಗಳೂರು ಸಿಂಪ್ಸನ್ ಕಂಪೆನಿಯಲ್ಲಿದ್ದ ಮೆಕ್ಯಾನಿಕ್ ಕೆಲಸವನ್ನು ಬಿಟ್ಟು ಕುಣಿಗಲಿಗೆ ಬರಬೇಕಾಗಿತ್ತು. ಆ ಕಾಲದಲ್ಲಿ ಊರಲ್ಲಿ ಮೆಕ್ಯಾನಿಕ್ ಕೆಲಸ ಅಷ್ಟಾಗಿರಲಿಲ್ಲವಾಗಿ ಡ್ರೈವರ್ ಕೆಲಸವನ್ನು—ಅದೂ ಶೇಂದಿ ಲಾರಿ ನಡೆಸುವ ಕೆಲಸವನ್ನು—ಒಪ್ಪಿಕೊಂಡಿದ್ದೆ. ಆಗ ಕುಣಿಗಲಿಗೆ ಬಂದಿದ್ದ ಮಾಲಿ ಮರಿಯಪ್ಪನವರ ಪರಿಚಯ ಚೆನ್ನಾಗಿತ್ತಾಗಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ನನ್ನನ್ನೇ ಆರಿಸಿದರು. ಜೀವನಕ್ಕೆ ಶೇಂದಿ ಲಾರಿ ಡ್ರೈವರ್, ರಾಜಕೀಯವಾಗಿ ತಾಲ್ಲೂಕ್ ಕಾಂಗ್ರೆಸ್ ಕಾರ್ಯದರ್ಶಿ. ಅಧ್ಯಕ್ಷರು ದಿ|| ಕೆ. ಎಂ. ಸಂಜೀವಯ್ಯ.

ತಾಲ್ಲೂಕ್ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರು 10–12 ಜನರಿದ್ದರು. ಆದರೆ ಯಾರಿಗೂ ನೇರ ಪ್ರಚಾರದಲ್ಲಿ ಬರಲು ಧೈರ್ಯ ಸಾಲದು. ಗತಭಾವನೆಗಳಿಗೆ ಕಟ್ಟುಬಿದ್ದ ಜನಕ್ಕೆ ಮಹಾರಾಜರ ವಿರುದ್ಧ ಮಾತಾಡುವುದೆಂದರೆ ಧೂರ್ತತನವೆಂದು ನಂಬಿಕೆ. ಕಾಂಗ್ರೆಸ್ಸಿನ ಆಗಿನ ಘೋಷಿತ ಕಾರ್ಯಕ್ರಮ—"ಜಮೀನ್ದಾರಿಯನ್ನು ಹೊಡೆದುಹಾಕುತ್ತೇವೆ; ಉಳುವವನದೇ ಹೊಲವಾಗಬೇಕು; ಬಂಡವಾಳಶಾಹಿಯನ್ನು ಬಲಿಹಾಕುತ್ತೇವೆ; ಅಧಿಕಾರಶಾಹಿಯನ್ನು ಮರ್ದಿಸುತ್ತೇವೆ ಜಾತೀಯ ಅಥವಾ ಮತೀಯ ಭಾವೋದ್ರೇಕಗಳಿಗೆ ಸರಿಯಾದ ಮದ್ದು ಹಾಕುತ್ತೇವೆ........" ಇತ್ಯಾದಿ. ಈ ಪುರೋಗಾಮಿ ಘೋಷಣೆಗಳು ನಾಯಕರುಗಳ ಭಾಷಣಗಳಲ್ಲಿ ಘೋಷಿಸಲ್ಪಡುತ್ತಿ

ದ್ದುದಕ್ಕೆ ಜನಕ್ಕೆಲ್ಲ ಅಸಮಾಧಾನ. ಆಗಿನ ದೇಶಾಭಿಮಾನ ವಾತಾವರಣ, ಜಾತ್ಯತೀತತೆಯನ್ನೂ ಅಸ್ಪೃಶ್ಯತಾ ನಿವಾರಣೆಯನ್ನೂ ಸಾರುತ್ತಿದ್ದು, ಅದನ್ನು ಕಾರ್ಯತಃ ಪಾಲಿಸಬೇಕೆಂಬ ನನ್ನ ಭಾವನೆಗಳು ಬಹುಜನರಿಗೆ ಹಿಡಿಸುತ್ತಿರಲಿಲ್ಲ.

ಆಗ ಕೆಲವು ದಿನಗಳ ಹಿಂದೆ ನಮ್ಮೂರಿನಲ್ಲಿ ಬ್ರಾಹ್ಮಣರ ಸಂಘವೊಂದು ಹುಟ್ಟಿಕೊಂಡಿತ್ತು. ಈ ಸಂಘಕ್ಕೆ ತಿಂಗಳಿಗೆ ಎರಡಾಣೆ ಚಂದಾ ಕೊಡಬೇಕೆಂದು ನನ್ನನ್ನು ಕೇಳಿದರು. ನಾನು, "ನಾನೊಂದು ಜಾತ್ಯತೀತ ಸಂಘಕ್ಕೆ ಸದಸ್ಯ. ಹೀಗಿರುವಾಗ ನಾನು ಒಂದು ಜಾತೀಯ ಸಂಘಕ್ಕೆ ಯಾವುದೇ ರೀತಿಯಲ್ಲೂ ಸೇರಲಾರೆ ಮತ್ತು ಸಹಕರಿಸಲಾರೆ" ಎಂದಾಗ ಅವರು, "ಎಷ್ಟು ದಿನ ಕೊಡುವುದಿಲ್ಲ ನೋಡುತ್ತೇವೆ!" ಎಂದು ಅಂದಿದ್ದರು. "ಅದಕ್ಕೇನಂತೆ—ಕುದುರೆ ಇದೆ ಮೈದಾನ್ ಇದೆ" ಎಂದಿದ್ದೆ ನಾನು. ಇದರಿಂದಾಗಿ ಈ ಊರಿನಲ್ಲಿ ಬ್ರಾಹ್ಮಣರು ನನಗೆ ತಿಳಿವಳಿಕೆ ಕೊಡದೆಯೇ ನಿಶ್ಶಬ್ದವಾಗಿ ನನ್ನ ಮೇಲೆ ಬಹಿಷ್ಕಾರ ಹಾಕಿದ್ದರು.

ತಾ॥ ಕಾ॥ ಸ॥ ಕಾರ್ಯದರ್ಶಿ ನಾನೇ ಆಗಿದ್ದರಿಂದ ಅದರ ಪ್ರಚಾರಕಾರ್ಯವನ್ನು ಸ್ಥಳೀಯವಾಗಿ ಚುರುಕಾಗಿಟ್ಟಿರಬೇಕಾದ್ದು ನನ್ನ ಕರ್ತವ್ಯವಾಗಿತ್ತು. ನನ್ನದೇ ಖರ್ಚಿನಿಂದ ಆಗಾಗ್ಗೆ ಹಸ್ತಪತ್ರಿಕೆ ವಿತರಣೆ ಮತ್ತು ಬಹಿರಂಗ ಸಭೆಗಳನ್ನೇರ್ಪಡಿಸುತ್ತಿದ್ದೆ. ಇದಕ್ಕಾಗಿ ತಿಂಗಳಿಗೆ 25-30 ರೂ.ನ್ನು ಖರ್ಚುಮಾಡುತ್ತಿದ್ದೆ. ಯಾವ ನಾಯಕರು ಬಂದರೂ ನನ್ನ ಮನೆ ಸದಾ ತೆರೆದಿರುತ್ತಿತ್ತು. ನಾಯಕರು ಬಂದಾಗ ಕಾರ್ಯಕಾರಿ ಸಮಿತಿಯ ಸ್ನೇಹಿತರನ್ನು .ಕಲೆಹಾಕಿ ಅವರಿಂದ 2-3 ರೂ.ನ್ನು ಬಲವಂತವಾಗಿ ಖರ್ಚಿಗೆಂದು ವಸೂಲುಮಾಡುತ್ತಿದ್ದೆ.

ಎಷ್ಟೋ ವೇಳೆ ನಾನೊಬ್ಬನೇ ಒಂದು ಹೆಗಲ ಮೇಲೆ ಬಾವುಟ, ಇನ್ನೊಂದು ಹೆಗಲ ಮೇಲೆ ಪ್ರಚಾರಫಲಕವನ್ನಿಟ್ಟುಕೊಂಡು, ದುಡ್ಡು ಕೊಟ್ಟು ತಮಟೆ ಹೊಡೆಸಿಕೊಂಡು, ಹಸ್ತಪತ್ರಿಕೆಗಳನ್ನು ಹಂಚುತ್ತಾ ಊರೆಲ್ಲಾ ಸುತ್ತಾಡುತ್ತಿದ್ದೆ. "ಇವನಿಗೆ ಮಾಡಲು ಬೇರೇನೂ ಕೆಲಸವಿಲ್ಲ! ಎಂದು ನನ್ನೆದುರಿಗೇ ಜನ ಆಡಿಕೊಳ್ಳುತ್ತಿದ್ದರು. ನಾನು ಅವರ ಮಾತಿಗೆ ಉತ್ತರವಾಗಿ ನಗುತ್ತಾ ಮುಂದೆ ಸಾಗುತ್ತಿದ್ದೆ. ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದ ಸ್ನೇಹಿತರ ಉಪದೇಶವೂ ತಮಾಷೆಯಾಗಿರುತ್ತಿತ್ತು. "ನಾಯಕರಾರಾದರೂ ಬಂದಾಗ ಅವರೊಂದಿಗೆ ಕೊಂಚ ಓಡಾಡಿಕೊಂಡಿದ್ದರೆ ಸಾಕು, ಈ ನಿನ್ನ ಪ್ರಚಾರ ಚಟುವಟಿಕೆಗಳು ಬೇರೆ ಬೇಡ. ಜನರನ್ನು ಎದುರುಹಾಕಿಕೊಳ್ಳುವುದೇತಕ್ಕೆ ? ಈಗ ನಾವೆಲ್ಲಾ ಇರುವಂತಿದ್ದರೆ ಆಯಿತು" ಎಂದೆನ್ನುತ್ತಿದ್ದರು. ನನ್ನ ಹೆಂಡತಿಯೂ ಈ ವಿಷಯದಲ್ಲಿ ನನಗೆ ವಿರೋಧವಾಗಿದ್ದಳು.

ಇದೇ ಕಾಲದಲ್ಲಿ ದೇಶ ವಿಭಜನೆಯಾಗಬೇಕೆಂಬ ಚಳವಳಿ, ದೇಶಾದ್ಯಂತ ಮುಸ್ಲಿಮರ ಹಿಂಸಾಚಾರ, ಗಾಂಧೀಜಿಯವರ ಸತತ ಮೈತ್ರಿಪ್ರಯತ್ನಗಳು ಖ್ಯಾತವಿದೆ. ಕುಣಿಗಲಿಗೆ 40 ಮೈಲಿ ದೂರದಲ್ಲಿರುವ ಚನ್ನಪಟ್ಟಣದಲ್ಲಿ ಅಲ್ಲಿನ ಮುಸ್ಲಿಮರು ಸರ್ಕಾರಿ

ಶಾಲೆಗೆ ನುಗ್ಗಿ ಓರ್ವ ಉಪಾಧ್ಯಾಯನನ್ನು ಕತ್ತಿಯಿಂದ ಕತ್ತರಿಸಿ ಹಾಕಿದ್ದ ಸುದ್ದಿ ನಮ್ಮೂರಿಗೂ ಬೀಸಹತ್ತಿತ್ತು. ಮುಸ್ಲಿಮರು ಗಣನೀಯ ಸಂಖ್ಯೆಯಲ್ಲಿರುವ ಕಡೆಗಳಲ್ಲಿ ಈ ಹಿಂಸಾಚಾರ ನಡೆದಿತ್ತು. ಕುಣಿಗಲಿನಲ್ಲಿ ಸಹ 2/5 ಭಾಗ ಮುಸ್ಲಿಂ ಜನಸಂಖ್ಯೆ ಇದ್ದರೂ ಇಲ್ಲಿ ಮತೀಯ ಗಲಭೆ ಆಗಗೊಡಬಾರದೆಂದು ನನ್ನ ಛಲ. ದೈಹಿಕ ಬಲದಲ್ಲಿ ನಮ್ಮಲ್ಲಿನ ಆಗಿನ ಯಾವ ಪೈಲ್ವಾನನಿಗೂ ನಾನು ಜಗ್ಗುವಂತಿರಲಿಲ್ಲ. ನಮ್ಮ ಮನೆತನದ ಪ್ರಭಾವ, ನನ್ನ ಅಣ್ಣನವರ ಪ್ರಭಾವಗಳು ನನಗೆಷ್ಟೋ ನೆರಳು ಕೊಟ್ಟಿತ್ತು.

ಹೀಗಿರುವಾಗ ಒಂದು ದಿನ ನಮ್ಮೂರಿನ ಮುಸ್ಲಿಮರ ಗುಪ್ತಸಭೆಯಲ್ಲಿ ಕೈಗೊಂಡ ತೀರ್ಮಾನ: "ಈ ಊರಿನಲ್ಲಿ ಕಾಂಗ್ರೆಸ್ಸನ್ನು ನಿರ್ಮೂಲ ಮಾಡಲು ಕೃಷ್ಣಸ್ವಾಮಿಯೊಬ್ಬನನ್ನು ತೆಗೆದುಹಾಕಿಬಿಟ್ಟರೆ ಸಾಕು. ಇನ್ನಾರೂ ಇಲ್ಲ. ಅಷ್ಟನ್ನು ಮಾಡಬೇಕು" ಎಂದಾಗಿತ್ತು. ಆ ದಿನ ನಾನು ಬೆಂಗಳೂರಿನಿಂದ ಹಿಂದಿರುಗಿದಾಗ ಅಬ್ದುಲ್ ಘನಿ ಎಂಬೊಬ್ಬ ನನ್ನ ಮುಸ್ಲಿಂ ಸ್ನೇಹಿತ ನಾನು ಬೆಂಗಳೂರಿಗೆ ಹೋಗಿರುವೆನೆಂದು ತಿಳಿದು ನನ್ನ ಬರುವನ್ನೇ ಕಾಯುತ್ತಿದ್ದವನು ತಕ್ಷಣವೇ ನನ್ನ ಬಳಿ ಬಂದು ಮುಸ್ಲಿಮರು ನನ್ನ ಬಗ್ಗೆ ತೆಗೆದುಕೊಂಡಿದ್ದ ತೀರ್ಮಾನದಿಂದ ನನ್ನನ್ನು ಎಚ್ಚರಿಸಿದ.

ಮುಂದಕ್ಕೆ ನಾನು ಮನೆಯ ಕಡೆ ಹೋಗುತ್ತಿದ್ದಾಗ ನನ್ನ ಒಬ್ಬ ಹಿಂದು ಸ್ನೇಹಿತ ಸಿಕ್ಕಿ "ನಿನ್ನನ್ನೇ ಕಾಯುತ್ತಿದ್ದೆ. ಸಂಜೆ 8 ಗಂಟೆಗೆ ಕೋಲಾಪುರದಮ್ಮನ ದೇವಸ್ಥಾನದಲ್ಲಿ ನಮ್ಮವರದೆಲ್ಲಾ ಸಭೆಯಿದೆ. ಈ ಊರಿನ ಮುಸ್ಲಿಮರ ಮೇಲೆ ದಾಳಿ ನಡೆಸುವ ತೀರ್ಮಾನ ಕೈಗೊಳ್ಳಲಾಗುವುದು. ನೀನು ಬೇಗ ಬರಬೇಕು" ಎಂದು ಹೇಳಿದ. ಅಂಥದ್ದೇನಾದರೂ ಸಂಭವಿಸಿದರೆ ಬಡವರು, ಕೂಲಿಯಿಂದ ಜೀವಿಸುವಂಥವರಿಗೆ, ಹಗಲು ದುಡಿದು ಸಂಜೆ ತಂದು ತಿನ್ನುವವರಿಗೆ ಹೆಚ್ಚು ತೊಂದರೆ, ಶ್ರೀಮಂತರಿಗೆ ಅಂಥ ತೊಂದರೆಗಳು ಅಷ್ಟಾಗಿ ಆಗುವುದಿಲ್ಲ. ಬಡವರಿಗೆ ಇರುವುದೊಂದು ನೆರಳು ಎಂಥದೋ, ಅದು ಬೇಗನೆ ಭಸ್ಮವಾಗಿ ಹೋಗುತ್ತದೆ. ಪ್ರತಿಬಂಧಕಾಜ್ಞೆಗಳಿಂದ ಕೂಲಿಗೆ ಹೋಗುವುದೂ ಕಷ್ಟ. ಒಂದು ವೇಳೆ ಹೇಗೋ ಹೋಗಿ ದುಡಿದು ಬಂದರೂ ಅಂಗಡಿಗಳು ತೆರೆದಿರುವುದಿಲ್ಲ. ಇತ್ಯಾದಿ ಸಂಕಷ್ಟಗಳು ಬಡವರನ್ನೇ ಹೆಚ್ಚು ತೊಂದರೆಗೀಡುಮಾಡುವುವೆಂಬುದು ನನಗೆ ಚೆನ್ನಾಗಿ ಅರ್ಥವಾಗಿತ್ತು. "ಆಗಲಿ ಬರುತ್ತೇನೆ" ಎಂದು ಹೇಳಿ ಆತನನ್ನು ಕಳುಹಿಸಿ, ಏನಾದರೂ ಮಾಡಿ ಗಲಭೆ ಉಂಟುಮಾಡುವವರನ್ನು ಉಪಾಯವಾಗಿ ತಡೆಯಬೇಕು ಎಂದು ನಿರ್ಧರಿಸಿದೆ. ದೇವಾಲಯದಲ್ಲಿ ಸಭಾಧ್ಯಕ್ಷತೆಯನ್ನು ಸೂಚಿಸುವ ಕಾರ್ಯವನ್ನು ಎಲ್ಲರಿಗಿಂತ ಮುಂಚಿತವಾಗಿ ನಾನೇ ಮಾಡಿದೆ. ಸಭಿಕರಾರೂ ತಿರಸ್ಕರಿಸಲಾರದ ವ್ಯಕ್ತಿಯನ್ನು. ಮಹನೀಯರು ಅಧ್ಯಕ್ಷತೆಯನ್ನಲಂಕರಿಸಿದ ಕೂಡಲೇ "ಕೃಷ್ಣಸ್ವಾಮಿಗಳು ನಾಲ್ಕು ಮಾತುಗಳನ್ನಾಡುತ್ತಾರೆ. ಸಭಿಕರೆಲ್ಲ ಸಮಾಧಾನದಿಂದ ಕೇಳುವುದು" ಎಂದರು.

ದೇಶದ ಆರ್ಥಿಕ ಸ್ಥಿತಿ, ಖಾದಿ. ಗ್ರಾಮೋದ್ಯೋಗ, ಸ್ವಪರಿಪೂರ್ಣತೆ ಇತ್ಯಾದಿ

ಗಳನ್ನೂ ಮತ್ತು ಪಾಶ್ಚಾತ್ಯ ದೇಶಗಳ ಬೆಳವಣಿಗೆ ಮತ್ತೆ ಅವರಿಂದ ನಮ್ಮ ಶೋಷಣೆ, ದ್ವಿತೀಯ ಮಹಾಯುದ್ಧ, ಅದರ ಕಾರಣ, ಅದರ ಪರಿಣಾಮ ಇತ್ಯಾದಿಗಳನ್ನೇ ಹೇಳುತ್ತಾ ಬಹಳ ಸಮಯ ತೆಗೆದುಕೊಂಡೆ. ಯಾವುದೋ ಹುಮ್ಮಸ್ಸಿನಿಂದ ಬಂದಿದ್ದ ಜನರಿಗೆ ವೇಳೆಯೂ ಆಯಿತು. ಬೇಸರದಿಂದ ಒಬ್ಬೊಬ್ಬರಾಗಿ ಹೋಗುವುದಕ್ಕಾದರು. ಕಡೆಗೆ ನನ್ನ ಮಾತುಗಳನ್ನು ಮುಕ್ತಾಯ ಮಾಡಿದೆ. ಅನಂತರ ಅಧ್ಯಕ್ಷತೆ ವಹಿಸಿದ್ದವರು ತಮ್ಮ ಕೆಲವು ಮಾತುಗಳೊಂದಿಗೆ, ವಂದನಾರ್ಪಣೆ, ವಂದೇ ಮಾತರಂ ಗೀತೆಯೊಡನೆ ಸಭೆ ಮುಕ್ತಾಯನೆಂದರು. ಸಭೆ ಮುಕ್ತಾಯವಾಯಿತು. ಇನ್ನೂ ಜನರು ಪೂರ್ಣ ಕದಲಿರಲಿಲ್ಲ. ಅಷ್ಟರಲ್ಲಿಯೇ ಮುಂಚಿತವಾಗಿ ಅಧ್ಯಕ್ಷತೆಯಲ್ಲಿ ಕೂತು ಗಲಭೆ ತೀರ್ಮಾನ ಮಾಡಬೇಕೆಂದು ಏರ್ಪಾಟು ಮಾಡಿಕೊಂಡಿದ್ದ ವ್ಯಕ್ತಿ ತಾನೇ ನನ್ನ ಬಳಿಗೆ ಬಂದು "ಆ ವಿಷಯ ಏನಾಯಿತು, ಸಭೆ ಮುಕ್ತಾಯ ಮಾಡಿಬಿಟ್ಟರಲ್ಲಾ ?" ಎಂದು ಪಿಸು ಮಾತಿನಲ್ಲಿ ಕೇಳಿದ. "ಇಂಥಿಂಥ ಗಣ್ಯವ್ಯಕ್ತಿಗಳು ಬಂದಿಲ್ಲ (ಅವರುಗಳೆಂದೂ ಇಂಥ ಸಭೆಗಳಿಗೆ ಭಾಗವಹಿಸುವವರೇ ಅಲ್ಲ. ಕೇವಲ ಅಧಿಕಾರಿಗಳು ಏರ್ಪಡಿಸುವ ಸಮಾರಂಭಗಳಲ್ಲಿ ಭಾಗವಹಿಸುವ ಕಂಬಿಪೇಟೆದವರು). ಅವರೆಲ್ಲರನ್ನೂ ಬಿಟ್ಟು ಇಂಥಾ ಮಹಾ ತೀರ್ಮಾನವನ್ನು ನಾವೇ ತೆಗೆದುಕೊಳ್ಳುವುದು ಸರಿಯಲ್ಲ" ಎಂದು ದೇಶಿಕರು (ಅಧ್ಯಕ್ಷತೆ ವಹಿಸಿದ್ದವರು) ಹೇಳಿದರು. "ಇನ್ನೊಂದು ಸಭೆಗೆ ಅವರೆಲ್ಲರನ್ನೂ ಬರುವಂತೆ ಮಾಡೋಣ, ಆ ಬಗ್ಗೆ ನೀನೇನೂ ಯೋಚಿಸಬೇಡ" ಎಂದು ಒಂದು ಸುಳ್ಳು ಹೇಳಿದೆ.

ಅಂದೇ ರಾತ್ರಿ ಹನ್ನೊಂದು ಗಂಟೆ ಸಮಯದಲ್ಲಿ ಊರೆಲ್ಲಾ ಮಲಗಿರುವಾಗ ಮುಸ್ಲಿಮರ ಮೊಹಲ್ಲಾ ಮಧ್ಯದಲ್ಲೇ ಇದ್ದ ಮುಸ್ಲಿಂ ನಾಯಕನ ಬಾಗಿಲು ತಟ್ಟಿ ಕರೆದೆಬ್ಬಿಸಿದೆ. ಆತನು ಹೊರಬಂದವನೇ ಒಂದು ತರಹ ಗಾಬರಿ ಧ್ವನಿಯಲ್ಲಿ, "ಏನು ಸ್ವಾಮಿ, ಇಷ್ಟೊತ್ತಿನಲ್ಲಿ ?" ಎಂದ. "ನೀವು ಕೈಗೊಂಡಿರುವ ತೀರ್ಮಾನ ತಿಳಿಯಿತು —ನನ್ನನ್ನು ಕೊನೆಗಾಣಿಸಿದರೆ ಈ ಊರಿನಲ್ಲಿ ಕಾಂಗ್ರೆಸ್ಸಿರುವುದಿಲ್ಲವೆಂಬುದು" ಎಂದೆ. ಆತ ಮೊದಲೆರಡು ಬಾರಿ ಅಂಥದ್ದೇನೂ ಇಲ್ಲವೆಂದು ನಿರಾಕರಿಸಿದ. ಆಗ ನಾನು, "ಹಾಗಾದರೆ ಈ ಮಾತು ಎದ್ದಿದ್ದೆಲ್ಲಿಂದ ? ಅದಕ್ಕೆಲ್ಲಾದರೂ ಮೂಲ ಇರಲೇಬೇಕು. ನಿಮ್ಮ ತೀರ್ಮಾನ ಜಾರಿಯಾದರೆ ಅದರ ಪರಿಣಾಮ ಊರೆಲ್ಲ ಹತ್ತಿ ಉರಿಯುವುದು. ಬಡಬಗ್ಗರಿಗೇ ಕೂಲಿಯಿಂದ ಜೀವನ ಮಾಡುವವರಿಗೇ ಸಹಿಸಲಾಗದ ಕಷ್ಟಗಳು ಬರುವುವು. ಅಂಗಡಿಗಳು ಮುಚ್ಚಿರುವುವು. ಅವರಿಗೆ ತಿನ್ನುವುದಕ್ಕೇನೂ ಸಿಗದಂತಾಗುವುದು. ನನಗೂ ನಿನಗೂ ಒಂದು ತಿಂಗಳು ಅಂಗಡಿಗಳು ಮುಚ್ಚಿದ್ದರೂ ಪರವಾಗಿಲ್ಲ. ಎಲ್ಲಿಂದಲಾದರೂ ಸರಬರಾಜಾಗುವುದು" ಎಂದೆ. "ನಾನಲ್ಲ ಸ್ವಾಮಿ ಆ ಮಾತಾಡಿದ್ದು" ಎಂದಾತ ನುಡಿದ. "ನೀನಲ್ಲದೆ ಬೇರೆ ಯಾರೋ ಆಡಿದರು, ಆ ಮಧ್ಯೆ ನೀನೂ ಇದ್ದೆ. ಆದರೆ ನೀನು ಅದನ್ನು ವಿರೋಧಿಸಲಿಲ್ಲ, ಅಂದರೆ ನೀನೂ ಅದಕ್ಕೆ ಒಪ್ಪಿಗೆಯಿತ್ತೆಯೆಂದೇ ಅರ್ಥ" ಎಂದೆ. ಈ ಮಧ್ಯೆ ಕಾಂಗ್ರೆಸ್ಸಿನ ರಾಜಕೀಯ ಗುರಿಯ ಕುರಿತು ಮಾತು.

ಒಂದಷ್ಟು ಸಮಯದನಂತರ ಆತನೂ (ಇಂದೂ ಆತ ಇದ್ದಾನೆ) ಸಮಾಧಾನವಾಗಿ, "ನೀವು ಹೋಗಿ, ಸ್ವಾಮಿ. ಏನೂ ಮನಸ್ಸಿನಲ್ಲಿಟ್ಟುಕೋಬೇಡಿ" ಎಂದು ಅಷ್ಟು ದೂರ ಬಂದು ಬೀಳ್ಕೊಟ್ಟನು. ಇಲ್ಲಿಗೆ ಅದರ ಮುಕ್ತಾಯ. ಇಂಥ ಪರಿಸ್ಥಿತಿಗಳು ಮುಂದೆ ಬಂದಾಗಲೂ ಹೀಗೆಯೇ ಉಪಾಯವಾಗಿ ಅವನ್ನು ತಡೆದೆ.

1947ರಲ್ಲಿ ಟಿ. ಸುಬ್ರಹ್ಮಣ್ಯಂರ ಸಮ್ಮುಖದಲ್ಲಿ ನಮ್ಮ ಮನೆಯಲ್ಲಿ ಸಭೆ ಸೇರಿ 'ಮೈಸೂರು ಚಲೋ' ಚಳವಳಿಯಲ್ಲಿ ಮೈಸೂರಿಗೆ ಹೋಗುವವರು ಹೋಗಲಿ, ಸಾಮಾನ್ಯರಂತೂ ಸ್ಥಳೀಯ ಸರ್ಕಾರಿ ಕಚೇರಿಗಳಿಗೇ ನುಗ್ಗುವ ಕಾರ್ಯವಾಗಬೇಕು; ಅದು ಜನತೆಯನ್ನು ಹುರಿದುಂಬಿಸುವುದೆಂಬುದೇ ನನ್ನ ವಾದವಾಗಿತ್ತು. ಅದಕ್ಕೆ ಒಪ್ಪಿಗೆಯೂ ಆಯಿತು.

'ಮೈಸೂರು ಚಲೋ' ಚಳವಳಿ ಪ್ರಾರಂಭವಾದೊಡನೆಯೇ 1947ರ ಸೆಪ್ಟೆಂಬರ್ 4ನೇ ತಾರೀಖು ಮಧ್ಯರಾತ್ರಿಯಲ್ಲಿ ನನ್ನನ್ನು, ನಾಗೇಶರಾಯರನ್ನು (ಇವರೊಬ್ಬ ಶಾಲಾ ಉಪಾಧ್ಯಾಯ) ಮತ್ತು ಈಗಿನ ಕಂದಾಯ ಮಂತ್ರಿ ಹುಚ್ಚಮಾಸ್ತಿಗೌಡರನ್ನು (ಆಗ ಅವರು ಕುಣಿಗಲಿಗೆ ಬಂದಾಗ ನನ್ನ ಮನೆಯಲ್ಲೇ ಬಂದು ತಂಗುತ್ತಿದ್ದರು) ಬಂಧಿಸುವರಾಗಿ ತಿಳಿಯಿತು. ಆಗ ಹುಚ್ಚಮಾಸ್ತಿಗೌಡರನ್ನು ಬೇರೆಡೆಗೆ ಕಳುಹಿಸಿದೆ.

ನಾಗೇಶರಾಯರ ಬಂಧನವು ನಡುರಾತ್ರಿಯಲ್ಲೇ ಆಯಿತು. ಹುಚ್ಚಮಾಸ್ತಿಗೌಡರ ಬಂಧನವೂ ಊರ ಮುಂದಾಗಿತ್ತು. ನಾನೂ ಬೆಳಗ್ಗೆ ಮನೆಯಿಂದ ಸ್ನಾನಮಾಡಿ ಊರ ಮುಂದೆ ಬರುತ್ತಿದ್ದಂತೆ ರಸ್ತೆಯಲ್ಲೇ ನನ್ನ ಬಂಧನವೂ ಆಯಿತು. ತುಮಕೂರು, ಬೆಂಗಳೂರು ಸೆಂಟ್ರಲ್ ಜೈಲು, ಅಲ್ಲಿಂದ ಬೆಂಗಳೂರು ಬಳಿಯ ಕೃಷ್ಣರಾಜಪುರಂ ಡೆಟೆನ್ಯೂ ಕ್ಯಾಂಪ್ ಇಲ್ಲೆಲ್ಲ ವಾಸವಾಯಿತು. ಕುಣಿಗಲಿಂದ ಇನ್ನೂ ಬಂಧಿತರಾದವರು, ಕೆ. ಎಂ. ಸಂಜೀವಯ್ಯ ಮತ್ತು ಎಸ್. ಬಿ. ಗುಂಡಯ್ಯಶೆಟ್ಟಿ (ಇಬ್ಬರೂ ಕಾಲಾತೀತರಾಗಿದ್ದಾರೆ), ಬಿದನಗೆರೆಯ ಕೆಲವು ಮಿತ್ರರು.

ನಮ್ಮಗಳ ಬಂಧನದನಂತರ ಜನ ಬಹುರೊಚ್ಚಿಗೆದ್ದರು, ಹರತಾಳವಾಚರಿಸಿದರು, ಏನೆಲ್ಲಾ ಗಲಾಟೆ ಮಾಡಿದರು, ತಾಲ್ಲೂಕು ಕಚೇರಿಗೆ ನುಗ್ಗಿದರು. ಅದರ ಪೂರ್ಣ ವಿವರ ಅಷ್ಟಾಗಿ ಈಗ ವಿಚಾರಿಸುವುದೇ ಕಷ್ಟ.

ವ್ಯೈ.ತು. 23

# ವಿ. ವಿ. ಗಂಗಣ್ಣಗೌಡ

ಜನನ : ? ಉದ್ಯೋಗ : ವ್ಯವಸಾಯ ವಿಳಾಸ : ಬಿದನಗೆರೆ, ತಾ॥ ಕುಣಿಗಲು

---

ಶಿವಪುರ ಕಾಂಗ್ರೆಸ್ಸಿಗೆ ಕುಣಿಗಲಿಂದ ಆ ಊರ ಖ್ಯಾತ ವ್ಯಕ್ತಿ ಕೆ. ವಿ. ಸುಬ್ರಹ್ಮಣ್ಯ ಸ್ವಾಮಿಗಳೂ ಅವರ ನಿಕಟವರ್ತಿಗಳೂ ಪ್ರಜಾಪ್ರತಿನಿಧಿ ಸಭೆಗೆ ಸ್ಪರ್ಧಿಸಿದ್ದವರೂ ಆದ ನಮ್ಮ ಚಿಕ್ಕಪ್ಪ ರಾಮಣ್ಣಗೌಡ, ಇವರುಗಳು ಹೋಗಿದ್ದು, ಅವರು ಹೇಳಿದ ಸಂಗತಿಗಳಿಂದ ನಮ್ಮ ಸ್ವಾತಂತ್ರ್ಯಕಾಂಕ್ಷೆ ಹೆಚ್ಚಿತು. 18-4-1938ರಂದು ಕುಣಿಗಲಲ್ಲಿ ನಡೆದ ಧ್ವಜಸತ್ಯಾಗ್ರಹಕ್ಕೆ ನಮ್ಮ ಊರವರಾದ ನರಸಪ್ಪಗೌಡ, ಯಾಲಕ್ಕಯ್ಯ, ನಂಜುಂಡಯ್ಯ, ರಾಮಣ್ಣಗೌಡ ಇವರುಗಳ ಬಂಧನ ಆದನಂತರ ಬಂಧನಗಳು ನಿಂತವು. ಏಕೆಂದರೆ ಆಗ ಸಹಸ್ರಾರು ಜನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು.

1947ರಲ್ಲಿ ಕುಣಿಗಲಲ್ಲಿ ಹುಚ್ಚಮಾಸ್ತಿಗೌಡ, ಕೆ. ವಿ. ಕೃಷ್ಣಸ್ವಾಮಿ, ನಾಗೇಶ ರಾವ್ ಇವರ ಬಂಧನ ಸೆ. 5ಕ್ಕೆ ಆಯಿತು. ಮರುದಿನ ಊರಲ್ಲಿ ಭಾರಿ ಹರತಾಳ, ಮೆರವಣಿಗೆ ಆಯಿತು. ಹರತಾಳಕ್ಕೆ ಸಹಕರಿಸದವರ ಅಂಗಡಿಗಳು ಲೂಟಿ ಆದುವು. ತಾಲ್ಲೂಕು ಆಫೀಸಿನ ಮುಂದೆ ಪಿಕೆಟಿಂಗ್ ನಡೆಸಿದೆವು. ಈ ಸಂಬಂಧ ನಾನು, ನರಸಪ್ಪಗೌಡ, ಯಾಲಕ್ಕಯ್ಯ, ರಂಗಯ್ಯ, ನಂಜುಂಡಯ್ಯ, ಶಾಮಣ್ಣ, ವೆಂಕಟಯ್ಯ, ಬಿ. ತಿಮ್ಮೇಗೌಡ, ನಾರಾಯಣಪ್ಪ, ಲಕ್ಷ್ಮಣರಾಜು ಇವರ ಬಂಧನ ಆಯಿತು. ಅನಂತರ ಊರಲ್ಲಿ ಕೊಂಚ ಅಶಾಂತಿ ವಾತಾವರಣ ಇತ್ತು. ಹೆಚ್ಚಿನ ವಿವರ ತಿಳಿಯದಿದ್ದರೂ ಇಷ್ಟು ತಿಳಿಯಿತು. ನಮ್ಮ ಊರು ಮತ್ತು ಪಕ್ಕದ ಮಲ್ಲಾಘಟ್ಟ ಇಲ್ಲಿ ಮುಸ್ಲಿಮರು ಗುಳ, ಗುದ್ದಲಿ, ಲಾಳ ತಯಾರಿಸುವ ಕುಲುಮೆ ಇಟ್ಟುಕೊಂಡಿದ್ದರು. ಅವರು ಚೂರಿ, ಕತ್ತಿ ತಯಾರಿಸಿ, ಶಿರಾ, ಮಡಕಶಿರಾ ಮಾರ್ಗವಾಗಿ ರಜಾಕಾರರಿಗೆ ಕಳುಹಿಸುತ್ತಿದ್ದರು. ಅವುಗಳನ್ನು ಗುಳಗಳಂತೆ ಪ್ಯಾಕ್ ಮಾಡುತ್ತಿದ್ದರು. ಇಂಥ ಕುಲುಮೆಗಳನ್ನು ನಿಷ್ಕ್ರಿಯಗೊಳಿಸಲಾಯಿತು. ಆದರೆ ಯಾರಿಗೂ ಹಿಂಸೆ ಆಗದಂತೆ ನೋಡಿಕೊಳ್ಳಲಾಯಿತು.

ನಮ್ಮನ್ನು ಬಂಧಿಸಿ ತುಮಕೂರಿಗೆ ಒಯ್ದರು. ಮುಂದೆ ನವೆಂಬರ್ 3ಕ್ಕೆ ನಮ್ಮೆಲ್ಲರ ಬಿಡುಗಡೆ ಆಯಿತು. ಅನಂತರ ಟಿ. ಸುಬ್ರಹ್ಮಣ್ಯಂ, ಹುಚ್ಚಮಾಸ್ತಿ ಗೌಡರನ್ನು ಕರೆಸಿ 101 ಎತ್ತಿನ ಜೋಡಿಯಲ್ಲಿ ಅವರ ಮೆರವಣಿಗೆ ಮಾಡಿ ನಮ್ಮ ಊರಲ್ಲಿ ಸ್ವಾತಂತ್ರ್ಯ ವಿಜಯೋತ್ಸವ ಆಚರಿಸಿದೆವು. 15 ಪಲ್ಲ ದಿನಸಿ ಬೇಯಿಸಿ ಗ್ರಾಮದಲ್ಲಿ ಊಟ ಹಾಕಿದೆವು.

ವ್ಯೈ.ತು. 24

# ಡಾ|| ಟಿ. ಆರ್. ಚನ್ನಿಗರಾಮಯ್ಯ

(1911- 1976)



ಕೊರಟಗೆರೆಯಲ್ಲಿ 4-6-1911ರಲ್ಲಿ ಜನಿಸಿದ ಡಾ|| ಚನ್ನಿಗರಾಮಯ್ಯ ಆದಿಕರ್ನಾಟಕ ಜನಾಂಗದ ಸ್ಥಳೀಯ ಯಜಮಾನ ರಾಮಹನುಮಂತಯ್ಯನವರ ಏಕಮಾತ್ರ ಪುತ್ರ. ಸ್ವಂತ ಊರಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸಿ ಕೆಲಕಾಲ ವ್ಯವಸಾಯ ನಿರತರಾಗಿದ್ದ ಚನ್ನಿಗರಾಮಯ್ಯ, ಮುಂದೆ 1929 ರಲ್ಲಿ ಬೆಂಗಳೂರು ಕೋಟೆ ಹೈಸ್ಕೂಲು ಸೇರಿ 1931 ರಲ್ಲಿ ಎಸ್.ಎಸ್.ಎಲ್.ಸಿ.ಯಲ್ಲಿ ಅನುತ್ತೀರ್ಣರಾದರು. ಆಗ ಅವರು ನರಸಿಂಹರಾಜಾ ಹಾಸ್ಟಲ್‌ನಲ್ಲಿ ಇರುತ್ತಿದ್ದರು. ಮೈಸೂರು ರಾಜ್ಯ ಜನಗಣತಿ ಇಲಾಖೆಯಲ್ಲಿ ಮೂರು ತಿಂಗಳು ಗುಮಾಸ್ತರಾಗಿ ಕೆಲಸಮಾಡಿ, ಮುಂದೆ ಅದೇ ವರ್ಷ ಗಾಂಧೀಜಿಯವರ ವಿಚಾರಗಳಿಂದ ಪ್ರಭಾವಿತರಾಗಿ ನೌಕರಿ ತ್ಯಜಿಸಿ, ಕೊರಟಗೆರೆಯಲ್ಲಿ ಸಾರ್ವಜನಿಕ ರಂಗಕ್ಕೆ ಕಾಲಿಟ್ಟರು. ಕೊರಟಗೆರೆ ಪುರಸಭೆ ಮತ್ತು ತುಮಕೂರು ಜಿಲ್ಲಾ ಬೋರ್ಡ್ ಸದಸ್ಯರಾದರು (1932). ಪುರಸಭಾ ಸದಸ್ಯರಾಗಿ 15 ವರ್ಷ, ಹಾಗೂ ಜಿಲ್ಲಾ ಬೋರ್ಡ್ ಸದಸ್ಯರಾಗಿ 12 ವರ್ಷ ಸೇವೆಸಲ್ಲಿಸಿದರು. 1937ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭಾಸದಸ್ಯರಾಗಿ ಹಾಗೂ 1941ರಲ್ಲಿ ನ್ಯಾಯವಿಧಾಯಕ ಸಭಾಸದಸ್ಯರಾಗಿ ನಾಮಕರಣಗೊಂಡರು.

ಮೈಸೂರು ರಾಜ್ಯ ಆದಿಜಾಂಬವಾಭಿವೃದ್ಧಿ ಸಂಘ ಸ್ಥಾಪಿಸಿ, ಅದರ ಕಾರ್ಯದರ್ಶಿ ಚಿಕ್ಕಹನುಮಂತಯ್ಯನವರೊಡನೆ ರಾಜ್ಯದಲ್ಲಿ ಹರಿಜನರ ಸಂಘಟನೆ ನಡೆಸಿದರು. ಹರಿಜನರ ಪ್ರಜಾಸಂಖ್ಯೆಗೆ ಅನುಗುಣವಾಗಿ ಶಾಸನಸಭೆ, ಸ್ಥಳೀಯ ಸಂಸ್ಥೆಗಳಲ್ಲಿ ಅವರಿಗೆ ಪ್ರಾತಿನಿಧ್ಯ ಮೀಸಲಿಡಬೇಕೆಂದು ಈ ಸಂಸ್ಥೆಯ ಸಮ್ಮೇಳನಗಳಲ್ಲಿ ಮಾಡಿದ ಠರಾವು ಮುಂದೆ ಕಾರ್ಯಾಚರಣೆಗೆ ಬಂತು. 1932ರಲ್ಲಿ ಗಾಂಧೀಜಿ ಹರಿಜನರ ಸಮಸ್ಯೆಯ ಬಗ್ಗೆ ಉಪವಾಸ ಕೈಕೊಂಡಾಗ ಹರಿಜನರ ದೇವಾಲಯ ಪ್ರವೇಶ, ಸಹಪಂಕ್ತಿಭೋಜನ, ಪಾನನಿರೋಧ ಮುಂತಾದ ಆಂದೋಲನಗಳಲ್ಲಿ ಶ್ರೀಯುತರು ದಿಟ್ಟತನದಿಂದ ದುಡಿದರು. ಗಾಂಧೀಜಿ ಬೆಂಗಳೂರಿಗೆ ಬಂದಾಗ ಆದಿಜಾಂಬವ ಹಾಸ್ಟಲ್‌ನ (ಈಗಿನ ಬಾಪೂಜೀ ಹಾಸ್ಟಲ್) ಶಂಕುಸ್ಥಾಪನೆ ಮಾಡಿಸಿ (1934) ಅದರ ಕಟ್ಟಡ ಸಿದ್ಧವಾಗುವಂತೆ ದುಡಿದರು. 1936ರಲ್ಲಿ ಮೈಸೂರು ಸರಕಾರ ಮತ್ತು ಹರಿಜನಸೇವಕ ಸಂಘದ ಪ್ರತಿನಿಧಿ

ಯಾಗಿ ದೆಹಲಿ ಮತ್ತು ಕಲ್ಕತ್ತಗಳಿಗೆ ತೆರಳಿ ಪ್ರತ್ಯೇಕ ಮತದಾರ ಸಂಘಗಳ ತತ್ತ್ವಕ್ಕೆ ವಿರುದ್ಧವಾಗಿ ಜಂಟಿಮತದಾರ ಸಂಘ ಮತ್ತು ಸ್ಥಾನಗಳ ಮೀಸಲಿಡುವಿಕೆಯ ತತ್ತ್ವಕ್ಕೆ ಬೆಂಬಲ ನೀಡಿದರು.

ಸ್ವಾತಂತ್ರ್ಯಚಳವಳಿಯಲ್ಲಿ ಪಾಲುಗೊಂಡ ಇವರನ್ನು 1942ರಲ್ಲಿ ಕೊರಟಗೆರೆಯಲ್ಲಿ ಬಂಧಿಸಿ ಬೆಂಗಳೂರು ಸೆಂಟ್ರಲ್‌ಜೈಲಿಗೆ ತಂದರು. ಇವರ ಆರೋಗ್ಯ ಕೆಟ್ಟುದರಿಂದ, ಕ್ಷಮಾಪಣೆ ಬರೆದುಕೊಟ್ಟು ಮನೆಗೆ ತೆರಳುವಂತೆ ಅನೇಕ ಮಿತ್ರರು ಒತ್ತಾಯಿಸಿದರೂ ಇವರು ಹಾಗೆ ಮಾಡದೆ, ಜೈಲಿನಿಂದ ಸರಕಾರ ತಾನಾಗಿ ಬಿಡುಗಡೆ ಮಾಡುವ ತನಕ ಇದ್ದರು. "ಸತ್ತರೂ ಚಿಂತೆ ಇಲ್ಲ" ಎಂದು ಅನಾರೋಗ್ಯಸಹಿಸಿ ಜೈಲಿನಲ್ಲಿ ಉಳಿದರು. 1947ರಲ್ಲೂ ಅವರು ಒಂದೂವರೆ ತಿಂಗಳು ಸ್ಥಾನಬದ್ಧರಾಗಿದ್ದರು. ಕೆ. ಸಿ. ರೆಡ್ಡಿ ಸಂಪುಟದಲ್ಲಿ ಅವರು ಮೈಸೂರಿನ ಪ್ರಥಮ ಹರಿಜನ ಮಂತ್ರಿಯಾದರು. 1956ರಲ್ಲಿ ಕೂಡ ಸಚಿವರಾಗಿದ್ದರು. ಸ್ಥಳೀಯ ಸಂಸ್ಥೆಗಳು, ಶಿಕ್ಷಣ, ಅರಣ್ಯ, ವ್ಯವಸಾಯ, ರೇಷ್ಮೆ ಇಲಾಖೆಗಳಲ್ಲಿ ಇವರು ಮಂತ್ರಿಗಳಾಗಿ ಸೇವೆಸಲ್ಲಿಸಿದ್ದರು. ಅಲ್ಲದೆ ವಿಧಾನ ಪರಿಷತ್ ಸದಸ್ಯ, ಡೆ|| ಸ್ಪೀಕರ್ ಮತ್ತು ಸ್ಪೀಕರ್ ಆಗಿಯೂ ಕೆಲಸಮಾಡಿದ್ದರು. ಲೋಕಸೇವಾ ಆಯೋಗದ ಸದಸ್ಯ ಹಾಗೂ ಅಧ್ಯಕ್ಷರಾಗಿಯೂ ಇವರು ಇದ್ದರು.

ಸಮಾಜ ಕಲ್ಯಾಣ ಇಲಾಖೆಯಲ್ಲಿ ಅನೇಕ ಸುಧಾರಣೆಗಳಾಗಲು ಇವರು ಶ್ರಮಿಸಿದರು. ಹರಿಜನರ ಪುರೋಗಮನಕ್ಕೆ ನೆರವಾಗುವ ನಿವೇಶನ ಹಂಚಿಕೆ, ಗೃಹನಿರ್ಮಾಣಕ್ಕೆ ನೆರವು, ವಿದ್ಯಾರ್ಥಿವೇತನ ವ್ಯವಸ್ಥೆ, ವಿದ್ಯಾರ್ಥಿನಿಲಯಗಳ ಸ್ಥಾಪನೆ, ಪಾನನಿರೋಧ ಮುಂತಾದ ಚಟುವಟಿಕೆಗಳಲ್ಲಿ ಈ ಇಲಾಖೆ ಚುರುಕಾಗಿ ಕೆಲಸಮಾಡುವಂತೆ ಮಾಡಿದರು.

ಇವರು ಮಂತ್ರಿಯಾದಾಗ ಮೈಸೂರು ಚಾಮುಂಡಿ ದೇವಾಲಯಕ್ಕೆ ಪ್ರವೇಶ ನಿರಾಕರಿಸಿದಾಗ ಈ ಬಗ್ಗೆ ತೀವ್ರಪ್ರತಿಭಟನೆ ವ್ಯಕ್ತಪಡಿಸಿದರು. ಆಗ ಜಯಚಾಮರಾಜ ಒಡೆಯರ್ ಈ ವಿಷಯ ತಿಳಿದು ಸಕಲ ರಾಜಮರ್ಯಾದೆಯಿಂದ ಅವರನ್ನು ದೇವಾಲಯಕ್ಕೆ ಬರಮಾಡಿಕೊಳ್ಳುವ ವ್ಯವಸ್ಥೆಮಾಡಿದರು. ಜೈನರು ಹಿಂದುಗಳಲ್ಲವೆಂದೂ ಹಿಂದುಗಳಾದ ಹರಿಜನರಿಗೆ ಪ್ರವೇಶ ನೀಡುವುದಿಲ್ಲವೆಂದೂ ಶ್ರವಣಬೆಳಗೊಳ ಗೊಮ್ಮಟನ ದರ್ಶನಕ್ಕೆ ಇವರಿಗೆ ಅನುಮತಿ ನಿರಾಕರಿಸಿದಾಗ, "ನಾನು ಮಂತ್ರಿಯಾದರೂ ನಿಮ್ಮ ಮನಸ್ಸು ನೋಯಿಸಿ ದೇವಾಲಯ ಪ್ರವೇಶಮಾಡುವುದು ನನಗೆ ಇಷ್ಟವಿಲ್ಲ" ಎಂದು ಇವರು ಹೇಳಿದರು. ಅಲ್ಲಿನ ಆಡಳಿತ ಮಂಡಳಿಯವರು ಇವರ ಸೌಜನ್ಯ ಕಂಡು ಕ್ಷಮೆ ಕೇಳಿ ತಲೆತಗ್ಗಿಸಿದರು. ಇಂಥ ಪ್ರಸಂಗಗಳಲ್ಲಿ ಸವರ್ಣೀಯರ ಹೃದಯಪರಿವರ್ತನೆಗೆ ಇವರು ಹೆಚ್ಚು ಗಮನ ನೀಡಿದ್ದರು. ದೈವಭಕ್ತರಾದ ಇವರು ವೈಜ್ಞಾನಿಕ ವಿಚಾರವುಳ್ಳವರು; ಮೂಢನಂಬಿಕೆಗಳನ್ನು ವಿರೋಧಿಸುತ್ತಿದ್ದರು. ಕೊರಟಗೆರೆ ಗಂಡಾಂಜನೇಯ ದೇವಾಲಯದಲ್ಲಿ ಜೀರ್ಣೋದ್ಧಾರಕ್ಕೆ ಅವರು ಶ್ರಮಿಸಿದ್ದರು.

ಆದಿಜಾಂಬವ ಹರಿಜನ ವಿದ್ಯಾಭಿವೃದ್ಧಿ ಟ್ರಸ್ಟ್, ಮೈಸೂರು ರಾಜ್ಯ ಹರಿಜನ ಸೇವಕ ಸಂಘ, ಬಸವ ಸಮಿತಿ ಮುಂತಾದ ಸಂಸ್ಥೆಗಳ ಜೊತೆಯೂ ಅವರ ಸಂಬಂಧ ವಿತ್ತು. 21-1-1976ರಂದು ಅವರು ನಿಧನರಾದರು.

ಬಿ. ಅನಂತರಾಮಯ್ಯ
ಇತಿಹಾಸ ವಿಭಾಗ, ಜ್ಞಾನಭಾರತಿ, ಬೆಂಗಳೂರು-56

ವ್ಯ. ಚಿ. 1

# ಎಸ್. ವಾಸುದೇವರಾವ್

ಜನನ : 1911 ಉದ್ಯೋಗ : ವಿಧಾಯಕ ಕಾರ್ಯ ವಿಳಾಸ : ಮೊದಕೇರಿಪುರ ತಾ॥ ಚಿತ್ರದುರ್ಗ



ಲೋಕಮಾನ್ಯ ಟಿಳಕರ ಭಾಷಣಗಳು ಮತ್ತು ಲೇಖನಗಳಿಂದ ಪ್ರೇರಿತರಾದ ಹರಿಹರದ ಗುಂಡೂರಾಯರು 1920ರಲ್ಲಿ ಚಿತ್ರದುರ್ಗದಲ್ಲಿ ತಿಲಕ ಸಂಘವನ್ನು ಸ್ಥಾಪಿಸಿದರು. ಇದರ ಚಟುವಟಿಕೆಗಳು ನಾನಾಮುಖವಾಗಿದ್ದುವು. ವೃತ್ತಪತ್ರಿಕೆಗಳನ್ನು ಓದುವವರೇ ಇಲ್ಲದಂತಿದ್ದ ಕಾಲದಲ್ಲಿ ವೃತ್ತಪತ್ರಿಕೆಗಳ ಪ್ರಚಾರ, ವಾಚನಾಲಯ ಮತ್ತು ತಿಲಕ ಪುಸ್ತಕಾಲಯ ಸ್ಥಾಪನೆ, ಸಾರ್ವಜನಿಕ ಗಣಪತಿ ಉತ್ಸವ, ಪರದೇಶೀ ವಸ್ತ್ರದಹನ, ಖಾದೀ ಪ್ರಚಾರ, ಗೀತಾ ಜಯಂತಿ ಆಚರಣೆ, ಸಂಗೀತಕಛೇರಿ, ಸಂಘದ ವಾರ್ಷಿಕೋತ್ಸವ ಮುಂತಾದ ಸಂದರ್ಭದಲ್ಲಿ ಸಾರ್ವಜನಿಕ ಸಭೆಗಳನ್ನು ನಡೆಸುವುದು ಇವೇ ಅವರ ಕಾರ್ಯಕಲಾಪಗಳು. ಆಲೂರು ವೆಂಕಟರಾಯರು, ಎಂ. ವೆಂಕಟಕೃಷ್ಣಯ್ಯ, ಡಿ. ಕೆ. ಭಾರದ್ವಾಜ್, ಡಾ॥ ಹರ್ಡೀಕರ, ಮುದವೀಡು ಕೃಷ್ಣರಾಯರು, ಬಳ್ಳಾರಿ ರಾಘವಾಚಾರ್ ಇವರುಗಳು ಇಲ್ಲಿಗೆ ಆ ಕಾಲದಲ್ಲಿ ಬಂದು ಭಾಷಣ ಮಾಡಿರುತ್ತಾರೆ. ಕೊಪ್ಪಳದ ಜಯರಾಮಾಚಾರ್ಯರ ಅನೇಕ ಹರಿಕಥೆಗಳಾದುವು. ಅವರ ಪೌರಾಣಿಕ ಕಥೆಗಳು ರಾಜಕೀಯದಿಂದ ಕೂಡಿರುತ್ತಿದ್ದುವು. ಸಭಿಕರು ಮಂಗಳಾರತಿ ತಟ್ಟೆಗೆ ಹಣ, ಉಂಗುರಗಳು, ಬಂಗಾರದ ಬಳೆಗಳು ಮುಂತಾದವನ್ನು ಕಾಣಿಕೆಯಾಗಿ ಹಾಕುತ್ತಿದ್ದರು. ಜಿಲ್ಲಾ ಕಚೇರಿಯಲ್ಲಿ ಗುಮಾಸ್ತರಾಗಿದ್ದ ಗುಂಡೂರಾಯರು ರಾಜಕೀಯ ಮುಂದಾಳುಗಳಾದ ವಕೀಲರಾದರು. ಹಿರಿಯೂರಿನ ರಾಮದಾಸರೆಂಬ ಮಹನೀಯರೊಬ್ಬರು ಆಲೂರು ವೆಂಕಟರಾಯರ ಭಾಷಣ ಕೇಳಿ, ದೇಶಾಭಿಮಾನಪ್ರೇರಿತರಾಗಿ ಪರದೇಶೀ ವಸ್ತ್ರ ತೊರೆದು ಕೇವಲ ಲಂಗೋಟಿಯ ಮೇಲೆ ನಿಂತು ಖಾದೀಧಾರಿಗಳಾದರೆಂಬ ಜ್ಞಾಪಕ ಗುಂಡೂರಾಯರಿಗಿದೆ. ಚೆಳ್ಳಕೆರೆಯ ಸಿ. ವಿ. ಕೃಷ್ಣಮೂರ್ತಿಯವರು ಆಗಿನ ಸ್ವಯಂಸೇವಕ ತಂಡದಲ್ಲಿದ್ದವರೊಬ್ಬರು.

ದೇವರ ಹೆಸರಿನಲ್ಲಿ ಪಶುವಧೆ ಮಾಡುವುದನ್ನು ತಪ್ಪಿಸುವುದು ಪ್ರಾಣಿದಯೆಯಿಂದ. ದಾವಣಗೆರೆಯಲ್ಲಿ ಈ ಕೆಲಸದಲ್ಲಿ ತೊಡಗಿದ ತಂಡವೇ ಪ್ರಾಣಿದಯಾ ಜ್ಞಾನ ಪ್ರಚಾರ ಸಂಘ. ಕಾಸಲ ಶ್ರೀನಿವಾಸಶೆಟ್ಟರು ಮುಖಂಡರು. ಶಿರೂರು ಪಾಂಡುರಂಗರಾಯರು ಬೆಂಬಲಿಗರು. ಶೇಷಪ್ಪನವರು, ಜೆಲ್ಲದ ಸಿದ್ಲಿಂಗಪ್ಪನವರು ಮತ್ತು ಆನಗೋಡು ಮುಪ್ಪಣ್ಣನವರು ಪ್ರಮುಖ ಕಾರ್ಯಕರ್ತರು. ಪಶುವಧೆ ತಪ್ಪಿಸಲು ಜಾತ್ರೆಗಳಲ್ಲಿ ಪ್ರಚಾರ ಕೈಗೊಂಡು ತಮ್ಮ ಕಾರ್ಯದಲ್ಲಿ ಯಶಸ್ವಿಯಾದರು. ದಾವಣಗೆರೆಯಲ್ಲಿ ಅಬಲ ದನಕರುಗಳ ಒಂದು ರಕ್ಷಣಾಲಯವನ್ನು ಸ್ಥಾಪಿಸಿದರು. ಈಗಲೂ ಒಂದು ಷೆಡ್, ಜಮೀನು ಈ ಸಂಸ್ಥೆಯ ಆಸ್ತಿಯಾಗಿ ಉಳಿದಿದೆ.

ಪರದೇಶೀ ವಸ್ತ್ರ ಮಾರಾಟದ ವಿರುದ್ಧ ಪಿಕೆಟಿಂಗ್ ಜಿಲ್ಲೆಯಲ್ಲಿ 1921ರಲ್ಲಿ ಪ್ರಾರಂಭವಾಯಿತು. ಪರದೇಶೀ ವಸ್ತ್ರದ ಹೋಳಿಗಾಗಿ ಹರಿಹರ ಗುಂಡೂರಾಯರು ಸ್ವತಃ ಧಾರವಾಡಕ್ಕೆ ಹೋಗಿ ನೂಲುವುದನ್ನು ಕಲಿತು ಬಂದರು. ಹಳ್ಳಿಯಲ್ಲಿ ದೊರೆತ ಚರಖಾ ಸುಧಾರಿಸುವ ಪ್ರಯತ್ನವನ್ನೂ ಮಾಡಿದರು. ಬಡಗಿ ಹೊಸೂರಪ್ಪ ಈ ಕಾರ್ಯದಲ್ಲಿ ಸಹಾಯಕರಾಗಿ ಒಂದು ಸುಧಾರಿಸಿದ ಚರಖಾ ಮಾಡಿಕೊಟ್ಟರು. ಹಚ್ಚಡದಂತಹ ಬಟ್ಟೆಯೇ ಮೊದಲು ತಯಾರಾದುದು. ಇದನ್ನೇ ಅವರೂ ಅವರ ಮಿತ್ರರೂ ಧರಿಸಿದರು. ಖಾದೀಪ್ರಚಾರ ಈ ರೀತಿ ಮುಂದೆ ಸಾಗಿತು. 'ಖಾದೀ ಮಹಿಮೆ' ಎಂಬ ಪುಸ್ತಕವನ್ನೂ ಬರೆದರು. ಇವರ ಧರ್ಮಪತ್ನಿ ವೆಂಕಮ್ಮನವರೂ ಖಾದಿಸೀರೆ ಉಡ ತೊಡಗಿದರು. ಅವರ ತಂದೆ ಎಚ್. ಕೆ. ಕೃಷ್ಣರಾಯರೂ ಮಗಳಿಗೆ ಪ್ರೋತ್ಸಾಹವಿತ್ತರು.

1927ರಲ್ಲಿ ಮಹಾತ್ಮರು ಖಾದೀಪ್ರಚಾರಕ್ಕಾಗಿ ಮೈಸೂರು ದೇಶದಲ್ಲಿ ಪ್ರವಾಸ ಕೈಗೊಂಡು ಆಗ ಸಂಗ್ರಹವಾದ ಖಾದಿನಿಧಿಯಿಂದ ಖಾದಿ ಅಂಗಡಿಗಳು ಪ್ರಾರಂಭವಾದವು. ದಾವಣಗೆರೆಯಲ್ಲಿ ಕಾಸಲ ಶ್ರೀನಿವಾಸಶೆಟ್ಟರ ಮೇಲ್ವಿಚಾರಣೆಯಲ್ಲಿ ಒಂದು ಖಾದಿ ಅಂಗಡಿಯನ್ನು ಅಖಿಲಭಾರತ ಚರಖಾ ಸಂಘವು ಪ್ರಾರಂಭಿಸಿತು. ಜೆಲ್ಲದ ಸಿದ್ಲಿಂಗಪ್ಪನವರು ವ್ಯವಸ್ಥಾಪಕರು. ಅವರು ಹೆಗಲ ಮೇಲೆ ಗಂಟುಗಳನ್ನು ಹೊತ್ತು ಹಳ್ಳಿಹಳ್ಳಿಗೆ ಹೋಗಿ ಖಾದಿ ಮಾರುತ್ತಿದ್ದರು.

1932ರಲ್ಲಿ ಚಿತ್ರದುರ್ಗ ಜಿಲ್ಲಾ ಬೋರ್ಡು ಅಧ್ಯಕ್ಷರಾಗಿದ್ದ ಜಿ. ಚೆನ್ನಪ್ಪನವರ ನೇತೃತ್ವದಲ್ಲಿ ಐಮಂಗಲದಲ್ಲಿ ಖಾದೀಕೇಂದ್ರವೊಂದು ಸ್ಥಾಪಿತವಾಯಿತು. ಬದನವಾಳಿನಲ್ಲಿ ಸ್ಥಾಪಿತವಾಗಿದ್ದ ಖಾದೀಕೇಂದ್ರದಲ್ಲಿ ಅನುಭವ ಪಡೆದಿದ್ದ ಎಚ್. ಎಸ್. ನಂಜುಂಡಯ್ಯನವರು ಐಮಂಗಲ ಕೇಂದ್ರಕ್ಕೆ ವ್ಯವಸ್ಥಾಪಕರಾದರು. ಅನಂತರ ಹೆಚ್ಚು ಶಾಖೆಗಳನ್ನು ಸ್ಥಾಪಿಸಿ ಹೆಚ್ಚು ಖಾದಿ ಉತ್ಪತ್ತಿ ಮಾಡಿದವರು ಟಿ. ಎಸ್. ವೆಂಕಟಗಿರಿರಾಯರು. ಡಾ|| ಹರ್ಡೀಕರರು ಈ ಜಿಲ್ಲೆಯಲ್ಲಿ ಪ್ರವಾಸ ಮಾಡಿದಾಗ ಅವರಿಂದ ಪ್ರೇರಿತರಾಗಿ ಜಿಲ್ಲಾ ಬೋರ್ಡು ಅಧ್ಯಕ್ಷರಾಗಿದ್ದ ಮಹಮ್ಮದ್ ಇಮಾಮ್ ಐಮಂಗಲ ಕೇಂದ್ರದ ಏಳಿಗೆಗೆ ಕಾರಣರಾದರು. ಎಸ್. ವಾಸುದೇವರಾವ್ ಐಮಂಗಲ ಖಾದೀ ಕೇಂದ್ರದ

ಏಜಂಟರಾಗಿ ಚಿತ್ರದುರ್ಗದಲ್ಲಿ ಖಾದೀ ವಸ್ತ್ರಾಲಯವನ್ನು ಸ್ಥಾಪಿಸಿದರು. ಕೆಲಕಾಲ ಇದರ ಪಕ್ಕದಲ್ಲಿಯೇ ಕಾಂಗ್ರೆಸ್ ಕಾರ್ಯಾಲಯವಾಯಿತು. ತುರುವನೂರು, ದೊಡ್ಡ ಸಿದ್ದವನಹಳ್ಳಿ, ರಾಮಜೋಗಿಹಳ್ಳಿ ಇವು ಮುಖ್ಯ ಖಾದಿಕೇಂದ್ರಗಳು. ತುರುವನೂರಿನಲ್ಲಿ ಮನೆಮನೆಯಲ್ಲಿ ರಾಟೆಗಳು. ಮಹದೇವ ದೇಸಾಯಿ 1940ರಲ್ಲಿ ತುರುವನೂರಿಗೆ ಭೇಟಿಕೊಟ್ಟಾಗ 'ನೂಲುವ ಹಬ್ಬ' ಆಚರಿಸಿ ಅವರ ಮತ್ತು ಮಹಾತ್ಮಾ ಗಾಂಧಿಯವರ ಮೆಚ್ಚುಗೆಗೆ ಆ ಊರನವರು ಪಾತ್ರರಾದರು. ಬದನವಾಳ ಖಾದಿ ಕೇಂದ್ರದ ವ್ಯವಸ್ಥಾಪಕ ರಾದ ಎಸ್. ವಿ. ರಾಜಾರಾಮ ಐಯಂಗಾರ್ ಮತ್ತು ಅವರ ಸಹೋದ್ಯೋಗಿಗಳಾದ ಡಿ. ರಂಗಶೆಟ್ಟರು, ರಾಮಕೃಷ್ಣ ಮತ್ತು ಸುಬ್ರಹ್ಮಣ್ಯಂ ಮುಂತಾದವರು 1945ರಲ್ಲಿ ಕ್ಷಾಮಪರಿಹಾರ ಕೆಲಸಕ್ಕಾಗಿ ಜಿಲ್ಲೆಯಾದ್ಯಂತ ನೂಲುವ ಪ್ರಚಾರ ಕೈಗೊಂಡರು. ಹೊಸ ಹೊಸ ಕೇಂದ್ರಗಳಾದುವು.

1942ನೇ ಜನವರಿ 26ನೇ ತಾರೀಖು ಎಚ್. ಸಿ. ದಾಸಪ್ಪ ಮುಂತಾದ ಮೈಸೂರು ಕಾಂಗ್ರೆಸ್ ಮುಂದಾಳುಗಳು ಅಖಿಲ ಮೈಸೂರು ಚರಖಾ ಸಂಘವೆಂಬ ಹೆಸರಿನಿಂದ ಒಂದು ಸಂಸ್ಥೆಯನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು. ಇದರ ಅಧ್ಯಕ್ಷರು ಕೆ. ಟಿ. ಭಾಷ್ಯಂ, ಕಾರ್ಯದರ್ಶಿಗಳು ಎಂ. ಎನ್. ಸೀತಾರಾಮಯ್ಯ. ಏಪ್ರಿಲ್ ತಿಂಗಳಲ್ಲಿ ತಿಟ್ಟಮಾರನಹಳ್ಳಿಯಲ್ಲಿ (ಚನ್ನಪಟ್ಟಣದ ಹತ್ತಿರ) ನಡೆದ ಕಾಂಗ್ರೆಸ್ ಅಧಿವೇಶನದ ಕಾಲಕ್ಕೆ ಸೇರಿದ ಖಾದೀಪ್ರೇಮಿಗಳ ಸಭೆಯಲ್ಲಿ ಎಸ್. ವಾಸುದೇವರಾವ್‌ರವರು ಕಾರ್ಯ ದರ್ಶಿಗಳಾಗಿ ಚುನಾಯಿತರಾಗಿ ಕಾರ್ಯಾಲಯವು ಚಿತ್ರದುರ್ಗಕ್ಕೆ ಸ್ಥಳಾಂತರಿಸಲ್ಪ ಟ್ಟಿತು. 1943ರಲ್ಲಿ ಟಿ. ಸುಬ್ರಹ್ಮಣ್ಯಂರವರು ಅಧ್ಯಕ್ಷರಾದರು. (1951ರಲ್ಲಿ ಚಿತ್ರದುರ್ಗಕ್ಕೆ ಮೂರು ಮೈಲಿ ದೂರದಲ್ಲಿರುವ ಮೆದಕೇರಿಪುರದಲ್ಲಿ ಸ್ವಂತ ಕಟ್ಟಡಗಳಾಗಿ ಸಂಸ್ಥಾನದ ನಾಲ್ಕು ಜಿಲ್ಲೆಗಳಲ್ಲಿ ಮೈಸೂರು ಚರಖಾ ಸಂಘವೆಂಬ ಹೆಸರಿನಲ್ಲಿ ಕೆಲಸ ಬೆಳೆಯಿತು. ಇದರ ಶಾಖೆಗಳು ಸ್ವತಂತ್ರವಾದ ಸಹಕಾರ ಸಂಘಗಳಾಗಿ 1962-63ರಲ್ಲಿ ಪರಿವರ್ತಿತವಾಗಿದ್ದು ಈಗ ಚಿತ್ರದುರ್ಗ ತಾಲ್ಲೂಕು ಮತ್ತು ಹೊರಕೆರೆ ದೇವರಪುರಗಳಿಗೆ ಮಾತ್ರ ಮೈಸೂರು ಚರಖಾ ಪ್ರಚಾರ ಸಂಘದ ಕ್ಷೇತ್ರ ಸೀಮಿತವಾಗಿರುತ್ತದೆ.)

ದೇಶ ಸ್ವತಂತ್ರವಾಗಲು ಸಾಧಕವಾಗಿ ಮಹಾತ್ಮಾ ಗಾಂಧಿಯವರು ಪ್ರಾರಂಭಿಸಿದ ರಚನಾತ್ಮಕ ಕಾರ್ಯಗಳಲ್ಲಿ ಒಂದಾದ ಹರಿಜನೋದ್ಧಾರ ಕಾರ್ಯ ಕೈಗೊಂಡವರಲ್ಲಿ ಚಿತ್ರದುರ್ಗದಲ್ಲಿ ಹನುಮಂತರಾಜು ಅಗ್ರಗಣ್ಯರು; ಭೀಮರಾಜು ಮತ್ತೊಬ್ಬರು. 1934ರಲ್ಲಿ ಮಹಾತ್ಮಾ ಗಾಂಧಿಯವರು ಹರಿಜನೋದ್ಧಾರ ಕಾರ್ಯಕ್ಕಾಗಿ ಪ್ರವಾಸ ಕೈಗೊಂಡಾಗ ದಾವಣಗೆರೆಯಲ್ಲಿ ಹರಿಜನ ವಿದ್ಯಾರ್ಥಿನಿಲಯಕ್ಕೆ ಅಸ್ತಿಭಾರ ಹಾಕಿದರು. ಕಾಸಲ ಶ್ರೀನಿವಾಸ ಶೆಟ್ಟರು ಈ ಸಂಘದ ಕಾರ್ಯದರ್ಶಿಗಳು.

1930ರಲ್ಲಿ ಬ್ರಿಟಿಷ್ ಭಾರತದಲ್ಲಿ ಪ್ರಾರಂಭವಾದ ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ ಇತ್ಯಾದಿ ಚಳವಳಿಗಳಲ್ಲಿ ಚಿತ್ರದುರ್ಗ ಜಿಲ್ಲೆಯವರನೇಕರು ಭಾಗವಹಿಸಿದರು.

ಕೊಟ್ರಿ ನಂಜಪ್ಪ, ಎಸ್. ವಾಸುದೇವರಾವ್, ಡಿ. ಆರ್. ಮೌನೇಶ್ವರಪ್ಪ, ಕೊಟ್ರಪ್ಪ ಇವರು ಕೆಲವರು. 1931ರ ನವೆಂಬರ್ ತಿಂಗಳಲ್ಲಿ ದಾವಣಗೆರೆಯಲ್ಲಿ ಕಾಸಲ ಶ್ರೀನಿವಾಸ ಶೆಟ್ಟರವರ ಮುಖಂಡತ್ವದಲ್ಲಿ ಪರದೇಶಿ ಅಂಗಡಿ ಪಿಕೆಟಿಂಗ್‌ಗಾಗಿ ಶಿಬಿರ ವೊಂದು ನಡೆದು ಬಟ್ಟೆ ಕಟ್ಟೆ ಸೀಲು ಮಾಡಿಟ್ಟನಂತರ ನಿಂತಿತು.

1935ರಲ್ಲಿ ಚಿತ್ರದುರ್ಗ ಮತ್ತು ದಾವಣಗೆರೆಗಳಲ್ಲಿ ಹಿಂದೀ ರಾಷ್ಟ್ರೀಯ ಕಾಂಗ್ರೆಸ್‌ನ ರಜತಮಹೋತ್ಸವವು ಆಚರಿಸಲ್ಪಟ್ಟಿತು. 1936ರಲ್ಲಿ ಕಾಂಗ್ರೆಸ್ ಪ್ರಚಾರಕ್ಕಾಗಿ ಡಾ|| ಹರ್ಡೀಕರವರು ಚಿತ್ರದುರ್ಗಕ್ಕೆ ಆಗಮಿಸಿದರು. ಎ. ಭೀಮಪ್ಪ ನಾಯಕ್, ಎಸ್. ರಂಗರಾವ್, ಎಸ್. ವಾಸುದೇವರಾವ್ ಮತ್ತು ಹುಲ್ಲೂರು ಶ್ರೀನಿವಾಸ ಜೋಯಿಸ ಮುಂತಾದವರುಗಳನ್ನೊಳಗೊಂಡ ಕಾಂಗ್ರೆಸ್ ಸಮಿತಿ ಸ್ಥಾಪಿವಾಯಿತು. ಕೊಟ್ರಿ ನಂಜಪ್ಪ ಮತ್ತು ಮೌನೇಶ್ವರಪ್ಪನವರ ಪ್ರಯತ್ನದ ಫಲವಾಗಿ ದಾವಣಗೆರೆಯಲ್ಲಿ ಕಾಂಗ್ರೆಸ್ ಸಮಿತಿ ರಚನೆಯಾಯಿತು. ಕೊಟ್ರಿಯವರು ಹಳ್ಳಿಹಳ್ಳಿಗಳಿಗೂ ಹೋಗಿ ಕಾಂಗ್ರೆಸ್ ಸದಸ್ಯರನ್ನು ಮಾಡುವ ಕಾರ್ಯದಲ್ಲಿ ತೊಡಗಿದರು. ದಾವಣಗೆರೆ, ಹೊಳಲಕೆರೆ, ಹೊಸದುರ್ಗ, ಜಗಳೂರು ಮತ್ತು ಚಿತ್ರದುರ್ಗ ತಾಲ್ಲೂಕುಗಳಲ್ಲಿ ಆಗ್ಗೆ ಅವರ ಅನುಯಾಯಿಗಳಾದವರೇ ಮುಂದೆ ಜಿಲ್ಲೆಯಲ್ಲಿ ನಡೆದ ಹೋರಾಟಗಳಲ್ಲಿ ಪ್ರಮುಖ ಪಾತ್ರವಹಿಸಿದರು.

1936ರಲ್ಲಿ ಪ್ರಥಮತಃ ಮೈಸೂರು ರಾಜ್ಯದ ಪ್ರಜಾಪ್ರತಿನಿಧಿಸಭೆಗೂ ನ್ಯಾಯ ವಿಧಾಯಕ ಸಭೆಗೂ ಕಾಂಗ್ರೆಸ್ ತನ್ನ ಪ್ರತಿನಿಧಿಗಳನ್ನು ನಿಲ್ಲಿಸಿ ಚುನಾವಣೆಯಲ್ಲಿ ಭಾಗ ವಹಿಸಿತು. ಈ ನಿರ್ಧಾರ ತೆಗೆದುಕೊಳ್ಳುವ ಮೊದಲೇ ನ್ಯಾಯವಿಧಾಯಕ ಸಭೆಯ ಚುನಾವಣೆ ಪ್ರಚಾರ ಪ್ರಾರಂಭವಾಗಿದ್ದುದರಿಂದ ನ್ಯಾಯವಿಧಾಯಕ ಸಭೆಗೆ ಕಾಂಗ್ರೆಸ್ ಉಮೇದುವಾರರನ್ನು ನಿಲ್ಲಿಸಲಾಗಲಿಲ್ಲ. ಎ. ಭೀಮಪ್ಪ ನಾಯಕ್ ಮತ್ತು ಎಸ್. ರಂಗರಾವ್‌ರವರು ಪ್ರಜಾಪ್ರತಿನಿಧಿ ಸಭೆಗೆ ಚುನಾಯಿತರಾದರು.

1940ರಲ್ಲಿ ನಡೆದ ಜಿಲ್ಲಾ ಬೋರ್ಡು ಚುನಾವಣೆ ಪ್ರಚಾರದಲ್ಲಿ ಭಾಗವಹಿಸಿದವ ರಲ್ಲಿ ಧಾರವಾಡ ಜಿಲ್ಲೆಯ ಕಳ್ಳಿ ತಿಪ್ಪಣ್ಣಶಾಸ್ತ್ರಿ ಮತ್ತು ಕಜ್ಜರಿ ಸಿದ್ದಲಿಂಗಸ್ವಾಮಿ ಯವರು ಪ್ರಮುಖರು. ವಿಶೇಷ ಬಹುಮತ ದೊರೆತು ಕಾಂಗ್ರೆಸ್‌ನ ಎಸ್. ವೀರಬಸಪ್ಪ ನವರು ಅಧ್ಯಕ್ಷರಾಗಿ ಚುನಾಯಿತರಾದರು. ಪಾರ್ಲಿಮೆಂಟರಿ ಕಾರ್ಯಕ್ರಮಗಳಲ್ಲಿ ಆಗ ಕಾಂಗ್ರೆಸ್ ಎದುರಾಳಿಗಳಾಗಿದ್ದ ಜೆ. ಮಹಮದ್ ಇಮಾಂ, ಭೂಪಾಲಂ ನಂಜುಂಡಯ್ಯ, ಎಚ್. ಸಿದ್ದವೀರಪ್ಪ, ಡಿ. ಎಚ್. ಚಂದ್ರಶೇಖರಯ್ಯ ಇವರುಗಳನ್ನು ಪ್ರಚಂಡ ಬಹು ಮತದಿಂದ ಸೋಲಿಸಿದ ಕೀರ್ತಿಗೆ ಈ ಜಿಲ್ಲೆಯು ಪಾತ್ರವಾಯಿತು.

1938ರಲ್ಲಿ ಶಿವಪುರ ಕಾಂಗ್ರೆಸ್ ಸಮ್ಮೇಳನವನಂತರ ಧ್ವಜಸತ್ಯಾಗ್ರಹ ಆರಂಭ ವಾಯಿತು. ಇದು ಈ ಜಿಲ್ಲೆಗೂ ಹರಡಿತು. ಕೊಟ್ರಿ ನಂಜಪ್ಪ, ಎಂ. ಗೋವಿಂದ ರೆಡ್ಡಿ ಯವರು ದಸ್ತಗಿರಿಯಾದರು. ನಂತರ ಭಾಗವಹಿಸಿದ ಅನೇಕರ ದಸ್ತಗಿರಿಯಾಗಲಿಲ್ಲ.

ದಾವಣಗೆರೆಯಲ್ಲಿ 1937ರಲ್ಲಿ ತಿಲಕ ತರುಣ ಸಂಘವು ಸ್ಥಾಪಿತವಾಯಿತು. ಎಂ. ವಲ್ಲಪ್ಪನವರು ಕಾರ್ಯದರ್ಶಿಗಳು. 1937ರಲ್ಲಿ ಡಾ|| ಹರ್ಡೀಕರರ ಮಾರ್ಗ ದರ್ಶಿತ್ವದಲ್ಲಿ ಕಿಸಾನ್ ಚಳವಳಿ ನಡೆಯಿತು. ದಾವಣಗೆರೆಯ ಡಿ. ಆರ್. ಮೌನೇಶ್ವರಪ್ಪ ಇದರ ಪ್ರಮುಖರು. ಚೆಳ್ಳಕೆರೆಯಲ್ಲಿ ರೈತರ ಸಮ್ಮೇಳನವೊಂದು ಕೆ. ಸಿ. ರೆಡ್ಡಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಿ. ವಿ. ಕೃಷ್ಣಮೂರ್ತಿ ಮತ್ತು ಸಿ. ಕೃಷ್ಣರಾಯರು ಇದರ ಸಂಘಟಕರು.

ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ 1939ರಲ್ಲಿ ಚಳವಳಿ ಪ್ರಬಲವಾಯಿತು. ಸಭೆ, ಮೆರವಣಿಗೆಗಳನ್ನು ನಿರೋಧಿಸಿ ಹಾಕಿದ ಪ್ರತಿಬಂಧಕಾಜ್ಞೆಗಳ ಉಲ್ಲಂಘನೆಯು ದೇಶಾದ್ಯಂತ ನಡೆಯಿತು. ಈ ಕಾರ್ಯಕ್ರಮಗಳು ದೊಡ್ಡದೊಡ್ಡ ಊರುಗಳಿಗೆ ಮತ್ತು ಭಾಷಣ ಮಾಡಬಲ್ಲವರಿಗೆ ಮಾತ್ರ ಸೀಮಿತವಾಗಿತ್ತು. ಹಳ್ಳಿಹಳ್ಳಿಯಲ್ಲೂ ಪ್ರತಿ ಯೊಬ್ಬರೂ ಭಾಗವಹಿಸಬಹುದಾದ ಕಾರ್ಯಕ್ರಮ ಬೇಕಾಗಿತ್ತು. ಈ ಕಾರ್ಯ ಕ್ರಮವನ್ನು ಎಸ್. ನಿಜಲಿಂಗಪ್ಪನವರ ಮುಖಂಡತ್ವದಲ್ಲಿ ಚಿತ್ರದುರ್ಗ ಜಿಲ್ಲೆ ಒದಗಿಸಿತು. ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು ಮೊದಲ ಕಾರ್ಯಕ್ರಮವಾಯಿತು. ಚಿತ್ರದುರ್ಗ ಮತ್ತು ದಾವಣಗೆರೆಗಳಲ್ಲಿ ಇದು ಪ್ರಾರಂಭವಾಯಿತು. ಅನಂತರ ಹೆಂಡ ಉತ್ಪತ್ತಿಮಾಡುವ ಮರಗಳನ್ನೇ ಕಡಿಯಬೇಕೆಂಬ ಕಾರ್ಯಕ್ರಮವನ್ನು ಕೈಗೊಳ್ಳಲಾ ಯಿತು. ನ್ಯಾಯವಾದಿಗಳಾಗಿ ನ್ಯಾಯಪರಿಪಾಲನೆಯಲ್ಲಿ ಸರ್ಕಾರಕ್ಕೆ ಸಹಾಯಕರಾಗ ಬೇಕಾಗಿದ್ದ ಎಸ್. ನಿಜಲಿಂಗಪ್ಪನವರು ಕಾನೂನು ಉಲ್ಲಂಘನೆಯ ಈ ಅರಣ್ಯ ಸತ್ಯಾಗ್ರಹದ ಮುಖಂಡತ್ವವನ್ನು ವಹಿಸಿದರು. ತುರುವನೂರಿನ ಈಚಲ ವನದಲ್ಲಿ ಮೊದಲು ಈ ಕಾನೂನು ಭಂಗವಾಗಿ 14 ಜನರ ಬಂಧನ ಆಯಿತು.

ಕೊಡಲಿ ಹೊತ್ತು ಮೆರವಣಿಗೆಯಲ್ಲಿ ಈಚಲವನಗಳಿಗೆ ಹೋಗಿ ಈಚಲಮರಗಳನ್ನು ಕಡಿಯುವುದು—ಈ ಕಾರ್ಯ ಜಿಲ್ಲಾದ್ಯಂತ ನಡೆಯಿತು. ಹೊಳಲಕೆರೆ ರಂಗಾಪುರ, ಹೊಸದುರ್ಗ ತಾ|| ಬಾಗೂರು, ಚಿತ್ರದುರ್ಗ ತಾ|| ಕೊಳಹಾಳು, ದಾವಣಗೆರೆ ತಾ|| ಮಾಯಕೊಂಡ, ಹಿರಿಯೂರು ತಾ|| ಕಸ್ತೂರಿ ರಂಗಪ್ಪನ ಹಳ್ಳಿ, ಮರಡಿಹಳ್ಳಿ, ಗೊರ್ಲಡಕ, ಚೆಳ್ಳಕೆರೆ ಇವು ಅರಣ್ಯಸತ್ಯಾಗ್ರಹದ ಕೇಂದ್ರಗಳಾದುವು. ಈ ಜಿಲ್ಲೆಯ 500ಕ್ಕೂ ಮೇಲ್ಪಟ್ಟ ಅರಣ್ಯಸತ್ಯಾಗ್ರಹಿಗಳು ಕಾರಾಗಾರವಾಸವನ್ನು ಅನುಭವಿಸಿದರು. ಅನೇಕರ ದಸ್ತಗಿರಿಯೇ ಆಗಲಿಲ್ಲ. ದಸ್ತಗಿರಿ ಮಾಡಿ ಮನಸಾರ ಹೊಡೆಯುವುದು, ಚಿತ್ರಹಿಂಸೆ ಕೊಡುವುದು, ವ್ಯಾನುಗಳಲ್ಲಿ ದೂರ ತೆಗೆದುಕೊಂಡು ಹೋಗಿ ಕಾಡಿನಲ್ಲಿ ಬಿಟ್ಟುಬಿಡುವುದು ಇವು ಸಾಧಾರಣವಾದುವು. ಬೈರಮಂಗಲ ಮತ್ತು ತಿಪ್ಪಗೊಂಡನ ಹಳ್ಳಿಗಳಲ್ಲಿ ಕೆರೆಕಾಮಗಾರಿಗಳಲ್ಲಿ ಇವರಿಂದ ಕೆಲಸ ಮಾಡಿಸಲಾಯಿತು.

ಚಿತ್ರದುರ್ಗ ತಾಲ್ಲೂಕು ತುರುವನೂರು, ಕೊಳಹಾಳು ಗ್ರಾಮದಲ್ಲಿ ಭಾಗವಸಿದ ಜನರಿಗೆ ಚಿತ್ರಹಿಂಸೆ ಕೊಟ್ಟರು. ಇದರ ವಿಚಾರಣೆಗಾಗಿಯೇ ಮಹಾತ್ಮಾ ಗಾಂಧಿಯವರು

ಅವರ ಕಾರ್ಯದರ್ಶಿ ಮಹದೇವ ದೇಸಾಯಿಯವರನ್ನು ಕಳಿಸಿದ್ದು ಈ ವರದಿ ಸತ್ಯ ಎಂಬುದನ್ನರಿತರು. ಎಂ. ಗೋವಿಂದ ರೆಡ್ಡಿಯವರು ಜನತೆಯ ಪರವಾಗಿ ಹೇಳಿಕೆಗಳನ್ನು ಒದಗಿಸಿದರು.

ಕಾನೂನುಭಂಗಮಾಡಿ, ಈಚಲಮರಗಳನ್ನು ಕಡಿದು, ಕಾನೂನು ಪರಿಪಾಲನೆಗಾಗಿ ಸರ್ಕಾರ ತನ್ನ ವಿಶೇಷ ಖರ್ಚಿಗೆ ಈಡುಮಾಡಿದರೆಂಬ ಕಾರಣದಿಂದ ಈ ಹಣವನ್ನು ತುರುವನೂರು ಊರು ಜನರಿಂದಲೇ ವಸೂಲಿ ಮಾಡಬೇಕೆಂದು ಸರ್ಕಾರವು ಪುಂಡುಗಂದಾಯ ವಿಧಿಸಿತು. ಪುಂಡುಗಂದಾಯ ಕೊಡದಿದ್ದವರ ಆಸ್ತಿ ಜಪ್ತಿಮಾಡುವುದು ಮತ್ತು ಹರಾಜುಮಾಡುವುದು ಇವು ನಡೆದುವು. ಆದರೂ ಜನರು ಹಿಂಜರಿಯಲಿಲ್ಲ.

1941ನೇ ಏಪ್ರಿಲ್ ತಿಂಗಳಲ್ಲಿ ಹರಿಹರದ ಹತ್ತಿರ ಹಳ್ಳಿಯೊಂದರಲ್ಲಿ ಮೈಸೂರು ಕಾಂಗ್ರೆಸ್ ಅಧಿವೇಶನ ನಡೆಯಿತು. ಆ ಕಾಲಕ್ಕೆ ಸುವ್ಯವಸ್ಥಿತವಾದ ಖಾದಿ ಮತ್ತು ಗ್ರಾಮೋದ್ಯೋಗ ಪ್ರದರ್ಶನ ನಡೆಯಿತು. ಸರ್ದಾರ್ ಕೆ. ಎ. ವೆಂಕಟರಾಮಯ್ಯನವರು ಅದರ ಕಾರ್ಯದರ್ಶಿಗಳು. ಬಾಬು ರಾಜೇಂದ್ರ ಪ್ರಸಾದರು ಈ ಪ್ರದರ್ಶನ ಉದ್ಘಾಟಿಸಿದರು. ವಿನೋಬಾನಗರದ ಅಧಿವೇಶನದ ಅಧ್ಯಕ್ಷರು ಎಚ್. ಸಿದ್ದಯ್ಯ. ಸ್ವಾಗತ ಸಮಿತಿ ಅಧ್ಯಕ್ಷರು ಎಸ್. ನಿಜಲಿಂಗಪ್ಪ. ಕೋಶಾಧ್ಯಕ್ಷರು ಕಾಸಲ ಶ್ರೀನಿವಾಸ ಶೆಟ್ಟರು. ಕಾರ್ಯದರ್ಶಿ ಎಸ್. ವಾಸುದೇವರಾವ್. ಸ್ವಯಂಸೇವಕರ ದಳಪತಿ ಮೌನೇಶ್ವರಪ್ಪ, ಎಸ್. ವೀರಬಸಪ್ಪ, ಮಾಗನೂರು ಬಸಪ್ಪ ಮತ್ತು ಬಳ್ಳಾರಿ ಸಿದ್ದಮ್ಮ ಉಪಾಧ್ಯಕ್ಷರು.

1942ರ ಹೋರಾಟದಲ್ಲಿ ಇಡೀ ಜಿಲ್ಲೆಯು ಭಾಗವಹಿಸಿತು. ವಿದ್ಯಾರ್ಥಿಗಳ ಪಾತ್ರ ಹಿರಿದಾದುದು. ರೈಲು ಕಂಬಿಗಳನ್ನು ಕೀಳುವುದು ಅಥವಾ ತಪ್ಪಿಸುವುದು, ಟೆಲಿಗ್ರಾಫ್ ತಂತಿಗಳನ್ನು ಕಡಿಯುವುದು, ಅಂಚೆಪೆಟ್ಟಿಗೆಗಳನ್ನು, ಅಂಚೆಕಚೇರಿಗಳನ್ನು, ಶಾಲಾ ಪೀಠೋಪಕರಣಗಳನ್ನು ಸುಡುವುದು, ಸರ್ಕಾರದ ಕಾರ್ಯ ನಡೆಯದಂತೆ ಅಥವಾ ಸ್ಥಗಿತಗೊಳ್ಳುವಂತೆ ಕಾರ್ಯಕ್ರಮಗಳನ್ನು ಕೈಗೊಳ್ಳುವುದು ಈ ಚಳವಳಿಯ ರೂಪವಾಗಿತ್ತು. ಸಂಚಾರ ಸೌಲಭ್ಯಗಳನ್ನು ಕತ್ತರಿಸುವ ಅಂದರೆ ಸೇತುವೆಗಳನ್ನು ಕೆಡಹುವ ಪ್ರಯತ್ನ ನಡೆಯಿತು. ವಿದ್ಯಾರ್ಥಿಗಳಿಗೆ ಟಿಕೆಟ್ ಇಲ್ಲದೆ ರೈಲಿನಲ್ಲಿ ಪ್ರಯಾಣ ಮಾಡುವ ಕಾರ್ಯ ಬಹಳ ಸುಲಭವಾಗಿತ್ತು.

ದಾವಣಗೆರೆಯಲ್ಲಿ ಚಳವಳಿ ಬೃಹದ್ರೂಪ ತಾಳಿತು. ಗೋಲೀಬಾರು ಆಯಿತು. ಮಿಲಿಟರಿ ಸಹಾಯವೂ ಸರ್ಕಾರಕ್ಕೆ ಅವಶ್ಯವಾಯಿತು. ಉಗ್ರಗಾಮಿಗಳಾದ ಇಟಗಿ ವೇದಮೂರ್ತಿ, ಸಮಾಜವಾದಿ ಶಿವಾನಂದಯ್ಯ, ಮುರಿಗೇಂದ್ರಯ್ಯ ಇವರುಗಳು ಪ್ರಮುಖ ಪಾತ್ರವಹಿಸಿದರು. ಕೊಟ್ಟಿಗೆ ಶಿದ್ಲಿಂಗಪ್ಪ, ಬಳ್ಳಾರಿ ಮುರಿಗಪ್ಪ, ವೆಂಕಟಶೆಟ್ಟಿ, ಗುರುಬಸಪ್ಪ, ರುದ್ರಪ್ಪ, ರಾಜಪ್ಪ, ಯಲ್ಲಪ್ಪ, ಲೋಕಪ್ಪ ಇವರು ದಸ್ತಗಿರಿಯಾಗಿ ಕಾರಾಗಾರ ಸೇರಿದರು. ವಕೀಲ ಕಲ್ಲಪ್ಪನವರು ಗೋಲೀಬಾರಿನಿಂದ ಗಾಯಗೊಂಡರು.

ಮಾಯಕೊಂಡದ ಹತ್ತಿರ ರೈಲು ಕಂಬಿ ಪದೇ ಪದೇ ಕೀಳುತ್ತಿದ್ದುದರಿಂದ

ಮಿಲಿಟರಿ ಕಾವಲು ಇಡಬೇಕಾಯಿತು. ಆ ಊರಲ್ಲಿ ಅನೇಕರು ಶಿಕ್ಷೆಗೊಳಗಾದರು. ಹೊಸದುರ್ಗ ರೈಲ್ವೆ ನಿಲ್ದಾಣದಿಂದ ಹೊಸದುರ್ಗಕ್ಕೆ ತೆಗೆದುಕೊಂಡುಹೋಗುತ್ತಿದ್ದ ಅಂಚೆ ಚೀಲಗಳನ್ನು ಅಂಚೆ ಜವಾನನಿಂದ ಅಪಹರಿಸುವ ಕಾರ್ಯವನ್ನು ರೇವಣಸಿದ್ದಪ್ಪ, ಪಂಚಾಕ್ಷರಯ್ಯ, ಡಿ. ಸಿ. ಕೃಷ್ಣಪ್ಪ, ಕೆ. ವೆಂಕಟರಾಮಯ್ಯ ಮತ್ತು ಬಿ. ಎನ್. ನರಸಿಂಹ ರೆಡ್ಡಿ ಮಾಡಿದರು. ಇವರು ಶಿಕ್ಷೆಗೂ ಒಳಗಾದರು.

ಹಿರಿಯೂರು ತಾಲ್ಲೂಕು ಮದ್ದೂರ ಹಳ್ಳದ ಸೇತುವೆಗೆ ಡೈನಾಮೈಟ್ ಇಡಲು ಹೋದ ಗೋವಿಂದಸ್ವಾಮಿ, ಎನ್. ಉಗ್ರಯ್ಯ ಮತ್ತು ರಂಗಯ್ಯನವರು ಸಿಕ್ಕಿಬಿದ್ದು ಶಿಕ್ಷೆಗೆ ಒಳಗಾದರು.

ಚಿತ್ರದುರ್ಗ ಜಿಲ್ಲಾಧಿಕಾರಿಗಳ ಕಚೇರಿಗೆ, ಪಂಡರಹಳ್ಳಿ, ಗುಡ್ಡದರಂಗವ್ವನಹಳ್ಳಿ, ಕಡಬನಕಟ್ಟೆ, ಕಲ್ಲೇದೇವರಪುರ ಮುಂತಾದ ಊರ ಶಾಲೆಗಳಿಗೆ, ಚಿತ್ರದುರ್ಗ ರೈಲ್ವೆ ಸ್ಟೇಷನ್‌ಗೆ ಮತ್ತು ಚಿಕ್ಕಜಾಜೂರು ರೈಲ್ವೆ ಸ್ಟೇಷನ್‌ಗಳ ನೀರಿನ ಟ್ಯಾಂಕುಗಳಿಗೆ ಬೆಂಕಿ ಇಡುವ ಕಾರ್ಯದಲ್ಲಿಯೂ ಕೆಲವು ಯುವಕರು ತೊಡಗಿದರು. ಪಟೇಲ್ ಸೋಮಣ್ಣ ಮುಂತಾದವರು ದಸ್ತಗಿರಿಯಾದರು. ದಸ್ತಗಿರಿಗೆ ಒಳಗಾಗದೆ ಗುಪ್ತವಾಗಿದ್ದು ಕೆಲಸ ಮಾಡಿದ ಪ್ರಮುಖರಲ್ಲಿ ಪಿ. ಚಿನ್ನಾರೆಡ್ಡಿಯವರೊಬ್ಬರು.

1947ನೇ ಆಗಸ್ಟ್‌ನಲ್ಲಿ ದೇಶ ಸ್ವತಂತ್ರವಾಯಿತು. ಆದರೆ ಮೈಸೂರು ರಾಜ್ಯದಲ್ಲಿ ಪ್ರಜಾಪ್ರಭುತ್ವವಿರಲಿಲ್ಲ. ಜವಾಬ್ದಾರಿ ಸರ್ಕಾರಕ್ಕಾಗಿ 1947ರ ಸೆಪ್ಟಂಬರ್ ತಿಂಗಳಲ್ಲಿ ಹೋರಾಟ ಪ್ರಾರಂಭವಾಯಿತು. ಹೆಂಡದಂಗಡಿಗಳ ಪಿಕೆಟಿಂಗ್, ಈಚಲಮರ ಕಡಿಯುವುದು, ಹೆಂಡದ ಚೀಲಗಳನ್ನು ಕತ್ತರಿಸುವುದು, ಕೋರ್ಟ್ ಮತ್ತು ಕಚೇರಿಗಳ ಪಿಕೆಟಿಂಗ್, ಸರ್ಕಾರದ ಕಟ್ಟಡಗಳ ಮೇಲೆ ರಾಷ್ಟ್ರಧ್ವಜ ಹಾರಿಸುವುದು, ಶಾಲೆಗಳಿಗೆ ಬಹಿಷ್ಕಾರ ಮುಂತಾದ ಕಾರ್ಯಕ್ರಮ ಜಿಲ್ಲೆಯ ಎಲ್ಲಾ ಭಾಗಗಳಲ್ಲೂ ನಡೆದುವು. ಸಾವಿರಾರು ಜನರು ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಜಿಲ್ಲಾ ಲಾಕಪ್‌ಗಳಲ್ಲಿ ಜಾಗವಿಲ್ಲದೇ ಟೌನ್‌ಹಾಲ್ ಮುಂತಾದ ಕಟ್ಟಡಗಳೇ ಜೈಲುಗಳಾದುವು!

ಸರ್ಕಾರಿ ಕಟ್ಟಡಗಳ ಮೇಲೆ ಧ್ವಜ ಹಾರಿಸುವ ಕಾರ್ಯಕ್ರಮ ಲಾಠಿ ಛಾರ್ಜು ಮತ್ತು ಗುಂಡಿನೇಟುಗಳಿಗೆ ಎಡೆಕೊಟ್ಟಿತು. ದಾವಣಗೆರೆಯಲ್ಲಿ ಜೆಕೃಣ್ಣೆ ಕರಿಬಸಪ್ಪ, ಚಿತ್ರದುರ್ಗದಲ್ಲಿ ಅರ್ಥಂ ಸುಬ್ರಾಯ ಶೆಟ್ಟರು, ಹೊಸದುರ್ಗದಲ್ಲಿ 7 ಜನರು ಎಂದರೆ ಕೊಂಡಾಪುರದ ದೊಡ್ಡ ಹನುಮಯ್ಯ ಬಿನ್ ಕರಿಯಣ್ಣ, ಮೂರುಗುಂಡಿನ ದಿಬ್ಬದ ಹಿರೇತಿಮ್ಮಯ್ಯ ಬಿನ್ ಕರೆತಿಮ್ಮಯ್ಯ, ಗುತ್ತಿಕಟ್ಟೆಗ್ರಾಮದ ಸಣ್ಣಮ್ಮ ಕೋಂ|| ರಂಗಪ್ಪ, ರಾಮಜ್ಜನಹಳ್ಳಿ ಮಜರೆ ಒಂಟೆನಗೆರೆ ಗವಿಯ ಕಾದಪ್ಪ ಬಿನ್ ಮೂರ್ತೀರಪ್ಪ ಮುಂತಾದವರು ಗುಂಡಿನೇಟಿಗೆ ತುತ್ತಾದರು.

ಚಿತ್ರದುರ್ಗದಲ್ಲಿ ಜಿಲ್ಲಾ ಕಚೇರಿಯ ಸುತ್ತ ಸರ್ಪಕಾವಲಾಗಿ ಪೋಲೀಸರಿದ್ದರೂ ಅವರಿಗೆ ಕಾಣದಂತೆ ಕಟ್ಟಡದ ಮೇಲೇರಿ ಧ್ವಜ ಹಾರಿಸಿದರು. ಸ್ಟೈಲ್ಪ್ಯಾನ್ ಸಂಜಪ್ಪ

ನವರು. ಚಿತ್ರದುರ್ಗದಲ್ಲಿ ಗುಂಡಿನೇಟಿನ ಪ್ರಕರಣ ನಡೆಯುತ್ತಿರುವ ಸಂದರ್ಭದಲ್ಲಿ ಧೈರ್ಯವಾಗಿ ಮುಂದೆ ನಿಂತು ಸತ್ಯಾಗ್ರಹಿಗಳ ಮುಖಂಡತ್ವ ವಹಿಸಿದರು ಹೋ. ಚಿ. ಬೋರಯ್ಯನವರು.

ಈ ಅಂತಿಮ ಹೋರಾಟದಲ್ಲಿ ಭಾಗವಹಿಸಿದವರು ಸಾವಿರಾರು ಜನರು. ಈ ಚಳವಳಿಯನ್ನು ಎದುರಿಸುವುದು ಸರ್ಕಾರಕ್ಕೆ ಸಾಧ್ಯವಾಗದಾಯಿತು. ಮಹಾರಾಜರು ಜವಾಬ್ದಾರಿ ಸರ್ಕಾರ ಘೋಷಿಸಿದರು. ಅ|| ಮೈ|| ಕಾಂ|| ಸಮಿತಿಯ ಅಧಿವೇಶನ ಚಿತ್ರದುರ್ಗದಲ್ಲಿ ನಡೆದು ಆಗಲೇ ವಿಜಯೋತ್ಸವವೂ ಆಯಿತು. ಸಾರ್ವಜನಿಕ ಕಟ್ಟಡಗಳು, ಎಲ್ಲಾ ಮನೆಗಳೂ ಅತಿಥಿಗಳಿಂದ ತುಂಬಿದವು. ಮೈಸೂರು ಕಾಂಗ್ರೆಸ್ ಅಧ್ಯಕ್ಷರು ಮತ್ತು ಮುಖ್ಯಮಂತ್ರಿಗಳಾದ ಕೆ. ಚಂಗಲರಾಯ ರೆಡ್ಡಿ ಮತ್ತು ಕೆ.ಪಿ.ಸಿ.ಸಿ. ಅಧ್ಯಕ್ಷ ಎಸ್. ನಿಜಲಿಂಗಪ್ಪನವರ ಮೆರವಣಿಗೆ ಅತ್ಯಂತ ವೈಭವದಿಂದ ನಡೆಯಿತು. ಅಧಿವೇಶನದಲ್ಲಿ ಮೈಸೂರು ಕಾಂಗ್ರೆಸ್ ಅಧ್ಯಕ್ಷರಾಗಿ ಟಿ. ಸಿದ್ದಲಿಂಗಯ್ಯನವರು ಚುನಾಯಿತರಾಗಿ ಅಧಿಕಾರ ವಹಿಸಿಕೊಂಡರು. ಕಾಂಗ್ರೆಸ್ ಹೊಸ ಹುರುಪಿಂದ ಕಾರ್ಯೋನ್ಮುಖವಾಯಿತು.

## ಹರಿಹರ ಗುಂಡೂರಾಯರು

ಗುಂಡೂರಾಯರು 1893ರಲ್ಲಿ ಹರಿಹರದಲ್ಲಿ ಜನಿಸಿದರು. ವಿದ್ಯಾಭ್ಯಾಸ ಮುಗಿದ ನಂತರ ಚಿತ್ರದುರ್ಗ ಜಿಲ್ಲಾ ಕಚೇರಿಯಲ್ಲಿ ಗುಮಾಸ್ತರಾಗಿ ಸೇರಿದರು. ವಿದ್ಯಾರ್ಥಿದೆಸೆಯಲ್ಲೇ ಟಿಳಕರ ಭಾಷಣ, ಲೇಖನಗಳಿಂದ ಪ್ರೇರಿತರಾತದರು. ಚಿತ್ರದುರ್ಗದ ಐಯಣ್ಣನ ಪೇಟೆಯಲ್ಲಿ 1920ರಲ್ಲಿ 'ತಿಲಕ ಸಂಘ'ವನ್ನು ಸ್ಥಾಪಿಸಿದರು. ವೃತ್ತಪತ್ರಿಕೆಗಳನ್ನು ಓದುವ ರೂಢಿಯಿಲ್ಲದ ಆ ಕಾಲದಲ್ಲಿ ವೃತ್ತಪತ್ರಿಕೆಗಳನ್ನು ಓದುವ ಚಟ ಉಂಟುಮಾಡುವ ಕಾರ್ಯ ಇವರದಾಯಿತು. ಸಾರ್ವಜನಿಕ ಸಭೆಗಳೇ ನಡೆಯದಿದ್ದ ಕಾಲದಲ್ಲಿ ಇದನ್ನೂ ಪ್ರಾರಂಭಿಸಿದರು. ದೇಶದ ನಾನಾಭಾಗಗಳಿಂದ ಭಾಷಣಕಾರರನ್ನು ಕರೆಯಿಸಿ ಭಾಷಣವನ್ನು ಮಾಡಿಸುತ್ತಿದ್ದರು. ತಿಲಕ ಪುಸ್ತಕಾಲಯ ಮತ್ತು ವಾಚನಾಲಯವೊಂದನ್ನು ಪ್ರಾರಂಭಿಸಿದರು. ಕೆಲಕಾಲ ನಡೆದು ನಿಂತಿದ್ದ ಈ ಪುಸ್ತಕಾಲಯವನ್ನು 1939ರಲ್ಲಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಗೆ ವಹಿಸಿಕೊಟ್ಟರು. ಪುಸ್ತಕಾಲಯಕ್ಕೆ ಯಾವ ಸದಸ್ಯತ್ವದ ಚಂದಾ ಇರಲಿಲ್ಲ. ಒಂದು ಪೆಟ್ಟಿಗೆಯಲ್ಲಿ ಇಷ್ಟಬಂದವರು ಇಷ್ಟಬಂದಷ್ಟು ಕಾಣಿಕೆ ಹಾಕಬಹುದಿತ್ತು; ಇದು 'ಕಾಸಿನ ನಿಧಿ'. ಈ ಹಣ ಸಾಲದೇ ಬಂದರೆ ಇವರ ಸ್ವಂತ ಹಣ ಉಪಯೋಗವಾಗುತ್ತಿತ್ತು. ರಾಷ್ಟ್ರನಾಯಕರ ಭಾವಚಿತ್ರಗಳ ಮಾರಾಟವೂ ಇವರ ಕಾರ್ಯಕ್ರಮಗಳಲ್ಲೊಂದು.

ಖಾದಿಪ್ರಚಾರ ಮಾಡುವ ಅಪೇಕ್ಷೆ ಬಂತು. ಧಾರವಾಡದಿಂದ ಹೊಸ ಚರಖಾ

ತರಿಸಿ ನೂಲಲು ಪ್ರಾರಂಭಿಸಿದರು. ನೂಲವುದನ್ನೂ ಧಾರವಾಡದಲ್ಲೇ ಕಲಿತರು. ನೇಯಿಗೆಮಾಡಲು ಸಹ ಕಷ್ಟವೇ. ನೂಲು ಸಾಕಷ್ಟು ಹುರಿಕಟ್ಟಾಗಿರದೆ ಸಮಾನತೆಯೂ ಇರುತ್ತಿರಲಿಲ್ಲ. ನೇಯುವಾಗ ಮೇಲಿಂದಮೇಲೆ ಹರಿದುಹೋಗುತ್ತಿತ್ತು. ಆದರೂ ಹೆಚ್ಚು ಮಜೂರಿ ಕೊಟ್ಟು ನೇಯಿಸುತ್ತಿದ್ದರು. ಬಹಳ ದಪ್ಪವಾದ ಹಚ್ಚಡ ತಯಾರು ಆಗುತ್ತಿತ್ತು. ಅದರಲ್ಲೇ ಬನೀನು ಹೊಲಿಸಿಕೊಂಡು ಅವರು ಮತ್ತು ಅವರ ಮಿತ್ರರು ಧರಿಸಿದರು. ಕ್ರಮೇಣ ಪಂಚೆ ಮತ್ತು ಸೀರೆಗಳು ತಯಾರಾದವು. ಗುಂಡೂರಾಯರ ಧರ್ಮಪತ್ನಿಯೂ ಖಾದಿಸೀರೆಯನ್ನು ತೊಡಲು ಪ್ರಾರಂಭಿಸಿದರು. ಚಿತ್ರದುರ್ಗದ ಬಡಗಿ ಹೊಸೂರಪ್ಪನವರು ಸುಧಾರಿಸಿದ ಚರಖಾ ತಯಾರಿಸುತ್ತಿದ್ದರು. ಚಿತ್ರದುರ್ಗದಲ್ಲೂ ಸಾರ್ವಜನಿಕ ಗಣಪತಿ ಉತ್ಸವವನ್ನು ಟಿಳಕರ ಉದಾಹರಣೆಯಂತೆ ನಡೆಯಿಸಲಾರಂಭಿಸಿದರು. ಆಗ ಮತ್ತು ಸಂಘದ ವಾರ್ಷಿಕ ಉತ್ಸವದ ಕಾಲಕ್ಕೆ ಭಾಷಣ ಮಾಡಲು ಆಲೂರು ವೆಂಕಟರಾಯರು, ಎಂ. ವೆಂಕಟಕೃಷ್ಣಯ್ಯ, ಡಿ. ಕೆ. ಭಾರದ್ವಾಜ್, ಡಾ|| ಹರ್ಡೀಕರ, ಮುದವೀಡು ಕೃಷ್ಣರಾಯರು, ಜಯರಾಮಾಚಾರ್ಯ, ಬಳ್ಳಾರಿಯ ರಾಘವಾಚಾರ್ ಮುಂತಾದ ಮಹನೀಯರನ್ನು ಕರೆಯಿಸುತ್ತಿದ್ದರು. ಕಾಮನಭಾವಿಯ ಹತ್ತಿರವಿದ್ದ ಟಿಪ್ಪುಸುಲ್ತಾನನು ಕಟ್ಟಿಸಿದ ಕಟ್ಟಡವೊಂದರಲ್ಲಿದ್ದ ತಾಲ್ಲೂಕು ಕಚೇರಿ ಆವರಣವೇ ಇವರ ಸಾರ್ವಜನಿಕ ಭಾಷಣಗಳ ವೇದಿಕೆಯಾಗಿತ್ತು. ಪರದೇಶೀ ವಸ್ತ್ರ ದಹನವೂ ನಡೆಯಿತು.

ಇಂಗ್ಲೆಂಡಿನಲ್ಲಿ ಚಿರೋಲ್ ಬರೆದ ಲೇಖನಕ್ಕಾಗಿ ಟಿಳಕರು ಮಾನನಷ್ಟ ಮೊಕದ್ದಮೆ ಹೂಡಿದರು. ಗುಂಡೂರಾಯರೂ ಚಿತ್ರದುರ್ಗದಲ್ಲಿ ಐವತ್ತು ರೂಪಾಯಿ ಸಂಗ್ರಹಿಸಿ ಕಳಿಸಿಕೊಟ್ಟರು. ಅನಂತರ ಟಿಳಕ ಸ್ವರಾಜ್ಯ ಫಂಡಿಗೂ ಒಂದುನೂರು ರೂಪಾಯಿ ಸಂಗ್ರಹಿಸಿ ಕಳುಹಿಸಿದರು. ತಿಲಕ ಸಂಘವ ಕಾರ್ಯಕಲಾಪಗಳ ನೆರವಿಗಾಗಿ ಸ್ವಯಂ ಸೇವಕರ ಒಂದು ತಂಡವನ್ನೂ ತಯಾರಿಸಿದ್ದರು. ಚಳ್ಳಕೆರೆಯ ಸಿ. ವಿ. ಕೃಷ್ಣಮೂರ್ತಿ, ತಾಳ್ಯದ ಜಯರಾಮರಾವ್ ಇವರೂ ಸ್ವಯಂಸೇವಕರು. ತಿಲಕ ಸಂಘದ ಸಹಾಯಾರ್ಥ 'ಶಿಬಿಚಕ್ರವರ್ತಿ' ಎಂಬ ಸಹಾಯಾರ್ಥ ನಾಟಕವೊಂದನ್ನು ಆಡಿದರು.

ಗುಂಡೂರಾಯರ ಸಾರ್ವಜನಿಕ 'ಸೇವಾಕಾರ್ಯದಲ್ಲಿ ಅವರ ಧರ್ಮಪತ್ನಿಯೂ ಭಾಗಿಯೇ ಆಗಿದ್ದರು. ಸಮಾರಂಭಗಳಿಗೆ ಬರುವ ಮಹನೀಯರ ಅತಿಥಿಸತ್ಕಾರ ಬಹಳ ಹರ್ಷದಿಂದ ಮಾಡುತ್ತಿದ್ದರು. ಅವರೂ ಒಬ್ಬ ಸ್ವಯಂಸೇವಕಿಯೇ. ಹರಿಕಥೆ, ಪೂಜೆಗಳಿಗೆ ಬೇಕಾಗುವ ಆರತ್ಯಕ್ಷತೆ ಸಿದ್ಧತೆಯನ್ನು ಮಾಡುವುದು ಅವರ ಭಾಗದ ಕೆಲಸವಾಗಿತ್ತು. ಅವರೂ ಖಾದೀಧಾರಿಗಳೇ.

ಗುಂಡೂರಾಯರ ಈ ಅಸ್ತಿಭಾರದ ಮೇಲೆ 1935ರ ನಂತರ ಕಾಂಗ್ರೆಸ್ ಕಲಾಪಗಳು ನಡೆದುವು. ಹೊಸ ಉತ್ಸಾಹ ಮತ್ತು ಹುಮ್ಮಸ್ಸಿನಿಂದ ಯುವಕರು ಪ್ರಾರಂಭಿಸಿದ ಕಾಂಗ್ರೆಸ್ ಕೆಲಸಗಳಿಗೆ ಇವರು ಮಾರ್ಗದರ್ಶಕರಾದರು.

# ದಿ|| ಹುಲ್ಲೂರು ಶ್ರೀನಿವಾಸ ಜೋಯಿಸರು

(1893–1956)

---



ತಾ|| 8-3-1893ರಲ್ಲಿ ಜನಿಸಿದ ದಿ|| ಹುಲ್ಲೂರು ಶ್ರೀನಿವಾಸ ಜೋಯಿಸರು ಬಾಲ್ಯದಿಂದಲೂ ಸ್ವಾತಂತ್ರ್ಯಪ್ರೇಮಿಗಳು. ಜೀವನದಲ್ಲಿ ಕಾಲಿಟ್ಟು ಸರ್ಕಾರಿ ಕೆಲಸಕ್ಕೆ ಸೇರಿದಾಗ ಅವರ ಸ್ವತಂತ್ರ ಮನೋವೃತ್ತಿಗೆ ಅದು ಒಗ್ಗದೇ ಹೋಯಿತು. ಕೂಡಲೇ ರಾಜೀನಾಮೆ ಸಲ್ಲಿಸಿ ಚಿತ್ರದುರ್ಗದಲ್ಲಿ ವಕೀಲಿವೃತ್ತಿಯನ್ನು ಆರಂಭಿಸಿದರು.

ಗಾಂಧೀಜಿಯವರ ವ್ಯಕ್ತಿತ್ವ ಅವರ ಮೇಲೆ ಅತೀವ ಪ್ರಭಾವ ಮಾಡಿತು. ಅವರ ಭಕ್ತರಾದರು. ಖಾದಿಯನ್ನು ತೊಡಲು ಆರಂಭಿಸಿದರು. ಸ್ವದೇಶಿ ವಸ್ತುಗಳನ್ನೇ ಉಪಯೋಗಿಸುತ್ತಿದ್ದರು. ಚಿತ್ರದುರ್ಗದಲ್ಲಿ ಖಾದೀ ಪ್ರಚಾರ ಕೈಗೊಂಡು ನೂರುವ ಶಾಖೆಯನ್ನು ತಮ್ಮ ಗೃಹದಲ್ಲಿಯೇ ಪ್ರಾರಂಭಿಸಿದರು. ಸ್ಥಳೀಯರನ್ನು ಉತ್ಸಾಹಿಸಿ ಖಾದಿ ಭಂಡಾರ ಸ್ಥಾಪಿಸಲು ನೆರವಾದರು. ಸ್ವತಂತ್ರ ವೃತ್ತಿಗಳನ್ನು ಕೈಗೊಳ್ಳಲು ಅನೇಕರಲ್ಲಿ ಸ್ಫೂರ್ತಿಯನ್ನು ತುಂಬಿದರು.

1942ರಲ್ಲಿ ಧ್ವಜಸತ್ಯಾಗ್ರಹದಲ್ಲಿ ನಾಯಕರಾಗಿ ರಾಷ್ಟ್ರೀಯ ಧ್ವಜವನ್ನು ಹಾರಿಸಿ ಸರ್ಕಾರೀ ಆಜ್ಞೆಯನ್ನು ಮುರಿದರು. ಚಿತ್ರದುರ್ಗದ ಜಿಲ್ಲಾ ಮ್ಯಾಜಿಸ್ಟ್ರೇಟರು ಬಂಧಿಸಲು ಆಜ್ಞೆ ಇತ್ತು ಸೆರೆಯಲ್ಲಿಟ್ಟರು. ಬೆಂಗಳೂರು ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. ಕಾರಾಗೃಹದಲ್ಲಿದ್ದಾಗ ವಾಯುಬಾಧೆಯಿಂದ ಕೈಕಾಲುಗಳು ಊದಿದವು. ಓಡಾಡಲೂ ಆಗಲಿಲ್ಲ. ಮಕ್ಕಳು ಚಿಕ್ಕವರಾಗಿದ್ದು ಯಾವ ವ್ಯವಸ್ಥೆಯೂ ಇಲ್ಲದೆ ಊರಿನಲ್ಲಿದ್ದರು. ದೇಶಸೇವೆ ಈಶಸೇವೆಯೆಂದು ಏಕಮನಸ್ಸಿನಿಂದ ರೋಗಬಾಧೆಯನ್ನೂ ಮನೋಬಾಧೆಯನ್ನೂ ಸಹಿಸಿ ಸುಮಾರು ಒಂದೂವರೆ ವರ್ಷಕಾಲ ಕಾರಾಗೃಹವಾಸವನ್ನು ಅನುಭವಿಸಿದರು. ಕುಟುಂಬವೇ ನಾಶವಾಗುವ ಸ್ಥಿತಿಯಲ್ಲಿದ್ದರೂ ದೇಶಪ್ರೇಮದಿಂದ ವಿಚಲಿತರಾಗಲಿಲ್ಲ. ಎಲ್ಲ ಕಷ್ಟನಷ್ಟಗಳನ್ನೂ ಅನುಭವಿಸಿದರು.

ಬಂಧನದಿಂದ ಹೊರಬಂದಮೇಲೆ ಜಿಲ್ಲೆಯಲ್ಲಿ ಕ್ಷಾಮವು ತಲೆದೋರಿತು. ಹಳ್ಳಿ ಹಳ್ಳಿಗಳನ್ನು ಸಂಚರಿಸಿ ಗಂಜಿ ಕೇಂದ್ರಗಳನ್ನು ತೆರೆಯಲು ನೆರವಾದರು. ಚಿತ್ರದುರ್ಗ ತಾಲ್ಲೂಕು ಕ್ಷಾಮನಿವಾರಣಾ ಸಮಿತಿಯ ಅಧ್ಯಕ್ಷರಾಗಿ ಸೇವೆಸಲ್ಲಿಸಿದರು. [illegible]

ಪ್ರಜಾರಾಜ್ಯ ಉದಯಕ್ಕಾಗಿ ಚಳವಳಿ ನಡೆಸಿದರು. ಪುನಃ ಬಂಧಿಸಲ್ಪಟ್ಟು ಕಾರಾಗೃಹ ದಲ್ಲಿ ಕೆಲತಿಂಗಳು ಇದ್ದರು.

ಚಿತ್ರದುರ್ಗದಿಂದ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ ಚುನಾಯಿತ ರಾದರು. ಗೃಹಕೈಗಾರಿಕೆಗಳಿಗೂ, ಹರಿಜನೋದ್ಧಾರಕ್ಕೂ ಸತತವಾಗಿ ದುಡಿದರು. ಹರಿಜನರು ಹುಲ್ಲೂರು ಬಳಿ ನಿರ್ಮಿತವಾದ ತಮ್ಮ ಹಳ್ಳಿಗೆ 'ಶ್ರೀನಿವಾಸಪುರ'ವೆಂದು ಜೋಯಿಸರ ಹೆಸರಿಟ್ಟರು.

ಸತ್ಯನಿಷ್ಠೆ, ಬಡವರ ಸೇವೆ, ಅಲ್ಪತೃಪ್ತಿ, ಸ್ವದೇಶಪ್ರೇಮ ಅವರ ಜೀವನದ ಧ್ಯೇಯವಾಗಿತ್ತು. ಕನ್ನಡನಾಡಿನ ಅನೇಕ ವೀರರ ಅದ್ಭುತಕಾರ್ಯಗಳನ್ನು ಸಂಶೋಧಿಸಿ ಅವರ ರಾಷ್ಟ್ರಪ್ರೇಮವನ್ನು ಕನ್ನಡ ಜನತೆಗೆ ಲೇಖನಗಳ ಮೂಲಕ ಪರಿಚಯಮಾಡಿ ಕೊಟ್ಟರು. ಕರ್ನಾಟಕ ಏಕೀಕರಣ ಪ್ರಚಾರಕ್ಕಾಗಿ ಪ್ರವಾಸ ಕೈಗೊಂಡರು. ಅದು ಕೈಗೂಡಿದ ಎಂಟನೆಯ ದಿನವೇ (8-11-1956) ತಮ್ಮ ಅಸು ನೀಗಿದರು.

## ನನ್ನ ಸ್ಮೃತಿಗಳು

1911ರಲ್ಲಿ ಜನಿಸಿದ ನಾನು ಬೆಂಗಳೂರು ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲೊಂದಾದ ದೇಶೀಯ ವಿದ್ಯಾಶಾಲೆಗೆ 1925ರಲ್ಲಿ ಸೇರಿದೆನು. ಬಡವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಹೊತ್ತು ಉಪಾಹಾರವನ್ನು ಒದಗಿಸುವ ಕಾರ್ಯಕ್ರಮ ನನ್ನ ಮನಸ್ಸನ್ನು ಸೆಳೆಯಿತು. ಬೆಂಗಳೂರಿನ ಹಳೇ ತರಗುಪೇಟೆಯಲ್ಲಿ ಶಾಲೆ ನಡೆಯುತ್ತಿತ್ತು. ಮನೆಮನೆಗೂ ಪ್ರತಿ ಭಾನುವಾರ ಹೋಗುವುದು, ಅಕ್ಕಿ, ಬೇಳೆ ಮತ್ತು ಧನ ಸಂಗ್ರಹಿಸುವುದು ಸ್ವಯಂ ಸೇವಕರ ಕೆಲಸವಾಗಿತ್ತು. ನಾನೂ ಈ ತಂಡಕ್ಕೆ ಸೇರಿದೆನು. ಶಾಲೆಯಲ್ಲಿ ಕಲಿಸುತ್ತಿದ್ದ ಪೌರನೀತಿ, ಆಚರಿಸುತ್ತಿದ್ದ ರಾಷ್ಟ್ರೀಯ ಉತ್ಸವಗಳು, ರಾಷ್ಟ್ರನಾಯಕರ ಬೋಧನೆಗಳು ಇವು ನನ್ನಲ್ಲಿ ರಾಷ್ಟ್ರಾಭಿಮಾನ ಮೂಡಿಸಿದವು. ಇಡೀ ಶಾಲೆಯ ವಿದ್ಯಾರ್ಥಿಗಳಿಗೆ ದಿನದ ಕೊನೆಯ ಅವಧಿಯಲ್ಲಿ ನಡೆಯುತ್ತಿದ್ದ ಕವಾಯತ್ ಮತ್ತು ವ್ಯಾಯಾಮ ಶಿಕ್ಷಣಗಳು ಶಿಸ್ತನ್ನು ಕಲಿಸಿದವು. ಸೇವಾದಳದ ಸ್ಥಾಪಕರಾದ ಡಾ|| ನಾ. ಸು. ಹರ್ಡೀಕರವರು ನಮ್ಮ ಶಾಲೆಗೆ ಭೇಟಿಕೊಟ್ಟು ಹಿಂದೂಸ್ಥಾನೀ ಸೇವಾದಳದ ಒಂದು ಶಾಖೆಯನ್ನು ಸ್ಥಾಪಿಸಿದರು. ಆಗ ಹಿಂದೂಸ್ಥಾನೀ ಸೇವಾದಳ ಶಿಕ್ಷಕರೊಬ್ಬರಾದ ಈಗ 'ಸರ್ದಾರ'ರೆಂದು ಹೆಸರುಗೊಂಡ ಕೆ. ಎ. ವೆಂಕಟರಾಮಯ್ಯನವರು ನಮಗೆ ಶಿಕ್ಷಣ ಕೊಡಲು 1925ರಲ್ಲಿ ಬಂದರು. ಅಲ್ಲಿ ಭಾರತ ಸೇವಾದಳವು ನ್ಯಾಷನಲ್ ಹೈಸ್ಕೂಲ್ ಮುಖ್ಯ ಉಪಾಧ್ಯಾಯ ರಾಗಿದ್ದ ಕೆ. ಸಂಪದ್ಗಿರಿರಾವ್ ಮುಂತಾದವರಿಂದ ಸ್ಥಾಪಿಸಲ್ಪಟ್ಟಿತು. ತಿರುಮಲೆ ತಾತಾ ಚಾರ್ಯರು ನಮ್ಮ ಅಧ್ಯಕ್ಷರು. ಶಾಲೆಯ ಉಪಾಧ್ಯಾಯರೊಬ್ಬರಾದ ಎಚ್. ರಾಮ ರಾಯರು ಸರದಾರರು. ಪ್ರಾರಂಭ್ಯದ ಶಿಬಿರಗಳಲ್ಲಿ ನಮಗೆ ಬೌದ್ಧಿಕ ಮತ್ತು ಪ್ರತ್ಯಕ್ಷ ಶಿಕ್ಷಣಗಳು ದೊರೆಯಿತು. ಎಚ್. ಸಿ. ಗಣೇಶರಾವ್ ಇನ್ನೊಬ್ಬ ಪ್ರಮುಖ ಶಿಕ್ಷಕರು.

ಆಗ ನನ್ನ ಜೊತೆಗಾರರಾಗಿದ್ದ ವಿದ್ಯಾರ್ಥಿ ಕಾರ್ಯಕರ್ತರೆಂದರೆ ದಯಾನಂದರಾಜು, ಕೆ.ಜಿ. ಕೃಷ್ಣಮೂರ್ತಿ, ಆರ್. ಶ್ರೀನಿವಾಸರಾವ್ ಮತ್ತು ಎಂ. ಶಂಕರನಾರಾಯಣರಾವ್.

1927ರಲ್ಲಿ ಮಹಾತ್ಮಾ ಗಾಂಧಿಯವರು ವಿಶ್ರಾಂತಿಪಡೆಯಲು ನಂದಿಬೆಟ್ಟದಲ್ಲಿ ಕೆಲವು ತಿಂಗಳು, ಅನಂತರ ಬೆಂಗಳೂರಿನಲ್ಲಿ ಕೆಲವು ತಿಂಗಳು ತಂಗಿದರು. ನಂದಿಬೆಟ್ಟ ಯಾತ್ರಾಸ್ಥಳವಾಯಿತು. ಕರ್ನಾಟಕದ ಮುಖಂಡರಾದ ಕರ್ನಾಟಕ ಸಿಂಹ ಗಂಗಾಧರ ರಾವ್ ದೇಶಪಾಂಡೆಯವರೂ ಮತ್ತು ತಮಿಳುನಾಡಿನ ಮುಖಂಡರಾದ ತಿರುಚ್ಚೆಂಗೋಡು ಆಶ್ರಮದ ರಾಜಗೋಪಾಲಾಚಾರ್‌ರವರೂ ಗಾಂಧಿಯವರ ಬಿಡಾರದ ವ್ಯವಸ್ಥಾಪಕರು. ಬೆಂಗಳೂರು ಸೇವಾದಳದ ಸ್ವಯಂಸೇವಕರು ಅಲ್ಲಿ ಸೇವೆಸಲ್ಲಿಸುವ ಸೌಭಾಗ್ಯ ಪಡೆದರು. ನನಗೂ ಹತ್ತು ದಿನಗಳ ಕಾಲ ಅವರ ಮತ್ತು ಕಸ್ತೂರಿಬಾರ ಸೇವೆಮಾಡುವ ಸದವಕಾಶ ದೊರೆಯಿತು. ಅದರ ಪ್ರಭಾವವೇ ನನ್ನನ್ನು ದೇಶಸೇವೆಯಲ್ಲಿ ತೊಡಗಿಸಿತು. ಗಾಂಧಿಯವರು ಬೆಂಗಳೂರಿನ ಕುಮಾರಾ ಪಾರ್ಕಿನಲ್ಲಿದ್ದಾಗ ದೇಶದ ನಾಯಕರೆಲ್ಲರೂ ಅವರ ಭೇಟಿಗೆ ಬಂದರು. ಆಚಾರಶೀಲರಾದ ಪಂಡಿತ ಮದನಮೋಹನ ಮಾಲವೀಯರು ತಮ್ಮ ಅಡಿಗೆಯವನು ಮುಂತಾದ ಸಿಬ್ಬಂದಿಯೊಂದಿಗೆ ಬಂದು ತಮ್ಮದೇ ಪ್ರತ್ಯೇಕವಾದ ಬಿಡಾರವೊಂದನ್ನು ಕುಮಾರಾ ಪಾರ್ಕಿನಲ್ಲಿ ಮಾಡಿದರು. ಶಂಕರ ಮಠದಲ್ಲಿ ಅಸ್ಪೃಶ್ಯತಾ ನಿವಾರಣೆ ಬಗ್ಗೆ ಸಂಸ್ಕೃತ ಭಾಷೆಯಲ್ಲಿ ನಡೆದ ಚರ್ಚೆಯ ಕಾಲಕ್ಕೆ ಅವರ ಪಾಂಡಿತ್ಯದ ಅರಿವು ಬೆಂಗಳೂರಿನವರಿಗಾಯಿತು. ಅಸ್ಪೃಶ್ಯತಾ ಭಾವನೆಯು ಆಗಲೇ ನಮ್ಮಿಂದ ದೂರವಾಯಿತು.

ಗಾಂಧೀಜಿಯವರು ಬೆಂಗಳೂರಿನಲ್ಲಿದ್ದಾಗಲೇ ದಕ್ಷಿಣ ಭಾರತ ಖಾದಿ ಪ್ರದರ್ಶನವೊಂದು ಬಸವನ ಗುಡಿಯಲ್ಲಿ ಕಟ್ಟಲ್ಪಟ್ಟ ದೇಶೀಯ ವಿದ್ಯಾಶಾಲೆಯ ಹೊಸ ಕಟ್ಟಡದಲ್ಲಿ ನಡೆಯಿತು. ದೇಶದ ನಾನಾ ಭಾಗದಲ್ಲಿ ತಯಾರಾಗುತ್ತಿದ್ದ ಖಾದಿ ಬಟ್ಟೆ ಬಂದಿದ್ದವು. ನೂಲುವ, ನೇಯುವ ಮತ್ತು ಬಟ್ಟೆಯ ಮೇಲೆ ಮುದ್ರಣ ಮಾಡುವ ಕ್ರಿಯೆಗಳ ಪ್ರತ್ಯಕ್ಷ ಪ್ರದರ್ಶನವಾಯಿತು. ಬಟ್ಟೆಯ ಮೇಲೆ ಕಾಗೆಬಂಗಾರದ (ಮೈಕಾ) ಮುದ್ರಣ ಆಗ್ಗ ಹೊಸದು. ಅದರ ಪ್ರದರ್ಶನವೂ ಇತ್ತು. ಮಿಲ್ ಬಟ್ಟೆಯಲ್ಲಿ ಈ ರೀತಿ ಮುದ್ರಣ ಆ ಕಾಲದಲ್ಲಿ ಆಗುತ್ತಿರಲಿಲ್ಲ. ಆದುದರಿಂದ ಆ ಬಟ್ಟೆಗೆ ವಿಶೇಷ ಗಿರಾಕಿ ಇರುತ್ತಿತ್ತು.

ಬೆಂಗಳೂರಿನ ಕೋಟೆಯಲ್ಲಿ ಮೈಸೂರು ಸಂಸ್ಥಾನಕ್ಕೆ ಮೊದಲನೆಯದಾಗಿ ಖಾದಿ ಭಂಡಾರ ಸ್ಥಾಪಿತವಾಯಿತು. ಸೇವಾದಳದ ಸ್ವಯಂಸೇವಕರು ಹೆಗಲ ಮೇಲೆ ಮತ್ತು ಕೈಗಾಡಿಯಲ್ಲಿ ಖಾದಿ ಬಟ್ಟೆ ಹೊತ್ತು ಬೆಂಗಳೂರಿನ ಮೂಲೆಮೂಲೆಗೂ ಹೋಗಿ ಖಾದಿ ಪ್ರಚಾರ ಮಾಡುತ್ತಿದ್ದೆವು. ಪರದೇಶೀವಸ್ತ್ರ ಬಹಿಷ್ಕಾರ ಮತ್ತು ಖಾದಿಪ್ರಚಾರಗಳು ಸ್ವಾತಂತ್ರ್ಯ ಹೋರಾಟದ ಕಾರ್ಯಕ್ರಮಗಳು. ಮಹಾತ್ಮಾ ಗಾಂಧಿಯವರು 1927ರಲ್ಲಿ ಮೈಸೂರು ಸೀಮೆಯ ಆದ್ಯಂತ ಪ್ರವಾಸಮಾಡಿ ಖಾದಿಪ್ರಚಾರ ಮಾಡಿದರು. ಖಾದಿಗಾಗಿ ನಿಧಿ ಸಂಗ್ರಹಿಸಿದರು. ಎಸ್. ವಿ. ರಾಜಾರಾಮ ಐಯ್ಯಂಗಾರ್‌ರೂ (ಅನಂತರ

ಬದನವಾಳ ಖಾದೀ ಕೇಂದ್ರದ ವ್ಯವಸ್ಥಾಪಕರಾಗಿದ್ದರು), ವಿದ್ಯಾರ್ಥಿಮುಖಂಡರಾದ ರಾಘವೇಂದ್ರರಾಯರು (ಅನಂತರ ಪ್ರೌಢಶಾಲಾ ಮುಖ್ಯ ಉಪಾಧ್ಯಾಯರಾಗಿದ್ದರು) ಮತ್ತು ಎಸ್. ರಂಗರಾವ್ (ಅನಂತರ ಚಿತ್ರದುರ್ಗದಲ್ಲಿ ವಕೀಲರಾಗಿದ್ದರು) ಖಾದೀ ಪ್ರಚಾರ ತಂಡದ ಮುಖ್ಯಸ್ಥರು.

1927ನೇ ಡಿಸೆಂಬರ್‌ನಲ್ಲಿ ಮದರಾಸಿನಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಬೆಂಗಳೂರು ಸೇವಾದಳದ 100 ಜನ ಸ್ವಯಂಸೇವಕರ ತಂಡವು ಈ ಅಧಿವೇಶನದಲ್ಲಿ ಸ್ವಯಂಸೇವಕ ವಿಭಾಗದಲ್ಲಿ ಅಗ್ರಪಾತ್ರ ವಹಿಸಿತು. ಶೌಚಕೂಪಗಳ ಸ್ವಚ್ಛತೆ ಕಾಪಾಡುವುದು ಒಂದು ಕೆಲಸ. ಕಾಂಗ್ರೆಸ್ ಅಧಿವೇಶನದ ವೇದಿಕೆಯ ಸುತ್ತ ನಮ್ಮ ದಳದವರೇ ಎಲ್ಲವನ್ನೂ ಕಾಯುವವರು. ಬ್ಯಾಡ್ಜ್ ಇಲ್ಲದೆಯೇ ಬಂದ ಪಂಡಿತ ಜವಾಹರಲಾಲ್ ನೆಹರೂರವರನ್ನು ನಮ್ಮ ಸ್ವಯಂಸೇವಕರು ತಡೆದರು. ಮದ್ರಾಸಿನ ಸ್ವಾಗತ ಸಮಿತಿಯ ಮುಖಂಡರು ಧಾವಿಸಿಬಂದು ಸ್ವಯಂಸೇವಕರನ್ನು ದಂಡಿಸಿದರು. ಆದರೆ ಜವಾಹರಲಾಲ್ ನೆಹರೂರವರು ಆ ಸ್ವಯಂಸೇವಕರನ್ನು ಪ್ರಶಂಸಿಸಿದರು. ಬ್ಯಾಡ್ಜ್ ಇಲ್ಲದೇ ಬಂದುದು ತಮ್ಮದೇ ತಪ್ಪೆಂದರು. ಈ ಅಧಿವೇಶನದಲ್ಲಿ ನಾನು ದಸ್ತಾನಾಯಕನಾಗಿದ್ದ ಅಭಿಮನ್ಯುದಸ್ತಾ ಪ್ರಶಂಸೆಗೆ ಪಾತ್ರವಾಯಿತು. ಅಮೃತೂರು ವೆಂಕಟರಾಮಯ್ಯ, ಪಿ. ಶಂಕರನಾರಾಯಣ, ತಾತಾಚಾರ್, ದಯಾನಂದರಾಜು, ಕೆ. ಜಿ. ಕೃಷ್ಣಮೂರ್ತಿ, ಎಂ. ಎಲ್. ನರಸಿಂಹಮೂರ್ತಿ, ಎಚ್. ಕೇಶವಮೂರ್ತಿ ಆಗ ನಮ್ಮಲ್ಲಿಂದ ಹೋದ ಇತರ ದಸ್ತಾನಾಯಕರು.

ಹೊಸಕೊಪ್ಪ ಕೃಷ್ಣರಾಯರು ಮುಂತಾದವರ ಶ್ರಮದಿಂದ ಶಿವಮೊಗ್ಗ ಜಿಲ್ಲಾ ತೀರ್ಥಹಳ್ಳಿಯಲ್ಲಿ ಸೇವಾದಳದ ಪರಶುರಾಮ ಸ್ವಯಂಸೇವಕ ಶಿಕ್ಷಣ ಶಿಬಿರವು 1928ರ ಬೇಸಿಗೆಯಲ್ಲಿ ನಡೆಯಿತು. ಶಿಕ್ಷಣಾರ್ಥಿಯಾಗಿ ಶಿಕ್ಷಣ ಪಡೆಯುವ ಅವಕಾಶದೊಂದಿಗೆ ಸ್ಥಳೀಯರಿಗೆ ತರಗತಿಗಳನ್ನು ನಡೆಸಲು ನಾನೊಬ್ಬ ಶಿಕ್ಷಕನಾಗಿ ಕೆಲಸಮಾಡುವ ಅವಕಾಶ ದೊರೆಯಿತು. ಕೆ. ಎ. ವೆಂಕಟರಾಮಯ್ಯನವರು ಶಿಬಿರಾಧಿಪತಿಗಳು. ಮಹಾರಾಷ್ಟ್ರದ ಮಂತ್ರಿಯವರು ಮುಖ್ಯ ಶಿಕ್ಷಕರು. ಅಲ್ಲಿ ನಾನು ಪಡೆದ ಹೊಸ ಶಿಕ್ಷಣ 'ಮಲ್ಲಕಂಭ' ವ್ಯಾಯಾಮ.

1929ರಲ್ಲಿ ತುಮಕೂರಿನ ಪ್ರಮುಖರಾದ ಕೆ. ರಂಗೈಂಗಾರ್, ಟಿ. ಸುಬ್ರಹ್ಮಣ್ಯಂ ಮತ್ತು ಸೆಟ್ಲೂರ ಸೇವಾದಳದ ಶಿಕ್ಷಣ ಶಿಬಿರವೊಂದನ್ನು ನಡೆಯಿಸಿದರು. ನಾನು ಅಲ್ಲಿ ಒಬ್ಬ ಶಿಕ್ಷಕ. ಶಿಬಿರಕ್ಕೆ ದೇಶದ ನಾನಾ ಭಾಗಗಳಿಂದ ಯುವಕರು ಶಿಕ್ಷಣ ಪಡೆಯಲು ಬಂದಿದ್ದರು. ಡಾ|| ಹರ್ಡೀಕರ (ಹಿಂದೂಸ್ಥಾನೀ ಸೇವಾದಳದ ಕಾರ್ಯದರ್ಶಿ) ಈ ಶಿಬಿರದ ಮೇಲ್ವಿಚಾರಣೆ ನಡೆಸುತ್ತಿದ್ದರು. ನಾನು ಮುಖ್ಯ ಶಿಕ್ಷಕನಾಗಿ ಕೆಲಸಮಾಡುತ್ತಿದ್ದುದರಿಂದ ಅದರ ಮಾರ್ಗದರ್ಶನ ಪಡೆಯಲು ಸದವಕಾಶ ದೊರೆಯಿತು. 1929ನೇ ಮೇ ತಿಂಗಳ ಕೊನೆಯ ಭಾನುವಾರ ಚಿತ್ರದುರ್ಗದಲ್ಲಿ ಮೊದಲ ಸಲ ಸೇವಾದಳದ

ಮತ್ತೊಬ್ಬ ಕಾರ್ಯಕರ್ತರೊಂದಿಗೆ ಧ್ವಜವಂದನಾ ಕಾರ್ಯಕ್ರಮ ಏರ್ಪಡಿಸಲಾಯಿತು. ಪ್ರತಿಬಂಧಕಾಜ್ಞೆ ಜಾರಿಯಾಯಿತು. ಆಗಲೇ ಪೋಲೀಸರ ಪಟ್ಟಿಯಲ್ಲಿ ದಾಖಲಾದೆವು.

ಲಾಹೋರಿನಲ್ಲಿ ನಡೆದ ಕಾಂಗ್ರೆಸ್‌ನ ಠರಾವಿನಂತೆ 1930ರ ಜನವರಿ 26ರಂದು ಬೆಂಗಳೂರಿನ ಸಂಪಿಗೆ ವೆಂಕಟಪತಯ್ಯನವರ ಮನೆ ಆವರಣದಲ್ಲಿ ನಡೆದ ಧ್ವಜವಂದನಾ ಕಾರ್ಯಕ್ರಮದಲ್ಲಿ ನಾನು ಹಾಜರಿದ್ದೆ. ದೇಶೀಯ ವಿದ್ಯಾಶಾಲೆಯಲ್ಲೂ ಜನವರಿ 30ಕ್ಕೆ ಧ್ವಜ ಹಾರಿಸಲಾಯಿತು.

ಉಪ್ಪಿನ ಸತ್ಯಾಗ್ರಹ ಕಾಲಕ್ಕೆ ಕಾಲೇಜ್ ವಿದ್ಯಾಭ್ಯಾಸವನ್ನು ತೊರೆದು ನಾನೂ ಸೇರಿದೆನು. ಹುಬ್ಬಳ್ಳಿಯಲ್ಲಿ ನಡೆಯುತ್ತಿದ್ದ ಕರ್ನಾಟಕ ಸತ್ಯಾಗ್ರಹಿಗಳ ಶಿಕ್ಷಣ ಶಿಬಿರದ ಅಧಿಪತಿಯಾಗಿ ಕೆಲವು ತಿಂಗಳು ಶಿಕ್ಷಣ ಕೊಡುತ್ತಿದ್ದೆನು. ಕಾರವಾರ ಜಿಲ್ಲೆಯ ಶಿರಸಿಯಲ್ಲಿ ಅರಣ್ಯಸತ್ಯಾಗ್ರಹ ಮಾಡಲು ಮುಖಂಡರು ತೀರ್ಮಾನಿಸಿದರು. ಅಲ್ಲಿಯೂ ಸತ್ಯಾಗ್ರಹಿಗಳಿಗೆ ಶಿಕ್ಷಣ ಕೊಡಲು ಒಂದು ಶಿಬಿರವು ಪ್ರಾರಂಭವಾಯಿತು. ಅದರ ಜವಾಬ್ದಾರಿ ನನ್ನ ಮೇಲಿತ್ತು. ಕರನಿರಾಕರಣ ಆರಂಭ ಆದಾಗ ಶಿರಸಿ ತಾಲ್ಲೂಕಿನಲ್ಲಿ ಪಟೇಲ್, ಶ್ಯಾನುಭೋಗರು ತಮ್ಮ ಕೆಲಸಕ್ಕೆ ರಾಜೀನಾಮೆಯಿತ್ತು ಸರ್ಕಾರದೊಂದಿಗೆ ಅಸಹಕಾರಮಾಡಲು ಪ್ರಚಾರಕಾರ್ಯವನ್ನು ಕೈಗೊಂಡೆವು. ಹುಬ್ಬಳ್ಳಿಯ ವೆಂಕಟೇಶ ಮಾಗಡಿಯವರು ನನ್ನ ಜೊತೆಗಾರರು. ನಾವಿಬ್ಬರೂ ಸುಮಾರು ಮೂವತ್ತು ಜನ ಪಟೇಲರ ರಾಜೀನಾಮೆಯನ್ನು ಪಡೆದೆವು. ಮೋಟಿನಸರ ಹೆಗಡೆ, ವಾ. ಅ. ಹೊದಿಕೆ, ಗೋಪಾಲ ಮಡಗಾಂವಕರ ಈ ಕಾರ್ಯದಲ್ಲಿ ನೆರವಾದರು.

ಸತ್ಯಾಗ್ರಹಕ್ಕೆ ಸೇರುವಾಗ ನಾನು ದೇಶಸೇವೆ ಮಾಡಲು ಪಣತೊಟ್ಟೆನು. ಆದುದರಿಂದ ಸತ್ಯಾಗ್ರಹವು ನಿಂತಮೇಲೆ ಸೇವಾದಳದ ಕಾರ್ಯದಲ್ಲಿ ತೊಡಗಿದೆನು. ಬೆಳಗಾಂವಲ್ಲೊಂದು ಶಿಬಿರ ನಡೆಯಿಸಿದೆನು. ಅಲ್ಲಿಂದ ಉತ್ತರ ಪ್ರದೇಶದ ಝಾನ್ಸಿಯಲ್ಲೊಂದು ಶಿಬಿರ ನಡೆಯಿತು. ಅಲ್ಲಿ ನಾನು ಮುಖ್ಯಶಿಕ್ಷಕನಾಗಿ ಕೆಲಸಮಾಡಿದೆನು. ಅಲಹಾಬಾದಿನಲ್ಲಿ ಸ್ಥಳೀಯ ಸೇವಾದಳ ಶಾಖೆಯನ್ನು ಸಂಘಟಿಸಿದೆನು. ಕಾಶಿಯಲ್ಲಿ ಒಂದು ಸೇವಾದಳದ ಸೈನಿಕ ಶಿಬಿರ ಅನಂತರ ಅಧಿಕಾರಿಗಳ ಶಿಬಿರಕ್ಕೆ ಅಧಿಪತಿಯಾಗಿ ಕೆಲಸಮಾಡಿದೆನು. ಉತ್ತರಪ್ರದೇಶದ ರಾಜಕೀಯ ಸಮ್ಮೇಳನದ ವ್ಯವಸ್ಥೆಗಾಗಿ ಸ್ವಯಂ ಸೇವಕರನ್ನು ತರಬೇತುಮಾಡಲು ಇಟಾವಾದಲ್ಲಿ ಒಂದು ಶಿಬಿರವನ್ನು ನಡೆಯಿಸಿದೆವು. ಮಹಾತ್ಮಾಗಾಂಧಿಯವರು ದುಂಡುಮೇಜಿನ ಪರಿಷತ್ತಿನಿಂದ ಹಿಂತಿರುಗುತ್ತಲೇ ಸತ್ಯಾಗ್ರಹ ಪುನಃ ಪ್ರಾರಂಭವಾಯಿತು. ನನ್ನನ್ನು ಆಗ ಇಟಾವಾದಿಂದ ಗಡೀಪಾರು ಮಾಡಿದರು. ಮುಂಬೈಗೆ ಬಂದು ಸತ್ಯಾಗ್ರಹ ಚಳವಳಿಯಲ್ಲಿ ಭಾಗವಹಿಸಿದೆ. ಹದಿನೈದು ತಿಂಗಳುಗಳ ಕಾರಾಗಾರವಾಸವನ್ನು ಅಹಮದ್‌ನಗರ ಜಿಲ್ಲೆಯ ವಿಸಾಪುರದಲ್ಲಿ ಅನುಭವಿಸಿದೆ. ಕರ್ನಾಟಕದ ಅಂಕೋಲಾ ಕರನಿರಾಕರಣೆ ಚಳವಳಿಯ ಮುಖಂಡರಾದ ದತ್ತಾತ್ರಯ ಕಮರಕರವರು ಜೈಲಿನಲ್ಲೂ ಸತ್ಯಾಗ್ರಹಿಗಳಿಗೆ ಕವಾಯತ್ ಶಿಕ್ಷಣ ಕೊಡಲು

ಏರ್ಪಡಿಸಿದ್ದರು. ನಮ್ಮ ಕವಾಯತ್ ತರಗತಿಗಳು ಕಾರಾಗೃಹದ ಸೂಪರಿಂಟೆಂಡೆಂಟ್‌ರ ಮೆಚ್ಚಿಗೆಗೆ ಸಹ ಪಾತ್ರವಾಯಿತು.

1933ರಲ್ಲಿ ಜೈಲಿನಿಂದ ಬಿಡುಗಡೆಯಾಗಿ ಬಂದವನು ಶಿವಮೊಗ್ಗೆಯಲ್ಲಿ ಬಾಲಕಾಶ್ರಮ ನಡೆಯಿಸಿದೆ. ಕಾರವಾರ ಜಿಲ್ಲೆಯಲ್ಲಿ ನಡೆದ ಕರನಿರಾಕರಣೆ ಚಳವಳಿಯಲ್ಲಿ ಭಾಗ ವಹಿಸಿದವರ ಮಕ್ಕಳ ಪೋಷಣೆಗಾಗಿ ನಡೆಯಿಸಿದ ಆಶ್ರಮವಿದು. ಇದರ ಸಂಚಾಲಕರು ಕೆ. ಎ. ವೆಂಕಟರಾಮಯ್ಯ, ಭೂಪಾಲಂ ಚಂದ್ರಶೇಖರಯ್ಯ, ದೇವಂಗಿ ಮಾನಪ್ಪ, ಮಳೂರು ಸುಬ್ಬರಾವ್, ಚೆನ್ನಗಿರಿ ಸೋಮಣ್ಣ ಶೆಟ್ಟಿ, ಪಾರ್ಥನಾರಾಯಣ ಪಂಡಿತ್, ಮಾತಂಡ್, ತಮ್ಮಯ್ಯ, ಗೌರಮ್ಮ, ಕಾವೇರಮ್ಮ ಹಾಗೂ ನಾನು. ಶಿವಮೊಗ್ಗ, ಭದ್ರಾವತಿಗಳಿಂದ ಧಾನ್ಯ, ಹಣ ಸಂಗ್ರಹ ಆಗುತ್ತಿತ್ತು. ಕಾರ್ನಾಡರು, ಗುಲವಾಡಿ, ಕರಮರಕರ ಮುಂಬೈಯಿಂದ ಸಹಾಯ ಒದಗಿಸುತ್ತಿದ್ದರು. 1935ರಲ್ಲಿ ಸ್ವಂತ ಊರಾದ ಚಿತ್ರದುರ್ಗಕ್ಕೆ ಹಿಂತಿರುಗಿ ಖಾದೀಪ್ರಚಾರದ ಸಲುವಾಗಿ ಖಾದಿ ಅಂಗಡಿಯೊಂದನ್ನು ಪ್ರಾರಂಭಿಸಿದೆ. ಹಿಂದೂಸ್ಥಾನೀ ಸೇವಾದಳವು ಆಗ ವಿಸರ್ಜಿತವಾಗಿತ್ತು. ಆಗ ಹರಿಹರ ಗುಂಡೂರಾವ್, ಹುಲ್ಲೂರು ಶ್ರೀನಿವಾಸ ಜೋಯಿಸ್, ಎಸ್. ರಂಗರಾವ್, ಎಂ. ಆನಂದಮೂರ್ತಿ ಕಾಂಗ್ರೆಸ್ ಕೆಲಸ ಮಾಡುತ್ತಿದ್ದರು.

1935ರಲ್ಲಿ ಕಾಂಗ್ರೆಸ್ ಸುವರ್ಣ ಮಹೋತ್ಸವವನ್ನು ಚಿತ್ರದುರ್ಗದಲ್ಲಿ ಆಚರಿಸಿದೆವು. ನಾನು ಕಾಂಗ್ರೆಸ್ ಸಂಸ್ಥೆಯ ಸಂಘಟನೆಯಲ್ಲಿ ತೊಡಗಿದೆ. 1936ರಲ್ಲಿ ಚಿ|| ಜಿ|| ಕಾಂ|| ಸಮಿತಿಯನ್ನು ಕೊಟ್ರಿ ನಂಜಪ್ಪನವರು ದಾವಣಗೆರೆಯಲ್ಲಿ ಆರಂಭಿಸಿದರು. ಮುಂದೆ ಅದರ ಕಾರ್ಯಾಲಯ ಚಿತ್ರದುರ್ಗಕ್ಕೆ ಬಂತು. ಎಸ್. ನಿಜಲಿಂಗಪ್ಪ ಅಧ್ಯಕ್ಷರು. ಕೊಟ್ರಿ ಮತ್ತು ನಾನು ಕಾರ್ಯದರ್ಶಿಗಳು. 1936ರಿಂದ 1951ರ ವರೆಗೆ ಜಿಲ್ಲಾ ಕಾಂಗ್ರೆಸ್ ಕಾರ್ಯದರ್ಶಿಯಾಗಿ 1951ರಲ್ಲಿ ಅದರ ಅಧ್ಯಕ್ಷನಾಗಿ ಎರಡು ವರ್ಷ ಕೆಲಸ ಮಾಡಿದೆನು. 1938ರಲ್ಲಿ ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿದೆನು. ಇದರಲ್ಲಿ ಪಾಲುಗೊಂಡ ಇತರರು: ಕೊಟ್ರಿ, ಎಂ. ಗೋವಿಂದ ರೆಡ್ಡಿ, ರಾಮಗಿರಿ ಹನುಮಂತಪ್ಪ, ಶ್ರೀನಿವಾಸಮೂರ್ತಿ ಆಚಾರ್. 1939ರಲ್ಲಿ ಅರಣ್ಯಸತ್ಯಾಗ್ರಹ (ಈಚಲಮರ ಕಡಿಯುವುದು), 1942ರಲ್ಲಿ ಕ್ವಿಟ್ ಇಂಡಿಯಾ ಚಳವಳಿ, 1947ರಲ್ಲಿ ಮೈಸೂರು ಜವಾಬ್ದಾರಿ ಸರ್ಕಾರದ ಚಳವಳಿಗಳಲ್ಲಿ ಭಾಗವಹಿಸಿ ಕಾರಾಗಾರವಾಸವನ್ನು ಅನುಭವಿಸಿದೆ.

1933ರಲ್ಲಿ ಹಿಂದೂಸ್ಥಾನೀ ಸೇವಾದಳವು ವಿಸರ್ಜಿಸಲ್ಪಟ್ಟ ಅನಂತರ ರಾಷ್ಟ್ರೀಯ ಸೇವಾದಳ ಮುಂತಾದ ನಾನಾ ಹೆಸರುಗಳಿಂದ ಸ್ಥಳೀಯವಾಗಿ ಸೇವಾದಳದ ಮುಖಾಂತರ ಯುವಕರ ಸಂಘಟನೆಯಾಗುತ್ತಿತ್ತು. 1947ರಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾದ ಅನಂತರ ಮೈಸೂರಿನಲ್ಲಿ ಭಾರತ ಸೇವಾದಳದ ಸ್ಥಾಪನೆ ಮತ್ತು ಸಂಘಟನೆಯಲ್ಲಿ ತೊಡಗಿದೆನು. ದೇಶ ರಾಜಕೀಯವಾಗಿ ಸ್ವತಂತ್ರವಾದ ಅನಂತರ ಆರ್ಥಿಕ-ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸರ್ವೋದಯ ಕಾರ್ಯಕರ್ತನಾಗಿರುವೆ,

ಪ್ರ.ಚಿ. 2

# ಎಸ್. ನಿಜಲಿಂಗಪ್ಪ

ಜನನ : 1902 ಉದ್ಯೋಗ : ವಕೀಲ ವಿಳಾಸ : ವೆಂಕಟೇಶಪುರ ಬಡಾವಣೆ, ಚಿತ್ರದುರ್ಗ



ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕು ಹಲವಾಗಲು ಗ್ರಾಮದಲ್ಲಿ ಹುಟ್ಟಿದವನಾದ ನಾನು ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡೆನಾದರೂ ನನ್ನ ಧೀರೆ ತಾಯಿಯಿಂದ ಬೆಳೆಸಲ್ಪಟ್ಟೆ. ನನ್ನ ಅಬಚಿಯ ಗಂಡ ಶಿಕ್ಷಣಕ್ಕಾಗಿ ನನ್ನನ್ನು ದಾವಣಗೆರೆಗೆ ಕರೆದು ತಂದರು. 1915ರಲ್ಲಿ ಲೋವರ್ ಸೆಕೆಂಡರಿ ಮುಗಿಸಿ, ಮುಂದೆ ಚಿತ್ರದುರ್ಗದಲ್ಲಿ ಶಿಕ್ಷಣ ಮುಂದುವರಿಸುತ್ತಿದ್ದಾಗ, ಅನಿಬೆಸೆಂಟರ ಬರಹಗಳಿಂದ ಪ್ರಭಾವಿತನಾದೆ. 'ನ್ಯೂ ಇಂಡಿಯಾ' ಪತ್ರಿಕೆಯನ್ನು ತರಿಸಿ ಸತತವಾಗಿ ಓದುತ್ತಿದ್ದೆ. 1920ರಲ್ಲಿ ಎಂಟ್ರೆನ್ಸ್ ಪರೀಕ್ಷೆ ಪಾಸಾಗಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ, ಬೆಂಗಳೂರಲ್ಲಿ ನಡೆಯುತ್ತಿದ್ದ ರಾಷ್ಟ್ರೀಯ ಚಟುವಟಿಕೆಗಳು ನನ್ನ ಮೇಲೆ ಇನ್ನಷ್ಟು ಪ್ರಭಾವ ಬೀರಿದವು. 1923ರಿಂದಲೇ ಖಾದಿ ಧರಿಸಲಾರಂಭಿಸಿದೆ. 1920ರಲ್ಲಿ ಗಾಂಧೀಜೀ ಅಲಿ ಸೋದರರ ಜೊತೆ ಬೆಂಗಳೂರಿಗೆ ಬಂದಿರಲು ಕಂಟೋನ್‌ಮೆಂಟ್ ಪ್ರದೇಶದಲ್ಲಿ ಮಳೆಯಲ್ಲಿ ನಡೆದ ಸಭೆಗೆ ಹೋಗಿದ್ದೆ. 1921ರಲ್ಲಿಯೇ ನಾನು ನಾಲ್ಕಾಣೆ ಕಾಂಗ್ರೆಸ್ ಸದಸ್ಯನಾದೆ. ನಿಟ್ಟೂರು ಶ್ರೀನಿವಾಸರಾಯರು ಆಗ ನನ್ನ ಸಹಪಾಠಿಗಳು. ಪದವೀಧರನಾದಾಗ ಪುಣೆಗೆ ಕಾನೂನು ಶಿಕ್ಷಣಕ್ಕೆ ಹೋದವನು 1924ರಲ್ಲಿ ಬೆಳಗಾವಿ ಕಾಂಗ್ರೆಸ್ಸಿಗೆ ಬಂದಿದ್ದೆ.

ಬೆಳಗಾವಿ ಕಾಂಗ್ರೆಸ್ಸಿನ ಭವ್ಯತೆಯ ಚಿತ್ರಗಳು ಈಗಲೂ ಕಣ್ಣು ಕಟ್ಟಿದಂತೆ ನನ್ನ ಮುಂದೆ ಇವೆ. ಅಲ್ಲಿ ಮಾಳವೀಯಜೀ ಮಾಡಿದ ಭಾಷಣ ಅತ್ಯಂತ ಪ್ರಭಾವಿಯಾದುದು; ಸ್ವಾಮಿ ಶ್ರದ್ಧಾನಂದರ ವ್ಯಕ್ತಿತ್ವವೂ ನನ್ನ ಮೇಲೆ ಅಪಾರ ಪ್ರಭಾವ ಬೀರಿತು. ಬೆಳಗಾವಿ ಕಾಂಗ್ರೆಸ್‌ನ ವಾತಾವರಣ ನನ್ನ ಮೇಲೆ ಚಿರವಾದ ಪರಿಣಾಮ ಉಂಟುಮಾಡಿತು.

1926ರಲ್ಲಿ ಚಿತ್ರದುರ್ಗಕ್ಕೆ ಬಂದು ನನ್ನ ವಕೀಲಿ ವೃತ್ತಿ ಆರಂಭಿಸಿ ಶೀಘ್ರ ಯಶಸ್ಸು ಗಳಿಸಿದೆ. 1930ರ ಚಳವಳಿ ಕಾಲದಲ್ಲಿ ಅಂಕೋಲ, ಸಿದ್ದಾಪುರ ಚಳವಳಿಗೆ

ನೆರವಾಗಲು ಸಾಧ್ಯವಿದ್ದಷ್ಟು ಹಣ ಸಂಗ್ರಹಿಸಿ ಕಳುಹಿಸುತ್ತಿದ್ದೆವು. 1930ರಿಂದಲೇ ಪ್ರತಿ ಶನಿವಾರ ಕೆಲವು ಮಿತ್ರರು ಸೇರಿ ಚಿತ್ರದುರ್ಗದಲ್ಲಿ ರಾಷ್ಟ್ರಧ್ವಜವಂದನೆ ನಡೆಸುತ್ತಿದ್ದೆವು. ಸರ್ಕಾರದವರು ಈ ಬಗ್ಗೆ ಏನೂ ಕ್ರಮ ಕೈಗೊಳ್ಳಲಿಲ್ಲ. ಆಗ ಡೆಪ್ಯೂಟಿ ಕಮಿಷನರ್ ಆಗಿದ್ದವರು "ನಿಮ್ಮನ್ನು ಬಂಧಿಸಿದರೆ ನೀವು ವೃಥಾ ದೊಡ್ಡವರಾಗುತ್ತೀರಿ" ಎನ್ನುತ್ತಿದ್ದರು.

1936ರಲ್ಲಿ ನಮ್ಮಲ್ಲಿ ಡಿ.ಸಿ.ಸಿ. ಸ್ಥಾಪಿಸಿದಾಗ ನಾನು ಅಧ್ಯಕ್ಷ ಹಾಗೂ ಎಸ್. ವಾಸುದೇವರಾವ್ ಕಾರ್ಯದರ್ಶಿಯಾದರು. ಅದೇ ವರ್ಷದಲ್ಲಿ ಡಾ|| ಹರ್ಡೀಕರರು ಬಂದಾಗ ಜಿಲ್ಲೆಯ ಎಲ್ಲೆಡೆ ಯಶಸ್ವಿ ಪ್ರಚಾರ ಪ್ರವಾಸ ಮಾಡಿ ರಾಷ್ಟ್ರೀಯ ಜಾಗೃತಿ ಮಾಡಿದೆವು. ಚಳ್ಳಕೆರೆ, ಮೊಳಕಾಲ್ಮುರು, ಜಗಳೂರು, ಹಿರಿಯೂರು, ಹೊಸದುರ್ಗಗಳಿಗೆಲ್ಲ ಹೋಗಿದ್ದೆವು. 1937ರ ಚುನಾವಣೆಯ ಕಾಲಕ್ಕೆ ಪ್ರಜಾಪಕ್ಷದಿಂದ ಕೌನ್ಸಿಲ್ ಚುನಾವಣೆಗೆ ಡಿ. ಎಚ್. ಚಂದ್ರಶೇಖರಯ್ಯ ನಿಂತಾಗ, ನಾನು ಅವರಿಗೆ ಬೆಂಬಲ ನೀಡುವುದಾಗಿ ಮಾತುಕೊಟ್ಟೆ. ನಾನು ಎಂದೂ ಪ್ರಜಾಪಕ್ಷದಲ್ಲಿ ಇದ್ದವನಲ್ಲವಾದರೂ ಸ್ನೇಹದಿಂದ ಹಾಗೆ ಮಾಡಿದ್ದೆ. ನನ್ನ ಇಚ್ಛೆಗೆ ವಿರುದ್ಧ ಕಾಂಗ್ರೆಸ್ ಅಭ್ಯರ್ಥಿಯನ್ನು ನಿಲ್ಲಿಸಿದರು. ಕಡೆಗೆ ಚಂದ್ರಶೇಖರಯ್ಯನವರೇ ಗೆದ್ದರು. ಆದರೆ ನಾನೇನೂ ಕಾಂಗ್ರೆಸ್ ಬಿಡಲಿಲ್ಲ. 1937ರಲ್ಲಿ ಚಿತ್ರದುರ್ಗದಲ್ಲಿ ಮೈಸೂರು ಕಾಂಗ್ರೆಸ್‌ನ ಪ್ರಥಮ ಕನ್ವೆನ್‌ಶನ್ ಅನಂತಯ್ಯ ಶೆಟ್ಟಿ ಹಾಸ್ಟೆಲ್‌ನಲ್ಲಿ ಸೇರಿತು. ಕೆ. ಸಿ. ರೆಡ್ಡಿ ಅಧ್ಯಕ್ಷರು. ಅಂದಿನಿಂದಲೇ ಕಾಂಗ್ರೆಸ್‌ನ ಪ್ರಚಾರ ಬಲವಾಗಿ ಸಾಗಿತು. ಧಾರವಾಡ ಜಿಲ್ಲೆಯ ಸಂಪರ್ಕದಿಂದಲೂ ಜನರಲ್ಲಿ ಭಾರಿ ರಾಷ್ಟ್ರೀಯ ಜಾಗೃತಿ ಉಂಟಾಯಿತು.

ಮುಂದೆ 1939ರಲ್ಲಿ, ಮೊದಲ ಬಾರಿ ನಾವು (ಅಂದರೆ ಚಿತ್ರದುರ್ಗದ ಡಿ.ಸಿ.ಸಿ.) ಕಾನೂನು ಮುರಿಯಲು ನಿರ್ಣಯ ಮಾಡಿದೆವು. ಅದಕ್ಕನುಸಾರವಾಗಿ ಅರಣ್ಯ ಸತ್ಯಾಗ್ರಹ ಮಾಡಲು ನಿರ್ಣಯಿಸಿ ಚಿತ್ರದುರ್ಗ ತಾಲ್ಲೂಕು ತುರುವನೂರಿನಲ್ಲಿ ಈಚಲ ಮರ ಕಡಿಯುವ ಅರಣ್ಯಸತ್ಯಾಗ್ರಹವನ್ನು ಪ್ರಾರಂಭಿಸಿದೆವು. ನಿತ್ಯ 5–10 ಜನರಂತೆ ಸತ್ಯಾಗ್ರಹ ಮಾಡುವ ನಿರ್ಣಯ ಮಾಡಿ ಅದರಂತೆ ಮೊದಲ ತಂಡದಲ್ಲಿ ಪಾಲ್ಗೊಂಡೆ. ನನ್ನ ಜೊತೆ ರಾಜಶೇಖರಯ್ಯ ಹಿರೇಮಠ, ಎಸ್. ವಾಸುದೇವರಾವ್, ಬಳ್ಳಾರಿ ಸಿದ್ದಮ್ಮ, ನಾಗರತ್ನಮ್ಮ ಹಿರೇಮಠ, ತಿಪ್ಪಣ್ಣ, ರಾಮರೆಡ್ಡಿ ಇದ್ದರು. ಇದಲ್ಲದೆ ಕಾರ್ಯಕ್ರಮ ವೀಕ್ಷಣೆಗೆ ಬಂದಿದ್ದ ಪತ್ರಕರ್ತ ಚಂದೂರ್ ಅವರ ಬಂಧನ ಆಯಿತು. ಈ ಸತ್ಯಾಗ್ರಹ 15 ದಿನಕ್ಕೂ ಹೆಚ್ಚಾಗಿ ಸಾಗಿತು. ನನಗೆ 18 ತಿಂಗಳು ಶಿಕ್ಷೆ, 800 ರೂ. ದಂಡ ಆಯಿತು. ದಂಡ ವಸೂಲಿಗೆಂದು ನಮ್ಮ ಮನೆಗೆ ಪೋಲಿಸರು ಬಂದಿರಲು ಊರ ಹೆಂಗಸರೆಲ್ಲಾ ನನ್ನ ಮನೆಯ ಮುಂದೆ ಸೇರಿ ಪ್ರತಿಭಟನೆ ಸೂಚಿಸಿದ್ದರಂತೆ. ಸೆಪ್ಟಂಬರ್ 1940ರಲ್ಲಿ ಜಯಚಾಮರಾಜ ಒಡೆಯರ ಪಟ್ಟಬಂಧದ ಕಾಲಕ್ಕೆ ಒಂದು ವರ್ಷ ಶಿಕ್ಷೆಯನಂತರ ನನ್ನ ಬಿಡುಗಡೆ ಆಯಿತು. 1940ರಲ್ಲಿ ನಡೆದ ಚುನಾವಣೆಯಲ್ಲಿ ನಾವು ಚಿತ್ರದುರ್ಗದ

ಎಲ್ಲ ಸ್ಥಾನಗಳನ್ನೂ ಗೆದ್ದೆವು. ಇದು ಇಲ್ಲಿ ಕಾಂಗ್ರೆಸ್ಸಿನ ಮೊದಲ ಜಯ.

ಹರಿಹರದಲ್ಲಿ ನಡೆದ ರಾಜ್ಯ ಕಾಂಗ್ರೆಸ್ ಅಧಿವೇಶನಕ್ಕೆ ನಾನು ಸ್ವಾಗತ ಸಮಿತಿ ಅಧ್ಯಕ್ಷ. ರಾಜೇಂದ್ರ ಪ್ರಸಾದರು ಖಾದೀ ಪ್ರದರ್ಶನದ ಉದ್ಘಾಟನೆಗಾಗಿ ಬಂದಿದ್ದರು. ಅಧಿವೇಶನದ ಅನಂತರ ಅವರು ಸಂಸ್ಥಾನದಲ್ಲೆಲ್ಲ ಪ್ರಚಾರ ಪ್ರವಾಸ ಮಾಡಿದರು; ಎಚ್. ಸಿ. ದಾಸಪ್ಪ ಅವರ ಜೊತೆ ಹೋಗಿದ್ದರು. ಮುಂದೆ 1944ರಲ್ಲಿ ಶಿವಮೊಗ್ಗದಲ್ಲಿ ನಡೆದ ಮೈಸೂರು ಕಾಂಗ್ರೆಸ್ ಅಧಿವೇಶನದಲ್ಲಿ ನನ್ನನ್ನು ಮೈಸೂರು ಕಾಂಗ್ರೆಸ್ ಅಧ್ಯಕ್ಷನೆಂದು ಆರಿಸಿದರು.

1942ರಲ್ಲಿ ಎ.ಐ.ಸಿ.ಸಿ.ಯಿಂದ ಮರಳುತ್ತಿದ್ದಂತೆ ಯಶವಂತಪುರ ನಿಲ್ದಾಣದಲ್ಲೇ ಮಿತ್ರರ ಜೊತೆ ನನ್ನ ಬಂಧನ ಆಯಿತು. ಒಂಬತ್ತು ತಿಂಗಳು ಕೆ.ಜಿ.ಎಫ್. ಜೈಲಿನಲ್ಲಿ ಒಬ್ಬಂಟಿಗನಾಗಿದ್ದೆ. ಆಗ ನನಗೆ ತೀವ್ರ ಮಲೇರಿಯಾ ಆಗಿ, ಕ್ಷಯವಿರಬಹುದೆಂಬ ಶಂಕೆ ಮೂಡಿತ್ತು. ಜೈಲು ಡಾಕ್ಟರರು ನನ್ನ ಮೇಲೆ ಅನುಕಂಪ ತಳೆದು, "ನೀವು ಕ್ಷಮೆ ಕೇಳಿ ಏಕೆ ಮನೆಗೆ ಹೋಗಬಾರದು? ಏಕೆ ಈ ಎಲ್ಲಾ ತಾಪತ್ರಯ?" ಅಂದರು. ನಾನು ಮಾತ್ರ ಒಪ್ಪಲಿಲ್ಲ. ಮುಂದೆ ಅನೇಕ ದಿನಗಳವರೆಗೆ ಜ್ವರ ಬರುತ್ತಿತ್ತು. ಕೊನೆಗೆ ಬೆಂಗಳೂರು ಸೆಂಟ್ರಲ್ ಜೈಲಿಗೆ ಸ್ಥಳಾಂತರಿಸಿದರು. 1943ರ ಕೊನೆಯ ಹೊತ್ತಿಗೆ ಬಿಡುಗಡೆ ಆಯಿತು. 1946ರಲ್ಲಿ ಉತ್ತರ ಕರ್ನಾಟಕ ಭಾಗದಿಂದ ಸಂವಿಧಾನ ರಚನಾ ಸಭೆಗೆ ನಾನೂ ದಿವಾಕರರೂ ಆಯ್ಕೆಗೊಂಡೆವು. ಆಗ ನಾನು ಕೆ.ಪಿ.ಸಿ.ಸಿ. ಅಧ್ಯಕ್ಷನೂ ಆಗಿದ್ದೆ. 1947ರಲ್ಲಿ ಮೈಸೂರಿನಲ್ಲಿ ಚಳವಳಿ ನಡೆದ ಕಾಲಕ್ಕೆ ನಾನು ದೆಹಲಿಯಿಂದ ಮದ್ರಾಸಿಗೆ ಹೋಗಿ ಅಲ್ಲಿಂದ ಕೊಡಗಿನ ಮಾರ್ಗವಾಗಿ ಮೈಸೂರಿಗೆ ಬರುತ್ತಿರಲು ನನ್ನ ಬಂಧನ ಆಯಿತು. 15-20 ದಿನ ನನ್ನನ್ನು ಮೈಸೂರು ರೈಲ್ವೆ ಸ್ಟೇಷನ್ನಿನಲ್ಲಿಯೇ ಬಂಧನದಲ್ಲಿ ಇಟ್ಟಿದ್ದರು. ಆಗ ರೈಲ್ವೆ ನೌಕರರೂ ಮುಷ್ಕರ ಹೂಡಿದ್ದರಿಂದ ಸ್ಟೇಷನ್ ಬರಿದಾಗಿಯೇ ಇತ್ತು. ಅನಂತರ ಒಂದೆರಡು ವಾರ ಮೈಸೂರು ಜೈಲಿನಲ್ಲಿ ಇದ್ದೆ. ಅದೇ ಕಾಲಕ್ಕೆ ಹೊಸದುರ್ಗದಲ್ಲಿ ಗೋಳೀಬಾರಿನಲ್ಲಿ ಆರು ಜನ, ದಾವಣಗೆರೆಯಲ್ಲಿ 2-3 ಜನ ಮಡಿದರು. ಚಳವಳಿ ಕಾಲದಲ್ಲಿ ಎಲ್ಲೆಡೆ ಹರಡಿದ್ದ ಚಿಕ್ಕಪುಟ್ಟ ನಿಷ್ಠಾವಂತ ಕಾರ್ಯಕರ್ತರೇ ಕಾಂಗ್ರೆಸ್ಸಿನ ಬಲವಾಗಿದ್ದರು. ಚಿತ್ರದುರ್ಗದಲ್ಲಿ ಎಸ್. ವಾಸುದೇವರಾವ್ ಪ್ರಮುಖ (ಹಾಗೂ ಇಂದಿಗೂ ನಿಷ್ಠಾವಂತ ವಿಧಾಯಕ ಕಾರ್ಯಕರ್ತರಾಗಿರುವ) ವ್ಯಕ್ತಿಗಳು. ಇದಲ್ಲದೆ ರಾಮರೆಡ್ಡಿ, ಕೃಷ್ಣಾರೆಡ್ಡಿ, ಬಳ್ಳಾರಿ ಸಿದ್ದಮ್ಮ, ಕೊಟ್ರೆ ನಂಜಪ್ಪ, ಎ. ಎಸ್. ಶ್ರೀನಿವಾಸಮೂರ್ತಿ ಆಚಾರ್, ಭೀಮಪ್ಪ ನಾಯಕ್ ಪ್ರಮುಖರಾಗಿದ್ದವರು. ತುರುವನೂರಿನ ರೈತರನೇಕರಂತೂ ಭಾರಿ ತ್ಯಾಗ ಮಾಡಿದವರು. ಹೊಳಲ್ಕೆರೆಯ ಕೃಷ್ಣಮೂರ್ತಿ ಶೆಟ್ಟಿ ಎಂಬುವರು ಜಿಲ್ಲೆಯಲ್ಲೇ ಪ್ರಥಮ ಬಂಧಿತ ಸತ್ಯಾಗ್ರಹಿ. ತೀರ ಸಂಕ್ಷಿಪ್ತವಾಗಿ ಪ್ರಮುಖ ವಿಚಾರಗಳನ್ನು ಮಾತ್ರ ಇಲ್ಲಿ ಹೇಳಿದ್ದೇನೆ.

ವೈ.ಟಿ. 3

# ಎ. ಎಸ್. ಶ್ರೀನಿವಾಸಮೂರ್ತಿ ಆಚಾರ್

ಜನನ : 1914 ಉದ್ಯೋಗ : ಅರ್ಚಕ ವಿಳಾಸ : ಶ್ರೀ ರಾಘವೇಂದ್ರಸ್ವಾಮಿ ವೃಂದಾವನ ಸನ್ನಿಧಾನ, ಚಿತ್ರದುರ್ಗ

---



ನನ್ನ ಸೋದರಮಾವಂದಿರಾದ ಕೆ. ಕೃಷ್ಣರಾವ್, ಕೆ. ಭೀಮರಾವ್ ಬೆಂಗಳೂರು ನ್ಯಾಷನಲ್ ಹೈಸ್ಕೂಲಿನಲ್ಲಿ ಓದುತ್ತಿದ್ದರು. ಅವರಲ್ಲಿಗೆ ಶಿಕ್ಷಣಕ್ಕೆ ಹೋದ ನಾನು (1922) ಅವರ ಪ್ರಭಾವದಿಂದ ಖಾದಿ ಧರಿಸಲು ಆರಂಭಿಸಿದೆ. ಅಲ್ಲಿ ನಾನು ಸಂಸ್ಕೃತ ಕಾಲೇಜು ಸೇರಿದಾಗ (1923) ಪ್ರಿನ್ಸಿಪಾಲ್ ವೆಂಕಟರಮಣಯ್ಯ ಒಂದು ದಿನ 'ಜನನೀ ಜನ್ಮಭೂಮಿಶ್ಚ' ಶ್ಲೋಕ ಹೇಳಿಕೊಟ್ಟರು. ಆ ಶ್ಲೋಕದ ಅರ್ಥ ನನ್ನ ಮನಸ್ಸಿಗೆ ತಟ್ಟಿತು. ಈ ಕಾಲಕ್ಕೆ ಬೆಂಗಳೂರು ಗಾಂಧೀ ಮೈದಾನದಲ್ಲಿ ನಡೆಯುತ್ತಿದ್ದ ಸಭೆಗಳಿಗೆಲ್ಲ ಹೋಗುತ್ತಿದ್ದು ಸಂಪಿಗೆ ವೆಂಕಟಪತಯ್ಯ, ತಗಡೂರು, ತಾಳಕೆರೆ ಇವರೆಲ್ಲರುಗಳ ಭಾಷಣದಿಂದ ಪ್ರಭಾವಿತನಾದೆ. 1930ರಲ್ಲಿ ಮೈಸೂರಲ್ಲಿ ಸಂಸ್ಕೃತ ಶಿಕ್ಷಣಕ್ಕೆ ಹೋದಾಗಲೂ ಅಲ್ಲಿ ಸೀತಾವಿಲಾಸ ಛತ್ರದ ಎದುರಿನ ಮೈದಾನದಲ್ಲಿ ಕಾಂಗ್ರೆಸ್ಸಿನ ಸಭೆಗಳಾಗುತ್ತಿದ್ದು ಅಲ್ಲಿ ಅಗರಂ ರಂಗಯ್ಯ, ಎಂ. ಎನ್. ಜೋಯಿಸ್ ಇವರ ಭಾಷಣಗಳನ್ನು ಕೇಳಿದೆ. ನಾಲ್ಕು ವರ್ಷದ ಮೈಸೂರು ವಾಸವು ನನಗೆ ಒಳ್ಳೆಯ ರಾಷ್ಟ್ರೀಯ ವಾತಾವರಣವನ್ನು ಒದಗಿಸಿತು.

1934ರಲ್ಲಿ ಚಿತ್ರದುರ್ಗಕ್ಕೆ ಬಂದಾಗ ಇಲ್ಲಿಯೂ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಪಾಲುಗೊಂಡೆನು. ಎಸ್. ವಾಸುದೇವರಾಯರನ್ನು ಕರೆಸಿ (1935) ಇಲ್ಲಿ ಖಾದಿ ಸ್ಟೋರ್ ಸ್ಥಾಪಿಸಿದರು. ಅವರ ಸ್ನೇಹದಿಂದ ರಾಷ್ಟ್ರೀಯ ವೃತ್ತಿ ದೃಢವಾಯಿತು. ಆಗ ಕಾಂಗ್ರೆಸ್ ಸದಸ್ಯರನ್ನು ನೋಂದಾಯಿಸಿ ಟೌನ್ ಕಾಂಗ್ರೆಸ್ ಕಮಿಟಿ ಮಾಡಿದೆವು. ಎ. ಭೀಮಪ್ಪ ನಾಯಕರು ಅಧ್ಯಕ್ಷರು, ನಾನು ಕಾರ್ಯದರ್ಶಿ (ಈ ಹುದ್ದೆಯಲ್ಲಿ 1951ರ ತನಕ ಸತತವಾಗಿ ಮುಂದುವರಿದೆ). ಆಗಲೇ ಜನವಾಣಿ, ಸಂಯುಕ್ತ ಕರ್ನಾಟಕಗಳ ಏಜೆನ್ಸಿ ಪಡೆದು ವ್ಯಾಪಾರ ಆರಂಭಿಸಿದೆ. ಆದರೆ ಹಗಲುರಾತ್ರಿ ಕಾಂಗ್ರೆಸ್‌ನ ಕೆಲಸವೇ ಉದ್ಯೋಗ. ಎಸ್. ರಂಗರಾವ್, ಎಸ್. ವಾಸುದೇವರಾವ್, ಎಂ. ರಾಮರೆಡ್ಡಿ, ಕೃಷ್ಣರೆಡ್ಡಿ ಪಂಡಿತ್, ಭೀಮಪ್ಪ ನಾಯಕ್, ಚಿನ್ನಾರೆಡ್ಡಿ, ಕೊಟ್ರೆ ನಂಜಪ್ಪ ಇವರೆಲ್ಲರೂ

ಪ್ರಮುಖ ಕಾರ್ಯಕರ್ತರು. ಎಸ್. ನಿಜಲಿಂಗಪ್ಪನವರೂ ಇದೇ ಕಾಲದಲ್ಲಿ ಮುಂದೆ ಬಂದು 1936ರಲ್ಲಿ ಡಿ.ಸಿ.ಸಿ. ಅಧ್ಯಕ್ಷರಾದರು.

1937ರಲ್ಲಿ ಮೈಸೂರು ಕಾಂಗ್ರೆಸ್ ಕನ್ವೆನ್‌ಶನ್ ಈಗ ಸಿರಿಗೆರೆ ಮಠದ ಹಾಸ್ಟೆಲ್ ಇರುವಲ್ಲಿ ಕೆ. ಸಿ. ರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. 1938ರಲ್ಲಿ ಪಟ್ಟಾಭಿ ಸೀತಾರಾಮಯ್ಯ ಅವರು ಇಲ್ಲಿಗೆ ಬಂದಾಗ ಅವರ ಸ್ವಾಗತಕ್ಕೆ ನಿಂತ ನಮ್ಮ ಕೆಲವರ ಮೇಲೆ ಖಟ್ಲೆ ಹಾಕಿದ್ದರು. ಮುಂದೆ ಅದು ಬಿಟ್ಟುಹೋಯಿತು. ಲಿನ್‌ಲಿತ್‌ಗೋ ದಾವಣಗೆರೆಗೆ ಬಂದಾಗ ಅವರಿಗೆ ಕರೀ ನಿಶಾನಿ ತೋರಿಸಬೇಕೆಂದು ಇಲ್ಲಿಂದ ನಾನು, ಆನಂದಮೂರ್ತಿ ಮತ್ತು ಭೀಮಕುಮಾರ್ ಹೋಗಿದ್ದೆವು. ಅಲ್ಲಿ ನಮ್ಮ ಬಂಧನವಾಗಿ ಒಂದು ದಿನ ಇಟ್ಟುಕೊಂಡರು.

1939ರಲ್ಲಿ ಸೆಪ್ಟಂಬರ್ 3ಕ್ಕೆ ತುರುವನೂರಲ್ಲಿ ಜಂಗಲ್ ಸತ್ಯಾಗ್ರಹ ನಡೆಸುವ ಬಗ್ಗೆ ನಾನೇ ಬೆಂಗಳೂರಿಗೆ ಹೋಗಿ ಮೈಸೂರು ಕಾಂಗ್ರೆಸ್ಸಿನ ನಾಯಕರ ಅನುಮತಿಪಡೆದು ಬಂದಿದ್ದೆ. ಈ ಬಗ್ಗೆ ಬೆಂಗಳೂರಲ್ಲಿ ಸುಭಾಸ್ ನಗರದಲ್ಲಿ ಸಭೆ ನಡೆಸಿ ಸಾರ್ವಜನಿಕ ಘೋಷಣೆಯನ್ನು ಮಾಡಲಾಗಿತ್ತು. ತುರುವನೂರಲ್ಲಿ ನನ್ನ ಸಹಿತ 16 ಜನ ಸತ್ಯಾಗ್ರಹ ಮಾಡಿ ಬಂಧಿತರಾಗಲು, ಮುಂದೆ ಸೆಪ್ಟಂಬರ್ 29ಕ್ಕೆ ನಮಗೆ 18 ತಿಂಗಳು ಶಿಕ್ಷೆ 500 ರೂ. ದಂಡ ಆಯಿತು. ಈ ಸತ್ಯಾಗ್ರಹದಲ್ಲಿ ಶಿಕ್ಷೆಗೊಳಗಾದ ಎಸ್. ನಿಜಲಿಂಗಪ್ಪ ಮತ್ತು ಎಂ. ಗೋವಿಂದ ರೆಡ್ಡಿ ಇವರ ವಕೀಲಿ ಸನದನ್ನು ಕಸಿದುಕೊಂಡರು. ಆರಂಭದಲ್ಲಿ ಬೆಂಗಳೂರು ಜೈಲಿನಲ್ಲಿ ಇದ್ದ ನನ್ನನ್ನು ಮುಂದೆ 1940ರ ಫೆಬ್ರವರಿಯಲ್ಲಿ ತುಮಕೂರು ಜೈಲಿಗೆ ವರ್ಗಾಯಿಸಿದರು. ತುಮಕೂರಲ್ಲಿ ಆಗ ಎಂ. ಎನ್. ಸೀತಾರಾಮಯ್ಯ ನಮ್ಮ ಜೊತೆಗೆ ಇದ್ದರು. 10–9–1940ರಲ್ಲಿ ನಮ್ಮ ಬಿಡುಗಡೆ ಆಯಿತು. ಫೈಜಪುರ, ತ್ರಿಪುರಾ, ಹರಿಪುರ ಕಾಂಗ್ರೆಸ್ಸುಗಳಿಗೆಲ್ಲ ನಾವು 8–10 ಜನ ಹೋಗಿದ್ದೆವು. ನಾನು ಆಗ ಎ.ಎಂ.ಸಿ.ಸಿ. ಮತ್ತು ಕೆ.ಪಿ.ಸಿ.ಸಿ. ಸದಸ್ಯನೂ ಆಗಿದ್ದೆ.

1942ರಲ್ಲಿ ನಾನು ಚಳವಳಿಯಲ್ಲಿ ಪಾಲುಗೊಂಡರೂ ಬಂಧಿತನಾಗಲಿಲ್ಲ; ಬುಡಮೇಲು ಕೃತ್ಯಗಳಲ್ಲಿ ಪಾಲುಗೊಳ್ಳಲಿಲ್ಲ. ಚಳವಳಿಯ ಕೆಲಸಗಳಿಗಾಗಿ ಹಿಂದೂಪುರ, ಹುಬ್ಬಳ್ಳಿಗಳಿಗೂ ಹೋಗಿದ್ದೆ. ಜಿ. ನಾರಾಯಣರಾವ್, ಕೆ. ಎಚ್. ಸತ್ಯನಾರಾಯಣ ರಾವ್, ಎಸ್. ವಾಸುದೇವರಾವ್ ಆಗ ಬುಲೆಟಿನ್ ಹೊರಡಿಸುತ್ತಿದ್ದರು. 1947ರಲ್ಲಿ ಜಿಲ್ಲಾ ಕಚೇರಿ ಮುಂದೆ ಊರ ಪೈಲ್ವಾನರು ಕೂಡಿ ನಡೆಸಿದ ಉಗ್ರ ಪ್ರದರ್ಶನದ ಕಾಲಕ್ಕೆ ಗೋಳೀಬಾರು ಆದರೂ ಯಾರೂ ಸಾಯಲಿಲ್ಲ.

1951ರಲ್ಲಿ ನಾನು ಕಾಂಗ್ರೆಸ್ ತ್ಯಜಿಸಿ ಪಿ.ಎಸ್.ಪಿ. ಸೇರಿದೆ. 1953ರಿಂದ ಧಾರ್ಮಿಕ, ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ಮಗ್ನನಾಗಿದ್ದೇನೆ. 1969ರಿಂದ ಆಡಳಿತ ಕಾಂಗ್ರೆಸ್ ಸದಸ್ಯನಾಗಿದ್ದೇನೆ.

ಮೈ.ಚಿ. 4

# ಎಂ. ರಾಮರೆಡ್ಡಿ

ಜನನ : ? ಉದ್ಯೋಗ : ಕೃಷಿ ವಿಳಾಸ : ಚರ್ಚ್ ಬಡಾವಣೆ, ಚಿತ್ರದುರ್ಗ

---



ನಾವು ಮೂರು ಜನ ಸೋದರರೂ—ಹಿರಿಯನಾದ ನಾನು, ನನ್ನ ಹಿರಿಯ ತಮ್ಮ ಕೃಷ್ಣಾರೆಡ್ಡಿ ಪಂಡಿತ ಹಾಗೂ ಕಿರಿತಮ್ಮ ಎಂ. ಗೋವಿಂದರೆಡ್ಡಿ, ಮೈಸೂರು ಸತ್ಯಾಗ್ರಹಗಳಲ್ಲಿ ಭಾಗವಹಿಸಿ ಜೈಲುವಾಸವನ್ನು ಅನುಭವಿಸಿದವರು. 1937ರಿಂದಲೂ ಕಾಂಗ್ರೆಸ್‌ನಲ್ಲಿ ಕೆಲಸಮಾಡುತ್ತಿದ್ದ ನಾನು, ಆ ವರ್ಷ ಚಿತ್ರದುರ್ಗ ದಲ್ಲಿ ನಡೆದ ಮೈಸೂರು ಕಾಂಗ್ರೆಸ್ ಕನ್ವೆನ್‌ಶನ್‌ನಲ್ಲಿ ಪಾಲುಗೊಂಡಿದ್ದೆ. ಅಲ್ಲದೆ, ಶಿವಪುರ, ವಿದುರಾಶ್ವತ್ಥ ಕಾಂಗ್ರೆಸ್‌ಗಳಿಗೆ ಎ.ಎಂ.ಸಿ.ಸಿ. ಪ್ರತಿನಿಧಿಯಾಗಿ ತೆರಳಿದ್ದೆ. ಕಾಂಗ್ರೆಸ್ ಕಾರ್ಯಸಮಿತಿಯವರು ಕೆ.ಜಿ ಎಫ್.ನಲ್ಲಿ ಬಂಧಿತರಾಗಿ ಜೈಲು ಸೇರಿರಲು, ತುರುವನೂರಲ್ಲಿ ಈಚಲಮರ ಕಡಿದು ಜಂಗಲ್ ಸತ್ಯಾಗ್ರಹ ಮಾಡಲು ನಿರ್ಣಯಿಸಿದೆವು. ಆಗ ನಾನು ತುರುವನೂರಲ್ಲಿ ಗ್ರೂಪ್ ಕಾಂಗ್ರೆಸ್ ಕಮಿಟಿ ಸೆಕ್ರೆಟರಿ ಆಗಿದ್ದೆ. 3–9–1939ರಲ್ಲಿ ಸತ್ಯಾಗ್ರಹ ಮಾಡುವ ಮೊದಲು ಬಳ್ಳಾರಿ ಸಿದ್ದಮ್ಮ, ನಾಗರತ್ನಮ್ಮ ಹಿರೇಮಠ ಮತ್ತು ನಿಜಲಿಂಗಪ್ಪನವರು ಭಾಷಣಮಾಡಿದರು. ಸುಮಾರು 7–8 ಸಾವಿರ ಜನರು ಸೇರಿದ್ದರು. ಆ ದಿನ ಸತ್ಯಾಗ್ರಹಮಾಡಿ ಬಂಧಿತರಾದವರೆಂದರೆ ನಿಜಲಿಂಗಪ್ಪನವರು, ರಾಜಶೇಖರಯ್ಯ ಹಿರೇಮಠ, ಕೃಷ್ಣಾರೆಡ್ಡಿ ಪಂಡಿತ, ಪಿ. ಚೆನ್ನಾರೆಡ್ಡಿ, ರಾಮಗಿರಿ ಹನುಮಂತಪ್ಪ, ಎಸ್. ವಾಸುದೇವರಾವ್, ಶ್ರೀನಿವಾಸಮೂರ್ತಿ ಆಚಾರ್, ದುಮ್ಮಿ ಮುರಿಗಪ್ಪ, ನಾಗಪ್ಪ, ತಿಮ್ಮನಗೌಡರ ತಿಪ್ಪಣ್ಣ, ನಟೇಕಲ್ ಹನುಮಂತಪ್ಪ, ಎನ್. ಎನ್. ಚಂದೂರ್, ಬಳ್ಳಾರಿ ಸಿದ್ದಮ್ಮ, ನಾಗರತ್ನಮ್ಮ ಹಿರೇಮಠ ಹಾಗೂ ನಾನು ಹೀಗೆ 15 ಜನ. ನಮ್ಮ ಬಂಧನದನಂತರವೂ ಸತ್ಯಾಗ್ರಹ ನಡೆದು ಪೋಲಿಸರು ಜನರನ್ನು ಬಂಧಿಸಲಾಗದೆ ತಟಸ್ಥರಾಗಬೇಕಾಯಿತು. ಭಾಗ ವಹಿಸಿದವರನ್ನೆಲ್ಲ ಬಂಧಿಸಿದಲ್ಲಿ ಸೆಂಟ್ರಲ್ ಜೈಲು ಸಾಕಾಗುತ್ತಿರಲಿಲ್ಲ. ನಮ್ಮ ಖಟ್ಲೆಗಳು ಚಿತ್ರದುರ್ಗದಲ್ಲಿ 20 ದಿನ ನಡೆದು 18 ತಿಂಗಳ ಕಠಿಣ ಶಿಕ್ಷೆ, 500 ರೂ. ಜುಲ್ಮಾನೆ, ಜುಲ್ಮಾನೆ ಕೊಡಲು ತಪ್ಪಿದರೆ 6 ತಿಂಗಳ ಶಿಕ್ಷೆ ವಿಧಿಸಿದರು.

ಸತ್ಯಾಗ್ರಹ ಪ್ರತಿನಿತ್ಯ ನಡೆಯುತ್ತಿದ್ದು, ಕಡೆಗೆ ಗಡಿಗೆ ಕಟ್ಟಿದ ಈಚಲಮರಗಳನ್ನೂ ಕಡಿಯಲಾರಂಭಿಸಿದರು. ಕೊನೆಗೆ, ಒಬ್ಬ ಎಕ್ಸೈಜ್ ಜವಾನನ ಹಲ್ಲನ್ನು ಡಾಕ್ಟರರಿಂದ್ಲ ಕೀಳಿಸಿ, ಆಗಿನ ಮುಖ್ಯ ಕಾರ್ಯಕರ್ತರ ಮೇಲೆ ಈ ಬಗ್ಗೆ ಕೇಸು ಹಾಕಿಸಿದರು. ಸೆಶನ್ಸ್ ಕೋರ್ಟ್‌ನಲ್ಲಿ ಇವರುಗಳಿಗೆ ತಲಾ ಮೂರು ವರ್ಷಗಳ ಶಿಕ್ಷೆ ಆಯಿತು. ಹೀಗೆ ಶಿಕ್ಷೆಗೆ ಒಳಗಾದ ಕಾಂಗ್ರೆಸ್ ಕಾರ್ಯಕರ್ತರೆಂದರೆ, ಗೌಡರ ಜಡಿಯಪ್ಪ, ಸಾಣಿಕಂ ಗೋವಿಂದ ರೆಡ್ಡಿ, ಸಾನಿಕಂ ರಾಮಪ್ಪ, ಎಸ್. ಕೆ. ಹನುಮಂತ ರೆಡ್ಡಿ, ಮರಿಬಸಪ್ಪ, ಹರಿಹರದ ಎಂ. ಹನುಮಂತರಾವ್, ಕೋಳದಾಳು ಕಲ್ಲಪ್ಪ, ಬಸವರಾಜು, ಎಂ. ಹನುಮಂತಪ್ಪ. ಮುಂದೆ ಅಲ್ಲಿ ನಡೆದ ಸತ್ಯಾಗ್ರಹದಲ್ಲಿ ಶಿಕ್ಷೆಗೊಳಗಾದ ಇತರರೆಂದರೆ ಸಾದಾ ಕೃಷ್ಣರೆಡ್ಡಿ, ಮುರಡಪ್ಪ, ಎಸ್. ಸಂಜೀವ ರೆಡ್ಡಿ, ಸಾನಿಕಂ ವೀರಣ್ಣ, ಸಾನಿಕಂ ನಾರಾಯಣ ರೆಡ್ಡಿ, ಏಕಾಂತಪ್ಪ, ತಿಪ್ಪಣ್ಣ, ವಿರುಪಣ್ಣ, ಚಿನ್ನಮಲ್ಲಪ್ಪ, ಸಾನಿಕಂ ನಾರಾಯಣ ರೆಡ್ಡಿ, ಮುಲ್ಲಂಗಿ ಹನುಮಂತರೆಡ್ಡಿ, ಬುಡಾನ್‌ಸಾಬ, ತಿಮ್ಮನಗೌಡರ ಭೀಮಣ್ಣ, ಮುದ್ದೆ ಬಸಪ್ಪ, ಗಣೇಕಲ್ಲು ತಿಪ್ಪೇರುದ್ರಪ್ಪ ಮುಂತಾದ ಇನ್ನೂ ಅನೇಕರು. ಇವರಿಗೆಲ್ಲ ತಲಾ ಮೂರರಿಂದ ನಾಲ್ಕು ತಿಂಗಳು ಶಿಕ್ಷೆ ಆಗಿತ್ತು. ಅಲ್ಲದೆ ಗೌಡರ ಹನುಮಕ್ಕ, ಸಾನಿಕಂ ಕೃಷ್ಣಮ್ಮ, ಗಣೇಕಲ್ಲು ಭೀಮಕ್ಕ ಮುಂತಾದ ಇನ್ನೂ ಕೆಲವು ಮಹಿಳೆಯರು ಊರಲ್ಲಿ ಜನರಿಗೆ ಧೈರ್ಯ ಹೇಳಿ, ಹಿಂದೆ ನಿಂತು ತುಂಬಾ ಕೆಲಸಮಾಡಿದ್ದಾರೆ. ಇವರ ಸೇವೆ ಜೈಲಿಗೆ ಹೋದವರಿಗಿಂತಲೂ ಹೆಚ್ಚಿನದು. ಕೊನೆಗೆ ಜಿಲ್ಲಾ ಕಲೆಕ್ಟರರು ತುರುವನೂರಿಗೆ ಪುಂಡುಗಂದಾಯ ವಿಧಿಸಲು ಊರ ಜನರು ಹೆದರದೇ ಪರಿಸ್ಥಿತಿಯನ್ನು ಎದುರಿಸಿದರು. ತುರುವನೂರು, ಕೊಳದಾಳುಗಳಲ್ಲಿ ಪೋಲಿಸರು ಈ ಕಾಲಕ್ಕೆ ನಡೆಸಿದ ದೌರ್ಜನ್ಯಗಳ ಬಗ್ಗೆ ಮಹಾತ್ಮಾ ಗಾಂಧೀಜಿಯವರಿಗೆ ಪತ್ರ ಬರೆಯಲು ಅವರು ತಮ್ಮ ಸೆಕ್ರೆಟರಿ ಆಗಿದ್ದ ಮಹದೇವ ದೇಸಾಯಿ ಅವರನ್ನು ಈ ಬಗ್ಗೆ ವಿಚಾರಣೆ ನಡೆಸಲು ಮೈಸೂರು ಸಂಸ್ಥಾನಕ್ಕೆ ಕಳುಹಿಸಿಕೊಟ್ಟರು.

ನಮ್ಮಲ್ಲಿ ಕೆಲವರನ್ನು ಬೈರಮಂಗಲ ಕ್ಯಾಂಪು ಜೈಲಿಗೆ ಕಳುಹಿಸಲು ಸುಮಾರು ಎರಡು ಫರ್ಲಾಂಗಿನಷ್ಟು ದೂರದ ಕಾಲುವೆಯನ್ನು ನಾವು ತೋಡಿದೆವು. ದಿ|| ಮಾಲಿ ಮರಿಯಪ್ಪನವರು ನಮಗೆ ಆಗ ಮಾರ್ಗದರ್ಶಕರು. ಮುಂದೆ ಸೆಂಟ್ರಲ್ ಜೈಲಿಗೆ ಕರೆದೊಯ್ದು ಅಪಾಲಜಿ ಕೇಳುವಂತೆ ನಮಗೆ ಅಪಾರ ಹಿಂಸೆಕೊಟ್ಟರು. ಕಡೆಗೆ 1940ರ ಸೆಪ್ಟಂಬರ್‌ನಲ್ಲಿ ಜಯಚಾಮರಾಜ ಒಡೆಯರ್ ಅವರ ಪಟ್ಟಾಭಿಷೇಕದ ಕಾಲಕ್ಕೆ ನಮ್ಮ ಬಿಡುಗಡೆ ಆಯಿತು.

1942 ಹಾಗೂ 1947ರಲ್ಲೂ ಚಳವಳಿಯಲ್ಲಿ ಭಾಗವಹಿಸಿ ಅನೇಕ ದಿನ ನಾನು ಡಿಟೆನ್ಯು ಆಗಿದ್ದೆ.

ವ್ಯ. ಚಿ. 5

# ಪಿ. ಚನ್ನಾ ರೆಡ್ಡಿ

ಜನನ : ? ಉದ್ಯೋಗ : ನಿವೃತ್ತ ಜೀವನ ವಿಳಾಸ : ಚಿತ್ರದುರ್ಗ



1937-38ರಲ್ಲಿ ನಮ್ಮ ಊರಾದ ತುರುವನೂರಲ್ಲಿ ಗ್ರೂಪ್ ಕಾಂಗ್ರೆಸ್ ಕಮಿಟಿ ಸ್ಥಾಪಿಸಿ ಸುತ್ತಲ ಗ್ರಾಮಗಳಿಗೂ ಕಾಂಗ್ರೆಸ್ ಸಂದೇಶವನ್ನು ಮುಟ್ಟಿಸಿದೆವು. ಧ್ವಜಸತ್ಯಾಗ್ರಹದಲ್ಲಿ ಪಾಲುಗೊಂಡಿದ್ದೆ; ವಿದುರಾಶ್ವತ್ಥ ಕಾಂಗ್ರೆಸ್ಸಿಗೂ ನಾನು ಹೋಗಿದ್ದೆ. ತುರುವನೂರು ಜಂಗಲ್ ಸತ್ಯಾಗ್ರಹದಲ್ಲಿ ನನಗೆ 18 ತಿಂಗಳು ಶಿಕ್ಷೆ, 500 ರೂ. ದಂಡ ಆಗಿತ್ತು. ಒಂದು ವರ್ಷದಲ್ಲಿ ಬಿಡುಗಡೆ ಆಯಿತು. ನಾನು ಚಿತ್ರದುರ್ಗ ಟಿ.ಸಿ.ಸಿ. ಅಧ್ಯಕ್ಷನಾಗಿಯೂ ಇದ್ದೆ.

1942ರಲ್ಲಿ ನಮ್ಮ ನಾಯಕರ ಬಂಧನಾನಂತರ ತಾಲೂಕು ಡಿಕ್ಟೇಟರನ್ನಾಗಿ ನಾನು ಕೆಲಸಮಾಡಿದೆ. ಆಗ ಅಡ್ವೊಕೇಟ್ ಎಂ. ಶಿವಯ್ಯ, ತುರುವನೂರಿನ ಗೌಡ್ರ ತಿಪ್ಪೇಸ್ವಾಮಿ ಇವರುಗಳ ನೆರವಿನಿಂದ ಬಳ್ಳಾರಿ ಜಿ|| ಕೂಡ್ಲಿಗಿ ತಾ|| ಖಾನಾಮಡು ಹೈಸ್ಕೂಲಿನಿಂದ ಸೈಕ್ಲೊಸ್ಟೈಲನ್ನು ತಂದು, ದರ್ಶಿ ನಾರಾಯಣರಾಯರು, ಸತ್ಯನಾರಾಯಣರಾಯರು ಸೇರಿ ಬುಲೆಟಿನ್ ಹೊರಡಿಸುತ್ತಿದ್ದೆವು. ಕಡೆಗೆ ನಮ್ಮ ಮೇಲೆ ವಾರಂಟು ಹೊರಡಿಸಿದರು. ಈ ಕಾಲದಲ್ಲಿ ಸರಕಾರಿ ಯಂತ್ರವನ್ನು ಸ್ಥಗಿತಗೊಳಿಸುವ ಕಾರ್ಯಕ್ರಮದಂತೆ ಚಿತ್ರದುರ್ಗ ಜಿ|| ವಿದ್ಯಾ ಇಲಾಖೆಯ ಆಫೀಸಿಗೆ ಬೆಂಕಿ ಇಟ್ಟು ಅಲ್ಲಿನ ಫರ್ನಿಚರ್, ರಿಕಾರ್ಡ್ ಸುಟ್ಟುಹಾಕಿದೆವು. ಚಿತ್ರದುರ್ಗ ರೈಲ್ವೆ ಸ್ಟೇಶನ್‌ನ ನೀರಿನ ಟ್ಯಾಂಕ್ ಪೂರ್ತಿ ಸುಟ್ಟುಬಿಟ್ಟೆವು. ಗಾರೆಹಟ್ಟಿ ಪಟೇಲ್ ಸೋಮಣ್ಣ ಮತ್ತು ಇತರ ಕೆಲವರನ್ನು ಈ ಸಂಬಂಧ ಬಂಧಿಸಿ ಅರಸೀಕೆರೆಗೆ ಒಯ್ದರು. ಪಂಡ್ರಳ್ಳಿ, ಗುಡ್ಡದರಂಗಪ್ಪನಹಳ್ಳಿ, ಕಡಬನಕಟ್ಟೆ ಶಾಲೆಗಳಿಗೆ ಬೆಂಕಿ ಇಟ್ಟೆವಲ್ಲದೆ ಜಗಳೂರು ತಾ|| ಕಲ್ಲೇದೇವಪುರದ ಸ್ಕೂಲನ್ನು ಪೂರ್ತಿ ಸುಟ್ಟುಹಾಕಿದೆವು. ಮುಂದೆ ನಮ್ಮ ಊರಲ್ಲಿ ಒಮ್ಮೆ ನನ್ನನ್ನು ಪೋಲಿಸರು ಬಂಧಿಸಿದ್ದರೂ ನಾನು, ಸ್ನಾನ ಊಟಮಾಡಿ ಬರುವುದಾಗಿ ಹೇಳಿ ಅಲ್ಲಿಂದ ತಪ್ಪಿಸಿಕೊಂಡು ಪಾರಾದೆ. ತುರುವನೂರು ಪೋಲಿಸ್ ಸ್ಟೇಶನ್ ಮೇಲೆ ಧ್ವಜ ಹಾರಿಸಿದ್ದರಿಂದ ಕೆಲವರ ದಸ್ತಗಿರಿ ಆಯಿತು. ಕಡೆಗೆ 1-7-1943ರಂದು ನನ್ನ ಬಂಧನವಾಗಿ 8-10-1943ರ ವರೆಗೆ ನನ್ನನ್ನು ಡಿಟೆನ್‌ಶನ್‌ನಲ್ಲಿ ಇಟ್ಟಿದ್ದರು.

1947ರಲ್ಲಿ ಡಿ. ಎಂ. ರೇವಣಸಿದ್ದಯ್ಯನವರ ನೆರವಿನಿಂದ ಧಾರವಾಡ ಕಡೆಯ ಕೆಲವು ಕಾರ್ಯಕರ್ತರನ್ನು ಕರೆದುತಂದು ಅವರನ್ನು ಗೌಪ್ಯವಾಗಿ ಕುರುಡಿಹಳ್ಳಿ ಕಾವಲಲ್ಲಿ ಇಟ್ಟು. ಅವರಿಂದ ಇನ್ನೂ ಹೆಚ್ಚಿನ ಕೆಲಸಗಳನ್ನು ಮಾಡಿಸಬೇಕೆಂದು ಇದ್ದಾಗಲೇ ಚಳವಳಿ ನಿಂತಿತು.

ವ್ಯ.ಚಿ. 6

## ಕೆ. ಸಂಜೀವ ರೆಡ್ಡಿ

ಜನನ : 1914 ಉದ್ಯೋಗ : ವ್ಯವಸಾಯ ವಿಳಾಸ : 7866, ಜಯಚಾಮರಾಜೇಂದ್ರ ಬಡಾವಣೆ, ಚಿತ್ರದುರ್ಗ



ತುರುವನೂರು ಅರಣ್ಯ ಸತ್ಯಾಗ್ರಹದ ಕಾಲಕ್ಕೆ ನಾನು ಕಾಂಗ್ರೆಸ್‌ನ ಕೆಲಸ ಆರಂಭಿಸಿದ್ದು, ಆ ಕಾಲದಲ್ಲಿ ಸತ್ಯಾಗ್ರಹಿಗಳನ್ನು ಹುರಿದುಂಬಿಸಿ ಕಳುಹಿಸುವ ಕೆಲಸವನ್ನು ಅನೇಕ ದಿನಗಳು ಮಾಡಿದೆ. ಮುಂದೆ ಎಂ. ಗೋವಿಂದ ರೆಡ್ಡಿಯವರ ಸಲಹೆಯಂತೆ ನೂಲುವುದನ್ನು ಜನಪ್ರಿಯಗೊಳಿಸಲು ತುರುವನೂರು ಆಂಜನೇಯ ದೇವಸ್ಥಾನದಲ್ಲಿ ರಾಟೆಹಬ್ಬವನ್ನು ಮಹದೇವ ದೇಸಾಯಿ ಅವರ ಸಮ್ಮುಖದಲ್ಲಿ ನಡೆಸಿದೆವು.

1942ರಲ್ಲಿ ನಾವು ತುರುವನೂರಲ್ಲಿ ಮಿಡ್ಲ್‌ಸ್ಕೂಲ್ ರೆಕಾರ್ಡುಗಳನ್ನು ಸುಟ್ಟೆವು. ಡಿಸೆಂಬರ್ 5ಕ್ಕೆ ತುರುವನೂರು ಪೋಲಿಸ್ ಸ್ಟೇಶನ್ ಮೇಲೆ ಧ್ವಜ ಹಾರಿಸಿ ಸ್ಟೇಶನ್ ಮೇಲೆ 'ಕಾಂಗ್ರೆಸ್ ಕಚೇರಿ' ಎಂದು ಬೋರ್ಡ್ ಹಾಕಿದೆವು. ಮೊದಲು ನಾನು, ಅನಂತರ ಬುಡೇನ್‌ಸಾಬ್, ಜಿ. ತಿಪ್ಪೇರುದ್ರಪ್ಪ ಮತ್ತು ಎನ್. ಸಿದ್ದಣ್ಣ ಹೀಗೆ ಒಬ್ಬರನಂತರ ಒಬ್ಬರು ಧ್ವಜ ಹಾರಿಸಿ ಬಂಧನಕ್ಕೆ ಒಳಗಾದೆವು. ಚಿತ್ರದುರ್ಗದಲ್ಲಿ ನನಗೆ ನಾಲ್ಕು ಶಿಕ್ಷೆವಿಧಿಸಿದರು (8-12-1942). ಬಿಡುಗಡೆಯನಂತರವೂ ನನಗೆ ಮತ್ತೆ ಎರಡು ತಿಂಗಳು ಡಿಟೆನ್‌ಶನ್‌ಗೆ (7-4-1943) ಒಳಪಡಿಸಿದರು.

•

ಮೈ.ಚ. 7

# ಜಿ. ನಾರಾಯಣರಾವ್

ಜನನ: 1919 ಉದ್ಯೋಗ: ದರ್ಜಿ ವಿಳಾಸ: 24, ಡಿಕೆನ್‌ಸನ್ ರಸ್ತೆ, ಬೆಂಗಳೂರು–42

---



ನಾನು ಚಿತ್ರದುರ್ಗದಲ್ಲಿ ಹೊಲಿಗೆ ಕೆಲಸವನ್ನು ಮಾಡುವಾಗ ಡಾ|| ಹರ್ಡೀಕರ, ಎಸ್. ವಾಸುದೇವರಾವ್ ಮುಂತಾದವರ ಸಂಪರ್ಕದಲ್ಲಿ ಬಂದು ಖಾದಿ ಧರಿಸಲಾರಂಭಿಸಿದೆನಲ್ಲದೆ ಮದ್ಯದಂಗಡಿಗಳ ಮುಂದೆ ಪಿಕೆಟಿಂಗ್‌ನಲ್ಲಿ ಪಾಲುಗೊಳ್ಳುತ್ತಿದ್ದೆ. ಖಾದಿ ಬಟ್ಟೆಯನ್ನು ಜನಪ್ರಿಯಗೊಳಿಸಲು ಖಾದಿ ಬಟ್ಟೆಗಳನ್ನು ಅರ್ಧ ಚಾರ್ಜಿಗೆ ಹೊಲಿದುಕೊಡುತ್ತಿದ್ದೆ. 1937ರಲ್ಲಿ ಚಿತ್ರದುರ್ಗದಲ್ಲಾದ ಮೈಸೂರು ಕಾಂಗ್ರೆಸ್ ಕನ್‌ವೆನ್‌ಶನ್ ಕಾಲದಲ್ಲಿ ಸ್ವಯಂ ಸೇವಕನಾಗಿ ದುಡಿದೆ. ಸಭೆಸಮಾರಂಭಗಳಿಗೆ ನಿಜಲಿಂಗಪ್ಪ, ಭೀಮಪ್ಪ ನಾಯಕ್, ಶ್ರೀನಿವಾಸ ಜೋಯಿಸ್ ಮುಂತಾದವರನ್ನು ಕರೆಯಲು ಹೋಗುತ್ತ ಅವರ ನಿಕಟ ಸಂಪರ್ಕದಲ್ಲಿ ಬಂದೆ. ಹೊಲಿಗೆ ಕಲೆಯಲ್ಲಿ ಹೆಚ್ಚಿನ ತರಬೇತಿ ಪಡೆಯಲು ಮೈಸೂರಿಗೆ ಹೋಗಿದ್ದ ನಾನು, ಅಲ್ಲಿ ಹ್ಯಾಮಿಲ್ಟನ್ ಸತ್ಯಾಗ್ರಹದಲ್ಲಿ ಪಾಲುಗೊಂಡು ಜೈಲುವಾಸ ಅನುಭವಿಸಿದೆ. ಬಿಡುಗಡೆಯನಂತರ ಚಿತ್ರದುರ್ಗಕ್ಕೆ ಮರಳಿದಾಗ ಯುವಕ ಸಂಘದ ಕಾರ್ಯದರ್ಶಿಯಾಗಿ ಕೆಲಸಮಾಡಿದೆ.

1942ರ ಚಳವಳಿ ಕಾಲಕ್ಕೆ 'ಪ್ರಳಯ' ಎಂಬ ಭೂಗತ ಬುಲೆಟಿನ್ ಹೊರಡುತ್ತಿದ್ದು ಎಸ್. ವಾಸುದೇವರಾವ್, ಕೆ. ಎಚ್. ಸತ್ಯನಾರಾಯಣರಾವ್, ಪಿ. ಚೆನ್ನಾರೆಡ್ಡಿ ಇವರುಗಳು ಇದನ್ನು ಪ್ರಕಟಿಸುತ್ತಿದ್ದರು. ಇದರ ಗುಪ್ತ ಮಾರಾಟದ ಕೆಲಸ ನನ್ನದು. ಇದರ 23ನೆಯ ಸಂಚಿಕೆಯ ತನಕ ವಿತರಣೆಯನ್ನು ಸಮರ್ಪಕವಾಗಿ ನಡೆಸಿಕೊಂಡು ಬಂದೆ. ಈ ಬುಲೆಟಿನ್‌ನ ಪ್ರಕಟಣಾಮೂಲದ ಮಾಹಿತಿ ಒದಗಿಸುವವರಿಗೆ 200 ರೂ. ಬಹುಮಾನವನ್ನು ಸರಕಾರ ಪ್ರಕಟಿಸಿತು. ಡಿಸೆಂಬರ್ 12ರ ರಾತ್ರಿ ನನ್ನ ಅಂಗಡಿಯನ್ನು ಪೋಲಿಸರು ಜಪ್ತಿಮಾಡಿ, ಆಗ ಸಿಕ್ಕ ಬುಲೆಟಿನ್ ಪ್ರತಿ ಮತ್ತು ಅನ್ಯ ಸಾಹಿತ್ಯಕ್ಕಾಗಿ ಬಂಧಿಸಿದರು. ಅದೇ ದಿನ ರಾತ್ರಿ ರೈಲ್ವೆ ಸ್ಟೇಶನ್‌ನ ನೀರಿನ ಟ್ಯಾಂಕ್, ತಾ|| ಆಫೀಸು ಕಟ್ಟಡ, ಜಿಲ್ಲಾ ವಿದ್ಯಾ ಇಲಾಖೆಯ ಕಟ್ಟಡಗಳಿಗೆ ಚಳವಳಿಗಾರರ

ಅಗ್ನಿಸ್ಪರ್ಶಮಾಡಿದರು. ಪೋಲಿಸರು ನನ್ನಿಂದ ಚಳವಳಿಯ ಗುಟ್ಟುಗಳನ್ನು ತಿಳಿಯಲು ಯತ್ನಿಸಿ ವಿಫಲರಾಗಿ, ನಮ್ಮ ಮನೆಯಲ್ಲಿ ನನ್ನ ತಾಯಿಯ ಹತ್ತಿರ ಹೋಗಿ, ಅವರಿಗೆ 100 ರೂ. ಬಹುಮಾನದ ಆಸೆ ತೋರಿಸಿ, ಬುಲೆಟಿನ್ ಬಗ್ಗೆ ಹಾಗೂ ಚಳವಳಿಯ ಬಗ್ಗೆ ಮಾಹಿತಿ ಸಂಗ್ರಹಿಸಲು ಯತ್ನಿಸಿ ಅಲ್ಲಿಯೂ ವಿಫಲರಾದರು. ದಿ॥ ರೇವಣಸಿದ್ದಪ್ಪ, ರಾಮಗಿರಿ ಹನುಮಂತಪ್ಪ, ಕುನ್ನಿ ಹನುಮಂತಪ್ಪ, ಸಂಜೀವರೆಡ್ಡಿ, ನರಸಿಂಹರೆಡ್ಡಿ, ಸಿದ್ದವನಹಳ್ಳಿ ಗೋವಿಂದರೆಡ್ಡಿ ಇವರೆಲ್ಲ ಆ ಕಾಲದಲ್ಲಿ ಚಿತ್ರದುರ್ಗ ಹಾಗೂ ಸುತ್ತಲ ಪ್ರದೇಶಗಳ ಪ್ರಮುಖ ಭೂಗತ ಕಾರ್ಯಕರ್ತರು.

ಮುಂದೆ ಐದು ತಿಂಗಳು ಅಂಡರ್-ಟ್ರಯಲ್ ಆಗಿದ್ದ ನಾನು ಗಾಂಧೀಜಿಯವರು ಪುಣೆಯಲ್ಲಿ ಉಪವಾಸ ಕೈಕೊಂಡಾಗ ಜೈಲಿನಲ್ಲಿ ಏಳು ದಿನ ಉಪವಾಸ ಮಾಡಿದೆನು. ನನಗೆ 28-4-1943ರಂದು 18 ತಿಂಗಳ ಶಿಕ್ಷೆವಿಧಿಸಿದರು. ಇದೇ ಕಾಲಕ್ಕೆ ಚಿತ್ರದುರ್ಗ ಅಂಚೆ ಕಚೇರಿಯಲ್ಲಿ ಸ್ಫೋಟಕವನ್ನು ಒಗೆಯಲಾಯಿತು. 3-3-1944ರಲ್ಲಿ ನನ್ನ ಬಿಡುಗಡೆ ಆಯಿತು. 1945-46ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಕ್ಷಾಮಪರಿಹಾರ ಕಾರ್ಯಗಳಲ್ಲಿ ದುಡಿದೆನು. ಬಳ್ಳಾರಿ ಸಿದ್ದಮ್ಮನವರ ಮಾತೃಮಂದಿರದಲ್ಲೂ ಕೆಲಸಮಾಡಿದೆನು. 'ಮೈಸೂರು ಚಲೋ' ಚಳವಳಿ ಕಾಲಕ್ಕೆ ಗೋವೆಯ ತನಕ ಗುಪ್ತವಾಗಿ ಹೋಗಿ ಅಲ್ಲಿಂದ ಸ್ಫೋಟಕ ವಸ್ತುಗಳನ್ನು ತಂದು ಇಲ್ಲಿಗೆ ತಂದು ಪೂರೈಸಿದೆನು. ಡಿ.ಸಿ.ಸಿ. ಕಾರ್ಯದರ್ಶಿಯಾಗಿಯೂ ಸೇವಾದಳದ ಜಿಲ್ಲಾ ಸಂಘಟಕನಾಗಿಯೂ ಕೆಲಸಮಾಡಿದೆನು.

ಈಗ ಬೆಂಗಳೂರಲ್ಲಿ ನೆಲಸಿ ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳನ್ನು ನಡೆಸುತ್ತ ಇದ್ದೇನೆ.

ಮೈ. ಚಿ. 8

## ಕೆ. ಎಚ್. ರಂಗನಾಥ್

ಜನನ: 1926 ಉದ್ಯೋಗ: ವಕೀಲ ವಿಳಾಸ: ಸಹಕಾರ ಸಚಿವರು, ವಿಧಾನ ಸೌಧ, ಬೆಂಗಳೂರು-1

---

ನನ್ನ ತಂದೆ ಹರಿಹರಪ್ಪನವರು ಸರಕಾರೀ ನೌಕರರಾಗಿದ್ದರೂ ರಾಷ್ಟ್ರೀಯ ವಿಚಾರದವರೂ ಸಮಾಜವಾದದ ಬಗ್ಗೆ ಒಲವಿದ್ದವರೂ ಆಗಿದ್ದು, ಅವರ ಮಾತುಕತೆಗಳ ಪ್ರಭಾವ ನನ್ನ ಮೇಲೆ ಆಗಿತ್ತು. ಇದಲ್ಲದೆ 1935ರ ಸುಮಾರಿಗೆ ಕೆ. ಎಫ್. ಪಾಟೀಲರು ಬರೆದಿದ್ದ ಸುಭಾಸ್‌ಚಂದ್ರ ಬೋಸರ ಜೀವನ ಚರಿತ್ರೆ ನನ್ನ ಮೇಲೆ ಹೆಚ್ಚಿನ ಪರಿಣಾಮ ಉಂಟುಮಾಡಿತ್ತು. ಇಂದು ಕೂಡ ಸುಭಾಸ್‌ಚಂದ್ರ ಬೋಸರ ಅಭಿಪ್ರಾಯ ಮತ್ತು ವ್ಯಕ್ತಿತ್ವದ ಕಡೆ ಹೆಚ್ಚು ಒಲವು. ನಮ್ಮ ತಂದೆಯವರಲ್ಲಿ ಅವರ ಒಂದು ಪ್ರತಿ ಇತ್ತು.



ದ್ವಿತೀಯ ಮಹಾಯುದ್ಧ ಪ್ರಾರಂಭ ಆದಾಗ ಚಿತ್ರದುರ್ಗದ ಹೈಸ್ಕೂಲಿನಲ್ಲಿ ಇದ್ದ ನಾನು, ಆಗ ವಿಕಸಿತವಾಗಿದ್ದ ವಿಶಿಷ್ಟ ಆಂಗ್ಲವಿರೋಧಿ ಹಾಗೂ ರಾಷ್ಟ್ರೀಯ ವಾತಾವರಣದಿಂದ ಪ್ರಭಾವಿತನಾಗದೆ ಇರಲಿಲ್ಲ.

ಚಿತ್ರದುರ್ಗದಲ್ಲಿ ಕೆ. ಕೆಂಚಪ್ಪನವರು ಮೇಲ್ವಿಚಾರಕರಾಗಿ ನಡೆಸುತ್ತಿದ್ದ ಕುಂಚಟಿಗರ ಹಾಸ್ಟೆಲ್‌ನಲ್ಲಿ ಇದ್ದೆ. ಆ ಹಾಸ್ಟಲ್ ಮತ್ತು ರೆಡ್ಡಿ ಹಾಸ್ಟೆಲ್ ರಾಷ್ಟ್ರೀಯ ಚಟುವಟಿಕೆಗಳ ಕೇಂದ್ರವೇ ಆಗಿದ್ದವು. ಎಸ್. ವಾಸುದೇವರಾವ್, ಮುಲ್ಲಂಗಿ ಗೋವಿಂದ ರೆಡ್ಡಿ, ಶ್ರೀನಿವಾಸಮೂರ್ತಿ ಆಚಾರ್, ಭೀಮಪ್ಪ ನಾಯಕ, ಕೊಟ್ರೆ ನಂಜಪ್ಪ, ಎಸ್. ನಿಜಲಿಂಗಪ್ಪ, ಹುಲ್ಲೂರು ಶ್ರೀನಿವಾಸ ಜೋಯಿಸ್, ಹಾಗೂ ಕೆ. ಕೆಂಚಪ್ಪ ಆಗ ಊರಲ್ಲಿ ಗಣ್ಯ ಕಾಂಗ್ರೆಸ್ ಕಾರ್ಯಕರ್ತರು. ಕೆಂಚಪ್ಪನವರದಂತೂ ನನ್ನ ಮೇಲೆ ವಿಶೇಷ ಪ್ರಭಾವ. ಇದೇ ಕಾಲದಲ್ಲಿ ತುರುವನೂರು ಅರಣ್ಯಸತ್ಯಾಗ್ರಹದ ಬಂಧಿತರು ಬಿಡುಗಡೆ ಆಗಿ ಬಂದರು. ಇವರಿಗೆ ಊರಲ್ಲಿ ಭಾರೀ ಸ್ವಾಗತ ನೀಡಿದರು. ಈ ಕಾರ್ಯಕ್ರಮದಿಂದಾಗಿ ವಿದ್ಯಾರ್ಥಿಗಳ ಉತ್ಸಾಹ ಮೇರೆ ಮೀರಿತು. ಸುಭಾಸರು ಭಾರತದಿಂದ ತಪ್ಪಿಸಿಕೊಂಡುದು ಮತ್ತು ಜರ್ಮನಿ ಭಾರತದ ಮೇಲೆ ದಂಡೆತ್ತಿಬರಬಹುದೆಂಬ ವದಂತಿ ಆಗ ವಿದ್ಯಾರ್ಥಿಗಳಲ್ಲಿ ವಿಶೇಷವಾಗಿ ಚರ್ಚೆ ಆಗುತ್ತಲಿತ್ತು.

1942ರ ಚಳವಳಿ ಆಗುವುದಕ್ಕೂ ಸ್ವಲ್ಪ ಮೊದಲು ಚಿತ್ರದುರ್ಗದಲ್ಲಿ ಒಮ್ಮೆ ವಿದ್ಯಾರ್ಥಿಗಳು ಯಾವುದೋ ಕಾರಣಕ್ಕಾಗಿ ಸರಕಾರೀ ಹೈಸ್ಕೂಲಲ್ಲಿ ಮುಷ್ಕರ ನಡೆಸಿದರು. ಚಳವಳಿಗೆ ಇದು ಒಳ್ಳೆಯ ಹಿನ್ನೆಲೆ ನೀಡಿತ್ತು. ಚಳವಳಿ ಶುರು ಆದಾಗಲೇ ನೂರಾರು ವಿದ್ಯಾರ್ಥಿಗಳು ಶಾಲೆ ತ್ಯಜಿಸಿ ಪಿಕೆಟಿಂಗ್ ಮುಂತಾದ ಚಟುವಟಿಕೆಗಳಲ್ಲಿ ಪಾಲುಗೊಂಡರು. ಚಿತ್ರದುರ್ಗದಿಂದ ಒಟ್ಟು ಸುಮಾರು 150 ಜನ ವಿದ್ಯಾರ್ಥಿಗಳಷ್ಟು ಬಂಧಿತರಾಗಿರಬೇಕು. ಊರಲ್ಲಿ ಈ ಚಳವಳಿ ಬರೀ ವಿದ್ಯಾರ್ಥಿಗಳದ್ದೇ ಆಗಿತ್ತು. ಶಾಲೆ ತ್ಯಜಿಸಿ, ಶಾಲೆ, ಸರಕಾರೀ ಕಚೇರಿಗಳಲ್ಲಿ ಪಿಕೆಟಿಂಗ್ ನಡೆಸಿದೆವು. ತಂಡತಂಡಗಳಾಗಿ ಈ ಪಿಕೆಟಿಂಗ್ ನಡೆದಿತ್ತು. ಕೆ. ಕೆಂಚಪ್ಪನವರು ಆಗ ಜಿಲ್ಲಾ ಬೋರ್ಡು ಉಪಾಧ್ಯಕ್ಷರಾಗಿದ್ದವರು, ಆ ಸ್ಥಾನಕ್ಕೆ ರಾಜೀನಾಮೆ ಇತ್ತು, ಕೋರ್ಟನ್ನು ಬಹಿಷ್ಕರಿಸಿದರು. ಒಮ್ಮೆ ಕೋರ್ಟ್ ಎದುರು ಪಿಕೆಟಿಂಗ್ ನಡೆದಾಗ, ಭಾರಿ ತೀವ್ರಪರಿಸ್ಥಿತಿ ಉಂಟಾಯಿತು. ಗೋಳೀಬಾರಾಗಿ ಕೆಲವರಾದರೂ ಸಾಯುವ ಸ್ಥಿತಿ ಇತ್ತು. ಆದರೆ ಭೀಮಪ್ಪ ನಾಯಕರ ಕೌಶಲ್ಯದಿಂದ ಅದು ತಪ್ಪಿತು. ಹಮಾಲರೂ ರೈತರೂ ಚಳವಳಿಯಲ್ಲಿ ಸೇರಿಕೊಂಡರು. ಹಿರಿಯೂರಲ್ಲಿ ಆಗ ಚಳವಳಿ ಬಲವಾಗಿತ್ತು. ಎರಡು ತಿಂಗಳಾದರೂ ಪಿಕೆಟಿಂಗ್ ವಗೈರೆ

ಸಾಗಿತ್ತು. ಸೆಪ್ಟೆಂಬರ್ ಮೊದಲ ವಾರದಲ್ಲಿ ಶಾಲೆಯ ಮುಂದೆ ಪಿಕೆಟಿಂಗ್ ನಡೆಸಿ ಜಿ. ಆಂಜನಪ್ಪ ಬಂಧಿತರಾದರು. ಇದೇ ರೀತಿ 9-9-1942ರಂದು ನಾನು, ಕೃಷ್ಣಶೆಟ್ಟಿ, ಜಯಣ್ಣ (ಇಬ್ಬರೂ ಈಗ ಪಿ.ಡಬ್ಲ್ಯು.ಡಿ. ನೌಕರರು), ರುದ್ರಪ್ಪ, ಜಯರಾಮ ರೆಡ್ಡಿ (ಇಬ್ಬರೂ ಈಗ ಅಧ್ಯಾಪಕರು), ಸೊರೇನಹಳ್ಳಿ ಎನ್. ಜಿ. ಬಸಪ್ಪ, ಕೆ. ಬಿ. ಓಬಯ್ಯ (ಈಗ ಅಡ್ವೊಕೇಟ್) ಮುಂತಾದವರ ಜೊತೆ ಪಿಕೆಟಿಂಗ್ ನಡೆಸಿ ಬಂಧಿತನಾದೆ. ಸ್ಥಾನ ಬದ್ಧನಾಗಿ ಒಂದು ತಿಂಗಳು ಚಿತ್ರದುರ್ಗದಲ್ಲಿ, ಮುಂದೆ ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ಇದ್ದೆ. 1943ರ ಜನವರಿಯಲ್ಲಿ ನನ್ನ ಬಿಡುಗಡೆ ಆಯಿತು.

ಬಿಡುಗಡೆಯನಂತರ ಭೂಗತ ಚಟುವಟಿಕೆಗಳಲ್ಲಿ ಪಾಲುಗೊಂಡೆ. ಸೊಂಡೆಕೆರೆ ಹಳ್ಳಿಯಲ್ಲಿ ಕೆ. ಕೆಂಚಪ್ಪನವರು ಆರಂಭಿಸಿದ ಚಾಪೆ ನೇಯುವ ಕೇಂದ್ರವೇ ನಮ್ಮ ಚಟುವಟಿಕೆಗಳ ಕೇಂದ್ರ. ಕೊಟ್ರಿ ನಂಜಪ್ಪ ಆಗಾಗ ಬರುತ್ತಿದ್ದರು. ಹಿಂದೂಪುರ ವಿ. ಎಂ. ಲಿಂಗಣ್ಣ ನಮಗೆ ಮಾರ್ಗದರ್ಶಕರು. ಕೊಟ್ರಿಯವರ ಮೇಲೆ ಆಗಲೇ ವಾರಂಟ್ ಇತ್ತು. ಈ ಕಾಲದಲ್ಲಿ ಚಿತ್ರದುರ್ಗ ವೆಂಕಟೇಶ್ವರ ಬಡಾವಣೆಯ ಶಾಲೆ ಸುಡಲಾಯಿತು. ಹೊಳಲ್ಕೆರೆಯಲ್ಲಿ ರನ್ನರ್‌ನ ಬಳಿಯ ಪೋಸ್ಟ್ ಕಸಿದುದು ಇನ್ನೊಂದು ಘಟನೆ. ನನ್ನ ಮೇಲೆ ವಾರಂಟ್ ಇತ್ತು. ನಾನು ಹುಬ್ಬಳ್ಳಿಯ ಮುರಗೋಡ ಮಹಾದೇವಪ್ಪನವರ ಗಿರೀಶ ಆಶ್ರಮಕ್ಕೆ ಹೋಗಿ ಇದ್ದು ಬರುತ್ತಿದ್ದೆ. ಮುಂದೆ 1945ರಲ್ಲಿ ಎಸ್.ಎಸ್.ಎಲ್.ಸಿ. ಪಾಸಾಗಿ ಬೆಂಗಳೂರಲ್ಲಿ ಕಾಲೇಜು ಶಿಕ್ಷಣ ಮುಂದುವರಿಸಿದೆ.

ಬೆಂಗಳೂರಲ್ಲಿ ಕಾಂಗ್ರೆಸ್ ಸೋಶಲಿಸ್ಟ್ ಗುಂಪಿನಲ್ಲಿ ಕ್ರಿಯಾಶೀಲನಾಗಿದ್ದೆ. 1947ರಲ್ಲಿ ಚಳವಳಿಯಲ್ಲಿ ಪಾಲುಗೊಂಡರೂ ಬಂಧಿತನಾಗಲಿಲ್ಲ. ನಂಜನಗೂಡಿನಲ್ಲಿ ಅಶೋಕ ಮೆಹತಾ ಬಂದಾಗ ನಡೆದ ಸಮ್ಮೇಳನಕ್ಕೆ ಹೋಗಿದ್ದೆ. 1948ರಲ್ಲಿ ಕಾಂಗ್ರೆಸ್ ತ್ಯಜಿಸಿ ಸಮಾಜವಾದಿ ಪಕ್ಷ ಸೇರಿದೆ; 1953ರಲ್ಲಿ ಪಿ.ಎಸ್.ಪಿ.ಗೆ ಸೇರಿದೆ. ಪಿ.ಎಸ್.ಪಿ. ಪಕ್ಷದಲ್ಲಿ ಅದರ ಸಹಕಾರ್ಯದರ್ಶಿಯಾಗಿ, ಪಾರ್ಲಿಮೆಂಟರಿ ಬೋರ್ಡಿನ ಕಾರ್ಯದರ್ಶಿಯಾಗಿ ಕೆಲಸಮಾಡುವ ಅವಕಾಶ ದೊರಕಿತ್ತು. ಕೆ. ಆರ್. ಕಾರಂತರು ಪಿ.ಎಸ್.ಪಿ.ಯ ಅ.ಭಾ. ಅಧ್ಯಕ್ಷರಾಗಿದ್ದಾಗ ನಾನು ಸಹಕಾರ್ಯದರ್ಶಿಯಾಗಿ ಕೆಲಸಮಾಡುವ ಅವಕಾಶ ದೊರಕಿತ್ತು.

1962, 1967 ಮತ್ತು 1972ರಲ್ಲಿ ವಿಧಾನ ಸಭೆಗೆ ಆಯ್ಕೆಗೊಂಡೆ. ಕೆ.ಪಿ.ಸಿ.ಸಿ. ಅಧ್ಯಕ್ಷನಾಗಿ ಇತ್ತೀಚೆಗೆ ಕೆಲಸಮಾಡಿದೆ. ಸುಮಾರು 10 ತಿಂಗಳು ಕಾಲ ಸಚಿವನಾಗಿಯೂ ಅಧ್ಯಕ್ಷನಾಗಿಯೂ ಮುಂದುವರಿದೆ. ಈಗ ಅರಸು ಸಂಪುಟದಲ್ಲಿ ಸಚಿವನಾಗಿ ಇದ್ದೇನೆ.

ವೈ.ಚಿ. 9

# ಎಚ್. ಸಿ. ನಾರಾಯಣ ಐಯ್ಯಂಗಾರ್

ಜನನ : ?  ಉದ್ಯೋಗ : ಅಧ್ಯಾಪಕ  ವಿಳಾಸ : ಧರ್ಮಶಾಲಾ ರಸ್ತೆ, ಚಿತ್ರದುರ್ಗ



1934ರಲ್ಲಿ ನಾನು ಮಾಧ್ಯಮಿಕ ಶಾಲೆಯಲ್ಲಿದ್ದಾಗ ಒಮ್ಮೆ ತಗಡೂರರೂ ವೀರಕೇಸರಿಗಳೂ ಇಲ್ಲಿಗೆ ಬಂದರು. ಪುರಸಭೆಯ ಮುಂದೆ ಆಗ ಪರದೇಶೀ ವಸ್ತ್ರಗಳ ದಹನ ಕಾರ್ಯಕ್ರಮವಿತ್ತು. ಸಾವಿರಾರು ಜನ ಸೇರಿದ ಆ ಸಭೆಯಲ್ಲಿ ಅನೇಕರು ತಮ್ಮ ಮೈಮೇಲಿದ್ದ ಪರದೇಶೀ ಬಟ್ಟೆಯನ್ನು ಬೆಂಕಿಗೆ ಎಸೆಯಲು ನಾನೂ ನನ್ನ ತಲೆ ಮೇಲಿನ ಜರತಾರಿ ಟೋಪಿ ಹಾಗೂ ತೊಟ್ಟ ಕೋಟನ್ನು ಬೆಂಕಿಗೆಸೆದೆ. ಜರತಾರೀ ಟೋಪಿ ಉರಿಯುವಾಗ ಬಣ್ಣ ಬಣ್ಣದ ಜ್ವಾಲೆ ಬರುತ್ತಿದ್ದುದನ್ನು ನೋಡಿ ಚಪ್ಪಾಳೆ ತಟ್ಟಿ ಆನಂದದಿಂದ ಮನೆಗೆ ಬಂದೆ. ಮನೆಯಲ್ಲಿ ನಾಲ್ಕಾರು ಏಟುಗಳನ್ನೂ ತಿಂದೆ. ಮಾರನೆಯ ದಿನ ಗುರುಗಳು ನನ್ನ ತಲೆಯ ಮೇಲೆ ಟೋಪಿ ಮತ್ತು ಕೋಟು ಇಲ್ಲದಿರುವುದನ್ನು ಕಂಡು ವರ್ಗದಿಂದ ಹೊರಗೆ ಕಳುಹಿಸಿದರು. ನಾನು ಖಾದಿ ಅಂಗಡಿಗೆ ಹೋಗಿ ಎರಡಾಣೆ ಕೊಟ್ಟು ಖಾದಿಟೋಪಿ ಕೊಂಡು ಧರಿಸಿದೆ. ಅದು ಹಿಂದೆ ಮತ್ತು ಮುಂದೆ ಮೂರು ಮೂರು ಇಂಚು ಉದ್ದವಾಗಿತ್ತು. ನನ್ನ ವಿನಾ ಶಾಲೆಯಲ್ಲಿ ಯಾರೂ ಅಂಥ ಟೋಪಿ ಧರಿಸದೇ ಇದ್ದು ನನ್ನನ್ನು ಗುರುಗಳ ಸಹಿತ ಎಲ್ಲರೂ 'ಗಾಂಧೀ ಟೋಪಿ' ಎಂದು ಕರೆಯುತ್ತಿದ್ದರು.

ಸುಮಾರು 1937ರಲ್ಲಿ ಟಿ. ಸಿದ್ದಲಿಂಗಯ್ಯ ನಮ್ಮೂರಿಗೆ ಬಂದಿರಲು, ಎನ್. ಭೀಮರಾಯರ ಅಧ್ಯಕ್ಷತೆಯಲ್ಲಿ ಸಭೆ ಆಯಿತು. ಜಮಖಾನು ಮುಂತಾದ ವಸ್ತುಗಳನ್ನು ತಂದು ನಾನು ಸಭೆ ಏರ್ಪಡಿಸಿದ್ದೆ. ಸಭೆಗೆ 8-9 ಜನ ಮಾತ್ರ ಬಂದಿದ್ದರು. ಈಗಲೂ ಸಿದ್ದಲಿಂಗಯ್ಯನವರು ನನ್ನನ್ನು ಕಂಡಾಗಲೆಲ್ಲ ಆ ಸಭೆಯನ್ನು ಜ್ಞಾಪಿಸಿಕೊಳ್ಳುತ್ತಾರೆ.

1939ರ ಅರಣ್ಯಸತ್ಯಾಗ್ರಹದಲ್ಲಿ ಭಾಗವಹಿಸಿ ಕೆಲದಿನ ಪೋಲಿಸರ ವಶದಲ್ಲಿದ್ದೆ. 1942ರಲ್ಲಿ ಅನೇಕ ಸಭೆಗಳನ್ನು ನಡೆಸಿ ಭಾರತ ರಕ್ಷಣಾ ಕಾನೂನು 26ರ ಪ್ರಕಾರ ನಾನು ಮತ್ತು ನನ್ನ ಸೋದರ ಗೋಪಾಲ ಐಯ್ಯಂಗಾರ್ ಇಬ್ಬರೂ ದಸ್ತಗಿರಿಯಾಗಿ ಚಿತ್ರದುರ್ಗ ಲಾಕಪ್‌ನಲ್ಲಿ ಇದ್ದೆವು. ಮುಂದೆ ನನ್ನನ್ನು ಬೆಂಗಳೂರು ಜೈಲಿಗೆ ಒಯ್ದರು. ದಾರಿಯಲ್ಲಿ ಬಸ್ಸಿನಲ್ಲಿ ನನಗೂ ಎಸ್.ಐ. ಅವರಿಗೂ ತೀರ ಜಗಳ ಆಯಿತು. ಹೀಗಾಗಿ

ಬೆಂಗಳೂರು ಜೈಲು ಅಧಿಕಾರಿಗಳಿಗೆ ಅವರು ನನ್ನನ್ನು ಒಪ್ಪಿಸುವಾಗ ನಾನು ತೀರ ಅಪಾಯಕಾರಿ ವ್ಯಕ್ತಿ ಎಂದು ಎಚ್ಚರಿಸಿದರು.

ಬೆಂಗಳೂರಲ್ಲಿ 3,000 ರಾಜಕೀಯ ಕೈದಿಗಳಿದ್ದು ಜೈಲಿನಲ್ಲಿ ಊಟದ ವ್ಯವಸ್ಥೆ ಏನೂ ಚನ್ನಾಗಿರಲಿಲ್ಲ. ಕೆಲವು ತಿಂಗಳನಂತರ ನಮ್ಮಲ್ಲಿ ಕೆಲವರನ್ನು ಬಿಡುಗಡೆ ಮಾಡಲು ಜಿಲ್ಲಾಧಿಕಾರಿಗಳಿಗೆ ಸೂಚನೆ ಬಂದಾಗ, ನನ್ನ ವಿನಾ ಇನ್ನು ಅನೇಕರ ಬಿಡುಗಡೆಗೆ ಅವರು ಆಜ್ಞೆ ನೀಡಿದರು. ಮುಂದೆ ನಾನು ಬಿಡುಗಡೆ ಆಗಿ ಹೊರಬಂದು ಚಿತ್ರದುರ್ಗ ಸೇರಿದಾಗ ಆ ದಿನ ಊರಲ್ಲಿ ಸವಾದ್ಯ ಮೆರವಣಿಗೆ ಮಾಡಿದರು. ಅದೇ ದಿನ ರಾತ್ರಿ ರೈಲು ನಿಲ್ದಾಣದಲ್ಲಿ ಮರದ ನೀರಿನ ತೊಟ್ಟಿಯನ್ನು ಯಾರೋ ಸುಟ್ಟರು. ಪಕ್ಕದ ಗ್ರಾಮದ ಕವಾಡಿಗರ ಹಟ್ಟಿಯ ಪಟೇಲ್ ಸೋಮಪ್ಪನವರನ್ನು ರೈಲ್ವೆ ಪೋಲಿಸರು ಹಿಡಿದುತಂದು ಬಂಧಿಸಲು, ತೊಟ್ಟಿ ಸುಟ್ಟವರು ನಾರಾಯಣಯ್ಯಂಗಾರ್ ಸೋದರರು, ಎಂದು ಹೇಳಿಕೆ ಕೊಡಲು ಸೋಮಪ್ಪನವರನ್ನು ಪೋಲಿಸರು ಒತ್ತಾಯಿಸಿದರು. ಆದರೆ ಸೋಮಪ್ಪನವರು ಅದಕ್ಕೆ ಒಪ್ಪಲಿಲ್ಲ. ಅವರನ್ನು ಅರಸೀಕೆರೆಗೆ ಕರೆದುಕೊಂಡು ಹೋಗಿ ಚಿತ್ರಹಿಂಸೆಗೆ ಗುರಿಮಾಡಿದರು.

1947ರಲ್ಲಿ ಜಿಲ್ಲಾಧಿಕಾರಿಗಳ ಆಫೀಸ್ ಮೇಲೆ ರಾಷ್ಟ್ರಧ್ವಜವನ್ನು ಹಾರಿಸುವುದಾಗಿ ಬಹಿರಂಗಪಡಿಸಿ ಕಚೇರಿ ಬಳಿ ಹೋದಾಗ ಅಲ್ಲಿ ನನ್ನನ್ನು ಬಹಳವಾಗಿ ಹೊಡೆದರು. ಅದನ್ನು ನೆನಸಿಕೊಂಡರೆ ಈಗಲೂ ಸಂಕಟ ಬರುತ್ತದೆ. ಬಾಧಿತನಾದ ನನ್ನ ಮೇಲೆ ಶಾಂತಿಭಂಗ ಮತ್ತು ದೊಂಬಿ ಎಬ್ಬಿಸಿದ ಆಪಾದನೆ ಹಾಕಿ ಎರಡು ತಿಂಗಳು ಕಠಿಣ ಶಿಕ್ಷೆ ವಿಧಿಸಿದರು. "ನೀವು ನ್ಯಾಯಾಧೀಶರೂ ಅಲ್ಲ, ಇದು ನ್ಯಾಯಾಲಯವೂ ಅಲ್ಲ" ಎಂದು ಹೇಳಿದೆ. ಕೆಲವು ಕಾಲದನಂತರ ನನ್ನ ಬಿಡುಗಡೆ ಆಯಿತು.

ವ್ಯ. ಚಿ. 10

## ಎಚ್. ಎಸ್. ಪಾಂಡುರಂಗ ಜೋಯಿಸ್

ಜನನ : 1923 ಉದ್ಯೋಗ : ಕ್ಯುರೇಟರ್ ವಿಳಾಸ : ವೆಂಕಟೇಶಪುರ ಬಡಾವಣೆ, ಚಿತ್ರದುರ್ಗ

---

ನನ್ನ ಪೂಜ್ಯ ಪಿತೃವರ್ಯರಾದ ದಿ|| ಹುಲ್ಲೂರು ಶ್ರೀನಿವಾಸ ಜೋಯಿಸರು ತಾಯ್ನಾಡಿಗಾಗಿ ಮಾಡಿದ ತ್ಯಾಗ, ಬಡವರ ಮೇಲಿನ ಅನುಕಂಪ ಮುಂತಾದ ಗುಣಗಳು ನನ್ನನ್ನು ರಾಷ್ಟ್ರೀಯ ಚಳವಳಿಯ ಕಡೆಗೆ ಆಕರ್ಷಿಸಿದವು. ರಾಜೇಂದ್ರ ಪ್ರಸಾದ, ಸರ್ದಾರ್ ಪಟೇಲ್, ಪಂಡಿತ್ ನೆಹರು ಮುಂತಾದ ರಾಷ್ಟ್ರನಾಯಕರ ಭಾಷಣಗಳು



ಸ್ಫೂರ್ತಿ ನೀಡಿದ್ದವು. ನಿಜಲಿಂಗಪ್ಪ, ಭೀಮಪ್ಪ ನಾಯಕ್, ಎಸ್. ವಾಸುದೇವರಾವ್, ಸಿ.ಕೃಷ್ಣ ಶರ್ಮ ಮುಂತಾದವರ ಸಹವಾಸ, ಸಹಕಾರಗಳೂ ನನ್ನ ರಾಷ್ಟ್ರೀಯ ಚಟುವಟಿಕೆಗಳಿಗೆ ಕಾರಣವಾದವು.

ಬೆಂಗಳೂರು ನ್ಯಾಷನಲ್ ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ಬೆಂಗಳೂರು ಬನಪ್ಪಾ ಪಾರ್ಕ್‌ನಲ್ಲಿ ನರಿಮನ್ನರ ಭಾಷಣ ಕೇಳಲು ಹೋಗಿ ಪೋಲಿಸರ ಲಾಠೀ ಪ್ರಹಾರಕ್ಕೆ ತುತ್ತಾದೆ. ಮುಂದೆ 1942ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದವನು, ವ್ಯಾಸಂಗ ತ್ಯಜಿಸಿ ಶಾಲಾ ಕಾಲೇಜು ಪಿಕೆಟಿಂಗ್‌ನಲ್ಲಿ ಪಾಲುಗೊಂಡೆ. ನಮ್ಮ ಕಾಲೇಜು ವಿದ್ಯಾರ್ಥಿ ಕೆ. ವಿ. ವಸಂತಯ್ಯ (ಬೆಂಗಳೂರಲ್ಲಿ ಈಗ ವಕೀಲರು) ಆಗ ವಿದ್ಯಾರ್ಥಿಗಳ ನಾಯಕರಾಗಿದ್ದು ನಮ್ಮ ಪಿಕೆಟಿಂಗ್ ತಂಡಕ್ಕೆ ಎಚ್. ಎಸ್. ಶ್ರೀನಿವಾಸರಾವ್ ನಾಯಕರಾಗಿದ್ದರು. ಸಭೆ, ಮೆರವಣಿಗೆಗಳಲ್ಲೂ ಪಾಲುಗೊಳ್ಳುತ್ತಿದ್ದೆ ಮತ್ತು ಕಾಲೇಜು ಶಿಕ್ಷಣವನ್ನು ಪೂರ್ತಿ ತ್ಯಜಿಸಿದೆ.

ಇದೇ ಕಾಲಕ್ಕೆ 1942ರಲ್ಲಿ ಚಿತ್ರದುರ್ಗದಲ್ಲಿ ಧ್ವಜಸತ್ಯಾಗ್ರಹ ನಡೆಸಲಾಯಿತು. ನಮ್ಮ ತಂದೆಯವರು ನೀಲಕಂಠೇಶ್ವರ ದೇವಸ್ಥಾನದ ಮುಂದೆ ಧ್ವಜಸತ್ಯಾಗ್ರಹಮಾಡಿ ಬಂಧಿತರಾಗಲು ಮನೆ ಕಡೆ ನೋಡುವವರು ಯಾರೂ ಇಲ್ಲದಂತಾಯಿತು. ಕುಟುಂಬ ರಕ್ಷಣೆ ಮಾಡುವವರೇ ಇಲ್ಲದಾಗಲು, ನಾನು ಚಿತ್ರದುರ್ಗಕ್ಕೆ ಬಂದೆ. ವಿಶ್ವಕರ್ನಾಟಕ, ತಾಯಿನಾಡು ಪತ್ರಿಕೆಗಳ ಸುದ್ದಿಗಾರನಾಗಿ ಚಿತ್ರದುರ್ಗದ ಪರಿಸರದಲ್ಲಿ ನಡೆಯುತ್ತಿದ್ದ ಚಳವಳಿಯ ಚಟುವಟಿಕೆ, ವಿಧ್ವಂಸಕ ಕೃತ್ಯಗಳ ವರದಿ ಕಳುಹಿಸುತ್ತಿದ್ದೆ. ಈ ಚಟುವಟಿಕೆಗಳಿಗೆ ಕಾರಣಕರ್ತರಾದವರ ಹೆಸರು ತಿಳಿಸಬೇಕೆಂದು ಪೋಲಿಸರು ನನ್ನನ್ನು ಬೆದರಿಸಿದರು ; ಜೈಲಿಗೆ ಹಾಕುವುದಾಗಿ ಹೆದರಿಸಿದರು. ಮ್ಯಾಜಿಸ್ಟ್ರೇಟರು ಕರೆದು ಎಚ್ಚರಿಸಿದರು. ಯಾವುದಕ್ಕೂ ಬೆದರದೆ ಬಹಳ ಕಷ್ಟಪರಿಸ್ಥಿತಿಯಲ್ಲಿ ಕಾಲ ನೂಕಿದೆ. ಈ ಕಾಲದಲ್ಲಿ ಜೈಲಿನಲ್ಲಿ ನಮ್ಮ ತಂದೆಯವರು ಕಾಯಿಲೆಬಿದ್ದರು ; ಕೈಕಾಲು ಹಿಡಿದು ಓಡಾಡದಂತೆ ಆಯಿತು. ಆದರೂ ಸುಮಾರು ಒಂದೂಕಾಲು ವರ್ಷ ಈ ಎಲ್ಲ ಕಷ್ಟಗಳನ್ನು ಎದುರಿಸಿದರು. ನಾನಾದರೂ ಶೋಚನೀಯ ಬಡತನದಲ್ಲಿ ಜೀವನವನ್ನು ನಡೆಸಬೇಕಾಯಿತು.

ಇದೇ ಕಾಲದಲ್ಲಿ ಸನ್ಮಿತ್ರ ಸಂಘವೆಂಬ ದೇಶಪ್ರೇಮಿ ಯುವಕರ ಸಂಸ್ಥೆಯನ್ನು ಸ್ಥಾಪಿಸಿ ದೇಶಪ್ರೇಮ, ಸ್ವಾವಲಂಬನ ಮತ್ತು ಗೃಹಕೈಗಾರಿಕೆಗಳ ವಿಚಾರವನ್ನು ಹಳ್ಳಿಗಳಲ್ಲಿ ಪ್ರಚಾರ ಕೈಗೊಳ್ಳಲಾಯಿತು.

ನ್ಯ.ಚಿ. 11

# ಕೆ. ವಿ. ಮಂಜುನಾಥರಾವ್

ಜನನ : ? | ಉದ್ಯೋಗ : ಪ್ರವಾಸೀ ಮಾರ್ಗದರ್ಶಿ | ವಿಳಾಸ : ಶ್ರೀ ಪಾತಾಳೇಶ್ವರ ಪ್ರಕಾಶನ, ಚಿತ್ರದುರ್ಗ



ದಕ್ಷಿಣ ಕನ್ನಡದ ಕೋಟೇಶ್ವರ ಊರಲ್ಲಿ ನಾನು ಹಾಯರ್ ಎಲಿಮೆಂಟರಿ ಶಾಲೆಯಲ್ಲಿ ಓದುತ್ತಿದ್ದೆ. ಆಗ ನಮ್ಮ ಊರಲ್ಲಿ ರಾಮಚಂದ್ರ ಬಾಯರ್, ಸೂರ್ಯನಾರಾಯಣ ಐತಾಳ, ಶೇಷಗಿರಿ ಕಾಮತ್, ಶೀನ ಐತಾಳ ಇವರುಗಳು ಕಾಂಗ್ರೆಸ್ಸಿನ ಕೆಲಸ ಮಾಡುತ್ತಿದ್ದರು. 1932-33ರ ಸುಮಾರಿಗೆ ಒಮ್ಮೆ ನಮ್ಮ ಊರಲ್ಲೆಲ್ಲ 'ಇಂಗ್ಲಿಷ್ ಓದಬೇಡಿ', 'ಸ್ವದೇಶೀ ವಸ್ತುಗಳನ್ನೇ ಉಪಯೋಗಿಸಿರಿ', 'ಮಹಾತ್ಮಾ ಗಾಂಧೀ ಕಿ ಜೈ' ಮುಂತಾದ ಘೋಷಣೆಗಳು ಕೇಳ ಬರುತ್ತಿದ್ದವು. ಒಂದು ದಿನ ಕುಂದಾಪುರದ ಸತ್ಯಾಗ್ರಹಿಗಳ ತಂಡವೊಂದು ಬಸ್ಸಿನಲ್ಲಿ ಬಂದು ನಮ್ಮೂರಲ್ಲಿ ಇಳಿಯಿತು. ಹೀಗೆ ಬಂದವರಲ್ಲಿ ಎಸ್. ಆರ್. ಎಮ್ಮಾರ್ಳ್, ಸೂರ್ಯನಾರಾಯಣ ಐತಾಳ ಮುಂತಾದವರು ಇದ್ದಂತೆ ನೆನಪು. ಅವರು ಹೊರಗಡೆ ಜಯಕಾರ ಹಾಕಿಸುತ್ತಿರಲು ನಮ್ಮ ಶಾಲೆಯ ಬಾಗಿಲು ಮುಚ್ಚಲಾಗಿತ್ತು. ಸುಮಾರು ಒಂದೂವರೆ ಗಂಟೆಯನಂತರ ವರ್ಗದೊಳಗಿದ್ದ ನಾನು ಮೌನ ಭಂಗಿಸಿ "ಮಹಾತ್ಮಾ ಗಾಂಧೀ ಕಿ ಜೈ" ಎಂದು ಕೂಗಿದೆ. ತಕ್ಷಣ ಅದುವರೆಗೂ ತಡೆದಿದ್ದ ಹುಡುಗರು ಮುನ್ನುಗ್ಗಿ ಬಾಗಿಲು ತೆರೆದು ಮೆರವಣಿಗೆಯಲ್ಲಿ ಸೇರಿಕೊಂಡರು. ಮಧ್ಯಾಹ್ನ ಮತ್ತೆ ಶಾಲೆಗೆ ಬಂದಾಗ ನನ್ನನ್ನು ಮೊದಲಾಗಿಸಿ ಹತ್ತಾರು ಹುಡುಗರನ್ನು ಶಾಲೆಯಿಂದ ಹೊರ ಹಾಕಿದ್ದಾಗಿ ಮುಖ್ಯೋಪಾಧ್ಯಾಯರು ತಿಳಿಸಲು, ನಾವು ಹೊರಗೋಡಿ ಮೈದಾನಿನಲ್ಲಿ ನಮ್ಮ ಇಂಗ್ಲಿಷ್ ಪುಸ್ತಕಗಳನ್ನೆಲ್ಲ ಸುಟ್ಟು ಜಯಜಯಕಾರ ಹಾಕಿದೆವು. ಒಂದು ವರ್ಷಕಾಲ ಶಾಲೆಯಿಂದ ವಜಾಮಾಡಲು ನನ್ನ ಶಿಕ್ಷಣ ಮುಕ್ತಾಯಗೊಂಡಿತು.

ಶಾಲೆ ಬಿಟ್ಟನಂತರ ಚಳವಳಿಯವರ ಜೊತೆ ಊರೂರು ಸುತ್ತುತ್ತ ಶಿವಮೊಗ್ಗಕ್ಕೆ ಬಂದೆ. ನನ್ನ ಜೊತೆ ಶೇಷಗಿರಿ ಕಾಮತ್, ಶೀನ ಐತಾಳ ಇವರುಗಳಿದ್ದರು. ಕೆಲವು ದಿನ ಈ ಗುಂಪಿನ ಜೊತೆ ಕಾಲಯಾಪನ ಮಾಡಿದೆ. ಒಂದು ದಿನ ನನಗೆ ಜ್ವರ ಬಂತು. ನನ್ನ ಜೊತೆಗಾರರು ಎಲ್ಲಿ ಹೋದರೆಂದೂ ತಿಳಿಯಲಿಲ್ಲ. ಬಸ್ ನಿಲ್ದಾಣದಲ್ಲಿ ಗೋಣಿ

ಚೀಲ ಹೊಡೆದುಕೊಂಡು, ಬರೀ ಕಾಫಿ ಕುಡಿದು ಮಲಗಿರಲು ಕೆಲದಿನಗಳನಂತರ ಗಜಾನನ ಮೋಟರ್ ಸರ್ವಿಸ್‌ನ ಮಾಲಿಕ ಕಾರ್ಗಡಿ ಶೇಷಗಿರಿರಾಯ ಎಂಬವರು ನನ್ನನ್ನು ನೋಡಿ ಕರುಣೆ ತೋರಿ ಹೋಟೆಲೊಂದರಲ್ಲಿ ಇರಿಸಿ ನನ್ನ ಔಷಧಿ, ಊಟ, ಉಪಚಾರಗಳ ವ್ಯವಸ್ಥೆ ಮಾಡಿದರು. 15 ದಿನಗಳನಂತರ ಹುಷಾರಾದಮೇಲೆ ಅವರೇ ನನ್ನನ್ನು ಚಿತ್ರದುರ್ಗಕ್ಕೆ ಬಸ್ಸಿನಲ್ಲಿ ಕಳುಹಿಸಿದರು.

1942ರ ಚಳವಳಿಯ ಕಾಲಕ್ಕೆ ನಾನು ಅದರಲ್ಲಿ ಸೇರಿಕೊಂಡು ಗುಪ್ತ ಚಟುವಟಿಕೆಗಳಿಗೆ ನೆರವಾದೆ. ಸತ್ಯಾಗ್ರಹಿಗಳಿಗೆ ಆಹಾರ ಸರಬರಾಜು, ರಾತ್ರಿಹೊತ್ತು ಅವರಿಗೆ ಸಂದೇಶಗಳನ್ನು ಮುಟ್ಟಿಸುವುದು, ಅವರ ಓಡಾಟಗಳಿಗೆ ನೆರವಾಗುವುದು, ಮಾಡುತ್ತಿದ್ದೆ.

1947ರಲ್ಲಿ ಜಿಲ್ಲಾ ಕಚೇರಿಯ ಮೇಲೆ ಬಾವುಟ ಹಾರಿಸಿದ ಧೀರ ಪೈಲ್ವಾನ್ ನಂಜಪ್ಪನವರು ಗುಡ್ಡಗಳಲ್ಲಿ ಅಡಗಿರಲು ಅವರಿಗೆ ಊಟ, ತಿಂಡಿ ಸರಬರಾಜು ಮಾಡುತ್ತಿದ್ದೆ. ಹುಲ್ಲೂರು ಶ್ರೀನಿವಾಸ ಜೋಯಿಸ್ ಅವರ ಜೊತೆಗಾರನಾಗಿದ್ದು, ದುರ್ಗಕ್ಕೆ ಗೈಡ್ ಆಗಿ ಈಗ ಕೆಲಸಮಾಡುತ್ತ ಇದ್ದೇನೆ.

ವ್ಯ.ಚಿ. 12

## ಎಸ್. ಆರ್. ಸಿದ್ದಪ್ಪ

ಜನನ : 1904 ಉದ್ಯೋಗ : ಕೃಷಿ ವಿಳಾಸ : ರಂಗಾಪುರ, ತಾ|| ಹೊಳಲ್ಕೆರೆ



1938ರಲ್ಲಿ ರೈತಸಮ್ಮೇಳನವನ್ನು ನಮ್ಮ ಊರಲ್ಲಿ ಕೊಟ್ರೆ ನಂಜಪ್ಪನವರ ಪ್ರೇರಣೆಯಂತೆ ನಡೆಸಿದೆವು. ಎಚ್. ಸಿದ್ದಯ್ಯ ಅಧ್ಯಕ್ಷತೆ ವಹಿಸಿದ್ದರು. ಕಳ್ಳಿ ತಿಪ್ಪಣ್ಣಶಾಸ್ತ್ರಿ, ಹಳ್ಳಿಕೇರಿ ಗುದ್ಲೆಪ್ಪ, ಸಿದ್ದಲಿಂಗಯ್ಯ ಕಜರಿಸ್ವಾಮಿ ಮುಂತಾದ ಉತ್ತರ ಕರ್ನಾಟಕ ನಾಯಕರೂ ತಾಳಕೆರೆ ಸುಬ್ರಹ್ಮಣ್ಯಂ, ಕೆ. ಸಿ. ರೆಡ್ಡಿ, ಟಿ. ಸಿದ್ದಲಿಂಗಯ್ಯ, ನಿಜಲಿಂಗಪ್ಪ, ಭೀಮಪ್ಪ ನಾಯಕ್, ಮಾಧವರಾವ್ ಮುಂತಾದ ಧುರೀಣರೂ ಬಂದಿದ್ದು, ಸಮ್ಮೇಳನದಲ್ಲಿ 10,000 ಜನ ಹಾಜರಿದ್ದು 45 ಪಲ್ಲ ಅಕ್ಕಿಯ ಅಡಿಗೆ ಮಾಡಿಸಿ ಸಹಪಂಕ್ತಿಭೋಜನ ಕೂಡ ನಡೆಯಿತು. ಅದೇ ಕಾಲಕ್ಕೆ ಎಂ. ಗೋವಿಂದ ರೆಡ್ಡಿಯವರ ಪ್ರೇರಣೆಯಂತೆ ನಮ್ಮ

ಊರಲ್ಲಿ ರಾಷ್ಟ್ರೀಯ ಪ್ರಾಥಮಿಕ ಶಾಲೆಯನ್ನು ಆರಂಭಿಸಿ ಪರವೂರ ವಿದ್ಯಾರ್ಥಿಗಳಿಗೂ ಪ್ರತಿ ಮನೆಯಲ್ಲಿ 2-3 ಜನರಂತೆ ಊಟದ ವ್ಯವಸ್ಥೆ ಮಾಡಿಸಿದೆವು. ಬಿ. ಗಂಗಾಧರ ಆಚಾರ್ಯರು ಮುಖ್ಯ ಉಪಾಧ್ಯಾಯರಾಗಿದ್ದು ಹನುಮಲಿ ತಿಮ್ಮಪ್ಪ (ಹೆಬ್ಬೂರು), ವೀರಪ್ಪ ಹೊದಿಗೆರೆ ಇವರುಗಳೆಲ್ಲ ಅಧ್ಯಾಪಕರಾಗಿದ್ದರು. ನಮ್ಮ ಊರಲ್ಲಿ ಜನ ಸರಕಾರಕ್ಕೆ ಹೆದರದೆ ರಚನಾತ್ಮಕ ಕಾರ್ಯಗಳಲ್ಲೂ ಸತ್ಯಾಗ್ರಹದಲ್ಲೂ ಪಾಲುಗೊಂಡರು.

ಅದಲ್ಲದೆ ಅದೇ ವರ್ಷ 15 ಲಗ್ನಗಳನ್ನು ಒಂದೇ ಮುಹೂರ್ತದಲ್ಲಿ ರಾಷ್ಟ್ರೀಯ ವಿವಾಹದ ಸ್ವರೂಪದಲ್ಲಿ ದೇವಸ್ಥಾನದಲ್ಲಿ ಮಾಡಿಸಿದೆವು. ಇದು ಒಂದು ರಚನಾತ್ಮಕ ಕಾರ್ಯ.

1939ರಲ್ಲಿ 400 ಜನರ ಕ್ಯಾಂಪ್ ಮಾಡಿ ರಂಗಾಪುರದಲ್ಲಿ ಅರಣ್ಯಸತ್ಯಾಗ್ರಹ ಮಾಡಿದೆವು. ದಿನಕ್ಕೊಂದು ಬ್ಯಾಚಿನಂತೆ ಸತ್ಯಾಗ್ರಹ ಅನೇಕ ದಿನ ನಡೆದು, ಮೊದಲ ದಿನ ಕೊಟ್ರಿ ನಂಜಪ್ಪನವರ ನೇತೃತ್ವದಲ್ಲಿ ನನ್ನ ಸಹಿತ ಒಟ್ಟು 30 ಜನರ ಬಂಧನ ಆಯಿತು. ಅವರಲ್ಲಿ ಕೆಲವರ ಹೆಸರುಗಳು ಹೀಗಿವೆ : ಎಸ್. ಗುರುಬಸಪ್ಪ, ಜಿ. ಈಶ್ವರಪ್ಪ, ಸಂಕೋಳ ರೇವಪ್ಪ, ಎಚ್. ಮಹಾದೇವಪ್ಪ, ಕಾಡೋಳ ಅಜ್ಜಪ್ಪ, ಕೊಟ್ರಿ ಸಿದ್ದಪ್ಪ, ಜಿ. ಬಸಪ್ಪ, ಜಿ. ಚಿಕ್ಕಮಲ್ಲಪ್ಪ, ಎಸ್. ಆರ್. ನಂದಿಬಸಪ್ಪ, ಕೆ. ಶಿವಲಿಂಗಪ್ಪ (ಮುಗಳಿಹಳ್ಳಿ), ನಾಯ್ಕರ ಕರಿಯಪ್ಪ, ಎ. ಕೆ. ತಿಮ್ಮಪ್ಪ, ಎಚ್. ಬಸಪ್ಪ ಹನುಮಲಿ, ಬಿ. ವೆಂಕಟರಾಮಯ್ಯ (ಬಾಗೂರು), ನರಸಿಂಹ ರೆಡ್ಡಿ, ಕೃಷ್ಣ ರೆಡ್ಡಿ ಪಂಡಿತ್, ಡಿ. ಹನುಮಂತಪ್ಪ (ರಾಮಗಿರಿ), ಎ. ತಿಮ್ಮಪ್ಪಯ್ಯ (ರಾಮಗಿರಿ), ನಾಯ್ಕರ ಹಳ್ಳಪ್ಪ, ತಾವರೆಕೆರೆ ನಂಜಪ್ಪ ಮತ್ತು ದಾಸಿದ್ದಟ್ಟಿಯ ಎಚ್. ಮಹಾದೇವಪ್ಪ ಹಾಗೂ ಕೆ. ಮಹಾದೇವಪ್ಪ.

ನನಗೆ ಎರಡು ವರ್ಷ ಕಠಿಣ ಶಿಕ್ಷೆ, 500 ರೂ. ಜುಲ್ಮಾನೆ ; ಜುಲ್ಮಾನೆ ಕೊಡಲು ತಪ್ಪಿದರೆ 6 ತಿಂಗಳ ಶಿಕ್ಷೆ ಆಯಿತು. ಬೆಂಗಳೂರು, ಹಾಸನ ಜೈಲುಗಳಲ್ಲಿ ಶಿಕ್ಷೆ ಅನುಭವಿಸಿದೆ. ಒಂದು ವರ್ಷದನಂತರ ಬಿಡುಗಡೆ ಆಯಿತು.

1942ರಲ್ಲಿ ಬೆಂಗಳೂರಲ್ಲಿ ಗುಪ್ತವಾಗಿದ್ದು ವಿಧ್ವಂಸಕ ಕೃತ್ಯಗಳನ್ನು ನಡೆಸಿದೆ. ಅಲ್ಲಿಂದ ಬಂಧನ ತಪ್ಪಿಸಿ ಊರಿಗೆ ಬಂದು ಕೆಲಸಮಾಡಿದೆ. 1947ರಲ್ಲಿ ಹೊಳಲ್ಕೆರೆ ತಾಲ್ಲೂಕು ಆಫೀಸಿನ ಎದುರು ಒಂದು ತಿಂಗಳು ಪಿಕೆಟಿಂಗ್ ನಡೆಸಿದೆ. ಮೂರು ದಿನ ಪೋಲಿಸ್ ಕಸ್ಟಡಿಯಲ್ಲಿ ಇದ್ದೆ.

ವ್ಯ.ಚಿ. 13

# ಕಾಂಗ್ರೆಸ್ ಸಿದ್ದಪ್ಪ

ಜನನ : 1901 ಉದ್ಯೋಗ : ಕೃಷಿ ವಿಳಾಸ : ಚಿಕ್ಕಜಾಜೂರು, ತಾ|| ಹೊಳಲ್ಕೆರೆ

---



ನಾನೂ ಕೊಟ್ರಿ ನಂಜಪ್ಪನವರೂ ಇಡೀ ಹೊಳಲ್ಕೆರೆ ತಾಲೂಕಿನಲ್ಲಿ 1936ರಿಂದಲೂ ಸಂಚಾರಮಾಡಿ ಗಾಂಧೀಜಿಯವರ ಸಂದೇಶನನ್ನು ಮುಟ್ಟಿಸಲು ನೂರಾರು ಸಭೆ ನಡೆಸಿ ಜನಜಾಗೃತಿ ಮಾಡಿದೆವು. ಅಲ್ಲದೇ ನನ್ನ ಊರಾಗಿದ್ದ ರಂಗಾಪುರದಲ್ಲಿ ದಿ|| ಎಚ್. ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ರೈತ ಸಮ್ಮೇಳನ ನಡೆಸಿದೆವು. 12,000 ಜನ ಸೇರಿದ್ದರು (1938). ಅದೇ ಕಾಲಕ್ಕೆ ತಗಡೂರು ರಾಮಚಂದ್ರರಾಯರಿಂದ ಒಂದು ಆಶ್ರಮವನ್ನು ಉದ್ಘಾಟಿಸಿ ಅದರಲ್ಲಿ ರಾಷ್ಟ್ರೀಯ ಶಾಲೆ ನಡೆಸಿದೆವಲ್ಲದೆ ಚರಕಗಳನ್ನು ಇಟ್ಟು ನೂಲು ತೆಗೆಸಿದೆವು.

ಅದೇ ವರ್ಷ ನಮ್ಮ ಜಿಲ್ಲೆಯಲ್ಲಿ ಮಳೆ ಆಗದೆ, ದನಕರುಗಳಿಗೆ ಮೇವಿಲ್ಲದೆ ದನಗಳು ಸಾಯುತ್ತಿರಲು, ನಮ್ಮ ನೆರೆಯ ಚನ್ನಗಿರಿ ತಾಲೂಕಿನ ಮಲೆಗುಡ್ಡಕ್ಕೆ ನಮ್ಮ ಐದು ತಾಲ್ಲೂಕಿನ ದನಗಳನ್ನು ಹೊಡೆಸಿಕೊಂಡು ಹೋಗಿ, ಅಲ್ಲಿ ಹುಲ್ಲುಬನ್ನಿಯ ಬಗ್ಗೆ ಪ್ರತಿಭಟನೆ ಮಾಡಿ ಮೇಯಿಸಿದೆವು. ಹುಲ್ಲು ಬನ್ನಿ ವಜಾ ಆಗಿ ಜನರಿಗೆ ಕ್ಷೇಮವಾಯಿತು.

1939ರಲ್ಲಿ ನಮ್ಮ ರಂಗಾಪುರದಲ್ಲಿ ಜಂಗಲ್ ಸತ್ಯಾಗ್ರಹ ಮಾಡಿ ಸಾವಿರಾರು ಈಚಲಮರಗಳನ್ನು ಕಡಿಸಿದೆವು. ಅನೇಕರಿಗೆ ನಾಲ್ಕು ವರ್ಷಗಟ್ಟಲೆ ಶಿಕ್ಷೆ, ಸಾವಿರ, ಎರಡು ಸಾವಿರ ರೂಪಾಯಿ ದಂಡವಾಗಿ, ಅನೇಕರ ಎತ್ತು, ಎಮ್ಮೆಗಳ ಹರಾಜೂ ಆಯಿತು. ನಾನೂ ನನ್ನ ಹೆಂಡತಿ ಸಾಂತಮ್ಮನೂ ಮನೆಗೆ ಬೀಗ ಹಾಕಿ ಈಚಲಮರ ಕಡಿದು ಜೈಲಿಗೆ ಹೋಗಿರಲು, ಆಗಿನ ಸರಕಾರ ನನ್ನ ಮನೆಯ ಬಾಗಿಲನ್ನು ಒಡೆಸಿ ಮನೆಯಲ್ಲಿದ್ದ ಸಾಮಾನು, ಸೂರಿನ 32 ಜಿಂಕ್‌ಶೀಟ್ ತಗಡುಗಳು, ಬಾಗಿಲು ಇವುಗಳನ್ನೆಲ್ಲ ಹರಾಜು ಮಾಡಿಸಿದರೂ ಆ ಸೊತ್ತುಗಳು ಹುಲ್ಲುಕಡ್ಡಿಗೆ ಸಮಾನವೆಂದು ಎಣಿಸಿ ಜೈಲುವಾಸ ಅನುಭವಿಸಿದ್ದೇವೆ.

ನಾವು ಜೈಲಿನಲ್ಲಿದ್ದಾಗ ನನ್ನ ಹೆಂಡತಿ ಗರ್ಭಿಣಿ ಇದ್ದು, ಒಂದು ದಿನ ರಾತ್ರಿ ಕಾಲದಲ್ಲಿ ಟ್ರೈನಿನಿಂದ ಅವಳನ್ನು ರಂಗಾಪುರದಲ್ಲಿ ಬಿಟ್ಟು ಹೋದರು. ಆ ದಿನ

ಮಧ್ಯಾಹ್ನವೇ ಒಂದು ಮರದ ಕೆಳಗೆ ಅವಳು ಗಂಡುಮಗು ಹೆತ್ತಳು. ಆ ಮಗುವಿನ ಹೆಸರು ಜೈಪ್ರಕಾಶ. ಆಗ ರಂಗಾಪುರದ ಜನರು ಸಂಕೋಳ ನಂದಿಬಸಪ್ಪ ಎಂಬವರ ಮನೆಯ ಪಡಸಾಲೆಯಲ್ಲಿ ನೆರಕೆಯನ್ನು ಕಟ್ಟಿಸಿ, ಮಗು ಬಾಣಂತಿಯನ್ನು ಅಲ್ಲಿ ರಕ್ಷಣೆ ಮಾಡಿದರು. ಶಿಕ್ಷೆಯಾಗಿ ಒಂದು ವರ್ಷ ಆದಾಗ ನನ್ನ ಬಿಡುಗಡೆ ಆಗಲು, ರಂಗಾಪುರದಲ್ಲಿ ಬಂಧಿತರಿಗೆಲ್ಲ ಕೆ. ಟಿ. ಭಾಷ್ಯಂ ಅವರ ಅಧ್ಯಕ್ಷತೆಯಲ್ಲಿ ಒಂದು ಸತ್ಕಾರಸಭೆ ಮಾಡಿದರು.

ಮೈಸೂರು ದೇಶದವರೇ ಅಲ್ಲದೆ ಧಾರವಾಡ, ಬೆಳಗಾವಿ ಕಡೆ ಲೀಡರುಗಳೂ ನಮ್ಮ ಸಣ್ಣ ಹಳ್ಳಿಗೆ ಬಂದು ನಮ್ಮ ಗ್ರಾಮದ ರಾಷ್ಟ್ರೀಯ ಚಟುವಟಿಕೆ ನೋಡಿ ಹೋಗುತ್ತಿದ್ದರು. ನಮ್ಮ ಊರಲ್ಲಿ ಅನೇಕ ಸಭೆಸಮ್ಮೇಳನಗಳನ್ನು ನಡೆಸಿದ್ದೇವೆ. ಗುರುಬಸಪ್ಪ, ಸಂಕೋಳ ದೇವಪ್ಪ, ಗೌಡ್ರ ಈಶ್ವರಪ್ಪ, ಹರೆಹಳ್ಳಿ ರುದ್ರಪ್ಪ, ಎಸ್. ಆರ್. ಸಿದ್ದಪ್ಪ, ಸಂಕೋಳ ನಂದಿಬಸಪ್ಪ, ಜಂತುಕೊಳಲ ನಾಗಪ್ಪ, ಗಿರೀ ತಿಮ್ಮಜ್ಜನ ಬಸಪ್ಪ, ನಾಯ್ಕರ ಕರಿಯಪ್ಪ, ನಾಯ್ಕರ ಹಳ್ಳೆಪ್ಪ, ಹರಿಜನರ ತಿಮ್ಮಪ್ಪ—ಹೀಗೆ ಅನೇಕರು ಚಳವಳಿಯಲ್ಲಿ ಕಾಯಾ ವಾಚಾ ಮನಸಾ ದುಡಿದು ಜೈಲುವಾಸ ಸಹ ಅನುಭವಿಸಿದ್ದಾರೆ.

1942ರಲ್ಲಿ ನಾನು ಚಿಕ್ಕಜಾಜೂರಿಗೆ ಬಂದು ಇಲ್ಲಿ ಕೂಡ ಕಾಂಗ್ರೆಸ್ ಕೆಲಸ ಮಾಡಿದ್ದೇನೆ. ರೆಡ್ಡಿಯವರು ಮುಖ್ಯಮಂತ್ರಿ ಆದಾಗ ಅವರನ್ನೂ ಎಚ್. ಸಿದ್ದಯ್ಯ ಅವರನ್ನೂ ಕರೆಸಿ ಚಿಕ್ಕಜಾಜೂರಲ್ಲಿ ಹರಿಜನ ಸಮ್ಮೇಳನ ಮಾಡಿದ್ದೇನೆ. ಹೊಳಲ್ಕೆರೆ ತಾಲೂಕಿನ ದೊಡ್ಡದೊಡ್ಡ ಊರುಗಳ ದೇವಸ್ಥಾನಗಳಿಗೆ ಹರಿಜನರನ್ನು ಕರೆದೊಯ್ದುದಲ್ಲದೆ ಸಾರ್ವಜನಿಕ ಬಾವಿಗಳಿಗೆ ಅವರನ್ನು ಒಯ್ದು ಬಾವಿಗಳಲ್ಲಿ ಗಂಗಾದೇವತೆಯನ್ನು ಮಾಡಿಸಿ ದೊಡ್ಡ ಕ್ರಾಂತಿಯನ್ನೇ ಮಾಡಿದ್ದೇವೆ.

ಮೈ. ಚಿ. 14

## ಎಂ. ಲಿಂಗಪ್ಪ

ಜನನ : 1904 ಉದ್ಯೋಗ : ಕೃಷಿ ವಿಳಾಸ : ಚಿತ್ರಹಳ್ಳಿ, ತಾ॥ ಹೊಳಲ್ಕೆರೆ

ದಿ॥ ಕೊಟ್ರೆ ನಂಜಪ್ಪನವರು 1938ರಲ್ಲಿ ನಮ್ಮ ಗ್ರಾಮಕ್ಕೆ ಬಂದು ಒಂದು ಸಾರ್ವಜನಿಕ ಸಭೆ ಸೇರಿಸಿದರು. ಕಳ್ಳಿ ತಿಪ್ಪಣ್ಣಶಾಸ್ತ್ರಿಗಳದೂ ಭಾಷಣ ಆಯಿತು. ಆ ಕಾಲದಿಂದ ನಾನು ಕಾಂಗ್ರೆಸ್ ಸದಸ್ಯನಾದೆ. 1939ರಲ್ಲಿ ಅರಣ್ಯಸತ್ಯಾಗ್ರಹ ಆಯಿತು. ನಾನು ಸತ್ಯಾಗ್ರಹಿಗಳಿಗೆ ಧನಸಹಾಯ, ಅವರ ಊಟದ ವ್ಯವಸ್ಥೆ ಮಾಡಿದೆ. ಜೈಲಿಗೆ ಹೋಗಲಿಲ್ಲ.



ನಾನು ಲಿಂಗಾಯತನಾದರೂ ಹರಿಜನರನ್ನೂ ಇತರೇ ಜಾತಿಯ ಜನರನ್ನೂ ನಮ್ಮ ಮನೆಯಲ್ಲಿ ಕರೆದು ಸಹಭೋಜನದ ಏರ್ಪಾಡುಮಾಡಿಸಿದೆ. 1939ರಲ್ಲಿ ಇದು ಹೆಚ್ಚಿನ ವಿಷಯ. ಹರಿಜನರನ್ನು ಮುಟ್ಟಿದರೆ ಸಮಾಜಕ್ಕೆ ದಂಡ ಕೊಡಬೇಕಾದ ಕಾಲ. ಸಿ. ಟಿ. ಹನುಮಂತಯ್ಯ ಎಂಬುವರು ನಮ್ಮ ಗ್ರಾಮದಲ್ಲಿ ದೇವಸ್ಥಾನದ ಮುಂದೆ ತೆಂಗಿನ ಕಾಯಿ ಒಡೆದಿದ್ದಕ್ಕೆ ನೂರು ರೂಪಾಯಿ ತೆರ ಬೇಕೆಂದು ಸುತ್ತ ಹಳ್ಳಿಜನ ದಂಡ ವಿಧಿಸಿದರು. ನಾನು ಅದನ್ನು ದಿಟ್ಟತನದಿಂದ ಎದುರಿಸಿದೆ.

1942ರ ಚಳವಳಿಯಲ್ಲಿ ಕೊಟ್ರಿ ನಂಜಪ್ಪ, ಮಲ್ಲಾಡಿಹಳ್ಳಿ ರಾಘವೇಂದ್ರ ಸ್ವಾಮಿಗಳು ಹಾಗೂ ಕೃಷ್ಣರೆಡ್ಡಿ ಪಂಡಿತರು ನಮ್ಮ ಭಾಗದಲ್ಲಿ ಬಹಳ ಕೆಲಸಮಾಡಿದರು. ಸ್ವಾಮಿಗಳು ನಮ್ಮ ಗ್ರಾಮದಲ್ಲಿ ಕೆಲವು ದಿನ ಕ್ಯಾಂಪು ಹಾಕಿದ್ದ ಜನರನ್ನು ಹುರಿದುಂಬಿ ಸಿದ್ದರು. ದಾವಣಗೆರೆ ಸ್ಟೇಶನ್ ಸುಡುವ ಕೆಲಸದಲ್ಲಿ ನಾನು, ಕೊಟ್ರಿ ನಂಜಪ್ಪ, ಸಿದ್ದಪ್ಪ, ದಾವಣಗೆರೆ ಶಿವಪ್ಪ, ಬೆನ್ನೂರು ಚನ್ನಬಸಪ್ಪ, ಶಾಮನೂರು ಕಲ್ಲಪ್ಪ, ಶ್ರೀನಿವಾಸರಾವ್ ಮುಂತಾದವರಿದ್ದರಲ್ಲದೆ ಅದೇ ಊರಿನ ನೂರಾರು ಜನ ರೈಲುಗೇಟು ಮುರಿದು ಬಂದಿದ್ದರು. ಹಗಲು 11ಕ್ಕೆ ಈ ಕೆಲಸ ಆಯಿತು. ಪೋಲಿಸರು ಲಾಠಿ ಪ್ರಹಾರ ಮಾಡಲು ನಾವು ಚನ್ನಗಿರಿ ರಂಗಪ್ಪನ ಛತ್ರದ ಕಡೆ ಓಡಿದೆವು. ರಸ್ತೆಗೆ ಹಾಕಲು ತಂದ ಜಲ್ಲಿಕಲ್ಲನ್ನು ಜನ ಪೋಲಿಸರ ಕಡೆ ತೂರಲು ಪೋಲಿಸರು ಏಟು ತಡೆಯಲಾರದೆ ಗುಂಡುಹಾರಿಸಿ ಕೆಲವರು ಸತ್ತರು. ನಾವೆಲ್ಲ ಚೆಲ್ಲಾಪಿಲ್ಲಿಯಾಗಿ ಸಿಕ್ಕ ಕಡೆ ಓಡಿದೆವು. ಒಬ್ಬನಿಗೆ ಕಣ್ಣಿನಲ್ಲಿ, ಕೆಲವರಿಗೆ ಎದೆಯಲ್ಲಿ, ಒಬ್ಬನಿಗೆ ಪಕ್ಕೆಯಲ್ಲಿ ಗುಂಡು ತಗಲಿದ್ದು ರಸ್ತೆಯೆಲ್ಲ ರಕ್ತಮಯವಾಗಿತ್ತು. ನಾನು ಆಸ್ಪತ್ರೆಗೆ ಹೋದೆ. ಕೈ, ಬೆನ್ನಿಗೆ ಗಾಯ ಆಗಿತ್ತು. ಔಷಧಿ ಹಾಕಿಸಿಕೊಂಡು ಅಲ್ಲಿ ಒಬ್ಬ ವಕೀಲರ ಮನೆಯಲ್ಲಿ ಇದ್ದು ಮರುದಿನ ನಡೆದು ಊರಿಗೆ ಬಂದೆ. ಅಮೃತಾಪುರ ಹತ್ತಿರ ಇರುವ ರೈಲುಸೇತುವೆ ಕೆಡವಬೇಕೆಂದು, ಮುಂದೆ ನಾಲ್ಕನೆಯ ದಿನ ನಮ್ಮಲ್ಲಿ ಬಂದ ಕೊಟ್ರಿ ನಂಜಪ್ಪ ಸೂಚಿಸಿದರು. ಡೈನಮೈಟ್ ಕೊಟ್ಟರು. ಆದರೆ ಈ ಯತ್ನ ಫಲಿಸಲಿಲ್ಲ. ಮುಂದೆ ಚಿತ್ರದುರ್ಗ ಸ್ಟೇಶನ್‌ಗೆ ಹೋಗಿ ಸಶಸ್ತ್ರರಾಗಿ ಪೋಸ್ಟ್ ಕಸಿಯಲು ಯತ್ನಿಸಿದೆವು. ಆ ಯತ್ನವೂ ವಿಫಲವಾಯಿತು. ಆಗ ನಮ್ಮಲ್ಲಿ ಒಂದು ರಿವಾಲ್ವರ್, ಮೂರು ಬಂದೂಕುಗಳು ಇದ್ದವು. ಇವನ್ನು ಕೊಟ್ರಿ ನಂಜಪ್ಪನವರು ಬೆಂಗಳೂರಿನ ಡಾ|| ಗುರುದಾಸರ ತಮ್ಮ ಬುದ್ಧದಾಸರಿಂದ ತಂದಿದ್ದರು. ಒಟ್ಟಿನಲ್ಲಿ ನಮ್ಮ ಊರ ಸುತ್ತ ರೈಲು ತಂತಿ ಕತ್ತರಿಸಿದ್ದು, ಕೆಲವು ಕಂಬ ಮುರಿದದ್ದು ಬಿಟ್ಟರೆ ಬೇರೇನೂ ವಿಧ್ವಂಸಕ ಕೃತ್ಯ ನಮ್ಮಿಂದ ಆಗಲಿಲ್ಲ. ನನಗೆ ಶಸ್ತ್ರ

ಇಲ್ಲವೇ ಡೈನಮೈಟ್ ಬಳಸಲು ಸರಿಯಾದ ತರಬೇತಿ ಇರಲಿಲ್ಲ. ದೇಹದಲ್ಲಿ ಬಲವಿತ್ತೇ ವಿನಾ ಬುದ್ಧಿ ಇರಲಿಲ್ಲ. ಬರಿ ಓಡಾಡುವುದರಲ್ಲಿ ನಮ್ಮ ಕೆಲಸವಾಯಿತು. ಜೋಗ ಜಲಪಾತಕ್ಕೆ ಹೋಗಿ ಕರೆಂಟು ಇಲ್ಲವಂತೆ ಮಾಡಬೇಕು ಎಂದು ರೈಲಿನಲ್ಲಿ ಸಾಗರಕ್ಕೆ ಹೋದೆವು. ಸುಳಿ ಪೂರಾ ಹಿಡಿದು ಜೋಗಕ್ಕೆ ಹೋಗಲು ಆಗುವುದಿಲ್ಲವೆಂದು ಆಮೇಲೆ ವಾಪಸು ಕರೆದುಕೊಂಡು ಬಂದರು. ಈ ಕಾಲದಲ್ಲಿ ಶಾಮನಹಳ್ಳಿ ಕಲ್ಲಪ್ಪನವರು ರಾಣೆಬೆನ್ನೂರು ಭಾಗದಿಂದ ಕೆಲವರನ್ನು ಕರೆದುತಂದು ಈ ಭಾಗದ ಕೆಲವು ರಾಜಕೀಯ ವಿರೋಧಿಗಳ ಮನೆ ದರೋಡೆ ಮಾಡಿಸಿದರು. ನಾವು ಈ ಕಾರ್ಯಕ್ರಮಗಳಲ್ಲಿ ಸೇರಲಿಲ್ಲ.

ಹಿರಿಯೂರು ತಾಲೂಕು ಕಸ್ತೂರಿರಂಗಪ್ಪನ ಹಳ್ಳಿಯವರು ಕೆಂಗತಿಮ್ಮಯ್ಯನ ಮುಖಂಡತ್ವದಲ್ಲಿ ಆ ಕಾಲದಲ್ಲಿ ಚಳವಳಿ ಕೆಲಸ ಮಾಡಿದರು. ನಮ್ಮ ಗ್ರಾಮದಿಂದ ಯಾರೂ ಆಗ ಬಂಧನಕ್ಕೆ ಒಳಗಾಗಲಿಲ್ಲ.

ವ್ಯ. ಚಿ. 15

## ಡಿ. ಸಿ. ಕೃಷ್ಣಪ್ಪ

ಜನನ : 1925 ಉದ್ಯೋಗ : ಅಧ್ಯಾಪಕ ವಿಳಾಸ : ನಾರಬಗಟ್ಟ, ಬಾಗೂರು ಅಂಚೆ, ತಾ|| ಹೊಸದುರ್ಗ

---



ಬಾಗೂರು ಮಿಡ್ಲ್ ಸ್ಕೂಲಲ್ಲಿ 1937-38ರಲ್ಲಿ ಓದುತ್ತಿದ್ದಾಗ ನಮ್ಮ ಉಪಾಧ್ಯಾಯ ರಾಮಚಂದ್ರ ರಾಯರು ದೇಶಭಕ್ತರ ಚರಿತ್ರೆ, ಆಗ ನಡೆಯುತ್ತಿದ್ದ ಸ್ವಾತಂತ್ರ್ಯ ಆಂದೋಲನ, ರಾಷ್ಟ್ರ ನಾಯಕರ ವಿಚಾರ ತಿಳಿಸಿ ರಾಷ್ಟ್ರಭಕ್ತಿಯ ಬೀಜ ಬಿತ್ತಿದರು. ದೊಡ್ಡನಾಳು ಊರ ದಿ|| ಕೊಟ್ರಿ ಸಂಜಪ್ಪ ನನ್ನ ರಾಜಕೀಯ ಗುರು. ಡಾ|| ಹರ್ಡೀಕರ, ಭಾಷ್ಯಂ ಮುಂತಾದವರ ಭಾಷಣ ಇವರು ನಮ್ಮಲ್ಲಿ ಏರ್ಪಡಿಸಿದ್ದರು. 1939ರಲ್ಲಿ ಅರಣ್ಯಸತ್ಯಾಗ್ರಹದಲ್ಲಿ ಪಾಲುಗೊಳ್ಳಲು ಶಾಲೆ ತ್ಯಜಿಸಿ ರಂಗಾಪುರ, ನೂಲೇನೂರುಗಳಿಗೆ ಹೋಗಿರಲು, ಸತ್ಯಾಗ್ರಹ ಕಾಲಕ್ಕೆ ನನ್ನನ್ನು ಬಂಧಿಸಿದರು. ನ್ಯಾಯಾಧೀಶರು ಚಿಕ್ಕ ಹುಡುಗನೆಂದು ನನ್ನನ್ನು ಬಿಟ್ಟರು. ಆಗಿನ ಸತ್ಯಾಗ್ರಹಿಗಳಲ್ಲಿ ಪ್ರಮುಖರೆಂದರೆ, ದಿ|| ರಾಮಯ್ಯ, ಪಂದಿಪರಮಯ್ಯ, ಗೌಡಜ್ಜ, ವೆಂಕಟರಾಮಯ್ಯ, ಬಾಗೂರು ನಾಗೇನಹಳ್ಳಿ ಪುಟ್ಟಪ್ಪ, ಸಿಂಗಪ್ಪ,

ಹನುಮಂತಪ್ಪ ಮುಂತಾದವರು. ಆಗ ಚಿತ್ರದುರ್ಗಕ್ಕೆ ಹೋದಾಗ ಸತ್ಯಾಗ್ರಹ ಶಿಬಿರದಲ್ಲಿ ಎಸ್. ವಾಸುದೇವರಾವ್, ಸತ್ಯನಾರಾಯಣರಾವ್ ಮಾತ್ರ ಇದ್ದರು. ಆಗ ಸೆಂಟ್ರಲ್ ಜೈಲಿನಲ್ಲಿ ಎಚ್. ಸಿದ್ದಯ್ಯ, ಟಿ. ಸುಬ್ರಹ್ಮಣ್ಯಂ ರಾಗಿ ಬೀಸುತ್ತಿರುವ ಚಿತ್ರ ಇರುವ ಹಾಗೂ ಇತರ ಪ್ರಕಟಣೆಗಳನ್ನು ಹಂಚಲು ಕೊಟ್ಟರು. ಪೋಲಿಸರ ಕೈಗೆ ಸಿಕ್ಕು ಚಿತ್ರ ಹಿಂಸೆಗೆ ಒಳಗಾದೆ. ಆಗಲೂ ಚಿಕ್ಕ ಹುಡುಗನೆಂದು ನ್ಯಾಯಾಧೀಶರು ಬಿಟ್ಟುಬಿಟ್ಟರು.

ಊರಿಗೆ ಮರಳಿ ಬಂದಾಗ ಬಿ. ಎನ್. ನರಸಿಂಹರೆಡ್ಡಿ ಮುಂತಾದವರ ಜೊತೆ ಸೇರಿ ಮಧುರೆ, ಬಾಗೂರು ಸೇಂದಿ ಅಂಗಡಿ ಸುಟ್ಟುಹಾಕಿದೆವು. ಜನರಿಂದ ಅರಣ್ಯಸತ್ಯಾಗ್ರಹ ಮಾಡಿಸಿ ಕಾಡುಮರ, ಈಚಲಮರ ಕಡಿಸಲಾಯಿತು. ಅಮೃತ್‌ಮಹಲ್ ಕಾವಲಿನಲ್ಲಿ ದನಗಳನ್ನು ಮೇಯಿಸಲಾಯಿತು. ನೀರಗುಂದ, ಕ್ಯಾದಿಗೆರೆ, ದೇವಪುರ ಮುಂತಾದ ಕಾವಲುಗಳಲ್ಲಿ ಹೀಗೆ ಮಾಡಿಸಲಾಯಿತು.

1942ರಲ್ಲಿ ದಿ|| ಭಾಸ್ಕರಾಚಾರ್, ಅವರ ಸೋದರ ಸೂರಾಚಾರ್ ಮತ್ತು ನಾನು ಹೊಸದುರ್ಗ ಮಿಡ್ಲ್ ಸ್ಕೂಲ್‌ನಲ್ಲಿ ಪಿಕೆಟಿಂಗ್ ಮಾಡುವಾಗ ನಮ್ಮನ್ನು ಬಂಧಿಸಿದರು. ಚಿತ್ರದುರ್ಗಕ್ಕೆ ಹೋಗಿ ಕೇಸು ಹಾಕಲು ಅಲ್ಲಿಂದ ತಪ್ಪಿಸಿಕೊಂಡೆ. ಅಲ್ಲಿ ರೆಡ್ಡಿ ಹಾಸ್ಟೆಲ್‌ನ ಜಯರಾಮರೆಡ್ಡಿ ಮತ್ತು ಸ್ನೇಹಿತರು, ನರಸಿಂಹಯ್ಯಂಗಾರ್, ಕೆ. ಎಚ್. ರಂಗನಾಥ್, ಎಸ್. ರಂಗರಾವ್, ಹುಲ್ಲೂರು ಶ್ರೀನಿವಾಸ ಜೋಯಿಸ್ ಮುಂತಾದವರ ಜೊತೆ ಸೇರಿ ಭೂಗತ ಕೆಲಸ, ಕೋರ್ಟ್ ಪಿಕೆಟಿಂಗ್ ಮಾಡುತ್ತಿರಲು ಬಂಧನ ಆಯಿತು. ಚಿತ್ರದುರ್ಗ, ಬೆಂಗಳೂರು ಜೈಲುಗಳಲ್ಲಿ ಡೆಟೆನ್ಯೂ ಆಗಿ ಇದ್ದೆ. 1943ರಲ್ಲಿ ಬಿಡುಗಡೆ ಆದಾಗಲೂ ಚಿತ್ರದುರ್ಗದ ರೇವಣಸಿದ್ದಪ್ಪ, ಪಂಚಾಕ್ಷರಯ್ಯ, ಬಾಗೂರು ಕೆ. ವೆಂಕಟರಾಮಯ್ಯ, ಬಿ. ಎನ್. ನರಸಿಂಹರೆಡ್ಡಿ, ಹೀಗೆ ಐದು ಜನ ಕೂಡಿ ಹೊಸದುರ್ಗ ರೈಲ್ವೆ ಸ್ಟೇಷನ್‌ನಿಂದ ಮೇಲ್ ಬ್ಯಾಗ್ ತರುವ ರನ್ನರ್‌ನಿಂದ ಬ್ಯಾಗ್ ದರೋಡೆ ಮಾಡಿದೆವು. ತಲೆಮರೆಸಿ ಕೊಂಡು ನಾವು ಇರಲು-ಒಂದು ವರ್ಷದನಂತರ ಕೇಸು ಪತ್ತೆ ಆಯಿತು. ಚಿತ್ರದುರ್ಗದಲ್ಲಿ ದೀರ್ಘಕಾಲ ವಿಚಾರಣೆ ಆಗಿ ಕೇಸು ವಜಾ ಆಯಿತು. ನೂರಾರು ಸಾಕ್ಷಿಗಳನ್ನು ತಂದಿದ್ದರು. ಆಗ ನನಗೆ ತುಂಬಾ ಆರ್ಥಿಕ ನಷ್ಟವಾಯಿತು. ಅಲ್ಲಿಗೂ ಸುಮ್ಮನಿರದೆ ನೀರಗುಂದ ಕಾವಲಿನಲ್ಲಿ ಜಾಲಿಮರಗಳನ್ನು ಕಡಿದು ಸರಕಾರವೇ ಇಲ್ಲವೆಂಬಂತೆ ಮಾಡಲಾಯಿತು.

1947ರ ಸೆಪ್ಟೆಂಬರ್‌ನ ಕೊನೆಯ ಸೋಮವಾರ ಹೊಸದುರ್ಗ ತಾಲ್ಲೂಕು ಕಚೇರಿಯ ಮುಂದೆ ಪಿಕೆಟಿಂಗ್ ಮಾಡುತ್ತಿರುವಾಗ ಸರ್ಕಾರದವರು ನಾಲ್ಕು ಸುತ್ತು ಗುಂಡು ಹಾರಿಸಿ ಏಳು ಜನ ಸತ್ತು ಅನೇಕರು ಗಾಯಗೊಂಡರು. ತೀರಿಕೊಂಡವರಲ್ಲಿ ಹೆಚ್ಚಿನವರು ಸಂತೆಗೆ ಬಂದ ಹಳ್ಳಿಯವರು. ಇವರಲ್ಲಿ ಕೆಲವರ ಹೆಸರು ತಿಳಿದಿದೆ. ಕೊಂಡಾಪುರದ ದೊಡ್ಡ ಹನುಮಯ್ಯ ಬಿನ್ ಕರಿಯಣ್ಣ ಸ್ಥಳದಲ್ಲೇ ಸತ್ತ. ಅಲ್ಲದೇ

ಮಾರುಗುಂಡನ ದಿಬ್ಬದ ಗಿರೇತಿಮ್ಮಯ್ಯ ಬಿನ್ ಕರೇತಿಮ್ಮಯ್ಯ, ಗುತ್ತಿಕಟ್ಟೆಯ ಸಣ್ಣಮ್ಮ ಕೋಂ|| ರಂಗಪ್ಪ, ಬಂಟನಗವಿಯ ಕಾಟಪ್ಪ ಬಿನ್ ಮೂಕೀರಪ್ಪ ಸತ್ತವರಲ್ಲಿ ಕೆಲವರು. ಅಲ್ಲದೆ ಗಂಗಮ್ಮ ಕೋಂ|| ವರದಪ್ಪ (ಅತ್ತಿಮಗೆ), ಗಿರೇತಿಮ್ಮಯ್ಯ ಬಿನ್ ಹೋಳಿಗೆ ಕರಿಯಪ್ಪ (ಮಾಚೇನಹಳ್ಳಿ), ಶಂಕರಪ್ಪ ಬಿನ್ ಅಜ್ಜಪ್ಪ (ಹೊನ್ನೇನಹಳ್ಳಿ), ಮಲ್ಲಿಹಳ್ಳಿ ನಿಂಗಪ್ಪ (ಕುರುಬರಹಳ್ಳಿ), ಕುರುಡ ಗೋವಿಂದಪ್ಪ (ದೇವಪುರ), ರಾಮಣ್ಣ ಬಿನ್ ತಿಮ್ಮಣ್ಣ (ನಾಗೇನಹಳ್ಳಿ) ಗುಂಡು ತಗಲಿ ಗಾಯಗೊಂಡವರಲ್ಲಿ ಕೆಲವರು.

1938-39ರಲ್ಲಿ ಧ್ವಜಸತ್ಯಾಗ್ರಹ ಮತ್ತು ಅರಣ್ಯಸತ್ಯಾಗ್ರಹದಲ್ಲಿ ಜೈಲುವಾಸ ಅನುಭವಿಸಿದ ಈ ಭಾಗದ ಕೆಲವರ ಹೆಸರು ಇಲ್ಲಿ ಕೊಟ್ಟಿದೆ: ಬಾಗೂರಿನ ಎಂ. ಕರೀಂ ಖಾನ್ ಪಂಡಿತರು, ಕೆ. ವೆಂಕಟರಾಮಯ್ಯ, ಬಿ. ಎನ್. ನರಸಿಂಹರೆಡ್ಡಿ, ಕರಡಿ ಗೌಡಪ್ಪ, ಮಹಮ್ಮದ್‌ಖಾನ್, ಪಂದಿ ಪರಮಣ್ಣ, ಗೌಡಣ್ಣ ಬಿನ್ ಹೊಟ್ಟೆಬಂಡಪ್ಪ, ಡಿ. ರಾಮಯ್ಯ, ಎಚ್. ಕಿಟ್ಟಪ್ಪ, ಚೌಡಪ್ಪ ಬಿನ್ ಗವೇ ಸಿದ್ದಪ್ಪ, ಕಾಕಾಸಿ ಗೋವಿಂದಪ್ಪ, ನಾಗೇನಹಳ್ಳಿಯ ಎಚ್. ಪುಟ್ಟಯ್ಯ, ನಿಂಗಪ್ಪ ಬಿನ್ ಮಲ್ಲಪ್ಪ, ಗೋವಿಂದಪ್ಪ ಬಿನ್ ಚಿತ್ರಹಳ್ಳಪ್ಪ, ಹನುಮಂತಯ್ಯ ಬಿನ್ ಕರೇತಿಮ್ಮಯ್ಯ, ಕರೇ ತಿಮ್ಮಜ್ಜ ಬಿನ್ ರಂಗಪ್ಪ, ಹೊಸಕುಂದೂರಿನ ಕುಂದೂರು ಗೋವಿಂದಪ್ಪ, ಈರಣ್ಣ ಮತ್ತು ರಾಮಣ್ಣ. ಕೈನಡುಗ್ರಾಮದ ದಿ|| ಭಾಸ್ಕರಾಚಾರ್ ಹಾಗೂ ಸೂರಾಚಾರ್ ಇವರಿಗೆ 1942ರಲ್ಲಿ ಆರು ತಿಂಗಳು ಶಿಕ್ಷೆ ಆಗಿತ್ತು. ಇದಲ್ಲದೆ 1947ರಲ್ಲಿ ಬಂಧಿತರಾದವರೆಂದರೆ, ದಿ|| ಬಿ. ಟಿ. ವೀರಾಚಾರ್ (ಮಾರಬಗಟ್ಟ), ದಿ|| ಚಂಗಯ್ಯ ನಾಯ್ಡು (ಬಲ್ಲಾಳಸಮುದ್ರ), ದಿ|| ಅಲ್ಲಂಪಲ್ಲಿ ನಂಡುಂಡಶೆಟ್ಟಿ (ಹೊಸದುರ್ಗ) ಹಾಗೂ ಹೊಸದುರ್ಗದ ಎಂ. ವಿ. ಮೂಡಲಗಿರಿಯಪ್ಪ, ಎಸ್. ಬಿ. ಕುಬೇರಪ್ಪ, ಎಚ್. ಕೆ. ಭೂಪಾಲ್, ಡಿ. ಬಿ. ತಿಮ್ಮಣ್ಣ, ಎ. ಟಿ. ಭೀಮಣ್ಣ ಹಾಗೂ ಬಾಗೂರಿನ ಎನ್. ಗೂರಪ್ಪ, ಚಿಕ್ಕಯಗಟೆಯ ಜಿ. ಪರಮೇಶ್ವರಯ್ಯ. ಇದೇ ಕಾಲಕ್ಕೆ ಜೈಲಿಗೆ ಹೋಗದಿದ್ದರೂ ಚಳವಳಿಯಲ್ಲಿ ಪಾಲುಗೊಂಡ ಕೆಲವರು ಇವರು: ಬಾಗೂರಿನ ಡಿ. ಬಿ. ನಾಗಪ್ಪ ಮತ್ತು ಎಂ. ಷೇಕ್ ಮುಹಮ್ಮದ್; ಹೊಸದುರ್ಗದ ಬುಡೇನ್‌ಖಾನ್ ಸಾಹೇಬ್ ಮತ್ತು ಅಲ್ಲಂಪಲ್ಲಿ ಈಶ್ವರಶೆಟ್ಟರು; ಬಲ್ಲಾಳಸಮುದ್ರದ ದೊರೆಸ್ವಾಮಿ ನಾಯ್ಡು ಮತ್ತು ಕೃಷ್ಣಪ್ಪ ನಾಯ್ಡು; ಶ್ರೀರಾಮಪುರದ ದಿ|| ಬಸಪ್ಪ.

ಜ್ಞಾಪಕವಿದ್ದವರ ಹೆಸರು ಮಾತ್ರ ಬರೆದಿದ್ದೇನೆ.

ಮೈ. ಚಿ. 16

# ಬಿ. ಎನ್. ನರಸಿಂಹರೆಡ್ಡಿ

ಜನನ : 1918 ಉದ್ಯೋಗ : ಕೃಷಿ ವಿಳಾಸ : ಬಾಗೂರು, ತಾ॥ ಹೊಸದುರ್ಗ



ನಾನು 1936-37ರಲ್ಲಿ ಮಿಡ್ಲ್ ಸ್ಕೂಲಲ್ಲಿ ಓದುತ್ತಿದ್ದಾಗ ನಮ್ಮ ಗ್ರಾಮಕ್ಕೆ ದೊಗ್ಗನಾಳಿನ ದಿ॥ ಕೊಟ್ರಿ ನಂಜಪ್ಪನವರು ರಾಷ್ಟ್ರೀಯ ವಿಚಾರಗಳ ಪ್ರಚಾರಕ್ಕೆ ಬರುತ್ತಿದ್ದರು. ಅವರ ಭಾಷಣ ಕೇಳಿ, ದೇಶಸೇವೆಮಾಡುವ ವಿಚಾರದಿಂದ ಸ್ಕೂಲನ್ನು ಬಿಟ್ಟು, ಅವರ ಜೊತೆ ಪ್ರಚಾರಕ್ಕೆ ಹಳ್ಳಿಹಳ್ಳಿಗೆ ಹೋಗಲಾರಂಭಿಸಿದೆ.

1939ರಲ್ಲಿ ಹೊಳಲ್ಕೆರೆ ತಾಲೂಕು ರಂಗಾಪುರದಲ್ಲಿ ಅರಣ್ಯ ಸತ್ಯಾಗ್ರಹ ಶಿಬಿರವನ್ನು ಸ್ಥಾಪನೆಮಾಡಿದಾಗ ನಮ್ಮ ಗ್ರಾಮದಿಂದ ಕೆ. ವೆಂಕಟರಾಮಯ್ಯ, ಕರಡಿ ಗೌಡಪ್ಪ, ಕಾಕಾಶಿ ಗೋವಿಂದಪ್ಪ ಇವರು ಶಿಬಿರದಲ್ಲಿ ಇದ್ದು ಮೂರು ದಿನ ಉತ್ತಾರು ಇಲ್ಲದ ಈಚಲುಮರಗಳನ್ನು ಕಡಿದೆವು. ಮುಂದೆ ರಾಮಗಿರಿ ಸಮೀಪದ ವಡೇರಳ್ಳಿಯಲ್ಲಿ ಉತ್ತಾರು ಇರುವ 300 ಮರಗಳನ್ನು ಕಡಿದೆವು. ಹೊಳಲ್ಕೆರೆ ಪೋಲಿಸರು ನಮ್ಮನ್ನು 20 ಜನರನ್ನು ದಸ್ತಗಿರಿಮಾಡಿದರು. ದಾವಣಗೆರೆ ಕೋರ್ಟಿಗೆ ಹಾಜರುಮಾಡಲು ನನಗೆ ಮೂರು ವರ್ಷ ಶಿಕ್ಷೆ ಮತ್ತು 3500 ರೂ. ದಂಡ ವಿಧಿಸಿದರು (ಕೆ.ನಂ. 209 ಮತ್ತು 210, 1939-40). ಈ ರೀತಿ 5-10-1939ಕ್ಕೆ ನನಗೆ ಶಿಕ್ಷೆ ಆಗಲು, ಬೆಂಗಳೂರು, ಶಿವಮೊಗ್ಗ, ತೀರ್ಥಹಳ್ಳಿ ಜೈಲುಗಳಲ್ಲಿ ಇದ್ದು, ಕಡೆಗೆ 8-9-1940ರಂದು ಬಿಡುಗಡೆ ಆಯಿತು.

1942-43ರಲ್ಲಿ ಬಾಗೂರು ಸೇಂದಿ ಅಂಗಡಿಯನ್ನು ಸುಟ್ಟೆವಲ್ಲದೆ ದೇವಪುರ ವನದಿಂದ ಮಧುರೆಗೂ ಬಾಗೂರಿಗೂ ಸೇಂದಿ ತರುವ ಗಾಡಿಗಳ ಪೀಪಾಯಿಗಳನ್ನು ಒಡೆದು ಹಾಕಿದೆವು. ಅಲ್ಲದೆ ನಾವು ಐದು ಜನ ಸೇರಿ (ಯಾದಿ ಹಿಂದಣ ಮೈ.ಚಿ. 15ರಲ್ಲಿ ಬಂದಿದೆ —ಸಂ॥) ಹೊಸದುರ್ಗ ರೋಡ್‌ನಿಂದ ಬಾಗೂರು ಮತ್ತು ಹೊಸದುರ್ಗಗಳಿಗೆ ಹೋಗುವ ಪೋಸ್ಟನ್ನು 11-3-1943ರ ಬೆಳಗ್ಗೆ 4-30ಕ್ಕೆ ಇಬ್ಬರು ರನ್ನರ್‌ಗಳಿಂದ ಕಸಿದೆವು. ಮಲ್ಲಪ್ಪನಹಳ್ಳಿಯ ಹುಣಿಸೆಕಟ್ಟೆಯ ಮೇಲೆ ರಾತ್ರಿಯೇ ಹೋಗಿ ಮಲಗಿ ಹೊಂಚುಹಾಕಿ ಈ ಕೆಲಸ ಮಾಡಿದೆವು.

ಒಂದು ವರ್ಷದನಂತರ ರೇವಣಸಿದ್ದಪ್ಪ ಸಿಕ್ಕಿಬಿದ್ದು, ಅದರಿಂದ ನಮ್ಮ ದಸ್ತಗಿರಿ ಆಯಿತು. ಆರು ತಿಂಗಳು ಈ ಬಗ್ಗೆ ಖಟ್ಲೆ ನಡೆಯಿತು. (ಚಿತ್ರದುರ್ಗ ನಂ. 57, 44-45ಗದು) ಕೆ. ಕೆಂಚಪ್ಪ, ಎಚ್. ಎಸ್. ವೆಂಕಟಾಚಲಯ್ಯ ನಮ್ಮ ಪರ ವಕೀಲಿ ನಡೆಸಿದರು. ಕಡೆಗೆ ಖಟ್ಲೆ ಖುಲಾಸೆ ಆಯಿತು.

1947ರಲ್ಲಿ ನಾನೂ ಹೊಸದುರ್ಗದ ಡಾ|| ಜಿ. ವಿ. ಲಿಂಗಣ್ಣ ಇಬ್ಬರೂ ಸೇರಿ ಹುಡುಗರನ್ನು ಸೇರಿಸಿ ಸೇಂದಿ ಮಾರಾಟ, ವನಗಳಲ್ಲಿ ಉತ್ತರುವಾಡುವುದನ್ನೂ ನಿಲ್ಲಿಸಿ ದೆವು. ಬಾಗೂರು, ಮಧುರೆ ಸೇಂದಿ ಅಂಗಡಿ ಸುಟ್ಟೆವು. ನೆಕ್ಕೆನಹಳ್ಳಿಯ ಬಳಿ ಸೇಂದಿ ಗಾಡಿ ನಿಲ್ಲಿಸಿ ಪೀಪಾಯಿ ಒಡೆದು ಅದನ್ನು ಸುಟ್ಟೆವು. ಅನಂತರ ಕಲ್ಕೆರೆ, ಕಬ್ಬಳಗಳ ಅಂಗಡಿ ಸುಟ್ಟೆವು. ಇದಲ್ಲದೆ ಕಡೂರು ತಾಲೂಕು ಬಿಟ್ಟೇನಹಳ್ಳಿಯ ಬಳಿ ಕೊಡಲಿ ಯಿಂದ ಸೇಂದಿ ಗಾಡಿಯೊಂದನ್ನು ನಿಲ್ಲಿಸಿ ಪೀಪಾಯಿ ಒಡೆದೆನು. ಅಲ್ಲಿಂದ ಊರಿಗೆ ಬಂದಿರಲು ನನ್ನನ್ನೂ, ಅದರ ಹಿಂದೆ ಜಿ. ವಿ. ಲಿಂಗಣ್ಣ, ಡಿ. ಬಿ. ತಿಮ್ಮಾಜಿ, ಬಸಪ್ಪ ಇವರನ್ನೂ ಬಂಧಿಸಿದರು. ಆ ದಿನ ಸಾಯಂಕಾಲ ಹೊಸದುರ್ಗ ಊರ ಜನರು ತಮ್ಮನ್ನೂ ಬಂಧಿಸಬೇಕೆಂದು ಹೇಳಿ ಭಾರೀ ಸಂಖ್ಯೆಯಲ್ಲಿ ಮೆರವಣಿಗೆ ಮಾಡಿದರು. ನಮ್ಮನ್ನು ಚಿತ್ರದುರ್ಗಕ್ಕೆ ಒಯ್ದು ಅಲ್ಲಿಂದ ಬೆಂಗಳೂರು ಜೈಲಿನಲ್ಲಿ 15 ದಿನ ಇಟ್ಟು, ಆಮೇಲೆ ಬಿಟ್ಟರು. ಬಂದನಂತರ, ಐದೈದು ಜನರ ತಂಡಗಳಲ್ಲಿ ತಾಲೂಕು ಕಚೇರಿಯ ಮೇಲೆ ಧ್ವಜ ಹಾರಿಸಲು ಕಾರ್ಯಕ್ರಮ ಹಾಕಿಕೊಟ್ಟೆ. ಹೀಗೆ ಮೊದಲ ತಂಡದ ದಸ್ತಗಿರಿ ಆಯಿತು. 29-9-1947ರಂದು ಸೋಮವಾರ ಸಂತೆಯ ಕಾಲಕ್ಕೆ ನಮ್ಮ ತಾಯಿ ಮಂಗಮ್ಮ ತಾಲೂಕು ಕಚೇರಿಯ ಮೇಲೆ ಧ್ವಜ ಹಾರಿಸಲು ಮೆರವಣಿಗೆಯಲ್ಲಿ ಹೊರ ಟಾಗ ಸಾವಿರಾರು ಜನ ಸೇರಿದರು. ಪೋಲಿಸರ ಮೇಲೆ ಕಲ್ಲುಗಳನ್ನು ಎಸೆಯಲಾರಂಭಿಸಿ ದರಲ್ಲದೆ ಗಾಡಿಗಳ ಕಣಿಗೆಗಳನ್ನು ಕೈಯಲ್ಲಿ ಹಿಡಿದುಕೊಂಡು ನಿಂತರು. ಗೋಳೀಬಾರ್ ಆಯಿತು. ನಾನು ಆಗ ಕಾಂಗ್ರೆಸ್ ಆಫೀಸಿನಲ್ಲಿ ಇದ್ದೆ. ಆಸ್ಪತ್ರೆಗೆ ಹೋಗಿ ಗಾಯ ಗೊಂಡವರನ್ನು ಕಂಡೆ. ವಿಜಯಾ ಬಸ್ಸಿನಲ್ಲಿ ಕೆಲವರನ್ನು ಚಿತ್ರದುರ್ಗಕ್ಕೆ ಒಯ್ಯಲು ವ್ಯವಸ್ಥೆ ಆಯಿತು. ಅನೇಕರು ಸತ್ತರು. ಈ ದುರಂತದನಂತರ ಹೊಸದುರ್ಗದಲ್ಲಿ ಸತ್ಯಾಗ್ರಹ ನಿಂತಿತು. ನಾನು ರಾಣೆಬೆನ್ನೂರು ಶಿಬಿರಕ್ಕೆ ಹೋಗಿದ್ದೆ. ಅಲ್ಲಿ ಚಿತ್ರದುರ್ಗದ ದುಮ್ಮಿ ಮುರಿಗಪ್ಪ ಶಿಬಿರದ ವ್ಯವಸ್ಥಾಪಕರು. ಅಲ್ಲಿಂದ ಮುಂದೆ ಹುಬ್ಬಳ್ಳಿ ಶಿಬಿರಕ್ಕೂ ಹೋದೆ. ಅಲ್ಲಿ ಶಿವಮೊಗ್ಗೆಯ ಎಚ್. ಎಸ್. ರುದ್ರಪ್ಪ, ಗಿರಿಮಾಜಿರಾವ್ ವ್ಯವ ಸ್ಥಾಪಕರಾಗಿದ್ದರು. ಸತ್ಯಾಗ್ರಹ ನಿಂತಮೇಲೆ ಊರಿಗೆ ಮರಳಿದೆ.

ವೈ.ಚಿ. 17

# ಎನ್. ಉಗ್ರಯ್ಯ

ಜನನ : ಸು. 1914 ಉದ್ಯೋಗ : ನಿವೃತ್ತ ಅಧ್ಯಾಪಕ ವಿಳಾಸ : ಗೊರ್ಲಡ್ಕು, ತಾ॥ ಹಿರಿಯೂರು

---



ನಾನು ಮೊಟ್ಟಮೊದಲು ಸಂಗ್ರಾಮಕ್ಕೆ ಧುಮುಕಿದುದು 1939ರಲ್ಲಿ ನಡೆದ ಅರಣ್ಯ ಸತ್ಯಾಗ್ರಹದಲ್ಲಿ. ಅದಕ್ಕೂ ಮುಂಚೆ ಭಾಗವಹಿಸುವ ಆವೇಶವಿತ್ತು, ಆದರೆ ಹಿಂಜರಿಯುತ್ತಿದ್ದೆ. ಅಂದಿನ ಸತ್ಯಾಗ್ರಹಕ್ಕೆ ನಾನು ಮುಖಂಡನಾಗಿ, ನಮ್ಮ ಹಳ್ಳಿಯ ಸುತ್ತಮುತ್ತ ಹಳ್ಳಿಯ ಕೆಲವು ಮುಖಂಡರನ್ನು ಒಳಗೊಂಡು ಭಾಗವಹಿಸಿದೆವು. ಈ ಚಳವಳಿ ನಡೆದದ್ದು ಸೆಪ್ಟಂಬರ್‌ನಲ್ಲಿ. ನಾನು, ಇತರ 15 ಜನ ಅಂದು ದೊಣ್ಣೆ, ಕೊಡಲಿ ಮೊದಲಾದ ಆಯುಧಗಳ ಸಮೇತ ಕಾಟನಾಯಕನ ಹಳ್ಳಿಯ ಕಾಡಿನಲ್ಲಿ ಸೇರಿ ಈಚಲಮರಗಳನ್ನು ಕತ್ತರಿಸಿದೆವು. ಕಸ್ತೂರಿರಂಗಪ್ಪನ ಹಳ್ಳಿಯ ಕೆಂಗತಿಮ್ಮಯ್ಯ, ಕಾಟನಾಯಕನ ಹಳ್ಳಿಯ ಕೆ. ಕೆಂಚಪ್ಪ ಮತ್ತು ಗೊರ್ಲಡ್ಕಿನ ಸಿ. ರಂಗಯ್ಯ ಮೊದಲಾದ 15 ಜನರೂ ಬಂಧಿಸಲ್ಪಟ್ಟೆವು. ನಮ್ಮನ್ನು ಹಿರಿಯೂರು ಪೋಲಿಸ್ ಸ್ಟೇಷನ್‌ಗೆ ತೆಗೆದುಕೊಂಡು ಹೋಗಿ ಸಣ್ಣ ಕೋಣೆಯಲ್ಲಿ ದೂಡಿದರು. ಮಲಮೂತ್ರಗಳಿಗೆ ಬಿಡದೆ, ಎರಡು ಮೂರು ದಿವಸ ಊಟ ಕೊಡದೆ, ಅಮಾನುಷ ರೀತಿಯಲ್ಲಿ ನಡೆದುಕೊಂಡರು. ಇನ್ನೊಂದು ಕಡೆ ಆ ಸಣ್ಣ ಕೋಣೆಯಲ್ಲಿ ಕೂರೆ, ತಗಣೆ ಮತ್ತು ಸೊಳ್ಳೆಗಳ ಕಾಟ ಹೇಳಲಸದಳ. ಏಳು ದಿವಸಗಳನಂತರ ನಮ್ಮನ್ನು ಚಿತ್ರದುರ್ಗದ ಲಾಕಪ್ಪಿಗೆ ತಂದರು. ಒಂದು ತಿಂಗಳವರೆಗೂ ನಮ್ಮನ್ನು ಸತಾಯಿಸಿ 18 ತಿಂಗಳು ಕಠಿಣ ಸಜ, 500 ರೂ. ಜುಲ್ಮಾನೆಯನ್ನು ಚಿತ್ರದುರ್ಗದ ಕೋರ್ಟಿನಲ್ಲಿ ವಿಧಿಸಿದರು. ಅಲ್ಲಿಂದ ನಮ್ಮನ್ನು ಬೆಂಗಳೂರಿನ ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. ಅದೇ ವೇಳೆಗೆ ಸರಿಯಾಗಿ ಮಹದೇವ ದೇಸಾಯಿಯವರು ಬಂದಿದ್ದರು. ಅವರು ನಮ್ಮನ್ನು ಭೇಟಿಮಾಡಿ ಕಷ್ಟನಷ್ಟಗಳನ್ನು ವಿಚಾರಿಸಿದರು. ಅವರು ನಮ್ಮ ಗ್ರಾಮಕ್ಕೂ ಭೇಟಿ ನೀಡಿ ಅಲ್ಲಿನ ಕುಂದುಕೊರತೆಗಳನ್ನು ಪರಿಶೀಲಿಸಿದರು. ನಾವು ಜೈಲಿನಲ್ಲಿ ಇದ್ದಾಗ ಪೊಲಿಸಿನವರು ನಮ್ಮ ಗ್ರಾಮಗಳಿಗೆ ನುಗ್ಗಿ ದೌರ್ಜನ್ಯದಿಂದ ವರ್ತಿಸಿದರು; ನಮ್ಮ ಮನೆಗಳಿಗೆಲ್ಲಾ ನುಗ್ಗಿ, ಜಪ್ತಿ ಮಾಡಿ, ಮನೆಯಲ್ಲಿದ್ದ ಹೆಂಗಸರು ಮಕ್ಕಳನ್ನು ಹೆದರಿಸಿ,

ಕೈಗೆ ಸಿಕ್ಕ ಪಾತ್ರೆ ಮತ್ತು ಜಿಲಿಬಿಳುವ ಅನೇಕ ಸಾಮಾನುಗಳನ್ನು ತೆಗೆದುಕೊಂಡು ಹೋದರೆಂದು ತಿಳಿದುಬಂತು.

ಅಲ್ಲಿಂದ ಜೈರಮಂಗಲ ಪ್ರಾಜೆಕ್ಟ್‌ಗೆ ಕರೆದುಕೊಂಡು ಹೋಗಿ ಕೆರೆಕಾಲುವೆ ತೆಗೆಯಲು ನಮ್ಮನ್ನು ನೇಮಿಸಿದರು. ಉರಿವ ಬಿಸಿಲಿನಲ್ಲಿ, ಸುಡುತ್ತಿರುವ ಧೂಳಿನಲ್ಲಿ ಕಾಲಿಗೆ ಚಪ್ಪಲಿಗಳಿಲ್ಲದೆ, ಕುಡಿಯಲು ನೀರಿಲ್ಲದೆ, ಊಟ ಸಕಾಲಕ್ಕೆ ದೊರೆಯದೆ ನಮ್ಮನ್ನು ನಾಯಿನರಿಗಳಿಗೂ ಕೀಳಾಗಿ ನಡೆಸಿಕೊಂಡರು. ಅಲ್ಲಿನ ಕೆಲಸವೆಲ್ಲಾ ಮುಗಿದ ಮೇಲೆ ಮತ್ತೆ ಸೆಂಟ್ರಲ್ ಜೈಲಿನಲ್ಲಿ ಬಂಧಿಸಿದರು. ಆ ವೇಳೆಗೆ ಸರಿಯಾಗಿ ಜಯ ಚಾಮರಾಜೇಂದ್ರರ ಪಟ್ಟಾಭಿಷೇಕ ನಡೆಯುವಾಗ ಎಲ್ಲ ರಾಜಕೀಯ ಕೈದಿಗಳನ್ನು ಬಿಡುವಂತೆ ನಮ್ಮನ್ನು ಬಿಟ್ಟರು. ಬಿಟ್ಟಮೇಲಂತೂ ನನಗೆ ಮನೆಯಲ್ಲಿ ನಡೆದ ಘಟನೆ ಗಳನ್ನು ತಿಳಿದು ರಕ್ತ ಕುದಿದು, ಸರ್ಕಾರದ ವಿರುದ್ಧ ಸೇಡುತೀರಿಸಿಕೊಳ್ಳಲು ಸಮಯ ವನ್ನು ಕಾಯುತ್ತ ಅನೇಕರನ್ನು ಸಂಗ್ರಾಮಕ್ಕೆ ಹುರಿದುಂಬಿಸಲು ಮೊದಲುಮಾಡಿದೆ. 1942ರ ಚಳವಳಿಯಲ್ಲೂ ಭಾಗವಹಿಸಿದೆನು. ಆಗ ರಾಷ್ಟ್ರೀಯ ಹೆದ್ದಾರಿ ನಂ. 4ರ ತಂತಿ ಕಂಬಗಳನ್ನು ಹತ್ತಿ ತಂತಿ ಕತ್ತರಿಸುವುದು ಪ್ರಮುಖ ಕಾರ್ಯವಾಯಿತು. ಹೇಮಾವತಿಯ ಸೇಂದಿ ಅಂಗಡಿಗೆ ಬೆಂಕಿ ಇಟ್ಟು ಭಸ್ಮಮಾಡಿದೆವು. ಅಂತೂ ಸರ್ಕಾರದ ವಿರುದ್ಧ ಹೋರಾಟ ಈ ಮೂಲಕವಾಗಿ ಸಾಗಿತ್ತು. ಹಾಗೆಯೇ ನಮ್ಮ ಗ್ರಾಮದವರ ಸಹಕಾರವೂ ಅಷ್ಟೇ ಮೇಲ್ಮಟ್ಟದ್ದು. ನಮ್ಮನ್ನು ಹಿಡಿಯಲು ಬಂದಾಗ ಯಾವ ಸುಳಿವನ್ನೂ ಕೊಡು ತ್ತಿರಲಿಲ್ಲ. ಸುಳಿವಿರಲಿ, ಪೋಲಿಸರಿಗೆ ಕುಡಿಯಲು ಒಂದು ತೊಟ್ಟು ನೀರನ್ನೂ ಕೊಡದೆ ಅವರನ್ನು ಹಿಂದಿರುಗಿಸುತ್ತಿದ್ದರು. ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಮತ್ತು ಸುವರ್ಣ ಮುಖಿ ನದಿಗೆ ಕಟ್ಟಿರುವ ಜವನಗೊಂಡನಹಳ್ಳಿ ಹತ್ತಿರವಿರುವ ಸೇತುವೆಯನ್ನು ಛಿದ್ರ ಮಾಡಲು ಮದ್ದನ್ನು ಇಟ್ಟು ಸಿಡಿಸಿದಾಗ ಫಲಕಾರಿಯಾಗಲಿಲ್ಲ. ಹಿರಿಯೂರ ಹತ್ತಿರ ವಿರುವ ಮದ್ದೇರಹಳ್ಳಿ ಸೇತುವೆಯನ್ನು ಒಡೆಯುವ ಸಂದರ್ಭದಲ್ಲಿ ಸಿ. ರಂಗಯ್ಯ ಮತ್ತು ಗೋವಿಂದಸ್ವಾಮಿ ಪೋಲಿಸಿನವರ ಕೈಗೆ ಸಿಕ್ಕಿಬಿದ್ದರು, ನಾನು ಮತ್ತು ಕೆಲವರು ಸಿಗದೆ ಪರಾರಿಯಾದೆವು. ನಾವುಗಳು ಊರಿಗೆ ದೂರವಾಗಿ, ಅನೇಕ ಕಡೆಗಳಲ್ಲಿ ಅಸಹಕಾರ ಚಳವಳಿಗೆ ಬೆಂಬಲಿಗರಾಗಿ ಕೆಲಸ ಮಾಡುತ್ತಿದ್ದೆವು. ಆಗ ನಮ್ಮಂತೆ ಇನ್ನೂ ಅನೇಕ ಗುಂಪುಗಳು ಕೆಲಸಮಾಡುತ್ತಿದ್ದವು.

ಮೈ.ಚಿ. 18

# ಬಸವರಾಜ ಹಿರೇಮಠ

ಜನನ : 1927 ಉದ್ಯೋಗ : ? ವಿಳಾಸ : ಬಬ್ಬೂರು, ತಾ|| ಹಿರಿಯೂರು



ಧಾರವಾಡ ಜಿಲ್ಲಾ ನವಲಗುಂದದಲ್ಲಿ ನಾನು ಹುಟ್ಟಿದ್ದು. ನನ್ನ ಶೈಶವದ ದಿನಗಳಲ್ಲೇ ನಮ್ಮ ಹಿರಿಯರು ಬರಗಾಲದ ಕಾರಣ ವಲಸೆಬಂದು ಗುಂಪಿನಲ್ಲಿ ಸೇರಿ ಚಿತ್ರದುರ್ಗ ಜಿಲ್ಲೆಯಲ್ಲಿ ನೆಲಸಿದರು. 1932ರಲ್ಲಿ ನನ್ನನ್ನು ಚಿತ್ರದುರ್ಗದ ಶ್ರೀಮುರುಘಾರಾಜೇಂದ್ರ ಸ್ವಾಮಿಗಳ ಮಠಕ್ಕೆ ದಾನಮಾಡಿದರು. ತಿಪಟೂರಲ್ಲಿರುವ ಮಠದ ಸಂಸ್ಕೃತ ಪಾಠಶಾಲೆಯಲ್ಲಿ ಓದುತ್ತಿದ್ದಾಗಲೇ, ಅಲ್ಲಿನ ಗ್ರಂಥಾಲಯದ ಪುಸ್ತಕ ಭಂಡಾರದಲ್ಲಿನ ಪುಸ್ತಕಗಳನ್ನು ಓದಿ ಧಾರ್ಮಿಕ, ರಾಜಕೀಯ ಪ್ರಜ್ಞೆಗಳನ್ನು ಬೆಳೆಸಿಕೊಂಡೆನಲ್ಲದೆ ಚರ್ಚಾಸ್ಪರ್ಧೆಯಲ್ಲಿ ಪಾಲುಗೊಂಡು ವಕ್ತೃತ್ವವನ್ನೂ ಬೆಳೆಸಿಕೊಂಡೆ.

1942ರಲ್ಲಿ ತಿಪಟೂರಿನ ಎರಡು ವಿದ್ಯಾರ್ಥಿನಿಲಯಗಳಲ್ಲಿ ಇದ್ದ ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳು ಚಳವಳಿಯಲ್ಲಿ ಮುಂದಾಗಿದ್ದರು. ಆಗ ಡಿ. ಎಸ್. ಮಲ್ಲಪ್ಪ, ಟಿ. ದಾಸಪ್ಪ, ಎಸ್. ಆರ್. ಮಲ್ಲಪ್ಪ ಊರಲ್ಲಿ ಪ್ರಮುಖ ಕಾಂಗ್ರೆಸ್ ನಾಯಕರು. ಈಗಿನ ರಾಜ್ಯ ಹೈಕೋರ್ಟ್ ಜಜ್ ಡಿ. ಎಸ್. ಚಂದ್ರಶೇಖರ್ ಅವರು ಆಗ ಬನಾರಸ್‌ನಿಂದ ಶಿಕ್ಷಣ ತ್ಯಜಿಸಿ ಬಂದು ಚಳವಳಿಯಲ್ಲಿ ಪಾಲುಗೊಂಡಿದ್ದರು. ಒಮ್ಮೆ ವಿದ್ಯಾರ್ಥಿಗಳು ಬೆಂಗಳೂರು–ಪುಣೆ ರೈಲುಗಾಡಿ ತಡೆಯಲು ಯತ್ನಿಸಲು ಅದರಲ್ಲಿದ್ದ ಸೈನಿಕರು ಗುಂಡು ಹಾರಿಸಿದರು. ಎರಡು-ಮೂರು ಜನರಿಗೆ ಗುಂಡು ತಗಲಿತು. ರೈಲು ಮುಂದೆ ಸಾಗಿತಾದರೂ ಅಲ್ಲಿ ನೆರೆದ 4–5 ಸಾವಿರ ಜನ ರೈಲ್ವೆ ಗುಡ್ಸ್‌ಶೆಡ್ ಮತ್ತು ರೈಲ್ವೆ ಸ್ಟೇಶನ್‌ಗಳಿಗೆ ಬೆಂಕಿ ಇಟ್ಟರು. ತುಮಕೂರಿನಿಂದ ಸೈನ್ಯ ಮತ್ತು ಅಗ್ನಿಶಾಮಕ ದಳ ಬರುವುದರಲ್ಲಿ ಈ ಕಟ್ಟಡಗಳು ಪೂರ್ತಿ ಸುಟ್ಟುಹೋದವು. ಹಾಸ್ಟಲ್‌ಗಳು ಬರಿದಾಗಿ ವಿದ್ಯಾರ್ಥಿಗಳು ಊರು ಬಿಟ್ಟರು. ಮುಂದೆ ಡಿ. ಎಸ್. ಚಂದ್ರಶೇಖರರ ಅಧ್ಯಕ್ಷತೆಯಲ್ಲಿ ವಿದ್ಯಾರ್ಥಿಗಳ ಒಂದು ಖಂಡನಾಸಭೆ ಕೂಡ ಆಯಿತು.

ಈ ಘಟನೆಗಳಿಂದ ಸ್ಫೂರ್ತಿಪಡೆದ ನನ್ನಲ್ಲಿ ರಾಷ್ಟ್ರೀಯ ಪ್ರವೃತ್ತಿ ಬಲವಾಗಿತ್ತು. 1947ರಲ್ಲಿ ಎಚ್. ಸಿದ್ದಯ್ಯ ಮತ್ತು ಕೆ. ಜಿ. ಒಡೆಯರರ ನೆರವಿನಿಂದ ಕೆಳದಿ ರಾಜಗುರು ಹಿರೇಮಠದಲ್ಲಿ ಏಜಂಟನಾಗಿ ನೇಮಕಗೊಂಡಿರಲು, ಚಳವಳಿಯು ಆರಂಭ ಆದಾಗ

ಒಡೆಯರ್‌ರು ಒಮ್ಮೆ ನನಗೆ ಕಾಗೋಡಿಗೆ ಬರಲು ಪತ್ರ ಬರೆದರು. ನಾನು ಕಾಗೋಡಿಗೆ ಹೋಗಲು ಅಲ್ಲಿಂದ ವೇಷಮರೆಸಿ ನಾವಿಬ್ಬರೂ ಸಾಗರಕ್ಕೆ ಹೋದೆವು. ಅಲ್ಲಿ ಮರುದಿನ ಸಂತೆಯ ಕಾಲಕ್ಕೆ ಬಹಿರಂಗ ಸಭೆ ಏರ್ಪಡಿಸಿದಾಗ ಒಡೆಯರರ ಬಂಧನವಾಗಲು ಅವರು ಎ. ಆರ್. ಬದರೀನಾರಾಯಣ ಅಯ್ಯಂಗಾರ್ ಮತ್ತು ನನ್ನನ್ನು ಕರೆದು ಸಭೆ ಸಾಗಿಸಿ, ಚಳವಳಿ ಮುಂದುವರಿಸಲು ಸೂಚಿಸಿದರು. ಮರೂರು ರುದ್ರಪ್ಪಗೌಡರ ಅಧ್ಯಕ್ಷತೆಯಲ್ಲಿ ಬಹಿರಂಗ ಸಭೆಯಾಗಿ ಅದರಲ್ಲಿ ಬದರೀನಾರಾಯಣ ಅಯ್ಯಂಗಾರ್, ಎಚ್. ಎಲ್. ವೀರಭದ್ರಪ್ಪ ಮತ್ತು ನಾನು ಮಾತನಾಡಿದೆವು. ತಾ|| ಕಚೇರಿಯ ಮೇಲೆ ಧ್ವಜ ಹಾರಿಸುವ ಕಾರ್ಯಕ್ರಮ ಸಭೆಯಲ್ಲಿ ನಿರ್ಣಯಿಸಲ್ಪಟ್ಟಿತು.

ಮರುದಿನ ಬೆಳಗ್ಗೆ 2–3 ಸಾವಿರ ಜನ (ಸಾಗರದಲ್ಲಿ ಆಗ ಪ್ಲೇಗಿನ ಹಾವಳಿ ಇದ್ದರೂ ಲೆಕ್ಕಿಸದೆ) ಕಚೇರಿಯ ಮುಂದೆ ನೆರೆದಿರಲು ಬದರೀನಾರಾಯಣ ಅಯ್ಯಂಗಾರ್‌ರ ಹಿರಿತನದಲ್ಲಿ ಕಚೇರಿಯ ಮೇಲೆ ಧ್ವಜ ಏರಿಸುವ ಚಳವಳಿ ಆರಂಭಿಸಿ ಬಂಧಿತರಾದೆವು. ಕೋರ್ಟಿನಲ್ಲಿ ನಮಗೆ ಎರಡು ತಿಂಗಳು ಶಿಕ್ಷೆ ಆಯಿತು. ಅಲ್ಲಿಯ ಸಬ್‌ಜೈಲ್‌ನಲ್ಲಿ ಇಲಿ ಬಿದ್ದ ವಾರ್ತೆ ಕೇಳಿದ್ದ ನಾವು ಜೈಲಿಗೆ ಹೋಗಲೊಪ್ಪದೆ ರಸ್ತೆಯಲ್ಲೇ ಮುಷ್ಕರ ಹೂಡಿ ಕುಳಿತೆವು. ಸಾಗರ ಸಿನಿಮಾ ಮಂದಿರವನ್ನೇ ಜೈಲಾಗಿ ಪರಿವರ್ತಿಸಿ ಅಲ್ಲಿ ನಮ್ಮನ್ನು ಇಟ್ಟರು. 3–4 ದಿನಗಳೊಳಗೆ ಹೊಸನಗರ, ಸೊರಬ. ಶಿಕಾರಿಪುರ ತಾ||ಗಳಿಂದ ಸತ್ಯಾಗ್ರಹಿಗಳು ಬಂದು ಸೇರಿ. 100–200 ಜನರಿಂದ ಈ ಜೈಲು ತುಂಬಿತು. ಮುಂದೆ 23 ಜನರನ್ನು ಬೆಂಗಳೂರು ಜೈಲಿಗೆ ಸ್ಥಳಾಂತರಿಸಿದರು. ಮುಂದೆ ಶೀಘ್ರದಲ್ಲಿಯೇ ಸರಕಾರಕ್ಕೂ ಕಾಂಗ್ರೆಸ್ಸಿಗೂ ಒಪ್ಪಂದ ಆಗಿ ನಮ್ಮ ಬಿಡುಗಡೆ ಆಯಿತು.

ವೈ.ಚಿ. 19

## ಎಸ್. ಗೋವಿಂದ ರೆಡ್ಡಿ

ಜನನ: 1911 ಉದ್ಯೋಗ: ಕೃಷಿ ವಿಳಾಸ: ಚರ್ಚ್ ಬಡಾವಣೆ, ಚಿಕ್ಕಪ್ಪ ಬಿಲ್ಡಿಂಗ್, ಚಿತ್ರದುರ್ಗ

---

ಹಿರಿಯೂರು ತಾ|| ಮರಡಿಹಳ್ಳಿಯವನಾದ ನಾನು 1936ರಲ್ಲೇ ಕಾಂಗ್ರೆಸ್ ಸೇರಿದೆನು. ಆಗಿನಿಂದ (1937) 1948ರ ವರೆಗೂ ನಾನು ಸ್ಥಳೀಯ ಕಾಂಗ್ರೆಸ್ ಕಮಿಟಿಯ ಅಧ್ಯಕ್ಷನಾಗಿದ್ದೆನು ಮತ್ತು ಸತ್ಯಾಗ್ರಹ, ಅಸ್ಪೃಶ್ಯತಾ ನಿವಾರಣೆ, ಖಾದಿ-ಗ್ರಾಮೋದ್ಯೋಗ, ಕ್ಷಾಮಪರಿಹಾರ ಮುಂತಾದ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತ ಇದ್ದೆನು.

1939ರಲ್ಲಿ ನನ್ನ ಊರಲ್ಲಿ ಈಚಲುಮರ ಕಡಿದು ಜಂಗಲ್ ಸತ್ಯಾಗ್ರಹ ಹಾಗೂ ಸಾರಾಯಿ ಅಂಗಡಿ ಪಿಕೆಟಿಂಗ್ ಜೋರಾಗಿ ನಡೆಯಿತು. ನನ್ನ ಗ್ರಾಮದಿಂದಲೇ 100 ಜನ ಸತ್ಯಾಗ್ರಹದಲ್ಲಿ ಪಾಲು ಗೊಂಡು ಅನೇಕರಿಗೆ ಶಿಕ್ಷೆ ಆಯಿತು. ಆ ಪೈಕಿ ಪಿ. ಸೀತಾರಾಮ ರೆಡ್ಡಿ, ಡಿ. ನರಸಿಂಹಯ್ಯ ಮತ್ತು ನಾನು ಒಬ್ಬರಾದನಂತರ ಒಬ್ಬರು ತಾಲ್ಲೂಕು ಡಿಕ್ಟೇಟರರಾಗಿ ಘೋಷಿಸಿಕೊಂಡು ಸತ್ಯಾಗ್ರಹ ವನ್ನು ನಡೆಸಿದೆವು. ನಮಗೆ ಮೂವರಿಗೂ ಅಲ್ಲದೆ ಎಂ. ನಾರಾಯಣ ರೆಡ್ಡಿ, ಪಂಡಿತ ಬಾಲಪ್ಪ, ಯಾತ್ರಾ ಸಿದ್ದಪ್ಪ, ಈ ರೀತಿ ಒಂದೇ ಊರಿನ 7 ಜನಕ್ಕೆ ಎರಡೂವರೆ ವರ್ಷ ಶಿಕ್ಷೆಯನ್ನು 14-10-1939ರಂದು ಜಿಲ್ಲಾ ಮೆಜಿಸ್ಟ್ರೇಟರು ವಿಧಿಸಿದರು. ಈ ಕಾಲಕ್ಕೆ ನನ್ನ ಪತ್ನಿಯು ಕೂಡ ಸೇಂದಿ ಪಿಕೆಟಿಂಗ್‌ನಲ್ಲಿ ಪಾಲುಗೊಂಡಳು. ಆಕೆ ಗರ್ಭಿಣಿ ಇದ್ದುದರಿಂದ ಅವಳನ್ನು ಬಂಧಿಸಲಿಲ್ಲ. ನನ್ನ ಒಂದನೆಯ ಸೋದರ ಕೃಷ್ಣ ರೆಡ್ಡಿ, ಎರಡನೆಯ ಸೋದರ ರಾಮಕೃಷ್ಣ ರೆಡ್ಡಿ ಇವರೂ ತಮ್ಮ ವ್ಯವಸಾಯ, ಶಿಕ್ಷಣಗಳನ್ನು ತ್ಯಜಿಸಿ ಪಿಕೆಟಿಂಗ್‌ನಲ್ಲಿ ಪಾಲುಗೊಂಡರು. ನಮ್ಮ ಗ್ರಾಮದಿಂದ ಅನೇಕ ಜನ ಈ ಕಾಲದಲ್ಲಿ ಶಿಕ್ಷೆಗೆ ಒಳಗಾದರು. 11 ತಿಂಗಳ ಅನಂತರ ನನ್ನ ಬಿಡುಗಡೆ ಆಯಿತು.



1942ರಲ್ಲಿ ಸರಕಾರವನ್ನು ಬುಡಮೇಲು ಮಾಡುವ ಚಳವಳಿಯಲ್ಲಿ ಚಿತ್ರದುರ್ಗ ಜಿಲ್ಲಾ ಕಚೇರಿಯನ್ನು ವಶಪಡಿಸಿಕೊಳ್ಳಬೇಕೆಂದು ನಮ್ಮ ಯತ್ನವಾಗಿ, ಮಿಲಿಟರಿ ಬರದಂತೆ ತಡೆಯಲು ಸೇತುವೆ ಒಡೆಯಲು ಯೋಜನೆ ಹಾಕಿದೆವು. ಬಳ್ಳಾರಿ ಜಿಲ್ಲೆ ಯಿಂದ ಸಿಡಿಮದ್ದನ್ನು ತರಿಸಿದೆವು. ಆದರೆ ಆ ಮದ್ದು ಸಿಡಿಯದೆ ಸೇತುವೆ ಹಾರಿಸಲು ಆಗಲಿಲ್ಲ. ಚಳ್ಳಕೆರೆ-ಹಿರಿಯೂರು ರಸ್ತೆಯಲ್ಲಿ ಎರಡು ಸಲ ಟೆಲಿಗ್ರಾಫ್ ತಂತಿ ಕತ್ತರಿಸಿ ದೆವು. ಹತ್ತು ಜನರ ಗುಂಪಿನಲ್ಲಿ ಹೋಗುತ್ತಿದ್ದೆವು. ನನ್ನ ಮೇಲೆ ವಾರಂಟ್ ಹೊರಟು, ನಾನು ಮನೆಗೆ ಬಾರದೇ ಇದ್ದೆ. ಇದೇ ಕಾಲಕ್ಕೆ ನನ್ನ ಹೆಂಡತಿ ಹೆತ್ತು, ಹಡೆದ ಕೂಸಿಗೆ ಅಸೌಖ್ಯವೆಂದು ತಿಳಿದು ಒಮ್ಮೆ ರಾತ್ರಿ ನಾನು ಮನೆಗೆ ಹೋದಾಗ ಕಾದಿದ್ದ ಪೋಲಿಸ ರಿಂದ ನನ್ನ ಬಂಧನ ಆಯಿತು. ಬೆಂಗಳೂರು ಸೆಂಟ್ರಲ್ ಜೈಲ್‌ನಲ್ಲಿ ಏಳು ತಿಂಗಳು ಇದ್ದೆ. ಜೊತೆಯಲ್ಲಿ ಚಿತ್ರದುರ್ಗದ ಹುಲ್ಲೂರು ಶ್ರೀನಿವಾಸ ಜೋಯಿಸರೂ, ಎಸ್. ರಂಗರಾಯರೂ ಇದ್ದರು. ಜೋಯಿಸರಿಗೆ ಕೈಕಾಲು ಹಿಡಿದು ಏಳಲು ಆಗುತ್ತಿರಲಿಲ್ಲ. ಅಲ್ಲಿ ನಾನು ಅವರ ಸೇವೆ ಮಾಡುತ್ತಿದ್ದೆ. ಮುಂದೆ ನನ್ನ ತಂದೆ ಮತ್ತು ಹೆಂಡತಿಗೆ ಅಸೌಖ್ಯ ಆಗಲು ಪೆರೋಲ್‌ನಿಂದ ಊರಿಗೆ ಬಂದೆ. ನನ್ನ ತಂದೆ ದೈವಾಧೀನರಾದರು. ಈ ಕಾಲದಲ್ಲಿ ನಾವು ಮೂವರು ಸೋದರರೂ ಚಳವಳಿಯಲ್ಲಿ ಪಾಲುಗೊಂಡಿದ್ದೆವು.

1947ರಲ್ಲಿ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿ, ಚಳವಳಿ ಸೇರಿದವರಿಗಾಗಿ ಕ್ಯಾಂಟೀನು ನಡೆಸುವ ಜವಾಬ್ದಾರಿ ಹೊತ್ತುಕೊಂಡೆ. ಆ ಕಾಲದಲ್ಲಿ ನನ್ನ ತಾಯಿ ದೈವಾಧೀನರಾದರು. ಆದರೂ ಸ್ವರಾಜ್ಯವನ್ನು ಕಂಡೇ ತೀರಬೇಕೆಂದು ದುಡಿದೆನು.

ಚಳವಳಿಯಿಂದಾಗಿ ನಾನು ಅಪಾರ ಆರ್ಥಿಕ ಹಾನಿಗೆ ಒಳಗಾದೆನಲ್ಲದೆ ನನ್ನ ಹೆಂಡತಿಯ ಕಡೆಯ ಆಸ್ತಿಗೆ ಸಂಬಂಧಿಸಿ ಅನೇಕ ತೊಂದರೆಗಳು ಬಂದವು. ಮರಡಿಹಳ್ಳಿ, ಚಳ್ಳಕೆರೆಗಳಲ್ಲಿ ಎರಡು ವಿದ್ಯಾರ್ಥಿನಿಲಯಗಳನ್ನು 1944ರಿಂದ ಆರಂಭಿಸಿ 10-12 ವರ್ಷ ಸೆಕ್ರೆಟರಿ ಆಗಿ ಅದರ ಜವಾಬ್ದಾರಿ ನೋಡಿಕೊಂಡೆನು. 1943ರಲ್ಲಿ ನಮ್ಮ ಊರಲ್ಲಿ ಹರಿಜನರಿಗೆ ನೀರಿನ ಬಾವಿಯನ್ನು ತೆರವು ಮಾಡಿಸಿ ಅಸ್ಪೃಶ್ಯತಾನಿವಾರಣೆಯ ಚಟುವಟಿಕೆಯನ್ನು ನಡೆಸಿದೆವು. ಹರಿಜನರಿಗೆ ಮನೆಗಳನ್ನು ಕಟ್ಟಲು ಮುಚ್ಚಳಿಕೆ ಕೊಟ್ಟು ಸಾಲವನ್ನು ಸರಕಾರದಿಂದ ಕೊಡಿಸಿದೆನು. ಸ್ವಾತಂತ್ರ್ಯಪೂರ್ವದಲ್ಲಿ ಜಿಲ್ಲಾ ಕ್ಷಾಮಪರಿಹಾರ ಸಮಿತಿಯ ಸದಸ್ಯನೂ ಆಗಿ ದುಡಿದೆನು.

ಮೈ.ಚಿ. 20

## ದಿ|| ಕಾಸಲ ಶ್ರೀನಿವಾಸ ಶೆಟ್ಟಿ
(1902-1960)



1902ರಲ್ಲಿ ಜನಿಸಿದ ಕಾಸಲ ಶ್ರೀನಿವಾಸ ಶೆಟ್ಟರು ತಮ್ಮ 18ನೆಯ ವಯಸ್ಸಿನಿಂದಲೇ ಖಾದಿ ಧರಿಸಲು ಆರಂಭಿಸಿದರಲ್ಲದೆ ರಾಷ್ಟ್ರೀಯ ಚಳವಳಿಯ ಬಗ್ಗೆ ತಾರುಣ್ಯದ ದಿನಗಳಿಂದಲೂ ತೀವ್ರ ಆಸಕ್ತಿ ತಳೆದಿದ್ದರು. ಕಾಂಗ್ರೆಸ್ಸಿನ ಸಂದೇಶವು ಮೈಸೂರು ಸಂಸ್ಥಾನದಲ್ಲಿ ವ್ಯಾಪಿಸುವ ಮೊದಲೇ ಅವರು ಕಾಂಗ್ರೆಸ್ ಸೇರಿದ್ದರು. ಕಾಸಲ ಅನಂತಪ್ಪ ಅಂಡ್ ಸನ್ಸ್ ಎಂಬ ಬೃಹತ್ ವ್ಯಾಪಾರಿ ಸಂಸ್ಥೆಯನ್ನು ನಿರ್ವಹಿಸುತ್ತಿದ್ದಂತೆ, ರಾಷ್ಟ್ರೀಯ, ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಸಂಸ್ಥೆಗಳಲ್ಲಿ ಅವರು ಅಪಾರವಾಗಿ ದುಡಿದರು. ಅವರ ಮನೆ ರಾಷ್ಟ್ರೀಯ ಕಾರ್ಯಕರ್ತರಿಗೆ ಆಶ್ರಯ ಹಾಗೂ ವಿಶ್ರಾಂತಿಸ್ಥಾನವಾಗಿತ್ತು. ಮೈಸೂರಲ್ಲಿ ಚಳವಳಿ ಆರಂಭವಾಗುವುದಕ್ಕೂ ಮೊದಲು ನೆರೆಯ ಉತ್ತರಕನ್ನಡ, ಧಾರವಾಡ, ಬಳ್ಳಾರಿ ಜಿಲ್ಲೆಗಳ ಚಳವಳಿಗಳಿಗೆ ಅವರು ಬೆಂಬಲ ನೀಡುತ್ತಿದ್ದರು. ಪ್ರಾಣಿದಯಾ ಸಂಘದ

ಕ್ರಿಯಾಶೀಲ ಆಧಾರಸ್ತಂಭರಾದ ಅವರು ದೇವರಿಗೆ ಪ್ರಾಣಿಬಲಿ ನೀಡುವುದರ ವಿರುದ್ಧ ಚಳವಳಿ, ಪ್ರಚಾರ ನಡೆಸಿದರು.

1930ರಲ್ಲಿ ಅಂಕೋಲೆಯಲ್ಲಿ ಭಾರೀ ಪ್ರಮಾಣದಲ್ಲಿ ಉಪ್ಪಿನ ಸತ್ಯಾಗ್ರಹ ನಡೆದಾಗ ಮೊದಲ ದಿನ ಉತ್ಪಾದಿಸಿದ ಕರಮುಕ್ತ ಉಪ್ಪನ್ನು ಅಲ್ಲಿ ಹಾಜರಿದ್ದು ಹರಾಜಿಗೆ ಪಡೆದವರಲ್ಲಿ ಶ್ರೀನಿವಾಸ ಶೆಟ್ಟರು ಒಬ್ಬರು. 1934ರಲ್ಲಿ ದಾವಣಗೆರೆಗೆ ಗಾಂಧೀಜಿ ಬಂದಾಗ ಅವರ ಕೈಯಿಂದ ಹರಿಜನ ವಿದ್ಯಾರ್ಥಿನಿಲಯ, ಗೋಶಾಲೆ, ಆದಿಕರ್ನಾಟಕರ ಹಾಸ್ಟೆಲ್, ಚಲುವಾದಿ ಹಾಸ್ಟೆಲ್, ವೈಶ್ಯ ಹಾಸ್ಟೆಲ್, ಅಶಕ್ತ ಪೋಷಕ ಸಂಘ ಮುಂತಾದ ಸಂಸ್ಥೆಗಳಿಗೆ ಅವರು ಸ್ಥಾಪಕರೂ ಉದಾರಧನದಾತರೂ ಆಗಿದ್ದರು. ಈಗ ಡಿ. ಆರ್. ಮೆಡಿಕಲ್ ಕಾಲೇಜನ್ನು ನಡೆಸುತ್ತಿರುವ ದಾವಣಗೆರೆಯ ಬಾಪೂಜಿ ಎಜುಕೇಶನ್ ಅಸೋಸಿಯೇಶನ್ ಮತ್ತು ದಾವಣಗೆರೆ ಎಜುಕೇಶನ್ ಸೊಸೈಟಿಗಳ ಸ್ಥಾಪಕ ಕಾರ್ಯದರ್ಶಿಗಳಾಗಿಯೂ ಅವರಿದ್ದರು. ಅನೇಕ ಸಾರ್ವಜನಿಕ ಸಂಸ್ಥೆಗಳಿಗೆ ಉದಾರ ಸಹಾಯ ನೀಡಿದ ಅವರು ರಾಷ್ಟ್ರೀಯ ಚಟುವಟಿಕೆಗಳಿಗಾಗಿ ಮಾಡಿದ ವೆಚ್ಚ ಅಪಾರ. ಎಲ್ಲ ಕಾಂಗ್ರೆಸ್ ಅಧಿವೇಶನಗಳಿಗೂ ಅವರು ಹೋಗುತ್ತಿದ್ದು, ಹರಿಪುರ ಕಾಂಗ್ರೆಸ್ ಈ ಪೈಕಿ ಉಲ್ಲೇಖನೀಯ. ಅನೇಕ ವರ್ಷ ಅವರು ತಾ|| ಕಾಂಗ್ರೆಸ್ ಕಾರ್ಯದರ್ಶಿ ಆಗಿದ್ದರಲ್ಲದೆ ಹರಿಹರದಲ್ಲಿ ನಡೆದ (1941) ಮೈಸೂರು ಕಾಂಗ್ರೆಸ್ ಅಧಿವೇಶನಕ್ಕೆ ಅವರು ಸ್ವಾಗತ ಸಮಿತಿಯ ಉಪಾಧ್ಯಕ್ಷರಾಗಿ ಇದ್ದರು.

ಚಳವಳಿಯ ಕಾಲಕ್ಕೆ ಮೂರು ಬಾರಿ 1939, 1942 ಮತ್ತು 1947ರಲ್ಲಿ ಅವರು ಜೈಲುವಾಸವನ್ನು ಅನುಭವಿಸಿದ್ದರು. ಧಾರ್ಮಿಕ ವೃತ್ತಿಯವರಾದ ಅವರು ದಾವಣಗೆರೆಯ ಕೋದಂಡರಾಮ ಮತ್ತು ಕನ್ನಿಕಾಪರಮೇಶ್ವರಿ ದೇವಾಲಯಗಳ ಕಾರ್ಯದರ್ಶಿಗಳೂ ಆಗಿದ್ದರು. 1922ರಲ್ಲಿ ಕಮಲಾಕ್ಷಮ್ಮ ಅವರನ್ನು ವರಿಸಿದ ಅವರಿಗೆ ಎರಡು ಗಂಡು ಮತ್ತು ಒಂದು ಹೆಣ್ಣುಮಗು, ಹೀಗೆ ಮೂರು ಮಕ್ಕಳಿದ್ದಾರೆ.

ಜೀವನದಲ್ಲಿ ಅನೇಕ ಕಷ್ಟಕೋಟಲೆಗಳನ್ನು ಎದುರಿಸಿದವರಾದ ಅವರು ಸರಳ, ನ್ಯಾಯಪರ ಹಾಗು ಸಮಾಜಾರ್ಪಿತವಾದ ಜೀವನ ನಡೆಸಿ, 1960ರಲ್ಲಿ ದಿವಂಗತರಾದರು.

**ಕಾಸಲ ಅನಂತ್**

(ಕಾಸಲ ಶ್ರೀನಿವಾಸ ಶೆಟ್ಟಿ ಅಂಡ್ ಸನ್ಸ್, ದಾವಣಗೆರೆ)

(ದಿ|| ಶೆಟ್ಟರ ಪುತ್ರರೇ ಬರೆದ ಈ ಪರಿಚಯ ಲೇಖನ ಯಾವುದೇ ವಿಶೇಷಣಗಳ ಬಳಕೆ ಮಾಡದ, ತೀರ ವಿನಯಪರ ಬರಹವಾಗಿದೆ. ವಾಸ್ತವವಾಗಿ ದಿ|| ಶೆಟ್ಟರು ಮೈಸೂರು ಸಂಸ್ಥಾನದಲ್ಲಿ ಕಾಂಗ್ರೆಸ್ಸಿನ ಗಣ್ಯಕಾರ್ಯಕರ್ತರಾಗಿದ್ದು ಕೊಡುಗೈದೊರೆಯಾಗಿ ರಾಷ್ಟ್ರೀಯ ಹಾಗೂ ರಚನಾತ್ಮಕ ಚಟುವಟಿಕೆಗಳನ್ನು ಪೋಷಿಸಿದವರಾಗಿದ್ದಾರೆ —ಸಂ||).

ವೈ.ಚಿ. 21

# ಡಿ. ಆರ್. ಮೌನೇಶ್ವರಪ್ಪ

ಜನನ : 1911    ಉದ್ಯೋಗ : ನಿವೃತ್ತ ಜೀವನ    ವಿಳಾಸ : 9/1740/1, III ಮೇನ್, IV ಕ್ರಾಸ್, ವಿನೋಬನಗರ, ದಾವಣಗೆರೆ-4



1924ರಲ್ಲಿ ಬೆಳಗಾವಿ ಕಾಂಗ್ರೆಸ್ಸಿಗೆ ನಮ್ಮ ಅಣ್ಣನವರ ಜೊತೆ ಹೋಗಿದ್ದ ನಾನು ಅಲ್ಲಿ ಸ್ವಯಂಸೇವಕನಾಗಿ ಕೆಲಸ ಮಾಡಬೇಕೆಂದಿದ್ದರೂ ನಾನು ಕೇವಲ 13 ವರ್ಷದವನಾದುದರಿಂದ ನನ್ನನ್ನು ಸೇರಿಸಿಕೊಳ್ಳಲಿಲ್ಲ. ಗಾಂಧೀಜಿಯವರೇ ಮುಂತಾದ ರಾಷ್ಟ್ರೀಯ ನಾಯಕರ ದರ್ಶನಪಡೆದು ಆಗಲೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪಾಲುಗೊಳ್ಳಬೇಕೆಂದು ಸಂಕಲ್ಪ ತೊಟ್ಟೆನಲ್ಲದೆ ಅಂದಿನಿಂದಲೇ ಖಾದೀಧಾರಿಯಾದೆ. ಶಾಲೆಯಲ್ಲಿ ನಮ್ಮ ಅಧ್ಯಾಪಕರಾದ ಕೆ. ಸುಬ್ಬರಾಯರು ದೇಶಪ್ರೇಮಿಗಳಾಗಿದ್ದು ಅವರೂ ಸ್ವಾತಂತ್ರ್ಯ ಹೋರಾಟದಲ್ಲಿ ಸೇರಲು ಪ್ರೋತ್ಸಾಹಿಸಿದರು. ದಾವಣಗೆರೆಯ ಪ್ರಾಣಿ ದಯಾ ಸಂಘದ ಅಧ್ಯಕ್ಷ ಕಾಸಲ ಶ್ರೀನಿವಾಸ ಶೆಟ್ಟರ ಸಹಕಾರ, ಸಹಾಯ ಚಳವಳಿಯಲ್ಲಿ ಧುಮುಕಲು ನೆರವಾಯಿತು.

1930ರ ಏಪ್ರಿಲ್ 17ಕ್ಕೆ ರಾತ್ರಿ ಮನೆಯಲ್ಲಿ ಯಾರಿಗೂ ತಿಳಿಸದೆ ಹುಬ್ಬಳ್ಳಿಗೆ ಹೋಗಿ ಡಾ|| ಹರ್ಡೀಕರರು ಸ್ಥಾಪಿಸಿದ್ದ ಸೇವಾದಲದ ಶಿಬಿರದಲ್ಲಿ ಮರುದಿನ ಸೇರಿಕೊಂಡೆನು. ಅಲ್ಲಿ ಸೈನಿಕ ಶಿಕ್ಷಣ, ಶಿಸ್ತು, ಲಾಠಿ, ಲೇಜಿಂ, ಕತ್ತಿವರಸೆ ಮುಂತಾದವುಗಳನ್ನು ಕಲಿತೆನು. ಡೈರಿ ಬರೆಯುವ ಅಭ್ಯಾಸ ವಗೈರೆ ಆಯಿತು. ಅಲ್ಲಿಂದ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲುಗೊಳ್ಳಲು ಕಾರವಾರ ಜಿಲ್ಲೆಗೆ ನಮ್ಮ ಒಂದು ತಂಡವನ್ನು ನನ್ನ ನೇತೃತ್ವದಲ್ಲಿ ಕಳುಹಿಸಿದರು. ನನ್ನ ಜೊತೆ ದಾವಣಗೆರೆಯ ಮಲ್ಲಾಬಾದಿ ಮಹಾಂತಪ್ಪನವರ ಮಗ ವಿರೂಪಾಕ್ಷಪ್ಪ, ಬೆಂಗಳೂರಿನ ಅಚ್ಯುತ ಮತ್ತು ಕೃಷ್ಣಮೂರ್ತಿ, ಧಾರವಾಡದ ಬುರ್ಲಿ ಇದ್ದರು. ಮುಂಡಗೋಡದಲ್ಲಿ ನಮ್ಮನ್ನು ಬಸ್ಸಿನಿಂದ ಇಳಿಸಿ ಸ್ಟೇಶನ್‌ಗೆ ಕರೆದೊಯ್ದು ಹಿಂದಕ್ಕೆ ಹೋಗಲು ತಿಳಿಸಿದರು. ನಾವು ಊರಲ್ಲಿ ರಾತ್ರಿ ಬಹಿರಂಗಸಭೆ ಸೇರಿಸಿ ಜಂಗಲ್‌ಸತ್ಯಾಗ್ರಹ ಪ್ರಾರಂಭಿಸಿದೆವು. ನಮ್ಮನ್ನು ದಸ್ತಗಿರಿಮಾಡಿ ಶಿರಸಿ I ಕ್ಲಾಸ್ ಮ್ಯಾಜಿಸ್ಟ್ರೇಟರ ಕೋರ್ಟಿನಲ್ಲಿ ಹಾಜರುಮಾಡಿ ಐ.ಪಿ.ಸಿ. 143ನೆಯ ಸೆಕ್ಷನ್ ಪ್ರಕಾರ 14-10-1930ರಂದು ಮೂರು ತಿಂಗಳು ಕಠಿಣ ಶಿಕ್ಷೆ ವಿಧಿಸಿದರು.

ಮತ್ತು ಕಾರವಾರ ಜೈಲಿಗೆ ಸಾಗಿಸಿದರು. ಅಲ್ಲಿ ನಮ್ಮ ಜೊತೆ ಪಾರ್ಥನಾರಾಯಣ ಪಂಡಿತ್, ಶಿವಮೊಗ್ಗದ ಕೆ. ಆರ್. ಮಾಧವರಾವ್, ಸರ್ದಾರ್ ವೆಂಕಟರಾಮಯ್ಯ, ಮುಂತಾದ ಮುಖಂಡರಿದ್ದರು. 3-1-1931ಕ್ಕೆ ಬಿಡುಗಡೆ ಆಯಿತು. ನನ್ನ ಮೂರು ಫೋಟೊಗಳನ್ನು ತೆಗೆದು ದಾವಣಗೆರೆ ಪೋಲಿಸರಿಗೆ ತಂದು ನನ್ನನ್ನು ಒಪ್ಪಿಸಿ ಕಾರವಾರ ಪೋಲಿಸರು ವಾಪಸಾದರು. ನಮ್ಮೂರ ಪೋಲಿಸರು ನಮ್ಮ ಜಿಲ್ಲಾಧಿಕಾರಿಗಳಿಗೆ ನನ್ನ ಬಗ್ಗೆ ವರದಿ ಒಪ್ಪಿಸಬೇಕೆಂದಾಯಿತು. ನಾನು ಮೈಸೂರು ಸೀಮೆಯಿಂದ ರೈಲು, ಬಸ್ಸುಗಳನ್ನು ಬಿಟ್ಟು ಕಾಲುನಡೆಯಿಂದಲೇ ವಿ. ವಿ. ರುದ್ರಯ್ಯನವರ ಜೊತೆ ಧಾರವಾಡ ಜಿಲ್ಲಾ ಮುಂಡರಗಿಗೆ ಹೋಗಿ ಅಲ್ಲಿಂದ ವಿಜಾಪುರಕ್ಕೆ ಬಸ್ಸಿನಿಂದ ತಲಪಿ ಅಲ್ಲಿ ವೆಂಕಟೇಶ ಮಾಗಡಿಯವರ ನೇತೃತ್ವದಲ್ಲಿ ಪರದೇಶಿ ಸರಕುಗಳ ಅಂಗಡಿಯ ಮುಂದೆ ಪಿಕೆಟಿಂಗ್ ಮಾಡಿದೆವು. ಅನಂತರ ಧಾರವಾಡ ಜಿ|| ಹಿರೇಕೆರೂರು ತಾ||ನಲ್ಲಿ ಸರದಾರ ವೀರನಗೌಡರು ನಡೆಸುತ್ತಿದ್ದ ಕರಬಂಧಿ ಚಳವಳಿಯಲ್ಲಿ ಪಾಲುಗೊಂಡೆನು. ಮುಂದೆ ಸರಕಾರಕ್ಕೂ ಕಾಂಗ್ರೆಸ್ಸಿಗೂ ಒಪ್ಪಂದ 2-6-1931ರಲ್ಲಿ ಕರಬಂಧಿಯನ್ನು ನಿಲ್ಲಿಸಲಾಯಿತು. ಚಳ ವಳಿಯ ಕಾಲಕ್ಕೆ ಕೆ. ಎಫ್. ಪಾಟೀಲ್, ಟಿ. ಆರ್. ನೇಸ್ವಿ, ಹಳ್ಳಿಕೇರಿ ಗುದ್ಲೆಪ್ಪ, ಕಜ್ಜರಿ ಸಿದ್ದಲಿಂಗಸ್ವಾಮಿ, ವೆಂಕಟೇಶ ಮಾಗಡಿ, ಹುಲ್ಲತ್ತಿ ಮಾಸ್ತರ ಮುಂತಾದವರು ಇದ್ದರು.

ರಾಣೆಬೆನ್ನೂರಲ್ಲಿ ಹಳ್ಳಿಕೇರಿ ಗುದ್ಲೆಪ್ಪನವರ ನೇತೃತ್ವದಲ್ಲಿ ಪರದೇಶೀ ಬಟ್ಟೆ ಪಿಕೆಟಿಂಗ್ ಆರಂಭಿಸಿ, ಬಟ್ಟೆಗಳನ್ನು ಗಂಟುಕಟ್ಟಿ ಸೀಲುಮಾಡಿಸುವವರೆಗೆ (2-11-31) ಪಿಕೆಟಿಂಗ್ ನಡೆಸಿದೆವು. ನಮ್ಮ ಜೊತೆ ಮಾಗಡಿ, ಕಜ್ಜರಿಸ್ವಾಮಿ ಇವರೂ ಇದ್ದರು. 10-11-1931ರಲ್ಲಿ ದಾವಣಗೆರೆಯಲ್ಲಿ ಪರದೇಶಿ ಬಟ್ಟೆ ಪಿಕೆಟಿಂಗ್‌ನ್ನು ಕಾಸಲ ಶ್ರೀನಿವಾಸ ಶೆಟ್ಟರ ನೇತೃತ್ವದಲ್ಲಿ ಆರಂಭಿಸಿದೆವು. 18-11-1931ರಲ್ಲಿ ನೆಹರೂ ಅವರು ಹುಬ್ಬಳ್ಳಿಗೆ ಬಂದಾಗ ಅವರ ಕೈಯಿಂದ ಸೇವಾದಳದ ಸೈನಿಕ ಪರೀಕ್ಷೆಯಲ್ಲಿ ತೇರ್ಗಡೆಯಾದ ಸರ್ಟಿ ಫಿಕೇಟ್ ಪಡೆದೆನು. ದಾವಣಗೆರೆಯಲ್ಲಿ ಪಿಕೆಟಿಂಗ್ ಬಗ್ಗೆ ಸ್ಥಾಪಿಸಿದ ಸ್ವಯಂಸೇವಕರ ಶಿಬಿರದಿಂದ 2-2-1912ರಿಂದ ಮತ್ತೆ ಪಿಕೆಟಿಂಗ್ ಆರಂಭಿಸಿ, ಪರದೇಶಿ ಬಟ್ಟೆಗಳನು ಸೀಲು ಮಾಡಿಸಿ ಮತ್ತೆ ಪಿಕೆಟಿಂಗ್‌ನ ಮುಕ್ತಾಯಮಾಡಿದೆವು.

ದಾವಣಗೆರೆಯಿಂದ ಕೆಲವು ಸ್ವಯಂಸೇವಕರ ಜೊತೆ ಬೆಳಗಾವಿಗೆ ಹೋದೆನು. ಧಾರವಾಡದ ಚಿಂತಾಮಣಿ ಹಳಪೇಟೆಯವರು ನಮ್ಮ ಜೊತೆ ಸೇರಿದರು. ವಡವಿಮಾಸ್ತರರ ಸಲಹೆಯಂತೆ ಬೆಳಗಾವಿ ಪೋಲಿಸ್ ಸ್ಟೇಶನ್ ವಶಪಡಿಸುವ ಕಾರ್ಯಕ್ರಮ ಹಾಕಿಕೊಂಡು 27-7-1932ರಂದು ಸ್ಟೇಶನ್‌ಗೆ ನುಗ್ಗಿದೆವು. ನಮ್ಮ ದಸ್ತಗಿರಿ ಆಗಿ 28-7-1932 ರಂದು 6 ತಿಂಗಳ ಶಿಕ್ಷೆ 25 ರೂ. ದಂಡ, ದಂಡ ತೆರದಲ್ಲಿ ಮತ್ತೆ ಒಂದು ತಿಂಗಳು ಜೈಲು ಆಯಿತು. 2-2-1933ರಲ್ಲಿ 24 ದಿನ ರೆಮಿಶನ್ ಕೊಟ್ಟು ಹಿಂಡಲಗಿ ಜೈಲಿನಿಂದ ಬಿಡುಗಡೆ ಮಾಡಿದರು. ಜೈಲಿನಲ್ಲಿ ಯೂಸುಫ್ ಮೆಹರಲಿ, ಮುಕುಂದ ಮಾಲವಿಯ,

ಕಮಲಾದೇವಿ ಚಟ್ಟೋಪಾಧ್ಯಾಯ, ಹಳ್ಳಿಕೇರಿ ಗುದ್ಲೆಪ್ಪ, ಕೆ. ಎಫ್. ಪಾಟೀಲ್, ಪಾಚ್ಛಾಪುರದ ಕೆ. ಎ. ಶೇಕ್ ಮುಂತಾದವರು ಇದ್ದರು. ಏಪ್ರಿಲ್‌ನಲ್ಲಿ ಮುಂಬೈಗೆ ಹೋಗಿ ಅಲ್ಲಿ ಯೂಸುಫ್ ಮೆಹರಲಿಯವರ ಜೊತೆ ಬುಲಿಟಿನ್ ಪ್ರಕಟಣೆಯ ಕೆಲಸಕ್ಕೆ ದುಡಿದೆನು. ನನ್ನ ಜೊತೆ ಹರವಿ, ಟಿ. ಆರ್. ಶಿದ್ದಬಸಪ್ಪ ಇದ್ದರು. ಕೆಲವು ತಿಂಗಳ ಅನಂತರ ದಾವಣಗೆರೆಗೆ ವಾಪಸು ಬಂದೆ.

1934ರ ಮಾರ್ಚ್ 3ಕ್ಕೆ ಮಹಾತ್ಮರು ಬಂದು ಹರಿಜನ ಹಾಸ್ಟಲ್‌ಗೆ ಶಂಕು ಸ್ಥಾಪನೆಮಾಡಿದಾಗ ಸ್ವಯಂಸೇವಕರ ವ್ಯವಸ್ಥೆಯನ್ನು ನಾನೇ ನೋಡಿಕೊಂಡೆ. 1934ರ ಅಕ್ಟೋಬರ್‌ನಲ್ಲಿ ಜವಾಹಿರ ವ್ಯಾಯಾಮಶಾಲೆಯನ್ನು ದಾವಣಗೆರೆಯಲ್ಲಿ ಸ್ಥಾಪಿಸಿದಾಗ ನಾನು ಅದರ ಕಾರ್ಯದರ್ಶಿಯೂ ಪೋಷಕನೂ ಆಗಿದ್ದೆ. ಅಲ್ಲಿ ಸ್ವಯಂಸೇವಕರಿಗೆ ತರಬೇತಿ ನೀಡುವ ಕೆಲಸಮಾಡುತ್ತಿದ್ದೆವು. 1935ರಲ್ಲಿ ದಾವಣಗೆರೆಯಲ್ಲಿ ಹಿಂದೀ ಪ್ರಚಾರ ಸಂಸ್ಥೆಯನ್ನು ಡಿ. ಎಚ್. ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಿ ನಾನು ಅದರ ಕಾರ್ಯದರ್ಶಿಯಾಗಿದ್ದೆ. ದಾವಣಗೆರೆ ಹೈಸ್ಕೂಲಿನಲ್ಲೂ ಉಚಿತವಾಗಿ ಉಪಾಧ್ಯಾಯರನ್ನು ಒದಗಿಸಿ ಅಲ್ಲಿ ಹಿಂದಿಯನ್ನು ಪೂರಕ ವಿಷಯವಾಗಿ (ಎಡಿಷನಲ್ ಸಬ್ಜೆಕ್ಟ್) ಕಲಿಸುವ ವ್ಯವಸ್ಥೆಮಾಡಿದೆವು.

1937ರಲ್ಲಿ ಕಿಸಾನ್ ಚಳವಳಿಗೆ ಸಂಬಂಧಿಸಿ ಡಾ|| ಹರ್ಡೀಕರರೊಂದಿಗೆ ದಾವಣಗೆರೆ ಹರಿಹರ ತಾ||ಗಳಲ್ಲಿ ಪ್ರಚಾರಕಾರ್ಯ ಆರಂಭಿಸಲು, ದಾವಣಗೆರೆ, ಹರಿಹರದ ಸುತ್ತ ಹತ್ತು ಮೈಲು ಫಾಸಲೆಯಲ್ಲಿ ಸಭೆ, ಭಾಷಣ, ಪ್ರಚಾರ ವಗೈರೆ ಮಾಡಬಾರದೆಂದು ಪ್ರತಿಬಂಧವನ್ನು ದಾವಣಗೆರೆ ಮ್ಯಾಜಿಸ್ಟ್ರೇಟ್ ಕೋರ್ಟಿನಿಂದ ಸೆಕ್ಷನ್ 39ರಂತೆ ಡಾ|| ಹರ್ಡೀಕರ, ಕಾಸಲ ಶ್ರೀನಿವಾಸ ಶೆಟ್ಟಿ, ಬೊಂದಾಡೆ ಹನುಮಂತರಾವ್ (ದಾವಣಗೆರೆ ವಕೀಲ), ದೋತ್ರಗಾವಿ ಪೌನೇಶ್ವರಿ (ನಾನು), ನಂಜಪ್ಪ ಕೊಟ್ರೆ, ಎಸ್. ನಿಜಲಿಂಗಪ್ಪ ಮತ್ತು ವಾಸುದೇವರಾವ್ ಇವರ ಮೇಲೆ 16–5–1937ರಂದು ಹೊರಡಿಸಿದರು (ಆಜ್ಞೆಯ ಪ್ರತಿ ಕಳುಹಿಸಿದ್ದೇನೆ). ತೆರಿಗೆ ಕೊಡುವುದರ ವಿರುದ್ಧ ಹಳ್ಳಿಗರಿಗೆ ಶಿಕ್ಷಣ ನೀಡಲು ಈ ಚಳವಳಿ ನಡೆಯುತ್ತಿದೆ, ಎಂದು ಆಜ್ಞೆಯಲ್ಲಿ ವರ್ಣಿಸಲಾಗಿದೆ. ಅದೇ ರೀತಿ ನಾನು ದಾವಣಗೆರೆ, ಹರಿಹರಗಳಲ್ಲಿ ಹಾಗೂ ಸುತ್ತಲ ಪ್ರದೇಶದಲ್ಲಿ ಕಾಂಗ್ರೆಸ್ ಬಾವುಟ ವನ್ನು ಪ್ರದರ್ಶಿಸಬಾರದು, ಹಾಗೆ ಮಾಡುವುದು "ಸಾರ್ವಜನಿಕ ಶಾಂತಿಯನ್ನು ಕದಡಲು ಕಾರಣವಾಗಬಹುದು ಮತ್ತು ತಮ್ಮದೇ ಮಾನ್ಯತೆ ಪಡೆದು ಧ್ವಜವನ್ನು ಹೊಂದಿರುವ ಶ್ರೀಮನ್ಮಹಾರಾಜರ ಪರಮಾಧಿಕಾರಕ್ಕೆ ಇದರಿಂದ ಘಾತವಾಗಬಹುದು" ಎಂದು ದಾವಣಗೆರೆ ಫಸ್ಟ್ ಕ್ಲಾಸ್ ಮ್ಯಾಜಿಸ್ಟ್ರೇಟರು 12–10–1937ರಂದು ಆಜ್ಞೆ ಯೊಂದನ್ನು ನನ್ನ ಮೇಲೆ ಜಾರಿಮಾಡಿದರು (ಆಜ್ಞೆಯ ಪ್ರತಿ ಕಳುಹಿಸಿದ್ದೇನೆ).

1938ರಲ್ಲಿ ದಾವಣಗೆರೆ ತಾ|| ಯುವಕ ಸಂಘದ ಕಾರ್ಯದರ್ಶಿಯಾಗಿ ಇದ್ದೆನು. 1943ರ ವರೆಗೆ ನಗರ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿಯೂ ಇದ್ದೆನು.

ಗಾಂಜೀ ವೀರಪ್ಪನವರು ಆಗ ನಗರ ಕಾಂ|| ಸ|| ಅಧ್ಯಕ್ಷರು. 1941ರಲ್ಲಿ ಹರಿಹರದಲ್ಲಿ ಮೈಸೂರು ಕಾಂಗ್ರೆಸ್‌ನ ನಾಲ್ಕನೆಯ ಅಧಿವೇಶನ ನಡೆದಾಗ ನಾನು ಜಿ.ಓ.ಸಿ. ಆಗಿ ಇದ್ದು, ಅಧಿವೇಶನಕ್ಕೆ ಒಂದು ತಿಂಗಳು ಮುಂಚಿತನಾಗಿ ಸ್ವಯಂಸೇವಕರ ಶಿಕ್ಷಣ ಶಿಬಿರ ಆರಂಭಿಸಿ ಇಡೀ ಜಿಲ್ಲೆಯಿಂದ 300 ಸ್ವಯಂಸೇವಕರಿಗೆ ತರಬೇತಿ ನೀಡಿದೆವು. ಕೆ. ಎ. ವೆಂಕಟರಾಮಯ್ಯ ತರಬೇತಿಯನ್ನು ಕೊಡುವುದರಲ್ಲಿ ಪಾಲುಗೊಂಡಿದ್ದರು. ಎಚ್. ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ನಡೆದ ಈ ಅಧಿವೇಶನದ ಸ್ವಾಗತ ಸಮಿತಿಯಲ್ಲಿ ಎಸ್. ನಿಜಲಿಂಗಪ್ಪ (ಅಧ್ಯಕ್ಷ), ಎಸ್. ವಾಸುದೇವರಾವ್ (ಕಾರ್ಯದರ್ಶಿ), ಎಸ್. ವೀರಬಸಪ್ಪ, ಕಾಸಲ ಶ್ರೀನಿವಾಸ ಶೆಟ್ಟಿ, ಮಾಗನೋರು ಬಸಪ್ಪ, ಬಳ್ಳಾರಿ ಸಿದ್ದಮ್ಮ (ಉಪಾಧ್ಯಕ್ಷರುಗಳು) ಮುಂತಾದವರಿದ್ದು ಸಿದ್ದಮ್ಮನವರು ಸ್ವಯಂಸೇವಕಿಯರ ಮೇಲ್ವಿಚಾರಣೆ ಕೂಡ ನೋಡುತ್ತಿದ್ದರು.

31–8–1946ರಲ್ಲಿ ದಾವಣಗೆರೆಯಲ್ಲಿ ನಡೆದ ಅಖಿಲ ಕರ್ನಾಟಕ ಏಕೀಕರಣ ಅಧಿವೇಶನದ ಕಾಲಕ್ಕೆ ಸ್ವಯಂಸೇವಕರ ನಾಯಕನಾಗಿ ಕೆಲಸಮಾಡಿದೆನು. 1947ರಲ್ಲಿ, 'ಮೈಸೂರು ಚಲೋ' ಚಳವಳಿಗೆ ಸಂಬಂಧಿಸಿ, ಸೆಪ್ಟಂಬರ್ 8ರ ರಾತ್ರಿ ಕೆ. ಟಿ. ಜಂಬಣ್ಣ, ಎಚ್. ಕೆಂಪಹೊನ್ನಪ್ಪ, ಬಿ. ತಿಪ್ಪಣ್ಣ, ಬಿ. ಮುರಿಗಯ್ಯ, ಮಲ್ಲಿಕಾರ್ಜುನಪ್ಪ ಮುಂತಾದವರನ್ನು ಬಂಧಿಸಿ ಚಿತ್ರದುರ್ಗ ಜೈಲಿನಲ್ಲಿ ಇಟ್ಟರು. ಅಲ್ಲಿ ಭೀಮಪ್ಪ ನಾಯಕ, ಎಸ್. ವೀರಬಸಪ್ಪ, ಹೊ. ಚಿ. ಬೋರಯ್ಯ, ಗಾಂಜೀ ವೀರಪ್ಪ, ಕೆ. ಕೆಂಚಯ್ಯ ಮುಂತಾದ ಜಿಲ್ಲೆಯ ಮುಖಂಡರುಗಳು ಇದ್ದರು.

1930ರಿಂದ ಸ್ವಾತಂತ್ರ್ಯ ದೊರೆಯುವವರೆಗೆ ಅನೇಕ ಸತ್ಯಾಗ್ರಹಗಳಲ್ಲಿ ಅಲ್ಪ ಸೇವೆಯನ್ನು ಸಲ್ಲಿಸಿರುವೆನು. ಸ್ವಾತಂತ್ರ್ಯ ಸಿಕ್ಕನಂತರವೂ ಪುರಸಭಾಸದಸ್ಯನಾಗಿಯೂ ಅನ್ಯರೀತಿಯಿಂದಲೂ ಸಾರ್ವಜನಿಕ ಸೇವೆಸಲ್ಲಿಸಿದ್ದೇನೆ.

ವ್ಯ.ಚಿ. 22

## ಕೆ. ಎಸ್. ಸಿದ್ದಪ್ಪ

ಜನನ : ? ಉದ್ಯೋಗ : ವಿಧಾಯಕ ಕಾರ್ಯಕರ್ತ

ವಿಳಾಸ : ನವಭಾರತ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘ ಲಿ., ದಾವಣಗೆರೆ

---

ದಾವಣಗೆರೆ ತಾ|| ಕುಂದುವಾಡ ಗ್ರಾಮದವನಾದ ನಾನು 1935 ರಿಂದ 1937ರ ನಡುವೆ ಯು.ಟಿ.ಸಿ. ಶಿಕ್ಷಣಕ್ಕಾಗಿ ಶಿವಮೊಗ್ಗೆಗೆ ಹೋದವನು ಅಲ್ಲಿನ ದೊಡ್ಡಪೇಟೆಯ ಆರ್ಯವೈಶ್ಯ ವಾಚನಾಲಯದಲ್ಲಿ ಪ್ರಜಾಮತ, ತಾಯಿನಾಡು, ಜನವಾಣಿ, ಸಂಯುಕ್ತ ಕರ್ನಾಟಕ,

ಪೌರವಾಣಿ ಪತ್ರಿಕೆಗಳನ್ನು ಓದುತ್ತಿದ್ದೆ. ಪೌರವಾಣಿ ಈ ಪೈಕಿ ನನ್ನ ಮೇಲೆ ವಿಶೇಷ ಪ್ರಭಾವ ಬೀರಿತು. ಅಲ್ಲದೆ ಗಾಂಧೀಜಿಯವರ ಹರಿಜನ ಪತ್ರಿಕೆಯನ್ನು ಕೂಡ ಓದುತ್ತಿದ್ದೆ. ಇದಕ್ಕೂ ಮೊದಲು ಗಾಂಧೀಜಿಯವರು ಎರಡು ಬಾರಿ ದಾವಣಗೆರೆಗೆ ಬಂದಾಗಲೂ ಅವರ ದರ್ಶನ ಪಡೆದಿದ್ದೆ. ಆಗಿನಿಂದಲೇ ನಾನು ಚಳವಳಿಗೆ ಪರವಾಗಿ ಇದ್ದೆ. ಇವೆಲ್ಲದರ ಪರಿಣಾಮಗಳ ಜೊತೆ, ಶಿವಮೊಗ್ಗದ ಖಾದಿ ಭಂಡಾರದ ಎಸ್. ಆರ್. ನಾಗಪ್ಪ ಶೆಟ್ಟರ ಆಕರ್ಷಕ ನಡವಳಿಕೆ ಅನೇಕ ಜನರಂತೆ ನನ್ನನ್ನೂ ದೇಶದ ಕಾರ್ಯದ ಕಡೆ ಸೆಳೆಯಿತು. ಎಚ್. ಸಿದ್ದಯ್ಯ, ಪುಟ್ಟನಂಜಪ್ಪ ಇವರ ಸಹವಾಸವೂ ಲಭಿಸಿತು.

ಶಿಕ್ಷಣ ಮುಗಿಸಿ ದಾವಣಗೆರೆಗೆ ಬಂದ ನಾನು ಶಿಕ್ಷಕವೃತ್ತಿ ಸ್ವೀಕರಿಸದೆ, ಖಾದಿ ಪ್ರಚಾರಕ್ಕೆ ಮಮತೆಯಿಂದ ನಿಂತು ಖಾದಿ ಭಂಡಾರವನ್ನು ತೆರೆದೆ ('ಖಾದಿ ಸಿದ್ದಪ್ಪ' ಎಂದೇ ಮಾನ್ಯರು ಪರಿಚಿತರಾಗಿದ್ದಾರೆ—ಸಂ||). ಅಂದಿನಿಂದ ದೇಶದ ಗುಲಾಮಗಿರಿಯನ್ನು ನಿವಾರಿಸುವ ಎಲ್ಲ ವಿಧದ ಚಳವಳಿಗಳಲ್ಲಿ ಅಹೋರಾತ್ರಿ ದುಡಿದೆ. 1942ರಲ್ಲಿ ಮುಂಬೈ ಎ.ಐ.ಸಿ.ಸಿ.ಗೆ ದಾವಣಗೆರೆಯಿಂದ ಎಚ್. ಕೆ. ವೀರಭದ್ರಪ್ಪ, ಭೂತೆ, ಪಾಂಡು ಮತ್ತು ನಾನು ಹೋಗಿದ್ದೆವು. ಅಲ್ಲಿಂದ ಮರಳಿದನಂತರ, ಇಟಗಿ ವೇದಮೂರ್ತಿ, ಕೊಟಗಿ ಸಿದ್ದಲಿಂಗಪ್ಪ, ಬಳ್ಳಾರಿ ಸಿದ್ದಮ್ಮನವರ ಪತಿ ಮುರಿಗಪ್ಪ ಇವರ ಜೊತೆ ಸೇರಿ 12-8-1942 ರಿಂದ ಶಾಂತಿಯುತ ಪಿಕೆಟಿಂಗ್ ಮುಂತಾದ ಚಟುವಟಿಕೆ ಪ್ರಾರಂಭಿಸಿದೆವು. ನಾವು ಅಹಿಂಸಾಮಾರ್ಗದಲ್ಲೇ ನಡೆದರೂ ಆಗಿನ ಸರಕಾರ ಜನರನ್ನು ಬೆದರಿಸಲು ಮತ್ತು ಬಗ್ಗುಬಡಿಯಲು ಮಿಲಿಟರಿಯನ್ನು ತರಿಸಿ ಹೆದ್ದಾರಿಗಳಲ್ಲೂ ಊರಲ್ಲೂ ಓಡಾಡಿಸಹತ್ತಿದ್ದರು. ಇದರಿಂದ ರೊಚ್ಚಿಗೆದ್ದ ಜನ ಸರಕಾರದ ಆಸ್ತಿಪಾಸ್ತಿ ನಾಶಮಾಡುವ ಉದ್ದೇಶದಿಂದ ದಾವಣಗೆರೆ ತಾಲ್ಲೂಕು ಕಚೇರಿ, ರೈಲ್ವೆ ಸ್ಟೇಷನ್, ಅಂಚೆ ಕಚೇರಿ ಮುಂತಾದವುಗಳಿಗೆ ಹಾನಿ ಮಾಡಲು ಆ ದಿನ (17-8-1942ರಂದು) ಸೈನಿಕರು ಗುಂಡಿನ ಸುರಿಮಳೆ ಮಾಡಿದರು. ಬಂದೂರು ಕ್ಯಾಂಪಿನ ನಿಂಗಪ್ಪ (ಯುವಕ), ಹಮಾಲಿ ತಿಮ್ಮಣ್ಣ (40 ವರ್ಷ), ಮಾಗನಹಳ್ಳಿ ಹನುಮಂತಪ್ಪ, ಹಳ್ಳೂರು ನಾಗಪ್ಪ, ಅಕ್ಕಸಾಲಿ ವಿರೂಪಾಕ್ಷಪ್ಪ ಇವರೆಲ್ಲ ಗುಂಡೇಟಿನಿಂದ ವೀರಸ್ವರ್ಗ ಸೇರಿದರು.

ಎರಡು ದಿನಗಳನಂತರ ಪರಿಸ್ಥಿತಿ ಶಾಂತವಾಯಿತು. ಒಂದು ದಿನ ರಾತ್ರಿ ನನ್ನ ಸಹಿತ 20 ಜನರನ್ನು ರಾತ್ರಿಹೊತ್ತು ಅರೆಸ್ಟ್ ಮಾಡಿ ಒಯ್ದರು. ಬಂಧಿಸುವಾಗ ಮನೆಯವರ ಮುಂದೆಯೇ ಅವರೆಲ್ಲರಿಗೆ ದುಃಖವಾಗುವಂತೆ ಬೂಟುಗಾಲಿನಿಂದ ನನ್ನನ್ನು ಒದ್ದರು. ಅವರನ್ನು ಸಿಕ್ಕಾಬಟ್ಟೆ ಹೆದರಿಸಿದರು. ಬಳ್ಳಾರಿ ಮುರಿಗಪ್ಪ, ಕೊಟಗಿ ಸಿದ್ದಲಿಂಗಪ್ಪ, ಅಮರನಾಥಸ್ವಾಮಿ, ಉತ್ತಂಗಿ ರುದ್ರಪ್ಪ, ಅಗಸರ ಯಲ್ಲಪ್ಪ, ಬಿ. ಮಲ್ಲಪ್ಪ, ವೆಂಕಟಶೆಟ್ಟರು, ಸಣ್ಣರಾಜಪ್ಪ, ಹೊಳೆಗುಂಡಿ ಗುರುಸಿದ್ದಪ್ಪ ನನ್ನ ಜೊತೆ ಬಂಧಿತರಾದ ಕೆಲವರು. ನನ್ನ ಬಂಧನದನಂತರ ನನ್ನ ಖಾದಿ ಭಂಡಾರ ಪೂರ್ತಿಯಾಗಿ ಬಂದಾಯಿತು. ಅಂದಿನ ಕಾಂಗ್ರೆಸ್ ಸಂಸ್ಥೆಯಲ್ಲಿ ಅಧಿಕಾರಸ್ಥಾನದಲ್ಲಿ ಇದ್ದವರು (ಸ್ಥಳೀಯ ನಾಯಕರು)

ಅಧಿಕಾರಿಗಳ ಮರೆಹೊಕ್ಕು ಆಸ್ತಿಪಾಸ್ತಿಗಳನ್ನು ಉಳಿಸಿಕೊಂಡು ಬಚಾವಾದರು. ನಾನು ಒಂದೂವರೆ ವರ್ಷ ದಾವಣಗೆರೆ, ಚಿತ್ರದುರ್ಗ, ಬೆಂಗಳೂರು ಜೈಲುಗಳಲ್ಲಿ ಶಿಕ್ಷೆ ಅನುಭವಿಸಿ ಹೊರಬಂದಮೇಲೆ ಮುನಿಸಿಪಾಲಿಟಿ, ಜಿಲ್ಲಾ ಬೋರ್ಡು, ಹರಿಜನಸೇವಾ, ಹಿಂದೀ ಪ್ರಚಾರ, ಸೇವಾದಳ, ರೈತಸಂಘಟನೆ, ಖಾದಿ ಸೇವೆಗಳನ್ನು ಮಾಡುತ್ತ ಬಂದಿದ್ದೇನೆ. ಈಗ ಅನೇಕ ವರ್ಷಗಳಿಂದ ವಿನೋಬಾಜಿಯವರಿಂದ ಪ್ರೇರಣೆ ಪಡೆದು ಸರ್ವೋದಯ ಚಟುವಟಿಕೆಗಳನ್ನು ನಡೆಸುತ್ತಿದ್ದೇನೆ.

ಸ್ಯ.ಚಿ. 23

## ಕೊಟಗಿ ಸಿದ್ದಲಿಂಗಪ್ಪ

ಜನನ : 1918 ಉದ್ಯೋಗ : ಟ್ರಾಫಿಕ್ ಕಂಟ್ರೋಲರ್, ರಾಜ್ಯ ರಸ್ತೆ ಸಾರಿಗೆ ಸಂಸ್ಥೆ

ವಿಳಾಸ : 4715, I ಕ್ರಾಸ್, ಶಿವಾಜಿ ರಸ್ತೆ, ಮೈಸೂರು-7

---



ಯೂಸುಫ್ ಮೆಹರಾಲಿಯವರ ಉಪಸ್ಥಿತಿಯಲ್ಲಿ ಜರುಗಿದ ರಾಣೇಬೆನ್ನೂರಿನ ರಾಜಕೀಯ ಮತ್ತು ರೈತರ ಪರಿಷತ್ತು ನಾನು ಪಾಲುಗೊಂಡ ಮೊದಲ ರಾಜಕೀಯ ಕಾರ್ಯಕ್ರಮ. ಹರಿಹರ ಬಳಿ ಹರಳಾಪುರದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನ, ಅಜ್ಜಂಪುರದಲ್ಲಿ ನಡೆದ ಸಮ್ಮೇಳನ, ಅರಸೀಕೆರೆ ಎ.ಎಂ.ಸಿ.ಸಿ.ಗಳಿಗೂ ಹೋಗಿದ್ದೆ. ದಾವಣಗೆರೆಯ ನಾಯಕರಾದ ಕಾ. ಶ್ರೀನಿವಾಸ ಶೆಟ್ಟಿ, ಮಾಗನೂರು ಬಸಪ್ಪ, ಖಾದಿ ಸಿದ್ದಲಿಂಗಪ್ಪ, ಖಾದಿ ಸಿದ್ದಪ್ಪ, ಗಾಯಕವಾಡ ನಾರಾಯಣರಾವ್, ಮೌನೇಶ್ವರಪ್ಪನವರ ಸಹವಾಸ, ಕೆ. ಎಫ್. ಪಾಟೀಲರ 'ಶೂರ ಸುಭಾಸಚಂದ್ರ ಬೋಸ್' ಕೃತಿ, ಪತ್ರಿಕೆಗಳ ಓದಿನಿಂದ ಚಳವಳಿಯಲ್ಲಿ ಪಾಲುಗೊಳ್ಳಲು ಸ್ಫೂರ್ತಿ ಲಭಿಸಿತ್ತು.

ನಮ್ಮ ಜಿಲ್ಲೆಯಲ್ಲಿ 1939ರಲ್ಲಿ ಜಂಗಲ್ ಸತ್ಯಾಗ್ರಹವಾಗಿ ಸಾವಿರಾರು ಜನ ಜೈಲು ಕಂಡರು. ಜಿಲ್ಲೆಯಲ್ಲಿ ರಂಗಾಪುರ, ತುರುವನೂರು, ಮಾಯಕೊಂಡಗಳಲ್ಲಿ ಶಿಬಿರ ಸ್ಥಾಪಿಸಿ ಸತ್ಯಾಗ್ರಹ ನಡೆದಿರಲು ನಾನು ರಂಗಾಪುರದಲ್ಲಿ ಕೊಟ್ರೆ ಸಂಜಪ್ಪನವರ ನೇತೃತ್ವದಲ್ಲಿ 20 ಜನರ ಜೊತೆ ಸತ್ಯಾಗ್ರಹಮಾಡಿ ಬಂಧಿತನಾದೆ. ಪೋಲಿಸರ ಚಿತ್ರಹಿಂಸೆ, ಕ್ರೂರಕೃತ್ಯಗಳಿಗೆ ಎಣೆಯೇ ಇರಲಿಲ್ಲ. ಶಾಂತಮ್ಮ, ಗಂಗಮ್ಮ, ಜಾಜೂರು ಸಿದ್ದಪ್ಪ,

ತಿಮ್ಮಪ್ಪ ಮುಂತಾದವರು ಜೊತೆಯಲ್ಲಿ ಇದ್ದ ಕೆಲವರು. ನಮ್ಮ ಜೊತೆಗಾರ ಕೊಟ್ರಬಸಪ್ಪನವರಿಗೆ ಛಟಕಿ ಶಿಕ್ಷೆ ಕೊಟ್ಟದ್ದರಿಂದ ಅವರ ಕುಂಡೆಯ ಮೇಲೆ ಬಲುದಿನಗಳವರೆಗೆ ಕಲೆಗಳು ಉಳಿದಿದ್ದವು. ಆಗ ನನಗೆ ಶಿಕ್ಷೆ, ದಂಡ ಆದವು.

'ಕ್ವಿಟ್ ಇಂಡಿಯಾ' ಚಳವಳಿ ಕಾಲಕ್ಕೆ ವಿದ್ಯಾರ್ಥಿಗಳ ಗುಂಪೊಂದನ್ನು ಬಲಪಡಿಸಿ ನಗರ ಮತ್ತು ನಗರದ ಸುತ್ತ 12 ಮೈಲುವರೆಗೆ ಕಾಲ್ನಡೆಯಿಂದ, ಆಹಾರ ನಿದ್ರೆ ತೊರೆದು ಕುರ್ಕಿ, ಕೊಡಗನೂರು, ಹೆಬ್ಬಾಳು ಮುಂತಾದ ಕಡೆ ಸುತ್ತಿ ಮೆರವಣಿಗೆ, ಸಭೆ ನಡೆಸಿದೆವು. ರಾತ್ರಿ ದೇವಾಲಯದಲ್ಲಿ ನಮ್ಮ ವಾಸ. ಅಂಚೆ, ರೈಲು ಸ್ತಬ್ಧಗೊಳಿಸುವ ಕೆಲಸಕ್ಕೆ ಪ್ರಾಧಾನ್ಯ. ರೈಲ್ವೆ ಗ್ಯಾಂಗ್‌ಮನ್ ಬಾಕ್ಸ್‌ಗಳನ್ನು ಒಡೆದು ಅದರೊಳಗಿನ ಸಾಮಾನುಗಳ ಸಹಾಯದಿಂದ ಅನೇಕ ಫರ್ಲಾಂಗ್ ಉದ್ದ ರೈಲು ಹಳಿ ಕಿತ್ತೆವು. ಅದೇ ರೀತಿ ಟೆಲಿಗ್ರಾಫಿಕ್ ತಂತಿಗಳನ್ನೂ ಕಂಬಗಳನ್ನೂ ಕಿತ್ತುಹಾಕಿದೆವು. ಕೊಡಗನೂರು ರೈಲ್ವೆ ಸ್ಟೇಷನ್ನಿನಲ್ಲಿ ಪೋರ್ಟರ್ ಮತ್ತು ಸ್ಟೇಷನ್ ಮಾಸ್ಟರರನ್ನು ಸ್ಟೇಷನ್ ಕಟ್ಟಡದೊಳಗೆ ಕೂಡಿಹಾಕಿ, ಬಾಗಿಲು ಭದ್ರಪಡಿಸಿ, ಸ್ಟೇಷನ್‌ನಲ್ಲಿನ ಸುದ್ದಿವಾಹಕ ಯಂತ್ರಗಳನ್ನು ನಾಶಮಾಡಿದೆವು. ಪೋಲಿಸ್ ವಾಹನಗಳು ನಮ್ಮನ್ನು ಬೆನ್ನುಹತ್ತಿರುತ್ತಿದ್ದವು. ಈ ಕಾಲಕ್ಕೆ ಬೆಂಗಳೂರು ಘಟನೆಗಳನ್ನು ಕಣ್ಣಾರೆ ಕಂಡ ಇಟಗಿ ವೇದಮೂರ್ತಿಯವರು ದಾವಣಗೆರೆಯನ್ನು ಬಡಿದೆಬ್ಬಿಸಿದರಲ್ಲದೆ, ಕರಿಯ ಕಂಬಳಿ ಹೊದ್ದು ಕಣ್ಮರೆಯ ಕಾರ್ಯಾಚರಣೆಯಲ್ಲಿದ್ದು ಕಾಡ್ಗಿಚ್ಚಿನಂತೆ ಹೋರಾಟವನ್ನು ಹಬ್ಬಿಸಿದರು. ಸತ್ಯಾಗ್ರಹಿಗಳನ್ನು ತಹಬಂದಿಗೆ ತರಲಾರದೆ ಸರಕಾರವು ಮಿಲಿಟರಿ ಕರೆಸಿತು. ರೈಲ್ವೆ ಸ್ಟೇಶನ್ ಮತ್ತು ಬೋಗಿಗಳಿಗೆ ಡಬ್ಬಗಟ್ಟಲೆ ಸೀಮೆ ಎಣ್ಣೆ ಸುರಿದು 17-8-1942ರಂದು ಬೆಂಕಿ ಹಚ್ಚಲಾಯಿತು. ತಾಲೂಕು ಕಚೇರಿ, ಖಜಾನೆ, ಪೋಲಿಸ್ ಸ್ಟೇಷನ್‌ಗಳನ್ನು ಮುತ್ತಲು ಸಹಸ್ರಾರು ಜನರು ಧಾವಿಸಿದರು. ಗುಂಡುಹಾರಿ ದಾವಣಗೆರೆಯ ಸಮರಕ್ಷೇತ್ರ ರಕ್ತದ ಮಡುವಾಯಿತು. ಐದು ಜನ ಆಸುನೀಗಿದರು. ಉತ್ತಂಗಿ ಮನೆತನದ ತರುಣನೊಬ್ಬನ ತೋಳಿನಲ್ಲಿ ನೆಟ್ಟ ಗುಂಡನ್ನು ಡಾ|| ಗೋಪಾಲರಾವ್ ಹೊರತೆಗೆದು ಚಿಕಿತ್ಸೆಮಾಡಿದರು. ರಾತ್ರಿ 12 ಗಂಟೆಗೆ ನನ್ನಂತೆ 20 ಜನರನ್ನು ಬಂಧಿಸಿ ಕೈಬೇಡಿ ತೊಡಿಸಿದರು. ಖಾದಿ ಸಿದ್ದಪ್ಪ ಮತ್ತು ನನ್ನ ಕೈಗೆ ಒಂದೇ ಬೇಡಿ. ಇಬ್ಬರ ಜಲಮಲಾದಿಗಳು ಏಕಕಾಲದಲ್ಲಿ ಆಗಬೇಕು. ಗಲ್ಲಿಗೇರಿಸಿದರೂ ಅದಕ್ಕೆ ಸಿದ್ಧರಾಗಿದ್ದ ನಾವು ನ್ಯಾಯಾಲಯದಲ್ಲೂ ಪ್ರತಿಭಟನೆ ಸೂಚಿಸಿದೆವು. ಆರು ತಿಂಗಳ ಶಿಕ್ಷೆ ಆಯಿತು. ಬಳ್ಳಾರಿ ಮುರುಗೆಪ್ಪ, ಮುರುಗಯ್ಯ, ವೆಂಕಟಶೆಟ್ಟಿ, ಗುರುಸಿದ್ದಪ್ಪ, ರುದ್ರಪ್ಪ, ರಾಜಪ್ಪ, ಯಲ್ಲಪ್ಪ, ಲೋಕಪ್ಪ ಮುಂತಾದವರು ನಮ್ಮ ಸಂಗಡ ಇದ್ದರು.

1947ರಲ್ಲಿ ಕಾಸಲ ಶ್ರೀನಿವಾಸ ಶೆಟ್ಟಿ, ಕೆ. ಟಿ. ಜಂಬಣ್ಣ, ಗಾಂಜೀ ವೀರಪ್ಪ ಇವರನ್ನು ಮೊದಲೇ ಸ್ಥಾನಬದ್ಧತೆಯಲ್ಲಿ ಇಟ್ಟಿದ್ದರು. ನಗರದಲ್ಲಿ ನಾನೇ ಮುಂದಾಗಿ ಸತ್ಯಾಗ್ರಹ ಕಹಳೆ ಹಸ್ತಪತ್ರಿಕೆ ಹಂಚಿದೆ. ಬಕ್ಕೇಶ್ವರಸ್ವಾಮಿ ದೇವಾಲಯದಿಂದ ಕೆಲವು

ಬಾಲಕರೊಂದಿಗೆ ರಾಷ್ಟ್ರಗೀತೆ, ಜೈಕಾರಗಳೊಂದಿಗೆ ಸಾಗಿದೆ. ದೇವಾಲಯದಿಂದ ನ್ಯಾಯಾಲಯಕ್ಕೆ ಬರುವಷ್ಟರಲ್ಲಿ 10,000 ಜನ ಸೇರಿದರು. ಜವಾಬ್ದಾರೀ ಸರಕಾರದ ಬಗ್ಗೆ ಭಾಷಣ ಮಾಡುತ್ತಿದ್ದ ನನ್ನನ್ನು ಕೋರ್ಟಿನ ಎದುರು ಬಂಧಿಸಿದರು. ನನ್ನ ಜೊತೆ ಆಗ ಶಿಕ್ಷೆಗೆ ಒಳಗಾದವರು ಖಾದಿ ಸಿದ್ದಪ್ಪ, ಶರಭಲಿಂಗಪ್ಪ ಮುಂತಾದವರು. ಮೂರು ಬಾರಿ ನಾನು ಒಟ್ಟು ಅನುಭವಿಸಿದ ಕಾರಾವಾಸ 54 ತಿಂಗಳು, ನನಗಾದ ದಂಡ 500 ರೂ.

ವ್ಯ.ಚಿ. 24

## ವೀರಬಸಯ್ಯ ಪುರಾಣಿಕ ಮಠ

ಜನನ : 1912

ಉದ್ಯೋಗ : ಸಾಮಾಜಿಕ ಕಾರ್ಯಕರ್ತ

ವಿಳಾಸ : ಜಯದೇವ ಸರ್ಕಲ್, ದಾವಣಗೆರೆ

---



ನಮ್ಮ ಊರಲ್ಲಿ ಕಾಸಲ ಶ್ರೀನಿವಾಸ ಶೆಟ್ಟರು, ಬೆಲ್ಲದ ಸಿದ್ದಲಿಂಗಪ್ಪ, ಶೇಷಪ್ಪ, ಆನೆಕೊಂಡದ ಮುಪ್ಪಣ್ಣ ಮಾಸ್ತರರು ಪ್ರಾಣಿದಯಾ ಸಂಘವನ್ನು ನಡೆಸಿರಲು, ಅದರ ಆಫೀಸಿಗೆ ಹೋಗುತ್ತಿದ್ದ ನಾನು ಅಲ್ಲಿ ತಕಲಿಯಿಂದ ನೂಲುತ್ತಿದ್ದ ಮಹನೀಯರನ್ನು ಕಂಡು ಅದರ ವಿಚಾರವೇನೆಂದು ಕೇಳಿದೆ. ಕೈಯಿಂದ ನೂತು ನೇಯ್ದ ಬಟ್ಟೆಯಾದ ಖಾದಿಯನ್ನು ತೊಟ್ಟರೆ ನಮ್ಮವರಿಗೇ ಅನ್ನ ಕೊಟ್ಟಂತೆ ಆಗುತ್ತದೆ, ಪರದೇಶೀವಸ್ತ್ರ ತೊಡಬಾರದು, ಎಂಬ ಗಾಂಧೀಜಿಯವರ ವಿಚಾರ ತಿಳಿಸಿ ಹೇಳಿದರು. ನಾನು ಅಂದಿನಿಂದಲೇ ಖಾದಿ ಧರಿಸಲು ನಿರ್ಧರಿಸಿದೆ. ಒಮ್ಮೆ ಅಕಸ್ಮಾತ್ತಾಗಿ ಹುಬ್ಬಳ್ಳಿಗೆ ಹೋದವನು ಅಲ್ಲಿ ಪ್ರಭಾತ್‌ಫೇರಿ ಮುಂತಾದವನ್ನು ಕಂಡು, ಕಡೆಗೆ ಅಲ್ಲಿಯೇ ಡಾ|| ಹರ್ಡೀಕರರು ನಡೆಸುತ್ತಿದ್ದ ಸೇವಾದಳದ ಶಿಬಿರ ಸೇರಿದೆ. ಮೂರು ತಿಂಗಳು ಅಲ್ಲಿ ಇದ್ದು ಮತ್ತೆ ದಾವಣಗೆರೆ ಮರಳಿದೆ. ಶಿಕ್ಷಣದ ಬಗ್ಗೆ ಆಸ್ಥೆ ಕಡಿಮೆಯಾಯಿತು. ಕಾಂಗ್ರೆಸ್ ಸದಸ್ಯನಾಗಿ ಕಾಂಗ್ರೆಸ್ ಆಫೀಸಿನಲ್ಲಿ ಓಡಾಡುತ್ತಿದ್ದೆನು. ಮುಂದೆ ಕಾಂಗ್ರೆಸ್ ಆಫೀಸನ್ನು ಸರಕಾರ ಮುಟ್ಟುಗೋಲು ಹಾಕಿದಾಗ ಕಾಸಲ ಶ್ರೀನಿವಾಸ ಶೆಟ್ಟರ ಮನೆಯಲ್ಲಿ ಕಾಂಗ್ರೆಸ್ ಆಫೀಸು ಮಾಡಿ ಕೆಲಸಮಾಡಿದೆ. ಇದರಿಂದ ಬಹಿರಂಗ ಕೆಲಸ ಕಷ್ಟವಾಯಿತು. ಕಡೆಗೆ ನನ್ನ ಸ್ನೇಹಿತ ಬಿ. ಮಲ್ಲಪ್ಪನವರ ಸಲಹೆಯಂತೆ ತಿಲಕ ತರುಣ ಸಂಘವನ್ನು ಸ್ಥಾಪಿಸಿ ನಾನು ಕಾರ್ಯದರ್ಶಿಯಾದೆ. ಟಿ. ಸಿದ್ದಲಿಂಗಯ್ಯನವರನ್ನು

ಬರಮಾಡಿಸಿ ಅವರಿಂದ ಮಾರ್ಗದರ್ಶನ ಪಡೆದೆವು. ಶಾಲಾ ಶಿಕ್ಷಣ ನಿಂತೇಹೋಯಿತು.

ಹರಿಹರದಲ್ಲಿ ಕಾಂಗ್ರೆಸ್ ಆದಾಗ ನಾನು ಮನರಂಜನಾ ಕಮಿಟಿ ಕಾರ್ಯದರ್ಶಿಯಾಗಿದ್ದೆ. ಹರಿಹರದ ಕೆ. ಟಿ. ಜಂಬಣ್ಣ, ಜೊಂದಾಡೆ ಹನುಮಂತಪ್ಪ ಮುಂತಾದವರು ನನಗೆ ಸಹಾಯಕರು. ತಿಲಕ ತರುಣ ಸಂಘದವರಿಂದ 'ಚಲ್ತಿ ದುನಿಯಾ' ಎಂಬ ನಾಟಕ ಆಡಿಸಲು, ಆಗ ಬಂದಿದ್ದ ರಾಜೇಂದ್ರ ಪ್ರಸಾದರು ಮೆಚ್ಚುಗೆ ಸೂಚಿಸಿದರು.

1942ರಲ್ಲಿ ಟಿಕೆಟ್ ಇಲ್ಲದೆ ರೈಲು ಪ್ರಯಾಣ ಮಾಡುವ ಚಟುವಟಿಕೆಯಲ್ಲಿ ಸೇರಿ, ಬಾಣಾವರಕ್ಕೆ ಹೋಗಿರಲು ರಾತ್ರಿ ಪೋಲಿಸರು ರೈಲು ನುಗ್ಗಿ ಲಾಠಿಚಾರ್ಜುಮಾಡಿದರು. ಕತ್ತಲಲ್ಲಿ ನಾನು ರೈಲಿನಿಂದ ಇಳಿದು ಗಿಡದ ಮರೆಯಲ್ಲಿ ಕುಳಿತೆ. ಬೆಳಕು ಹರಿದಾಗ ಸ್ಟೇಷನ್ನಿನಲ್ಲಿ ಒಂದು ಸಾವಿರ ನನ್ನಂತೆ ಬಂದ ಜನ ಇದ್ದೆವು. ಗುಂಪುಕಟ್ಟಿ ಹೋಗುವುದು ಒಳಿತಲ್ಲವೆಂದು ನಾನು ನಡೆದು ಅರಸಿಕೆರೆಗೆ ಹೋದೆ. ಅಲ್ಲಿ ಒಬ್ಬರ ಮನೆಯಲ್ಲಿ ಉಂಡು, ಶಿರಾಕ್ಕೆ ಬಂದೆ. ಕೈಯಲ್ಲಿ ಹಣವಿರಲಿಲ್ಲ. ಶಿರಾದ ಸ್ನೇಹಿತರ ನೆರವಿನಿಂದ ಚಿತ್ರದುರ್ಗ ತಲುಪಿದೆ. ಅಲ್ಲಿನ ಕಾಂಗ್ರೆಸ್ ಕಾರ್ಯಕರ್ತರು, ಈಗ ದಾವಣಗೆರೆಗೆ ಹೋಗಬೇಡಿ, ಎಂದು ತಿಳಿಸಿದರು. ಒಂದು ವಾರದನಂತರ ದಾವಣಗೆರೆಗೆ ಬಂದಾಗ ಸಿ.ಐ.ಡಿ.ಗಳು ನನ್ನನ್ನು ವಿಚಾರಿಸುತ್ತಿದ್ದರೆಂದು ತಿಳಿದು ಮನೆ ಬಿಟ್ಟು ಒಂದು ತಿಂಗಳು ಹೊರಗುಳಿದೆ. ಗುಪ್ತವಾಗಿ ಕಾಂಗ್ರೆಸ್ ಚಟುವಟಿಕೆ ನಡೆಸಿದೆ.

1947ರಲ್ಲಿ ದಾವಣಗೆರೆ ಮ್ಯಾಜಿಸ್ಟ್ರೇಟ್ ಕೋರ್ಟ್ ಮುಂದೆ ಪಿಕೆಟಿಂಗ್‌ಮಾಡಿ ಬಂಧಿತನಾಗಲು ಆರು ತಿಂಗಳ ಶಿಕ್ಷೆ ವಿಧಿಸಿದರು. ಆದರೆ ಮುಂದೆ ಬೇಗ ಬಿಡುಗಡೆ ಆಯಿತು. ಮುಂದೆ ಐದು ವರ್ಷಕಾಲ ನಗರಸಭಾ ಸದಸ್ಯನಾಗಿದ್ದೆ. ಏಕೀಕರಣ ಚಳವಳಿ, ಗಡಿ ಚಳವಳಿಗಳಲ್ಲೂ ದುಡಿದಿರುವೆ. ಕಲೆ, ಸಾಹಿತ್ಯ ಮುಂತಾದ ಕ್ಷೇತ್ರಗಳಲ್ಲೂ ದುಡಿಯುತ್ತಿರುವೆ.

ವೈ.ಚಿ. 25

## ಕೆ. ಎಂ. ಪೂರ್ವಾಚಾರಿ

ಜನನ : 1907 ಉದ್ಯೋಗ : ಅಕ್ಕಸಾಲಿಗ ವಿಳಾಸ : ಮಾಯಕೊಂಡ, ತಾ|| ದಾವಣಗೆರೆ

---

ಗದಗಿನವರಾದ ಬಾಳಾಜಿರಾವ್ ವಿತ್ತೆ ಎಂಬವರು 1934ರಲ್ಲಿ ನಮ್ಮ ಊರಾದ ಮಾಯಕೊಂಡಕ್ಕೆ ರೆವಿನ್ಯೂ ಇನ್ಸ್‌ಪೆಕ್ಟರಾಗಿ ಬಂದರು. ಕಾಂಗ್ರೆಸ್‌ನ ನಿಜತತ್ವ ಬಲ್ಲ ಸಂಭಾವಿತರು. ಅವರ ರಾಷ್ಟ್ರೀಯ ಚಟುವಟಿಕೆಗಳನ್ನು ಸಹಿಸಲಾರದ ಸರಕಾರ ಅವರನ್ನು ತುಮಕೂರು ಜಿಲ್ಲೆಯಿಂದ ಮಾಯಕೊಂಡಕ್ಕೆ ವರ್ಗಮಾಡಿತ್ತು. ಈ ರೀತಿ



ಮೇಲಿಂದಮೇಲೆ ತಮ್ಮನ್ನು ವರ್ಗಾಯಿಸುವುದು ಜನಜಾಗೃತಿಮಾಡಲು ಅನುಕೂಲಕರವಾಯಿತು ಎಂದು ಅವರು ಹೇಳುತ್ತಿದ್ದರು. ಪ್ರತಿ ಭಾನುವಾರ ನಮ್ಮ ಊರ ಆಂಜನೇಯ ದೇವಸ್ಥಾನದಲ್ಲಿ ಅವರು ಭಾಷಣಗಳನ್ನು ಏರ್ಪಡಿಸಿ ಜನರಲ್ಲಿ ಜಾಗೃತಿ ಮಾಡಿದರಲ್ಲದೆ ಪ್ರತಿದಿನ ಬೆಳಗಿನ ಜಾವ ಪ್ರಭಾತ್ ಫೇರಿ ನಡೆಸಲಾರಂಭಿಸಿದರು. ಮುಂದೆ ಅವರನ್ನು ಬೇರೆ ಕಡೆಗೆ ವರ್ಗಾಯಿಸಿದರೂ ನಮ್ಮಲ್ಲಿ ಕಾಂಗ್ರೆಸ್‌ನ ಬೀಜವನ್ನು ಅವರು ಬಿತ್ತಿ ಆಗಿತ್ತು. ಅದೇ ಹೊತ್ತಿಗೆ ಹೊಸದುರ್ಗ ತಾ॥ನಲ್ಲಿ ಉಪಾಧ್ಯಾಯರಾಗಿದ್ದ ಚಪಾಳೆ ಮರಿರಾಮಪ್ಪನವರು ಒಂದು ನಾಟಕ ಬರೆದು ನಮ್ಮ ಊರಲ್ಲಿ ಆಡಿಸಿದರು. 'ಸ್ತ್ರೀನಾಟಕ' ಎಂದು ಹೆಸರಿಟ್ಟ ಅದರಲ್ಲಿ ಪಾಶ್ಚಾತ್ಯ ಶಿಕ್ಷಣದಿಂದ ನಮ್ಮ ಜನ ಪಾಶ್ಚಾತ್ಯರನ್ನು ಅನುಕರಿಸಿ ವಿಲಾಸಿಗಳೂ ಕುಡುಕರೂ ಆಗಿ ಹೀನವರ್ತನೆಯ ಜನರ ಬೆಂಬಲಿಗರೂ ಸತ್ಯವಾದಿಗಳನ್ನು ತಿರಸ್ಕರಿಸುವವರೂ ಆದರೆಂದು ಚಿತ್ರಿಸಲಾಗಿತ್ತು. ಈ ನಾಟಕಕ್ಕೆ ಲೈಸೆನ್ಸು ಕೊಡುವುದಿಲ್ಲವೆಂದರೂ ನಮ್ಮ ಊರಲ್ಲಿ ಐಕ್ಯತೆ ಇದ್ದುದರಿಂದ ನಾಲ್ಕೈದು ಬಾರಿ ಅದನ್ನು ಅಭಿನಯಿಸಿದ್ದಾಯಿತು. ಅಲ್ಲದೆ ಧಾರವಾಡ ಮತ್ತು ಬೆಂಗಳೂರು ಕಡೆಯಿಂದ ಪ್ರಿಂಟಾದ ಸಣ್ಣ ಸಣ್ಣ ಲಾವಣಿ ಪುಸ್ತಕಗಳನ್ನು ತರಿಸಿ ದೇಶಭಕ್ತಿಗೀತೆ, ದೇಶಭಕ್ತಿಗಾಗಿ ಹೋರಾಡುವ ತತ್ತ್ವಗಳು, ಉಪ್ಪಿನ ಸತ್ಯಾಗ್ರಹದ ವಿಚಾರ ಮುಂತಾದ ಲಾವಣಿಗಳನ್ನು ನಮ್ಮ ಊರ ಎಸ್. ಕೆ. ಗೋವಿಂದಪ್ಪ, ಜಿ. ಎಚ್. ಸಿದ್ದಪ್ಪ ಮುಂತಾದವರು ಹಾಡಿ ಪ್ರಚಾರ ಮಾಡಿದರು. ಹೀಗೆ ನಮ್ಮಲ್ಲಿ ಜಾಗೃತಿ ಹೆಚ್ಚಿತು.

1937ರಲ್ಲಿ ದೇಶಭಕ್ತರಾದ ವೀರಣ್ಣಗೌಡ ಮತ್ತು ತಾಯಮ್ಮ ನಮ್ಮ ಊರಲ್ಲಿ ಭಾಷಣಮಾಡಿ ಸರ್ವಜನಗಳಿಂದ ಮಾನ್ಯತೆಪಡೆದು ಹೋದರು. ನಂತರ ನಿಜಲಿಂಗಪ್ಪ, ಟಿ. ಸುಬ್ರಹ್ಮಣ್ಯಂ, ಎಚ್. ಸಿ. ದಾಸಪ್ಪ, ಎಸ್. ವಾಸುದೇವರಾವ್, ಕೆ. ಟಿ. ಭಾಷ್ಯಂ ಮುಂತಾದವರೂ ಬರುತ್ತಿದ್ದರು. ದಾವಣಗೆರೆಯಲ್ಲಿ ತಾ॥ ಕಾಂಗ್ರೆಸ್ಸು ಆಫೀಸು ಶುರು ಆದರೂ ಕಾರ್ಯಕಲಾಪಗಳೆಲ್ಲ ಮಾಯಕೊಂಡದಲ್ಲಿ ಹೆಚ್ಚಾಗಿ ನಡೆಯುತ್ತಿತ್ತು. ಹೆಂಡದ ಅಂಗಡಿ ಪಿಕೆಟಿಂಗ್, ಸಾರಾಯಿ ಅಂಗಡಿಗೆ ಹೋಗುವವರನ್ನು ವಂದನಾಪೂರ್ವಕವಾಗಿ ತಡೆಗಟ್ಟುವುದು ಮುಂತಾದ ಚಟುವಟಿಕೆ ನಡೆಯುತ್ತಲೇ ಇದ್ದವು. ಅಷ್ಟೊತ್ತಿಗೆ ಪೋಲಿಸರ ಕಾಟ ಜಾಸ್ತಿ ಆಗುತ್ತ ಬಂತು.

1939ರಲ್ಲಿ ಅರಣ್ಯಸತ್ಯಾಗ್ರಹವು ಆರಂಭ ಆಗಿ ತುರುವನೂರಲ್ಲಿ ಬಂಧನಗಳಾದಾಗ ಅವರನ್ನು ಜೈಲಿಗೆ ಒಯ್ಯುವ ವೇಳೆಗೆ ರೈಲುಗಾಡಿಯಲ್ಲಿ ಆದ ಜಯಕಾರಗಳನ್ನು ಕೇಳಿ

ನಮ್ಮ ಊರಿನವರೂ ಹುರಿದುಂಬಿದರು. 12-10-1939ರಲ್ಲಿ ಗೋಗಿ ಜೊಮ್ಮಣ್ಣ ನವರು ಸರ್ವಾಧಿಕಾರಿಯಾಗಿ ನೇಮಕಗೊಂಡು, ಹಸ್ತಪ್ರತಿ ಹಂಚಿ, 13-10-1939ರಂದು ಕೊಡಗನೂರು ಅರಣ್ಯದಲ್ಲಿ ಈಚಲಮರ ಕಡಿದು ಸತ್ಯಾಗ್ರಹಮಾಡಿ ಗೋಗಿ ಜೊಮ್ಮಣ್ಣ, ಎಸ್. ಕುಂಭಣ್ಣ, ಎಸ್. ವಿಶ್ವನಾಥಾಚಾರಿ, ಬಿ. ಲಕ್ಷ್ಮಣ ನಾಯ್ಕ, ಎಸ್. ಗೋವಿಂದಪ್ಪ, ಕೆ. ಸಂಕಪ್ಪ, ಎದ್ದೆ ಸಾಹುಕಾರ್ ಬಸಣ್ಣ ಮುಂತಾದ 16 ಜನರನ್ನು ಬಂಧಿಸಿ ದಾವಣಗೆರೆಗೆ ಒಯ್ದರು. ಎರಡನೆಯ ಸರ್ವಾಧಿಕಾರಿಯಾಗುವ ಜವಾಬ್ದಾರಿ ನನ್ನ ಮೇಲೆ ಬಂದು ನನ್ನ ಜೊತೆಗೆ ಕೆ. ನಾಗಲಿಂಗಾಚಾರಿ, ಹಾಲಪ್ಪ, ಅಡಿವೆಪ್ಪ, ನೀಲಪ್ಪ ಮುಂತಾದ 11 ಜನ 14-10-1939ರಲ್ಲಿ ಅರೆಸ್ಟಾಗಿ ದಾವಣಗೆರೆಗೆ ಹೋದೆವು. ಮೂರನೆಯ ಸರ್ವಾಧಿಕಾರಿಯಾಗಿ ಎ. ಸದಾಶಿವಪ್ಪನವರು ಎಂಟು ಜನರ ಜತೆ ಕೂಡಿಕೊಂಡು ಸತ್ಯಾಗ್ರಹಮಾಡಿ ಬಂಧಿತರಾದರು. ಈ ಮೂರು ಗುಂಪುಗಳಿಗೆ 16-10-1939 ರಂದು ದಾವಣಗೆರೆಯಲ್ಲಿ ಕೋರ್ಟಿಗೆ ಒಯ್ದು ಶಿಕ್ಷೆ ವಿಧಿಸಿ ಆ ದಿನ ರಾತ್ರಿ ರೈಲಿನಲ್ಲಿ ಬೆಂಗಳೂರು ಸೆಂಟ್ರಲ್ ಜೈಲಿಗೆ ಒಯ್ದರು. ಜೈಲಿನಲ್ಲಿ ದನಗಳ ದೊಡ್ಡಿಯಲ್ಲಿ ತುಂಬು ವಂತೆ ಜನರನ್ನು ತುಂಬಿದ್ದರು. ಅನಂತರವೂ ನಮ್ಮ ಊರಲ್ಲಿ ಶಾನುಭೋಗ ವಿರೂಪಾಕ್ಷಪ್ಪ, ಹೆಬ್ಬಾಳ್ ಮೂಡ್ಲಗಿರಿಯಪ್ಪ ಇವರ ನೇತೃತ್ವದಲ್ಲಿ ನಾಲ್ಕನೆಯ ಮತ್ತು ಐದನೆಯ ತಂಡದವರು ಸತ್ಯಾಗ್ರಹಮಾಡಿದರು. ಪ್ರತಿ ತಂಡದಲ್ಲಿ ಐದಾರು ಜನ ಇದ್ದರು. ಮೊದಲನೆಯ ಗುಂಪಿಗೆ ಮಾತ್ರ ಹೆಚ್ಚು ಶಿಕ್ಷೆ ಆಗಿ, ಉಳಿದ ನಾಲ್ಕು ಗುಂಪಿನವರಿಗೆ ತಲಾ ಐದೂವರೆ ತಿಂಗಳು ಶಿಕ್ಷೆ ಆಗಿತ್ತು. ನಾವು ನಾಲ್ಕು ಗುಂಪಿನವರು ಐದೂವರೆ ತಿಂಗಳ ಅನಂತರ ಬಿಡುಗಡೆ ಆದೆವು. ಮೊದಲ ಗುಂಪಿನವರು ಜಯಚಾಮರಾಜ ಒಡೆಯರ ಪಟ್ಟದ ಕಾಲಕ್ಕೆ ಬಿಡುಗಡೆ ಆದರು.

1942ರಲ್ಲಿ ನಾನಾಕಡೆಯ ಜನರು ಕಂಬಿ ಕೀಳುವುದು, ತಾರು ಕತ್ತರಿಸುವುದು, ಸೇತುವೆ ಒಡೆವುದು ಮುಂತಾದ ಕೆಲಸಮಾಡುತ್ತಿದ್ದರು. ನೆರೆಯ ಬ್ರಿಟಿಷ್ ಜಿಲ್ಲೆಗಳಲ್ಲಿ ನಡೆದ ಚಳವಳಿಯು ನಮಗೆ ಸ್ಫೂರ್ತಿಯನ್ನು ನೀಡಿತ್ತು. ಬಿ. ಲಕ್ಷ್ಮಣ ನಾಯಕ, ಜಿ. ಹನುಮಂತಪ್ಪ, ಕೆಂಚಪ್ಪ, ಅಡಿವಪ್ಪ, ಎಸ್. ಪುಟ್ಟಪ್ಪ, ಎಸ್. ಗೋವಿಂದಪ್ಪ, ಕೆ. ಸಂಕಪ್ಪ, ಮಾದಪ್ಪ, ಬೀರಪ್ಪ, ಕೆ. ಎಚ್. ರುದ್ರಾಚಾರಿ, ಏಕಾಂತಪ್ಪ, ಗುಡ್ಡಪ್ಪ, ಹನುಮಪ್ಪ ಮುಂತಾದವರು ಮಾಯಕೊಂಡ ರೈಲ್ವೆ ಸ್ಟೇಶನ್‌ಗೆ ಒಂದು ಮೈಲು ದೂರದ ಒಂದು ಸೇತುವೆಯನ್ನು ಸ್ವಲ್ಪ ಸಡಲಿಸಿದರು. ಅದನ್ನು ಒಡೆಯಲು ಆಗಲಿಲ್ಲ. ಮೂರು ಮೈಲು ದೂರದಲ್ಲಿ ನಾಲ್ಕು ಕಂಬಿಗಳನ್ನು ಕಿತ್ತು ಮೂರು ಕಡೆ ಟೆಲಿಗ್ರಾಫ್ ತಂತಿ ಕಡಿದರು. ಗಾಡಿ ಬಂದಾಗ ಅದರಲ್ಲಿ ಗ್ಯಾಂಗ್‌ಮನ್‌ಗಳೂ ಮಿಲಿಟರಿಯವರೂ ಇದ್ದರು. ಅವರು ರಸ್ತೆ ಸರಿಮಾಡಿ ಮುಂದೆ ಸಾಗಿದರು. ಮುಂದೆ ಒಂದು ದಿನ ಒಂದು ರೈಲು ಬೆಳಗ್ಗೆ ಐದು ಗಂಟೆಗೆ ನಿಲ್ದಾಣದಲ್ಲಿ ನಿಂತು, ಅದರಿಂದ 300 ಮಿಲಿಟರಿಯವರು ತುಪಾಕಿ ಸಹಿತ ಇಳಿದು ಬಂದು ನಮ್ಮ ಊರನ್ನು ಸುತ್ತುಗಟ್ಟಿ, ಊರ 4-5 ಜನರ

ನೆರವಿನಿಂದ ಮೇಲ್ಕಂಡ ಯೋಧರನ್ನೂ ಗ್ರಾಮದ ಮುಖ್ಯಸ್ಥರಾದ ಎಂ. ಕೆ. ಎಚ್. ನಾಗಲಿಂಗಾಚಾರ್, ಎ. ನಂದ್ಯಪ್ಪ, ಕೆ. ಹುಚ್ಚಪ್ಪ, ಡಿ. ಕೊಟ್ರಪ್ಪ, ಎಂ. ದಾಸಪ್ಪ ಮುಂತಾದ ಕೆಲವು ಜನಗಳನ್ನೂ ಪಕ್ಷಿಗಳನ್ನು ಬಲೆ ಒಡ್ಡಿ ಹಿಡಿದು ಬುಟ್ಟಿಯೊಳಗೆ ತುಂಬುವಂತೆ ವ್ಯಾನಿನಲ್ಲಿ ತುಂಬಿ ಒಯ್ದರು. ಯಾಕೆ, ಏನು, ಎಂದರೆ ತುಪಾಕಿ ತೋರಿಸುತ್ತಿದ್ದರು. ದಾವಣಗೆರೆಯಲ್ಲಿ ಇವರಿಗೆಲ್ಲ ಶಿಕ್ಷೆವಿಧಿಸಿ ಚಿತ್ರದುರ್ಗ, ಮೈಸೂರು ಜೈಲಿಗೆ ಒಯ್ದರು.

1947ರಲ್ಲಿ ಪ್ರಭಾತ್‌ಫೇರಿ, ಭಾಷಣ ನಡೆದವು. ಸ್ವರಾಜ್ಯ ಬಂದನಂತರವೂ ಹಿಂದೆ ಬರುತ್ತಿದ್ದ ನಾಯಕರು ನಮ್ಮ ಊರಿಗೆ ಬಂದು ಅನೇಕ ವಿಧದಲ್ಲಿ ಊರಿಗೆ ಅನುಕೂಲಮಾಡಲು ಮರೆಯಲಿಲ್ಲ.

ವ್ಯ.ಚಿ. 26

## ಕೆ. ಎಂ. ಅಣಜಿಮಠ

ಜನನ : 1909 ಉದ್ಯೋಗ : ನಿವೃತ್ತ ಜೀವನ ವಿಳಾಸ : ಹರಿಹರ



ಹರಿಹರದಲ್ಲಿ ಬಾಲ್ಯದಲ್ಲಿ ನನ್ನ ತಂದೆಯವರು ತೀರಿ ಕೊಳ್ಳಲು ನಾನು ನನ್ನ ತಾಯಿಯ ತವರುಮನೆ ಯಾದ ರಾಣೆಬೆನ್ನೂರಿಗೆ ಹೋಗಿ ಅಲ್ಲಿ ಹೈಸ್ಕೂಲಲ್ಲಿ ಓದುತ್ತಿದ್ದೆ. ಆಗ ಬೆಳಗಾವಿ ಕಾಂಗ್ರೆಸಿನ ವಿಚಾರ ಪತ್ರಿಕೆಗಳಲ್ಲಿ ಓದಿ, ಶಾಲೆಯ 2-3 ತಿಂಗಳ ಶುಲ್ಕ ಕೊಡದೆ ಅದೇ ಹಣದಿಂದ ಬೆಳಗಾವಿ ಅಧಿವೇಶನಕ್ಕೆ ಒಂದು ತಿಂಗಳು ಮುಂಚಿತವಾಗಿ ಹೋಗಿ, ಅಲ್ಲಿ ಸ್ವಯಂಸೇವಕನಾಗಿ ಸೇವೆಸಲ್ಲಿಸಿದೆನು. ಅನಂತರ ಗಂಗಾಧರರಾಯರು, "ನೀನು ಓದಿ ದೊಡ್ಡವನಾದ ನಂತರ ಇಲ್ಲಿಗೆ ಬಾ" ಎಂದು ರೈಲಿಗೆ ಮೂರು ರೂ. ಕೊಟ್ಟು ರಾಣೆಬೆನ್ನೂರಿಗೆ ಕಳುಹಿಸಿ ಕೊಟ್ಟರು. ಅಲ್ಲಿ ಮೆಟ್ರಿಕ್‌ನಲ್ಲಿದ್ದಾಗ ಕಾಯಿದೆಭಂಗ ಚಳವಳಿ ಸೇರಿ ಪರದೇಶೀ ವಸ್ತ್ರ ಬಹಿಷ್ಕಾರ ಚಟುವಟಿಕೆಯಲ್ಲಿ ಸೇರಿದೆ. ಮುಂದೆ ಅರಣ್ಯಸತ್ಯಾಗ್ರಹ, ಸೇಂದಿ ಅಂಗಡಿ ಪಿಕೆಟಿಂಗ್‌ನಲ್ಲೂ ಪಾಲುಗೊಂಡೆ. ಗದಗಿಗೆ ಹೋಗಿ ಅಲ್ಲಿ ಕೂಡ ತೋಟಪ್ಪ ನಾರಾಯಣಪುರರ ಸಂಗಡ ಪಿಕೆಟಿಂಗ್‌ನಲ್ಲಿ ಸೇರಿದೆ. ಮುಂದೆ ಮುಂಬೈಗೆ ಹೋಗಿ 1930ರ ಮೇಯಲ್ಲಿ ವಡಾಲಾ ಉಪ್ಪಿನ ಸತ್ಯಾಗ್ರಹ ಶಿಬಿರ ಸೇರಿದೆನು. ಯೂಸುಫ್ ಮೆಹರಾಲಿ, ಎಸ್. ಕೆ. ಪಾಟೀಲ್, ಹಂಸಾ ಮೆಹ್ತಾ ಮುಂತಾದವರ ಆದೇಶದಂತೆ

ಕೆಲಸ ಮಾಡಿದೆ. ಆ ಕಾಲದಲ್ಲಿ ಮೂರು ತಿಂಗಳು ಜೈಲಾಯಿತು. 1932ರಲ್ಲಿ ಮುಂಬೈಯಲ್ಲಿ ಪಿಕೆಟಿಂಗ್ ಚಟುವಟಿಕೆಯಲ್ಲಿ ಪಾಲುಗೊಂಡೆ. ಒಮ್ಮೆ ಲಾಠೀಚಾರ್ಜು ಆದಾಗ ಗಾಯಗೊಂಡು ಜಿ. ಟಿ. ಮತ್ತು ಜೆ. ಜೆ. ಆಸ್ಪತ್ರೆಗಳಲ್ಲಿ ಆರೈಕೆಹೊಂದಿದೆ. ಅಲ್ಲಿಂದ ಸಾಬರಮತಿ ಆಶ್ರಮಕ್ಕೆ ತೆರಳಿ ಖಾದಿ ಉತ್ಪಾದನೆಯಲ್ಲಿ ಮೂರು ತಿಂಗಳು ತರಬೇತಿ ಪಡೆದು 1936ರಲ್ಲಿ ಹರಿಹರಕ್ಕೆ ಮರಳಿ ಬಂದೆ. 1937ರಲ್ಲಿ ಸಿದ್ದಲಿಂಗಯ್ಯನವರು ಕಾಂಗ್ರೆಸ್ ಪ್ರಚಾರಕ್ಕೆ ಬಂದನಂತರ ಹರಿಹರದಲ್ಲಿ ಕಾಂಗ್ರೆಸ್ ಕಮಿಟಿ ಸ್ಥಾಪಿಸಿದೆವು. ಈ ಕಮಿಟಿಯಲ್ಲಿ ಟಿ. ಎಂ. ಗುರುಶಿದ್ದಪ್ಪ (ಅಧ್ಯಕ್ಷ), ಆರ್. ಎಸ್. ಶಾಂತಪ್ಪ (ಕಾರ್ಯದರ್ಶಿ), ಕೆ. ಎಂ. ಅಣಜಿಮಠ (ಸಹಕಾರ್ಯದರ್ಶಿ), ಜಿ. ಎಂ. ಹನುಮಂತರಾವ್, ಹಮ್ಮಿಗಿ ಹನುಮಂತಶೆಟ್ಟರು, ಮೊಗಲಪ್ಪನವರ ಪುಟ್ಟಪ್ಪನವರು, ಬಿ. ಟಿ. ಕಾಶಿಂ ಸಾಬಿ, ಎಚ್. ವೀರಭದ್ರಪ್ಪ, ಡಿ. ಎಸ್. ಸುಂದರಶರ್ಮ ಮುಂತಾದವರಿದ್ದರು. 1939ರಲ್ಲಿ ಧ್ವಜಸತ್ಯಾಗ್ರಹದಲ್ಲಿ ಪಾಲುಗೊಂಡು ಬಂಧಿತನಾಗಿದ್ದೆ. ಅಲ್ಲದೆ 1940ರಲ್ಲಿ ರಾಣೆಬೆನ್ನೂರಲ್ಲಿ ಯುದ್ಧವಿರೋಧೀ ವೈಯಕ್ತಿಕ ಸತ್ಯಾಗ್ರಹ ಕೂಡ ನಡೆಸಿ ಬಂಧನಕ್ಕೆ ಒಳಗಾಗಿದ್ದೆ. ಹರಿಹರ ಕಾಂಗ್ರೆಸ್ ಅಧಿವೇಶನದ ಯಶಸ್ಸಿಗಾಗಿ ಕೂಡ ಶ್ರಮಿಸಿದೆ. 1942ರಲ್ಲಿ ತಾಲ್ಲೂಕಿನಲ್ಲೆಲ್ಲ ಅನೇಕ ಭೂಗತ ಹಾಗೂ ವಿಧ್ವಂಸಕ ಕೃತ್ಯಗಳಲ್ಲಿ ಪಾಲುಗೊಂಡೆ. 1947ರಲ್ಲಿ ತಾಲ್ಲೂಕು ಕಚೇರಿಯ ಮೇಲೆ ಧ್ವಜ ಹಾರಿಸುವುದಾಗಿ ಪತ್ರ ಬರೆದಿರಲು ಹಿಂದಿನ ದಿನ ನನ್ನನ್ನು ಬಂಧಿಸಿದರು. ಈ ಕಾಲಕ್ಕೆ ತಾ|| ಕಾಂ|| ಅಧ್ಯಕ್ಷನಾಗಿದ್ದ ನನ್ನ ಜೊತೆ ಎಚ್. ಎಂ. ಕಾಶೀನಾಥಯ್ಯ, ಟಿ. ಜಯದೇವಪ್ಪ, ಎಂ. ಮಾಧವ ನಾಯಕ, ಕೆ. ದಶರಥಶಾಸ್ತ್ರಿ, ಜಿ. ಎಂ. ಹನುಮಂತರಾವ್, ಎಂ. ನಾಗಭೂಷಣಸಾ, ಎಂ. ನಾರಾಯಣಸಾ, ಎಂ. ಕೊನೇರಿಸಾ, ಕೆ. ನಂಜುಂಡಯ್ಯ, ಜಿ. ಮುನಿಯಪ್ಪ, ಗೌಡ್ರ ಬಸಪ್ಪ, ತೇಲ್ಕರ್ ಮುಕುಂದರಾವ್, ಎಚ್. ವೀರಭದ್ರಪ್ಪ, ದೊಡ್ಡಬಾತಿ ಸಿದ್ದಲಿಂಗಪ್ಪ ಮುಂತಾದವರೂ ಇದ್ದರು. ಈ ಕಾಲದಲ್ಲಿ ನನ್ನ ತಾಯಿ ತೀರ ಅಸೌಖ್ಯದಿಂದ ಇದ್ದುದರಿಂದ ಸ್ನೇಹಿತರೆಲ್ಲರೂ ನಾನು ಸತ್ಯಾಗ್ರಹಕ್ಕೆ ಬರಬೇಕಾಗಿಲ್ಲವೆಂದರೂ ಅಧ್ಯಕ್ಷನಾದ ನಾನು ಹಿಂದುಳಿಯನಾರೆನೆಂದು ಹೇಳಿ ಚಿತ್ರದುರ್ಗ ಜೈಲು ಸೇರಿದೆ. ಆ ಕಾಲಕ್ಕೆ ಕೆಲವು ದಿನಗಳಲ್ಲಿ ನನ್ನ ತಾಯಿ ಶಿವಾಧೀನಳಾಗಲು ನನ್ನನ್ನು ಪೋಲಿಸ್ ವ್ಯಾನಿನಲ್ಲಿ ರಾತ್ರಿ ಹರಿಹರಕ್ಕೆ ತಂದುಬಿಟ್ಟರು. ಅಲ್ಲಿಂದ ಮುಂದೆ ನಾನು ರಾಣೆಬೆನ್ನೂರಿಗೆ ಹೋದೆ. ಅಲ್ಲಿ ಸತ್ಯಾಗ್ರಹ ಶಿಬಿರ ಸ್ಥಾಪಿಸಿರಲು ಪ್ರತಿದಿನ 50ರಂತೆ ಸತ್ಯಾಗ್ರಹಿಗಳನ್ನು ಹರಿಹರಕ್ಕೆ ಕಳುಹಿಸುತ್ತಿದ್ದೆವು. ಈ ಚಟುವಟಿಕೆ ಒಂದು ತಿಂಗಳ ತನಕ ನಡೆಯಿತು. ಈ ಶಿಬಿರದ ಪ್ರಮುಖರಾಗಿ ದುಮ್ಮಿ ಮರಿಗೆಪ್ಪ, ತುಮಕೂರಿನ ಸಿ. ಆರ್. ಬಸಪ್ಪ ಇವರುಗಳಿದ್ದರು. ಮುಂದೆ ಒಪ್ಪಂದ ಆಯಿತು.

ಚಳವಳಿಗಳ ಕಾಲಕ್ಕೆ ಹೊಲ, ಮನೆ, ಬೆಳ್ಳಿ, ಬಂಗಾರ ಎಲ್ಲವನ್ನೂ ಕಳೆದುಕೊಂಡು ತುಂಬಾ ತೊಂದರೆಪಟ್ಟಿದ್ದೇನೆ.

ವ್ಯ. ಚಿ. 27

# ಕೆ. ಎಚ್. ಮಹಾದೇವಪ್ಪ

ಜನನ : ? ಉದ್ಯೋಗ : ವೈದ್ಯ ವಿಳಾಸ : ಕುಂಬಳೂರು, ತಾ॥ ಹರಿಹರ



1938ರ ಶಿವಪುರ ಕಾಂಗ್ರೆಸ್ಸಿಗೆ ನಾನೂ ನನ್ನ ಮಿತ್ರ ಕೆ. ಚೆನ್ನವೀರಪ್ಪ ಇಬ್ಬರೂ ಹೋಗಿ ಅಲ್ಲಿ ಸ್ವಯಂಸೇವಕರಾಗಿ ಒಂದು ವಾರ ಪರ್ಯಂತ ಕೆಲಸ ಮಾಡಿದೆವು. ಅಲ್ಲಿಂದ ಬರುವಾಗ ಚಿತ್ರದುರ್ಗ ಕಾಂಗ್ರೆಸ್ ಆಫೀಸಿಗೆ ಹೋಗಿ ಅಲ್ಲಿಂದ ಕಾಂಗ್ರೆಸ್ ಸದಸ್ಯತ್ವದ ಪುಸ್ತಕಗಳನ್ನು ಪಡೆದು ನಮ್ಮ ಊರಾದ ಕುಂಬಳೂರಿಗೆ ಬಂದು ಇಲ್ಲಿ ಕೆಲವು ಮೆಂಬರುಗಳನ್ನು ಮಾಡಿ ಒಂದು ಸಮಿತಿ ಸ್ಥಾಪಿಸಿದೆವು. ಅಲ್ಲಿಂದ ಮಲೇಬೆನ್ನೂರು, ಜಿಗಳಿ, ನಿಟ್ಟೂರು, ನಂದಿತಾವರೆ, ಬೆಳಕೆರೆ, ಶಿರಿಗೆರೆ, ಕೊಕ್ಕನೂರು ಮುಂತಾದ ಹಳ್ಳಿಗಳಲ್ಲಿ ತಿರುಗಿ ಇಡೀ ತಾಲ್ಲೂಕಿನ ಬಹುಭಾಗ ಊರುಗಳಲ್ಲಿ ಕಾಂಗ್ರೆಸ್ ಸದಸ್ಯರನ್ನು ಸೇರಿಸಿದೆವು. ತಾಲ್ಲೂಕಿನಲ್ಲೇ ನಾನು ಮೊದಲ ಕಾಂಗ್ರೆಸಿಗನಾಗಿ ಟಿ.ಸಿ.ಸಿ., ಡಿ.ಸಿ.ಸಿ., ಎ.ಎಂ.ಸಿ.ಸಿ. ಸದಸ್ಯತ್ವವನ್ನೂ ಪಡೆದೆನು. ನಾನು ದಾವಣಗೆರೆಯಲ್ಲಿ 1938ರಲ್ಲಿ ಧ್ವಜ ಸತ್ಯಾಗ್ರಹದಲ್ಲಿ ಪಾಲುಗೊಂಡೆನಲ್ಲದೆ ಇದರನಂತರ ಹೆಂಡದಂಗಡಿ ಪಿಕೆಟಿಂಗ್ ಸಪ್ತಾಹದಲ್ಲೂ ಸೇರಿದ್ದೆನು. ಅರಣ್ಯಸತ್ಯಾಗ್ರಹಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲೂ ಇದ್ದೆನು. 1939ರ ಅಕ್ಟೋಬರ್‌ನಲ್ಲಿ ಮೈಸೂರಿನಲ್ಲಿ ಜಾರಿಮಾಡಿದ 144ನೇ ಸೆಕ್ಷನ್ ಮುರಿಯಲು ರೈಲಿನಲ್ಲಿ ಹೊರಟಾಗ ನನ್ನನ್ನೂ ನನ್ನ ಜೊತೆಗಾರ ಕೆ. ಚೆನ್ನವೀರಪ್ಪ ವಗೈರೆ ಆರು ಜನಗಳನ್ನೂ ಪೋಲಿಸರು ಬಂಧಿಸಿ ಹಾಸನದಲ್ಲಿ ಐದಾರು ತಿಂಗಳು ಡೆಟೆನ್ಯು ಆಗಿ ಇಟ್ಟರು. ಆಗ ಜೈಲಿನಲ್ಲಿ ಇದ್ದವರೆಂದರೆ ಎಸ್. ಚನ್ನಯ್ಯ, ಟಿ ಮರಿಯಪ್ಪ, ಎ. ಜಿ. ಬಂದೀಗೌಡ, ಕೆ. ಚಿಕ್ಕಲಿಂಗಯ್ಯ, ಡಾ॥ ಪಶುಪತಿರಾವ್, ಕೆ. ಚಾಮುಂಡಯ್ಯ, ಕೆ. ಕೆಂಚಪ್ಪ, ಬಿ. ವಿಶ್ವನಾಥ ಶೆಟ್ಟಿ, ಕೆ. ವೀರಭದ್ರಪ್ಪ, ಗಾಯಕವಾಡ ನಾರಾಯಣ ರಾವ್, ಕೊಟ್ರಬಸಪ್ಪ ವಗೈರೆ.

ಹರಿಹರದಲ್ಲಿ ನಡೆದ ಮೈಸೂರು ಕಾಂಗ್ರೆಸ್‌ನ ಕಾಲಕ್ಕೆ ಒಂದು ತಿಂಗಳು ಅಲ್ಲೇ ದುಡಿದೆ. 1942ರಲ್ಲಿ ಧಾರವಾಡ ಜಿಲ್ಲೆಯ ಯಾರೋ ಬಂದು ಹರಿಹರದಲ್ಲಿ ತಾರುಕಂಬ ಕಿತ್ತುಹಾಕಲು, ನನ್ನನ್ನೂ ನನ್ನ ಜೊತೆಗಾರ ಕೆ. ಚೆನ್ನವೀರಪ್ಪನನ್ನೂ ಬಂಧಿಸಿದರು.

ದಾರಿಯಲ್ಲಿ ಊಟ, ತಿಂಡಿ, ನೀರು ಸಹ ಕೊಡದೆ ದೂರದ ಕಪ್ಪತಗುಡ್ಡದಲ್ಲಿ ನಮ್ಮನ್ನು ಬಿಟ್ಟುಬಂದರು. ಅಲ್ಲಿಂದ 20–25 ದಿನಗಳ ಅನಂತರ ನಡೆದು ಬಂದು ನಾವು ಊರು ಸೇರಿದೆವು. ಮುಂದೆ, ಧಾರವಾಡ ಜಿಲ್ಲೆಯ ಖ್ಯಾತ ಹೋರಾಟಗಾರ ಮೆಣಸಿನಹಾಳು ತಿಮ್ಮಣ್ಣಗೌಡರು ನಮ್ಮಲ್ಲಿ ಮೂರು ದಿನ ಗುಟ್ಟಾಗಿ ಇದ್ದರೆಂಬ ಕಾರಣಕ್ಕಾಗಿ ಪೋಲಿಸರು ನನ್ನನ್ನು ಸ್ಟೇಶನ್‌ಗೆ ಕರೆದೊಯ್ದು ಐದು ದಿನ ಚಿತ್ರಹಿಂಸೆಗೆ ಒಳಪಡಿಸಿದರು. ಹರಿಹರದಲ್ಲಿ ಸ್ಕೂಲುಹಳಿಯನ್ನು ಕಿತ್ತ ಆರೋಪದ ಮೇಲೆ ನನ್ನನ್ನೂ ಚೆನ್ನವೀರಪ್ಪನನ್ನೂ ಚಿತ್ರದುರ್ಗದಲ್ಲಿ ಐದಾರು ತಿಂಗಳು ಡೆಟೆನ್ಯು ಅಂತ ಇಟ್ಟರು.

ದಾವಣಗೆರೆಯಲ್ಲಿ ಭಾರೀ ಮೆರವಣಿಗೆ ಆಗಿ ಗೋಲೀಬಾರಾಗಲು ಒಬ್ಬನು ಸ್ಥಳದಲ್ಲೇ ಮೃತಪಟ್ಟು, ಇನ್ನೊಬ್ಬ ಕಲ್ಲಪ್ಪ (ಈಗ ಲಾಯರ್) ಎಂಬವರಿಗೆ ಕಾಲಿಗೆ ಗುಂಡು ಬಡಿದು ಕಾಲು ಕಾಯಂ ಕುಂಟಾಯಿತು. ಇದರ ಮರುದಿನ ನನ್ನನ್ನೂ ಚೆನ್ನವೀರಪ್ಪನನ್ನೂ ಹಿಡಿದು ಒಯ್ದು, ಏಳು ದಿನ ಇರಿಸಿಕೊಂಡು ಚಿತ್ರಹಿಂಸೆ ಕೊಟ್ಟು ಕಡೆಗೆ ಪೋಲಿಸರು ಬಿಟ್ಟರು.

ಹರಿಹರ ಊರಲ್ಲಿ ಪ್ರಮುಖ ಹೋರಾಟಗಾರರೆಂದರೆ, ಮರಾಠಿ ಹನುಮಂತರಾಯರು, ಟಿ. ಗುರುಸಿದ್ದಪ್ಪ, ಎಂ. ಮುರಿಗೆಪ್ಪ ಮತ್ತು ನಾರಾಯಣಸಾ. ತಾಲ್ಲೂಕಿನಲ್ಲಿ ಜಿಗಳಿಯ ಯಂಕಣ್ಣಶೆಟ್ಟಿ, ಕುಂಬಳೂರ ಕಮ್ಮಾರ ಚನ್ನವೀರಪ್ಪ, ನಂದಿಗಾವಿಯ ಎನ್. ಎಂ. ಚಂದ್ರಶೇಖರಯ್ಯ, ಹರಳಹಳ್ಳಿಯ ಸಣ್ಣಹನುಮಂತಪ್ಪ, ಕೊಪ್ಪದ ಲಾಯರ್ ಕೆ. ಕೆಂಚಪ್ಪ, ಶಿರಿಗೆರೆಯ ಕುಂಡೂರು ರಾಮಪ್ಪ, ಮಲೇಬೆನ್ನೂರು ಪಾದಿಗರ ಬಸಪ್ಪ. ದಾವಣಗೆರೆಯಲ್ಲಿ ಕಾಸಲ ಶ್ರೀನಿವಾಸ ಶೆಟ್ಟಿ, ಬಳ್ಳಾರಿ ಮುರಿಗೆಪ್ಪ, ಸಿದ್ದಮ್ಮ, ಕೆ. ಟಿ. ಜಂಬಣ್ಣ, ಗಾಂಜೀ ವೀರಪ್ಪ, ಕೆ. ವೀರಭದ್ರಪ್ಪ, ಮಲ್ಲಾಬಾದಿ ಕೊಟ್ರಪ್ಪ, ವಿರೂಪಾಕ್ಷಪ್ಪ, ಗಾಯಕವಾಡ ನಾರಾಯಣರಾವ್, ಮೌನೇಶ್ವರಪ್ಪ, ಸಿದ್ಧರಾಮಪ್ಪ ಮುಂತಾದವರು.

ಸ್ಮೃ.ಚಿ. 28

## ಸಿ. ವಿ. ಕೃಷ್ಣಮೂರ್ತಿ

ಜನನ : 1909 ಉದ್ಯೋಗ : ವ್ಯವಸಾಯ ವಿಳಾಸ : ಚಳ್ಳಕೆರೆ

---

1925ರಲ್ಲಿ ನಾನು ಚಿತ್ರದುರ್ಗ ಪ್ರೌಢಶಾಲೆಯಲ್ಲಿ ಓದುತ್ತಿದ್ದಾಗ ಹರಿಹರ ಗುಂಡೂರಾಯರೆಂಬ ಅಲ್ಲಿನ ವಕೀಲರು ಆರಂಭಿಸಿದ್ದ ತಿಲಕ್ ಸಂಘವೆಂಬ ಸಂಸ್ಥೆಗೆ ನನ್ನ ಸಹಪಾಠಿ ತಾಳ್ಯದ ದಿ|| ಶಾಮರಾವ್ ಎಂಬವರ ಸಂಪರ್ಕದಿಂದ ಸೇರಿದೆ, ಅವರು ಗುಂಡೂರಾಯರ



ಸಂಬಂಧಿ. ಸ್ವರಾಜ್ಯ ಹೋರಾಟಕ್ಕೆ ಪ್ರಚಾರ ಪುಸ್ತಕಾಲಯ ನಡೆಸುವುದು, ಸ್ವಯಂಸೇಕ ದಳದ ರಚನೆಗಳನ್ನು ಮಾಡಿ ಸಂಘವು ಆಗಾಗ್ಗೆ ಉಪ ನ್ಯಾಸಗಳನ್ನು ಏರ್ಪಡಿಸುತ್ತಿತ್ತು. ಗೀತಾಜಯಂತಿ, ವಿನಾಯಕನ ಹಬ್ಬ ಇತ್ಯಾದಿ ಆಚರಿಸುತ್ತಿದ್ದೆವು. ಹೈಸ್ಕೂಲು ಮತ್ತು ಎ. ವಿ. ಮಾಧ್ಯಮಿಕ ಶಾಲಾ ವಿದ್ಯಾರ್ಥಿಗಳು ಇದರಲ್ಲಿ ಪಾಲುಗೊಳ್ಳುತ್ತಿದ್ದರು. 1926ರ ಸುಮಾರಿಗೆ ಒಮ್ಮೆ ಸಂಘದ ವಾರ್ಷಿ ಕೋತ್ಸವ ನಡೆದಾಗ ಮುದವೀಡು ಕೃಷ್ಣರಾಯರು ಕರ್ನಾಟಕದ ಗತವೈಭವ ಮತ್ತು ಸ್ವರಾಜ್ಯ ನನ್ನ ಆಜನ್ಮಸಿದ್ಧ ಹಕ್ಕು ಎಂಬ ವಿಚಾರ ವಾಗಿ ಉಪನ್ಯಾಸಗಳನ್ನು ನೀಡಿದರು. ಮತ್ತು ಆಗ ಉತ್ಸವಾಂಬಾ ದೇವಾಲಯದಲ್ಲಿ ಸ್ವಾತಂತ್ರ್ಯ ಸಮ್ಮೇಳನ ನಡೆಸಿದೆವು. ಈ ಬಗ್ಗೆ ನನ್ನನ್ನೂ ಕೆಲವು ಸ್ವಯಂಸೇವಕರನ್ನೂ ಪೋಲಿಸ್ ಸ್ಟೇಶನಿಗೆ ಕರೆದೊಯ್ದು ಎಚ್ಚರಿಕೆ ಕೊಟ್ಟು ಕಳುಹಿಸಿದರು.

ಗಿರೇಗೌಡರು ಮಾಲಕರಾಗಿರುವ ಗಿರಿಧರ ಸಂಗೀತ ನಾಟಕ ಮಂಡಳಿಯಲ್ಲಿ 1930 ರಿಂದ 32ರ ವರೆಗೆ ಮ್ಯಾನೇಜರಾಗಿ ನಾನು ಕೆಲಸಮಾಡುತ್ತಿದ್ದಾಗ ಒಮ್ಮೆ 1931ರಲ್ಲಿ ಧಾರವಾಡಕ್ಕೆ ಹೋದೆ. ಅಲ್ಲಿ ಪರದೇಶೀ ವಸ್ತ್ರದಹನ ಸಭೆ ನಡೆಯುತ್ತಿರಲು ಪ್ರೇಕ್ಷಕನಾಗಿ ನಿಂತಿದ್ದ ಖಾದೀಧಾರಿಯಾಗಿದ್ದ ನನ್ನನ್ನೂ ಲಾಠಿಯಿಂದ ಪೋಲಿಸರು ಥಳಿಸಿದರು.

ಮುಂದೆ ಚಳ್ಳಕೆರೆಯಲ್ಲಿ ನೆಲೆನಿಂತು, ಕೆ.ಪಿ.ಸಿ.ಸಿ.ಗೆ ಅಧೀನವಾಗಿ (ಬಹುಶಃ 1934) ಕಾಂಗ್ರೆಸ್ ಸಮಿತಿಯನ್ನು ಸ್ಥಾಪಿಸಿದೆವು. ಸಿ. ಕೃಷ್ಣಮೂರ್ತಿ, ಪ್ಲೀಡರ್ (ಅಧ್ಯಕ್ಷ), ಸಿ. ವಿ. ಕೃಷ್ಣಮೂರ್ತಿ (ಕಾರ್ಯದರ್ಶಿ), ಪಿ. ಆರ್. ಆದಿಶೇಷ ಜೋಯಿಸ್ (ಸಹಕಾರ್ಯದರ್ಶಿ), ಮಠದ ನಾಗೇಂದ್ರಯ್ಯ, ಬಿ. ವೀರಣ್ಣ, ಪಿ. ಕೆ. ಪಾಪಣ್ಣ, ಕೆ. ಟಿ. ಧರಣೇಂದ್ರಯ್ಯ, (ದಿ||) ಪೂಲಣ್ಣ ರೆಡ್ಡಿ (ಕುರಡಿಹಳ್ಳಿ), (ದಿ||) ವೆಂಕಟರಾಮಯ್ಯ (ಪರಶುರಾಮಪುರ) (ಸದಸ್ಯರುಗಳು), ಹೀಗೆ ಸಮಿತಿ ಇತ್ತು. ಮುಂದೆ 1936ರಿಂದ 1960ರ ವರೆಗೆ ನಾನೇ ತಾ|| ಕಾಂ|| ಸಮಿತಿ ಅಧ್ಯಕ್ಷನಾಗಿದ್ದೆ.

1938ರಲ್ಲಿ ಶಿವಪುರ ಧ್ವಜಸತ್ಯಾಗ್ರಹದ ಅಂಗವಾಗಿ ನಮ್ಮ ಊರಲ್ಲಿ ಸಿ. ಕೃಷ್ಣರಾವ್, ನಾನು, ಆದಿಶೇಷ ಜೋಯಿಸ್, ಗುಂಡಾ ಜೋಯಿಸ್ ಕೂಡಿ ಈಗಣ ನೆಹರೂ ಸರ್ಕಲ್ ಬಳಿ ಧ್ವಜವನ್ನು ಹಾರಿಸಿದೆವು. ಧ್ವಜವನ್ನು ಕಿತ್ತುಕೊಂಡು ಪೋಲಿಸರು ನಮ್ಮನ್ನು ಸ್ಟೇಶನಿಗೆ ಕರೆದೊಯ್ದು ಸಂಜೆ ತನಕ ಇರಿಸಿ ಬೆದರಿಸಿದರು. ಈ ನಡುವೆ ಕಾಂಗ್ರೆಸ್ ಪ್ರಚಾರಕ್ಕಾಗಿ ಟಿ. ಸಿದ್ಧಲಿಂಗಯ್ಯ, ಉಮಾಬಾಯಿ ಕುಂದಾಪ್ಪರ,

ಎಚ್. ಕೆ. ವೀರಣ್ಣಗೌಡ, ತಾಯಮ್ಮ ಇವರು ನಮ್ಮ ಊರಿಗೆ ಬಂದು ಭಾಷಣ ಮಾಡಿದರು. ಅಲ್ಲದೆ ಚಳ್ಳಕೆರೆ ತಾ|| ರೈತಸಮ್ಮೇಳನ ಏರ್ಪಡಿಸಿ ಕೆ. ಸಿ. ರೆಡ್ಡಿಯವರಿಂದ ಉದ್ಘಾಟಿಸಲು ನಮ್ಮ ಮೇಲೆ 144ನೆಯ ಸೆಕ್ಷನ್ ಜಾರಿಮಾಡಿದರು.

1939ರಲ್ಲಿ ಅರಣ್ಯಸತ್ಯಾಗ್ರಹ ಕಾಲಕ್ಕೆ ಎರಡನೆಯ ಜಿಲ್ಲಾ ಡಿಕ್ಟೇಟರ್ ಆಗಿ, ನಾನೇ ಮುಖಂಡತ್ವ ವಹಿಸಿ, ಸೋಮಗುದ್ದು ಗ್ರಾಮದಲ್ಲಿ ಮೆರವಣಿಗೆಯೊಂದಿಗೆ ಈಚಲ ಮರ ಕಡಿದೆವು. ನಾನೂ ಕೆ. ಟಿ. ಧರಣೇಂದ್ರಯ್ಯ, ವಿ. ಕೆ. ಪಾಪಣ್ಣ, ಜಿ. ಮುದ್ದಯ್ಯ, ಈಡಿಗರ ತಿಪ್ಪೇಸ್ವಾಮಿ, ಜಿ. ಮಲ್ಲಣ್ಣ, ಪುಲ್ಲಣ್ಣ ರೆಡ್ಡಿ, ಹನುಮಂತ ರೆಡ್ಡಿ, ಚನ್ನಬಸಪ್ಪ, ಕರೆತಿಪ್ಪಯ್ಯ ಇತ್ಯಾದಿ 15 ಜನರನ್ನು ಬಂಧಿಸಿ ಉಳಿದ ನೂರಾರು ಜನರನ್ನು ಬಿಟ್ಟರು. ಚಿತ್ರದುರ್ಗ ಕೋರ್ಟಿನಲ್ಲಿ ನನಗೆ ಎರಡೂವರೆ ವರ್ಷ ಕಠಿಣ ಶಿಕ್ಷೆ, 500 ರೂ. ದಂಡ ಆಯಿತು. ನಾನು ಜೈಲಿನಲ್ಲಿ ಇದ್ದಾಗ ನನ್ನ ಖಾದಿ ಹಾಗೂ ಸ್ಟೇಷನರಿ, ಔಷಧಿಗಳ ಅಂಗಡಿಯನ್ನು ಜಫ್ತಿಮಾಡಿ 2,000 ರೂ. ಬೆಲೆಬಾಳುವ ಸೊತ್ತುಗಳನ್ನು ಸರಕಾರವು ಹರಾಜು ಮಾಡಿತು. ನನ್ನ ಜೊತೆ ಬಂಧಿತರಾದ ಇತರ ಸ್ನೇಹಿತರಿಗೆ ಒಂದೂವರೆ ವರ್ಷದಿಂದ ಆರು ತಿಂಗಳವರೆಗೆ ಸಜಾ ಆಯಿತು. ಬೆಂಗಳೂರು ಸೆಂಟ್ರಲ್ ಜೈಲ್, ಶಿವಮೊಗ್ಗ, ತೀರ್ಥಹಳ್ಳಿ ಸಬ್‌ಜೈಲ್‌ಗಳಲ್ಲಿ ಇದ್ದೆವು. ಒಂದು ವರ್ಷದನಂತರ ಬಿಡುಗಡೆ ಆಯಿತು. ಜೈಲಿನಲ್ಲಿ ಏಳು ತಿಂಗಳ ಕಾಲ ಜ್ವರ, ಆಮಶಂಕೆಗಳಿಂದ ಬಳಲಿದೆ. ಹರಿಹರ ದಲ್ಲಿ ಕಾಂಗ್ರೆಸ್ ಸಮ್ಮೇಳನ ಆದಾಗ ಚಪ್ಪರ ಸಮಿತಿಯ ಸಂಚಾಲಕನಾಗಿ ನಮ್ಮ ಭಾಗ ದಿಂದ ಸಾವಿರಾರು ಈಚಲ ಚಾಪೆ ಒದಗಿಸಿದ್ದೆ.

1942ರಲ್ಲಿ ತಾಲೂಕಿನಲ್ಲಿ ಅನೇಕ ಕಡೆ ವಿಧ್ವಂಸಕ ಕೃತ್ಯಗಳು ನಡೆಯಲು ಪ್ರೇರಕನಾಗಿ ಪೋಲಿಸರಿಗೆ ಸಿಗದೆ ಚಳವಳಿ ನಡೆಸಿದೆ. ಎರಡು ಬಾರಿ ಪೋಲಿಸರು ಬಂಧಿಸಿ ಬಿಟ್ಟರು. ಪೋ|| ಇನ್ಸ್‌ಪೆಕ್ಟರ್ ನನ್ನ ಸ್ನೇಹಿತರಾಗಿ ಇದ್ದುದರಿಂದ ಬಂಧನ ಆಗಲಿಲ್ಲ. ಬಳ್ಳಾರಿ-ಬೆಂಗಳೂರು ರೋಡಿನಲ್ಲಿ ಮೂರು ಮೈಲಿ ಟೆಲಿಗ್ರಾಫ್ ತಂತಿ ಕತ್ತರಿಸಿ ಕಂಬಗಳನ್ನೂ ಕಿತ್ತುಹಾಕಿದೆವು. ನಮ್ಮ ಊರ ಕೆ. ಮುರಿಗಪ್ಪ, ಯಜ್ಞನಾರಾಯಣ ದೀಕ್ಷಿತ್, ಸಾಣೀಕೆರೆಯ ರಾಜಶೇಖರಯ್ಯ, ದಾಸಯ್ಯಗಳ ಲಿಂಗಪ್ಪ ಇವರುಗಳ ಬಂಧನ ವಾಗಿ, ಮೊದಲ ಇಬ್ಬರು ಹನ್ನೊಂದು ತಿಂಗಳು ಸ್ಥಾನಬದ್ಧತೆಯಲ್ಲಿ ಇದ್ದರು. ಇನ್ನೂ ಹಲವು ತರುಣರು ಚಳವಳಿಯಲ್ಲಿ ಇದ್ದರು. ಲಕ್ಷ್ಮೀಪುರದ ಸುಬ್ರಹ್ಮಣ್ಯಯ್ಯ ಹಾಗೂ ಕುರಡಿಹಳ್ಳಿಯ ಹನುಮಂತರೆಡ್ಡಿ ಇವರಿಬ್ಬರೂ ಪಟೇಲಿಕೆಗೆ ರಾಜೀನಾಮೆ ಕೊಟ್ಟರು. ಸಾಣೀಕೆರೆ, ಸಿದ್ದಾಪುರ, ಚಳ್ಳಕೆರೆ ಸೇಂದಿ ಅಂಗಡಿಗಳನ್ನೂ ಸುಟ್ಟೆವು.

1947ರಲ್ಲಿ ಸರ್ಕಾರಿ ಕಚೇರಿಯ ಮೇಲೆ ಧ್ವಜಾರೋಹಣ, ಸೇಂದಿ ಅಂಗಡಿಗಳ ನಾಶ, ಸರ್ಕಾರಕ್ಕೆ ಕಂದಾಯ ತೆರಿಗೆ ಕೊಡಬಾರದಾಗಿ ಪ್ರಾರ್ಥನೆ, ಶಾಲೆಗಳಿಗೆ ಹೋಗ ದಂತೆ ವಿದ್ಯಾರ್ಥಿಗಳಲ್ಲಿ ಪ್ರಚಾರ ಹಾಗೂ ಅವರ ಮುಷ್ಕರ ಮಾಡಿಸಿದೆವು. ತಾ|| ಕಚೇರಿ ಮೇಲೆ ಧ್ವಜ ಏರಿಸುವ ಕಾರ್ಯಕ್ರಮ 8-10 ದಿನ ನಡೆಯಿತು. ಆಗ ಅನೇಕ ಸಲ

ಲಾಠೀ ಚಾರ್ಜು ಆಯಿತು. 20-30 ಜನರಿಗೆ ಗಾಯಗಳಾದವು. ಗೋಳೀಬಾರು ಆಗಿ ಕರಿಬಸಪ್ಪ ಎಂಬ 18 ವರ್ಷದ ತರುಣ ಸ್ಥಳದಲ್ಲೇ ಮೃತಪಟ್ಟನು. ಅರ್ಥಂ ಸುಬ್ಬಯ್ಯ ಶೆಟ್ಟಿ ಎಂಬುವರ ಸೊಂಟಕ್ಕೆ ಗುಂಡು ತಗಲಿ, ಚಿತ್ರದುರ್ಗ ಜಿಲ್ಲಾ ಆಸ್ಪತ್ರೆಯಲ್ಲಿ ಒಂದು ತಿಂಗಳನಂತರ ಸತ್ತರು. ಈ ಕಾಲದಲ್ಲಿ ನನ್ನನ್ನು ಎರಡು ಬಾರಿ ಬಂಧಿಸಿ, ಬಿಟ್ಟರು. ಅನೇಕ ದಿನಗಳು ದಾವಣಗೆರೆಯಲ್ಲಿ ಡೆಟನ್ಯು ಆಗಿ ಇದ್ದೆ. ನನ್ನ ಪತ್ನಿ ಸಾವಿತ್ರಮ್ಮ ಮತ್ತು ಒಬ್ಬಳೇ ಮಗಳು ಶ್ರೀದೇವಿ ತಾ॥ ಕಚೇರಿ ಮೇಲೆ ಧ್ವಜ ಏರಿಸಲು ಯತ್ನಿಸಿ ಬಂಧಿತರಾಗಿದ್ದರು. ಇವರ ನೇತೃತ್ವದಲ್ಲಿ ಸತ್ಯಾಗ್ರಹಮಾಡಿದ್ದ ನಾಲ್ಕು ಜನ ಇತರ ಸ್ತ್ರೀಯರಿಗೆ ಮಾತ್ರ ಶಿಕ್ಷೆ ಆಗಿತ್ತು.

ಎರಡನೆಯ ಬಾರಿ ನನ್ನ ಬಿಡುಗಡೆ ಆದಾಗ ನಾನು ಹಿಂದೂಪುರ ಶಿಬಿರಕ್ಕೆ ಹೋಗಿ ವಿಧ್ವಂಸಕ ಕೃತ್ಯ ನಡೆಸುವ ಚಟುವಟಿಕೆಯಲ್ಲಿ ಸೇರಿದ್ದೆ. ಮುಂದೆ ಶೀಘ್ರ ಚಳವಳಿ ನಿಂತಿತು.

ಚಳವಳಿ ಕಾಲಕ್ಕೆ ನನ್ನ ಅಂಗಡಿಯ ಸಾಮಾನು ಹರಾಜಾಯಿತಲ್ಲದೆ ಒಂದು ಲಕ್ಷ ರೂ. ಬೆಲೆಯ ಪಿತ್ರಾರ್ಜಿತ ಆಸ್ತಿ ಕೂಡ ಕಳೆದುಕೊಂಡೆ. ಈಚೆಗೆ ಸರಕಾರ ನನಗೆ 14 ಎಕರೆ ಖುಷ್ಕಿ ಜಮೀನು ಮತ್ತು 200 ರೂ. ಮಾಸಿಕ ಪೆನ್ಶನ್ ನೀಡಿದೆ.

ವ್ಯ. ಚಿ. 29

## ಬಿ. ವಿ. ಚನ್ನವೀರ ರೆಡ್ಡಿ

ಜನನ : 1931 ಉದ್ಯೋಗ : ? ವಿಳಾಸ : ಘಟಪರ್ತಿ, ತಾ॥ ಚಳ್ಳಕೆರೆ



ಚಳ್ಳಕೆರೆ ತಾಲ್ಲೂಕಿನ ಘಟಪರ್ತಿಗೆ ಇಪ್ಪತ್ತೈದು ವರ್ಷಗಳ ಹಿಂದೆ ಚಳ್ಳಕೆರೆಯಿಂದ ಬಸ್ ಸೌಕರ್ಯ ಕೂಡ ಇರಲಿಲ್ಲ. ಮೊದಲ ಆರು ಮೈಲಿ ನಡೆದು ಮುಂದಿನ ಒಂಬತ್ತು ಮೈಲಿ ಬಸ್ ಪ್ರಯಾಣ ಮಾಡಬೇಕಾಗಿತ್ತು. 1946-47ರಲ್ಲಿ ಘಟಪರ್ತಿಗೆ ಹೊಸ ಮಾದರಿ ಮಾಧ್ಯಮಿಕ ಶಾಲೆ ಬಂತು. ಡಿ. ಕೊಲ್ಲಾರಯ್ಯ ಅವರು ಮುಖ್ಯ ಉಪಾಧ್ಯಾಯರಾಗಿ ಬಂದರು. ಅವರು ಹರಿಜನರಾಗಿದ್ದರು. ಹರಿಜನ ವ್ಯಕ್ತಿಯೊಬ್ಬ ಉಪಾಧ್ಯಾಯನಾಗಬಲ್ಲ ಎಂಬ ಸಂಗತಿ ನಮ್ಮೂರಿನ ಅನೇಕರಿಗೆ ವಿಸ್ಮಯವನ್ನುಂಟುಮಾಡಿತ್ತು. ಕೊಲ್ಲಾರಯ್ಯ ಮೇಷ್ಟ್ರು ನಮ್ಮ ದೊಡ್ಡಪ್ಪನವರ ಮನವೊಲಿಸಿ ನಾನು ಲೋಯರ್

ಸೆಕೆಂಡರಿ ಪರೀಕ್ಷೆಗೆ ವ್ಯಾಸಂಗ ಮಾಡಲು ಅಗತ್ಯವಾದ ಏರ್ಪಾಟು ಮಾಡಿದರು. ನಾಲ್ಕು ವರ್ಷಗಳ ದೀರ್ಘವಿರಾಮದನಂತರ ನಾನು ಮತ್ತೊಮ್ಮೆ ವಿದ್ಯಾರ್ಥಿಯಾದೆ.

ಸ್ವಾತಂತ್ರ್ಯ ಹೋರಾಟದ ಪ್ರಥಮ ಪರಿಚಯ ನನಗೆ ಆದುದು ಕೊಲ್ಲಾರಯ್ಯ ಅವರಿಂದ. ಅವರು 'ತಾಯಿನಾಡು' ಪತ್ರಿಕೆಯನ್ನು ಕೈಯಲ್ಲಿ ಹಿಡಿದು ಆಗಾಗ ಗಾಂಧೀಜಿಯವರ ಉಪವಾಸ ಸತ್ಯಾಗ್ರಹ, ನೆಹರು ಅವರ ಸೆರೆಮನೆವಾಸ, ಪೋಲಿಸರಿಂದ ಗೋಲೀಬಾರ್ ಮುಂತಾದ ರೋಮಾಂಚಕಾರಿ ಸುದ್ದಿಗಳನ್ನು ತರಗತಿಯಲ್ಲಿ ಹೇಳುತ್ತಿದ್ದರು. ನಮ್ಮ ಮೇಷ್ಟ್ರು ನಮಗೆ ಹಳ್ಳಿಗರ ಬಡತನಕ್ಕೂ ಬ್ರಿಟಿಷರ ಆಳ್ವಿಕೆಗೂ ಇರುವ ಸಂಬಂಧದ ಎಳೆಗಳನ್ನು ಬಿಡಿಸಿ ವಿಚಾರಪ್ರಚೋದಕ ಸಂಗತಿಗಳನ್ನು ಬೋಧಿಸುತ್ತಿದ್ದರು. ಮಹಾತ್ಮರ ಪವಾಡಗಳನ್ನು ಬಣ್ಣಕಟ್ಟಿ ವರ್ಣಿಸುತ್ತಿದ್ದರು. ಈ ಎಲ್ಲ ಸಂಗತಿಗಳು ನನ್ನ ಎಳೆಮನಸ್ಸಿನ ಮೇಲೆ ತೀವ್ರಪರಿಣಾಮ ಬೀರಿದವು.

ಅದೇ ಸಮಯದಲ್ಲಿ ನಾನು ಒಂದು ದಿನ ನಮ್ಮ ದೊಡ್ಡಪ್ಪನವರೊಡನೆ ಚಳ್ಳಕೆರೆಗೆ ಗಾಡಿಗಳಲ್ಲಿ ನೀರುಳ್ಳಿಯನ್ನು ಹೇರಿಕೊಂಡು ಸಂತೆಯಲ್ಲಿ ಮಾರಲು ಬಂದಿದ್ದೆವು. ನಾನೊಬ್ಬನೇ ಸಂತೆಯಲ್ಲಿ ತಿರುಗಾಡಲು ಹೋದೆ. ಚೌಕದ ಮೈದಾನದಲ್ಲಿ ದೊಡ್ಡ ಸಭೆ ಸೇರಿತ್ತು. ಚಳ್ಳಕೆರೆಯ ಕಾಂಗ್ರೆಸ್ ಮುಖಂಡರಾದ ಸಿ. ವಿ. ಕೃಷ್ಣಮೂರ್ತಿ, ಪಾಪಣ್ಣ ಅವರು ವೇದಿಕೆಯ ಮೇಲೆ ಇದ್ದರು. ಇನ್ನೂ ಪ್ರಮುಖರಂತೆ ಕಾಣುವ ಮತ್ತಿಬ್ಬರು ಕಾಂಗ್ರೆಸ್ ನಾಯಕರು ವೇದಿಕೆಯ ಮಧ್ಯಭಾಗವನ್ನು ಅಲಂಕರಿಸಿದ್ದರು. ವೇದಿಕೆಯ ಮುಂಭಾಗದಲ್ಲಿ ಸೇವಾದಳದ ಸಮವಸ್ತ್ರಗಳನ್ನು ಧರಿಸಿದ 15–20 ಹುಡುಗರು ಜನರನ್ನು ಕುಳಿತುಕೊಳ್ಳಲು ಹೇಳುತ್ತಿದ್ದರು. ವೇದಿಕೆಯ ಮೇಲಿನ ಇಬ್ಬರು ನಾಯಕರಲ್ಲಿ ಒಬ್ಬರು ಕೆ. ಕೆಂಚಪ್ಪನವರೆಂದು ಆಮೇಲೆ ನನಗೆ ತಿಳಿಯಿತು. ಅವರು ಚಿತ್ರದುರ್ಗ ಜಿಲ್ಲೆಯ ಡಿಸ್ಟ್ರಿಕ್ಟ್ ಬೋರ್ಡಿನ ಅಧ್ಯಕ್ಷರಾಗಿ ಅಪಾರ ಜನಪ್ರಿಯತೆ ಗಳಿಸಿದ್ದರು.

ಸ್ವಾತಂತ್ರ್ಯ ಚಳವಳಿಯ ಅಂಗವಾಗಿ ಘಟಪರ್ತಿಯಲ್ಲೂ ಸಭೆ, ಮೆರವಣಿಗೆಗಳನ್ನು ಏರ್ಪಡಿಸುವ ವಿಚಾರವನ್ನು ನಮ್ಮೂರಿನ ಕೆಲವು ಹಿರಿಯರು ಆಲೋಚಿಸುತ್ತಿದ್ದರು. ಸಿ. ಪಿ. ತಿಪ್ಪೇಸ್ವಾಮಿ ಮತ್ತು ಅವರ ಸೋದರರಾದ ಸಿ. ಪಿ. ತ್ಯಾಗಣ್ಣ ಮತ್ತು ಸಿ. ಪಿ. ಚಂದ್ರಶೇಖರಪ್ಪ ಇವರು ಆಗಾಗ ಚಿತ್ರದುರ್ಗಕ್ಕೆ ಹೋಗಿ ಬರುತ್ತಿದ್ದರು. ಅಲ್ಲಿ ಅವರಿಗೆ ನೆಂಟರಿಷ್ಟರಿದ್ದರು. ಅಲ್ಲಿ ನಡೆಯುತ್ತಿದ್ದ ಚಳವಳಿಯ ಸಂಗತಿಯನ್ನು ರಂಜನೆಯಾಗುವಂತೆ ಹೇಳುತ್ತಿದ್ದರು. ಅದರಲ್ಲೂ ಚಿತ್ರದುರ್ಗದ ಪೈಲ್ವಾನ್ ನಂಜನು ಜಿಲ್ಲಾ ಕಚೇರಿಯ ಮೇಲೆ ಬಾವುಟ ಹಾರಿಸಿದ ಸಾಹಸಕಥೆಯನ್ನೂ ಅದನ್ನು ಕುರಿತ ಲಾವಣಿಯನ್ನೂ ನಾನು ಹಲವು ಬಾರಿ ಕೇಳಿದ್ದೆ.

ಘಟಪರ್ತಿಯಲ್ಲಿ ಸಿ. ಪಿ. ತಿಪ್ಪೇಸ್ವಾಮಿ ಅವರ ನೇತೃತ್ವದಲ್ಲಿ ಒಂದು ಸಭೆ ಏರ್ಪಾಡಾಯಿತು. ನಮ್ಮ ಶಾಲೆಯಿಂದ ಮೆರವಣಿಗೆ ಹೊರಡುವುದೆಂದು ತೀರ್ಮಾನ

ನಾಯಿತು. ನೂರಾರು ಜನ ಚಿಕ್ಕವರು ದೊಡ್ಡವರು ಮೆರವಣಿಗೆಯಲ್ಲಿ ಸಾಲಾಗಿ ನಿಂತೆವು. ನಮ್ಮ ಸಹಪಾಠಿಯೊಬ್ಬ ಮುಂಭಾಗದಲ್ಲಿ ಬಾವುಟವನ್ನು ಎತ್ತಿಹಿಡಿದಿದ್ದ. ದೇಶಪ್ರೇಮದ ಕನ್ನಡ ಮತ್ತು ಹಿಂದಿ ಗೀತೆಗಳನ್ನು ಹಾಡಲಾಗುತ್ತಿತ್ತು. ಜೈಕಾರಗಳು ಹಳ್ಳಿಯ ಸಂದಿಗೊಂದಿಗಳ ಹೆಣ್ಣುಮಕ್ಕಳನ್ನೆಲ್ಲ ಮುಖ್ಯಬೀದಿಗೆ ಕರೆತಂದವು. ಊರ ಹೊರಗಿನ ಹೆಂಡದಂಗಡಿಯತ್ತ ಕೈಮಾಡಿ ಯಾರೋ "ಹೆಂಡ ಕುಡಿಯುವುದನ್ನು ಬಿಡಿರಿ" ಎಂದು ಕೂಗಿದರು. ಮೆರವಣಿಗೆ ಅತ್ತ ನಡೆಯಿತು. ಅದು ಮುಂಜಾನೆ ಸಮಯವಾದ್ದರಿಂದ ಅಂಗಡಿಯಲ್ಲಿ ಗಿರಾಕಿಗಳಾರೂ ಇರಲಿಲ್ಲ; ಹೆಂಡವೂ ಹೆಚ್ಚಿಗಿರಲಿಲ್ಲ. ಇದ್ದ ಹೆಂಡವನ್ನೆಲ್ಲ ಚೆಲ್ಲಾಡಿದೆವು; ಗಡಿಗೆಗಳನ್ನು ಒಡೆದುಹಾಕಿದೆವು.

1947ರ ಸೆಪ್ಟಂಬರ್‌ನಲ್ಲಿ ಚಳ್ಳಕೆರೆಯಲ್ಲಿ ದಿನವೂ ಒಂದೊಂದರಂತೆ ಹಲವಾರು ತಂಡಗಳು ತಾಲ್ಲೂಕು ಕಚೇರಿಯ ಮೇಲೆ ಧ್ವಜ ಹಾರಿಸಲು ಹೋಗಿ ಅರೆಸ್ಟ್ ಆಗುತ್ತಿದ್ದವು. ಬರುವ ಭಾನುವಾರ ಚಳವಳಿಗಾರರ ಒಂದು ಗುಂಪು ತಾಲ್ಲೂಕು ಕಚೇರಿಯ ಮೇಲೆ ದಾಳಿಮಾಡುತ್ತದೆ, ಎಂಬ ಸುದ್ದಿ ಘಟಪರ್ತಿಯನ್ನು ತಲುಪಿತು. ನಾನು ಮನೆಯಲ್ಲಿ ತಿಳಿಸದೆ ಸಂತೆಗಾಡಿಯೊಂದರಲ್ಲಿ ಕುಳಿತು ಶನಿವಾರ ಸಂಜೆಗೆ ಚಳ್ಳಕೆರೆ ಸೇರಿದೆ. ಮರುಮುಂಜಾನೆ ತಾಲ್ಲೂಕು ಕಚೇರಿಯ ಆವರಣವನ್ನು ತಲುಪಿದೆ. ಆ ದಿನದ ಚಳವಳಿಯ ನಾಯಕತ್ವವನ್ನು ಬಿ. ಎಲ್. ಗೌಡ ಅವರು ವಹಿಸಿದ್ದರು. ಅವರು ಆಗಿನ್ನೂ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದರು. ಘಟಪರ್ತಿಯಿಂದ ಸಿ. ಪಿ. ಚಂದ್ರಶೇಖರಪ್ಪ, ಕುರುಬರ ಹುಚ್ಚಪ್ಪನವರ ಹನುಮಂತಪ್ಪ, ಇ. ಎಸ್. ತಿಪ್ಪೇಸ್ವಾಮಿ ಮತ್ತು ನಾನು ಪ್ರತ್ಯೇಕವಾಗಿ ಚಳವಳಿಯಲ್ಲಿ ಭಾಗವಹಿಸಲು ಚಳ್ಳಕೆರೆಗೆ ಬಂದಿದ್ದೆವು. ಅಲ್ಲಿ ನಾವೆಲ್ಲ ಒಟ್ಟುಗೂಡಿ ಬಿ. ಎಲ್. ಗೌಡ ಅವರನ್ನು ಭೇಟಿಮಾಡಿ ನಮ್ಮ ಆಸೆಯನ್ನು ವ್ಯಕ್ತಪಡಿಸಿದೆವು. ಆ ತಂಡದಲ್ಲಿ ಆಗಲೇ 16 ಜನ ಸತ್ಯಾಗ್ರಹಿಗಳಿದ್ದರು. ನಾವು ನಾಲ್ವರು ಮತ್ತೆ ಬೇರೆ ನಾಲ್ವರು ಸೇರಿ ಒಟ್ಟು 24 ಜನರ ಒಂದು ಗುಂಪು ಸತ್ಯಾಗ್ರಹಕ್ಕೆ ಸಿದ್ಧವಾಯಿತು. ಗೌಡರು ನಮ್ಮನ್ನು ಕುರಿತು ಕೆಲವು ಸೂಚನೆಗಳನ್ನು ನೀಡಿದರು. ಮುಂದಿಟ್ಟ ಹೆಜ್ಜೆಯನ್ನು ಹಿಂದೆಗೆಯಬಾರದು; ಲಾಠೀ ಏಟು ಬಿದ್ದರೂ ಹೆದರಬಾರದು, ಎಂದು ಪುನಃ ಪುನಃ ಹೇಳುತ್ತಿದ್ದರು. ಸುಮಾರು 10 ಗಂಟೆಯ ವೇಳೆಗೆ ನಾವೆಲ್ಲ ಸಾಲಾಗಿ ನಿಂತೆವು. ಗೌಡರು ಬಾವುಟ ಹಿಡಿದಿದ್ದರು. ಮೈದಾನವೆಲ್ಲ ಜನರಿಂದ ಕಿಕ್ಕಿರಿದು ತುಂಬಿತ್ತು. ಊರಿನ ನಾಗರಿಕರು ಸತ್ಯಾಗ್ರಹಿಗಳಿಗೆ ವೀರತಿಲಕವನ್ನಿಟ್ಟು ವಿಜಯಮಾಲೆಗಳನ್ನು ಹಾಕುತ್ತಿದ್ದರು. ಆ ನೋಟ ಹದಿನಾರರ ಹರೆಯದ ನನಗೆ ರೋಮಾಂಚನಕಾರಿಯಾಗಿತ್ತು. ನನ್ನ ಮನಸ್ಸಿನಲ್ಲಿ ಕಿಂಚಿತ್ತೂ ಭಯದ ಕಲ್ಪನೆ ಮೂಡಲಿಲ್ಲ.

ತಾಲ್ಲೂಕು ಕಚೇರಿಯನ್ನು ನಾವು ಸಮೀಪಿಸುತ್ತಿದ್ದಂತೆ ಪೋಲಿಸ್ ಅಧಿಕಾರಿಗಳು ಬಂದು ನಮ್ಮನ್ನು ತಡೆದು ಅರೆಸ್ಟ್ ಮಾಡಿದರು. ಹತ್ತಾರು ಬಂದೂಕುಧಾರಿ ಪೋಲಿಸರು ನಮ್ಮನ್ನು ಸುತ್ತುವರೆದರು. ಆಮೇಲೆ ನಮ್ಮನ್ನು ಪೋಲಿಸ್ ಠಾಣೆಯ ಲಾಕಪ್ಪಿನಲ್ಲಿ

ಬಂಧಿಸಿದರು. ಆದರೂ ಬಂಧನದ ಕಲ್ಪನೆಯೇ ನಮಗೆ ಉಂಟಾಗಲಿಲ್ಲ. ಸ್ವಲ್ಪ ಹೊತ್ತಿನಲ್ಲೇ ಯಾರುಯಾರೋ ನಮಗೆಲ್ಲಾ ಊಟ ತಿಂಡಿಗಳನ್ನು ತಂದರು. ಸ್ಟೇಷನ್ನಿನ ಒಳಗೂ ಹೊರಗೂ ಅನೇಕರು ಬಂದು ಹೋಗುತ್ತಿದ್ದರು. ಹಳ್ಳಿಯ ಹೆಂಗಸೊಬ್ಬಳು ಒಂದು ಬುಟ್ಟಿಯ ತುಂಬ ಸಜ್ಜೆ ರೊಟ್ಟಿಗಳನ್ನು ಮಾಡಿಕೊಂಡು ತಂದಿದ್ದಳು.

ಅಂದೇ ನಮ್ಮನ್ನು ಚಿತ್ರದುರ್ಗಕ್ಕೆ ಕೊಂಡೊಯ್ದರು. ಮುಂದಿನ ಮೂರುನಾಲ್ಕು ದಿನಗಳು ನಾವು ಅಲ್ಲಿಯ ಸಬ್ ಜೈಲಿನಲ್ಲಿ ಕೊಳೆಯಬೇಕಾಯಿತು. ಅಲ್ಲೂ ನಮಗೆ ಊಟ ಉಪಚಾರಗಳು ಯಥೇಚ್ಛವಾಗಿಯೇ ದೊರೆತವು. ಯಾರುಯಾರೋ ನಮಗೆ ಚಪಾತಿ, ಚಿತ್ರಾನ್ನಗಳನ್ನು ಅಕ್ಕರೆಯಿಂದ ಕಳಿಸುತ್ತಿದ್ದರು. ನಾವು ಕ್ಷಮಾಪಣೆ ಕೇಳಿಕೊಂಡಲ್ಲಿ ನಮ್ಮನ್ನು ಬಿಡುಗಡೆ ಮಾಡಲಾಗುವುದೆಂದು ನಮ್ಮನ್ನು ಪೋಲಿಸರು ಪುಸಲಾಯಿಸುತ್ತಲೇ ಇದ್ದರು. ಆದರೆ ನಾವೆಲ್ಲ ದೃಢನಿಲುವನ್ನು ತಳೆದಿದ್ದೆವು.

ಒಂದು ದಿನ ನಮ್ಮ ಊರಿನ ಕೆಲವು ಪ್ರಮುಖರು ನಮ್ಮನ್ನು ನೋಡಲು ಬಂದಿದ್ದರು. ನಮ್ಮ ದೊಡ್ಡಪ್ಪನವರೂ ಬಂದಿದ್ದರು. ಅವರ ಮುಖದಲ್ಲಿ ಒಮ್ಮೆ ಕಾತರ, ಒಮ್ಮೆ ಅಭಿಮಾನ ಮೂಡಿ ಮುಳುಗುತ್ತಿದ್ದುವು. ನನಗಾಗಿ ಅವರು ಒಂದು ಜಮಖಾನ, ಒಂದು ರಗ್ಗು ಮತ್ತು ಉಡಲು ಎರಡು ಜೊತೆ ಬಟ್ಟೆ ತಂದಿದ್ದರು. 1947ರ ಸೆಪ್ಟಂಬರ್ 19ರಂದು ನಮ್ಮ ವಿಚಾರಣೆ. ಎಲ್ಲಾ ಯಾಂತ್ರಿಕವಾಗಿ ನಡೆಯಿತು. ನಮ್ಮ ವಿರುದ್ಧ ದಾಖಲುಮಾಡಿಕೊಂಡ ಕ್ರಿಮಿನಲ್ ಕೇಸಿನ ವಿಚಾರಣೆಯಾಗಿ 1946ರ ಪಿ.ಎಸ್. ಆಕ್ಟ್‌ನ 24(1) (B) ಸೆಕ್ಷನ್ ಪ್ರಕಾರ ಚಿತ್ರದುರ್ಗದ ಪ್ರಥಮ ದರ್ಜೆ ನ್ಯಾಯಾಧೀಶರು ನಮ್ಮೆಲ್ಲರಿಗೂ ಆರು ತಿಂಗಳು ಕಠಿಣ ಶಿಕ್ಷೆಯನ್ನು ವಿಧಿಸಿದರು. ನ್ಯಾಯಾಲಯದಿಂದ ಹೊರಬರುತ್ತಿದ್ದಂತೆ ನಮ್ಮ ದೊಡ್ಡಪ್ಪನವರು "ವಾರಕ್ಕೊಂದು ಕಾಗದ ಬರೆಯುತ್ತಿರು" ಎಂದು ಹೇಳಿ ಹೋದರು.

ಸೆಪ್ಟಂಬರ್ 21ರಂದು ನಮ್ಮನ್ನು ಬೆಂಗಳೂರಿನ ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. ಸತ್ಯಾಗ್ರಹಿಗಳಿಂದ ಜೈಲ್ ತುಂಬಿಹೋಗಿತ್ತು. ಬ್ಯಾರಕ್‌ಗಳೆಲ್ಲ ಭರ್ತಿಯಾಗಿ ಟೆಂಟ್‌ಗಳನ್ನು ಹಾಕಿದ್ದರು. ನಾವು ಜೈಲನ್ನು ಪ್ರವೇಶಿಸುತ್ತಲೇ ನಮ್ಮ ಜಿಲ್ಲೆಯ ಮುಖಂಡರಾದ ಕೆ. ಕೆಂಚಪ್ಪನವರು ನಮ್ಮನ್ನು ನಗುಮುಖದಿಂದ ಸ್ವಾಗತಿಸಿದರು. ಅವರ ಹಿಂದೆಯೇ ಕೆಂಗಲ್ ಹನುಮಂತಯ್ಯ ಮತ್ತು ಎಚ್. ಸಿ. ದಾಸಪ್ಪ ಮುಂತಾದ ನಾಯಕರೂ ಬಂದು ನಮಗೆಲ್ಲ ಧೈರ್ಯ ಹೇಳಿದರು. ಒಂದೆರಡು ದಿನ ನಾವು ಅತಿ ಕಷ್ಟದಿಂದ ಜೈಲಿನ ಊಟ ಮಾಡಿದೆವು. ಅದು ಅತಿಭಯಾನಕವಾಗಿತ್ತು. ಮನೆಯಲ್ಲಿ ರಾಗಿ ಮುದ್ದೆ, ಚಟ್ನಿಯಾದರೂ ಅದು ನನ್ನ ಪಾಲಿಗೆ ಅಮೃತದಂತಿರುತ್ತಿತ್ತು. ಸೆರೆವಾಸದ ಬಗ್ಗೆ ಇದುವರೆಗೂ ಇಲ್ಲದಿದ್ದ ಭಯ ಈಗ ನನ್ನ ಮನಸ್ಸಿನಲ್ಲಿ ಮೊಟ್ಟಮೊದಲು ಮೂಡಿತು. ಆರು ತಿಂಗಳು ಈ ಊಟ ಮಾಡುವುದು ಹೇಗೆ? ಮಾಡದೆ ಇದ್ದರೆ ಬದುಕುವುದೆಂತು ?—ಎಂಬ ಭೀತಿ ನನ್ನನ್ನು ಕಾಡಿತು.

ರಾಜಕೀಯ ಸೆರೆಯಾಳುಗಳಿಂದ ಊಟದ ಬಗ್ಗೆ ಪ್ರತಿಭಟನೆ ಮೊದಲಾಯಿತು. ಜೈಲಿನ ಅಧಿಕಾರಿಗಳು ರಾಜಕೀಯ ಕೈದಿಗಳ ಬಗ್ಗೆ ನಿಯಮಗಳನ್ನು ಸಡಿಲಗೊಳಿಸ ಬೇಕಾಯಿತು. ಜೈಲಿನ ಊಟ ಒಗ್ಗದವರು ಹೊರಗಿನಿಂದ ಊಟ ತರಿಸಿಕೊಳ್ಳಬಹುದು ಎಂದು ಹೇಳಲಾಯಿತು. ಸ್ವಲ್ಪ ದಿನ ಬೆಂಗಳೂರಿನ ಕೆಲವು ಸೇವಾ ಸಂಸ್ಥೆಗಳು ಸ್ವಯಂ ಪ್ರೇರಣೆಯಿಂದ ನಮಗೆ ಊಟ ಕಳಿಸುವ ಜವಾಬ್ದಾರಿಯನ್ನು ವಹಿಸಿಕೊಂಡವು. ನಮಗೆ ಎಷ್ಟೋ ಧೈರ್ಯ ಬಂತು. ಆದರೆ ಜೈಲಿನಲ್ಲಿ ಜನಸಂಖ್ಯೆ ಹೆಚ್ಚಿದಂತೆಲ್ಲ ಸೇವಾ ಸಂಸ್ಥೆಗಳಿಂದ ಸರಬರಾಜಾಗುತ್ತಿದ್ದ ಊಟದ ಗುಣ ಮತ್ತು ಗಾತ್ರ ಕಡಿಮೆಯಾಗುತ್ತ ಹೋಯಿತು. ಕೊನೆಕೊನೆಗೆ ನಮ್ಮ ಹಣದಿಂದಲೇ ಊಟ ತರಿಸಿಕೊಳ್ಳತೊಡಗಿದೆವು. ಊರಿನಿಂದ ಹಣ ತರಿಸಿಕೊಂಡಮೇಲೆ ಊಟದ ಸಮಸ್ಯೆ ಬಗೆಹರಿಯಿತು.

ಶಾಲೆಯಲ್ಲಿ ಕಲಿಯದ ಎಷ್ಟೋ ಸಂಗತಿಗಳನ್ನು ನಾನು ಜೈಲಿನಲ್ಲಿ ಕಲಿತುಕೊಂಡೆ. ಗಾಂಧೀಜಿ, ನೆಹರು, ಪಟೇಲ್, ಲಾಲಾ ಲಜಪತರಾಯ್, ಟಿಳಕರಂತಹ ಮಹಾನು ಭಾವರ ಜೀವನಚರಿತ್ರೆಯ ಎಷ್ಟೋ ಸಂಗತಿಗಳನ್ನು ಪ್ರತ್ಯಕ್ಷದರ್ಶಿಗಳಿಂದ ಕೇಳಿ ತಿಳಿಯುವ ಭಾಗ್ಯ ಅಲ್ಲಿ ನನಗೆ ದೊರೆಯಿತು. ಕಡೆಗೆ ಅಕ್ಟೋಬರ್ 7ರಂದು ನಮ್ಮೊಡನಿದ್ದ ಕಾಂಗ್ರೆಸ್ ನಾಯಕರನ್ನೆಲ್ಲ ಬಿಡುಗಡೆ ಮಾಡಲಾಯಿತು. ಅಕ್ಟೋಬರ್ 11ರಂದು ಚಂಗಲರಾಯ ರೆಡ್ಡಿ ಅವರಿಗೂ ಮಹಾರಾಜರಿಗೂ ಒಂದು ಒಪ್ಪಂದವಾಯಿತು. 1947ರ ಅಕ್ಟೋಬರ್ 14ರಂದು ನಮ್ಮ ತಂಡವೂ ಬಂಧಮುಕ್ತವಾಯಿತು.

ಚಳ್ಳಕೆರೆ ಮತ್ತು ಘಟಪರ್ತಿಗಳಲ್ಲಿ ನಮಗೆ ಅದ್ಧೂರಿ ಸ್ವಾಗತ ನೀಡಲಾಯಿತು. ಘಟಪರ್ತಿಯಲ್ಲಿ ಸರ್ವಾಲಂಕೃತವಾದ ಎತ್ತಿನಗಾಡಿಯಲ್ಲಿ ನಮ್ಮನ್ನು ಮೆರವಣಿಗೆ ಮಾಡ ಲಾಯಿತು. ಆರು ತಿಂಗಳು ಕಠಿಣಶಿಕ್ಷೆಗೊಳಗಾಗಿದ್ದರೂ ಒಂದೇ ತಿಂಗಳೊಳಗೆ ವಿಜಯ ಶಾಲಿಗಳಾಗಿ ಮರಳಿದ ನಾವು ನಾಲ್ವರು ಊರ ಜನರ ಹೆಮ್ಮೆ ಮತ್ತು ಅಭಿಮಾನಗಳಿಗೆ ಪಾತ್ರರಾಗಿದ್ದೆವು. ಗಾಂಧೀಜಿ, ನೆಹರು ಮುಂತಾದವರ ಹೆಸರನ್ನು ಹೇಳಿ ಜೈಕಾರ ಮಾಡುತ್ತ ಇದ್ದ ಜನರು ಕೊನೆಯಲ್ಲಿ ನಮ್ಮ ಹೆಸರನ್ನೂ ಕೂಗಿ 'ಜೈ' ಎಂದಾಗ ನನ್ನ ಮೈ ಪುಳಕಗೊಂಡಿತು. ಹೂವಿನೊಡನೆ ನಾರೂ ಸ್ವರ್ಗ ಸೇರಿದ ಅನುಭವವಾಯಿತು !

ವ್ಯ.ಶಿ. 1

## ಕಡಿದಾಳ ಮಂಜಪ್ಪ

ಜನನ : 1910 ಉದ್ಯೋಗ : ವಕೀಲ ವಿಳಾಸ : 7, ಲ್ಯಾಂಗ್‌ಫರ್ಡ್ ರಸ್ತೆ, ಬೆಂಗಳೂರು-1



ತೀರ್ಥಹಳ್ಳಿ ತಾ|| ಹಾರೊಗೊಳಿಗೆ ಗ್ರಾಮದವನಾದ ನಾನು ಶಿವಮೊಗ್ಗ ಹೈಸ್ಕೂಲಲ್ಲಿ ವಿದ್ಯಾರ್ಥಿಯಾಗಿದ್ದಾಗ ವಿವೇಕಾನಂದರ ಬರೆಹಗಳಿಂದ ಹಾಗು ನೆಪೋಲಿಯನ್, ಅಲೆಕ್ಸಾಂಡರ್ ಮುಂತಾದವರ ಜೀವನಚರಿತ್ರೆಗಳಿಂದ ಪ್ರಭಾವಿತನಾದೆ. ಮುಂದೆ ಶಿವಮೊಗ್ಗದಲ್ಲಿ ಶಿಕ್ಷಣ ಮುಂದುವರಿಸಿದಾಗ ಯಂಗ್ ಇಂಡಿಯ, ಇಂಡಿಯನ್ ರಿವ್ಯೂ, ಮಾಡರ್ನ್ ರಿವ್ಯೂ, ಹಿಂದೂ ಓದುತ್ತಿದ್ದೆ. ನನಗೆ ಓದುವ ಗೀಳು ಬಹಳ. ನಾನು ರಾಮಾಯಣ, ಭಾಗವತ, ಮಹಾಭಾರತ ಮುಂತಾದ ಧಾರ್ಮಿಕ ಕೃತಿಗಳನ್ನೂ ಕನ್ನಡದಲ್ಲಿ ಎಲ್ಲ ಪ್ರಕಟಿತ ಕಾದಂಬರಿಗಳನ್ನೂ ಆಗಲೇ ಓದಿದ್ದೆ. ಇವುಗಳ ಪ್ರಭಾವ ನನ್ನ ರಾಷ್ಟ್ರೀಯ ಭಾವನೆಗಳ ಉದ್ದೀಪನಕ್ಕೆ ಕಾರಣ. ಬೆಂಗಳೂರಿನಲ್ಲಿ ಇಂಟರ್, ಮೈಸೂರಿನಲ್ಲಿ ಬಿ.ಎ. ಮುಗಿಸಿ, ಪೂನಾಕ್ಕೆ ವಕೀಲಿ ಶಿಕ್ಷಣಕ್ಕೆ ಹೋದ ಕಾಲದಲ್ಲಿ ಅಲ್ಲಿ ನಡೆಯುತ್ತಿದ್ದ ಕಾಂಗ್ರೆಸ್ ಸಭೆಗಳಿಗೆ ಹೋಗುತ್ತಿದ್ದೆ. ಗಾಂಧೀಜಿ ಯರವಾಡ ಜೈಲಿನಲ್ಲಿ ಉಪವಾಸ ಮಾಡಿದಾಗ 2-3 ಬಾರಿ ಅವರನ್ನು ಕಾಣಲು ಹೋಗಿದ್ದೆ. 1934ರಲ್ಲಿ ಲಾ ಪರೀಕ್ಷೆ ಮುಗಿಸಿ ಶಿವಮೊಗ್ಗದಲ್ಲಿ ಪ್ರಾಕ್ಟೀಸ್ ಆರಂಭಿಸಿ ಆಗಲೇ ಎಂದರೆ 1935ರಲ್ಲೇ ಕಾಂಗ್ರೆಸ್ ಸದಸ್ಯನಾದೆ. ಆಗ ಡಾ|| ಪಾರ್ಥನಾರಾಯಣ ಪಂಡಿತರು ಕಾಂಗ್ರೆಸ್ಸಿನ ಗಣ್ಯನಾಯಕರೆನಿಸಿದ್ದರು. ಎಸ್. ವಿ. ಕೃಷ್ಣಮೂರ್ತಿರಾವ್, ರಾಮಕೃಷ್ಣರಾವ್, ಚನ್ನಗಿರಿಯ ಸೋಮಣ್ಣ, ಶಿಕಾರಿಪುರದ ವಾಸಪ್ಪ ಗೋಗಿ, ಮರಿಸ್ವಾಮಿ, ಹಿರೇಮಠ ಇವರೆಲ್ಲ ಜಿಲ್ಲೆಯ ಪ್ರಮುಖ ಕಾರ್ಯಕರ್ತರು. ಶಿವಮೊಗ್ಗದಲ್ಲಿ ಕೆ. ಆರ್. ಮಾಧವರಾವ್, ಭೂಪಾಳಂ ಸೋದರರೂ ಕ್ರಿಯಾಶೀಲರು. 1937ರಲ್ಲಿ ನಾನು ಡಿ.ಸಿ.ಸಿ. ಕಾರ್ಯದರ್ಶಿ ಆಗಿ ಆಯ್ಕೆಗೊಂಡೆ. ಶಿವಪುರ ಕಾಂಗ್ರೆಸ್ಸಿಗೂ ನಾನು ಹೋಗಿದ್ದೆ.

1939ರ ಅರಣ್ಯಸತ್ಯಾಗ್ರಹವು ಶಿವಮೊಗ್ಗ ಜಿಲ್ಲೆಯ ಅನೇಕ ಗ್ರಾಮಗಳಲ್ಲಿ ಆಯಿತು. ನಾನು ಚಳವಳಿಯ ಸಂಘಟನೆಗಾಗಿ ಓಡಾಡುತ್ತಿದ್ದೆನಾದರೂ ನನ್ನ ಬಂಧನ

ಆಗಲಿಲ್ಲ. ನನ್ನ ಮೇಲೆ ವಾರಂಟ್ ಇತ್ತು. ಈ ಕಾಲದಲ್ಲಿ ಪೋಲಿಸರು ನಡೆಸಿದ ದಬ್ಬಾಳಿಕೆಯ ವಿಚಾರಣೆ ನಡೆಸಲು ಬಂದಿದ್ದ ಮಹದೇವಭಾಯಿ ದೇಸಾಯಿ ಅವರ ಜೊತೆ ಒಂದು ದಿನ ಜಿಲ್ಲೆಯಲ್ಲಿ ಪ್ರವಾಸಮಾಡಿದ್ದೆ. ಆಗ ಶಿವಮೊಗ್ಗ ಜಿಲ್ಲೆಯ ಎಲ್ಲ ಪ್ರಮುಖ ನಾಯಕರು ಜೈಲಿನಲ್ಲಿ ಇದ್ದರು.

1940ರಲ್ಲಿ ಮೈಸೂರು ಕಾಂಗ್ರೆಸ್ಸಿನ ಒಂದು ಕನ್‌ವೆನ್‌ಶನ್ ಶಿವಮೊಗ್ಗದಲ್ಲಿ ಕೆ. ಟಿ. ಭಾಷ್ಯಂರ ಅಧ್ಯಕ್ಷತೆಯಲ್ಲಿ ನಡೆದಿರಲು ನಾನು ಸ್ವಾಗತ ಸಮಿತಿ ಕಾರ್ಯದರ್ಶಿ ಆಗಿದ್ದೆ. 1941ರ ಚುನಾವಣೆಯಲ್ಲಿ ನಾನು ತೀರ್ಥಹಳ್ಳಿಯಿಂದ ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆಗೊಂಡೆ.

1942ರಲ್ಲಿ ನಾನು ಭೂಗತನಾಗಿ, 15-10-1942ರಂದು ನನ್ನ ಬಂಧನ ಆಗುವ ತನಕ ಕೆಲಸಮಾಡುತ್ತಲಿದ್ದೆ. ವೇಷ ಮರೆಸಿಕೊಂಡು ಸಂಚರಿಸಿ ಚಳವಳಿಗೆ ಮಾರ್ಗದರ್ಶನ ನೀಡುತ್ತಿದ್ದೆ. ನಾನು ಬಂಧಿತನಾಗಬಾರದಾಗಿ ನಾಯಕರ ಆದೇಶವಿತ್ತು. ನನ್ನ ಮೇಲೆ ನಾಲ್ಕು ವಾರಂಟುಗಳಿದ್ದವು. ಒಮ್ಮೆ ಸಕಲೇಶಪುರಕ್ಕೆ ಮಾರವಾಡಿ ವ್ಯಾಪಾರಿಯಂತೆ ಮಾರುವೇಷದಲ್ಲಿ ಹೋಗಿದ್ದು ಈಗಲೂ ನೆನಪಿದೆ. ಭದ್ರಾವತಿಯಲ್ಲಿ ಆಗ ಕಾರ್ಮಿಕರ ಮುಷ್ಕರ ನಡೆದಿದ್ದು ಅವರಿಗೆ ಹಣಸಂಗ್ರಹಿಸುವ ಕೆಲಸ ಕೂಡ ನಡೆಸಿದ್ದೆ. ಶಿವಮೊಗ್ಗದಲ್ಲಲ್ಲದೆ ಹಾಸನ, ಚಿಕ್ಕಮಗಳೂರು ಜಿಲ್ಲೆಗಳಲ್ಲೂ ಓಡಾಡುತ್ತಲಿದ್ದೆ. ಆದರೆ ವಿಧ್ವಂಸಕ ಕೃತ್ಯಗಳಿಗೆ ನನ್ನ ಒಪ್ಪಿಗೆಯಿರಲಿಲ್ಲ.

ಆಗ ನನ್ನ ಪತ್ನಿ ಗರ್ಭಿಣಿಯಾಗಿದ್ದು ಅವಳನ್ನು ಮೂಡಗೆರೆಯಲ್ಲಿ ಬಿಟ್ಟುಬಂದೆ. ನನ್ನ ತಮ್ಮನೂ ಆಗ ಅಸೌಖ್ಯವಾಗಿ ಇದ್ದ. ನನ್ನ ಬಂಧನವಾದ ಮೂರು ದಿನಗಳ ನಂತರ ನನ್ನ ಮಗ ಜಯಪ್ರಕಾಶ್ ಹುಟ್ಟಿದ್ದು. ಶಿವಮೊಗ್ಗ, ಮೈಸೂರು, ಕರುಹಟ್ಟಿಗಳಲ್ಲಿ ಒಟ್ಟು 10 ತಿಂಗಳು ಸ್ಥಾನಬದ್ಧತೆಯಲ್ಲಿದ್ದು ಬಿಡುಗಡೆ ಆದೆ. ಮುಂದೆ 1945ರಲ್ಲಿ ನಾನೂ ಎಚ್. ಎಸ್. ರುದ್ರಪ್ಪನವರೂ ಕೌನ್ಸಿಲ್‌ಗೆ ಅವಿರೋಧವಾಗಿ ಆಯ್ಕೆಗೊಂಡೆವು. 1947ರಲ್ಲಿ ಚಳವಳಿ ಆರಂಭದಿಂದಲೇ ನನ್ನ ಬಂಧನ ಆಯಿತು. ಶಿವಮೊಗ್ಗ ಜೈಲಿನಲ್ಲಿದ್ದೆ.

1940ರ ವರೆಗೆ ನನ್ನ ಸಂಪಾದನೆಯನ್ನೆಲ್ಲ ಕಾಂಗ್ರೆಸ್ಸಿಗೇ ನೀಡುತ್ತಿದ್ದೆ. 1940ರಲ್ಲಿ ನನ್ನ ಮದುವೆ ಆದನಂತರ ಹಾಗೆ ಮಾಡಲು ಆಗಲಿಲ್ಲ.

ಜಿಲ್ಲೆಯಲ್ಲಿನ ಅಂದಿನ ಕಾರ್ಯಕರ್ತರನ್ನು ಹೇಳುವುದಾದರೆ, ತೀರ್ಥಹಳ್ಳಿಯಲ್ಲಿ ದೇವಂಗಿ ಮಾನಪ್ಪ, ದಿ|| ಕಾಳಿಂಗಯ್ಯನ ರಾಘವೇಂದ್ರರಾವ್, ಗೋಪಾಲಕೃಷ್ಣ ಕಾಮತ್, ಸೀತಾರಾಮ ಕಾಮತ್, ಎಂ. ಗುರುಮೂರ್ತಿ ಇವರನ್ನು ಜ್ಞಾಪಿಸಬೇಕು. ಗೋಪಾಲಕೃಷ್ಣ ಕಾಮತ್‌ರವರು 1939ರ ಸುಮಾರಿಗೆ ಕಾಂಗ್ರೆಸ್ಸಿನ ವತಿಯಿಂದ ಜಿಲ್ಲಾ ಬೋರ್ಡಿಗೆ ಆಯ್ಕೆಗೊಂಡಿದ್ದರು. ಅವರ ವಿರುದ್ಧ ನಿಂತ ಒಕ್ಕಲಿಗ ಹುರಿಯಾಳುಗಳು ಸೋತರು. 1942ರಲ್ಲಿ ಆ ಊರಿನಿಂದಲೇ 40-50 ಜನ ಬಂಧಿತರಾಗಿದ್ದರು.

1937-38ರ ಸುಮಾರಿಗೆ ನಾನು, ಯು. ಮಂಜುನಾಥಯ್ಯ (ಶಿವಮೊಗ್ಗ)

ಆನಂದಪುರ ಹೋಗಿ ಎ. ಆರ್. ಬದರೀನಾರಾಯಣ ಅಯ್ಯಂಗಾರ್ ಅವರನ್ನು ಕಾಂಗ್ರೆಸ್ಸಿಗೆ ಸೇರಿಸಿದೆವು. ಮುಂದೆ ಅವರೇ ಡಿ.ಎಲ್.ಬಿ. ಅಧ್ಯಕ್ಷರಾದರು.

ಶಿಕಾರಿಪುರ ತಾ||ನಲ್ಲಿ ವಾಸಪ್ಪ ಗೋಗಿ, ಮರಿಸ್ವಾಮಿ ಹಿರೇಮಠ, ಶಿವಾಜಿಗೌಡ ಪ್ರಮುಖರು. ಕೊನೆಯವರು ಅರಣ್ಯಸತ್ಯಾಗ್ರಹದ ಕಾಲಕ್ಕೆ ತೀರ ಚಟುವಟಿಕೆಯಿಂದ ಓಡಾಡಿದ್ದರು. ಸಾಗರದಲ್ಲಿ ಹಳದಿಪುರ ರಂಗಪ್ಪ, ಮರೂರು ರುದ್ರಪ್ಪಗೌಡ, ಮೃತ್ಯುಂಜಯ ಬಾಪಟ್ ಪ್ರಮುಖರು. ಹೊನ್ನಾಳಿಯವರಾದ ಎಚ್. ಎಸ್. ರುದ್ರಪ್ಪ ಶಿವಮೊಗ್ಗದಲ್ಲಿ ಇದ್ದರೂ ಹೊನ್ನಾಳಿ ಭಾಗದಲ್ಲೂ ಕೆಲಸ ನೋಡಿಕೊಳ್ಳುತ್ತಿದ್ದರು. ಎಚ್. ಸಿದ್ದಯ್ಯನವರು ಚನ್ನಗಿರಿಯವರು, ಶಿವಮೊಗ್ಗದಲ್ಲಿ ಭೂಪಾಳಂ ಚಂದ್ರಶೇಖರಯ್ಯ, ಕೆ. ಎನ್. ಮೂರ್ತಿ, ಕಾಳೋಜಿರಾವ್ ಜಾಧವ್, ಎಸ್. ಆರ್. ನಾಗಪ್ಪ ಶೆಟ್ಟಿ ಇವರೆಲ್ಲ ಈಗಲೂ ಜೀವಂತವಾಗಿರುವ ಪ್ರಮುಖ ಕಾರ್ಯಕರ್ತರು. ಕೆ. ಆರ್. ಮಾಧವರಾವ್, ಕೆ. ಜಿ. ಒಡೆಯರ್ ಇವರುಗಳು ನಮ್ಮ ಜಿಲ್ಲೆಯಿಂದ ಮೈಸೂರು ಕಾಂಗ್ರೆಸ್ ಕಾರ್ಯಸಮಿತಿಯಲ್ಲಿ ಇದ್ದವರು. ಆರಂಭದಲ್ಲಿ ನನ್ನನ್ನು ಕಾಂಗ್ರೆಸ್‌ನಿಂದ ಹೊರಕ್ಕೆಳೆಯಲು ಆಗ ಅನೇಕ ಯತ್ನಗಳು ಆದವು. ಪ್ರಜಾಪಕ್ಷದ ಕೆಲನಾಯಕರು ನನಗೆ ಮುನ್ಸೀಫ್ ಜಾಗ ಕೊಡಿಸುವುದಾಗಿ ಆಮಿಷ ತೋರಿಸಿದರು. 1941–42ರಲ್ಲಿ ಸರಕಾರದ ಕಡೆಯಿಂದ ನನಗೆ ಅ|| ಕಮಿಶನರ್ ಹುದ್ದೆ ನೀಡುವ ಮಾತು ಬಂತು. ನಾನು ಅದನ್ನೂ ತಿರಸ್ಕರಿಸಿದೆ. ಅಂದಿನ ಉತ್ಸಾಹದ, ತ್ಯಾಗದ ವಾತಾವರಣ ಅಸಾಧಾರಣವಾದುದು. ನಾವು ಆಗ ದೇಶಕ್ಕಾಗಿ ಪ್ರಾಣ ಕೊಡಲೂ ಸಿದ್ಧರಾಗಿದ್ದವರು. ರಾತ್ರಿ ಹೊತ್ತೆಲ್ಲ ಕಾಂಗ್ರೆಸ್ಸಿನ ಕೆಲಸಕ್ಕಾಗಿ ಓಡಾಟ, ಹಗಲು ಉದ್ಯೋಗ, ಇದು ನನ್ನ ಆಗಿನ ಚಟುವಟಿಕೆ. ಒಂದು ಮುರುಕು ಕಾರಿನಲ್ಲಿ ಊರಿನಿಂದ ಊರಿಗೆ ಓಡಾಡುತ್ತಿದ್ದೆ. ಸಭೆಗಳಿಗೆ ಜನರನ್ನು ಕೂಡಿಸಲು ಜಾಗಟೆ ಬಡೆದು ನಾನು ಪ್ರಚಾರ ಮಾಡಿದ್ದು ನೆನಪಿದೆ.

1938–39ರಲ್ಲಿ ಯೂತ್ ಲೀಗ್ ಎಂಬ ಸಂಸ್ಥೆ ಸ್ಥಾಪಿಸಿ ನಾನು ಅಧ್ಯಕ್ಷನಾಗಿದ್ದೆ. ಅದರ ಆಶ್ರಯದಲ್ಲಿ ಅಧ್ಯಯನ ವರ್ಗ, ಸಭೆ ನಡೆಸುತ್ತಿದ್ದೆವು. ಡಾ|| ಹರ್ಡೀಕರ, ಕಮಲಾದೇವಿ ಚಟ್ಟೋಪಾಧ್ಯಾಯ, ಶ್ರೀನಿವಾಸ ಮಲ್ಯ ಮುಂತಾದವರ ಭಾಷಣಗಳನ್ನು ಇಟ್ಟಿದ್ದೆವು. ಇದಲ್ಲದೆ 1943–44ರಲ್ಲಿ ಮಲೆನಾಡು ರೈತರ ಸಂಘ ಒಂದನ್ನು ಸ್ಥಾಪಿಸಿ ಅದರ ಅಧ್ಯಕ್ಷನಾದೆ. ಜಿಲ್ಲೆಯ ಎಲ್ಲೆಡೆಯನ್ನು ಅದರ ಶಾಖೆಗಳಿದ್ದವು. ಇದಲ್ಲದೆ, ಗೇಣಿದಾರರ ಸಂಘವನ್ನೂ ನಾನು ಸಂಘಟಿಸಿದ್ದು, ಇದೇ ಮುಂದೆ ಕಾಗೋಡು ಸತ್ಯಾಗ್ರಹಕ್ಕೆ ಹಾದಿಮಾಡಿಕೊಟ್ಟಿತು. (1948ರಲ್ಲಿ ಲೋಹಿಯ ಅದರ ನಾಯಕತ್ವ ವಹಿಸಿದ್ದರು.) ಚಳವಳಿಗೆ ಪೂರಕವಾಗುವ ಅನೇಕ ಚಟುವಟಿಕೆಗಳನ್ನು ಆಗ ನಡೆಸಿದ್ದೆವು.

ಮೈ.ಶಿ. 2

# ಟಿ. ಡಿ. ಶಂಕರನಾರಾಯಣ

ಜನನ : 1919 ಉದ್ಯೋಗ : ಕೃಷಿ ವಿಳಾಸ : ಶಿವಮೊಗ್ಗ



ತಿಲಕರ ಆಂದೋಲನದ ಪ್ರಭಾವಕ್ಕೆ ಒಳಗಾಗಿ ತಮ್ಮ ಬೊಂಬಾಯಿ ಸರ್ಕಾರದಲ್ಲಿನ ಕೆಲಸಕ್ಕೆ ರಾಜೀನಾಮೆ ನೀಡಿ ಹಿಂದಿನ ಮೈಸೂರು ಸಂಸ್ಥಾನಕ್ಕೆ ಬಂದು ನನ್ನ ತಂದೆ ಕೃಷ್ಣಾಜಿ ದೇಸಾಯಿ ತಮ್ಮ ಬಂಧುಗಳಲ್ಲಿ ನೆಲೆಸಿದರು. ನನ್ನ ತಾಯಿ ದಿ|| ಅಂಬಾಬಾಯಿಯವರು ನನ್ನ ದಿ|| ತಂದೆಯವರಲ್ಲಿದ್ದ ದೇಶಾಭಿಮಾನದ ಹಲವು ಸಂಗತಿಗಳನ್ನು ತಿಳಿಸಿದರು. ಆ ಪ್ರೇರಣೆಯೇ ನನಗೆ ಸ್ಫೂರ್ತಿ ನೀಡಿ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಲು ಸಹಾಯಕವಾಯಿತು.

ನಾನು ಶಿವಮೊಗ್ಗದಲ್ಲಿ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವಾಗಲೇ ಗಾಂಧೀಜಿಯವರು ಸ್ವದೇಶೀ ಚಳವಳಿಯನ್ನು ಪ್ರಾರಂಭಿಸಿದರು. ವ್ಯಾಪಕವಾಗಿ ರಾಷ್ಟ್ರಾದ್ಯಂತ ಹರಡಿದ ಈ ಚಳವಳಿಯು ನಮ್ಮ ನಗರದಲ್ಲಿಯೂ ಆರಂಭವಾಯಿತು. ಅಂದು ನಮ್ಮೂರಿನ ಗಾಂಧಿ ಪಾರ್ಕಿನಲ್ಲಿ ಸಾರ್ವಜನಿಕ ಸಭೆ ನಡೆಯಿತು. ಹಿರಿಯ ಮುಖಂಡರುಗಳಾದ ಡಾ|| ವೈ. ಪಾರ್ಥನಾರಾಯಣ ಪಂಡಿತರು, ದಿ|| ರಾಮಕೃಷ್ಣರಾಯರು, ದಿ|| ಟಿ. ಸಿ. ಎಸ್. ಮಣಿಯಂ, ದಿ|| ಸೋಮಣ್ಣಸೆಟ್ಟರು ಮುಂತಾದವರು ಚಳವಳಿಯ ಮಹತ್ವವನ್ನು ತಿಳಿಸಿದರು. ಅನಂತರ ಎಲ್ಲರೂ ತಾವು ಧರಿಸಿದ್ದ ಪರದೇಶೀ ಬಟ್ಟೆಗಳನ್ನು ತೆಗೆದು ಬೆಂಕಿಗೆ ಹಾಕಿ ಸುಟ್ಟರು. ನನ್ನ ಅಣ್ಣ ಸಿ. ಎನ್. ಎಸ್. ಮೂರ್ತಿಗಳ ಜೊತೆಯಲ್ಲಿ ನಾನೂ ಅಂದಿನ ಸಭೆಯಲ್ಲಿ ಭಾಗವಹಿಸಿದ್ದೆ. ತಮ್ಮ ಮೈಮೇಲಿನ ಮಲ್ ಅಂಗಿ ತೆಗೆದು ನನ್ನ ಅಣ್ಣ ಬೆಂಕಿಗೆ ಹಾಕಿದರು. ನಾನೂ ಹಾಗೇ ಮಾಡಿದೆ. ಅಂದಿನಿಂದಲೇ ಸ್ವದೇಶೀ ವ್ರತವನ್ನು ಕೈಗೊಂಡು ಖಾದಿ ಹಾಕಲು ಪ್ರಾರಂಭಿಸಿದೆ.

ಭಾರತ ಸೇವಾದಲದ ಎಂ. ಸಿ. ಮಾತಂಡರು ಅಂಕೋಲೆಯಿಂದ ನಮ್ಮ ನಗರಕ್ಕೆ ಬಂದು ಸೇವಾದಲದ ಶಾಖೆಯೊಂದನ್ನು ಪ್ರಾರಂಭಿಸಿದರು. ನಗರದ ಗಾಂಧಿ ಪಾರ್ಕಿನಲ್ಲಿ ಬೆಳಗ್ಗೆ ಸಂಜೆ ಶಿಕ್ಷಣವನ್ನು ಕೊಡುತ್ತಿದ್ದರು. ಕೆ. ಎನ್. ಮೂರ್ತಿ, ಎಸ್. ಆರ್. ನಾಗಪ್ಪಸೆಟ್ಟರು, ಬೈರಪ್ಪ ಇವರೇ ಮುಂತಾದ ಸ್ವಯಂಸೇವಕರ ಜೊತೆಯಲ್ಲಿ ನಾನೂ ಭಾಗವಹಿಸಿ ಶಿಕ್ಷಣವನ್ನು ಪಡೆದುಕೊಂಡೆ. ಅನಂತರ ಸೇವಾದಲದ ಬ್ಯಾಂಡ್ ಸೆಟ್

ಒಂದನ್ನು ಕೆ. ಎನ್. ಮೂರ್ತಿ, ರಾಮರಾವ್ ಪವಾರ್ ಇವರುಗಳು ಪ್ರಾರಂಭಿಸಿದರು. ಆ ತಂಡದವರ ಜೊತೆಯಲ್ಲಿ ನಾನೂ ಸೇರಿದೆ.

ನಮ್ಮ ನಗರದಲ್ಲಿ ಮೈಸೂರು ಕಾಂಗ್ರೆಸ್ಸಿನ ಆಜಾದ್ ಸಮ್ಮೇಳನ ನಡೆಯಿತು. ನಮ್ಮ ಜಿಲ್ಲೆಯ ಮುಖಂಡರುಗಳಾದ ಮಾಜಿ ಮಂತ್ರಿ ದಿ|| ಸಿದ್ದಯ್ಯ, ರತ್ನಮ್ಮ ಮಾಧವರಾವ್, ಅವರ ಪತಿ ದಿ|| ಕೆ. ಆರ್. ಮಾಧವರಾವ್, ದಿ|| ಸೋಮಣ್ಣ ಸೆಟ್ಟರು, ದಿ|| ಸಿ. ರಾಮಸ್ವಾಮಿಸೆಟ್ಟರು, ದಿ|| ಮರಿಸ್ವಾಮಿ ಹಿರೇಮಠ, ದಿ|| ಕೆ.ಜಿ. ಒಡೆಯರ್, ದಿ|| ನಿದಿಗೆ ರುದ್ರಪ್ಪ, ಡಾ|| ವೈ. ಪಾರ್ಥನಾರಾಯಣ ಪಂಡಿತ, ಇನ್ನೂ ಜಿಲ್ಲೆಯ ಹಲವಾರು ಮುಖಂಡರುಗಳು ಸಮ್ಮೇಳನದಲ್ಲಿ ಭಾಗವಹಿಸಿದ್ದರು. ದಿ|| ಎಸ್. ವಿ. ಕೃಷ್ಣಮೂರ್ತಿರಾಯರು ಅಂದು ನಮ್ಮ ಸ್ವಯಂಸೇವಕ ಪಡೆಗೆ ಜಿ.ಒ.ಸಿ.ಗಳಾಗಿದ್ದರು. ಅವರ ಮಾರ್ಗದರ್ಶನದಲ್ಲಿ ಕೆಲಸ ಮಾಡಿದೆ. ದಿ|| ಕೆ. ಟಿ. ಭಾಷ್ಯಂರವರು ಸಮ್ಮೇಳನದ ಅಧ್ಯಕ್ಷರಾಗಿದ್ದು ಯಶೋದಮ್ಮ ದಾಸಪ್ಪನವರು ಸಮ್ಮೇಳನವನ್ನು ಉದ್ಘಾಟಿಸಿದರು. ಇದಾದನಂತರ ನನ್ನ ಮುಂದಿನ ದಿನಗಳೆಲ್ಲವನ್ನೂ ರಾಜಕೀಯದಲ್ಲಿ ಕಳೆಯಬೇಕಾಯಿತು.

ಹರಿಹರದಲ್ಲಿ ಮೈಸೂರು ಕಾಂಗ್ರೆಸ್ಸಿನ ಸಮ್ಮೇಳನ ನಡೆದಾಗ ಕೆ. ಎನ್. ಮೂರ್ತಿಯವರ ನೇತೃತ್ವದಲ್ಲಿ ನಮ್ಮ ಬ್ಯಾಂಡ್ ಸೆಟ್ಟಿನವರು ಅದರಲ್ಲಿ ಭಾಗವಹಿಸಿದ್ದೆವು. ರಾಜೇಂದ್ರ ಪ್ರಸಾದರು ಸ್ವಯಂಸೇವಕರನ್ನುದ್ದೇಶಿಸಿ ಸ್ಫೂರ್ತಿದಾಯಕ ಭಾಷಣಮಾಡಿ ಪ್ರತಿಯೊಬ್ಬರಿಗೂ ಪ್ರಶಸ್ತಿಪತ್ರಗಳನ್ನು ವಿತರಣೆ ಮಾಡಿದರು. ನನಗೂ ಸಹ ದೊರೆತಿದೆ. ಚಿತ್ರದುರ್ಗದಲ್ಲಿ ಜರುಗಿದ ಎಂ.ಪಿ.ಸಿ.ಸಿ. ಸಮ್ಮೇಳನದಲ್ಲಿಯೂ ನಮ್ಮ ಬ್ಯಾಂಡ್ ಸೆಟ್ಟಿನವರ ತಂಡದಲ್ಲಿ ನಾನೂ ಭಾಗವಹಿಸಿದ್ದೆ.

1939ರ ಅರಣ್ಯಸತ್ಯಾಗ್ರಹ ಮತ್ತು ಧ್ವಜಸತ್ಯಾಗ್ರಹಗಳು ನಮ್ಮಲ್ಲಿ ನಡೆದಾಗ ನಾನೂ ಭಾಗವಹಿಸಿದ್ದೆ.

1942ರಲ್ಲಿ ನಾನು ಹೈಸ್ಕೂಲ್ ಶಿಕ್ಷಣ ಮುಕ್ತಾಯಗೊಳಿಸಿ ಖಾದಿ-ಗ್ರಾಮೋದ್ಯೋಗ ಚಳವಳಿಗೆ ವಿಶೇಷವಾಗಿ ಲಕ್ಷ್ಯವನ್ನು ಹರಿಸಿ, ಬೆಳಗಾವಿ ಜಿಲ್ಲೆಯ ಹುದಲಿ ಆಶ್ರಮಕ್ಕೆ ಕರ್ನಾಟಕದಿಂದ ಆಯ್ಕೆಯಾಗಿ ಹೋಗಿ ಸೇರಿದೆ. ಅಲ್ಲಿಗೆ ಬೇರೆ ಬೇರೆ ಪ್ರಾಂತ್ಯಗಳಿಂದ ಆರಿಸಿದ 52 ಜನ ವಿದ್ಯಾರ್ಥಿಗಳು ಬಂದಿದ್ದರು. ಪುಂಡಲೀಕಜೀ, ವಡವೀ ಮಾಸ್ತರರವರಲ್ಲಿ ಖಾದಿ-ಗ್ರಾಮೋದ್ಯೋಗ ಶಿಕ್ಷಣ ಪಡೆದೆ. ಬೆಂಗಳೂರಿನಲ್ಲಿ ಸಾಹಿತ್ಯ ಪರಿಷತ್ತಿನ ಈಗಿನ ಅಧ್ಯಕ್ಷರಾಗಿರುವ ಜಿ. ನಾರಾಯಣ ಅವರೂ ನಮ್ಮೊಂದಿಗೆ ಇದ್ದರು. 8–10 ತಿಂಗಳು ಶಿಕ್ಷಣ ಪಡೆಯುತ್ತಿರುವಾಗಲೇ ಗಾಂಧೀಜಿಯವರು 'ಕ್ವಿಟ್ ಇಂಡಿಯಾ' ಚಳವಳಿ ಪ್ರಾರಂಭಿಸಿದರು. ನಮ್ಮ ಆಶ್ರಮವನ್ನು ಮುಚ್ಚಲಾಯಿತು. ನಾವುಗಳೆಲ್ಲ ನಮ್ಮ ನಮ್ಮ ಊರುಗಳಿಗೆ ಹಿಂತಿರುಗಿದೆವು. ಊರಿಗೆ ಬರುತ್ತಿರುವ ವೇಳೆಗಾಗಲೇ ಅನೇಕರು ಕೈಸೆರೆಯಾಗಿದ್ದರು. ನಾನು ನನ್ನ ಮಿತ್ರರಾದ ಎಸ್. ಚಂದ್ರಶೇಖರ, ಜಗನ್ನಾಥ ಇವರೊಡನೆ ಗುಪ್ತವಾಗಿ ಬುಲೆಟಿನ್‌ಗಳನ್ನು ಪ್ರಕಟಿಸಿ

ಹಂಚಿದೆವು. ಜಗನ್ನಾಥ ಮತ್ತು ನಾನು ನಮ್ಮೂರಿನ ಹತ್ತಿರ ರೈಲಿನ ಕಂಬಿಯ ಮೇಲಿದ್ದ ಫಿಶ್‌ಪ್ಲೇಟನ್ನು ಕಿತ್ತೆವು. ಅನಂತರ ನಾನು ಸಿದ್ದಾಪುರ ಗಡಿಯಲ್ಲಿಯೇ ತಲೆ ಮರೆಸಿಕೊಂಡು ಕಾರ್ಯಾಚರಣೆ ನಡೆಸಿದೆ. ಚಳವಳಿಯು ಮುಕ್ತಾಯವಾದಮೇಲೆ ಕೆಲವು ಕಾಲ ಎಸ್. ಆರ್. ನಾಗಪ್ಪಸೆಟ್ಟರು ಪ್ರಾರಂಭಿಸಿದ ಖಾದಿ-ಗ್ರಾಮೋದ್ಯೋಗ ಸರಂಜಾಂ ಕಾರ್ಯಾಲಯದಲ್ಲಿ ಕೆಲಸ ಮಾಡಿದೆ. ಶಿವಮೊಗ್ಗ ತಾಲ್ಲೂಕ್ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿಯೂ ಕೆಲವು ಕಾಲ ಕಾರ್ಯ ನಡೆಸಿದೆ.

'ಮೈಸೂರು ಚಲೋ' ಚಳವಳಿ ಕಾಲಕ್ಕೆ ರಾಮಣ್ಣಸೆಟ್ಟರ ಪಾರ್ಕಿನಲ್ಲಿ ಪ್ರತಿದಿನ ಸಂಜೆ ಸಭೆ ನಡೆಸುವ ಜವಾಬ್ದಾರಿ ಹೊತ್ತುಕೊಂಡು ಕೆಲಸ ನಿರ್ವಹಿಸಿದೆ. ನನ್ನ ಮೇಲೆ ವಾರೆಂಟ್ ಹೊರಟ ಕೂಡಲೇ ತಲೆಮರೆಸಿಕೊಂಡು ಹುಬ್ಬಳ್ಳಿಯ ಕೆ.ಪಿ.ಸಿ.ಸಿ. ಆಫೀಸಿಗೆ ಹೋಗಿ ಸೇರಿದೆ. ಅಲ್ಲಿಗೆ ನಮ್ಮೂರಿಂದ ಎಚ್. ಎಸ್. ರುದ್ರಪ್ಪ, ಎಂ. ಸಿ. ಈಶ್ವರಪ್ಪ ಇವರು ನನಗಿಂತ ಮುಂಚಿತವಾಗಿಯೇ ಬಂದಿದ್ದರು. ನೇಸ್ವಿಯವರು ಹೊರಡಿಸುತ್ತಿದ್ದ ನವಯುಗ ದಿನಪತ್ರಿಕೆಯಲ್ಲಿ ಪ್ರತಿನಿತ್ಯವೂ ಹೋರಾಟಗಾರರು ಮೈಸೂರು ರಾಜ್ಯದ ಹಲವಾರು ಹಳ್ಳಿಗಳನ್ನು ಕೈವಶಪಡಿಸಿಕೊಂಡರು ಎಂಬ ಲೇಖನಗಳನ್ನು ಬರೆದು ಪ್ರಕಟಿಸುತ್ತಿದ್ದೆ. ಎಂ. ಪಿ. ಈಶ್ವರಪ್ಪನವರೊಂದಿಗೆ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಪ್ರವಾಸಮಾಡಿ ಅಲ್ಲಲ್ಲಿಯೇ ಸಭೆಗಳನ್ನು ನಡೆಯಿಸಿ, ನಮ್ಮ ಹೋರಾಟಕ್ಕೆ ಬೆಂಬಲ ಕೊಡುವಂತೆ ಕರೆ ಕೊಡುತ್ತಿದ್ದೆ. ಅನಂತರ ಹುಬ್ಬಳ್ಳಿಗೆ ಹಿಂತಿರುಗಿ ಗುಪ್ತವಾಗಿ ರಿವಾಲ್ವರನ್ನು ರಾಜ್ಯದೊಳಕ್ಕೆ ಕಳುಹಿಸುತ್ತಿದ್ದೆ ಕೊನೆಗೆ ಶಿವಮೊಗ್ಗ ಜಿಲ್ಲೆಯಲ್ಲಿ ಕಾಲಿಡುತ್ತಿದ್ದಂತೆಯೇ ನನ್ನನ್ನು ಬಂಧಿಸಿ ಮಂಡಗದ್ದೆ ಮತ್ತು ಸಾಗರದ ಡಿಟೆನ್ಶನ್ ಕ್ಯಾಂಪಿನಲ್ಲಿ ಹಲವು ತಿಂಗಳ ಕಾಲ ಇಟ್ಟರು.

ಪಾನನಿರೋಧ ಚಳವಳಿ ನಮ್ಮೂರಿನಲ್ಲಿಯೂ ನಡೆಯಿತು. ರತ್ನಮ್ಮ, ಮಾಧವ ರಾವ್, ಪೊನ್ನಮ್ಮಾಳ್, ಡಾ|| ಎಚ್. ರಾಮಕೃಷ್ಣರಾವ್ ಇವರುಗಳ ಜೊತೆಯಲ್ಲಿ ನಾನೂ ಭಾಗವಹಿಸಿದ್ದೆ. ರಾಮಚಂದ್ರನ್ ಶಿವಮೊಗ್ಗಕ್ಕೆ ಬಂದು ಹರಿಜನೋದ್ಧಾರ ಕಾರ್ಯದಲ್ಲಿ ಆಸಕ್ತರಾದರು. ಅವರೊಡನೆ ಕೆಲವು ಕಾಲ ಕೆಲಸ ಮಾಡಿದೆ. 1943ರಲ್ಲಿ ಶಿವಮೊಗ್ಗ ನಗರದಲ್ಲಿ ದೇಶೀಯ ವಿದ್ಯಾ ಶಾಲೆಯನ್ನು ನನ್ನ 5 ಜನ ಮಿತ್ರರೊಂದಿಗೆ ಪ್ರಾರಂಭಿಸಿ, ಆರು ವರ್ಷಗಳ ಕಾಲ ಮುಖ್ಯೋಪಾಧ್ಯಾಯನಾಗಿದ್ದೆ. ಈಗ ಅದರಲ್ಲಿ ಕಳೆದ 30 ವರ್ಷಗಳಿಂದ ಆಡಳಿತ ಮಂಡಲಿಯಲ್ಲಿ ಸೇವೆಸಲ್ಲಿಸುತ್ತಿದ್ದನೆ. ನಗರದಲ್ಲಿ ಪ್ರಾರಂಭಿಸಲಾಗಿರುವ ಸ್ವಾತಂತ್ರ್ಯ ಹೋರಾಟಗಾರರ ಸಂಘದ ಕಾರ್ಯದರ್ಶಿಯಾಗಿ ಇದ್ದೇನೆ. ನಗರದ ನಾನಾ ಸಂಘಸಂಸ್ಥೆಗಳಲ್ಲಿ ಡೈರೆಕ್ಟರ್ ಆಗಿಯೂ ಕಾರ್ಯದರ್ಶಿ ಆಗಿಯೂ ಕಿಂಚಿತ್ ಸೇವೆಸಲ್ಲಿಸುತ್ತಿದ್ದೇನೆ.

ವೈ.ಶಿ. 3

# ಕೆ. ಎನ್. ಮೂರ್ತಿ

ಜನನ : 1914 ಉದ್ಯೋಗ : ? ವಿಳಾಸ : ಸರ್ಕ್ಯೂಟ್ ಹೌಸ್ ರಸ್ತೆ, ದುರ್ಗಿಗುಡಿ, ಶಿವಮೊಗ್ಗ

---



1931ರಲ್ಲಿ ನಾನು ಬೆಂಗಳೂರಲ್ಲಿದ್ದಾಗ, ಮೋತೀಲಾಲ್ ನೆಹರೂ ಅವರು ದಿವಂಗತರಾಗಲು ಫೋರ್ಟ್ ಹೈಸ್ಕೂಲ್ ಮೈದಾನಿನಲ್ಲಿ ಸಂತಾಪಸಭೆಯಾಗಿ ಭಾಷ್ಯಂ ಮತ್ತು ವೀರಕೇಸರಿಯವರ ಭಾಷಣಗಳಾಗಿ ಪರದೇಶಿ ಬಟ್ಟೆಯ ಬಹಿಷ್ಕಾರವನ್ನು ಅವರು ಸೂಚಿಸಲು, ಆಗಿನಿಂದಲೇ ನಾನು ಕಾಂಗ್ರೆಸ್‌ನ ಸ್ವಯಂಸೇವಕನಾದೆ. ಭಗತ್‌ಸಿಂಗ್ ಪ್ರಭೃತಿಗಳೂ ಅದೇ ರೀತಿ ಸೊಲ್ಲಾಪುರದ ಧನಶೆಟ್ಟಿ ಮಲ್ಲಪ್ಪ ಮುಂತಾದವರು ಫಾಶಿಗೆ ಹಾಕಲ್ಪಟ್ಟಾಗ ಸರಕಾರದ ನೀತಿಯನ್ನು ಧಿಕ್ಕರಿಸಿ ಸಭೆ, ಮೆರವಣಿಗೆ ಏರ್ಪಡಿಸಿದಾಗ ಅದರಲ್ಲಿ ಪಾಲುಗೊಂಡೆ. ಆ ದಿನ ನಮ್ಮಲ್ಲಿ ಅನೇಕರನ್ನು ಬಂಧಿಸಿ, ಚಿಕ್ಕ ಹುಡುಗರೆಂದು ಬಿಟ್ಟುಬಿಟ್ಟರು.

ಮುಂದೆ ಶಿವಮೊಗ್ಗದಲ್ಲಿ (1931) ಸ್ವಯಂಸೇವಕರ ಶಿಬಿರ ಪ್ರಾರಂಭ ಆಯಿತು. ಅವರಲ್ಲಿ ಲಾಠಿ, ಕತ್ತಿವರಸೆ ಹೇಳಿಕೊಡುತ್ತಿದ್ದರು. ನಮ್ಮ ತಂಡದ ನಾಯಕರಾಗಿ ಡಿ|| ಭೈರಪ್ಪ ಮತ್ತು ಬೀರಪ್ಪ (ಡಾ|| ಚಂದ್ರಶೇಖರ್) ನಮಗೆ ಲಾಠಿ ಹೇಳಿಕೊಡುತ್ತಿದ್ದರು. ಒಂದೆರಡು ತಿಂಗಳನಂತರ ಮಾತಂಡ ಎಂಬವರು ಬಂದು ಇಲ್ಲಿನ ಶಿಬಿರದ ಸೇನಾಪತ್ಯ ವಹಿಸಿದರು. ಮುಂದೆ ಸತ್ಯಾಗ್ರಹದಲ್ಲಿ ಭಾಗವಹಿಸಲು 7-8 ಜನರ ಒಂದು ತಂಡ ಹುಬ್ಬಳ್ಳಿಗೆ ಹೋಗಿ, ಅಲ್ಲಿಂದ ಹೊರಡಲು ಲಾಠೀಚಾರ್ಜ್ ಮಾಡಿ ದೂರದ ಸ್ಥಳಕ್ಕೆ ಒಯ್ದು ಬಿಟ್ಟರು. ತಿರುಗಿ ಕೆಲವು ಮಿತ್ರರೊಂದಿಗೆ ಶಿವಮೊಗ್ಗದಿಂದ ಹೊರಟಾಗ ಮತ್ತೆ ಹೊಡೆದು ಅರಸೀಕೆರೆ ರೈಲ್ವೆ ಸ್ಟೇಷನ್‌ನಲ್ಲಿ ಒಯ್ದು ಬಿಟ್ಟರು. ಬೆಂಗಳೂರು ಕಂಟೋನ್ಮೆಂಟ್‌ನ ಕಾಂಗ್ರೆಸ್ ಸೆಕ್ರೆಟರಿ ಸ್ವಾಮಿ ಎಂಬವರು ನಮ್ಮನ್ನು ಉಪಚರಿಸಿ ಬೆಂಗಳೂರಿಗೆ ಕರೆದೊಯ್ದರು. ಬೆಂಗಳೂರು ಕಮರ್ಶಿಯಲ್ ಸ್ಟ್ರೀಟ್‌ನಲ್ಲಿ ವಿದೇಶೀಯ ಧಾರಿವಾಲ್ ಬಟ್ಟೆ ಅಂಗಡಿಯ ಮುಂದೆ ಪಿಕೆಟಿಂಗ್‌ಗೆ ನಿಂತೆವು. ಪೋಲಿಸರು ಮತ್ತೆ ಲಾಠಿಯಿಂದ ಹೊಡೆದು ದೂರಕ್ಕೆ ಬಿಟ್ಟರು. ಶೂಲೆಯಲ್ಲಿ ಹೆಂಡದಂಗಡಿ ಪಿಕೆಟಿಂಗ್ ಮಾಡಿದೆವು. ಅಲ್ಲಿ ಆದ ಲಾಠೀ ಚಾರ್ಜ್‌ನಿಂದ ನಾನು ಜ್ಞಾನತಪ್ಪಿಬಿದ್ದಿರಲು ಯಾರೋ ಲಾಯರ್ ಒಬ್ಬರು

ಆಸ್ಪತ್ರೆಯಲ್ಲಿ ಚಿಕಿತ್ಸೆಮಾಡಿಸಿ, ಅಲ್ಲಿಂದ ಶಿವಮೊಗ್ಗಕ್ಕೆ ಕಳುಹಿಸಿಕೊಟ್ಟರು. ಶಿವಮೊಗ್ಗ ಖಾದಿ ಭಂಡಾರದ ಮಣಿಯಂ ಅವರ ನೇತೃತ್ವದಲ್ಲಿ ಖಾದಿ ಬಟ್ಟೆಯನ್ನು ಮನೆಮನೆಗೆ ಹೊತ್ತು ಒಯ್ದು ಮಾರುತ್ತಿದ್ದೆವು.

1936ರಲ್ಲಿ ಶಿವಾಜಿ ಸಂಘವೆಂಬ ಸ್ವಯಂಸೇವಕ ಶಿಬಿರ ಸ್ಥಾಪಿಸಿ ಅದಕ್ಕೆ ನಾನೇ ಮುಖಂಡನಾಗಿ ಕೆಲಸ ಮಾಡುತ್ತಿದ್ದೆ. ಗಾಂಧೀ ಜಯಂತಿ, ಗಣಪತಿ ಉತ್ಸವ ವೈಭವದಿಂದ ಆಚರಿಸುತ್ತಿದ್ದೆವು. 1936ರಲ್ಲಿ ಮೈಸೂರು ಅಸೆಂಬ್ಲಿಗೆ ಚುನಾವಣೆ ನಡೆದಾಗ ಕಾಂಗ್ರೆಸ್ಸಿನಿಂದ ಭೂಪಾಳಂ ಪುಟ್ಟನಂಜಪ್ಪ ಮತ್ತು ಕೆ. ಜಿ. ಒಡೆಯರ್ ಸ್ಪರ್ಧಿಸಿದ್ದರು. ಆದರೆ ಕಾಂಗ್ರೆಸ್ಸಿನಿಂದ ಪುಟ್ಟನಂಜಪ್ಪನವರೂ ಪ್ರತಿಪಕ್ಷದಿಂದ ಎಚ್. ಸಿದ್ದಯ್ಯನವರೂ ಗೆದ್ದರು. ಎಚ್. ಸಿದ್ದಯ್ಯನವರು ಮುಂದೆ ಕಾಂಗ್ರೆಸ್ ಸೇರಿದರು.

1938ರಲ್ಲಿ ಧ್ವಜಸತ್ಯಾಗ್ರಹ ನಡೆದು ರಾಮಣ್ಣ ಪಾರ್ಕಿನಲ್ಲಿ ಡಿ.ಸಿ.ಸಿ. ಕಾರ್ಯದರ್ಶಿ ಕಡಿದಾಳ ಅಲ್ಲದೆ ದಿ|| ಎಸ್. ವಿ. ಕೃಷ್ಣಮೂರ್ತಿರಾವ್, ಕೆ. ಆರ್. ಮಾಧವರಾವ್, ಎಚ್. ಸಿದ್ದಯ್ಯ ಇವರುಗಳ ನೇತೃತ್ವದಲ್ಲಿ ಧ್ವಜ ಏರಿಸಲು ಹೋದಾಗ ಕೆ. ಆರ್. ಮಾಧವರಾವ್, ಬಂಗ್ಲೆ ರಾಮಕೃಷ್ಣಯ್ಯ, ಮಾನಪ್ಪಗೌಡ ಇವರು ಬಂಧಿತರಾದರು. 1938ರಲ್ಲಿ ಪುರಸಭಾ ಚುನಾವಣೆಗೆ ನಿಲ್ಲಲು ನನ್ನನ್ನು ಸಿದ್ದಯ್ಯನವರೂ ಕಡಿದಾಳರೂ ಒತ್ತಾಯಿಸಲು ನಾನು ಸ್ವಯಂಸೇವಕನಾಗಿಯೇ ಉಳಿಯುವುದಾಗಿ ಹೇಳಿದೆ. 1939ರಲ್ಲಿ ಅರಣ್ಯಸತ್ಯಾಗ್ರಹ ನಡೆಸಲು ನಿರ್ಧರಿಸಿ ತೀರ್ಥಹಳ್ಳಿ ಹಳೆ ರಸ್ತೆಯಲ್ಲಿ ಸತ್ಯಾಗ್ರಹ ಶಿಬಿರವನ್ನು ನಾನು ಮತ್ತು ಎಸ್. ಆರ್. ನಾಗಪ್ಪಶೆಟ್ಟಿ ಸ್ಥಾಪಿಸಿದೆವು. ಅದೇ ಕಾಲದಲ್ಲಿ ದಿವಾನ್ ಮಿರ್ಜಾ ಅವರು ತೀರ್ಥಹಳ್ಳಿಗೆ ರಂಗಮಂಟಪ ಉದ್ಘಾಟಿಸಲು ಊರ ಮೂಲಕ ಹೋಗುತ್ತಿರಲು ಪೋಲಿಸರು ನನ್ನನ್ನೂ ನಾಗಪ್ಪಶೆಟ್ಟರನ್ನೂ ರಾಮರಾವ್ ಪವಾರರನ್ನೂ ಬಂಧಿಸಿ ರಾತ್ರಿ ಬಿಡುಗಡೆ ಮಾಡಿದರು. ಆಮೇಲೆ ನನ್ನನ್ನು 2 3 ದಿನಗಳನಂತರ ಡಾ|| ಕೆ. ಎನ್. ದತ್ತಾತ್ರಿಯವರ ಆಸ್ಪತ್ರೆಯಿಂದಲೇ ಬಂಧಿಸಿ 14 11-1939ರಂದು ಮೊಕದ್ದಮೆ ಹೂಡಿ ಅರಣ್ಯಸತ್ಯಾಗ್ರಹಕ್ಕಾಗಿ ಆರು ತಿಂಗಳ ಕಠಿಣ ಸಜಾ ಮತ್ತು 50 ರೂ. ದಂಡ, ದಂಡ ತೆರದಿದ್ದರೆ ಒಂದೂವರೆ ತಿಂಗಳ ಸಾದಾ ಶಿಕ್ಷೆ ವಿಧಿಸಿದರು. ಈ ಕಾಲದಲ್ಲಿ ಜಿಲ್ಲೆಯ ಎಲ್ಲ ತಾಲೂಕುಗಳಲ್ಲಿ ಸತ್ಯಾಗ್ರಹ ನಡೆಯಿತಲ್ಲದೆ, ಒಟ್ಟು 300 400 ಜನರನ್ನು ಬಂಧಿಸಿದರು. ಕಡಿದಾಳ, ಎಸ್. ವಿ. ಕೃಷ್ಣಮೂರ್ತಿರಾವ್, ಎಚ್. ಸಿದ್ದಯ್ಯ, ಕೆ. ಆರ್. ಮಾಧವರಾವ್, ರತ್ನಮ್ಮ ಮಾಧವರಾವ್, ಕೆ. ಜಿ. ಒಡೆಯರ್, ಎಚ್. ಎಸ್. ರುದ್ರಪ್ಪ ಮುಂತಾದ ಮುಖಂಡರೂ ಆಗ ಬಂಧಿತರಾದರು. ನಮ್ಮ ಬಿಡುಗಡೆಯನಂತರ ಮೈಸೂರು ಅಸೆಂಬ್ಲಿಗೆ ನಡೆದ ಚುನಾವಣೆಯಲ್ಲಿ ಕಡಿದಾಳರು ಸ್ಪರ್ಧಿಸಿರಲು ಪೋಲಿಸರು ಮೆರವಣಿಗೆ, ಭಾಷಣಗಳ ವಿರುದ್ಧ ತೀರ್ಥಹಳ್ಳಿಯಲ್ಲಿ 39ನೆಯ ಸೆಕ್ಷನ್‌ನಂತೆ ಪ್ರತಿಬಂಧ ಹೇರಿದಾಗ ಕಡಿದಾಳರೂ ಕೆ. ಜಿ. ಶಾಮೇಗೌಡರೂ ನಾನೂ ಅಲ್ಲಿಗೆ ಹೋಗಿ ಕಾನೂನು ಮುರಿದು ಮೆರವಣಿಗೆ ಹೊರಟೆವು. ನನ್ನನ್ನು

ಬಂಧಿಸಿ, ಕೇಸು ದಾಖಲುಮಾಡಿ ಅನಂತರ ಬಿಟ್ಟರು. ಮುಂದೆ ಕೇಸನ್ನು ವಾಪಸ್ಸು ತೆಗೆದುಕೊಂಡರು.

1942ರಲ್ಲಿ ಮುಂಬೈ ಎ.ಐ.ಸಿ.ಸಿ.ಗೆ ನಾನು, ಕಾಳೋಜಿರಾವ್, ಎಸ್. ಆರ್. ನಾಗಪ್ಪಶೆಟ್ಟಿ ಹೋಗಿದ್ದೆವು. ಮಹಾತ್ಮರ ಬಂಧನವಾಗಿ, ಆ ದಿನ ಸಂಜೆ ಶಿವಾಜಿ ಪಾರ್ಕ್‌ನಲ್ಲಿ ಸಭೆ ಇದೆಯೆಂದು ವರ್ತಮಾನ ತಿಳಿದು ಅಲ್ಲಿಗೆ ಹೋಗಿರಲು ಲಾಠೀ ಚಾರ್ಜ್, ಅಶ್ರುವಾಯುಪ್ರಯೋಗ, ಗೋಳಿಬಾರ್‌ಗಳಾಗಿ ಕೆಲವು ವೀರಬಾಲಕರು ಪ್ರಾಣಾರ್ಪಣೆಮಾಡಿದರು. ಅಚ್ಯುತ ಪಟವರ್ಧನರು ಒಂದು ಸಂದೇಶ ಕಳುಹಿಸಿ ಬೇರೆ ಬೇರೆ ಊರುಗಳಿಂದ ಬಂದ ಪ್ರತಿನಿಧಿಗಳು ತಮ್ಮ ಊರುಗಳಿಗೆ ಹಿಂತಿರುಗಿ ಸತ್ಯಾಗ್ರಹ ಪ್ರಾರಂಭಿಸಬೇಕು, ಇಲ್ಲಿ ಚಳವಳಿಯಲ್ಲಿ ಭಾಗವಹಿಸಬಾರದು ಎಂದು ತಿಳಿಸಲು, ನಾವು ಪುಣೆಗೆ ಬಂದೆವು. ಮುಂಬೈಯಂತೆ ಅಲ್ಲೂ ಗಲಾಟೆ. ದೇಶಪಾಂಡೆ ಗಂಗಾಧರರಾಯರ ಬಂಧನಕ್ಕೆ ಯತ್ನವಾಗಿದೆ, ಅವರು ಸಿಕ್ಕಿಲ್ಲ, ಎಂಬ ಸುದ್ದಿ ಬಂತು. ಮುಂದೆ ಊರಿಗೆ ಬರುತ್ತಿದ್ದಂತೆ ಭಾಷ್ಯಂ, ಕೆ. ಸಿ. ರೆಡ್ಡಿ, ದಾಸಪ್ಪ ಮುಂತಾದ ನಾಯಕರ ಬಂಧನದ ವಾರ್ತೆ ತಿಳಿಯಿತು. ನಾವು ಹರಿಹರದಲ್ಲಿ ರೈಲು ಇಳಿದು, ಶಿವಮೊಗ್ಗದ ಹತ್ತಿರಕ್ಕೆ ಬಂದು ಅಲ್ಲೇ ಇಳಿದು ಬೇರೆ ದಾರಿಗಳಿಂದ ಮನೆ ಸೇರಿದೆವು. ನಾನೂ ಎಸ್. ಆರ್. ನಾಗಪ್ಪಶೆಟ್ಟರೂ ಸತ್ಯಾಗ್ರಹ ಶಿಬಿರ ಪ್ರಾರಂಭಿಸಿ ಕೆಲವು ಕಾರ್ಯಕರ್ತರು ತಲೆಮರೆಸಿಕೊಂಡು ಕೆಲಸ ಮಾಡಬೇಕೆಂದು ಹೇಳಿ, ಅಂಥವರ ಗುಂಪುಮಾಡಿ ಕೆಲಸ ಆರಂಭಿಸಿದೆವು. ಭದ್ರಾವತಿಯ ಕಬ್ಬಿಣ, ಕಾಗದ. ಸಿಮೆಂಟ್ ಕಾರ್ಖಾನೆಗಳಲ್ಲಿ ಮುಷ್ಕರವಾಯಿತು. ಕಾರ್ಮಿಕರಿಗೆ ಪರಿಹಾರ ಕೊಡುವ ಉದ್ದೇಶದಿಂದ ಡಾ|| ಎನ್. ಜಿ. ರುದ್ರಪ್ಪ, ನಾಗಪ್ಪ ಶೆಟ್ಟಿ ಚಂದಾ ಎತ್ತುವ ಕೆಲಸ ಮಾಡಿದರು. ಮುಂದೆ ಕೆಲವು ಕಾರ್ಮಿಕ ಕುಟುಂಬಗಳನ್ನು ಹಳ್ಳಿಗಳಿಗೆ ಕಳುಹಿಸುವ ವ್ಯವಸ್ಥೆಮಾಡಿದೆವು.

ಈ ನಡುವೆ ಈಸೂರು ದುರಂತವಾಯಿತು. ಪೋಲಿಸರಿಂದ ಅಪಾರ ಅತ್ಯಾಚಾರ, ಮಾನಭಂಗ, ಲೂಟಿ, ಸುಲಿಗೆಗಳಾಗಿ ಅಲ್ಲಿನ ಜನ ಮನೆಮಠ ಬಿಟ್ಟು ಕಾಡು ಸೇರಿದರು. ಕೆಲವರು ಶಿವಮೊಗ್ಗ ಆಸ್ಪತ್ರೆಗೆ ಚಿಕಿತ್ಸೆಗೆ ಬಂದರು. ಎಸ್. ಆರ್. ನಾಗಪ್ಪ ಶೆಟ್ಟರು ಬಹು ಪ್ರಯಾಸದಿಂದ ವಿಷಯ ಸಂಗ್ರಹಿಸಿ ವಿಷಯಗಳನ್ನು ಮಹಾರಾಜರಿಗೆ ತಿಳಿಯಪಡಿಸಿದರು. ದೊಂಬಿ ಮತ್ತು ಪ್ರಾಣಹತ್ಯೆ ಮಾಡಿದ ಆಪಾದನೆಯ ಮೇಲೆ 42 ಜನರ ಮೇಲೆ ಒಂದು ಖಟ್ಲೆ ಹಾಕಿ ಸಾಗರ ನ್ಯಾಯಾಲಯದಲ್ಲಿ ಅವರಿಗೆ ಸೆಶನ್ಸ್‌ಗೆ ಕಮಿಟ್ ಮಾಡಿದರು. ಮುಂದೆ ಜಿಲ್ಲಾ ನ್ಯಾಯಾಲಯದಲ್ಲಿ 13 ಜನರಿಗೆ ಫಾಶಿ ಶಿಕ್ಷೆ ವಿಧಿಸಿ ತೀರ್ಮಾನವಾಯಿತು. ಆಗ ನಾವು ವೇಷ ಮರೆಸಿಕೊಂಡು ಹಾಸನ ಜೈಲಿನಲ್ಲಿ ಭಾಷ್ಯಂ, ಸಿದ್ದಯ್ಯ ಅವರನ್ನು ಕಂಡು ಅವರ ಸಲಹೆಯಂತೆ ನಾನು ಮತ್ತು ಎನ್. ಜಿ. ರುದ್ರಪ್ಪನವರು ಮೈಸೂರಿನ ಪ್ರಮುಖ ಲಾಯರಾದ ಕೃಷ್ಣಮೂರ್ತಿಯವರನ್ನು ಕಂಡೆವು. ಅನಂತರ ಬೆಂಗಳೂರು ಎಲ್. ಎಸ್. ರಾಜು ಅವರನ್ನು ಕಂಡೆವು. ಇಬ್ಬರೂ ನೆರವಾಗಲು ನಿರಾಕರಿಸಿದರು.

ಮದ್ರಾಸಿನಲ್ಲಿರುವ ನೂಜೆಂಟ್ ಗ್ರಾಂಟ್‌ರನ್ನು ಕರೆದು ತರಬೇಕೆಂದು ರುದ್ರಪ್ಪನವರು ಮದ್ರಾಸಿಗೆ ಹೋದರು. ಅವರು ಜಯರಾಮ ಐಯ್ಯರ್‌ರನ್ನು ಗೊತ್ತು ಮಾಡಿಕೊಟ್ಟರು. ಹೈಕೋರ್ಟಿನಲ್ಲಿ ಜಯರಾಮ ಐಯ್ಯರ್ ಈ ಖಟ್ಲೆ ನಡೆಸಿದರು. ಕೊನೆಯಲ್ಲಿ ಐದು ಜನರಿಗೆ ಫಾಶಿ ಆಗಿ ಉಳಿದವರಿಗೆ ಜೈಲುವಾಸವೆಂದು ತೀರ್ಪು ಆಯಿತು. ಅವರನ್ನು ಕ್ಷಮಿಸಬೇಕೆಂದು ಒಂದು ಲಕ್ಷಕ್ಕೂ ಮೇಲ್ಪಟ್ಟು ಮಹಾಜನಗಳಿಂದ ರುಜುಮಾಡಿಸಿ ಮಹಾರಾಜರಿಗೆ ಮನವಿ ಕೊಟ್ಟೆವು. ಆದರೂ ಫಲ ಆಗಲಿಲ್ಲ. ಫಾಶಿಗೇರಿಸುವರೆಂಬ ಖಚಿತ ವಾರ್ತೆ ಬಂದಾಗ, ಸೂರ್ಯನಾರಾಯಣಾಚಾರಿಯವರ ಹೆಂಡತಿಯನ್ನೂ ಶಂಕರಪ್ಪ ನವರ ಹೆಂಡತಿಯನ್ನೂ ಮತ್ತು ಇನ್ನೆರಡು ಕುಟುಂಬದವರನ್ನು ಕರೆದುಕೊಂಡು ನಾನು ಬೆಂಗಳೂರಿಗೆ ಮೊದಲ ದಿನ ಹಾಲಪ್ಪ ಮತ್ತು ಗುರಪ್ಪನವರನ್ನೂ ಮರುದಿನ ಮಲ್ಲಪ್ಪ ಮತ್ತು ಸೂರ್ಯನಾರಾಯಣಚಾರಿಯನ್ನೂ ಮೂರನೆಯ ದಿನ ಶಂಕರಪ್ಪನವರನ್ನೂ ಫಾಶಿಗೆ ಹಾಕಿದರು. ಸಂಬಂಧಪಟ್ಟವರ ಕುಟುಂಬೀಯರನ್ನು ಅವರಿಗೆ ಭೇಟಿ ಮಾಡಿಸುವುದರ ಜೊತೆ ಮುಂದೆ ಅವರ ದೇಹಾಂತವಾದಾಗ ಆಯಾ ಜಾತಿಯವರ ವಿಧಿಗಳಂತೆ ಅಂತ್ಯ ಕ್ರಿಯೆಗಳನ್ನು ಮಾಡಿಸಿ ಊರಿಗೆ ಬಂದೆ.

ಮೈಸೂರು ಕಾಂಗ್ರೆಸ್ಸಿನ ಅಧಿವೇಶನಾದಿಗಳಿಗೆಲ್ಲ ನಾನು ಹೋಗುತ್ತ ಇದ್ದೆ. ಹರಿಹರ ಕಾಂಗ್ರೆಸ್ ಕಾಲಕ್ಕೆ ರಾಜೇಂದ್ರ ಪ್ರಸಾದರು ನಮಗೆ ಪ್ರಶಸ್ತಿಪತ್ರ ಕೊಟ್ಟರು.

1947ರಲ್ಲಿ ಚಳವಳಿ ಆರಂಭ ಆದ ದಿನವೇ ನನ್ನನ್ನು ಬಂಧಿಸಿದರು. ಕಡಿದಾಳ, ಎಚ್. ಎಸ್. ರುದ್ರಪ್ಪ, ಸಿ. ರಾಮಸ್ವಾಮಿ ಶೆಟ್ಟಿ, ಲಾಯರ್ ಆರ್. ಕೆ. ಜಯ ತೀರ್ಥಾಚಾರ್, ಯು. ಪಿ. ಶಂಕರರಾವ್ ಇವರೆಲ್ಲರೂ ನಮ್ಮನ್ನು ಬಂದು ಸೇರಿದರು. 25 ದಿನ ಶಿವಮೊಗ್ಗ ಜೈಲಿನಲ್ಲಿಟ್ಟು ಅನಂತರ ಸೆಂಟ್ರಲ್ ಜೈಲಿಗೆ ಒಯ್ದರು. ಅಲ್ಲಿಂದ ಕೃಷ್ಣರಾಜಪುರಂ (ಇಟಾಲಿಯನ್ ಪ್ರಿಸನರ್ಸ್ ಕ್ಯಾಂಪ್) ಕ್ಯಾಂಪ್ ಜೈಲಿಗೆ ಒಯ್ದರು. ಮುಂದೆ ಜವಾಬ್ದಾರಿ ಸರಕಾರ ಬಂದಾಗ ನಮ್ಮ ಬಿಡುಗಡೆ ಆಯಿತು.

ಮೈ.ಶಿ. 4 | **ಎಚ್. ವೆಂಕಟಪ್ಪ**

ಜನನ : ಸು. 1910

ಉದ್ಯೋಗ : ವ್ಯವಸಾಯ

ವಿಳಾಸ : 60, ಮಾಮುಲ್‌ಪೇಟೆ, ಬೆಂಗಳೂರು-2

---

1929-30ರಲ್ಲಿ ಬೆಂಗಳೂರಿಗೆ ಬಂದ ನಾನು ದಿ|| ಸಂಪಿಗೆ ವೆಂಕಟಪತಯ್ಯನವರ ಪ್ರೇರಣೆ ಯಂತೆ ಮದ್ರಾಸಿಗೆ ಹೋಗಿ ವಿದೇಶೀವಸ್ತ್ರ ಬಹಿಷ್ಕಾರ ಚಳವಳಿಯಲ್ಲಿ ಪಾಲ್ಗೊಂಡು,



ಪೋಲೀಸರಿಂದ ಛಡಿಯೇಟುಗಳಿಗೆಗುರಿಯಾದೆ. 1930–31ರ ಸುಮಾರಿಗೆ ಮದ್ರಾಸಿಗೆ ಬಂದ ಲೋದಿಯನ್ ಕಮಿಟಿ ಬಹಿಷ್ಕಾರ ಚಳವಳಿಯಲ್ಲಿ ಪಾಲುಗೊಂಡು ಆರು ತಿಂಗಳು ಜೈಲುವಾಸ ಅನುಭವಿಸಿದೆ. ಆಗ ಮದ್ರಾಸ್ ಜೈಲಿನಲ್ಲಿದ್ದ ಸುಭಾಸ್ ಚಂದ್ರ ಬೋಸರ ಸಂದರ್ಶನ, ಮಾರ್ಗದರ್ಶನಗಳ ಪುಣ್ಯ ದೊರೆಯಿತು. ಬಿಡುಗಡೆಯ ನಂತರ ಕೆಂಗೇರಿ ಗುರುಕುಲದಲ್ಲಿ 1931–36ರ ವರೆಗೆ ಅಧ್ಯಾಪಕ ಮತ್ತು ಗ್ರಾಮಸೇವಕನಾಗಿ ದುಡಿದೆ. 1936–37ರಲ್ಲಿ ತುಂಗಭದ್ರಾ ಪ್ರೇಮವಿದ್ಯಾಪೀಠದಲ್ಲಿ ಪಂಡಿತ ತಾರಾನಾಥರ ಸಾನ್ನಿಧ್ಯದಲ್ಲಿ ಆಯುರ್ವೇದಾಧ್ಯಯನ ಮಾಡಿದೆ. ಮುಂದೆ 1938ರಲ್ಲಿ ಬೆಂಗಳೂರಲ್ಲಿ ವಿ. ಎಸ್. ನಾರಾಯಣರಾಯರೊಂದಿಗೆ ಕಾಂಗ್ರೆಸ್ ಆಫೀಸು ಕೆಲಸ ಮಾಡುತ್ತಿದ್ದೆ. 1939ರಲ್ಲಿ ಶಿವಮೊಗ್ಗಕ್ಕೆ ಬಂದು ಡಾ|| ಪಾರ್ಥನಾರಾಯಣ ಪಂಡಿತರ ಜೊತೆ ಅವರ ಉದ್ಯೋಗ ದಲ್ಲಿ ನೆರವಾಗುತ್ತಿದ್ದೆನಲ್ಲದೆ ಜಿಲ್ಲಾ ಕಾಂಗ್ರೆಸ್ ಆಫೀಸಿನ ಕೆಲಸವನ್ನೂ ನೋಡುತ್ತಿದ್ದೆ. ಆಗ ಪಂಡಿತರು ಡಿ.ಸಿ.ಸಿ. ಅಧ್ಯಕ್ಷರಾಗಿದ್ದು ಕಡಿದಾಳ ಮಂಜಪ್ಪನವರು ಹಾಗು ದಿ|| ಕೆ. ಆರ್. ಮಾಧವರಾಯರು ಡಿ.ಸಿ. ಕಾರ್ಯದರ್ಶಿಗಳಾಗಿದ್ದರು. ಪಂಡಿತರ ದವಾ ಖಾನೆಯೇ ಕಾಂಗ್ರೆಸ್ ಆಫೀಸಾಗಿತ್ತು. 1939ರಲ್ಲಿ ನನ್ನನ್ನು ಒಂದು ರಹಸ್ಯ ಸಂದೇಶ ದೊಂದಿಗೆ ಸಾಗರದ ಮುಖಂಡರಾದ ದಿ|| ರುದ್ರಪ್ಪಗೌಡರು ಕಳುಹಿಸಿರಲು ಅಲ್ಲಿ ನನ್ನನ್ನು ಬಂಧಿಸಿದರು. 10-15 ದಿನ ಲಾಕಪ್ಪಿನಲ್ಲಿಟ್ಟು ಅಪಾರ ಹಿಂಸೆಕೊಟ್ಟು ಕಡೆಗೆ ಆರು ತಿಂಗಳು ಶಿಕ್ಷೆ ವಿಧಿಸಿದರು. ಜಸ್ಟಿಸ್ ನಾಗೇಶ್ವರ ಅಯ್ಯರ್ ಸಮಿತಿಯ ಮುಂದೆ ಸಾಕ್ಷ್ಯ ನುಡಿಯಲು ನನ್ನನ್ನು ಶಿವಮೊಗ್ಗ ಜಿಲ್ಲೆಯಿಂದ ಪ್ರಥಮನಾಗಿ ಆಯ್ಕೆ ಮಾಡಿದ್ದರು. ಆದರೆ ಈ ಸಮಿತಿ ತನ್ನ ಕೆಲಸವನ್ನು ಪೂರ್ತಿಮಾಡಲಿಲ್ಲವಷ್ಟೇ ಅಲ್ಲ ಜೈಲುವಾಸದಿಂದ ನನಗೆ ಸಾಕ್ಷ್ಯ ಹೇಳಲು ಆಗಲೂ ಇಲ್ಲ. ಶಿವಮೊಗ್ಗ, ಬೆಂಗಳೂರು ಜೈಲುಗಳಲ್ಲಿ ಇದ್ದೆ.

1941ರಲ್ಲಿ ನನ್ನ ಮದುವೆ ಆಗಿ ನಾನು ನನ್ನ ಪತ್ನಿಯ ತವರಾದ ಆಂಧ್ರದ ಹಿಂದೂ ಪುರದಲ್ಲಿ ಉಳಿಯಬೇಕಾದುದರಿಂದ 1942ರ ಚಳವಳಿಯಲ್ಲಿ ಪಾಲುಗೊಳ್ಳಲು ಆಗಲಿಲ್ಲ. ಆದರೆ 1947ರಲ್ಲಿ ಶಿವಮೊಗ್ಗ ಜಿ|| ಭದ್ರಾವತಿ ತಾ|| ಹೊಳೆಹೊನ್ನೂರು ಗ್ರಾಮದಲ್ಲಿ ಬಂದು ಅದೇ ಊರ ಉಪಾಧ್ಯಾಯರುಗಳಾದ ದಾಸಪ್ಪ ಮತ್ತು ಹನುಮಂತಪ್ಪ ಇವರ ನೆರವಿನಿಂದ 20–25 ಯುವಕರು ಸೆರೆಮನೆ ಸೇರುವಂತೆ ಮಾಡುವುದು ಸಾಧ್ಯವಾಯಿತು. ಸರಕಾರಿ ಕಟ್ಟಡಗಳ ಮೇಲೆ ಧ್ವಜ ಹಚ್ಚುವುದು, ಈಚಲುಮರ ಕಡಿಯುವುದು ನಮ್ಮ ಮುಖ್ಯ ಕಾರ್ಯಕ್ರಮ. ಆ ಊರ ದಿ|| ಮಹದೇವಪ್ಪನವರೂ ಆಗ ನನ್ನ ಜೊತೆ ಬಂಧಿತರಾಗಿ ಸೆರೆಮನೆಗೆ ಸೇರಿದ್ದರು.

ವ್ಯ.ಶಿ. 5

# ಕೆ. ಶ್ರೀನಿವಾಸ ಮೂರ್ತಿ

ಜನನ : 1920 ಉದ್ಯೋಗ : ? ವಿಳಾಸ : ನಂ. 10, ಎಚ್. ಕೃಷ್ಣಮೂರ್ತಿ, ಕಂಪೌಂಡ್, ಓ.ಟಿ. ರಸ್ತೆ, ಶಿವಮೊಗ್ಗ.

---



1934ರಲ್ಲಿ ಗಾಂಧೀಜಿ ಶಿವಮೊಗ್ಗಕ್ಕೆ ಬಂದಾಗಿನಿಂದಲೇ ನಾನು ಕಾಂಗ್ರೆಸ್‌ನೆಡೆ ಆಕರ್ಷಿತನಾದೆ. ಶಾಲೆ ತ್ಯಜಿಸಿ ಚಳವಳಿ ಸೇರಿದೆ. ನಾನೂ ಗುರುನಾಥ ಆರಾಧ್ಯರೂ 1936-37ರಲ್ಲಿ ಖಾದಿ ಮಾರಾಟದ ಬಗ್ಗೆ ವಿಶೇಷ ಪ್ರಚಾರ ಮಾಡತೊಡಗಿದೆವು. 1938ರ ಶಿವಪುರ ಕಾಂಗ್ರೆಸ್‌ನಲ್ಲಿ ಧ್ವಜಸತ್ಯಾಗ್ರಹ ಆಚರಿಸಲು ನಿರ್ಧರಿಸಿದ್ದಂತೆ ನಮ್ಮ ಊರ ರಾಷ್ಟ್ರೀಯ ಯುವಜನ ಸಂಘದಿಂದ ನನ್ನನ್ನೂ ಜೈರಾಂಸಿಂಗ್ ಎಂಬವರನ್ನೂ ಆಯ್ಕೆಮಾಡಲು, ರಾಮಣ್ಣ ಶ್ರೇಷ್ಠಿ ಪಾರ್ಕ್‌ನಲ್ಲಿ ಧ್ವಜ ಹಾರಿಸಿ ನಾವು ಬಂಧಿತರಾಗಿ ನಾಲ್ಕು ತಿಂಗಳು ಶಿಕ್ಷೆ ಅನುಭವಿಸಿದೆವು. ಧ್ವಜ ಹಾರಿಸಿದವರಲ್ಲಿ ನಾವೇ ಜಿಲ್ಲೆಗೆ ಪ್ರಥಮ. 1939ರ ಅರಣ್ಯಸತ್ಯಾಗ್ರಹ ಶಿಬಿರದಲ್ಲಿ ಕೆಲಸ ಮಾಡಿದೆ. ಸತ್ಯಾಗ್ರಹಿಗಳ ತರಬೇತಿ, ಅವರನ್ನು ಹುಡುಕಿ ತಂದು ಸತ್ಯಾಗ್ರಹಕ್ಕೆ ತಯಾರು ಮಾಡುವುದು, ಹೀಗೆ ಮಾಡಿದೆ. ಭೂಪಾಳಂ ಕೃಷ್ಣಮೂರ್ತಿ, ಜೈರಪ್ಪ ಇವರು ಸತ್ಯಾಗ್ರಹ ಮಾಡಿದ್ದು ನೆನಪಿದೆ.

1942ರಲ್ಲಿ ಟೆಲಿಫೋನ್ ವೈರ್ ಕತ್ತರಿಸುವುದು ಮುಂತಾದ ವಿಧ್ವಂಸಕ ಕೃತ್ಯ ಮಾಡುತ್ತಿದ್ದೆ. ನಾನು ಮತ್ತು ಕೆ. ಜಿ. ವೇದವ್ಯಾಸ ಸರಕಾರಿ ಹೈಸ್ಕೂಲಿನ ಸ್ಪೋರ್ಟ್ಸ್ ರೂಮಿಗೆ ಬೆಂಕಿ ಹಾಕಿದ್ದೆವು. ಭದ್ರಾವತಿಯಲ್ಲಿ ಸುಂದರ ಮತ್ತು ಇನ್ನು ಕೆಲವರು ತಯಾರಿಸುತ್ತಿದ್ದ ಬುಲೆಟಿನ್ ಹಂಚುತ್ತಿದ್ದೆವು. ಜನವರಿ 14ರ (1943) ಬೆಳಗ್ಗೆ 5 ಗಂಟೆಗೆ ಬಂದ ಪೋಲಿಸರು ನನ್ನ, ಕೆ. ಎನ್. ಮೂರ್ತಿ ಮತ್ತು ಸುಬ್ರಾವ್ ಹೀಗೆ ಮೂವರ ಮನೆ ಶೋಧಿಸಿದರು. ಆಗ ನನ್ನ ಬಳಿ ಕಟ್ಟಿಂಗ್ ಪ್ಲಯರ್, ಒಂದು ರಿವಾಲ್ವರ್, ಕೆಲವು ಸ್ಫೋಟಕಗಳು ಇದ್ದರೂ ಅವು ಪೋಲಿಸರಿಗೆ ಸಿಕ್ಕಲಿಲ್ಲ. ಒಂದು ಬುಲೆಟಿನ್ ಸಿಕ್ಕಿತು. ಮೂರೂ ಮನೆಗಳು ಒಮ್ಮೆಗೇ ರಷಿಡ್ತಿ ಆಯಿತು. ಆ ದಿನ ರಾತ್ರಿ ನನ್ನನ್ನು ಬಂಧಿಸಿ, ಬುಲೆಟಿನ್ ಸಿಕ್ಕಿದ ಬಗ್ಗೆ ಮೂರು ತಿಂಗಳ ಶಿಕ್ಷೆವಿಧಿಸಿದರು.

1947ರಲ್ಲೂ ಸುತ್ತಲ ಹಳ್ಳಿಗಳಲ್ಲಿ ಹೋಗಿ ಪ್ರಚಾರ ವಗೈರೆ ಕೈಕೊಂಡು ಚಳವಳಿಯಲ್ಲಿ ಪಾಲುಗೊಂಡೆನಾದರೂ ಬಂಧಿತನಾಗಲಿಲ್ಲ. 1938 ಮತ್ತು 1943ರಲ್ಲಿ ಒಟ್ಟು ಏಳು ತಿಂಗಳು ಶಿಕ್ಷೆ ಅನುಭವಿಸಿದ್ದೇನೆ.

ವ್ಯ.ಶಿ. 6

# ವೈ. ಕೆ. ತಿಮ್ಮರಸಯ್ಯ

ಜನನ : 1924 ಉದ್ಯೋಗ : ಸರಕಾರಿ ನೌಕರಿ ವಿಳಾಸ : 78(3), ಆನಂದಪುರಂ ರಸ್ತೆ, ತೀರ್ಥಹಳ್ಳಿ



1942ರಲ್ಲಿ ನಾನು ಶಿವಮೊಗ್ಗ ಸರಕಾರಿ ಪ್ರೌಢಶಾಲೆಯಲ್ಲಿ ಮೆಟ್ರಿಕ್ ವರ್ಗದಲ್ಲಿ ವಿದ್ಯಾರ್ಥಿಯಾಗಿದ್ದೆ. ನನ್ನ ಸಹ ಪಾಠಿಗಳಾಗಿದ್ದ ದಿ|| ಎಂ. ಕೆ. ಚಂದ್ರಶೇಖರ್, ಸಿ. ಎಂ. ಪಾಪಣ್ಣ, ಸಿ. ಪಿ. ಮುರಿಗಪ್ಪ, ಎಂ. ವಿ. ಈಶ್ವರಪ್ಪ, ಎಸ್. ಗೋಪಾಲ ಗೌಡ, ಸಿದ್ದೋಜಿರಾವ್, ಎಚ್. ರಾಮು, ಶಂಕ್ರಪ್ಪ ಗೌಡ ಇವರೆಲ್ಲ ಖಾದೀಧಾರಿಗಳು. ನಾನೂ ಅವರಿಂದ ಪ್ರಭಾವಿತನಾಗಿ ಖಾದೀ ಧರಿಸಲು ಮೊದಲಿಟ್ಟೆ. ಊರಲ್ಲಿ ನಡೆಯುವ ಬಹಿರಂಗ ಸಭೆಗಳಿಗೆ ತಪ್ಪದೆ ಹೋಗುತ್ತಿದ್ದು ಆಗಿನ ಕಾಲದ ಕೆಲವ್ಯಕ್ತಿಗಳ ಮಾತುಗಳನ್ನು ನೆನಸಿದರೆ ಇಂದಿಗೂ ಮೈ ಪುಳಕಿತವಾಗುತ್ತದೆ. ಅವರಲ್ಲಿ ಮುಖ್ಯರಾದವರೆಂದರೆ— ದಿ|| ಎಚ್. ಸಿದ್ದಯ್ಯ, ಜ್ಞಾನೇಂದ್ರ ಪ್ರಭು, ರಾಮಕೃಷ್ಣರಾವ್, ದಿ|| ಎಸ್. ಗೋಪಾಲ ಗೌಡ, ಎಂ. ಪಿ. ಈಶ್ವರಪ್ಪ, ಸದಾಶಿವರಾವ್, ಹೀಗೆ ಹಲವರು. ಇವರಲ್ಲಿ ನನ್ನ ಮಾರ್ಗದರ್ಶಕರೂ ಗುರುಗಳೂ ಆದವರು ದಿ|| ಸಿದ್ದಯ್ಯನವರು. ಅವರು ರಾಮಣ್ಣ ಶ್ರೇಷ್ಠಿ ಪಾರ್ಕಿನಲ್ಲಿ ಭಾಷಣಕ್ಕೆ ನಿಂತರೆ ಸಾಕು ; ಎಲ್ಲರೂ ತದೇಕಚಿತ್ತದಿಂದ ಮೂಕರಾಗುತ್ತಿದ್ದರು. ಭಾಷಣದಲ್ಲಿ ಒಮ್ಮೊಮ್ಮೆ ಗಳಗಳನೆ ಅತ್ತುಬಿಡುವಾಗ ಸಭಿಕರೂ ಅವರೊಂದಿಗೆ ಅತ್ತ ಸಂದರ್ಭವಿತ್ತು. ಪ್ರತಿನಿತ್ಯ ಅವರು ಪ್ರಾತಃಕಾಲ 9ರಿಂದ ನಮ್ಮ ಮನೆ ಎದುರಿಗಿದ್ದ ಆರ್ಯವೈಶ್ಯ ಶ್ರೀರಾಮ ಲೈಬ್ರರಿಯಲ್ಲಿ ಪತ್ರಿಕೆ ಹಿಡಿದು ಎಲ್ಲವನ್ನೂ ಓದುವ ಅಭ್ಯಾಸವಿತ್ತು. ನಾನು ಸಮಯ ಸಿಕ್ಕಾಗಲೆಲ್ಲ ಅಲ್ಲಿ ಅವರೊಡನೆ ರಾಜಕೀಯ ವಿಚಾರ ಚರ್ಚಿಸುತ್ತಿದ್ದೆ. ನನಗೆ ಚಳವಳಿಯಲ್ಲಿ ಧುಮುಕಲು ಅವರ ಭಾಷಣವೇ ಪ್ರಚೋದನೆ, ಅವರ ಸಿದ್ಧಾಂತವೇ ಒಪ್ಪು.

ಶಾಲೆಯಲ್ಲಿ ವಿದ್ಯಾರ್ಥಿ ಸಂಘ, ಕ್ಯಾಂಟೀನ್, ಶಾಲಾಪತ್ರಿಕೆ, ಕರ್ನಾಟಕ ಸಂಘ, ಹೀಗೆ ಎಲ್ಲದರಲ್ಲೂ ನನ್ನದೇ ಮೇಲುಗೈ. ಶಾಲಾ ಪಿಕೆಟಿಂಗ್ ಆರಂಭ ಆದಾಗ ನಮ್ಮ ಮಿತ್ರಮಂಡಳಿಯ ಗುಪ್ತ ಕಾರ್ಯ ಪ್ರಾರಂಭವಾಯಿತು. ರಾತ್ರಿ ಶಾಲೆಯ ಹತ್ತಿರ ಸುಸುಳಿ ಬಂದು ಸೀಮೆ ಎಣ್ಣೆ ಸುರಿದು ಬೆಂಕಿ ಇಡಲಾಯಿತು. ಮರುದಿನ ಶನಿವಾರ

ಬೆಳಗಿನ ತರಗತಿ. ಎಸ್. ಎಸ್. ವೀರಪ್ಪ ವಿರಚಿತ ಪ್ರಾರ್ಥನೆ 'ಜಯ ಹೇ ಕನ್ನಡ ವನಗಳ ನಾಡೇ....' ಹೇಳಿಕೊಟ್ಟಾದನೇಲೆ ಇದ್ದಕ್ಕಿದ್ದಂತೆ ಒಬ್ಬ 'ಬೋಲೋ ಭಾರತ್ ಮಾತಾಕೀ' ಎಂದಾಗ ಜಯಕಾರ ಆಕಾಶ ಮುಟ್ಟಿತು. ಹೆಡ್‌ಮಾಸ್ಟರು ಹೊರಬಂದು, ಇನ್ನುಮುಂದೆ ಹೀಗೆ ಕೂಗಿದರೆ 'ಡಿಸ್‌ಮಿಸ್' ಮಾಡುವುದಾಗಿ ಬೆದರಿಕೆ ಹಾಕಿದರು. ಆಗ, ನನಗೆ ಅರಿವಿಲ್ಲದಂತೆ ನಾನೇ 'ಬೋಲೋ ಭಾರತ್‌ಮಾತಾಕೀ' ಎಂದಾಗ ಮೊದಲಿಗೂ ಜೋರಾಗಿ ಜಯಕಾರ ಉಬ್ಬಿಬಂತು. ಹೆಡ್‌ಮಾಸ್ಟರು ತಲೆತಗ್ಗಿಸಿ ತಮ್ಮ ಕೊಠಡಿಗೆ ನಡೆದರು. ಮಾರನೆಯ ದಿನ ಪ್ರಭಾತ್‌ಫೇರಿಯಲ್ಲಿ ಜಯಕಾರ ಹಾಕಲು ನನ್ನನ್ನೇ ನೇಮಿಸಿಕೊಂಡರು. ಈ ಪ್ರಭಾತ್‌ಫೇರಿಗೆ ಮುಂದಾಳು ದಿ|| ಎಂ. ಕೆ. ಚಂದ್ರಶೇಖರ.

ಆ ಕಾಲದಲ್ಲಿ ಈಚಲುಮರ ಕಡಿಯುವ ಕಾರ್ಯಕ್ರಮ ಇದ್ದಾಗ ಸಿದ್ದಯ್ಯನವರು ನನ್ನನ್ನು ಕರೆದು, "ಏನಪ್ಪಾ, ನಾಳಿನಿಂದ ಈಚಲುಮರ ಸತ್ಯಾಗ್ರಹ, ನೀವೆಲ್ಲಾ ಸರದಿ ಪ್ರಕಾರ ಬರಬೇಕಾಗುತ್ತದೆ" ಎನ್ನಲು, ಮಾರನೆಯ ದಿನವೇ ಒಂದು ಚಿಕ್ಕ ಕೊಡಲಿಯನ್ನು ಪುಸ್ತಕದ ಚೀಲದಲ್ಲಿ ಅಡಗಿಸಿಟ್ಟು ಶನಿವಾರ ಬೆಳಗಿನ ಶಾಲೆಗೆ ಹೋದೆ. ಮಿತ್ರರಿಗೆಲ್ಲ ಬರಲು ತಿಳಿಸಿದೆ. ತರಗತಿಯಲ್ಲಿ ಹಾಜರಿ ಹಾಕಿದನಂತರ ಘೋಷಣೆ ಕೂಗಿ ಮಿತ್ರರ ಜೊತೆ ಹೊರಬಂದೆ. ಕೊಡಲಿಗೆ ಒಂದು ಲಾರಿಯಿಂದ ತಾತ್ಕಾಲಿಕವಾಗಿ ಕಾವು ಹಾಕಿ, ಶಿವಮೊಗ್ಗ-ನವಿಲೆ ಮಾರ್ಗದಲ್ಲಿ ಸಾಗಿ ಸಾಲುಮರದಲ್ಲಿನ ಒಂದು ಈಚಲಮರದ ಸುತ್ತ ಸೇರಿದೆವು. ನಾನೇ ಮರಕ್ಕೆ ಮೊದಲು ಏಟು ಹಾಕಬೇಕೆಂದಾಗ ನಮ್ಮ ಗುಂಪಿನಲ್ಲಿದ್ದ ಗುರಪ್ಪ ಎಂಬವರು ತಾವೇ ಮೊದಲು ಏಟು ಹಾಕಿಯೇ ಬಿಟ್ಟರು. ಅವರನ್ನು ದಸ್ತಗಿರಿ ಮಾಡಿ ಜೀಪಿನಲ್ಲಿ ತೂರಿಸಿದ ಪೋಲಿಸರು ನಮ್ಮನ್ನು ಕೋಲು ಬೀಸಿ ಅಟ್ಟಿಸಿಕೊಂಡು ಬಂದರು. ಆ ದಿನ ಸಂಜೆ ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ಸಭೆ ಆಗಿ ಮರುದಿನದಿಂದ ಟಿಕೆಟ್ ರಹಿತ ರೈಲುಪ್ರಯಾಣದ ಚಳವಳಿ ನಡೆಸುವ ವಿಚಾರ ಪ್ರಕಟಿಸಿದರು.

ಮರುದಿನ ರಾತ್ರಿ ರೈಲುಪ್ರಯಾಣಕ್ಕೆ ಸಿದ್ಧತೆ. ಎಸ್. ಆರ್. ನಾಗಪ್ಪ ಶ್ರೇಷ್ಠಿ, ಶಂಕರಪ್ಪ, ದಿನಕರ್ ಮುಂತಾದವರ ಸಲಹೆ ಪಡೆದೆವು. ನನ್ನ ಗುಂಪಿನಲ್ಲಿ ನನ್ನ ಪರಮ ಮಿತ್ರ ಎಚ್. ರಾಮು, ಸಿದ್ದೋಜಿರಾವ್, ಶಂಕ್ರಪ್ಪಗೌಡ, ರಾಜಶೇಖರಪ್ಪ, ಸತ್ಯನಾರಾಯಣ ಶೆಟ್ಟಿ, ಜಯದೇವಪ್ಪ ಇದ್ದರು. ನಾವು ಒಬ್ಬೊಬ್ಬರಾಗಿಯೇ ಹೊಸ ನಿಲ್ದಾಣಕ್ಕೆ ಹೋಗಿ ಮೊದಲ ದರ್ಜೆ ಡಬ್ಬಿ ಹಿಡಿದು ಕುಳಿತೆವು. ನಿಲ್ದಾಣದ ತುಂಬ ಪೋಲಿಸರು, ಮಿಲಿಟರಿಗಳು. ಮೊದಲನೆಯ ದರ್ಜೆ ಪ್ರಯಾಣ ನಾವು ಕಂಡೇ ಇರಲಿಲ್ಲ. ಅಲ್ಲಿನ ಮೆತ್ತೆಯ ಮೇಲೆ ಉರುಳಾಡಿದೆವು ; ಬೀಸಣಿಗೆಗಳನ್ನು ತಿರುವಿದೆವು ; ಎಲ್ಲ ದೀಪಗಳನ್ನು ಉರಿಸಿದೆವು. ಭದ್ರಾವತಿಗೂ ಮುಂದೆ ಹೋದಾಗ ಜಯಕಾರ ಆರಂಭಿಸಿದೆವು. ಕೆಲವು ನಿಲ್ದಾಣಗಳಲ್ಲಿ ನಮಗೆ ಭೋಜನಸತ್ಕಾರ, ಹೂಮಾಲೆ ಸಿಕ್ಕಿತು.

ಬೆಳಕು ಹರಿಯುವ ಮೊದಲು ರೈಲು ಯಾವುದೋ ನಿಲ್ದಾಣದಲ್ಲಿ ನಿಂತಿತು. ಎಲ್ಲ ಕಡೆಗೂ ಮೌನ, ಕತ್ತಲೆ. ಇದ್ದಕ್ಕಿದ್ದಂತೆ ನಾಲ್ಕಾರು ಜನ ಕೂಗಿಕೊಂಡು

ನಮ್ಮ ಡಬ್ಬಿಯಲ್ಲಿ ತೂರಿಬಂದರು. "ಏನ್ರೀ ಸಮಾಚಾರ?" ಎಂದಾಗ, "ಮಿಲ್ಟ್ರಿ ಬಂತು, ಲಾಠೀಚಾರ್ಜ್ ಮಾಡ್ತಿದ್ದಾರೆ, ಓಡಿ" ಎಂದರು. "ಬರಲಿ, ಮಿಲ್ಟ್ರಿ ಬಿಟ್ಟು ಅವರಪ್ಪ!" ಎಂದು ಜಯಕಾರ ಮಾಡುತ್ತಿದ್ದಾಗ ಮೂರುನಾಲ್ಕು ಮಿಲ್ಟ್ರಿಗಳು ಲಾಠೀಸಮೇತ ನಮ್ಮ ಎದುರು ನಿಂತಾಗ, ಮುಂದೇನು, ಎಂಬುದೇ ತೋರಲಿಲ್ಲ. ನಮ್ಮ ಸೀಟು ಬಿಟ್ಟು ಏಳು ವುದರಲ್ಲಿ ನಮ್ಮ ಬೆನ್ನಿಗೆ ಒಂದೆರಡು ಪೆಟ್ಟುಗಳು ಬಿದ್ದಿದ್ದವು. "ಚಲೇ ಜಾವ್, ಬದ್ಮಾಷ್!" ಎನ್ನುತ್ತಲೇ ದೊಣ್ಣೆಯಿಂದ ಸಲೀಸಾಗಿ ಬೀಸಲು ಆರಂಭಿಸಿದರು. ನಾವು ಚಲ್ಲಾಪಿಲ್ಲಿ ಯಾಗಿ ಓಡಿದೆವು. ನಾನು, ರಾಮು ಕೈಕೈ ಹಿಡಿದಿದ್ದೆವು. ಒಂದೆರಡು ಹುಸಿಗುಂಡು ಹಾರಿಸಿದರು. ನಾನೂ ರಾಮು ಒಂದು ಕೊಚ್ಚೆಗುಂಡಿಯಲ್ಲಿ ಇಳಿದಿದ್ದೆವು. ಬೆಳಕು ಹರಿಯಿತು. ನಾವು ರೈಲುನಿಲ್ದಾಣದಿಂದ ದೂರ ಬಂದಿದ್ದೆವು. "ಕಾಮ್ರೇಡ್ಸ್ ಕಮಾನ್, ವಿ ಆರ್ ಹಿಯರ್" ಎಂದು ಸ್ನೇಹಿತರು ಕರೆದಾಗ ಗುಂಡಿಯಿಂದ ಮೇಲೆದ್ದು ಬಂದು ರೈಲುನಿಲ್ದಾಣದಲ್ಲಿ ಮುಖ, ಕೈಕಾಲು ತೊಳೆದು ಗಲೀಜಾದ ಬಟ್ಟೆಗಳನ್ನು ನೆನೆಸಿ ತೊಳೆದೆವು. ಒಂಬತ್ತು ಗಂಟೆ ಆದಾಗ, ನಮ್ಮ ತಂಡದ ಸಿ. ಸತ್ಯನಾರಾಯಣ ಶೆಟ್ಟಿ ಸ್ಟೇಶನ್ ಮಾಸ್ಟರರ ಕಚೇರಿ ನುಗ್ಗಿದರು. ಇನ್ನಿಬ್ಬರು ಕಂಬ ಹತ್ತಿ ಟೆಲಿಗ್ರಾಫ್ ತಂತಿ ಕಿತ್ತರು. ಮತ್ತೊಬ್ಬರು ರೈಲುಹಳಿ ಕೀಳಲು ಪ್ರಾರಂಭಿಸಿದರು. ಸತ್ಯನಾರಾಯಣ ಶೆಟ್ಟಿ ರೈಲು ಟಿಕೆಟ್ಟುಗಳನ್ನು ಕೂಡಿಸಿ ಕಡ್ಡಿ ಗೀರಿದರು. ಸ್ಟೇಷನ್ ಮಾಸ್ಟರರು ಬಂದಾಗ ಅವರಿಗೇ ಖಾದಿ ಟೋಪಿ ಹಾಕಿದೆವು. ಬೆಂಕಿ ಮೇಲೇಳುತ್ತಿದ್ದಂತೆ ನಾವು ಅಲ್ಲಿಂದ ಹೊರಬಂದು, ಕಾಲುನಡೆಯಲ್ಲಿ ಸಕ್ಕರೆಪಟ್ಟಣದ ಮೂಲಕ ಚಿಕ್ಕಮಗಳೂರು ಸೇರಿದೆವು. ಅಲ್ಲಿ ಯಾರೋ ಕೆಲವರು ನಮಗೆ ಉಪಾಹಾರ ಕೊಟ್ಟು ಒಂದು ಕತ್ತಲೆಕೋಣೆಯಲ್ಲಿಟ್ಟು ಬೀಗ ಹಾಕಿಕೊಂಡು, ನಮ್ಮ ಸುಳಿವು ಯಾರಿಗೂ ಪತ್ತೆಯಾಗದಿರಲೆಂದು ನೋಡಿ ಕೊಂಡರು. ಚಿಕ್ಕಮಗಳೂರಿನಿಂದ ಹೊರಟು, ಹಳ್ಳಿಗಳಲ್ಲಿ ಪ್ರಚಾರಮಾಡುತ್ತ ಮುಂದೆ ತರೀಕೆರೆಗೆ ಬಂದು ಅಲ್ಲಿ ಟಿ. ಸಿ. ಬಸಪ್ಪನವರಲ್ಲಿ ಊಟೋಪಚಾರ ಮುಗಿಸಿ ಮುಂದೆ ಸಾಗಿದೆವು. ಬಾಣಾವರ ಸ್ಟೇಷನ್‌ಗೆ ಬೆಂಕಿ, ಅಲ್ಲಿ ಲಾಠೀಚಾರ್ಜ್ ಆದ ವಿಚಾರ ಆ ದಿನ ಪತ್ರಿಕೆಗಳಲ್ಲಿ ಬಂದಿತ್ತು. ನಾವು ಪುನಃ ಊರು ತಲುಪಿದೆವು.

1947ರಲ್ಲಿ ನಾನು ಆಗತಾನೇ ಸರಕಾರಿ ನೌಕರಿಗೆ ಸೇರಿದ್ದೆ. ಚಳವಳಿಗೆ ನನ್ನ ಗುಪ್ತ ಸಹಕಾರವಿತ್ತು. ಒಮ್ಮೆ ಇಬ್ಬರು ಅಪರಿಚಿತರು ನಮ್ಮ ಮನೆಗೆ ಬಂದರು. ನನ್ನ ಹೆಸರು ಹಿಡಿದು ಕೂಗಿದಾಗಲೇ ಅವರು ಎಸ್. ಆರ್. ನಾಗಪ್ಪ ಶ್ರೇಷ್ಠಿ ಮತ್ತು ಎಸ್. ಡಿ. ದಿನಕರ್ ಎಂದು ತಿಳಿಯಿತು. ಇಬ್ಬರೂ ಬೀಡಿ ಏಜಂಟರೆಂದುಕೊಂಡು ಬಂದಿದ್ದರು. ಅವರನ್ನು ಹುಡುಕಿ ಪೋಲಿಸರು ನನ್ನ ರೂಮಿಗೇ ಬರಬೇಕೆ? ಅವರ ಹೆಸರು ಹೇಳಿ, ಅವರು ಬಂದಿರುವರೇ, ಎಂದರು. ಇಲ್ಲ, ಎಂದಾಗ ನನ್ನನ್ನೇ ದಸ್ತಗಿರಿಮಾಡುವುದಾಗಿ ಬೆದರಿಸಿದರು. "ಇವರಾರು?" ಎಂದು ಆಗಂತುಕರನ್ನು ಕಂಡು ಕೇಳಿದರು. "ಖಾದರ್ ಬೀಡಿ ಏಜಂಟರು" ಎಂದೆ. ಒಬ್ಬ ಪಿ.ಸಿ. ಒಳಬಂದು ನನ್ನ ಕಪಾಟುಗಳನ್ನೆಲ್ಲ

ಹುಡುಕಾಡಿದ. ಅದರಲ್ಲಿ "ಬಹಿರಂಗ ಸಭೆ.... ಈ ದಿನ.... ಗಂಟೆಗೆ.... ವಿಷಯ.... ಭಾಷಣಕಾರರು...." ಹೀಗಿದ್ದ ಖಾಲಿ ಪ್ರಕಟಣೆಗಳನ್ನು ಕೈಗೆತ್ತಿಕೊಂಡು, "ನೀವು ಚಳವಳಿಗೆ ಸೇರಿದ್ದೀರಾ ಅಂತ ಕಾಣಿಸ್ತದೆ—" ಎಂದು ಬೆದರಿಸಿದ. "ನಾನು ಮಿಡ್ಲ್ ಸ್ಕೂಲ್ ಉಪಾಧ್ಯಾಯ, ಶಾಲಾ ಸಂಘದ ಕಾರ್ಯದರ್ಶಿ. ಶಾಲೆಯಲ್ಲಿ ಸಭೆ ನಡೆಸುವಾಗ ಬೇಕೆಂದು ಖಾಲಿ ಫಾರಂ ಇಟ್ಟಿದ್ದೇವೆ" ಎಂದೆ. ಅವರು ಎಚ್ಚರಿಕೆ ಕೊಟ್ಟು ಹೋದರು.

ಮೈ. ಶಿ. 7

## ಕೆ. ಎಚ್. ಶ್ರೀನಿವಾಸ ಶೆಟ್ಟಿ

ಜನನ : 1914 ಉದ್ಯೋಗ : ನಿವೃತ್ತ ಜೀವನ ವಿಳಾಸ : ಕಡೂರು, ಚಿಕ್ಕಮಗಳೂರು ಜಿಲ್ಲೆ



ಗಾಂಧೀಜಿಯವರ ವಿಚಾರಗಳಿಂದಲೂ ಜಲಿಯನ್ ವಾಲಾ ಹತ್ಯಾಕಾಂಡದಿಂದಲೂ ಚಳವಳಿಯ ಕಡೆ ಆಕರ್ಷಿತನಾದ ನಾನು, ಶಿವಮೊಗ್ಗ ರಾಮಣ್ಣ ಶೆಟ್ಟಿ ಪಾರ್ಕಿನಲ್ಲಿ ಧ್ವಜಸತ್ಯಾಗ್ರಹ, ಮುಂದೆ ಸೇಂದಿ ಪಿಕೆಟಿಂಗ್, ವನಸತ್ಯಗ್ರಹ ಮಾಡಿದೆ. ಪೋಲಿಸರು ಬಂಧಿಸಿ, ಮನೆಗೆ ಕರೆತಂದು ಬಿಟ್ಟರು. ಜೈಲಿಗೆ ಹಾಕಲಿಲ್ಲ. ಶಿವಮೊಗ್ಗದಲ್ಲಿ ಆಗ ಭೂಪಾಳಂ ಪುಟ್ಟನಂಜಪ್ಪ, ಬಿ. ಆರ್. ಕೃಷ್ಣಮೂರ್ತಿ, ಎಸ್. ಆರ್. ನಾಗಪ್ಪಶೆಟ್ಟಿ, ಬೈರಪ್ಪ ಸಿದ್ದಪ್ಪ, ಎಚ್. ರಾಮಕೃಷ್ಣರಾಯರು, ಕೂದುವಳ್ಳಿ ನಾರಾಯಣರಾಯರು, ರಾಮರಾವ್ ಪವಾರ್, ಕಾಳೋಜಿ ರಾವ್, ಖಾದಿ ಭಂಡರಾದ ಶಂಕ್ರಪ್ಪ, ಈಗ ದಾವಣಗೆರೆಯಲ್ಲಿರುವ ಖಾದಿ ಸಿದ್ದಪ್ಪ, ಎಚ್. ಸಿದ್ದಯ್ಯ, ದಿನಕರ್, ಗಿರಿಮಾಜಿರಾಯರು, ಕೆ. ಎನ್. ಮೂರ್ತಿ, ಕೆ. ಆರ್. ಮಾಧವರಾವ್, ಪಾರ್ಥನಾರಾಯಣ ಪಂಡಿತ್, ಕಡಿದಾಳ ಮಂಜಪ್ಪ, ಎಸ್. ವಿ. ಕೃಷ್ಣಮೂರ್ತಿರಾವ್, ಅನಂತ ಶರ್ಮ, ರಾಮಕೃಷ್ಣ ಚಟ್ಟಿ, ಟಿ. ಜಿ. ನಾರಾಯಣ ಅಯ್ಯಂಗಾರ್, ಚನ್ನಗಿರಿ ಸೋಮಣ್ಣ ಶೆಟ್ಟರು, ಭೂಪಾಳಂ ಚಂದ್ರಶೇಖರ ಶೆಟ್ರು, ಇವರೆಲ್ಲರ ಜೊತೆ ಇದ್ದು ಹರಿಜನ ಸೇವಕ ಸಂಘ, ರಾಷ್ಟ್ರೀಯ ಯುವಜನ ಸಂಘ, ಮೈಸೂರು ಸೇವಾದಳ, ಹರಿಜನಾಶ್ರಮ, ಕಾಂಗ್ರೆಸ್ ಕಮಿಟಿಗಳಲ್ಲಿ ದುಡಿಯುತ್ತಿದ್ದೆ.

ಮುಂದೆ ದಾವಣಗೆರೆಯಲ್ಲಿ ಕಾಸಲ ಶ್ರೀನಿವಾಸ ಶೆಟ್ಟಿ, ಶೇಷಪ್ಪ ಇವರ ಜೊತೆ

ಪ್ರಾಣಿದಯಾ ಸಂಘಗಳ ಪ್ರಚಾರ ಕೂಡ ಕೆಲಕಾಲ ಮಾಡಿದೆ. ಅಲ್ಲದೆ ದಾವಣಗೆರೆಯಲ್ಲಿ ಪರದೇಶೀ ವಸ್ತ್ರ ಬಹಿಷ್ಕಾರ ಕಾರ್ಯಕ್ರಮದಲ್ಲಿ ಪಾಲುಗೊಂಡಿದ್ದೆ. ಅಲ್ಲದೆ ಸಮಾಜ ಸುಧಾರಣೆಗಾಗಿ ಬಾಲ್ಯವಿವಾಹ, ವೃದ್ಧವಿವಾಹ, ವಿಷಮವಿವಾಹ ಮಾಡಬಾರದೆಂದೂ ಬಾಲವಿಧವೆಯರಿಗೆ ಪುನರ್ವಿವಾಹ ಮಾಡಬೇಕೆಂದೂ ದಾವಣಗೆರೆ ವೈಶ್ಯ ಸಮಾಜದಲ್ಲಿ ಭಾಷಣಮಾಡಿದಾಗ, "ನೀವು ಅಂಥಾ ವಿವಾಹ ಮೊದಲು ಮಾಡಿಕೊಳ್ಳಿ" ಎಂದು ನನಗೆಂದರು. "ಅಂಥ ಕನ್ಯೆಯರಿದ್ದರೆ, ನಾನು ತಯಾರು" ಎಂದೆ. ಇದಾಗಿ ಎಂಟು ದಿನದಲ್ಲಿ ಕಡೂರು ಲಿಂಗಪ್ಪಶೆಟ್ಟರ ಬಾಲವಿಧವೆ ಮಗಳ ಜೊತೆ ನನ್ನ ಮದುವೆ ದಾವಣಗೆರೆಯಲ್ಲಿ ಆಯಿತು. 3,000 ಜನ ಹಾಜರಿದ್ದು ಹರಸಿದರು. ಚನ್ನಗಿರಿ ರಂಗಪ್ಪ, ಕಾಸಲ ಶ್ರೀನಿವಾಸ ಶೆಟ್ಟಿ ಇವರೆಲ್ಲ ಭಾಷಣ ಮಾಡಿದರು. ಮಂಗಳೂರಿನ ಲಕ್ಷ್ಮಣದೇವ ವಿದ್ಯಾರ್ಥಿ, ಶಿರಸಿಯ ಗಣಪತಿ ನಾರಾಯಣ ಭಟ್ಟ, ಕುರ್ತಕೋಟಿ ಶಂಕರಾಚಾರ್ಯ ಇವರೆಲ್ಲರ ಆಶೀರ್ವಾದ ಬಂದಿತ್ತು.

ನನಗೀಗ ಆರು ಮಕ್ಕಳು. ಇಬ್ಬರು ಹುಡುಗಿಯರಿಗೆ ಮದುವೆ ಆಗಿದೆ. ಸಮಾಜದಲ್ಲಿ ಮಾತ್ರ 'ಮುಂಡೇಗಂಡನ ಮಕ್ಕಳೆ'ಂಬ ಭಾವನೆ ನಮ್ಮ ಮಕ್ಕಳ ಬಗ್ಗೆ ಇದೆ.

ವೈ.ಶಿ. 8

## ಟಿ. ರಾಮ ಭಟ್ಟ

ಜನನ : 1927

ಉದ್ಯೋಗ : ಭಾರತ್ ಸೇವಾದಲ ಸಂಘಟಕ

ವಿಳಾಸ : IV ಕ್ರಾಸ್, ರಾಜೇಂದ್ರನಗರ, ಶಿವಮೊಗ್ಗ



ಚಿತ್ರದುರ್ಗದಲ್ಲಿ ಮೆಟ್ರಿಕ್‌ನಲ್ಲಿ ಓದುತ್ತಿದ್ದ ನನ್ನ ಅಣ್ಣ ಹನುಮಂತ ಭಟ್ಟ 1939ರಲ್ಲಿ ಚಳವಳಿಯಲ್ಲಿ ಪಾಲುಗೊಂಡು ಬಂಧಿಸಲ್ಪಟ್ಟಿದ್ದರು. ಅವರು ನಮ್ಮ ಊರು ತಾಳ್ಯಕ್ಕೆ ಬರುವಾಗ ತಂದುಕೊಟ್ಟ ಖಾದಿ ಬಟ್ಟೆಯೇ ನನಗೆ ರಾಷ್ಟ್ರಾಭಿಮಾನದ ಸ್ಫೂರ್ತಿ ಕೊಟ್ಟಿತು. 1939ರಲ್ಲಿ ಪ್ರಭಾತ್‌ಫೇರಿಗಳಲ್ಲಿ ಭಾಗ ವಹಿಸುತ್ತಿದ್ದೆ.

1942ರಲ್ಲಿ ಚಿತ್ರದುರ್ಗ ಜಿಲ್ಲಾ ಶ್ರೀರಾಮಪುರದಲ್ಲಿ ಸೇಂದಿ ಅಂಗಡಿ ಸುಡುವುದರಲ್ಲಿ ಪಾಲುಗೊಂಡಿದ್ದೆ. ಪೋಲಿಸರು ಒಂದು ದಿನ

ಬಂಧಿಸಿ, ನಮ್ಮ ತಂದೆಯವರ ಮಿತ್ರರಾದುದರಿಂದ ಬಿಟ್ಟರು. ಹೊಸದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಸತ್ಯಾಗ್ರಹಕ್ಕೆ ಬೆಂಬಲ ದೊರಕಿಸುವುದು, ಸತ್ಯಾಗ್ರಹಿಗಳಿಗೆ ಆಹಾರ ಒದಗಿಸುವುದು, ಬುಲೆಟಿನ್ ಹಂಚುವುದು ಮುಂತಾದ ಕೆಲಸಗಳಲ್ಲಿ ತೊಡಗಿ ಹಳ್ಳಿಹಳ್ಳಿ ಸುತ್ತುತ್ತಿದ್ದೆ. ನನ್ನ ಮಿತ್ರ ಸಿದ್ದರಂಗಪ್ಪನನ್ನು ಬಂಧಿಸಿ ಬೆಂಗಳೂರು ಸೆಂಟ್ರಲ್ ಜೈಲಿಗೆ ಸಾಗಿಸಿದರು. ಕಡೆಗೊಮ್ಮೆ ನನ್ನದೂ ಬಂಧನ ಆಗಿ, ಎಂಟು ತಿಂಗಳು ಶಿಕ್ಷೆ ಆಗಿ, ಕೆಲವು ದಿನ ಬೆಂಗಳೂರು ಜೈಲಿನಲ್ಲಿದ್ದಾಗಲೇ ಬಿಡುಗಡೆ ಆಯಿತು. 1944ರಲ್ಲಿ ಚಿತ್ರದುರ್ಗದಲ್ಲಿ ರಚನಾತ್ಮಕ ಕಾರ್ಯದಲ್ಲಿ ತೊಡಗಿದೆನು. 1945ರಲ್ಲಿ ಮಠಡಿಹಳ್ಳಿಯಲ್ಲಿ ಖಾದಿ ಶಿಕ್ಷಣ ಪಡೆದೆನು. ಅಲ್ಲಿ ಇದ್ದವರಲ್ಲಿ ಶಿವಮೊಗ್ಗದ ಸ್ವಾತಂತ್ರ್ಯಯೋಧ ಬೈರಪ್ಪ ಒಬ್ಬರು. ಆ ಕಾಲದಲ್ಲಿ ಕ್ಷಾಮನಿವಾರಣಾ ಸಮಿತಿ ಕಾರ್ಯಾಲಯದಲ್ಲೂ ದುಡಿದೆ. ಸಂತೆಗಳಲ್ಲಿ ಧಾನ್ಯ, ತರಕಾರಿ ಬೇಡಿ ತಂದು ಗಂಜಿ ಕೇಂದ್ರಗಳಿಗೆ ಒದಗಿಸುತ್ತಿದ್ದೆವು. ಆ ಕಾಲದಲ್ಲಿ ಠಕ್ಕರ್ ಬಾಪಾ ಬಂದಿದ್ದರು. ದಾವಣಗೆರೆಯಲ್ಲಿ ನಡೆದ ಕ್ಷಾಮನಿವಾರಣಾಕಾರ್ಯಕ್ಕೆ ನಿಧಿಸಂಗ್ರಹ ಮಾಡಲಿಲ್ಲ. ಸಮ್ಮೇಳನವೊಂದರಲ್ಲಿ ನಿರ್ಧಾರ ಆಯಿತು. ಮೈಸೂರಿನ ಟಿ. ಎಸ್. ಸುಬ್ಬಣ್ಣ ಈ ಕಾರ್ಯದಲ್ಲಿ ಸಹಕರಿಸಿದ್ದರು.

1946ರಲ್ಲಿ, ನಮ್ಮ ತಂದೆಯವರ ಬಲವಂತಕ್ಕೆ ಉಪಾಧ್ಯಾಯವೃತ್ತಿಗೆ ಸೇರಿ ಗುಡ್ಡದ ರಂಗವ್ವನಹಳ್ಳಿಯಲ್ಲಿ ಕೆಲಕಾಲ ಉಪಾಧ್ಯಾಯನಾಗಿ ಇದ್ದೆನು. ಆಗ ಸಿ.ಆರ್.ಬಿ. ನಂಬರು ಬಂದಿತ್ತು. ಆದರೆ ಕೆಲಸ ಕಾಯಂ ಆಗಲು ಕಾಯದೆ 1947ರ ಚಳವಳಿಯಲ್ಲಿ ಧುಮುಕಿದೆನು. ಭೀಮಪ್ಪ ನಾಯಕ್, ವಾಸುದೇವರಾವ್, ಎಸ್. ರಂಗರಾವ್, ಎಸ್. ವೀರಬಸಪ್ಪ ಇವರುಗಳ ಬಂಧನ ಆಗಿರಲು ನಾನೂ ಗೋಪಾಲ ಐಯ್ಯಂಗಾರ್ ಪ್ರತಿನಿತ್ಯ ಸಂಜೆ ಸಭೆ ನಡೆಸಿ ಸತ್ಯಾಗ್ರಹಿಗಳ ಪಟ್ಟಿ ಪ್ರಕಟಣೆ ಮುಂತಾದ ಕೆಲಸ ಮಾಡುತ್ತಿದ್ದೆವು. ಪೈಲ್ವಾನ್ ಸಂಜಪ್ಪ ಜಿ|| ಕಚೇರಿ ಮೇಲೆ ಧ್ವಜ ಹಾರಿಸುವ ಯತ್ನಮಾಡಿ ಗೋಳೀಬಾರ್ ಆಗಿ ಕರ್ಫ್ಯೂ ಜಾರಿ ಆಯಿತು. ನನ್ನ ಮೇಲೆ ವಾರಂಟ್ ಇತ್ತು. ನಾನು ಮನೆಗೆ ಬರುವಾಗ ಪೋಲಿಸರು ಬರುತ್ತಿರಲು ವಾಚ್ ರಿಪೇರರ್ ರಾಜಣ್ಣನ ಮನೆಯಲ್ಲಿ ಕಕ್ಕಸಿನಲ್ಲಿ ಅಡಗಿಕೊಂಡೆ. ಪೋಲಿಸರು ರಾಜಣ್ಣನ ಮನೆಗೆ ಬಂದು ವಿಚಾರಿಸಲು, ಮನೆಯ ಹೆಂಗಸರು ಇಲ್ಲಿ ಯಾರೂ ಬಂದಿಲ್ಲ, ಎಂದರು. ಕಡೆಗೆ ಹುಚ್ಚಂಗಮ್ಮನ ಗುಡಿ ಪಕ್ಕದಿಂದ ಹಾಯ್ದು ಪೇಟೆಕ್ಕೆ ಹೋದೆ. ರಾತ್ರಿ ಮಂಡಿ ಸಂಗಪ್ಪನವರಲ್ಲಿ ಬಂದು, ಅಲ್ಲೇ ಇದ್ದೆ. ಮರುದಿನ ಸಂಜೆ 10 ರೂ. ಅವರಿಂದ ಪಡೆದು ಹಿಂದೂಪುರಕ್ಕೆ ಹೋಗಲು ಅಡ್ಡದಾರಿಗಳಿಂದ ಬಸ್ ಸ್ಟ್ಯಾಂಡಿಗೆ ಬಂದೆ. ಆಗ ಗೋಪಾಲ ಅಯ್ಯಂಗಾರ್, ಮುಂದೆ ಹೋಗಿ ಬಸ್ಸು ಹತ್ತಲು ತಿಳಿಸಿದರು. ಮೆದೆಹೇರಿಪುರ ರಸ್ತೆಯಲ್ಲಿ ಮುಲ್ಕಾ ಗೋವಿಂದ ರೆಡ್ಡಿ ಹಾಗೂ ಇನ್ನೊಬ್ಬರು ಸಿಕ್ಕರು. ಅವರ ಜೊತೆ ಬಳ್ಳಾರಿಗೆ ಹೋಗಿ, ಮರುದಿನ ಹಿಂದೂಪುರ ಸೇರಿದೆವು. ಅಲ್ಲಿ ಟಿ. ಎಸ್. ಸುಬ್ಬಣ್ಣ, ಚಿತ್ರದುರ್ಗದ ಶ್ರೀನಿವಾಸಮೂರ್ತಿ ಆಚಾರ್, ತುಮಕೂರಿನ

ಆರಾಧ್ಯ ಇದ್ದರು. ಗಡಿಭಾಗಗಳಿಗೆ ಅಲ್ಲಿಂದ ದಾಳಿಗಳು ಆಗುತ್ತಿದ್ದವು. ಶ್ರೀನಿವಾಸ ಮೂರ್ತ್ಯಾಚಾರ್‌ರೊಂದಿಗೆ ಹುಬ್ಬಳ್ಳಿಗೆ ಬಂದು, ಮುಂದೆ ರಾಣೆಬೆನ್ನೂರಿಗೆ ಬಂದೆವು. ಅಲ್ಲಿ ದುಮ್ಮಿ ಮುರಿಗೆಪ್ಪನವರ ನೇತೃತ್ವದಲ್ಲಿ ನಡೆಯುತ್ತಿದ್ದ ಚಟುವಟಿಕೆಗಳಲ್ಲಿ ಪಾಲು ಗೊಂಡೆ. ಚಿತ್ರದುರ್ಗ ಜಿಲ್ಲಾ ತಾಲ್ಲೂಕು ಟ್ರೆಜರಿಗಳನ್ನೆಲ್ಲ ಲೂಟಿಮಾಡಬೇಕೆಂದು ಬಂದೂಕು ಸಂಗ್ರಹಿಸಿ ತಂದು ತಯಾರಿ ನಡೆದಾಗಲೇ ಒಪ್ಪಂದವಾಗಿ ಚಳವಳಿ ನಿಂತಿತು. ತಂದ ಬಂದೂಕುಗಳನ್ನು ಗೋಣಿಚೀಲದಲ್ಲಿ ಹಾಕಿ ಚಿತ್ರದುರ್ಗದಿಂದ ಒಂದು ವ್ಯಾನಿನಲ್ಲಿ ಅವನ್ನು ವಾಪಸ್ ಹುಬ್ಬಳ್ಳಿಗೆ ತಲಪಿಸಬೇಕೆಂದಾಗ, ಹರಿಹರ ಗೇಟಿನ ಬಳಿ ಪೋಲಿಸರು ಚೆಕ್ಕಿಂಗಿಗೆ ತಡೆದರು. ವ್ಯಾನಿನಲ್ಲಿ ನನ್ನ ಜೊತೆ ಚಿತ್ರದುರ್ಗದ ಲಾಯರ್ ಎಚ್. ಎಸ್. ವೆಂಕಟಾಚಲಯ್ಯ ಹಾಗೂ ಪಿ. ಚನ್ನಾರೆಡ್ಡಿ ಇದ್ದರು. ಆ ಪೋಲಿಸರು ವೆಂಕಟಾಚಲಯ್ಯ ನವರಿಗೆ ಪರಿಚಿತರಾಗಿದ್ದುದರಿಂದ, ನಮ್ಮನ್ನು ಹಾಗೇ ಬಿಟ್ಟರು. ಗಂಡಾಂತರ ತಪ್ಪಿತು. ಹುಬ್ಬಳ್ಳಿ-ಧಾರವಾಡ ರಸ್ತೆಯಲ್ಲಿನ ಒಂದು ಆಶ್ರಮವು ಕ್ರಾಂತಿ ಚಟುವಟಿಕೆಗಳ ಕೇಂದ್ರವಾಗಿದ್ದು ಅಲ್ಲಿಗೇ ಅವನ್ನು ವಾಪಸ್ ಮುಟ್ಟಿಸಿದೆವು.

ಚಿತ್ರದುರ್ಗ ಪೋಲಿಸ್ ಸ್ಟೇಶನ್‌ನಿಂದ (ಸಂತೆಬಾಗಿಲಿನದು) ಆಗ ಬಂದೂಕು ಅಪಹರಿಸಲು ನಾವು ಸಿದ್ಧತೆಮಾಡಿ, ಆ ಭಾಗದ ದೀಪಗಳನ್ನು ಆರಿಸಲು ಲೈಟ್ ಕಂಬಕ್ಕೆ ನಾನೂ ಸಂಪತ್‌ಕುಮಾರ್ ಬೆಂಕಿ ಇಟ್ಟೆವು. ಆದರೆ ಅಂತಿಮವಾಗಿ ಕಾರ್ಯ ಯಶಸ್ವಿ ಆಗಲಿಲ್ಲ. ಅದೇ ಚಳವಳಿ ಕಾಲಕ್ಕೆ ಹೊಸದುರ್ಗದಲ್ಲಿ ಆದ ಗೋಳೀಬಾರ್ ಬಗ್ಗೆ ವಿವರ ಸಂಗ್ರಹಿಸಲು ನಾನೂ ದುಡಿದು, ಆ ಬಗ್ಗೆ ಒಂದು ವರದಿ ತಯಾರಿಸಿ ಡಿ.ಸಿ.ಸಿ. ಆಫೀಸಿಗೂ ಜಿಲ್ಲಾಧಿಕಾರಿಗೂ ಒಪ್ಪಿಸಿದೆವು. ಆ ವರ್ಷ ನನ್ನ ಉಪಾಧ್ಯಾಯ ವೃತ್ತಿ ಹೋಗಿಯೇ ಬಿಟ್ಟಿತು !

ವೈ.ಶಿ. 9

## ಯು. ಗುರುನಾಥಾರಾಧ್ಯ

ಜನನ : 1908 ಉದ್ಯೋಗ : ಪುರೋಹಿತ ವಿಳಾಸ : ನರಸಿಂಹಸ್ವಾಮಿ ದೇವಸ್ಥಾನ ರಸ್ತೆ, ಭದ್ರಾವತಿ

---

1930ರ ಉಪ್ಪಿನ ಸತ್ಯಾಗ್ರಹ ಕಾಲಕ್ಕೆ ಚಳವಳಿಯ ವಿಚಾರ ಪತ್ರಿಕೆಗಳಲ್ಲಿ ಓದಿ, ಹುಬ್ಬಳ್ಳಿಗೆ ಹೋಗಿ ಸೇವಾದಳದ ಶಿಬಿರ ಸೇರಿ ತರಬೇತಿ ಪಡೆದೆನು. ಕೆಲವು ತಿಂಗಳು ಹುಬ್ಬಳ್ಳಿಯಲ್ಲಿ ಪಿಕೆಟಿಂಗ್ ಮುಂತಾದ ಚಟುವಟಿಕೆಗಳಲ್ಲಿ ಸೇರಿ, ಮುಂದೆ ನಾನೂ ಎಸ್. ಎನ್. ಜಂದೂರರೂ ವಿಜಾಪುರ ಜಿಲ್ಲಾ ಕೆರೂರಿಗೆ ಹೋಗಿ, ಅಲ್ಲಿನ ಕಪ್ಪರ



ದೇವಾಲಯದಲ್ಲಿ ಸತ್ಯಾಗ್ರಹ ಶಿಬಿರ ತೆರೆದೆವು. ಅಲ್ಲಿ ಸೇಂದಿ ಅಂಗಡಿ ಮುಂದೆ ಪಿಕೆಟಿಂಗ್, ಚೌಳು ಮಣ್ಣಿನಿಂದ ಉಪ್ಪು ತಯಾರಿ, ಸೆನ್ಸಸ್ ಬಾಯ್ ಕಾಟ್ ಮುಂತಾದ ಚಟುವಟಿಕೆಗಳನ್ನು ಸಾಗಿಸಿ ದೆವು. ಶಿಬಿರದಲ್ಲಿ ಮೊದಲ ದಿನ 10 ಜನ ಸೇರಿದರು. ಮುಂದೆ 80 ಜನ ತಯಾರಾದರು. ಚಂದೂರರ ಮಾರ್ಗದರ್ಶನದಂತೆ ನಿತ್ಯ ಚಟುವಟಿಕೆ ನಡೆದರೂ ಯಾರದೇ ಬಂಧನ ಆಗಲಿಲ್ಲ. ಮುಂದೆ ಚಂದೂರರು ನನ್ನನ್ನೂ ಗೋವಿಂದಪ್ಪ ಎಂಬ ಕೆರೂರಿನ ಸ್ವಯಂಸೇವಕರನ್ನೂ ಮುದ್ದೇಬಿಹಾಳಕ್ಕೆ ಕಳುಹಿಸಿದರು. ಅಲ್ಲಿ ನಾವು ಹೋದಾಗ, ಆಗಲೇ ಸತ್ಯಾಗ್ರಹ ಭರದಿಂದ ಸಾಗಿ 100 ಜನ ಸೆರೆಮನೆ ಸೇರಿದ್ದರಲ್ಲದೆ ಊರ ಪ್ರಮುಖ ಲಾಯರುಗಳೇ ಮುಂತಾದವರೂ ಜೈಲಿ ನಲ್ಲಿದ್ದು ಪೋಲಿಸರ ದಬ್ಬಾಳಿಕೆ ಬಲವಾಗಿತ್ತು. ಊರಲ್ಲಿ ಜನ ತೀರ ಹೆದರುತ್ತಿದ್ದು, ಹೋಟೆಲಿನವರು ನಮಗೆ ಒಂದು ಲೋಟ ನೀರನ್ನೂ ಕೊಡಲು ಸಿದ್ಧರಿರಲಿಲ್ಲ. ಆ ಊರ ಪ್ರಮುಖ ವ್ಯಕ್ತಿ ಒಬ್ಬರು ನಮ್ಮನ್ನು ಕಾರು ಹತ್ತಿಸಿ, "ನೀವು ಈ ಊರು ಬಿಟ್ಟು ಮೊದಲು ಹೊರಡಿ" ಎಂದು, ಐದು ಮೈಲಿ ದೂರದ ಒಂದು ಹಳ್ಳಿಗೆ ಒಯ್ದು ಬಿಟ್ಟರು. ನಾವು ಬಸ್ಸು ಹತ್ತಿ ಹುನಗುಂದ ಸೇರಿ, ಅಲ್ಲಿನ ಬಸವೇಶ್ವರ ದೇವಾಲಯದಲ್ಲಿ ಇದ್ದು, ಪಾನನಿರೋಧ, ಉಪ್ಪಿನ ಸತ್ಯಾಗ್ರಹ, ಜನಗಣನಾ ವಿರೋಧಕ್ಕೆ ಸಂಬಂಧಿಸಿ ಬೋರ್ಡ್ ಗಳನ್ನು ಬರೆದು ಊರಲ್ಲಿ ಕಂಬಕ್ಕೆ ಕಟ್ಟಿದೆವು. ರಾಷ್ಟ್ರಧ್ವಜವನ್ನೂ ಹಾರಿಸಿದೆವು. "ನಾಳೆ ಬೆಳಗ್ಗೆ 9ಕ್ಕೆ ಸತ್ಯಾಗ್ರಹ ಪ್ರಾರಂಭ, ಬಸವೇಶ್ವರ ದೇವಾಲಯಕ್ಕೆ ಬನ್ನಿ" ಎಂದು ಊರಲ್ಲಿ ಜಾಗಟೆ ಹೊಡೆದೆವು.

ಮರುದಿನ ಸೇಂದಿ ಅಂಗಡಿ ಮುಂದೆ ಪಿಕೆಟಿಂಗ್ ಆರಂಭಿಸಿದಾಗ ನಮ್ಮನ್ನು ಬಂಧಿಸಿ, ಮರುದಿನ ಬಾದಾಮಿ ಲಾಕಪ್ಪಿಗೆ ಕಳುಹಿಸಿದರು. ಒಂದು ತಿಂಗಳು ಬಾದಾಮಿ ಲಾಕಪ್ಪಿ ನಲ್ಲಿ ಇದ್ದೆವು. ಅನಂತರ ವಿಜಾಪುರ ಲಾಕಪ್ಪಿನಲ್ಲಿ ಒಂದು ವಾರ ಇಟ್ಟು, ಕಡೆಗೆ ಜಿಲ್ಲಾಧಿಕಾರಿಗಳು ನಮಗೆ ಏಳೂವರೆ ತಿಂಗಳು ಶಿಕ್ಷೆ ಇತ್ತರು. ವಿಜಾಪುರ ಸೆಂಟ್ರಲ್ ಜೈಲಿನಲ್ಲಿ ಐದು ತಿಂಗಳು ಕಳೆದಮೇಲೆ ಗಾಂಧಿ-ಇರ್ವಿನ್ ಒಪ್ಪಂದದಂತೆ ಬಿಡುಗಡೆ ಆಯಿತು.

ನಾವಿಬ್ಬರೂ (ಗೋವಿಂದಪ್ಪ ಸಹ) ಹುಬ್ಬಳ್ಳಿಗೆ ಬಂದು, ಅಲ್ಲಿಂದ ಕೆಲಕಾಲದ ಅನಂತರ ಶಿರಸಿ ತಾ|| ಕಡವೆಗೆ ಹೋದೆವು. ಕಡವೆ ರಾಮಕೃಷ್ಣ ಹೆಗ್ಗಡೆಯವರು ಶಿಬಿರ ಆರಂಭಿಸಲು ಅನುಕೂಲಮಾಡಿಕೊಟ್ಟರು. 40 ಗಂಡಸರು, 40 ಹೆಂಗಸರು ಆ ಕ್ಯಾಂಪಿಗೆ ಬಂದು ಸೇರಿದರು. ಕರನಿರಾಕರಣ ಚಳವಳಿ ಶುರು ಆಗಿ, ಮುಂದೆ 2-3 ತಿಂಗಳಲ್ಲಿ ಕಂದಾಯ ತೆರದವರ ಸಾಮಾನುಗಳನ್ನು ಜಪ್ತಿಮಾಡಿದರು. ಶಿರಸಿ ಕಾಂಗ್ರೆಸ್ ಆಫೀಸಿನ

ಮುಂದೆ ಇವುಗಳನ್ನು ಹರಾಜಿಗೆ ಇಡುವರೆಂದು ಟಾಂಟಾಂ ಮಾಡಲು, ನಾನು, ಗೋವಿಂದಪ್ಪ, ಕಡವೆ ರಾಮಕೃಷ್ಣ ಹೆಗ್ಡೆಯವರ ಹೆಂಡತಿ, ಅವರ ಸೊಸೆ, ಸವಿಹಾಪದ ಹೆಗ್ಗಾರು, ಹೆಗಡೆಕಟ್ಟೆಯ 15 ಜನ ಹರಾಜಿನ ಸ್ಥಳದಲ್ಲಿ ಹೋಗಿ ಪಿಕೆಟಿಂಗ್ ಮಾಡಲು, ನಮ್ಮನ್ನೆಲ್ಲ ಬಂಧಿಸಿ ಶಿರಸಿ ಲಾಕಪ್ಪಿನಲ್ಲಿ ಒಂದು ತಿಂಗಳು ಇಟ್ಟರು. 2-12-1932ಕ್ಕೆ ನನಗೂ ಗೋವಿಂದಪ್ಪನಿಗೂ ಒಂದು ವರ್ಷ ಶಿಕ್ಷೆ ಆಯಿತು. ಕಾರವಾರ ಜೈಲಿನಲ್ಲಿ ಸುಮಾರು ಒಂದು ತಿಂಗಳು ಇದ್ದು, ಮುಂದೆ 10-1-1933ಕ್ಕೆ ವಿಸಾಪುರ ಜೈಲಿಗೆ ಒಯ್ದರು. ಶಿಕ್ಷೆ ಪೂರ್ತಿ ಆದಮೇಲೆ ನನ್ನನ್ನು ಪೋಲಿಸರು ಬೆಂಗಳೂರಿಗೆ ರೈಲಿನಲ್ಲಿ ತಂದು ಬೆಂಗಳೂರು ರೈಲ್ವೆ ಪೋಲಿಸರ ವಶ ಬಿಟ್ಟುಹೋದರು. ಅವರು ಭದ್ರಾವತಿ ಪೋಲಿಸ್ ಸ್ಟೇಶನಿಗೆ ತಂದುಬಿಡಲು ಅಲ್ಲಿ ನನ್ನ ಬಿಡುಗಡೆ ಆಯಿತು.

1934ರಲ್ಲಿ ಭದ್ರಾವತಿಯಲ್ಲಿ ಕಾಂಗ್ರೆಸ್ ಕಮಿಟಿ ಸ್ಥಾಪಿಸಿದೆ. ಕೆ. ಶೇಷಗಿರಿ ಶಾಸ್ತ್ರಿ ಅಧ್ಯಕ್ಷರು ; ನಾನೇ ಕಾರ್ಯದರ್ಶಿ. ಪ್ರಚಾರ ಕಾರ್ಯಕ್ರಮ ಸಾಗಿತು. ಶಿವಪುರದಲ್ಲಿ ಧ್ವಜ ಸತ್ಯಾಗ್ರಹ ನಡೆದನಂತರ 1938ರಲ್ಲಿ ಭದ್ರಾವತಿಯಲ್ಲಿ ಮುಖ್ಯಬೀದಿಗಳಲ್ಲಿ ಧ್ವಜ ಹಿಡಿದು ಮೆರವಣಿಗೆ ಮಾಡಿ ಟಿಂಬರ್ ಡಿಪೋ ಮೈದಾನದಲ್ಲಿ ಧ್ವಜ ಹಾರಿಸಿದೆವು. ಐದಾರು ಜನರ ಬಂಧನ ಆಗಿ, ಮುನ್ಸಿಫ್ ಮ್ಯಾಜಿಸ್ಟ್ರೇಟರು ಕೋರ್ಟು ಏಳುವವರೆಗೆ ನಮಗೆ ಶಿಕ್ಷೆ ವಿಧಿಸಿದರು.

1939ರಲ್ಲಿ ಎಸ್. ಆರ್. ನಾಗಪ್ಪ ಶೆಟ್ಟರು ಅರಣ್ಯಸತ್ಯಾಗ್ರಹದ ಕ್ಯಾಂಪನ್ನು ಶಿವಮೊಗ್ಗದಲ್ಲಿ ಸ್ಥಾಪಿಸಲು ಆ ಕ್ಯಾಂಪಿಗೆ ಹೊನ್ನಾಳಿ, ಶಿವಮೊಗ್ಗ ಮತ್ತು ಶಿಕಾರಿಪುರ ತಾಲ್ಲೂಕಿನ 300 ಜನ ಸೇರಿದ್ದರು. ಪ್ರತಿದಿನ ನಾಲ್ಕು ಸತ್ಯಾಗ್ರಹಿಗಳು ಗಂಧದ, ಈಚಲ ಮರ ಕಡಿದು ಬಂಧಿತರಾಗುತ್ತಿದ್ದರು. 12-10-1939ರಂದು ನಾನೂ ಶಿವಮೊಗ್ಗದ ಎಚ್. ಎಂ. ಸಿದ್ದಯ್ಯ ಅರಣ್ಯಸತ್ಯಾಗ್ರಹಕ್ಕೆ ಹೊರಡಲು ಪೋಲಿಸರು ನಮ್ಮನ್ನು ಬಂಧಿಸಿದರು. ಶಿವಮೊಗ್ಗ ಮ್ಯಾಜಿಸ್ಟ್ರೇಟರು 14-10-1939ರಂದು ನಮಗೆ 6 ತಿಂಗಳು ಕಠಿಣ ಶಿಕ್ಷೆ, 50 ರೂ. ದಂಡ, ದಂಡ ನೀಡದಲ್ಲಿ ಆರು ವಾರ ಸಾದಾ ಸಜೆ ವಿಧಿಸಿದರು. ಶಿವಮೊಗ್ಗ ಜೈಲಿನಲ್ಲಿ ಒಂದು ತಿಂಗಳು ಇದ್ದು, ಮುಂದೆ ಬೆಂಗಳೂರಿಗೆ ಕಳುಹಿಸಿದರು. 23-4-1940ರಂದು ಬಿಡುಗಡೆ ಆಯಿತು. 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಗುಪ್ತಚಟುವಟಿಕೆ ನಡೆಸಿ, ಕಾರ್ಯಕರ್ತರಿಗೆ ಉತ್ತೇಜನ ನೀಡುತ್ತಿದ್ದೆ ; ಬಂಧಿತನಾಗಲಿಲ್ಲ. 1947ರಲ್ಲಿ ಕಾರ್ಯಕರ್ತರಿಗೆ ಮಾರ್ಗದರ್ಶನ ನೀಡುತ್ತಿರಲು ಕೆಲಕಾಲ ಬಂಧಿತನಾಗಿದ್ದೆ.

ಈಗ ಆರ್. ಕಾಂಗ್ರೆಸ್ ಕಾರ್ಯಕರ್ತನಾಗಿರುವೆನಲ್ಲದೆ ತಾ|| ಸ್ವಾತಂತ್ರ್ಯ ಯೋಧರ ಸಂಘದ ಕಾರ್ಯದರ್ಶಿ ಆಗಿರುವೆ. ನಮ್ಮ ತಾಲ್ಲೂಕಿನ ಸ್ವಾತಂತ್ರ್ಯಯೋಧರ ಪಟ್ಟಿ ಇಲ್ಲಿ ಕೊಟ್ಟಿರುವೆ :

ಎಸ್. ಎಲ್. ಕೃಷ್ಣ (ಶಿರಸಿ ಕರನಿರಾಕರಣದಲ್ಲಿ 1931-32ರಲ್ಲಿ ಒಂದು ವರ್ಷ, 1942ರಲ್ಲಿ ಭದ್ರಾವತಿಯಲ್ಲಿ ಒಂಬತ್ತು ತಿಂಗಳು ಶಿಕ್ಷೆ), ಯು. ಗುರುನಾಥಾರಾಧ್ಯ

(1930ರಲ್ಲಿ 7 ತಿಂ., 1932–33ರಲ್ಲಿ 1 ವ., 1939ರಲ್ಲಿ 7½ ತಿಂ.), ಕೆ. ಶೇಷಗಿರಿ ಶಾಸ್ತ್ರಿ (1939ರಲ್ಲಿ 7½ ತಿಂ., 1942ರಲ್ಲಿ 14 ತಿಂ.), ಟಿ. ಎನ್. ಓಬಳಪ್ಪ (1939–9 ತಿಂ.), ಬಿ. ಕೃಷ್ಣಭಟ್ಟ (1939–7½ ತಿಂ.), ಕೆ. ಎಸ್. ರಾಮಚಂದ್ರ ಶೆಟ್ಟಿ (1939–7½ ತಿಂ.), ಎಚ್. ಎನ್. ನರಸಿಂಹಮೂರ್ತಿ (ಮೈಸೂರು ಟೌನ್‌ಹಾಲ್ ಸತ್ಯಾಗ್ರಹ, 1939–6 ತಿಂ.), ಯು. ಏಕನಾಥಆರಾಧ್ಯ (1939–7½ ತಿಂ.), ಭೀಮರಾವ್ ಚವ್ಹಾಣ್ (1942–9 ತಿಂ.), ದಾಸರ ಗೋವಿಂದಪ್ಪ (1942–9 ತಿಂ.), ಜವರಯ್ಯ (1942–8 ತಿಂ.), ಎಲ್. ಬಾಲಾಜಿ ಸಿಂಘ್ (1942–8 ತಿಂ.), ದಿ|| ಬಿ. ಎಸ್. ಭೀಮಶೆಟ್ಟಿ (1942–8 ತಿಂ.), ಬಿ. ಪಾಂಡುರಂಗ ಶೆಟ್ಟಿ (1942–1 ವ.), ಬಿ. ಮಾಧವಾಚಾರ್ (1938, ಹ್ಯಾಮಿಲ್ಟನ್ ಸತ್ಯಾಗ್ರಹ ಹಾಗೂ 1947, ಒಟ್ಟು 9 ತಿಂ.), ಕೆ. ನಂಜಪ್ಪ (1942–15 ತಿಂ.), ದಿ|| ಪುಂಡಲೀಕರಾವ್ (1942–9 ತಿಂ.), ಜಿ. ಬಿ. ಮರಿಸ್ವಾಮಿ (1942–9 ತಿಂ.), ಜಿ. ವಿ. ದೇಶಿಕನ್ (1942–8 ತಿಂ.), ಆರ್. ಯೆಲ್ಲಪ್ಪ (1942–8 ತಿಂ.), ಎಸ್. ಸೋಮಯ್ಯ (1942–8 ತಿಂ.), ದಿ|| ವೆಂಕಟರಾವ್ ಧಾರೇಶ್ವರ (ಶಿರಸಿ ಕರನಿರಾಕರಣ, 1931–32—1 ವ.), ಲಕ್ಷ್ಮೀನಾರಾಯಣ (1942–8 ತಿಂ.), ಕೆ. ಅನಂತಶಾಸ್ತ್ರಿ (1942–8 ತಿಂ.), ಕೆ. ಚಿದಂಬರ (1942–8 ತಿಂ.), ದಿ|| ಕೆ. ಎಚ್. ಪುಟ್ಟಯ್ಯ (1942–8 ತಿಂ.), ಸಿಂಗಾರಿಗೌಡ (1942–1 ವ.), ಶ್ರೀನಿವಾಸರಾವ್ (1942–13 ತಿಂ.), ದಿ|| ಬಸವಲಿಂಗಪ್ಪ (1942, ಬೆಳಗಾವಿ–1 ವ.), ಬಿಡ್ಡಪ್ಪ (1933, ಕಣ್ಣಾನೂರ ಜೈಲು, 6 ತಿಂ.), ಎಸ್. ಆರ್. ಲಕ್ಷ್ಮೀದೇವಮ್ಮ (1942–8 ತಿಂ.), ವಿನಾಯಕ ಹರಿ ಕಾನಿಟ್ಕರ್ (1932, ಬೆಳಗಾವಿ–6 ತಿಂ.), ಎಚ್. ಎಸ್. ಹಾಲಪ್ಪ (1942–1 ವ.), ಶಂಕರ ನಂಜಪ್ಪ (1942–1 ವ.), ಆರ್. ಪುಟ್ಟಯ್ಯಗೌಡ (1942–1 ವ.), ಹೀಗೆ 36 ಜನ.

ಇದಲ್ಲದೆ, 1942ರಲ್ಲಿ ಕಬ್ಬಿಣದ ಕಾರ್ಖಾನೆಯಿಂದ ಕೆಲಸದಿಂದ ಕಿತ್ತೊಗೆಯಲ್ಪಟ್ಟು ಐದು ವರ್ಷದವರೆಗೆ ಭದ್ರಾವತಿಯಿಂದ ಗಡೀಪಾರು ಮಾಡಲ್ಪಟ್ಟವರ ಪಟ್ಟಿ : ಆರ್. ಎಸ್. ನಾರಾಯಣರಾವ್, ಪರಶುರಾಮರಾವ್, ವಿಕ್ಟರ್, ಕೆ. ಎಂ. ಜವರಯ್ಯ, ಪುರುಷೋತ್ತಮ ನಾಯ್ಡು, ದಿ|| ಗಂಗಾರಾಮ ಸಿಂಘ್, ವೈ. ಸತ್ಯನಾರಾಯಣ, ಪುಣ್ಯಪ್ಪ, ಅಲ್ಲಿಸಾಹೇಬ್, ಚಿಕ್ಕಲಿಂಗ, ಕುಳ್ಳಯ್ಯ, ದಿ|| ಎಂ. ಎಸ್. ಲಕ್ಷ್ಮಣರಾವ್, ಬಿ. ಶಾಮರಾವ್, ಶೇಷಪ್ಪ, ಚಂದು ಕುಟ್ಟಿ, ಸ್ಟೆಂಗೋಟಂ, ಎನ್. ರಾಮರಾವ್, ರಂಗಸ್ವಾಮಿ, ಕೃಷ್ಣನ್ ನಾಯರ್, ಎಚ್. ಎನ್. ಕೃಷ್ಣಮೂರ್ತಿ, ಎಚ್. ಎನ್. ಸೂರ್ಯನಾರಾಯಣ, ವಿಠ್ಠಲ ಶೆಟ್ಟಿ, ತಿರುಮಲಯ್ಯ, ಹನುಮಂತಯ್ಯ, ದಿ|| ಎಚ್. ಶ್ರೀನಿವಾಸಮೂರ್ತಿ, ಅಲ್ಫೋನ್ಸ, ಎಚ್. ಕೃಷ್ಣಮೂರ್ತಿ, ಹೀಗೆ 27 ಜನ.

1947ರಲ್ಲಿ ಬಂಧಿತರಾದವರು : ಬಿ. ಎ. ವೇಣುಗೋಪಾಲ್, ವೆಂಕೋಬಾಚಾರ್, ಸತ್ಯನಾರಾಯಣ, ರಂಗೇಶ, ದಿ|| ಷಣ್ಮುಗಯ್ಯ, ವೈ. ನಾಗಣ್ಣ ಶೆಟ್ಟಿ, ಕೆ. ಎನ್.

ದೇಸಾಯಿ, ಮುನಿಸ್ವಾಮಿ, ಎತಿರಾಜಲು ನಾಯ್ಡು, ಬಿ. ನಾರಾಯಣಸ್ವಾಮಿ, ಮುರುಗೇಶ ಮುದಲಿಯಾರ್, ರುದ್ರಪ್ಪ, ವೆಂಕಟರಾಮ ಶಾಸ್ತ್ರಿ, ಎಸ್. ಬಿ. ಪುಟ್ಟಯ್ಯ, ರಾಮಲಿಂಗೇಗೌಡ, ಬಿ. ಎಚ್. ಗಂಗಪ್ಪ, ಕಸ್ತೂರಿ ರಂಗಾಚಾರ್, ಎಚ್. ರಾಮರಾವ್, ಎಂ. ಮಾರಮ್ಮಣ್ಣ, ಎ. ರಾಮರಾವ್, ಸುಬ್ಬಣ್ಣ, ಕರಿಯಪ್ಪ, ಕೆಂಚಪ್ಪ, ಆರ್. ಕೃಷ್ಣಪ್ಪ ಬಿನ್ ರಾಜಪ್ಪ, ಆರ್. ಕೃಷ್ಣಪ್ಪ ಬಿನ್ ರಾಮಯ್ಯ, ಎಚ್. ಪಿ. ರಾಮಸ್ವಾಮಿ, ರಂಗಯ್ಯ, ಪಟುವಾಜಿರಾವ್, ಶೇಷಗಿರಿ, ಲಿಂಗಪ್ಪ, ದಿ|| ಕೃಷ್ಣಸ್ವಾಮಿ, ಧರ್ಮರಾವ್, ಲಕ್ಷ್ಮಣರಾವ್ ಚವ್ಹಾಣ್, ಹಾಲಪ್ಪ ಬಿನ್ ಚನ್ನಪ್ಪ, ಟಿ. ದಾಸಪ್ಪ, ಸಿದ್ದಪ್ಪ, ಚೊಕ್ಕಣ್ಣಯ್ಯ, ದಿ|| ನಾರಾಯಣರಾವ್, ದಿ|| ಕೆ. ಬಾಬುರಾವ್, ಮಲ್ಲಿಕಾರ್ಜುನ ಕೋಟಿ, ನಂಜುಂಡಯ್ಯ, ತಿಪ್ಪೇಸ್ವಾಮಿ, ತಿಪ್ಪೇರುದ್ರಸ್ವಾಮಿ, ಜಿ. ವೆಂಕಟೇಶಯ್ಯ, ಜಿ. ಮುರುಗಯ್ಯ, ಅಲ್ಫೋನ್ಸ, ಜಿ. ಎಲ್. ವಿಠ್ಠಲರಾವ್, ಜಗದೀಶ್, ಚಂದ್ರಶೇಖರ, ದಿ|| ಎಸ್. ಜಿ. ಮುರುಗೇಂದ್ರಪ್ಪ, ಹೀಗೆ 53 ಜನ. ಇವರಿಗೆಲ್ಲ ಮೂರು ತಿಂಗಳ ಶಿಕ್ಷೆವಿಧಿಸಲಾಗಿತ್ತು.

1942ರ ಮೇ 3ಕ್ಕೆ ಆದ ಗೋಳೀಬಾರಿನಲ್ಲಿ ಪುಟ್ಟಯ್ಯ ಮತ್ತು ಸರೋಜ ಸ್ಥಳದಲ್ಲೇ ಸತ್ತರು. ಜಾನ್ ಗ್ರೆಗರಿ ಗಾಯಗೊಂಡರು. ಅದೇ ರೀತಿ 1947ರಲ್ಲಿ ಖಂಡಪ್ಪ ಎಂಬಾತನಿಗೆ ಗುಂಡಿನ ಗಾಯ ಆಗಿತ್ತು.

ವೈ.ಶಿ. 10

## ಎಲ್. ಬಾಲಾಜಿ ಸಿಂಗ್

ಜನನ: 1909 ಉದ್ಯೋಗ: ನಿವೃತ್ತ ಜೀವನ ವಿಳಾಸ: ನ್ಯೂ ಮಾಡೆಲ್ ಕಾಲನಿ, III ಕ್ರಾಸ್, ಭದ್ರಾವತಿ

---



1925ರಲ್ಲಿ ನನ್ನ ಹುಟ್ಟೂರಾದ ಕೊಂಡಜ್ಜಿಯಿಂದ ಭದ್ರಾವತಿಗೆ ಬಂದು ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿದೆ. ಕಾರ್ಖಾನೆಯ ಕೆಲವು ಸ್ನೇಹಿತರಾದ ಕೂಲಿಕಾರರನ್ನು ಸೇರಿಸಿ ಕೊಂಡು ಇಲ್ಲಿ ಒಂದು ಕೂಲಿಕಾರ ಸಂಘವನ್ನು ಕಟ್ಟಬೇಕೆಂದು 1939 ಮತ್ತು 1940ರಲ್ಲಿ ಶುರು ಮಾಡಿ 1941ರ ಕೊನೆಯೊಳಗಾಗಿ ನಮ್ಮ ಬೇಡಿಕೆ ಗಳನ್ನು ಪೂರೈಸಲು ಮೂರು ನಾಲ್ಕು ಸಲ

ಮುಷ್ಕರಮಾಡಿ ಯಶಸ್ವಿಯಾದೆವು. ಸಂಘ ಕಟ್ಟಲು ದುಡಿದ ನಮ್ಮ ಕೆಲಸಗಾರರೆಂದರೆ, ದಿ|| ಬಿ. ರಾಮರಾವ್, ಎಚ್. ಕೆ. ಪುಟ್ಟಯ್ಯ, ದಿ|| ಗುರುನಾಥ್ ಪಿಳ್ಳೈ, ದಿ|| ಆರ್. ವಿ. ರಂಗಣ್ಣ, ದಿ|| ಪುಂಡಲೀಕರಾವ್, ದಿ|| ಸಿದ್ದೋಜಿರಾವ್, ಎಸ್. ಎಲ್. ಕೃಷ್ಣ, ಸುಬ್ರಹ್ಮಣ್ಯ ಪಿಳ್ಳೈ, ಜಿ. ವಿ. ದೇಶಿಕನ್, ನಂಜಪ್ಪ, ಚಿದಂಬರರಾವ್. ಈ ಬಗ್ಗೆ ಹೊರಗಿನಿಂದ ಬಂದು ನಮ್ಮನ್ನು ಪ್ರೋತ್ಸಾಹಿಸಿದವರೆಂದರೆ ಎನ್. ಡಿ. ಶಂಕರ್, ಕೊದವಳ್ಳಿ ರಾಮಸ್ವಾಮಿ, 'ಅನೇಕಿವಿ' ರಾಮಕೃಷ್ಣರಾಯರು, ಬಿ. ಪಿ. ಹಾಲಪ್ಪ. ಶೇಷಗಿರಿ ಶಾಸ್ತ್ರಿ. ಇದೇ ಕಾಲಕ್ಕೆ ಕೆ. ಟಿ. ಭಾಷ್ಯಂ, ಟಿ. ಸುಬ್ರಹ್ಮಣ್ಯಂ, ಎಚ್. ಸಿದ್ದಯ್ಯ, ಕೆ. ಆರ್. ಮಾಧವರಾವ್, ರತ್ನಮ್ಮ, ಪಾರ್ಥನಾರಾಯಣ ಪಂಡಿತ್, ರಾಘವೇಂದ್ರರಾವ್, ಲಕ್ಷ್ಮೀದೇವಮ್ಮ ರಾಘವೇಂದ್ರರಾವ್, ಬಿ. ಪಾಂಡುರಂಗಶೆಟ್ಟಿ, ಭೀಮರಾವ್ ಚವ್ಹಾಣ್, ದಾಸರ ಗೋವಿಂದಪ್ಪ, ಎಸ್. ರಾಮಚಂದ್ರ ಶೆಟ್ಟಿ, ಕಮಲಮ್ಮ ಎಸ್. ಎಲ್. ಕೃಷ್ಣ, ಕೆ. ಸಿ. ರೆಡ್ಡಿ, ಟಿ. ಸಿದ್ದಲಿಂಗಯ್ಯ, ಕೆಂಗಲ್ ಹನುಮಂತಯ್ಯ ಮುಂತಾದವರು ಆಗಾಗ ಭಾಷಣಮಾಡಿ ನಮ್ಮ ಕೂಲಿಗಾರ ಬಂಧುಗಳಲ್ಲಿ ರಾಷ್ಟ್ರೀಯ ಜಾಗೃತಿ ಮಾಡಿದರಲ್ಲದೆ ನಮ್ಮ ಸಂಘಟನೆಗೂ ಬೆಂಬಲ ನೀಡಿದರು.

1942ರ ಮೇ ದಿನಾಚರಣೆಯನ್ನು ಆಚರಿಸಲು ಏರ್ಪಾಡುಮಾಡಿದಾಗ ಆಗಿನ ಸರಕಾರ ಪ್ರತಿಬಂಧಕಾಜ್ಞೆ ಜಾರಿಮಾಡಿ, ಅದನ್ನು ನಾವು ಮುರಿದಾಗ ಲಾಠೀಚಾರ್ಜ್, ಗೋಳೀಬಾರ್ ಮಾಡಿತು. ನಾಲ್ಕು ಜನ ಕೂಲಿಕಾರ ಸಹೋದರರು ಸತ್ತರು. ನಮ್ಮನ್ನು ಕೆಲವು ದಿನಗಳವರೆಗೆ ಅರೆಸ್ಟ್ ಮಾಡಿ ಪುನಃ ಬಿಟ್ಟರು. ನಮ್ಮ ಸ್ವಾತಂತ್ರ್ಯದ ಬಗೆಗಿನ ಅಭಿಲಾಷೆ ಹೆಚ್ಚಾಯಿತು. 1942ರ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಸೇರಿದೆವು. ಸೆಪ್ಟೆಂಬರ್ 1ರಿಂದ ಕಾರ್ಖಾನೆಯ ಏಳು ಸಾವಿರ ಜನರನ್ನೂ ಹುರಿದುಂಬಿಸಿ ಮುಷ್ಕರ ಹೂಡಿ, ಬೆಳಗ್ಗೆ ಮೆರವಣಿಗೆ, ಸಾಯಂಕಾಲ ಬಹಿರಂಗ ಸಭೆ, ಈ ರೀತಿ ಕಾರ್ಯಕ್ರಮ ಮಾಡಿ, ಜಿಲ್ಲೆಯ ಹಳ್ಳಿಗಳಿಗೆ ಹೋಗಿ ರೈತರನ್ನು ಹುರಿದುಂಬಿಸಿ, ಈಚಲ, ಗಂಧದ ಮರ ಕಡಿಸುವ ಕಾರ್ಯಕ್ರಮ ಮಾಡಿಸಿದೆವು. ಅಕ್ಟೋಬರ್ 2ರಂದು ನನ್ನನ್ನು ಅರೆಸ್ಟ್ ಮಾಡಿ ಶಿವಮೊಗ್ಗ ಜೈಲಿಗೆ ಕಳುಹಿಸಿದರು. ನನ್ನನ್ನೇ ನಂಬಿದ್ದ ನನ್ನ ತಾಯಿ, ಹೆಂಡತಿ, ಮೂರು ಮಕ್ಕಳನ್ನು ಕಾರ್ಖಾನೆಯ ಮನೆಯಿಂದ ಬಿಡಿಸಿ ಓಡಿಸಿಬಿಟ್ಟರು. ಒಂದು ವರ್ಷದನಂತರ ಎಲ್ಲರ ಜೊತೆ ನನ್ನ ಬಿಡುಗಡೆ ಆಯಿತು. ಶಿವಮೊಗ್ಗ ಜಿಲ್ಲೆಗೆ ಬರಬಾರದೆಂದು ನೋಟೀಸ್ ಜಾರಿಮಾಡಿದರಲ್ಲದೆ ಯಾವ ಕಾರ್ಖಾನೆಯಲ್ಲೂ ನನಗೆ ಕೆಲಸ ಕೊಡದಂತೆ ಆಜ್ಞೆಮಾಡಿದ್ದರು. 1947ರ ಡಿಸೆಂಬರ್ ವರೆಗೂ ನಮ್ಮ ವನವಾಸ, ಕಷ್ಟ ಹೇಳಲು ಬರೆಯಲು ಸಾಧ್ಯವಿಲ್ಲ. ವಡ್ಡರ ಹಾಗೆ ಅಲ್ಲಿ ಇಲ್ಲಿ ಚಂಗೂಲಿಮಾಡಿ ಜೀವಿಸಿದೆವು.

1947ರಲ್ಲಿ ಮತ್ತೆ ಹೋರಾಟ ಶುರು ಆದಾಗ ಭದ್ರಾವತಿಗೆ ನುಗ್ಗಿ ಕೂಲಿಗಾರರಲ್ಲೂ ವಿದ್ಯಾರ್ಥಿಗಳಲ್ಲೂ ಪ್ರಚಾರಮಾಡಿ ಮುಷ್ಕರ ಮಾಡಿಸಿದೆನು. ಭೂಗತನಾಗಿದ್ದೇ

ಇದ್ದು, ಬಂಧಿತನಾಗದೆ ಕೆಲಸಮಾಡಿದೆ. ಭದ್ರಾವತಿ ತಾಲ್ಲೂಕಿನ ಬಾರಂದೂರು. ಹಿರಿಯೂರು, ಸಿದ್ದಾಪುರ, ಕೂಡ್ಲಿಗೆರೆ, ಹೊಳೆಹೊನ್ನೂರುಗಳಿಗೆ ಹೋಗಿ ಈಚಲ, ಗಂಧದ ಮರ ಕಡಿಯಲು ಪ್ರೋತ್ಸಾಹಿಸುತ್ತಿದ್ದೆವು. ಹೀಗೆ ಸತ್ಯಾಗ್ರಹ ಮಾಡಿದವರನ್ನು ಬಂಧಿಸಿ, 10 12 ಗಂಟೆ ಇಟ್ಟುಕೊಂಡು ಬಿಡುತ್ತಿದ್ದರು. ಬಿ. ಮಾಧವಾಚಾರ್, ಡಿ. ಟಿ. ಸೀತಾರಾಮರಾವ್, ಎಚ್. ಎಸ್. ಹಾಲಪ್ಪ, ಬಿ. ಪಿ. ಹಾಲಪ್ಪ, ಬಿ. ಪಾಂಡುರಂಗ ಶೆಟ್ಟಿ, ಆರ್. ಯಲ್ಲಪ್ಪ, ಎಸ್. ಸೋಮಯ್ಯ ಇವರೆಲ್ಲ ನನ್ನ ಜೊತೆ ಭಾಷಣ, ಪ್ರಚಾರಕ್ಕೆ ಹಳ್ಳಿಗಳಿಗೆ ಬರುತ್ತಿದ್ದರು. ಇವರೆಲ್ಲ ಆಗ ಬಂಧಿತರಾಗಿ ಎರಡು ತಿಂಗಳು ಜೈಲಿನಲ್ಲಿ ಇದ್ದರು.

ಮುಂದೆ ಮೈಸೂರಲ್ಲಿ ಜವಾಬ್ದಾರಿ ಸರಕಾರ ಬಂದಾಗ, 1947ರ ಡಿಸೆಂಬರ್ 3ನೆಯ ತಾರೀಕಿಗೆ ನಮ್ಮನ್ನೆಲ್ಲ ಕಾರ್ಖಾನೆಯಲ್ಲಿ ಮತ್ತೆ ಕೆಲಸಕ್ಕೆ ತೆಗೆದುಕೊಂಡರು. 1966ರಲ್ಲಿ ನಿವೃತ್ತನಾಗಿದ್ದೇನೆ.

ವ್ಯ.ಶಿ. 11

## ಕೆ. ಸುಬ್ರಹ್ಮಣ್ಯಂ ಪಿಳ್ಳೈ

ಜನನ : 1899 ಉದ್ಯೋಗ : ಟರ್ನರ್ ವಿಳಾಸ : ಉತ್ಸವಾಂಬಾ ದೇವಾಲಯ ಬಳಿ, ಚಿತ್ರದುರ್ಗ

---



ಬೆಂಗಳೂರಲ್ಲಿ ಹುಟ್ಟಿದ ನಾನು 1921ರಿಂದಲೂ ಭಾರತ ಸ್ವತಂತ್ರವಾಗುವ ಬಗ್ಗೆ ಚಿಂತೆ ಮಾಡುತ್ತ ಇದ್ದೆ. ಆ ಕಾಲದಲ್ಲಿ ನಾನು ಕೋಲಾರ ಚಿನ್ನದ ಗಣಿಯಲ್ಲಿ ಕೆಲಸ ಮಾಡುತ್ತಿದ್ದವನು ಅಲ್ಲಿಂದ ಮದ್ರಾಸಿಗೆ ಹೋಗಿ ಅಲ್ಲಿನ ನಾನಾ ಚಳವಳಿಗಳಲ್ಲಿ ಪಾಲುಗೊಂಡೆ. ಅಲ್ಲಿಂದ, ಊರಿನವನಲ್ಲವೆಂದು 1928ರಲ್ಲಿ ಓಡಿಸಿಬಿಟ್ಟರು. ಬೆಂಗಳೂರಲ್ಲಿ ಅದೇ ವರ್ಷ ಗಣಪತಿ ಗಲಭೆ ಆದಾಗ ಅದರಲ್ಲೂ ಪಾಲುಗೊಂಡೆ. ಆಗ ತಗಡೂರು ರಾಮಚಂದ್ರರಾವ್, ಸೀತಾರಾಮ ಶಾಸ್ತ್ರಿ ನಾಯಕರು. 1930ರಲ್ಲಿ ಭದ್ರಾವತಿಗೆ ಬಂದು ಕಬ್ಬಿಣದ ಕಾರ್ಖಾನೆಯ ಮಿಶನ್ ಶಾಪಿನಲ್ಲಿ ಟರ್ನರ್ ಆಗಿ ಕೆಲಸಕ್ಕೆ ಸೇರಿದೆ. ಅಲ್ಲಿ ರಾಜಕೀಯ ಚಟುವಟಿಕೆ ನಡೆಸುವುದು ಕಷ್ಟವಾಗಿತ್ತು. ಮೊದಲನೆ ತಾಲೂಕು ಕಾಂಗ್ರೆಸ್ ಆಫೀಸು ಶುರು ಮಾಡಿದೆವು. ಇದೆಲ್ಲ ಒಬ್ಬನಿಂದ

ಆಗುವ ಕೆಲಸವಾಗಿರಲಿಲ್ಲ. ಶೇಷಗಿರಿ ಶಾಸ್ತ್ರಿ, ಮಾಧವಾಚಾರ್, ಗುರುನಾಥಾರಾಧ್ಯ, ಕಾರಂತ ಮುಂತಾದವರನ್ನು ಸೇರಿಸಿಕೊಂಡು ತಂಜಾವೂರು ರಾಘವೇಂದ್ರ ರಾಯರ ಸಹಾಯದಿಂದ ಕೆಲಸ ನಡೆಯುತ್ತಾ ಇತ್ತು.

1939ರಲ್ಲಿ ಮೇಲ್ಕಂಡ ಕಾರ್ಖಾನೆಯ ಕೆಲಸಗಾರರ ಸಂಘವನ್ನು ಸ್ಥಾಪಿಸಿದೆವು. ಅದು ಕುಂಟುತ್ತಾ ನಡೆಯುತ್ತಿತ್ತು. 1941ರಲ್ಲಿ ಈ ಸಂಘವು ರಿಜಿಸ್ಟರ್ ಆಯಿತು. ನಮ್ಮ ಸಂಸ್ಥಾನದಲ್ಲೆ ರಿಜಿಸ್ಟ್ರೇಶನ್ ಆದ ಮೊದಲ ಕೆಲಸಗಾರರ ಸಂಘ ಇದು. 1942ರ ಮೇ ತಿಂಗಳಲ್ಲಿ ಒಂದನೆಯ ತಾರೀಕು ಮೇ ದಿನಾಚರಣೆ ನಡೆಸಬೇಕೆಂದು ಸಂಘ ತೀರ್ಮಾನಿಸಿತು. ಮ್ಯಾನೇಜ್‌ಮೆಂಟ್ ವಿರೋಧಿಸಿತು. ಸರಕಾರ ನಿರ್ಬಂಧಾಜ್ಞೆ ಹಾಕಿತು. ಆಗ ಕೆಲಸಗಾರರ ಸಂಘದ ಅಧ್ಯಕ್ಷರು ಎಸ್. ಎಲ್. ಕೃಷ್ಣನ್, ಕಾರ್ಯದರ್ಶಿ ಎಚ್. ಕೆ. ಪುಟ್ಟಯ್ಯ. ತ್ರಿವರ್ಣಧ್ವಜ, ಸೋವಿಯತ್ ಧ್ವಜ, ಮೈಸೂರು ಧ್ವಜ, ಇವು ಮೂರನ್ನೂ ಹಿಡಿದು ಮೆರವಣಿಗೆ ಹೊರಟೆವು. ಹಳೇ ಭದ್ರಾವತಿ, ನ್ಯೂ ಟೌನ್, ಹುತ್ತ ಕಾಲನಿ ಮುಂತಾದೆಡೆಯಿಂದ ಮೆರವಣಿಗೆ ಸಂಘದ ಆಫೀಸಿಗೆ ಬಂತು. ಪೋಲಿಸರನ್ನು ಛೂಬಿಟ್ಟರೂ ನಾವು ಜಗ್ಗಲಿಲ್ಲ, ಕುಗ್ಗಲಿಲ್ಲ. ಮೂರು ದಿನದನಂತರ ನನ್ನ ಸಹ ವರ್ಕಿಂಗ್ ಕಮಿಟಿ ಸದಸ್ಯರನ್ನೆಲ್ಲ ಬಂಧಿಸಿದರು. 1944ರ ವರೆಗೂ ಸರಕಾರದ ಕ್ರಮ ಜರಗುತ್ತ ಇತ್ತು. (ಬಹುಶಃ ಖಟ್ಲೆ ಇರಬೇಕು—ಸಂ||)

1942ರ ಚಳವಳಿ ಶುರು ಆದಾಗ ಕಾಂಗ್ರೆಸ್ ಕಮಿಟಿಯವರನ್ನೆಲ್ಲ ಬಂಧಿಸಿದರು; ಇದನ್ನು ಕೇಳಿ ನಾವು ಕೆಲಸವನ್ನು ನಿಲ್ಲಿಸಿದೆವು. ನಾವು ತಯಾರಿಸುವ ಕಬ್ಬಿಣ ಒಯ್ದು ನಮ್ಮ ಜನರನ್ನೇ ಕೊಲ್ಲುತ್ತಾರೆಂದು ಸ್ಟ್ರೈಕ್ ಮಾಡಲಾಯಿತು. 1942ರ ಸಪ್ಟೆಂಬರ್ ಒಂದನೆಯ ತಾರೀಕಿನ ವರೆಗೆ ಸ್ಟ್ರೈಕ್ ಮುಂದುವರಿಯಿತು. ಒಂದನೆಯ ತಾರೀಕು ಮಧ್ಯರಾತ್ರಿ ನಮ್ಮನ್ನು ಬಂಧಿಸಿ ಶಿವಮೊಗ್ಗ ಜೈಲಿಗೆ ಒಯ್ದರು. ಅಲ್ಲಿಂದ ಮೈಸೂರು ಒಂಟಿಕೊಪ್ಪಲು ಕ್ಯಾಂಪ್, ಕೆಲವು ದಿನ ಮೈಸೂರು ಸಬ್ ಜೈಲ್, ಅಲ್ಲಿಂದ ಚಿಕ್ಕಮಗಳೂರು ಸಬ್ ಜೈಲ್, ಸ್ವಲ್ಪ ದಿವಸ ತುಮಕೂರು ಸಬ್ ಜೈಲ್, ಅಲ್ಲಿಂದ ಬೆಂಗಳೂರು ಸಬ್ ಜೈಲ್‌ಗಳಿಗೆ ವರ್ಗಾಯಿಸಿದರು. 1943ರ ನವೆಂಬರ್ ತಿಂಗಳಲ್ಲಿ ಬಿಡುಗಡೆ ಮಾಡಿದರು. ಭದ್ರಾವತಿಗೆ ಆರು ಮೈಲು ಸುತ್ತಲ ಏರಿಯಾದಲ್ಲಿ ಹೋಗಬಾರದೆಂದು ನೋಟೀಸ್ ಕೊಟ್ಟರು. ಶಿವಮೊಗ್ಗದಲ್ಲಿ ಉಳಿದುಕೊಂಡಿದ್ದೆ. ಅಲ್ಲಿ ಪ್ರತಿದಿನ ಸಿ.ಐ.ಡಿ.ಗಳ ಕಾಟ–ಬೆಳಗಿನಿಂದ ಸಂಜೆಯವರೆಗೆ. ಮುಂದೆ ಜೋಗ್‌ನಲ್ಲಿ ಇಂಡಿಯನ್ ಹ್ಯೂಂ ಪೈಪ್ ಕಂಪನಿಯಲ್ಲಿ ಕೆಲಸಮಾಡುತ್ತಿದ್ದೆ. ಸ್ವಾತಂತ್ರ್ಯನಂತರ ನಮ್ಮನ್ನು ಭದ್ರಾವತಿಗೆ ಕರೆಸಿಕೊಂಡು ಕೆಲಸ ಕೊಟ್ಟರು. 1956ರಲ್ಲಿ ರಿಟೈರಾಗಿ ಈಗ ಚಿತ್ರದುರ್ಗದಲ್ಲಿ ವಾಸಿಸುತ್ತಿದ್ದೇನೆ.

ವ್ಯ.ಶಿ. 12

# ಟಿ. ಎಸ್. ಓಬಳಪ್ಪ ಪಂಡಿತ್

ಜನನ : 1910 ಉದ್ಯೋಗ : ಕೃಷಿ ವಿಳಾಸ : ಅಂತರಗಂಗೆ, ತಾ॥ ಭದ್ರಾವತಿ



ಚಿತ್ರದುರ್ಗ ಜಿ॥ ಜಗಳೂರು ತಾ॥ ತೋರಣಗಟ್ಟೆ ಯುವನಾದ ನಾನು ಆ ಊರಲ್ಲಿ ವ್ಯಾಪಾರಮಾಡಿ ಕೊಂಡಿರಲು ಪತ್ರಿಕೆಗಳನ್ನು ಓದಿ ಸ್ವಾತಂತ್ರ್ಯ ಸಂಗ್ರಾಮದ ವಿಚಾರ ತಿಳಿದುಕೊಂಡೆನು. ಶಿವಪುರ ಕಾಂಗ್ರೆಸ್, ವಿದುರಾಶ್ವತ್ಥ ದುರಂತಗಳ ವಿಚಾರ ಕೇಳಿ ಮನಸ್ಸು ರೊಚ್ಚಿಗೆದ್ದಿತು. ಈ ಕಾಲಕ್ಕೆ ನಿಜ ಲಿಂಗಪ್ಪ, ಭೀಮಪ್ಪ ನಾಯ್ಕ, ವಾಸುದೇವ ರೆಡ್ಡಿ, ದೊಗ್ಗನಾಳಿನ ಕೊಟ್ರೆ ನಂಜಪ್ಪ ಮುಂತಾದ ಕೆಲವು ಲೀಡರುಗಳು ನಮ್ಮ ಗ್ರಾಮದಲ್ಲಿ ಸಭೆ ಸೇರಿಸಿ ಜನರಲ್ಲಿ ಜಾಗೃತಿ ಮಾಡಿದರು. ಅಲ್ಲದೆ 8–10 ತರುಣರು ಮುಂದಾದಾಗ ಗ್ರೂಪ್ ಕಾಂಗ್ರೆಸ್ ಕಮಿಟಿ ಮಾಡಿ ನನ್ನನ್ನು ಕಾರ್ಯ ದರ್ಶಿಯಾಗಿ ನೇಮಿಸಿದರು. ಆ ಲಾಗಾಯ್ತು ನಾನು ವ್ಯವಹಾರದ ಕಡೆ ಹೆಚ್ಚು ಲಕ್ಷ್ಯ ಕೊಡದೆ ಪ್ರಾಥಮಿಕ ಸದಸ್ಯರ ನೋಂದಣಿ, ಹಳ್ಳಿಗಳಲ್ಲಿ ಜವಾಬ್ದಾರಿ ಸರಕಾರದ ಧೋರಣೆಗಳ ಪ್ರಚಾರ ಮಾಡುತ್ತಿದ್ದೆ. ಹೊಳಲ್ಕೆರೆ ತಾ॥ ರಂಗಾಪುರದಲ್ಲಿ ಎಚ್. ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ಅಧಿವೇಶನ ನಡೆದಾಗ, ನಮ್ಮ ಗ್ರಾಮದಿಂದ ನನ್ನ ಮುಖಂಡತ್ವದಲ್ಲಿ 12 ಜನರ ಒಂದು ತಂಡ 60–70 ಮೈಲು ನಡೆದು, ದಾರಿಯಲ್ಲಿ ಸಿಕ್ಕ ಎಲ್ಲ ಊರುಗಳಲ್ಲಿ ಪ್ರಚಾರಮಾಡಿ ರಂಗಾಪುರಕ್ಕೆ ಹೋಗಿ ಅಲ್ಲಿ ಅಧಿವೇಶನದಲ್ಲಿ ಸ್ವಯಂ ಸೇವಕರಾಗಿ ದುಡಿದು, ಪುನಃ ನಡೆದೇ ಊರಿಗೆ ವಾಪಸಾಯಿತು. ನಮ್ಮ ಹುರಿದುಂಬಿದ ಮನಸ್ಸುಗಳಿಗೆ ಆಗ ಅದೆಲ್ಲ ಕಷ್ಟ ಎನಿಸಲೇ ಇಲ್ಲ.

ನಮ್ಮ ಗ್ರಾಮದಲ್ಲಿ ತಾ॥ ಕಾಂಗ್ರೆಸ್ ಸಮ್ಮೇಳನವನ್ನು ಆಗಿನ ಕಾಂಗ್ರೆಸ್ ಅಧ್ಯಕ್ಷ ಎಚ್. ಸಿ. ದಾಸಪ್ಪನವರ ಘನ ನೇತೃತ್ವದಲ್ಲಿ ನಡೆಸಿದೆವು. 101 ಜೋಡಿ ಎತ್ತು ಹೂಡಿ, ನೂರು ಮೈಲು ದೂರದಿಂದ ಅಧ್ಯಕ್ಷರ ಮೆರವಣಿಗೆ ಮಾಡಿದೆವು. ವೀರಣ್ಣಗೌಡ, ಪಟ್ಟಾಭಿರಾಮನ್, ಭೀಮಪ್ಪ ನಾಯಕ ಮುಂತಾದ ನಾಯಕರೂ ಬಂದಿದ್ದರು. ಸುತ್ತಲ ಹಳ್ಳಿಯಿಂದ 10–12 ಸಾವಿರ ಜನ ಬಂದು ಈ ಕಾರ್ಯಕ್ರಮ ವೀಕ್ಷಿಸಿದರು.

ಮುಂದೆ ನಮ್ಮ ಊರಲ್ಲಿ ಸೇಂದಿ ಅಂಗಡಿ ಪಿಕೆಟಿಂಗ್ ಶುರುಮಾಡಲು, ಇಡೀ ತಾಲೂಕನ್ನೇ ತಮ್ಮ ಪುಂಡಾಟಿಕೆಯಿಂದ ಹೆದರಿಸುತ್ತಿದ್ದ ಸೇಂದಿ ಕಂಟ್ರಾಕ್ಟರರು ನಮ್ಮ

ಮೇಲೆ ಕುಡುಕರಿಂದ ಬೈಸಿ, ಉಗುಳಿಸಿದರೂ ನಾವು ಶಾಂತಿಯಿಂದ ನಾಲ್ಕು ತಿಂಗಳ ಕಾಲ ಒಂದು ದಿನವೂ ಬಿಡದೆ ಪಿಕೆಟಿಂಗ್ ಮಾಡಿದೆವು. ಪೋಲಿಸರಿಂದ ವಿಪರೀತ ಕಿರುಕುಳ ಆಯಿತು. ಕೋಳ ತೊಡಿಸಿ ಎಳೆದೊಯ್ಯುವ ಪ್ರಯತ್ನ ಮಾಡಿಸಿದರು. ನಾವು ಶಾಂತಿವಿಧಾನಗಳಿಂದ ಕೆಲಸ ಮುಂದುವರಿಸಿದೆವು. ಆ ಸ್ಥಳ ಬಿಟ್ಟು ಊರಿಗೆ ಒಂದು ಮೈಲಿ ದೂರದಲ್ಲಿ ಬೇರೆ ಮನೆ ಕಟ್ಟಿ ಅಲ್ಲಿ ಮಾರಾಟ ಶುರುಮಾಡಿದರು. ನಮ್ಮ ಸ್ನೇಹಿತರಿಂದ ಆ ಅಂಗಡಿ, ಪೀಪಾಯಿ ವಗೈರೆ ಸುಟ್ಟುಹಾಕಿಸಿದೆವು. ನಮ್ಮನ್ನು ಬಂಧಿಸಲು ಬಂದಾಗ, ಅಕ್ರಮವಾದ ಹೆಂಡ ಮಾರುತ್ತಿರುವ ಅಂಗಡಿ ಸುಟ್ಟಿದೆ, ಮಾನ್ಯೂಲು ಅಂಗಡಿ ಹಾಗೇ ಇದೆ, ಎನ್ನಲು, ಕಂಟ್ರಾಕ್ಟರರ ಮೇಲೇ ಕ್ರಮ ತೆಗೆದುಕೊಂಡರು. ಪಿಕೆಟಿಂಗ್ ನಿಲ್ಲಲಿಲ್ಲ. ಪಿಕೆಟಿಂಗ್ ನಿಲ್ಲಿಸಿದರೆ ನಮ್ಮ ಊರ ಗ್ರಾಮ ದೇವರಿಗೆ ಸಾವಿರಾರು ರೂ. ಕೊಡುವುದಾಗಿ ಕಂಟ್ರಾಕ್ಟರರು ಊರ ಕೆಲವರಿಗೆ ಹೇಳಿ ಆಸೆ ಹುಟ್ಟಿಸಿ ಒಡಕು ಉಂಟುಮಾಡಲು ಯತ್ನಿಸಿದರು. ನಾನೂ ನನ್ನ ಸಂಗಡಿಗರೂ ಊರೂರುಗಳಿಗೆ ಹೋಗಿ ಭಿಕ್ಷೆ ಬೇಡಿ ಹಣ ಜೋಡಿಸಿ ದೇವರಿಗೆ ಕೊಡುತ್ತೇವೆಂದು ಸ್ಪಷ್ಟವಾಗಿ ತಿಳಿಸಿದಮೇಲೆ ಅಲ್ಲಿಗೆ ಅವರ ಕೀಟಲೆ ನಿಂತಿತು.

ತುರುವನೂರು ಸತ್ಯಾಗ್ರಹದಲ್ಲಿ ನಾನೂ ನನ್ನ ಭಾವಮೈದ ತಿಮ್ಮಪ್ಪನೂ ತುರುವನೂರಿನ ಕುನ್ನ, ಎಂ. ಹನುಮಂತಪ್ಪ, ಹನುಮಂತ ರೆಡ್ಡಿ, ವಿರುಪಣ್ಣ ಹನುಮಂತಪ್ಪ, ಹೀಗೆ ಆರು ಜನರ ಒಂದು ತಂಡ ನನ್ನ ಮುಂದಾಳುತನದಲ್ಲಿ ಪಾಲುಗೊಂಡಿತು. ತುರುವನೂರಿಗೆ 5–6 ಮೈಲು ದೂರದ ಬಾಗೆನಾಳು ಎಂಬ ಹಳ್ಳಿಯ ಬಳಿ ಈಚಲಮರ ಕಡಿಯಲು ನಮ್ಮನ್ನು ಬಂಧಿಸಿದರು. ಅಲ್ಲಿಂದ ಚಿತ್ರದುರ್ಗಕ್ಕೆ ಒಯ್ಯುವಾಗ, ದಾರಿಯಲ್ಲಿ ಎ. ಕೆ. ಹಟ್ಟಿಯಿಂದ ಈಚಲ ಹಗ್ಗ ಕಟ್ಟಿ ನಮ್ಮನ್ನು ಬೆತ್ತದಿಂದ ಹೊಡೆಯುತ್ತ ಎಳೆದು ತಂದರು. ಬೆಳಗಟ್ಟೆ ಗ್ರಾಮದ ಜನ ಈ ವರ್ತನೆಗೆ ಪ್ರತಿಭಟಿಸಲು ಹೊಡೆಯುವುದನ್ನು ಬಿಟ್ಟರು. ನಾನು ನಡೆದು ಬರಲಾರೆ, ಎಂದೆ. ಬೆಳಗಟ್ಟೆಯವರಲ್ಲಿ ಪೋಲಿಸರು ಗಾಡಿ ಕೇಳಿದರು. ಆದರೆ ಹಳ್ಳಿಗರು ಗಾಡಿ ಹೊಡೆಯಲು ನಿರಾಕರಿಸಿದರು. ಆ ಗ್ರಾಮದ ಜನ ನಮಗೆ ಊಟೋಪಚಾರ ಮಾಡಿಸಿದರು. ಕಡೆಗೆ ದುರ್ಗದ ಕಡೆಯಿಂದ ಬಂದ ಬಸ್ಸು ನಿಲ್ಲಿಸಿ ಪ್ರಯಾಣಿಕರನ್ನು ಇಳಿಸಿ, ಆ ಬಸ್ಸನ್ನು ಮತ್ತೆ ದುರ್ಗಕ್ಕೆ ತಂದರು. ಆದರಲ್ಲಿ ನಾವು ಪೋಲಿಸ್ ಸ್ಟೇಶನ್ ಸೇರಿದೆವು. ರಾತ್ರಿ ನನಗೆ ಮಾತ್ರ ಊಟ ಕೊಡದಿರಲು ಉಳಿದವರು ಪ್ರತಿಭಟಿಸಿದರು; ತಾವೂ ಉಣ್ಣುವುದಿಲ್ಲವೆಂದರು. ಕಡೆಗೆ ನನಗೂ ಊಟ ತರಿಸಿಕೊಟ್ಟರು. ಏಳು ದಿನ ರಿಮಾಂಡ್ ಆದಮೇಲೆ ನನಗೆ 1 ವರ್ಷ ಕಠಿಣ ಶಿಕ್ಷೆ, 100 ರೂ. ದಂಡ ಆಯಿತು. ಬೆಂಗಳೂರು ಸೆಂಟ್ರಲ್ ಜೈಲಿನಲ್ಲಿ ನಮ್ಮ ಕೈಯಲ್ಲಿ ದಿನಕ್ಕೆ 25 ಸೇರು ರಾಗಿ 15 ದಿನ ಬೀಸಿಸಿದರು. ಅನಂತರ ತೋಟದ ಕೆಲಸ ಕೊಟ್ಟರು. ನಾಲ್ಕು ತಿಂಗಳನಂತರ ಬೈರಮಂಗಲ ಜೈಲಿಗೆ ಕರೆದೊಯ್ದು ಅಲ್ಲಿ ಕೆರೆ ಅಗೆಯುವ ಕೆಲಸ ಕೊಟ್ಟರು. ನಾಲ್ಕು ತಿಂಗಳು ಹೀಗೆ ಸಾಗಿತ್ತು. ಆಗ ರಾಜ್ಯದಲ್ಲಿ

ಈ ಕ್ರಮದ ವಿರುದ್ಧ ಜೋಬ್ಬಾಟ ಆಗಲು, ಪುನಃ ಸೆಂಟ್ರಲ್ ಜೈಲಿಗೆ ತಂದರು. ಅಲ್ಲಿ ಕೈಗಾರಿಕೆ ಕೆಲಸ ಕೊಟ್ಟರು. ಒಂದು ವರ್ಷ 17 ದಿನ ಆದಾಗ ಬಿಡುಗಡೆ ಆಯಿತು.

ನನ್ನ ಬಂಧನ ಆದಾಗ, ನಮ್ಮ ಗ್ರಾಮದಿಂದ ಇನ್ನೂ ಕೆಲವು ಸತ್ಯಾಗ್ರಹಿಗಳು ಮುಂದೆ ಬಂದು ಚಳವಳಿ ಮುಂದುವರಿಸಬೇಕೆಂದು ನಾನು ಬರೆದ ಟಪಾಲ್ ಹೇಗೋ ಪೋಲಿಸರಿಗೆ ದೊರೆತು, ಮಾರನೆಯ ದಿನವೇ 20 ಪೋಲಿಸರ ತಂಡ ನಮ್ಮ ಗ್ರಾಮಕ್ಕೆ ರಾತ್ರಿಯೇ ಬಂದು, ಬೆಳಗಿನ ಜಾವ ಸತ್ಯಾಗ್ರಹಿಗಳ ಬಾಗಿಲ ಬಳಿ ಹುಸಿಗುಂಡು ಹಾರಿಸಿ, ಬೆದರಿಕೆ ಹಾಕಿದರೆಂದು ನನ್ನ ಬಿಡುಗಡೆಯ ಅನಂತರ ತಿಳಿಯಿತು. ಗ್ರಾಮದಲ್ಲಿ ಅನೇಕ ರನ್ನು ಬೆಲ್ಟುಗಳಿಂದ ಹೊಡೆದು ಹಿಂಸಿಸಿದರಲ್ಲದೆ ನನ್ನ ಇಬ್ಬರು ತಮ್ಮಂದಿರನ್ನೂ 10 ಜನ ಗಳನ್ನೂ ಬಂಧಿಸಿ ಎಂಟು ದಿನ ಇಟ್ಟು ಬಿಟ್ಟಿದ್ದರು. ತುರುವನೂರಲ್ಲೂ ನಮ್ಮೂರಲ್ಲೂ ಸರ್ಕಾರ ನಡೆಸಿದ ಹಿಂಸಾಚಾರಕ್ಕೆ ಇತಿಮಿತಿ ಇಲ್ಲ. ಈ ವಿಚಾರ ಗಾಂಧೀಜಿಗೂ ತಿಳಿದು ಮಹದೇವ ದೇಸಾಯಿಯವರು ಈ ವಿಚಾರಗಳ ಪರಿಶೀಲನೆಗೆ ಬಂದರು. ಅಲ್ಲದೆ ನನ್ನ ಜುಲ್ಮಾನೆ ಹಣಕ್ಕಾಗಿ, ನಮ್ಮ ಮನೆಗೆ ಬಂದು, ಮನೆಮಂದಿಯನ್ನು ಬೆದರಿಸಿ, ದವಸ ಧಾನ್ಯ, ಪಾತ್ರೆಪರಡಿ ಮುಂತಾದ 300 ರೂ.ಗಳ ಸಾಮಾನು ಜಪ್ತಿಮಾಡಿದರು. ಊರಲ್ಲಿ ಹರಾಜಿಗೆ ಯಾರೂ ನಿಲ್ಲದಿರಲು ಜಗಳೂರು ಸಂತೆಯಲ್ಲಿ ಅದನ್ನು ಹರಾಜು ಮಾಡಿದರು.

ಊರಿಗೆ ಬಂದನಂತರ ರಚನಾತ್ಮಕ ಕಾರ್ಯಗಳನ್ನು ಮುಂದುವರಿಸಿದೆನಲ್ಲದೆ, 1942ರಲ್ಲಿ ಜಿಲ್ಲಾ ಕಾಂಗ್ರೆಸ್ ಆದೇಶದಂತೆ ಭೂಗತ ಚಟುವಟಿಕೆಗಳಲ್ಲಿ ಸಹಕರಿಸಿದೆ. 1947ರಲ್ಲೂ ಬಂಧಿತನಾಗದೆ ಕೆಲಸಮಾಡಿದೆ. 1957ರಲ್ಲಿ ಭದ್ರಾವತಿಗೆ ಬಂದು ನೆಲಸಿದ್ದು, ಈಗ ಅಂತರಗಂಗೆ ಗ್ರಾಮದಲ್ಲಿ ನಾಲ್ಕು ಎಕರೆ ಖುಷ್ಕಿ ಜಮೀನು ಪಡೆದು ಅಲ್ಲಿ ಕೃಷಿ ಮಾಡುತ್ತಿರುವೆ.

ಶ್ಮಿ.ಶಿ. 13

## ಬಿ. ಆರ್. ಶಾಮ ಐತಾಳ್

ಜನನ : ? ಉದ್ಯೋಗ : ಚಿಲ್ಲರೆ ವ್ಯಾಪಾರ ವಿಳಾಸ : ತೀರ್ಥಹಳ್ಳಿ

---

ನಾನು ತೀರ್ಥಹಳ್ಳಿಯಲ್ಲಿ ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದಾಗ 1927ರಲ್ಲಿ ಗಾಂಧೀಜಿ ಯವರು (ಆಗಸ್ಟ್ 17) ಬಂದಿರಲು, ಅವರ ಭಾಷಣದಿಂದ ಪ್ರಭಾವಿತನಾಗಿ ಆಗಿನಿಂದಲೇ ಚಳವಳಿಯ ಕಡೆ ಆಕರ್ಷಿತನಾದೆ. ಅವರ ಜೊತೆ ರಾಜಾಜಿಯವರೂ ಗಂಗಾಧರರಾವ್ ದೇಶಪಾಂಡೆಯವರೂ ಬಂದಿದ್ದರು. ಅವರು ಬಂದಾಗ ಮಾಡಿದ



ಸ್ವಾಗತ ಸಮಿತಿಯಲ್ಲಿ ಅಂಡೆಕುಳಿ ಮಂಜಯ್ಯ, ಬಾವಿಕಟ್ಟೆ ನಾಗಾಭಟ್ಟರು, ಕಾಳಿಂಗಯ್ಯನ ರಾಘವೇಂದ್ರರಾಯರು, ಜ್ಞಾನೇಂದ್ರ ಪ್ರಭು, ವೈ ವಾಸಪ್ಪ. ಜವಳಿ ಮಾಧವರಾವ್, ಜವಳಿ ಭಾಸ್ಕರ ರಾವ್, ನಾಲೂರು ಶಂಕರಪ್ಪಗೌಡ, ಜವಳಿ ರಘುಪತಿರಾವ್ ಮುಂತಾದವರಿದ್ದರು.

1931-32ರಲ್ಲಿ ಶಿರಸಿ-ಸಿದ್ದಾಪುರಗಳಲ್ಲಿ ನಡೆದ ಕರನಿರಾಕರಣ ಚಳವಳಿಯಲ್ಲಿ, ನನಗೆ ತಿಳಿದ ಮಟ್ಟಿಗೆ ನಮ್ಮ ಊರ ಈ ಕೆಲವು ಮಹನೀಯರು ಬಂಧಿತರಾಗಿ ಒಂದೆರಡು ವರ್ಷ ಶಿಕ್ಷೆ ಅನುಭವಿಸಿದರು. ಅವರೆಂದರೆ, ಅಂಡೆಕುಳಿ ಮಂಜಯ್ಯ, ಪಿ. ವೆಂಕಟ ರಾವ್, ಜೆ. ಶ್ರೀಪತಿರಾವ್. ಮುಂದೆ, 1936ರಲ್ಲಿ ನಮ್ಮ ಊರಲ್ಲಿ ಕಾಂಗ್ರೆಸ್ ಸಮಿತಿ ಸ್ಥಾಪಿಸಿದಾಗ ಕಾಳಿಂಗಯ್ಯನ ರಾಘವೇಂದ್ರರಾವ್, ಬಾವಿಕಟ್ಟೆ ನಾಗಾಭಟ್ಟರು, ಕೆ. ಗೋಪಾಲ ಕೃಷ್ಣ ಕಾಮತ್, ಎಚ್. ಆರ್. ನಾಗೇಂದ್ರ ಶಾಸ್ತ್ರಿ, ಪಿ. ಮಹಾಬಲ ಹೆಬ್ಬಾರ್, ಬಿ. ಆರ್. ಶಿವರಾಮ ಐತಾಳ ಮುಂತಾದವರು ಸಮಿತಿಯಲ್ಲಿ ಇದ್ದರು. ಅಲ್ಲದೆ ಆಗ ಎನ್. ವೆಂಕಟಗಿರಿರಾವ್, ವೈ. ವಾಸಪ್ಪ ಮುಂತಾದವರು ಊರಲ್ಲಿ ಕಾಂಗ್ರೆಸ್‌ನ ಕೆಲವು ಪ್ರಮುಖರಾಗಿ ಇದ್ದರು. ಆಗಲೇ ನಾನು ಕಾಂಗ್ರೆಸ್ ಸದಸ್ಯನಾಗಿ ಕಾಂಗ್ರೆಸ್‌ನ ಚಟುವಟಿಕೆಗಳಲ್ಲಿ ಪಾಲುಗೊಳ್ಳಹತ್ತಿದೆ. ನಾನು ಟಿ ಸಿ.ಸಿ. ಸದಸ್ಯನೂ ಆಗಿದ್ದೆ.

1939ರಲ್ಲಿ ನಮ್ಮಲ್ಲಿ ಅರಣ್ಯಸತ್ಯಾಗ್ರಹ ಆದಾಗ ನಾನು ಅದರ ಯಶಸ್ಸಿಗೆ ದುಡಿದೆ; ಆದರೆ ಬಂಧಿತನಾಗಲಿಲ್ಲ. ತೀರ್ಥಹಳ್ಳಿ ಸಮೀಪದ ಅರಣ್ಯದಲ್ಲಿ ಕೆಲವರು ಬಗನೆಮರಗಳನ್ನು ಕತ್ತರಿಸಿ ಬಂಧಿತರಾಗಿ ಆರು ತಿಂಗಳಿಂದ ಒಂದು ವರ್ಷ ಶಿಕ್ಷೆಗೆ ಒಳಗಾದರು. ಅವರೆಂದರೆ, ಟಿ. ನರಸಿಂಹ ಭಟ್ಟ (ತೆಂಗಿನಕೆರೆ), ಡಿ. ವಿ. ಶ್ರೀನಿವಾಸಮೂರ್ತಿ, ಟಿ. ಆರ್. ಚಂದ್ರಶೇಖರ, ಕೆ. ಜಿ. ಮಹಾಬಲ ಭಟ್ಟ, ಗಿರಿಯಪ್ಪಗೌಡ ಮುಡಬಾಗಿಲು, ಜ್ವರಾರಿ ಯು. ಶ್ರೀನಿವಾಸರಾವ್. 1940 ಮತ್ತು 1942ರಲ್ಲಿ ನಡೆದ ಮೈಸೂರು ಕಾಂಗ್ರೆಸ್ ಅಧಿವೇಶನಗಳಿಗೆ ನಾನು ತಾಲೂಕಿನ ಪ್ರತಿನಿಧಿಯಾಗಿ ಹೋಗಿದ್ದೆ. 1942ರಿಂದ 1948ರ ವರೆಗೆ ಡಿ.ಸಿ.ಸಿ. ಕಾರ್ಯದರ್ಶಿಯಾಗಿಯೂ 1945ರಿಂದ 1948ರ ವರೆಗೆ ಡಿ.ಸಿ.ಸಿ. ಸದಸ್ಯನಾಗಿಯೂ ಇದ್ದೆ.

1942ರಲ್ಲಿ ಕಾಂಗ್ರೆಸ್ಸನ್ನು ಪ್ರತಿಬಂಧಿಸಿದಾಗ ನಾನು ನೇರ ಚಳವಳಿಯಲ್ಲಿ ಧುಮುಕಿದೆ. ಬಹಿರಂಗ ಸಭೆ, ಮೆರವಣಿಗೆ, ಪ್ರಚಾರ, ನಿಧಿಸಂಗ್ರಹ, ಸತ್ಯಾಗ್ರಹ ಸಂಘಟನೆಯ ಕೆಲಸ ಮಾಡುತ್ತಲಿದ್ದೆ. ಟೆಲಿಗ್ರಾಫ್ ತಂತಿಗಳನ್ನು ಕತ್ತರಿಸುವ ಕೆಲಸವನ್ನು ನಾನೂ ಶಾಂತವೇರಿ ಗೋಪಾಲಗೌಡರೂ, ನಾಗಭೂಷಣರಾವ್, ದೇವರಗುಡಿ ಕೃಷ್ಣಪ್ಪಗೌಡ, ನಾರಾಯಣ ಶೆಟ್ಟಿ ಬಸವಾನಿ, ರಘುರಾಮ ಭಟ್, ಕೆ. ವೆಂಕಟರಾಯ ಕಾಮತ್,

ಡಿ. ಟಿ. ಚಂದ್ರಶೇಖರ್, ಹೀಗೆ ಎಂಟು ಜನರು ಮಾಡಿದೆವು. ಕೊಪ್ಪ ರೋಡಿನ ಮೂರು ಮೈಲು ಫಾಸಲಿನಲ್ಲಿ ತಿರುಳಿಬೈಲ್ ಎಂಬ ಊರ ಹತ್ತಿರ ಎರಡು ಸಾರಿ ತಂತಿ ಕತ್ತರಿಸಿದೆವು. ಮೂರನೆಯ ಬಾರಿ ಕೊಪ್ಪ ರೋಡಿನಲ್ಲಿ 10 ಮೈಲು ದೂರದಲ್ಲಿ 2,000 ಅಡಿ ತಂತಿ ಕತ್ತರಿಸಿದೆವು. ಕೊನೆಯ ಇಬ್ಬರ ವಿನಾ ಉಳಿದ ಆರು ಜನರನ್ನು 15-11-1942 ರಲ್ಲಿ ಬಂಧಿಸಿ ಖಟ್ಲೆ ಹಾಕಲು, ಏಳು ತಿಂಗಳು ಕಾಲ ನಾವು ಜೈಲುವಾಸವನ್ನು ಅನುಭವಿಸಿದೆವು. 22-6-1943ರಲ್ಲಿ ಬಿಡುಗಡೆ ಆಯಿತು. ಕೊನೆಯ ಇಬ್ಬರು ತಲೆತಪ್ಪಿಸಿಕೊಂಡು, ಕಡೆಯ ತನಕ ಪೋಲಿಸರಿಗೆ ಸಿಗಲಿಲ್ಲ.

1946ರಲ್ಲಿ ಸಾರ್ವಜನಿಕರಿಂದ 2,000 ಚಂದಾ ಸಂಗ್ರಹಿಸಿ ನನ್ನ ಕೈಯಿಂದ ಸ್ವಲ್ಪ ಬಂಡವಾಳ ಹೂಡಿ ಚರಖಾ ಸಂಘ ಸ್ಥಾಪಿಸಿ, ಮೈಸೂರು ಚರಖಾ ಸಂಘದ ಆಶ್ರಯದಲ್ಲಿ ಖಾದಿ ಮಾರಾಟ ವಗೈರೆ ಮಾಡಿದೆವು. 1956ರಲ್ಲಿ ನನ್ನ ಕೈಯಿಂದಲೇ 2,000 ರೂ. ನಷ್ಟವಾಗಿ, ಬಂಡವಾಳವೆಲ್ಲವೂ ಕರಗಿ, ಸಂಘವನ್ನು ಮುಚ್ಚಬೇಕಾಯಿತು.

1947ರ ಚಳವಳಿ ಕಾಲಕ್ಕೆ ನನ್ನನ್ನು ಬಂಧಿಸಿ ಎರಡು ತಿಂಗಳು ಸ್ಥಾನಬದ್ಧತೆಯಲ್ಲಿ ಇಟ್ಟರು. 1948ರಲ್ಲಿ ತೀರ್ಥಹಳ್ಳಿ ರಾಮೇಶ್ವರ ಹಾಗೂ ಇತರ ದೇವಾಲಯಗಳಲ್ಲಿ ಹರಿಜನರ ಪ್ರವೇಶಮಾಡಿಸಿದೆ. ಮೂರು ಬಾರಿ ಪುರಸಭೆಗೆ ಆರಿಸಿಬಂದು, ನಾಲ್ಕು ವರ್ಷ ಪುರಸಭಾಧ್ಯಕ್ಷನಾಗಿದ್ದೆ. ಗೇಣಿದಾರರ ಸಂಘ, ಅನೇಕ ಸಹಕಾರಿ ಸಂಘಗಳು, ತುಂಗಾ ವಿದ್ಯಾವರ್ಧಕ ಸಂಘಗಳಲ್ಲಿ ದುಡಿದಿದ್ದೇನೆ. ನನ್ನ ರಾಜಕೀಯ ಜೀವನದಲ್ಲಿ ಸ್ವಂತವಾಗಿ ಇದ್ದ ಸ್ವಲ್ಪ ಜಮೀನನ್ನೂ ಮನೆಯನ್ನೂ ಕಳೆದುಕೊಂಡಿದ್ದೇನೆ.

ಮೈ.ಶಿ. 14

## ಕೆಲವು ನೆನಪುಗಳು



ಟಿ. ವಿಶ್ವನಾಥರಾವ್

ಜಯ ಜಯ ಪಾವನಚರಿತನೆ ।
ಜಯ ಭಾರತ ಭಾಗ್ಯೋದಯ ಗಾಂಧೀ ॥
ಮಕ್ಕಳ ಕಾಸನು ಕೊಳ್ವನು ಗಾಂಧೀ ।
ಮನೆಯಂಗಳದೊಳು ಬರುವನು ಗಾಂಧೀ ॥
॥ ಜಯ ಜಯ ॥

ಎಂಬ, ಕನುಕೋಡು ನರಸಿಂಹಶಾಸ್ತ್ರಿಗಳವರು ಆ ಸಂದರ್ಭಕ್ಕೆಂದೇ ರಚಿಸಿದ್ದ, ಪ್ರಾಸಬದ್ಧ, ಲಯಬದ್ಧ ಕವನವನ್ನು ಒಂದೇ ಕಂಠದಿಂದ ಹಾಡುತ್ತಾ,

ನಾವೆಲ್ಲ ಆ ಮಹಾಸೇನಾನಿಯ ಬರವನ್ನು ಹಾರೈಸುತ್ತ, ತುಂಬ ಗಡಿಬಿಡಿಯಲ್ಲಿದ್ದೆವು (17-8-1927).

ಈಗಿನ ತೀರ್ಥಹಳ್ಳಿ ಬಸ್ ಸ್ಟ್ಯಾಂಡಿನ ಹಿಂಭಾಗದಲ್ಲಿ ಆಗ ಸಿಲ್ವರ್ ಜ್ಯೂಬಿಲಿ ರೀಡಿಂಗ್ ರೂಮ್ ಇತ್ತು. ಅಲ್ಲಿ ಗಾಂಧೀಜಿಯವರು ಸ್ವಲ್ಪ ಕಾಲ ತಂಗುವ, ವಿಶ್ರಾಂತಿ ಪಡೆಯುವ ಕಾರ್ಯಕ್ರಮವಿತ್ತು. ನಾವು ಊರಲ್ಲೆಲ್ಲ ಪ್ರಭಾತ್‌ಫೇರಿ ನಡೆಸಿ, ರೀಡಿಂಗ್ ರೂಮ್ ಹತ್ತಿರ ಸೇರಬೇಕೆಂದು ಯೋಜನೆಯಾಗಿತ್ತು ; ಹಾಗೆ ನಾವು ಸುತ್ತಿಬರುವುದರೊಳಗೆ ರೀಡಿಂಗ್ ರೂಮಿನ ಹತ್ತಿರ ಜನಜಾತ್ರೆ. ನಾವೆಲ್ಲ ಸಣ್ಣ ಹುಡುಗರು, ಹರಕು ಅಂಗಿಗಳನ್ನು ಹಾಕಿಕೊಂಡು ಸಂದಿಯಲ್ಲಿ ನುಗ್ಗುವುದೇ ಕೆಲಸ. ಯಡೆಹಳ್ಳಿ ವಾಸಪ್ಪನವರಲ್ಲಿ ಒಬ್ಬರು, ಒಳ್ಳೆ ಕಂಠದಿಂದ ಪ್ರಭಾತ್‌ಫೇರಿ ಹಾಡುಗಳನ್ನು ಹೇಳಿಕೊಡುತ್ತಿದ್ದರು. ಮುಂದೆ ಆ ಮನೆಯವರಲ್ಲೇ ತೀರ್ಥಹಳ್ಳಿ ತಾಲ್ಲೂಕಿನಲ್ಲೇ ಮೊದಲನೆಯ ಧ್ವಜ ಸತ್ಯಾಗ್ರಹಿ, ಎ. ಗುರುಮೂರ್ತಿಯವರು ಬೆಳಗಿದುದು. ನಿಸ್ಸ್ವಾರ್ಥ ಹಿನ್ನೆಲೆಯ ವೀರ. ಇವರೂ ಮುಂದೆ ನನ್ನ ಜತೆಗಾರರೇ.

ಹನ್ನೊಂದು ಹನ್ನೆರಡು ಘಂಟೆಯ ವೇಳೆಗೆ ಗಾಂಧೀಜಿಯವರ ಕಾರ್ ಅಲ್ಲಿಗೆ ಬಂದಿತು. ಜಯಘೋಷ ಭೋರ್ಗರೆಯಿತು. ನಾವು ಸಾಲಾಗಿ ನಿಂತಿದ್ದವರು, 'ಜಯ ಜಯ ಪಾವನ' ಶುರುಮಾಡಿದೆವು. ಯಾರು ಕೇಳಿದರೋ ಬಿಟ್ಟರೋ, ಆ ಜನರ ಸಮುದ್ರದಲ್ಲಿ. ಕಾರಿನಿಂದ ಇಳಿದವರೇ ಗಾಂಧೀಜೀ ಜನರೆಡೆಗೊಮ್ಮೆ ನೋಡಿ, ಹಸ್ತವನ್ನೆತ್ತಿ, ತಲೆಯಲ್ಲಾಡಿಸಿ, ವಿಶ್ರಾಂತಿಗೆಂದು ಒಳಗೆ ನಡೆದರು. ಜನಜಂಗುಳಿ ನೊರೆಯಿತು.

ಗಾಂಧೀಟೋಪಿಧಾರಿಗಳೊಬ್ಬರು ಹೊರಗೆ ಬಂದರು. ಅವರು ತೊಟ್ಟಿದ್ದ ನೆಹರೂ ಬನಿಯನ್ನಿನ ಜೇಬುಗಳೆರಡೂ ದೊಡ್ಡವಾಗಿದ್ದವು. ಹೊರಗೆ ಬಂದವರೇ ಏಕಾಏಕಿ, ಹತ್ತಿರದಲ್ಲಿದ್ದ ಟೇಬಲ್ ಒಂದನ್ನು ಹತ್ತಿ ಭಾಷಣ ಪ್ರಾರಂಭಮಾಡಿಬಿಟ್ಟರು. ನಾನು ಕೇಳಿದ ಮೊದಲನೆಯ ರಾಜಕೀಯ ಭಾಷಣದ ಮಂಗಳ ಶ್ಲೋಕವದು— ದೇಶಪಾಂಡೆ ಗಂಗಾಧರರಾಯರ ಕಂಚಿನ ಕಂಠದ ಘೋಷಣೆ.

ಅನಂತರ ಸಿ. ರಾಜಗೋಪಾಲಾಚಾರಿಯವರ ಭಾಷಣ; ಅವರು ಖಾದೀಟೋಪಿ ಧರಿಸಿರಲಿಲ್ಲ; ಪಂಚೆ, ಬನಿಯನ್, ಮೇಲೊಂದು ಅಂಗವಸ್ತ್ರ. ಬೋಳುತಲೆಯ ನಡುವೆ ಪಿಳ್ಳಂಜುಟ್ಟು. ಈ ಭಾಷಣ ಗೊತ್ತೇ ಆಗಲಿಲ್ಲ. ಅಂತು "ಮಧ್ಯಾಹ್ನ ವೈ. ಶೇಷಪ್ಪನವರ ನಾಟಕದ ಥಿಯೇಟರಿನಲ್ಲಿ ಗಾಂಧೀಜಿಯವರ ಭಾಷಣ ಅದ ; ಅಲ್ಲಿಗೆ ಎಲ್ಲರೂ ಬರ್ರಿ ; ಗಾಂಧೀಜಿಯವರಿಗೆ ಸ್ವಲ್ಪ ಅಜಾರಿ ( ! ) ಅದs " ಎನ್ನುವ ಮಾತುಗಳು ತಿಳಿದವು. ನೆಟ್ಟಗೆ ಶೇಷಪ್ಪನವರ ನಾಟಕ ಮಂದಿರಕ್ಕೆ ಓಡಿದೆವು ; ಜನಸಮ್ಮರ್ದದಲ್ಲಿ ಬೆರೆತಾಗ ನಮಗೆ ಗೊತ್ತಾಯಿತು, ಗಾಂಧೀಜಿಯವರು ನಮ್ಮ ಮನೆಗೆ ಬರುತ್ತಾರೆ ಎಂದು.

ನಮ್ಮ ಸೋದರಮಾವ, ಜ್ವರಾರಿ ಕಂಪನಿ ಮಂಜುನಾಥಯ್ಯನವರು ಹೊಸಮನೆ

ಯೊಂದನ್ನು ಕಟ್ಟಿಸುತ್ತಿದ್ದರು. ಹೆಚ್ಚಿನ ಕೆಲಸಗಳೆಲ್ಲ ಮುಗಿದಿದ್ದವು. ಗೃಹಪ್ರವೇಶಕ್ಕೆ ಮುಹೂರ್ತ ಹುಡುಕುತ್ತಿದ್ದರು. ಆ ಗಳಿಗೆಗೆ ಸರಿಯಾಗಿ ಗಾಂಧೀಜಿಯವರ ಕಾರ್ಯಕ್ರಮ ತೀರ್ಥಹಳ್ಳಿಯಲ್ಲಿ ಕೂಡಿಬರಬೇಕೆ? ಗಾಂಧೀಜಿಯವರು ಇಡೀ ತೀರ್ಥಹಳ್ಳಿಯವರಿಗೇ ಆಶ್ಚರ್ಯವಾಗುವಂತೆ, ಮಂಜುನಾಥಯ್ಯನವರ ಹೊಸಮನೆಯ ಗೃಹಪ್ರವೇಶವನ್ನು ತಮ್ಮ ಅಮೃತಹಸ್ತದಿಂದ ನೆರವೇರಿಸಿಕೊಡಲು ಒಪ್ಪಿಕೊಂಡುಬಿಟ್ಟರು. ಇದು ಹೇಗೆ ಆಯಿತು? ಇದು ಹೇಗೆ ಸಾಧ್ಯ ? ಎಂದುಕೊಳ್ಳುತ್ತಿರುವಾಗಲೇ ಮಧ್ಯಾಹ್ನ ಮೂರೂವರೆ ಘಂಟೆ ಆಗಿಹೋಯಿತು.

ಆಗ ಕಂಟ್ರಾಕ್ಟರ್ ಚಲೋ ಶೆಟ್ಟಿ ಎಂಬ ಪರಮಧಾರ್ಮಿಕ ಗಾಂಧೀ ಭಕ್ತರಾದ ಕಂಟ್ರಾಕ್ಟರ್, ಮಂಜುನಾಥಯ್ಯನವರಿಗೆ ಸಹಾಯ ಒದಗಿಸಿದರು. (ಈ ಹಿರಿಯ ಜೀವ ನೂರಾರು ಜನ ಸರ್ಪ ಕಡಿದವರಿಗೆ ಧರ್ಮಾರ್ಥ ಚಿಕಿತ್ಸೆ ನಡೆಸಿ ಗುಣ ಏರ್ಪಡಿಸುತ್ತಿದ್ದರು. ನನಗೆ ಗೊತ್ತಿರುವಂತೆ, ಅವರಲ್ಲಿಗೆ ಹೊತ್ತುಕೊಂಡುಹೋಗಿ ಹಾಕಲ್ಪಟ್ಟ ಸರ್ಪ ಕಡಿದವನು ಯಾರೂ ಆಸು ನೀಗಿರಲಿಲ್ಲ. ಯಾವ ಪ್ರತಿಫಲವನ್ನೂ ಹಾರೈಸದೆ ಚಿಕಿತ್ಸೆ ನಡೆಸುತ್ತಿದ್ದವರು). ಚಲೋಶೆಟ್ಟರು ತಮ್ಮ ಕೈಕೆಳಗಿನ ಎಲ್ಲ ಆಳುಗಳನ್ನೂ ಆ ಘಳಿಗೆಯಲ್ಲಿ ನಮ್ಮ ಮಾವನವರ ಮನೆಯ ಅಂಗಳಕ್ಕೆ ಕರೆಸಿಕೊಂಡು ಕೆಲಸಕ್ಕೆ ತೊಡಗಿಸಿದ್ದರು. (ತೀರ್ಥಹಳ್ಳಿಯಲ್ಲಿ ನಡೆದ ಪರಶುರಾಮ ಸ್ವಯಂಸೇವಕ ಶಿಕ್ಷಣ ಶಿಬಿರಕ್ಕೆ ಉದಾರವಾಗಿ ಸಹಾಯ ಮಾಡಿದ್ದುದೇ ಅಲ್ಲದೆ, ಶಿಬಿರದವರ ಉಪಯೋಗಕ್ಕಾಗಿ, ಒಂದು ದೊಡ್ಡ ಮಲ್ಲಕಂಭವನ್ನು, ಕೇವಲ ಕೆಚ್ಚುತುಂಬಿದ ಹಲಸಿನ ಮರದ ತುಂಡಿನಿಂದ ಈ ಸೆಟ್ಟರು ನಯನಾಜೂಕಾಗಿ ನಿರ್ಮಿಸಿಕೊಟ್ಟರು.) ಮತ್ತೊಂದು ಘಂಟೆಯಲ್ಲಿ ಗಾಂಧೀಜಿಯವರು ಕಾರ್‌ನಿಂದ ಇಳಿದು, ಮನೆಯ ಬಾಗಿಲವರೆಗೆ ನಡೆಯಬೇಕಾಗಿದ್ದ ನಾಲ್ವತ್ತು ಹೆಜ್ಜೆಗಳ ದಾರಿಯನ್ನು ಸ್ವಚ್ಛಮಾಡಿ, ಬಿಳಿಯ ಮರಳಿನಿಂದ ಹಾಸಿದ್ದರು. ಬಾಗಿಲನ್ನು ಹೊಂದಿಸಿ, ಪುರೋಹಿತರುಗಳಿಂದ ಕುಂಕುಮದಲ್ಲಿ ಶ್ರೀಕಾರವನ್ನು ಬರೆಯಿಸಿ ಆಗಿತ್ತು.

"ಓಹ್ಹೋ ಹೊ್ಹೋ! ಬಂದರು, ಬಂದರು, ಗಾಂಧೀಜಿಯವರು ಬಂದರು!" ಎನ್ನುತ್ತಿರುವಾಗಲೇ ಅವರು, ಶೇಷಪ್ಪನವರ ಥಿಯೇಟರ್‌ನ ಕಾರ್ಯಕ್ರಮವನ್ನು ಮುಗಿಸಿಕೊಂಡು, ಕಾರಿನಲ್ಲಿ ಮಂಜುನಾಥಯ್ಯನವರ ಮನೆಯ ಮುಂದೆ ಬಂದು, ಕಾರನ್ನು ನಿಲ್ಲಿಸಿ, ನಗುತ್ತ ಇಳಿದರು. ನಾವೆಲ್ಲ ದಿಕ್ಕೆಟ್ಟು ಅತ್ತಿತ್ತ ಓಡಾಡುತ್ತಿರುವಾಗ ಬಾಪೂಜಿಯವರು ತಡಮಾಡದೆ, ಕಾಂಪೌಂಡಿನ ಬಾಗಿಲನ್ನು ದಾಟಿ ಖಾದೀಧಾರೀ ವಕೀಲ ಮಾಳೂರು ಸುಬ್ಬರಾಯರ ಜತೆಯಲ್ಲಿ ಏನೋ ಮಾತುಗಳನ್ನಾಡುತ್ತ, ವಿಚಾರಿಸುತ್ತ ನಡೆದು ಜಗುಲಿ ಹತ್ತಿದರು.

ಭಯಭಕ್ತಿಯಿಂದ ನಮ್ಮ ಮಾವನವರು, ಹರಿವಾಣವೊಂದರಲ್ಲಿ ಒಂದು ನೂರು ರೂಪಾಯಿಗಳನ್ನಿಟ್ಟು (ತುಳಸೀದಳವೊಂದನ್ನು ಮಾಳೂರು ಸುಬ್ಬರಾಯರು ಇಡಿಸಿದ್ದ

ರೆಂದು ನನ್ನ ನೆನಪು) ಹೂ ಹಣ್ಣುಗಳ ಸಮೇತ, ಮಗ ಯು. ಶ್ರೀನಿವಾಸರಾವ್‌ನೊಡನೆ ಗಾಂಧೀಜಿಗೆ ಅರ್ಪಿಸಿದರು. ಅತ್ತೆ ಗಂಗಮ್ಮನವರು, ಯಾವುದೋ ಒಂದು ಬಂಗಾರದ ಚೂರನ್ನು ಗಾಂಧೀಜಿಯವರಿಗೆ ಅರ್ಪಿಸಿದರು. ನಮ್ಮ ಅಕ್ಕ ಲಕ್ಷ್ಮಮ್ಮ ಮಂಗಲಸೂತ್ರದ ತಾಳಿಯನ್ನು ಗಾಂಧೀಜಿಗೆ ಅರ್ಪಿಸಿದರು. (ನಮ್ಮ ತಂದೆಯವರು ತೀರಿಹೋಗಿ ಕೆಲವಾರು ದಿನಗಳು ಮಾತ್ರ ಆಗಿತ್ತು.) ಇವನ್ನೆಲ್ಲ ನೋಡುತ್ತ, ಕೇಳುತ್ತ, ಹರಿವಾಣವನ್ನು ಬಾಪೂಜೀಯವರು ತಮ್ಮ ಹಿಂದೆ ಬರುತ್ತಿದ್ದ ಯಾರೋ ಒಬ್ಬರ ಕೈಯಲ್ಲಿ ಕೊಟ್ಟು, ಬಂಗಾರಗಳನ್ನು ಬೇರೊಬ್ಬರ ಕೈಯಲ್ಲಿ ಕೊಟ್ಟು, ಪುರೋಹಿತರು ಕೊಟ್ಟ ಅಕ್ಷತೆಕಾಳುಗಳನ್ನು ಹಾಕಿ, ಬಾಗಿಲು ತೆಗೆದರು. ಒಳಗೆ ಹೆಜ್ಜೆಯಿಟ್ಟು ಬಲಗಡೆಯ ಕೋಣೆಗೆ ನಡೆದರು. ಅಲ್ಲಿಯ ಕೋಣೆಯಲ್ಲಿ ಮಂಚದ ಮೇಲೆ ಫಾಸಿಗಳನ್ನು ಬಿಡಿಸಿದ್ದರ ಮೇಲೆ, ಸ್ವಲ್ಪ ಕುಳಿತಂತೆ ಮಾಡಿ, ದೇಶಕ್ಕಾಗಿ ತ್ಯಾಗ ಮಾಡಬೇಕೆಂದು, ನಮ್ಮ ಅಮ್ಮನತ್ತ ತಿರುಗಿ ಹೇಳಿ, ಮತ್ತೊಂದು ನಿಮಿಷದಲ್ಲಿ, ಅವರಿಗೆ ಅರ್ಪಿಸಿದ್ದ ತಟ್ಟೆಯಲ್ಲಿದ್ದ ಒಂದು ಕಿತ್ತಲೆಯ ಹಣ್ಣನ್ನು ತೆಗೆದು, ಹತ್ತಿರದಲ್ಲಿಯೇ ನಿಂತಿದ್ದ, ನನ್ನ ಅಕ್ಕ ಶಾರದಮ್ಮನಿಗೆ ಕೊಟ್ಟು, ಹೊರಟರು ಕೋಣೆಯ ಹೊರಗಿನ ಬಾಗಿಲಿನಿಂದ.. (ಒಟ್ಟು ಲೆಕ್ಕಮಾಡಿದರೆ ಅರವತ್ತಾರು ಹೆಜ್ಜೆಗಳಿಗೆ ನೂರಾರು ರೂಪಾಯಿಗಳು. ಅಬ್ಬ ಬನಿಯಾ!) ನಾನು ಎಷ್ಟು ಹಾರಯಿಸಿದರೂ ನನಗೆ ಯಾವ ಹಣ್ಣನ್ನೂ ಕೊಡಲಿಲ್ಲ ಮುದುಕ. ಇಂದಿಗೂ ಈ ವಿಚಾರವಾಗಿ ನನಗೂ ಅಕ್ಕನಿಗೂ (ಇಬ್ಬರೂ ಅರವತ್ತು ವರ್ಷಕ್ಕೆ ಹತ್ತಿರ ಬಂದಿದ್ದೇವೆ) ಚರ್ಚೆ ನಡೆಯುತ್ತಲೇ ಇರುತ್ತೆ. ಆದರೆ ಅಂದು ಗಾಂಧೀಜಿಯವರು ನಮ್ಮ ಮನೆಯಲ್ಲಿ ಕೊಟ್ಟ ಆಜ್ಞೆಯಂತೆ, ಇಡೀ ಜ್ವರಾರೀ ಕುಟುಂಬವೇ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕಿತು. ಬೇರೆ ಪ್ರಚೋದನೆಗಳು ಏಕೆ, ಆ ಮಹಾಸೇನಾನಿಯೇ ಮನೆಗೆ ಬಂದಮೇಲೆ ?

* * *

ಈ ಮನೆತನದ ಸ್ವಾತಂತ್ರ್ಯ ಸಂಗ್ರಾಮದ ಮೊದಲನೆಯ ಬಲಿ, ನವವಿವಾಹಿತ, ತರುಣ, ಯು. ಶ್ರೀನಿವಾಸರಾವ್. ದೂರದ ಭೈರಮಂಗಲ ಕೆರೆಯಲ್ಲಿ ಅವರನ್ನು ಬರಿಗಾಲಿನಲ್ಲಿ ಮಣ್ಣು ಹೊರಲಿಕ್ಕೆ ಹಚ್ಚಿದ್ದರು, ಸುಡುವ ಬಿಸಿಲಿನಲ್ಲಿ. ಮಂಜುನಾಥಯ್ಯನವರು ಮತ್ತೆ ಸೆರೆಮನೆ ಸೇರಿ, ಡಯಾಬಿಟಿಸ್‌ಗೆ ತುತ್ತಾಗಿ, ಅನಂತರ ಬಿಡುಗಡೆ, ಗಡೀಪಾರ್ ಶಿಕ್ಷೆಗೆ ಗುರಿಯಾಗಿದ್ದರು.

ಮಂಜುನಾಥಯ್ಯನವರ ಧರ್ಮಪತ್ನಿ ಗಂಗಮ್ಮನವರು ಸ್ವಯಂಸೇವಕರಿಗೆ ಸಹಕಾರ, ರಕ್ಷಣೆ, ಪೋಷಣೆಗಳನ್ನು ನಡೆಸಿದ್ದರು. ಶಿವಮೊಗ್ಗೆಯ ಜ್ವರಾರೀ ಕಂಪನಿಯೇ ಭೂಗತರ ಚಳವಳಿಯ ಒಂದು ಕೇಂದ್ರವಾಗಿತ್ತು. ಅಡಗಿ ಕುಳಿತುಕೊಂಡು, ಅಂಗಡಿಗೆ ಬರುವ ಸಿ.ಐ.ಡಿ.ಗಳ ಮೇಲೆ ಕಣ್ಣಿಡಲು, ಒಂದು ಗಟ್ಟಿ ತೊಟ್ಟಿಲನ್ನೇ ಔಷಧಗಳನ್ನು

ತುಂಬಿದ ಬೀರುಗಳ ಹಿಂದುಗಡೆ ನೇತುಬಿಡಲಾಗಿತ್ತು. ಅದರಿಂದಾಗಿ, ಎಷ್ಟು ಸಾರಿ ಜ್ವರಾರಿ ಕಂಪನಿಯನ್ನು ಜಪ್ತಿ ಮಾಡಿದರೂ ಯಾವ ಭೂಗತರೂ ಅಲ್ಲಿ ಅವರ ಕೈಗೆ ಸಿಕ್ಕಿರಲಿಲ್ಲ.

ಮಂಜುನಾಥಯ್ಯನವರ ಅಳಿಯ ಟಿ. ಭಾಸ್ಕರರಾವ್ ಸತ್ಯಾಗ್ರಹಿಯಾಗಿ, ಶಿಕ್ಷೆ ಅನುಭವಿಸಿ, ಈಗ ತಾಮ್ರಪತ್ರ ಪಡೆದಿದ್ದಾರೆ.

ನಾನು ಅನೇಕ ಸಾರಿ ಭೂಗತರೊಡನೆ ಕಾರ್ಯ ನಡೆಸಿ, ಶಾಂತಿಕಾಲದಲ್ಲಿ ಹೆಚ್ಚಿನ ರಚನಾತ್ಮಕ ಕಾರ್ಯದಲ್ಲೂ ಭಾಗವಹಿಸಿದ್ದೆ; ಇದಕ್ಕೆ ಶಿವಮೊಗ್ಗೆಯಲ್ಲಿ ಮಂಜುನಾಥಯ್ಯನವರ ತಮ್ಮ ಯು. ನಾರಾಯಣರಾಯರು ತುಂಬ ಸಹಕಾರಿಗಳಾಗಿದ್ದರು. ಆಗ ಶಿವಮೊಗ್ಗೆಯಲ್ಲಿ ದುಡಿಯುತ್ತಿದ್ದ ಕಾಂಗ್ರೆಸ್ ಕಾರ್ಯಕರ್ತ ಎಂ. ಸಿ. ಮಾತಂಡ್‌ರೊಡನೆ ನನ್ನನ್ನು ವಾರವಾರವೂ ಖಾದಿಯನ್ನು ಹೊತ್ತು ಮನೆಮನೆ ಮಾರಲಿಕ್ಕೂ, 'ವಂದೇ ಮಾತರಮ್' ಎಂದು ಮನೆಮನೆ ಬೇಡಿ, ನಿಧಿ ಸಂಗ್ರಹಿಸಲಿಕ್ಕೂ ಕಳುಹಿಸುತ್ತಿದ್ದರು.

ಜೈಲಿನ ವಿಪರೀತ ಕಷ್ಟದ ಜೀವನ ನಡೆಸಿ ಹೊರಗೆ ಬಂದ ಯು. ಶ್ರೀನಿವಾಸ ರಾವ್ ಮುಂದೆ ಬಹಳ ವರ್ಷ ಬದುಕಲೇ ಇಲ್ಲ; ಚಿಕ್ಕಚಿಕ್ಕ ಮಕ್ಕಳನ್ನು ಅಜ್ಜ, ಅಜ್ಜಿ, ತಾಯಿಯವರ ಸ್ವಾಧೀನಕ್ಕೆ ಒಪ್ಪಿಸಿ, ತಾರುಣ್ಯದಲ್ಲಿಯೇ ಅಸು ನೀಗಿದರು. ಈ ಮೊಮ್ಮಕ್ಕಳನ್ನು ಸಾಕಿಕೊಂಡ ಮಂಜುನಾಥಯ್ಯನವರು ಅನಂತರದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ, ಸೆರೆವಾಸವನ್ನು ಅನುಭವಿಸಿ, ಎಲ್ಲ ಕಷ್ಟಗಳಿಗೂ ಗುರಿಯಾಗಿ ದುಡಿಮೆಯನ್ನು ನಡೆಸಿ, ಜರ್ಝರಿತರಾಗಿ, ಎಲ್ಲ ಜವಾಬ್ದಾರಿಯನ್ನು ಪತ್ನಿ ಗಂಗಮ್ಮನವರಿಗೇ ಬಿಟ್ಟು ಪರಲೋಕವಾಸಿಗಳಾದರು. ಗಂಗಮ್ಮನವರು ಜರ್ಝರಿತರಾಗಿದ್ದರೂ ಮಕ್ಕಳ ವಿದ್ಯಾಭ್ಯಾಸ, ಹೊಲಮನೆಗಳ ನಿಭಾವಣೆ, ಅಂಗಡಿ ವ್ಯಾಪಾರ ಕಾರ್ಯಗಳನ್ನೆಲ್ಲ ನೋಡಿಕೊಂಡು, ಬಹಳ ವರ್ಷ ಬದುಕಲಾರದೆ, ಗತಿಸಿದರು. ಭಾಸ್ಕರರಾಯರೂ ಐವತ್ತು ವರ್ಷದೊಳಗೇ ಮುದುಕರಂತಾಗಿ, ಹಲ್ಲುಗಳನ್ನು ಕಳೆದುಕೊಂಡು, ದೃಷ್ಟಿ ಮಾಂದ್ಯಕ್ಕೆ ಗುರಿಯಾಗಿ, ದೇವರ ದಯೆಯಿಂದ ಈಗ ಪೆನ್ಷನ್ನಿಗೆ ಭಾಗಿಗಳಾಗಿದ್ದಾರೆ. ಎಲ್ಲರಿಗೂ ಜ್ವರಾರಿ ಕಂಪೆನಿಯವರ ತ್ಯಾಗಸೇವೆಗಳು ತಿಳಿದಿದ್ದರೂ ಯಾರೂ ಅವರನ್ನು ಯಾವ ಕಾರ್ಯಕ್ರಮಗಳಲ್ಲೂ ಮುಂದೆ ಕರೆಯದಿದ್ದುದು, ದೈವದುರ್ವಿಪಾಕವೇ. ಈಗ ಶ್ರೀನಿವಾಸರಾಯರ ಮಕ್ಕಳು ಎಲ್ಲೆಲ್ಲೋ ಹೆಸರಿಲ್ಲದವರಂತೆ ಇದ್ದಾರೆ. ಯಾರೂ ಇವರುಗಳನ್ನು ವಿಚಾರಿಸಿಕೊಳ್ಳದಿದ್ದರೂ, ಕಡಿದಾಳ ಮಂಜಪ್ಪನವರು ಮಾತ್ರ ಊರಿಗೆ ಬಂದಷ್ಟು ಸಾರಿ, ಈ ತಬ್ಬಲಿ ಮಕ್ಕಳನ್ನು ವಿಚಾರಿಸಿ, ಯೋಗಕ್ಷೇಮವನ್ನು ಕೇಳದೇ ಇಂದಿಗೂ ಹೋಗುತ್ತಿರುವುದಿಲ್ಲ.

* * *

ತೀರ್ಥಹಳ್ಳಿಯ ಸಾರಸ್ವತ ಜನಾಂಗದ ಹಿರಿಯರು ಸೇರಿ ರಥಬೀದಿಯ ನಡುವೆ ಒಂದು ರಾಮಮಂದಿರವನ್ನು ನಿರ್ಮಿಸಿಕೊಂಡು, ವರ್ಷವರ್ಷವೂ ರಾಮನವಮಿಯಂದು ಮಹೋತ್ಸವವನ್ನು ನಡೆಸಿ, ಪಾನಕ ಪನಿವಾರಗಳನ್ನು ವಿತರಣೆ ಮಾಡುತ್ತಿದ್ದರು. ಈ ರಾಮಮಂದಿರ ಸಾರಸ್ವತ ಜನಾಂಗದ ಹಿರಿಯರ ಕುಟುಂಬವೊಂದರ ವೈಯಕ್ತಿಕ ಆಸ್ತಿಯಾಗಿದ್ದರೂ, ರಾಷ್ಟ್ರೀಯ ಆಂದೋಲನದಲ್ಲಿ ಸಾರ್ವಜನಿಕರು ಈ ರಾಮಮಂದಿರದ ಉಪಯೋಗವನ್ನು ಸ್ಮರಣೀಯವಾಗಿ ಮಾಡಿಕೊಂಡರು. ತೀರ್ಥಹಳ್ಳಿಗೆ ಯಾರೇ ರಾಜಕಾರಣಿ, ಚಳವಳಿಯ ಮುಂದಾಳುಗಳು ಬಂದರೂ ಅವರಿಗೆಲ್ಲ ಭಾಷಣಮಾಡುವ ಸುಸ್ಥಳ ಶ್ರೀರಾಮಮಂದಿರವೇ ಆಗಿತ್ತು. ಸಾಮಾನ್ಯವಾಗಿ ಬಹಿರಂಗ ಸಭೆಗಳನ್ನು ನಡೆಸಲು ಹೊರಗೆ ಯಾವಾಗಲೂ ಪ್ರತಿಬಂಧಕಾಜ್ಞೆಗಳಿರುತ್ತಿದ್ದುದರಿಂದ ವೈಯಕ್ತಿಕ ಆಸ್ತಿ ಶ್ರೀರಾಮಮಂದಿರವನ್ನೇ ಎಲ್ಲರೂ ಆಶ್ರಯಿಸುತ್ತಿದ್ದರು. ಅಲ್ಲದೆ ಈ ಶ್ರೀರಾಮಮಂದಿರಕ್ಕೆ ಹಿತ್ತಲ ಕಡೆಯಲ್ಲಿ ಬಾಗಿಲೊಂದು ಇದ್ದುದೂ ತೀರ ಅನುಕೂಲವಾಗಿತ್ತು.

ಜವಹರಲಾಲ್ ನೆಹರೂರವರು ಎಲ್ಲಿಗೋ ಹೋಗುವವರು ತೀರ್ಥಹಳ್ಳಿಗೆ ಬಂದರು. ಅವರನ್ನು ನಾವು ಎದುರುಗೊಂಡುದು ಈ ಶ್ರೀರಾಮಮಂದಿರದಲ್ಲೇ. ಅವರ ಜತೆಯಲ್ಲಿ ಡಾ|| ಹರ್ಡೀಕರ ಇದ್ದರು. ಆದರೆ ಆ ದಿನ ಜಾಸ್ತಿ ಜನ ಸೇರಿಯೇ ಇರಲಿಲ್ಲ. ಕೇವಲ 40–50 ಜನ ಸೇರಿದ್ದರು.

ನಾವು ಪರಶುರಾಮ ಸ್ವಯಂಸೇವಕ ಶಿಕ್ಷಣ ಶಿಬಿರದವರು, ಶ್ರೀರಾಮಮಂದಿರದಲ್ಲಿ ಅವರನ್ನು ಸ್ವಾಗತಿಸಿದೆವು.

ಲೇಜೀಮಿನ ಕವಾಯತಿಯೊಡನೆ ಪಂಡಿತ ಶ್ರೀ ಕಮಕೋಡು ನರಸಿಂಹಶಾಸ್ತ್ರಿಗಳು ಬರೆದುಕೊಟ್ಟ ಪದ್ಯ—

ಆಗಮಿಸಿಹ ವರ ಭಾರತವೀರರ ।
ಸ್ವಾಗತಗೈಯಲು ಬಾಗಿ ನಮಿಸುವೆವು ॥

"ಏಕ್, ದೋ, ತೀನ್, ಚಾರ್; ಏಕ್, ದೋ, ತೀನ್, ಚಾರ್" ಹೇಳುತ್ತ, ಸುಂದರವಾಗಿ ಕವಾಯತು ಮಾಡಿದೆವು. ನಮ್ಮ ಶಿಕ್ಷಕರಾಗಿದ್ದ ಅ. ಬಾ. ಮಹಾಶಬ್ದೆಯವರು ವೈ. ಚಂದ್ರಶೇಖರ್‌ರೊಡನೆ (ಈಗ ಡಾಕ್ಟರ್) ಲಕಡೀ ಡ್ರಿಲ್‌ನ್ನು ಮಾಡಿ ತೋರಿಸಿದರು.

ನಮ್ಮ ಕವಾಯತುಗಳನ್ನು ನೋಡಿ ಹರ್ಷಗೊಂಡ ನೆಹರೂಜಿಯವರು ಏನೇನೊ ಭಾಷಣಮಾಡಿದರು. ಡಾ|| ಹರ್ಡೀಕರರವರೂ ಏನೋ ಹೇಳಿದರು. ಆದರೆ ಅವರು ಕಟ್ಟಾ ಸ್ವಯಂಸೇವಕರಂತೆ ನಿಕ್ಕರ್, ಸಮವಸ್ತ್ರ ಧರಿಸಿದ್ದೂ ನೆಹರೂಜಿಯವರೊಡನೆ ಸರಿಸಮನಾಗಿ ಕುಳಿತುಕೊಂಡಿದ್ದುದೂ ನಮಗೆಲ್ಲ ಆಶ್ಚರ್ಯವನ್ನೇ ಉಂಟುಮಾಡಿತ್ತು.

ಅನಂತರದ ಕಾಲದಲ್ಲಿಯೂ ಯಾರು ಯಾರು ಕಾಂಗ್ರೆಸ್ ಚಳವಳಿಯಲ್ಲಿ

ಭಾಗವಹಿಸಿದ್ದರೋ ಆ ಮುಂದಾಳುಗಳೆಲ್ಲಾ ಈ ಶ್ರೀರಾಮಮಂದಿರವನ್ನು ತಮ್ಮ ಭಾಷಣಗಳ ಸಭಾಸ್ಥಳಗಳಾಗಿ ಉಪಯೋಗಿಸಿಕೊಂಡಿದ್ದರು. ವೀರಕೇಸರಿ ಸೀತಾ ರಾಮಶಾಸ್ತ್ರಿ, ತಗಡೂರು ರಾಮಚಂದ್ರರಾವ್, ಟಿ. ಟಿ. ಶರ್ಮ, ಇವರೆಲ್ಲ ತಮ್ಮ ಕಂಚಿನ ಕಂಠದಿಂದ ರಾಮಮಂದಿರದ ಸಭಾಂಗಣವನ್ನು ನಡುಗಿಸಿದ್ದರು; ಜನಜಾಗೃತಿ ಯನ್ನು ಉಂಟುಮಾಡಿದ್ದರು. ನಿಜಲಿಂಗಪ್ಪ, ಕಡಿದಾಳ ಮಂಜಪ್ಪ, ಕಾಳಿಂಗ್ಸೆ ರಾಘವೇಂದ್ರರಾವ್ ಸೋದರರು ಸಹ ಇಲ್ಲಿ ಭಾಷಣಗಳನ್ನು ಮಾಡಿದ್ದರು.

ರಾಷ್ಟ್ರೀಯ ಹರಿಕಥೆಗಳು ಸಹ ಇಲ್ಲಿ ನಡೆದಿದ್ದುವು. ಇಲ್ಲಿನ ಪ್ರತಿಯೊಬ್ಬ ಸತ್ಯಾಗ್ರಹಿಯೂ ಇಲ್ಲಿಂದಲೇ ಹಾರತುರಾಯಿಗಳನ್ನು ಧರಿಸಿ ಹೊರಡುತ್ತಿದ್ದರು.

ಹೀಗಾಗಿ ಶ್ರೀರಾಮಮಂದಿರವು ತೀರ್ಥಹಳ್ಳಿಯ ಆ ಕಾಲದ-ಸ್ವಾತಂತ್ರ್ಯ ಚಳವಳಿಯ ಕಾರ್ಯಕರ್ತರಿಗೆ ಒಂದು ವಿಸ್ಮರಣೀಯ ಸಭಾಂಗಣವಾಗಿತ್ತು; ಅಲ್ಲದೆ, ಶ್ರೀರಾಮಮಂದಿರದ ನಡುವೆಯಿದ್ದ ಶ್ರೀರಾಮ ದೇವಾಲಯವು ಸಭಿಕರಲ್ಲೊಂದು ಬಗೆಯ ಧಾರ್ಮಿಕ ಮನೋಭಾವನೆಯನ್ನುಂಟುಮಾಡುತ್ತಿತ್ತು. ಆಗಿನ ಕಾಂಗ್ರೆಸ್ ಕಾರ್ಯ ಕರ್ತರು ಯಾರೂ ದೈವ ದೇವರುಗಳನ್ನು ದೂರ ಮಾಡಿರಲಿಲ್ಲ; ದಶರಥರಾಮನು ಬಾಪೂಜಿಯವರಿಗೂ ಆರಾಧ್ಯದೇವನೇ ಆಗಿದ್ದ.

*    *    *

ಗಂಗಸರೋ ಗಂಗಸರ
ಪಾರಡೇ ಕಲೀ ಗಂಗಸರ ||

ಕೆಬಿತ್ತ ಮುರೂ ದೆತ್ತುದು ಕೊರೂ
ಪಾರ್ಂಡ ಕಲೀ ಗಂಗಸರ ||

ಕಿದೆತ್ತ ಎರೂ ಮಾರ್ದು ಪೋವು
ಪಾರ್ಂಡ ಕಲೀ ಗಂಗಸರ ||

ಗಂಗಸರೋ ಗಂಗಸರ
ಪಾರಡೇ ಕಲೀ ಗಂಗಸರ ||

ಅಟ್ಟದ ಬಿತ್ತ್ ಮಾರ್ದು ಪೋವು
ಪಾರ್ಂಡ ಕಲೀ ಗಂಗಸರ ||

ದೊಡ್ಡ ಧ್ವನಿಯಲ್ಲಿ ಈ ತುಳು ಹಾಡನ್ನು ಹೇಳುತ್ತ ಜಿರಾವತಿ ಮಳೆಯಲ್ಲಿ ನಾವು ಸಾರಾಯಿ ಅಂಗಡಿಯ ಪಿಕೆಟಿಂಗ್ ಮಾಡುತ್ತಿದ್ದೆವು. ಆರ್ಯ ಸಮಾಜಕ್ಕೆ ಸೇರಿದ್ದ ನರೇಂದ್ರ ಪ್ರಭು ಎಂಬುವರು ನಮ್ಮ ನಾಯಕರಾಗಿದ್ದರು. ನರೇಂದ್ರ ಪ್ರಭು ತುಂಬಾ ಶ್ರದ್ಧಾನಿಯಾಗಿದ್ದ ತರುಣರು; ಸ್ವಲ್ಪ ಹೆಚ್ಚುಕಡಿಮೆ ನನಗಿಂತ ನಾಲ್ಕೈದು ವರ್ಷದಷ್ಟೇ

ಹಿರಿಯರು. ಆದರೆ ಯಾವ ಪ್ರಭಾವವೋ, ಆರ್ಯಸಮಾಜದ ಆದ್ಯಗ್ರಂಥ 'ಸತ್ಯಾರ್ಥ ಪ್ರಕಾಶ'ವನ್ನು ಆ ವಯಸ್ಸಿನಲ್ಲೆಲ್ಲ ವಿವರಿಸಿ ಅರ್ಥೈಸುತ್ತಿದ್ದರು; ಮಹರ್ಷಿ ದಯಾನಂದ ಸರಸ್ವತಿಯವರ ಜೀವನದ ಬಗ್ಗೆ ಆಗಾಗ್ಗೆ ವ್ಯಾಖ್ಯಾನ ಮಾಡುತ್ತಿದ್ದರು. ಇಂಥ ಹಿರಿಯಣ್ಣನ ನೇತೃತ್ವದಲ್ಲಿ ನಾವು ತೀರ್ಥಹಳ್ಳಿಯ ಆಗಿನ ಆಸ್ಪತ್ರೆಯ ಎದುರಿಗಿದ್ದ ಸಾರಾಯಿ ಅಂಗಡಿಯ ಮುಂದೆ ಪಿಕೆಟಿಂಗ್‌ಮಾಡುತ್ತಿದ್ದೆವು. ಸಾರಾಯಿ ಅಂಗಡಿಯನ್ನು ನಮ್ಮ ವೈರಿಗಳು ಯಾರೂ ನಡೆಸುತ್ತಿರಲಿಲ್ಲ; ನಮ್ಮ ಕ್ಲಾಸ್‌ಮೇಟ್ ಆಗಿದ್ದು ನನ್ನ ಸ್ನೇಹಿತರಲ್ಲಿ ಒಬ್ಬನಾಗಿದ್ದ ಟಿ. ಲಕ್ಷ್ಮಯ್ಯನ ತಂದೆ, ರಂಗಪ್ಪ ಆ ಸಾರಾಯಿ ಅಂಗಡಿಯನ್ನು ನಡೆಸುತ್ತಿದ್ದರು. ಅಲ್ಲಿಯವರೆಗೆ, ನಾನಂತೂ ಶಾಲೆಗೆ ಹೋಗುವಾಗ ಅವರ ಮನೆಯಲ್ಲಿ ಕೆಲವಾರು ನಿಮಿಷಗಳನ್ನು ಕಳೆದು ಲಕ್ಷ್ಮಯ್ಯನನ್ನು ಕರೆದುಕೊಂಡೇ ಶಾಲೆಗೆ ಹೋಗುತ್ತಿದ್ದೆ; ಶಾಲೆ ಬಿಟ್ಟ ಕೂಡಲೆ ನಾನು ಅವನ ಮನೆಯ ಅಂಗಡಿಯ ಮುಂದೇ ನಿಂತುಕೊಂಡು, ಸೇಂದಿ ಸಾರಾಯಿಗಳ ಪಿಕೆಟಿಂಗ್ ಮಾಡುತ್ತಿದ್ದೆ. ಅವನೂ ಸಹ ಅನೇಕ ಸಾರಿ ನನ್ನೊಡನೆ ಈ ವಿಷಯ ಚರ್ಚೆ ಮಾಡುತ್ತಿದ್ದ; ಆದರೆ ನಾನು ಕೇಳ ಬೇಕೇ ? ಅವನಿಗೆ ದುಃಖವಾಗುತ್ತಿದ್ದುದು, ನನಗೆ ಗೊತ್ತಾಗುವಂತೆ ಅವನು ಮುಖ ಭಾವವನ್ನು ಬದಲಾಯಿಸುತ್ತಿದ್ದುದು, ಈಗಲೂ ನನಗೆ ಕಣ್ಮುಂದೆ ಕಟ್ಟುತ್ತಿದೆ.

ಅವತ್ತೇನಾಗಿತ್ತೋ, ಆ ಜಿರಾವತಿ ಮಳೆಯಲ್ಲೇ ನಿಂತುಕೊಂಡು ನಾವು ಕೂಗುತ್ತಿರುವಾಗ, ಪೋಲೀಸಿನವರು ಬಂದು, ನಮ್ಮನ್ನು ಸ್ಟೇಷನ್ನಿಗೆ ಎಳೆದುಕೊಂಡು ಹೋಗಿ ಒದ್ದರು. ನಡುರಾತ್ರಿಯವರೆಗೆ ಕೂರಿಸಿಕೊಂಡು, ಮತ್ತೊಮ್ಮೆ ಒದ್ದು, ಹೊರಗೆ ದೂಡಿದರು. ಆ ಒದೆಗಳ ಸ್ವಾರಸ್ಯ ಈಗಲೂ ನೆನಪಿದೆ. ನನ್ನ ಕೈ ಹಿಡಿದು ಕೊಂಡು ನನ್ನ ಕಣ್ಣನ್ನೇ ನೋಡುತ್ತ, ಪೋಲಿಸಿನವರು ತನ್ನ ಬೂಟುಗಾಲಿನ ತುದಿಯಿಂದ ನನ್ನ ಮೊಣಕಾಲು ಗಂಟಿನ ಕೆಳಗಿನ ಎಲುಬಿಗೆ ಕಟಕಟ ಒದೆಯುವುದು. ಆಗ ನನಗೆ ಮೇಲಿನ ಏಳು ಲೋಕಗಳೂ ಕಣ್ಣಿಗೆ ಕಾಣುತ್ತಿದ್ದವು ! ಮೂರನೆಯ ಸಾರಿ ಒದೆಯುವಾಗ ಆ ಅಂಗಡಿಯ ಬಿಕರೀದಾರ ರಂಗಪ್ಪನವರೇ ಬಂದು ನನ್ನನ್ನು ಆ ಯಮಗಂಡದಿಂದ ಬಿಡಿಸಿ, ತಬ್ಬಿಕೊಂಡು, ಹೊರಗೆ ಕರೆದುಕೊಂಡು ಬಂದು, ಸ್ವಲ್ಪ ದೂರ ನಡೆದು, ನನ್ನನ್ನು ನನ್ನ ಮನೆಯ ಹತ್ತಿರ ಬಿಟ್ಟು ಹೋಗಿದ್ದರು. ಅವರಿಗೆ ಲಕ್ಷ್ಮಯ್ಯನಿಗೂ ನನಗೂ ಹೆಚ್ಚು ವ್ಯತ್ಯಾಸ ಕಂಡಿರಲಿಕ್ಕಿಲ್ಲವೆನ್ನಿಸುತ್ತದೆ ಈಗ.

ಅಂಥ ಕಾರುಣ್ಯಮೂರ್ತಿಗಳ ನೆನಪಿನ ಜತೆಯಲ್ಲೇ ಈಗ ನನ್ನ ಚಿಕಿತ್ಸಾಲಯದ ಮುಂಭಾಗದಲ್ಲಿಯೇ ಇರುವ ಸಾರಾಯಿ ಅಂಗಡಿಯಲ್ಲಿ ದಿನನಿತ್ಯವೂ ನಡೆಯುತ್ತಿರುವ ಎಲ್ಲಾ ಸಮಯದ ಗದ್ದಲವನ್ನು ನೋಡಿ, ಕಂಡವರು ನನ್ನನ್ನು ಹುಚ್ಚನೆಂದಾರು— ಎಂಬ ಆತಂಕದಿಂದ ಯಾರೂ ನೋಡದಂತೆ ನಾನೇ ನಗುತ್ತಿರುತ್ತೇನೆ; ಅಂದಿನಿಂದ ಈ ನಾಲ್ವತ್ತು ವರ್ಷಗಳ ಬೆಳವಣಿಗೆಯನ್ನು ನೋಡಿ, 'ರಂಗಪ್ಪನವರು ಏನನ್ನುತ್ತಿದ್ದರು ?' ಎಂಬ ಯೋಚನೆಯಾಗುತ್ತಿದೆ; ಯಾವ ತತ್ವಕ್ಕಾಗಿ ಬಾಲಕರಾದ ನಾವು ಪ್ರಾಣದ

ಹಂಗು ತೊರೆದು ಹೆಣಗುತ್ತಿದ್ದೆವೋ, ಅದೇ ಈಗ ಸರಕಾರದ ಬದುಕಿನ ಒಂದು ಜೀವ ನಾಡಿಯಾಗಿದೆ! ಎಂಥ ವಿಪರ್ಯಾಸ ಈ ದಿನಗಳಲ್ಲಿ ?

* * *

ಅಂಕೋಲೆಯ ಉಪ್ಪಿನ ಸತ್ಯಾಗ್ರಹಕ್ಕೆ ನಮ್ಮ ಊರಿನಿಂದ ಪರಶುರಾಮ ಸ್ವಯಂಸೇವಕ ಶಿಕ್ಷಣ ಶಿಬಿರದಿಂದ ಇಬ್ಬರು ಸತ್ಯಾಗ್ರಹಿಗಳನ್ನು ಕಳುಹಿಸಿಕೊಡಲು ಕಾರ್ಯಕರ್ತರ ನಾಯಕ ಅ. ಬಾ. ಮಹಾಶಬ್ದೆಯವರು ಹಿರಿಯರನ್ನು ಕೇಳಿ, ನಿರ್ಧರಿಸಿದ್ದರು.

ತುಂಬ ಚರ್ಚೆ, ಯೋಚನೆಗಳನಂತರ ಇಬ್ಬರ ಹೆಸರುಗಳನ್ನು ಮಾತ್ರ ಒಪ್ಪಿ ಕೊಳ್ಳಲಾಯಿತು. ಮೊದಲನೆಯದು, ಆರ್ಯ ಸಮಾಜದ ಶ್ರೇಷ್ಠ ಕಾರ್ಯಕರ್ತ ನರೇಂದ್ರ ಪ್ರಭು ಅವರದ್ದು; ಎರಡನೆಯ ಹೆಸರು, ನಮ್ಮ ಶಿಬಿರದಲ್ಲಿಯೇ ತುಂಬ ಚುರುಕಿನ ಕಾರ್ಯಕರ್ತರಾದ ಎಂ. ಜೆ. ರಮಾನಾಥರಾಯರದು. ಇಬ್ಬರೂ ತುಂಬ ಉತ್ಸಾಹಿಗಳೂ ಜ್ಞಾನಿಗಳೂ ಆಗಿದ್ದರು. ಅವರಿಬ್ಬರ ಮೇಲೂ ನಮ್ಮೆಲ್ಲರ ಅಭಿಮಾನ ತುಂಬ. ಜೈಕಾರಗಳನ್ನು ಮಾಡುತ್ತ, ಹಾರ ಹಾಕಿ ಅವರನ್ನು ಅಂಕೋಲೆಯ ಉಪ್ಪಿನ ಸತ್ಯಾಗ್ರಹದ ಶಿಬಿರಕ್ಕೆ ಕಳುಹಿಸಿದೆವು. ಶಿಕ್ಷೆಯನ್ನೂ ಅನುಭವಿಸಿ ಬಂದರು.

ಮತ್ತೊಮ್ಮೆ ರಮಾನಾಥರಾಯರನ್ನು ಪೋಲಿಸರು ಹಿಡಿದುಕೊಂಡು ಹೋದರು. ನರೇಂದ್ರಪ್ರಭು ಮೈಸೂರು ಕಾಲೇಜಿನಲ್ಲಿ ವ್ಯಾಸಂಗ ಮುಂದುವರಿಸಲು ಕಳುಹಿಸಲ್ಪಟ್ಟರು. ಅಲ್ಲಿ, ಜೈಲುವಾಸದಿಂದ ಅನಾರೋಗ್ಯಕ್ಕೆ ತುತ್ತಾಗಿದ್ದ ಅವರು, ರೋಗಗ್ರಸ್ತರಾಗಿ, ಮರಣಹೊಂದಿದರು; ಅರಳುಮಲ್ಲಿಗೆ ಮಾಯವಾಯಿತು—ಎಂದರು ಕಮಕೋಡು ನರಸಿಂಹಶಾಸ್ತ್ರಿಗಳು. ರಮಾನಾಥರಾಯರು ಎಲ್ಲಿಲ್ಲೋ ಕಷ್ಟಬಡುತ್ತಾ ಇದ್ದು, ಮುಂದೆ ನಮ್ಮೂರಿನಲ್ಲಿ ಕಾಣಲು ಸಿಗುತ್ತಲೇ ಇರಲಿಲ್ಲ. ಅವರ ತಮ್ಮ ಮದನಮೋಹನ್ ನನ್ನ ಸಹಾಧ್ಯಾಯಿ. ಅಂಕೋಲೆಯ ಸತ್ಯಾಗ್ರಹಿಗಳಾಗಿ ಹೋದ ನಮ್ಮೂರ ವೀರರು ನಮಗಿಲ್ಲವಾದರು!

* * *

ಒಂದು ತಾಲ್ಲೂಕು ಕೇಂದ್ರದಲ್ಲಿ ಪತ್ರಿಕೆಗಳು ನಡೆಯುವುದೇ ಕಷ್ಟವಾಗಿರುವಾಗ ತೀರ್ಥಹಳ್ಳಿಯಲ್ಲಿ ಒಂದು ಕಾಲಕ್ಕೆ ಎರಡು ಪತ್ರಿಕೆಗಳು ನಡೆಯುತ್ತಿದ್ದುವೆಂದರೆ ಆಶ್ಚರ್ಯದ ಸುದ್ದಿಯೇ ಸರಿ; ಆದರೆ ಅದು ವಾಸ್ತವ.

ಗಾಂಧೀಜಿಯವರು ತೀರ್ಥಹಳ್ಳಿಗೆ ಬಂದು ಹೋದನಂತರ ಇಲ್ಲಿ ಒಂದು ಹೊಸ ಚೇತನದ ಬುಗ್ಗೆಯೇ ಹೊರಹೊಮ್ಮಿತು; ಇದರ ಪ್ರತೀಕವೇ 'ಜನ್ಮಭೂಮಿ' ವಾರಪತ್ರಿಕೆ, 'ಆಯುರ್ವೇದ' ಮಾಸಪತ್ರಿಕೆ. 'ಜನ್ಮಭೂಮಿ'ಗೆ ಚಿನ್ನಭಂಡಾರದ ಸುಬ್ಬರಾಯರು ಸಂಪಾದಕರಾದರೆ, 'ಆಯುರ್ವೇದ'ಕ್ಕೆ ಪಟ್ಟಗೆರೆ ಸೂರ್ಯನಾರಾಯಣ

ಶಾಸ್ತ್ರಿಗಳು ಸಂಪಾದಕರಾಗಿದ್ದರು. ಸೂರ್ಯನಾರಾಯಣ ಶಾಸ್ತ್ರಿಗಳು ಪ್ರಕಾಂಡ ಪಂಡಿತರಾಗಿದ್ದುದೇ ಅಲ್ಲದೆ, ಕಟ್ಟಾ ಗಾಂಧೀವಾದಿಗಳಾಗಿದ್ದರು; ಆಯುರ್ವೇದ ಗ್ರಂಥಗಳಲ್ಲಿನ ಅವರ ಜ್ಞಾನ, ಸಂಸ್ಕೃತ ವೈದುಷ್ಯ ಅಪಾರ; ಚಿನ್ನಭಂಡಾರದ ಸುಬ್ಬರಾಯರು ಅಂಥ ಪಾಂಡಿತ್ಯವನ್ನು ಹೊಂದಿರದಿದ್ದರೂ ಸರಳಜೀವಿಗಳಾಗಿದ್ದು, ನಿಷ್ಠಾವಂತ ಕೆಲಸಗಾರರಾಗಿದ್ದರು; ಇವರಿಬ್ಬರೂ ಅವರ ಹೃದಯಗಳಿಗೇ ಖಾದಿಯನ್ನು ತೊಡಿಸಿಕೊಂಡಿರುತ್ತಿದ್ದರು; ಸುಬ್ಬರಾಯರು ಖಾದಿ ಟೋಪಿಯನ್ನು ಧರಿಸಿ, ಹೆಗಲಿಗೊಂದು ಚೀಲವನ್ನು ಸಿಕ್ಕಿಸಿಕೊಂಡು, ಪತ್ರಿಕಾವ್ಯವಸಾಯಕ್ಕೆ ಹೊರಡುತ್ತಿದ್ದರೆ, ಶಾಸ್ತ್ರಿಗಳದ್ದು ಪಿಳ್ಳೆಜುಟ್ಟು, ಶಾಲನ್ನು ಹೊದ್ದುಕೊಂಡು ಕಾರ್ಯೋನ್ಮುಖರಾಗುತ್ತಿದ್ದರು; ತಾಲ್ಲೂಕಿನ ಹಳ್ಳಿಹಳ್ಳಿಗಳನ್ನು ಸಂಚರಿಸಿ, ಸ್ವಾತಂತ್ರ್ಯದ ಪ್ರಚಾರ ಮಾಡುತ್ತಿದ್ದರು.

ಆಗ ತೀರ್ಥಹಳ್ಳಿಯಲ್ಲಿ ಆಯುರ್ವೇದದ ಅಭಿಮಾನ ಮೂರ್ತೀಭವಿಸಿಬಿಟ್ಟಿತ್ತು; ಏಕಮೂಲಿಕಾವೈದ್ಯರಾದರೂ ಆಗ ಅವರಲ್ಲಿ, ಅಂದರೆ ಆಯುರ್ವೇದ ವೈದ್ಯರಲ್ಲಿ, ಕೀಳರಿಮೆ ಕಿಂಚಿತ್ತೂ ಇರಲಿಲ್ಲ. ಹಲಸಿನಹಳ್ಳಿ ಸುಬ್ಬಣ್ಣಾಚಾರ್ ಎಂಬವರು ರೇಷ್ಮೆ ಜ್ವರ ಚಿಕಿತ್ಸೆಯಲ್ಲಿ ತಾಲ್ಲೂಕಿನಲ್ಲಿಯೇ ಪ್ರಸಿದ್ಧರಾಗಿದ್ದರು; ಮಕ್ಕೀಮನೆ ರಾಮಚಂದ್ರರಾಯರು ಬಾವಿನ ಚಿಕಿತ್ಸೆಯ ಎಣ್ಣೆ, ಬೇರು, ಗುಳಿಗೆಗಳಿಗೆ ಹೆಸರುವಾಸಿಯಾಗಿದ್ದರು; ಬೆಟ್ಟಮಕ್ಕಿಯವರು ಮೂಳೆಯ ಮುರಿತಗಳನ್ನು ಕಟ್ಟಿ ಸರಿಪಡಿಸುವುದರಲ್ಲಿ ಹೆಸರುಗಳಿಸಿದ್ದರು. ಇವರಿಗೆಲ್ಲ ಜವಳಿ ರಘುಪತಿರಾಯರು ವಿಂಧ್ಯಾಟವಿಯ ಬೂರುಗದ ಮರ! ಇವರು ಜ್ವರಾರಿ ಕಂಪನಿಯವರ ಭಾಗೀದಾರರು.

ಸುಬ್ಬರಾಯರಿಗೆ ತಾಲ್ಲೂಕೇ ಆಶ್ರಯ ಕೊಟ್ಟಿತ್ತೆಂದರೆ ಅತಿಶಯೋಕ್ತಿಯಲ್ಲ; ಪತ್ರಿಕಾಪ್ರಚಾರ ಒಂದಂಶವಾದರೆ, ಖಾದೀಪ್ರಚಾರ, ಸ್ವಾತಂತ್ರ್ಯ ಸಂಗ್ರಾಮದ ಸಿದ್ಧತೆಗಳ ಪ್ರಚಾರ ಇನ್ನೆರಡು ಅಂಶಗಳಾಗಿರುತ್ತಿದ್ದುವು.

ಕ್ರಮೇಣ ಈ ಪತ್ರಿಕೆಗಳ ವ್ಯಾಪ್ತಿ ಜಿಲ್ಲಾಮಳೆಯವರೆಗಾಯಿತು; ಮಾಧವ ನಿದಾನ, ಶಾರ್ಙ್ಗಧರಸಂಹಿತೆ ಎಂಬ ಉದ್ಗ್ರಂಥಗಳ ಅನುವಾದವಾಯಿತು. ಕೆಲವೊಂದು ಮನೆತನಗಳಿಗೇ ಸೀಮಿತವಾಗಿದ್ದ ಸ್ವಾತಂತ್ರ್ಯ ಹೋರಾಟವು ಆಗ ಆ ಎಲ್ಲೆಗಳನ್ನು ಮೀರಿ ಜನತಾ ಆಂದೋಲನದ ರೂಪುತಾಳುತ್ತ ನಡೆದಿತ್ತೆಂದು ಇತಿಹಾಸಕಾರ ಗುರುತಿಸಬಹುದಾಗಿತ್ತು.

ಕೆಲವು ವರ್ಷಗಳನಂತರ ಈ ಪತ್ರಿಕೆಗಳು ಮುಕ್ತಿಯನ್ನು ಕಂಡರೂ ಅವುಗಳ ಸ್ಮರಣೆ ರಾಷ್ಟ್ರೀಯ ಹೋರಾಟದ ಸ್ಮೃತಿಗಳಲ್ಲಿರಬೇಕಾದುದು ಸೂಕ್ತವಲ್ಲವೆ?

* * *

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತೀರ್ಥಹಳ್ಳಿಯಿಂದ ಆರು ಮೈಲುಗಳಷ್ಟು ದೂರದಲ್ಲಿರುವ ಅಗ ಗ್ರಾಮವೂ ಸಾಕಷ್ಟು ಸೇವೆಸಲ್ಲಿಸಿದೆ. ಒಂದು ಬೆಳಗಿನ ಜಾವ

ಪೋಲಿಸಿನವರು ಬಂದು, ಹೋಟೆಲ್ ಗುಂಡೂ ಮಂಜುನಾಥ ಶಾನುಭೋಗರು, ಹೋಟೆಲ್ ರಾಮರಾಯರು, ಹಣ್ಣಗಿರಿ ಅನಂತ ಭಟ್ಟರು (ಇವರು ತೀರ್ಥಹಳ್ಳಿಯ ಅನಂತಯ್ಯನ ಅಗ್ರಹಾರದ ಪಂಡಿತಾ ಸೀತಮ್ಮನಂತೆ ಹೆಸರಾಂತ ಮಕ್ಕಳ ರೋಗ ಚಿಕಿತ್ಸಕರು), ಪಟ್ಮಕ್ಕೀ ವಿಜಯದೇವೇಗೌಡರು ಇವರುಗಳನ್ನು ಡಿಫೆನ್ಸ್ ಆಫ್ ಇಂಡಿಯಾ ಕಾನೂನಿನ ಪ್ರಕಾರ ದಸ್ತಗಿರಿ ಮಾಡಿಕೊಂಡೊಯ್ದರು.

ವರ್ಷಾನುಗಟ್ಟಲೆ ಈ ಎರಡು ಹೋಟೆಲುಗಳನ್ನೂ ಹೆಣ್ಣುಮಕ್ಕಳೇ ನಡೆಸಿ ಕೊಂಡು, ಅವರವರ ಸಂಸಾರ ತೂಗಿಸಿದರು. ಗುಂಡೂ ಮಂಜುನಾಥ ಶಾನುಭೋಗರಿ ಗಂತೂ ಗಂಡುಮಕ್ಕಳಿರಲಿಲ್ಲ; ರಾಮರಾಯರ ಮಕ್ಕಳು ಚಿಕ್ಕ ಬಾಲಕರು; ಅಲ್ಲದೆ ರಾಮರಾಯರಿಗೆ ಬೇಸಾಯದ ಗದ್ದೆಯೂ ಇತ್ತು. ಹೋಟೆಲನ್ನು ನಡೆಸಿಕೊಂಡು, ಬೇಸಾಯವನ್ನು ನಡೆಸಿ, ಸಂಸಾರವನ್ನು ತೂಗಿಸಿಕೊಂಡು ಹೋಗಿರಬೇಕಾದರೆ ಆ ತಾಯಂದಿರಿಗೆ ಸುಲಭವಾಗಿರಬಹುದೇ? ಆಶ್ಚರ್ಯದ ಸಂಗತಿಯೆಂದರೆ, ಜೈಲಿನಿಂದ ಬಂದಮೇಲೆ ಇವರು ಮೂವರೂ ಬೇಗಬೇಗನೇ ಸ್ವರ್ಗವಾಸಿಗಳಾದರು. ಪಟ್ಮಕ್ಕೀ ವಿಜಯದೇವೇಗೌಡರೊಬ್ಬರೇ ಇವರಲ್ಲಿ ಉಳಿದಿರುವ ವೀರರು.

ಮತ್ತೊಮ್ಮೆ ಮೇಷ್ಟ್ರು ದೇವೇಗೌಡರ ತಮ್ಮ ಕೃಷ್ಣೇಗೌಡರು ಚಳವಳಿಯಲ್ಲಿ ಭಾಗವಹಿಸಿ ಸೆರೆಯಾದರು. ಜೈಲಿನಿಂದ ಬಿಡುಗಡೆಯಾಗಿ ಬಂದನಂತರ ಯಾವ ಪ್ರೋತ್ಸಾಹವೂ ಇಲ್ಲದ ಈ ತರುಣ, ಜೀವನದಲ್ಲಿ ಜುಗುಪ್ಸೆಗೊಂಡು, ಆತ್ಮಹತ್ಯೆ ಮಾಡಿಕೊಂಡರೆಂದು ಸುದ್ದಿ ಬಂತು.

ರಾಮರಾಯರ ಒಬ್ಬ ಮಗ ಬಳ್ಳಾರಿಗೆ ಹೋಗಿ ಹೋಟೆಲ್ ಒಂದರಲ್ಲಿ ಕೆಲಸಕ್ಕೆ ನಿಂತು, ಅನಾರೋಗ್ಯಕರವಾದ ಜೀವನಕ್ಕೆ ತುತ್ತಾಗಿ, ಹೇಳಹೆಸರಿಲ್ಲದಂತೆ ಮರಣ ಹೊಂದಿದ. ಈಗ ಅವರ ಕುಟುಂಬಗಳಿಗೆ ಎಷ್ಟು ಸನ್ಮಾನ ಮಾಡಿದರೆ ಏನು ಬರುತ್ತೆ? ಅಥವಾ ಸನ್ಮಾನ ಮಾಡುವವರಾದರೂ ಯಾರು?

* * *

ತೀರ್ಥಹಳ್ಳಿಯ ಸ್ವಾತಂತ್ರ್ಯ ಚಳವಳಿಯ ಪ್ರಾರಂಭಕಾಲದಲ್ಲಿ, ಜ್ಞಾನಿಗಳೂ ತ್ಯಾಗಿಗಳೂ ರಾಷ್ಟ್ರೀಯತೆಯ ಪ್ರವಾದಿಗಳೂ ಆಗಿದ್ದ ಅನಂತ ಶರ್ಮರನ್ನು ಆ ಕಾಲ ದವರೆಲ್ಲ ಅರಿತವರೇ ಆಗಿದ್ದರು. ಅಪ್ಪಟ ಖಾದೀಧಾರಿಗಳಾಗಿದ್ದ ಇವರು, ತೀರ್ಥಹಳ್ಳಿಯ ಬಾಳೇಬೈಲಿನ ಹತ್ತಿರ, ತುಂಗಾತೀರದಲ್ಲಿ ಆಶ್ರಮವೊಂದನ್ನು ಕಟ್ಟಿಕೊಂಡು ವಾಸ ಮಾಡುತ್ತಿದ್ದರು. ಎಲ್ಲ ರಾಷ್ಟ್ರೀಯ ಕಾರ್ಯಕ್ರಮದ ಕಲಾಪಗಳಲ್ಲಿ ಭಾಗವಹಿಸುತ್ತಿದ್ದ ಅವರು, ತಮ್ಮ ಆಶ್ರಮದಲ್ಲಿ ಹರಿಜನರನ್ನು ಕೆಲಸಕ್ಕೆ ನೇಮಿಸಿಕೊಂಡಿದ್ದಲ್ಲದೆ, ಅಸ್ಪೃಶ್ಯ ಬಾಲಕರಿಗೆ ಅನ್ನಬಟ್ಟೆಗಳನ್ನು ಕೊಟ್ಟು ಪಾಠ ಹೇಳುತ್ತಿದ್ದರು. ಬಹುಸಂಖ್ಯೆಯಲ್ಲಿ ಪುಸ್ತಕಗಳಿದ್ದ ಒಂದು ಪುಸ್ತಕ ಭಂಡಾರವೇ ಅವರ ಆಶ್ರಮದಲ್ಲಿತ್ತು; ಭಗವದ್ಗೀತೆಯ

ಮೊದಲನೆಯ ಪಾಠ ನನಗೆ ಅವರೇ ಮಾಡಿದ್ದು ; 'ಸೇನೆಯೋರುಭಯೋರ್ಮಧ್ಯೇ' —ಈಗಲೂ ನನಗೆ ನೆನಪಿದೆ.

ತೀರ್ಥಹಳ್ಳಿಯ ರಾಜಕೀಯ ಚಳವಳಿಯ ಮೊದಲಲ್ಲಿ ಇವರು ಪ್ರಮುಖಪಾತ್ರ ವಹಿಸಿದ್ದರು.

'ಶ್ರೀ ನಾಗಾನಂದ'

(ಡಾ॥ ಟಿ. ವಿಶ್ವನಾಥಂರಾವ್, ಮೇದರ ಕೇರಿ, ಚನ್ನಗಿರಿ, ಜಿ॥ ಶಿವಮೊಗ್ಗ)

ಸ್ವಾ.ಶಿ. 15

# ಎ. ಗುರುಮೂರ್ತಿ

ಜನನ : 1918 ಉದ್ಯೋಗ : ? ವಿಳಾಸ : ಅರಗ, ತೀರ್ಥಹಳ್ಳಿ ತಾ॥



1924ರ ಬೆಳಗಾವಿ ಕಾಂಗ್ರೆಸ್ಸಿಗೆ ನಮ್ಮ ಊರ ಮುಖಂಡರಾದ ಬಿ.ಎಸ್. ನಾಗಾಭಟ್ಟ, ಅಂಡೆಕುಳಿ ಮಂಜಯ್ಯ, ವೈ. ವಾಸಪ್ಪ, ಎಂ. ಜಿ. ಶಂಕರಪ್ಪಗೌಡ, ಚಿಕ್ಕಮಗಳೂರು ರಾಮೇಗೌಡ, ಜ್ವರಾರಿ ಮಂಜುನಾಥಯ್ಯ, ಕಾಳಿಂಗಯ್ಯನ ರಾಘವೇಂದ್ರರಾವ್, ಜವಳಿ ಮಾಧವರಾವ್, ತೆಂಗಿನಕೆರೆ ರಾಮಚಂದ್ರ ಭಟ್ಟರು ಮತ್ತು ಇತರರು ಭಾಗವಹಿಸಿದ್ದರು. ಮುಂದೆ 1927ರಲ್ಲಿ ಗಾಂಧೀಜಿ ತೀರ್ಥಹಳ್ಳಿಗೆ ಬಂದಾಗ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಾದ ನಮ್ಮನ್ನು ಸ್ವಯಂಸೇವಕರಾಗಿ ಸೇರಿಸಿಕೊಂಡಿದ್ದರು. ಅಸಾಧ್ಯವಾದ ಏರ್ಪಾಟಾಗಿತ್ತು. ಗಾಂಧಿಯವರ ಜೊತೆ ಕಸ್ತೂರ್‌ಬಾ, ಮಹದೇವ ದೇಸಾಯಿ, ಸರ್ದಾರ್ ಪಟೇಲ್, ರಾಜಾಜಿ, ಗಂಗಾಧರರಾವ್ ಇವರೆಲ್ಲ ಬಂದಿದ್ದು ಎಡೆಹಳ್ಳಿ ಶೇಷಪ್ಪನವರ ನಾಟಕ ಮಂದಿರದಲ್ಲಿ ಆದ ಸಭೆಯಲ್ಲಿ ಗಾಂಧೀಜಿಗೆ ತಾಲ್ಲೂಕಿನ ಪರ 1500 ರೂ. ನಿಧಿ ಅರ್ಪಿಸಲಾಗಿತ್ತು. ಶ್ರೀರಾಮ ಮಂದಿರದಲ್ಲಿ ಸ್ತ್ರೀಯರಿಗಾಗಿಯೂ ಸಭೆ ಏರ್ಪಾಡಾಗಿತ್ತು. ಅಂದಿನಿಂದಲೇ ನಾನು ಖಾದಿ ಬಟ್ಟೆ ತೊಡುತ್ತಿದ್ದೆ.

1928ರಲ್ಲಿ ಮಂಗಳೂರಿಗೆ ಬಂದ ಜವಾಹರ್‌ಲಾಲ್ ನೆಹರೂರನ್ನು ತೀರ್ಥಹಳ್ಳಿಗೆ ಬರುವ ದಾರಿಯಲ್ಲಿ ಸಪ್ಪಗತಿಸಲಾಗಿತ್ತು. ನಾಲೂರಿನಲ್ಲಿ ಎಂ. ಜಿ. ಶಂಕರಪ್ಪಗೌಡರು ನೆಹರೂರಿಗೆ ಮತ್ತು ಡಾ॥ ಹರ್ಡೀಕರರಿಗೆ ತಮ್ಮ ಸ್ವಂತ ಮನೆಯಲ್ಲಿ ಭೋಜನಕೊಟ್ಟ

ಏರ್ಪಡಿಸಿದ್ದರು. ಶೇಷಪ್ಪನವರ ನಾಟಕಮಂದಿರದಲ್ಲಿ ಸಭೆ ಆಗಲು, ನಾನು ಆಗಲೂ ಸ್ವಯಂಸೇವಕನಾಗಿ ಇದ್ದೆ. ಈ ಕಾರ್ಯಕ್ರಮಗಳಿಂದ ನಾನು ಸ್ವಾತಂತ್ರ್ಯ ಚಳವಳಿಗೆ ಆಕರ್ಷಿತನಾದೆ. ಅಲ್ಲದೆ ಅದೇ ವರ್ಷ ಸೇವಾದಳದ ಒಂದು ಶಿಬಿರ ಕೆ. ಎ. ವೆಂಕಟ ರಾಮಯ್ಯನವರ ನೇತೃತ್ವದಲ್ಲಿ ಒಂದೂವರೆ ತಿಂಗಳು ನಡೆದು 100-150 ಹುಡುಗರು ತರಬೇತಿಪಡೆದರು. ಡಾ|| ತಾರಾನಾಥರೂ ಈ ಕ್ಯಾಂಪಿಗೆ ಬಂದಿದ್ದರು. ಈ ಶಿಬಿರದ ವ್ಯವಸ್ಥೆಗೆ ಒಂದು ಕಮಿಟಿ ಮಾಡಲಾಗಿದ್ದು ಅದಕ್ಕೆ ವೈ. ಲಿಂಗಪ್ಪ ಅಧ್ಯಕ್ಷರು, ಬಿ. ಎಸ್. ನಾಗಾಭಟ್ಟರು. ಅಂಡೆಕುಳಿ ಮಂಜಯ್ಯ, ಜನಳಿ ಮಾಧವರಾವ್, ಕಾಳಿಂಗಯ್ಯನ ರಾಘವೇಂದ್ರರಾವ್, ಕಂಟ್ರಾಕ್ಟರ್ ಚಲೋ ಶೆಟ್ಟರು ಮುಂತಾದವರು ಸದಸ್ಯರು. ಸೇವಾದಳವನ್ನು ಎರಡು ವರ್ಷಕಾಲ ಟಿ. ನರೇಂದ್ರ ಪ್ರಭು ಅವರ ಅಧ್ಯಕ್ಷತೆಯಲ್ಲಿ, ಎ. ಬಿ. ಮಹಾಶಬ್ದೆಯವರನ್ನು ಶಿಕ್ಷಕರನ್ನಾಗಿ ನೇಮಿಸಿ ಊರವರು ಚಂದಾ ಎತ್ತಿ ನಡೆಸಿದರು. ಅದರಲ್ಲಿ ನಾನು ತರಬೇತಿಪಡೆದಿದ್ದೆ.

ಲಾಹೋರ್ ಕಾಂಗ್ರೆಸ್‌ನ ಪೂರ್ಣಸ್ವರಾಜ್ಯ ಗುರಿಯ ನಿರ್ಣಯದ ಪ್ರಚಾರಕ್ಕೆ 1930ರ ಆರಂಭದಲ್ಲಿ ತೀರ್ಥಹಳ್ಳಿಯಲ್ಲಿ ಪ್ರಭಾತ್‌ಫೇರಿ, ಸಭೆ ನಡೆಸಲು, 144ನೇ ಸೆಕ್ಷನ್ ಜಾರಿಮಾಡಿ, ಪ್ರಮುಖರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ, ಬಂಧಿಸುವ ಬೆದರಿಕೆ ಬಂತು. ಆದರೂ ಪೋಲಿಸರ ಕಣ್ಣು ತಪ್ಪಿಸಿ ಅಲ್ಲಲ್ಲಿ ಧ್ವಜ ಹಾರಿಸುತ್ತ ಇದ್ದೆವು. ಅದೇ ವರ್ಷ ಶಿರಸಿ-ಸಿದ್ದಾಪುರದಲ್ಲಿ ಚಳವಳಿ ಶುರು ಆಗಲು, ಪ್ರತಿ ಶನಿವಾರ ಊರಿನಲ್ಲಿ ಭಿಕ್ಷೆ ಬೇಡಿ, ಆ ಹಣವನ್ನು ಈ ಚಳವಳಿಯ ವೆಚ್ಚಕ್ಕಾಗಿ ಗುಟ್ಟಾಗಿ ಕೆ. ಎ. ವೆಂಕಟರಾಮಯ್ಯನವರಿಗೆ ಮುಟ್ಟಿಸುತ್ತಿದ್ದೆವು. ಪೇಟೆ ವೆಂಕಟರಾವ್ ಹಾಗೂ ಜನಳಿ ಶ್ರೀಪತಿರಾವ್ ಈ ಚಳವಳಿಯಲ್ಲಿ ಭಾಗವಹಿಸಿ 6 ತಿಂಗಳು ಶಿಕ್ಷೆ ಅನುಭವಿಸಿದರು. ಈ ಚಳವಳಿಯ ಕೆಲಸಗಾರರಾಗಿ ದೇವಂಗಿ ಡಿ. ಆರ್. ಮಾನಪ್ಪ, ಎಡೆಹಳ್ಳಿ ವೈ. ಶ್ರೀನಿವಾಸಯ್ಯ ಭಾಗವಹಿಸಿದ್ದರು.

ನರಿಮನ್ ಗಲಭೆ ಆದಾಗ ನಾವೂ ನಮ್ಮೂರಲ್ಲಿ ಶಾಲಾ ಮುಷ್ಕರ ಹೂಡಿದ್ದೆವು. ಆಗ ಶಾಲಾಧಿಕಾರಿಗಳು ಮುಷ್ಕರ ಹೂಡಿದವರಿಗೆ ಒಂದು ವಾರ ಗ್ಹೈರುಹಾಜರಿ, ಫ್ರಿಷಿಪ್, ಹಾಫ್ ಫ್ರೀಷಿಪ್ ಬರುವವರಿಗೆಲ್ಲ ಒಂದೊಂದು ತಿಂಗಳ ವರಮಾನ ಖೋತಾ ಮಾಡಿದ್ದರು. ಈ ಹೈಸ್ಕೂಲು ವ್ಯಾಸಂಗದ ಕಾಲಕ್ಕೆ ಸ್ವಾತಂತ್ರ್ಯಯೋಧರ, ಕ್ರಾಂತಿಕಾರಿಗಳ ಚರಿತ್ರೆ, ಆತ್ಮಚರಿತ್ರೆಗಳನ್ನು ಸ್ನೇಹಿತರ ಜೊತೆಗೆ ಓದಿ ಹೋರಾಟದ ಬಗ್ಗೆ ಅಪಾರಶ್ರದ್ಧೆ ಬೆಳೆಸಿಕೊಂಡೆವು. ಶಿವಪುರ ಕಾಂಗ್ರೆಸ್ಸಿನನಂತರ ತೀರ್ಥಹಳ್ಳಿಯಲ್ಲಿ ಧ್ವಜಸತ್ಯಾಗ್ರಹಮಾಡಿ (1938ರ ಏಪ್ರಿಲ್ ಸುಮಾರಿಗೆ) ಬಂಧಿತನಾಗಿ, ಶಿವಮೊಗ್ಗ ಕೋರ್ಟಿನಲ್ಲಿ ಮೂರು ತಿಂಗಳ ಶಿಕ್ಷೆಗೆ ಒಳಗಾದೆ. ಶಿವಮೊಗ್ಗ ಜೈಲಿನಲ್ಲಿ ನನ್ನ ಜೊತೆ ಆಗ ಕೆ. ಸಿ. ರೆಡ್ಡಿ, ಡಿ. ಆರ್. ಮಾನಪ್ಪ, ಈಗಿನ ತೀರ್ಥಹಳ್ಳಿ ಕಾರ್ಪೊರೇಷನ್ ಬ್ಯಾಂಕ್ ಮ್ಯಾನೇಜರ್ ಸ್ವಾಮಿರಾವ್ ಹಾಗೂ ಇತರ 30 ಜನ ಇದ್ದರು. ಮುಂದೆ

ಕಾಂಗ್ರೆಸ್ಸಿಗೂ ಸರಕಾರಕ್ಕೂ ಒಪ್ಪಂದ ಆಗಿ 1½ ತಿಂಗಳಲ್ಲಿ ಬಿಡುಗಡೆ ಆಯಿತು. ಇಷ್ಟೊತ್ತಿಗೆ ಕಡಿದಾಳ ಮಂಜಪ್ಪನವರೂ ಚಳವಳಿಗೆ ಸೇರಿ ನನ್ನನ್ನು ಪ್ರೋತ್ಸಾಹಿಸುತ್ತಿದ್ದರು.

1939ರ ಅರಣ್ಯಸತ್ಯಾಗ್ರಹದಲ್ಲಿ ನಾನು ನೇರವಾಗಿ ಪಾಲುಗೊಳ್ಳಲಿಲ್ಲ. ಸತ್ಯಾಗ್ರಹದ ವ್ಯವಸ್ಥೆಗೆ ದುಡಿಯುತ್ತಿದ್ದೆ. ನನ್ನ ಮಿತ್ರರಾದ ಟಿ. ಆರ್. ಚಂದ್ರಶೇಖರ, ಡಿ. ವಿ. ಶ್ರೀನಿವಾಸಮೂರ್ತಿ, ನರಸಿಂಹ ಭಟ್ಟ, ಎಸ್. ಭೀಮರಾವ್, ಟಿ. ಜೆ. ರಾಮಕೃಷ್ಣ, ಎಸ್. ಅನಂತರಾವ್, ದಿನೇಶ್, ಕಾಫಿ ನರಸಿಂಹಯ್ಯ ವಿ. ಶರ್ಮ, ಗಿರಿಯಪ್ಪಗೌಡ ಹಾಗೂ ಇತರರು ಭಾಗವಹಿಸಿದ್ದರು. ಸತ್ಯಾಗ್ರಹಿಗಳಿಗೆ ಆರಾರು ತಿಂಗಳು ಸಜೆ, ಜುಲ್ಮಾನೆ ಆದವು. ಸರ್ಕಾರದವರು ನನ್ನ ಚಲನವಲನಗಳನ್ನು ನಿರೀಕ್ಷಿಸುತ್ತಿದ್ದು ರಾತ್ರಿ ಮನೆ ಬಿಟ್ಟು ಹೊರಡದಂತೆ ಕಾವಲು ಹಾಕಿದ್ದರು.

1942ರಲ್ಲಿ ನಮ್ಮ ಊರ ಪುರಪ್ರಮುಖರೂ ಮಹಿಳೆಯರೂ ಯುವಕರೂ ಬಾಲಕ ಬಾಲಕಿಯರೂ ದಿನಂಪ್ರತಿ ಪ್ರಭಾತ್‌ಫೇರಿ ತೆಗೆಯುತ್ತಿದ್ದೆವು. ಸಭೆ ಕೂಡ ಆಗುತ್ತಿತ್ತು. ಭದ್ರಾವತಿಯಲ್ಲಿ ಕಾರ್ಮಿಕರ ಮುಷ್ಕರಕ್ಕೆ ಹಣವೊದಗಿಸಲು ನಮ್ಮ ತಾಲ್ಲೂಕಿನಲ್ಲಿ ಕಾಳಿಂಗಯ್ಯನ ರಾಘವೇಂದ್ರರಾವ್, ಗುಡ್ಡೆಕೇರಿ ದುಗ್ಗಪ್ಪ ಹೆಗ್ಗಡೆ, ಎಂ. ಜಿ. ಶಂಕರಪ್ಪ ಗೌಡರು, ಜ್ವರಾರಿ ಶ್ರೀನಿವಾಸರಾವ್, ಕಡಿದಾಳ ಮಂಜಪ್ಪ ಸಂಗ್ರಹಕಾರ್ಯದಲ್ಲಿ ತೊಡಗಿದ್ದರು. ಈ ಹಣವನ್ನು ಮುಷ್ಕರಕಾರರಿಗೆ ಮುಟ್ಟಿಸುವ ಕೆಲಸಕ್ಕೆ ನನ್ನನ್ನು ನೇಮಿಸಿದ್ದರು. ನಾನು ಆ ಹಣವನ್ನು ಎಚ್. ಸಿದ್ದಯ್ಯ, ಎಚ್. ಎಸ್. ರುದ್ರಪ್ಪ, ಭೂಪಾಳಂ ಪುಟ್ಟನಂಜಪ್ಪ ಇವರಿಗೆ ತಲಪಿಸುತ್ತಿದ್ದೆ. ತೀರ್ಥಹಳ್ಳಿಯಲ್ಲಿ ಕಡಿಪಾಡ್ರೆ ಗೋಪಾಲಕೃಷ್ಣ ಕಾಮತ್ ಈ ಹಣದ ಖಜಾಂಚಿ ಆಗಿದ್ದರು. ಇಂತಹ ಚಳವಳಿ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದ ನನ್ನನ್ನು ಸೆಪ್ಟೆಂಬರ್ 16ರಂದು ನನ್ನ ಸ್ನೇಹಿತರೊಡನೆ ಬೆಳಗ್ಗೆ ಬಂಧಿಸಿದರು. ಕೆ. ಗೋಪಾಲಕೃಷ್ಣ ಕಾಮತ್, ದಿನೇಶ್, ಎಸ್. ಭೀಮರಾವ್, ಟಿ. ಭಾಸ್ಕರ, ಉಡುಪಿ ಮಂಜಪ್ಪ, ಎಸ್. ಸದಾಶಿವರಾವ್, ಎಸ್. ಡಾಕಪ್ಪ, ರಾಮಕೃಷ್ಣ ಪ್ರಭು, ಜೆ. ಶ್ರೀಪತಿರಾವ್, ಎಂ. ಜೆ. ರಮಾನಾಥ, ಪಿ. ವಿಠೋಬ, ಅರಗದ ಅನಂತ ಭಟ್ಟ, ರಾಮಯ್ಯ, ಗುಂಡಯ್ಯ, ಡಿ. ಕೃಷ್ಣೇಗೌಡ, ಶೇಷಪ್ಪ ಹೆಗ್ಗಡೆ, ಎಲವಟ್ಟಿ ಕೃಷ್ಣರಾವ್, ಚಿದಂಬರ ಶಾಸ್ತ್ರಿ ಮುಂತಾದವರನ್ನು, ನನ್ನ ಹಾಗೆ ಭಾರತ ರಕ್ಷಣಾ ಕಾನೂನಿನಂತೆ ಬಂಧಿಸಿ, ಶಿವಮೊಗ್ಗ ಜೈಲಿಗೆ ಒಯ್ದರು ಅಲ್ಲಿ ಎಚ್. ಸಿ. ದಾಸಪ್ಪ, ಕಡಿದಾಳ ಮಂಜಪ್ಪ ನಮ್ಮ ಜೊತೆ ಇದ್ದರು. ತೀರ್ಥಹಳ್ಳಿಯಿಂದ 150 ಜನರು ಚಳವಳಿಯಲ್ಲಿ ಆಗ ಸೇರಿದ್ದು ವಿದ್ಯಾರ್ಥಿಗಳಾದ ಬಿ. ಎನ್. ಶಂಕರಪ್ಪ, ಟಿ. ಪುರುಷೋತ್ತಮ, ಪಿ. ಎಂ. ಶ್ರೀನಿವಾಸ, ಕಾಸರವಳ್ಳಿ ಗಣೇಶ್ ಇವರನ್ನು ತೀರ್ಥಹಳ್ಳಿ ಹೈಸ್ಕೂಲಿನ ಸ್ಟೈಕ್ಲೊಸ್ಟೈಲ್ ಕಳವು ಮಾಡಿದರೆಂದು ಆಪಾದಿಸಿ ಶಿಕ್ಷೆಗೆ ಒಳಪಡಿಸಿದರು. ಶಾಂತವೇರಿ ಗೋಪಾಲಗೌಡ, ಶಿವರಾಮ ಐತಾಳ, ಕಡಿಪಾಡೆ ವೆಂಕಟರಾಯ

ಕಾಮತ್ ಇವರ ಮೇಲೆ ತಂತಿ ಕತ್ತರಿಸಿದ ಆಪಾದನೆ ಬಂತು. ಮೊದಲ ಇಬ್ಬರ ಬಂಧನ ಆದರೂ ಮೂರನೆಯವರು ಸಿಗದೆ ಅವರ ಬಂಧನಕ್ಕೆ 500 ರೂ. ಬಹುಮಾನ ಘೋಷಿಸಿದ್ದರು. 1942ರಲ್ಲಿ ಶಿವಮೊಗ್ಗ, ಕರುಹಟ್ಟಿ, ಬೆಂಗಳೂರು, ಚಿಕ್ಕಮಗಳೂರು ಸಬ್. ಜೈಲ್‌ಗಳಲ್ಲಿ ಇದ್ದೆ. ಬೆಂಗಳೂರು ಜೈಲಿನಲ್ಲಿ ನಾವಿದ್ದಾಗಲೇ ಈಸೂರಿನವರಿಗೆ ಫಾಶಿ ಆಯಿತು. 1943ರ ಜೂನ್ ಸುಮಾರಿಗೆ ಬಿಡುಗಡೆ ಆದೆ.

1947ರ ಚಳವಳಿ ಕಾಲಕ್ಕೆ ಸೆಪ್ಟೆಂಬರ್ 8ರ ಬೆಳಗ್ಗೆ 3 ಗಂಟೆಗೆ ನನ್ನನ್ನು ಬಂಧಿಸಿದರು. ಕಾಳಿಂಗಯ್ಯನ ರಾಘವೇಂದ್ರರಾವ್, ಎಸ್. ಭೀಮರಾವ್, ದಿನೇಶ್, ಸಿರಿವಂತೆ ಆನಂದರಾವ್, ಎಸ್. ನರಸಿಂಹ ಭಗತ್, ಜ್ಞಾನೇಂದ್ರ ಪ್ರಭು, ಬಿ. ಎಸ್. ಕೃಷ್ಣಮೂರ್ತಿ, ಜನಾರ್ದನ ನಾಯ್ಕ, ಜವಳಿ ದತ್ತಾತ್ರಿ, ದೇವಂಗಿ ಮಾನಪ್ಪ ಗೌಡ, ಡಿ. ಟಿ. ಚಂದ್ರಶೇಖರ, ಕೆ. ಎನ್. ಗಣೇಶ್, ಟಿ. ಪುರುಷೋತ್ತಮ, ಕಟ್ಟೆ ಭಾಸ್ಕರನ್, ಜವಳಿ ವೆಂಕಟಸ್ವಾಮಿ, ಬಸವಾನಿ ರಾಮಶರ್ಮ ಇವರನ್ನು ಕಾಲಕ್ರಮದಲ್ಲಿ ಬಂಧಿಸಿದರು. ಮಹಿಳೆಯರಾದ ಸಾವಿತ್ರಮ್ಮ ರಾಮಶರ್ಮ, ಪದ್ಮ ರಾಮದಾಸ್, ಜಯಮ್ಮ, ಲಕ್ಷ್ಮಮ್ಮ, ಪಿ. ದೇವಿ ಯಾನೆ ಜವಳಿ ವನಮಾಲಾ ಇವರನ್ನೂ ಬಂಧಿಸಿದರು. ಶಿವಮೊಗ್ಗ, ಅಲ್ಲಿಂದ ಬೆಂಗಳೂರು, ಕಡೆಗೆ ಕೃಷ್ಣರಾಜಪುರ ಮಿಲಿಟರಿ ಕ್ಯಾಂಪ್ ಜೈಲ್‌ಗಳಿಗೆ ನಮ್ಮನ್ನು ವರ್ಗಾಯಿಸಿದರು.

ಚಳವಳಿ ಕಾಲದಲ್ಲಿ 13-14 ತಿಂಗಳು ಜೈಲುವಾಸ ಅನುಭವಿಸಿರುವೆ. ಅಲ್ಲದೆ ಚಳವಳಿ ಕಾಲಕ್ಕೆ ಆರ್ಥಿಕವಾಗಿ ಹಾಗೂ ಮಾನಸಿಕವಾಗಿ ಬಹಳ ತೊಂದರೆಗೆ ಈಡಾಗಿದ್ದೇನೆ. ಚುನಾವಣೆಗಳ ಕಾಲದಲ್ಲಿ (ಪುರಸಭೆ, ಜಿ॥ ಬೋರ್ಡ್, ಅಸೆಂಬ್ಲಿ) ನಾನೇ ಪ್ರಚಾರದ ಮುಖಂಡತ್ವ ವಹಿಸುತ್ತಿದ್ದೆ. ನಮ್ಮ ನೆಚ್ಚಿನ ನಾಯಕ ಕಡಿದಾಳ ಮಂಜಪ್ಪನವರು ಅಸೆಂಬ್ಲಿಗೆ ನಿಂತು ಗೆದ್ದಿದ್ದರು.

ಮೈ.ಶಿ. 16

## ಬಿ. ಆರ್. ಶಿವರಾಮ ಐತಾಳ

ಜನನ : 1908 ಉದ್ಯೋಗ : ? ವಿಳಾಸ : ನಗರಹಳ್ಳಿ, ಮುಕ್ಕಿಮನೆ ಅಂಚೆ, ತೀರ್ಥಹಳ್ಳಿ ತಾ॥

---

ಗಾಂಧೀಜಿ ತೀರ್ಥಹಳ್ಳಿಗೆ ಬಂದಾಗ ಅವರ ಭಾಷಣವನ್ನು ತಂದೆಯವರ ಜೊತೆ ಹೋಗಿ ಕೇಳಿದ್ದೆ. ಡಾ॥ ಹರ್ಡೀಕರರ ಸೇವಾದಳ ಸೇರಿ ಪ್ರತಿ ಸೋಮವಾರ ಮನೆಮನೆಗೆ ಭೇಟಿ ನೀಡಿ ಪ್ರಚಾರ ನಡೆಸುವ ಕೆಲಸದಲ್ಲಿ ಪಾಲುಗೊಂಡಿದ್ದೆ. ಸಂಸ್ಥಾನ ಹಾಗೂ ಜಿಲ್ಲಾ



ಮಟ್ಟದ ನಾಯಕರ ಭಾಷಣಗಳನ್ನು ಕೇಳಿದ್ದೆ. 1937ರಿಂದ ಕಾಂಗ್ರೆಸ್ಸಿನ ಕೆಲಸಗಳಲ್ಲಿ ಪ್ರತ್ಯಕ್ಷ ದುಡಿಯಲು ಆರಂಭಿಸಿದೆ. ಚಿತ್ರದುರ್ಗದಲ್ಲಿ ನಡೆದ ರಾಷ್ಟ್ರಕೂಟ (ಕಾಂಗ್ರೆಸ್ ಕನ್‌ವೆನ್ಶನ್) ಅನಂತರ ಎಲ್ಲೆಡೆ ಪ್ರತಿಬಂಧಕಾಜ್ಞೆ ಹೇರಿದಾಗ ನನ್ನ ಮತ್ತು ಪಾಂಡುರಂಗ ಭಟ್ಟರ ಮೇಲೆ (ಹಾಗೂ ಇನ್ನೂ ಕೆಲವರ ಮೇಲೆ) ಪ್ರತಿಬಂಧ ಜಾರಿಮಾಡಲು, ನಾನು ಕೊಪ್ಪಕ್ಕೆ ಹೋಗಿ ಕಾಂಗ್ರೆಸ್‌ನ ಕೆಲಸ ಮಾಡಿದೆ. ಇದೇ ಕಾಲಕ್ಕೆ ನ್ಯಾಯವಿಧಾಯಕ ಸಭೆಗೆ ಪಾತ್ರೆ ಅಂಗಡಿ ಎಸ್. ಆರ್. ಸುಬ್ರಾವ್ ಹಾಗೂ ಪ್ರಜಾಪ್ರತಿನಿಧಿಸಭೆಗೆ ಭೂಪಾಳಂ ಪುಟ್ಟನಂಜಪ್ಪ ಆರಿಸಿಬರುವಂತೆ ಶ್ರಮಿಸಿದೆವು. ಆಗ ನಾನು ಟಿ.ಸಿ.ಸಿ. ಕಾರ್ಯದರ್ಶಿ ಆದೆ ಹಾಗೂ ಡಿ.ಸಿ.ಸಿ. ಸದಸ್ಯನಾದೆ. ಕಾಳಿಂಗಯ್ಯನ ರಾಘವೇಂದ್ರರಾಯರು, ಜ್ಞಾನೇಂದ್ರ ಪ್ರಭು, ಕಟ್ಪಾಡಿ ಕಾಮತ್, ವೆಂಕಟಗಿರಿರಾಯರು, ಡಾ|| ಚಂದ್ರಶೇಖರ್, ಉಡುಪಿ ಮಂಜಪ್ಪ ಊರ ಪ್ರಮುಖ ಉತ್ಸಾಹೀ ಕಾರ್ಯಕರ್ತರು. ಹರಿಹರ, ಚನ್ನಪಟ್ಣ ಕಾಂಗ್ರೆಸ್‌ಗಳಿಗೂ ಹೋಗಿದ್ದೆ. ಆಗಿನ ಸಕಲ ಚಳವಳಿ, ಚುನಾವಣೆಗಳಲ್ಲಿ ದುಡಿದೆ.

1942ರಲ್ಲಿ ತೀರ್ಥಹಳ್ಳಿ–ಕೊಪ್ಪ ಮಾರ್ಗದಲ್ಲಿ ದೇವಂಗಿ–ಬಸವಾನಿ ಸಮೀಪ ತಂತಿ ಕತ್ತರಿಸಿದ ಆಗಿನ ಟಿ.ಸಿ.ಸಿ. ಕಾರ್ಯದರ್ಶಿ ಶಾಮ ಐತಾಳ, ಗೋಪಾಲಗೌಡ, ಕಿಟ್ಟಪ್ಪ, ಕಾಮತ್, ನರಸಿಂಹ ಭಟ್ ಮೊದಲಾದವರ ಜೊತೆ ಸಹಕರಿಸಿದ್ದೆ, ಅವರ ವಿಚಾರಣೆ ನಡೆದಾಗ. ಧುರೀಣರ ಮಾರ್ಗದರ್ಶನದಂತೆ ಎಲ್ಲ ನಡವಳಿಕೆ ನಡೆಸಿದ್ದು ಜ್ಞಾಪಕ ಇದೆ.

1946ರಿಂದ ಅಖಿಲ ಮೈಸೂರು ಕಾಂಗ್ರೆಸ್‌ನ ಸದಸ್ಯನಾಗಿಯೂ ಡಿ.ಸಿ.ಸಿ.ಯಲ್ಲೂ ಕೆಲಸಮಾಡಿದೆ. ಟಿ.ಸಿ.ಸಿ.ಯಲ್ಲಿ ಕಾರ್ಯದರ್ಶಿ, ಉಪಾಧ್ಯಕ್ಷ, ಖಜಾಂಚಿ ಆಗಿಯೂ ದುಡಿದಿರುವೆ. ಪಬ್ಲಿಕ್ ಸೆಕ್ಯುರಿಟಿ ಆ್ಯಕ್ಟ್ ಪ್ರಕಾರ ಡಿಟೆನ್ಶನ್ ವಾರಂಟ್‌ನಂತೆ ರಾಜಕೀಯ ಬಂದಿಯಾಗಿ ಜಿಲ್ಲಾ ಲಾಕಪ್, ಸೆಂಟ್ರಲ್ ಜೈಲ್, ಡಿಟೆನ್ಶನ್ ಕ್ಯಾಂಪ್‌ಗಳಲ್ಲೂ ವಾಸಮಾಡಿದೆ.

ಸರಕಾರ ನೀಡುವ ಪೆನ್ಶನ್, ಜಮೀನು ಮುಂತಾದವನ್ನು ಪಡೆದಿಲ್ಲ. ಯಾವ ಉದ್ಯೋಗವಾಗಲೀ ಉದ್ಯೋಗಾವಕಾಶವಾಗಲೀ ಆರ್ಥಿಕ ಸಹಾಯವಾಗಲೀ ದೇಶದ ಆಡಳಿತಗಾರರ ಸಹಾನುಭೂತಿಯಾಗಲೀ ಇಲ್ಲ. ಜನ್ಮಭೂಮಿಗೆ ಅಲ್ಪಸೇವೆ ಸಲ್ಲಿಸಿದ ಹೆಮ್ಮೆ ಇದೆ.

ವ್ಯ.ಶಿ. 17

# ಬಸವಾನಿ ರಾಮಶರ್ಮ

ಜನನ : ? ಉದ್ಯೋಗ : ವ್ಯವಸಾಯ ವಿಳಾಸ : ಬಸವಾನಿ, ತಾ|| ತೀರ್ಥಹಳ್ಳಿ



ನನಗೆ ಸಂಗ್ರಾಮದಲ್ಲಿ ಪಾಲುಗೊಳ್ಳಲು ಸ್ಫೂರ್ತಿ ನೀಡಿದ ನನ್ನ ಸಂಬಂಧಿ ದಿ|| ಅಂಡೆಕುಳಿ ಮಂಜಯ್ಯ ಹಾಗೂ ಅವರ ಕುಟುಂಬೀಯರ ವಿಚಾರ ಮೊದಲು ಹೇಳಬೇಕು. ನಮ್ಮ ಊರವರಾದ ಮಂಜಯ್ಯ 1918ರಿಂದಲೇ ಕಾಂಗ್ರೆಸ್ಸಿನ ವಿಚಾರ ಆಸ್ಥೆ ಉಳ್ಳವರು. ಕೊಪ್ಪಳ ಜಯರಾಮಾಚಾರ್ಯರ ಹರಿಕಥೆಯಿಂದ ಪ್ರಭಾವಿತರಾಗಿ, 1921-22ರಲ್ಲಿ ತಮ್ಮ ಭಾರೀ ಜವಳಿ ಅಂಗಡಿಯಲ್ಲಿದ್ದ ಸುಮಾರು 20-25 ಸಾವಿರ ರೂ. ಬೆಲೆಯ ಬಟ್ಟೆಯನ್ನು ಅಗ್ನಿನಾರಾಯಣನಿಗೆ ಆಹುತಿ ಮಾಡಿದರು. ಅಲ್ಲದೆ ಬಸವಾನಿಯಲ್ಲಿ ಖಾದಿ ಉತ್ಪಾದನಾ ಕೇಂದ್ರ ಸ್ಥಾಪಿಸಲು ಅಪಾರ ಧನವ್ಯಯ ಮಾಡಿದರು. ತೀರ್ಥಹಳ್ಳಿ ಸಮೀಪದ ಬಾಳೆಬಯಲಿನಲ್ಲಿ ಸಾಬರಮತಿಯ ಮಾದರಿಯ ಬ್ರಹ್ಮಚರ್ಯಾಶ್ರಮವನ್ನು ವಸಿಷ್ಠಕುಲದ ಅನಂತಶರ್ಮರ ನೇತೃತ್ವದಲ್ಲಿ ಸ್ಥಾಪಿಸಿ ಅದಕ್ಕಾಗಿ ಅವರು ಸಾವಿರಾರು ರೂ. ವೆಚ್ಚಮಾಡಿದರು.

ಕಾಂಗ್ರೆಸ್ಸಿನ ಎಲ್ಲ ಅಧಿವೇಶನಗಳಿಗೂ ಹೋಗಿಬರುತ್ತಿದ್ದ ಅವರು ಎ.ಐ.ಸಿ.ಸಿ. ಸದಸ್ಯರೂ ಆದರು. ಕೆಲವು ಕಾಲ ಡಿ.ಸಿ.ಸಿ.ಯ ಅಧ್ಯಕ್ಷರೂ ಆಗಿದ್ದರು. ಡಾ|| ಹರ್ಡೀಕರ, ಡಾ|| ಪಾರ್ಥನಾರಾಯಣ ಪಂಡಿತ್ ಮುಂತಾದವರ ಮಿತ್ರರಾಗಿದ್ದು ಸೇವಾದಳದ ಕೆಲಸಗಳಿಗಾಗಿ ಅಪಾರ ವೆಚ್ಚಮಾಡುತ್ತಿದ್ದರು. ಸಂತ್ರಸ್ತ ಸತ್ಯಾಗ್ರಹಿಗಳ ಕುಟುಂಬಪೋಷಣೆಗೂ ವೆಚ್ಚಮಾಡುತ್ತಿದ್ದರು. ಡಾ|| ಡಿ. ಕೆ. ಭಾರದ್ವಾಜರು ಸೆರೆಮನೆಯಲ್ಲಿದ್ದಾಗ ಅವರ ಕುಟುಂಬೀಯರೆಲ್ಲ ಇವರ ಮನೆಯಲ್ಲೇ ಇದ್ದರು. ಕಾಂಗ್ರೆಸ್ಸಿನ ವಿವಿಧ ಕೆಲಸಗಳಿಗಾಗಿ ತ್ಯಾಗಮಾಡಿ ಸುಮಾರು 2 ಲಕ್ಷ ರೂ. ಬೆಲೆಯ ಇವರ ಆಸ್ತಿ ಮುಂದೆ ಸಾಲಿಗರ ಪಾಲಾಯಿತು. ಗಾಂಧೀಜಿ 1927ರಲ್ಲಿ ತೀರ್ಥಹಳ್ಳಿಗೆ ಬರಲು ಇವರೇ ಕಾರಣ. 1930ರಲ್ಲಿ ಅಂಕೋಲಾ ಸತ್ಯಾಗ್ರಹದಲ್ಲಿ ಬಂಧಿತರಾಗಿ ವಿಸಾಪುರ, ಹಿಂಡಲಗಿ ಜೈಲುಗಳಲ್ಲಿ ಕಠಿಣ ಶಿಕ್ಷೆ ಅನುಭವಿಸಿದ್ದರು. ಮುಂದೆ 1932-33ರಲ್ಲೂ

ಒಂದು ವರ್ಷ ಕಾರವಾರ ಜೈಲಿನಲ್ಲಿ ಇದ್ದರು. ಸೆರೆಮನೆಯಲ್ಲಿದ್ದಾಗಲೇ ಅನಾರೋಗ್ಯಕ್ಕೆ ಒಳಪಟ್ಟು ಗುಣಮುಖರಾಗದೆ 1935ರಲ್ಲಿ ಸ್ವರ್ಗಸ್ಥರಾದರು.

ಇವರ ಮಕ್ಕಳಾದ ಎ. ಎಂ. ರಾಮದಾಸ್ ಹಾಗೂ ಎ. ಎಂ. ದೇವದಾಸ್ ಮತ್ತು ಸೊಸೆ ಪದ್ಮಾ ರಾಮದಾಸ್ ಇವರೂ ಕೂಡ ಕಾಂಗ್ರೆಸ್‌ನ ಚಟುವಟಿಕೆಗಳಲ್ಲಿ ದುಡಿದವರು. ಈ ಮೂವರೂ 1947ರಲ್ಲಿ ಬಂಧನಕ್ಕೊಳಗಾಗಿ ಜೈಲು ಸೇರಿದ್ದರು. ರಾಮದಾಸರು 1942ರಲ್ಲಿ ಪಾನನಿರೋಧ ಚಟುವಟಿಕೆಯ ಕಾಲಕ್ಕೆ ಮದ್ಯದಂಗಡಿ ಯವರ ಪುಂಡಾಟಿಕೆಯಿಂದ ಕಾಲಲ್ಲಿ ಗಾಯಗೊಂಡು ಅನೇಕ ದಿನ ಶಿವಮೊಗ್ಗ ಆಸ್ಪತ್ರೆ ಯಲ್ಲಿದ್ದರಲ್ಲದೆ ಈ ಸಂಬಂಧದ ಖಟ್ಲೆಯಿಂದ ಅಪಾರ ಖರ್ಚುವೆಚ್ಚಕ್ಕೆ ಒಳಗಾದರು.

ಅಂಡೆಕುಳಿ ಮಂಜಯ್ಯನವರ ಚಟುವಟಿಕೆಗಳೇ ನನಗೆ ಬಾಲ್ಯದಿಂದ ಸ್ಫೂರ್ತಿ ನೀಡಿದ್ದವು. ಚಳವಳಿಯಲ್ಲಿ ನಾನು 1930 ಮತ್ತು 1947ರಲ್ಲಿ ಜೈಲು ಕಂಡಿದ್ದೇನೆ. ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳೆರಡರಲ್ಲೂ ಕಾಂಗ್ರೆಸ್ಸಿನ ಕೆಲಸ ಮಾಡಿದ್ದೇನೆ. 1942ರಲ್ಲಿ ಹಳ್ಳಿಹಳ್ಳಿಗಳಲ್ಲಿ ಪ್ರಚಾರಮಾಡಿ ಎರಡೂ ಜಿಲ್ಲೆಗಳಲ್ಲಿ ಅನೇಕ ಚಟುವಟಿಕೆ ಗಳನ್ನು ಮಾಡಿಸಿದೆ. ದಿ|| ಶಾಂತವೇರಿ ಗೋಪಾಲಗೌಡ, ನಾರಾಯಣಶೆಟ್ಟಿ, ದೇವಂಗಿಯ ಡಿ. ಟಿ. ಚಂದ್ರಶೇಖರ, ಶಾಮ ಐತಾಳ, ವೆಂಕಟರಾಯ ಕಾಮತ್ ಇವರುಗಳು ನಮ್ಮ ಮನೆಯಿಂದಲೇ ಹೊರಟು ನಮ್ಮ ಊರ ಬಳಿ ಟೆಲಿಗ್ರಾಫ್ ತಂತಿ ಕತ್ತರಿಸಿದ್ದರು. ಇದು ಮುಂದೆ ಪ್ರಸಿದ್ಧ ಪ್ರಕರಣವೇ ಆಯಿತು. ಚಿಕ್ಕಮಗಳೂರು ಜಿಲ್ಲೆಯಲ್ಲೂ ತಂತಿ ಕತ್ತರಿಸುವ ಪ್ರಕರಣಗಳು ನಮ್ಮವರಿಂದ ಆಯಿತು. ಎಲ್ಲೆಡೆ ರಾಜಕೀಯ ಜಾಗೃತಿಗೆ ದುಡಿದೆ. 1947ರಲ್ಲಿ ನಾನು ತಾಲ್ಲೂಕಿನ ಎರಡನೆಯ ಸರ್ವಾಧಿಕಾರಿಯಾಗಿ ಸೆರೆಮನೆ ಸೇರಿದೆ. ಇದೇ ಕಾಲದಲ್ಲಿ (ಕಾಂಗ್ರೆಸ್‌ನ ಸಕ್ರಿಯ ಕಾರ್ಯಕರ್ತೆಯಾಗಿ 1935ರಿಂದಲೂ ದುಡಿಯುತ್ತಿದ್ದ) ನನ್ನ ಪತ್ನಿ ಸಾವಿತ್ರಮ್ಮ ಕೂಡ ತೀರ್ಥ ಹಳ್ಳಿ ತಾ|| ಕಚೇರಿಯಲ್ಲಿ ಪಿಕೆಟಿಂಗ್‌ನಲ್ಲಿ ನಾಯಕತ್ವ ವಹಿಸಿ ಬಂಧಿತಳಾಗಿ ಜೈಲು ಕಂಡಳು. 1947ರಲ್ಲಿ ಜೈಲಿ ನಿಂದ ಹೊರಬರುವಾಗ ಅಡಿಕೆ ಧಾರಣೆ ಇಳಿದು ನನಗೆ 60–70 ಸಾವಿರ ರೂ. ನಷ್ಟವಾದರೇ ಎದೆಗುಂದದೇ ಸಾರ್ವಜನಿಕ ಚಟುವಟಿಕೆಗಳನ್ನು ಸಾಗಿಸಿದ್ದೇನೆ.



ಮಲೆನಾಡು ಗೇಣಿದಾರ ರೈತ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ದುಡಿಯುತ್ತಿದ್ದೇನೆ. ಕಾಗೋಡು ಸತ್ಯಾ ಗ್ರಹದ ಸಂಘಟಕರಲ್ಲಿ ನಾನೂ ಒಬ್ಬ. ಇಂದಿಗೂ ಆಡಳಿತಕಾಂಗ್ರೆಸ್ ಸಂಘಟನೆ, ಸಾಹಿತ್ಯ ಪ್ರಚಾರ, ಶಿಕ್ಷಣ, ಸಹಕಾರ ರಂಗದಲ್ಲಿ ದುಡಿಯುತ್ತಿರುವೆ. ನನ್ನ ಪತ್ನಿ ಸಾವಿತ್ರಮ್ಮ ಕೂಡ ಕಸ್ತೂರಬಾ ಸ್ಮಾರಕ ನಿಧಿ ಸಂಸ್ಥೆಯಲ್ಲಿ ಶಿಕ್ಷಣಪಡೆದು ಬಸವಾನಿ ಗ್ರಾಮಸೇವಾ ಕೇಂದ್ರದ ಸಂಚಾಲಕಿಯಾಗಿ ಸೇವೆಸಲ್ಲಿಸುತ್ತಿದ್ದಾಳೆ. ಬಸವಾನಿಯಲ್ಲಿ ಕಸ್ತೂರ್‌ಬಾ ಮಾತೃ

ಮಂದಿರ (ಹೆರಿಗೆ ಆಸ್ಪತ್ರೆ) ಸ್ಥಾಪಿಸಿ ಹಳ್ಳಿಗಾಡಿನಲ್ಲಿ ಬಡಗರ್ಭಿಣಿ, ಬಾಣಂತಿಯರ ಸೇವೆ ನಡೆಸುತ್ತ ಬಂದಿದ್ದಾಳೆ.

## ವ್ಯ.ತಿ. 18 | ರಂಗಘೋಳ ತುಳುಜಪ್ಪ

ಜನನ : 1920 ಉದ್ಯೋಗ : ಹೊಲಿಗೆ ಕೆಲಸ ವಿಳಾಸ : ಅರ್ಷಾದ್ ರಸ್ತೆ, ಸಾಗರ

---



ಕಾರವಾರ ಜಿಲ್ಲೆಯಲ್ಲಿ 1930-33ರ ಅವಧಿಯಲ್ಲಿ ತೀವ್ರ ಚಳವಳಿ ನಡೆದಾಗ ಸಾಗರಕ್ಕೆ ಅನೇಕ ನಾಯಕರು ಬಂದು ಧನಸಂಗ್ರಹ, ಪ್ರಚಾರ ಮಾಡುತ್ತಿದ್ದುದರಿಂದ ನಮ್ಮೂರಲ್ಲೂ ರಾಷ್ಟ್ರೀಯ ಜಾಗೃತಿ ಆಯಿತು. ಖಾದಿ ಮಾರಾಟದ ಜೊತೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಚೈತನ್ಯ ನೀಡುವ ಸಾಹಿತ್ಯಗಳ ಮಾರಾಟ ಕೂಡ ಆಗುತ್ತಿತ್ತು. ಆಗ ಸ್ವಾತಂತ್ರ್ಯಕ್ಕಾಗಿ ದುಡಿಯಲು ಅನೇಕರು ಮುಂದಾಗಲು ನಾನೂ ಒಬ್ಬ ಸ್ವಯಂಸೇವಕನಾಗಿ ಸೇರಿಕೊಂಡೆ. ಸಭೆ, ಸಮ್ಮೇಳನ, ಪಿಕೆಟಿಂಗ್, ಬುಲೆಟಿನ್ ಪ್ರಕಟಣೆ, ಪ್ರಭಾತ್‌ಫೇರಿಗಳನ್ನು ಮಾಡುತ್ತಿದ್ದೆ. ಹಳದೀಪುರ ರಂಗಪ್ಪ, ಬಿ. ಗೋಪಾಲರಾವ್, ಕಾಸರಕೋಡು ನಾಗಪ್ಪ, ಮೃತ್ಯುಂಜಯರಾವ್ ಬಾಪಟ್, ಕೆ. ಜಿ. ಒಡೆಯರ್ ಇವರುಗಳ ಪ್ರಾಮಾಣಿಕತೆ, ನಿಷ್ಠೆ, ಕೆಚ್ಚು ನನಗೂ ಪ್ರೇರಕವಾಗಿದ್ದವು.

1937ರಲ್ಲಿ ಟಿ. ಸಿದ್ದಲಿಂಗಯ್ಯನವರು ಇಲ್ಲಿ ಪ್ರಚಾರಕ್ಕೆ ಬಂದಾಗ ಅವರ ಕಾರಿನಲ್ಲಿ ಇದ್ದ ಧ್ವಜವನ್ನು ಸಬ್-ಇನ್ಸ್‌ಪೆಕ್ಟರರೊಬ್ಬರು ಹರಿದು ನಾಶಪಡಿಸಲು, ಜನ ರೊಚ್ಚಿಗೆದ್ದು, ಜನಬೆಂಬಲಕ್ಕೆ ಇದು ನಾಂದಿಯಾಯಿತು. ಧ್ವಜಸತ್ಯಾಗ್ರಹ ಆಚರಿಸುವ ಕರೆ ಬಂದಾಗ ಬಿ. ವೆಂಕಟರಾವ್, ವಿನಾಯಕರಾವ್ ಬಾಪಟ್, ತಲಗೇರಿ ದತ್ತೋಬರಾವ್, ಬಿ. ಗೋಪಾಲರಾವ್, ಎಚ್. ರಂಗಪ್ಪ ಮತ್ತು ನಾನು ಅದರಲ್ಲಿ ಪಾಲುಗೊಂಡು ದಸ್ತಗಿರಿ ಆದೆವು. ನನ್ನನ್ನು ವಯಸ್ಸಾಗಿಲ್ಲವೆಂದು ಠಾಣೆಯಿಂದ ಬಿಟ್ಟರೂ ಉಳಿದವರನ್ನು 15-20 ದಿನಗಳನಂತರ ಬಿಟ್ಟರು. ಮುಂದೆ ಚಳವಳಿಯ ಬಗ್ಗೆ ಸರಕಾರದ ನಿರಾಸಕ್ತಿ ಆದಾಗ ನಮ್ಮ ಚಟುವಟಿಕೆಗಳು ಹೆಚ್ಚಾದವು. ನಾಯಕರು ವಹಿಸಿದ ಕೆಲಸ

ವನ್ನು ಉತ್ಸಾಹದಿಂದ ಸೇವಾಭಾವದಿಂದ ರಾತ್ರಿಹಗಲೆನ್ನದೆ ನಾನು ಮಾಡುತ್ತಿದ್ದುದರಿಂದ ನಾಯಕರ ವಿಶ್ವಾಸ ನನ್ನ ಮೇಲೆ ಹೆಚ್ಚಿ ನನ್ನ ಕೆಲಸ, ಜವಾಬ್ದಾರಿಗಳೂ ಹೆಚ್ಚಿ, ನನ್ನ ಸ್ವಂತ ಕೆಲಸವನ್ನು ತೊರೆಯಬೇಕಾಗಿತ್ತು. ಮನೆಗೆ ಹಿರಿಯ ನಾನೇ ಆಗಿದ್ದು ಮನೆಯ ಜವಾಬ್ದಾರಿ ನಾನು ನೋಡಿಕೊಂಡೇನೆಂದು ನಂಬಿದ ತಂದೆತಾಯಂದಿರಿಗೆ ನಿರಾಶೆ ಆಯಿತು. ನನಗೆ ಸ್ವಾತಂತ್ರ್ಯದ ಹುಚ್ಚು ಹೆಚ್ಚಾಗಿ ಅನೇಕ ಸಲ ಮನೆ ಸಹ ಸೇರದಾಗ, ನನ್ನ ಆಸೆಯನ್ನು ಬಿಟ್ಟು ಅವರು ಉಳಿದ ಮಕ್ಕಳನ್ನು ತೀರ ಕಷ್ಟದಿಂದ ಸಲಹಿ ಸಂಸಾರ ಸಾಗಿಸಬೇಕಾಯಿತು. ಮೇಲಿಂದಮೇಲೆ ನಾಯಕರುಗಳು ಪ್ರಚಾರಕ್ಕೆ ಬರುತ್ತಿದ್ದರು. ಭಾಷಣ ಮಾಡುವ ಸ್ಥಳದ ವ್ಯವಸ್ಥೆ, ಜಾಗಟೆ ಹೊಡೆದು ಪ್ರಚಾರ, ಊರ ಪ್ರಮುಖ ರನ್ನು ಕರೆದು ತರುವುದು, ಜನಗಳನ್ನು ಸೇರಿಸುವುದು, ಟೇಬಲ್, ಕುರ್ಚಿ ತರುವುದು, ಭಾಷಣಕಾರರನ್ನು ಕರೆದುತಂದು ಕಾರ್ಯಕ್ರಮ ನಡೆಸುವುದು, ಬಂದವರ ಊಟೋಪಚಾರ ವ್ಯವಸ್ಥೆ, ಅವರ ಮುಂದಿನ ಪ್ರಯಾಣ ವ್ಯವಸ್ಥೆ, ಹೀಗೆ ನಾನಾಮುಖವಾಗಿ ಕಾರ್ಯಕ್ರಮ ಗಳನ್ನು ನನ್ನ ವಯಸ್ಸಿನ ಯುವಕರನ್ನು ಕರೆದು ಮಾಡುತ್ತಿದ್ದೆ. ಟಿ. ಸಿದ್ದಲಿಂಗಯ್ಯ, ವೀರಣ್ಣಗೌಡ ಹಾಗೂ ತಾಯಮ್ಮ, ಟಿ. ಆರ್. ನೇಸ್ವಿ, ಕೆ. ಹನುಮಂತಯ್ಯ, ಎನ್. ಡಿ. ಶಂಕರ್ ಮುಂತಾದವರು ಹೀಗೆ ಬರುತ್ತಿದ್ದು, ಎನ್. ಡಿ. ಶಂಕರ್ ಅವರು ಸಾಗರ ತಾಲ್ಲೂಕನ್ನೇ ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡಿದ್ದರು. ಹಿಂದಿ-ಉರ್ದುವಿನಲ್ಲಿ ಕೆಚ್ಚನ್ನು ಉಂಟುಮಾಡುವ ಕ್ರಾಂತಿಕಾರಕ ಭಾಷಣಗಳನ್ನು ನೀಡುತ್ತಿದ್ದರು. ಬರಬರುತ್ತ ಪೋಲಿಸರು ಇವರ ಸಭೆಗಳು ನಡೆಯದಂತೆ ತೊಂದರೆ ಕೊಡಲು ಆರಂಭಿಸಿದರು.

1939ರಲ್ಲಿ ಜೋಗ್ ರೋಡಿನಲ್ಲಿ ಸತ್ಯಾಗ್ರಹ ಶಿಬಿರವನ್ನು ಕೆ. ಜಿ. ಒಡೆಯರ್‌ರ ನೇತೃತ್ವದಲ್ಲಿ ತೆರೆದು, 9-10-1939ರಂದು ಅವರ ಹಿರಿತನದಲ್ಲಿ, ಭಾರಿ ಮೆರವಣಿಗೆ ಯಲ್ಲಿ, ಸಾವಿರಾರು ಜನರ ಸಮ್ಮುಖದಲ್ಲಿ ಅರಣ್ಯಸತ್ಯಾಗ್ರಹವಾಯಿತು. ಒಡೆಯರ್ ಮತ್ತು ತಂಡದವರ ಬಂಧನ ಆಯಿತು. ಮರುದಿನ ನನ್ನ ನಾಯಕತ್ವದಲ್ಲಿ ಇನ್ನೊಂದು ತಂಡ ಸತ್ಯಾಗ್ರಹ ಮಾಡಿ ನಾವು ಬಂಧಿತರಾದೆವು. ಇದೇ ರೀತಿ ಪ್ರತಿನಿತ್ಯ ಸತ್ಯಾಗ್ರಹ ನಡೆದು ಅನೇಕರ ಬಂಧನ ಸಾಗಿ ತಾಲ್ಲೂಕಿಗೇ ಕೀರ್ತಿ ಬಂತು. 20-10-1939ರಂದು ಸಾಗರ ಕೋರ್ಟಿನಲ್ಲಿ ನಮಗೆಲ್ಲ 8½ ತಿಂಗಳು ಶಿಕ್ಷೆ ಆಯಿತು. 21-10-1939ರಂದು ಶಿವಮೊಗ್ಗ ಜೈಲಿಗೆ ಸೇರಿಸಿದರು. ಆಗ ಮೈಸೂರು ಕಾಂಗ್ರೆಸ್ ವರ್ಕಿಂಗ್ ಕಮಿಟಿ ಯವರನ್ನೆಲ್ಲ ಕೋಲಾರದಲ್ಲಿ ಬಂಧಿಸಿ ಅದೇ ಜೈಲಿನಲ್ಲಿ ಇಟ್ಟಿದ್ದರು. ಜೈಲಿನ ಶಿಸ್ತಿನ ವಾತಾವರಣ, ಹಿರಿಯ ನಾಯಕರ ಸಹವಾಸದಿಂದ ಸತ್ಪ್ರಜೆಗಳಾಗಿ, ಬಾಳಿ ದೇಶಸೇವೆ ಮಾಡುವ ಮಾರ್ಗದರ್ಶನ ನಮಗೆ ದೊರೆಯಿತು. ಪೂರ್ಣ ಶಿಕ್ಷೆ ಅನುಭವಿಸಿ ನಾವು ಬಿಡುಗಡೆ ಆದಾಗ ಎಸ್. ಸಿ. ತಿಮ್ಮಾರೆಡ್ಡಿ ಮಾತ್ರ ಜೈಲಿನಲ್ಲಿ ಇದ್ದರು. ಬಿಡುಗಡೆ ಆದ ದಿನ ದಿ|| ಎಚ್. ಸಿದ್ದಯ್ಯನವರ ಧರ್ಮಪತ್ನಿ ನಮಗೆ ಭೋಜನಕೂಟ ಏರ್ಪಡಿಸಿ

ಸತ್ಕರಿಸಿದರು. ಎಸ್. ಆರ್. ನಾಗಪ್ಪ ಶೆಟ್ಟರು ಎಲ್ಲ ಸತ್ಯಾಗ್ರಹಿಗಳಿಗೂ ಒಂದೊಂದು ಜೊತೆ ಖಾದಿ ಬಟ್ಟೆಯ ಲುಂಗಿ, ಜುಬ್ಬಾ ಉಡುಗರೆ ಇತ್ತರು.

1942ರಲ್ಲಿ ಸಾಗರದಲ್ಲಿ ಪ್ಲೇಗ್ ಬಂದು, ಜನರೆಲ್ಲ ಊರು ಬಿಟ್ಟು ಹೊರಗಡೆ ಬೀಡುಬಿಟ್ಟಿದ್ದರಿಂದ ಉಗ್ರ ಚಳವಳಿ ನಡೆಸಲು ಕಾಂಗ್ರೆಸ್‌ಗೆ ಸಾಧ್ಯ ಆಗಲಿಲ್ಲ. ಮುಂದೆ 1945ರಲ್ಲಿ ಕೆಂಗಲ್ ಹನುಮಂತಯ್ಯನವರು ಬಂದಾಗ ನಗರೇಶ್ವರ ದೇವಾಲಯದಲ್ಲಿ ಭಾರಿ ಸಭೆ ಏರ್ಪಡಿಸಿದೆವು. ಅವರ ಉಗ್ರ ಭಾಷಣದಿಂದಾಗಿ ಅವರ ಮೇಲೆ ರಾಜ ದ್ರೋಹದ ಆಪಾದನೆ ಹಾಕಿ ಸಾಗರ ಕೋರ್ಟಿನಲ್ಲಿ ಅವರಿಗೆ ಶಿಕ್ಷೆ ಆಯಿತು. ತಾಳಕೆರೆ ಸುಬ್ರಹ್ಮಣ್ಯಂ ಆಗ ಅವರ ಪರ ವಾದಿಸಲು ಬಂದಿದ್ದು ವಿಚಾರಣೆಯ ಕಾಲಕ್ಕೆ ಭಾರಿ ಜನ ಸೇರಿದ್ದರು.

1947ರ ಆಗಸ್ಟ್ 15ಕ್ಕೆ ಊರಲ್ಲಿ ಎಲ್ಲರೂ ತ್ರಿರಂಗೀ ಧ್ವಜ ಹಚ್ಚಿ ವಿಜಯೋತ್ಸವ ಆಚರಿಸಿದರು. ಆದರೆ ಇಡೀ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕರೂ ನಮ್ಮ ಹೋರಾಟ ಸಾಗಬೇಕಾಗಿತ್ತು. ಸೆಪ್ಟೆಂಬರ್ ತಿಂಗಳಲ್ಲಿ ನಾನಾರೀತಿಯ ಕಾನೂನುಭಂಗ ಭರದಿಂದ ಸಾಗರದಲ್ಲಿ ಆಯಿತು. 10-9-1947ರಂದು ಟಿ. ಬಿ. ಎದುರಿನ ಗಂಧದ ಮರ ಕಡಿದು ನಾನು ಬಂಧಿತನಾಗಿ, ನನಗೆ ಎಂಟು ತಿಂಗಳ ಶಿಕ್ಷೆ ವಿಧಿಸಿದರು. ಸಾಗರದ ಜೈಲು ಸಾಲದೆ ಟಾಕೀಸಿನಲ್ಲಿ ಜನರನ್ನು ತುಂಬಿದ್ದರು. ಮುಂದೆ ಕೆಲವು ದಿನಗಳಲ್ಲಿ ನಮ್ಮನ್ನು ಬದರೀನಾರಾಯಣ ಅಯ್ಯಂಗಾರ್‌ರ ಜೊತೆ ಬೆಂಗಳೂರು ಸೆಂಟ್ರಲ್ ಜೈಲಿಗೆ ಒಯ್ದರು. ಮುಂದೆ ಬಿಡುಗಡೆ ಆಗಿ ರೈಲಿನಲ್ಲಿ ನಾವು ಸಾಗರಕ್ಕೆ ಬಂದಾಗ ಜನ ಸ್ಟೇಶನ್‌ನಲ್ಲಿ ಕಾದಿದ್ದು, ಊರಲ್ಲೆಲ್ಲ ಅಪೂರ್ವ ಮೆರವಣಿಗೆ ಮಾಡಿದರು.

ನಮ್ಮ ತಾಲ್ಲೂಕಿನಲ್ಲಿ ಜೈಲು ಕಂಡ ಕೆಲ ಪ್ರಮುಖರ ಹೆಸರು ಇಲ್ಲಿ ಕೊಟ್ಟಿರುವೆ: ಮೃತ್ಯುಂಜಯ ಬಾಪಟ (ಧ್ವಜಸತ್ಯಾಗ್ರಹದಲ್ಲಿ 3 ತಿಂಗಳು ಸಜಾ); ಕಾಗೋಡು ಕೆ. ಜಿ. ಒಡೆಯರ್ (1939ರಲ್ಲಿ ಅರಣ್ಯಸತ್ಯಾಗ್ರಹದಲ್ಲಿ 9½ ತಿಂ.); ಬಿ. ವೆಂಕಟರಾವ್ (1939-10½ ತಿಂ.); ಹಳದೀಪುರ ರಂಗರಾವ್ (1939-14½ ತಿಂ.); ಮಾರೂರು ರುದ್ರಪ್ಪ (ಸ್ಥಾನಬದ್ಧತೆ); ಎಂ. ವೀರಪ್ಪಗೌಡ (3 ತಿಂ.); ಮಳಲಿಕೊಪ್ಪದ ವೀರ ಭದ್ರಪ್ಪಗೌಡ (1939-11 ತಿಂ.); ಬಾಳಗೋಡು ಶಿವಪ್ಪಗೌಡ (1939-9½ ತಿಂ); ನಾರಗೋಡು ಸದಾಶಿವಪ್ಪಗೌಡ (1939-11 ತಿಂ. ಹಾಗೂ 200 ರೂ. ದಂಡ); ಎಚ್. ವೀರಭದ್ರಪ್ಪಗೌಡ (2 ತಿಂ.); ಬರದವಳ್ಳಿ ಗಂಗಾಧರಪ್ಪಗೌಡ (1939-6 ತಿಂ.); ಕಾಸ್ಪೆ ಬೈರನಾಯ್ಕ ಬಿನ್ ಗಿಡ್ಡನಾಯ್ಕ (1939-9½ ತಿಂ.); ಬರದಳ್ಳಿ ರಾಮನಾಯ್ಕ ಬಿನ್ ಫಕೀರನಾಯ್ಕ (9½ ತಿಂ.); ಮಂಡಗಳಲೆ ಬಂಗಾರಪ್ಪ ಬಿನ್ ಮಂಜುನಾಯ್ಕ (9½ ತಿಂ.); ಕಾಗೋಡು ಗಿರಿಯ ನಾಯ್ಕ ಬಿನ್ ಕರಿಯಪ್ಪ (9½ ತಿಂ.); ಹಳೇಕೇರಿ ಬಿಳಿಯಪ್ಪ ಬಿನ್ ಸೈಲನಾಯ್ಕ (9½ ತಿಂ.); ಕುಗ್ವೆ ಬೈರ ನಾಯ್ಕ (9½ ತಿಂ); ಕುಗ್ವೆ ಮಾಸ್ತಿಯಪ್ಪ (1939-9½ ತಿಂ.); ಮರತ್ತೂರು ಕನ್ನಪ್ಪ (9½ ತಿಂ.);

ಮಂಡಕ್ಕೆ ಭೀಮಕ್ಕೆ ಸಾಗರ (9½ ತಿಂ.) ; ಗಾರೆ ಶಾಮಕ್ಕೆ ಸಾಗರ (9½ ತಿಂ.) ; ಗುರು ಸಿದ್ದಯ್ಯ ಸಾಗರ (8 ತಿಂ.) ; ನೆಲ್ಲೂರು ಬರಸಿನ ದ್ಯಾವನಾಯ್ಕ ಬಿನ್ ಬೀರನಾಯ್ಕ (9½ ತಿಂ.) ; ತುಳುಜಪ್ಪ ರಂಗಘೋಳ (9½ ತಿಂ.) ; ಪಡುವಗೋಡ ನರಸಿಂಹಯ್ಯ (15 ತಿಂ.) ; ಚಿಪ್ಲಿ ನಾರಾಯಣಪ್ಪ ಪಡುವಗೋಡ (1 ವ.) ; ಎ. ಆರ್. ಬದರೀ ನಾರಾಯಣ (ಡಿಟೆನ್ಯನ್ ಹಾಗೂ 2 ತಿಂ. ಶಿಕ್ಷೆ) ; ಆನಂದರಾವ್ ವಿಠಲರಾವ್ (9½ ತಿಂ.) ; ಎಚ್. ಸೀತಾರಾಮು (ಡೆಟೆನ್ಯು) ; ಎನ್. ಎಸ್. ಗಿರಿಮಾಜಿ (ಡೆಟೆನ್ಯು) ; ಮಾಸೂರು ಬಸವಣ್ಣೆಪ್ಪ (1939–8 ತಿಂ.) ; ಕೆ. ಗಣಪತಿ ಭಟ್ಟ (9 ತಿಂ.) ; ಮಂಚಾಲೆ ಗಣಪತಿ (2 ತಿಂ.) ; ವಿನಾಯಕರಾವ್ ಬಾಪಟ್ (3 ತಿಂ.) ; ವಾಚ್‌ಮೇಕರ್ ದತ್ತೋಬರಾವ್ (2 ತಿಂ.) ; ಸಾಗರದ ಗುಂಡಪ್ಪ (6 ತಿಂ.) ; ಸೈದೂರು ಚನ್ನಬಸಪ್ಪಗೌಡ (1 ವ.) ; ಎಚ್. ಗಣಪತಿಯಪ್ಪ (1947–2 ತಿಂ.) ; ಬಿ. ಮಂಗೇಶರಾವ್ ಇವರಿಗೆ ಸಬ್-ಇನ್ಸ್‌ಪೆಕ್ಟರರು ಚಿತ್ರಹಿಂಸೆ ನೀಡಿದ್ದಲ್ಲದೆ ಬಾಯಲ್ಲಿ ಮೂತ್ರ ಸುರಿಸಿದ್ದರು.

ವೈ.ಶಿ. 19

## ಬರ್ಸಿನ ದ್ಯಾವಪ್ಪ ನಾಯ್ಕ

**ಜನನ : ?** **ಉದ್ಯೋಗ : ಕೃಷಿ** **ವಿಳಾಸ : ಹಿರೇನಲ್ಲೂರು, ತಾ॥ ಸಾಗರ**



ಕೆ. ಜಿ. ಒಡೆಯರ ನಾಯಕತ್ವದಲ್ಲಿ ಅರಣ್ಯಸತ್ಯಾಗ್ರಹದ ಶಿಬಿರ ಶುರು ಆದಾಗ ನಾನು ಒಂದೂವರೆ ತಿಂಗಳು ಆ ಶಿಬಿರದಲ್ಲಿ ಇದ್ದು ಪ್ರಭಾತ್‌ಫೇರಿ, ಮುಷ್ಟಿಫಂಡು ಎತ್ತುವಳಿ, ಪಿಕೆಟಿಂಗ್‌ಗಳಲ್ಲಿ ಭಾಗ ವಹಿಸುತ್ತಿದ್ದೆ. ಮುಂದೆ 10–10–1939ರಂದು ಸಾಗರ ತಾಲೂಕಿನಲ್ಲಿ ಸತ್ಯಾಗ್ರಹಮಾಡಿದ ಮೊದಲ ಬ್ಯಾಚಿನಲ್ಲಿ ಕೆ. ಜಿ ಒಡೆಯರ ಜೊತೆ ಸೇರಿ ಅವರ ಜೊತೆ ಬಂಧಿತನಾದೆ. 14–10–1939ರಂದು ನನಗೆ ಎಂಟು ತಿಂಗಳ ಶಿಕ್ಷೆ ವಿಧಿಸಿದರು. ನನ್ನ ಜೊತೆ ಬಂಧಿತರಾಗಿ ಶಿಕ್ಷೆಹೊಂದಿದ ಇತರರೆಂದರೆ ಬಸವಣ್ಣೆಪ್ಪ, ಮಾಧು ನಾಯ್ಕ, ಬಂಗಾರಪ್ಪ, ಗುರುಶಿದ್ದಯ್ಯ. ಒಟ್ಟು ಆರು ಜನ ನಾವು ಶಿವಮೊಗ್ಗ ಸಬ್-ಜೈಲಿನಲ್ಲಿ ಪೂರ್ತಿ ಶಿಕ್ಷೆ ಅನುಭವಿಸಿದೆವು.

ಪ್ರ:ಃ 1947ರಲ್ಲೂ ನನಗೆ ಎರಡು ತಿಂಗಳ ಶಿಕ್ಷೆ ಆಯಿತು. ಆದರೆ ಒಂದೇ ತಿಂಗಳಲ್ಲಿ ಬಿಡುಗಡೆ ಆಯಿತು.

ವ್ಯ.ಶಿ. 20

## ಟಿ. ಬಸವಣ್ಣಗೌಡ

ಜನನ : ? ಉದ್ಯೋಗ : ಕೃಷಿ ವಿಳಾಸ : ಮಾಸೂರು, ತಾ॥ ಸಾಗರ



ಎಚ್. ಸಿದ್ದಯ್ಯ, ಕೆ. ಜಿ. ಒಡೆಯರ್, ಮರೂರು ವೀರಭದ್ರಪ್ಪಗೌಡ ಇವರೇ ಚಳವಳಿ ಸೇರಲು ನಮಗೆ ಪ್ರೇರಣೆ ನೀಡಿದವರು. 1939ರಲ್ಲಿ ಸಾಗರ ಮತ್ತು ಸೊರಬ ತಾಲೂಕುಗಳ ಒಂದು ಜಂಟಿ ಸತ್ಯಾಗ್ರಹ ಶಿಬಿರವನ್ನು ಸಾಗರದಲ್ಲಿ ಸ್ಥಾಪಿಸಿದ್ದು, ನಾನು ಅದರಲ್ಲಿ ಸೇರಿ ಹೆಂಡದ ಅಂಗಡಿ ಪಿಕೆಟಿಂಗ್ ಮಾಡುತ್ತಿದ್ದೆ. ಪಾನಪ್ರಿಯರು ಅನೇಕವೇಳೆ ಸತ್ಯಾಗ್ರಹಿಗಳ ಮೇಲೆ ಕೈಮಾಡಿ, ಮುಖದ ಮೇಲೆ ಉಗಿದು, ಹೀನಾಯವಾಗಿ ಬೈದ ಸಂದರ್ಭಗಳು ಅನೇಕ. ಪೋಲೀಸರದೂ ಕುಡುಕರಿಗೇ ಕುಮ್ಮಕ್ಕು. ಸತ್ಯಾಗ್ರಹಿಗಳನ್ನು ಹೊಡೆದು, ಮುಖಕ್ಕೆ ಉಗಿದು ಮಾಫಿ ಬೇಡುವಂತೆ ಹಿಂಸೆ ಕೊಡುವುದೂ ಆಗಿನ ಸಬ್-ಇನ್ಸ್‌ಪೆಕ್ಟರರ ತಂತ್ರ. ದೇಶದ ಸ್ವಾತಂತ್ರ್ಯಕ್ಕೋಸ್ಕರ, ಎಷ್ಟೇ ಹಿಂಸಿಸಿದರೂ ಜಗ್ಗದೆ ಇದ್ದೆವು. ಒಡೆಯರ್‌ರ ನೇತೃತ್ವದಲ್ಲಿ ಅರಣ್ಯಸತ್ಯಾಗ್ರಹ ಮಾಡಿದ್ದಕ್ಕಾಗಿ ಬಂಧಿಸಿ ಮೂರು ದಿನ ಲಾಕಪ್‌ನಲ್ಲಿ ಕೂಡಿಹಾಕಿ 14-10-1939ರಲ್ಲಿ ಎಂಟು ತಿಂಗಳು ಕಠಿಣ ಶಿಕ್ಷೆ ಕೊಟ್ಟರು. ಶಿವಮೊಗ್ಗ ಜೈಲಲ್ಲಿ ಪೂರ್ತಿ ಎಂಟು ತಿಂಗಳು ಶಿಕ್ಷೆ ಅನುಭವಿಸಿದೆ. ಜೈಲಿನಲ್ಲಿ ಪಾರ್ಥನಾರಾಯಣ ಪಂಡಿತ್, ಕೇಶವಯ್ಯಂಗಾರ್, ಮಾರೂರು ರುದ್ರಪ್ಪಗೌಡ, ಮರೂರು ವೀರಭದ್ರಪ್ಪಗೌಡ ಇವರೆಲ್ಲರ ಸಹವಾಸದಲ್ಲಿ ಹೆಚ್ಚಿನ ದೇಶಸೇವೆ ಮಾಡುವ ಪ್ರೇರಣೆ ಪಡೆದೆವು. ಬಿಡುಗಡೆ ಆದ ದಿನ ಸಾಗರದಲ್ಲಿ ಮೃತ್ಯುಂಜಯ ಜಾಪಟ್ ವಕೀಲರು ನಮ್ಮನ್ನು ಸ್ವಾಗತಿಸಿ ಊಟೋಪಚಾರ ಸತ್ಕಾರ ಮಾಡಿ ಕಳುಹಿಸಿದರು.

ವ್ಯ.ಶಿ. 21

# ಮ. ವೀರಭದ್ರಪ್ಪ ಗೌಡ

ಜನನ : ? ಉದ್ಯೋಗ : ಕೃಷಿ ವಿಳಾಸ : ಮಳಲಿಕೊಪ್ಪ, ತಾ॥ ಸಾಗರ

---



ದಿ॥ ಎಚ್. ಸಿದ್ದಯ್ಯ, ಕೆ. ಜಿ. ಒಡೆಯರ್ ಮತ್ತು ಮರೂರು ವೀರಭದ್ರಪ್ಪಗೌಡರ ಪ್ರೇರಣೆಗಳಿಂದ ಚಳವಳಿಗೆ ಸೇರಿದ ನಾನು 1939ರಲ್ಲಿ ಸಾಗರ ಸತ್ಯಾಗ್ರಹ ಶಿಬಿರದಲ್ಲಿ ಇದ್ದೆ. ಬೆಳಗ್ಗೆ 7ರಿಂದ 8½ಗೆ ಪ್ರಭಾತ್‌ಫೇರಿ, ಅನಂತರ ಮುಷ್ಟಿಫಂಡ್ ಸಂಗ್ರಹ, ಸಂಜೆ ಸೇಂದಿ ಅಂಗಡಿ ಪಿಕೆಟಿಂಗ್ ಮಾಡುತ್ತಿದ್ದೆವು. ಶಿಬಿರಕ್ಕೆ ಒಮ್ಮೆ ಡಾ॥ ಪಾರ್ಥನಾರಾಯಣ ಪಂಡಿತರು ಬಂದಿದ್ದರು. ಮೊದಲ ಡಿಕ್ಟೇಟರ್ ಕೆ. ಜಿ. ಒಡೆಯರ್, ಎರಡನೆಯ ಡಿಕ್ಟೇಟರ್ ಬಾಳಗೋಡು ಬಿ. ಕೆ. ಶಿವಪ್ಪಗೌಡ್ರು ಇವರ ತಂಡಗಳು ಜಂಗಲ್ ಸತ್ಯಾಗ್ರಹಮಾಡಿ ಜೈಲು ಕಂಡವು. ಮುಂದೆ ನಾನು ಮತ್ತು ಕೆಲವು ಮಿತ್ರರು ಈ ಶಿಬಿರದಿಂದ ಸೊರಬ ತಾ॥ ಹಲಗಳಲೆ ಜಂಗಲಿನಲ್ಲಿ (ಸೊರಬ–ಸಾಗರ ರಸ್ತೆಯ 16ನೆಯ ಮೈಲುಕಲ್ಲು ಬಳಿ) ಅರಣ್ಯಸತ್ಯಾಗ್ರಹ ಮಾಡಿದೆವು (20-9-1939). ನನ್ನ ಜೊತೆ ಸತ್ಯಾಗ್ರಹ ಮಾಡಿದವರು ಮಳಲಗದ್ದೆ (ತಾ॥ ಸೊರಬ)ಯ ವೀರಪ್ಪಗೌಡ, ಕೊಪ್ಪದ (ಸಾಗರ ತಾ॥) ನಾರಗೋಡು ಸದಾಶಿವಪ್ಪಗೌಡ, ಅದೇ ಊರ ವೀರಭದ್ರಪ್ಪ, ಮುಳ್ಳ (ಸಾಗರ ತಾ॥) ಊರಿನವರಾದ ಬಸವಣ್ಯಪ್ಪ, ಹನುಮಪ್ಪ ಹಾಗೂ ಹುಚ್ಚಪ್ಪ, ಮಳಲಗದ್ದೆ ಲಕ್ಷ್ಮೀನಾರಾಯಣಪ್ಪ ಬಿನ್ ಗೋಪಾಲಪ್ಪ ಮತ್ತು ಅದೇ ಊರ ಲಕ್ಷ್ಮೀನಾರಾಯಣಪ್ಪ ಬಿನ್ ತಿಮ್ಮಪ್ಪ, ಸೊರಬ ತಾ॥ ಕುಪ್ಪೆಯ ಲಿಂಗಪ್ಪಗೌಡ, ಹೀಗೆ ಒಟ್ಟು 10 ಜನ ನಮ್ಮನ್ನು ಬಂಧಿಸಿ ಸೊರಬ ಠಾಣೆಗೆ ಒಯ್ದು ಲಾಕಪ್‌ನಲ್ಲಿ ಅನ್ನ–ವಸತಿ ವ್ಯವಸ್ಥೆ ನೀಡದೆ ಅಪಾಲಜಿ ನೀಡಬೇಕೆಂದು ಹಿಂಸಿಸಿದರು. ಮುಂದೆ ಸಾಗರದಲ್ಲಿ ರಿಮಾಂಡಿನಲ್ಲಿಟ್ಟು ಕೊನೆಗೆ ನಮಗೆ ಒಂಬತ್ತು ತಿಂಗಳು ಕಠಿಣ ಶಿಕ್ಷೆ, 200 ರೂ. ದಂಡ ಆಯಿತು. ನಮ್ಮಲ್ಲಿ ಕೆಲವರು ಅಪಾಲಜಿ ಕೊಟ್ಟು ಹೋದರು. ನಾನೂ ಮೇಲೆ ಹೇಳಿದ ಮೊದಲ ಇಬ್ಬರೂ ಪೂರ್ತಿ ಶಿಕ್ಷೆ ಅನುಭವಿಸಿದೆವು. ದಂಡದ ಹಣ ತುಂಬಿಸಲು ನನ್ನ ಮನೆಯ ಕೆಲವು ಚರಸೊತ್ತುಗಳನ್ನೂ ಈ ಕಾಲದಲ್ಲಿ ಜಪ್ತಿಮಾಡಿದರು.

ಶಿವಮೊಗ್ಗ, ಬೆಂಗಳೂರು ಜೈಲುಗಳಲ್ಲಿ ಇದ್ದೆವು. ಅನೇಕ ಗಣ್ಯರ ಸಹವಾಸ ಸಿಕ್ಕಿತು. 3-9-1940ರಂದು ಬಿಡುಗಡೆ ಆದಾಗ ನನಗೂ ಮಳಲಗದ್ದೆ ವೀರಪ್ಪಗೌಡ,

ನಾರಗೋಡು ಸದಾಶಿವಪ್ಪಗೌಡರಿಗೂ ಟಿ. ಸಿದ್ದಲಿಂಗಯ್ಯನವರು ಜಟಕಾ ಕಳಿಸಿದ್ದರು. ಬೆಂಗಳೂರು ಕಾಂಗ್ರೆಸ್ ಆಫೀಸಿಗೆ ಹೋಗಿ ಉಪಹಾರ ಮುಗಿಸಿ ಊರಿಗೆ ವಾಪಸಾದೆವು. ಶಿವಮೊಗ್ಗದಲ್ಲಿ ತಮ್ಮ ಮನೆಗೆ ಬರುವಂತೆ ಎಚ್. ಸಿದ್ದಯ್ಯನವರು ಪತ್ರ ಬರೆದಿದ್ದು ಅಲ್ಲಿಯೂ ಅವರ ಆತಿಥ್ಯ ಸ್ವೀಕರಿಸಿದೆವು.

ಈ ಹೋರಾಟ ನನ್ನ ಜೀವನದಲ್ಲಿ ಎಂದೂ ಮರೆಯಲಾಗದ ಒಂದು ಮುಖ್ಯ ಘಟನೆ.

ಸ್ಮೃ.ಶಿ. 22

## ಬಿ. ಕೆ. ಶಿವಪ್ಪ ಗೌಡ

ಜನನ : ? ಉದ್ಯೋಗ : ಕೃಷಿ ವಿಳಾಸ : ಬಾಳಗೋಡು, ಮಡಸೂರು ಲಿಂಗದಹಳ್ಳಿ ಅಂಚೆ, ಸಾಗರ ತಾ॥



ಕೆ. ಜಿ. ಒಡೆಯರ್‌ರ ನೇತೃತ್ವದಲ್ಲಿ ಸಾಗರದ ಬಳಿ ಸಣ್ಣಮನೆಹಳ್ಳದ ಪಕ್ಕದಲ್ಲಿ ನಡೆದ ಕಾಂಗ್ರೆಸ್ ಕ್ಯಾಂಪಿಗೆ 3-9-1939ರಲ್ಲಿ ನಾನು ಸೇರಿದೆ. ನಾನು ಶಿಬಿರದ ವ್ಯವಸ್ಥಾಪಕನಾಗಿಯೂ ಬಿ. ವೆಂಕಟ ರಾವ್ ಟಪ್ಪಾಲುವ್ಯವಸ್ಥೆ ನೋಡುವ ಕೆಲಸವನ್ನೂ ಮಾಡುತ್ತಿದ್ದೆವು. ಪ್ರತಿನಿತ್ಯ ಪ್ರಭಾತ್‌ಫೇರಿ, ಹರಿಜನ ಕೇರಿಗೆ ಭೇಟಿ, ಹೆಂಡದ ಅಂಗಡಿ ಪಿಕೆಟಿಂಗ್, ಹಾಗೂ ಸುತ್ತಲ ಹಳ್ಳಿಗಳಿಂದ ಅಕ್ಕಿ, ಹಣಕಾಸು ಸಂಗ್ರಹ ಹೀಗೆ ನಿತ್ಯ ಕಾರ್ಯಕ್ರಮ ಮಾಡುತ್ತಿದ್ದೆವು. ಸರಕಾರಿ ಕಚೇರಿಗಳ ಮೇಲೆ ಧ್ವಜಾರೋಹಣ ಮಾಡಿದೆವು. ಅನೇಕ ದಿನ ಈ ಚಟುವಟಿಕೆ ಆದರೂ ಯಾರದೂ ಬಂಧನ ಆಗಲಿಲ್ಲ. ಕಡೆಗೆ ಬಲವಾದ ಹೋರಾಟ ಮಾಡಬೇಕೆಂದು ನಿರ್ಧರಿಸಿ, 10-10-1939ರಂದು ಕೆ. ಜಿ. ಒಡೆಯರ ನೇತೃತ್ವದಲ್ಲಿ ಕಲಕೊಪ್ಪ ಮನ್ನಾ ಜಂಗಲಿನಲ್ಲಿ ಮರ ಕಡಿದು 8 10 ಜನ ಜಂಗಲ್ ಸತ್ಯಾಗ್ರಹಮಾಡಲು, ಅವರ ತಂಡದ ಬಂಧನ ಆಯಿತು. 12-10-1939ರಂದು 16 ಜನರ ನಮ್ಮ ತಂಡವು ಕೊಪ್ಪ ಮನ್ನಾಜಂಗಲಿಗೆ ರಾಷ್ಟ್ರಗೀತೆಗಳೊಡನೆ ಕೊಡಲಿ, ಕಂದಲೆ ಸಹಿತ ಹೋಗಿ ಬಗನೆ ಮರ, ಭರಣಿಗೆ ಮರಗಳನ್ನು ಕಡಿದು ಬಂಧಿತರಾದೆವು.

ಸಾಗರ ಲಾಕಪ್‌ನಲ್ಲಿ 2-3 ದಿನ ನನಗೆ ಅನ್ನಾಹಾರ ಕೊಡದೆ ಬಹಳ ಹಿಂಸೆ ಕೊಟ್ಟು ಅಪಾಲಜಿ ಕೇಳಲು ಒತ್ತಾಯಿಸಿದರು. ನಮ್ಮ ತಂಡದ ಹತ್ತು ಜನರನ್ನು ಹೊರಗೆ ಒಯ್ದು ಹೊಡೆದು, ಹಿಂಸೆ ಕೊಟ್ಟು ಅಪಾಲಜಿ ಕೇಳುವಂತೆ ಮಾಡಿದರು. ಉಳಿದ ಆರು ಜನರಿಗೆ 16-10-1939ರಲ್ಲಿ ಶಿಕ್ಷೆ ಆಯಿತು. ನನಗೂ ಭೈರನಾಯ್ಕ, ಶ್ಯಾಮರಾವ್, ಕನ್ನಪ್ಪ, ಮಾಸ್ತಿ ಇವರಿಗೂ 8 ತಿಂಗಳು ಶಿಕ್ಷೆ, 100 ರೂ. ಜುಲ್ಮಾನೆ ಹಾಗೂ ದಂಡದ ಬದಲಿಗೆ ಮತ್ತೆ 1½ ತಿಂಗಳು ಶಿಕ್ಷೆ ವಿಧಿಸಿದರು. ಆರನೆಯವರಾದ ವೆಂಕಟರಾವ್ ಇವರಿಗೆ 1 ವರ್ಷ ಶಿಕ್ಷೆ ಆಯಿತು. 24-10-1939ರಲ್ಲಿ ಶಿವಮೊಗ್ಗ ಸಬ್ ಜೈಲಿಗೆ ರವಾನಿಸಿದರು. ಜೈಲಿನಲ್ಲಿ ಹುಳುಕು ಅಕ್ಕಿ, ಮುಗ್ಗಲು ಕಾರದ ಪುಡಿ ಮುಂತಾದ ಅಸಹ್ಯಕರವಾದ ರೇಷನ್‌ನಿಂದ ನನಗೆ ರಕ್ತಭೇದಿ, ಆಮಶಂಕೆ ಪ್ರಾರಂಭ ವಾಗಿ, 3-4 ತಿಂಗಳು ಅನುಭವಿಸಿದೆನು. ಅಲ್ಲಿ ಒಲೆತಿರೋಳಿನ ನಮೂನೆ ಅಸಹ್ಯಕರವಾದ ಕಕ್ಕಸುಗಳಿದ್ದವು. ಚಳಿಗಾಲದಲ್ಲಿ ಒಂದು ಗೋಣಿತಟ್ಟು, ಒಂದು ಜಿಡ್ಡು ಕಂಬಳಿ ಮಾತ್ರ ಇತ್ತು. ಚಳಿ ತಡೆದುಕೊಳ್ಳಲಾರದೆ ನಾವೆಲ್ಲ ಜೈಲರನೊಡನೆ ಕೂಗಿಕೊಂಡದ್ದ ರಿಂದ ಒಂದು ಉಣ್ಣೆ ಅಂಗಿ, ಒಂದು ಬ್ಲ್ಯಾಂಕೆಟ್ ಕೊಡಿಸಿದರು. ಕಡೆಗೆ ರಕ್ತಭೇದಿಯ ಜೊತೆ ಮೈಕಡಿತವೂ ಉಂಟಾಗಿ ಮೈ ಗದ್ದಲಗಟ್ಟುತ್ತಿತ್ತು. ಕಡೆಗೆ 15-20 ದಿನ ಆಸ್ಪತ್ರೆಗೆ ರವಾನಿಸಿದರು. ಅಲ್ಲಿ ತಕ್ಕಮಟ್ಟಿಗೆ ಚಿಕಿತ್ಸೆ ಆಯಿತು. ಜೈಲಿನಲ್ಲಿ ಕಲ್ಲು ಆರಿಸಿ ಗುಡ್ಡೆ ಹಾಕುವುದು, ತರಕಾರಿ ಬೆಳೆಸುವುದು, ನೀರು ಹಾಕಿಸುವುದು ಮುಂತಾದ ಕೆಲಸ ಕೊಡುತ್ತಿದ್ದರು. ಕಾಹಿಲೆ ಆದವರಿಗೆ ಡಾಕ್ಟರರು ಸರಿಯಾಗಿ ಔಷಧ ಕೊಡು ತ್ತಿರಲಿಲ್ಲ. ಪಥ್ಯದ ಬ್ರೆಡ್, ಹಾಲು ಕೇಳಿದರೆ "ನಿಮ್ಮ ಅಪ್ಪನ ಮನೇದಲ್ಲ" ಎನ್ನುತ್ತಿ ದ್ದರು. ಕೆಲವರು ಕ್ಷಮಾಪಣೆ ಕೇಳಿ ಹೋದರು. ನಾನೂ ಇತರ ನನ್ನ ಬ್ಯಾಚಿನ ನಾಲ್ವರೂ ಪೂರ್ಣ ಶಿಕ್ಷೆ ಅನುಭವಿಸಿ 6-7-1940ಕ್ಕೆ ಬಿಡುಗಡೆ ಆದೆವು. ಸಾಗರದಲ್ಲಿ ನಮ್ಮ ಮೆರವಣಿಗೆ ವಿಜೃಂಭಣೆಯಿಂದ ಆಯಿತು.

## ಪ. ರಾ. ನರಸಿಂಹಯ್ಯ

ಮೈ.ಶಿ. 23

ಜನನ : ? ಉದ್ಯೋಗ : ಕೃಷಿ ವಿಳಾಸ : ಪಡುವಗೋಡಿ, ತಾ॥ ಸಾಗರ

1939ರ ಸತ್ಯಾಗ್ರಹದ ಮೂಲಕ ನಾನು ಕಾಂಗ್ರೆಸ್ ಚಟುವಟಿಕೆಯಲ್ಲಿ ಸೇರಿದೆ. ಆ ವರ್ಷ ಸಪ್ಟೆಂಬರ್‌ನಲ್ಲಿ ಸಾಗರ ಕಾಂಗ್ರೆಸ್ ಆಫೀಸು ಮುಚ್ಚಲ್ಪಟ್ಟು ಎಲ್ಲ ನಾಯಕರ ಬಂಧನ ಆಯಿತು. ಆಗ ಪಡುವಗೋಡಿಯಲ್ಲಿ ಮರೂರು ರುದ್ರಪ್ಪಗೌಡರ ಮನೆ



ಯಿಂದ ಚಟುವಟಿಕೆ ಶುರು ಆದವು. ರುದ್ರಪ್ಪ ಗೌಡರೂ ಅವರ ಸೋದರ ವೀರಭದ್ರಪ್ಪ ಗೌಡರೂ (ಇವರು ಬಿ.ಎ ಪದವೀಧರರು) ಗಣ್ಯ ಕಾಂಗ್ರೆಸ್ ಕಾರ್ಯಕರ್ತರಾಗಿದ್ದು ಅವರುಗಳು ಆಗಲೇ ಬಂಧಿತ ರಾದರು. ಅವರ ಮನೆಯ ಮೇಲೂ ಸರಕಾರದ ಕಣ್ಣುಬಿತ್ತು. ಆಗ ನಮ್ಮ ಮನೆಯಿಂದ ಎಲ್ಲ ಕೆಲಸಕಾರ್ಯ ನಡೆಸಲು ತೀರ್ಮಾನಿಸಿದೆವು. ಅರಣ್ಯ ಸತ್ಯಾಗ್ರಹಕ್ಕೆ ಜನರನ್ನು ಹುರಿದುಂಬಿಸುವುದು ಹಾಗೂ ಕರಪತ್ರಗಳನ್ನು ಬರೆದು ಹಳ್ಳಿಹಳ್ಳಿ ಮನೆಮನೆಗೆ ಮುಟ್ಟಿಸುವುದು, ಸುತ್ತಲ ಹಳ್ಳಿಗಳಿಂದ ಸತ್ಯಾಗ್ರಹಿಗಳನ್ನು ಕಳುಹಿಸುವುದು ಸಾಗಿತ್ತು. ಕಡೆಗೆ ನನ್ನ ಮನೆಯ ಮೇಲೂ ಪೋಲಿಸರ ಕಣ್ಣು ಬೀಳಲು ಆಫೀಸನ್ನು ನಮ್ಮೂರ ಹತ್ತಿರದ ಮರೂರು ಪುಟ್ಟಣ್ಣಗೌಡರ ಮನೆಗೆ ವರ್ಗಾಯಿಸಿದೆವು. ದಿನಕ್ಕೊಂದು ಬ್ಯಾಚು ಸತ್ಯಾಗ್ರಹಿಗಳನ್ನು ಕಳುಹಿಸಲೇಬೇಕಾಗಿದ್ದು ಆಗ ಪ್ರಮುಖ ನಾಯಕರಾದ ಶಿರವಂತೆ ವೀರಭದ್ರಪ್ಪಗೌಡ ಹಾಗೂ ಬಿ ಗಂಗಾಧರಪ್ಪಗೌಡ ಇವರಷ್ಟೇ ಹೊರಗೆ ಉಳಿದಿದ್ದರು. ಅವರು ಬಂಧಿತ ರಾಗದಂತೆ ನಾವು ನೋಡಬೇಕಿತ್ತು. ಒಮ್ಮೆ ಸತ್ಯಾಗ್ರಹಿಗಳ ಪಂಗಡಕ್ಕೆ ಲೀಡರ್ ಇಲ್ಲದಂತೆ ಆಗಲು, ನಾನು ಆ ಗ್ರಾಮದ ಪಟೇಲನೇ ಆಗಿದ್ದರೂ ಗುಪ್ತವಾಗಿ ಕೆಲಸ ಮಾಡುತ್ತಿದ್ದವನು ಸಪ್ಟೆಂಬರ್ 15ಕ್ಕೆ ಸತ್ಯಾಗ್ರಹದ ನಾಯಕನಾಗಲು ನಿರ್ಧರಿಸಿದೆ.

ನಮ್ಮೂರಿಂದ ಮೂರನೆಯ ಮೈಲಿನ ಕಾಡಿನಲ್ಲಿ ನಾವು (ಮೊದಲೇ ಪೋಲಿಸರಿಗೆ ತಿಳಿಸಿ) 12 ಜನ ಸತ್ಯಾಗ್ರಹಮಾಡಲು ನಿರ್ಧರಿಸಿದೆವು. ನಾವು ಊರಿಂದ ಅರ್ಧಮೈಲು ದೂರ ಸಾಗುವಷ್ಟರಲ್ಲಿ ಪೋಲಿಸ್ ವ್ಯಾನ್ ಬಂದು ನಮ್ಮನ್ನು ಬಂಧಿಸಿ, ಬೇರೆಬೇರೆ ಕಡೆ ಚಿಕ್ಕಪುಟ್ಟ ಪೋಲಿಸ್ ಠಾಣೆಗಳಲ್ಲಿ ಇಕ್ಕಟ್ಟಿನ ಜಾಗೆಗಳಲ್ಲಿ ನಮ್ಮನ್ನು ಇಟ್ಟು ಹಿಂಸಿಸಿ ದರು. ಸರಿಯಾಗಿ ಊಟ ಕೂಡ ಹಾಕದೆ ಆರೇಳು ದಿನ ತೊಂದರೆ ಕೊಟ್ಟರು. ಮುಂದೆ ನನ್ನನ್ನು ಉಳಿದ ಸತ್ಯಾಗ್ರಹಿಗಳಿಂದ ಬೇರ್ಪಡಿಸಿದರು. ಕಡೆಗೆ, ಪ್ರತ್ಯೇಕವಾಗಿ ಬಂಧಿತ ರಾಗಿ ಬಂದಿದ್ದ ಬಸವರಾಜಪ್ಪಗೌಡ ಮತ್ತು ಚಿಪ್ಪಳಿ ನಾರ್ಣಪ್ಪ ಅವರನ್ನೂ ನನ್ನನ್ನೂ 29-10-1939ರಂದು ಸಾಗರದಲ್ಲಿ ವಿಚಾರಣೆಗೆ ಒಳಪಡಿಸಿದರು. 9-11-1939ರಂದು ಬಸವರಾಜಪ್ಪ ಮತ್ತು ನಾರ್ಣಪ್ಪನವರಿಗೆ 11 ತಿಂಗಳು, ನನಗೆ 15 ತಿಂಗಳ ಶಿಕ್ಷೆ 200 ರೂ. ದಂಡ ವಿಧಿಸಿದರಲ್ಲದೆ ಪಟೇಲಿಕೆ ಸಸ್ಪೆಂಡ್ ಮಾಡಿದರು. ನಮ್ಮನ್ನು ಶಿವಮೊಗ್ಗ ಸಬ್-ಜೈಲಿಗೆ ಕಳುಹಿಸಿದರು. ಬೇರೆಬೇರೆ ಕಡೆಯಿಂದ ಬಂದ 30-40 ಬೇರೆ ಸತ್ಯಾಗ್ರಹಿಗಳೂ ಆ ದಿನ ನಮ್ಮ ಜೊತೆ ಸಾಗರದಿಂದ ಶಿವಮೊಗ್ಗ ಜೈಲಿಗೆ ಬಂದರು. ಶಿವಮೊಗ್ಗ ಜೈಲಲ್ಲಿ ನನಗೆ ಡಿಸೆಂಟ್ರಿ ಶುರು ಆಗಿ ಮೆಗಾನ್ ಆಸ್ಪತ್ರೆಗೆ ಕಳುಹಿಸಿದರು. ಮಹಾದೇವಭಾಯಿ ದೇಸಾಯಿ ಅವರು ಆಗ ಜೈಲುಗಳ ಪರೀಕ್ಷೆಗೆ ಬಂದವರು ಆಸ್ಪತ್ರೆಗೂ

ಬಂದು ನನ್ನನ್ನು ವಿಚಾರಿಸಿಕೊಂಡು ಹೋದರು. ಒಂದು ತಿಂಗಳು ಆಸ್ಪತ್ರೆಯಲ್ಲಿ ಔಷಧ ಉಪಚಾರ ಆದರೂ ನನಗೆ ಸೌಖ್ಯ ಆಗದೆ, ನನಗೆ ನಮ್ಮವರನ್ನು ಬಿಟ್ಟಿರಲಿಕ್ಕೂ ಆಗದೆ, ನಾನು ಒಂದು ದಿನ ಬದುಕುವ ಆಸೆ ತೊರೆದದ್ದರಿಂದ ನನ್ನನ್ನು ಜೈಲಿಗೇ ಒಯ್ಯಲು ಒತ್ತಾಯಿಸಿದೆ. ಕಾಯಿಲೆ ಉಲ್ಬಣಿಸಿದ್ದರಿಂದ ಜೀವ ಹೋದರೆ ಜೈಲಿನಲ್ಲೇ ಹೋಗಲಿ ಅಂದುಕೊಂಡೆ. ಪೇದೆಯ ಹೆಗಲು ಹಿಡಿದು, ಆಸ್ಪತ್ರೆ ಅಧಿಕಾರಿಗಳ ಸಮ್ಮತಿಪಡೆದು ಜೈಲಿಗೇ ಬಂದೆ. ಆ ಕಾಲಕ್ಕೆ ಟಿ. ಸುಬ್ರಹ್ಮಣ್ಯಂ, ಪಾರ್ಥನಾರಾಯಣ ಪಂಡಿತ್ ಮುಂತಾದ ಕೆಲವರನ್ನು ಶಿವಮೊಗ್ಗ ಜೈಲಿಗೆ ವರ್ಗಾಯಿಸಿದ್ದರು. ಪಾರ್ಥನಾರಾಯಣ ಪಂಡಿತರ ಔಷಧೋಪಚಾರದಿಂದ ಗುಣಮುಖನಾಗಿ, ಅಂತೂ ಬದುಕಿದೆ. ಕಡೆಗೆ ಬೆಂಗಳೂರು ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. ಮೂರು ತಿಂಗಳು ಕಳೆಯುವುದರಲ್ಲಿ ಜನರಲ್ ಬಿಡುಗಡೆ ಆರ್ಡರ್ ಬಂತು.

1942ರಲ್ಲಿ ನಾನು ಕಾಹಿಲೆ ಮಲಗಿದ್ದು, ಆರು ತಿಂಗಳು ಮೇಲೆದ್ದಿರಲಿಲ್ಲ. ಸೌಖ್ಯ ವಾದಮೇಲೆ ಎಸ್. ಆರ್. ಗಿರಿಮಾಜಿ, ನಾಗಪ್ಪ ಶೆಟ್ಟಿ, ಕೆ. ಜಿ. ಒಡೆಯರ್ ಇವರು ಬಂದು, ಚಳವಳಿಯ ಆಫೀಸನ್ನು ಮರೂರು ಪುಟ್ಟಣ್ಣಗೌಡರ ಮನೆಯಲ್ಲಿ ಮಾಡಿ ಕೊಂಡು, ಭೂಗತ ಚಟುವಟಿಕೆ ನಡೆಸಿದರು. ನಾನೂ ಅವರ ಜೊತೆ ಸಹಕರಿಸಿದೆ. ಶಾನುಭೋಗರ ದಫ್ತರು ಕಸಿಯುವುದು, ರೈಲ್ವೆ ಹಳಿ ಕೀಳುವುದು ಹೀಗೆ ಕೆಲಸಗಳಾದವು. ಬುಲೆಟಿನ್ ಪ್ರಚಾರ ಕೂಡ ಮಾಡುತ್ತಿದ್ದೆವು. ಒಮ್ಮೆ ನಾನೂ ಗಿರಿಮಾಜಿಯವರೂ ಸಾಗರ ತಾಲ್ಲೂಕು ಕಚೇರಿಗೆ ಕೈಬಾಂಬು ಹಾಕುವ ವಿಫಲ ಪ್ರಯತ್ನವನ್ನು ಕೂಡ ಮಾಡಿದ್ದೆವು.

ವ್ಯ.ಶಿ. 24 | 

## ಎಂ. ಮಹಾಬಲೇಶ್ವರ ಭಟ್ಟ

ಜನನ: ? ಉದ್ಯೋಗ: ಕೃಷಿ ವಿಳಾಸ: ಸಾಗರ

---

1930ರ ಉಪ್ಪಿನ ಸತ್ಯಾಗ್ರಹದ ಬಿಸಿ ನನಗೂ ತಲಪಿತ್ತು. ಅಂಕೋಲ-ಸಿದ್ದಾಪುರಗಳಲ್ಲಿ ಕರನಿರಾಕರಣ ಚಳವಳಿಯೂ ಆಯಿತು. ಅದರ ಸಂಘಟನೆಗೆ ದುಡಿಯುತ್ತಿದ್ದ ಕೆ. ಎ. ವೆಂಕಟರಾಮಯ್ಯನವರೂ ದೊಡ್ಮನೆ ನಾಗೇಶ ಹೆಗ್ಡೆಯವರೂ ನಮ್ಮ ಜಿಲ್ಲೆ ಯಲ್ಲಿಯೇ ಇದ್ದು ಚಳವಳಿಯ ಚಟುವಟಿಕೆಗಳನ್ನು ನಡೆಸುತ್ತಿದ್ದುದರಿಂದ ನಾನೂ ಅವರ ಸಂಪರ್ಕದಿಂದಾಗಿ, ಕರನಿರಾಕರಣೆಯ ಚಟುವಟಿಕೆಗಳಲ್ಲಿ ಸೇರಿ, ಉತ್ತರ ಕನ್ನಡ ಜಿಲ್ಲೆಗೆ ಹೋಗಿ ಕೆಲಸ ಮಾಡಲಾರಂಭಿಸಿದೆ. 1932ರ ಜನವರಿ ಜೊತ್ತಿಗೆ ಹುಮ್ಮಸಾಗಿ



ಚಳವಳಿ ಸಾಗಿ ಸಿದ್ದಾಪುರ ಬಳಿ ಬೂತಕಟ್ಟೆ ಎಂಬಲ್ಲಿ ಇದ್ದು ನಾನು ಸುತ್ತ ಓಡಾಡುತ್ತಿದ್ದೆ. ಅಲ್ಲಿಗೆ ಜನ ಬರಲು ಹೆದರುತ್ತಿದ್ದು ಅದೇ ನಮ್ಮ ಸಾಮಾನುಗಳನ್ನು ಇಡಲು ಸರಿಯಾದ ಸ್ಥಳವಾಯಿತು. ಹಳ್ಳಿಗಳಿಗೆ ಹೋಗಿ ಕಂದಾಯ ಕೊಡಬೇಡಿರೆಂದು ಪ್ರಚಾರ ಮಾಡುತ್ತಿದ್ದ ಸ್ವಯಂಸೇವಕರಲ್ಲಿ ನಾನೂ ಒಬ್ಬ. ಬಿಳಗಿ ಹತ್ತಿರದ ತಾರಖಂಡದ ಸೀತಾರಾಮ ಹೆಗ್ಡೆ ಅವರು ನಮಗೆ ವಿಶೇಷ ಸಹಕಾರ ನೀಡುತ್ತಿದ್ದು, ಒಮ್ಮೆ ಪೋಲಿಸರು ಬಂದಾಗ ನಮ್ಮನ್ನು ಬಹಳ ಧೈರ್ಯದಿಂದ ಅವರೂ ಅವರ ಪತ್ನಿಯವರೂ ಪಾರುಮಾಡಿದರು. ಶಿರಸಿ ಕಡೆ ಸಿದ್ದಾಪುರದ ಗಡಿಯಲ್ಲಿ ಹೋಬಳಿ ಗಣಪತಿ ಭಟ್ಟರ ಮನೆ ಇನ್ನೊಂದು ಇಂಥದೇ ಕೇಂದ್ರವಾಗಿದ್ದು ಅಲ್ಲಿಗೆ ಚಳವಳಿಯ ವರ್ತಮಾನಗಳನ್ನು ಸಂಗ್ರಹಿಸಲು ನಾನು ಹೋಗಬೇಕಾಗುತ್ತಿತ್ತು. ನಮ್ಮ ಎಲ್ಲ ನಡೆದಾಟ ರಾತ್ರಿಹೊತ್ತೇ ಆಗಬೇಕು. ದೊಡ್ಮನೆ ನಾಗೇಶ ಹೆಗ್ಡೆಯವರ ಚರಸೊತ್ತು ಮತ್ತು ಜಾನುವಾರುಗಳನ್ನು ಮಾಮಲೇದಾರರು ಜಪ್ತಿಮಾಡಿ ಹರಾಜು ಮಾಡಿದಾಗ ಮುಟ್ಟಳ್ಳಿ ಸಮೀಪದ ಒಬ್ಬರು ಪಡೆದಿದ್ದರು ನಾವು ಆ ವ್ಯಕ್ತಿಯ ಮನೆಗೆ ಹೋಗಿ ಆ ಎಮ್ಮೆ, ದನಗಳನ್ನು ಬಿಡ ಬೇಕೆಂದು, ಇಲ್ಲವಾದಲ್ಲಿ ಅವರ ಮನೆ ಮುಂದೆ ಉಪವಾಸ ಕೂಡುತ್ತೇವೆಂದೂ ಹೇಳಿದೆವು. ಗೌಡರು ನಮಗೆ ಹೆದರಿಕೆ ಹಾಕಿದರು. ನಾವು ಜಗ್ಗಲಿಲ್ಲ. ನಮ್ಮ ಜೊತೆ ಅಲ್ಲಿ ಕೆಲವು ಹೆಂಗಸರೂ ಇದ್ದರು. ಹೀಗೆ ಚಳವಳಿಯ ಚಟುವಟಿಕೆಗಳನ್ನು ನಡೆಸುತ್ತಿದ್ದಾಗ ಫೆಬ್ರವರಿ ಯಲ್ಲಿ ನನ್ನ ಬಂಧನವಾಗಿ, ಫೆಬ್ರವರಿ 22ಕ್ಕೆ ಶಿಕ್ಷೆಗೆ ಒಳಗಾದೆ. ಕಾರವಾರ, ವಿಸಾಪುರ ಜೈಲುಗಳಲ್ಲಿ ಶಿಕ್ಷೆ ಅನುಭವಿಸಿದೆ. ಕಾರವಾರದಲ್ಲಿ ವಿ. ಎಸ್. ನಾರಾಯಣರಾಯರ ಹಾಗೂ ಕರಮರಕರರ ಪರಿಚಯವಾಯಿತು. ವಿಸಾಪುರದಲ್ಲಿ ಮುಂಬೈಯ ಎಸ್. ಕೆ. ಪಾಟೀಲರ ಪರಿಚಯ ಆಯಿತು. ವಿಸಾಪುರದಲ್ಲಿ ಕೆಲಕಾಲ ಅಸೌಖ್ಯವೂ ಆಗಿತ್ತು.

1942ರಲ್ಲಿ ನಮ್ಮ ಊರಿಂದ ನಾಲ್ಕೇ ಮೈಲು ದೂರದಲ್ಲಿರುವ ಕಾಗೋಡಿನಲ್ಲಿ ಕೆಲಸಗಾರರೆಲ್ಲ ಕೆ. ಜಿ. ಒಡೆಯರ ಮನೆಯಲ್ಲಿ ಸೇರುತ್ತಿದ್ದೆವು. ಅಲ್ಲಿ ನದೀದಂಡೆಯಲ್ಲಿ ಒಂದು ಮನೆಯಲ್ಲಿ ಇರುತ್ತಿದ್ದು ನಮ್ಮನ್ನು ನೋಡಿಕೊಳ್ಳುವ ಜವಾಬ್ದಾರಿ ಒಡೆಯರೂ ಅವರ ಶ್ರೀಮತಿಯವರೂ ನಿರ್ವಹಿಸಿದ್ದರು. ಆ ಊರಿನ ಕೋಟ್ಯ ಎಂಬವನೊಬ್ಬ ತಾಳಗುಪ್ಪ ಪೋಲಿಸರಿಗೆ ದಿನಾಲು ಸುದ್ದಿ ಮುಟ್ಟಿಸುತ್ತಿದ್ದ. ಒಮ್ಮೆ ಅಕಸ್ಮಾತ್ ಪೋಲಿಸರು ನಮ್ಮ ಶಿಬಿರದ ಮೇಲೆ ದಾಳಿ ಮಾಡಿದಾಗ, ಮಳೆಗಾಲದಲ್ಲಿ ನಾವು ಹೊಳೆಯನ್ನು ಈಜಿ ದಾಟಿ ಪಾರಾದೆವು. ಇದೇ ಕಾಲಕ್ಕೆ ನಡೆದ ಈಸೂರು ಪ್ರಕರಣದ ಕಾಲಕ್ಕೆ ಫಾಶಿ ಶಿಕ್ಷೆ ಆದವರ ಬಗ್ಗೆ 'ಮರ್ಸಿ' ಅರ್ಜಿಗಾಗಿ ಸಹಿ ಪಡೆಯಲು ನಾನು ಓಡಾಡಿದೆ. ಇದೇ ಕಾಲಕ್ಕೆ ಭಾರತ ರಕ್ಷಣಾ ಕಾನೂನಿನಂತೆ ನನ್ನನ್ನು ಬಂಧಿಸಿದರು.

ನಾನು ಒಂದು ವರ್ಷ ಜೈಲಿನಲ್ಲಿ ಇದ್ದೆ.

ಈ ಹೋರಾಟದ ಕಾಲದಲ್ಲಿ ನನ್ನ ಶಿಕ್ಷಣ ಪೂರ್ತಿ ನಿಂತಿತು. ನನ್ನಿಂದಾಗಿ ನನ್ನ ಮನೆತನ ಅಪಾರ ಕಷ್ಟನಷ್ಟ ಅನುಭವಿಸಿತು. ಆದರೆ 1947ರಲ್ಲಿ ಸ್ವಾತಂತ್ರ್ಯ ಬಂದಾಗ ಈ ಎಲ್ಲ ಕಷ್ಟಗಳು ಮರೆತುಹೋದುವು.

ವೈ ಶಿ. 25

## ಎಚ್. ನೀಲಕಂಠಪ್ಪ

ಜನನ : ? ಉದ್ಯೋಗ : ಕ್ಷೌರಿಕ ವಿಳಾಸ : ಹಾಲಿವಾಣ, ತಾ॥ ಹರಿಹರ ಜಿ॥ ಚಿತ್ರದುರ್ಗ

---



ಹಾಲಿವಾಣ ಊರವನಾದ ನಾನು ಎಲ್.ಎಸ್. ಮುಗಿಸಿದ ಮೇಲೆ ಈಸೂರಲ್ಲಿ ಉದರನಿರ್ವಾಹಕ್ಕಾಗಿ ಕ್ಷೌರಿಕ ವೃತ್ತಿಗಾಗಿ ತೆರಳಿ ಇರುತ್ತಿರಲು, ಆಂಗ್ಲರು ಜನರಿಗೆ ಕೊಡುತ್ತಿರುವ ಹಿಂಸೆ, ಅವರ ದಬ್ಬಾಳಿಕೆಯ ವಿಚಾರಗಳಿಂದ ಮನನೊಂದು ರಾಷ್ಟ್ರೀಯ ಚಳವಳಿಗೆ ಸೇರಿದೆನು. ಈಸೂರು ಊರಲ್ಲಿ ಸಾಹುಕಾರ ರುದ್ರಪ್ಪ ಮತ್ತು ಪಟೇಲ್ ಗುರುಶಾಂತಪ್ಪಗೌಡ್ರು ಇವರನ್ನು ಮೊದಲುಗೊಂಡು ಸುಮಾರು 25 ಜನರಿಂದ ರಾಷ್ಟ್ರೀಯ ಚಳವಳಿ ಶುರು ಆಯಿತು. ಈಸೂರು ಗ್ರಾಮದಲ್ಲಿ 1942ರಲ್ಲಿ ಪ್ರತಿದಿನ ಸಭೆ ಸೇರುತ್ತಿತ್ತು. ಈ ಸಭೆಯು ಜಯಪ್ಪ ಎಂಬುವರನ್ನು ಅಮಲ್ದಾರರಾಗಿ ಆರಿಸಿದ್ದು ಅವರೇ ಸಭೆಗೆ ನಾಯಕರು. 'ಕ್ವಿಟ್ ಇಂಡಿಯಾ' ಎಂಬ ಗಾಂಧೀವಾಣಿಯೇ ಈ ಸಭೆಗಳ ಘೋಷಣೆ. ಪ್ರತಿದಿನ ಊರಲ್ಲಿ ಪ್ರಭಾತ್‌ಫೇರಿ ಆಗುತ್ತಿತ್ತು. ಆ ಊರಲ್ಲಿ ಸ್ವತಂತ್ರ ಸರಕಾರ ಸ್ಥಾಪನೆಯಾಗಿದೆಯೆಂದು ಪ್ರಕಟಿಸಿ, ಬ್ರಿಟಿಷರ ಅಧಿಕಾರಿಗಳು, ಕಾನೂನುಗಳೂ ನಮಗಿಲ್ಲವೆಂದು ಸಾರಲಾಗಿತ್ತು.

ಒಮ್ಮೆ ಊರ ಹಳೆಯ ಪಟೇಲರು ಬಂದಾಗ ಅವರ ಜೇಬನ್ನು ಅಮಲ್ದಾರ ಜಯಣ್ಣ ಶೋಧಿಸಲು, ನಾವು ನಡೆಸುವ ಚಳವಳಿಯ ಬಗ್ಗೆ ಒಂದು ರಿಪೋರ್ಟ್ ಬ್ರಿಟಿಷ್ ಸರಕಾರಕ್ಕೆ ಕಳುಹಿಸಲು ಬರೆದುದು ಸಿಕ್ಕಿತು. ನಮ್ಮ ಸಭೆಯ ಮುಖಂಡರ ಹೆಸರೂ ಅದರಲ್ಲಿ ಇತ್ತು. ಅಮಲ್ದಾರ್ ಜಯಣ್ಣ ಅವರಿಗೆ 10 ರೂ. ದಂಡ ಹಾಕಿದರು.

ಅವರಲ್ಲಿ ಹಣ ಇರದ್ದರಿಂದ ಅವರಿಗೂ ಅಪರ ಇನ್ನೊಬ್ಬ ಜೊತೆಗಾರರಿಗೂ ಒಂದು ಗಂಟೆಯವರೆಗೆ ಒಂಟಿಗಾಲಲ್ಲಿ ನಿಲ್ಲಿಸಿದರು.

ಈ ಕಿಚ್ಚಿನ ಕಾರಣದಿಂದ ಅವರಿಬ್ಬರೂ ಒಂದು ದಿನ ಸೋಮವಾರ 8 ಜನ ಪೋಲಿಸರು, ಪೋಲಿಸ್ ಅಧಿಕಾರಿ ಹಾಗು ಅಮಲ್ದಾರರ ಸಹಿತ ಈಸೂರಿನ ಸ್ವತಂತ್ರ ಸರ್ಕಾರದ ಆಫೀಸಿಗೆ ಬಂದು ಅಲ್ಲಿನ ಗಾಂಧಿ, ನೆಹರು, ಸುಭಾಸ್ ಮುಂತಾದವರ ಭಾವಚಿತ್ರಗಳನ್ನು ಕಿತ್ತು ನುಚ್ಚುನೂರುಮಾಡಿ ಕಾಲಿನಿಂದ ತುಳಿದರು. ಅಲ್ಲಿನ ಬೋರ್ಡುಗಳನ್ನು ಕಿತ್ತು ಹರಿದರು. ವೀರಭದ್ರಸ್ವಾಮಿ ದೇವಾಲಯದಲ್ಲಿ ಇದೆಲ್ಲ ಆಯಿತು. ಅಲ್ಲಿದ್ದ ಜನ ಈ ರೀತಿ ರಾಷ್ಟ್ರೀಯ ನಾಯಕರಿಗೆ ಅವಮಾನವಾದ ಬಗ್ಗೆ ಉದ್ರೇಕಗೊಂಡು, ಗಾಂಧೀ ಟೋಪಿ ಹಾಕಿಕೊಂಡು ಜೈ ಅಂದು ಹೋಗಬೇಕೆಂದು ಪೋಲಿಸರಿಗೂ ಅಧಿಕಾರಿಗಳಿಗೂ ಒತ್ತಾಯಿಸಿದರು. ಆಗ ಲಾಠೀಪ್ರಯೋಗ ಆಗಿ ಗುಂಡು ಹಾರಿಸಿದರು. ಗುಂಡು ಫಣಿಯಪ್ಪಾಚಾರ್ ಎಂಬವರಿಗೆ ತಗಲಿತು ಮತ್ತು ಗುರಪ್ಪ ಎಂಬವರ ಕುತ್ತಿಗೆಗೂ ಗುಂಡೊಂದು ಹತ್ತಿ ರಕ್ತ ಚಿಮ್ಮಿತು. ಆಗ ಊರ ನಗಾರಿ ಬಾರಿಸಲು ಊರ ಜನ ನೆರೆದು ಆದ ರಕ್ತಪಾತ ಕಂಡು, ದಂಗೆ ಎದ್ದುಬಿಟ್ಟರು. ಸಬ್-ಇನ್ಸ್‌ಪೆಕ್ಟರು ಹಾಗೂ ಸರಕಾರದ ಅಮಲ್ದಾರರು ಜನರ ತುಳಿತಕ್ಕೆ ಸಿಕ್ಕಿ ಮೃತ ಪಟ್ಟರು. ಇನ್ನುಳಿದ ಪೋಲಿಸರಿಗೆ ಗಾಯಗಳಾಗಿ ಅವರನ್ನು ಶಿಕಾರಿಪುರಕ್ಕೆ ಕಳುಹಿಸ ಲಾಯಿತು.

ಇದಾದಮೇಲೆ ರಿಸರ್ವ್ ಪೋಲಿಸರು ಬಂದು ಊರ ಮನೆಗಳನ್ನು ಲೂಟಿಮಾಡಿ ಸಿಕ್ಕವರನ್ನೆಲ್ಲ ಎಳೆದೊಯ್ದರು. ಈ ಸಂಬಂಧ 50 ಜನಗಳ ಮೇಲೆ ಅಪರಾಧ ಹೇರಲ್ಪ ಟ್ಟಿತ್ತು. ಇದರಲ್ಲಿ ನಾನೂ ಒಬ್ಬ ಅಪರಾಧಿಯಾದೆ. ಆದರೆ ನಾವು ಹೋರಾಡಿದ್ದು ನಮ್ಮ ದೇಶದ ಸ್ವಾತಂತ್ರ್ಯಕ್ಕೋಸ್ಕರ. ಈ ಐವತ್ತು ಜನರಲ್ಲಿ ಮೂವರು ಹೆಂಗಸರೂ ಇದ್ದು ಸಾಗರದ ಗಂಧದಕೋಟೆಯ ಸ್ಪೆಷಲ್ ಜಜ್ ಅವರು 26 ಜನಕ್ಕೆ ಬಿಡುಗಡೆ ಮಾಡಿದರು. ಉಳಿದವರಲ್ಲಿ 13 ಜನರಿಗೆ ಗಲ್ಲು, 11 ಜನಕ್ಕೆ ಜೀವಾವಧಿ ಶಿಕ್ಷೆಕೊಟ್ಟರು. ಹೀಗೆ ಜೀವಾವಧಿ ಶಿಕ್ಷೆಗೆ ಒಳಗಾದವರಲ್ಲಿ ನಾನೂ ಒಬ್ಬ. ಬೆಂಗಳೂರು ಹೈಕೋರ್ಟಿನಲ್ಲಿ ಜಜ್ ರ್‍ಯಾಲಿಯವರು 5 ಜನರಿಗೆ ಗಲ್ಲು ಆರ್ಡರ್ ಕಾಯಂ ಮಾಡಿದರು. ಉಳಿದವರಿಗೆ ಜೀವಾವಧಿ ಶಿಕ್ಷೆ ಕಾಯಂ ಆಯಿತು. ಬೆಂಗಳೂರು ಸೆಂಟ್ರಲ್ ಜೈಲ್‌ನಲ್ಲಿ ಇದ್ದ ನಮಗೆ ಐದು ವರ್ಷದನಂತರ ಬಿಡುಗಡೆ ಆಯಿತು. ಇದು ನನ್ನ ರಾಷ್ಟ್ರಸೇವೆ. ಆಗ ನನಗೆ 25 ವರ್ಷ. ಸ್ವಾತಂತ್ರ್ಯಕ್ಕೋಸ್ಕರ ಪ್ರಾಣ ಅರ್ಪಿಸಿದ ನನ್ನ ಐದು ಮಿತ್ರರ ಆತ್ಮಕ್ಕೆ ಇಂದಿಗೂ ಶಾಂತಿ ಕೋರುತ್ತಿರುವೆ. ಈಗ ನನ್ನ ಹುಟ್ಟೂರಾದ ಹಾಲಿವಾಣದಲ್ಲಿದ್ದೇನೆ.

ವ್ಯೈ.ಶಿ. 26

# ರಾಮಳ್ಳಿ ಹೊಳೆಬಸಪ್ಪ

ಜನನ : ಸು. 1920 ಉದ್ಯೋಗ : ಕೃಷಿ ವಿಳಾಸ : ಈಸೂರು, ತಾ॥ ಶಿಕಾರಿಪುರ



ಶಿಕಾರಿಪುರ ತಾ||ನ ಒಂದು ಚಿಕ್ಕ ಹಳ್ಳಿ ಈಸೂರು. ಈ ಚಿಕ್ಕ ಹಳ್ಳಿ ಈಸೂರು ಕೂಡ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ತನ್ನದೇ ಆದ ವೈಶಿಷ್ಟ್ಯಪೂರ್ಣ, ರೋಮಾಂಚಕ ಇತಿಹಾಸ ನಿರ್ಮಿಸಿದೆ. ಈಸೂರು ವಿಪರೀತ ಕಾಡಿನಲ್ಲಿರುವ ಹಳ್ಳಿಯಾಗಿತ್ತು ಆಗಿನ ಕಾಲಕ್ಕೆ. ಊರಿಗೆ ಹೊರ ಗಡೆಯಿಂದ ಹೆಚ್ಚಾಗಿ ವಿಷಯಗಳು ತಿಳಿಯುತ್ತಿರ ಲಿಲ್ಲ. 1937ರಲ್ಲಿ ಈಸೂರಿನ ಪಕ್ಕದ ಗ್ರಾಮದಲ್ಲಿ ಎಚ್. ಸಿ. ದಾಸಪ್ಪನವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್‌ನ ಕಾರ್ಯಕ್ರಮ ಒಂದು ನಡೆಯಿತು. ಆಗಲೇ ನಮಗೆ ಕಾಂಗ್ರೆಸ್ ಅಂದರೇನು, ಅದರ ಧ್ಯೇಯಧೋರಣೆ ಗಳೇನು ಎಂದು ತಿಳಿದಿದ್ದು. ಆಗ ಅಕ್ಕಪಕ್ಕದ ಊರಿನ ಜನಗಳೆಲ್ಲ ಸ್ವಯಂಸೇವಕರಾಗಿ ಸೇರಿಕೊಂಡರು. ಆಗಲೇ ತ್ಯಾಪಣಗಿ ಮಲ್ಲೇಶಪ್ಪ, ಸಾಹುಕಾರ ಬಸವಣ್ಣಪ್ಪ, ಫಣಿಯಪ್ಪಾಚಾರ್, ಹೊಳೆಯಪ್ಪ, ನಾಗೇಶಾಚಾರ್, ಸೂರ್ಯನಾರಾಯಣಾಚಾರ್, ಇನ್ನೂ ಕೆಲವರು ಮತ್ತು ನಾನು ಸಹ ಸ್ವಯಂಸೇವಕರಾಗಿ ಕೆಲಸಮಾಡಿದೆವು. ಅದರಲ್ಲಿ ಮುಖ್ಯವಾಗಿ, ಹಿರೇಮಠದ ಮರಿಸ್ವಾಮಿ, ಅಂದಾನಿ ಶಿದ್ಲಿಂಗಪ್ಪ, ಕಳ್ಳಿ ತಿಪ್ಪಣ್ಣ ಶಾಸ್ತ್ರಿ ಮತ್ತು ಕೂಪಟಿ ಮಹದೇವಪ್ಪ ಇವರುಗಳು ಪ್ರಮುಖ ಪಾತ್ರವಹಿಸಿದ್ದರು. ಇವರಿಂದಲೇ ನಮ್ಮ ತಾಲ್ಲೂಕಿನಲ್ಲಿ ಕಾಂಗ್ರೆಸ್ ಜನಪ್ರಿಯವಾದುದು.

ನಮ್ಮ ಊರಿನ ಅನೇಕ ಜನರು 1937ರಿಂದಲೇ ಕಾಂಗ್ರೆಸ್ ಸೇರಿ ಅಲ್ಪಸ್ವಲ್ಪ ಅಳಿಲುಸೇವೆ ಸಲ್ಲಿಸುತ್ತಿದ್ದೆವು. ಆಗಿನಿಂದಲೇ ಅನೇಕರು ಖಾದೀಧಾರಿಗಳಾದರು.

ಅಷ್ಟರಲ್ಲೇ 1942ರ ಚಳವಳಿ ಬಂತು. ನಾಗವಂದದ ಭರಮಣ್ಣ ಎಂಬುವರು ಈಸೂರಿಗೆ ಕಾಂಗ್ರೆಸ್ ಸೇವಕರಾಗಿ ಬಂದರು. ಮೊದಲು ಭರಮಣ್ಣನ ಮಾತನ್ನು ಊರಿನ ಪ್ರಮುಖರಾದ ಸಾಹುಕಾರ ಬಸವಣ್ಯಪ್ಪ, ಅಂಗಡಿ ಹಾಲಪ್ಪ ಮತ್ತು ಸೂರ್ಯನಾರಾಯಣಾಚಾರ್ ಚೆನ್ನಾಗಿ ಅರಿತು ಊರ ಜನರನ್ನೆಲ್ಲ ಹುರಿದುಂಬಿಸಿದರು.

ಜೈಕಾರಗಳನ್ನು ಹಾಕುತ್ತಾ ಊರಿನ ಚಿಕ್ಕ ಬಾಲಕರು ವಿದ್ಯಾರ್ಥಿಗಳು ಪ್ರತಿದಿನ ಮೆರವಣಿಗೆ ಮಾಡುತ್ತಿದ್ದರು. ಊರಿಗೆ ಅಧಿಕಾರಿಗಳು ಯಾರಾದರೂ ಬಂದರೆ ಅವರಿಗೆ

ಈ ಚಿಕ್ಕ ಮಕ್ಕಳು ಖಾದೀ ಟೋಪಿ ಹಾಕುತ್ತಿದ್ದರು.

1942 ಸೆಪ್ಟೆಂಬರ್ 26ರಂದು ಈಸೂರಿನ ವೀರರು 'ನಾವು ಸ್ವತಂತ್ರರು' ಎಂದು ಹೇಳಿಕೊಂಡರು. ಈ ಸ್ವತಂತ್ರ ಸರ್ಕಾರಕ್ಕೆ 10 ವರ್ಷದ ಬಾಲಕ ಜಯಪ್ಪನನ್ನು ಅಮಲ್ದಾರನನ್ನಾಗಿ ನೇಮಿಸಿದರು. ಈ ಬಾಲಕನ ಮುಂದಾಳುತನದಲ್ಲಿ ಪ್ರತಿದಿನದ, ಕಾರ್ಯಕಲಾಪ ನಡೆಯುತ್ತಿತ್ತು. ಈ ಹುಡುಗರು ಊರಿನ ಪಟೇಲ್ ಮತ್ತು ಶ್ಯಾನು ಭೋಗನಿಗೆ ರಾಜೀನಾಮೆ ಕೊಡಲು ಕೇಳಿಕೊಂಡರು. ಅದಕ್ಕೆ ಅವರು ನಿರಾಕರಿಸಿದರು. ಅವರಿಂದ ದಫ್ತರಗಳನ್ನು ಕಸಿದುಕೊಂಡು ಸುಟ್ಟರು. ತಾರೀಖು 27-9-1942 ಭಾನುವಾರ ಈಸೂರಿನ ಶ್ರೀವೀರಭದ್ರದೇವರ ದೇವಸ್ಥಾನದ ಆವರಣದಲ್ಲಿ ಪ್ರಚಂಡ ಸಭೆ ಸೇರಿತು. ರಾಷ್ಟ್ರಧ್ವಜವು ಹೆಮ್ಮೆಯಿಂದ ತಲೆ ಎತ್ತಿ ಹಾರುತ್ತಿತ್ತು. ಜಯಪ್ಪನು ಈಗಾಗಲೇ ಪ್ರತಿದಿನ ಕೆಲಸ ಮಾಡುತ್ತಿದ್ದನು. ಶ್ಯಾನುಭೋಗ, ಪಟೇಲರಿಗೆ ತಲಾ ಹತ್ತು ರೂಪಾಯಿ ದಂಡ ವಿಧಿಸಿದರು, ಕೊಡದಿದ್ದರೆ ಮೂರು ತಾಸು ಒಂಟಿಕಾಲ ಮೇಲೆ ನಿಲ್ಲುವ ಶಿಕ್ಷೆ ವಿಧಿಸಿತು ಈಸೂರು ಸರ್ಕಾರ. ಈ ತೀರ್ಮಾನವು ಪುನರ್ವಿಮರ್ಶೆಯಾಗಿ ಶಿಕ್ಷಿತರು ವಯಸ್ಕರೆಂಬ ಕಾರಣದಿಂದ ಶಿಕ್ಷೆಯು ಮೂರು ತಾಸಿನಿಂದ ಒಂದು ತಾಸಿಗಿಳಿಸಲ್ಪಟ್ಟು ಸಹಜವಾಗಿ ಬಿಸಿಲಿನಲ್ಲೇ ನಿಲ್ಲುವ ತೀರ್ಪು ಹೊರಬಿತ್ತು. ಈ ಶಿಕ್ಷೆ ಅನುಭವಿಸಿದ ಪಟೇಲ್, ಶಾನುಭೋಗರು ಅಧಿಕಾರಿಗಳಿಗೆ ದೂರಿತ್ತರು.

ಈಸೂರು ನೂತನ ಸರ್ಕಾರದ ಸ್ಥಾಪನೆಯನ್ನು, ಅದರ ಚಟುವಟಿಕೆಗಳನ್ನು ಬ್ರಿಟಿಷ್ ಸರ್ಕಾರ ಎಲ್ಲಿಯವರೆಗೆ ಸಹಿಸೀತು ? ದಿನದಿನವೂ ಅಧಿಕಾರಿಗಳಿಗೆ ಹೇಗೋ ವರದಿಗಳು ಹೋಗುತ್ತಲೇ ಇದ್ದವು. 'ಇಲಿ ಹೋದರೆ ಹುಲಿ ಹೋಯಿತು' ಎನ್ನುವ ಸುದ್ದಿಗಳಿಗೂ ಏನು ಕಡಿಮೆ ಇರಲಿಲ್ಲ. ಈಸೂರಿನ ಸ್ವತಂತ್ರ ಸರ್ಕಾರ ಸ್ಥಾಪನೆಯ ಕಹಳೆಯ ಕೂಗು ಆದಂದಿನಿಂದ ತಾಲ್ಲೂಕು ಅಧಿಕಾರಿಗಳ ಮನಸ್ಸಿಗೆ ಶಾಂತಿಯೇ ಇರಲಿಲ್ಲ. ಯಾವುದೇ ಜನತಾ ಚಳವಳಿಯನ್ನು ಹತ್ತಿಕ್ಕುವ ಕಾರ್ಯದಲ್ಲಿ ನಮ್ಮ ಅಧಿಕಾರಿಗಳು ಅಪೂರ್ವ ಆಸಕ್ತಿ ಧೈರ್ಯಗಳನ್ನು ತೋರಿಸಿ ಸರ್ಕಾರದ ಮೆಚ್ಚಿಗೆ ಪಡೆಯುವ ಸ್ವಭಾವ ಆಗ ಇದ್ದಿತು.

ಶ್ರೀ ವೀರಭದ್ರ ದೇವಸ್ಥಾನದ ಜಾಗಟೆಯನ್ನು ಬಾರಿಸಿದರೆ ಊರಿನ ಜನರೆಲ್ಲ ಸೇರಬೇಕೆಂದು ಊರಿನ ಸ್ವಾತಂತ್ರ್ಯಪ್ರೇಮಿಗಳು ಮೊದಲೇ ಗೊತ್ತುಮಾಡಿಕೊಂಡಿದ್ದರಿಂದ ಜನಗಳನ್ನು ಸೇರಿಸಬೇಕಾದರೆ ಜಾಗಟೆ ಬಾರಿಸುತ್ತಿದ್ದರು.

27-9-1942ರ ಮಧ್ಯರಾತ್ರಿ ಸುಮಾರು 40 ಜನರ ಗುಂಪೊಂದು ಈಸೂರಿಗೆ 11 ಮೈಲಿ ದೂರದಲ್ಲಿರುವ ಶಿವಮೊಗ್ಗ-ಶಿಕಾರಿಪುರ ರಸ್ತೆಯಲ್ಲಿರುವ ಸೇತುವೆ(ಮೋರಿ) ಯನ್ನು ಧ್ವಂಸಮಾಡಲು ಹೊರಟಿತು, 28ರ ಬೆಳಗಿನ ಜಾವ ಶಿಕಾರಿಪುರ ತಾಲೂಕು ಕಚೇರಿಯ ಮೇಲೆ ರಾಷ್ಟ್ರಧ್ವಜ ಹಾರಿಸಿ, ತಾಲೂಕು ಟ್ರೆಜರಿಯನ್ನು ಲೂಟಿ ಮಾಡಬೇಕೆಂದೂ ವಿಚಾರ ಇತ್ತು. ಇದಕ್ಕೆಲ್ಲ ನಮ್ಮಗಳ ನಾಯಕ ನಾಗವಂದದ ಭರಮಣ್ಣ.

ನಾವೆಲ್ಲರೂ ರಾತ್ರಿ ಹೊತ್ತು 11 ಮೈಲಿಯನ್ನು ನಡೆದು ಹೊರಟೆವು. ರಾತ್ರಿಯಲ್ಲಿ ಸೇತುವೆ ಒಡೆಯುವ ಕೆಲಸ ಮಾಡಿದೆವು. ಆದರೆ ಸೇತುವೆ ತುಂಬಾ ಪ್ರಬಲವಾಗಿದ್ದಿತು. ಈ 40 ಜನರ ಗುಂಪಿಗೆ ಅಸಾಧ್ಯವಾಯಿತು. 4 ಅಡಿಗಳ ದಪ್ಪದಷ್ಟು ಸೇತುವೆಯನ್ನು ಹಾಳುಮಾಡುವ ಹೊತ್ತಿಗೆ ಬೆಳಗಿನ ಜಾವ 4 ಗಂಟೆಯಾಯಿತು. ಇನ್ನೂ ಪ್ರಯತ್ನಿಸುತ್ತಿದ್ದೆವು. ಅಷ್ಟರಲ್ಲೇ ಒಂದು ಜೀಪು ಬಂದು ನಮ್ಮಗಳ ಕೆಲಸಕ್ಕೆ ಅಡ್ಡಿ ಮಾಡಿತು. ನಾವುಗಳು ಜೀಪು ಬಂದ ತಕ್ಷಣ ಅರಣ್ಯದಲ್ಲಿ ಮಾಯವಾದೆವು. ಊರಿಗೆ ಬರುವಾಗ ಹಾದಿಯಲ್ಲಿ ತಂತಿ ಕತ್ತರಿಸಿದೆವು ; ಸಾಲುಕಂಬಗಳನ್ನು ಕೆಡವಿದೆವು ; ಹಾಗು ಸಾಲು ಮರಗಳನ್ನು ಕಡಿದು ರಸ್ತೆಗಳಿಗೆ ಅಡ್ಡ ಹಾಕಿದೆವು. ಬೆಳಗ್ಗೆ 8 ಗಂಟೆ ಹೊತ್ತಿಗೆ ಊರು ತಲಪಿ ನಾವೆಲ್ಲ ರಾತ್ರಿಯಲ್ಲಿ ದಣಿದಿದ್ದರಿಂದ ಮಲಗಿಬಿಟ್ಟೆವು. ಈ ಕೆಲಸದಲ್ಲಿ ಪಾಲುಗೊಂಡವರಲ್ಲಿ ಪ್ರಮುಖರು ಇವರು : ಪೇಟೆ ರುದ್ರಪ್ಪ, ಕಡೇಮನೆ ಹಾಲಪ್ಪ, ರಾಮಚಂದ್ರಪ್ಪ, ಗುರಪ್ಪ, ಮಲ್ಲಪ್ಪ, ಹೊಳೆಯಪ್ಪ, ಜಿ. ಹಾಲಪ್ಪ, ನಾಗೇಶಚಾರಿ, ಕೆ. ಬಸವಣ್ಣಪ್ಪ, ದಿ|| ಅಡಿಗಂಟೆ ಭದ್ರಪ್ಪ, ಅಡಿಗಂಟೆ ಮಲ್ಲಪ್ಪ, ಉಜ್ಜಳ್ಳಿ ವೀರಪ್ಪ, ಉಜ್ಜಳ್ಳಿ ಚಂದ್ರಶೇಖರಪ್ಪ, ಯು. ಗುರುಶಾಂತಪ್ಪ, ಎಸ್. ಗುರುಶಾಂತಪ್ಪ, ಎಸ್. ವೀರಪ್ಪ, ಕಮ್ಮಾರ ವೀರಪ್ಪ, ಬಸೆಟ್ಟೆಪ್ಪ, ಶಂಕರಪ್ಪ. ಮಂಜಪ್ಪ, ನಾನು ಮತ್ತು ಇನ್ನು ಅನೇಕರು. ಸುಮಾರು 40 ಜನರಲ್ಲಿ ಎಲ್ಲರ ಹೆಸರು ನನಗೆ ಸರಿಯಾಗಿ ನೆನಪಿಲ್ಲ.

ಇತ್ತ ಪ್ರತಿನಿತ್ಯದ ಕೆಲಸದಂತೆ ವಿದ್ಯಾರ್ಥಿಗಳು, ಚಿಕ್ಕ ಬಾಲಕರು ಹಾಗು ಪ್ರಮುಖ ಸ್ವಾತಂತ್ರ್ಯಪ್ರೇಮಿಗಳು 28-9-1942ರಂದು ಪ್ರಭಾತ್‌ಫೇರಿ ನಡೆಸಿದರು. ಅಂದು ಸೋಮವಾರ. ಊರಿನ ದೇವರ ಎದುರಿನಲ್ಲಿ ರಾಷ್ಟ್ರಧ್ವಜ ಹಾರಾಡುತ್ತಿತ್ತು. ಈ ಹಿಂದೆ ಪೆಟ್ಟು ತಿಂದ ಶ್ಯಾನುಭೋಗ ಮತ್ತು ಪಟೇಲ್‌ರವರು ಶಿಕಾರಿಪುರದ ಅಧಿಕಾರಿಗಳಿಗೆ ತಿಳಿಸಿದ್ದರು. ಇದರಿಂದ ಕುಪಿತರಾದ ಸಬ್-ಇನ್ಸ್‌ಪೆಕ್ಟರ್ ತಹಸೀಲ್ದಾರರನ್ನು ಮತ್ತು ಕೆಲವು ಜನ ಪೋಲಿಸ್ ಪೇದೆಗಳನ್ನು ಕರೆದುಕೊಂಡು ಈಸೂರಿಗೆ ಹೊರಟರು. ಇವರು ಪ್ರವೇಶಿಸುವಾಗ ಊರ ಹೊರಗೆ ಒಂದು ಬೋರ್ಡನ್ನು ಹೀಗೆ ಬರೆದಿತ್ತು : "ಸರ್ಕಾರಿ ನೌಕರರಿಗೆ ಪ್ರವೇಶವಿಲ್ಲ ! ಬಂದರೆ......" ಎಂದು. ಅದನ್ನು ಕಿತ್ತುಹಾಕಿ ಊರನ್ನು ಪ್ರವೇಶಿಸಿದರು. ಆ ಸಬ್-ಇನ್ಸ್‌ಪೆಕ್ಟರ್ ಕೆಂಚೇಗೌಡ ಮತ್ತು ತಹಸೀಲ್ದಾರ್ ಚೆನ್ನಕೃಷ್ಣಯ್ಯ ಮಧ್ಯಾಹ್ನ 12 ಗಂಟೆಗೆ ಈಸೂರಿಗೆ ಬಂದರು. ಬರುವಾಗ ಹಾದಿಯಲ್ಲೆ (ಮುಂದೆ ಮರಣದಂಡನೆಗೆ ಗುರಿಯಾದ) ದಿ|| ಗುರಪ್ಪನವರು ಸಿಕ್ಕರು. ಅವರನ್ನು ಕರೆದು, ಹಿಡಿದುಕೊಂಡೇ ಊರಿಗೆ ಬಂದರು. ಊರಿಗೆ ಬಂದ ತಕ್ಷಣ ಊರಿನ ಪಟೇಲ್ ಮಹಾದೇವಪ್ಪನವರಿಂದ ವಿಷಯ ತಿಳಿದು ದೇವಸ್ಥಾನದ ಹತ್ತಿರ ಹೋದರು. ಅಲ್ಲಿ ಹಾರಾಡುತ್ತಿದ್ದ ರಾಷ್ಟ್ರಧ್ವಜವನ್ನು ಕೆಡವಿ ಕಾಲಿನಿಂದ ತುಳಿದರು.

ಸ್ವಯಂಸೇವಕರು ಅಧಿಕಾರಿಗಳಿಗೆ ಗಾಂಧೀಟೋಪಿಯನ್ನು ಹಾಕಲು ಹೋದರು. ತಹಸೀಲ್ದಾರರಿಗೆ ಸ್ವಲ್ಪ ಮನಸ್ಸಿದ್ದರೂ ಸಬ್-ಇನ್ಸ್‌ಪೆಕ್ಟರು ತೀವ್ರವಾಗಿ ವಿರೋಧಿಸಿ

ದರು. ಇದಕ್ಕೆ ಕುಪಿತನಾದ ಪೋಲಿಸ್ ಅಧಿಕಾರಿ ಲಾಠೀಚಾರ್ಜ್ ಮಾಡಲು ಆದೇಶವಿತ್ತ. ಚಿಕ್ಕ ಮಕ್ಕಳು ಪೆಟ್ಟು ತಡೆಯಲಾರದೆ ಓಡತೊಡಗಿದರು. ಅಧಿಕಾರಿಗಳು ಹೀಗೆ ಮಾಡಿದ್ದು ಆಗಲೇ ಊರಿನ ಪ್ರಮುಖರಿಗೆ ತಿಳಿಯಿತು. ಒಬ್ಬ ಜಾಗಟೆ ಬಾರಿಸಿದ. ಊರಿನ ಜನಗಳು, ಹೆಂಗಸರು, ಮಕ್ಕಳು, ವೃದ್ಧರಾದಿಯಾಗಿ ಬಂದು ಸೇರಿಕೊಂಡರು. ಇಷ್ಟು ಜನಗಳ ಗುಂಪನ್ನು ನೋಡಿ ಪೋಲಿಸ್ ಅಧಿಕಾರಿ ಯೋಚನೆ ಮಾಡದೆ ಗುಂಡು ಹಾರಿಸಲಾರಂಭಿಸಿದ. ಆ ಗುಂಡಿನಿಂದ ಫಣಿಯಪ್ಪಾಚಾರ್ ಮತ್ತು ಸಂಡದ ಗುರುಶಾಂತಪ್ಪ ಗಾಯಗೊಂಡರು.

ತಕ್ಷಣವೇ ಊರಿನ ಜನ ತೀರ ಉದ್ವಿಗ್ನರಾಗಿ ಕೈಗೆ ಸಿಕ್ಕ ಆಯುಧಗಳು, ಮರದ ದೊಣ್ಣೆಗಳನ್ನು ತೆಗೆದುಕೊಂಡರು. ಊರಿನ ಕಾಂಗ್ರೆಸ್ ಜನರಿಗೂ ಅಧಿಕಾರಿಗಳಿಗೂ ಸಮರ ನಡೆದುಹೋಯಿತು. ಈ ಸಮರದಲ್ಲಿ ಸಬ್-ಇನ್ಸ್‌ಪೆಕ್ಟರ್ ಕೆಂಚೇಗೌಡ, ತಹಸಿಲ್ದಾರ್ ಚೆನ್ನಕೃಷ್ಣಯ್ಯ ಮರಣಹೊಂದಿದರು. ಅನೇಕ ಪೋಲಿಸ್ ಪೇದೆಗಳು ಓಡಿಹೋದರು. ನಿಜಕ್ಕೂ ತಹಸೀಲ್ದಾರ್ ಚೆನ್ನಕೃಷ್ಣಯ್ಯ ಒಳ್ಳೆಯ ವ್ಯಕ್ತಿ ಎಂದು ಹೇಳುತ್ತಾರೆ. ಆದರೆ 'ಗುಂಪಿನಲ್ಲಿ ಗೋವಿಂದ' ಎನ್ನುವಂತೆ ದುರದೃಷ್ಟಕರ ಘಟನೆ ಈಸೂರು ಜನತೆಯ ಕೈಮೀರಿ ನಡೆದುಹೋಯಿತು !

ಈ ಘಟನೆಯ ಸುದ್ದಿ ಶಿವಮೊಗ್ಗಕ್ಕೆ ಮಾರನೆಯ ದಿನ ತಲುಪಿತು ಮತ್ತು ಮೂರನೆಯ ದಿನ ಡಿ.ಸಿ. ಕೆಲವು ಪೋಲೀಸ್ ಪೇದೆಯೊಂದಿಗೆ ಬಂದರು. ಆದರೆ ಈಸೂರನ್ನು ಪ್ರವೇಶಿಸಲು ಅವರಿಗೆ ಧೈರ್ಯ ಬರಲಿಲ್ಲ. ಅವರು ಶಿಕಾರಿಪುರಕ್ಕೆ ತೆರಳಿ ಬೆಂಗಳೂರಿನಿಂದ ಮಿಲಿಟರಿ ಬರುವವರೆಗೆ ಕಾಯಬೇಕಾಯಿತು.

ಈ ಮಧ್ಯೆ ಚುರ್ಚಿಗುಂಡಿ ಕಾಡಪ್ಪನವರು ಮೃತದೇಹಗಳನ್ನು ಶಿಕಾರಿಪುರಕ್ಕೆ ತೆಗೆದುಕೊಂಡು ಹೋಗಿ ಅಧಿಕಾರಿಗಳ ವಶಕ್ಕೆ ಒಪ್ಪಿಸಿದ್ದರು.

ಶಿಕಾರಿಪುರಕ್ಕೆ ಮಿಲಿಟರಿ ಬಂತು. ಡಿ.ಸಿ. ಅವರ ಜೊತೆಯಾಗಿ ಈಸೂರನ್ನು ಪ್ರವೇಶಿಸಿದರು. ಇಷ್ಟು ಹೊತ್ತಿಗೆ ಆಗಲೇ ಈಸೂರಿನ ಪ್ರಜೆಗಳು ಕಾಡಪ್ಪಗೌಡರ ಮಾತಿನಂತೆ ಊರು ಬಿಟ್ಟು ಓಡಿಹೋದರು.

ಮಿಲಿಟರಿಯವರು ಏನು ಬೇಕಾದರೂ ಮಾಡಲು ಆಗಲೇ ಅಧಿಕಾರ ಪಡೆದಿದ್ದರು. ಪೋಲಿಸರು, ಮಿಲಿಟರಿಯವರು ಈಸೂರನ್ನು ಲೂಟಿಮಾಡಿದರು. ಸಾಹುಕಾರರ ಮನೆಯ ಭದ್ರ ಕಬ್ಬಿಣದ ಕಪಾಟುಗಳನ್ನು ಒಡೆಯಲಾಯಿತು ಮತ್ತು ಅಮೂಲ್ಯ ವಸ್ತುಗಳನ್ನೂ ಹಣವನ್ನೂ ಕದ್ದರು. ಆ ಮನೆಯನ್ನು ಪೂರ್ತಿಯಾಗಿ ಸುಟ್ಟರು. ಸುಲಿಗೆ ಮತ್ತು ಸುಡುವಿಕೆ ಡೆಪ್ಯುಟಿ ಕಮೀಷನರ ಎದುರಿಗೇ ನಡೆಯಿತು. ಸಾಹುಕಾರರ ಮನೆಯಿಂದಲೇ ಲಕ್ಷಾಂತರ ರೂಪಾಯಿ ಬೆಲೆಯ ವಸ್ತುಗಳನ್ನು ದೋಚಿದರು. ಊರಿನ ಜನಗಳನ್ನು ಹೊಡೆದರು, ಹಿಂಸಿಸಿದರು ಹಾಗು ಬೇರೆಬೇರೆ ವಿಧಾನಗಳಿಂದ ತೊಂದರೆ ಕೊಟ್ಟರು. ಕೆಲವು ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದರು. ಹಾಗೂ ಊರಿನಲ್ಲಿ

ಉಳಿದಿದ್ದ ವೃದ್ಧೆಯರು, ವೃದ್ಧರು ದವಸ, ಧಾನ್ಯ, ಹಾಲನ್ನ ಇನ್ನು ಮುಂತಾದ ಸಾಮಾನುಗಳನ್ನು ಮಿಲಿಟರಿಗೆ ಒದಗಿಸಬೇಕಾಯಿತು (ಅವರ ಒತ್ತಾಯಕ್ಕೆ). ಆ ಕಷ್ಟ ಹಿಂಸೆಗಳನ್ನು ವರ್ಣಿಸಲು ಬಾಯಿ ಸಾಲುವುದಿಲ್ಲ, ಬರೆಯುವುದಕ್ಕೆ ಕೈಯಿಂದಲೂ ಸಾಧ್ಯವಿಲ್ಲ. ಆ ಕಷ್ಟ ಸ್ವತಃ ಅನುಭವಿಸಿದವರಿಗೂ ದೇವರಿಗೂ ಗೊತ್ತು!

ಕಂಡಕಂಡವರನ್ನು ದಸ್ತಗಿರಿ ಮಾಡಲಾಯಿತು. ಒಟ್ಟು 49 ಜನರ ಒಂದು ತಂಡವನ್ನು ಬಂಧಿಸಲು ವಾರೆಂಟು ಹೊರಟಿತು. ಆ ವಾರೆಂಟ್‌ನಲ್ಲಿ ನನ್ನ ಹೆಸರೂ ಇತ್ತು. ಅನೇಕ ಜನರನ್ನು ಬಂಧಿಸಿದರು. ನಾನು ಮತ್ತು ನನ್ನ ಕೆಲವು ಗೆಳೆಯರು ತಪ್ಪಿಸಿಕೊಂಡು ಓಡಿಹೋದೆವು. ಹಿಡಿದ ನನ್ನ ಗೆಳೆಯರ ಸುಮಾರು 40 ಜನರ ಗುಂಪನ್ನು ಸಾಗರ ಸಬ್-ಜೈಲಿನಲ್ಲಿ ಇಟ್ಟು. ಸಾಗರದಲ್ಲಿ ಸ್ಪೆಷಲ್ ಫಸ್ಟ್‌ಕ್ಲಾಸ್ ಮ್ಯಾಜಿಸ್ಟ್ರೇಟರ ಕೋರ್ಟು ಪ್ರಾರಂಭವಾಯಿತು. ಕ್ರಿಮಿನಲ್ ಕೇಸುಗಳ ಪೈಕಿ 123ನೆಯದಾಗಿ ಈಸೂರು ಮೊಕದ್ದಮೆ 1942–43ರ ಸಾಲಿಗೆ ದಾಖಲಾಗಿ ಹೋಯಿತು. 22-10-1942ರ ಸರ್ಕಾರಿ ನೋಟಿಫಿಕೇಷನ್ 207ರ ಪ್ರಕಾರ ದೊಂಬಿ, ಗಲಭೆ, ಖೂನಿಗಳ ಮೊಕದ್ದಮೆ ನಡೆಸಲು ನಿಂತರು. ಆಗ ಸಾಗರದಲ್ಲಿ ಸಾಗರೋಪಮವಾದ ಸನ್ನಿವೇಶ. ವಿಶೇಷ ನ್ಯಾಯ ಮೂರ್ತಿಗಳ, ವಿಶೇಷ ನಡವಳಿಕೆಗಳ ವಿಚಾರಣೆ ಪ್ರಾರಂಭವಾಯಿತು. ವಾದವಿವಾದ ಗಳು ನಡೆದವು. ಸಾವಿರಾರು ಜನಗಳ ಕಣ್ಣಾಲಿಗಳು ತೀರ್ಪು ಹೊರಬೀಳುವ ನ್ಯಾಯ ಪೀಠದತ್ತ ಇಣಿಯಿಣಿಕಿ ನೋಡಿದವು.

5–12–1942ರಲ್ಲಿ ಪ್ರಥಮ ತೀರ್ಪು ಹೊರಬಿತ್ತು: 11 ಜನರಿಗೆ ಗಲ್ಲುಶಿಕ್ಷೆ ಯಾಯಿತು; 13 ಜನರಿಗೆ ಜೀವಾವಧಿ ಶಿಕ್ಷೆ, ಕೆಲವರಿಗೆ ಕಡಿಮೆ ಅವಧಿಯ ಶಿಕ್ಷೆ, ಇತರರಿಗೆ ಬಿಡುಗಡೆಯಾಯಿತು.

ಮರಣದಂಡನೆಗೆ ಗುರಿಯಾದವರು: (1) ಗುರಪ್ಪ, (2) ಮಲ್ಲಪ್ಪ, (3) ಸತ್ಯನಾರಾಯಣಾಚಾರಿ, (4) ಗುರುಶಾಂತಪ್ಪ ಸಂಡದ, (5) ಫಣಿಯಪ್ಪಾಚಾರಿ, (6) ಹುಚ್ಚರಾವ್, (7) ಬಡಕಳ್ಳಿ ಹಾಲಪ್ಪ, (8) ಶಂಕ್ರಪ್ಪ, (9) ಸಿದ್ಲಿಂಗಪ್ಪ, (10) ನಾಗೇಶಾಚಾರಿ, (11) ದಿ|| ಚನ್ನಬಸಪ್ಪ. (ಈ ಪೈಕಿ ಬಡಕಳ್ಳಿ ಹಾಲಪ್ಪನವರನ್ನು ಅಂಗಡಿ ಹಾಲಪ್ಪನವರ ಬದಲಾಗಿ ಬಂಧಿಸಲಾಗಿತ್ತು. ಬಿ. ಹಾಲಪ್ಪ ನಿಜವಾಗಿ ನಿರಪರಾಧಿ).

ಜೀವಾವಧಿ ಶಿಕ್ಷೆಗೆ ಗುರಿಯಾದವರು: (1) ದುರ್ಗೋಜಿರಾವ್, (2) ರಾಮಣ್ಣ, (3) ಅಗಸರ ಹನುಮಂತಪ್ಪ, (4) ಎಚ್. ನೀಲಕಂಠಪ್ಪ, (5) ಸುಬ್ರಾಯಪ್ಪ, (6) ವೀರಸಬಪ್ಪ, (7) ರಂಗಪ್ಪ, (8) ಲಿಂಗಪ್ಪ, (9) ಉಜ್ಜಳ್ಳಿ ಗುರುಶಾಂತಪ್ಪ, (10) ಹನುಮಂತಪ್ಪ, (11) ಹಾಲಮ್ಮ, (12) ಸಿದ್ದಮ್ಮ, (13) ಪಾರ್ವತಮ್ಮ.

ನನ್ನ ಮೇಲೂ ಮತ್ತು ಇನ್ನು 8–10 ಜನರ ಮೇಲೆ ವಾರೆಂಟ್ ತೆಗೆದುಕೊಂಡು ನಮ್ಮನ್ನು ಪೋಲಿಸರು ಹುಡುಕುತ್ತಿದ್ದರು. ನಾನು ಸುಮಾರು 3 ತಿಂಗಳು ಅವರ

ಕೈಗೆ ಸಿಗಲಿಲ್ಲ. ತಲೆತಪ್ಪಿಸಿಕೊಂಡ ನಮ್ಮಂಥ ಜನ ಪಟ್ಟಪಾಡು ವರ್ಣಿಸಲು ಬಾರದು. ಒಮ್ಮೆ ಒಬ್ಬ ಸಂಬಂಧಿಕರ ಮನೆಗೆ ಹೋದಾಗ ಅವರು ಸರಕಾರಕ್ಕೆ ಹೆದರಿ ನನಗೆ ಆಶ್ರಯವನ್ನೇ ಕೊಡಲಿಲ್ಲ. ಎರಡು ದಿನ ಉಪವಾಸವಾಗಿ ಗುಡ್ಡದಲ್ಲೇ ಕಾಲ ಕಳೆದೆ. ಸಂಬಂಧಿಕರು ಊಟ ಹಾಕಲು ಕೂಡ ನಿರಾಕರಿಸಿದರು. ನಂದಿಹಳ್ಳಿ ಕಾಡಿನಲ್ಲಿ ಹಾವು ಕಚ್ಚಿ ಸಾಯಬೇಕೆಂದು ಹುತ್ತದಲ್ಲಿ ಕೈಯಿಟ್ಟು ಕೆಲವು ಗಂಟೆ ಕುಳಿತಿದ್ದೆ. ಜೀವನವೇ ಜುಗುಪ್ಸೆಯಾಗಿತ್ತು. ಇನ್ನೂ ಕೆಲವರು ಪೋಲಿಸರಿಗೆ ಸಿಗಲಿಲ್ಲ. ಮೊದಲು ಶಿಕ್ಷೆ ಆದವರಿಗಿಂತ ಹೊರಗಿದ್ದ ನಾವು ತುಂಬಾ ತೊಂದರೆಪಡಬೇಕಾಯಿತು. ನನ್ನನ್ನು ಧಾರವಾಡದಲ್ಲಿ, ಹಿರೇಮಠದ ಮುದಿಯಪ್ಪನವರ ಮನೆಯಲ್ಲಿ ಇಟ್ಟಿದ್ದರು. ನನಗೆ ಸಣ್ಣಜ್ಜ ವೀರಪ್ಪ, ಹೊಳೆಯಪ್ಪ, ನನ್ನ ಅಣ್ಣ ವೀರಬಸಪ್ಪ ಮತ್ತು ನನ್ನ ಭಾವ ನಿಂಗಪ್ಪನವರು ನನಗೆ ಆಗಾಗ್ಗೆ ವರ್ತಮಾನ ಕೊಟ್ಟು, ನನ್ನನ್ನು ಬೇರೆಬೇರೆ ಸ್ಥಳಗಳಿಗೆ ಹೋಗಲು ಅನುಕೂಲ ಮಾಡಿಕೊಟ್ಟರು. ನಾನು ಮೊದಲೇ ಎಲ್ಲರ ಹಾಗೆ ಬ್ರಿಟಿಷ್ ಸರ್ಕಾರಕ್ಕೆ ಸಿಕ್ಕಿದ್ದರೆ ನನಗೆ ಖಂಡಿತವಾಗಿ ಗಲ್ಲುಶಿಕ್ಷೆಯಾಗುತ್ತಿತ್ತು. ಗಲ್ಲುಶಿಕ್ಷೆ ಮಾತ್ರ ಬಿಟ್ಟು ಏನಾದರೂ ಆಗಲಿ ಎಂದು ಸದ್ಯಕ್ಕೆ ಪೋಲಿಸರಿಂದ ತಪ್ಪಿಸಿಕೊಳ್ಳುತ್ತಿದ್ದೆ. ನನ್ನ ಕಡೆಯಿಂದ ನನ್ನ ಅಣ್ಣ ವೀರಬಸಪ್ಪ, ನನ್ನ ಭಾವ ನಿಂಗಪ್ಪ, ನನ್ನ ಹೆಂಡತಿ ಪಾರ್ವತಮ್ಮ ಮತ್ತು ನನ್ನ ಅತ್ತೆ ವೃದ್ಧೆ ಮಲ್ಲಮ್ಮ ಇವರಿಗೆಲ್ಲ ಪೋಲಿಸರು ತುಂಬಾ ಚಿತ್ರಹಿಂಸೆ ಕೊಟ್ಟರು. ಪೋಲಿಸಿನವರಿಗೆ ಪದೇ ಪದೇ ಹಣಕೊಟ್ಟು ಬಾಯಿ ಮುಚ್ಚಿಸಿ ಕಳುಹಿಸುತ್ತಿದ್ದರು. ನನ್ನ ಅತ್ತೆಯನ್ನು ದಸ್ತಗಿರಿ ಮಾಡಿದರಂತೆ. ಅಧಿಕಾರಿಗಳಿಗೆ 200 ರೂ. ಕೊಟ್ಟಮೇಲೆ ಬಿಡುಗಡೆ ಮಾಡಿದರಂತೆ.

ನನ್ನನ್ನು ಮೊದಲ ಬಾರಿಗೆ ಧಾರವಾಡ ಜಿಲ್ಲೆ ಹಿರೇಕೆರೂರು ತಾ|| ಹಿರೇಮಠದಲ್ಲಿ ಬಂಧಿಸಿ, ಹಿರೇಕೆರೂರು ಲಾಕಪ್ಪಿನಲ್ಲಿ ಹಾಕಿದರು. ಅನಂತರ ಶಿಕಾರಿಪುರಕ್ಕೆ ತಂದು ಚಪ್ಪಲಿಯಿಂದ ಸಿಕ್ಕಾಪಟ್ಟೆ ಹೊಡೆದು ಚಿತ್ರಹಿಂಸೆ ಕೊಟ್ಟರು. ಕಾರಣ ನಾನು ಪೋಲಿಸಿನವರಿಗೆ ತುಂಬಾ (3 ತಿಂಗಳು) ಕೈಕೊಟ್ಟು ತಪ್ಪಿಸಿಕೊಳ್ಳುತ್ತಿದ್ದೆ. ಅನಂತರ ಸಾಗರ ಜೈಲಿಗೆ ವರ್ಗಾಯಿಸಿದರು. ಅಲ್ಲಿ ನನಗೆ ಕೊಟ್ಟ ಕೆಲಸ ಬೇರೆಯವರ ಮಲ ಮೂತ್ರ ಎತ್ತುವುದು. ಅನಂತರ ಸಾಗರದಿಂದ ಶಿವಮೊಗ್ಗಕ್ಕೆ ವರ್ಗಾಯಿಸಿದರು.

ನನ್ನನ್ನು ಬಂಧಿಸಿದ ಅನಂತರ ಕಮ್ಮಾರಗಟ್ಟೆ ರಂಗಪ್ಪ, ಮಠದ ಚನ್ನಬಸಮ್ಮ, ಗಾಮದ ವೀರಭದ್ರಪ್ಪ ಇವರನ್ನು ಬಂಧಿಸಿ ಶಿವಮೊಗ್ಗಕ್ಕೆ ತಂದರು. ನಮ್ಮ ವಿಚಾರಣೆ ಪ್ರಾರಂಭವಾದಮೇಲೆ ಸಾಹುಕಾರ ರುದ್ರಪ್ಪನವರು ಮತ್ತು ಅವರ ಮಗ ಶಾಂತವೀರಪ್ಪನವರು ಅವರೇ ಕೋರ್ಟಿಗೆ ಹಾಜರಾದರು.

ಅಂಗಡಿ ಹಾಲಪ್ಪ ಮತ್ತು ಸಾಹುಕಾರ್ ಬಸಪಣ್ಣಪ್ಪನವರು ಕೊನೆಗೂ ಸಿಗಲಿಲ್ಲ.

ನಮ್ಮ ಮೇಲೆ ಸಾಕ್ಷಿ ಹೇಳಲು 60 ಜನರನ್ನು ತಯಾರುಮಾಡಿದ್ದರು. ಬ್ರಿಟಿಷ್ ಅಧಿಕಾರಿಗಳು ಹೇಳಿಕೊಟ್ಟಂತೆ ಹೇಳಬೇಕಾಗಿತ್ತು. ಕೋರ್ಟಿನಲ್ಲಿ ನಮ್ಮ ಊರ

ಮಿತ್ರರೇ ನನಗೆ ವಿರೋಧವಾಗಿ ಸಾಕ್ಷಿಯನ್ನು ಹೇಳಿದರು. ಹಾಗೆ ಹೇಳುವಂತೆ ಅಧಿಕಾರಿಗಳು ಅವರನ್ನು ಒತ್ತಾಯಿಸಿದ್ದರು.

ಶಿವಮೊಗ್ಗ ಕೋರ್ಟಿನಲ್ಲಿ ರಂಗಪ್ಪ, ಸಾಹುಕಾರ್ ರುದ್ರಪ್ಪ, ಶಾಂತವೀರಪ್ಪ ಮತ್ತು ನನಗೂ ಜೀವಾವಧಿ ಶಿಕ್ಷೆಯಾಯಿತು. ಕೋರ್ಟ್ ಆದೇಶದಂತೆ ನಮ್ಮನ್ನು ಬೆಂಗಳೂರು ಸೆಂಟ್ರಲ್ ಜೈಲಿಗೆ ವರ್ಗಾಯಿಸಿದರು. ನಾವುಗಳು ಬೆಂಗಳೂರಿಗೆ ಹೋದಾಗ ಸಾಗರದ ತೀರ್ಪಿನಂತೆ ಎಲ್ಲರನ್ನೂ ಸೆಂಟ್ರಲ್ ಜೈಲಿಗೆ ಒಯ್ದುರು.

ನಾವು ಸೆಂಟ್ರಲ್ ಜೈಲಿಗೆ ಹೋದಾಗ ಕಾಂಗ್ರೆಸ್ ಮುಖಂಡರಾದ ದಿ|| ಸಿಧಿಗೆ ರುದ್ರಪ್ಪ, ಎಚ್. ಸಿದ್ದಯ್ಯ, ಎಚ್. ಎಸ್. ರುದ್ರಪ್ಪ, ಎಸ್. ಆರ್. ನಾಗಪ್ಪಶೆಟ್ಟರು, ದಿ|| ಕೆ. ಆರ್. ಮಾಧವರಾವ್, ಭೂಪಾಳಂ ಚಂದ್ರಶೇಖರಯ್ಯ ಮುಂತಾದವರು ತಮ್ಮ ಕೈಯಿಂದಲೆ ಹಣ ಖರ್ಚುಮಾಡಿ ಮೊದಲ ಒಂದು ಗುಂಪನ್ನು ಹೈಕೋರ್ಟಿಗೆ ಅಪೀಲ್ ಹಾಕಿದ್ದರು. ನಾನು ಹೋದಾಗ ವಿಚಾರಣೆ ಆಗಿ ತೀರ್ಪು ಹೊರಬಿತ್ತು. ಅದರಲ್ಲಿ (1) ಗುರಪ್ಪ, (2) ಮಲ್ಲಪ್ಪ, (3) ಸೂರ್ಯನಾರಾಯಣಾಚಾರ್, (4) ಶಂಕ್ರಪ್ಪ, (5) ಹಾಲಪ್ಪನವರಿಗೆ ಗಲ್ಲುಶಿಕ್ಷೆಯಾಯಿತು. ಉಳಿದವರಿಗೆ ಬೇರೆ ಬೇರೆ ಅವಧಿಯ ಶಿಕ್ಷೆ ಯಾಯಿತು ; ಕೆಲವರಿಗೆ ಬಿಡುಗಡೆಯಾಯಿತು.

ನಂತರ ಜೈಲಿನಲ್ಲಿದ್ದ ಕಾಂಗ್ರೆಸ್ ಮುಖಂಡರಾದ ಹನುಮಂತಯ್ಯ, ನಿಜಲಿಂಗಪ್ಪ ನವರು, ಕೆ. ಸಿ. ರೆಡ್ಡಿ ಇನ್ನು ಮುಂತಾದವರು ಸೇರಿ ನಮ್ಮ 4 ಜನದ ಕೇಸನ್ನು ಹೈಕೋರ್ಟಿಗೆ ಅಪೀಲು ಹಾಕಿಸಿದರು. ನಮ್ಮ ಕೇಸಿನಲ್ಲಿ ಲಾಯರಾದ ದೇವಿದಾಸ್ (ಬೆಂಗಳೂರು), ದಿ|| ಭಟ್ (ಶಿವಮೊಗ್ಗ) ಇನ್ನು ಕೆಲವರು ತಮ್ಮ ಶಕ್ತಿಮೀರಿ ವಾದಿ ಸಿದರು. ಹೈಕೋರ್ಟಿನಲ್ಲಿ ನನಗೂ ಮತ್ತು ರಂಗಪ್ಪನಿಗೂ 10 ವರ್ಷಗಳ ಶಿಕ್ಷೆಯಾಯಿತು. ಸಾಹುಕಾರ್ ರುದ್ರಪ್ಪ ಮತ್ತು ಶಾಂತವೀರಪ್ಪನವರನ್ನು ಬಿಡುಗಡೆ ಮಾಡಿದರು.

ಇಲ್ಲಿಗೆ ಎಲ್ಲ ತೀರ್ಪುಗಳು ಮುಗಿದವು. ಹೈಕೋರ್ಟ್ ತೀರ್ಪಿನಂತೆ ಐದು ಜನಕ್ಕೆ ಗುರಪ್ಪ, ಮಲ್ಲಪ್ಪ, ಶಂಕರಪ್ಪ, ಸೂರ್ಯನಾರಾಯಣಾಚಾರ್ ಮತ್ತು ಹಾಲಪ್ಪನವರಿಗೆ ಗಲ್ಲುಶಿಕ್ಷೆಯಾಯಿತು. ಅಂದು ಜೈಲಿನಲ್ಲಿದ್ದವರೆಲ್ಲ ಉಪವಾಸ ಆಚರಿಸಿದೆವು. ನಮ್ಮನ್ನೆಲ್ಲ ಸೆಂಟ್ರಲ್ ಜೈಲಿನಲ್ಲಿಟ್ಟರು. ಮಹಾರಾಜರಿಗೆ ಸಲ್ಲಿಸಿದ್ದ ಮಾಫಿ ಅರ್ಜಿಗಳು ಮೊದಲೇ ತಿರಸ್ಕೃತವಾಗಿದ್ದವು.

ನಮ್ಮನ್ನೆಲ್ಲಾ ಕ್ರಿಮಿನಲ್ ಕೈದಿಗಳಂತೆ ನೋಡಿಕೊಂಡು, ಮೊದಲು ನಮಗೆ ತುಂಬಾ ತೊಂದರೆ ಕೊಟ್ಟರು. ಪ್ರತಿದಿನ ಬೆಳಗ್ಗೆ ಎಲ್ಲರೂ 25 ಸೇರು ರಾಗಿಯನ್ನು ಕಡ್ಡಾಯವಾಗಿ ಬೀಸಬೇಕಿತ್ತು ; ಬೀಸುತ್ತಿದ್ದೆವು ಮತ್ತು ಬಟ್ಟೆ ನೇಯುವುದು ಇತ್ಯಾದಿ ಅವರು ಹೇಳಿದ ಕೆಲಸಗಳನ್ನು ಮಾಡುತ್ತಿದ್ದೆವು. ಈ ತೊಂದರೆ ನೋಡಿದ ಸಿದ್ದಯ್ಯ, ಹನುಮಂತಯ್ಯ, ಗೊರೂರು ರಾಮಸ್ವಾಮಿಯ್ಯಂಗಾರ್, ನಿಜಲಿಂಗಪ್ಪ, ತಗಡೂರು ರಾಮಚಂದ್ರರಾವ್, ಹಂಜಿ ಶಿವಣ್ಣ ಇನ್ನು ಮುಂತಾದವರ ನಾಯಕತ್ವದಲ್ಲಿ ನಾವು

ಉಪವಾಸ ಸತ್ಯಾಗ್ರಹ ನಡೆಸಿ (ಜೈಲಿನಲ್ಲಿ) 'ಕ್ರಿಮಿನಲ್ ಕೈದಿ'ಯೆಂಬುದನ್ನು ತೆಗೆಸಿ ರಾಜಕೀಯ ಕೈದಿಗಳಾಗಿ ಪರಿವರ್ತಿಸಿಕೊಂಡೆವು.

ಅನಂತರ ದಿ|| ಮಹಾರಾಜರ ಮಗಳು ಗಾಯತ್ರಿದೇವಿ ಹುಟ್ಟಿದ ಸಂತೋಷಕ್ಕೆ ನಮ್ಮಲ್ಲಿನ 13 ಜನರನ್ನು 21-10-1946ರಂದು ಬಿಡುಗಡೆಮಾಡಿದರು. ಆಗ ನನ್ನನ್ನೂ ಬಿಡುಗಡೆಮಾಡಿದರು. ಇನ್ನು 6 ಜನ ಗೆಳೆಯರನ್ನು ಮೈಸೂರು ಜೈಲಿಗೆ ವರ್ಗಾಯಿಸಿ ಅವರಿಗೆ ತುಂಬಾ ತೊಂದರೆ ಕೊಟ್ಟರಂತೆ. ಅಲ್ಲಿ ಪ್ರತಿದಿನ 300 ಜನರಿಗೆ ಅಡಿಗೆ ಮಾಡುವುದು. ಕೊನೆಗೆ ಅವರಿಗೆ ಸ್ವಾತಂತ್ರ್ಯ ಬಂದ ತಕ್ಷಣ ಬಿಡುಗಡೆಯಾಯಿತು.

1947ರಲ್ಲಿ 'ಮೈಸೂರು ಚಲೋ ಚಳವಳಿ' ಚಳವಳಿ ಪ್ರಾರಂಭವಾಯಿತು. ಅದಕ್ಕೆ ನಾವೆಲ್ಲ ಹಳ್ಳಿಗಳಲ್ಲಿ ಸಂಚರಿಸಿ ನಿಧಿ ಎತ್ತಿ, ತಾಲ್ಲೂಕ್ ಕೇಂದ್ರ ಶಿಕಾರಿಪುರದಲ್ಲಿ ಚಳವಳಿ ಮಾಡಿದೆವು. ಆವಾಗ ಈ ಕೆಳಕಂಡವರನ್ನು ದಸ್ತಗಿರಿಮಾಡಲಾಯಿತು: ಕೆ. ವಿ. ನರಸಪ್ಪ, ಬಿ. ವೀರಪ್ಪ, ಮಹಾರುದ್ರಪ್ಪ, ಹೊಳೆಯಪ್ಪ, ಜಿ. ಶಿವಯ್ಯ, ಕೂಟಿ ಮಹದೇವಪ್ಪ, ಜೋರಪ್ಪ ಮೇಷ್ಟ್ರು, ಗುರುಬಸಪ್ಪ, ಭದ್ರಾಚಾರಿ, ಎಂ. ವೀರಬಸಪ್ಪ, ಆರ್. ಎಸ್. ಶಾಂತವೀರಪ್ಪ, ನಾನು ಮತ್ತು ಇನ್ನೂ ಅನೇಕರು. ನನ್ನ ನೆನಪಿಗೆ ಬಂದಿರುವ ಹೆಸರುಗಳನ್ನು ಕೊಟ್ಟಿರುವೆ. ಪುನಃ ಸಾಗರ ಕೋರ್ಟ್ ತೀರ್ಪು ಕೊಟ್ಟಿತು. ಪುನಃ ಕೆಲವರನ್ನು ಸಾಗರ್ ಜೈಲಿನಲ್ಲಿ, ಕೆಲವರನ್ನು ಶಿವಮೊಗ್ಗ ಜೈಲಿನಲ್ಲೂ ಸೆಂಟ್ರಲ್ ಜೈಲಿನಲ್ಲೂ ಕೆಲವರನ್ನು ಕೃಷ್ಣರಾಜಪುರ ಜೈಲಿನಲ್ಲೂ ಇಟ್ಟಿದ್ದು, ಸ್ವಾತಂತ್ರ್ಯಾನಂತರ ಎಲ್ಲರನ್ನು ಬಿಡುಗಡೆ ಮಾಡಿದರು.

ಅಂಗಡಿ ಹಾಲಪ್ಪ ಮತ್ತು ಸಾಹುಕಾರ್ ಬಸವಣ್ಣೆಪ್ಪನವರು ಕೊನೆಗೂ ಬ್ರಿಟಿಷ್ ಸರ್ಕಾರಕ್ಕೆ ಸಿಗಲೇ ಇಲ್ಲ. ಬಸವಣ್ಣೆಪ್ಪನವರು 1942ರಲ್ಲಿ ಊರು ಬಿಟ್ಟವರು ಪುನಃ ಊರಿಗೆ ಬರಲೇ ಇಲ್ಲ. ಅಂದರೆ ಬೇರೆ ಎಲ್ಲಿಯೋ ಮರಣಹೊಂದಿದರೆಂಬ ಸುದ್ದಿ ನಮಗೆ ತಲುಪಿತು.

ಈಗ ನಮ್ಮ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ನಮ್ಮನ್ನು ಸ್ವಾತಂತ್ರ್ಯ ಹೋರಾಟಗಾರರೆಂದು ಪರಿಗಣಿಸಿ ನಮಗೆ ವಿಶ್ರಾಂತಿವೇತನ ಕೊಡುತ್ತಿದೆ ಮತ್ತು ನಮಗೆಲ್ಲ ತಾಮ್ರಫಲಕ ಕೊಟ್ಟು ಸನ್ಮಾನಿಸಿದೆ. ಮರಣದಂಡನೆಗೆ ಗುರಿಯಾದವರ ಸವಿನೆನಪಿಗಾಗಿ ವೀರೇಂದ್ರ ಪಾಟೀಲ್ ಸರ್ಕಾರದವರು 1 ಲಕ್ಷದ 34 ಸಾವಿರ ರೂ.ಗಳ ವೆಚ್ಚದಲ್ಲಿ ಸ್ಮಾರಕ ಭವನವನ್ನು ಕಟ್ಟಿಸಿದ್ದಾರೆ.

ಜೈಲಿನಿಂದ ಬಿಡುಗಡೆಯಾದನಂತರ ನಮ್ಮ ವೃತ್ತಿ ವ್ಯವಸಾಯ ಮಾಡುತ್ತಾ ಬಂದೆವು. ಅನಂತರ ಸ್ವಲ್ಪ ರಾಜಕೀಯದಲ್ಲಿ ಮುಂದುವರೆದು ಶಿಕಾರಿಪುರ ಟಿ.ಡಿ.ಬಿ. ಅಧ್ಯಕ್ಷನಾಗಿ ಕೆಲಸ ಮಾಡಿದೆನು. ತಾಲ್ಲೂಕ್ ಕಾಂಗ್ರೆಸ್ (ಸಂಸ್ಥಾ) ಅಧ್ಯಕ್ಷನಾಗಿ ಕೆಲಸ ಮಾಡುತ್ತಾ ನನಗೆ ಸಾಧ್ಯವಾದಷ್ಟು ಸಮಾಜಸೇವೆ ಮಾಡುತ್ತಿದ್ದೇನೆ.

ವೈ.ಶಿ. 27

# ಎಚ್. ಲೋಕೇಶ್ವರಪ್ಪ

ಜನನ : 1922　　ಉದ್ಯೋಗ : ಅಧ್ಯಾಪಕ　　ವಿಳಾಸ : ನ್ಯಾಮತಿ, ತಾ॥ ಹೊನ್ನಾಳಿ

---



ನಮ್ಮ ತಾಯಿಯವರು ಶೀಘ್ರ ತೀರಿಕೊಂಡುದರಿಂದ ನಮ್ಮ ತಂದೆ ಸಂಗಪ್ಪನವರಿಗೆ ಗೃಹಸ್ಥಜೀವನದಲ್ಲಿ ಜುಗುಪ್ಸೆ ಬಂದು ಅವರು ಧ್ವಜಸತ್ಯಾಗ್ರಹದಲ್ಲಿ ಭಾಗವಹಿಸಿ 3 ತಿಂಗಳ ಶಿಕ್ಷೆ ಅನುಭವಿಸಿದ್ದರು. ಇದು ನಾನು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ ನಡೆದ ಘಟನೆ. ಅಲ್ಲದೆ ಇದರ ಹಿಂದೆಯೇ ಜಂಗಲ್ ಸತ್ಯಾಗ್ರಹವೂ ಆಯಿತು. ಇದರಲ್ಲಿ ಊರ ಮುಂದಾಳುಗಳಾದ ಎನ್. ಎಸ್. ಹಾಲಪ್ಪ ಹಾಗೂ ವಿ. ಎಂ. ಮಾಸ್ತಿ ಪಾಲುಗೊಂಡಿದ್ದರು. ನನ್ನ ತಂದೆ ಹಾಗೂ ಈ ಎಲ್ಲ ಮುಖಂಡರ ಉದಾಹರಣೆ, ಆಗಾಗ ಆಗುತ್ತಿದ್ದ ರಾಜ್ಯದ ಮುಖಂಡರ ಭಾಷಣಗಳಿಂದ ಪ್ರೇರಿತನಾಗಿ ನಾನು 1942ರ ಚಳವಳಿಯಲ್ಲಿ ಪಾಲುಗೊಂಡೆ. ಚಳವಳಿ ಶುರು ಆದಾಗ ಸತ್ಯಾಗ್ರಹ ಸಮಿತಿಯು ನಮ್ಮ ಗುಂಪನ್ನು ಹಳ್ಳಿಹಳ್ಳಿಗಳಲ್ಲಿ ಪ್ರಚಾರಕ್ಕೆಂದು ಕಳುಹಿಸಿದರು. ಈ ಕಾಲದಲ್ಲಿ ನಾವು ಟೆಲಿಗ್ರಾಂ ಸಂಪರ್ಕ ಇಲ್ಲದಂತೆ ಮಾಡಲು ತಂತಿ ಕತ್ತರಿಸಿ, ತಂತಿಯ ಸುರುಳಿ ಸಹಿತ ಬರುತ್ತಿರಲು ಪೋಲಿಸರು ನಮ್ಮನ್ನು ಬಂಧಿಸಿ, 20 ಮೈಲು ದೂರದ ಕಾಡಿನಲ್ಲಿ ಬಿಟ್ಟುಬಂದರು. ಅಲ್ಲಿಂದ ದಾರಿಯ ಎಲ್ಲ ಹಳ್ಳಿಗಳಲ್ಲಿ ಪ್ರಚಾರ ಮಾಡುತ್ತ ಊರಿಗೆ ಮರಳಿದೆವು.

ನ್ಯಾಮತಿ ಮಾಧ್ಯಮಿಕ ಶಾಲೆಯ ಸೈಕ್ಲೊಸ್ಟೈಲ್ ಯಂತ್ರ ಅಪಹರಿಸಿ, ಅದನ್ನು ಕರಪತ್ರ ತಯಾರಿಸಲು 1942 ಮತ್ತು 1947ರಲ್ಲಿ ಬಳಸಿದೆವು. ಈ ಕಾಲದಲ್ಲಿ ನಮ್ಮನ್ನು ಇನ್ನೊಮ್ಮೆ ಬಂಧಿಸಿ ಶಿಕಾರಿಪುರ ರಸ್ತೆಯ ಅರಣ್ಯದಲ್ಲಿ ಬಿಟ್ಟುಬಂದರು. ನಾವು ಬಸ್ಸಿನ ಟೈಯರುಗಳಿಗೆ ಮೊಳೆ ಹೊಡೆದು ಬಸ್ಸು ಚಲಿಸದಂತೆ ಮಾಡಿ ಶಿಕಾರಿಪುರದ ಕಡೆ ನಡೆದು ಬಂದೆವು. ದಾರಿಯಲ್ಲಿ ಕಾಗಿನೆಲ್ಲಿ ಎಂಬ ಗ್ರಾಮಕ್ಕೆ ಮಿಲಿಟರಿ ಬರಲಿದೆಯೆಂದು ತಿಳಿದು, ಆ ಊರಿಗೆ ಸಮೀಪದ ಆಯಕಟ್ಟಿನ ಸೇತುವೆ ನಾಶಮಾಡಿ ಸಂಚಾರಸಂಪರ್ಕ ಇಲ್ಲದಂತಾಗಿಸಿ ಈಸೂರಿನ ಕಡೆ ನಡೆದೆವು. ಈಸೂರಲ್ಲೂ ಸಭೆ ನಡೆಸಿದೆವು.

ಭದ್ರಾವತಿಯಲ್ಲಿ 144ನೆಯ ಸೆಕ್ಷನ್ ಮುರಿಯಲು ಜಿಲ್ಲಾ ಸಮಿತಿ ಆದೇಶ ನೀಡಿದಂತೆ ಮಹಿಳಾ ಸತ್ಯಾಗ್ರಹಿ ಗೌರಮ್ಮ ಎನ್. ಎಸ್. ಹಾಲಪ್ಪನವರೊಂದಿಗೆ ಭದ್ರಾವತಿಗೆ ಹೋಗಿ ಅವರ ಜೊತೆ ಕಾನೂನು ಮುರಿದು ನಾವು ದಸ್ತಗಿರಿ ಆದೆವು

(15-9-1942). ಮುಂದೆ ಶಿವಮೊಗ್ಗ, ಚಿಕ್ಕಮಗಳೂರು ಜೈಲುಗಳಲ್ಲಿ ಇದ್ದು 19-5-1943ರಲ್ಲಿ ಬಿಡುಗಡೆ ಆದೆ. ಜೈಲಿನಿಂದ ಹೊರಬಂದಮೇಲೆ ಹೊನ್ನಾಳಿ ತಾ|| ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿ ಖಾದಿ ಪ್ರಚಾರದ ಚಟುವಟಿಕೆ ನಡೆಸಿದೆ. ಖಾದಿ ಉತ್ಪಾದನೆಯಲ್ಲಿ ಪೂರ್ಣ ಅನುಭವ ಪಡೆಯಲು 1946ರಲ್ಲಿ ಬದನವಾಳ್ ಕೇಂದ್ರದಲ್ಲಿ ತರಬೇತಿಪಡೆದು, ಶಿವಮೊಗ್ಗ ಡಿ|| ಬೋ|| ಖಾದಿ ಕೇಂದ್ರದಲ್ಲಿ ಪ್ರಚಾರಕನಾಗಿ ಇದ್ದೆ. ಇದೇ ಕಾಲಕ್ಕೆ ಕಾಂಗ್ರೆಸ್‌ನ ಕೆಲಸ ಕೂಡ ಮಾಡುತ್ತಿದ್ದೆ.

1947ರಲ್ಲಿ ಹೊನ್ನಾಳಿ ತಾ|| ಕಚೇರಿಯ ಮೇಲೆ ಧ್ವಜ ಹಚ್ಚಬೇಕೆಂದು ನಾನು ಅಧಿಕೃತವಾಗಿ ಪ್ರಚಾರ ಮಾಡುತ್ತ, 13-9-1947ರಂದು ಧ್ವಜ ಹಚ್ಚಲು ಸಹಸ್ರಾರು ಜನ ಸೇರಿದರು. ಪ್ರಾ||ಶಾ|| ಶಿಕ್ಷಕರಾದ ಮಲ್ಲಿಗೆನಹಳ್ಳಿಯ ಎಂ. ನಂಜಪ್ಪಮಾಸ್ತರರು ಈ ಕೆಲಸ ನಿರ್ವಹಿಸಲು ಸಿದ್ಧರಾದರು. ಆಗ ಅಲ್ಲಿ ಅಮಾನುಷವಾಗಿ ಲಾಠೀಚಾರ್ಜ್ ಆಗಿ ಮನೆಯೊಳಗಿದ್ದವರನ್ನೂ ಹೊರಗೆಳೆದು ಹೊಡೆದರು. ಪ್ರೇಕ್ಷಕರಾಗಿದ್ದ ಸೈಕಲ್ ಸವಾರರಿಗೂ ಏಟು ಬಿತ್ತು. ಆಗಿನ ಡಿ|| ಬೋ|| ಅಧ್ಯಕ್ಷರೇ ಲಾಠೀಚಾರ್ಜ ಮತ್ತು ಗೋಲೀಬಾರಿಗೆ ಪ್ರೋತ್ಸಾಹಿಸಿದವರು. ಆಗ ಬಂಧಿತನಾದ ನಾನು ಬಿಡುಗಡೆಯಾಗಿ ಬಂದನಂತರ ಆರು ತಿಂಗಳ ಕಾಲ ಖಾದೀ ಕೇಂದ್ರದಲ್ಲಿ ನೌಕರಿಯನ್ನು ನಿರ್ವಹಿಸಿದರೂ ಅವರು ನನಗೆ ವೇತನ ಕೊಡಲಿಲ್ಲ ಮತ್ತು ಕಡೆಗೆ ನೌಕರಿಯಿಂದಲೂ ಹೊರದೂಡಿದರು. ಇವರೇ ಮುಂದೆ ಮೈಸೂರಿನ ಕಾಂಗ್ರೆಸ್ ಸರಕಾರದಲ್ಲಿ ಡೆ|| ಮಂತ್ರಿ ಕೂಡ ಆದರು !

ಈಗ ನಾನು ನೂಲುವ ಮತ್ತು ನೆಯ್ಗೆಯ ಶಿಕ್ಷಕನಾಗಿ ಗಾಂಧೀಜೀ ವಿಚಾರಗಳ ಕಾರ್ಯಾಚರಣೆಗೆ ದುಡಿಯುತ್ತಿದ್ದೇನೆ. ಹರಿಜನರೊಂದಿಗೆ ಸಹಭೋಜನ ಏರ್ಪಡಿಸಿದ್ದೇನೆ. ನಾನು ಹುಟ್ಟಿದ್ದು ಆಗಸ್ಟ್ 15ಕ್ಕೆ. ನನಗೆ ಸರಿಯಾಗಿ 25 ವರ್ಷ ತುಂಬಿದ ದಿನವೇ ದೇಶಕ್ಕೆ ಸ್ವಾತಂತ್ರ್ಯ ಬಂದುದು ಹೆಮ್ಮೆಯ ವಿಷಯ.

## ಮೈ.ಶಿ. 28 | ಎಸ್. ಲಕ್ಷ್ಮೀಪತಿ

ಜನನ : 1927 ಉದ್ಯೋಗ : ಅಧ್ಯಾಪಕ ವಿಳಾಸ : ಸರಕಾರಿ ಪ್ರೌಢಶಾಲೆ, ಶಿವಮೊಗ್ಗ

---

1947ರಲ್ಲಿ ವರ್ತಮಾನ ಪತ್ರಿಕೆಗಳನ್ನು ಓದಿ ಹಾಗು ಕಡಿದಾಳ ಮಂಜಪ್ಪನವರ ಹೇಳಿಕೆಗಳಿಂದ ಸ್ಫೂರ್ತಿಪಡೆದು, ಶಿವಮೊಗ್ಗ ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಓದುತ್ತಿದ್ದ ನಾನು ಚಳವಳಿ ಸೇರಿದೆ. ಎಲ್ಲ ಪ್ರಾಂತಗಳು ಭಾರತ ಒಕ್ಕೂಟಕ್ಕೆ ಸೇರಿ ಮೈಸೂರು ಒಂದೇ ಸ್ವಾತಂತ್ರ್ಯ ಇಲ್ಲದೆ ಇರುವುದು ದುಃಖಕರ ಸಂಗತಿಯಾಗಿತ್ತು. ಆಗ



ಶಾಲಾ ಕಾಲೇಜುಗಳು ಮುಚ್ಚಿದ್ದು, ರೈಲುಗಳ ಓಡಾಟ ಕೂಡ ನಿಂತು ಎಲ್ಲೆಡೆ ಮುಷ್ಕರ, ಪ್ರತಿಭಟನೆ ನಡೆದಿತ್ತು. ನಾನು ನನ್ನ ಊರಾದ ಹೊನ್ನಾಳಿ ತಾ॥ ಸುಂಕದಕಟ್ಟೆಗೆ ಹೋಗಿ ಚಳವಳಿಯಲ್ಲಿ ಸೇರಿದೆ. ಊರ ಸ್ನೇಹಿತರಾದ ಎಸ್. ಜಿ. ಬಾಲಚಂದ್ರಪ್ಪ, ಎಸ್. ಜಿ. ಮಂಜಪ್ಪ, ಮಲ್ಲೂರು ರಂಗಪ್ಪ, ಕರಿಸಿದ್ದಪ್ಪ, ಸಿದ್ದಮಲ್ಲಪ್ಪ, ಎಸ್. ತಿಮ್ಮಪ್ಪ ಮುಂತಾದ ಅನೇಕ ಸ್ನೇಹಿತರು ಈ ಚಳವಳಿಯಲ್ಲಿ ಪಾಲುಗೊಂಡಿದ್ದರು. ಅರಬಗಟ್ಟೆ, ಕಡದಕಟ್ಟೆ, ಸಾಸುವೆಹಳ್ಳಿ, ಕೋಟೆಹಾಳು ಮತ್ತು ಬೇಲೂರು ಮುಂತಾದ ಊರುಗಳಿಗೆ ಹೋಗಿ ಜನಜಾಗೃತಿಗೆ ಭಾಷಣ ಮಾಡಿದೆವು. ಬೇಲೂರಿನಲ್ಲಿ ಸಾರಾಯಿ ಕುಡಿಯುತ್ತಿರುವ ಜನರಿಗೆ ಹಾಗೆ ಮಾಡಬಾರದೆಂದು ತಿಳಿಸಿ ಹೇಳಿದೆವಲ್ಲದೆ, ಅಲ್ಲಿನ ಸಾರಾಯಿ ಮಡಿಕೆ ಒಡೆದು, ಮಾರಾಟದ ಗುಡಿಸಲಿಗೆ ಬೆಂಕಿ ಇಟ್ಟೆವು. ಅಲ್ಲಿ ನನ್ನನ್ನು ಮತ್ತು ನನ್ನ ಸ್ನೇಹಿತರನ್ನು ಬಂಧಿಸಿ ಹೊನ್ನಾಳಿ ಲಾಕಪ್‌ಗೆ ಒಯ್ದರು. ಅದೇ ದಿನ ಹೊನ್ನಾಳಿ ತಾಲೂಕು ಕಚೇರಿ ಸುತ್ತ ಸುಮಾರು 20,000 ಜನ ಸೇರಿ ಕಚೇರಿ ಕಟ್ಟಡದ ಮೇಲೆ ರಾಷ್ಟ್ರಧ್ವಜ ಹಾರಿಸಿದರು. ಅಲ್ಲಿ ವಿಪರೀತ ಲಾಠೀಚಾರ್ಜು, ಗೋಲೀಬಾರು ಆಯಿತು. ಅನೇಕರ ತಲೆ ಒಡೆದು, ಕೆಲವರ ಕೈಕಾಲು ಮುರಿದವು. ಮುಂದೆ ನಮ್ಮನ್ನು ಶಿವಮೊಗ್ಗ ಜೈಲಿಗೆ ಒಯ್ದರು. 9-10-1947ರಂದು ಬಿಡುಗಡೆ ಆಯಿತು.

1942ರಲ್ಲಿ ನಮ್ಮ ಭಾಗದಿಂದ ಜೈಲಿಗೆ ಹೋದ ಕೆಲವರ ಹೆಸರು ತಿಳಿದಿದೆ: ಸರಗಂಟೆ ಶೇಖರಪ್ಪ (ನ್ಯಾಮತಿ), ಎಸ್. ಜಿ. ಹಾಲಪ್ಪ (ಸುಂಕದಕಟ್ಟೆ), ಎಂ. ಎಚ್. ರಂಗಪ್ಪ (ಬೇಲಿಮಲ್ಲೂರು), ಸಿ. ಈಶ್ವರಪ್ಪ (ಬೆನಕನಹಳ್ಳಿ), ಬಸವಣ್ಣಪ್ಪ (ನ್ಯಾಮತಿ), ಕತ್ತಲಗೆರೆ ರುದ್ರಪ್ಪ (ಕತ್ತಲಗೆರೆ, ತಾ॥ ಚನ್ನಗಿರಿ).

ಮೈ.ಶಿ. 29

## ಬಿ. ಸಂಗಪ್ಪ ನಾಯ್ಕ

ಜನನ : 1921 ಉದ್ಯೋಗ : ಕೃಷಿ ವಿಳಾಸ : ಬೆನ್ನೂರು, ಸೊರಬ

---

ಹಿಂದಿನ ದಾಖಲೆಗಳಲ್ಲಿ ನನ್ನ ಹೆಸರು ಟಿ. ವಿ. ಸಂಗಪ್ಪ ನಾಯ್ಕ ಎಂದಿದೆ. ಈಗ ನಾನು ಬೆನ್ನೂರಲ್ಲಿ ದತ್ತಕನಾಗಿ ಹೋಗಿರುವುದರಿಂದ ನನ್ನ ಹೆಸರು ಮೇಲಿನಂತೆ ಆಗಿದೆ. ನಾನು 1935-36ರಲ್ಲಿ ಧಾರವಾಡ ಜಿ॥ ಹಂಸಭಾವಿಯಲ್ಲಿ ಓದುತ್ತಿದ್ದಾಗ, ನಮ್ಮ ಶಾಲೆಗೆ



ಅಲ್ಲಿ ರಾಷ್ಟ್ರೀಯ ವೃತ್ತಿಯ ಜನರಾದ ಕೆ. ಎಫ್. ಪಾಟೀಲ್ ಮುಂತಾದವರು ಆಗಾಗ ಬರುತ್ತಿದ್ದರು. ಒಮ್ಮೆ ಪಾಟೀಲರು "ಈಗಿನ ರಾಷ್ಟ್ರೀಯ ನಾಯಕರಲ್ಲಿ ಯಾರನ್ನು ಹೆಚ್ಚು ಪ್ರೀತಿಸುತ್ತೀರಿ?" ಎಂದಾಗ ನಾನು ಸುಭಾಸಚಂದ್ರ ಭೋಸರ ಹೆಸರು ಹೇಳಲು ವರ್ಗದಲ್ಲಿ ಉಳಿದವರೂ ಅದನ್ನೇ ಅನುಮೋದಿಸಿದರು. ಭೋಸರ ವಿಷಯ ಒಂದು ಪುಸ್ತಕ ಬರೆಯಲು ಅವರನ್ನು ಒತ್ತಾಯಿಸಿದೆವು. ಮುಂದೆ ಕೆಲಕಾಲದಲ್ಲಿ ತಾವು ಸುಭಾಸರ ಬಗ್ಗೆ ಬರೆದ ಪುಸ್ತಕ ತಂದು ತೋರಿಸಿದರು. ಶಾಲೆಯ ಎಲ್ಲ ಬಾಲಕರೂ ಆ ಪುಸ್ತಕವನ್ನು ಪ್ರೀತಿಯಿಂದ ಓದಿದರು. ಆ ಪುಸ್ತಕದ ಜೊತೆ ಶಾಲೆಯಲ್ಲಿನ ವಾತಾವರಣವೂ ನನ್ನಲ್ಲಿ ರಾಷ್ಟ್ರೀಯವೃತ್ತಿ ಬೆಳೆಯಲು ಕಾರಣ. 1937ರಲ್ಲಿ ನಾವು ಆ ಭಾಗದಲ್ಲಿ ಮುಂಬೈ ವಿಧಾನಸಭೆಗೆ ನಡೆದ ಚುನಾವಣೆಯ ಕಾಲಕ್ಕೆ, ನಾಗಮ್ಮ ಪಾಟೀಲರ ಪರ ಕಾಂಗ್ರೆಸ್ಸಿನ ಪ್ರಚಾರಕ್ಕಾಗಿ ದುಡಿದದ್ದಿದೆ. ಅವರ ವಿಜಯದಿಂದ ನಮಗೆ ಅಪಾರ ಹರ್ಷ. ಇದೇ ಕಾಲಕ್ಕೆ ಖಾದಿ ಸಿದ್ದಲಿಂಗಪ್ಪನವರು ಅಲ್ಲಿ ಖಾದಿ ಮಾರಾಟಕ್ಕಾಗಿ ಬರುತ್ತಿದ್ದು ನಾವು ಅವರಿಂದ ಖಾದಿ ಕೊಂಡು ತೊಡಲು ಆರಂಭಿಸಿದ್ದೆವು. ಮುಂದೆ 1942ರಲ್ಲಿ ಧಾರವಾಡದಲ್ಲಿ ಓದುತ್ತಿದ್ದ ನಾನು, ಅಲ್ಲಿಂದ ಶಿಕ್ಷಣ ತ್ಯಜಿಸಿ ನಮ್ಮ ಊರಿಗೆ ಬಂದು ತಾಲೂಕಿನಲ್ಲಿ ಚಳವಳಿಯಲ್ಲಿ ಪಾಲುಗೊಂಡು, 1-11-1942 ರಿಂದ 9-12-1943ರ ವರೆಗೆ ಬಂಧನದಲ್ಲಿ ಇದ್ದೆ. ಮುಂದೆ 1947ರಲ್ಲೂ ಚಳವಳಿಯಲ್ಲಿ ಪಾಲುಗೊಂಡೆ.

ನಮ್ಮ ತಾಲೂಕಿನಲ್ಲಿ ಚಳವಳಿಗೆ ಮೂಲಪುರುಷರು, ನನಗೆ ತಿಳಿದಮಟ್ಟಿಗೆ ಬೊಮ್ಮನಹಳ್ಳಿಯ ವಾಸಿ ದಿ|| ಸಂಗಪ್ಪಗೌಡರು. ಬೆಳಗಾಂವಿಯಲ್ಲಿ ಓದುತ್ತಿದ್ದ ಅವರು 1925-26ರಲ್ಲೇ ಮೆಟ್ರಿಕ್ ಮುಗಿಸಿ ಊರಿಗೆ ಬಂದು ಖಾದಿ ಬಟ್ಟೆ ತೊಟ್ಟು ಸಾರುವುದು, ಬಯಲಾಟಗಳು ನಡೆದಾಗ ಸ್ವಾತಂತ್ರ್ಯದ ಬಗ್ಗೆ ಭಾಷಣಗಳನ್ನು ಮಾಡುವುದು, ಹರಿಜನೋದ್ಧಾರದ ಬಗ್ಗೆ ತಿಳಿಸಿಹೇಳುವುದು, ಬಡ್ಡಿ ಖಾತೆ ಸಾಹುಕಾರರನ್ನು ವಿರೋಧಿಸುವುದು, ಬಾಲವಿವಾಹಗಳ ಪ್ರತಿಭಟನೆ, ವಿಧವಾಪುನರ್ವಿವಾಹದ ಪುರಸ್ಕಾರ ಇವನ್ನೆಲ್ಲ ನಡೆಸಿದ್ದು ಕಂಡುಬರುತ್ತದೆ. ಬೆಳಗಾಂವಿ ಕಾಂಗ್ರೆಸ್ ಅಧಿವೇಶನದಿಂದಲೇ ಅವರಲ್ಲಿ ಈ ವಿಚಾರ ಜಾಗೃತಿ ಆಗಿರಬೇಕು. ಲಿಂಗಾಯತರಲ್ಲಿ ಈ ಭಾಗದಲ್ಲಿ 3-4 ವಿಧವಾ ವಿವಾಹಗಳು ಆಗಲು ಅವರೇ ಕಾರಣರಾಗಿದ್ದು ಸ್ವತಃ ಅವರೂ ಒಬ್ಬ ಬಾಲವಿಧವೆಯ ಕೈಹಿಡಿದಿದ್ದರು. ಸಂಪ್ರದಾಯಸ್ಥರನೇಕರು ಅವರ ಬಗ್ಗೆ ಮೂಗುಮುರಿದರೂ ಅವರಿಂದ ಖಾದಿ ಹಾಗೂ ಗಾಂಧೀ ವಿಚಾರಗಳು ಈ ಭಾಗದಲ್ಲಿ ಹರಡಲು ಸಾಧ್ಯ ಆಯಿತು.

1931-32ರಲ್ಲಿ ಉತ್ತರ ಕನ್ನಡದಲ್ಲಿ ನಡೆದ ಕರನಿರಾಕರಣದ ಕಾಲಕ್ಕೆ ನೆರೆಯ

ಸಿದ್ದಾಪುರ ತಾ||ನ ಚಳವಳಿಗೆ ಸಂಬಂಧಿಸಿ ಟಿ. ಆರ್. ನೇಸ್ವಿ, ಕೆ. ಎ. ವೆಂಕಟರಾಮಯ್ಯ, ಕೆ. ಎಫ್. ಪಾಟೀಲ್ ಮತ್ತು ಶಿಕಾರಿಪುರದ ಮರಿಸ್ವಾಮಿ ಹಿರೇಮಠ ಇವರು ಬಂದು ಹೋಗುತ್ತಿದ್ದರು. ಗುಪ್ತಕೇಂದ್ರಗಳಲ್ಲಿ ನಮ್ಮ ತಾ||ನ ಮಾಗಡಿ ಒಂದಾಗಿದ್ದು ಇಲ್ಲಿಂದಲೇ ಮರಿಸ್ವಾಮಿ ಹಿರೇಮಠರ ತಾಯಿ, ನೇಸ್ವಿಯವರ ತಾಯಿ ಮತ್ತು ಚನ್ನವೀರಪ್ಪ ಗೌಡರ ತಾಯಿ ಇವರುಗಳು ಉತ್ತರ ಕನ್ನಡಕ್ಕೆ ಹೋಗಿ ಚಳವಳಿಯಲ್ಲಿ ಭಾಗವಹಿಸಿ ಆರಾರು ತಿಂಗಳು ಶಿಕ್ಷೆ ಅನುಭವಿಸಿದರು. ಚನ್ನವೀರಪ್ಪಗೌಡರ ತಂದೆಯವರು, ತಮ್ಮ ಐನತ್ತು ವರ್ಷದ ಪತ್ನಿ ಜೈಲಿಗೆ ಹೋದ ವಿಚಾರ ಕೇಳಿ ಬುದ್ಧಿ ಭ್ರಮೆಹೊಂದಿ ತೀರಿಕೊಂಡರು. ಅಲ್ಲದೆ ಮಳಲಗದ್ದೆ ಬಸವಣ್ಣಪ್ಪಗೌಡರ ಸಹೋದರ ಚನ್ನಪ್ಪಗೌಡರೂ ಈ ಚಳವಳಿಯಲ್ಲಿ ಭಾಗವಹಿಸಿ 6 ತಿಂಗಳು ಜೈಲುವಾಸಿಗಳಾಗಿದ್ದರು.

1937ರಲ್ಲಿ ಟಿ. ಸಿದ್ದಲಿಂಗಯ್ಯನವರು ಅಧ್ಯಕ್ಷರಾಗಿ ಮೈಸೂರು ಕಾಂಗ್ರೆಸ್ ಸ್ಥಾಪನೆಗೊಂಡನಂತರ ನಮ್ಮ ಭಾಗದಲ್ಲೂ ಚಟುವಟಿಕೆಗಳು ಚುರುಕಾಗಿ ಆದವು. 1939ರಲ್ಲಿ ಅರಣ್ಯಸತ್ಯಾಗ್ರಹ ನಡೆದಾಗ ಕೋಡಿಕೊಪ್ಪದ ಕೆ. ಪಿ. ರುದ್ರಪ್ಪಗೌಡರು ಬೆಳಗಾಂವಿಯಲ್ಲಿ ಲಾ ಓದುತ್ತಿದ್ದವರು ಶಿಕ್ಷಣ ನಿಲ್ಲಿಸಿ ಚಳವಳಿಯಲ್ಲಿ ಧುಮುಕಿದರು. (ಇದಕ್ಕೂ ಹಿಂದೆ ಇವರು ಹಂಸಭಾವಿಯಲ್ಲಿ ಕೆಲವು ಕಾಲ ಇತಿಹಾಸ ಅಧ್ಯಾಪಕರಾಗಿಯೂ ಇದ್ದರಂತೆ). ಇದೇ ಕಾಲಕ್ಕೆ ಮೈಲಾರ ಮಹಾದೇವಪ್ಪನವರೂ ನಮ್ಮ ತಾಲೂಕಿಗೆ ಬಂದು ಸತ್ಯಾಗ್ರಹದ ಯಶಸ್ಸಿಗೆ ಶ್ರಮಿಸಿದರು. ಬೆಟ್ಟದಕೂರ್ಲಿ ಬೂದಿ ಬಸಪ್ಪ ಗೌಡರು ಹಾಗೂ ಹಳೇನೆಲ್ಲಿಕೊಪ್ಪದ ವೀರಪ್ಪಗೌಡರು ಮೈಲಾರರ ಸ್ನೇಹಿತರಾಗಿದ್ದರು. ಬೆಟ್ಟದಕೂರ್ಲಿಯನ್ನು ಕೇಂದ್ರವಾಗಿಟ್ಟುಕೊಂಡು ಚಳವಳಿ ಸಂಘಟನೆಯ ಯತ್ನ ಆಯಿತು. ಜಡೆ, ಆನವಟ್ಟಿ ಹೋಬಳಿಗಳಲ್ಲಿ ಕೆ. ಪಿ. ರುದ್ರಪ್ಪಗೌಡರು ಜನ ಜಾಗೃತಿಗೆ ಶ್ರಮಿಸಿದ್ದರು. ಅಲ್ಲದೆ ಈ ಭಾಗದಲ್ಲಿ ನೇಸ್ವಿ, ಹಳ್ಳಿಕೇರಿ ಗುದ್ಲೆಪ್ಪ ಮತ್ತು ದಿ|| ಎಚ್. ಸಿದ್ದಯ್ಯನವರ ಗಮನವೂ ಇತ್ತು. ಮಳಲಗದ್ದೆ ಬಸವಣ್ಣೆಪ್ಪಗೌಡರ ಮನೆತನ 1931-32ರ ಸಿದ್ದಾಪುರ ಚಳವಳಿಯ ಕಾಲದಿಂದ ಚಳವಳಿಯಲ್ಲಿ ಇದ್ದುದು. ಕೋಡಿಕೊಪ್ಪ, ತೆಲಗುಂದ, ಸಾಲಿಗೆ, ಜಡೆ, ಮೂಡಿ, ನೆಲ್ಲಿಕೊಪ್ಪ, ದಡ್ಡಿಕೊಪ್ಪ, ಎಲಿವಾಳ, ಕಮನವಳ್ಳಿ, ಎಣ್ಣೇಕೊಪ್ಪ, ಬೆಟ್ಟದಕೂರ್ಲಿ, ಹಳೇ ನೆಲ್ಲಿಕೊಪ್ಪ, ಚಿಕ್ಕಿಡಗೋಡು ಗ್ರಾಮಗಳಿಂದ ಅರಣ್ಯಸತ್ಯಾಗ್ರಹದಲ್ಲಿ ಪಾಲುಗೊಂಡರಲ್ಲದೆ ಅನೇಕರು ಛಟಿಕೆ ಏಟು, ಬೂಟಿನ ಒದಿಕೆ, ಲಾಠೀ ಏಟಿಗೆ ಗುರಿಯಾದರು. ಕೆಲವು ಸತ್ಯಾಗ್ರಹಿಗಳು ಇಂಥ ಹಿಂಸಾಚಾರ ತಾಳಲಾರದೆ ಕ್ಷಮೆ ಕೇಳಿ ಮನೆಗೆ ಬಂದರು. ಆದರೂ ಅನೇಕರು ಕಡೆ ತನಕ ಧೀರತನದಿಂದ, ಎಲ್ಲ ಹಿಂಸಾಚಾರವನ್ನೂ ಸಹಿಸಿ, ಜೈಲುವಾಸ ಅನುಭವಿಸಿದರು. ಅವರೆಂದರೆ, ಬೂದಿ ಬಸಪ್ಪಗೌಡ್ರು, ಹಳೇನೆಲ್ಲಿಕೊಪ್ಪದ ವೀರಪ್ಪಗೌಡ್ರು, ಎಲಿವಾಳದ ಕೊಟ್ರಪ್ಪನವರು, ದಿ|| ಗೊಗ್ಗನಾಳ ರುದ್ರಪ್ಪನವರು (ಕಮನವಳ್ಳಿ). ಎಚ್. ಮಲ್ಲಪ್ಪ ಗೌಡರು (ಸಾಲಿಗೆ), ಟಿ.ಕೆ. ಮಲ್ಲಪ್ಪಗೌಡರು (ತೆಲಗುಂದ), ಬಸವಣ್ಣಪ್ಪ ಸಜ್ಜನಶೆಟ್ಟರು

(ದಡ್ಡಿಕೊಪ್ಪ), ಮರ್ಶಿ ಬಸವಣ್ಣಪ್ಪ (ನೆಲ್ಲಿಕೊಪ್ಪ), ಮಲ್ಲಪ್ಪ ಕೂಸನೂರ (ದಡ್ಡಿಕೊಪ್ಪ), ಡಿ. ಕೆ. ಮಲ್ಲಿಕಾರ್ಜುನಪ್ಪ (ದಡ್ಡಿಕೊಪ್ಪ), ತಳವಾರ ಗುಡ್ಡಪ್ಪ, ಚನ್ನಬಸಪ್ಪ ಗೌಡ್ರು, ಎಡವಟ್ಟೆ ಮಹಾದೇವಪ್ಪ, ಗುಡ್ಲೆಪ್ಪ ಹಿತ್ತಲಮನಿ (ನಾಲ್ವರೂ ನೆಲ್ಲಿಕೊಪ್ಪದವರು), ಎಂ. ಕೆ. ವೀರಪ್ಪಗೌಡ (ಮಳಲಗದ್ದೆ), ದಿ|| ಎ. ಚನ್ನಬಸಪ್ಪ (ಅಗಸನಹಳ್ಳಿ), ದಿ|| ಗುಡ್ಡಪ್ಪಮಾಸ್ತರ (ಮೂಡಿ-ನೆಲ್ಲಿಕೊಪ್ಪ), ದಿ|| ಮಹಾದೇವಪ್ಪ ಬಣಕಾರ (ನೆಲ್ಲಿಕೊಪ್ಪ). ದಿ|| ಕಡ್ಲೆಪ್ಪ (ಮೂಡಿ-ನೆಲ್ಲಿಕೊಪ್ಪ), ದಿ|| ಚನ್ನಬಸಪ್ಪಗೌಡ್ರು (ಮೂಡಿ-ನೆಲ್ಲಿಕೊಪ್ಪ), ದಿ|| ಎಲ್. ಎಸ್. ಚಂದ್ರಪ್ಪ (ಜಡೆ), ದಿ|| ಬಂಗಾರ್‍ಯಪ್ಪ ಸಿರಪಟ್ಟಿ (ಜಡೆ). ದಿ|| ರಂಗಪ್ಪ ನಾಯ್ಕ (ಭಾರಂಗಿ), ಮಲ್ಲಿಕಾರ್ಜುನಪ್ಪ (ಹುರುಳಿ), ಕುಸನೂರು ಮಲ್ಲಪ್ಪ (ಮೂಡಿ), ಗಿಂಡಿ ಸೋಮನಗೌಡ, ಸೂರಣಗಿ ಬಂಗಾರ್‍ಯಪ್ಪ ಗೌಡ, ಎಂ. ವಿ. ರಾಮಚಂದ್ರ ಭಟ್ (ಬನದಕೊಪ್ಪ). ಇವರೆಲ್ಲರೂ 1939ರಲ್ಲಿ ಜಂಗಲ್ ಸತ್ಯಾಗ್ರಹದಿಂದ ವಿವಿಧ ಅವಧಿಯ ಶಿಕ್ಷೆಯನ್ನು ಅನುಭವಿಸಿದ ಸೊರಬ ತಾಲೂಕಿನವರು.

ಈ ನಡುವೆ 1937ರ ಹರಿಪುರ ಕಾಂಗ್ರೆಸ್ಸಿಗೆ ಆನವಟ್ಟಿ ಸರ್ಕಾರಿ ಆಸ್ಪತ್ರೆಯ ವೈದ್ಯರಾದ ಡಾ|| ಶ್ರೀನಿವಾಸ ಅಯ್ಯರರು ತೆರಳಿದ್ದು ಅವರ ಜೊತೆ ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪ ಗೌಡರೂ ತೆರಳಿದ್ದರು. ಅದರಿಂದ ಪ್ರಭಾವಿತರಾದ ಮಲ್ಲಿಕಾರ್ಜುನಪ್ಪ ಗೌಡರು 1939ರ ಜಂಗಲ್ ಸತ್ಯಾಗ್ರಹದಲ್ಲಿ ಹಿನ್ನೆಲೆಯಲ್ಲಿ ದುಡಿದವರು. 1942ರ ಚಳವಳಿಗೆ ಇವರೇ ತಾಲೂಕಿಗೆ ನಾಯಕರೆನ್ನಬೇಕು. 1942ರಲ್ಲಿ ಊರಿಗೆ ಬಂದ ನಾನು 1939ರ ಸತ್ಯಾಗ್ರಹಿಗಳಾದ ಬೂದಿ ಬಸಪ್ಪಗೌಡರು, ಹಳೇನೆಲ್ಲಿಕೊಪ್ಪದ ವೀರಪ್ಪ ಗೌಡರನ್ನು ಕಂಡು ಮುಂದಿನ ಚಟುವಟಿಕೆ ಬಗ್ಗೆ ವಿಚಾರವಿನಿಮಯ ಮಾಡಿದೆ. ಹಿರೇಚೌಟಿ ಶಿವಾಜಿಗೌಡರು ಈ ಚಳವಳಿಯಲ್ಲಿ ಪ್ರಮುಖರು. ಇವರೆಲ್ಲರ ನೆರವಿನಿಂದ ಬೇರೆಬೇರೆ ಕಡೆ ಸಭೆ ನಡೆಸಿದೆ. ಆನವಟ್ಟಿ ಮಾಧ್ಯಮಿಕ ಶಾಲೆ ಮುಚ್ಚಿಸಲು ಯತ್ನ ನಡೆಸಿದೆ. ಆ ಊರಲ್ಲಿ ಮಲ್ಲಿಕಾರ್ಜುನಪ್ಪ ಗೌಡರ ಅಧ್ಯಕ್ಷತೆಯಲ್ಲಿ ಸಂತೆ ಮೈದಾನದಲ್ಲಿ ಸಭೆ ಸೇರಿಸಿ ನಾನೂ ಆಗಿನ ವಿದ್ಯಾರ್ಥಿ ಡಿ. ಸಿ. ಒಡೆಯರ್‌ರೂ ಭಾಷಣ ಮಾಡಿದೆವು. ಆಗಲೇ ನಾನು ಮೊದಲು ಭಾಷಣ ಮಾಡಿದ್ದು, ಅಂದಿನಿಂದಲೇ ನನಗೆ ಧೈರ್ಯಬಂತು. ಮುಂದೆ ನಾಲ್ಕಾರು ದಿನಗಳಲ್ಲಿ ಹಳೇ ನೆಲ್ಲಿಕೊಪ್ಪದ ವೀರಪ್ಪಗೌಡ್ರು, ಎಲಿವಾಳದ ಕೊಟ್ರಪ್ಪನವರು ಹಾಗೂ ದ್ಯಾವನಹಳ್ಳಿ ವಿರೂಪಾಕ್ಷಗೌಡ ದೇಸಾಯಿ ಅವರನ್ನು ಬಂಧಿಸಲಾಯಿತು.

ಪಟೇಲರ ರಾಜೀನಾಮೆಯ ಕಾರ್ಯಕ್ರಮ ಇಟ್ಟುಕೊಂಡು ನಾವು ಯತ್ನಿಸಲು ತಲೂರಿನ ಟಿ. ವಿ. ಪುಟ್ಟಪ್ಪನಾಯ್ಕರು ಮೊದಲು ಪಟೇಲಿಕೆಗೆ ರಾಜೀನಾಮೆ ಕೊಟ್ಟರು. ಅವರು ಚಳವಳಿಯ ಸಂಘಟನೆಗೆ ನಮ್ಮ ಜೊತೆ ಸೇರಿದರು. ಇದು ಬಹಳ ಹುಮ್ಮಸ್ಸು ತಂದ ಘಟನೆ. ಆಗಿನಿಂದ ಚಿಕ್ಕವನೆಂದು ಕಡೆಗಾಣಿಸಿದ್ದ ನನ್ನ ಮೇಲೆ ಪೋಲಿಸರ

ಕಣ್ಣುಬಿತ್ತು. ನಾನು, ಬೂದಿ ಬಸಪ್ಪಗೌಡರು, ಪುಟ್ಟಪ್ಪನಾಯ್ಕರು ಹಾಗೂ ಹಿರೇ ಚೌಟಿಯ ಶಿವಾಜಿಗೌಡರು ಸೇರಿ ಹಿರೇ ಇಡಗೋಡ ಚನ್ನಬಸಪ್ಪಗೌಡರು, ಚಿಕ್ಕಿಡ ಗೋಡಿನ ಚನ್ನವೀರಪ್ಪಗೌಡರು, ಹುನಸವಳ್ಳಿ ವೀರಭದ್ರಪ್ಪಗೌಡರು, ಕಾಮನವಳ್ಳಿ ಬಸಪ್ಪಗೌಡರು ಹಾಗೂ ಮಾವಲಿ ಅಣ್ಣಾಜಿಗೌಡರು ಪಟೇಲಿಕೆಗೆ ರಾಜೀನಾಮೆ ಕೊಡಿಸಿದೆವು. ಕಾಮನವಳ್ಳಿ ಬಸಪ್ಪಗೌಡರ ವಿನಾ ಇನ್ನೆಲ್ಲರೂ ಬಂಧನಕ್ಕೆ ಒಳಗಾದರು. ಇದೇ ಕಾಲದಲ್ಲಿ ಎನ್. ಆರ್. ಗಿರಿಮಾಜಿಯವರ ಭೇಟಿ ಆಗಿ ಅವರ ಕ್ರಾಂತಿಕಾರಿ ವಿಚಾರಗಳ ಕಾರ್ಯಾಚರಣೆಗೆ ದುಡಿದೆವು. ಅವರಲ್ಲಿ ಒಂದು ಡಬ್ಬಲ್ ಬ್ಯಾರಲ್ ರೈಫಲ್ ಕೂಡ ಇತ್ತು. ಅವರ ಸಲಹೆಯಂತೆ 'ಸ್ವಾತಂತ್ರ್ಯ' ಎಂಬ ಕೈಬರಹದ ಬುಲೆಟಿನ್ ಪ್ರಕಟಣೆ ಆರಂಭಿಸಿದೆವು. ಅದರ ಸಂಪಾದಕರು ಹಿರೇಚೌಟಿ ಶಿವಾಜಿಗೌಡರು. ನಾನೂ ಬರೆಯುತ್ತಿದ್ದೆ. ದ್ಯಾವನಹಳ್ಳಿ ವೀರಪ್ಪಗೌಡರು ಅದನ್ನು ಕೈಯಲ್ಲಿ ಬರೆದು ಹಂಚುತ್ತಿದ್ದರು. ಅದರಲ್ಲಿ ನಮ್ಮ ಹೆಸರುಗಳಿದ್ದುದರಿಂದ ಪೋಲಿಸರ ನಿಗಾ ಹೆಚ್ಚಿತು. ನಮ್ಮ ಅಣ್ಣ ಟಿ. ವಿ. ಬಸಪ್ಪನಾಯ್ಕರಿಗೆ (ಆಗ ಅವರು ಉಪಾಧ್ಯಾಯರು) ಶಾಲಾ ಇನ್ಸ್‌ಪೆಕ್ಟರರು ನಾನು ಚಳವಳಿಯಿಂದ ಹಿಂಜರಿಯುವಂತೆ ಬುದ್ಧಿ ಹೇಳಲು ಪ್ರೇರೇಪಿಸಿದರು. ಮತ್ತು ಹಾಗೆ ಮಾಡಿದರೆ ನನಗೆ ಉಪಾಧ್ಯಾಯವೃತ್ತಿ ಕೊಡಿಸುವುದಾಗಿ ಹೇಳಿದರು. ಅಲ್ಲದೆ ಅಣ್ಣನ ನೌಕರಿಗೆ ನನ್ನ ಚಟುವಟಿಕೆಗಳಿಂದ ತೊಂದರೆ ಆದೀತೆಂದು ಹೆದರಿಸಿದ್ದರು. ಆದರೆ ಅಲ್ಲಿ ಇದಾವುದಕ್ಕೂ ಮಣಿಯಲಿಲ್ಲ. ಉಳವಿ ಹೋಬಳಿಯಲ್ಲಿ ಮಳಲಗದ್ದೆಯ ಎಂ. ಕೆ. ವೀರಪ್ಪಗೌಡರು ಮಾಡುವ ಚಟುವಟಿಕೆಗಳಿಗಾಗಿ ಅವರನ್ನು ಗಡೀಪಾರು ಮಾಡಿದ್ದರು. ಇದರಿಂದ ಆ ಭಾಗದಲ್ಲಿ ಚಳವಳಿ ತಣ್ಣಗಾಗಿತ್ತು. ಜಡೇ ಭಾಗದಲ್ಲಿ ಸಭೆ, ಮೆರವಣಿಗೆ ನಡೆದರೂ ಚಳವಳಿ ಬಲವಾಗಲಿಲ್ಲ. ನಾನು, ಪುಟ್ಟಪ್ಪನಾಯ್ಕರು, ಬೂದಿ ಬಸಪ್ಪಗೌಡರು ತಾಲ್ಲೂಕಿನಲ್ಲಿ ಬಹುಭಾಗದಲ್ಲಿ ಸಂಚರಿಸಿದೆವು. ನಾಡಿಗ ಕೃಷ್ಣಮೂರ್ತಿ (ಈಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪತ್ರಿಕೋದ್ಯಮ ಪ್ರೊಫೆಸರ್) ಈ ಕಾಲದಲ್ಲಿ ಬಂಧಿತರಾದವರಲ್ಲಿ ಒಬ್ಬರು. ಪುಟ್ಟಪ್ಪನಾಯ್ಕರು, ಶಿವಾಜಿಗೌಡರು ಹಾಗೂ ಬೂದಿ ಬಸಪ್ಪಗೌಡರು ಹಾಗೂ ನನ್ನನ್ನು ಒಟ್ಟಿಗೆ ಬಂಧಿಸಲಾಯಿತು. ಇದರಿಂದ ತಾಲೂಕಿನಲ್ಲಿ ಚಳವಳಿ ಸ್ತಬ್ಧವಾದಂತೆ ಆಯಿತು. 1942ರ ಚಳವಳಿಯಲ್ಲಿ ಶಿಕ್ಷೆಗೊಂಡ ಈ ತಾಲೂಕಿನ ವ್ಯಕ್ತಿಗಳೆಂದರೆ : ದಿ|| ವೀರಭದ್ರಪ್ಪಗೌಡರು (ಹುನಸವಳ್ಳಿ), ದಿ|| ಚನ್ನಬಸಪ್ಪಗೌಡರು (ಹಿರೇಯಿಡಗೋಡ), ದಿ|| ಅಣ್ಣಾಜಿಗೌಡರು (ಮಾವಲಿ), ದಿ|| ಎಚ್. ಶಿವಾಜಿಗೌಡರು (ಹಿರಿಚೌಟಿ), ದಿ|| ಮರ್ಶಿ ಬಸವಣ್ಣಪ್ಪ (ಮೂಡಿ-ನೆಲ್ಲಿಕೊಪ್ಪ), ಮಲ್ಲಿಕಾರ್ಜುನಪ್ಪ ಗೌಡರು (ಎಣ್ಣೆಕೊಪ್ಪ), ವೀರಪ್ಪಗೌಡರು (ಹಳೇನೆಲ್ಲಿಕೊಪ್ಪ), ಬೂದಿ ಬಸಪ್ಪಗೌಡರು (ಬೆಟ್ಟದಕೂರ್ಲಿ), ಕೊಟ್ರಗೌಡ (ಎಲಿವಾಳ), ಎಂ. ಕೆ. ವೀರಪ್ಪಗೌಡ (ಮಳಲಗದ್ದೆ), ಟಿ. ವಿ. ಸಂಗಪ್ಪನಾಯ್ಕ (ನಾನು), ವಿರೂಪಾಕ್ಷಗೌಡ (ದ್ಯಾವನಹಳ್ಳಿ), ಬಸವಣ್ಣಪ್ಪ ಸಜ್ಜನಶೆಟ್ಟರು (ದೊಡ್ಡಿಕೊಪ್ಪ), ನಾಡಿಗ ಕೃಷ್ಣಮೂರ್ತಿ (ಆನವಟ್ಟಿ ; ಮೈಸೂರಲ್ಲಿ),

ಶಿದ್ದರಾಮಪ್ಪ ತುವ್ವಿಕಟ್ಟಿ ಹಾಗೂ ಪರಶುರಾಮಪ್ಪ ಬಿನ್ ವೀರಪ್ಪ (ಇಬ್ಬರೂ ಧಾರವಾಡ ಜಿ||ಯಲ್ಲಿ), ಎಸ್. ಬಿ. ನೆಜೂರ (ಜಡೆ—ಧಾರವಾಡ ಜಿ||ಯಲ್ಲಿ), ಲೋಕೇಶಪ್ಪ ಬಿನ್ ಸಂಗಪ್ಪ (ಆನವಟ್ಟಿ ; ನ್ಯಾಮತಿಯಲ್ಲಿ).

ಬಿಡುಗಡೆಯ (12-12-1943) ಅನಂತರ 1944ರ ಮೇಯಲ್ಲಿ ಅಣ್ಣನವರ ಪ್ರೋತ್ಸಾಹದಿಂದ ಮತ್ತೆ ಧಾರವಾಡಕ್ಕೆ ಹೋದೆ. ಆದರೆ ಶಾಲೆಗೆ ಸೇರದಂತೆ ಮೂರು ವರ್ಷ ನನ್ನನ್ನು ಡಿಬಾರ್ ಮಾಡಿದ್ದು ತಿಳಿಯಿತು. ಸ್ನೇಹಿತರ ಸಲಹೆಯಂತೆ ಬೆಂಗಳೂರಲ್ಲಿ ಕಾಂಪೌಂಡರ್ ಟ್ರೈನಿಂಗ್ ಮುಗಿಸಿ ತೀರ್ಥಹಳ್ಳಿ ತಾ|| ಮೇಗರವಳ್ಳಿಯಲ್ಲಿ ಕೆಲಸಕ್ಕೆ ಸೇರಿದೆ. ಆಗಲೂ ಆಗುಂಬೆ ಪೋಲಿಸ್ ಠಾಣೆಯಿಂದ ನನ್ನ ಬಗ್ಗೆ ಗುಪ್ತ ವರದಿ ಹೋಗುತ್ತಿದ್ದ ವಿಚಾರ ತಿಳಿಯಿತು. ಕೆಲಸದ ಬಗ್ಗೆ ಜುಗುಪ್ಸೆ ಹುಟ್ಟಿತು. ಸೀನಿಯರ್ ಸರ್ಜನ್ ಮಾಂಟ್ಗೊಮರಿಯವರ ಸಂದರ್ಶನ ನಮ್ಮಲ್ಲಿ ಆದಾಗಿನಿಂದ ಸ್ವಾಭಿಮಾನ ಇನ್ನಷ್ಟು ಕೆರಳಿತು. ರಾಜೀನಾಮೆ ಬರೆದೆ. ಐದು ವರ್ಷ ಸರ್ವಿಸಿನಲ್ಲಿರ ಬೇಕೆಂದು ಬಾಂಡ್ ಕೊಟ್ಟದ್ದರಿಂದ ರಾಜೀನಾಮೆ ಸ್ವೀಕಾರ ಆಗಲಿಲ್ಲ. ಒಂದು ವಾರ ರಜಾ ಹಾಕಿ ಊರಿಗೆ ಬಂದೆ; ಮತ್ತೆ ಒಂದು ವಾರದ ರಜಾ ಹಾಕಿದೆ. 'ಕೂಡಲೇ ಕೆಲಸಕ್ಕೆ ಬರಬೇಕು, ರಜಾ ಸ್ವೀಕರಿಸಲಾಗದೆ'ಂದು ಪತ್ರ ಬಂತು. ಆಗ ಸ್ವಾತಂತ್ರ್ಯ ಬಂತು. ಜವಾಬ್ದಾರಿ ಸರಕಾರದ ಚಳವಳಿ ಆರಂಭ ಆಗಿತ್ತು. 'ಜವಾಬ್ದಾರಿ ಸರಕಾರದ ಹೋರಾಟ ಮುಗಿಯುವವರೆಗೆ ಕೆಲಸಕ್ಕೆ ರಾಜೀನಾಮೆ' ಎಂದು ಬರೆದಿತ್ತು, ಚಳವಳಿಯಲ್ಲಿ ಧುಮುಕಿದೆ. ಆನವಟ್ಟಿಯಲ್ಲಿ ಶಿಬಿರ ಏರ್ಪಡಿಸಲಾಗಿತ್ತು. ಸೆಪ್ಟೆಂಬರ್ 1ಕ್ಕೇ ಮಲ್ಲಿಕಾರ್ಜುನಪ್ಪಗೌಡರನ್ನೂ ವೀರಪ್ಪಗೌಡರನ್ನೂ (ನೆಲ್ಲಿಕೊಪ್ಪ) ಮುನ್ನೆಚ್ಚರಿಕೆ ಕ್ರಮವಾಗಿ ಬಂಧಿಸಿದರು. ಆನವಟ್ಟಿ ಶಿಬಿರದ ಮೇಲ್ವಿಚಾರಣೆಯನ್ನು ಎಂ. ಈಶ್ವರಪ್ಪ ಶೆಟ್ಟರು ನೋಡಿಕೊಳ್ಳುತ್ತಿದ್ದರು. ಆಗ ಟಿ. ವಿ. ಪುಟ್ಟಪ್ಪ ನಾಯ್ಕರು ಟಿ. ಸಿ. ಸಿ. ಅಧ್ಯಕ್ಷರಾಗಿದ್ದು ಶಿಬಿರದ ಹೊಣೆಗಾರಿಕೆ ಅವರದೇ ಆಗಿತ್ತು. ಚಳವಳಿ ಸೇರಲು ಎಚ್. ವಿ. ಚನ್ನಬಸಪ್ಪ ಗೌಡರು ಉಪಾಧ್ಯಾಯ ವೃತ್ತಿಗೆ ರಾಜೀನಾಮೆ ಕೊಟ್ಟರು. ತೋರನಂದ ದಿ|| ವೀರಬಸಪ್ಪ, ಬಂಗಾರಸ್ವಾಮಿ ಕುಬಟೂರ ಇವರೂ ಪ್ರಮುಖ ರಾಗಿದ್ದರು. ಇವರುಗಳ ಬಂಧನ ಆಯಿತು. ಎಚ್. ಎಸ್. ರುದ್ರಪ್ಪನವರು ಆಗ ಬನವಾಸಿಯಲ್ಲಿದ್ದು ಮಾರ್ಗದರ್ಶನ ನೀಡುತ್ತಿದ್ದರು. ನಾನೂ ಪುಟ್ಟಪ್ಪ ನಾಯ್ಕರೂ ಹಣ ಸಂಗ್ರಹಿಸಲು ಓಡಾಡುತ್ತಿದ್ದೆವು. ಆನವಟ್ಟಿ ಶಿಬಿರದ ಸತ್ಯಾಗ್ರಹಿಗಳ ಸಂಖ್ಯೆ ಹೆಚ್ಚುತ್ತಿತ್ತು. ಸತ್ಯಾಗ್ರಹ ಮಾಡಿದವರನ್ನು ಹಿಡಿಯುತ್ತಿರಲಿಲ್ಲ. ಹಿಡಿದರೂ ಹೊಡೆದು ಬಿಡುತ್ತಿದ್ದರು. ಪೋಲಿಸರಿಗೆ ಬೇಕಾದವರು ಸಿಗುತ್ತಿರಲಿಲ್ಲ. ಜಡೆ ಆನವಟ್ಟಿ ಭಾಗದಲ್ಲಿ ಪೋಲಿಸರ ದಬ್ಬಾಳಿಕೆ ಹೆಚ್ಚಿತ್ತು. ಕಾತವಳ್ಳಿ ಬೆನ್ನೂರಿನ ಕರಿಯಪ್ಪ ಗೌಡರನ್ನು ಬಂಧಿಸಿ, ಅವರನ್ನು ಬೆತ್ತಲೆಗೊಳಿಸಿ ಪೋಲಿಸರು ಮನಸ್ವೀ ಹೊಡೆದರಲ್ಲದೆ ಅವರ ಖಾದಿ ಬಟ್ಟೆಗಳನ್ನು ಸುಟ್ಟರು. ಗಡಿ ಗ್ರಾಮವಾದ ಹುಲಗಡ್ಡಿ, ಕಿರುವಾಡಿ, ತಿಳವಳ್ಳಿಗಳಿಂದ

ನಾನು ಕೆಲಸಮಾಡುತ್ತಿದ್ದೆ. ಹುಲಗಡ್ಡಿಯ ದಿ|| ಶಿವಬಸಪ್ಪ ಪಾಟೀಲ ಸೋದರರು, ಕಿರುವಾಡಿ ರುದ್ರಗೌಡರು, ತಿಳವಳ್ಳಿಯ ವಿ. ಎಸ್. ಒಡೆಯರ್ ವಿಶೇಷ ಸಹಕಾರ ನೀಡಿದರು. ನಡುವೆ ಪುಟ್ಟಪ್ಪ ನಾಯ್ಕರೂ ಅಕ್ಕಸಾಲಿ ಕಾಳಪ್ಪನವರೂ ಒಟ್ಟಿಗೇ ಬಂಧಿತರಾಗಿ ಇನರಿಬ್ಬರಿಗೂ ಅಮಲ್ದಾರರ ಎದುರೇ ವಿಪರೀತ ಹೊಡೆದರು. ಇದೇ ರೀತಿ ಪ್ರಮುಖ ಕಾರ್ಯಕರ್ತ ಎಚ್. ಸೇನಾಪತಿ ಗೌಡರಿಗೂ ಹಿಂಸೆಕೊಟ್ಟರು. ಕಿರುವಾಡಿ ಯಿಂದ ಭಾರೀ ಸತ್ಯಾಗ್ರಹಿ ತಂಡವನ್ನು ಸೊರಬ ತಾಲೂಕಿನಲ್ಲಿ ನುಗ್ಗಿಸುವ ತಯಾರಿ ಯನ್ನು ರುದ್ರಗೌಡರು ಮಾಡಿದರು. ಅಷ್ಟರಲ್ಲಿ ಚಳವಳಿ ನಿಂತಿತು.

1947ರಲ್ಲಿ ಶಿಕ್ಷೆಗೆ ಒಳಗಾದವರು (ಇವರಿಗೆಲ್ಲ ಮೂರು ತಿಂಗಳ ಶಿಕ್ಷೆ ವಿಧಿಸಿದ್ದರು): ಹುರುಳಿಯ ಚನ್ನಬಸಪ್ಪ ಗೌಡ್ರು, ತೋರವಂದದ ವೀರಬಸಪ್ಪನವರು, ಕುಬಟೂರ ಕೆ. ಪಿ. ಬಂಗಾರಸ್ವಾಮಿ, ಅಗಸನಹಳ್ಳಿ ಶಂಕರಪ್ಪ, ಹುರುಳಿಯವರಾದ ಯಳಗೇರಿ ಬಸವಣ್ಣಪ್ಪ ಹಾಗೂ ರುದ್ರಪ್ಪ, ನಡಳ್ಳಿಯ ಎನ್. ಮಂಜಪ್ಪ, ಸೊರಬದವರಾದ ವಾಸಪ್ಪ ಬಿನ್ ಪುಟ್ಟಪ್ಪ, ರಂಗನಾಥಪ್ಪ ಬಿನ್ ರುದ್ರಪ್ಪ, ಜೋವಿ ಗುತ್ಯಪ್ಪ, ಎಂ. ಮೈಲಾರಪ್ಪ, ಭೂಪಾಲಪ್ಪ ಹಾಗೂ ಶಿವಾನಂದಪ್ಪ, ಕೊಡಕಣಿಯವರಾದ ಗೌಡನ ವೀರಪ್ಪ, ಕೊರಪ್ಪ ಹಾಗೂ ಕೆರಿಯಪ್ಪ, ನೆಲ್ಲಿಕೊಪ್ಪದ ಚನ್ನಬಸಪ್ಪ, ವೀರಭದ್ರಪ್ಪ, ತಮ್ಮಣಗೌಡ, ಮಲ್ಲಪ್ಪ ಹಾಗೂ ಶಿವಪ್ಪ, ಸಮನವಳ್ಳಿಯ ಕುರುಗೋಡು ರೇವಣಪ್ಪ, ಕುಬಟೂರ ನರಸಪ್ಪ, ಕಮನವಳ್ಳಿ ಚನ್ನಬಸವಯ್ಯ, ಕಾತವಳ್ಳಿ ಬೆನ್ನೂರ, ಈಳಿಗೇರ ರಂಗಪ್ಪ, ಕಮನವಳ್ಳಿಯ ಕೆ. ವೀರಪ್ಪ. ಇದಲ್ಲದೇ ಇನ್ನೂ ಅನೇಕರು ಬಂಧನಕ್ಕೆ ಒಳಗಾಗಿದ್ದರು. ಇನ್ನು ನಮ್ಮ ತಾಲೂಕಿನ ಗಣ್ಯನಾಯಕರಾದ ಎಣ್ಣೆಕೊಪ್ಪದ ಮಲ್ಲಿಕಾರ್ಜುನಪ್ಪಗೌಡರ ಪರಿಚಯ ನೀಡಿರುವೆ.

## ಮಲ್ಲಿಕಾರ್ಜುನಪ್ಪ ಗೌಡರು, ಎಣ್ಣೆಕೊಪ್ಪ



ಈಗ 73-74 ವಯಸ್ಸಿನವರಾದ ಎಣ್ಣೆಕೊಪ್ಪ ಊರಿನ ಮಲ್ಲಿಕಾರ್ಜುನಪ್ಪಗೌಡರು 1937ರಲ್ಲಿ ಹರಿಪುರ ಕಾಂಗ್ರೆಸ್ಸಿಗೆ ಹೋಗಿ ಬಂದಾಗಿನಿಂದ ಕಾಂಗ್ರೆಸ್ಸಿನ ಕಡೆಗೆ ಒಲಿದರು. ಡಾ|| ಶ್ರೀನಿವಾಸ ಅಯ್ಯರ್, ದಿ|| ಕೆ. ಪಿ. ರುದ್ರಗೌಡ ಹಾಗೂ ದಿ|| ಎಚ್. ಸಿದ್ದಯ್ಯ ಇವರುಗಳ ಸಹವಾಸದಿಂದ ಗಾಂಧೀಜಿಯವರ ವಿಚಾರಗಳನ್ನು ಮನನಮಾಡಿ ಸ್ವೀಕರಿಸಿ ಕೊಂಡರು. 1939-40ರ ಜಂಗಲ್ ಸತ್ಯಾಗ್ರಹದ ಸಂಘಟನೆ ಹಾಗೂ ಯಶಸ್ಸಿಗಾಗಿ ದುಡಿದರು. 1942ರಲ್ಲಿ

ಪಟೇಲ ಹುದ್ದೆಗೆ ರಾಜೀನಾಮೆ ಕೊಟ್ಟು ಆಗಿನ ಸರ್ಕಾರ ನೀಡಿದ್ದ ಪ್ರಶಸ್ತಿಪದಕ ವನ್ನೂ ಮರಳಿಸಿದರು. ಚಳವಳಿಯ ಯಶಸ್ಸಿಗಾಗಿ ಅಪಾರವಾಗಿ ಶ್ರಮಿಸಿದರು. 25-10-1942 ರಿಂದ 9-12-1943ರ ವರೆಗೆ ಅವರು ಬಂಧನದಲ್ಲಿದ್ದರು. 1947ರ ಜವಾಬ್ದಾರೀ ಸರಕಾರದ ಕಾಲದಲ್ಲೂ ಎರಡು ತಿಂಗಳು ಸ್ಥಾನಬದ್ಧತೆಯಲ್ಲಿ ಇದ್ದರು. ಎಂ.ಆರ್.ಎ. ಆಗಿಯೂ ಎಂ.ಎಲ್.ಎ. ಆಗಿಯೂ ದುಡಿದ ಇವರು ತಾ॥ ಅ॥ ಮಂಡಳಿಯ ಅಧ್ಯಕ್ಷರೂ ಆಗಿದ್ದರು. ಜತ್ತಿಯವರ ನೇತೃತ್ವದಲ್ಲಿ ರಚಿಸಿದ ಭೂ ಸುಧಾರಣಾ ಸಮಿತಿಯ ಸದಸ್ಯರೂ ಆಗಿದ್ದರು.

ವಿನೋಬಾಜಿಯವರ ಸಂಪರ್ಕದಿಂದ ಸರ್ವೋದಯ ಕಾರ್ಯಕರ್ತರಾದ ಇವರು, ತಮ್ಮ ಆಸ್ತಿಯ ಆರನೆ ಒಂದು ಭಾಗವಾದ 70 ಎಕರೆ ತರೀ ಜಮೀನನ್ನು ಭೂಹೀನರಿಗೆ ಹಂಚಿದರು. ಎಣ್ಣೆಕೊಪ್ಪ ಗ್ರಾಮವಾಸಿ ಲಿಂಗಪ್ಪಗೌಡರ ಪುತ್ರರಾದ ಇವರು ತಮ್ಮ ತಾಲೂಕಿನ ಗಣ್ಯ ಸ್ವಾತಂತ್ರ್ಯಯೋಧರೂ ನಾಯಕರೂ ರಚನಾತ್ಮಕ ಕಾರ್ಯಕರ್ತರೂ ಆಗಿದ್ದಾರೆ.

ವೈ.ಶಿ. 30

## ಬೂದಿ ಬಸಪ್ಪಗೌಡ

ಜನನ : 1905 ಉದ್ಯೋಗ : ಕೃಷಿ ವಿಳಾಸ : ಚಿಟ್ಟೆದಕೂರ್ಲಿ, ತಾ॥ ಸೊರಬ



ದಿ॥ ಮೈಲಾರ ಮಹಾದೇವಪ್ಪನವರು 1939ರಲ್ಲಿ ನಮ್ಮ ಭಾಗಕ್ಕೆ ಬಂದಿದ್ದು ಅವರಿಂದಲೇ ರಾಷ್ಟ್ರೀಯ ಚಳವಳಿಯಲ್ಲಿ ನಾನು ಸೇರುವಂತಾಯಿತು. ಅಲ್ಲದೆ ದಿ॥ ಎಚ್. ಸಿದ್ದಯ್ಯ ಮತ್ತು ದಿ॥ ಕೆ. ಜಿ. ಒಡೆಯರ್ ಅವರ ಪ್ರಭಾವವೂ ನನ್ನ ಮೇಲೆ ಆಗಿತ್ತು. ಅದೇ ವರ್ಷ ನಮ್ಮ ಊರಲ್ಲಿ ದಿ॥ ಮೈಲಾರರು ಅರಣ್ಯಸತ್ಯಾಗ್ರಹಕ್ಕೆ ಪ್ರೇರಣೆ ನೀಡಲು ನಾನೇ ನಮ್ಮ ಊರಿನಿಂದ ಪ್ರಥಮ ಸತ್ಯಾಗ್ರಹಿ. ಇದಲ್ಲದೆ 1942-43ರ ಕ್ವಿಟ್ ಇಂಡಿಯ ಚಳವಳಿಯಲ್ಲೂ 1947ರ ಚಳವಳಿಯಲ್ಲೂ ಕೂಡ ನಾನು ಪ್ರತ್ಯಕ್ಷ ಭಾಗವಹಿಸಿದ್ದೇನೆ. 1942ರಲ್ಲಿ ನಾನು ಪುಟ್ಟಪ್ಪ ನಾಯ್ಕರ ಜೊತೆ ತಾಲೂಕಿನ ಅನೇಕ ಕಡೆ ಸಂಚರಿಸಿ ಪ್ರಚಾರ ಮಾಡಿದ್ದೇನೆ. ಮತ್ತು ನನ್ನ ಬಂಧನ ಕೂಡ ಆ ಕಾಲಕ್ಕೆ ಪುಟ್ಟಪ್ಪ ನಾಯ್ಕರ ಜೊತೆಯಲ್ಲಿಯೇ ಆಯಿತು. ಶಿವಮೊಗ್ಗ ಹಾಗೂ ಬೆಂಗಳೂರು ಸೆಂಟ್ರಲ್ ಜೈಲ್‌ನಲ್ಲಿ

ನಾವುಗಳು ಇದ್ದೆವು. 1939-40ರಲ್ಲಿ ನನಗೆ ಒಂದು ವರ್ಷ ಕಠಿಣ ಶಿಕ್ಷೆ ಹಾಗೂ 1942-43ರಲ್ಲಿ ಆರು ತಿಂಗಳ ಕಾಲ 'ಡಿಟೆನ್ಯನ್' ಆಯಿತು. ನಮ್ಮ ಭಾಗದಲ್ಲಿ ನೆಲ್ಲಿಕೊಪ್ಪದ ವೀರಪ್ಪಗೌಡರೂ ಚಿಕ್ಕಿಡಗೋಡಿನ ಶಿವಪ್ಪಗೌಡರೂ ನಮ್ಮ ಸಹಪಾಠಿಗಳಾಗಿದ್ದರು. ಅಲ್ಲದೆ ತರುಣ ಕಾರ್ಯಕರ್ತ ಸಂಗಪ್ಪ ನಾಯ್ಕರು 1942ರಲ್ಲಿ ಬಂದು ಕೆಲಸದಲ್ಲಿ ಸೇರಿಕೊಂಡರು.

ವ್ಯ.ಶಿ. 31

## ಟಿ. ವಿ. ಪುಟ್ಟಪ್ಪ ನಾಯ್ಕ

ಜನನ : 1912 ಉದ್ಯೋಗ : ಕೃಷಿ ವಿಳಾಸ : ತಲೂರು, ತಾ|| ಸೊರಬ



ಅರಣ್ಯ ಸತ್ಯಾಗ್ರಹದ ಕಾಲಕ್ಕೆ ಪಟೇಲನಾಗಿದ್ದ ನಾನು ಚಳವಳಿಯಲ್ಲಿ ಪಾಲುಗೊಳ್ಳದಿದ್ದರೂ ಎಲ್ಲ ವಿಧದಿಂದ ಸತ್ಯಾಗ್ರಹಕ್ಕೆ ಸಹಕಾರ ನೀಡುತ್ತಿದ್ದೆ. 1942ರ ಚಳವಳಿ ಶುರು ಆದಾಗ ಸ್ವಾತಂತ್ರ್ಯದ ಕನವರಿಕೆ ನನಗೆ ಜಾಸ್ತಿಯಾಯಿತು. ಆ ಕಾಲಕ್ಕೆ ನಮ್ಮ ತಾಲ್ಲೂಕಿನ ಹಿರಿಯ ಮುಖಂಡ ಮಲ್ಲಿಕಾರ್ಜುನಪ್ಪಗೌಡರು ನೀಡಿದ ಪ್ರೋತ್ಸಾಹ ಚಳವಳಿಯಲ್ಲಿ ನೇರವಾಗಿ ಸೇರುವಂತೆ ನನ್ನನ್ನು ಪ್ರೇರೇಪಿಸಿತು. ಬೂದಿ ಬಸಪ್ಪಗೌಡ್ರು, ಧಾರವಾಡದಲ್ಲಿ ವಿದ್ಯಾರ್ಥಿಯಾಗಿದ್ದ ನನ್ನ ಚಿಕ್ಕಪ್ಪನ ಮಗ ಚಿ|| ಸಂಗಪ್ಪನಾಯ್ಕ ಮತ್ತು ಹಿರೇಚವಟ ದಿ|| ಶಿವಪ್ಪಗೌಡ್ರು ಇವರೊಡನೆ ಸೇರಿ, ಮೊದಲು ನನ್ನ ತಲೂರು ಪಟೇಲಿಗೆ ರಾಜೀನಾಮೆ ಕೊಟ್ಟು, ತಾಲೂಕಿನ ಇತರ ಹಳ್ಳಿಗಳಿಗೆ ಪಟೇಲಿಗೆ ರಾಜೀನಾಮೆ ಕೊಡುವ ಕಾರ್ಯಕ್ರಮದಲ್ಲಿ ತೊಡಗಿ 33 ಹಳ್ಳಿಗಳ ಪಟೇಲರ ರಾಜೀನಾಮೆ ಕೊಡಿಸುವಲ್ಲಿ ಯಶ ಕಂಡೆವು. ಇದೇ ಕಾಲಕ್ಕೆ ಬುಲೆಟಿನ್‌ಗಳನ್ನೂ ಎಲ್ಲೆಡೆ ಹಂಚುತ್ತಿದ್ದೆವು. ಆಗ ಈಸೂರು ದುರಂತವಾಗಿ, ಸರಕಾರದವರು ವಿಶೇಷ ಪ್ರಯತ್ನಮಾಡಿ 1-11-1942ರಲ್ಲಿ ಬಂಧಿಸಿ ಶಿವಮೊಗ್ಗ ಜೈಲಿಗೆ ಸೇರಿಸಿದರು. 19-5-1943ರಂದು ಬಿಡುಗಡೆ ಆಯಿತು.

1943ರಿಂದ 1950ರ ವರೆಗೆ ತಾ|| ಕಾಂ|| ಕಮಿಟಿ ಅಧ್ಯಕ್ಷನಾಗಿದ್ದೆ. 1947ರ ಚಳವಳಿ ಕಾಲಕ್ಕೆ ಪೂರ್ತಿ ತಾಲೂಕಿನ ಜವಾಬ್ದಾರಿ ನನ್ನ ಮೇಲೆ ಇದ್ದು 7-10-1947 ಧಾರವಾಡ ಜಿ|| ಹುಲಗಡ್ಡಿ ಗ್ರಾಮದ ಪುಟ್ಟಪ್ಪಗೌಡರ ಮನೆಯಲ್ಲಿ ಎಚ್. ಎಸ್.

ರುದ್ರಪ್ಪ, ಎಚ್. ಮಲ್ಲಪ್ಪಗೌಡ, ಟಿ. ಶಿವಪ್ಪ ಇವರ ಮುಖಂಡತ್ವದಲ್ಲಿ ಆದ ಸಭೆಯಂತೆ ಹೆಚ್ಚಿನ ಕಾರ್ಯಕ್ರಮಕ್ಕಾಗಿ 8-10-1947ರಂದು ಉಳವಿ ಹೋಬಳಿಗೆ ಹೋಗುತ್ತಿರುವಾಗ ಚಳವಳಿಗೆ ವಿರೋಧಿಯಾದ ವಿದ್ಯಾರ್ಥಿಯೊಬ್ಬನ ಸೂಚನೆಯಂತೆ ಬೆಟ್ಟದಕೂರ್ಲಿ ಬೂದಿ ಬಸಪ್ಪಗೌಡರ ಭೂತನಮಟ್ಟಿಯಲ್ಲಿ ಮಿಲಿಟರಿಯವರ ಸಹಿತ ಬಂದು ಅಮಲ್ದಾರರು ನನ್ನನ್ನು ಬಂಧಿಸಿದರು. ನನ್ನ ಜೊತೆ ಉದ್ರಿ ಕಾಳಪ್ಪನನ್ನೂ ಬಂಧಿಸಿದ್ದು ಇಬ್ಬರಿಗೂ ಚಿತ್ರಹಿಂಸೆ ಕೊಟ್ಟರಲ್ಲದೆ ನನ್ನಲ್ಲಿದ್ದ ನಗದು ಹಣ 52 ರೂ. ಹಾಗೂ ಫೇವರ್‌ಲ್ಯುಬಾ ಕೈಗಡಿಯಾರವನ್ನೂ ಕಸಿದುಕೊಂಡರು. ಸಂಜೆ ವ್ಯಾನಿನಲ್ಲಿ ಆನವಟ್ಟಿ ಲಾಕಪ್ಪಿಗೆ ತಂದು ಹಾಕಿರಲು ಒಬ್ಬ ಮಿಲ್ಟ್ರಿ ನಾಯಕನು ರಾತ್ರಿ ನನ್ನನ್ನು ಲಾಕಪ್ಪಿನಿಂದ ಹೊರತೆಗೆದು "ನಿನಗೆ ಸ್ವಾತಂತ್ರ್ಯ ಬೇಕೆ, ಕೊಡುವೆ!" ಎಂದು ಎಚ್ಚರ ತಪ್ಪುವ ರೀತಿಯಲ್ಲಿ ಹಿಂಸೆಕೊಟ್ಟರು. ನನ್ನ ವಾಚಿನ ವಿಚಾರ ಕೇಳಿದಾಗ "ಇದು ವಾಚು ಕಟ್ಟುವ ಕೈಯೊ ?" ಎಂದು ಕೈ ತಿರುವಿದರು. "ಇವನಿಗೆ ಗುಂಡು ಹಾಕಬೇಕು" ಎಂದಾಗ, "ಗುಂಡು ಹಾಕು" ಎಂದು ಅಂಗಿಗುಂಡಿ ತೆಗೆದು ಎದೆ ತೋರಿಸಿದೆ. 12-10-1947ರಂದು ಸಾಗರ ಕೋರ್ಟಿಗೆ ಒಯ್ದರು. "ಸಂಧಾನ ಮುಗಿಯುತ್ತ ಬಂದಿದೆ, ನೀವು ಕೋರ್ಟಿಗೆ ತರುತ್ತೀರಿ" ಎಂದು ಮ್ಯಾಜಿಸ್ಟ್ರೇಟರು ಪೋಲಿಸರಿಗೆ ಹೇಳಲು 13-10-1947ಕ್ಕೆ ಆನವಟ್ಟಿಗೆ ತಂದು ಬಿಟ್ಟರು. ಕಾಂಗ್ರೆಸ್‌ನ ಜಿಲ್ಲಾ ಸಮಿತಿ ಸದಸ್ಯನಾಗಿ ಸೇವೆಸಲ್ಲಿಸಿದ್ದೇನೆ. ಅಧಿಕಾರಕ್ಕಾಗಿ ಎಂದೂ ಆಸೆಪಟ್ಟಿಲ್ಲ.

ಮೈ.ಶಿ. 32

## ಎಚ್. ಮಲ್ಲಪ್ಪಗೌಡ

ಜನನ : 1905 ಉದ್ಯೋಗ : ಕೃಷಿ ವಿಳಾಸ : ಶಾಲಿಗೆ, ಜಡೆ ಅಂಚೆ, ತಾ॥ ಸೊರಬ



ಕೋಡಿಕೊಪ್ಪ ಗ್ರಾಮದ ಕೆ. ಪಿ. ರುದ್ರಪ್ಪಗೌಡರೇ ನಾನು ಸ್ವಾತಂತ್ರ್ಯ ಚಳವಳಿಯಲ್ಲಿ ಸೇರಲು ಕಾರಣ. ಅವರೇ ನಮ್ಮ ಭಾಗದ ನಾಯಕರು. 1936ರಲ್ಲಿ ನಾನು ಜಡೆ ಪಂಚಾಯತ್ ಅಧ್ಯಕ್ಷನೂ ಆರ್.ಎ. ಮೆಂಬರೂ ಆಗಿದ್ದೆ. ಆ ಕಾಲದಲ್ಲಿ ಜಂಗಲ್ ಸತ್ಯಾಗ್ರಹದಲ್ಲಿ ಪಾಲುಗೊಂಡ ಜಡೆ ಗ್ರಾಮದಲ್ಲಿ ಬಂಧಿತನಾದೆ (10-11-1939). ನನ್ನ ಜ್ಯಾಚಿನಲ್ಲಿ ತಲಗುಂದದ ಟಿ. ಕೆ. ಮಲ್ಲನಗೌಡರು, ಕೋಡಿಕೊಪ್ಪದ

ಬಂಗಾರಪ್ಪಗೌಡರು, ಅದೇ ಊರ ಸೋಮನಗೌಡರು, ಜಡೆಯವರಾದ ಬಂಗಾರಪ್ಪ ಮತ್ತು ಎಲ್. ಎಸ್. ಚಂದ್ರಪ್ಪ ಇದ್ದರು. ಸಿ.ಸಿ. ನಂ. 248—1939-40ರದು, ಈ ಪ್ರಕಾರ 26-10-1939ರಂದು ನನಗೆ 14 ತಿಂಗಳು ಜೈಲು, 200 ರೂ. ದಂಡ ಆಗಿ, 8 9-1940ರಂದು ಬಿಡುಗಡೆ ಆದೆ. ಶಿವಮೊಗ್ಗ ಜೈಲು ಹಾಗೂ ಬೆಂಗಳೂರು ಸಬ್-ಜೈಲಿನಲ್ಲಿ ಶಿಕ್ಷೆ ಅನುಭವಿಸಿದೆ. ನಾನು ಜೈಲಿನಲ್ಲಿದ್ದಾಗ ಸರ್ಕಾರದವರು, ನಾನು ಅಪಾಲಜಿ ಬರೆದುಕೊಟ್ಟು ಬರುವಂತೆ ಮನೆಮಂದಿಗೆ ಒತ್ತಾಯಿಸಿದರಲ್ಲದೆ, ಹಾಗೆ ಮಾಡದಿದ್ದರೆ ಆಸ್ತಿ ಕಸಿದುಕೊಂಡು ಮನೆ ಲೂಟಿ ಮಾಡುವುದಾಗಿ ಬೆದರಿಸಿದರು. ಆದರೆ ನನ್ನ ತಂದೆ ಹಾಗೂ ನನ್ನ ಪತ್ನಿ ಇದಕ್ಕೆಲ್ಲ ಬೆದರಲಿಲ್ಲ. ಅವರು ಚಳವಳಿ ಬಗ್ಗೆ ಪೂರ್ತಿ ಸಹಾನುಭೂತಿ ಹೊಂದಿದ್ದವರು. ಚಳವಳಿಯ ಯಾವ ಕಾರ್ಯಕರ್ತರು ಬಂದರೂ ಊಟೋಪಚಾರದ ವ್ಯವಸ್ಥೆ ಮಾಡುತ್ತಿದ್ದರು.

1947ರಲ್ಲಿ ನಾನೂ ಶ್ಯಾನವಳ್ಳಿ ಶಿವಪ್ಪಗೌಡ್ರು ಎಚ್. ಎಸ್. ರುದ್ರಪ್ಪನವರ ಜೊತೆ ಕಾರವಾರ, ಧಾರವಾಡ ಜಿಲ್ಲಾ ಗಡಿಗಳಲ್ಲಿ ಇದ್ದು ಕೆಲಸಮಾಡುತ್ತಿದ್ದೆವು. ಹುಲಗಡ್ಡಿ ಪಾಟೀಲರಲ್ಲಿ ಬಹಳ ಕಾಲ ಇದ್ದೆವು. ನಮ್ಮನ್ನು ಕಂಡಲ್ಲಿ ಗುಂಡು ಹಾಕುವ ಆಜ್ಞೆ ಆಗಿತ್ತು. ಆದರೂ ಬೆದರದೆ ನಮ್ಮ ಜಿಲ್ಲೆಯೊಳಗೆ ಅಲ್ಲಿಂದ ಅಸಹಕಾರದ ಚಟುವಟಿಕೆ ಮಾಡಿಸುತ್ತಿದ್ದೆವು. ಸ್ವಾತಂತ್ರ್ಯಾನಂತರ 1948ರಲ್ಲಿ ನಾನು ಅಸೆಂಬ್ಲಿಗೆ ಕಾಂಗ್ರೆಸ್ಸಿನಿಂದ ಅವಿರೋಧವಾಗಿ ಆಯ್ಕೆ ಆದೆ.

ಮಲ್ಲಿಕಾರ್ಜುನಪ್ಪಗೌಡರು ಎಣ್ಣೆಕೊಪ್ಪ ಇವರು ಈ ಭಾಗದಲ್ಲಿ ನಮಗೆ ಇತ್ತ ಪ್ರೋತ್ಸಾಹ ಸ್ಮರಣೀಯ.

ಮೈ.ಶಿ. 33

## ಡಿ. ಕೆ. ಮಲ್ಲಿಕಾರ್ಜುನಪ್ಪ

ಜನನ : 1909 ಉದ್ಯೋಗ : ಕೃಷಿ ವಿಳಾಸ : ಹುರಳಿ, ತಾ॥ ಸೊರಬ

---



ಕೋಡಕೊಪ್ಪದ ಕೆ. ಪಿ. ರುದ್ರಗೌಡರು ಮತ್ತು ಯಲಿವಾಳದ ಕೊಟ್ರಪ್ಪಗೌಡರು ನಾನು ಕಾಂಗ್ರೆಸ್ ಸೇರಲು ಕಾರಣರಾದವರು. ನಮ್ಮ ಊರಲ್ಲಿ ನಾನೂ ಮಲ್ಲಪ್ಪ ಕುಸನೂರರೂ ದೊಡ್ಡಕೊಪ್ಪದವರಾದ ಬಸವಣ್ಣೆಪ್ಪ ಸಜ್ಜನರ ಇವರೂ ಆಗ ಕಾಂಗ್ರೆಸ್ಸಿನ ಕೆಲಸಮಾಡುತ್ತಿದ್ದವರು. ಆನವಟ್ಟಿ ಹೋಬಳಿ ಯಲ್ಲಿ 1939ರಲ್ಲಿ ಜಂಗಲ್ ಸತ್ಯಾಗ್ರಹ ಮಾಡಿ

ಈಚಲ ಗಿಡ ಕಡಿದು ನಾನು ಬಂಧಿತನಾದೆ. ನನ್ನ ಜೊತೆ ಸತ್ಯಾಗ್ರಹಮಾಡಿ ಬಂಧಿತರಾದ ಇತರರೆಂದರೆ: ಮಲ್ಲಪ್ಪ ಕುಸನೂರ, ಗೊಗ್ಗನಾಳ ಮಲ್ಲಪ್ಪ (ಕಮನವಳ್ಳಿ), ಮರ್ಸಿನ ಬಸವಣ್ಣೆಪ್ಪ, ಚನ್ನಬಸಪ್ಪಗೌಡ, ಮಹಾದೇವಪ್ಪ, ವೀರಪ್ಪಗೌಡ, ಗುಡ್ಲೆಪ್ಪ, ಕಡ್ಲೆಪ್ಪ ಮುಂತಾದ ನೆಲ್ಲಿಕೊಪ್ಪದ ವಾಸಿಗಳು ಹಾಗೂ ಬೂದಿ ಬಸಪ್ಪಗೌಡ್ರು (ಜೆಟ್ಟದಕೂರ್ಲಿ), ಯಲಿವಾಳ ಕೊಟ್ರಪ್ಪ ಈ ಬಗ್ಗೆ ನಮಗೆ ಸೆಕ್ಷನ್ 145, 186 ಹಾಗೂ 426 ಐ.ಪಿ.ಸಿ.ಗಳಂತೆ ಶಿಕ್ಷೆ ಆಯಿತು (ಸಿ.ಸಿ. ನಂ. 250, ವರ್ಷ 1939-40, ಸಾಗರ. I ಕ್ಲಾಸ್ ಮೆಜಿಸ್ಟ್ರೇಟರ ಕೋರ್ಟ್). ಎಂಟು ತಿಂಗಳ ಕಠಿಣ ಶಿಕ್ಷೆ ಹಾಗೂ 100 ರೂ. ದಂಡ ಇಲ್ಲವೇ ಎರಡು ತಿಂಗಳ ಕಠಿಣಶಿಕ್ಷೆ ವಿಧಿಸಿದರು. ಶಿವಮೊಗ್ಗ, ಬೆಂಗಳೂರು ಜಿಲ್ಲೆಗಳಲ್ಲಿ ಇದ್ದು 27-11-1939ರಿಂದ 8-9-1940ರ ವರೆಗೆ ಶಿಕ್ಷೆ ಅನುಭವಿಸಿದ್ದೇನೆ. ಜಿ.ಓ. ನಂ. ಪಿ. 1325-35ನಂತೆ ಬಿಡುಗಡೆ ಆಗಿತ್ತು.

1947ರಲ್ಲಿ ಹುರಳಿ ಎಚ್. ವಿ. ಚನ್ನಬಸಪ್ಪಗೌಡ್ರು, ಪಾಟೀಲ ನಿಂಗಪ್ಪಗೌಡು ಆನವಟ್ಟಿಯಲ್ಲಿ ಶಿಬಿರ ಮಾಡಿಕೊಂಡು ಇರಲು ಅವರಿಗೆಲ್ಲ ಎಲ್ಲ ವಿಧ ಸಹಾಯ ನೀಡಿದೆ. ಆಗ ಚನ್ನಬಸಪ್ಪಗೌಡ್ರು, ರುದ್ರಯ್ಯ ಬಿನ್ ನಾಗಪ್ಪ, ಬಸವಣ್ಣೆಪ್ಪ ಬಿನ್ ನಿಂಗಪ್ಪ, ಮಲ್ಲಪ್ಪ ಬಿನ್ ಕಲ್ಲಪ್ಪ ಮುಂತಾದ ನಮ್ಮ ಊರವರು ಜೈಲಿಗೆ ಹೋಗಿದ್ದರು.

ಸ್ಮೃ.ಶಿ. 34

## ವಿರೂಪಾಕ್ಷಗೌಡ ಪಟೇಲ

ಜನನ : 1913 ಉದ್ಯೋಗ : ಕೃಷಿ ವಿಳಾಸ : ಆನವಟ್ಟಿ, ತಾ॥ ಸೊರಬ



ವಿದ್ಯಾರ್ಥಿಯಾಗಿದ್ದಾಗ ದೇಶದ ಸ್ವಾತಂತ್ರ್ಯಕ್ಕೆ ಹೋರಾಡಬೇಕೆಂದು ನನ್ನಲ್ಲಿ ಬಲವಾದ ಆಸೆ ಮೂಡಿ ಆಗಿನಿಂದಲೇ ಖಾದಿಯನ್ನು ತೊಡಲು ಆರಂಭಿಸಿದೆ. ಶಿಕಾರಿಪುರ ತಾ॥ನ ಮರಿಸ್ವಾಮಿಯವರ ಪ್ರಭಾವ ನನ್ನ ಮೇಲೆ ಆಗಿತ್ತು. ನಾನು ಸೇವಾದಳಕ್ಕೆ ಸೇರಿ, 1931ರಲ್ಲಿ ಹುಬ್ಬಳ್ಳಿಗೆ ಬಂದಾಗ ನೆಹರೂರ ಕೈಯಿಂದ ಹಸ್ತಲಾಘವ ಪಡೆದು ಸರ್ಟಿಫಿಕೇಟ್ ಪಡೆದಿದ್ದೆ. ಶಿವಮೊಗ್ಗದಿಂದ ನಾವು 10-12 ಜನ ಹೋಗಿದ್ದೆವು. 1932ರಲ್ಲಿ ಕಾರವಾರ ಜಿ॥ ಶಿರಸಿ ತಾ॥ ತಿಗಣಿಗೆ ಸಂಕಾನನ ಪರ ಇದ್ದ ನಮ್ಮ ಸಂಬಂಧಿಕರೊಬ್ಬರ ಮನೆಮುಂದೆ ಸತ್ಯಾಗ್ರಹಮಾಡಲೆಂದು

ಹೋಗಿದ್ದೆ. ಮರಿಸ್ವಾಮಿಯವರೇ ಕರೆದುಕೊಂಡು ಹೋಗಿದ್ದರು. ಆದರೆ ನಾನು ಪಕ್ಕದ ಹಳ್ಳಿಯಲ್ಲಿ ಇದ್ದಾಗಲೇ ನಮ್ಮ ತಂದೆಗೆ ಸುದ್ದಿ ತಲಪಿ ಅವರು ನನ್ನನ್ನು ಹೊಡೆದು ಊರಿಗೆ ಎಳೆದುಕೊಂಡು ಹೋಗುವಂತೆ ಮಾಡಿದರು. ಆದರೂ ದೇಶಪ್ರೇಮದ ವಿಚಾರ ಬಿಡಲಿಲ್ಲ.

1941ನೆಯ ಇಸವಿಯಲ್ಲಿ ಆನವಟ್ಟಿಯಲ್ಲಿ ಒಂದು ಕಿರಾಣಿ ಅಂಗಡಿ ನಡೆಸುತ್ತಿದ್ದೆನು. ಕ್ವಿಟ್ ಇಂಡಿಯಾ ಚಳವಳಿ ಕಾಲಕ್ಕೆ ನಮ್ಮ ಖಾದಿ ಸಿದ್ದಲಿಂಗಪ್ಪ, ಮೈಲಾರ ಮಹಾದೇವಪ್ಪ, ಮೈಲಾರ ಸಿದ್ದಮ್ಮ, ಹಂಸಭಾವಿಯ ಹುಲ್ಲತ್ತಿಮಾಸ್ತರು ಹಾಗೂ ಇನ್ನೂ ಅನೇಕ ದೇಶಪ್ರೇಮಿಗಳು ನಮ್ಮಲ್ಲಿ ವಸತಿಮಾಡುತ್ತಿದ್ದರು. ನಾನು ಚಳವಳಿಗಾರರಿಗೆ ಸಹಾಯಮಾಡುತ್ತಿದ್ದೇನೆಂದು ದಿ. 10-10-1942ರಂದು ನನ್ನನ್ನು ಬಂಧಿಸಿ, ಡೆಟನ್ಯೂ ಆಗಿ ಇಟ್ಟುಕೊಂಡು, 1-7-1943ರಲ್ಲಿ ಬೆಂಗಳೂರು ಜೈಲಿಗೆ ವರ್ಗಾಯಿಸಿ, 19-8-1943ರಂದು ಬಿಡುಗಡೆ ಮಾಡಿದರು. ಅಂಗಡಿ ದಿವಾಳಿಯಾಗಿ, ಬೇರೆ ವ್ಯವಹಾರಕ್ಕೆ ಕೈಹಾಕಿದೆ. ಈಗ ವ್ಯವಸಾಯವನ್ನು ಅವಲಂಬಿಸಿದ್ದೇನೆ.

## ಮೈ.ಶಿ. 35 | ಎಂ. ಕೆ. ವೀರಪ್ಪಗೌಡ (ಉ|| ಪುಟ್ಟಪ್ಪ)

ಜನನ : ಸು. 1910 ಉದ್ಯೋಗ : ಕೃಷಿ ವಿಳಾಸ : ಮಳಲಗದ್ದೆ, ತಾ|| ಸೊರಬ



ನಮ್ಮ ಮನೆತನದವರು 1932-33ರ ಕಾರವಾರದ ಕರಬಂದಿ ಚಳವಳಿಯಲ್ಲಿ ಸಹಕರಿಸಿ ಶಿಕ್ಷೆಗೆ ಒಳಗಾದವರು. ನಮ್ಮ ಮನೆತನದ ಬಸವಣ್ಣೆಪ್ಪಗೌಡರು ಈ ಭಾಗದ ಗಣ್ಯ ಕಾರ್ಯಕರ್ತರು. 1939ರಲ್ಲಿ ನಾನು ನೇತೃತ್ವ ವಹಿಸಿ ಒಟ್ಟು 10 ಜನರ ತಂಡದಿಂದ ಜಂಗಲ್ ಸತ್ಯಾಗ್ರಹ ಮಾಡಿಸಿದೆ. ನನ್ನ ಜೊತೆ ಬಂಧಿತರಾದ ಇತರರೆಂದರೆ ವೀರಭದ್ರಪ್ಪಗೌಡ, ವೀರಭದ್ರಪ್ಪ, ಬಸವಲಿಂಗಪ್ಪ, ಲಕ್ಷ್ಮೀನಾರಾಯಣಪ್ಪ ಬಿನ್ ಗೋಪಾಲಯ್ಯ, ಹನುಮಪ್ಪ, ಲಿಂಗಪ್ಪಗೌಡ, ಹೊನ್ನಪ್ಪ, ಸದಾಶಿವಪ್ಪಗೌಡ, ಲಕ್ಷ್ಮೀನಾರಾಯಣಪ್ಪ ಬಿನ್ ಪುಟ್ಟಪ್ಪ. ದಿ. 25-10-1939ರಂದು ಸಾಗರದಲ್ಲಿ ನನ್ನ ಮೇಲೆ ಖಟ್ಲೆ ಹಾಕಿ (ಸಿ.ಸಿ. ನಂ. 223—1939-40ರಂದು) 1-11-1939ರಂದು ನನಗೆ ಎಂಟು ತಿಂಗಳು ಕಠಿಣ ಶಿಕ್ಷೆ, 200 ರೂ. ದಂಡ ಹಾಕಿದರು. ದಂಡ ತೆರದಿದ್ದರೆ ಮತ್ತೆ ಎರಡು ತಿಂಗಳ

ಶಿಕ್ಷೆ ಆಯಿತು. ಮೊದಲು ಶಿವಮೊಗ್ಗ ಜೈಲಿನಲ್ಲಿ ಇದ್ದು 1940ರ ಜೂನ್ ಕೊನೆಗೆ ಬೆಂಗಳೂರಿಗೆ ವರ್ಗಾಯಿಸಿದ್ದರು. ಪೂರ್ತಿ ಶಿಕ್ಷೆ ಭೋಗಿಸಿದೆ.

1942ರಲ್ಲಿ ಚಳವಳಿಯಲ್ಲಿ ಸರ್ವವಿಧದಲ್ಲೂ ಸಹಕರಿಸಿದೆ. ಸೇಂದಿ ಪಿಕೆಟಿಂಗ್‌ನಲ್ಲಿ ಪಾಲುಗೊಳ್ಳುತ್ತಿದ್ದೆ. ಆಗ ಶಾಂತತಾಭಂಗ ಆಗುವುದೆಂದು ಸರಕಾರವು ನನ್ನನ್ನು ತಾಲೂಕಿನಿಂದಲೇ ಗಡೀಪಾರು ಮಾಡಿತ್ತು.

ಮೈ.ಶಿ. 36

## ವೀರಪ್ಪಗೌಡ ಪಾಟೀಲ

ಜನನ : 1908 ಉದ್ಯೋಗ : ಕೃಷಿ ವಿಳಾಸ : ನೆಲ್ಲಿಕೊಪ್ಪ, ತೊಟ್ಟೂರು ಅಂಚೆ, ತಾ॥ ಸೊರಬ

---



ನಾನು 1928ರ ಸುಮಾರಿಗೆ ಹುಬ್ಬಳ್ಳಿಯಲ್ಲಿ ಮೆಟ್ರಿಕ್ ಪರೀಕ್ಷೆಯಲ್ಲಿ ಓದುತ್ತಿದ್ದಾಗ ಡಾ॥ ಹರ್ಡೀಕರರ ಭಾಷಣ ಕೇಳಿ ಉತ್ಸಾಹಿತನಾಗಿ ನನ್ನ ಸರ್ಜ ಕೋಟನ್ನೂ ಟೊಪ್ಪಿಗೆಯನ್ನೂ ಬೆಂಕಿಗಾಹುತಿ ಮಾಡಿ ಅಂದೇ ಖಾದೀಧಾರಿಯಾದೆ. ಅಂದಿನಿಂದಲೇ ದೇಶಸೇವೆ ಮಾಡಲು ಸಂಕಲ್ಪಮಾಡಿದೆ. ಸರದಾರ್ ವೀರನಗೌಡ್ರು, ಟಿ. ಆರ್. ನೇಸ್ವಿ, ಕೆ. ಎಫ್. ಪಾಟೀಲ, ಎಚ್. ಎಫ್. ಕಟ್ಟೀಮನಿ, ಮಹಾದೇವ ಮೈಲಾರ ಇವರೆಲ್ಲರ ಸಹವಾಸದ ಪ್ರಭಾವವೂ ನನ್ನ ಮೇಲೆ ಆಯಿತು.

ನಮ್ಮೂರಿಗೆ ಬಂದನಂತರ 1939ರಲ್ಲಿ ನಡೆದ ಮೈಸೂರು ಕಾಂಗ್ರೆಸ್ಸಿನ ಅರಣ್ಯ ಸತ್ಯಾಗ್ರಹದಲ್ಲಿ ಬೆಟ್ಟದಕೂರ್ಲಿಯ ಬಸಪ್ಪಗೌಡ್ರು ಹಾಗೂ ಇನ್ನು ಕೆಲವರ ಜೊತೆ ಸತ್ಯಾಗ್ರಹ ಮಾಡಿದೆ. ಪಟೇಲಿಕೆಗೆ ರಾಜೀನಾಮೆ ನೀಡಿದೆ. ದಸ್ತಗಿರಿ ಆಗಿ ಮುಂದೆ ಸಾಗರದಲ್ಲಿ (ಸಿ.ಸಿ. ನಂ. 229—1939-40ರಂದು) 18 ತಿಂಗಳು ಕಠಿಣ ಶಿಕ್ಷೆ, 200 ರೂ. ದಂಡ ವಿಧಿಸಲಾಯಿತು. ಮುಂದೆಯೂ ಸತ್ಯಾಗ್ರಹ ಒಂದು ತಿಂಗಳು ಸಾಗಿತ್ತು. ಪೋಲಿಸರ ಕಿರುಕುಳ ಅತಿಯಾಗಿತ್ತು. 1942ರಲ್ಲಿ ನಾನು ಸೊರಬ ಟಿ.ಸಿ.ಸಿ. ಅಧ್ಯಕ್ಷನಾಗಿದ್ದೆ. ಮಳವಳ್ಳಿ ಮರಿಸ್ವಾಮಿ ಹಿರೇಮಠ, ಶಿಕಾರಿಪುರದ ಗಿರಿಮಾಜಿಯವರು ಹಾಗೂ ಎಣ್ಣೆಕೊಪ್ಪ ಮಲ್ಲಿಕಾರ್ಜುನಪ್ಪ ಗೌಡರು ನಮಗೆ ಆಗ ಜೊತೆಗಾರರಾಗಿ, ಚಳವಳಿಯಲ್ಲಿ ಭಾಗವಹಿಸಿದ್ದೆ. ಈ ಕಾಲದಲ್ಲಿ ನನ್ನ ಬಂಧನ ಆಗಿ (ಸಿ.ಸಿ. ನಂ. 208—1942-43ರಂತೆ) 6 ತಿಂಗಳು 11 ದಿನ ಜೈಲಿನಲ್ಲಿ ಇದ್ದೆ.

ವ್ಯ.ಶಿ. 37

# ಮಲ್ಲಪ್ಪ ಕೂಸನೂರು

ಜನನ : ಸು. 1915 ಉದ್ಯೋಗ : ಕೃಷಿ ವಿಳಾಸ : ಮೂಡಿ, ತಾ॥ ಸೊರಬ

---



ಎಚ್. ಸಿ. ದಾಸಪ್ಪನವರು ಕಾಂಗ್ರೆಸ್ ಅಧ್ಯಕ್ಷರಾಗಿ ಇದ್ದ ಕಾಲದಿಂದ ನಾನು ಕಾಂಗ್ರೆಸ್ ಸೇರಿದೆ. ಕೋಡಿಕೊಪ್ಪದ ಕೆ. ಪಿ. ರುದ್ರಗೌಡರು ಚಳವಳಿ ಸೇರಲು ಪ್ರೋತ್ಸಾಹ ಕೊಟ್ಟಿದ್ದರಿಂದ 25-10-39 ರಂದು ಆನವಟ್ಟಿಯಲ್ಲಿ ಅರಣ್ಯಸತ್ಯಾಗ್ರಹ ಮಾಡಿದೆವು. ದೊಡ್ಡಕೊಪ್ಪದ ಬಸವಣ್ಣಪ್ಪ ಸಜ್ಜನಶೆಟ್ಟಿ ನಮ್ಮ ನಾಯಕರಾಗಿದ್ದು ಆ ಬ್ಯಾಚಿನಲ್ಲಿ ಕೊಟ್ರಪ್ಪಗೌಡ ಎಲಿವಾಳ, ಕಮನಳ್ಳಿಯ ರುದ್ರಪ್ಪ ಕೊಗ್ಗನಾಳ, ನೆಲ್ಲಿಕೊಪ್ಪದ ಬಸವಣ್ಣಪ್ಪ ಮರ್ಸಿ ಹಾಗೂ ದೊಡ್ಡಕೊಪ್ಪದವರಾದ ಶಿವಲಿಂಗಪ್ಪ ಕೂಸನೂರು, ಮಲ್ಲಿಕಾರ್ಜುನಪ್ಪ ಕೂಸನೂರು ಇವರುಗಳಿದ್ದರು. ನನಗೆ ಒಂದು ತಿಂಗಳು ಶಿಕ್ಷೆ ಆಗಿ (28-11-1939) ಶಿವಮೊಗ್ಗ ಜೈಲು ಸೇರಿದೆ. ಮುಂದೆ ಜೂನ್ ಕೊನೆಗೆ (1940) ಬೆಂಗಳೂರು ಸೆಂಟ್ರಲ್ ಜೈಲ್ ಸೇರಿದೆ. 8-9-1940ರಲ್ಲಿ ಬಿಡುಗಡೆ ಆದೆ.

ವ್ಯ. ಚಿಮ. 1

## ಎಸ್. ಅಣ್ಣಪ್ಪ ಶೆಟ್ಟಿ

ಜನನ : 1908 ಉದ್ಯೋಗ : ಕಾಫಿ ಪ್ಲಾಂಟರ್ ವಿಳಾಸ : ಚಿಕ್ಕಮಗಳೂರು

ನನಗೆ ತಿಳಿದಂತೆ 1921-22ರ ಸುಮಾರಿಗೇ ನಮ್ಮ ಭಾಗದಲ್ಲಿ ಹೊಸಕೊಪ್ಪ ಕೃಷ್ಣ ರಾಯರು ಕಾಂಗ್ರೆಸ್ಸಿನ ಕೆಲಸಮಾಡುತ್ತಿದ್ದು ಖಾದಿಪ್ರಚಾರ ಮುಂತಾದ ಚಟುವಟಿಕೆ ಗಳನ್ನು ಆಸ್ಥೆಯಿಂದ ಮಾಡುತ್ತಿದ್ದರು. ಅಲ್ಲದೆ ಸಮೀಪದ ಬೀರೂರಿನಲ್ಲಿ ಕೆ. ಟಿ. ಸತ್ಯ ನಾರಾಯಣ ಶೆಟ್ಟರೂ ಬಲು ಹಿಂದಿನಿಂದ ಕಾಂಗ್ರೆಸ್ಸಿನಲ್ಲಿ ಇದ್ದವರು. ನಾನು 1924-26ರ ಕಾಲದಲ್ಲಿ ಮೈಸೂರಲ್ಲಿ ಓದುತ್ತಿದ್ದು ಆಗ ದಸರಾ ಕಾಲಕ್ಕೆ ಪ್ರಜಾಪ್ರತಿನಿಧಿಸಭೆಗೆ ಹೋಗಿ ಪ್ರೇಕ್ಷಕನಾಗಿ ಕುಳಿತಿರುತ್ತಿದ್ದೆ ಮತ್ತು ನಾನೂ ಸಹ ಈ ಸಭೆಯ ಮೆಂಬರ್ ಆಗಬೇಕೆಂಬ ಆಸೆ ಬೆಳೆದು, ಸಾರ್ವಜನಿಕ ರಂಗದಲ್ಲಿ ಪ್ರವೇಶಿಸಲು ಕಾರಣವಾಯಿತು. 1928ರ ಸುಮಾರಿಗೆ ನಮ್ಮ ಊರಲ್ಲಿ ಬಿ. ಕೆ. ನರಸಿಂಹಮೂರ್ತಿ, ಎ. ಜಿ. ನಾರಾಯಣ ನಾಯ್ಕ, ಸಿ. ವಿ. ಧ್ರುವರಾವ್ ಹಾಗೂ ಡಿ|| ರಾಮಚಂದ್ರ ವಾಸುದೇವರಾವ್ ಕಾಂಗ್ರೆಸ್ಸಿನ ವಿಧಾಯಕ ಚಟುವಟಿಕೆಗಳಲ್ಲಿ ಕೆಲಸಮಾಡುತ್ತಿದ್ದವರು.

1928ರಲ್ಲಿ ಮನೆಯಲ್ಲಿ ಹಿರಿಯರಿಗೆ ತಿಳಿಸದೆ ಕಲ್ಕತ್ತಾ ಕಾಂಗ್ರೆಸ್ಸಿಗೆ ಹೋದೆ. ನಮ್ಮ ಊರಿಂದ ಅಲ್ಲಿಗೆ ಬಂದಿದ್ದ ಬಿ. ಕೆ. ನರಸಿಂಹಮೂರ್ತಿಯವರ ನೆರವಿನಿಂದ ಅಧಿವೇಶನದಲ್ಲಿ ಪ್ರವೇಶಪಡೆದೆ. ಅಧಿವೇಶನದ ಕಾಲಕ್ಕೆ ಎಲ್ಲ ನಾಯಕರ, ವಿಶೇಷವಾಗಿ ಸುಭಾಸರ ಭಾಷಣದಿಂದ ಪ್ರಭಾವಿತನಾದೆ. ಅಲ್ಲಿಂದ ಬಂದನಂತರ ಖಾದಿ ಧರಿಸಲು ಆರಂಭಿಸಿದೆನಲ್ಲದೆ ರಾಟೆಯಿಂದ ನೂಲು ತೆಗೆಯುತ್ತಲಿದ್ದೆ. 10-12 ಜನರಿಗೆ ದಾರ ತೆಗೆಯಲು ಪ್ರೋತ್ಸಾಹಿಸಿ ತಕಲಿ ಕೊಡಿಸಿದೆ. 1932ರಲ್ಲಿ ನಾನು ಸ್ವತಂತ್ರನಾಗಿ ಪುರ ಸಭೆಗೆ ಸ್ಪರ್ಧಿಸಿ ಗೆದ್ದೆ. ಮುಂದೆ 28 ವರ್ಷಗಳ ಕಾಲ ಪುರಸಭಾಸದಸ್ಯನಾಗಿದ್ದು 1947 ರಿಂದ 49ರ ವರೆಗೆ ಅಧ್ಯಕ್ಷನೂ ಆಗಿದ್ದೆ.

1938ರಲ್ಲಿ ಶಿವಪುರಕ್ಕೆ ನಮ್ಮ ಭಾಗದಿಂದ ಬಾಗಮನೆ ದೇವೇಗೌಡ, ಆಲ್ದೂರಿನ ಬಸಪ್ಪಶೆಟ್ಟಿ. ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟಿ ಇವರೆಲ್ಲ ಹೋಗಿದ್ದು ಅಲ್ಲಿ ಬಂಧಿತರೂ ಆದರು. ಮಾಕೋನಹಳ್ಳಿ ಹುಚ್ಚೇಗೌಡರೂ ಶಿವಪುರಕ್ಕೆ ಹೋಗಿದ್ದರು.

1942ರಲ್ಲಿ ನಮ್ಮ ಊರಲ್ಲಿ ಎ. ಜಿ. ನಾರಾಯಣ ನಾಯ್ಕರ ಬಂಧನವಾಯಿತಲ್ಲದೆ ನನ್ನ ಬಂಧನಕ್ಕೂ ಪೋಲಿಸರು ಬಂದರು. ಮನೆಯ ಮುಂದೆ ಹಿಂದೆ ಭಾರೀ ಪೋಲಿಸರು ಸೇರಿದ್ದರು. ಮನೆಯ ಜಗಲಿಯ ಮೇಲೆ ನಿಂತು, ಸೇರಿದ ಭಾರೀ ಸಂಖ್ಯೆಯ ಜನರನ್ನು

ಉದ್ದೇಶಿಸಿ ಭಾಷಣಮಾಡಿದೆ. ನಮ್ಮ ಊರ ವಕೀಲ ಎಚ್. ಬಿ. ರಂಗನಾಥಯ್ಯಂಗಾರರೂ ಉತ್ತೇಜಿತರಾಗಿ ಭಾಷಣ ಮಾಡಿದರು. ನಮ್ಮಿಬ್ಬರನ್ನೂ ಬಂಧಿಸಿ ಪೋಲಿಸರು 1½ ವರ್ಷ ಜೈಲಿನಲ್ಲಿ ಇಟ್ಟರು. ಈ ಕಾಲದಲ್ಲಿ ಅನೇಕ ಬಡ ಹೋರಾಟಗಾರರೂ ಬಂಧಿತರಾಗಿರಲು, ಅವರ ಮನೆಮುಂದಿಗೆ ಜೈಲಿನಿಂದಲೇ ಸಾವಿರಾರು ರೂ.ಗಳ ನೆರವು ಕಳುಹಿಸುವ ವ್ಯವಸ್ಥೆ ಮಾಡಿದ್ದೇನೆ. ಆ ಕಾಲದಲ್ಲಿ ನಮ್ಮ ಊರಲ್ಲಿ ಪ್ರಭಾತ್‌ಫೇರಿ, ವಿಧ್ವಂಸಕ ಕೃತ್ಯಗಳು ನಡೆದೇ ಇದ್ದವು. ನನ್ನ ಪತ್ನಿ ಮಂಜಮ್ಮ, ಮಗಳು ವಿಶಾಲಾಕ್ಷಮ್ಮ ಪ್ರಭಾತ್‌ಫೇರಿಗೆ ಹೋಗುತ್ತಿದ್ದರು. ನಮ್ಮ ಅಣ್ಣ ಎಸ್. ಕೃಷ್ಣಶೆಟ್ಟಿ ಕೂಡ ಆಗ 40 ದಿನ ಸ್ಥಾನಬದ್ಧತೆಯಲ್ಲಿ ಇದ್ದರು. ಸಿ. ಎಂ. ಎಸ್. ಶಾಸ್ತ್ರಿ, ಮಂಜುನಾಥ ಭಟ್ಟ, ಸಿ. ಆರ್. ಶಿವಾನಂದ, ಗೋವಿಂದಸ್ವಾಮಿ ಶೆಟ್ಟಿ, ಪಟ್ಟಾಭಿಶೆಟ್ಟಿ, ಅಣ್ಣಪ್ಪರಾವ್ ಮುಂತಾದವರು ಆಗ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿ ಬಂಧಿತರಾದರು. ಎಂ. ಎನ್. ವಿಶ್ವನಾಥಶೆಟ್ಟಿ ಎಂಬವರು ಕೋರ್ಟಿನಲ್ಲಿ ನ್ಯಾಯಾಧೀಶರ ಪೀಠದಲ್ಲಿ ಕುಳಿತು ಸ್ವರಾಜ್ಯದ ಕೋರ್ಟು ನಡೆಸಿದರು. ಆದರೆ ಅವರ ಬಂಧನ ಆಗಲಿಲ್ಲ.

ನಾನು ಜೈಲಿನಲ್ಲಿ ಇದ್ದಾಗ ದೊಡ್ಡಬಳ್ಳಾಪುರದಿಂದ ಬಂದ ನನ್ನ ಷಡ್ಡಕರು ನನ್ನ ಬಿಡುಗಡೆ ಮಾಡಿಸುತ್ತೇನೆಂದು ನನ್ನ ಮೇಲೆ ಒತ್ತಾಯ ತಂದರೂ ನಾನು ಮುಂದಿಟ್ಟ ಹೆಜ್ಜೆ ಹಿಂದಿಡಲಾರೆನೆಂದು ಹೇಳಿದೆ. ಮುಂದೆ ಜೈಲಿನಿಂದ ಬಿಟ್ಟನಂತರ ಸುಮಾರು 2½ ತಿಂಗಳು ನಾನು ಬೇಲೂರಲ್ಲಿ ನಮ್ಮ ತೋಟದಲ್ಲೇ ಇರಬೇಕೆಂದು ಸರಕಾರ ಪ್ರತಿಬಂಧ ಹಾಕಿತ್ತು. ವಾರಕ್ಕೊಮ್ಮೆ ಪೋಲಿಸರು ಬಂದು ಹೋಗುತ್ತಿದ್ದರು.

ಇದಕ್ಕೂ ಮುಂಚೆ 1941ರಲ್ಲಿ ತಾಳಕೆರೆ ಸುಬ್ರಹ್ಮಣ್ಯಂ ಅವರು ನಮ್ಮಲ್ಲಿಂದ ಕಾಂಗ್ರೆಸ್ಸಿನ ವತಿಯಿಂದ ಅಸೆಂಬ್ಲಿಗೆ ಉಮೇದುವಾರರನ್ನು ಆರಿಸಲು ಬಂದಾಗ, ನಾನು ಉಮೇದುವಾರನಾಗಲು ಸಮ್ಮತಿ ಸೂಚಿಸಿ ಅರ್ಜಿ ಕೊಟ್ಟೆ. ಕಾಂಗ್ರೆಸ್‌ನಿಂದ ಚುನಾವಣೆಗೆ ನಿಲ್ಲಲು ಜನ ಹೆದರುತ್ತಿದ್ದ ಕಾಲ ಅದು. ನನ್ನನ್ನೇ ಚುನಾವಣೆಗೆ ನಿಲ್ಲಿಸಲು, ನಾನು ಗೆದ್ದು ಬಂದೆ. 1946ರಲ್ಲೂ ಅದೇ ರೀತಿ ಸ್ಪರ್ಧಿಸಿ ಗೆದ್ದೆ. ಕಾಂಗ್ರೆಸ್ ಅಸೆಂಬ್ಲಿ ಪಾರ್ಟಿ ಕೋಶಾಧ್ಯಕ್ಷನಾಗಿ, ರೈಲ್ವೆ ಸಮಿತಿ ಸದಸ್ಯನಾಗಿ ಕೂಡ ಸೇವೆಸಲ್ಲಿಸಿದೆ.

1947ರಲ್ಲಿ 'ಮೈಸೂರು ಚಲೋ' ಚಳವಳಿ ಕಾಲಕ್ಕೆ ಬೀರೂರು, ಅಜ್ಜಂಪುರ, ತರೀಕೆರೆ ಭಾಗದ ಜಾಥಾ ಬಂದು ನಮ್ಮ ಊರಲ್ಲಿ ಆಜಾದ್ ಪಾರ್ಕ್‌ನಲ್ಲಿ ಸುಮಾರು 10,000 ಜನ ಸೇರಿ, ನನ್ನ ಅಧ್ಯಕ್ಷತೆಯಲ್ಲಿ ಸಭೆ ಆಯಿತು. ನಾನೂ ಜಾಥಾ ಸೇರಿದೆ. ಬೇಲೂರಿಗೆ ಹೋಗಿರಲು ಅಲ್ಲಿ ಬಂಧಿತನಾದೆ. ಜಾಥಾದಲ್ಲಿ ಒಟ್ಟು 40–45 ಜನರಿದ್ದು ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟಿ, ಕೆ. ಆರ್. ಕೃಷ್ಣಮೂರ್ತಿ ಮುಂತಾದವರು ಇದ್ದರು. ಅಜ್ಜಂಪುರದ ತಂಡದಲ್ಲಿ ಸುಬ್ರಹ್ಮಣ್ಯ ಶೆಟ್ಟಿ ನಾಯಕರಾಗಿದ್ದರು. ಬೇಲೂರಲ್ಲಿ ರಾತ್ರಿ 12½ ಗಂಟೆಗೆ ಭಾಷಣಮಾಡಿದೆ. ಅನಂತರ ಬೆಳಗ್ಗೆ 5½ ಗಂಟೆಗೆ ಬಂಧನ ಆಗಿ ಹಾಸನ ಜೈಲಿಗೆ ಒಯ್ದರು. ಮರುದಿನ ಬಾಗಮನೆ ದೇವೇಗೌಡರನ್ನೂ

ಬಂಧಿಸಿ ಹಾಸನಕ್ಕೆ ತಂದರು ನಮ್ಮ ಜಾಥಾದ ಉಳಿದ ಜನರು ಪಾಂಡವಪುರದ ತನಕ ಹೋಗಿ, ಅಲ್ಲಿ ಪೋಲಿಸರಿಂದ ಅಪಾರ ದೌರ್ಜನ್ಯಕ್ಕೆ ಒಳಗಾದರು. ಒಂದು ತಿಂಗಳ ನಂತರ ಬೆಂಗಳೂರು ಬಳಿ ಕೃಷ್ಣರಾಜಪುರಂ ಕ್ಯಾಂಪ್ ಜೈಲಿಗೆ ಹೋದೆವು. ಅಲ್ಲಿ ಒಂದು ವಾರ ಇರುವಷ್ಟರಲ್ಲಿ ಬಿಡುಗಡೆ ಆಯಿತು.

ಚಳವಳಿಯ ಕಾಲಕ್ಕೆ ನಮ್ಮ ತಂದೆ ಮತ್ತು ಕುಟುಂಬದ ಜನ ಎಲ್ಲ ರೀತಿಯ ಸಹಕಾರ ನೀಡಿದರು. ನಮ್ಮ ಮನೆ ಹೋರಾಟಗಾರರಿಗೂ ನಾಯಕರಿಗೂ ಮುಕ್ತದ್ವಾರ ವಾಗಿತ್ತು. ನಮ್ಮ ಸಂಬಂಧಿಗಳಾದ ಪದ್ಮಶ್ರೀ ಡಿ. ಎನ್. ಕೃಷ್ಣಯ್ಯಶೆಟ್ಟಿ ಬೆಂಗಳೂರು, ದಾವಣಗೆರೆಯ ಕಾಸಲ ಶ್ರೀನಿವಾಸ ಶೆಟ್ಟಿ, ಬೀರೂರಿನ ಕೆ. ಟಿ. ಸತ್ಯನಾರಾಯಣ ಶೆಟ್ಟಿ—ಇವರೆಲ್ಲ ಚಳವಳಿಯಲ್ಲಿ ಭಾಗವಹಿಸಿದ ವ್ಯಕ್ತಿಗಳು.

ತಾಲೂಕು ರೈತ ಸಂಘ, ಮೋಟಾರು ಕಾರ್ಮಿಕರ ಸಂಘ, ಪ್ರಾಣಿದಯಾ ಸಂಘ —ಹೀಗೆ ಅನೇಕ ಸಂಘಸಂಸ್ಥೆಗಳ ಅಧ್ಯಕ್ಷನಾಗಿ ಸೇವೆಸಲ್ಲಿಸಿರುವೆನಲ್ಲದೆ ದೇವಸ್ಥಾನಗಳಿಗೆ ಹರಿಜನರ ಪ್ರವೇಶ, ವಿಧವಾವಿವಾಹ ಮುಂತಾದ ಚಟುವಟಿಕೆಗಳಲ್ಲಿ ಮುಂದಾಗಿ ಕೆಲಸ ಮಾಡಿದ್ದೇನೆ. 1947 ರಿಂದ 1949ರ ವರೆಗೆ ಪುರಸಭಾ ಅಧ್ಯಕ್ಷನಾಗಿದ್ದಾಗ 85 ಸೈಟು ಗಳನ್ನು (30 ಅಡಿ ಉದ್ದ 40 ಅಡಿ ಅಗಲ) ಹರಿಜನರಿಗೆ ನಾಮುಮಾತ್ರ ಬೆಲೆಗೆ ಕೊಡುವ ವ್ಯವಸ್ಥೆ ಮಾಡಿದ್ದೇನೆ. ಅಲ್ಲದೆ ಪುರಸಭೆಯ ಸ್ವೀಪರ್‌ಗಳಿಗೆ ದೇವಸ್ಥಾನ ಕಟ್ಟಲು ನೆರವು ನೀಡಿದ್ದೇನೆ. ನನ್ನ ಅಂದಿನ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಮುಖ್ಯವಾಗಿ ಸಿ. ವಿ. ಧ್ರುವರಾವ್ ಹಾಗೂ ಎ. ಜಿ. ನಾರಾಯಣ ನಾಯಕ್ ಪ್ರೋತ್ಸಾಹ, ಸಹಕಾರ ನೀಡುತ್ತ ಬಂದಿದ್ದನ್ನು ಇಲ್ಲಿ ಸ್ಮರಿಸುತ್ತೇನೆ.

ಮೈ.ಚಿಮ. 2

## ದಿ|| ಹೊಸಕೊಪ್ಪ ಕೃಷ್ಣರಾಯರು
(1880–1937)

ಮೈಸೂರು ಸಂಸ್ಥಾನದ ಸ್ವಾತಂತ್ರ್ಯಯೋಧರಲ್ಲಿ ಅಗ್ರಗಣ್ಯರ ಪೈಕಿ ಹೊಸಕೊಪ್ಪ ಕೃಷ್ಣರಾಯರು ಒಬ್ಬರು. ಚಿಕ್ಕಮಗಳೂರು ಜಿಲ್ಲೆಯ ಹೊಸಕೊಪ್ಪದಲ್ಲಿ 1880ರಲ್ಲಿ ಸಂಪ್ರದಾಯಸ್ಥ ಮನೆತನದಲ್ಲಿ ಜನಿಸಿದ ಅವರು ಬಾಲ್ಯದಲ್ಲಿ ಶಾಲೆಯ ಶಿಕ್ಷಣವನ್ನೇನನ್ನೂ ಪಡೆದಿರದಿದ್ದರೂ ವೇದಪಾಠಶಾಲೆಯೊಂದರಲ್ಲಿ ಸಂಸ್ಕೃತವನ್ನು ಕಲಿತರು. ಅವರ ಮುಂದಣ ಕೀರ್ತಿಗೆ ಈ ಶಿಕ್ಷಣವೇ ತಳಹದಿಯಾಯಿತು. ಹಿರಿಯರಿಂದ ತಮಗೆ ಬಂದ ಅಡಿಕೆ ತೋಟ, ಬತ್ತದ ಗದ್ದೆ ಮುಂತಾದ ಆಸ್ತಿಪಾಸ್ತಿಯನ್ನೂ ಅವರು ಚೆನ್ನಾಗಿ ರೂಢಿಸಿಕೊಂಡಿದ್ದರು. ಮಲೆನಾಡು ಭೂಮಾಲೀಕರ ಸಂಘವನ್ನು ಕಟ್ಟಿ ರೈತರಿಗೆ

ಸರಕಾರದಿಂದ ಅನೇಕ ಸವಲತ್ತುಗಳನ್ನು ಅವರು ಸಂಪಾದಿಸಿಕೊಟ್ಟಿದ್ದರು. ಈ ಸಂಘದ ಅಧ್ಯಕ್ಷರಾಗಿದ್ದ ಇವರನ್ನು ಪ್ರಜಾಪ್ರತಿನಿಧಿಸಭೆಯ ಸದಸ್ಯನಾಗಿ ಸರಕಾರವು ನಾಮಕರಣ ಮಾಡಿತ್ತು.

ಕಿವಿಯಲ್ಲಿ ಬಂಗಾರದ ಉಂಗುರಗಳು, ಉದ್ದವಾದ ಕೋಟು ಹಾಗು ಮುಂಡಾಸು ತೊಟ್ಟು 1912ರಲ್ಲಿ ಪ್ರ.ಪ್ರ. ಸಭೆಗೆ ಹೋದ ಈ ಮಲೆನಾಡಿನ ರೈತಮುಖಂಡ ತಮ್ಮ ವಕ್ತೃತ್ವ ಹಾಗೂ ಆಕರ್ಷಕ ವ್ಯವಹಾರಗಳಿಂದ ಸರ್ವರ ಗಮನ ಸೆಳೆದರು. ದಿವಾನ್ ವಿಶ್ವೇಶ್ವರಯ್ಯನವರು ಈ ತರುಣನಿಂದ ಪ್ರಭಾವಿತರಾಗಿ, ಆತನಿಗೆ ಇಂಗ್ಲಿಷ್ ಕಲಿಯುಲು ಮತ್ತು ಆಧುನಿಕ ಫ್ಯಾಷನ್‌ನಂತೆ ಬಟ್ಟೆತೊಡಲು ಸಲಹೆನೀಡಿದರೆಂದು ಹೇಳಲಾಗುತ್ತದೆ. ಒಡನೆಯೇ ಪದವೀಧರನೊಬ್ಬನನ್ನು ತಮ್ಮ ಕಾರ್ಯದರ್ಶಿಯಾಗಿ ನೇಮಿಸಿಕೊಂಡು ಇವರು ಇಂಗ್ಲಿಷ್ ಕಲಿಯಲಾರಂಭಿಸಿದರು. ಐರೋಪ್ಯ ಶೈಲಿಯಲ್ಲಿ ಸೂಟ್ ತೊಟ್ಟು, ಕೂದಲನ್ನು ಕತ್ತರಿಸಿ ಕ್ರಾಪ್ ಬಾಚಿಕೊಂಡು, ಆಧುನಿಕ ವೇಷಭೂಷಣಧರಿಸಿದರು. ಶೀಘ್ರವಾಗಿ ಇಂಗ್ಲಿಷಿನಲ್ಲಿ ಭಾಷಣಮಾಡಲು ಹಾಗೂ ಲೇಖನ ಬರೆಯಲು ಅವರು ಸಮರ್ಥರಾದರು.

ಆದರೆ 1921ರಲ್ಲಿ ಅವರ ಜೀವನದಲ್ಲಿ ತೀವ್ರಬದಲಾವಣೆಗಳಾದವು. ಗಾಂಧೀಜಿಯವರ ಪ್ರಭಾವದಿಂದಾಗಿ ಅವರು ವಿದೇಶೀ ಉಡುಗೆಗಳನ್ನು ತ್ಯಜಿಸಿ ಖಾದಿಯನ್ನೇ ತೊಡಲು ಆರಂಭಿಸಿದರಲ್ಲದೆ ರಾಷ್ಟ್ರೀಯ ಚಳವಳಿಯಲ್ಲಿ ಧುಮುಕಿದರು. ಮಲೆನಾಡು ಡಿ.ಸಿ.ಸಿ.ಯ ಅಧ್ಯಕ್ಷರೂ ಆದರು. ಅವರು ಸಂಸ್ಥಾನಗಳ ಪ್ರತಿನಿಧಿಯಾಗಿ ಎ.ಐ.ಸಿ.ಸಿ. ಸದಸ್ಯರಾದರಲ್ಲದೆ ಕೆ.ಪಿ.ಸಿ.ಸಿ.ಯ ಉಪಾಧ್ಯಕ್ಷರೂ ಆದರು. ಬೆಳಗಾವಿ ಕಾಂಗ್ರೆಸ್ಸಿನ ಸ್ವಾಗತ ಸಮಿತಿಯ ಉಪಾಧ್ಯಕ್ಷರೂ ಆಗಿದ್ದರು. ಅಲ್ಲದೆ ಹಿಂದುಸ್ತಾನೀ ಸೇವಾದಳದ ಕರ್ನಾಟಕ ಶಾಖೆಯ ಅಧ್ಯಕ್ಷರೂ ಆದರು. 1928ರಲ್ಲಿ ಅವರು ಕಲ್ಕತ್ತ ಕಾಂಗ್ರೆಸ್ಸಿಗೆ ಹೋಗಿ ಅಲ್ಲಿ ಪೂರ್ಣಸ್ವರಾಜ್ಯದ ಠರಾವಿನ ಚರ್ಚೆಯಲ್ಲಿ ನೆಹರು, ಸುಭಾಸರ ಬೆಂಬಲಿಗರಾಗಿ, ಗಾಂಧೀಜಿ, ಮೋತೀಲಾಲರ ವಿರುದ್ಧ ಮಾತನಾಡಿ ಖ್ಯಾತರಾದರು.

ಲಂಡನ್‌ನಲ್ಲಿ ಚಕ್ರಗೋಷ್ಠಿ ನಡೆದಿರಲು ಭಾರತಕ್ಕಾಗಿ ಒಂದು ಕರಡು ಸಂವಿಧಾನವನ್ನು ಕೃಷ್ಣರಾಯರು ಸಿದ್ಧಪಡಿಸಿ ಎಲ್ಲ ಪ್ರತಿನಿಧಿಗಳಿಗೂ ಎಂ.ಪಿ.ಗಳಿಗೂ ಕಳುಹಿಸಿದ್ದರು. ಆಗಿನ ಪ್ರಧಾನಿ ಮ್ಯಾಕ್‌ಡೊನಾಲ್ಡರೂ ಇದು ಒಂದು ಬೆಲೆಬಾಳುವ ದಾಖಲೆ ಎಂದು ಇದರ ಕುರಿತು ಉದ್ಗರಿಸಿದ್ದರು.

1932ರಲ್ಲಿ ಕಡೂರು ಜಿಲ್ಲಾ ಬೋರ್ಡಿನ ಪ್ರಥಮಾಧ್ಯಕ್ಷರಾಗಿ ಆಯ್ಕೆಗೊಂಡ ಅವರು ಜಿಲ್ಲೆಯ ಸರ್ವಾಂಗೀಣ ಪ್ರಗತಿಗೆ ಶ್ರಮಿಸಿದರಲ್ಲದೆ ಕಡೂರಿನವರೆಗೆ ಇರುವ ರೈಲು ಮಾರ್ಗವನ್ನು ಚಿಕ್ಕಮಗಳೂರಿಗೂ ಮಂಗಳೂರಿಗೂ ವಿಸ್ತರಿಸಬೇಕೆಂದು ಬಹಳವಾಗಿ ಚಳವಳಿ ನಡೆಸಿದರು. ಹಳೆಯ ಮೈಸೂರಲ್ಲಿ ಚಿಕ್ಕಮಗಳೂರೊಂದೇ ರೈಲುಸಂಪರ್ಕ

ವಿಲ್ಲದ ಜಿಲ್ಲಾಕೇಂದ್ರವಾಗಿದ್ದು (ಆಗ ಜಿಲ್ಲೆಯ ಹೆಸರು—1946ರ ವರೆಗೆ—ಕಡೂರು ಎಂದಿದ್ದರೂ ಜಿಲ್ಲಾ ಕೇಂದ್ರ ಚಿಕ್ಕಮಗಳೂರೇ ಆಗಿತ್ತು) ರೈಲ್ವೆ ಸೆಸ್‌ನ ವಸೂಲಿಯಿಂದ ಸಂಗ್ರಹವಾದ ಹಣದ ಸದುಪಯೋಗ ಆಗಲೇಬೇಕೆಂದು ಅವರು ಸಕಾರಣವಾಗಿ ವಾದಿಸುತ್ತಿದ್ದರು. ಅಜ್ಜಂಪುರದಲ್ಲಿ ಖಾದೀಕೇಂದ್ರವನ್ನು ಸ್ಥಾಪಿಸಿ ಖ್ಯಾತವಿಜ್ಞಾನಿ ಪಿ. ಸಿ. ರಾಯ್ ಅವರಿಂದ ಅದರ ಉದ್ಘಾಟನೆ ಮಾಡಿಸಿದರಲ್ಲದೆ 1934ರಲ್ಲಿ ಅವರು ಅ.ಭಾ. ಖಾದೀ ಗ್ರಾಮೋದ್ಯೋಗ ಪ್ರದರ್ಶನವನ್ನು ಚಿಕ್ಕಮಗಳೂರಲ್ಲಿ ಏರ್ಪಡಿಸಿದ್ದರು. ಪರಮ ಉದಾರಿಗಳಾದ ಅವರ ಮನೆ ಒಂದು ಧರ್ಮಶಾಲೆಯಂತೆ, ಸರ್ವರಿಗೂ ಸದಾ ತೆರೆದಿತ್ತು. ಹಿಂದೂ ದೇವಾಲಯ ದತ್ತಿಗಳ ರಕ್ಷಣೆಗಾಗಿ ಶ್ರಮಿಸುತ್ತಿದ್ದ ಅವರು ಮದ್ರಾಸ್‌ನಲ್ಲಿ ಆ ಬಗ್ಗೆ ಆದ ಕಾನೂನನ್ನು ತೀವ್ರವಾಗಿ ವಿರೋಧಿಸಿ, ಅದಕ್ಕಾಗಿ ಸಿಮ್ಲಾದವರೆಗೆ ಯಾತ್ರೆ ಮಾಡಿದ್ದರು. ಸಂಗೀತದಲ್ಲಿ ಅವರಿಗೆ ಅಪಾರ ಅಭಿರುಚಿ. ಅವರ ಹೊಸಕೊಪ್ಪ ಮತ್ತು ಚಿಕ್ಕಮಗಳೂರುಗಳಲ್ಲಿದ್ದ ಮನೆಗಳಿಗೆ ಅನೇಕ ಸಂಗೀತ ವಿದ್ವಾಂಸರು ಬಂದು ಕಾರ್ಯಕ್ರಮ ನಡೆಸುತ್ತಿದ್ದರು. ಯಕ್ಷಗಾನದ ಬಗ್ಗೆಯೂ ಅವರಿಗೆ ಅಪಾರ ಆಸ್ಥೆ. ಪುಸ್ತಕಪ್ರೇಮಿಗಳೂ ಆದ ಅವರು ಚಿಕ್ಕಮಗಳೂರಿನ ಕೃಷ್ಣ ರಾಜೇಂದ್ರ ಸಾರ್ವಜನಿಕ ಗ್ರಂಥಭಂಡಾರವನ್ನು ಸುಧಾರಿಸಿದ್ದರಲ್ಲದೆ, ಜಿಲ್ಲಾ ಬೋರ್ಡ್ ಕಟ್ಟಡದ ಕೆಳಭಾಗವನ್ನು ಗ್ರಂಥಭಂಡಾರಕ್ಕೆಂದೇ ಯೋಗ್ಯ ವಿನ್ಯಾಸದ ಸಹಿತ ಮಾಡಿಸಿದ್ದರು.

ಅವರ ಔದಾರ್ಯ ಮಿತಿಮೀರಿದ್ದಾಗಿ ತಮ್ಮ ಕೊನೆಯ ದಿನಗಳಲ್ಲಿ ಅವರು ಆರ್ಥಿಕ ಸಂಕಷ್ಟಗಳಿಗೆ ಒಳಗಾದರು. 1935ರಲ್ಲಿ ಅಸೌಖ್ಯಬಿದ್ದ ಅವರು ವಿವಿಧ ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮ ಅವಿಶ್ರಾಂತ ದುಡಿಮೆಯಿಂದಾಗಿ ಆರೋಗ್ಯವನ್ನು ಮತ್ತೆ ಪಡೆಯಲಾರದೆ 1937ರಲ್ಲಿ ತೀರಿಕೊಂಡರು.

ಸಾರ್ವಜನಿಕ ಕಾರ್ಯಕರ್ತರಾಗಿ ಹಾಗೂ ಸರಕಾರದ ಕ್ರಮಗಳ ಟೀಕಾಕಾರರಾಗಿ ಅವರು ಎಷ್ಟು ಪ್ರಭಾವಿಗಳಾಗಿದ್ದರೆಂದರೆ ದಿವಾನ್ ಅಲ್‌ಬಿಯನ್ ಬ್ಯಾನರ್ಜಿಯವರು ಒಮ್ಮೆ ಪ್ರ.ಪ್ರ. ಸಭೆಯಲ್ಲಿ ತಾವು ನೀಡಿದ ಹೇಳಿಕೆಯೊಂದರ ಬಗ್ಗೆ ಮುಂದೆ ಕೃಷ್ಣ ರಾಯರ ಕ್ಷಮೆ ಕೇಳಬೇಕಾದ ಪ್ರಸಂಗ ಬಂದಿತ್ತು.

ಟಿ. ಜಿ. ಸತ್ಯನಾರಾಯಣ
(ಇತಿಹಾಸ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ)

ವ್ಯ. ಚಿಮ. 3

## ಕೆ. ಎಂ. ರಾಮಚಂದ್ರಶೆಟ್ಟಿ

ಜನನ : 1913 ಉದ್ಯೋಗ : ನಿವೃತ್ತಜೀವನ ವಿಳಾಸ : ಸ್ಟೇಷನ್ ರಸ್ತೆ, ಹಾಸನ



ಬಾಲ್ಯದಿಂದಲೂ ನನಗೆ ರಾಷ್ಟ್ರೀಯ ವಿಚಾರಗಳಲ್ಲಿ ಆಸ್ಥೆ. 1924ರಲ್ಲಿ ನಮ್ಮ ಊರು ಚಿಕ್ಕಮಗಳೂರಿನಿಂದ ನನ್ನ ಚಿಕ್ಕಪ್ಪ ಕೆ. ಸೂರಪ್ಪ ಶ್ರೇಷ್ಠಿ ಅವರು ಬೆಳಗಾವಿ ಕಾಂಗ್ರೆಸ್ಸಿಗೆ ಪ್ರೇಕ್ಷಕರಾಗಿ ಹೋಗಿದ್ದು, ಅವರು ಅಲ್ಲಿನ ಬಗ್ಗೆ ನೀಡಿದ ವರದಿಗಳಿಂದ ನನ್ನ ಉತ್ಸಾಹ ಇಮ್ಮಡಿಯಾಯಿತು. ಖಾದಿ ಬಟ್ಟೆಗಳನ್ನೇ ಧರಿಸುವ ಉತ್ಸಾಹ, ಮೋಹಕ ಪದಾರ್ಥಗಳ ಬಗ್ಗೆ. ತಿರಸ್ಕಾರ, ಸಕ್ಕರೆಗೆ ಎಲುಬಿನ ಪುಡಿ ಕೂಡಿರುವುದೆಂದು ನಂಬಿ ಸಿಹಿ ಪದಾರ್ಥಗಳ ಬಹಿಷ್ಕಾರ, ಇದೆಲ್ಲ ನನ್ನಲ್ಲಿ ಆದ ಬದಲಾವಣೆಗಳು. 1927ರಲ್ಲಿ ಗಾಂಧೀಜಿಯವರು ಶಿವಮೊಗ್ಗದಿಂದ ಭೂಪಾಳಂ ಚಂದ್ರಶೇಖರಯ್ಯನವರ ಕಾರಿನಲ್ಲಿ ಚಿಕ್ಕಮಗಳೂರಿಗೆ ಬಂದರು (ಫೆ. 16). ಗಾಂಧೀ ದಂಪತಿಗಳನ್ನು ಸ್ವಾಗತಿಸಿ ರಾಜಬೀದಿಗಳಲ್ಲಿ ಮೆರವಣಿಗೆಯ ಮೂಲಕ ಜಿಲ್ಲಾ ಕಚೇರಿ ಆವರಣಕ್ಕೆ ಕರೆತರಲಾಯಿತು. ಅವರ ಹಿಂದೀ ಭಾಷಣವನ್ನು ಗಂಗಾಧರರಾವ್ ದೇಶಪಾಂಡೆಯವರು ಕನ್ನಡಕ್ಕೆ ತರ್ಜುಮೆ ಮಾಡುತ್ತಿದ್ದರು. ಇಂಗ್ಲಿಷ್ ಭಾಷಣವನ್ನು ಭೂಪಾಳಂ ಅನುವಾದ ಮಾಡುತ್ತಿದ್ದರು. ಅಂದಿನ ಪುರಸಭಾಧ್ಯಕ್ಷರಾದ ಬಿ. ಕೇಶವಯ್ಯನವರ ಹಸ್ತದಿಂದ ಗಾಂಧೀಜಿಯವರಿಗೆ 5,000 ರೂ.ಗಳ ನಿಧಿ ಅರ್ಪಿಸಲಾಯಿತು. ಪುರಸಭೆಯ ಹಿಂಭಾಗದಲ್ಲಿದ್ದ ಟೆನಿಸ್ ಕೋರ್ಟ್‌ನಲ್ಲಿ ಮಹಿಳೆಯರಿಗಾಗಿ ಕಸ್ತೂರ್‌ಬಾ ಅವರ ಭಾಷಣ ಏರ್ಪಡಿಸಲಾಗಿತ್ತು. ಲಾಯರ್ ಸುಂದರಂ ಅಯ್ಯರ್‌ರ ಪತ್ನಿ ತಮ್ಮ ಚಿನ್ನದ ಬಳೆಗಳನ್ನೂ, 8–10 ವರ್ಷ ಹೆಣ್ಣುಮಗು ಒಂದು ಚಿನ್ನದ ಉಂಗುರವನ್ನೂ, ಅನೇಕರು ಹಣವನ್ನೂ ಹರಿಜನ ನಿಧಿಗೆ ಅಲ್ಲಿಯೇ ಕೊಟ್ಟರು.

ಅಸ್ಪೃಶ್ಯತಾ ನಿವಾರಣೆ ಹಲವರ ಮನಹೊಕ್ಕಿತ್ತೆಂಬ ಸಂಗತಿ, ಆ ಕಾಲದಲ್ಲಿ ಸುಂದರಂ ಅಯ್ಯರ್ ಅವರು ಅಸ್ಪೃಶ್ಯ ಜಾತಿಯವನೊಬ್ಬನನ್ನು ಊಳಿಗಕ್ಕೆ ಇಟ್ಟುಕೊಂಡುದರಿಂದ ಕಂಡುಬರುತ್ತದೆ.

ನಾವುಗಳು ಪ್ರತಿದಿನ ಖಾದಿ ಭಂಡಾರದ ಜಗಲಿಯ ಮೇಲೆ ಚರಕ, ತಕಲಿಗಳಿಂದ ನೂಲುತ್ತಿದ್ದೆವು. ಊರಲ್ಲಿ ದೇಶಭಕ್ತಿಪರ ಗೀತೆಗಳ ಸಹಿತ ಪ್ರಭಾತ್‌ಫೇರಿ ಆರಂಭಿಸಿದೆವು.

1927–28ರಲ್ಲಿ ಖಾದಿಭಂಡಾರದಲ್ಲಿ ನರಸಿಂಹಮೂರ್ತಿಯವರು ನಮಗೆ ಹಿಂದೀ ಕಲಿಸುತ್ತಿದ್ದರು.

1932ರಲ್ಲಿ ನಾನು ವ್ಯಾಸಂಗಕ್ಕೆ ಶರಣುಹೊಡೆದಿದ್ದು ಆಗಲೇ ಮುಂಬೈಗೆ ಹೋಗಿ ಕಾಂಗ್ರೆಸ್ ಹೌಸ್‌ನಲ್ಲಿ ಸೇರಿಕೊಂಡು, ಅಲ್ಲಿ ಸ್ವಯಂಸೇವಕನಾಗಿ ದುಡಿಯಹತ್ತಿದೆ. ಒಮ್ಮೆ ಮಂಗಲ್‌ದಾಸ್ ಮಾರ್ಕೆಟ್ ಮುಂದಿನ ಚೌಕದಲ್ಲಿ ಒಲೆ ಹಚ್ಚಿ ಉಪ್ಪು ತಯಾರಿಸಲು ಯತ್ನಿಸುವಾಗ ಬಂಧಿಸಿ, 6–10–1932ರಂದು ನನಗೆ ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರು ಆರು ತಿಂಗಳು ಕಠಿಣ ಶಿಕ್ಷೆ, 50 ರೂ. ಜುಲ್ಮಾನೆ, ಜುಲ್ಮಾನೆ ಕೊಡಲು ತಪ್ಪಿದರೆ ಮತ್ತೆ ಆರು ವಾರಗಳ ಸಜೆ ನೀಡಿದರು. ನಮ್ಮನ್ನು ಆರ್ಥರ್ ರೋಡ್ ಜೈಲಿಗೆ ಒಯ್ದು ಮುಂದೆ ಯರವಡಾ ಜೈಲಿಗೆ ಸ್ಥಳಾಂತರಿಸಿದರು. ಅಲ್ಲಿ ನಮ್ಮ ಜೊತೆ ರಾಮದಾಸ್ ಗಾಂಧಿಯವರು ಇದ್ದರಲ್ಲದೆ, ಚಿಕ್ಕಮಗಳೂರಿನ ಖಾದಿಭಂಡಾರದ ಎಸ್. ವೆಂಕಟರಾಮಯ್ಯ, ಬೆಂಗಳೂರಿನ ವಿ. ಎಸ್. ನಾರಾಯಣರಾವ್, ಮೈಸೂರಿನ ಎಂ. ಸೀತಾರಾಮ್ (ಸೌತ್ ಇಂಡಿಯನ್ ಕಾಫಿ ವರ್ಕ್ಸ್), ಪದಕಿ ಕೃಷ್ಣಮೂರ್ತಿ, ಹುಣಸೂರಿನ ಕೃಷ್ಣಮೂರ್ತಿ, ನಮ್ಮ ಊರ ಬಾಲ್ಯಸ್ನೇಹಿತ ಕೆ. ಆರ್. ನಾರಾಯಣ ಶೆಟ್ಟಿ, ಸಕಲೇಶಪುರದ ಶಾನುಭೋಗ ಎಸ್. ಸುಬ್ಬನರಸಿಂಹಯ್ಯ, ಕುಶಾಲನಗರ ಕೊಪ್ಪದ ಕೃಷ್ಣಮೂರ್ತಿಗಳು, ಇವರೆಲ್ಲ ಬಹುಪಾಲು ಉತ್ತರ ಕನ್ನಡ ಜಿಲ್ಲೆಯಿಂದ ಬಂಧಿತರಾಗಿ ಬಂದು ಇದ್ದರು. ಮುಂದೆ 3–3½ ತಿಂಗಳನಂತರ ವಿಸಾಪುರಕ್ಕೆ ಸಾಗಿಸಿದರು. ಯರವಡಾದಂತೆ ಇಲ್ಲಿಯೂ ಉತ್ತರ ಕನ್ನಡದಿಂದ ಬಂದವರು ಇದ್ದರು. ಕರಮರಕರ, ತುಮಕೂರಿನ ಸೂರ್ಯನಾರಾಯಣರಾವ್ ಇದ್ದರು. 27–4–1933ರಂದು ನನ್ನ ಬಿಡುಗಡೆ ಆಯಿತು. ಅಲ್ಲಿಂದ ಮುಂಬೈಗೆ ಹೋಗಿ 10–15 ದಿನಗಳನಂತರ ಚಿಕ್ಕಮಗಳೂರಿಗೆ ಬಂದೆ. ಕನ್ನಿಕಾಪರಮೇಶ್ವರಿ ದೇವಸ್ಥಾನದಲ್ಲಿ ನಮ್ಮ ಬಂಧುಗಳೆಲ್ಲರನ್ನು ಆಮಂತ್ರಿಸಿ ನನ್ನ ಅನುಭವಗಳನ್ನು ನಿವೇದಿಸಿದೆ. 1936ರಲ್ಲಿ ವಿವಾಹಿತನಾಗಿ ವ್ಯಾಪಾರದಲ್ಲಿ ತಲ್ಲೀನನಾದೆ.

1938ರಲ್ಲಿ ಶಿವಪುರ ಕಾಂಗ್ರೆಸ್ಸಿಗೆ ಹೋದಾಗ, ಹಾಸನದ ಗುಂಡಪ್ಪಗೌಡರ ಬಂಧನವಾಗುವ ತನಕ ನಾನಿದ್ದೆ. ಮುಂದೆ 1942ರ ಚಳವಳಿಯಲ್ಲಿ ಚಿಕ್ಕಮಗಳೂರಲ್ಲೇ ಪಾಲುಗೊಂಡೆ. ಸುಬ್ರಾಯ ಗಣೇಶ ಯಾಜಿ, ಸಿ. ಆರ್. ಶಿವಾನಂದ, ಸಿ. ಆರ್. ಶಂಕರಪ್ಪ, ತಿರುಮಲರಾಜ ಅರಸ್, ಧರಣೇಂದ್ರ, ಪುಟ್ಟೇಗೌಡ, ಯೋಗಾನರಸಿಂಹ, ವೆಂಕಟರಾಮು, ದೇವದಾಸ ಪೈ, ರಾಮರಾಜ ಅರಸ್ ಮೊದಲಾದವರ ಜೊತೆ ನಾನೂ ಕೆಲಸಮಾಡಿದೆ. ನಾವುಗಳು ಮಿಲ್ ಬಟ್ಟೆಯ ದಹನ, ಸೇಂದಿ ಅಂಗಡಿಯ ಮುಂದೆ ಮುಷ್ಕರ, ಶಾಲೆಗಳಲ್ಲಿ ಮುಷ್ಕರ ಇವನ್ನೆಲ್ಲ ನಡೆಸಿದೆವಲ್ಲದೆ ಗಾಂಧೀ ಜಯಂತಿಯಂದು ನಾವು 20 ಮಂದಿ ಕಳಸಾಪುರ, ಬೆಳವಾಡಿ ಮಾರ್ಗಗಳಲ್ಲಿ ಸೇಂದಿ ಲಾರಿಗಳನ್ನು ತಡೆದು ಲಾರಿಗಳಲ್ಲಿ ಇದ್ದ ಚರ್ಮದ ಚೀಲಗಳನ್ನು ಹರಿದು ಸೇಂದಿಯನ್ನು ಚೆಲ್ಲಿದೆವು. ಒಂದು

ವಾರ ಈ ಕಾರ್ಯಕ್ರಮ ನಡೆಸಿದೆವು. ನಮ್ಮ ಪೈಕಿ 7–8 ಜನ ಸಿಕ್ಕಿಬಿದ್ದು ಅವರಿಗೆಲ್ಲ ಐದು ತಿಂಗಳ ಶಿಕ್ಷೆ ಆಯಿತು. ನಾನು ಸಿಗಲಿಲ್ಲ. ಮೈಸೂರಿಗೆ ಗುಪ್ತವಾಗಿ ಹೋಗಿ ಬುಲೆಟಿನ್ ವಿತರಣೆಯ ಕೆಲಸದಲ್ಲಿ ತೊಡಗಿದೆ. ಆಗಿನ ಕಾಲದಲ್ಲಿ ಖಾಸಗಿ ಬಸ್‌ನ ಸಿಬ್ಬಂದಿಯವರು ಚಳವಳಿಯ ಗುಪ್ತಪತ್ರಿಕೆಗಳನ್ನು ಬೇಕಾದಲ್ಲಿ ಒಯ್ದು ಮುಟ್ಟಿಸುತ್ತಿದ್ದರು. ಬಸ್ ಮಾಲಿಕರೂ ಕಾಂಗ್ರೆಸ್ ಸ್ವಯಂಸೇವಕರಿಗೆ ಪುಕ್ಕಟೆಯಾಗಿ ಎಲ್ಲಿಯವರೆಗೆ ಬೇಕಾದರೂ ತಲಪಿಸುತ್ತಿದ್ದರು; ಊಟವನ್ನೂ ದಾರಿಯಲ್ಲಿ ಹಾಕಿಸುತ್ತಿದ್ದರು.

1944ರಲ್ಲಿ ಶಿವಮೊಗ್ಗದಲ್ಲಿ ಆಲ್ ಇಂಡಿಯಾ ನೇಟಿವ್ ಸ್ಟೇಟ್ಸ್ ಕಾನ್ಫರೆನ್ಸ್ ಕರ್ನಾಟಕ ಸಂಘದ ಪಕ್ಕದಲ್ಲಿ ನಡೆದು ವಿ. ಡಿ. ಸಾವರ್ಕರರು ಅದಕ್ಕೆ ಬಂದಿದ್ದರು (9–4–1944). ಭೂಪಾಳಂ ಚಂದ್ರಶೇಖರಯ್ಯ ಇದನ್ನು ಏರ್ಪಡಿಸಿದವರು. ಹಿಂದೂ ಮಹಾಸಭೆಯ ಅನೇಕ ನಾಯಕರು ಅಲ್ಲಿ ಬಂದಿದ್ದರು. ನಾನೂ ಆ ಸಭೆಗೆ ಹೋಗಿದ್ದೆ.

1947ರಲ್ಲಿ ನನ್ನ ಮೇಲೆ ವಾರಂಟ್ ಮತ್ತೆ ಹೊರಟು, ನಾನು ತಪ್ಪಿಸಿಕೊಂಡು ಮೈಸೂರಿಗೆ ಹೋದೆ. ಆಗ ಸುಬ್ರಾಯನ ಕೆರೆಯಲ್ಲಿ ನಡೆಯುತ್ತಿದ್ದ ಸಭೆಯಲ್ಲಿ ಜಾರುಗುಪ್ಪೆ ಏರಿ ಭಾಷಣಮಾಡಿದೆ. ಒಮ್ಮೆ ನನ್ನನ್ನು ಬಂಧಿಸಿ ದೇವರಾಜ ಮಾರ್ಕೆಟ್ ಲಾಕಪ್‌ನಲ್ಲಿ ಇಟ್ಟುಕೊಂಡು, ಅನಂತರ ರಾತ್ರಿ ಬಿಟ್ಟರು. ಮುಂದೆ ಕೆ.ಆರ್. ನಗರ, ಹೊಳೇನರಸೀಪುರಗಳಿಗೆ ಹೋಗಿ ಶಾಲೆಗಳ ಪಿಕೆಟಿಂಗ್, ಮುಷ್ಕರ ಮಾಡಿಸಿದೆ.

ಸ್ವಾತಂತ್ರ್ಯ ಸಿಕ್ಕಾಗ ನಮ್ಮ ಊರ ಕನ್ನಿಕಾಪರಮೇಶ್ವರಿ ದೇವಾಲಯದ ಅಷ್ಟಪೀಠದ ರಥವನ್ನು ತಂದು ಅದರಲ್ಲಿ ಗಾಂಧೀಜಿ, ನೆಹರು, ಸುಭಾಸ್, ಸರ್ದಾರ್ ಪಟೇಲ್ ಮೊದಲಾದವರ ಭಾವಚಿತ್ರವಿಟ್ಟು ರಥವನ್ನು ಶೃಂಗರಿಸಿ ಊರಲ್ಲಿ ಮೆರವಣಿಗೆ ಮಾಡಿದೆವು. ಸ್ಕೌಟು, ಸೇವಾದಳ, ವಿದ್ಯಾರ್ಥಿವಿದ್ಯಾರ್ಥಿನಿಯರು, ಊರ ವಾಹನಗಳು ಮೆರವಣಿಗೆಯಲ್ಲಿ ಪಾಲುಗೊಂಡಿದ್ದವು. ಮರುದಿನ ಬಡವರಿಗೆ ಅನ್ನಸಂತರ್ಪಣೆ ಕೂಡ ಆಯಿತು.

ಈಗ ನಾನು ಹಾಸನದಲ್ಲಿ ಇದ್ದು ಇಲ್ಲಿನ ಸ್ವಾತಂತ್ರ್ಯ ಹೋರಾಟಗಾರರ ಸಂಘದ ಕಾರ್ಯದರ್ಶಿ ಆಗಿದ್ದೇನೆ.

ಮೈ.ಚಿಮ. 4

## ಎಸ್. ವಿ. ರಾಮಚಂದ್ರರಾವ್

ಜನನ : ? ಉದ್ಯೋಗ : ಶೈಕ್ಷಣಿಕ ಅಧಿಕಾರಿ ವಿಳಾಸ : ಚಿಕ್ಕಮಗಳೂರು

---

ವಿದ್ಯಾರ್ಥಿಯಾಗಿದ್ದಾಗಲೇ ನಾನು ಖಾದಿ ತೊಡುತ್ತಿದ್ದೆನಲ್ಲದೆ ಚಿಕ್ಕಮಗಳೂರಿನ ಖಾದಿ ವಸ್ತ್ರಾಲಯಕ್ಕೂ ಹೋಗಿ, ಅಲ್ಲಿನ ಮ್ಯಾನೇಜರ್ ವೆಂಕಟರಾಮಯ್ಯನವರ ಜೊತೆ ಸದಾ ವಿಚಾರವಿನಿಮಯ ಮಾಡುತ್ತಿದ್ದೆ. ಅವರು ನಿಜವಾಗಿ ಗಾಂಧೀಭಕ್ತರಾಗಿದ್ದು

ಕಿರಿಯರಿಗೆ ಮಾರ್ಗದರ್ಶನ ನೀಡುತ್ತಿದ್ದರು. ಸಿ. ವಿ. ಧ್ರುವ ಇವರ ಜೊತೆ ನಡೆಸುತ್ತಿದ್ದ ಸಂಭಾಷಣೆಗಳೂ ದೇಶಪ್ರೇಮವನ್ನು ಪೋಷಿಸಿದವು. ಇವುಗಳ ಜೊತೆ ಚಿಕ್ಕಮಗಳೂರಿನ ನ್ಯಾಷನಲ್ ಶಾಲೆಯ ತರಬೇತಿ ಜೇರಿ. ನೂಲುವುದು ಆಗನಿಂದಲೇ ಅಭ್ಯಾಸವಾಗಿತ್ತು.

1942ರ ಚಳವಳಿ ಶುರು ಆದಾಗ ನಾನು ಮೈಸೂರಲ್ಲಿ ಅಂತಿಮ ಬಿ.ಎ.ಯಲ್ಲಿ, ಶಾಲಾಕಾಲೇಜುಗಳ ಬಹಿಷ್ಕಾರದಲ್ಲಿ ಪಾಲುಗೊಂಡಿದ್ದೆ. ಎಚ್. ವೈ. ಶಾರದಾಪ್ರಸಾದ, ಎಂ. ವಿ. ಕೃಷ್ಣಪ್ಪ ಆಗ ನಮ್ಮ ನಾಯಕರು. ಸಭೆ, ಮೆರವಣಿಗೆಗಳಲ್ಲೂ ತಪ್ಪದೆ ಭಾಗವಹಿಸುತ್ತಿದ್ದೆ. ಮುಂದೆ ಚಿಕ್ಕಮಗಳೂರಿಗೆ ಬಂದು, ಇಲ್ಲೂ ವಿದ್ಯಾರ್ಥಿಗಳು ಸಾಗಿಸುತ್ತಿದ್ದ ಚಳವಳಿಯಲ್ಲಿ ಸೇರಿಕೊಂಡೆ. ಇದರಿಂದ ಇಲ್ಲಿ ಚಳವಳಿಗೆ ಹೊಸ ಹುರುಪು ಬಂದಂತಾಯಿತು. ಮೈಸೂರಿನಲ್ಲಿ ನಾನು ಪಡೆದ ಅನುಭವವನ್ನು ವಿವರಿಸಿ ವಿದ್ಯಾರ್ಥಿನಿಯರೂ ಚಳವಳಿಯಲ್ಲಿ ಭಾಗವಹಿಸುವಂತೆ ಮಾಡಿದೆ.

ಪ್ರತಿದಿನ ಊರಲ್ಲಿ ಪ್ರಭಾತ್‌ಫೇರಿ, ಮಧ್ಯಾಹ್ನ ಮೆರವಣಿಗೆ, ಸಾಯಂಕಾಲ ಸಭೆ ಇವು ನಿತ್ಯದ ಕಾರ್ಯಕ್ರಮ. ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸಪರಂಪರೆಯನ್ನು ರಸವತ್ತಾಗಿ ತಿಳಿಸಿ ನಾನು ಭಾಷಣಮಾಡುತ್ತಿದ್ದೆನಲ್ಲದೆ ನನ್ನ ಭಾಷಣ ಮುಗಿದ ತಕ್ಷಣ ಮುಂದಿನವರ ಭಾಷಣಕ್ಕೆ ಕಾಯದೆ, ಪೋಲಿಸರಿಗೆ ಸಿಗದಂತೆ ಯಾರಾದರೊಬ್ಬರು ಸ್ನೇಹಿತರ ಮನೆ ಸೇರುತ್ತಿದ್ದೆ. ನಮ್ಮ ಮನೆಗೆ ಹೋಗದೆ ತಪ್ಪಿಸಿ ನಿತ್ಯ ಭಾಷಣಕ್ಕೆ ಹಾಜರಾಗುತ್ತಿದ್ದೆ. ಕಡೆಗೊಂದು ದಿನ ಅಜಾದ್ ಪಾರ್ಕ್‌ನಲ್ಲಿ ಅಣ್ಣಪ್ಪ ಶೆಟ್ಟರ ಅಧ್ಯಕ್ಷತೆಯಲ್ಲಿ ಸಭೆ ನಡೆದಾಗ ನನ್ನ ಭಾಷಣ ಆದಾಗಲೇ ನನ್ನನ್ನು ಬಂಧಿಸಿ ಒಯ್ದರು (5–9–1942). ಚಿಕ್ಕಮಗಳೂರಿನಲ್ಲೇ ನಾನು ಸ್ಥಾನಬದ್ಧತೆಯಲ್ಲಿ ಒಟ್ಟು ಮೂರು ತಿಂಗಳು ಒಂದು ದಿನ ಇದ್ದೆ. ಆಗ ನಮ್ಮ ಜೈಲಿನಲ್ಲಿ ಟಿ. ಸುಬ್ರಹ್ಮಣ್ಯಂ, ಬೆಂಗಳೂರಿನ ಗುಂಡೇನಹಳ್ಳಿ ನಂಜಪ್ಪ, ಎಂ. ಎನ್. ಜೋಯಿಸ್, ಸಿ. ವಿ. ಧ್ರುವ, ಎಸ್. ಸುಬ್ಬರಾವ್, ಗೋವಿಂದ ಶೆಟ್ಟಿ, ಮೂಡಿಗೆರೆ ಕೃಷ್ಣೇಗೌಡ ಇವರಲ್ಲದೆ ವಿದ್ಯಾರ್ಥಿ ನಾಯಕರಾದ ಸಿ. ಆರ್. ಶಿವಾನಂದ, ಸಿ ಆರ್. ಶಂಕರಪ್ಪ ಹಾಗೂ ವಿದ್ಯಾರ್ಥಿನಿಯರಾದ ಸಿ. ಆರ್. ಸುಬ್ಬಮ್ಮ, ಎನ್. ಆರ್. ಸರಸ್ವತಿ, ಎಚ್. ಆರ್. ವೈದೇಹಿ, ಜಯಮ್ಮ ಇವರೆಲ್ಲ ಇದ್ದರು. ಜೈಲಿನಲ್ಲಿ ಬಂದಿಗಳ ವ್ಯವಸ್ಥೆ ನೋಡಿಕೊಳ್ಳಲು ನನ್ನನ್ನೇ ಪ್ರಮುಖನಾಗಿ ನೇಮಿಸಿಕೊಂಡರು. ಊಟ, ಉಪಚಾರ, ಶಿಸ್ತುಗಳ ವ್ಯವಸ್ಥೆ ನೋಡಿಕೊಂಡು ಜೈಲಿನ ಅಧಿಕಾರಿಗಳ ಹಾಗೂ ಕೈದಿಗಳ ನಡುವೆ ಸಂಪರ್ಕ ಸಾಧಿಸುವ ಮಧ್ಯಸ್ಥಿ ಕೆಲಸ ಮಾಡುತ್ತಿದ್ದೆ. ಬಂದಿಗಳಿಗೆ ಸಾಧ್ಯವಿದ್ದಷ್ಟು ಸವಲತ್ತು ಒದಗಿಸುವಂತೆ ಮಾಡಿದೆ. ಜೈಲು ಸಿಬ್ಬಂದಿಯವರೂ ನನ್ನ ಮಾತಿಗೆ ಗೌರವ ಕೊಡುತ್ತಿದ್ದರು. ನನ್ನ ಶಾಂತಸ್ವಭಾವ ಇದಕ್ಕೆ ಕಾರಣ. ಅನೇಕ ವಿದ್ಯಾರ್ಥಿಗಳ ಹಿರಿಯರು ಜಾಮೀನು ಕೊಟ್ಟು ತಮ್ಮ ಮಕ್ಕಳನ್ನು ಬಿಡಿಸಿಕೊಂಡು ಹೋದರು. ನಾನು ಮಾತ್ರ ಅಪಾಲಜಿ ಪತ್ರಕ್ಕೆ ಬರೆದುಕೊಡದೆ ಇದ್ದೆ. 6–12–1942ರಂದು ಅವರೇ ಬಿಡುಗಡೆಮಾಡಿದರು.

ಮೈ.ಚಿಮು. 5

# ಸುಬ್ರಾಯ ಗಣೇಶ ಯಾಜಿ

ಜನನ : 1923 ಉದ್ಯೋಗ : ಮುದ್ರಣಾಲಯ ವಿಳಾಸ : ಮಲೆನಾಡು ಪ್ರೆಸ್, ಚಿಕ್ಕಮಗಳೂರು

---



ಉತ್ತರ ಕನ್ನಡ ಜಿಲ್ಲಾ ಹೊನ್ನಾವರ ತಾ|| ಕರ್ಕಿಯವರಾದ ನಮ್ಮ ತಂದೆ ಗಣೇಶ ರಾಮ ಯಾಜಿಯವರು ಉತ್ತರ ಕನ್ನಡದ 'ಕಾನಡಾ ಧುರೀಣ' (ಕುಮಟಾ) ಪತ್ರಿಕೆಯ ಸಂಪಾದಕರಾಗಿ ಹತ್ತು ವರ್ಷ ಸೇವೆ ಸಲ್ಲಿಸಿದ್ದರಲ್ಲದೆ, 1930ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲುಗೊಂಡು ತುರಂಗ ಸೇರಿದ್ದರು. ಬ್ರಿಟಿಷ್ ಸರಕಾರವು ಪತ್ರಿಕೆಯ ಮೇಲೆ ಪ್ರತಿಬಂಧ ಹೇರಿದಾಗ, ಊರನ್ನೇ ತ್ಯಜಿಸಿ ಚಿಕ್ಕಮಗಳೂರಿಗೆ ಬಂದು ಇಲ್ಲಿ 1932ರ ಅಕ್ಷಯತದಿಗೆಯಂದು ಸ್ವಂತ ಮುದ್ರಣಾಲಯ ಆರಂಭಿಸಿದರು. ಅವರ ಮಗನಾದ ನನ್ನಲ್ಲಿ ಹುಟ್ಟಿದಾರಭ್ಯ ದೇಶಪ್ರೇಮ ತುಂಬಿತ್ತು. ಮೈಸೂರಲ್ಲಿ ನಾನು ಕಾಲೇಜು ಶಿಕ್ಷಣವನ್ನು ಪಡೆಯುತ್ತಿರಲು 1942ರ ಚಳವಳಿಯಲ್ಲಿ ಸೇರಿದೆ. ಕಾಲೇಜು ತ್ಯಜಿಸಿ ಚಿಕ್ಕಮಗಳೂರಿಗೆ ಬಂದೆ. ಪರದೇಶೀವಸ್ತ್ರ ಬಹಿಷ್ಕಾರ, ಸೇಂದಿ, ಸಾರಾಯಿ ಬಹಿಷ್ಕಾರ, ಸಾರ್ವಜನಿಕ ಭಾಷಣ ಮುಂತಾದ ಚಟುವಟಿಕೆಗಳಲ್ಲಿ ಪಾಲುಗೊಂಡೆ. ನಾವು 12–13 ಸ್ನೇಹಿತರು ಸೇರಿ 6–9–1942 ರಂದು, ಸೂರ್ಯೋದಯಕ್ಕೂ ಮೊದಲು ಕಳಸಾಪುರದಿಂದ ಬರುತ್ತಿದ್ದ ಸೇಂದಿ ಲಾರಿಯನ್ನು ಕಳಸಾಪುರ ಮತ್ತು ಮಾಗಡಿ ಕೈಮರದ ನಡುವೆ ತಡೆದು, ಪೀಪಾಯಿಗಳನ್ನು ಉರುಳಿಸಿ ಹೆಂಡವನ್ನು ನಾಶಮಾಡಿದೆವು. ಡ್ರೈವರ್ ಮತ್ತು ಕ್ಲೀನರ್ ಕಬ್ಬಿಣದ ಸಲಾಕೆ ಹಿಡಿದು ಹೊಡೆಯಲು ಬಂದಾಗ ತಪ್ಪಿಸಿಕೊಂಡೆವು. ಮುಂದೆ ಪೋಲಿಸ್ ವ್ಯಾನ್ ಬಂದು ನಮ್ಮನ್ನು ಬಂಧಿಸಿತು. ಅನಂತರ ನಮಗೆ ನಾಲ್ಕೂರಿಗೆ ಐದು ತಿಂಗಳು ಶಿಕ್ಷೆ ಆಯಿತು. ಶಿಕ್ಷೆ ಮುಗಿದಮೇಲೂ ಡೆಟಿನ್ಯೂ ಆಗಿ ಜೈಲಿನಲ್ಲಿ ಇಟ್ಟರು. 8 ತಿಂಗಳು 16 ದಿನ ಜೈಲಿನಲ್ಲಿ ಇದ್ದೆ. ಕೊನೆಯವರೆಗೆ ಚಿಕ್ಕಮಗಳೂರು ಜೈಲಿನಲ್ಲೇ ಇದ್ದೆ. ಆಗಿನ ಕಾಂಗ್ರೆಸ್ ಅಧ್ಯಕ್ಷ ಟಿ. ಸುಬ್ರಹ್ಮಣ್ಯಂ, ಎಂ. ಎಸ್. ಜೋಯಿಸ್, ಮಾಕೋನಹಳ್ಳಿ ಹುಚ್ಚೇಗೌಡರು, ಎಸ್. ಅಣ್ಣಪ್ಪಶೆಟ್ಟಿ, ಎಸ್. ವಿ. ರಾಮಚಂದ್ರರಾವ್, ಸಿ. ವಿ. ಧ್ರುವರಾವ್, ಎ. ಜಿ. ನಾರಾಯಣ ನಾಯ್ಕ ನಮ್ಮ ಜೊತೆ ಜೈಲಿನಲ್ಲಿ ಇದ್ದವರು.

1947ರ ಚಳವಳಿಯಲ್ಲಿ ಪಾಲುಗೊಂಡರೂ ನಮಗೆ ಜೈಲುವಾಸ ಆಗಲಿಲ್ಲ. ಆದರೆ ನಮ್ಮ ತಂದೆಯವರನ್ನು ಬಂಧಿಸಿ 15 ದಿನ ಮೈಸೂರು ಜೈಲಿನಲ್ಲಿಟ್ಟಿದ್ದರು.

ವೈ. ಬಿಮು. 6

## ಸಿ. ವಿ. ವೆಂಕಟರಾವ್

ಜನನ : 1923

ಉದ್ಯೋಗ : ಅಂಚೆ ಇಲಾಖೆ ಇನ್ಸ್‌ಪೆಕ್ಟರ್

ವಿಳಾಸ : ಓ.ಎಂ.ಜಿ. ಕಚೇರಿ, ಬೆಂಗಳೂರು

---



1942ರ ಚಳವಳಿ ಶುರು ಆದಾಗ ಬೆಂಗಳೂರಲ್ಲಿ ಸೀ|| ಇಂಟರ್‌ನಲ್ಲಿ ಓದುತ್ತಿದ್ದ ನಾನು ಚಳವಳಿ ಸೇರಿದೆ. ಬೆಂಗಳೂರಲ್ಲಿ ರೈಲು ಓಡಾಟ ಹಾಗೂ ಅಂಚೆ ಸಂಪರ್ಕಗಳನ್ನು ಅವ್ಯವಸ್ಥೆಗೊಳಿಸುವ ಚಟುವಟಿಕೆ ನಡೆದಿದ್ದವು. ಹೆಂಡದ ಅಂಗಡಿ ಪಿಕೆಟಿಂಗ್, ಪ್ರಭಾತ್‌ಫೇರಿಗಳಲ್ಲಿ ನಾನು ಪಾಲುಗೊಂಡೆ. ಕೆಲವು ದಿನಗಳ ಕಾಲ ಅಲ್ಲಿದ್ದು, ಮುಂದೆ ನನ್ನ ಊರಾದ ಚಿಕ್ಕಮಗಳೂರಿಗೆ ಹೊರಟೆ. ರೈಲಿನಲ್ಲಿ ಎಲ್ಲೆಡೆ ಚಳವಳಿಯವರೇ. ದಾರಿಯಲ್ಲಿ ಅನೇಕ ರೈಲ್ವೆ ಸ್ಟೇಶನ್‌ಗಳಿಗೆ ಜಖಂ ಆಗಿದ್ದು ತಿಪಟೂರು ಸ್ಟೇಶನ್ ಪೂರ್ತಿ ನಾಶ ಆಗಿತ್ತು.

ನಮ್ಮ ಊರಲ್ಲಿ 8–10 ಜನ ಉತ್ಸಾಹೀ ತರುಣರು ಸೇರಿ ಹಳ್ಳಿಗಳಿಗೆ ಹೋಗಿ ಸ್ವಾತಂತ್ರ್ಯ ಸಂಗ್ರಾಮದ ಪ್ರಚಾರ ಮಾಡಿದೆವು. ಮಾಜಿ ಎಂ.ಎಲ್.ಸಿ. ಸದಾಶಿವ ಶಾಸ್ತ್ರಿ ನಮ್ಮ ನಾಯಕರಾಗಿದ್ದು ನಿರ್ವಾಣಪ್ಪ, ಶಿವಣ್ಣ, ಮರುಳಸಿದ್ದಪ್ಪ ಮುಂತಾದವರು ನಮ್ಮ ಇತರ ಜೊತೆಗಾರರು. ಸಂಪರ್ಕಸಾಧನಗಳಾದ ಟೆಲಿಫೋನ್, ಟೆಲಿಗ್ರಾಫ್‌ಗಳನ್ನು ನಷ್ಟಗೊಳಿಸಿ ತಂತಿಗಳನ್ನು ನೀರಕುಂಡಗಳಲ್ಲಿ ಹುಗಿಯುತ್ತಿದ್ದೆವು. ಈ ವಿಚಾರ ಪೋಲಿಸರಿಗೆ ತಿಳಿದು, ಅವರು ಒಬ್ಬೊಬ್ಬರನ್ನೇ ಬಂಧಿಸಿ, ಒಂದು ತಿಂಗಳು ಜುಡಿಶಿಯಲ್ ಕಸ್ಟಡಿಯಲ್ಲಿ ಇಟ್ಟನಂತರ ವಿಚಾರಣೆ ಆಗಿ 25–11–1942ರಂದು ಶಿಕ್ಷೆ ಆಯಿತು. 1–6–1943ರಲ್ಲಿ ಬಿಡುಗಡೆ ಆಯಿತು.

ವೈ.ಚಿಮ. 7 | ## ಟಿ. ಎನ್. ವಿಶ್ವನಾಥರಾವ್ (ಈಶ್ವರಿ)

ಜನನ : 1927    ಉದ್ಯೋಗ : ?    ವಿಳಾಸ : ಬಸವನಹಳ್ಳಿ, ಚಿಕ್ಕಮಗಳೂರು

ಬಾಲ್ಯದಲ್ಲಿಯೇ ಶಿವಾಜಿ, ಝಾನ್ಸಿ ರಾಣಿ, ಕಿತ್ತೂರ ಚನ್ನಮ್ಮ, ಟಿಪ್ಪು ಮುಂತಾದ ಸ್ವಾತಂತ್ರ್ಯವೀರರ ಕತೆ ಕೇಳಿ ನಾನು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲುಗೊಳ್ಳಬೇಕೆಂಬ ಆಸೆಹೊಂದಿದ್ದೆ. ವ್ಯಾಯಾಮದಲ್ಲಿಯೂ ಆಸ್ಥೆತಳೆದು ವ್ಯಾಯಾಮ ಮಾಡುತ್ತಿದ್ದೆ. 1939ರಲ್ಲಿ ಸಿ. ವಿ. ಧ್ರುವ, ಎ. ಜಿ. ನಾರಾಯಣ ನಾಯ್ಕ, ಮಾಜಿ ಎಂ. ಪಿ. ಮಾಕೋನಹಳ್ಳಿ ಹುಚ್ಚೇಗೌಡ ಇವರ ನೇತೃತ್ವದಲ್ಲಿ ಮದ್ಯಪಾನದ ಅಂಗಡಿ ಮುಂದೆ ಪಿಕೆಟಿಂಗ್, ವಿದೇಶೀ ವಸ್ತುಗಳ ಬಹಿಷ್ಕಾರ ಪ್ರಚಾರ ಮುಂತಾದ ಕಾರ್ಯಕ್ರಮಗಳಲ್ಲಿ ನನ್ನ ಸಹಪಾಠಿಗಳೊಂದಿಗೆ ಭಾಗವಹಿಸುತ್ತಿದ್ದೆ. ಆಗ ನಮ್ಮ ನಾಯಕರುಗಳನ್ನು ಮಾತ್ರ ಬಂಧಿಸಿದ್ದರು. ಬಾಲಕನಾದ ನನಗೆ ಪೋಲಿಸರ ಲಾಠಿ ಏಟು, ಬೂಟಿನ ಏಟು ಮಾತ್ರ ದೊರಕಿದವು. ಇದೇ ವರ್ಷ ಡಾ|| ಪಾರ್ಥಸಾರಾಯಣ ಪಂಡಿತ್, ಕಮಲಾದೇವಿ ಚಟ್ಟೋಪಾಧ್ಯಾಯ ಇವರು ನಮ್ಮ ಊರಲ್ಲಿ ಧ್ವಜಾರೋಹಣ ಕಾರ್ಯಕ್ರಮ ಜರುಗಿಸಲು ನಾನೂ ಸಿ. ಎಂ. ಶ್ರೀನಿವಾಸರಾವ್ ಈ ಕಾರ್ಯಕ್ರಮದ ಯಶಸ್ಸಿಗೆ ಸಹಕರಿಸಿದೆವು.

ನಾನು ಏಳನೆಯ ವರ್ಗದಲ್ಲಿ ಓದುತ್ತಿದ್ದಾಗ 1942ರ ಚಳವಳಿ ಶುರು ಆಗಿ, ನಾನು ವಿದ್ಯಾರ್ಥಿಮುಖಂಡನಾಗಿ ಚಳವಳಿಯಲ್ಲಿ ಧುಮುಕಿದೆ. ಮಾಜಿ ಎಂ.ಎಲ್.ಎ.ಗಳಾದ ಸಿ. ಎಂ. ಎಸ್. ಶಾಸ್ತ್ರಿ, ಸಿ. ಆರ್. ಶಂಕರಪ್ಪ, ಸಿ. ಆರ್. ಶಿವಾನಂದ ಇನ್ನೂ ಅನೇಕರು ಜೊತೆಗೂಡಿ ಮದ್ಯದ ಅಂಗಡಿ ಸುಡುವಿಕೆ, ವೈರ್ ಕಟಿಂಗ್, ಶಾಲೆಗಳಲ್ಲಿ ಪಿಕೆಟಿಂಗ್ ಹಾಗೂ ಚಳವಳಿ ಉಗ್ರವಾಗಿ ನಡೆಯುವಂತೆ ಭಾಷಣ ಮುಂತಾದ ಕಾರ್ಯಕ್ರಮ ನಡೆಸಿದೆ. 3-9-1942ರಂದು ನನ್ನನ್ನು ಬಂಧಿಸಿದರು. ಗಾಂಧೀ ಜಯಂತಿ ದಿನ ಜೈಲಿನಲ್ಲಿದ್ದ ನಾನು ಜೈಲು ಕಟ್ಟಡದ ಮೇಲೆ ಧ್ವಜಾರೋಹಣ ಮಾಡಿದೆ. ಎಸ್.ಡಿ.ಓ. ಅವರು ರೈಫಲ್ ಬಾರ್‌ಮಾಡಿ ಗುಂಡು ಹಾರಿಸುವುದಾಗಿ ಹೆದರಿಸಿದರೂ ಬಿಡದೆ, ಧೈರ್ಯದಿಂದ ಧ್ವಜ ಹಾರಿಸಿದೆ. ಆಗ ಜೈಲಿನ ಹೊರಗಡೆ ಸಾವಿರಾರು ಜನ ಮೆರವಣಿಗೆಯಲ್ಲಿ ಹೊರಟವರು ಜೈಕಾರಮಾಡಿದರು. ನನ್ನ ಮೇಲೆ ಎರಡು ಮೊಕದ್ದಮೆ ಹೂಡಿದರು. ಟಿ. ಸೀತಾರಾಮಯ್ಯ ಹಾಗೂ ಬಿ. ಕೆ. ನರಸಿಂಹಮೂರ್ತಿ ನನ್ನ ಪರ ಮುಫತ್ತಾಗಿ ವಕೀಲಿ ನಡೆಸಿದರು. ಇದರಿಂದ ಮೊಕದ್ದಮೆ ವಜಾ ಆಯಿತು. ನಾನು ಕೋರ್ಟಿನ ಹೊರಬಂದಾಗ ನನ್ನನ್ನೂ ನನ್ನ ಸಹಪಾಠಿ ಬಿ. ಜೆ. ಸುಬ್ಬರಾವ್‌ನನ್ನೂ

ಮತ್ತೆ ಬಂಧಿಸಿದರು. ಮುಂದೆ ಎಲ್ಲ ವಿದ್ಯಾರ್ಥಿಗಳನ್ನು ಬಿಡಬೇಕೆಂಬ ಹುಕುಂನಂತೆ 16-12-1942ರಲ್ಲಿ ಬಿಡುಗಡೆ ಆದೆ.

1943ರಿಂದ 1946ರ ವರೆಗೆ ಮೂರು ವರ್ಷವೂ ಹೈಸ್ಕೂಲ್ ಸ್ಟೂಡೆಂಟ್ಸ್ ಯೂನಿಯನ್ ಪ್ರೆಸಿಡೆಂಟ್ ಆಗಿ ಚುನಾಯಿತನಾದೆನಲ್ಲದೆ 1945ರಲ್ಲಿ ಬೆಂಗಳೂರಲ್ಲಿ ನಡೆದ ಸ್ಟೇಟ್ ಸ್ಟೂಡೆಂಟ್ಸ್ ಫೆಡರೇಶನ್ ಕಾನ್ಫರೆನ್ಸ್‌ಗೂ ಪ್ರತಿನಿಧಿಯಾಗಿ ಹೋದೆ. ಆಗ ನನ್ನನ್ನು ಆ ಸಂಸ್ಥೆಯ ಸೆಕ್ರೆಟರಿಯಾಗಿ ಆಯ್ಕೆಮಾಡಿದರು. 1947ರಲ್ಲಿ ಮನೆಯ ತಾಪತ್ರಯಗಳಿಂದ ಶಾಲೆ ತ್ಯಜಿಸಿ ಅ|| ರೆಜಿಸ್ಟ್ರಾರ್ ಆಫ್ ಕೋ|| ಸೊಸೈಟಿಯಲ್ಲಿ ಕಾರಕೂನನಾಗಿ ಸೇರಿಸಲು ಎರಡು ತಿಂಗಳಲ್ಲೇ 1947ರ ಚಳವಳಿ ಶುರು ಆಗಲು ನೌಕರಿಗೆ ರಾಜೀನಾಮೆ ಕೊಟ್ಟು, ಎಲ್ಲಾ ಶಾಲೆಗಳಲ್ಲಿ ಮುಷ್ಕರ ಮಾಡಿಸಿದೆ. ಪ್ರತಿದಿನ ಪ್ರಭಾತ್‌ಫೇರಿ, ಸರಕಾರಿ ಕಚೇರಿಗಳ ಮೇಲೆ ಧ್ವಜಾರೋಹಣ, ಮದ್ಯದಂಗಡಿಗಳ ಧ್ವಂಸ, ಸಾರ್ವಜನಿಕ ಸಭೆಗಳಲ್ಲಿ ಭಾಷಣ ಇವನ್ನೆಲ್ಲ ಮಾಡುತ್ತ ಜಿಲ್ಲೆಯಲ್ಲೆಲ್ಲ ಪ್ರವಾಸ ಮಾಡಿದೆ. ಹಾಸನಕ್ಕೂ ಕೆಲಮಿತ್ರರ ಜೊತೆ ಹೋಗಿ ಅಲ್ಲಿ ವಿದ್ಯಾರ್ಥಿಗಳ ಮುಷ್ಕರ ಮಾಡಿಸಿದೆ. ವಾಪಸಾದಾಗ ನನ್ನನ್ನು ಬಂಧಿಸಲು, ಪೋಲಿಸರ ಕೈಯಿಂದ ಬಿಡಿಸಿ ಕೊಂಡು ಪರಾರಿಯಾದೆ. ನನ್ನ ಬಂಧನವಾಯಿತೆಂದು ಕೇಳಿ ನೂರಾರು ಜನ ಪೋಲಿಸ್ ಸ್ಟೇಷನ್ ಮೇಲೆ ನುಗ್ಗಿದರು. ಆಗ ಲಾಠೀಚಾರ್ಜ್, ಫೈರಿಂಗ್ ಕೂಡ ಆಯಿತಂತೆ.

ನಾನು ಮಂಗಳೂರಿಗೆ ಹೋಗಿ ಅಲ್ಲಿನ ಡಿ.ಸಿ.ಸಿ. ಅಧ್ಯಕ್ಷ ಕೆ. ಕೆ. ಶೆಟ್ಟರ ಸಹಕಾರವನ್ನು ಕೇಳಲು ಅವರು ಆಸ್ಥೆ ತೋರಲಿಲ್ಲ. ಉಡುಪಿಗೆ ಹೋಗಿ ಅಲ್ಲಿ ಸೋಷಿಯಲಿಸ್ಟ್ ಪಾರ್ಟಿಯವರನ್ನೂ ಸಂಪರ್ಕಿಸಿ ನಿರಾಶನಾದೆ. ಮತ್ತೆ ಮಂಗಳೂರಿಗೆ ಬಂದು ಕಮ್ಯುನಿಸ್ಟ್ ಪಾರ್ಟಿ ಆಫೀಸಿನಲ್ಲಿ ಬಿ. ವಿ. ಕಕ್ಕಿಲ್ಲಾಯರನ್ನು ಸಂಪರ್ಕಿಸಲು ಅವರು ಉತ್ಸಾಹದಿಂದ ಕಾರ್ಯಕರ್ತರನ್ನೆಲ್ಲ ಬರಮಾಡಿಕೊಂಡು, ರಾತ್ರಿಯೆಲ್ಲ ಪ್ಲೆಕಾರ್ಡ್‌ಗಳನ್ನು ಬರೆಸಿ ಮಾರನೆಯ ದಿನ ಹೆಂಚಿನ ಕಾರ್ಖಾನೆ, ಗೇರುಬೀಜದ ಕಾರ್ಖಾನೆಗಳ ಕೂಲಿಕಾರರು, ಸ್ತ್ರೀಯರ ಸಹಿತ ದೊಡ್ಡ ಮೆರವಣಿಗೆ ಹೊರಡಿಸಿ ಮೈಸೂರು ಚಳವಳಿಗೆ ಬೆಂಬಲ ಸೂಚಿಸಿದರು. ಸಂಜೆ ಕಕ್ಕಿಲ್ಲಾಯರ ಅಧ್ಯಕ್ಷತೆಯಲ್ಲಿ ಹಂಪನಕಟ್ಟೆಯಲ್ಲಿ ದೊಡ್ಡ ಸಭೆ ಆಗಿ ದಿ|| ಕೊಳ್ಳರು ನನ್ನ ಪರಿಚಯ ಮಾಡಿಸಿದರು. ನನ್ನ ಭಾಷಣ ನಡೆದಾಗ ನಮ್ಮ ಊರ ಸಿ. ಎಂ. ಶ್ರೀನಿವಾಸರಾವ್, ಎಸ್. ಕೃಷ್ಣ ಅಲ್ಲಿ ಬಂದು ನಾವಿಲ್ಲದೇ ಊರಲ್ಲಿ ಚಳವಳಿ ಕುಗ್ಗುತ್ತಿರುವ ವಿಚಾರ ತಿಳಿಸಿದ್ದರು. ಅಲ್ಲಿಂದ ಚಿಕ್ಕಮಗಳೂರಿಗೆ ಬಂದು. ಮಂಗಳೂರು ಕಡೆಯಿಂದ ಸಹ ಜನಬೆಂಬಲ ನಮಗಿದೆ, ಎಂದು ಹೇಳಿದೆ. ಅಲ್ಲಿ ಮತ್ತೆ ಉತ್ಸಾಹದಿಂದ ಕಾರ್ಯಕ್ರಮಗಳು ಶುರು ಆದವು.

ಮಂಗಳೂರಿನಿಂದ ಚಾರ್ಮಾಡಿ, ಆಗುಂಬೆ ಘಾಟಿ ಮೂಲಕ ಬಂದ ಜಾಥಾಗಳನ್ನು ಅಲ್ಲಿಯೇ ತಡೆದು ಬಂಧಿಸುತ್ತಿದ್ದರು. ನಾನು ನನ್ನ ಜೊತೆಗಾರರೊಂದಿಗೆ ಮತ್ತೆ ಮಂಗಳೂರಿಗೆ ಹೊರಡಲು ಜೈಪುರದಲ್ಲಿ ಸರಕಾರದವರು ಮಿಲಿಟರಿ ಸರಬರಾಜಿಗೆಂದು

ಪಟೇಲರ ಮನೆಯಲ್ಲಿ ಶೇಖರಿಸಿಟ್ಟ ಎರಡು ಹಗೇವು ಬತ್ತವನ್ನು ಹೊರತೆಗೆದು ಹಳ್ಳಿಯ ಜನಕ್ಕೆ ತಲಾ ಐದು ಸೇರಿನಂತೆ ಹಂಚಿದೆ. 100 ಪಲ್ಲ ಬತ್ತ ಹೀಗೆ ವಿತರಣೆ ಆಯಿತು. ಮುಂದೆ ಕೊಪ್ಪ, ಆಗುಂಬೆಗಳಲ್ಲಿ ಸಭೆ ನಡೆಸಿ, ಧ್ವಜಾರೋಹಣ ಮಾಡಿ ಮಂಗಳೂರಿಗೆ ಹೋದೆ. ಅಲ್ಲಿಂದ ಸಿ. ಎಂ. ಶ್ರೀನಿವಾಸರಾವ್ ಜೊತೆ ವೇಷ ಮರೆಸಿ ಧಾರವಾಡಕ್ಕೆ ಹೋದೆ. ಅಷ್ಟರಲ್ಲಿ ಚಳವಳಿ ನಿಂತಿತು.

ಚಿಕ್ಕಮಗಳೂರಿಗೆ ಬಂದನಂತರ ನಾನು ಕಮ್ಯುನಿಸ್ಟ್ ಪಾರ್ಟಿ ಸೇರಿ, 1948ರಲ್ಲಿ ದಾವಣಗೆರೆಯಲ್ಲಿ ನಡೆದ ಆ ಪಕ್ಷದ ಕಾನ್ಫರೆನ್ಸಿಗೂ ಹೋಗಿದ್ದೆ. ಕೆಲತಿಂಗಳಲ್ಲಿ ನನ್ನ ಮದುವೆ ಆಗಿ, ಸಕ್ರೆಪಟ್ಟಣದಲ್ಲಿ ಅಧ್ಯಾಪಕನಾಗಿರಲು, ಆಗ ನಾನು 'ಕ್ರಾಂತಿಕಾರಿ' ಎಂದು ಬಂಧಿಸಿದರು. ಸಿ. ವಿ. ಧ್ರುವ ಅವರು ಚಿಕ್ಕಮಗಳೂರಲ್ಲಿ ಸಾರ್ವಜನಿಕ ಸಭೆ ನಡೆಸಿ ನನ್ನಂಥ ಸ್ವಾತಂತ್ರ್ಯಯೋಧನನ್ನು ಕಾಂಗ್ರೆಸ್ ಸರಕಾರವೇ ಬಂಧಿಸಿದ ಬಗ್ಗೆ ಖಂಡನಾನಿರ್ಣಯ ಮಾಡಿದರು. ಮುಂದೆ ಬಿಡುಗಡೆ ಆದಾಗ, ನೌಕರಿಗೆ ರಾಜೀನಾಮೆ ಕೊಟ್ಟೆ. ಉದರನಿರ್ವಾಹಕ್ಕೆ ಈಗ ಮಾರ್ಗವಿಲ್ಲ. ನನ್ನ ತಾಯಿ, ಅಣ್ಣ ನನಗಿತ್ತ ಪ್ರೋತ್ಸಾಹವನ್ನು ಮಾತ್ರ ಮರೆಯಲಾರೆ.

ವೈ.ಚಿಮ. 8

## ಎಂ. ವಿ. ಸುಬ್ಬಯ್ಯ

ಜನನ : 1909 ಉದ್ಯೋಗ : ಪತ್ರಿಕೋದ್ಯಮಿ, ವ್ಯಾಪಾರಿ ವಿಳಾಸ : ಶೆಟ್ಟಿ ಬೀದಿ, ಚಿಕ್ಕಮಗಳೂರು



ತಮಿಳು ನಾಡಿನ ಒಂದು ಗ್ರಾಮದಲ್ಲಿ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವಾಗಲೇ ಗಾಂಧಿ, ನೆಹರೂರ ಹೆಸರುಗಳು ನನ್ನಲ್ಲಿ ಚೇತನ ಮತ್ತು ಸ್ಫೂರ್ತಿಯನ್ನು ಮೂಡಿಸುತ್ತಿದ್ದವು. ಇದೇ ಕಾಲಕ್ಕೆ ನಮ್ಮ ಹಳ್ಳಿಯಿಂದ 12 ಮೈಲು ದೂರದ ಡಿಂಡಿಗಲ್‌ಗೆ ನೆಹರೂರು ಬರುತ್ತಾರೆಂದು ಕೇಳಿ, ಮನೆಮಂದಿಗೆ ತಿಳಿಸದೇ, ಆ ದೂರವನ್ನು ನಡೆದು ಡಿಂಡಿಗಲ್‌ಗೆ ತಲುಪಿ, ನೆಹರೂರ ಸಿಂಹವಾಣಿಯನ್ನು ಕೇಳಿ ಸ್ಫೂರ್ತಿಗೊಂಡು ವಿದ್ಯೆಗೆ ತಿಲಾಂಜಲಿ ನೀಡಿ ರಾಜಕೀಯ ಪ್ರವೇಶಿಸಿದೆ. ನನ್ನ ಶಿಕ್ಷಣ ಪ್ರಾಥಮಿಕ ಹಂತದಲ್ಲೇ ನಿಂತಿತು.

1942ರ ಚಳವಳಿಯಲ್ಲಿ ತಂತಿ ಕತ್ತರಿಸುವುದೇ ಮುಂತಾದ ವಿಧ್ವಂಸಕ ಕೃತ್ಯಗಳಲ್ಲಿ ಪಾಲುಗೊಂಡಿದ್ದಲ್ಲದೆ 144ನೆಯ ಸೆಕ್ಷನ್ ಮುರಿದು ಜೈಲು ಸೇರಿದೆ. ಸುಮಾರು ಆರು ತಿಂಗಳು ಜೈಲಿನಲ್ಲಿದ್ದು ಬಿಡುಗಡೆಯಾಗಿ ಬೆಂಗಳೂರಿಗೆ ಬಂದೆ. ಬೆಂಗಳೂರಲ್ಲಿ ಗುಪ್ತ ಚಟುವಟಿಕೆಗಳಲ್ಲಿ ಪಾಲುಗೊಂಡು ಹಸ್ತಪ್ರತಿ ಹಂಚುವುದು, ಪೇಪರ್ ಮತ್ತು ಪುಸ್ತಕಗಳನ್ನು ಮಾರುವುದು ನನ್ನ ಕೆಲಸವಾಯಿತು. 1943ರ ಆಗಸ್ಟ್ 9ರಂದು ಕ್ವಿಟ್ ಇಂಡಿಯಾ ಚಳವಳಿಯ ವಾರ್ಷಿಕೋತ್ಸವದ ಅಂಗವಾಗಿ ಸಭೆ ಸೇರಿದಾಗ ನಾನು ಬಂಧಿತನಾಗಿ ಆರು ತಿಂಗಳು ಬೆಂಗಳೂರು ಸೆಂಟ್ರಲ್ ಜೈಲ್‌ನಲ್ಲಿ ಇದ್ದೆ. ಸೆರೆಮನೆ ವಾಸವು ನನ್ನನ್ನು ಧೈರ್ಯಶಾಲಿಯಾಗಿ ಮಾಡಿತಲ್ಲದೆ ಜಯಪ್ರಕಾಶ ನಾರಾಯಣ್; ಡಾ|| ಲೋಹಿಯಾ, ಅರುಣಾ ಅಸಫ್ ಅಲಿ ಮುಂತಾದವರ ಆದರ್ಶಗಳಿಂದ ನಾನು ಸಮಾಜವಾದದ ಕಡೆ ವಾಲಿದೆ. ವರ್ಗರಹಿತ, ಜಾತಿರಹಿತ, ಶೋಷಣೆರಹಿತ ಸ್ವಾತಂತ್ರ್ಯ, ಸಮಾನತೆ ಕಾಣುವುದೇ ನಾನು ನಿರೀಕ್ಷಿಸಿದ ಪ್ರತಿಫಲ. ಭಾರತ ಸ್ವತಂತ್ರವಾದಾಗ ನನ್ನ ಕಲ್ಪನೆಗಳೆಲ್ಲಾ ಭ್ರಮೆ ಎಂಬುದು ಅಲ್ಪಕಾಲದಲ್ಲಿಯೇ ತಿಳಿದುಹೋಯಿತು. ಆದರೂ ಸಹಸ್ರಾರು ಜನರ ತ್ಯಾಗ ವ್ಯರ್ಥವಾಗದೆಂದು ಆಶಾವಾದಿಯಾಗಿದ್ದೇನೆ.

## ವ್ಯ.ಚಿಮ. 9 | ಎಚ್. ಎಸ್. ಮಂಜುನಾಥಯ್ಯ (ಜನವಾಸಿ)

ಜನನ : ? ಉದ್ಯೋಗ : ಪುಸ್ತಕ ವ್ಯಾಪಾರ ವಿಳಾಸ : ಪ್ಲೆನ್‌ಶಾನ್ ಮೊಹಲ್ಲಾ, ಚಿಕ್ಕಮಗಳೂರು



ನಾನು ಚಿಕ್ಕಮಗಳೂರಲ್ಲೂ ಇಡೀ ಸಂಸ್ಥಾನದಲ್ಲೂ 1938ರಿಂದ ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲುಗೊಂಡಿದ್ದೇನೆ. ನನ್ನ ತಂದೆ ಪೋಲಿಸ್ ಕಾನ್ಸ್‌ಟೆಬಲ್ ಆಗಿದ್ದರು. ಆದರೂ ಹೆದರದೆ ಕೆಲಸ ಮಾಡುತ್ತಿದ್ದೆ. ಇದಕ್ಕಾಗಿ ನಮ್ಮ ತಂದೆಯವರನ್ನು ಏಳು ತಿಂಗಳು ಸಸ್ಪೆನ್ಶನ್‌ನಲ್ಲಿ ಕೂಡ ಇಟ್ಟಿದ್ದರು. ಆಗ ನನ್ನನ್ನು ಅನೇಕ ಸಲ ಬಂಧಿಸಿ ಬಿಟ್ಟರು. ನನಗೆ ಬೂಟುಗಾಲಿನಿಂದ ಒದ್ದು ಅನೇಕ ರೀತಿಯ ಅತ್ಯಾಚಾರಗಳಿಗೆ ಒಳಪಡಿಸಿದ್ದಾರೆ. ಡಿ. ಎಚ್. ರುದ್ರಪ್ಪ, ಎಸ್. ಅಣ್ಣಪ್ಪ ಶೆಟ್ಟಿ, ಸಿ. ವಿ. ಧ್ರುವ, ಸಿ. ಎಂ. ಎಸ್. ಶಾಸ್ತ್ರಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಿಂಗಾರಿಗೌಡ ಇವರೆಲ್ಲ ನಮ್ಮ ನಾಯಕರು. ನನಗೆ ಪೆನ್‌ಶನ್ ಕೂಡ ಈವರೆಗೆ ಕೊಟ್ಟಿಲ್ಲ.

ವ್ಯ.ಚಿಮ. 10

## ಬಿ. ಎ. ಮಂಜುನಾಥ ಭಟ್ಟ

ಜನನ : ? ಉದ್ಯೋಗ : ? ವಿಳಾಸ :- ಬಸವನಹಳ್ಳಿ, ಚಿಕ್ಕಮಗಳೂರು



1942ರಲ್ಲಿ ನಾನು ಚಿಕ್ಕಮಗಳೂರಿನ ಸರಕಾರಿ ಹೈಸ್ಕೂಲಿನಲ್ಲಿ ಓದುತ್ತಿದ್ದವನು ಎಸ್.ಎಸ್.ಎಲ್.ಸಿ. ಸೆಲೆಕ್ಷನ್ ಪರೀಕ್ಷೆಗೂ ಹೋಗದೆ ಚಳವಳಿಯಲ್ಲಿ ಪಾಲುಗೊಂಡೆನು. ನಮ್ಮ ಊರಿನ ಅಣ್ಣಪ್ಪಶೆಟ್ಟಿ, ಶಿವಾನಂದ, ಶಂಕರಪ್ಪ, ಸಿ. ಎಂ. ಎಸ್. ಶಾಸ್ತ್ರಿ, ಹುಚ್ಚೇಗೌಡ ಇವರೆಲ್ಲ ನಮ್ಮ ನಾಯಕರು. ಡಿಸ್ಟ್ರಿಕ್ಟ್‌ನಲ್ಲೆಲ್ಲ ಪ್ರವಾಸ ಮಾಡಿ ಚಳವಳಿಯ ಬಗ್ಗೆ ನಾನು ಭಾಷಣ ಮಾಡುವಾಗ ತರೀಕೆರೆಯಲ್ಲಿ ನನ್ನ ಭಾಷಣದ ಕಾಲಕ್ಕೇ ಬಂಧಿಸಿ, ತರೀಕೆರೆ ಸಬ್‌ಜೈಲ್‌ನಲ್ಲಿ ಒಂದು ತಿಂಗಳು ಇಟ್ಟು ಅನೇಕ ಬಾರಿ ಲಾಠಿಯಿಂದ ಹೊಡೆದರು. ಅಲ್ಲಿಂದ ಚಿಕ್ಕಮಗಳೂರು ಜೈಲಿನಲ್ಲಿ ಒಂದು ತಿಂಗಳು ಇಟ್ಟರು. ಮುಂದೆ 21 ಜನರ ಪಾರ್ಟಿಯಲ್ಲಿ ಬೆಂಗಳೂರಿಗೆ ರವಾನೆ ಮಾಡಿದರು. ಅಲ್ಲಿ ಆರು ತಿಂಗಳು ಇದ್ದೆ. ಬಿಡುಗಡೆ ಆದಾಗ, ನಾನು ಎಸ್.ಎಸ್.ಎಲ್.ಸಿ.ಗೆ ಕೂತಿಲ್ಲವೆಂದು ಮನೆಯಿಂದ ಹೊರಗೆ ಹಾಕಿದರು. ಜೀವನಕ್ಕೂ ತೀರ ಕಷ್ಟವಾಯಿತು.

ವ್ಯ.ಚಿಮ. 11

## ಎ. ಬಿ. ಬಸವಾರಾಧ್ಯ

ಜನನ : 1916 ಉದ್ಯೋಗ : ನಿವೃತ್ತ ಜೀವನ ವಿಳಾಸ : ರತ್ನಗಿರಿ ರಸ್ತೆ, ಚಿಕ್ಕಮಗಳೂರು

ಗಾಂಧೀಜಿಯವರ ಆದಿಯಾಗಿ ಅನೇಕ ನಾಯಕರು ನಮ್ಮ ಊರಿಗೆ ಬಂದು ಮಾಡಿದ ಭಾಷಣಗಳ ಪರಿಣಾಮವಾಗಿ ನಾವುಗಳು ಕಾಂಗ್ರೆಸ್ಸಿಗೆ ಸೇರಿ ಪ್ರಭಾತ್‌ಫೇರಿಯೇ ಮುಂತಾದ ಕಾರ್ಯಕ್ರಮಗಳಲ್ಲಿ ಪಾಲುಗೊಳ್ಳುತ್ತಿದ್ದೆವು. 1942ರಲ್ಲಿ ಚಳವಳಿ ಸೇರಿ ಅಂಗಡಿಗಳ ಬಾಗಿಲು ಮುಚ್ಚಿಸುವುದು, ಶಾಲೆಗಳನ್ನು ಮುಚ್ಚಿಸುವುದು, ಆಫೀಸುಗಳಿಗೆ



ಹೋಗಿ ಜಯಕಾರ ಹಾಕುವುದು, ಸೇಂದಿ ಅಂಗಡಿ ಪಿಕೆಟಿಂಗ್, ಸೇಂದಿ ಚೆಲ್ಲುವುದು, ಸೇಂದಿಗಾಡಿ ತಡೆದು ಅದರಲ್ಲಿನ ಪೀಪಾಯಿಗಳನ್ನು ಖಾಲಿ ಮಾಡುವುದು ಮಾಡುತ್ತಿದ್ದೆವು. ಆಗ ನಮ್ಮ ಜೊತೆಗಾರರೆಂದರೆ ಸಿ. ಎಂ. ಎಸ್. ಶಾಸ್ತ್ರಿ, ಸಿ. ನಿರ್ವಾಣಪ್ಪ, ವೆಂಕಟರಾವ್, ಶಿವಲಿಂಗಪ್ಪ, ರಾಮರಾಜೇ ಅರಸ್, ವೀರಪ್ಪ, ರಾಮಚಂದ್ರ, ಮುರುಳಸಿದ್ದಪ್ಪ. ಅನೇಕ ಬಾರಿ ಪೋಲಿಸರು ನಮ್ಮನ್ನು ಹಿಡಿದು ಒಡಿದು ಬಿಡುತ್ತಿದ್ದರು. ಜೈಲಿನ ಗೋಡೆಗೆ ಡೈನಮೈಟ್ ಇಡಬೇಕೆಂದು ಯೋಚಿಸಿ, ಸ್ಫೋಟಕ ವಸ್ತುಗಳನ್ನು ತರಲು ಶಿವಮೊಗ್ಗ ಮತ್ತು ಹಾವೇರಿಗೆ ಹೋದೆವು. ಅಲ್ಲಿ ಅದು ಸಿಗದ್ದರಿಂದ ಬಂದೂಕಿನ ಅಂಗಡಿಯಿಂದ ನಾಟೀಮುಸಿ, ಡೈನಾಮೈಟ್ ಬತ್ತಿಯನ್ನು ತಂದೆವು. ಕಾಲು ಕೆ.ಜಿ. ನಾಟೀಮುಸಿಯನ್ನು ಕಾಗದದಲ್ಲಿ ಬಿಗಿಯಾಗಿ ಸುತ್ತಿ ಅದರ ಮೇಲೆ ಐದಾರು ಸುತ್ತು ದಾರ ಬಿಗಿದು, ಜೈಲ್ ಗೋಡೆಯ ಒಳ ಅರು ಇಂಚು ಗುಂಡಿ ತೆಗೆದು, ಅದರಲ್ಲಿ ಇದನ್ನು ಇಟ್ಟು ಬೆಂಕಿ ಹಾಕಿದೆವು. ಅದು ಹಾರಿದಮೇಲೆ ಮತ್ತೆ ಹೋಗಿ ನೋಡಲಾಗಿ ಅಲ್ಲಿ ಸುಮಾರು 2 ಅಡಿಯಷ್ಟು ಸುತ್ತಳತೆಯಲ್ಲಿ ಮಣ್ಣು ಹಾರಿತ್ತು. ಇದೇ ಅನುಕೂಲವೆಂದು ಮಾಡಿಕೊಂಡೆವು. ಟೆಲಿಫೋನ್ ವೈರ್ ಕತ್ತರಿಸುವುದಲ್ಲದೆ, ಇಲ್ಲಿನ ಎಸ್ಟೇಟ್ ಮಾಲಿಕರಾದ ಯುರೋಪಿಯನ್ನರ ಕ್ಲಬ್ಬಿಗೆ ಹೋಗಿ, ಅವರಿಗೆ ಗಾಂಧೀ ಟೋಪಿ ಹಾಕಿ, ಅವರ ಕೈಯಿಂದಲೂ ಜೈಕಾರ ಹಾಕಿಸಿದೆವು.

ಬಾಣಾವರ ರೈಲ್ವೆ ಸ್ಟೇಶನ್‌ಗೆ ಬೆಂಕಿ ಹಾಕಿ ಅಲ್ಲಿನ ರಿಜರ್ವ್ ಪೋಲಿಸರು ಲಾಠೀಚಾರ್ಜು ಮಾಡಲು ಬಹಳ ಜನಕ್ಕೆ ಏಟುಬಿದ್ದು ಅದರ ಪೈಕಿ ಸುಮಾರು 50 ಜನ ನಮ್ಮ ಊರಿಗೆ ಓಡಿಬರಲು, ಅವರನ್ನು ಇಲ್ಲಿನ ಒಂದು ಖಾಲಿಮನೆಯಲ್ಲಿ ಇಟ್ಟು, ತೀರಾ ಏಟು ತಿಂದು ಗಾಯಗೊಂಡವರಿಗೆ ಡಾ|| ಕೆ. ಪಿ. ರಘುನಾಥರಿಂದ ಔಷಧಿ ಕೊಡಿಸಿದೆವು. ಅವರಿಗೆಲ್ಲ ಊಟೋಪಚಾರದ ಅನುಕೂಲವನ್ನು ಸಹ ಮಾಡಿಕೊಟ್ಟು ಪ್ರತಿದಿನ 8–10 ಜನಗಳಿಗೆ ಅವರವರ ಮನೆಗಳಿಗೆ ಬಸ್ಸಿನಲ್ಲಿ ಕಳುಹಿಸಿಕೊಟ್ಟೆವು. ಮುಂದೆ ನಮ್ಮನ್ನು ಬಂಧಿಸಿದರು (ನವೆಂಬರ್). ತಂತಿ ಕತ್ತರಿಸಿದವರು ಯಾರೆಂದು ತಿಳಿಸಲು ಸಿಕ್ಕಾಬಟ್ಟೆ ಹೊಡೆದರು. ಮಿತ್ರರಿಗೆ ತೊಂದರೆ ಆಗಬಾರದೆಂದು ನಾನು ಬಾಯಿಬಿಡಲಿಲ್ಲ. ಮರು ದಿನ ಸಿ. ಪಿ. ರಾಮಚಂದ್ರನನ್ನು ಬಂಧಿಸಿ (ಅವನೂ ನನ್ನ ಜೊತೆ ಕೆಲಸಮಾಡಿದ್ದ), "ಅವನು ಎಲ್ಲ ವಿಷಯ ಹೇಳಿದ್ದಾನೆ, ನೀನು ಈಗ ಹೇಳು" ಎಂದು ಬೆದರಿಸಿದರು; ಅರ್ಧಜೀವಮಾಡುವುದಾಗಿ ಗದರಿಸಿದರು. ಅಷ್ಟರಲ್ಲಿ ಸಿ. ಎಂ. ಎಸ್. ಶಾಸ್ತ್ರಿ, ಸಿ. ನಿರ್ವಾಣಪ್ಪನನ್ನೂ ಬಂಧಿಸಿ ತರಲು ನಾವೇ ತಂತಿ ಕತ್ತರಿಸಿದ್ದೆಂದು ಒಪ್ಪಿದೆವು. ಅಪಾಲಜಿ ಬರೆದುಕೊಡಲು ಒತ್ತಾಯಿಸಿದರೂ ನಾವುಗಳು ಒಪ್ಪಲಿಲ್ಲ.

ಮೂರು ತಿಂಗಳು ಜ್ಯುಡಿಶಿಯಲ್ ಕಸ್ಟಡಿಯಲ್ಲಿ ಇಟ್ಟನಂತರ ನಮಗೆ ತಲಾ ಒಂದು ವರ್ಷ ಶಿಕ್ಷೆ ಆಯಿತು. ಕೆಲವರಿಗೆ ಖುಲಾಸೆ ಆಯಿತು. ಬೆಂಗಳೂರು ಜೈಲಿಗೆ 4-2-1943ಕ್ಕೆ ವರ್ಗಾಯಿಸಿ, ಮುಂದೆ 12-3-1943ಕ್ಕೆ ತುಮಕೂರಿಗೆ ವರ್ಗಾಯಿಸಿದರು. ತುಮಕೂರಲ್ಲಿ ನಾನು ಇದ್ದಾಗಲೇ ನಮ್ಮ ತಂದೆ ತೀರಿಕೊಂಡರು. ಆಗಲೂ ನನ್ನನ್ನು ಜೈಲಿನಿಂದ ಬಿಡಲಿಲ್ಲ. ಆಗ ಮನೆಯಲ್ಲಿ ಯಾರೂ ಇರದ್ದರಿಂದ ಮನೆಯಲ್ಲಿನ ಪ್ರತಿಯೊಂದು ಸಾಮಾನೂ ದನಕರುಗಳೂ ಸಹ ಅಪಹರಿಸಲ್ಪಟ್ಟವು. ಒಂದು ವರ್ಷ ಶಿಕ್ಷೆ ಪೂರ್ತಿ ಮುಗಿಸಿ 1-2-1944ಕ್ಕೆ ನಾನು, ಶಾಸ್ತ್ರಿ, ನಿರ್ವಾಣಯ್ಯ ಬಿಡುಗಡೆ ಆದೆವು. ಉಳಿದ ಕೆಲವರು ಅಪಾಲಜಿ ಕೇಳಿ ಮೊದಲೇ ಹೋಗಿದ್ದರು.

ಬಿಡುಗಡೆ ಆದಾಗ ಮನೆ, ಮನೆಯ ಸಾಮಾನು, ಜಮೀನು, ಎಲ್ಲವೂ ಪರಾಧೀನವಾಗಿದ್ದು ಕಂಡುಬಂತು. ಅಲ್ಲಿ ಇಲ್ಲಿ ಅಲೆದಾಡಿಕೊಂಡು ಇದ್ದೆ. ಸಮಾಜದ ಜನರೂ "ಪೋಲಿ, ಎಲ್ಲ ಹುಡುಗರನ್ನು ಹಾಳುಮಾಡಿ ಜೈಲಿಗೆ ಹೋದವ!" ಎಂದು ಹೀಯಾಳಿಸಿ ಮಾತಾಡಿದರು. ಮದುವೆ. ಹಬ್ಬಹುಣ್ಣಿಮೆಗಳ ಕಾಲಕ್ಕೂ ಯಾರೂ ನನ್ನನ್ನು ಕರೆಯುತ್ತಿರಲಿಲ್ಲ. 1946ರಲ್ಲಿ ಮುನ್ಸಿಪಾಲಿಟಿಯಲ್ಲಿ III ದರ್ಜೆ ಗುಮಾಸ್ತನಾಗಿ ಸೇರಿ, ಜನರಿಗೆ ಕೈಲಾದನುಟ್ಟಿಗೆ ಸೇವೆಸಲ್ಲಿಸಿದ್ದೇನೆ. ಮುಂದೆ ಜಿಲ್ಲಾಧಿಕಾರಿಗಳು ನನ್ನನ್ನು II ದರ್ಜೆ ಗುಮಾಸ್ತನಾಗಿ ಮಾಡಿ, ರೆವಿನ್ಯು ಇನ್ಸ್‌ಪೆಕ್ಟರ್, ಆಕ್ಟ್ರಾಯ್ ಇನ್ಸ್‌ಪೆಕ್ಟರ್ ಎಂದು ಪ್ರಮೋಶನ್ ಕೊಟ್ಟರು. ಈಗ ನಿವೃತ್ತನಾಗಿದ್ದೇನೆ. ಇಲ್ಲಿನ ಭಾರತ ಸ್ವಾತಂತ್ರ್ಯ ಹೋರಾಟಗಾರರ ಸಂಘವ ಕಾರ್ಯದರ್ಶಿಯಾಗಿದ್ದೇನೆ.

ಮೈ. ಚಿಮ. 12

## ಕೆ. ಅನಂತರಾಮಯ್ಯ

ಜನನ : 1910 ಉದ್ಯೋಗ : ವ್ಯವಸಾಯ ವಿಳಾಸ : ಕರಗಡದ, ತಾ॥ ಬೇಲೂರು, ಜಿ॥ ಹಾಸನ

---

ನನ್ನ ಪ್ರೌಢಶಾಲಾ ಶಿಕ್ಷಣದನಂತರ ಟೈಲರಿಂಗ್ ಕಲಿಯಲು 1931ರಲ್ಲಿ ಧಾರವಾಡಕ್ಕೆ ಹೋಗಿರಲು ಅಲ್ಲಿ ನಡೆದ ರಾಷ್ಟ್ರೀಯ ಚಟುವಟಿಕೆಗಳು ನನ್ನ ಮೇಲೆ ಅಪಾರ ಪ್ರಭಾವ ಬೀರಿದವು. ಅದಲ್ಲದೆ ಮಹಾತ್ಮಾಜಿಯವರು ಚಿಕ್ಕಮಗಳೂರಿಗೂ ಬೆಂಗಳೂರಿಗೂ ಬಂದಾಗ ಅವರ ದರ್ಶನ ಪಡೆದಿದ್ದೆನಲ್ಲದೆ ಪ್ರಾರ್ಥನಾಸಭೆಗಳಲ್ಲೂ ಪಾಲುಗೊಂಡಿದ್ದೆ. ಶಿವಪುರ, ವಿದುರಾಶ್ವತ್ಥ ಕಾಂಗ್ರೆಸ್‌ಗಳಿಗೂ ಹೋಗಿದ್ದೆ. 1939ರಲ್ಲಿ ನಡೆದ ನೇರ ಕಾರ್ಯಕ್ರಮದಲ್ಲಿ ಕೂಡ ಚಿಕ್ಕಮಗಳೂರಲ್ಲಿ ಭಾಗವಹಿಸಿ ಹೆಂಡದಂಗಡಿ ಪಿಕೆಟಿಂಗ್,



ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡುತ್ತಿದ್ದೆ. ಸರ್ಕಾರದವರು ಪಬ್ಲಿಕ್ ಸೆಕ್ಯೂರಿಟಿ ಆ್ಯಕ್ಟ್ ಪ್ರಕಾರ 5 ದಿನ ಬಂಧಿಸಿಟ್ಟರು. ಬಿಡುಗಡೆಯಾದನಂತರವೂ ಚಟುವಟಿಕೆಗಳನ್ನು ಮುಂದುವರಿಸಿದೆ. ನನ್ನ ಭಾಷಣ ಕಾರ್ಯಕ್ರಮಗಳಿಗೆ ಜನರು ಬರುವುದು ಹೆಚ್ಚಾಯಿತು. 1939ರ ಅಕ್ಟೋಬರ್‌ನಲ್ಲಿ ಮತ್ತೆ ಬಂಧಿಸಿ ಚಿಕ್ಕಮಗಳೂರು ಜೈಲಿನಲ್ಲಿ ಅಂಡರ್-ಟ್ರಯಲ್ ಆಗಿ ಆರು ತಿಂಗಳು ಇಟ್ಟರಲ್ಲದೆ ಮುಂದೆ ಒಂದು ವರ್ಷ ಶಿಕ್ಷೆ ಆಯಿತು. ಆಗ ಬೆಂಗಳೂರು ಸೆಂಟ್ರಲ್ ಜೈಲಿಗೆ ಕಳುಹಿಸಿದರು. ಚಿಕ್ಕಮಗಳೂರು ಜೈಲಿನಲ್ಲಿ ಸತ್ಯನಾರಾಯಣ ಶ್ರೇಷ್ಠಿ, ದಿ॥ ಟಿ. ಸಿ. ಬಸಪ್ಪ, ಸರದಾರ್ ವೆಂಕಟರಾಮಯ್ಯ ಮೊದಲಾದವರಿದ್ದರು. 1940ರ ಆಗಸ್ಟ್‌ನಲ್ಲಿ ನನ್ನ ಬಿಡುಗಡೆ ಆಯಿತು.

1942ರಲ್ಲಿ ಚಳವಳಿ ಆರಂಭ ಆದಾಗ ಸ್ಥಳೀಯ ಮುಖಂಡರೆಲ್ಲ ಬಂಧಿತರಾಗಿ, ಸತ್ಯಾಗ್ರಹಿಗಳ ಊಟೋಪಚಾರ, ಗ್ರಾಮಾಂತರ ಜನರ ಸಂಘಟನೆ ಮುಂತಾದ ಕೆಲಸಗಳಲ್ಲಿ ತೊಡಗಿ ನಾನು ಬಂಧನಕ್ಕೆ ಒಳಗಾಗಲಿಲ್ಲ. 1947ರಲ್ಲಿ ಸೆ. 2ಕ್ಕೆ ಚಳವಳಿ ಶುರು ಆದಾಗ ನಾನು ಕನಕಪುರದಲ್ಲಿ ಇದ್ದು, ಅಲ್ಲಿಂದ ಜಾಥಾದಲ್ಲಿ ಹೊರಟು ಮಂಡ್ಯ, ಶ್ರೀರಂಗಪಟ್ಟಣ ಮಾರ್ಗವಾಗಿ ಮೈಸೂರಿಗೆ ಬಂದೆನು. ಸೆಪ್ಟಂಬರ್ 5ಕ್ಕೆ ಮಹಾರಾಜಾ ಕಾಲೇಜಿನಿಂದ ಹೊರಟ ಗುಂಪಿನ ಜೊತೆ ಸೇರಲು ನೂರಡಿ ರಸ್ತೆ (ಈಗಿನ) ರಾಮಸ್ವಾಮಿ ಸರ್ಕಲ್ ಬಳಿ, ಅಲ್ಲಿ ಗೋಳೀಬಾರಾಗಿ ರಾಮಸ್ವಾಮಿ ಉರುಳಿ, ಮೆರವಣಿಗೆ ಚದರಿತು. ಸಂಜೆ ರಂಗಾಚಾರ್ಲು ಪುರಭವನ ಬಳಿ ಲಾಠಿಚಾರ್ಜ್ ಆಗಿ, ಏಟು ತಿಂದು, ಬಂಧುಗಳೊಬ್ಬರ ಮನೆಯಲ್ಲಿ ಎರಡು ದಿನ ಸುಧಾರಿಸಿಕೊಂಡು ಚಿಕ್ಕಮಗಳೂರಿಗೆ ಬಂದೆನು.

ಚಿಕ್ಕಮಗಳೂರಲ್ಲಿ ಆಗಲೇ ನೂರಾರು ಮಕ್ಕಳನ್ನು ಬಂಧಿಸಿ ಚಿತ್ರಹಿಂಸೆಗೆ ಒಳಪಡಿಸಿದ್ದರಿಂದ ಸಭೆ, ಮೆರವಣಿಗೆ ನಿಲ್ಲುವಂತಾಗಿತ್ತು. ಪುರಭವನದಲ್ಲಿ ಭಾರತಿಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಚಳವಳಿಯನ್ನು ತೀವ್ರಗೊಳಿಸುವ ಬಗ್ಗೆ ತೀರ್ಮಾನವಾಗಿ, ಕೋರ್ಟು ಕಚೇರಿ ಮುಂದೆ ಪಿಕೆಟಿಂಗ್, ಸಭೆ ಪ್ರಾರಂಭಿಸಿದೆವು. ಒಂದು ಬುಧವಾರ ಸಂತೆಯ ದಿನ ತಾ॥ ಕಚೇರಿ ಮುಂದೆ ಪಿಕೆಟಿಂಗ್ ನಡೆಸುತ್ತಿರಲು ನೂರಾರು ಮಂದಿ ಮಹಿಳೆಯರು ಸೇರಿದ್ದರು. ಗೋಳೀಬಾರ್ ಆಗುವ ಸಂಭವ ಉಂಟೆಂದು, ಎಲ್ಲರಿಗೂ ದಾರಿಯಲ್ಲಿ ಅಡ್ಡಲಾಗಿ ಮಲಗಲು ತಿಳಿಸಲಾಯಿತು. ಸಂಜೆಯ ತನಕ ಯಾರೂ ಕಚೇರಿಗೆ ಪ್ರವೇಶಿಸಲು ಸಾಧ್ಯ ಆಗದೆ ಕೆಲಸ ಸ್ಥಗಿತವಾಯಿತು. ಇದನ್ನು ನೋಡಲು ನೆರೆದ ಗ್ರಾಮಾಂತರ ಭಾಗದ ನೂರಾರು ಜನರು ಜೈಕಾರ ಹಾಕುತ್ತ ಸತ್ಯಾಗ್ರಹಿಗಳಿಗೆ

ಕಾಫಿ, ನೀರು, ಹಣ್ಣು, ಪೆಪ್ಪರ್‌ಮಿಂಟ್ ಮೊದಲಾದವನ್ನು ತಂದಿತ್ತು ತಮ್ಮ ಮೆಚ್ಚಿಗೆ, ಸಹಾನುಭೂತಿ ಸೂಚಿಸಿದರು. ಸರಕಾರವು ಜಿಲ್ಲಾಧಿಕಾರಿಗಳ ಬಗ್ಗೆ ಅಸಮಾಧಾನ ಪಟ್ಟು ಅವರನ್ನು ವರ್ಗಾಯಿಸಿತು. ಹೊಸದಾಗಿ ಬಂದ ಜಿಲ್ಲಾಧಿಕಾರಿಗಳು ಮಿಲಿಟರಿ ಸಹಿತ ಬಂದರು. ಇದನ್ನು ಕೇಳಿದ ಸತ್ಯಾಗ್ರಹಿಗಳು ಚಳವಳಿ ನಿಲ್ಲಿಸೆವೆಂದು ತಮ್ಮ ರಕ್ತದಿಂದ ಆಶ್ವಾಸನೆ ಬರೆದುಕೊಟ್ಟರು. ನನ್ನನ್ನು ಬಂಧಿಸಿದರು. ಚಿಕ್ಕಮಗಳೂರು ಜೈಲಿನಲ್ಲಿ ಆಗ ಕೆ. ಸಿ. ರೆಡ್ಡಿ, ಎಚ್. ಸಿದ್ದಯ್ಯ, ತಾಳಕೆರೆ, ಬಂದೀಗೌಡ ಮುಂತಾದ ನಾಯಕರಿದ್ದರು. ಮುಂದೆ ಚಳವಳಿ ನಿಲ್ಲುವ ಸ್ಥಿತಿ ಬಂದು ಇಲ್ಲಿದ್ದ ನಾಯಕರನ್ನು ಮಾತುಕತೆಗೆ ಬೆಂಗಳೂರಿಗೆ ಒಯ್ಯಬೇಕೆಂದಿದ್ದಾಗ ಮಹಾದ್ವಾರವನ್ನು ಪೂರ್ತಿ ತೆರೆದು ಅವರನ್ನು ಹೊರಗೊಯ್ಯಬೇಕೆಂದೂ ದ್ವಾರದಲ್ಲಿ ಇರುವ ಕಿಂಡಿಯಿಂದ ಅಲ್ಲವೆಂದೂ ಹಟ ಹಿಡಿದು, ಅಡ್ಡ ಕುಳಿತು ಯಶ ಕಂಡೆವು. ಮಹಾದ್ವಾರ ತೆರೆಸಿಯೇ ನಾಯಕರನ್ನು ಬೀಳ್ಕೊಂಡೆವು. ಸಂಧಾನಾನಂತರ ನಮ್ಮ ಬಿಡುಗಡೆ ಆಯಿತು.

ಮೈ. ಚಿಮ. 13

## ಬಿ. ಎಸ್. ಪುಟ್ಟೇಗೌಡ

ಜನನ : 1923 ಉದ್ಯೋಗ : ಕಾಫಿ ಬೆಳೆಗಾರ ವಿಳಾಸ : ಹಾಂದಿ, ಜಿ॥ ಚಿಕ್ಕಮಗಳೂರು

---



1942ರಲ್ಲಿ ನಾನು ಪ್ರೌಢಶಾಲೆಯ ಕೊನೆಯ ತರಗತಿಯಲ್ಲಿ ಚಿಕ್ಕಮಗಳೂರಲ್ಲಿ ವ್ಯಾಸಂಗಮಾಡುತ್ತಿರಲು, ಬೆಂಗಳೂರು, ಮೈಸೂರು ಕಡೆಯಿಂದ ಚಳವಳಿಯ ಗುಪ್ತವಾರ್ತೆಗಳು ಎಸ್. ಕೆ. ಪುಟ್ಟೇಗೌಡ ಮುಂತಾದವರ ಮುಖಾಂತರ ನಮ್ಮ ಕೈಸೇರುತ್ತಿದ್ದವು. 'ಮಾಡು ಇಲ್ಲವೆ ಮಡಿ!' ಘೋಷಣೆ ನನ್ನ ಅಂತಃಕರಣವನ್ನು ಪ್ರವೇಶಿಸಿತು. ಸ್ವಾತಂತ್ರ್ಯ ದೊರೆಯುವ ತನಕ ಶಾಲೆಗೆ ಹೋಗುವುದಿಲ್ಲವೆಂದು ನಿಶ್ಚಯಿಸಿ ನಿತ್ಯ ಪ್ರಭಾತ್‌ಫೇರಿ, ಪಿಕೆಟಿಂಗ್, ಸಭೆ, ಮೆರವಣಿಗೆ, ಕಟ್ಟಡಗಳ ಮೇಲೆ ಧ್ವಜ ಹಾರಿಸುವಿಕೆ, ವಿದೇಶೀ ವಸ್ತ್ರ ದಹನ ಮುಂತಾದ ಚಟುವಟಿಕೆ ಕೈಕೊಂಡೆವು. ಸಿ. ವಿ. ಧ್ರುವರಾವ್, ಎಸ್. ಅಣ್ಣಪ್ಪ ಶೆಟ್ಟಿ, ರಾಜು; ರಾಮಸ್ವಾಮಿ ಮುಂತಾದ ಹಿರಿಯರ ಮಾರ್ಗದರ್ಶನ, ಸಹಕಾರ ಇತ್ತು.

ಒಂದು ಬೆಳಗು ಬೆಳವಾಡಿ ರಸ್ತೆಯಲ್ಲಿ ಕಲ್ಲು ಅಡ್ಡ ಇಟ್ಟು ಸೇಂದಿ ಲಾರಿ ನಿಲ್ಲಿಸಿ ಪೀಪಾಯಿ ಉರುಳಿಸಿ ಹೆಂಡ ಚೆಲ್ಲಿದೆವು. ಲಾರಿಯ ಡ್ರೈವರ್, ಕಂಡಕ್ಟರ್ ಕಬ್ಬಿಣದ ಕಂಬಿ ಹಿಡಿದು ಹೊಡೆಯಲು ಬಂದರು. ನನ್ನ ಬಲಗಡೆ ಪಕ್ಕೆಲುಬಿಗೆ ಏಟು ಬಿದ್ದು ಬಾಯಿಂದ ರಕ್ತ ಬಂತು. ಜೈಕಾರ ಮಾಡುತ್ತ ಇದ್ದೆ. ನನ್ನ ಜೊತೆ ಸಿ. ಎಂ. ಎಸ್. ಶಾಸ್ತ್ರಿ, ಕೆಂಪರಾಜ್, ಸಿ. ಆರ್. ಶಿವಾನಂದ, ಶಂಕರಪ್ಪ, ಕರಗಡದ ವೆಂಕಟರಾಮಯ್ಯ ಇವರೂ ಇದ್ದರು. ಆಗ ಕಳಸಾಪುರ ಕಡೆಯಿಂದ ರಕ್ಷಣಾ ಇಲಾಖೆ ಮುಖ್ಯಾಧಿಕಾರಿ ಬರಲು ನಾವೆಲ್ಲರೂ ಕರಗಡದ ವೆಂಕಟರಾಮಯ್ಯನವರಲ್ಲಿ ವಿಶ್ರಾಂತಿಪಡೆದು ಚಿಕ್ಕಮಗಳೂರಿಗೆ ಮರಳಿದೆವು. ಮುಂದೆ ನಾನು, ಎಸ್. ಶಂಕರಪ್ಪ, ಜೆ. ಕೃಷ್ಣಪ್ಪ ತಂತಿ ಕತ್ತರಿಸಿದೆವು. 24-9-1942ರಲ್ಲಿ ನನ್ನನ್ನು ಬಂಧಿಸಿ, ಮುಂದೆ 26-9-1942ರಂದು ಜಾಮೀನಿನಿಂದ ಬಿಟ್ಟರು. ಮುಂದೆ ಹೆಂಡದ ಲಾರಿ ಪ್ರಕರಣದ ಸಂಬಂಧವಲ್ಲಿ ಮತ್ತೆ ಬಂಧಿಸಿದರು. ಈ ಕೇಸು ರುಜುವಾತು ಆಗಲಿಲ್ಲ. 6-12-1942ರಂದು ಬಿಡುಗಡೆ ಆಯಿತು. ಜೈಲಿನಲ್ಲಿ ನಮ್ಮ ಜೊತೆ ಅಣ್ಣಪ್ಪ ಶೆಟ್ಟಿ, ಎಸ್. ಜಿ. ಯಾಜಿ, ಸಿದ್ದಪ್ಪ, ಗೋವಿಂದ ಶೆಟ್ಟಿ, ರಾಮಸ್ವಾಮಿ, ರಾಮರಾಜ ಅರಸ್, ಸಿ. ಬಿ. ಪುಟ್ಟಸ್ವಾಮಿ, ಸಿ. ಆರ್. ಶಿವಾನಂದ, ಶಂಕರಪ್ಪ, ಸರಸ್ವತಿ, ವೈದೇಹಿ, ಡಿ. ಎಸ್. ಕೃಷ್ಣೇಗೌಡ, ದಿ|| ಹುಚ್ಚೇಗೌಡ ಇವರೆಲ್ಲ ಇದ್ದರು.

ವೈ.ಚಿಮ. 14

## ಎಂ. ಕೆ. ದೊಡ್ಡಪ್ಪಗೌಡ

ಜನನ : 1907 ಉದ್ಯೋಗ : ಕಾಫಿ ಪ್ಲಾಂಟರ್ ವಿಳಾಸ : ಮೂಡಿಗೆರೆ



1930ರ ವೇಳೆಗೆ ಮಹಾತ್ಮಾಜೀ ಆರಂಭಿಸಿದ ಉಪ್ಪಿನ ಸತ್ಯಾಗ್ರಹ ಭಾರತೀಯರ ಸ್ವಾತಂತ್ರ್ಯ ದಾಹವನ್ನು ಇಮ್ಮಡಿಗೊಳಿಸಿತು. ಅದುವರೆಗೆ ಸೇವಾದಳದ ಸಂಘಟನಾ ಕಾರ್ಯದಲ್ಲಿಯೇ ನಿರತರಾಗಿದ್ದ ಹಿರಿಯರು ಈಗ ನೇರವಾಗಿಯೇ ಸ್ವಯಂಸೇವಕರನ್ನು ಕಣಕ್ಕಿಳಿಸಿ, ಅಖಿಲಭಾರತ ಕಾಂಗ್ರೆಸ್ ಆದೇಶಕ್ಕನುಗುಣವಾಗಿ, ಎಲ್ಲ ರಂಗಗಳಲ್ಲಿಯೂ ಕಾರ್ಯಾಚರಣೆಗೆ ಹವಣಿಸಿದರು. ಆಗಿನ ಸಂಸ್ಥಾನಗಳನ್ನುಳಿದು, ಬ್ರಿಟಿಷ್ ಭಾರತಾದ್ಯಂತ ಸ್ವಾತಂತ್ರ್ಯ

ಚಳವಳಿ ಬಿರುಸಿನಿಂದ ಸಾಗಿತ್ತು. ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಿದ್ದ ಸ್ವಯಂ ಸೇವಕರ ಚಳವಳಿ ಬ್ರಿಟಿಷ್ ಸರ್ಕಾರಕ್ಕೆ ತಲೆಸಿಡಿತವಾಯಿತು. ಪೋಲಿಸ್ ಮತ್ತು ಮಿಲಿಟರಿಯವರಿಂದ ಸ್ವಯಂಸೇವಕರನ್ನು ಹೊಡೆಸಿ ಹಿಂಸಿಸಿದರು, ತುರಂಗಕ್ಕೆ ತಳ್ಳಿದರು. ಕೆಲವರನ್ನು ಅನಿರ್ದಿಷ್ಟಕಾಲ ಸ್ಥಾನಬದ್ಧತೆಯಲ್ಲಿಟ್ಟರು. ಮತ್ತೆ ಕೆಲವರನ್ನು ಉಗ್ರ ಗಾಮಿಗಳೆಂದು ಘಾಸಿ ಶಿಕ್ಷೆಗೆ ಗುರಿಪಡಿಸಿದರು. ಕೆಲವು ಕಡೆ ಲಾಠೀಚಾರ್ಜ್, ಗೋಳೀ ಬಾರಿನಿಂದ ಅನೇಕರು ಸತ್ತರು. ಇಷ್ಟಾದರೂ ಸ್ವಯಂಸೇವಕರ ಉತ್ಸಾಹ, ಸಂಖ್ಯಾ ಬಲ ಕುಗ್ಗುವ ಬದಲು ಹಿಗ್ಗುತ್ತಲೇ ಬಂದಿತು. ಬ್ರಿಟಿಷರಿಂದ ಕೊನೆಗೂ ಭಾರತೀಯರ ಸ್ವಾಭಿಮಾನ ಹಾಗೂ ಸ್ವರಾಜ್ಯದಾಹವನ್ನು ಹತ್ತಿಕ್ಕಲು ಸಾಧ್ಯವಾಗಲೇ ಇಲ್ಲ.

ಆದರೆ ಹಿಂದೂಸ್ಥಾನಿ ಸೇವಾದಳದ ಬಗ್ಗೆ ಬ್ರಿಟಿಷರ ಧೋರಣೆ ಬದಲಾಯಿತು. 1932ರ ಸುಮಾರಿಗೆ, ಇದಕ್ಕಾಗಿಯೇ ಪ್ರತ್ಯೇಕ ಸುಗ್ರೀವಾಜ್ಞೆ ಹೊರಡಿಸಿ, ಸೇವಾದಳದ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿ ಅದರ ಅಸ್ತಿತ್ವವನ್ನೇ ನಾಶಮಾಡಿದರು. ಅದರ ಸಂಸ್ಥಾಪಕರೆಲ್ಲರೂ ಕಾಂಗ್ರೆಸ್ಸಿನ ಆಡಳಿತಾಂಗದಲ್ಲಿ ಬೆರೆತುಹೋದರು. ಸರ್ದಾರ್ ವೆಂಕಟರಾಮಯ್ಯನವರ ಮೇಲೆ ದೀರ್ಘಕಾಲ ವಾರಂಟ್ ಇತ್ತು. ಇದನ್ನು ತಪ್ಪಿಸಿ ಕೊಂಡು ಅವರು ಅಲೆಯುತ್ತಿದ್ದಾಗ ನಮ್ಮ ಊರಲ್ಲಿಯೂ ಅವರಿಗೆ ಸ್ವಲ್ಪ ಕಾಲ ಆಶ್ರಯ ಕೊಟ್ಟಿದ್ದೆವು.

ನಾನು 1926ರಿಂದ 1928ರ ವರೆಗೆ ಮೂರು ವರ್ಷ ಬೆಂಗಳೂರಲ್ಲಿ ಹೈಸ್ಕೂಲ್ ಮತ್ತು ಇಂಟರ್‌ಮೀಡಿಯೆಟ್ ಕಾಲೇಜಿನಲ್ಲಿ ಓದುತ್ತಿದ್ದೆ. ನಾನು ಇದ್ದುದು ಕೋಟೆ ಒಕ್ಕಲಿಗರ ಹಾಸ್ಟೆಲಿನಲ್ಲಿ. 1926-27ರಲ್ಲಿ ಒಮ್ಮೆ ದಿ|| ಸಿ. ರಾಜಗೋಪಾಲಾಚಾರ್, ಸಿದ್ಧನಾಥ ಪಂತ್‌ಜೀಯವರೊಡನೆ ನಮ್ಮ ನಿಲಯಕ್ಕೆ ಬಂದು ಸ್ವರಾಜ್ಯ ಕಲ್ಪನೆಯ ಬಗ್ಗೆ ಭಾಷಣ ಮಾಡಿದರು. ವಿದ್ಯಾರ್ಥಿಗಳೆಲ್ಲರೂ ಖಾದಿ ಧರಿಸಬೇಕಾಗಿಯೂ, ಹಿಂದಿ ಕಲಿಯಬೇಕೆಂದೂ ಬೋಧಿಸಿದರು. ನಾನೇ ಮುಂದಾಗಿ 15-20 ಜನರನ್ನು ಕೂಡಿ ಕೊಂಡು ಹಿಂದಿ ಕಲಿಕೆ ಪ್ರಾರಂಭಿಸಿದೆವು; ಖಾದೀಪ್ರೇಮಿಗಳಾಗಿ ವಿದೇಶೀ ವಸ್ತುಗಳನ್ನು ತೊರೆದೆವು. ಸಿದ್ಧನಾಥ ಪಂತ್‌ಜೀಯವರೇ ವಾರಕ್ಕೆರಡು ಸಲ ಬಂದು ಪಾಠ ಮಾಡುತ್ತಿದ್ದರು. ಕಾಂಗ್ರೆಸ್ ಹೆಸರಿನಿಂದ ನಡೆಯುವ ಯಾವದೇ ಕಾರ್ಯಕ್ರಮಕ್ಕೂ ನಾವು ಮುಂದಾಗಿ ಹೋಗಿ, ಮೇಜು, ಕುರ್ಚಿ, ಬೆಂಚುಗಳನ್ನು ಅಣಿಮಾಡುತ್ತಿದ್ದೆವು. ಅಂತಹ ಸಭೆಗಳು ಸಾಮಾನ್ಯವಾಗಿ ಈಗಿನ ಕೋಟೆ ಹೈಸ್ಕೂಲ್ ಆವರಣದಲ್ಲೇ ನಡೆಯುತ್ತಿದ್ದವು. ಅಂದು ನಾನು ನೋಡುತ್ತಿದ್ದ ಪ್ರಮುಖ ಕಾಂಗ್ರೆಸ್ ವ್ಯಕ್ತಿಗಳೆಂದರೆ ದಿ|| ಕೆ. ಟಿ. ಭಾಷ್ಯಂ ಮತ್ತು ಕಂಟೋನ್ಮೆಂಟ್‌ನಿಂದ ಕಪ್ಪು ಶೆರ್ವಾನಿ, ಉದ್ದನೆಯ ಖಾದಿ ಟೋಪಿ ಧರಿಸಿ ಮೋಟರ್‌ಸೈಕಲ್ ಮೇಲೆ ಬರುತ್ತಿದ್ದ ಒಬ್ಬ ಮುಸಲ್ಮಾನರು— ಅವರ ಹೆಸರು ಬಹುಶಃ ಖಲೀಲ್ ಎಂದೋ ರಜ್ವಿಯೆಂದೋ ಇರಬಹುದು. ಇಂತಹ

ಸಭೆಯಲ್ಲಿಯೇ ಕಮಲಾದೇವಿ ಚಟ್ಟೋಪಾಧ್ಯಾಯ ಹಾಗೂ ಅವರ ಪತಿ ಹರೀಂದ್ರನಾಥ ಚಟ್ಟೋಪಾಧ್ಯಾಯ ಇವರು ಭಾಷಣ ಮಾಡಿದ್ದು ನೆನಪಿದೆ.

1927ರ ವೇಳೆಗೆ ಸೈಮನ್ ಕಮಿಷನ್ ಭಾರತಕ್ಕೆ ಬಂದಾಗ ನಾನೂ ಸಹ ಅದರ ಬಹಿಷ್ಕಾರ ಚಳವಳಿಯಲ್ಲಿ ಪಾಲ್ಗೊಂಡಿದ್ದೆ. 1927ರಲ್ಲಿಯೇ ನ್ಯಾಷನಲ್ ಹೈಸ್ಕೂಲಿನಲ್ಲಿ ಮಹಾತ್ಮಾಜಿಯವರು ಬಂದು ಕೆಲವು ವಾರಗಳು ತಂಗಿದ್ದರು. ನಾವು ಕೆಲವರು ಆಗ ಅಲ್ಲಿ ಸ್ವಯಂಸೇವಕರಾಗಿ ಸೇರಿಕೊಂಡೆವು. ಶಾಲಾ ಸಮಯಾನಂತರ ಸಂಜೆ 5ರಿಂದ 9ರ ವರೆಗೆ ಸರದಿಯಂತೆ ನಮಗೆ ವಹಿಸಿದ ಕಾರ್ಯವನ್ನು ಮಾಡುತ್ತಿದ್ದೆವು. ಪ್ರತಿದಿನ ಸಂಜೆ ಬಾಪೂಜಿ ಹಾಗೂ ಇತರ ಕಾಂಗ್ರೆಸ್ ಪ್ರಮುಖರ ಭಾಷಣ ಕೇಳಲು ಸಾವಿರಾರು ಜನ ಸೇರುತ್ತಿದ್ದರು. ಇಂತಹ ಪ್ರಮುಖರಲ್ಲಿ ಕೆಲವರು ಜ್ಞಾಪಕದಲ್ಲಿದ್ದಾರೆ. ಸರ್ದಾರ್ ವಲ್ಲಭಭಾಯಿ, ಪಂಡಿತ ಮದನ ಮೋಹನ ಮಾಳವೀಯ, ಡಾ|| ಪಿ. ಸಿ. ರೇ, ಮೌಲಾನಾ ಅಬುಲ್ ಕಲಾಮ್ ಅಜಾದ್, ಪಂಡಿತ ತಾರಾನಾಥ ಮುಂತಾದವರು.

ಇದಕ್ಕೆ ಮುನ್ನ, ಚಿಕ್ಕಮಗಳೂರಲ್ಲಿ ನಾಲ್ಕನೆಯ ಫಾರಂನಲ್ಲಿದ್ದಾಗಲೇ ಚಿತ ಕಲೆಯ ಹುಚ್ಚು ಹಿಡಿದು 'ಮದ್ರಾಸ್ ಟೆಕ್ನಿಕಲ್ ಎಕ್ಸಾಮಿನೇಷನ್'ನಲ್ಲಿ ಉತ್ತೀರ್ಣ ನಾಗಿದ್ದೆ. ನಾನು ಬೆಂಗಳೂರಿನಲ್ಲಿದ್ದಾಗ ವೆಸ್ಲಿಯನ್ ಮಿಷನ್, ಲಂಡನ್ ಮಿಷನ್ ಮತ್ತು ಸೇಂಟ್ ಜೋಸೆಫ್ ಈ ಮೂರರಲ್ಲೂ ಒಬ್ಬರೇ ಡ್ರಾಯಿಂಗ್ ಮಾಸ್ಟರರಾಗಿದ್ದ ಮನ್ನಾಸ್ ಎಂಬುವರು ನನ್ನ ಕಲಾಭಿರುಚಿಯನ್ನು ಮೆಚ್ಚಿ, ನಗರ್ತಪೇಟೆಯಲ್ಲಿದ್ದ ಪ್ರಸಿದ್ಧ ಕಲಾವಿದ ದಿ|| ವೆಂಕಟಪ್ಪನವರಲ್ಲಿಗೆ ಕರೆದುಕೊಂಡು ಹೋಗಿ ನನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸಬೇಕೆಂದು ಅವರನ್ನು ಪ್ರಾರ್ಥಿಸಿದರು. ಆಗ್ಗೆ ವೆಂಕಟಪ್ಪ ನವರು ಚಿಕ್ಕಪೇಟೆ ಮಹಾರಾಜ ಫ್ರೇಂ ವರ್ಕ್ಸ್‌ರವರಿಗಾಗಿ ತಿಂಗಳಿಗೆ 200 ರೂಪಾಯಿ ಸಂಬಳಕ್ಕೆ ಕೆಲಸ ಮಾಡುತ್ತಿದ್ದುದರಿಂದ, ಬೇರೆಯವರಿಗೆ ಪಾಠ ಹೇಳುವಂತಿರಲಿಲ್ಲ. ಅಲ್ಲಿಂದ ನೇರವಾಗಿ ಬಳೇಪೇಟೆಯಲ್ಲಿದ್ದ ಕಲಾಮಂದಿರದ ಸುಬ್ಬರಾಯರಲ್ಲಿಗೆ ಹೋದೆವು. ಅವರು ನನ್ನನ್ನು ಕಲಾಮಂದಿರಕ್ಕೆ ಸೇರಿಸಿಕೊಳ್ಳಲು ಒಪ್ಪಿದರು. ಆದರೆ ಅಲ್ಲಿಯ ಶಾಲಾ ವೇಳೆಯೂ ನನ್ನ ಕಾಲೇಜು ವೇಳೆಯೂ ಒಂದೇ ಆಗಿದ್ದುದರಿಂದ ನಾನು ಅಲ್ಲಿ ಇರಲಾಗಲಿಲ್ಲ.

ಇದಕ್ಕೆ ಒಂದೂವರೆ ವರ್ಷ ಮುಂಚೆಯೇ ಪ್ರೊ|| ಕೆ. ವಿ. ಐಯ್ಯರ ಜಿಮ್ನಾಶಿಯಂ ನಲ್ಲಿ ವ್ಯಾಯಾಮ ಮಾಡುತ್ತಿದ್ದೆ ಮತ್ತು ಚಾಮರಾಜಪೇಟೆಯಲ್ಲಿ ಉಡುಪಿಯವರು ನಡೆಸುತ್ತಿದ್ದ ಸಂಗೀತ ಪಾಠಶಾಲೆಗೂ ಸೇರಿದ್ದೆ. ಕೊನೆಗೆ ಈ ಎಲ್ಲಾ ಆಸೆ ಆಕಾಂಕ್ಷೆ ಗಳನ್ನೂ ಮೆಟ್ಟಿನಿಂತದ್ದು ದೇಶಾಭಿಮಾನ.

ಜೂನಿಯರ್ ಇಂಟರ್ ಅನಂತರ ನಾನು ವಿದ್ಯಾಭ್ಯಾಸಕ್ಕೆ ಶರಣುಹೊಡೆದೆ; ಸ್ವಾತಂತ್ರ್ಯ ಹೋರಾಟದತ್ತ ಗಮನ ಹರಿಸಿದೆ. 1930ರ ಸಮಯದವರೆಗೂ ಸ್ವಾತಂತ್ರ್ಯ ಚಳವಳಿ ಕೇವಲ ಪಟ್ಟಣಗಳಿಗೆ ಸೀಮಿತವಾಗಿತ್ತು; ಹಳ್ಳಿಗಾಡುಗಳಲ್ಲಿ ಸ್ವಾತಂತ್ರ್ಯ

ಚಳವಳಿಯ ಮಹತ್ವದ ಅರಿವು ಇನ್ನೂ ಆಗಿರಲಿಲ್ಲ. ಇಲ್ಲಿ ಬಹಳಷ್ಟು ಮಂದಿಗೆ ಬ್ರಿಟಿಷರ ಸರ್ಕಾರ ಆದರ್ಶವಾಗಿತ್ತು. "ಕಾಂಗ್ರೆಸ್ ಪುಂಡರ ಸಂಸ್ಥೆ; ಅದಕ್ಕೆ ಸೇರುವವರೂ ಪುಂಡುಪೋಕರಿಗಳು; ಗಾಂಧಿಯೊಬ್ಬ ಹೊಲೆಯ-ಬ್ರಾಹ್ಮಣರನ್ನು ಒಂದು ಮಾಡಲು ಹೊರಟಿದ್ದಾನೆ. ಈ ಕೆಲಸ ಬ್ರಿಟಿಷರೇ ಮಾಡಲಿಲ್ಲ. ಬಟ್ಟೆ ಮಿಲ್‌ಗಳೊಡನೆ ಈ ಒರಟು ಖಾದಿ ಸ್ಪರ್ಧೆ ಮಾಡಲು ಸಾಧ್ಯವೇ? ಬ್ರಿಟಿಷರು ಒಮ್ಮೆ ಈ ದೇಶ ಬಿಟ್ಟು ಹೊರಡಲಿ, ಅನಂತರ ನಾವೆಲ್ಲ ಕಚ್ಚಾಡಿ ಸಾಯುತ್ತೇವೆ. ಮತ್ತೆ ಮೊಗಲಾಯಿ ದೌಲತ್ತು ಬರಬೇಕೇ? ಪೇಟೆಪಟ್ಟಣಗಳಲ್ಲಿ ಕೂಗುವವರು ಕೂಗಲಿ, ನಮಗೆ ಅದರ ಗೊಡವೆ ಬೇಡ"—ಇಂತಹವೇ ತಪ್ಪುಕಲ್ಪಿತ ಅಭಿಪ್ರಾಯಗಳನ್ನು ಗ್ರಾಮೀಣ ಜನ ಹೊಂದಿದ್ದರು. ಇದಕ್ಕೆ ತಕ್ಕಹಾಗೆ ಅಧಿಕಾರಿಗಳೂ ತಾಳಹಾಕುತ್ತಿದ್ದರು.

ಆ ಕಾಲಕ್ಕೆ ಹಳ್ಳಿಗಳಲ್ಲಿ ಪತ್ರಿಕೆಗಳೂ ಅಪರೂಪ; ಓದುಬರೆಹ ಬಲ್ಲವರೂ ವಿರಳ. ಗುಲಾಮಗಿರಿ ರಕ್ತಗತವಾಗಿರುವಾಗ, ಎಣ್ಣೆ ಇಲ್ಲದ ದೀಪದಲ್ಲಿ ಜ್ಯೋತಿ ಬೆಳಗುವುದಾದರೂ ಹೇಗೆ? ಜಡಭಾರತದ ಬಡಜನತೆ ಬ್ರಿಟಿಷರ ಸೇವಾಕಾಂಕ್ಷೆಯಲ್ಲೇ ತನ್ನ ಉದ್ಧಾರವನ್ನು ಅರಸುತ್ತಾ, ಸ್ವಾಭಿಮಾನವನ್ನು ದೂರೀಕರಿಸಿ ಮಲಗಿತ್ತು.

ಈ ಎಲ್ಲ ತೊಂದರೆಗಳನ್ನೆದುರಿಸಿ, ಗ್ರಾಮಜೀವನದ ಒಳಹೊಕ್ಕು, ಸ್ವಾತಂತ್ರ್ಯದ ಕಹಳೆಯೂದಿ, ನಿಜಭಾರತದ ಬೆಂಬಲ, ಸಹಕಾರಗಳನ್ನು ಸ್ವಾತಂತ್ರ್ಯಸಂಗ್ರಾಮಕ್ಕಾಗಿ ಗಳಿಸಬೇಕಿತ್ತು. ಇಂತಹ ಕಾರ್ಯ ಹಿರಿಯ ನಾಯಕರುಗಳಿಂದಲೇ ಆಗುವಂತಹದಲ್ಲ. ಮಳೆ, ಚಳಿ, ಗಾಳಿ, ನಿದ್ರಾಹಾರ ಯಾವುದನ್ನೂ ಲೆಕ್ಕಿಸದೆ, ಹಳ್ಳಿಹಳ್ಳಿಗೂ ನುಗ್ಗಿ, ಹಟ್ಟಿಯೋ ಕೊಟ್ಟಿಗೆಯೋ ಜಗಲಿಯೋ, ಕೊಸೆಗೆ ಮರದ ಬುಡವೋ, ಎಲ್ಲೆಂದರೆ ಅಲ್ಲಿ ಇರುತ್ತಾ, ಸಿಕ್ಕಿದ್ದು ತಿಂದು, ಬೈಯುವವರಿಂದ ಬೈಸಿಕೊಳ್ಳುತ್ತ, ಹೊಡೆಯುವವರಿಂದ ಹೊಡೆಯಿಸಿಕೊಳ್ಳುತ್ತ ತಮ್ಮ ರೀತಿನೀತಿ, ಮಾತುಗಾರಿಕೆ, ಶಿಸ್ತುಸಂಯಮಗಳು, ದೇಶಪ್ರೇಮದಿಂದ ಆತ್ಮಾರ್ಪಣೆಗೂ ಸಿದ್ಧರಾಗಿ ದುಡಿಯಬಲ್ಲ ನಿಷ್ಠಾವಂತ ಯುವಕರ ತಂಡಗಳಿಂದ ಮಾತ್ರವೇ ಈ ಮಹತ್ಕಾರ್ಯ ಸಾಧ್ಯವಿತ್ತು. ಈ ಭದ್ರ ತಾತ್ವಿಕ ಬುನಾದಿಯ ಮೇಲೆಯೇ ಡಾ|| ಹರ್ಡೀಕರರು ಹಿಂದುಸ್ಥಾನೀ ಸೇವಾದಳವನ್ನು ಸ್ಥಾಪಿಸಿದರು.

ಹಿಂ.ಸೇ. ದಳದ ಬಗೆಗೆ ಆಗಲೇ ನಾನು ಪತ್ರಿಕೆಗಳಲ್ಲಿ ಓದಿ ತಿಳಿದುಕೊಂಡಿದ್ದೆ. 1930 ಏಪ್ರಿಲ್‌ನಲ್ಲಿ ಮಹಾತ್ಮಾಜಿಯವರು ದಾಂಡೀ ಸತ್ಯಾಗ್ರಹ ಆರಂಭಿಸಿ ಸೆರೆಮನೆಗೆ ಒಯ್ಯಲ್ಪಟ್ಟರು. ಅವರ ಜೊತೆಜೊತೆಗೇ ಅನೇಕ ಗಣ್ಯನಾಯಕರೂ ತುರಂಗವನ್ನು ಸೇರಿದರು. ನನ್ನ ಅಂತರಾತ್ಮ ತುಡಿಯಿತು. ಆಗೊಂದು ದಿನ ನಮ್ಮ ತಂದೆಯವರು ಕೊಟ್ಟಿದ್ದ 60 ರೂ.ಗಳು ನನ್ನಲ್ಲಿದ್ದವು. ಇದ್ದಕ್ಕಿದ್ದಂತೆ ಯಾರಿಗೂ ತಿಳಿಸದೆ, ಉಟ್ಟ ಬಟ್ಟೆಯಲ್ಲೇ ಮೂಡಿಗೆರೆಯಿಂದ ಹುಬ್ಬಳ್ಳಿಗೆ ಓಡಿಹೋಗಿ, ಎಂ. ಕೆ. ಕೃಷ್ಣಪ್ಪ ಎಂಬ ಸುಳ್ಳು ಹೆಸರಿನಿಂದ ಹಿಂ.ಸೇ. ದಳವನ್ನು ಸೇರಿದೆ.

ಸೇವಾದಳ ಶಿಸ್ತಿನ ಆಗರ. ಅದಕ್ಕೆ ಸೇರುವವರು ಮೊದಲಿಗೆ ಬ್ರಿಟಿಷರ ಗುಪ್ತ

ದಳಕ್ಕೆ ಸೇರದವನೆಂಬುದನ್ನು ಸ್ಥಿರಪಡಿಸಬೇಕು; ಅನಂತರ ಆರು ತಿಂಗಳ ಕಾಲ ಸಂಸ್ಥೆ ಯಲ್ಲಿ ಆಜ್ಞಾಬದ್ಧನಾಗಿ ದುಡಿಯುವುದಾಗಿ ಮುಚ್ಚಳಿಕೆ ಬರೆದುಕೊಡಬೇಕು. ನಮ್ಮ ಶಿಬಿರಾಧಿಪತಿ ವಿ. ಎಂ. ಮಂತ್ರೀಜಿ ಎಂಬ ಬಂಗಾಳಿ ತರುಣ. ಕೊಡಗಿನ ತಮ್ಮಯ್ಯ (ಅಜ್ಜಿಕುಟ್ಟೀರ ತಮ್ಮಯ್ಯ, ಪೊನ್ನಂಪೇಟೆ—ಸಂ||) ಇನ್ನೊಬ್ಬ ಪ್ರಮುಖರು. ಪ್ರತಿ ಹತ್ತು ಸ್ವಯಂಸೇವಕರಿಗೆ ಒಬ್ಬರು ದಸ್ತಾನಾಯಕ್ ಇರುತ್ತಿದ್ದರು. ಶಿಬಿರದ ಕಾರ್ಯ ಕಲಾಪಗಳೆಲ್ಲ ಸೈನಿಕ ಶಿಬಿರದಲ್ಲಿರುವಂತೆಯೇ. ಮುಂಜಾನೆ 5-30ಕ್ಕೆ ತುತ್ತೂರಿ ಊದಿ ದಾಗ ಎದ್ದೆವೆಂದರೆ ರಾತ್ರಿ 10 ಘಂಟೆಯವರೆಗೆ ಬಿಡುವಿಲ್ಲದ ಕಾರ್ಯಕ್ರಮಗಳು. ಬೆಳಗ್ಗೆ ಮತ್ತು ಸಂಜೆ ಕವಾಯತು; ಧ್ವಜಾರೋಹಣ, ಅವರೋಹಣ; ರಾಷ್ಟ್ರಗೀತೆಗಳ ಅಭ್ಯಾಸ; ತಕಲಿಯಲ್ಲಿ ನೂಲುವುದು; ಶಿಬಿರದ ಸ್ವಚ್ಛತೆ; ಪೇಟೆಯಿಂದ ಸಾಮಗ್ರಿ ತರುವುದು; ಅಡಿಗೆಯವನಿಗೆ ಸಹಾಯ ಮಾಡುವುದು; ದಿನಪೂರ್ತಿ, ಸರದಿಯಂತೆ, ಶಿಬಿರದ ಸುತ್ತಲೂ ಪಹರೆ ಕಾರ್ಯವನ್ನು ಮಾಡುವುದು. ಪ್ರತಿದಿನ ಸಂಜೆ 8 ಘಂಟೆಗೆ ಜನರನ್ನು ಆಹ್ವಾನಿಸಿ, ಪ್ರತಿ ದಸ್ತಾದಿಂದ ಇಬ್ಬರು ಸ್ವಾತಂತ್ರ್ಯ ಚಳವಳಿ, ಸ್ವಾಭಿಮಾನ, ಸಾಕ್ಷರತೆ, ಅಸ್ಪೃಶ್ಯತಾನಿವಾರಣೆ, ಪಾನಪ್ರತಿಬಂಧ, ಖಾದೀ ಗ್ರಾಮೋದ್ಯೋಗ, ಸರಳಜೀವನ, ಗ್ರಾಮನೈರ್ಮಲ್ಯ, ತ್ರಿವರ್ಣಧ್ವಜ ಮುಂತಾದ ಯಾವುದಾದರೊಂದು ವಿಷಯದ ಮೇಲೆ ಮಾತನಾಡುವ ಕಾರ್ಯಕ್ರಮವಿರುತ್ತಿತ್ತು.

ಸ್ವಯಂಸೇವಕರಿಗೆ ಖಾದಿ ಸಮವಸ್ತ್ರ ಕಡ್ಡಾಯ. ಬೀಡಿ, ಸಿಗರೇಟ್, ನಸ್ಯ, ಎಲೆಯಡಿಕೆ ಯಾವುದೂ ಸಲ್ಲ. ಶಿಬಿರದ ಒಳಗಾಗಲೀ ಹೊರಗಾಗಲೀ ಶಿಸ್ತಿನ ನಡತೆ—ಶಿಬಿರಾಧಿಪತಿ ಅಪ್ಪಣೆ ಮಾಡಿದ ತಕ್ಷಣವೇ ಎಲ್ಲಿಗೆಂದರಲ್ಲಿಗೆ ಹೊರಡಲು ಸಿದ್ಧರಿರ ಬೇಕಿತ್ತು. ಸ್ವಯಂಸೇವಕನು ಅತ್ಯವಶ್ಯವೆನ್ನಬಹುದಾದ ವಸ್ತುಗಳನ್ನು ಮಾತ್ರವೇ ಹೊಂದಿರಬೇಕಿತ್ತು. ಶಿಬಿರದಲ್ಲಿ ಮುಂಜಾನೆ 7 ಗಂಟೆಗೆ ಒಂದು ಲೋಟ ಜೋಳದ ಗಂಜಿ, ಮಧ್ಯಾಹ್ನ ಊಟ, ಸಂಜೆ ಊಟ ದೊರಕುತ್ತಿದ್ದವು. ಶಿಸ್ತು ನಿಯಮ ಉಲ್ಲಂಘಿಸಿದವರಿಗೆ ಛೋಟಾ ಹಾಜರಿ (ಲಘು ಉಪಹಾರ) ಇಲ್ಲವೇ ಹಾಜರಿ (ಊಟ) ಬಂದ್. ಶಿಬಿರದ ವೆಚ್ಚಗಳನ್ನೆಲ್ಲ ಕಾಂಗ್ರೆಸ್ ಸಮಿತಿಯವರು ನಿರ್ವಹಿಸುತ್ತಿದ್ದರು.

ಹೀಗೆ 15-20 ದಿನಸಗಳವರೆಗೆ ಶಿಕ್ಷಣಪಡೆದ ಸ್ವಯಂಸೇವಕರನ್ನು ಮೊದಲು ಹತ್ತಿರದ ಊರುಗಳಿಗೂ ಅನಂತರ ದೂರದೂರದ ಊರುಗಳಿಗೂ ಪ್ರಚಾರಕಾರ್ಯ ಕ್ಕಾಗಿ ಅಟ್ಟುತ್ತಿದ್ದರು. ಅವಶ್ಯವಿದ್ದಷ್ಟು ದಾರಿ ಖರ್ಚಿಗೆ ಹಣ ಕೊಡುವರು. ಊಟ ವಸತಿ ಹಳ್ಳಿಗಳಲ್ಲಿಯೇ ಕಲ್ಪಿಸಿಕೊಳ್ಳಬೇಕು. ಹೀಗೆ 4-6 ಹಳ್ಳಿಗಳಲ್ಲಿ ತಿರುಗಿ, ವಿಶ್ರಾಂತಿ ಗೆಂದು ಶಿಬಿರಕ್ಕೆ ಬರುವರು. ಪ್ರತಿನಿತ್ಯವೂ ಹೊಸ ಹೊಸ ತಂಡಗಳು ಹೋಗುವುದು ಹಾಗೂ ಬರುವುದು. ನಾನು ಶಿಬಿರದಲ್ಲಿ 30 ದಿವಸಗಳು ಕಠಿಣ ರೀತಿಯಲ್ಲಿ ಕಳೆದೆ.

ಒಂದು ದಿನ ಸಂಜೆ 6 ಗಂಟೆಗೆ ನಾವು 17 ಮಂದಿಗೆ ಕಚೇರಿಯಿಂದ ಕರೆ ಬಂದಿತು. ನಮ್ಮ ಕಿಟ್ ಸಮೇತ ಎಲ್ಲರಿಗೂ ವಂದಿಸಿ ಹೊರಟೆವು. ರಾತ್ರಿ 10 ಗಂಟೆ ನಂತರ

ಕಚೇರಿಯ ಬಾಗಿಲು, ಕಿಟಕಿಗಳನ್ನೆಲ್ಲ ಮುಚ್ಚಿ ನಮ್ಮನ್ನು ಮಹಡಿಯ ಮೇಲೆ ಕರೆದೊಯ್ದರು. ಅಲ್ಲಿ ಡಾ|| ಹರ್ಡೀಕರರೊಂದಿಗೆ ಲೋಕರೆ ಭಾಸ್ಕರರಾಯರು ಮತ್ತು ಮಹಾರಾಷ್ಟ್ರದ ತರುಣರೊಬ್ಬರು ಇದ್ದರು. ನಮ್ಮನ್ನು ಆ ಅಪರಿಚಿತರೊಂದಿಗೆ ಗುಜರಾತದ ಧಾರ್ಸನಾಕ್ಕೆ ಉಪ್ಪಿನ ಸತ್ಯಾಗ್ರಹಕ್ಕೆ ಕಳುಹಿಸಲಾಯಿತು. ನಾವೆಲ್ಲರೂ ವೇಷ ಬದಲಿಸಿ ಹುಟಗಿ ಮತ್ತು ಲೋಂಡಾ ಮಾರ್ಗವಾಗಿ ಎರಡು ತಂಡಗಳಲ್ಲಿ ನಡುರಾತ್ರಿಯಲ್ಲಿ ರೈಲಿಗೆ ಹೊರಟು ಮುಂಬಯಿ ಸೇರಿದೆವು. ಸ್ಟೇಷನ್‌ನಲ್ಲಿ ಹಳ್ಳಿಕೇರಿ ಗುದ್ಲೆಪ್ಪನವರೂ ಬಾಪೂರಾಯರೂ ನಮ್ಮನ್ನು ಕಂಡು ವಿಲೆಪಾರ್ಲೆ ಶಿಬಿರಕ್ಕೆ ಕರೆದೊಯ್ದರು. ಮತ್ತೆ ನಾಲ್ಕಾರು ದಿನಗಳಲ್ಲಿ ಕರ್ನಾಟಕದ ನಾನಾ ಕಡೆಗಳಿಂದ ಸುಮಾರು 100 ಮಂದಿ ಸ್ವಯಂಸೇವಕರು ಬಂದು ಕೂಡಿಕೊಂಡರು (ಇದು 1930ರ ಮೇ ಅಂತ್ಯದಲ್ಲಿರಬೇಕು — ಸಂ||).

ಮುಂಬಯಿನ ವಿಲೆಪಾರ್ಲೆ ಶಿಬಿರದಲ್ಲಿ ಮಹಾರಾಷ್ಟ್ರ, ಗುಜರಾತದ ಸ್ವಯಂಸೇವಕರೂ ಇದ್ದರು. ಭಾಷೆ ಮತ್ತು ಸ್ಥಳ ಪರಿಚಯವಿಲ್ಲದ ನಾವು ಸ್ವಯಂಸೇವಕಿಯರ ಜೊತೆಗಾವಲಿಗೂ, ಕಲೆಹಾಕಿದ ವಿದೇಶೀ ವಸ್ತ್ರಗಳನ್ನು ಹೊತ್ತು ತರಲು ಹಾಗೂ ಶಿಬಿರದ ಸ್ವಚ್ಛತೆಯ ಕೆಲಸಗಳಿಗೆ ಹೋಗುತ್ತಿದ್ದೆವು. ಹೀಗೆ 13–14 ದಿನಗಳು ಕಳೆದವು. ಕಾಂಗ್ರೆಸ್ ಅಧ್ಯಕ್ಷ ಮೋತೀಲಾಲ್ ನೆಹರೂರವರಿಂದ ತಂತಿ : "ಉಪ್ಪು ದಾಸ್ತಾನು ಇಲ್ಲ. ಧಾರ್ಸನಾದಲ್ಲಿ ವಿಪರೀತ ಮಳೆ. ಕರ್ನಾಟಕದವರಿಗೆ ಧೈರ್ಯವಿದ್ದರೆ ಈಗ ಅಖಿಲ ಭಾರತ ಪ್ರಶ್ನೆಯಾಗಿರುವ ಸೊಲ್ಲಾಪುರಕ್ಕೆ ಹೋಗಿ ಲಷ್ಕರೀ ಶಾಸನಭಂಗ ಮಾಡಲಿ."

ಮಾರ್ಷಲ್ ಲಾ ಮುರಿಯುವುದು ಸುಲಭದ ಮಾತಾಗಿರಲಿಲ್ಲ. ಅನೇಕ ಸ್ವಯಂಸೇವಕರು ನಾನಾ ಕಾರಣಗಳನ್ನಿತ್ತು ಹಿಂಜರಿದರು. ಕೊನೆಯಲ್ಲಿ ಬೆಂಗಳೂರಿನವರೊಬ್ಬರು, ಮಹಾರಾಷ್ಟ್ರದವರೊಬ್ಬರು (ಇಬ್ಬರೂ ಪದವೀಧರರು ; ಹೆಸರು ನೆನಪಿಲ್ಲ), ಕರ್ನಾಟಕ–ಮಹಾರಾಷ್ಟ್ರ–ಗುಜರಾತದ ಸುಮಾರು 113 ಸ್ವಯಂಸೇವಕರೊಂದಿಗೆ, ಸೊಲ್ಲಾಪುರಕ್ಕೆ ಹೊರಟರು. ಪುಣೆಯ ಟಿಳಕ ಮಂದಿರದಲ್ಲಿ ಮಧ್ಯಾಹ್ನ ಊಟ. ಅಲ್ಲೇ ರಾತ್ರಿ ಉಪವಾಸವಿದ್ದು, ಮಾರನೇ ದಿನ ಸಂಜೆಯ ವೇಳೆಗೆ ಸೊಲ್ಲಾಪುರಕ್ಕೆ 10 ಮೈಲು ದೂರದಲ್ಲಿರುವ ಪಾಕಣಿ ಎಂಬ ಸಣ್ಣ ಸ್ಟೇಷನ್‌ನಲ್ಲಿಳಿದು ರಾತ್ರಿ 9 ಗಂಟೆ ಮೇಲೆ ಸೊಲ್ಲಾಪುರಕ್ಕೆ ಹೊರಟೆವು. ನಮ್ಮ ಸುಳಿವು ತಿಳಿದ ಮಿಲಿಟರಿಯವರು ಜೀಪಿನಲ್ಲಿ ನಡುದಾರಿಯಲ್ಲಿ ಅಡ್ಡಗಟ್ಟಿ ಕತ್ತಲಲ್ಲಿ ನಿಂತಿದ್ದರು. ಸಮೀಪಕ್ಕೆ ಬಂದಾಗ ಗುಂಡು ಹಾರಿಸುವ ಬೆದರಿಕೆ ನೀಡಿದರು. ನಾವು ಹೆದರಲಿಲ್ಲ. ಅವರು ಹಿಂದಿರುಗಿದನಂತರ ಒಂದು ಹೊಲದಲ್ಲಿ ಮಲಗಿದ್ದು, ಬೆಳಗ್ಗೆ 6 ಗಂಟೆಗೇ ಎದ್ದು, ಹತ್ತಿರದ ಒಂದು ಬಾವಿಯಲ್ಲಿ ಮುಖ ತೊಳೆದು ನೀರು ಕುಡಿದೆವು. ಒಂದು ಫರ್ಲಾಂಗ್ ಅಂತರದಲ್ಲಿ ಮೂರು ಮೂರು ಜನರಂತೆ ರಾಷ್ಟ್ರಧ್ವಜಗಳನ್ನು ಹಿಡಿದು ಸೊಲ್ಲಾಪುರಕ್ಕೆ ನಡೆದೆವು.

ಮುನಿಸಿಪಲ್ ಗೇಟ್ ಬಳಿ ಐರೋಪ್ಯ ಹಾಗೂ ದೇಶೀಯ ಸಿಪಾಯಿಗಳೂ

ಸಾರ್ಜೆಂಟ್‌ಗಳೂ ಲಾಠಿ, ರೈಫಲ್ ಸಹಿತ ಕಾದಿದ್ದರು. ನಾವು ಗೇಟ್ ಒಳಗೆ ಬಂದೊಡನೆಯೇ ಮೊದಲು ಮನಸ್ವೀ ಲಾಠಿ ಬಡಿತ, ನಂತರ ಬಾವುಟಗಳನ್ನು ಕಿತ್ತೆಸೆದು ನಮ್ಮನ್ನು ಒಂದೆಡೆ ಕುಕ್ಕರಿಸುವ ಸಮಾರಂಭವು 12 ಗಂಟೆಯವರೆಗೆ ನಡೆಯಿತು. ಕೆಲವರ ಮೂಳೆಗಳು ಮುರಿದು ಬಾಸುಂಡೆ ಎದ್ದು ರಕ್ತ ಸೋರಿತು. ಗೋಡಬೋಲಿ ಎಂಬ ತರುಣನ ಕಿವಿ ಹರಿದು ನೆತ್ತರು ಸುರಿಯುತ್ತಿದ್ದ ದೃಶ್ಯ ಭಯಾನಕವಾಗಿತ್ತು. ನನ್ನ ಮೈಕೈ, ಬೆನ್ನು, ತೊಡೆ, ಕಾಲುಗಳಿಗೆ ಲೆಕ್ಕವಿಲ್ಲದಷ್ಟು ಪೆಟ್ಟುಗಳು ಬಿದ್ದವು. ಯಾರಿಗೂ ಔಷಧೋಪಚಾರವಿಲ್ಲ. ಎಲ್ಲರನ್ನೂ ಬಸ್ಸಿನಲ್ಲಿ ತುಂಬಿ ಸಾದರ್ ಪೋಲಿಸ್ ಸ್ಟೇಷನ್‌ಗೆ ಒಯ್ದರು. ಅಲ್ಲಿ ಒಬ್ಬೊಬ್ಬರನ್ನೇ ಒಳಗೆ ಕರೆದು ಬೂಟುಗಾಲಿನಿಂದಲೂ, ಕೈಗಳಿಂದಲೂ ಥಳಿಸಿ ಕ್ಷಮಾಪತ್ರಕ್ಕೆ ಸಹಿ ಹಾಕಿಸಲು ವ್ಯರ್ಥಯತ್ನ ನಡೆಸಿದರು. ನಮ್ಮ ಬಟ್ಟೆಗಳನ್ನೆಲ್ಲ ಕಳಚಿ, ನಿಕ್ಕರ್ ಮಾತ್ರ ಬಿಟ್ಟು ಹೊರಗೆ ಬಿಸಿಲಲ್ಲಿ ಕೂರಿಸಿದರು. ಕತ್ತಲಾಗುವ ಮುನ್ನ ಭಾಷಾವಾರು ನಮ್ಮನ್ನು ವಿಂಗಡಿಸಿ 12–13 ಜನರಂತೆ ಒಂದೊಂದು ಬಸ್ಸಿನಲ್ಲಿ ಕೂರಿಸಿಕೊಂಡು, ಮುಂದೆ ಸಾರ್ಜೆಂಟ್, ಹಿಂದೆ ಸಿಪಾಯಿಗಳು ಕುಳಿತು ನಾಲ್ಕು ದಿಕ್ಕುಗಳಿಗೆ ಹೊರಟರು. ನಾವು ಒಂದು ಬಸ್ಸಿನಲ್ಲಿ 13 ಕನ್ನಡಿಗರು ಇದ್ದೆವು. ದಟ್ಟವಾಗಿ ಬೆಳೆದಿದ್ದ ಒಂದು ಕಾಡುಪ್ರದೇಶದಲ್ಲಿ ಮಾರನೆಯ ಮಧ್ಯಾಹ್ನ ನಮ್ಮನ್ನಿಳಿಸಿ ಹೊರಟುಹೋದರು. ಎರಡು ದಿನಗಳ ಉಪವಾಸ, ಚಿತ್ರಹಿಂಸೆಗಳಿಂದ ಹೆಜ್ಜೆ ಎತ್ತಿ ಇಡುವಂತಿರಲಿಲ್ಲ.

ನಮ್ಮ ಸುದೈವದಿಂದ ಜಾರಾಮಣಿ ಎಂಬ ಹಳ್ಳಿಯ ಇಬ್ಬರು ಸಿಕ್ಕಿ ನಮ್ಮನ್ನೆಲ್ಲ ತಮ್ಮ ಹಳ್ಳಿಗೆ ಒಯ್ದು, ಆ ನಡುರಾತ್ರಿ ಜನರನ್ನೆಬ್ಬಿಸಿ, ಭಕ್ಕರಿ ಮಾಡಿಸಿ ಊಟ ಕೊಡಿಸಿದರು. ಆ ನಮ್ಮ ಗುಂಪಿನಲ್ಲಿ ಗದಗಿನ ಡಂಬಳ ಮತ್ತು ಲಕ್ಷ್ಮೀಕಾಂತ್ ಎಂಬುವರು ಇದ್ದುದು ನೆನಪಿನಲ್ಲಿದೆ.

ಮೂರನೇ ದಿನ ಉರಿಬಿಸಿಲಲ್ಲಿಯೇ ಹೊರಟು ಸಂಜೆಯವರೆಗೆ ಸುಮಾರು 30 ಮೈಲು ನಡೆದು ಹುಟಗಿ ಸ್ಟೇಷನ್ ತಲುಪಿ, ರೈಲಿನಲ್ಲಿ ಪ್ರಯಾಣ ಮಾಡಿ ಹುಬ್ಬಳ್ಳಿಗೆ ಬಂದಾಗ ನಾನು ಮತ್ತು ಇನ್ನೊಬ್ಬರು ಮಾತ್ರ ಇದ್ದೆವು; ಉಳಿದವರು ಅವರವರ ಊರಿನಲ್ಲಿ ಇಳಿದಿದ್ದರು. ನಾವು ನೇರ ಕಚೇರಿಗೆ ಹೋಗಿ ವರದಿಯೊಪ್ಪಿಸಿದೆವು. ಆ ವೇಳೆಗೆ ಡಾ|| ಹರ್ಡೀಕರರೂ ಸರ್ದಾರ್ ವೆಂಕಟರಾಮಯ್ಯನವರೂ ಇದ್ದು, ನಮ್ಮ ವರದಿಯನ್ನು ಅಚ್ಚುಹಾಕಿಸಿ ಮೂರನೇ ದಿನ ಹಂಚಿದರು.

ಎರಡು ದಿನ ವಿಶ್ರಾಂತಿಗಾಗಿ ನಾನು ಶಿಬಿರದಲ್ಲಿ ನಿಂತೆ. ಆಗ ನನ್ನ ತಂದೆಯವರು ಬಂದು ಊರಿಗೆ ಹಿಂತಿರುಗುವಂತೆ ನನ್ನ ಮನವೊಲಿಸಲು ಯತ್ನಿಸಿ ವಿಫಲರಾಗಿ ಹಿಂತಿರುಗಿದರು. ನಾನಾಗ ದಸ್ತಾನಾಯಕ್ ಆದೆ. ನನ್ನ ಸಂಗಡ 10 ಸ್ವಯಂಸೇವಕರನ್ನು ಕರೆದುಕೊಂಡು ಹಿರೇಕೆರೂರು ತಾಲ್ಲೂಕು ಹಂಸಭಾವಿಯಲ್ಲಿ ಶಿಬಿರವನ್ನು ತೆರೆದು ಚಳವಳಿ ಪ್ರಾರಂಭಿಸಿದೆ. ಆಗ ನನ್ನ ಜೊತೆ ಇದ್ದವರಲ್ಲಿ ನರಸಪ್ಪ ಎಂಬವರ ಹೆಸರು

ಮಾತ್ರ ನೆನಪಿದೆ. ಜುಲೈ ಮಧ್ಯೆ ಇರಬೇಕು. ಹಂಸಭಾವಿಯಲ್ಲಿ ಶಾಲಾ ಮಾಸ್ತರ ಆಗಿದ್ದ, ಪ್ರಭಾವೀ ಕಾಂಗ್ರೆಸ್ ಕಾರ್ಯಕರ್ತ ನೇಸ್ವಿ ಮಾಸ್ತರ (ಮುಂದೆ ಎಂ.ಪಿ. ಆದರು ; ಸಂಪುಟ I, ಧಾರ. 57 ನೋಡಿ—ಸಂ||) ನನ್ನ ಕಾರ್ಯಾಚರಣೆಗೆ ಪೂರ್ಣ ಸಹಕಾರ ನೀಡಿದರು. ಅವರು ಸಮೀಪದ ದೀವಿಗೆಹಳ್ಳಿಯವರು. ಹಂಸಭಾವಿಯಿಂದ ಸುತ್ತುಕೋಟಿವರೆಗಿನ ಆರೇಳು ಮೈಲು ಫಾಸಲೆವರೆಗೆ ನನ್ನ ಕಾರ್ಯಕ್ಷೇತ್ರ ವಿಸ್ತರಿಸಿತ್ತು.

ಒಮ್ಮೆ ನನ್ನ ತಂಡದವರೊಂದಿಗೆ ಬ್ಯಾಡಗಿಗೆ ಬಂದು ರಾಷ್ಟ್ರಗೀತೆ ಹಾಡಿ ಭಾಷಣ ಮಾಡಿದ್ದಕ್ಕೆ ನನ್ನ ಮೇಲೆ ಅರೆಸ್ಟ್ ವಾರಂಟ್ ಹೊರಟಿತು. ಇದರ ಸುಳಿವು ಹತ್ತಿದ ಡಾ|| ಹರ್ಡೀಕರರು ಕೂಡಲೇ ನನ್ನನ್ನು ಹುಬ್ಬಳ್ಳಿಗೆ ಕರೆಸಿ, ಮಾರನೆ ದಿನವೇ ಶಿರ್ಸಿಗೆ ಕಳುಹಿಸಿದರು. ವಾರಂಟ್ ಇದ್ದದ್ದು ಎಂ. ಸಿ. ಕೃಷ್ಣಪ್ಪನ ಹೆಸರಿನಲ್ಲಿ; ನಾನು ಎಂ. ಕೆ. ಕೃಷ್ಣಪ್ಪ. ಇಷ್ಟೇ ನೆಪಮಾಡಿ ಡಾ|| ಹರ್ಡೀಕರರು "ಆ ಹೆಸರಿನವರು ನಮ್ಮ ಶಿಬಿರದಲ್ಲಿ ಯಾರೂ ಇಲ್ಲ" ಎಂದು ಪತ್ರ ಬರೆಯುತ್ತಿದ್ದುದು ಆನಂತರ ತಿಳಿಯಿತು.

ಶಿರ್ಸಿಗೆ ನಾನು ಹೋದುದು ಮಳೆಗಾಲದಲ್ಲಿ. ಸದಾ ಹುಯ್ಯುತ್ತಿದ್ದ ಜಡಿಮಳೆಯಿಂದ ಹಳ್ಳಕೊಳ್ಳಗಳೆಲ್ಲ ತುಂಬಿ ಹರಿಯುತ್ತಿದ್ದವು ಶಿರ್ಸಿಯಲ್ಲಿ ಸ್ವಯಂಸೇವಕರಿಗಾಗಿ ಒಂದು ಶಿಬಿರವಿತ್ತು. ನಾನೂ ಸ್ಥಳೀಯ ಸ್ವಯಂಸೇವಕರೂ ಕೂಡಿ ಐದಾರು ಮಂದಿ ಶಿರ್ಸಿ–ಹುಬ್ಬಳ್ಳಿ ರಸ್ತೆಯಲ್ಲಿದ್ದ ಯೆಕ್ಕಂಬಿ ಎಂಬ ಊರಿಗೆ ಬಂದೆವು. ಆ ಊರವರು ಕಾಂಗ್ರೆಸ್ಸಿಗರಾದ ನಮ್ಮನ್ನು ಅಸ್ಪೃಶ್ಯರಂತೆ ಎಣಿಸಿದರು. ಮನೆಗಳಿಗೆ ಸೇರಿಸುವುದಿರಲಿ, ಮನೆ, ಅಂಗಡಿ ಜಗಲಿಯ ಮೇಲೂ ನಿಲ್ಲಗೊಡುತ್ತಿರಲಿಲ್ಲ. ಅವರು ತಮ್ಮ ಊನವರೇ ಆದ ಗೋಪಾಲ ಭಟ್ಟ ಎಂಬ ಕಾಂಗ್ರೆಸ್‌ನವರನ್ನು ಹೊರಹಾಕಿದ್ದರು. ನಾವು ಅವರದೇ ನೆರವುಪಡೆದು ಒಂದು ಹಾಳುಮನೆಯಲ್ಲಿ ತಂಗಿದೆವು. ಒಳಗೆ ಆಳುದ್ದ ಹುತ್ತ, ಹೊರಗೆ ಕಾಡುಬಳ್ಳಿಗಳು ಮನೆಯ ಮೇಲೆಲ್ಲ ಮುಚ್ಚಿಕೊಂಡು ಭಯಾನಕವಾಗಿತ್ತು. ಅದರಲ್ಲಿ ಅಡುಗೆ ಮಾಡಿ ಊಟ ಮಾಡುವಂತಿರಲಿಲ್ಲ. ಪಾತ್ರೆ ಸಾಮಾನು ಹೊಂದಿಸಿಕೊಳ್ಳಲು ಸಮಯವಾಗಲೀ ಹಣವಾಗಲೀ ಇಲ್ಲ (1930ರ ಆಗಸ್ಟ್ ಕೊನೆಯ ಹೊತ್ತಿಗೆ).

ನಾವು ಬಂದ ಸುಳಿವು ತಿಳಿದು ತಾಲ್ಲೂಕು ಮಾಮಲೇದಾರರು ಕಾರಿನಲ್ಲಿ ಬಂದು ಟಿ.ಬಿ.ಯಲ್ಲಿ ಮೊಕ್ಕಾಂ ಮಾಡಿದರು. ನಮ್ಮ ಕಾರ್ಯಕ್ರಮ ಅರಣ್ಯಸತ್ಯಾಗ್ರಹ ಹಾಗೂ ಕರನಿರಾಕರಣೆ. ಬೆಳಗ್ಗೆ ಏಳುವಾಗಲೇ ಅವಲಕ್ಕಿ ನೆನೆಸಿಕೊಂಡು, ಅದಕ್ಕೆ ನಿಂಬೆಹುಳಿ ಹಿಂಡಿ, ಹೊಟ್ಟೆ ತುಂಬ ತಿಂದು, ಕೂಡಲೇ ಬಿಸಲೇಕೊಪ್ಪ ಮುಂತಾದ ಹಳ್ಳಿಗಳಿಗೆ ಹೋಗಿ ಗಂಡಸರನ್ನೆಲ್ಲ ಸತ್ಯಾಗ್ರಹಕ್ಕಾಗಿ ಕಾಡಿಗೆ ಕಳುಹಿಸುತ್ತಿದ್ದೆವು. ಮಾಮಲೇದಾರರು ಬರುವಾಗ, ಕಾರಿಗೆ ಅಡ್ಡವಾಗುವಂತೆ, ಮರಗಳನ್ನು ಕಡಿದು ಉರುಳಿಸುವುದು, ಕಲ್ಲುಮುಳ್ಳು ಹಾಕುವುದು ಮಾಡುತ್ತಿದ್ದೆವು. "ದೇವೇಂದ್ರ ಮಳೆ ಕರೆಯುತ್ತಾನೆ, ಭೂಮಿತಾಯಿ ಹುಲ್ಲು ಬೆಳೆಸುತ್ತಾಳೆ; ಆದ್ದರಿಂದ ಸರ್ಕಾರಕ್ಕೆ ಹುಲ್ಲು ಬನ್ನಿ ತೆರಬೇಡಿ, ಕಂದಾಯ ಕೊಡಬೇಡಿ. ಮನೆಕಟ್ಟಲು ಬೇಕಾದ ಮರಮುಟ್ಟುಗಳನ್ನು

ಕಡಿಮೆ ಸಾಗಿಸಿ. ಸ್ವಾತಂತ್ರ್ಯದ ಕಹಳೆಗೆ ಓಗೊಟ್ಟು ನಮ್ಮೊಡನೆ ಸಹಕರಿಸಿ"—ಇದೇ ಮುಂತಾಗಿ ಗ್ರಾಮಸ್ಥರಿಗೆ ಬೋಧಿಸುತ್ತಿದ್ದೆವು

ಇದ್ದ ಒಂದು ಕಂಬಳಿಯನ್ನೇ ಕೊಪ್ಪೆ ಹಾಕಿ, ಮುಂಜಾನೆ ಹೊರಟೆವೆಂದರೆ ಹಗಲೆಲ್ಲಾ ಮಳೆಯಲ್ಲಿ ತಿರುಗಿ, ಸಂಜೆಗೆ ಹಿಂತಿರುಗುವಾಗ ಸ್ವಲ್ಪ ಸೌದೆ ಹೊತ್ತುತಂದು ಬೆಂಕಿ ಮಾಡಿ, ಕಂಬಳಿ ಆರಲು ಹಾಕಿ, ಅವಲಕ್ಕಿ ನೆನೆಸಿ ತಿಂದು, ಹರಕು ಚಾಪೆಯ ಮೇಲೆ ಅದೇ ಕಂಬಳಿಯನ್ನು ಹೊದ್ದು ಮಲಗುತ್ತಿದ್ದೆವು. ಬೆಳಕಿಗೆಂದು ಸೀಮೆ ಎಣ್ಣೆ ಬುಡ್ಡಿಯೊಂದನ್ನಿಟ್ಟುಕೊಂಡಿದ್ದೆವು.

ನಮ್ಮ ಈ ಕಾರ್ಯಾಚರಣೆಯಿಂದಾಗಿ, 9 ದಿನಗಳು ಮೊಕ್ಕಾಂ ಮಾಡಿದ ಮಾಮಲೇದಾರರು ಕೇವಲ ನಾಲ್ಕಾಣೆ ಮಾತ್ರ ಕಂದಾಯ ವಸೂಲು ಮಾಡಿಕೊಂಡು ಬಂದ ದಾರಿಗೆ ಸುಂಕವಿಲ್ಲ ಎಂಬಂತೆ ಹಿಂತಿರುಗಿದರು. ಆ ಒಂಬತ್ತು ದಿನಗಳೂ ನಾವು ಕೇವಲ ಅವಲಕ್ಕಿಯನ್ನು ಮಾತ್ರವೇ ತಿಂದು ಜೀವ ಹಿಡಿದೆವು.

ಅನಂತರ ನಮ್ಮ ಕೇಂದ್ರದಿಂದ ಬಂದ ಆದೇಶದಂತೆ, ಒಳಪ್ರಾಂತ್ಯದ ಮಲೆ ಸೀಮೆಯಾದ ಮಾಲಂಜಿ ಎಂಬ ಹಳ್ಳಿಗೆ ಹೋದೆ. ದಾರಿಯಲ್ಲಿ ಗೊಂಡಾರಣ್ಯದಲ್ಲಿ ದಾರಿತಪ್ಪಿ ಸಂಜೆ 5 ಘಂಟೆಯ ತನಕ ಸುತ್ತಾಡಿದೆ. ಒಬ್ಬಂಟಿಗನಾಗಿಯೇ ಕಾಡಿನಲ್ಲಿ ಉಳಿಯುವ ಪ್ರಸಂಗ ಬಂದ ಬಗ್ಗೆ ದುಃಖವಾಯಿತು. ಅದೃಷ್ಟವಶಾತ ಸೌದೆಗಾಗಿ ಬಂದ ಇಬ್ಬರು ದಾರಿತೋರಿದರು. ಮಾಲಂಜಿಗೆ ಸುತ್ತಲ 32 ಹಳ್ಳಿಗಳಲ್ಲಿ ಕರನಿರಾಕರಣೆ, ಅರಣ್ಯಸತ್ಯಾಗಹವನ್ನು ಮುಂದುವರಿಸಿದೆವು. ಆ ಮೊದಲೇ ಅಲ್ಲಿ ಚಕ್ರಪಾಣಿಯೆಂಬ ಸ್ವಯಂಸೇವಕರು ಕಾರ್ಯನಿರತರಾಗಿದ್ದರು. (ಇವರು ಬೆಂಗಳೂರು ಮಿನರ್ವಾ ಮಿಲ್ಸ್‌ನಲ್ಲಿ ಕೆಲಸ ಮಾಡುತ್ತಿದ್ದವರು). ಇದೆಲ್ಲ ನಡೆದದ್ದು 1930ರ ಸೆಪ್ಟೆಂಬರ್ ಮಧ್ಯದಲ್ಲಿ.

ಆ ಕಾಡುಪ್ರದೇಶದಲ್ಲಿ ಚಕ್ರಪಾಣಿಯೂ ನಾನೂ ಬಹಳ ಕಷ್ಟನಷ್ಟಗಳಿಗೆ ಗುರಿಯಾಗಬೇಕಾಯಿತು. ಒಂದು ರಾತ್ರಿಯಂತೂ ಕಾಡಿನಲ್ಲಿ ಮೌನವಾಗಿ ನಡೆಯುತ್ತಿದ್ದ ನಮ್ಮನ್ನು ದನವೆಂದು ಭ್ರಮಿಸಿದ ಹುಲಿಯೊಂದು ಮೈಮೇಲೆ ಬೀಳುವುದರಲ್ಲಿತ್ತು. ನಾವು ಮಾತನಾಡಿದ ಧ್ವನಿ ಕೇಳಿ ಹುಲಿ ಒಮ್ಮೆ ಗರ್ಜಿಸಿ, ಹಿಂದಕ್ಕೆ ಹಾರಿ, ನಮ್ಮತ್ತ ನೋಡುತ್ತಾ ಕಣ್ಮರೆಯಾಯಿತು. ಅದರ ಗರ್ಜನೆ ನಮ್ಮನ್ನು ಕೆಲಕಾಲ ನಿಶ್ಚೇಷ್ಟಿತರನ್ನಾಗಿಸಿತು. ನಮ್ಮ ನಾಲಗೆಯೊಣಗಿ ಒಬ್ಬರಿಗೊಬ್ಬರು ಮಾತನಾಡಲೂ ಆಗದಂತೆ ಆಯಿತು. ಮತ್ತೊಮ್ಮೆ ದಾಸನಕೊಪ್ಪಲಿನಿಂದ ಮಾಳಿಗೆಗೆ ಹೋಗುವ ದಾರಿಯಲ್ಲಿ ಸಿಕ್ಕ ಚಿಕ್ಕ ಹೊಳೆಯೊಂದರಲ್ಲಿ ತೇಲಿಹೋಗುವುದರಲ್ಲಿದ್ದೆವು. ಹೀಗೆ ಅಲ್ಲಿ ಸ್ವಲ್ಪ ಕಾಲವಿದ್ದು ಹುಬ್ಬಳ್ಳಿಗೆ ಹಿಂತಿರುಗಿ, ಗುರುದೇವರ ಆಶೀರ್ವಾದಪಡೆದು (ಅಕ್ಟೋಬರ್, 1930) ಊರಿಗೆ ಬಂದೆ. ಇದು ಹಿಂದುಸ್ಥಾನೀ ಸೇವಾದಳದಲ್ಲಿ ಆರು ತಿಂಗಳು ಕಾಲ ದುಡಿದುದರ ಸವಿನೆನಪು.

ನಾವು ಮುಂಬಯಿಯಿಂದ ಸೊಲ್ಲಾಪುರಕ್ಕೆ ಹೋಗುವಾಗ ಮಧ್ಯ ಒಂದು ದಿನ

ಪುಣೆಯ ಟಿಳಕ್ ಮಂದಿರದಲ್ಲಿ ತಂಗಿದ್ದೆವು ನನ್ನಲ್ಲಿ ಇದ್ದ ಮುಕ್ಕಾಲು ಸೊವರನ್ನಿನ ಒಂದು ಉಂಗುರ ಹಾಗೂ ನಾಲ್ಕುನಾಲ್ಕು ಮುತ್ತುಗಳ ಒಂದು ಜೊತೆ ಕಿವಿ-ಒಂಟಿ ಇವನ್ನು ನಾಯಕರ ಸೂಚನೆಯಂತೆ ಅಲ್ಲಿನ ವ್ಯವಸ್ಥಾಪಕರು ಇಸಿದುಕೊಂಡು ಪಟ್ಟಿ ಬರೆದಿಟ್ಟಿದ್ದರು. ನಾನು ಊರಿಗೆ ಬಂದನಂತರ ಡಾ|| ಹರ್ಡೀಕರರು ಒಂದು ಪತ್ರ ಬರೆದು, ಒಡವೆಗಳನ್ನು ತಾವು ತಂದುದಾಗಿಯೂ ಅವುಗಳನ್ನು ಹೇಳಿಕಳುಹಿಸಬೇಕೆಂದು ತಿಳಿಸಬೇಕಾಗಿಯೂ ಪತ್ರ ಬರೆದರು. ಅವನ್ನು ಒಳ್ಳೆಯ ಬೆಲೆಗೆ ಮಾರಿ ಹಣವನ್ನು ಕಾಂಗ್ರೆಸ್ ಫಂಡಿಗೆ ಸೇರಿಸಿಕೊಳ್ಳಲು ಅವರಿಗೆ ಉತ್ತರ ಬರೆದೆ.

1932ರಲ್ಲಿ ನನ್ನ ಸ್ವಂತ ಊರಾದ ಮಾಕೋನಹಳ್ಳಿಯನ್ನು ಬಿಟ್ಟು ಮೂಡಿಗೆರೆಗೆ ಬಂದು ನೆಲಸಿದೆ. ಆಗ ಬೀರೂರಿನ ಕೆ. ಟಿ. ಸತ್ಯನಾರಾಯಣಶೆಟ್ಟರು ಕಾಂಗ್ರೆಸ್ಸಿನ ಧುರೀಣರಾಗಿದ್ದು ಅವರ ಸಲಹೆಯಂತೆ ಸಂಸ್ಥೆಯನ್ನು ಬೆಳೆಸಲು ಶ್ರಮಿಸಿದೆ. 1936ರಿಂದ 1965ರ ವರೆಗೆ ಕಾಂಗ್ರೆಸ್ ಕಚೇರಿ ಕೂಡ ನನ್ನ ಮಳಿಗೆಯ ಕಟ್ಟಡದಲ್ಲೇ ಇತ್ತು. ಮುನಿಸಿಪಾಲಿಟಿ ಅಧ್ಯಕ್ಷ, ತಾ|| ಬೋ|| ಅಧ್ಯಕ್ಷನಾಗಿ ಕೆಲಸಮಾಡಿದ್ದೇನೆ. 1964 ರಿಂದ ಕಾಂಗ್ರೆಸ್ ಚಟುವಟಿಕೆಗಳಿಂದ ನಿವೃತ್ತನಾಗಿರುವೆ.

ಮೈ. ಚಿಮು. 15

## ಎಸ್. ರಾಮಸ್ವಾಮಿ

ಜನನ : 1921 ಉದ್ಯೋಗ : ರಚನಾತ್ಮಕ ಕಾರ್ಯಕರ್ತ ವಿಳಾಸ : ಮೂಡಿಗೆರೆ



1927ರಲ್ಲಿ ಮಹಾತ್ಮಾ ಗಾಂಧಿಯವರನ್ನು ಹಾಸನದಲ್ಲಿ ಮಹಾರಾಜ ಪಾರ್ಕಿನ ಸಭೆಯಲ್ಲಿ ನನ್ನ ತಾಯಿಯವರೊಂದಿಗೆ ಹೋಗಿ ನೋಡುವ ಸಂಯೋಗವು ನನಗೆ ಲಭಿಸಿತ್ತು. ನಾನು ಚಿಕ್ಕವನಾಗಿದ್ದರೂ ಹಾಸನದಲ್ಲಿ ಗಾಂಧೀಜಿ ಬಗ್ಗೆ ಜನ ಆಡುತ್ತಿದ್ದ ಮಾತುಗಳು, ಅವರಿಗೆ ಲಭಿಸಿದ ಸ್ವಾಗತ ಮತ್ತು ಅವರ ಭೇಟಿಗಾಗಿ ಸೇರಿದ್ದ ಜನಸಂದಣಿ ಇವುಗಳು ನನ್ನ ಮನಸ್ಸಿನಮೇಲೆ ಗಾಂಧೀಜಿ ಬಗ್ಗೆ ಭಕ್ತಿ ಹಾಗೂ ಗೌರವ ಭಾವನೆಗಳನ್ನುಂಟು ಮಾಡಿದವು. ನಾನು ಬೀರೂರಿನ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯಾಗಿದ್ದೆ. ಶಾಲೆಯ ಸಭೆಸಮಾರಂಭಗಳಲ್ಲಿ ಬೀರೂರಿನ ಮುಖಂಡರೂ, ಆಗಿನ ಮೈಸೂರು ಕಾಂಗ್ರೆಸ್‌ನ ಒಬ್ಬ ಹಿರಿಯ ಮುಂದಾಳುಗಳೂ ಆಗಿದ್ದ ಕೆ. ಟಿ. ಸತ್ಯನಾರಾಯಣ ಶೆಟ್ಟರು ತಪ್ಪದೆ

ಭಾಗವಹಿಸುತ್ತಿದ್ದರು. ನಮ್ಮ ಎಲ್ಲಾ ಉಪಾಧ್ಯಾಯರುಗಳೂ ಅವರ ಬಗ್ಗೆ ಭಕ್ತಿ ವಿಶ್ವಾಸವನ್ನಿಟ್ಟಿದ್ದರು. ಅವರು ಸಭೆಸಮಾರಂಭಗಳಲ್ಲಿ ಗಾಂಧೀಜಿಯ ಬಗ್ಗೆಯೂ, ಸ್ವದೇಶಿ, ಖಾದಿಯ ಬಗ್ಗೆಯೂ ಉಪನ್ಯಾಸ ಮಾಡುತ್ತಿದ್ದರು. ವಿದ್ಯಾರ್ಥಿಗಳೆಲ್ಲರೂ ಖಾದಿ ಟೋಪಿಯನ್ನು ಧರಿಸಿಯೇ ಶಾಲೆಗೆ ಬರುವಂತಹ ವ್ಯವಸ್ಥೆಯಾಯಿತು. ಶಾಲೆಯ ತನಿಖೆಗಾಗಿ ಬಂದ ಜಿಲ್ಲಾ ವಿದ್ಯಾಧಿಕಾರಿಗಳು ಶಾಲೆಯ ಹೊರ ಆವರಣದಲ್ಲಿ ಶಿಸ್ತಿನಿಂದ ಸಮಾಂತರದಲ್ಲಿ ನಿಂತು ಶಾಲಾಪ್ರಾರ್ಥನೆ ಮಾಡುತ್ತಿದ್ದುದನ್ನು "ವಿದ್ಯಾರ್ಥಿಗಳು ಶಿಸ್ತಿನಿಂದ, ಶುಭ್ರ ಬಿಳಿಟೋಪಿ ಧರಿಸಿ ಪ್ರಾರ್ಥನೆ ಮಾಡುತ್ತಿದ್ದಾಗಿನ ನೋಟ ನನಗೆ ನಕ್ಷತ್ರ ಮಂಡಲವನ್ನು ನೋಡಿದರೆ ಆಗುವ ಆನಂದದ ಅನುಭವವನ್ನು ಉಂಟುಮಾಡಿತು" ಎಂದು ತಮ್ಮ ತನಿಖೆಯ ವರದಿಯಲ್ಲಿ ವರ್ಣಿಸಿದ್ದಾರೆ (1933-34ರಲ್ಲಿ). ವಿದ್ಯಾರ್ಥಿದೆಸೆಯಿಂದಲೇ ನಾನು ಖಾದೀಧಾರಿಯಾಗಲು ಇವೆಲ್ಲ ಕಾರಣವಾದವು. ಕೆ. ಟಿ. ಸತ್ಯನಾರಾಯಣಶೆಟ್ಟರ ನೇತೃತ್ವದಲ್ಲಿ ನಡೆಸಲ್ಪಡುತ್ತಿದ್ದ 'ಸೇವಾ ಸಮಾಜದ ಗಣಪತಿ ಉತ್ಸವ' ಈ ಪ್ರಾಂತ್ಯದಲ್ಲೇ ಅತ್ಯಂತ ವೈಭವದಿಂದ ನಡೆಸಲ್ಪಡುತ್ತಿತ್ತು. 21 ದಿನಗಳ ಈ ಉತ್ಸವದ ಕಾರ್ಯಕ್ರಮವಾಗಿ, ಹರಿಕಥೆ, ಕೀರ್ತನೆಗಳ ಜೊತೆಗೆ ಪ್ರತಿದಿನ ಯಾರಾದರೊಬ್ಬ ದೇಶಭಕ್ತರ ಭಾಷಣವೂ ಲಾವಣಿಗಳು, ನಾಟಕಾಭಿನಯಗಳೂ ನಡೆಸಲ್ಪಡುತ್ತಿದ್ದು, ಅಂತಹ ಕಾರ್ಯಕ್ರಮದಲ್ಲಿ ನಾನು ತಪ್ಪದೆ ಪಾಲ್ಗೊಳ್ಳುತ್ತಿದ್ದೆ.

ಕೆ. ಟಿ. ಸತ್ಯನಾರಾಯಣಶೆಟ್ಟರ ಪ್ರೇರಣೆ ಮತ್ತು ಜಿಲ್ಲಾ ವಿದ್ಯಾಧಿಕಾರಿಗಳಾಗಿದ್ದ ಜಿ. ಎಸ್. ಸುಬ್ಬರಾಯರ ಪ್ರೋತ್ಸಾಹದಿಂದ ನಮ್ಮ ಶಾಲೆಯ ಎರಡು-ಮೂರು ಮಂದಿ ಉಪಾಧ್ಯಾಯರುಗಳು ಬೆಂಗಳೂರು ನ್ಯಾಷನಲ್ ಹೈಸ್ಕೂಲಿನಲ್ಲಿ ಸರ್ದಾರ್ ವೆಂಕಟರಾಮಯ್ಯನವರ ಮಾರ್ಗದರ್ಶನದಲ್ಲಿ ಕೊಡಲಾಗುತ್ತಿದ್ದ ಶಿಸ್ತು ಮತ್ತು ವ್ಯಾಯಾಮ ಶಿಕ್ಷಣದ ಟ್ರೈನಿಂಗ್ ಪಡೆದು ಬಂದು ನಮ್ಮನ್ನು ತಯಾರು ಮಾಡಿದ್ದರಿಂದ, ಶಿಸ್ತಿನ ಸ್ವಯಂಸೇವಕರಾಗಿ ಮುಂದುವರಿಯಲು ತಳಹದಿ ಹಾಕಿಕೊಟ್ಟಂತಾಯಿತು.

ಆರ್ಥಿಕ ಅಡಚಣೆಗಳಿಂದ ನನ್ನ ವ್ಯಾಸಂಗ ನಿಲ್ಲಿಸಿ 1937ನೇ ವರ್ಷ ಮೂಡಿಗೆರೆಗೆ ಬಂದು ನನ್ನ ಸ್ನೇಹಿತರ ನೆರವು ಪಡೆದು, ಸರ್ಕ್ಯಾಲದ ಪುಸ್ತಕ ವ್ಯಾಪಾರವನ್ನು ಪ್ರಾರಂಭಿಸಿದೆ. ನನ್ನ ವಿರಾಮಕಾಲದಲ್ಲಿ ಮೂಡಿಗೆರೆ ಶಾಲಾ ಮಕ್ಕಳಿಗೆ ವ್ಯಾಯಾಮ ಹಾಗೂ ಶಿಸ್ತಿನ ಶಿಕ್ಷಣವನ್ನು ಕೊಡಲು ಪ್ರಾರಂಭಿಸಿದೆ. ಅದಕ್ಕೆ ಉಪಾಧ್ಯಾಯರುಗಳ ಸಹಕಾರವಿತ್ತು. ನಾನು ಮೂರು ವರ್ಷಕಾಲ ಸ್ಕೌಟ್ ಸಂಸ್ಥೆಯಲ್ಲಿ ಸೇವೆಸಲ್ಲಿಸಿದ್ದರಿಂದ ನನಗೆ ಒಂದು ಮೆಡಲ್ ಕೊಟ್ಟು ಗೌರವಿಸಿದರು. 1940ರಲ್ಲಿ ಬೆಂಗಳೂರಿನಲ್ಲಿ ನಡೆದ ಸ್ಟೇಟ್ ರ್ಯಾಲಿಗೆ ಸ್ಕೌಟ್ ಟ್ರೂಪ್ ಒಂದನ್ನು ಕರೆದುಕೊಂಡು ಹೋಗಿದ್ದೆ. ಇದರ ಪರಿಣಾಮವಾಗಿ ವಿದ್ಯಾರ್ಥಿಗಳ ಸಂಪರ್ಕವೂ, ಅವರ ಅಭಿಮಾನವೂ ನನಗೆ ಲಭಿಸಿದ್ದು, ನನ್ನ ಮುಂದಿನ ಚಳವಳಿಗೆ ಸಹಕಾರಿಯಾಯಿತು.

1942ರ 'ಕ್ವಿಟ್ ಇಂಡಿಯಾ' ಚಳವಳಿಯು ಪ್ರಾರಂಭವಾಯಿತು. ನನ್ನ

ಮಿತ್ರರಾದ ಮೂಡಿಗೆರೆ ತಾಲ್ಲೂಕು ಧಾರದಹಳ್ಳಿಯ ಕೃಷ್ಣಪ್ಪಗೌಡರು, ಹಂತೂರಿನ ಎಚ್. ಬಿ. ಕೃಷ್ಣೇಗೌಡರು, ಹಳಿಕೆ ಚನ್ನೇಗೌಡರು ಮೊದಲಾದವರನ್ನೆಲ್ಲ ಸಂಧಿಸಿ, ನಮ್ಮ ತಾಲ್ಲೂಕಿನಲ್ಲೂ ಚಳವಳಿ ಮಾಡುವ ವಿಷಯ ಚರ್ಚಿಸಿ, ಅವರೆಲ್ಲರ ಸಹಕಾರದಿಂದ ಚಳವಳಿಯನ್ನು ಪ್ರಾರಂಭಿಸಲು ನಿರ್ಧರಿಸಿದೆವು. ನಾವು 6–8 ಜನ ಹಳ್ಳಿಹಳ್ಳಿಯನ್ನು ತಿರುಗಿ, ಸತ್ಯಾಗ್ರಹಿಗಳ ತಂಡವನ್ನು ಬೆಳೆಸುವ ಹಾಗೂ ಹಳ್ಳಿಹಳ್ಳಿಗಳಲ್ಲೂ ಅಸಹಕಾರ ಚಳವಳಿಯ ಕಿಚ್ಚನ್ನು ಹಬ್ಬಿಸುವ ಕಾರ್ಯಕ್ರಮ ಕೈಗೊಂಡೆವು. ಕೆಲವಾರು ದಿನಗಳಲ್ಲೇ ನಮ್ಮ ಗುಂಪು ಅಧಿಕಗೊಂಡಿತು. ಆಗ ನನ್ನ ಸಹಕಾರ್ಯಕರ್ತರಾಗಿದ್ದವರು— ದಿ|| ಡಿ. ಎಸ್. ಕೃಷ್ಣಪ್ಪಗೌಡರು (ಮಾಜಿ ಪುರಸಭಾಧ್ಯಕ್ಷರು, ಮೂಡಿಗೆರೆ), ಡಿ. ಬಿ. ಬಿಳೀಗೌಡರು (ಧಾರದಹಳ್ಳಿ), ದಿ|| ಎಚ್. ಬಿ. ಕೃಷ್ಣೇಗೌಡ (ದೇವವೃಂದ), ಬಿ. ಎಸ್. ರಾಮೇಗೌಡ (ಚಿಟ್ಟಿಗೆರೆ), ಪಟೇಲ್ ಚನ್ನೇಗೌಡ (ಹಳಿಕೆ), ಎಚ್. ಬಿ. ಬೈರೇಗೌಡ (ಹಳಸೆ), ನಾರಾಯಣ ಅಧಿಕಾರಿ (ಮೂಲ ಊರು—ಸಾರಂಕಿ, ಪುಂಜಾಲಕಟ್ಟೆ, ದ.ಕ.), ಎಂ. ಹುಚ್ಚೇಗೌಡ (ಮಾಕೋನಹಳ್ಳಿ). ನಮ್ಮ ಗುಂಪನ್ನು ಬಂಧಿಸಲು ಮೂಡಿಗೆರೆ ತಾಲ್ಲೂಕ್ ಪೋಲಿಸ್ ಅಧಿಕಾರಿಗಳಿಗೆ ಮೇಲಧಿಕಾರಿಗಳಿಂದ ಆದೇಶ ಬಂದಿದ್ದು, ಅವರು ನಮ್ಮನ್ನು ಹುಡುಕುತ್ತಿದ್ದಾರೆಂಬ ವರ್ತಮಾನವೂ ನಮಗೆ ಹಳ್ಳಿಯಲ್ಲೇ ತಿಳಿದು ನಾವು ಜಾಗೃತರಾಗಿ, ರಾತ್ರಿಯ ವೇಳೆಗಳಲ್ಲಿ ಹಳ್ಳಿಗಳಿಗೆ ಭೇಟಿಕೊಟ್ಟು ಜನಜಾಗೃತಿಗೊಳಿಸುತ್ತಿದ್ದೆವು.

19–9–1942ರಂದು ನಾವು ಸಕಲೇಶಪುರ ತಾಲ್ಲೂಕಿನ ಕೆಲವು ಹಳ್ಳಿಗಳಲ್ಲಿ ಕೆಲಸ ಪೂರೈಸಿಕೊಂಡು, ಮೂಡಿಗೆರೆ ಕಡೆಗೆ ಸಂಜೆಯಾದಮೇಲೆ ಹೊರಟೆವು. ಮಾರ್ಗದಲ್ಲಿ ಸಣ್ಣಗೆ ಮಳೆ ಬಂದದ್ದರಿಂದ, ಮೂಡಿಗೆರೆ ಕಡೆಗೆ ಬರುತ್ತಿದ್ದ ಮಂಜ್ರಾಬಾದು ಬಸ್ಸನ್ನು ಹತ್ತಿಕೊಂಡು, ಮೂಡಿಗೆರೆ–ಜನ್ನಾಪುರದ ಮಧ್ಯದ ಕಾಡಿನಲ್ಲಿ ಇಳಿದು ಬಿಟ್ಟೆವು. ನಮ್ಮ ಬಟ್ಟೆಗಳನ್ನು ಒಗೆಯಬೇಕಾಗಿದ್ದುದರಿಂದಲೂ ಊರನ್ನು ಬಿಟ್ಟು 8–10 ದಿನಗಳಾಗಿದ್ದುವರಿಂದಲೂ, ನಾವು ಇಳಿದ ಜಾಗಕ್ಕೆ ಸಮೀಪವಾಗಿದ್ದ ಹಾಗೂ ಡಿ. ಎಸ್. ಕೃಷ್ಣಪ್ಪಗೌಡ ಮತ್ತು ಬಿಳಿಗೌಡರ ಊರಾದ ಧಾರದಹಳ್ಳಿಗೆ ರಾತ್ರಿ ಹೋದೆವು. 20–9–1942ನೇ ದಿನ ಬೆಳಗಾಗುವ ವೇಳೆಗೆ ಧಾರದಹಳ್ಳಿಗೆ 6–8 ಜನ ಪೋಲಿಸರೂ ಅಧಿಕಾರಿಗಳೂ ಬಂದರು. ನಾವೆಲ್ಲಾ ಒಂದು ಕಡೆ ಉಪಹಾರಕ್ಕಾಗಿ ಸೇರಿದ್ದ ಸಮಯಕ್ಕೆ ಸರಿಯಾಗಿ ಪೋಲಿಸರು 3–4 ಜನರನ್ನು ಬಂಧಿಸಿಬಿಟ್ಟರು; ಕೆಲವರು ಮಾತ್ರ ತಪ್ಪಿಸಿಕೊಂಡರು. ನನ್ನನ್ನೂ, ಡಿ. ಎಸ್. ಕೃಷ್ಣಪ್ಪಗೌಡ ಹಾಗೂ ಬಿಳಿಗೌಡರನ್ನೂ ಬಂಧಿಸಿ ಕಾರಿನಲ್ಲಿ ಮೂಡಿಗೆರೆಗೆ ಹೊರಟರು. ಆ ವೇಳೆಗಾಗಲೇ ನಮ್ಮನ್ನು ಬಂಧಿಸಿದ ಸುದ್ದಿ ಮೂಡಿಗೆರೆಯನ್ನು ಮುಟ್ಟಿದ್ದುದರಿಂದ ವಿದ್ಯಾರ್ಥಿಗಳೂ ಮೂಡಿಗೆರೆಯಲ್ಲಿದ್ದ ಸತ್ಯಾಗ್ರಹಿಗಳೂ ಊರ ಜನರೂ ಗುಂಪುಗುಂಪಾಗಿ ಕಾರು ಬರುವ ಮಾರ್ಗದಲ್ಲಿ ಜಯಕಾರ ಮಾಡುತ್ತಾ ನಿರೀಕ್ಷಿಸುತ್ತಿದ್ದರು. ಕಾರು ಬಂದೊಡನೆ

ಮೂಡಿಗೆರೆಯ ಜನಸಂದಣಿಯನ್ನೂ, ವಿದ್ಯಾರ್ಥಿಗಳ ಘೋಷಣೆಗಳನ್ನೂ ಕಂಡ ಪೋಲಿಸ್ ಅಧಿಕಾರಿಗಳು ಹೆದರಿ ಅಲ್ಲಿನ ಪೋಲಿಸ್ ಸ್ಟೇಷನ್ ಹತ್ತಿರವೂ ಸಹ ಕಾರು ನಿಲ್ಲಿಸದೆ ಸೀದಾ ಚಿಕ್ಕಮಗಳೂರಿಗೆ ತಂದರು.

ಜಿಲ್ಲಾ ಮ್ಯಾಜಿಸ್ಟ್ರೇಟರ ಮುಂದೆ ನಮ್ಮನ್ನು ಹಾಜರುಪಡಿಸಲಾಯಿತು. ನಮ್ಮನ್ನು ಡಿಫೆನ್ಸ್ ಆಫ್ ಇಂಡಿಯಾ ರೂಲ್ಸ್ ಪ್ರಕಾರ C.C. No. 63/42–43 ಹುಕುಂ ಮೇರೆಗೆ ಡಿಟೆನ್ಷನ್ನಿನಲ್ಲಿ ಅನಿರ್ದಿಷ್ಟಕಾಲದವರೆಗೆ ಬಂಧಿಸಿಡುವ ವಾರಂಟ್‌ಗೆ ನಮ್ಮ ಸಹಿ ಪಡೆದರು. ಕೂಡಲೇ ನಮ್ಮನ್ನು ಜಿಲ್ಲಾ ಲಾಕಪ್ಪಿಗೆ ಕರೆದುಕೊಂಡು ಹೋದರು. ಆ ವೇಳೆಗಾಗಲೇ ಅಲ್ಲಿ 30 ಜನ ಸತ್ಯಾಗ್ರಹಿಗಳಿದ್ದು ಅವರೆಲ್ಲ ನಮ್ಮನ್ನು ಆನಂದದಿಂದ ಸ್ವಾಗತಿಸಿದರು.

ಜೈಲಿನಲ್ಲಿದ್ದವರ ಪೈಕಿ ಹೆಚ್ಚಿನವರು ವಿದ್ಯಾರ್ಥಿಗಳು. ಆಗ ವಿದ್ಯಾರ್ಥಿಗಳಾಗಿದ್ದು, ಈಗ ಚಿಕ್ಕಮಗಳೂರಿನಲ್ಲೇ ಡಿ.ಡಿ.ಪಿ.ಐ. ಆಗಿರುವ ಎಸ್. ವಿ. ರಾಮಚಂದ್ರರಾವ್, ಜಿಲ್ಲಾ ಆರೋಗ್ಯಾಧಿಕಾರಿಗಳಾಗಿರುವ ಡಾ|| ಶಿವಣ್ಣ, ಚಿಕ್ಕಮಗಳೂರು ಪುರಸಭಾಧ್ಯಕ್ಷರಾಗಿದ್ದ ಸಿ. ಆರ್. ಶಿವಾನಂದ, ಮಾಜಿ ಶಾಸನಸಭಾಸದಸ್ಯ ಸಿ. ಎಂ. ಎಸ್. ಶಾಸ್ತ್ರಿ, ಸಿ. ಆರ್. ಶಂಕರಪ್ಪ, ದೇವದಾಸ ಪೈ, ಮಲೆನಾಡು ಪ್ರೆಸ್ ಮಾಲೀಕರಾಗಿರುವ ಎನ್. ಜಿ. ಯಾಜಿ ಇನ್ನೂ ಮುಂತಾದವರು ಅಲ್ಲಿದ್ದರು. ನಾವು ಹೋದ ಕೆಲದಿನಗಳ ನಂತರ, ಈಗ ಖಾದಿ ಬೋರ್ಡ್ ಅಧ್ಯಕ್ಷರಾಗಿದ್ದ ಮಂಜುನಾಥ್‌ರವರ ಪತ್ನಿ ಸಿ. ಆರ್. ಸುಬ್ಬಮ್ಮ, ಲಾಯರ್ ರಂಗನಾಥಯ್ಯಂಗಾರ್ಯರ ತಂಗಿ ವೈದೇಹಿ ಮತ್ತು ಇನ್ನೋರ್ವ ಹೆಣ್ಣುಮಗಳು (ಹೆಸರು ಈಗ ಜ್ಞಾಪಕವಿಲ್ಲ) ಬಂದರು. ಹೀಗೆ ದಿನಂಪ್ರತಿ 6–8 ಜನರು ಸಾಮಾನ್ಯವಾಗಿ ಬರುತ್ತಲೇ ಇದ್ದರು.

ಜೈಲಿನ ಹೊರಗೆ ಪ್ರತಿದಿನ ಬೆಳಗ್ಗೆ ಪ್ರಭಾತ್‌ಫೇರಿ ಬರುತ್ತಿತ್ತು. ಆ ವೇಳೆಗೆ ನಾವೆಲ್ಲಾ ಜೈಲುಗೋಡೆಯ ಹತ್ತಿರ ನಿಂತು ಘೋಷಣೆ ಕೂಗುತ್ತಿದ್ದೆವು. ಹೊರಗಿನ ವರ್ತಮಾನಗಳನ್ನೂ ನಮ್ಮ ಬಂಧುಗಳ ಸ್ನೇಹಿತರ ಪತ್ರಗಳನ್ನೂ ಪ್ರಭಾತ್‌ಫೇರಿಯಲ್ಲಿ ಬಂದವರು ಕಲ್ಲಿಗೆ ಸುತ್ತಿ ಜೈಲ್ ಆವರಣದೊಳಕ್ಕೆ ಎಸೆಯುತ್ತಿದ್ದರು. ನಾವೂ ಅದೇ ರೀತಿ ಒಳಗಿನ ಸಮಾಚಾರಗಳನ್ನು ಹೊರಕ್ಕೆ ರವಾನಿಸುತ್ತಿದ್ದೆವು. ಈ ಪತ್ರವ್ಯವಹಾರಕ್ಕೆ 'ಏರ್ ಮೇಲ್' ಎಂದು ಕರೆಯುತ್ತಿದ್ದೆವು.

ಕೆಲವು ದಿನಗಳಲ್ಲೇ ಮೈಸೂರಿನ ಮುಖಂಡರಾದ ಎಂ. ಎನ್. ಜೋಯಿಸ್, ಮೈಸೂರು ಕಾ.ವ.ಕ. ಸದಸ್ಯರಾಗಿದ್ದ ಎಂ. ಹುಚ್ಚೇಗೌಡ, ಮಾಜಿ ಎಂ.ಆರ್.ಎ. ಎಸ್. ಅಣ್ಣಪ್ಪಶೆಟ್ಟರು ಇವರುಗಳನ್ನು ಚಿಕ್ಕಮಗಳೂರು ಜೈಲಿಗೆ ಕಳುಹಿಸಿದರು. ಕೆಲವು ತಿಂಗಳುಗಳನಂತರ ಅಲ್ಪಾವಧಿ ಶಿಕ್ಷೆಗೆ ಗುರಿಯಾಗಿದ್ದವರನ್ನೂ ಕೆಲವು ವಿದ್ಯಾರ್ಥಿಗಳನ್ನೂ ಬಿಡುಗಡೆ ಮಾಡಿದರು.

ಎಂ. ಎನ್. ಜೋಯಿಸರು ಹುಟ್ಟಾ ಸತ್ಯಾಗ್ರಹಿಗಳೂ, ಉಗ್ರ ಹೋರಾಟ

ಗಾರರೂ, ಕಂಚಿನ ಕಂಠದವರೂ ಆಗಿದ್ದರು ಅವರು ರೇಗಿದರೆಂದರೆ ಜೈಲು ಅಧಿಕಾರಿಗಳೂ ಹೆದರಿಬಿಡುತ್ತಿದ್ದರು. ಎಂ. ಹುಚ್ಚೇಗೌಡರು ಮತ್ತು ಅಣ್ಣಪ್ಪಶೆಟ್ಟರು ನಮ್ಮ ಜಿಲ್ಲೆಯವರೇ ಆಗಿದ್ದು ಸರಳ ಹಾಗೂ ಶಾಂತಸ್ವಭಾವದವರು.

ನಾನು ಜೈಲಿಗೆ ದಾಖಲಾದ 239ನೇ ದಿನ (17-5-1943) ಯಾವ ಶರತ್ತೂ ಇಲ್ಲದೆ, ಇತರ ಕೆಲವು ಸತ್ಯಾಗ್ರಹಿಗಳೊಂದಿಗೆ, ಬಿಡುಗಡೆ ಮಾಡಿದರು. ನಾನು ಸತ್ಯಾಗ್ರಹ ಚಳವಳಿಗೆ ಧುಮುಕಿದ್ದರಿಂದ ನನ್ನ ಪುಸ್ತಕ ವ್ಯಾಪಾರ ಸಂಪೂರ್ಣವಾಗಿ ನಿಂತುಹೋಯಿತಲ್ಲದೆ, ನನ್ನ ಪುಸ್ತಕದ ಬಾಕಿಗೆ ನಾನು ಸರ್ಕಾರದಲ್ಲಿ ಇಟ್ಟಿದ್ದ ಠೇವಣಿ ಅಡ್ಜಸ್ಟ್ ಆಗಿತ್ತು. ಪಠ್ಯಪುಸ್ತಕಗಳೆಲ್ಲ ಬದಲಾಯಿಸಲ್ಪಟ್ಟಿದ್ದರಿಂದ, ಉಳಿದಿದ್ದ ಪುಸ್ತಕಗಳನ್ನು ಮಾರುವಂತಿರಲಿಲ್ಲ. ಮನೆಬಾಡಿಗೆಯನ್ನೂ ಕಟ್ಟಿ, ಆ ಪುಸ್ತಕಗಳನ್ನೆಲ್ಲ ಹಳೆ ಕಾಗದಕ್ಕೆ ಕೊಟ್ಟುಬಿಟ್ಟೆ. ಉದ್ಯೋಗವಿಲ್ಲದೆ ಕಾಲಕಳೆಯುವುದು ಕಷ್ಟವಾಯಿತು. ಅದಕ್ಕಾಗಿ ಸಾರ್ವಜನಿಕರಿಂದ ಸ್ವಲ್ಪ ನಿಧಿ ಸಂಗ್ರಹಿಸಿ, ಕೆಲವು ಚರಕಗಳನ್ನು ಕೊಂಡುತಂದು ಒಕ್ಕಲಿಗರ ಹಾಸ್ಟೆಲ್‌ನಲ್ಲಿ ನೂಲುವ ಶಿಕ್ಷಣ ಪ್ರಾರಂಭಿಸಿದೆ. ನನ್ನ ಎಲ್ಲ ಸಹೋದ್ಯೋಗಿ ಸತ್ಯಾಗ್ರಹಿಗಳೂ ಕೆಲವೇ ದಿನಗಳಲ್ಲಿ ಬಿಡುಗಡೆ ಹೊಂದಿ ಬಂದರು. ನಾವೆಲ್ಲ ಸೇರಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯೊಂದನ್ನು ರಚಿಸಿದೆವು. ಅದಕ್ಕೆ ನಾನೇ ಕಾರ್ಯದರ್ಶಿ. ಹೀಗೆ ಒಂದೂವರೆ ವರ್ಷ ಕಳೆದಮೇಲೆ ನನಗೆ ಸೇವಾ ಕ್ಷೇತ್ರ ಒಂದು ಸಿಕ್ಕಿತು.

ಯಶೋಧರಾ ದಾಸಪ್ಪನವರು ಮೈಸೂರು ರಾಜ್ಯದಲ್ಲಿ ಕಸ್ತೂರಬಾ ಸ್ಮಾರಕ ಟ್ರಸ್ಟಿನ ಪ್ರತಿನಿಧಿಯಾಗಿ ಗ್ರಾಮಸೇವಿಕಾ ವಿದ್ಯಾಲಯವನ್ನೂ, ಎಲ್ಲ ಜಿಲ್ಲೆಗಳಲ್ಲೂ ಗ್ರಾಮಸೇವಾ ಕೇಂದ್ರಗಳನ್ನೂ ತೆರೆಯುವ ಕೆಲಸ ಕೈಗೊಂಡಿದ್ದರು. ಎಂ. ಹುಚ್ಚೇಗೌಡರ ಪತ್ನಿ ಪಾರ್ವತಮ್ಮ ಮೂಡಿಗೆರೆ ತಾಲ್ಲೂಕು ಹೊಸಹಳ್ಳಿ ಎಂಬ ಗ್ರಾಮದಲ್ಲಿ ಒಂದು ಕೇಂದ್ರವನ್ನು ಪ್ರಾರಂಭಿಸಿದರು. ಅಲ್ಲಿಗೆ ಕಾರ್ಯಕರ್ತರಾಗಿ ಬಂದವರು ಮಲೆನಾಡಿನ ಹವಾಮಾನ ಒಗ್ಗದೆ ಕೆಲಸವನ್ನೇ ಬಿಟ್ಟು ಹೊರಟುಹೋದರು. ಆ ಕೇಂದ್ರದ ಕೆಲಸ ಪ್ರಾರಂಭದಲ್ಲೇ ನಿಂತುಹೋಗುವ ಪರಿಸ್ಥಿತಿ ಬಂತು. ಆಗ ಯಶೋಧರಾ ದಾಸಪ್ಪನವರು ಹೊಸಹಳ್ಳಿ ಕಸ್ತೂರಬಾ ಕೇಂದ್ರದ ಕಾರ್ಯಚಟುವಟಿಕೆಗಳನ್ನು ಮುಂದುವರಿಸಿ ಕೊಂಡು ಬರಲು ನನಗೆ ಕರೆ ಕೊಟ್ಟರು. ನನಗೆ ರಚನಾತ್ಮಕ ಕಾರ್ಯಕ್ಕೆ ಕ್ಷೇತ್ರವೊಂದು ಅಗತ್ಯವಾಗಿದ್ದುದರಿಂದ ಕೂಡಲೇ ಒಪ್ಪಿಕೊಂಡೆ. ಪಾರ್ವತಮ್ಮ ಹುಚ್ಚೇಗೌಡರು ಹೊಸಹಳ್ಳಿ ಕೇಂದ್ರದ ಕೆಲಸವನ್ನು ಆಕರ್ಷಣೀಯವಾಗುವಂತೆ ಮಾಡಬೇಕೆಂಬ ಹಿರಿಯಾಸೆಯಿಂದ ಬಹಳವಾಗಿ ಶ್ರಮಿಸುತ್ತಿದ್ದರು. ಅವರು ನನ್ನನ್ನು ತಮ್ಮನಂತೆ ವಿಶ್ವಾಸದಿಂದ ಕಾಣುತ್ತಿದ್ದರು. ಕಾರ್ಯ ಕೇಂದ್ರದ ಚಟುವಟಿಕೆಗಳ ಜೊತೆಗೆ, ಸ್ವತಃ ಕಟ್ಟಡ ಒಂದನ್ನು ಕಟ್ಟಿಕೊಂಡು ಅದರಲ್ಲಿ ಕಸ್ತೂರಬಾ ಕೇಂದ್ರದ ಸ್ಥಾಪನೆ ಮಾಡಬೇಕೆಂಬ ಪಾರ್ವತಮ್ಮನವರ ಆಶಯವನ್ನು ಪೂರ್ಣಗೊಳಿಸುವ ಸಂಕಲ್ಪದಿಂದ

ಅವರು-ನಾನು ಅವಿಶ್ರಾಂತವಾಗಿ ಶ್ರಮಿಸಿ, ಹಳ್ಳಿಗಳನ್ನು ತಿರುಗಿ ನಿಧಿ ಸಂಗ್ರಹಿಸಿದ್ದಲ್ಲದೆ, ಗ್ರಾಮದ ಉತ್ಸಾಹಿ ಹಿರಿಯರಾದ ಮಂಜೇಗೌಡರು, ಜೊಮ್ಮೇಗೌಡರು, ಎಂ. ಆರ್‌ನಾ ಅವರು, ಎಚ್. ಬಿ. ಕಾಳೇಗೌಡರು ಮೊದಲಾದವರ ಸಹಾಯ ಸಹಕಾರಗಳನ್ನು ಪಡೆದು ಕೇವಲ ಒಂದೇ ವರ್ಷದಲ್ಲಿ ಉತ್ತಮ ಕಾರ್ಯಕೇಂದ್ರ ಕಟ್ಟಡವನ್ನು ಕಟ್ಟಿಸಿ, ಯಶೋಧರಾ ದಾಸಪ್ಪನವರಿಂದ ಅದನ್ನು ಉದ್ಘಾಟಿಸಿದೆವು. ಕಸ್ತೂರಬಾ ಟ್ರಸ್ಟಿನ ಪ್ರಥಮ ಕಟ್ಟಡ ಹೊಂದಿದ ಕಾರ್ಯಕೇಂದ್ರಗಳಲ್ಲಿ ಇದೇ ಮೊದಲನೆಯದಾಯಿತು. ಕಾರ್ಯಕೇಂದ್ರದ ಚಟುವಟಿಕೆ ಹಾಗೂ ಕಸ್ತೂರಬಾ ಟ್ರಸ್ಟಿನ ಧ್ಯೇಯಧೋರಣೆಗಳನ್ನು ಮೆಚ್ಚಿಕೊಂಡ ಕಾಫಿ ಪ್ಲಾಂಟರ್ ಎಂ. ಆರೇನಾರವರು ಕಸ್ತೂರಬಾ ಟ್ರಸ್ಟಿನ ಕಾರ್ಯದಲ್ಲಿ ಒಂದಾದ ಪ್ರಸೂತಿಕಾ ಶುಶ್ರೂಷೆಗಾಗಿ ಉತ್ತಮ ಕಟ್ಟಡ ಒಂದನ್ನು ಕಟ್ಟಿಸಿಕೊಟ್ಟು ಸಹಾಯ ಮಾಡಿದರು. ಸರ್ಕಾರದ ಗ್ರಾಮಕೈಗಾರಿಕಾ ಇಲಾಖೆಯವರು ಒಂದು ಕೈಗಾರಿಕಾ ಕೇಂದ್ರದ ಕಟ್ಟಡ ಕಟ್ಟಿಸಿಕೊಟ್ಟರು. ಈ ಎರಡು ಶಾಖೆಗಳಿಗೂ ಕಾರ್ಯಕರ್ತರನ್ನು ಕಸ್ತೂರಬಾ ಟ್ರಸ್ಟ್‌ನಿಂದಲೇ ಒದಗಿಸಿಕೊಟ್ಟು, ಈ ಕೇಂದ್ರವು ಒಂದು ಸಮಗ್ರ ಗ್ರಾಮಸೇವಾ ಕೇಂದ್ರವಾಗಲು ಸಹಾಯ ಮಾಡಿದರು. ಈ ಕೇಂದ್ರವು ಒಂದು ಆಕರ್ಷಣೀಯ ಸಂಸ್ಥೆಯಾಯಿತು.

1947ರಲ್ಲಿ ಈ ಕಾರ್ಯ ಕೇಂದ್ರಕ್ಕೆ ಬೇರೊಬ್ಬ ಮಹಿಳಾ ಕಾರ್ಯಕರ್ತರು ಬಂದದ್ದು ನಾನು ಮೈಸೂರು ಜವಾಬ್ದಾರಿ ಸರ್ಕಾರದ ಚಳವಳಿಗೆ ಧುಮುಕಲು ಅನುವು ಮಾಡಿಕೊಟ್ಟಿತು. ನನ್ನ ಬರುವಿಕೆಗಾಗಿಯೇ ಕಾದಿದ್ದ ಮೂಡಿಗೆರೆ ಸತ್ಯಾಗ್ರಹಿಗಳು ಪುನಃ ಸತ್ಯಾಗ್ರಹಿಗಳ ಸಂಘಟನೆಗಾಗಿ ಹಳ್ಳಿಗಳನ್ನೆಲ್ಲಾ ತಿರುಗಿ, ದೊಡ್ಡ ಸತ್ಯಾಗ್ರಹಿಗಳ ಸಮೂಹವನ್ನು ಕಲೆಹಾಕಿ, ಚಳವಳಿಯನ್ನು ಪ್ರಾರಂಭಿಸಿದರು. 'ಚಲೋ ಮೈಸೂರ್' ಜಾಥಾಗಳನ್ನೂ ರಚಿಸಿದೆವು. ಮೊದಲನೇ ತಂಡದಲ್ಲಿ ನಾನೂ ಸೇರಿ ಹತ್ತು ಜನರಿದ್ದೆವು. ಅವರೆಂದರೆ, ಎಂ. ಬಿ. ಪುಟ್ಟೇಗೌಡ (ಹಲಸಿಗೆ), ಎಂ. ಯು. ಚಂದ್ರೇಗೌಡ (ಮಾಕೋನಹಳ್ಳಿ), ಡಾ|| ಡಿ. ಆರ್. ಸಿದ್ದೇಗೌಡ (ಈಗ ಬೆಂಗಳೂರಿನಲ್ಲಿ ಹೆಲ್ತ್ ಡಿಪಾರ್ಟ್‌ಮೆಂಟಿನಲ್ಲಿರುತ್ತಾರೆ), ವರದಶೆಟ್ಟಿ (ವಿದ್ಯಾ ಇಲಾಖೆ), ದ್ಯಾವೇಗೌಡ (ಮೂಡಿಗೆರೆ), ಬಿ. ಕೆ. ಲೋಕಪ್ಪಗೌಡ (ಮೂಡಿಗೆರೆ). ಉಳಿದ ಇಬ್ಬರ ಹೆಸರು ನೆನಪಿಲ್ಲ.

ಕಾಲ್ನಡಿಗೆಯಿಂದಲೇ ಮೈಸೂರಿಗೆ ಹೋಗಬೇಕೆಂದು ನಿರ್ಣಯಿಸಿದೆವು. ಅದರಂತೆ ನಮ್ಮ ತಂಡ ಸಕಲೇಶಪುರ, ಹಾಸನ, ಹೊಳೆನರಸೀಪುರಗಳ ಮಾರ್ಗವನ್ನು ಹಿಡಿದು ಹೊರಟಿತು. ಸಕಲೇಶಪುರದಲ್ಲಿ ಆ ದಿನ ತಂಗಿ ವಿಶ್ರಾಂತಿಪಡೆದೆವು. ಮಾರನೇ ಬೆಳಗ್ಗೆ ಪ್ರಭಾತ್‌ಫೇರಿಯ ವ್ಯವಸ್ಥೆಮಾಡಿ ದೊಡ್ಡ ಮೆರವಣಿಗೆಯೊಂದನ್ನು ನಡೆಸಿದೆವು. ನಾನು ನಡಿಗೆಯ ಹಾಗೂ ದೇಶಭಕ್ತಿಯ ಗೀತೆಗಳನ್ನು ಹೇಳಿಕೊಡುತ್ತ ಪ್ರಭಾತ್‌ಫೇರಿಗೆ ಮಾರ್ಗದರ್ಶಕನಾಗಿದ್ದೆ. ಅದೇ ದಿನ ಸಕಲೇಶಪುರಕ್ಕೆ ಹಾಸನದ ಜಿಲ್ಲಾ ಪೋಲೀಸ್ ಸೂಪರಿಂಟೆಂಡೆಂಟ್ ಬಂದಿದ್ದು, ಅವರು ನಮ್ಮ ಕಾರ್ಯಕ್ರಮಗಳನ್ನೆಲ್ಲ ವೀಕ್ಷಿಸಿದ್ದರು.

ಅವರನ್ನೂ ನಮ್ಮ ರಾಷ್ಟ್ರಭಕ್ತಿಗೀತೆಗಳು ಮೈಮರೆಸಿರಬೇಕು. ನಾವು ಬಿಡಾರಮಾಡಿದ್ದ ಲ್ಯಾಂಡ್ ಮಾರ್ಟ್‌ಗೇಜ್ ಬ್ಯಾಂಕ್‌ಗೆ ಒಬ್ಬ ಸಾದಾ ಬಟ್ಟೆಯಲ್ಲಿದ್ದ ಪೋಲಿಸ್‌ನನ್ನು ಕಳಿಸಿ, ಹಾಡು ಹೇಳಿಕೊಡುತ್ತಿದ್ದವರನ್ನು ಕರೆದುಕೊಂಡು ಬರುವಂತೆ ಡಿ.ಎಸ್.ಪಿ. ಯವರು ಹೇಳಿಕಳಿಸಿದರು. ನಾನು ನಮ್ಮ ತಂಡದವರಿಗೆ ತಿಳಿಸಿ ಪೋಲಿಸ್ ಸ್ಟೇಷನ್ನಿಗೆ ಹೋದೆ. ಡಿ.ಎಸ್.ಪಿ.ಯವರೇ ನನ್ನನ್ನು ಬರಮಾಡಿಕೊಂಡು, ಒಂದು ರೂಮಿಗೆ ಕರೆದುಕೊಂಡು ಹೋಗಿ ಕಾಗದ ಮತ್ತು ಪೆನ್ನನ್ನು ಒದಗಿಸಿ, ಆ ದಿನ ನಾನು ಹೇಳಿ ಕೊಡುತ್ತಿದ್ದ ಗೀತೆಗಳನ್ನೆಲ್ಲ ಬರೆದುಕೊಡಲು ಕೇಳಿದರು. ಅನಂತರ ನಮಗೆ ಕಾಫಿ ತಿಂಡಿ ಕೊಟ್ಟು ಆಶ್ಚರ್ಯಪಡಬಾರದಾಗಿ ತಿಳಿಸಿದರು. ನಾನು ಬರುವುದು ನಿಧಾನವಾಗಿ ನಮ್ಮ ತಂಡದವರು ಸಹಜವಾಗಿಯೇ ಗಾಬರಿಗೊಂಡಿದ್ದರು. ವಿಚಾರ ತಿಳಿದಮೇಲೆ ಎಲ್ಲ ರಿಗೂ ಹರ್ಷವಾಯಿತು. ಮಾರನೇ ದಿನ ಹಾಸನಕ್ಕೆ ಪ್ರಯಾಣ ಮುಂದುವರಿಸಿ, ರೈಲ್ವೆ ಸ್ಟೇಷನ್ ಹತ್ತಿರ ಇದ್ದ ಡಿಸ್ಟ್ರಿಕ್ಟ್ ಬೋರ್ಡ್ ಮುಸಾಫಿರ್‌ಖಾನೆಯಲ್ಲಿ ಬಿಡಾರ ಹೂಡಿ ದೆವು. ಅದೇ ದಿನವೇ ಬೀರೂರಿನ ತಂಡ ಬಂದು ಪ್ರವಾಸಿಮಂದಿರದಲ್ಲಿ ಉಳಿದಿತ್ತು. ಡಿ. ಎಚ್. ರುದ್ರಪ್ಪ ಅದರ ನಾಯಕರು. ಮಾರನೇ ದಿನ, ಹಾಸನದ ಕಾರ್ಯಕರ್ತರು ಪುರಭವನದ ಮುಂದೆ ವ್ಯವಸ್ಥೆಗೊಳಿಸಿದ ಸಭೆಯಲ್ಲಿ ನಾವು ಹಾಗೂ ಬೀರೂರು ತಂಡ ದವರು ಭಾಷಣ ಮಾಡಿದೆವು. ಅರಸೀಕೆರೆಯ ಚೆನ್ನಪ್ಪಯ್ಯನವರೆಂಬ ಹಿರಿಯ ಕಾರ್ಯ ಕರ್ತರು ನಮ್ಮನ್ನು ಸ್ವಾಗತಿಸಿ, ಆಶೀರ್ವದಿಸಿ ಬೀಳ್ಕೊಟ್ಟರು. ಹೊಳೇನರಸೀಪುರದ ಕಡೆ ರೈಲುಮಾರ್ಗ ಹಿಡಿದು ಮುಂದೆ ಸಾಗಿದೆವು. ಮಾರ್ಗದ ಹಳ್ಳಿಗರು ನಮ್ಮನ್ನು ಆದರಿಸಿ ಮುಂದಕ್ಕೆ ಬೀಳ್ಕೊಡುತ್ತಿದ್ದರು.

ಅಂದು ರಾತ್ರಿ ಹೊಳೇನರಸೀಪುರ ಸೇರಿದೆವು. ಅಲ್ಲಿನ ಯುವಕ ಕಾರ್ಯಕರ್ತರು ನಮಗೆ ಊಟೋಪಚಾರಗಳ ವ್ಯವಸ್ಥೆ ಮಾಡಿಕೊಟ್ಟರು. ಮಾರನೇ ದಿನ ಪ್ರಭಾತ್‌ಫೇರಿ ಯಲ್ಲಿ ಪಾಲ್ಗೊಂಡು ಪಾರ್ಕಿನ ಮೈದಾನದಲ್ಲಿ ಸಭೆಯನ್ನುದ್ದೇಶಿಸಿ ನಮ್ಮ ತಂಡದವರೆಲ್ಲ ಮಾತನಾಡಿದೆವು. ನಾನು ಹಳೇ ಸತ್ಯಾಗ್ರಹಿಯಾಗಿದ್ದು ತಕ್ಕಮಟ್ಟಿಗೆ ವಿಷಯ ಸಂಗ್ರಹಣೆಯೂ ನನ್ನಲ್ಲಿತ್ತು. ನಮ್ಮ ತಂಡದವರೂ ಸಹ ವಿದ್ಯಾವಂತ ತರುಣರಾಗಿದ್ದುದ ರಿಂದ ನಮ್ಮ ಭಾಷಣಗಳು ಆ ಊರಿನ ಜನರ ಮೇಲೆ ಒಳ್ಳೆ ಪರಿಣಾಮ ಮಾಡಿರಬೇಕು. ನಮ್ಮನ್ನು ಎರಡು ದಿನ ಉಳಿಸಿಕೊಂಡು ಸಭೆಯಲ್ಲಿ ಮಾತನಾಡಿಸಿದರು. ಸಭೆಗೆ ಬಹಳ ಜನರು ಸೇರಿದ್ದರಲ್ಲದೆ, ಲಾಯರುಗಳು, ವ್ಯಾಪಾರಿಗಳು ಅಧಿಕಸಂಖ್ಯೆಯಲ್ಲಿ ಬಂದು ನಮ್ಮನ್ನು ಪ್ರೋತ್ಸಾಹಿಸಿದರು. ಈ ಸಭೆಗಳ ವರದಿಗಳು ಪೋಲಿಸ್ ಸಿ.ಐ.ಡಿ.ಗಳ ಮೂಲಕ ಜಿಲ್ಲಾ ಕೇಂದ್ರಕ್ಕೂ ತಲಪಿಸಲ್ಪಟ್ಟು ಸದ್ಯದಲ್ಲೇ ನಮ್ಮನ್ನು ಬಂಧಿಸಬಹುದೆಂಬ ಸೂಚನೆ ಕಂಡ ಕೆಲ ಯುವಕರು ಜಾಗ್ರತೆಯಾಗಿ ಹೊಳೆನರಸೀಪುರದಿಂದ ಬೀಳ್ಕೊಟ್ಟರು. ನಾವು ವಾಹನ ಮಾರ್ಗವನ್ನು ಬಿಟ್ಟು ಕಾಲುದಾರಿ, ರೈಲುಮಾರ್ಗಗಳ ಮೂಲಕ ನಡೆದು ಸುಮಾರು 12-15 ಮೈಲು ದೂರವನ್ನು ತ್ವರಿತವಾಗಿ ಕ್ರಮಿಸಿ ರಾತ್ರಿ

8–9 ಘಂಟೆ ಸುಮಾರಿಗೆ ಒಂದು ಹಳ್ಳಿಯನ್ನು ಸೇರಿದೆವು. ಹಳ್ಳಿಗರು ಸ್ವಲ್ಪ ಹೆದರಿದ್ದಂತೆ ಕಂಡಿತು. ನಮ್ಮನ್ನು ಹುಡುಕಿಕೊಂಡು ಆ ವೇಳೆಗಾಗಲೇ 2–3 ಬಾರಿ ಪೋಲಿಸರು ಬಂದು ಹೋಗಿದ್ದುದೇ ಅದಕ್ಕೆ ಕಾರಣವೆಂದು ತಿಳಿಯಿತು. ಆದರೂ ನಾವು ಸಾಕಷ್ಟು ಸುಸ್ತಾಗಿದ್ದರಿಂದ ಅಲ್ಲಿಯೇ ರಾಮಮಂದಿರದಲ್ಲಿ ತಂಗಿದೆವು. ಒಬ್ಬೊಬ್ಬರನ್ನು ಒಂದೊಂದು ಮನೆಗೆ ಕರೆದೊಯ್ದು ಊಟಮಾಡಿಸಿದರು. ನಾವೆಲ್ಲರೂ ಬಂದು ಮಲಗುವ ವೇಳೆಗೆ 10–11 ಘಂಟೆ ಮೇಲಾಯಿತು. ಚನ್ನಾಗಿ ನಿದ್ರಿಸಿದೆವು. ರಾತ್ರಿ ಸುಮಾರು ಎರಡೂವರೆ ಮೂರರ ಹೊತ್ತಿಗೆ ನಾವು ಉಳಿದಿದ್ದ ಸ್ಥಳಕ್ಕೆ ಪಟೇಲರನ್ನೂ ಕರೆದುಕೊಂಡು ಪೋಲಿಸರು ಬಂದು ನಮ್ಮೆಲ್ಲರನ್ನು ಕೂಡಲೆ ವ್ಯಾನಿನಲ್ಲಿ ಹಾಸನ ಪೋಲಿಸ್ ಕಚೇರಿಗೆ ಕರೆದೊಯ್ದರು. ಅಲ್ಲಿ ಒಂದು ಹಾಲ್‌ನಲ್ಲಿ ನಾವೆಲ್ಲ ಮಲಗಿದೆವು. ಮಾರನೆಯ ದಿನ ನಮ್ಮನ್ನು ವ್ಯಾನಿನಲ್ಲಿ ಕೂರಿಸಿಕೊಂಡು, ಚೀಕನಹಳ್ಳಿ ಸಮೀಪ ಹಾಸನ ಜಿಲ್ಲಾ ಗಡಿ ದಾಟಿಸಿ ಬಿಟ್ಟುಬಿಟ್ಟರು.

ನಾವು ಮೈಸೂರಿಗೆ ಹೋಗುವ ಗುರಿಸಾಧನೆಗಾಗಿ ಕೊಡಗು ಜಿಲ್ಲೆಯ ಕೊಡ್ಲಿ ಪೇಟೆಯ ದಾರಿಯನ್ನು ಹಿಡಿದೆವು. ಮಾರ್ಗದಲ್ಲಿ ಕಾಫಿ ಎಸ್ಟೇಟ್ ಒಂದರಲ್ಲಿ ಉಳಿದಿದ್ದು ಮಾರನೇ ದಿನ ಊಟವನ್ನು ಮುಗಿಸಿಕೊಂಡು ಮುಂದುವರಿದೆವು. ಸಂಜೆ 6–7 ಘಂಟೆ ವೇಳೆ ಕೊಡ್ಲಿಪೇಟೆ ತಲುಪಿ, ಬಸವಣ್ಣನ ದೇವಸ್ಥಾನದಲ್ಲಿ ನಿಂತೆವು. ಊರಿನವರು ನಮಗೆ ರೊಟ್ಟಿ, ಕಾಫಿಗಳನ್ನಿತ್ತು ಆದರಿಸಿದರು.

ಮಾರನೇ ದಿನ ನಾವು ಬಸ್ಸಿನಲ್ಲಿ ಮೈಸೂರಿಗೆ ಹೊರಟೆವು. ನಮ್ಮ ವೇಷಭೂಷಣ ಗಳಿಂದ ನಾವು ಸತ್ಯಾಗ್ರಹಿಗಳೆಂಬ ಅಂಶ ತಿಳಿಯದಂತೆ ತಯಾರಾಗಿದ್ದೆವು. ಮೈಸೂರು ನಗರದೊಳಗಿಳಿಯದೆ, ಟೋಲ್‌ಗೇಟ್‌ನಿಂದ ಒಂದೆರಡು ಮೈಲು ಹಿಂದೆ ½ ಮೈಲು 2 ಫರ್ಲಾಂಗ್ ಅಂತರದಲ್ಲಿ ಇಬ್ಬರಿಬ್ಬರು ಜನ ಇಳಿಯಬೇಕೆಂದೂ, ದೂರದೂರದಲ್ಲಿ ಒಬ್ಬರಿಗೊಬ್ಬರು ಕಾಣುವಷ್ಟು ಅಂತರದಲ್ಲಿ ನಡೆದು, ಎಲ್ಲರೂ ಒಂಟಿಕೊಪ್ಪಲಿನ ಕೆ. ಎಚ್. ರಾಮಯ್ಯನವರ ಅನಾಥಾಲಯವನ್ನು ಸೇರಬೇಕೆಂದೂ ನಿಶ್ಚಯಿಸಿ ಕೊಂಡಿದ್ದೆವು. ಒಂದು ಘಂಟೆ ವೇಳೆಯಲ್ಲಿ ಎಲ್ಲರೂ ಅಲ್ಲಿ ಸೇರಿದೆವು. ವಿದ್ಯಾರ್ಥಿ ಗಳಂತೆ ಅಲ್ಲಿದ್ದು ಪರಿಸ್ಥಿತಿಯನ್ನೆಲ್ಲ ತಿಳಿದುಕೊಂಡೆವು. ಯಶೋಧರಾ ದಾಸಪ್ಪನವರು ಆಗ ಮೈಸೂರಿನಲ್ಲೇ ಇದ್ದರು. ನಾನು ಅವರ ಮನೆಯಲ್ಲಿಯೇ ಯಶೋಧರನ್ನು, ನವರನ್ನು ಕಂಡೆ. ಅವರು ಮೈಸೂರಿನಲ್ಲಿ ಪೋಲಿಸರಿಂದಾಗುತ್ತಿದ್ದ ಅಮಾನುಷ ಕೃತ್ಯಗಳನ್ನು ತಿಳಿಸಿ, "ಮೈಸೂರಿನಲ್ಲಿ ನೀವು ನಾಲ್ಕು ಜನ ಒಟ್ಟಾಗಿ ಹೊರಟರೆ ಅರೆಸ್ಟ್ ಮಾಡುತ್ತಾರೆ. ಇಲ್ಲಿ ನೀವು ಬೇರೇನೂ ಮಾಡಲು ಸಾಧ್ಯವಾಗುವುದಿಲ್ಲ. ರಾಜ್ಯದ ಪ್ರತಿ ತಾಲ್ಲೂಕಿನಿಂದಲೂ ಚಳವಳಿಯ ಬಿಸಿ ಸರ್ಕಾರಕ್ಕೆ ತಟ್ಟುವಂತೆ ಜನರನ್ನು ಪ್ರೇರೇಪಿಸಿ ನಿಮ್ಮ ತಾಲ್ಲೂಕಿನಲ್ಲೇ ಚಳವಳಿಯನ್ನು ಉಗ್ರಗೊಳಿಸಿದರೆ ಒಳ್ಳೆಯದು. ಜೈಲಿಗೆ ಹೋಗಿ ಅಥವಾ ಏಟು ತಿಂದು ಕಾಡಿಗೆ ಹೋಗಿ ನಿರಾಶರಾಗುವುದಕ್ಕಿಂತ ಚಳವಳಿ ಯನ್ನು ವಿಸ್ತರಿಸಿ ಸರ್ಕಾರದ ಯಂತ್ರ ಕೆಲಸಮಾಡಲಾಗದಂತೆ ಪ್ರಯತ್ನಿಸುವುದು ಹೆಚ್ಚು

ಫಲಕಾರಿ" ಎಂದು ಸಲಹೆ ನೀಡಿದರು. ನಮ್ಮ ತಂಡದವರೆಲ್ಲರೂ ಇದನ್ನೇ ಅನುಮೋದಿಸಿದ್ದರಿಂದ ಮರುದಿನವೇ ವಾಪಸ್ಸು ಹೊರಡುವುದೆಂದು ತೀರ್ಮಾನಿಸಿದೆವು. ಎಲ್ಲರ ಬಟ್ಟೆಗಳನ್ನೂ ಎರಡು ಹಾಸಿಗೆಯಾಗಿ ಮಾಡಿ ಇಬ್ಬರೊಂದಿಗೆ ಜಟಕಾದಲ್ಲಿ ಬಸ್ ಸ್ಟ್ಯಾಂಡಿಗೆ ಸಾಗಿಸಿ, ಉಳಿದವರು ಒಬ್ಬೊಬ್ಬರೇ ಅಲ್ಲಿಗೆ ಬಂದು ಸೇರಿ, ಚಿಕ್ಕಮಗಳೂರಿನ ಬಸ್‌ನಲ್ಲಿ ಹಿಂತಿರುಗಿದೆವು. ಚಿಕ್ಕಮಗಳೂರಿನ ಸತ್ಯಾಗ್ರಹಿಗಳಿಗೆ ವಿಚಾರ ತಿಳಿಸಿ, ಮಾರನೇ ದಿನ ಮೂಡಿಗೆರೆ ತಲಪಿದೆವು.

ಅಲ್ಲಿ ಚಳವಳಿಯ ಕಾರ್ಯಕ್ರಮಗಳು ಯಥಾ ಪ್ರಕಾರ ಸಾಗುತ್ತಿದ್ದವು. ಎರಡನೆಯ ತಂಡದ ಸತ್ಯಾಗ್ರಹಿಗಳು ಆ ವೇಳೆಗಾಗಲೇ ಮೂಡಿಗೆರೆಯನ್ನು ಬಿಟ್ಟಾಗಿತ್ತು. ನಾವು ಬಂದಮೇಲೆ, ಹಳ್ಳಿಗಳ ಕಡೆ ಇದ್ದ ಸತ್ಯಾಗ್ರಹಿಗಳನ್ನು ಕೂಡಿಸಿ, ತಾಲ್ಲೂಕ್ ಕಚೇರಿಯಲ್ಲಿ ಕೆಲಸ ಜರುಗದಂತೆ ಬಾಗಿಲುಗಳ ಮುಂದೆ ನೂರಾರು ಜನ ಮಲಗಿಬಿಟ್ಟೆವು. ಒಳಗೆ ಹೋಗಬೇಕಾದರೆ ನಮ್ಮನ್ನು ತುಳಿದುಕೊಂಡೇ ಹೋಗಬೇಕಾಗಿತ್ತು. ಮೂರು ದಿನಗಳು ಒಂದೇ ಸಮನೆ ಈ ಪರಿಸ್ಥಿತಿಯಾಗಲು, ನಾಲ್ಕನೆಯ ದಿನವೇ ಡಿ.ಎಸ್.ಪಿ. ಯವರು ಪೋಲಿಸರೊಂದಿಗೆ ಮೂಡಿಗೆರೆಗೆ ಬಂದರು. ಪೋಲಿಸ್ ಇನ್ಸ್‌ಪೆಕ್ಟರ್‌ರ ಮೂಲಕ ಸತ್ಯಾಗ್ರಹಿಗಳ ಇಬ್ಬರು ಮೂವರು ನಾಯಕರುಗಳನ್ನು ಕರೆತರಬೇಕೆಂದು ಹೇಳಿಕಳುಹಿಸಿದರು. ನಾನು, ಡಿ. ಎಸ್. ಕೃಷ್ಣಪ್ಪಗೌಡ, ಲೋಕಪ್ಪಗೌಡ ಇನ್ನೂ ಒಬ್ಬಬ್ಬರು ಡಿ.ಎಸ್.ಪಿ.ಯವರನ್ನು ಕಾಣಲು ಹೋದೆವು. ಆ ವೇಳೆಗೆ ಅಮಲ್ದಾರರೊಡನೆ ಮಾತನಾಡುತ್ತಿದ್ದವರು, ಅಮಲ್ದಾರರನ್ನು ವಾಪಸ್ ಕಳುಹಿಸಿ ನನ್ನನ್ನು ಬರಮಾಡಿಕೊಂಡರು. ಅವರಿಗೆ ಸತ್ಯಾಗ್ರಹಿಗಳ ಬಗೆಗೆ ಅಭಿಮಾನವಿದ್ದಂತಿತ್ತು. ತಮಗೆ ಸತ್ಯಾಗ್ರಹವನ್ನು ಮಟ್ಟಹಾಕುವ ಉದ್ದೇಶವಿಲ್ಲವೆಂದೂ, ಆದರೆ ಅದರ ಬಿಸಿ ಸರ್ಕಾರಕ್ಕೆ ಮುಟ್ಟಿರುವುದರಿಂದ ಏನೂ ಮಾಡದೆ ಸುಮ್ಮನೆ ಇರುವುದು ಸಹ ಸಾಧ್ಯವಿಲ್ಲವೆಂದೂ, ಆದ್ದರಿಂದ ಸತ್ಯಾಗ್ರಹಕ್ಕೂ ತೊಂದರೆಯಾಗದಂತೆ ಕೇವಲ ಇಬ್ಬರನ್ನು ಬಂಧಿಸಿಕೊಂಡು ಹೋದಂತೆ ಮಾಡುವುದಾಗಿಯೂ ಅದಕ್ಕೆ ತಾವು ಸಹಕರಿಸಬೇಕೆಂದೂ ಕೋರಿದರು. ಡಿ. ಎಸ್. ಕೃಷ್ಣಪ್ಪಗೌಡ ಮತ್ತು ಬಿ. ಕೆ. ಲೋಕಪ್ಪಗೌಡ ಬಂದಿಗಳಾಗಲು ಸಮ್ಮತಿಸಿ ಡಿ.ಎಸ್.ಪಿ.ಯವರೊಂದಿಗೆ ಚಿಕ್ಕಮಗಳೂರಿಗೆ ಹೋಗಿ ಜೈಲಿಗೆ ದಾಖಲಾದರು.

ನಮ್ಮ ಚಳವಳಿಯನ್ನು 6–8 ದಿನಗಳು ಮುಂದುವರಿಸಿದೆವು. ಅಧಿಕಾರಿಗಳು ವಿರೋಧಿಸದೆ ಸಹಕರಿಸಿದರು. ಈ ಮಧ್ಯೆ ಯಶೋಧರಾ ದಾಸಪ್ಪನವರು ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಕಸ್ತೂರಬಾ ಕೇಂದ್ರಗಳ ವೀಕ್ಷಣೆಗಾಗಿ ಬಂದವರು ಮೂಡಿಗೆರೆಗೂ ಬಂದರು. ಇಲ್ಲಿನ ಸತ್ಯಾಗ್ರಹದ ವಿದ್ಯಮಾನ ತಿಳಿದು ಸಂತೋಷಿಸಿದರು. ಅವರ ಇಚ್ಛೆಮೇರೆಗೆ ಅವರೊಡನೆ ಶಿವಮೊಗ್ಗ ಜಿಲ್ಲಾ ಪ್ರವಾಸಕ್ಕೆ ನಾಲ್ಕು ದಿನಗಳ ಮಟ್ಟಿಗೆಂದು ಸಹಸತ್ಯಾಗ್ರಹಿಗಳ ಒಪ್ಪಿಗೆ ಪಡೆದು ಹೊರಟೆ.

ಮೂರು ದಿನಗಳ ಪ್ರವಾಸದನಂತರ ಯಶೋಧರಮ್ಮನವರು ತೀರ್ಥಹಳ್ಳಿಯಲ್ಲಿ ನನ್ನನ್ನೂ ಶಿವರಾಂ ಎಂಬುವರನ್ನೂ ಬಿಟ್ಟು ಮೈಸೂರಿಗೆ ಜರೂರು ಹೊರಟುಹೋದರು. ಬನವಾಸಿ ಕೇಂದ್ರದ ಕಾರ್ಯಕರ್ತರಾಗಿದ್ದ ಸಾವಿತ್ರಮ್ಮ ರಾಮಶರ್ಮ ಅವರೂ ಸತ್ಯಾಗ್ರಹಕ್ಕೆ ಧುಮುಕಿದ್ದರು. ಮಾರನೇ ದಿನವೇ ಮುಖಂಡರೆಲ್ಲರ ಬಿಡುಗಡೆಯಾಗಿ, ಮಹಾರಾಜರ ಭೇಟಿಗೆ ಆಹ್ವಾನವಿತ್ತಿರುವ ವರ್ತಮಾನವೂ, ಬೆಂಗಳೂರು ಜೈಲಿನಲ್ಲಿದ್ದ ಅಖಿಲ ಭಾರತ ವಿದ್ಯಾರ್ಥಿ ಕಾಂಗ್ರೆಸ್ಸಿನ ಅಧ್ಯಕ್ಷ ರವೀಂದ್ರ ವರ್ಮರವರು ಅದೇ ಸಂಜೆ ತೀರ್ಥಹಳ್ಳಿಗೆ ಬಂದು ಭಾಷಣ ಮಾಡಲಿರುವ ವಿಚಾರವೂ ತಿಳಿದಿದ್ದರಿಂದ ಆ ದಿನ ಅಲ್ಲೇ ಉಳಿದು ಭಾಷಣವನ್ನು ಕೇಳಿಕೊಂಡು, ಮಾರನೇ ದಿನ ಮೂಡಿಗೆರೆಗೆ ವಿಜಯೋತ್ಸವ ಸಮಾರಂಭಕ್ಕಾಗಿ ಹೊರಟೆ.

ಅರಣ್ಯ ಇಲಾಖೆಯ ಆನೆಯೊಂದನ್ನು ಉತ್ಸವಕ್ಕಾಗಿ ಪಡೆದು, ಭಾರತಮಾತೆಯ ಹಾಗೂ ಮಹಾತ್ಮಾ ಗಾಂಧೀಜಿಯವರ ಭಾವಚಿತ್ರಗಳನ್ನು ಅಲಂಕೃತ ಅಂಬಾರಿಯ ಮೇಲೆ ಇಟ್ಟು ಜಯಘೋಷಣೆ ಹಾಗೂ ವಾದ್ಯಮೇಳಗಳೊಂದಿಗೆ ಭಾರಿ ಮೆರವಣಿಗೆಯನ್ನು ನಡೆಸಿದೆವು. ಮೂಡಿಗೆರೆ ಮತ್ತು ತಾಲ್ಲೂಕಿನ ಅನೇಕ ಸತ್ಯಾಗ್ರಹಿಗಳಿಗೆ ಮಾಲಾರ್ಪಣೆ ಮಾಡಿ ಸನ್ಮಾನಿಸಿದರು. ಈ ಕಾಲದಲ್ಲಿ (1947) ಕುಂದೂರಿನ ಎಚ್. ಪಿ. ಕೆಂಚೇಗೌಡ, ಬಣಕಲ್‌ನ ಬಿ. ಡಿ. ಶಿವೇಗೌಡ, ಹಾಲೂರಿನ ಎಚ್. ಕೆ. ಗಿಡ್ಡಪ್ಪ, ಬೆಳಗೋಡಿನ ಬಿ. ಯು. ಕಪ್ಪಣ್ಣಗೌಡ, ಬೆಳೆಹೊಳೆಯ ಭದ್ರೇಗೌಡ ಇವರೆಲ್ಲರೂ ಚಳವಳಿಯಲ್ಲಿ ಉತ್ಸಾಹದಿಂದ ಪಾಲುಗೊಂಡಿದ್ದನ್ನು ನೆನೆಯಬೇಕು.

ನನಗೆ ತಿಳುವಳಿಕೆ ಬಂದಾಗಿನಿಂದಲೂ ನಾನೊಬ್ಬ ಸ್ವಯಂಸೇವಕ. ನಿಸ್ವಾರ್ಥ ರಾಜಕೀಯ, ಸ್ವಾತಂತ್ರ್ಯ ಹೋರಾಟ, ರಚನಾತ್ಮಕ ಕಾರ್ಯ ಮಾಡುವ ಸಂಸ್ಥೆಗಳಲ್ಲಿ ಕಳೆದ 30-32 ವರ್ಷಗಳಿಂದ ಪ್ರತ್ಯಕ್ಷ ಕಾರ್ಯಕರ್ತನಾಗಿ ಸೇವೆಸಲ್ಲಿಸಿರುತ್ತೇನೆ. ಈಗಲೂ ಯಥಾಶಕ್ತಿ ಸೇವೆಸಲ್ಲಿಸುತ್ತಿರುತ್ತೇನೆ. ಯಾವುದೇ ವಿಧವಾದ ಅಧಿಕಾರ ದಾಹವಾಗಲೀ, ಸುಖಾಪೇಕ್ಷೆಯಾಗಲೀ ನನಗೆ ಇಲ್ಲ. ನನ್ನ ನಿಸ್ವಾರ್ಥಸೇವೆಯನ್ನು ತಾಲ್ಲೂಕಿನ ಜನ ಮೆಚ್ಚಿ ನನ್ನ ಬಗ್ಗೆ ಪ್ರೀತಿವಿಶ್ವಾಸಗಳನ್ನು ಹೊಂದಿರುವುದೇ ನಾನು ಜೀವಮಾನದಲ್ಲಿ ಗಳಿಸಿದ ಬಹುದೊಡ್ಡ ನಿಧಿ ಎಂಬ ತೃಪ್ತಿ ನನಗಿದೆ.

ಮೈ.ಚಿಮ. 16

## ದಿ|| ಎಸ್. ಸುಬ್ರಹ್ಮಣ್ಯ ಶೆಟ್ಟಿ
(1910–1973)

ಚಿಕ್ಕಮಗಳೂರು ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ರಚಿಸುವಾಗ ಅಜ್ಜಂಪುರದ ದಿ|| ಎಸ್. ಸುಬ್ರಹ್ಮಣ್ಯ ಶೆಟ್ಟರವರ ಹೆಸರು ಮೊದಲು ಬರುತ್ತದೆ.



1910ರ ಫೆ. 2ರಂದು ಜನಿಸಿದ ಅವರು ವಿಶ್ವಕರ್ಣಾಟಕ ಪತ್ರಿಕೆಯನ್ನು ಓದಿ, ರಾಷ್ಟ್ರೀಯ ವಿಚಾರಗಳಿಂದ ಪ್ರೇರಿತರಾದರು. ಮುಂದೆ, ಇವರ ಬೆಂಬಲದಿಂದಲೇ, ಹೊಸಕೊಪ್ಪ ಕೃಷ್ಣರಾಯರು ಮತ್ತು ಕೆ. ಟಿ. ಸತ್ಯ ನಾರಾಯಣ ಶೆಟ್ಟಿ (ಬೀರೂರು) ಇವರು ಈ ಊರಲ್ಲಿ ಖಾದಿ ಉತ್ಪಾದನಾಕೇಂದ್ರವನ್ನು ಜಿ|| ಬೋ|| ಆಶ್ರಯ ದಿಂದ ತೆರೆಯಲು ಸಾಧ್ಯವಾಯಿತು. ಡಾ|| ಪಿ. ಸಿ. ರಾಯ್ ಅವರು ಬಂಗಾಳದಿಂದ ಇದರ ಉದ್ಘಾಟನೆಗೆ ಬಂದರು. ಬಿ. ಪಿ. ಸುಬ್ಬರಾವ್, ಎ. ಪಿ. ನಾಗಶ್ರೇಷ್ಠಿ, ಎಸ್. ಹನುಮಯ್ಯ, ಎಚ್. ನಾರಾಯಣರಾವ್ ಇವರೆಲ್ಲ ಸುಬ್ರಹ್ಮಣ್ಯ ಶೆಟ್ಟರ ಜೊತೆಗಾರರಾಗಿ ದುಡಿದು, ಸ್ವರಾಜ್ಯದ ಕಲ್ಪನೆಯೇ ಇರದ, ಕಾಂಗ್ರೆಸ್ ಎಂದರೆ ಜನ ಸರಕಾರಕ್ಕೆ ಬೆದರಿ ಅದರಿಂದ ದೂರ ಇರುತ್ತಿದ್ದ ಕಾಲದಲ್ಲಿ (1928) ಅಜ್ಜಂಪುರದಲ್ಲಿ ಕೆಲಸಮಾಡಿದರು. ಆಗಿನಿಂದಲೇ ಖಾದೀಧಾರಿಗಳಾಗಿ ಖಾದೀಪ್ರಚಾರ ಮುಂತಾದ ವಿಧಾಯಕ ಕಾರ್ಯವನ್ನು ಕೈಕೊಂಡರು. ಚೀನಾ ಮುಂತಾದ ವಿದೇಶಗಳಿಂದ ಬರುತ್ತಿದ್ದ ಪಟಾಕಿ ಹಚ್ಚದಂತೆ ಪ್ರಚಾರಮಾಡಿದರು. ಕಾಂಗ್ರೆಸ್ಸಿನ ಎಲ್ಲ ನಾಯಕರನ್ನೂ ಕರೆಸಿ ಅವರ ಭಾಷಣವನ್ನು ಏರ್ಪಡಿಸಿದ್ದರಲ್ಲದೆ, ಎಲ್ಲ ನಾಯಕರಿಗೂ ಕಾರ್ಯಕರ್ತರಿಗೂ ಇವರ ಆದರಾತಿಥ್ಯ ಸದಾ ಲಭ್ಯವಾಗಿತ್ತು.

ಎ.ಎಂ.ಸಿ.ಸಿ. ಸಭೆಯನ್ನು ಒಮ್ಮೆ ಅಜ್ಜಂಪುರದಲ್ಲಿ ನಡೆಸಬೇಕಾದ ಪ್ರಸಂಗ ಬಂದಾಗ (1940) ಚಿಕ್ಕನಲ್ಲೂರು ಮಂಡಿ ರುದ್ರಣ್ಣನವರ ಜಮೀನಿನಲ್ಲಿ ಊರ ಬಳಿ ಚಪ್ಪರ ಹಾಕಿ ತಯಾರಿ ನಡೆಯಿತು. ಆದರೆ ಊರ ಸುತ್ತ ಮೂರು ಮೈಲಿ ದೂರದವರೆಗೆ ಸಭೆ ನಡೆಸಬಾರದೆಂದು ಪ್ರತಿಬಂಧಕಾಜ್ಞೆಯನ್ನು ಸರಕಾರ ಹೇರಿತಲ್ಲದೆ ಅಧಿವೇಶನದ ವ್ಯವಸ್ಥೆಗಾಗಿ ಬಂದ ಕೆ. ಟಿ. ಭಾಷ್ಯಂ ಅವರನ್ನು ಬಂಧಿಸಿತು ಆಗ ಊರಿಂದ ನಾಲ್ಕು ಮೈಲು ದೂರದ ಚನ್ನಾಪುರ ಗ್ರಾಮದ ಬಳಿ (ಈಗಿನ ನಾಗಮಂಗಲ ರೈಲ್ವೆ ಸ್ಟೇಷನ್ ಬಳಿ) ದಿನಬೆಳಗಾಗಬೇಕಾದರೆ ಭಾರಿ ಚಪ್ಪರ ಹಾಕಿಸಿ, ವಿಜಯನಗರವೆಂಬ ಹೆಸರಿಟ್ಟು, ಸಕಾಲದಲ್ಲಿ ಬಂದ ಆಗಿನ ಅಧ್ಯಕ್ಷ ಎಚ್. ಸಿ. ದಾಸಪ್ಪನವರನ್ನು 108 ಜೊತೆ ಎತ್ತು ಗಳ ಮೆರವಣಿಗೆಯಲ್ಲಿ ಒಯ್ದು ಎಲ್ಲರೂ ಬೆರಳುಕಚ್ಚುವಂತೆ ಮಾಡಿದ್ದು ದಿ|| ಶೆಟ್ಟರ ಸಂಘಟನಾಕೌಶಲ್ಯ, ಅವರಿಗಿದ್ದ ಜನಬೆಂಬಲಕ್ಕೆ ಸಾಕ್ಷಿ. ಅಧಿವೇಶನ ಯಶಸ್ವಿಯಾಗಿ ನಡೆಯಿತು.

1938ರಲ್ಲಿ ಪಾನನಿರೋಧ, ಪಿಕೆಟಿಂಗ್ ಮುಂತಾದ ಚಟುವಟಿಕೆಗಳ ಸಂಬಂಧ ವಾಗಿ ದಿ|| ಶೆಟ್ಟರನ್ನು ಬಂಧಿಸಿ ನರಸಿಂಹರಾಜಪುರ ಸೆರೆಮನೆಯಲ್ಲಿ ಇಟ್ಟರು. ತಮ್ಮ ಸೋದರ ಸತ್ಯನಾರಾಯಣಶೆಟ್ಟರು ಶಿಕ್ಷಣ ತ್ಯಜಿಸಬೇಕಾಗಿ ಬಂದರೂ ಆಗ ಇದ್ದ ತಮ್ಮ

ಏಕೈಕಪುತ್ರ ಮೋಹನದಾಸ ಸನ್ನಿಪಾತ ಜ್ವರದಿಂದ ನರಳಿ ಸಾವನ್ನಪ್ಪಿದರೂ ಹೆದರದೆ, ಮುಚ್ಚಳಿಕೆ ಬರೆದುಕೊಟ್ಟು ಊರಿಗೆ ಹೋಗಲು ಅವಕಾಶವಿದ್ದರೂ ಜೈಲಿನಲ್ಲಿ ಉಳಿದರು. ಬಿಡುಗಡೆಯ ನಂತರವೂ ತಮ್ಮ ಚಟುವಟಿಕೆಯನ್ನು ಯಾವ ರೀತಿಯಲ್ಲೂ ಕಡಿಮೆ ಮಾಡಲಿಲ್ಲ ಸೇವಾದಳದ ಶಿಬಿರಗಳನ್ನು ನಡೆಸಿ ತರುಣರಿಗೆ ತರಬೇತಿ ನೀಡುವ ಕೆಲಸವನ್ನು ಮುಂದುವರಿಸಿದರು.

1942ರ ಚಳವಳಿಯ ಕಾಲಕ್ಕೂ ಇವರು ಅಗ್ರಗಾಮಿಗಳಾಗಿದ್ದರು. ಎರಡನೆಯ ವಿಶ್ವಸಮರದ ಕಾಲಕ್ಕೆ ಶಿವಕಥೆ ನಡೆಸಿ ಇಂಗ್ಲಿಷರ ಸೈನ್ಯಕ್ಕೆ ಸೇರಲು ಯುವಕರನ್ನು ಪ್ರೋತ್ಸಾಹಿಸಿ, ಪ್ರತಿ ಸೈನ್ಯಕ್ಕೆ ಸೇರಿದ ಯುವಕನಿಗಾಗಿ ಐದು ರೂ. ಸಂಭಾವನೆ ಪಡೆಯುತ್ತಿದ್ದ ಒಬ್ಬ ಘಾತಕರ ಶಿವಕಥೆ ನಮ್ಮ ಊರಲ್ಲಿ ನಡೆಯದಂತೆ ಇವರೂ ಇವರ ಮಿತ್ರರೂ ಊರು ಬಿಡಿಸಿದರು. (ಈ ಕೀರ್ತನಕಾರರಿಗೆ ಮುಂದೆ ಪದ್ಮಶ್ರೀ ಕೂಡ ಬಂತು!) ಈ ಚಳವಳಿಯ ಕಾಲಕ್ಕೆ ಅಕ್ಟೋಬರ್ 1ರಂದು ಬಂಧಿಸಲು ಪೋಲಿಸರು ಬಂದಾಗ ಊರೆಲ್ಲ ಇವರನ್ನು ಬೀಳ್ಕೊಡಲು ನೆರೆಯಿತು. ಶೆಟ್ಟರನ್ನು ಮೆರವಣಿಗೆ ಮಾಡುತ್ತೇವೆಂದಾಗ ಪೋಲಿಸರು ನಿರಾಕರಿಸಲು ಕುಪ್ಪಾಳು ನಂಜುಂಡಪ್ಪ ಎಂಬವರು ಸಿಟ್ಟಿಗೆದ್ದು ಪೋಲಿಸ್ ಅಧಿಕಾರಿಗೆ ಹೊಡೆದು, ಅವರ ಬಾಯಿಂದ ರಕ್ತ ಬಂತು. ಪರಿಸ್ಥಿತಿ ವಿಕೋಪಕ್ಕೆ ಹೋಗುವುದೆಂದು ಅರಿತ ಶೆಟ್ಟರು, ಜನತೆಗೆ ಹಿಂಸೆಗಿಳಿಯದಂತೆ ವಿನಂತಿಸಿ ಶಾಂತಗೊಳಿಸಿದರು. ಶೆಟ್ಟರನ್ನೂ ಇತರ ಬಂಧಿತರನ್ನೂ ವ್ಯಾನ್‌ನಲ್ಲಿ ಕೂರಿಸಿ ಆರತಿ ಬೆಳಗಿ, ಶೆಟ್ಟರ ಹೆಸರಿನಲ್ಲಿ ಜಯಕಾರ ಹಾಕಿ, ಊರಲ್ಲಿ ಮೆರವಣಿಗೆ ಮಾಡಿದರು.

1947ರಲ್ಲೂ ತ್ರಿರಂಗೀಧ್ವಜವನ್ನು ತರೀಕೆರೆ ತಾ|| ಕಚೇರಿ ಮೇಲೆ ಹಾರಿಸುವ ದಿಟ್ಟಕ್ರಮವನ್ನು, ಗುಂಡು ಹಾರಿಸುವುದಾಗಿ ಪೋಲಿಸರು ಬೆದರಿಸಿದರೂ ಜಗ್ಗದೆ, ಶೆಟ್ಟರು ಕೈಕೊಂಡರು. ಅವರ ಈ ಎದೆಗಾರಿಕೆಯ ಮುಂದೆ ಪೋಲಿಸರೂ ಸ್ತಬ್ಧರಾದರು. ಮುಂದೆ 30 ಸತ್ಯಾಗ್ರಹಿಗಳ ಜಾಥಾದೊಂದಿಗೆ ಮೈಸೂರಿಗೆ ಕಾಲ್ನಡೆಯಲ್ಲಿ ಹೊರಟಿರಲು ಬೀರೂರು, ಕಡೂರು, ಚಿಕ್ಕಮಗಳೂರು, ಹಾಸನ ಮಾರ್ಗವಾಗಿ ಚನ್ನರಾಯಪಟ್ಟಣ ತಲಪಿದಾಗ ಇವರನ್ನು ಬಂಧಿಸಿ ಹಾಸನ ಜೈಲಿನಲ್ಲಿ ಸರಕಾರವು ಬಂಧಿಸಿ ಇಟ್ಟಿತು. ಇವರ ಜೊತೆ ಚಳವಳಿಯಲ್ಲಿ ದುಡಿದು ಜೈಲಿಗೆ ಹೋದವರಲ್ಲಿ ಮಾಳಿಗೆ ಕರಿಯಪ್ಪ, ಕೆ. ವೆಂಕೋಜಿರಾವ್, ಸಿ. ಜಿ. ತಿಮ್ಮಯ್ಯ, ಜಿ. ತಿಮ್ಮಯ್ಯ, ಜಾವೂರು ಸಿದ್ದಪ್ಪ, ಟೈಲರ್ ಮಲ್ಲಪ್ಪ, ಗೋವಿಂದಪ್ಪ, ಕೆ. ಜಿ. ವೀರಣ್ಣ, ಕೆ. ಜಿ. ರುದ್ರಪ್ಪ, ಹನುಮಂತಪ್ಪ, ಎಸ್. ವಿ. ವೆಂಕಟಾಚಲ ಗುಪ್ತ, ಕೆ. ಚನ್ನಬಸಪ್ಪ, ಎಸ್. ವೈ. ನಾಗಣ್ಣ ಶೆಟ್ಟಿ, ಟಿ. ಕೃಷ್ಣಾಜಿ ರಾವ್, ಎಲ್. ಸುಬ್ರಹ್ಮಣ್ಯ ಶೆಟ್ಟಿ, ಬಿ. ಎಂ. ಏಕೋರಾಮ ಸ್ವಾಮಿ, ಎಲ್. ರಾಮಶೆಟ್ಟಿ, ಬಿ. ಎಂ. ಮಲ್ಲಪ್ಪ ಮುಂತಾದ ಸ್ವಾತಂತ್ರ್ಯಯೋಧರು ಪ್ರಮುಖರು. ದಿ||ರಿಗೆ ಚಳವಳಿಯಲ್ಲಿ ಬೆಂಬಲ, ಪ್ರೋತ್ಸಾಹವಿತ್ತವರಲ್ಲಿ ಶ್ರೀ ಶಂಕರಾನಂದ ಸ್ವಾಮಿಗಳು, ಎ. ಪಿ. ನಾಗರಾಜ ಶ್ರೇಷ್ಠಿ, ಸೋದರ ಎಸ್. ಸತ್ಯನಾರಾಯಣ ಶೆಟ್ಟಿ

ಹಾಗೂ ಚಳವಳಿ ಕಾಲದಲ್ಲಿ ಗುಪ್ತವಾಗಿ ಬೆಂಬಲ ನೀಡಿದ ಅನೇಕ ಸರಕಾರಿ ನೌಕರರೂ ಇದ್ದರು.

ವಿಧಾಯಕ ಕಾರ್ಯಗಳಲ್ಲೂ ಅವರಿಗೆ ವಿಶೇಷ ಆಸ್ಥೆ. ಅಂದು ಖಾದೀಪ್ರಸಾರಕ್ಕೆ ಅವರು ನಡೆಸಿದ ಯತ್ನದಿಂದ ಇಂದಿಗೂ ಈ ಭಾಗದಲ್ಲಿ ದೊಡ್ಡ ಪ್ರಮಾಣದಲ್ಲಿ ಖಾದೀ ಧಾರಿಗಳಿದ್ದಾರೆ. ಹೆಂಡದಂಗಡಿ ಪಿಕೆಟಿಂಗ್, ಈಚಲುಮರ ಕಡಿಯುವುದರಲ್ಲೂ ಇವರು ಸ್ವತಃ ಪಾಲುಗೊಂಡಿದ್ದಾರೆ. ಹರಿಜನರ ಜೊತೆ ಬೆರೆತು ಭಜನೆ, ಉತ್ಸವಗಳನ್ನು ನಡೆಸು ತ್ತಿದ್ದರಲ್ಲದೆ, ಎರಡುಮೂರು ಹರಿಜನ ಬಾಲಕರನ್ನು ತಮ್ಮ ಮನೆಯಲ್ಲೇ ಸಾಕಿ ಅವರಿಗೆ ಶಿಕ್ಷಣಾನುಕೂಲ ಕೂಡ ಮಾಡಿಕೊಟ್ಟರು. ಇವರ ಪತ್ನಿ ರುಕ್ಮಮ್ಮನವರೂ ಇವರ ಸಕಲ ಚಟುವಟಿಕೆಗಳಲ್ಲಿ ಧೈರ್ಯದಿಂದ ಬೆಂಬಲವಾಗಿದ್ದರು. 1935 ರಿಂದ 25 ವರ್ಷ ಪುರಸಭಾ ಸದಸ್ಯರಾಗಿ ಸತತವಾಗಿ ಇದ್ದರಲ್ಲದೆ 3-4 ಬಾರಿ ಅಧ್ಯಕ್ಷರಾಗಿ ಕೂಡ ಸೇವೆ ಸಲ್ಲಿಸಿದರು. ಅನೇಕ ವರ್ಷ ಟಿ.ಸಿ.ಸಿ. ಅಧ್ಯಕ್ಷರೂ ಆಗಿದ್ದರು. ಪ್ರೌಢಶಿಕ್ಷಣ ಕೂಡ ಮುಗಿಸದಿದ್ದರೂ ಕನ್ನಡ, ಇಂಗ್ಲಿಷ್‌ಗಳಲ್ಲಿ ಅವರಿಗೆ ವಿಶೇಷ ಪ್ರಭುತ್ವ ಇತ್ತು. 12-6-1973ರಲ್ಲಿ ಅವರು ದಿವಂಗತರಾದರು. (ಚಳವಳಿಗೆ ಸಂಬಂಧಿಸದ ಎಷ್ಟೋ ವಿವರಗಳನ್ನಿಲ್ಲಿ ಕೈಬಿಟ್ಟಿದೆ. ದಿ||ರು ಅನೇಕ ಚಟುವಟಿಕೆಗಳಲ್ಲಿ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಭಾಗವಹಿಸಿದ್ದು 'ಗೀತಾಮಿತ್ರ' ಎಂಬ ಒಳ್ಳೆಯ ಮಾಸಿಕ ಪತ್ರಿಕೆಯನ್ನೂ ನಡೆಸುತ್ತಿದ್ದರು—ಸಂ||).

**ಎ. ಎಲ್. ನಾಗರಾಜ ಶ್ರೇಷ್ಠಿ**
(ಪತ್ರಕರ್ತರು, ಅಜ್ಜಂಪುರ)

ಮೈ.ಚಿಮ. 17

## ಎಸ್. ವೈ. ನಾಗಣ್ಣ ಶೆಟ್ಟಿ

ಜನನ : 1917 ಉದ್ಯೋಗ : ವ್ಯಾಪಾರ ವಿಳಾಸ : ಹೊಸಮನೆ ರಸ್ತೆ, ಭದ್ರಾವತಿ

---



ಚಿಕ್ಕಮಗಳೂರಲ್ಲಿ ಜನಿಸಿದ ನಾನು ಕಡೂರಲ್ಲಿ ಕಾಂಗ್ರೆಸ್‌ಗೆ ನನ್ನ 12ನೆಯ ವರ್ಷದಲ್ಲಿಯೇ ಸೇರಿ ಕೆಲಸಮಾಡಿದೆ. ಕಡೂರಲ್ಲಿ ಕೆ. ಜೆ. ಸತ್ಯನಾರಾಯಣ ಶೆಟ್ಟರೂ ಕೆ. ಆರ್. ಮಲ್ಲಣ್ಣ ಶೆಟ್ಟರೂ ಆಗ ಕಾಂಗ್ರೆಸ್ಸಿನ ಪ್ರಮುಖ ಕಾರ್ಯಕರ್ತರು. ಮುಂದೆ ವ್ಯಾಪಾರಕ್ಕೆ ಅಜ್ಜಂಪುರದಲ್ಲಿ ನೆಲಸಿದೆ. ಅಜ್ಜಂಪುರದಲ್ಲಿ ದಿ|| ಸುಬ್ರಹ್ಮಣ್ಯ ಶೆಟ್ಟರು ಗಣ್ಯನಾಯಕರು. ಚಳವಳಿಯಲ್ಲಿ ಮೂರು ಬಾರಿ ಬಂಧಿತನಾಗಿದ್ದೆ.

ಮೂರು ಬಾರಿ ನನ್ನ ಮನೆ ಜಪ್ತಿ ಆಯಿತು. ಹತ್ತಾರು ಕೇಸುಗಳಿಗೆ ಒಳಗಾದೆ. ಮಹದೇವ ದೇಸಾಯಿ ಅವರು ಬಂದಾಗ ಅವರ ಜೊತೆ ಎಲ್ಲೆಡೆ ಅವರ ಮಾರ್ಗದರ್ಶಿಯಾಗಿ ಸಂಚರಿಸಿದೆ. ತಾಳಕೆರೆ ಮತ್ತು ಎಚ್. ಸಿದ್ದಯ್ಯನವರು ಜೈಲಿನಲ್ಲಿ ರಾಗಿ ಬೀಸುತ್ತಿದ್ದಾಗಿನ ಭಾವಚಿತ್ರ ಹಿಡಿದು, ಅವುಗಳ ಪ್ರತಿಗಳನ್ನು ಮುದ್ರಿಸಿ ಹಂಚುತ್ತಿದ್ದಾಗ ಹಿರಿಯೂರಲ್ಲಿ ಬಂಧಿತನಾದೆ. ಅಜ್ಜಂಪುರದಲ್ಲಿ ಮಂಡಲ ಮತ್ತು ಹೋಬಳಿ ಕಾಂಗ್ರೆಸ್ ಅಧ್ಯಕ್ಷನಾಗಿ ಕೆಲಸಮಾಡಿದ್ದೇನೆ. ಅಲ್ಲದೆ ಮುಂದೆ ಚಿಕ್ಕಮಗಳೂರು ಡಿ.ಸಿ.ಸಿ. ಉಪಾಧ್ಯಕ್ಷನಾಗಿಯೂ ಇದ್ದೆ. ಅಜ್ಜಂಪುರ ಜಾತ್ರೆಯಲ್ಲಿ ಆಗುತ್ತಿದ್ದ ಕೋಣದ ಬಲಿಯನ್ನು ನಿಲ್ಲಿಸಲು ಕೂಡ ಶ್ರಮಿಸಿದೆ. ಯರವಡಾ ಜೈಲು, ಹಿರಿಯೂರು ಲಾಕಪ್, ಚಿತ್ರದುರ್ಗ ಲಾಕಪ್, ಅಜ್ಜಂಪುರ ಲಾಕಪ್, ಹಾಸನ ಜೈಲು, ಸಾಗರ ಜೈಲುಗಳಲ್ಲಿ ಇದ್ದೆನಲ್ಲದೆ ತಿಪ್ಪಗೊಂಡನಹಳ್ಳಿಯಲ್ಲಿ ಕಲ್ಲುಮಣ್ಣು ಕೂಡ ಹೊತ್ತಿದ್ದೇನೆ.

ದಿ|| ಬೀರೂರು ಸತ್ಯನಾರಾಯಣ ಶೆಟ್ಟರು, ಡಿ. ಎಚ್. ರುದ್ರಪ್ಪ (ಬೀರೂರು), ಮಾರ್ಗದ ಮಲ್ಲಪ್ಪನವರು (ಬೀರೂರು), ಹಣಸೆಹಳ್ಳಿ ಎಚ್. ಎಂ. ಮಲ್ಲಿಕಾರ್ಜುನಪ್ಪನವರು, ಯಳ್ಳಂಬಳಸೆಯ ವೈ. ಎಂ. ಚಂದ್ರಶೇಖರಯ್ಯ ; ಚಿಕ್ಕಮಗಳೂರು ಕಡೆ ಅಣ್ಣಪ್ಪ ಶೆಟ್ಟರು, ಶಿವಾನಂದರು, ಸುಬ್ಬಮ್ಮ, ಪಾರ್ವತಮ್ಮ, ಭಾಗಮನೆ ದೇವೇಗೌಡ, ಬಿ. ಪಿ. ಬಸಪ್ಪಶೆಟ್ಟಿ, ಬಿ. ಪಿ. ಹಾಲಪ್ಪ, ಹುಚ್ಚೇಗೌಡರು ಆ ಕಾಲದ ಪ್ರಮುಖ ಕಾರ್ಯಕರ್ತರು. ಈಗ 14 ವರ್ಷದಿಂದ ಭದ್ರಾವತಿಗೆ ಬಂದು ನೆಲಸಿದ್ದೇನೆ.

ಮೈ.ಚಿಮ. 18

## ಎ. ಆರ್. ಭೀಮಯ್ಯ

ಜನನ : ಸು. 1926 ಉದ್ಯೋಗ : ಕೃಷಿ ವಿಳಾಸ : ಅಜ್ಜಂಪುರ, ತಾ|| ತರೀಕೆರೆ



ಎಸ್. ಸುಬ್ರಹ್ಮಣ್ಯ ಶೆಟ್ಟರ ಭಾಷಣಗಳಿಂದ ಪ್ರಭಾವಿತನಾಗಿ ಬಾಲ್ಯದಿಂದಲೇ ಕಾಂಗ್ರೆಸ್ಸಿನಲ್ಲಿ ನಾನು ದುಡಿಯುತ್ತಿದ್ದೆ. ಇಲ್ಲಿ ನಡೆದ ಎ.ಎಂ.ಸಿ.ಸಿ. ಸಮ್ಮೇಳನದ ಯಶಸ್ಸಿಗಾಗಿ ದುಡಿದೆನಲ್ಲದೆ ಚಿತ್ರದುರ್ಗದಲ್ಲಿ ನಡೆದ ಎ.ಎಂ.ಸಿ.ಸಿ.ಗೂ ಹೋಗಿದ್ದೆ. ಸುಬ್ರಹ್ಮಣ್ಯ ಶೆಟ್ಟಿ ಮತ್ತು ಜಿ. ಕೆ. ಸಿದ್ದಪ್ಪ ಶೆಟ್ಟಿ ಇವರು 1942–47 ರಲ್ಲಿ ನಡೆಸಿದ್ದ ಚಳವಳಿ ಚಟುವಟಿಕೆಗಳಲ್ಲಿ ಪಾಲುಗೊಂಡೆ. 1947ರಲ್ಲಿ ಅಜ್ಜಂಪುರ, ತಾವರೆಕೆರೆ ಮತ್ತು

ಚನ್ನಗಿರಿ ಪೋಲಿಸ್ ಠಾಣೆಗಳ ಮೇಲೆ ತ್ರಿವರ್ಣಧ್ವಜ ಹಚ್ಚಲು ಯತ್ನಿಸಿ ಆದ ಗಲಾಟೆ ಕಾಲಕ್ಕೆ ಏಟು ತಿಂದೆನು. ಅಜ್ಜಂಪುರದಲ್ಲಿ ಪಿಕೆಟಿಂಗ್‌ನಲ್ಲೂ ಪಾಲುಗೊಂಡೆನು. 1947ರಲ್ಲಿ ಏಳು ದಿನ ಶಿಕ್ಷೆಗೆ ಒಳಗಾಗಿ ಬೆಂಗಳೂರು ಜೈಲಿನಲ್ಲಿ ಇದ್ದೆ. ನನ್ನ ಜೊತೆ ಇನ್ನೂ 12 ಜನ ಇದ್ದರು. ಬಿಡುಗಡೆಯನಂತರ ನಡೆದೇ ಅಜ್ಜಂಪುರಕ್ಕೆ ಬಂದೆ.

ನಮ್ಮ ಊರ ಸ್ವಾತಂತ್ರ್ಯ ಯೋಧರೆಂದರೆ ಜಿ. ಕೆ. ಸಿದ್ದಪ್ಪಶೆಟ್ಟಿ, ಸಿ ಜಿ. ತಿಮ್ಮಯ್ಯ, ಕೆ. ಜಿ. ಸಿದ್ದಪ್ಪ, ವೈ. ಜಿ. ಹನುಮಂತಪ್ಪ, ದಾವಣಗೆರೆ ಗಣೇಶರಾವ್, ಸಿ. ಮಲ್ಲಪ್ಪ, ಎಸ್. ವೈ. ನಾಗಪ್ಪಶೆಟ್ಟಿ, ಮಾಳಿಗೆ ಕರಿಯಪ್ಪ, ಬಿ. ಎಂ. ಏಕೋರಾಮಸ್ವಾಮಿ, ಟಿ ಕೃಷ್ಣಾಜಿರಾವ್, ಡಿ. ಸಿದ್ದಲಿಂಗಪ್ಪ, ಕೆ. ವೆಂಕೋಜಿರಾವ್, ಟಿ. ಗೋವಿಂದಪ್ಪ, ರಾಮೋಜಿರಾವ್, ಎಸ್. ಮರಿಯಪ್ಪ, ಜೆ. ಟಿ. ಮೂಡ್ಲಗಿರಿಯಪ್ಪ, ಕಮ್ಮತ್ತಿಗೆ ಚನ್ನಬಸಪ್ಪ, ಡಿ. ಸಿದ್ದಪ್ಪ, ಮರುಳಸಿದ್ದಪ್ಪ, ಜಿ. ತಿಮ್ಮಯ್ಯ —ಹೀಗೆ ಅನೇಕರಿದ್ದಾರೆ.

ವೈ.ಚಿಮ. 19

## ಕೆ. ಜೆ. ಸತ್ಯನಾರಾಯಣ ಶೆಟ್ಟಿ

ಜನನ : 1909 ಉದ್ಯೋಗ : ನಿವೃತ್ತ ಜೀವನ ವಿಳಾಸ: ಗಜನಿಲಯ, VII ಮೇನ್, ಸಂಪಂಗಿರಾಮನಗರ, ಬೆಂಗಳೂರು-27

---



ನಮ್ಮ ಊರಾದ ಕಡೂರಲ್ಲಿ ಲೋಕಮಾನ್ಯ ಟಿಳಕರು ತೀರಿಕೊಂಡಾಗ 1920ರಲ್ಲಿ ಹಿಲಾಲು ಹಿಡಿದು ಮೆರವಣಿಗೆ ಆಗಿ ಆಂಜನೇಯ ಗುಡಿಯಲ್ಲಿ ವಿಶೇಷ ಪೂಜೆ, ಭಾಷಣ ಆದುದು ನನಗೆ ನೆನಪಿದೆ. ಆಗ ಊರಲ್ಲೆಲ್ಲ ಪ್ರಪ್ರಥಮ ಬಾರಿ ಅಂಗಡಿಗಳನ್ನೆಲ್ಲ ಮುಚ್ಚಿದ್ದರು. ಸಭಾಪತಿ ಮೀನಾಕ್ಷಯ್ಯ ಎಂಬ ಬೆಂಗಳೂರಿನ ಒಬ್ಬರು ನಮ್ಮಲ್ಲಿ ಇದ್ದು ಅವರು ಈ ಎಲ್ಲ ಚಟುವಟಿಕೆಗಳ ನಾಯಕತ್ವ ವಹಿಸಿದ್ದು ನೆನಪು. ಮುಂದೆ ನಮ್ಮ ಭಾಗದಲ್ಲಿ ದಿ|| ಹೊಸಕೊಪ್ಪ ಕೃಷ್ಣರಾಯರ ಪ್ರಭಾವದಿಂದ ರಾಷ್ಟ್ರೀಯತೆ ಬೆಳೆಯಿತು. ಅಡ್ಡಗದ್ದೆ ತಿಮ್ಮಪ್ಪಯ್ಯ ಎಂಬ 1000 ಮಣ ಅಡಿಕೆಯ ಉತ್ಪನ್ನವುಳ್ಳ ಜಮೀನ್ದಾರರ ಮಗನಾದ ಇವರು 1920 ರಿಂದ 1934ರ ವರೆಗೆ ಬಹಳ ಕೆಲಸ ಮಾಡಿದವರು. ಭಜನೆ, ಯಕ್ಷಗಾನ ಅಂದರೆ ಅವರಿಗೆ ಬಲುಪ್ರೀತಿ.

ಚಳವಳಿ ಕಾಲಕ್ಕೆ ಎಲ್ಲ ಆಸ್ತಿ ಕಳೆದುಕೊಂಡು ಸಾಲಗಾರರಾದರು. ಅಜ್ಜಂಪುರ ಖಾದಿ ಸೆಂಟರ್ ಅವರೇ ಸ್ಥಾಪಿಸಿದ್ದು. ಅಲ್ಲಿಯೇ ಅವರು ತೀರಿಕೊಂಡರು. ನಮ್ಮ ಜಿಲ್ಲೆಯ ಪ್ರಥಮ ಡಿ.ಎಲ್.ಬಿ. ಅಧ್ಯಕ್ಷರೂ ಅವರೇ.

1927ರಲ್ಲಿ ಕಡೂರಿಗೆ ಗಾಂಧೀಜೀ ಬಂದಿದ್ದು ಡಾ|| ಸುಬ್ಬರಾವ್, ಲಕ್ಷ್ಮೀ ನಾರಾಯಣರಾವ್ ಹುಂಡೇಕಾರ್ ಇವರೆಲ್ಲ ಸಭೆ ನಡೆಸಿ ಗಾಂಧೀಜಿಗೆ ನಿಧಿ ಅರ್ಪಿಸಿದ್ದರು. ಅದೇ ವರ್ಷ ಮದ್ರಾಸ್ ಕಾಂಗ್ರೆಸ್ಸಿಗೆ ನಾನು ಕಡೂರಿನಿಂದಲೂ ಚಿಕ್ಕಮಗಳೂರಿನಿಂದ ಅಡ್ವೋಕೇಟ್‌ರಾದ ಹೊಸತಾರೆ ಹೊನ್ನಪ್ಪಯ್ಯ, ಕಳಸ ಕೃಷ್ಣರಾವ್, ಬೀರೂರಿಂದ ಕೆ. ಟಿ. ಸತ್ಯನಾರಾಯಣ ಶೆಟ್ಟಿ ಇವರೆಲ್ಲ ಬಂದಿದ್ದರು. ಆಗ ಮೋತೀಲಾಲರ ವರದಿ, ಆ ಬಗ್ಗೆ ಜವಾಹರಲಾಲರ ಸ್ಫೂರ್ತಿಯುತ ಭಾಷಣಗಳಿಂದ 'ಹುಲಿಯ ಹೊಟ್ಟೆಯಲ್ಲಿ ಹುಲಿ ಹುಟ್ಟಿದೆ!' ಅನಿಸಿತಲ್ಲದೆ, ದೇಶಕ್ಕಾಗಿ ಇಂಥವರು ಕೆಲಸಮಾಡುತ್ತಾರಲ್ಲ, ಎಂದು ಹೆಮ್ಮೆ ಅನಿಸಿತು. ಮುಂದೆ ಹರಿಪುರ ಕಾಂಗ್ರೆಸ್ಸಿಗೂ ಬೆಂಗಳೂರಿಂದ ಹೋಗಿದ್ದೆ.

1934ರಲ್ಲಿ ನಾನು ಕಡೂರಿನಿಂದ ಬಂದು ಬೆಂಗಳೂರಲ್ಲಿ ನೆಲೆಸಿದೆ. ವಿ. ಎಸ್. ನಾರಾಯಣರಾವ್, ಎಂ. ಎನ್. ಸೀತಾರಾಮಯ್ಯ, ಶ್ರೀಧರಮೂರ್ತಿ ಮುಂತಾದವರ ಜೊತೆ ಕೆಲಸ ಮಾಡಿದೆ. ಆ ಕಾಲದಲ್ಲಿ ಕಬ್ಬನ್ ಪೇಟೆಯಲ್ಲಿ ಕೆ. ರಾಮಸ್ವಾಮಿ, ಪಿ. ರಾಮಸ್ವಾಮಿ ಮುಂತಾದವರು ಪ್ರಮುಖ ಕಾರ್ಯಕರ್ತರು.

1939ರಲ್ಲಿ ಅರಣ್ಯಸತ್ಯಾಗ್ರಹ ಆರಂಭ ಆದಾಗ ನಾನು ಬೆಂಗಳೂರು ವಿಭಾಗದಲ್ಲಿ ಆರ್ಗನೈಸಿಂಗ್ ಸೆಕ್ರೆಟರಿ ಆಗಿ ಕೆಲಸಮಾಡಿದೆ. ಆಸ್ಪತ್ರೆ ರಸ್ತೆ ಕೇಶವಯ್ಯಂಗಾರ್ ಮನೆಯಲ್ಲಿ ಶಿಬಿರವಿತ್ತು. ಬಿಂದುಮಾಧವ ಬುರ್ಲಿ ಅವರು ಆಗ ಕೆಲವು ದಿನ ಇಲ್ಲಿ ಇದ್ದರು. ಈ ಕಾಲದಲ್ಲಿ ಕೊಟ್ರೆ ಸಂಜಪ್ಪನವರಿಗೆ ಜೈಲಿನಲ್ಲಿ ತಿಕಡಿ ಏಟು ಕೊಟ್ಟರು. ಜೈರಮಂಗಲದಲ್ಲಿ ಬಂಧಿತನಾಗಿದ್ದ ಶಿವಮೊಗ್ಗದ ಪ್ರಹ್ಲಾದ ಶೆಟ್ಟಿ ಎಂಬಾತ ತೀರಿಕೊಂಡ. ಅವನ ಹೆಸರಲ್ಲಿ ವಿಶ್ವೇಶ್ವರಪುರದಲ್ಲಿ (ಬೆಂಗಳೂರು) ಮುಂದೆ ಒಂದು ರೀಡಿಂಗ್ ರೂಂ ಸ್ಥಾಪಿಸಲಾಯಿತು. ಈ ಕಾಲದಲ್ಲಿ 26 ದಿನ ನಾನು ಕೆಲಸ ಮಾಡಿದೆ. 'ಕ್ರಾಂತಿ' ಎಂಬ ಬುಲಿಟಿನ್ ಹೊರಡಿಸುತ್ತಿದ್ದೆವು. ಕೃಷ್ಣಮೂರ್ತಿ ಎಂಬಾತ ಬರವಣಿಗೆ ಮಾಡುತ್ತಿದ್ದು ಎಸ್. ಎನ್. ಗುಪ್ತ ಸ್ಟೆನ್ಸಿಲ್ ಮಾಡುತ್ತಿದ್ದರು. ಆಗ ನನ್ನನ್ನು ಬಂಧಿಸಿ ಸೂಲಿಬೆಲೆಯಲ್ಲಿ ದಿಗ್ಬಂಧನದಲ್ಲಿ ಇಟ್ಟಿರಲು ನಾನು ಐದು ದಿನದ ಅನಂತರ ಅಲ್ಲಿಂದ ಮದ್ರಾಸಿಗೆ ಓಡಿಹೋದೆ. ನನ್ನ ಅನಂತರ ಎಂ. ಆರ್. ಎಸ್. ಶಾಸ್ತ್ರಿ ಸತ್ಯಾಗ್ರಹದ ಆರ್ಗನೈಜಿಂಗ್ ಸೆಕ್ರೆಟರಿ ಆದರು. ಆಗ ಎಚ್. ಸಿದ್ದಯ್ಯ. ತಾಳಕೆರೆ ಜೈಲಿನಲ್ಲಿ ರಾಗಿ ಬೀಸುತ್ತಿದ್ದುದರ ವ್ಯಂಗ್ಯಚಿತ್ರದ ಬ್ಲಾಕ್ ಮದ್ರಾಸಿಗೆ ಒಯ್ದು ಅದನ್ನು ಮುದ್ರಿಸಿ ಕಾಂಗ್ರೆಸ್ಸನ್ನು ಟೀಕಿಸುವವರಿಗೆಲ್ಲ ಆ ಬುಲೆಟಿನ್ ಪೋಸ್ಟ್‌ಮಾಡಿದೆ. ಅಲ್ಲಿಂದ ಧಾರವಾಡಕ್ಕೆ ಹೋಗಿ ಅಲ್ಲಿ ನಡೆದ ಸಮ್ಮೇಳನದಲ್ಲಿ ಪಾಲುಗೊಂಡೆ. ಮೈಸೂರಿನ ಅನೇಕ ಕಾರ್ಯಕರ್ತರು ಆಗ ಅಲ್ಲಿಗೆ ಬಂದಿದ್ದರು. ಸತ್ಯಾಗ್ರಹ ನಡೆಸಲು, ಡಾ|| ಪಾರ್ಥನಾರಾಯಣ ಪಂಡಿತರ

ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಿಸಲಾಯಿತು. ಮುಂದೆ ಮತ್ತೆ ಬೆಂಗಳೂರಿಗೆ ಮರಳಿ ಬಂಧಿತನಾಗಿ 9 ತಿಂಗಳ ಕಠಿಣಶಿಕ್ಷೆಗೆ ಒಳಗಾದೆ. ಆದರೆ ಏಳು ತಿಂಗಳು 20 ದಿನಗಳಲ್ಲಿ ಬಿಡುಗಡೆ ಆಯಿತು.

1942ರಲ್ಲಿ ಆ. 10ಕ್ಕೆ ನನ್ನ ಮತ್ತು ಎಂ. ಎನ್. ಸೀತಾರಾಮಯ್ಯನವರ ಬಂಧನ ಆಯಿತು. ಬೆಂಗಳೂರು, ಹಾಸನ, ಸಾಗರ, ಶಿವಮೊಗ್ಗ, ಚಿತ್ರದುರ್ಗ ಜೈಲುಗಳಲ್ಲಿ ಇದ್ದೆ. ಹತ್ತು ತಿಂಗಳು ಇಪ್ಪತ್ತು ದಿನಗಳಲ್ಲಿ ಬಿಡುಗಡೆ ಆಯಿತು. ಹಾಸನ ಜೈಲಿನಲ್ಲಿ ಇದ್ದಾಗ ಶ್ರವಣಬೆಳಗೊಳ ಗೋಲೀಬಾರಿನಲ್ಲಿ ಗುಂಡುತಗುಲಿದವನೊಬ್ಬನ ಕಾಲನ್ನು ಆಸ್ಪತ್ರೆಯಲ್ಲಿ ಕತ್ತರಿಸಿದ್ದು ತಿಳಿಯಿತು. ಪುಣೆಯಲ್ಲಿ ಗಾಂಧೀಜಿ ಉಪವಾಸಮಾಡಿದಾಗ ನಾನೂ ಪೂರ್ತಿ ಉಪವಾಸಮಾಡಿದ್ದೆ. ಬಂಧನಕ್ಕೆ ಮೊದಲು ಬೆಂಗಳೂರಲ್ಲಿ ಕಾಂಗ್ರೆಸ್ ಕಮಿಟಿ ಕಾರ್ಯದರ್ಶಿ ಆಗಿದ್ದೆ. ಚಳವಳಿಯ ಉದ್ದಕ್ಕೂ ಮೈಸೂರು ಕಾಂಗ್ರೆಸ್ಸಿನ ಎಲ್ಲ ಚಟುವಟಿಕೆ, ಸಮ್ಮೇಳನಗಳಲ್ಲಿ ಪಾಲುಗೊಂಡಿದ್ದೆ. ಈ ಕಾಲದಲ್ಲಿ ಕಡೂರಲ್ಲಿ ಇರುವ ನಮ್ಮ ಎಲ್ಲವನ್ನು ಕಳಕೊಂಡು ಬೆಂಗಳೂರಿಗೆ ಬಂದಾಗ ಎಷ್ಟೇ ತೊಂದರೆಗಳಾದರೂ ನನ್ನ ಪತ್ನಿ ಎಲ್ಲ ಚಟುವಟಿಕೆಗಳಲ್ಲಿ ಸಹಕರಿಸಿದಳು.

ರಾಮಲಾಲ್ ತಿವಾರಿ, ಎಸ್. ಎಸ್. ಶಾಸ್ತ್ರಿ, ಶಾಮರಾಜಯ್ಯಂಗಾರ್, ನಾಗಭೂಷಣರಾವ್, ಕೆ. ಎಲ್. ಶರ್ಮ, ಶಿವಾನಂದ ಶರ್ಮ, ಲಾವಣಿ ನೀಲಕಂಠಪ್ಪ, ವಜ್ರಂ, ಕುಮಾರನ್, ಪರಶುರಾಮ್, ಎನ್. ಎನ್. ಚಂದೂರ್, ಚಲಂ, ಭೈರಪ್ಪ, ಶೇಖರಪ್ಪ ಸೋದರರು, ಮರಿಸಂಕಣ್ಣ, ರಂಗಸ್ವಾಮಿ, ಎ. ವಿ. ಶ್ರೀನಿವಾಸಮೂರ್ತಿ, ಬಿ. ಎಂ. ಸೀನಪ್ಪ, ಎಸ್. ಎನ್. ಗುಪ್ತ, ಹೀಗೆ ಅನೇಕರು ಬೆಂಗಳೂರಿನ ಕಾರ್ಯಕರ್ತರು.

ಮೈ.ಚಿಮು. 20

## ಎಂ. ಎಸ್. ಹಾಲುಸ್ವಾಮಿ

ಜನನ : 1933 ಉದ್ಯೋಗ : ಪತ್ರಕರ್ತ ; ಕೃಷಿ ವಿಳಾಸ: ಮತಿಘಟ್ಟ, ತಾ|| ಕಡೂರು

ನಾನು ವಿದ್ಯಾರ್ಥಿಯಾಗಿದ್ದಾಗ ಕಡೂರು ಕಡೆಯಿಂದ ದಿ|| ಕೆ. ಎಚ್. ಮುದಿಯಪ್ಪನವರ ನೇತೃತ್ವದಲ್ಲಿ ‘ಚಲೋ ಮೈಸೂರು’ ಜಾಥಾ ಬರಲು, ಮನೆಯಲ್ಲಿ ತಿಳಿಸದೆ ಅವರ ಜೊತೆ ಸಾಗಿದೆ. ಶ್ರೀರಂಗಪಟ್ಟಣ ಸೇರುವಾಗ ಪೋಲಿಸರು ನಮ್ಮನ್ನು ಚದರಿಸಿದರು. ಚನ್ನರಾಯಪಟ್ಟಣ ಠಾಣೆಯಲ್ಲಿ ನಮ್ಮಲ್ಲಿ ಕೆಲವರನ್ನು ಒಂದು ದಿನ ರಾತ್ರಿ ಇಟ್ಟಿದ್ದರು.



ಮುಂದೆ ಮಾರನೆಯ ದಿನ ನಮ್ಮ ನಮ್ಮ ಊರುಗಳ ಬಳಿ ನಮ್ಮನ್ನು ತಂದುಬಿಟ್ಟರು. ನಮಗೂ ಹಿಂದೆ ನಮ್ಮ ಊರಲ್ಲಿ ಎಂ. ವರ್ಧರಾಜಯ್ಯ, ಸಿ. ಜಿ. ರಾಮಕೃಷ್ಣೋಜಿರಾವ್ ಇವರು ಹಿರಿಯ ಕಾರ್ಯಕರ್ತರು. ಇವರಲ್ಲದೆ ಊರ ಹಿರಿಯರಾದ ಎಂ. ಟಿ. ಮುದ್ದಪ್ಪ. ಎಂ. ಎಚ್. ನಂಜುಂಡಪ್ಪ. ವಿ. ಶಂಕರಪ್ಪ, ಪಂಡಿತ ಶಿವಮೂರ್ತಿಸ್ವಾಮಿ ಇವರೆಲ್ಲರ ಬೆಂಬಲ ನಮಗಿತ್ತು.

ಕರಿಯನಹಳ್ಳಿ, ಲಕ್ಕೇನಹಳ್ಳಿ, ಚೀಲನಹಳ್ಳಿ, ಕುಪ್ಪಾಳು, ದೇವನೂರು, ಸಿಡಘಟ್ಟ, ನಾಗರಾಳು ಮುಂತಾದ ಊರುಗಳಿಗೂ ಹೋಗಿ ಆಗ ಪ್ರಭಾತ್‌ಫೇರಿ ನಡೆಸಿ ಆರ್ಕಾಟರ ದಿವಾನಗಿರಿ ಬಗ್ಗೆ ಭಾಷಣ ಮಾಡಿದ್ದೆವು. ಈ ಬಗ್ಗೆ ಬೆಂಗಳೂರು ಕಾಂಗ್ರೆಸ್ ಆಫೀಸಿಗೆ ವರದಿ ಕಳುಹಿಸುತ್ತಿದ್ದೆವು. ನಮ್ಮೂರ ಸೇಂದಿ ಅಂಗಡಿಯನ್ನು ಸುಟ್ಟಿದ್ದೆವು. ನಿತ್ಯ ಊರಲ್ಲಿ ಧ್ವಜಾರೋಹಣ, ಪ್ರಭಾತ್‌ಫೇರಿ ಮಾಡುತ್ತಿದ್ದೆವು. ನಮ್ಮ ಜಿಲ್ಲೆಯ ಈ ಭಾಗದ ಆಗಿನ ನಾಯಕರೆಂದರೆ ವೈ. ಎಂ. ಚಂದ್ರಶೇಖರಯ್ಯ, ಕೆ. ಎಚ್. ಮುದಿಯಪ್ಪ, ಡಿ. ಎಚ್. ರುದ್ರಪ್ಪ, ಕೆ. ಎಂ. ತಮ್ಮಯ್ಯ.

ಸ್ವ.ಪಾ. 1

# ಹಾಸನ ಜಿಲ್ಲೆಯಲ್ಲಿ ಸಂಗ್ರಾಮ

ವಂಗಭಂಗದ ಕಾಲದಲ್ಲಿ (1905) ಹಾಸನದಲ್ಲಿ ಸಹ ವಕೀಲರು ಸಭೆಗಳನ್ನು ನಡೆಸಿ ಬ್ರಿಟಿಷ್ ಸರ್ಕಾರದ ವಿರುದ್ಧ ನಿರ್ಣಯವನ್ನು ಸ್ವೀಕರಿಸಿ ಪೂರ್ಣ ಸ್ವದೇಶಿಯ ಪ್ರತಿಜ್ಞೆಯನ್ನು ಕೈಕೊಂಡದ್ದನ್ನು ನಮ್ಮ ಹಿರಿಯರು ನನಗೆ ಹೇಳಿದ್ದರು. 1908ರಲ್ಲಿ ಟಿಳಕರಿಗೆ ಆರುವರ್ಷ ಶಿಕ್ಷೆ ಆದಾಗ, ಈಗ ಹಾಸನದ ಪ್ರವಾಸಿ ಮಂದಿರದ ಎದುರಿಗಿರುವ ಮೈದಾನದಲ್ಲಿ ನಾಗರಿಕರು ಸಭೆ ನಡೆಸಿ ಶಿಕ್ಷೆಯು ನ್ಯಾಯವಲ್ಲ ಎಂದು ನಿರ್ಣಯ ಅಂಗೀಕರಿಸಿದ್ದರು.


ಗೊರೂರು ರಾಮಸ್ವಾಮಿ ಅಯ್ಯಂಗಾರ್

1920ರ ಆ. 1ರಂದು ಟಿಳಕರು ತೀರಿಕೊಂಡಾಗ ಹಾಸನದ ಹೈಸ್ಕೂಲು ವಿದ್ಯಾರ್ಥಿಗಳೆಲ್ಲರೂ ಪಾಠಶಾಲೆಯಿಂದ ಹೊರಬಿದ್ದು ಟಿಳಕ, ಗಾಂಧೀಜಿ, ಭಾರತ ಮಾತೆಯ ಭಾವಚಿತ್ರದೊಂದಿಗೆ ಊರಿನಲ್ಲೆಲ್ಲ ಮೆರವಣಿಗೆ ಹೊರಟರು. ಉದ್ದಕ್ಕೂ ಪರದೇಶೀವಸ್ತ್ರ ಸಂಗ್ರಹಿಸುವುದೇ ಅವರ ಕಾರ್ಯವಾಯಿತು. ಹೊಗಲಾರದ ಪರದೇಶೀ ವಸ್ತ್ರಗಳ ಮೂಟೆಗಳೊಂದಿಗೆ ಜ್ಯೂಬಿಲಿ ಮೈದಾನವನ್ನು ಸೇರಿದೆವು. ಬರಿ ವಿದ್ಯಾರ್ಥಿ ಗಳೇ ಇದ್ದ ಮೆರವಣಿಗೆಗೆ ದಾರಿಯಲ್ಲಿ ಅನೇಕ ಪುರಪ್ರಮುಖರು, ಕೂಲಿಗಳು, ರೈತರು, ಹರಿಜನರು, ಮಹಿಳೆಯರು ಇವರೆಲ್ಲ ಕೂಡಿ ದೊಡ್ಡ ಸಮೂಹವೇ ಆಯಿತು. ಆಗ ಖಾದಿ ಬಟ್ಟೆ ಎಲ್ಲ ಕಡೆ ಸಿಕ್ಕುತ್ತಿರಲಿಲ್ಲ. ಪರದೇಶೀವಸ್ತ್ರ ಸುಡಲು ಕೇಳುವ ನಮಗೆ, "ಇದನ್ನು ಕೊಟ್ಟು ನಾವು ಏನನ್ನು ಧರಿಸುವುದು?" ಎಂದು ಸೀತುರಾಮಯ್ಯಂಗಾರ್ಯರು ಕೇಳಿದಾಗ ನಾವು ಅಂತರಿಕ್ಷವನ್ನೇ ನೋಡಿದೆವು. ಅಂದಿನ ದಹನಕಾರ್ಯಕ್ಕೆ ಅತ್ಯಂತ ಹೆಚ್ಚಾದ ಪರದೇಶೀವಸ್ತ್ರ (ತಮ್ಮ ಒಳ್ಳೆಯ ಜರಿಯ ಬಟ್ಟೆ ಸಹ) ಕೊಟ್ಟವರೆಂದರೆ ಇದೇ ಸೀತುರಾಮಯ್ಯಂಗಾರ್ಯರೇ. ಎಸ್. ಎಸ್. ನಂಜುಂಡಯ್ಯ ಒಂದು ಜರಿಯ ರುಮಾಲನ್ನೇ ಕೊಟ್ಟರು. ನಾವು ಒತ್ತಾಯಮಾಡಿ ತೊಟ್ಟ ಕೋಟನ್ನೂ ಇಸಿದು ಕೊಂಡೆವು. ಅಡ್ವೊಕೇಟ್ ವೆಂಕಟೇಶಯ್ಯನವರು ಬಹಳ ವಾದಿಸಿದನಂತರ ತಮ್ಮ ನೆಕ್‌ಟೈ ಮಾತ್ರ ಕೊಟ್ಟರು. (ಆದರೆ 1927ರಲ್ಲಿ ಗಾಂಧೀಜಿ ಹಾಸನಕ್ಕೆ ಬಂದಾಗ

ಇದೇ ವೆಂಕಟೇಶಯ್ಯನವರೇ ಸ್ವಾಗತ ಸಮಿತಿಯಲ್ಲಿ ಪ್ರಮುಖ ಪಾತ್ರವಹಿಸಿದ್ದರು). ನಮ್ಮ ಹೆಡ್ಮಾಸ್ಟರು ಆರ್. ವಿ. ಕೃಷ್ಣಸ್ವಾಮಿ ಅಯ್ಯರ್ ಜರಿವಸ್ತ್ರವೊಂದನ್ನು ಕೊಟ್ಟರು. ಗಾಂಧೀಜೀಕಿ ಜೈ, ಭಾರತಮಾತಾಕೀ ಜೈ ಘೋಷಣೆಗಳೊಂದಿಗೆ ಈ ಅಗಾಧ ವಸ್ತ್ರದ ರಾಶಿಗೆ ಬೆಂಕಿಯನ್ನು ತಗುಲಿಸಿದೆವು.

1927ರ ಆಗಸ್ಟ್‌ನಲ್ಲಿ ಮಹಾತ್ಮರು ಹಾಸನಕ್ಕೆ ಬಂದಿರಲು ರೈಲ್ವೆ ನಿಲ್ದಾಣಕ್ಕೆ ಹತ್ತಿರವಿರುವ ಜಿ|| ಬೋ|| ಮುಸಾಫಿರ್‌ಖಾನೆಯಲ್ಲಿ ಬಿಡಾರಕ್ಕೆ ವ್ಯವಸ್ಥೆಯಾಗಿತ್ತು. ಕಾರೊನೇಶನ್ ಭವನದ ಮುಂದೆ ವಿಶಾಲ ಮೈದಾನದಲ್ಲಿ ಮಹಾತ್ಮರನ್ನು ಸ್ವಾಗತಿಸುವ ದಕ್ಷ್ಮಾ ನಿಧಿಯ ಅರ್ಪಣೆಗೂ ವ್ಯವಸ್ಥೆ ಆಗಿತ್ತು. ಹಾಸನದಲ್ಲಿ ಅಷ್ಟು ದೊಡ್ಡ ಸಭೆ ಹಿಂದೆ ಆಗಲೀ ಈಚೆಗೆ ಆಗಲೀ ಸೇರಿದುದಿಲ್ಲ. ಗಾಂಧೀಜಿಯ ಭಾಷಣವನ್ನು ಗಂಗಾಧರರಾವ್ ದೇಶಪಾಂಡೆಯವರು ಕನ್ನಡಕ್ಕೆ ಅನುವಾದ ಮಾಡಿದರು. ಗಾಂಧೀಜಿ ಎಷ್ಟು ಶಾಂತರಾಗಿ ಮಾತನಾಡುತ್ತಿದ್ದರೋ ಅಷ್ಟು ರಭಸದಿಂದ ಗಂಗಾಧರರಾಯರು ಮಾತನಾಡುತ್ತಿದ್ದರು. ಮಹಾತ್ಮರು ಒಂದು ಮಾತಿನಲ್ಲಿ ಹೇಳಿದುದನ್ನು ಗಂಗಾಧರರಾಯರು ನೂರು ಮಾತುಗಳಲ್ಲಿ ವಿವರಿಸುತ್ತಿದ್ದರು. ಭಾರತಕ್ಕೆ ಆಂಗ್ಲೇಯರಿಂದಾದ ಕಷ್ಟನಷ್ಟ, ನೈತಿಕ ಅವನತಿಗಳನ್ನು ವಿವರಿಸುವಾಗ ಅವರ ಮುಖ ಕೆಂಪಾಗಿ ಆ ವೇಳೆಯಲ್ಲಿ ಅವರ ಮೀಸೆಯ ತುದಿಗೆ ಬೆಂಕಿಕಡ್ಡಿ ಹಿಡಿದರೆ, ಅದು ಹತ್ತಿಕೊಳ್ಳುತ್ತದೋ ಎಂಬಂತೆ ತೋರುತ್ತಿದ್ದಿತು. ಜನರು ಗಾಂಧಿಯವರ ದರ್ಶನವನ್ನು ಹೇಗೆ ಮರೆಯುವುದಿಲ್ಲವೋ ಹಾಗೆಯೇ ಗಂಗಾಧರರಾಯರ ಭಾಷಣ ದರ್ಶನಗಳನ್ನೂ ಮರೆಯುವುದಿಲ್ಲ.

ಆ ಸಂಜೆ ಮತ್ತೆ ಅದೇ ಸ್ಥಳದಲ್ಲಿ ರಾಜಗೋಪಾಲಾಚಾರಿಯವರ ಭಾಷಣವಾಗಿ ಅವರ ಭಾಷಣದ ವಿಷಯವೂ ಹರಿಜನೋದ್ಧಾರವೇ. ಮರುದಿನ ಮೋಟಾರಿನಲ್ಲಿ ಗಾಂಧೀಜಿ ಹೊಳೆನರಸೀಪುರಕ್ಕೆ ಹೋದರು. ಕಾರೊನೇಶನ್ ಕಟ್ಟಡದ ಎದುರಿಗಿರುವ ಭಾರಿ ಮೈದಾನದಲ್ಲಿ ಸೊಗಸಾದ ಚಪ್ಪರ, ವೇದಿಕೆಗಳನ್ನು ಏರ್ಪಡಿಸಿದ್ದರು.

1930ರ ಉಪ್ಪಿನಸತ್ಯಾಗ್ರಹ ಕಾಲಕ್ಕೂ ಜಿಲ್ಲೆಯಲ್ಲಿ ಚಳವಳಿ ಉಲ್ಬಣವಾಯಿತು. ಪರದೇಶೀವಸ್ತ್ರ ಬಹಿಷ್ಕಾರ ಆಗಿನ ಮುಖ್ಯ ಕಾರ್ಯವಾಗಿದ್ದರೂ ಹಾಸನವೇ ಮುಂತಾದ ಅನೇಕ ಸ್ಥಳಗಳಲ್ಲಿ ಪರದೇಶೀವಸ್ತ್ರ ಬಹಿಷ್ಕಾರ, ಪಾನನಿರೋಧ, ಹಿಂದೂ-ಮುಸ್ಲಿಂ ಐಕ್ಯ, ಅಸ್ಪೃಶ್ಯತಾನಿವಾರಣೆ ಈ ಎಲ್ಲ ಕಾರ್ಯಗಳು ಭರದಿಂದ ಸಾಗಿದವು. 1939ರಲ್ಲಿ ಅರಸೀಕೆರೆಯಲ್ಲಿ ಅರಣ್ಯಸತ್ಯಾಗ್ರಹ ತುಂಬ ಉಗ್ರರೂಪ ತಾಳಿತು. ಅರ್ಕಲಗೂಡಿನ ಎ. ವೆಂಕಟರಾಮಯ್ಯ ವೇದಾರಣ್ಯ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ಸೇರಿದರು. ಬ್ರಿಟಿಷ್ ಕರ್ನಾಟಕದ ವೈಯಕ್ತಿಕ ಸತ್ಯಾಗ್ರಹದಲ್ಲಿ ಗೊರೂರು ಸಂಪತ್ತಯ್ಯಂಗಾರ್ಯರು ಭಾಗವಹಿಸಿ ಸೆರೆ ಕಂಡರು.

1942ರಲ್ಲಿ ಹಾಸನ ಜಿಲ್ಲೆಯಲ್ಲಂತೂ ಚಳವಳಿ ಅತ್ಯಂತ ವ್ಯಾಪಕವಾದ ರೀತಿಯಲ್ಲಿ ಬೆಳೆಯಿತು. ಹಾಸನ ಜ್ಯೂಬಿಲಿ ಮೈದಾನದಲ್ಲಿ ಪ್ರತಿ ಸಂಜೆಯೂ ಬಹಿರಂಗ

ಸಭೆ ನಡೆಯುತ್ತಿದ್ದಿತು. ಪಾನನಿರೋಧ ಮತ್ತು ಸಂತೆಸುಂಕ ಪ್ರತಿಭಟನೆ ಇವು ಈ ಜಿಲ್ಲೆಯ ಅತಿಮುಖ್ಯವಾದ ಮತ್ತು ಅತಿವ್ಯಾಪಕವಾದ ಚಟುವಟಿಕೆಗಳಾದವು. ಪ್ರತಿಯೊಂದು ಸಂತೆಯಲ್ಲಿ ಜನ ಸುಂಕವನ್ನು ಕೊಡಲು ನಿರಾಕರಿಸಿದರು. ಎರಡೇ ವಾರದೊಳಗೆ ಹಳ್ಳಿಗೆಲ್ಲ ಹರಡಿ ಮೂರನೆಯ ವಾರ ಇಡೀ ಜಿಲ್ಲೆಯ ಯಾವ ಸಂತೆಯಲ್ಲಿಯೂ ಜನ ಸುಂಕವನ್ನೇ ಕೊಡಲಿಲ್ಲ. ಬುದ್ಧಿಕೆಟ್ಟ ಅಧಿಕಾರಿಗಳು ಪ್ರತಿ ಸಂತೆಯಲ್ಲೂ ಲಾಠೀ ಚಾರ್ಜ್ ಮಾಡಿ ತಾಲ್ಲೂಕು ಲಾಕಪ್ ಹಿಡಿಸುವಷ್ಟು ಜನರನ್ನು ತಂದು ಕೂಡಿಹಾಕಿ ಒಂದೆರಡು ದಿನ ಬಡಿದು ಬಿಡುತ್ತಿದ್ದರು. ಹೆಚ್ಚಿಗೆ ಆದ 'ಅಪರಾಧಿ'ಗಳನ್ನು ಸಾವಿರಾರು ಸಂಖ್ಯೆಯಲ್ಲಿ ಹಾಸನದ ಸೆರೆಮನೆಗೇ ಹಿಡಿದು ತಂದು ಸೇರಿಸುತ್ತಿದ್ದರು. ಅನೇಕ ತಿಂಗಳು ಯಾವ ಸಂತೆಯಲ್ಲಿಯೂ ಸರ್ಕಾರಕ್ಕೆ ಸುಂಕವೇ ವಸೂಲಾಗಲಿಲ್ಲ. ಈ ಜಿಲ್ಲೆ ಇದರ ಜೊತೆ ಮತ್ತೊಂದು ಅಂಶದಲ್ಲಿಯೂ ಇಡೀ ದೇಶಕ್ಕೆ ಮಾಗದರ್ಶನ ಮಾಡಿತು. ಪ್ರಥಮವಾಗಿ ಈ ಜಿಲ್ಲೆಯಲ್ಲಿ ಸಾಮೂಹಿಕವಾಗಿ ಅನೇಕ ಪಟೇಲರು ತಮ್ಮ ಉದ್ಯೋಗಕ್ಕೆ ರಾಜೀನಾಮೆ ಕೊಟ್ಟರು. ಹಳ್ಳಿಗಳಿಗೆ ಹೆಂಡದ ಲಾರಿ ಹೋಗುವುದನ್ನು ತಡೆದು ನಿಲ್ಲಿಸಿ ವಾರಗಟ್ಲೆ ಹೆಂಡ ಊರೊಳಗೆ ಪ್ರವೇಶಿಸದಂತೆ ಊರ ಜನ ಮಾಡಿದರು.

1947ರಲ್ಲಿ ಸ್ವರಾಜ್ಯ ದೊರಕಿತು. ಆದರೆ ಇಜ್ಜೋಡು ಗುಲಾಮಗಿರಿಯನ್ನು ಅನುಭವಿಸುತ್ತಿದ್ದ ದೇಶೀಯ ಸಂಸ್ಥಾನಗಳಲ್ಲಿ ಜವಾಬ್ದಾರೀ ಸರಕಾರ ದೊರೆಯಲಿಲ್ಲ. 'ಕುದುರೆಗಿಂತ ಲದ್ದಿ ಬಿರುಸು' ಎಂಬಂತೆ ಬ್ರಿಟಿಷರ ಆಳ್ವಿಕೆ ಹೋದರೂ ನಮ್ಮ ರಾಜರು ನಮ್ಮ ಮೇಲಿನ ಉಕ್ಕಿನ ಹಿಮ್ಮುಡಿಯನ್ನು ಸಡಲಿಸಲಿಲ್ಲ. ಮತ್ತೊಂದು ಚಳವಳಿ ಸಹ ಅನಿವಾರ್ಯವಾಯಿತು. ಬ್ರಿಟಿಷ್ ಸರಕಾರದ ದಬ್ಬಾಳಿಕೆಯ ಇನ್ನೂ ಹೆಚ್ಚು ಕ್ರೂರ ಪುನರವತರಣ ಆಗ ಆಯಿತು. ಈ ಜಿಲ್ಲೆಯ ಇಬ್ಬರು ಬಾಲಕರು ರಾಮಚಂದ್ರ ಮತ್ತು ರಾಮಸ್ವಾಮಿ ಪೋಲಿಸರ ಗೋಳಿಬಾರಿಗೆ ಸಿಕ್ಕಿ ಮಡಿದು ಹುತಾತ್ಮರಾದರು. (ರಾಮಚಂದ್ರ ಮಾನ್ಯ ಲೇಖಕರ ಮಗ; ತುಮಕೂರಲ್ಲಿ ಅಸುನೀಗಿದ. ರಾಮಸ್ವಾಮಿ ಬಾಣಾವರದವನು; ಮೈಸೂರಲ್ಲಿ ತೀರಿಕೊಂಡ. ಇವನ ಸ್ಮಾರಕವಾಗಿ ಈಗ ಮೈಸೂರಲ್ಲಿ ರಾಮಸ್ವಾಮಿ ಸರ್ಕಲ್ ಇದೆ—ಸಂ||).

## ಸ್ವವಿಷಯ

1904ರಲ್ಲಿ ಜನಿಸಿದ ನಾನು 1921ರಲ್ಲಿ ಅಸಹಕಾರದ ಕರೆಯಂತೆ, ಹಾಸನದಲ್ಲಿ ಎಸ್.ಎಸ್.ಎಲ್.ಸಿ. ಶಿಕ್ಷಣ ತ್ಯಜಿಸಿ ಅಹಮ್ಮದಾಬಾದಿಗೆ ಹೋಗಿ ಸಾಬರಮತಿ ಆಶ್ರಮ ಸೇರಿದೆ. ಗುಜರಾತ್ ವಿದ್ಯಾಪೀಠದಲ್ಲಿ ಶಿಕ್ಷಣ ನಡೆಸಿದೆ. ಕೆಲವರ್ಷಗಳಲ್ಲಿ ಗೊರೂರಿಗೆ ಮರಳಿ ಖಾದೀ ಕೇಂದ್ರ ಸ್ಥಾಪಿಸಿದೆ. 1929ರಲ್ಲಿ ಕೇಂಗೇರಿ ಗುರುಕುಲ ಆಶ್ರಮ ಸೇರಿ ಗ್ರಾಮಪುನಶ್ಚೇತನ ಕಾರ್ಯಕ್ರಮ ಕೈಗೊಂಡೆ. 1930ರಲ್ಲಿ ಅ.ಭಾ. ಚರಖಾ ಸಂಘದ ಬೆಂಗಳೂರು ವಸ್ತ್ರಾಲಯದಲ್ಲಿ ಮ್ಯಾನೇಜರ್ ಆಗಿ ಸೇರಿದೆ,

1938ರ ವರೆಗೆ ಖಾದಿ ತಯಾರಿ, ಪ್ರಚಾರ, ವ್ಯಾಪಾರಗಳಲ್ಲಿ ತೊಡಗಿದ್ದೆ. 1939ರಲ್ಲಿ ಗೌರೂರಿಗೆ ಬಂದು ಎ.ಐ.ವಿ.ಐ.ಎ. ಶಾಖೆಯೊಂದನ್ನು ತೆರೆದು ಅಲ್ಲಿ ಖಾದಿ, ಕೈಕಾಗದ, ಎಣ್ಣೆಗಾಣ, ಚಾಪೆ, ಕೊಟ್ಟಣದ ಅಕ್ಕಿ ತಯಾರಿ, ಗಾಂಧೀಜಿಯವರ 18 ಅಂಶದ ಕಾರ್ಯಕ್ರಮ ನಡೆಸುತ್ತಿದ್ದೆವು. ಮೈಸೂರು ಕಾಂಗ್ರೆಸ್ಸಿನ ಗ್ರಾಮೋದ್ಯೋಗ ವಿಭಾಗದ ಹೊಣೆಗಾರಿಕೆಯನ್ನು ನಿರ್ವಹಿಸುತ್ತಿದ್ದೆ. ಎಲ್ಲ ಕಾಂಗ್ರೆಸ್ ಪ್ರದರ್ಶನಗಳಲ್ಲಿಯೂ ಗ್ರಾಮೋದ್ಯೋಗಭಾಗದ ಪ್ರಯೋಗಪ್ರದರ್ಶನ ನಡೆಸುತ್ತಿದ್ದೆ. 1942ರಲ್ಲಿ ಬಂಧಿತನಾಗಿ 15 ತಿಂಗಳು ಪೂರ್ತಿ ಕಾರಾಗೃಹವಾಸವನ್ನು ಅನುಭವಿಸಿದೆ. ಬಿಡುಗಡೆಯನಂತರ ಗೌರೂರಿಗೇ ಮರಳಿ ಗ್ರಾಮಪುನರುಜ್ಜೀವನದ ಕಾರ್ಯದಲ್ಲಿ ತೊಡಗಿದೆ. 1947ರಲ್ಲಿ 'ಪ್ಯಾಲೇಸ್ ಚಲೋ' ಚಳವಳಿ ಸೇರಿ ಸೆಪ್ಟೆಂಬರ್‌ನಲ್ಲಿ ಸೆರೆಮನೆ ಕಂಡೆ.

ನನ್ನ ಮಗ ರಾಮಚಂದ್ರ, ಸ್ವಾತಂತ್ರ್ಯ ಹೋರಾಟದಲ್ಲಿ ತುಮಕೂರಿನಲ್ಲಿ ಪೋಲಿಸರ ಗುಂಡಿನೇಟಿಗೆ ಬಲಿಯಾದನು. "Your son has become a martyr. He will be remembered as long as the glorious freedom fight history will be remembered" ಎಂದು ಗಾಂಧೀಜಿಯವರು ನನಗೆ ಬರೆದರು. ಗಾಂಧೀಜಿಯ ಮೂರು ದ. ಭಾರತ ಪ್ರವಾಸಗಳಲ್ಲೂ ನಾನು ಅವರೊಡನಿದ್ದೆ.

ಪ್ರಾರಂಭದಿಂದಲೂ ಗಾಂಧೀಸಾಹಿತ್ಯ ರಚನೆ, ಇತರ ಕಥೆ, ಕಾದಂಬರಿಗಳನ್ನು ಬರೆಯುತ್ತಿದ್ದೆ. 1942ರ 'ಅನಂತರ ರಾಷ್ಟ್ರೀಯ ಸಾಹಿತ್ಯ ಸಮಿತಿ' ಎಂಬ ಹೆಸರಲ್ಲಿ ರಾಷ್ಟ್ರೀಯ ಸಾಹಿತ್ಯಗ್ರಂಥಗಳನ್ನು ಪ್ರಕಟಿಸಿದೆ. 1930ರಲ್ಲಿ 'ಭಾರತಸ್ವಾತಂತ್ರ್ಯ' ಎಂಬ ಹೆಸರಿನ ಸ್ವಾತಂತ್ರ್ಯಜಾಗೃತಿಯ ಪುಸ್ತಕ ಬರೆದೆ. ಗಾಂಧೀಸಾಹಿತ್ಯದ ಬಹು ಭಾಗ ಕನ್ನಡದಲ್ಲಿ ಅನುವಾದಿಸಿದೆ. ಜೆ. ಸಿ. ಕುಮಾರಪ್ಪ ಪ್ರಕಟಿಸುತ್ತಿದ್ದ ಗ್ರಾಮೋದ್ಯೋಗ ಪತ್ರಿಕೆಯನ್ನು ಕೆಲವು ವರುಷ ಅನುವಾದಿಸಿ ತಿಂಗಳುತಿಂಗಳೂ ಪ್ರಕಟಿಸುತ್ತಿದ್ದೆ. ಗಾಂಧೀಜಿ, ಕಸ್ತೂರ್‌ಬಾ, ಮೌಲಾನಾ ಆಜಾದ್ ಇವರ ಜೀವನಸ್ಮೃತಿಗಳನ್ನು ಬರೆದೆ. 'ಸ್ವಾತಂತ್ರ್ಯವೇ ಧರ್ಮ', 'ಮಹಾದೇವ ದೇಸಾಯಿ', 'ಭಾರತಭಾಗ್ಯವಿಧಾತಾ' (ಗಾಂಧೀಚರಿತ್ರೆ), 'ಗ್ರಾಮಕೈಗಾರಿಕೆಗಳು', 'ಪೂರ್ಣ ಸ್ವದೇಶಿ' ಮುಂತಾದ ಗ್ರಂಥಗಳನ್ನು ಪ್ರಕಟಿಸಿದೆ. ಗಾಂಧೀ ಸ್ಮಾರಕ ನಿಧಿಯವರು ರಚಿಸಿದ ಸಮಗ್ರ ಗಾಂಧೀ ಗ್ರಂಥಮಾಲೆಯ ಸಂಪಾದಕ ಮಂಡಳಿಯಲ್ಲಿ ಮೊದಲಿನಿಂದ ಕೊನೆಯವರೆಗೆ ಕೆಲಸ ಮಾಡಿದೆ. ಗಾಂಧೀಜಿಯ ಆತ್ಮಚರಿತ್ರೆಯೂ ಸೇರಿದಂತೆ ನಾಲ್ಕು ಗ್ರಂಥಗಳನ್ನು ಆ ಮಾಲೆಗೆ ಅನುವಾದಿಸಿ ಕೊಟ್ಟಿದ್ದೇನೆ. ಇವುಗಳಲ್ಲದೆ ಕಥೆ, ಕಾದಂಬರಿ, ಹಾಸ್ಯ ಚಿತ್ರಗಳು ಮುಂತಾದ 50 ಗ್ರಂಥಗಳನ್ನು ಬರೆದಿದ್ದೇನೆ.

ಪ್ರಥಮ ವಿಧಾನಪರಿಷತ್ತಿಗೆ 1952ರಲ್ಲಿ ನನ್ನನ್ನು ನಾಮಕರಣಮಾಡಿ, ಅದರ ಸದಸ್ಯನಾಗಿ 12 ವರ್ಷ ಇದ್ದೆ. ನನ್ನ ಕತೆಗಳು ತಮಿಳು, ಹಿಂದಿ, ರಷ್ಯನ್ ಭಾಷೆಗೆ

ಅನುವಾದವಾಗಿವೆ. 1974ರಲ್ಲಿ ಮೈಸೂರು ವಿಶ್ವವಿದ್ಯಾಲಯ ನನಗೆ ಗೌರವ ಡಿ.ಲಿಟ್. ಪದವಿ ನೀಡಿತು.

**ಗೊರೂರು ರಾಮಸ್ವಾಮಿ ಅಯ್ಯಂಗಾರ್**
ಗೊರೂರು, ಜಿ॥ ಹಾಸನ

ಮೈ.ಹಾ. 2

## ಹಾರನಹಳ್ಳಿ ರಾಮಸ್ವಾಮಿ

ಜನನ : 1921 ಉದ್ಯೋಗ : ವಕೀಲ ವಿಳಾಸ : ಹಾಸನ



ಚಿಕ್ಕಂದಿನಲ್ಲಿ ಅಜ್ಜ ಕಲ್ಯಾಡಿ ರಂಗಪ್ಪನವರಲ್ಲಿ ವಾಸ ವಿದ್ದಾಗ ಅವರು ನಮ್ಮ ಸಂಸ್ಕೃತಿಯ ಔನ್ನತ್ಯ, ಪರ ದೇಶದವರಿಂದ ಆಗುತ್ತಿದ್ದ ಅನ್ಯಾಯಗಳನ್ನು ತಿಳಿಸು ತ್ತಿದ್ದರು. ಹೈಸ್ಕೂಲು ತರಗತಿಗೆ ಸೇರಿದಾಗ ನಮ್ಮ ಪಕ್ಕದ ಹಳ್ಳಿಯ ದಿ॥ ಡಿ. ವಿ. ರಾಮಸ್ವಾಮಿಯವರ ಪ್ರಭಾವ ಆಯಿತು. ಅವರು ಮೈಸೂರು ರಾಜ್ಯದ ಪ್ರಮುಖ ಕಾಂಗ್ರೆಸ್ ಮುಂದಾಳಾಗಿದ್ದವರು; ನನ್ನೊ ಡನೆ ಅನೇಕ ಬಾರಿ ಚರ್ಚೆ ನಡೆಸಿ ರಾಷ್ಟ್ರೀಯ ಭಾವನೆ ಗಳನ್ನು ತುಂಬಿದರು.

ಇದೇ ಸಮಯದಲ್ಲಿ ಟಿ. ಸಿದ್ದಲಿಂಗಯ್ಯನವರು ಅಮೆರಿಕಾಕ್ಕೆ ಹೋಗಿ ಅಲ್ಲಿಂದ ಪ್ರಸಿದ್ಧ ತತ್ವಶಾಸ್ತ್ರಜ್ಞ ಹಾಗೂ ಇತಿಹಾಸಕಾರ ವಿಲ್ ಡ್ಯೂರಾಂಟ್ ಭಾರತದ ರಾಷ್ಟ್ರೀಯ ಆಂದೋಲನದ ಬಗ್ಗೆ ಬರೆದಿದ್ದ ಪುಸ್ತಕ ಒಂದನ್ನು ತಂದು ಪುನರ್ ಮುದ್ರಣ ಮಾಡಿಸಿದ್ದರು. ಮುಂದೆ ಈ ಪುಸ್ತಕ ಸರ್ಕಾರದಿಂದ ಮುಟ್ಟುಗೋಲು ಹಾಕಲ್ಪಟ್ಟಿತು; ನನ್ನ ಮೇಲೆ ಈ ಪುಸ್ತಕ ಹೆಚ್ಚಿನ ಪ್ರಭಾವ ಬೀರಿತು. 1937ರಿಂದ 1940ರ ವರೆಗೆ ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಸಭೆ, ಮೆರವಣಿಗೆ ಮುಂತಾದವುಗಳಲ್ಲಿ ಭಾಗ ವಹಿಸಿದೆ. ಆ ಕಾಲದಲ್ಲಿ ಹಾಸನಕ್ಕೆ ಬಂದಿದ್ದ ರಾಷ್ಟ್ರೀಯ ಮುಖಂಡರಾದ ಡಾ॥ ಪಟ್ಟಾಭಿ ಸೀತಾರಾಮಯ್ಯನವರ ಭಾಷಣ ಹೆಚ್ಚು ಪ್ರಭಾವ ಬೀರಿತು.

ನಮ್ಮ ಗ್ರಾಮ ಹಾರನಹಳ್ಳಿ (ಅರಸೀಕೆರೆ ತಾಲ್ಲೂಕು) ಮೊದಲಿನಿಂದ ರಾಷ್ಟ್ರೀಯ ಚಟುವಟಿಕೆಗೆ ಹೆಸರಾದ ಊರು. 1937ರಲ್ಲಿ ಹಾಸನಕ್ಕೆ ಮಹದೇವ ದೇಸಾಯಿ

ಬಂದಿದ್ದಾಗ ಹಾರನಹಳ್ಳಿಯಿಂದ ಹೆಂಗಸರು ಗಂಡಸರು ಆದಿಯಾಗಿ ಎರಡುನೂರು ಜನ ಬಂದು ಸಭೆ, ಮೆರವಣಿಗೆಯಲ್ಲಿ ಭಾಗವಹಿಸಿ ಮಹದೇವಭಾಯಿಯವರ ಮೆಚ್ಚುಗೆ ಗಳಿಸಿದರು. ಈ ಗ್ರಾಮದ ಮುನಿಸಿಪಾಲಿಟಿಯಲ್ಲಿ ಸ್ವಾತಂತ್ರ್ಯ ಘೋಷಣೆ ನಿರ್ಣಯ ಮಾಡಿದ್ದರಿಂದ ಸರ್ಕಾರದವರು ಪುರಸಭೆಯನ್ನು ಕಿತ್ತುಹಾಕಿದರು.

ಗ್ರಾಮದ ಪ್ರಮುಖ ಹಿರಿಯರಾದ ನಮ್ಮ ಸೋದರಮಾವ ಶಾನುಭೋಗ ಸೀತಾ ರಾಮಯ್ಯನವರು ತಮ್ಮ ದಫ್ತರವನ್ನು ಸರ್ಕಾರಕ್ಕೆ ವಾಪಸು ಮಾಡಿ ನೌಕರಿ ತ್ಯಜಿಸಿ ದರು. ಪ್ರತಿ ಚಳವಳಿಯಲ್ಲೂ (1930 ರಿಂದ 1947ರ ವರೆಗೆ) ಇವರೇ ಪ್ರಮುಖರಾಗಿ ಗ್ರಾಮದ ನೂರಾರು ಜನ ಭಾಗವಹಿಸಿದರು. ಸೇಂದಿ ಅಂಗಡಿ ಪಿಕೆಟಿಂಗ್, ಈಚಲ ಮರ ಕಡಿದುಹಾಕುವುದು, ಅರಣ್ಯಸತ್ಯಾಗ್ರಹ ಇತ್ಯಾದಿ ಕಾರ್ಯಕ್ರಮಗಳು ನಡೆದವು. ಗ್ರಾಮದ ಇತರ ಕಾರ್ಯಕರ್ತರೆಂದರೆ ದಿವಂಗತರಾದ ಎಚ್. ರಾಮಯ್ಯ, ವೆಂಕಟ ರಾಮಯ್ಯ, ಮುದ್ದುರಂಗನಾಯ್ಕ, ಎಚ್. ಎಸ್. ಕೃಷ್ಣಮೂರ್ತಿ ಮತ್ತು ಹಾಲಿ ಇರುವ ಎಚ್. ಎಸ್. ದ್ಯಾವರಯ್ಯ, ಎಚ್. ಎನ್. ಕೃಷ್ಣಪ್ಪ, ನಾರಾಯಣಾಚಾರ್, ಬೋರಪ್ಪ ಮುಂತಾದವರು.

1938ರಲ್ಲಿ ತಿಪಟೂರಿನಲ್ಲಿ ಸಭೆ, ಮೆರವಣಿಗೆಯಲ್ಲಿ ಭಾಗವಹಿಸಿದೆ. ಅಂದಿನಿಂದಲೇ ಖಾದಿ ಮತ್ತು ಸ್ವದೇಶಿ ವ್ರತಗಳ ಸತತವಾದ ಪರಿಪಾಲನೆ ಮಾಡುತ್ತ ಬಂದೆ. 1942ರಲ್ಲಿ 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಪೂರ್ಣ ಭಾಗವಹಿಸಿದೆ. ಇಂಟರ್‌ಮೀಡಿ ಯೆಟ್ ತರಗತಿಯಲ್ಲಿ ತುಮಕೂರಿನಲ್ಲಿದ್ದವನು ತರಗತಿ ಬಿಟ್ಟು ಹಾರನಹಳ್ಳಿ ಗ್ರಾಮಕ್ಕೆ ಬಂದು ಅದನ್ನು ಕೇಂದ್ರವಾಗಿಟ್ಟುಕೊಂಡು ಅರಸೀಕೆರೆ, ಹಾಸನ, ಮೈಸೂರು ಮುಂತಾದ ಎಲ್ಲಾ ಕಡೆಯ ವಿದ್ಯಾರ್ಥಿಗಳ ಸಂಪರ್ಕಹೊಂದಿ ತೀವ್ರವಾದ ಚಳವಳಿ ಮಾಡಿದೆ. 1942ನೇ ಸೆಪ್ಟೆಂಬರ್‌ನಲ್ಲಿ ಅರಸೀಕೆರೆ ಸುತ್ತಮುತ್ತ ವಿಧ್ವಂಸಕ ಕೃತ್ಯ—ಟೆಲಿಫೋನ್ ತಂತಿ ಕತ್ತರಿಸುವುದು, ರೈಲ್ವೆ ಸೇತುವೆ ಒಡೆಯುವ ಯತ್ನ—ನಡೆಯಿತು.

ಹಾಸನ ತಾಲ್ಲೂಕು ಸೊಪ್ಪಿನಹಳ್ಳಿ ಗ್ರಾಮದ ಸುತ್ತಮುತ್ತ 30-40 ಹಳ್ಳಿಗಳಲ್ಲಿ ಪ್ರಜಾರಾಜ್ಯ ಘೋಷಿಸಲಾಯಿತು. ಆ ಪ್ರದೇಶಕ್ಕೆ ಪೋಲೀಸರು ಪ್ರವೇಶಿಸುವಂತೆಯೇ ಇರಲಿಲ್ಲ. ಗಂಗೂರು ಗ್ರಾಮಕ್ಕೆ ಪೋಲಿಸರ ಪ್ರವೇಶವಾಗಿ ಘರ್ಷಣೆಯಲ್ಲಿ ಗೋಲೀಬಾರ್ ನಡೆದು ಒಬ್ಬನ ಸಾವಾಯಿತು. ಎರಡು ತಿಂಗಳುಗಳ ಕಾಲ ಭೂಗತವಾಗಿದ್ದು ಹಾಸನ ಜಿಲ್ಲೆಯನ್ನೆಲ್ಲ ವ್ಯಾಪಿಸಿ, ತೀವ್ರವಾದ ಚಳವಳಿ ನಡೆಸಿದೆ. ಸರ್ಕಾರ ಪೋಲಿಸ್ ಜಾಲ ವನ್ನೇ ಹರಡಿದರೂ ಅವರ ವಶನಾಗಲಿಲ್ಲ. ಈ ನಡುವೆ ಹಾಸನದಲ್ಲಿ ಬಹಿರಂಗ ಸಭೆಯಲ್ಲಿ ಭಾಷಣಮಾಡಿದೆ. ಪೋಲಿಸರಿಗೆ ತಿಳಿದು ಅವರು ಹಿಡಿಯುವಷ್ಟರಲ್ಲಿ ತಪ್ಪಿಸಿಕೊಂಡು ಆಗಿನ ಪ್ರಸಿದ್ಧ ಪತ್ರಿಕೋದ್ಯಮಿಗಳೂ ಅಡ್ವೋಕೇಟರೂ ಆಗಿದ್ದ ಸಿ. ಎಸ್. ಕೃಷ್ಣಪ್ಪ ನವರ ಮನೆಯಲ್ಲಿ ತಲೆಮರೆಸಿಕೊಂಡಿದ್ದು, ಕೊನೆಗೆ ಅರಸೀಕೆರೆಯಲ್ಲಿ ಬಂಧಿತನಾದೆ. ನಾಲ್ಕು ತಿಂಗಳು ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿ ಡೆಟನ್ಯೂ ಆಗಿದ್ದೆ.

ತುರಂಗದಿಂದ ಬಂದು ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಪ್ರವೇಶಿಸಿದೆ. 1943-44ರಲ್ಲಿ ಕಮ್ಯುನಿಸ್ಟರ ಕೈಗೊಂಬೆಯಾಗಿದ್ದ, ರಾಜ್ಯದ ವಿದ್ಯಾರ್ಥಿ ಫೆಡರೇಶನ್ ಅನ್ನು ಭಿನ್ನಮಾಡಿ, ಮೈಸೂರು ಸಂಸ್ಥಾನದ ವಿದ್ಯಾರ್ಥಿ ಕಾಂಗ್ರೆಸ್ ಸ್ಥಾಪಿಸಿದೆವು. ಅದರಲ್ಲಿ ವಿ. ಎಸ್. ಕೃಷ್ಣಯ್ಯರ್, ಮೈಸೂರು ಶ್ರೀಕಂಠಪ್ಪ, ಡಾ|| ಸೋಗಾಲ್ ನಾಗಭೂಷಣ ಮುಂತಾದ ಅನೇಕ ಪ್ರಮುಖರಿದ್ದರು: ನಾನೇ ಅಧ್ಯಕ್ಷನಾದೆ; ಸೋಗಾಲ್ ನಾಗಭೂಷಣ ಕಾರ್ಯದರ್ಶಿ. ಪ್ರಥಮ ಸಮ್ಮೇಳನವನ್ನು ಪ್ರೊಫೆಸರ್ ಎನ್. ಜಿ ರಂಗಾ ಅವರ ಅಧ್ಯಕ್ಷತೆಯಲ್ಲಿ ಅರಳೇಪೇಟೆ ಕಾಂಗ್ರೆಸ್ ಭವನದಲ್ಲಿ ನಡೆಸಿದೆವು. ಈ ವಿದ್ಯಾರ್ಥಿ ಚಳವಳಿಗೆ ಕರ್ನಾಟಕದ ಸಮಗ್ರರೂಪವನ್ನು ಕೊಟ್ಟು 1945ರಲ್ಲಿ ಧಾರವಾಡ, 1946ರಲ್ಲಿ ಶಿವಮೊಗ್ಗಗಳಲ್ಲಿ ಪ್ರಾಂತೀಯ ಸಮ್ಮೇಳನಗಳನ್ನು ನಡೆಸಿದೆವು. ಪ್ರಾಂತೀಯ ವಿದ್ಯಾರ್ಥಿ ಕಾಂಗ್ರೆಸ್ಸಿಗೆ ನಾನೇ ಪ್ರಧಾನ ಕಾರ್ಯದರ್ಶಿಯಾಗಿದ್ದೆ. ನಮ್ಮ ಜೊತೆಗೆ ಬೆಳಗಾಂವಿಯ ವಿ. ಎ. ಕುಲಕರ್ಣಿ, ಆರ್. ಎಚ್. ಕುಲಕರ್ಣಿ, ಶಂಕರ ಡಂಗ್, ಕಾರವಾರದ ಎಸ್. ಕೆ. ಪೈ, ಧಾರವಾಡದ ಶಂಕರ ಕುರ್ತಕೋಟಿ, ಶಿವಮೊಗ್ಗದ ಜಿ. ಎಂ. ಜವಳಿ, ಹೊಳೆನರಸೀಪುರದ ಜಿ. ಪಿ. ಕೃಷ್ಣರಾವ್, ನಾಡಿಗ ಕೃಷ್ಣಮೂರ್ತಿ, ಕೆ. ವಿ. ವಸಂತಯ್ಯ ಮುಂತಾದ ಪ್ರಮುಖರಿದ್ದರು. ಈ ರೀತಿ ನಾಡಿನಾದ್ಯಂತ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯ ಜಾಗೃತಿ ಮಾಡಲಾಯಿತು.

1946-47ರಲ್ಲಿ ಬೆಳಗಾವಿಯಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಕರ್ನಾಟಕದ ಪ್ರಾಂತೀಯ ಕಾಂಗ್ರೆಸ್ ಸೇವಾದಳದ ದಂಡನಾಯಕ (ಜಿ.ಒ.ಸಿ.) ಆಗಿ ನೇಮಕಗೊಂಡೆ. ದೆಹಲಿಯಲ್ಲಿ ಒಂದು ತಿಂಗಳ ಶಿಬಿರದಲ್ಲಿ ಭಾಗವಹಿಸಿದೆ. ಕರ್ನಾಟಕದ ನಾನಾ ಜಿಲ್ಲೆಗಳಲ್ಲಿ ಶಿಕ್ಷಣ ಶಿಬಿರಗಳನ್ನೇರ್ಪಡಿಸಿದೆ. 1947ರಲ್ಲಿ ಸೇವಾದಳದ ದಂಡನಾಯಕನಾಗಿ ಡಾ|| ಹರ್ಡೀಕರರೊಡನೆ ಗಾಂಧೀಜಿಯನ್ನು ಭೇಟಿಯಾದೆ. ದೆಹಲಿಯ ಭಂಗಿ ಕಾಲೊನಿಯಲ್ಲಿ ಗಾಂಧೀಜಿಯವರಿಗೆ ಡಾ|| ಹರ್ಡೀಕರ್, "ಇವನು ನಮ್ಮ ಕರ್ನಾಟಕ ಸೇವಾದಳದ ಜಿ.ಒ.ಸಿ." ಎಂದು ಪರಿಚಯ ಮಾಡಿಸಿದರು. ಗಾಂಧೀಜಿ ನಗುತ್ತಾ, "ಓ! ದಂಡನಾಯಕನೇ ? ನಾನಾದರೋ ಇನ್ನೂ ಸ್ವಯಂಸೇವಕನಾಗಿಯೇ ಇದ್ದೇನೆ" ಎಂದು ಹಾಸ್ಯದ ಚಟಾಕಿ ಹಾರಿಸಿ ನಂತರ ಆಶೀರ್ವದಿಸಿದರು.

ಈ ನಡುವೆ 1947ರಲ್ಲಿ ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರ್ಕಾರ ಚಳವಳಿ ಪ್ರಾರಂಭವಾಯಿತು. ಹುಬ್ಬಳ್ಳಿಯಲ್ಲಿದ್ದ ನಾನು ಹಾಸನಕ್ಕೆ ಬಂದು, ಅದನ್ನೇ ಕೇಂದ್ರವಾಗಿಟ್ಟುಕೊಂಡು ತೀವ್ರವಾದ ಚಳವಳಿ ನಡೆಸಿದೆವು. ಒಂದು ತಿಂಗಳ ಕಾಲ ಸಭೆ ಮೆರವಣಿಗೆ ನಡೆಸಿದೆವು; ವಿದ್ಯಾರ್ಥಿಗಳು ಶಾಲಾಕಾಲೇಜುಗಳನ್ನು ತ್ಯಜಿಸಿದರು. ಅನಂತರ ನನ್ನನ್ನು ಅರಸೀಕೆರೆಯಲ್ಲಿ ದಸ್ತಗಿರಿ ಮಾಡಿ ಎರಡು ತಿಂಗಳು ಹಾಸನದ ತುರಂಗದಲ್ಲಿ ಇಟ್ಟರು.

ಸ್ವಾತಂತ್ರ್ಯ ಹೋರಾಟದಲ್ಲಿ ನನಗೆ ಮೊದಲನೇ ಗುರು ಎಂದರೆ ದಿ|| ಡಿ. ವಿ.

ರಾಮಸ್ವಾಮಿಗಳು; ಅವರು ಪ್ರತಿಭಾವಂತ ವಾಗ್ಮಿಗಳು; ಶಿವಪುರ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. 1939ರಲ್ಲಿ ಮೈಸೂರಿನಲ್ಲಿ ಚಳವಳಿ ನಡೆಸಿದಾಗ ಮೂರನೇ ಸರ್ವಾಧಿಕಾರಿಗಳಾಗಿ ನೇಮಕ ಹೊಂದಿ ಕೆಲಸ ಮಾಡಿದರು.

ಅನಂತರ ನನ್ನ ಆದರ್ಶ ಗುರುಗಳೆಂದರೆ ಡಾ|| ಹರ್ಡೀಕರರು. ಅವರು ನನಗೆ ವಿದ್ಯಾರ್ಥಿ ಕಾಂಗ್ರೆಸ್, ಸೇವಾದಳ ಮುಂತಾದ ಎಲ್ಲಾ ಸಂಸ್ಥೆಗಳಲ್ಲೂ ಕೆಲಸಮಾಡಲು ತಿಳಿಸಿದರು. ಮೈಸೂರಿನ ದಿ|| ಬಿ. ಸುಬ್ರಹ್ಮಣ್ಯ, ದಿ|| ಎ. ಜಿ. ರಾಮಚಂದ್ರರಾವ್ ಇವರು ನನ್ನ ಹಿರಿಯರು ಮತ್ತು ದಾರಿದೀಪಕರು.

ಮೈ.ಹಾ. 3

## ಎಚ್. ಕೆ. ಸತ್ಯನಾರಾಯಣ

ಜನನ : ? ಉದ್ಯೋಗ : ವೈದ್ಯ ವಿಳಾಸ : ಹಾಸನ



ನಮ್ಮ ಊರಿನ ಹಿರಿಯರಾದ ದಿ|| ಅಡ್ವೋಕೇಟ್ ಎಚ್. ವಿ. ರಂಗಸ್ವಾಮಿ, ದಿ|| ಎ. ಜಿ. ರಾಮಚಂದ್ರರಾವ್, ದಿ|| ಕಾಳಂ ಭಟ್ಟರು, ಗೊರೂರು ರಾಮಸ್ವಾಮಯ್ಯಂಗಾರ್, ಬಿ. ಎನ್. ಬೋರಣ್ಣಗೌಡ ಹಾಗೂ ಎಚ್. ಸಿದ್ದನಂಜಪ್ಪ ಇವರೆಲ್ಲ ಸೇರಿಕೊಂಡು ನಡೆಸುತ್ತಿದ್ದ ಖಾದಿ ಪ್ರಚಾರ, ಮದ್ಯಪಾನ ನಿರೋಧ, ಅಸ್ಪೃಶ್ಯತಾನಿವಾರಣೆ, ಸರ್ವಮತಸ್ಥರ ಏಕೀಕರಣ, ಜವಾಬ್ದಾರಿ ಸರಕಾರ ಸ್ಥಾಪನೆ ಮುಂತಾದ್ದಕ್ಕೆ ಸಂಬಂಧಿಸಿದ ಚಟುವಟಿಕೆಗಳಿಂದ ನಾನು ಆಕರ್ಷಿತನಾದೆ. ಪ್ರಭಾತ್‌ಫೇರಿಗಳೂ ನನ್ನನ್ನು ಸೆಳೆದವು. ನನ್ನ ಸ್ನೇಹಿತರುಗಳಾದ ಸಿ. ಎಸ್. ಪುಟ್ಟಣ್ಣ, ಜಗದೀಶ್, ರತ್ನರಾಜ್, ಕರಡಣ್ಣಯ್ಯ, ನಾಣಿ ಹಾಗೂ ಇತರರೊಡನೆ ಈ ಚಳವಳಿ ಚಟುವಟಿಕೆಯಲ್ಲಿ ನಾನು ಸೇರಿಕೊಂಡೆನು. ಇಂಥ ಚಟುವಟಿಕೆಯಲ್ಲಿ 1935ರಿಂದ ಸೇರಿದ್ದ ನಾವು ಗಾಂಧೀ ಮೈದಾನದಲ್ಲಿ ಆಗುತ್ತಿದ್ದ ಎಲ್ಲ ಮೀಟಿಂಗ್‌ಗಳಿಗೂ ತಪ್ಪದೆ ಹೋಗುತ್ತಿದ್ದೆವು.

1942ರಲ್ಲಿ ನಮ್ಮ ಊರ ಹತ್ತಿರದ ದಾಸರಕೊಪ್ಪಲಿನಲ್ಲಿ ನಡೆದ ಹೆಂಡದಂಗಡಿ ಪಿಕೆಟಿಂಗ್‌ನಲ್ಲಿ ಪಾಲ್ಗೊಂಡೆವು. ಈ ಪಿಕೆಟಿಂಗ್ ಕಾಲಕ್ಕೆ ಹೆಂಡವನ್ನೆಲ್ಲ ಸುರಿದು ಅಂಗಡಿ ಸುಟ್ಟಿದ್ದರಿಂದ ಲಾಠೀಚಾರ್ಜ್ ಆಯಿತು. ಮುಂದೆ ಈಚಲುಮರ ಕಡಿಯು

ವಾಗ ಗೋಲೀಬಾರ್ ಆಗಿ ಅನೇಕರಿಗೆ ಏಟು ಬಿತ್ತು. ನನ್ನ ಬಂಧನ ಆಗಿ (ಸೆಪ್ಟೆಂಬರ್) ಮೂರು ತಿಂಗಳು ಸಜ ಆಯಿತು. ಜೈಲಿನಲ್ಲಿ ಆಗ ದಿ|| ಎಚ್. ಸಿ. ದಾಸಪ್ಪ, ತಾಳಕೆರೆ, ರಂಗರಾವ್, ಬಿ. ಎನ್. ಬೋರಣ್ಣಗೌಡ ಇವರೆಲ್ಲ ಇದ್ದರು.

1946–47ರಲ್ಲಿ ನಾನು ಹಾಸನ ವಿದ್ಯಾರ್ಥಿ ಕಾಂಗ್ರೆಸ್ ಅಧ್ಯಕ್ಷನಾಗಿದ್ದೆ. ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ನಾನು, ಕೃಷ್ಣಮೂರ್ತಿ, ಬ್ಯೂಗಲ್ ಕೃಷ್ಣಮೂರ್ತಿ, ನಾಣಿ, ಬಸವಾಗಟ್ಟದ ನಂಜಪ್ಪ, ಚಿಕ್ಕೇಗೌಡ, ಕೆ. ಜಿ. ಕರೀಗೌಡ ಇವರೆಲ್ಲ ಜಾಥಾ ಹೊರಟಿರಲು ಹೊಳೇನರಸೀಪುರದ ಬಳಿ ಬಂಧಿಸಿ, ಹೊಳೇನರಸೀಪುರ, ಸಕಲೇಶಪುರ ಜೈಲುಗಳಲ್ಲಿ ಇಟ್ಟರು.

ನಮ್ಮ ಊರಿಗೆ ಒಮ್ಮೆ ರಾಜೇಂದ್ರ ಪ್ರಸಾದರು ಬಂದಾಗ ನಾನು ಮತ್ತು ನಾಣಿ, "ಭಾರತ್ ಹಮಾರಾ ಮಾತಾ। ಹಂ ಬಾಳ ಹೈ ಉಸೀಕಿ ॥ ಉಸ್ಕೇ ಲಿಯೇ ಮರೇಂಗೆ। ಲೇಂಗೆ ಸ್ವರಾಜ್ಯ ಲೇಂಗೆ॥" ಎಂಬ ಲಾವಣಿ ಹೇಳಿದಾಗ ಅವರು ಅದನ್ನು ಬಹಳ ಮೆಚ್ಚಿ ನಮ್ಮನ್ನು ಹುರಿದುಂಬಿಸಿದರು.

ಮೈ.ಹಾ. 4

## ಎಚ್. ವೀರಬಸಪ್ಪ

ಜನನ : ? ಉದ್ಯೋಗ : ? ವಿಳಾಸ : ಅಗ್ರಹಾರ ಕ್ರಾಸ್ ರೋಡ್, ಹಾಸನ



ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಗಾಂಧೀಜಿಯವರ ಭಾಷಣ ಕೇಳಿ ನನ್ನ ಕಪ್ಪು ಟೋಪಿಯನ್ನು ಬೆಂಕಿಗೆ ಹಾಕಿ ಖಾದಿ ಟೋಪಿ ಧರಿಸಿ ಶಾಲೆಗೆ ಹೋಗಲಾರಂಭಿಸಿದೆ. ಶಾಲೆಯಲ್ಲಿದ್ದಾಗ ಅನೇಕ ದೇಶಭಕ್ತರ ಜೀವನಚರಿತ್ರೆ ಓದಿ ಸ್ಫೂರ್ತಿಗೊಂಡೆ. ಮಹದೇವ ದೇಸಾಯಿ, ರಾಜೇಂದ್ರ ಪ್ರಸಾದ್, ಡಾ|| ಹರ್ಡೀಕರ, ದಿವಾಕರ ಮುಂತಾದವರ ಭಾಷಣಗಳಿಂದಲೂ ಪ್ರಭಾವಿತನಾದೆ. ಆಗ ನಮ್ಮ ಊರ ಹಿರಿಯ ಕಾಂಗ್ರೆಸ್ ಕಾರ್ಯಕರ್ತರೆಂದರೆ, ದಿ|| ಎ. ಜಿ. ರಾಮಚಂದ್ರರಾವ್, ಅಡ್ವೊಕೇಟ್ ಅರಕೆರೆ ಸುಬ್ಬರಾಯರು, ಅಡ್ವೊಕೇಟ್ ರಂಗಸ್ವಾಮಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಂಪತ್ತಯ್ಯಂಗಾರ್, ಬೇಲೂರು ಬೋರಣ್ಣ ಗೌಡ, ಕರೀಗೌಡರು, ಗರುಡಶರ್ಮ,

ಮುಂತಾದವರು. ಸಭೆ, ಮೆರವಣಿಗೆಗಳಿಗಲ್ಲದೆ ಚಿತ್ರದುರ್ಗ, ಬೆಂಗಳೂರು, ಮೈಸೂರುಗಳಲ್ಲಿ ನಡೆದ ಸಮ್ಮೇಳನಗಳಿಗೂ ಹೋಗುತ್ತಿದ್ದೆ.

1942ರಲ್ಲಿ ಸಭೆ, ಮೆರವಣಿಗೆ ಪಿಕೆಟಿಂಗ್‌ಗಳಲ್ಲಿ ಭಾಗವಹಿಸಿದೆ. ವಿದ್ಯಾರ್ಥಿಗಳು ಶಾಲೆಗೆ ಹೋಗದಂತೆ, ಲಾಯರುಗಳು ಕೋರ್ಟಿಗೆ ಹೋಗದಂತೆ ಪ್ರಚಾರ, ಸರಕಾರಿ ಕಟ್ಟಡಗಳ ಮೇಲೆ ಧ್ವಜಾರೋಹಣ ಹಾಗೂ ಹಾಸನ, ಬೇಲೂರು, ಚನ್ನರಾಯಪಟ್ಟಣ, ಹೊಳೆನರಸೀಪುರಗಳಲ್ಲಿ ಹಾಗೂ ಸುತ್ತಲ ಹಳ್ಳಿಗಳಲ್ಲಿ ನಡೆಯುತ್ತಿದ್ದ ಪ್ರಚಾರ, ವಿಧ್ವಂಸಕ ಕೃತ್ಯಗಳಲ್ಲಿ ಪಾಲುಗೊಂಡೆ. ಸಿಂಗ್ರಿಗೌಡ (ಹಾಲಿ ಹೆಲ್ತ್ ಇನ್ಸ್‌ಪೆಕ್ಟರ್), ಬಿ. ಎ. ಶರ್ಮ, ಕೆ. ಸಿಂಗ್, ಕರಡಣ್ಣಯ್ಯ, ನಾಣಿ, ಸುಬ್ಬರಾಯ, ಅರಸೀಕೆರೆಯ ಕೃಷ್ಣಪ್ಪ (ಹಾಲಿ ಬಿ.ಡಿ.ಒ), ನಾರಾಯಣಗೌಡ ಇವರೆಲ್ಲ ಆಗ ನನ್ನ ಜೊತೆಗಾರರು. ಅರಸೀಕೆರೆಯ ಪಂಚಾಕ್ಷರಯ್ಯ, ಕರಿಸಿದ್ದಪ್ಪ (ಇಬ್ಬರೂ ಎಂ.ಎಲ್.ಎ. ಆದರು), ಹೋಟಲ್ ವಿಠಲಮೂರ್ತಿ (ವಿಠಲಾಚಾರ್ಯ ?—ಸಂ||), ಚೆನ್ನಪ್ಪಯ್ಯ, ಚಿಕ್ಕಪ್ಪ, ಶ್ರೀಕಂಠ ಶೆಟ್ಟಿ, ವಿಶ್ವನಾಥ ಶೆಟ್ಟಿ, ಕಾಂತರಾಜಪುರದ ಕೆ. ಲಕ್ಕಪ್ಪ, ಭೋಜಪ್ಪ, ಸಣ್ಣನಂಜಪ್ಪ, ಶಿವನಂಜೇಗೌಡ, ಶಿವಪ್ಪ ಸೋದರರು, ನರಸಣ್ಣ, ಭದ್ರಗಿರಿ ರಾಮಶೆಟ್ಟಿ, ಬೇಲೂರಿನ ಬೋರಣ್ಣಗೌಡ, ಬಸವೇಗೌಡ, ಚೆನ್ನೇಗೌಡ, ವೀರಭದ್ರೇಗೌಡ ಇವರುಗಳ ನೇತೃತ್ವದಲ್ಲಿ ನಡೆದ ವಿಧ್ವಂಸಕ ಕೃತ್ಯಗಳಲ್ಲಿ ಭಾಗವಹಿಸಿರುವೆ. ಸುಂಕ ತೆರದಂತೆ ಪ್ರಚಾರ, ಟಿಕೆಟ್ ಇಲ್ಲದೆ ರೈಲು ಪ್ರಯಾಣ ಇತ್ಯಾದಿ ಚಟುವಟಿಕೆಯಲ್ಲಿ ಪಾಲುಗೊಂಡೆ. 1942ರಲ್ಲಿ ಹಾಸನದಲ್ಲಿ ಅಂಡರ್ ಟ್ರಾಯಲ್ ಆಗಿದ್ದೆನಲ್ಲದೆ, ಬೆಂಗಳೂರು ಜೈಲಿನಲ್ಲಿ ಮೂರೂವರೆ ತಿಂಗಳು ಶಿಕ್ಷೆ ಅನುಭವಿಸಿದೆ. ಇದರಿಂದ ಜನನಿಂದೆಗೂ ಗುರಿಯಾದೆ. ಪ್ರೌಢಶಾಲಾ ಶಿಕ್ಷಣ ನಿಂತಿತು. 1947ರಲ್ಲೂ ಒಂದು ವಾರ ಲಾಕಪ್‌ನಲ್ಲಿ ಇದ್ದೆ.

ಮೈ.ಹಾ. 5

## ಎನ್. ರಂಗನಾಥನ್

ಜನನ : ? ಉದ್ಯೋಗ : ಛಾಯಾಚಿತ್ರಗ್ರಾಹಕ ವಿಳಾಸ : ಎಸ್. ಎನ್. ಮೂರ್ತಿ ಸ್ಟುಡಿಯೋ, ಹಾಸನ

---

1947ರ ಚಳವಳಿಯ ಕಾಲಕ್ಕೆ ನಾವು ಐದು ಮಿತ್ರರು 'ಮೈಸೂರು ಚಲೋ' ಮಾಡಲು ಟಿ. ಎನ್. ದೇಶಿಕನ್ (ನಮ್ಮ ನಾಯಕ), ಬಿ. ಕೆ. ಕೃಷ್ಣಯ್ಯ, ಟಿ. ರಾಮಾನುಜಂ, ಪುಟ್ಟೇಗೌಡ ಮತ್ತು ನಾನು ಶಾಲೆಗೆ ಹೋಗದೆ ಹಾಸನದಿಂದ ಕಾಲುನಡಿಗೆಯಲ್ಲಿ ಹೊರಟು, ಹೊಳೇನರಸೀಪುರಕ್ಕೆ ಹೋಗಿ ಅಲ್ಲಿಂದ ಕೆ.ಆರ್. ಪೇಟೆ ತಲಪಿದೆವು.



ಕೈಯಲ್ಲಿ ಕಾಸಿಲ್ಲ, ಎಷ್ಟೋ ಸಲ ಊಟವಿಲ್ಲ, ಯಾರದೋ ಜಗಲಿಯಲ್ಲಿ ನಿದ್ದೆ, ಹಾಸಲು, ಹೊದೆಯಲು ಕೂಡ ಇಲ್ಲ. ದಾರಿಯಲ್ಲಿ ಯಾರೋ ತಾಯಂದಿರು ಊಟ ಹಾಕಿ ಪುಡಿಕಾಸು ಕೊಟ್ಟು ಬೀಳ್ಕೊಡುತ್ತಿದ್ದರು. ಕೆ.ಆರ್. ಪೇಟೆಯಿಂದ ಎಡತೊರೆ ಮಾರ್ಗವಾಗಿ ಮುಂದುವರಿಯುವಾಗ ಶಿವಮೊಗ್ಗ ಜಿ|| ಹಾರನಹಳ್ಳಿಯ 25 ಜನರ ತಂಡ ಸಿಕ್ಕಿ ನಾವು ಅವರ ಜೊತೆ ಸೇರಿಕೊಂಡೆವು. ಮುಂದೆ ಇನ್ನೂ ಕೆಲವು ತಂಡಗಳು ಸೇರಿ ಒಟ್ಟು ಸಂಖ್ಯೆ 85ಕ್ಕೆ ಏರಿತು. ಎಡತೊರೆ ಸಮೀಪಿಸಿದಂತೆ ಕೆಲವು ಸಿ.ಐ.ಡಿ.ಗಳೂ ನಮಗೆ ಅರಿಯದಂತೆ ನಮ್ಮ ಜೊತೆ ಸೇರಿದ್ದರು. ಎಡತೊರೆ ಊರವರು ಒಂದು ಛತ್ರದಲ್ಲಿ ನಮ್ಮ ಊಟದ ವ್ಯವಸ್ಥೆ ಮಾಡಿದ್ದರು. ಪಕ್ಕದ ನಾಲೆಗೆ ಹೋಗಿ ಸ್ನಾನಮಾಡಿ ತೀರ ಹಸಿದ ನಾವು ಉಣ್ಣಲು ಕೂತಾಗ, ಐದು ವ್ಯಾನ್ ರಿಜರ್ವ್ ಪೋಲಿಸರು ಬಂದು, ನಮಗೆ ಸರಿಯಾಗಿ ಉಣ್ಣಲು ಬಿಡದೇ ಗಾಳಿಯಲ್ಲಿ ಗುಂಡು ಹಾರಿಸಿ ಬೆದರಿಸಿದರು. ಎಲೆಗಳನ್ನು ಒದ್ದು, ದೂರ ಸರಿಸಿದರು. ಸ್ಟೇಷನ್ ಹತ್ತಿರ ಒಯ್ದು ವ್ಯಾನ್‌ನಿಂದ ಇಳಿಸಿ ಸಾಲಾಗಿ ನಿಲ್ಲಿಸಿದರು. "ನೀವೆಲ್ಲ ಹಿಂದಕ್ಕೆ ಹೋಗಿ" ಎಂದರು. "ಪ್ರಾಣ ಹೋದರೂ ಸರಿ, ಹಿಂದಕ್ಕೆ ಹೋಗಲಾರೆವು" ಎಂದೆವು. ಮತ್ತೆ ಛತ್ರಕ್ಕೆ ಒಯ್ದು "ಊಟಮಾಡಿ ಬನ್ನಿ" ಎಂದರು. ಊಟ ಅರ್ಧ ಆದಾಗ, ಮತ್ತೆ ಅದೇ ರೀತಿ ಎಲ್ಲರನ್ನೂ ಎಳೆದು ಒಯ್ದರು. ನಾವೈವರು ಮಾತ್ರ ಹಿಂಬಾಗಿಲಿನಿಂದ ತಪ್ಪಿಸಿಕೊಂಡು, ರಾತ್ರಿ ಆ ಊರು ಬಿಟ್ಟು ಬೇರೊಂದು ಹಳ್ಳಿ ಸೇರಿದೆವು. ನಮ್ಮ ಜೊತೆ ಇದ್ದವರನ್ನು ಹುಣಸೂರು ಕಾಡಿಗೆ ಒಯ್ದು ಬಿಟ್ಟರೆಂದು ಆಮೇಲೆ ತಿಳಿಯಿತು. ನಾವು ಮಾತ್ರ ಮರುದಿನ ಕನ್ನಂಬಾಡಿ ಹಾದಿಯಿಂದ ಮೈಸೂರು ಸೇರಿದೆವು.

ಮೈಸೂರಲ್ಲಿ ನಮಗೆ ಆಶ್ರಯ ನೀಡುವವರು ಯಾರೂ ಇರಲಿಲ್ಲ. 2–3 ಜನ ಒಟ್ಟಾಗಿ ಹೋಗುವಂತೆಯೂ ಇರಲಿಲ್ಲ. ಎಲ್ಲೆಡೆ ಸಿ.ಐ.ಡಿ.ಗಳ ಓಡಾಟ. ಹೋಟೆಲಿನಲ್ಲಿ ಇರಲು ಕೂಡ ಜಾಗ ಕೊಡುತ್ತಿರಲಿಲ್ಲ. ದೇವರಾಜ ಮಾರ್ಕೆಟ್‌ನಲ್ಲಿ ಬರೀ ಹಣ್ಣು ತಿಂದು ಊಟವಿಲ್ಲದೆ ಇದ್ದೆವು. ಸಂಜೆ ಹೇಗೋ ಒಂದು ಗರಡಿಮನೆ ಸೇರಲು ಯಾರೋ ನಮ್ಮ ಬೆನ್ನಟ್ಟಿ ಬಂದುದು ಕಾಣಿಸಿತು. ನಾವು ಭಯ ಬಿದ್ದೆವು. ಆದರೆ ಬಂದಾತ ಸಿ.ಐ.ಡಿ. ಆಗಿರದೆ ಕಾಂಗ್ರೆಸ್‌ನವನೇ ಇದ್ದು ಆತ ನಮ್ಮನ್ನು ಇಟ್ಟಿಗೆಗೂಡು ಶ್ರೀರಾಮಮಂದಿರಕ್ಕೆ ರಾತ್ರಿ ಕರೆದೊಯ್ದ. ಅಲ್ಲಿ ಎಂ. ವಿ. ಕೃಷ್ಣಪ್ಪನವರ ಭೇಟಿ ಆಯಿತು. ಅಲ್ಲಿಯೂ ಪೋಲಿಸರ ಕಾಟ. ಎರಡುಮೂರು ಬಾರಿ ನಮ್ಮನ್ನು ಬೇರೆ ಸ್ಥಳಕ್ಕೆ ವರ್ಗಾಯಿಸುವ ವ್ಯವಸ್ಥೆಯನ್ನು ಕೃಷ್ಣಪ್ಪನವರೂ ಅವರ ಸಹಕಾರಿಗಳೂ

ಮಾಡಿದರು. ರಾತ್ರಿ ಎಲ್ಲ ಅವರಿಗೆ ನಿದ್ದೆಯೇ ಇಲ್ಲ. ಅಲ್ಲಿನ ಕಾಲೇಜು ವಿದ್ಯಾರ್ಥಿಗಳ ಜೊತೆ ಸೇರಿ ಕೋರ್ಟಿನ ಮುಂದೆ ಪಿಕೆಟಿಂಗ್ ಮಾಡಿದೆವು. ಕೋರ್ಟಿನ ಕಟ್ಟಡದ ಮೇಲೆ ಧ್ವಜ ಹಾರಿಸಿದೆವು. ನಮ್ಮ ಬಂಧನವಾಗಿ ಹೊಡೆದರು. ಲಾಠಿ ಹೊಡೆತದಿಂದ ಕೈಮೈ ಊದಿತು. ನನ್ನ ತಲೆಯಿಂದ ರಕ್ತ ಚಿಮ್ಮಿತು. ಮೊಳಕಾಲು, ಮುಂಡಿಗಳಿಗೂ ಹೊಡೆತ, ಅವಾಚ್ಯ ಬೈಗಳು ಬೇರೆ. ನಾಲ್ಕು ದಿನ ಓಡಾಡಲು ಆಗಲಿಲ್ಲ. ಯಾವುದೋ ವರಾಂಡದಲ್ಲಿ ಚಳಿಯಲ್ಲಿ ರಾತ್ರಿ ಕುಳ್ಳಿರಿಸಿ, ಮರುದಿನ ನಾಲ್ಕೇ ಜನ ಕೂಡುವ ಕೊಠಡಿಯ ಸ್ಥಳದಲ್ಲಿ 12 ಜನರನ್ನು ಲಾಕಪ್‌ಗೆ ನೂಕಿದರು. ಕೂರಲು, ಮಲಗಲು ಕೂಡ ಜಾಗವಿಲ್ಲ. 12 ಗಂಟೆಗೆ ಒಂದು ಸೌಟು ಕಲಸನ್ನ, ರಾತ್ರಿ ಎಂಟಕ್ಕೆ ಒಂದು ಚಮಚ ಅನ್ನ ಮಾತ್ರ ಆಹಾರ. ಹದಿನೈದು ದಿನ ಈ ರೀತಿ ಉಪವಾಸ ಹಿಂಸೆ ಆಯಿತು. ಹದಿನಾರನೆಯ ದಿನ ಮೈಸೂರು ಬಂದೀಖಾನೆಗೆ ಸಾಗಿಸಿದರು. ಅಲ್ಲಿ 300 ಜನ ಇದ್ದರು ಅಲ್ಲಿ ಹೊಟ್ಟೆತುಂಬ ಉಂಡು ಚೇತರಿಸಿಕೊಂಡೆವು. ನಮ್ಮನ್ನು ಸಿ–ಕ್ಲಾಸಿಗೆ ಹಾಕಿ. ಕಲ್ಲುಮಣ್ಣಿನ ಊಟ ಎರಡು ಸಲ ಮಾತ್ರ ಕೊಡುತ್ತಿದ್ದರು. 35-36 ದಿನದನಂತರ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಿ, ಅಲ್ಲಿ ಎರಡು ತಿಂಗಳು ಶಿಕ್ಷೆಕೊಟ್ಟರು. ನಾವು ಮಾಫಿ ಬೇಡಲಿಲ್ಲ. ಆಗ ಅನೇಕ ಕಾಲೇಜು ವಿದ್ಯಾರ್ಥಿನಿಯರೂ ಜೈಲಿಗೆ ಬಂದರು. ಜೈಲಿನಲ್ಲಿ ಇದ್ದ ನಿಜಲಿಂಗಪ್ಪನವರು ನಮ್ಮ ನಾಯಕತ್ವ ವಹಿಸಿ ಊಟ, ಸ್ನಾನದ ವ್ಯವಸ್ಥೆ ಅನುಕೂಲ ಮಾಡಿಕೊಟ್ಟರು. 10–10–1947ಕ್ಕೆ ಬಿಡುಗಡೆ ಆಯಿತು. ನಾವು ಮೈಸೂರು ಊರು ಸುತ್ತಿ ಹಾಸನಕ್ಕೆ ಬಂದೆವು.

ಹಾಸನದಲ್ಲಿ ಸಿ. ಎಸ್. ಕೃಷ್ಣಪ್ಪ, ಪ್ರೆಸ್ ಗಂಡೂರಾವ್, ಹಾರನಹಳ್ಳಿ ರಾಮಸ್ವಾಮಿ ಇವರೆಲ್ಲ ಸಭೆ ನಡೆಸಲು ಭಾಷಣಮಾಡಿ, ಹಾರಹಾಕಿ ನಮ್ಮನ್ನು ಗೌರವಿಸಿದರು.

## ಮೈ.ಹಾ. 6 | ಎಚ್. ಎನ್. ವೆಂಕಟಪ್ಪ

ಜನನ : ? ಉದ್ಯೋಗ : ಹೊಲಿಗೆ ವಿಳಾಸ : ಹಾಸನ



ಮೈಸೂರಲ್ಲಿ ಹಾಮಿಲ್ಟನ್ ಸತ್ಯಾಗ್ರಹ ಆದಾಗ ನಾನೂ ಅದರಲ್ಲಿ ಪಾಲುಗೊಂಡು ಲಾಠೀಚಾರ್ಜಿಗೆ ಒಳಗಾಗಿದ್ದೆ. ಮುಂದೆ 1938ರಲ್ಲಿ ಹಾಸನಕ್ಕೆ ಬಂದು ಇಲ್ಲಿನ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದೆ. 1942ರಲ್ಲಿ ಮೈಸೂರಿನಿಂದ 200 ವಿದ್ಯಾರ್ಥಿಗಳು ಟಿಕೆಟ್ಟಿಲ್ಲದೆ ಹಾಸನಕ್ಕೆ ಬಂದಿರಲು, ಹಾಸನದಲ್ಲಿ ಅವರನ್ನು ಸ್ವಾಗತಿಸಿ ಭಾರಿ ಸಭೆ ನಡೆಸಿದರು.

ಆಗ ನಾನು ಲಾವಣಿ ಹೇಳಿದೆ. ಬಂದವರಿಗೆಲ್ಲ ಊಟದ ವ್ಯವಸ್ಥೆ ಮಾಡಿದರು. ಮೈಲಾರಿ ದೇವಸ್ಥಾನದ ಬಳಿ ತಿಂಗಳಿಗೆ ಒಂದು ರೂಪಾಯಿ ಬಾಡಿಗೆಗೆ ಒಂದ ಚಿಕ್ಕ ರೂಮು ಹಿಡಿದು ಅಲ್ಲಿ ಟೈಲರಿಂಗ್ ಕೆಲಸವನ್ನು ಮಾಡುತ್ತ, ಅಲ್ಲಿ ವಿದ್ಯಾರ್ಥಿಗಳನ್ನು ಬರಮಾಡಿ ಕೊಂಡು ಅವರಿಂದ ಟೆಲಿಫೋನ್ ವೈರ್ ಕತ್ತರಿಸುವುದು, ಸೇಂದಿ ಗುಡಿಸಲಿಗೆ ಬೆಂಕಿಹಾಕು ವುದು, ಸೇಂದಿ ತುಂಬಿಕೊಂಡು ಹೋಗುವ ಸಿಪಾಯಿಗಳ ಗಟ್ಟಿ ತೆಗೆಯುವುದು, ಮರಕ್ಕೆ ಕಟ್ಟಿದ ಗಡಿಗೆಗಳನ್ನು ಒಡೆಯುವುದು, ಈಚಲುಮರ ಕಡಿಯುವುದು—ಹೀಗೆಲ್ಲ ಕೆಲಸ ಮಾಡುತ್ತಿದ್ದೆ. ಎ. ಜಿ. ರಾಮಚಂದ್ರರಾವ್ ಹಾಗು ಬೇಲೂರು ಬೋರಣ್ಣಗೌಡರು ನನ್ನ ಮೇಲೆ ವಿಶ್ವಾಸವಿಟ್ಟು ಎಲ್ಲ ಕೆಲಸ ಹೇಳುತ್ತಿದ್ದರು. ನ್ಯಾಷನಲ್ ಪ್ರೆಸ್ ಮಹಡಿಯ ಮೇಲೆಯೇ ನಮ್ಮ ಎಲ್ಲ ಗುಪ್ತಸಭೆಗಳು ನಡೆಯುತ್ತಿದ್ದವು.

1947ರಲ್ಲಿ ನ್ಯಾಷನಲ್ ಪ್ರೆಸ್ ಗುಂಡೂರಾಯರೂ ಸಿಂಗ್ರೀಗೌಡರೂ ನನ್ನನ್ನು ಹೂವಿನ ಹಾರ ಹಾಕಿ 'ಚಲೋ ಮೈಸೂರು' ಕಾರ್ಯಕ್ರಮಕ್ಕೆ ಬೀಳ್ಕೊಟ್ಟರು. ಮರುದಿನ ಮೊಸಳೆ ಊರಿನಲ್ಲಿ ನಮ್ಮನ್ನು ಬಂಧಿಸಿ, ಒಂದು ದಿನದನಂತರ ಬಿಟ್ಟರು. ಹಾಸನದಲ್ಲಿ ಒಂದು ರಾತ್ರಿ ಪೋಲಿಸ್ ಸೂಪರಿಂಟೆಂಡೆಂಟರ ಆಫೀಸಿನ ಹಿಂಭಾಗದ ಪಾಯಿಖಾನೆ ಯಲ್ಲಿ ಅಡಗಿ ಕೂತು ರಾತ್ರಿ ಆಫೀಸಿನ ಮೇಲೆ ಧ್ವಜ ಹಾರಿಸಿದೆ. ಅದೇ ದಿನ ಸರಕಾರಿ ಹೈಸ್ಕೂಲ್ ಮತ್ತು ಅಮಲ್ದಾರರ ಆಫೀಸಿನ ಮೇಲೂ ಧ್ವಜ ಹಾರಿಸಿದೆ. ಈ ವಿಚಾರ ಪೇಪರ್‌ಗಳಲ್ಲೂ ಬಂತು. ಕಡೆಗೊಂದು ದಿನ ನನ್ನ ಬಂಧನ ಆಯಿತು. ನಾವು ಒಟ್ಟು 11 ಜನ ಇದ್ದೆವು. ನನ್ನ ಜೊತೆ ಬಂಧಿತರಾದ ಇತರರೆಂದರೆ, ವೆಂಕಟಸುಬ್ಬು (ಕಸ್ತೂರಿ), ಎಸ್. ಆರ್. ವೆಂಕಟೇಶ್, ಎಸ್. ಆರ್. ಆನಂದ್, ಸೂರ್ಯಕಾಂತ ಶೆಟ್ಟಿ, ಎಸ್. ನಾಗಭೂಷಣ, ವಜ್ರನಾಭಯ್ಯ, ಸೀತಾರಾಮ (ಎಲ್ಲ ಹಾಸನದವರು), ಆರಾಧ್ಯ (ಶಿರಾ ತಾ॥ನವರು), ಸುಬ್ಬೇಗೌಡ (ಸಕಲೇಶಪುರ ತಾ॥), ಚಿದಂಬರ ಶೆಟ್ಟಿ (ಬೇಲೂರು). ನಮ್ಮನ್ನು ಬೇಲೂರು ಲಾಕಪ್ಪಿನಲ್ಲಿ ಒಯ್ದು ಇಟ್ಟರು. ಅಲ್ಲಿಯೂ ಒಂದು ದಿನ ರಾತ್ರಿ ಲಾಕಪ್ಪಿನ ಹಂಚು ತೆಗೆದು, ಕಚೇರಿಯ ಮೇಲೆ ಧ್ವಜ ಹಾರಿಸಿದೆ. ಮರುದಿನ ಶಾಲಾಮಕ್ಕಳು ಧ್ವಜ ನೋಡಿ ಜಯಕಾರ ಹಾಕಿದರು. ಪೋಲಿಸರು ನಮ್ಮನ್ನು ಸಿಕ್ಕಾಬಟ್ಟೆ ಹೊಡೆದರು. ಬೂಟಿನಿಂದ ಒದ್ದರು. ದೇಹವೆಲ್ಲ ರಕ್ತಮಯ ವಾಯಿತು. ನನಗೆ ಸ್ಮೃತಿ ತಪ್ಪಿತು. ಆಸ್ಪತ್ರೆಗೆ ಒಯ್ದು ಇಡೀ ಮೈಗೆಲ್ಲ ಬ್ಯಾಂಡೇಜ್ ಕಟ್ಟಿದ್ದರು. ನನಗೂ ಆನಂದು ಮತ್ತು ವೆಂಕಟೇಶನಿಗೂ ಭಾರೀ ಏಟು ಬಿದ್ದಿತ್ತು. ಜೈಲಿನಲ್ಲಿ ನೆಲದ ಮೇಲೆ ಬಿದ್ದ ರಕ್ತವನ್ನು ತೊಳೆದು ತೆಗೆಯುವಷ್ಟು ಪ್ರವಾಹ ಹರಿದಿತ್ತು. ಈ ವಿಚಾರ ತಾಯಿನಾಡು ಪೇಪರ್‌ನಲ್ಲಿ ಕೂಡ ಬಂದಿತ್ತು. ಮುಂದೆ ನಮ್ಮನ್ನು ಚನ್ನರಾಯಪಟ್ಟಣ ಲಾಕಪ್ಪಿಗೆ ಒಯ್ದರು; ಬೆಂಗಳೂರು ಸೆಂಟ್ರಲ್ ಜೈಲಿಗೆ ಒಯ್ದರು. 13-10-1947ಕ್ಕೆ ಬಿಡುಗಡೆ ಆಯಿತು. ಚಿಕ್ಕಮಗಳೂರು ಜೈಲಿನಲ್ಲಿ ಇದ್ದ ಕೆ. ಸಿ. ರೆಡ್ಡಿ ಮುಂತಾದ ಮುಖಂಡರು ಬೇಲೂರಿಗೆ ಬಂದು ರಕ್ತದ ಬಟ್ಟೆಗಳನ್ನು ಕಣ್ಣಾರೆ

ಕೆಂಡರು. ರೆಡ್ಡಿಯವರು ತಮ್ಮ ರಗ್ಗನ್ನು ನನಗೆ ಕೊಟ್ಟರು.

1942ರಲ್ಲಿ ನನ್ನ ಜೊತೆ ಜೈಲಿನಲ್ಲಿ ಇದ್ದ ಮುಖಂಡರು : ನಿಜಲಿಂಗಪ್ಪ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಸಂಪತ್ ಅಯ್ಯಂಗಾರ್, ಜೋರಣ್ಣಗೌಡ, ಲಕ್ಕಪ್ಪ ಗೌಡ, ಡಾ|| ರಾಮಚಂದ್ರಯ್ಯರ್. 1947ರಲ್ಲಿ ಜಿ. ಎ. ತಿಮ್ಮಪ್ಪಗೌಡ, ಎಸ್. ಎ. ಕರೀಂಖಾನ್ ಹಾಗೂ ಮೇಲೆ ಹೇಳಿದ 10 ಜನರು, ಮುಂತಾದವರು.

## ಮೈ.ಜಾ. 7 | ಎಲ್. ಎಸ್. ಗೋಪಾಲಕೃಷ್ಣ ಶೆಟ್ಟಿ

ಜನನ : 1909 ಉದ್ಯೋಗ : ವಕೀಲ ವಿಳಾಸ : ಹಾಸನ



1922ರಿಂದ ಶಿವಮೊಗ್ಗ ಪ್ರೌಢಶಾಲೆಯಲ್ಲಿ ಇದ್ದಾಗ ಪತ್ರಿಕೆಗಳನ್ನು ಓದಿ, ಹಿಂದಿ ಅಭ್ಯಾಸಮಾಡಿ ದೇಶದ ಸೇವೆಯ ಕಡೆ ಆಕರ್ಷಿತನಾದೆ. ಖಾದಿಯನ್ನೆ ಬಳಸ ಲಾರಂಭಿಸಿ 1945ರ ವರೆಗೂ ಖಾದಿ ಬಳಸುತ್ತಿದ್ದೆ. ಶಿವಮೊಗ್ಗ ಖಾದಿ ಭಂಡಾರದ ಮಣಿಯಂ ಅವರ ಮಾರ್ಗದರ್ಶನವೂ ದೇಶಭಕ್ತಿ ಬೆಳೆಸಲು ಕಾರಣ ವಾಗಿತ್ತು. ಬೆಂಗಳೂರಿನ ನ್ಯಾಷನಲ್ ಹೈಸ್ಕೂಲು ಹಾಗೂ ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ ಸೇವಾದಳ ಸೇರಿ ಸರ್ದಾರ್ ವೆಂಕಟರಾಮಯ್ಯ ಮತ್ತು ಟಿ. ಸದಾಶಿವಂ (ಖಾದಿ ಭಂಡಾರ) ಇವರ ಸಂಪರ್ಕದಿಂದ ಪ್ರಭಾವಿತನಾದೆ. 1927ರಲ್ಲಿ ಗಾಂಧೀಜಿ ಬಂದು ಬೆಂಗಳೂರಲ್ಲಿ ಇದ್ದಾಗ ಅವರ ಮತ್ತು ಅನ್ಯ ನಾಯಕರ ಭಾಷಣಗಳನ್ನೂ ಕೇಳಿದೆ. ಮದ್ರಾಸ್ ಕಾಂಗ್ರೆಸ್ಸಿಗೆ ವೆಂಕಟರಾಮಯ್ಯನವರ ಜೊತೆ ಸ್ವಯಂಸೇವಕನಾಗಿ ಹೋಗಿದ್ದೆ.

1930ರಲ್ಲಿ ಅಂತಿಮ ಬಿ.ಎ.ಯಲ್ಲಿದ್ದಾಗ ಕಾಯಿದೆಭಂಗದ ಕರೆ ಬರಲು, ನಾನು ಮತ್ತು ಟಿ. ಸದಾಶಿವಂ ಕೊಯಮುತ್ತೂರಿಗೆ ಹೋದೆವು. ಅಲ್ಲಿ ಮೆರವಣಿಗೆ, ಪಿಕೆಟಿಂಗ್ ಗಳಲ್ಲಿ ಪಾಲುಗೊಂಡೆವು. ಅಲ್ಲಿಂದ ತಿರುಚಿನಾಪಳ್ಳಿಗೆ ಹೋದೆವು. ಅಲ್ಲಿ ಇದೇ ರೀತಿ ಕಾನೂನುಭಂಗ ಚಳವಳಿಯಲ್ಲಿ ಭಾಗ ತೆಗೆದುಕೊಳ್ಳುವಾಗ ನಾನು, ಅರಕಲಗೂಡು ವೆಂಕಟರಾಮಯ್ಯ, ಟಿ. ಸದಾಶಿವಂ, ವೆಂಕಟಸ್ವಾಮಿ, ಗೋಪಾಲಶೆಟ್ಟಿ, ಶ್ರೀರಾಮಯ್ಯ —ಹೀಗೆ 12 ಜನರು 4-9-1930ರಂದು ಬಂಧಿತರಾದೆವು. ಆರು ತಿಂಗಳು ಶಿಕ್ಷೆ ಆಗಿ

ತಿರುಚಿನಾಪಳ್ಳಿ ಸೆಂಟ್ರಲ್ ಜೈಲಿನಲ್ಲಿ ಇದ್ದೆವು. 22-10-1930ಕ್ಕೆ ಬಳ್ಳಾರಿ ಅಲ್ಲಿಪುರಂ ಜೈಲಿಗೆ ವರ್ಗಾಯಿಸಿದರು. 10-2-1931ಕ್ಕೆ ಬಿಡುಗಡೆ ಆಯಿತು. ಜೈಲಿನಲ್ಲಿ ನನಗೆ ಜಾಂಡಿಸ್ ಆಗಿ ಸುಧಾರಿಸಿಕೊಳ್ಳಲು ಎರಡು ವರ್ಷ ಹಿಡಿಯಿತು. ಮುಂದೆ ಲಾ ಓದಿ; ಕೌಟುಂಬಿಕ ಕಾರಣಗಳಿಂದ ಪೋಲಿಸ್ ಇಲಾಖೆಯಲ್ಲಿ ನೌಕರಿಗೆ ಸೇರಿದೆ. ಸಬ್ ಇನ್ಸ್‌ಪೆಕ್ಟರ್ ಆಗಿ ಸೇರಿದವನು 1964ರಲ್ಲಿ ಡಿ.ಎಸ್.ಪಿ. ಆಗಿ ನಿವೃತ್ತನಾದೆ. ಈಗ ಹಾಸನದಲ್ಲಿ ಅಡ್ವೊಕೇಟ್ ಆಗಿ ಇದ್ದೇನೆ.

ಮೈ.ಹಾ. 8

## ಜಿ. ಎಸ್. ಸಂಪತ್ತಯ್ಯಂಗಾರ್

ಜನನ : 1915 ಉದ್ಯೋಗ : ಕೃಷಿ ವಿಳಾಸ : ಗೊರೂರು, ತಾ॥ ಹಾಸನ



ನಾನು ಹೈಸ್ಕೂಲಿಗೆ ಸೇರಿದಾಗ 1927ರಲ್ಲಿ ಗಾಂಧೀಜಿಯವರು ಹಾಸನಕ್ಕೆ ಬಂದಸರು ನಮ್ಮ ಹೈಸ್ಕೂಲಿಗೂ ಬಂದರು. ನಮಗೆಲ್ಲಾ ಆನಂದವೋ ಆನಂದ. ಅವರು ವಿದೇಶೀ ಟೋಪಿಗಳನ್ನೆಲ್ಲಾ ಬೆಂಕಿಗೆ ಹಾಕಿ ಎಂದು ಹೇಳಿದರು. ಎಲ್ಲರ ಟೋಪ್ಪಿಗಳೂ ಗುಡ್ಡದಂತೆ ಬಿದ್ದು ಭಸ್ಮವಾದವು. ನನ್ನ ವಿದ್ಯಾಭ್ಯಾಸ ಮುಂದುವರಿಯಿತು. ಆದರೆ ಗಾಂಧಿಯ ಚಿತ್ರವೇ ಯಾವಾಗಲೂ ಕಣ್ಣೆದಿರಿಗೆ ಇದ್ದುದರಿಂದ ವಿದ್ಯಾಭ್ಯಾಸದಲ್ಲಿ ಆಸಕ್ತಿಯೇ ಇರುತ್ತಿರಲಿಲ್ಲ. ಬಿ.ಎಸ್‌ಸಿ. ಪರೀಕ್ಷೆಯನ್ನು ಮಾಡಿಕೊಂಡು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಬೇಕೆಂದು ತೀರ್ಮಾನಿಸಿದೆ. ನಮ್ಮ ಅಣ್ಣಂದಿರು ನನಗೆ ಈ ವಿಷಯದಲ್ಲಿ ಬಹಳ ಬಲವನ್ನು ಕೊಟ್ಟರು. ಮಹಾತ್ಮಾ ಗಾಂಧಿಯವರ ಉಪದೇಶದಂತೆ ನನ್ನ ಸ್ವಗ್ರಾಮವಾದ ಗೊರೂರಿನಲ್ಲಿಯೇ ಇದ್ದು ನಮ್ಮ ಸುತ್ತಮುತ್ತಲ ಗ್ರಾಮಗಳನ್ನು ಸುಧಾರಿಸಲು ಯತ್ನಿಸುತ್ತಿದ್ದೆನು. ಅಲ್ಲದೆ, ಗೊರೂರಿನಲ್ಲಿ ಸಣ್ಣ ಕೈಗಾರಿಕೆಗಳನ್ನು ಉತ್ತಮಪಡಿಸಲು ಪ್ರಯತ್ನಿಸಿದೆನು. ಇರ್‌ವಿನ್ ಕೆನಾಲ್ ಫಾರಂ, ವರ್ಧಾ, ಬದನವಾಳು ಮುಂತಾದ ಸ್ಥಳಗಳಿಗೆ ಭೇಟಿ ಕೊಟ್ಟೆ. ವರ್ಧಾದಲ್ಲಿ 15 ದಿನ ತರಬೇತಿ ಪಡೆದು ಬಂದೆ. ಗೊರೂರಿನಲ್ಲಿ ಜೇನು ಸಾಕುವಿಕೆ, ಕಾಗದದ ತಯಾರಿಕೆ, ಗಾಣದ ಎಣ್ಣೆಯ ತಯಾರಿಕೆ, ಚರ್ಮ ಹದಮಾಡುವುದು, ಸಕ್ಕರೆ ತಯಾರಿಕೆ ಈ ರೀತಿ ಎಲ್ಲಾ ಸಣ್ಣ ಕೈಗಾರಿಕೆಗಳನ್ನು ಪ್ರಾರಂಭಿಸಿದೆವು. ಗೊರೂರು

ರಾಮಸ್ವಾಮಿಯ್ಯಂಗಾರ್ಯರು ಇದಕ್ಕೆಲ್ಲಾ ಬೆಂಬಲ ಕೊಟ್ಟರು. ಇದಕ್ಕೆ ಮುಂಚೆ ನಮ್ಮೂರಿನಲ್ಲಿ ನನ್ನ ಅಣ್ಣಂದಿರಾದ ಜಿ. ಎಸ್. ರಾಮನ್, ಜಿ. ಕೆ. ಐಯ್ಯಂಗಾರ್‌ರವರು ಖಾದಿ ಅಭಿವೃದ್ಧಿ ಪಡಿಸುವುದರಲ್ಲಿ ಬಹಳ ಆಸಕ್ತಿ ತೆಗೆದುಕೊಂಡಿದ್ದರು. ಜಿಲ್ಲಾ ಬೋರ್ಡ್ ಒಂದು ಖಾದಿ ಕೇಂದ್ರವನ್ನೂ ನಮ್ಮಲ್ಲಿ ಸ್ಥಾಪಿಸಿತು. ವರ್ಧಾದಿಂದ ಮಾದರಿ ಗಾಣ ತಂದು ಅದರಂತಹವೇ ಹನ್ನೆರಡು ಗಾಣ ಮಾಡಿಸಿದೆವು. ಬಾಳೆ ಎಲೆ, ಹುಲ್ಲು ಬಳಸಿ ಕಾಗದ ಮಾಡಿದೆವು.

ಈ ರೀತಿ ನಾನು ಹಳ್ಳಿಯಲ್ಲಿ ಕೆಲಸಮಾಡುತ್ತಿದ್ದಾಗ ಮೈಸೂರು ಕಾಂಗ್ರೆಸ್‌ನವರು ಪ್ರಾರಂಭಿಸಿದ ಅರಸೀಕೆರೆ ಸತ್ಯಾಗ್ರಹದಲ್ಲಿ ಭಾಗವಹಿಸಿದೆ. 1940ರಲ್ಲಿ ಮಹಾತ್ಮಾ ಗಾಂಧಿಯವರು ವೈಯಕ್ತಿಕ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಈ ಸತ್ಯಾಗ್ರಹದಲ್ಲಿ ಭಾಗವಹಿಸಬೇಕೆಂದು ತೀರ್ಮಾನಿಸಿ ಕಾಂಗ್ರೆಸ್ ಕಮಿಟಿಗೆ ಅರ್ಜಿ ಹಾಕಿದ್ದಲ್ಲದೆ ಮಹಾತ್ಮರಿಗೂ ಒಂದು ಕಾಗದವನ್ನು ಬರೆದೆ. ಅದೃಷ್ಟವಶಾತ್ ನನಗೆ ಅವಕಾಶ ಸಿಕ್ಕಿತು. ಸಾಮಾನ್ಯವಾಗಿ ಆಗ ಸತ್ಯಾಗ್ರಹದಲ್ಲಿ ಭಾಗವಹಿಸಲು ಸಂಸ್ಥಾನಗಳ ಪ್ರಜೆಗಳಿಗೆ ಅವಕಾಶವಿರಲಿಲ್ಲ.

ನಾನು ರಾತ್ರಿ ಹಾಸನದಿಂದ ಹೊರಟು (1941) ಧಾರವಾಡ ತಲುಪಿ, ಮಾರನೇ ದಿನ ರಾತ್ರಿ ಸತ್ಯಾಗ್ರಹದಲ್ಲಿ ಭಾಗವಹಿಸಿದೆ, ಮತ್ತು ಅಂದೇ ರಾತ್ರಿ ಸುಮಾರು 10 ಘಂಟೆಗೆ ಬಂಧಿಸಲ್ಪಟ್ಟೆ. ನನ್ನನ್ನು ಬಂಧಿಸಲು ಸುಮಾರು ಇಪ್ಪತ್ತು ಬಂದೂಕುಧಾರಿ ಸಿಪಾಯಿಗಳು ಬಂದಿದ್ದರೂ ನನಗೆ ಭಯವೆನಿಸಲಿಲ್ಲ. ನನಗೆ ಶಿಕ್ಷೆಯಾಗುವವರೆಗೆ ಧಾರವಾಡ ಜೈಲಿನಲ್ಲಿ 10 ಅಡಿ ಅಗಲ ಮತ್ತು 10 ಅಡಿ ಉದ್ದದ ರೂಮಿನಲ್ಲಿ ಇಟ್ಟಿದ್ದರು. ಸುಮಾರು 50-60 ಸತ್ಯಾಗ್ರಹಿಗಳು ಅಲ್ಲಿ ಸ್ವಲ್ಪ ಕಷ್ಟದಿಂದಲೇ ಇದ್ದೆವು. ಶಿಕ್ಷೆ ಆದಮೇಲೆ ನಮ್ಮನ್ನು ಬೆಳಗಾಂವಿ ಜೈಲಿಗೆ ಕಳುಹಿಸಿದರು. ಅದು ಬಹಳ ದೊಡ್ಡ ಜೈಲು (ಬಹುಶಃ ಗೊರೂರು ಗ್ರಾಮಕ್ಕಿಂತಲೂ ದೊಡ್ಡದಿರಬಹುದು). ಸುಮಾರು 800 ಕ್ರಿಮಿನಲ್ ಕೈದಿಗಳಿದ್ದರು; ಸತ್ಯಾಗ್ರಹಿಗಳು ಸುಮಾರು 1000 ಇದ್ದರು. ಸುಮಾರು 6 ತಿಂಗಳ ಕಾಲ ಜೈಲಿನಲ್ಲಿದ್ದು ನಂತರ ಊರಿಗೆ ಬಂದೆ.

1942ರಲ್ಲಿ ಚಳವಳಿ ಪ್ರಾರಂಭವಾದ ಕೂಡಲೇ ಸುಮಾರು 7–8 ದಿವಸಗಳು ಗೌಪ್ಯವಾಗಿ ಕಾಂಗ್ರೆಸ್ ಕಾರ್ಯಕ್ರಮಗಳನ್ನು ಜಾರಿಗೆ ತರಲು ದುಡಿದೆ. ಹಾಸನದ ಹೈಸ್ಕೂಲು ಹುಡುಗರ ಸಹಾಯದಿಂದ ದೊಡ್ಡದೊಡ್ಡ ಸಭೆಗಳನ್ನು ಏರ್ಪಡಿಸಿ ಗಾಂಧೀ ಕಾರ್ಯಕ್ರಮದ ಅಂಶಗಳನ್ನು ಎಲ್ಲರಿಗೂ ತಿಳಿಯುವ ಹಾಗೆ ಏರ್ಪಾಟುಮಾಡಿದೆವು. ಈ ಕಾಲದಲ್ಲಿ ಹಾಸನದಲ್ಲಿದ್ದ ಎಸ್. ಕೆ. ರಾಜಂರವರ ಮನೆಯಲ್ಲಿ ಊಟಮಾಡಿಕೊಂಡು ಎಲ್ಲವನ್ನೂ ಏರ್ಪಾಟುಮಾಡುತ್ತಿದ್ದೆ. ಸುಮಾರು ಹದಿನೈದು ದಿವಸಗಳು ಆದಮೇಲೆ ನನ್ನ ಬಂಧನವಾಯಿತು. $1\frac{1}{2}$ ವರ್ಷಗಳ ಕಾಲ ಹಾಸನ, ಸಾಗರ, ಶಿವಮೊಗ್ಗ ಮತ್ತು ಬೆಂಗಳೂರು ಜೈಲುಗಳಲ್ಲಿ ಡೆಟನ್ಯೂ ಆಗಿ ಇದ್ದೆ. ಊಟದ ದೃಷ್ಟಿಯಿಂದ ಮತ್ತು

ಇತರ ವಿಷಯಗಳ ಬಗ್ಗೆ ಅನುಕೂಲವಿಲ್ಲದುದರಿಂದ ನನ್ನ ಕಾರಾಗೃಹವಾಸ ಅಷ್ಟು ಸುಖಕರವಾಗಿರಲಿಲ್ಲ.

1947ರಲ್ಲಿ ಮೈಸೂರು ಕಾಂಗ್ರೆಸ್ ಜವಾಬ್ದಾರಿ ಸರ್ಕಾರದ ಚಳವಳಿ ಪ್ರಾರಂಭಿಸಿದಾಗ ನನ್ನನ್ನೂ ಬಂಧಿಸಿದರು. ಆಗ ನನ್ನನ್ನು ಚಿಕ್ಕಮಗಳೂರು ಜೈಲಿನಲ್ಲಿ ಇಡಲಾಗಿತ್ತು.

1941ರಲ್ಲಿ ಹಳೇ ಮೈಸೂರಿನಿಂದ ವೈಯಕ್ತಿಕ ಸತ್ಯಾಗ್ರಹದಲ್ಲಿ ಭಾಗವಹಿಸಿದವನು ನಾನೊಬ್ಬನೇ. ಇದಕ್ಕೆ ಏರ್ಪಾಟು ಮಾಡಿದವರು ಧಾರವಾಡದ ಕುರ್ತಕೋಟಿಯವರು. 1942ರಲ್ಲಿ ಮುಖ್ಯವಾಗಿ ನನಗೆ ಸಹಾಯ ಮಾಡಿದವರು ಹಾಸನದ ಲಕ್ಷ್ಮೀಪತಿ ಮತ್ತು ಚಂದ್ರಶೇಖರಯ್ಯ. ಈ ಕೆಲಸದಲ್ಲೆಲ್ಲ ಎಲ್. ಟಿ. ಕಾರ್ಲೆಯವರು ಬಹಳ ಪ್ರಮುಖ ಪಾತ್ರವಹಿಸಿದ್ದರು. ಕೆಲವು ದಿವಸ ನಾವು ಮಲ್ಲೇದೇವರ ಬೆಟ್ಟದ ಮೇಲೆ ಇದ್ದು ಕೆಲಸಕಾರ್ಯಗಳನ್ನು ನಡೆಸುತ್ತಿದ್ದೆವು. ಈ ಸಂದರ್ಭದಲ್ಲಿ ಹಾರನಹಳ್ಳಿ ರಾಮಸ್ವಾಮಿಯವರೂ ಸಹ ಈ ಕೆಲಸಗಳಲ್ಲೆಲ್ಲ ಭಾಗವಹಿಸಿದ್ದರು. ಬೆಂಗಳೂರು ಜೈಲಿನಲ್ಲಿದ್ದಾಗ ಗೊರೂರು ರಾಮಸ್ವಾಮಯ್ಯಂಗಾರ್ಯರೂ ನಮ್ಮೊಡನೆಯೇ ಇದ್ದರು.

ಮೈ.ಹಾ. 9

## ಬಿ. ಎಂ. ಮಂಜಪ್ಪಗೌಡ

ಜನನ : 1910 ಉದ್ಯೋಗ : ಕೃಷಿ ವಿಳಾಸ : ದುದ್ದ, ತಾ॥ ಹಾಸನ

---



1927ರಲ್ಲಿ ಗಾಂಧೀಜಿಯವರು ಹಾಸನಕ್ಕೆ ರೈಲಿನಲ್ಲಿ ಬರುವಾಗ ಅರಸೀಕೆರೆಯಲ್ಲಿ ನಾನೂ ದೊಡ್ಡ ಶ್ಯಾನುಭೋಗ ಸುಬ್ಬರಾಯರೂ ಸ್ಟೇಶನ್ನಿನಲ್ಲಿ ಗಾಂಧೀಜಿಗೆ ಭೇಟಿಕೊಟ್ಟು, ನಾನು ಒಂದು ಚಿಪ್ಪು ಬಾಳೆಹಣ್ಣನ್ನು ಒಪ್ಪಿಸಲು, ಕಸ್ತೂರಬಾ ಅವರು ಅದನ್ನು ಸ್ವೀಕರಿಸಿದರು. ಆಗಿನಿಂದಲೇ ಮಹಾತ್ಮರ ಬಗ್ಗೆ ನನ್ನ ಗಮನಬಿತ್ತು. ಸ್ವದೇಶಾಭಿಮಾನಿ ಪತ್ರಿಕೆಯನ್ನು ಮಂಗಳೂರಿನಿಂದ ತರಿಸಿ ಓದುತ್ತಿದ್ದೆ. 1935-36ರಲ್ಲಿ ಬೆಂಗಳೂರು ಕೋಟೆ ಖಾದಿ ಭಂಡಾರದಲ್ಲಿ ಕಾಂಗ್ರೆಸ್ಸಿನ ನಾಲ್ಕಾಣೆ ಸದಸ್ಯನಾಗಿ ಆಗಿನಿಂದ ಖಾದಿ ಧರಿಸಲು ಆರಂಭಿಸಿದೆನಲ್ಲದೆ, ಶೀಘ್ರವೇ ಎ. ಜಿ. ರಾಮಚಂದ್ರರಾವ್ ಮತ್ತು ಬಿ. ಎನ್. ಬೋರಣ್ಣಗೌಡರ ಪ್ರೋತ್ಸಾಹದಿಂದ ಹಾಸನ

ತಾ|| ಕಾಂಗ್ರೆಸ್ ಜಿ|| ಸೆಕ್ರೆಟರಿ ಆದೆ. ಜೋರಣ್ಣಗೌಡರು ಅಧ್ಯಕ್ಷರು. ನಾನು ಆಗ ವಿಮಾ ಕಂಪನಿಯ ಪ್ರತಿನಿಧಿಯಾಗಿದ್ದುದರಿಂದ ನನ್ನಲ್ಲಿ ಕಾರು ಇದ್ದು ಎಲ್ಲೆಡೆ ಪ್ರವಾಸಕ್ಕೆ ಅನುಕೂಲ ಆಗುತ್ತಿತ್ತು. ಟಿ ಸಿದ್ದಲಿಂಗಯ್ಯ, ಎಚ್. ಕೆ. ವೀರಣ್ಣಗೌಡ, ಟಿ. ಸುಬ್ರಹ್ಮಣ್ಯಂ ಮುಂತಾದ ಮುಖಂಡರುಗಳು ಬಂದಾಗ ಎಲ್ಲೆಡೆ ಅವರನ್ನು ನನ್ನ ಕಾರಿನಲ್ಲಿ ಒಯ್ಯುತ್ತಿದ್ದೆ. ಆಗ ಎಚ್. ಬಿ. ಗುಂಡಪ್ಪಗೌಡರು ಡಿ.ಸಿ.ಸಿ. ಅಧ್ಯಕ್ಷರು; ಎ. ಜಿ. ರಾಮಚಂದ್ರರಾವ್ ಕಾರ್ಯದರ್ಶಿಗಳು.

ಶಿವಪುರ ಕಾಂಗ್ರೆಸ್ಸಿಗೆ ನನ್ನ ಕಾರಿನಲ್ಲಿ ಬಿ. ಚೆಟ್ಟಪ್ಪಗೌಡ, ಬಿ. ಎಚ್. ರುದ್ರಯ್ಯ, ಜೋರಣ್ಣಗೌಡ, ಎ.ಜಿ.ಆರ್., ಗುಂಡಪ್ಪಗೌಡ, ಅರಸೀಕೆರೆ ಡಿ. ವಿ. ರಾಮಸ್ವಾಮಿ, ಹೊಳೆನರಸೀಪುರದ ಸೂರ್ಯನಾರಾಯಣಶೆಟ್ಟಿ, ಹೀಗೆ ಮುಖಂಡರೊಡನೆ ಹೋಗಿ ಬಂದೆ. ಮುಂದೆ ಧ್ವಜಸತ್ಯಾಗ್ರಹದ ಕಾಲಕ್ಕೆ ಒಂದು ತಿಂಗಳು ಕಾಲ ಹಾಸನಕ್ಕೇ ಬರ ಬಾರದೆಂದು ನನ್ನ ಮೇಲೆ ಪ್ರತಿಬಂಧ ಹೇರಿದರು. ಆದರೂ ಗುಟ್ಟಾಗಿ ಕೆಲಸಮಾಡುತ್ತಿದ್ದೆ. 1940ರಲ್ಲಿ ಜಿ|| ಬೋ|| ಚುನಾವಣೆಯಲ್ಲಿ ಹಾಸನ ತಾ||ನಿಂದ ಗುಂಡಪ್ಪಗೌಡರೇ ಕಪ್ಪಣ್ಣಗೌಡರನ್ನು ಸೇರಿಸಿ ಕಾಂಗ್ರೆಸ್ಸಿನ ವಿರುದ್ಧ ಸ್ಪರ್ಧಿಸಲು ನಾನೂ ಎ.ಜಿ.ಆರ್. ಕಾಂಗ್ರೆಸ್ಸಿನ ಪರ ನಿಂತು ಗೆದ್ದೆವು. ಜಿಲ್ಲೆಯ 17 ಸ್ಥಾನಗಳಲ್ಲಿ 15ನ್ನು ನಾವು ಗೆದ್ದೆವು. ಆದರೆ ಅಧಿಕಾರಿಗಳ ಕಪಟ ಧೋರಣೆಯಿಂದ ಸರಕಾರೀ ಪಕ್ಷದವರು ಅಧ್ಯಕ್ಷರಾದರು. 1944ರಲ್ಲೂ ನಾನೇ ಆರಿಸಿ ಬಂದೆ.

1942ರಲ್ಲಿ, ನಮ್ಮ ಮುಖಂಡರ ಸೂಚನೆಯಂತೆ ತಂತಿ ಕತ್ತರಿಸುವುದು, ವಿದ್ಯುತ್‌ಕಂಬ ಸುಡುವುದು, ಸ್ವಯಂಸೇವಕರಿಗೆ ಊಟೋಪಚಾರ ಮುಂತಾದ ಭೂಗತ ಕೆಲಸಮಾಡಿದೆವು. ದುದ್ದ-ಹಾಸನದ ನಡುವೆ ಟೆಲಿಗ್ರಾಫ್ ತಂತಿ ಕತ್ತರಿಸಿ ಹಾಕಿದೆವು. ವೆಂಕಟಪ್ಪ, ದಲುಸಯ್ಯ ನನ್ನ ಜೊತೆ ಸಹಕರಿಸಿದರು. ನಮ್ಮ ಹಳ್ಳಿಯ ರೈತರೂ ಪಟೇಲರೂ ಚೇರ್ಮನ್ನರೂ ಸಹಕರಿಸಿದ್ದರು. ಆಗಸ್ಟ 20ಕ್ಕೆ ನನ್ನನ್ನು ಬಂಧಿಸಿ ಹಾಸನದಲ್ಲಿ ಇರಿಸಿ, ಅಲ್ಲಿಂದ ಬೆಂಗಳೂರಿಗೆ, ಅಲ್ಲಿಂದ 5-12-1942ಕ್ಕೆ ನನ್ನನ್ನೂ ಶೇಷಾದ್ರಿ ಎಂಬವರನ್ನೂ ಹಾಸನಕ್ಕೆ ವರ್ಗಾಯಿಸಿದರು. ಮುಂದೆ ಒಂದು ವಾರದಲ್ಲಿ ಎಲ್. ಟಿ. ಕಾರ್ಲೆ, ಎಸ್. ವಿ. ಕೃಷ್ಣಮೂರ್ತಿ, ಎಚ್. ಎಸ್. ದೊರೆಸ್ವಾಮಿ, ಕ್ಯಾಪ್ಟನ್ ರಾಮಸ್ವಾಮಿ, ಭಾಷ್ಯಂ, ಗಂಗಿರೆಡ್ಡಿ, ಗೊರೂರು ಮುಂತಾದ 40 ಜನರನ್ನು ಸಾಗರಕ್ಕೆ ಕಳುಹಿಸಿದರು. ಮುಂದೆ 15-20 ದಿನಗಳಲ್ಲಿ 80 ಜನರನ್ನು ಶಿವಮೊಗ್ಗ ಜೈಲಿಗೆ ಕಳುಹಿಸಿದರು. 1943ರ ಮೇ 20ಕ್ಕೆ ಎಲ್. ಟಿ. ಕಾರ್ಲೆ, ನನ್ನ ಬಿಡುಗಡೆ ಆಯಿತು.

1947ರಲ್ಲಿ ಹಾಸನದಲ್ಲಿ ನನ್ನನ್ನು ಬಂಧಿಸಿದರು. ಹಾಸನ, ಚಿಕ್ಕಮಗಳೂರು, ಕೃಷ್ಣರಾಜಪುರಂ ಕ್ಯಾಂಪ್ ಜೈಲುಗಳಲ್ಲಿ ಇದ್ದು ಬಿಡುಗಡೆ ಆದೆ.

ಮೈ.ಹಾ. 10

# ಎಚ್. ಆರ್. ಸಂಜೀವಯ್ಯ

ಜನನ : 1904 ಉದ್ಯೋಗ : ಕೃಷಿ ವಿಳಾಸ : ಹಲಸಿನಹಳ್ಳಿ, ತಾ॥ ಹಾಸನ



ಬಲು ಹಿಂದಿನಿಂದಲೂ ನಾನು ಕಾಂಗ್ರೆಸ್ಸಿನಲ್ಲಿ ಕೆಲಸ ಮಾಡಿದ್ದೇನಲ್ಲದೆ ಶಿವಪುರ, ವಿದುರಾಶ್ವತ್ಥ ಕಾಂಗ್ರೆಸ್ಸಗಳಿಗೂ ಹೋಗಿ ಬಂದಿದ್ದೇನೆ. ಎಚ್. ಬಿ. ಗುಂಡಪ್ಪಗೌಡರು, ಬಿ. ಎನ್. ಬೋರಣ್ಣಗೌಡರು, ಡಿ. ಬಿ. ಕರೀಗೌಡರು ಇವರೊಡನೆ ದುಡಿದಿದ್ದೇನೆ. ಮುಂದೆ ಗುಂಡಪ್ಪಗೌಡರು ಕಾಂಗ್ರೆಸ್ಸು ಬಿಟ್ಟಾಗ ಅವರ ವಿರುದ್ಧ ಕೆಲಸಮಾಡಿದೆ.

1942ರಲ್ಲಿ ಸಾಲಗಾಮೆ, ಹಳೇಬೀಡು, ಜಾವಗಲ್ಲು, ಗಂಡಸಿ, ಯಲಗುಂದ, ಹೆಗರೆ, ದುದ್ದ, ಹುಲ್ಲಗುಂಡಿ ಮುಂತಾದ ಕಡೆಗಳಲ್ಲಿ ವಾರದ ಸಂತೆಯಲ್ಲಿ ಸುಂಕ ತೆರದಂತೆ ಇತರ ಸಹಕಾರಿಗಳ ಜೊತೆ ಹೋಗಿ ಪ್ರಚಾರಮಾಡಿದೆ. ಸೇಂದಿ, ಸಾರಾಯಿ ಅಂಗಡಿಗಳ ಮುಂದೆ ಕೂಡ ಪಿಕೆಟಿಂಗ್ ಮಾಡಿದೆವು. ಫಾರೆಸ್ಟ್, ಅಮೃತಮಹಲ್ ಕಾವಲುಗಳಲ್ಲೇ ಜಾನುವಾರುಗಳನ್ನು ಮೇಯಿಸುವಂತೆ ಪ್ರಚಾರ ಕೂಡ ಮಾಡಿದೆವು. ಆಡುಗೂರು ಮಡಿವಾಳಪ್ಪ, ದಾಸರಕೊಪ್ಪಲು ಮಳಿಪ್ಪ, ದುದ್ದದ ಮಂಜಪ್ಪ, ಹಾರುವನಹಳ್ಳಿಯಲ್ಲಿ 8 ಜನ, ನಿಟ್ಟೂರಿನಲ್ಲಿ 6 ಜನ, ಗಂಗೂರಲ್ಲಿ 20 ಜನ, ರಾಮೇದೇವರಪುರದಲ್ಲಿ ಇಬ್ಬರು ಹೀಗೆ ಅನೇಕರು ನನ್ನ ಜೊತೆ ಕೆಲಸಮಾಡಿ, ಶಿಕ್ಷೆ ಅನುಭವಿಸಿದರು. ಆಗಿನ ನಮ್ಮ ಚಳವಳಿ ಅಡಗಿಸಲು ಕುದುರೆಸವಾರರ ಮಿಲಿಟರಿ ಬಂದು ಯಲಗುಂದ ಫಾರೆಸ್ಟ್ ಲಾಜ್‌ನಲ್ಲಿ ಕ್ಯಾಂಪ್‌ಮಾಡಿ ಒಂದು ತಿಂಗಳು ಕಾಲ ಇದ್ದು ಹಳ್ಳಿಗರಿಗೆಲ್ಲ ತೀರ ತೊಂದರೆ ಕೊಟ್ಟಿತು. ನನ್ನ ತಮ್ಮ ಸೋಮಣ್ಣ, ಸಾಲಗಾಮೆ ರಾಜಣ್ಣ ಹಾಗೂ ಇತರರನ್ನು 3-12-42ರಂದು ಬಂಧಿಸಿ ನನಗೆ ಮೂರೂವರೆ ವರ್ಷ ಶಿಕ್ಷೆ, 600 ರೂ. ಜುಲ್ಮಾನೆ ವಿಧಿಸಿದರು. (ಖಟ್ಲೆ ನಂ 52—42-43; ಮತ್ತು ನಂ. 41—42-43-ಹಾಸನ). ಮುಂದೆ 16-6-44ರಂದು ಬೆಂಗಳೂರು ಜೈಲಿನಿಂದ ಬಿಡುಗಡೆ ಆದೆ.

ಮೈ.ಹಾ. 11

# ನಿಟ್ಟೂರು ದೊಡ್ಡಯ್ಯ ಶೆಟ್ಟಿ

ಜನನ : ?    ಉದ್ಯೋಗ : ಕೂಲಿ    ವಿಳಾಸ : ಚಿಕ್ಕಮುಂಡಿಗನಹಳ್ಳಿ, ತಾ॥ ಹಾಸನ

---



1942ರ ಫೆಬ್ರವರಿಯಲ್ಲಿ ಯಶೋಧರಮ್ಮ ದಾಸಪ್ಪ ಅವರು ನಮ್ಮ ಊರ ಶ್ರೀ ಜೋಧೇಶ್ವರಸ್ವಾಮಿ ಮಠದಲ್ಲಿ ಭಾಷಣಮಾಡಿ ನಮ್ಮಲ್ಲಿ ರಾಷ್ಟ್ರೀಯ ಜಾಗೃತಿಗೆ ಕಾರಣರಾದರು. 1942ರ ಚಳವಳಿ ಶುರು ಆದಾಗ ನಾವು ಸುತ್ತಲ ಗ್ರಾಮಗಳಲ್ಲಿ ಕಂದಾಯ ಕೊಡಬೇಡಿರೆಂದೂ ಸಂತೆಗಳಲ್ಲಿ ಸುಂಕ ತೆರಬೇಡಿರೆಂದೂ ಪ್ರಚಾರಮಾಡಿದೆವು. ನಮ್ಮ ಊರ ಶಿವಲಿಂಗಯ್ಯ, ಕಾಳಾಚಾರಿ, ಸೊಪ್ಪಿನ ಹಳ್ಳಿ ಕಾಳೇಗೌಡ, ಹಲಸಿನಹಳ್ಳಿ ಸಂಜೀವೇಗೌಡ ಇನ್ನೂ ಅನೇಕರು ಪ್ರಚಾರಕ್ಕೆ ಬರುತ್ತಿದ್ದರು. ಸೇಂದಿ ಅಂಗಡಿಗಳನ್ನೂ ಲೂಟಿಮಾಡಿದೆವು. ಜಾವಗಲ್ ಸಂತೆಯಲ್ಲಿ ಸುಂಕ ತೆರಬೇಡಿರೆಂದು ಭಾರಿ ಸಭೆ ಸೇರಿಸಿ ಪ್ರಚಾರಮಾಡಿದೆವು. ಪೋಲಿಸರು ಬಂದಾಗ ನಾವು ಕಾಡಿಗೆ ಬಿದ್ದೆವು. ಒಂದು ದಿನ ಬೆಳಗ್ಗೆಯೇ ನಮ್ಮ ಊರನ್ನು 300 ಮಿಲಿಟರಿ, ಕುದುರೆಸವಾರರ ಸಹಿತ ಮುತ್ತಿ, 50-60 ಜನರನ್ನು ಹಿಡಿದು ಯಲಗುಂದ ಟಿ.ಬಿ.ಗೆ ಒಯ್ದು ನಮ್ಮ ಊರ 10 ಜನರನ್ನು ಬಂಧಿಸಿದರು: ನಾನು, ನಂಜೇಗೌಡ, ಸಾಂಬಯ್ಯ, ಮುಪ್ಪಣ್ಣಯ್ಯ, ಶಿವಲಿಂಗಯ್ಯ, ಮಾದೇಗೌಡ, ಸಿದ್ದಪ್ಪ, ರಂಗಯ್ಯ, ಬಸವೇಗೌಡ, ಕಾಳಾಚಾರಿ. ಹಾಸನದಲ್ಲಿ ನಮಗೆ 8 ತಿಂಗಳು ಕಠಿಣ ಶಿಕ್ಷೆ, 200 ರೂ. ದಂಡ, ದಂಡ ತೆರದೆ ಇದ್ದಲ್ಲಿ 2 ತಿಂಗಳು ಶಿಕ್ಷೆ ವಿಧಿಸಿದರು (29-10-1942). ದಂಡ ವಸೂಲಿ ಮಾಡಿದರು. ಹಾಸನ ಜೈಲಿನಲ್ಲಿ ಕೆಲವು ದಿನ ಇದ್ದು, ಮುಂದೆ ಮೈಸೂರು ಜೈಲಿಗೆ ರವಾನಿಸಿದರು. ಅಲ್ಲಿ ಊಟ ತಿಂಡಿ ವ್ಯವಸ್ಥೆ ಸರಿ ಇರದಿದ್ದರಿಂದ 1-6-43ರಿಂದ ಐದು ದಿನ ಪೂರ್ತಿ ಉಪವಾಸ ಸತ್ಯಾಗ್ರಹ ಮಾಡಿದ್ದೆವು. ಹಾಸನ ಜೈಲಿನಲ್ಲಿ ನಮ್ಮ ಜೊತೆ ಬೋರಣ್ಣಗೌಡರು, ಕಣಗಾಲ್ ಕೆ. ಪಿ. ಚಿಕ್ಕೇಗೌಡ, ಅಡಿಗೂರು ಮಡಿವಾಳಪ್ಪ, ಕೆ. ಹನುಮಂತಯ್ಯ ಇವರೆಲ್ಲ ಇದ್ದರು. 1-9-1943ಕ್ಕೆ ಬಿಡುಗಡೆ ಆಯಿತು.

ಚಳವಳಿ ಕಾಲಕ್ಕೆ ನಿಟ್ಟೂರಲ್ಲಿ ಇದ್ದ 2-3 ಎಕರೆ ಜಮೀನು ಕಳೆದುಕೊಂಡು, ಈಗ ಜೀವನಕ್ಕೆ ಕೂಲಿಮಾಡುತ್ತಿದ್ದೇನೆ.

ಮೈ.ಹಾ. 12

# ಬಸವೇಗೌಡ

ಜನನ: 1913 ಉದ್ಯೋಗ: ಕೂಲಿ ವಿಳಾಸ: ನಿಟ್ಟೂರು, ತಾ|| ಹಾಸನ



ಫೆ. 1942ರಲ್ಲಿ ಯಶೋಧರಮ್ಮನವರ ಭಾಷಣದಿಂದಲೇ ನಮ್ಮ ಊರಲ್ಲಿ ಜಾಗೃತಿ ಆಯಿತು. ನಮ್ಮ ಊರ ಪ್ರಮುಖ ಕಾರ್ಯಕರ್ತ ನಂಜೇಗೌಡರ ಮಾರ್ಗದರ್ಶನದಲ್ಲಿ ಕೆಲಸವನ್ನು ಆರಂಭಿಸಿ ಊರಲ್ಲಿ ಧ್ವಜ ಹಿಡಿದು ಮೆರವಣಿಗೆ ಮಾಡಿದೆವು. ಕಂದಾಯ ಕೊಡದಿರಲು ಸುತ್ತಲ ಹಳ್ಳಿಯಲ್ಲಿ ಪ್ರಚಾರ ಮಾಡಿದೆವು. ಸೇಂದಿ ಅಂಗಡಿ ಲೂಟಮಾಡಿದೆವು. ಮಂಗಳವಾರ ಜಾವಗಲ್ ಸಂತೆಗೆ ಹೋಗಿ, ಸುಂಕ ಕೊಡಬೇಡಿರೆಂದು ಪ್ರಚಾರ ಮಾಡಿದೆವು (23-10-42). ಪೋಲಿಸರು ಲಾಠೀಚಾರ್ಜು ಮಾಡಲು ಜನ ಚದರಿದರು. ನಾವು ಪಾರಾಗಿ ರಾತ್ರಿ ಹಳೇಬೀಡು ಸೇರಿದೆವು. ಬೆಳಗ್ಗೆ ಅಲ್ಲಿ ಸಭೆ ಸೇರಿಸಿ ಭಾಷಣ ಮಾಡಿ ಸೇಂದಿ ಅಂಗಡಿ ಲೂಟಿ ಮಾಡಿದೆವು. ಪೋಲಿಸರು ಬರಲು ಅವರಿಗೆ ಖಾದಿ ಟೋಪಿ ಹಾಕಿ ಜಯಕಾರ ಮಾಡಿದೆವು. ಅವರಿಗೆ ಅವಮಾನವಾಯಿತು. 14 ಮೈಲಿ ನಡೆದು ನಿಟ್ಟೂರಿಗೆ ಬಂದೆವು.

ಮರುದಿನ ಬೆಳಗಾಗುವ ಮೊದಲೇ ಮಿಲಿಟರಿ ಊರಿಗೆ ಸುತ್ತುಹಾಕಿ 40–50 ಜನರನ್ನು ಹಿಡಿದು ಯಲಗುಂದಕ್ಕೆ ಒಯ್ದು ನಮ್ಮ ಪೈಕಿ 10 ಜನರನ್ನು ಮಾತ್ರ ಬಂಧಿಸಿದರು (25-10-1942). ಮುಂದೆ ಹಾಸನಕ್ಕೆ ಮೊಕದ್ದಮೆ ಹೂಡಿ, ಕಂದಾಯ ಪಾವತಿ ಮಾಡದಂತೆ ಜನರಿಗೆ ಬೋಧನೆಮಾಡಿದ ಆಪಾದನೆಗಾಗಿ 8 ತಿಂಗಳು ಶಿಕ್ಷೆ, 200 ರೂ. ದಂಡ ಆಯಿತು (29–10–42). ದನಕರುಗಳನ್ನು ಜಪ್ತಿಮಾಡಿ ಜುಲ್ಮಾನೆ ವಸೂಲು ಮಾಡಿದರು. ಜೈಲಿನಲ್ಲಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರೂ ಮುಗಳವಳ್ಳಿ ಬೋರಣ್ಣಗೌಡರೂ ನಮಗೆ ಧೈರ್ಯ, ಉತ್ಸಾಹ ತುಂಬಿದರು. 10–11–42ಕ್ಕೆ ಮೈಸೂರು ಜೈಲಿಗೆ ವರ್ಗಾಯಿಸಿದರು.

ಹಿಂದೆ ಇದ್ದ ಪಿತ್ರಾರ್ಜಿತ ಆಸ್ತಿಯೆಲ್ಲವೂ ಕೈತಪ್ಪಿತು. ಈಗ ಜಿರಾಯಿತು ಕಸುಬು ಮಾಡಿಕೊಂಡು ಇದ್ದೇನೆ.

ಸ್ವಾ.ಹೋ. 13

# ಕಾಳಾಚಾರಿ

ಜನನ : 1923 ಉದ್ಯೋಗ : ಕಮ್ಮಾರ ವಿಳಾಸ : ನಿಟ್ಟೂರು, ತಾ|| ಹಾಸನ



ನಮ್ಮ ಊರ ನಾಯಕರಾದ ಸಂಜೀಗೌಡ ಮತ್ತು ಸಾಂಬಯ್ಯ ಇವರ ಮಾರ್ಗದರ್ಶನದಂತೆ ನಮ್ಮ ಊರಲ್ಲಿ 1942ರಲ್ಲಿ ಮೆರವಣಿಗೆ ನಡೆಸಿ ಮಠದಲ್ಲಿ ಸಭೆ ನಡೆಸಿದೆ ವಲ್ಲದೆ, ಸುತ್ತಲ ಗ್ರಾಮಗಳಲ್ಲಿ ಕರನಿರಾಕರಣ ಪ್ರಚಾರ ಮಾಡಿದೆವು. ಜಾವಗಲ್ ಸಂತೆಯಲ್ಲಿ ನಮ್ಮ ಊರವರು ಹೋಗಿ ಸುಂಕ ಕೊಡಬಾರದೆಂದು ಪ್ರಚಾರ ಮಾಡು ವಾಗ ಲಾಠಿ ಚಾರ್ಜ್ ಆಯಿತು. ನಾವು ತಪ್ಪಿಸಿ ಕೊಂಡು ರಾತ್ರಿ ಹಳೇಬೀಡಿಗೆ ಬಂದು ಮರುದಿನ ಆ ಊರಲ್ಲೂ ಸಭೆ ನಡೆಸಿದೆವು. ಅಲ್ಲಿ ಬಂದ ಒಬ್ಬ ಪೋಲಿಸನಿಗೆ ಗಾಂಧಿಟೋಪಿ ಹಾಕಿ ಅವಮಾನ ಮಾಡಿದೆವು. ಮರುದಿನ ಬೆಳಗ್ಗೆ ಮಿಲಿಟರಿ ಬಂದು ಊರನ್ನು ಸುತ್ತುವರಿದು ನಮ್ಮನ್ನು ಬಂಧಿಸಿತು. ನಮ್ಮ ಊರ 10 ಜನಕ್ಕೆ ಹಾಸನ ಅಡಿಷನಲ್ ಮ್ಯಾಜಿಸ್ಟ್ರೇಟರು 8 ತಿಂಗಳ ಕಠಿಣ ಶಿಕ್ಷೆ, 200 ರೂ. ಜುಲ್ಮಾನೆ ವಿಧಿಸಿದರು. ನಮ್ಮ ದನಕರುಗಳನ್ನು ಜಪ್ತಿಮಾಡಿ ದಂಡ ವಸೂಲು ಮಾಡಿದರು. ಹಾಸನ ಜೈಲು, ಮುಂದೆ ಮೈಸೂರು ಜೈಲುಗಳಲ್ಲಿ ಇದ್ದೆವು. ಅಲ್ಲಿ ಊಟದ ತೊಂದರೆ ಆದಾಗ ಚಾಮರಾಜನಗರದ ಟಿ. ಕೃಷ್ಣಪ್ಪ ಎಂಬುವರು ಈ ಬಗ್ಗೆ ನಾವು ನಡೆಸಿದ ಹೋರಾಟಕ್ಕೆ ನೆರವಾದರು. ಅವರು ಶಿಕ್ಷೆ ಮುಗಿಸಿ ಹೊರಗೆ ಹೋದವರು ಹೊರಗಡೆ ಈ ಬಗ್ಗೆ ಪ್ರಚಾರ ಮಾಡಲು, ಇದರಿಂದ ಹಾಹಾಕಾರವಾಗಿ ಪರಿಸ್ಥಿತಿ ಸುಧಾರಿಸಿತು. ಈಸೂರು ಜನರನ್ನು ಫಾಶಿಗೆ ಏರಿಸಿದ ದಿನ ನಾವು ಉಪವಾಸ ಇದ್ದೆವು.

ಸ್ವಾ.ಹೋ. 14

# ಎಸ್. ಬಸವೇಗೌಡ

ಜನನ : 1923 ಉದ್ಯೋಗ: ಸರಕಾರಿ ನೌಕರಿ ವಿಳಾಸ: ಪಂಪ್‌ಹೌಸ್ ರಸ್ತೆ, ಬೇಲೂರು

ನನ್ನ ಆಪ್ತಬಂಧುಗಳಾಗಿದ್ದ ದಿ|| ಬಿ. ಎನ್. ಬೋರಣ್ಣಗೌಡ (ಇತ್ತೀಚೆಗೆ 2-8-74 ರಂದು ತೀರಿಕೊಂಡರು) ಈ ರಾಜಕೀಯದಲ್ಲಿ ನನ್ನ ಗುರುಗಳು. ನಾನು ಸಾಣೇನಹಳ್ಳಿ



ಯಲ್ಲಿ ಓದುತ್ತಿದ್ದಾಗ 1934ರಲ್ಲಿ ಪ್ರಜಾಪ್ರತಿನಿಧಿ ಸಭೆಯ ಚುನಾವಣೆಗೆ ಬೋರಣ್ಣಗೌಡರು ನಮ್ಮ ಊರಿಗೆ ಪ್ರಚಾರಕ್ಕೆ ಬಂದಾಗಿನಿಂದ ನನಗೆ ಅವರ ಸಂಪರ್ಕವಾಯಿತು. 1942ರಲ್ಲಿ ನಾನು ಹಾಸನದಲ್ಲಿ ಎಸ್.ಎಸ್.ಎಲ್.ಸಿ. ಓದುತ್ತಿದ್ದಾಗ ಚಳವಳಿಯಲ್ಲಿ ಬೋರಣ್ಣಗೌಡರ ಆದೇಶದಂತೆ ಪಾಲುಗೊಂಡೆ. ನಾನು ಬಡವಿದ್ಯಾರ್ಥಿಯಾಗಿದ್ದುದರಿಂದ ನನಗೆ ಆಗ ಸ್ಕಾಲರ್ ಶಿಪ್ ಬರುತ್ತಿತ್ತು. ನಾನು ಶಾಲೆ ಬಿಡುವಂತೆ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಪಿಕೆಟಿಂಗ್ ಪ್ರಾರಂಭಿಸಲು ಹೆಡ್ಮಾಸ್ಟರರು ನನ್ನನ್ನು ಕರೆಸಿ, ನೀನು ಚಳವಳಿಯಲ್ಲಿ ಭಾಗವಹಿಸಿದ್ದೇ ಆದರೆ ಮೂರು ವರ್ಷಗಳಿಂದ ಪಡೆದಿರುವ ಸ್ಕಾಲರ್‌ಶಿಪ್ ಹಣ ವಾಪಸು ಕೊಡಬೇಕಾಗುತ್ತದೆ ಮತ್ತು ಮೂರು ವರ್ಷ ಶಾಲೆಯಿಂದ ಡಿಬಾರ್ ಮಾಡಲಾಗುತ್ತದೆ ಎಂದು ಹೆದರಿಸಿದರು. ಆದರೆ ನಾನು ಹಿಂಜರಿಯದೆ ನಮ್ಮ ಊರಿಗೆ ಮರಳಿ, ಬೋರಣ್ಣಗೌಡರ ಸೂಚನೆಯಂತೆ, ಅವರು ಹೇಳಿದ್ದ ವ್ಯಕ್ತಿಗಳ ಸಂಪರ್ಕ ಮಾಡಿದೆ. ಸೊಪ್ಪಿನಹಳ್ಳಿ ಕುಳ್ಳೇಗೌಡರು ನಮ್ಮ ಭಾಗದಲ್ಲಿ ಗಂಗೂರು, ನಿಟ್ಟೂರು, ಯಲಗುಂದ ವಗೈರೆ ಗ್ರಾಮಗಳಿಗೆ ಪ್ರಮುಖರಾಗಿದ್ದು, ಬೋರಣ್ಣಗೌಡರ ಸೂಚನೆ ತಿಳಿಸಿದ ತಕ್ಷಣ ಅವರು ಸಂತೋಷದಿಂದ ಸಹಕರಿಸಲು ಒಪ್ಪಿದರು. ಅದಲ್ಲದೆ ಗಂಗೂರಿನ ಮಲ್ಲೇಗೌಡರು, ಸಾಣೇನಹಳ್ಳಿ ಅಖಂಡಶೆಟ್ಟರು, ಲಕ್ಕಜ್ಜೇಗೌಡರು, ರುದ್ರೇಗೌಡರು, ನಿಂಗೇಗೌಡರು, ಹೊನ್ನಾಚಾರ್ಯರು ಮುಂತಾದವರೂ ಸಹಕರಿಸಿದರು. ಆಗಲೇ ಬೋರಣ್ಣಗೌಡರು, ಕೆ. ಸಿ. ಪುಟ್ಟೇಗೌಡರು ಮುಂತಾದ ಹಿರಿಯರ ಬಂಧನ ಆಗಿತ್ತು. ಮತಿಘಟ್ಟ, ಅಡಗೂರು ಗ್ರಾಮಗಳಿಗೂ ನಾನು ಪ್ರವಾಸಕ್ಕೆ ಹೋದೆ. ನಮ್ಮ ಊರ ಜನರೇ ನಮ್ಮ ಚಲನವಲನಗಳ ಬಗ್ಗೆ ಪೋಲಿಸರಿಗೆ ವರದಿ ಮಾಡುತ್ತಿದ್ದುದರಿಂದ ರಾತ್ರಿ ಹೊತ್ತೇ ನಮ್ಮ ಚಟುವಟಿಕೆ ಸಾಗಬೇಕಿತ್ತು. ಜಾವಗಲ್, ಹಳೇಬೀಡು ಸಂತೆಗಳಿಗೆ ಹಿಂದಿನ ರಾತ್ರಿ ಹೋಗಿ ಸಂತೆಯಲ್ಲಿ ಸುಂಕ ಕೊಡದಂತೆ ಪ್ರಚಾರ, ಹರಿಜನ ಕಾಲೊನಿಗಳಲ್ಲಿ ಹೆಂಡ ಕುಡಿಯದಂತೆ ಪ್ರಚಾರ, ಹೆಂಡದಂಗಡಿಗಳ ಮುಂದೆ ಪಿಕೆಟಿಂಗ್, ಮರಗಳಿಗೆ ಕಟ್ಟಿದ ಹೆಂಡದ ಗಡಿಗೆ ಒಡೆಯುವುದು, ಮುಂತಾದ ಚಟುವಟಿಕೆ ನಡೆಸಿದೆವು. ಬೋರಣ್ಣಗೌಡರ ಬಂಧನದ ಪ್ರತಿಭಟನಾರ್ಥ 16-9-42ರಂದು ಬೇಲೂರಲ್ಲಿ ಬೃಹತ್ ಪ್ರದರ್ಶನ ಆರಂಭಿಸಬೇಕೆಂದು 5-9-42ರ ನಮ್ಮ ಗುಪ್ತಸಭೆಯಲ್ಲಿ ತೀರ್ಮಾನಿಸಿತು. ಈ ಮಧ್ಯೆ ಜಾವಗಲ್ ಸಂತೆ, ಹಳೇಬೀಡು ಸಂತೆಯಲ್ಲಿ ಸುಂಕ ಕೊಡದಂತೆ ಪಿಕೆಟಿಂಗ್, ಹೆಂಡದಂಗಡಿ ನಾಶಗಳ ಬಗ್ಗೆ ಕೆಲಸ ನಡೆದಿತ್ತು. 16-9-42ರಂದು ಬೇಲೂರು ಟೌನ್ ಹಾಲ್ ಬಳಿ ಮೈದಾನಿನಲ್ಲಿ ಸಾವಿರಾರು ಸಂಖ್ಯೆಯಲ್ಲಿ ಜನ ಪ್ರದರ್ಶನಕ್ಕಾಗಿ ನೆರೆದರು. ಬಿ. ಎಸ್. ಚಿದಂಬರಶೆಟ್ಟಿ, ಬಿ. ಸಿ ಗುಂಡಶೆಟ್ಟಿ ಇತ್ಯಾದಿ ಮುಖಂಡರನ್ನು ಬಂಧಿ

ಸಿದರು. ನಮ್ಮ ಊರ ಕಾರ್ಯಕರ್ತರು ತಪ್ಪಿಸಿಕೊಂಡೆವು. ಚನ್ನರಾಯಪಟ್ಟಣದಲ್ಲಿ ತೀರ ಗಲಭೆಗಳಾಗಿ ಹೆಚ್ಚಿನ ಪೋಲಿಸರು ಅಲ್ಲಿಗೆ ಹೋಗಿದ್ದರಿಂದ, ನಾವು ಜಾವಗಲ್, ಹಳೇಬೀಡು ಸಂತೆಗಳಲ್ಲಿ ಹೆಂಡದಂಗಡಿ ಲೂಟಿಮಾಡಿದೆವಲ್ಲದೆ ಸಂತೆ ಕಂಟ್ರಾಕ್ಟ್‌ದಾರನು ಸುಂಕ ವಸೂಲುಮಾಡದಂತೆ ತಡೆದೆವು. ಆಗ ಬೇಲೂರಿನ ಅಮಲ್ದಾರ್ ಡಿ. ಬಸವರಾಜೇ ಅರಸರು ನಮ್ಮ ಗ್ರಾಮಕ್ಕೆ ಬಂದು ನನ್ನನ್ನು ಮತ್ತೆ ಸ್ಕೂಲಿಗೆ ಕಳುಹಿಸುವಂತೆ, ಸ್ಕಾಲರ್ ಶಿಪ್‌ನ್ನು ಮತ್ತೆ ಕೊಡಿಸುವ ಆಶ್ವಾಸನೆಯ ಮೇಲೆ ವಿನಂತಿ ಮಾಡಿದರು. ಆದರೆ ಈ ಹೋರಾಟ ಮುಗಿಯುವ ತನಕ ಶಾಲೆಗೆ ಹೋಗುವುದಿಲ್ಲವೆಂದು ಅವರಿಗೂ ನನ್ನ ತಂದೆಯವರಿಗೂ ಖಚಿತವಾಗಿ ಹೇಳಿದೆನು. ಆಗ ಅವರು ನನ್ನ ಬಂಧನಕ್ಕೆ ಸೂಚನೆ ಕೊಟ್ಟರು. ಆದರೆ ನಾನೂ ನಮ್ಮ ಸ್ನೇಹಿತರೂ ಹಗಲೆಲ್ಲ ತೋಟಗಳಲ್ಲಿ ಇದ್ದು ರಾತ್ರಿ ಊರೂರು ತಿರುಗುತ್ತ ಪ್ರಚಾರ, ಈಚಲಮರದ ಗಡಿಗೆ ಒಡೆಯುವುದು ನಡೆಸಿದ್ದೆವು. ಅಕ್ಟೋಬರ್ ಕೊನೆಯ ವಾರದಲ್ಲಿ ಹಳೇಬೀಡು, ಜಾವಗಲ್ ಸಂತೆಗಳಲ್ಲಿ ಹೆಂಡದ ಪೀಪಾಯಿ ಒಡೆದುಹಾಕಿದ್ದು ವಿಕೋಪಕ್ಕೆ ಹೋಗಿ, ರೈತರು ದಂಗೆ ಏಳುವಂಥ ಪರಿಸ್ಥಿತಿ ಸರಕಾರಕ್ಕೆ ಗೋಚರ ಆಯಿತು.

29–10–42ರಂದು ಮ್ಯಾಜಿಸ್ಟ್ರೇಟರೂ ಅಮಲ್ದಾರರೂ 200 ರಿಜರ್ವ್ ಪೋಲಿಸರು ಬೆಳಗ್ಗೆ ನಾಲ್ಕು ಗಂಟೆಗೇ ನಮ್ಮ ಮನೆಯನ್ನು ಮುತ್ತಿದರು. ಬೇಕಾದವರನ್ನು ತಂದು ಒಪ್ಪಿಸದಲ್ಲಿ ಊರನ್ನು ನಾಶಮಾಡುವುದಾಗಿ ಊರ ಮುಖಂಡರನ್ನು ಬೆದರಿಸಿದರು. ನನ್ನಿಂದ ಊರಿಗೆ ತೊಂದರೆ ಬೇಡವೆಂದು ನಾನೇ ಪೋಲಿಸರ ವಶವಾದೆ. ನಮ್ಮ ಊರು, ಗಂಗೂರು ಹಾಗೂ ಮತಿಘಟ್ಟ ಗ್ರಾಮಗಳಿಂದ ಒಟ್ಟು 15 ಜನಗಳನ್ನು ಹಿಡಿದರು. ಅಲ್ಲಿಂದ ಹಳೇಬೀಡಿಗೆ ನಡಿಗೆಯಲ್ಲೇ ಕರೆದುತಂದು, ಅಲ್ಲಿಂದ ವ್ಯಾನಿನಲ್ಲಿ ಸಕಲೇಶಪುರಕ್ಕೆ ಒಯ್ದು ರಿಮ್ಯಾಂಡಿನಲ್ಲಿಟ್ಟರು. 30–10–42ರಂದು ಹಾಸನಕ್ಕೆ ಕರೆದೊಯ್ದು, ಸೆಂಟ್ರಲ್ ಪೋಲಿಸ್ ಸ್ಟೇಶನ್‌ನ ತಳಭಾಗದಲ್ಲಿ ಕೂಡಿಹಾಕಿ ಅಪಾಲಜಿ ಬೇಡುವಂತೆ ಹೆದರಿಸಿದರು. ಊಟ ಸಹ ಕೊಡಲಿಲ್ಲ; ಬರಿನೆಲದಲ್ಲಿ ಮಲಗಬೇಕಾಯಿತು. ಆದರೆ ನನ್ನ ಮಾತು ಕೇಳಿ ಯಾರೂ ಅಪಾಲಜಿ ಬರೆದುಕೊಡಲಿಲ್ಲ. ಸಿ.ಸಿ. ನಂ. 41 (42–43ರದು) ಖಟ್ಲೆ ಹಾಕಿದರೂ ವಿಚಾರಣೆ ಆಗದೇ, 7–5-43ರಂದು ನನ್ನ ಬಿಡುಗಡೆ ಆಯಿತು. ಆಗ ಚಳವಳಿ ನಿಂತುದರಿಂದ 1944ರಲ್ಲಿ ಎಸ್.ಎಸ್.ಎಲ್.ಸಿ. ತೇರ್ಗಡೆ ಆಗಿ ಮುಂದೆ ಸರಕಾರಿ ನೌಕರಿಗೆ ಸೇರಿದೆ.

ಪ್ರ.ಶಾ. 15

# ಪಟೇಲ್ ಬಿ. ಟಿ. ನಂಜೇಗೌಡ

ಜನನ : 1908 ಉದ್ಯೋಗ : ಕೃಷಿ ವಿಳಾಸ : ಬಸ್ತಿಹಳ್ಳಿ, ಹಳೇಬೀಡು, ತಾ|| ಬೇಲೂರು

---



ಮುಗಳಿಹಳ್ಳಿ ಬಿ. ಎನ್. ಬೋರಣ್ಣಗೌಡರು ಹಾಗೂ ಮಲ್ಲಾಪುರ ಕೆ. ಪುಪ್ಪೇಗೌಡರು ಇವರೇ ನಮಗೆ ರಾಷ್ಟ್ರೀಯ ವಿಚಾರ ತಿಳಿಸಿ ಹೇಳಿದ್ದು ಬಹಳ ಹಿಂದಿನಿಂದ—1936–37ರಿಂದಲೂ—ಅವರ ಜೊತೆ ಎಲ್ಲಿಡೆ ಕೆಲಸಕ್ಕೆ ನಾನು ಹೋಗುತ್ತಿದ್ದೆ. 1942ರಲ್ಲಿ ಚಳವಳಿಯಲ್ಲಿ ಪೂರ್ಣ ಇಳಿದೆ. ಹಾಸನದ ಎ. ಜಿ. ರಾಮಚಂದ್ರರಾಯರು ಅಡಗಿಕೊಂಡಿದ್ದು ನಮ್ಮ ಖರ್ಚಿಗೆ ಸ್ವಲ್ಪ ಹಣ ಕೊಡುತ್ತಿದ್ದರಲ್ಲದೆ, ಏನೇನು ಕೆಲಸ ಮಾಡಬೇಕೆಂದು ತಿಳಿಸುತ್ತಿದ್ದರು. ಅವರು ಪೋಲಿಸರಿಗೆ ಸಿಕ್ಕಲಿಲ್ಲ. (ಅವರ ತಂದೆಯವರು ಸತ್ತ ದಿವಸ ಸಿಕ್ಕಿಕೊಂಡರು.) ಅಲ್ಲದೆ ಹಾಸನ ಜೈಲಿನಲ್ಲಿ ಇದ್ದ ಭಾಷ್ಯಂ, ಸಿದ್ದಯ್ಯ, ಹನುಮಂತಯ್ಯ, ತಾಳಕೆರೆ, ಬೋರಣ್ಣಗೌಡ ಮುಂತಾದವರೂ ನಮಗೆ ಸಲಹೆಸೂಚನೆ ಕಳುಹಿಸುತ್ತಿದ್ದರು. ಆಗ ಚಳವಳಿ ನಡೆಸಲು ನಮ್ಮ ದೊಡ್ಡ ತಂಡವೇ ಇತ್ತು. ಒಂದು ಸಾವಿರ, ಕೆಲವು ಸಲ ಐನೂರು, ಕಡಿಮೆ ಅಂದರೆ 200 ಜನ ಗುಂಪು ಕಟ್ಟಿ ಕೆಲಸಕ್ಕೆ ಹೋಗುತ್ತಿದ್ದೆವು. ಗಂಗೂರು, ಅರಸೀಕೆರೆ, ಸಾಣೇನಹಳ್ಳಿ, ಅಡಗೂರು, ಹಳೇಬೀಡು, ಲಿಂಗನಕೊಪ್ಪಲು, ಜಾವಗಲ್, ನಿಟ್ಟೂರು, ಹೀಗೆ ದೊಡ್ಡ ಗುಂಪು ಮಾಡಿ, ಸಂತೆಸುಂಕ ಕೊಡದಂತೆ ಪ್ರಚಾರ, ಈಚಲ ಕಡಿಯುವುದು, ಸೇಂದಿ ಅಂಗಡಿ ಲೂಟಿ, ರೈಲುಹಳಿ ಕೀಳುವುದು, ತಂತಿ ಕತ್ತರಿಸುವುದು, ಸ್ಟೇಶನ್ ಸುಡುವುದು, ಕರೆಂಟು ಕಂಬ ಸುಡುವುದು, ಪೋಲಿಸ್ ಸ್ಟೇಶನ್ ಲೂಟಿ ಇತ್ಯಾದಿ ಸರಕಾರಕ್ಕೆ ಲುಕ್ಸಾನು ಮಾಡುವ ಕೆಲಸ ಮಾಡಿದೆವು. ಮಂಜಪ್ಪಗೌಡ್ರು, ಪುಟ್ಟೇಗೌಡ್ರು, ನಂಜುಂಡಯ್ಯ, ಅನಂತರಾಮಯ್ಯ ಹೀಗೆ ನಾಯಕರಾಗಿದ್ದು ನಮ್ಮ ಹಳೇಬೀಡಿಂದ ಗವಿಯಪ್ಪಶೆಟ್ರು, ಮರಿಸಿದ್ದಪ್ಪ, ಸಿದ್ದಪ್ಪ, ಪುಟ್ಟಯ್ಯ, ಮಲ್ಲೇಶಪ್ಪ ಮುಂತಾದ ಇನ್ನೂ ಕೆಲವರು, ಸಾಣೇನಹಳ್ಳಿ ಅಖಂಡಶೆಟ್ಟಿ, ಸಿದ್ದಲಿಂಗಯ್ಯ, ರುದ್ರೇಗೌಡ, ಎಸ್. ಗಂಗಾಧರಪ್ಪ, ಲಕ್ಕಜ್ಜೇಗೌಡ, ನಿಂಗೇಗೌಡ, ಸಣ್ಣವೀರೇಗೌಡ, ನಿಂಗೇಗೌಡ, ಚನ್ನಯ್ಯ, ಕೆಂಚಯ್ಯ ಮುಂತಾದವರು, ಗಂಗೂರಿನ ಮಲ್ಲೇಗೌಡ, ಕರಿಗೌಡ, ತಿಮ್ಮೇಗೌಡ, ಈರೇಗೌಡ, ರಂಗಪ್ಪ, ಹುಲಿಗೌಡ (ಇವರು ಆಗಲೇ ಲಾಠಿ ಏಟಿನಿಂದ ಸತ್ತರು), ಲಿಂಗನಕೊಪ್ಪಲಿನ ಮಲ್ಲೇಗೌಡ, ಧಾಮೇಗೌಡ, ಅಡಗೂರಿನ ಮಡಿ

ವಾಳಯ್ಯ, ಕೃಷ್ಣಪ್ಪ, ತಿಪಟೂರಿನ ಟೈಲರ್ ರಂಗಪ್ಪ, ಗಂಗಪ್ಪ ಹೀಗೆ ಅನೇಕರು. ಬೇಲೂರು, ಹಳೇಬೀಡು, ಜಾವಗಲ್, ಹಾಸನ, ಅರಸೀಕೆರೆ, ಗಂಡಸಿ, ಹಲ್ಲುಗುಂಡಿ ಸಂತೆಗಳಲ್ಲಿ ಸುಂಕ ಕೊಡದಂತೆ ಜೋರಾಗಿ ಪ್ರಚಾರಮಾಡಿದೆವು. ಬಾಣಾವರ, ಅರಸೀಕೆರೆ, ಕಡೂರು, ತಿಪಟೂರುವರೆಗೆ ರೈಲುಹಳಿ ಕಿತ್ತೆವು.

ಜಾವಗಲ್ ಸಂತೆಯಲ್ಲಿ ಪಿಕೆಟಿಂಗ್ ಆದಾಗ ಅರಸೀಕೆರೆಯಿಂದ ಎರಡು ಲಾರಿ, ಚಿಕ್ಕಮಗಳೂರಿನಿಂದ ಎರಡು ಲಾರಿ ಮಿಲಿಟರಿ ತಂದರು. ಚಿಕ್ಕಮಗಳೂರಿನಿಂದ ಬಂದವರು ಲಾಠಿ-ದೊಣ್ಣೆಗಳಿಂದ ಹೊಡೆದು ಜನರನ್ನು ಚದರಿಸಿದರು. ನಾವು ಕಾಡು ಬಿದ್ದು ತಪ್ಪಿಸಿಕೊಂಡೆವು. ರಾತ್ರಿ ಜಾವಗಲ್‌ನಿಂದ ಎರಡು ಲಾರಿ ಮಿಲಿಟರಿ ಹಳೇಬೀಡು ಪ್ರವಾಸಿ ಮಂದಿರದಲ್ಲಿ ಇಳಿದು ಬೆಳಗ್ಗೆ ನಾಲ್ಕು ಗಂಟೆಗೆ ಸಾಣೇನಹಳ್ಳಿಗೆ ಹೋಗಿ ಮುಖ್ಯಸ್ಥರನ್ನು ಬಂಧಿಸಿ, ಅಲ್ಲಿಂದ ಗಂಗೂರು, ಮತಿಘಟ್ಟ, ಲಿಂಗನಕೊಪ್ಪಲು ಎಲ್ಲ ಕಡೆ ಹೋಗಿ ಮುಖ್ಯಸ್ಥರನ್ನು ಬಂಧಿಸಿ, ಬೆಳಗಿನ ಆರು ಗಂಟೆಗೆ ಮತ್ತೆ ಹಳೇಬೀಡಿಗೆ ಬಂದರು. ಅಲ್ಲಿ ಕೊಟ್ಟ ಲಾಠಿ ಹೊಡೆತದಿಂದಲೇ ಗಂಗೂರು ಹುಲಿಗೌಡರು ಎರಡೇ ದಿನದಲ್ಲಿ ಸತ್ತರು. ನಾನು ಸಾಣೇನಹಳ್ಳಿಯಲ್ಲಿ ಇದ್ದವನು ತಪ್ಪಿಸಿಕೊಂಡೆ. ಪೋಲಿಸರು ಪ್ರತಿದಿನ ಮನೆಗೆ ಬಂದು ಹೆಂಗಸರನ್ನು ಬೆದರಿಸಿ, ನನ್ನನ್ನು ಗುಂಡಿಟ್ಟು ಕೊಲ್ಲುವುದಾಗಿ ಹೇಳಿ ಹೋಗುತ್ತಿದ್ದರು. ಒಂದು ತಿಂಗಳು ತಪ್ಪಿಸಿಕೊಂಡು ಇದ್ದೆ. ಒಂದು ದಿನ ಇದ್ದ ಊರಲ್ಲಿ ಮರುದಿನ ಇರುತ್ತಿರಲಿಲ್ಲ. ಹೋದಲ್ಲೆಲ್ಲ ಆಯಾ ಗ್ರಾಮಸ್ಥರು ಊಟ ಹಾಕುತ್ತಿದ್ದರಲ್ಲದೆ ಖರ್ಚಿಗೆ ಕೊಡುತ್ತಿದ್ದರು. ಕಡೆಗೆ ಪುಪ್ಪೇಗೌಡರ ಸಲಹೆಯಂತೆ, ಬೇಲೂರು ಪೋಲಿಸ್ ಸ್ಟೇಶನ್ನಿನಲ್ಲಿ ಶರಣಾದೆ. ಅಲ್ಲಿಂದ ಸಕಲೇಶಪುರ ಸ್ಟೇಶನ್ನಿಗೆ ಒಯ್ದು ಒಂದು ವಾರ ಇಟ್ಟು ಸಿಕ್ಕಾಪಟ್ಟೆ ಹೊಡೆದುದರಿಂದ ಮುಂದೆ ಬಲಗಣ್ಣು ಹೋಗಿಯೇ ಬಿಟ್ಟಿತು. ಔಷಧೋಪಚಾರ ಇಲ್ಲದೆ ಹೂವು ಬಂದು, ಏಟು ಬಿದ್ದ ಕಣ್ಣು ಕಾಣಿಸದಂತೆ ಆಯಿತು. ಹತ್ತು ದಿನಗಳನಂತರ ಹಾಸನದಲ್ಲಿ ಕಸ್ಟಡಿಗೆ ಕಳುಹಿಸಿದರು. ಅಲ್ಲಿ ನಾಯಕರ ಸೂಚನೆಯಂತೆ ಕಣ್ಣಿಗೆ ಔಷಧೋಪಚಾರ ಮಾಡಿದರೂ ಉಪಯೋಗ ಆಗಲಿಲ್ಲ. ಕೇಸ್ ನಂ. 46ರಂತೆ (42-43ರದು) 14-11-1942ರಂದು ನನಗೆ ಆರು ತಿಂಗಳು ಶಿಕ್ಷೆ, ಇನ್ನೂರು ರೂ. ದಂಡ ಆಯಿತು. ಹಾಸನ, ಬೆಂಗಳೂರು, ತುಮಕೂರು ಜೈಲುಗಳಲ್ಲಿ ಶಿಕ್ಷೆ ಅನುಭವಿಸಿದೆ. ದಂಡದ ಹಣಕ್ಕಾಗಿ ಮನೆ ಜಪ್ತಿಮಾಡಿ ಹಂಡೆ, ಕೊಡ, ತಪ್ಪಲೆ, ಊಟದ ತಟ್ಟೆ, ಚೆಂಬು, ಲೋಟ ಹರಾಜು ಮಾಡಿದರು. ಜೈಲಿನಿಂದ ಬಂದಮೇಲೆ ಜಮೀನು ಮಾರಿ ಸಾಲ ವಗೈರೆ ತೀರಿಸಿದೆ.

ಸ್ವಾತಂತ್ರ್ಯ ಸಿಕ್ಕಮೇಲೆ ಕಡಿದಾಳ ಮಂಜಪ್ಪನವರು 10 ಎಕರೆ ಜಮೀನು ಕೊಡಿಸಿದರು. ಆದರೆ ಅಧಿಕಾರಿಗಳು ಅಳತೆ ಮಾಡಿಕೊಡದೆ, ಅದರಲ್ಲೇ ಬೇರೆಯವರಿಗೆ ಜಮೀನು ಕೊಟ್ಟಿದ್ದಾರೆ. ಇನ್ನೂ ಸರಿಯಾಗಿ ಅಳತೆ ಮಾಡಿಲ್ಲ. ಎರಡು ಎಕರೆ ಸಾಗುಮಾಡುತ್ತಿದ್ದು, ಉಳಿದುದು ಬರೀ ಕಲ್ಲು, ಮರಡಿ.

ಸ್ವ.ಪಾ. 16

## ಎ. ಎಸ್. ಮಡಿವಾಳಪ್ಪ

ಜನನ: 1917 ಉದ್ಯೋಗ: ವ್ಯವಸಾಯ ವಿಳಾಸ: ಅಮಗೂರು, ತಾ॥ ಬೇಲೂರು



1942ರಲ್ಲಿ ನಮ್ಮ ಊರ ಪಕ್ಕದ ಹಳ್ಳಿಯವರಾದ ಸಾಣೇನಹಳ್ಳಿ ಗಂಗಾಧರಪ್ಪ ಎಂಬುವರು ನಮ್ಮ ಊರ ಮುಂದೆ ಬಹಿರಂಗಸಭೆ ಏರ್ಪಡಿಸಿ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಮಾತನಾಡಲು ನಾನೂ ಚಳವಳಿಯಲ್ಲಿ ಸೇರಿದೆ. ಮುಂದೆ ಎ. ಜಿ. ರಾಮಚಂದ್ರರಾಯರು ನಮ್ಮ ಹಳ್ಳಿಗೆ ಬಂದು ಯೋಗ್ಯ ಮಾರ್ಗದರ್ಶನ ನೀಡಿದ್ದರು. ಹಳ್ಳಿಗಳಲ್ಲಿ ಜನರ ಗುಂಪು ಸೇರಿಸಿ ಸಂತೆಸುಂಕ ಕೊಡಬಾರದೆಂದೂ, ಹೆಂಡ ಕುಡಿಯಬಾರದೆಂದೂ ಪ್ರಚಾರ ಮಾಡುತ್ತಿದ್ದೆವು. ಹಳೇಬೀಡು, ಜಾವಗಲ್ ಸಂತೆಗಳಲ್ಲಿ ಪಿಕೆಟಿಂಗ್‌ನಲ್ಲಿ ನಾನು ವಿಶೇಷವಾಗಿ ಭಾಗವಹಿಸಿದ್ದೆ. ಹಳೇಬೀಡಿನ ಸಂತೆ ಪಿಕೆಟಿಂಗ್ ಕಾಲದಲ್ಲಿ ಘೋಷಣೆ ಮಾಡುತ್ತ ಪೋಲಿಸ್ ಠಾಣೆಗೂ ನುಗ್ಗಿದೆವು. ಮಾರನೆಯ ದಿನ ನನ್ನ ಬಂಧನ ಆಯಿತು. ಬೇಲೂರು ಬಂದೀಖಾನೆ, ಮುಂದೆ ಹಾಸನ ಬಂದೀಖಾನೆಗಳಲ್ಲಿ ಇಟ್ಟರು.

1947ರಲ್ಲಿ ಅರಸೀಕೆರೆ ತಾ॥ ಕಚೇರಿ ಮುಂದೆ ಪಿಕೆಟಿಂಗ್ ಮಾಡಿ ನಮ್ಮ ಬಾವುಟವನ್ನು ಹಾರಿಸಿ ಒಂದು ಸಭೆ ಸೇರಿಸಿದೆವು. ಆ ವೇಳೆಗೆ ಪೋಲೀಸರು ಬಂದು 10 ಜನರನ್ನು ದಸ್ತಗಿರಿಮಾಡಿ ಹಾಸನದ ಬಂದೀಖಾನೆಯಲ್ಲಿ ಸೇರಿಸಿದರು.

ಆರ್. ಎಸ್. ಗುಂಡೂರಾವ್, ವೈರಮುಡಿಗೌಡ, ಸೂರ್ಯನಾರಾಯಣಶೆಟ್ಟಿ, ಅರಕಲಗೂಡು ಸೀತಾರಾಮಯ್ಯ, ಬೋರಣ್ಣಗೌಡ, ಎ. ಜಿ. ರಾಮಚಂದ್ರರಾವ್, ಷಾ ಮುಂತಾದವರು 1942ರಲ್ಲಿ ನಮ್ಮ ಜೊತೆ ಇದ್ದರು.

ಸ್ವ.ಪಾ. 17

## ಎಚ್. ಸಿ. ಸಿಂಗ್ರಿಗೌಡ

ಜನನ: ಸು. 1922 ಉದ್ಯೋಗ: ? ವಿಳಾಸ: ಹೊಳೇನರಸೀಪುರ

1941ರ ನವೆಂಬರ್‌ನಲ್ಲಿ ಹೊಳೇನರಸೀಪುರದಲ್ಲಿ ಎಚ್. ಸಿದ್ದಯ್ಯನವರ ಅಧ್ಯಕ್ಷತೆಯಲ್ಲಿ ಎ.ಎಂ.ಸಿ.ಸಿ. ನಡೆದಾಗ ಅಲ್ಲಿ ನಡೆದ ಕಾರ್ಯಕ್ರಮಗಳಿಂದ ತರುಣನಾದ ನನ್ನಲ್ಲಿ



ದೇಶಭಕ್ತಿ ಉಕ್ಕಿ ಅಂದಿನಿಂದಲೇ ಸ್ವಾತಂತ್ರ್ಯ ಚಳವಳಿಗೆ ಸಂಬಂಧಿಸಿದ ಕಾರ್ಯಕ್ರಮಗಳಲ್ಲಿ ಪಾಲುಗೊಳ್ಳಲು ಆರಂಭಿಸಿದೆ. ನಮ್ಮ ಊರಲ್ಲಿ ಆಗ ಎಸ್. ಸಿ. ಸೂರ್ಯನಾರಾಯಣ ಶೆಟ್ಟಿ, ಆರ್. ಎಸ್. ಗುಂಡೂರಾಮಯ್ಯ, ಡಾ|| ಸೂರ್ಯನಾರಾಯಣರಾವ್, ಹೆಬ್ಬಾಲೆ ಸೂರ್ಯನಾರಾಯಣರಾವ್, ಚಂದ್ರಗಿರಿ ಸುಬ್ಬರಾವ್, ಎಚ್. ಬಿ. ಸತ್ಯನಾರಾಯಣಶೆಟ್ಟಿ, ಜಿ. ಪಿ. ಕೃಷ್ಣರಾವ್, ಇನ್ನೂ ಮುಂತಾದ ಕಾರ್ಯಕರ್ತರ ಜೊತೆಯಲ್ಲಿ ಸಹಕರಿಸುತ್ತಿದ್ದೆ.

1942ರಲ್ಲಿ ನಾನು ರೈಲಿನಲ್ಲಿ ಟಿಕೇಟು ಇಲ್ಲದೆ ಪ್ರವಾಸ ಮಾಡುವ ಸತ್ಯಾಗ್ರಹದಲ್ಲಿ ಸೇರಿ ಘೋಷಣೆ ಕೂಗುತ್ತ ಹೋದೆ. ಹಾಸನದಿಂದ ಗುಂಪುವಾರು ವಿಂಗಡಿಸಿ, ಪ್ರತಿಯೊಂದು ಗುಂಪನ್ನು ಒಂದೊಂದು ತಾಲ್ಲೂಕಿಗೆ ಕಳುಹಿಸಿದರು. ನಮ್ಮ ಗುಂಪನ್ನು ಶ್ರವಣಬೆಳಗೊಳಕ್ಕೆ ಸಂತೆಯಲ್ಲಿ ಪಿಕೆಟಿಂಗ್ ಮಾಡಲು ಕಳುಹಿಸಿದರು. ಅಲ್ಲಿ ಗೋಳೀಬಾರಾಗಿ ಪ್ರಾಣಹಾನಿ ಕೂಡ ಆಯಿತು. ಗುಂಡೇಟು ತಿಂದ ಕೆಲವರನ್ನು ಆಸ್ಪತ್ರೆಗೂ ಸೇರಿಸಿದರು. ನಾನು ತಪ್ಪಿಸಿಕೊಂಡು, ಇಂದ್ರಗಿರಿಗೆ ಹೋಗಿ 8 ದಿನ ಬೆಟ್ಟದ ಮೇಲೆಯೇ ಇದ್ದೆ. ಅಲ್ಲಿಂದ ಮಡಿಕೇರಿಗೆ ಹೋಗಿ, ಅಲ್ಲಿ ಒಂದು ತಿಂಗಳು ಕಾಲ ಕಳೆದು ಆಮೇಲೆ ಶಿವಮೊಗ್ಗಕ್ಕೆ ಹೋಗಿ ಎರಡು ತಿಂಗಳು ಇದ್ದು, ಊರಲ್ಲಿ ಗಲಾಟೆಯೇನೂ ಇಲ್ಲವೆಂದು ತಿಳಿದಾಗ ಊರಿಗೆ ಬಂದೆ. ಅಲ್ಲಿಯವರೆಗೆ ತಲೆಮರೆಸಿಕೊಂಡೇ ಇದ್ದೆ.

1947ರಲ್ಲಿ ಚಳವಳಿ ಶುರು ಆದಾಗಲೇ ನಾನೂ ಕೆಲವು ಸ್ನೇಹಿತರೂ ಹಳ್ಳಿಗಳಿಗೆ ಹೋಗಿ ಜವಾಬ್ದಾರಿ ಸರ್ಕಾರದ ಘೋಷಣೆಗಳನ್ನು ಹಳ್ಳಿಗಳಲ್ಲಿ ಹೋಗಿ ಪ್ರಚಾರಮಾಡಿ ಬರುತ್ತಿದ್ದೆವು. ಕೆ. ಸಿ. ರೆಡ್ಡಿಯವರ ಬಂಧನದ ಸುದ್ದಿ ಬೆಳಗ್ಗೆ ರೇಡಿಯೋದಲ್ಲಿ ಕೇಳುತ್ತಿದ್ದಂತೆ, ನಮ್ಮಲ್ಲಿ ಕೆಲವರನ್ನು ಬೆಳಗ್ಗೆ 8ಕ್ಕೇ ವಾರಂಟ್ ತಂದು ಬಂಧಿಸಿದರು. ಹೀಗೆ ಬಂಧಿತರಾದವರಲ್ಲಿ ನಾನು, ಆರ್. ಎಸ್. ಗುಂಡೂರಾಮಯ್ಯ, ಹೆಬ್ಬಾಲೆ ಸೂರ್ಯನಾರಾಯಣರಾವ್, ಸಿ. ಸುಬ್ಬರಾವ್, ಎಚ್. ಎಸ್. ಬೈರಮುಡಿಗೌಡ, ಮುತ್ತಣ್ಣ, ಎಸ್. ಸಿ. ಸೂರ್ಯನಾರಾಯಣಶೆಟ್ಟಿ, ಎಚ್. ಬಿ. ಸತ್ಯನಾರಾಯಣಶೆಟ್ಟಿ, ಕಾಂತಿಲಾಲ್, ಬಿ. ಕೃಷ್ಣಶೆಟ್ಟಿ ಇನ್ನೂ ಕೆಲವು ಮಿತ್ರರು ಇದ್ದರು. ಊರ ಜನ ದೊಡ್ಡ ಮೆರವಣಿಗೆ ಮಾಡಿ ಹಾರತುರಾಯಿ ಹಾಕಿ, ಜಯಕಾರಗಳೊಡನೆ ನಮ್ಮನ್ನು ಬೀಳ್ಕೊಂಡಲ್ಲದೆ ಸರಕಾರವನ್ನು ದೂಷಿಸಲಾರಂಭಿಸಿದರು.

ನಮ್ಮನ್ನು ಹಾಸನ ಜೈಲಿಗೆ ಒಯ್ದರು. ಅಲ್ಲಿ ಶ್ಯಾಮಯ್ಯಂ, ಸಾಹುಕಾರ ಚನ್ನಯ್ಯ, ಎಚ್. ಎಂ. ಚನ್ನಬಸಪ್ಪ, ಕೆ. ಲಕ್ಕಪ್ಪ, ಎಲ್. ಟಿ. ಕಾರ್ಲೆ, ನಮ್ಮ ಗುರುಗಳಾದ

ದಿ|| ಎ. ಜಿ. ರಾಮಚಂದ್ರರಾವ್, ಆಸಿವಾಳದ ಸಂಜಪ್ಪ ಮುಂತಾದ ನಾಯಕರಿದ್ದರು. 20 ದಿನಗಳನಂತರ ಚಿಕ್ಕಮಗಳೂರು ಜೈಲಿಗೆ ಸ್ಥಳಾಂತರಿಸಿದರು. ಅಲ್ಲಿ ಚಿಕ್ಕಮಗಳೂರಿನ ಅಣ್ಣಪ್ಪಶೆಟ್ಟಿ, ಶಾಸ್ತ್ರಿ, ಧ್ರುವ, ಬಿ. ಎಲ್. ಸುಬ್ಬಮ್ಮ ಮುಂತಾದ ಮುಖಂಡರ ಪರಿಚಯವಾಯಿತು. ಅಲ್ಲಿಂದ ಬೆಂಗಳೂರು ಜಾಲಹಳ್ಳಿ ಇಟಾಲಿಯನ್ ಕ್ಯಾಂಪ್ ಜೈಲಿಗೆ ಒಯ್ದರು. ಅಲ್ಲಿದ್ದಾಗಲೇ ಜವಾಬ್ದಾರಿ ಸರಕಾರ ಬಂದು ನಮ್ಮ ಬಿಡುಗಡೆ ಆಯಿತು. ನಮ್ಮ ಊರಲ್ಲಿ ನಮ್ಮನ್ನು ಮೆರವಣಿಗೆಯಲ್ಲಿ ತೀರ ವಿಜೃಂಭಣೆಯಿಂದ ಸ್ವಾಗತಿಸಿದರು. ಮುಂದೆ ಭಾರತ ಸೇವಾದಳದ ತರಬೇತಿಪಡೆದು ನಾನು ಕಾಂಗ್ರೆಸ್ಸಿನ ಅನೇಕ ಜವಾಬ್ದಾರಿ ಕೆಲಸಗಳನ್ನು ನಡೆಸಿದೆನು ಪುರಸಭೆಯ ಅಧ್ಯಕ್ಷನೂ ಆದೆನು. ಸಹಕಾರ, ಶೈಕ್ಷಣಿಕ ಕ್ಷೇತ್ರಗಳಲ್ಲೂ ಸೇವೆಸಲ್ಲಿಸಿದ್ದೇನೆ.

ಮೈ.ಹಾ. 18

## ಎಚ್. ಎಸ್. ವೈರಮುಡಿಗೌಡ

ಜನನ : 1913 ಉದ್ಯೋಗ : ಕೃಷಿ ವಿಳಾಸ : ಹೊಳೇನರಸೀಪುರ



1927ರಲ್ಲಿ ಮಹಾತ್ಮರೂ ಕಸ್ತೂರಿಬಾರವರೂ ಹೊಳೇನರಸೀಪುರಕ್ಕೆ ಬಂದಾಗ ಗಾಂಧೀ ಮೈದಾನದಲ್ಲಿ ಸಭೆ ಆಗಿ, ಆಗಿನ ಪುರಸಭಾ ಉಪಾಧ್ಯಕ್ಷರಾಗಿದ್ದ ನರಸಿಂಹಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಡಾ|| ಕೃಷ್ಣಮೂರ್ತಿ, ದಿ|| ಎಸ್. ಸಿ. ಸೂರ್ಯನಾರಾಯಣಶೆಟ್ಟಿ, ದಿ|| ಆರ್. ಎಸ್. ಗುಂಡುರಾಮಯ್ಯ ಮುಂತಾದವರು ಗಾಂಧೀಜಿಯವರ ಸ್ವಾಗತಾದಿ ಚಟುವಟಿಕೆಗಳಲ್ಲಿ ಆಗ್ರಪಾತ್ರವಹಿಸಿದ ಊರ ನಾಯಕರು. ಆಗಿನಿಂದಲೇ ರಾಷ್ಟ್ರೀಯ ಚಟುವಟಿಕೆಯ ಕಡೆ ಆಕರ್ಷಿತನಾದ ನಾನು, 1931ರಲ್ಲಿ ಭಗತ್‌ಸಿಂಗ್, ಅದೇ ರೀತಿ ಮಲ್ಲಪ್ಪ ಧನಶೆಟ್ಟಿ ಮುಂತಾದವರನ್ನು ಫಾಶಿಗೇರಿಸಿದಾಗ ನಾನೂ ಕ್ರಾಂತಿಕಾರಿಯಾಗಬೇಕೆಂದು ತಳಮಳಿಸಿದ್ದೆ. ತಾಳಕೆರೆ, ಭಾಷ್ಯಂ, ಕೆ. ಸಿ. ರೆಡ್ಡಿ, ಕೆಂಗಲ್, ದಾಸಪ್ಪ, ಸಿದ್ದಯ್ಯ ಮುಂತಾದ ನಾಯಕರ ಭಾಷಣಗಳು ನಮ್ಮಲ್ಲಿ ಮೇಲಿಂದಮೇಲೆ ಆಗುತ್ತಿದ್ದು ಜನಜಾಗೃತಿಗೆ ಸಹಾಯಕವಾದವು.

1938ರಲ್ಲಿ ಎಸ್. ಸೂರ್ಯನಾರಾಯಣಶೆಟ್ಟಿ ಮತ್ತು ಗುಂಡುರಾಮಯ್ಯನವರು ರಾಜದ್ರೋಹದ ಭಾಷಣಮಾಡಿದರೆಂಬ ಆಪಾದನೆಯ ಮೇಲೆ ಅವರನ್ನು ದಸ್ತಗಿರಿಮಾಡಿ

ತಲಾ ಮೂರು ತಿಂಗಳು ಶಿಕ್ಷೆ ವಿಧಿಸಿದ್ದು ಜನರನ್ನು ಇನ್ನಷ್ಟು ಕೆರಳಿಸಿತು. ಪ್ರಜಾ ಪ್ರತಿನಿಧಿ ಸಭೆಗೆ ಕಾಂಗ್ರೆಸ್ಸಿನ ಉಮೇದುವಾರರನ್ನು ನಿಲ್ಲಿಸಿದಾಗಲೂ ಸರಕಾರ ವಿಪರೀತ ದಬ್ಬಾಳಿಕೆ ಮಾಡಿತು. 1940ರಲ್ಲಿ ಪುರಸಭಾ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಕಡೆಯಿಂದ ನಿಂತ ನಾವುಗಳು (ಸೂರ್ಯನಾರಾಯಣಶೆಟ್ಟಿ, ನಾಗಲಿಂಗಶೆಟ್ರು, ರುದ್ರಪಟ್ಣದ ಲಾಯರ್ ರಾಮಸ್ವಾಮಿ, ಲಾಯರ್ ಅನಂತರಾಮಯ್ಯ, ಜಮೀನ್ದಾರ್ ಆರ್. ಎಸ್. ಗುಂಡುರಾಮಯ್ಯ ಹಾಗು ನಾನು ಆರಿಸಿ ಬರಲು, ಅಧಿಕಾರಿಗಳ ಕಿರುಕುಳಕ್ಕೆ ನಾನೂ ಗುರಿಯಾದೆ. 1941ರಲ್ಲಿ ಎ.ಎಂ.ಸಿ.ಸಿ. ಸಭೆ ನಮ್ಮ ಊರಲ್ಲಿ ಆಗಿ ಜವಾಬ್ದಾರಿ ಸರಕಾರದ ಬೇಡಿಕೆಯನ್ನು ಬಲವಾಗಿ ಮಂಡಿಸಲಾಯಿತು. ಅನೇಕ ಗಣ್ಯನಾಯಕರು ಆಗ ನಮ್ಮ ಊರಿಗೆ ಬಂದಿದ್ದರು.

1942ರಲ್ಲಿ ಎಂ. ವಿ. ಕೃಷ್ಣಪ್ಪ ಮತ್ತು ಜಿ. ಪಿ. ಕೃಷ್ಣಸ್ವಾಮಿಯವರು ನೀಡಿದ ಸಲಹೆಗಳಂತೆ ವಿದ್ಯಾರ್ಥಿಗಳು ನಮ್ಮ ಊರಲ್ಲಿ ಬುಡಮೇಲು ಕೃತ್ಯಗಳಲ್ಲಿ ನಿರತರಾದರು. ಎಸ್. ಸಿ. ಸೂರ್ಯನಾರಾಯಣಶೆಟ್ಟಿ ಮತ್ತು ಗುಂಡುರಾಮಯ್ಯನವರನ್ನು ಗಡೀಪಾರು ಮಾಡಲು ಆಜ್ಞೆ ವಿಧಿಸಿದಾಗ ಅವರು ಅದನ್ನು ಭಂಗಿಸಲು ಸ್ಪೆಷಲ್ ಕೋರ್ಟ್‌ನಲ್ಲಿ ಇಬ್ಬರಿಗೂ ತಲಾ ಒಂದು ವರ್ಷ ಕಠಿಣಶಿಕ್ಷೆ ಮತ್ತು 500 ರೂ. ದಂಡ ವಿಧಿಸಿದರು. ದಂಡ ತೆರದ್ದಕ್ಕೆ ಆರು ತಿಂಗಳು ಹೆಚ್ಚಿನ ಶಿಕ್ಷೆ ಆಯಿತು. ರಾಯಪ್ಪ, ಹನುಮಂತಯ್ಯ ಮುಂತಾದವರೆಲ್ಲ ಸೇರಿ ನಾವುಗಳು ತಂತಿ ಕತ್ತರಿಸುವುದು, ಪೋಸ್ಟಾಫೀಸಿಗೆ ಬೆಂಕಿ ಹಚ್ಚುವುದು ಮಾಡಲು 1–10–1942ರಂದು ನಮ್ಮ ಮೂವರನ್ನೂ ಬಂಧಿಸಿ ಎರಡು ವರ್ಷ ಕಠಿಣ ಸಜೆ, 200 ರೂ. ಜುಲ್ಮಾನೆ ಆಯಿತು. ಜುಲ್ಮಾನೆ ಕೊಡದ್ದರಿಂದ ಮತ್ತೆ ಎರಡು ತಿಂಗಳು ಶಿಕ್ಷೆ ಅನುಭವಿಸಿದೆವು. ಮೈಸೂರು ಸೆರೆಮನೆಯಲ್ಲಿ ಇದ್ದು 1944ರ ಜೂನ್ 14ಕ್ಕೆ ಬಿಡುಗಡೆ ಆದೆವು.

1947ರಲ್ಲಿ ಜವಾಬ್ದಾರಿ ಸರಕಾರಕ್ಕೆ ಹೋರಾಟ ಆರಂಭ ಆದಾಗ ನಾನೂ ಸೇರಿ 10 ಜನರನ್ನು (ಸೂರ್ಯನಾರಾಯಣಶೆಟ್ಟಿ, ಗುಂಡುರಾಮಯ್ಯ, ಸೂರ್ಯನಾರಾಯಣ ರಾವ್, ಮುಂತಾದವರು) ಬಂಧಿಸಿ ಹಾಸನದಲ್ಲಿ ಡೆಟಿನ್ಯು ಆಗಿ ಇಟ್ಟರು. ಚಳವಳಿ ಉಗ್ರ ರೂಪ ತಾಳಿ ಗೊರ್ನಹಳ್ಳಿ ನರಸಿಂಹಯ್ಯನವರು ನೇತೃತ್ವ ವಹಿಸಿ ತಾ|| ಆಫೀಸಿಗೆ ಮುತ್ತಿಗೆ ಹಾಕಲು ಗುಂಡು ಹಾರಿಸಿ, ಪುಟ್ಟಪ್ಪ ಎಂಬಾತನು ತೀರಿಕೊಂಡನು. ಅನೇಕರಿಗೆ ಗುಂಡಿನ ಗಾಯ ಆಯಿತು. ತೀರಿಕೊಂಡ ಪುಟ್ಟಪ್ಪನೂ ಸೇರಿ 30 ಜನರ ಮೇಲೆ ದರೋಡೆಯ ಕೇಸು ಹಾಕಿದರು. ಆರ್. ಎಸ್. ದೊರೆ, ನಾಗರಾಜು, ಟಿ. ಉಗ್ರಯ್ಯ ಶೆಟ್ಟಿ, ಬಿ. ಕೃಷ್ಣಶೆಟ್ಟಿ, ಯೋಗಾನರಸಿಂಹಯ್ಯ, ರಾಮಶೆಟ್ಟಿ, ನರಸಿಂಹಶೆಟ್ಟಿ, ವಾಸು ದೇವಾಚಾರ್ ಮುಂತಾದವರು ಈ 30 ಜನರ ಪೈಕಿ ಕೆಲವರು. ಪೋಲಿಸರು ಆ ಕಾಲದಲ್ಲಿ ಇವರನ್ನೆಲ್ಲ ಬಂಧಿಸಿದ್ದಲ್ಲದೆ ಊರಲ್ಲಿ ನಾಗರಿಕರಿಗೆ ಅಪಾರ ಹಿಂಸೆ ಕೊಟ್ಟರು. ನಾಗೂಬಾಯಿ ಮತ್ತು ನಾಗರತ್ನಮ್ಮ ಎಂಬ ಮಹಿಳಾ ಕಾರ್ಯಕರ್ತೆಯರ ಮೇಲೆ

ವಾರಂಟ್ ಹೊರಡಿಸಿದರು. ಅವರು ತಪ್ಪಿಸಿಕೊಂಡಿದ್ದರು. ಮುಂದೆ ಜವಾಬ್ದಾರಿ ಸರಕಾರ ಬಂತು. ಆಗಿನಿಂದ ನಾನು ಕೈಲಾದ ಸಮಾಜಸೇವೆ ಮಾಡುತ್ತಿದ್ದು ತಾ|| ಅ|| ಬೋ|| ಅಧ್ಯಕ್ಷನಾಗಿಯೂ ಕೆಲಸ ಮಾಡಿರುವೆ.

ಮೈ.ಪಾ. 19

## ಎ. ಎಸ್. ವೆಂಕಟಸುಬ್ಬಯ್ಯ ಶರ್ಮ

ಜನನ : ?        ಉದ್ಯೋಗ : ನಿವೃತ್ತ ಜೀವನ        ವಿಳಾಸ : 198, II ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು-28



ಅರಕೊಲಗೂಡಿನವರಾದ ನಮ್ಮ ಇಡೀ ಮನೆತನದವರೆಲ್ಲ ಸಾರ್ವಜನಿಕ ಸೇವೆ ಮತ್ತು ರಾಷ್ಟ್ರೀಯ ಚಟುವಟಿಕೆಗಳಿಗಾಗಿ ಶ್ರಮಿಸಿದವರು. 1932-33ರಲ್ಲಿ ಮುಂಬಯಿಯಲ್ಲಿ ನೌಕರಿ ಮಾಡುತ್ತಿದ್ದ ನಾನು ಅಲ್ಲಿ ದಾರುದುಕಾನ್ ಪಿಕೆಟಿಂಗ್, ವಿದೇಶಿ ಬಟ್ಟೆಗಳ ಅಂಗಡಿ ಮುಂದೆ ಪಿಕೆಟಿಂಗ್, ಬುಲೆಟಿನ್ ಮಾರಾಟ ಮಾಡುತ್ತಿದ್ದೆ. ಮುಂದೆ ಹಾಸನಕ್ಕೆ ಬಂದಿರಲು ಅಲ್ಲಿಯೂ ಚಳವಳಿಯಲ್ಲಿ ಪಾಲ್ಗೊಂಡೆ. ನಮ್ಮ ಅಣ್ಣ ಎ. ಎಸ್. ಸೀತಾರಾಮಯ್ಯನವರು ಎ. ಜಿ. ರಾಮಚಂದ್ರ ರಾಯರ ಜೊತೆ ಪ್ರಚಾರಕ್ಕೆ ಹೋಗುವಾಗ ನಾನು ಸ್ವಂತ ಕಾರಿನಲ್ಲಿ ಅವರನ್ನು ಹಳ್ಳಿಗಳಿಗೆ ಒಯ್ಯುತ್ತಿದ್ದೆ. ನನ್ನ ಅಣ್ಣ ಮತ್ತು ರಾಮಚಂದ್ರರಾಯರು ಒಮ್ಮೆ ಒಟ್ಟಿಗೇ ಬಂಧಿತರಾದರು. ಇದೇ ಕಾಲಕ್ಕೆ 1938ರಲ್ಲಿ ಹಾಸನ ಬಳಿ ದುದ್ದದಲ್ಲಿ ಈಚಲಮರ ಕಡಿಯುವ ಸತ್ಯಾಗ್ರಹ ನಡೆಸಿದೆ. ಮುಂದೆ ಮೈಸೂರಲ್ಲಿ ಬಂದು ಮಹಾತ್ಮಾ ಕಾಫಿ ಮತ್ತು ಬಿಸ್ಕತ್ ವರ್ಕ್ಸ್ ಎಂಬ ಸಂಸ್ಥೆಯನ್ನು ನಡೆಸುತ್ತಿರಲು, ಅಲ್ಲಿಯೂ ಚಳವಳಿಯಲ್ಲಿ ಪಾಲುಗೊಳ್ಳುತ್ತಿದ್ದೆ. ನನ್ನ ತಮ್ಮಂದಿರಾದ ಎ. ಎಸ್. ಕೃಷ್ಣಮೂರ್ತಿ ಮತ್ತು ಎ. ಎಸ್. ಶ್ರೀನಿವಾಸಮೂರ್ತಿ 1947ರ ಚಳವಳಿಯಲ್ಲಿ ಪಾಲುಗೊಂಡರು. ಎ. ಎಸ್. ಕೃಷ್ಣಮೂರ್ತಿ ಹೆಸರಲ್ಲಿ ಸತ್ಯಾಗ್ರಹಿ ಎಂಬ ದಿನಪತ್ರಿಕೆ ಹೊರಡಿಸುತ್ತಿದ್ದೆವು; ನಮ್ಮ ಮನೆ ಸತ್ಯಾಗ್ರಹಿಗಳಿಗೆ ಊಟೋಪಚಾರದ ಕೇಂದ್ರವೇ ಆಗಿತ್ತು. ನನ್ನ ತಮ್ಮಂದಿರ ಜೊತೆ ಎಂ. ಎಸ್. ರಾಜಶೇಖರ (ಈಗ ಶ್ರೀ ಮೋಟಾರ್ ವರ್ಕ್ಸ್‌ನಲ್ಲಿ ಫೋರ್‌ಮನ್) ಇವರು ಕೂಡ ಸೇರಿ ಈ ಮೂವರೂ ಕರ್ಫ್ಯೂ ಭಂಗಿಸಲು, ಆದ ಗೋಳೀಬಾರಿನಲ್ಲಿ ಎಂ. ಎಸ್. ರಾಜಶೇಖರ

ಇವರಿಗೆ ಗುಂಡಿನೇಟು ತಗಲಿ ಅವರು ಆಸ್ಪತ್ರೆಗೆ ದಾಖಲಾಗಿ ಮುಂದೆ ನನ್ನ ತಮ್ಮಂದಿರ ಜೊತೆ ಜೈಲಿನಲ್ಲೂ ಇದ್ದರು. ಅವರು ಜೈಲಿಗೆ ಹೋದಾಗಲೂ ನಮ್ಮ ಫ್ಯಾಕ್ಟರಿಯಲ್ಲಿ ಊರ ಪರವೂರ ಸತ್ಯಾಗ್ರಹಿಗಳಿಗೆ ನಮ್ಮ ತಂದೆತಾಯಿ ಮತ್ತು ನಾನು ಊಟೋಪಚಾರ ಒದಗಿಸಿದ್ದೇನೆ. ಸ್ವಾತಂತ್ರ್ಯಸಂತರವೂ ನಾವು ಎಷ್ಟೇ ಕಷ್ಟ ಬಂದರೂ ಕಾಂಗ್ರೆಸ್ಸಿನ ಕೆಲಸವನ್ನೂ ಜನಸೇವೆಯನ್ನೂ ಶ್ರದ್ಧೆಯಿಂದ ಮಾಡುತ್ತ ಬಂದಿದ್ದೇವೆ.

ಮೈ.ಹಾ. 20

## ರಾಯಪ್ಪ

ಜನನ : 1896 ಉದ್ಯೋಗ : ಕೃಷಿ, ಟೈಲರಿಂಗ್ ವಿಳಾಸ : ಕೋಡಂಗಿ ಕೊಪ್ಪಲು, ತಾ|| ಹೊಳೇನರಸೀಪುರ

ಹೊಳೇನರಸೀಪುರದವನಾದ ನಾನು 1941ರಲ್ಲಿ ಕಾಂಗ್ರೆಸ್ ಸೇರಿದೆ. 1942ರ ಚಳವಳಿಯಲ್ಲಿ ಓಡಾಡಿ ಟೆಲಿಫೋನ್ ತಂತಿ ಕತ್ತರಿಸಿದೆವು. ದಿ|| ಎಸ್. ಸಿ. ಸೂರ್ಯ ನಾರಾಯಣಶೆಟ್ಟಿ ಮತ್ತು ದಿ|| ಗುಂಡೂರಾಮಯ್ಯ ನಮಗೆ ನಿರ್ದೇಶನವಿತ್ತರು. ನನ್ನ ಜೊತೆ ಕೆಲಸಮಾಡಿದವರೆಂದರೆ ಸಿ. ಹನುಮಂತಯ್ಯ ಮತ್ತು ಎಚ್. ಎಸ್. ವೈರಮುಡಿ ಗೌಡ. ನಮ್ಮನ್ನು ಎರೆಸ್ಟ್‌ಮಾಡಿ ಹಾಸನ ಫಸ್ಟ್‌ಕ್ಲಾಸ್ ಮ್ಯಾಜಿಸ್ಟ್ರೇಟರ ಮುಂದೆ ನಿಲ್ಲಿಸಲು ಅವರು ನಮಗೆ ತಲಾ ಎರಡು ವರ್ಷ ಶಿಕ್ಷೆ, 200 ರೂ. ದಂಡ ವಿಧಿಸಿದರು (ಸಿ.ಸಿ. ನಂ. 51—42–43). 1–12–1942ರಲ್ಲಿ ನನ್ನನ್ನು ಹಾಸನ ಜೈಲಿಗೆ ಸೇರಿಸಿದರು; 19–8–1944ರಲ್ಲಿ ಬಿಡುಗಡೆ ಆಯಿತು.

ಮೈ.ಹಾ. 21

## ಅರಸೀಕೆರೆ ತಾ||ನ ಸ್ವಾತಂತ್ರ್ಯಯೋಧರು

ದಿ|| ಕೆ. ಎಂ. ವೆಂಕಟರಮಣ ಶೆಟ್ಟರು 1939, 1942 ಮತ್ತು 1947ರ ಚಳವಳಿಯಲ್ಲಿ ಅರಸೀಕೆರೆಯಲ್ಲಿ ಮುಂದಾಳುಗಳಾಗಿದ್ದು ಒಟ್ಟು ಒಂದು ವರ್ಷಕ್ಕೂ ಮೇಲ್ಪಟ್ಟು ಜೈಲುವಾಸ ಅನುಭವಿಸಿದ್ದರು.

ದಿ|| ಡಿ. ವಿ. ರಾಮುಸ್ವಾಮಿ ಹಾಸನ ಜಿಲ್ಲೆಯಲ್ಲಿ ಕಾಂಗ್ರೆಸ್ಸಿನ ಸ್ಥಾಪಕರಲ್ಲಿ ಒಬ್ಬರು. 1939, 42, 47ರಲ್ಲಿ ಜೈಲುವಾಸ ಅನುಭವಿಸಿದ್ದರು.

ದಿ॥ ಬಿ. ಆರ್. ಎಸ್. ಬಕ್ಕಪ್ಪನವರು 1939 ಮತ್ತು 1942ರಲ್ಲಿ ಜೈಲುವಾಸ ಅನುಭವಿಸಿದ್ದರು.

ದಿ॥ ಬಿ. ನಂಜಪ್ಪ ಬಾಗಿವಾಳು ಗ್ರಾಮದವರಾಗಿದ್ದು 1942ರಲ್ಲಿ ಎಂಟು ತಿಂಗಳು ಶಿಕ್ಷೆ ಅನುಭವಿಸಿದ್ದರಲ್ಲದೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು.

ದಿ॥ ಎಚ್. ವಿ. ವೆಂಕಟರಾಮಯ್ಯ ಹಾರನಹಳ್ಳಿ ಗ್ರಾಮದವರಾಗಿದ್ದು 1939ರಲ್ಲಿ ಮೂರು ತಿಂಗಳಿಗೂ ದೀರ್ಘಕಾಲ, 1942ರಲ್ಲಿ ಏಳು ತಿಂಗಳ ಸ್ಥಾನಬದ್ಧತೆಯನ್ನೂ ಅನುಭವಿಸಿದ್ದರು; ಇದೇ ಊರ ದಿ॥ ಮುದ್ದುರಂಗನಾಯ್ಕರು 1939 ಮತ್ತು 1942ರಲ್ಲಿ ಶಿಕ್ಷೆಗೆ ಒಳಗಾಗಿದ್ದರು; ಇದೇ ಊರ ದಿ॥ ಎಚ್. ರಾಮಯ್ಯ 1942ರಲ್ಲಿ ಏಳು ತಿಂಗಳು ಶಿಕ್ಷೆ ಅನುಭವಿಸಿದ್ದರಲ್ಲದೆ ಪ್ರಜಾಪ್ರತಿನಿಧಿಸಭಾ ಸದಸ್ಯರಾಗಿದ್ದರು.

ಅರಸೀಕೆರೆಯ ದಿ॥ ಎಸ್. ಸಿದ್ದಣ್ಣಯ್ಯ 1947ರಲ್ಲಿ ಶಿಕ್ಷೆ ಅನುಭವಿಸಿದ್ದು ಪ್ರಜಾ ಪ್ರತಿನಿಧಿಸಭಾ ಸದಸ್ಯರಾಗಿದ್ದರು.

ಅರಸೀಕೆರೆ ಕೆ. ಎನ್. ವಿಶ್ವನಾಥ ಶೆಟ್ಟರು 1942ರ ಚಲೇ ಜಾವ್ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದು 1947ರಲ್ಲಿ ಶಿಕ್ಷೆ ಅನುಭವಿಸಿದ್ದರು. ಈಗ ತಾ॥ ಸ್ವಾತಂತ್ರ್ಯ ಹೋರಾಟಗಾರರ ಸಮಿತಿ ಅಧ್ಯಕ್ಷರು.

ನಾನು, ಎ. ಕೆ. ಚನ್ನಕೇಶವ ಶರ್ಮ, 1939ರಲ್ಲಿ $3\frac{1}{2}$ ತಿಂಗಳು, 1942ರಲ್ಲಿ 8 ತಿಂಗಳಿಗೂ ಮೇಲ್ಪಟ್ಟು ಹಾಗೂ 1947ರಲ್ಲಿ ಬಂಧನದಲ್ಲಿದ್ದೆ. ಈಗ ತಾ॥ ಸ್ವಾತಂತ್ರ್ಯ ಯೋಧರ ಸಮಿತಿ ಕಾರ್ಯದರ್ಶಿಯೂ ಆಗಿದ್ದೇನೆ.


ಎ. ಕೆ. ಚನ್ನಕೇಶವ ಶರ್ಮ
ಲೇಖಕರು

ಅರಸೀಕೆರೆಯ ಬಿ. ಎನ್. ಶ್ರೀಕಂಠಶೆಟ್ಟರು 1939ರಲ್ಲಿ ಏಳು ತಿಂಗಳು, 1942ರಲ್ಲಿ ಒಂದು ವರ್ಷಕ್ಕೂ ಮೇಲ್ಪಟ್ಟು ಹಾಗೂ 1947ರಲ್ಲಿ ಸ್ಥಾನಬದ್ಧತೆಯಲ್ಲಿದ್ದು ತಾಲ್ಲೂಕಿನಲ್ಲಿ ಕಾಂಗ್ರೆಸ್ಸನ್ನು ಕಟ್ಟಿದವರಲ್ಲಿ ಒಬ್ಬರು.

ಕೆ. ಪಂಚಾಕ್ಷರಯ್ಯ ಹಾಸನ ಜಿಲ್ಲೆಯಲ್ಲಿ ಕಾಂಗ್ರೆಸ್ಸನ್ನು ಕಟ್ಟಿದವರಲ್ಲಿ ಒಬ್ಬರಾಗಿದ್ದು 1939ರಲ್ಲಿ ಏಳು ತಿಂಗಳು, 1942ರಲ್ಲಿ ಒಂದೂವರೆ ವರ್ಷ ಮತ್ತು 1947ರಲ್ಲಿ ಕೂಡ ಕಾರಾಗೃಹವಾಸ ಅನುಭವಿಸಿದ್ದರು. ಸ್ವಾತಂತ್ರ್ಯಪೂರ್ವದಲ್ಲಿ ಡಿ.ಸಿ.ಸಿ. ಮತ್ತು ಟಿ.ಸಿ.ಸಿ. ಅಧ್ಯಕ್ಷರಾಗಿದ್ದರಲ್ಲದೆ 1952ರಲ್ಲಿ ಎಂ.ಎಲ್.ಎ. ಆಗಿದ್ದರು.

ಬಿ. ಕೆ. ಷಡಕ್ಷರಯ್ಯ 1939ರ ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದ್ದರಲ್ಲದೆ 1942ರಲ್ಲಿ ಒಂದು ವರ್ಷ ಸ್ಥಾನಬದ್ಧರಾಗಿದ್ದರು. 1947ರಲ್ಲೂ ಬಂಧನದಲ್ಲಿ ಇದ್ದರು. ಪ್ರಜಾಪ್ರತಿನಿಧಿಸಭೆಗೆ ಅರಸೀಕೆರೆಯಿಂದ ಆರಿಸಿ ಬಂದಿದ್ದು ಪುರಸಭಾಧ್ಯಕ್ಷರೂ ಆದರು. ಎಚ್. ಚನ್ನಪ್ಪಯ್ಯ 1939ರಲ್ಲಿ ಮೂರು ತಿಂಗಳು, 1942ರಲ್ಲಿ ಹದಿನೈದು ತಿಂಗಳು ಶಿಕ್ಷೆ

ಅನುಭವಿಸಿದ್ದು 1947ರಲ್ಲಿ ಸ್ಥಾನಬದ್ಧರಾಗಿದ್ದರು. ಆಸಿವಾಳದ ಸಂಜಪ್ಪ 1942ರಲ್ಲಿ ಏಳೂವರೆ ತಿಂಗಳು ಸ್ಥಾನಬದ್ಧರಾಗಿದ್ದು ಟಿ.ಸಿ.ಸಿ. ಹಾಗೂ ಡಿ.ಸಿ.ಸಿ. ಕಾರ್ಯದರ್ಶಿ ಆಗಿದ್ದರಲ್ಲದೆ ಸಹಕಾರ ಕ್ಷೇತ್ರದಲ್ಲಿ ಅಮೋಘ ಸೇವೆ ಸಲ್ಲಿಸಿದ್ದಾರೆ (ಇವರೆಲ್ಲ ಅರಸೀಕೆರೆಯವರು.)

ಬಿ. ಚಿಕ್ಕಣ್ಣ ಬಾಗಿವಾಳು ಊರಿನರಾಗಿದ್ದು 1939ರಲ್ಲಿ ಮೂರೂವರೆ ತಿಂಗಳು, 1942ರಲ್ಲಿ ನಾಲ್ಕು ತಿಂಗಳು ಹಾಗೂ 1947ರಲ್ಲಿ ಕೂಡ ಬಂಧನದಲ್ಲಿದ್ದು 1952ರಲ್ಲಿ ಗಂಡಸಿಯಿಂದ ಎಂ.ಎಲ್.ಎ. ಆಗಿ ಆಯ್ಕೆಗೊಂಡಿದ್ದರು.

ಡಾ|| ಅನಂತಸಿಂಗ್ 1942ರಲ್ಲಿ ಒಂದು ವರ್ಷ ಸ್ಥಾನಬದ್ಧರಾಗಿದ್ದರಲ್ಲದೆ ಮುಂದೆ ಪುರಸಭಾ ಉಪಾಧ್ಯಕ್ಷರಾಗಿದ್ದರು.

ಎಚ್. ಎಸ್. ದೇವರಯ್ಯ ಹಾರನಹಳ್ಳಿಯವರಾಗಿದ್ದು 1942ರಲ್ಲಿ ಏಳು ತಿಂಗಳು ಸಶ್ರಮ ಸಜೆ ಅನುಭವಿಸಿದ್ದರು.

ಬಿ. ಗುಂಡಪ್ಪ ಬಾಣಾವರದವರಿದ್ದು 1942 ಮತ್ತು 1947ರಲ್ಲಿ ಬಂಧಿತರಾಗಿದ್ದರು.

ಕೊಪ್ಪ ಶಿವಲಿಂಗಯ್ಯ 1942ರಲ್ಲಿ ಒಂಬತ್ತು ತಿಂಗಳು ಶಿಕ್ಷೆ ಅನುಭವಿಸಿದ್ದರು.

ಡಾ|| ಎ. ಆರ್. ಕರಿಸಿದ್ದಪ್ಪ 1942ರಲ್ಲಿ ಆರು ತಿಂಗಳು ಸ್ಥಾನಬದ್ಧತೆ ಹಾಗು 1947ರಲ್ಲಿ ಸಶ್ರಮ ಶಿಕ್ಷೆ ಅನುಭವಿಸಿದ್ದರು.

ಬಾಗಿವಾಳು ಚಿಕ್ಕಣ್ಣ 1939ರಲ್ಲಿ ಏಳು ತಿಂಗಳು ಶಿಕ್ಷೆ ಅನುಭವಿಸಿದ್ದರು.

ಎಸ್. ವಿ. ವೆಂಕಟಾಚಲಗುಪ್ತರು 1942 ಮತ್ತು 1947ರ ಚಳವಳಿಯಲ್ಲಿ ಒಟ್ಟು ಎಂಟು ತಿಂಗಳು ಸ್ಥಾನಬದ್ಧತೆಯಲ್ಲಿ ಇದ್ದರು.

ಬಾಗಿವಾಳು ತೊಟ್ಲಪ್ಪನವರು 1939ರಲ್ಲಿ ಏಳು ತಿಂಗಳು ಕಠಿಣ ಶಿಕ್ಷೆಗೆ ಒಳಗಾಗಿದ್ದರು.

ಎಚ್. ಎನ್. ಕೃಷ್ಣಪ್ಪ ಹಾರನಹಳ್ಳಿಯವರಾಗಿದ್ದು 1942ರಲ್ಲಿ ಏಳು ತಿಂಗಳು ಸ್ಥಾನಬದ್ಧ ಕೈದಿಯಾಗಿದ್ದರು.

ಅರಸೀಕೆರೆಯ ಜಿ. ಎನ್. ವಿಶ್ವನಾಥ ಶೆಟ್ಟರು 1939ರಲ್ಲಿ ಮೂರು ತಿಂಗಳು, 1942ರಲ್ಲಿ ಏಳು ತಿಂಗಳು, 1947ರಲ್ಲಿ ಒಂದು ತಿಂಗಳು ಕಾರಾವಾಸ ಅನುಭವಿಸಿರುತ್ತಾರೆ. ಟಿ.ಸಿ.ಸಿ. ಕಾರ್ಯದರ್ಶಿಯಾಗಿದ್ದು, ಈಗ ಬೆಂಗಳೂರಲ್ಲಿರುತ್ತಾರೆ.

ಅರಸೀಕೆರೆ ಎಸ್. ಲಕ್ಷ್ಮೀನಾರಾಯಣ ಶೆಟ್ಟರು 1939ರಲ್ಲಿ ಮೂರು ತಿಂಗಳು ಹಾಗು 1942ರಲ್ಲಿ ಆರು ತಿಂಗಳು ಜೈಲುವಾಸ ಅನುಭವಿಸಿದ್ದಾರೆ.

ಅರಸೀಕೆರೆಯ ಬಿ. ವಿಠಲಾಚಾರ್ಯರು 1942ರಲ್ಲಿ ಆರೂವರೆ ತಿಂಗಳು ಸ್ಥಾನಬದ್ಧತೆಯಲ್ಲಿ ಇದ್ದು ಚಳವಳಿಯಲ್ಲಿ ಮುಂದಾಳಾಗಿ ಇದ್ದವರು.

ಡಿ. ಶಂಕರಸಿಂಗ್ 1942ರಲ್ಲಿ ಆರೂವರೆ ತಿಂಗಳು ಸ್ಥಾನಬದ್ಧರಾಗಿದ್ದು ಅರಸೀಕೆರೆ ಟಿ.ಸಿ.ಸಿ. ಕಾರ್ಯದರ್ಶಿಯಾಗಿ ಕೂಡ ಇದ್ದರು.

ಜಾವಗಲ್ಲು ಕೃಷ್ಣಪ್ಪನವರ ಮಗ ನಾಗಭೂಷಣ 1942ರ ಚಳವಳಿಯಲ್ಲಿ ಏಳು ತಿಂಗಳು ಕಠಿಣ ಶಿಕ್ಷೆ ಅನುಭವಿಸಿದ್ದಾರೆ. ಜಾವಗಲ್ ಕೃಷ್ಣಪ್ಪನವರ ಮಗ ಶಂಕರರಾವ್ 1942ರಲ್ಲಿ ಏಳು ತಿಂಗಳು ಕಠಿಣ ಶಿಕ್ಷೆ ಅನುಭವಿಸಿದ್ದಾರೆ.

ಅರಸೀಕೆರೆಯ ಕಾಶೀ ವಿಶ್ವನಾಥ ಶೆಟ್ಟರು 1939ರಲ್ಲಿ ಏಳು ತಿಂಗಳು ಕಾಲ ಶಿಕ್ಷೆ ಅನುಭವಿಸಿದ್ದು ಟಿ.ಸಿ.ಸಿ. ಸದಸ್ಯರೂ ಆಗಿದ್ದರು.

ಹಾರನಹಳ್ಳಿ ಸಣ್ಣನಿಂಗಪ್ಪ 1939ರಲ್ಲಿ ಮೂರೂವರೆ ತಿಂಗಳು ಕಠಿಣಶಿಕ್ಷೆ ಅನುಭವಿಸಿದ್ದರು. ಇದೇ ಹಾರನಹಳ್ಳಿ ಕಾಂಗ್ರೆಸ್ ಬೀರಪ್ಪ ಮತ್ತು ಮರಿಯಪ್ಪ ಇಬ್ಬರೂ 1939ರಲ್ಲಿ ಮೂರು ತಿಂಗಳಿಗೂ ಮೇಲ್ಪಟ್ಟು ಶಿಕ್ಷೆ ಅನುಭವಿಸಿದ್ದಾರೆ.

ಬಾಗಿವಾಳು ಬೊಮ್ಮೇಗೌಡರ ಮಗ ನಂಜೇಗೌಡ 1939ರಲ್ಲಿ ಮೂರು ತಿಂಗಳು ಕಠಿಣ ಶಿಕ್ಷೆ ಅನುಭವಿಸಿದ್ದಾರೆ.

ಅರಸೀಕೆರೆಯ ಸಿ. ಎಚ್. ವಿರುಪಣ್ಣ 1942ರಲ್ಲಿ ನಾಲ್ಕು ತಿಂಗಳು ಸ್ಥಾನಬದ್ಧರಾಗಿದ್ದರು. (ಬಿಡುಗಡೆಯನಂತರ ಶಿಕ್ಷಣ ತ್ಯಜಿಸಿ ಕೆಲಕಾಲದನಂತರ ಎಚ್ ಎ.ಎಲ್. ನಲ್ಲಿ ನೌಕರಿಗೆ ಸೇರಿ 7–8 ತಿಂಗಳು ಕೆಲಸಮಾಡಿರಲು, ಸಿ ಐ.ಡಿ. ವರದಿಯಂತೆ ವಿರುಪಣ್ಣ ಅವರು ನೌಕರಿ ಕಳೆದುಕೊಂಡರೆಂದು ಅವರೇ ತಿಳಿಸಿದ್ದಾರೆ—ಸಂ॥ ) ಇದೇ ಊರ ಎಚ್. ಸಿ. ಸುಬ್ಬರಾಯರು 1942ರಲ್ಲಿ ಒಂದು ತಿಂಗಳು ಕಾರಾಗೃಹವಾಸ ಅನುಭವಿಸಿದ್ದು ಶಿಕ್ಷಕರಾಗಿರುವ ಇವರಿಗೆ ರಾಷ್ಟ್ರೀಯ ಶಿಕ್ಷಕ ಪ್ರಶಸ್ತಿ ದೊರೆತಿದೆ.

ಅಗ್ಗುಂದದ ಎ. ವಿ. ಮಹೇಶ್ವರಯ್ಯನವರು 1942ರ ಚಳವಳಿಯಲ್ಲಿ ಬಂಧಿತರಾಗದೆ ಅನೇಕ ಚಟುವಟಿಕೆಗಳನ್ನು ಮಾಡಿದ್ದರು. ಆಕಸ್ಮಾತ್ತಾಗಿ ಬೆಂಗಳೂರಲ್ಲಿ ಬಂಧಿತರಾಗಿ ಪೋಲಿಸರು ರೈಲಿನಲ್ಲಿ ಅರಸೀಕೆರೆಗೆ ಕರೆದು ತರುವಾಗ ಚಲಿಸುತ್ತಿದ್ದ ರೈಲು ಗಾಡಿಯಿಂದ ಹೊನ್ನವಳಿ ರೋಡ್ ಸ್ಟೇಷನ್‌ನಲ್ಲಿ ಧುಮುಕಿ ರಾತ್ರಿ ತಲೆತಪ್ಪಿಸಿಕೊಂಡು ಚಳವಳಿಯನ್ನು ಮುಂದುವರಿಸಿದರು. 1942ರಲ್ಲೂ ಎರಡು ತಿಂಗಳು ಸ್ಥಾನಬದ್ಧರಾಗಿದ್ದರು. ಇದೇ ಊರ ಪಿ. ವೀರಪ್ಪಯ್ಯ 1947ರಲ್ಲಿ ಎರಡು ತಿಂಗಳಿಗೂ ಮೇಲ್ಪಟ್ಟು ಕಠಿಣ ಶಿಕ್ಷೆಗೆ ಒಳಗಾಗಿದ್ದರಲ್ಲದೆ ಮುಂದೆ ಟಿ.ಸಿ.ಸಿ. ಅಧ್ಯಕ್ಷರೂ ಆದರು.

ಅರಸೀಕೆರೆ ಕೆ. ಲಕ್ಷ್ಮಣ ಶೆಟ್ಟರು 1947ರಲ್ಲಿ ಎರಡು ತಿಂಗಳಿಗೂ ಮೇಲ್ಪಟ್ಟು ಕಠಿಣ ಶಿಕ್ಷೆ ಅನುಭವಿಸಿದ್ದಾರೆ. ಇದೇ ಊರ ಕೊಲ್ಲ ರಾಜಶೇಖರ ಶೆಟ್ಟರು 1947ರ ಚಳವಳಿಯಲ್ಲಿ ಮೂರೂವರೆ ತಿಂಗಳು ಕಠಿಣ ಶಿಕ್ಷೆ ಅನುಭವಿಸಿದ್ದಾರೆ. ಇದೇ ಊರ ಎ. ಸಿ. ಕೃಷ್ಣಪ್ಪ 1942ರಲ್ಲಿ ಐದು ತಿಂಗಳು, 1947ರಲ್ಲಿ ಎರಡು ತಿಂಗಳು ಶಿಕ್ಷೆ ಅನುಭವಿಸಿದ್ದು ಈಗ ಸಹಕಾರಿ ಸಂಘಗಳ ಅ॥ ರಿಜಿಸ್ಟ್ರಾರ್ ಆಗಿದ್ದಾರೆ. ಇದೇ ಊರ ಜೆ. ರಾಧಾಕೃಷ್ಣ 1942ರಲ್ಲಿ ಮೂರು ತಿಂಗಳು ಶಿಕ್ಷೆ ಅನುಭವಿಸಿದ್ದಾರೆ. ಇದೇ ಊರ ಡಿ. ನಾರಾಯಣರಾಯರು 1947ರಲ್ಲಿ ಎರಡು ತಿಂಗಳು ಕಠಿಣಶಿಕ್ಷೆ ಅನುಭವಿಸಿದ್ದಾರೆ.

ಅಂಚಿಕೊಪ್ಪಲು ತಿಮ್ಮಯ್ಯನವರ ಮಗ ದಾಸಪ್ಪ 1947ರಲ್ಲಿ ದೀರ್ಘಕಾಲ ಕಠಿಣ ಶಿಕ್ಷೆಗೆ ಒಳಗಾದರು.

ಹಾರನಹಳ್ಳಿ ಬಿ. ಎಸ್. ನಂಜುಂಡಪ್ಪ ಶೆಟ್ಟರು 1947ರಲ್ಲಿ ದೀರ್ಘಕಾಲ ಸಶ್ರಮ ಶಿಕ್ಷೆ ಅನುಭವಿಸಿದರು.

ಉಂಡಿಗನಾಳು ಟಿ. ಸಿ. ಪುಟ್ಟಸಿದ್ದಯ್ಯ 1939ರಲ್ಲಿ ಐದು ತಿಂಗಳಿಗೂ ದೀರ್ಘ ಕಾಲ ಶಿಕ್ಷೆ ಅನುಭವಿಸಿದ್ದಾರೆ.

ಬಾಣಾವರದ ವೈ. ಬಿ. ಹಾಲೇಗೌಡರು 1947ರಲ್ಲಿ ದೀರ್ಘಕಾಲ ಕಠಿಣ ಶಿಕ್ಷೆ ಅನುಭವಿಸಿರುತ್ತಾರೆ.

ಅರಸೀಕೆರೆ ಕೆ. ಎನ್. ನೀಲಶೇಖರ ಶೆಟ್ಟರು 1947ರಲ್ಲಿ ಎರಡು ತಿಂಗಳಿಗೂ ದೀರ್ಘಕಾಲ ಶಿಕ್ಷೆ ಅನುಭವಿಸಿದ್ದಾರೆ.

ನೇರಲಿಗೆ ಬಸವೇಗೌಡರು 1947ರಲ್ಲಿ ಎರಡು ತಿಂಗಳು ಕಠಿಣ ಶಿಕ್ಷೆ ಅನುಭವಿಸಿದ್ದಾರೆ.

ಅರಸೀಕೆರೆ ಕೆ. ಆರ್. ವೆಂಕಟರಾಮಯ್ಯ 1947ರಲ್ಲಿ ದೀರ್ಘಕಾಲ ಶಿಕ್ಷೆ ಅನುಭವಿಸಿದ್ದಾರೆ.

ನಿಟ್ಟೂರು ಎನ್. ಎಸ್. ರಾಮಕೃಷ್ಣಯ್ಯ 1947ರಲ್ಲಿ ದೀರ್ಘಕಾಲ ಶಿಕ್ಷೆ ಅನುಭವಿಸಿದ್ದಾರೆ. ಇವರ ಸೋದರ ಎನ್. ಎಸ್. ಶೇಷಪ್ಪ ಕೂಡ ಈ ಕಾಲದಲ್ಲಿ ಶಿಕ್ಷೆ ಅನುಭವಿಸಿದ್ದಾರೆ.

ಹಳೇಬೀಡು ಹೋಬಳಿ ಶಿವನೇಹಳ್ಳಿ ರಾಮೇಗೌಡರ ಮಗ ಸಿದ್ದಪ್ಪ 1942ರಲ್ಲಿ ಏಳು ತಿಂಗಳು ಶಿಕ್ಷೆ ಅನುಭವಿಸಿದ್ದಾರೆ.

ಹಾರನಹಳ್ಳಿ ರಾಮಸ್ವಾಮಿ 1942 ಮತ್ತು 1947ರಲ್ಲಿ ಕಾರಾಗೃಹವಾಸ ಅನುಭವಿಸಿದ್ದು ಈಗ ಹಾಸನದ ಖ್ಯಾತ ಅಡ್ವೊಕೇಟರು. ಡಿ.ಸಿ.ಸಿ. ಅಧ್ಯಕ್ಷರೂ ಆದರು.

ಅರಸೀಕೆರೆಯ ಬಿ. ಎಸ್. ನಂಜುಂಡ ಶೆಟ್ಟಿ, ಬಿ. ಜಿ. ವಾಸುದೇವ ಶೆಟ್ಟಿ ಹಾಗು ಕೆ. ಆರ್. ವಾಸುದೇವರಾಯರು, ಇವರೆಲ್ಲ 1947ರಲ್ಲಿ ಕಾರಾಗೃಹವಾಸಿಗಳಾಗಿದ್ದರು. ಇದೇ ಊರ ಪಿ. ಎಸ್. ಸೂರಪ್ಪ ಶೆಟ್ಟರು 1939, 1942 ಮತ್ತು 1947ರಲ್ಲಿ ಅನೇಕ ಬಾರಿ ಬಂಧಿತರಾಗಿ ಬಿಡಲ್ಪಟ್ಟರು. ಚಳವಳಿಯಲ್ಲಿ ಪ್ರಮುಖ ಪಾತ್ರವಹಿಸಿದವರು ಟಿ. ಕೆ. ಸತ್ಯನಾರಾಯಣ ಶೆಟ್ಟರು, 1939 ರಿಂದ 1947ರ ವರೆಗೆ ಎಲ್ಲ ಚಳವಳಿಗಳಲ್ಲಿ ಪಾಲುಗೊಂಡವರು. ಇದೇ ರೀತಿ ಎಂ. ಎನ್. ಬಸಪ್ಪ 1939 ಮತ್ತು 1942ರ ಚಳವಳಿಗಳ ವ್ಯವಸ್ಥಾಪಕರಾಗಿ ಇದ್ದವರು. ಹಾರನಹಳ್ಳಿ ಎಚ್. ಬಿ. ಲಿಂಗಪ್ಪ ಶೆಟ್ಟರು ಇದೇ ರೀತಿ 1939 ಮತ್ತು 1942ರ ಚಳವಳಿಗಳಲ್ಲಿ ಪಾಲುಗೊಂಡು ಅನೇಕ ಬಾರಿ ಬಂಧಿತರಾಗಿ ಬಿಡಲ್ಪಟ್ಟವರು. ಕಾಳನಕೊಪ್ಪಲು ಕೆ. ಎಚ್. ಹನುಮಂತಪ್ಪ 1939, 1942 ಮತ್ತು 1947ರ ಚಳವಳಿಯಲ್ಲಿ ಪಾಲುಗೊಂಡು ಪೋಲಿಸರ ಕೈಗೆ ಸಿಕ್ಕದೆ ಕೆಲಸ

ಮಾಡಿದವರು. ಅರಸೀಕೆರೆ ರಂಗಸ್ವಾಮಿ ಭಟ್ವಾಚಾರ್ಯರು 1942 ಮತ್ತು 1947ರ ಚಳವಳಿಯಲ್ಲಿ ಕೆಲಸಮಾಡಿದವರು. ಎಚ್. ಎಸ್. ಸಿದ್ದಲಿಂಗಪ್ಪನವರು 1942ರ ಚಳವಳಿಯಲ್ಲಿ ಭಾಗವಹಿಸಿದ್ದರು.

ಜಿ. ಎಸ್. ಬಸವರಾಜ (ವಕೀಲ), ಬಿ. ಎಸ್. ವಿಶ್ವನಾಥ ಶೆಟ್ಟಿ, ಎ. ಕೆ. ಅಪ್ಪಾಸ್ವಾಮಿ ಮೊದಲಿಯಾರ್, ಕೆ. ಬಿ. ಚಿಕ್ಕಯ್ಯ, ಕೆ. ಗೋಪಾಲಸ್ವಾಮಿ, ಬಿ. ಎಸ್. ಸತ್ಯನಾರಾಯಣ ಇವರೆಲ್ಲ 1947ರಲ್ಲಿ ಅರಸೀಕೆರೆಯಲ್ಲಿ ಚಳವಳಿಯಲ್ಲಿ ಪಾಲುಗೊಂಡವರು.

ಸುಬ್ಬಮ್ಮ ಜೋಯಿಸ್ 1939, 1942 ಹಾಗು 1947ರ ಚಳವಳಿಯಲ್ಲಿ ಪಾಲುಗೊಂಡಿದ್ದರಲ್ಲದೆ ಸರಕಾರದ ದಬ್ಬಾಳಿಕೆಯ ಕಾಲದಲ್ಲಿ ಪ್ರಜಾಪ್ರತಿನಿಧಿಸಭೆಗೆ ಸ್ಪರ್ಧಿಸಿ ಗೆದ್ದು ಬಂದಿದ್ದರು.

**ಎ. ಕೆ. ಚನ್ನಕೇಶವ ಶರ್ಮ**
ಕಾರ್ಯದರ್ಶಿ
ಅರಸೀಕೆರೆ ತಾ|| ಸ್ವಾ|| ಹೋರಾಟಗಾರರ ಸಮಿತಿ

ವ್ಯೈ.ಹಾ. 22

## ಜಿ. ಎನ್. ಗುಂಡಪ್ಪ

ಜನನ : ? ಉದ್ಯೋಗ : ? ವಿಳಾಸ : ಜಾವಗಲ್, ತಾ|| ಅರಸೀಕೆರೆ



ತಾಯಿನಾಡು, ವಿಶ್ವಕರ್ಣಾಟಕ, ಜನವಾಣಿ ಪತ್ರಿಕೆಗಳನ್ನು ಓದಿ ಚಳವಳಿ ವಿಚಾರ ತಿಳಿದಿದ್ದೆ. 1942ರಲ್ಲಿ ಹಳೇಬೀಡಿನಲ್ಲಿ ಸಂತೆಗೆ ಹೋಗಿರಲು ಅಲ್ಲಿ ಚಿಕ್ಕಮಗಳೂರಿನ ಇಬ್ಬರು ಹೈಸ್ಕೂಲು ಬಾಲಕರು ಬ್ರಿಟಿಷರ ವಿರುದ್ಧ ಭಾಷಣ ಮಾಡುತ್ತಿದ್ದರು ಭಾಷಣಾನಂತರ ಪೋಲಿಸರು ಅವರನ್ನು ಬೆದರಿಸಿದರು. ನಾನು ಹೋಗಿ ಪೋಲಿಸರಿಗೆ ಮನಸ್ಸಿನ ಮಾತಾಡಿ ಬಾಲಕರಿಗೆ ತಿಂಡಿ ಕೊಡಿಸಿ ಚಿಕ್ಕಮಗಳೂರಿಗೆ ಕಳುಹಿಸಿಕೊಟ್ಟೆ. ಪೋಲಿಸರು ನನ್ನ ಮೇಲೆ ಕಣ್ಣಿಟ್ಟರು. ಈ ವಿಚಾರ ಜಾವಗಲ್‌ನಲ್ಲಿ ಪ್ರಚಾರಮಾಡಿದೆನಲ್ಲದೆ ಒಂದು ದಿನ ಜಾವಗಲ್‌ನಲ್ಲೇ ಸರ್ಕಾರದ ವಿರುದ್ಧ ಭಾಷಣಮಾಡಿದೆ. ಅಲ್ಲಿಂದ ಅರಸೀಕೆರೆಗೆ ಹೋಗಿ ಸತ್ಯಾಗ್ರಹ ಕ್ಯಾಂಪಿನಲ್ಲಿ ಸೇರಿ ಪ್ರಭಾತ್ ಫೇರಿಗಳಲ್ಲಿ ಭಾಗವಹಿಸಿದ್ದೆ.

ದಾಸೇಗೌಡ, ಆನಿವಾಳ ನಂಜಪ್ಪ, ಬಾಗಿವಾಳು ಚಿಕ್ಕಣ್ಣ, ಷಡಾಕ್ಷರಪ್ಪ, ನಾಗಣ್ಣ ಶೆಟ್ಟಿ, ಶ್ರೀಕಂಠ ಶೆಟ್ಟಿ, ದೊಡ್ಡಲಕ್ಕಪ್ಪ ಇವರೆಲ್ಲ ಆಗ ಶಿಬಿರ ನಡೆಸುತ್ತಿದ್ದರು. ನಾನು ಶಿಬಿರ ಸೇರಿದ ದಿನವೇ ಡಾ|| ಕರಿಸಿದ್ದಪ್ಪ, ಶ್ರೀಕಂಠ ಶೆಟ್ಟಿ, ಷಡಾಕ್ಷರಪ್ಪ, ನಾಗಣ್ಣ ಶೆಟ್ಟಿ ಇವರುಗಳನ್ನೆಲ್ಲ ಬಂಧಿಸಿದರಲ್ಲದೆ ನಮ್ಮನ್ನೆಲ್ಲ ಲಾರಿಯಲ್ಲಿ ಹಾಕಿ ಶಿವಮೊಗ್ಗ ಕಾಡಿನಲ್ಲಿ ಬಿಟ್ಟರು. ಅಲ್ಲಿಂದ ಶಿವಮೊಗ್ಗಕ್ಕೆ ಹೋಗಿ ಭೂಪಾಳಂ ಕೃಷ್ಣಮೂರ್ತಿಯವರ ಆಶ್ರಯ ಪಡೆದು ಜಾವಗಲ್‌ಗೆ ಬಂದೆ.

26-11-1942ರಲ್ಲಿ ಜಾವಗಲ್‌ನಲ್ಲಿ ಸಂತೆಸುಂಕ ಕೊಡಬಾರದೆಂದು ಪಿಕೆಟಿಂಗ್ ಮಾಡಿದಾಗ ಸಾವಿರಾರು ಜನ ಹಳ್ಳಿಗರು ಇದ್ದರು. ಈ ಪಿಕೆಟಿಂಗ್‌ನಲ್ಲಿ ನಾನು, ಎಚ್. ಕೆ. ನಾಗಭೂಷಣ, ಎಚ್. ಕೆ. ಶಂಕರರಾವ್, ಜೆ. ಎಸ್. ಮುಕುಂದಯ್ಯ, ಜೆ. ಎಸ್. ಬೀರೇಗೌಡ, ನಿಟ್ಟೂರು ದೊಡ್ಡಯ್ಯಶೆಟ್ಟಿ, ಸಾಹುಕಾರ ಕೆಮರ ಶೆಟ್ಟಿ, ಮತಿಘಟ್ಟ ಕೃಷ್ಣಮೂರ್ತಿ, ಎಂ. ಸಿ. ನಂಜಪ್ಪಯ್ಯ ಇವರೆಲ್ಲ ಇದ್ದರು. ನನ್ನನ್ನೂ ನನ್ನ ಜೊತೆಗಾರ ನಾಗಭೂಷಣ, ಶಂಕರ ಇವರುಗಳೊಂದಿಗೆ ಹಾಸನ ಜೈಲಿಗೆ ರಿಮ್ಯಾಂಡ್ ಮಾಡಿ 12 ದಿನಗಳನಂತರ 8-12-1942ರಂದು ಸ್ಪೆಷಲ್ ಫಸ್ಟ್‌ಕ್ಲಾಸ್ ಮ್ಯಾಜಿಸ್ಟ್ರೇಟರ ಮುಂದೆ ವಿಚಾರಣೆ ಆಗಿ 13 ಜನರಿಗೆ ಆರು ತಿಂಗಳು ಕಠಿಣ ಸಜ, 50 ರೂ. ಜುಲ್ಮಾನೆ, ಜುಲ್ಮಾನೆ ಕೊಡದಿದ್ದಲ್ಲಿ ಮುಂದೆ ಒಂದು ತಿಂಗಳ ಶಿಕ್ಷೆ ವಿಧಿಸಿದರು. ಜೈಲುವಾಸವನ್ನು ಹಾಸನ, ಮೈಸೂರುಗಳಲ್ಲಿ ಅನುಭವಿಸಿದೆವು. ಆಗ ಹಾಸನ ಜೈಲಿನಲ್ಲಿ ಕೆಂಗಲ್, ಭಾಷ್ಯಂ, ತಾಳಕೆರೆ, ಎಸ್. ಚನ್ನಯ್ಯ ಮುಂತಾದ ಮುಖಂಡರಿದ್ದರು. ಮೈಸೂರಲ್ಲಿ ಎಂ. ವಿ. ಕೃಷ್ಣಪ್ಪ, ಎಚ್. ವೈ. ಶಾರದಾಪ್ರಸಾದ್, ಕ್ಯಾತನಹಳ್ಳಿ ಸಿದ್ದಪ್ಪ, ಎಂ. ಜಿ. ಸೀತಾರಾಮ್, ಸುಬ್ಬಣ್ಣ, ಅರಕಲಗೂಡು ಸೀತಾರಾಮಯ್ಯ ಇವರೆಲ್ಲ ಇದ್ದರು. ಜೈಲಿನಲ್ಲಿ 'ಸುಭದ್ರಾಪರಿಣಯ' ನಾಟಕವನ್ನು ಅಭಿನಯಿಸಿದ್ದೆವು.

ಸ್ವೃ.ಹಾ. 23

## ಆನಿವಾಳದ ನಂಜಪ್ಪ

ಜನನ: ಸು. 1915 ಉದ್ಯೋಗ: ವ್ಯವಸಾಯ, ವ್ಯಾಪಾರ ವಿಳಾಸ: ಸುಭಾಸ್‌ನಗರ ಬಡಾವಣೆ, ಅರಸೀಕೆರೆ

ನಾನು ನನ್ನ ಶಿಕ್ಷಣ ಮುಗಿಸಿ ಅರಸೀಕೆರೆಗೆ ಬಂದು ವ್ಯಾಪಾರದಲ್ಲಿ ತೊಡಗಿರಲು 1935ರಿಂದಲೇ ರಾಜಕೀಯದಲ್ಲಿ ಆಸ್ಥೆ ತಳೆದೆ. ಶಿವಪುರ, ವಿದುರಾಶ್ವತ್ಥ ಮುಂತಾದ

ಅಧಿವೇಶನಗಳಿಗೆ ಹೋಗಿದ್ದ ನಾನು 1939ರ ಚಳವಳಿಯಲ್ಲಿ ಪಾಲುಗೊಂಡಿದ್ದೆನಲ್ಲದೆ 1940ರಿಂದ ಮುಂದೆ ಅರಸೀಕೆರೆ ಟಿ.ಸಿ.ಸಿ. ಮತ್ತು ಹಾಸನ ಡಿ.ಸಿ.ಸಿ.ಯ ಕಾರ್ಯದರ್ಶಿಯಾಗಿಯೂ ಎ.ಎಂ.ಸಿ.ಸಿ. ಹಾಗೂ ಎಂ.ಪಿ.ಸಿ.ಸಿ. ಸದಸ್ಯನಾಗಿಯೂ ವಿವಿಧ ಜವಾಬ್ದಾರಿಗಳನ್ನು ಕಾಂಗ್ರೆಸ್ಸಿನಲ್ಲಿ ನಿರ್ವಹಿಸಿದ್ದೇನೆ. (ಈಗ ಮಾನ್ಯರು ಎಂ.ಎಲ್.ಎ. ಆಗಿದ್ದಾರೆ —ಸಂ||). 1942ರ ಚಳವಳಿ ಕಾಲದಲ್ಲಿ ನಾನು ಅರಸೀಕೆರೆ ತಾ||ನಲ್ಲಿ ಚಳವಳಿಯ ಪ್ರಧಾನ ನಿರ್ದೇಶಕನಾಗಿ ಇದ್ದೆ.

ಆ ಕಾಲದಲ್ಲಿ ಅರಸೀಕೆರೆಯಲ್ಲಿ ಅಪೂರ್ವ ಜನಜಾಗೃತಿ ಆಯಿತು. ಪ್ರತಿದಿನ ಬಹಿರಂಗ ಸಭೆ ಸೇರಿದಾಗ ಹತ್ತಾರು ಸಾವಿರ ಜನ ಬರುತ್ತಿದ್ದರು. ಮೆರವಣಿಗೆಗಳು ನಡೆದಾಗಲೂ ಸ್ತ್ರೀಯರೂ ಮಕ್ಕಳೂ ವಿದ್ಯಾರ್ಥಿಗಳೂ ಸೇರಿ 10,000 ಜನರಾದರೂ ಇರುತ್ತಿದ್ದರು. ಅರಸೀಕೆರೆ ತಾಲ್ಲೂಕು ಆಫೀಸಿನ ಮುಂದೆ ಸತ್ಯಾಗ್ರಹವನ್ನು ಏರ್ಪಾಡುಮಾಡಿ, ಆಫೀಸಿನ ಮೇಲೆ ಧ್ವಜ ಹಾರಿಸಲು ಯತ್ನಿಸಿದಾಗ, ನಾನೂ ನನ್ನ ಮಿತ್ರರೂ ಬಂಧಿತರಾಗಿ, ಮರುದಿನ ಬಿಡುಗಡೆ ಆದೆವು. ಡಾ|| ಕರಿಸಿದ್ದಪ್ಪ, ಬಿ. ನಂಜಪ್ಪ ಕೂಡ ಹೀಗೆ ಬಂಧಿತರಾದವರಾಗಿದ್ದು, ಆಗ 20,000 ಜನ ಕಚೇರಿ ಎದುರು ಸೇರಿದ್ದರು. ಕಚೇರಿಯಲ್ಲಿ ಕೆಲಸಕ್ಕೆ ಅಡಚಣೆ ಮಾಡುವ ಚಳವಳಿ, ಮದ್ಯದ ಅಂಗಡಿಗಳ ಪಿಕೆಟಿಂಗ್, ಈಚಲುಮರ ಕಡಿಯುವುದು, ತಂತಿ ಕತ್ತರಿಸುವುದು, ರೈಲ್ವೆ ಬ್ರಿಜ್ ಹಾಳುಮಾಡುವುದು ರೈಲ್ವೆ ಸ್ಟೇಶನ್ ಸುಡುವ ಚಟುವಟಿಕೆಗಳು ನಮ್ಮಲ್ಲಿ ಆದವು.

ಒಮ್ಮೆ ಮೈಸೂರಿಗೆ ಹೋಗಿ ಯಶೋಧರಮ್ಮ ದಾಸಪ್ಪನವರ ಮನೆಯಲ್ಲಿ ಎಂ. ಎಚ್. ಷಾರನ್ನು ಕಂಡು ಅವರು ಕೊಟ್ಟ ಡೈನಮೈಟ್, ಕತ್ತರಿ(ತಂತಿ ಕತ್ತರಿಸಲು) ಇತ್ಯಾದಿ ಸಲಕರಣೆಗಳನ್ನು ಪಡೆದು ಬಂದೆ. ನಾನು ಮೈಸೂರಲ್ಲಿ ರೈಲಿನಿಂದ ಇಳಿದಾಗಲೇ ಪೋಲಿಸರು ನನ್ನ ಹಿಂದೆ ಬಿದ್ದರು. ನಾನು ಒಕ್ಕಲಿಗರ ಸಂಘದ ಹಾಸ್ಟೆಲಿಗೆ ಹೋಗಿ, ಅಲ್ಲಿಂದ ದಾಸಯ್ಯನ ವೇಷ ಧರಿಸಿ ರಾತ್ರಿ 10 ಗಂಟೆಗೆ ಷಾರವರನ್ನು ಕಾಣಲು ಹೋದೆ. ಅನಂತರ ಅದೇ ವೇಷದಲ್ಲಿ, ಸಲಕರಣೆಗಳೊಡನೆ ನಂಜನಗೂಡಿಗೆ ನಡೆದು ಸಾಗಿ, ಅಲ್ಲಿಂದ ಖಾಸಗಿ ಲಾರಿಯಿಂದ ಊರಿಗೆ ಬಂದೆ. ಆಗ ಅರಸೀಕೆರೆಯ ಬಿ. ಎಚ್. ರಸ್ತೆಯ ಒಂದು ಕಟ್ಟಡದಲ್ಲಿ ನಮ್ಮ ಚಳವಳಿಯ ಆಫೀಸನ್ನು ತೆರೆದಿದ್ದು ನಾನು, ಎಚ್. ಸಿ. ಚನ್ನಪ್ಪಯ್ಯ, ಜಿ. ವಿಶ್ವನಾಥ ಶೆಟ್ಟಿ, ಮಿಠಾಯಿ ಗಂಗಪ್ಪ ತಾಲೂಕಿನ ಗ್ರಾಮಾಂತರ ಪ್ರದೇಶಗಳಲ್ಲೂ ಸಂಚರಿಸಿ ಊರೂರಲ್ಲಿ ಪ್ರಭಾತ್‌ಫೇರಿ, ಸಭೆ ನಡೆಸಲು ವ್ಯವಸ್ಥೆಮಾಡಿದೆವು. ಸರಕಾರದ ಜೊತೆ ಸಹಕರಿಸಬಾರದು, ಆಹಾರಪದಾರ್ಥ, ಎಣ್ಣೆಕಾಳು ಸರಕಾರಕ್ಕೆ ಮಾರಬಾರದು, ಎಂದು ಸಭೆಯಲ್ಲಿ ಪ್ರಚಾರಮಾಡುತ್ತಿದ್ದೆವು.

ಸಭೆಗೆ ಜನರು ಬರದಂತೆ ಪೋಲೀಸರು ಬೆದರಿಸುತ್ತಿದ್ದರು. (ಆಗ ಸರಕಾರದ ಪರವಾಗಿದ್ದು ಕಾಂಗ್ರೆಸ್ಸಿನ ಬಗ್ಗೆ ಅಪಪ್ರಚಾರ ಮಾಡುತ್ತಿದ್ದ ಜನರೆಲ್ಲ ಈಗ ದೊಡ್ಡ ದೇಶಭಕ್ತರಾಗಿ, ಕಾಂಗ್ರೆಸ್ಸಿನ ಮುಂದಾಳುಗಳಾಗಿದ್ದಾರೆ!)

ಟಿಕೆಟ್ ಇಲ್ಲದೆ ರೈಲುಪ್ರಯಾಣ ಮಾಡಿ ಚಳವಳಿಯಲ್ಲಿ ಪಾಲುಗೊಳ್ಳುತ್ತಿದ್ದ ಜನರು ಆಗ ಅರಸೀಕೆರೆಯಲ್ಲಿ, ಇದು ಜಂಕ್ಷನ್ ಸ್ಥಳವಾದುದರಿಂದ, ಇಳಿಯುತ್ತಿದ್ದರು. ಈ ಸತ್ಯಾಗ್ರಹಿಗಳು ನಿತ್ಯ ನೂರಾರು ಜನ ಬರುತ್ತಿದ್ದು ಇವರ ಊಟತಿಂಡಿಯ ವ್ಯವಸ್ಥೆ ನಾವು ಮಾಡಬೇಕಿತ್ತು. ಪ್ರತಿದಿನ ಇದಕ್ಕೆ ಸಾವಿರಾರು ರೂ. ಖರ್ಚಾಗುತ್ತಿತ್ತು. ಈ ಹಣವನ್ನೆಲ್ಲ ಅರಸೀಕೆರೆ ಊರವರೇ ಅಲ್ಲದೆ ಗ್ರಾಮಾಂತರ ಪ್ರದೇಶಗಳ ಜನರೂ ಕೊಡುತ್ತಿದ್ದರು. ಅನೇಕ ಜನ ಅಧಿಕಾರಿಗಳಿಗೆ ಹೆದರಿ, ಗುಟ್ಟಾಗಿ ಉದಾರ ನೆರವು ನೀಡುತ್ತಿದ್ದರು. ಒಮ್ಮೆ ನಾವು ತೀರ ಅಡಚಣೆಯಲ್ಲಿ ಇದ್ದಾಗ ತಿಮ್ಮಲಾಪುರದ ದಿ|| ಗಿರೇಗೌಡರು 500 ರೂ. ನೀಡಿದ್ದರು. ಈ ಎಲ್ಲ ವಿಧದ ಚಟುವಟಿಕೆಗಳನ್ನು ನಡೆಸುವಾಗ ನನಗೆ ಆಹಾರ, ನಿದ್ರೆ, ವಿಶ್ರಾಂತಿಗಳೂ ಇಲ್ಲದೆ ನನ್ನ ಆರೋಗ್ಯ ಕೆಟ್ಟಾಗ ಸ್ಥಳೀಯ ವೈದ್ಯರು ನನಗೆ ಕ್ಷಯ ಬಂದಿದ್ದು ಮೂರು ತಿಂಗಳು ಪೂರ್ತಿ ವಿಶ್ರಾಂತಿ ಬೇಕೆಂದು ಸೂಚಿಸಿದರು. ಆದರೆ 'ಮಾಡು ಇಲ್ಲವೆ ಮಡಿ' ಘೋಷಣೆಯಂತೆ ನಾನು ಜೈಲಿನಲ್ಲೇ ಸಾಯುತ್ತೇನಲ್ಲದೆ ಚಳವಳಿಯ ಚಟುವಟಿಕೆಗಳನ್ನು ನಿಲ್ಲಿಸಲಾರೆ, ಎಂದು ನನ್ನ ಕೆಲಸ ಮುಂದುವರಿಸಿದೆ. ಮೈಸೂರಿನಿಂದ ಬಂದನಂತರ, ಮರುದಿನ ತಾ|| ಕಚೇರಿಗೆ ಧ್ವಜ ಹಚ್ಚುವ ಪ್ರಕರಣ, ಬಂಧನ, ಬಿಡುಗಡೆ ಆಯಿತು.

ಬಿಡುಗಡೆ ಆದ ಮರುದಿನ ನಾನು, ಶಂಕರಸಿಂಗ್, ಚಿಕ್ಕಪ್ಪ, ವಿಠಲರಾವ್, ಹಾರನಹಳ್ಳಿ ಮುದ್ದರಂಗನಾಯಕ, ಇತರೇ ಆರು ಜನ ಸೇರಿ ಭೂಗತ ಕಾರ್ಯಕ್ರಮ ಆರಂಭಿಸಿ ಆರು ಮೈಲು ತಂತಿ ಕತ್ತರಿಸಿದೆವಲ್ಲದೆ, ಎರಡು ರೈಲ್ವೆ ಸೇತುವೆಗಳಿಗೆ ಡೈನಮೈಟ್ ಇಟ್ಟೆವು. ರೈಲ್ವೆ ಲೈನು ಕಾಯುತ್ತಿದ್ದ ಅಧಿಕಾರಿಗಳು ಬೆನ್ನಟ್ಟಲು ಹಂದಿಕಾಯುವವರ ಹಂದಿಮರಿ ಗುಬ್ಬಗಳಲ್ಲಿ ಇಡೀ ರಾತ್ರಿ ಇದ್ದು ತಪ್ಪಿಸಿಕೊಂಡೆವು. ಇಂಥ ಕಾರ್ಯಕ್ರಮ ಹೆಚ್ಚಿದಾಗ ಮಿಲಿಟರಿ ಬಂತು. ಸಿ.ಐ.ಡಿ.ಗಳ ಓಡಾಟ ಹೆಚ್ಚಾಯಿತು. ನಾನು ಹಗಲು ಮಂಡಿಯಲ್ಲಿ ಇದ್ದಾಗ ರೈತರ ವೇಷ ಧರಿಸಿ ಸಿ.ಐ ಡಿ. ಗಳು ಅಂಗಡಿಗೆ ಬಂದು ಇಡೀ ದಿನ ಅಲ್ಲಿ ಇರುತ್ತಿದ್ದರು.

ಚಳವಳಿ ಬಿರುಸಾಗಿ ಒಂದೇ ದಿನ ಬಾಣಾವರ, ತಿಪಟೂರು ರೈಲ್ವೆ ಸ್ಟೇಶನ್ ಸುಟ್ಟುಹೋದವು. ಗ್ರಾಮಾಂತರ ಪ್ರದೇಶಗಳಲ್ಲಿ ಚಳವಳಿ ಉಗ್ರವಾಯಿತು. ಒಂದು ದಿನ ಪೋಲಿಸ್ ಇನ್ಸ್‌ಪೆಕ್ಟರರೊಬ್ಬರು ಬಂದು ನನಗೆ ಬೆದರಿಕೆ ಹಾಕಿದರು. ನಾನು ಗಾಂಧೀಜಿಯವರ ಆದೇಶದಂತೆ ನಡೆಯುವುದು ನನ್ನ ಕೆಲಸ, ಎಂದೆ. ಒಂದು ದಿನ ಊರಲ್ಲಿ ಭಾರಿ ಮೆರವಣಿಗೆ ಹೊರಟಿತು. ನಾನೇ ಮುಂದೆ ಧ್ವಜ ಹಿಡಿದು ಸಾಗಿದ್ದೆ. ವಿದ್ಯಾರ್ಥಿಗಳೂ ಕಾರ್ಮಿಕರೂ ಇದ್ದರು. ಅನಂತರ ಸಭೆ ಆಯಿತು. ಕುಂದೂರು ಸದ

ಮಿಲಿಟರಿಯವರ ಓಡಾಟ ಇದ್ದುದರಿಂದ ಜನ ಹೆದರಿ ಬಹಳ ಸಂಖ್ಯೆಯಲ್ಲಿ ಬಂದಿರಲಿಲ್ಲ. ಅದೇ ದಿನ (17-9-1942) ನನ್ನ ಬಂಧನ ಆಗಿ ಬೆಂಗಳೂರು ಸೆಂಟ್ರಲ್ ಜೈಲಿಗೆ ಒಯ್ದರು. ಜನವರಿ 26ಕ್ಕೆ (1943) ಧ್ವಜಾರೋಹಣದ ಸಂಬಂಧ ಜೈಲಿನಲ್ಲಿ ಆದ ಗಲಭೆಯಲ್ಲಿ ನನಗೂ ಲಾಠಿಯೇಟು ಬಿದ್ದವು.

ಈಸೂರ ಸೋದರರನ್ನು ಗಲ್ಲಿಗೆ ಹಾಕಿದ್ದು ಹೃದಯದ್ರಾವಕ ಪ್ರಸಂಗ. ಫಣಿಯಪ್ಪಾಚಾರಿಯವರು ತಮ್ಮ ತಾಯಿಯನ್ನು ಅಪ್ಪಿಕೊಂಡು, ತಮ್ಮ ಪತ್ನಿಯನ್ನೂ ಉದ್ದೇಶಿಸಿ, "ನೀವುಗಳು ದುಃಖಪಡಬೇಡಿ, ನಾನು ಸಾಯುವುದಿಲ್ಲ. ಸ್ವರ್ಗ ಲೋಕಕ್ಕೆ ಹೋಗುತ್ತೇನೆ. ದೇಶಕ್ಕೆ ಖಂಡಿತ ಸ್ವಾತಂತ್ರ್ಯ ಸಿಕ್ಕುವುದು. ದೇಶಕ್ಕೆ ಒಳ್ಳೆಯದಾಗುವುದು" ಎಂದ ಮಾತು ಇನ್ನೂ ನನ್ನ ಕಿವಿಗಳಲ್ಲಿ ಪ್ರತಿಧ್ವನಿಸುತ್ತಿದೆ. ಅವರನ್ನು ಗಲ್ಲಿಗೇರಿಸುವ ದಿನ ಅವರು ತಮ್ಮ ರೂಮಿನಿಂದ ಗಲ್ಲು ಹಾಕುವ ಸ್ಥಳಕ್ಕೆ ನಡೆದು ಸಾಗಿ, ಸ್ವರಾಜ್ಯದ ಘೋಷಣೆಗಳನ್ನು ಮಾಡಿ, "ತಡಮಾಡಬೇಡಿ, ನನ್ನನ್ನು ಸ್ವರ್ಗಕ್ಕೆ ಕಳುಹಿಸಿ" ಎಂಬುದಾಗಿ ಅಧಿಕಾರಿಗಳಿಗೆ ಎಂದ ಪ್ರಸಂಗ ಈಗಲೂ ನನ್ನ ಕಣ್ಣಿಗೆ ಕಟ್ಟಿದಂತೆ ಇದೆ.

ಜೈಲಿನಲ್ಲಿ ನನ್ನ ಆರೋಗ್ಯವು ಪೂರ್ಣ ಕೆಟ್ಟಿತು. ನನ್ನನ್ನು ಚಿಕಿತ್ಸೆಗೂ ಬಿಡಕೊಡದೆಂದು ಜಿಲ್ಲಾಧಿಕಾರಿಗಳು ಸೂಚಿಸಿದರು. ಆರೋಗ್ಯ ತೀರ ಕೆಟ್ಟು ಕಣ್ಣು ಬೇನೆ ಬಂತು. ನನ್ನ ಸ್ನೇಹಿತರೆಲ್ಲ ಸೇರಿ ನಿಟ್ಟೂರು ಶ್ರೀನಿವಾಸರಾಯರ ಮುಖಾಂತರ ಹೈಕೋರ್ಟಿಗೆ ಅರ್ಜಿ ಹಾಕಲು, ಪೆರೋಲ್ ಮೇಲೆ ಬಿಡುಗಡೆ ಆಯಿತು. ಡಾ|| ಮೇಕ್ರಿಯವರ ಹತ್ತಿರ ಕಳುಹಿಸಿದರು. ನನಗೆ ಮೂರು ವರ್ಷ ಚಿಕಿತ್ಸೆ, ವಿಶ್ರಾಂತಿ ಬೇಕೆಂದು ಡಾ||ರು ಬರೆದಂತೆ 1943ರ ಆಗಸ್ಟಿನಲ್ಲಿ ಬಿಡುಗಡೆ ಆಗಿ, ಮುಂದೆ ಬೆಂಗಳೂರಲ್ಲಿ ಮೂರು ವರ್ಷ ಚಿಕಿತ್ಸೆಪಡೆದು ಊರಿಗೆ ಮರಳಿದೆ.

ಆಗಿನ ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯಯೋಧರೆಂದರೆ ದಿ|| ಎ. ಜಿ. ರಾಮಚಂದ್ರರಾವ್, ಬೇಲೂರಿನ ಬಿ. ಎನ್. ಬೋರಣ್ಣಗೌಡ, ಹೊಳೇನರಸೀಪುರದ ಸೂರ್ಯನಾರಾಯಣ ಶೆಟ್ಟಿ ಹಾಗೂ ಗುಂಡೂರಾಮಯ್ಯ, ಚನ್ನರಾಯಪಟ್ಟಣದ ಅಂಕಂ ಸಂಜೀವಶೆಟ್ಟಿ ಹಾಗೂ ನರಸಣ್ಣ, ಕಾಂತರಾಜಪುರದ ಬೋಜಪ್ಪ, ಅರಸೀಕೆರೆಯ ಡಿ. ವಿ. ರಾಮಸ್ವಾಮಿ, ಶಂಕರಸಿಂಗ್, ಬಿ. ವಿಠಲಾಚಾರ್, ಚಿಕ್ಕಪ್ಪ, ಜಿ. ವಿಶ್ವನಾಥ ಶೆಟ್ಟಿ, ಡಾ|| ಕರಿಸಿದ್ದಪ್ಪ, ಕೆ. ಪಂಚಾಕ್ಷರಯ್ಯ, ಕೆ. ಎಂ. ವೆಂಕಟರಮಣ ಶೆಟ್ಟಿ, ಎ. ಕೆ. ಸಿ. ಶರ್ಮ, ಎಚ್. ಚನ್ನಪ್ಪಯ್ಯ, ಎಚ್. ರಾಮಯ್ಯ, ಮುದ್ದುರಂಗ ನಾಯಕ, ಲಕ್ಷ್ಮೀನಾರಾಯಣ ಶೆಟ್ಟಿ, ಸಿ. ಎಚ್. ವಿರುಪಣ್ಣ ಮುಂತಾದವರು.

ಮೈ.ಹಾ. 24

# ಎನ್. ಎಸ್. ರಾಮಕೃಷ್ಣ

ಜನನ : ?   ಉದ್ಯೋಗ : ಕೃಷಿ   ವಿಳಾಸ : ನಿಟ್ಟೂರು. ತಾ|| ಹಾಸನ



ನನ್ನ ಸ್ವಂತ ಊರು ನಿಟ್ಟೂರಾದರೂ ನಮ್ಮ ತಂದೆ ಅರಸೀಕೆರೆಯಲ್ಲಿ ಒಂದು ಹೋಟೇಲು ನಡೆಸಿಕೊಂಡಿದ್ದುದರಿಂದ ನಾವು ಅದೇ ಊರಲ್ಲಿ ಇದ್ದು ಎ.ಐ.ಸಿ.ಸಿ. ಕಾರ್ಯಸಮಿತಿ ಸಭೆ ನಾಲೆಕಲ್ ತಿರುಪತಿಯಲ್ಲಿ ಆದಾಗ ಅಲ್ಲಿ ಪ್ರತಿದಿನ ಹೋಗುತ್ತಿದ್ದು ಆಗಿನಿಂದ ಚಳವಳಿಯಲ್ಲಿ ಆಸ್ಥೆ ತಳೆದೆ. 1939ರಲ್ಲಿ ನಡೆದ ಪಿಕೆಟಿಂಗ್ ಮತ್ತು ಪ್ರಭಾತ್‌ಫೇರಿಗಳಲ್ಲಿ ಪಾಲುಗೊಳ್ಳುತ್ತಿದ್ದೆನಲ್ಲದೆ, 1942ರಲ್ಲೂ ರೈಲು ನಿಲ್ಲಿಸುವ ಮತ್ತು ವೈರ್ ಕತ್ತರಿಸುವ ಚಟುವಟಿಕೆಗಳಲ್ಲಿ ಅಂತರ್ಗಾಮಿಯಾಗಿ ಕೆಲಸ ಮಾಡಿದ್ದೆ.

1947ರ ಚಳವಳಿಯಲ್ಲಿ ಅರಸೀಕೆರೆಯಲ್ಲಿ ಸ್ಮರಣೀಯ ಕೆಲಸಗಳಾದವು. ಆರ್ಕಾಟ್ ಮತ್ತು ತಂಬುಚೆಟ್ಟಿಯವರ ಚಿಟ್ಟದ ಮೆರವಣಿಗೆಯನ್ನು ನಡೆಸಿಕೊಂಡು ಹೋಗುವಾಗ ನನ್ನನ್ನೂ ನನ್ನ ಇತರ ಸ್ನೇಹಿತರನ್ನೂ ಬಂಧಿಸಿದರು.

ಆಗಿನ ಎಲ್ಲ ಚಟುವಟಿಕೆಗಳ ಕೇಂದ್ರವಾಗಿದ್ದ ನಮ್ಮ ಹೋಟೆಲ್‌ಗೆ ನಿಯಂತ್ರಿತ ದರದಲ್ಲಿ ಕೊಡುತ್ತಿದ್ದ ಆಹಾರಪದಾರ್ಥಗಳ ಪೂರೈಕೆ ನಿಲ್ಲಿಸಿದರು. ಅಲ್ಲಿ ರಾತ್ರಿ ನಡೆಯುತ್ತಿದ್ದ ಸಭೆಗಳ ಸಂಬಂಧವಾಗಿ ನನ್ನ ತಮ್ಮ ಎನ್. ಎಸ್. ಶೇಷಗಿರಿಯನ್ನು ಬಂಧಿಸಿದರು. ಆಗ ಇಡೀ ಸಂಸಾರದ ಜವಾಬ್ದಾರಿ ಹಾಗೂ ಹೋಟೆಲ್ ನಿರ್ವಹಣೆಯ ಹೊಣೆ ನನ್ನ ತಮ್ಮಂದಿರ ಮೇಲೆ ಬಿತ್ತು. ನಾನೂ ನನ್ನ ತಮ್ಮನೂ ದೀರ್ಘಕಾಲ ಹಾಸನ ಜೈಲಲ್ಲಿ ಇದ್ದೆವು. ಸಾಮೂಹಿಕ ಬಿಡುಗಡೆ ಆದಾಗ ಹೊರಬಂದೆವು.

ಈಗ ನಿಟ್ಟೂರಿನಲ್ಲಿ ಕೃಷಿಕಾರ್ಯ ಮಾಡುತ್ತ ಇದ್ದೇನೆ. ಗೋವಾ ಸತ್ಯಾಗ್ರಹದಲ್ಲೂ ಪಾಲುಗೊಂಡಿದ್ದೆ.

ಮೈ.ಹಾ. 25

# ಎಸ್. ಎಲ್. ಸತ್ಯನಾರಾಯಣ

ಜನನ : 1923

ಉದ್ಯೋಗ : ಸರಕಾರಿ ನೌಕರಿ

ವಿಳಾಸ : ಆಫೀಸ್ ಸೂಪರಿಂಟೆಂಡೆಂಟ್, ಸೆಂಟ್ರಲ್ ಕಾಲೇಜು, ಬೆಂಗಳೂರು

---



ನನ್ನ ಸೋದರಮಾವ ಚಲ್ಯ ಊರಿನ ಸಿ. ವಿ. ರಾಜಗೋಪಾಲ್ ವರ್ಧಾ ಆಶ್ರಮದಲ್ಲಿ 1942 ಮತ್ತು 1947ರ ನಡುವೆ ಇದ್ದು ಬಂದವರ ಗಿದ್ದು ಅವರ ಪ್ರಭಾವ ನನ್ನ ಮೇಲೆ ಆಗಿತ್ತು. ನಮ್ಮ ಊರಾದ ಶ್ರವಣಬೆಳಗೊಳಕ್ಕೆ ತಾಯಿನಾಡು ಪತ್ರಿಕೆ ಬರುತ್ತಲಿದ್ದು ಅದನ್ನೂ ಓದುತ್ತಿದ್ದೆ. ಸ್ವಾತಂತ್ರ್ಯ ಚಳವಳಿಯ ಕಡೆ ಆಕರ್ಷಿತನಾದೆ. ನಾನು ಮೈಸೂರಲ್ಲಿ ಎಸ್.ಎಸ್.ಎಲ್.ಸಿ. ಓದುತ್ತಿರಲಾಗಿ ನ. ಭದ್ರಯ್ಯ ಮತ್ತು ಅಧ್ಯಾಪಕ ಎಸ್. ಲಿಂಗಣ್ಣಯ್ಯ ಅವರ ಪ್ರಭಾವ ಕೂಡ ನನ್ನಮೇಲೆ ಆಯಿತು. 1942ರಲ್ಲಿ ನಾನು ಎಸ್.ಎಸ್.ಎಲ್.ಸಿ. ಮುಗಿಸಿ ಮೈಸೂರಲ್ಲಿ ಟೈಪ್‌ರೈಟಿಂಗ್ ಅಭ್ಯಾಸ ಮಾಡುವಾಗ ಎಂ. ವಿ. ಕೃಷ್ಣಪ್ಪ, ಶಾರದಾಪ್ರಸಾದ್ ಮುಂತಾದವರ ನೇತೃತ್ವದಲ್ಲಿ ಚಳವಳಿ ಆರಂಭವಾಗಿ ಸುಬ್ರಾಯನ ಕೆರೆಯಲ್ಲಿ ನಿತ್ಯ ಸಭೆ ನಡೆಯುತ್ತಲಿದ್ದವು. ಅವುಗಳಲ್ಲಿ ಪಾಲುಗೊಳ್ಳುತ್ತಿದ್ದ ನಾನು ಕಡೆಗೆ ನನ್ನ ಊರಾದ ಶ್ರವಣಬೆಳಗೊಳಕ್ಕೆ ಬಂದೆ.

ಕಾಂತರಾಜಪುರ ಮತ್ತು ಅದರ ಸಮೀಪದ ಕೊತ್ತನಘಟ್ಟಗಳಲ್ಲಿ ಆಗ ಸಾಕಷ್ಟು ಜಾಗೃತಿ, ಚಳವಳಿ ಇತ್ತು. ಎಸ್. ಶಿವಪ್ಪನವರ ಕುಟುಂಬದ ಜನ ಆ ಭಾಗದಲ್ಲಿ ಚಳವಳಿಯಲ್ಲಿ ಅಗ್ರಭಾಗದಲ್ಲಿ ಇದ್ದರು. ಶ್ರವಣಬೆಳಗೊಳದಲ್ಲಿ ಏನೊಂದೂ ಚಟುವಟಿಕೆ ಇರಲಿಲ್ಲ. ನಾನೇ ಎಲ್ಲ ಚಟುವಟಿಕೆ ಆರಂಭಿಸಿದೆ. ಸಭೆ, ಮೆರವಣಿಗೆ ಆದವು. ಸರಕಾರದ ಪರವಾಗಿ ಇದ್ದ ವ್ಯಾಪಾರಿಗಳ ಮಕ್ಕಳೇ ನನ್ನ ಜೊತೆ ಸಹಕರಿಸಿದರು. ಈ ಪೈಕಿ (ಈಗ ಡಾ॥) ಸುಕುಮಾರ್, (ಹೋಟೆಲ್ ಇಟ್ಟುಕೊಂಡಿರುವ) ರಾಜೇಂದ್ರ, ವಸಂತಕುಮಾರ್ ಪ್ರಮುಖರು.

ಒಂದು ದಿನ ಬೆಳಗ್ಗೆ ಕೆರೆಕಡೆಗೆ ಹೋಗುತ್ತೇನೆಂದು ಹೇಳಿ ನಮ್ಮ ಊರಿಂದ ಎಂಟು ಮೈಲಿ ದೂರದ ಬೂಕನಕೆರೆಗೆ ನಾನೊಬ್ಬನೇ ಹೋಗಿ ಅಲ್ಲಿನ ಶನಿವಾರ ಸಂತೆಯಲ್ಲಿ ಸುಂಕ ಕೊಡಬೇಡಿರೆಂದು ಭಾಷಣಮಾಡಿ, ರಾತ್ರಿ ನಡೆದು ಊರಿಗೆ ಮರಳಿದೆ. ಅನಂತರದ ಮಂಗಳವಾರ ನಾನು, ಸುಕುಮಾರ್ ಶ್ರವಣಬೆಗೊಳ ಸಂತೆಯಲ್ಲಿ ಸುಂಕ ಕೊಡಬೇಡಿರಿ

ಎಂದು ಜೋರಾಗಿ ಪ್ರಚಾರ ಮಾಡಲು ಯಾರೂ ಸುಂಕ ಕೊಡಲಿಲ್ಲ. ಮುಂದಿನ ವಾರ, ಯಾರು ಸುಂಕ ಕೊಡುವುದಿಲ್ಲವೋ ಅವರು ಸಂತೆಯ ಸ್ಥಳಕ್ಕೆ ಬರಬಾರದೆಂದು ಸರಕಾರಿ ಆಜ್ಞೆ ಹೊರಬಂತು. ಆಗ ಜನ ಮಾವಳ್ಳಿಯ ಸ್ಥಳದಿಂದ ನೂರಡಿ ದೂರದಲ್ಲಿ ಪ್ರತ್ಯೇಕ ವಾಗಿ ಸಂತೆ ನಡೆಸಿದರು. ಆಗ ಪೋಲಿಸರು ಆ ಸ್ಥಳಕ್ಕೆ ಬಂದು ಸುಂಕ ತೆರಬೇಕೆಂದು ಹೆಂಗಸರಿಗೂ ಮುದುಕರಿಗೂ ಹೊಡೆಯಲು ಆರಂಭಿಸಲು, ಸಂತೆಗೆ ಬಂದ ಜನ ರೊಚ್ಚಿದ್ದರು. ಸಮೀಪದ ಕಲ್ಲುಗುಡ್ಡದಿಂದ ಪೋಲಿಸರ ಮೇಲೆ ಕಲ್ಲುತೂರಾಟ ಆರಂಭ ಆಯಿತು. ನಾನು ಜನರಿಗೆ ಹಿಂಸಾಚಾರಕ್ಕೆ ತೊಡಗದಂತೆ ಕೇಳಿಕೊಂಡು ಸ್ಥಳದಲ್ಲಿ ಹಾಜರಿದ್ದ ಅಮಲ್ದಾರರಿಗೂ ಸಮಜಾಯಿಷಿ ಹೇಳಲು ಯತ್ನಿಸಿದೆ. ಈ ಎಲ್ಲ ಯತ್ನಗಳು ವಿಫಲ ವಾದವು. ಪೋಲಿಸರು ಆಕಾಶದಲ್ಲಿ ಗುಂಡು ಹಾರಿಸಿದರು. ಯಾರಿಗೂ ಏಟು ಬೀಳದ್ದರಿಂದ, "ಹುಸಿಮದ್ದು, ಹುಸಿಮದ್ದು" ಎಂದು ಜನ ಆಡಿಕೊಂಡರು. "ನುಗ್ಗಿರೋ!" ಎಂಬ ಕೂಗು ಕೇಳಿಬಂತು. ಜನ ಪೋಲಿಸರನ್ನು ಮುತ್ತಿದರು. ಯಾರ ಮಾತನ್ನೂ ಅವರು ಕೇಳಲಿಲ್ಲ. ಪೋಲಿಸರು ತಪ್ಪಿಸಿಕೊಳ್ಳಲು ಯತ್ನಿಸಿದಾಗ ಜನ ಅಟ್ಟಿಸಿಕೊಂಡು ಹೋದರು. ಒಬ್ಬ ಪೋಲಿಸರವ ಎಡವಿಬಿದ್ದ. ರೊಚ್ಚಿಗೆದ್ದ ಜನ ಅವನ ತಲೆಗೆ ಕಲ್ಲಿನಿಂದ ಹೊಡೆದರು. ಆತ ಸತ್ತನೆಂದು ನನ್ನ ನೆನಪು. ಮುಂದೆ ಮತ್ತೆ ಗುಂಡು ಹಾರಲು 8-10 ಜನಕ್ಕೆ ಭಾರೀ ಏಟು ಬಿತ್ತು. ರಾತ್ರಿ ಕರ್ಫ್ಯೂ ಹೇರಿದರು. ರಿಸರ್ವ್ ಪೋಲಿಸರು ಬಂದರು. ಅನೇಕರ ಬಂಧನ ಆಯಿತು. ಆ ಪೈಕಿ ಗುಂಡು ತಗಲಿದವರೂ ಇದ್ದರು. ನನ್ನ ಮಿತ್ರರ ಸಲಹೆಯಂತೆ ನಾನು ರಾತ್ರಿ ಹಿರೇಸಾವೆಗೆ ಹೋಗಿ, ಮರುದಿನ ಮೈಸೂರು ಸೇರಿದೆ. ಚಳವಳಿ ಮುಗಿಯುವ ತನಕ ಮೈಸೂರಲ್ಲೇ ಇದ್ದೆ. ಈ ಪ್ರಕರಣದಲ್ಲಿ 7-8 ಜನಕ್ಕೆ ಶಿಕ್ಷೆ ಆಗಿದ್ದು ಇವರಲ್ಲಿ ಹೆಚ್ಚಿನವರು ಕೊತ್ತನಘಟ್ಟದವರು.

ಮೈಸೂರಲ್ಲಿ ಮುಂದೆ ರೈಲು ಚಳವಳಿಯಲ್ಲಿ ಸೇರಿ ನಂಜನಗೂಡು, ಕೃಷ್ಣರಾಜ ನಗರಗಳಿಗೆ ಟಿಕೆಟ್ಟಿಲ್ಲದೆ ಪ್ರವಾಸ ಮಾಡುತ್ತಿದ್ದೆ. ಎಂ. ವಿ. ಕೃಷ್ಣಪ್ಪ ಆಗ ಕನ್ನೇಗೌಡನ ಕೊಪ್ಪಲಲ್ಲಿ ಭೂಗತರಾಗಿದ್ದು ಕೆಲಸಮಾಡಿಸುತ್ತಿದ್ದರು.

ಮೈ.ಪಾ. 26

## ಅರಕಲಗೂಡು ವೆಂಕಟರಾಮಯ್ಯ

ಜನನ: 1910 ಉದ್ಯೋಗ: ಇಂಜಿನಿಯರ್, ಕಂಟ್ರಾಕ್ಟರ್ ವಿಳಾಸ: ಅರಕಲಗೂಡು

ಹೈಸ್ಕೂಲು ವಿದ್ಯಾಭ್ಯಾಸಕ್ಕಾಗಿ ಅರಕಲಗೂಡಿನಿಂದ ಬೆಂಗಳೂರಿಗೆ ಹೋಗಿ ನ್ಯಾಷನಲ್ ಹೈಸ್ಕೂಲಿಗೆ ಸೇರಿದಲು (1924-25), ಅಲ್ಲಿನ ವಾತಾವರಣ, ಅಲ್ಲಿನ ಅಧ್ಯಾಪಕರು



(ಪ್ರೊ|| ಸಂಪದ್ಗಿರಿರಾವ್, ಎಚ್. ರಾಮರಾವ್, ಕೆ. ಕೃಷ್ಣಯ್ಯಂಗಾರ್) ಇವರ ಪ್ರಭಾವಗಳಿಂದ ನಾನು ರಾಷ್ಟ್ರೀಯಪ್ರವೃತ್ತಿಯುಳ್ಳವನಾದೆ. ಆಗ ನಾನು ಸೇವಾದಳ ಹಾಗೂ ಸ್ಕೌಟ್ ಚಳವಳಿಯಲ್ಲಿ ಕೂಡ ಸೇರಿದೆ. ಆಗಿನಿಂದಲೇ ಖಾದೀಧಾರಿಯಾದೆನಲ್ಲದೆ ನೂಲಲು ಆರಂಭಿಸಿದೆ. 1927ರಲ್ಲಿ ಗಾಂಧೀಜಿ ಇಲ್ಲಿಗೆ ಬಂದಾಗ ನಾನು ಅವರ ಸೇವೆಗಾಗಿ ನಿಯೋಜಿತರಾದವರಲ್ಲಿ ಒಬ್ಬನಾಗಿದ್ದು ಅವರ ಹಾಗೂ ಅವರ ಜೊತೆಗಾರರ ನಿಕಟಸಂಪರ್ಕಕ್ಕೆ ಬಂದೆನಲ್ಲದೆ ಆಗ ಬೆಂಗಳೂರಲ್ಲಿ ನಡೆದ ಅ.ಭಾ. ಖಾದಿ ಗ್ರಾಮೋದ್ಯೋಗ ಪ್ರದರ್ಶನ ದಲ್ಲಿ ನಡೆದ ನೂಲುವ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದು ಗಾಂಧೀಜಿಯವರ ಹಸ್ತದಿಂದ ಬಂಗಾರದ ಪದಕ ಪಡೆದೆ. ಮದ್ರಾಸ್ ಕಾಂಗ್ರೆಸ್‌ಗೆ 1927ರಲ್ಲಿ ಸ್ವಯಂ ಸೇವಕನಾಗಿ ಹೋಗಿದ್ದೆ. ವಿಶ್ವವಿದ್ಯಾನಿಲಯದ ಅಭ್ಯಾಸ ಮಾಡುವಾಗ ಬೆಂಗಳೂರಲ್ಲಿ ಸ್ವಯಂಸೇವಕರಿಗೆ ತರಬೇತಿ ನೀಡುತ್ತಿದ್ದು ಆಗ ನಗರದಲ್ಲಿ ನಡೆಯುವ ಎಲ್ಲ ಸಭೆ ಸಮಾರಂಭಗಳಲ್ಲೂ ಸೇವೆಸಲ್ಲಿಸಿದ್ದೇನೆ. ಖಾದಿ ಹೊತ್ತು ಮನೆಮನೆಗೆ ಮಾರಿದ್ದೇನೆ.

ಉಪ್ಪಿನ ಸತ್ಯಾಗ್ರಹದ ಶುರು ಆದಾಗ 100 ಸ್ವಯಂಸೇವಕರ ತಂಡದ ನಾಯಕ ನಾಗಿ ಉತ್ತರ ಕನ್ನಡ ಜಿಲ್ಲೆಗೆ ಹೋಗುವ ತಯಾರಿಯಲ್ಲಿರಲು, ರಾಜಾಜಿಯವರ ಕರೆಯಂತೆ ಕಾಲೇಜು ತ್ಯಜಿಸಿ, ಟಿ. ಸದಾಶಿವಂ ಮತ್ತು ವಿ. ಎ. ಸುಂದರಂರ ಜೊತೆ, ಇಡೀ 100 ಜನರ ತಂಡದೊಡನೆ ತಮಿಳುನಾಡಿಗೆ ತೆರಳಿದೆ. ಮದರಾಸಿನಿಂದ ಕೊಯಮತ್ತೂರು, ಅಲ್ಲಿಂದ ತಿರುಚಿನಾಪಳ್ಳಿ, ಅಲ್ಲಿಂದ ಮಧುರೆ, ಕಡೆಗೆ ಮತ್ತೆ ತಿರುಚಿನಾಪಳ್ಳಿಗೆ ತೆರಳಿ ಚಳವಳಿಯ ಚಟುವಟಿಕೆಗಳಲ್ಲಿ ಪಾಲುಗೊಂಡೆವು. ಎಲ್ಲ ನಾಯಕರ ಬಂಧನದ ಕಾರಣದಿಂದಾಗಿ ಜೂನ್-ಜುಲೈ ತಿಂಗಳ ವೇಳೆಗೆ ತಮಿಳು ನಾಡಿನಲ್ಲಿ ಸ್ಥಗಿತಾವಸ್ಥೆಗೆ ಬಂದ ಸತ್ಯಾಗ್ರಹ ನಮ್ಮ ತಂಡದ ಚಟುವಟಿಕೆಗಳಿಂದ ಮತ್ತೆ ಬಿರುಸಾಗಿ ಸಾಗಿತು. 1930ರ ಸೆಪ್ಟೆಂಬರ್‌ನಲ್ಲಿ ನನಗೆ 6 ತಿಂಗಳ ಶಿಕ್ಷೆ ಆಯಿತು. ತಿರುಚಿನಾಪಳ್ಳಿಯಲ್ಲಿ ಬಂಧಿತನಾದ ನಾನು ಮೊದಲು ತಿರುಚಿನಾಪಳ್ಳಿಯಲ್ಲೂ ನಂತರ ಬಳ್ಳಾರಿಯ ಆಲಿಪುರಂ ಜೈಲಿನಲ್ಲೂ ಇದ್ದೆ. ತಿರುಚಿನಾಪಳ್ಳಿಯಲ್ಲಿ ನನ್ನ ಜೊತೆ ರಾಜಾಜಿ, ಕಾಮರಾಜ್ ಮುಂತಾದ ನಾಯಕರೂ ಇದ್ದರು.

ಜೈಲುವಾಸ ಮುಗಿದಮೇಲೆ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಲ್ಲಿ ಒಂದಾದ ಖಾದಿ ಗ್ರಾಮೋದ್ಯೋಗದ ಕೆಲಸಕ್ಕಾಗಿ ಸ್ವಂತ ಊರಾದ ಅರಕಲಗೂಡಿನಲ್ಲಿ ನೆಲಸಿದೆ. ಜೀವನೋಪಾಯಕ್ಕಾಗಿ ಕಂಟ್ರಾಕ್ಟರ್ ವೃತ್ತಿಯನ್ನು ಹಿಡಿದು, ಅ.ಮೈ. ಕಂಟ್ರಾಕ್ಟರರ ಸಂಘವನ್ನು 1948ರಲ್ಲಿ ಸ್ಥಾಪಿಸಿದೆ. ನಾನೇ ಅದರ ಅಧ್ಯಕ್ಷ.

ಪ್ರ.ಪಾ. 27

# ಡಾ|| ಎಸ್. ಚಲುವರಾಯ್

ಜನನ: 1915 ಉದ್ಯೋಗ: ವೈದ್ಯ ವಿಳಾಸ: ಸಕಲೇಶಪುರ



1930 ರಿಂದ 1933ರ ವರೆಗೆ ಬೆಂಗಳೂರಿನಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ವಿದೇಶೀವಸ್ತ್ರಗಳನ್ನು ಮಾರುವ ಅಂಗಡಿಗಳ ಮುಂದೆ ನಡೆಯುತ್ತಿದ್ದ ಪಿಕೆಟಿಂಗ್‌ನಲ್ಲಿ ಭಾಗವಹಿಸುತ್ತಿದ್ದು, ಕೋಟೆ ಹೈಸ್ಕೂಲಿನಲ್ಲಿ ಓದುತ್ತಿದ್ದ ನಾನು ಅದರ ಆವರಣದಲ್ಲಿ ನಡೆಯುವ ವಿದೇಶೀ ಟೋಪಿಗಳ ದಹನಕಾರ್ಯದಲ್ಲಿ ಕೂಡ ಪಾಲುಗೊಳ್ಳುತ್ತಿದ್ದೆ. ಶಾಲಾ ಆವರಣದಲ್ಲಿ ಜೈಕಾರಗಳು ಆಗುತ್ತಿದ್ದಾಗ ಒಮ್ಮೆ ಪೋಲೀಸರು ಬಂದು ಲಾಠೀಚಾರ್ಜ್ ಮಾಡಲು ಅನೇಕ ವಿದ್ಯಾರ್ಥಿಗಳು ಸರಕಾರದ ವಿರುದ್ಧ ಇನ್ನಷ್ಟು ಕೆರಳುವಂತಾಯಿತು. ಇದೇ ಅವಧಿಯಲ್ಲಿ ಅರಳೇಪೇಟೆಯಿಂದ ಬಸವನಗುಡಿ ದೇವಾಲಯಕ್ಕೆ ಭಾರೀ ಮೆರವಣಿಗೆಯಲ್ಲಿ ತೆರಳಿ ಹರಿಜನರನ್ನು ದೇವಾಲಯ ಪ್ರವೇಶ ಮಾಡಿಸಿದ ರೋಮಾಂಚಕಾರೀ ದೃಶ್ಯದಲ್ಲಿ ನಾನೂ ಪಾಲುಗಾರನಾಗಿದ್ದೆ. ಕೆ. ಟಿ. ಭಾಷ್ಯಂ, ಟಿ. ಟಿ. ಶರ್ಮ, ವೆಂಕಟಪತಯ್ಯ, ವೀರಕೇಸರಿ, ಪಿ. ಆರ್. ರಾಮಯ್ಯ ಮುಂತಾದವರು ಈ ಕಾರ್ಯಕ್ರಮದ ನೇತೃತ್ವ ವಹಿಸಿದ್ದರು.

1933ರಲ್ಲಿ ವಿಶ್ವೇಶ್ವರಪುರದಲ್ಲಿ ಸ್ಟೂಡೆಂಟ್ಸ್ ಯೂನಿಯನ್ ಎಂಬ ಸಂಸ್ಥೆ ಸ್ಥಾಪಿಸಲು, ಅದರ ಮೂಲಕ ಚರ್ಚಾಕೂಟಗಳನ್ನು ಏರ್ಪಡಿಸಿ ಸ್ವಾತಂತ್ರ್ಯ ಚಳವಳಿಗೆ ಬೆಂಬಲ ಗಳಿಸಲು ದುಡಿದೆವು. ಗಾಂಧೀಜಿಯವರು ಹರಿಜನ ನಿಧಿಗೆ ಧನ ಸಂಗ್ರಹಿಸಲು ಸಂಚಾರ ಕೈಕೊಂಡಾಗ ಕೆ. ಎಚ್. ರಾಮಯ್ಯನವರೊಡನೆ ಈ ಕೆಲಸದಲ್ಲಿ ಸಹಕರಿಸಿ ದುಡಿದೆನಲ್ಲದೆ ಪಂಡಿತ ತಾರಾನಾಥ, ವೈದ್ಯಗುರು ಡಿ. ಕೆ. ಭಾರದ್ವಾಜ ಮುಂತಾದವರು ನಡೆಸುತ್ತಿದ್ದ ಗೀತಾಪ್ರಚಾರ, ಆಯುರ್ವೇದಪ್ರಚಾರ, ಸಮಾಜಸುಧಾರಣಾ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದೆನು.

ಸಕಲೇಶಪುರಕ್ಕೆ ಮರಳಿದಾಗ (1935) ಅಲ್ಲಿ ಒಂದು ಖಾದಿ ಭಂಡಾರ ತೆರೆಯಬೇಕೆಂದು ಹಿರಿಯರ ನೆರವು ಕೇಳಲು, ತಂದೆಯವರು ಹಣ ಕೊಡಲು ಒಪ್ಪಲಿಲ್ಲ. ಇದರ ಬಗ್ಗೆ ಆಗ್ರಹ ಹಿಡಿದು ನಾನು ಉಪವಾಸ ಮಾಡಲು, ನನ್ನ ಗುರುಗಳಾದ ಎಸ್. ನಾರಾಯಣಶಾಸ್ತ್ರಿ ಅವರ ಮಧ್ಯಸ್ಥಿಕೆಯಿಂದ, ಐದು ದಿನಗಳನಂತರ ನೆರವು ನೀಡಲು ಸಮ್ಮ

ತಂದೆಯವರು ಸಮ್ಮತಿ ಇತ್ತರು. 1935ರಿಂದ 10–12 ವರ್ಷಗಳ ಕಾಲ ಈ ಖಾದಿ ಅಂಗಡಿಯ ಮೂಲಕ ಖಾದಿಪ್ರಚಾರ ನಡೆಸಿದೆನಲ್ಲದೆ, ಮೊದಲಿನಿಂದಲೂ ವಿದೇಶೀ ಔಷಧಿ ಹಾಗೂ ಇತರ ಸಾಮಾನು ಮುಟ್ಟುವುದಿಲ್ಲವೆಂದು ಸಂಕಲ್ಪಮಾಡಿ ಕೇವಲ ಸ್ವದೇಶಿ ಔಷಧಿ ಮತ್ತು ಇತರ ಸಾಮಗ್ರಿಗಳನ್ನು ಮಾತ್ರ ಮಾರಾಟಮಾಡುತ್ತಿದ್ದೆನು.

ಶಿವಪುರ ಕಾಂಗ್ರೆಸ್ಸಿಗೆ ನಾನು ಹೋಗಿದ್ದೆನಲ್ಲದೆ ನಮ್ಮ ಊರಲ್ಲಿ ಕಾಂಗ್ರೆಸ್ ಸಮಿತಿ ಸ್ಥಾಪಿಸಿ ಅದರ ಕಾರ್ಯದರ್ಶಿ, ಖಜಾಂಚಿ ಮತ್ತು ಅಧ್ಯಕ್ಷನಾಗಿ ಬೇರೆಬೇರೆ ಕಾಲಕ್ಕೆ ಕೆಲಸ ಮಾಡಿದ್ದೇನೆ. ಬಿ. ಎನ್. ಬೋರಣ್ಣಗೌಡರ ನಿರ್ದೇಶನದಂತೆ ಎಲ್ಲ ರೀತಿಯ ರಾಜಕೀಯ, ರಚನಾತ್ಮಕ ಚಟುವಟಿಕೆಗಳಲ್ಲಿ ಪಾಲುಗೊಂಡೆನಲ್ಲದೆ, ಡಾ|| ಹರ್ಡೀಕರ, ಕಮಲಾದೇವಿ ಚಟ್ಟೋಪಾಧ್ಯಾಯ, ಭಾಷ್ಯಂ, ಕೆ. ಸಿ. ರೆಡ್ಡಿ, ವಿ. ಎಸ್. ನಾರಾಯಣರಾವ್, ಡಾ|| ಪಾರ್ಥನಾರಾಯಣ ಪಂಡಿತ್ ಮುಂತಾದ ಅನೇಕ ನಾಯಕರುಗಳು ನಮ್ಮ ಊರಿಗೆ ಬಂದಾಗ ಅವರ ಭಾಷಣ ಕಾರ್ಯಕ್ರಮಗಳನ್ನು ಏರ್ಪಡಿಸಲು ಸಹಕರಿಸಿದ್ದೆ. ಫ್ರೆಂಡ್ಸ್ ಯೂನಿಯನ್ ಎಂಬ ಸಂಸ್ಥೆ ಸ್ಥಾಪಿಸಿ, ರಾಷ್ಟ್ರೀಯ ವಿಚಾರಗಳಿಗೆ ಸಂಬಂಧಿಸಿದ ಚರ್ಚಾಕೂಟಾದಿಗಳನ್ನು ನಡೆಸಿದೆವು. ಕಾಂಗ್ರೆಸ್ಸಿನ ಸುವರ್ಣಮಹೋತ್ಸವವನ್ನು ಪುರಸಭಾ ಉಪಾಧ್ಯಕ್ಷ ಎಸ್. ಎಂ. ರಾಮಸ್ವಾಮಿಯವರ ಮುಖಂಡತ್ವದಲ್ಲಿ ವಿಜೃಂಭಣೆಯಿಂದ ನಡೆಸಿದೆವು.

ಶಿವಪುರ ಕಾಂಗ್ರೆಸ್‌ನಲ್ಲಿ ನಮ್ಮ ಊರ ನಿಟ್ಟೂರು ಮಂಜಯ್ಯ, ಎನ್. ಡಿ. ಪುಟ್ಟಸ್ವಾಮಪ್ಪ, ಎಸ್. ಆರ್. ವೆಂಕಟಕೃಷ್ಣಯ್ಯ, ಶಾಪ್ ಬಸಪ್ಪ, ಎನ್. ಕೆ. ಪುಟ್ಟೇಗೌಡ, ಎಸ್. ಕೆ. ಕರೀಂಖಾನ್ ಮೊದಲಾದವರ ಜೊತೆ ಭಾಗವಹಿಸಿ ಧ್ವಜ ಸತ್ಯಾಗ್ರಹದಲ್ಲಿ ಪಾಲುಗೊಳ್ಳಲು ಸಿದ್ಧನಾದರೂ ಬಂಧನ ಆಗಲಿಲ್ಲ.

ಇಂದಿಗೂ ಚಳವಳಿಯ ಕಾಲದಲ್ಲಿ ಮುಂದಿಟ್ಟದ್ದ ರಚನಾತ್ಮಕ ಕಾರ್ಯಗಳ ಕಾರ್ಯಾಚರಣೆಗೆ ದುಡಿಯುತ್ತಿರುವೆನಲ್ಲದೆ ಬ್ಲಾಕ್ ಕಾಂ|| ಕ|| ಉಪಾಧ್ಯಕ್ಷನಾಗಿರುವೆ.

ಮೈ.ಹಾ. 28

## ಅಂ. ಕಂ. ಸಂಜೀವ ಶೆಟ್ಟಿ

ಜನನ : 1902 ಉದ್ಯೋಗ : ವ್ಯಾಪಾರ ವಿಳಾಸ : ಚನ್ನರಾಯಪಟ್ಟಣ

ಹೊಳೇನರಸೀಪುರಕ್ಕೆ ಗಾಂಧೀಜಿ ಬಂದಿರಲು (1927) ಅವರನ್ನು ಕಾಣಲು ಹೋದಾಗಿನಿಂದ ನಾನು ಕಾಂಗ್ರೆಸ್ಸಿನ ಕಡೆ ಆಕರ್ಷಿತನಾದೆ. ಹಿರಿಯ ನ್ಯಾಯವಾದಿ ದಿ|| ಅರಕಲಗೂಡು ಶ್ರೀಕಂಠಯ್ಯ ನನಗೆ ಕಾಂಗ್ರೆಸ್ ದೀಕ್ಷೆ ಕೊಟ್ಟರು. ನಾನು ಖಾದಿ



ತೊಡಲು ಆರಂಭಿಸಿದೆ. ಶಿವಪುರ ಕಾಂಗ್ರೆಸ್ಸಿನನಂತರ ನಮ್ಮ ಊರಲ್ಲಿ ಕಾಂಗ್ರೆಸ್ ಚಟುವಟಿಕೆಗಳು ಬಲವಾದವು. 1939ರಲ್ಲಿ ಚನ್ನರಾಯಪಟ್ಟಣ ತಾ॥ ಕಾಂಗ್ರೆಸ್ ಸಮಿತಿ ಸ್ಥಾಪಿತವಾದಾಗ ನಾನೇ ಅಧ್ಯಕ್ಷನಾದೆ. ಬೆಳಗಿಹಳ್ಳಿ ಬೋರಯ್ಯ (ಕಾರ್ಯದರ್ಶಿ). ಎಚ್. ಎನ್. ನರಸಯ್ಯ (ಹಿರಿಸಾವೆ) ಹಾಗೂ ರಾಜಪ್ಪ (ಹಿರಿಸಾವೆ), ಕಾಂತರಾಜಪುರದ ಸೋಮಯ್ಯ, ಸಿ. ಎನ್. ಕೃಷ್ಣಪ್ಪ ಉರುಫ್ ತಿಲಕ್ (ಕಾರ್ಯದರ್ಶಿ), ಆನೆಕೆರೆ ಕೃಷ್ಣಮೂರ್ತಿ, ಕೆಂಗೇಗೌಡ (ಆನೆಕೆರೆ), ನಲ್ಲೂರು ನಂಜೀನಯ್ಯ, ಹುಚ್ಚೇಗೌಡ (ಗಂಜಿಗೆರೆ), ಹಲಸಿನಹಳ್ಳಿ ಬೊಮ್ಮೇಗೌಡ, ಕುಂಬಾರಹಳ್ಳಿ ಜವರೇಗೌಡ, ಮರಗೂರು ನಂಜೇಗೌಡ ಇವರೆಲ್ಲ ಸದಸ್ಯರು. ಗ್ರಾಮಾಂತರ ಪ್ರದೇಶಗಳ ರೈತಬಾಂಧವರ ಅಪಾರ ಸಹಕಾರ ನನಗೆ ಲಭಿಸಿತು ಮತ್ತು ನಾವು ನಡೆಸುತ್ತಿದ್ದ ಚಟುವಟಿಕೆಗಳಿಂದ ಅಧಿಕಾರಿಗಳ ಕೆಂಗಣ್ಣು ನಮ್ಮ ಮೇಲೆ ಬೀಳುವಂತೆ ಆಯಿತು. ಆದರೆ ಹಳ್ಳಿಗಾಡಿನ ರೈತರೂ ಅಪಾರ ದಿಟ್ಟತನ ತೋರಿ ಚಳವಳಿಯ ಕಾರ್ಯಗಳಲ್ಲಿ ಸಹಕರಿಸಿದರು.

ಜಿಲ್ಲಾ ಮುಖಂಡರಾದ ಎ. ಜಿ. ರಾಮಚಂದ್ರರಾವ್, ಗುಂಡೂರಾಮಯ್ಯ, ಬಿ. ಎನ್. ಬೋರಣ್ಣಗೌಡ ಇವರುಗಳು ಆಗಾಗ ಇಲ್ಲಿ ಬಂದು ಕಾರ್ಯಕ್ರಮಗಳನ್ನು ಮುಂದುವರಿಸಲು ಧೈರ್ಯ, ಉತ್ಸಾಹ ಕೊಟ್ಟು ಭಾಷಣಮಾಡಿ ಹೋಗುತ್ತಿದ್ದರು. ಇದಲ್ಲದೆ ಸಂಸ್ಥಾನದ ಮುಖಂಡರಾದ ಭಾಷ್ಯಂ, ಎಚ್. ಸಿದ್ದಯ್ಯ, ಕೆ. ಸಿ. ರೆಡ್ಡಿ, ವೀರಣ್ಣಗೌಡ, ಸಾಹುಕಾರ ಚನ್ನಯ್ಯ, ತಗಡೂರು, ತಾಳಕೆರೆ, ಕೆಂಗಲ್, ರಂಗರಾಮಯ್ಯ, ವೀರಕೇಸರಿ, ಸಿದ್ದಲಿಂಗಯ್ಯ ಇವರೆಲ್ಲ ನಮ್ಮಲ್ಲಿಗೆ ಬಂದು ನಮ್ಮ ಮನೆ ಮುಂದೆ ಭಾಷಣಮಾಡಿ ಜನರಲ್ಲಿ ಉತ್ಸಾಹ ತುಂಬುತ್ತಿದ್ದರು. ಮೈಸೂರು ಜಿಲ್ಲಾ ಮುಖಂಡರುಗಳಾದ ಅಗರಂ ರಂಗಯ್ಯ, ಪಾಲಹಳ್ಳಿ ಸೀತಾರಾಮಯ್ಯ, ಎಂ. ಶಂಕರಯ್ಯ, ಕೃಷ್ಣಪ್ಪಗೌಡ ಮುಂತಾದವರನ್ನು ಅವರ ಜಿಲ್ಲೆಯಿಂದ ಆಗಿನ ಸರಕಾರವು ಗಡೀಪಾರು ಮಾಡಿದಾಗ, ನಮ್ಮ ತಾಲೂಕಿನಲ್ಲಿ ಅವರೆಲ್ಲ ಬಂದು ಒಂದು ತಿಂಗಳು ತಂಗಿದ್ದರು. ಅವರ ಎಲ್ಲ ವ್ಯವಸ್ಥೆಗಳನ್ನೂ ನಾವು ನೋಡಿಕೊಂಡೆವು.

1942ರಲ್ಲಿ ಚನ್ನರಾಯಪಟ್ಟಣದಲ್ಲಿ ತಾಲೂಕು ಮಟ್ಟದ ರಾಜಕೀಯ ಸಮ್ಮೇಳನ ಏರ್ಪಡಿಸಿದ್ದರು. ಎಚ್. ಸಿ. ದಾಸಪ್ಪನವರು ಉದ್ಘಾಟಿಸಿ, ಯಾಚೇನಹಳ್ಳಿ ಮಲ್ಲಯ್ಯನವರು ಅಧ್ಯಕ್ಷತೆ ವಹಿಸಿದ್ದರು. ಸಿದ್ದವನಹಳ್ಳಿ ಕೃಷ್ಣ ಶರ್ಮರು ಭಾಷಣಮಾಡಿದರು. ಇದರ ಪರಿಣಾಮವಾಗಿ ವಿಶ್ವಕರ್ಣಾಟಕ ದಿನಪತ್ರಿಕೆಯನ್ನು ಸರಕಾರ ಒಂದು ವರ್ಷ ಪ್ರಕಟಿಸದಂತೆ ನಿರ್ಬಂಧಪಡಿಸಿತು. (ಆಗ ಸಿ. ಕೃ. ಶರ್ಮ ಅದರ ಸಂಪಾದಕರು). ಈ ಸಮ್ಮೇಳನದಲ್ಲಿ ಸಾವಿರಾರು ರೈತರು ಪಾಲುಗೊಂಡಿದ್ದರು.

1942ರಲ್ಲಿ ಚಳವಳಿ ಪ್ರಾರಂಭ ಆದಾಗ ಶಾಲೆಗಳಿಗೆ ಬಹಿಷ್ಕಾರ, ಕರನಿರಾಕರಣ (ಸಂತೆಸುಂಕದ ಬಗ್ಗೆ), ಸರಕಾರೀ ಕಾರ್ಯಗಳಿಗೆ ಅಡ್ಡಿ, ಸೇಂದಿ ಪಿಕೆಟಿಂಗ್, ಈಚಲು ಮರಗಳನ್ನು ಕತ್ತರಿಸುವುದು, ತಂತಿ ಕತ್ತರಿಸುವುದು, ಇನ್ನೂ ಅನೇಕ ಕಾರ್ಯಕ್ರಮ ಗಳನ್ನು ಆಚರಿಸಲಾಯಿತು. ನನ್ನ ಮತ್ತು ತಿಲಕ್ ಅವರ ಬಂಧನವಾಯಿತಲ್ಲದೆ, ಇತರ ಗ್ರಾಮಗಳಲ್ಲೂ ಅನೇಕರ ಬಂಧನ ಆಯಿತು. ಸಿ. ಟಿ. ರಾಮಕೃಷ್ಣಶೆಟ್ಟಿ ಹಾಗೂ ಆನೆಕೆರೆ ಕೃಷ್ಣಮೂರ್ತಿ ಚಳವಳಿಯನ್ನು ಮುಂದುವರಿಸಿದರು. ಅದೇ ಸೆಪ್ಟೆಂಬರ್‌ನಲ್ಲಿ ರಾಮಕೃಷ್ಣ ಶೆಟ್ಟರ ದಸ್ತಗಿರಿ ಆಯಿತು. ತಾಲೂಕಿನಲ್ಲಿ ಸಂತೆಸುಂಕ ನಿರಾಕರಿಸಿ ಎಲ್ಲೆಡೆ ಉಗ್ರಪ್ರತಿಭಟನೆ ಆಯಿತು.

ಅಕ್ಟೋಬರ್‌ನಲ್ಲಿ ಚನ್ನರಾಯಪಟ್ಟಣದಲ್ಲಿ ಸಂತೆ ಸೇರದಂತೆ ನಿಷೇಧಿಸಲಾಗಿತ್ತು. ಇದರಿಂದ ಶ್ರವಣಬೆಳಗೊಳ ತಿರುವಿನಲ್ಲಿ ಸಂತೆಗೆ ಜನ ಸೇರಿಕೊಂಡರು. ಜನ ಜೆದರದೆ ಹಳ್ಳಿಗಳಿಂದ ತಂಡೋಪತಂಡವಾಗಿ ಬಂದು ಮಧ್ಯಾಹ್ನದವರೆಗೆ 600 ಜನರನ್ನು ಬಂಧಿಸಿ ತಾಲ್ಲೂಕು ಕಚೇರಿಯಲ್ಲಿ ಇಡಲಾಯಿತು. ಮಧ್ಯಾಹ್ನದನಂತರ ಸುಮಾರು 15,000 ಜನರು ತಾ|| ಕಚೇರಿಗೆ ಮುತ್ತಿಗೆಹಾಕಿ ಬಂಧನದಲ್ಲಿದ್ದವರನ್ನೆಲ್ಲ ಬಿಡುಗಡೆಮಾಡಬೇಕೆಂದು ಅಲ್ಲಿದ್ದ ಅಧಿಕಾರಿಗಳನ್ನು ಒತ್ತಾಯಪಡಿಸಲು ಆರಂಭಿಸಿದರು. ಸಾವಿರಾರು ಹೆಂಗಸರು ಈ ಜನಜಂಗುಳಿಯ ಮುಂಭಾಗದಲ್ಲಿ ಇದ್ದರು. ಆನೆಕೆರೆ ಕೃಷ್ಣಮೂರ್ತಿಯವರನ್ನು ಮ್ಯಾಜಿಸ್ಟ್ರೇಟರು ಪ್ರಾರ್ಥಿಸಿದ ಮೇರೆಗೆ ಅವರು ಜನರನ್ನು ಶಾಂತಗೊಳಿಸಿ ಸಂಜೆಯತನಕ ತಮ್ಮ ತಮ್ಮ ಊರುಗಳಿಗೆ ಮರಳುವಂತೆ ಮಾಡಿದರು. ಸಂಜೆಗೆ ಪೋಲಿಸ್ ಸೂಪರಿಂಟೆಂಡೆಂಟರು ಅನೇಕ ಸಿಬ್ಬಂದಿಯೊಡನೆ ಇಲ್ಲಿಗೆ ಬಂದು, ಊರಿನಲ್ಲೆಲ್ಲ ದಾಳಿ ನಡೆಸಿ ಸಿಕ್ಕಸಿಕ್ಕವರನ್ನು ಹೊಡೆದು ಸಂಜೀವಶೆಟ್ಟರ ಮನೆಗೆ ನುಗ್ಗಿ, ವಿವೇಚನೆ ಇಲ್ಲದೆ ಅಲ್ಲಿದ್ದ ಅನೇಕ ಗ್ರಾಮಸ್ಥರನ್ನು ಹೊಡೆದು ಧಾಂದಲೆಮಾಡಿ, ಅನೇಕರನ್ನು ವಾಹನಗಳಲ್ಲಿ ತುಂಬಿಕೊಂಡು ಹೋದರು. ರಸ್ತೆಯಲ್ಲಿ ಹೋಗುತ್ತಿದ್ದವರನ್ನೂ ಹೊಡೆದು ಅನೇಕರು ಗಾಯಗೊಂಡು ಆಸ್ಪತ್ರೆಗೆ ಸೇರುವಂತೆ ಆಯಿತು.

ಈ ಸಂದರ್ಭದಲ್ಲಿ ದಸ್ತಗಿರಿಯಾದವರ ಬಗ್ಗೆ ವಿಚಾರಣೆ ಮಾಡಲು ಒಂದು ವಿಶೇಷ ನ್ಯಾಯಾಲಯ ಸ್ಥಾಪಿಸಿದರು. ಆಗ ಆನೆಕೆರೆ ಕೃಷ್ಣಮೂರ್ತಿಗಳು ಹಾಸನಕ್ಕೆ ಹೋಗಿ ಅಡ್ವೊಕೇಟ್ ರಂಗಸ್ವಾಮಿ ಮತ್ತು ವೆಂಕಟೇಶಯ್ಯ ಇವರುಗಳನ್ನು ಕರೆದು ತಂದು ಕೋರ್ಟಿಗೆ ವಕಾಲತ್ತು ಹಾಕಿಸುವ ಸಂದರ್ಭದಲ್ಲಿ ಕೋರ್ಟಿನ ಬಳಿ ಕೃಷ್ಣ ಮೂರ್ತಿಗಳನ್ನು ದಸ್ತಗಿರಿಮಾಡಲಾಯಿತು.

ಇದಾದ 4-5 ದಿನಗಳಲ್ಲಿ ಶ್ರವಣಬೆಳಗೊಳ ಸಂತೆಯಲ್ಲಿ ಪಿಕೆಟ್ ಮಾಡುತ್ತಿದ್ದವರ ಮೇಲೆ ಪೋಲಿಸರು ಲಾಠಿಪ್ರಯೋಗಮಾಡಿ ಹಿಂಸೆಮಾಡಲು, ಜನ ಪ್ರಚೋದಿತರಾಗಿ ಕಲ್ಲುಗಳ ಮಳೆಗರೆಯಲು ಒಬ್ಬ ರಿಜರ್ವ್ ಪೋಲಿಸನು ಸತ್ತನು. ಆಗ ಪೋಲಿಸರು ಗೋಲೀಬಾರು ಮಾಡಿ ಅನೇಕ ಜನಕ್ಕೆ ಗಾಯವಾಯಿತು. ಸಬ್‌ಡಿವಿಜನ್ ಅಧಿಕಾರಿ,

ತಹಶೀಲ್ದಾರ ಪೋ॥ ಸೂಪರಿಂಟೆಂಡೆಂಟ್, ರಿಜರ್ವ್ ಪೋಲಿಸರು, ಇವರೆಲ್ಲ ಕಲ್ಲೇಟಿನಿಂದ ಗಾಯಗೊಂಡರು.

ಇದರ ಹಿಂದೆಯೇ ಭಾನುವಾರ ಶ್ರೀನಿವಾಸಪುರ ಸಂತೆಯಲ್ಲಿ ಸಲ್ಲೂರು ಸಂಜೀವಯ್ಯನವರ ಮುಖಂಡತ್ವದಲ್ಲಿ ಸುತ್ತಲ ಗ್ರಾಮದವರು ಪಿಕೆಟಿಂಗ್ ಮಾಡಲು, ಅಲ್ಲಿಯೂ ಜನಕ್ಕೂ ಪೋಲಿಸರಿಗೂ ಘರ್ಷಣೆ ಆಗಿ, ಪೋಲಿಸ್ ಇನ್ಸ್‌ಪೆಕ್ಟರ್ ವಗೈರೆಯವರಿಗೆ ಗಾಯವಾಯಿತು. ಅನೇಕರ ದಸ್ತಗಿರಿ ಆಯಿತು. ಚನ್ನರಾಯಪಟ್ಟಣದ ಎಚ್. ಎನ್. ನರಸಣ್ಣನವರು ಹೊಳೇನರಸೀಪುರಕ್ಕೆ ಹೋದಾಗ ಅಲ್ಲಿ ಅವರನ್ನು ಬಂಧಿಸಲಾಯಿತು. ಅವರ ಮೇಲೆ ಗಡೀಪಾರು ಆಜ್ಞೆ ಹೇರಲು, ಅದನ್ನು ಅವರು ನಿರಾಕರಿಸಿ ಒಂದೂವರೆ ವರ್ಷ ಸಶ್ರಮ ಜೈಲುಶಿಕ್ಷೆ ಅನುಭವಿಸಿದರು.

ಸಲ್ಲೂರು ಸಂಜೀವಯ್ಯನವರು ಭೂಗತರಾಗಿರಲು ಅವರನ್ನು ಹಿಡಿದುಕೊಟ್ಟವರಿಗೆ ಸೂಕ್ತ ಬಹುಮಾನ ಕೊಡುವುದಾಗಿ ಪೋಲಿಸರು ಪ್ರಕಟಿಸಿದರೂ ಅವರ ಬಂಧನ ಆಗಲಿಲ್ಲ. ಕಡೆಗೆ ಅವರು ಕಾಯಿಲೆ ಬಿದ್ದುದರಿಂದ ಪೋಲಿಸರಿಗೆ ಶರಣಾಗತರಾಗಲು, ಅವರಿಗೆ ಎರಡು ವರ್ಷ ಸಶ್ರಮ ಶಿಕ್ಷೆ ಆಯಿತು. ಇದನ್ನು ಮುಂದೆ ಹೈಕೋರ್ಟು ರದ್ದು ಮಾಡಲು, ಅವರು ಒಂದು ವರ್ಷ ಮಾತ್ರ ಸೆರೆಯಲ್ಲಿ ಇದ್ದರು.

ಈ ಕಾಲಕ್ಕೆ ಹಳ್ಳಿಯ ಭಾಗಗಳಿಂದ ಚಳವಳಿಯಲ್ಲಿ ನನ್ನ ಜೊತೆ ಸಹಕರಿಸಿದವರೆಂದರೆ ಕುಂಬಾರಹಳ್ಳಿ ಜವರೇಗೌಡ, ನುಗ್ಗೇಹಳ್ಳಿ ನರಸಿಂಹೇಗೌಡ, ಹಿರೀಸಾವೆ ರಾಚಪ್ಪ, ಕಾಂತರಾಜಪುರದ ಸೋಮಯ್ಯ ಮತ್ತು ದೊಡ್ಡಲಕ್ಕಪ್ಪ ಮುಂತಾದವರು ಪ್ರಮುಖರು. ಈ ಚಳವಳಿಯ ಕಾಲದಲ್ಲಿ ಕಾಂತರಾಜಪುರದ ಊರ ಮೇಲೆ ಪುಂಡುಗಂದಾಯ ಕೂಡ ವಿಧಿಸಿ ವಸೂಲು ಮಾಡಿದರು.

ಜೈಲಿನಲ್ಲಿ ಊಟೋಪಚಾರಗಳ ತೊಂದರೆ ಆದಾಗ ಸ್ವಂತ ಖರ್ಚಿನಿಂದ ಎಷ್ಟೋ ಅನುಕೂಲಗಳನ್ನು ಒದಗಿಸಿದೆನಲ್ಲದೆ, ಅಧಿಕಾರಿಗಳೊಂದಿಗೂ ಹೋರಾಡಿ ಕೊರತೆಗಳ ನಿವಾರಣೆಗೆ ಶ್ರಮಿಸಿದೆನು. ಈ ಹೋರಾಟಗಳಿಗಾಗಿ ನನ್ನನ್ನು ಅಲ್ಲಿ 'ವೀರ ಅಭಿಮನ್ಯು' ಎಂದು ಕರೆಯುತ್ತಿದ್ದರು. ಹಾಸನ, ಶಿವಮೊಗ್ಗ, ಸಾಗರ, ಚಿಕ್ಕಮಗಳೂರು ಜೈಲುಗಳಲ್ಲಿ ನಾನು ಇರಬೇಕಾಗಿ ಬಂತು.

ಯುದ್ಧಕಾಲದಲ್ಲಿ ಸೀಮೆ ಎಣ್ಣೆಗೆ ಬರ ಬಂದಾಗ, ಸೀಮೆ ಎಣ್ಣೆಯ ಬದಲಿಗೆ ಹಿಪ್ಪೆ ಎಣ್ಣೆ, ಹೊಂಗೆ ಎಣ್ಣೆ, ಕೊಬ್ಬರಿ ಎಣ್ಣೆ ಇವುಗಳನ್ನೇ ಬಳಸಬೇಕು, ಪರದೇಶೀ ಎಣ್ಣೆಯ ಮೇಲೆ ಅವಲಂಬನ ಬೇಡ, ಎಂದು ನಾನೂ ಬೋರಣ್ಣಗೌಡರೂ ತಾಲೂಕಿನ ಹಳ್ಳಿಗಳಲ್ಲಿ ಪ್ರಚಾರಮಾಡಿದ್ದೆ.

ಮೈ.ಹಾ. 29

## ಎಚ್. ಎಸ್. ಹೊಂಗೇಗೌಡ

ಜನನ : 1905 ಉದ್ಯೋಗ : ? ವಿಳಾಸ : ಹಿರೀಸಾವೆ, ತಾ॥ ಚನ್ನರಾಯಪಟ್ಟಣ



ಕೆ. ಟಿ. ಭಾಷ್ಯಂ, ಟಿ. ಮರಿಯಪ್ಪ, ಕೆ. ಸಿ. ರೆಡ್ಡಿ ಮುಂತಾದ ನಾಯಕರು ನಮ್ಮ ಊರಿಗೆ ಬಂದು ಭಾಷಣ ಮಾಡಿದ್ದರಿಂದ ಪ್ರಭಾವಿತನಾಗಿ ಚಳವಳಿ ಸೇರಿದ ನಾನು, 1942ರಲ್ಲಿ ನಮ್ಮ ಊರ ಬೋರೇಗೌಡ, ರಾಜೇಗೌಡ, ಎಚ್. ಜಿ. ಶಿವೇಗೌಡ ಮುಂತಾದವರನ್ನು ಕೂಡಿಕೊಂಡು ಸುತ್ತಲ ಗ್ರಾಮಗಳಲ್ಲಿ ನಡೆಯುತ್ತಿದ್ದ ಸಂತೆಗಳಲ್ಲಿ ಸುಂಕ ಕೊಡದಂತೆ ಪಿಕೆಟಿಂಗ್ ನಡೆಸುತ್ತಿದ್ದೆವು. ಚನ್ನರಾಯಪಟ್ಟಣದಲ್ಲಿ ಪಿಕೆಟಿಂಗ್ ನಡೆಸಿದಾಗ ನಮ್ಮನ್ನು ಬಂಧಿಸಿದರು. 21 ದಿನ ಕಸ್ಟಡಿಯಲ್ಲಿ ಇರಿಸಿ, ಕೇಸ್ ನಡೆಸಿ ಮುಂದೆ ಎರಡು ತಿಂಗಳು ಶಿಕ್ಷೆ, 50 ರೂ. ದಂಡ ; ದಂಡ ತೆರದಿದ್ದಲ್ಲಿ 15 ದಿನ ಶಿಕ್ಷೆ ವಿಧಿಸಿದರು. ದಂಡ ತೆರಲಿಲ್ಲ. 12-10-1942ರಲ್ಲಿ ಮೈಸೂರು ಜೈಲಿಗೆ ಸೇರಿಸಿ, 25-12-1942ಕ್ಕೆ ಬಿಡುಗಡೆ ಆಯಿತು.

1947ರಲ್ಲಿ 15-20 ಜನರ ಗುಂಪಿನೊಡನೆ ಕಾಲ್ನಡಿಗೆಯಿಂದ ಮೈಸೂರಿಗೆ ಜಾತಾ ಹೊರಡಲು ಚನ್ನರಾಯಪಟ್ಟಣದಲ್ಲಿ ಪೋಲಿಸರು ಅಡಚಣೆ ಮಾಡಿದರು. ನಾವು ಹೆದರದೆ ಮುಂದೆ ಕಿಕ್ಕೇರಿಗೆ ಹೋದೆವು ಅಲ್ಲಿಯೂ ಪೋಲೀಸರು ತಡೆಯಲು, ಹಿಂಜರಿಯದೆ ಕೃಷ್ಣರಾಜಪೇಟೆಗೆ ಹೋದೆವು. ಅಲ್ಲಿ ನಮ್ಮನ್ನು ಬಂಧಿಸಿ, ಅಲ್ಲಿಂದ ಮಂಡ್ಯ ಜೈಲಿಗೆ ಕಳುಹಿಸಿದರು. ಅಲ್ಲಿ 13-9-1947ರಿಂದ 8-10-1947ರ ವರೆಗೆ ಇದ್ದೆ. 1942ರಿಂದ 1947ರವರೆಗೆ ಸ್ವಾತಂತ್ರ್ಯ ಚಳವಳಿಯ ಸಲುವಾಗಿ ತನುಮನಧನಗಳಿಂದ ದುಡಿದಿದ್ದೇನೆ.

ಮೈ.ಹಾ. 30

## ಎಚ್. ಜಿ. ಶಿವಣ್ಣ

ಜನನ : 1911 ಉದ್ಯೋಗ : ? ವಿಳಾಸ : ಹಿರೀಸಾವೆ, ತಾ॥ ಚನ್ನರಾಯಪಟ್ಟಣ

ಉಪ್ಪಿನ ಸತ್ಯಾಗ್ರಹದ ಕಾಲಕ್ಕೆ ಶಾಲೆ ತ್ಯಜಿಸಿದ ನಾನು 1942ರಲ್ಲಿ ಚಲೇ ಜಾವ್ ಚಳವಳಿ ಕಾಲಕ್ಕೆ ನಮ್ಮ ಊರಲ್ಲಿ ಸಂತೆ ಸೇರದಂತೆ ಪಿಕೆಟಿಂಗ್ ಮಾಡಿದೆ. ಪೋಲಿಸರು



ಆಗ ನನ್ನ ಮೇಲೆ ನಿಗಾ ಇಟ್ಟರು. ಆದರೆ ಪೋಲಿಸ್ ಪೇದೆಯೊಬ್ಬನು ನನ್ನ ಮಿತ್ರನಾಗಿದ್ದುದರಿಂದ ನನಗೆ ಪೋಲೀಸರ ಚಟುವಟಿಕೆಯು ಸುಳಿವು ತಿಳಿಯುತ್ತಿತ್ತು. ನನ್ನ ಹೆಂಡತಿ ಈ ಕಾಲದಲ್ಲಿ ನನಗೆ ವಿಶೇಷ ಪ್ರೋತ್ಸಾಹ ನೀಡುತ್ತಿದ್ದಳು. ನಾನು ಅವಳ ಸಲಹೆಯಂತೆ ಸೀರೆ ಉಟ್ಟು ರಾತ್ರಿ ತಂತಿ ಕತ್ತರಿಸಿ ಬರುತ್ತಿದ್ದೆ. ಬಹಳ ದಿನ ಈ ವಿಚಾರ ಪೋಲಿಸರ ಗಮನಕ್ಕೆ ಬರಲಿಲ್ಲ. ಕಡೆಗೆ ಯಾರೋ ಗ್ರಾಮಸ್ಥರೇ ಈ ವಿಚಾರ ಪೋಲಿಸರಿಗೆ ತಿಳಿಸಲು, ಈ ಸಂಗತಿ ನನ್ನ ಮಿತ್ರ-ಪೋಲಿಸನಿಂದ ನನಗೆ ತಿಳಿಯಿತು. ನಾನು ತಪ್ಪಿಸಿಕೊಂಡು ಚನ್ನರಾಯಪಟ್ಟಣಕ್ಕೆ ಹೋದೆ. ಅಲ್ಲಿ ಸಂತೆ ಪಿಕೆಟಿಂಗ್‌ನಲ್ಲಿ ಪಾಲುಗೊಂಡು ಬಂಧಿತನಾದೆ. ಒಂದು ತಿಂಗಳು ಕಸ್ಟಡಿಯಲ್ಲಿ ಇಟ್ಟುಕೊಂಡು, ಅಪಾಲಜಿ ಬರೆಸಿಕೊಳ್ಳಲು ತುಂಬಾ ಯತ್ನಮಾಡಿದರು. ಜಮೀನು ಕೊಡಿಸುವುದಾಗಿ ಪುಸಲಾಯಿಸಿದರು. ನಾನು ಯಾವುದಕ್ಕೂ ಬಗ್ಗಲಿಲ್ಲ. ಉಪವಾಸ ಕೆಡವಲು, ಕಸ್ಟಡಿಯಲ್ಲಿ ಪ್ರಜ್ಞಾಹೀನನಾಗಿ ಬಿದ್ದೆ. ನನ್ನನ್ನು ನಂತರ ಫಸ್ಟ್‌ಕ್ಲಾಸ್ ಮ್ಯಾಜಿಸ್ಟ್ರೇಟರ ಮುಂದೆ ಹಾಜರುಪಡಿಸಲು 3 ತಿಂಗಳ ಕಠಿಣಶಿಕ್ಷೆ 50 ರೂ. ದಂಡ ಆಯಿತು. ಮೈಸೂರು ಜೈಲಿನಲ್ಲಿದ್ದಾಗ ಗಲಾಟೆ ಆಗಿ, ಕೆಲವರಿಗೆ ತಿಕಡಿಯಲ್ಲಿ ಬಂಧಿಸಿ ಹೊಡೆಯಲು ಆರ್ಡರ್ ಆಯಿತು. ನಾನು ತಿಕಡಿಯನ್ನು ಏರಿ ಮುರಿದುದಕ್ಕೆ ನನಗೆ 6 ತಿಂಗಳು ಶಿಕ್ಷೆ 500 ರೂ ದಂಡ ಆಯಿತು. ಈ ಕಾಲದಲ್ಲಿ ನನ್ನ ಜಮೀನು, ಮನೆ ಕೈತಪ್ಪಿಹೋಯಿತು. ನನ್ನ ತಾಯಿ, ನನ್ನ ಇಬ್ಬರು ಅಕ್ಕಂದಿರು ನಾನು ಜೈಲಲ್ಲಿ ಇದ್ದಾಗಲೇ ತೀರಿಕೊಂಡರು. ನನ್ನ ಸ್ನೇಹಿತರಾದ ಬಸವೇಗೌಡರು ಆಗ ಇವರೆಲ್ಲರ ಉತ್ತರಕ್ರಿಯಾದಿಗಳನ್ನು ನಡೆಸಿಕೊಟ್ಟರು. ನಾನು ಜೈಲಿನಿಂದ ಹೊರಬರುವಾಗಲೂ ಅಧಿಕಾರಿಗಳು ನನಗೆ ಕಾಂಗ್ರೆಸ್ ತ್ಯಜಿಸಲು ಒತ್ತಾಯಿಸಿದರು.

1947ರಲ್ಲಿ ನಾವು ಜಾತಾ ಹೊರಡಲು ನಮ್ಮನ್ನು ಬಂಧಿಸಿ ಕಣ್ಣುಕಟ್ಟಿ ದೂರ ಕಾಡಿನಲ್ಲಿ ವ್ಯಾನ್ ಮೂಲಕ ಬಿಟ್ಟರು. ರಾತ್ರಿ ಕಾಡಿನಲ್ಲಿ ಕಳೆದು ಬೆಳಗ್ಗೆ ಶಿವಮೊಗ್ಗ ಸೇರಲು, ಆ ಊರಿನವರು ನಮ್ಮನ್ನು ಬಸ್ಸುಗಳ ಮೂಲಕ ಊರಿಗೆ ಕಳುಹಿಸಿದರು. ತಿರುಗಿ ಚನ್ನರಾಯಪಟ್ಟಣದಿಂದ ಕಿಕ್ಕೇರಿ ಮೂಲಕ ಜಾತಾ ಹೊರಡಲು ನಮ್ಮನ್ನು ಬಂಧಿಸಿ ಮಂಡ್ಯ ಜೈಲಿಗೆ ಸೇರಿಸಿದರು. ದೀರ್ಘಕಾಲ ಅಲ್ಲಿದ್ದ ನಂತರ, ಕಡೆಗೆ ಬಿಡುಗಡೆ ಆಯಿತು.

ಹೈ.ರಾ. 1

# ಹೈದರಾಬಾದ್ ಕರ್ನಾಟಕದಲ್ಲಿ ಸಂಗ್ರಾಮ



ಜಯತೀರ್ಥ ರಾಜಪುರೋಹಿತ
ಲೇಖಕರು

ನಿಜಾಮರ ಹೈದರಾಬಾದ್ ಸಂಸ್ಥಾನದಲ್ಲಿ ಸ್ವಾತಂತ್ರ್ಯಹೋರಾಟ ಅನೇಕ ಮಟ್ಟಗಳಲ್ಲಿ ಜರುಗ ಬೇಕಾಗಿತ್ತು. ಮೊದಲನೆಯದಾಗಿ, ರಾಷ್ಟ್ರಮಟ್ಟ ದಲ್ಲಿ ಬ್ರಿಟಿಷರ ವಿರುದ್ಧವಾಗಿ; ಎರಡನೆಯದಾಗಿ, ಸಂಸ್ಥಾನಮಟ್ಟದಲ್ಲಿ ಆಳುತ್ತಿದ್ದ ನಿಜಾಮರ ವಿರುದ್ಧ ವಾಗಿ; ಇನ್ನೂ ಕೆಳಗಿನ ಮಟ್ಟದಲ್ಲಿ ಸಂಸ್ಥಾನ ದೊಳಗಿನ ಚಿಕ್ಕಪುಟ್ಟ ಜಾಗೀರುದಾರರ ಅಂಕಿತ ಪ್ರದೇಶಗಳಲ್ಲಿದ್ದ, ವ್ಯವಸ್ಥಿತ ಸರ್ಕಾರವೇ ಇಲ್ಲದಂಥ ಪರಿಸ್ಥಿತಿಯ ವಿರುದ್ಧವಾಗಿಯೂ ಹೋರಾಟ ನಡೆಸ ಬೇಕಾಗಿತ್ತು.

ಜಾಗತಿಕ ಯುದ್ಧಗಳಲ್ಲಿ ಬ್ರಿಟಿಷ್ ಸಮ್ರಾಟರಿಗೆ ನಿಷ್ಠಾಪೂರ್ಣ ಸೇವೆಗೈದ ನಿಜಾಮರು ಬ್ರಿಟಿಷರ 'ಪ್ರಾಮಾಣಿಕ ಸ್ನೇಹಿತ' ಎಂಬ ಬಿರುದು ಪಡೆದಿದ್ದರು; ಸಂಸ್ಥಾನದ ಜನತೆಯಲ್ಲಿ ಸ್ವಾತಂತ್ರ್ಯದ ಆಸೆ ಮೂಡದಂತೆ ಕಾಲಕಾಲಕ್ಕೆ ಎಚ್ಚರಿಕೆ ವಹಿಸುತ್ತ ಬಂದಿದ್ದರು. ಹೈದರಾಬಾದ್ ಸಂಸ್ಥಾನದ ಜನತೆಯಲ್ಲಿ ಕೇವಲ ಶೇಕಡ 12ರಷ್ಟು ಜನ ಮಾತ್ರ ನಿಜಾಮರ ಮತೀಯರಾದ ಮುಸ್ಲಿಮರು. ಜನತಾರಾಜ್ಯವಾದರೆ ಬಹುಸಂಖ್ಯಾತರ ಹಿಂದೂ ರಾಜ್ಯವಾಗುವುದೆಂಬ ಹೆದರಿಕೆಯೇ ನಿಜಾಮರ ಸ್ವಾತಂತ್ರ್ಯ ವಿರೋಧೀ ಧೋರಣೆಗೆ ಪ್ರಬಲ ಕಾರಣ. ಇದಲ್ಲದೆ, ಆನುವಂಶಿಕವಾಗಿ ನಿರಂಕುಶಾಧಿ ಕಾರವನ್ನು ರೂಢಿಸಿಕೊಂಡಿದ್ದ ನಿಜಾಮರು ಮುಸ್ಲಿಂ ಜನಸಾಮಾನ್ಯರಿಗೇ ಆದರೂ ಅಧಿಕಾರವನ್ನು ಹೇಗೆ ಬಿಟ್ಟುಕೊಟ್ಟಾರು ?

ಸುಮಾರು 250 ವರ್ಷಗಳ ಹಿಂದೆ ದಕ್ಷಿಣದಲ್ಲಿ ಮೊಘಲರ ಸುಬೇದಾರನಾಗಿದ್ದ ಮೊದಲನೆಯ ನಿಜಾಮನು ಕೇಂದ್ರದಲ್ಲಿನ ಮೊಘಲರ ದೌರ್ಬಲ್ಯದ ದುರ್ಲಾಭಪಡೆದು, ಸ್ವಾಮಿದ್ರೋಹಮಾಡಿ, ದಕ್ಷಿಣದಲ್ಲಿ ಸ್ವಾತಂತ್ರ್ಯ ಸಾರಿ ಆಸಫ್‌ಜಾಹಿ ಮನೆತನದ ಮೂಲಪುರುಷನಾಗಿದ್ದನು. ಈ ಶತಮಾನದ ಆರಂಭದಿಂದ ಆಳ್ವಿಕೆಗೆ ಬಂದಿದ್ದ ಅದೇ ವಂಶದ ಮೀರ್ ಉಸ್ಮಾನ್ ಅಲಿಖಾನ್ ಸಹ ಭಾರತದಿಂದ ಬ್ರಿಟಿಷರ ನಿರ್ಗಮನ, ಭಾರತದ ವಿಭಜನೆ, ದೇಶೀಯ ಸಂಸ್ಥಾನಗಳ ಸ್ಥಾನಮಾನಗಳ ಇತಿಮಿತಿ, ಇಂಥ

ಸಂಕ್ರಮಣ ಕಾಲದ ಗೊಂದಲದ ಲಾಭ ಪಡೆದು ಹೈದರಾಬಾದನ್ನು ಸ್ವತಂತ್ರ ಸಂಸ್ಥಾನವನ್ನಾಗಿ ತಮ್ಮ ಆಳ್ವಿಕೆಯಲ್ಲಿಯೇ ಉಳಿಸಿಕೊಳ್ಳಲು ಯತ್ನಿಸಿದುದರಲ್ಲಿ ಆಶ್ಚರ್ಯವೇನೂ ಇಲ್ಲ. 1946ರ ಮಾರ್ಚ್ ತಿಂಗಳ ಒಂದು ದಿನ 'ಹಿಂದೂ' ಪತ್ರಿಕೆಯಲ್ಲಿ 'ಬಂಗಾಳ ಆಖಾತದ ನೀರು ನಿಜಾಮರ ಪಾದಗಳಿಗೆ ಅಭಿಷೇಕ ಮಾಡಲಿದೆ' ಎಂದು ಪ್ರಕಟವಾದುದನ್ನು ಇಲ್ಲಿ ಗಮನಿಸಬೇಕು.

ನಿಜಾಮರ ಈ ಮಹತ್ವಾಕಾಂಕ್ಷೆಯಲ್ಲಿ ಸಂಸ್ಥಾನದ ಮುಸಲ್ಮಾನರ ಹಿತಾಸಕ್ತಿಯೂ ಅಡಕವಾಗಿದೆ, ಎಂದು ಪ್ರಚೋದಿಸಲಾಯಿತು. ನಿಮ್ನವರ್ಗದ ಹಿಂದುಗಳಿಗೆ ಅನೇಕ ಪ್ರಲೋಭನೆಗಳನ್ನೊಡ್ಡಿ ಮತಾಂತರ, ದಬ್ಬಾಳಿಕೆ ಮುಂತಾದ ಚಟುವಟಿಕೆಗಳನ್ನು ನಡೆಸುವಂಥ 'ಇತಿಹಾದುಲ್ ಮುಸಲ್ಮೀನ್'ನಂಥ ಜಾತೀಯ ಸಂಸ್ಥೆಗಳಿಗೆ ನಿಜಾಮ್ ಸರ್ಕಾರ ಬೆಂಬಲ ಕೊಟ್ಟು ಬಹುಜನಾಭಿಪ್ರಾಯವನ್ನು ಹತ್ತಿಕ್ಕಲು ಯತ್ನಿಸಿತು. ಇನ್ನೊಂದೆಡೆ, ಪಕ್ಷಪಾತಪೂರಿತ ಕಾನೂನುಗಳ ಮೂಲಕ ಹಿಂದುಗಳ ವಿರುದ್ಧ ಮುಸ್ಲಿಮರನ್ನೂ ಹಿಂದುಗಳಲ್ಲಿಯೇ ಅನೇಕ ಪಂಗಡಗಳನ್ನೂ ಎತ್ತಿಕಟ್ಟುವ ಹಾಗೂ ರಾಜಕೀಯ ಸುಧಾರಣೆಯ ಸೋಗುಹಾಕಿ ಬುದ್ಧಿಜೀವಿಗಳ ಮನವೊಲಿಸುವ ಯತ್ನವೂ ನಡೆಯಿತು. ಪಾಕಿಸ್ತಾನದ ಜನನ ಅನೇಕ ನ್ಯಾಯಪಕ್ಷಪಾತಿಗಳಾದ ಮುಸಲ್ಮಾನರ ವಿವೇಕವನ್ನು ಸಹ ಕೆಡಿಸಿ ಅವರು ತಮ್ಮ ನೆರೆಯ ಹಿಂದುಗಳ ಮೇಲೆ 'ನಿಗಾ' ಇಡುವಂತೆ ಪ್ರಚೋದಿಸಿತು. ಅನೇಕ ಹಿಂದು ಅಧಿಕಾರಿಗಳೂ ಜಾಗೀರದಾರರೂ ಸ್ವಾತಂತ್ರ್ಯಾಂದೋಲನವನ್ನು ಹತ್ತಿಕ್ಕಲು ನಿಜಾಮರಿಗೆ ನೆರವಾದ ನಿದರ್ಶನಗಳಿಗೇನೂ ಕೊರತೆಯಿಲ್ಲ. ಇಂಥ ಕಷ್ಟಕರ ಪರಿಸ್ಥಿತಿಯಲ್ಲಿ ಆಂದೋಲನವನ್ನು ನಡೆಸಿ ಯಶಸ್ಸು ಗಳಿಸಿದ ಹೈದರಾಬಾದ್ ಕರ್ನಾಟಕದ ಜನರು ಎಂಥ ಅಗ್ನಿಪರೀಕ್ಷೆಯಿಂದ ಪಾರಾಗಿರಬಹುದು ಎಂಬುದು ಗಮನಿಸಬೇಕಾದ ಸಂಗತಿ. ಈ ಸಂಸ್ಥಾನ ಭಾರತದೊಡನೆ ವಿಲೀನವಾಗಲು ಜನತಾ ಆಂದೋಲನವೇ ಪ್ರಬಲ ಕಾರಣವಾಯಿತು. ಭಾರತ ಸರ್ಕಾರ ನಡೆಸಿದ ಮಿಲಿಟರಿ ಕಾರ್ಯಾಚರಣೆ ಒಂದು ಪೂರಕ ಕ್ರಿಯೆ ಮಾತ್ರ.

ಸುಮಾರು 200 ವರ್ಷಗಳ ತಮ್ಮ ಆಳ್ವಿಕೆಯ ಅವಧಿಯಲ್ಲಿ ನಿಜಾಮರು ಹೇಳಿಕೊಳ್ಳುವಂತಹ ಸುಧಾರಣೆಗಳನ್ನೇನೂ ತರಲಿಲ್ಲ. 1919ರಲ್ಲಿ ಜಾರಿಗೆ ಬಂದ ಮಾಂಟೆಗೂ-ಚೆಮ್ಸ್‌ಫರ್ಡ್ ಸುಧಾರಣೆಗಳು ಭಾರತದ ಜನಕೋಟಿಯಲ್ಲಿ ನವಚೈತನ್ಯವನ್ನುಂಟು ಮಾಡಿದವು. ಇದರ ಪರಿಣಾಮ ಹೈದರಾಬಾದ್ ಸಂಸ್ಥಾನದ ಮೇಲೂ ಆಗದಿರಲಿಲ್ಲ. ಇಲ್ಲಿಯ ಜನರಲ್ಲಿಯೂ ಅವು ರಾಷ್ಟ್ರೀಯ ಭಾವನೆಯನ್ನು ಜಾಗೃತಗೊಳಿಸಿದವು. ಆಳುತ್ತಿದ್ದ ನಿಜಾಂ ಸಹ ಅದೇ ವರ್ಷದ ಆಗಸ್ಟ್‌ನಲ್ಲಿ ಒಂದು ಫರ್ಮಾನ್ ಹೊರಡಿಸಿ ಸರ್ ಅಲಿ ಇಮಾಮರನ್ನು ಶಾಸನಸಭೆಯ ಬಗ್ಗೆ ವರದಿಮಾಡಲು ಅಧ್ಯಕ್ಷರನ್ನಾಗಿ ನಿಯಮಿಸಿದರು. ರಾಯ್ ಬಾಲಮುಕುಂದ್ ವರದಿಯೊಂದನ್ನು ಸಿದ್ಧಪಡಿಸಿದರು. ಸರ್ ಇಮಾಂ ಅದಕ್ಕೆ ತಮ್ಮ ಒಪ್ಪಿಗೆಯನ್ನು ಕೊಟ್ಟರು. ಆದರೆ ಆ ವರದಿ ಕೌನ್ಸಿಲ್

ಮುಂದೆ ಬರುವ ಮುಂಚೆಯೇ ಸರ್ ಇಮಾಂ ರಾಜೀನಾಮೆ ಸಲ್ಲಿಸಿದರು. ಹೊಸ ಸುಧಾರಣೆಗಳು ಜಾರಿಗೆ ಬರಲೇ ಇಲ್ಲ.

ಈ ಘಟನೆ ಸಂಸ್ಥಾನದ ಜನತೆಯನ್ನು ಬಹಳ ಕೆರಳಿಸಿತು. ಜನರು ಆಡಳಿತದಲ್ಲಿನ ಅವ್ಯವಸ್ಥೆ, ಭ್ರಷ್ಟಾಚಾರ ಇವೇ ಮುಂತಾದುವನ್ನು ಹೊರಗೆಳೆದರು. ಚಾಣಾಕ್ಷ ನಿಜಾಂ ಬ್ರಿಟಿಷ್ ಅಧಿಕಾರಿಗಳನ್ನು ನೇಮಿಸಿಕೊಂಡು, ಅವರ ಮರೆಯಲ್ಲಿ ನಿರಂಕುಶಾಧಿಕಾರವನ್ನು ಮುಂದುವರಿಸಿದರು.

1921ರಲ್ಲಿ ಸಂಸ್ಥಾನದ ಸುಧಾರಣಾ ಸಮಿತಿಯು ಸಾರ್ವಜನಿಕ ಪರಿಷತ್ತನ್ನು ಕೂಡಿಸಲು ಯತ್ನಿಸಿತು ; ಸರ್ಕಾರ ಅವಕಾಶ ಕೊಡಲಿಲ್ಲ. ರಾಜಕೀಯ ಸಭೆಗಳ ಮೇಲೆ ನಿರ್ಬಂಧ ಹೇರಿತು. ಸರ್ಕಾರಕ್ಕೆ ಬೇಡವಾದ ಯಾವ ಸಭೆಯಾದರೂ 'ರಾಜಕೀಯ' ಎಂದಾಯಿತು. ಇಷ್ಟಾದರೂ ಜನನಾಯಕರು 1923ರಲ್ಲಿ ಶಾಸನಸಭೆಯ ರಚನೆಯ ಬಗ್ಗೆ ನಿರ್ದಿಷ್ಟ ಯೋಜನೆಯನ್ನು ನಿಜಾಂ ಸರ್ಕಾರಕ್ಕೆ ಸಾದರಪಡಿಸಿದರು. ಸುಮಾರು 6 ವರ್ಷಗಳನಂತರ ಸರ್ಕಾರ 'ಕಾಲಾಗಸ್ತಿ' ಅಂದರೆ ಕರಿಸುತ್ತೋಲೆ ನಂ. 53 ಎಂಬುದನ್ನು ಜಾರಿ ಮಾಡಿ ಸರ್ಕಾರದ ಪೂರ್ವಾನುಮತಿಯಿಲ್ಲದೆ ಯಾವ ಸಭೆಯೂ ಸೇರಕೂಡದೆಂದು ನಿರ್ಬಂಧಿಸಿತು. ಜನರು ಈ ಸುತ್ತೋಲೆ ವಿರೋಧಿ ಸಮಿತಿಯನ್ನು ರಚಿಸಿಕೊಂಡರು. ರಾಜ್ಯದ ಒಳಗೆ ನಿರ್ಬಂಧವಿದ್ದ ಕಾರಣ ಬಿರಾರ್ ಪ್ರಾಂತದ ಅಕೋಲಾದಲ್ಲಿ ರಾಜಕೀಯ ಪರಿಷತ್ತನ್ನು ಸೇರಿಸಿ 'ಜವಾಬ್ದಾರಿ ಸರ್ಕಾರ'ವೇ ಮೂಲ ಧ್ಯೇಯವಾಗಿರುವ ಘಟನಾತ್ಮಕ ಸುಧಾರಣೆಗಳನ್ನು ರಾಜ್ಯದಲ್ಲಿ ಜಾರಿಗೆ ತರಬೇಕೆಂಬ ಗೊತ್ತುವಳಿಯನ್ನು ಸುಧಾರಣಾವಾದಿ ನಾಯಕರು ಅಂಗೀಕರಿಸಿದರು. ಆದರೆ ಸರ್ಕಾರ ಉದಾಸೀನವಾಗಿಯೇ ಇತ್ತು.

ಈ ನಡುವೆ ಭಾರತದ ಸ್ವಾತಂತ್ರ್ಯಕ್ಕಾಗಿ ಹೊರಪ್ರಾಂತ್ಯಗಳಲ್ಲಿ ಸತ್ಯಾಗ್ರಹಗಳು ನಡೆದವು. ಹೈದರಾಬಾದ್‌ನಲ್ಲೂ ಸಹ 'ಹೈದರಾಬಾದ್ ಸ್ವದೇಶೀ ಲೀಗ್' ಸ್ಥಾಪಿತವಾಯಿತು. ವಿದೇಶೀ ಬಟ್ಟೆ ಬಹಿಷ್ಕಾರ, ಸಾಪ್ತಾಹಿಕ ಧ್ವಜವಂದನೆ ಮುಂತಾದ ಕಾರ್ಯಕ್ರಮಗಳು ಪ್ರಾರಂಭವಾದವು. 1935ರಲ್ಲಿ 'ನಿಜಾಂ ಪ್ರಜಾ ಪರಿಷತ್ತು' ಸ್ಥಾಪಿತವಾಗಿ, ರಾಜಕೀಯ ಹಕ್ಕುಬಾಧ್ಯತೆಗಳ ಬಗ್ಗೆ ಹೋರಾಟ ಘೋಷಿಸಿತು. ಹೈದರಾಬಾದ್‌ನ ಎಲ್ಲ ಪ್ರಜೆಗಳಿಗೂ ನಾಗರಿಕ ಹಾಗೂ ಧಾರ್ಮಿಕ ಸ್ವಾತಂತ್ರ್ಯ ಮತ್ತು ವಿಚಾರಪ್ರಕಟಣಾಸ್ವಾತಂತ್ರ್ಯವಿರಬೇಕೆಂದು ಘೋಷಿಸಲಾಯಿತು. ಸರ್ಕಾರ ಈ ಸಂಸ್ಥೆಯನ್ನೂ ಇತರ ಇಂಥಾ ಸಂಸ್ಥೆಗಳನ್ನೂ ಮತೀಯ ಸಂಸ್ಥೆಗಳೆಂದು ಹತ್ತಿಕ್ಕತೊಡಗಿತು. ಆದರೆ ಬಹದ್ದೂರ್ ಯಾರ್ ಜಂಗ್ ಎಂಬುವರ ನೇತೃತ್ವದಲ್ಲಿ, ದಲಿತರ ಮತಾಂತರ ಮಾಡುವಂಥ ಮುಸ್ಲಿಂ ಸಂಸ್ಥೆಗಳಿಗೆ ಸರ್ಕಾರ ಬೆಂಬಲ ನೀಡತೊಡಗಿತು. ಆಗಿನ ಪಕ್ಷಪಾತಯುಕ್ತ ಕಾನೂನಿಗೆ ಒಂದು ಉದಾಹರಣೆ: ಯಾವ ಜಾತಿಯವನ ಆಸ್ತಿಯನ್ನಾದರೂ ಮುಸಲ್ಮಾನರು ಕೊಳ್ಳಬಹುದಿತ್ತು, ಆದರೆ ಮುಸಲ್ಮಾನನೊಬ್ಬನ ಆಸ್ತಿಯನ್ನು ಮುಸಲ್ಮಾನರಲ್ಲದವರ್ಯಾರೂ ಕೊಳ್ಳುವಂತಿರಲಿಲ್ಲ. ಆಸ್ತಿಯ ರಕ್ಷಣೆಗಾಗಿ

ದುರ್ಬಲರು ಮುಸಲ್ಮಾನರಾಗುವಂತೆ ಆಕರ್ಷಿಸಲು ಇದರಿಂದ ಸಾಧ್ಯವಿತ್ತು. ಈ ರೀತಿಯ ಮತಾಂತರಕ್ಕೆ ಪ್ರಚೋದನೆಯೂ ಸಾಕಷ್ಟಿತ್ತು. ಗಣೇಶಚತುರ್ಥಿ, ದಸರಾ ಮುಂತಾದ ಹಿಂದೂ ಹಬ್ಬಗಳಲ್ಲಿ ಸಹ ಸಭೆಗಳನ್ನು ನಿರ್ಬಂಧಿಸಲಾಗಿತ್ತು. ಈ ಎಲ್ಲ ಪ್ರತಿಗಾಮಿ ಕ್ರಮಗಳ ವಿರುದ್ಧ ಆರ್ಯ ಸಮಾಜ ಉಗ್ರ ಸಾಹಸಪೂರ್ಣ ಹೋರಾಟ ನಡೆಸಿ, ಜನ ಸಾಮಾನ್ಯರಲ್ಲಿ ಸಾಕಷ್ಟು ಚೈತನ್ಯವನ್ನು ತಂದಿತು. ಆರ್ಯ ಸಮಾಜ ಅಖಿಲ ಭಾರತ ಸಂಸ್ಥೆಯಾದ ಕಾರಣ ಭಾರತದ ಅನೇಕ ಭಾಗಗಳಿಂದ ಸಾವಿರಾರು ಸಂಖ್ಯೆಯಲ್ಲಿ ಸತ್ಯಾಗ್ರಹಿಗಳು ಬಂದು ಹೈದರಾಬಾದಿನ ವಿವಿಧ ನಗರಗಳಲ್ಲಿ ಚಳವಳಿಯನ್ನು ಆರಂಭಿಸಿದರು ಸಂಸ್ಥಾನದ ಜಿಲ್ಲೆಗಳಿಂದಲೂ ಸ್ವಯಂಸೇವಕರು ತಯಾರಾಗಿ ಬಂದರು. ಪಂಡಿತ ನರೇಂದ್ರಜಿ, ಬನ್ಸಿಲಾಲ್‌ಜಿ ವ್ಯಾಸ್, ಪನ್ನಾಲಾಲ್, ವಿನಾಯಕರಾವ್ ವಿದ್ಯಾಲಂಕಾರ ಮುಂತಾದವರು ಈ ಚಳವಳಿಯ ಮುಖಂಡರಾದರು. ಮತಾಂತರದ ವಿರುದ್ಧವಂತೂ ಬಲು ಚುರುಕಾದ ಪ್ರತಿಭಟನೆ ಹಾಗೂ ಶುದ್ಧಿಯ ಕಾರ್ಯಕ್ರಮಗಳನ್ನು ಆರ್ಯ ಸಮಾಜ ರೂಪಿಸಿತು. ಆ ದಿನಗಳಲ್ಲಿ ಆರ್ಯ ಸಮಾಜದವರು ಹೊರಡಿಸುತ್ತಿದ್ದ ಪ್ರಚಂಡ ಮೆರವಣಿಗೆಗಳೂ ಮೆರವಣಿಗೆಗಳಲ್ಲಿ ಮತೀಯ ಗೂಂಡಾಗಳಿಂದ ಉಂಟಾಗುತ್ತಿದ್ದಂಥ ತಾಕಲಾಟಗಳೂ ಸಂಸ್ಮರಣೀಯವಾಗಿವೆ.

ಆರ್ಯ ಸಮಾಜದ ಚಳವಳಿಗೆ ಕಿಂಚಿತ್ ಧಾರ್ಮಿಕ ಸ್ವರೂಪವಿದ್ದ ಕಾರಣ ರಾಜಕೀಯ ಚಳವಳಿಯಿಂದ ಇದನ್ನು ಬೇರೆ ಇಡುವ ಎಚ್ಚರಿಕೆಯನ್ನು ಮುಖಂಡರು ವಹಿಸಿದರು. ಆದರೂ ಕಾಂಗ್ರೆಸ್ ಹಾಗೂ ಪರಿಷತ್ ಎರಡೂ ಮತೀಯ ಸಂಸ್ಥೆಗಳೆಂದೇ ಸರ್ಕಾರ ಪ್ರಚಾರ ನಡೆಸಿತು. ರಾಜಕೀಯ ಸುಧಾರಣೆಗಾಗಿ ಬೇಡಿಕೆ ಮುಂದೊಡ್ಡುವ ಒಂದಿಲ್ಲೊಂದು ಸಂಸ್ಥೆ ಹುಟ್ಟುತ್ತಲೇ ಇದ್ದುವು. 1936ರಲ್ಲಿ ಅರ್ವಮುದು ಅಯ್ಯಂಗಾರ್ ಅವರ ಅಧ್ಯಕ್ಷತೆಯಲ್ಲಿ ನಿಜಾಂ ಮತ್ತೊಂದು ಸುಧಾರಣಾ ಸಂಸ್ಥೆಯನ್ನು ರಚಿಸಿದರು. 1938ರಲ್ಲಿ ಇದರ ವರದಿ ಬಂತು. ಈ ಸಮಯದಲ್ಲಿ ತಮ್ಮ ಬೇಡಿಕೆಗಳ ಬಗ್ಗೆ ಒತ್ತಾಯಿಸಲು ಪ್ರಜೆಗಳು 'ಹೈದರಾಬಾದ್ ಪೀಪಲ್ಸ್ ಕನ್ವೆನ್ಷನ್' ಸ್ಥಾಪಿಸಿದರು. ಆದರೆ ಸರ್ಕಾರ ಮತ್ತಷ್ಟು ನಿರ್ಬಂಧಗಳನ್ನು ಹೇರಿತು.

ಹರಿಪುರ ಕಾಂಗ್ರೆಸ್ ಅಧಿವೇಶನದ ಆದೇಶದ ಮೇರೆಗೆ ಸಂಸ್ಥಾನದ ಜನತೆ 1938ರ ಜುಲೈ ತಿಂಗಳಲ್ಲಿ 'ಹೈದರಾಬಾದ್ ಸ್ಟೇಟ್ ಕಾಂಗ್ರೆಸ್'ನ ತಾತ್ಕಾಲಿಕ ಸಮಿತಿಯನ್ನು ರಚಿಸಿತು. ಇದಾದ ಒಂದೇ ತಿಂಗಳಿನಲ್ಲಿ 100 ಜನ ಕಾಂಗ್ರೆಸ್ ಸದಸ್ಯರಾದರು. ಮುಂದೆ ಸೆಪ್ಟೆಂಬರ್‌ನಲ್ಲಿ ಸ್ಟೇಟ್ ಕಾಂಗ್ರೆಸ್‌ನ ಸಾಮಾನ್ಯ ಸದಸ್ಯರ ಸಭೆ ಸೇರಬೇಕೆಂದು ಗೊತ್ತಾಯಿತು. ಸರ್ಕಾರಕ್ಕೆ ಇದು ನುಂಗಲಾರದ ತುತ್ತಾಯಿತು. ಸಭೆ ಸೇರುವ ಮುನ್ನಾ ದಿನವೇ ಈ ಕಾಂಗ್ರೆಸ್ ಜಾತೀಯ ಸಂಸ್ಥೆಯೆಂದು ಘೋಷಿಸಿ ಸಭೆಯನ್ನು ನಿರ್ಬಂಧಿಸಿತು. ಕಾಯಿದೆ ಭಂಗವೊಂದೇ ಈಗ ಉಳಿದಿದ್ದ ಏಕೈಕ ಮಾರ್ಗ. ಅಂತೆಯೇ ಸ್ಟೇಟ್ ಕಾಂಗ್ರೆಸ್‌ನ ತಾತ್ಕಾಲಿಕ ಸಮಿತಿಯ ಮುಖಂಡರು ಸೇರಿ ಕಾಂಗ್ರೆಸ್ಸನ್ನು ಅಸ್ತಿತ್ವದಲ್ಲಿ

ತರುವುದಾಗಿ ಸಾರಿದರು. ಗೋವಿಂದರಾವ್ ನಾನಲ್‌ರು ಈ ಸಮಿತಿಯ ಅಧ್ಯಕ್ಷರು; ರಾಮಕೃಷ್ಣ ದೂತರು ಕಾರ್ಯದರ್ಶಿಗಳು; ಕರ್ನಾಟಕ ಭಾಗದ ಜನಾರ್ದನರಾವ್ ದೇಸಾಯಿ, ತೆಲಂಗಾಣದ ರವಿನಾರಾಯಣ ರೆಡ್ಡಿ (ಆಮೇಲೆ ಕಮ್ಯುನಿಸ್ಟ್ ಮುಖಂಡರಾದರು), ಮರಾಠವಾಡ ಭಾಗದಿಂದ ಶ್ರೀನಿವಾಸರಾವ್ ಬೋರೀಕರ್ ಕಾರ್ಯಸಮಿತಿಯ ಸದಸ್ಯರುಗಳು. ಈ ಮುಖಂಡರು 1938ರ ಅಕ್ಟೋಬರ್ 24ರಂದು 'ಸ್ಟೇಟ್ ಕಾಂಗ್ರೆಸ್' ಹುಟ್ಟಿತೆಂದು ಬಹಿರಂಗವಾಗಿ ಘೋಷಿಸಿದರು. ಆಗ ಸದಸ್ಯತ್ವ 1200ಕ್ಕೆ ಏರಿತ್ತು.

'ಕಾಂಗ್ರೆಸ್' ಎಂದರೆ ಹೆದರುತ್ತಿದ್ದ ನಿಜಾಮರ ಕಣ್ಣೆದುರಿನಲ್ಲೇ ಕಾಂಗ್ರೆಸ್ ಹುಟ್ಟಿತು. ಆಗ ನಿಜಾಂ ಹೇಗೆ ಸಹಿಸಿಯಾರು? ಆ ದಿನ ಮೇಲೆ ಹೆಸರಿಸಿದ ಐದೂ ನಾಯಕರು ಸತ್ಯಾಗ್ರಹಮಾಡಿ ಸೆರೆಮನೆ ಸೇರಿದರು. ಹೈದರಾಬಾದ್ ಕರ್ನಾಟಕ ಭಾಗದಿಂದ ಸ್ಟೇಟ್ ಕಾಂಗ್ರೆಸ್ ಸಂಸ್ಥಾಪಕ ಸದಸ್ಯರಾಗಿ, ಮೊದಲು ಸೆರೆಮನೆ ಸೇರಿದ ಕೀರ್ತಿ ರಾಯಚೂರು ಜಿಲ್ಲೆಯ ಜನಾರ್ದನರಾವ್ ದೇಸಾಯಿ ಇವರಿಗೆ ಲಭಿಸಿತು. ಸತ್ಯಾಗ್ರಹಗಳ ಮಾಲೆಯೇ ಇವರೊಡನೆ ಪ್ರಾರಂಭವಾಗಿ, ಬೇರೆ ಬೇರೆ ಕಡೆಗಳಲ್ಲಿ ಸುಮಾರು 400 ಜನ ಸೆರೆಮನೆ ಸೇರಿದರು. ಈ ನಡುವೆ, ಆರ್ಯಸಮಾಜ ಮತ್ತು ಹಿಂದು ಸಿವಿಲ್ ಲಿಬರ್ಟೀಜ್ ಸಂಸ್ಥೆಯವರು ಧಾರ್ಮಿಕ ಹಕ್ಕುಗಳಿಗಾಗಿ ಸತ್ಯಾಗ್ರಹ ಹೂಡಿದ ಕಾರಣ ಗೊಂದಲಮಯ ಪರಿಸ್ಥಿತಿಯುಂಟಾಗದಿರಲೆಂದು ಕಾಂಗ್ರೆಸ್ ಸತ್ಯಾಗ್ರಹವನ್ನು ನಿಲ್ಲಿಸಿತು.

ಅಖಿಲ ಭಾರತ ಪರಿಸ್ಥಿತಿಯನ್ನು ಪರಿಶೀಲಿಸಿ, ನಿಜಾಂ ಸರ್ಕಾರ 1939ರಲ್ಲಿ ಕಾಂಗ್ರೆಸ್ ಸತ್ಯಾಗ್ರಹಿಗಳನ್ನೆಲ್ಲಾ ಬಿಡುಗಡೆ ಮಾಡಿತು. ದ್ವಿತೀಯ ಮಹಾಯುದ್ಧಾನಂತರ ಕಾಂಗ್ರೆಸ್ಸಿನ ಮೇಲಿದ್ದ ನಿರ್ಬಂಧವನ್ನು ತೆಗೆದುಕೊಳ್ಳಲು ಮತ್ತೊಮ್ಮೆ ಸರ್ಕಾರಕ್ಕೆ ಮನವಿ ಮಾಡಲಾಯಿತು. ಆದರೆ ಆ ಯತ್ನ ಫಲಿಸಲಿಲ್ಲ. ಆದಕಾರಣ ಪ್ರಾಂತೀಯ ಪರಿಷತ್ತುಗಳನ್ನು ರಚಿಸಲು ಮುಖಂಡರು ನಿಶ್ಚಯಿಸಿದರು. ಬೇರೆಲ್ಲ ಕಡೆಗಳಂತೆಯೇ ಕರ್ನಾಟಕ ಭಾಗದಲ್ಲಿ 'ನಿಜಾಮ್ ಕರ್ನಾಟಕ ಪರಿಷತ್ತು' ಸ್ಥಾಪಿತವಾಯಿತು. ಅಧಿಕ ಜನಬೆಂಬಲವಿದ್ದ ಕಾರಣ ಈ ಪರಿಷತ್ತುಗಳು ಜವಾಬ್ದಾರಿ ಸರ್ಕಾರ ರಚನೆಯೇ ತಮ್ಮ ಗುರಿಯೆಂದು ಘೋಷಿಸಿದವು.

ನಿಜಾಮ್ ಕರ್ನಾಟಕ ಪರಿಷತ್ತಿನ ಪ್ರಥಮ ಅಧಿವೇಶನ ಹೈದರಾಬಾದ್‌ನಲ್ಲಿ ನಡೆಯಿತು. ರಾಯಚೂರಿನ ಖ್ಯಾತ ವಕೀಲರಾದ ಪಿ. ಕಿಷನ್‌ರಾಯರು ಅಧ್ಯಕ್ಷತೆ ವಹಿಸಿದ್ದರು. ಹೈದರಾಬಾದ್ ಸಂಸ್ಥಾನ ಕಾಂಗ್ರೆಸ್ಸನ್ನೂ, ಆಮೇಲೆ ನಿಜಾಂ ಕರ್ನಾಟಕ ಪರಿಷತ್ತನ್ನೂ ಸ್ಥಾಪಿಸುವಲ್ಲಿ ರಾಯಚೂರು ಜಿಲ್ಲೆ ಗುಡಗುಂಟಿ ರಾಮಾಚಾರ್ಯ ಜೋಶಿ, ಜನಾರ್ದನರಾವ್ ದೇಸಾಯಿ, ಜೆ. ಕೆ. ಪ್ರಾಣೇಶಾಚಾರ್ಯ ಅವರುಗಳ ಪಾತ್ರ ಹಿರಿದು. ನಂತರದ ರಾಜಕೀಯದಲ್ಲಿ ಗಣನೀಯ ಸೇವೆಸಲ್ಲಿಸಿದವರಲ್ಲಿ ಕಾಟರಹಳ್ಳಿ ಬಸವಂತರಾವ್ ಸಿರೂರ ವೀರಭದ್ರಪ್ಪ, ನರಸಿಂಗರಾವ್ ಹಂಪಿ, ಗುಲ್ಬರ್ಗ ಜಿಲ್ಲೆಯ ಕಕ್ಕೇರಿ ಹನುಮಂತ

ರಾವ್, ಅಣ್ಣಾರಾವ್ ಗಣಮುಖಿ, ದತ್ತಾತ್ರೇಯರಾವ್ ಅವರಾದಿ ಹಾಗೂ ಚಂದ್ರಶೇಖರ ಪಾಟೀಲ, ಕೋಳೂರ ಮಲ್ಲಪ್ಪ, ಜಗನ್ನಾಥರಾವ್ ಚಂಡರಕಿ ಮುಂತಾದವರನ್ನು ಹೆಸರಿಸಬಹುದು.

ನಿಜಾಂ ಕರ್ನಾಟಕ ಪರಿಷತ್ತಿನ ಎರಡನೆಯ ಅಧಿವೇಶನ ಬೀದರಿನಲ್ಲಿ ನಡೆಯಿತು. ಜನಾರ್ದನರಾವ್ ದೇಸಾಯಿ ಅಧ್ಯಕ್ಷರಾಗಿದ್ದರು; ಮಹಿಳಾ ವಿಭಾಗಕ್ಕೆ ವಿಮಲಾಬಾಯಿ ಮೇಲ್ಕೋಟೆ ಅಧ್ಯಕ್ಷೆಯಾಗಿದ್ದರು. ಈ ಸಮ್ಮೇಳನ ಮಹತ್ವಪೂರ್ಣ ಘಟನೆಗಳಿಗೆ ಕಾರಣವಾಯಿತು. ಬಹುದೊಡ್ಡ ಪ್ರಮಾಣದಲ್ಲಿ ಸೇರಿದ್ದ ಈ ಸಮ್ಮೇಳನವನ್ನು ವಿಫಲಗೊಳಿಸಲು ಸರ್ಕಾರದಿಂದ ಪ್ರೋತ್ಸಾಹಿತರಾದ ಮುಸ್ಲಿಂ ಗೂಂಡಾಗಳು ಸಮ್ಮೇಳನದ ಮೇಲೆ ಹಲ್ಲೆ ನಡೆಸಿದರಲ್ಲದೆ ನಗರದಲ್ಲಿನ ಪ್ರಮುಖ ಹಿಂದೂ ವ್ಯಾಪಾರಿಗಳ ಅಂಗಡಿಗಳನ್ನೆಲ್ಲಾ ಸುಟ್ಟರು. ಇದರ ಪರಿಣಾಮವಾಗಿ ಸರಕಾರ ಎಣಿಸಿದ್ದಂತೆ ಜನ ಹೆದರಲಿಲ್ಲ. ಬದಲು ಹೋರಾಟದ ಹುಮ್ಮಸ್ಸು ಜಾಸ್ತಿಯಾಯಿತು. ಪರಿಷತ್ತಿನ ಮೂರನೆಯ ಅಧಿವೇಶನ ಗುಲ್ಬರ್ಗ ಜಿಲ್ಲೆಯ ಸುರಪುರದಲ್ಲಿ ಅಣ್ಣಾರಾವ್ ಗಣಮುಖಿಯವರ ಅಧ್ಯಕ್ಷತೆಯಲ್ಲಿ ಜರುಗಿತು. ಜನಾರ್ದನರಾವ್ ದೇಸಾಯರ ಪತ್ನಿ ಸುಭದ್ರಾಬಾಯಿ ಮಹಿಳಾ ವಿಭಾಗದ ಅಧ್ಯಕ್ಷೆಯಾಗಿದ್ದರು. ನಾಲ್ಕನೆಯ ಅಧಿವೇಶನವು ಕಕ್ಕೇರಿ ಹನುಮಂತರಾಯರ ಅಧ್ಯಕ್ಷತೆಯಲ್ಲಿ ನಡೆಯುವ ಹೊತ್ತಿಗೆ ಜನಜಾಗೃತಿ ಉಂಟಾಗಿತ್ತು.

* * *

ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟದ ಕಿಡಿ ಹೊತ್ತಿದ್ದು ಮೊದಲು ರಾಯಚೂರು, ಕೊಪ್ಪಳ ಭಾಗಗಳಲ್ಲಿ ಎಂದೇ ಹೇಳಬೇಕು. ಕೊಪ್ಪಳದ ಕೋಟೆಯಲ್ಲಿ ಬ್ರಿಟಿಷರ ವಿರುದ್ಧ ಹೋರಾಡುತ್ತಾ ಮಡಿದ ಮುಂಡರಗಿ ಭೀಮರಾಯ ಮತ್ತು ಹಮ್ಮಿಗೆ ಕೆಂಚನಗೌಡ ಅವರ ಹೆಸರುಗಳು ಇಂದಿಗೂ ಸ್ಫೂರ್ತಿದಾಯಕವಾಗಿವೆ. ಕೊಪ್ಪಳವೆಂದರೆ ಕೀರ್ತನೆಗಳಿಂದ ಹೋರಾಟದ ಸ್ಫೂರ್ತಿಯನ್ನು ಹುಟ್ಟಿಸುತ್ತಿದ್ದ ಕೀರ್ತನಕೇಸರಿ ಜಯರಾಮಾಚಾರ್ಯರ ಹೆಸರು ನೆನಪಾಗುತ್ತದೆ. ಗಾಂಧೀಜಿ ಸಹ ಇವರ ಕೀರ್ತನೆಗಳ ಪ್ರಭಾವದ ವಿಚಾರ ಕೇಳಿ ಮೆಚ್ಚಿಗೆ ವ್ಯಕ್ತಪಡಿಸಿದ್ದರು. ಹೈದರಾಬಾದಿನಲ್ಲಿ ಮೊಟ್ಟಮೊದಲು ಪೋಲಿಸರ ಕಣ್ಣು ತಪ್ಪಿಸಿ ರಾಷ್ಟ್ರಧ್ವಜ ಹಾರಿಸಿದವರು ಕಾಟರಹಳ್ಳಿ ಬಸವಂತರಾವ್ ಮತ್ತು ಹಿರೇಮಠ ಅವರು. ಬೆಳಗಾವಿಯಲ್ಲಿ ಗಾಂಧೀಜಿ ಅಧ್ಯಕ್ಷತೆಯಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಈ ಭಾಗದ ನಿಜಾಮರ ಪ್ರಜೆಗಳಲ್ಲಿ ನವಚೈತನ್ಯವನ್ನು ತಂದಿತು. ಈ ಭಾಗದ ಅನೇಕ ತರುಣರು ಕಾಂಗ್ರೆಸ್ ಅಧಿವೇಶನಗಳಿಗೆ ತಪ್ಪದೆ ಹೋಗಿ ಸ್ಫೂರ್ತಿಪಡೆಯುತ್ತಿದ್ದರು. ಎಚ್. ಕೊಟ್ರಪ್ಪ, ಸಿರೂರ ವೀರಭದ್ರಪ್ಪ, ಹಂಪಿ ನರಸಿಂಗರಾವ್, ಇಟಗಿ ವಿರೂಪಾಕ್ಷಯ್ಯ ಇವರುಗಳು ಕೊಪ್ಪಳ ಭಾಗದಲ್ಲಿ ಜನಜಾಗೃತಿಗಾಗಿ ದುಡಿದರು. 1934ರಲ್ಲಿ ಹುಬ್ಬಳ್ಳಿ ಮಾರ್ಗವಾಗಿ ಹೋಗುತ್ತಿದ್ದ ಗಾಂಧೀಜಿಯವರಿದ್ದ ರೈಲನ್ನು ಭಾನಾಪುರ ನಿಲ್ದಾಣದಲ್ಲಿ ಗೌರವ

ಸಲ್ಲಿಸಲು ನಿಲ್ಲಿಸಿ ಈ ಮುಖಂಡರು ಜನಜಾಗೃತಿಯುಂಟುಮಾಡಲು ಯತ್ನಿಸಿದರು. ಈ ಭಾಗದ ರಾಜಕೀಯ ಜಾಗೃತಿಗೆ ಶ್ರಮಿಸಿದ ಇನ್ನೊಂದು ಸಂಸ್ಥೆ ಎಂದರೆ ಕುಕನೂರಿನ ವಿದ್ಯಾನಂದ ಗುರುಕುಲ. ಅದರ ಸಂಸ್ಥಾಪಕ ರಾಘವೇಂದ್ರ ದೇಸಾಯಿಯವರು ರಾಷ್ಟ್ರ ನಿಷ್ಠ ಯುವಕರ ತಂಡಗಳನ್ನು ಸಿದ್ಧಗೊಳಿಸಿದರು. 1942ರನಂತರದ ಚಳವಳಿಯಲ್ಲಿ ಈ ಭಾಗದಲ್ಲಿ ಭಾಗವಹಿಸಿದವರಲ್ಲಿ ಬಹುಮಂದಿ ಈ ಗುರುಕುಲದ ವಿದ್ಯಾರ್ಥಿಗಳೇ.

1942ರ ಚಳವಳಿಯಲ್ಲಿ ಮುರಡಿ ಭೀಮಪ್ಪ, ಜೆ. ಕೆ. ಪ್ರಾಣೇಶಾಚಾರ್, ಶ್ಯಾಮಸುಂದರ ಮೊದಲಾದರು ಕೊಪ್ಪಳ ಭಾಗದಲ್ಲಿ ಸತ್ಯಾಗ್ರಹಮಾಡಿ ಸೆರೆಮನೆ ಸೇರಿದರು. ಯಲಬುರ್ಗಿ ಮತ್ತು ಕೊಪ್ಪಳ ಎರಡೇ ತಾಲ್ಲೂಕುಗಳಿಂದ 120ಕ್ಕೂ ಹೆಚ್ಚು ಸಂಖ್ಯೆಯ ಸತ್ಯಾಗ್ರಹಿಗಳಿದ್ದರು. ಸತ್ಯಾಗ್ರಹಿಗಳಿಗೆ ನೆರವು ನೀಡಿದರೆಂಬ ಆಪಾದನೆಯ ಮೇಲೆ ಚಾಕಲಬ್ಬಿ ರಾಘವೇಂದ್ರರಾಯರನ್ನು ಬಂಧಿಸಿದರು.

ರಾಯಚೂರು ನಗರದಲ್ಲಿ ರಾಜಕೀಯ ಚಟುವಟಿಕೆಗಳು 1920ರಿಂದಲೇ ಆರಂಭ ವಾದವು. ಆಗಿನ್ನೂ ವಿದ್ಯಾರ್ಥಿಗಳಾಗಿದ್ದ ಆಡವಿರಾವ್ ಫಡ್ನವೀಸ್, ರಾಮ ಭಟ್ಟ, ರಾ. ಗು. ಜೋಶಿ, ಆರ್. ಎಂ. ಗಂಗಾವತಿ ಇವರುಗಳನ್ನು ಪ್ರಾರಂಭದ ಕಾರ್ಯಕರ್ತ ರೆಂದು ಗುರ್ತಿಸಬಹುದು. ವಾಚನಾಲಯ ಮತ್ತು ಕ್ಲಬ್‌ಗಳ ಮೂಲಕ ಇಲ್ಲಿ ಸಂಘಟನೆ ಪ್ರಾರಂಭವಾಯಿತು. ಪಂಡಿತ ತಾರಾನಾಥರು ಸ್ಥಾಪಿಸಿದ ಹಮ್‌ದರ್ದ್ ಹೈಸ್ಕೂಲು ರಾಷ್ಟ್ರೀಯ ಭಾವನಾಪ್ರಚೋದನೆಗೆ ಸಹಾಯಕವಾಗಿತ್ತು. 1928ರಲ್ಲಿ ರಾಯಚೂರನ್ನು ಸಂದರ್ಶಿಸಿದ ಸ್ವಾಮಿ ಭಾಸ್ಕರಾನಂದರಿಂದ ಪ್ರಭಾವಿತರಾದ ಡಿ. ಮಾಣಿಕರಾವ್, ಜಗನ್ನಾಥರಾವ್ ಫಡ್ನವೀಸ್ ಹಾಗೂ ರಾ. ಗು. ಜೋಶಿಯವರು 'ಕರ್ನಾಟಕ ತರುಣ ಸಂಘ'ವನ್ನು ಸ್ಥಾಪಿಸಿದರು.

1937ರ ಹೊತ್ತಿಗೆ ಪರಿಸ್ಥಿತಿ ವಿಕೋಪಕ್ಕೆ ತಿರುಗಿತ್ತು. 'ಶಂಕರಲಿಂಗ ಭಜನ ಮಂಡಳಿ'ಯ ಮೆರವಣಿಗೆಯ ಮೇಲೆ ರಾಯಚೂರು ನಗರದಲ್ಲಿ ಮುಸಲ್ಮಾನರು ದಾಳಿ ಮಾಡಿದರು. 1938ರಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು 'ವಂದೇ ಮಾತರಂ' ಗೀತೆಯನ್ನು ಪ್ರಾರ್ಥನಾಸಮಯದಲ್ಲಿ ಹಾಡುವುದನ್ನು ನಿರ್ಬಂಧಿ ಸಲಾಯಿತು. ಆಗ ನಡೆದ ವಿದ್ಯಾರ್ಥಿ ಚಳವಳಿಗೆ 'ವಂದೇ ಮಾತರಂ ಸತ್ಯಾಗ್ರಹ' ಎಂದೇ ಹೆಸರಾಯಿತು. ಆ ಚಳವಳಿ ರಾಜ್ಯಾದ್ಯಂತ ವ್ಯಾಪಿಸಿತು. ವಿದ್ಯಾರ್ಥಿಗಳು ಕಾಲೇಜು ತೊರೆದು ಸತ್ಯಾಗ್ರಹ ಸೇರಿದರು.

1942ರ ಚಳವಳಿಯಲ್ಲಿ ಡಾ|| ಬಿ. ಜಿ. ದೇಶಪಾಂಡೆ, ರಾಮಾಚಾರ್ ಪುರೋಹಿತ, ವೆಂಕೋಬರಾವ್, ನಾರಾಯಣಪ್ಪ ಮುಂತಾದವರು ದಸ್ತಗಿರಿಯಾದರು. ರಾಯಚೂರಿನ ಮುಖಂಡರಲ್ಲಿ ನೆನೆಯಬೇಕಾದ ಹಿರಿಯರೆಂದರೆ ಗುಡಿಹಾಳ ಹನುಮಂತರಾಯರು, ಜಿ. ಮಧ್ವರಾಯರು. ಇದರಂತೆಯೇ ಕಲ್ಬುರ್ಗಿ ವಿಭಾಗದಲ್ಲಿ ಆಂದೋಲನ ನಡೆಸಿ ದವರಲ್ಲಿ ಕೋಳೂರ ಮಲ್ಲಪ್ಪ, ಜಗನ್ನಾಥರಾವ್ ಚಂಡರಕಿ, ದತ್ತಾತ್ರೇಯರಾವ್

ಅವರಾದಿ ಹಾಗೂ ಬೀದರ್‌ನಲ್ಲಿ ಮುರಲೀಧರರಾವ್ ಕಾಮಟೀಕರ, ರಂಗನಾಥರಾವ್ ಮೊದಲಾದವರು ಮುಖ್ಯರು. 1947ರ ಹೊತ್ತಿಗೆ ಸ್ಟೇಟ್ ಕಾಂಗ್ರೆಸ್ಸಿನ ಮುಖಂಡತ್ವಕ್ಕೆ ಸಿದ್ಧರಾದ ಸ್ವಾಮಿ ರಾಮಾನಂದ ತೀರ್ಥರೂ ಕನ್ನಡಿಗರೇ. ಡಾ|| ಜಿ. ಎಸ್. ಮೇಲ್ಕೋಟೆಯವರು ಹೈದರಾಬಾದ್‌ನಲ್ಲಿಯೇ ಇದ್ದು ಆಂದೋಲನದಲ್ಲಿ ಸತತವಾಗಿ ಭಾಗವಹಿಸಿದ ಕನ್ನಡಿಗರಲ್ಲಿ ಪ್ರಮುಖರು. ಕೃಷ್ಣಾಚಾರ್ಯ ಜೋಶಿ, ಅಸ್ವರಿ ಮಧ್ವರಾವ್ ಮೊದಲಾದ ಕನ್ನಡಿಗರು ಅನಂತರ ರಾಜಕೀಯ ಆಂದೋಲನದಲ್ಲಿ ಧುಮುಕಿದ ಪ್ರಮುಖರು.

1947ರ ಆಗಸ್ಟ್ 15ರಂದು ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ರಾಷ್ಟ್ರಾದ್ಯಂತ ರಾಷ್ಟ್ರಧ್ವಜ ಹಾರಾಡಿದರೂ ಹೈದರಾಬಾದ್ ಸಂಸ್ಥಾನದಲ್ಲಿ ಅದು ಹಾರಲಾಗಲಿಲ್ಲ. ಸಂಸ್ಥಾನದ ಜನತೆ ರೊಚ್ಚಿಗೆದ್ದಿತು. ಆದರೆ ಈ ಸಮಯದಲ್ಲಿ ನಿಜಾಮರು ತಮ್ಮ ಸ್ವಾತಂತ್ರ್ಯ ಘೋಷಿಸಿಕೊಳ್ಳುವ ಹವಣಿಕೆಯಲ್ಲಿದ್ದರು. 'ಸ್ಟೇಟಸ್‌ಕೋ' ಒಪ್ಪಂದ ವೊಂದನ್ನು ಅತಿಪ್ರಯಾಸದಿಂದ ಭಾರತದೊಡನೆ ಮಾಡಿಕೊಂಡು, ಭಾರತದ ವಿರುದ್ಧ ದಂಗೆಯೇಳುವ ಸಂಚಿನಲ್ಲಿ ತೊಡಗಿದರು. ಜವಾಹರಲಾಲ್‌ರನ್ನು ರಣರಂಗದಲ್ಲಿಯೇ ನೋಡುವ ಆಶಯದ ಹೇಳಿಕೆಗಳೂ ಬಂದವು. ಪಾಕಿಸ್ಥಾನದ ನೆರವು ಪಡೆಯುವ ಯತ್ನಗಳಾದವು. ವಿದೇಶೀಯರು ಶಸ್ತ್ರಗಳನ್ನು ಸರಬರಾಜು ಮಾಡಿ ನಿಜಾಮರಿಗೆ ಕುಮ್ಮಕ್ಕು ಕೊಟ್ಟರು. ಸಂಸ್ಥಾನದ ಒಳನಾಡಿನಲ್ಲಿ ರಾಜಕೀಯ ಮಹತ್ವಾಕಾಂಕ್ಷೆಯಿಂದ ಹುಚ್ಚೆದ್ದ ಅರಸು ಮತ್ತು ಅವನ ಹಸ್ತಕರಾದ ರಜಾಕಾರರ ತಂಡಗಳು ಹಿಂದುಗಳ ಆಸ್ತಿ ಪಾಸ್ತಿಯ ಲೂಟಿ, ಮಹಿಳೆಯರ ಮಾನಾಪಹರಣ ಮುಂತಾದ ವಿಪತ್ಕಾರೀ ಚಟುವಟಿಕೆ ಗಳಲ್ಲಿ ತೊಡಗಿದರು ; ದೌರ್ಜನ್ಯದಿಂದ ಸ್ವಾತಂತ್ರ್ಯ ಹೋರಾಟವನ್ನು ಹತ್ತಿಕ್ಕುವ ಯತ್ನ ನಡೆಯಿತು. ಆದರೆ ರಾಜಕೀಯ ಕಾರ್ಯಕರ್ತರ ಸಂಖ್ಯೆ ನಿರೀಕ್ಷೆ ಮೀರಿ ಬೆಳೆಯುತ್ತಹೋಗಿ ಲಕ್ಷಕ್ಕೇರಿತು ; ಸೆರೆಮನೆಗಳೆಲ್ಲಾ ತುಂಬಿದವು ; ಹಳ್ಳಿಹಳ್ಳಿಗಳಲ್ಲೂ ಪ್ರತಿಭಟನೆ, ಕಾಯಿದೆಭಂಗ ನಡೆದವು. ಸರ್ಕಾರಿ ಆಸ್ತಿಪಾಸ್ತಿಗಳನ್ನು ನಾಶಪಡಿಸುವುದು ಸಕ್ರಮ ಚಟುವಟಿಕೆಯೇ ಆಯಿತು.

ರಾಯಚೂರು ಜಿಲ್ಲೆಯು ಈ ಚಳವಳಿಯಲ್ಲೂ ಅಗ್ರಸ್ಥಾನದಲ್ಲಿತ್ತು. ಭಾರತ ಸ್ವಾತಂತ್ರ್ಯಪಡೆದ ದಿನವೇ ರಾಯಚೂರಿನ ಕಲೆಕ್ಟರರ ಕಚೇರಿಯ ಮೇಲೆ ವಿದ್ಯಾರ್ಥಿ ಧುರೀಣರಾದ ಮಟಮಾರಿ ನಾಗಪ್ಪ ಅವರು ಶರಭಯ್ಯ, ಚಂದ್ರಯ್ಯ, ಪರ್ವತರೆಡ್ಡಿ ಹಾಗು ಬಸವಣ್ಣ ಎಂಬುವರೊಂದಿಗೆ ಹೋಗಿ ಪೋಲಿಸರ ಕಣ್ಣು ತಪ್ಪಿಸಿ ರಾಷ್ಟ್ರಧ್ವಜ ವನ್ನು ಹಾರಿಸಿದರು. ಬೆಳಗಾಗುವುದರೊಳಗಾಗಿ ಕಚೇರಿಯ ಮೇಲೆ ರಾಷ್ಟ್ರಧ್ವಜ ಹಾರಾಡುತ್ತಿತ್ತು. ಹಾರಿಸಿದವರನ್ನು ಹಿಡಿಯಲು ನೋಡಿದ ಪೋಲಿಸರು ನಿರಾಶರಾದರು. ಅವರೆಲ್ಲ ಆಗಲೇ ತುಂಗಭದ್ರಾ (ಮಂತ್ರಾಲಯ) ದಾಟಿ ಗಡಿ ಹೊರಗಿದ್ದರು. ಆ ದಿನ ಸತ್ಯಾಗ್ರಹಮಾಡಿ ಜೈಲು ಸೇರಿದ ಪ್ರಮುಖರಲ್ಲಿ ಜಿ. ಮಧ್ವರಾಯರು, ರಾಘವೇಂದ್ರ

ರಾಯರು, ಲಕ್ಷ್ಮಣಾಚಾರ್ಯ ವೈದ್ಯರು ಸೇರಿದ್ದರು. ರಾ. ಗು. ಜೋಶಿ ಹಾಗೂ ದೋಮಕುಂಟೆ ನಾರಾಯಣಪ್ಪ ಒಂದು ವಾರದ ಮೊದಲೇ ಜೈಲು ಸೇರಿದ್ದರು. ಡಾಕ್ಟರ್ ರಾಮಕೃಷ್ಣ ಮತ್ತು ಇತರರೂ ಜೈಲು ಸೇರಿದರು.

ಲಿಂಗಸುಗೂರು ತಾಲೂಕಿನಲ್ಲಿ ಶಂಕರಪ್ಪ, ಸದಾಶಿವಪ್ಪ, ಬಸಲಿಂಗಯ್ಯ; ಸಿಂಧನೂರಿನಲ್ಲಿ ಕನಕಗಿರಿ ರಾಮರಾವ್, ಗುಡಿಹಾಳ ಕಿಷನ್‌ರಾವ್ ಅವರು ಕಾರ್ಯ ಮಾಡಿದರು. ಕುಷ್ಟಗಿಯಲ್ಲಿ ಚಳಗೇರಿ ಭೀಮಾಚಾರ್ಯರು ಸ್ವಾತಂತ್ರ್ಯದಿನದಂದು ಸತ್ಯಾಗ್ರಹಮಾಡಿ ಸೆರೆಮನೆ ಸೇರಿದರು. ಸೌದೀ ಗುರಪ್ಪ, ಪುಂಡಲೀಕಪ್ಪ, ಫೂಲ್‌ಚಂದ್ ಶೇಠ್ ಹಾಗೂ ವಿಜಯರಾವ್ ದೇಸಾಯಿ ಮತ್ತು ಭೀಮಜ್ಜ ಅವರು ಸತ್ಯಾಗ್ರಹ ಸಂಘಟನೆಯಲ್ಲಿ ಪ್ರಮುಖ ಪಾತ್ರವಹಿಸಿದರು. ಗಂಗಾವತಿಯಲ್ಲಿ ಕೇಶವರಾವ್, ಆರ್. ಎಂ. ಗಂಗಾವತಿ, ರಾಮಭಟ್ಟ, ಅಡವಿರಾವ್ ಜಂತಕಲ್ ಮತ್ತು ಜಯತೀರ್ಥ ರಾಜಪುರೋಹಿತ ಮೊದಲಾದವರು ಪ್ರತಿಭಟನೆಯ ನೇತಾರರಾದರು. ಕೊಪ್ಪಳದ ಕಿಲ್ಲೆಯ ಮೇಲೆ ರಾಷ್ಟ್ರಧ್ವಜ ಹಾರಾಡಿತು. ಇದರಂತೆಯೇ ಯಲಬುರ್ಗಿ, ಕೊಪ್ಪಳ ಭಾಗದಲ್ಲಿ ಸಿರೂರ ವೀರಭದ್ರಪ್ಪ, ಜನಾರ್ದನರಾವ್ ವಕೀಲ, ಅಳವಂಡಿ ಶಿವಮೂರ್ತಿ ಸ್ವಾಮಿ, ಕುಕನೂರ ರಾಘವೇಂದ್ರರಾವ್, ಡಾ|| ರಾಮರಾವ್, ಭೀಮರಾವ್ ದೇಸಾಯಿ ಬೆಣಕಲ್ ಮೊದಲಾದವರು ನಾಯಕತ್ವವನ್ನು ವಹಿಸಿದರು. ಭೀಮರಾವ್ ದೇಸಾಯಿ ಯವರನ್ನು ಗುಲ್ಬರ್ಗ ಜೈಲಿನಲ್ಲಿ ಪೋಲಿಸರು ಲಾಠಿಚಾರ್ಜ್‌ಮಾಡಿ ಕೊಂದುಹಾಕಿದರು. ಇದರಂತೆಯೇ, 'ವಂದೇ ಮಾತರಂ ಚಳವಳಿ'ಯಲ್ಲಿ ಹನುಮಸಾಗರದ ದಾಸಪ್ಪ ಎಂಬ ವಿದ್ಯಾರ್ಥಿಯೂ ಪೋಲಿಸರ ಚಿತ್ರಹಿಂಸೆಯಿಂದ ಹುತಾತ್ಮನಾದನು. ಧ್ವಜವಂದನಾ ಕಾರ್ಯಕ್ರಮ ಹಾಗು 'ಒಕ್ಕೂಟ ಸೇರಿರಿ' ದಿನಾಚರಣೆಗಳ ಮೂಲಕ ಹಳ್ಳಿಹಳ್ಳಿಗಳಲ್ಲಿ ಕಾಯಿದೆಭಂಗಮಾಡಿ ಜನರು ಸೆರೆಮನೆ ಸೇರಿದರು. ನೂರಾರು ಸಂಖ್ಯೆಯಲ್ಲಿ ಕಾಲೇಜು ಗಳನ್ನು ತೊರೆದು ಬಂದ ವಿದ್ಯಾರ್ಥಿಗಳು ಪ್ರತಿಭಟನೆಯೇ ಏಕೆ, ಸಶಸ್ತ್ರ ಹೋರಾಟಕ್ಕೂ ಸಿದ್ಧರಾಗಿದ್ದರು.

ಈ ಸಂದರ್ಭದಲ್ಲಿ ಸ್ಟೇಟ್ ಕಾಂಗ್ರೆಸ್ ಮುಖಂಡರಲ್ಲಿ ಹೊರಗುಳಿದವರು ಗಡಿ ಭಾಗಗಳಲ್ಲಿ ಹಿಂಸಾತ್ಮಕ ಪ್ರತಿಭಟನೆಗಾಗಿ ಶಿಬಿರಗಳನ್ನು ಸ್ಥಾಪಿಸಿದರು. ರಜಾಕಾರರು ನಡೆಸಿದ ಲೂಟಿ, ದರೋಡೆಯ ಘಟನೆಗಳಿಂದ ಜನ ನಿರಾಶ್ರಿತರಾಗಿ ಪಕ್ಕದ ಮದ್ರಾಸ್, ಮುಂಬಯಿ ಭಾಗಗಳಿಗೆ ಆಶ್ರಯಕ್ಕಾಗಿ ಧಾವಿಸುತ್ತಿದ್ದರು. ಅವರ ಯೋಗಕ್ಷೇಮವನ್ನು ನೋಡಿಕೊಳ್ಳುವುದು ಈ ಶಿಬಿರಗಳ ಕೆಲಸವಾಗಿತ್ತು. ಸ್ಟೇಟ್ ಕಾಂಗ್ರೆಸ್‌ನ ಕ್ರಿಯಾ ಸಮಿತಿಯ ಕೇಂದ್ರವನ್ನು ಮದ್ರಾಸ್ ನಗರದಲ್ಲಿ ತೆರೆಯಲಾಯಿತು. ರಾಯಚೂರು ಜಿಲ್ಲೆಯವರಾದ ಜೆ. ಕೆ. ಪ್ರಾಣೇಶ ಆಚಾರ್ಯರೇ ಇದರ ಸಂಚಾಲಕರಾಗಿದ್ದರು. ಡಿ. ಜಿ. ಬಿಂದು ಇದರ ಅಧ್ಯಕ್ಷರಾದರು. ಕರ್ನಾಟಕ ಪ್ರಾದೇಶಿಕ ಕಾಂಗ್ರೆಸ್ ಕಚೇರಿ ಯನ್ನು ಗದುಗಿನಲ್ಲಿ ತೆರೆಯಲಾಯಿತು. ಹಿರಿಯ ಮುಖಂಡರಾದ ಜನಾರ್ದನರಾವ್

ದೇಸಾಯಿಯವರು ಇದರ ಅಧಿಪತಿಗಳಾಗಿ ಕರ್ನಾಟಕ ಭಾಗದ ಜಿಲ್ಲೆಗಳಲ್ಲಿ ನಡೆಸುವ ಚಟುವಟಿಕೆಗಳ ಸಂಘಟನೆಮಾಡಿದರು. ಲ. ಕೃ. ಸರಾಫ್ ಹಾಗು ಬಿ. ವಿ. ದೇಸಾಯಿ ಈ ಕಚೇರಿಯ ಕಾರ್ಯದರ್ಶಿಗಳಾಗಿದ್ದರು. ರಾಯಚೂರು ಜಿಲ್ಲೆಯಲ್ಲಿ ಹಿಂಸಾತ್ಮಕ ಪ್ರತಿಭಟನೆ ಹಾಗೂ ಸತ್ಯಾಗ್ರಹಗಳ ಸಂಘಟನೆಗಾಗಿ ಒಂದು ಚಿಕ್ಕ ಸಮಿತಿ ನೇಮಕವಾಯಿತು. ಇದರಲ್ಲಿ ಗಾಣದಾಳ ನಾರಾಯಣಪ್ಪ ಜಿಲ್ಲಾಧಿಕಾರಿಯಾಗಿಯೂ, ಜಯತೀರ್ಥ ರಾಜಪುರೋಹಿತ ಹಣಕಾಸು ಹಾಗು ಪ್ರಚಾರಾಧಿಕಾರಿಯಾಗಿಯೂ ಮತ್ತು ಬಿ. ಎಚ್. ಇನಾಂದಾರ್ ಒಳಾಡಳಿತ ನೋಡಿಕೊಳ್ಳುವುದಕ್ಕಾಗಿಯೂ ನಿಯಮಿತರಾದರು. ಕೂಟಯುದ್ಧವೇ ನೀತಿಯಾಯಿತು.

ಗಜೇಂದ್ರಗಡದಲ್ಲಿ ಮುರಡಿ ಭೀಮಜ್ಜ ಅವರ ಅಧಿಪತ್ಯದಲ್ಲಿ, ಗಂಗಾಧರ ರಾಜಪುರೋಹಿತರ ನಾಯಕತ್ವದಲ್ಲಿ ಸಶಸ್ತ್ರ ಯುವಕರ ತಂಡಗಳು ರಜಾಕಾರ ಹಾಗೂ ಪೋಲಿಸರನ್ನು ಎದುರಿಸಿ ಅನೇಕ ದಾಳಿಗಳನ್ನು ಮಾಡಿದರು. ಹಣವಾಳು, ನಿಲೋಗಲ್, ಮಾಲಗಿತ್ತಿಗಳಲ್ಲಿ ನಡೆದ ಸಶಸ್ತ್ರ ಹೋರಾಟಗಳು ಸ್ಮರಣೀಯ. ಒಂಕಲಕುಂಟೆಯ ಪೋಲಿಸ್ ಠಾಣೆಯ ಮೇಲೆ ದಾಳಿಮಾಡಿ ಬಂದೂಕಗಳನ್ನು ವಶಪಡಿಸಿಕೊಂಡುದು ಈ ಶಿಬಿರದ ವಿಶೇಷ ಸಾಧನೆ. ಇದರಂತೆಯೇ ಚಟುವಟಿಕೆಯ ಶಿಬಿರಗಳು ಸೂಡಿ, ಇಟಗಿ, ಶಾಂತಗೇರಿ, ಮುಂಡರಗಿಗಳಲ್ಲಿಯೂ ತುಂಗಭದ್ರಾ ನದಿಗುಂಟ ಕಂಪಲಿ, ಚಳ್ಳೇಕೂಡ್ಲೂರು, ಶಿರಗುಪ್ಪ, ಇಳಕಲ್ ಹಾಗೂ ಮಂತ್ರಾಲಯಗಳಲ್ಲಿ ಸ್ಥಾಪಿತವಾದವು. ಸಿಂಧನೂರಿನ ತಹಸೀಲ್ದಾರನ ಮನೆ ಒಳನುಗ್ಗಿ ದಾಳಿಮಾಡಿದ ಚಳ್ಳೇಕೂಡ್ಲೂರ್ ಶಿಬಿರದವರ ಸಾಧನೆ ರೋಮಾಂಚಕಾರಿಯಾಗಿದೆ. ಈ ಶಿಬಿರದ ಅಧಿಪತಿ ನಾಗಪ್ಪ ಮಟಮರಿ ಆಗಿದ್ದರು. ಬೆಟದೂರ ಶಂಕರಪ್ಪ ಇಲ್ಲಿ ತರಬೇತಿಪಡೆದ ದಳನಾಯಕರಾಗಿದ್ದರು. (ಇದರಂತೆಯೇ ಒಳನುಗ್ಗಿ ವೈಯಕ್ತಿಕವಾಗಿ ಜಾಗೀರ ತಹಸೀಲ್ದಾರನ ಮೇಲೆ ದಾಳಿ ನಡೆಸಿದ ಜಯತೀರ್ಥ ರಾಜಪುರೋಹಿತ ಹಾಗು ಅವರ ಇಬ್ಬರು ಸಂಗಡಿಗರ ಸಾಹಸದ ಕಥೆ ಬೇರೆಡೆ ಹೇಳಲಾಗಿದೆ.—ಸಂ||) ಯಲಬುರ್ಗಿಯ ತಾಲ್ಲೂಕು ಕಚೇರಿಯ ಮೇಲೆ ದಾಳಿ ನಡೆಸಿದ ಘಟನೆ ಇನ್ನೊಂದು ವಿಶೇಷ.

ಮುಂಬಯಿ ಇಲಾಖೆಯಲ್ಲಿ ಹೊರಚಾಚಿದ್ದ (ಧಾರವಾಡ ಜಿಲ್ಲೆಯಿಂದ ಸುತ್ತುವರಿದ) ನಿಜಾಮ್ ಸಂಸ್ಥಾನದ ರಾಯಚೂರು ಜಿಲ್ಲೆಯ ಹದಿಮೂರು ಹಳ್ಳಿಗಳ ಜನರೆಲ್ಲ ಈ ನಡುವೆ ಬಂಡೆದ್ದು ಸ್ವಾತಂತ್ರ್ಯ ಸಾರಿದ್ದರು. ನಿಜಾಮನ ಸೈನಿಕರೂ ಪೋಲಿಸರೂ ಈ ಹಳ್ಳಿಗಳಿಗೆ ಬರದಂತೆ ಕಾಂಗ್ರೆಸ್ ಸ್ವಯಂಸೇವಕರು ಕಾವಲು ನಿಂತರು. ಸಂಸ್ಥಾನದ ಒಂದು ಭಾಗ ಸ್ವತಂತ್ರವಾಗಿ ಅಲ್ಲಿ ಸ್ವಾತಂತ್ರ್ಯ ಘೋಷಣೆಯಾದುದು ಒಂದು ರೋಮಾಂಚಕಾರೀ ಘಟನೆಯೇ ಸರಿ. ಈ ಘೋಷಣೆಯ ಸಮಾರಂಭದಲ್ಲಿ ಸ್ಟೇಟ್ ಕಾಂಗ್ರೆಸ್ ಮುಖಂಡರಾದ ಸ್ವಾಮಿ ರಮಾನಂದ ತೀರ್ಥ, ಜನಾರ್ದನರಾವ್ ದೇಸಾಯಿ, ಡಾ|| ಮೇಲ್ಕೋಟೆ ಹಾಗೂ ಆರ್. ವಿ. ಬಿಡಪ್ ಮತ್ತು ಅ. ಶಿವಮೂರ್ತಿ ಸ್ವಾಮಿ

ಮುಂತಾದವರು ಹಾಜರಿದ್ದು, ಪ್ರತಿಸರ್ಕಾರವನ್ನು ಘೋಷಿಸಿದರು

ಘಟನೆಗಳ ವೇಗ ತ್ವರಿತಗೊಂಡಂತೆ ದಬ್ಬಾಳಿಕೆಯೂ ಹೆಚ್ಚಾಯಿತು. ನಿಜಾಂ ಸರ್ಕಾರದ ಮಂತ್ರಿಗಳಾಗಿ ಸೇರಿದ್ದ ರಾಯಚೂರಿನ ಜಿ. ರಮಾಚಾರ್ಯರು ರಾಜೀನಾಮೆ ಕೊಟ್ಟು ಹೊರಬಂದರು. ಆಗ ಭಾರತ ಸರ್ಕಾರದ ಸೈನಿಕ ಕ್ರಮಕ್ಕೆ ಕಾಲ ಪಕ್ವವಾಗಿತ್ತು. ಆ ಕ್ರಮ ಶೀಘ್ರದಲ್ಲಿಯೇ ಶತಮಾನಗಳ ನಿರಂಕುಶಾಧಿಕಾರಕ್ಕೆ ಮುಕ್ತಾಯ ಹಾಡಿತು.

## ನನ್ನ ಸ್ಮೃತಿ

ನಮ್ಮ ಊರು ಗಂಗಾವತಿ ತಾ॥ನ ಕನಕಗಿರಿಯು ಹೈದರಾಬಾದ್ ಸಂಸ್ಥಾನದ ದಕ್ಷಿಣದ ಕೊನೆಯಲ್ಲಿ ಇದ್ದ ಕಸಬಾ ಗ್ರಾಮ. 1925ರಲ್ಲಿ ಜನಿಸಿದವನಾದ ನಾನು ರಾಯಚೂರಿನಲ್ಲಿ ಓದುತ್ತಿದ್ದು. 1943ರ ಉತ್ತರಾರ್ಧದಲ್ಲಿ ಮೆಟ್ರಿಕ್ ಪರೀಕ್ಷೆ ಕಟ್ಟಿ ಊರಿಗೆ ಮರಳಿದ್ದೆ. ಹೈದರಾಬಾದಿನಲ್ಲಾದ 'ವಂದೇ ಮಾತರಂ ಆಂದೋಲನ'ದ ವಿಚಾರವನ್ನು ಕೇಳಿದ್ದೆ. ಕಾಲೇಜಿನ ಹಾಸ್ಟೆಲಿನಲ್ಲಿ ವಂದೇ ಮಾತರಂ ಪ್ರಾರ್ಥನೆ ಹೇಳಿಕೊಳ್ಳಲು ವಿದ್ಯಾರ್ಥಿಗಳಿಗೆ ಸರ್ಕಾರ ಪ್ರತಿಬಂಧಿಸಿದಾಗ ಈ ಸತ್ಯಾಗ್ರಹವಾಗಿ ಅನೇಕ ವಿದ್ಯಾರ್ಥಿಗಳು ಜೈಲಿಗೆ ಹೋಗಿದ್ದರು. ದಾಸಪ್ಪನೆಂಬ ಕುಷ್ಟಗಿ ತಾ॥ ಹಣಮಸಾಗರದ ವಿದ್ಯಾರ್ಥಿಯನ್ನು ಜೈಲಿನಲ್ಲಿ ಹೇಗೆ ಹಿಂಸಿಸಿ ಕೊಲ್ಲಲಾಯಿತೆಂಬುದನ್ನು ಕೇಳಿದ್ದೆ. ಆಗಾಗ ನಡೆಯುತ್ತಿದ್ದ ಆರ್ಯ ಸಮಾಜದವರ ಸಭೆಗೂ ಹೋಗಿದ್ದೆ. ಹುತಾತ್ಮ ದಾಸಪ್ಪನ ಸ್ಮೃತಿಗಾಗಿ ಕೆಲವರು ಹೈದರಾಬಾದಿನಲ್ಲಿ ಒಂದು ವಾಚನಾಲಯವನ್ನು ಸ್ಥಾಪಿಸಿದ್ದರು. ಕನಕಗಿರಿಯಲ್ಲಿ ಆವರೆಗೆ ವಾಚನಾಲಯವಿರಲಿಲ್ಲ. ನಮ್ಮ ತಂದೆಯ ಸ್ನೇಹಿತರಾದ ವರ್ತಕರನ್ನು ಭೆಟ್ಟಿಯಾಗಿ, ನಾಲ್ಕಾರು ಪತ್ರಿಕೆಗಳಿಗೆ ಚಂದಾ ಪಡೆದು ಪತ್ರಿಕೆಗಳು ಬರುವಂತೆ ವ್ಯವಸ್ಥೆ ಮಾಡಿದೆ. ಬಜಾರದಲ್ಲಿ ಒಂದು ಮಳಿಗೆ ಹಿಡಿದು ಅಲ್ಲಿ ಒಂದು ವಾಚನಾಲಯವನ್ನು ತೆರೆಯಲು ನಿರ್ಧರಿಸಿದೆವು.

ಆಗ ಕನಕಗಿರಿಯಲ್ಲಿ ಹಿರಿಯರೆನಿಸಿಕೊಂಡಿದ್ದವರೂ ಮತ್ತು ಸ್ಥಳೀಯ ಶಾಲೆಯ ಮುಖ್ಯೋಪಾಧ್ಯಾಯರೂ ಆಗಿದ್ದ ನರಹರಿ ಆಚಾರ್ಯರನ್ನು ವಾಚನಾಲಯ ಉದ್ಘಾಟನೆಗೆ ಕೇಳಿಕೊಂಡೆ. ಅವರು ಯಾಕೋ ಒಪ್ಪದೇ ಅಲ್ಲಿಯ ಅಬ್ಕಾರಿ ಇನ್ಸ್‌ಪೆಕ್ಟರ್‌ನಿಂದ ಆ ಕೆಲಸ ಮಾಡಿಸಲು ಹೇಳಿದರು. ಆದರೆ ನಾವು ಒಪ್ಪಲಿಲ್ಲ. ಆಚಾರ್ಯರಿಗೆ ಮುಖಭಂಗವಾಗಿರಬೇಕು. ಸ್ಥಾನಿಕ ಪೋಲಿಸ್ ಇನ್ಸ್‌ಪೆಕ್ಟರ್‌ಗೆ ವರದಿ ಹೋಗಿರಬೇಕು. ಆತ ನನ್ನನ್ನು ಕರೆಸಿ ವಾಚನಾಲಯವನ್ನು ತೆರೆದದ್ದೇ ಆದರೆ ಜೈಲಿಗೆ ಹೋಗಬೇಕಾಗುವದೆಂದು ಹೆದರಿಸಿದ. ಮುಂದೇನು ಎಂದು ಚಿಂತಿಸುತ್ತಿರುವಾಗ ನಿಜಾಂ ಕರ್ನಾಟಕ ಪರಿಷತ್ತಿನ ಮುಖಂಡರಾದ ಜನಾರ್ದನರಾವ್ ದೇಸಾಯಿಯವರು ಗಂಗಾವತಿಗೆ ಬಂದಿದ್ದ ವರದಿ ಬಂತು. ನಾನು ಮರುದಿನವೇ ಅವರನ್ನು ಕಂಡು ನಡೆದ ಸಮಾಚಾರ ತಿಳಿಸಿದೆ. ಕನಕ

ಗಿರಿಯಲ್ಲಿ ನಿಜಾಂ ಕರ್ನಾಟಕ ಪರಿಷತ್ತಿನ ಶಾಖೆಯೊಂದನ್ನು ತೆರೆಯುವುದಾದರೆ ತಾವು ಬಂದು ವಾಚನಾಲಯವನ್ನು ಉದ್ಘಾಟಿಸುವುದಾಗಿ ಹೇಳಿದರು. ಇದಕ್ಕೆ ನಾನು ಕೂಡಲೇ ಒಪ್ಪಿದೆ. ಎರಡು ದಿನಗಳನಂತರ ಕನಕಗಿರಿಗೆ ದೇಸಾಯರು ಬಂದರು. ಊರಲ್ಲಿ ಪ್ರಚಾರ ನಡೆಸಿದ್ದೆವು. ಆದರೆ ಪೋಲಿಸರು ಜನರನ್ನು ಹೆದರಿಸಿದ್ದರು.

ಬಜಾರದ ನಮ್ಮ ಮಳಿಗೆಯಲ್ಲಿ ಸಭೆ ಸೇರಿತು. ಬಂದವರು ಏಳೆಂಟು ಜನರೇ ಆದರೂ ಅಂದು ಸಭೆ ಆಯಿತು; ವಾಚನಾಲಯದ ಉದ್ಘಾಟನೆಯೂ ಆಯಿತು; ನಿಜಾಂ ಕರ್ನಾಟಕ ಪರಿಷತ್ತಿನ ಕನಕಗಿರಿ ಶಾಖೆ ಪ್ರಾರಂಭವಾಯಿತು. ನಾನೇ ಕಾರ್ಯದರ್ಶಿ ಆದೆ. ಅಧ್ಯಕ್ಷರಾಗಲು ಜನ ಮುಂದೆ ಬರಲಿಲ್ಲವಾದಕಾರಣ ಸದ್ಯಕ್ಕೆ ಕಾರ್ಯದರ್ಶಿಯೇ ಸಾಕೆಂದಾಯಿತು. ಪೋಲಿಸ್ ಸ್ಟೇಷನ್‌ನಿಂದ ಹೆಡ್‌ಕಾನ್‌ಸ್ಟೇಬಲ್ ಒಬ್ಬ ಸಭೆ ನಡೆಯುವಾಗ ಬಂದು ಇದೆಲ್ಲ ಏನು, ಎಂದು ವಿಚಾರಿಸಿದ. ದೇಸಾಯರೇ ಎಲ್ಲ ಹೇಳಿದರು. ನನ್ನ ಹೆಸರನ್ನು ಬರೆದುಕೊಂಡ. "ಇದೆಲ್ಲ ರಾಜಕೀಯ (ಸಿಯಾಸಲ್) ಅಲ್ಲವೆ?" ಎಂದು ಕೇಳಿದ. "ಹೌದು" ಎಂದು ಮೊಂಡತನದಿಂದ ದೇಸಾಯರು ಉತ್ತರಿಸಿದರು. ಪೋಲಿಸ್ ಸಪ್ಪೆಮುಖ ಮಾಡಿಕೊಂಡು ಹೋದ.

ವಾಚನಾಲಯದ ಘಟನೆಯ ಅನಂತರ ಅದೇಕೋ ಜನರು ನನ್ನನ್ನು ಭೇಟಿ ಮಾಡುವುದು ಹೆಚ್ಚಾಯಿತು. ಸ್ಥಳೀಯ ಅಧಿಕಾರಿಗಳ ಅಕ್ರಮಗಳ ಬಗ್ಗೆ ದೂರು ಹೇಳತೊಡಗಿದರು. ಮುಖ್ಯೋಪಾಧ್ಯಾಯರ ಕಡೆಗೆ ಸಕ್ಕರೆ, ಚಿಮಣಿ ಎಣ್ಣೆಗಳನ್ನು ಹಂಚುವ ವ್ಯವಸ್ಥೆ ಇತ್ತು. ಅವರ ಬಗ್ಗೆ ಬಂದ ತಕರಾರುಗಳನ್ನು ಅವರ ಎದುರು ಒಯ್ದಾಗ ಅವರಿಗೆ ಎಲ್ಲಿಲ್ಲದ ಕೋಪ. ಸರಕಾರ ಲೆವಿ ವಸೂಲಿಗಾಗಿ ಆಜ್ಞೆ ಹೊರಡಿಸಿತ್ತು. ಬೆಳೆಗಳು ನಮ್ಮ ಭಾಗದಲ್ಲಿ ಕೆಟ್ಟಿದ್ದರೂ ವಸೂಲಿ ಸಾಗಿತ್ತು. ಇದನ್ನು ವಿರೋಧಿಸಿ ರೈತರ ತಂಡವೊಂದನ್ನು ಕಟ್ಟಿಕೊಂಡು ನಮ್ಮ ಊರಿಗೆ ಬಂದಿದ್ದ ಕಲೆಕ್ಟರನ ಮುಂದೆ ನಿವೇದಿಸಿದೆ. ಆತ ನನ್ನ ಗಲ್ಲ ಹಿಡಿದು "ಬಚ್ಚಾ! ಅಭೀ ದೂದ್‌ಕೆ ದಾಂತ್ ಹೈ....ಇಸ್ ಮೇ ನಹಿಂ ಆನಾ" ('ಹುಡುಗ! ನೀನು ಇನ್ನೂ ಹಾಲುಗಲ್ಲದವ. ಇದರಲ್ಲಿ ಬರಬಾರದು') ಎಂದು ಹೇಳಿದ್ದ. ಅದು ನಿಜವೂ ಇತ್ತು. ನನಗಾಗ ಕೇವಲ ಹದಿನೆಂಟು ವರುಷ ತುಂಬಿದ್ದುವೇನೋ.

1946ರಲ್ಲಿ ನಾನು ಬಿ.ಎ. ಮೊದಲನೇ ವರ್ಷ ಮುಗಿಸುವುದರಲ್ಲಿದ್ದೆ. 'ಮಜಲಿಸ್ ಇತ್ತೆಹಾದುಲ್ ಮುಸಲ್ಮೀನ್' ಸಂಸ್ಥೆಯ ನಾಯಕತ್ವ ಉಗ್ರಗಾಮಿಗಳ ಕೈಸೇರಿತ್ತು. 'ರಜಾಕಾರ' ಎಂಬ ಮುಸ್ಲಿಂ ಸ್ವಯಂಸೇವಕರ ಸಂಘಗಳು ಜಿಲ್ಲೆ, ತಾಲ್ಲೂಕು, ಕಸಬಾ ಸ್ಥಳಗಳಲ್ಲಿ ಸಹ ಸಂಘಟಿತವಾಗತೊಡಗಿದ್ದವು. ಸರಕಾರದ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ಬೆಂಬಲದಿಂದ ಕಲಿತ ಮುಸ್ಲಿಮರಲ್ಲಿ ಮತಾಂಧತೆ, ಅಧಿಕಾರದಾಹ, ಹಿಂಸಾಮನೋವೃತ್ತಿ ಬೆಳೆಯತೊಡಗಿತ್ತು. ಮುಸ್ಲಿಂ ನಾಯಕನಾಗಿ ಅನೇಕ ಮತಾಂತರಗಳನ್ನು ಪ್ರಚೋದಿಸಿದ್ದ ಬಹದ್ದೂರ್ ಯಾರ್ ಜಂಗ್ ಸಹ ಈಗ ಸಾಕಷ್ಟು ತೀವ್ರಗಾಮಿಯಲ್ಲವೆಂಬ

ಗ್ರಹಿಕೆಯುಂಟಾಯಿತು. ಕುಪ್ರಸಿದ್ಧ ಕಾಸಿಂ ರಜವಿಯ ನಾಯಕತ್ವ ಹೊಸ ಘೋಷಣೆಯೊಂದಿಗೆ ಪ್ರಾರಂಭವಾಯಿತು. "ಇಸ್ಲಾಂ ಖತರೇ ಮೇ ಹೈ" (ಇಸ್ಲಾಂ ಗಂಡಾಂತರದಲ್ಲಿದೆ), "ಹೈದರಾಬಾದ್ ಎಂದರೆ ನಿಜಾಂ ರಾಜ್ಯವಲ್ಲ, ಇಸ್ಲಾಮಿನ ರಾಜ್ಯ", ನಿಜಾಮನ ಅರಸೊತ್ತಿಗೆ ಮುಸ್ಲಿಮರಿಗೆ, ಇಸ್ಲಾಂಗೆ ಸೇರಿದ್ದು, ಎಂದೆಲ್ಲ ಆತ ವಾದಿಸುವಂತಿತ್ತು. ರಾಜ್ಯದ ಮುಸ್ಲಿಮರ ಬೆಂಬಲಕ್ಕೆ ಈ ಘೋಷಣೆ ಅನುಕೂಲವೆಂದು ನಿಜಾಮನೂ ಇದಕ್ಕೆ ಸೈ ಎಂದಿದ್ದ. ಮುಸ್ಲಿಂ ವಿದ್ಯಾರ್ಥಿಗಳು ಸಹ ನಾವು ಹಾಕುತ್ತಿದ್ದ ಖಾದಿ ಟೊಪ್ಪಿಗೆಗಳನ್ನು ಎಸೆಯಲು ಕೂಗುತ್ತಿದ್ದರು.

1947ರ ಪ್ರಾರಂಭದ ಹೊತ್ತಿಗೆ ಪರಿಸ್ಥಿತಿಗೆ ಕಾವೇರುತ್ತಲಿತ್ತು. ಭಾರತ ಸ್ವತಂತ್ರವಾದ ದಿನವೂ ಹೈದರಾಬಾದಿನ ಪ್ರಜೆಗಳಾಗಿದ್ದ ನಮಗೆ ರಾಷ್ಟ್ರಧ್ವಜ ವಂದನೆಗೆ ನಿರ್ಬಂಧವಾಯಿತು. ಜನ ಪ್ರತಿಭಟಿಸಿದರು ; ಸತ್ಯಾಗ್ರಹಗಳಾದವು. ಇದೀಗ ನಮಗೆಲ್ಲ ನಿಜವಾದ ಪರೀಕ್ಷಾಕಾಲ ಬಂತು. ಸಾಮೂಹಿಕ ಕಾಯಿದೆಭಂಗಕ್ಕಾಗಿ ಕರೆ ಬರುವದೆಂದು ತಿಳಿಯಿತು. ಉಸ್ಮಾನಿಯಾ ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯದಲ್ಲಿ ಆಗ ನಾನಿದ್ದುದು. ಅಲ್ಲಿಯೂ ಮುಸ್ಲಿಂ, ಹಿಂದೂ ವಿದ್ಯಾರ್ಥಿಗಳ ಪಂಗಡಗಳಿದ್ದವು. ನಮ್ಮ ನಮ್ಮ ಗುಂಪುಗಳಲ್ಲಿ ನಾವು ರಾಜಕೀಯ ಪ್ರಚಾರ ಮಾಡಿಕೊಳ್ಳುತ್ತಿದ್ದೆವು. ಮುಸ್ಲಿಂ ಉಗ್ರಗಾಮಿಗಳ ಕೈ ಮೇಲಾಗತೊಡಗಿತ್ತು. ಸಂಧಾನ, ಸಮಾಧಾನದ ಮಾತುಗಳನ್ನಾಡುವ ಮುಸ್ಲಿಮರನ್ನು ಸಹ 'ಮಜ್ಲಿಸ್' ಸಹಿಸುತ್ತಿರಲಿಲ್ಲ. ಪ್ರಸಿದ್ಧ ಪತ್ರಕರ್ತ ಷೋಯಿಬುಲ್ಲಾನ ಕೊಲೆಯಾಯಿತು. ಮುಖ್ಯಮಂತ್ರಿ ಛತ್ತಾರಿನ ನವಾಬನ ಮೀಸೆಯನ್ನು ಮುಸ್ಲಿಂ ಗೂಂಡಾಗಳು ಎಳೆದಾಡಿದರು. ಕೊನೆಕೊನೆಗೆ ಬಂದಿದ್ದ ಮಿರ್ಜಾ ಇಸ್ಮಾಯಿಲ್‌ರಂಥ ಮುತ್ಸದ್ದಿಯನ್ನು ನಮ್ಮ ವಿಶ್ವವಿದ್ಯಾಲಯದ ಮುಸ್ಲಿಂ ವಿದ್ಯಾರ್ಥಿಗಳು ಸಭೆಯಲ್ಲಿ ಮಾತನಾಡಗೊಡಲಿಲ್ಲ.

1947-48ರ ಸಮಯದಲ್ಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ಕ್ರಿಯಾ ಸಮಿತಿಯಲ್ಲಿ ನಾನೂ ಒಬ್ಬ ಸದಸ್ಯನಾಗಿದ್ದೆ. ವಸತಿಗೃಹಗಳಲ್ಲಿ ಗ್ರೂಪ್ ಮೀಟಿಂಗ್ ಮಾಡುವ ಕೆಲಸ ನನ್ನ ಪಾಲಿಗಿತ್ತು. ಆಗ ನನ್ನ ಸಹಪಾಠಿಯಾಗಿದ್ದ ಗೋಪಾಲ್ ಮುಜುಂದಾರ್ ನನ್ನ ನೆರವಿಗಿರುತ್ತಿದ್ದ. ಇನ್ನೊಬ್ಬ ಸದಸ್ಯ ಜಿ. ಜಿ. ಪುರೋಹಿತನೂ ಆರ್. ಜಿ. ಕುಲಕರ್ಣಿಯೂ ಬೇರೆಡೆ ಕಾರ್ಯೋನ್ಮುಖರಾಗಿದ್ದರು. ನಮ್ಮ ಮುಖಂಡರು ದಸ್ತಗಿರಿಯಾದಾಗಲೆಲ್ಲಾ ನಾವು ಕಾಲೇಜ್ ಬಹಿಷ್ಕರಿಸಿ ಪ್ರಚಂಡ ಮೆರವಣಿಗೆಗಳನ್ನು ತೆಗೆಯುತ್ತಿದ್ದೆವು. ಅನೇಕ ಸಲ ಈ ಮೆರವಣಿಗೆಗಳನ್ನು ತಡೆಯುತ್ತಿದ್ದರು. ಅನೇಕ ಸಲ ಈ ಮೆರವಣಿಗೆಗಳು ಟಿಯರ್ ಗ್ಯಾಸ್ ಅಥವಾ ಲಾಠಿ ಪ್ರಯೋಗಗಳಲ್ಲಿ ಪರ್ಯವಸಾನ ಹೊಂದುತ್ತಿದ್ದವು.

ಡಾ|| ಮೇಲ್ಕೋಟೆ ಮತ್ತು ಪಂಡಿತ ನರೇಂದ್ರಜೀಯವರನ್ನು ಸೆರೆಹಿಡಿದ ದಿನವೂ ಭಾರಿ ಮೆರವಣಿಗೆ ಹೊರಡಿಸಿದೆವು. ಸುಮಾರು ಮೈಲುದ್ದದ ಈ ಮೆರವಣಿಗೆ ಸುಲ್ತಾನ್

ಬಜಾರಿನ ಬಡೀ ಚಾವಡಿ ಹತ್ತಿರ ಬಂದಾಗ ಪೋಲಿಸ್ ಪಡೆ ಅಡ್ಡನಿಂತಿತ್ತು. ಅದನ್ನು ತೂರಿಹೋಗಲು ಹವಣಿಸಿದಾಗ ಮುಂದಿನ ಸಾಲಿನಲ್ಲಿದ್ದ ನಮ್ಮನ್ನು ಪೋಲಿಸರು ಚನ್ನಾಗಿ ಥಳಿಸಿದರು. ನಮ್ಮಲ್ಲಿ ಅನೇಕರು ಅಲ್ಲಿಯೇ ಕುಸಿದುಬಿದ್ದೆವು. ಇನ್ನೂ ಅನೇಕರು ಓಡಿದರು. ಅಂದು ನಮ್ಮನ್ನೂ, ಸಿಕ್ಕ ಇನ್ನು ಹಲವರನ್ನೂ ಲಾಕಪ್‌ನಲ್ಲಿ ಹಾಕಿದರು. ಮೂರು ದಿನ ಅಲ್ಲಿಯೇ ಕೊಳೆತರೂ ವಿಚಾರಣೆಯಾಗಲೀ, ಜೈಲಿಗೆ ಕಳಿಸುವುದಾಗಲೀ ಆಗಲಿಲ್ಲ. ಯಾವ ಕಾರಣದಿಂದಲೋ ಏನೋ ಕೊನೆಗೊಮ್ಮೆ ನಮ್ಮನ್ನೆಲ್ಲಾ ಬಿಡುಗಡೆ ಮಾಡಿದರು.

ಈ ಹೊತ್ತಿಗೆ ಜೈಲಿನ ಅವಧಿ ಮುಗಿಸಿ ಬಂದಿದ್ದ ಕೆಲವು ಮುಖಂಡರು ಸಂಸ್ಥಾನದ ಹೊರಗೆ ಹೋಗಿ ಗಡಿಯಿಂದ ಪ್ರತೀಕಾರ ಸಂಘಟನೆ ನಡೆಸಿರುವರೆಂದು ತಿಳಿಯಿತು. ನಿಜಾಂ ಕರ್ನಾಟಕಕ್ಕಾಗಿ ಜನಾರ್ದನರಾವ್ ದೇಸಾಯಿಯವರು ಗದಗಿನಲ್ಲಿ ಇಂಥ ಕೇಂದ್ರವನ್ನು ತೆರೆದರು. ಕಾಲೇಜುಗಳಿಗಂತೂ ಬಹಿಷ್ಕಾರ ಹಾಕಿ ತಿಂಗಳುಗಳಾಗಿದ್ದವು. ನಿಜಾಂ ಮೇಲೆ ದಾಳಿಯಾಗಲಿದೆ ಎಂಬ ವಾರ್ತೆ ಹಬ್ಬುತ್ತಿರುವಾಗಲೇ ವಿದ್ಯಾರ್ಥಿ ಸಂಘದ ತರುಣನೊಬ್ಬ ನಿಜಾಮನ ಕಾರಿನ ಮೇಲೆ ಬಾಂಬೆಸೆದು ದಸ್ತಗಿರಿಯಾದ.

ಆ ರಾತ್ರಿಯೇ ನಮ್ಮೊಂದಿಗೆ ಸಂಪರ್ಕವಿಟ್ಟುಕೊಂಡಿದ್ದ ಗುಪ್ತ ಪೋಲಿಸ್ ದಳದ ವೆಂಕೋಬರಾವ್ ಎಂಬ ಇನ್ಸ್‌ಪೆಕ್ಟರ್ ನನ್ನನ್ನು ಕಂಡ. ಬೆಳಗಾಗುವುದರೊಳಗಾಗಿ ವಿದ್ಯಾರ್ಥಿ ಕ್ರಿಯಾಸಮಿತಿಯ ಸದಸ್ಯರನ್ನೆಲ್ಲ ಸೆರೆಹಿಡಿಯುವವರಿದ್ದಾರೆಂದೂ ಕೂಡಲೇ ಪಾರಾಗಬೇಕೆಂದೂ ತಿಳಿಸಿದ. ಆಗಿನ ಅಸೆಂಬ್ಲಿಯಲ್ಲಿ ಇದ್ದ ದಿವಂಗತ ಅನ್ವರಿ ಮಧ್ವ ರಾಯರಿಗೆ ಈ ವಿಷಯ ತಿಳಿದಿತ್ತೇನೋ. ಅವರು ನನ್ನನ್ನು ಕರೆಸಿ 400 ರೂ.ಗಳನ್ನು ಕೊಟ್ಟು ರಾಜಕೀಯ ಚಟುವಟಿಕೆಗಳಿಗೆ ಬಳಸಬೇಕೆಂದು ಹೇಳಿ ಹೈದರಾಬಾದು ಬಿಟ್ಟು ಹೊರಡಲು ತಿಳಿಸಿದರು. ಆ ರಾತ್ರಿಯೇ ಹೊರಟು ನಾನು ಮರುದಿನ ಗದಗ ತಲುಪಿ ಹೈದರಾಬಾದ್ ಕಾಂಗ್ರೆಸ್ ಕ್ಯಾಂಪ್ ಆಫೀಸಿನಲ್ಲಿ ಆ ಹಣ ಕೊಟ್ಟು ಕನಕಗಿರಿಗೆ ಮರಳಿದೆ. 1942ರ 'ಚಲೇ ಜಾವ್' ಚಳವಳಿಯ ಮಾದರಿಯಲ್ಲಿ ನಮ್ಮ ಚಟುವಟಿಕೆ ಗಳನ್ನು ರೂಪಿಸುವ ಸೂಚನೆ ಪಡೆದು ನಾನು ಬಂದಿದ್ದ.

ರಾಯಚೂರು ಜಿಲ್ಲೆಯ ಬೇರೆಬೇರೆ ತಾಲ್ಲೂಕುಗಳಲ್ಲಿ ಈ ಹೊತ್ತಿಗಾಗಲೇ ಸತ್ಯಾಗ್ರಹ ಸಂಘಟನೆಯ ಕಾರ್ಯ ಪ್ರಾರಂಭವಾಗಿತ್ತು. ಸರಕಾರ ತಾಲೂಕು ಮುಖಂಡ ರನ್ನು ಹಿಡಿದು ಸೆರೆಮನೆಗೆ ಕಳಿಸಿತ್ತು. ಸಂಘಟಕರು ಗೌಪ್ಯವಾಗಿ ಕಾರ್ಯವನ್ನು ಮಾಡಬೇಕಿತ್ತು. ನಾನು ಕನಕಗಿರಿಗೆ ಬಂದ 3-4 ದಿನಗಳಲ್ಲಿಯೇ ಗಂಗಾವತಿಯಲ್ಲಿ ಸತ್ಯಾಗ್ರಹ ಸಂಘಟಿಸುತ್ತಿದ್ದ ನನ್ನ ಮಿತ್ರ ಜಂತಕಲ್ ಅಡವಿರಾಯನಿಗಾಗಿ ಪೋಲಿಸರು ಹುಡುಕತೊಡಗಿದ್ದರು. ಆತ ಒಂದು ಸಂಜೆ ನಮ್ಮ ಮನೆಗೆ ಬಂದ. ನಮ್ಮ ಮನೆಯೂ ಆಗ ಸುರಕ್ಷಿತವಾಗಿರಲಿಲ್ಲ. ಕೂಡಲೇ ನಮ್ಮೂರಿನ ಕಲ್ಲುಮಠದ ಚನ್ನಮಲ್ಲಸ್ವಾಮಿ ಗಳನ್ನು ಕಂಡು ಆಶ್ರಯಕ್ಕಾಗಿ ಕೇಳಿಕೊಂಡೆ. ಅವರು ಸಂತೋಷದಿಂದ ತಮ್ಮ ಮಠದ

ಒಂದು ನೆಲಮಾಳಿಗೆಯನ್ನು ಅಡವಿರಾಯನಿಗೆ ಬಿಟ್ಟುಕೊಟ್ಟರು. ಎರಡು ದಿನ ಅಡವಿರಾಯನನ್ನು ಅಲ್ಲಿ ಇರಿಸಿ ಪಾರುಮಾಡಿದೆವು.

ಈ ನಡುವೆ ತಾವರಗೆರೆ, ಮುದ್ಗಲ್, ಲಿಂಗಸುಗೂರು, ನವಲಿ, ಕುಷ್ಟಗಿ, ಒಂಕಲಕುಂಟೆ ಮುಂತಾದೆಡೆಗಳಲ್ಲಿ ಸಂಚರಿಸಿ ಜನರ ಅಭಿಪ್ರಾಯಗಳನ್ನು ಅರಿತು ಬಂದೆ. ಎಲ್ಲ ಕಡೆಯೂ ಆತ್ಮೀಯತೆ, ಕಾತರತೆ, ಸಾಹಸದ ಕುತೂಹಲಗಳೇ ಕಂಡವು. ಒಂಕಲಕುಂಟೆಯಲ್ಲಿ ಆಗ ಜೆ. ಪುಂಡಲೀಕಪ್ಪ ಸತ್ಯಾಗ್ರಹ ಸಂಘಟನಾಕಾರ್ಯ ಮಾಡುತ್ತಿದ್ದ. ಪ್ರತಿವಾರ ಕೆಲವು ಹುಡುಗರನ್ನು ಸಿದ್ಧಮಾಡಿ ಸತ್ಯಾಗ್ರಹ ಮಾಡಿಸಬೇಕಿತ್ತು. ನಾನು ಅಲ್ಲಿಗೆ ಹೋದ ದಿನ ಹತ್ತಿರದ ಹಳ್ಳಿಯಾದ ಉಪ್ಪಲದಿನ್ನಿಯಲ್ಲಿ ಪ್ರಚಂಡ ಸಭೆ ಸೇರಿತ್ತು. ನಾನೂ ಪುಂಡಲೀಕಪ್ಪನೂ ಉದ್ರಿಕ್ತರಾಗಿ ಭಾಷಣ ಮಾಡಿದೆವು.

ಅಂದು ನಡೆದ ಆಶ್ಚರ್ಯಕರ ಘಟನೆಯೆಂದರೆ ಕಲ್ಲಭಾವಿ ದೇಸಾಯರ ಪತ್ನಿ ಕಮಲಮ್ಮ ನಮಗೆಲ್ಲ ಆರತಿ ಬೆಳಗಿದುದು. ಅಷ್ಟಕ್ಕೇ ನಿಲ್ಲದೆ ಸತ್ಯಾಗ್ರಹ ಮಾಡುವವರಿಗೆಲ್ಲಾ ತಾನು ಆರತಿ ಮಾಡಿ ಕಳಿಸುವುದಾಗಿ ಸಾರಿದಳು. ಮಧ್ಯವಯಸ್ಸಿನ ಆ ಮಹಿಳೆಯ ಸಾಹಸ ರೋಮಾಂಚಕಾರಿಯಾಗಿತ್ತು. ಆ ಸಭೆಯಿಂದಲೇ ಕೆಲವು ಯುವಕರು ಸಿದ್ಧರಾಗಿ ಬಂದು ಒಂಕಲಕುಂಟೆ ಬಜಾರಿನಲ್ಲಿ ಸತ್ಯಾಗ್ರಹ ಮಾಡಲು ಹೊರಟರು.

ಪೋಲಿಸ್ ಠಾಣೆ ಮತ್ತು ವಿಶೇಷ ಸಿಬ್ಬಂದಿ ಇದ್ದ ಒಂಕಲಕುಂಟೆಯ ಎರಡೇ ಮೈಲು ದೂರದಲ್ಲಿ ನಡೆದ ಸಭೆಯಲ್ಲಿ ನಡೆದ ಈ ಘಟನೆ ಸುತ್ತಲಿನ ಮಹಿಳೆಯರನ್ನೆಲ್ಲ ಬಡಿದೆಬ್ಬಿಸಿತು. ನನಗಾಗ ಮುಸ್ಲಿಮರಿಂದ ಬೆದರಿಕೆಯ ಪತ್ರಗಳು ಬಂದವು. ಸರಕಾರ ರಚಿಸಿದ್ದ ಶಾಂತಿ ಸಮಿತಿಯಲ್ಲಿ ಅವನ್ನೆಲ್ಲ ನಾನು ಬಹಿರಂಗಪಡಿಸಿದೆ. ಆ ಮುಂಚೆ ಕನಕಗಿರಿಯ ಗುರುರಾವ್ ಮಾದಿನಾಳ್ ಇವರ ಮನೆಗೆ ಮುಸ್ಲಿಮರು ಎಲುಬಿನ ತೋರಣ ಕಟ್ಟಿದರು. ಅದನ್ನೆಲ್ಲ ಡೆಪ್ಯುಟಿ ಕಲೆಕ್ಟರ್ ಕರೆಸಿದ್ದ ಸಭೆಯಲ್ಲಿ ಖಂಡಿಸಿದೆ. ಕನಕಗಿರಿಯಲ್ಲಿ ಈಗ ಸತ್ಯಾಗ್ರಹವಾಗಬೇಕಿತ್ತು. ನಮ್ಮ ಮನೆಯ ಪಕ್ಕದಲ್ಲಿಯೇ ಪೋಲಿಸ್ ಇನ್ಸ್‌ಪೆಕ್ಟರನ ಮನೆ. ಆಗಾಗ ಸಂಧಿಸಿದಾಗ "ಈ ಊರಲ್ಲಿ ಸತ್ಯಾಗ್ರಹ ಯಾರು ಮಾಡುವರೋ ನೋಡೋಣ" ಎಂದು ಹೇಳುತ್ತಾ ಮೀಸೆ ತಿರುವುತ್ತಿದ್ದ ಪೋಲಿಸ್ ಸಾಹೇಬ. ನನ್ನ ಮಿತ್ರರಾದ ಕಳ್ಳಿ ರಾಘವೇಂದ್ರಾಚಾರ್ಯರ ಮನೆಯಲ್ಲಿ ಗುಪ್ತಸಭೆಗಳನ್ನು ನಾವು ನಡೆಸುತ್ತಿದ್ದೆವು. ವೈಶ್ಯ ಹನುಮಂತ ಶೆಟ್ಟಿ ಮತ್ತು ಶರಸಪ್ಪ ಬೋಂದಾಡೆ ಎಂಬುವರು ಕೊನೆಗೆ ಸತ್ಯಾಗ್ರಹಿಗಳ ಕುಟುಂಬದ ಖರ್ಚು ವಹಿಸಲು ಸಿದ್ಧರಾದರು. ಮೊದಲು ಸತ್ಯಾಗ್ರಹವನ್ನು ಒಡೆಯರ ಕನಕಪ್ಪಾಚಾರ್ ಮತ್ತು ವೀರಾರೆಡ್ಡಿ ಮಾಡಿದರು. ಬಹು ಜಂಬದಿಂದಿದ್ದ ಸಬ್-ಇನ್ಸ್‌ಪೆಕ್ಟರನಿಗೆ ಆಘಾತವಾಗಿತ್ತು. ಸಂತೆಯಲ್ಲಿ ಸತ್ಯಾಗ್ರಹ ಮಾಡಿದ ಕಾರಣ ಸುತ್ತಲಿನ ಹಳ್ಳಿಗಳ ಜನರೂ ಗುಂಪು ಸೇರಿ ಪೋಲಿಸ್ ಸ್ಟೇಷನ್‌ವರೆಗೆ ಸತ್ಯಾಗ್ರಹಿಗಳನ್ನು ಕರೆತಂದರು. ಅಂದು

ರಾತ್ರಿ ಸತ್ಯಾಗ್ರಹಿಗಳನ್ನು ಹೊಡೆಯುವೆನೆಂದು ಹೆದರಿಸಿದ್ದ ಇನ್ಸ್‌ಪೆಕ್ಟರನ ಬೆದರಿಕೆಗೆ ಹೆದರದೆ ಸುಮಾರು 30 ಜನ ಯುವಕರು ಕೋಲುಗಳಿಗೆ ತೆಗೆದುಕೊಂಡು ಪೋಲಿಸ್ ಠಾಣೆ ಗುಂಟ ಗಸ್ತು ಮಾಡಿದರು. ಮರುದಿನವೇ ಕೈದಿಗಳನ್ನು ಗಂಗಾವತಿಗೆ ಒಯ್ದು ಇನ್ಸ್‌ಪೆಕ್ಟರ್ ನನ್ನ ಬಗ್ಗೆಯೂ ವರದಿ ಮಾಡಿದುದಾಗಿ ತಿಳಿಯಿತು. ಆದರೆ ಮರುದಿನ ಆತ ಬರುವುದರೊಳಗಾಗಿ ನಾನು ಭೂಗತನಾಗಿದ್ದೆ.

ಲಕ್ಕುಂಪುರದ ನರಸಪ್ಪನೆಂಬ ರೈತ ನನಗೆ ಅನೇಕ ದಿನ ಆಶ್ರಯ ಕೊಟ್ಟಿದ್ದ. ಹಳ್ಳಿಗಳಲ್ಲಿ ಜನ ಜಾಗೃತರಾಗಿದ್ದರು. ಸಭೆ ಕರೆದರೆ ಹೆದರದೆ ಬರುತ್ತಿದ್ದರು. ಸರಕಾರದ ರೀತಿನೀತಿಗಳನ್ನೂ ದಬ್ಬಾಳಿಕೆಯನ್ನೂ ತಿಳಿಸಿಹೇಳಿದರೆ ಸಹಾನುಭೂತಿ ವ್ಯಕ್ತಪಡಿಸು ತ್ತಿದ್ದರು. ಪ್ರತಿಭಟನೆಗಾಗಿ ನಾವು ಹೇಳುವ ಒರಟು ಉಪಾಯಗಳನ್ನು ಕೇಳಿಕೊಳ್ಳು ತ್ತಿದ್ದರು. ಆದರೆ ಪಟ್ಟಣಗಳಲ್ಲಿ ಇರುವ ಕೆಲವು ಜನ ಹಿಂದುಗಳಿಗೆ ಈ ಹೋರಾಟದಲ್ಲಿ ನಂಬಿಕೆ ಇರಲಿಲ್ಲವೆಂಬಂತೆ ತೋರುತ್ತಿತ್ತು ಅಥವಾ ನಿರಂಕುಶ ಆಡಳಿತದ ಹೆದರಿಕೆಯೂ ಅಂಥ ದುರ್ಬಲತೆಯನ್ನು ತಂದಿರಬೇಕು. ಗಂಗಾವತಿಯಲ್ಲಿ ಇದ್ದ ನಮ್ಮ ಬಂಧು ಗಳೊಬ್ಬರ ಮನೆಗೆ ನಮ್ಮ ತಂದೆ ಹೋದಾಗ 'ಬರಬೇಡ' ಎಂದು ಹೇಳಿದರಂತೆ. ಸರಕಾರಿ ನೌಕರಿಯಲ್ಲಿದ್ದ ಆ ಬಂಧು ಸಹಜವಾಗಿ ಹೆದರಿರಬೇಕು. ಕುಷ್ಟಗಿಯಲ್ಲಿದ್ದ ಒಬ್ಬಿಬ್ಬ ಹಿಂದು ವಕೀಲರೇ ನಮ್ಮ ಸುಳಿವನ್ನು ಸರ್ಕಾರಕ್ಕೆ ತಿಳಿಸುತ್ತಿದ್ದುದು ಗೊತ್ತಾಯಿತು.

ಹಳ್ಳಿಗಳಲ್ಲಿ ನಮ್ಮ ಚಟುವಟಿಕೆ ಹೆಚ್ಚಾದ ಹಾಗೆ ಪೋಲಿಸ್ ವ್ಯವಸ್ಥೆಯೂ ಹೆಚ್ಚಿತು; ಗಡಿಭದ್ರತೆಗಾಗಿ ವಿಶೇಷ ಸೈನಿಕ ವ್ಯವಸ್ಥೆ ಮತ್ತು ರಜಾಕಾರ ತುಕಡಿಗಳು ಸೇರಿದವು. ಕುಷ್ಟಗಿ ಈಗ ಜಿಲ್ಲಾ ಕೇಂದ್ರವಾಗಿ ಮಾರ್ಪಟ್ಟಿತ್ತು. ಆದರೂ ನಮ್ಮ ಸುಳಿದಾಟ ಸಾಗಿಯೇ ಇತ್ತು.

ಈ ನಡುವೆ ಕನಕಗಿರಿಯ ಸೇಂದಿ ಅಂಗಡಿಗೆ ಬೆಂಕಿ ಬಿತ್ತು. ಅದರ ಪ್ರತಿಕ್ರಿಯೆ ಎಂದೋ ಏನೋ, ನಮ್ಮ ಮನೆಗೆ ಸ್ಥಳೀಯ ರಜಾಕಾರರು ಬೆಂಕಿಹಚ್ಚುವ ಯತ್ನ ಮಾಡಿದರು. ನಮ್ಮ ಮನೆತನದ ಬಗ್ಗೆ ಮೊದಲಿನಿಂದಲೂ ಗೌರವ ಹೊಂದಿದ್ದ ಹೊನ್ನೂರ ಸಾಹೇಬನೆಂಬ ಮುಸಲ್ಮಾನನೇ ದುರಂತವನ್ನು ತಪ್ಪಿಸಿದನೆನ್ನಬಹುದು. ಸ್ವಲ್ಪ ದಿನಗಳ ಮೇಲೆ ನಮ್ಮ ಮನೆಯವರೆಲ್ಲ ಊರು ಬಿಟ್ಟು ಹೊಸಪೇಟೆಗೆ ಬಂದರು.

ದೀಪಾವಳಿ ಅಮಾವಾಸ್ಯೆಯ ಅರ್ಧರಾತ್ರಿ ನಾನು ಕೆಲವು ಘಂಟೆಗಳು ಕನಕ ಗಿರಿಗೆ ಬಂದಿದ್ದೆ. ನನ್ನ ನಂಬಿಕೆಯ ರೆಡ್ಡಿಯ ಮನೆಯಲ್ಲಿ ಸೇರಿ, ನಮ್ಮ ಮನೆಗೆ ಹೇಳಿ ಕಳುಹಿಸಿದ್ದೆ. ಕಂಬಳಿಯ ಮುಸುಕಿನಲ್ಲಿ ನನ್ನನ್ನು ಮನೆಗೆ ಕರೆದೊಯ್ದು ಇನ್ನೂ ಅಲ್ಲಿಯೇ ಇದ್ದ ನನ್ನ ಪತ್ನಿ ಮತ್ತು ತಾಯಿತಂದೆಯರ ದರ್ಶನ ಮಾಡಿಸಿದರು. ನಮ್ಮ ತಂದೆ ಗಾಬರಿಯಾಗಿದ್ದರು. ನನ್ನನ್ನು ಹಿಡಿಯಲು ವಾರಂಟ್ ಇತ್ತು. ಆದರೆ ಸ್ಥಳೀಯ ರಜಾ ಕಾರರು ಕೊಲ್ಲುವ ಮಾತಾಡುತ್ತಿದ್ದಾರೆಂದು ಹೇಳಿ ಕೂಡಲೆ ಗಡಿ ದಾಟಬೇಕೆಂದು ತಂದೆ ಒತ್ತಾಯಿಸಿದರು. ಒಂದು ಬಂಡಿಯನ್ನು ಸಿದ್ಧಪಡಿಸಿ ಹೊರಡಿಸಿಯೂ ಬಿಟ್ಟರು.

ದೀಪಾವಳಿ ರಾತ್ರಿ; ಬೆಳಗಾದರೆ ಪ್ರತಿಪದೆ; ಹೆರೆಯುದ ಹೆಂಡತಿಯ ಕಣ್ಣುಗಳಲ್ಲಿ ಕಾತರತೆ. ಹಾಗೆಯೇ ಹೊರಟೆ. ಒಂದೆರಡು ದಿನಗಳಲ್ಲಿ ತಂದೆಯವರೂ ಊರು ಬಿಡುವ ಯೋಚನೆಯಲ್ಲಿದ್ದರು. ನನ್ನ ದಾರಿಯೇ ಬೇರೆಯಾಗಿತ್ತು. ಕನಕಗಿರಿಗೆ 8 ಮೈಲು ದೂರದ ಗೌರೀಪುರದಲ್ಲಿ ಪ್ರಚಂಡ ಸಭೆ ಸೇರುವುದು ಆಗಲೇ ಗೊತ್ತಾಗಿತ್ತು. ಸುತ್ತಲಿನ ಹತ್ತು ಹಳ್ಳಿಗಳ ಜನ ಸೇರಲಿದ್ದರು. ಅಲ್ಲಿ ನನ್ನ ಭಾಷಣವಿತ್ತು. ಇದನ್ನೆಲ್ಲ ಬಿಟ್ಟು ಗಡಿ ದಾಟುವುದೆ ? ಗೌರೀಪುರದ ಬಾಳನಗೌಡ ಶೂರ. ಬೇಡರ ಶೌರ್ಯ, ಕ್ರೌರ್ಯ ಪರಂಪರೆಗಳಲ್ಲಿ ಅಭಿಮಾನ ಉಳ್ಳಾತ. ಆತ ಸುದೈವದಿಂದ ನಮ್ಮ ತಂದೆಯವರ ಶಿಷ್ಯ. ಆಗಿನ ಕಾಲದಲ್ಲಿ ಸಾರ್ವಜನಿಕ ಸಭೆ ಕರೆಯುವ ಸಾಹಸ ಮಾಡುವುದು ಸುಲಭವೇನಾಗಿರಲಿಲ್ಲ. ಆತನಿಗೆ ನಾನು ಸೂಚಿಸಿದ್ದಾಗ ಸಂತೋಷದಿಂದ ಮುಂದಾಗಿ, ಕರಪತ್ರಗಳನ್ನು ಹಳ್ಳಿಹಳ್ಳಿಗೆ ಆತ ಕಳುಹಿಸಿದ್ದ. ನಮ್ಮ ತಂದೆಯ ಕಣ್ಣು ತಪ್ಪಿಸಿ, ಬಂಡಿ ಮುಂಜಾನೆ ಗೌರೀಪುರ ತಲುಪಿತು. ನಾಲ್ಕು ತಾಸು ಹೊತ್ತು ಏರುವುದರೊಳಗಾಗಿ ಸುತ್ತಲಿನ ಹಳ್ಳಿಗಳ ಜನ ತಂಡತಂಡವಾಗಿ ಬಂದು ಊರ ಮುಂದಿನ ಹನುಮನ ಗುಡಿಯ ಬಳಿ ಸೇರಿದರು. ಸುಮಾರು ಎರಡು ಸಾವಿರ ಜನವಿರಬೇಕು. ಗೌರೀಪುರದ ಜನ ಕೋಲುಗುದಿಗೆ, ಕೊಡಲಿಗಳನ್ನು ಹಿಡಿದು ಗುಡಿಯ ಪೌಳಿಯ ಸುತ್ತ ನಿಂತರು. ವೈಲಿ ಹಾಕಲು ಬಂದಿದ್ದ ಸರ್ಕಾರಿ ಕಾರಕೂನ ಮತ್ತು ಸಹಕಾರಿ ಶಾಖೆಯ ಅಧಿಕಾರಿ ಈ ರೌದ್ರಸಿದ್ಧತೆ ನೋಡಿ ಪಲಾಯನ ಮಾಡಿದರು. ಬಾಳನ ಗೌಡ ಮತ್ತು ಆತನ ತಮ್ಮ ಲೈಸನ್ಸಿಲ್ಲದ ತಮ್ಮ ಬಂದೂಕುಗಳನ್ನು ಹೊತ್ತು ಕಾವಲಾಗಿ ನಿಂತರು. ಇಂಥ ಸಭೆಯಲ್ಲಿ ನನ್ನ ಭಾಷಣ ನಡೆಯಿತು. ಏನು ಭಾಷಣವೋ ? ನಿಜಾಮನನ್ನು ಬಯ್ಯುತ್ತ ಜನರನ್ನು ಹಿಂಸಾತ್ಮಕ ಪ್ರತಿಭಟನೆಗೆ ಉದ್ರೇಕಿಸುವುದೇ ನಮ್ಮ ಉದ್ದೇಶವಾಗಿತ್ತು. ಎರಡು ತಾಸುಗಳವರೆಗೆ ಮಾತನಾಡಿರಬಹುದು. ದೂರದಿಂದ ಸೈಕಲ್ ಮೇಲೆ ಏದುತ್ತಾ ಬಂದನೊಬ್ಬ. ಗೌಡರು ವಿಚಾರಿಸಿದರು. ಕುಷ್ಟಗಿಗೂ ಈ ಸಭೆಯ ವಾರ್ತೆ ತಲುಪಿರುವುದೆಂದೂ, ಅಲ್ಲಿಂದ ಎರಡು ಟ್ರಕ್ ಭರ್ತಿ ಸಶಸ್ತ್ರ ಪೋಲಿಸರು ಹೊರಟಿರುವರೆಂದೂ ಕಾರ್ಯಕರ್ತನೊಬ್ಬ ಸುದ್ದಿ ಕಳುಹಿಸಿದ್ದ. ಕೂಡಲೇ ಸಭೆ ಮುಗಿಸಿದೆವು. ಊಟವೂ ಆಗಿಲ್ಲದ ನನ್ನನ್ನು ಗೌಡ ಕೂಡಲೇ ಹುಲಸನಟ್ಟಿಗೆ ಕಳಿಸುವ ವ್ಯವಸ್ಥೆ ಮಾಡಿದ. ಒಂದು ಘಂಟೆಕಾಲ ಪೋಲಿಸರನ್ನು ತಿನಿಸು ಕುಡಿತಗಳಲ್ಲಿ ತಡೆಯುವುದಾಗಿ ಹೇಳಿ ನನ್ನನ್ನು ಬಂಡಿ ಹತ್ತಿಸಿದ. ನನ್ನ ರಕ್ಷಣೆಗೆಂದು ರೋಣದ ವೀರಭದ್ರಪ್ಪ ಮಾಸ್ತರ್ ಜೋಡುನಳಿಕೆಯ ಬಂದೂಕಿನೊಂದಿಗೆ ಬಂದ.

ಹುಲಸನಹಟ್ಟಿ ಸೇರಿದೆವು. ಅಲ್ಲಿ ಗೌಡನ ಮನೆಯಲ್ಲಿ ಊಟ ಮುಗಿಯುವುದರೊಳಗಾಗಿ ಗೌರೀಪುರಕ್ಕೆ ಪೋಲಿಸ್ ದಳ ತಲುಪಿ, ಗೌಡನ ಆತಿಥ್ಯದಲ್ಲಿ ಮಗ್ನವಾಗಿದೆ, ಎಂದು ತಿಳಿಯಿತು. ಮತ್ತೆ ನಾವು ಬಂಡಿಯೇರಿ ಒಂಕಲಕುಂಟೆಯತ್ತ ಸಾಗಿದೆವು. ಹಿಂದೆ ಹಿಂದೆ ಪೋಲಿಸ್ ದಳ, ಮುಂದೆ ಮುಂದೆ ನಾವು. ಒಂಕಲಕುಂಟೆ ತಲುಪಿದಾಗ ರಾತ್ರಿ

ಎಂಟು ಘಂಟೆಯಾಗಿತ್ತು. ವೀರಭದ್ರಪ್ಪ ವಾಪಸ್ ಹೊರಟ. ಅಲ್ಲಿದ್ದ ಬಂಧುಗಳ ಮನೆಗೆ ನಾನು ಹೋಗುವಂತಿರಲಿಲ್ಲ. ಹಿಂದೊಮ್ಮೆ ಜೇನೆಯಲ್ಲಿಯೇ ನಾನು ಅಲ್ಲಿಗೆ ಬಂದಿದ್ದಾಗ ನನ್ನ ಪತ್ನಿಯ ಅಜ್ಜಿ ನನ್ನನ್ನು ಮನೆಯೊಳಗಿನಿಂದ ಹೊರಗೇ ಬಾರದಂತೆ ಶೌಚಮೂತ್ರ ಗಳನ್ನೂ ಎತ್ತಿಹಾಕಿ ಉಪಚಾರದ ವ್ಯವಸ್ಥೆ ಮಾಡಿದ್ದಳು. ಆದರೆ ಈಗ ಪರಿಸ್ಥಿತಿ ಇನ್ನೂ ಹದಗೆಟ್ಟಿತ್ತು. ಅವರನ್ನು ಗಂಡಾಂತರದಲ್ಲಿ ನೂಕುವ ಇಚ್ಛೆ ನನಗಿರಲಿಲ್ಲವಾದ ಕಾರಣ ಒಂದು ಹಾಳುಮನೆಯಲ್ಲಿ ಉಳಿದೆ. ಈ ಮನೆಗೆ ಮುಂದಿನಿಂದ ಬೀಗ ಹಿಂದಿನಿಂದ ಮುಳ್ಳು ಬೇಲಿ ಹತ್ತಿತ್ತು. ಎಲ್ಲಾ ಬಿದ್ದು ಒಂದು ಕೋಣೆ ಉಳಿದುಕೊಂಡಿತ್ತು. ಇದು ಮೊದಲು ಪುಂಡಲೀಕಪ್ಪನಿಗೆ, ಈಗ ನನಗೆ ಆಶ್ರಯ ಕೊಟ್ಟ, ಯಾರೂ ಲಕ್ಷ್ಯ ಕೊಡದಂಥ ಸ್ಥಳ.

ನಾನು ತಲಪಿದ ಒಂದು ಘಂಟೆಯೊಳಗೆ ಪೋಲಿಸರು ಒಂಕಲಕುಂಟೆ ತಲಪಿದರು. ಅಲ್ಲಿನ ಕಾರ್ಯಕರ್ತರಿಗೆ ನನ್ನ ರಕ್ಷಣೆಯೊಂದು ಸಮಸ್ಯೆಯಾಯಿತು. ಪೋಲಿಸರು ಊರಿನಲ್ಲಿ ನಮ್ಮವರ ಮನೆಯನ್ನೆಲ್ಲ ಶೋಧಿಸಿದರು. ಅಲ್ಲಿನ ಕಾರ್ಯಕರ್ತರಾಗಿದ್ದ ಲಿಂಗಯ್ಯ, ಶಿವಬಸಯ್ಯ ಮತ್ತು ಕೃಷ್ಣರಾವ್ ಅವರು ನನ್ನನ್ನು ಕೂಡಲೇ ಹತ್ತಿರದ ಉಪ್ಪಲದಿನ್ನಿಗೆ ಕರೆದೊಯ್ದು ಅಲ್ಲಿ ಮಡಿವಾಳಪ್ಪನೆಂಬ ರೈತನ ಮನೆ ಸೇರಿಸಿ, ಗಡಿಯಿಂದ ಪಾರಾಗಲು ಬಂಡಿ ತರುವುದಾಗಿ ಹೇಳಿ ಹೋದರು.

ಮಡಿವಾಳಪ್ಪ ಹಿರಿಯ ರೈತ. ಮನೆಯಲ್ಲಿ ತನ್ನ ಹೆಂಡತಿ, ಹರೆಯದ ಮಗ ಮೂರೇ ಜನ. ಬೆಳೆಯನ್ನು ಕದ್ದೊಯ್ಯುವರೆಂಬ ಭೀತಿಗಾಗಿ ಮಗನನ್ನು ಹೊಲದಲ್ಲಿ ಮಲಗಿಸಿದ್ದ. ನಾನು ಅಲ್ಲಿ ಸೇರಿ ಎರಡು ತಾಸಾಗಿರಬಹುದು. ನಾನು ಎತ್ತಿನ ಗೋದಲೆ ಸೇರಿ ಮೇಲಿಷ್ಟು ಕೆಳಗಿಷ್ಟು ಜೋಳದ ದಂಟುಗಳನ್ನು ಹಾಕಿಕೊಂಡೆ. ಯಾರೋ ಬಾಗಿಲು ಬಡಿದರು. ಮಡಿವಾಳಪ್ಪನೇ ವಿಚಾರಿಸಿದ. ಪೋಲಿಸರು ಊರಲ್ಲಿ ಹೊಕ್ಕು ಕುರಿ ಕಳವು ಮಾಡುತ್ತಿರುವಾಗ ರೈತಹುಡುಗರು ಒಬ್ಬನನ್ನು ಹಿಡಿದು ಹೊಡೆದ ಕಾರಣ ಉಳಿದ ಪೋಲಿಸರೆಲ್ಲ ಮನೆಮನೆ ಹೊಕ್ಕು ಕಾಂಗ್ರೆಸ್‌ನವರಿಗಾಗಿ ಹುಡುಕುತ್ತಿದ್ದಾರೆಂದು ಊರ ಗೌಡ ಬಂದು ಹೇಳಿದ. ನಾನು ಚಟಕ್ಕನೆ ದಂಟುಗಳನ್ನು ಸರಿಸಿ ಎದ್ದೆ. ರೈತನೂ ಗಾಬರಿಯಾಗಿದ್ದ. "ನಾನೂ ನೀವೂ ಸೆರೆ ಸಿಕ್ಕಿಬೀಳ್ತೀವಿ, ಧಣೇರ" ಎಂದ. "ಹಾಗಾದರೆ ನಾನು ಹೋಗಿ ಬಿಡುತ್ತೇನೆ, ಮಡಿವಾಳಪ್ಪ; ನನಗಾಗಿ ನಿಮಗೆಲ್ಲೀಗೂ ತೊಂದರೆ ಬೇಡ" ಎಂದು ನಾನು ಗೋದಲೆಯಿಂದ ಇಳಿದು ಬಾಗಿಲತ್ತ ಸಾಗಿದೆ. ರೈತನಿಗೆ ಏನನಿಸಿತೋ ? "ಸ್ವಲ್ಪ ನಿಲ್ಲಿರಿ, ಧಣೇರ. ನಾನು ನೀವು ಹೋಗ್ರಿ ಅನ್ನಿಲ್ಲ. ದನಾ ಮಳೆಯಾಗ ತೋಯ್ತಿದ್ರ ನಾವು ಮುಸುಕಿನಾ ಕರ್‍ಕೊಂಜೋ ಜನ. ನಿಮ್ಮನ್ನ ಹ್ಯಾಂಗ ಹೊರಗ ಕಳಿಸಾನ್ರಿ ? ಬರ್‍ರಿ, ಅಲ್ಲೇ ನನ್ನ ಹೇಣ್ತಿ ಹಂತೇಕ್ ಹೋಗಿ ಕೌದಿ ಹೊದಕೊಂಡು ಮಲಕೋರಿ...ನನ್ನ ಮಗ ಮಲಗ್ಯಾನ ಅಂತ ಹೇಳ್ತೇನಿ" ಅಂದ. ರೈತನ ಕಣ್ಣುಗಳನ್ನು ದಿಟ್ಟಿಸಿ ನೋಡಿದೆ; ಸರಳ ಪ್ರಾಮಾಣಿಕತೆ ಕಂಡಿತು. ಮೂಕನಾಗಿ ಆ ತಾಯಿಯ ಪಕ್ಕದಲ್ಲಿ ಮುದುರಿ ಮಲಗಿದೆ. ಸ್ವಲ್ಪ ಹೊತ್ತಿನಲ್ಲಿ ಬಂದೂಕಿನ ಹಿಂದಿನಿಂದ ಬಾಗಿಲು

ತಟ್ಟಿದ ಶಬ್ದ ಕೇಳಿಸಿತು. ಮಡಿವಾಳಪ್ಪ ಬಾಗಿಲು ತೆಗೆದು ಸಹಜವಾಗಿಯೆಂಬಂತೆ ಅವರೊಂದಿಗಿದ್ದ ಗೌಡನೊಂದಿಗೆ ಮಾತಾಡಿದ. "ಅಚ್ಛಾ, ಅಚ್ಛಾ" ಎನ್ನುತ್ತ ಪೋಲಿಸರು ಹೋದರು. ಮತ್ತೆ ಒಂದು ಘಂಟೆಯನಂತರ ಲಿಂಗಯ್ಯ ಬಂಡಿ ತಂದ. ಅದರಲ್ಲಿ ಕೂತು ನಾನು ಗಡಿ ದಾಟಿ ಗಜೇಂದ್ರಗಡ ಸೇರಿದೆ. ಆದರೆ ಅಂದೇ ರಾತ್ರಿ ಕಲ್ಲಭಾವಿಯ ಹೆಂಡದಂಗಡಿಗೆ ಬೆಂಕಿ ಬಿದ್ದಿತ್ತು.

ಗಜೇಂದ್ರಗಡದಲ್ಲಿ ಕಾಂಗ್ರೆಸ್ಸಿನ ಸಶಸ್ತ್ರ ಶಿಬಿರದ ಕೇಂದ್ರವಿತ್ತು. ಮುರಡಿಯ ಭೀಮಜ್ಜ (ಯೋಗಸಾಧನೆಯಲ್ಲಿ ಪ್ರಸಿದ್ಧನಾಗಿದ್ದ) ಅದರ ನಾಯಕನಾಗಿದ್ದ ; ಜಿ. ಕೆ. ರಾಜಪುರೋಹಿತ ಅದರ ದಳಪತಿಯಾಗಿದ್ದ. ಇಂಥ ಅನೇಕ ಶಿಬಿರಗಳು ಶಾಂತಗೇರಿ, ಇಟಗಿ, ಮುಂಡರಗಿ, ಕಂಪಿಲಿ, ಚಳ್ಳಿಕೂಡ್ಲೂರು, ತುಂಗಭದ್ರಾ ಇವುಗಳಲ್ಲಿ ಸ್ಥಾಪನೆಯಾಗಿ ರಜಾಕಾರ ಮತ್ತು ಪೋಲಿಸರ ವಿರುದ್ಧ ಕಾರ್ಯಾಚರಣೆ ನಡೆಸಿದ್ದವು. ಒಳಗೆ ದೌರ್ಜನ್ಯಕ್ಕೆ ತುತ್ತಾಗಿ ವಲಸೆಬರುವ ನಿರಾಶ್ರಿತರ ಯೋಗಕ್ಷೇಮವನ್ನು ಈ ಶಿಬಿರಗಳಲ್ಲಿ ನೋಡಿಕೊಳ್ಳಲಾಗುತ್ತಿತ್ತು. ಈ ನಡುವೆ ಮುಂಬಯಿ ಪ್ರಾಂತದಲ್ಲಿ ನಡುಗಡ್ಡೆಯಂತಿದ್ದ ನಿಜಾಮರ 13 ಹಳ್ಳಿಗಳು ಸ್ವಾತಂತ್ರ್ಯ ಸಾರಿದ್ದವು. ಈ ಹೊತ್ತಿಗೆ ಜೈಲಿನಿಂದ ಹೊರ ಬಂದ ಕಲ್ಬುರ್ಗಿಯ ಮುಖಂಡ ಕೋಳೂರು ಮಲ್ಲಪ್ಪನವರೂ ಗದಗ ಕೇಂದ್ರಕ್ಕೆ ಬಂದರು.

ಇಟಗಿ ಕಾರ್ಯಕ್ರಮದಲ್ಲಿ ಭಾಗವಹಿಸಿ ನಾವೆಲ್ಲ ಮರಳಿದನಂತರ ವಿವಿಧ ಶಿಬಿರಗಳ ಕಾರ್ಯಸಂಯೋಜನೆಗಾಗಿ ರಾಯಚೂರು ಜಿಲ್ಲೆಗಾಗಿ ಒಂದು ಸಂಘಟನಾ ಸಮಿತಿ ಏರ್ಪಟ್ಟಿತು. ಈ ಸಮಿತಿ ದಿ|| ಗಾಣದಾಳ ನಾರಾಯಣಪ್ಪ, ಜಯತೀರ್ಥ ರಾಜಪುರೋಹಿತ ಮತ್ತು ಬಿಂದಾಚಾರ ಇನಾಂದಾರರನ್ನೊಳಗೊಂಡು ರಚಿತವಾಯಿತು. ನಾನು ರಾಯಚೂರು ಜಿಲ್ಲೆಯ ಶಿಬಿರಗಳಿಗಾಗಿ ಪ್ರಚಾರ, ಹಣಕಾಸು ಪೂರೈಕೆಯ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದೆ.

ಇದೇ ಸಮಯದಲ್ಲಿ ಹೊಸಪೇಟೆ, ಬಳ್ಳಾರಿ, ಶಿರಗುಪ್ಪ ಭಾಗಗಳಲ್ಲಿ ಸಂಚರಿಸಿ ನೂರಾರು ಸಭೆಗಳನ್ನು ಏರ್ಪಡಿಸಿ ಭಾಷಣಗಳ ಮೂಲಕ ಹೈದರಾಬಾದು ಆಂದೋಲನದ ಬಗ್ಗೆ ಗಡಿಭಾಗದವರಲ್ಲಿ ಸಹಾನುಭೂತಿ ಹುಟ್ಟಿಸಿದುದಲ್ಲದೆ ಧನಸಂಗ್ರಹ ಮಾಡಿ ಗದಗಿನ ಕೇಂದ್ರಕ್ಕೆ ಒಪ್ಪಿಸುತ್ತಿದ್ದೆ. ಬಳ್ಳಾರಿಯಲ್ಲಿ ಈ ಸಂಬಂಧವಾಗಿ ಏರ್ಪಟ್ಟ ಸಾರ್ವಜನಿಕ ಸಭೆಯಲ್ಲಿ ಜನಾರ್ದನರಾವ್ ದೇಸಾಯಿಯವರು, ಕಸ್ಬೆ ಪಾಂಡುರಂಗರಾಯರು ಸಹ ಭಾಗವಹಿಸಿದ್ದರು. ಈ ಹೊತ್ತಿಗೆ ನನ್ನ ಪತ್ನಿ, ತಾಯಿ ಚಿಕ್ಕ ಮಗುವಿನೊಂದಿಗೆ ಎಲ್ಲೆಲ್ಲೋ ಸುತ್ತಾಡಿ ತುಂಗಭದ್ರಾ ನದಿ ದಾಟಿ ಹೊಸಪೇಟೆ ಸೇರಿದ್ದರು. ನೇರವಾಗಿ ನದಿ ದಾಟಲು ರಜಾಕಾರರಿಂದ ತೊಂದರೆಯಾಗಿ ನಮ್ಮ ತಂದೆ ಇನ್ನೂ ಒಳಗೇ ಸುತ್ತಾಡುತ್ತಿದ್ದರು. ಹೊಸಪೇಟೆಯ ಚಿತ್ತವಾಡಿಗಿಯಲ್ಲಿ ಒಂದು ಸಣ್ಣ ಕೋಣೆಯನ್ನು ಮಾಡಿ ನಮ್ಮವರನ್ನು ಇಟ್ಟಿದ್ದಾಯಿತು. ಆದರೆ ಅವರ ಖರ್ಚು ನಡೆಸುವುದು ಕಠಿಣವಾಯಿತು. ಧನಸಂಗ್ರಹ ನಾನೇ ಮಾಡುತ್ತಿದ್ದರೂ ಕೇವಲ ನನ್ನ ಊಟತಿಂಡಿಗಾಗಿ ಮಾತ್ರ ಬಳಸಿ

ಕೊಂಡು ಉಳಿದುದೆಲ್ಲವನ್ನೂ ಕೇಂದ್ರಕ್ಕೆ ಒಪ್ಪಿಸುತ್ತಿದ್ದೆ. ಅಲ್ಲಿಯ ಮುಖಂಡರು ಖರ್ಚಿಗಾಗಿ ಹೆಚ್ಚು ಕೊಡುವ ಬಗ್ಗೆ ಯೋಚಿಸಲಿಲ್ಲ; ಬಹುಶಃ ಅದು ಸಾಧ್ಯವೂ ಇರಲಿಲ್ಲ. ಹೆಂಡತಿಗೆ ಉಡಲು ಹರಿದ ಸೀರೆಗಳೇ ಗತಿಯಾದವು. ನನಗೆ ಸರಿಯಾಗಿ ಮನೆಯಲ್ಲಿರುವುದಕ್ಕಾಗುತ್ತಿರಲಿಲ್ಲ. ಈ ಸ್ಥಿತಿಯಲ್ಲಿ ನಮ್ಮ ಮಾವ ಬಂದು ಮಗಳನ್ನು ಕರೆದೊಯ್ದರು.

ಕೈಬಾಂಬ್‌ಗಳನ್ನೂ ಶಸ್ತ್ರಗಳನ್ನೂ ಗದಗ ಕೇಂದ್ರದಿಂದ ರೈಲಿನಲ್ಲಿ ತುಂಗಭದ್ರಾ ದಡದ ಶಿಬಿರಗಳಿಗೆ ಸಾಗಿಸುವುದೂ ನನ್ನ ಕೆಲಸವಾಗಿತ್ತು. ಸಶಸ್ತ್ರ ದಾಳಿಗಳನ್ನೂ ಸಂಯೋಜಿಸಬೇಕಾಗುತ್ತಿತ್ತು. ಕೆಲವು ಬಾಂಬುಗಳನ್ನು ಒಮ್ಮೆ ತಂದು ನಾನೂ ಅಡವಿರಾಯರೂ ಸೇರಿ ಹಾರಿಸಬೇಕೆಂದು ನದಿಯನ್ನು ಅರ್ಧ ದಾಟಿ ಜಂತಕಲ್ಲ ಹತ್ತಿರ ರಾತ್ರಿ ನದಿಯ ಮರಳಿನಲ್ಲಿ ಬಾಂಬನ್ನು ಹೂತು ಬತ್ತಿಯನ್ನು ಹೊತ್ತಿಸಿ ಓಡಿಹೋಗಿ ಎಷ್ಟು ಹೊತ್ತು ಕಾದರೂ ಅದು ಹಾರಲೇ ಇಲ್ಲ. ಕೊನೆಗೆ ಕಸಕಡ್ಡಿ ಕೂಡಿಹಾಕಿ ಉರಿ ಹಚ್ಚಿ ಅದರಲ್ಲಿ ಇಡೀ ಬಾಂಬನ್ನೇ ಹಾಕಿದರೂ ಹಾರಲಿಲ್ಲ. ಆ ಉರಿ ನೋಡಿ ದಡದಲ್ಲಿದ್ದ ನಿಜಾಂ ಪೋಲಿಸರು ಗಲಾಟೆ ಮಾಡಿದಾಗ ನಾವು ಓಡಿಹೋಗಿ ಮದ್ರಾಸ್ ವಿಭಾಗದ ಕಂಪ್ಲಿ ದಡ ಸೇರಿದೆವು. ಆದರೆ ಇನ್ನೊಮ್ಮೆ ತಂದ ಬಾಂಬುಗಳು ಸಫಲವಾದವು. ಚಳ್ಳಿಕೂಡ್ಲೂರ ಕೇಂದ್ರದ ನಾಗಪ್ಪ ಮುಂತಾದ ಮಿತ್ರರು ಹಡಗಿನಾಳಿನಲ್ಲಿ ಕರೊಡಗಿರಿ ಕಚೇರಿ ಸುಡಲು ಬಾಂಬು ಉಪಯೋಗಬಿತ್ತು; ಸಿಂಧನೂರ ತಹಸೀಲ್ದಾರನ ಡೇರೆ ಸುಡುವುದರಲ್ಲಿಯೂ ಬಾಂಬು ಸಫಲವಾಯಿತು.

ಈಗ ತುಂಗಭದ್ರಾ ಅಣೆಕಟ್ಟೆಯಲ್ಲಿ ಮುಳುಗಡೆಯಾಗಿರುವ ನಾರಾಯಣದೇವರ ಕೆರೆಗೆ ಧನ ಸಂಗ್ರಹಕ್ಕಾಗಿ ಹೋದಾಗ ಅಲ್ಲಿಯ ರಮಣಾಚಾರ್, ರಾಮಮೂರ್ತಿ ಮುಂತಾದ ಮಿತ್ರರನ್ನು ಕರೆದುಕೊಂಡು ನಿಜಾಂ ಗಡಿಯಲ್ಲಿದ್ದ ಕೋರಗಲ್ ಎಂಬ ಊರಿನ ಕರೊಡಗಿರಿ ನಾಕಾಕ್ಕೆ ಬೆಂಕಿಯಿಟ್ಟು ಭಸ್ಮ ಮಾಡಿದೆವು.

ಹಣಸಂಗ್ರಹಕ್ಕಾಗಿ ನಾನೊಮ್ಮೆ ಗಜೇಂದ್ರಗಡದಿಂದ ಒಳಹೊಕ್ಕು ಕುಷ್ಟಗಿ ತಾಲ್ಲೂಕಿನ ಗ್ರಾಮಗಳಲ್ಲಿ ಗುಪ್ತವಾಗಿ ಸಂಚರಿಸುತ್ತಲಿದ್ದೆ. ಗೆದ್ದಗೇರಿಯ ಲಮಾಣಿ ತಾಂಡೇದ ಹನುಮನಾಯಕ ನಮಗೆ ಬಂಡಿ ಕಟ್ಟಿಕೊಂಡು ಬಂದು ಸಹಾಯ ಮಾಡುತ್ತಿದ್ದ. ನಾನು ಗಾಣಧಾಳು ಸೇರಿದಾಗ ರಾತ್ರಿ 9 ಗಂಟೆ. ವೀರಭದ್ರಪ್ಪ ಮಾಸ್ತರ್ ಯಾವದೋ ನಾಟಕದ ತಾಲೀಮಿನಲ್ಲಿ ಮಗ್ನನಾಗಿದ್ದ. ಗಾಣಧಾಳಿನಲ್ಲಿ ನಾವು ನಿರೀಕ್ಷಿಸಿದ್ದ ವ್ಯಕ್ತಿ ಸಿಗಲಿಲ್ಲವೆಂದು ಕಲ್‌ಭಾವಿಗೆ ಬಂದೆ. ನನ್ನೊಂದಿಗೆ ಗೆದ್ದಗೇರಿಯ ಬಂಡೆಪ್ಪ ಮತ್ತು ಇನ್ನೊಬ್ಬ ಒಕ್ಕಲಿಗ ಯುವಕ ನೆರವಿಗಾಗಿ ಶಿಬಿರದಿಂದ ಬಂದಿದ್ದರು. ಕಲ್‌ಭಾವಿಯಲ್ಲಿ ಕಮಲಮ್ಮನ ಮನೆಯಲ್ಲಿ ನಮ್ಮ ಊಟವಾಯಿತು. ನಮ್ಮ ಸುಳಿವನ್ನು ಹೇಗೋ ಅರಿತ ಗುನ್ನಾಳಿನ ಕಾರ್ಯಕರ್ತ ಕೊಟ್ರಯ್ಯ ಎಂಬಾತ ನನ್ನನ್ನು ಕಂಡು, ಗುನ್ನಾಳಿನಲ್ಲಿ ತಹಸೀಲ್ದಾರನು ಒತ್ತಾಯದಿಂದ ಕಂದಾಯದ ಹಣವನ್ನು ಶೇಖರಿಸಿಟ್ಟಿದ್ದಾನೆಂದೂ ಜೊತೆಗೆ ಪೋಲಿಸ್ ಇಲ್ಲವೆಂದೂ ತಿಳಿಸಿ ಆತ ತಂಗಿದ್ದ ತಾಣದ ವಿಚಾರವನ್ನೆಲ್ಲ ಹೇಳಿದ.

ಕೂಡಲೇ ನಾವು ಕಾರ್ಯೋನ್ಮುಖರಾದೆವು. ಹತ್ತಿರದ ತಾಳಕೇರಿಯ ಆರೇಳು ಯುವಕರನ್ನೂ ಸೇರಿಸಿಕೊಂಡು ಅಲ್ಲಿಂದ ಎಂಟು ಮೈಲಿರುವ ಗುನ್ನಾಳಿಗೆ ಹೊರಟೆವು. ನನ್ನ ಬಳಿ ಆರು ಗುಂಡಿನ ಒಂದು ಪಿಸ್ತೂಲು ಮತ್ತು ಒಂದು ಗ್ರೆನೇಡ್ ಇದ್ದವು. ಸಂಗಡಿಗನೊಬ್ಬ ಹಳೆಯ ಪಿಸ್ತೂಲ್ ಒಂದು ತಂದಿದ್ದ.

ಗುನ್ನಾಳು ತಲಪಿದಾಗ ರಾತ್ರಿ ನಾಲ್ಕು ಘಂಟೆ. ಗೊಬ್ಬರ ಹೊರುವ ಬಂಡಿಗಳ ಸುಳಿದಾಟ ಆಗಲೇ ಆರಂಭವಾಗಿತ್ತು. ನಾನು ಜಂಗಮನ ವೇಷದಲ್ಲಿದ್ದೆ. ಊರಿಗೆ ಬಂದು ಅಗಸಿಯಲ್ಲಿ ಮಲಗಿದ್ದ ತಹಸೀಲ್ ಕಛೇರಿಯ ಜವಾನರನ್ನು ನಿಯಂತ್ರಿಸಲು ಐದು ಜನರನ್ನು ಕೋಲುಗುದಿಗೆಗಳೊಂದಿಗೆ ಬಿಟ್ಟು ನಾವು ಸಾಗಿದೆವು. ಪುರುಷೋತ್ತಮರಾಯರೆಂಬವರ ಮನೆ ಹೊರಕೋಣೆಯ ಕಟ್ಟೆಯ ಮೇಲೆ ತಹಸೀಲ್ದಾರ್ ಮುಸುಕು ಹಾಕಿ ಮಲಗಿದ್ದ. ಅವನನ್ನು ಕೊಲ್ಲಬಾರದೆಂದುಕೊಂಡು, ಜೊತೆಯವರಿಗೆ ಬಡಿಗೆಯಿಂದ ಹೊಡೆದೆಬ್ಬಿಸಲು ಹೇಳಿದೆ. ಮೂರುನಾಲ್ಕು ಏಟುಗಳು ಬೀಳುವುದರೊಳಗಾಗಿ "ಅರೇ ಮರ್‌ಗಯಾ !" ಎಂದು ಬೊಬ್ಬೆಹೊಡೆಯುತ್ತ ಅವನು ಎದ್ದು ರೂಮಿನೊಳಕ್ಕೆ ಹೊಕ್ಕು ಅದರ ಬಾಗಿಲು ಹಾಕಿಕೊಂಡ. ನಾನು ಕಿಟಕಿಯಿಂದ ಗುಂಡು ಹಾರಿಸಿದೆ. ಪಕ್ಕದಿಂದ ತನ್ನ ಜೀವಕ್ಕಾಗಿ ಹೆದರಿ ಓಡಿಹೋಗುತ್ತಿದ್ದ ಇನ್ನೊಬ್ಬ ಜವಾನನನ್ನು ನೋಡಿ ಹೆದರಿ ನನ್ನ ಜೊತೆಯವರೆಲ್ಲ ಓಡಿಹೋದರು. ಗಾಬರಿಯಲ್ಲಿ ನನ್ನ ಜೊತೆಯವ ಹಾರಿಸಿದ ಗುಂಡು ಬಾಗಿಲೊಡೆಯಲು ಯತ್ನಿಸುತ್ತಿದ್ದ ಬಂಡೆಪ್ಪನ ಕಾಲಿಗೇ ಬಡಿಯಿತು. ನಾನು, ಬಂಡೆಪ್ಪ ಇಬ್ಬರೇ ಉಳಿದುದು ಗಂಡಾಂತರವೆಂದುಕೊಂಡು, ನಾವೂ ಬೇರೆಬೇರೆಯಾಗಿ ಓಡಿದೆವು. ಆ ರಾತ್ರಿಯೆಲ್ಲ ಓಡಿ ಓಡಿ ದಣಿದು ಯಾವದೋ ಮರದ ಕೆಳಗೆ ಮಲಗಿಬಿಟ್ಟೆ. ಎಚ್ಚರಾದಾಗ ಬೆಳಗ್ಗೆ ಹೊತ್ತೇರಿ ಮೂರು ತಾಸಾಗಿತ್ತು. ಮತ್ತೆ ಮೂರು ತಾಸು ನಡೆದು ಹನುಮನಾಯಕನ ತಾಂಡೆ ಸೇರಿದೆ. ಅಲ್ಲಿ ಅವನ ಮಗಳ ಮದುವೆ ; ಆದರೂ ಅವನು ಬಂಡಿ ಕಟ್ಟಿ ನನ್ನನ್ನು ಗಡಿಯಾಚೆಗೆ ತಲುಪಿಸಿದ. ಈ ದಾಳಿಯಲ್ಲಿ ತಹಸೀಲ್ದಾರನ ತಲೆಗೆ ಏಟು ಬಿತ್ತಾದರೂ ಹಣವೇನೂ ದೊರೆಯಲಿಲ್ಲ. ಇಂಥವೇ ಮತ್ತೆರಡು ದಾಳಿಗಳ ನೇತೃತ್ವ ವಹಿಸಿದ್ದೆ.

ನಮ್ಮ ಶಿಬಿರಗಳವರು ಕೈಕೊಂಡ ಹಿಂಸಾತ್ಮಕ ಪ್ರತಿಭಟನಾ ದಾಳಿಗಳಲ್ಲಿ ಒಂಕಲ ಕುಂಟೆ, ಕುಕನೂರು ಪೋಲಿಸ್ ಠಾಣೆಗಳ ಲೂಟಿ, ಮೂಲಗತ್ತಿ, ಹಣಮಾಳುಗಳಲ್ಲಿ ಪೋಲಿಸರನ್ನು ಎದುರಿಸಿದ ಪ್ರಕರಣಗಳು ಗಣನೀಯವಾದವು. ಹಿಂಸಾತ್ಮಕ ಪ್ರತಿಭಟನೆ ನಿಜಾಂ ಪೋಲಿಸರ ಮತ್ತು ರಜಾಕಾರರ ಸ್ಥೈರ್ಯವನ್ನೇ ಕಳೆದುಬಿಟ್ಟಿತು. ಈ ಕೃತ್ಯಗಳಿಗೆ ಗಡಿಭಾಗದ ಜನತೆಯ ಮತ್ತು ಮುಂಬಯಿ, ಮದ್ರಾಸ್ ಸರ್ಕಾರಿ ಅಧಿಕಾರಿಗಳ ಬೆಂಬಲ ದೊರೆತಂತೆಯೇ ನಿಜಾಂ ಪ್ರದೇಶದೊಳಗಿನ ಜನತೆಯ ಬೆಂಬಲ ಅಷ್ಟೇ ಹೆಚ್ಚಾಗಿ ದೊರಕಿತು.

ಕರ್ನೂಲು, ಗದ್ವಾಲ, ಬಳ್ಳಾರಿ ಮತ್ತು ಹೊಸಪೇಟೆಗಳಲ್ಲಿ ನನ್ನ ಭಾಷಣಗಳಿಂದಾಗಿ

ಆಯಾ ನಗರಗಳ ಕಾಂಗ್ರೆಸ್ ಸಮಿತಿಯವರು ಏರ್ಪಡಿಸಿದ ಬೃಹತ್ ಸಭೆಗಳ ಯಶಸ್ಸು, ಜನರ ಉತ್ಸಾಹ ಇಂದಿಗೂ ಸ್ಮರಣೀಯವಾಗಿವೆ.

ನಿಜಾಂ ರಾಜ್ಯದ ಹೊರಗಿನಿಂದ ಈ ರೀತಿಯ ಒತ್ತಡ ಹೆಚ್ಚಾದಂತೆ, ಒಳಭಾಗ ದಲ್ಲಿ ದೌರ್ಜನ್ಯ ಇನ್ನೂ ಹೆಚ್ಚಾಯಿತು. ಹಿಂದೂ ಪ್ರಯಾಣಿಕರಿಗೆ ಕ್ಷೇಮವಿಲ್ಲದಂತೆ ಆಯಿತು. ಎಲ್ಲಿಯೋ ಔತಣಕ್ಕೆ ಹೋಗಿ ಮರಳಿ ಬರುತ್ತಿದ್ದ ಕನಕಗಿರಿಯ ಹನುಮಂತ ಭಟ್ಟರನ್ನು ಪಠಾಣರು ಅಡವಿಯಲ್ಲಿ ತಡೆದು ಎರಡು ರೂಪಾಯಿ ದಕ್ಷಿಣೆ ಬಂದಿದ್ದನ್ನೂ ಕಿತ್ತುಕೊಂಡರು.

ಮುನಿರಾಬಾದ್, ಕೊಪ್ಪಳ, ಕುಷ್ಟಗಿ, ಗಂಗಾವತಿಗಳಲ್ಲಿ ಪಠಾಣರ, ರಜಾಕಾರರ ಹಾವಳಿ ಅತಿಯಾಗಿ, ಹಳ್ಳಿಗಳಲ್ಲಿ ಹಾಡುಹಗಲೇ ಲೂಟಿದರೋಡೆಗಳಾದರೂ ಅಧಿಕಾರಿ ಗಳು ಕೇಳದಾದರು. ಪರಿಸ್ಥಿತಿ ಇಷ್ಟೊಂದು ವಿಕೋಪಕ್ಕೆ ತಿರುಗಿದಾಗ ಭಾರತ ಸರ್ಕಾರ ಪೋಲಿಸ್ ಕಾರ್ಯಾಚರಣೆ ಕೈಗೊಂಡು 1948ರ ಸೆಪ್ಟೆಂಬರಿನಲ್ಲಿ ಹೈದರಾಬಾದನ್ನು ವಿಮೋಚನೆಗೊಳಿಸಿತು

ಭಾರತ ಸೈನ್ಯದೊಡನೆ ನಾನು ಗಂಗಾವತಿ, ಕನಕಗಿರಿ ಮತ್ತು ನನಗೆ ನೆರವಿತ್ತ ಬೇರೆ ಎಲ್ಲಾ ಹಳ್ಳಿಗಳಿಗೂ ಹೋದೆ. ನಾವು ಸಲ್ಲಿಸಿದ ಆ ಅಲ್ಪಸೇವೆಗಾಗಿ ವಿಶೇಷ ಮನ್ನಣೆ, ಆದರ ಮತ್ತು ಪ್ರೀತಿಯನ್ನು ಜನತೆ ಹೊಳೆಯಾಗಿ ಹರಿಸಿತು. ಹೈದರಾಬಾದಿನ 'ಕರ್ನಾಟಕ ಸಾಹಿತ್ಯ ಮಂದಿರ'ದವರು ನನ್ನ ರಾಜಕೀಯ ಸೇವೆಯನ್ನು ಪ್ರಶಂಸಿಸಿ ಒಂದು ನಿರ್ಣಯವನ್ನು ಅಂಗೀಕರಿಸಿ ತಮ್ಮ ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು. ನಾನು ಹೈದರಾಬಾದಿನಲ್ಲಿ ಅಭ್ಯಾಸ ಮುಂದುವರಿಸಿದೆ. ರಾಜಕೀಯ ಕಾರಣಗಳಿಗಾಗಿ ಕಾಲೇಜ್ ಬಿಟ್ಟ ವಿದ್ಯಾರ್ಥಿಗಳಿಗಾಗಿ 1948ರ ಡಿಸೆಂಬರ್‌ನಲ್ಲಿ ವಿಶೇಷ ಪರೀಕ್ಷೆಗಳನ್ನೇರ್ಪಡಿಸಿದರು. ನಾನು ಆ ವರ್ಷ ಬಿ ಎ. ಪರೀಕ್ಷೆಯಲ್ಲಿ ವಿಶ್ವವಿದ್ಯಾಲಯಕ್ಕೇ ಮೊದಲಿಗನಾಗಿ ತೇರ್ಗಡೆ ಯಾದೆ. ಅನಂತರ ನಾನು ಸಕ್ರಿಯ ರಾಜಕೀಯವನ್ನು ತ್ಯಜಿಸಿ ಬೇರೆ ದಾರಿ ಹಿಡಿದೆ.

ಹೈ.ರಾ. 2

## ದಿ|| ಜನಾರ್ದನರಾವ್ ದೇಸಾಯಿ

---

ರಾಯಚೂರು ಜಿಲ್ಲೆಯ ಸಿಂಧನೂರು ತಾಲ್ಲೂಕಿನ ಚಿಕ್ಕಹಳ್ಳಿಯಾದ ವಲಕುಂದಿನ್ನಿ ಯಲ್ಲಿ ನಾನು ಜನಿಸಿದೆನು (28-2-1892). ವಿದ್ಯೆಗೋಸ್ಕರ ಸಿಂಧನೂರು, ಗಂಗಾವತಿ, ರಾಯಚೂರು ಮತ್ತು ಹೈದರಾಬಾದ್ ನಗರಗಳನ್ನು ಸಂದರ್ಶಿಸಿದೆನು. ಕೇಶವರಾವ್ ವಕೀಲರ ಹತ್ತಿರ ಹೈದರಾಬಾದಿನಲ್ಲಿ ಮೋರಿರ್ ಕೆಲಸವನ್ನು ಮಾಡುತ್ತ ಆಗಿನ ಕಾಲದ



ಸುವ್ವಂ, ದುವ್ವಂ, ಅವ್ವಲ್, ಜುಡೀಶಿಯಲ್ ಪರೀಕ್ಷೆಗಳನ್ನು 1917ರಲ್ಲಿ ಪಾಸಾದೆನು. 1913 ರಿಂದ 1917ರ ವರೆಗೆ ಅವರ ಪಟ್ಟಶಿಷ್ಯನಾಗಿದ್ದೆನು. ಅವರು ರಾಜಕೀಯ ಮುಖಂಡರಲ್ಲಿ ಒಬ್ಬರಾಗಿದ್ದು, ಎಲ್ಲ ಸಭೆಗಳಿಗೆ ಉಪಸ್ಥಿತರಾಗುತ್ತಿದ್ದರು. ನಾನೂ ಅವರ ಜೊತೆಗೆ ಹೋಗುತ್ತಿದ್ದೆನು. ಆಗಲೇ ನನಗೆ ರಾಜಕೀಯದಲ್ಲಿ ಆಸ್ಥೆ ಬೆಳೆಯಿತು. ಆಗಲೇ ವೃತ್ತಿಯನ್ನು ಕೈಗೊಳ್ಳಲು ನಾನು ಗುಲಬರ್ಗಾಕ್ಕೆ ಹೋಗಬೇಕಾಯಿತು. ಜನಸೇವೆಯೇ ಜನಾರ್ದನ ಸೇವೆಯೆಂದು ಬಗೆದ ನಾನು ಅಲ್ಲಿಯೂ ವೃಥಾ ಕಾಲಹರಣ ಮಾಡದೆ ಅಲ್ಲಿಯ ಕನ್ನಡಿಗರಿಗೆ ಆದ ಅನ್ಯಾಯವನ್ನು ಹೋಗಲಾಡಿಸಲು ಪಣತೊಟ್ಟೆನು. ಅಲ್ಲಿ ಮರಾಠಿಯ ಪ್ರಭಾವವು ಅತಿಯಾಗಿತ್ತು. ಆದರೆ ಕನ್ನಡಿಗರು ಕನ್ನಡವನ್ನು ಕಲಿಯಬೇಕು ಎಂಬ ಪ್ರಬಲ ಆಸೆ ಉಂಟಾಗಿ ಅದರ ಸಲುವಾಗಿ ಅನೇಕ ಪ್ರಯತ್ನ ಮಾಡಿ ಕಾರ್ಯರೂಪಕ್ಕೆ ತರಲಾಯಿತು. ಅಲ್ಲಿಯ ರಾಷ್ಟ್ರೀಯ ಕನ್ನಡ ಶಾಲೆಯಾದ ನೂತನ ವಿದ್ಯಾಲಯಕ್ಕೆ ಸೆಕ್ರೆಟರಿಯಾಗಿದ್ದುದರಿಂದ ಅದರ ಉನ್ನತಿಯ ಭಾರ ನನ್ನ ಮೇಲೆ ಇತ್ತು. ಹಗಲಿರುಳೂ ದುಡಿದೆನು. ಯಾವುದೇ ಕಾರ್ಯವು ಮುಂದೆ ಬರಲು ಆರ್ಥಿಕ ಸಹಾಯದ ಆವಶ್ಯಕತೆ ಇರುವುದು ಎಂದು ಗ್ರಹಿಸಿದೆನು. ಆದುದರಿಂದ ಸ್ನೇಹಿತರೆಲ್ಲ ಸೇರಿ ಸರಸ್ವತಿ ಬ್ಯಾಂಕನ್ನು ಸ್ಥಾಪಿಸಿದೆವು. ಅದರ ಉತ್ಪನ್ನವು ಈ ಶಾಲೆಗೆ ಸಹಾಯವಾಗುವಂತೆ ಮಾಡಿದೆನು. ವಕೀಲರೆಲ್ಲರಿಗೂ ಅನುಕೂಲವಾಗುವಂತೆ 'ವಕೀಲ್ ಕಾನ್ಫರೆನ್ಸ್'ನ್ನು ಸ್ಥಾಪಿಸಿದೆನು ಸಮಾಜವನ್ನು ಸುಧಾರಿಸುವ ಉದ್ದೇಶದಿಂದ ವಿಧವಾ ವಿವಾಹವನ್ನು ಕೈಗೊಳ್ಳಬೇಕೆಂದು ಗ್ರಹಿಸಿ ಕಾರ್ಯರೂಪಕ್ಕೆ ತಂದಾಗ ಅನೇಕ ಸಂಪ್ರದಾಯಸ್ಥರನ್ನು ಎದುರಿಸುವ ಪ್ರಸಂಗ ನನಗೆ ಒದಗಿತು. ಕೈಕೊಂಡ ಕಾರ್ಯವನ್ನು ಪೂರ್ಣಗೊಳಿಸುವವರೆಗೆ ನಾನು ಸುಖ ನಿದ್ರೆಯನ್ನು ಮಾಡುತ್ತಿರಲಿಲ್ಲ. ಇದರಿಂದ ನಾನು ಅನೇಕ ಕಷ್ಟಗಳನ್ನು ಎದುರಿಸುವ ಪ್ರಸಂಗಗಳು ಒದಗಿದುವು. ಪ್ರಮುಖ ಜನರ ಸ್ನೇಹವನ್ನು ಬೆಳೆಸುವ ಸದವಕಾಶವನ್ನು ಕಲ್ಪಿಸಿಕೊಂಡೆನು. ಮುಂದೆ ಹತ್ತು ವರ್ಷಗಳ ಅವಧಿಯಲ್ಲಿ ನಾನು 'ಬಾರ್ ಅಸೋಸಿಯೇಷನ್'ನಲ್ಲಿ ಮುಖ್ಯಸ್ಥಾನವನ್ನು ಪಡೆದೆನು.

ಈ ಅವಧಿಯಲ್ಲಿ 1919ರಲ್ಲಿ ಅಮೃತಸರದಲ್ಲಿ ಭಾರತೀಯ ಕಾಂಗ್ರೆಸ್ ಮಹಾಸಭೆ ನಡೆಯಿತು. ಆ ಸಭೆಗೆ ಡೆಲಿಗೇಟ್ ಆಗಿ ನಾನೂ ಟಿಳಕರ ಪ್ರತ್ಯೇಕ ಗಾಡಿಯಲ್ಲಿ ಅವರ ಸಂಗಡವೇ ಹೋಗಿದ್ದೆ. ಈ ಸಭೆಯ ಪ್ರಾಮುಖ್ಯತೆಯೆಂದರೆ ಮಹಾತ್ಮಾಜಿಯವರು ದಕ್ಷಿಣ ಆಫ್ರಿಕಾದಿಂದ ಅದೇ ಮೊದಲ ಸಾರಿಗೆ ಅಧಿವೇಶನಕ್ಕೆ ಬಂದಿದ್ದರು. ಈ ಸಭೆ ನನ್ನ ಪರಿವರ್ತನೆಗೆ ಮೂಲಕಾರಣವಾಯಿತು.

1921–22ರಲ್ಲಿ ಗುಲಬರ್ಗಾದಲ್ಲಿ ಕರಾಳಸ್ವರೂಪದ ಹಿಂದೂ-ಮುಸಲ್ಮಾನರ ದಂಗೆ ನಡೆಯಿತು. ಈ ಒಂದು ಘಟನೆಯು ನನ್ನ ಸಾಮಾಜಿಕ ಜೀವನದ ಮುಖ್ಯ ಘಟನೆಯೆಂದು ಹೇಳಬಹುದು. ಮುಸಲ್ಮಾನರು ಗುಡಿಗಳನ್ನೆಲ್ಲ ಕೆಡವುತ್ತ ಶರಣಬಸಪ್ಪನ ಗುಡಿಯನ್ನು ಕೆಡವಲು ಬಂದವರು ಸುಮ್ಮನಿರದೆ ದಂಗೆಯನ್ನು ಎಬ್ಬಿಸಿದರು. ಅದರಲ್ಲಿ ಸಿ.ಐ.ಡಿ.–ಡಿ.ಎಸ್.ಪಿ.ಯ ಮರಣವಾಯಿತು. ನಿಜಾಂ ಸರಕಾರದವರು ಈ ವಿಷಯ ವನ್ನು ಮುಚ್ಚಿಡಬೇಕೆಂದು ಬಹಳ ಪ್ರಯತ್ನಿಸಿದರು. ಆದರೆ ನಾವು ಇದರ ವಿಚಾರವಾಗಿ 'ಟೈಮ್ಸ್ ಆಫ್ ಇಂಡಿಯ'ದಲ್ಲಿ ಪ್ರಚಾರ ಮಾಡಿದೆವು. ಹೀಗಾಗಿ ನಿಜಾಂ ಸರಕಾರಕ್ಕೆ ಇದನ್ನು ಮುಚ್ಚಿಡಲು ಆಗಲಿಲ್ಲ. ನಿಜಾಮರು ಹೆದರಿ ಕೇಶವರಾವ್ ವಕೀಲರನ್ನು ಮತ್ತು ದುಲ್‌ಬಜೆ ಜಂಗ್ ಇವರನ್ನು ನೇಮಿಸಿ ಒಂದು ಕಮಿಶನ್ ಏರ್ಪಡಿಸಿದರು. ಆಗಿನ ಕಾಲದಲ್ಲಿ ಹಿಂದೂಗಳ ಹಿತರಕ್ಷಣೆಗೋಸ್ಕರ ಕ್ರಾಫರ್ಡ್ ಎಂಬುವರನ್ನು ನೇಮಿ ಸಿತ್ತು. ಆಗಿನ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೋಲಿಸ್‌ರವರು ನನ್ನ ಮೇಲೆ ತಪ್ಪು ಆರೋಪಣೆ ಹೊರಿಸಿದರು. ಈ ದಂಗೆ ತಡೆಯುವಲ್ಲಿ ಮುಖ್ಯಪಾತ್ರ ನನ್ನದೇ ಆಗಿತ್ತು. ಆದರೆ ಪೋಲಿಸಿನವರು ಈ ದಂಗೆಗೆ ಕಾರಣ ನಾನೇ ಎಂದೂ ನನ್ನನ್ನು ಜೈಲಿಗೆ ಕಳುಹಿಸ ಬೇಕೆಂದೂ ನಿಜಾಂ ಸರಕಾರಕ್ಕೆ ತಿಳಿಸಿದರು. ಅವರು ಈ ಬಗ್ಗೆ ಎಚ್ಚರಿಕೆಯ ಮಾತನ್ನು ನನಗೆ ಹೇಳಿದರು. ಬಾಲ್ಯದಿಂದಲೇ ಸತ್ಯಕ್ಕೆ ಹೆದರದ ನಾನು "ಜನರ ಸೇವೆಯನ್ನು ಮಾಡುವುದರಲ್ಲಿ ನನ್ನದೇನಾದರೂ ತಪ್ಪಿದ್ದರೆ ನಾನು ನಗುತ್ತ ಜೈಲನ್ನು ಸೇರುವೆನು" ಎಂದೆನು. ಆದರೆ ಕ್ರಾಫರ್ಡರು ಅಲ್ಲಿಯೇ ಇದ್ದು ನಿಜಸ್ಥಿತಿಯನ್ನು ತಿಳಿದು ನನ್ನ ಮೇಲಿನ ಆರೋಪವನ್ನು ತೆಗೆದುಹಾಕಲು ನಿಜಾಮರಿಗೆ ಶಿಫಾರಸು ಮಾಡಿದ್ದಲ್ಲದೆ ಚಾಲಾನನ್ನು ತಿರುಗಿ ತೆಗೆದುಕೊಳ್ಳುವಂತೆ ಮಾಡಿದರು. ಈ ಬಗ್ಗೆ ನಾನು ಪ್ರಚಾರ ಮಾಡಿದುದರ ಪರಿಣಾಮವಾಗಿ 40,000 ರೂಪಾಯಿಗಳನ್ನು ಗುಡಿಗಳ ಜೀರ್ಣೋದ್ಧಾರದ ಸಲುವಾಗಿ ಮಂಜೂರು ಮಾಡಿಕೊಂಡೆವು.

'ಟೈಮ್ಸ್ ಆಫ್ ಇಂಡಿಯ'ದಲ್ಲಿ ಗುಲಬರ್ಗದ ಸುದ್ದಿಯನ್ನು ಓದಿದ ಮಹಾತ್ಮಾಜಿ ಯವರು ಸಯುಬ್ ಖುರೇಶಿ ಮತ್ತು ಕಿಶನ್‌ಲಾಲ್‌ರನ್ನು ವಿಚಾರಿಸಿಕೊಂಡು ಬರಲು ಕಳುಹಿಸಿದ್ದರು. ಇವರಿಗೆ ಬೇಕಾದ ವರದಿಗಳನ್ನು ಸವಿಸ್ತಾರವಾಗಿ ತಿಳಿಸಿದೆನು. ವಿಷಯ ಗ್ರಹಿಸಿದನಂತರ ಗಾಂಧೀಜಿಯವರು ಸಮಾಧಾನದ ಉಸಿರನ್ನು ಬಿಟ್ಟು ತಮ್ಮ 'ಹರಿಜನ' ('ಯಂಗ್ ಇಂಡಿಯ' ಇರಬಹುದೇ?—ಸಂ॥) ಪತ್ರಿಕೆಯಲ್ಲಿ 'ಗುಲ್ಬರ್ಗ ಗಾನ್ ಮ್ಯಾಡ್' ಎಂದು ಒಂದು ಲೇಖನವನ್ನು ಬರೆದು ಪ್ರಕಟಿಸಿದರು. ಈ ಘಟನೆ ನನ್ನಲ್ಲಿ ಸಮಾಜಸೇವಾವೃತ್ತಿ ದೃಢವಾಗಿ ಬೇರೂರಲು ಕಾರಣವಾಯಿತು. ಗುಲಬರ್ಗಾದ ಘಟನೆಯು ಸಂಸ್ಥಾನದ ಹದಿನೆಂಟು ಜಿಲ್ಲೆಗಳ ಜನರ ಸುಪ್ತಸಹಾನುಭೂತಿಗೆ ಪಾತ್ರ ವಾಗಿತ್ತು. ಈ ಒಂದು ಘಟನೆಯೇ ನನಗೆ ಹೈದರಾಬಾದಿಗೆ ಬಂದು ನೆಲೆಸಿ ಅಲ್ಲಿಯ ಮುಖಂಡರಿಗೆ ಸಹಾಯ ಮಾಡುವ ಅವಕಾಶವನ್ನು ಕಲ್ಪಿಸಿತು. ಹೈದರಾಬಾದಿಗೆ ಬಂದ

ನನಗೆ ಕಾರ್ಯಸಾಧನದಲ್ಲಿ ಸ್ವಲ್ಪ ಸಮಯ ಬೇಕಾಯಿತು. ಇಲ್ಲಿಯ ಮುಖಂಡರಾದ ವಾಮನ್ ನಾಯಕ ಮತ್ತು ಕೇಶವರಾವ್ ಮುಂತಾದವರು ಗಾಂಧೀಜಿಯವರ ಮುಖಂಡತ್ವ ಮತ್ತು ಅನೇಕ ರಾಜಕೀಯ ವಿಷಯಗಳನ್ನು ಚರ್ಚಿಸುತ್ತಿದ್ದರು. ಆದರೆ ಮೂರೂ ಭಾಷೆಯ ಮುಖಂಡರಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳಿದ್ದ ಕಾರಣ ಎಲ್ಲರಿಗೂ ಸ್ವೀಕಾರಾರ್ಹವಾಗುವ ಕಾರ್ಯಕ್ರಮಗಳು ಕಾರ್ಯರೂಪಕ್ಕೆ ಬರುವುದು ಕಠಿಣ ವಾಗಿತ್ತು. ಟಿಳಕರ ನಾಯಕತ್ವದಲ್ಲಿ ದೇಶದಲ್ಲಿ ಸ್ವಾತಂತ್ರ್ಯದ ಆಸೆ ಬಲವಾಗಿ ಆಗಲೇ ಬೆಳೆದಿತ್ತು.

ಭಾರತದಲ್ಲಿ ಇಂತಹ ಪರಿಸ್ಥಿತಿ ಇರಬೇಕಾದಾಗ ನಮ್ಮ ನಿಜಾಮ ಸರಕಾರದ ಸ್ಥಿತಿಯೇ ಬೇರೆಯಾಗಿತ್ತು. ಅಲ್ಲಿಯ ಸಮರವೂ ಪ್ರತ್ಯೇಕವಾದದ್ದಾಗಿತ್ತು. ಆ ದಿನಗಳಲ್ಲಿ ನಿಜಾಮರ ನಿರಂಕುಶ ಪ್ರಭುತ್ವವನ್ನು ಸ್ವತಂತ್ರ ವ್ಯಕ್ತಿತ್ವ ಹಾಗೂ ಸ್ವಭಾವದ ಯಾವ ವ್ಯಕ್ತಿಗೂ ಸಹಿಸಲು ಸಾಧ್ಯವಿರಲಿಲ್ಲ. ಹೈದರಾಬಾದಿನಲ್ಲಿ ಸ್ವಾತಂತ್ರ್ಯ ಸಂಗ್ರಾಮವನ್ನು ನಡೆಸುವುದು ಅತ್ಯಂತ ಕಠಿಣವಾಗಿತ್ತು. ಯಾಕೆಂದರೆ ಅಲ್ಲಿಯ ಜನತೆಗೆ ಬ್ರಿಟಿಷ್ ಸಾಮ್ರಾಜ್ಯಶಾಹಿ ಮತ್ತು ನಿಜಾಮರ ಸರಂಜಾಮುಶಾಹಿಗಳ ವಿರುದ್ಧವೂ ಹೋರಾಡ ಬೇಕಾಗಿತ್ತು. ಬಹಿರಂಗವಾಗಿ ಯಾವ ರಾಜಕೀಯ ಸಭೆ, ಭಾಷಣಗಳನ್ನು ಅವರ ಅಪ್ಪಣೆ ಇಲ್ಲದೆ ಮಾಡುವುದು ನಿಷಿದ್ಧವಾಗಿತ್ತು. ಈ ಕಾರಣದಿಂದ ಮುಖಂಡರು ಜನರಿಗೆ ನಿಜ ಪರಿಸ್ಥಿತಿಯನ್ನು ತಿಳಿಸಲು ಮತ್ತು ಸತ್ಯಾಗ್ರಹದ ಬಗ್ಗೆ ಚರ್ಚಿಸಲೂ ಗಡಿಯ ಹೊರಗಿನ ಊರುಗಳನ್ನು ಆರಿಸಿ ಅಧಿವೇಶನಗಳನ್ನು ನಡೆಸಿದರು. 1920ರಲ್ಲಿ ಪ್ರಾರಂಭವಾದ ಗಾಂಧೀಜಿಯವರ ಮೊದಲನೆಯ ಅಸಹಕಾರ ಚಳವಳಿಯ ಪ್ರಭಾವವು ಹೈದರಾಬಾದ್ ಕನ್ನಡಿಗರ ಮೇಲೆ ಬಹಳವಾಯಿತು. ಪಂಡಿತ ತಾರಾನಾಥರ ಚಟುವಟಿಕೆಗಳೂ ರಾಷ್ಟ್ರೀಯ ಜಾಗೃತಿಯನ್ನುಂಟುಮಾಡಿದವು.

ಮೊದಲನೆಯ ಹೈದರಾಬಾದ್ ರಾಜಕೀಯ ಅಧಿವೇಶನವು 1923ರಲ್ಲಿ ಕಾಕಿನಾಡ ದಲ್ಲಿ ಜರುಗಿತು. ಮುಖಂಡರಾದ ಸರೋಜಿನಿ ನಾಯಿಡು, ಸಿ. ಆರ್. ದಾಸ್ ಹಾಗೂ ಸರದಾರ್ ವಲ್ಲಭಭಾಯಿ ಪಟೇಲರು ನಮ್ಮ ಬೇಡಿಕೆಗಳನ್ನು ಮನ್ನಿಸಿ ಭಾಷಣಗಳನ್ನು ಮಾಡಿದರು. ವಾಮನ್ ನಾಯಕರೂ ಅವರ ಜೊತೆಗಾರರೂ ನಾನೂ ಸೇರಿ 'ವಾಲಂಟಿಯರ್ ಕಾನ್ಫರೆನ್ಸ್' ಸಲುವಾಗಿ ಹಾಕಿದ ಪೆಂಡಾಲಿನಲ್ಲಿಯೇ ರಾಜಕೀಯ ಸಭೆಯನು ಜರುಗಿಸಬೇಕೆಂದು ನಿರ್ಧರಿಸಿದ್ದೆವು. ಆದರೆ ಈ ವಿಚಾರವನ್ನು ಗುಲಬರ್ಗಾದ ವಕೀಲರಾದ ಅಬ್ದುಲ್ ಕರೀಮ್ ಮತ್ತು ರಾಯ್ ಬಿಶ್ವೇಶ್ವರ್ ನಾಥರು ವಿರೋಧಿಸಿದರು. ಆದರೂ ಗುಪ್ತವಾಗಿ ಸಭೆಗಳನ್ನು ನೆರವೇರಿಸಿದೆವು.

ಎರಡನೆಯ ಅಧಿವೇಶನವು 1926ರಲ್ಲಿ ಮುಂಬಯಿಯಲ್ಲಿ ನೆರವೇರಿತು. ದತ್ತು ಅಪ್ಪಾಜಿ ಚೇರ್‌ಮನ್ ಆಗಿದ್ದು, ಅಧ್ಯಕ್ಷ ಸ್ಥಾನದಲ್ಲಿ ಬಿರಾರದ ಪಂಡಿತರಾದ ವೈ. ಎಂ. ಕಾಳೆ ಇದ್ದರು. ಆ ಸಭೆಯಲ್ಲಿ ನಿಜಾಂ ಸರಕಾರದಲ್ಲಿ ಜರುಗುತ್ತಿದ್ದ ಅನೇಕ

ಅನ್ಯಾಯಗಳನ್ನು ವಿವರಿಸಿ ಅಧ್ಯಕ್ಷಭಾಷಣಗಳನ್ನು ಮಾಡಿದರು.

ಮೂರನೆಯ ಅಧಿವೇಶನವು 1928ರಲ್ಲಿ ಪುಣೆಯಲ್ಲಿ ಜರುಗಿತು. ಈ ಸಭೆ ವಿಚಾರಶೀಲ ಭಾರತೀಯ ಮುಖಂಡರ ಮೇಲೆ ತೀವ್ರವಾದ ಪರಿಣಾಮವನ್ನುಂಟುಮಾಡಿತು. ಆಗ ಎನ್. ಸಿ. ಕೇಳಕರ್ ಅಧ್ಯಕ್ಷರು ಮತ್ತು ಎಲ್. ಬಿ. ಜೋಪಟ್ಕರ್ ಚೇರ್‌ಮನ್ ಆಗಿದ್ದರು. ನೇತಾಜಿ ಸುಭಾಸಚಂದ್ರ ಬೋಸರು ಬಂದು ತಮ್ಮ ಚಿಕ್ಕ ಭಾಷಣದಿಂದ ಜನರ ಮನವನ್ನಾಕರ್ಷಿಸಿದರು. ಬೋಸರ ಭಾಷಣ ನನ್ನನ್ನು ಇನ್ನಷ್ಟು ಉತ್ತೇಜಿತನನ್ನಾಗಿ ಮಾಡಿತು.

ನಾಲ್ಕನೆಯ ಹೈದರಾಬಾದ್ ರಾಜಕೀಯ ಅಧಿವೇಶನವು 1931ರಲ್ಲಿ ಅಕೋಲಾದಲ್ಲಿ ಜರುಗಿತು. ರಾಮಚಂದ್ರ ನಾಯಕ ಅಧ್ಯಕ್ಷರಾಗಿಯೂ ಸಿರಾಜುಲ್ ಹಸನ್ ಚೇರ್‌ಮನ್‌ರಾಗಿಯೂ ಇದ್ದರು. ಈ ಸಭೆಗೂ ನಾನು ಹೋಗಿದ್ದೆನು. ಅಧ್ಯಕ್ಷಭಾಷಣದಲ್ಲಿ ನಾಯಕರು ಹೈದರಾಬಾದ್ ರಾಜ್ಯದಲ್ಲಿ ಜರುಗುತ್ತಿರುವ ಅನ್ಯಾಯದ ಬಗ್ಗೆ ವಿವರವಾಗಿ ತಿಳಿಸಿದರು.

1931–32ರಲ್ಲಿ ಇಂಗ್ಲೆಂಡಿನಲ್ಲಿ ದುಂಡು ಮೇಜಿನ ಪರಿಷತ್ತು ನಡೆಯುತ್ತಿದ್ದ ಸಮಯದಲ್ಲಿ ಖಾದಿ ಬಟ್ಟೆಗಳ ಪ್ರಚಾರ, ಪರದೇಶೀ ವಸ್ತ್ರಗಳ ಬಹಿಷ್ಕಾರಗಳನ್ನು ಹೈದರಾಬಾದಿನಲ್ಲಿ ಭರದಿಂದ ಸಾಗಿಸಿದೆವು. ಆಬಾಲವೃದ್ಧರೂ ಸ್ತ್ರೀಯರೂ ಅದರಲ್ಲಿ ಪಾಲುಗೊಳ್ಳುತ್ತಿದ್ದರು.

ನಾನು ಕಾಂಗ್ರೆಸ್ಸಿನ ಮೆಂಬರ್ ಆಗಿದ್ದಕಾರಣ ಹರಿಪುರ ಕಾಂಗ್ರೆಸ್ಸಿಗೆ ಹೋಗಿದ್ದೆ. ಹೈದರಾಬಾದಿನ 500 ಜನರು ಅದರಲ್ಲಿ ಭಾಗವಹಿಸಿದ್ದರು. ಅಲ್ಲಿಯ ನಿರ್ಣಯಗಳು ಯುವಕ ಜನಾಂಗದ ಮೇಲೆ ತುಂಬಾ ಪರಿಣಾಮ ಮಾಡಿದವು. ಹೈದರಾಬಾದಿನ ಜನತೆ ರಾಜಕೀಯ ಸಂಘಟನೆಯೊಂದನ್ನು ಸ್ಥಾಪಿಸಲು ಒತ್ತಾಯ ಮಾಡುತ್ತಿತ್ತು. ಕೆಲವು ಮುಖಂಡರು ಈ ವಿಚಾರವು ಅಸಮಂಜಸವೆಂದೂ ಯುವಜನಾಂಗವು ತಪ್ಪು ಹೆಜ್ಜೆಯನ್ನಿಟ್ಟರೆ ಪರಿಸ್ಥಿತಿ ಗಂಭೀರವಾಗಬಹುದೆಂದೂ ಬಗೆದರು. ಕಡೆಗೆ ಅನೇಕ ಸಭೆಗಳ ತರುವಾಯ ಜುಲೈ 1938ರಲ್ಲಿ ತಾತ್ಕಾಲಿಕ ಕಮಿಟಿ ಸ್ಥಾಪಿತವಾಯಿತು. ಒಂದು ತಿಂಗಳಲ್ಲಿಯೇ ನೂರು ಜನ ಸದಸ್ಯರ ಹೆಸರುಗಳು ಬಂದುವು.

ಇಷ್ಟರಲ್ಲಿ 9 ಜಿಲ್ಲೆಗಳನ್ನೊಳಗೊಂಡ ಆಂಧ್ರಮಹಾಸಭಾ, 5 ಜಿಲ್ಲೆಗಳನ್ನೊಳಗೊಂಡ ಮಹಾರಾಷ್ಟ್ರ ಪರಿಷದ್‌ನ ಆಶ್ರಯದಲ್ಲಿ ವಿದ್ಯಾದಾನದ ಜೊತೆಗೆ ರಾಷ್ಟ್ರೀಯ ಜಾಗೃತಿಯನ್ನೂ ಮಾಡುತ್ತಿದ್ದವು. ಮೂರು ಜಿಲ್ಲೆಗಳನ್ನೊಳಗೊಂಡ ಕರ್ನಾಟಕದ ಕಡೆಯಿಂದ ಯಾವ ಕಾರ್ಯವೂ ಇದ್ದಿಲ್ಲ. ಕರ್ನಾಟಕದವರೆಲ್ಲರೂ ಮುಂದೆ ಬರಲು ಪ್ರಯತ್ನಿಸುತ್ತಿದ್ದರು. ಆದರೆ ಮುಖಂಡರಾಗಲು ಎಲ್ಲರೂ ಹೆದರುತ್ತಿದ್ದರು. ಕೆಲವು ಮಿತ್ರರ ಸಲಹೆಯ ಮೇರೆಗೆ ನಾನೇ ಮುಂದಾದೆನು. ಗುಲ್ಬರ್ಗ, ಬೀದರ್ ಮತ್ತು ರಾಯಚೂರು ಜಿಲ್ಲೆಯ ವಕೀಲರು, ಶಿಕ್ಷಕರು ಮತ್ತು ಇತರ ಮುಖಂಡರನ್ನು ಭೆಟ್ಟಿ

ಆದೆನು. ಅವರಿಗೆ ರಾಷ್ಟ್ರೀಯ ಜಾಗೃತಿಯ ಬಗ್ಗೆ ತಿಳಿಸಿ 'ಕರ್ನಾಟಕ ಪರಿಷತ್ತು' ಸ್ಥಾಪಿಸುವ ಉದ್ದೇಶವನ್ನು ತಿಳಿಸಿದೆನು. ಅವರೆಲ್ಲರೂ ನನಗೆ ಉತ್ತೇಜನ ಕೊಟ್ಟರು. ಹೈದರಾಬಾದಿಗೆ ಬಂದನಂತರ ಇಲ್ಲಿಯ ಕನ್ನಡ ಮುಖಂಡರನ್ನು ಭೆಟ್ಟಿ ಆದೆನು. ಎಲ್ಲರ ಪ್ರೇರಣೆಯ ಮೂಲಕ 'ಕರ್ನಾಟಕ ಪರಿಷತ್ತು' ಸ್ಥಾಪಿಸುವ ಉದ್ದೇಶವನ್ನು ತಿಳಿಸಿದೆನು. ನಾವು ಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಿದ್ದೆವು. ಸಾಹಿತ್ಯ ರಂಗ ಸರಕಾರದ ಕಣ್ಣೋಟದಿಂದ ದೂರವಿರುತ್ತಿತ್ತು. ಆದರೆ ಸಾಹಿತ್ಯವು ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನೊಳಗೊಂಡಿರುತ್ತಿತ್ತು. ಆ ರಾಜ್ಯದ ಕನ್ನಡಿಗರ ಸರ್ವಾಂಗೀಣ ಏಳಿಗೆಗಾಗಿಯೂ ಕನ್ನಡ ಸಾಹಿತ್ಯ, ಸಂಸ್ಕೃತಿ, ಕಲೆಗಳ ಅಭಿವೃದ್ಧಿಗಾಗಿಯೂ ನಿಜಾಂ ಕರ್ನಾಟಕದ ಪರಿಷತ್ತೊಂದನ್ನು ಸ್ಥಾಪಿಸಬೇಕೆಂಬ ವಿಚಾರವು ಸುಳಿಯುತ್ತಿತ್ತು.

1934ರಲ್ಲಿ ರಾಯಚೂರಿನಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಬಂದ ನಿಜಾಮ ಕರ್ನಾಟಕದ ಬೇರೆ ಬೇರೆ ಭಾಗಗಳ ಪ್ರಮುಖರ ಸಭೆಯೊಂದನ್ನು ಪಿ. ಕಿಶನ್‌ರಾಯರ ಮನೆಯಲ್ಲಿ ಕರೆಯಲಾಯಿತು. ಕಾರವಾನ ಶ್ರೀನಿವಾಸರ ಅಧ್ಯಕ್ಷತೆಯಲ್ಲಿ ಒಂದು ಕೇಂದ್ರ ಸಮಿತಿ ರಚನೆಯಾಯಿತು. ಪಿ. ಕಿಶನ್‌ರಾಯರು ಉಪಾಧ್ಯಕ್ಷರಾಗಿಯೂ ರಾಘವೇಂದ್ರ ರಾವ್ ಮನಸಬ್‌ದಾರರು ಮತ್ತು ನಾನು ಕಾರ್ಯದರ್ಶಿಗಳಾಗಿಯೂ ಆರಿಸಲ್ಪಟ್ಟೆವು.

ಈ ಸಮಿತಿಯ ಆಶ್ರಯದಲ್ಲಿ ಹೈದರಾಬಾದಿನಲ್ಲಿ ಒಂದು ಪರಿಷತ್ತನ್ನು ಸೇರಿಸುವುದಕ್ಕಾಗಿ ಜಿ. ರಾಮಾಚಾರ್ಯರ ಅಧ್ಯಕ್ಷತೆಯಲ್ಲಿ ಸ್ವಾಗತ ಸಮಿತಿಯು ಸ್ಥಾಪಿತವಾಯಿತು. ನಾನೂ ಸಿದ್ದವನಹಳ್ಳಿ ಕೃಷ್ಣಶರ್ಮರೂ ಕಾರ್ಯದರ್ಶಿಗಳಾಗಿ, ಕೃಷ್ಣಾಚಾರ್ಯ ಜೋಶಿಯವರು ಕೋಶಾಧ್ಯಕ್ಷರಾಗಿ ಇತರ 15 ಜನ ಸದಸ್ಯರುಳ್ಳ ಸಮಿತಿ ಇದ್ದಾಗಿತ್ತು. 22ನೆಯ ಫೆಬ್ರವರಿ 1937ರಂದು ಪಿ. ಕಿಶನ್‌ರಾಯರ ಅಧ್ಯಕ್ಷತೆಯಲ್ಲಿ ಹೈದರಾಬಾದಿನಲ್ಲಿ ಪರಿಷತ್ತು ಸೇರಿತು. ಇದರಲ್ಲಿ ಅನೇಕ ಮಹತ್ವದ ಗೊತ್ತುವಳಿಗಳನ್ನು ಸ್ವೀಕರಿಸಿದೆವು. ಇಲ್ಲಿಂದಲೇ ರಾಜಕೀಯ ಚಟುವಟಿಕೆಗಳು ಪ್ರಾರಂಭವಾದವು. ಇದರಂತೆಯೇ ಆಂಧ್ರ, ಮಹಾರಾಷ್ಟ್ರ ಭಾಗಗಳೂ ತಮ್ಮ ತಮ್ಮ ಸಂಸ್ಥೆಗಳ ಮೂಲಕ ಚಟುವಟಿಕೆಗಳನ್ನು ನಡೆಯಿಸಲು ಪ್ರಾರಂಭಿಸಿದ್ದವು.

ಇದೇ ಸಮಯಕ್ಕೆ 'ವಂದೇ ಮಾತರಂ' ಚಳವಳಿ ಪ್ರಾರಂಭವಾಯಿತು.

ಹರಿಪುರ ಅಧಿವೇಶನದಲ್ಲಿ ಚರ್ಚೆ ನಡೆದ ತರುವಾಯ ಜುಲೈ 1938ರಲ್ಲಿ ತಾತ್ಕಾಲಿಕ ಸ್ಟೇಟ್ ಕಾಂಗ್ರೆಸ್ ಕಮಿಟಿ ಸ್ಥಾಪಿತವಾಯಿತು.

1938ರ ಸೆಪ್ಟೆಂಬರ್ 9ನೇ ದಿನಾಂಕ ಸರ್ವಸದಸ್ಯರ ಸಭಾದಿನವಾಗಿತ್ತು. ಸಂಸ್ಥೆಯ ಗೊತ್ತುಗುರಿಗಳನ್ನು ನಿರ್ಧರಿಸುವ ದಿನವಾಗಿತ್ತು. ರಾಷ್ಟ್ರೀಯ ಸಂಸ್ಥೆಯನ್ನು ಸ್ಥಾಪಿಸಬೇಕಾದರೆ ಅದರಲ್ಲಿ ಮುಸ್ಲಿಮರು ಸೇರಿರಬೇಕು, ಅದು ಕೇವಲ ಹಿಂದುಗಳ ಸಂಸ್ಥೆಯಾಗಿರಬಾರದು ಎಂಬ ಕರಾರು ಸರಕಾರ ಹಾಕಿತು. ಸರಕಾರ ಹೀಗೆ ಕರಾರು ಹಾಕುವುದು ನಮಗೆ ಮಾನ್ಯವಾಗಲಿಲ್ಲ. ಈ ಸಂಸ್ಥೆಯು ಹುಟ್ಟುವ ಮೊದಲೇ ಸೆಪ್ಟೆಂಬರ್ 7ನೇ

ತಾರೀಕಿನಂದು ಸರಕಾರವು ಅದನ್ನು ಕಾಯಿದೆಬಾಹಿರವೆಂದು ಘೋಷಿಸಿತು. ಆ ದಿನವೇ ಕೊತ್ವಾಲನು ರಾಮಾಚಾರ್ಯರನ್ನು ಸಂಧಿಸಿ ಜನರಲ್ ಬಾಡಿ ಮೀಟಿಂಗನ್ನು ನಿಷೇಧಿಸಬೇಕೆಂದು ಹೇಳಿದನು. ಈ ಬಗ್ಗೆ ಎಂ. ನರಸಿಂಗರಾವ್ ಮತ್ತು ನವಾಬ್ ಬಹಾದುರ್ ಯಾರ್ ಜಂಗ್ ಇಬ್ಬರ ನಡುವೆ ಮಾತುಕತೆಗಳು ಜರುಗಿದವು. ಎಂ. ಹನುಮಂತರಾವ್, ಕಾಶೀನಾಥರಾವ್ ವೈದ್ಯ, ಜಿ. ರಾಮಾಚಾರ್, ವಿನಾಯಕರಾವ್ ಕೊರಟಕರ್, ಬಿ. ರಾಮಕೃಷ್ಣರಾವ್ ಮತ್ತು ನಾನು ಹೀಗೆ ಎಲ್ಲರೂ ಸೇರಿ ಒಮ್ಮತದಿಂದ ಜನರಲ್ ಬಾಡಿ ಮೀಟಿಂಗನ್ನು ಮುಂದಕ್ಕೆ ಹಾಕಿದರೆ ಮಾತ್ರ ಸ್ಟೇಟ್ ಕಾಂಗ್ರೆಸ್ಸಿನ ಮೇಲೆ ಹೊರಿಸಿದ ಬಹಿಷ್ಕಾರ ದೂರ ಮಾಡಲಾಗುವುದು, ಎಂದು ತಿಳಿಸಿದರು. ನಾವೆಲ್ಲರೂ ಈ ಒಪ್ಪಂದಕ್ಕೆ ಒಪ್ಪಿಕೊಂಡೆವು. ಆದರೆ ಇದರಿಂದ ಲಾಭವೇನೂ ಆಗಲಿಲ್ಲ. ಆಗ ನಾವೆಲ್ಲರೂ ಸತ್ಯಾಗ್ರಹವನ್ನು ಮಾಡಲು ನಿರ್ಧರಿಸಿದೆವು. ಗೋವಿಂದರಾವ್ ನಾನಲ್ ಇವರ ಸರ್ವಾಧಿಕಾರದೊಳಗೆ ಸತ್ಯಾಗ್ರಹವನ್ನು ಹೂಡುತ್ತೇವೆಂದು ಘೋಷಿಸಿದೆವು. ಅದೇ ಪ್ರಕಾರ ಮೊದಲನೆಯ ಸತ್ಯಾಗ್ರಹದಲ್ಲಿ ಕರ್ನಾಟಕದ ಪರವಾಗಿ ನಾನು, ಮಹಾರಾಷ್ಟ್ರದ ಪರವಾಗಿ ಗೋವಿಂದರಾವ್ ನಾನಲ್ ಮತ್ತು ಶ್ರೀನಿವಾಸರಾವ್ ಬೋರಿಕರ್, ಆಂಧ್ರದ ಪರವಾಗಿ ರವಿ ನಾರಾಯಣ ರೆಡ್ಡಿ, ಹೈದರಾಬಾದ್ ಪಟ್ಟಣದ ಪರವಾಗಿ ರಾಮಕೃಷ್ಣ ದೂತರು ಹೀಗೆ ನಾವೆಲ್ಲರೂ ಸೇರಿ ಸತ್ಯಾಗ್ರಹವನ್ನು ಸ್ಟೇಟ್ ಕಾಂಗ್ರೆಸ್ಸಿನ ಉದ್ದೇಶವನ್ನು ಘೋಷಿಸಿದೆವು. ಪೋಲಿಸರು ನಮ್ಮನ್ನು ಬಂಧಿಸಿದರು.

ಎರಡನೆಯ ಸತ್ಯಾಗ್ರಹವನ್ನು ಸ್ವಾಮಿ ರಮಾನಂದ ತೀರ್ಥರು ಪ್ರಾರಂಭಿಸಿದರು. ಇದೇ ಮೇರೆಗೆ 18 ತಂಡಗಳಲ್ಲಿ ಸತ್ಯಾಗ್ರಹವನ್ನು ಮುಂದುವರಿಸಿದರು.

ಈ ಅವಧಿಯಲ್ಲಿ ಆರ್ಯ ಸಮಾಜದವರು ಹಾಗು ಹಿಂದು ಮಹಾಸಭೆಯವರು ನಾಗರಿಕ ಹಕ್ಕುಗಳಿಗಾಗಿ ಸತ್ಯಾಗ್ರಹ ಆರಂಭ ಮಾಡಿದರು. ಈ ಉಭಯತರ ಸತ್ಯಾಗ್ರಹಗಳೂ ಮತ್ತು ಕಾಂಗ್ರೆಸ್ಸಿನ ಸತ್ಯಾಗ್ರಹವೂ ಜಾತೀಯವೆಂದು ಆಗಿನ ಪ್ರಧಾನ ಮಂತ್ರಿ ಸರ್ ಅಕ್ಬರ್ ಹೈದರಿ ಅವರು ಗಾಂಧೀಜಿಗೆ ಬರೆದರು. ಸ್ಟೇಟ್ ಕಾಂಗ್ರೆಸ್ಸು ಸತ್ಯಾಗ್ರಹ ಮಾಡುವುದಕ್ಕಿಂತ ಮುಂಚೆ ಗಾಂಧೀಜಿಯವರೊಡನೆ ಸಮಾಲೋಚನೆ ನಡೆಸಿ ಅವರ ಆಶೀರ್ವಾದವನ್ನು ಪಡೆದಿದ್ದಿತು. ಆದರೆ ಸರ್ ಅಕ್ಬರ್ ಹೈದರಿಯವರ ಪತ್ರದಿಂದ ಹಿಂದೂ ಮಹಾಸಭೆಯ ಸತ್ಯಾಗ್ರಹದ ಕಾರಣ ಹೈದರಾಬಾದ್ ಸರಕಾರಕ್ಕೆ "ಕಾಂಗ್ರೆಸ್ಸಿನ ಸತ್ಯಾಗ್ರಹವು ಜಾತೀಯವೆಂದು ಹೇಳಲು ಒಂದು ನೆಪ ಸಿಕ್ಕಿದೆ. ಆದುದರಿಂದ ನೀವು ಈಗ ಸತ್ಯಾಗ್ರಹ ನಿಲ್ಲಿಸಿ" ಎಂದು ಗಾಂಧೀಜಿಯವರು ಆದೇಶ ಕೊಟ್ಟರು. ಮತ್ತು ಸರ್ ಅಕ್ಬರ್ ಹೈದರಿಯವರೊಡನೆ ಪತ್ರವ್ಯವಹಾರ ಮಾಡಿ ಸ್ಟೇಟ್ ಕಾಂಗ್ರೆಸ್ಸಿನ ಮೇಲಿನ ನಿರ್ಬಂಧವನ್ನು ದೂರ ಮಾಡಿಸುತ್ತೇನೆ, ಎಂದೂ ಗಾಂಧೀಜಿಯವರು ಹೇಳಿದರು. ಗಾಂಧೀಜಿ ಹಾಗೂ ಹೈದರಿಯವರಲ್ಲಿ ಪತ್ರವ್ಯವಹಾರ ಅನೇಕ ತಿಂಗಳುಗಳವರೆಗೆ ನಡೆಯಿತು. ನಂತರ ಜಿ. ರಾಮಾಚಾರಿಯವರು ಪ್ರಯತ್ನಿಸತೊಡಗಿದರು. ಇದರಿಂದ ಏನೂ

ಪ್ರಯೋಜನವಾಗಲಿಲ್ಲ. ಆಮೇಲೆ ಮಿರ್ಜಾ ಇಸ್ಮಾಯಿಲ್ ಹೈದರಾಬಾದ್ ಸ್ಟೇಟಿನ ಪ್ರಧಾನ ಮಂತ್ರಿಯಾದರು. ಆಗ ಜವಾಹರಲಾಲರ ಯತ್ನದಿಂದ ಏಪ್ರಿಲ್ 1946ರಲ್ಲಿ ಸ್ಟೇಟ್ ಕಾಂಗ್ರೆಸ್ಸಿನ ಮೇಲೆ ಹೊರಿಸಿದ ನಿಷೇಧವನ್ನು ರದ್ದುಗೊಳಿಸಲಾಯಿತು.

ಈ ಮಧ್ಯೆ ನಮ್ಮನ್ನು ಜೈಲಿನಿಂದ ಬಿಡುಗಡೆ ಮಾಡಿದರು. ನಾನು ಜೈಲಿನಿಂದ ಬಿಡುಗಡೆಯಾದ ತಕ್ಷಣವೇ ಸಾಬರಮತಿಗೆ ಗಾಂಧೀಜಿಯವರ ಸಂದೇಶವನ್ನು, ಅವರ ಆಶೀರ್ವಾದವನ್ನು ಪಡೆಯಲು ನಡೆದೆನು. ಆಗ ಸರ್ ಅಕ್ಬರ್ ಹೈದರಿಯವರು ಗಾಂಧೀಜಿಯವರಿಗೆ ಸ್ಟೇಟ್ ಕಾಂಗ್ರೆಸ್ಸಿನ ವಿರೋಧವಾಗಿ ಪತ್ರಗಳನ್ನು ಬರೆದಿದ್ದರು. ನಾನು ಗಾಂಧೀಜಿಗೆ ಎಲ್ಲ ವಿಷಯವನ್ನು ವಿವರವಾಗಿ ತಿಳಿಸಿ ಸರಕಾರದವರ ಅನ್ಯಾಯವನ್ನು ತೋರಿಸಿಕೊಟ್ಟೆನು. ನನ್ನಿಂದ ನಿಜ ವಿಷಯವನ್ನು ತಿಳಿದು ಎಚ್ಚರಿಕೆಯಿಂದ ಇರುವಂತೆ ಆದೇಶಿಸಿ ಕಳುಹಿಸಿ ಕೊಟ್ಟರು. ಸರಕಾರದವರ ಸೊಕ್ಕನ್ನು ಬಗ್ಗಿಸಲು ಈ ಸ್ಟೇಟ್ ಕಾಂಗ್ರೆಸ್ ಒಂದೇ ಸಾಕೆಂದು ನಾನು ಮನಗಂಡೆನು.

ಇದೇ ಸಮಯದಲ್ಲಿ ಇಲ್ಲಿ ಹಿಂದು-ಮುಸಲ್ಮಾನರ ದಂಗೆ ಪ್ರಾರಂಭವಾಯಿತು. ಇದರಲ್ಲಿ ಸರಕಾರದವರ ಕೈವಾಡವೂ ಇತ್ತು. ಕಾಂಗ್ರೆಸ್ಸನ್ನು ಬಗ್ಗುಬಡಿಯಬೇಕೆಂದು ಸರಕಾರ ನಿರ್ಧರಿಸಿತ್ತು. ಲೋಧಾ ಮತ್ತು ಬೇಗಂ ಬಜಾರದ ಜನತೆಯೇ ಮುಸಲ್ಮಾನರ ಅತ್ಯಾಚಾರಕ್ಕೆ ಒಳಗಾದರು. ಪ್ರಾಂತದಲ್ಲಿ ಶಾಂತತೆ ನೆಲೆಸಲು ಸರಕಾರದವರ ಸಹಾಯದಿಂದ ಒಂದು ಕಮಿಟಿಯನ್ನು ಸ್ಥಾಪಿಸಿದೆವು.

ಇಷ್ಟರಲ್ಲಿ ಕರ್ನಾಟಕದ ಗೆಳೆಯರು ಕರ್ನಾಟಕ ಪರಿಷತ್ತನ್ನು ಸೇರಿಸಲು ಪ್ರಾರಂಭ ಮಾಡಿದ್ದರು. ಅನೇಕರು ನನ್ನನ್ನು ಭೆಟ್ಟಿಯಾದರು. ಆಗ ಹಿಂದುಳಿದ ಅನೇಕ ಪ್ರದೇಶಗಳ ಜನರನ್ನು ಎಚ್ಚರಿಸಲು ಇದೊಂದು ಒಳ್ಳೆಯ ಸದವಕಾಶವೆಂದು ಬಗೆದೆನು.

ಬೀದರ್ ಪಟ್ಟಣವು ಬಹುಸಂಖ್ಯಾತ ಮುಸಲ್ಮಾನರಿಂದ ಒಳಗೊಂಡಿತ್ತು. ಕರ್ನಾಟಕ ಪರಿಷತ್ತನ್ನು ಅಲ್ಲಿ ಮಾಡಲು ನಿರ್ಧರಿಸಿದೆವು. ಅಲ್ಲಿಯ ಕನ್ನಡಿಗರು ಇದಕ್ಕೆ ಒಪ್ಪಲಿಲ್ಲ. ಆಗ ಕೀರ್ತನಕೇಸರಿ ಜಯರಾಮಾಚಾರ್ಯರ ಸಹಾಯದಿಂದ 2-3 ತಿಂಗಳ ಸತತ ಪ್ರಯತ್ನದಿಂದ ಅಲ್ಲಿಯ ಕನ್ನಡಿಗರ ಮನಸ್ಸನ್ನು ಬದಲಿಸಲಾಯಿತು. 1940ರಲ್ಲಿ ಅಧಿವೇಶನವನ್ನು ಉತ್ಸಾಹದಿಂದ ನೆರವೇರಿಸಲು ಒಪ್ಪಿಕೊಂಡರು. ಆ ಪರಿಷತ್ತಿಗೆ ನಾನೇ ಅಧ್ಯಕ್ಷನಾಗಿದ್ದೆನು. ಕಾರ್ಯಕಲಾಪಗಳನ್ನೆಲ್ಲ ಮುಗಿಸಿಕೊಂಡು ನಾವು ಹೈದರಾಬಾದಿಗೆ ಹಿಂತಿರುಗಿದೆವು. ಆದರೆ ಅಲ್ಲಿಯ ಮುಸಲ್ಮಾನರು ಹಿಂದೂ ಜನರನ್ನು ನಾಶ ಮಾಡಬೇಕೆಂಬ ಉದ್ದೇಶದಿಂದ ಅಲ್ಲಿಯ ಗಂಜನ್ನು ಸುಟ್ಟರು. ಲಕ್ಷಗಟ್ಟಲೆ ಹಣ ನಷ್ಟವಾಯಿತು. ಮುಸಲ್ಮಾನರು ಮಾಡಿದ ಈ ಅತ್ಯಾಚಾರವನ್ನು ಸರಕಾರದವರು ಮುಚ್ಚಿಡಲು ಪ್ರಯತ್ನ ಮಾಡಿದರು. ಆದರೆ ಆ ಘನಘೋರ ಘಟನೆಯನ್ನು ಮುಚ್ಚುವಂತಿರಲಿಲ್ಲ. ಅಧಿಕೃತವಾದ ವರದಿ ಮುಟ್ಟಿದಮೇಲೆ "ಲಂಕಾದಹನವಾದಮೇಲೆ ಬೀದರ್ ದಹನವಾಯಿತು!" ಎಂದು ಗಾಂಧೀಜಿಯವರು ಉದ್ಗಾರ ತೆಗೆದರು.

ಕರ್ನಾಟಕ ಪರಿಷತ್ತಿನ ನಾಲ್ಕನೆಯ ಅಧಿವೇಶನ ರಾಯಚೂರಿನಲ್ಲಿ ನಡೆಯಿತು. ಐದನೆಯ ಅಧಿವೇಶನವು 1946ರ ಮೇ 26ಕ್ಕೆ ಸೇರಿತು. ಕಕ್ಕೇರಿ ಹಣಮಂತರಾಯರು ತಮ್ಮ ಅಧ್ಯಕ್ಷಭಾಷಣದಲ್ಲಿ ಜವಾಬ್ದಾರೀ ಸರಕಾರದ ಬಗೆಗೆ ಒತ್ತಾಯಿಸಿದರು.

ಹೈದರಾಬಾದಿನ ಜನರಲ್ಲಿ ಕಾಂಗ್ರೆಸ್ ಮೇಲಿನ ನಿರ್ಬಂಧವು ದೂರವಾದ ಕೂಡಲೇ ನವಚೈತನ್ಯವು ಉಂಟಾಯಿತು. ಮೂರು ಪ್ರಾಂತಗಳಲ್ಲಿ ಸಂಚರಿಸಿ ಸ್ಟೇಟ್ ಕಾಂಗ್ರೆಸ್ಸಿನ ತತ್ವಗಳನ್ನು ಪ್ರಚಾರ ಮಾಡಿದರು. ಸ್ಟೇಟ್ ಕಾಂಗ್ರೆಸ್ಸಿನ ಪ್ರತಿನಿಧಿಗಳು ಸ್ವಾಮೀ ರಮಾನಂದ ತೀರ್ಥರನ್ನೇ ಪ್ರಥಮ ಅಧಿವೇಶನದ ಅಧ್ಯಕ್ಷರೆಂದು ಆರಿಸಿದರು.

1947ರ ಜೂನ್ 16ನೆಯ ದಿನ ಹೈದರಾಬಾದಿನಲ್ಲಿ ಸ್ಟೇಟ್ ಕಾಂಗ್ರೆಸ್ಸಿನ ಮೊದಲ ಅಧಿವೇಶನವು ಸೇರಿತು. ಬ್ರಿಟಿಷ್ ಹಿಂದೂಸ್ಥಾನದ ಆಂಧ್ರ, ಮಹಾರಾಷ್ಟ್ರ, ಕರ್ನಾಟಕಗಳ ಮುಖಂಡರು ಆಗಮಿಸಿದ್ದರು. ಎರಡು ಲಕ್ಷಕ್ಕಿಂತ ಹೆಚ್ಚಿನ ಪ್ರೇಕ್ಷಕರನ್ನು ಮತ್ತು ಪ್ರತಿನಿಧಿಗಳನ್ನು ಸಂಬೋಧಿಸಿ ಸ್ವಾಮೀ ರಮಾನಂದ ತೀರ್ಥರು ತಮ್ಮ ಅಧ್ಯಕ್ಷಭಾಷಣವನ್ನು ಮಾಡಿದರು. ಆಗ ಹಿಂದೀ ಒಕ್ಕೂಟದಿಂದ ಬೇರ್ಪಡಿಸುವ ಯಾವುದೇ ಪ್ರಯತ್ನವನ್ನು ಎದುರಿಸಬೇಕೆಂಬ ಮಹತ್ವದ ನಿರ್ಣಯವಾಯಿತು.

ಇಷ್ಟರಲ್ಲಿ ನಿಜಾಮ ಸರಕಾರವು ಸಂಸ್ಥಾನ ಕಾಂಗ್ರೆಸ್ಸನ್ನು ಬಗ್ಗು ಬಡಿಯಬೇಕೆಂದು ಪ್ರಮುಖ ಕಾರ್ಯಕರ್ತರನ್ನು ಬಂಧಿಸಿದ್ದಲ್ಲದೆ ಸಾರ್ವಜನಿಕ ಸಭೆಗಳ ಮೇಲೆ ನಿರ್ಬಂಧವನ್ನು ಹಾಕಿತು. ಮತ್ತು ಹೈದರಾಬಾದ್ ಸಂಸ್ಥಾನದಲ್ಲಿ ಯಾವ ಮುದ್ರಣಾಲಯದಲ್ಲಿಯೂ ಸ್ಟೇಟ್ ಕಾಂಗ್ರೆಸ್ಸಿನ ಗೊತ್ತುವಳಿಗಳನ್ನು ಮುದ್ರಿಸಬಾರದೆಂದು ಪ್ರತಿಬಂಧ ಮಾಡಿತ್ತು. ಇತ್ತೆಹಾದುಲ್ ಮುಸಲ್ಮಾನರ ಚಟುವಟಿಕೆಗಳು ಉಗ್ರಸ್ವರೂಪ ತಾಳಿದವು. ಸರಕಾರವು ಈ ಬಗ್ಗೆ ಕಣ್ಣು ಮುಚ್ಚಿತು. ಈ ಪರಿಸ್ಥಿತಿಯನ್ನು ಅರಿತು ಕಾಂಗ್ರೆಸ್ಸಿನ ಕಾರ್ಯಕಾರೀ ಸಮಿತಿಯು ತನ್ನ ಮುಂದಿನ ಕಾರ್ಯಕ್ರಮಗಳನ್ನು ಆಲೋಚಿಸಿ ಸೊಲ್ಲಾಪುರದಲ್ಲಿ ಜೂನ್ 29, 30 ಮತ್ತು ಜುಲೈ 1ಕ್ಕೆ ಸಭೆ ಸೇರಿ ಸರ್ವಸಂಕಟ ಮತ್ತು ವಿಘ್ನಗಳಲ್ಲಿಯೂ ತನ್ನ ಕಾರ್ಯವನ್ನು ಎಡೆಗುಂದದೆ ಮುಂದೆ ಸಾಗಿಸಬೇಕೆಂದು ಪಣ ತೊಟ್ಟಿತು. ಸಂಸ್ಥಾನದ ಮೂಲೆಮೂಲೆಗಳಲ್ಲಿ ಅನೇಕ ಸಾರ್ವಜನಿಕ ಮತ್ತು ಗ್ರೂಪ್ ಮೀಟಿಂಗ್‌ಗಳು ಕೂಡಿಸಲ್ಪಟ್ಟವು. ಮೊದಲೇ ನಿರ್ಣಯವಾದ ಮೇರೆಗೆ ಘಟನಾ ಸಮಿತಿಗೆ ಜನತೆಯಿಂದ ಪತ್ರ ಮತ್ತು ತಂತಿಗಳು ಬಂದವು. ಜನರು ಈ ಚಳವಳಿಗೆ ಒಳ್ಳೆಯ ಉತ್ಸಾಹದಿಂದ ಸಹಾನುಭೂತಿಯನ್ನು ತೋರಿಸಿದರು. ವರಂಗಲ್, ನಿಜಾಮಾಬಾದ್, ನಾಂದೇಡ್ ಈ ಜಿಲ್ಲೆಗಳನ್ನು ಬಿಟ್ಟು ಸಂಸ್ಥಾನದ ಮಿಕ್ಕ ಎಲ್ಲ ಸ್ಥಳಗಳಲ್ಲಿ ಸಾರ್ವಜನಿಕ ಸಭೆಗಳು ಸಾಗಿದವು. ಜುಲೈ 17ನೆಯ ದಿನ ಸ್ಟೇಟ್ ಕಾಂಗ್ರೆಸ್ಸು ಅಸಹಕಾರವನ್ನು ಸಾರಿತು. ಪಟೇಲರು, ಪಟವಾರಿಗಳು, ಪಂಚರು ರಾಜೀನಾಮೆ ಕೊಟ್ಟರು.

ಈ ಮಧ್ಯೆ ನನ್ನ ಸನದುಗಳನ್ನು ಸರಕಾರದವರು ತೆಗೆದುಕೊಂಡಿದ್ದನ್ನು ತಿರುಗಿ ಕೊಟ್ಟರು. ಆದರೆ ಒಮ್ಮೆ ರಾಜಕೀಯ ರಂಗದಲ್ಲಿ ಧುಮುಕಿದ ನಾನು ಮುಂದೆ ಇಟ್ಟ

ಹೆಜ್ಜೆಯನ್ನು ಹಿಂದಕ್ಕೆ ತೆಗೆದುಕೊಳ್ಳಲು ಇಷ್ಟಪಡಲಿಲ್ಲ. ವಕಾಲತ್ತು ಬಿಟ್ಟುಬಿಟ್ಟೆನು. ತನುಮನಧನವನ್ನು ರಾಜಕೀಯ ರಂಗಕ್ಕೆ ಅರ್ಪಿಸಿದೆನು.

ಜುಲೈ ತಿಂಗಳ ಕೊನೆಯಲ್ಲಿ ಸ್ಟೇಟ್ ಕಾಂಗ್ರೆಸ್ಸಿನ ಕಾರ್ಯಕಾರೀ ಸಮಿತಿಯು ಹೈದರಾಬಾದಿನಲ್ಲಿ ಸೇರಿ ಆಗಸ್ಟ್ 7ರಂದು 'ಹಿಂದೀ ಒಕ್ಕೂಟ ದಿನ' ಎಂದು ಆಚರಿಸಲು ನಿರ್ಧರಿಸಿದೆವು. ಸರಕಾರದ ನಿರ್ಬಂಧವನ್ನು ಮುರಿಯಲು ನಿಯಮಭಂಗಮಾಡಿ ಪ್ರಭಾತ್‌ಫೇರಿ ಹಾಗೂ ಮೆರವಣಿಗೆಗಳನ್ನು ತೆಗೆಯಲು ಹರತಾಳ ಮತ್ತು ಸಂಪು ಗಳನ್ನು ಹೂಡಲು ಜನತೆಗೆ ಆದೇಶ ಕೊಟ್ಟೆವು. ಈ ದಿನವು ಸಂಸ್ಥಾನದ 345 ಕೇಂದ್ರಗಳಲ್ಲಿ ಆಚರಿಸಲ್ಪಟ್ಟಿತು. ಆಗಸ್ಟ್ 7ನೆಯ ದಿನಾಂಕಕ್ಕೆ ಸೆರೆಹಿಡಿಯಲ್ಪಟ್ಟವರ ಸಂಖ್ಯೆಯು 180ಕ್ಕೆ ಏರಿತು. ಖಮ್ಮಮ್, ಔರಂಗಾಬಾದ್, ಮಂಥಣಿ ಈ ಸ್ಥಳಗಳಲ್ಲಿ ಪೋಲಿಸರಿಂದ ಲಾಠೀಪ್ರಹಾರ ನಡೆಯಿತು. ಆಗ ನಾನು ಕೊಪ್ಪಳದಲ್ಲಿದ್ದೆನು. ಬೀದರ್‌ನಲ್ಲಿ ಹರತಾಳವನ್ನು ಮಾಡಲು ಹೇಳಿ ಹೈದರಾಬಾದಿಗೆ ಬಂದೆನು. ಆದರೆ ನಾನೇ ಮುಖ್ಯಪಾತ್ರ ವಹಿಸುತ್ತಿರುವೆನೆಂದು ಸರಕಾರ ನನ್ನ ಮೇಲೆ 'ಅರೆಸ್ಟ್ ವಾರಂಟ್'ನ್ನು ಹೊರಡಿಸಿತು. ನನಗೆ ಈ ವಿಷಯ ಗೊತ್ತಿರಲಿಲ್ಲ. ಅದೇ ಸಮಯಕ್ಕೆ ಇಲ್ಲಿಯ ಪೋಲಿಸರನ್ನು ನನ್ನ ಸಲುವಾಗಿ ಬೀದರಿಗೆ ಕಳುಹಿಸಿದ್ದರು. ಪೋಲಿಸರಿದ್ದ ಮತ್ತು ನನ್ನ ರೈಲುಗಾಡಿಗಳು ಎದುರುಬದುರಾಗಿ ಹಾದುಹೋದವು. ರೈಲ್ವೆ ನಿಲ್ದಾಣಕ್ಕೆ ಕಾಶೀನಾಥರಾವ್ ವೈದ್ಯರು ಬಂದಿದ್ದರು. 'ಅರೆಸ್ಟ್ ವಾರಂಟ್'ನ ವಿಷಯ ತಿಳಿಸಿ ನನ್ನನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ನನ್ನ ಮನೆಯ ಸುತ್ತಲೂ ಪೋಲಿಸಿನವರ ಪಹರೆ ಇತ್ತು. ಆ ದಿನ ರಾತ್ರಿಯೇ ನನ್ನನ್ನು ಗಡೀಪಾರು ಮಾಡಲು ಆದೇಶಿಸಿದ್ದರು. ಅದೇ ಪ್ರಕಾರ ನನ್ನ ಅಜ್ಞಾತವಾಸವನ್ನು ಗದುಗಿನಲ್ಲಿ ಕಳೆದೆನು. ಅಲ್ಲಿ ನಾನು ವ್ಯರ್ಥ ಕಾಲಹರಣ ಮಾಡದೆ ರಜಾಕಾರರನ್ನು ಎದುರಿಸಲು ಉಪಾಯಗಳನ್ನು ಹುಡುಕಿದೆನು. ಈ ಕೆಲಸವನ್ನು ಹೈದರಾಬಾದಿನಲ್ಲಿದ್ದು ನಡೆಸಲು ಸಾಧ್ಯವಿರಲಿಲ್ಲ.

ನಾಗಪುರದಲ್ಲಿ ಮಹರಾಷ್ಟ್ರದ ಶಿಬಿರ, ಬೆಜವಾಡಾದಲ್ಲಿ ಆಂಧ್ರದ ಶಿಬಿರ ಸ್ಥಾಪಿತ ವಾದಂತೆ ಕರ್ನಾಟಕದ ಮುಂದಾಳಾದ ನನ್ನ ನೇತೃತ್ವದಲ್ಲಿ ಕರ್ನಾಟಕದ ಶಿಬಿರವನ್ನು ಸಂಘಟಿಸಲು ನಾನು ನೆರವಿಗೆ ನಿಂತೆನು. ಬುರ್ಲಿ ಬಿಂದುಮಾಧವರು ನನಗೆ ಬಹಳ ಸಹಾಯ ಮಾಡಿದರು. ಸುಮಾರು 10 ತಿಂಗಳ ತನಕ ಅನೇಕ ಕಾರ್ಯಕರ್ತರು ಈ ಶಿಬಿರದಲ್ಲಿ ತನುಮನಧನದಿಂದ ಸೇವೆಸಲ್ಲಿಸಿದರು. ಗದುಗಿನ ನನ್ನ ಮನೆಯು ಹೈದರಾ ಬಾದ್ ಕರ್ನಾಟಕದ ಕೇಂದ್ರ ಶಿಬಿರವೇ ಆಗಿತ್ತೆಂದು ಹೇಳಬಹುದು. ಹೈದರಾಬಾದಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕನ್ನಡ ಜಿಲ್ಲೆಗಳ ಪರವಾಗಿ ಚಳವಳಿಯನ್ನು ಯಶಸ್ವಿಯಾಗಿ ನಡೆಸಲು ನೇತೃತ್ವ ವಹಿಸಿದ್ದು ನಾನೇ ಎಂದು ಹೇಳಬಹುದು. "ಹಿಂದುಸ್ಥಾನದ ಸ್ವಾತಂತ್ರ್ಯ ಸಂಗ್ರಾಮದ ಕೊನೆಯ ಯುದ್ಧ ಹೈದರಾಬಾದಿನಲ್ಲಿ ನಡೆದಿದೆ" ಎಂದು

ಮಹಾತ್ಮ ಗಾಂಧೀಜಿಯವರು ಉದ್ಗಾರ ತೆಗೆದದ್ದು ವಿಶ್ವಸನೀಯ ಸಂಗತಿಯಾಗಿದೆ.

ರಜಾಕಾರರ ದುಷ್ಕೃತ್ಯಗಳು ನಡೆಯದಂತೆ ನೋಡಿಕೊಳ್ಳಲು ಹಲವಾರು ಶಿಬಿರಗಳನ್ನು ಸ್ಥಾಪಿಸಿದೆವು. ಪ್ರತಿಯೊಂದು ಶಿಬಿರವನ್ನು ವ್ಯವಸ್ಥಿತ ರೀತಿಯಿಂದ ನಡೆಸಿಕೊಂಡು ಹೋಗುವ ಜವಾಬ್ದಾರಿಯನ್ನು ಆಯಾ ಶಿಬಿರಾಧಿಪತಿಗಳು ಮತ್ತು ಅದಕ್ಕಾಗಿ ರಚನೆಗೊಂಡ ಕಾರ್ಯಸಮಿತಿಗಳಿಗೆ ವಹಿಸಿದ್ದೆವು. ಈ ಎಲ್ಲ ಶಿಬಿರಗಳ ಮೇಲ್ವಿಚಾರಣೆಯ ಭಾರ ನನ್ನದಾಗಿತ್ತು.

ಪ್ರತಿಯೊಂದು ಶಿಬಿರದಲ್ಲಿಯ ಸೈನಿಕ ತರಬೇತಿ ಹೊಂದಿದ ಯುವಕರ ತಂಡ ಒಂದು ಇರುತ್ತಿತ್ತು. ರಜಾಕಾರರು ಬಂದು ದಾಳಿ ಮಾಡಿದರೆ ಈ ಯುವಕರು ಅವರನ್ನು ಹೊಡೆದೋಡಿಸುತ್ತಿದ್ದರು. ಕೆಲವು ಬಾರಿ ಅವರನ್ನು ಅಟ್ಟಿಸಿಕೊಂಡು ಹೋಗಿ ಅವರು ಶೇಖರಿಸಿದ್ದ ಮದ್ದುಗುಂಡುಗಳನ್ನೂ ಬಂದೂಕುಗಳನ್ನೂ ಕಿತ್ತುಕೊಂಡು ಬರುತ್ತಿದ್ದರು. ಹೀಗಾಗಿ ಅನೇಕ ಸಲ ಶಿಬಿರದ ಯುವಕರಿಗೂ ಮತ್ತು ರಜಾಕಾರರಿಗೂ ಸಣ್ಣಪುಟ್ಟ ಯುದ್ಧಗಳಾಗುತ್ತಿದ್ದುವು. ಅನೇಕ ಸಲ ನನ್ನ ಕಣ್ಣೆದುರೇ ರಜಾಕಾರರ ಗುಂಪನ್ನು ಚದುರಿಸಿ ಕೈಗೆ ಸಿಕ್ಕಿದವರನ್ನು ಕೊಂದಿದ್ದರು. ಶಿಬಿರಗಳಿಗೆ ಸ್ವಯಂಸೇವಕರನ್ನು ಒದಗಿಸುವುದು, ಇವರಿಗೆ ಮದ್ದುಗುಂಡುಗಳು, ಕೈಬಾಂಬುಗಳು ಅಲ್ಲದೇ ಬಂದೂಕುಗಳ ಸರಬರಾಜನ್ನು ನಾವು ಮಾಡಬೇಕಾಗುತ್ತಿತ್ತು.

ನಿಜಾಮರ ಸಹಾಯದಿಂದ ರಜಾಕಾರರಿಗೆ ಅರಬ್ ಸೈನಿಕರ ಬೆಂಬಲ ಮತ್ತು ಹಣ, ಮದ್ದುಗುಂಡುಗಳು ಕೂಡ ದೊರಕುತ್ತಿದ್ದುವು. ಆದರೆ ನಮ್ಮ ಶಿಬಿರಗಳಿಗೆ ಯಾವ ರೀತಿಯ ಸಹಾಯವೂ ಸಿಗುತ್ತಿರಲಿಲ್ಲ. ಸಾರ್ವಜನಿಕರಿಂದ ಹಣ ಸಂಗ್ರಹಿಸಿ ಮದ್ದುಗುಂಡುಗಳನ್ನು ಒದಗಿಸುವುದರ ಜೊತೆಗೆ ಆಹಾರದ ಸರಬರಾಜನ್ನು ಮಾಡಬೇಕಾಗುತ್ತಿತ್ತು. ನಮಗೆ ಅಂದಿನ ಮುಂಬಯಿ ಪ್ರಾಂತದ ಮುಖ್ಯಮಂತ್ರಿಗಳಾಗಿದ್ದ ಬಿ. ಜಿ. ಖೇರರು ಅಪಾರ ಸಹಾಯವನ್ನು ಸಲ್ಲಿಸಿದರು. ಅದರಂತೆಯೇ ಮದ್ರಾಸು, ಮೈಸೂರಿನವರೂ ಸಹಾಯ ಮಾಡಿದರು.

ಇಂತಹ ಪ್ರಸಂಗದಲ್ಲಿಯೇ ನನಗೆ ನಿಜಾಂ ಸರಕಾರದವರು 'ಕಂಡ ಕಡೆ ಗುಂಡು ಹಾರಿಸಿ' ಎಂದು ಆಜ್ಞೆ ಮಾಡಿದ್ದರು. ಆದರೆ ನಾನು ಸಾವಿಗೆ ಅಂಜಲಿಲ್ಲ. ಅಲ್ಲಿದ್ದ ಶಿಬಿರದ ಜನರಿಗೆ ಪ್ರೋತ್ಸಾಹ ನೀಡುತ್ತ ಇದ್ದೆನು.

ರಜಾಕಾರರ ಹಾವಳಿ ಹೈದರಾಬಾದಿನಲ್ಲಿ ಅತಿಯಾಯಿತು. ಭಾರತ ಸರಕಾರವು ನಿಜಾಮರ ವಿರುದ್ಧ ಆರ್ಥಿಕ ದಿಗ್ಬಂಧನ ಮತ್ತು ಪೋಲಿಸ್ ಕ್ರಮವನ್ನು ಕೈಕೊಂಡು ನಿಜಾಮ ಸರಕಾರವು ಕುಸಿದು ಬೀಳುವಂತೆ ಮಾಡಿತು. ದಿನಾಂಕ 13-9-1948 ರಂದು ಹೈದರಾಬಾದಿನ ವಿರುದ್ಧ ಪೋಲಿಸ್ ಕ್ರಮವನ್ನು ತೆಗೆದುಕೊಂಡು ವಿಜಯವನ್ನು ಸಂಪಾದಿಸಿತು.

(ಮುಂದೆ 1952ರ ವರೆಗೆ ಡಿ|| ದೇಸಾಯಿ ಅವರು ಹೈದರಾಬಾದ್ ಕಾಂಗ್ರೆಸ್ಸಿನ ಅಧ್ಯಕ್ಷರೂ ಆಗಿದ್ದು 1954 ರಿಂದ 1960ರ ವರೆಗೆ ರಾಜ್ಯಸಭೆಯ ಸದಸ್ಯರೂ ಆಗಿದ್ದರು. 20-3-1975ರಂದು ಅವರು ಚಿತ್ರದುರ್ಗದಲ್ಲಿ ದಿವಂಗತರಾದರು. ಹೈದರಾಬಾದ್ ಭಾಗದ ಸ್ಮೃತಿಗಳನ್ನು ಸಂಗ್ರಹಿಸಲು ಅವರು ನೀಡಿದ ನೆರವನ್ನು ಹೃತ್ಪೂರ್ವಕ ಸ್ಮರಿಸುತ್ತೇನೆ. —ಸಂ||)

ಹೈ.ರಾ. 3

## ಡಿ|| ಸ್ವಾಮಿ ರಮಾನಂದ ತೀರ್ಥ
(1903–1972)

ಹೈದರಾಬಾದ್ ಸಂಸ್ಥಾನದಲ್ಲಿ ಕಾಂಗ್ರೆಸ್ ಚಳವಳಿಯ ಕಾಲಕ್ಕೆ ಸಂಸ್ಥಾನದಲ್ಲಿ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಕನ್ನಡಿಗ ರಮಾನಂದ ತೀರ್ಥರು ಸಂನ್ಯಾಸಿಯಾಗಿದ್ದರೂ ತಮ್ಮ ಸಾತ್ವಿಕ ವೃತ್ತಿಗೆ ವಿರುದ್ಧ ರಾಜಕೀಯಕ್ಕಿಳಿದವರು.

ಗುಲ್ಬರ್ಗ ಜಿಲ್ಲೆಯ ಚಿನ್ಮಲಿ ಗ್ರಾಮದಲ್ಲಿ ಜನಿಸಿದ (3-11-1903) ಸ್ವಾಮೀಜಿಯವರ ಪೂರ್ವಾಶ್ರಮದ ಹೆಸರು ವೆಂಕಟೇಶ ಭಗವಾನರಾವ್ ಖೇಡ್ಗೀಕರ್. ತಮ್ಮ ಪ್ರಾಥಮಿಕ ಶಿಕ್ಷಣವನ್ನು ಕಲ್ಯಾಣದಲ್ಲಿ ಮುಗಿಸಿ ಸೊಲ್ಲಾಪುರದಲ್ಲಿ ಹೈಸ್ಕೂಲು ಶಿಕ್ಷಣ ಪಡೆಯುತ್ತಿದ್ದಾಗಲೇ ಬಾಲಕ ವೆಂಕಟೇಶ ರಾಷ್ಟ್ರೀಯವಾದಿಯಾಗಿದ್ದ. ಸರಕಾರೀ ಶಾಲೆಯಲ್ಲಿ ಪಂಚಮ ಜಾರ್ಜರ ಸಿಂಹಾಸನಾರೋಹಣಕಾಲದಲ್ಲಿ ನೀಡಿದ್ದ ಯೂನಿಯನ್ ಜಾಕ್‌ನ ಪ್ರತೀಕವನ್ನು ಎಸೆದು ಸಿಹಿತಿಂಡಿಯನ್ನು ಮಾತ್ರ ಇಟ್ಟುಕೊಂಡ. ಖಾದಿ ಟೋಪಿ ಧರಿಸಬಾರದೆಂಬ ಮುಖ್ಯೋಪಾಧ್ಯಾಯರ ಆಜ್ಞೆಯ ವಿರುದ್ಧ 200 ವಿದ್ಯಾರ್ಥಿಗಳು ಟೋಪಿ ಧರಿಸಿ ಬರುವಂತೆ ಮಾಡಿ ಛಡಿಯೇಟು ತಿಂದ. ಲೋಕಮಾನ್ಯ ಟಿಳಕರು ಸೊಲ್ಲಾಪುರಕ್ಕೆ ಬಂದಾಗ ಮುಖ್ಯೋಪಾಧ್ಯಾಯರ ಆಜ್ಞೆ ಮೀರಿ ಸಾರ್ವಜನಿಕ ಸಭೆಗೆ ಹೋಗಿ ಮುಂದೆ ಮತ್ತೆ ಶಿಕ್ಷೆಗೊಳಗಾದ. ಟಿಳಕರು ದಿವಂಗತರಾದಾಗ ಆ ದಿನವೇ ತಾನು ಜೀವನಾದ್ಯಂತ ಬ್ರಹ್ಮಚಾರಿಯಾಗಿ ಉಳಿದು ದೇಶಸೇವೆಗಾಗಿ ತನ್ನ ಜೀವನವನ್ನು ಮುಡಿಪಿಡುವುದಾಗಿ ಪ್ರತಿಜ್ಞೆ ತೊಟ್ಟ.

ಶಿಕ್ಷಣ ತ್ಯಜಿಸಿದನಂತರ ಅನೇಕ ತಿಂಗಳು ಹಳ್ಳಿಗಳಲ್ಲಿ ಹೋಗಿ ಅಸಹಕಾರದ ಪ್ರಚಾರ ಕೈಗೊಂಡ ಅವರು ಮುಂದೆ 1921ರ ಅಮಳನೇರದ ರಾಷ್ಟ್ರೀಯ ಕಾಲೇಜು ಸೇರಿ ಅನಂತರ ಪುಣೆ ಟಿಳಕ ವಿದ್ಯಾಪೀಠದ ಬಿ.ಎ. ಡಿಗ್ರಿಯನ್ನು ಸರ್ವಪ್ರಥಮರಾಗಿ ಪಡೆದರಲ್ಲದೆ ಮುಂದೆ 'ಜನತಂತ್ರದ ವಿಕಾಸ' ಎಂಬ ವಿಷಯದ ಬಗ್ಗೆ ಪ್ರೌಢ ಪ್ರಬಂಧ ಬರೆದು ಎಂ.ಎ. ಡಿಗ್ರಿ ಪಡೆದರು. 1927ರಲ್ಲಿ ಸೊಲ್ಲಾಪುರದಲ್ಲಿ ಕಾರ್ಮಿಕ ರಂಗದಲ್ಲಿ ದುಡಿದರು.

ಅನಂತರ ಉಸ್ಮಾನಾಬಾದ್ ಜಿಲ್ಲೆಯ ಹಿಪ್ಪರಗಾದಲ್ಲಿ ರಾಷ್ಟ್ರೀಯ ಶಾಲೆಯೊಂದರ ಮುಖ್ಯೋಪಾಧ್ಯಾಯರಾದರು. ಇದಕ್ಕೂ ಮೊದಲು ಸೊಲ್ಲಾಪುರದಲ್ಲಿ ಕಾರ್ಮಿಕ ಚಳವಳಿಯಲ್ಲಿ ಅವರು ಒಮ್ಮೆ ಬಂಧಿತರಾಗಿ ಶಿಕ್ಷೆಗೂ ಒಳಗಾಗಿದ್ದರು. ಆಗ ಅವರು ಎಸ್. ಎಂ. ಜೋಶಿಯವರ ಜೊತೆಗಾರರಾಗಿ ಕೆಲಸ ಮಾಡುತ್ತಿದ್ದರು.

ಹಿಪ್ಪರಗಾದಲ್ಲಿ ಇದ್ದ ವಿದ್ಯಾರ್ಥಿಗಳಲ್ಲಿ ಅನೇಕರು ಮುಂದೆ ಹೈದರಾಬಾದ್ ರಾಷ್ಟ್ರೀಯ ಚಳವಳಿಯಲ್ಲಿ ಅಗ್ರಗಣ್ಯರಾದರೆಂದು ಬೇರೆ ಹೇಳಬೇಕಾಗಿಲ್ಲ. ಅಲ್ಲಿ ಆರು ವರ್ಷ ಈ ಶಾಲೆ ನಡೆಸಿದರು. ಇದೇ ಕಾಲಕ್ಕೆ, ಎಂದರೆ 1931ರಲ್ಲಿ, ಅವರು ಸ್ವಾಮಿ ರಾಮತೀರ್ಥರ ಶಿಷ್ಯರಾದ ಸ್ವಾಮಿ ನಾರಾಯಣ ಎಂಬವರ ಕೈಯಿಂದ ಸನ್ಯಾಸದೀಕ್ಷೆ ತೆಗೆದುಕೊಂಡು 'ರಮಾನಂದ ತೀರ್ಥ' ಎಂಬ ಅಭಿಧಾನವನ್ನು ಪಡೆದರು.

1937ರಲ್ಲಿ ಮೊಮಿನಾಬಾದ್‌ನ ಒಂದು ಹೈಸ್ಕೂಲಿನ ಪ್ರಮುಖರಾಗಿ ಬಂದ ಅವರು ಆಗಲೇ ಮತ್ತೆ ಸ್ವಾತಂತ್ರ್ಯ ಚಳವಳಿಯಲ್ಲಿ ಪದಾರ್ಪಣ ಮಾಡಿದರು. ಆಗ ಹೈದರಾಬಾದ್ ಸಂಸ್ಥಾನದ ಸ್ಥಿತಿ ಇನ್ನೆಲ್ಲ ಸಂಸ್ಥಾನಗಳಿಗಿಂತ ವಿಚಿತ್ರ. ಗುಲಾಮಗಿರಿಯ ಜೊತೆ ಜಾತೀಯ ಸಮಸ್ಯೆಯೂ ಅಲ್ಲಿ ಸೇರಿಕೊಂಡಿತ್ತು. ಯಾವುದೇ ಶೈಕ್ಷಣಿಕ, ಧಾರ್ಮಿಕ, ಸಾಹಿತ್ಯಿಕ ಚಟುವಟಿಕೆಯನ್ನೂ ರಾಜದ್ರೋಹವೆಂದು ಹತ್ತಿಕ್ಕಲಾಗುತ್ತಿತ್ತು. ಸ್ವಾಮೀಜಿಯವರ ಶಬ್ದಗಳಲ್ಲೇ ಹೇಳುವುದಾದರೆ, "ಮುಸಲ್ಮಾನನು ಸ್ವಾಮಿ, ಹಿಂದು ಗುಲಾಮ. ಸಾಮಾಜಿಕ ಜೀವನದಲ್ಲೂ ಇದೇ ಬಣ್ಣ; ಹಿಂದುಗಳನ್ನು ಸರ್ವರಂಗಗಳಲ್ಲಿ ಹತ್ತಿಕ್ಕಲಾಗುತ್ತಿತ್ತು .. ಜನರ ಧೈರ್ಯಸ್ಥೈರ್ಯ ತೀರ ಕೆಳಮಟ್ಟ ಮುಟ್ಟಿತ್ತು. ಆದರೆ ಈ ದಬ್ಬಾಳಿಕೆ ಎಷ್ಟು ಕಾಲ ನಡೆದೀತು?" ಬ್ರಿಟಿಷರಾದರೋ ಈ ಜಾತೀಯ ಭಾವನೆಯ ಲಾಭ ಪಡೆಯಲು ಯತ್ನಿಸುತ್ತಿದ್ದರು. ಆದರೆ ರಾಷ್ಟ್ರೀಯ ಭಾವನೆಗಳನ್ನು ಈ ಧಾರ್ಮಿಕ ಭಾವನೆಗಳಿಗೆ ಅತೀತವಾಗಿ ಬೆಳೆಸುವ ಕಾರ್ಯ ಆಗಬೇಕಿತ್ತು. ಹೀಗಾಗಿ ಜಾತೀಯ ಆಧಾರದ ಮೇಲೆ ಆಡಳಿತದಲ್ಲಿ ಪ್ರಾತಿನಿಧ್ಯ ಅಧಿಕಾರಗಳನ್ನು ಕೇಳುವ ಬದಲು ಜವಾಬ್ದಾರಿ ಸರಕಾರದ ಬೇಡಿಕೆ ಮುಂದಿಟ್ಟು ಜನರನ್ನು ಸಂಘಟಿಸಲು ಸ್ವಾಮೀಜಿ ನಿರ್ಧರಿಸಿದರು.

ಮೊಮಿನಾಬಾದ್‌ನಲ್ಲಿ ಇದ್ದ ವಿದ್ಯಾಲಯವನ್ನು ಹೈಸ್ಕೂಲಾಗಿ ಪರಿವರ್ತಿಸಲು ಸರಕಾರ ವಿರೋಧಿಸಿತು. ವಿದ್ಯಾಲಯದಲ್ಲಿನ ಹೈಸ್ಕೂಲು ವರ್ಗಗಳನ್ನು ಮುಚ್ಚಿ ತಾನು ಹೊಸದಾಗಿ ತೆರೆಯಲಿರುವ ಹೈಸ್ಕೂಲಿಗೆ ವಿದ್ಯಾರ್ಥಿಗಳನ್ನು ಕಳುಹಿಸಬೇಕೆಂದು ಸರಕಾರ ಒತ್ತಾಯಿಸಿತು. ಆದರೆ ಸ್ವಾಮೀಜಿ ಈ ಒತ್ತಾಯಕ್ಕೆ ಕಿವಿಗೊಡದೆ, ಮೂರು ವರ್ಷ ಸತತ ಯತ್ನಿಸಿ, ಹೈಸ್ಕೂಲಿಗೆ ಮಾನ್ಯತೆಪಡೆದುಕೊಂಡರು. ಇದು ಜನತಾ ಚಳವಳಿಗೆ ದೊರೆತ ಮೊದಲ ಜಯ. "ಮೊಮಿನಾಬಾದ್‌ನ ಘಟನೆ ಮುಂದೆ ಬರಲಿರುವ ಸ್ವಾತಂತ್ರ್ಯಕ್ಕಾಗಿ ನಡೆದ ಐತಿಹಾಸಿಕ ಹೋರಾಟದ ಆರಂಭವಷ್ಟೇ ಆಗಿತ್ತು" ಎಂದು ಈ ಕುರಿತು ಅವರು ಹೇಳಿದ್ದಾರೆ.

1938ರಲ್ಲಿ ಸ್ವಾಮೀಜಿ ಮಹಾರಾಷ್ಟ್ರ ಪರಿಷತ್ತಿನ ಕಾರ್ಯದರ್ಶಿಯಾಗಿ ಆಯ್ಕೆ

ಆಗಿ ಶಾಲೆಯ ಜವಾಬ್ದಾರಿಗಳನ್ನು ತ್ಯಜಿಸಿದರು. 1938ರಲ್ಲಿ ಸ್ಥಾಪಿತವಾದ ಸಂಸ್ಥಾನಿ ಕಾಂಗ್ರೆಸ್ಸನ್ನು ನಿಜಾಮರು ಪ್ರತಿಬಂಧಿಸಿದ್ದರಿಂದ ಅಕ್ಟೋಬರ್ 1938ರಲ್ಲಿ ಈ ಪ್ರತಿಬಂಧ ವನ್ನು ಪ್ರತಿಭಟಿಸಿ ಸ್ವಾಮೀಜಿ ಬಂಧಿತರಾದರು. ಕೆಲವು ತಿಂಗಳು ಜೈಲುವಾಸ ಅನು ಭವಿಸಿದರು. ಅವರನ್ನು ಮುಂದೆ ಸಂಸ್ಥಾನೀ ಕಾಂಗ್ರೆಸ್ಸಿನ ಕಾರ್ಯದರ್ಶಿಯಾಗಿ ನೇಮಿಸ ಲಾಯಿತಲ್ಲದೆ 1942ರಲ್ಲಿ ಅವರು ಹೈದರಾಬಾದ್ ಕಾಂಗ್ರೆಸ್ಸಿನ ಅಧ್ಯಕ್ಷರೂ ಆದರು.

ಹೈದರಾಬಾದ್‌ನ ಸ್ವಾತಂತ್ರ್ಯ ಹೋರಾಟದಲ್ಲಿ ಸ್ವಾಮೀಜಿ ನೀಡಿದ ಸ್ಫೂರ್ತಿ, ತೋರಿದ ಧೈರ್ಯಸ್ಥೈರ್ಯಗಳನ್ನು ಪಿ. ವಿ. ನರಸಿಂಹರಾವ್ ಹೀಗೆ ವರ್ಣಿಸಿದ್ದಾರೆ:

"ಕರ್ನಾಟಕದಲ್ಲಿಯೇ ಹುಟ್ಟಿದವರಾಗಿದ್ದು ಆ ಭಾಗದಲ್ಲಿ ಹೆಮ್ಮೆಯ ಭಾವನೆಯನ್ನು ಹುಟ್ಟಿಸಿದರು ತಮ್ಮ ತೀವ್ರಚಟುವಟಿಕೆ ಮತ್ತು ತ್ಯಾಗಗಳಿಂದ ಅವರು ರಾಜಕೀಯ ಶೈಕ್ಷಣಿಕ ಆಧ್ಯಾತ್ಮಿಕ ತಳಹದಿಯನ್ನು ಮರಾಠವಾಡ ಪ್ರದೇಶದಲ್ಲಿ ಹಾಕಿದರು. ಇದೆಲ್ಲಕ್ಕೂ ಹೆಚ್ಚಾಗಿ, ಸ್ವಾಮೀಜಿ ತೆಲಂಗಾಣದಲ್ಲಿ ಒಂದು ಇತಿಹಾಸವನ್ನೇ ನಿರ್ಮಿಸಿದರು. ಅವರ ವ್ಯಕ್ತಿತ್ವಕ್ಕೆ ಸಮನಾದ ಬೇರೊಂದನ್ನು ಕಂಡುಹಿಡಿಯುವುದು ಕಷ್ಟ."

1939ರಲ್ಲಿ ಜೈಲಿನಿಂದ ಬಿಡುಗಡೆಯಾದನಂತರ ಕಾಂಗ್ರೆಸ್ಸಿನ ಮೇಲಿನ ಪ್ರತಿಬಂಧ ವನ್ನು ಹಿಂತೆಗೆದುಕೊಳ್ಳಬೇಕೆಂದು ವೈಯಕ್ತಿಕ ಸತ್ಯಾಗ್ರಹಕ್ಕೆ ಸಿದ್ಧರಾಗುತ್ತಿದ್ದಾಗಲೇ ಸೆಪ್ಟೆಂಬರ್ 1940ರಲ್ಲಿ ಮತ್ತೆ ಅವರ ಬಂಧನವಾಯಿತು. 1941ರ ಕೊನೆಯ ತನಕವೂ ಅವರು ಜೈಲಿನಲ್ಲಿದ್ದರು. ಮತ್ತೆ 1942ರಲ್ಲಿ ಬಂಧಿತರಾದರು. 16 ತಿಂಗಳನಂತರ ಅವರ ಬಿಡುಗಡೆ ಆಯಿತು.

ಮುಂದಿನ ಕಾಲಾವಧಿ ಹೈದರಾಬಾದಿನ ಇತಿಹಾಸದಲ್ಲೇ ತೀವ್ರ ಸ್ಥಿತ್ಯಂತರ ಗಳದಿತ್ತು: ಒಂದೆಡೆ ಜಾತೀಯವಾದಿ ರಜಾಕಾರರ ಪುಂಡಾಟಿಕೆಗಳು; ಇನ್ನೊಂದೆಡೆ ತೆಲಂಗಾಣದಲ್ಲಿ ಕಮ್ಯುನಿಸ್ಟರು ನಡೆಸಿದ ಚಳವಳಿಗಳು; ಸರಕಾರ ಬಡರೈತರ ಮೇಲೆ ನಡೆಸಿದ ದಬ್ಬಾಳಿಕೆ; ಸ್ವತಂತ್ರ ಹೈದರಾಬಾದಿನ ಕನಸು ಕಾಣುತ್ತಿರುವ ನಿಜಾಮರು; ಜಮೀನ್ದಾರರು ನಡೆಸಿದ ರೈತರ ಶೋಷಣೆ. ಈ ವಿಚಿತ್ರ ವಾತಾವರಣದಲ್ಲಿ ಸ್ವಾಮೀಜಿ ಸ್ವಾತಂತ್ರ್ಯ ಚಳವಳಿಗೆ ನೀಡಿದ ನಾಯಕತ್ವ ಗಮನಾರ್ಹ.

ಭಾರತ ಸ್ವತಂತ್ರವಾದನಂತರವೂ ಹೈದರಾಬಾದ್‌ನಲ್ಲಿ ರಜಾಕಾರರ ಪುಂಡಾಟಿಕೆ ಸಾಗಿತು. ನಿಜಾಮರು ಭಾರತ ಒಕ್ಕೂಟವನ್ನು ಸೇರಲು ನಿರಾಕರಿಸಿದರು. ರಾಷ್ಟ್ರ ಧ್ವಜವನ್ನು ಆಗಸ್ಟ್ 15ರಂದು ಹೈದರಾಬಾದ್‌ನಲ್ಲಿ ಹಾರಿಸಬೇಕೆಂದಿದ್ದ ಸ್ವಾಮೀಜಿ ಆ ದಿನವೇ ಬೆಳಗ್ಗೆ ಮೂರು ಗಂಟೆಗೆ ಡಾ|| ಮೇಲ್ಕೋಟೆಯವರ ಜೊತೆಗೆ ಬಂಧಿತರಾದರು. ಇದಕ್ಕೂ ಮೊದಲೇ ಮುಂಬಯಿಯಲ್ಲಿ ಕ್ರಿಯಾಸಮಿತಿಯೊಂದನ್ನು ನೇಮಿಸಿ ಗಡಿಗಳಿಂದ ಚಳವಳಿ ಸಾಗಿಸಲು ಸ್ವಾಮೀಜಿ ವ್ಯವಸ್ಥೆ ಮಾಡಿದ್ದರು. ಮುಂದೆ ಸಂಸ್ಥಾನಾದ್ಯಂತ ಉಗ್ರಚಳವಳಿಯಾಗಿ 21,000 ಜನ ಬಂಧಿತರಾದರು. ನಿಜಾಮರ ಸರಕಾರ ನಡುಗಿತು. ಈ ನಡುವೆ ಸ್ವಾಮೀಜಿಯ ಬಿಡುಗಡೆಯಾಯಿತು. ಆಗ ಸ್ವಾಮೀಜಿ ದೆಹಲಿಗೆ ಹೋಗಿ

ಕೇಂದ್ರ ನಾಯಕರನ್ನು ಕಂಡರು. ಕೆ. ಎಂ. ಮುನ್ಷಿಯವರನ್ನು ಏಜೆಂಟ್-ಜನರಲ್ ಆಗಿ ಹೈದರಾಬಾದಿಗೆ ಕಳುಹಿಸಲಾಯಿತು. ಸ್ವಾಮೀಜಿ ಹೈದರಾಬಾದಿಗೆ ಬಂದು ಸತ್ಯಾಗ್ರಹ ನಡೆಸಿ ಮತ್ತೆ ಬಂಧಿತರಾದರು (ಜನವರಿ 1948). ಸೆಪ್ಟೆಂಬರ್‌ನಲ್ಲಿ ಆದ 'ಪೋಲಿಸ್ ಆ್ಯಕ್ಷನ್'ನಿಂದ ಹೈದರಾಬಾದ್ ಸ್ವತಂತ್ರವಾಯಿತು.

ಸ್ವಾತಂತ್ರ್ಯಾನಂತರ ತೆಲಂಗಾಣದಲ್ಲಿನ ಕಮ್ಯುನಿಸ್ಟ್ ಪ್ರಚೋದಿತ ರಕ್ತಪಾತದ ಪರಿಸ್ಥಿತಿಯನ್ನು ಹದಕ್ಕೆ ತರಲು ಕೂಡ ಸ್ವಾಮೀಜಿ ಹಗಲಿರುಳು ಶ್ರಮಿಸಿದರು. ತೆಲಂಗಾಣದ ಉದ್ದಗಲಕ್ಕೂ ಓಡಾಡಿ, ಪುಂಡಾಟದ ಕೇಂದ್ರಗಳಾದ ಲಮಾಣಿ ತಾಂಡೆಗಳಿಗೆ ಹೋಗಿ ಜನರ ಜೊತೆ ಚರ್ಚೆ ನಡೆಸಿದರು. ಬಡವರಲ್ಲಿ ವಿಶ್ವಾಸ ಹುಟ್ಟಿಸಿದರು. ಶಾಂತಿಸಂದೇಶ ನೀಡಿದರು. ತೆಲಂಗಾಣದ ರೈತರ ಸಮಸ್ಯೆಯನ್ನು ಚೆನ್ನಾಗಿ ತಿಳಿದಿದ್ದ ಅವರು, 1952ರಲ್ಲೇ ಅತ್ಯಂತ ಪ್ರಗತಿಪರ ಭೂಮಸೂದೆಯನ್ನು ಹೈದರಾಬಾದ್‌ನಲ್ಲಿ ಜಾರಿಗೆ ತರಲು ಕಾರಣರಾದರು.

ಈ ಕಾಲದಲ್ಲಿ ಕೇಂದ್ರ ಸರಕಾರವು ತೆಲಂಗಾಣದಲ್ಲಿ ಶಾಂತಿಪ್ರಸ್ಥಾಪನೆಗೆ ಸೂಕ್ತ ವಾತಾವರಣ ಸೃಷ್ಟಿಯಾಗಲು ನೆರವಾಗುವಂತೆ, ಆಗ ಲೋಕಸಭಾಸದಸ್ಯರಾಗಿದ್ದ ಸ್ವಾಮೀಜಿ ತಮ್ಮ ಸ್ಪಷ್ಟ ವಿಚಾರಗಳಿಂದ ಯತ್ನಿಸಿದರು. ಮುಂದೆ ವಿನೋಬಾರ ಭೂದಾನವೇ ಮುಂತಾದ ರಚನಾತ್ಮಕ ಕಾರ್ಯಗಳಲ್ಲೂ ಸಹಕರಿಸಿದರು.

ಕೆಲವೊಂದು ಪಟ್ಟಭದ್ರ ಹಿತಾಸಕ್ತಿಗಳು ಹೈದರಾಬಾದ್ ರಾಜ್ಯವನ್ನು ಒಂದು ಪ್ರತ್ಯೇಕ ರಾಜ್ಯವಾಗಿ ಉಳಿಸಬೇಕೆಂದು ಯತ್ನಿಸುತ್ತಿದ್ದವು. ಪಂಡಿತ್ ನೆಹರೂರವರು ಇದೇ ದೃಷ್ಟಿಯನ್ನು ಹೊಂದಿದ್ದರು. ಆದರೆ ಸಾಮ್ರಾಜ್ಯಶಾಹಿಯ ಸಂಕೇತವಾಗಿದ್ದ ವಿಚಿತ್ರ ಜಮೀನುದಾರಿ ವಾತಾವರಣವನ್ನು ಹೊಂದಿದ್ದ ಮಾಜೀ ಸಂಸ್ಥಾನವನ್ನು ಭಾಷಾವಾರಾಗಿ ವಿಭಜಿಸಬೇಕೆಂಬ ವಿಚಾರದ ಬಗ್ಗೆ ಸ್ವಾಮೀಜಿ ಸ್ಥಿರರಾಗಿದ್ದರು. ಭಾಷಾವಾರು ಪ್ರಾಂತ ರಚನೆಗೆ ಅವರದು ತೀವ್ರ ಬೆಂಬಲವಿತ್ತು.

ಸ್ವಾಮೀಜಿ ಮುಂದೆ ರಾಜಕೀಯದಲ್ಲಿ, ಸ್ಥಾನಮಾನಗಳಲ್ಲಿ ವಿಶೇಷ ಆಸಕ್ತಿ ವಹಿಸಲಿಲ್ಲ. ಮೂಲತಃ ಸನ್ಯಾಸಿಯಾಗಿದ್ದ ಅವರು ನಿತ್ಯ ಆಧ್ಯಾತ್ಮಿಕ ಸಾಧನೆ ಮಾಡುತ್ತಿದ್ದರು. ಜೈಲಿನಲ್ಲಿದ್ದಾಗ ಇದಕ್ಕೆ ಹೆಚ್ಚಿನ ಅವಕಾಶ ಇರುತ್ತಿತ್ತು. "ದೈವೇಚ್ಛೆಯೆ ನನ್ನನ್ನು ಸ್ವಾತಂತ್ರ್ಯ ಸಂಗ್ರಾಮಕ್ಕೂ ರಾಜಕೀಯಕ್ಕೂ ಎಳೆಯಿತು. ಸೇವೆಯೊಂದೇ ಗುರಿಯಾಗಿ ಆ ರಂಗಕ್ಕೆ ನಾನು ಇಳಿದೆ" ಎಂದಿರುವ ಅವರು 1957ರ ನಂತರ ಚುನಾವಣೆಗೆ ನಿಲ್ಲಲಿಲ್ಲ. ವಿಧಾಯಕ ಕಾರ್ಯ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಮಗ್ನರಾದರು. ಆದರೆ ಅವರು ಯಾವ ಮಠವನ್ನೂ ಕಟ್ಟಲಿಲ್ಲ, ಯಾವ ಪರಂಪರೆಯನ್ನೂ ಸ್ಥಾಪಿಸಲಿಲ್ಲ. ಅಪರಿಗ್ರಹದ ಜೀವನವನ್ನು ಕೊನೆಯ ತನಕ ನಡೆಸಿದರು. ನೂರಾರು ಕಾರ್ಯಕರ್ತರಿಗೆ ನಿಃಸ್ವಾರ್ಥಸೇವೆಯ ದೀಕ್ಷೆಯನ್ನು ನೀಡಿದರು. 22-1-1972ರಂದು ಅವರು ತೀರಿಕೊಂಡರು.

(ಹೈದರಾಬಾದಿನ ವಿ. ಎಚ್. ದೇಸಾಯಿ ಅವರ ಬರಹ ಹಾಗೂ ಸ್ವಾಮೀಜಿ ಬರೆದ ಸ್ಮೃತಿಗಳ ಆಧಾರದಿಂದ ಬರೆದುದು. ಸ್ವಾಮೀಜಿಯವರು ಇಂಗ್ಲಿಷಿನಲ್ಲಿ ಬರೆದಿರುವ 'ಮೆಮಾಯರ್ಸ್ ಆಫ್ ಹೈದರಾಬಾದ್ ಫ್ರೀಡಂ ಸ್ಟ್ರಗಲ್' ಪುಸ್ತಕವನ್ನು ನಾನು ಭಾಷಾಂತರಿಸುತ್ತಿದ್ದು ಶೀಘ್ರವೇ ಅದು ಕನ್ನಡದಲ್ಲಿ ಬೆಳಕು ಕಾಣಲಿದೆ. —ಸಂ||)

| | |
|---|---|
| ಹೈ.ರಾ. 4 | ದಿ|| ಪಂಡಿತ ತಾರಾನಾಥ (1891-1942) |

"ಮಹಾತ್ಮಾ ಗಾಂಧೀಜೀ ಅವರ ವೈರಾಗ್ಯ, ಅರವಿಂದರ ಯೋಗ, ಟಾಗೂರರ ಕಲೆ ಹಾಗೂ ಲೋಕಮಾನ್ಯ ಟಿಳಕರ ಚಾಣಾಕ್ಷ ಬುದ್ಧಿ — ಇವುಗಳನ್ನು ಕಲೆಹಾಕಿ ಮಾಡಿದ ಉಂಡೆಯೇ ಪಂಡಿತ ತಾರಾನಾಥರು! ಇದು ಕರ್ನಾಟಕದ ಉಂಡೆಯಾಗಿರುವುದೇ ಇದರ ವೈಶಿಷ್ಟ್ಯ." ರಾಜಕೀಯ ಕ್ಷಿತಿಜದ ಆದ್ಯಮುಂದಾಳುಗಳಾಗಿದ್ದ ದಿ|| ಕಡಪಾ ರಾಘವೇಂದ್ರರಾಯರು ತಾರಾನಾಥರ ವಿಷಯದಲ್ಲಿ ಹೀಗೆ ಉದ್ಗಾರ ತೆಗೆದಿದ್ದರು. 1920-22ರ ದೇಶಜಾಗೃತಿ ಕಾಲದಲ್ಲಿ ದಿ|| ಕಡಪಾರಿಗೆ ತಾರಾನಾಥರ ಪರಿಚಯವಾಗಿ ಈ ಬಹುಮುಖ ಪ್ರತಿಭೆಯ ಕನ್ನಡ ಪುತ್ರನು ಕನ್ನಡಿಗರಿಗೆ ಅರಿವಿಲ್ಲದೆ ಜನಸೇವೆ ಮಾಡುತ್ತಾ ಮೂಲೆಯೊಂದರಲ್ಲಿ ಇರುವುದನ್ನು ಕಂಡು, ಅವರನ್ನು ಉತ್ತರ ಕರ್ನಾಟಕ ಭಾಗಕ್ಕೆ ಬರಲು ಅವರು ಒತ್ತಾಯಿಸಿದರು. ತಾರಾನಾಥರು ಇದಕ್ಕೆ ಒಪ್ಪದಿರಲು, ತಾವು ಉಪವಾಸ ಸತ್ಯಾಗ್ರಹ ಮಾಡುವುದಾಗಿ ಕಡಪಾರು ಬೆದರಿಸಿದರೆಂದೂ ಆಗ ಈ ಪ್ರೀತಿಯ ಬಲಕ್ಕೆ ತಾರಾನಾಥರು ಬಗ್ಗಿದರೆಂದೂ ಅವರನ್ನು ಧಾರವಾಡಕ್ಕೆ ಕರೆತಂದು ಸಾರ್ವಜನಿಕ ಸಭೆ ಜರುಗಿಸಿ, ಪಂಡಿತರ ವಿದ್ವತ್ತೆ, ಅಸ್ಖಲಿತ, ಅಪೂರ್ವ, ಅಸದೃಶ ವಾಗ್ಝರಿಯ ಮೊದಲ ಭಾಷಣವನ್ನು ಧಾರವಾಡದ ಜನ ಕೇಳುವಂತೆ ಮಾಡಿದರೆಂದೂ ಹೇಳುತ್ತಾರೆ.

ದಿ|| ತಾರಾನಾಥರು ತಾ|| 6-6-1891ರಂದು ಮಂಗಳೂರಿನಲ್ಲಿ ಜನ್ಮತಾಳಿದರು. ಅಲ್ಲಿ ಹೈಸ್ಕೂಲಿನ ಅಭ್ಯಾಸ ಮುಗಿಸಿದಮೇಲೆ ಆರೋಗ್ಯ ಸರಿ ಇಲ್ಲದಾಗ ಹವಾ ಬದಲಾವಣೆ ಮಾಡಬೇಕೆಂದು ಆಗಿನ ನಿಜಾಮರ ರಾಜ್ಯದಲ್ಲಿ ವಿದ್ಯಾಧಿಕಾರಿಗಳಾಗಿದ್ದ ಅವರ ಭಾವಂದಿರಾದ ಡಾ|| ಸುಬ್ಬರಾವ್‌ರಲ್ಲಿ ವಾಸಿಸಿ ವಿದ್ಯಾಭ್ಯಾಸ ಮುಂದುವರಿಸಿದರು. ಹೈದರಾಬಾದಿನಲ್ಲಿ ಮೆಡಿಕಲ್ ಕಾಲೇಜು ಸೇರಿ ಎಂ.ಬಿ.ಬಿ.ಎಂ. (ಈಗಿನ ಎಂ.ಬಿ.ಬಿ.ಎಸ್.) ಓದಿದರು. ನಿಜಾಮರ ವೈದ್ಯರಾದ ರಾಜವೈದ್ಯ ಹರಿಗೋವಿಂದಜೀ ಅವರಲ್ಲಿ ಆಯುರ್ವೇದ, ಯುನಾನಿ ಅಭ್ಯಾಸ ಮಾಡಿದರು. ಮೆಡಿಕಲ್ ಕಾಲೇಜಿನಲ್ಲಿ

ಕೆಲಕಾಲ ಅಧ್ಯಾಪಕರಾಗಿದ್ದು ಮುಂದೆ ವಿದ್ಯಾ ಇಲಾಖೆಗೆ ಸೇರಿದರು. ನಿಜಾಮರ ದಬ್ಬಾಳಿಕೆಯ ವಿರುದ್ಧ ಆಗಿನ ಯುವಕರು ಗುಪ್ತವಾಗಿಯೂ ಬಹಿರಂಗವಾಗಿಯೂ ಚಳವಳಿ ನಡೆಸಿದ್ದರು. ತಾರಾನಾಥರು ಡೇಲಿ ಮೇಲ್, ಹಿಂದು ಸ್ವರಾಜ್ಯ ಮುಂತಾದ ಪತ್ರಿಕೆಗಳಲ್ಲಿ ಈ ಬಗ್ಗೆ ಲೇಖನಗಳನ್ನಿತ್ತರು. ಅವರನ್ನು ಈ ಕಾರಣಕ್ಕಾಗಿ ಮೊದಲು ಬೀದರ್, ಮುಂದೆ ರಾಯಚೂರಿಗೆ ವರ್ಗಾಯಿಸಿದರು. ರಾಯಚೂರಲ್ಲಿ 1920ರಲ್ಲಿ ಹಮ್‌ದರ್ದ್ ಹೈಸ್ಕೂಲನ್ನು ಅವರು ಸ್ಥಾಪಿಸಿದರು. ಸರಕಾರವಿರೋಧೀ ಕಾರ್ಯವನ್ನು ರಾಯಚೂರಲ್ಲಿದ್ದಾಗ ಮುಂದುವರಿಸಲು ಆಜನ್ಮ ಬಂದೀವಾಸವಾಗುವ ಸಮಾಚಾರ ಅವರ ಶಿಷ್ಯರು, ಸ್ನೇಹಿತರಿಗೆ ಮಧ್ಯರಾತ್ರಿಕಾಲದಲ್ಲಿ ದೊರೆಯಿತು. ತಮ್ಮ ಇಚ್ಛೆಯ ವಿರುದ್ಧ, ಆಗ ಬಂದ ಗೂಡ್ಸ್ ಟ್ರೈನಿನಲ್ಲಿ ಇವರನ್ನು ನಿಜಾಮರ ಗಡಿ ಹೊರಗೆ ದಾಟಿಸಿದರು (1921). ಬ್ರಿಟಿಷ್ ಗಡಿಯಲ್ಲಿಯ ಮೊದಲನೇ ಸ್ಟೇಶನ್ ತುಂಗಭದ್ರಾದಲ್ಲಿ ಇಳಿದರು. ಮೊದಲು ದೇವಸ್ಥಾನದಲ್ಲಿ ಮರದ ನೆರಳಿನಲ್ಲಿ ಇರಹತ್ತಿದರು. ಬಡವರ ಸೇವೆ, ಚಿಕಿತ್ಸೆ ಆರಂಭಿಸಿದರು. ಮುಂದೆ ಜನರು ಒಂದು ಸ್ಥಳ ಕೊಟ್ಟರು; ಕಟ್ಟಡಗಳಾದವು. ಈ ಆಶ್ರಮಕ್ಕೆ 'ಪ್ರೇಮಾಯತನ' ಎಂಬ ಹೆಸರಿಟ್ಟರು. ತಾರಾನಾಥರ ಪ್ರತಿಭೆ, ಚಿಕಿತ್ಸೆಯಲ್ಲಿ ನೈಪುಣ್ಯ ಕೇಳಿ ಭಾರತದ ಮತ್ತು ವಿದೇಶಗಳಿಂದ ವಿದ್ವಾಂಸರು ಬರಹತ್ತಿದರು. ಇವರು ಕಠಿಣವಾದ ರೋಗಗಳನ್ನು ಗುಣಪಡಿಸಿದರು. ಇವರು ಸುಮಾರು ಹದಿಮೂರು ಭಾಷೆಗಳಲ್ಲಿ ನಿಪುಣರಾಗಿದ್ದರು. ಯಾವ ಭಾಷೆಯಾಡಿದರೂ ಅದು ಅವರದೇ ಆದ ಮುದ್ರೆ ಒತ್ತಲ್ಪಟ್ಟದ್ದಾಗಿತ್ತು. ಹೆಚ್ಚಾಗಿ ಕನ್ನಡದಲ್ಲಿ ಭಾಷಣ, ಬರವಣಿಗೆ ಮಾಡುವುದನ್ನು ನೋಡಿ ಹಲವರು ಇಂಗ್ಲೀಷ್‌ನಲ್ಲಿ ಬರವಣಿಗೆ ಸುರುಮಾಡಬೇಕೆಂದಾಗ "My best kicks will be in Kannada" ಅಂದರು! 'ಪ್ರೇಮಾ ಮೆಡಿಕಲ್ ಕಾಲೇಜ್' ಎಂಬ ಸಂಸ್ಥೆ ಸ್ಥಾಪಿಸಿ ನೂರಾರು ವಿದ್ಯಾರ್ಥಿಗಳಿಗೆ ಆಯುರ್ವೇದ ಶಿಕ್ಷಣ ಕೊಟ್ಟರು.

ಜಾತಿ, ಮಠ, ಮತಗಳ ಹೆಸರಿನಲ್ಲಿ ನಡೆಯುವ ಅನ್ಯಾಯ, ಡಂಭಾಚಾರಗಳ ವಿರುದ್ಧ ಅವರು ಬಹಿರಂಗವಾಗಿ ಅರ್ಧ ಶತಮಾನದ ಹಿಂದೆಯೇ ಬಂಡೆಬ್ಬಿಸಿದರು. ಭಾಷಣ, ಲೇಖನಗಳ ಮೂಲಕ ಜನರನ್ನು ಹೊಡೆದೆಬ್ಬಿಸಿದರು. ದಿವಂಗತ ಆಲೂರು ವೆಂಕಟರಾಯರ ಪ್ರೋತ್ಸಾಹ–ಒತ್ತಾಯದಿಂದ ಅವರು 'ಧರ್ಮಸಂಭವ' ಎಂಬ ವಿಚಾರ ಪ್ರಚೋದಕ ಗ್ರಂಥ ಬರೆದರು ಮತ್ತು ಅದರ ಮೊದಲನೇ ಆವೃತ್ತಿಯನ್ನು ಆಲೂರರೇ 1931ರಲ್ಲಿ ಪ್ರಸಿದ್ಧಿಸಿದರು.

ಅಮೇರಿಕಾದಿಂದ 1933ರಲ್ಲಿ ಅವರಿಗೆ ಸರ್ವಧರ್ಮ ಸಮ್ಮೇಲನಕ್ಕಾಗಿ ಭಾರತದ ಪ್ರತಿನಿಧಿಯಾಗಿ ಬರಲು ಆಮಂತ್ರಣ ಬಂದಿತು. ಹಿಂದೆ ಈ ಮಾನವು ಸ್ವಾಮಿ ವಿವೇಕಾನಂದರಿಗೆ ಬಂದಿತ್ತು. ತಾರಾನಾಥರು ಆಗ ಬಳ್ಳಾರಿ ಜಿಲ್ಲೆಯಲ್ಲಿ ಹಾಹಾಕಾರವೆಬ್ಬಿಸಿದ್ದ ಕಾಲರಾ ಬೇನೆಯಿಂದ ಪೀಡಿತವಾದ ಹಳ್ಳಿಗಳಲ್ಲಿ ತಮ್ಮ ಶಿಷ್ಯರು ಸಹಕಾರಿಗಳಿಂದ

ಕೊಡಿ ಜನರ ಸೇವೆಯಲ್ಲಿ ವ್ಯಗ್ರರಾಗಿದ್ದರಿಂದ ಈ ಆಮಂತ್ರಣವನ್ನು ನಿರಾಕರಿಸಿ "ನನ್ನ ದೇಶವು ಬಡತನದಿಂದಲೂ ರೋಗದಿಂದಲೂ ನರಳುತ್ತಿರುವ ಸಮಯದಲ್ಲಿ ನಾನು ಇಲ್ಲಿರುವುದು ಅಗತ್ಯವಾಗಿರುವಾಗ ಅಮೆರಿಕಾಕ್ಕೆ ಹೋಗಿಬಂದು ಕೇವಲ ಆಚರಣಹೀನವಾದ ಬುದ್ಧಿಪ್ರದರ್ಶಕ ವಾದಗಳಲ್ಲಿ ಹೊತ್ತುಕಳೆಯಲಾರೆ" ಎಂದು ಬರೆದುಬಿಟ್ಟರು.

ಅವರು ಚಿಕ್ಕಂದಿನಿಂದ ತಾಯಿಯ ಮೂಲಕ ದೈವಭಕ್ತಿಯನ್ನು ಮೈಗೂಡಿಸಿಕೊಂಡಿದ್ದರು. ಆಗ ಮಹಾರಾಷ್ಟ್ರದಲ್ಲಿ ಪ್ರಸಿದ್ಧರಾದ ಮಾಣಿಕ ಪ್ರಭು ಮಹಾರಾಜರಲ್ಲಿ ತಾಯಿಯೊಡನೆ ಹಲವು ಸಾರಿ ಹೋಗಿದ್ದರು. ಮಾಣಿಕ ನಗರವು (ಮಾಣಿಕ ಪ್ರಭುಗಳ ಧರ್ಮಭೂಮಿ) ಗುಲಬರ್ಗಾದ ಹತ್ತಿರವಿದೆ. ಮುಂದೆ ನೇಪಾಳದ ಉತ್ತಮದಾಸ ಪರಮಹಂಸ, ಜೆ. ಮುಂಗಯ್ಯ, ರಾಮಕೃಷ್ಣ ಮಿಶನ್ನಿನ ಸ್ವಾಮಿ ಯೋಗೀಶ್ವರಾನಂದ ಇವರುಗಳಿಂದ ಯೋಗದೀಕ್ಷೆ ಪಡೆದರು, ಸಾಧನೆ ನಡೆಸಿದರು.

ಧರ್ಮದ ಹೆಸರಿನಿಂದ ನಡೆಯುವ ಅನ್ಯಾಯ ದುರಾಚಾರಗಳ ವಿರುದ್ಧ ಇವರು ಕಠೋರ ಹೋರಾಟ ನಡೆಸಿದಾಗ ಹಾಗೂ ಗುರುಮಠಗಳು ಅನಾಚಾರ ನಡೆಸಿದ್ದನ್ನು ಬಹಿರಂಗವಾಗಿ ಖಂಡಿಸಿದಾಗ ಓರ್ವ ಗುರುಗಳು ಬೆದರಿಕೆ ಹಾಕಿ ಹೇಳಿಕಳಿಸಿದ್ದೇನೆಂದರೆ, "ನೀವು ಸತ್ತರೆ ನಿಮ್ಮ ಹೆಣ ತೆಗೆಯಲು ಯಾರೂ ಬಾರರು" ಎಂದು.

ಆಗ ತಾರಾನಾಥರ ಮಾರ್ಮಿಕ ಉತ್ತರವು ಹಿಂದೂ ಧರ್ಮದ ಅವರ ಜ್ಞಾನದ ಆಳ ತೋರಿಸುವಂತಿದೆ. "ನಾನು ಸತ್ತಮೇಲೆ ಹೆಣ ಯಾರೂ ತೆಗೆಯಲಾರರು ಎಂದು ಹೆದರಿಸಿ ಗುರುಗಳೇ ತಮ್ಮ ಧರ್ಮದ ಕುರಿತು ತಮಗೆ ಇರುವ ಅಜ್ಞಾನವನ್ನು ತೋರಿಸಿರುವರು. ನಾನು ಸತ್ತಮೇಲೆ ಹೆಣ ನಿಮ್ಮದು ; ನೀವು ತೆಗೆಯಿರಿ ಬಿಡಿರಿ, ಅದು ನಿಮ್ಮ ಹೆಣ!" ಆತ್ಮವು ಅಮರ, ದೇಹ ನಶ್ವರ ಎಂಬ ಕಲ್ಪನೆ ಇಲ್ಲಿ ಸ್ಪಷ್ಟವಾಗಿದೆ.

ಅವರು ದೀನದುಃಖಿತರ, ಹರಿಜನರ ಸೇವೆಯನ್ನು ಸದಾ ಮಾಡಿದರು. ಆಶ್ರಮದಲ್ಲಿ ಹರಿಜನರನ್ನೇ ಎಲ್ಲ ಕೆಲಸಕ್ಕೆ ನೇಮಕಮಾಡಲಾಗಿತ್ತು. ಆಗಿನ ಮುಟ್ಟು ಚಟ್ಟಿನ ಜನರು, ಗುರುಗಳು ಇಲ್ಲಸಲ್ಲದ ಸುದ್ದಿ, ನಿಂದೆಗಳ ಸುರಿಮಳೆಗರೆದರು. ನಿಮಗೆ ನರಕಪ್ರಾಪ್ತಿಯೇ ಗತಿ ಎಂದು ಅಂದದ್ದನ್ನು ಕೇಳಿದಾಗ ಹೊರಟ ಅವರ ಉರ್ದು ಕಾವ್ಯಧಾರೆಯು ಹೀಗೆ ನುಡಿಯಿತು :

ಲೇ ಚಲೂಂ ದೋಸ್ತ್ ದುಷ್ಮನ್ ಕೋ ಜನ್ನತಕೋ ।
ಖುದ್ ಹಿ ಜಹನ್ನಮ್ ಕೋ ಜಾತೇ ಹುಯೇ ॥

ಅಂದರೆ, 'ದೀನ, ದುಃಖಿತರ ಸೇವೆಯನ್ನು ಮಾಡುವುದರ ಪ್ರತಿಫಲವು ನರಕಪ್ರಾಪ್ತಿಯೇ ಆಗಿದ್ದರೆ, ಮಿತ್ರರು ಶತ್ರುಗಳು ಎಂಬುದರ ಭೇದ ಮಾಡದೆ, ಅವರನ್ನೆಲ್ಲ ಸ್ವರ್ಗದ ಬಾಗಿಲಿಗೆ ಕರೆದೊಯ್ದುಬಿಟ್ಟು, ನಾನು ಸ್ವತಃ ನರಕಕ್ಕೆ ತೆರಳುವೆನು !' ಹೀಗಿತ್ತು ಪುಣ್ಯಜೀವಿ ತಾರಾನಾಥರ ಜೀವನವೇದಾಂತದ ತಿರುಳು.

ದಿ|| ತಾರಾನಾಥರನ್ನು ಧರ್ಮದ್ರೋಹಿ, ಗುರುನಿಂದಕರೆಂದು ಅಜ್ಞಾನಿಗಳು ಹೇಳಬೇಕು. ಅವರು ರಾಮಕೃಷ್ಣ, ವಿವೇಕಾನಂದ ಇವರ ಅನನ್ಯಭಕ್ತರಾಗಿದ್ದರು; ಅವರ ಜಯಂತಿಯನ್ನು ಆಶ್ರಮದಲ್ಲಿ ಆಚರಿಸುತ್ತಿದ್ದರು. ಮಾಜಿ ರಾಷ್ಟ್ರಪತಿ, ವೇದಾಂತ ಶಾಸ್ತ್ರಾಧ್ಯಾಪಕರಾದ ರಾಧಾಕೃಷ್ಣನ್ ಅವರ ವಿನಂತಿಗನುಸಾರ ಶ್ರೀ ಶಂಕರಾಚಾರ್ಯರ ಅದ್ವೈತವಾದವನ್ನು ಒಮ್ಮೆ ಭಾಷಣದಲ್ಲಿ ಮಂಡಿಸಿ, ಅವರು ತಲೆದೂಗುವಂತೆ ತಾರಾನಾಥರು ಮಾಡಿದ್ದರು. ಸ್ವತಃ ಅವರು ಮೈಮರೆತು ಭಜನೆಯಲ್ಲಿ ಪಾಲುಗೊಳ್ಳುತ್ತಿದ್ದರು.

ಅವರ ಯೋಗಸಿದ್ಧಿಯನ್ನು ಹಲವರು ಅರಿತವರು, ನೋಡಿದವರು, ಇನ್ನೂ ಇದ್ದಾರೆ. ಅವರ ಯೋಗಸಾಧನಾ ಕಾಲದಲ್ಲಿ ಹಲವರು ತಮ್ಮಿಂದ ಉಪದೇಶ ಪಡೆಯದೆ ಅನುಕರಣೆ ಮಾಡಿದ ಮೂಲಕ ತೊಂದರೆಗೀಡಾದುದನ್ನು ನೋಡಿ ಅವರು ನುಡಿದರು :

ತಾರಾ ಕರತಾ ಹೈ ತೋ ಕರೇಂಗೆ ತೋ ಮರೇಂಗೆ |
ತಾರಾ ಕಹತಾ ಹೈ ತೋ ಕರೇಂಗೆ ತೋ ತರೇಂಗೆ ||

ಅರ್ಥ : ‘ತಾರಾ(ನಾಥನು) ಮಾಡುವುದರ ಬರೀ ಅನುಕರಣೆ ಮಾಡಿದರೆ ಸಾಯುವಿರಿ ; ತಾರಾ(ನಾಥನು) ಉಪದೇಶ ಮಾಡಿದಂತೆ ನಡೆದರೆ ಗೆಲ್ಲುವಿರಿ.’

ತಾರಾನಾಥರು ಗಾಂಧೀಭಕ್ತರು; ಸತತ ಖಾದೀಧಾರಿಗಳಾಗಿದ್ದರು. ಪ್ರತಿವಾರ ‘ಹರಿಜನ’ ಪತ್ರಿಕೆ ಬಂದ ಕೂಡಲೇ ಅದನ್ನು ಓದುತ್ತಿದ್ದರು. ಗಾಂಧೀತತ್ವಜ್ಞಾನದ ವಿವೇಚನೆಯನ್ನು ಅವರು ಸುಂದರವಾಗಿ ಮಾಡುತ್ತಿದ್ದರು. ಆದರೆ ವೈದ್ಯಶಾಸ್ತ್ರಕ್ಕೂ ವಿಜ್ಞಾನಕ್ಕೂ ಮಾನ್ಯವಾಗದ ವಿಚಾರಗಳನ್ನು ಗಾಂಧೀಜಿ ವ್ಯಕ್ತಪಡಿಸಿದಾಗ ಅವನ್ನು ಟೀಕಿಸಿದುದನ್ನೂ ನಾನು ಕೇಳಿದ್ದೇನೆ.

1927ರಲ್ಲಿ ಗಾಂಧೀಜಿ ನಂದೀಬೆಟ್ಟಕ್ಕೆ ಆರೋಗ್ಯಕ್ಕಾಗಿ ಬಂದಾಗ ನಡೆದ ಸಂಗತಿಯನ್ನು ತಿ. ತಾತಾಚಾರ್ಯ ಶರ್ಮರು 1964ನೇ ಇಸ್ವಿಯ ‘ಪ್ರಜಾಮತ’ದ ದೀಪಾವಳಿ ವಿಶೇಷ ಸಂಚಿಕೆಯಲ್ಲಿ ಬಹು ಹೃದಯಂಗಮವಾಗಿ ‘ಕನ್ನಡ ನಾಡಿನ ಮೂವರು ಮಹಾವಾಗ್ಮಿಗಳು’ ಎಂಬ ಲೇಖನದಲ್ಲಿ ಆರುಹಿದ್ದಾರೆ :

“ಮೇಧಾವಿ, ಜ್ಞಾನಿ, ಕಲಾವಿದ, ವೈದ್ಯ—ನಾನಾಮುಖಗಳಲ್ಲಿ ಪ್ರವಹಿಸಿತವರ ಪ್ರತಿಭೆ. ತಾರಾನಾಥರನ್ನು ಬಲ್ಲವರು, ಅವರೊಂದಿಗೆ ಮಾತನಾಡಿದವರು, ಅವರ ಹಾಡನ್ನು ಕೇಳಿದವರು, ಅವರಿಂದ ಚಿಕಿತ್ಸೆ ಪಡೆದವರೇ ಬಲ್ಲರು, ಅವರ ನೈಪುಣ್ಯತೆಯನ್ನು, ಅವರ ಕರ್ಮಕೌಶಲ್ಯವನ್ನು, ಅವರ ಸೌಂದರ್ಯಾನುಭವ ಭಾಗ್ಯವನ್ನು, ಅವರ ಶಾಸ್ತ್ರಪ್ರಾವೀಣ್ಯತೆಯನ್ನು—ಕನ್ನಡ, ಹಿಂದಿ, ಇಂಗ್ಲೀಷ್ ಎಲ್ಲದರಲ್ಲೂ ಒಂದೇ ಮಟ್ಟದ ಜ್ಞಾನ ಮತ್ತು ಲೇಖನಶಕ್ತಿಸಾಮರ್ಥ್ಯ....” ಎಂದು. ನಾಟಕಾದಿಗಳ

ಕುರಿತು ತಿರಸ್ಕಾರಭಾವವುಳ್ಳ ಮಹಾತ್ಮಾಜೀ ಅವರು ಆಗ ಬೆಂಗಳೂರಲ್ಲಿ ತಾರಾನಾಥ ರಿಂದ ಬರೆಯಲ್ಪಟ್ಟ ಹಾಗೂ ಅವರೇ ಅಭಿನಯಿಸಿದ ಹಿಂದೀ ಭಾಷೆಯ ಕಬೀರ ನಾಟಕ ವನ್ನು ತಲ್ಲೀನರಾಗಿ ಕೂತು ನೋಡಿ, ಕೊನೆಗೆ "I gained threefold pleasure today!'' ಎಂದು ಉದ್ಗರಿಸಿದರು. ಈ ಚಿಕ್ಕ ನಾಟಕಕ್ಕೆ ಮುನ್ನುಡಿ ಬರೆದುಕೊಟ್ಟು, ಇಂಥ ಸುಂದರ ಹಿಂದೀ ಭಾಷೆ ತಾವು ಕೇಳಿರಲಿಲ್ಲ, ಅಂದರವರು.

ದಿ|| ಡಿ. ಕೆ. ಭಾರದ್ವಾಜರು ತಾರಾನಾಥರನ್ನು ಕುರಿತು "ಪಂಡಿತಜೀಯವರಂಥ ವ್ಯಕ್ತಿಯು ಕರ್ನಾಟಕವಲ್ಲದೆ ಮತ್ತ್ಯಾವುದಾದರೂ ಪ್ರಾಂತ್ಯದಲ್ಲಾಗಲೀ, ದೇಶದಲ್ಲಾಗಲೀ ಇದ್ದಿದ್ದರೆ, ಅಂಥಾ ಪ್ರಾಂತ್ಯವಾಗಲೀ ದೇಶವಾಗಲೀ ಆ ವ್ಯಕ್ತಿಯ ಜನ್ಮಭೂಮಿಯು ತಾನೆಂದು ಹೆಮ್ಮೆಪಡುತ್ತಿತ್ತು" ಎಂದು ಬರೆದ ವಾಕ್ಯವನ್ನು ಓದಿದಾಗ ನಾನವರ ವಿದ್ಯಾರ್ಥಿಯಾಗಿದ್ದಾಗಿನಿಂದ ಇದೇ ತರಹದ ಭಾವನೆ, ಮನೋವೇದನೆ ಹೊಂದಿದ ನನ್ನ ವಿಚಾರಗಳನ್ನೇ ಹೊರಗೆಡಹಿದಂತೆ ನನಗನಿಸಿತ್ತು. ದಿ|| 31-10-1942 ರಲ್ಲಿ ಅವರು ದಿವಂಗತರಾದರು.

**ಡಾ|| ಕೃಷ್ಣ ಸು. ಭಟ್ಟ**
ಡೈರೆಕ್ಟರ್, ತಾರಾನಾಥ ರಸೌಷಧಿ ವರ್ಕ್ಸ್,
ಚಿಕ್ಕಮಗಳೂರು

(ಬೇರೆ ಮೂಲಗಳಂತೆ ತಾರಾನಾಥರ ಜನನ 5-6-1891ರಲ್ಲಿ ಆಯಿತು. ಅವರ ತಂದೆ ರಂಗರಾವ್. ರಾಯರ ರಾಜಕೀಯ ಚಟುವಟಿಕೆಗಳ ವಿವರ ಇನ್ನೂ ಶೋಧನೆ ಆಗಬೇಕು. ತಮ್ಮ ಆಶ್ರಮದ ಸುತ್ತಲ ಗ್ರಾಮಗಳಲ್ಲಿ ಅವರು ಒಮ್ಮೆ ಕರನಿರಾಕರಣ ಚಳವಳಿ ಸಂಘಟಿಸಿದ್ದರಂತೆ. ವೈಸ್‌ರಾಯ್, ಪ್ರಿನ್ಸ್ ಆಫ್ ವೇಲ್ಸ್ ಮುಂತಾದವರು ಆ ಭಾಗದಿಂದ ರೈಲಿನಲ್ಲಿ ಹೋಗುವಾಗ ಈ 'ರಾಜದ್ರೋಹಿ'ಯನ್ನು ಭದ್ರತಾಕ್ರಮವಾಗಿ ಬಂಧಿಸಿ ಇಡುತ್ತಿದ್ದರಂತೆ. 1937ರಲ್ಲಿ ಆಂಧ್ರ ಪಿ.ಸಿ.ಸಿ. ಸಮ್ಮೇಳನವನ್ನು ಅವರು ತುಂಗಭದ್ರಾದಲ್ಲಿ ನಡೆಸಿಕೊಟ್ಟಿದ್ದರು. —ಸಂ||)

ಹೈ.ರಾ. 5

## ದಿ|| ಜಿ. ರಾಮಾಚಾರ್
**(1894-1953)**

ಲಿಂಗಸುಗೂರು ತಾಲೂಕಿನ ಗುರ್ಗುಂಟೆದಲ್ಲಿ ಜನಿಸಿದ (11-11-1894; ತಂದೆ: ವೆಂಕಪ್ಪಾಚಾರ್; ತಾಯಿ: ಭೀಮಮ್ಮ) ರಾಮಾಚಾರ್ ಅವರು ಗುರ್ಗುಂಟೆ, ಲಿಂಗಸುಗೂರು ಮತ್ತು ಶೋರಾಪುರಗಳಲ್ಲಿ ತಮ್ಮ ಶಿಕ್ಷಣ ಮುಗಿಸಿ 1909ರಲ್ಲಿ ಹೈದರಾಬಾದಿಗೆ



ಬಂದು ತನ್ನ ಕಾನೂನು ಶಿಕ್ಷಣ ಮುಗಿಸಿದರು 1918ರಿಂದ ಚಿಂಚೋಳಿಯಿಂದ ವಕೀಲವೃತ್ತಿ ಆರಂಭಿಸಿದರು. ತಮ್ಮ 27ನೆಯ ವಯಸ್ಸಿನಲ್ಲಿ ಅವರು ಸೀತಾಬಾಯಿಯವರನ್ನು ವರಿಸಿದರು. ಏಳು ವರ್ಷಗಳನಂತರ ಅವರು ಹೈಕೋರ್ಟಿನ ಅಡ್ವೊಕೇಟರಾಗಿ ಹೈದರಾಬಾದಿಗೇ ಬಂದು ತಮ್ಮ ವೃತ್ತಿಯನ್ನು ಮುಂದುವರಿಸಿ, ಸಂಸ್ಥಾನದ ಗಣ್ಯವಕೀಲರಲ್ಲಿ ಒಬ್ಬರೆನಿಸಿದರು. ಉರ್ದು, ಪರ್ಶಿಯನ್, ಕನ್ನಡ, ಮರಾಠಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪರಿಣತರಾದ ಅವರು ತಮ್ಮ ಜನಮೆಚ್ಚುವ ನಡತೆಯಿಂದಾಗಿ ಹೈದರಾಬಾದಿನ ಸುಶಿಕ್ಷಿತ ವರ್ಗದಲ್ಲಿ ಗಣ್ಯರೆನಿಸಿ ಜನಪ್ರಿಯರಾದರು.

ಅಪ್ಪಟ ಗಾಂಧೀವಾದಿಗಳೂ ಕಾಂಗ್ರೆಸ್‌ನ ವಿಚಾರದವರೂ ಆದ ಅವರು 1942ರಲ್ಲಿ ತಮ್ಮ ಲಾಭದಾಯಕವಾದ ವೃತ್ತಿಯನ್ನು ತ್ಯಜಿಸಿ ದೇಶಸೇವೆಗಾಗಿ ತಮ್ಮನ್ನು ಮೀಸಲಾಗಿಟ್ಟುಕೊಂಡರು. ಹೈದರಾಬಾದ್ ಸಂಸ್ಥಾನದ ಪ್ರಗತಿಗಾಗಿ ಅವರು ಸಲ್ಲಿಸಿದ ಸೇವೆ ಒಂದು ಪ್ರತ್ಯೇಕ ಪ್ರಕರಣವೇ ಆಗುವುದು. ಅವರ ಮನೆ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಚಟುವಟಿಕೆಗಳ ಕೇಂದ್ರವೇ ಆಗಿತ್ತು. ಹೈದರಾಬಾದ್ ಸಂಸ್ಥಾನೀ ಕಾಂಗ್ರೆಸ್‌ನ ಸ್ಥಾಪನೆಯ ಯತ್ನವನ್ನು ಸಂಸ್ಥಾನೀ ಸರಕಾರವು ವಿಫಲಗೊಳಿಸಲು ಯತ್ನಿಸಿದಾಗ, ಕಾಂಗ್ರೆಸ್‌ನ ಉದ್ದೇಶಗಳ ಕಾರ್ಯಾಚರಣೆಗಾಗಿ ತೆಲಂಗಾಣ, ಮರಾಠವಾಡಾ ಹಾಗೂ ಕರ್ನಾಟಕ ಹೀಗೆ ಮೂರು ಪ್ರಾದೇಶಿಕ ಪರಿಷತ್ತುಗಳನ್ನು ಸಂಘಟಿಸಲು ದುಡಿದ ಅವರು, ಇತರರ ಜೊತೆ ಇವುಗಳ ಸಂಘಟನೆಯ ನಾಯಕತ್ವವನ್ನೂ ತಾವೇ ವಹಿಸಿದರು. (ಪ್ರಥಮ ಕರ್ನಾಟಕ ಪರಿಷತ್ತಿನ ಸ್ವಾಗತಾಧ್ಯಕ್ಷರು ಅವರೇ ಆಗಿದ್ದರು.) ಈ ರೀತಿ ಸಂಸ್ಥಾನದಲ್ಲಿ ರಾಜಕೀಯ ಜಾಗೃತಿಗಾಗಿ ಅವರು ಶ್ರಮಿಸಿದರಲ್ಲದೆ ಸ್ವದೇಶೀ ಲೀಗ್ ಜೊತೆ ಕೂಡ ಸಂಬಂಧ ಉಳ್ಳವರಾಗಿದ್ದರು. ಮುಂದೆ ಸ್ವಾಮಿ ರಮಾನಂದ ತೀರ್ಥರ ನೇತೃತ್ವದಲ್ಲಿ ಸಂಸ್ಥಾನೀ ಕಾಂಗ್ರೆಸ್‌ನ ಸ್ಥಾಪನೆ ಆದಾಗಲೂ ಇವರು ಅದಕ್ಕೆ ಬೆಂಬಲ ನೀಡಿದರಲ್ಲದೆ ಸಂಸ್ಥಾನದ ಗಣ್ಯನಾಯಕರಲ್ಲಿ ಒಬ್ಬರೆನಿಸಿದರು.

ಸಂಸ್ಥಾನದಲ್ಲಿ ರಾಜಕೀಯ ಬಿಕ್ಕಟ್ಟು ಉಂಟಾದ ಸಂದಿಗ್ಧ ಸ್ಥಿತಿಯಲ್ಲಿ ಅವರು ಮೀರ್ ಲಾಯಕ್ ಅಲಿ ಸಂಪುಟದಲ್ಲಿ, ತಮ್ಮ ಆಗಿನ ಜನಪ್ರಿಯತೆಯನ್ನು ಬಲಿಗೊಟ್ಟು ಮಂತ್ರಿಗಳಾದರು. ಹೀಗೆ ಅವರು ಮಾಡಲು ಒಂದೇ ಒಂದು ಕಾರಣ, ಸರಕಾರದ ಒಳಗೆ ಇದ್ದು ಚಳವಳಿಯ ಹಿತಕ್ಕಾಗಿ ಕೆಲಸ ಮಾಡುವುದು ಹಾಗೂ ರಜಾಕಾರರ ಚಟುವಟಿಕೆಗಳನ್ನು ತಡೆಯುವುದು—ಇದೇ ಆಗಿತ್ತು. ರಜಾಕಾರರು ಹಿಂದೂ ಸಮಾಜದ ಮೇಲೆ ಮಾಡಿದ ಅತ್ಯಾಚಾರಗಳ ಬಗ್ಗೆ ತಾವು ನಡೆಸಿದ್ದ

ವಿಚಾರಣಾ ವರದಿಗಳ ಬಗ್ಗೆ ಸರಕಾರವು ಕ್ರಮ ಕೈಗೊಳ್ಳಲು ತಪ್ಪಿದಾಗ ಅವರು ರಾಜೀನಾಮೆ ನೀಡಿದರು. ಈ ಪ್ರಸಂಗವು ವಿಶ್ವಸಂಸ್ಥೆಯಲ್ಲೂ ಚರ್ಚಿಸಲ್ಪಟ್ಟಿತು. ಆಗಿನ ಭಾರತ ಸರಕಾರದ ಪೊಲಿಟಿಕಲ್ ಏಜೆಂಟರಾದ ಕೆ. ಎಂ. ಮುನ್ಷಿ ಹಾಗೂ ಸರ್ದಾರ್ ಪಟೇಲರ ಜೊತೆ ನಿಕಟಸಂಪರ್ಕ ಹೊಂದಿದ್ದ ಅವರು ನಿಜಾಂ ಹಾಗೂ ಭಾರತ ಸರಕಾರಗಳ ನಡುವೆ ಸಂಬಂಧ ಪ್ರಸ್ಥಾಪನೆಗೆ ಶ್ರಮಿಸಿದ್ದರು. ಪೋಲಿಸ್ ಕಾರ್ಯ್ಯಾಚರಣೆಯ ನಂತರ ರಾಮಾಚಾರ್ ಕೇಂದ್ರ ನಡುಗಾಲ ಸರಕಾರದಲ್ಲಿ ರೈಲ್ವೆ ಹಾಗೂ ಸಂಪರ್ಕ ಖಾತೆಯ ಸದಸ್ಯರಾಗಿದ್ದರಲ್ಲದೆ 1951ರಲ್ಲಿ ಪಾರ್ಲಿಮೆಂಟ್ ಸದಸ್ಯರಾದರು. 1952ರಲ್ಲಿ ಚಿಂಚೋಳಿಯಿಂದ ಅವರು ಹೈದರಾಬಾದ್ ಶಾಸನಸಭೆಗೆ ಆಯ್ಕೆಗೊಂಡರು. ಈ ಕಾಲದಲ್ಲಿ ಅವರು ಮುಲ್ಕಿ ಚಳವಳಿಯ ಪ್ರಬಲ ಬೆಂಬಲಿಗರೂ ಆಗಿದ್ದರು. ಹೈದರಾಬಾದ್ ಹಿತರಕ್ಷಕ ಸಮಿತಿಯ ಪ್ರಮುಖರಾಗಿಯೂ ಅವರು ಕೆಲಸಮಾಡಿದರು.

ರಾಮಾಚಾರ್ಯರು ನೇರಮಾತಿನ ನಿರ್ಭಯ ನಿಲುವಿನ ವ್ಯಕ್ತಿಗಳಾಗಿದ್ದು ಕಾಶಿಂ ರಜ್ವಿ ಕೂಡ ಅವರಿಗೆ ಬೆದರುತ್ತಿದ್ದ. ಹೈದರಾಬಾದ್ ಕರ್ನಾಟಕ ಶಿಕ್ಷಣ ಸಮಿತಿಯ ಪ್ರಥಮಾಧ್ಯಕ್ಷರಾಗಿದ್ದ ಅವರು 50,000 ರೂ.ಗಳ ದೇಣಿಗೆಗಳನ್ನೆತ್ತಿ ನೃಪತುಂಗ ಹೈಸ್ಕೂಲಿನ (ಹೈದರಾಬಾದ್) ಕಟ್ಟಡದ ನಿರ್ಮಾಣಕ್ಕೆ ಕಾರಣರಾದರು. ಇದಲ್ಲದೆ ಶಾರದಾ ಕರ್ನಾಟಕ ಕನ್ಯಾ ಶಾಲೆಯ ಗಣ್ಯ ಕಾರ್ಯಕರ್ತರೂ ಅವರಾಗಿದ್ದರು. ಮಹಾರಾಜರ ಆಮಂತ್ರಣದಂತೆ ಮೈಸೂರು ದಸರೆಗೆ ಹೋಗಿದ್ದ ಅವರು 1953ರ ಅಕ್ಟೋಬರ್ 15ಕ್ಕೆ ಬೆಂಗಳೂರಿನಲ್ಲಿ ತೀರಿಕೊಂಡರು.

**ಮಧ್ವಾಚಾರ್ಯ ಜೋಶಿ**
ಅಡ್ವೋಕೇಟ್, ಬಿ–17, ಅಬೀದ್ ರೋಡ್,
ಹೈದರಾಬಾದ್–1

(ಲೇಖಕರು ದಿ|| ರಾಮಾಚಾರ್ಯರ ಪುತ್ರರು. ದಿ|| ಕೃಷ್ಣಾಚಾರ್ಯ ಜೋಶಿ ಎಂಬ ಇನ್ನೊಬ್ಬ ನಾಯಕರು ದಿ|| ರಾಮಾಚಾರ್ಯರೂ ಸೋದರರು. ದಿ|| ಸಿದ್ದವನಹಳ್ಳಿ ಕೃಷ್ಣ ಶರ್ಮರ 'ನೆನಪಿನ ಚಿತ್ರಗಳು' [ಬೆಂಗಳೂರು, 1973] ಕೃತಿಯಲ್ಲಿ ಆಚಾರ್ಯರ ಬಗ್ಗೆ ವಿವರಗಳಿವೆ. —ಸಂ||)

ಹೈ.ರಾ. 6

# ದಿ|| ಕೃಷ್ಣಾಚಾರ್ಯ ಜೋಶಿ
(1899–1966)



ಗುಡ್ಡುಗಂಟೆಯಲ್ಲಿ ಜನಿಸಿದ (26–12–1899) ದಿ|| ಕೃಷ್ಣಾಚಾರ್ಯರು ಗುಡ್ಡುಗಂಟೆ, ಚಿಂಚೋಳಿ, ಪುಣೆ, ಹಾಗೂ ಹೈದರಾಬಾದ್‌ನಲ್ಲಿ ಶಿಕ್ಷಣ ಪಡೆದು, ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಬಿ.ಎ. ಮತ್ತು ಎಲ್‌ಎಲ್.ಬಿ.ಗಳಲ್ಲಿ ಡಿಸ್ಟಿಂಕ್ಷನ್ ಪಡೆದು ತೇರ್ಗಡೆಯಾದವರು. 1927ರಲ್ಲಿ ವಕೀಲಿವೃತ್ತಿ ಆರಂಭಿಸಿ ಶೀಘ್ರವೇ ಸಂಸ್ಥಾನದ ಗಣ್ಯವಕೀಲರಲ್ಲಿ ಒಬ್ಬರೆನಿಸಿದರು. ಹೈದರಾಬಾದ್‌ನ ಶಾರದಾ ಕರ್ನಾಟಕ ಕನ್ಯಾ ಶಾಲೆಯೆಂಬ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆಯ ಸ್ಥಾಪಕರು ಇವರಾಗಿದ್ದು ಮುಂದೆ ಈ ಶಾಲೆಯು ಒಂದು ಹೈಸ್ಕೂಲಾಯಿತು.

ಸ್ವಾಮಿ ರಮಾನಂದ ತೀರ್ಥರ ನಾಯಕತ್ವದಲ್ಲಿ ಸ್ಥಾಪಿತವಾದ ಸಂಸ್ಥಾನೀ ಕಾಂಗ್ರೆಸ್‌ನ ಕಾರ್ಯಕರ್ತರಾದ ಇವರು 1946ರಲ್ಲಿ ವಕೀಲಿಯನ್ನೇ ತ್ಯಜಿಸಿ ಚಳವಳಿಯಲ್ಲಿ ಸೇರಿದರಲ್ಲದೆ ಕಾಂಗ್ರೆಸ್‌ನ ಕಾರ್ಯಸಮಿತಿ ಸದಸ್ಯರಾಗಿದ್ದರು. 7–8–1947ರಂದು 'ಇಂಡಿಯಾ ಒಕ್ಕೂಟಕ್ಕೆ ಸೇರ್ಪಡೆ ದಿನ'ವನ್ನು ಆಚರಿಸಿ ಬಂಧಿತರಾಗಿ, ಮುಂದೆ ಬಿಡುಗಡೆ ಹೊಂದಿದರು. ಆಮೇಲೆ 14–8–1947ರ ರಾತ್ರಿ ಸ್ವಾಮಿ ರಮಾನಂದ ತೀರ್ಥ ಮತ್ತು ಜಿ. ಎಸ್. ಮೇಲುಕೋಟೆಯವರ ಜೊತೆ ಮತ್ತೆ ಬಂಧಿತರಾಗಿ, ಹೈದರಾಬಾದ್ ಜೈಲ್‌ನಲ್ಲಿ ಇದ್ದು, ಮುಂದೆ ಭಾರತ ಸರಕಾರ ಹಾಗೂ ಹೈದರಾಬಾದ್ ಸಂಸ್ಥಾನಗಳ ನಡುವೆ 'ಯಥಾಸ್ಥಿತಿ ಒಪ್ಪಂದ' ಆದಾಗ ಬಿಡುಗಡೆ ಹೊಂದಿದರು. ತಕ್ಷಣ ಮದ್ರಾಸಿಗೆ ತೆರಳಿದ ಅವರು ಅಲ್ಲಿಂದ ಗಡಿ ಚಟುವಟಿಕೆಗಳ ಕಾರ್ಯಾಚರಣೆಯಲ್ಲಿ ನಿರತರಾದರು. ಪೋಲಿಸ್ ಕಾರ್ಯಾಚರಣೆಯನಂತರ ರಜಾಕಾರರ ಅತ್ಯಾಚಾರಗಳಿಗೆ ಒಳಗಾಗಿದ್ದ ಜನರಿಗೆ ನೆರವು, ಪುನರ್ವಸತಿ ಒದಗಿಸುವ ಚಟುವಟಿಕೆಗಳಲ್ಲಿ ಅವರನ್ನು ನೇಮಿಸಲಾಗಿತ್ತು.

1952ರಲ್ಲಿ ಯಾದ್‌ಗಿರ್‌ನಿಂದ ಲೋಕಸಭೆಗೆ ಅವಿರೋಧವಾಗಿ ಆಯ್ಕೆಗೊಂಡ ಅವರು ಲೋಕಸಭೆಯ ಅಧಿವೇಶನಗಳಲ್ಲಿ ನಿಯಮಿತವಾಗಿ ಪಾಲುಗೊಳ್ಳುತ್ತಿದ್ದರಲ್ಲದೆ ಸದಾ ಪ್ರಶ್ನೆ ಕೇಳುವ ಗಣ್ಯ ಸದಸ್ಯರಾಗಿದ್ದರು. "ಅತ್ಯಂತ ಗಮನ ಸೆಳೆಯುವ"

ಸದಸ್ಯರೆಂದು 'ಪಾರ್ಲಿಮೆಂಟ್ ಇನ್ ಇಂಡಿಯು' ಎಂಬ ಪುಸ್ತಕದಲ್ಲಿ ಡಬ್ಲ್ಯು. ಜೆ. ಮೋರಿಸ್ ಜೋನ್ಸ್ ಅವರನ್ನು ಬಣ್ಣಿಸಿದ್ದಾರೆ.

ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಒಳ್ಳೆಯ ಬರಹಗಾರರಾಗಿದ್ದ ಅವರು ಕನ್ನಡದಲ್ಲಿ ರಾಜನೀತಿಶಾಸ್ತ್ರ (ಈ ಪುಸ್ತಕಕ್ಕೆ ಕರ್ನಾಟಕ ರಾಜ್ಯ ಸಾಹಿತ್ಯ ಅಕ್ಯಾಡಮಿಯ ಬಹುಮಾನ ಬಂದಿತ್ತು), ನಡುಗಾಲ ಪ್ರಭುತ್ವ, ಘಟನಾಸಮಿತಿ, ಆಯ್ಕೆಯ ಶಾಸನ, ಸಾರ್ವತ್ರಿಕ ಆಯ್ಕೆಗಳು, ಅಂತರರಾಷ್ಟ್ರೀಯ ರಾಜಕಾರಣ ಮುಂತಾದ ಪುಸ್ತಕಗಳನ್ನು ಬರೆದಿರುವರು. ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯವನ್ನು ಅವರು ಹಿಂದಿಗೆ ಭಾಷಾಂತರಿಸಿದ್ದಾರೆ. ಇಂಗ್ಲಿಷ್‌ನಲ್ಲಿ 'ಜನರಲ್ ಇಲೆಕ್ಷನ್ಸ್ ಅಂಡ್ ಮಾಧ್ವವೇದಾಂತ' ಎಂಬ ಪುಸ್ತಕ ಕೂಡ ಬರೆದಿದ್ದಾರೆ. ಹೈದರಾಬಾದ್ ಸಂಸ್ಥಾನದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯ ಸಂಬಂಧ ನಡೆದ ಇತಿಹಾಸ ಪ್ರಕಟನಾ ಸಮಿತಿಗಳಲ್ಲಿ ಅವರು ಗೌರವ ಸಂಶೋಧನಾಧಿಕಾರಿಯಾಗಿಯೂ ಸಂಪಾದಕರಾಗಿಯೂ ಶ್ರಮಿಸಿರುವರಲ್ಲದೆ ಅನೇಕ ಸಂಘಸಂಸ್ಥೆಗಳ ಜೊತೆ ಸಂಬಂಧ ಹೊಂದಿದ್ದರು. 10-10-1966ರಲ್ಲಿ ಅವರು ಹೈದರಾಬಾದಿನಲ್ಲಿ ತೀರಿಕೊಂಡರು.

**ವೆಂಕಟಾಚಾರಿ ಜೋಶಿ**
ಅಡ್ವೊಕೇಟ್, ಪರಿಮಳ ಕುಂಜ, ವೀರ ಸಾವರ್ಕರ್ ರೋಡ್,
ಕಾಚಿಗುಡ, ಹೈದರಾಬಾದ್-27

ಹೈ.ರಾ. 7

## ರಾ. ಗು. ಜೋಶಿ

ಜನನ: 1908   ಉದ್ಯೋಗ: ಪತ್ರಕರ್ತ   ವಿಳಾಸ: ಗಾಜುಗಾರಪೇಟೆ, ರಾಯಚೂರು



ಪರದೇಶೀ ಬಟ್ಟೆಗಳ ಬಹಿಷ್ಕಾರದ ಕಾಲ. ದೇಶದಲ್ಲಿ ಪರದೇಶೀ ಬಟ್ಟೆಗಳ ಹೋಳಿ ನಡೆದಿದ್ದಿತು. ಮುಂಬಯಿಯಲ್ಲಿ ಬೃಹತ್ ಪ್ರಮಾಣದಲ್ಲಿ ಪರದೇಶೀ ವಸ್ತ್ರಗಳ ದಹನ. ಇದಕ್ಕಾಗಿ ಮದ್ರಾಸಿನಿಂದ ಮುಂಬಯಿಗೆ ಹೊರಟಿದ್ದ ಮಹಾತ್ಮಾ ಗಾಂಧೀಜಿಯವರು ರಾಯಚೂರ ಮೇಲೆ ಹಾಯ್ದು ಹೋಗುವುದಿತ್ತು. ಗಾಂಧೀಜಿಯವರ ದರ್ಶನಕ್ಕಾಗಿ ಸ್ಟೇಶನದಲ್ಲಿ ಜನ ಸಂದಣಿ. ಹೈದ್ರಾಬಾದ್ ಸ್ಂಸ್ಥಾನದಲ್ಲಿ ಆಗ

ನಿಜಾಮರ ನಿರಂಕುಶ ಪ್ರಭುತ್ವ. ಬ್ರಿಟಿಷರ ಅಡಿಯಾಳಾಗಿದ್ದರೂ ತಾವು ಸ್ವತಂತ್ರರೆಂಬ ಹೆಮ್ಮೆ ನಿಜಾಮರಿಗೆ. ಭಾರತದಲ್ಲಿಯ ಸ್ವಾತಂತ್ರ್ಯಾಂದೋಲನಕ್ಕೆ ಸಹಾನುಭೂತಿ ತೋರಿಸುವುದೂ ಅಪರಾಧವೆನಿಸುತ್ತಿತ್ತು. ಆದರೂ ಗಾಂಧೀಜಿಯವರ ದರ್ಶನಕ್ಕಾಗಿ ಕಿಕ್ಕಿರಿದು ಜನ ಸೇರಿದ್ದರು. ಮುಕ್ಕಾಲುಪಾಲು ವಿದ್ಯಾರ್ಥಿಗಳ ಸಂಖ್ಯೆ. ಆಗಿನ್ನೂ ನಾನು ವಿದ್ಯಾರ್ಥಿ. ರೈಲು ಬಂದ ಕೂಡಲೇ ಗಾಂಧೀಜಿಯವರ ಜಯಜಯಕಾರ. ಗಾಂಧೀಜಿ ಯವರು ಕುಳಿತ ಡಬ್ಬಿಯಲ್ಲಿ ಪರದೇಶೀ ವಸ್ತ್ರಗಳ ರಾಶಿ; ಮುಂಬಯಿಯಲ್ಲಿ ನಡೆಯುವ ದಹನಕ್ಕಾಗಿ ಮಾರ್ಗದುದ್ದಕ್ಕೂ ಜನರು ಹಾಕಿದ ಬಟ್ಟೆ. ಗಾಂಧೀಜಿಯವರು ಡಬ್ಬಿಯ ಕಿಡಕಿಯಿಂದಲೇ ದರ್ಶನವಿತ್ತರು. ಆ ಬಟ್ಟೆಯ ರಾಶಿ ನೆರೆದ ಜನರಲ್ಲಿ ಆವೇಶ ತುಂಬಿ ತೆಂದೇ ಹೇಳಬೇಕು. ನೆರೆದವರಲ್ಲಿ ಬಹುಪಾಲು ಜನರು ತಮ್ಮ ಮೈಮೇಲಿನ ಒಂದಿಲ್ಲ ಒಂದು ಪರದೇಶೀ ವಸ್ತ್ರವನ್ನು ಡಬ್ಬಿಯೊಳಗೆ ಎಸೆದರು. ಒಂದು ವಾರದ ಹಿಂದೆ ಕೊಂಡ ನನ್ನ ಫೆಲ್ಟ್‌ಕ್ಯಾಪ್‌ನ್ನು ನಾನೂ ಒಗೆದೆ. ಈ ಘಟನೆ ರಾಯಚೂರಿನ ಜನರ ಮನಸ್ಸಿನಲ್ಲಿ ದೇಶಾಭಿಮಾನವನ್ನು ಮೂಡಿಸಿತೆಂದು ಹೇಳಬಹುದು. ಖಾದಿಯ ಮಹತ್ವ ತಿಳಿದೋ ತಿಳಿಯದೆಯೋ, ಅದನ್ನು ತೊಡುವುದು ಒಂದು ದೇಶಕಾರ್ಯವೆಂದು ಜನ ಖಾದಿ ಹಾಕಲು ಪ್ರಾರಂಭಿಸಿತು. ಖಾದಿ ಟೊಪ್ಪಿಗೆಯ ಬಳಕೆಯೇ ಹೆಚ್ಚು. ಈ ಖಾದಿ ಟೊಪ್ಪಿಗೆ ಧರಿಸುವವರ ಮೇಲೆ ಸಹ ಆಗ್ಗೆ ಪೋಲಿಸರ ಕಣ್ಣು. ಅಂದಿನಿಂದ ನನ್ನ ತಲೆಗೂ ಗಾಂಧಿ ಟೊಪ್ಪಿಗೆ ಬಂದಿತು. ಪರದೇಶಿ ಬಟ್ಟೆ ಕೊಳ್ಳುವುದು ನನ್ನಿಂದ ನಿಂತಿತು.

ಈ ಪ್ರಸಂಗ ನಡೆದ ಕೆಲದಿನಗಳಲ್ಲೇ ಇರಬೇಕು. 1920ರ ಯುಗಾದಿಯ ದಿನ ದಿವಂಗತ ಪಂಡಿತ ತಾರಾನಾಥರು ಶಾಲೆಯೊಂದನ್ನು ಪ್ರಾರಂಭಿಸಿದರು. ಆಗ್ಗೆ ರಾಯಚೂರಿನಲ್ಲಿ ಪ್ರೌಢಶಾಲೆ ಸಹ ಇರಲಿಲ್ಲ. ಇದ್ದುದು ಸರಕಾರಿ ಮಾಧ್ಯಮಿಕ ಶಾಲೆ. ತಾರಾನಾಥರೂ ಮಾಧ್ಯಮಿಕ ಶಾಲೆಯನ್ನೇ ಪ್ರಾರಂಭಿಸಿದರು. ಸರಕಾರಿ ಶಾಲೆಯು ಬರಿದಾಯಿತು. ವಿದ್ಯಾರ್ಥಿಗಳೆಲ್ಲ ಈ ಹೊಸ ಶಾಲೆಗೆ ತಿರುಗಿದರು. ಈ ಶಾಲೆ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆ ಅಂಕುರಿಸಲು ಕ್ಷೇತ್ರವಾಯಿತು. ಈ ಶಾಲೆಯ ಪ್ರಾರಂಭದಿಂದಲೇ ನಾನು ಇದರ ವಿದ್ಯಾರ್ಥಿಯಾದೆ.

ತಾರಾನಾಥರ ಉಪದೇಶ, ಅವರ ಬೆಂಬಲದಿಂದ ವಾಚನಾಲಯವನ್ನು ಪ್ರಾರಂಭಿ ಸುವುದರಿಂದ ನನ್ನ ಸಾರ್ವಜನಿಕ ಚಟುವಟಿಕೆ ಪ್ರಾರಂಭವಾಯಿತೆಂದು ಹೇಳಬಹುದು.

ಈ ನಗರದ ಮೇಲೆ ಗಾಂಧೀಜಿಯವರು ಹಾಯ್ದುಹೋದಂದಿನಿಂದ ಖಾದಿಯ ಬೇಡಿಕೆ ಹೆಚ್ಚಿತಾದರೂ ಇಲ್ಲಿ ಖಾದಿ ದೊರೆಯುತ್ತಿರಲಿಲ್ಲ. ನನ್ನ ಗೆಳೆಯ ದಿವಂಗತ ದೊಡ್ಡವೀರಣ್ಣನೂ ನಾನೂ ಸೇರಿಕೊಂಡು ತಿರುಪುರದಿಂದ ಖಾದಿ ತರಿಸಿ ಪೂರೈಸಲು ಪ್ರಾರಂಭಿಸಿದೆವು. ವಿಶಿಷ್ಟ ದಿನಗಳಲ್ಲಿ ಖಾದಿ ಹೊತ್ತು ಮನೆಮನೆಗೂ ಹೋಗಿ ಖಾದಿ ಪ್ರಚಾರ ಮಾಡಿದ್ದುಂಟು. ಆಗ್ಗೆ ಖಾದಿ ಕೊಳ್ಳುವುದೂ ಅಪರಾಧವೆಂದು ಹೆದರಿ ಖಾದಿ ಕೊಳ್ಳದೆ ಇರುವ ಜನರೂ ಇದ್ದರು.

ನಾನು ವಿದ್ಯಾರ್ಥಿಯಾಗಿದ್ದಾಗ (ನನ್ನ ಸ್ಮೃತಿಯಂತೆ) ನಗರದಲ್ಲಿ ೪–೬ ವರ್ತಮಾನಪತ್ರಗಳು ಮಾತ್ರ ಬರುತ್ತಿದ್ದವು. ಆಗ್ಗೆ ಕರ್ನಾಟಕದಲ್ಲಿ ಹೆಸರಾದ ಪತ್ರಿಕೆ 'ಶುಭೋದಯ'. ನಾನಿದ್ದ ಕೇರಿಯಲ್ಲಿ ದಿವಂಗತ ದಳವಾಯಿ ವೆಂಕಟಾಚಾರ್ಯರೊಬ್ಬರೇ ಅದನ್ನು ತರಿಸುತ್ತಿದ್ದರು. ನನ್ನ ಮನೆಯ ಎದುರಿಗೆ ಗಂಗಾಧರ ಪಂತರೆಂಬ ಸುಮಾರು ೬೦ ವರ್ಷ ವಯಸ್ಸಿನ ಹಿರಿಯರು. ಇವರಿಗೆ ಕನ್ನಡ ಓದಲು ಬರುತ್ತಿರಲಿಲ್ಲ. ಆದರೆ ವರ್ತಮಾನಪತ್ರಗಳಲ್ಲಿಯ ಸಂಗತಿಗಳನ್ನು ತಿಳಿದುಕೊಳ್ಳುವ ಉತ್ಕಟೇಚ್ಛೆ, ಚಪಲ. ನಾನು ಶಾಲೆಯಿಂದ ಬಂದಕೂಡಲೇ 'ಶುಭೋದಯ' ಪತ್ರಿಕೆಯನ್ನು ತರಿಸಿ ನನ್ನಿಂದ ಓದಲು ಹಚ್ಚುತ್ತಿದ್ದರು. ಪತ್ರಿಕೆಯನ್ನು ಪ್ರಾರಂಭದಿಂದ ಕೊನೆಯವರೆಗೆ, ಮುದ್ರಕರು ಎನ್ನುವವರೆಗೂ ಅಕ್ಷರ ಬಿಡದೆ ಓದುತ್ತಿದ್ದೆ. ಪತ್ರಿಕೆಯನ್ನು ಓದುವುದರಲ್ಲಿ ಆಸಕ್ತಿ ಹುಟ್ಟಿಸಿ ಅಭ್ಯಾಸ ಹಾಕಿಸಿದವರು ಈ ಪಂತರು.

ಮುಂದೆ ಬಾಗಲಕೋಟೆಯಿಂದ ಶ್ರೀನಿವಾಸರಾವ್ ಮಂಗಳವೇಢೆಯವರ 'ಕನ್ನಡಿಗ' ಪ್ರಾರಂಭವಾಯಿತು. ಈ ಹೊತ್ತಿಗೆ 'ಕರ್ನಾಟಕ ತರುಣ ಸಂಘ' (ಈಗಿನ ಕರ್ನಾಟಕ ಸಂಘ) ಪ್ರಾರಂಭವಾಗಿದ್ದಿತು. ಕಾರ್ಯದರ್ಶಿಯ ಕೆಲಸ ನನ್ನ ಕಡೆಗೇ ಇದ್ದಿತು. ನಗರದಲ್ಲಿ ಪತ್ರಿಕೆಗಳನ್ನು ಓದುವ ಆಸಕ್ತಿ ಹುಟ್ಟಿಸಬೇಕೆಂದು ಈ ಸಂಘ 'ಕನ್ನಡಿಗ'ವನ್ನು ತರಿಸಿ ಅಂಗಡಿ ಅಂಗಡಿಗೂ ಮನೆಮನೆಗೂ ಹೋಗಿ ಮಾರುವ ಕೆಲಸ ಕೈಗೊಂಡಿತು. ೫–೬ ಜನರು ಸೇರಿ ಈ ಕಾರ್ಯವನ್ನು ಕೈಗೊಂಡೆವು. ನಗರದ ಸುದ್ದಿಗಳು ಪತ್ರಿಕೆಯಲ್ಲಿ ಬರಬೇಕೆಂಬ ಆಸೆ ನನಗಾಯಿತು. ಒಮ್ಮೆ ನಡೆದ ಒಂದು ದುರಂತ ಘಟನೆಯನ್ನು ಬರೆದು ಕಳಿಸಿದೆ. ಅದು ಒಬ್ಬರ ಕೊಲೆಯ ಸುದ್ದಿ. 'ಕನ್ನಡಿಗ' ಈ ಸುದ್ದಿಯನ್ನು ಪ್ರಕಟಿಸಿತು. ಪತ್ರಿಕೆಗೆ ಸುದ್ದಿಗಳನ್ನು ಕಳುಹಿಸುವ ಪ್ರವೃತ್ತಿ ಪ್ರಾರಂಭವಾಯಿತು. ಮುಂದೆ ಬೆಳಗಾಂವಿಯಲ್ಲಿ 'ಸಂಯುಕ್ತ ಕರ್ನಾಟಕ' ಹುಟ್ಟಿತು. ಅದರ ಹುಟ್ಟಿನಿಂದಲೂ ಅದರ–ನನ್ನ ಸಂಪರ್ಕ. ಈಗಲೂ ಅದರ ವರದಿಗಾರ, ಬರಹಗಾರನಾಗಿರುವೆ. ಪತ್ರಿಕೋದ್ಯಮದ ಕಡೆಗೆ ಮನಸ್ಸೆಳೆದದ್ದು 'ಕನ್ನಡಿಗ'. ಅದನ್ನು ಬೆಳೆಯಿಸಿ ಪತ್ರಿಕೋದ್ಯಮಿ (ಜರ್ನಲಿಸ್ಟ್) ಅನ್ನಿಸಿಕೊಳ್ಳುವಂತೆ ಮಾಡಿದ್ದು 'ಸಂಯುಕ್ತ ಕರ್ನಾಟಕ'.

ರಾಯಚೂರಿನ ಹಮ್ದರ್ದ್ ಶಾಲೆಯಲ್ಲಿ (ಪಂ. ತಾರಾನಾಥರು ಸ್ಥಾಪಿಸಿದ್ದು) ಮಾಧ್ಯಮಿಕ ಅಭ್ಯಾಸ ಮುಗಿಸಿ ಪ್ರೌಢಾಭ್ಯಾಸಕ್ಕಾಗಿ (ಮ್ಯಾಟ್ರಿಕ್) ಹೈದ್ರಾಬಾದಿಗೆ ಹೋದೆನಾದರೂ ಅನನುಕೂಲದಿಂದ ಅಭ್ಯಾಸವನ್ನು ತ್ಯಜಿಸಿ ಹಮ್ದರ್ದ್ ಶಾಲೆಯಲ್ಲಿ ಅಧ್ಯಾಪಕನಾಗಿ ಸೇರಿದೆ. ಈ ಹೊತ್ತಿಗೆ ತಾರಾನಾಥರನ್ನು ಸರಕಾರ ಗಡಿ ದಾಟಿಸಿದ್ದಿತು. ಶಾಲೆಯ ವ್ಯವಸ್ಥೆ ಸ್ಥಾನಿಕ ಮುಖಂಡರದಾಗಿದ್ದಿತು. ವರ್ಷ 1930–31 ಇರಬೇಕು. ಧಾರವಾಡದಲ್ಲಿ ನಾಡಹಬ್ಬವನ್ನು ರಾಷ್ಟ್ರೀಯ ಹಬ್ಬವನ್ನಾಗಿ ನೆರವೇರಿಸಲು ಪ್ರಾರಂಭಿಸಿದ್ದರು. ಈ ಹಬ್ಬದ ಸಮಾರಂಭಕ್ಕಾಗಿ ನಾನು, ನನ್ನ ಜೊತೆಗೆ ದೊಡ್ಡವೀರಣ್ಣ ಹೋಗಿದ್ದೆವು. ಪತ್ರಿಕೆಗಳಿಗೆ ವರದಿ ಕಳಿಸುವ ನನ್ನ ಕಾರ್ಯ ನಡೆದೇ ಇದ್ದಿತು. ಖಾದಿ

ನೂರಾಟದ ಕೆಲಸ ಪತ್ರಿಕೆಯಲ್ಲಿಯೇ ಸಾಗಿತ್ತು. ರಾಷ್ಟ್ರೀಯ ನಾಯಕರ ದಿನಾಚರಣೆ, ವಿದ್ಯಾರಣ್ಯರ ಪುಣ್ಯತಿಥಿ ಆಚರಣೆ ಕ.ತ. ಸಂಘದ ಆಶ್ರಯದಲ್ಲಿ ಹೆಚ್ಚಾಗಿ ನನ್ನ ನಿಯೋಜಕತ್ವದಲ್ಲಿ ಪ್ರಾರಂಭವಾದವು. ನಾನು ನಾಡಹಬ್ಬಕ್ಕೆ ಹೋದುದು, ರಾಷ್ಟ್ರೀಯ ಕಾರ್ಯಕ್ರಮಗಳನ್ನು ನಡೆಯಿಸುತ್ತಿದ್ದುದು ಶಾಲೆಯ ವ್ಯವಸ್ಥಾಪಕರಿಗೆ ರಾಜಕೀಯ ವೆನಿಸಿ ಹಿಡಿಸದಾದವು. ಶಾಲೆಯಿಂದ ನನ್ನನ್ನು ಮನೆಗೇ ಕಳಿಸಿದರು. ನನ್ನ ಹಿರಿಯರು ಸ್ವತಂತ್ರ ಉದ್ಯೋಗವೆಂದು ಔಷಧ ಮತ್ತು ಜನರಲ್ ಅಂಗಡಿಯನ್ನು ತೆಗೆದುಕೊಟ್ಟರು. ಈ ಅಂಗಡಿ ಮುಂದೆ ರಾಜಕೀಯ ಮತ್ತು ರಾಷ್ಟ್ರೀಯ ಚಟುವಟಿಕೆಗಳಿಗೆ ಸ್ಥಳವಾಯಿತು.

ಹೈದ್ರಾಬಾದ್ ಸಂಸ್ಥಾನದಲ್ಲಿ ನನಗೆ ನೆನಪಿದ್ದಂತೆ, 1938ರ ವರೆಗೆ ಕಾಂಗ್ರೆಸ್ ಸಂಸ್ಥೆ ಇರಲಿಲ್ಲ. ಕರ್ನಾಟಕ ಕಾಂಗ್ರೆಸ್ ಸಂಸ್ಥೆಯು ರಾಯಚೂರನ್ನು ವಿಜಾಪುರ ಜಿಲ್ಲಾ ಕಾಂಗ್ರೆಸ್ಸಿಗೆ ಸೇರಿಸಿದ್ದಿತು. ಈ ವಿಜಾಪುರ ಜಿಲ್ಲಾ ಕಾಂಗ್ರೆಸ್‌ನೊಡನೆ ಸಂಪರ್ಕ ಬೆಳೆಸಿ ಕಾಂಗ್ರೆಸ್ ಸದಸ್ಯತ್ವ ಪತ್ರಿಕೆಗಳನ್ನು ತರಿಸಿಕೊಂಡು ಕಾಂಗ್ರೆಸ್ ಸದಸ್ಯರನ್ನಾಗಿ ಮಾಡುವ ಕಾರ್ಯ ಪ್ರಾರಂಭಿಸಿದೆ. ಜನರು ಅಭಿಮಾನದಿಂದ ಸದಸ್ಯರಾಗುತ್ತಿದ್ದರಾದರೂ ಹೆಸರು ಬಹಿರಂಗಪಡಿಸಬಾರದೆಂದು ದೈನ್ಯತೆಯಿಂದ ಕೇಳಿಕೊಳ್ಳುತ್ತಿದ್ದರು. ನಗರದ ಪ್ರಸಿದ್ಧ ವಕೀಲರೆಂಬುವರು ಸಹ ಸದಸ್ಯರಾಗಲು ಹಿಂದುಮುಂದು ವಿಚಾರಮಾಡಿ, “ಸದಸ್ಯರನ್ನಾಗಿ ಮಾಡಿ ನಮ್ಮನ್ನು ಸಂಕಟಕ್ಕೆ ಗುರಿಮಾಡುವುದೇಕೆ ?” ಎಂದು ಆಗ್ಗೆ ಪ್ರಶ್ನಿಸಿದ್ದೂ ಉಂಟು. ಅಂಗಡಿ ವ್ಯವಹಾರದಲ್ಲಿಯೂ ನನಗೆ ಯಶಸ್ಸು ದೊರೆಯಲಿಲ್ಲ. ೪–೬ ವರ್ಷಗಳಲ್ಲಿಯೇ ವ್ಯವಹಾರಕ್ಕೆ ಶರಣುಹೊಡೆದೆ. ಪಿತ್ರಾರ್ಜಿತ ಭೂಮಿಯೇ ಜೀವನಾಧಾರವಾಯಿತು.

1938ರಲ್ಲಿ ಹೈದ್ರಾಬಾದ್ ಸಂಸ್ಥಾನ ಕಾಂಗ್ರೆಸ್ ಪ್ರಾರಂಭವಾದರೂ ಸರಕಾರದಿಂದ ಪ್ರತಿಬಂಧನವಾಯಿತು. ಸಂಸ್ಥಾನದಲ್ಲಿ ಗುಪ್ತವಾಗಿ ಕಾಂಗ್ರೆಸ್ ಚಟುವಟಿಕೆಗಳು ನಡೆದೇ ಇದ್ದವು. 1938ರಿಂದ ವಿಜಾಪುರ ಜಿಲ್ಲಾ ಕಾಂಗ್ರೆಸ್‌ದಿಂದ ನನ್ನ ಸಂಬಂಧ ತಪ್ಪಿತೆಂದು ಹೇಳಬೇಕು. ಅಂದಿನಿಂದ ನಮ್ಮ ಕಾರ್ಯಚಟುವಟಿಕೆ ಸಂಸ್ಥಾನ ಕಾಂಗ್ರೆಸ್ ಅಂಗವಾಗಿ ನಡೆಯಿತು.

1942ರಲ್ಲಿ ‘ಭಾರತದಿಂದ ತೊಲಗಿ’ ಚಳವಳಿಯ ವೈಯಕ್ತಿಕ ಸತ್ಯಾಗ್ರಹ. ಈ ಹೊತ್ತಿಗೆ ಸ್ಥಳೀಯ ಪ್ರಭಾವೀ ವ್ಯವಸ್ಥಾಪಕರಾದ ಫಡ್ನವೀಸ್ ಅಡವಿರಾಯರಿಗೂ ನನಗೂ ನಿಕಟವಾದ ಗೆಳೆತನ ಬೆಳೆದಿದ್ದಿತು. ಕಾಂಗ್ರೆಸ್ ಕಾರ್ಯದಲ್ಲಿ ಇಬ್ಬರೂ ಸಹಭಾಗಿಗಳಾಗಿ ಕೆಲಸ ನಡೆಸಿದೆವು. 1942ರಲ್ಲಿ ಅಡವಿರಾಯರು ಸತ್ಯಾಗ್ರಹ ನಡೆಸುವುದಾಗಿ ನಿರ್ಧರಿಸಿದರು. ನಾನು ಸತ್ಯಾಗ್ರಹ ಮಾಡಕೂಡದೆಂದು ಆದೇಶಿಸಿ, ಸತ್ಯಾಗ್ರಹ ಮುಂದುವರಿಸಿಕೊಂಡು ಹೋಗುವ ಮತ್ತು ರಾಜಕೀಯ ಪ್ರಚಾರಪತ್ರಿಕೆಗಳನ್ನು ಬರೆಯುವ, ಸೈಕ್ಲೋಸ್ಟೈಲ್ ಮಾಡಿ ಹಂಚಿಸುವ ಕೆಲಸ ರಹಸ್ಯವಾಗಿ ಮಾಡಲು ನನಗೊಪ್ಪಿಸಿದರು, ಗಣದಾಳ ನಾರಾಯಣಪ್ಪನು ಎರಡನೇ ಸತ್ಯಾಗ್ರಹಿಯಾಗಿ

ಗೋಲ್ಕಾಣಾ ಬಳಿ ಸತ್ಯಾಗ್ರಹಮಾಡಿ ಬಂಧಿತನಾದ. ಅವನಿಗೆ 9 ತಿಂಗಳು ಶಿಕ್ಷೆ ಆಯಿತು. ಕೆಲವು ವಿದ್ಯಾರ್ಥಿಗಳು ಮುಂದೆ ಬಂದು ಸತ್ಯಾಗ್ರಹಮಾಡಿ ಬಂಧಿತರಾದರು. ಹತ್ತಾರು ವಿದ್ಯಾರ್ಥಿಗಳನಂತರ ಸತ್ಯಾಗ್ರಹಕ್ಕೆ ಯಾರೂ ದೊರೆಯಲಿಲ್ಲ. ಕೊನೆಯ ಸತ್ಯಾಗ್ರಹಿ ನಾನೆಂದು ಗುಪ್ತವಾಗಿ ಅಡವಿರಾಯರಿಗೆ ತಿಳಿಸಿದೆ. ದಿನವನ್ನೂ ನಿಶ್ಚಯಿಸಿದ್ದಿತು. ಆದರೆ ಗಾಂಧೀಜಿಯವರು ಈ ಸತ್ಯಾಗಹವನ್ನು ಹಿಂತೆಗೆದುಕೊಂಡರು. ನನಗೆ ಅವಕಾಶ ದೊರೆಯಲಿಲ್ಲ. ಸತ್ಯಾಗ್ರಹ ಮಾಡಿ ಬಂಧಿತನಾಗುವವರೆಗೆ ಒಂದೇ ಹೊತ್ತು ಊಟವೆಂದು ಪ್ರತಿಜ್ಞೆ ಮಾಡಿಕೊಂಡೆ. ದೇವರು ಈ ಪ್ರತಿಜ್ಞೆಯನ್ನು ಪೂರ್ತಿಗೊಳಿಸಿದ.

1947 ಆಗಸ್ಟ್ 15 ಭಾರತದಲ್ಲಿ ಸ್ವಾತಂತ್ರ್ಯದ ಸಂತಸ. ಭಾರತದ ಸ್ವತಂತ್ರ ಧ್ವಜ ಹಾರಿಸುವ ಉತ್ಸಾಹ. ಹೈದ್ರಾಬಾದ್ ರಾಜ್ಯದಲ್ಲಿ ಆ ಸಂತಸ, ಉತ್ಸಾಹದ ಯೋಗವಿಲ್ಲ. ಭಾರತ ಧ್ವಜನನ್ನು ಹಾರಿಸುವುದು ನಿಷೇಧ. ಹೀಗಾಗಿ ಸಂಸ್ಥಾನದಲ್ಲಿ ಸತ್ಯಾಗ್ರಹ ಪ್ರಾರಂಭ ಆಗಸ್ಟ್ ಏಳರಿಂದಲೇ ಸತ್ಯಾಗ್ರಹಕ್ಕೆ ನಾಂದಿ. ರಾಯಚೂರಿನಲ್ಲಿ ನಾನು, ದಿ|| ಗುಡಿಹಾಳ ಹನುಮಂತರಾಯರು ಪ್ರಥಮ ಸತ್ಯಾಗ್ರಹಿಗಳಾಗಿ ಆಗಸ್ಟ್ ಏಳರಂದು ಸರಕಾರದ ಆಜ್ಞೆಯನ್ನು ಉಲ್ಲಂಘಿಸಿದೆವು. ನಮ್ಮ ಜೊತೆಗೆ ದೋಮಕುಂಟೆ ನಾರಾಯಣಪ್ಪನೂ (ವ್ಯಾಪಾರಿ) ಸೇರಿದ. ಬಂಧಿತರಾದೆವು. ನನ್ನ ಆಚರಣೆ ಜೈಲಿನಲ್ಲಿ ಊಟಮಾಡಲು ಬೇಡವೆನಿಸಿತು. ಜೈಲಿನಲ್ಲಿರುವವರೆಗೂ ನಾನು ಊಟ ಮಾಡಲಿಲ್ಲ. ಜೈಲಧಿಕಾರಿಗಳು ಒದಗಿಸುವ ಹಾಲು, ಹಣ್ಣು, ಗೆಡ್ಡೆಗೆಣಸು ನನ್ನ ಆಹಾರವಾಗಿದ್ದಿತು. ನಮ್ಮನ್ನು ಸ್ಥಾನಬದ್ಧರನ್ನಾಗಿ ಮಾಡಿ ಗುಲ್ಬರ್ಗಾ ಜೈಲಿಗೆ ಕಳಿಸಿದರು. ಗುಲ್ಬರ್ಗಾ ಜೈಲಿನಲ್ಲಿ ಸತ್ಯಾಗ್ರಹಿಗಳಿಗೆ ದೊರೆಯಬೇಕಾಗಿದ್ದ ಕೆಲವೊಂದು ಸೌಕರ್ಯಕ್ಕಾಗಿ ಉಪವಾಸ ಮಾಡಬೇಕಾಗಿ ಬಂತು. ನಾನೊಬ್ಬನೇ 9 ದಿನ ಉಪವಾಸ ಮಾಡಿದೆ. ನನ್ನ ಸಹವಾಸಿಗಳು ಒಂದೆರಡು ದಿನ ಹಾಗೂ ಹೀಗೂ ಉಪವಾಸ ಮಾಡಿದರು. ನನ್ನ ಉಪವಾಸದಲ್ಲಿ ನಾನು ದಿನಕ್ಕೆ 1 ಔನ್ಸ್ ನೀರು ಮಾತ್ರ ತೆಗೆದುಕೊಳ್ಳುತ್ತಿದ್ದೆ. ಇದರ ಪರಿಣಾಮವಾಗಿ ಕೆಲವೊಂದು ಸೌಕರ್ಯಗಳು ದೊರೆತವು. ನನ್ನನ್ನು ನಿಜಾಮಾಬಾದ್ ಜೈಲಿಗೆ ಕಳಿಸಿದರು. ಅಲ್ಲಿಯೂ 19 ದಿನ ಉಪವಾಸ ಮಾಡಿದೆ. ಯಾವ ಬೇಡಿಕೆಗಾಗಿ ಅಲ್ಲ; ನನ್ನ ಸಾಮರ್ಥ್ಯ ನಾನು ಕಂಡುಕೊಳ್ಳಲು. ಈ ಉಪವಾಸದಲ್ಲಿ ಯಥೇಚ್ಛ ನೀರು ತೆಗೆದುಕೊಳ್ಳುತ್ತಿದ್ದೆ. (ನನ್ನ ಜೈಲಿನ ಅನುಭವಗಳು 'ನೆನಹಿನ ಪುಟಗಳು' ಎಂದು ಪುಸ್ತಕರೂಪದಲ್ಲಿ ಪ್ರಕಟವಾಗಿವೆ.)

ನಾನು ಜೈಲಿನಲ್ಲಿರುವ ಅವಧಿಯವರೆಗೂ ನನ್ನ ಕ್ಷೇಮಕ್ಕಾಗಿ ನನ್ನ ತಾಯಿಯು ಊಟವನ್ನೇ ಮಾಡಲಿಲ್ಲವೆಂದೂ ಫಲಾಹಾರವೇ ಅವರ ಆಹಾರವಾಗಿತ್ತೆಂದೂ ನನ್ನ ಬಿಡುಗಡೆಯನಂತರ ನನಗೆ ತಿಳಿಯಿತು. ಇದು ಮಗನ ಕ್ಷೇಮಕ್ಕಾಗಿ ತಾಯಿ ಮಾಡಿದ ವ್ರತ. ನನ್ನ ಬಿಡುಗಡೆಯಾಗುವ ಹೊತ್ತಿಗೆ ತಾಯಿ ರಾಯಚೂರಿನಲ್ಲಿ ಮನೆಯಲ್ಲೇ

ಇದ್ದರೂ ಹೆಂಡತಿ ಹಾಗೂ ಇತರರು ಹೈದ್ರಾಬಾದ್ ಸಂಸ್ಥಾನದ ಗಡಿಯ ಆಚೆ ತುಂಗಭದ್ರೆಯಲ್ಲಿ ವಾಸಿಸಿದ್ದರು. ಜೈಲಿನಿಂದ ಬಂದನಂತರ ನಾನು ಸಹ ತುಂಗಭದ್ರೆಗೆ ನಡೆದೆ.

ಭೂಮಿಯಿಂದ ಬರಬೇಕಾಗಿದ್ದ ದುಡ್ಡು ತರಲು ಒಮ್ಮೆ ಭೂಮಿ ಇರುವ ಹಳ್ಳಿಗೆ ಹೋದೆ. ಹೋಗುವಾಗ ಯಾರೂ ತಡೆಯಲಿಲ್ಲ. ತಿರುಗಿ ಬರುವಾಗ ಮಟಮರಿ ಸ್ಟೇಷನ್‌ನಲ್ಲಿ ರಜಾಕಾರರು ಮುತ್ತಿ ಬಂಧಿಸಿದರು. ಎರಡು ದಿನ ಆಹಾರ ಕೊಡದೆ ತಮ್ಮ ವಶದಲ್ಲಿ ಇಟ್ಟುಕೊಂಡು ರಾಯಚೂರಿಗೆ ತಂದು ಜಿಲ್ಲಾಧಿಕಾರಿಗಳ ಮುಂದೆ ನಿಲ್ಲಿಸಿದರು. ಜಿಲ್ಲಾಧಿಕಾರಿ ನನ್ನನ್ನು ಹಿಡಿಯಲು ಆಜ್ಞೆ ಇಲ್ಲವೆಂದು ರಜಾಕಾರರ ಕೃತಿಯನ್ನು ನಿಷೇಧಿಸಿದ. ಆದರೂ ರಜಾಕಾರರು ನನ್ನನ್ನು ಬಿಡಲಿಲ್ಲ. ಕರೆದೊಯ್ದು ಪೋಲಿಸರ ವಶಕ್ಕೆ ಕೊಟ್ಟರು. 15 ದಿನ ಪೋಲಿಸರ ವಶದಲ್ಲಿಯೇ ಇದ್ದೆ. ಅನಂತರ ನನ್ನನ್ನು ಬಿಟ್ಟುಬಿಟ್ಟರು.

ಹೈದ್ರಾಬಾದ್ ಸಂಸ್ಥಾನದ ಮೇಲೆ ಪೋಲಿಸರ ಕ್ರಮ ನಡೆದನಂತರ ಸಂಸ್ಥಾನ ಕಾಂಗ್ರೆಸ್ ಪೂರ್ಣ ಅಸ್ತಿತ್ವದಲ್ಲಿ ಬಂದಿತು. ಸಂಸ್ಥಾನದಲ್ಲಿಯೂ ಮೂರು ಭಾಗ: ತೆಲಂಗಾಣ, ಮಹಾರಾಷ್ಟ್ರ ಮತ್ತು ಕರ್ನಾಟಕ. ಈ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಕಮಿಟಿಯ ಸ್ಥಾಯಿ ಸಮಿತಿಯ ಸಭಾಸದನಾಗಿಯೂ ಕೆಲವರ್ಷ ಕಾರ್ಯ ಮಾಡಿದೆ.

ಸಂಸ್ಥಾನ ಕಾಂಗ್ರೆಸ್ಸಿನ ಸಂಸ್ಥೆಯ ಚುನಾವಣೆ ನಡೆಯಿತು. ಅದು ಮೊದಲ ಚುನಾವಣೆ ಅಲ್ಲ. ೫-೬ ಚುನಾವಣೆಗಳು ನಡೆದು ಹೋಗಿದ್ದವು. ಈ ಸಲದ ಚುನಾವಣೆಯಲ್ಲಿ ಪಂಗಡಗಳಾಗಿ ಚುನಾವಣೆ ತುರುಸಿಗೆ ಬಂದಿತ್ತು. ಈ ಚುನಾವಣೆಯಲ್ಲಿ ಸಂಸ್ಥೆಯಲ್ಲಿಯ ಸ್ಥಾನಗಳಿಗೂ ಪೈಪೋಟಿ; ಕಾಂಗ್ರೆಸ್ಸಿನ ಅನೇಕರಲ್ಲಿ ಸ್ಥಾನದ ಲಾಲಸೆ; ತಮ್ಮ ಪಂಗಡ ಬಲವಾಗಲಿ, ಎಂಬ ದೃಷ್ಟಿಯಿಂದ ಅರ್ಹತೆ, ಅನರ್ಹತೆ ನೋಡದೆ ಇದುವರೆಗೆ ದೇಶಕ್ಕಾಗಿ ದುಡಿದವರನ್ನು ಗಣನೆಗೆ ತೆಗೆದುಕೊಳ್ಳದೆ ಚುನಾವಣಾ ಪ್ರಚಾರ ನಡೆಯಿತು. ಈ ಬಗೆಯ ಸ್ವಾರ್ಥ ನನಗೆ ಹಿಡಿಸಲಿಲ್ಲ. ಚುನಾವಣೆಯಿಂದ ದೂರಾದೆ. ಅಂದಿನಿಂದ ಇದುವರೆಗೂ ಕಾಂಗ್ರೆಸ್ ಸದಸ್ಯನಾಗುವ ಗೊಡವೆಗೆ ಹೋಗಿಲ್ಲ.

ಕಾಂಗ್ರೆಸ್‌ನಲ್ಲಿರದಿದ್ದರೂ ವೈಯಕ್ತಿಕವಾಗಿ ನನ್ನ ಒಬ್ಬಿಬ್ಬ ಗೆಳೆಯರ ಸಹಾಯದಿಂದ ನಾಗರಿಕರ ಹಕ್ಕುಗಳಿಗಾಗಿ ಸಾಧ್ಯವಾದಷ್ಟು ಸಾಹಸ ನಡೆದಿದೆ. ರಾಜಕೀಯ ಸಭೆಸಮಾರಂಭಗಳಿಗೆ ಕರೆದರೆ ಹೋಗಿ ಭಾಗ ತೆಗೆದುಕೊಳ್ಳುವ ಪರಿಪಾಠ ಇಟ್ಟುಕೊಂಡಿದ್ದೇನೆ. 'ಸಂಯುಕ್ತ ಕರ್ನಾಟಕ' ಪತ್ರಿಕೆಯ ಸಂಬಂಧ ಎಂದಿನಂತೆ ಇಂದಿಗೂ ಇದೆ. ನನ್ನ ಗೆಳೆಯ ಎಸ್. ಜಿ. ಲೋಖಂಡೆ ಮತ್ತು ನಾನೂ ಸೇರಿ 'ಕಾಂತಿ' ಎಂಬ ಪಾಕ್ಷಿಕ ಪತ್ರಿಕೆ ಈಗ ವರ್ಷದಿಂದ ಹೊರಡಿಸುತ್ತಿದ್ದು ಅದರ ಸಂಪಾದಕನಾಗಿರುವೆ. (ಪತ್ರಿಕೆ ಜುಲೈ, 1975ರಿಂದ ನಿಂತಿದೆ. —ಸಂ||).

ಹೈ.ರಾ. 8

# ಜಿ. ಮಧ್ವರಾವ್

ಜನನ: 1897 ಉದ್ಯೋಗ: ವಕೀಲ ವಿಳಾಸ: ಗಾಜುಗಾರಪೇಟೆ, ರಾಯಚೂರು

---



1925ರಲ್ಲಿ ನಾನು ವಕೀಲಿ ಪರೀಕ್ಷೆ ಪಾಸುಮಾಡಿ ನನ್ನ ತಂದೆಯವರ ಸಂಗಡ ರಾಯಚೂರಲ್ಲಿ ವಕೀಲಿವೃತ್ತಿಯನ್ನು ಪ್ರಾರಂಭಿಸಿದೆನು. ಜನಾರ್ದನ ರಾವ್ ದೇಸಾಯಿ, ಜಿ. ರಾಮಾಚಾರ್ ಹಾಗೂ ರಂಗನಾಥ ದಿವಾಕರ ಇವರು ನನಗೆ ಚಳವಳಿ ಸೇರಲು ಸ್ಫೂರ್ತಿಕೊಟ್ಟವರಾಗಿದ್ದು ರಜಾಕಾರರ ಅತ್ಯಾಚಾರಗಳಿಂದ ನಾನು ತೀರ ಸಿಟ್ಟಿಗೆದ್ದೆನು. ಹೈದರಾಬಾದಿನಲ್ಲಿ ರಜಾಕಾರರು ಒಮ್ಮೆ ಎಂಟು ಜನರನ್ನು ಬಸ್ಸಿನಿಂದ ಇಳಿದಕೂಡಲೇ ನನ್ನೆದುರಿಗೇ ಇರಿದು ಕೊಂದರು. ರಾಯಚೂರು ನಗರದಲ್ಲಿ ಸಾವಿರಾರು ಬಡಜನರ ಗುಡಿಸುಲುಗಳನ್ನು ಸುಟ್ಟು ಅವರನ್ನು ಕಷ್ಟಕ್ಕೀಡುಮಾಡಿದರು. ಗ್ರಾಮಾಂತರ ಪ್ರದೇಶಗಳಲ್ಲೂ ಹಿಂದುಗಳ ಮನೆಗಳನ್ನು ಲೂಟಿಮಾಡುತ್ತಿದ್ದರಲ್ಲದೆ ಹೆಣ್ಣುಮಕ್ಕಳಿಗೂ ಹಿಂಸೆ ಕೊಟ್ಟು ಅವರ ಮೇಲೆ ಕೈಮಾಡಿ ಆಭರಣಗಳನ್ನು ದೋಚುತ್ತಿದ್ದರು. ಆಗ ಜಿ. ರಾಮಾಚಾರ್ಯರ ಜೊತೆ ಸಹಕರಿಸಿ ರಜಾಕಾರರ ಅತ್ಯಾಚಾರದ ಬಗ್ಗೆ ಆಗಿನ ಪ್ರಧಾನಮಂತ್ರಿ ಮಿರ್ ಲಾಯಕ್ ಅಲಿ ಅವರಿಗೆ ವರದಿ ತಿಳಿಸಲು ನೆರವಾದೆನು. ಅಲ್ಲದೆ ಮುಂದೆ ಆ. 15, 1947ರಂದು ನಾನು ಬೆಳಗ್ಗೆ ಇಬ್ಬರು ವಿದ್ಯಾರ್ಥಿಗಳ ಜೊತೆ ರಾಯಚೂರಲ್ಲಿ ಸತ್ಯಾಗ್ರಹ ಮಾಡಿದೆನು. ಇದೇ ಕಾಲಕ್ಕೆ ಜನಾರ್ದನರಾವ್ ದೇಸಾಯಿ ಅವರ ನೇತೃತ್ವದಲ್ಲಿ ಗುಲ್ಬರ್ಗ, ಬೀದರ್ ಜಿಲ್ಲೆಗಳಲ್ಲೂ ಸತ್ಯಾಗ್ರಹ ಆಯಿತು.

ನನ್ನ ವಿಚಾರಣೆಯನ್ನು ರಾಯಚೂರು ಜೈಲಿನಲ್ಲೇ ಮಾಡಿ ನನಗೆ ಹತ್ತೊಂಬತ್ತು ತಿಂಗಳು ಶಿಕ್ಷೆ ವಿಧಿಸಿದರು. ಮೂರು ತಿಂಗಳನಂತರ ಅಲ್ಲಿಂದ ಗುಲ್ಬರ್ಗ ಜೈಲಿಗೆ ವರ್ಗಾ

ಯಿಸಿದರು. ಅಲ್ಲಿ ಪೋಲಿಸರ ಅತ್ಯಾಚಾರದಿಂದ ಒಬ್ಬರು ಸತ್ತರು. ನಾನು ಜೈಲಿನಲ್ಲಿದ್ದಾಗ ನನ್ನ ಮನೆಮುಂದಿಯಲ್ಲ ಮನೆಯಲ್ಲಿದ್ದಾಗಲೇ ರಜಾಕಾರರು ಮನೆಗೆ ಬೆಂಕಿ ಹಚ್ಚಿದರು. ಜೈಲಿನಲ್ಲಿ ನನ್ನ ಜೊತೆ ಅಡವಿರಾವ್ ಫಡ್ನೀಸ್, ಜಿ. ರಾಮಾಚಾರ್ ಮುಂತಾದ ನೂರಾರು ಜನ ಇದ್ದರು.

ನಾನು ಮೊದಲಿನಿಂದ ರಾ|| ಜಿ|| ಕಾಂ|| ಸಮಿತಿ ಅಧ್ಯಕ್ಷನಾಗಿದ್ದೆನಲ್ಲದೆ ಹಿಂದಣ ಹೈದರಾಬಾದ್ ಸಂಸ್ಥಾನದಲ್ಲಿ ರಾಜ್ಯಮಟ್ಟದ ಆಹಾರ ಸಮಿತಿ, ಮಾರ್ಕೆಟಿಂಗ್ ಸಮಿತಿ, ಟಿನೆನ್ಸಿ ಸಮಿತಿ ಇವುಗಳಲ್ಲಿ ಸದಸ್ಯನಾಗಿ ದುಡಿದಿದ್ದೇನೆ. 1947ರಲ್ಲಿ ಚಳವಳಿ ಸೇರಿದಾಗ ವಕೀಲವೃತ್ತಿ ತ್ಯಜಿಸಿ ದೇಶಕಾರ್ಯಕ್ಕೆ ನನ್ನನ್ನು ಅರ್ಪಿಸಿಕೊಂಡೆನು.

ಹೈ.ರಾ. 9

## ಶಂಕರಗೌಡ ಬೆಟ್ಟದೂರು

ಜನನ : 1928 ಉದ್ಯೋಗ : ಕೃಷಿ ವಿಳಾಸ : ಕಪ್ಪಗಲ್, ತಾ|| ಮಾನ್ವಿ



ನಾನೊಬ್ಬ ಚಿತ್ರಕಲಾವಿದ. ಶಾಂತಿನಿಕೇತನದಲ್ಲಿ ನಾಲ್ಕು ವರ್ಷ ಅಭ್ಯಾಸಮಾಡಿ ಪದವಿ ಪಡೆದಿರುವೆ. ನಂದಲಾಲ್ ಬಸು ಅವರ ಅಚ್ಚುಮೆಚ್ಚಿನ ಶಿಷ್ಯ ನಾನು. ಹುಟ್ಟಿದೂರು ರಾಯಚೂರು ಜಿಲ್ಲಾ ಮಾನ್ವಿ ತಾಲ್ಲೂಕಿನ ಬೆಟ್ಟದೂರು. ಪ್ರಸಿದ್ಧ ಗೌಡರ ಮನೆತನ ನನ್ನದು.

ನನ್ನ ವಿದ್ಯಾರ್ಥಿಜೀವನದಲ್ಲಿ ಓದಿಗಿಂತ ಚಿತ್ರಕಲೆಯ ಕಡೆಗೇ ನನ್ನ ಮನಸ್ಸು ಹೆಚ್ಚು ವಾಲಿತ್ತು. ದೇಶದ ರಾಜಕೀಯ, ಸ್ವಾತಂತ್ರ್ಯ ಹೋರಾಟ ಎಂದರೆ ನನ್ನ ಮನಸ್ಸು ಎಲ್ಲವನ್ನೂ ಮರೆಯುತ್ತಿತ್ತು. ಆ ಹೋರಾಟದಲ್ಲಿ ಭಾಗಿಯಾಗುವ ಪುಣ್ಯ ನನಗೆ ಬಂದೀತೇ ಎಂದು ಅಂಥ ಸುದಿನವನ್ನು ನೆನೆಯುತ್ತಿದ್ದೆ.

ನಿಷ್ಠುರವಾದಿಯಾದ ನನ್ನ ಅಣ್ಣ ಚೆನ್ನಬಸವಪ್ಪ ವಕೀಲ (ಹೆಸರಾಂತ ಲೇಖಕ 'ಅನುರಾನಂದ') ಮತ್ತು ಮಕ್ಕಳ ಸೇವೆಯೇ ಮಹೇಶನ ಸೇವೆ ಎಂದು ಬಗೆದು ನಿರ್ಮಲಾಂತಃಕರಣದಿಂದ ಫ್ರೀ ಬೋರ್ಡಿಂಗ್ ಸ್ಥಾಪಿಸಿ ಮಕ್ಕಳ ಸೇವೆಯಲ್ಲಿಯೇ ಕಾಲಕಳೆದ ನನ್ನ ಪೂಜ್ಯ ಗುರು ಲಿ|| ಪಂಡಿತ ಸೂಗವೀರ ಶರ್ಮರ ಪ್ರಭಾವ ನನ್ನ ಮೇಲೆ ಬಹಳವಾಗಿದೆ.

ಅನ್ಯಾಯ, ಅಸತ್ಯ, ಅನಾಚಾರ, ಗುಲಾಮಗಿರಿ—ಎಂದರೆ ನನಗೆ ಎಲ್ಲಿಲ್ಲದ ಸಿಟ್ಟು. ಇವನ್ನು ಒಂದು ನಿಮಿಷವೂ ನಾನು ತಡೆಯಲಾರೆ. ಭಾರತಕ್ಕೆ ಸ್ವಾತಂತ್ರ್ಯ ಬರುವ ಶಿವಶುಭಕಾಲದಲ್ಲಿ ನಾನು ಹೈಸ್ಕೂಲಿನ ಒಂಬತ್ತನೆಯ ವರ್ಗದ ವಿದ್ಯಾರ್ಥಿಯಾಗಿದ್ದೆ. ನಮಗೆ ಮಾತ್ರ ಆಗ ಸ್ವಾತಂತ್ರ್ಯದ ಸವಿ ದೂರಾದಂತೆನಿಸಿತು. ನಾವು ಹೋರಾಟಕ್ಕೆ ಇಳಿದೆವು. 15 ಆಗಸ್ಟ್ 1947ಕ್ಕಿಂತ ಎಳೆಂಟು ತಿಂಗಳು ಮುಂಚೆಯೇ ನಮ್ಮ ಹೋರಾಟದ ರೂಪರೇಷೆ ಹಾಕಿದೆವು; ಸ್ವಯಂಸೇವಕರ ಗುಂಪು ತಯಾರಿಸಿದೆವು. ನಾವು ಅನೇಕ ವಿದ್ಯಾರ್ಥಿಗಳಿದ್ದೆವು. ಎಂ. ನಾಗಪ್ಪ, ಡಿ. ಪಂಪಣ್ಣ, ರಾಮುಲು, ಪೊನ್ನೂರು ವೀರಣ್ಣ, ಆಯನೂರು ನರಸಪ್ಪ. ಆಲ್ದೊಡ ಅಮರೇಶ, ರಂಗಣ್ಣ, ಹಂಪಣ್ಣ, ಅಮರಣ್ಣ, ಶರಭಣ್ಣ, ಉಲುಗುಂಚಿ ವೀರನಗೌಡ, ಪರ್ವತ ರೆಡ್ಡಿ ಮತ್ತು ನಾನು ಈ ಸ್ವಾತಂತ್ರ್ಯ ಹೋರಾಟದಲ್ಲಿ ಮುಖ್ಯಪಾತ್ರ ವಹಿಸಿದೆವು.

ನಾನು ಇವರಲ್ಲಿ ಕೆಲವರೊಡನೆ ತುಂಗಭದ್ರಾಕ್ಕೆ (ಈಗಿನ ಮಂತ್ರಾಲಯಂ ರೋಡ್) ಹೋದೆ. ಅಲ್ಲಿಯ ತಾರಾನಾಥರ ಆಶ್ರಮದಲ್ಲಿ ನಮ್ಮ ವಾಸ. ಅಲ್ಲಿ ಒಂದು ಹೋರಾಟಗಾರರ ಶಿಬಿರವಿತ್ತು; ದಿ|| ಗಣಧಾಳ ನಾರಾಯಣಪ್ಪ ಅವರು ಅದರ ಮುಂದಾಳಾಗಿದ್ದರು.

ನನ್ನನ್ನು ಮತ್ತು ಪರ್ವತ ರೆಡ್ಡಿಯನ್ನು ರೈಫಲ್ ಮುಂತಾದವುಗಳ ಉಪಯೋಗ ಪಡೆಯಲು ಬೆಜವಾಡಕ್ಕೆ ಟ್ರೈನಿಂಗ್‌ಗೆ ಕಳಿಸಲಾಯಿತು. 20 ದಿನಗಳ ಟ್ರೈನಿಂಗ್ ಮುಗಿಸಿ ಬಂದೆವು.

ತುಂಗಭದ್ರಾದ ದಕ್ಷಿಣ ದಂಡೆಯಲ್ಲಿರುವ ಮರಳಿಯಲ್ಲಿ ಕೆಲದಿನವಿದ್ದೆವು. ಅಲ್ಲಿಂದ ಚಳ್ಳಿಕೂಡ್ಲೂರಿಗೆ ಹೋದೆವು. ನಾನೇ ಅಲ್ಲಿಯ ಶಿಬಿರದ ಮುಂದಾಳಾದೆ. ಚಳ್ಳಿ ಕೂಡ್ಲೂರಿನ ಲಿಂಗನಗೌಡರ ಮಹಡಿಯಲ್ಲಿ ನಮ್ಮ ವಾಸ. ಅಲ್ಲಿಂದ ನಾವು ನದಿಯನ್ನು ದಾಟಿ ತುಂಗಭದ್ರೆಯ ಉತ್ತರ ದಂಡೆಗಿದ್ದ ರಜಾಕಾರರ ಕ್ಯಾಂಪುಗಳ ಮೇಲೆ ಹಲ್ಲೆ ಮಾಡುತ್ತಿದ್ದೆವು.

ಒಂದು ರಾತ್ರಿ: ಎಂ. ನಾಗಪ್ಪ, ಚಂದ್ರಯ್ಯ, ಡಿ. ಪಂಪಣ್ಣ, ಪರ್ವತ ರೆಡ್ಡಿ ಮತ್ತು ನಾನು ಕೂಡಿ ಎಡಿವ್ಯಾಳ ಕರೋಡಗಿರಿಗೆ (ಸುಂಕದ ಕಟ್ಟೆ) ಮುತ್ತಿಗೆ ಹಾಕಿ ಅದನ್ನು ಸುಟ್ಟುಬಿಟ್ಟೆವು. ಇದೇ ರೀತಿ ಇನ್ನೊಂದು ದಿನ ಮಾದಲಾಪುರದ ಕರೋಡಗಿರಿಯನ್ನು ಭಸ್ಮಗೊಳಿಸಿದೆವು. ಇನ್ನೊಂದು ರಾತ್ರಿ ನದಿಯ ಉತ್ತರ ದಂಡೆಯಲ್ಲಿದ್ದ ನಿಜಾಮರ ನಾಲ್ಕು ಜನ ಸೈನಿಕರ ಮೇಲೆ ಬಿದ್ದು ಅವರ ಆಯುಧಗಳನ್ನು ಕಸಿದುಕೊಂಡೆವು.

ನಮ್ಮ ಚಳ್ಳಿಕೂಡ್ಲೂರು ಶಿಬಿರಕ್ಕೆ ಒಮ್ಮೆ ಜಯತೀರ್ಥ ರಾಜಪುರೋಹಿತರು ಬಂದಿದ್ದರು. ಅವರು ಬಂದ ನಾಲ್ಕನೆಯ ದಿನ ಹಗಲು ರಾಜಪುರೋಹಿತರ ಆದೇಶದಂತೆ ಆಯನೋರು ಕ್ಯಾಂಪಿನ ಮೇಲೆ ಹಲ್ಲೆಮಾಡಿದೆವು. ಕಾವಲುಗಾರರು ದಿಕ್ಕಾಪಾಲಾಗಿ ಓಡಿಹೋದರು.

ಒಂದು ದಿನ ಹಗಲು ಆಕ್ರಮಣ ಮಾಡಲು ಹೋಗಿ ನಾನು ಮತ್ತು ಆಲ್ಕೋಡ ಅನುರೇಶ ಚೀಕಲಪರ್ವಿಯು (ಶ್ರೀವಿಜಯದಾಸರ ಚೀಕಲಪರ್ವಿ) ಸುಂಕದ ಕಟ್ಟೆಯಲ್ಲಿ ಸಿಕ್ಕುಬಿದ್ದೆವು. "ನಾವು ನೀರಮಾನ್ವಿಯ ಹಂಪನಗೌಡನ ಮಕ್ಕಳು. ನಮ್ಮ ಕುದುರೆ ಕಳೆದಿದೆ. ಆಳುಗಳನ್ನು ಹುಡುಕಲು ಕಳಿಸಿದ್ದೆವು. ಅವರು ಬರಲಿಲ್ಲ; ಕುದುರೆಯೂ ಬರಲಿಲ್ಲ. ಅದಕ್ಕಾಗಿ ಕುದುರೆ ಹುಡುಕುತ್ತಾ ಬಂದೆವು" ಎಂದು ಹೇಳಿದೆವು. ಆಗ ಆ ಸುತ್ತಮುತ್ತಲ ಪ್ರದೇಶದಲ್ಲಿ ನೀರಮಾನ್ವಿ ಹಂಪನಗೌಡರ ಪ್ರಭಾವ ಬಹಳವಾಗಿತ್ತು. ರಜಾಕಾರರು ಸುಮ್ಮನಾದರು; ಆದರೆ ನಮ್ಮನ್ನು ಅಲ್ಲಿಯೇ ಕೂಡಿಸಿದರು. ನಮ್ಮ ಜೇಬುಗಳಲ್ಲಿ ಕೈಬಾಂಬುಗಳು ಮತ್ತು ಹ್ಯಾಂಡ್ ಗ್ರೆನೇಡ್ಸ್ ಇದ್ದವು. ನಾವು ನೀರು ಬೇಡಿದೆವು. ರಜಾಕಾರರು ನಮ್ಮನ್ನು ಯಾವುದೋ ಒಂದು ಲಿಂಗಾಯತರ ಮನೆಗೆ ಕರೆದೊಯ್ದರು. ಅವರು ಹೊರಗೆ ನಿಂತರು; ನಾವು ಒಳಗೆ ಹೋದೆವು. ಮನೆಯಲ್ಲಿ ಒಬ್ಬ ಮುದುಕನಿದ್ದ. ಮುಖ ತೊಳೆವ ನೆಪಮಾಡಿ ನಾವು ಬಚ್ಚಲಮನೆಗೆ ಹೋಗಿ ಅಲ್ಲಿಯೇ ಗೂಡಿನಲ್ಲಿ ಬಾಂಬು ಮತ್ತು ಗ್ರೆನೇಡುಗಳನ್ನಿಟ್ಟೆವು. ನೀರುಕುಡಿದು ಹೊರ ಬಂದೆವು. ಅಂದೇ ಆ ಊರಿನಲ್ಲಿ ಮಾರಮ್ಮನ ಜಾತ್ರೆಯಿತ್ತು. ಊರ ಜನ ನೆರೆದಿದ್ದರು. ರಜಾಕಾರರು ನಮ್ಮನ್ನು ಕರೆದೊಯ್ದು ಊರ ಗೌಡರು ಕುಳಿತ ಎತ್ತರದ ಕಟ್ಟೆಯ ಮೇಲೆ ಕೂಡಿಸಿದರು. ಅಲ್ಲಿ ಪಶುಬಲಿ ನಡೆಯುವುದಿತ್ತು. "ನಮ್ಮಿಂದ ಕೋಣ ಕಡಿಯುವುದನ್ನು ನೋಡಲಾಗುವುದಿಲ್ಲ" ಎಂದು ಹೇಳಿದೆವು. ಹಂಪನ ಗೌಡರ ಹೆಸರಿನ ಪ್ರಭಾವದಿಂದ ಆ ರಜಾಕಾರರು ನಮ್ಮನ್ನು ಹೋಗಗೊಟ್ಟರು. ನಾವು ರಾತ್ರಿಯಾಗುವವರೆಗೂ ನಡೆದು, ಆ ಬಳಿಕ ನದಿ ದಾಟಿ ಈಚೆಗೆ ನಮ್ಮ ಶಿಬಿರಕ್ಕೆ ಬಂದೆವು.

ನಡುವೆ ಒಮ್ಮೆ ಹುಟ್ಟಿದೂರಾದ ಬೆಟ್ಟದೂರು ಮತ್ತು ಮಾನ್ವಿಗೆ ಹೋಗಬೇಕಾಯಿತು. ಕೋಸಗಿಯಿಂದ ಪ್ಯಾಸೆಂಜರ್ ಗಾಡಿಯನ್ನು ಹತ್ತಿದೆ. ಮಟಮಾರಿ (ನಿಜಾಮ ಸಂಸ್ಥಾನದಲ್ಲಿತ್ತು) ನಿಲ್ದಾಣದಲ್ಲಿ ಇಳಿದು ಚೂಕೂರಿಗೆ ಹೋದೆ. ಅಲ್ಲಿ ನನ್ನ ಸ್ನೇಹಿತರಾದ ಮಲ್ಲನಗೌಡ ಮತ್ತು ಸೋಮನಗೌಡರಿದ್ದರು.

ಚೂಕೂರಿನಿಂದ ರಾತ್ರಿ 12 ಘಂಟೆಗೆ ಕುದುರೆ ಏರಿ ಹೊರಟೆ. ಅದು ಸ್ನೇಹಿತರ ಒರೆ ಕುದುರೆ. ಬೆಟ್ಟದೂರಿಗೆ ಹೋಗುವ ಮಧ್ಯದಲ್ಲಿ ರಾಜಲ (ರಾಜೊಳ್ಳಿ) ಬಂಡೆ ಬರುತ್ತದೆ; ಅಲ್ಲಿ ನಿಜಾಮ ಸರಕಾರದ ಸೈನಿಕ ಠಾಣೆ ಇತ್ತು. ದೊಡ್ಡ ರಸ್ತೆ ಬಿಟ್ಟು ನಾನು ಕಾಲುದಾರಿ ಹಿಡಿದೆ. ಆದರೆ ತುಸುದೂರ ಹೋಗುವುದರೊಳಗೆ ದಾರಿ ತಪ್ಪಿತು. ಗಾಢ ಕತ್ತಲು. ಅರ್ಧಗಂಟೆಯ ಬಳಿಕ ತುಸುದೂರದಲ್ಲಿ ಯಾರೋ ನಿಂತು ನನ್ನ ಕಡೆ ಬ್ಯಾಟ್ರಿ ಹಾಕಿ, "Halt, who comes there, friend or foe ?" ಎಂದೊದರಿದರು. ಅಚಾತುರ್ಯದಿಂದ ರಾಜೊಳ್ಳಿ ಬಂಡೆಯ ಸೈನಿಕ ಕ್ಯಾಂಪಿನ ಹತ್ತಿರ ತಲುಪಿದ್ದೆ. ನನ್ನ ಜೀವನ ಮುಗಿಯಿತು, ಎನಿಸಿತು. ಸ್ವಾತಂತ್ರ್ಯಕ್ಕಾಗಿ ಪ್ರಾಣಾರ್ಪಣೆ ಮಾಡುವ ಅವಕಾಶ ಬಂದುದಕ್ಕಾಗಿ ಒಂದು ಬಗೆಯ ಧನ್ಯತೆ ಮನಸ್ಸಿನಲ್ಲಿ ಸುಳಿದುಹೋಯಿತು.

ಅಚಾತುರ್ಯವಾದರೆ ವೈರಿಗಳ ಮೇಲೆ ಕೈಬಾಂಬ್ ಒಗೆದು, ಅವರಿಗೆ ಸಾಕಷ್ಟು ಹಾನಿ ಮಾಡಿಯೇ ಸಾಯುವ ನಿರ್ಧಾರ ಮಾಡಿದೆ. ನಾನು ಹಾಫ್ ನಿಕ್ಕರ್ ಹಾಕಿದ್ದೆ. ಶರಟು ತೊಟ್ಟು ಕೋಟು ಹಾಕಿದ್ದೆ. ತಲೆಯ ಮೇಲೆ ಹ್ಯಾಟಿತ್ತು. ಕೋಟಿನ ಎರಡು ಕಡೆಯ ಜೇಬುಗಳಲ್ಲಿ ಕೈಬಾಂಬುಗಳಿದ್ದವು. ಒಂದು ಗಂಟಿನಲ್ಲಿ ಹ್ಯಾಂಡ್ ಗ್ರೆನೇಡ್ಸ್ ಇದ್ದವು. ಆ ಗಂಟನ್ನು ಮುಂದೆ ಇಟ್ಟುಕೊಂಡಿದ್ದೆ. ಅಲ್ಲಿ ಇಬ್ಬರು ಸೈನಿಕರಿದ್ದರು. ಕುದುರೆ ನಿಲ್ಲಿಸಿದೆ; ಕೈಯೆತ್ತಿದೆ. ಒಬ್ಬ ಸೈನಿಕ ಬಂದು ಕುದುರೆಲಗಾಮು ಹಿಡಿದ.

ನನ್ನನ್ನು ಕುದುರೆಯಿಂದಿಳಿಸಿದರು. ಕುದುರೆ ಮೇಲೆ ನನ್ನ ಮುಂದೆ ಇಟ್ಟುಕೊಂಡ ಗ್ರೆನೇಡ್ಸ್‌ಗಳ ಗಂಟು ಅಲ್ಲಿಯೇ ಬಿಟ್ಟೆ. ಹಿಂದೆಮುಂದೆ ಕೋವಿ ಹಿಡಿದ ಸೈನಿಕರು ನನ್ನನ್ನು ಕ್ಯಾಂಪಿನೊಳಗಡೆ ಕರೆದೊಯ್ದರು.

ಒಳಗೆ ಕುರ್ಚಿ ಮೇಲೆ ಕಮಾಂಡರ್ ಕುಳಿತಿದ್ದ. ಲಾಟೀನ್ ಉರಿಯುತ್ತಿತ್ತು. ನಾನು ಅವನ ಮುಂದೆ ನಿಂತುಕೊಂಡೆ. ಎರಡು ಕೈಗಳನ್ನು ಕೋಟಿನ ಎರಡು ಜೇಬುಗಳಲ್ಲಿ ಇಳಿ ಬಿಟ್ಟಿದ್ದೆ. ಸಮಯ ಬಂದರೆ ಕೈಬಾಂಬ್ ಒಗೆಯಲು ಸಿದ್ಧನಾಗಿದ್ದೆ. ಆದರೆ ಕುದುರೆ ಮೇಲೆ ಬಿಟ್ಟುಬಂದ ಗಂಟಿನ ನೆನಪಾಗಿ ಎದೆ ಝಲ್ಲೆನ್ನುತ್ತಿತ್ತು. ಅಕಸ್ಮಾತ್ ಅದು ಕೆಳಗೆ ಬಿದ್ದರೆ? ಸ್ಫೋಟವಾಗಿ ಪರಿಸ್ಥಿತಿ ಹದಗೆಡುವುದು. ಸುದೈವದಿಂದ ಹಾಗಾಗಲಿಲ್ಲ. ಅದು ಹೇಗೋ ಗಂಟು ಜೀನಿನ (ತಡಿ) ಮಧ್ಯೆ ನಿಂತಿತ್ತು. ಮತ್ತು ಆ 'ಜಾತಿ' ಕುದುರೆ ನಾನು ಬರುವವರೆಗೆ ಅಲ್ಲಿಯೇ ಅತ್ತಿತ್ತ ತಿರುಗಾಡುತ್ತ ಇತ್ತು.

ಕಮಾಂಡರನ ಪ್ರಶ್ನೆಗಳು ಪ್ರಾರಂಭವಾದವು. ನಾನು ಸುಂದರ ಸುಳ್ಳುಗಳನ್ನು ಸೃಷ್ಟಿಸತೊಡಗಿದೆ.

"ನೀನು ಯಾರು ?"

"ದೇವದುರ್ಗ ತಾಲ್ಲೂಕಿನ ಮಾಯಳ್ಳಿಯ ಗೌಡನ ಮಗ." (ಮಾಯಳ್ಳಿ ಎಂಬುದೇ ಇಲ್ಲ.)

"ಈ ಅಪರಾತ್ರಿಯಲ್ಲಿ ಎಲ್ಲಿಗೆ ಹೊರಟಿರುವೆ ?"

"ನಾನು ಮತ್ತು ನನ್ನ ತಂಗಿ ಹಂಪಿ ಜಾತ್ರೆಗೆ ಹೋಗಿದ್ದೆವು. ನಿನ್ನೆ ಮರಳಿ ಚೂಕೂರಿಗೆ ಬಂದೆವು. ದಾರಿಯಲ್ಲಿಯೇ ನನ್ನ ತಂಗಿಗೆ ಜಡ್ಡಾಯಿತು. ಅದಕ್ಕಂತಲೇ ಮಟಮರಿಗೆ ಇಳಿದು ಚೂಕೋಗೆ ಹೋದೆವು. ಇವತ್ತು ಸಂಜೆ ನನ್ನ ತಂಗಿ ಸತ್ತು ಹೋದಳು (ನಾನು ಅಳುಮೋರೆ ನಟಿಸಿದೆ). ನನ್ನ ತಂದೆ ನೀರಮಾನ್ವಿಗೆ ಬಂದಿದ್ದಾರೆ; ಅಲ್ಲದೆ ನನ್ನ ಬಂಧುಗಳು ಮಾನ್ವಿಯಲ್ಲಿದ್ದಾರೆ. ಇವರು ಬರಲಾರದೆ ನಮ್ಮ ತಂಗಿಯ ಹೆಣವನ್ನು ಹೂಳಲು ಬರುವುದಿಲ್ಲ. ಅದಕ್ಕಾಗಿ ಅವರನ್ನು ಕರೆಯಲು ಹೊರಟಿರುವೆ" ಎಂದೆ.

"ಸುಳ್ಳು, ನೀನು ಯಾರೋ ವೈರಿಯಾಗಿರಬೇಕು. ನಿನ್ನನ್ನು ಬಿಡುವುದಿಲ್ಲ. ಬೆಳಗಾಗುವವರೆಗೂ ಇಲ್ಲಿಯೇ ಕೂತಿರು" ಎಂದ ಕಮಾಂಡರ್.

"ನೋಡ್ರಿ, ನಾನ್ಯಾಕೆ ಸುಳ್ಳು ಹೇಳಲಿ? ನಿಜವಾಗಿಯೂ ನಮ್ಮ ತಂಗಿ ಸತ್ತು ಹೋಗಿದ್ದಾಳೆ. ಈ ರಾತ್ರಿಯೇ ನನ್ನ ಬಂಧುಗಳನ್ನು ಕರೆತರಬೇಕು. ದಯಪಿಟ್ಟು ನನ್ನನ್ನು ಬಿಡಿರಿ" ಎಂದೆ ನಾನು.

"ನಿಜವಾಗಿ ನಿಮ್ಮ ತಂಗಿ ಸತ್ತಿದ್ದಾಳೆಯೇ ?"

"ನಿಜ, ಸಾಹೇಬರೇ."

"ಮುಂಜಾನೆ ಹೋದರೆ ನಡೆಯುವುದಿಲ್ಲವೇನು ?"

"ನಡೆಯುವುದಿಲ್ಲ."

"ಏನೆಂದರೂ ನನಗೆ ನಂಬಿಕೆಯಾಗಲೊಲ್ಲದು. ಬೆಳಗಿನವರೆಗೆ ಇಲ್ಲೇ ಕೂಡ್ರು."

"ಸಾಹೇಬರೇ, ನಿಮ್ಮ ತಂಗಿಯೇ ಸತ್ತಿದ್ದರೆ ಏನು ಮಾಡುತ್ತಿದ್ದಿರಿ? ನೀವೇ ನನ್ನ ಸ್ಥಳದಲ್ಲಿದ್ದರೆ...." ಧೈರ್ಯ ಮಾಡಿ ನುಡಿದೆ. ಪಕ್ಕದಲ್ಲಿ ನಿಂತವನು ಸಿಟ್ಟಿಗೆದ್ದು ನನಗೆ ಕೆಟ್ಟ ಮಾತುಗಳಿಂದ ಬೈದ. ಆದರೆ ಆ ಕಮಾಂಡರ್ ಅಂತರ್ಮುಖಿಯಾಗಿದ್ದ.

"ಆಗಲಿ ಹೋಗು, ಆದರೆ ನಾಳೆ ಬೆಳಗ್ಗೆ ಹತ್ತು ಗಂಟೆಯೊಳಗಾಗಿ ನೀನು ಇಲ್ಲಿಗೆ ಬಂದು ಹೋಗಬೇಕು."

"ಆಗಲಿ, ಸಾಹೇಬರೇ" ಎಂದೆ. ಆದರೆ ಆ ಸೈನಿಕ ನನ್ನನ್ನು ದಿಟ್ಟಿಸಿ ನೋಡಿ, "ಸಾಹೇಬ್, ಇವನು ಬದ್‌ಮಾಷ್ ಇದ್ದಾನೆ. ಇವನು ರಾಯಚೂರಿನಲ್ಲಿದ್ದ. ಇವನನ್ನು ನಾನು ಬಲ್ಲೆ" ಎಂದ.

"ನೀನು ರಾಯಚೂರಿನಲ್ಲಿದ್ದೆಯಾ ?" ಕೇಳಿದ ಕಮಾಂಡರ್.

"ಹೋದ ವರ್ಷ ಓದಲು ಇದ್ದೆ, ಕೋಟೆಯಲ್ಲಿ" ಎಂದೆ. ಈ ಮಾತು ನನಗೆ ಅರಿಯದಂತೆಯೇ ಹೊರಬಂತು.

"ಏ ಬದ್ಮಾಷ್ ಹೈ ಸಾಹೇಬ್, ಹಮಾರಾ ದುಷ್ಮನ್ ಹೈ! ಇಸ್‌ಕೋ ಮತ್ ಛೋಡೋ" ಎಂದ ಸೈನಿಕ.

"ಸಾಹೇಬರೆ, ನಾನೇನೂ ಬದ್ಮಾಷ್‌ಗಿರಿ ಮಾಡಿಲ್ಲ. ಎಲ್ಲರಂತೇ ಓದುತ್ತಿದ್ದೆ. ಎಲ್ಲ ಸಾಲಿಗಳು ಮುಚ್ಚಿದ ಕೂಡಲೇ ಊರಿಗೆ ಹೋದೆ. ಊರಲ್ಲೇ ಇದ್ದೆ. ಮನೆ ದೇವರೆಂದು ಹಂಪಿ ಜಾತ್ರೆಗೆ ಹೋದೆ. ದಾರಿಯಲ್ಲಿ ತಂಗಿ ಸತ್ತಳು. ಆಕೆಯ ಶವಸಂಸ್ಕಾರ ಮಾಡಬೇಕಾಗಿದೆ. ಅದಕ್ಕಾಗಿ ಅರ್ಜೆಂಟ್ ಹೋಗಬೇಕಾಗಿದೆ. ನಾನು ಬದ್ಮಾಷ್ ಆಗಿದ್ದರೆ, ನಮ್ಮ ನವಾಬರ ವೈರಿಯಾಗಿದ್ದರೆ, ಈ ಅಪರಾತ್ರಿಯಲ್ಲಿ ಇಲ್ಲಿಗೆ ಬರುವ ಧೈರ್ಯ ಮಾಡುತ್ತಿದ್ದೆನೇ ? ನಿಮ್ಮಿಚ್ಛೆ. ಬಿಟ್ಟರೆ ಹೋಗುವೆ, ಇಲ್ಲದಿದ್ದರೆ ಇಲ್ಲ" ಎಂದೆ.

ಆ ಕಮಾಂಡರ್ ನನ್ನ ಮೋರೆ ನೋಡಿದ. ಏನೋ ಯೋಚಿಸಿದ. "ಛೋಡದೋ, ಜಾನೇದೋ" ಎಂದ. "ಆದರೆ ನಾಳೆ ನೀನು ತಪ್ಪದೇ ಇಲ್ಲಿಗೆ ಬಂದು ಹೋಗಬೇಕು" ಎಂದ. "ಆಗಲಿ" ಎಂದೆ.

ಆ ಸೈನಿಕ ನನ್ನ ಕೋಟಿನ ಜೇಬಿನಲ್ಲಿದ್ದ ರೂ. 90ರ ಪಾರ್ಕರ್ ಪೆನ್ ತೆಗೆದು ಕೊಂಡು, "ನಾಳೆ ಬಂದಾಗ ಒಯ್ಯುವಿಯಂತೆ" ಎಂದ.

ಕ್ಯಾಂಪಿನಿಂದ ಹೊರಬಂದೆ. ಕುದುರೆ ಅಲ್ಲೇ ಇತ್ತು. ಗ್ರೆನೇಡ್ಸ್ ಗಂಟು ಅದರ ಮೇಲೇ ಇತ್ತು. ಮೆಲ್ಲನೆ ಕುದುರೆ ಏರಿ, ಆ ಗಂಟನ್ನು ಹಿಡಿದುಕೊಂಡೆ. ಕುದುರೆ ಹೊರಟಿತು. ಸುಮಾರು ಒಂದು ಮೈಲು ಹೋಗುವವರೆಗೆ ಇಬ್ಬರು ಸೈನಿಕರು ನನ್ನ ಕಡೆ ಬ್ಯಾಟ್ರಿ ಬೆಳಕು ಹಾಕಿ ಬಂದೂಕು ಹಿಡಿದು ನಿಂತಿದ್ದರು.

ನಾನು ನೇರ ಬಿಟ್ಟದೂರಿಗೆ ಹೋಗಿ, ಅದೇ ರಾತ್ರಿ ಕುದುರೆಯನ್ನು ಚೂಕೂರಿಗೆ ಕಳಿಸಿದೆ—ಬೇರೆ ಮಾರ್ಗವಾಗಿ. ಅಂದೇ ರಾತ್ರಿ ನಾನು ಊರು ಬಿಟ್ಟೆ. ಮಾನ್ವಿಗೆ ಹೋಗಿ ರಜಾಕಾರರು ಪೆರೇಡ್ ಮಾಡುವ ಮೈದಾನದಲ್ಲಿ ಹ್ಯಾಂಡ್ ಗ್ರೆನೇಡ್ಸ್ ಉಪಯೋಗಿಸುವ ಯೋಜನೆ ಇತ್ತು. ಆದರೆ ಹಿಂದಿನ ರಾತ್ರಿ ನಡೆದ ಹಗರಣದಿಂದ ಪೋಲಿಸರು ಅಲ್ಲಿಯೂ ನನ್ನ ಶೋಧದಲ್ಲಿರಬಹುದೆಂದು ಬಗೆದು ನಾನು ನಮ್ಮ ಚಳ್ಳಿಕೂಡ್ಲೂರು ಕ್ಯಾಂಪಿಗೆ ಬಂದೆ.

ಮತ್ತೊಂದು ದಿನ ನಾನು ಮತ್ತು ಆಲ್ಕೋಡ ಅಮರೇಶ ಕೂಡಿ ಮಾನ್ವಿಯ ಪೋಲಿಸ್ ಸ್ಟೇಷನಕ್ಕೆ ಬಾಂಬ್ ಇಡುವ ಯೋಜನೆ ಹಾಕಿದೆವು. ನದಿ ದಾಟಿ ಏಳೆಂಟು ಮೈಲು ನಡೆದು ರಾತ್ರಿ ಮಾನ್ವಿಗೆ ಬಂದೆವು. ನಮ್ಮನ್ನು ಯಾರೂ ನೋಡಬಾರದೆಂದು ಎರಡನೇ ಆಟ ಸಿನೇಮಾಕ್ಕೆ ಹೋದೆವು. ಆದರೆ ಯಾರೋ ನಮ್ಮ ಹಿಂದೆ ಹಿಂದೆ ಬಂದಂತೆನಿಸಿತು. ನಾವು ಸಿನೇಮಾ ಹಾಲ್ ಹೊಕ್ಕ ಕೂಡಲೇ ಅವರೂ ಒಳಬಂದ ಸುಳಿವು ಹತ್ತಿತು. ನಾವು ಮಧ್ಯದಲ್ಲಿಯೇ ಎದ್ದು ಹೊರಬಂದು ಡಾ|| ಮಹಾಂತಯ್ಯನರ ಮನೆ ಮುಂದೆ ಕಟ್ಟೆಮೇಲೆ ಮಲಗಿದೆವು. ಒಂದುವೇಳೆ ನಾವು ಸಿಕ್ಕರೆ ಡಾಕ್ಟರರಿಗೆ ತೊಂದರೆ ಎಂದು ಅಲ್ಲಿಂದೆದ್ದು ಅಂಗಡಿಯೊಂದರ ಕಟ್ಟೆಯ ಮೇಲೆ ಮಲಗಿದೆವು. ರಾತ್ರಿ ಮೂರು ಗಂಟೆಗೆ ಪೋಲಿಸ್ ಸ್ಟೇಷನದ ಕಡೆ ನಡೆದೆವು. ಅದರ ಗೋಡೆಗೆ ಹೊಂದಿ ಬಾಂಬ್ ಇಟ್ಟು ಓಟ ಕಿತ್ತೆವು. ಪೋಲಿಸರಿಗೆ ಸುಳಿವು ಬಡಿದು ಅವರು ನಮ್ಮ ಬೆನ್ನುಹತ್ತಿದರು. ನಾವು ತಪ್ಪಿಸಿಕೊಂಡು ಓಡಿ ಊರು ದಾಟಿ ಅಡವಿಗೆ ಬಿದ್ದೆವು. ನಮ್ಮಲ್ಲಿ ಕೈಬಾಂಬುಗಳಿರ ಬಹುದೆಂದು ಹೆದರಿ ಪೋಲಿಸರು ಹಿಂದಕ್ಕೆ ಹೋದರೆನಿಸಿತು. ನಾವಿಟ್ಟ ಬಾಂಬಿಗೆ ನೀರು ಹಾಕಿ ಅದು ಸ್ಫೋಟವಾಗದಂತೆ ಮಾಡಲಾಯಿತಂತೆ.

ಒಂದು ದಿನ ಎಂ. ನಾಗಪ್ಪ, ಡಿ. ಪಂತಣ್ಣ, ಅಮರೇಶ, ನಾನು ಮತ್ತು ಇನ್ನು ಕೆಲವರು ನಾಗಲದಿನ್ನಿಗೆ ಹೋದೆವು. ಅಲ್ಲಿಂದ ದಾಟಿ ಉತ್ತರ ದಂಡೆಗಿದ್ದ ರಜಾಕಾರರ ಕ್ಯಾಂಪುಗಳ ಮೇಲೆ ಆಕ್ರಮಣ ಮಾಡುವ ಉದ್ದೇಶ ನಮ್ಮದಾಗಿತ್ತು. ಆದರೆ ಆದದ್ದೇ ಬೇರೆ. ಭಾರತ ಸರಕಾರದ ಪೋಲಿಸರು ನಮ್ಮ ಹಿಂದೆಹಿಂದೇ ಬಂದಿದ್ದರು. ನಾವು ಕಮ್ಯುನಿಸ್ಟರು, ವಿಧ್ವಂಸಕ ವೃತ್ತಿಯವರು ಎಂದು ಅವರಿಗೆ ಯಾರೋ ಹೇಳಿದ್ದರಂತೆ. ನಮ್ಮನ್ನೆಲ್ಲಾ ಲಾರಿಯಲ್ಲೇರಿಸಿ ಅವರು ಎಮ್ಮಿಗನೂರಿಗೆ ಕರೆದೊಯ್ದು ಅಲ್ಲಿಯ ಜೇಲಿ ನಲ್ಲಿಟ್ಟರು. ನಾವು ಸ್ವಾತಂತ್ರ್ಯಹೋರಾಟಗಾರರೆಂದು ಮದ್ರಾಸಿನ ನಮ್ಮ ಕೇಂದ್ರದ

ಒಂದೂವರೆ ತಿಂಗಳ ಬಳಿಕ ಸುದ್ದಿ ಬಂದು ಆ ಕೇಂದ್ರದ ಆದೇಶದಂತೆ ನಮ್ಮನ್ನು ಬಿಡುಗಡೆ ಮಾಡಿದರು.

ನಮ್ಮ ಹೋರಾಟಗಾರರ ಕೇಂದ್ರ ಮದ್ರಾಸಿನಲ್ಲಿತ್ತು. ಎಲ್ಲ ಆದೇಶಗಳು ನಮಗೆ ಅಲ್ಲಿಂದಲೇ ಬರುತ್ತಿದ್ದವು. ಕೆಲವು ದಿನಗಳ ಬಳಿಕ ಹೋರಾಟವನ್ನು ನಿಲ್ಲಿಸಲು ಅಲ್ಲಿಂದ ಆದೇಶ ಬಂತು. ಆ ಬಳಿಕ ನಾವು ಜೈಲಿನಲ್ಲಿ ಅಕ್ರಮವಾಗಿ ಹೈದರಾಬಾದ್ ಸಂಸ್ಥಾನಕ್ಕೆ ಸಾಗಿಸುತ್ತಿದ್ದ ವಸ್ತುಗಳನ್ನು ಪತ್ತೆಹಚ್ಚುವ ಕೆಲಸ ಕೈಗೊಂಡೆವು.

ಭಾರತ ಸರಕಾರ ಹೈದರಾಬಾದಿನ ಮೇಲೆ ಪೋಲಿಸ್ ಕ್ರಮ ಕೈಗೊಂಡಿತು. ನವಾಬರು ತತ್ತರಿಸಿ ನಾಲ್ಕೇ ದಿನಕ್ಕೆ ಶಸ್ತ್ರ ಕೆಳಗಿಟ್ಟರು. ಸಂಸ್ಥಾನ ಮುಕ್ತಾಯವಾಯಿತು. ಸ್ವತಂತ್ರ ಭಾರತದಲ್ಲಿ ಲೀನವಾಯಿತು. ಸ್ವಾತಂತ್ರ್ಯದ ಉಸಿರಾಡುತ್ತಲೇ ನಾವು ನಮ್ಮ ಊರುಗಳಿಗೆ ತಲೆಯೆತ್ತಿಕೊಂಡು ಹೋದೆವು; ಸ್ವಾತಂತ್ರ್ಯದ ಹಬ್ಬ ಆಚರಿಸಿದೆವು; ಅಶೋಕಚಕ್ರಾಂಕಿತ ತ್ರಿವರ್ಣಧ್ವಜವನ್ನು ನಮ್ಮ ಮನೆಗಳ ಮೇಲೆ ಏರಿಸಿ ರಾಷ್ಟ್ರಗೀತೆ ಹಾಡಿದೆವು.

ಹೈ.ರಾ. 10

## ಎಂ. ನಾಗಪ್ಪ

ಜನನ : 1928  ಉದ್ಯೋಗ : ವಕೀಲ  ವಿಳಾಸ : ಬೇರೂನ್ ಕಿಲ್ಲೆ, ರಾಯಚೂರು



ನನ್ನ ಊರು ರಾಯಚೂರು ತಾಲ್ಲೂಕಿನ ಒಂದು ಹಳ್ಳಿ ಮಟಮರಿ. ಎರೆಮಣ್ಣಿನ ಜಿಗುಟು ನೆಲ ಇದಾಗಿದ್ದು ಈ ಜಿಗುಟುತನ ಹುಟ್ಟಿನೊಡನೆ ನನ್ನಲ್ಲಿ ಬಂದಿದೆಯೆಂದು ಹೆಮ್ಮೆಯಿಂದ ಹೇಳುವೆ. ನನ್ನ ತಂದೆತಾಯಿ, ಅಣ್ಣತಮ್ಮಂದಿರೆಲ್ಲ ಸ್ವಾತಂತ್ರ್ಯಪ್ರಿಯರು, ಧರ್ಮಿಷ್ಠರು; ಅನ್ಯಾಯ ಕಂಡರೆ ಆಗದವರು. ಈ ಎಲ್ಲ ಗುಣಗಳು ಸಹಜವಾಗಿಯೇ ನನ್ನಲ್ಲಿ ಬೆಳೆದು ಬಂದವು. ಈ ಸದ್ಗುಣಗಳೇ ನನ್ನ ಬಾಳನ್ನು ಬೆಳಗಿದವು.

ಆಗಿನ ಆಳರಸರೆಂದರೆ ನನಗೆ ಚಿಕ್ಕಂದಿನಿಂದಲೂ ರೋಷ, ಸಿಡಿಮಿಡಿ. ಒಬ್ಬ ನನ್ನು ಇನ್ನೊಬ್ಬನು ಆಳುವ ಭಾವನೆ ನನಗೆ ಸಹಿಸಲಾರದ ಸಂಕಟ. ನಿಜಾಮರ ಆಳ್ವಿಕೆಯಲ್ಲಿದ್ದ ಪಕ್ಷಪಾತ, ಮತದ್ವೇಷ ಮುಂತಾದುವುಗಳನ್ನು ನೆನೆದರೆ ನನ್ನ ಮೈಯಲ್ಲಿ ಉರಿ ಏಳುತ್ತಿತ್ತು.

ನನ್ನ ಶಾಲೆಯ ಜೀವನದಲ್ಲಿ ನಾನು ಓದು ಒಂದನ್ನೇ ಕಲಿಯಲಿಲ್ಲ. ಅನ್ಯಾಯದ ವಿರುದ್ಧ ಹೇಗೆ ಪ್ರತಿಭಟಿಸಬೇಕೆಂಬುದನ್ನೂ ಕಲಿತೆ. ಈ ಆಚರಣೆ ನನ್ನ ಜೀವನದುದ್ದಕ್ಕೂ ನಡೆದುಬಂದುದು. ನಮ್ಮ ರಾಷ್ಟ್ರದ ಮುಖಂಡರ ಜೀವನ, ಕಾರ್ಯ, ತ್ಯಾಗ ಮುಂತಾದವುಗಳು ನನ್ನ ಶಾಲಾದಿನಗಳಲ್ಲೇ ನನ್ನ ಮೇಲೆ ಪ್ರಭಾವ ಬೀರಿದವು. ಇವರಲ್ಲಿ ಹೆಚ್ಚು ಪ್ರಭಾವ ಬೀರಿದ ಮಹಾನುಭಾವರೆಂದರೆ ಡಾ|| ರಾಮಮನೋಹರ ಲೋಹಿಯಾ ಅವರು. ಇಂದಿಗೂ ನಾನು ಅಚ್ಚ ಸೋಷಿಯಲಿಸ್ಟ್.

ಹೈದರಾಬಾದ್ ರಾಜ್ಯವೆಂದರೆ ನಾಲ್ಕು ಮಹಾಗೋಡೆಗಳ ನಡುವಿನ–ಹೊರಗಿನ ಹೊಸ ವಾತಾವರಣ ಹೊಸ ವಿಚಾರಗಳ ಸಂಪರ್ಕವಿಲ್ಲದ—ಮನೆಯಂತಿತ್ತು. ಬ್ರಿಟಿಷ್ ಇಂಡಿಯದಲ್ಲಿ ಪರರಾಜ್ಯಗಳಲ್ಲಿ ಸ್ವಾತಂತ್ರ್ಯಚಳುವಳಿ ನಡೆದುದನ್ನು ಓದಿ ಕೇಳಿ, ನಾನು ರೋಮಾಂಚನಗೊಳ್ಳುತ್ತಿದ್ದೆ. ಈ ಸ್ವಾತಂತ್ರ್ಯಸಂಗ್ರಾಮಕ್ಕೆ ಧುಮುಕಲು ನೆತ್ತರು ಕುದಿಯುತ್ತಿತ್ತು. ನೇರವಾಗಿ ಸಂಗ್ರಾಮಕ್ಕಿಳಿಯುವ ಸಮಯಕ್ಕಾಗಿ ಕಾಯುತ್ತಿದ್ದೆ. ಆ ಸಮಯವೂ ಬಂದಿತು. ಹೈದರಾಬಾದ್ ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯದ ಹೋರಾಟ ಅವಿಸ್ಮರಣೀಯವಾದುದು. 1947ಕ್ಕಿಂತ ಐದಾರು ತಿಂಗಳ ಹಿಂದೆಯೇ ನಾವು ಹೋರಾಟ ಪ್ರಾರಂಭಿಸಿದೆವು. ಸ್ವಾತಂತ್ರ್ಯ ಗಳಿಸಲಿಕ್ಕಾಗಿ ಏನೆಲ್ಲ ತ್ಯಾಗಕ್ಕೂ ಪ್ರಾಣಾರ್ಪಣೆಗೂ ನಾವು ಸಿದ್ಧರಾದೆವು.

ನಾನಾಗ ಗುಲ್ಬರ್ಗದ ಸರಕಾರಿ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್ ಕ್ಲಾಸ್‌ನಲ್ಲಿದ್ದೆ. ಕಾಲೇಜ್ ಜೀವನದ ಜೊತೆಗೆ ನನ್ನ ನಾಡಿನ ಬಿಡುಗಡೆಯ ಹೋರಾಟದ ಮಹಾಜೀವನದಲ್ಲಿಯೂ ನಾನು ಸಕ್ರಿಯ ಭಾಗಿಯಾಗಿದ್ದೆ. ಹೈದರಾಬಾದ್ ಸ್ಟೂಡೆಂಟ್ಸ್ ಯೂನಿಯನ್ನಿನ ಕಾರ್ಯಕರ್ತನಾಗಿದ್ದೆ. ಹೈದರಾಬಾದ್ ಕರ್ನಾಟಕ ಸಂಘಟಕನಾಗಿದ್ದೆ. ಗುಲ್ಬರ್ಗ, ರಾಯಚೂರು, ಯಾದ್‌ಗೀರ ಭಾಗಗಳಲ್ಲಿ ಸಂಚರಿಸಿ ಸ್ವಾತಂತ್ರ್ಯಸಂಗ್ರಾಮಕ್ಕಾಗಿ ಜನರನ್ನು ಹುರಿದುಂಬಿಸಿದೆ. 1947ರ ಆಗಸ್ಟ್ 15ಕ್ಕಿಂತ ಒಂದು ವಾರ ಮುಂಚೆ ಕ್ವಿಟ್ ಕಾಲೇಜ್' ಚಳವಳಿ ಪ್ರಾರಂಭಿಸಿದೆವು. ಶಾಲಾಕಾಲೇಜುಗಳಿಂದ ವಿದ್ಯಾರ್ಥಿಗಳು ಹೊರಬಂದರು. ಸ್ವಾತಂತ್ರ್ಯ ಸಂಗ್ರಾಮದ ಬಿಸಿಯು ಆಳರಸರಿಗೆ ಮುಟ್ಟಲು ತಡವಾಗಲಿಲ್ಲ.

ರಾಯಚೂರಿನ 'ಏಳು ಕಚೇರಿ' ಜಿಲ್ಲೆಯ ಮುಖ್ಯ ಕಚೇರಿ. ಇದು ದಿನ್ನೆಯ ಮೇಲೆ ಕಟ್ಟಿದ ಹಳೆಯ ಸುಂದರ ಕಟ್ಟಡ. ಕಲೆಕ್ಟರ್ ಆಫೀಸ್ ಮತ್ತು ನ್ಯಾಯಮಂದಿರಗಳು ಇಲ್ಲಿಯೇ ಇವೆ. ಶರಭಯ್ಯ, ಚಂದ್ರಯ್ಯ, ಬಸಣ್ಣ ಮತ್ತು ನಾನು ಈ ಕಚೇರಿಯ ಮೇಲೆ ಧ್ವಜ ಹಾರಿಸುವ ಕೆಲಸಕ್ಕೆ ಸಿದ್ಧರಾದೆವು. ಆಗಸ್ಟ್ 14, 1947ರ ರಾತ್ರಿ. ಅಂದು ನಮಗೆ ಉತ್ಸಾಹವೋ ಉತ್ಸಾಹ. ಊರ ತುಂಬ ರಜಾಕಾರರ ಮತ್ತು ಪೊಲೀಸರ ಗಸ್ತು. ಆಯಕಟ್ಟಿನ ಸ್ಥಳಗಳಲ್ಲೆಲ್ಲ ಬಂದೂಕುಗಳೊಂದಿಗೆ ರಜಾಕಾರ ಪಠಾಣರು ನಿಂತಿದ್ದರು. ಬಿ. ಎಚ್. ಇನಾಮದಾರ, ಲ. ಕೃ. ಸಂಘ್ ಮತ್ತು ಅಡವಿ

ರಾವ್ ಫಡ್ನೀಸ್ ಈ ಮೂವರು ಹಿರಿಯರು ನಮಗೆ ಸ್ವತಂತ್ರಭಾರತದ ಧ್ವಜ ಕೊಟ್ಟರು. ಅದು ನಮ್ಮ ಕೈಗೆ ಬಂದಾಗ ಮೈಯಲ್ಲೆಲ್ಲ ವಿದ್ಯುತ್ ಸಂಚಾರವಾಯಿತು. ರೋಮ ರೋಮವೆಲ್ಲಾ ಚೈತನ್ಯದಿಂದ ಎದ್ದುನಿಂತವು. ಅನಿರ್ವಚನೀಯವಾದ, ಭವ್ಯವಾದ ಹೆಮ್ಮೆಯ ಭಾವವೊಂದು ಮನದಲ್ಲಿ ತುಂಬಿದ್ದಿತು. ರಾತ್ರಿ ಹತ್ತು ಗಂಟೆಗೆ ಧ್ವಜದೊಡನೆ ಏಳು ಕಚೇರಿಯತ್ತ ನಡೆದೆವು. ಸುತ್ತಮುತ್ತ ಪೋಲೀಸರ ಕಾವಲು. ಅವರ ಕಣ್ಣು ತಪ್ಪಿಸಿ ನಾವು ಮೇಲೇರಬೇಕು. ಶರಭಯ್ಯ ಮತ್ತು ಚಂದ್ರಯ್ಯ ದಕ್ಷಿಣ ಮತ್ತು ಪಶ್ಚಿಮದ ರಸ್ತೆಯ ಮೇಲೆ ನಿಂತರು, ಏನಾದರೂ ಅನಾಹುತವಾದರೆ ಸೂಚನೆ ಕೊಡಲು. ನಾನು ಮತ್ತು ಬಸಣ್ಣ ಪಶ್ಚಿಮದ ಕಡೆಯಿಂದ ಆವಾರದ ಗೋಡೆ ಏರಿ ಒಳಗಿಳಿದೆವು. ತೆವಳುತ್ತ ತೆವಳುತ್ತ ಕಟ್ಟಡದ ಒಳಗೆ ಪ್ರವೇಶಿಸಿದೆವು. ಕಟ್ಟಡದ ಮುಂಭಾಗ ಮತ್ತು ಹಿಂಭಾಗಗಳಲ್ಲಿ (ದಕ್ಷಿಣ ಮತ್ತು ಉತ್ತರ) ಪೋಲಿಸರು ಕಾವಲಿದ್ದರು. ಅವರು ಆಗಾಗ ಆಚೆ ಈಚೆ ತಿರುಗಾಡುತ್ತಿದ್ದರು. ನಾವು ಬಹು ಎಚ್ಚರದಿಂದ ಮೆಟ್ಟಿಲು ಹತ್ತಿ ಮೇಲೆ ಹೋದೆವು. ಅಲ್ಲಿದ್ದ ನಿಜಾಮಶಾಹಿ ಧ್ವಜವನ್ನು ತೆಗೆದು ಸ್ವತಂತ್ರ ಭಾರತದ ಧ್ವಜವನ್ನು ಹಾರಿಸಿದೆವು. ಕೆಳಗೆ ಪೋಲಿಸರು ಮಾತನಾಡುತ್ತಿದ್ದರು. ಆಗ ಗಸ್ತು ತಿರುಗುತ್ತಿದ್ದರು. ಆದರೆ ಯಾರೂ ಮೇಲೆ ನೋಡಲಿಲ್ಲ. ಅವರ ಕಣ್ಣಿಗೆ ಬಿದ್ದಿದ್ದರೆ ಅವರ ಬಂದೂಕುಗಳಿಗೆ ನಾವು ಬಲಿಯಾಗುತ್ತಿದ್ದೆವು! ಅದಕ್ಕೆ ನಾವು ಸಿದ್ಧರಿದ್ದೆವು. ಸ್ವತಂತ್ರ ಭಾರತದ ಧ್ವಜ ತಲೆಯೆತ್ತಿ ಹಾರಾಡುವುದನ್ನು ಕಣ್ತುಂಬ ನೋಡಿ, ಅಂತಃಕರಣದಿಂದ ಮಣಿದು ಧನ್ಯತೆಯ ಭಾವದೊಡನೆ ಕೆಳಗಿಳಿದೆವು.

ಬೆಳಗಿನವರೆಗೂ ಪೋಲಿಸರು ಮುಖ ಮೇಲೆತ್ತಿ ನೋಡಿರಲಿಲ್ಲ. ಬೆಳಗ್ಗೆ 15 ಆಗಸ್ಟ್ ರಂದು ಊರ ತುಂಬಾ ಸುದ್ದಿ. ಬೆಳಗಿನ ಹತ್ತು ಗಂಟೆಯವರೆಗೆ ಧ್ವಜ ಅಲ್ಲಿ ತಲೆಯೆತ್ತಿ ಹಾರಾಡುತ್ತಿತ್ತು. ಊರಲ್ಲಿ ಕೋಲಾಹಲವೋ ಕೋಲಾಹಲ. ಅದೇ ದಿನ ಬೆಳಗ್ಗೆ ದೆಹಲಿಯ ಆಕಾಶವಾಣಿ ಕೇಂದ್ರ ರಾಯಚೂರಿನ ಏಳು ಕಚೇರಿಯ ಮೇಲೆ ಸ್ವಾತಂತ್ರ್ಯ ವೀರರು ಸ್ವತಂತ್ರ ಭಾರತದ ಧ್ವಜವನ್ನು ಏರಿಸಿದ ರೋಮಾಂಚಕಾರೀ ಸುದ್ದಿಯನ್ನು ಬಿತ್ತರಿಸಿತು. ಧ್ವಜ ಏರಿಸಿದವರನ್ನು ಪತ್ತೆಹಚ್ಚಿ ಹಿಡಿದುಕೊಟ್ಟವರಿಗೆ ಒಂದು ಸಾವಿರ ರೂ.ಗಳು ಬಹುಮಾನ ಕೊಡುವುದಾಗಿ ನಿಜಾಮ ಸರಕಾರ ಸಾರಿತು. ನಾವು ಅಂದೇ ಊರು ಬಿಟ್ಟೆವು.

ನಾವು ಬಿರಾರ್ ಜಿಲ್ಲೆಯ ಚಾಂದಾ ಎಂಬಲ್ಲಿಗೆ ಹೋಗಿ ಒಂದೂವರೆ ತಿಂಗಳು ತರಬೇತಿ ಪಡೆದೆವು. ಆ ಬಳಿಕ ರಾಯಚೂರಿಗೆ ಮರಳಿದೆವು. ಇಲ್ಲಿ ನಮ್ಮ ಹೆಸರಿಗೆ ವಾರಂಟ್ ಜಾರಿಯಾಗಿತ್ತು. ನಾವು ಮತ್ತೆ ನಮ್ಮ ಗಡಿ ದಾಟಿದೆವು. ಮದ್ರಾಸಿನಲ್ಲಿದ್ದ ನಮ್ಮ ಕೇಂದ್ರದ ಆದೇಶದಂತೆ ನಾನು ಮತ್ತು ಚಂದ್ರಯ್ಯ ಇಬ್ಬರೂ ಬೆಜವಾಡಕ್ಕೆ ಐ.ಎಸ್.ಎ. ಟ್ರೇನಿಂಗ್‌ಗೆ ಹೋದೆವು. ಎರಡು ತಿಂಗಳು ಟ್ರೇನಿಂಗ್ ಮುಗಿಸಿಕೊಂಡು ತುಂಗಭದ್ರಾಕ್ಕೆ ಬಂದೆವು. ಅಲ್ಲಿ ನಮ್ಮ ಹೋರಾಟಗಾರರ ಶಿಬಿರವಿತ್ತು. ತುಂಗಭದ್ರಾ

(ಈಗಿನ ಮಂತ್ರಾಲಯಂ ರೋಡ್) ರೈಲ್ವೆ ನಿಲ್ದಾಣದ ಹತ್ತಿರ ನಮ್ಮ ಶಿಬಿರ. ನದಿಯ ಆಚೆ ಉತ್ತರ ದಂಡೆಗೆ ರಜಾಕಾರರ, ಪಠಾಣರ ಸೈನಿಕ ಶಿಬಿರಗಳಿದ್ದವು.

ಒಂದು ದಿನ ರಾತ್ರಿ: ಚಂದ್ರಯ್ಯ, ಈಶ್ವರರಾಜ, ಪಟಗಲ್ ಬಸವರಾಜ, ಪರ್ವತರೆಡ್ಡಿ, ಆಲ್ಕೋಡ ಅಮರೇಶ, ಹಂಪಣ್ಣ, ಅಮರಣ್ಣ, ಶರಭಣ್ಣ, ಉಲುಗುಂಚಿ ವೀರನಗೌಡ, ಆಯನೂರು ನರಸಣ್ಣ, ಪನ್ನೂರು ಈರಣ್ಣ ಮತ್ತು ನಾನು (ನಮ್ಮೊಡನೆ ಇನ್ನು ಕೆಲವು ಜನರಿದ್ದರು; ಒಟ್ಟು 15 ಜನರಿದ್ದೆವು) ತುಂಗಭದ್ರಾ ಸೇತುವೆಯ ಉತ್ತರ ದಂಡೆಗಿದ್ದ ಪೊಲೀಸ್ ಕ್ಯಾಂಪಿನ ಮೇಲೆ ಹಲ್ಲೆ ಮಾಡಿದೆವು. ಸಾಕಷ್ಟು ಗಲಾಟೆ ಮಾಡಿ ಅವರಿಗೆ ಕಿರುಕುಳ ಕೊಟ್ಟು ಮರಳಿ ಬಂದೆವು.

ಇದಾದ ೫–೬ ದಿನಗಳ ತರುವಾಯ ಮತ್ತೊಮ್ಮೆ ನದಿಯನ್ನು ದಾಟಿದೆವು. ೧೫ ಮೈಲು ನಡೆದು ಹೋಗಿ ರಾಯಚೂರು ರೈಲ್ವೆ ನಿಲ್ದಾಣಕ್ಕೆ ನೀರು ಪೂರೈಸುವ ಪಂಪಿನ ಬಾವಿಯ ಮೇಲೆ ಆಕ್ರಮಣ ಮಾಡಿದೆವು; ಅಲ್ಲಿ ರಜಾಕಾರರ ಪಡೆಯಿತ್ತು. ಅಲ್ಲಿಂದ ಮಟಮರಿ ರೈಲ್ವೆ ನಿಲ್ದಾಣಕ್ಕೆ ಹೋಗಿ ರೈಲು ಹತ್ತುವಾಗ ಪೋಲಿಸರು ಹಿಡಿದರು. ಈರಣ್ಣ, ಈಶ್ವರರಾಜ, ಪಟಗಲ್ ಬಸವರಾಜ ಮತ್ತು ನಾನು ಸೆರೆಯಾದೆವು. ಉಳಿದವರು ಪಾರಾದರು. ನಮ್ಮನ್ನು ರಾಯಚೂರಿಗೆ ಒಯ್ದರು; ಎರಡು ತಿಂಗಳು ವಿಚಾರಣೆ ನಡೆಯುವವರೆಗೂ ರಾಯಚೂರು ಜೈಲಿನಲ್ಲಿದ್ದೆವು. ವಿಚಾರಣೆ ಮುಗಿದು ಎರಡು ತಿಂಗಳು ಶಿಕ್ಷೆಯಾಯಿತು. ರಾಯಚೂರು ಭಾಗದಲ್ಲಿ ಹೋರಾಟ ಪ್ರಖರವಾಗಿತ್ತು. ನಮ್ಮನ್ನು ರಾಯಚೂರು ಜೈಲಿನಲ್ಲಿ ಇಟ್ಟರೆ ಹೋರಾಟ ಮತ್ತಷ್ಟು ಹೆಚ್ಚಾಗುವುದೆಂದು ಭಾವಿಸಿ, ಗುಲ್ಬರ್ಗಾದ ಸೆಂಟ್ರಲ್ ಜೈಲಿನಲ್ಲಿ ಇಟ್ಟರು. 1948ರ ಮೇ ಮತ್ತು ಜೂನ್ ಎರಡು ತಿಂಗಳು ಅಲ್ಲಿದ್ದೆವು. ಗುಲ್ಬರ್ಗಾದ ಸೆಂಟ್ರಲ್ ಜೈಲಿನಲ್ಲಿಯ ನಮ್ಮ ವಾಸ್ತವ್ಯ ರೋಮಾಂಚಕಾರಿಯಾಗಿತ್ತು. ಅಲ್ಲಿ ನಮ್ಮನ್ನು 10ನೆಯ ನಂಬರಿನ ಬ್ಯಾರಕ್ಕಿನಲ್ಲಿ ಇಟ್ಟಿದ್ದರು. ನಮ್ಮಂತೆ ಇನ್ನೂ ಅನೇಕ ಸ್ವಾತಂತ್ರ್ಯವೀರರು ಅಲ್ಲಿದ್ದರು; ಸ್ವಾಮಿ ರಮಾನಂದ ತೀರ್ಥರೂ ಇದ್ದರು.

ರಾತ್ರಿ ನಾವು ಜೈಲಿನ ಒಳ ಅಂಗಳದಲ್ಲಿ ನೆರೆದು ಪ್ರಾರ್ಥನೆ ಮಾಡುತ್ತಿದ್ದೆವು. ಆ ಬಳಿಕವೇ ನಾವು ಬ್ಯಾರಕ್ಕಿನೊಳಗಡೆ ಹೋಗುತ್ತಿದ್ದೆವು. ಒಂದು ದಿನ ರಾತ್ರಿ ಅಧಿಕಾರಿಗಳು ಪ್ರಾರ್ಥನೆ ಬೇಡವೆಂದರು. ನಾವೂ ಕೇಳಲಿಲ್ಲ. 40 ಮಂದಿಯ ಮೇಲೆ ಕ್ರೂರ ಲಾಠೀ ಚಾರ್ಜ್ ನಡೆಯಿತು. ಜೆಣಕಲ್ ಭೀಮಸೇನರಾವ್ ದೇಸಾಯರು ಲಾಠೀ ಚಾರ್ಜ್‌ನಿಂದ ಆ ಸ್ಥಳದಲ್ಲಿಯೇ ಅಸುನೀಗಿದರು. ಹುಯಿಲೆದ್ದಿತು. ಬ್ಯಾರಕ್ಕುಗಳ ಬಾಗಿಲು ಮುರಿದು, ಕಟಾಂಜನದ ತಂತಿಗಳನ್ನು ಕಿತ್ತು ಹೊರಗೆ ಬಂದೆವು. ಮುಖ್ಯ ದ್ವಾರಕ್ಕೆ ಬರುವಷ್ಟರಲ್ಲಿ ರಿಜರ್ವ್ ಪೋಲಿಸರು ಕೋವಿ ಹಿಡಿದು ಬಂದರು. ನಾವು ಹೆದರಲಿಲ್ಲ. ದೇಸಾಯರ ಶವ ಬೇಡಿದೆವು. ಅದೇ ಜೈಲಿನಲ್ಲಿದ್ದ ರಮಾನಂದ ತೀರ್ಥರನ್ನು ಕರೆತಂದರು; ಅವರು ಭಾಷಣ ಮಾಡಿದರು; ಅದರಿಂದ ನಾವು ಇನ್ನೂ ಉತ್ತೇಜಿತ

ರಾದೆವು. ಆದರೆ ರಸೂಲ್ಖಂಡ ತೀರ್ಥರು ಹೇಳಿದಂತೆ ಶಿಸ್ತಿಗೊಳಗಾದೆವು. ಅವರು ದೇಸಾಯರ ಶವವನ್ನು ನಮಗೆ ಕೊಡಿಸಿದರು; ಮೆರವಣಿಗೆಯಲ್ಲಿ ಹೋಗಿ ಸಂಸ್ಕಾರ ಮಾಡಿ ಬಂದೆವು. ನಾವು ಜೈಲಿನಲ್ಲಿರುವಾಗ ಆಲಾ ಹಜರತ್‌ರ (ನವಾಬ) ಹುಟ್ಟಿದ ಹಬ್ಬದ ದಿನ ನಮಗೆ ಸಿಹಿ ಊಟ ತಂದರು. ನಾವೆಲ್ಲ ಅದನ್ನು ಚೆಲ್ಲಿಬಿಟ್ಟೆವು. ಅಂದು ಉಪವಾಸ ಆಚರಿಸಿದೆವು.

ಎರಡು ತಿಂಗಳ ಬಳಿಕ ಬಿಡುಗಡೆಯಾಯಿತು. ಜಿಟ್ಟದೂರು ಶಂಕರಗೌಡರೊಡನೆ ಚಳ್ಳಿಕೊಡ್ಲೂರು ಕ್ಯಾಂಪಿಗೆ ಹೋದೆವು. ಒಂದು ರಾತ್ರಿ ಚಳ್ಳಿಕೊಡ್ಲೂರ ಮುಂದೆ ತುಂಗಭದ್ರೆ ದಾಟಿ ಉತ್ತರ ದಂಡೆಯ ಎಡೆವಾಳ ಕರೋಡಗಿರಿಗೆ (ಸುಂಕದ ಕಟ್ಟೆ) ಮುತ್ತಿಗೆ ಹಾಕಿದೆವು. ಅಲ್ಲಿ ಗಲಾಟೆ ಎಬ್ಬಿಸಿ ಸುಂಕದ ಕಟ್ಟೆಯ ರಜಿಸ್ಟರ್ ಮತ್ತು ಅಲ್ಲಿಯ ಕಾವಲುಗಾರರ ಕ್ಯಾಂಪುಗಳನ್ನು ತಂದೆವು.

ಒಂದು ದಿನ ಎಡಗಿನಹಾಳಿನ ಕ್ಯಾಂಪಿನಲ್ಲಿ ಸಿಂಧನೂರಿನ ತಹಸೀಲ್ದಾರರಾದ ಮದನ್‌ಸಿಂಗ್ ಮಾಯಾಲ್ ಬಿಡಾರ ಬಿಟ್ಟಿದ್ದ. ಅಂದು ರಾತ್ರಿ ಒಂದು ಗಂಟೆಗೆ ಚಂದ್ರಯ್ಯ, ಪೊನ್ನೂರು ಈರಣ್ಣ, ಆಯನೂರು ನರಸಪ್ಪ ಮತ್ತು ನಾನು ಆ ಕ್ಯಾಂಪಿನ ಮೇಲೆ ಹಲ್ಲೆ ಮಾಡಿದೆವು. ರಾತ್ರಿ ಎರಡು ಗಂಟೆಗೆ ಆ ತಹಸೀಲ್ದಾರನ ಡೇರೆಗೆ ಬೆಂಕಿ ಹಚ್ಚಿದೆವು. ಆತನ ಸಿಬ್ಬಂದಿ ಜನ ನಮ್ಮ ಬೆನ್ನುಹತ್ತಿದರು. ಅಲ್ಲಿಂದ ಪಾರಾಗಿ ನಾನು ಮತ್ತು ನರಸಪ್ಪ ಆಯನೂರಿಗೆ ಹೋಗಿ ವಸತಿ ಮಾಡಿದೆವು.

ಮತ್ತೊಂದು ದಿನ ಆಯನ್ನೂರು ಸಮೀಪವಿರುವ ಮ್ಯಾಗಳೂರಿನಲ್ಲಿ ಮಾನ್ವಿಯ ಸರ್ಕಲ್ ಸಬ್-ಇನ್ಸ್‌ಪೆಕ್ಟರ್ ಕ್ಯಾಂಪ್ ಮಾಡಿದ್ದ. ನಾವು ಆತನ ಮೇಲೆ ಆಕ್ರಮಣ ಮಾಡಿದೆವು. ಆತ ಅಲ್ಲಿಂದ ಓಡಿಹೋದ.

ಚಳ್ಳಿಕೊಡ್ಲೂರು ಶಿಬಿರದಿಂದ ಕೆಲದಿನಗಳ ಬಳಿಕ ನಾವು ಚಾಗಿಯ ಶಿಬಿರಕ್ಕೆ ಬಂದೆವು. (ಕಾವಿಯ ಬಟ್ಟೆ ಧರಿಸಿದ ಸಿದ್ದಿಕಿ ಚನ್ನಬಸವೇಶ್ವರ ಎಂದೆನ್ನುವ ಒಂದು ಮುಸಲ್ಮಾನ ತಂಡ ಹೈದರಾಬಾದ್ ರಾಜ್ಯದಲ್ಲಿತ್ತು. ಚನ್ನಬಸವಣ್ಣ ನಮ್ಮಲ್ಲಿ ಮತ್ತೆ ಹುಟ್ಟಿ ಬಂದಿದ್ದಾನೆ ಎಂದು ಹೇಳಿ ಜನರನ್ನು ನಂಬಿಸಿ, ಮುಸಲ್ಮಾನ ಧರ್ಮಕ್ಕೆ ಪರಿವರ್ತಿಸುವ ಕಾರ್ಯ ಇವರಿಂದ ನಡೆದಿತ್ತು. ಇವರು ಕಾವಿಬಟ್ಟೆ ಧರಿಸಿ ಹಳ್ಳಿಹಳ್ಳಿ ತಿರುಗುತ್ತಿದ್ದರು. ಸರಕಾರವೂ ಇವರಿಗೆ ಒಳಗೊಳಗೇ ನೆರವು ನೀಡುತ್ತಿತ್ತೆಂದು ತಿಳಿದು ಬರುತ್ತದೆ). ಒಮ್ಮೆ ಆಗ ಸಿದ್ದಿಕಿ ಚನ್ನಬಸವೇಶ್ವರ ತಂಡದವರು ನದಿ ದಾಟಿಬಂದು ನಮ್ಮ ಶಿಬಿರದ ಮೇಲೆ ದಾಳಿ ಮಾಡಿದರು. ಅವರನ್ನು ಎದುರಿಸಿ ಹೊಡೆದು ಓಡಿಸಿದೆವು. ನಮ್ಮ ಪೆಟ್ಟು ತಾಳದೆ ಅವರು ಹಿಂದಿರುಗಿ ನೋಡದೆ ಓಡಿಹೋದರು.

ಚಾಗಿಯಿಂದ ಒಂದು ದಿನ ನಾವು ನಾಗಲದಿನ್ನಿಗೆ ಬಂದೆವು. ನನ್ನ ಜೊತೆಗೆ ಡಿ. ಪಂಪಣ್ಣ, ಬಿ. ಶಂಕರಗೌಡ ಮುಂತಾದವರಿದ್ದರು. ಅಂದು ರಾತ್ರಿ 10 ಘಂಟೆಗೆ ತುಂಗಭದ್ರೆಯಿಂದ ಭಾರತ ಸರಕಾರದ ಪೋಲೀಸರು ಬಂದು ನಮ್ಮನ್ನು ಹಿಡಿದರು. ಅಂದೇ

ರಾತ್ರಿ ನಮ್ಮನ್ನು ಲಾರಿಯಲ್ಲಿ ಎಮ್ಮಿಗನೂರಿಗೆ (ಆದವಾನಿ ತಾಲ್ಲೂಕು) ಒಯ್ದು ಅಲ್ಲಿಯೇ ಜೈಲಿನಲ್ಲಿಟ್ಟರು. ಅವರು ನಮ್ಮನ್ನು ಕಮ್ಯುನಿಸ್ಟರೆಂದು ತಿಳಿದಿದ್ದರೆಂದು ತೋರುತ್ತದೆ. ಒಂದೂವರೆ ತಿಂಗಳು ಆ ಜೈಲಿನಲ್ಲಿ ಇದ್ದೆವು. ನಾವು ಸ್ವಾತಂತ್ರ್ಯ ಹೋರಾಟಗಾರರೆಂದು ತಿಳಿದ ಬಳಿಕ ಬಿಡುಗಡೆಮಾಡಿದರು. ಮತ್ತೆ ನಮ್ಮ ಚಟುವಟಿಕೆ ಪ್ರಾರಂಭವಾದವು. ಕೆಲದಿನಗಳ ಬಳಿಕ ಮದ್ರಾಸಿನ ಕೇಂದ್ರದಿಂದ “ನಿಮ್ಮ ಚಟುವಟಿಕೆ ನಿಲ್ಲಿಸಿರಿ” ಎಂಬ ಆದೇಶ ಬಂತು. ಆ ಬಳಿಕ ನಾವು ಬೇರೊಂದು ಕೆಲಸ ಕೈಗೊಂಡೆವು. ಆಗ ಹೈದರಾಬಾದ್ ಸಂಸ್ಥಾನಕ್ಕೆ ಆರ್ಥಿಕ ದಿಗ್‌ಬಂಧನ ಹಾಕಲಾಗಿತ್ತು. ಕಾಳಸಂತೆ ಕೋರರು ಕಳ್ಳತನದಿಂದ ರೈಲಿನಲ್ಲಿ ಮಾಲು ಸಾಗಿಸುತ್ತಿದ್ದರು. ನಾನು ಮತ್ತು ನನ್ನ ಜೊತೆಗಾರರು ಆದವಾನಿಯಿಂದ ತುಂಗಭದ್ರೆಯವರೆಗೆ ರೈಲಿನಲ್ಲಿ ಪ್ರಯಾಣಮಾಡಿ ಕಳ್ಳತನದಿಂದ ಹೈದರಾಬಾದ್ ಸಂಸ್ಥಾನಕ್ಕೆ ಒಯ್ಯುತ್ತಿದ್ದ ವಸ್ತುಗಳನ್ನು ಹಿಡಿಯ ತೊಡಗಿದೆವು; ಅನೇಕರನ್ನು ಹಿಡಿದೆವು. ಅನೇಕ ಲಕ್ಷ ರೂಪಾಯಿಗಳ ವಸ್ತುಗಳು ದೊರಕಿದವು. 1948ರ ಸೆಪ್ಟಂಬರ್‌ನಲ್ಲಿ ಹೈದರಾಬಾದಿನ ನವಾಬರು ಭಾರತ ಸರಕಾರಕ್ಕೆ ಶರಣಾಗತರಾದರು. ಅಂದಿನವರೆಗೆ ನಮ್ಮ ಹೋರಾಟ ನಿರಂತರ ನಡೆದೇ ಇತ್ತು.

## ಹೈ.ರಾ. 11 | ಪರ್ವತಯ್ಯ

ಜನನ : 1931    ಉದ್ಯೋಗ : ಸರಕಾರಿ ನೌಕರಿ    ವಿಳಾಸ : ಯರ್ಮರಸ್



ನಾನು 1946ರಲ್ಲಿ ರಾಯಚೂರಲ್ಲಿ ಹೈಸ್ಕೂಲಲ್ಲಿ ಓದುತ್ತಿರಲು ನನ್ನ ಗುರುಗಳಾದ ಶರಭಣ್ಣನವರು ವಿದ್ಯಾರ್ಥಿಗಳಿಗೆ ಗರಡಿಸಾಧನೆ ಮಾಡಿಸುವುದರ ಜೊತೆ ರಾಷ್ಟ್ರೀಯ ಪ್ರೇಮವನ್ನೂ ಬಿಂಬಿಸಿದರು. ಈ ಪೈಕಿ ಆರು ಜನ (ನಾನು, ಎಂ. ನಾಗಪ್ಪ, ಶರಭಯ್ಯ, ಚಂದ್ರಯ್ಯ, ಬಿ ಶಂಕ್ರಪ್ಪ, ಅಮರೇಗೌಡ ಹಾಲಕೊಡ) ಸೇರಿ ಆಗಿನ ಕಾಂಗ್ರೆಸ್ ಪುಢಾರಿಗಳಾದ ಅಡವಿರಾವ್, ಹನುಮಂತರಾವ್ ಗುಡಿಹಾಳ ವಕೀಲ, ರಾಘವ ಜೋಶಿ, ಬಿ. ಎಚ್. ಇನಾಂದಾರ ಇವರಿಂದ ಆರಂಭಿಸಲ್ಪಟ್ಟ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದೆವು. ಜೀವದ ಹಂಗು ತೊರೆದು ನಾವುಗಳು 1947ರ ಆಗಸ್ಟ್ 14ರ ರಾತ್ರಿ ರಾಯಚೂರಿನ ಸಾತ್ ಕಚೇರಿಯ

ಮೇಲೆ (ಏಳು ಗಂಟೆಗೆ, ಸುಮಾರು 25 ನಿಜಾಮ ಪೋಲಿಸರ ಕಣ್ಣು ತಪ್ಪಿಸಿ) ಏರಿ ತ್ರಿವರ್ಣಧ್ವಜ ಏರಿಸಿದೆವು. ಪೋಲಿಸರ ಕಣ್ಣಿಗೆ ಬಿದ್ದರೆ ಅಲ್ಲೇ ಹೆಣವಾಗಿ ಮಲಗ ಬೇಕಿತ್ತು. ಅಲ್ಲಿಂದ ಕಿತ್ತಿತಂದ ನಿಜಾಮರ ಝೇಂಡಾವನ್ನು ತುಂಡುತುಂಡು ಮಾಡಿ ಒಂದು ಕಲ್ಲಿಗೆ ಕಟ್ಟಿ ಬಾವಿಗೆಸೆದೆವು.

ಮುಂದೆ ಅಕ್ಟೋಬರ್ 2ರ ದಿನಸ ಸದಾಶಿವಭಟ್ಟರ ನೇತೃತ್ವದಲ್ಲಿ ನಾವೆಲ್ಲ ವಿದ್ಯಾರ್ಥಿಗಳು ಸೇರಿ ಸತ್ಯಾಗ್ರಹ ಪ್ರಾರಂಭಿಸಲು 30 ವಿದ್ಯಾರ್ಥಿಗಳನ್ನು ಬಂಧಿಸಿ ರಾಯಚೂರು ಜೈಲಿನಲ್ಲಿಟ್ಟರು. ನನ್ನ ಹೆಸರನ್ನು ನಾನು ಅಲ್ಲಿ ಪರ್ವತ ರೆಡ್ಡಿ ಎಂದು ಕೊಟ್ಟದ್ದರಿಂದ ನನ್ನ ಬಳಗದ ಜನ ಸುರಕ್ಷಿತವಾಗಿ ಉಳಿದರು. (ಆಗ ಬದಲಿಸಿದ್ದ ಹೆಸರೇ ಮುಂದೆ ಕಾಯಂ ಆಗಿ, ಆಫೀಸಿನಲ್ಲೂ ಬಂದುಬಿಟ್ಟಿತ್ತು. ಈಗ ಮತ್ತೆ ಪರ್ವತಯ್ಯ ಎಂದು ಬದಲಾಯಿಸಿಕೊಂಡೆ). ಜೈಲಿನಲ್ಲಿ ಎರಡೂವರೆ ತಿಂಗಳು ಇದ್ದ ಮೇಲೆ ಬಿಡುಗಡೆ ಆಯಿತು. ಚಳವಳಿಯು ಮತ್ತೆ ಬಲ ಆದಾಗ ನಮ್ಮಗಳ ಬಂಧನಕ್ಕೆ ವಾರಂಟ್ ಹೊರಟ ಸಂಗತಿ ತಿಳಿದು ನಾನು, ಗೆಳೆಯ ಎಂ. ನಾಗಪ್ಪ ಮುಂತಾದ ಏಳೆಂಟು ಜನ ಸೇರಿ ಮುಖವಾಡ ಧರಿಸಿ, ಊರಿಂದ ಪಾರಾಗಿ ತುಂಗಭದ್ರಾ ಆಶ್ರಮ ಸೇರಿದೆವು. ಅಲ್ಲಿ ಒಂದು ಶಿಬಿರ ನಡೆಸಿದರು. ಅಲ್ಲಿಂದ ನನ್ನನ್ನು ವಿಜಯವಾಡಾ ಜಿಲ್ಲೆಯ ಪಟಯಾಲಾ ಎಂಬಲ್ಲಿಗೆ ಮಿಲಿಟರಿ ಟ್ರೈನಿಂಗ್‌ಗೆ ಕಳುಹಿಸಿದರು. ಆಂಧ್ರದ ನಾಯಕ ಕಾಳೇಶ್ವರರಾವ್ (ಇವರು ಮುಂದೆ ಸ್ಪೀಕರ್ ಆದರು) ಇವರು ನೇತೃತ್ವ ವಹಿಸಿದ್ದು 200 ಜನ ಅಲ್ಲಿ ತರಬೇತಿಯನ್ನು ಮೂರು ತಿಂಗಳ ಕಾಲ ಪಡೆದರು. ಮುಂದೆ ವಿಶೇಷ ತರಬೇತಿಗಾಗಿ ನನ್ನ ಸಹಿತ 14 ಜನರನ್ನು ಧಾರವಾಡ ಜಿ|| ಗಜೇಂದ್ರಗಡಕ್ಕೆ ಕಳುಹಿಸಿದರು. ಒಂದು ತಿಂಗಳು ಅಲ್ಲಿ ತರಬೇತಿ ಆಯಿತು. ಮುಂದೆ ಕುಷ್ಟಗಿ ತಾ|| ಕಲಾಲಬಂಡ ಎಂಬ ಊರ ಮೇಲೆ ನಾವು 22 ಜನ ದಾಳಿಮಾಡಲು, ನಮ್ಮ ಕಣ್ಣೆದುರಿಗೇ ಐದಾರು ರಜಾಕಾರರ ಹೆಣ ಬಿದ್ದವು.

ರಜಾಕಾರರು ಈ ಕಾಲದಲ್ಲಿ ಎಷ್ಟು ಕ್ರೂರವಾಗಿ ವರ್ತಿಸುತ್ತಿದ್ದರೆಂದರೆ ಆ ಬಗ್ಗೆ ಉದಾಹರಣೆ ಹೇಳಬಹುದು. ನಾನು ಮುಧೋಳ ಬಳಿಯ ರಾಮಪುರಕ್ಕೆ ಹೋದಾಗ ನಾನು ಪೋಲಿಸ್ ವೀರಭದ್ರಪ್ಪನ ಜೊತೆ ಮಾತನಾಡುತ್ತಿದ್ದೆ. ಹೀಗೆ ಸಾಗುತ್ತಿರಲು ಆತ ದೂರದಲ್ಲಿ ನಿಂತ ಪಠಾಣನೊಬ್ಬನ ಕಡೆಗೆ ಕೈಮಾಡಿ, ಆ ಸ್ಥಳವನ್ನು ನಿರ್ದೇಶಿಸಿದಾಗ ಆ ಪಠಾಣ ಕಾರಣವಿಲ್ಲದೆ ವೀರಭದ್ರಪ್ಪನ ಮೇಲೆ ಗೋಲಿ ಹಾರಿಸಿದ. ಈತನಿಗೆ ಕೈಗೆ ಗಾಯವಾಯಿತು. ನಾನು ಮದ್ದುಗುಂಡು ಹಾರಿಸಿದೆ. ನಾನು ಒಬ್ಬನೇ, ಅವರು ಹಲವರಾಗಿರಲು, ಮರೆಯಲ್ಲಿ ನಿಂತು ಒಬ್ಬನೇ ಅವರ ಜೊತೆ ಜೀವದ ಹಂಗುತೊರೆದು ಹೋರಾಡಿದೆ. ವೀರಭದ್ರಪ್ಪ ಓಡಿಹೋಗಿ ಇಂಡಿಯನ್ ಮಿಲಿಟರಿ ಕರೆದು ತರಲು (ರಾಮಪುರದಿಂದ ಸ್ವಲ್ಪ ದೂರದಲ್ಲಿ ಮಿಲಿಟರಿ ಕ್ಯಾಂಪ್ ಇತ್ತು), ಅವರು ಬಂದು ನನ್ನ ಬಿಡುಗಡೆ ಮಾಡಿದರು.

ರಜಾಕಾರರು ಹಗಲುಹೊತ್ತು ದಾಳಿ ಮಾಡುತ್ತಿದ್ದರು ; ನಾವು ಮಾತ್ರ ರಾತ್ರಿ ದಾಳಿಮಾಡುತ್ತಿದ್ದೆವು. 1948ರಲ್ಲಿ ನಾವು ನಂದವಾರದಲ್ಲಿ ತಂಗಿದ್ದಾಗ, ನಮ್ಮನ್ನು ಕಮ್ಯುನಿಸ್ಟರೆಂದು ಭಾವಿಸಿ ಇಂಡಿಯನ್ ಮಿಲಿಟರಿಯವರು ಬಂಧಿಸಿ ನಮ್ಮ ಮೇಲೆ ಕೇಸುಹಾಕಿ ಎಮ್ಮಿಗನೂರಲ್ಲಿ ಇಟ್ಟಿರಲು, ಸಾಕ್ಷಿಗಳು ಸಿಗದೆ ಕೇಸು ನಡೆಯದಾಯಿತು. ಕಡೆಗೆ ಮದ್ರಾಸಿನಿಂದ ಓ. ಪಿ. ರೆಡ್ಡಿಯಾರರು ಸಂಬಂಧಪಟ್ಟ ಮಿಲಿಟರಿಯವರಿಗೆ ಫೋನ್‌ಮಾಡಿ ನಮ್ಮ ಬಿಡುಗಡೆ ಮಾಡಿಸಿದರು. ಬಿಡುಗಡೆಯನಂತರ ಆದವಾನಿಯಲ್ಲಿ ಶಿಬಿರ ಮಾಡಿಕೊಂಡು ರಜಾಕಾರರ ಮೇಲೆ ದಾಳಿ ಆರಂಭಿಸಿದೆವು. ಒಮ್ಮೆ ಸೊಲ್ಲಾಪುರಕ್ಕೆ ಕೈಬಾಂಬು ತರಲು ಹೋದ ನಾವು ಆದವಾನಿಗೆ ಮರಳುವಾಗ ರಾಯಚೂರ ಮೂಲಕ ರೈಲಿನಲ್ಲಿ ಬರಬೇಕಾಗಿತ್ತು. ದಾರಿಯ ಸ್ಟೇಶನ್‌ಗಳಲ್ಲಿ ಸಾಮಾನುಗಳನ್ನು ತಪಾಸು ಮಾಡಿಯೇ ಬಿಡುತ್ತಿದ್ದರು. ಮಾವಿನ ಬುಟ್ಟಿಯಲ್ಲಿ ಈ ಬಾಂಬುಗಳನ್ನು ಹಾಕಿ ಡಿ. ಪಂಪಣ್ಣನ ಜೊತೆ ರಾಯಚೂರುವರೆಗೆ ಬಂದೆನು. ಆದರೆ ನಾವು ಕೂತ ಡಬ್ಬಿ ರಾಯಚೂರವರೆಗೆ ಮಾತ್ರ ಇದ್ದು ಅಲ್ಲಿ ಅದನ್ನು ಕಳಚಿದರು. ಬೇರೊಂದು ಡಬ್ಬಿ ಹತ್ತುವಾಗ ಪೋಲಿಸರು ನಮ್ಮನ್ನು ಹಿಡಿದರು. ಏಕೆಂದರೆ ನಾವು ಹತ್ತಿದ ಡಬ್ಬಿ ಸೆಕೆಂಡ್ ಕ್ಲಾಸಿನದ್ದು ; ನಮ್ಮಲ್ಲಿ ಥರ್ಡ್ ಕ್ಲಾಸ್ ಟಿಕೆಟ್ ಇತ್ತು. ಹಾಗೂ ಹೀಗೂ ಸ್ಟೇಶನ್ ಮಾಸ್ತರರ ನೆರವಿನಿಂದ ಮಂತ್ರಾಲಯ ಸ್ಟೇಶನ್‌ಗೆ ಬಂದಾಗ ರಾತ್ರಿಯಾಗತೊಡಗಿತ್ತು. ರಜಾಕಾರರು ಅಲ್ಲಿ ಇಳಿಯುವ ವ್ಯಕ್ತಿಗಳನ್ನು ನೋಡಿಯೇ ಬಿಡುತ್ತಿದ್ದರು. ಹಿಂಬಾಗಿಲಿನಿಂದ ಇಳಿದು ಬುಟ್ಟಿಗಳೊಂದಿಗೆ ಪಾರಾಗುವಾಗ, ಪೋಲಿಸ್‌ನೊಬ್ಬ ಬೆನ್ನುಬಿದ್ದ. ನಾವು ಹೊಲದೊಳಗಿನ ಬೆಳೆಯ ನಡುವೆ ಪಾರಾದೆವು.

ಇಂಥ ಅನೇಕ ಘಟನೆಗಳನ್ನು ಈಗ ನೆನೆದರೆ ಮೈ ಜುಮ್ ಎನ್ನುವುದು. ಏನೋ ನಮ್ಮ ದೈವವೇ ಚೆನ್ನಾಗಿತ್ತು. ಭಾರತಾಂಬೆಯ ಆಶೀರ್ವಾದದಿಂದ ಎಂಥೆಂಥದೋ ಪರಿಸ್ಥಿತಿಗಳಿಂದ ಪಾರಾಗಿ ಬಂದೆವು.

ಹೈ.ರಾ. 12

## ಅಡವಿರಾವ್ ಫಡ್ನೀಸ್

ಜನನ : ಸು. 1896 ಉದ್ಯೋಗ : ನಿವೃತ್ತಜೀವನ ವಿಳಾಸ : ಕುಷ್ಟಗಿ

ನನ್ನ ಕಕ್ಕಂದಿರಾದ ಜಿ. ಕಿಶನ್‌ರಾವ್ ವಕೀಲ ಇವರ ನೆರವಿನಿಂದ ನನ್ನ ಶಿಕ್ಷಣವು ಕಲ್ಬುರ್ಗಿ ನೂತನ ವಿದ್ಯಾಲಯದಲ್ಲಿ ಜರುಗಿತು. ಆಗ ಒಮ್ಮೆ ನಿಜಾಮನು ಕಲ್ಬುರ್ಗಿಗೆ ಬಂದಿರಲು ರಸ್ತೆಯಲ್ಲಿ ಅಡ್ಡ ಬಂದ ಒಬ್ಬ ಹುಡುಗನನ್ನು ಪೋಲಿಸರು ಪ್ರಾಣ ಹೋಗುವವರೆಗೆ ಹೊಡೆದದ್ದನ್ನು ನೋಡಿ ಬಾಲಕನಾದ ನಾನು ಪೋಲಿಸ್ ಕಮಿಶನರ್ ಹಾಗೂ

ಕಲೆಕ್ಟರರ ಕಡೆ ಹೋಗಿ ಪ್ರತಿಭಟನೆ ವ್ಯಕ್ತಪಡಿಸಿದೆ. ಪೋಲಿಸರು ನನ್ನನ್ನು ಚೆನ್ನಾಗಿ ಥಳಿಸಿದರು. ಅನ್ಯಾಯವನ್ನು ಪ್ರತಿಭಟಿಸುವ ಶಕ್ತಿ ಬಾಲ್ಯದಿಂದ ನನ್ನಲ್ಲಿ ಬೆಳೆದಿತ್ತು.

ಮುಂದೆ ಪುಣೆಯಲ್ಲಿ ನ್ಯೂ ಇಂಗ್ಲಿಷ್ ಸ್ಕೂಲಿಗೆ ಸೇರಿದಲು, ಆ ಊರಲ್ಲಿ ಟಿಳಕ, ಖಾಡಿಲಕರ್, ಎಸ್. ಎಂ. ಪರಾಂಜಪೆ, ಕವಡೆಶಾಸ್ತ್ರಿ ಮುಂತಾದವರ ಭಾಷಣ ಕೇಳಿ ನನ್ನಲ್ಲಿ ದೇಶಪ್ರೇಮವು ಉಕ್ಕೇರಹತ್ತಿತು. ಆದರೆ ನನ್ನ ಆರೋಗ್ಯ ಕೆಟ್ಟದ್ದರಿಂದ ಶಿಕ್ಷಣ ಪೂರ್ಣಮಾಡದೆ, ಘಟಪ್ರಭಾದಲ್ಲಿ ಚಿಕಿತ್ಸೆಹೊಂದಿ ರಾಯಚೂರಿಗೆ ಬಂದೆನು. ಅಲ್ಲಿ ವ್ಯಾಪಾರದಲ್ಲಿ ತೊಡಗಿದೆನು. ಆಗಲೇ ನನಗೆ ರಾ. ಗು. ಜೋಶಿಯವರ ಸ್ನೇಹವಾಯಿತು. ಅವರು ನನಗೆ ಮಾರ್ಗದರ್ಶಕರೂ ಆದರು. ನಾವಿಬ್ಬರೂ ಸೇರಿ ಜನರಲ್ಲಿ ದೇಶಪ್ರೇಮ, ಸಾಹಿತ್ಯಪ್ರೇಮ ಹುಟ್ಟಿಸಲು ದುಡಿದೆವು. 1932ರಿಂದ ಗಣೇಶೋತ್ಸವವೇ ಮುಂತಾದ ಚಟುವಟಿಕೆಗಳನ್ನು ಆರಂಭಿಸಿ, ಮುದವೀಡು ಕೃಷ್ಣರಾವ್, ಆಲೂರು ವೆಂಕಟರಾವ್, ದಿವಾಕರ, ಬೇಂದ್ರೆ ಮುಂತಾದವರನ್ನು ಕರೆಯಿಸಿ, ಜನರಲ್ಲಿ ಉತ್ಸಾಹ ಮೂಡಿಸುವ ಭಾಷಣ ಕಾರ್ಯಕ್ರಮ ಮಾಡಿಸಿದೆವು. ಪೂರ್ಣ ಕಗ್ಗತ್ತಲೆಯಲ್ಲಿ ಇದ್ದ ರಾಯಚೂರಿನ ಜನಕ್ಕೆ ಕನ್ನಡಾಭಿಮಾನ, ದೇಶಪ್ರೇಮ ಬೆಳೆಯಲು ನಾವಿಬ್ಬರೂ ದುಡಿದೆವು. ಇದಲ್ಲದೆ 1938ರಿಂದ ಕಾಂಗ್ರೆಸ್ ಸದಸ್ಯರ ನೋಂದಣಿಯ ಕಷ್ಟಸಾಧ್ಯವಾದ ಕೆಲಸ ಆರಂಭಿಸಿದೆವು. (ಸ್ವತಃ ಅಡವಿರಾಯರು 1921ರಿಂದಲೇ ಕಾಂಗ್ರೆಸ್ ಸದಸ್ಯರಾಗಿದ್ದರೆಂದು ರಾ. ಗು. ಜೋಶಿ ಹೇಳಿದ್ದಾರೆ. ಕಾಂತಿ, 2-12-1973). ಎಲ್ಲ ವ್ಯಾಪಾರಸ್ಥರೂ ಊರಪ್ರಮುಖರೂ ಕಾಂಗ್ರೆಸ್ ಸದಸ್ಯರಾದರು. ಈ ಕಾಲದಲ್ಲಿ ಖಾದಿ ಭಂಡಾರವನ್ನೂ ತೆರೆಯಲಾಯಿತು. ಬಿಂದೂರಾವ್ ಇನಾಂದಾರರ ಸತತ ಪ್ರಯತ್ನದಿಂದ ಜನರು ಖಾದೀಪ್ರೇಮಿಗಳಾದರು.

ಬೇರೆಯವರ ಅಂಗಡಿಯಲ್ಲಿ ವ್ಯವಸ್ಥಾಪಕನಾಗಿ ಕೆಲಸಮಾಡುತ್ತಿದ್ದ ನಾನು ಗಂಜ ಭಾಗದಲ್ಲಿ ನನ್ನದೇ ಅಡತ ಅಂಗಡಿಯನ್ನು ತೆರೆದೆ. ನನ್ನನ್ನು ಮಾರ್ಕೆಟ್ ಕಮಿಟಿ ಸದಸ್ಯನಾಗಿಯೂ ಆರಿಸಿದರು. ಹಮಾಲರ, ಬಂಡಿ ಹೊಡೆಯುವವರ ಸಂಘಟನೆ ಮಾಡಿದೆನು. ಈ ಕಾಲದಲ್ಲಿ ಸರಕಾರವು ನನ್ನನ್ನು ಸಂಶಯದೃಷ್ಟಿಯಿಂದ ನೋಡಲು ಆರಂಭಿಸಿತು. 1945ರಲ್ಲಿ ಜನಹಿತ ಸಂಘ ಎಂಬ ಸಂಸ್ಥೆ ಆರಂಭಿಸಿದೆವು. ರಾ. ಗು. ಜೋಶಿ ಅಧ್ಯಕ್ಷರು. ನಾನೂ ಗಾಣಧಾಳ ನಾರಾಯಣಪ್ಪ ಕಾರ್ಯದರ್ಶಿಗಳು. ಬಿಂದುರಾವ್ ಇನಾಂದಾರ ನಮ್ಮ ಜೊತೆಗಾರರು. ಯುದ್ಧಕಾಲದಲ್ಲಿ ಲೆವಿ ವಸೂಲಿ ಬಗ್ಗೆ ಜನರಿಗಾಗುವ ಕಷ್ಟನಷ್ಟಗಳನ್ನು ಸ್ವತಃ ನೋಡಿಕೊಂಡು ಬರಬೇಕೆಂದು ನಾವು ಮಾನವಿ ತಾಲ್ಲೂಕಿನಲ್ಲಿ ಪಾದಯಾತ್ರೆ ಕೈಕೊಂಡೆವು. (ರಾ. ಗು. ಜೋಶಿ ಇವರು ಈ ಪಾದಯಾತ್ರೆಯ ವಿಷಯವನ್ನು ತಮ್ಮ ಪುಸ್ತಕ 'ಅನುಕಂಪ-ಜನಕಂಪ'ದಲ್ಲಿ ವಿಸ್ತಾರವಾಗಿ ವರ್ಣಿಸಿದ್ದಾರೆ.)

ಹೈದರಾಬಾದಿನಲ್ಲಿ ಇದೇ ಕಾಲಕ್ಕೆ ಕಾಂಗ್ರೆಸ್ ಪ್ರಾರಂಭವಾದ್ದರಿಂದ ರಾಯಚೂರು ಕಾಂಗ್ರೆಸ್ಸು ಅದರ ಒಂದು ಶಾಖೆಯೆಂದು ಸಾರಲಾಯಿತು. ರಾಯಚೂರಿನ ವಕೀಲರು ಇದಕ್ಕೆ ಸಹಾನುಭೂತಿಯನ್ನು ತೋರಿಸಿದರು.

ಈ ಕಾಲಕ್ಕೆ ರಜಾಕಾರರ ದಬ್ಬಾಳಿಕೆ ಹೆಚ್ಚಾಗಹತ್ತಿತು. ಸರಕಾರ ಹಿಂದುಗಳ ಮೇಲೆ ಅನ್ಯಾಯ ಮಾಡಲಾರಂಭಿಸಿ, ಹಿಂದುಗಳಲ್ಲಿದ್ದ ಶಸ್ತ್ರಾಸ್ತ್ರಗಳನ್ನು ಕಸಿದು ರಜಾಕಾರರಿಗೆ ಕೊಡಹತ್ತಿತು. ಕಾಂಗ್ರೆಸ್ ಸದಸ್ಯರಿಗೆ ಕಷ್ಟನಷ್ಟ, ಕಾಂಗ್ರೆಸ್ ನಿಶಾನೆಗೆ ಅವಮಾನ ನಡೆದವು. 1942ರಲ್ಲಿ ನಾನು ವೈಯಕ್ತಿಕ ಸತ್ಯಾಗ್ರಹವನ್ನು ರಾಯಚೂರಲ್ಲಿ ಮಾಡಿ ಬಂಧಿತನಾದೆ. ಮೊದಲ ಸತ್ಯಾಗ್ರಹಿಯಾದ ನನಗೆ ಐದು ತಿಂಗಳ ಕಠಿಣ ಶಿಕ್ಷೆ ಆಯಿತು. ನನ್ನನಂತರ ಗಣಧಾಳ ನಾರಾಯಣಪ್ಪ ಎರಡನೇ ಸತ್ಯಾಗ್ರಹಿ. ಆತನಿಗೂ ಶಿಕ್ಷೆ ಆಯಿತು. ನಾವು ಬಿಡುಗಡೆ ಆಗಿ ಬಂದಾಗ ರಜಾಕಾರರ ಹಾವಳಿ ಹೆಚ್ಚಾಗಿತ್ತು. "ಬ್ರಾಹ್ಮಣರನ್ನು ಹೊಡೆಯಿರಿ, ಕೋಮಟರನ್ನು ಸುಲಿಯಿರಿ!" ರಜಾಕಾರರ ಆಗಿನ ಘೋಷಣೆ. ಹಿಂದುಗಳ ವಿರುದ್ಧ ಉದ್ರೇಕಕಾರೀ ಪ್ರಚಾರ ಕಲೆಕ್ಟರರಿಂದ ಮೊದಲ್ಗೊಂಡು ಎಲ್ಲರೂ ಲಂಚ ಪಡೆದು ಧಾನ್ಯವನ್ನು ಬೇರೆ ಪ್ರಾಂತಗಳಿಗೆ ಸಾಗಿಸುತ್ತಿದ್ದರು. ಈ ಎಲ್ಲ ವಿಚಾರಗಳನ್ನು ತಿಳಿದು ನಾನು ಗುಪ್ತರೀತಿಯಿಂದ ಅಧಿಕಾರಿಗಳಿಗೆ ತಿಳಿಸುತ್ತಿದ್ದೆ. ಇದರಿಂದ ಅನೇಕ ಬಾರಿ ನನ್ನನ್ನು ಗೂಂಡಾ ಎಂದು ಹೇಳಿ ಬಂಧಿಸಿ ಹೊಡೆದುದೂ ಇದೆ. ಇಂಥ ಒಂದು ಸಂದರ್ಭದಲ್ಲಿ ನಾನು ಜೈಲಿನಲ್ಲಿ ಆರು ದಿನ ಉಪವಾಸ ಮಾಡಿದೆ. ಮುಂದೆ ಸ್ವಾಮಿ ರಮಾನಂದ ತೀರ್ಥರ ಆದೇಶದಂತೆ ಉಪವಾಸವನ್ನು ನಿಲ್ಲಿಸಿದೆ. ಎರಡು ಬಾರಿ ರಜಾಕಾರರು ನನ್ನ ಅಂಗಡಿಯನ್ನು ಲೂಟಿಮಾಡಿ ಅರಳೆದಿಂಡುಗಳನ್ನು ಸುಟ್ಟುದರಿಂದ ನನಗೆ 80,000 ರೂ.ಗಳಷ್ಟು ನಷ್ಟವಾಯಿತು. ಪೋಲಿಸರಿಗೆ ವರದಿ ಕೊಟ್ಟಾಗ ಅವರು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಮಾತ್ರವಲ್ಲ, ಇಂಥ ಒಂದು ಪ್ರಸಂಗದ ಹಿಂದೆಯೇ ಜಾತೀಯ ದೊಂಬಿ ನಡೆಸಿದ ಆಪಾದನೆ ಹೇರಿ ನನ್ನನ್ನೂ ಜೋಶಿ ರಾಮಾಚಾರ್ಯ, ಗುಡಿಹಾಳ ಹನುಮಂತರಾವ್ ಮುಂತಾದವರನ್ನೂ ಬಂಧಿಸಿದರು (ಜುಲೈ, 1948). ಅಲ್ಲಿಂದ ಕಲಬುರ್ಗಿ ಜೈಲಿಗೆ ವರ್ಗಾಯಿಸಿದರು. ಅಲ್ಲಿ ಅನೇಕ ಅನ್ಯಾಯಗಳು ನಡೆದು, ಅವುಗಳ ವಿರುದ್ಧ ನಾನು ಪ್ರತಿಭಟಿಸಿದ್ದರಿಂದ ನಿಜಾಮಾಬಾದ್ ಜೈಲಿಗೆ ವರ್ಗಾಯಿಸಿದರು. ಈ ಕಾಲದಲ್ಲಿ ನನ್ನ ಹೆಂಡತಿಮಕ್ಕಳಿಗೆ ರಜಾಕಾರರಿಂದ ತೀರ ಕೀಟಲೆ ಆಗಲು ಕಲ್ಲೂರ ಸಿದ್ದಣ್ಣ ತಮ್ಮ ಕಾರಿನಲ್ಲಿ ಕಮತಗಿಗೆ ಅವರುಗಳನ್ನು ಬಿಟ್ಟುಬಂದರು. ಹತ್ತು ತಿಂಗಳನಂತರ ನನ್ನ ಬಿಡುಗಡೆ ಆದಾಗ ನಾನು ತುಂಗಭದ್ರಾ ಶಿಬಿರವನ್ನು ಸೇರಿದೆ. ಅಲ್ಲಿ 4-5 ದಿನ ಇದ್ದು ಅಲ್ಲಿಂದ ಗದಗಿಗೆ ಹೋದೆ. ಪೋಲಿಸ್ ಆ್ಯಕ್ಷನ್ ಆಗುವವರೆಗೆ ಅಲ್ಲಿನ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದೆ. ಆದವಾನಿಯಲ್ಲಿ ಆಗ ಶಿಬಿರವಿದ್ದು ಅದರ ವ್ಯಾಪ್ತಿ ತುಂಗಭದ್ರಾದಂಡೆಗೂ ಇತ್ತು. ನಾರಾಯಣಪ್ಪ ಗಾಣಧಾಳ ಹಾಗೂ ನಾರಾಯಣಪ್ಪ ಕೊಂಕಲ ಯಾದಗಿರಿ ಇವರು ಅಲ್ಲಿ ಪ್ರಮುಖರಾಗಿದ್ದರು. ಗದಗಿನಲ್ಲಿ ಜನಾರ್ದನರಾವ್ ದೇಸಾಯಿ, ವಿಜಯರಾವ್ ದೇಸಾಯಿ, ಪುಂಡಲೀಕಪ್ಪಾ (ಕುಷ್ಟಗಿ) ಹಾಗೂ ಜಯತೀರ್ಥ ರಾಜಪುರೋಹಿತ ಇವರುಗಳಿದ್ದರು. ಪೋಲಿಸ್ ಆ್ಯಕ್ಷನ್ ನಂತರ ರಾಯಚೂರಿಗೆ ಮರಳಿದೆ. ಈಗ ಕುಷ್ಟಗಿಯಲ್ಲಿ ಸ್ವಂತ ಮನೆಯಲ್ಲಿ ಇದ್ದೇನೆ.

ಹೈ.ದಾ. 13

# ಆದಿ ರಾಜಶೇಖರ

ಜನನ : 1932 ಉದ್ಯೋಗ : ವಕೀಲ ವಿಳಾಸ : ದೇವದುರ್ಗ



1946ರಲ್ಲಿ ರಾಯಚೂರಿನ ಸರ್ಕಾರಿ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ನಾನು ವಿದ್ಯಾರ್ಥಿಗಳ ನಾಯಕನಾಗಿದ್ದೆ. ಆಗ ಅಲ್ಲಿನ ಮುಸ್ಲಿಂ ವಿದ್ಯಾರ್ಥಿಗಳು ನಾವು ಖಾದಿ ಟೊಪ್ಪಿಗೆ ಧರಿಸಿ ಬರುವುದಕ್ಕೆ ವಿರೋಧ ಮಾಡುತ್ತಿದ್ದರು. "ಪಾಕಿಸ್ತಾನ ಲೇಕೆ ರಹೇಂಗೆ, ನಹಿ ದಿಯಾ ತೋ ಲಡಕೇ ಹಿ ಲೇಂಗೆ" ಎಂಬ ಘೋಷಣೆಗಳನ್ನು ಶಾಲೆಯ ಗೋಡೆಗಳ ಮೇಲೆ ಬರೆಯುತ್ತಿದ್ದರು. ಒಮ್ಮೆ ಕಾಶಿಂ ರಜ್ವಿ, ಶಾಮಸುಂದರ್, ಬಿ. ಎಸ್. ವೆಂಕಟರಾವ್ ಇವರುಗಳು ರಾಯಚೂರಿಗೆ ಬಂದು ಅಲ್ಲಿನ **ರಣಜಿತ್** ಟಾಕೀಸಿನಲ್ಲಿ ಗಾಂಧಿ, ನೆಹರೂ, ಸರ್ದಾರ್ ಪಟೇಲ್, ಮೌಲಾನಾ ಆಜಾದ್ ಮುಂತಾದ ನಾಯಕರನ್ನು ಟೀಕಿಸಿ ಭಾಷಣ ಮಾಡಿದರಲ್ಲದೆ ಮುಸಲ್ಮಾನರೂ ಹರಿಜನರೂ ಒಂದಾಗಿ ಹಿಂದುಗಳನ್ನು ಎದುರಿಸಬೇಕೆಂದು ಹೇಳಿದರು. ಆದರೆ ರಜಾಕಾರರನ್ನು ಎದುರಿಸುವಲ್ಲಿ ಹರಿಜನರು ತಮ್ಮ ಹಿಂದೂ ಬಾಂಧವರೊಡನೆ ಸಹಕರಿಸಿದರೇ ವಿನಾ ತಮ್ಮ ಈ ನಾಯಕರ ಮಾತನ್ನು ಕೇಳಲಿಲ್ಲ. ಇದರ ಹಿಂದೆಯೇ ಮುಸಲ್ಮಾನರೆಲ್ಲ ಒಂದಾಗಿ ಶಾಲೆಯ ಕಾಂಪೌಂಡಿನ ಹೊರಗಡೆ ನೆರೆದು ಶಾಲೆಯೆಡೆ ಕಲ್ಲೆಸೆದ ಪ್ರಕರಣವೂ ಆಯಿತು. ಈ ಕಾಲಕ್ಕೆ ಯಾವುದೋ ವೈಯಕ್ತಿಕ ಕಾರಣಕ್ಕಾಗಿ ಮುಸಲ್ಮಾನನೊಬ್ಬನ ಕೊಲೆಯಾಗಲು ರಜಾಕಾರರು ಈ ಪ್ರಕರಣಕ್ಕೆ ಜಾತೀಯ ಬಣ್ಣ ಕೊಟ್ಟು ರಾಯಚೂರಿನ ಟಿಂಬರ್‌ಪೇಟ್ ಭಾಗದ 100 ಗುಡಿಸಲುಗಳನ್ನು ಸುಟ್ಟರು. ಈ ಎಲ್ಲ ಗೊಂದಲಗಳಿಂದಾಗಿ ಹಿಂದುಗಳು ಊರು ಬಿಟ್ಟು ಸಂಸ್ಥಾನದ ಗಡಿಯಾಚೆ ಹೋದರು. ಎರಡು ಮೂರು ಬಾರಿ ಕಾಂಗ್ರೆಸ್ ನಾಯಕರ ಅಂಗಡಿಗಳನ್ನು ಸುಡುವ ಯತ್ನವೂ ನಡೆಯಿತು.

ಆಗಸ್ಟ್ 7ರ (1947) ದಿನ ಗಡಿಹಾಳು ಹಣಮಂತರಾವ್ ವಕೀಲರೂ ಆರ್. ಜಿ. ಜೋಶಿಯವರೂ ನಾರಾಯಣಪ್ಪನವರೂ ಸತ್ಯಾಗ್ರಹ ನಡೆಸಿ ರಾಯಚೂರಲ್ಲಿ ಬಂಧಿತರಾದರು. ನಾನು ದೇವದುರ್ಗದಿಂದ ಸತ್ಯಾಗ್ರಹ ಮಾಡಬೇಕೆಂದಿದ್ದರೂ ಅಲ್ಲಿ ವಿಶೇಷ ಬೆಂಬಲ ಸಿಗದ್ದರಿಂದ ನಾನು ರಾಯಚೂರಿಗೆ ಮರಳಿದೆ. ಆಗಸ್ಟ್ 15ರಂದು

ಎಂ. ನಾಗಪ್ಪ ಮುಂತಾದ ಕೆಲವು ಮಿತ್ರರು ಕಲೆಕ್ಟರ್ ಕಚೇರಿಯ ಮೇಲೆ ರಾಷ್ಟ್ರಧ್ವಜ ಹಾರಿಸಿದರು. ಆ ದಿನದಿಂದಲೇ ವಿದ್ಯಾರ್ಥಿಗಳು ಮುಷ್ಕರ ಹೂಡಿ ಸಂಸ್ಥಾನದಲ್ಲೆಲ್ಲ ಚಳವಳಿಯಲ್ಲಿ ಸೇರಿದ್ದರು. ಆರ್ಯ ಭವನ ಹೋಟೆಲಿನ ಮಾಲಿಕರು ಮಹಾದೇವ ಅಯ್ಯರ್ ಆ ದಿನ ತಮ್ಮ ಹೋಟೆಲಿನ ಮೇಲೆ ರಾಷ್ಟ್ರಧ್ವಜ ಹಾರಿಸಿ ಬಂಧಿತರಾದರು. ಅದೇ ದಿನವೇ ಜಿ. ಮಧ್ವರಾವ್ ಅಡ್ವೊಕೇಟ್ ಅವರೂ ಸತ್ಯಾಗ್ರಹ ಮಾಡಿ ಬಂಧಿತರಾದರು.

ದಿ. 2-9-1947ನ್ನು ರಾಷ್ಟ್ರೀಯ ಧ್ವಜದಿನವಾಗಿ ಆಚರಿಸಲು ಸಂಸ್ಥಾನೀ ಕಾಂಗ್ರೆಸ್ ಕರೆನೀಡಿದಾಗ ನಾನೊಬ್ಬನೇ ರಾಯಚೂರಿನಲ್ಲಿ ನಮ್ಮ ಮನೆಯ ಮೇಲೆ ಧ್ವಜವನ್ನು ಹಾರಿಸಿದೆ. ಆ ದಿನ ಪೋಲಿಸರು ನಮ್ಮ ಮನೆಗೆ ಬಂದು ಝಡ್ತಿಮಾಡಿದರು. ಮುಂದೆ ಅಕ್ಟೋಬರ್ 2ರಂದು (1947) ಪ್ರತಿಭಟನಾದಿನ ಆಚರಿಸಲು ಹೈದರಾಬಾದ್ ನಿಂದ ಸೂಚನೆ ಬರಲು ಆರ್ಯಸಮಾಜ ಮಂದಿರದಲ್ಲಿ ವಿದ್ಯಾರ್ಥಿಗಳ ಸಭೆ ಕರೆದು (1-10-47) ನಾನು ಭಾಷಣ ಮಾಡಿದೆನಲ್ಲದೆ ಮರುದಿನದ ಕಾರ್ಯಕ್ರಮದ ಕಲ್ಪನೆಯನ್ನು ತಿಳಿಸಿ ಹೇಳಿದೆ. ಮರುದಿನ ಸಂಜೆಯ ನಾಲ್ಕು ಗಂಟೆಗೆ 32 ವಿದ್ಯಾರ್ಥಿಗಳು ರಾಷ್ಟ್ರಧ್ವಜ ಹಿಡಿದು, ಗಾಂಧೀಜಿಯ ಹೆಸರಲ್ಲಿ ಜಯಕಾರ ಹಾಕುತ್ತ ಒಕ್ಕೂಟದ ಜೊತೆ ಸಂಸ್ಥಾನವು ಸೇರಬೇಕೆಂದು ಘೋಷಣೆ ಕೂಗುತ್ತ ಸಾಗಿದೆವು. ನಾವು ಕಲೆಕ್ಟರ್ ಕಚೇರಿಯ ಮುಂದಿನಿಂದ ಹಾದು ಸುಮಾರು ಮುಕ್ಕಾಲು ಮೈಲು ದೂರ ಹೋಗಿರಲು ಪೋಲಿಸರು ನಮ್ಮನ್ನು ತಡೆದು ಬಂಧಿಸಿ ರಿಮಾಂಡ್‌ನಲ್ಲಿ ಇಟ್ಟರು. ನಮಗೆಲ್ಲ ಐದು ವಾರಗಳ ಶಿಕ್ಷೆ ಆಗಿ 10-11-1947ರಂದು ಬಿಡುಗಡೆ ಆಯಿತು. ಜೈಲಿನಲ್ಲಿ ನಾವು ಇದ್ದಾಗ ನಮ್ಮ ಸಂಬಂಧಿಗಳು ನಮ್ಮನ್ನು ಸಂದರ್ಶಿಸಿ ಕ್ಷಮೆಯನ್ನು ಕೇಳಿ ಬಿಡುಗಡೆ ಹೊಂದಲು ಒತ್ತಾಯಿಸಿದರೂ ಯಾರೂ ಕ್ಷಮೆಯನ್ನು ಕೇಳಲಿಲ್ಲ. ಬಿಡುಗಡೆಯನಂತರ ನಾನು ದೇವದುರ್ಗಕ್ಕೆ ಬಂದು ಸುಮಾರು 25 ತರುಣರ ಗುಪ್ತಸಂಘಟನೆ ಮಾಡಿ, ರಜಾಕಾರರ ಚಟುವಟಿಕೆಗಳನ್ನು ತಡೆಯಲು ಶ್ರಮಿಸಿದೆನು. ರಜಾಕಾರರು ಆಗ ಭಾರತ ವಿರೋಧಿ ಘೋಷಣೆಗಳನ್ನು ಕೂಗುತ್ತ ಶಸ್ತ್ರ ಹಿಡಿದು ಬೀದಿಗಳಲ್ಲಿ ಗಸ್ತಿ ತಿರುಗುತ್ತಿದ್ದರು. ನನ್ನ ಚಟುವಟಿಕೆಗಳ ಮೇಲೆ ಕಣ್ಣಿಡಲು ಸಿ.ಐ.ಡಿ.ಗಳನ್ನು ಇಟ್ಟದ್ದರು. ರಾತ್ರಿಯ ಕಾಲದಲ್ಲಿ ರಜಾಕಾರರ ಚಟುವಟಿಕೆಗಳ ಭಯವಿದ್ದುದರಿಂದ ಹಿಂದುಗಳು ನಿದ್ದೆಹೋಗದೆ ದೇವಾಲಯಗಳಲ್ಲಿ ಭಜನೆ ನಡೆಸುತ್ತ ಎಚ್ಚರವಾಗಿರುತ್ತಿದ್ದರು. ಇದೇ ಕಾಲಕ್ಕೆ ನಾನು ಬಸವಜಯಂತಿಯನ್ನು ಆಚರಿಸಿ, ಬಸವಣ್ಣನವರ ಭಾವಚಿತ್ರದ ಮೆರವಣಿಗೆಯ ಕಾರ್ಯಕ್ರಮವನ್ನು ನಡೆಸಿದೆನು. ಇದರಿಂದ ಸರಕಾರ ನನ್ನ ಮೇಲೆ ಇನ್ನೂ ಹೆಚ್ಚು ನಿಗಾ ಇಡುವಂತೆ ಆಯಿತು. ನಮ್ಮ ಮನೆಮಂದಿಯನ್ನೆಲ್ಲ ಆದೋನಿಗೆ ಕಳುಹಿಸಿ ನಾನೂ ತಂದೆಯವರೂ ಮಾತ್ರ ಊರಲ್ಲಿ ಉಳಿದೆವು. ಇಷ್ಟೊತ್ತಿಗೆ ನನ್ನ ಗುಪ್ತಸಂಘಟನೆಯ ಸದಸ್ಯಸಂಖ್ಯೆ 50ಕ್ಕೇರಿತು. ಅವರೆಲ್ಲ ಶಸ್ತ್ರಸಜ್ಜಿತರಾಗಿದ್ದರು. ಈ ಕಾಲಕ್ಕೆ ವಿದ್ಯಾರ್ಥಿ-

ನಾಯಕರನ್ನೆಲ್ಲ ಬಂಧಿಸಲು ಸರಕಾರವು ಆಜ್ಞೆ ನೀಡಿದೆಯೆಂಬ ಸಂಗತಿ ತಿಳಿದು ನಾವು ಕೆಲವು ಮಿತ್ರರು ಸೊಲ್ಲಾಪುರಕ್ಕೆ ಹೋಗಿ ಅಲ್ಲಿನ ಪಾಂಜರ್‌ಪೋಳ್ ನಿರಾಶ್ರಿತರ ಶಿಬಿರದ ಆಶ್ರಯಪಡೆದೆವು. ಅಲ್ಲಿನ ನಿರಾಶ್ರಿತರ ಸೇವೆಗೆ ಸ್ವಯಂಸೇವಕನಾಗಿ ನಾನು ದುಡಿದೆನಲ್ಲದೆ ಆಗಿನ ಕಾಲೇಜು ವಿದ್ಯಾರ್ಥಿನಾಯಕರು ನಡೆಸುತ್ತಿದ್ದ ಪ್ರಜಾ ಹೈಸ್ಕೂಲನ್ನು ಸೇರಿದೆನು. ಮಶಾಳ್ಕರ್ ಮುಖ್ಯಾಧ್ಯಾಪಕರಾಗಿದ್ದು ಅಲ್ಲಿ ಧರ್ಮರಾವ್ ಅಫಜಲ್‌ಪುರಕರರೂ ಇದ್ದರು. ರಾತ್ರಿಕಾಲಕ್ಕೆ ನಾವು ಕಲ್ಬುರ್ಗಿಗೂ ನಮ್ಮ ಸ್ವಂತ ಊರಿಗೂ ನಡುವೆ ಬರುತ್ತಲೇ ಇದ್ದೆವು. ರಜಾಕಾರರ ಹಾವಳಿಯಿಂದ ಊರು ಬಿಡುತ್ತಿದ್ದ ನಿರಾಶ್ರಿತರ ನೆರವಿಗೆ ನಾವು ವಾಡಿಜಂಕ್ಷನ್‌ವರೆಗೂ ಬರುತ್ತಲಿದ್ದೆವು. ನನ್ನ ಬಂಧನಕ್ಕೆ ಹೈದರಾಬಾದ್ ಪೋಲಿಸರು ವಾರಂಟ್ ಕೂಡ ಹೊರಡಿಸಿದ್ದರು. ನಾನು ಸದಾ ಸಂಸ್ಥಾನದೊಳಕ್ಕೆ ಬರುತ್ತಿದ್ದರೂ ನನ್ನನ್ನು ಹಿಡಿಯುವುದು ಅವರಿಗೆ ಸಾಧ್ಯ ಆಗಲಿಲ್ಲ. ಸೊಲ್ಲಾಪುರದಲ್ಲಿ ನಾವು ವಿದ್ಯಾರ್ಥಿಗಳು ಕಾಂಗ್ರೆಸ್ ನಾಯಕರ ಆದೇಶದಂತೆ ನಿರಾಶ್ರಿತ ನಿಧಿ ಸಂಗ್ರಹಿಸುತ್ತಿದ್ದೆವು. ಕಲ್ಬುರ್ಗಿ, ಬೀದರ್, ರಾಯಚೂರ್, ಉಸ್ಮಾನಾಬಾದ್ ಜಿಲ್ಲೆಗಳ ಸುಮಾರು 60 ವಿದ್ಯಾರ್ಥಿಗಳು ಈ ಪಾಂಜರ್‌ಪೋಳ್ ಕ್ಯಾಂಪ್‌ನಲ್ಲಿ ಇದ್ದೆವು. ಆಗಿನ ಮುಂಬಯಿ ರಾಜ್ಯದ ಗೃಹಮಂತ್ರಿ ಮುರಾರ್ಜಿ ದೇಸಾಯಿ ಅವರು ಎರಡು ಬಾರಿ ಈ ಶಿಬಿರಕ್ಕೆ ಬಂದು ಇಲ್ಲಿನ ಆಹಾರವ್ಯವಸ್ಥೆ ಮುಂತಾದವುಗಳನ್ನು ಪರಿಶೀಲಿಸಿದರು. ಸಂಸ್ಥಾನವು ಸ್ವತಂತ್ರವಾದನಂತರ ನಾವು ಊರಿಗೆ ಮರಳಿದೆವು.

1962ರಲ್ಲಿ ಕಾನೂನು ಶಿಕ್ಷಣ ಮುಗಿಸಿ ವಕೀಲವೃತ್ತಿ ನಡೆಸುತ್ತಿರುವ ನಾನು ಸಹಕಾರ ರಂಗದಲ್ಲಿ ದುಡಿಯುತ್ತಿರುವೆನಲ್ಲದೆ 1969ರಿಂದ 1972ರ ವರೆಗೆ ದೇವದುರ್ಗ ಪುರಸಭೆಯ ಉಪಾಧ್ಯಕ್ಷನೂ ಆಗಿದ್ದೆ.

ಹೈ.ರಾ. 14

## ಎ. ಚಂದ್ರಯ್ಯ

ಜನನ: 1928 ಉದ್ಯೋಗ: ವಕೀಲರ ಕಾರಕೂನ ವಿಳಾಸ: ದ್ವಾರಾ : ಕೆ. ಮಹಾದೇವಪ್ಪ, ಸ್ಟೇಷನ್ ರೋಡ್, ರಾಯಚೂರು

---

ನಾನು ರಾಯಚೂರಲ್ಲಿ ಮೆಟ್ರಿಕ್ ವರ್ಗದಲ್ಲಿ ಓದುತ್ತಿದ್ದಾಗ ನನ್ನ ಮಿತ್ರ ಎಂ. ನಾಗಪ್ಪ ಮುಂತಾದವರು ಸೇರಿ ಅಗಸ್ಟ 14ರ ರಾತ್ರಿ (1947) ರಾಯಚೂರಿನ ಸಾತ್ ಕಚೇರಿಯ ಮೇಲೆ ತ್ರಿರಂಗಿ ಧ್ವಜ ಹಾರಿಸಿದೆವು. ಸುಚ್ಚಾಚಾರ್, ಜಿ. ಮಧ್ವರಾವ್, ಅಡವೀರಾವ್ ಮುಂತಾದ ಹಿರಿಯರು ನಮ್ಮನ್ನು ಈ ಕೆಲಸಕ್ಕೆ ಪ್ರೋತ್ಸಾಹಿಸಿದರು.



ಮರುದಿನವೇ ನನ್ನ ಗುಂಪಿನ ಮೇಲೆ ವಾರಂಟ್ ಜಾರಿಯಾಗಲು ನಾವು ಊರು ಬಿಟ್ಟು ಎ. ಗುರುನಾಥ ರಾವ್, ಅಡ್ವೊಕೇಟ್ ಇವರ ನೇತೃತ್ವದಲ್ಲಿ ಆದವಾನಿಯಲ್ಲಿ ಸ್ಥಾಪಿಸಿದ ಶರಣಾರ್ಥಿಗಳ ಕ್ಯಾಂಪಿಗೆ ಸೇರಿದೆವು. ಅಲ್ಲಿಂದ ನಮ್ಮ ಮಿತ್ರರ ಜೊತೆ ಗಡಿಭಾಗದೊಳಕ್ಕೆ ನಿಜಾಂ ಸರಕಾರದ ಆಸ್ತಿಪಾಸ್ತಿ ನಷ್ಟಮಾಡುವ ಚಟುವಟಿಕೆಗಳಲ್ಲಿ ಪಾಲುಗೊಂಡೆವು. ಸಿಂಧನೂರಿನ ತಹಸೀಲ್ದಾರರು ಲೆವಿ ವಸೂಲಿಗೆ ಎಡಿವಾಳದಲ್ಲಿ ಶಿಬಿರ ಸ್ಥಾಪಿಸಿಕೊಂಡು ಇರಲು ನಾನು, ನಾಗಪ್ಪ, ಶ್ರೀರಾಮುಲು, ಚಂದ್ರಯ್ಯ, ನರಸಪ್ಪ ಇವರುಗಳು ಹೋಗಿ ಅವರ ಡೇರೆಯನ್ನು (ನದಿ ದಾಟಿ ಹೋಗಿ) ಸುಟ್ಟೆವು. ಆಗ ಪೋಲಿಸರು ಅಟ್ಟಿಸಿಕೊಂಡು ಬರಲು ನಾನು, ಶ್ರೀರಾಮುಲು ನದಿಯಲ್ಲಿ ಹಾರಿ, ಈಜಿ ನದಿ ದಾಟಿದೆವು. ಉಳಿದವರು ಹಳ್ಳಿಯಲ್ಲಿಯೇ ಉಳಿದು ತಲೆತಪ್ಪಿಸಿಕೊಂಡು ಪಾರಾದರು. ಆಗ ನನ್ನ ವಾಚು, ಬಂಗಾರದ ಉಂಗುರ ನದಿಯ ಪಾಲಾದವು. ಒಮ್ಮೆ ವೇಷ ಮರೆಸಿ ರಾಯಚೂರಿಗೆ ಹೋಗಿ ಅಲ್ಲಿ ರಜಾಕಾರರ ಕೇಂದ್ರಸ್ಥಾನದ ಮೇಲೆ ಬಾಂಬು ಎಸೆದೆ. ಆ ಬಾಂಬು ಸಿಡಿಯಲಿಲ್ಲ. ನನ್ನನ್ನು ಹಿಡಿಯಲು ಪೋಲಿಸರು ಬೆನ್ನುಹತ್ತಿದರು. ಹೇಗೋ ತುಂಗಭದ್ರೆಯ ದಡಕ್ಕೆ ಬಂದು ಸೇರಿದೆ.

ಮಾನ್ವಿ ತಾ|| ಯಾಡಗಿನಾಳ ಕರೋಡಗಿರಿ ನಾಕಾವನ್ನು ಸುಟ್ಟು ಅಲ್ಲಿನ ದಾಖಲೆಗಳನ್ನು ತಂದು ನಮ್ಮ ಶಿಬಿರಾಧಿಪತಿ ಹುಚ್ಚಾಚಾರ್ಯರಿಗೆ ಒಪ್ಪಿಸಿದೆವು. ಇದು ಜನವರಿ 29ರಂದು ನಡೆದದ್ದು. ಮರುದಿನವೇ ಗಾಂಧೀಜಿಯವರ ಮರಣದ ದುಃಖದ ವಾರ್ತೆ ಬಂತು. ಒಮ್ಮೆ ರಾಯಚೂರು ತಾ|| ಗಾಣಧಾಳ ಗ್ರಾಮದಲ್ಲಿಯ ಕರೋಡಗಿರಿಯ ನಾಕಾವನ್ನು ಗುಂಪಿನೊಂದಿಗೆ ಹೋಗಿ ಬಾಂಬ್ ಎಸೆದು ಸುಟ್ಟೆವು. ಇನ್ನೊಮ್ಮೆ ಗಾಣಧಾಳ ನಾರಾಯಣಪ್ಪನವರ ಹಿರಿತನದಲ್ಲಿ, ಮಂತ್ರಾಲಯದ ಬಳಿಯ ತುಂಗಭದ್ರಾ ನದಿಯ ಸೇತುವೆಯ ಆಚೆಗಿನ ಪೋಲಿಸರ ಶಿಬಿರಗಳಮೇಲೆ ದಾಳಿಮಾಡಲು ಹೋಗಿದ್ದೆವು. ಆದರೆ ಅಚಾತುರ್ಯದಿಂದ ಅಲ್ಲಿನ ಪೋಲಿಸರು ಎದ್ದು ನಮ್ಮನ್ನು ಬೆನ್ನಟ್ಟಲು ನಾವು ಓಡಿಹೋಗಿ ನದಿಯಲ್ಲಿ ಈಸುಬಿದ್ದೆವು. ಕೆಲವರ ಕೈಕಾಲು ಮುರಿದು ಅನೇಕ ಕಷ್ಟನಷ್ಟಗಳಿಗೆ ಒಳಗಾದೆವು. ಅಗಸ್ಟ 15ರಿಂದ (1947) ಪೋಲಿಸ್ ಕಾರ್ಯಾಚರಣೆಯಾಗುವ ತನಕ ಈ ರೀತಿ ರಜಾಕಾರರ ವಿರೋಧೀ ಚಟುವಟಿಕೆಗಳಲ್ಲಿ ಮಗ್ನರಾಗಿರಲು, ನನ್ನ ಅಭ್ಯಾಸ ಬಿಟ್ಟೇಹೋಯಿತು. ಇಂದಿನವರೆಗೂ ಮ್ಯಾಟ್ರಿಕ್ ಪಾಸಾಗದಂತೆ ಆಗಿದೆ. ಆರ್ಥಿಕ ತೊಂದರೆಗಳಿಂದ ಅದು ಸಾಧ್ಯ ಆಗದೆ, ಇಂದೂ ಆ ತೊಂದರೆಯಲ್ಲೇ ಇದ್ದೇನೆ.

ಪೈ.ರಾ. 15

## ಪ್ರಹ್ಲಾದರಾವ್ ದೇಸಾಯಿ ದ್ಯಾಂಪುರ

ಜನನ : 1914 ಉದ್ಯೋಗ : ನಿವೃತ್ತ ಜೀವನ ವಿಳಾಸ : ದ್ವಾರಾ : ಆರ್. ಎನ್. ಕುಲಕರ್ಣಿ, ಕೆ.ಎಸ್.ಇ.ಬಿ. ಕಾಲನಿ, ರಾಯಚೂರು

---

ಕುಕನೂರಿನ ರಾಷ್ಟ್ರೀಯ ಶಿಕ್ಷಣ ಶಾಲೆ ವಿದ್ಯಾನಂದ ಗುರುಕುಲದಲ್ಲಿ ಓದಿದ ನಾನು 1930ರಲ್ಲಿ ರೋಣದಲ್ಲಿ ಹೋಗಿ ಉಪ್ಪಿನ ಸತ್ಯಾಗ್ರಹದಲ್ಲಿ ಪಾಲುಗೊಂಡು ಮೂರು ತಿಂಗಳು ಸ್ಥಾನಬದ್ಧತೆಯಲ್ಲಿ ಇದ್ದೆ. ಮುಂದೆ ಸೇವಾದಳದ ಕಾರ್ಯಕರ್ತನಾಗಿ, 1932ರಲ್ಲಿ ವೈಯಕ್ತಿಕ ಸತ್ಯಾಗ್ರಹದಲ್ಲಿ ಪಾಲುಗೊಂಡು 18 ತಿಂಗಳು ಠಾಣಾ ಜೈಲಿನಲ್ಲಿ ಇದ್ದೆ. ನನ್ನ ಬಂಧಿ ನಂ. 13072 ಆಗಿತ್ತು. ಬಿಡುಗಡೆಯನಂತರ ಬಿಹಾರ ಭೂಕಂಪ ಸಂತ್ರಸ್ತರ ಪರಿಹಾರಕಾರ್ಯದಲ್ಲಿ ಡಾ॥ ಹರ್ಡೀಕರರ ಸೂಚನೆಯಂತೆ ಕೆಲಸಮಾಡಿದೆ. ಅಲ್ಲಿಂದ ಬಂದನಂತರ ರಾಯಚೂರಿನಲ್ಲಿ ರೆಡಿಮೇಡ್ ಬಟ್ಟೆ ಅಂಗಡಿ ತೆರೆದು ಜೀವನ ನಿರ್ವಹಿಸಿದೆ. ಈ ಕಾಲಕ್ಕೆ ಮುಂದೆ ಕ್ವಿಟ್ ಇಂಡಿಯಾ ಚಳವಳಿಯಲ್ಲೂ ಪಾಲುಗೊಂಡೆ.

1947ರಲ್ಲಿ ಹೈದರಾಬಾದ್ ಸತ್ಯಾಗ್ರಹ ಆರಂಭ ಆದಾಗ ರಾಯಚೂರಿಗೆ 12 ಮೈಲಿ ದೂರದ ಕಲ್ಲೂರು ಗ್ರಾಮದಲ್ಲಿ ಜವಾಬ್ದಾರಿ ಸತ್ಯಾಗ್ರಹದ ಘೋಷಣೆಕೂಗಿ ಧ್ವಜವಂದನೆ ನಡೆಸಿ ಬಂಧಿತನಾದೆ. ಅದೇ ಗ್ರಾಮದ ಶ್ರೀನಿವಾಸ, ಮಲ್ಲಿಕಾರ್ಜುನಪ್ಪ, ಶಂಕ್ರಪ್ಪ, ಶಾಂತಪ್ಪ, ಬಸಯ್ಯ ಇವರೂ ನನ್ನ ಜೊತೆ ಬಂಧಿತರಾದರು. ನನಗೂ ಶ್ರೀನಿವಾಸನಿಗೂ ತಲಾ ಮೂರು ತಿಂಗಳ ಶಿಕ್ಷೆ ಆಯಿತು. ಬಿಡುಗಡೆಯನಂತರ ಗಡಿ ಆಂದೋಲನಕ್ಕೆ ಬೆಂಬಲ ನೀಡಲು ದುಡಿದೆನು.

ಪೈ.ರಾ. 16

## ದಿ॥ ವೀರಭದ್ರಪ್ಪ ಶಿರೂರ

ಜನನ : 1908 ಉದ್ಯೋಗ : ಕೃಷಿ ವಿಳಾಸ : ಆಡೂರು, ಅಂಚೆ ರಾಜೂರು, ತಾ॥ ಯಲಬುರ್ಗಿ

---

(ವೀರಭದ್ರಪ್ಪ ಶಿರೂರ ಅವರು ಕೊಪ್ಪಳ ಭಾಗದ ಅತ್ಯಂತ ಗಣ್ಯ ಸ್ವಾತಂತ್ರ್ಯ ಯೋಧರು ಹಾಗೂ ಸಾಮಾಜಿಕ ಕಾರ್ಯಕರ್ತರು. ರಾಯಚೂರು ಜಿಲ್ಲೆಯಲ್ಲಿನ



ಸ್ಮೃತಿಗಳ ಸಂಗ್ರಹಕ್ಕೆ ಅವರು ನೀಡಿದ ಸಹಕಾರ ಅಪಾರ. ಇತ್ತೀಚೆಗೆ ದಿ. 28-2-1976ರಂದು ಅವರು ಶಿವಾಧೀನರಾದರು. —ಸಂ||)

1922ರಲ್ಲಿ ಕುಕನೂರಲ್ಲಿ ರಾಷ್ಟ್ರೀಯ ಶಾಲೆ ಆರಂಭವಾಯಿತು. ಆ ವಿದ್ಯಾನಂದ ಗುರುಕುಲಕ್ಕೆ ನಾನು ಪ್ರತಿನಿತ್ಯ ನಮ್ಮ ಊರಿಂದ ಹೋಗುತ್ತಿದ್ದೆನು. ಅಲ್ಲಿ ರಾಷ್ಟ್ರೀಯ ಮಹಾ ಮಹಾಪುರುಷರ ವಿಚಾರ ಗಳನ್ನು ತಿಳಿಸುತ್ತಿದ್ದರು. 1924ರಲ್ಲಿ ಬೆಳಗಾವಿಯಲ್ಲಿ ಆದ ಭವ್ಯ ಕಾಂಗ್ರೆಸ್ಸಿನ ವಿಚಾರ ವರದಿಗಳನ್ನು ಹುಬ್ಬಳ್ಳಿಯ ಕನ್ನಡ 'ಲೋಕಮತ' ವಾರ ಪತ್ರಿಕೆಯಿಂದ ಓದಿಕೊಂಡೆನು. (ರಾಷ್ಟ್ರೀಯವಾದಿ ಪತ್ರಿಕೆಗೆ ವಿ. ಬಿ. ಪುರಾಣಿಕ ಎಂಬವರು ಸಂಪಾದಕರು. —ಸಂ||). ಅನ್ಯರಾಷ್ಟ್ರೀಯ ವಿಚಾರಗಳೂ ಈ ಪತ್ರಿಕೆಯಿಂದ ತಿಳಿದವು. 1926ರಲ್ಲಿ ನಾನು ಗದಗಿಗೆ ನೌಕರಿಗಾಗಿ ಹೋಗಿರಲು, ಅಲ್ಲಿದ್ದಾಗ ಲಾಹೋರ್ ಕಾಂಗ್ರೆಸ್ಸಿನ ಕಾಲಕ್ಕೇ ನಾನು ಖಾದಿಧಾರಣೆ ಆರಂಭಿಸಿ ಗದಗಿನಲ್ಲಿ ಕಾಂಗ್ರೆಸ್ ಸದಸ್ಯನಾದೆನು. ನಾನು ಖಾದಿ ಧರಿಸಿದ್ದನ್ನು ಕಂಡು ನನ್ನನ್ನು ಅನೇಕರು ಹೆದರಿಸಿದರು. ಆದರೆ ಗದಗಿನ ಅನಂತರಾವ ಜಾಲಿಹಾಳ ವಕೀಲ, ಡಾ|| ಹುಯಿಲಗೋಳ, ಅಂದಾನಪ್ಪ ದೊಡ್ಡ ಮೇಟಿ, ಚನ್ನಬಸವಸ್ವಾಮಿ ಹಿರೇಮಠ ಇವರೆಲ್ಲರ ಪ್ರೋತ್ಸಾಹ ನನಗೆ ಇತ್ತು.

1930ರಲ್ಲಿ ನಮ್ಮ ಊರಾದ ಆಡೂರಲ್ಲಿ ಚನ್ನಪ್ಪ ಮೋಟಮ್ಮನವರ ಇವರ ನೆರವಿನಿಂದ ವಿಶ್ವನಾಥ ವಾಚನಾಲಯವನ್ನು ಸ್ಥಾಪಿಸಿ ಪುಸ್ತಕ-ಪತ್ರಿಕೆಗಳನ್ನು ಓದುವ, ಓದಿಸಿಕೊಳ್ಳುವ ಚಟುವಟಿಕೆ ಆರಂಭಿಸಿ ಜನಜಾಗೃತಿಗೆ ದುಡಿದೆನು. 1932ರಲ್ಲಿ ಆಡೂರಲ್ಲಿ ರಾಷ್ಟ್ರೀಯ ಶಾಲೆ ಅರಂಭಿಸಿದೆವು. ಗದಗಿನಲ್ಲಿ ಸೇಂದಿ ಗಿಡ ಕಡಿಯುವ ಚಳವಳಿಯಲ್ಲಿ ಪ್ರತಿನಿತ್ಯ ನೂರಾರು ಜನರ ಜೊತೆ ಹೋಗಿ ಬರುತ್ತಿದ್ದೆನು. 1934ರಲ್ಲಿ ಗಾಂಧೀಜಿ ಕರ್ನಾಟಕದಲ್ಲಿ ಪ್ರವಾಸ ಕೈಕೊಂಡಾಗ ಭಾನಾಪುರ ರೈಲುನಿಲ್ದಾಣದಲ್ಲಿ ಸಾವಿರಾರು ಜನರ ಸಮ್ಮುಖದಲ್ಲಿ ಗಾಂಧೀಜಿಗೆ ಮಾನಪತ್ರ, ನಿಧಿ ಸಮರ್ಪಿಸಿದೆವು. 1935ರಲ್ಲಿ ಹರ್ಡೀಕರ ಮಂಜಪ್ಪನವರು ನಮ್ಮ ಜಿಲ್ಲೆಯಲ್ಲಿ ಪ್ರವಾಸಮಾಡಿ ಜನಜಾಗೃತಿಗೆ ಕಾರಣ ರಾದರು. 1937ರಲ್ಲಿ ಬಾಬು ರಾಜೇಂದ್ರ ಪ್ರಸಾದರಿಗೂ ಭಾನಾಪುರ ರೈಲುಸಿಲ್ದಾಣ ದಲ್ಲಿ ಮಾನಪತ್ರ ಅರ್ಪಿಸಿದೆವು. 1939ರಲ್ಲಿ ಸ್ವಾಮಿ ರಮಾನಂದ ತೀರ್ಥ, ಗೋವಿಂದ ರಾವ್ ನಾನಲ್, ದೊಡ್ಡಮೇಟಿ ಅಂದಾನಪ್ಪ, ಹಳ್ಳಿಕೇರಿ ಗುದ್ಲೆಪ್ಪ ಇವರುಗಳೆಲ್ಲರನ್ನು ಕರೆಯಿಸಿ ಸುತ್ತಲ ಊರುಗಳಲ್ಲಿ ಕಾರ್ಯಕ್ರಮಗಳನ್ನು ಮಾಡಿಸಿದೆವು. 1940ರಲ್ಲಿ ಬೀದರ್ ನಗರದಲ್ಲಿ ನಿಜಾಮ ಕರ್ನಾಟಕ ಪರಿಷತ್ತಿಗೆ ಕೊಪ್ಪಳ ಜಿಲ್ಲೆಯಿಂದ ನಾವು 20 ಜನ ಹೋಗಿದ್ದೆವು. ನಿಜಾಮರು ಆಗ ಘೋಷಿಸಿದ್ದ ಸುಧಾರಣೆಗಳನ್ನು ವಿರೋಧಿಸಿ ಅಲ್ಲಿ

ಭಾಷಣ ಮಾಡಿದೆನಲ್ಲದೆ ಜವಾಬ್ದಾರಿ ಸರಕಾರಕ್ಕಾಗಿ ಚಳವಳಿ ನಡೆಸಲು ಒತ್ತಾಯಿಸಿದೆ. ವಿಧಾಯಕ ಕಾರ್ಯಕ್ರಮಗಳಿಗೆ ಸಂಬಂಧಿಸಿದ ಠರಾವನ್ನು ನಾನೇ ಮಂಡಿಸಿದೆ. ನಾನು ಪರಿಷತ್ತಿನ ಕಾರ್ಯಕಾರೀ ಮಂಡಳದ ಸದಸ್ಯನಾಗಿದ್ದು ಅದರ ಶಾಖೆಗಳನ್ನು ಜಿಲ್ಲೆಯಲ್ಲಿ ಸ್ಥಾಪಿಸಲು ದುಡಿದೆ. ಕ್ವಿಟ್ ಇಂಡಿಯಾ ಚಳವಳಿ ಕಾಲಕ್ಕೆ ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳ ಅನೇಕ ಭೂಗತ ಕಾರ್ಯಕರ್ತರಿಗೆ ನಮ್ಮಲ್ಲಿ ಆಶ್ರಯ ನೀಡಿದ್ದೆ. ಅಲ್ಲದೆ ಅವರಿಗೆ ಧನಸಹಾಯ ಕೂಡ ಮಾಡಿದ್ದೆ. ಆ ಕಾಲದಲ್ಲಿ ನಮ್ಮ ಭಾಗದಲ್ಲಿ ಅಖಂಡವಾಗಿ ಬರಬಿದ್ದಾಗ ಪರಿಹಾರಕಾರ್ಯಗಳಲ್ಲಿ ದುಡಿದೆನಲ್ಲದೆ ಸರಕಾರಕ್ಕೆ ಇಲ್ಲಿನ ಪರಿಸ್ಥಿತಿಯನ್ನು ತಿಳಿಸಿಹೇಳಲು ಶ್ರಮಿಸಿದೆನು. 1944ರಲ್ಲಿ ಲೆವಿ ವಸೂಲಿ ಹಾಗೂ ಕಂದಾಯ ವಸೂಲಿ ವಿರೋಧಿಸಿದ್ದ ನನ್ನಮೇಲೆ ಕುಸಿಸಿನಿಂದ ನಿಜಾಮ ಸರಕಾರವು ಒಂದು ಖಟ್ಲೆಯನ್ನೂ ಹಾಕಿತ್ತು.

1946ರಲ್ಲಿ ಹೈದರಾಬಾದ್‌ನಲ್ಲಿ ನಡೆದ ಸ್ಟೇಟ್ ಕಾಂಗ್ರೆಸ್ಸಿಗೆ ನಮ್ಮ ಕೊಪ್ಪಳ ಭಾಗದಿಂದ 10-12 ಜನ ಹೋಗಿದ್ದೆವು. ಈ ಕಾಲಕ್ಕೆ ನಾವು ಕೊಪ್ಪಳ ಜಿಲ್ಲಾ ಪ್ರಜಾ ಸಮಿತಿಯೆಂಬ ಸಂಘವನ್ನು ಸ್ಥಾಪಿಸಿಕೊಂಡಿದ್ದು ಅದಕ್ಕೆ ಲಕ್ಷ್ಮಣಾಚಾರ್ಯ ವಕೀಲರು ಅಧ್ಯಕ್ಷರಾಗಿಯೂ ತಮ್ಮನಗೌಡ ಪಾಟೀಲ ಮತ್ತು ನಾನು ಕಾರ್ಯದರ್ಶಿಗಳಾಗಿಯೂ ಇದ್ದೆವು. ಜನರ ಪರವಾಗಿ ಸರಕಾರದೊಡನೆ ಹೋರಾಟ ನಡೆಸಿದ್ದೆವು. ರಾಜೂರು, ಕುಕನೂರು, ಕೊಪ್ಪಳಗಳಲ್ಲಿ ಹರಿಜನ ಬಾಲಕರಿಗಾಗಿ ಒಂದು ಶಾಲೆಯನ್ನು ಸ್ಥಾಪಿಸಿದೆವು.

1947ರ ಆಗಸ್ಟ್ 15ಕ್ಕೆ ಎಲ್ಲೆಡೆ ರಾಷ್ಟ್ರಧ್ವಜ ಹಾರಿಸಿ ನಿಜಾಮ ಸರಕಾರದ ಕ್ರಮಗಳನ್ನು ಪ್ರತಿಭಟಿಸಲು ಇದಕ್ಕೂ ಮೊದಲು ಕೊಪ್ಪಳದಲ್ಲಿ ನಡೆದ ನಮ್ಮ ಸಭೆಯಲ್ಲಿ ನಿರ್ಧಾರ ಕೈಗೊಂಡೆವು. ಅನೇಕ ಕಡೆ ಕಾರ್ಯಕರ್ತರನ್ನು ಹುರಿದುಂಬಿಸಿ ಸತ್ಯಾಗ್ರಹದ ಸಿದ್ಧತೆಮಾಡಿಸಲು, ಆಗಸ್ಟ್ 15ರಂದು ಕಿನ್ನಾಳ, ಅಳವಂಡಿ, ಕಾತರಕಿ, ಕವಲೂರು, ಕುಕನೂರು, ಯಲಬುರ್ಗಿ, ಸಂಗನಹಾಳು, ಚಿಕ್ಕೇನಕೊಪ್ಪ ಇಲ್ಲೆಲ್ಲ ಸತ್ಯಾಗ್ರಹ ನಡೆದವು. ಕೊಪ್ಪಳದಲ್ಲಿ ನಾನು, ಲಕ್ಷ್ಮಣಾಚಾರ್ಯ ವಕೀಲ, ಹಂಪಿ ಮಾಸ್ತರ, ಹೀಗೆ ಮೂವರೂ ಧ್ವಜವಂದನೆಮಾಡಿ ಬಂಧನಕ್ಕೆ ಒಳಗಾದೆವು. ಜೈಲಿನಲ್ಲಿ ನಮ್ಮನ್ನು ವಿಚಾರಣೆಮಾಡಿ ಶಿಕ್ಷೆಗೆ ಒಳಪಡಿಸಿದರು. 7-8 ದಿನಗಳೊಳಗೆ ಅನೇಕ ಸತ್ಯಾಗ್ರಹಿಗಳು ಜೈಲು ಸೇರಲು ನಮ್ಮನ್ನು ಹೈದರಾಬಾದಿಗೆ ಕಳುಹಿಸಿದರು. ಆಗ ಹೈದರಾಬಾದಿನಲ್ಲಿ ಓದುತ್ತಿದ್ದ ಕೆಲ ನಮ್ಮ ಜಿಲ್ಲೆಯ ವಿದ್ಯಾರ್ಥಿಗಳು ಜೈಲಿನಲ್ಲಿ ಬಂದು ನನ್ನನ್ನು ಭೇಟಿ ಆದರು. ಅವರಿಗೆಲ್ಲ ಶಿಕ್ಷಣ ತ್ಯಜಿಸಿ ಚಳವಳಿಗೆ ಸೇರಬೇಕೆಂದು ನಾನು ವಿನಂತಿಸಿಕೊಂಡೆನು. ಪ್ರಭುರಾಜ ಪಾಟೀಲ ಮತ್ತು ಬಸವ ರೆಡ್ಡಿ ಅಬ್ಬಿಗೇರಿ ಇವರುಗಳು 10-12 ಜನ ಕಾರ್ಯಕರ್ತರೊಡನೆ ಕುಕನೂರು ಪೋಲಿಸ್ ಠಾಣೆಯ ಮೇಲೆ ದಾಳಿಮಾಡಿ ಪೋಲಿಸರು ಜನರಿಂದ ಕಸಿದುಕೊಂಡಿದ್ದ ಸುಮಾರು 100 ಬಂದೂಕುಗಳನ್ನು ತಾಬೆಗೆ

ತೆಗೆದುಕೊಂಡು, ಅಳವಂಡಿ ಶಿವಮೂರ್ತಿ ಸ್ವಾಮಿಗಳ ನೇತೃತ್ವದಲ್ಲಿ ಮುಂಡರಗಿಯಲ್ಲಿ ಶಿಬಿರವನ್ನು ಸ್ಥಾಪಿಸಿ ರಜಾಕಾರರು ಗಡಿಭಾಗದಲ್ಲಿ ನಡೆಸಿದ ಚಟುವಟಿಕೆಗಳಿಗೆ ತಡೆಹಾಕಲು ದುಡಿಯಲು ಇದೇ ಕಾಲದಲ್ಲಿ ಆರಂಭಿಸಿದರು. ಹೈದರಾಬಾದಿನಿಂದ ನಮ್ಮನ್ನು ಔರಂಗಾಬಾದ್ ಸೆರೆಮನೆಗೆ ಕಳುಹಿಸಿದರು. ಅಲ್ಲಿನ ಕೆಲವರು ಕೈದಿಗಳು ತಪ್ಪಿಸಿ ಕೊಂಡರು. ಇದೇ ಕಾಲಕ್ಕೆ ಮಹಾತ್ಮರ ಮರಣದ ಸುದ್ದಿಯು ತಿಳಿದು ಜೈಲಿನಲ್ಲಿ 800 ಜನ ನಾವು ಒಂದೆಡೆ ಸೇರಿ ಪ್ರಾರ್ಥನೆ ಸಲ್ಲಿಸಿ, ಅಂದು ಉಪವಾಸಮಾಡಿದೆವು. ಇದಾಗಿ 10–12 ದಿನಗಳ ಅನಂತರ ಯಲಬುರ್ಗಿ ತಹಸೀಲ ಕಚೇರಿಯ ಮೇಲೆ ಕಾಂಗ್ರೆಸ್ಸಿಗರು ದಾಳಿಮಾಡಿದ ವಾರ್ತೆ ಪತ್ರಿಕೆಗಳಲ್ಲಿ ಪ್ರಕಟ ಆಗಿತ್ತು. ನನ್ನ ಶಿಕ್ಷೆಯು ಏಳು ತಿಂಗಳ ಅವಧಿ ಮುಗಿದು, ಅಲ್ಲಿಂದ ಹೈದರಾಬಾದಿಗೆ ಬಂದೆನು. ಅಲ್ಲಿ ಒಂದು ದಿನ ಇದ್ದು ಅಲ್ಲಿಂದ ಕೊಪ್ಪಳಕ್ಕೆ ಹೊರಡಲು ಗುಂತಕಲ್ ಜಂಕ್ಷನ್‌ನಲ್ಲಿ ಮುಂಡರಗಿ ಶಿಬಿರದ ಕಾರ್ಯಕರ್ತರು ನನ್ನನ್ನು ಇಳಿಸಿಕೊಂಡರು; ಹಾಗೂ ನನ್ನನ್ನು ಗದಗಿಗೆ ಕರೆದೊಯ್ದರು. ಮರುದಿನವೇ ನಮ್ಮ ಮನೆಮಂದಿಯೆಲ್ಲ ಗದಗಿಗೆ ಬಂದರು. ಅಲ್ಲಿ ಆಗ, ಹಿಂದೆ ಯಲಬುರ್ಗಿ ತಾ|| ಕಚೇರಿಮೇಲೆ ದಾಳಿಮಾಡಿದಾಗ ಬಾಂಬು ಸ್ಫೋಟವಾಗಿ ಕೈ ಕಳೆದುಕೊಂಡ ಒಬ್ಬ ಕಾರ್ಯಕರ್ತನಿದ್ದನು. ಅವನನ್ನು ಆಸ್ಪತ್ರೆಯಲ್ಲಿ ಭೇಟಿ ಆಗಿ ಯೋಗಕ್ಷೇಮ ವಿಚಾರಿಸಿದೆನು. ಇದಾಗಿ ಕೆಲವೇ ದಿನಗಳಲ್ಲಿ ಇನ್ನೊಬ್ಬ ತರುಣನೂ ಬಾಂಬು ಸ್ಫೋಟದಲ್ಲಿ ಕೈ ಕಳೆದುಕೊಂಡ ಪ್ರಕರಣ ನಡೆಯಿತು. ಕವಲೂರಲ್ಲಿ ರಿಜರ್ವ್ ಪೋಲಿಸರು ಬಂದು ಜನರನ್ನು ಹೆದರಿಸಹತ್ತಿದಾಗ ಅಲ್ಲಿನ ಕೆಲವರು ಪ್ರತಿಭಟಿಸಲು ಯತ್ನಿಸಿ, ಮೂವರು ಗುಂಡಿನ ಗಾಯಕ್ಕೆ ಒಳಗಾದರು. ಅವರನ್ನು ಆಸ್ಪತ್ರೆಗೆ ತಂದಿರಲು ಅವರಲ್ಲಿ ಇಬ್ಬರು ತೀರಿಕೊಂಡರು.

ಹೈದರಾಬಾದ್ ಸಂಸ್ಥಾನ ಕಾಂಗ್ರೆಸ್ ಕ್ರಿಯಾಸಮಿತಿ ಸಭೆಯನ್ನು ಮದ್ರಾಸಿನಲ್ಲಿ ಕರೆದಿರಲು, ನಾನು, ಶಂಕ್ರಪ್ಪ ಬಂಗಾರಶೆಟ್ಟಿ ಮತ್ತು ಕೊಟ್ಟೂರು ವೀರಬಸವಯ್ಯ ಹೋಗಿದ್ದೆವು. ಆಗ, ವಿವಿಧ ಶಿಬಿರಗಳಲ್ಲಿನ 400 ತರುಣರನ್ನು ಒಟ್ಟುಗೂಡಿಸಿ ತರಬೇತಿ ನೀಡಿ, ಅವರು ಸಂಸ್ಥಾನದಲ್ಲಿ ನುಗ್ಗುವಂತೆ ಮಾಡಬೇಕೆಂಬ ಠರಾವು ಮಂಡಿಸಿದೆ. ಅದು ಒಪ್ಪಿಗೆ ಆಯಿತು. ಈ ಕ್ರಮವನ್ನು ನಮ್ಮ ಶಿಬಿರದಲ್ಲಿಯೇ ಆರಂಭಿಸಬೇಕೆಂದು ನಿರ್ಣಯವಾಯಿತು. ಗದಗಿನಲ್ಲಿದ್ದ ನಿರಾಶ್ರಿತ ಸಹಾಯಕ ಸಮಿತಿಗೆ ನಾನು ಕಾರ್ಯದರ್ಶಿಯಾಗಿ ಇದ್ದೆ. ಅಲ್ಲಿ ಸಂಸ್ಥಾನದಿಂದ ಬಂದ ಜನರ ದನಕರುಗಳಿಗೆ ಬಸರೀಗೀಡದ ವೀರಪ್ಪ ಉಚಿತವಾಗಿ ಮೇವನ್ನು ಒದಗಿಸುತ್ತಿದ್ದರು.

ಒಂದು ಸಲ ಮುಂಡರಗಿ ಬಳಿಯ ಬೆಳ್ಳಿಗಟ್ಟಿಯಲ್ಲಿ ರಜಾಕಾರರಿಗೂ ಮುಂಡರಗಿ ಶಿಬಿರದವರಿಗೂ ಕೈಗೆ ಕೈಹತ್ತಿ ಹೋರಾಟವಾಗಿ ಅದರಲ್ಲಿ ಮೂವರು ರಜಾಕಾರರು ಕೊಲ್ಲಲ್ಪಟ್ಟರು. ಮರುದಿನ ಅವರ ಹೆಣಗಳನ್ನು ಒಯ್ಯಲು ಸುಮಾರು 200 ಜನರ ಗುಂಪು ಆ ಗ್ರಾಮದ ಮೇಲೆ ದಾಳಿಗೆ ಬಂದಿತು. ಈ ವಿಚಾರದ ಸುಳಿವು ಪಡೆದ

ರೈತನೊಬ್ಬನು ಮುಂಡರಗಿ ಶಿಬಿರಕ್ಕೆ ಬಂದು ತಿಳಿಸಲು ನಾನು ಪೋಲಿಸ್ ಠಾಣೆಗೆ ತಿಳಿಸಲು. ಅವರು ಗದಗಿನಿಂದ ಹೆಚ್ಚಿನ ಪೋಲೀಸರನ್ನು ಕಳುಹಿಸಲು ತಂತಿ ಕೊಟ್ಟರು. ಬರದೂರು ಮತ್ತು ಹೆಸರೂರಿನಿಂದ ಕೂಡಿಟ್ಟ ಪೋಲಿಸರನ್ನು ಕಳುಹಿಸಲು ಸೈಕಲಿನಿಂದ ಶಿಬಿರದ ಕಾರ್ಯಕರ್ತರನ್ನು ಕಳುಹಿಸಿದೆವು. ಶಿಬಿರದ 10–12 ಕಾರ್ಯಕರ್ತರು ಜೆಳ್ಳಿಗಟ್ಟಿಗೆ ಹೋಗಿ ಅವಿತುಕೊಂಡು ಜೆಳ್ಳಿಗಟ್ಟಿಯಿಂದ ಗುಂಡು ಹಾರಿಸಲಾರಂಭಿಸಿದರು. ಈ ಗುಂಡಿನ ಸುರಿಮಳೆಗೆ ಕೊಪ್ಪಳದಿಂದ ಬಂದ ರಜಾಕಾರರು ಹಿಂಜರಿದರು. ಇವರ ಹಿಂದೆಯೇ ಗದಗಿನಿಂದ ಪೋಲಿಸರ ದಂಡು ಬರಲು ದಾಳಿಕಾರರು ಕಾಲ್ತೆಗೆದರು.

ಮುಂದೆ ಪೋಲಿಸ್ ಕಾರ್ಯಾಚರಣೆ ಆದಾಗ ಮಿಲಿಟರಿ ಅಧಿಕಾರಿಗಳಿಗೆ ಈ ಭಾಗದ ರಸ್ತೆ, ಹಳ್ಳ, ನದಿಗಳ ಪರಿಚಯ ಮಾಡಿಕೊಟ್ಟಿನಲ್ಲದೆ ರಜಾಕಾರರ ಠಾಣ್ಯಗಳ ವಿವರಗಳನ್ನೂ ಒದಗಿಸಿದೆನು. ಅವರು ನಮ್ಮ ಶಿಬಿರದ 20 ಕಾರ್ಯಕರ್ತರಿಗೆ ಪರಿಚಯದ ಕಾರ್ಡುಗಳನ್ನು ಕೊಟ್ಟರು. ಹಿಂದುಸ್ಥಾನ ಸರಕಾರದ ಪೋಲಿಸ್ ಪಡೆಯು ಗದಗಿನಿಂದ ಸ್ಪೆಶಲ್ ಟ್ರೈನಿನಲ್ಲಿ ಕೊಪ್ಪಳಕ್ಕೆ ಬಂದು, ಅಲ್ಲಿಯ ಜಿಲ್ಲಾಧಿಕಾರಿಯ ಕಚೇರಿ ಮತ್ತು ಪೋಲಿಸ್ ಕಚೇರಿಯನ್ನು ವಶಪಡಿಸಿಕೊಂಡು ರಜಾಕಾರರನ್ನು ಹಿಡಿಯಹತ್ತಿದರು. ಈ ಸುದ್ದಿಯು ಮುಧೋಳ, ಕುಕನೂರು, ಬನ್ನಿಕೊಪ್ಪ, ಬೆಟಗೇರಿ, ಕವಲೂರು, ಅಳವಂಡಿ ಮೊದಲಾದ ಕಡೆಗಳಲ್ಲಿ ಇದ್ದ ರಜಾಕಾರರಿಗೂ ಪಠಾಣರಿಗೂ ಗೊತ್ತಾಗಿ, ಜನರಿಂದ ಲೂಟಿಮಾಡಿ ತಂದ ವಸ್ತುಗಳನ್ನೂ ಆಸ್ತಿಯನ್ನೂ ಬಿಟ್ಟುಕೊಟ್ಟು ಅವರು ದಿಕ್ಕಾಪಾಲಾಗಿ ಓಡಹತ್ತಿದರು. ಮುನಿರಾಬಾದ್ ಡ್ಯಾಮ್ ಸ್ಟೇಟಿನಲ್ಲಿದ್ದ ರಜಾಕಾರರ ಹಾಗೂ ಪಠಾಣರ ಗುಂಪು ಒಂದು ಕಾಲುವೆಯ ತಗ್ಗಿನಲ್ಲಿ ಅಡಗಿ ಕುಳಿತು ಅಲ್ಲಿನ ಸೇತುವೆಯನ್ನು ಕಾಯುತ್ತಿದ್ದ ಪೋಲಿಸರ ಮೇಲೆ ಗುಂಡಿನ ಮಳೆಗರೆದರು. ಇದರಿಂದ ನಾಗರಿಕರಿಗೂ ಪೋಲಿಸರಿಗೂ ತೀರ ಹಾನಿಯಾಯಿತು. ಅನೇಕ ಜನರು ಸತ್ತರು. ಬೆಳಗಾಗುವುದರೊಳಗೆ ಬಳ್ಳಾರಿಯಿಂದ ಭಾರತದ ಸೈನ್ಯ ತುಕಡಿ ಬರಲು ಇವರುಗಳು ಹಿಂದೆಗೆದರು. ದಾರಿಯುದ್ದಕ್ಕೂ ದೀಪಗಳು, ಹೆಣಗಳು, ಸಾಮಾನುಗಳು ಅಲ್ಲಲ್ಲಿ ಬಿದ್ದಿದ್ದವು. ಕೆಲವು ಹಳ್ಳಿಗರು ಈ ಸಾಮಾನುಗಳನ್ನು ಒಯ್ದು ತಮ್ಮ ಮನೆ ತುಂಬಿಕೊಂಡರೆ, ಕೆಲವು ಜನ ಗೂಂಡಾಗಳು ಮುಸಲ್ಮಾನರ ಮೇಲೆ ಸೇಡು ತೀರಿಸಲು ಅವರ ಆಸ್ತಿಪಾಸ್ತಿ ಲೂಟಿಮಾಡಹತ್ತಿದರು. ಶಿಬಿರದ 25–30 ಕಾರ್ಯಕರ್ತರೊಡನೆ, ಕೂಡಿಟ್ಟ ಒಂದು ಬಸ್ಸಿನಲ್ಲಿ ಇಂಥ ಸ್ಥಳಗಳಿಗೆ ಈ ಬಗ್ಗೆ ವರದಿ ಬಂದ ತಕ್ಷಣ ಹೋಗಿ ಜನರಿಗೆ ಶಾಂತಿಯಿಂದ ಇರುವ ನಮ್ಮ ಕರ್ತವ್ಯದ ವಿಚಾರ ತಿಳಿಸಿಹೇಳುತ್ತಿದ್ದೆವು. 8–10 ದಿನಗಳಲ್ಲಿ ಮದ್ರಾಸ್‌ದಿಂದ ಅನೇಕ ಅಧಿಕಾರಿಗಳೂ ಮಿಲಿಟರಿಯವರೂ ಬಂದರು. ಅವರ ಜೊತೆ ಹಳ್ಳಿಗಳಿಗೆ ಹೋಗಿ ಜನರಿಗೆ ಶಾಂತಿಯಿಂದ ಇರಲು ತಿಳಿಸುತ್ತಿದ್ದೆವು. ಈ ಭಾಗದ ರಜಾಕಾರ ನಾಯಕರಾಗಿದ್ದ ಪಾಷ್ಯಾ ಕುಕನೂರ, ಜಾನೀಮಿಯಾ, ಕೊಪ್ಪಳದ ಅಮೀನ್ ಉದ್ದೀನ್ ಮುಂತಾದ 30 ಜನರನ್ನು ಮಿಲಿಟರಿಯವರು ಬಂಧಿಸಿದರು.

ಅನೇಕರ ಮನೆ ಶೋಧಿಸಿ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡರು. ಮುಂದೆ ಸರಕಾರದ ಸೂಚನೆಯಂತೆ ನಮ್ಮ ಶಿಬಿರಗಳಲ್ಲಿದ್ದ ಎಲ್ಲ ಶಸ್ತ್ರಾಸ್ತ್ರಗಳನ್ನೂ ಕೊಪ್ಪಳ ಪೋಲಿಸ್ ಕಚೇರಿಗೆ ಒಪ್ಪಿಸಿದೆವು. ಇಲ್ಲಿಗೆ ನಮ್ಮ ಸ್ವಾತಂತ್ರ್ಯ ಹೋರಾಟದ ಕತೆ ಮುಗಿಯಿತು.

1939ರಲ್ಲಿ ಗದಗಿನಲ್ಲಿ ನಿಜಾಮ ಕರ್ನಾಟಕ ಕಾರ್ಯಕರ್ತರ ಸಭೆಯನ್ನು ಕರೆದು ಸಂಸ್ಥಾನದಲ್ಲಿ ಸತ್ಯಾಗ್ರಹ ಪ್ರಾರಂಭಿಸಲು ನಿರ್ಣಯಿಸಿದ್ದೆವು. ಅಷ್ಟರಲ್ಲಿ ಆರ್ಯಸಮಾಜ ದವರು ಸತ್ಯಾಗ್ರಹ ಪ್ರಾರಂಭಿಸಿದ್ದರಿಂದ, ನಮ್ಮ ಸತ್ಯಾಗ್ರಹಕ್ಕೆ ಜಾತೀಯ ಸ್ವರೂಪ ಬರಬಹುದೆಂದು ಮಹಾತ್ಮಾ ಗಾಂಧಿಯವರು ಸಲಹೆ ಕೊಡಲು ಸತ್ಯಾಗ್ರಹವನ್ನು ನಿಲ್ಲಿಸಿದೆವು. ಆದರೆ ಜೆ. ಕೆ. ಪ್ರಾಣೇಶಾಚಾರ್ಯರು ಕಾಂಗ್ರೆಸ್ಸಿನ ಕೆಲವು ಪ್ರಕಟಣೆಗಳನ್ನು ಹಂಚಿದ್ದರಿಂದ ಅವರನ್ನು ಬಂಧಿಸಿದರು.

ಕೊಪ್ಪಳ ಭಾಗದಲ್ಲಿ ಚಳವಳಿಯಲ್ಲಿ ಭಾಗ ತೆಗೆದುಕೊಂಡ ಕೆಲವು ಪ್ರಮುಖರ ಮಾನ್ಯರ ಪರಿಚಯ ಸಂಕ್ಷೇಪವಾಗಿ ಮಾಡಿಕೊಡುವೆ : 1. ಕೀರ್ತನಕೇಸರಿ ಜಯರಾಮಾ ಚಾರ್ಯ ಕೊಪ್ಪಳ ಇವರು ತಮ್ಮ ಅಸ್ಖಲಿತವಾಣಿಯಿಂದ ಪುರಾತನ ಕೀರ್ತನೆಗಳನ್ನು ರಾಷ್ಟ್ರೀಯವಾಗಿ ಪರಿವರ್ತಿಸಿಕೊಂಡು ಹೇಳುತ್ತ ಸತತವಾಗಿ ಅಖಂಡ ಕರ್ನಾಟಕದಲ್ಲಿ 25 ವರ್ಷಗಳು ಪ್ರವಾಸಮಾಡಿ ಜನರನ್ನು ಬಡಿದೆಬ್ಬಿಸಿ ಸ್ವಾತಂತ್ರ್ಯ ಹೋರಾಟಕ್ಕೆ ಅಣಿಗೊಳಿಸಿದರು ; ಸೆರೆಮನೆಯ ವಾಸವನ್ನೂ ಅನುಭವಿಸಿದರು. 2. ನರಸಿಂಗರಾವ್ ಹಂಪೀ ಮಾಸ್ತರ ಇವರು ಪತ್ರಿಕೋದ್ಯಮಿಗಳು, ಲೇಖಕರು, ವಾಗ್ಮಿಗಳು. ವಿಧಾಯಕ ಕಾರ್ಯಕರ್ತರಾದ ಇವರು ಬರಗಾಲ ಪರಿಹಾರಕಾರ್ಯಗಳಲ್ಲಿ ರೈತರಿಗೆ ಸಹಾಯಕರಾಗಿ ಕೆಲಸಮಾಡುತ್ತಿದ್ದರು. 1942ರಲ್ಲಿ ಪದ್ಮಜಾ ನಾಯ್ಡುರನ್ನೂ ಎಂ. ನರಸಿಂಗರಾಯರನ್ನೂ ಪರಿಸ್ಥಿತಿಯ ಸಮೀಕ್ಷೆಗೆ ಕೊಪ್ಪಳಕ್ಕೆ ಕರೆದು ತಂದಿದ್ದರು. ಕೊಪ್ಪಳದಲ್ಲಿ ಹರಿಜನ ಶಾಲೆ ನಡೆಸುತ್ತಿದ್ದು ಸತ್ಯಾಗ್ರಹದಲ್ಲಿ ಸೆರೆಮನೆ ಕಂಡಿದ್ದರು. 3. ಲಕ್ಷ್ಮಣಾಚಾರ್ಯ ವಕೀಲರು ಕೊಪ್ಪಳ ಜಿ|| ಪ್ರಜಾಸಮಿತಿಯ ಅಧ್ಯಕ್ಷರಾಗಿದ್ದರಲ್ಲದೆ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರೂ ಆಗಿದ್ದು 15–8–1947ರಲ್ಲಿ ಸತ್ಯಾಗ್ರಹಮಾಡಿ ಸೆರೆಮನೆ ಕಂಡರು. 4. ರಾಘವೇಂದ್ರ ರಾವ್ ಚಾಕಲಬ್ಬಿ ಇವರು ಕೊಪ್ಪಳದ ಪ್ರಮುಖ ವಕೀಲರೂ ಉತ್ತಮ ಲೇಖಕರೂ ಆಗಿದ್ದು ಇವರನ್ನು ಸರಕಾರವು ಬಂಧಿಸಿ ಸೆರೆಮನೆಯಲ್ಲಿಟ್ಟಿತ್ತು. 5 ರಾಘವೇಂದ್ರರಾವ್ ಇಟಗಿ ಇವರು ಕೊಪ್ಪಳದ ಪ್ರಮುಖ ವಕೀಲರಾಗಿದ್ದು 1947ರ ಆ. 15ರಂದು ಕುಕನೂರಲ್ಲಿ ಧ್ವಜವಂದನೆಗೈದು ಜೈಲು ಕಂಡರು. 6. ವಿರೂಪಾಕ್ಷಯ್ಯ ಹಿರೇಮಠ ಇವರು 1939ರಲ್ಲಿ ಐದು ಜನ ಸಂಗಡಿಗರೊಂದಿಗೆ ಸತ್ಯಾಗ್ರಹಮಾಡಿ ಸೆರೆಮನೆ ಕಂಡರು. 7. ಶಂಕರಪ್ಪ ಬಂಗಾರಶೆಟ್ಟಿ ಇವರು ಕೊಪ್ಪಳದ ಪ್ರಮುಖ ಕಾರ್ಯಕರ್ತರಾಗಿದ್ದು ಆ. 15ರಂದು ಕಾತರಕಿಯಲ್ಲಿ ಧ್ವಜವಂದನೆಮಾಡಿ ಬಂಧನಕ್ಕೆ ಒಳಗಾದರು. 8. ಕುಕನೂರಿನ ರಾಘವೇಂದ್ರರಾವ್ ದೇಸಾಯಿ ಇವರು ಆ ಊರಿನ ವಿದ್ಯಾನಂದ ಗುರುಕುಲವನ್ನು 1922ರಲ್ಲಿ ಸ್ಥಾಪಿಸಿದವರಾಗಿದ್ದು ಇವರನ್ನು ಸರಕಾರ ಬಂಧಿಸಿಟ್ಟದ್ದಿತು. 9. ಜನ್ನಪ್ಪ

ವಕ್ಕಳ, ಚಿಕ್ಕೇನಕೊಪ್ಪ ಇವರು 1947ರ ಆ. 15ರಂದು 10 ಸಂಗಡಿಗರೊಂದಿಗೆ ತಮ್ಮ ಊರಲ್ಲಿ ಬಂಧನಕ್ಕೆ ಒಳಗಾದರು. 10. ಶ್ರೀನಿವಾಸರಾವ್ ದೇಸಾಯಿ ಇವರು ಯಲಬುರ್ಗಿಯಲ್ಲಿ ಧ್ವಜವಂದನೆ ಮಾಡಿ ಶಿಕ್ಷೆ ಅನುಭವಿಸಿದರು. 11. ಜನಾರ್ದನರಾವ್ ವಕೀಲ, ಕೊಪ್ಪಳ ಇವರು ಧ್ವಜವಂದನೆಮಾಡಿ ಬಂಧನಕ್ಕೆ ಒಳಗಾದರು.

1947–48ರ ಶಿಬಿರಗಳು : 1. ಮುಂಡರಗಿಯ ಶಿಬಿರದ ಶಿಬಿರಾಧಿಪತಿಗಳಾಗಿ ಅಳವಂಡಿ ಶಿವಮೂರ್ತಿಸ್ವಾಮಿಗಳವರು ನೇಮಕಗೊಂಡಿದ್ದು ಮುಂಡರಗಿ ತೋಟದಸ್ವಾಮಿಗಳ ಮಠದಲ್ಲಿ ಕಾರ್ಯಾಲಯವನ್ನು ನಡೆಸುತ್ತಿದ್ದೆವು. ಹೆಸರೂರು, ಗದಗ, ತಿಮ್ಮಾಪುರ, ನರೇಗಲ್ಲ, ಕೊಪ್ಪ ಈ ಪ್ರಕಾರ ಉಪಕೇಂದ್ರಗಳಿದ್ದವು. ಸುಮಾರು 120 ಕಾರ್ಯಕರ್ತರು ಈ ಶಿಬಿರಗಳಲ್ಲಿ ಇದ್ದು ಶಂಕರಪ್ಪ ಯರಾಶಿ, ಕರಿಸಿದ್ದಸ್ವಾಮಿ, ಶಂಕರಗೌಡ, ಪ್ರಭುರಾಜ, ಬಸವರೆಡ್ಡಿ ಇವರಲ್ಲಿ ಪ್ರಮುಖರು. 2. ಬರದೂರ ಶಿಬಿರದಲ್ಲಿ ಮುಡಿಯಪ್ಪಗೌಡ, ನಾರಾಯಣಗೌಡ ಮುಂತಾದ 15 ಜನ ಕಾರ್ಯಕರ್ತರಿದ್ದರು. 3. ಗಜೇಂದ್ರಗಡ ಶಿಬಿರದಲ್ಲಿ ಜೆ. ಪುಂಡಲೀಕಪ್ಪ (ಕುಷ್ಟಗಿ) ಇವರು ಶಿಬಿರಾಧಿಪತಿಗಳಾಗಿದ್ದು, ಡಾ|| ರಾಮರಾವ್, ವಿಜಯರಾವ್ ದೇಸಾಯಿ ಮೊದಲಾದ 20 ಜನ ಕಾರ್ಯಕರ್ತರಿದ್ದರು.

ಇನ್ನು ನನ್ನ ವಿಧಾಯಕ ಕಾರ್ಯದ ವಿಚಾರ ಹೇಳುವುದಾದರೆ ನಾನು ಕೊಪ್ಪಳ ಜಿ|| ಹರಿಜನ ಸೇವಕ ಸಂಘದ ಅಧ್ಯಕ್ಷನಾಗಿದ್ದೆ. ಆಡೂರಲ್ಲಿ ಒಂದು ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿದೆ. 1941ರಲ್ಲಿ ಕೊಪ್ಪಳದಲ್ಲಿ ಸ್ನೇಹಿತರ ನೆರವಿನಿಂದ ಉಚಿತ ವಿದ್ಯಾರ್ಥಿ ಪ್ರಸಾದ ನಿಲಯವನ್ನು ಸ್ಥಾಪಿಸಿ ಅದರ ವ್ಯವಸ್ಥಾಪಕನಾಗಿದ್ದೆ. ಕೊಪ್ಪಳ ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷನಾಗಿ, ಅಲ್ಲಿನ ಪುರಸಭಾಸದಸ್ಯನಾಗಿ ಕೂಡ ದುಡಿದೆನಲ್ಲದೆ ಕೊಪ್ಪಳ ಗವಿಸಿದ್ಧೇಶ್ವರ ಹೈಸ್ಕೂಲಿನ ಸ್ಥಾಪಕರಲ್ಲಿ ಒಬ್ಬನಾಗಿರುವೆನು. ಗವಿಸಿದ್ಧೇಶ್ವರ ಕಾಲೇಜು, ಕುಕನೂರ ಹೈಸ್ಕೂಲಿನ ಸ್ಥಾಪನೆಗೂ ಶ್ರಮಿಸಿದ್ದೇನೆ.

ಮುಂದೆ ಲೋಕ ಸೇವಾ ಸಂಘದ ಕಾರ್ಯದರ್ಶಿಯಾಗಿಯೂ ಅಧ್ಯಕ್ಷನಾಗಿಯೂ ಕೆಲಸಮಾಡಿದೆನಲ್ಲದೆ 1962ರಲ್ಲಿ ಈ ಪಕ್ಷದಿಂದ ವಿಧಾನಸಭೆಗೂ ಆಯ್ಕೆಗೊಂಡೆ. 1953ರಲ್ಲಿ ಕೊಪ್ಪಳದಿಂದ ಕೆಲವು ಮಿತ್ರರು ಸೇರಿ 'ಲೋಕವಾಣಿ' ಕನ್ನಡ ವಾರಪತ್ರಿಕೆಯನ್ನು ಹೊರಡಿಸಿದೆವು. ಆಡೂರು ವಿಶ್ವನಾಥ ವಾಚನಾಲಯದಿಂದ ಅನೇಕ ಪುಸ್ತಕಗಳನ್ನೂ ಪ್ರಕಟಿಸಿದ್ದೇವೆ. ಕೊಪ್ಪಳ ಜಿ|| ಮಧ್ಯವರ್ತಿ ಸಹಕಾರಿ ಸಂಘದ ಕಾರ್ಯದರ್ಶಿಗಳಲ್ಲಿ ಒಬ್ಬನಾಗಿಯೂ ಕೊಪ್ಪಳ ತಾ|| ಒಕ್ಕಲತನ ಸಹಕಾರೀ ಸಂಘದ ಡೈರೆಕ್ಟರ್ ಆಗಿಯೂ ಗೌರವ ಕಾರ್ಯದರ್ಶಿಯಾಗಿಯೂ ಸಹಕಾರಿ ರಂಗದಲ್ಲಿ ದುಡಿದಿರುವೆ. ಕೊನೆಯದಾಗಿ ನಮ್ಮ ಭಾಗದ ಮೂವರು ಗಣ್ಯಕಾರ್ಯಕರ್ತರ ಸಂಕ್ಷಿಪ್ತ ಪರಿಚಯ ಕೆಳಗೆ ಮಾಡಿಕೊಡುವೆ.

## ದಿ|| ಚನ್ನಪ್ಪ ಮೋಟಮ್ಮನವರ

ನಮ್ಮ ಊರಲ್ಲಿ ಜನಿಸಿದ ಚನ್ನಪ್ಪ ಮೋಟಮ್ಮನವರ ಇವರು ಇದನೆಯ

ಇಯತ್ತೆಯವರೆಗೆ ಮಾತ್ರ ಕಲಿತರೂ ನಾಟಕಗಳಲ್ಲಿ ಪಾಲುಗೊಂಡು ಗೆಳೆಯರ ಗುಂಪನ್ನು ಕಟ್ಟಿದರು. ನಮ್ಮ ಊರಲ್ಲಿ ವಿಶ್ವನಾಥ ವಾಚನಾಲಯದ ಸ್ಥಾಪನೆಗೂ ದುಡಿದರು. ನಾಟ್ಯಸಂಘದ ಸಂಚಾಲಕರೂ ಆಗಿ ಉತ್ತಮ ನಟರೂ ಎನಿಸಿದರು. ಬರಗಾಲದ ಪ್ರಸಂಗಗಳಲ್ಲಿ ಪರಿಹಾರ ಚಟುವಟಿಕೆಗಳಲ್ಲಿ ಪಾಲುಗೊಂಡರು. ಆಡೂರು ಖಾದಿ ಸಂಘದ ಸಂಚಾಲಕರಾಗಿದ್ದರಲ್ಲದೆ, ಸನಿಹದ ರಾಜೂರಲ್ಲಿ ಹರಿಜನರಿಗಾಗಿ ಶಾಲೆ ತೆರೆದಾಗ ಅದರಲ್ಲಿ ಗೌರವ ಶಿಕ್ಷಕರಾಗಿ ದುಡಿದರು. ವಾಚನಾಲಯದಲ್ಲಿ ಪತ್ರಿಕೆಗಳನ್ನು ಜನಕ್ಕೆ ಓದಿಹೇಳಿ ಜನಜಾಗೃತಿಗಾಗಿ ದುಡಿದರು. ಆಗಸ್ಟ್ 15ಕ್ಕೆ (1947) ಕುಕನೂರಲ್ಲಿ ಇಟಗಿ ರಾಘವೇಂದ್ರರಾಯರ ಜೊತೆ ಸತ್ಯಾಗ್ರಹಮಾಡಿ ಒಂದುವಾರ ಶಿಕ್ಷೆಗೆ ಒಳಗಾದರು ಬಿಡುಗಡೆಯನಂತರ ಇವರು ಮುಂಡರಗಿ ಶಿಬಿರಕ್ಕೆ ತೆರಳಿ, ಶಿವಮೂರ್ತಿ ಸ್ವಾಮಿಗಳ ನಾಯಕತ್ವದಲ್ಲಿ ತಿಪ್ಪಾಪುರ ಉಪಶಿಬಿರದ ಸಂಚಾಲಕರಾಗಿ ದುಡಿದರು. ಪೋಲಿಸ್ ಕಾರ್ಯಾಚರಣೆಯನಂತರ ರೈತರ ಸಂಘಟನೆಗೆ ದುಡಿದರು. ತಮ್ಮ 61ನೆಯ ವಯಸ್ಸಿನಲ್ಲಿ ಇವರು ದಿವಂಗತರಾದರು.

## ದಿ|| ಬಸವಂತರಾವ್ ಹಿರೇಮಠ, ಕಾಟ್ರಳ್ಳಿ

ಕೊಪ್ಪಳ ತಾ|| ಕಾಟ್ರಳ್ಳಿಯವರಾದ ಬಸವಂತರಾವ್ ಹಿರೇಮಠರು 1901ರಲ್ಲಿ ಜನಿಸಿದ್ದರು. ಕೊಪ್ಪಳದ ನವಾಬರಾದ ಸಾಲಾರ್‌ಜಂಗ್‌ರು ಇವರ 15-16ನೆಯ ವಯಸ್ಸಿನಲ್ಲಿಯೇ ಇವರನ್ನು ವಿದ್ಯಾಭ್ಯಾಸಕ್ಕಾಗಿ ಹೈದರಾಬಾದ್‌ಗೆ ಒಯ್ದರು. ಅಲ್ಲಿ ರೆಡ್ಡಿ ಹಾಸ್ಟೆಲ್‌ನಲ್ಲಿ ಇರುತ್ತಿದ್ದ ಇವರು ಸರೋಜಿನಿ ನಾಯ್ಡು ಮುಂತಾದ ನಾಯಕರ ವಿಶ್ವಾಸಕ್ಕೆ ಪಾತ್ರರಾದರು. 1930ರಲ್ಲಿ ಹೈದರಾಬಾದ್ ಕೋಟೆಯ ಮೇಲೆ ರಾಷ್ಟ್ರಧ್ವಜ ಹಾರಿಸಲು ಕಾಂಗ್ರೆಸ್ ನಾಯಕರು ನಿರ್ಣಯಿಸಿರಲು, ಈ ಸುದ್ದಿ ಸರಕಾರಕ್ಕೆ ತಿಳಿಯಿತು. ಕೋಟೆಯ ಬಳಿ ಭಾರಿ ಪೋಲಿಸ್ ಬಂದೋಬಸ್ತು ಇಟ್ಟರು. ದಿಟ್ಟ ಬಸವಂತರಾವ್ ಘೋಷಾ ತೊಟ್ಟು ರಿಕ್ಷಾದಲ್ಲಿ ಕೋಟೆಯೊಳಕ್ಕೆ ಹೋಗಿ, ಗಿಡವೊಂದನ್ನು ಏರಿ ಧ್ವಜ ಹಾರಿಸಿದ ಪ್ರಕರಣ ದೇಶತುಂಬೆಲ್ಲ ಪ್ರಸಿದ್ಧವಾಯಿತು. ಹೈದರಾಬಾದ್‌ನಲ್ಲಿ ಸಾರ್ವಜನಿಕ ರಂಗದಲ್ಲಿ ಖ್ಯಾತರಾದರು ; ವಿಮಾ ಕಂಪನಿಯ ಏಜಂಟರಾಗಿ ಕೆಲಸಮಾಡಿದರು. ಉತ್ತಮ ವಾಗ್ಮಿಗಳೂ ಆಗಿದ್ದರು. ಕೊಪ್ಪಳ ನಾಡಿನಲ್ಲಿ ಬರಬಿದ್ದಾಗ ಪದ್ಮಜಾ ನಾಯ್ಡು, ರವಿ ನಾರಾಯಣ ರೆಡ್ಡಿ ಇವರನ್ನು ಕರೆದುಕೊಂಡು ಬಂದು ಇಲ್ಲಿಯ ಪರಿಸ್ಥಿತಿಯ ದರ್ಶನ ಮಾಡಿಸಿದರು. 1939ರಲ್ಲಿ ಹೈದರಾಬಾದ್ ಕಾಂಗ್ರೆಸ್ಸು ಸತ್ಯಾಗ್ರಹವನ್ನು ಘೋಷಿಸಿದಾಗ ಹೈದರಾಬಾದಿನಲ್ಲಿ ನಾಲ್ಕನೆಯ ಡಿಕ್ಟೇಟರ್ ಆಗಿ ಸತ್ಯಾಗ್ರಹ ನಡೆಸಿ ಬಂಧಿತರಾಗಿ ಶಿಕ್ಷೆಗೊಳಗಾದರು.

1943ರಲ್ಲಿ ಕೊಪ್ಪಳಕ್ಕೆ ಬಂದು ಇರಹತ್ತಿದರು. ಆಗ ಈ ಭಾಗದಲ್ಲಿ ಬರಗಾಲ ಬರಲು ಇಲ್ಲಿನ ಬರಗಾಲ ನಿವಾರಣೋಪಾಯ ಸಂಘದ ಕಾರ್ಯದರ್ಶಿಗಳಾಗಿ ನಮ್ಮ ಜೊತೆ

ಕೆಲಸ ಮಾಡಿದರು. ತುಂಗಭದ್ರಾ ಇಂಡಸ್ಟ್ರಿಯಲ್ ಕಂಪನಿಯೆಂಬ ಸಂಸ್ಥೆ ಸ್ಥಾಪಿಸಿ ಅದರ ಮ್ಯಾನೇಜಿಂಗ್ ಡೈರೆಕ್ಟರರಾಗಿದ್ದರು. 1947ರಲ್ಲಿ ಇವರು ಅಸೌಖ್ಯವಾಗಿದ್ದಾಗ ರಜಾಕಾರರು ಇವರ ಕಂಪನಿಯನ್ನು ಲೂಟಿಮಾಡಿದರಲ್ಲದೆ ಇವರನ್ನೂ ಹೊಡೆದರು. 1950ರಲ್ಲಿ ಮುನಿರಾಬಾದಿನಲ್ಲಿ ಕೊಪ್ಪಳ ನಾಡು ರೈತರ ಪರಿಷತ್ತನ್ನು ಸಂಘಟಿಸಲು ಆಗ ಸ್ವಾಗತಾಧ್ಯಕ್ಷನಾಗಿದ್ದ ನನಗೆ ಅಪಾರ ನೆರವು ನೀಡಿದರು. 1951ರಲ್ಲಿ ಅವರು ದಿವಂಗತರಾದರು.

## ಶಿವಮೂರ್ತಿಸ್ವಾಮಿ ಹಿರೇಮಠ, ಅಳವಂಡಿ

1923ರ ಜುಲೈ 1ರಂದು ಖ್ಯಾತ ಜಂಗಮರ ವಂಶದಲ್ಲಿ ಅಳವಂಡಿಯಲ್ಲಿ ಜನಿಸಿದ ಶಿವಮೂರ್ತಿಸ್ವಾಮಿಗಳು ಬಾಲ್ಯದಿಂದಲೂ ಧಾರ್ಮಿಕ ವೃತ್ತಿಯುಳ್ಳವರೂ ಸಮಾಜಸೇವಾ ವೃತ್ತಿಯವರೂ ಆಗಿದ್ದರು. ತಮ್ಮ ಆಡಳಿತಕ್ಕೆ ಸೇರಿದ ಶ್ರೀಮದುಜ್ಜಯಿನಿ ಶಾಖಾಮಠ ಅಳವಂಡಿಯ ಕಟ್ಟಿಮನಿ ಹಿರೇಮಠದಲ್ಲಿ ಬರಗಾಲ ಬಂದಾಗಲೆಲ್ಲ ಬಡಜನರಿಗೆ ತಪ್ಪದೇ ದಾಸೋಹ ನಡೆಸುತ್ತಿದ್ದರು. ಅವರ ತಾಯಿ ಈ ಬಗ್ಗೆ ಸದಾ ಉತ್ಸಾಹಿಗಳಾಗಿದ್ದರು.

ಶಿವಮೂರ್ತಿಸ್ವಾಮಿಗಳ ಪ್ರಾಥಮಿಕ ಕನ್ನಡ ಶಿಕ್ಷಣ ಅಳವಂಡಿಯಲ್ಲಿ, ಉರ್ದು ಶಿಕ್ಷಣ ಕೊಪ್ಪಳದಲ್ಲಿ, ಮಾಧ್ಯಮಿಕ ಶಿಕ್ಷಣವು ಹುಬ್ಬಳ್ಳಿ ಹಾಗೂ ಗುಲ್ಬರ್ಗಾದಲ್ಲಿ ನಡೆದವು. 1944 ರಿಂದ 1947ರ ವರೆಗೆ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಬಿ.ಎಸ್‌ಸಿ. ವರೆಗೆ ಅಭ್ಯಾಸಮಾಡಿದರು. 1942ರಲ್ಲಿ ಹೈದರಾಬಾದ್‌ನಲ್ಲಿ ಪರದೇಶೀ ವಸ್ತ್ರ ಬಹಿಷ್ಕಾರ ಚಳವಳಿ ಹೈದರಾಬಾದ್ ಭಾಗದಲ್ಲಿ ಜೋರಾಗಿ ನಡೆದಿರಲು, ಎಷ್ಟೋ ವಿದ್ಯಾರ್ಥಿಗಳು ಪರದೇಶೀ ವಸ್ತ್ರ ಸುಟ್ಟು ಖಾದಿ ತೊಡಲು ಆರಂಭಿಸಿದರು. ಸ್ವಾಮಿಗಳು ಅಷ್ಟಕ್ಕೇ ತೃಪ್ತರಾಗದೆ, ತಮ್ಮ ತಾಯಿಯವರ ಬಂಗಾರದ ಬಳೆಗಳನ್ನೂ ತಮ್ಮ ಬಂಗಾರದ ಗುಂಡು ಗಡಿಗೆಯನ್ನೂ ಮಾರಿ, ಅದರಿಂದ ಬಂದ ಹಣದಿಂದ ಅಳವಂಡಿಯಲ್ಲಿ ಚರಖಾ ಸಂಘ ಸ್ಥಾಪಿಸಿದರು. ನಿಜಾಮ ಸರಕಾರವು ಅದನ್ನು ವಾರಂಟ್ ಹೊರಡಿಸಿ ಮುಚ್ಚಿಸಿತು. ಆದರೆ ಈಗ ಆ ಸಂಘ ಮತ್ತೆ ಕಾರ್ಯಶೀಲವಾಗಿ ನೂರಾರು ಜನರಿಗೆ ಉದರನಿರ್ವಾಹಕ್ಕೆ ನೆರವಾಗುತ್ತಿದೆ.

ಬಿ.ಎಸ್‌ಸಿ. ಕೊನೆ ವರ್ಷದಲ್ಲಿ ಇದ್ದಾಗ ಕಾಲೇಜು ತ್ಯಜಿಸಿ (1947) ಸ್ವಾಮಿ ರಮಾನಂದ ತೀರ್ಥರು ಆರಂಭಿಸಿದ ವಿಲೀನ ಚಳವಳಿಯಲ್ಲಿ ಪಾಲುಗೊಂಡರು. ಇವರ ಮೇಲೆ ವಾರಂಟ್ ಹೊರಟುದರಿಂದ ಮುಂಡರಗಿ ಸತ್ಯಾಗ್ರಹ ಶಿಬಿರ ಸ್ಥಾಪಿಸಿ ಆಗಸ್ಟ್ 15 ರಿಂದ (1947) ಪೋಲಿಸ್ ಕಾರ್ಯಾಚರಣೆಯವರೆಗೆ ಆ ಶಿಬಿರದ ಪ್ರಮುಖರಾಗಿ ಕೆಲಸ ಮಾಡಿದರು. ನಿಜಾಮ ರಾಜ್ಯದಿಂದ ಬರುತ್ತಿದ್ದ ನೂರಾರು ನಿರಾಶ್ರಿತರಿಗೆ ಅಲ್ಲಿ ದಾಸೋಹ ನಡೆಯುತ್ತಲಿತ್ತು. ದನಕರುಗಳಿಗೆ ಮೇವು ಒದಗಿಸಲಾಯಿತು. ಈ ಕಾರ್ಯದಲ್ಲಿ ದಿ|| ಬಸರೀಗಿಡದ ವೀರಪ್ಪ, ಅಂದಾನಪ್ಪ ದೊಡ್ಡಮೇಟಿ ಹಾಗೂ ಶ್ರೀಮಂತ ಶಿದ್ಲೆ ಕೊಪ್ಪ

ದೇಸಾಯಿಯವರು ಅಪಾರ ಸಹಾಯ ನೀಡಿದರು. ಮುಂಡರಗಿ ಶಿಬಿರದ ಉಪಶಿಬಿರಾಧಿಪತಿಗಳಾಗಿ ಡಾ|| ಸಿ. ಎಂ. ಚುರ್ಚಿಹಾಳಮಠ, ಹಳ್ಳಿಕೇರಿಯಲ್ಲಿ ಶಿದ್ನೆಕೊಪ್ಪದ ದೇಸಾಯಿ, ಹಂಪಸಾಗರದಲ್ಲಿ ವಿರೂಪಾಕ್ಷಪ್ಪ (ಕೊಪ್ಪಳ), ಹೆಸರೂರಲ್ಲಿ ಚೆನ್ನವೀರಯ್ಯ, ಗದಗಿನಲ್ಲಿ ನಾನು, ತಿಮ್ಮಾಪುರದಲ್ಲಿ ಚೆನ್ನಪ್ಪ ವೋಟಮ್ಮನವರ ಮತ್ತು ಕೊಪ್ಪದಲ್ಲಿ ಬಸಪ್ಪ ಸರ್ವೆ, ಇವರುಗಳಿದ್ದರು. ಈ ಕಾಲದಲ್ಲಿ ಸಂಕನೂರ ಅಡ್ಡಹಾದಿ ಆಚೆಗಿನ ಹಳ್ಳಿಗಳನ್ನು ಸ್ವತಂತ್ರಪಡಿಸಿ ಇಟಗಿ ಕೇಂದ್ರದಿಂದ ಆರ್. ವಿ. ಬಿಡಪನವರಿಗೆ ಅದರ ಆಡಳಿತವನ್ನು ಒಪ್ಪಿಸಲಾಯಿತು. ಬನ್ನಿಕೊಪ್ಪದ ಶಂಕರಪ್ಪ ಯರಾಶಿ ಹಾಗೂ ಸಂಗನಹಾಳು ಪ್ರಭುರಾಜ ಪಾಟೀಲ ಇವರುಗಳು ಶೀರ ಶೂರತನದಿಂದ ಕುಕನೂರ ಪೋಲಿಸ್ ಠಾಣೆಯಲ್ಲಿನ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡರು.

ಈ ಕಾಲದಲ್ಲಿ ರಜಾಕಾರರು ಅಳವಂಡಿ ಕಟ್ಟಿಮನಿ ಹಿರೇಮಠವನ್ನೇ ತಮ್ಮ ಶಿಬಿರವಾಗಿ ಮಾಡಿಕೊಂಡು ಅಲ್ಲಿನ ಸಾವಿರಾರು ತಾಡವೋಲೆ ಗ್ರಂಥಗಳನ್ನು ಸುಟ್ಟರು. ಸುಮಾರು 15 ಲಾರಿ ದೊಡ್ಡದೊಡ್ಡ ಹಂಡೆ ಭಾಂಡಿಗಳನ್ನು ಅಲ್ಲಿಂದ ಲೂಟಿಮಾಡಿ ಸಾಗಿಸಿದರು. ಊರ ಸಿದ್ಧೇಶ್ವರ ಗುಡಿಯ ಪಾವಿತ್ರ್ಯ ಮಾತ್ರ ಕೆಡಿಸಲಿಲ್ಲ. ಊರ ಮುಸಲ್ಮಾನ ಬಂಧುಗಳೇ ಮಠದ ಅಭಿಮಾನಿಗಳಾಗಿದ್ದುದು ಇದಕ್ಕೆ ಕಾರಣವಾಗಿರಬಹುದು. ಶಿವಮೂರ್ತಿ ಸ್ವಾಮಿಗಳನ್ನು ಹಿಡಿದುಕೊಟ್ಟವರಿಗೆ 20,000 ರೂ., ಅವರ ಹೆಣ ತಂದುಕೊಟ್ಟವರಿಗೆ 10,000 ರೂ. ಬಹುಮಾನವನ್ನು ಆಗಿನ ಸಂಸ್ಥಾನೀ ಸರಕಾರ ಘೋಷಿಸಿತ್ತು.

ಪೋಲಿಸ್ ಆ್ಯಕ್ಷನ್ ಅನಂತರ ನಮ್ಮ ಸ್ವತಂತ್ರ ಸರಕಾರವು ಲೆವಿ ವಸೂಲಿಗೆ ಹಳ್ಳಿಗಳ ಮೇಲೆ ದಬ್ಬಾಳಿಕೆ ನಡೆಸಲು ಅದನ್ನು ಪ್ರತಿಭಟಿಸಿ ಇವರು ಜೈಲು ಕಂಡರು. ಬಿಡುಗಡೆಯ ಅನಂತರ ಕಾಂಗ್ರೆಸ್ ತ್ಯಜಿಸಿ ಜನತಾ ಪಕ್ಷವನ್ನು ಸಂಘಟಿಸಿ ಆ ಪಕ್ಷದ ಮತಿಯಿಂದ ಲೋಕಸಭೆಗೆ ಆಯ್ಕೆಯಾದರು (1952). ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತಿನಲ್ಲೂ ಶ್ರಮಿಸಿದರು. 1954ರಲ್ಲಿ ಹಂಪೆಯಲ್ಲಿ ನಡೆದ ಅ.ಕ.ರಾ.ನಿ.ಪ.ದ ಎರಡನೆಯ ಅಧಿವೇಶನಕ್ಕೆ ಇವರೇ ಅಧ್ಯಕ್ಷರು. ಈ ಬಗ್ಗೆ ಹುಬ್ಬಳ್ಳಿ ಸತ್ಯಾಗ್ರಹದಲ್ಲೂ ತುಂಗಭದ್ರಾ ಕಾಲುವೆ ಪಡೆಯುವ ಸತ್ಯಾಗ್ರಹದಲ್ಲೂ ಸ್ವಾಮಿಗಳ ನೇತೃತ್ವವಿತ್ತು. ಲೋಕಸೇವಾ ಸಂಘದ ಸ್ಥಾಪನೆ ಆದಾಗ (ಗದಗಿನಲ್ಲಿ ಅಕ್ಟೋಬರ್ 20–21ಕ್ಕೆ, 1956ರಲ್ಲಿ) ಅದರ ಪ್ರಥಮಾಧಿವೇಶನದ ಅಧ್ಯಕ್ಷತೆಯನ್ನು ಶಿವಮೂರ್ತಿ ಸ್ವಾಮಿಗಳವರೇ ವಹಿಸಿದರು. ಅಲ್ಲದೆ ನವಪಕ್ಷದ ಅಧ್ಯಕ್ಷರೂ ಅವರೇ ಆದರು. 1962ರಲ್ಲೂ ಅವರು ಲೋಕಸಭೆಗೆ ಆಯ್ಕೆಗೊಂಡರು. 1963ರಲ್ಲಿ ಅ.ಭಾ. ಮತದಾರ ಪರಿಷತ್ತನ್ನು ದೆಹಲಿಯಲ್ಲಿ ಹುಕುಂ ಸಿಂಗ್‌ರ ಅಧ್ಯಕ್ಷತೆಯಲ್ಲಿ ಇವರು ಸಂಘಟಿಸಿದರು. ಈಗ ರಾಮಸಾಗರ (ತಾ|| ಹೊಸಪೇಟೆ) ಒಂದು ಖಂಡಸಾರಿ ಸಹಕಾರೀ ಸಕ್ಕರೆ ಕಾರ್ಖಾನೆಯನ್ನು ಸಹಕಾರ ರಂಗದಲ್ಲಿ ಸಂಘಟಿಸಿದ್ದಾರೆ.

ಹೈ.ರಾ. 17

# ಗುರಪ್ಪ ಬಸಪ್ಪ ಅರ್ಕಸಾಲಿ

ಜನನ : 1922 ಉದ್ಯೋಗ : ಅಕ್ಕಸಾಲಿ ವಿಳಾಸ : ತೋಟಗಂಟಿ, ಅಂಚೆ : ಕೋಡಿಕೊಪ್ಪ, ತಾ॥ ರೋಣ

---



ಯಲಬುರ್ಗಿ ತಾ॥ ಚಿಕ್ಕೇನಕೊಪ್ಪದವನಾದ ನಾನು ಕುಷ್ಟಗಿಯಲ್ಲಿ ಓದುತ್ತಿರಲು 1942ರ ಚಳವಳಿಯಿಂದ ಪ್ರಭಾವಿತನಾಗಿ ಶಿಕ್ಷಣವನ್ನು ತ್ಯಜಿಸಿ ಸ್ವಗ್ರಾಮಕ್ಕೆ ಬಂದೆನು. ಕುಷ್ಟಗಿಯಲ್ಲಿ ಹಾಗೂ ನಮ್ಮ ಊರಲ್ಲಿ ಚಳವಳಿ ನಡೆಸಲು ಸರಿಯಾದ ಮಾರ್ಗದರ್ಶಕರೇ ಇರಲಿಲ್ಲ. ಊರಲ್ಲಿ ಒಂದು ಗೆಳೆಯರ ಗುಂಪನ್ನು ಸ್ಥಾಪಿಸಿ ಅದರ ವತಿಯಿಂದ ಒಂದು ವಾಚನಾಲಯವನ್ನು 1942ರಲ್ಲಿ ಆರಂಭಿಸಿ ರಾಷ್ಟ್ರೀಯ ವಿಚಾರಗಳ ಪ್ರಸಾರಕ್ಕೆ ಅವಕಾಶ ಮಾಡಿದೆವಲ್ಲದೆ ಕೆಲವು ಗೆಳೆಯರು ಕೂಡಿ ಸ್ವಾತಂತ್ರ್ಯಕ್ಕಾಗಿ ದುಡಿಯುವ ಶಪಥ ಕೈಕೊಂಡೆವು. ರಾಟಿಯಿಂದ ನೂಲುವ ಚಟುವಟಿಕೆ ಆರಂಭಿಸಿದೆವು. ಸರಕಾರ ನಮ್ಮ ಮೇಲೆ ಕಣ್ಣಿಟ್ಟಿತು. 1947ರ ಆಗಸ್ಟ್ 15ಕ್ಕೆ ನಾವು ಸ್ವಾತಂತ್ರ್ಯ ಹೋರಾಟಗಾರರ ಒಂದು ಸಮಿತಿಯನ್ನು ಮಾಡಿಕೊಂಡೆವು. ಟಿ.ಸಿ.ಸಿ. ಅಧ್ಯಕ್ಷ ವೀರಭದ್ರಪ್ಪ ಶಿರೂರರ ಸೂಚನೆಯಂತೆ ನಮ್ಮ ಊರ ಹತ್ತಿರದ ಕಿನ್ನಾಳದಲ್ಲಿ ಬಸವೇಶ್ವರ ಜಾತ್ರೆಯ ಕಾಲಕ್ಕೆ ನಾವು ನಿಜಾಮ ಸರಕಾರದ ವಿರುದ್ಧ ಘೋಷಣೆ ಕೂಗುತ್ತ ಒಂಬತ್ತು ಜನ ಪ್ರಚಾರ ಮಾಡಲು ಅಲ್ಲಿ ಇಬ್ಬರನ್ನು ಬಂಧಿಸಿದರು ; ಇದು ಆಗಸ್ಟನಲ್ಲಿಯೇ. ನಮ್ಮ ಊರಲ್ಲೂ ಸುತ್ತಲ ಊರುಗಳಲ್ಲೂ ನಿಜಾಂ ವಿರೋಧಿ ಘೋಷಣೆಗಳನ್ನು ಎಲ್ಲೆಡೆ ಗೋಡೆಗಳ ಮೇಲೆ ಬರೆದಿದ್ದೆವು. ಮುಂದೆ 12–9–1947ರಂದು ನಾವು ಏಳು ಜನ ನಮ್ಮ ಊರಲ್ಲಿ ಸಭೆ ಕರೆದು ನಿಜಾಮ ಸರಕಾರದ ವಿರುದ್ಧ ಭಾಷಣ ಮಾಡಲು, ನಮ್ಮನ್ನೆಲ್ಲರನ್ನೂ ಕುಕನೂರು ಪೋಲಿಸರು ಬಂಧಿಸಿ ಕೊಪ್ಪಳ ಜೈಲಿಗೆ ಒಯ್ದರು. ಅಲ್ಲಿ ಜೈಲಿನಲ್ಲೇ ನಮಗೆ 15 ತಿಂಗಳ ಶಿಕ್ಷೆಯನ್ನು ನ್ಯಾಯಾಧೀಶರು ವಿಧಿಸಿದರು. ಅಲ್ಲಿಂದ ಹೈದರಾಬಾದ್ ಸೆಂಟ್ರಲ್ ಜೈಲ್, ಮುಂದೆ ಔರಂಗಾಬಾದ್ ಜೈಲಿನಲ್ಲಿ ಇದ್ದೆನು. ಆಗ ಜೈಲಿನಲ್ಲಿ ಕೈದಿಗಳು ಹೆಚ್ಚಾಗಿದ್ದರಿಂದ 25–4–1948ರಂದು ನನ್ನ ಬಿಡುಗಡೆ ಆಯಿತು. ನಾನು ರೈಲಿನಲ್ಲಿ ಹೊಸಪೇಟೆ ತಲಪಿರಲು ಕೊಪ್ಪಳದ ಕಾಂಗ್ರೆಸ್ ಕಾರ್ಯಕರ್ತರು ಒಂದು ಕೊಪ್ಪಳದಲ್ಲಿ ಇಳಿಯಬಾರದು, ರಜಾಕಾರರು ಅಲ್ಲಿ ಬಿಡುಗಡೆಯಾಗಿ ಬಂದ ಸತ್ಯಾಗ್ರಹಿ

ಗಳಿಗಾಗಿ ಕಾಯುತ್ತಿದ್ದಾರೆ ಅನ್ನಲು ನಾನು ಗದಗಿಗೆ ಹೋದೆನು. ಶಿಬಿರದಲ್ಲಿ ಕೆಲಸ ಮಾಡಿದೆನು.

ನಾನು ಜೈಲಿನಲ್ಲಿದ್ದಾಗ ನಮ್ಮ ಮನೆಮಂದಿ ರಜಾಕಾರರ ದೌರ್ಜನ್ಯಕ್ಕೆ ಬೆದರಿ ರೋಣ ತಾ|| ತೋಟಗುಂಟೆಯಲ್ಲಿ ನೆಲಸಿದ್ದರು. ನಾನು ಮುಂದೆ ಇಲ್ಲೇ ಸ್ಥಾಯಿಯಾದೆ.

ಹೈ.ರಾ. 18

## ಮಹಾದೇವಪ್ಪ ಹುಚ್ಚಪ್ಪ ದೊಡ್ಡಮನಿ

ಜನನ : 1926 ಉದ್ಯೋಗ : ಕೃಷಿ ವಿಳಾಸ : ಚಿಕ್ಕೇನಕೊಪ್ಪ, ತಾ|| ಯಲಬುರ್ಗಿ



ಆ ಕಾಲದಲ್ಲಿ ಸಾಲಾರ್‌ಜಂಗರ ಜಾಗೀರಾಗಿದ್ದ (ಈಗಿನ ಕೊಪ್ಪಳ, ಯಲಬುರ್ಗಿ ತಾ||ಗಳು) ಕೊಪ್ಪಳ ಜಿಲ್ಲೆಯ ಕೇವಲ ಏಳೆಂಟು ನೂರು ಜನವಸತಿಯ ನಮ್ಮ ಗ್ರಾಮವು ರಾಜಮಾರ್ಗವಿಲ್ಲದ, ರೈಲುಮಾರ್ಗದಿಂದ 8–10 ಮೈಲು ದೂರದ, ವಾರಕ್ಕೊಮ್ಮೆ ಮಾತ್ರ ಕುಕನೂರಿನಿಂದ ಟಪ್ಪಾಲು ಪಡೆಯುತ್ತಿದ್ದ, ಏಕಾಂಗಿಯಾದ ಹಿಂದುಳಿದ ಊರಾಗಿತ್ತು. ಇಂಥ ಈ ಊರಲ್ಲಿ ಆಡೂರಿನ ವೀರಭದ್ರಪ್ಪ ಶಿರೂರ ಅವರ ಪ್ರೇರಣೆಯಿಂದ, ಅವರ ಅಧ್ಯಕ್ಷತೆಯಲ್ಲೇ 1942ರಲ್ಲಿ ಕಲ್ಲಿನಾಥ ವಾಚನಾಲಯವನ್ನು ಸ್ಥಾಪಿಸಿದೆವು. ನಮ್ಮ ತಂದೆ ಇದಕ್ಕಾಗಿ ತಮ್ಮ ಇಮಾರತಿಯನು ದಾನಮಾಡಿದ್ದರು. ಈ ವಾಚನಾಲಯಕ್ಕೆ ಚನ್ನಪ್ಪ ವಕ್ಕಳದ (ಅಧ್ಯಕ್ಷ), ಶಿವಲಿಂಗಪ್ಪ ಅಡಿಗಿಮನಿ (ಉಪಾಧ್ಯಕ್ಷ), ನಾನು (ಕೋಶಾಧಿಕಾರಿ) ಹೀಗೆ ಸಮಿತಿ ಮಾಡಿದೆವು. ಈ ವಾಚನಾಲಯದಿಂದ ನಮ್ಮ ಊರಲ್ಲಿ ಜನಜಾಗೃತಿಗೆ ಅವಕಾಶ ಆಯಿತು. ಆ ಕಾಲದಲ್ಲಿ ನೆರೆಯ ಬ್ರಿಟಿಷ್ ಜಿಲ್ಲೆಗಳಲ್ಲಿ ದೊಡ್ಡಮೇಟಿ, ಹಳ್ಳಿಕೇರಿ, ವಾಲಿ ಚನ್ನಪ್ಪ, ತಲ್ಲೂರು ರಾಯನಗೌಡ ಮುಂತಾದವರು ಚಳವಳಿಯಲ್ಲಿ ಧುಮುಕಿ ಕೆಲಸಮಾಡಿದ ವಿಚಾರವನ್ನು ನಾವು ಕೇಳಿ, ಓದಿ ಇದ್ದೆವು. ನಾವು ನಮ್ಮ ಕುಂದುಕೊರತೆಗಳನ್ನು ಯಾರಲ್ಲೂ ಹೇಳದಂಥ ಸ್ಥಿತಿಯಲ್ಲಿದ್ದೆವು. ಸಂಸ್ಥಾನದ ಅಧಿಕಾರಿಗಳೆಲ್ಲ ಮುಸಲ್ಮಾನರಾಗಿದ್ದು ಅವರ ಬಳಿ ಹೋದರೆ ಹೊಲಸು ಬಯ್ಗಳೇ ನಮಗೆ ಲಾಭ. ಮುಂದೆ ಸ್ವಾಮಿ ರಮಾನಂದ ತೀರ್ಥರು ಸಂಸ್ಥಾನೀ ಕಾಂಗ್ರೆಸ್ಸ ಸ್ಥಾಪಿಸಿ, ಗುಲ್ಬರ್ಗದ ಕೋಲೂರು ಮಲ್ಲಪ್ಪನವರು ಕರ್ನಾಟಕ ಭಾಗದ ಪ್ರಮುಖ ಕಾರ್ಯಕರ್ತರಾಗಲು ಅವರ ಸೂಚನೆಯಂತೆ

ನಮ್ಮ ಭಾಗದಲ್ಲಿ ಚಟುವಟಿಕೆಗಳು ಶುರು ಆದವು. ವೀರಭದ್ರಪ್ಪನವರೂ ಚನ್ನಪ್ಪ ವೋಟವನ್ನವರೂ ನಮ್ಮಲ್ಲಿ ಆಗಾಗ ಬರುತ್ತಿದ್ದರು.

ವೀರಭದ್ರಪ್ಪನವರ ಅಪ್ಪಣೆಯಂತೆ 1-9-1947ರಂದು ನಮ್ಮ ಊರ ಸಮೀಪದ ಬಿನ್ನಾಳ ಗ್ರಾಮದಲ್ಲಿ (ಪ್ರತಿವರ್ಷ ಶ್ರಾವಣಮಾಸದಲ್ಲಿ ಜರಗುವ) ಶ್ರೀ ಬಸವೇಶ್ವರ ಜಾತ್ರೆಯಲ್ಲಿ, ಕುಕನೂರಲ್ಲಿ ಇರುವ ಪೋಲಿಸ್ ಅಮೀನನಿಗೆ ತಿಳಿಸಿ, ಲಿಂಗಪ್ಪ ಬಿಸನಳ್ಳಿ ಹಾಗೂ ಶಿದ್ಧಲಿಂಗಯ್ಯಸ್ವಾಮಿ ಇವರಿಂದ ಸತ್ಯಾಗ್ರಹ ಮಾಡಿಸಲು, ಇವರುಗಳ ಬಂಧನವಾಗಿ, ಅವರನ್ನು ಕೈಕೋಳ ಹಾಕಿ, ರಟ್ಟೆಗೆ ಹಗ್ಗ ಬಿಗಿದು ಠಾಣೆಗೆ ಸಾಗಿಸಿದರು. ಮುಂದೆ ನಮ್ಮ ಊರ ಪ್ರಮುಖರಾದ ಲಿಂಗಪ್ಪ ಬಡಿಗೇರ ಅವರು ಸತ್ಯಾಗ್ರಹ ನಡೆಸಲು ಮುಂದಾದರೂ ಕೂಡ ನಾಯಕರಾದ ಅವರು ಹಿಂದಿರುವಂತೆ ತಿಳಿಸಿ ನಾವುಗಳು, ಅಂದರೆ ಚನ್ನಪ್ಪ ವಕ್ಕಳದ, ಶಿವಸಂಗಪ್ಪ ಅಡಿಗಿಮನಿ, ಮಹಾದೇವಪ್ಪ ದೊಡ್ಡಮನಿ, ಮಲ್ಲಪ್ಪ ಹಕಾರಿ, ಮಹಾಲಿಂಗಯ್ಯ, ಗುರಪ್ಪ ಅಕ್ಕಸಾಲಿ, ದೇವಪ್ಪ ವಕ್ಕಳದ—ಹೀಗೆ ಏಳು ಜನ 12-9-1947ರಂದು ಸತ್ಯಾಗ್ರಹ ಮಾಡಿದೆವು. ಸ್ನಾನ ತೀರಿಸಿ, ಖಾದಿ ಧರಿಸಿ, ತಂದೆತಾಯಿಗಳಿಗೆ ವಂದಿಸಿ ಲಿಂಗಪ್ಪ ಬಡಿಗೇರ ಅವರ ಮನೆಯಲ್ಲಿ ಮೃಷ್ಟಾನ್ನ ಭೋಜನ ಮಾಡಿದೆವು. ಅಲ್ಲಿ ಶೃಂಗರಿಸಿಟ್ಟ ಭಾರತಮಾತೆಯ ಚಿತ್ರಕ್ಕೆ ಬಾಗಿ ವಂದಿಸಿದೆವು. ಗಂಗೂಬಾಯಿ ಲಿಂಗಪ್ಪ ಬಡಿಗೇರ ಅವರು ನಮ್ಮ ನೊಸಲಿಗೆ ತಿಲಕವಿಟ್ಟು, ಹೂಮಾಲೆ ಹಾಕಿಸಿ ಆರತಿ ಬೆಳಗಿ ಬೀಳ್ಕೊಂಡರು. ಧ್ವಜಧಾರಿಗಳಾಗಿ ಹೊರಟ ನಮಗೆ ಊರ ಸುಮಂಗಲೆಯರೆಲ್ಲ ಆರತಿ ಬೆಳಗಿ ದಾರಿಯಲ್ಲಿ ಬೀಳ್ಕೊಂಡರು. ನಾವು ಜಯ ಘೋಷ ಮಾಡುತ್ತ ಊರ ಅಗಸೆಗೆ ಬರಲು ನಮ್ಮನ್ನು ಬಂಧಿಸಿ, ಕೋಳ ತೊಡಿಸಿ, ರಟ್ಟೆಗೆ ಹಗ್ಗ ಬಿಗಿವರು. "ಕ್ಷಮೆ ಬೇಡಿ ಹೋಗಿ, ಇಲ್ಲವೆ ಗುಂಡಿಕ್ಕುವೆವು" ಎಂದರು. ನಾವು ಒಪ್ಪಲಿಲ್ಲ. ನೆರೆದ ಜನಜಂಗುಳಿಯ ನಡುವೆ ನಮ್ಮ ತಂದೆತಾಯಂದಿರು ಕಣ್ಣೀರಿಟ್ಟು, "ಈ ಹುಡುಗರಿಗೆ ಬುದ್ಧಿ ಹೇಳಿ ಮನೆಗೆ ಕಳುಹಿಸಿ" ಎಂದರು. ಊರ ಹೆಂಗಸರು ಬಿಕ್ಕಿಬಿಕ್ಕಿ ಅತ್ತರು. ನಮ್ಮ ತಂದೆತಾಯಂದಿರಿಗೆ ಸಾಂತ್ವನ ಹೇಳಿ, ನಡೆದುಕೊಂಡೇ ಏಳು ಮೈಲು ದೂರದ ಕುಕನೂರು ಠಾಣೆಗೆ ಬಂದೆವು. ಮರುದಿನ ಕೊಪ್ಪಳದ ಪ್ರಾಚೀನ ಅವಶೇಷವಾದ ಜೈಲಿಗೆ ಒಯ್ದರು. ಅಲ್ಲಿ ಐದು ದಿನ ಇದ್ದೆವು. ಅಲ್ಲೇ ನಮ್ಮ ವಿಚಾರಣೆ ಆಗಿ 15 ತಿಂಗಳ ಶಿಕ್ಷೆ ಆಯಿತು. ನಿಂತು ಬೀಸುವ ಕಲ್ಲಿನ ಆರು ಏಣಿನ ಗೂಟ ಹಿಡಿದು ಧಾನ್ಯ ಬೀಸುವುದು, ಹುಳು ತುಂಬಿದ, ಅರೆಬೆಂದ ಊಟ ಉಣ್ಣುವುದು, ನಮ್ಮ ಕೋಣೆಯಲ್ಲೇ ಮಲಮೂತ್ರ ಮಾಡಿ, ನಾವೇ ಭಂಗಿಗಳಾಗಿ ಅದನ್ನು ಚೆಲ್ಲುವುದು, ಹೀಗೆ ಅಲ್ಲಿನ ಅನುಭವ. ಜಡಿಮಳೆಯಲ್ಲಿ ನಮ್ಮನ್ನು ನಡೆಸಿ ರೈಲ್ವೆ ಸ್ಟೇಶನ್‌ಗೆ ತಂದು ಹೈದರಾಬಾದ್‌ಗೆ ಸಾಗಿಸಿದರು. ಸ್ಟೇಶನ್‌ನಲ್ಲಿ ಲಿಂಗಪ್ಪ ಬಡಿಗೇರರು ನಮ್ಮನ್ನು ಭೇಟಿಮಾಡಿ ಸಾಂತ್ವನ ಹೇಳಿದರು. ಹೈದರಾಬಾದ್ ಜೈಲಿನಲ್ಲಿ ಆಗ ಕೊಪ್ಪಳದವರಾದ ರಾಘವೇಂದ್ರರಾವ್ ವಕೀಲ ಇಟಗಿ, ಲಕ್ಷ್ಮಣಾಚಾರ್ಯ ವಕೀಲ,

ಶಂಕರಪ್ಪ ಬಂಗಾರಶೆಟ್ಟಿ, ಹಂಪೆಕರ ಮಾಸ್ತರ, ಚಿದಂಬರಭಟ್ಟ ಜೋಶಿ, ರಾಮಾ ಟೇಲರ ಮತ್ತು ಲಕ್ಷ್ಮಣ ಟೇಲರ, ಕಿನ್ನಾಳದವರಾದ ಗೋಪಲಿಪ್ಪ ಶೆಟ್ಟಿ, ಪ್ರಹ್ಲಾದಾಚಾರ್ಯ, ಬಂಡಾಚಾರ್ಯ ಮತ್ತು ವಿರೂಪಾಕ್ಷಪ್ಪ, ಕವಲೂರಿನ ಚನ್ನಬಸವನಗೌಡ ಅಲ್ಲೀಪುರ ಹಾಗೂ ಶಿವಪ್ಪ, ಯಲಬುರ್ಗಿಯ ಶ್ರೀನಿವಾಸರಾವ್ ರ‍್ಯಾವಣಗಿ ಮತ್ತು ಜಯರಾವ್ ಬೀಡನಾಳ ಮುಂತಾದವರು ಇದ್ದರು.

ಅಲ್ಲಿಂದ ಮುಂದೆ ಔರಂಗಾಬಾದ್ ಜೈಲಿಗೆ (11-10-1947) ವರ್ಗಾಯಿಸಿ, ಕಡೆಗೆ 24-4-1948ರಂದು ಬಿಡುಗಡೆ ಮಾಡಿದರು. ಗ್ರಾಮಕ್ಕೆ ಬಂದು ನೋಡಲಾಗಿ ಜನ ತಮ್ಮ ಮನೆಮಾರು ಬಿಟ್ಟು, ದನಕರುಗಳನ್ನು ಹೊಡೆದುಕೊಂಡು ಧಾರವಾಡ ಜಿಲ್ಲೆಯ ಆಶ್ರಯಪಡೆದಿದ್ದರು. ಕ್ರೂರ ರಜಾಕಾರರು ನಮ್ಮ ಮನೆಯನ್ನು ತಮ್ಮ ಬೀಡಾಗಿ ಮಾಡಿಕೊಂಡಿದ್ದರು. ವಾಚನಾಲಯದ ಮನೆಯನ್ನು ಭಸ್ಮ ಮಾಡಿದ್ದರು. ಲಿಂಗಪ್ಪ ಬಡಿಗೇರ, ಸಂಗಪ್ಪ ಮುಟ್ಗಿ ಇವರು ಗ್ರಾಮದ ರಕ್ಷಣೆಗಾಗಿ ಶಕ್ತಿಮೀರಿ ಹೋರಾಡಿ, ಕಡೆಗೆ ಜನರನ್ನು ಬಿಡಿಸಿ ಬೇರೆ ಕಡೆಗೆ ಸಾಗಿಸಿದ್ದರು. ನಮ್ಮ ಮನೆಮಂದಿ ನರೇಗಲ್‌ನಲ್ಲಿ ಇದ್ದರು. ಶಿವಮೂರ್ತಿಸ್ವಾಮಿಗಳೂ ವೀರಭದ್ರಪ್ಪನವರೂ ತಿಮ್ಮಾಪುರ, ಮುಂಡರಗಿಗಳಲ್ಲಿ ಸ್ಥಾಪಿಸಿದ್ದ ಶಿಬಿರಗಳಿಗೆ ನಾನು ಹೋಗಿ ಬರುತ್ತ ಇದ್ದೆನು. ಮುಂದೆ ಪೋಲಿಸ್ ಕಾರ್ಯಾಚರಣೆ ಆಗಿ ಊರಿಗೆ ಮರಳಿದ ನಾವು ಶಿವಮೂರ್ತಿಸ್ವಾಮಿ ಅಳವಂಡಿ, ವೀರಭದ್ರಪ್ಪ ಶಿರೂರ, ಮಲ್ಲಪ್ಪ ವಕೀಲ ಹೊಂಬಳ, ಶಂಕ್ರಪ್ಪ ಯರಾಸಿ ಬನ್ನಿಕೊಪ್ಪ, ಶಂಕರಗೌಡ ತೆಗ್ಗಿನಮನಿ ಇವರನ್ನೆಲ್ಲ ಕರೆಸಿ, ಊರ ಮುಂದಣ ಬಯಲಲ್ಲಿ ತ್ರಿವರ್ಣ ಧ್ವಜವನ್ನು ಶಿವಮೂರ್ತಿಸ್ವಾಮಿಗಳ ಕೈಯಿಂದ ಆರೋಹಿಸಿ ಸ್ವಾತಂತ್ರ್ಯದಿನ ಆಚರಣೆ ಮಾಡಿದೆವು.

## ಹೈ.ರಾ. 19 | ಶಂಕರಗೌಡ ಶಿವನಗೌಡ ಹಿರೇಗೌಡ್ರ

ಜನನ : ? ಉದ್ಯೋಗ : ಕೃಷಿ ವಿಳಾಸ : ತಳಕಲ್ಲ, ಯಲಬುರ್ಗಿ

---

ಏನೋ ಕೆಲಸದ ನಿಮಿತ್ತ 15-8-47ರಂದು ಗದಗಿಗೆ ಹೋಗಿದ್ದ ನಾನು ಗದಗಿನಲ್ಲಿ ಎಲ್ಲೆಡೆ ಸ್ವಾತಂತ್ರ್ಯೋತ್ಸವ ಸಂಭ್ರಮ ಕಂಡು ಕಸಿವಿಸಿಗೊಂಡು ಊರಿಗೆ ಮರಳಿದೆ. ಊರಲ್ಲಿ ಗೆಳೆಯರಾದ ದಿ|| ದೊಡ್ಡವೆಂಕರೆಡ್ಡಿ, ಸೋಮರೆಡ್ಡಿ, ನಿಂಗಪ್ಪ, ಕೆಂಚರೆಡ್ಡಿ, ಸಂಗಪ್ಪ ವಡ್ಡಿನ, ಚನ್ನಪ್ಪ ಜಿನ್ನಳ್ಳಿ, ಭೀಮಪ್ಪ ರಾಯರೆಡ್ಡಿ, ಸಿದ್ಧನಗೌಡ ಸಿದ್ಧನಗೌಡ್ರ, ಇವರೆಲ್ಲ ಕೂಡಿ ನಮ್ಮ ಭಾಗದ ನಿರಂಕುಶಾಧಿಕಾರದ ವಿರುದ್ಧ ಹೋರಾಡಲು ನಿರ್ಧರಿಸಿದೆವು. ಊರಲ್ಲಿ ಪ್ರಚಾರಮಾಡಿ ಗಾಂಧೀ ಫೋಟೋ ಹಿಡಿದು ಮೆರವಣಿಗೆ ನಡೆ



ಸಿದೆವು. ಒಂದು ದಿನ ರಾತ್ರಿ ನಮ್ಮ ಊರ ಬಳಿಯ ಕೋಮಲಾಪುರ ಚಾವಡಿ ಸುಟ್ಟೆವು. 10-11-1947ರ ರಾತ್ರಿ ನಮ್ಮ ತಳಕಲ್ಲಿನ ಚಾವಡಿ, ಸೇಂದಿ ಅಂಗಡಿ ಸುಟ್ಟು ಭಾನಾಪುರಕ್ಕೆ ಹೋಗಿ ಅಲ್ಲಿನ ಡಾಕ ಬಂಗಲೆಗೆ ಬೆಂಕಿ ಹಚ್ಚಿದೆವು. ನಮ್ಮ ಮೇಲೆ ವಾರಂಟ್ ಹೊರಡಲು ಧಾರವಾಡ ಜಿಲ್ಲಾ ಹಳ್ಳಿಕೇರಿಗೆ ಹೋಗಿ, ಆ ಭಾಗದಲ್ಲಿ 1942ರ ಚಳವಳಿಯಲ್ಲಿ ಪಾಲುಗೊಂಡಿದ್ದ ಪಣ್ಣುಖಪ್ಪ ನಾಗನೂರ ಮತ್ತು ಗೂಳಪ್ಪನವರ (ಹೊಂಬಳ) ಇವರ ನೇತೃತ್ವದಲ್ಲಿ ಅಲ್ಲಿ ಒಂದು ಶಿಬಿರವನ್ನು ಸ್ಥಾಪಿಸಿದೆವು. ಅಲ್ಲಿಂದ ಯರೇಹಂಚಿನಾಳ ಗ್ರಾಮದ ಸರಕಾರೀ ಕಾಗದಪತ್ರಗಳನ್ನೂ ಸೇಂದಿ ಸಾರಾಯಿಯ ಅಂಗಡಿಗಳನ್ನೂ, ಮರುದಿನ ಸೋಂಪುರದ ಕರೋಡಗಿರಿ, ಪೋಸ್ಟ್ ಆಫೀಸು, ಸೇಂದಿ ಸಾರಾಯಿ ಅಂಗಡಿ ಗಳನ್ನೂ ಸುಟ್ಟೆವು.

ಮುಂದೆ ಅಳವಂಡಿ ಶಿವಮೂರ್ತಿ ಸ್ವಾಮಿಗಳು ನಮ್ಮನ್ನೆಲ್ಲ ಮುಂಡರಗಿ ಶಿಬಿರಕ್ಕೇ ಬರಮಾಡಿದರು. ಅಲ್ಲಿ ಹೈದರಾಬಾದ್ ಕಾಂಗ್ರೆಸ್ ಸ್ಥಾಪಿಸಿದ ಶಿಬಿರಕ್ಕೆ ಶಿವಮೂರ್ತಿ ಸ್ವಾಮಿಗಳು ಶಿಬಿರಾಧಿಪತಿಗಳಾಗಿ ಪ್ರಭುರಾಜ ಪಾಟೀಲ ಸಂಗನಾಳ್, ಶಂಕರಪ್ಪ ದೊಡ್ಡಯರಾಶಿ, ಬನ್ನಿಕೊಪ್ಪದ ಕಾಳಪ್ಪ ಸಣ್ಣಯರಾಶಿ, ದಿ|| ಶಂಕರಗೌಡ್ರ ತೆಗ್ಗಿಸಮನಿ. (ಈಗ ಸಬ್-ಇನ್ಸ್‌ಪೆಕ್ಟರ್ ಆಗಿರುವ) ಭೀಮನಗೌಡ್ರ ಶಿವಪ್ಪಗೌಡ್ರ ತಳಕಲ್ಲ ಇವರು ಗಳನ್ನು ಸೆಕ್ಷನ್ ಕಮಾಂಡರಾಗಿ ನೇಮಿಸಿ, ಕೆಲವರನ್ನು ಸಿ.ಐ.ಡಿ. ಖಾತೆಗೆ, ಕೆಲವರನ್ನು ಆಫೀಸು ಕೆಲಸಕ್ಕೆ, ಕೆಲವರನ್ನು ಧನಧಾನ್ಯಸಂಗ್ರಹಕ್ಕೆ ನೇಮಿಸಿದರು.

ಪ್ರಭುರಾಜ ಪಾಟೀಲ, ಶಂಕರಪ್ಪ ಯರಾಶಿ, ಕಾಳಪ್ಪ ಯರಾಶಿ ಇವರ ನೇತೃತ್ವ ದಲ್ಲಿ ಕುಕನೂರ ಪೋಲಿಸ್ ಠಾಣೆಯ ಮೇಲೆ ದಾಳಿಮಾಡಿ ಭಾರಿ ಧೈರ್ಯತೋರಿ ಅಲ್ಲಿನ ಕಾಗದಪತ್ರ, ಪೋಲಿಸ್ ಉಡುಪು, ನೂರಾರು ಶಸ್ತ್ರಗಳನ್ನು ಸೆಳೆದು ಶಿಬಿರಕ್ಕೆ ತಂದೆವು. ಯಲಬುರ್ಗಿ ತಹಶೀಲ ಕಚೇರಿಯ ಮೇಲೆ ಮಾಡಿದ ದಾಳಿ ಅಪಯಶಸ್ವಿಯಾಯಿತು. ಗಡಿಭಾಗದಲ್ಲಿ ಯರೇಹಂಚಿನಾಳ, ಬೆಟಗೇರಿ, ಬೆಳಗಟ್ಟಿಗಳಲ್ಲಿ ನಮಗೂ ರಜಾಕಾರರಿಗೂ ಚಕಮಕಿ ಆದವು. 120ಜನ ನಾವು ಒಂದು ವರ್ಷ ಅನ್ನ ನೀರು, ನಿದ್ರೆ ವಿಶ್ರಾಂತಿ ಗಳನ್ನು ತೊರೆದು ಶಿಬಿರದಲ್ಲಿ ವೀರವೃತ್ತಿಯಿಂದ ದುಡಿದೆವು.

ಹೈ.ರಾ. 20

# ಲಿಂಗಯ್ಯ ಹಿರೇಮಠ

ಜನನ : ? ಉದ್ಯೋಗ : ಕೃಷಿ ವಿಳಾಸ : ಬನ್ನಿಕೊಪ್ಪ, ತಾ॥ ಯಲಬುರ್ಗಿ



1947ರಲ್ಲಿ ಭಾರತ ಸ್ವತಂತ್ರವಾದರೂ ನಮ್ಮ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಬಾರದಿದ್ದಾಗಲೇ ನಾವು ಈ ಬಗ್ಗೆ ಕಣ್ತೆರೆದು, ಈ ಕುರಿತು ಹಿರಿಯರಲ್ಲಿ ಚರ್ಚಿಸಲು, ಅವರು ಸತ್ಯಾಗ್ರಹ ಮಾರ್ಗವನ್ನು ಸೂಚಿಸಿದರು. ನಾವು 20 ಜನ ಮಿತ್ರರು ಸಂಸ್ಥಾನೀ ಕಾಂಗ್ರೆಸ್ ಕಮಿಟಿಯ ಸೂಚನೆಯಂತೆ ನಮ್ಮ ಊರಲ್ಲಿ ಸತ್ಯಾಗ್ರಹ ಮಾಡಿದೆವು. ಈ ಬಗ್ಗೆ ಪೋಲಿಸರಿಗೂ ಮೊದಲೇ ತಿಳಿಸಿದ್ದೆವು. ಪೋಲಿಸರು ಹಾಜರಿದ್ದರೂ ನಮ್ಮನ್ನು ಬಂಧಿಸಲಿಲ್ಲ; ಹಾಗೇ ಹೊರಟು ಹೋದರು. ಮರುದಿನ ನಾವುಗಳು ವಿಚಾರವಿನಿಮಯ ಮಾಡಿ, ಶಾಂತಿಯಿಂದ ಕಾರ್ಯಸಾಧಿಸದೆಂದು ಕ್ರಾಂತಿಮಾರ್ಗದಲ್ಲಿ ಅಡಿಯಿಟ್ಟು ನಿಜಾಂ ಸರಕಾರವನ್ನು ಬುಡಮೇಲು ಮಾಡುವ ಚಟುವಟಿಕೆಗಳನ್ನು ಆರಂಭಿಸಿದೆವು.

ದಿ. 3-11-47ರಂದು ಯಲಬುರ್ಗಿ ತಾ॥ ಮೊಳಕೊಪ್ಪಕ್ಕೆ ಹೋಗಿ ಅಲ್ಲಿಯ ಕರೋಡಗಿರಿ ನಾಕಾವನ್ನೇ ಸುಟ್ಟೆವು. 6-11-1947ರಂದು ನಮ್ಮೂರ ಸರಕಾರೀ ಲೇವೀ ಹಗೇವು ಒಡೆದು ಜೋಳವನ್ನು ಬಡವರಿಗೆ ಹಂಚಿದೆವು. 10-11-1947ರಂದು ತಳಕಲ್ಲ ಕಾರ್ಯಕರ್ತರ ನೆರವಿನಿಂದ ಆ ಊರ ಚಾವಡಿ, ಸೇಂದಿ ಅಂಗಡಿ ಸುಟ್ಟೆವು. ಅದೇ ದಿನ ಭಾನಾಪುರಕ್ಕೆ ಹೋಗಿ ಡಾಕ ಬಂಗಲೆ ಸುಟ್ಟೆವು. ಸರಕಾರ ನಮ್ಮ ಮೇಲೆ ವಾರಂಟ್ ಹೊರಡಿಸಲು, ಧಾರವಾಡ ಜಿಲ್ಲಾ ಹಳ್ಳಿಕೇರೀಗೆ ಹೋಗಿ ಅಲ್ಲಿ ಷಣ್ಮುಖಪ್ಪ ನಾಗನೂರ ಹಾಗೂ ಗೂಳಪ್ಪನವರು ಹೊಂಬಳ ಇವರ ಹಿರಿತನದಲ್ಲಿ ಅಲ್ಲಿ ಒಂದು ಶಿಬಿರ ಸ್ಥಾಪಿಸಿ ಅಲ್ಲಿಂದ ಯಲಬುರ್ಗಿ ತಾಲ್ಲೂಕು ಯೆರಿಹಂಚಿನಾಳಕ್ಕೆ ಹೋಗಿ ಅಲ್ಲಿನ ಕಾಗದಪತ್ರ, ಪೋಸ್ಟ್ ಆಫೀಸಿನ ಕಾಗದಪತ್ರ, ಸೇಂದಿ ಅಂಗಡಿ ಸುಟ್ಟೆವು. ಮರುದಿನ ಯಲಬುರ್ಗಿ ತಾ॥ ಸೊಂಡೂರ ಸರಕಾರೀ ಕಾಗದಪತ್ರ, ಕರೋಡಗಿರಿ, ಪೋಸ್ಟ್ ಆಫೀಸಿನ ಕಾಗದಪತ್ರ, ಸೇಂದಿ ಸೆರೆ ಅಂಗಡಿ ಇವನ್ನೆಲ್ಲ ಸುಟ್ಟೆವು. ಇದರನಂತರ ಮುಂಡರಗಿಗೆ ಅಳವಂಡಿ ಶಿವಮೂರ್ತಿಸ್ವಾಮಿಗಳ ಆಜ್ಞೆಯಂತೆ ಹೋದೆವು. ಅವರ ನಾಯಕತ್ವದಲ್ಲಿ ಕೆಲಸ ಆರಂಭಿಸಿದೆವು. ಆ ಶಿಬಿರದಿಂದ ಕೌಲೂರು, ಜೆಳಗಟ್ಟಿ, ಗಟ್ಟಿರಡ್ಡಿಹಾಳ, ಬಸರಳ್ಳಿ, ಬೆಟಗೇರಿ, ಬಚನಹಳ್ಳಿ, ಹಲವಾಗಲಿ, ಕಾಸಲಾಪುರ ಮುಂತಾದ ಸಂಸ್ಥಾನೀ ಊರುಗಳಲ್ಲಿ ದಫ್ತರು, ಕರೋಡಗಿರಿ, ಸೇಂದಿಸಾರಾಯಿ ಅಂಗಡಿ

ಇವನ್ನೆಲ್ಲ ಸುಟ್ಟೆವು. ಬಸರಳ್ಳಿ ದೇಸಾಯರ ವಾಡೆಯಲ್ಲಿದ್ದ ಕಾಗದಪತ್ರಗಳನ್ನು ಅವರೇ ಸುಡಲು ಕೊಟ್ಟರಲ್ಲದೆ ತನ್ನಲ್ಲಿದ್ದ ಶಸ್ತ್ರಾಸ್ತ್ರಗಳನ್ನೂ ಶಿಬಿರದ ನಮ್ಮಗಳ ಉಪಯೋಗಕ್ಕೆ ಕೊಟ್ಟರು. ಈ ಕಾಲಕ್ಕೆ ನಿಜಾಂ ಸರಕಾರ ನಮ್ಮ ಮೇಲೆ ವಾರೆಂಟ್ ಹೊರಡಿಸಿದ ವಿಚಾರ ಮುಂಡರಗಿ ಫೌಜದಾರರಿಂದ ತಿಳಿಯಲು ನಾವುಗಳು ನಮ್ಮಲ್ಲಿದ್ದ ಸಾಮಾನು ಗಳನ್ನು ಮುಂಡರಗಿ ಶಿಬಿರದಲ್ಲಿದ್ದ ಶಿವಪ್ಪ ಭೂಮರೆಡ್ಡಿ, ಡಾ|| ಚುರ್ಚಿಹಾಳಮಠ, ರಾಜೋಟಿಪ್ಪ, ಕೊಪ್ಪಳ ವೀರಭದ್ರಪ್ಪ, ಹಿರೇಮಠ ವೀರಭಪ್ರಯ್ಯನವರು, ಇವರುಗಳಿಗೆ ಒಪ್ಪಿಸಿ ಕಪ್ಪತ್ತ ಮಲ್ಲೇಶನ ಗಿರಿ ಸೇರಿದೆವು. ಅಲ್ಲಿ ಕೆಲದಿನ ಊಟವೂ ಇಲ್ಲದೆ ಗೆಡ್ಡೆ ಗೆಣಸು ತಿಂದು ಇದ್ದೆವು. ಮುಂದೆ ಹಿರೇವಡ್ಡಟ್ಟಿಯ ಜಗದ್ಗುರು ಅನ್ನದಾನ ಮಹಾ ಸ್ವಾಮಿಗಳು (ಮುಂಡರಗಿ), ಅಡಿವೆಯ್ಯ ಕಿನ್ನಾಳ, ಕಪ್ಪತ್ತನವರು ಸಂಗನಾಳ, ಇನ್ನೂ ಅನೇಕರು ಧನಧಾನ್ಯ ನೀಡಿ ಸಲಹಿದರು. 1948ರ ಜನವರಿ ಪೂರ್ತಿ ಅಲ್ಲೇ ಇದ್ದೆವು. ಫೆಬ್ರವರಿಯಲ್ಲಿ ಮತ್ತೆ ಶಿಬಿರಕ್ಕೆ ಮರಳಲು, ನೇತಾಜಿಯವರ ಐ ಎನ್.ಎ.ಯಲ್ಲಿದ್ದ ರಾಮಚಂದ್ರ ಸಿಂಗ್ ಎಂಬವರ ಕೈಯಲ್ಲಿ ನಮಗೆ ಮಂಗಳಿ ಗ್ರಾಮದಲ್ಲಿ ಹೆಚ್ಚಿನ ತರಬೇತಿ ನೀಡಿದರು. ಮುಂದೆ ಕ್ರಾಂತಿವೀರ ವಾಲಿ ಚನ್ನಪ್ಪನವರ ನೇತೃತ್ವದಲಿ ಯಲಬುರ್ಗಿ ತಾ|| ಕಚೇರಿ ಮೇಲೆ ದಾಳಿಮಾಡಲು ನಮ್ಮ ಕಾರ್ಯಕರ್ತನೊಬ್ಬನ ಕೈಯಲ್ಲಿ ಬಾಂಬು ಸಿಡಿದು ಅವನು ಕೈ ಕಳೆದುಕೊಳ್ಳಲು, ಅಲ್ಲಿಂದ ಹಿಂಜೆಗೆದೆವು. ಗದಗ ಜರ್ಮನ್ ಆಸ್ಪತ್ರೆಯಲ್ಲಿ ಗಾಯಗೊಂಡವನನ್ನು ಚಿಕಿತ್ಸೆಗೆ ಸೇರಿಸಿದೆವು.

ಮುಂದೆ ಬನ್ನಾಪುರ ಕರೋಡಗಿರಿ ಸುಟ್ಟು ಅಲ್ಲಿದ್ದ ಒಬ್ಬ ರಜಾಕಾರರ ಪರ ವ್ಯಕ್ತಿಗೆ ಶಾಸ್ತಿಮಾಡಿ ಮರಳಿದೆವು. ಇದಲ್ಲದೆ ಬನ್ನಿಕೊಪ್ಪ ಚಾವಡಿ, ಕರೋಡಗಿರಿ, ಬನ್ನಿಕೊಪ್ಪ ರೈಲ್ವೆ ಸ್ಟೇಶನ್‌ನಲ್ಲಿನ ಕರೋಡಗಿರಿ ಸುಟ್ಟೆವು. ಜೈಲಿನಿಂದ ಬಿಡುಗಡೆ ಯಾಗಿ ಬಂದ ಅನೇಕ ಸತ್ಯಾಗ್ರಹಿಗಳು ನಮ್ಮನ್ನು ಸೇರಿಕೊಂಡರು. ಜೀಗಟ್ಟಿ ಗ್ರಾಮದಲ್ಲಿ ರಜಾಕಾರರಿಗೂ ನಮಗೂ ಚಕಮಕಿಯಾಗಿ ಮೂವರು ರಜಾಕಾರರು ಮಡಿದರು. ಇಲ್ಲಿ ಒಬ್ಬಿಬ್ಬರು ನಮ್ಮ ಕಾರ್ಯಕರ್ತರು ಅಂಗಹೀನರಾದರು. ಆಗಸ್ಟ್ 15ಕ್ಕೆ (1948) ಕೊಪ್ಪಳ ತಾ|| ಬಿಟಗೇರಿಯನ್ನು ಸ್ವತಂತ್ರಗೊಳಿಸಿ ಅಲ್ಲಿ ಧ್ವಜಾರೋಹಣ ಮಾಡಿದೆವು. ಸಂಸ್ಥಾನದ ಊರುಗಳಲ್ಲಿ ರಜಾಕಾರರು ಮನೆಮನೆಗೆ ಹೋಗಿ "ನಿಮ್ಮ ಮಗ ಕಾಂಗ್ರೆಸ್ಸಿಗೆ ಸೇರಿದ್ದಾನೋ?" ಎಂದು ಬಂದೂಕನ್ನು ಗುರಿಮಾಡಿ ಜನರಿಗೆ ಹಿಂಸೆಕೊಡುತ್ತಿದ್ದರು. ಇವರ ಹಾವಳಿಗೆ ಬೇಸತ್ತ ಜನ ಮನೆಮಾರು, ಆಸ್ತಿಪಾಸ್ತಿ ತ್ಯಜಿಸಿ ಗಡಿಯ ಈ ಕಡೆ ಬಂದರು. ಹೊಲಕ್ಕೆ ಹೋದ ರೈತರೂ ದನಕರುಗಳೂ ಮರಳಿ ಬರಲಿಲ್ಲ. ಮಹಿಳೆಯರ ಮಾನಹಾನಿಗಳೂ ಆದವು. ಇಂಥ ಪ್ರಸಂಗಗಳಲ್ಲಿ ರೈತರನ್ನು ಪಾರುಮಾಡಲು ನಾವೇ ಒಳನುಗ್ಗಿ ರಜಾಕಾರರನ್ನು ದೂರಕ್ಕೆ ಅಟ್ಟಿದ ಪ್ರಸಂಗಗಳು ಸಾಮಾನ್ಯ. ಈ ಕಾಲದಲ್ಲಿ ಪ್ರಾಣವು ತೃಣಸಮಾನವೆಂದು ಭಾವಿಸಿ ಹಗಲುರಾತ್ರಿ ಸಂಸ್ಥಾನದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನಾವು ದುಡಿದೆವು. ಮನೆ

ಮಾರನ್ನೂ ಮರೆತೆವು. ಈ ಶಿಬಿರಗಳಲ್ಲಿ ಪಾಲುಗೊಂಡ ನಮ್ಮ ಊರ ಕೆಲವು ಜನರು ಇವರು : ಲಿಂಗಯ್ಯ ದೊಡ್ಡಯ್ಯ ಹಿರೇಮಠ, ಶಂಕರಪ್ಪಾ ದೊಡ್ಡಪ್ಪಾ ದೊಡ್ಡಯರಾಶಿ, ನಾಗಪ್ಪಾ ಕಾಳಪ್ಪಾ ಸಣ್ಣಯರಾಶಿ, ಶಿದ್ದನಗೌಡ ಹನಮಂತಗೌಡ ಶಿವಪ್ಪಗೌಡ್ರ, ಹಾಲಪ್ಪಾ ಮಲ್ಲಪ್ಪಾ ಡಂಬಳ, ಲಿಂಗಬಸಪ್ಪಾ ಸಂಗಪ್ಪಾ ನಾಗನೂರ, ಕಾಳನಗೌಡ ಫಕೀರಗೌಡ ಅಪ್ಪನಗೌಡ್ರ, ಅಡಿವೆಪ್ಪ ಸಣ್ಣಬಸಪ್ಪ ಹಳ್ಳಿಕೇರಿ, ವೀರಪ್ಪಾ ಚನ್ನಬಸಪ್ಪಾ ಓಜಿನಹಳ್ಳಿ, ಶಿವಪ್ಪಾ ಬಸಪ್ಪಾ ಬೆಳವಳಕೊಪ್ಪ, ಕೊಳ್ಳಪ್ಪಾ ಮರಿಯಪ್ಪಾ ತಳವಾರ, ಮರಿಯಪ್ಪಾ ಮುದುಕಪ್ಪಾ ಮಾಳೇಕೊಪ್ಪ, ಯಲ್ಲಪ್ಪಾ ಹನುಮಪ್ಪಾ ಕನ್ಯಾಳ, ಶೇಖರಯ್ಯಾ ವೀರಭದ್ರಯ್ಯಾ ಹಿರೇಮಠ, ಶರಣಪ್ಪಾ ಲಿಂಗಪ್ಪಾ ಡಂಬಳ, ಚಿದಾನಂದಪ್ಪ ಸಂಗಪ್ಪ ನಾಗನೂರ, ಗುರುಬಸಪ್ಪಾ ಮಲ್ಲಪ್ಪಾ ಅಳವಂಡಿ, ಬಸವರಡ್ಡೆಪ್ಪಾ ಸೋಂಪುರ, ಹೀಗೆ 18 ಜನ. ಇದಲ್ಲದೆ ಈ ಕೆಳಗಿನ ಏಳು ಜನ ದಿವಂಗತರಾಗಿದ್ದಾರೆ : ಶಂಕರಗೌಡ ಶಿದ್ದಪ್ಪಗೌಡ ತೆಗ್ಗಿನಮನಿ, ತಿಪ್ಪಣ್ಣಾ ಫಕೀರಪ್ಪಾ ಬ್ಯಾಲೇರಿ, ಅಡಿವೆಪ್ಪ ತಿಪ್ಪಣ್ಣ ಸಣ್ಣಯರಾಶಿ, ಶಿವಪ್ಪಾ ಯಂಕಣ್ಣಾ ಸಣ್ಣಯರಾಶಿ, ಚನ್ನಪ್ಪಾ ತಿಮ್ಮಪ್ಪಾ ನಡಮನಿ, ಭೀಮಪ್ಪ ಹನುಮಪ್ಪ ಮಡಿವಾಳ, ಮಲ್ಲಪ್ಪ ನಿಂಗಪ್ಪ ಕರಮುಡಿ.

ಹೈ.ರಾ. 21

## ಲಕ್ಷ್ಮಣ ಗುಡಿ

ಜನನ : 1923 ಉದ್ಯೋಗ : ? ನಿವಾಸ : ಕೋಟೆ, ಕೊಪ್ಪಳ

---



ನನ್ನ 13ನೆಯ ವಯಸ್ಸಿನಿಂದಲೇ ಶಿಕ್ಷಣ ತ್ಯಜಿಸಿ ಚಳವಳಿಯ ಚಟುವಟಿಕೆಗಳಲ್ಲಿ ಸೇರಿದೆ. ಜನಾರ್ದನರಾವ್, ಶೇಷ ಬುರ್ಲಿ ಇವರ ಪ್ರಭಾವ ನನ್ನ ಮೇಲೆ ಆಯಿತು. ವಿಜಯನಗರ ಷಟ್‌ಶತಸಾಂವತ್ಸರಿಕ ಉತ್ಸವದಲ್ಲಿ ಸ್ವಯಂಸೇವಕನಾಗಿ ಕೆಲಸಮಾಡಿದ್ದೆನು. ಬಳ್ಳಾರಿಯಲ್ಲಿ ನಡೆದ ಖಾದಿ ಗ್ರಾಮೋದ್ಯೋಗ ಪ್ರದರ್ಶನ, ಗಂಗಾವತಿಯಲ್ಲಿ ಆದ ಪರಿಷತ್ತುಗಳಲ್ಲೂ ದುಡಿದಿರುವೆ. ನಿಜಾಮರ ಸರಕಾರದ ವಿರುದ್ಧ ಆರ್ಯಸಮಾಜದವರ ಜೊತೆ ಸಹಕರಿಸಿದೆ. 1942ರಲ್ಲಿ ಕೊಪ್ಪಳ ಕೋಟೆಯಲ್ಲೂ ಇನ್ನು ಇತರ ಕಡೆಗಳಲ್ಲೂ ಧ್ವಜ ಹಾರಿಸಿದೆನಲ್ಲದೆ ಎಲ್ಲೆಡೆ ಘೋಷಣೆಗಳನ್ನು ಬರೆದೆ. ಗಾಂಧಿ ಜಯಂತಿ, ಸಾರ್ವಜನಿಕ ಗಣೇಶೋತ್ಸವ ಮುಂತಾದ ಕಾರ್ಯಕ್ರಮಗಳನ್ನು ಸರಕಾರದ ಪ್ರತಿಬಂಧವಿದ್ದರೂ ಬೆದರದೆ ಆಚರಿಸಿದೆ. 1947ರಲ್ಲಿ

ಕೊಪ್ಪಳ ಸರಕಾರೀ ಹೈಸ್ಕೂಲಿನ ವಿದ್ಯಾರ್ಥಿಗಳಿಂದ ಹರತಾಳ ಮಾಡಿಸಿದೆ; ಊರಲ್ಲಿ ಅವರ ಮೆರವಣಿಗೆಯು ನನ್ನ ನೇತೃತ್ವದಲ್ಲಿಯೇ ಆಯಿತು. ಇದರನಂತರ ನನ್ನ ಮೇಲೆ ವಾರಂಟ್ ಇರಲು ನಾನು ತಲೆತಪ್ಪಿಸಿ, ಗಡಿಭಾಗದ ಶಿಬಿರದಲ್ಲಿ ಭೂಗತ ಕಾರ್ಯವನ್ನು ಮಾಡಿ ರಜಾಕಾರರ ವಿರುದ್ಧ ಹೋರಾಟದಲ್ಲಿ ಪಾಲುಗೊಂಡೆ. ಈ ಚಟುವಟಿಕೆಗಳಿಂದ ನನ್ನ ಶಿಕ್ಷಣ ಪೂರ್ತಿ ನಿಂತಿತು.

ನಮ್ಮ ಊರ ಇತರ ಸತ್ಯಾಗ್ರಹಿಗಳು ಇವರು : ವಿರೂಪಾಕ್ಷಯ್ಯ ಗುರಯ್ಯ ಹಿರೇಮಠ, ಮಾರ್ತಾಂಡ ಹ. ಕುಲಕರ್ಣಿ, ಯಮನಪ್ಪ ಮುರಳಿ, ಮಾಧವರಾವ್ ಶೇಷಗಿರಿರಾವ್, ಬಸನಗೌಡ ಶೇಷನಗೌಡ, ಆರ್. ಬಿ. ಗುಡಿ, ಗೋವಿಂದ ಶೇಷಗಿರಿರಾವ್, ಎಂ. ಎಂ. ಬಂಗಾರಶೆಟ್ಟಿ, ಪೂಕರಾಜ ಜೈನ, ಶಿವಪ್ಪ ಮುರಲಿ, ಕೃಷ್ಣಪ್ಪ ಕಂಡೆಪ್ಪ ದರ್ಜಿ, ವಿರೂಪಕ್ಷಪ್ಪಾ ಕಳ್ಳಿ. ಅನಂತಭಟ್ಟ ಲಕ್ಷ್ಮೀಭಟ್ಟ (ಕವಲೂರು), ಶರಣಯ್ಯ ಗೊಡಚಯ್ಯ ಕುಲಕಂಠಿಮಠ (ಕವಲೂರು), ತುಳಜಾರಾವ್ ಆಲಿಯಾಸ್ ವಿಜಯರಾವ್ ಕಾನ್ಸ್‌ಟೆಬಲ್, ಹಣಮಂತರಾವ್ ಕುಲಕರ್ಣಿ, ಶಾಮರಾವ್ ಭವಾನಿಸಿಂಗ್, ನಾರಾಯಣ ಶಾಸ್ತ್ರಿ, ಮುರಿಗೆಪ್ಪ ಅಗಡಿ, ನಾಗಪ್ಪ ಬಾಗಲಿ, ರಾಮಕೃಷ್ಣ ಜೊಂದಾಡೆ (ಇವರಿಗೆಲ್ಲ ಜೈಲಾಗಿತ್ತು). ಇದಲ್ಲದೆ ಭೂಗತ ಕಾರ್ಯಕರ್ತರಾಗಿದ್ದವರು: ಡಾ|| ಕಾಶೀನಾಥಾಚಾರ್ಯ ಹಂಪಿ, ಬಾಲಾರಾಮ ಶಿಂಗ ಮುದ್ಗಲ್ಲಕರ, ಶಿವಪ್ಪ ದ್ಯಾಂಪುರ, ಕಾಂತಾಚಾರ್ಯ ಜಾಗಿರದಾರ, ಜನಾರ್ದನರಾವ್ ಅಡ್ವೊಕೇಟ್, ನಾಗಪ್ಪ ಅಬ್ಬಿಗೇರಿ, ಶಂಕರಪ್ಪ ಮಾಲಗತ್ತಿ, ಚನ್ನಬಸವಗೌಡ ಅಲ್ಲಿಪೂರ, ಎಸ್. ಜೆ. ಭೀಮನಗೌಡ್ರ, ಸುಮಂತರಾವ್ ಕುಲಕರ್ಣಿ, ಅನಂತಾಚಾರ್ಯ ವೆಂ. ಜೋಶಿ. ಇದಲ್ಲದೆ ಅನೇಕರು ದಿವಂಗತರಾಗಿದ್ದಾರೆ.

## ಹೈ.ರಾ. 22 | ಅನಂತಾಚಾರ್ಯ ವಿ. ಜೋಶಿ

ಜನನ : 1924 ಉದ್ಯೋಗ : ? ವಿಳಾಸ : ವಾರ್ಕರಿ ಬೀದಿ, ಕೊಪ್ಪಳ

ನಾನು ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗ ದೇಶದ ವಾತಾವರಣ ಚಳವಳಿಯಿಂದ ತಪ್ತವಾಗುತ್ತಿರಲು, ಅಧ್ಯಯನದ ಕಡೆ ಬಲವು ಕಡಿಮೆಯಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾದೆನು. ಲಕ್ಷ್ಮಣಾಚಾರ್ಯ ಅಗ್ನಿಹೋತ್ರಿ, ಜನಾರ್ದನರಾವ್ ವಕೀಲ ಮುಂತಾದವರು ಆಗ ಚಳವಳಿಯಲ್ಲಿ ಪ್ರಮುಖ ನೇತಾರರಾಗಿ ದೇಶಸೇವೆಯನ್ನು ಆಗ ಸಲ್ಲಿಸುತ್ತಿದ್ದರು. ಹಂಪೆಯಲ್ಲಿ ನಡೆದ ವಿಜಯನಗರದ ಉತ್ಸವ (1936), ಬಳ್ಳಾರಿಯಲ್ಲಿ ನಡೆದ ಖಾದಿಪ್ರದರ್ಶನ ಇವುಗಳಿಗೆಲ್ಲ ನಾನು ಸ್ವಯಂಸೇವಕನಾಗಿ ತೆರಳಿ ಸೇವೆ ಸಲ್ಲಿಸಿದ್ದೆ.



1942ರಲ್ಲಿ ಕೊಪ್ಪಳದ ಎಲ್ಲ ಕಮಾನುಗಳ ಮೇಲೆ ಮತ್ತು ಕೋಟೆ, ಅಂಚೆಕಚೇರಿ ಮುಂತಾದ ಸರಕಾರಿ ಕಚೇರಿಗಳ ಮೇಲೆ ತ್ರಿವರ್ಣಧ್ವಜ ಹಾರಿಸುವಿಕೆ ಹಾಗೂ ಊರಲ್ಲೆಲ್ಲ ಗೋಡೆಗಳ ಮೇಲೆ 'ಭಾರತದಿಂದ ತೊಲಗಿ' ಘೋಷಣೆ ಬರೆಯುವಿಕೆ, ಈ ಚಟವಟಿಕೆಗಳಲ್ಲಿ ಪ್ರಮುಖ ಪಾತ್ರವಹಿಸಿದ್ದೆ. ಅಲ್ಲದೆ ರಾಷ್ಟ್ರೀಯ ಸೇವಾದಳದ ನೇತೃತ್ವ ದಲ್ಲಿ ಗಾಂಧೀಜಿಯವರ ಜನ್ಮದಿನೋತ್ಸವದಂದು ಪ್ರಭಾತ್ ಫೇರಿ, ಸೂತ್ರಯಜ್ಞ, ಗೀತಾಪಠಣ ಮುಂತಾದ ಕಾರ್ಯ ಕ್ರಮ ಏರ್ಪಡಿಸಿದೆವು. ಧ್ವಜಧಾರಿಗಳಾಗಿ ಮುರಡಿ ಗ್ರಾಮಕ್ಕೆ ಹೋಗಿ ಅಲ್ಲಿ ಮುರಡಿ ಭೀಮಜ್ಜನವರ ಮಾರ್ಗದರ್ಶನ ಕೂಡ ಪಡೆದೆವು. ಸಾರ್ವಜನಿಕ ಗಣೇಶೋತ್ಸವವನ್ನು (ನಿಜಾಮ ಸರಕಾರದ ಪ್ರತಿಬಂಧ ಇದ್ದರೂ) ಆಚರಿಸಿ ಮೆರವಣಿಗೆ, ಭಾಷಣ ಕಾರ್ಯಕ್ರಮ ಏರ್ಪಡಿಸಿದೆವು. 1947ರಲ್ಲಿ ವಿದ್ಯಾರ್ಥಿ ಗಳ ಮೆರವಣಿಗೆ ಹೊರಡಿಸಲು ನನ್ನ ಮೇಲೆ ಆರೆಸ್ಟ್ ವಾರಂಟ್ ತೆಗೆದರು. ಜನಾರ್ದನ ರಾವ್ ದೇಸಾಯಿ ಅವರ ಸೂಚನೆಯಂತೆ ಮುಂಡರಗಿ, ಹೆಸರೂರು, ಬರದೂರು ಸ್ವಯಂಸೇವಕರ ಶಿಬಿರಗಳಲ್ಲಿ ಪಾಲುಗೊಂಡೆನು. ಶಿಬಿರಗಳಿಂದ ಆಗಾಗ ಕವಲೂರು, ಬನ್ನಿಕೊಪ್ಪ, ಹುಲ್ಲಾಗಲಿ, ತಿಗರಿ ಮುಂತಾದ ಊರುಗಳಿಗೆ ಹೋಗಿ ರಜಾಕಾರರ ಚಟುವಟಿಕೆಯ ವಿವರಗಳನ್ನು ತಿಳಿಯುತ್ತಿದ್ದೆನು. ರಜಾಕಾರರ ಜೊತೆ ನಡೆದ ಹೋರಾಟದಲ್ಲಿ ನನ್ನ ದೃಷ್ಟಿಗೂ ಹಾನಿಯಾಯಿತು. ಸಮಯೋಚಿತ ಮುನ್ಸೂಚನೆ ಇತ್ತು ಅನೇಕ ಹಳ್ಳಿಗರನ್ನು ರಜಾಕಾರರ ದಾಳಿಯಿಂದ ರಕ್ಷಿಸಿದೆನು. ಈ ಚಳವಳಿಯ ಚಟುವಟಿಕೆಗಳಿಂದ ಸಾಂಸಾರಿಕ ಸ್ಥಿತಿಯ ಕಡೆ ಅಲಕ್ಷ್ಯಮಾಡಿ ಆಸ್ತಿಪಾಸ್ತಿಗಳಿದ್ದು ದನ್ನೂ ರಕ್ಷಿಸಲಾರದೆ ಹೋದೆನು. ಈಗ ಉದರನಿರ್ವಾಹ ಕಷ್ಟವಾಗಿದೆ. ಗೋವಾ ವಿಮೋಚನಾ ಸತ್ಯಾಗ್ರಹದ ಕಾಲಕ್ಕೆ ಇಲ್ಲಿ ಸತ್ಯಾಗ್ರಹಿಗಳ ಸಂಘಟನೆಗೆ ದುಡಿದಿರುವೆ.

## ಹೈ.ರಾ. 23 | ದಿ|| ಕೊಪ್ಪಳ ಜಯರಾಮಾಚಾರ್ಯ (1885–1955)

1940ರ ಹೊತ್ತಿಗೆ ಬೀದರ್ ಊರಲ್ಲಿ ಅಲ್ಲಿಯ 'ಕನ್ನಡ' ಕನ್ನಡಿಗರಿಗೇ ಅರ್ಥವಾಗು ತ್ತಿರಲಿಲ್ಲ. ಅಲ್ಪಸ್ವಲ್ಪ ಓದು ಮರಾಠಿ; ಮನೆಯಲ್ಲಿ ಮಾತು ಮರಾಠಿ. ಅಲ್ಲಿ ಆಗ್ಗೆ ಕನ್ನಡಕ್ಕೆ ಸ್ಥಾನ ಕಲ್ಪಿಸುವುದೂ ಒಂದು ಕನಸಾಗಿತ್ತು. 1940ರ ಜನವರಿಯಲ್ಲಿ



ಅಲ್ಲಿ ನಿಜಾಮ್ ಕರ್ನಾಟಕ ಪರಿಷತ್ತಿನ ದ್ವಿತೀಯ ಅಧಿವೇಶನ. ಈ ಅಧಿವೇಶನದ ಯಶಸ್ಸಿನ ಬಗ್ಗೆ ಬಹು ಜನರಲ್ಲಿ ಸಂಶಯವೇ ಸಂಶಯ. ಕನ್ನಡ ಭಾಷೆಗೆ ಅಗ್ಗ ಅದೊಂದು ಮರುಭೂಮಿ; ಅಂಥಲ್ಲಿ ಕನ್ನಡದ ಬೀಜ ಫಲವತ್ತಾಗಲು ಭೂಮಿ ಹದಮಾಡುವ ಕಾರ್ಯದಲ್ಲಿ ಮೊದಲಿಗರು ಕೀರ್ತನ ಕೇಸರಿಜಯರಾಮಾಚಾರ್ಯ ರೆಂದರೆ ಅತಿಶಯೋಕ್ತಿಯಾಗದು.

ಭೂಮಿ ಸಿದ್ಧಗೊಳಿಸಿ 'ಕನ್ನಡ'ದ ಬಗ್ಗೆ ಜನರನ್ನು ಜಾಗೃತಗೊಳಿಸಲು ಅಧಿವೇಶನದ 8–10ದಿನ ಮುಂಚಿತ ವಾಗಿಯೇ ಆಚಾರ್ಯರು ಬೀದರಿಗೆ ಧಾವಿಸಿದರು. ಕನ್ನಡದಲ್ಲಿ ಕೀರ್ತನ ಅಲ್ಲಿಯ ಜನರಿಗೆ ಅಸಡ್ಡೆ. ಮೊದಲನೆಯ ದಿನದ ಇವರ ಕೀರ್ತನಕ್ಕೆ ಶ್ರೋತೃಗಳೆಂದರೆ ಇವರು ಇಳಿದುಕೊಂಡ ಮನೆಯ ಜನರು, 30–40 ಜನ ಹೊರಗಿನವರು. ಆಚಾರ್ಯರ ಕೀರ್ತನವೆಂದರೆ ಒಂದು ಮೋಹಕ ಮಂತ್ರ. ಅಂದು ಅವರ ಕೀರ್ತನ ಕೇಳಿದವರೆಲ್ಲ ಕನ್ನಡ ಸ್ಪಷ್ಟ ತಿಳಿಯದಿದ್ದರೂ ಮಂತ್ರಮುಗ್ಧರಾದರು. ನಾಲ್ಕಾರು ದಿನ ಕೀರ್ತನ ಮಾಡುವುದರಲ್ಲಿ ಕನ್ನಡಕುಲಾಭಿಮಾನ ಕನ್ನಡ ತಾಯ್ನುಡಿ ಎಂಬ ಭಾವನೆಯ ಅಂಕುರವಾಗಿ, ಇದರಿಂದ ಅಧಿವೇಶನಕ್ಕೆ ಅಪೂರ್ವ ಯಶಸ್ಸು. ಬೀದರಿನಲ್ಲಿ ನಡೆದ ಈ ಅಧಿವೇಶನ ನೆನೆಸಿಕೊಂಡರೆ ಆಗಿನ ಅಲ್ಲಿಯ ಸನ್ನಿವೇಶ, ಜಯರಾಮಾಚಾರ್ಯರ ಕೀರ್ತನ ಪ್ರಭಾವ ಕಣ್ಣಿಗೆ ಕಟ್ಟಿ ಮೈಮೇಲಿನ ಕೂದಲು ನಿಮಿರುತ್ತವೆ. ಜನಸಾಮಾನ್ಯರನ್ನು ಜಾಗೃತಗೊಳಿಸಿ, ದೇಶಕಾರ್ಯಕ್ಕೆ ಹುರಿಗೊಳಿಸುವ ಅವರ ಕೀರ್ತನದ ಅಗಾಧ ಶಕ್ತಿಯನ್ನು ಅವರ ಸಮಕಾಲೀನರೇ ಬಲ್ಲರು.

ಆಚಾರ್ಯರ ಜೀವನ ವೈವಿಧ್ಯಮಯ. ಪಾಂಡಿತ್ಯದ ಪದವೀಧರರಾಗದಿದ್ದರೂ ಪಂಡಿತರೆನಿಸಿಕೊಂಡವರು. ಅವರ ವಿದ್ಯಾಭ್ಯಾಸ ಆಗಿನ ಏಳನೆಯ ತರಗತಿ. ಆಗಿನ ಕಾಲದಲ್ಲಿ ಸುಪ್ರಸಿದ್ಧವಾದ ವಾಮನರಾವ ಮತ್ತು ಸದಾಶಿವರಾವ ಗರೂಡರ ನಾಟಕ ಕಂಪನಿಗಳ ಮೆನೇಜರಾಗಿದ್ದ ಇವರು ರೈಲ್ವೆಯಲ್ಲಿ ಸ್ಟೇಶನ್ ಮಾಸ್ತರರಾಗಿ ಕೆಲದಿನ ದುಡಿದರು. ಶಿಕ್ಷಣಾಧಿಕಾರಿಗಳಾಗಿಯೂ ಕೆಲಸ ಮಾಡಿದವರು. ಕೊನೆಗೆ ಕೀರ್ತನ ಕೇಸರಿಯಾಗಿ ಪ್ರಸಿದ್ಧಿ ಪಡೆದರು. ಕೀರ್ತನ ಮಾಡುತ್ತಿರುವಾಗಲೇ ಸಮಯ, ಸನ್ನಿವೇಶಕ್ಕೆ ಸರಿಯಾಗಿ ಆಗಲೇ ಹಾಡುಕಟ್ಟಿ ಹಾಡಿ ಜನರನ್ನು ಆಕರ್ಷಿಸುವ ಶಕ್ತಿ ಇವರದು. ಇವರಿಗೆ ಕೀರ್ತನ ಕಲೆ ದೈವದತ್ತವಾದುದು. ಅಂತೆಯೇ 'ಕೀರ್ತನಕೇಸರಿ' ಎಂಬ ಬಿರುದು ಇವರಿಗೆ ದಯಪಾಲಿಸಿದವರು ಆಗಿನ ಮೈಸೂರು ಮಹಾರಾಜರಾದ ಶ್ರೀ ಕೃಷ್ಣರಾಜೇಂದ್ರ ಒಡೆಯರು. ತಮ್ಮ ಕೀರ್ತನೆಯ ಪ್ರತಿಭೆಯಿಂದ ಉಡುಪಿಯಲ್ಲಿ ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಮೆರವಣಿಗೆ ಮಾಡಿಸಿಕೊಂಡರು ಆಚಾರ್ಯರು.

ಜಯರಾಮಾಚಾರ್ಯರು ಲೋಂಡಾದಲ್ಲಿ ಸ್ಟೇಶನ್ ಮಾಸ್ತರರು. ಮಹಾತ್ಮಾ ಗಾಂಧಿಯವರು ಈ ಸ್ಟೇಶನ್ ಮಾರ್ಗವಾಗಿ ಪ್ರಯಾಣ ಬೆಳೆಸಿದ್ದರು. ಆಚಾರ್ಯರಿಗೆ ಬಾಪೂಜಿಯವರ ಪ್ರಥಮ ದರ್ಶನ ಇದು. ಗಾಂಧೀಜಿಯವರನ್ನು ಸ್ವಾಗತಿಸಿ ಹಾರ ಹಾಕಿ ಗೌರವಿಸಿದರು. ಇದು ಅಪರಾಧವೆನಿಸಿ, ಕೆಲಸದಿಂದ ತೆಗೆದರು. ಆಚಾರ್ಯರು ರಾಷ್ಟ್ರದ ಕೆಲಸಕ್ಕೆ ಅಣಿಯಾದರು. ಅಸಹಕಾರ ಆಂದೋಲನದಲ್ಲಿ ಪರದೇಶಿ ವಸ್ತುಗಳ ಬಹಿಷ್ಕಾರ, ಹರಿಜನೋದ್ಧಾರ ಈ ಚಟುವಟಿಕೆಗಳಿಗಾಗಿ ಜನಜಾಗೃತಿಗೊಳಿಸುವ ಕಾರ್ಯ ಕೈಗೊಂಡರು; ಕೀರ್ತನೆ ಮಾಡಲುದ್ಯುಕ್ತರಾದರು. ಕೀರ್ತನದ ಕಥೆ ಪುರಾಣಕ್ಕೆ ಸಂಬಂಧಿಸಿದ್ದು. ಕಥೆಯ ವಸ್ತುವಿವರಣೆ, ಕಥೆಗೆ ಕೊಡುವ ರೂಪ ಜನತೆಯಲ್ಲಿ ಹುದುಗಿದ್ದ ರಾಷ್ಟ್ರಾಭಿಮಾನವನ್ನು ಜಾಗೃತಗೊಳಿಸುವಂತಹವು. ಪುರಾಣವೀರರಿಗೂ ರಾಷ್ಟ್ರೀಯ ವೀರರಿಗೂ ಹೋಲಿಸಿ ಚಮತ್ಕಾರಿಕ ತಂತ್ರ ಬಳಸಿ ಕಲಿತನಕ್ಕೆ ಪುಟಕೊಡುವ ಶೈಲಿ ; ಸ್ಫೂರ್ತಿ ಉಕ್ಕೇರಿಸುವ ಭಾಷೆ. ಕೀರ್ತನದ ಮುಖಾಂತರ ಅಸಹಕಾರ ಚಳವಳಿಗೆ ಜನರನ್ನು ಸಿದ್ಧಗೊಳಿಸಹತ್ತಿದರು. ಪರದೇಶೀ ಬಟ್ಟೆಗಳ ದಹನ ಪ್ರಾರಂಭಿಸಿದರು ; ಸೆರೆಯಾಳಾದರು. ಸುಮಾರು ಏಳು ತಿಂಗಳು ಕಾಲ ಹಿಂಡಲಗಿ ಸೆರೆಮನೆಯಲ್ಲಿ ಕಳೆದರು.

ಜಯರಾಮಾಚಾರ್ಯರ ಕೀರ್ತನದ ವೈಖರಿ, ಅವರಲ್ಲಿಯ ಜನಾಕರ್ಷಣೆಯ ಶಕ್ತಿಯನ್ನು ತನ್ನ ಜಹಗೀರಿನಲ್ಲಿ ಶಿಕ್ಷಣ ಪ್ರಸಾರಕ್ಕೆ ಉಪಯೋಗಿಸಿಕೊಳ್ಳಲು ಯೋಚಿಸಿದನು ನವಾಬ್ ಸಾಲಾರ್ ಜಂಗ. ಆಗ್ಗೆ ಕೊಪ್ಪಳ ಜಿಲ್ಲೆಯ ತಳಕಲ್ಲ ಗ್ರಾಮದಲ್ಲೇ ವಾಸವಾಗಿದ್ದರು ಆಚಾರ್ಯರು. ಸಾಲಾರ್ ಜಂಗನ ಆಹ್ವಾನ ಸ್ವೀಕರಿಸಿ ಹಳ್ಳಿಹಳ್ಳಿಗಳಲ್ಲಿ ಶಿಕ್ಷಣಪ್ರಸಾರ ಪ್ರಾರಂಭಿಸಿದರು. ಅನೇಕ ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆಯಿಸಿದರು. ಇದರಿಂದ ಇವರನ್ನು ತನ್ನ ಜಹಗೀರಿನಲ್ಲಿ ಶಿಕ್ಷಣಾಧಿಕಾರಿ ಸ್ಥಾನಕ್ಕೇರಿಸಿದನು ನವಾಬ್ ಸಾಲಾರ್ ಜಂಗ. ಶಿಕ್ಷಣಾಧಿಕಾರಿಯಾದರೂ ಜನರಲ್ಲಿ ರಾಷ್ಟ್ರಾಭಿಮಾನ ಹುಟ್ಟಿಸುವ ಕಾರ್ಯವನ್ನು ನಿಲ್ಲಿಸಲಿಲ್ಲ. ಸರಕಾರೀ ಅಧಿಕಾರಿಗಳು ಇವರ ಬಗ್ಗೆ ದೂರಿಕೊಂಡರೂ ನವಾಬರು ಯಾರನ್ನೂ ಗಮನಿಸಲಿಲ್ಲ.

ನಿಜಾಂ ಕರ್ನಾಟಕ ಪರಿಷತ್ತಿನ ಅಧಿವೇಶನ ಯಾದಗಿರಿಯಲ್ಲಿ ನಡೆಯಿತು. ಆಚಾರ್ಯರು ಇದರಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಇದು ಜಹಗೀರ ಅಧಿಕಾರಿಗಳಿಗೆ ಸಹನೆಯಾಗಲಿಲ್ಲ. ನವಾಬ್ ಸಾಲಾರ್ ಜಂಗರಲ್ಲಿ ಇವರ ಬಗ್ಗೆ ಬಲವತ್ತರವಾಗಿ ದೂರಿ ರಾಜಕೀಯ ಆಂದೋಲನದ ಆರೋಪ ಹೊರಿಸಿದರು. ನವಾಬರು ಆಗ ಇವರನ್ನು ನೌಕರಿಯಿಂದ ಮುಕ್ತಗೊಳಿಸಿದರು. ಪರೆ ಬಿಚ್ಚಿದ ಹಾವಾಗಿ ಸಂಸ್ಥಾನ ಕಾಂಗ್ರೆಸ್ಸಿನ ಸಂಘಟನೆಯ ಕಾರ್ಯವನ್ನು ಕೈಕೊಂಡರು. 1948ರಲ್ಲಿ ಹೈದ್ರಾಬಾದಿನ ಮೇಲೆ ಪೋಲಿಸ್ ಕ್ರಮದನಂತರ ತಮ್ಮ ರಾಜಕೀಯ ಕಾರ್ಯಗಳಿಂದ ನಿವೃತ್ತರಾದರೆಂದೇ ಹೇಳಬೇಕು.

ಕೀರ್ತನಮಾಡುವಲ್ಲಿ ನಿಪುಣರಾಗಿದ್ದಷ್ಟೇ ರಸಿಕರೂ ಆಗಿದ್ದರು. ಇವರ ಸಂಭಾಷಣೆ

ಯಲ್ಲಿ ಹಾಸ್ಯ ಚಿಮ್ಮಿಬರುತ್ತಿತ್ತು. ಔದಾರ್ಯ, ನಿಸ್ಸ್ವಾರ್ಥತೆ ಇವರಲ್ಲಿಯ ವಿಶಿಷ್ಟ ಗುಣಗಳಾಗಿದ್ದವು. ತಮಗೆ ಬಹುಮಾನವಾಗಿ ಬಂದ ಅನೇಕ ಜರತಾರಿ ಶಾಲುಗಳನ್ನು ಬೇಡಿದವರಿಗೆ ಉದಾರವಾಗಿ ದಾನ ಮಾಡಿದ್ದುಂಟು.

ಶ್ರೀಮದುತ್ತರಾದಿಮಠದ ಶ್ರೀ ಸತ್ಯಧ್ಯಾನತೀರ್ಥಸ್ವಾಮಿಗಳವರ ಸನ್ನಿಧಾನದಲ್ಲಿ ಇವರ ಕೀರ್ತನೆ ನಡೆಯಿತು, ಸಮಯಸ್ಫೂರ್ತಿಯಿಂದ ಕಾವ್ಯಮಯ ಶ್ಲೋಕಗಳನ್ನು ಆಗಲೇ ರಚಿಸಿ ಹನುಮ, ಭೀಮ, ಮಧ್ವರನ್ನು ಹೃದಯಂಗಮವಾಗಿ, ಸುಂದರವಾಗಿ ವರ್ಣಿಸಿದರು. ಸ್ವಾಮಿಗಳು ಇವರ ಕೀರ್ತನೆಗೆ ಮೆಚ್ಚಿ 'ಕೀರ್ತನಶಿರೋಮಣಿ' ಎಂಬ ಬಿರುದು ಮತ್ತು ಜರತಾರಿ ಶಾಲನ್ನು ದಯಪಾಲಿಸಿ ಸತ್ಕರಿಸಿದರು.

ಸ್ಫೂರ್ತಿಯಿಂದ ಬಂದ ಹಾಡು, ಶ್ಲೋಕಗಳನ್ನು ಬರೆದಿಡುವ ಗೋಜಿಗೆ ಅವರು ಹೋಗಲಿಲ್ಲ. ಹೀಗಾಗಿ ಅವರ ಲಿಖಿತ ಸಾಹಿತ್ಯ ಲಭ್ಯವಿಲ್ಲದಾಗಿದೆ. ಕೀರ್ತನೆಯಲ್ಲಿ ಹೆಸರುಪಡೆದಂತೆ ಹಳ್ಳಿಗಳಲ್ಲಿ ದೇವೀಪುರಾಣ, ಬಸವಪುರಾಣ ಮುಂತಾದವುಗಳನ್ನು ಹೇಳಿ ಪ್ರವಚನಮಾಡಿ ಹಳ್ಳಿಗರ ಪ್ರೀತ್ಯಾದರಗಳನ್ನು ಪಡೆದುಕೊಂಡಿದ್ದರು.

ಬಹುಮುಖ ಪ್ರತಿಭೆಯನ್ನು ದೈವದತ್ತವಾಗಿ ಪಡೆದ ಜಯರಾಮಾಚಾರ್ಯರು ವೈದಿಕ ಸಂಪ್ರದಾಯದ ಗುಂಡಾಚಾರ್ಯ ಮತ್ತು ಕೃಷ್ಣಾಬಾಯಿಯವರ ಪುತ್ರರು. ಇವರ ಜನನ 1885ರಲ್ಲಿ. ಸ್ಥಳ ಕೊಪ್ಪಳ. ಜನರಲ್ಲಿ ರಾಷ್ಟ್ರೀಯಪ್ರಜ್ಞೆಯನ್ನುಂಟು ಮಾಡಲು ಕರ್ನಾಟಕದ ಮೂಲೆಮೂಲೆಗಳಲ್ಲಿ ಸಂಚರಿಸಿ ಕೀರ್ತಿಶಾಲಿಯಾದರು.

ಕರ್ಪೂರ ಶ್ರೀನಿವಾಸರಾಯರು, ಮುದವೀಡು ಕೃಷ್ಣರಾಯರು, ಮೊಹರೆ ಹನುಮಂತರಾಯರು ಆಚಾರ್ಯರ ನಿಕಟವರ್ತಿಗಳಾಗಿದ್ದರು. ಆಚಾರ್ಯರು 1955 ಜನವರಿ 14ನೇ ದಿನ ಕೀರ್ತಿಶೇಷರಾದರು.

**ಅಡವ್ಯಾಚಾರ್ಯ ವಾಡಪ್ಪಿ**
(ನಿವೃತ್ತ ಅಧ್ಯಾಪಕ, ಮುಖ್ಯರಸ್ತೆ, ಕುಷ್ಟಗಿ)
('ಕಾಂತಿ' ಪತ್ರಿಕೆಯ ಕೃಪೆ)

ಹೈ.ರಾ. 24

## ಸದಾಶಿವರಾವ್ ದೇಸಾಯಿ ಬಿನ್ನಾಳ

ಜನನ : 1924 ಉದ್ಯೋಗ : ? ವಿಳಾಸ : ಮಂಡಲಗೇರಿ, ತಾ॥ ಕೊಪ್ಪಳ

---

ನನ್ನ ಪ್ರಾಥಮಿಕ ಶಿಕ್ಷಣ 3ರಿಂದ 7ನೆಯ ಇಯತ್ತೆವರೆಗೆ ಕುಕನೂರು ವಿದ್ಯಾನಂದಗುರುಕುಲ ರಾಷ್ಟ್ರೀಯಶಾಲೆಯಲ್ಲಾಯಿತು. ಅಲ್ಲಿ ಆರ್. ಬಿ. ದೇಸಾಯಿ ಹೆಡ್ಮಾಸ್ತರರಿದ್ದರು ;



ಅವರ ತಮ್ಮ (ಕಕ್ಕನ ಮಗ) ಹುತಾತ್ಮ ಭೀಮಸೇನ ದೇಸಾಯಿ ಆಗ ಅಲ್ಲಿ ಶಿಕ್ಷಕರಾಗಿ ಇದ್ದರು. ದೈವಸಂಕಲ್ಪದಿಂದ ನಮ್ಮ ಅಕ್ಕನ ವಿವಾಹ ಕೂಡ ಭೀಮಸೇನ ದೇಸಾಯಿ ಅವರ ಜೊತೆ ಆಗಿತ್ತು. ಈ ಹಿನ್ನೆಲೆ ನನ್ನಲ್ಲಿ ರಾಷ್ಟ್ರೀಯ ಭಾವನೆಯ ಜಾಗೃತಿಗೆ ಕಾರಣವಾಯಿತು. 1942ರಲ್ಲಿ ಕೊಪ್ಪಳ ಹೈಸ್ಕೂಲಲ್ಲಿ ಇದ್ದಾಗ 'ಕ್ವಿಟ್ ಇಂಡಿಯಾ' ಚಳವಳಿಯಲ್ಲಿ ಪಾಲ್ಗೊಂಡ ಬಗ್ಗೆ ನನ್ನನ್ನು ಬಂಧಿಸಿ 2-3 ದಿನದನಂತರ ಬಿಟ್ಟರು. ಕೊಪ್ಪಳದಲ್ಲಿ ಆಗ ಗಜಾನನ ನಾಡ ಹಬ್ಬವನ್ನು ಆಚರಿಸುತ್ತಿದ್ದು ಸಿ. ಕೆ. ವೆಂಕಟರಾಮಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಹಾಗೂ 7-8 ಸಲ ಅ. ನ. ಕೃಷ್ಣರಾವ್ ಇವರು ನಮ್ಮಲ್ಲಿ ಬಂದು ಭಾಷಣಮಾಡಿ ಸ್ಫೂರ್ತಿ ತುಂಬಿದರು. ಆಗಿನ ತಾಲೂಕದಾರನು ನನ್ನ ಮೇಲೆ ಕಣ್ಣಿಟ್ಟು ಶಾಲೆಯಿಂದ ಹೊರಹಾಕಿಸಿ ತೊಂದರೆ ಕೊಟ್ಟನು.

1947ರಲ್ಲಿ ಸ್ವಾಮಿ ರಮಾನಂದ ತೀರ್ಥರ ಸೂಚನೆಯಂತೆ ಮಂಡಲಗೇರಿ ಗ್ರಾಮದಲ್ಲಿ ರಾಷ್ಟ್ರಧ್ವಜ ಹಾರಿಸಿ ಸತ್ಯಾಗ್ರಹ ಮಾಡಿದೆನು. ನಾಲ್ಕು ಲಾರಿ ಮಿಲಿಟರಿ ತಂದು ನನ್ನನ್ನು ಬಂಧಿಸಿದರು. ಆರು ತಿಂಗಳು ಕೊಪ್ಪಳ ಜೈಲಿನಲ್ಲಿ ಇಟ್ಟು ಮುಂದೆ ರಾಯಚೂರು, ಗುಲ್ಬರ್ಗ ಜೈಲಿನಲ್ಲಿ ಇಟ್ಟರು. ಆಗಲೇ 14-4-1948ಕ್ಕೆ ಲಾಠೀ ಚಾರ್ಜಿನಲ್ಲಿ ನನ್ನ ಮಾವ ಭೀಮಸೇನ ದೇಸಾಯಿ ಬೆಣಕಲ್ ಜೈಲಿನಲ್ಲಿ ತೀರಿಕೊಂಡರು. (ಇದರ ವಿವರ ಮುಂದೆ ಗುಲ್ಬರ್ಗ ಜಿಲ್ಲೆಯಲ್ಲಿ ಅನಿರುದ್ಧ ದೇಸಾಯಿ ಅವರ ಸ್ಮೃತಿಯಲ್ಲಿ ಬಂದಿದೆ. —ಸಂ||) 12-6-1948ರಂದು ಗುಲ್ಬರ್ಗ ಜೈಲಿನಿಂದ ಬಿಡುಗಡೆ ಆದೆ.

ಹೈ.ರಾ. 25

## ಶಿವಕುಮಾರಯ್ಯ ಅಯ್ಯಪ್ಪಯ್ಯ ಶಾಂತಗಿರಿ ಹಿರೇಮಠ

ಜನನ : 1913 ಉದ್ಯೋಗ : ಕೃಷಿ ವಿಳಾಸ : ಹಿರೇ ಅಳಗುಂಡಿ, ಅಂಚೆ : ಮುಶಿಗೇರಿ, ತಾ|| ರೋಣ

---

ನಮ್ಮ ಗ್ರಾಮ ಹಿರೇ ಅಳಗುಂಡಿಯು ಮೊದಲು ನಿಜಾಮುಹದ್ದಿನಲ್ಲಿ ಇದ್ದಿತು. ನಮ್ಮ ಗ್ರಾಮದ ತಾಲೂಕು ಯಲಬುರ್ಗಾ, ಜಿಲ್ಲೆ ಕೊಪ್ಪಳ. ನನಗೆ ಆವಾಗ್ಗೆ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಬೇಕೆಂಬ ಆಸೆಯು ಹುಟ್ಟಿತು. ಹೈದರಾಬಾದಿನಲ್ಲಿ



1348ನೇ ಫಸಲಿ (1938ನೇ ಇಸ್ವಿ) ಚಳವಳಿಯು ಪ್ರಾರಂಭ ವಾಯಿತು. ಆಗ್ಗೆ ನಾನು ಹೈದರಾಬಾದ-ಚಳವಳಿಯಲ್ಲಿ ಭಾಗವಹಿಸಬೇಕೆಂದು ಕೊಪ್ಪಳಕ್ಕೆ ಹೋದೆನು. ಅಲ್ಲಿ ಜನಾರ್ದನ ಸಾಹೇಬ ವಕೀಲ ಅವರನ್ನು ವಿಚಾರಿಸಿದೆನು. ಹೈದರಾಬಾದಿಗೆ ಹೋಗುವ ಸತ್ಯಾಗ್ರಹಿಗಳ ಏಜೆಂಟರು ಹಂಪೇಕರ ಮಾಸ್ತರರೆಂಬುವರು ಇರುತ್ತಾರೆಂದು ಹೇಳಿ ಅವರ ಭೇಟಿ ಮಾಡಿಸಿದರು. ಅವರು, "ನೀವು ಒಬ್ಬರೇ ಬೇಡ. ನಿಮ್ಮಲ್ಲಿಯ 4-5 ಜನರದೊಂದು ಗುಂಪು ಮಾಡಿಕೊಂಡು ಬರ್ರಿ. ನೀವು ಇಲ್ಲಿಯವರೆಗೆ ಬರುವ ಖರ್ಚು ನೀವೇ ನೋಡಿಕೊಳ್ಳಬೇಕು. ಇಲ್ಲಿಂದ ನಾವು ಹೈದರಾಬಾದಕ್ಕೆ ಕಳಿಸುವ ವ್ಯವಸ್ಥೆ ಮಾಡಿಸುತ್ತೇವೆ. ಹೈದರಾಬಾದಿನ ಕಾಂಗ್ರೆಸ್ ಸಂಸ್ಥೆಯಿಂದ ಹೆಚ್ಚಿನ ಖರ್ಚು ಕೊಡುವ ಏರ್ಪಾಟು ಆಗುತ್ತದೆ" ಎಂದು ಹೇಳಿದರು.

ಆ ಪ್ರಕಾರ ನಾನು ಮರಳಿ ಊರಿಗೆ ಬಂದು ಅಂದಾನಪ್ಪ ಮಲ್ಲೇಶಪ್ಪ ಶಾಂತ ಗಿರಿ, ವೀರಪ್ಪ ಕೂಡ್ಲಪ್ಪ ಇಟಗಿ, ಕರಬಸಪ್ಪ ಇಟಗಿ, ಅಂದಾನಪ್ಪ ಮಲ್ಲಪ್ಪ ಇಟಗಿ, ವಿರೂಪಾಕ್ಷಯ್ಯ ಗುರಯ್ಯ, ಹೀಗೆ ಗುಂಪು ಮಾಡಿಕೊಂಡು ಸೂಡಿಯ ಮೇಲೆ ಹಾಯ್ದು ಹೋಗುವಾಗ್ಗೆ ಸೂಡಿಯ ಜನರು ಮೋಜುಮಜಲುಗಳಿಂದ ಸತ್ಕರಿಸಿ ಚಹಾಪಾರ್ಟಿ ಮಾಡಿಸಿ ಮಂಗಳಾರತಿ ಮಾಡಿಸಿ ಬೀಳ್ಕೊಟ್ಟರು.

ಮರುದಿವಸ ಕೊಪ್ಪಳಕ್ಕೆ ಹೋಗಿ ತಲುಪಿದೆವು. ಅಲ್ಲಿ ಶ್ರೀ ಗವಿಸಿದ್ಧೇಶ್ವರ ಮಠದಲ್ಲಿ ನಿಂತು ಹಂಪೇಕರ ಮಾಸ್ತರರಿಗೆ ಹೇಳಿಕಳಿಸಿದೆವು. ಅವರು ಊರಲ್ಲಿಲ್ಲದ ಮೂಲಕ ಭೆಟ್ಟಿಯಾಗಲಿಲ್ಲ. ರಾತ್ರಿ ಜನಾರ್ದನರಾಯರ ಮನೆಗೆ ಹೋಗಿ ಅವರನ್ನು ಭೆಟ್ಟಿಯಾದೆನು. ಅವರು, "ನಿಮ್ಮ ಸುದ್ದಿಯನ್ನು ಸೂಡಿಯವರು ಪೇಪರಿನಲ್ಲಿ ಔಟ್ ಮಾಡಿರುತ್ತಾರೆ. ನೀವು ಇಲ್ಲಿಯೇ ಇದ್ದರೆ ನಿಮ್ಮನ್ನು ಹಿಡಿಯುತ್ತಾರೆ. ನೀವು ಹೊಸ ಪೇಟೆಗೆ ಹೋಗಿ, ಅಲ್ಲಿ ಖಾನಾವಳಿಯಲ್ಲಿ ಇರ್ರಿ. ಅವನು ಬಂದಮೇಲೆ ಕಳಿಸಿಕೊಡು ತ್ತೇನೆ. ನಿಮ್ಮ ಖಾನಾವಳಿಯ ಖರ್ಚು, ಉಳಿದ ಖರ್ಚು ಕಳಿಸುತ್ತೇನೆ" ಎಂದರು. ಮತ್ತು ನಮಗೆ 15 ರೂ.ಗಳನ್ನು ಕೊಟ್ಟರು. ರಾತ್ರಿಗಾಡಿಗೆ ನಾವು ಹೊಸಪೇಟೆಗೆ ಹೋದೆವು. ಅಲ್ಲಿ 7-8 ದಿನ ಹಾದಿ ನೋಡಿದರೂ ಯಾರೂ ಬರಲಿಲ್ಲ. ನಾನು ಮತ್ತೆ ರಾತ್ರಿ ಗಾಡಿಗೆ ಕೊಪ್ಪಳಕ್ಕೆ ಬಂದೆನು. "ಅವರು ಇಲ್ಲಿಯವರೆಗೂ ಪತ್ತೆ ಇಲ್ಲ. ನಿನಗೆ ಮರಳಿ ಬರುವ ಮತ್ತು ಖಾನಾವಳಿಯ ಖರ್ಚು ಸಹಿತ ಕೊಡುತ್ತೇವೆ." ಮರಳಿ ಬಂದು "ನೀವು ಇಲ್ಲಿಯೇ ಹೈದರಾಬಾದ್ ಕಾಂಗ್ರೆಸ್ಸಿನ ಶಾಖಾ ಕಾಂಗ್ರೆಸ್ ಕಮಿಟಿಯನ್ನು ಚೌ ಬಜಾರದ ಹತ್ತಿರ ಸ್ಥಾಪನೆ ಮಾಡಿರಿ. ನೀನು ಅಧ್ಯಕ್ಷನಾಗು. ನಾವು ಇವತ್ತಿನ ದಿವಸ ಹೈದರಾಬಾದ್ ಸ್ಟೇಟ್ ಶಾಖಾ ಕಾಂಗ್ರೆಸ್ ಕಮಿಟಿಯನ್ನು ಇಲ್ಲಿ ಸ್ಥಾಪನೆ

ಮಾಡಿರುತ್ತೇವೆ. ನನ್ನನ್ನು ಯಾರಾದರೂ ಹಿಡಿದರೆ, ಮತ್ತೆ ಯಾರಾದರೂ ಇದಕ್ಕೆ ಭಾಗಿಗಳಾಗಿ ಈ ಸಂಸ್ಥೆಯನ್ನು ಊರ್ಜಿತ ಸ್ಥಿತಿಗೆ ತರಬೇಕೆಂದು ನೀನು ಹೇಳು. ಹಿಂದಿನ ಬಳಗವು 'ಇದಕ್ಕೆ ಜಯವಾಗಲಿ, ಕಾಂಗ್ರೆಸ್ಸಿಗೆ ಜಯವಾಗಲಿ' ಅಂತ ಅನ್ನಿರಿ" ಎಂದು ಹೇಳಿ ನಮ್ಮ ಖರ್ಚಿನ ಬಾಬತ್ತು ಕೊಟ್ಟರು. ನಾನು ರಾತ್ರಿ ಗಿಣಿಗೇರಿ ಸ್ಟೇಶನಕ್ಕೆ ಹೋಗಿ, ಮರುದಿನ ಮುಂಜಾನೆ ಗಾಡಿಗೆ ಹೋಗಿ ಅವರನ್ನು ಕರೆದುಕೊಂಡು ಮಧ್ಯಾಹ್ನದ ಗಾಡಿಗೆ ಬಂದೆವು. ಸ್ಟೇಶನದಿಂದ ಶ್ರೀ ಗವಿಸಿದ್ಧೇಶ್ವರ ಮಠಕ್ಕೆ ಹೋಗಿ ಮುಖ ತೊಳೆದುಕೊಂಡು ಸ್ವಾಮಿಗಳ ದರ್ಶನ ಪಡೆದು ಬರಬೇಕೆಂದು ಹೋಗುವಾಗ್ಗೆ ಪೋಲಿಸರು ನಮ್ಮನ್ನು ಗುರ್ತು ಹಿಡಿದು, "ಯಹೀಂ ಜಾ ರಹಾ ಹೈ !" ಎಂದು ಅನ್ನುತ್ತಿದ್ದರು. ಆದರೆ ನಮ್ಮನ್ನು ಯಾರೂ ಮಾತಾಡಿಸಲಿಲ್ಲ. ನಾವು ಮಠಕ್ಕೆ ಹೋಗಿ ಮುಖ ತೊಳೆದುಕೊಂಡು ಸ್ವಾಮಿಗಳ ದರ್ಶನ ಪಡೆದುಕೊಂಡು ಮರಳಿ ಬರುವಾಗ್ಗೆ ಪೋಲಿಸ್, ಅಮಿಾನ ವ ಸರ್‌ಕಲ್ ಮತ್ತು 8–10 ಜನ ಪೋಲಿಸರು ನಮಗೆ ಎದುರು ಬಂದರು. ಅವರು ನಮ್ಮನ್ನು ನೋಡಿ, ನಮ್ಮನ್ನು ನಡುವೆ ಮಾಡಿಕೊಂಡು ಸುಮ್ಮನೆ ಬಂದರು. ನಾವು ಬಜಾರಕ್ಕೆ ಬಂದಮೇಲೆ ಹಿಂದೆ ವಕೀಲರು ಹೇಳಿದಂತೆ ಓದಿ ಹೇಳಿದೆನು. ಹಿಂದಿನವರು ಜಯಘೋಷ ಮಾಡಿದರು. ಅಲ್ಲಿ ನಮಗೆ "ಚುಪ್ ರಹೋ-ಚುಪ್ ರಹೋ" ಎಂದು ಅನ್ನುತ್ತಿದ್ದರು. ನಾವು ಜಯಘೋಷದೊಡನೆ ಮುನ್ಸಿಫ್ ಕೋರ್ಟಿನ ಮುಂದೆ ಹಾಯ್ದು ಅಮಿಾನ ಕಚೇರಿಗೆ ಹೋದೆವು. ನಮ್ಮ ಜವಾಬು ತೆಗೆದುಕೊಳ್ಳುವುದರೊಳಗೆ ರಾತ್ರಿ 9–10 ಘಂಟೆಯಾಗಿರಬಹುದು. ಅವರು ನಮ್ಮನ್ನು ಲಾಕಪ್ಪಿನಲ್ಲಿ ಹಾಕಿದರು. ನಮಗೆ ಊಟ, ತಿನಿಸು, ಏನೂ ಕೊಡಲಿಲ್ಲ. ಅಲ್ಲಿಂದ ಕೋರ್ಟಿಗೆ ಹಾಜರುಪಡಿಸಿದರು. "ನಮಗೆ ನಿನ್ನೆಯಿಂದ ಊಟ ಕೊಟ್ಟಿಲ್ಲ. ನಿಲ್ಲುವ ಶಕ್ತಿ ನಮಗೆ ಇಲ್ಲ" ಎಂದು ಹೇಳಿದೆವು. "ಕುಳಿತುಕೊಂಡು ಜವಾಬು ಕೊಡಿರಿ" ಎಂದು ಆಜ್ಞಾಪಿಸಿ, ನಮ್ಮನ್ನು ಕುಳ್ಳಿರಿಸಿ ಜವಾಬು ಕೇಳಿ ಬರೆದುಕೊಂಡು, ಅಲ್ಲಿಂದ, "ನಿಮಗೆ ಕಾಂಗ್ರೆಸ್ ಕಮಿಟಿ ಸ್ಥಾಪನೆ ಮಾಡಿದ್ದಕ್ಕೆ ಒಂದು ವರ್ಷ ಶಿಕ್ಷೆ, ಹತ್ತು ರೂಪಾಯಿ ಜುರುಮಾನೆ ; ಜುರುಮಾನೆ ತಪ್ಪಿದಲ್ಲಿ ಎರಡು ತಿಂಗಳ ಶಿಕ್ಷೆ, ಐದು ರೂಪಾಯಿ ಜುರುಮಾನೆ-ಹೀಗೆ ಮಾಡಿರುತ್ತೇವೆಂದು" ಕನ್ನಡದಲ್ಲಿ ಹೇಳಿದರು. "ನೀವು ವಕೀಲರನ್ನು ಕೊಟ್ಟು ನ್ಯಾಯವಿಚಾರಣೆ ಮಾಡಿಕೊಳ್ಳುವಿರೋ ಹೇಗೆ?" ಎಂದೂ ಕೇಳಿದರು. "ನ್ಯಾಯವಿಚಾರಣೆ ನಮಗೆ ಬೇಡ. ಈಗ ನೀವು ಎರಡು ಕಲಮು ಹಚ್ಚಿ ಶಿಕ್ಷೆ ವಿಧಿಸುವಿರಿ. ನಾನೊಬ್ಬನೇ ಎರಡೂ ಕಲಮಿಗೆ ಬಾಧ್ಯಸ್ಥನು. ಜಯಘೋಷ ಮಾಡಿದ ಕಲಮಿಗೆ ಉಳಿದವರು ಬಾಧ್ಯಸ್ಥರೆಂದು" ಹೇಳಿದರೆ, "ಜಾವ್ ಜಾವ್" ಎಂದು ಹೇಳಿದರು. ಆವಾಗ್ಗೆ ಜನಾರ್ದನ ವಕೀಲ ಸಾಹೇಬರು ಚಹಾ ಫಳಾರ ಮಾಡಿಸಲಿಕ್ಕೆ ಮುನ್ಸೀಫರನ್ನು ವಿಚಾರಿಸಿದರು. ಅವರು ಅವರಿಗೆ ಪರವಾನಗಿ ಕೊಟ್ಟರು. ಅವರು ಸಾಕಷ್ಟು ಪುರೆ, ಉಂಡಿ ತರಿಸಿದರು. ನಂತರ ಜೈಲಿಗೆ ಕರೆದುಕೊಂಡು ಹೋಗಿ ನಮ್ಮ

ಕಾಲಿಗೆ ಕಬ್ಬಿಣದ ಕಡಗ ಹಾಕಿ, ಅವಕ್ಕೆ ಸರಪಳಿ ಜೋಡಿಸಿದ್ದು, ಆ ಸರಪಳಿಯನ್ನು ನಡುವಿಗೆ ಕಟ್ಟಿಕೊಂಡು 'ಜಣಕ್ ಜಣಕ್' ಎಂದು ನಡೆಯಬೇಕಾಯಿತು. ಎರಡು ಚೊಣ್ಣ, ಎರಡು ಅಂಗಿ, ಒಂದು ಹೊದ್ದುಕೊಳ್ಳುವುದು ಹಾಗೂ ಕಂಬಳಿ ಇವುಗಳನ್ನು ಕೊಟ್ಟರು. ಅಷ್ಟರಲ್ಲಿ ರಾತ್ರಿ 7-8 ಘಂಟೆಯಾಯಿತು ಮತ್ತು ಅಂದಿನ ದಿನವೂ ಉಪವಾಸವಿರಬೇಕಾಯಿತು. ಆ ದಿನ ತಾರೀಖು 30 ಧೈ–1348ನೇ ಫಸಲಿ. ಮರು ದಿನ ಬೀಸಲು ಹೇಳಿದರು. "ನಮಗೂ ಮನುಷ್ಯಜನ್ಮವಿದೆ. ನಾವು ಎರಡು ದಿವಸದಿಂದ ಉಪವಾಸವಿರುವುದು ನಿಮಗೆ ತಿಳಿಯಲೊಲ್ಲದೆ?" ಎಂದು ಕೇಳಿದಾಗ ಜೇಲರ್ ಸಾಹೇಬರು ಗುಣಗುಡುತ್ತಾ ಹೋದರು. ಅಂದಿನ ರಾತ್ರಿ ಊಟ ಮಾಡಿ ಆರಾಮದಿಂದ ಇದ್ದೆವು. ಮರುದಿನ ಬೀಸಲು ಹಚ್ಚಿದರು.

ಮುಂದೆ ಮುನ್ಸೀಫರ ಬಂಗಲೆಗೆ ಹೂವಿನ ಗಿಡಕ್ಕೆ ನೀರು ಹಾಕಲು ಹಚ್ಚಿದರು. ಅದು ಕೆಲವು ದಿವಸ ನಡೆದ ಮೇಲೆ ಕಾಲೊಳಗಿನ ಬೇಡಿಯು ಕಾಯ್ದು ಕಾಲಿಗೆ ತೆರೆಯಲು (ಗಾಯ ಆಗಲು) ಹಾದಿಯಲ್ಲಿ ಜಯಘೋಷ ಮಾಡಲು ಪ್ರಾರಂಭ ಮಾಡಿದೆವು. ಊರ ಮಧ್ಯದಲ್ಲಿ ಹಾಯ್ದು ಹೋಗುವುದಿತ್ತು. ಜನಸಂದಣಿ ಬಹಳ ಇದ್ದಲ್ಲಿ ಜಯಜಯಕಾರ ಮಾಡುತ್ತ ಸಾಗುತ್ತಿದ್ದೆವು. ಪೋಲಿಸರು ನಮ್ಮನ್ನು ಬೆದರಿಸುತ್ತಿದ್ದರು. ಅದಕ್ಕೆ ನಾವು ಅವರಿಗೆ ಹೀಗೆ ಮಾರುತ್ತರ ಕೊಡುತ್ತಿದ್ದೆವು: "ನಮ್ಮ ಕಾಲು ನೋವು ಬಹಳವಾಗಿದೆ. ನೋವನ್ನು ನಿವಾರಿಸಲು ದೇವರನ್ನು ನೆನೆಯುವುದು ಸಹಜ ಧರ್ಮ." "ನಿಮ್ಮ ದೇವರು ಅದೇ ಏನು?" ಎಂದು ಕೇಳುತ್ತಿದ್ದರು. "ಅದೇ ನಮ್ಮ ದೇವರು" ಎಂದು ಹೇಳುತ್ತಿದ್ದೆವು. ಮುಂದೆ ಕೆಲವು ದಿವಸಗಳಲ್ಲಿ ಅದನ್ನು ಬಿಡಿಸಿ ಜೈಲಿನಲ್ಲಿ ಹೆಂಡಿ ಎಳೆಯಲು ಹಚ್ಚಿದರು. ಅದು ಹಾಗೂ ಹೀಗೂ ನಡೆಯಿತು. ಜೈಲು ನೋಡಲು ಬಂದವರು ಕೊಟ್ಟ ವಂತಿಗೆ ಹಣ ಸುಮಾರು 300-400 ರೂ. ಕೈದಿ ಜನರಿಗೆ ಕೊಟ್ಟದ್ದು ಜೇಲರನ ಕಡೆಗೆ ಇತ್ತು. ಅದಕ್ಕೆ ಗಂಟುಬಿದ್ದು ನಿತ್ಯವೂ ಹುಗ್ಗಿ, ಸಜ್ಜಕಾ ಮಾಡಿಸಲು ಸುರು ಮಾಡಿಸಿದೆವು. ಆವಾಗ್ಗೆ ಜೇಲರ್ ಸಾಹೇಬರು ನಮ್ಮ ಕೂಡ ದ್ವೇಷ ಮಾಡಲು ಸುರುವು ಮಾಡಿದರು. ನಮ್ಮ ಜೊತೆಗೆ ಮಾತು ಸಹಿತ ಬಿಟ್ಟರು. ಹೀಗೆ ಕೆಲವು ದಿವಸ ನಡೆದಮೇಲೆ ಪಂಜಾಬ್ ಆರ್. ಎಸ್. ಪಕ್ಷದವರು (ಆರ್ಯಸಮಾಜದವರೆ? —ಸಂ||) ಬಹಳ ಜನ ಬರಹತ್ತಿದರು. ಆವಾಗ್ಗೆ ನಮ್ಮನ್ನೂ ಅವರನ್ನೂ ಪರಸ್ಪರ ಮಾತಾಡದಂತೆ ದೂರವಿಟ್ಟರು.

ಒಮ್ಮೆ ಸ್ನಾನಕ್ಕೆ ಎರಡೂ ಪಾರ್ಟಿ ಜನರನ್ನು ಒಮ್ಮೆಲೇ ಬಿಟ್ಟರು. ನಳದ ಹತ್ತಿರ ಅವರೂ ನಾವೂ ಮಾತನಾಡಲಾಗಿ ಜಮಾದಾರ್ ಬಂದು ನನ್ನನ್ನು ಬೈದ. ಅವನಿಗೂ ನನಗೂ ಸ್ವಲ್ಪ ಘರ್ಷಣೆಯಾಯಿತು. ನಾವು ಊಟ ಬಿಟ್ಟೆವು. ಮಧ್ಯಾಹ್ನ 5-6 ಘಂಟೆಯ ಸುಮಾರಕ್ಕೆ ಮುನ್ಸೀಫರು ಬಂದು ವಿಚಾರ ಮಾಡಿದರು. ಅವನನ್ನು ಜೈಲಿನಿಂದ ತೆಗೆದು ಕಳಿಸುವ ತನಕ ಊಟಮಾಡುವುದಿಲ್ಲ ಎಂದು ಹೇಳಿದೆವು.

ಎರಡು ದಿನದನಂತರ ಮುನ್ಸಿಫ್ ಸಾಹೇಬರು ಬಂದು ಜಮಾದಾರನನ್ನು ಈ ಜೈಲಿನಿಂದ ತೆಗೆದು "ಪಗಾರ ಒಂದು ರೂಪಾಯಿ ಕಡಿಮೆ ಮಾಡಿರುತ್ತದೆ" ಎಂದು ಹೇಳಿದರು.

ಅನಂತರ ಮತ್ತೊಬ್ಬ ಜಮಾದಾರ್ ಬಂದ. ಅವನು ಒಳ್ಳೆಯ ರೀತಿಯಿಂದ ನಮ್ಮ ಸಂಗಡ ನಡೆದುಕೊಳ್ಳಹತ್ತಿದ. ಕೆಲವು ದಿನಗಳು ಕಳೆದಮೇಲೆ ಜೈಲು ತುಂಬಿತು. ನಮ್ಮನ್ನು ಹೈದರಾಬಾದಕ್ಕೆ ಕರೆದುಕೊಂಡು ಹೋಗಿ ಸೆಂಟ್ರಲ್ ಜೈಲಿನಲ್ಲಿ ಹಾಕಿದರು. ಅಲ್ಲಿ ರಮಾನಂದ ತೀರ್ಥರೂ ಮತ್ತು ಕೆಲವು ವಕೀಲರೂ ಇದ್ದರು. ರಮಾನಂದ ತೀರ್ಥರು ನಮ್ಮನ್ನು ವಿಚಾರ ಮಾಡಿದರು. ನಾವು ಕೊಪ್ಪಳ ತಾಲೂಕಿನವರು, ಅಂತ ಹೇಳಿದೆವು. ಅವರು ಸಂತೋಷಪಟ್ಟರು. ಮುಂದೆ ಕೆಲವು ದಿವಸ ಕಳೆದಮೇಲೆ ರಮಾನಂದ ತೀರ್ಥರು ಹಾಗೂ ಅವರ ಸಂಗಡಿಗರನ್ನು ಬಿಡುಗಡೆ ಮಾಡುತ್ತೇವೆ ಅಂತಾ ಹೇಳಿದರು. ಅವರನ್ನು ಮಧ್ಯಾಹ್ನಕ್ಕೆ ಬಿಟ್ಟರು. ಆವತ್ತಿನ ತಾರೀಖು ಫ. 5-7-1349. ನಮ್ಮನ್ನು ರಾತ್ರಿಗಾಡಿಗೆ ಅಂದರೆ 9-10 ಘಂಟೆಯ ವೇಳೆಯಲ್ಲಿ ಮೋಟರದಲ್ಲಿ ಕುಳ್ಳಿರಿಸಿ ಸ್ಟೇಶನಕ್ಕೆ ತಂದರು. ಕೊಪ್ಪಳ ಟಿಕೇಟನ್ನು ಕೊಡಿಸಿ ಗಾಡಿಯಲ್ಲಿ ಕೂಡ್ರಿಸಿದರು. ದಾರಿಯಲ್ಲಿ ನಾವು ಒಂದು ದಿವಸ ಉಪವಾಸವಿದ್ದೆವು. ಮರುದಿನ ಮಧ್ಯಾಹ್ನ 3-4 ಘಂಟೆಯ ಸುಮಾರಿಗೆ ಕೊಪ್ಪಳಕ್ಕೆ ಬಂದೆವು. ಜನಾರ್ದನರಾವ್ ವಕೀಲರು ನಮ್ಮ ವ್ಯವಸ್ಥೆಮಾಡಿ ಎರಡು ದಿವಸ ನಮ್ಮನ್ನು ಇಟ್ಟುಕೊಂಡರು ಖಾನಾವಳಿ ಮತ್ತು ನಮ್ಮ ಉಳಿದ ಖರ್ಚು ಕೊಟ್ಟು, ಎರಡು ದಿವಸದಮೇಲೆ ನಮ್ಮ ಊರ ದಾರಿಯ ಖರ್ಚು ಕೊಟ್ಟು ಕಳಿಸಿದರು. ನಮ್ಮ ಊರಿಗೆ ಬಂದಮೇಲೆ ಕೊಪ್ಪಳದಿಂದ ಇಬ್ಬರು ಕುದುರೆಸವಾರ ಪೋಲಿಸರು ನಮ್ಮ ಗ್ರಾಮಕ್ಕೆ, ಅಂದರೆ ಹಿರೇಅಳಗುಂಡಿಗೆ, ಬಂದು ಪೋಲಿಸ್ ಪಾಟೀಲರಿಗೆ, "ಅವರು (ನಾವು) ಯಾವ ಊರಿಗಾದರೂ ಹೋದರೆ ನಮಗೆ ತಿಳಿಸಬೇಕು" ಅಂತಾ ಹೇಳಿದರು. ಇದು ನನಗೆ ತಿಳಿದಮೇಲೆ ನಾನು ಸುಮ್ಮಸುಮ್ಮನೆ ಒಂದು ಊರಿಗೆ ಅಂದರೆ ಇಂಗ್ರೇಜಿ ಗ್ರಾಮಕ್ಕೆ ಹೋಗುತ್ತಿದ್ದೆನು. ಅವರು ಬಂದು ತಕರಾರು ಮಾಡುತ್ತಿದ್ದರು. "ನಮ್ಮ ಕೆಲಸವಿದೆ; ನಾನು ಹೋಗುತ್ತೇನೆ" ಅಂತಾ ಹೇಳಿ ಹೋಗುತ್ತಿದ್ದೆನು. ಅವರು ನಿಜಾಮ್ ಹದ್ದಿನವರೆಗೆ ಬಂದು ಮರಳಿ ಹೋಗುತ್ತಿದ್ದರು. 1-2 ತಿಂಗಳಾದಮೇಲೆ ಅವರು ಮರಳಿ ಕೊಪ್ಪಳಕ್ಕೆ ಹೋಗುತ್ತಿದ್ದರು. 1947ನೆಯ ಇಸ್ವಿ ಅರ್ಥಾತ್ 1357ನೇ ಫಸಲಿ ಬಂತು. ಇಟಗಿ ದೇಸಾಯರ (ಮಲಸರ್ಜ ದೇಸಾಯರು) ಸಹಾಯದಿಂದ ಹನ್ನೆರಡು ಹಳ್ಳಿಗಳನ್ನು (ಅಂದರೆ ಇಟಗಿ, ಗುಳಗುಳಿ, ಹಿರೇಅಳಗುಂಡಿ, ಚಿಕ್ಕಅಳಗುಂಡಿ, ಶಾಂತಗಿರಿ, ಬೊಮ್ಮಸಾಗರ, ಗುಡ್ಡದ ಮಲ್ಲಾಪುರ, ಸರಜಾಪುರ, ಬಿಳಗೋಡ, ಹೊನ್ನಿಗನೂರ, ತಳ್ಳೀಹಾಳಮುಗುಳಿ, ಯರೇಕುರುಬನಹಾಳ) ಕೂಡಿಸಿಕೊಂಡು ಸ್ವಾತಂತ್ರ್ಯ ಸಾರಿದೆವು. ಈ ಹಳ್ಳಿಗಳ ಸುತ್ತ ಪೂರ್ತಿ ಇಂಡಿಯಾ ಹದ್ದು ಇತ್ತು. ಸುತ್ತಲಿನ ಗ್ರಾಮದಲ್ಲಿ ಅಂದರೆ ಇಂಡಿಯಾ ಗ್ರಾಮಗಳಲ್ಲಿ ಇಂಡಿಯಾ ಪೋಲಿಸ್ ಸಿಬ್ಬಂದಿ ಇತ್ತು. ಮತ್ತು ಆ ಹದ್ದಿನಲ್ಲಿ ನಿಜಾಮ್ ಹದ್ದಿನವರು ಹಾಯುವಂತೆ ಇದ್ದಿಲ್ಲ. ಹೀಗಾಗಿ

ಪೋಲಿಸ್ ಆ್ಯಕ್ಷನ್ ಆಗುವವರೆಗೂ ನಮಗೆ ಯಾವ ಸರಕಾರವೂ ಇಲ್ಲದಾಯಿತು. ಆವಾಗ್ಗೆ ನಮ್ಮಲ್ಲಿ ನಿಜಾಮ್ ಹದ್ದಿನೊಳಗಿದ್ದ ಲೀಡರ್ ರಮಾನಂದ ತೀರ್ಥರು, ಮೇಲುಕೋಟೆ ಮೊದಲಾದವರು ಬಂದು ಹೋಗುತ್ತಿದ್ದರು. ಬೀಡಪ್ಪನವರು, ಕೊಳೂರ ಮಲ್ಲಪ್ಪನವರೂ ಅಲ್ಲದೆ ಕೆಲವು ಜನರು ಬರುತ್ತಿದ್ದರು. ಅವರ ಹೆಸರು ನಮಗೆ ನೆನಪು ಇಲ್ಲ. ಆವಾಗ್ಗೆ ನಮ್ಮ ಹಳ್ಳಿ ಅತೀ ಸಣ್ಣದು. ಆ ವೇಳೆಯಲ್ಲಿ 30–35 ಜನರು ಲಮಾಣಿಗರು ಒಂದು ರಾತ್ರಿ ರಜಾಕಾರರಂತೆ ಮಾತನಾಡುತ್ತ, "ಜೈ ಮುರಹರಿ!" ಎಂದು ಊರು ಹೊಕ್ಕರು. ಕೈಗೆ ಸಿಕ್ಕವರನ್ನು ಹೊಡೆಯುವುದೊಂದೇ ಅವರ ಕೆಲಸವಾಗಿತ್ತು. ಆ ಹೊಡೆತದಲ್ಲಿ ಇಬ್ಬರು ಸಿಕ್ಕು ನುಗ್ಗಾಗಿ ಕೆಲದಿನಗಳಲ್ಲಿ ಮೃತ ರಾದರು. ಊರೊಳಗಿನ ಜನ ಕಿರಿಚಿಕೊಳ್ಳುವುದು, ಬಡಿದುಕೊಳ್ಳುವುದು ಸುರುವು ಆಯಿತು. ಆವಾಗ್ಗೆ ಊರ ಸಂರಕ್ಷಣೆಯ ಸಲುವಾಗಿ 40 ಜನ ಹೋಮ್‌ಗಾರ್ಡ್ಸ್ ಇದ್ದರು. ಬಂದವರು ರಜಾಕಾರರೆಂದೇ ಅಂಜಿ ಇವರು ಮಾಳಿಗೆ ಬಿಟ್ಟು ಇಳಿಯಲಿಲ್ಲ. ನಾನೊಬ್ಬನೇ ಧುಮಿಕಿದೆನು. ಅವರು ನನಗೆ ಒಂದು ಕಲ್ಲಿನೇಟು ಕೊಟ್ಟರು. ಆದರೂ ಕೇಳದೆ ಬಂದೂಕು ಹಾರಿಸುತ್ತಾ ಊರು ಬಿಡಿಸಿ ಒಂದು ಹೊಲ ಹೊರಗೆ ಹಾರುವುದ ರೊಳಗೆ ಚಿಕ್ಕಅಳಗುಂಡಿಯ ಜನರು ಬಾಯಿ ಕೇಳಿ ಕೇಕೆ ಹೊಡೆಯುತ್ತ ಬಂದರು. ಮತ್ತು ಮಾಳಿಗೆಯಿಂದ ನಮ್ಮ ಗ್ರಾಮದ ವ್ಹಾಲೆಂಟರ್ ಜನರೂ ಇಳಿದು ಬ್ಯಾಟ್ರಿ ಹಾಕುತ್ತ ಬಂದರು. ಇದನ್ನು ನೋಡಿ ಲಮಾಣಿ ಜನರು ಓಡಿಹೋದರು.

ಮುಂದೆ ಕೆಲವು ದಿನಗಳಲ್ಲಿ ಪೋಲಿಸ್ ಆಕ್ಷನ್ ಆಯಿತು. ಅದಕ್ಕೂ ಮೊದಲು 8–10 ತಿಂಗಳವರೆಗೆ ನಿಜಾಮರ ಹದ್ದಿನಲ್ಲಿದ್ದು ಅವರಿಗೆ ನಾವು ಮೂರು ವರ್ಷದ ಹಪ್ತೆ ವಗೈರೆ ಕೊಡದೇ ಇದ್ದೆವು. 1950ನೇ ಇಸ್ವಿಯಲ್ಲಿ ರೋಣ ತಾಲ್ಲೂಕಿನಲ್ಲಿ ಸೇರಿಸಿ ಕೊಂಡರು. ಹೀಗಾಗಿ ನಾವು ಈಗ ರೋಣ ತಾಲ್ಲೂಕಿನಲ್ಲಿ ಇರುತ್ತೇವೆ.

ಹೈ.ರಾ. 26

## ನಾಲ್ವಾಡ ಬಸಪ್ಪ

ಜನನ : 1920 ಉದ್ಯೋಗ : ? ವಿಳಾಸ : ಬಳ್ಳಾರಿ

ಕುಕನೂರಲ್ಲಿ ಹುಟ್ಟಿದ ನಾನು ನಮ್ಮ ತಂದೆ ಆ ಊರಲ್ಲಿ ಇಟ್ಟಿದ್ದ ಕಿರಾಣಿ ಅಂಗಡಿಗೆ ನೂಲು ಖರೀದಿಗೆಂದು ಆಗಾಗ ಹುಬ್ಬಳ್ಳಿಗೆ ಹೋಗುತ್ತಿದ್ದು, ಅಲ್ಲಿ ನಡೆದ ವೈಯಕ್ತಿಕ ಸತ್ಯಾಗ್ರಹದಿಂದ (1940-41) ಪ್ರಭಾವಿತನಾದೆ. 1942ರಲ್ಲಿ ಹುಬ್ಬಳ್ಳಿಯಲ್ಲಿ ಮೆರವಣಿಗೆ, ಗೋಳೀಬಾರು ಆಗಿ ನಾರಾಯಣ ಎಂಬ ಬಾಲಕ ಗುಂಡೇಟಿನಿಂದ ತೀರಿ ಕೊಳ್ಳಲು, ಆ ಮೆರವಣಿಗೆಯಲ್ಲಿದ್ದ ನನ್ನನ್ನೂ ಬಂಧಿಸಿ ಕೆಲವು ದಿನಗಳನಂತರ ಬಿಟ್ಟರು.



ಮುಂದೆ ಭಾರತ ಸ್ವತಂತ್ರ ಆದರೂ ಹೈದರಾಬಾದ್‌ನಲ್ಲಿ ಚಳವಳಿ ಸಾಗಿತು. ರಜಾಕಾರರ ಪುಂಡಾಟ ಹೆಚ್ಚಿತು. ಕುಕನೂರ ಬಳಿ ತಿನ್ನೂಪುರ ಎಂಬ ಧಾರವಾಡ ಜಿ|| ಊರಲ್ಲಿ ಒಂದು ಶಿಬಿರ ಸ್ಥಾಪಿಸಿ ಅಲ್ಲಿ ಕಾರ್ಯಕರ್ತರು ಕೂಡಿದರು. ಅಲ್ಲಿಂದ ವೃತ್ತಪತ್ರ, ಕರಪತ್ರ ತಂದು ನಮ್ಮ ಭಾಗದಲ್ಲಿ ಹಂಚಿ ಜನರಲ್ಲಿ ಧೈರ್ಯ ತುಂಬಲು ದುಡಿದೆ. ಕುಕನೂರ ಪೋಲಿಸ್ ಸ್ಟೇಶನ್ ಲೂಟಿ, ದಹನ ಆಗಲು 1947ರ ಡಿಸೆಂಬರ್‌ದಲ್ಲಿ ನನ್ನನ್ನೂ ನನ್ನ ಬಂಧು ಶಿವಪ್ಪನನ್ನೂ ನಾವೇ ಈ ಚಟುವಟಿಕೆಗೆ ಕಾರಣರೆಂದು ಬಂಧಿಸಿ ಕೊಪ್ಪಳ ಜೈಲಿಗೆ ಒಯ್ದರು. ಅಲ್ಲಿ ನಾಲ್ಕು ತಿಂಗಳು 5 ದಿನ ಇದ್ದೆ. ಅಲ್ಲಿಂದ ರಾಯಚೂರ್ ಜೈಲಿಗೆ ಸಾಗಿಸಿದರು. ಆಗ ನನ್ನನ್ನು ಲೀಡರ್ ಎಂದು ಭಾವಿಸಿ 'ಖತರ್‌ನಾಕ್' ಜನರ ಪಟ್ಟಿಯಲ್ಲಿ ಸೇರಿಸಿದರು. ತೀರ ಹಿಂಸೆ ಕೊಟ್ಟರು. ಎಡತೊಡೆಯ ಮೇಲೆ ಚಾಕುವಿನಿಂದ ಪೋಲಿಸರು ಗಾಯಮಾಡಿ ಅಸಹ್ಯ ಯಾತನೆ ಅನುಭವಿಸುವಂತೆ ಮಾಡಿದರು. ರಾ|| ಜಿ|| ಕಾಂಗ್ರೆಸ್ ಅಧ್ಯಕ್ಷ ಗುಡಿಹಾಳು ಹನುಮಂತರಾವ್ ಹಾಗೂ ವಕೀಲ ಗುರುರಾವ್ ದೇಸಾಯಿ ನನ್ನ ಚಿಕಿತ್ಸೆಗಾಗಿ ಎಷ್ಟು ಒತ್ತಾಯಮಾಡಿದರೂ ಚಿಕಿತ್ಸೆ ಮಾಡಲಿಲ್ಲ. ಕಡೆಗೆ 40 ಕೈದಿಗಳು ಈ ಬಗ್ಗೆ ಉಪವಾಸಮಾಡಿದರು. ಅವರನ್ನೆಲ್ಲ ಗುಲ್ಬರ್ಗ ಜೈಲಿಗೆ ಒಯ್ದರು. ನನ್ನನ್ನು ಆಸ್ಪತ್ರೆಗೆ ಒಯ್ದು ಗಾಯವನ್ನು ಇನ್ನಷ್ಟು ಕೊಯ್ದು ಇನ್ನೂ ಹೆಚ್ಚಿನ ಯಾತನೆಗೆ ಗುರಿಪಡಿಸಿದರು. ಅಲ್ಲಿಂದ ಗುಲ್ಬರ್ಗ ಜೈಲಿಗೆ ಒಯ್ದರು. ಹೀಗೆ ಒಟ್ಟು ಒಂಬತ್ತು ತಿಂಗಳು ಜೈಲಿನಲ್ಲಿ ಇದ್ದೆ. ಈ ಕಾಲದಲ್ಲಿ ನಮ್ಮ ಮನೆತನದ ಸರ್ವನಾಶವಾಯಿತು. 1949ರಲ್ಲಿ ಊರನ್ನೇ ಬಿಟ್ಟು ಬಳ್ಳಾರಿಗೆ ಬಂದೆ.

ಹೈ.ರಾ. 27

## ಡಾ|| ಸಿ. ಎಂ. ಚುರ್ಚಿಹಾಳಮಠ

ಜನನ : 1923 ಉದ್ಯೋಗ : ವೈದ್ಯ ವಿಳಾಸ : ಮುಂಡರಗಿ, ಜಿ|| ಧಾರವಾಡ

---

ನನ್ನ ಬಾಲ್ಯದ ದಿನಗಳಲ್ಲಿ ನಾನು ರೋಣ ತಾ||ನ ನರೇಗಲ್ಲಿನಲ್ಲಿ ಕಳೆದಿರಲು ಅಲ್ಲಿ ನನ್ನ ಧಾಡಸೀವೃತ್ತಿಯಿಂದಾಗಿ ನನ್ನ ಮಿತ್ರಮಂಡಳಿಯೊಂದು ಬೆಳೆಯಿತು. ಮುಂದೆ ವಿವಿಧ



ಸ್ವಾತಂತ್ರ್ಯ ಚಳವಳಿಗಳಲ್ಲಿ ನನ್ನ ಜೊತೆ ದುಡಿದವರು ಅನೇಕರಾದುದರಿಂದ ಅವರ ಹೆಸರುಗಳನ್ನು ಇಲ್ಲಿ ಹೇಳುವೆ: ಶಂಕರಪ್ಪಾ ಜೋಳದ, ಬಸವಣ್ಣೆಪ್ಪ ಲಕ್ಷ್ಮೇಶ್ವರ, ಈರಣ್ಣಾ ಬಳ್ಳಾರಿ, ಚಂದ್ರಶೇಖರಯ್ಯಾ ಸಂಗನಾಳಮಠ, ನಿಂಗಪ್ಪಾ ಈರಪ್ಪಾ, ಶಂಕರಯ್ಯಾ ಸಂಗನಾಳಮಠ, ರಾಮಣ್ಣಾ ಚಿನ್ನಿ, ವಿರುಪಾಕ್ಷಪ್ಪ ಕೊಟಗಿ, ಬಸಟ್ಟೆಪ್ಪಾ ಜಕ್ಕಲಿ, (ಈಗ ಕುಕನೂರಲ್ಲಿ ಡಾ|| ಆಗಿರುವ) ಕುಲಕರ್ಣಿ ಮುಂತಾದವರು. ಈ ಕಾಲದಲ್ಲಿ ರೋಣ ತಾ|| ಸಂಪೂರ್ಣವಾಗಿ ಗಾಂಧೀಜಿಯವರ ಪ್ರಭಾವಕ್ಕೆ ಒಳಪಟ್ಟಿತ್ತು. ಅಂದಾನೆಪ್ಪ ದೊಡ್ಡಮೇಟಿ, ಕಾಶೀನಾಥ ಶಾಸ್ತ್ರಿ ಹಾಗೂ ಅನೇಕ ನಿಷ್ಠಾವಂತ ಕಾಂಗ್ರೆಸ್ಸಿಗರ ಕರ್ಮಭೂಮಿ ಅದು ಆಗಾಗ್ಗೆ ಆಗುವ ಭಾಷಣ, ಮೆರವಣಿಗೆಗಳಲ್ಲಿ ನನ್ನ ಭಾಗವಿತ್ತು. ಮುಂದೆ ಬೆಳಗಾವಿಯಲ್ಲಿ ನಾನು ಆಯುರ್ವೇದ ವೈದ್ಯ ಶಿಕ್ಷಣ ಮುಗಿಸಿ ಅಲ್ಲಿಗೆ ಸಮೀಪದ ಸಂಬರಗಿ ಗ್ರಾಮದಲ್ಲಿ ಪ್ರ್ಯಾಕ್ಟಿಸ್ ಮಾಡುತ್ತಿದ್ದೆ. ಈ ಕಾಲದಲ್ಲಿ 'ಕ್ವಿಟ್ ಇಂಡಿಯಾ' ಚಳವಳಿ ನಡೆದಾಗ, ಚಳವಳಿಯ ಕಾರ್ಯಕರ್ತರಿಗೆ ನಾನು ನೀಡುತ್ತಿದ್ದ ಸಹಾಯಕ್ಕಾಗಿ ನನ್ನನ್ನು ಪೋಲಿಸ್ ಠಾಣೆಗೆ ಕರೆದು ಬೆದರಿಕೆ ಕೂಡ ಹಾಕಿದ್ದರು. ಒಂದು ಸಲ ನಾನು ಹಿಂಡಲಗಿ ಜೈಲಿಗೆ ಹೋಗಿ ಅಲ್ಲಿ ಕಾಶೀನಾಥ ಶಾಸ್ತ್ರಿ, ಅಂದಾನೆಪ್ಪ ದೊಡ್ಡಮೇಟಿ ಮುಂತಾದ ನಾಯಕರನ್ನು ಭೇಟಿಯಾಗಿ ಬಂದಿದ್ದೆ. ಆಮೇಲೆ ನಾನೂ ಸಂಗನಾಳ ಮಠರೂ ವಿಚಾರಮಾಡಿ ಹೊರಗಡೆ ನಿಂತು ಏನಾದರೂ ಕೆಲಸಮಾಡಬೇಕೆಂದು ಇರಲು, ಈ ವಿಚಾರ ಪೋಲಿಸರಿಗೆ ತಿಳಿದು, ನಾನು ಮಧ್ಯರಾತ್ರಿಯೇ ಅಲ್ಲಿಂದ ತಪ್ಪಿಸಿಕೊಂಡು ನರೇಗಲ್ಲ ಸೇರಿ ಚಳವಳಿಯ ಚಟುವಟಿಕೆಗಳನ್ನು ಅಲ್ಲಿನ ನನ್ನ ಮಿತ್ರರ ಜೊತೆ ಸೇರಿ ಆರಂಭಿಸಿದೆ. ಒಂದು ದಿನ ಬೆಳಗ್ಗೆ 9-45ಕ್ಕೆ ನಮ್ಮ ಊರ ಚಾವಡಿಯ ಎದುರಿಗೆ ನಾನು ಸರಕಾರವಿರೋಧೀ ಭಾಷಣಮಾಡಿದೆ. ನಮ್ಮನ್ನು ಬಂಧಿಸಿ ಸ್ಟೇಶನ್ನಿಗೆ ಒಯ್ದರು. ಆದರೆ ನಮ್ಮ ತಂದೆಯವರು ತಮ್ಮ ಮಿತ್ರರೊಬ್ಬರ ನೆರವಿನಿಂದ ನನ್ನನ್ನು ಬಿಡಿಸಿಕೊಂಡು ಹೋದರು. ನನ್ನ ಸ್ನೇಹಿತ ಸಂಗನಾಳಮಠರಿಗೆ ಮಾತ್ರ ನಾಲ್ಕು ತಿಂಗಳು ಶಿಕ್ಷೆ ಆಯಿತು.

ಆದರೂ ನಮ್ಮ ಗುಂಪಿನ ಮಿತ್ರರು ಸಂಯುಕ್ತ ಕರ್ನಾಟಕ, ಲೋಕಮತ ಮೊದಲಾದ ಪತ್ರಿಕೆಗಳಲ್ಲಿ ಬರುವ ವಿಷಯಗಳನ್ನು ಜನರಿಗೆ ತಿಳಿಸಿಹೇಳಿ ಪ್ರಚಾರಮಾಡುತ್ತಿದ್ದೆವು. ಕಾಂಗ್ರೆಸ್ ಬುಲಿಟನ್ ಹಂಚುತ್ತಿದ್ದೆವು. ಮುಂದೆ ಸಂಗನಾಳಮಠರು ಜೈಲಿನಿಂದ ಬಿಡುಗಡೆಯಾಗಿ ಬರಲು ನಮ್ಮ ಉತ್ಸಾಹ ಇಮ್ಮಡಿಸಿ, ನಿಂಗಪ್ಪ, ಶಂಕರಯ್ಯ, ಶಂಕರಪ್ಪ ಜೋಳದ, ಚಂದ್ರಶೇಖರಯ್ಯ ಸಂಗನಾಳಮಠ ಮುಂತಾದವರು ಕೂಡಿಕೊಂಡು 50-60 ಜನರಿರುವ ಮೆರವಣಿಗೆ ತೆಗೆದೆವು. ಮೆರವಣಿಗೆ ಪೇಟೆಗೆ ಬರಲು

ಪೋಲಿಸರು ಕೆಲವರನ್ನು ಸೆರೆಹಿಡಿದರು. ನನ್ನ ಸಹಿತ ಕೆಲವರು ತಪ್ಪಿಸಿಕೊಂಡರು. ಬಂಧಿತರಾದ ನಿಂಗಪ್ಪ, ಶಂಕರಪ್ಪ, ಶಂಕರಯ್ಯ, ಚಂದ್ರಶೇಖರಯ್ಯ ಇವರಿಗೆ ಆರಾರು ತಿಂಗಳು ಶಿಕ್ಷೆ ಆಯಿತು; ಕೆಲವರಿಗೆ ದಂಡವಾಯಿತು.

ಅಲ್ಲಿಂದ ಬೆಳಗಾವಿಗೆ ಹೋಗಿ, ಅಲ್ಲಿ ಆಯುರ್ವೇದ ವಿದ್ಯಾರ್ಥಿಗಳಿಗೆ ಪ್ರಚೋದನೆ ನೀಡುವ ಹಾಗೂ ಭೂಗತ ಚಟುವಟಿಕೆಗಳಿಗಾಗಿ ಸ್ಫೋಟಕವಸ್ತುಗಳನ್ನು ತಯಾರಿಸುವ ಯತ್ನದಲ್ಲಿರುವಾಗಲೇ, ನಮ್ಮ ಚಟುವಟಿಕೆಗಳ ವಿಚಾರ ಪೋಲಿಸರಿಗೆ ತಿಳಿದು, ಕೆಲವರ ಬಂಧನ ಆಯಿತು. ಆಗ ನಾನು ಕೆಲದಿನಗಳನ್ನು ತಲೆತಪ್ಪಿಸಿ ಓಡಾಡಿ ಕಳೆದೆ. ಕಡೆಗೆ ಚಳವಳಿ ತಣ್ಣಗಾದಾಗ ಮುಂಡರಗಿಗೆ ಬಂದು ದವಾಖಾನೆ ತೆರೆದೆ. ಆ ಕಾಲದಲ್ಲಿ ದೇಶ ಸ್ವತಂತ್ರವಾಯಿತು. ಆದರೆ ಇದರ ಹಿಂದೆಯೇ ಮೈಸೂರಲ್ಲಿ ಸತ್ಯಾಗ್ರಹ ಆರಂಭ ಆಯಿತು. ನಮ್ಮ ಊರಿಂದ ವೀರಭದ್ರಯ್ಯ ಶೆಟ್ಟರ, ಸೂಗೀರಪ್ಪ ಶೀರಿ, ಹಾವಿನಾಳಪ್ಪ ಏಳುಕೊಳ್ಳಿ ಹಾಗೂ ಆಲೂರು ಪೇಠಾದಿಂದ ಷಣ್ಮುಖಪ್ಪಾ ನಾಗನೂರ (ಯರಾಶಿ), ಬಸಪ್ಪಾ ನೀರಲಗಿ, ಗೂಳಪ್ಪಾ ಹೂಗಾರ, ಹೀಗೆ ಏಳು ಜನ ಕೂಡಿ ರಾಣೆಬೆನ್ನೂರು ಶಿಬಿರ ಸೇರಿದೆವು. ಅಲ್ಲಿಂದ ನಾನು, ಹಾವಿನಾಳಪ್ಪ ಹಾಗೂ ವೀರಭದ್ರಯ್ಯ 22–9–1947 ರಂದು ದಾವಣಗೆರೆ ಕೋರ್ಟಿನ ಮುಂದೆ ಪಿಕೆಟಿಂಗ್ ನಡೆಸಿದೆವು. ನಮ್ಮ ಜೊತೆ ದಾವಣಗೆರೆಯ ತರುಣರೂ ಇದ್ದರು. ಅವರೆಂದರೆ, ಎಚ್. ನಾಗಪ್ಪ (ಈಗ ಹರಿಹರ ಕಿರ್ಲೋಸ್ಕರ ಕಂಪನಿ ನೌಕರ), ಪಿ. ರಾಮಕೃಷ್ಣ ಶೆಟ್ಟಿ, ಬಿ. ಜಿ. ಕೊಟ್ರಪ್ಪ, ಎಸ್. ಬಿ. ಗುರುದೇವ ನಿಶಾನಿಮಠ (ಇಬ್ಬರೂ ದಾವಣಗೆರೆಯಲ್ಲಿ ಈಗ ವಕೀಲರು), ಕೆ. ನಾರಪ್ಪ, ಎ. ಆರ್. ಶಿದ್ರಾಮಪ್ಪ, ಎನ್. ಬಿ. ಮುರುಗೇಂದ್ರಪ್ಪ ಶಾಸ್ತ್ರಿ, ಸಿ. ರಾಮಚಂದ್ರಪ್ಪ, ಡಿ. ಎನ್. ಅಡಿವೆಪ್ಪ, ಎಚ್. ಎಂ. ಕೊಟ್ರಯ್ಯ, ಇಟಗಿ ವೇದಮೂರ್ತಿ, ಎಲಿಗಾರ ಬಸಟ್ಟೆಪ್ಪ, ಬಾಳೆಹೊಲದ ಸಿದ್ದಪ್ಪ, ಕೋರಿ ವಿರೂಪಾಕ್ಷಪ್ಪ ಮೊದಲಾದವರೂ ಇದ್ದರು. ನಮ್ಮಲ್ಲಿ 13 ಜನರನ್ನು ಬಂಧಿಸಿ, ನಮ್ಮಗಳಿಗೆ ಆರು ತಿಂಗಳು ಶಿಕ್ಷೆ, 50 ರೂ. ದಂಡ ವನ್ನು ನ್ಯಾಯಾಲಯವು ವಿಧಿಸಿತು. ನಾವು ಸೆರೆಮನೆ ಸೇರಿದೆವು. ಒಂದೆರಡು ದಿನ ಗಳಲ್ಲಿ, ನನ್ನ ಜೊತೆ ನಮ್ಮ ಭಾಗದಿಂದ ಬಂದಿದ್ದ ವೀರಭದ್ರಯ್ಯ ಶೆಟ್ಟಿ, ಶೀರಿ ಸೂಗೀರಪ್ಪ ಹಾಗೂ ಏಳುಕೊಳ್ಳಿ ಇವರುಗಳೂ ಬಂಧಿತರಾಗಿ, ತಲಾ ಐದು ತಿಂಗಳ ಶಿಕ್ಷೆಗೆ ಒಳಗಾಗಿ ಬಂದರು. ಷಣ್ಮುಖಪ್ಪ ನಾಗನೂರವರ ತಂಡದವರನ್ನು ಹರಿಹರ ಮುಂತಾದ ಕಡೆ ಸತ್ಯಾಗ್ರಹಮಾಡಿ ಬಂಧಿತರಾದಾಗ ಅವರನ್ನು ಲಾರಿಯಲ್ಲಿ ತುಂಬಿ ದೂರಕ್ಕೆ ಒಯ್ದು ಬಿಟ್ಟಿರಲು, ಅವರು ಮತ್ತೆ ಆನೆಕೊಂಡಿಗೆ ಬಂದು ಸೆರೆ ಅಂಗಡಿ ಮುಂದೆ ಪಿಕೆಟಿಂಗ್ ಮಾಡಲು, ಅವರನ್ನೂ ಬಂಧಿಸಿ ಆರು ತಿಂಗಳ ಶಿಕ್ಷೆ ವಿಧಿಸಿದರು. ಇವರು ಬಂದ ಮರುದಿನವೇ, ಅಂದರೆ 15–10–1947ರಂದು ನಮ್ಮೆಲ್ಲರ ಬಿಡುಗಡೆ ಆಯಿತು. ದಾವಣಗೆರೆಯಲ್ಲಿ ನಮ್ಮನ್ನು ಬೀಳ್ಕೊಡುವ ಅಪೂರ್ವ ಸಮಾರಂಭ ಆಯಿತು.

ನಾವು ಊರಿಗೆ ಮರಳುವಷ್ಟರಲ್ಲಿಯೇ ನಮ್ಮ ಜಿಲ್ಲೆಯ ಗಡಿಭಾಗದಲ್ಲಿ ರಜಾಕಾರರ

ಹಾವಳಿ ಆರಂಭ ಆಗಿತ್ತು. ನೆರೆಯ ರಾಯಚೂರು ಜಿಲ್ಲೆಯ ಭಾಗದಲ್ಲಿ ಆಗಲೇ ಅನೇಕರು ಸತ್ಯಾಗ್ರಹಮಾಡಿ ಜೈಲು ಕಂಡಿದ್ದರು. ಕೊಪ್ಪಳದಲ್ಲಿ ಜನಾರ್ದನರಾವ್ ವಕೀಲ, ಲಕ್ಷ್ಮಣಾಚಾರ್ಯ, ಶಿರೂರ ವೀರಭದ್ರಪ್ಪ, ಹಂಪಿ ನರಸಿಂಗರಾವ್, ಕುಕನೂರಲ್ಲಿ ಇಟಗಿ ರಾಘವೇಂದ್ರರಾವ್, ಚೆನ್ನಪ್ಪ ಮೋಟೆಮ್ಮನವರ್, ರಾಮಚಂದ್ರ ದೇಶಪಾಂಡೆ, ಸದಾಶಿವರಾವ್ ದೇಸಾಯಿ, ಯಲಬುರ್ಗಿಯಲ್ಲಿ ರೇವಣಕೆ, ಶ್ರೀನಿವಾಸರಾವ್, ಕಿನ್ನಾಳ ದಲ್ಲಿ ಸಿದ್ದಪ್ಪ ಮಾಸ್ತರ, ಜಯರಾವ್ ದೇಸಾಯಿ, ಪ್ರಹ್ಲಾದಾಚಾರ್ಯ ಕುಷ್ಟಗಿ, ಬಿಂದಾಚಾರ್ಯ, ವೆಂಕಪ್ಪಾಚಾರ್ಯ ಮೊದಲಾದವರೂ, ಕಾತರಕಿಯಲ್ಲಿ ಶಂಕರಪ್ಪ ಬಂಗಾರಶೆಟ್ಟಿ ಮುಂತಾದವರೂ ಆಗಲೇ ಸತ್ಯಾಗ್ರಹ ಕೈಗೊಂಡು ಬಂಧಿತರಾಗಿದ್ದರು. ಅಲ್ಲದೆ ಸೆಪ್ಟಂಬರ್ 2ರಂದು ಹೈದರಾಬಾದ್ ದಿನಾಚರಣೆಯ ಅಂಗವಾಗಿ ಕೊಪ್ಪಳ ಕಿಲ್ಲೆಯ ಮೇಲೆ ಬಿಸನಳ್ಳಿಯ ಪಂಚಾಕ್ಷರಿ ಹಿರೇಮಠ ಹಾಗೂ ಮಿತ್ರರು ರಾಷ್ಟ್ರಧ್ವಜ ಹಾರಿಸಿದ್ದರು. ಇದೇ ರೀತಿ ಕುಕನೂರಲ್ಲಿ ಶಾಮರಾವ್ ದೇಸಾಯಿ ಮಹಾಮಾಯಿ ದೇವಸ್ಥಾನದ ಮೇಲೆ ಧ್ವಜ ಹಾರಿಸಿದರು. ಅಕ್ಟೋಬರ್ 2ಕ್ಕೆ 'ದಬ್ಬಾಳಿಕೆ ಪ್ರತಿಭಟನಾ ದಿನಾಚರಣೆ'ಯ ಅಂಗವಾಗಿ ಕವಲೂರಲ್ಲಿ ಸಾರ್ವಜನಿಕ ಸಭೆ ಕರೆದು ಚೆನ್ನಬಸವಗೌಡ್ರು, ಮಲ್ಲಬಸವಗೌಡ್ರು ಹಾಗೂ ಎಸ್. ದ್ಯಾಂಪುರ ಇವರು ಬಂಧಿತರಾಗಿದ್ದರು. ಅಲ್ಲದೆ ಹೈದರಾಬಾದಿನಲ್ಲಿ ಓದುತ್ತಿದ್ದ ಕನ್ನಡ ಜಿಲ್ಲೆಗಳ ವಿದ್ಯಾರ್ಥಿಗಳಾದ ಅಳವಂಡಿ ಶಿವಮೂರ್ತಿ ಸ್ವಾಮಿ, ಜಯತೀರ್ಥ ರಾಜಪುರೋಹಿತ, ರಾಘವೇಂದ್ರರಾವ್ ಕಲ್ಲೂರ, ಮಹಾಂತ ಲಿಂಗಯ್ಯ ಹಿರೇಮಠ, ಪ್ರಭುರಾಜ ಪಾಟೀಲ, ದೇವೇಂದ್ರಕುಮಾರ ಹಕಾರಿ, ಗೋಪಾಲ ಮಜುಂದಾರ ಮೊದಲಾದವರು ಕಾಲೇಜು ತ್ಯಜಿಸಿ ಆಗಲೇ ಚಳವಳಿಯಲ್ಲಿ ಧುಮುಕಿದ್ದರು. ಹೈದರಾಬಾದ್ ಕಾಂಗ್ರೆಸ್‌ನ ಕಾರ್ಯದರ್ಶಿಗಳಲ್ಲೊಬ್ಬರಾದ ಜೆ. ಕೆ. ಪ್ರಾಣೇಶಾ ಚಾರ್ಯರು ಪರಿಪತ್ರಗಳನ್ನು ಪ್ರಕಟಿಸುತ್ತಿದ್ದರು. ನನ್ನ ಮಿತ್ರರಾದ ಷಣ್ಮುಖಪ್ಪಾ ನಾಗನೂರ (ಆಲೂರ) ಅವರು ಈ ಬಗ್ಗೆ ಹೇಳಿದ ಸಂಗತಿಗಳನ್ನು ಇಲ್ಲಿ ಕೊಡುವೆ:

ನಾನು ಮೈಸೂರು ಚಳವಳಿ ಮುಗಿಸಿಕೊಂಡು ಮನೆಗೆ ಬಂದಾಗ ನನ್ನ ತಂದೆ ಯವರು ನನ್ನನ್ನು ಅಪ್ಪಿಕೊಂಡು "ನೀನು ಹೋದ ಕೆಲಸ ಮುಗಿಯಲಿಲ್ಲ. ಇನ್ನೂ ಹೈದರಾಬಾದ್ ಹೋರಾಟ ನಡೆದಿದೆ. ಅದನ್ನೊಂದು ಮುಗಿಸಿಕೊಂಡು ಯಶಸ್ವಿಯಾಗಿ ಮರಳಿ ಬಾ" ಎಂದರು. ಅವರ ಆಶೀರ್ವಚನ ಪಡೆದು ನಾನು ಯಲಬುರ್ಗಿ ತಾ|| ಬನ್ನಿಕೊಪ್ಪಕ್ಕೆ ಹೋದೆ. ನಾಯಕರಿಲ್ಲದೆ, ಆದರೆ ಉತ್ಸಾಹ ತುಂಬಿ ಇದ್ದ ಅಲ್ಲಿನ 25 ತರುಣರು ಚಳವಳಿಯಲ್ಲಿ ಧುಮುಕಲು ಪ್ರತಿಜ್ಞೆಗೈದರು. ಅವರ ನಾಯಕ ಶಂಕರಪ್ಪ ಯರಾಶಿ ಅವರ ಜೊತೆ ನಾನು ಕೊಪ್ಪಳಕ್ಕೆ ಹೋದೆ. ಅಲ್ಲಿ ಯಾವ ವಿಷಯವೂ ಇತ್ಯರ್ಥ ಆಗಲಿಲ್ಲ. ಗದಗಿಗೆ ಬರಲು ಅಲ್ಲಿ ಸಂಗನಾಳ ಅಯ್ಯನಗೌಡ ಮತ್ತು ಜನಾರ್ದನರಾವ್ ದೇಸಾಯಿ ಅವರ ಜೊತೆ ವಿಚಾರವಿನಿಮಯ ಮಾಡಿದೆವು. ಮುಂಜೆ ನನ್ನ ಮಿತ್ರ ಮುಂಡರಗಿಯ ಚನ್ನಬಸವಯ್ಯ ಚುರ್ಚಿಹಾಳಮಠ ಇವರು ಸಹಾಯ

ನೀಡಲು ಸಿದ್ಧರಾದರು. ಅನಂತರ ಬನ್ನಿಕೊಪ್ಪ, ತಳಕಲ್ಲುಗಳ ತರುಣರು ಹಳ್ಳಿಕೇರಿಯಲ್ಲಿ ಶಿಬಿರ ಸ್ಥಾಪಿಸಲು ನಿರ್ಧರಿಸಿ, ಅದರ ವೆಚ್ಚಕ್ಕಾಗಿ ಹೈದರಾಬಾದ್ ಸಂಸ್ಥಾನದ ಹಳ್ಳಿಯೊಂದರ ಮೇಲೆ ದಾಳಿಮಾಡಿ, ಅಲ್ಲಿದ್ದ ಪೋಲಿಸರನ್ನು ಕಟ್ಟಿಹಾಕಿ ಸರಕಾರೀ ಹಗೇವಿನಲ್ಲಿದ್ದ 80 ಚೀಲ ಲೆವಿ ಜೋಳವನ್ನು ಲೂಟಿಮಾಡಿ ಹಳ್ಳಿಕೇರಿಗೆ ಚಕ್ಕಡಿಗಳ ಮೂಲಕ ತಂದೆವು. ಮುಂದೆ ಹಳ್ಳಿಕೇರಿ ಶಿಬಿರದಿಂದ ಸಂಸ್ಥಾನದೊಳಗಿನ ಸರಕಾರದ ವಿರುದ್ಧ ಅನೇಕ ಬುಡಮೇಲು ಕೃತ್ಯಗಳನ್ನು ಮಾಡಿದೆವು. ಆಗ ನಮ್ಮ ಶಿಬಿರದಲ್ಲಿದ್ದ ಪ್ರಮುಖರೆಂದರೆ ಶಂಕ್ರಪ್ಪ ಯರಾಶಿ, ಶಂಕರಗೌಡ ತೆಗ್ಗಿನಮನಿ, ಕಾಳಪ್ಪ ಯರಾಶಿ, ಶೇಖರಯ್ಯ ಹಿರೇಮಠ, ಶಿದ್ದನಗೌಡ ಶಿವಪ್ಪಗೌಡ್ರ, ಲಿಂಗಯ್ಯ ಹಿರೇಮಠ, ಶಂಕರಗೌಡ ಹಿರೇಗೌಡ್ರು ತಳಕಲ್ಲ, ಭೀಮನಗೌಡ್ರ ಶಿವಪ್ಪಗೌಡ್ರ, ಹಾಲಪ್ಪ ಡಂಬಳ, ಲಿಂಗಬಸಪ್ಪ ನಾಗನೂರ ಆಲೂರ, ಮುದಿಯಪ್ಪ ತಳವಾರ, ಶಿವಪ್ಪ ಬೆಳಕೊಪ್ಪ, ಶರಣಪ್ಪ ಡಂಬಳ, ಕಾಳನಗೌಡ್ರ ಅಪ್ಪನಗೌಡ್ರು, ಎಲ್ಲಪ್ಪಾ ಕಿನ್ನಾಳ, ಎಲ್ಲಪ್ಪ ಕುರಡಗಿ, ಚನ್ನಪ್ಪ ನಡಮನಿ, ಮರಿಯಪ್ಪಾ ಮಾಳೇಕೊಪ್ಪ, ಬಸವರೆಡ್ಡಿ ಸೋಮಾಪುರ. ಎರಡು–ಮೂರು ತಿಂಗಳು ನಮ್ಮ ಕಾರ್ಯಕ್ರಮಗಳು ನಡೆದಿರಲು ಅಳವಂಡಿ ಇನಾಂದಾರ ಶಿವಮೂರ್ತಿಸ್ವಾಮಿಗಳು ಗದಗಿನಲ್ಲಿ ನನ್ನನ್ನು ಭೇಟಿಮಾಡಿದರು. ಅವರೊಂದಿಗೆ 15 ಜನರು ನಮ್ಮ ಜೊತೆ ಸೇರಿಕೊಂಡರು. ಕಡೆಗೆ ಮುಂಡರಗಿ ಶಿಬಿರವನ್ನು ಮುಖ್ಯವಾಗಿ ಇಟ್ಟುಕೊಂಡು, ಹಳ್ಳಿಕೇರಿಯದನ್ನು ಅದರ ಬ್ರ್ಯಾಂಚ್ ಅಂತ ಮಾಡಿ ಕಾರ್ಯಮಾಡಲು ಠರಾಯಿಸಿದೆವು.

ಇದು ಷಣ್ಮುಖಪ್ಪ ನಾಗನೂರರ ಹೇಳಿಕೆಯ ಮುಖ್ಯಾಂಶ. 1–4–1948ರಂದು ಕೊಪ್ಪಳದಲ್ಲಿ ಸಿದ್ದಾಪುರ ಅವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಮೂರು ಸಮಿತಿಗಳನ್ನು ರಚಿಸಿದ್ದೆವು. ಮುಂದೆ ಮುಂಡರಗಿಯಲ್ಲಿ ಇನ್ನೊಂದು ಸಭೆ ಕರೆದು ಸಮಿತಿಗಳಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದೆವು. ಮೊದಲನೆಯದಾಗಿ, ಸಹಾಯಕ ಸಮಿತಿಯಲ್ಲಿ ವೀರಭದ್ರಪ್ಪ ಕೊಪ್ಪಳ, ಶಿವಪ್ಪ ಭೂಮರೆಡ್ಡಿ, ನಾನು (ಚುರ್ಚಿಹಾಳಮಠ), ಕಲಕೇರಿಯ ಮುದುಕನಗೌಡ ಪಾಟೀಲ, ಮುಂಡರಗಿಯ ರಾಚೋಟೆಪ್ಪ ಕೊಪ್ಪಳ, ಹಾಗೂ ಆಲೂರ ಗುರುರಾಜಗೌಡ್ರು ಅಪರಂಜಿ ಮುಂತಾದವರು. ಈ ಸಮಿತಿಯವರು ಶಿಬಿರದ ಖರ್ಚಿಗೆ ಹಣ, ಧಾನ್ಯ ಮುಂತಾದ ಸೌಲಭ್ಯ ಒದಗಿಸಬೇಕು. ಅಲ್ಲದೆ ಶಿವಮೂರ್ತಿ ಸ್ವಾಮಿಗಳು ಅಳವಂಡಿ (ಅಧ್ಯಕ್ಷರು), ಎಂ. ವಿರೂಪಾಕ್ಷಪ್ಪ ಸಿಂದೋಳಿ (ಕಾರ್ಯದರ್ಶಿ), ಬಿ. ವಿರೂಪಾಕ್ಷಪ್ಪ ಬೆಟಗೇರಿ, ಫಕೀರರೆಡ್ಡಿ ಗದ್ದಿಕೇರಿ, ಅಂದಾನಪ್ಪ ಮ್ಯಾಗೇರಿ ವಕೀಲ ಹೀಗೆ ಐವರ ಸಂಚಾಲಕ ಸಮಿತಿ ನೇಮಿಸಿದೆವು. ದೇವೇಂದ್ರಕುಮಾರ ಹಕಾರಿಯವರು ಬಿ. ವಿರೂಪಾಕ್ಷಪ್ಪನವರಿಗೆ ಪತ್ರವ್ಯವಹಾರದ ಇಲಾಖೆಯಲ್ಲಿ ನೆರವಾಗುತ್ತಿದ್ದರು. ಪಂಚಾಕ್ಷರಿ ಹಿರೇಮಠ ಇವರನ್ನು ಮುಂಡರಗಿ–ಕೊಪ್ಪಳ ಇವುಗಳ ಸಹಾಯಕ ಸಂಚಾಲಕರೆಂದು ನೇಮಿಸಿದ್ದರು. ಅಲ್ಲದೆ ನಿರಾಶ್ರಿತರಾಗಿ ಬಂದ ಜನರ ನೆರವಿಗೆ ನಿರಾಶ್ರಿತರ ಸಹಾಯಕ ಸಮಿತಿಯನ್ನು ರಚಿಸಿದ್ದು ಶಿವಬಸಪ್ಪ ಕಣವಿ, ಸಾ|| ಹಾರೋಗೇರಿ ಇವರು ಅದರ

ಅಧ್ಯಕ್ಷರು. ಫೀಲ್ಡ್‌ವರ್ಕ್‌ನ ಮುಖ್ಯಸ್ಥರಾಗಿ ಪ್ರಭುರಾಜ ಪಾಟೀಲ ಮತ್ತು ಕರಿಸಿದ್ಧ ಸ್ವಾಮಿ ಇನಾಂದಾರ ಇವರುಗಳಿದ್ದು ಇವರ ಕೈಕೆಳಗೆ ಸೆಕ್ಷನ್ ಕಮಾಂಡರುಗಳಾಗಿ ಶಂಕರಪ್ಪ ಯರಾಶಿ, ಶಂಕರಗೌಡ ತೆಗ್ಗಿನಮನಿ, ಷಣ್ಮುಖಪ್ಪಾ ನಾಗನೂರ, ಶಿದ್ದನಗೌಡ ಶಿವಪ್ಪಗೌಡ್ರ ಹಾಗೂ ಭೀಮನಗೌಡ ಶಿವಪ್ಪಗೌಡ್ರ ಇವರಿದ್ದರು. ಅಲ್ಲದೆ ಬೇಕಾದಾಗ ಯಾವುದೇ ಕಾರ್ಯಮಾಡಲು ಒಂದು ಕಾದಿಟ್ಟಪಡೆಯಿದ್ದು ಅದರಲ್ಲಿ 100ಕ್ಕೂ ಹೆಚ್ಚು ಜನರಿದ್ದರು. ಅದರಲ್ಲಿ ಮುಖ್ಯರೆಂದರೆ ನಾನು, ಅಲ್ಲದೆ ಡಾ|| ಟಿ. ಎಂ. ಚುರ್ಚಿಹಾಳ ಮಠ, ಡಾ|| ಎಸ್. ಕೆ. ನರೇಗಲ್ಲಮಠ, ಫಂಟೋಸಾ ಮುಗಜಿ (ಇವರಿಗೆ ಬೆಳಗಟ್ಟಿ ಹತ್ಯಾಕಾಂಡದಲ್ಲಿ ಗುಂಡು ಬಡಿದಿತ್ತು), ಸೂಗೀರಪ್ಪಾ ಶೀರಿ, ವೀರಭದ್ರಯ್ಯಾ ಶೆಟ್ರ, ಹಾವಿನಾಳಪ್ಪಾ ಏಳುಕೊಳ್ಳಿ, ಚನ್ನಬಸಪ್ಪಾ ಕ್ಷೌರದ, ಕಾಳಪ್ಪಾ ಕಂಚಗಾರ, ಷಣ್ಮುಖಪ್ಪಾ ಕುಬ್ಸದ, ಅಂದಾನೆಪ್ಪಾ ಮುಗ್ಗಿ, ಪತ್ರಯ್ಯಾ ನರೇಗಲ್ಲಮಠ, ಶೀನಪ್ಪಾ ಅಪರಂಜಿ, ಕಲ್ಲನಗೌಡಾ ಪಾಟೀಲ, ಯಮನಪ್ಪಗೌಡ ಗೋದಿ, ಭರಮಪ್ಪಾ ಉಳ್ಳಾಗಡ್ಡಿ ಮತ್ತು ಶಂಕರಯ್ಯಾ ಗಂಧದ ಮುಂತಾದವರು. ಇದಲ್ಲದೆ 30–35 ಸ್ವಯಂಸೇವಕರು ದಾವಣಗೆರೆ–ಹರಿಹರ ಕಡೆಯಿಂದ ಬಂದಿದ್ದರು. ಧಾರವಾಡ, ಬಳ್ಳಾರಿ ಜಿಲ್ಲೆಯ ಅನೇಕ ಕಾರ್ಯಕರ್ತರು ಇಲ್ಲಿದ್ದರಲ್ಲದೆ ಚನ್ನಪ್ಪ ವಾಲಿ, ಮಹಾದೇವಪ್ಪ ಮುರಗೋಡ, ಆರ್. ವಿ. ಬಿಡಪ ಇವರೂ ಮುಂಡರಗಿ ಶಿಬಿರದಲ್ಲಿ ಕಾರ್ಯನಿರತರಾಗಿದ್ದರು. ಈ ಶಿಬಿರದ ಕಾರ್ಯಕರ್ತರು ಹೆಸರೂರ, ಬೆಳಗಟ್ಟಿ, ಬನ್ನಿಕೊಪ್ಪ, ಬೆಟಗೇರಿ, ಭಾನಾಪುರ, ಕುಕನೂರ, ಯಲಬುರ್ಗಿ, ಬನ್ನಿಕೊಪ್ಪ, ಕವಲೂರ, ಗುಡಿಗೇರಿ, ಆಳವಂಡಿ, ನಗರ, ಮುಂಡರಗಿ, ಗುಡ್ಡಾನೂರ ಮುಂತಾದ ಕಡೆ ಅನೇಕ ಸಾಹಸದ ಹಾಗೂ ಪ್ರತ್ಯಕ್ಷ ಘರ್ಷಣೆಯ ಪ್ರಸಂಗಗಳಲ್ಲಿ ವೀರಾವೇಶದಿಂದ ಕೆಲಸ ಮಾಡಿದರು. ಅಂದಿನ ಸಾಹಸದ ಒಂದೊಂದು ಘಟನೆಯನ್ನು ನೆನಸಿಕೊಂಡರೆ ಇಂದಿಗೂ ರೋಮಾಂಚನವಾಗುತ್ತದೆ. ಸಂಸ್ಥಾನದೊಳಗಿನ ನಿರಪರಾಧಿ ಜನರ ರಕ್ಷಣೆಗೆಂದೇ ನಾವು ಈ ರೀತಿ ಶಸ್ತ್ರಧಾರಿಗಳಾಗಿ ಹೋರಾಡಬೇಕಾಯಿತು. ಆಗ ಭಾರತ ಸರಕಾರದ ಅಧಿಕಾರಿಗಳ ಪೈಕಿ ತಹಸೀಲ್ದಾರರಾದ ಹೆಬಸೂರ, ಫೌಜ್‌ದಾರರಾದ ಹೊಂಗಲ ಮತ್ತು ಸಂಕೊಳ್ಳಿ ಹಾಗೂ ಹವಾಲ್ದಾರರಾದ ರಾಜಾರಾಮ ಜಾಧವ ಹಾಗೂ ಅನೇಕ ಪೋಲೀಸರು ನಮ್ಮೊಂದಿಗೆ ಈ ಎಲ್ಲ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಇವರೆಲ್ಲರೂ ನಮ್ಮ ಜೊತೆ ಸಹಕರಿಸುವಾಗ ನಮಗೆ ಹಾಕಿದ ಕರಾರೆಂದರೆ, ಅವರು ಬಳಸಿದ ಮದ್ದುಗುಂಡುಗಳನ್ನು ನಾವು ಅವರಿಗೆ ಒದಗಿಸುವುದು; ಸಂಸ್ಥಾನದೊಳಗೆ ಕಾರ್ಯಾಚರಣೆಯಲ್ಲಿ ಅವರು ಸತ್ತರೆ ಅವರುಗಳ ಹೆಣವನ್ನು ನಮ್ಮ ಹದ್ದಿನೊಳಗೆ ತಂದು ಹಾಕುವದು!

ಹೈ.ಕ. 1

## ಪ್ರೊ|| ವಿಠಲ (ಎಲಾಯ್ಸ್ ಭಾವುರಾವ್) ದೇವುಳ್ಗಾಂವ್ಕರ್

ಜನನ : 1917 ಉದ್ಯೋಗ : ನಿವೃತ್ತಜೀವನ ವಿಳಾಸ : ವಿಶ್ರಾಂ, ಎಸ್.ಬಿ. ಕಾಲೇಜು ರಸ್ತೆ, ಕಲ್ಬುರ್ಗಿ



ಕಲ್ಬುರ್ಗಿಯಲ್ಲಿ ಸಾಮಾಜಿಕ, ಶೈಕ್ಷಣಿಕ ಹಾಗೂ ರಾಜಕೀಯ, ಹೀಗೆ ಎಲ್ಲ ರೀತಿಯ ಚಟುವಟಿಕೆಗಳ ಕೇಂದ್ರವಾದ ಮನೆಯೊಂದರಲ್ಲಿ ನಾನು ಜನಿಸಿದೆ. ನನ್ನ ದೊಡ್ಡಪ್ಪ ವಿಠಲರಾವ್ ದೇವುಳ್ಗಾಂವ್ಕರರು ಕಲ್ಬುರ್ಗಿ (ಗುಲ್ಬರ್ಗ)ಯ ಗಣ್ಯ ವಕೀಲರಿದ್ದು, ತಮ್ಮ ವೃತ್ತಿಯನ್ನು ದೃಢಗೊಳಿಸುವುದರ ಜೊತೆಗೆ ಅವರು ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಗಳಲ್ಲೂ ಪಾಲುಗೊಳ್ಳುತ್ತಿದ್ದರು. ಅವರು ಲೋಕಮಾನ್ಯ ಟಿಳಕರ ಅನುಯಾಯಿಗಳು. ಆ ಕಾಲದ ಸಮಸ್ಯೆಗಳ ಚರ್ಚೆಗಾಗಿ ಒಂದು ಸಾಹಿತ್ಯಿಕ ಕೂಟವನ್ನು ಆರಂಭಿಸಿ ತಮ್ಮ ಸಹೋದ್ಯೋಗಿಗಳ ಜೊತೆ ವಾರಕ್ಕೊಮ್ಮೆ ಸೇರುತ್ತಿದ್ದರು. ನಿಜಾಂ ರಾಜ್ಯದಲ್ಲಿ ಆಗ ಯಾವ ರೀತಿಯ ಸ್ವಾತಂತ್ರ್ಯಗಳೂ ಇರಲಿಲ್ಲವೆಂದೂ ಎಲ್ಲೆಡೆ ದಬ್ಬಾಳಿಕೆಯದೇ ರಾಜ್ಯವಿತ್ತೆಂದೂ ಮುಸಲ್ಮಾನರು ಅಲ್ಪಸಂಖ್ಯಾತರಾಗಿದ್ದರೂ ಸರಕಾರಿ ನೌಕರಿಯಲ್ಲಿ ಶೇಕಡಾ 80 ನೌಕರಿಗಳು ಅವರಿಗೆ ಮೀಸಲಾಗಿದ್ದುವೆಂದೂ ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಉರ್ದುವಿಗೆ ಪ್ರೋತ್ಸಾಹ ನೀಡುವ ಭರದಲ್ಲಿ ಬಹುಜನರ ಮಾತೃಭಾಷೆಗಳಾಗಿದ್ದ ಕನ್ನಡ, ತೆಲುಗು, ಮರಾಠಿಗಳನ್ನು ಮೂಲೆಗುಂಪು ಮಾಡಿದ್ದರು. ಇಂಥ ಪರಿಸ್ಥಿತಿಯಲ್ಲಿ ನಮ್ಮ ದೊಡ್ಡಪ್ಪನವರು ಕಲ್ಬುರ್ಗಿಯ ನೂತನ ವಿದ್ಯಾಲಯವೆಂಬ ರಾಷ್ಟ್ರೀಯ ಶಾಲೆಯನ್ನು 1908ರಲ್ಲಿ ಆರಂಭಿಸಿ, ಅಲ್ಲಿನ ವಿದ್ಯಾರ್ಥಿಗಳಲ್ಲಿ ರಾಷ್ಟ್ರೀಯತೆ, ದೇಶಭಕ್ತಿ, ನಿಸ್ವಾರ್ಥಸೇವಾಭಾವ ಬೆಳೆಯುವಂತೆ ಶ್ರಮಿಸಿದರು. ಅದು ರಾಜದ್ರೋಹೀ ಚಟುವಟಿಕೆಗಳ ಕೇಂದ್ರವೆಂದು ಸರಕಾರ ಅದನ್ನು ಟೀಕಿಸಿದರೂ ಅವರು ಅದನ್ನು ಗಮನಿಸಲಿಲ್ಲ. ಈ ಕಾಲದಲ್ಲಿ ನಮ್ಮ ದೊಡ್ಡಪ್ಪನವರ ವಿನಾ ನಮ್ಮ ಊರ ಆರ್ಯ ಸಮಾಜದ ನಾಯಕರಾಗಿದ್ದ ಕೇಶವರಾವ್ ಕೋರಟ್‌ಕರ್ ಅವರು ನಮ್ಮ ಊರ ಇನ್ನೊಬ್ಬ ನಾಯಕರಾಗಿದ್ದರು. ಆದರೆ ಮುಂದೆ ಕಲ್ಬುರ್ಗಿ ತ್ಯಜಿಸಿ ಅವರು ಹೈದರಾಬಾದಿಗೆ ಹೋದರು.

ನಾನು ನೂತನ ವಿದ್ಯಾಲಯದಲ್ಲಿಯೇ ಪ್ರಾಥಮಿಕದಿಂದ ಎಸ್.ಎಸ್.ಎಲ್.ಸಿ. ವರೆಗಿನ ಶಿಕ್ಷಣ ಪಡೆದವನಾಗಿದ್ದು ಅಲ್ಲಿನ ಸಮರ್ಪಣಭಾವದ ಉತ್ಸಾಹೀ ಅಧ್ಯಾಪಕರ ಪ್ರಭಾವ ನನ್ನ ಮೇಲೆ ಆಗದೇ ಇರಲಿಲ್ಲ. ಹೀಗಾಗಿ ನಮ್ಮ ಮನೆ ಮತ್ತು ಶಾಲೆ, ಹೀಗೆ ಎರಡೂ ಕಡೆಯ ವಾತಾವರಣವೂ ನನಗೆ ದೇಶಭಕ್ತಿಭಾವದ ಬೆಳವಣಿಗೆಗೆ ಸಾಧಕವಾಗಿತ್ತು. ಆಗ ನಮ್ಮ ದೊಡ್ಡಪ್ಪ ವಿಠಲರಾಯರು ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನಗಳಿಗೆ ಹೋಗುತ್ತಿದ್ದು ಅಲ್ಲಿನ ಚರ್ಚೆಗಳಲ್ಲೂ ಪಾಲುಗೊಳ್ಳುತ್ತಿದ್ದರು. ಅವರು ಮರಾಠಿ, ಉರ್ದುಗಳೆರಡರಲ್ಲೂ ಪ್ರಭಾವೀ ವಕ್ತಾರರಾಗಿದ್ದರು. ಆಗ ನಡೆದ ಸ್ವದೇಶೀ ಪ್ರಚಾರದಿಂದ ('ಸ್ವದೇಶೀ' ಶಬ್ದದ ಅರ್ಥ ಅಷ್ಟೊಂದು ತಿಳಿಯದಿದ್ದರೂ) ನಾನು ಪ್ರಭಾವಿತನಾಗಿದ್ದೆ. ಸ್ವದೇಶೀ ಚಳವಳಿಯಲ್ಲಿ ಆಸ್ಥೆಯುಳ್ಳ ನನ್ನ ತಂದೆ ಪಾಂಡುರಂಗರಾವ್ ಹಾಗೂ ನನ್ನ ಅಣ್ಣಂದಿರ ಜೊತೆ ಸೊಲ್ಲಾಪುರದಲ್ಲಿ ಆದ ಮುಂಬಯಿ ರಾಜ್ಯ ರಾಜಕೀಯ ಪರಿಷತ್ತಿಗೆ ಹೋಗಿ ಲೋಕಮಾನ್ಯರ ದರ್ಶನ ಪಡೆದ ಮಬ್ಬು ನೆನಪು ನನಗೆ ಇದೆ. ಆದರೆ 1927ರಲ್ಲಿ ಗಾಂಧೀಜಿ, ಕಲ್ಬುರ್ಗಿಯಲ್ಲಿ ಆಗಿದ್ದ ಒಂದು ಜಾತೀಯ ದಂಗೆಯ ಅನಂತರ, ಒಮ್ಮೆ ಇಲ್ಲಿಗೆ ಬಂದರು. ಆಗ ನೂತನ ವಿದ್ಯಾಲಯದಲ್ಲಿ ಅವರು ಭಾಷಣಮಾಡಿದ್ದರು. ಮತ್ತು ಒಬ್ಬ ಬಾಲಸ್ವಯಂಸೇವಕನಾಗಿ ಕೆಲಸ ಮಾಡಿ ನಾನು ಅವರನ್ನು ತೀರ ಹತ್ತಿರದಿಂದ ಕಂಡೆ. ಭೋಗಮಲ್ ಹಿರಾಲಾಲ್ ಭಲಗತ್ ಎಂಬ ವ್ಯಾಪಾರಿಯ ಮನೆಯಲ್ಲಿ ಅವರು ಇಳಕೊಂಡಿದ್ದರು. ಮುಂದೆ 1929ರ ಏಪ್ರಿಲ್‌ನಲ್ಲಿ, ಮುಂಬೈಯಿಂದ ಮದ್ರಾಸಿಗೆ ರೈಲಿನಲ್ಲಿ ಹೊರಟ ಅವರನ್ನು ಕಲ್ಬುರ್ಗಿಯ ಪ್ಲಾಟ್‌ಫಾರ್ಮ್ ಮೇಲೆ ಕಂಡಿದ್ದೆ. ಈ ದರ್ಶನಗಳಿಂದ ಅವರ ಕಡೆ ಹೆಚ್ಚು ಹೆಚ್ಚು ಆಕರ್ಷಿತನಾದೆ. ಅವರ ಸಾದಾತನ, ಅವರ ಸೋದರಭಾವದ ಕಲ್ಪನೆ, ಬಡವರ ಹಾಗು ದಲಿತರ ಪಕ್ಷದ ಅವರ ನಿಷ್ಠೆಗಳು ನನ್ನನ್ನು ಇನ್ನಷ್ಟು ಅವರೆಡೆ ಸೆಳೆದವು. 1930ರ ದಾಂಡೀ ಯಾತ್ರೆಯ (ಆಗ ನಾನು IVನೆಯ ಫಾರ್ಮ್‌ನಲ್ಲಿದ್ದೆ) ಕಾಲಕ್ಕೆ ನಾನು ತೀರ ಪ್ರಭಾವಿತನಾದೆ; ಆಗಿನಿಂದಲೇ ಖಾದಿಯನ್ನೇ ತೊಡಲು ಆರಂಭಿಸಿದೆ. ಆಗ ನನ್ನ ವಾರ್ಷಿಕ ಪರೀಕ್ಷೆ ಮುಗಿದಿದ್ದು ಇದೇ ಕಾಲಕ್ಕೆ ನನ್ನ ಅಣ್ಣ ಬೇಸಿಗೆ ರಜೆಗಾಗಿ ಮನೆಗೆ ಬಂದಿದ್ದ. ಅವನೂ ಅವನ ಸ್ನೇಹಿತರೂ ಆಗಾಗ ಮನೆಯಲ್ಲಿ ಸೇರಿ ರಾಜಕೀಯ ವಿಚಾರಗಳ ಚರ್ಚೆ ನಡೆಸುತ್ತಿದ್ದರು. ಇಂಥ ರಾಷ್ಟ್ರೀಯ ಜಾಗೃತಿಯ ವಾತಾವರಣದಲ್ಲೇ 1931ರಲ್ಲಿ ಭಗತ್‌ಸಿಂಗರಿಗೆ ಫಾಶಿ ಆಗಲು, ಅಂದು ಹರತಾಳ ಆಚರಿಸಿದ ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬ. ಒಂದು ಪುಟ್ಟ ಕೋಣೆಯಲ್ಲಿ ಕೆಲವಿದ್ಯಾರ್ಥಿಗಳು ಸಭೆಸೇರಿ ಹುತಾತ್ಮರಿಗೆ ಶ್ರದ್ಧಾಂಜಲಿ ಅರ್ಪಿಸಿದೆವು. ಹೀಗೆ ನನ್ನ ಬಾಲ್ಯದ ಪರಿಸರ, ನಾನು ಬೆಳೆಯುತ್ತಿದ್ದಂತೆ ಮೂಡಿಬಂದ ರಾಜಕೀಯ ವಾತಾವರಣ ಇವೆಲ್ಲ ನನ್ನಲ್ಲಿ ದೇಶಭಕ್ತಿ, ಸೇವೆ ಹಾಗೂ ತ್ಯಾಗ ಭಾವನೆಗಳ ಜಾಗೃತಿಗೆ ಕಾರಣವಾದುವು.

ಮುಂದೆ ಹೈದರಾಬಾದಿನ ನಿಜಾಂ ಕಾಲೇಜನ್ನು ಸೇರಿದಾಗ ಅಲ್ಲಿನ ವಿಚಿತ್ರ

ಶ್ರೀಮಂತಿಕೆಯ ವಾತಾವರಣ ನನಗೆ ಉಸಿರುಗಟ್ಟಿಸುವಂತೆನಿಸಿತು. ಸರಕಾರೀ ನೌಕರರ ಸೃಷ್ಟಿಗೇ ಇದ್ದಂತಿದ್ದ ಆ ಸಂಸ್ಥೆಯಲ್ಲಿ ಒಂದು ರೀತಿಯ ಗುಲಾಮಗಿರಿಯನ್ನು ಪೋಷಿಸುವ, ಐರೋಪ್ಯರ ಅನುಕರಣೆಯ ವಾತಾವರಣವಿದ್ದು, ಅಲ್ಲಿ ನಾನು ಧೋತಿಯನ್ನು ಉಡುವುದು, ಅದರಲ್ಲೂ ಖಾದಿಯನ್ನು ತೊಡುವುದು, ಸಂಶಯದೃಷ್ಟಿಗೆ ಒಳಗಾಗಿತ್ತು. ಹೀಗಿದ್ದರೂ ಅಲ್ಲಿ ಕೆಲವು ಉತ್ಸಾಹೀ ರಾಜಕೀಯ ಕಾರ್ಯಕರ್ತರ ಸಂಪರ್ಕ ನನಗೆ ಬಂದಿತು. ಆ ಅವಧಿಯು ಸಂಸ್ಥಾನದಲ್ಲಿ ಹಂತಹಂತವಾಗಿ ರಾಜಕೀಯ ಜಾಗೃತಿ ಕಾಣಿಸಿಕೊಂಡ ಸಂದಿಗ್ಧ ಕಾಲ. ಜನರ ಸ್ವಾತಂತ್ರ್ಯಗಳ ದಮನವೇ ಇದಕ್ಕೆ ಕಾರಣ. ಹಿಂದು ಸಿವಿಲ್ ಲಿಬರ್ಟೀಸ್ ಯುನಿಯನ್ ಎಂಬ ಸಂಸ್ಥೆ ಸ್ಥಾಪನೆಗೊಂಡು ಸಂಸ್ಥಾನದಲ್ಲಿ ಜನಜಾಗೃತಿಗೆ ಶ್ರಮಿಸುತ್ತಿತ್ತು. ಆದರೆ ನಮಗೆ ಸತ್ವಶಾಲೀ ನಾಯಕರೊಬ್ಬರು ಇಲ್ಲವೆಂದು ಆಗ ನನಗೆ ಅನಿಸುತ್ತಿತ್ತು. ಅದೇ ಅಂದಿನ ಕೊರತೆ.

ಆದರೆ ಅದೇ ಕಾಲಕ್ಕೆ, ಅಂದರೆ 1937ರಲ್ಲಿ, ಒಬ್ಬ ಕ್ಷೀಣಕಾಯರಾದ ಸಂನ್ಯಾಸಿ ರಂಗದ ಮೇಲೆ ಕಾಣಿಸಿಕೊಂಡರು ಮತ್ತು ವಿದ್ಯಾರ್ಥಿಗಳು ಅವರ ವಿಚಾರಧಾರೆ ಹಾಗೂ ಸಮಸ್ಯೆಗಳ ಬಗೆಗಿನ ನಿಲುವಿನಿಂದ ತೀರ ಪ್ರಭಾವಿತರಾದರು. ಅವರ ಪ್ರಗತಿಪರ ಹಾಗೂ ರಾಷ್ಟ್ರೀಯ ದೃಷ್ಟಿಕೋನಗಳಿಗೆ ನಾನೂ ಮಾರುಹೋದೆ. ಅವರೇ ಸ್ವಾಮಿ ರಮಾನಂದ ತೀರ್ಥ. ಧಾರ್ಮಿಕ ಇಲ್ಲವೇ ಜಾತೀಯ ಆಧಾರದ ಯಾವುದೇ ಚಳವಳಿಯು ಸಮಸ್ಯೆಗಳಿಗೆ ಪರಿಹಾರ ಒದಗಿಸದೆಂದು ಅವರು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಟ್ಟರು. ಹೀಗಾಗಿ ಹೈದರಾಬಾದ್ ಸಂಸ್ಥಾನೀ ಕಾಂಗ್ರೆಸ್ಸನ್ನು ಸ್ಥಾಪಿಸುವ ತಮ್ಮ ಉದ್ದೇಶವನ್ನು ಅವರು ತಿಳಿಯಪಡಿಸಿದರು. ಆದರೆ ಈ ಸಂಸ್ಥೆ ಹುಟ್ಟುವ ಮೊದಲೇ ಅದು ಪ್ರತಿಬಂಧಿಸಲ್ಪಟ್ಟದರಿಂದ, ಈ ಪ್ರತಿಬಂಧದ ವಿರುದ್ಧ ಮೊದಲ ಚಳವಳಿಯನ್ನು ಅವರು ಹೂಡಿದರು. ಮೊದಲ ಸತ್ಯಾಗ್ರಹೀ ತಂಡ 24–10–1938ರಲ್ಲಿ ಸತ್ಯಾಗ್ರಹ ಹೂಡಿತು. ಆಗ ಅಂತಿಮ ಬಿ.ಎ. ವರ್ಗದಲ್ಲಿದ್ದ ನಾನು, ಪರೀಕ್ಷೆ ಮುಗಿದನಂತರ ಸತ್ಯಾಗ್ರಹವನ್ನು ಹೂಡಬೇಕೆಂದು ಯೋಚಿಸುತ್ತಿದ್ದು, ಆ ಕಾಲದಲ್ಲಿ ಪ್ರತಿನಿತ್ಯ ಸ್ವಾಮಿಗಳನ್ನು ಭೇಟಿಯಾಗುತ್ತಿದ್ದೆ. ಆದರೆ ಮಹಾತ್ಮಾಜಿಯವರ ಸೂಚನೆಯಂತೆ ಡಿಸೆಂಬರ್ 1938ರಲ್ಲಿ ಸತ್ಯಾಗ್ರಹವನ್ನು ಹಿಂದೆಗೆದುಕೊಳ್ಳಲಾಯಿತು. ಹೀಗಾಗಿ ಈ ಸತ್ಯಾಗ್ರಹದಲ್ಲಿ ನಮ್ಮ ಕ್ಷೇತ್ರದಲ್ಲಿ ಸತ್ಯಾಗ್ರಹೀ ಕರಪತ್ರವನ್ನು ಗುಪ್ತವಾಗಿ ವಿತರಣೆ ಮಾಡಿದ ಸಮಾಧಾನವಷ್ಟೇ ನನಗೆ ಲಭಿಸುವಂತಾಯಿತು. ಇದೇ ಕಾಲದಲ್ಲಿ 'ವಂದೇ ಮಾತರಂ' ಚಳವಳಿ ಕಾಲೇಜುಗಳಲ್ಲಿ ನಡೆದು ಅನೇಕ ವಿದ್ಯಾರ್ಥಿಗಳು ಹೊರದೂಡಲ್ಪಟ್ಟಾಗ ಅಂಥವರನ್ನು ನಾಗಪುರ ವಿಶ್ವವಿದ್ಯಾಲಯ ತನ್ನಲ್ಲಿ ಸೇರಿಸಿಕೊಂಡಿತು. ಜಗನ್ನಾಥರಾವ್ ಚಂದ್ರಿಕಿ ಅವರು ಈ ಚಳವಳಿಯ ಕಾಲಕ್ಕೆ ಪ್ರಕಾಶಕ್ಕೆ ಬಂದವರು.

ಏಪ್ರಿಲ್ 1939ರಲ್ಲಿ ರಾಜಕೀಯ ಕೈದಿಗಳ ಬಿಡುಗಡೆ ಮಾಡಿದರೂ ಸ್ಟೇಟ್ ಕಾಂಗ್ರೆಸ್ ಮೇಲಿನ ಪ್ರತಿಬಂಧವು ಹಾಗೇ ಇತ್ತು. ನಾನು ಬಿ.ಎ. ಪಾಸಾದಾಗ

ಸಂಸ್ಥಾನೀ ರಾಜಕೀಯ ಕ್ಷೇತ್ರದಲ್ಲಿ ಒಂದು ರೀತಿಯ ಕ್ರಿಯಾಶೂನ್ಯತೆ ಇತ್ತು. ಆಗ ತಾನೇ ಫಾರ್ವರ್ಡ್ ಬ್ಲಾಕ್ ಅನ್ನು ಸ್ಥಾಪಿಸಿದ್ದ ಸುಭಾಸರು ಪುಣೆಗೆ ಬಂದಾಗ ಅವರ ಭಾಷಣ ಕೇಳುವ ಅವಕಾಶ ನನಗೆ ದೊರೆಯಿತು. ಪರೀಕ್ಷೆಯ ಅನಂತರ ಕಲ್ಬುರ್ಗಿಗೆ ಮರಳಿದ ನಾನು, ಆ ದಿನ ರೈಲ್ವೆ ಪ್ಲಾಟ್‌ಫಾರ್ಮ್‌ನಲ್ಲಿ ಸೇನಾಪತಿ ಬಾಪಟರಿಗೆ ಸ್ವಾಗತ ಬಯಸಿದ್ದಕ್ಕೆ, ನನ್ನ ಇಬ್ಬರು ಸ್ನೇಹಿತರ ಜೊತೆ ಬಂಧಿತನಾದೆ. ನಮ್ಮನ್ನು ಸಂಜೆ ಬಿಡುಗಡೆ ಮಾಡಿದರು. ಬಾಪಟರನ್ನು ಪುಣೆಗೆ ಹಿಂದಕ್ಕೆ ಕಳುಹಿಸಿದರು. ಇದು ಪೋಲಿಸರ ಆತಿಥ್ಯದ ನನ್ನ ಮೊದಲ ಅನುಭವವಾಗಿದೆ. ಆಗಸ್ಟ್ 1939ರಲ್ಲಿ ನೂತನ ವಿದ್ಯಾಲಯದಲ್ಲಿ ಅಧ್ಯಾಪಕನಾಗಿ ಸೇರಿದ ನಾನು, ಅದೇ ಅವಧಿಯಲ್ಲಿ ಹಿಂದೀ ಕ್ಲಾಸ್ ನಡೆಸುವುದು, ಗಣ್ಯ ವಿದ್ವಾಂಸರ ಹಾಗೂ ನಾಯಕರ ಭಾಷಣ ಏರ್ಪಡಿಸುವುದು, ಸಾರ್ವಜನಿಕ ಗಣೇಶೋತ್ಸವ ಸಂಘಟನೆ ಮುಂತಾದ ಸಾಮಾಜಿಕ ಚಟುವಟಿಕೆಗಳಲ್ಲಿ ಮಗ್ನನಾಗಿರುತ್ತಿದ್ದೆ.

ಸ್ಟೇಟ್ ಕಾಂಗ್ರೆಸ್ಸನ್ನು ಪ್ರತಿಬಂಧಿಸಿದ್ದರಿಂದ ಸ್ಥಾನೀಯ ಪರಿಷತ್ತುಗಳ ಮೂಲಕ ರಾಜಕೀಯ ಚಟುವಟಿಕೆಗಳನ್ನು ನಡೆಸಲು ಸ್ವಾಮಿ ರಮಾನಂದ ತೀರ್ಥರು ನಿರ್ಣಯಿಸಿ ಆಂಧ್ರ ಮಹಾಸಭಾ, ಕರ್ನಾಟಕ ಪರಿಷತ್ ಮತ್ತು ಮಹಾರಾಷ್ಟ್ರ ಪರಿಷತ್‌ಗಳನ್ನು ಸಂಘಟಿಸಲು, ಈ ಸಂಸ್ಥೆಗಳ ವಾರ್ಷಿಕ ಸಭೆಗಳಿಗೆ ಸಾವಿರಾರು ಹಳ್ಳಿಗರೂ ಬರುವ ಹಾಗಾಯಿತಲ್ಲದೆ, ಖಚಿತ ಗುರಿಯನ್ನು ಇಟ್ಟುಕೊಂಡ ರಾಜಕೀಯ ಕಾರ್ಯಕರ್ತರ ವರ್ಗವೊಂದು ಸಂಸ್ಥಾನದಲ್ಲಿ ಮೂಡಿಬರುತ್ತಲಿತ್ತು. ರಾಯಚೂರು (1944) ಮತ್ತು ಯಾದ್‌ಗೀರ್‌ಗಳಲ್ಲಿ (1946) ನಡೆದ ಕರ್ನಾಟಕ ಪರಿಷತ್ತುಗಳಿಗೆ ನಾನು ಹೋಗಿದ್ದು ಈ ಎರಡೂ ಸಲ ಹನುಮಂತರಾವ್ ಕಕ್ಕೇರಿ ಅವರೇ ಅಧ್ಯಕ್ಷರಾಗಿದ್ದರು. ಒಮ್ಮೆ ಮಹಾರಾಷ್ಟ್ರ ಪರಿಷತ್ತಿನ ಅಧಿವೇಶನಕ್ಕೂ ನಾನು ಹೋಗಿರಲು, ಮರಾಠವಾಡಾ ಭಾಗದಲ್ಲಿ, ಪ್ರತಿ ತಾಲೂಕಿಗೂ ಒಬ್ಬರಂತೆ ಒಬ್ಬ ಪೂರ್ಣಕಾಲೀನ ಕಾರ್ಯಕರ್ತರು ಇರುವುದನ್ನು ನಾನು ಗಮನಿಸಿದೆ. ಕರ್ನಾಟಕದ ಜಿಲ್ಲೆಗಳಲ್ಲಿ ಡಿ|| ಜೆ. ಕೆ. ಪ್ರಾಣೇಶಾಚಾರ್ಯ, ವಿ. ಬಿ. ಪದಕಿ ಮತ್ತು ಡಿ|| ಪ್ರಹ್ಲಾದಾಚಾರ್ಯರಂಥ ಕೆಲವರೇ ಈ ರೀತಿಯ ಕಾರ್ಯಕರ್ತರಿದ್ದರು. ನಾನು ಆಗ ನನ್ನ ನೌಕರಿ ತ್ಯಜಿಸಿ ಪೂರ್ಣಕಾಲೀನ ಕಾರ್ಯಕರ್ತನಾಗಲು ನಿರ್ಧರಿಸಿದೆ. ಆದರೆ ನಾನು ಶಾಲೆಯಲ್ಲಿ ಮಾಧ್ಯಮಿಕ ವಿಭಾಗದ ಸೂಪರಿಂಟೆಂಡೆಂಟ್ ಆಗಿದ್ದು, ಶಾಲೆಯ ಆಜೀವ ಸದಸ್ಯನೆಂದೂ ನನ್ನನ್ನು ಆಡಳಿತ ವರ್ಗದವರು ನೇಮಿಸಿದ್ದರು. ಹೀಗಾಗಿ ನಾನು ಒಬ್ಬ ಸಾಮಾನ್ಯ ಅಧ್ಯಾಪಕನೇನೂ ಅಲ್ಲ; ಜವಾಬ್ದಾರಿಯುಳ್ಳವನು. ನಾನು ನೌಕರಿ ತ್ಯಜಿಸಿದಲ್ಲಿ ಮನೆಯ ಆರ್ಥಿಕ ಸ್ಥಿತಿಯೂ ಏರುಪೇರಾಗುವಂತೆ ಇತ್ತು. ತೀರ ಆಂತರಿಕ ಸಂಘರ್ಷಕ್ಕೆ ಒಳಗಾದ ನಾನು, ಕಡೆಗೊಮ್ಮೆ ಸಮಾಜಹಿತವನ್ನು ಗಮನಿಸಿ, ನೌಕರಿ ತ್ಯಜಿಸಿ ಕರ್ನಾಟಕ ಪರಿಷತ್ತಿನ ಕಾರ್ಯಕರ್ತನಾದೆ. ಶಾಲೆಯಲ್ಲಿ ನನ್ನ ಸಹೋದ್ಯೋಗಿಗಳಾಗಿದ್ದ ನಾರಾಯಣ

ರಾವ್ ಕಣೆಹಾಳ್ ಮತ್ತು ಸೀತಾರಾಮರಾವ್ ಜೋಶಿ ಅವರೂ ನೌಕರಿ ತ್ಯಜಿಸಿ ನನ್ನಂತೆ ಕಾರ್ಯಕರ್ತರಾದರು. ಅದೇ ರೀತಿ ಎಸ್. ಹನುಮಂತರಾವ್ ಎಂಬ ಅಬಕಾರಿ ಅಧಿಕಾರಿಯೂ ಕಂದಾಯ ಇಲಾಖೆಯಲ್ಲಿ ಇದ್ದ ದತ್ತಾತ್ರಯ ಅವರಾದಿಯವರೂ ನಮ್ಮನ್ನು ಸೇರಿಕೊಂಡರು. ಯಾದ್‌ಗಿರ್ ಪರಿಷತ್ತಿನ (1946) ಅನಂತರ ನಮ್ಮ ಕೆಲಸ ವನ್ನು ನಾವು ಆರಂಭಿಸಿದೆವು. ನನ್ನನ್ನು ಕರ್ನಾಟಕ ಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಯಾಗಿ ಮಾಡಿದರು. ಅಷ್ಟೊತ್ತಿಗೆ ಸಂಸ್ಥಾನೀ ಕಾಂಗ್ರೆಸ್‌ನ ಮೇಲಣ ಪ್ರತಿಬಂಧ ಹೋಗಲು, ಮೂರೂ ಪ್ರಾದೇಶಿಕ ಪ್ರದೇಶಗಳನ್ನು ಒಟ್ಟುಗೂಡಿಸಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ಸನ್ನು ಪುನರ್ಘಟಿಸಲಾಯಿತು. ಆಗ ಹೈದರಾಬಾದ್ ಸಂಸ್ಥಾನದ ಕರ್ನಾಟಕ ಕಾಂಗ್ರೆಸ್ ಕಮಿಟಿಗೆ ನಾನು ಪ್ರಧಾನ ಕಾರ್ಯದರ್ಶಿಯಾದೆ. ಅಷ್ಟರಲ್ಲಿ ದೇಶ ಸ್ವತಂತ್ರ ವಾಗುತ್ತಿರಲು ನಿಜಾಮರು ಸ್ವಾತಂತ್ರ್ಯ ಘೋಷಿಸುವ ಇರಾದೆ ತೋರಿದರು. ಆಗ ಸ್ಟೇಟ್ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸ್ವಾಮೀಜಿಯವರು, ಸಂಸ್ಥಾನವು ಭಾರತೀಯ ಒಕ್ಕೂಟವನ್ನು ಸೇರಬೇಕು, ಹಾಗೂ ಸಂಸ್ಥಾನದಲ್ಲಿ ಜವಾಬ್ದಾರಿ ಸರಕಾರದ ಸ್ಥಾಪನೆ ಆಗಬೇಕೆಂದು ಧೀರ ನಿಲುವನ್ನು ತಳೆದರು. 1947ರ ಮೇಯಲ್ಲಿ ನಡೆದ ಸಂಸ್ಥಾನೀ ಕಾಂಗ್ರೆಸ್ ಅಧಿವೇಶನಕ್ಕೆ ಅ.ಭಾ. ಕಾಂಗ್ರೆಸ್ ನಾಯಕರೂ ಅನೇಕರು ಬಂದಿದ್ದರು. ಸಂಸ್ಥಾನವನ್ನು ಸ್ವತಂತ್ರವಾಗಿಡುವೆನೆಂದು ಘೋಷಿಸಿದ ನಿಜಾಮರು ರಜಾಕಾರರ ಪುಂಡಾಟಗಳಿಗೆ ಬೆಂಬಲ ನೀಡಿರಲು, ಜನತೆಗೆ ಧೀರಮಾರ್ಗದರ್ಶನ ನೀಡಿದ ಸ್ವಾಮೀಜಿ ಕಾಂಗ್ರೆಸ್ಸಿನ ಬೇಡಿಕೆಗಾಗಿ ಆ. 7ರಿಂದ ಸತ್ಯಾಗ್ರಹ ಕರೆನೀಡಿದರಲ್ಲದೆ, ಆ. 15ರಿಂದ ಧ್ವಜಸತ್ಯಾಗ್ರಹ ನಡೆಸಲು ಆದೇಶ ಕೊಟ್ಟರು. ಮುಂಬೈಯಿಂದ ಬರುವ ಮುಂಬೈ–ಮದ್ರಾಸ್ ಎಕ್ಸ್‌ಪ್ರೆಸ್ ಕಾಗದದ ತ್ರಿವರ್ಣಧ್ವಜಗಳಿಂದ ಅಲಂಕೃತವಾಗಿ ಆಗಸ್ಟ 14ರ ರಾತ್ರಿ ಬಂದಿರಲು, ಹೈದರಾಬಾದ್ ಸಂಸ್ಥಾನದಲ್ಲಿ ರಜಾಕಾರರು ಆ ಧ್ವಜಗಳನ್ನು ಕಿತ್ತು ಹರಿದುಹಾಕಲು ಯತ್ನಿಸಿದರು. ಹೀಗೆ ರಜಾಕಾರರ ರಾಜ್ಯ ಸಂಸ್ಥಾನದಲ್ಲಿ ಆರಂಭವಾಯಿತು. ನಾವು ಸತ್ಯಾಗ್ರಹಿಗಳ ಗುಂಪುಗಳ ಸಂಘಟನೆ, ಭೂಗತ ಚಟುವಟಿಕೆ, ಗಡಿಭಾಗದಲ್ಲಿ ಶಿಬಿರಗಳ ಸ್ಥಾಪನೆ ಮುಂತಾದ ವಿಚಾರಗಳಲ್ಲಿ ತೊಡಗಿದ್ದು, ಸೆಪ್ಟೆಂಬರ್ 2ಕ್ಕೆ ನಾನು ಸತ್ಯಾಗ್ರಹ ನಡೆಸಬೇಕೆಂದು ಇದ್ದೆ. ಆದರೆ ಆ. 27ರಂದು ಬೆಳಗ್ಗೆ 5–30ಕ್ಕೆ ನನ್ನ ಬಂಧನವಾಯಿತು. ಅದರಂತೆ ಹನುಮಂತರಾವ್ ಕಕ್ಕೇರಿ, ಅಶ್ವತ್ಥರಾವ್, ಕಿಶನ್‌ರಾವ್ ಸತಾಳ್ಕರ್, ಕೃಷ್ಣರಾವ್ ಕಪಟರಾಳ್, ದತ್ತಾತ್ರಯ ಅವರಾದಿ, ಎಸ್. ಹನುಮಂತರಾವ್ ಇವರೆಲ್ಲ ಅದೇ ದಿನ ಬಂಧಿತರಾಗಿ ಕಲ್ಬುರ್ಗಿ ಸೆಂಟ್ರಲ್ ಜೈಲಿಗೆ ನಮ್ಮನ್ನೆಲ್ಲ ಕಳುಹಿಸಿದರು. ಈ ಕಾಲದಲ್ಲಿ ಶೇಕಡಾ 50ರ ಪ್ರಾತಿನಿಧ್ಯದಂತೆ ಜವಾಬ್ದಾರಿ ಸರಕಾರವನ್ನು ಸ್ಥಾಪಿಸಲು ಒಪ್ಪಬೇಕೆಂದು ಕೆಲವು ಕಾಂಗ್ರೆಸ್ ನಾಯಕರನ್ನು ನಾವು ಜೈಲಿನಲ್ಲಿರುವಾಗ ಒಲಿಸಿಕೊಳ್ಳುವ ಯತ್ನವಾದರೂ ನಮ್ಮ ಜೈಲಿನಲ್ಲಿದ್ದ ನಾವೆಲ್ಲ ಕಾರ್ಯಕರ್ತರೂ ಅಂಥ ಖಾಜಿನ್ಯಾಯಗಳಿಗೆ ಒಪ್ಪಿಗೆ ನೀಡಲೇ

ಇಲ್ಲ. ಸ್ವಾಮಿಜಿ ಕೂಡ ಈ ಬಗ್ಗೆ ದೃಢವಾಗಿದ್ದರು. ಜೈಲಿನಲ್ಲಿ ನಮಗೆ ವಿಶೇಷ ತೊಂದರೆಗಳೇನೂ ಇರಲಿಲ್ಲ. ಆದರೆ ಹೊರಗಿನಿಂದ ರಜಾಕಾರರ ಕಾಟ ಇದ್ದೇ ಇದ್ದು ಜೈಲಿನೊಳಗೆ ಸಕ್ಕರೆ, ಪತ್ರಿಕೆಗಳು ಬಾರದಂತೆ ಕೂಡ ಅವರು ಅಡಚಣೆಮಾಡುತ್ತ ಇದ್ದರು. ಅಲ್ಲಿಯೇ ಭೀಮರಾವ್ ದೇಸಾಯಿ ಅವರು ಗೂಂಡಾಗಳ ಲಾಠಿಯೇಟಿನಿಂದ ಹುತಾತ್ಮರಾದರು. (ಇದರ ವಿವರ ಅನಿರುದ್ಧ ದೇಸಾಯಿ ಅವರ ಬರಹದಲ್ಲಿದೆ. —ಸಂ||). ಅವರ ಮರಣದ ವಾರ್ತೆ ತಿಳಿದಾಗ, ಜೈಲಿನಲ್ಲಿ ನಾವು ಆಗಿನ ಸ್ಟೇಟ್ ಕಾಂಗ್ರೆಸ್ ಕಾರ್ಯ ಸಮಿತಿ ಸದಸ್ಯ ಜಗನ್ನಾಥರಾವ್ ಚಂದ್ರಿಕಿ ಅವರ ನೇತೃತ್ವದಲ್ಲಿ ದಿವಂಗತರಿಗೆ ಶ್ರದ್ಧಾಂಜಲಿ ಅರ್ಪಿಸಲು ಮೆರವಣಿಗೆ ನಡೆಸಲು ಯತ್ನಿಸಿದೆವು. ನಮ್ಮ ಬರ‍್ಯಾಕಿನ ಗೋಡೆ ದಾಟುವಷ್ಟ ರಲ್ಲಿ ಮೆರವಣಿಗೆಯನ್ನು ತಡೆಯಲಾಯಿತು. ಈ ಬಗ್ಗೆ ಪ್ರತಿಭಟನೆ ಸೂಚಿಸಿ ನಾವು ಅಲ್ಲೇ ಉರಿಬಿಸಿಲಲ್ಲಿ ಧರಣಿ ಕೂತೆವು. ಆಗಲೇ ದಿವಂಗತರ ಅಂತ್ಯಕ್ರಿಯೆಗಳನ್ನು ನಡೆಸಿ ಆಗಿ ತ್ತೆಂದು ನಮಗೆ ತಿಳಿಯಿತು. ಕಡೆಗೆ ಅವರ ಚಿತಾಭಸ್ಮ ದರ್ಶನವನ್ನು ಮಾಡಿಸಿದಮೇಲೆ ನಾವು ಮೂರು ತಾಸಿನ ಧರಣಿಯನ್ನು ತ್ಯಜಿಸಿದೆವು. ಸ್ವಾಮಿಜಿ ಈ ಬಗ್ಗೆ ತೀರ ದುಃಖಿತ ರಾಗಿ, ಭೀಮರಾಯರ ಮರಣದ ಬಗ್ಗೆ ಸೂಕ್ತ ವಿಚಾರಣೆ ನಡೆಸಬೇಕೆಂದು ಮುಖ್ಯ ಮಂತ್ರಿಗೆ ಪತ್ರ ಬರೆದು, ಈ ಬಗ್ಗೆ ಉತ್ತರ ಬರುವ ತನಕ ಉಪವಾಸಮಾಡುವ ಪ್ರಕಟಣೆ ನೀಡಿದರು. ಸ್ವಾಮಿಗಳನ್ನು ಕಾಣಲು ನಮಗೆ ಅನುಮತಿ ನೀಡಬೇಕೆಂದು ನಾವು ಉಪವಾಸ ಹೂಡಿದೆವು. ಎರಡು ದಿನಗಳನಂತರ ನಮ್ಮಲ್ಲಿ ನಾಲ್ವರು ಸ್ವಾಮಿಜಿಗಳನ್ನು ಕಾಣುವ ಅವಕಾಶ ಪಡೆದೆವು. ಮುಖ್ಯಮಂತ್ರಿಯಿಂದ ಉತ್ತರ ಬಂದನಂತರ ತಾವು ಉಪವಾಸ ತ್ಯಜಿಸುವುದಾಗಿ ಮಾತುಕೊಟ್ಟ ಸ್ವಾಮಿಜಿ, ನಾವು ಉಪವಾಸ ತ್ಯಜಿಸ ಬೇಕೆಂದು ಹೇಳಿದರು. ನಾವು ಮೂರು ದಿನಗಳನಂತರ ಆಹಾರ ಸ್ವೀಕರಿಸಿದೆವು.

ಮುಂದೆ ಪೋಲಿಸ್ ಆ್ಯಕ್ಶನ್ ಆಗಿ, ಸೆ. 23ರಂದು ಭಾರತೀಯ ಸೇನೆ ಕಲ್ಬುರ್ಗಿ ಯನ್ನು ಪ್ರವೇಶಿಸಿ, ಸಂಜೆ 7ಕ್ಕೆ ನಮ್ಮ ಬಿಡುಗಡೆ ಆಯಿತು. ರಾತ್ರಿ 8ಕ್ಕೆ ತೀರ ಕಷ್ಟದಿಂದ ನಾವು ಮನೆಯನ್ನು ಸೇರಿದೆವು. ಹದಿಮೂರು ತಿಂಗಳ ಜೈಲುವಾಸ ಹೀಗೆ ಮುಗಿಯಿತು.

ದಿನಬೆಳಗಾಗುವುದರಲ್ಲಿ ನಿಜಾಮರ ಕೈವಾರಿಗಳಾಗಿದ್ದ ಜನ ಖಾದಿ ಟೋಪಿ ಧರಿಸಿ ಕಾಂಗ್ರೆಸ್ಸಿಗರಾದರು. ನಾಲ್ಕು ಗಣ್ಯ ಕಾಂಗ್ರೆಸ್ ನಾಯಕರನ್ನು ಒಳಗೊಂಡ ಮಂತ್ರಿಮಂಡಳ ರಾಜ್ಯದಲ್ಲಿ ಸ್ಥಾಪಿತವಾಯಿತು. ಆಗ ಕರ್ನಾಟಕ ರಾಜ್ಯ ಕಾಂಗ್ರೆಸ್‌ಗೆ ಜಗನ್ನಾಥರಾವ್ ಚಂದ್ರಿಕೆಯುವರು ಅಧ್ಯಕ್ಷರಾಗಿ ನಾನು ಪ್ರಧಾನ ಕಾರ್ಯದರ್ಶಿಯಾದೆ. ನಾನು ವೇತನವಿಲ್ಲದ ರಾಜಕೀಯ ಕಾರ್ಯಕರ್ತನಾಗಿ ಹೆಚ್ಚು ದಿನ ಕಳೆಯಲು ಸಾಧ್ಯ ವಿರಲಿಲ್ಲ. ನಾನು ನನ್ನ ಶಾಲೆಗೆ ಮರಳಿದೆ. 1951ರಲ್ಲಿ ನಿಜಾಂ ಕಾಲೇಜಿನಲ್ಲಿ ಮರಾಠಿ ಅಧ್ಯಾಪಕನಾಗಿ ಸೇರಿದ್ದ ನಾನು 1947ರಲ್ಲಿ ನಿವೃತ್ತನಾದೆ.

ನಮ್ಮ ಜಿಲ್ಲೆಯಲ್ಲಿ ಆಳಂದ್ ಚಳವಳಿಯು ಒಂದು ಗಣ್ಯ ಕೇಂದ್ರವಾಗಿದ್ದು, ಅಲ್ಲಿ

ಡಾ|| ಕಲ್ಯಾಣರಾವ್ ದೇಶಪಾಂಡೆ ಮತ್ತು ಅವರ ಸೋದರ ಡಾ|| ಧೋಂಡೋಪಂತ ದೇಶಪಾಂಡೆ ಆ ಭಾಗದ ಕ್ರಿಯಾಶೀಲ ನಾಯಕರಾಗಿದ್ದರು; ಸರಕಾರ ಮತ್ತು ಮುಸ್ಲಿಂ ಜಾತೀಯವಾದಿಗಳ ವಿರುದ್ಧ ಅವರು ದಿಟ್ಟತನದಿಂದ ಹೋರಾಡಿದವರು. ಚಿತ್ತಾಪುರ, ಚಿಂಚೋಳಿ ಹಾಗೂ ಶೋರಾಪುರಗಳಲ್ಲೂ ಹೀಗೇ ಚಟುವಟಿಕೆಗಳು ನಡೆಯುತ್ತಿದ್ದವು.

ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲುಗೊಳ್ಳುವ ಅವಕಾಶ ನನಗೆ ಲಭಿಸಿದ್ದು ಒಂದು ಪುಣ್ಯವೆಂದು ನನ್ನ ನಂಬಿಕೆ.

ಹೈ.ಕ. 2

## ಗೋಪಾಳರಾವ್ ಮುಜುಂದಾರ

ಜನನ : 1927 ಉದ್ಯೋಗ : ಸರಕಾರಿ ನೌಕರಿ ವಿಳಾಸ : 34, ಎನ್.ಜಿ.ಓ. ಕಾಲನಿ, ಕಲ್ಬುರ್ಗಿ

---



ಕಲ್ಬುರ್ಗಿಯಲ್ಲಿ ನನ್ನ ಕಕ್ಕನವರ ಮನೆಯಲ್ಲಿ ಇದ್ದು 1936ರಲ್ಲಿ ಅಸಫ್‌ಗಂಜ್ ಮಿಡ್ಲ್ ಸ್ಕೂಲ್ ಸೇರಿರಲು, 1937ರಲ್ಲಿ ಆರ್ಯ ಸಮಾಜದ ಸತ್ಯಾಗ್ರಹ ನಡೆದಾಗ ಪ್ರತಿನಿತ್ಯ ಒಂದೂವರೆ ಮೈಲಿ ನಡೆದು ಅದನ್ನು ನೋಡಲು ಹೋಗುತ್ತಿದ್ದೆ. ಆಗಲೇ ಪ್ರಭುತ್ವದೊಂದಿಗೆ ಘರ್ಷಣೆಯ ವಿಚಾರ ಮನದಲ್ಲಿ ಸುಳಿಯಿತು. ಆಗ ಹೈದರಾಬಾದ್‌ನಲ್ಲಿ ಕಾಲೇಜು ಓದುತ್ತಿದ್ದ (ಡಾ||) ಪಿ. ಜಿ. ಪುರಾಣಿಕರು ಕಲ್ಬುರ್ಗಿಗೆ ಬಂದು ವಂದೇ ಮಾತರಂ ಚಳವಳಿಗೆ ಚಾಲನೆ ಕೊಟ್ಟರು. (1938. ಈಗ ಅವರು ಹೈದರಾಬಾದ್ ನಿಜಾಂ ಕಾಲೇಜಿನಲ್ಲಿ ಪ್ರಿನ್ಸಿಪಾಲ್ ಆಗಿದ್ದಾರೆ.) ಕಲ್ಬುರ್ಗಿಯಲ್ಲಿ ನಾನೂ ಈ ಚಳವಳಿಯಲ್ಲಿ ಪಾಲುಗೊಂಡು ವಿದ್ಯಾರ್ಥಿಮುಷ್ಕರದಲ್ಲಿ ಸೇರಲು, ನಾನು ಶಾಲೆಯಿಂದ ಹೊರದೂಡಲ್ಪಟ್ಟೆ. ಮುಂದೆ ಚಳವಳಿ ನಿಂತಾಗ ನಮ್ಮ ತಂದೆ ಮತ್ತೆ ನನ್ನನ್ನು ಶಾಲೆಗೆ ಸೇರಿಸಿದರು. ಮುಂದೆ 1946ರ ವರೆಗೆ ಕಲ್ಬುರ್ಗಿಯಲ್ಲಿ ಚಳವಳಿ ಸೇರಲು ಯಾವ ವಿಶೇಷಾವಕಾಶ ಇರಲಿಲ್ಲ. 1946ರಲ್ಲಿ ನಾನು ಹೈದರಾಬಾದ್‌ನಲ್ಲಿ ಜ್ಯೂ. ಬಿ.ಎಸ್‌ಸಿ.ಯಲ್ಲಿ ಓದುತ್ತಿರಲು, ಆಗ ವಿದ್ಯಾರ್ಥಿಗಳ ಸಂಘಟನೆಯೂ ನಡೆದಿತ್ತು. ವಿದ್ಯಾರ್ಥಿಗಳು ಹೆಚ್ಚಾಗಿ ಕಮ್ಯುನಿಸ್ಟ್, ರ್‍ಯಾಡಿಕಲ್, ಡೆಮೊಕ್ರ್ಯಾಟಿಕ್ ಪಾರ್ಟಿಗಳಲ್ಲಿ ಹಂಚಿಹೋಗಿದ್ದರು. ನಾನು ಕಾಂಗ್ರೆಸ್ ಸೋಶಲಿಸ್ಟ್ ಪಾರ್ಟಿಯಲ್ಲಿದ್ದು ಸ್ಟೂಡೆಂಟ್ಸ್ ಯೂನಿಯನ್‌ನ ಚಟುವಟಿಕೆಗಳಲ್ಲಿ ಪಾಲುಗೊಳ್ಳುತ್ತಿದ್ದೆ. 1947ರ

ಆಗಸ್ಟ್ 10ಕ್ಕೆ ಗೌಳಿಗುಡಾದಲ್ಲಿ ಪ್ರತಿಬಂಧಕಾಜ್ಞೆ ಉಲ್ಲಂಘಿಸಿ ಸಭೆನಡೆಸಿ ನಾನು, ಡಾ|| ಜಿ. ಎಸ್. ಮೇಲ್ಕೋಟೆ, ಈಗ ಕಲ್ಬುರ್ಗಿಯಲ್ಲಿ ವಕೀಲ ಕುಸುಮಾಕರ ದೇಸಾಯಿ ಬಂಧಿತರಾಗಿ ನನಗೆ ಒಂದು ತಿಂಗಳು ಶಿಕ್ಷೆ ಆಯಿತು. 10-9-1947ಕ್ಕೆ ಬಿಡುಗಡೆ ಆಗಲು ವಿಜಯವಾಡಾದಲ್ಲಿ ನಡೆದ ವಿದ್ಯಾರ್ಥಿಪ್ರಮುಖರ ಸಭೆಯಲ್ಲಿ (ಇದು ಅಲ್ಲಿನ ಒಬ್ಬ ಗಣ್ಯ ವಕೀಲರ, ಬಹುಶಃ ಕಳಾ ವೆಂಕಟರಾವ್ ಇರಬೇಕು) ಪಾಲುಗೊಂಡು ವಿದ್ಯಾರ್ಥಿ ಕ್ರಿಯಾಸಮಿತಿಗೆ ಆಯ್ಕೆ ಆದೆ. ಇತರ ಸದಸ್ಯರು ಮುರಲೀಧರ ಕಾನಡೆ, ಪುರುಷೋತ್ತಮ ಪರ್ಡೀಕರ್, ಜಗನ್ನಾಥರಾವ್ ಬದರ್ಾಪುರ್ ಹಾಗೂ ಶ್ಯಾಮ ಅಪಸಂಗೀಕರ್ ಇತರ ಸದಸ್ಯರು. ಅಲ್ಲಿನ ನಿರ್ಣಯದಂತೆ 'ಕ್ವಿಟ್ ಕಾಲೇಜ್' ಚಳವಳಿ ಸಂಘಟಿಸುವಾಗಲೇ ನನ್ನ ಬಂಧನವಾಗುವ ವಾರ್ತೆ ಬರಲು ನಾನು ಗದುಗಿಗೆ ತೆರಳಿ, ಅಲ್ಲಿಗೆ ಬೆಂಗಳೂರಿನಿಂದ ಬಂದ ಕೆಲವು ತರುಣರೊಡನೆ ಗಡಿ ಶಿಬಿರಕ್ಕೆ ತೆರಳಿದೆ. ಆಗ ರಾಯಚೂರು ಜಿಲ್ಲೆಗೆ ಸೇರಿದ, ಆದರೆ ಧಾರವಾಡ ಜಿಲ್ಲೆಯಿಂದ ಆವೃತವಾದ 14 ಹಳ್ಳಿಗಳ ಸ್ವಾತಂತ್ರ್ಯಘೋಷಣೆ ಮಾಡಿದೆವು. ಬೆಂಗಳೂರಿನಿಂದ ಬಂದ ಯುವಕರ ಪೈಕಿ ರಾಮಕೃಷ್ಣ ಪ್ರಸಾದ್, ರಾಮಣ್ಣ, ಎಚ್. ಸಿ. ವೇಣುಗೋಪಾಲ್ ಪ್ರಮುಖರು. ವೇಣುಗೋಪಾಲರು ಬಂದೂಕು ಹಾಗೂ ಆಸ್ಫೋಟಕಗಳ ಬಳಕೆಯಲ್ಲಿ ತರಬೇತಿ ಹೊಂದಿದವರು. ಸ್ಥಳೀಯ ಯುವಕರನ್ನು ಸಂಘಟಿಸಿ ಹಣಮಸಾಗರದ ಒಳಕ್ಕೆ ಮಾಲಗತ್ತಿಯಲ್ಲಿ ಒಂದು ರಾತ್ರಿ ನಾನೂ ವೇಣುಗೋಪಾಲರೂ ಇತರ 20 ಯುವಕರೂ ಅಲ್ಲಿದ್ದ ವಿಶೇಷ ಪೋಲಿಸ್ ಪಡೆಯ ಮೇಲೆ ದಾಳಿ ಮಾಡಿದೆವು. ಕೈಗೆಕೈ ಹತ್ತಿತು. ನಮ್ಮ ಮುಂದಾಳು ವೇಣುಗೋಪಾಲರ ಶೌರ್ಯದ ಸೆಣಸಾಟ ಈಗ್ಯೂ ನನ್ನ ಕಣ್ಣ ಮುಂದೆ ಕಟ್ಟಿದೆ. (ಇವರು ಈಗ ಬೆಂಗಳೂರಿನಲ್ಲಿರುವ ಕೇಂದ್ರ ಬಾರ್ಡರ್ ಸೆಕ್ಯೂರಿಟಿ ಫೋರ್ಸ್ ವಿಭಾಗದ ಮುಖ್ಯಸ್ಥರಾಗಿದ್ದಾರೆ. —ಸಂ||) ಇದರಲ್ಲಿ ನಮ್ಮ ಒಬ್ಬ ಯುವಕನಿಗೆ ವಿಶೇಷ ಗಾಯವಾಯಿತು. ಪೋಲಿಸರಿಗಾದ ಸಾವುನೋವು ಬಹಳ.

ರೋಣ ತಾ|| ಸೂಡಿ ಗ್ರಾಮದ ಡಾ|| ರಂಗಣ್ಣ ನಮಗೆ ವಿಶೇಷ ಪ್ರೋತ್ಸಾಹ, ಸಹಾಯ ಇತ್ತರು. ನಮ್ಮ ಊಟೋಪಚಾರದ ವ್ಯವಸ್ಥೆ, ಧನಸಹಾಯಗಳಿಗೆ ಇವರದು ಮುಖ್ಯಭಾಗ. ಅಲ್ಲದೆ ಇಟಗಿಯ ರಾಘವೇಂದ್ರರನ್ನೂ ಸ್ಮರಿಸಬೇಕು. (ಈಗ ಅವರು ಆಕಾಶವಾಣಿಯಲ್ಲಿ ಇದ್ದಾರೆ.) ಕವಿಗಳಾಗಿದ್ದ ಇವರ ಮನೆಯಲ್ಲಿ ನಮಗೆ ಸದಾ ಸ್ವಾಗತ. ಇವರ ತಂದೆ ಪ್ರಹ್ಲಾದರಾಯರು ನಮ್ಮನ್ನು ಮಕ್ಕಳಂತೆ ನೋಡಿಕೊಂಡರು. ನನ್ನ ಕಾರ್ಯಕ್ಷೇತ್ರ ಆಗ ಹಿರೇಅಳಗುಂಡಿ ಗ್ರಾಮ. ಈ ಕಾಲದಲ್ಲಿ ಸ್ವಾಮಿ ರಮಾನಂದ ತೀರ್ಥರು ಇಟಗಿಗೆ ಬಂದಿರಲು ನಮ್ಮ ತಂಡದ 20 ಜನರೊಡನೆ ಅವರಿಗೆ ಅಲ್ಲಿ ಗೌರವರಕ್ಷೆ ಸಲ್ಲಿಸಿದ ಚಿತ್ರ ಆಗಿನ ಸಂಯುಕ್ತ ಕರ್ನಾಟಕದಲ್ಲಿ ಬಂದಿತ್ತು. ಆಗ ಗದಗಿನಲ್ಲಿ ಜನಾರ್ದನರಾವ್ ದೇಸಾಯಿ, ಕೋಲೂರು ಮಲ್ಲಪ್ಪ ಹಾಗೂ ಎಲ್. ಕೆ. ಸರಾಫ್ ನಮ್ಮ ಮಾರ್ಗದರ್ಶಕ ಮುಖಂಡರು.

ಈ ಚಟುವಟಿಕೆಗಳು ನಡೆದಾಗ ನಮ್ಮಗಳ ಶಿಬಿರಗಳಲ್ಲೇ ಭಿನ್ನಾಭಿಪ್ರಾಯ ಗಳಾದವು. ಶಾಂತಗಿರಿಯಲ್ಲಿ ಸೋಶಲಿಸ್ಟ್ ಗ್ರುಪ್‌ನ ಹೇರೂರು ಸಿದ್ರಾಮಪ್ಪ ಎಂಬ (ಬಹುಶಃ ತಾಂಡೂರಿನವರು) ಕಾರ್ಯಕರ್ತರು ಸಂಘಟಿಸಿದ್ದ ಶಿಬಿರ ಮತ್ತು ನಮ್ಮ ಶಿಬಿರಗಳ ನಡುವೆ ಜನರ ಸಹಾಕಾರ ವಿಭಜಿತವಾಗತೊಡಗಿತು. ಜಾತೀಯ ಮನೋ ಭಾವ ಕಾಣಿಸಿತು. ಈ ಕಲುಷಿತ ವಾತಾವರಣದಿಂದ ಕೆಲದಿನ ದೂರವಿರಬೇಕೆಂದು, ಉಸ್ಮಾನಾಬಾದ್ ಜಿ॥ ತುಳಜಾಪುರಕ್ಕೆ ನನ್ನ ಕಕ್ಕನ ಮನೆಗೆ ಹೊರಟಾಗ ನಿಜಾಂ ಹದ್ದಿನಲ್ಲಿ ನಾನಿದ್ದ ಬಸ್ಸು ಬರಲು, ಅಲ್ಲಿ ನಡೆದ ಪರಿಶೀಲನೆಯಲ್ಲಿ ನಾನು ಅಚಾತುರ್ಯ ದಿಂದ ಸಿಕ್ಕಿಬಿದ್ದೆ ; ಲಾಕಪ್ ಸೇರಿದೆ. ನನ್ನಲ್ಲಿದ್ದ ಕನ್ನಡ ಕಾಗದಪತ್ರಗಳು ಹೈದರಾ ಬಾದ್‌ನಲ್ಲಿ ಪೋಲಿಸ್ ಗುಪ್ತಚರ ಇಲಾಖೆಗೆ ಹೋಗಿ, ಅದರಿಂದಾಗಿ ಉದ್ಗಿರ್‌ನ ಜಗನ್ನಾಥರಾವ್ ಎಂಬುವರ ಬಂಧನವಾಯಿತೆಂದು ಕೇಳಿದೆ.

ಗದಗಿನಲ್ಲಿ ನಾನಿದ್ದಾಗ ಅನೇಕ ಬಾರಿ ಗುಪ್ತವಾಗಿ ಸಂಸ್ಥಾನದ ಒಳಗಡೆ ಪತ್ರ ವಗೈರೆ ಸಾಗಿಸಿದ್ದೆ. ಆಗ ಉದ್ಗೀರ್‌ಗೂ ಹೋಗಿದ್ದೆ ; ರಂಗನಾಥ ಸಾಯ್ಗಾಂವ್ಕರರ ಜೊತೆ ವೇಷಮರೆಸಿ ಪ್ರವಾಸ ಮಾಡಿದ್ದೆ. ಜನವರಿ ಎರಡನೆಯ ವಾರದಲ್ಲಿ ಬಂಧಿತನಾದ ನಾನು ಫೆಬ್ರವರಿ ಮೊದಲ ವಾರ ಹೈದರಾಬಾದ್ ಜೈಲಿಗೆ ರವಾನಿಸಲ್ಪಟ್ಟೆ. ಅಲ್ಲಿ ಇದ್ದಾಗ ನಾನು ಆಗಿನ ಮಂತ್ರಿ ಮಲ್ಲಿಕಾರ್ಜುನಪ್ಪ ಅವರ ವಿರುದ್ಧ ಘೋಷಣೆ ಕೂಗಿದ್ದರಿಂದ ಔರಂಗಾಬಾದ್‌ಗೆ ವರ್ಗಾಯಿಸಲ್ಪಟ್ಟೆ. ಎಂಟು ತಿಂಗಳ ಜೈಲುವಾಸದ ನಂತರ, ಪೋಲಿಸ್ ಕಾರ್ರ್ಯಾಚರಣೆಯನಂತರವೇ ಬಿಡುಗಡೆ ಆದೆ.

ಪೋಲಿಸ್ ಕಾರ್ರ್ಯಾಚರಣೆಯನಂತರ ಕಾಂಗ್ರೆಸ್ ಮುಖಂಡರಲ್ಲಿನ ಒಳಜಗಳ ಗಳಿಂದ ರೋಸಿಹೋಗಿ ರಾಜಕೀಯಕ್ಕೆ ಶರಣೆಂದೆ. ಕಾಲೇಜು ಸೇರಿ ಬಿ.ಎಸ್‌ಸಿ. ಮುಗಿಸಿದೆ. ಎರಡು ವರ್ಷ ನಿರುದ್ಯೋಗ. ಯಾವ ನಾಯಕರ ಬಳಿಯೂ ಸಹಾಯ ಯಾಚಿಸಲಿಲ್ಲ. 1951ರಲ್ಲಿ ರೆವಿನ್ಯೂ ಇನ್ಸ್‌ಪೆಕ್ಟರ್ ಆಗಿ ಸೇರಿ, 22 ವರ್ಷಗಳನಂತರ ಈಗ ಅಸಿಸ್ಟಂಟ್ ಕಮಿಶನರ್ ಆಗಿ ಬಡ್ತಿಹೊಂದಿರುವೆ.

ಹೈ.ಕ. 3

## ಅನಿರುದ್ಧ ದೇಸಾಯಿ

ಜನನ : ?  ಉದ್ಯೋಗ : ಸರಕಾರಿ ನೌಕರಿ  ವಿಳಾಸ : ಅಧೀನ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–1

---

ಹೈದರಾಬಾದಿನ 'ಮುಶೀರಾಬಾದ್'ನಲ್ಲಿ ಹೈದರಾಬಾದ್ ಸ್ಟೇಟ್ ಕಾಂ॥ ಅಧಿವೇಶನ ನೋಡಲು ನಾನು ನನ್ನ ತಂದೆ ರಾಘವೇಂದ್ರರಾಯರೊಡನೆ (ಸೈಕಲಿನ ಮೇಲೆ)

ಹೋದಾಗ ನನಗೆ ಹೈದರಾಬಾದ್ ಸಂಸ್ಥಾನದಲ್ಲಿ ಪ್ರಾರಂಭವಾಗಬೇಕಾದ ಹೋರಾಟದ ಬಗ್ಗೆ ಸ್ಪಷ್ಟ ಕಲ್ಪನೆ ಇರಲಿಲ್ಲ. ಆದರೆ ಅಂದು ಸ್ವಾಮಿ ರಮಾನಂದ ತೀರ್ಥರು ಕೊಟ್ಟ ಕರೆಯಿಂದ ಹೋರಾಟ ಪ್ರಾರಂಭವಾಗುವುದು ನಿಶ್ಚಿತವಾಯಿತು.

1947ರ ನಂತರ ರಜಾಕಾರರ ಹಾವಳಿ ಪ್ರಾರಂಭವಾಗಿ ಕಾಂಗ್ರೆಸ್ಸಿನ ಚಟುವಟಿಕೆಗಳು ಹೆಚ್ಚುತ್ತಹೋಗಿ ಹೈದರಾಬಾದಿನಲ್ಲಿ ವಿದ್ಯಾರ್ಥಿ ಆಂದೋಲನ ಪ್ರಾರಂಭವಾದ ಸಮಾಚಾರ ಬಂದಿತು. ಮೊದಲನೆಯ ಸಲ ವಿದ್ಯಾರ್ಥಿ ತಂಡ ಮೆರವಣಿಗೆ ಹೊರಟಿದ್ದೂ, ಅದರ ಮೇಲೆ ಆದ ಲಾಠೀ ಚಾರ್ಜು, ವಿದ್ಯಾರ್ಥಿಗಳ ದಸ್ತಗಿರಿ ಮೊದಲಾದ ಸಮಾಚಾರ ಬಂದಿತು. ಅದರೊಡನೆ ನಮ್ಮ ಅಣ್ಣ ಕುಸುಮಾಕರ ದೇಸಾಯಿ ಬಂಧಿತನಾಗಿ ಎರಡು ತಿಂಗಳ ಕಾರಾಗೃಹವಾಸ ವಿಧಿಸಲ್ಪಟ್ಟ ಸಮಾಚಾರ ಬಂದು ಚಳವಳಿ ನಮ್ಮ ಮನೆಯ ಬಾಗಿಲಿಗೇ ಬಂದಿತೆಂದು ನಾನು ಕಲಬುರ್ಗಿ ಕಾಲೇಜಿನ ವಿದ್ಯಾರ್ಥಿಗಳ ಮುಂದಾಳುತನದಲ್ಲಿ ಪಾಲು ಪಡೆಯಬೇಕಾಯಿತು.

ಅಂದು 15 ಆಗಸ್ಟ್, 1947. ಅಲ್ಲಿಗಾಗಲೇ ಕಲಬುರ್ಗಿಯ ಪ್ರಮುಖ ಕಾರ್ಯಕರ್ತರು—ಕಕ್ಕೇರಿ ಹನುಮಂತರಾಯರು, ಕಪಟರಾಳ ಕೃಷ್ಣರಾಯರು, ಔರಾದಿ ದತಾತ್ರೇಯರಾಯರು, ಭಾವುರಾವ್ ದೇವುಳಗಾಂವಕರ್‌ರವರು ಹಾಗೂ ಅಶ್ವತ್ಥರಾವ್ ವಕೀಲ್ ಮುಂತಾದವರು ಜೈಲು ಕಂಡಿದ್ದರು. ಚಂದ್ರಿಕೆ ಜಗನ್ನಾಥರಾಯರಂತೂ ಆಂದೋಲನಕ್ಕೆ ನಾಂದಿ ಆಗಿ ಮೊದಲೇ ಜೈಲು ಕಂಡಿದ್ದರು. ಇನ್ನೇನು ಕಾಂಗ್ರೆಸು ಕಲಬುರ್ಗಿಯಲ್ಲಿ ಮುಗಿದಂತೆಯೇ ಎಂಬ ಕಲ್ಪನೆ ಇದ್ದಿತು. ನಮಗೆ ಅದನ್ನು ಮೀರಿ ಕಾಂಗ್ರೆಸ್ ಆಂದೋಲನಕ್ಕೆ ಚಾಲನೆ ದೊರೆಯುವಂತೆ ಮಾಡಬೇಕಾಗಿದ್ದಿತು. ಅಂತೆಯೇ ಆಗಸ್ಟ್ 15ರಂದು ಪೋಲಿಸರ ಕಣ್ಣಿಗೆ ಮಣ್ಣೆರಚಿ ಪ್ರಭಾತ್‌ಫೇರಿ ಹೊರಡಿಸುವ ಸನ್ನಾಹ ನಮ್ಮದು.

'ಧೋ ಧೋ' ಮಳೆ ಸುರಿಯುತ್ತಿತ್ತು. ಬೆಳಗಿನಿಂದಲೇ ನೂತನ ವಿದ್ಯಾಲಯ ಆಟದ ಮೈದಾನದಲ್ಲಿ ಮೊದಲೇ ನಿಶ್ಚಿತಪಡಿಸಿದಂತೆ ಫುಟ್‌ಬಾಲ್ ಪಂದ್ಯ ನೋಡಲು ಉತ್ಸಾಹಿ ವಿದ್ಯಾರ್ಥಿಗಳು ಹಾಜರಾದರು. ಚಂಡಿನ ಜೊತೆಗೆ ಮುಖ್ಯವಾದ ರಾಷ್ಟ್ರೀಯ ಝಂಡಾವನ್ನು ತರಲು ಮರೆತಿರಲಿಲ್ಲ. ಸುಮಾರು 50–60 ವಿದ್ಯಾರ್ಥಿಗಳ ನಮ್ಮ ತಂಡ ಸರಿಯಾಗಿ ಬೆಳಗ್ಗೆ 6 ಘಂಟೆಗೇನೆ ಸೇರಿ ಪಬ್ಲಿಕ್ ಗಾರ್ಡನ್(ಮಹಬೂಬ್ ಗುಲ್ಶನ್) ನಿಂದ ಕಲಬುರ್ಗಿಯ ಮೇನ್ ರೋಡಿನವರೆಗೆ ಸಪ್ಪಳವಿಲ್ಲದೇನೆ ಬಂದು, ಕಕ್ಕೇರಿ ಹನುಮಂತರಾಯರ ಮನೆ ಮುಂದೆ ಬಂದಕೂಡಲೇ ಫಕ್ಕನೆ ರಾಷ್ಟ್ರಪತಾಕೆ ಹಾರಿಸಿ ಜೈಕಾರ ಮಾಡಿ ಮುಂದೆ ಸಾಗಿತು. ಪೋಲಿಸರಿಗೆ ತಿಳಿಯುವಷ್ಟರಲ್ಲಿ ಆದಷ್ಟು ಹೆಚ್ಚಿನ ದೂರ ಕ್ರಮಿಸಿ ಜನರಲ್ಲಿ ಜಾಗೃತಿಯನ್ನುಂಟುಮಾಡುವುದು ನಮ್ಮ ಉದ್ದಿಶ್ಯವಾಗಿತ್ತು. 'ಜೈಕಾರ' ಮಾಡುತ್ತ ಹೋದಂತೆ ನಮ್ಮ ಫೇರಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಸೇರುತ್ತ ಹೋದರು. 'ಜಗತ್' ಪೋಲಿಸ್ ಸ್ಟೇಶನಿನ ಮುಂದೆ ಹೋದಾಗ ನಮ್ಮ ಜೈಕಾರ

ದಿಂದಲೇ ಎಚ್ಚೆತ್ತ ಒಬ್ಬಿಬ್ಬರು ಪೋಲಿಸರು ಕಣ್ಣೊರಸಿಕೊಳ್ಳುತ್ತ ಬೆಪ್ಪಾಗಿ ನಮ್ಮತ್ತ ನೋಡಿದರು. ಊರಲ್ಲಿಯ ಎರಡು ಪೋಲಿಸ್ ಸ್ಟೇಶನ್‌ಗಳನ್ನು ದಾಟಿಕೊಂಡು ಮುಖ್ಯ ಬಾಜಾರದಲ್ಲಿ ಹಾಯ್ದು ಮತ್ತೆ ಸಾರ್ವಜನಿಕ ಉದ್ಯಾನವನಕ್ಕೆ ನಮ್ಮ ಮೆರವಣಿಗೆ ಬಂದು ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೊರಟುಹೋದೆವು. ಪೋಲಿಸ್ ಸಿ.ಐ.ಡಿ. ಗಳಿಗೆ ಕೈಕೊಟ್ಟು ಆಗಿನ ಪೋಲಿಸರ ಮಾತಿನಲ್ಲಿ 'ಅಮನ್' (ಶಾಂತ) ಇದ್ದ ಕಲಬುರ್ಗಿ ಯಲ್ಲಿ ಕಾಂಗ್ರೆಸ್ಸಿನ 'ಗಡ್‌ಬಡ್' ಎಬ್ಬಿಸಿದೆವು, ಆ ಮಳೆಯಲ್ಲಿ. ನಮ್ಮ ಪ್ರಭಾತ್ ಫೇರಿಯ ಉತ್ಸಾಹದಲ್ಲಿ ಬೆಳಗ್ಗೆ ಹೈದರಾಬಾದಿನಿಂದ ಹೂವಿನ ಮಾಲೆ ತರುತ್ತಿದ್ದವ ರೊಬ್ಬರು ದೊಡ್ಡಮಾಲೆಯನ್ನೇ ನಮ್ಮ ಝಂಡಾಕ್ಕೆ ಹಾಕಿದರು. ಎಷ್ಟು ರೋಮಾಂಚನ ಈಗಲೂ ನೆನೆದುಕೊಂಡರೆ !

ಆಮೇಲೆ ಬಂದ ಪೋಲಿಸರು ತೋಯಿಸಿಕೊಂಡು ಸಿಕ್ಕಿಬಿದ್ದ ವಿದ್ಯಾರ್ಥಿಗಳನ್ನೆಲ್ಲ ಹಿಡಿದು ಹೊಡೆದರು. ಹಾಗೆ ಸಿಕ್ಕಿಬಿದ್ದ ವಿದ್ಯಾರ್ಥಿಗಳಲ್ಲಿ ಈಗ ಪೋಲಿಸ್ ಸರ್ಕಲ್ ಇನ್‌ಸ್ಪೆಕ್ಟರ್ ಆಗಿರುವ ಗೆಳೆಯ ಗುರುಬಸವಯ್ಯ ಒಬ್ಬರು.

ಹೀಗೆ ಆಂದೋಲನದಲ್ಲಿ ನನ್ನ ಸಕ್ರಿಯ ಪಾತ್ರ ಪ್ರಾರಂಭವಾಯಿತು. ಈಗ ಪೋಲಿಸ್ ಐ.ಜಿ.ಪಿ. ಆಫೀಸಿನಲ್ಲಿರುವ ಮಂದ್ರವಾಟ ವೆಂಕಣ್ಣ ಮುಂತಾದ ಗೆಳೆಯರೊಡನೆ ಆಮೇಲೆ ಶಾಲೆಕಾಲೇಜುಗಳ ಪಿಕೆಟಿಂಗ್‌ನ್ನು ಎಲ್ಲೂ ಗದ್ದಲವಿಲ್ಲದೆ, ಸ್ವಲ್ಪೇ ಅವಧಿಯ ಸೂಚನೆಗಳಿಂದಲೇ ಸಾಧಿಸುವ ಕಲೆ ಸಾಧಿಸಿಕೊಂಡೆವು. ಒಂದು ವರ್ಷ ಕಾಲೇಜಿನ ಮುಷ್ಕರವಾಗಿ ಹೆಚ್ಚಿನ ವಿದ್ಯಾರ್ಥಿಗಳು ಕಾಲೇಜು ತೊರೆದರು. ಆದರೆ ಡಿಸೆಂಬರ್‌ದಲ್ಲಿ ಮತ್ತೆ ಕಾಲೇಜುಗಳು ಪ್ರಾರಂಭವಾದಾಗ ನಮ್ಮ ಎಷ್ಟೋ ಗೆಳೆಯರು ಮತ್ತೆ ಕಾಲೇಜು ಸೇರುತ್ತಿದ್ದಾರೆಂದು ನಮಗೆ ತಿಳಿದುದರಿಂದ ಗದಗು ಕ್ಯಾಂಪ್ ಸೇರಬೇಕೆಂದು ಹೋಗಿದ್ದ ನನಗೆ ಕಲಬುರ್ಗಿಗೆ ಮರಳಿ ಬರುವಂತಾಯಿತು. ಮತ್ತೆ ಪಿಕೆಟಿಂಗ್ ಮಾಡುವ ಪ್ರಯತ್ನದಲ್ಲಿದ್ದಾಗ 17 ಡಿಸೆಂಬರ್ 1947ರಂದು ನನ್ನ ದಸ್ತಗಿರಿ ನನ್ನ ಗೆಳೆಯ ಕೃಷ್ಣ ಗುನ್ನಾಳನೊಂದಿಗೆ ಆಯಿತು. ಆಗ ನನಗಿನ್ನೂ 16 ವರ್ಷ ವಯಸ್ಸು. ನಮ್ಮನ್ನು 'ಜಗತ್' ಪೋಲಿಸ್ ಸ್ಟೇಶನ್ನಿನಲ್ಲಿ ಇಟ್ಟಿರುವಾಗ ನಮಗೆ ಊಟ ಕೊಡಲು, ಜೈಲಿನಿಂದ ಬಿಡುಗಡೆಹೊಂದಿ ಬಂದಿದ್ದ ನಮ್ಮ ಅಣ್ಣ ಕುಸುಮಾಕರ ದೇಸಾಯಿ ಬಂದ. ಆತನಿಗೆ ನಾನು ಕೂಡ ಆತನಂತೆಯೇ ಜೈಲಿಗೆ ಹೋಗುತ್ತೇನೆಂದು ಹೇಳಿದುದು ನೆನಪಾಗಿ ಪೋಲಿಸ್ ಇನ್‌ಸ್ಪೆಕ್ಟರನ ಎದುರಿನಲ್ಲಿಯೇ "ಕಂಗ್ರಾಚ್ಯುಲೇಶನ್ಸ್" ಎಂದು ಹೇಳಿದ. ಆದನ್ನು ಕೇಳಿ ಕೆರಳಿದ, ಕೇವಲ ಉರ್ದು ಬಲ್ಲ ಇನ್ಸ್‌ಪೆಕ್ಟರ್, "ಏನು, ಅವನಿಗೆ ನನ್ನ ಎದುರಿಗೇ 'ಕಾಂಗ್ರೆಸ್ಸೀ' ಎಂದು ವರ್ಣಿಸುತ್ತೀಯಾ ? ಚೋಟುದ್ದದ ಇವನು ದೊಡ್ಡ ಲೀಡರನಾಗಿದ್ದಾನೆ, ಭಾಷಣಮಾಡುತ್ತಾನೆ ! ಸ್ವಾಮಿ ರಮಾನಂದ ತೀರ್ಥನಾಗಿದ್ದಾನೆ. ಆಗಲಿ, ನಿನ್ನ ಕಾಂಗ್ರೆಸ್ಸೀ ತಮ್ಮ ಜೈಲಿನ ರೊಟ್ಟೀ ಕಡಿಯಲಿ. ಆಗ ಗೊತ್ತಾಗುತ್ತದೆ!" ಎಂದು ಮುಕ್ತಾಫಲ ಉದುರಿಸಿದ.

ಮರುದಿನ ನಮ್ಮನ್ನು ಕೋರ್ಟಿನಲ್ಲಿ ಹಾಜರುಪಡಿಸಿ ನಮ್ಮನ್ನು ಒಯ್ದಾಗ ಜೈಲಿಗೆ ಸಂಜೆ 7 ಘಂಟೆ. ಅಲ್ಲಿ ಒಂದು ಸಂತಸದ ಸುಸ್ವಾಗತ—ಸರಳಿನ ಕಂಡಿಯ ಮೂಲಕ ನಮಗೆ ದೊರಕಿತು. ಅದು ನನ್ನ ಆತ್ಮೀಯ ಗೆಳೆಯ ಎ. ವೆಂಕಣ್ಣನಿಂದ. ಅವನು ನನ್ನ ಕಾಲೇಜು ಸಹಪಾಠಿ (ಈಗ ಪೋಲಿಸ್ ಸರ್ಕಲ್ ಇನ್ಸ್‌ಪೆಕ್ಟರ್).

ನಮ್ಮ ಮೇಲೆ ಟೆಲಿಫೋನ್ ತಂತಿ ಕತ್ತರಿಸಿದ, ಸರಕಾರದ ವಿರುದ್ಧ ದಂಗೆ ಏಳುವಂತೆ ಜನರನ್ನು ಪ್ರಚೋದಿಸಿದ ಆರೋಪಗಳನ್ನು ಹೊರಿಸಿ ಮೊಕದ್ದಮೆ ಹೂಡಲಾಯಿತು. ಆದಕಾರಣ ಆಗ ನಾವು 'ಅಂಡರ್-ಟ್ರಯಲ್ಸ್'. ಮೊಕದ್ದಮೆಯ ಹಿಯರಿಂಗ್-'ಪೇಷಿ'-ದಿನದಂದು ನಮ್ಮನ್ನು ಕೋರ್ಟಿಗೆ ಕರೆದೊಯ್ಯುತ್ತಿದ್ದುದು ನಮಗೆ ಬಹಳ ಸಂತೋಷದ ವಿಷಯವಾಗಿತ್ತು. ನಮ್ಮನ್ನು 'ಬಂದು' ಮಾಡಿನ ವ್ಯಾನಿನಲ್ಲಿ ಉಳಿದ ಕ್ರಿಮಿನಲ್ ಆಪಾದಿತರೊಂದಿಗೆ ಒಯ್ಯಲಾಗುತ್ತಿತ್ತು. ಒಂದು ಸಲ ಬೇರೆ ಯಾರೂ ಇರದೆ ನಾವಿಬ್ಬರೇ ಕೋರ್ಟಿಗೆ ಹೋಗಬೇಕಾಯಿತು. ನಾವು ಜೈಲಿನ ಹೊರಗಡೆ ಬಂದು 9 ಗಂಟೆಗೆ ಕುಳಿತೆವು. ಆಗ ವ್ಯಾನ್ ಬರಲು ತಡವೆಂದೂ ಅದಕ್ಕೆ ಸ್ವಲ್ಪ ರಿಪೇರಿ ಆಗುತ್ತಿದೆಯೆಂದೂ ಡ್ರೈವರ್ ಹೇಳಿದ. ನಾವು ಸಂತೋಷದಿಂದ, "ಹಾಗಿದ್ದರೆ ನಮ್ಮನ್ನು ನಡೆಸಿಕೊಂಡೇ ಹೋಗಿರಿ. ಕೈಗೆ ಬೇಡಿಗಳನ್ನೂ ಹಾಕಿರಿ. ಇವತ್ತು ವ್ಯಾನು ಬೇಡ, ಮಹರಾಯಾ" ಎಂದು ಡ್ರೈವರ್‌ನನ್ನು ಕೇಳಿಕೊಂಡೆವು. ತಲೆ ಬೆಳ್ಳಗಾದ ಡ್ರೈವರ್ ನಮ್ಮ ಮಾತಿನಿಂದ ಬಹಳ ಪ್ರಭಾವಿತನಾದಂತೆ ಕಂಡು ಬಂತು. ಆತ ನಮ್ಮ ಹತ್ತಿರ ಬಂದು, "ಬಚ್ಚೇ, ನೀನು ಮಾಡುವ ಕೆಲಸದಿಂದ ನನಗೆ ಬಹಳ ಸಂತೋಷವಾಗಿದೆ. ನಾಳೆ ಅಲ್ಲಾ ನಿಮ್ಮ ರಾಜ್ಯನನ್ನೇ ತರುತ್ತಾನೆಂದು ಕಾಣುತ್ತದೆ, ನೀನು ಮುಂದೆ ಲಗ್ನವಾದಾಗ ನಿನ್ನ ಬೀಬಿಗೆ ಎದೆ ಉಬ್ಬಿಸಿ ಹೇಳುವ ಕೆಲಸ ಮಾಡುತ್ತೀಯ !" ಎಂದು ಬೆನ್ನುಚಪ್ಪರಿಸಿದ. ಅಷ್ಟರಲ್ಲಿ ಕೆಂಪು ಮೋರೆಯ ದಫೇದಾರನೊಬ್ಬ, "ಆ ಹುಡುಗರ ಮಾತಿನಲ್ಲಿ ಮೋಸಹೋದೀಯೋ, ಜೋಕೆ ! ಅವರು ಬಹಳ ಘಾತುಕರು !" ಎಂದೂ, ತಾನು ನಮ್ಮನ್ನು ವ್ಯಾನು ಇಲ್ಲದೆಯೇ ಕೋರ್ಟಿಗೆ ಕರೆದೊಯ್ಯುವ ಜಿಮ್ಮೇದಾರಿ ವಹಿಸಲಾರೆನೆಂದೂ ಹೇಳಿ ಇಬ್ಬರಿಗಾಗಿಯೇ ಗಾಡಿ ತರಿಸಿದ.

ಅಂತೂ ಕೊನೆಗೊಮ್ಮೆ ನಮ್ಮ 'ಪೇಷಿ'ಗಳು ಮುಗಿಯುವ ಕಾಲ ಬಂದೇ ಬಂತು. ಅಂದು ನಮ್ಮ ವಿರುದ್ಧ ಸಾಕ್ಷಿ ಪುರಾವೆಗಳನ್ನು ಹಾಜರುಪಡಿಸಲಾಯಿತು. ನಮ್ಮ ಮೇಲೆ ಗುರುತರ ಅಪಾದನೆಗಳನ್ನು ಮಾಡಿದ್ದರಿಂದ ಹುಡುಗರಿಗೇನಾದರೂ ಹೆಚ್ಚಿನ ಶಿಕ್ಷೆ ಕೊಟ್ಟಾರೆಂದು ಸ್ವತಃ ಹೆಸರಾಂತ ಸಿವಿಲ್ ಅಡ್ವೊಕೇಟರಾಗಿದ್ದ ನಮ್ಮ ದೊಡ್ಡಪ್ಪ ಸಂಜೀವರಾವ್ ದೇಸಾಯಿ ಅವರು ನಮ್ಮ ಪರವಾಗಿ ನರಹರರಾವ್ ಅನಗರಕರ ವಕೀಲರನ್ನು ನೇಮಿಸಿದ್ದರು. ಆದರೆ ವಕೀಲರೆಲ್ಲರೂ ಮುಂದೆ ಕೋರ್ಟುಗಳಿಗೆ ಬಹಿಷ್ಕಾರ ಹಾಕಿದ್ದರಿಂದ ನಮ್ಮ 'ಪೇಷಿ'ಯ ದಿನ ಕೋರ್ಟಿನಲ್ಲಿ ನಮ್ಮ ಕೇಸು ಬಂದಾಗ ನಾವೇ ನಮ್ಮ ಪ್ರಕರಣ ನಡೆಸುತ್ತೇವೆಂದು ತಿಳಿಸಿದಾಗ ಅಲ್ಲಿದ್ದ ಬಹಳ ಜನ ಆಶ್ಚರ್ಯ

ಪಟ್ಟರು. ಆದರೆ ಮ್ಯಾಜಿಸ್ಟ್ರೇಟರು ಮಾತ್ರ ಬಹಳ ಸಂತೋಷಪಟ್ಟಂತೆ ಕಂಡುಬಂತು. ಅವರು ನಗುಮುಖದಿಂದ, "ಹೌದೇನು, ಬಹಳ ಒಳ್ಳೆಯದು. ನೀವು ಇಲ್ಲಿ ವಕೀಲರು ಕುಳಿತುಕೊಳ್ಳುವ ಟೇಬಲ್ಲಿನ ಬಳಿ ಕುಳಿತುಕೊಂಡು ನಿಮ್ಮ ಫೈಲು ನೋಡಿರಿ" ಎಂದು ಅಪ್ಪಣೆ ಕೊಟ್ಟರು. ಹಾಗೆ ನಾವು ಹೋಗಿ ಕುಳಿತಾಗ ನಮ್ಮನ್ನು ಕಾಯುತ್ತಿದ್ದ ಪೋಲಿಸರು ತಬ್ಬಿಬ್ಬಾಗಿ ಹೊರಹೋಗಿ ಕೋರ್ಟಿನ ಮೂಲೆಯಲ್ಲಿ ನಿಂತರು. ನಾವು ಫೈಲು ನೋಡುವ ಪ್ರಯತ್ನಮಾಡುತ್ತಿದ್ದಾಗ ಒಬ್ಬ ತರುಣ ಮುಸ್ಲಿಂ ವಕೀಲ ನಮ್ಮ ಹತ್ತಿರ ಬಂದು ತಾನು ನಮ್ಮ ಪರವಾಗಿ ವಕಾಲತ್ತು ವಹಿಸಬಹುದೇ? ಎಂದು ಕೇಳಿದ. ಆಗ ಅಲ್ಲಿಯೇ ಇದ್ದ ಇನ್ನೊಬ್ಬ ಹಿರಿಯ ವಕೀಲ ಸಿಡಿಮಿಡಿಗೊಂಡು, "ಅವರು ನಮ್ಮ ರಾಜ್ಯವನ್ನೇ ಕಸಿದುಕೊಳ್ಳುತ್ತೀವೆಂದು ಹೊರಟಾಗ ನೀನು ಅವರಿಗೆ ಸಹಾಯಮಾಡು, ಚೆನ್ನಾಗಿದೆ! ಅವರು ಬೇಡವೆಂದಾಗ ನೀನೇಕೆ ಮೇಲೆಬಿದ್ದು ಹೋಗುತ್ತೀಯಾ?" ಎಂದು ಬೆದರಿಸಿ ಅವನನ್ನು ತೆಪ್ಪಗಾಗಿಸಿದ. ಆದರೆ ಅದರಿಂದ ನಾವೇನು ಅಂಜುವ ಪ್ರಶ್ನೆಯೇ ಇರಲಿಲ್ಲ. ಜೈಲಿನಲ್ಲಿ ಮೊಹರಿರ ಭೀಮರಾವ್ ಕುಲಕರ್ಣಿ ಹಾಗೂ ಕೊಪ್ಪಳದ ಜನಾರ್ದನರಾವ್ ವಕೀಲರಿಂದ ತರಬೇತಿ ತೆಗೆದುಕೊಂಡ ನಾನು 'ಜಿರಾ' (ಪಾಟೀ ಸವಾಲು) ಮಾಡಿ ನನ್ನ ವಾದವನ್ನೂ ಕೂಡ ಮುಗಿಸಿಯೇ ಬಿಟ್ಟೆ. "ನಾವು ಪಿಕೆಟಿಂಗ್ ಮಾಡಿದ್ದು ನಿಜ. ಸತ್ಯಾಗ್ರಹ ಹೂಡಲು ಇಚ್ಛೆ ಇದ್ದುದು ನಿಜ. ಆದರೆ ಈ ಸುಳ್ಳು ಮೊಕದ್ದಮೆ ಏಕೆ?" ಎಂದು ಕೇಳಿದೆ. ಕೋರ್ಟಿನ ತುಂಬ ಇದ್ದ ಜನರು ನಮ್ಮ ಧೈರ್ಯಕ್ಕಾಗಿ ಆಶ್ಚರ್ಯಪಡುವವರೇ. ಅಂತೂ ಕೊನೆಗೆ 'ಹುಡುಗರು ವಿದ್ಯಾರ್ಥಿಗಳೂ, ಕಡಿಮೆ ವಯಸ್ಸಿನವರೂ' ಇದ್ದುದನ್ನು ಲಕ್ಷ್ಯದಲ್ಲಿಟ್ಟು ನಮಗೆ ಜಾಮೀನು ಮಂಜೂರು ಮಾಡಲಾಯಿತು. ನಾವು ಅದನ್ನು ನಿರಾಕರಿಸಿ ಮತ್ತೆ ಜೈಲನ್ನೇ ಬಯಸಿದೆವು.

ಫೆಬ್ರವರಿ 1948ರಲ್ಲಿ ನನ್ನನ್ನು ಭೇಟಿಯಾಗಲು ಬಂದ ನನ್ನ ತಂಗಿಯಿಂದ ಮಾರ್ಚ್ 1ರಂದು ನಮ್ಮ ತಂದೆಯವರು ಕಲಬುರ್ಗಿಯಲ್ಲಿ ಸತ್ಯಾಗ್ರಹ ಮಾಡಲಿರುವರೆಂದು ತಿಳಿಯಿತು. ಅವರು ಅದಕ್ಕಾಗಿ ಗದಗಿನಿಂದ ಬರುವವರಿದ್ದರು. ನಾನು ಆ ದಿವಸವನ್ನೇ ಎದುರುನೋಡುತ್ತಿದ್ದೆ. ಮಾರ್ಚ್ 3ನೆಯ ತಾರೀಕು ಸಾಯಂಕಾಲದ ವೇಳೆಗೆ ನಾನು ತಂದೆಯವರ 'ಬರುವಿಕೆ'ಯನ್ನೇ ಎದುರುನೋದುತ್ತಿದ್ದೆ. ಯಾರಿಗೂ ಆ ಬಗ್ಗೆ ಹೇಳಿರಲಿಲ್ಲ.

ಮಧ್ಯಾಹ್ನ 3 ಗಂಟೆ ಸುಮಾರು ಇರಬಹುದು. ನಾನಿದ್ದ ಬರಾಕಿಗೇನೆ ತಂದೆಯವರನ್ನು ಕರೆತರಲಾಯಿತು. ಅವರು ತುಂಬಾ ಉತ್ಸಾಹದಲ್ಲಿ ಇದ್ದರು. ನಾನು ನಮಸ್ಕಾರ ಮಾಡಿದೆ. "ತಂದೆಗಿಂತ ಮೊದಲು ಮಗ ಜೈಲಿಗೆ!" ಎಂದು ಕೆಲವರು ನನ್ನ ಬಗ್ಗೆ ಪ್ರಶಂಸೆಯ ಮಾತನ್ನಾಡಿದರು. ಅಂತೂ ಅಲ್ಲಿ ಇದ್ದವರೆಲ್ಲರಿಗೂ ಅದೊಂದು ಅಪೂರ್ವ ಸಮಾಗಮವೆನಿಸಿತು. ತಂದೆಯವರಿಗೆ ಅಲ್ಲಿ ಬಹಳಷ್ಟು ಜನ ಪರಿಚಯದವರಿದ್ದರು. ಎಲ್ಲರಿಗೂ ಜೈಲಿನ ಹೊರಗಿನ ವರ್ತಮಾನ ಕೇಳುವ ಕುತೂಹಲ. ನನಗೆ

ಸತ್ಯಾಗ್ರಹ ಹೇಗೆ ನಡೆಯಿತು, ಅವರಿಗೇನೂ ಪೋಲಿಸರಿಂದ ತೊಂದರೆಯಾಗಲಿಲ್ಲವೆ, ಎಂದು ತಿಳಿದುಕೊಳ್ಳುವ ಆತುರ. ಅವರು ಮನೆಯಲ್ಲಿ ಮಕ್ಕಳಿಂದ ಆರತಿ ಮಾಡಿಸಿಕೊಂಡು, ತಮ್ಮ ಹಿರಿಯಣ್ಣನವರ ಆಶೀರ್ವಾದ ಪಡೆದು, ಚೀಲದಲ್ಲಿ ಧ್ವಜ ಬಚ್ಚಿಟ್ಟುಕೊಂಡು ಬಂದು ಬಾಜಾರದ ಅತಿಮುಖ್ಯ ಸ್ಥಳ ಹಾಗೂ ಪೋಲಿಸ್ ಸ್ಟೇಶನ್ನಿನ ಎದುರಿನ ಚೌಕದಲ್ಲಿ 'ಝಂಡಾ' ಹಾರಿಸಿ ಸತ್ಯಾಗ್ರಹಮಾಡಿ ಬಂಧನವನ್ನು ಅಪ್ಪಿದರು. ಆಮೇಲೆ ಕೋರ್ಟಿನ ನಾಟಕವಾಗಿ ಒಂದು ವರುಷದ ಕಠಿಣ ಸಜೆಯೊಂದಿಗೆ ಜೈಲಿಗೆ ಆಗಮಿಸಿದ್ದರು. ಜೈಲಿಗೆ ಬಂದಾಗ ಅವರ ಸಾಮಾನಿನ ಝಡತಿ ಆಯಿತು. ಆಗ ತಮ್ಮ ಜನಿವಾರದಲ್ಲಿ ಧರಿಸಿದ ಸುದರ್ಶನವನ್ನು (ಸಾಲಿಗ್ರಾಮಯುಕ್ತ ಉಂಗುರ) ತೆಗೆದಿಡಬೇಕೆಂದು ಅವರಿಗೆ ಹೇಳಲಾಯಿತು. ಆಗ ಅವರು ದಿನಾಲೂ ಅದನ್ನು ಪೂಜೆ ಮಾಡದೆ ತಾವು ಉಣ್ಣುವಂತಿಲ್ಲವಾದ್ದರಿಂದ ಅದನ್ನು ತಾವು ತೆಗೆಯುವ ಹಾಗಿಲ್ಲವೆಂದು ಹೇಳಿದರಂತೆ. ಕೊನೆಗೆ ಜೈಲರನ ಹತ್ತಿರವೇ ನಿರ್ಣಯಕ್ಕೆ ತಕರಾರು ಹೋಯಿತು. ಆಗ ಜೈಲರನು "ಬಂಗಾರದಂಥ ಬೆಲೆಯುಳ್ಳ ಸಾಮಾನನ್ನು ಖಂಡಿತವಾಗಿ ಜೈಲಿನ ಒಳಗೆ ತೆಗೆದುಕೊಂಡು ಹೋಗಲು ಅಪ್ಪಣೆ ಕೊಡುವುದಿಲ್ಲ" ಎಂದಾಗ ಇವರು, "ನಿಮ್ಮ ನಿಯಮ ಹಾಗೆಯೇ ಇದ್ದರೆ ಸರಿ. ನನ್ನ ಸತ್ಯಾಗ್ರಹ ಜೈಲಿನಲ್ಲಿಯೂ ನಡೆಯುತ್ತದೆ" ಎಂದು ಹೇಳಿದರಂತೆ. ಹೀಗೆ ನಮ್ಮ ತಂದೆಯವರೇ ಗೆದ್ದು ಸುದರ್ಶನದೊಂದಿಗೇ ಬಂದರು, ಎಂದು ಅಭಿಮಾನ ಪಡುತ್ತಿರುವಾಗಲೇ ಜೈಲಿನ ವಾರ್ಡರ್‌ನೊಬ್ಬ ಬಂದು ನಮ್ಮ ತಂದೆಯವರು 'ಬದ್ರಿಕಾ' ಅರ್ಥಾತ್ ಬೇರೆ ಜೈಲಿಗೆ ಸಾಗಿಸಲು ಸಿದ್ಧರಾಗಿರಬೇಕೆಂದು ತಿಳಿಸಿದ. ಹೀಗೆ ಇಲ್ಲಿಗೆ ಬಂದ 3–4 ತಾಸಿನೊಳಗೇನೆ ಅವರನ್ನು ಮತ್ತೆ ಜೈಲಿನ ಆಫೀಸಿನೊಳಗೆ ಕರೆದೊಯ್ದು ರಾತ್ರಿ ಬೇರೆ ಕಡೆಗೆ ಕರೆದುಕೊಂಡು ಹೋಗಲಾಯಿತು. ಆಮೇಲೆ ಅವರನ್ನು ಹೈದರಾಬಾದಿಗೆ ಒಯ್ಯಲಾಯಿತೆಂದೂ, ಜಗಳಗಂಟ ಸತ್ಯಾಗ್ರಹಿಗಳನ್ನು ಕಲಬುರ್ಗಿಯಲ್ಲಿ ಇಟ್ಟುಕೊಳ್ಳಲು ಜೈಲರನು ಸಿದ್ಧನಾಗಿರಲಿಲ್ಲವೆಂದೂ ತಿಳಿಯಿತು. ಹೀಗೆ ತಂದೆ ಮಕ್ಕಳಿಬ್ಬರೂ ಬೇರೆ ಬೇರೆ ಜೈಲಿನಲ್ಲಿರುವಂತಾಯಿತು.

ಇದಾದ ಸ್ವಲ್ಪ ದಿನಗಳಲ್ಲಿಯೇ ರಾಯಚೂರಿನಿಂದ ಕೆಲಜನರನ್ನು ಕಲಬುರ್ಗಿಗೆ ತಂದಿದ್ದಾರೆಂದೂ, ಅದರಲ್ಲಿ ನಮ್ಮ ಕಕ್ಕ ಭೀಮಸೇನರಾಯರು ಇರುವರೆಂದೂ ತಿಳಿಯಿತು. ಭೀಮಸೇನರಾಯರು ನಮ್ಮ ತಂದೆಯವರ ತಮ್ಮ (ಕಕ್ಕನ ಮಗ). ಅವರು ನಮ್ಮ ತಂದೆಯವರ ಶಾಲೆ ವಿದ್ಯಾನಂದ ಗುರುಕುಲದ (ಕುಕನೂರು) ವಿದ್ಯಾರ್ಥಿ, ಹಾಗೂ ಅಲ್ಲಿ ಕೆಲದಿನ ಡ್ರಾಯಿಂಗ್ ಶಿಕ್ಷಕರಾಗಿದ್ದರು. ನನ್ನ ಮೇಲೆ ಹೆಚ್ಚಿನ ಪ್ರೀತಿ, ವಾತ್ಸಲ್ಯಗಳನ್ನು ತೋರಿಸಿದವರು. ನನಗೆ ಅವರು ಬಂದಿದ್ದಾರೆಂದು ತಿಳಿದು ಬಹಳ ಸಂತೋಷವಾಯಿತು. ಆದರೆ ಅವರೊಂದು, ನಾನೊಂದು 'ಬರಾಕು'ಗಳಲ್ಲಿ ಇದ್ದುದರಿಂದ ಮೊದಲು ಅವರನ್ನು ನೋಡಲು ಆಗಲೇ ಇಲ್ಲ. ಆದರೆ ಚಿಕ್ಕ ಹುಡುಗನೆಂದು ಕರೆಸಿಕೊಳ್ಳುತ್ತಿದ್ದ ನನಗೆ ಜೈಲಿನ ವಾರ್ಡರುಗಳ ಮನವೊಲಿಸಿ ಅವರಿದ್ದ 'ಬರಾಕಿ'ಗೆ


ಭೀಮಸೇನರಾವ್ ದೇಸಾಯಿ

ಹೋಗಲು ಹೆಚ್ಚಿನ ತೊಂದರೆಯಾಗಲಿಲ್ಲ. ಕಕ್ಕನವರು ಸ್ವಲ್ಪ ಸೊರಗಿದಂತೆ, ಜಡ್ಡಿನಲ್ಲಿ ಇದ್ದಂತೆ ಕಂಡು ಬಂದರು. ನಾನು "ರಾಯಚೂರು ಜೈಲಿನಲ್ಲಿ ತೊಂದರೆ ಆಯಿತೆ? ನಿಮಗೆ ಜೈಲುವಾಸ ಬೇಸರವಾಯಿತೆ?" ಎಂದು ಕೇಳಿದೆ. ಅವರು ನಕ್ಕು, "ಸ್ವಲ್ಪ ಪ್ರಕೃತಿ ಕೆಟ್ಟಿದೆ. ಗಾಬರಿ ಆಗುವಂಥಾದ್ದೇನಿದೆ? ಈ ಜೈಲನ್ನೇ ನುಂಗುವ ಉತ್ಸಾಹ, ಧೈರ್ಯವಿದೆ!" ಎಂದರು. ಆಮೇಲೆ ಅವರನ್ನು ದಿನಾಲೂ, ಬರಾಕುಗಳನ್ನು ತೆಗೆದಾಗ, ಊಟಕ್ಕೆ ಕೊಡುವಾಗ ಭೆಟ್ಟಿಯಾಗುವ ಅವಕಾಶ ಮಾಡಿಕೊಂಡೆ.

ಕಲಬುರ್ಗಿಯ ಕೇಂದ್ರ ಕಾರಾಗಾರ (ಸದರ್ ಮಹಬಸ್ ಸುಬಾ) ಊರ ಮಧ್ಯದಲ್ಲಿತ್ತು (ಈಗ ಬೇರೆ ಕಡೆಗೆ ವರ್ಗಾಯಿಸಿದ್ದಾರೆ) ; ಹಾಗೂ ಬಾಜಾರದ ಪಕ್ಕದಲ್ಲಿಯೇ ಇತ್ತು. ಹೊರಗೆ ಒಂದು ದೊಡ್ಡ ಗೋಡೆ, ಅದರನಂತರ ಒಳಾಂಗಣ. ಅದು ದಾಟಿದನಂತರ ಮತ್ತೊಂದು ಗೋಡೆ. ಅದಕ್ಕೆ ಹತ್ತಿರ ಸಣ್ಣ ಸಣ್ಣ ಅಂಗಳಗಳಿದ್ದು ಅವಕ್ಕೆ ಸಂಬಂಧಿಸಿದಂತೆ ಬೇರೆ ಬೇರೆ ಬರಾಕುಗಳಿದ್ದುವು. ನಮಗೆ, ಕಲಬುರ್ಗಿಯ ಜನರಿಗೆ, ಜೈಲಿನಲ್ಲಿ ಸತ್ಯಾಗ್ರಹಿಗಳಿರುವುದನ್ನು ನೆನಪುಮಾಡಿಕೊಡುವ ಆಸೆಯಾಯಿತು. ಅದಕ್ಕೆ ಪುಢಾರಿಯಾಗಿ ಎಣ್ಣೆ ವೆಂಕಣ್ಣ ನಿಂತ. ಸಾಯಂಕಾಲ ಬರಾಕಿನೊಳಗೆ ಹೋಗುವ ಮೊದಲು ಎಲ್ಲರೂ ಅಂಗಳಗಳಲ್ಲಿ ನಿಂತು ಸಾಮೂಹಿಕ ಪ್ರಾರ್ಥನೆ, ರಾಷ್ಟ್ರಗೀತೆ ಹೇಳತಕ್ಕದ್ದೆಂದು ನಿರ್ಣಯಿಸಿದ. ಅದರಂತೆ ಏಪ್ರಿಲ್ 8-9ನೇ ದಿನಾಂಕ ಇರಬೇಕು, ನಮ್ಮ ಪ್ರಾರ್ಥನೆ, ಗೀತೆ ಸಾಯಂಕಾಲ ಪ್ರಾರಂಭವಾಯಿತು. ಒಮ್ಮೆಲೇ ದೊಡ್ಡ ಧ್ವನಿಯಲ್ಲಿ ಪ್ರಾರಂಭವಾದ ಪ್ರಾರ್ಥನೆ ರುಚಿಸದೆ ಜೈಲಿನ ಅಧಿಕಾರಿಗಳು ಪ್ರಾರ್ಥನೆ ಹೇಳಕೊಡುವವರಿಬ್ಬರನ್ನೂ ಅದನ್ನು ನಿಲ್ಲಿಸಲು ಹೇಳಿದರು. ಅವರು ಒಪ್ಪದಿದ್ದಾಗ ಅವರನ್ನು 'ಸಾಲಿಟರಿ ಸೆಲ್'ನಲ್ಲಿ ಹಾಕುವುದಾಗಿ ಹೇಳಿ ಕರೆದೊಯ್ಯಲಾಯಿತು. ಅವರ ಹಿಂದೆಯೇ ನಮ್ಮ ಗೆಳೆಯ ಎ. ವೆಂಕಣ್ಣ ಪ್ರಾರ್ಥನೆ ಪ್ರಾರಂಭ ಮಾಡಿದ; ಅವನನ್ನೂ ಕರೆದೊಯ್ಯಲಾಯಿತು. ಆಗ ನನ್ನ ಸರದಿ; ಹೀಗೆ ಒಬ್ಬರ ಹಿಂದೊಬ್ಬರು ಬರುವುದನ್ನು ನೋಡಿ ಜೈಲರನು ಸಾಮೋಪಾಯವೇ ಯೋಗ್ಯವೆಂದು ಎಲ್ಲರನ್ನೂ ಮತ್ತೆ ಒಳಗೆ ಕಳುಹಿಸಿದ. ಮರುದಿನದಿಂದ ನಮಗೆ ಸಾಯಂಕಾಲದ ಪ್ರಾರ್ಥನೆ ವೇಳೆ ಎದುರು ನೋಡುವಂತಾಯಿತು. ಆದರೆ ಜೈಲರನ ಅಧಿಕಾರಕ್ಕೆ ಅದೊಂದು ದೊಡ್ಡ ಆಘಾತ.

ದಿನಾಂಕ ಏಪ್ರಿಲ್ 13ರಂದು ಸಾಯಂಕಾಲ ನಮ್ಮ ಕಕ್ಕನವರು ಇದ್ದ ಆವರಣದಲ್ಲಿ ಸತ್ಯಾಗ್ರಹಿಗಳೆಲ್ಲಾ ಪ್ರಾರ್ಥನೆಗೆ ಸೇರಿದ್ದರು. ಆಗ ಒಮ್ಮಿಂದೊಮ್ಮೆಲೇ

ಜೈಲಿನ 'ಗಂಡಾಂತರ' ಸೂಚಿಸುವ ಗಂಟೆ ಬಡಿಯಲಾರಂಭಿಸಿತು. ನಾವು ಯಾರೋ ಕೈದಿಯೊಬ್ಬನು ಓಡಿಹೋಗಿರಬೇಕೆಂಬುದಾಗಿ ಭಾವಿಸಿ ಅವನು ಎಲ್ಲಿಂದ ಓಡಿಹೋಗಿರಬಹುದು ಎಂಬುವರ ಬಗ್ಗೆ ಊಹಾಪೋಹ ಮಾಡುತ್ತಿದ್ದೆವು. ಜೈಲಿನ ಹೊರಗಿನಿಂದ ರಜಾಕಾರರೂ ಜೈಲಿನ ಬರ್ಕಂದಾರರೂ (ಪೋಲಿಸರು) ಹೆಚ್ಚಿನ ಸಂಖ್ಯೆಯಲ್ಲಿ ಲಾಠಿಗಳನ್ನು ಹಿಡಿದುಕೊಂಡು ಒಳಹೊಕ್ಕರು. ನಮ್ಮ ಪಕ್ಕದ ಪ್ರಾರ್ಥನಾಸ್ಥಳದಲ್ಲಿ ನಿಂತ ಸತ್ಯಾಗ್ರಹಿಗಳನ್ನು ಥಳಿಸಿ ಒಳಗೆ ಬರಾಕಿನಲ್ಲಿ ದೂಡಲು ಪ್ರಾರಂಭಮಾಡಿದರು. ನಮ್ಮ ಬರಾಕಿನಿಂದ ಅಲ್ಲಿ ಏನು ನಡೆಯುತ್ತಿದೆ ಎಂಬುದನ್ನು ನಾವು ಕಿಟಕಿಯಿಂದ ನೋಡಬಹುದಾಗಿತ್ತು. ಎಲ್ಲರನ್ನೂ ಹೊಡೆದಟ್ಟಿ, ಸತ್ಯಾಗ್ರಹಿಗಳ ಸೊಕ್ಕನ್ನು ಮುರಿದ ಹೆಮ್ಮೆಯಿಂದ ರಜಾಕಾರರು ಮರಳಿದರು. ರಾತ್ರಿಯಾದಂತೆ ಬೇರೆ ಬರಾಕಿನಿಂದ ಸಮಾಚಾರ ಬಂದು, ಯಾರೋ ಒಬ್ಬರಿಗೆ ಬಲವಾದ ಪೆಟ್ಟು ಬಿದ್ದಿದೆಯೆಂದೂ, ಆಸ್ಪತ್ರೆಗೆ ಸಾಗಿಸಿದ್ದಾರೆಂದೂ ತಿಳಿಯಿತು. ನಮ್ಮಲ್ಲಿ ಎಲ್ಲರಿಗೂ ಒಂದು ರೀತಿಯ ಅಸಮಾಧಾನ, ಕಾತರ. ಯಾರೆಂಬುದು ಸರಿಯಾಗಿ ಗೊತ್ತಾಗಲಿಲ್ಲ. ರಾತ್ರಿ 12 ಗಂಟೆ ಸುಮಾರಿಗೆ ಗಾಯಗೊಂಡವರು ನನ್ನ ಕಕ್ಕನವರೆಂದು ಜೈಲಿನಲ್ಲಿಯೇ ಇದ್ದ ನಮ್ಮ ಕಕ್ಕಿಯ ಒಡಹುಟ್ಟಿದ ತಮ್ಮನಾದ ಸದಾಶಿವರಾವ್ ಮಂಡಲಗೇರಿಯವರಿಂದ ತಿಳಿಯಿತು. ಅವರನ್ನೂ ಅನಂತರ ಆಸ್ಪತ್ರೆಗೆ ಕರೆದೊಯ್ಯಲಾಯಿತು. ಕಕ್ಕನವರಿಗೆ ತಲೆಯ ಮೇಲೆ ಲಾಠಿ ತುದಿಗೆ ಹಾಕಿದ ಕಬ್ಬಿಣದ ಅಣಸಿನಿಂದ ಪೆಟ್ಟು ಬಿದ್ದು, ತಲೆ ಒಡೆದು ಹೆಚ್ಚಿನ ರಕ್ತಸ್ರಾವವಾಗಿ ಎಚ್ಚರ ತಪ್ಪಿದೆ, ಎಂದು ತಿಳಿಯಿತು. ಬೆಳಗಾಗುವುದರೊಳಗೇನೆ ಅವರು ವೀರಮರಣವನ್ನಪ್ಪಿದ ದಾರುಣವಾರ್ತೆ ನಮ್ಮೆಲ್ಲರನ್ನು ಕಂಗೆಡಿಸಿತು.

ಎಲ್ಲ ಸತ್ಯಾಗ್ರಹಿಗಳೂ ಬೆಳಗಿನಿಂದಲೇ ಘೋಷಣೆ ಪ್ರಾರಂಭಿಸಿದರು. ಮೃತರ ಅಂತ್ಯದರ್ಶನ ಮಾಡಿಸಬೇಕೆಂದು ಹಟ ಹಿಡಿದರು. ಇಡೀ ಜೈಲಿನ ವಾತಾವರಣವೇ ಬದಲಾಗಿಹೋಗಿತ್ತು. ಜೈಲು ಅಧಿಕಾರಿಗಳು ತಪ್ಪಿತಸ್ಥರಂತೆ ಮೋರೆ ತಪ್ಪಿಸಿದರು. ಆಮೇಲೆ ದಿವಂಗತ ಕಕ್ಕನವರ ಅಂತ್ಯಕ್ರಿಯೆಗಾಗಿ ಜೈಲಿನವರು ಏರ್ಪಾಟುಮಾಡಿದರು. ನಮ್ಮ (ದಿ||) ದೊಡ್ಡಪ್ಪನವರಾದ ಸಂಜೀವರಾವ್ ದೇಸಾಯಿ ಅಡ್ವೊಕೇಟ್ ಅವರನು ಕರೆಯಿಸಿಕೊಂಡರು. ಚಿತೆಗೆ ಅಗ್ನಿಸ್ಪರ್ಶಕ್ಕಾಗಿ ಜೈಲಿನಲ್ಲಿಯೇ ಇದ್ದ ನನ್ನನ್ನು ರುದ್ರಭೂಮಿಗೆ ಕರೆದೊಯ್ಯುವೆವೆಂದು ತಿಳಿಸಿದರು. ನಾನು ಪೋಸ್ಟ್‌ಮಾರ್ಟಂ ರೂಮಿಗೆ ಹೋಗಿ ಕಕ್ಕನವರ ದರ್ಶನ ಪಡೆದೆ. ಅಲ್ಲಿ ಪೋಸ್ಟ್‌ಮಾರ್ಟಂ ಮಾಡಿ ಮತ್ತೆ ಹೊಲಿದ ದೇಹವನ್ನು ನೋಡಿದಾಗ, 'ಜೈಲನ್ನೇ ನುಂಗುವ' ಧೈರ್ಯ ಹೇಳಿದ ಕಕ್ಕ ಅವರನ್ನೇ ವಿಧಿವಿಲಾಸದಿಂದಾಗಿ, 'ಜೈಲೇ ನುಂಗುವಂತಾಯಿತಲ್ಲ' ಎಂದು ದುಃಖಿಸಿದೆ. ಅವರ ದೇಹವನ್ನು ಹೊಸ ಬಟ್ಟೆಯಲ್ಲಿ ಸುತ್ತಿ ಸರ್ಕಾರಿ ವ್ಯಾನಿನೊಳಗಿಟ್ಟು ಜೈಲಿನ ಹೊರಗೆ ಒಯ್ಯುವ ಏರ್ಪಾಟುಮಾಡಿದರು. ಇದಾಗುತ್ತಿದ್ದಾಗ ಜೈಲಿನ ಪ್ರತಿಯೊಂದು ಬರಾಕುಗಳಿಂದ "ಅಮರ ಭೀಮಸೇನ ದೇಸಾಯಿ ಜಿಂದಾಬಾದ್" ಹಾಗೂ ಅವರ ಅಂತ್ಯದರ್ಶನ

ಮಾಡಿಸಲೇಬೇಕೆಂಬ ಹಟದ ಘೋಷಣೆಗಳೊಂದಿಗೆ ಸತ್ಯಾಗ್ರಹಿಗಳು ಜೈಲಿನ ಕಬ್ಬಿಣದ ಒಂದೆರಡು ಬಾಗಿಲುಗಳನ್ನೇ ಮುರಿದರು. ಪಾರ್ಥಿವ ಶರೀರದೊಡನೆ ವ್ಯಾನಿನಲ್ಲಿ ಕುಳಿತ ನಾನು ಕೂಡ ಸತ್ಯಾಗ್ರಹಿಗಳ ಕೋರಿಕೆ ಪೂರೈಸದಿದ್ದರೆ ವ್ಯಾನು ಮುಂದೆ ಹೋಗುವಂತಿಲ್ಲ ಎಂದು ಹೇಳಿದೆ. ಜೈಲರ್ ಮತ್ತೆ ಸಾಮೋಪಾಯ ಯೋಚಿಸಿದ. ವ್ಯಾನ್ ಬಾಗಿಲಿನಲ್ಲಿ ನಿಂತು ಕೇವಲ 5 ನಿಮಿಷ ಮಾತ್ರ ದೇಹವನ್ನು ಕೆಳಗಿಟ್ಟು ದೂರದಿಂದ ದರ್ಶನ ಮಾಡಿಸ ಬಹುದೆಂದೂ, ಹೆಚ್ಚಿಗೆ ಸವಲತ್ತು ಕೊಟ್ಟು ಪರಿಸ್ಥಿತಿ ವಿಕೋಪಕ್ಕೆ ಹೋಗುವಂತೆ ಮಾಡುವಂತಿಲ್ಲನೆಂದೂ ತಿಳಿಸಿದ. ಅದರಂತೆ ಎದುರಿಗಿದ್ದ ಸತ್ಯಾಗ್ರಹಿಗಳಿಗೆ ದರ್ಶನ ಮಾಡಿಸಿ ರುದ್ರಭೂಮಿಗೆ ಹೋದೆವು. ಅಲ್ಲಿ ಸುತ್ತಮುತ್ತ ಪೋಲಿಸರ ಬಂದೋಬಸ್ತಿನಲ್ಲಿ ದಿವಂಗತ ಕಕ್ಕನವರ ಪಾರ್ಥಿವ ಶರೀರಕ್ಕೆ ಮಗನ ಅಧಿಕಾರದಿಂದ ಅಗ್ನಿಸ್ಪರ್ಶಮಾಡಿದೆ. ಆ ಹೊತ್ತಿನಲ್ಲಿ ಕೂಡ ವಿಧಿಯ ವೈಚಿತ್ರ್ಯವನ್ನು ಮನಸ್ಸು ನೆನೆಯದೇ ಇರಲಿಲ್ಲ. ಕೆಲವರ್ಷಗಳ ಹಿಂದೆ ನನ್ನ ತಾಯಿ ತೀರಿಕೊಂಡಾಗ ಕಕ್ಕನವರೇ ನಮ್ಮ ತಾಯಿಯವರ ಅಗ್ನಿಸಂಸ್ಕಾರವನ್ನು ಮಾಡಿದ್ದರು. ಅವರಿಗೆ ಗಂಡುಮಕ್ಕಳಿರಲಿಲ್ಲ. ಅವರ ಅಂತ್ಯ ಸಂಸ್ಕಾರವನ್ನು ಜೈಲಿನಲ್ಲಿದ್ದ ನಾನು ನೆರವೇರಿಸಿದ್ದು ವಿಧಿವಿಲಾಸವೇ ಸರಿ!

ಹೈ.ಕ. 4

## ರಾಮಚಂದ್ರ ರಾ. ಮಹೇಂದ್ರಕರ

ಜನನ : 1908 ಉದ್ಯೋಗ : ದರ್ಜಿ ವಿಳಾಸ : ಕಮಲಾಪುರ, ತಾ|| ಕಲ್ಬುರ್ಗಿ



ಅಧಿಕಾರಾರೂಢ ನಿಜಾಮರ ಜಾತಿಯವರು ತಾವು ಎಂದು ನಮ್ಮ ಊರಲ್ಲಿ ದಿನಂಪ್ರತಿ ಪುಂಡರು ನಡೆಸುತ್ತಿದ್ದ ಅತ್ಯಾಚಾರದ ಸಂಕಟಕ್ಕೋಸ್ಕರಾಗಿ ನಾವುಗಳು ಆರ್ಯಸಮಾಜ ಹಾಗೂ ಹಿಂದೂಮಹಾಸಭೆಯನ್ನು ಸೇರಿದೆವು. 1938ರ ಡಿಸೆಂಬರ್‌ನಲ್ಲಿ ಅ.ಭಾ. ಆರ್ಯನ್ ಕಾನ್ಫರೆನ್ಸ್ ಸೊಲ್ಲಾಪುರದಲ್ಲಿ ನಡೆದಾಗ ನಾನು ಅದರಲ್ಲಿ ನಮ್ಮ ಊರ ಇತರ ಅನೇಕರ ಜೊತೆ ಹೋಗಿದ್ದೆ. ಮಾಧವರಾವ್ ಅಣೆ ಈ ಕಾನ್ಫರೆನ್ಸ್‌ನ ಅಧ್ಯಕ್ಷತೆ ವಹಿಸಿದ್ದರು. ಜನವರಿ 22ಕ್ಕೆ (1939) 'ಹೈದರಾಬಾದ್ ದಿನ' ಆಚರಿಸಬೇಕೆಂದು ಆರ್ಯಸಮಾಜ ಕರೆನೀಡಿರಲು ನಮ್ಮ ಊರಾದ ಕಮಲಾಪುರದಲ್ಲಿ

ದಿ|| ಹಣಮಂತಗಿರಿ ಗೋಸ್ವಾಮಿಯವರ ನೇತೃತ್ವದಲ್ಲಿ ನಾವುಗಳು ಸತ್ಯಾಗ್ರಹ ಮಾಡಿದೆವು. ನಾವು ಒಟ್ಟು ಒಂಬತ್ತು ಜನ ಇದ್ದೆವು. ಇತರರು ಯಾರೆಂದರೆ, ಗುರುಪಾದಪ್ಪ ರೇವಣಸಿದ್ದಪ್ಪ ಚಿಕ್ಕಗೋಣಿ, ಬಾಚನಾಳ ಗ್ರಾಮದ ಹರಿಜನರ ಶರಣಪ್ಪ ಸಾಯಿಬಣ್ಣ ಮುತ್ತಂಗಿ, ನನ್ನ ತಮ್ಮ ಗೋಪಾಳರಾವ್ ರಾಜಾರಾಮ ಮಹೇಂದ್ರಕರ ಮುಂತಾದವರು. ನಮ್ಮಗಳ ಬಂಧನವಾಗಿ 30-1-1939ರಂದು ಗುಲ್ಬರ್ಗ ಮುನ್ಸಿಫ್ ಕೋರ್ಟ್‌ನಲ್ಲಿ ನಮಗೆ ಒಂದು ವರ್ಷ ಶಿಕ್ಷೆವಿಧಿಸಿದರು. ಆದರೆ ಮುಂದೆ ಆರು ತಿಂಗಳಲ್ಲಿ ನಮ್ಮ ಬಿಡುಗಡೆ ಆಯಿತು. ಇದಲ್ಲದೆ ನಮ್ಮ ಊರ ಗುರುಪಾದಪ್ಪಾ ಮಡೆಪ್ಪಾ ಪ್ಯಾಟಿ ಇವರೂ ನಮ್ಮ ಜೊತೆ ಸೋಲ್ಲಾಪುರ ಕಾನ್ಫರೆನ್ಸಿಗೆ ಬಂದವರು, 1939ರಲ್ಲಿ ಪುಣೆಯಲ್ಲಿ ಸತ್ಯಾಗ್ರಹ ಶಿಬಿರ ಸೇರಿ, ಮುಂದೆ ಔರಂಗಾಬಾದ್‌ನಲ್ಲಿ ಭೋಪಟಕರರ ನೇತೃತ್ವದಲ್ಲಿ ಸತ್ಯಾಗ್ರಹನಮಾಡಿ ಶಿಕ್ಷೆಗೆ ಒಳಗಾಗಿದ್ದರು. ಅವರೂ ಆರು ತಿಂಗಳಲ್ಲಿ ಬಿಡುಗಡೆ ಆದರು.

ಹೈ.ಕ. 5

## ದಿ|| ಕಪಟರಾಳ ಕೃಷ್ಣರಾವ್

(ಖ್ಯಾತ ಸಾಹಿತಿಗಳೂ ವಿದ್ವಾಂಸರೂ ಆದ ಮಾನ್ಯ ಕೃಷ್ಣರಾವ್ ಅವರು 31-12-1889ಕ್ಕೆ ಜನಿಸಿದವರು. ಚಳವಳಿ ಕಾಲಕ್ಕೆ ಕಲ್ಬುರ್ಗಿಯಲ್ಲಿದ್ದರು. ಈ ಸ್ಮೃತಿ ಕಳುಹಿಸಿದನಂತರ, ಇದೇ 9-6-1976ರಂದು ಅವರು ದಿವಂಗತರಾದರು. —ಸಂ||)

ಸ್ವಾಮಿ ರಮಾನಂದ ತೀರ್ಥರು ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಸ್ಥಾಪಿಸಿದರು. ಅದನ್ನು ಸರಕಾರ ಪ್ರತಿಬಂಧಿಸಲು ಸತ್ಯಾಗ್ರಹವನ್ನು ಹೂಡಲಾಯಿತು. ಇದೇ ಕಾಲಕ್ಕೆ ಆರ್ಯಸಮಾಜವೂ ಸತ್ಯಾಗ್ರಹ ಹೂಡಿತು. ಧಾರ್ಮಿಕ ಹಾಗೂ ರಾಜಕೀಯ ಸತ್ಯಾಗ್ರಹಗಳೆರಡನ್ನೂ ಒಟ್ಟಾಗಿ ಹೂಡಬಾರದೆಂದು ಗಾಂಧೀಜಿ ತಿಳಿಸಲು ಕಾಂಗ್ರೆಸ್ ಸತ್ಯಾಗ್ರಹವನ್ನು ಹಿಂದೆಗೆದರು. ಆರ್ಯ ಸಮಾಜದ ಸತ್ಯಾಗ್ರಹ ನಿಂತಾಗ, ಮತ್ತೆ ಕಾಂಗ್ರೆಸ್‌ನ ಚಟುವಟಿಕೆ ಆರಂಭಿಸಲು, ಸ್ವಾಮಿಜಿಯ ಬಂಧನ ಆಯಿತು. ಆಗ ಸ್ಟೇಟ್ ಕಾಂಗ್ರೆಸ್‌ನ ಹೆಸರು ತಪ್ಪಿಸಿ ಭಾಷಾವಾರಾಗಿ ಪರಿಷತ್ತುಗಳನ್ನು ರಾಜಕೀಯ ಉದ್ದೇಶಕ್ಕಾಗಿಯೇ ಸಂಘಟಿಸಿದರು. ಕರ್ನಾಟಕ ಪರಿಷತ್ತಿನಲ್ಲಿ ಜನಾರ್ದನ ದೇಸಾಯಿ, ಕಕ್ಕೇರಿ ಹಣಮಂತರಾವ್, ಅಶ್ವತ್ಥರಾಯರು, ನಾನೊಬ್ಬ ಜೊತೆಗಾರರಾಗಿ ಕನ್ನಡದ ಜಿಲ್ಲೆಗಳನ್ನು ಸುತ್ತಿದೆವು; ಜನಜಾಗೃತಿ ಮಾಡುತ್ತಿದ್ದೆವು. ವರ್ಷಕ್ಕೊಮ್ಮೆ ದೊಡ್ಡ

ಪ್ರಮಾಣದ ಸಮ್ಮೇಳನ ನಡೆಸುತ್ತಿದ್ದೆವು. ಜಿ. ರಾಮಾಚಾರ್ಯರು ಎಲ್ಲರ ಸಂಪರ್ಕ ಇಟ್ಟುಕೊಂಡು ಮೇಲ್ವಿಚಾರಕರಾಗಿ ಸಹಾಯಮಾಡುತ್ತಿದ್ದರು. ಈ ಪರಿಷತ್ತುಗಳ ಸಭೆಯಲ್ಲಿ ಭಾಗವಹಿಸಿದ್ದಕ್ಕೆ ನನ್ನ ಮೇಲೆ ರಾಜದ್ರೋಹದ ಖಟ್ಲೆ ಹಾಕಿ ಕಲ್ಬುರ್ಗಿ ಸೆಂಟ್ರಲ್ ಜೈಲ್‌ನಲ್ಲಿ ಇಟ್ಟರು. ಮುಂದೆ ಬೇಲ್ ಮೇಲೆ ಬಿಟ್ಟರು. ಆಮೇಲೆ ಭಾಷಾ ವಾರು ಪರಿಷತ್ತನ್ನು ವಿಸರ್ಜಿಸಿ ಸ್ಟೇಟ್ ಕಾಂಗ್ರೆಸ್ಸನ್ನು ಸ್ಥಾಪಿಸಿದರು. ಆಗ 27ನೆಯ ಆಗಸ್ಟ್ 1947ರಲ್ಲಿ ನನ್ನನ್ನು ಬಂಧಿಸಿದರು. ಮುಂದೆ 24-4-1948ರಲ್ಲಿ ಬಿಡುಗಡೆ ಮಾಡಿದರು. ಆದರೆ ನನ್ನ ಮೇಲಣ ರಾಜದ್ರೋಹದ ಖಟ್ಲೆ ಮುಗಿಯುವ ತನಕ ನಾನು ಊರು ಬಿಡುವಂತಿರಲಿಲ್ಲ. ಖಟ್ಲೆ ಕಡೆಗೆ ಮುಗಿಯಿತು. ಆದರೆ ನನ್ನ ಜೀವದ ಮೇಲೆ ರಜಾಕಾರರು ಹೊಂಚುಹಾಕಿರುವುದನ್ನು ಒಬ್ಬ ಸಿ.ಐ.ಡಿ. ಹೆಡ್‌ಕಾನ್ಸ್‌ಟೆಬಲ್ ನನಗೆ ಬೇಕಾದವನು ಬಂದು ಹೇಳಿದ. ನಾನು ಸೊಲ್ಲಾಪುರಕ್ಕೆ ಹೋಗಿ, ಪೋಲಿಸ್ ಆ್ಯಕ್ಶನ್ ಅನಂತರವೇ ಮರಳಿದೆ. ತಾರೀಕುವಾರು ಸಂಗತಿಗಳು ಈಗ ತಿಳಿಯುವಂತಿಲ್ಲ. ಆ ಎಲ್ಲ ಪೇಪರ್‌ಗಳು ಎಲ್ಲೋ ಬಿದ್ದುಹೋಗಿವೆ. ಒಟ್ಟಿನ ಮೇಲೆ ಹೈದರಾಬಾದ್ ರಾಜಕೀಯ ಚಳವಳಿಯಲ್ಲಿ ನನ್ನದೊಂದು ಮುಖ್ಯ ಭಾಗವೆನ್ನಲು ಅಡ್ಡಿಯಿಲ್ಲ.

ಹೈ.ಕ. 6

## ಮುದ್ದಯ್ಯಾ ಸ್ವಾಮಿ

ಜನನ : 1926 ಉದ್ಯೋಗ : ಶಿಕ್ಷಕ ವಿಳಾಸ : ನಂ. 3-6-69(1) ಚೇರೂನ ಕಿಲ್ಲಾ, ರಾಯಚೂರು



ನಾನು ಯಾದಗೀರ್‌ನಲ್ಲಿ ಹೈಸ್ಕೂಲು ಶಿಕ್ಷಣ ಪಡೆಯುತ್ತಿದ್ದಾಗ ರಾಜಕೀಯ ಮತ್ತು ಧಾರ್ಮಿಕ ಪುಸ್ತಕಗಳನ್ನು ಓದಿ ಗುಲಾಮಗಿರಿಯ ವಿರುದ್ಧ ಅಭಿಪ್ರಾಯ ಹೊಂದಿದೆನು. ಆಗ ಯಾದಗೀರ್ ಊರಲ್ಲಿ ಕಾಂಗ್ರೆಸ್ ನಾಯಕರು ಕೋಳೂರು ಮಲ್ಲಪ್ಪ, ವಿರೂಪಾಕ್ಷಪ್ಪ ಯಕ್ಕೆಳ್ಳಿ ಅಡ್ವೊಕೇಟ್ ಹಾಗೂ ಜಗನ್ನಾಥರಾವ್ ಚಂದ್ರಿಕಿ ಅಡ್ವೊಕೇಟ್. ಆಗ ಎಂ. ನಾಗಪ್ಪ ಇವರು ಹೈದರಾಬಾದ್ ಕರ್ನಾಟಕದ ವಿದ್ಯಾರ್ಥಿ ಯೂನಿಯನ್ ಸಂಘಟಕರಾಗಿದ್ದು ನಮ್ಮನ್ನು ಹುರಿದುಂಬಿಸಿ ಚಳವಳಿಯಲ್ಲಿ ಭಾಗವಹಿಸುವಂತೆ ಮಾಡಿದರು. 1947ರ ಅಕ್ಟೋಬರ್‌ನಲ್ಲಿ ಮ್ಯಾಟ್ರಿಕ್‌ನಲ್ಲಿ ಇದ್ದ ನನ್ನನ್ನು ವಿದ್ಯಾರ್ಥಿ

ಸಂಘದ ಕಾರ್ಯದರ್ಶಿಯಾಗಿ ಒಮ್ಮತದಿಂದ ಚುನಾಯಿಸಿದರು. ಆಗ ನಾನು ವಿದ್ಯಾರ್ಥಿಗಳು ಸಂಪುಹೂಡುವಂತೆ ಪ್ರೇರೇಪಿಸಿದೆನಲ್ಲದೆ, ಸುತ್ತಲ ಗ್ರಾಮಗಳಲ್ಲೂ ವಿದ್ಯಾರ್ಥಿಗಳ ಜೊತೆ ಹೋಗಿ ನಿಜಾಂ ಸರಕಾರದ ವಿರುದ್ಧ ಕಾರ್ಯಕ್ರಮಗಳನ್ನು ಮಾಡುತ್ತಿದ್ದೆವು. ಆಗ ನಮ್ಮ ನಾಯಕ ವಿಶ್ವನಾಥರೆಡ್ಡಿ ಮುದನಾಳ್, ಎನ್. ಕೋನಪ್ಪ, ವಿ. ಗುರಣ್ಣ, ವೀರನಗೌಡ, ಪರ್ವತರೆಡ್ಡಿ ದದ್ದಲ್, ಮದನಂತರಾವ್, ರಂಗರಾವ್ ಯಾದಗೀರ್ ಇವರೆಲ್ಲ ನಮ್ಮ ಜೊತೆಗಾರರು.

ಆಗ ರಜಾಕಾರರ ಹಾವಳಿ ವಿಪರೀತ. ಒಮ್ಮೆ ಹೈಸ್ಕೂಲಿನ ವಿದ್ಯಾರ್ಥಿಗಳನ್ನೆಲ್ಲ ಕೊಲೆಮಾಡಲು ಹೈಸ್ಕೂಲಿಗೇ ಬೀಗಹಾಕಿಟ್ಟರು. ಇನ್ನೊಮ್ಮೆ ಹೆಡ್ಮಾಸ್ಟರ ಮನೆಯ ಮೇಲೆ ದಾಳಿಮಾಡಿ ಅವರ ಕೊಲೆಗೆ ಯತ್ನಿಸಿದರು. ದಾಳಿಮಾಡಿದ ಜನರ ಪಾದಗಳ ಫೋಟೋ ತೆಗೆದು ಸರಕಾರಕ್ಕೆ ಒಪ್ಪಿಸಿದರೂ ಆ ಬಗ್ಗೆ ಚೌಕಶಿ ಆಗಲಿಲ್ಲ. ಪರ ಊರಿಂದ ಬರುವ ಜನರ ಸಾಮಾನು ಕಸಿಯುತ್ತಿದ್ದರು. ಹಳ್ಳಿಯಿಂದ ಒಮ್ಮೆ ಸಿನೇಮ ನೋಡ ಬಂದ ದಂಪತಿಗಳ ಪೈಕಿ ಸ್ತ್ರೀಯನ್ನು ಅಪಹರಿಸಿ ಒಯ್ದು ಅತ್ಯಾಚಾರ ಮಾಡಿದರು. ಒಮ್ಮೆ ಲಿಂಗೇರಿ ಕೊನಪ್ಪ ಬೋರ್ಡಿಂಗಿನ ಮೇಲೆ ದಾಳಿ ಆಗಲು, ದಾಳಿಕಾರ–ವಿದ್ಯಾರ್ಥಿಗಳಿಗೂ ಬೋರ್ಡಿಂಗ್‌ನವರಿಗೂ ತಿಕ್ಕಾಟವಾಯಿತು. ಈ ಸಂಬಂಧ ನನ್ನ ಬಂಧನ ಆಯಿತು (ಫಸಲಿ 15–1–1357). ಅಲ್ಲಿ ನನಗೆ ಅಸಾಧ್ಯ ಹಿಂಸೆ ಕೊಟ್ಟು ಕ್ಷಮಾಪತ್ರ ಕೊಡಲು ಹೇಳಿದರು. ನಾನು ಎಲ್ಲ ಹಿಂಸೆ ಸಹಿಸಿಕೊಂಡೆ. ಮುಂದೆ ಫಸಲಿ 14–2–1357ಕ್ಕೆ ಗುಲ್ಬರ್ಗ ಜೈಲಿಗೆ ಒಯ್ದರು. ಅಲ್ಲಿ ವಿಶ್ವನಾಥ ರೆಡ್ಡಿ, ಅಡವೀರಾವ್ ಫಡ್ನಿಸ್ ನಮ್ಮ ನಾಯಕರು. ಆಗಲೇ ಭೀಮಸೇನರಾವ್ ದೇಸಾಯಿ ಅಲ್ಲಿ ಹುತಾತ್ಮರಾದರು. ಫಸಲಿ 22–7–1357ರಂದು 52 ಜನರ ಬಿಡುಗಡೆ ಆದಾಗ ನಾನೂ ಹೊರ ಬಂದೆ. ಆದರೂ ಪೋಲಿಸರ ಕಾಟ ತಪ್ಪಲಿಲ್ಲ.

1949ರಲ್ಲಿ ಅಧ್ಯಾಪಕನಾದೆ. ಆಗ ನಿಲ್ಲಿಸಿದ್ದ ಮ್ಯಾಟ್ರಿಕ್ ಶಿಕ್ಷಣ 1961ರಲ್ಲಿ ಪೂರ್ತಿಮಾಡಿದೆ.

ಹೈ.ಕ. 7

## ಶಿದ್ರಾಮಪ್ಪಾ ಶಿವರಾಯಿ

ಜನನ : ಸು. 1920 ಉದ್ಯೋಗ : ಕೃಷಿ ವಿಳಾಸ : ಎಲ್ಹೇರಿ, ತಾ॥ ಯಾದಗಿರಿ

---

ನಾನು ಯಾದಗೀರ್‌ನಲ್ಲಿ ಹೈಸ್ಕೂಲಿಗೆ ಹೋಗುತ್ತಿರಲು 'ವಂದೇ ಮಾತರಂ' ಚಳವಳಿಯಲ್ಲಿ ಪಾಲುಗೊಂಡೆ. ಅದಕ್ಕೂ ಮೊದಲು ನಮ್ಮ ಶಾಲೆಯಲ್ಲಿ ನಡೆದ ಕಿತ್ತೂರ ಚನ್ನಮ್ಮ ನಾಟಕವೇ ಮುಖ್ಯವಾಗಿ ನನ್ನಲ್ಲಿ ರಾಷ್ಟ್ರೀಯ ಭಾವನೆಯನ್ನು ಜಾಗೃತಗೊಳಿಸಿತ್ತು.



ಈ ಚಳವಳಿ ಸಂಬಂಧವಾಗಿ ಶಾಲೆಯಿಂದ ಹೊರದೂಡಿದರು. ಮಾಫಿನಾಮಾ ಬರೆದುಕೊಡಲು ಮುಖ್ಯೋಪಾಧ್ಯಾಯರು ಒತ್ತಾಯಿಸಿದರೂ ನಾನು ಕೇಳಲಿಲ್ಲ. ಹೀಗೆ ಶಿಕ್ಷಣ ನಿಂತಿತು. ಮುಂದೆ ಸ್ಟೇಟ್ ಕಾಂಗ್ರೆಸ್‌ನ ಅಧಿವೇಶನಕ್ಕೆ ಕೂಡ ನಾನು ತೆರಳಿದ್ದೆ. ಅಲ್ಲಿಂದ ಬಂದ ಮೇಲೆ ಧರ್ಮವೀರ ಹಾಗೂ ಜಗನ್ನಾಥರಾವ್ ಚಂದ್ರಿಕಿ ಇವರು ಎಲ್ಹೇರಿಗೆ ಬರಲು, ವೀರಭದ್ರಪ್ಪ ಪೋಲಿಸ್ ಪಾಟೀಲ, ಚನ್ನಪ್ಪ ಗೌಡಪ್ಪನೋರ, ವಿಶ್ವನಾಥರೆಡ್ಡಿ ಶಿವರಾಯಿ, ರಾಜಶೇಖರ ತಿರುಕಪ್ಪನೋರ ಮತ್ತು ರಾಘವೇಂದ್ರರಾವ್ ಗೋಪಾಳಪುರ ಮುಂತಾದ 100 ಜನರು ಇಲ್ಲಿ ಕಾಂಗ್ರೆಸ್ಸಿನ ಸದಸ್ಯರಾದರು.

ಕಾಂಗ್ರೆಸ್ಸಿನ ನಿರ್ಣಯದಂತೆ ಆಗಸ್ಟ 7ರಂದು (1947) ನಮ್ಮ ಊರಲ್ಲಿ ಶಾಲೆಯಲ್ಲಿ ಹರತಾಳಮಾಡಿಸಿ ಊರಲ್ಲಿ ರಾಷ್ಟ್ರಧ್ವಜಸಹಿತ ಮೆರವಣಿಗೆ ಮಾಡಿಸಿದೆವು. ವಿಶ್ವನಾಥ ರೆಡ್ಡಿ, ವೀರಭದ್ರಪ್ಪ, ಚನ್ನಪ್ಪ, ರಾಜಶೇಖರ ಇವರೂ ನನ್ನ ಜೊತೆ ಇದ್ದರು. ಅಂಗಡಿಗಳನ್ನು ಮುಚ್ಚಿಸಿ ಹರತಾಳ ಮಾಡಿಸಿದೆವು. 18-8-1947ರಂದು ನನ್ನನ್ನು ಬಂಧಿಸಿ ಗುರುಮಟಕಲಿಗೆ ಒಯ್ದು ಅಪಾರ ಚಿತ್ರಹಿಂಸೆ ಕೊಟ್ಟರು. ಪೋಲಿಸರಿಗೆ ಕರುಣೆಯೇ ಇದ್ದಂತಿರಲಿಲ್ಲ. ಕಡೆಗೆ 28-8-1947ರಂದು ಯಾದಗೀರ್‌ನಲ್ಲಿ ನನ್ನ ವಿಚಾರಣೆ ಆಗಿ 2 ವರ್ಷ ಕಠಿಣ ಶಿಕ್ಷೆ, 50 ರೂ. ದಂಡ, ದಂಡ ತೆರದಲ್ಲಿ ಮತ್ತೆ ಎರಡು ತಿಂಗಳ ಶಿಕ್ಷೆವಿಧಿಸಿದರು. ಗುಲ್ಬರ್ಗ ಜೈಲಿಗೆ ನಾನು ಹೋದಾಗ ಬಾಚಿಮಟ್ಟಿ ಬಸಣ ಗೌಡರಿಗೆ ಗಂಜಿಖಾನೆ (ಕತ್ತಲ ಕೋಣೆ) ಶಿಕ್ಷೆ ಆಗಿರಲು, ನಾನು ಆ ಬಗ್ಗೆ ಇತರ ಮಿತ್ರರ ಜೊತೆ ಸೇರಿ ಉಪವಾಸಮಾಡಿಸಿ ಅವರನ್ನು ಗಂಜಿಖಾನೆಯಿಂದ ಹೊರತಂದೆವು. ಮುಂದೆ ಭೀಮಸೇನ ದೇಸಾಯಿ ತೀರಿಕೊಂಡರು. ಹಲವು ತಿಂಗಳನಂತರ ನನ್ನ ಬಿಡುಗಡೆ ಆದಾಗ, ನಮ್ಮ ಮನೆ ರಜಾಕಾರರ ದಾಳಿಗೆ ಒಳಗಾಯಿತು. ಮನೆಯಲ್ಲಿನ ಜೋಳವನ್ನು ಅಪಹರಿಸಿದ್ದರು. ಇದಕ್ಕೆ ಕಾರಣ ನಮ್ಮ ಊರಿಗೆ ಮರಳಿದ ನಾನು ರಜಾಕಾರರಿಗಾಗಲೀ ಸರಕಾರಕ್ಕಾಗಲೀ ಜೋಳ ಕೊಡಬೇಡಿರೆಂದು ಮಾಡಿದ ಪ್ರಚಾರ. ನನ್ನನ್ನು ಹಿಡಿಯಲು ರಜಾಕಾರರು ಹೊಂಚುಹಾಕಿರಲು ನಾನು ತಪ್ಪಿಸಿಕೊಂಡು, ಹೇಗೋ ಅಕ್ಕಲಕೋಟೆ ಸೇರಿದೆನು. ಅಲ್ಲಿಂದ ಸೊಲ್ಲಾಪುರದಲ್ಲಿ ಕೆಲದಿನ ಕೂಲಿಮಾಡಿ, ಮುಂದೆ ವಿಜಾಪುರ ಸೇರಿದೆನು. ಅಲ್ಲಿ ಕೊಲ್ಲೂರು ಮಲ್ಲಪ್ಪನವರ ಜೊತೆ ನಿರಾಶ್ರಿತರ ಶಿಬಿರದಲ್ಲಿ ಕೆಲಸಮಾಡಿ, ಮುಂದೆ ಅಕ್ಕಲಕೋಟೆ ಶಿಬಿರಕ್ಕೆ ಹೋದೆನು. ಅಲ್ಲಿ ಧರ್ಮವೀರ ಸಂಚಾಲಕರಾಗಿದ್ದು, ಗಡಿಭಾಗದ ವಸೂರ ಮುಂತಾದ ಊರುಗಳಲ್ಲಿ ಜನರನ್ನು ಹುರಿದುಂಬಿಸಿ ಪೋಲಿಸ್ ಆ್ಯಕ್ಷನ್ ತನಕ ಕೆಲಸಮಾಡಿದೆನು.

ಹೈ.ಕ. 8

# ಅನಂತ ಶರ್ಮ

ಜನನ : 1927 ಉದ್ಯೋಗ : ವಕೀಲ ವಿಳಾಸ : ಚಿಂಚೋಳಿ



ನನ್ನ ತಂದೆ ಜಯತೀರ್ಥಾಚಾರ್ಯರು ನಮ್ಮ ಊರ ಪ್ರಥಮ ಪದವೀಧರರಾಗಿದ್ದು ಹೈದರಾಬಾದಿನ ರಾಷ್ಟ್ರೀಯ ವಿದ್ಯಾಲಯ ವಿವೇಕವರ್ಧಿನಿಯಲ್ಲಿ ಶಿಕ್ಷಕರು. ಅಂದಿನ ಸಂಪರ್ಕಮೂಲಗಳ ಅಭಾವದ ಕಾಲದಲ್ಲೂ ಚಿಂಚೋಳಿಯಲ್ಲಿ ಟಿಳಕರ ಪ್ರಭಾವ ದಿಂದ ರಾಷ್ಟ್ರೀಯ ವಿದ್ಯಾಲಯ, ಗಣೇಶೋತ್ಸವ, ಶಿವಾಜಿ ಉತ್ಸವ, ವಾಚನಾಲಯ ಮುಂತಾದ ಸಂಗತಿಗಳಿಂದಾಗಿ ರಾಷ್ಟ್ರೀಯ ವಾತಾವರಣವಿತ್ತು. ಇದೆಲ್ಲದರ ಹಿನ್ನೆಲೆ ನನ್ನಲ್ಲಿ ರಾಷ್ಟ್ರೀಯ ಭಾವನೆಗಳ ಜಾಗೃತಿಗೆ ಕಾರಣ. 1941ರಲ್ಲಿ ನಾನು ಮೆಟ್ರಿಕ್ ಪಾಸುಮಾಡಿ ಚಿಂಚೋಳಿಗೆ ಬಂದಾಗ ನನಗೆ ಆರ್ಯಸಮಾಜದ ಸಂಪರ್ಕ ಬಂತು. ಪಂll ನರೇಂದ್ರಜಿಯವರ ಮಾರ್ಗದರ್ಶನ ದಲ್ಲಿ ಆರ್ಯಸಮಾಜದ ಪ್ರಚಾರಕಾರ್ಯ ಕೈಗೊಂಡು ಪೋಲಿಸರ ಜೊತೆ ಘರ್ಷಿಸುವ ಪ್ರಸಂಗಗಳಿಗೆ ಒಳಗಾದೆ. ಬೀದರ್ ಜಿಲ್ಲೆಯ ಚಿಟಗುಪ್ಪ ಆರ್ಯ ಸಮಾಜದ ಕೇಂದ್ರ ವಾಗಿದ್ದು ಅಲ್ಲಿ ಆರ್ಯಸಮಾಜದ ಉತ್ಸವದ ಕಾಲಕ್ಕೆ ನಾನು ಹರಿಜನರ ಓಣಿಯಲ್ಲಿ ಸಹಭೋಜನ ಮಾಡಿ ಮನೆಯಿಂದಲೇ ಬಹಿಷ್ಕೃತನಾದೆ (1942). ಹಿಂದೂ ಪ್ರಜಾ ಮಂಡಳ ಹಾಗೂ ಹಿಂದೂ ಸ್ವಯಂಸೇವಕ ಸಂಘದೊಡನೆ ನಿಕಟಸಂಪರ್ಕ ಪಡೆದೆ. ಹಿಂದೂ ಸ್ವಯಂಸೇವಕ ಸಂಘದ ಶಿಕ್ಷಣ ಶಿಬಿರದಲ್ಲಿ 1943ರಲ್ಲಿ ಪಾಲುಗೊಂಡೆ. ಜ.ಕ್ಕಲಕರ ಎಂಬುವರು ಹೈದರಾಬಾದ್‌ನ ಜಾಮಬಾಗ ಕ್ಷೇತ್ರದ ಸುಂದರ ಭವನದಲ್ಲಿ ಇದರ ಕೆಲಸಮಾಡುತ್ತಿದ್ದರು.

ಸಾನೆ ಗುರೂಜಿಯವರ ಬರವಣಿಗೆಗಳಿಂದ ಪ್ರೇರಿತನಾಗಿ, ಗೋಪಾಲದೇವ ಶಾಸ್ತ್ರಿಯವರ ಸಹಕಾರದಿಂದ ಬಸವಕಲ್ಯಾಣದ ಸಮೀಪದ ಜಾನಾಪುರ ಗ್ರಾಮದಲ್ಲಿ ನರೇಂದ್ರ ನಿಕೇತನವೆಂಬ ಆಶ್ರಮ ಸ್ಥಾಪಿಸಿ (1944) ಶಾಲೆ, ವಾಚನಾಲಯ, ಆಸ್ಪತ್ರೆ, ಗ್ರಾಮೋದ್ಯೋಗ ಕೇಂದ್ರ ನಡೆಸಿದೆ. ರಜಾಕಾರರ ಹಾವಳಿಯ ಕಾಲಕ್ಕೆ ಈ ಆಶ್ರಮ ಸುತ್ತಲ ಜನಕ್ಕೆ ಆಶ್ರಯ ಹಾಗೂ ಶಕ್ತಿಯ ಕೇಂದ್ರವಾಗಿತ್ತು.

1946ರಲ್ಲಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ಸಿನ ಮೇಲಣ ನಿರ್ಬಂಧ ರದ್ದಾಯಿತು.

ಆಗ ಚಿಂಚೋಳಿಯಲ್ಲಿ ಕಾಂಗ್ರೆಸ್‌ನ ಪ್ರಮುಖರೆಂದರೆ ದಿ|| ಡಾ|| ಶೇಷಗಿರಿರಾವ್ ಕುಲಕರ್ಣಿ, ಭೀಮಸೇನಾಚಾರ್ಯ ಮೂಲಿ ವಕೀಲ ಹಾಗೂ ನನ್ನ ತಂದೆ ದಿ|| ಜಯ ತೀರ್ಥಾಚಾರ್ಯ ಪುರಾಣಿಕ ವಕೀಲ ಇವರುಗಳು. ತಾಲೂಕಿನ ಪೈಕಿ ಸೂಲೇಪೇಟೆಯಲ್ಲಿ ಚನ್ನಬಸಪ್ಪ ನಿಂಗದಳ್ಳಿ ಹಾಗೂ ಪೋಲಕಪಳ್ಳಿಯಲ್ಲಿ ಶಿವಶರಣಪ್ಪ ಇವರು ಕಾಂಗ್ರೆಸ್ ಕಾರ್ಯಕರ್ತರು. ನಾನು ಆ ವರ್ಷ ಚಿಂಚೋಳಿಗೆ ಬಂದು ಕಾಂಗ್ರೆಸ್ಸಿನ ಕೆಲಸ ಆರಂಭಿಸಿದೆ. ಸುತ್ತಲ ಗ್ರಾಮಗಳಲ್ಲಿ ಅಡ್ಡಾಡಿ, ಬರಲಿರುವ ಸ್ವಾತಂತ್ರ್ಯವನ್ನು ಜನ ಸ್ವಾಗತಿಸಬೇಕಾದ ವಿಧಾನವನ್ನು ತಿಳಿಸಿ ಹೇಳಿದೆ. 1947ರ ಮೇಯಲ್ಲಿ ಸ್ಟೇಟ್ ಕಾಂಗ್ರೆಸ್ ಅಧಿವೇಶನ ಹೈದರಾಬಾದಿನಲ್ಲಿ ಆದಾಗ ನಾನು ಹೋಗಿದ್ದು ಆಗ ಕಾಂಗ್ರೆಸ್‌ನಲ್ಲಿ ಎರಡು ಗುಂಪುಗಳಿದ್ದು ಪ್ರಗತಿಪರ ವಿಚಾರದ ಸ್ವಾಮೀ ರಮಾನಂದ ತೀರ್ಥರ ಪರ ನಾನಿದ್ದೆ. ಅಧಿವೇಶನದ ಮೊದಲು ನಡೆದ ಚುನಾವಣೆಯಲ್ಲಿ ಸ್ಥಾಯೀ ಸಮಿತಿಗೆ ನಾನು ಆಯ್ಕೆಗೊಂಡೆ. ಶರಾವೊಂದರ ಬೆಂಬಲವಾಗಿ ನಾನೂ ಅಲ್ಲಿ ಭಾಷಣಮಾಡಿದೆ. ಅಲ್ಲಿಂದ ಮರಳಿದಮೇಲೆ ಮತ್ತೆ ಪ್ರಚಾರಕ್ಕಾಗಿ ಓಡಾಟ, ಕಷ್ಟಕಾರ್ಪಣ್ಯಗಳು; ನನ್ನ ಮೇಲಾದ ಆಕ್ರಮಣ ಗಳನ್ನೂ ಎದುರಿಸಿದೆ. 1947ರ ಆಗಸ್ಟ್‌ನಲ್ಲಿ ಚಿಂಚೋಳಿ, ಸೂಲೇಪೇಟೆಗಳಲ್ಲಿ ರಾಷ್ಟ್ರ ಧ್ವಜಾರೋಹಣವಾಯಿತು. ನನ್ನಮೇಲೆ ವಾರಂಟ್ ಇರಲು ಭೂಗತನಾದೆ. ಆ. 28ಕ್ಕೆ ಕಲ್ಬುರ್ಗಿಗೆ ಜಿಲ್ಲಾ ಕಾರ್ಯಕರ್ತರ ಸಭೆಗೆ ವೇಷಮರೆಸಿ 20 ಮೈಲಿ ನಡೆದು ಸಾಗಿರಲು ಸೇಡಂ, ಚಿತ್ತಾಪುರಗಳಲ್ಲಿ ಕಾರ್ಯಕರ್ತರ ಬಂಧನವಾದುದನ್ನು ಕಂಡೆ. ಕಲ್ಬುರ್ಗಿಯಲ್ಲಿ ಅಲ್ಲಿನ ಕಾರ್ಯಾಲಯವನ್ನು ಪೋಲಿಸರು ಸುತ್ತುಗಟ್ಟಿರುವರೆಂದು ತಿಳಿಯಿತು. ನಿಜಾಂ ಸರಕಾರದ ಗುಪ್ತಚರನೊಬ್ಬನ ನೆರವಿನಿಂದಲೇ ಸೊಲ್ಲಾಪುರ ಸೇರಿದೆ. ನಿರಾಶ್ರಿತರ ಶಿಬಿರದಲ್ಲಿ ಕೆಲದಿನ ಕೆಲಸಮಾಡಿದೆ. ಅಲ್ಲಿಂದ ಕೆಲವು ಕ್ರಾಂತಿಕಾರೀ ಯುವಕರ ಜೊತೆ ಸೇರಿ ಕುಷ್ಟಗಿ ತಾ|| ಶಾಂತಗಿರಿ ಹಾಗೂ ಸುತ್ತಲ ಒಟ್ಟು 13 ಗ್ರಾಮಗಳನ್ನು ಸ್ವತಂತ್ರ ಗೊಳಿಸುವ ಕಾರ್ಯದಲ್ಲಿ ಪಾಲುಗೊಂಡೆ. ಶಾಂತಗಿರಿಯಲ್ಲಿ ಪೋಲಿಸ್ ಚೌಕಿ ಇದ್ದು ಪೋಲಿಸರ ಸಹಾಯಕ್ಕೆ 20 ಪಠಾಣರು ಇದ್ದರು. ಕೇವಲ 25 ಯುವಕರು ನಾವು, ತರಬೇತಿಯ ಅಭಾವವಿದ್ದರೂ ದೇಶಭಕ್ತಿಯ ಹುಮ್ಮಸ್ಸಿನಿಂದ ಹೋರಾಡಲು ಎಂಟು ಬಂದೂಕು ಹಾಗೂ ಇತರ ಶಸ್ತ್ರಾಸ್ತ್ರಗಳನ್ನು ತ್ಯಜಿಸಿ ಅಲ್ಲಿದ್ದವರು ಓಡಿಹೋದರು. ನಿಜಾಮ ಹದ್ದಿನಿಂದ ಎರಡೇ ಫರ್ಲಾಂಗ್ ದೂರದಲ್ಲಿರುವ ಈ ಗ್ರಾಮಗಳನ್ನು ಮತ್ತೆ ಪಡೆಯಲು ನಿಜಾಮಿ ಪೋಲಿಸರೂ ರಜಾಕಾರರೂ ನಡೆಸಿದ್ದ ದಾಳಿಗಳನ್ನು 2-3 ಬಾರಿ ಹಿಮ್ಮೆಟ್ಟಿಸಿದೆವು. ಆರು ತಿಂಗಳವರೆಗೆ ಈ ಗ್ರಾಮಗಳ ಆಡಳಿತವು ನಮ್ಮ ವಶವಿತ್ತು. ಈ ಗುಂಪಿನ ಕಾರ್ಯಾಚರಣೆಯ ಮಾರ್ಗದರ್ಶನ ಆರ್. ವಿ. ಬಿಡಪ್ಪ ಅವರ ಕೈಯಲ್ಲಿ ಇದ್ದು ಚಿಟಗುಪ್ಪಾದ ನಾರಾಯಣ ಬೋಡಕೆ ಹಾಗೂ ಚಂದ್ರಶೇಖರ ಮತ್ತು ಹೈದರಾಬಾದಿನ ಗೋವಿಂದರಾವ್ ಇವರು ನಮ್ಮ ಜೊತೆ ಕೆಲಸಮಾಡಿದ ಕೆಲವರು.

ಸಂಸ್ಥಾನದ ಒಳಗಡೆ ಚಳವಳಿಯನ್ನು ಉಗ್ರಗೊಳಿಸುವ ವಿಚಾರದಿಂದ ಮತ್ತೆ

ಗುಪ್ತವಾಗಿ ಕಲ್ಬುರ್ಗಿ ಜಿಲ್ಲೆ ಸೇರಿ ಹಳ್ಳಿಹಳ್ಳಿಗಳಲ್ಲಿ ಪ್ರವಾಸ ಕೈಗೊಂಡೆ. ಒಂದು ದಿನ ಸಂಜೆ 7 ಗಂಟೆಗೆ 23 ಮೈಲು ನಡೆದು ಚಿಂಚೋಳಿಗೆ ಮರಳುವಾಗ ಬಂಧನಕ್ಕೆ ಒಳಪಟ್ಟೆ. ಜನವರಿ 27ಕ್ಕೆ (1948) ಕಲ್ಬುರ್ಗಿ ಕಾರಾಗೃಹ ಸೇರಿದೆ. ಆಗಲೇ (ಜನವರಿ 30) ರಾಷ್ಟ್ರಪಿತನ ಮರಣದ ದಾರುಣವಾರ್ತೆ ತಿಳಿಯಿತು. ಪ್ರೊ|| ಭಾವುಸಾಹೇಬ ದೇವುಳಗಾಂವ್ಕರ, ಜಗನ್ನಾಥರಾವ್ ಚಂದ್ರಿಕಿಯವರ ಸಹವಾಸದಿಂದ ಅಲ್ಲಿ ಸ್ವಾಧ್ಯಾಯಕ್ಕೆ ಅನುಕೂಲ ಆಯಿತು. ಆರು ತಿಂಗಳನಂತರ ಅನಿರೀಕ್ಷಿತವಾಗಿ ಬಿಡುಗಡೆಯಾದೆ. ವಿಜಾಪುರಕ್ಕೆ ಹೋಗಿ ಇರಲು ಪೋಲಿಸ್ ಆ್ಯಕ್ಷನ್ ಅನಂತರ ಸಂಸ್ಥಾನಕ್ಕೆ ಮರಳಿದೆ. 1949ರಲ್ಲಿ ಶಿಕ್ಷಕನಾಗಿ, ಮುಂದೆ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಬಿ.ಎ., ಎಲ್‌ಎಲ್.ಬಿ. ಮುಗಿಸಿ, 18 ವರ್ಷದಿಂದ ವಕೀಲಿ ಮಾಡುತ್ತಿರುವೆ. ಭಾರತೀಯ ಜನಸಂಘದ ಕರ್ನಾಟಕ ಪ್ರಾಂತೀಯ ಉಪಾಧ್ಯಕ್ಷ ಹಾಗೂ ಕರ್ನಾಟಕ ಆರ್ಯ ಉಪಪ್ರತಿನಿಧಿ ಸಭಾದ ಅಧ್ಯಕ್ಷನಾಗಿರುವೆ.

ಹೈ.ಕ. 9

## ಭೀಮಸೇನಾಚಾರ್ಯ ಮೂಲಿ

ಜನನ : 1907 ಉದ್ಯೋಗ : ವಕೀಲ ವಿಳಾಸ : ಚಿಂಚೋಳಿ



ಬಾಲ್ಯದಿಂದಲೂ ಮರಾಠಿ ಓದಿ ಲೋಕಮಾನ್ಯರ ಜೀವನ ಮತ್ತು ವಿಚಾರಗಳಿಂದ ನಾನು ಪ್ರಭಾವಿತನಾಗಿದ್ದೆ. ನಮ್ಮ ಸಂಸ್ಥಾನದಲ್ಲಿ ಆಗ ಜನಕ್ಕೆ ಯಾವ ರೀತಿಯ ಸ್ವಾತಂತ್ರ್ಯವಿರಲಿಲ್ಲ. ಸಭೆ, ಮೆರವಣಿಗೆಗಳನ್ನು ನಡೆಸಲು ಪೂರ್ವಾನುಮತಿ ಪಡೆಯಬೇಕು. ಬಹುಸಂಖ್ಯಾತ ಹಿಂದುಗಳನ್ನು ಗುಲಾಮರಂತೆ ನಡೆಸಿಕೊಳ್ಳುತ್ತಿದ್ದರು. ನಮ್ಮ ಆಸ್ತಿಪಾಸ್ತಿಗಳಿಗೆ ಸದಾ ಅಪಾಯ. ನಮ್ಮ ಸ್ತ್ರೀಯರ ಮಾನ ಅಭದ್ರ. ನಮ್ಮಲ್ಲಿ ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಸ್ಥಾಪನೆ ಆದಾಗ ಸ್ವಾಮಿ ರಮಾನಂದ ತೀರ್ಥರ ಸಹಕಾರಿ ರಾಮಕೃಷ್ಣ ಧೂತ್ ಅವರು ನಮ್ಮ ಊರಿಗೆ ಬಂದಿರಲು ನಾನು ಕಾಂಗ್ರೆಸ್ಸಿನ ಸದಸ್ಯನಾದೆ. ಆದರೆ ನಿಜವಾಗಿ ಜನರ ಹಿತರಕ್ಷಣೆಗಾಗಿ ಶ್ರಮಿಸಿದ ಸತ್ವಶಾಲಿ ಸಂಸ್ಥೆ ಆರ್ಯಸಮಾಜವೇ. ಮುಂದಿನ ರಾಜಕೀಯ ಚಟುವಟಿಕೆಗಳಿಗೆ ಅದೇ ಸಂಸ್ಥಾನದಲ್ಲಿ ರಂಗವನ್ನು ಸಜ್ಜುಗೊಳಿಸಿದ್ದು. ಜನರಲ್ಲಿ ಜಾಗೃತಿ

ಮಾಡಲು ಅದು ಸಭೆ, ಮೆರವಣಿಗೆಗಳಂಥ ಧೀರಕಾರ್ಯಕ್ರಮಗಳನ್ನು ರೂಪಿಸಿತಲ್ಲದೆ, ಧಾರ್ಮಿಕ, ಸಾಂಸ್ಕೃತಿಕ ಚಟುವಟಿಕೆಗಳ ಮರೆಯಲ್ಲಿ ಅದು ರಾಜಕೀಯ ಜಾಗೃತಿಗೆ ಶ್ರಮಿಸಿತು. 1933ರಿಂದಲೇ ನನ್ನನ್ನು ಸರಕಾರವಿರೋಧೀ ವ್ಯಕ್ತಿಯೆಂದು ಪೋಲಿಸರು ಗುರುತಿಸಿದ್ದರು. ಆರ್ಯ ಸಮಾಜದ ಕಾರ್ಯಕರ್ತನಾಗಿ ಭವ್ಯ ಮೆರವಣಿಗೆಗಳನ್ನು ನಡೆಸುತ್ತಿದ್ದೆನಲ್ಲದೆ ಹೋಳಿ, ದಸರಾ, ಗಣೇಶ ಉತ್ಸವ, ಪಾಂಡುರಂಗ ದೇವರ ಮೆರವಣಿಗೆಗಳನ್ನೂ ಏರ್ಪಡಿಸುತ್ತಿದ್ದೆ. 1929ರಲ್ಲಿಯೇ ಜನಜಾಗೃತಿಗಾಗಿ ಭಾರತ ವಾಚಲನಾಯವನ್ನು ಚಿಂಚೋಳಿಯಲ್ಲಿ ತೆರೆದಿದ್ದೆ. ಆ ವರ್ಷ ನಾನು ಬಿ.ಎ. ಪಾಸಾಗಿದ್ದೆ. ಆದರೆ ಕಾನೂನು ಶಿಕ್ಷಣಕ್ಕೆ ಉಸ್ಮಾನಿಯಾ ವಿಶ್ವವಿದ್ಯಾಲಯದವರನ್ನು ಮುಂಬಯಿ ವಿಶ್ವವಿದ್ಯಾಲಯಕ್ಕೆ ಸೇರಿಸಿಕೊಳ್ಳದಿರಲು ಡಾಕ್ಕಾಗೆ ಹೋಗಿ ನಾನು ಆನರ್ಸ್ ಶಿಕ್ಷಣವನ್ನು ಮುಂದುವರಿಸಿ ಬಿ.ಎ. ಗಳಿಸಿದನಂತರವೇ (1931) ಮುಂದೆ ಮುಂಬೈಯಲ್ಲಿ ಕಾನೂನು ಕಾಲೇಜಿಗೆ ಸೇರುವುದು ಸಾಧ್ಯ ಆಯಿತು. ಮೊದಲ ವರ್ಷ ಆದಬಳಿಕ ಅನಾರೋಗ್ಯದಿಂದ ಕಾಲೇಜು ತ್ಯಜಿಸಿ ಚಿಂಚೋಳಿಯಲ್ಲಿ ಸಾರ್ವಜನಿಕ ಕೆಲಸಮಾಡಿದೆ. ಆಗ ಶಾಲೆಯಲ್ಲಿ ಮುಖ್ಯೋಪಾಧ್ಯಾಯನಾಗಿದ್ದೆ. ಅನೇಕ ತೊಂದರೆಗಳನಂತರ 1947ರಲ್ಲಿ ಲಾ ಪಾಸುಮಾಡಿ, ಡಿಗ್ರಿ ಪಡೆದು, ಹೈದರಾಬಾದಿನಿಂದ ಸನದು ಪಡೆದು ಸೆಪ್ಟೆಂಬರ್ 5ಕ್ಕೆ (1947) ನನ್ನ ಊರಿಗೆ ಮರಳಿದಲು ಮರುದಿನವೇ ನನ್ನ ಬಂಧನ ಆಯಿತು. ಕಲ್ಬುರ್ಗಿ ಜೈಲಿನಲ್ಲಿ ನನ್ನನ್ನು ಇಟ್ಟಿದ್ದರು. 24-4-1948ರಲ್ಲಿ ಬಿಡುಗಡೆ ಮಾಡಿದರು.

ನಮ್ಮ ತಾಲೂಕಿನಿಂದ ಜೈಲಿಗೆ ಹೋದ ಇತರರೆಂದರೆ ಚಿಂಚೋಳಿಯ ದಿ|| ಡಾ|| ಶೇಷಗಿರಿರಾವ್ ಕುಲಕರ್ಣಿ, ಅನಂತ ಶರ್ಮ ವಕೀಲ, ಲಕ್ಷ್ಮಣಸಿಂಗ್ (ಈಗ ಹೈದರಾಬಾದ್‌ನಲ್ಲಿ ಅಧ್ಯಾಪಕ) ಹಾಗೂ ಸೂಲೇಪೇಟೆಯ ಚನ್ನಬಸಪ್ಪ.

ಬಿಡುಗಡೆಯನಂತರ ಎರಡು ತಿಂಗಳು ಮನೆಯಲ್ಲೇ ಇದ್ದೆ. ಒಮ್ಮೆ ರಜಾಕಾರರು ನನ್ನನ್ನು ಸಭೆಯೊಂದರಲ್ಲಿ ಭಾಷಣ ಮಾಡಲು ಕರೆದರು. ನಾನು ತಪ್ಪಿಸಿಕೊಂಡೆ. ಒಮ್ಮೆ ನಾನು ಗುಲ್ಬರ್ಗಕ್ಕೆ ಹೋದಾಗ ಪೋಲಿಸನೊಬ್ಬ ಸದಾ ನನ್ನ ಹಿಂದೆ ಬರುತ್ತಿದ್ದ. ಕಡೆಗೆ ಬೇಸತ್ತು ನಾನು ಬೊಂಬಾಯಿಗೆ ಹೋದೆ. ಅಲ್ಲಿಂದ ಸೋಲಾಪುರ, ಮುಂದೆ ವಿಜಾಪುರ ನಿರಾಶ್ರಿತರ ಶಿಬಿರದಲ್ಲಿ ಇದ್ದು ಪೋಲಿಸ್ ಆ್ಯಕ್ಶನ್ ನಂತರವೇ ಮರಳಿದೆ ಈಗ ವಕೀಲವೃತ್ತಿ ನಡೆಸುತ್ತಿರುವೆ. ಎಂಟು ವರ್ಷಕ್ಕೂ ಮೇಲ್ಪಟ್ಟು ಸ್ಥಳೀಯ ಬಾರ್ ಅಸೋಸಿಯೇಶನ್‌ನ ಅಧ್ಯಕ್ಷನಾಗಿ ಕೆಲಸಮಾಡಿದ್ದೇನೆ.

6676

ಹೈ.ಕ. 10

## ರಾಮರಾವ್ ಹೇಜಿಬ್

ಜನನ : 1931 ಉದ್ಯೋಗ : ನಿವೃತ್ತಜೀವನ ವಿಳಾಸ : 10-2-80 ಸಂಗಮೇಶ್ವರ ಕಾಲನಿ, ಕಲ್ಬುರ್ಗಿ



ನಾನು ನನ್ನ ಊರಾದ ಸುರಪುರ(ಶೋರಾಪುರ) ದಲ್ಲಿ ಹತ್ತನೆಯ ವರ್ಗದಲ್ಲಿ ಓದುತ್ತಿರಲು ದೇಶ ಸ್ವತಂತ್ರ ಆದಾಗ ಸ್ಟೂಡೆಂಟ್ಸ್ ಯೂನಿಯನ್‌ನ ಕಾರ್ಯದರ್ಶಿಯಾಗಿ ಆಯ್ಕೆಗೊಂಡೆ. ವಿದ್ಯಾರ್ಥಿಗಳು ಶಾಲೆಗೆ ಹೋಗದಂತೆ ಚಳವಳಿ ಮಾಡಿದ ನಾನು ಊರಲ್ಲಿ ತ್ರಿವರ್ಣಧ್ವಜವನ್ನು ಮಿತ್ರರ ನೆರವಿನಿಂದ ರಾತ್ರಿ ಗೋಡೆಗಳಿಗೆ ಅಂಟಿಸಿದೆ. ಒಮ್ಮೆ ಮಿತ್ರರ ಒಂದು ಗುಪ್ತಸಭೆ ಕರೆದು, ಊರಲ್ಲಿ ಮರುದಿನ ವಿಲೀನಪರ ಘೋಷಣೆ ಕೂಗಿ ಮೆರವಣಿಗೆ ತೆಗೆದೆವು. ನನ್ನ ಸಹಿತ 11 ಜನ ವಿದ್ಯಾರ್ಥಿನಾಯಕರ ಬಂಧನವಾಯಿತು. ಆ ಪೈಕಿ (ಈಗಿನ ಸರಕಾರಿ ಅಧ್ಯಾಪಕ) ಕಿಶನ್‌ರಾವ್ ಮುಳ್ಳಿ, ಗೋಪಾಲರಾವ್ ಆದೋನಿಕರ್ (ಈಗ ವಕೀಲ), ಅವರ ಸೋದರ ಮಾಣಿಕರಾವ್ ಆದೋನಿಕರ್ ಇವರೆಲ್ಲ ಇದ್ದರು. ನಮ್ಮ ಮೇಲೆ ಖಟ್ಲೆಯಾಗಿ, ಆರು ತಿಂಗಳು ಆರು ದಿನ ಕಲ್ಬುರ್ಗಿ ಜೈಲಿನಲ್ಲಿ ಇದ್ದೆವು. ಆಗ ನಮ್ಮ ನಾಯಕರೆಂದರೆ ತಿರುಮಲರಾವ್ ದೇಸಾಯಿ (ಈಗ ಸರಕಾರೀ ನೌಕರರು).

ಹೈ.ಕ. 11

## ತಿರುಮಲರಾವ್ ದೇಸಾಯಿ

ಜನನ : ? ಉದ್ಯೋಗ : ಸರಕಾರೀ ನೌಕರಿ ವಿಳಾಸ : ತಹಸೀಲ್ ಕಚೇರಿ, ಮೊಳಕಾಲ್ಮುರು

ಕಲ್ಬುರ್ಗಿಯ ರಾಷ್ಟ್ರೀಯ ಶಾಲೆ ನೂತನ ವಿದ್ಯಾಲಯದ ವಿದ್ಯಾರ್ಥಿಯಾಗಿದ್ದುದರಿಂದ ನಾನು ರಾಷ್ಟ್ರೀಯ ವೃತ್ತಿಯವನಾದುದರಲ್ಲಿ ಅಚ್ಚರಿ ಇಲ್ಲ. ಹೈದರಾಬಾದ್ ಸ್ಟೇಟ್ ಕಾಂಗ್ರೆಸ್‌ನ ಚಟುವಟಿಕೆಗಳಿಂದಲೂ ನನ್ನ ರಾಜಕೀಯ ಗುರುಗಳಾದ ಭಾವುರಾವ್

ದೇವುಳ್ಗಾಂವ್ಕರರ ಪ್ರಭಾವದಿಂದಲೂ ನಾನು ಚಳವಳಿಯ ಕಡೆ ಆಕರ್ಷಿತನಾದೆ. ನಮ್ಮ ತಂದೆ 1943ರಲ್ಲಿ ತೀರಿಕೊಂಡು, 13 ಜನರಿರುವ ಸಂಸಾರದ ಭಾರ ನಾನೇ ನಿರ್ವಹಿಸ ಬೇಕಾಗಿ ಬಂದರೂ ಚಳವಳಿಯಲ್ಲಿ ನಾನು ಭಾಗವಹಿಸುವ ಬಗ್ಗೆ ನಮ್ಮ ಮನೆಯಲ್ಲಿ ಭಿನ್ನಾಭಿಪ್ರಾಯವಿರಲಿಲ್ಲ. 1947ರಲ್ಲಿ ನಾನು ಶೋರಾಪುರ (ಸುರಪುರ) ತಾ|| ಆಫೀಸಿನಲ್ಲಿ ಸೆಕೆಂಡ್ ಡಿವಿಜನ್ ಕ್ಲಾರ್ಕ್ ಆಗಿದ್ದೆ. ಆ ಕಾಲದಲ್ಲಿ ಕಲ್ಬುರ್ಗಿಯಲ್ಲಿ ಭಾವುಸಾಹೇಬ್ ದೇವುಳ್ಗಾಂವ್ಕರ್, ದಿ|| ಹನುಮಂತರಾವ್ ಕಕ್ಕೇರಿ, ದಿ|| ಅಶ್ವತ್ಥರಾವ್ ವಕೀಲ್, ದಿ|| ಕಪಟರಾಳ ಕೃಷ್ಣರಾವ್, ಜಗನ್ನಾಥರಾವ್ ಚಂದ್ರಿಕಿ, ದತ್ತಾತ್ರೇಯರಾವ್ ಅವರಾದಿ ಹಾಗೂ ನಾರಾಯಣರಾವ್ ಕನ್ಹಾಳ ಇವರುಗಳು ಕಾಂಗ್ರೆಸ್ಸಿನ ಕಟ್ಟಾ ಅನುಯಾಯಿಗಳಾಗಿದ್ದರು.

1947ರಲ್ಲಿ ದೇವುಳ್ಗಾಂವ್ಕರರು ನನ್ನಲ್ಲಿಗೆ ಗುಟ್ಟಾಗಿ ಬಂದು, ಆಗಿನ ಸುರಪುರದ ಕಾಂಗ್ರೆಸ್ ಸಂಘಟಕ ವೆಂಕೋಬರಾವ್ ಪದಕಿ ಅವರು ಭೂಗತರಾಗಿರುವ ಕಾರಣ ಚಳವಳಿಗೆ ಸಂಬಂಧಿಸಿದ ಕೆಲಸಗಳನ್ನು ನಾನು ನೋಡಿಕೊಳ್ಳಬೇಕೆಂದು ತಿಳಿಸಿದರು. ಆಗ ಹಿಂದುಗಳೆಲ್ಲ ಚಳವಳಿಯ ಪರವಾಗಿದ್ದರೂ ಬಹಿರಂಗಕ್ಕೆ ಬಂದು ಚಳವಳಿಯನ್ನು ಬೆಂಬಲಿಸಲು ಯಾರೂ ಸಿದ್ಧರಿರಲಿಲ್ಲ.

1947ರ ಆಗಸ್ಟ್ 14ರ ರಾತ್ರಿ ನಿಜಾಂ ರಾಜ್ಯಕ್ಕೆ ಬಂದ ಭಾರತದ ರೈಲುಗಳಿಗೆ ಅಂಟಿಸಿದ್ದ ಕಾಗದದ ತ್ರಿರಂಗೀ ಧ್ವಜಗಳನ್ನು ರಜಾಕಾರರು ಹರಿದು ಕೀಳಲು, ಈ ಬಗ್ಗೆ ಭಾರತಾದ್ಯಂತ ಪ್ರತಿಭಟನೆ ಕೇಳಿಬಂತು. ಈ ತ್ರಿರಂಗೀ ಧ್ವಜವನ್ನು ಸಂಸ್ಥಾನದಲ್ಲಿ ಹಾರಿಸಬಹುದು, ಆದರೆ ಅದರ ವಿಜೃಂಭಣೆಯ ಆರೋಹಣ ಸಮಾರಂಭಗಳು ಮಾತ್ರ ಕೂಡದು, ಎಂದು ನಿಜಾಮರು ಫರ್ಮಾನ್ ಹೊರಡಿಸಿದರು. ಇದರ ಹಿಂದೆಯೇ ಸೆಪ್ಟೆಂಬರ್ 2ನ್ನು ಧ್ವಜದಿನವಾಗಿ ಎಲ್ಲೆಡೆ ಆಚರಿಸಬೇಕೆಂದು ಸ್ವಾಮಿ ರಮಾನಂದ ತೀರ್ಥರು ಕರೆಕೊಡಲು, ಇದರ ಕಾರ್ಯಾಚರಣೆಗೆ ನಮ್ಮ ತಾಲೂಕಿನಲ್ಲಿ ನಾನು ಯೋಜನೆ ಹಾಕಿದೆ. ಸುಮಾರು 600 ವಿದ್ಯಾರ್ಥಿಗಳಿರುವ ಸ್ಟೂಡೆಂಟ್ಸ್ ಯೂನಿಯನ್‌ನ ನೆರವಿನಿಂದ ಈ ಕೆಲಸ ಮಾಡಲು ನಿರ್ಧರಿಸಿ ಶ್ರೀನಿವಾಸಾಚಾರ್ಯ ಪ್ರತಿನಿಧಿ (ಈಗ ಜಿಲ್ಲಾ ಜಜ್) ಅವರ ಸಹಕಾರ ಹಾಗೂ ವ್ಯಾಪಾರೀ ಸಂಸ್ಥೆಯ ಬೆಂಬಲದಿಂದ ನಾನು 600 ಧ್ವಜಗಳನ್ನು ಸಿದ್ಧಪಡಿಸಿದೆನಲ್ಲದೆ 'ಸುರಪುರ ಸಮಾಚಾರ' ಎಂಬ ಬುಲೆಟಿನ್‌ನ್ನು ತಾಳಿಕೋಟೆಯಲ್ಲಿ ಮುದ್ರಿಸಿಕೊಂಡೆ. ಆ ಬುಲೆಟಿನ್‌ನಲ್ಲಿ ಜನರಿಗೆ ಹೀಗೆ ಕರೆ ಕೊಡಲಾಗಿತ್ತು : 'ಸಂಸ್ಥಾನವು ಭಾರತ ಒಕ್ಕೂಟದಲ್ಲಿ ಸೇರುವ ತನಕ ಚಳವಳಿ ; ಜವಾಬ್ದಾರಿ ಸರಕಾರಕ್ಕಾಗಿ ಒತ್ತಾಯಿಸುವುದು ; ಸರಕಾರೀ ನೌಕರರೂ ಶಾನುಭಾಗರೂ ರಾಜೀನಾಮೆ ನೀಡುವುದು; ಕರಗಳ ನಿರಾಕರಣೆ; ಸೇಂದಿ ಮರಗಳ ನಾಶ.'

ಆದರೆ 2–9-1947ರಂದು ನನ್ನನ್ನು ಖಜಾನೆಯ ಕಾವಲುಗಾರರಾದ ಅರಬ್ಬರ ವಶದಲ್ಲಿ ಬಂಧಿಸಿಟ್ಟರು. 6–9–1947ರಂದಷ್ಟೇ ನನ್ನ ಬಿಡುಗಡೆ ಆಯಿತು. ಹೀಗಾಗಿ

2-9-1947ರ ಕಾರ್ಯಕ್ರಮ ಆಗಲಿಲ್ಲ. ಆದರೆ 7-9-1947ರಂದು ಸುರಪುರದಲ್ಲಿ ವಿದ್ಯಾರ್ಥಿಗಳ ಭಾರೀ ಮೆರವಣಿಗೆಯಾಯಿತು. ಆ ದಿನವೇ ತ್ರಿರಂಗೀ ಧ್ವಜದ ಹಾರಾಟ ಹಾಗು ಬುಲೆಟಿನ್‌ಗಳ (ಭಿತ್ತಿಪತ್ರ) ಅಂಟಿಸುವಿಕೆ ತಾಲೂಕಿನ ಎಲ್ಲ 198 ಊರು ಗಳಲ್ಲೂ ಆಯಿತು. ಇದರಿಂದ 7-9-1947ರಂದು ನನ್ನ ಬಂಧನವಾಯಿತು. ನನ್ನ ಸಹೋದ್ಯೋಗಿ ಕೃಷ್ಣಮಾಚಾರ್ಯರೂ ಬಂಧಿತರಾದರು. ಅಲ್ಲಿಂದ ನಮ್ಮನ್ನು ಕಲ್ಬುರ್ಗಿ ಜೈಲಿಗೆ ಕಳುಹಿಸಿದರು. ಮುಂದೆ ಕೆಲಕಾಲ ಹೈದರಾಬಾದ್ ಜೈಲಿನಲ್ಲಿಟ್ಟು ಮತ್ತೆ ಕಲ್ಬುರ್ಗಿಗೇ ತಂದರು. ನನ್ನ ಅನಂತರ ಶೋರಾಪುರ ತಾಲೂಕಿನಲ್ಲಿ 34 ಬಂಧನ ಗಳಾದುವು. ಪೋಲಿಸ್ ಆ್ಯಕ್ಷನ್‌ನ ಅನಂತರ 24-9-1948ರಂದೇ ನನ್ನ ಬಿಡುಗಡೆ ಆಯಿತು. ಸ್ವಾತಂತ್ರ್ಯ ಯುದ್ಧದಲ್ಲಿ ಅಳಿಲಿನ ಮಳಲ ಸೇವೆ ಸಲ್ಲಿಸಿದ ತೃಪ್ತಿ ನನಗಿದೆ. ನನಗೂ ಹೆಚ್ಚು ತ್ಯಾಗಮಾಡಿದ ಜನ ಸಹಸ್ರಾವಧಿ ಇದ್ದಾರೆ.

ಹೈ.ಕ. 12

## ಕೃಷ್ಣರಾವ್ ದೇಶಪಾಂಡೆ, ಮಳ್ಳಿ

ಜನನ : 1925 ಉದ್ಯೋಗ : ಅಧ್ಯಾಪಕ ವಿಳಾಸ : 1-17-54, ಸುರಪುರ



1945ರಲ್ಲಿ ಶಿಕ್ಷಣಕ್ಕಾಗಿ ನಾನು ಸುರಪುರಕ್ಕೆ ಬಂದಿರಲು ಅಲ್ಲಿ ನಡೆಯುವ ಸಾಹಿತ್ಯ ಸಂಘದ ಚಟುವಟಿಕೆಗಳಲ್ಲಿ ಸ್ವಯಂಸೇವಕನಾಗಿ ಕೆಲಸ ಮಾಡುತ್ತಿದ್ದೆ. ಒಮ್ಮೆ ವಿದ್ಯಾರ್ಥಿಗಳೆಲ್ಲ ಕೂಡಿ ಸರಸ್ವತೀ ಪೂಜೆ ಮಾಡ ಬೇಕೆಂದಾಗ, ಶಾಲೆಯಲ್ಲಿ ಮಾಡಲು ಉಪಾಧ್ಯಾಯರು ಅನುಮತಿಯನ್ನು ನೀಡದಿರಲು, ಖಾಸಗಿಯಾಗಿ ಬಹು ವಿಜೃಂಭಣೆಯಿಂದ ಪೂಜೆ ಮಾಡಿದೆವು. ವಿದ್ಯಾರ್ಥಿಗಳು ಸರಸ್ವತಿಪೂಜೆ ಮಾಡಿದಾಗ ನಿಜಾಮರ ಫೋಟೋ ಕೆಳಭಾಗದಲ್ಲಿರಿಸಿ ಅವಮಾನ ಮಾಡಿದ್ದಾರೆ. ಇದರಲ್ಲಿ ಮುಖ್ಯೋಪಾಧ್ಯಾಯರ ಕೈವಾಡವಿದೆ' ಎಂದು ಅರ್ಜಿ ಸಲ್ಲಿಸಿದ ಕೆಲವು ಮುಸಲ್ಮಾನ ಮುಖಂಡರು ಖಾದೀಧಾರಿಗಳಾದ ಮುಖ್ಯೋಪಾಧ್ಯಾಯರನ್ನು ವರ್ಗಾ ಯಿಸುವಂತೆ ಮಾಡಿದರು. ಖಾದಿ ಧರಿಸುತ್ತಿದ್ದುದು ವಾಸ್ತವವಾಗಿ ಈ ಉಪಾಧ್ಯಾಯರ 'ಅಪರಾಧ'! ಯಾದಗಿರಿಯಲ್ಲಿ ನಡೆದ ಸ್ಟೇಟ್ ಕಾಂಗ್ರೆಸ್ಸಿಗೆ ವಿ. ಬಿ. ಪದಕಿಯವರ ನೇತೃತ್ವದಲ್ಲಿ 15-20 ವಿದ್ಯಾರ್ಥಿಗಳು ಕೂಡಿ ಹೋದೆವು. ಸುರಪುರದಲ್ಲಿ ವಿದ್ಯಾರ್ಥಿಗಳ

ಸಾಮೂಹಿಕ ಪ್ರಾರ್ಥನೆ, ಕವಾಯತು ಮುಂತಾದ ಚಟುವಟಿಕೆಗಳು ಮುಂದುವರಿದವು. ತಿರುಮಲರಾವ್ ದೇಸಾಯಿ ನಮಗೆ ಮಾರ್ಗದರ್ಶಕರು. ನನ್ನನ್ನು ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾಗಿ ಮಾಡಿದ್ದರು. ಆಗಾಗ್ಗೆ ತ್ರಿವರ್ಣದ ಬ್ಯಾಜ್‌ನ್ನು ಧರಿಸಿ ಶಾಲೆಗೆ ಹೋಗುತ್ತಿದ್ದೆವು.

ಬ್ರಿಟಿಷರಿಂದ ಭಾರತಕ್ಕೆ ನಡುಗಾಲ ಸರಕಾರ ಲಭಿಸಿದಾಗ ಸಂಸ್ಥಾನದಲ್ಲಿ ಚಳವಳಿ ಬಿಗಿಯಾಯಿತು. ಕಾಂಗ್ರೆಸ್ ಅಧ್ಯಕ್ಷರಾದ ಹಣಮಂತರಾವ್ ಕಕ್ಕೇರಿ ಬಂದಾಗ ಗುಪ್ತಸಭೆ ಆಗಿ, ಮುಂದೆ ಏನೇನು ಮಾಡಬಹುದೆಂಬ ಬಗ್ಗೆ ಚರ್ಚೆಗಳಾದವು. ಈ ಕಾಲಕ್ಕೆ ಹೈದರಾಬಾದ್‌ನಲ್ಲಿ ವಿದ್ಯಾರ್ಥಿಗಳು ಮೆರವಣಿಗೆ ನಡೆಸಿದ್ದಕ್ಕೆ ಪೋಲಿಸರು ಲಾಠೀಪ್ರಹಾರ, ಅಪಮಾನಮಾಡಿದ್ದರ ಪ್ರತಿಭಟನಾರ್ಥ ಸುರಪುರದಲ್ಲೂ ಮೆರವಣಿಗೆ ನಡೆಸಬೇಕೆಂದಿದ್ದೆವು. ಊರ ಹಿರಿಯರ ಸಹಾಯದಿಂದ ಧ್ವಜದ ಬಟ್ಟೆ, ಬಿದಿರಿನ ಕೋಲು ತರಿಸಿಕೊಂಡು ಬೇರೆಬೇರೆ ಮನೆಗಳಲ್ಲಿ ಇಟ್ಟಿದ್ದೆವು. ತಿರುಮಲರಾವ್ ದೇಸಾಯಿಯವರ ಸಲಹೆ ಪಡೆದು, ರಾಜಾ ಪಿಡ್ಡನಾಯಕರ ಬೆಂಬಲದಿಂದ ಮರುದಿನ ಬೆಳಗ್ಗೆ ಮೆರವಣಿಗೆಯ ಸಿದ್ಧತೆ ನಡೆಸಿದೆವು. ಬೆಳಗಾಗುವುದರಲ್ಲಿ 30-35 ಧ್ವಜಗಳನ್ನು ಘೋಷಾದ ಮನೆಯಲ್ಲಿ ಹೊಲಿಸಿದೆವು. ನಾಲ್ಕಾರು ಧ್ವಜಗಳನ್ನು ನಾನೇ ಕೈಯಿಂದ ಹೊಲಿದು ಸಿದ್ಧಗೊಳಿಸಿದೆ. ಸೂರ್ಯೋದಯದ ಮೊದಲೇ 300–400 ವಿದ್ಯಾರ್ಥಿಗಳು ಬಂದು ಸೇರಿದರು. ವಿದ್ಯಾರ್ಥಿಗಳು ಜಯಜಯಕಾರ ಮಾಡುತ್ತ ರಾಜಬೀದಿಗೆ ಬಂದರು. ರಜಾಕಾರರು ಅಲ್ಲಲ್ಲಿ ಆಯುಧ, ದೊಣ್ಣೆ ಹಿಡಿದು ನಿಂತಿದ್ದರು. ಮೆರವಣಿಗೆ ಇದಾವುದರ ಪರಿವೆಮಾಡದೆ ಮುಖ್ಯಬೀದಿಗಳಲ್ಲಿ ಹಾಯ್ದು ರಂಗಂಪೇಟೆ, ತಿಮ್ಮಾಪುರಗಳನ್ನೂ ಹಾದು ಮತ್ತೆ ಸುರಪುರಕ್ಕೆ ಬಂತು. ಜಯಘೋಷ, 'ವಿಜಯೀ ವಿಶ್ವತಿರಂಗಾ ಪ್ಯಾರಾ'ಗಳಿಂದ ಕೂಡಿದ ಅಂದಿನ ಭವ್ಯದೃಶ್ಯ ರೋಮಾಂಚಕಾರಿ. ಮೆರವಣಿಗೆಯ ಹಿಂದೆ ಪೋಲಿಸ್ ಟ್ರಕ್ ಇತ್ತು. ಸುರಪುರದಲ್ಲಿ ನಮ್ಮನ್ನು ತಡೆದು ಧ್ವಜಗಳನ್ನು ಪೋಲಿಸರು ತೆಗೆದುಕೊಂಡರಲ್ಲದೆ, ಕೆಲವರನ್ನು ಪೋಲಿಸ್ ಸ್ಟೇಶನ್ನಿಗೆ ತಂದರು. ಧ್ವಜಗಳನ್ನು ಕಿತ್ತು ಅಡ್ಡ ಇಟ್ಟಿರಲು, ನಾವೆಲ್ಲ ಅದನ್ನು ಸರಿಯಾಗಿ ನೇರ ಇಡಲು ಕೂಗಿಕೊಂಡಾಗ ಹಾಗೇ ಮಾಡಿದರು. ಅಲ್ಲಿ ನಾನಲ್ಲದೆ ಮಾಣಿಕರಾವ್ ಆದ್ವಾನಿ, ರಾಮರಾವ್ ಹೇಜಿಬ್, ಗೋಪಾಲರಾವ್ ಆದ್ವಾನಿ, ಭೀಮಾಚಾರ್ಯ ಕೆಂಭಾವಿ, ಅಶ್ವತ್ಥ, ನೀಲಕಂಠ, ಪರ್ವತರೆಡ್ಡಿ ರೊಟ್ನಡಿಗಿ, ಪಿ. ಕೃಷ್ಣಮಾಚಾರಿ ಮುಂತಾದವರು ಇದ್ದರು. ಅದೇ ದಿನ ಸಂಜೆ ಶಿವನಾರಾಯಣ ಶೇಠ, ತಿರುಮಲರಾವ್ ದೇಸಾಯಿ, ಕೃಷ್ಣಾಮಾಚಾರ್ಯ ಪುಣೆ, ಮಾಧವರಾವ್ ಬಾಸೂದಕರ ಇವರನ್ನು ಬಂಧಿಸಿ ಗುಲ್ಬರ್ಗ ಜೈಲಿಗೆ ಕಳುಹಿಸಿದರು. ನಮ್ಮಲ್ಲಿ ಕೆಲವರನ್ನು ಮುಚ್ಚಳಿಕೆ ಬರೆದುಬಿಟ್ಟು ಮರುದಿನ ಕೋರ್ಟಿಗೆ ಬರಲು ಹೇಳಿದರು. ಸಾಕ್ಷಿಗಳು ಸರಿಯಾಗಿ ಆಗದೆ ನಾವು ಕೆಲವರು ಬಿಡುಗಡೆ ಆದೆವು. ಮರುದಿನ ಶಾಲೆಯ ಮುಂದೆ ಪಿಕೆಟಿಂಗ್ ಮಾಡಿದೆವು. ನನ್ನನ್ನು

ಕರೆಯಲು ಮುಖ್ಯೋಪಾಧ್ಯಾಯರು ಇಬ್ಬರು ಉಪಾಧ್ಯಾಯರನ್ನು ಕಳುಹಿಸಿದರು. ನಾನು ಹೋಗಲಿಲ್ಲ. ಒಂದು ವಾರ ಹೀಗೆ ಸಾಗಿರಲು ಪೋಲಿಸರು ವಿದ್ಯಾರ್ಥಿಗಳ ಚಟುವಟಿಕೆಯಿಂದ ಬೇಸತ್ತರು. ಅನೇಕ ಕಡೆ ಧ್ವಜಗಳು ಏರಿಸಲ್ಪಡುತ್ತಿದ್ದವು. ಒಬ್ಬ ಶಿಕ್ಷಕರು ಆಗ ನನಗೆ ಭೂಗತರಾಗಿದ್ದ ವಿ. ಬಿ. ಪದಕಿಯವರ ಭೇಟಿಮಾಡಿಸಲು ಅವರು ನಾವು ಮೆರವಣಿಗೆ ಹೊರಡಿಸಿದ ಬಗ್ಗೆ ಪ್ರಶಂಸೆ ವ್ಯಕ್ತಪಡಿಸಿದರು. ಕೆಲವು ಲಕೋಟಿಗಳನ್ನು ಕೊಟ್ಟು ನನ್ನನ್ನು ಗದಗಿಗೆ ಕಳುಹಿಸಿದರು. ಪೋಲಿಸರ ಕಾಟದ ನಡುವೆಯೂ ಬಸ್ಸು ಹತ್ತಿ, ಯಾದಗಿರಿಯಿಂದ ಹುಟಗಿಗೆ ಹೋಗಿ ಹಣಮಂತರಾವ್ ಹರವಾಳ ಅವರನ್ನು ಭೇಟಿಯಾಗಿ ವಿಜಾಪುರದ ದುಬೆಯವರಿಗೆ ಮುಟ್ಟಿಸಲು ಪದಕಿ ಯವರು ಕೊಟ್ಟ ಕಾಗದಗಳನ್ನು ಅವರಿಗೆ ಕೊಟ್ಟೆ. ಗದಗಿನಲ್ಲಿ ಸದಾಶಿವರಾವ್ ಗರೂಡರ ಮನೆಯಲ್ಲಿ ಜನಾರ್ದನರಾವ್ ದೇಸಾಯಿ ಅವರನ್ನು ಕಂಡು ಕಾಗದಗಳನ್ನು ಒಪ್ಪಿಸಿದೆ. ಅಲ್ಲಿಯೇ ಇದ್ದ ರಾಜಾ ವೆಂಕಟಪ್ಪ ನಾಯಕ, ಶರಣಗೌಡ ದುಮ್ಮದ್ರಿ ಮತ್ತು ಅಚ್ಚಪ್ಪಗೌಡ ಸಗರ ಇವರನ್ನೂ ಕಂಡೆ. ಆಗಲೇ ರಾಮರಾವ್ ತಂಗಡಗಿ ನನ್ನಂತೆ ಕೆಲವು ಪತ್ರಸಹಿತ ಅಲ್ಲಿಗೆ ಬಂದರು. ಅಲ್ಲಿಂದ ನಾವು ಪ್ರೆಸ್ಸಿಗೆ ಹೋಗಿ 3000 ಪಾಂಫ್ಲೆಟ್, ಕಾಗದದ ಧ್ವಜ ಪಡೆದು ತಾಳೀಕೋಟೆಗೆ ಹೋದೆವು. ಅಲ್ಲಿ ಭೀಮಾಚಾರ್ಯ ಕೆಂಭಾವಿ ಅವರನ್ನು ಕಂಡೆವು. ರಾಮರಾವ್ ತಂಗಡಗಿ ಅವರಿಗೆ ಮಳ್ಳೂರಿನಿಂದ ಬಸ್ ಮೂಲಕ ಸುರಪುರಕ್ಕೆ ಹೋಗಲು ಹೇಳಿ ಕಾಗದಪತ್ರ, ಹಣ ಅವರಿಗೆ ಒಪ್ಪಿಸಿ, ನಾನೂ ಕೆಂಭಾವಿಯವರೂ ಹಟ್ಟಿಗೆ ಮೇಲಿಂದ ರಾತ್ರಿ ಕಾಮನಟಿಗೆಗೆ ಬಂದು, ಅಲ್ಲಿ ಧ್ವಜ, ಪಾಂಫ್ಲೆಟ್‌ಗಳನ್ನು ಹುಣಸಿಗೆ, ಕೊಡೆಕಲ್‌ಗಳಿಗೆ ಮುಟ್ಟಿಸಿ ಹಳ್ಳಿಗಳಲ್ಲಿ ಹಂಚಲು ಸಂತೆಗೆ ಹೋಗುವವರ ಕೈಗೆ ಕೊಟ್ಟೆವು. ನಾನು, ಕೆಂಭಾವಿ ರಾತ್ರಿ ಕಾಲುನಡಿಗೆಯಿಂದ ಕೆಸರು, ಮುಳ್ಳು ತುಳಿದು ಬೆಳಗಾಗುವ ಮೊದಲು ಸುರಪುರ ಸೇರಲು, ಮಳ್ಳೂರಿನಲ್ಲಿ ರಾಮರಾವ್ ತಂಗಡಗಿಯನ್ನು ಹಿಡಿದು ಸುರಪುರಕ್ಕೆ ತಂದ ವಿಚಾರ ತಿಳಿಯಿತು. ರಾತ್ರಿ ಪದಕಿಯವರನ್ನು ಕಂಡೆ. ಅವರು ಮುಂಜೈಗೆ ಜೆ. ಕೆ. ಪ್ರಾಣೇಶಾಚಾರ್ಯರ ಬಳಿ ಹೋಗೋಣ, ಎಂದರು. ಮೂರು ದಿನ ನಾವು ಕತ್ತಲ ಮನೆಯಲ್ಲೇ ಇದ್ದೆವು. ಬುದ್ಧಿವಂತ ಶೆಟ್ಟರು ಆಹಾರ ಒದಗಿಸುತ್ತಿದ್ದರು. ಮುಂದೆ ನನ್ನ ಬಂಧನ ಆಯಿತು. ಅದೇ ದಿನ ವಾಮನರಾವ್ ಕುಲಕರ್ಣಿ ಮುಷ್ಟೆಳ್ಳಿ, ಮಾಣಿಕರಾವ್ ಆಪ್ಟಾನಿ, ಪರ್ವತರೆಡ್ಡಿ ರೊಟ್ನಡಿಗಿ, ಮುಕುಂದಜೆಂದ ಇವರನ್ನೂ ಹಿಡಿದಿದ್ದರು. ಮುಂದೆ ಕಲ್ಬುರ್ಗಿ ಜೈಲಿಗೆ ಹೋದಾಗ ತಿರುಮಲರಾವ್ ದೇಸಾಯಿ ನಮ್ಮನ್ನು ಅಪ್ಪಿ ಎತ್ತಿದರು. ಅಲ್ಲಿ ರಮಾನಂದ ತೀರ್ಥರೂ ಇದ್ದರು. ಒಮ್ಮೆ ಜಗನ್ನಾಥರಾವ್ ಚಂದ್ರಿಕಿಯವರನ್ನು ಬೇರೆ ಜೈಲಿಗೆ ಸ್ಥಳಾಂತರಿಸುವ ಬಗ್ಗೆ ವಿರೋಧ ವ್ಯಕ್ತಮಾಡಿ, ಅವರ ಸ್ಥಳಾಂತರ ತಡೆದೆವು. 6 ತಿಂಗಳು 12 ದಿನ ಅಲ್ಲಿದ್ದೆ (ಫಸಲಿ 12-1-1357 ರಿಂದ 24 7-1357). ಬಿಡುಗಡೆ ಆದಾಗ ಬೆಂಗಳೂರಿಗೆ ಹೋದೆ.

ರಾಜಸೇವಾಸಕ್ತ ಡಿ. ಕೊಂಗಾಡಿಯಪ್ಪ, ದೊಡ್ಡಬಳ್ಳಾಪುರ ಇವರ ಮನೆಯಲ್ಲಿ ಆಶ್ರಯ ಕೊಟ್ಟರು. ಮುಂದೆ ತುಮಕೂರು ಬ್ರಾಹ್ಮಣ ಸಂಘದಲ್ಲಿ ಸೇರಿ ಶಿಕ್ಷಣ ಮುಂದುವರಿಸ ಬೇಕೆಂದಾಗ, ನನ್ನ ಊರು ಮಳ್ಳಿ ಗ್ರಾಮದ ಮೇಲೆ ಪಠಾಣರು ಆಕ್ರಮಣ ಮಾಡಿ ಅನೇಕರನ್ನು ಕೊಂದ ವಾರ್ತೆ ಪ್ರಜಾವಾಣಿಯಲ್ಲಿ ಬಂದಿತ್ತು. ದೊಡ್ಡಬಳ್ಳಾಪುರದ ನೀಲಕಂಠಪ್ಪ ಹಾಗೂ ಮುಗುವಾಳಪ್ಪ ಇವರ ಸಹಾಯದಿಂದ ಊರಿಗೆ ಹೊರಟೆ. ಸಿಂದಗಿ ತಾ|| ಹೊನ್ನಳ್ಳಿಯಲ್ಲಿ ನನ್ನ ತಾಯಿ, ಅತ್ತಿಗೆ, ತಮ್ಮಂದಿರು ಇದ್ದರು. ಅವರನ್ನು ಮಳ್ಳಿಗೆ ಕರೆದು ತಂದೆ. ಕಲ್ಬುರ್ಗಿ ಜಿಲ್ಲೆಯ ಮಳ್ಳಿ ಗ್ರಾಮ ವಿಜಾಪುರ ಜಿಲ್ಲೆಯ ಗಡಿಯಿಂದ 2-3 ಮೈಲಿ ಒಳಗಿದೆ. 9-9-1948ರಂದು ಪಠಾಣರೂ ರಜಾಕಾರರೂ ಪೋಲಿಸರೂ ನಮ್ಮ ಊರ ಮೇಲೆ ದಾಳಿಮಾಡಿ ನನ್ನ ತಂದೆ ಮಹಿಪತರಾವ್, ಚಿಕ್ಕಪ್ಪ ರಾಮರಾವ್, ಹಿರಿಯ ಅಣ್ಣ ಗುರುರಾವ್, ಚಿಕ್ಕ ಅಣ್ಣ ನಾರಾಯಣರಾವ್, ಹೀಗೆ ಒಂದೇ ಕುಟುಂಬದ ನಾಲ್ವರು, ಹಾಗೆಯೇ ಊರಲ್ಲಿ ಸಿದ್ದರಾಮ ಲಕ್ಕೊಂಡ, ಶೇಷಪ್ಪ ಪತ್ತಾರ, ಯಲ್ಲಪ್ಪ ಕುರಬರ, ಹಳ್ಳೆಪ್ಪ ಹರಿಜನ, ಬಸಲಿಂಗಪ್ಪ ಹರಿಜನ, ನಾಗೋಜಿ, ಜಾನೋಜಿ, ಹೀಗೆ ಒಟ್ಟು 11 ಜನರನ್ನು ಕೊಂದು ಊರಲ್ಲಿ ಲೂಟಿಮಾಡಿ ಆಭರಣ, ಹಣ, ದನಕರು, ಆಡು, ಕುರಿ ದೋಚಿಕೊಂಡು ಹೋಗಿದ್ದರು. ಮೂರು ದಿನಗಳವರೆಗೆ ಶವಗಳು ಹಾಗೇ ಬಿದ್ದಿದ್ದವು. ಅನಂತರ ಅವುಗಳನ್ನು ಬಂಡಿಯಲ್ಲಿ ಹೇರಿ ಕುಳಗೇರಿಯ ದರ್ಗಾದ ಹಿಂದಿನ ಭಾಗದಲ್ಲಿ ಹೂಳಿದರು. ಈ ಎಲ್ಲ ವಿವರಗಳನ್ನು ನನ್ನ ತಾಯಿ ಹೇಳಿದರು. "ನಿಮ್ಮ ಮನೆಯಲ್ಲಿ ಕಾಂಗ್ರೆಸ್ಸಿನವರು ಎಷ್ಟು ಜನರಿದ್ದಾರೆ ?" ಎಂದು ಅಣ್ಣ ನಾರಾಯಣರಾಯರನ್ನು ಎಳೆದು ಕೇಳುತ್ತ ಅವರ ಮೇಲೆ ಗುಂಡುಹಾರಿಸಿದರಂತೆ.

ಬಹುಶಃ ಹೈದರಾಬಾದ್ ಕರ್ನಾಟಕದಲ್ಲಿಯೇ ನನಗಾದಷ್ಟು ಹಾನಿ ಯಾವ ಸ್ವಾತಂತ್ರ್ಯ ಹೋರಾಟಗಾರನಿಗೂ ಸಂಭವಿಸಿಲ್ಲ. ಅಂದು ಆದ ಜೀವಹಾನಿ, ಆರ್ಥಿಕ ಹಾನಿ ಹಾಗೂ ಶೈಕ್ಷಣಿಕ ಹಾನಿಗಳಿಂದ ನಮ್ಮ ಕುಟುಂಬವು ಇನ್ನೂ ಚೇತರಿಸಿಲ್ಲ.

ಪೈ.ಐ. 1

## ಕೆ. ಎಸ್. ರಾಜ

ಜನನ : ?  ಉದ್ಯೋಗ : ನಿವೃತ್ತ ಜೀವನ  ವಿಳಾಸ : ದ್ವಾರಾ : ಬಸಪ್ಪ ತೇಲಿ, ಬಾಲಾಜಿ ಮಂದಿರ ಬಳಿ, ಹುಮ್ನಾಬಾದ್



ಬೆಂಗಳೂರಲ್ಲಿ ಜನಿಸಿದ ನನ್ನ ಪೂರ್ಣ ಹೆಸರು ಕೊಮ್ಮನಹಳ್ಳಿ ಶ್ರೀಪಾದರಾಜ. ಎಸ್.ಎಸ್.ಎಲ್.ಸಿ. ಶಿಕ್ಷಣ ಮುಗಿಸಿ ಬೆಂಗಳೂರಲ್ಲಿ ವೀರಕೇಸರಿಗಳು, ಪಿ. ಆರ್. ರಾಮಯ್ಯ, ತಿ. ತಾ. ಶರ್ಮ, ತಗಡೂರ, ಭಾಷ್ಯಂ ಮುಂತಾದವರ ಜೊತೆ ರಾಷ್ಟ್ರೀಯ ಚಟುವಟಿಕೆಗಳಲ್ಲಿ ಕೆಲಸಮಾಡುತ್ತಿದ್ದೆನಲ್ಲದೆ ಖಾದಿ ಹೊತ್ತು ಮಾರಲು ಹೋಗುತ್ತಿದ್ದೆ. 1940ರ ಕೊನೆಗೆ ನಾನು ಹೈದರಾಬಾದಿಗೆ ಹೋಗಿ, ಅಲ್ಲಿಂದ ಬಿದರೆಯಲ್ಲಿ (ಬೀದರ್) ನೆಲಸಿ, ಕನ್ನಡ ಭಾಷಾಸೇವೆಗಾಗಿ ಊರ ಪ್ರಮುಖರ ನೆರವಿನಿಂದ ಕನ್ನಡ ಶಾಲೆ ತೆರೆದು 'ರಾಜಮಾಸ್ತರ' ಆದೆ. ಆಗಿನ ಸರಕಾರ ಆಗ ನನ್ನನ್ನು ಅನೇಕ ಸಲ ದಬ್ಬಾಳಿಕೆಗೆ ಒಳಪಡಿಸಿತು. ಸಾಮಾಜಿಕ ರಂಗದಲ್ಲಿ ದುಡಿಯುತ್ತಿದ್ದ ನಾನು ಅಸ್ಪೃಶ್ಯತಾನಿವಾರಣೆ ಚಟುವಟಿಕೆಯ ಅಂಗವಾಗಿ ನನ್ನ ತಮ್ಮನ ಮದುವೆಯನ್ನು ಹರಿಜನ ಕನ್ಯೆಯ ಜೊತೆ ಮಾಡಿಸಿದೆ.

1942ರ ಚಳವಳಿಯ ಕಾಲಕ್ಕೆ ಬಿದರೆಯಲ್ಲಿ ಏನೂ ಚಟುವಟಿಕೆ ಇಲ್ಲದಿರಲು, ನಾನು ಚಳವಳಿಯ ಸಂಘಟನೆಗೆ ಪ್ರಯತ್ನಮಾಡಿ ಬಂಧಿತನಾದೆ. ಅಪಾಯಕಾರೀ ವ್ಯಕ್ತಿಯೆಂದು ನನ್ನ ವಿಚಾರಣೆಯನ್ನು ಜೈಲಿನಲ್ಲೇ ಮಾಡಿ ಮೂರು ವರ್ಷ ಶಿಕ್ಷೆ ಆಯಿತು. ಮೊದಲು ಮೂರು ತಿಂಗಳು ಬಿದರೆಯಲ್ಲೇ ಇಟ್ಟು ಮುಂದೆ ಕಲ್ಬುರ್ಗಿಗೆ ಕಳುಹಿಸಿದರು. ಅಲ್ಲಿ ಬಿದರೆ ಜಿಲ್ಲೆಯ ಮುಖಂಡ ಮುರಲೀಧರರಾವ್ ಕಾಮತೀಕರ್ ಅವರೂ ಇದ್ದರು. ಎರಡೂವರೆ ವರ್ಷದನಂತರ ಬಿಡುಗಡೆ ಆಯಿತು.

1947ರ ಆ. 7ಕ್ಕೆ ಹಳ್ಳಿಖೇಡ ಗ್ರಾಮದಲ್ಲಿ ಸತ್ಯಾಗ್ರಹ ಮಾಡಿದಾಗ ನಿಜಾಂ ಪೋಲಿಸರೂ ರಜಾಕಾರರೂ ನನ್ನನ್ನು ಹೊಡೆದು ಎರಡು ಹಲ್ಲುಗಳನ್ನು ಕಿತ್ತರು. ಮೈತುಂಬ ಗಾಯಗಳಾದವು. (ಆಗ ಪೋಲಿಸ್ ಠಾಣೆಯಲ್ಲಿ ತೆಗೆದ ಫೋಟೊವನ್ನೇ ಇಲ್ಲಿ ಕಳುಹಿಸಿರುವೆ). ಎಲ್ಲ ಮುಖಂಡರ ಜೊತೆ ನನ್ನನ್ನು ಸ್ಥಾನಬದ್ಧತೆಯಲ್ಲಿ

ಬೀದರ್, ಗುಲ್ಬರ್ಗ, ಔರಂಗಾಬಾದ್ ಹಾಗೂ ಹೈದರಾಬಾದ್ ಜಿಲ್ಲೆಗಳಲ್ಲಿಟ್ಟಿದ್ದರು. ನನ್ನ ಜೊತೆ ಜೈಲಿನಲ್ಲಿ ದಿ|| ಶ್ರೀನಿವಾಸರಾವ್ ಎಖೆಳ್ಳೀಕರ್, ಮುರಲೀಧರರಾವ್ ಕಾಮತೀಕರ್, ಬಾಪುರಾವ್ ದೇಶಪಾಂಡೆ, ಶೇಷರಾವ್ ಕಾಮತೀಕರ್, ದಿಗಂಬರರಾವ್ ಕಾಮತೀಕರ್, ನಾನಾಸಾಹೇಬ ವಕೀಲ, ವಿಶ್ವನಾಥರಾವ್ ವಕೀಲ ಇವರೆಲ್ಲ ಇದ್ದರು. ಪೋಲಿಸ್ ಆ್ಯಕ್ಶನ್ ನಂತರ ಬಿಡುಗಡೆ ಆಯಿತು. ಬಿಡುಗಡೆಯನಂತರ ಹರಿಜನ ಸೇವಕ ಸಂಘದ ಕೆಲಸ ಮಾಡಿದ್ದೇನೆ.

ಬಿದರೆಯಲ್ಲಿ ಇದ್ದ ಅನ್ಯಕಾರ್ಯಕರ್ತರೆಂದರೆ, 1. ದಿ|| ಇಟಗೆಪಲ್ಲಿ ದೇಶಪಾಂಡೆ ; ಇವರು ಸ್ವಾತಂತ್ರ್ಯನಂತರ ಹೈದರಾಬಾದ್‌ನಲ್ಲಿ ಎಂ.ಎಲ್.ಎ. ಆದರು. 2. ದಿ|| ಶ್ರೀನಿವಾಸರಾವ್ ಎಖೆಳ್ಳೀಕರ್ ; ಇವರು ಸ್ವಾತಂತ್ರ್ಯನಂತರ ಹೈದರಾಬಾದ್‌ನಲ್ಲಿ ಗೃಹಶಾಖಾ ಉಪಮಂತ್ರಿ ಆದರು. 3. ಮುರಲೀಧರ ಕಾಮತೀಕರ್ ; ಈಗ ಔರಾದ್‌ನಲ್ಲಿ ವಕೀಲರಾಗಿದ್ದಾರೆ. 4. ಶೇಷರಾವ್ ಕಾಮತೀಕರ್ ; ಬಿದರೆಯಲ್ಲಿ ವಕೀಲರು ; ಪುರಸಭಾಧ್ಯಕ್ಷರೂ ಆಗಿದ್ದರು. 5. ವಿಶ್ವನಾಥರಾವ್ ; ಈಗ ಬಿದರೆಯಲ್ಲಿ ವಕೀಲರು. 6. ನಾನಾಸಾಹೇಬ್ ; ಇವರೂ ಬಿದರೆಯಲ್ಲಿ ಈಗ ವಕೀಲರು. 7. ದಿ|| ಶ್ರೀನಿವಾಸ ರಾವ್ ಹವಾಲ್ದಾರ್ ; ಇವರ ಪತ್ನಿ ಮಾಲತೀಬಾಯಿ ಇದ್ದಾರೆ. 8. ಶಂಕರರಾವ್ ದೇಶಪಾಂಡೆ, ಹಳ್ಳಿಖೇಡ್, ತಾ|| ಹುಮ್ನಾಬಾದ್. 9. ದಿಗಂಬರರಾವ್ ಕಾಮತೀಕರ್ ; ನಾಂದೇಡದಲ್ಲಿ ಡೆಪ್ಯುಟಿ ಕಲೆಕ್ಟರರಾಗಿದ್ದಾರೆ (1974). ಇವರೆಲ್ಲ ಸ್ವಾತಂತ್ರ್ಯಕ್ಕಾಗಿ ಕಾರಾಗೃಹವಾಸಿಗಳಾಗಿದ್ದವರು.

ಹೈ.ಬಿ. 2

## ಆರ್. ವಿ. ಬಿಡಪ

ಜನನ : 1920 ಉದ್ಯೋಗ : ವಕೀಲ ವಿಳಾಸ : 22/ಸಿ, ನಂದಿದುರ್ಗ ರಸ್ತೆ, ಜಯಮಹಲ್ ಬಡಾವಣೆ, ಬೆಂಗಳೂರು-6

---

ಬಿದರೆ ಜಿಲ್ಲೆಯ ಚಿಟಗುಪ್ಪಾದಲ್ಲಿ ನಾನು ಹುಟ್ಟಿದೆ. ನಮ್ಮ ತಂದೆ ವೀರಭದ್ರಪ್ಪ ಆರ್ಯ ಸಮಾಜ ಹಾಗೂ ಗಾಂಧೀಜಿಯವರ ಸ್ವದೇಶೀ ಚಳವಳಿಗಳ ಪ್ರಭಾವಕ್ಕೆ ಒಳಗಾದವರು. ಕಲ್ಬುರ್ಗಿಯ ರಾಷ್ಟ್ರೀಯ ಶಾಲೆ ನೂತನ ವಿದ್ಯಾಲಯದಲ್ಲಿ ಕಲಿತ ನಾನು 1934ರಲ್ಲಿ ಮುಂಬಯಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೂ ಹೋಗಿದ್ದೆ. ಇಂಟರ್ ಶಿಕ್ಷಣಕ್ಕೆ ಅಲಿಗಢಕ್ಕೆ ಹೋದಾಗ ಅಲ್ಲಿ ಸುಭಾಷರ ಸ್ಫೂರ್ತಿಯುತ ಭಾಷಣ ಕೇಳಿದ್ದೆ. ಅಲ್ಲಿ ವ್ಯಕ್ತಿ ಸ್ವಾತಂತ್ರ್ಯಗಳಿಗೆ ಸಂಬಂಧಿಸಿದ ಚಳವಳಿಯಲ್ಲಿ ಪಾಲುಗೊಂಡು ಕಾಲೇಜಿನಲ್ಲಿ ಶಿಸ್ತಿನ



ಕ್ರಮಕ್ಕೆ ಒಳಗಾದೆ. ಅಲ್ಲಿಂದ ಪುಣೆಯ ಫರ್ಗ್ಯು ಸನ್ ಕಾಲೇಜಿನಲ್ಲಿ ಡಿಗ್ರಿ ಶಿಕ್ಷಣ ಮುಗಿಸಿ, ಕಾನೂನು ಶಿಕ್ಷಣವನ್ನು ಮುಂದುವರಿಸುವಾಗಲೇ ಆಗಸ್ಟ್ 1942ರ ಮುಂಬಯಿ ಎ.ಐ ಸಿ ಸಿ.ಗೆ ಹೋಗಿದ್ದೆ. ಅಲ್ಲಿನ ನಾಯಕರ ಭಾಷಣದಿಂದ ಪ್ರಭಾವಿತನಾಗಿ, ಅದೇ ಆಗ ನಡೆಯಬೇಕಾಗಿದ್ದ ಕಾನೂನು ಪರೀಕ್ಷೆಯನ್ನು ಕಡೆಗಣಿಸಿ ಚಳವಳಿಯಲ್ಲಿ ಪಾಲುಗೊಂಡೆ. ಕಾಲೇಜು ತ್ಯಜಿಸಲು ಕರೆಕೊಟ್ಟು ಪಿಕೆಟಿಂಗ್ ಮಾಡಿದೆ. ಮಹಾದೇವಭಾಯಿ ದೇಸಾಯಿ ತೀರಿಕೊಂಡ ಮರುದಿನ ಆ. 16ಕ್ಕೆ ಪುಣೆಯಲ್ಲಿ, ಬ್ರಿಟಿಷ್ ಸೈನಿಕರ ಗುಂಡಿಗೂ ಬೆದರದೆ ವಿದ್ಯಾರ್ಥಿಗಳ ಮೆರವಣಿಗೆಯ ನಾಯಕತ್ವ ವಹಿಸಿದೆ. ಒಮ್ಮೆ ಒಂದು ಗುಂಡು ಆಗ ನನ್ನನ್ನು ಒರಸಿಯೇ ಹೋಯಿತು. ಮುಂದೆ ಯೆರವಡಾ ಜೈಲು ಸೇರಿದೆ. ಅಲ್ಲಿ ಅನೇಕ ರಾಷ್ಟ್ರೀಯ ನಾಯಕರ ಸಂಪರ್ಕ ಬಂತು. ಅದಕ್ಕೂ ಮೊದಲೇ ಪುಣೆಯಲ್ಲಿ ನಾನು ಸೋಶಲಿಸ್ಟ್ ಕಾರ್ಯಕರ್ತರ ಸಹವಾಸದಲ್ಲಿ ಇದ್ದು ಸಮಾಜವಾದದ ಬಗ್ಗೆ ಒಲವು ಹೊಂದಿದ್ದೆ.

1944ರಲ್ಲಿ ಕಾನೂನು ಶಿಕ್ಷಣ ಮುಗಿಸಿ ಹೈದರಾಬಾದ್‌ನಲ್ಲಿ 1945ರಲ್ಲಿ ವಕೀಲಿ ಆರಂಭಿಸಿದೆ ಸಂಸ್ಥಾನೀ ಕಾಂಗ್ರೆಸ್‌ನಲ್ಲಿ ಸೋಶಲಿಸ್ಟ್ ಗುಂಪಿನ ಗಣ್ಯಕಾರ್ಯಕರ್ತ ನಾದೆ. ಆಚಾರ್ಯ ನರೇಂದ್ರ ದೇವರ ಅಧ್ಯಕ್ಷತೆಯಲ್ಲಿ 1946ರಲ್ಲಿ ಕಾನಪುರದಲ್ಲಿ ನಡೆದ ಕಾಂಗ್ರೆಸ್ ಸೋಶಲಿಸ್ಟ್ ಪಕ್ಷದ ಮೊದಲ ಸಮ್ಮೇಳನಕ್ಕೆ ಹೋಗಿಬಂದೆ. ಆಗ ಸಂಸ್ಥಾನೀ ಕಾಂಗ್ರೆಸ್ ಮೇಲೆ ಪ್ರತಿಬಂಧವಿರಲು ಹೈದರಾಬಾದ್ ಸಂಸ್ಥಾನೀ ಕರ್ನಾಟಕ ಪರಿಷತ್ತಿನಲ್ಲಿ ದುಡಿದೆನಲ್ಲದೆ ಕೆಲಕಾಲ ಹೈದರಾಬಾದಿನ ಫ್ರೀಡಂ ಕ್ಲಬ್‌ನ ಕಾರ್ಯದರ್ಶಿ ಆಗಿದ್ದೆ. ಕಾಂಗ್ರೆಸ್‌ನ ಮೇಲಿನ ಪ್ರತಿಬಂಧ ಹೋಗಲು ಅದರ ಕಾರ್ಯಸಮಿತಿಯ ಸದಸ್ಯರಲ್ಲಿ ಒಬ್ಬನಾದೆ. 1947ರಲ್ಲಿ ಹೈದರಾಬಾದ್ ಕರ್ನಾಟಕದ ಗಡಿಚಟುವಟಿಕೆಗಳ ಪ್ರಮುಖನೆಂದು ಸ್ಟೇಟ್ ಕಾಂಗ್ರೆಸ್ ನನ್ನನ್ನು ನೇಮಿಸಿತು. ಗಡಿಭಾಗದಲ್ಲಿ ಅನೇಕ ಗಡಿಶಿಬಿರಗಳನ್ನು ಸಂಘಟಿಸಿದೆ. ಈ ಪೈಕಿ ಗಣ್ಯಶಿಬಿರವೆಂದರೆ ಇಟಗಿ-ಶಾಂತಗಿರಿ ಪ್ರದೇಶದ 15 ಗ್ರಾಮಗಳ ಪ್ರದೇಶವು. ಈ ಗ್ರಾಮಗಳನ್ನು ಸ್ವತಂತ್ರಗೊಳಿಸಿ ಅವುಗಳ ಆಡಳಿತ, ಪೋಲಿಸ್ ವ್ಯವಸ್ಥೆ ಇವೆಲ್ಲವನ್ನೂ ಒಂದು ವರ್ಷಕ್ಕೂ ದೀರ್ಘಕಾಲ ನಾವೇ ನಿರ್ವಹಿಸಿದೆವು. ಈ ಕಾಲದಲ್ಲಿ ಸೊಲ್ಲಾಪುರ ಶಿಬಿರದಿಂದ ಕಾನೂನು ವಿದ್ಯಾರ್ಥಿ ನಾರಾಯಣರಾವ್ ಎಂಬಾತನಿಗೆ ನಾನು ಕೊಟ್ಟಿದ್ದೆನ್ನಲಾದ ಕೈಬಾಂಬನ್ನು ಹೈದರಾ ಬಾದ್‌ನಲ್ಲಿ ನಿಜಾಮರ ಕಾರಿನ ಮೇಲೆ ಎಸೆಯಲು ವಿಫಲಯತ್ನಮಾಡಿ ಆತನು ಬಂಧಿತ ನಾದನು; ನಾನೇ ಬಾಂಬು ನೀಡಿದವನೆಂದು ತಿಳಿದು ಪೋಲಿಸರು ಚಿಟಗುಪ್ಪಾದಲ್ಲಿದ್ದ

ನನ್ನ ತಂದೆಯವರನ್ನು ಹಿಡಿದು ಹೊಡೆದು ತೀವ್ರವಾಗಿ ಗಾಯಗೊಳಿಸಿದರು. ಆಗ ನಾನು ಪುಣೆಯಲ್ಲಿ, ಸಂಸ್ಥಾನದ ನೆರೆಯ ಪ್ರಾಂತಗಳ ಕಾಂಗ್ರೆಸ್ ನಾಯಕರ ಸಭೆ ಯೊಂದಕ್ಕೆ ಹೋಗಿದ್ದೆ. ಸಂಸ್ಥಾನದ ಚಳವಳಿಗೆ ಹೇಗೆ ನೆರವು ನೀಡಬಹುದೆಂದು ಚರ್ಚಿಸಲು ಎಸ್. ಕೆ. ಪಾಟೀಲರು ಈ ಸಭೆ ಕರೆದಿದ್ದರು. ಅಚ್ಯುತ ಪಟವರ್ಧನ, ಜಯಪ್ರಕಾಶ ನಾರಾಯಣ ಇವರೂ ಈ ಸಭೆಗೆ ಬಂದಿದ್ದರು. ಪೋಲಿಸ್ ಆ್ಯಕ್ಷನ್ ಅನಂತರ ಸೊಲ್ಲಾಪುರದಿಂದ ಹೈದರಾಬಾದಿಗೆ ಹೋದ ಮೊದಲ ರೈಲಿನಲ್ಲಿ ನಾನು ಹೈದರಾಬಾದಿಗೆ ಹೋದೆ.

ಸ್ವಾತಂತ್ರ್ಯಾನಂತರ, ಜಮೀಂದಾರಿ ರದ್ದತಿ, ಹೈದರಾಬಾದ್ ಸಂಸ್ಥಾನದ ವಿಭಜನೆ ಮುಂತಾದ ಪ್ರಶ್ನೆಗಳ ಕುರಿತು ನನಗೂ ಕಾಂಗ್ರೆಸ್ಸಿಗೂ ತೀರ ಭಿನ್ನಾಭಿಪ್ರಾಯ ವಾಗಿ, ಡಿ. 15ಕ್ಕೆ (1948) ಕಾರ್ಯಸಮಿತಿಗೂ ಕಾಂಗ್ರೆಸ್ಸಿಗೂ ರಾಜೀನಾಮೆ ನೀಡಿದೆ. ಮುಂದೆ ಹೈದರಾಬಾದ್‌ನಲ್ಲಿ ಸಮಾಜವಾದೀ ಪಕ್ಷ ಸಂಘಟನೆ, ರೈತಸಂಘಟನೆ, ಆಹಾರ ಚಳವಳಿ ಸಂಘಟಿಸುತ್ತಿರಲು ಭಾರತ ರಕ್ಷಣಾ ಕಾನೂನಿನಂತೆ ಸ್ವತಂತ್ರ ಭಾರತ ಸರಕಾರವೇ ನನ್ನನ್ನು ಕೆಲಕಾಲ ಸ್ಥಾನಬದ್ಧತೆಯಲ್ಲಿ ಇಟ್ಟಿತ್ತು.

ಹೈ.ಬಿ. 3

## ಚಂದ್ರಶೇಖರ ಆಝಾದ್

ಜನನ : 1922 ಉದ್ಯೋಗ : ಅಧ್ಯಾಪಕ ವಿಳಾಸ : ಸರಕಾರೀ ಪ್ರೌಢಶಾಲೆ, ಬಸವಕಲ್ಯಾಣ



ಆರ್ಯಸಮಾಜ ಹಾಗೂ ಅದರ ನಾಯಕರಾದ ನರೇಂದ್ರಜೀ ಮತ್ತು ಶ್ಯಾಮಲಾಲ್ ಬನ್ಸಿಲಾಲ್ ಇವರುಗಳ ಪ್ರಭಾವವೇ ನನ್ನನ್ನು ರಾಷ್ಟ್ರೀಯ ಚಳವಳಿಗೆ ಎಳೆದುದು. 1938ರಲ್ಲಿ ನಾರಾಯಣಸ್ವಾಮಿಯವರ ನೇತೃತ್ವದಲ್ಲಿ ನಡೆದ ಆರ್ಯಸತ್ಯಾಗ್ರಹದಲ್ಲಿ ನಾನು ಪಾಲುಗೊಂಡಿದ್ದೆ. 1942ರಲ್ಲಿ ನನ್ನ ಊರು ಚಿಟಗುಪ್ಪಾದಲ್ಲಿ ಧ್ವಜಸತ್ಯಾಗ್ರಹ ಹಾಗೂ ಪಾನಪ್ರತಿಬಂಧ ಚಳವಳಿಯಲ್ಲಿ ನಾನು ಪಾಲುಗೊಂಡು ಬಂಧಿತನಾಗಿ ಮುಂದೆ ಬಿಡುಗಡೆಹೊಂದಿದೆ. 1945ರ ಫೆಬ್ರವರಿ 5ಕ್ಕೆ ವರಂಗಲ್ ಜಿಲ್ಲಾ ಖಿನ್ನುಂನಲ್ಲಿ ಗಾಂಧೀಜಿಯವರ ದರ್ಶನಭಾಗ್ಯವು ನನಗೆ ಲಭಿಸಿತು. 1947ರಲ್ಲಿ

ಹೈದರಾಬಾದ್‌ನಲ್ಲಿ ನಡೆದ ಸ್ಟೇಟ್ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿದ್ದೆ. ಆಗಿನ ನಮ್ಮ ಭಾಗದ ಚಳವಳಿಯ ಮುಖಂಡರು ಆರ್. ವಿ. ಬಿಡಪ್ಪ ಮತ್ತು ಬಸವರಾಜ ಹುಡಗಿ. 15-8-1947ರಲ್ಲಿ ಚಿಟಗುಪ್ಪಾದಲ್ಲಿ ವಸಂತ ಗಾಜರೆಯವರ ಅಧ್ಯಕ್ಷತೆಯಲ್ಲಿ ನಮ್ಮ ಊರಲ್ಲಿ ನಾನೇ ರಾಷ್ಟ್ರಧ್ವಜ ಆರೋಹಣಮಾಡಿದೆ. ಆಗ ಬಂಧಿತನಾಗಿ ಬಿಡುಗಡೆಹೊಂದಿದೆ. ನಾನು ಮತ್ತು ಹಕಿಕತರಾಯ ರಾಷ್ಟ್ರೀಯ ಸಭೆಗಾಗಿ ಚಂದಾ ವಸೂಲಿಮಾಡುತ್ತಿದ್ದೆವು. ಮುಕ್ತಿ ಆಂದೋಲನದಲ್ಲಿ ನಾನು ಗುಪ್ತಚರ ವಿಭಾಗದಲ್ಲಿ ಕೆಲಸಮಾಡಿದೆ. ದುಧನಿ, ರೋಣ, ನ್ಯೆಂದರ್ಗಿ, ಶಾಂತಗಿರಿ ಶಿಬಿರಗಳಲ್ಲಿ ಕೆಲಸ ಮಾಡಿದೆ. ಗುಡ್ಡದ ಮಲ್ಲಾಪುರ ಇವಕ್ಕೆ ಕೇಂದ್ರ. ಇಲ್ಲಿನ ಸ್ವಯಂಸೇವಕರ ತಂಡದ ಸೇನಾಪತಿ ಬಳವಂತರಾವ್ ಕುಲಕರ್ಣಿ ಗುಡ್ಡದ ಮಲ್ಲಾಪುರದಲ್ಲೇ ಇರುತ್ತಿದ್ದರು. ಅಣ್ಣೆಪ್ಪ ಹಿರಿಯಾಳ ಇವರ ಜೊತೆಗಾರರು.

ಆರ್. ವಿ. ಬಿಡಪ್ಪರ ನೇತೃತ್ವದಲ್ಲಿ ಕೊಪ್ಪಳ ಜಾಗೀರಿನ 14 ಹಳ್ಳಿಗಳನ್ನು ಮುಕ್ತಗೊಳಿಸಲಾಗಿತ್ತು. ಇವುಗಳ ಆಡಳಿತದ ಅಧ್ಯಕ್ಷರು ಬಸಯ್ಯ ಶಾಂತಗಿರಿ; ಉಪಾಧ್ಯಕ್ಷರು ಅನಂತರಾವ್ ಕುಲಕರ್ಣಿ. ಇಲ್ಲಿ ಸಂರಕ್ಷಣೆ, ಆಹಾರ ಪೂರೈಕೆಗಳ ಕೆಲಸ ನಾನು ಮಾಡುತ್ತಿದ್ದೆ. ಗುಡ್ಡದೂರ, ತಗ್ಗಲದೋಣಿ, ಮಾಲಗತ್ತಿಗಳಲ್ಲಿ ನಿಜಾಮನ ಸೈನಿಕ ಠಾಣೆಗಳಿದ್ದು, ನಿಲುಗಲ್‌ನಲ್ಲಿ ವಾರಕ್ಕೊಮ್ಮೆ ನಮ್ಮ ನಡುವೆ ಹೋರಾಟ ಆಗುತ್ತಿತ್ತು. ನಮ್ಮಲ್ಲಿ ಆಗ ಸ್ಟೆನ್‌ಗನ್, ಕ್ಯಾಪ್‌ಗನ್, 303 ಹಾಗೂ 410ರ ಗನ್, ಕೈಬಾಂಬು ಇರುತ್ತಿದ್ದವು.

ಚಿಟಗುಪ್ಪಾದಲ್ಲಿ 40 ಜನರ ತಂಡ ವಿಧ್ವಂಸಕ ಕೃತ್ಯಗಳಲ್ಲಿ ತೊಡಗಿದ್ದು ಬಸಣ್ಣ ಅದರ ಮುಖ್ಯಸ್ಥರು. ರೇವಣಪ್ಪ ಭೂತಾಳೆ, ಬಿ. ಜಿ. ಪಾಟೀಲ, ನಾರಾಯಣ ಬೋಡಕೆ ಅವರ ಸಹಕಾರಿಗಳು. ಬುಡ್ಡಬಾಬಣ್ಣ ಎಂಬ ಈ ಗುಂಪಿನವನು ಡೈನ್ ಮೈಟ್ ತರುವಾಗ ಬಂಧಿತನಾದ.

15-9-1948ರಂದು ನಿಲುಗಲ್-ಹನುಮನಾಳು ಸೀಮೆಯಲ್ಲಿ ನಮಗೂ ರಜಾಕಾರರಿಗೂ ಆದ ಹೋರಾಟದಲ್ಲಿ ಶ್ರೀರಾಮುಲು ಹಾಗೂ ಇನ್ನೊಬ್ಬರು ಬಹಳ ಆವೇಶದಿಂದ ಕಾದಾಡಿ ವೀರಸ್ವರ್ಗ ಕಂಡರು. ಫೆಬ್ರವರಿಯಲ್ಲಿ ಈ ಭಾಗಕ್ಕೆ ಬಂದ ಸ್ವಾಮಿ ರಮಾನಂದ ತೀರ್ಥರು ಇಟಗಿಯಲ್ಲಿ ನಮ್ಮ ಶಿಬಿರವನ್ನು ಸಂದರ್ಶಿಸಲು ಅವರಿಗೆ 700 ಬಂದೂಕು ಹಾರಿಸಿ ವಂದನೆ ಸಲ್ಲಿಸಿದ್ದೆವು.

ಹೈ.ಬಿ. 4

## ಗೋಪಾಲದೇವ ಶಾಸ್ತ್ರಿ

ಜನನ : 1908 ಉದ್ಯೋಗ : ಸಮಾಜಸೇವೆ ವಿಳಾಸ : ಬಸವಕಲ್ಯಾಣ



ಆರ್ಯಸಮಾಜದ ಕಾರ್ಯಕರ್ತನಾದ ನಾನು 1938 ರಿಂದ ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲುಗೊಂಡೆ. ಕಲ್ಯಾಣ ಜಾಗೀರದಲ್ಲಿ ಸ್ವಾಮಿ ರಮಾನಂದ ತೀರ್ಥರ ಅನುಜ್ಞೆಯಂತೆ ಭಾಷಣ, ಸತ್ಯಾಗ್ರಹ ನಡೆಸಿದ್ದೆ. 1938ರಲ್ಲಿ ನನಗೆ 14 ತಿಂಗಳು ಶಿಕ್ಷೆ, 50 ರೂ. ಜುಲ್ಮಾನೆ; ಜುಲ್ಮಾನೆ ಕೊಡದಲ್ಲಿ ಮತ್ತೆ ಒಂದು ತಿಂಗಳ ಶಿಕ್ಷೆ ಆಯಿತು. 1948ರಲ್ಲಿ ಸಶಸ್ತ್ರ ಕ್ರಾಂತಿಯ ಕಾಲಕ್ಕೆ ಅದರಲ್ಲಿ ಪಾಲುಗೊಂಡ ನನ್ನ ಕಾಲಿಗೆ ಗುಂಡೇಟು ತಗಲಿತ್ತು. ಆಳಂದದ (ಜಿಲ್ಲಾ ಕಲ್ಬುರ್ಗಿ) ಅಣ್ಣಾರಾವ್ ವೀರಭದ್ರಪ್ಪಾ ಪಾಟೀಲ (ಈಗ ಎಂ ಎಲ್.ಎ.) ಇವರು ಆಗ ನನ್ನ ಜೊತೆ ಕೆಲಸಮಾಡಿದ್ದರು. ಈಗ ಆರ್ಯ ಉಪಪ್ರತಿನಿಧಿಸಭಾ ಕರ್ನಾಟಕದ ಮಂತ್ರಿಯಾಗಿ (ಕಾರ್ಯದರ್ಶಿ) ಇದ್ದೇನೆ.

ಹೈ.ಬಿ. 5

## ಹಕಿಕತರಾಯ್ ಉಮಾಜಿ ಚಿಟಗುಪ್ಪಾಕರ್

ಜನನ : ? ಉದ್ಯೋಗ : ವಿಧಾಯಕ ಕಾರ್ಯ ವಿಳಾಸ : ಬಾಪು ಚೌಕ, ಸೇಡಂ ರಸ್ತೆ, ಕಲ್ಬುರ್ಗಿ

ಚಿಟಗುಪ್ಪಾದಲ್ಲಿ ಪ್ರಾಥಮಿಕ ಶಾಲೆಗೆ ಹೋಗುತ್ತಿರಲು ನಿಜಾಮರ ಅಸಫ್‌ಜಾಹಿ ವಂಶವನ್ನು ಹೊಗಳಿ ಹೇಳಲಾಗುತ್ತಿರುವ ಪ್ರಾರ್ಥನೆಯನ್ನು ನಾನು ಹೇಳಲೊಪ್ಪದ್ದರಿಂದ ಶಾಲೆಯಿಂದ ಹೊರದೂಡಿದರು. ಆಗ ಹೈದರಾಬಾದ್‌ನ ವಿನಾಯಕರಾವ್ ವಿದ್ಯಾಲಂಕಾರರು ನನ್ನನ್ನು ಹೈದರಾಬಾದಿಗೆ ಒಯ್ದು ಅನಾಥಾಶ್ರಮಕ್ಕೆ ಸೇರಿಸಿ ವಿವೇಕವರ್ಧಿನಿ ಶಾಲೆಯಲ್ಲಿ ಶಿಕ್ಷಣ ಮುಂದುವರಿಸಲು ಅವಕಾಶ ಮಾಡಿಕೊಟ್ಟರು. ಎಂಟನೆಯ ವರ್ಗದವರೆಗೆ ಓದಿ, ಮುಂದೆ ನಾನು ಆರ್ಯ ಸಮಾಜದ ಚಟುವಟಿಕೆಯಲ್ಲಿ ಪಾಲ್ಗೊ

ಗೊಳಲು, ಕ್ಷುಲ್ಲಕ ಕಾರಣಕ್ಕಾಗಿ ನನ್ನನ್ನು ಬಂಧಿಸಿ 1939ರಲ್ಲಿ ಆರು ತಿಂಗಳ ಶಿಕ್ಷೆಗೆ ಒಳಪಡಿಸಿದರು.

1942ರಲ್ಲಿ ಚಿಟಗುಪ್ಪಾದ 22 ಸತ್ಯಾಗ್ರಹಿಗಳ ತಂಡದ ನಾಯಕನಾಗಿ ನಾನು ಹೈದರಾಬಾದಿಗೆ ಹೋಗಲು ಬಂಧಿತನಾಗಿ ಮತ್ತೆ ಆರು ತಿಂಗಳು ಶಿಕ್ಷೆಗೆ ಒಳಗಾಗಿ, ಚಂಚಲಗುಡ ಜೈಲಿನಲ್ಲಿ ಇದ್ದೆ. ಶಿಕ್ಷೆ ಮುಗಿದಮೇಲೆ ಚಿಟಗುಪ್ಪಾದಲ್ಲಿ ಕಾನೂನು ವಿರೋಧ ಸಾಹಿತ್ಯ ಹಂಚಿದ ಆಪಾದನೆಯ ಮೇಲೆ ಚಿಟಗುಪ್ಪಾಕ್ಕೆ ತಂದು ವಿಚಾರಣೆ ಮಾಡಿ ಮತ್ತೆ ಮೂರು ತಿಂಗಳು ಕಠಿಣ ಶಿಕ್ಷೆ ವಿಧಿಸಿದರು. ಕೊಂಡಾ ಲಕ್ಷ್ಮಣ ಅವರು ನನ್ನ ಪರ ವಕೀಲಿ ವಹಿಸದಿದ್ದಲ್ಲಿ ನನಗೆ ಇನ್ನೂ ಹೆಚ್ಚು ಶಿಕ್ಷೆ ಆಗಿ ಜೈಲಿನಲ್ಲೇ ಕೊಳೆಯ ಬೇಕಾಗುತ್ತಿತ್ತು. ಈ ಕಾಲದಲ್ಲಿ ನನ್ನಿಂದಾಗಿ ನನ್ನ ತಂದೆತಾಯಂದಿರಿಗೆ ಹಿಂಸೆ ಆಗಬಾರದೆಂದು 1938ರಲ್ಲಿ ನನ್ನ ಹೆಸರನ್ನು ನಾನು ಹಕಿಕತ್‌ರಾಯ್ ಸುಖಾದಿಯಾ ಎಂದೂ 1942ರಲ್ಲಿ ಹಕಿಕತ್‌ರಾಯ್ ಕೇಶವರಾವ್ ಎಂದೂ ಪೋಲಿಸರಿಗೆ ತಿಳಿಸಿದ್ದೆ.

1943ರಿಂದ 1947ರ ವರೆಗೆ ಬಿದರೆ ಜಿ|| ಕಾಂ|| ಕ|| ನನ್ನನ್ನು ಪೂರ್ಣಕಾಲೀನ ಕಾರ್ಯಕರ್ತನೆಂದು ಪ್ರಚಾರಕಾರ್ಯಕ್ಕೆ ನೇಮಿಸಿತ್ತು. 1947ರಲ್ಲಿ ಬಿದರೆ ಜಿಲ್ಲೆಯಲ್ಲಿ ಚಳವಳಿ, ಸೊಲ್ಲಾಪುರದ ನಿರಾಶ್ರಿತರ ಶಿಬಿರದಲ್ಲಿ ದುಡಿಮೆ ಹಾಗೂ ವ್ಯೆಂದರ್ಗಿ ಗಡಿ ಶಿಬಿರದಲ್ಲಿ ನೇರ ಹೋರಾಟ ಇವನ್ನೆಲ್ಲ ನಡೆಸಿದೆ.

1948-51ರಲ್ಲಿ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ನೇಕಾರರ ಸಹಕಾರ ಸಂಘಗಳ ಸಂಘಟನೆಗೆ ದುಡಿದೆ. ಚಿಟಗುಪ್ಪಾ ಶಿಂಪಿಗಳ ಸಹಕಾರ ಸಂಘ ಸಂಘಟಿಸಿದೆ. ಹರಿಜನರ ಕಾಲನಿ, ಹಾಸ್ಟೆಲುಗಳ ಸ್ಥಾಪನೆಗೂ ಶ್ರಮಿಸಿದೆ. ಚಿಟಗುಪ್ಪಾದ ಹರಿಜನರ ಬಾಪು ಬೋರ್ಡಿಂಗ್‌ನ ಕಾರ್ಯದರ್ಶಿಯಾಗಿ ಎರಡು ವರ್ಷ ಕೆಲಸಮಾಡಿದೆ. ಈಗ ಚಿಟಗುಪ್ಪಾದ ಕರ್ನಾಟಕ ಗ್ರಾಮಸೇವಕ ಸಂಘದಲ್ಲಿ ಖಾದಿ ಗ್ರಾಮೋದ್ಯೋಗಗಳ ಚಟುವಟಿಕೆಗಳಿಗಾಗಿ ದುಡಿಯುತ್ತಿರುವೆ. ರಾಜ್ಯ ಪಾನನಿರೋಧ ಸಮಿತಿಯ ಸದಸ್ಯ ನಾಗಿದ್ದೇನೆ.

ಹೈ.ಬಿ. 6

## ರಾಮಚಂದ್ರ ವೀರಪ್ಪ

ಜನನ : 1920 ಉದ್ಯೋಗ : ಕೃಷಿ ವಿಳಾಸ : ಹುಮ್ನಾಬಾದ್

ನಮ್ಮ ಸಂಸ್ಥಾನವನ್ನು ಆಳುವವರು ಬಹುಸಂಖ್ಯಾತ ಹಿಂದುಗಳನ್ನು ಅಲಕ್ಷ್ಯದಿಂದ, ತಮ್ಮ ಮನಬಂದಂತೆ ನಡೆಸಿಕೊಳ್ಳುತ್ತಿದ್ದರು. ಇಲ್ಲಿಯ ಮತಾಂಧ ಗೂಂಡಾಗಳಿಂದಲೂ



ದೇಶದ್ರೋಹಿ ರಜಾಕಾರರಿಂದಲೂ ಈ ಸಂಸ್ಥಾನದ ಪ್ರಜೆಗಳು ತಲ್ಲಣಿಸಿಹೋದುದು ಇತಿಹಾಸಪ್ರಸಿದ್ಧವಾಗಿದೆ. ನಮ್ಮ ಊರಾದ ಹುಮ್ನಾಬಾದವು ಹೈದರಾಬಾದ್-ಮುಂಬೈ ನಗರಗಳ ಹೆದ್ದಾರಿ ಮಧ್ಯೆ ಇದ್ದು ಇಲ್ಲಿಂದ ಹಾದುಹೋಗುತ್ತಿದ್ದ ಅದೆಷ್ಟೋ ಪ್ರವಾಸಿಗಳಿಗೂ ಕೂಡ ಇಲ್ಲಿಯ ಗೂಂಡಾಗಳು ತೊಂದರೆ ಕೊಡುತ್ತಿದ್ದರು. ತಾರುಣ್ಯದಲ್ಲಿ ಕಾಲಿರಿಸಿದ ನನಗೆ ಈ ಅಸಹ್ಯ ಅನುಭವಗಳಿಂದ ಹೆಚ್ಚಿನ ತಳಮಳವಾಗುತ್ತಲಿತ್ತು. ಇದೇ ಸಮಯಕ್ಕೆ ನನ್ನ ನೊಂದ ಮನಸ್ಸಿಗೆ ನೆಮ್ಮದಿ ಬಂದುದು ನಮ್ಮ ಹತ್ತಿರದ ಗ್ರಾಮ ಹಳ್ಳಿಖೇಡದವರಾದ ಭಾಯಿ ಬನ್ಸಿಲಾಲ್ ಹಾಗೂ ಅವರ ಸೋದರ ಶಾಮಲಾಲರು ಇಂಥ ಅಸಹ್ಯ ಸಂಗತಿಗಳ ವಿರುದ್ಧ ಪ್ರತೀಕಾರಕ್ಕೆ ಮುಂದಾದುದಾಗಿದೆ. ಅವರು ಅತ್ಯುತ್ಸಾಹದಿಂದ ನಡೆಸಿದ ಆರ್ಯ ಸಮಾಜದ ಚಟುವಟಿಕೆಗಳ ಕಡೆ ನಾನು 1935ರಿಂದಲೇ ಆಕರ್ಷಿತನಾದೆ. ನಾನು, ನನ್ನ ಅಣ್ಣ ಲಕ್ಷ್ಮಣರಾವ್ ಆರ್ಯ ಹಾಗೂ ಶಿವಚಂದ್ರಜಿ ನೆಲೋಗಿ ಮಾಸ್ತರ ಮುಂತಾದವರು ಬನ್ಸಿಲಾಲಜಿಯವರನ್ನು ಕೂಡಿಕೊಂಡೆವು. ಆಗ ನಮ್ಮ ವಿರುದ್ಧ ನಾನಾರೀತಿಯ ಸಂಚುಗಳನ್ನು ಹೂಡಿ ನಮ್ಮ ಮೇಲೆ ದೋಷಾರೋಪಣೆಮಾಡಿ ಸರಕಾರ ಹಿಂಸೆಕೊಡಲಾರಂಭಿಸಿತು.

1938ರಲ್ಲಿ ಪೂಜ್ಯ ನಾರಾಯಣ ಸ್ವಾಮಿಜಿ, ಸ್ವ|| ವಿನಾಯಕರಾವ್‌ಜಿ ಹಾಗೂ ಮಹಾತ್ಮ ಆನಂದಸ್ವಾಮಿಜಿ ಮುಂತಾದ ಆರ್ಯ ಸಮಾಜದ ನಾಯಕರ ನೇತೃತ್ವದಲ್ಲಿ ನಡೆದ ಆರ್ಯನ್ ಸತ್ಯಾಗ್ರಹದಲ್ಲಿ ನಾನು ಭಾಗವಹಿಸಿದೆ. ಕೇಂದ್ರೀಯ ಕಾರಾಗೃಹದಲ್ಲಿ ಬಂಧಿತನಾದೆ. ನನ್ನ ಜ್ಯೇಷ್ಠ ಬಂಧು ಲಕ್ಷ್ಮಣರಾಯರನ್ನೂ ಬಂಧಿಸಿ ಮೊದಲು ಗುಲಬರ್ಗಾ, ಮುಂದೆ ನಿಜಾಮಾಬಾದ್, ಕೊನೆಗೆ ಹೈದರಾಬಾದ್ ಜೈಲಿನಲ್ಲಿ ತಂದು ಹಾಕಿದರು. ಕೆಲವು ಸವಲತ್ತುಗಳನ್ನು ಪಡೆದು ಈ ಸತ್ಯಾಗ್ರಹವನ್ನು ಹಿಂದೆಗೆದುಕೊಂಡರೂ ಹೃದಯಮಧ್ಯದಲ್ಲಿ ಹೊಗೆಯಾಡುತ್ತಿದ್ದ ಸ್ವಾತಂತ್ರ್ಯಸಮರ ನಿಲ್ಲಲಿಲ್ಲ.

ನನ್ನ 'ಪುನರ್ಜನ್ಮ'ಕ್ಕೆ ಸಂಬಂಧಿಸಿದ ಒಂದು ಘಟನೆ ಆಯಿತು. ಹಾಡುಹಗಲಲ್ಲೇ ಕುಲೀನ ಸ್ತ್ರೀಯೋರ್ವಳ ಮಾನಭಂಗ ಮಾಡಲು ರಜಾಕಾರ ಗೂಂಡಾಗಳು ಯತ್ನಿಸುತ್ತಿರಲು, ಜನಸಮೂಹವೆಲ್ಲ ಅಸಹಾಯಕವಾಗಿ ನೋಡುತ್ತಿತ್ತು. ಕೈಯಲ್ಲಿ ಕೇವಲ ಒಂದು ಲಾಠಿಯನ್ನು ಹೊಂದಿದ್ದ ನಾನು, ಗೂಂಡಾಗಳು ಶಸ್ತ್ರಸಜ್ಜಿತರಾಗಿರುವುದನ್ನೂ ಗಮನಿಸದೆ ಅವರ ನಡುವೆ ಧುಮುಕಿದೆ. ಅವರನ್ನೆಲ್ಲ ಚೆಲ್ಲಾಪಿಲ್ಲಿಯಾಗಿ ಓಡಿಸುವ ಸಾಮರ್ಥ್ಯವನ್ನು ಆ ಪರಮಪಿತಾ ಪರಮಾತ್ಮನು ನನ್ನ ಪಾಲಿಗೆ ದಯಪಾಲಿಸಿದನು. ಆ ಮಹಿಳೆ ತನ್ನ ಮಾನ, ಪ್ರಾಣ ಉಳಿಸಿಕೊಂಡಳು. ಅಷ್ಟರಲ್ಲಿ

ಹೆಚ್ಚಿನ ಗೂಂಡಾಗಳು ಬಂದು ನನ್ನನ್ನು ಮುತ್ತಿದರು. ಕಲ್ಲುಕಟ್ಟಿಗೆಗಳಿಂದಲೂ ಕತ್ತಿ ಬರ್ಜಿಗಳಿಂದಲೂ ಪ್ರಹಾರ ನಡೆಸಿದರು. ನನ್ನ ಹೊಟ್ಟೆಗೆ ಬರ್ಜಿ ಚುಚ್ಚಿ, ರಕ್ತವು ಕಾರಂಜಿಯಂತೆ ಪುಟಿದು ಬೀಳುತ್ತಲಿತ್ತು. ನನ್ನ ಸ್ಮೃತಿ ತಪ್ಪಿಹೋಗಿ ನೆಲಕ್ಕುರುಳಿದುದನ್ನು ಕಂಡ ಆ ದುರಾಚಾರಿಗಳು ನಾನು ಸತ್ತುಹೋಗಿರಬಹುದೆಂದು ಭಾವಿಸಿ ಹೊರಟುಹೋದರು. ಆದರೂ ದೈವೇಚ್ಛೆಯಿಂದ ಬದುಕಿ ಉಳಿದೆ. ಆಸ್ಪತ್ರೆಯಲ್ಲಿ ಚಿಕಿತ್ಸೆಹೊಂದಿ ಗುಣಮುಖನಾದೆ. ಮುಂದೆ 1942ರಲ್ಲಿ ನಮ್ಮ ಊರಲ್ಲಿ ಹೋಳಿ ಹುಣ್ಣಿಮೆಯ ಕಾಲಕ್ಕೆ ಆರ್ಯ ಸಮಾಜದ ಗಣ್ಯಕಾರ್ಯಕರ್ತರೂ ಸೌಮ್ಯಮೂರ್ತಿಗಳೂ ಆದ ಶಿವಚಂದ್ರಜಿ ನೆಲೋಗಿ ಮಾಸ್ತರರನ್ನು ರಜಾಕಾರರು ಗುಂಡಿಕ್ಕಿ ಕೊಂದರು. ಇದೇ ಕಾಲಕ್ಕೆ ಇನ್ನು ಮೂರು ಜನರು ಈ ದುರಾಚಾರಿಗಳ ಬರ್ಜಿ, ಕತ್ತಿಗಳಿಗೆ ಬಲಿಯಾದರು.

ಇದೆಲ್ಲದರ ಕಾರಣದಿಂದಾಗಿ ಆರ್ಯ ಸಮಾಜವು ಇಲ್ಲಿನ ಸರಕಾರದ ವಿರುದ್ಧ ವಿಧ್ವಂಸಕ ಕೃತ್ಯಗಳನ್ನು ನಡೆಸಲು ಮುಂದಾಯಿತು. ಪರಿಸ್ಥಿತಿ ಹಾಗೆ ರೂಪುಗೊಂಡಿತ್ತು. ಹಲವಾರು ಕಡೆ ಬಾಂಬು ಸ್ಫೋಟಗಳಾದವು ಹುಮ್ನಾಬಾದದಲ್ಲಿ 1946ರಲ್ಲಿ ಇಂಥ ಒಂದು ಸ್ಫೋಟ ಪ್ರಕರಣ ಆದಾಗ ನನ್ನನ್ನು ಬಂಧಿಸಿ 35 ವರ್ಷಗಳ ಶಿಕ್ಷೆಗೆ ಒಳಪಡಿಸಿದರು. ನನ್ನ ಹೊಲ, ಮನೆಗಳೆಲ್ಲ ಕೈಬಿಟ್ಟು, ನಾನು ಕಂಗಾಲಾದೆ. ಪೋಲಿಸ್ ಆ್ಯಕ್ಶನ್ ತನಕ ನಾನು ಬಂಧನದಲ್ಲೇ ಇದ್ದೆ.

ಮಾಣಿಕರಾವ್ ವೀರಭದ್ರಪ್ಪ ಭಂಡಾರಿ (ಈಗ ಪತ್ರಿಕಾ ಏಜಂಟ್), ನನ್ನ ಅಣ್ಣ ಲಕ್ಷ್ಮಣರಾವ್ ವೀರಪ್ಪ ಆರ್ಯ (ಸಕಲ ಸಂಕಟಗಳಲ್ಲೂ ನನ್ನನ್ನು ರಕ್ಷಿಸಿದ ನನ್ನ ಜ್ಯೇಷ್ಠ ಬಂಧು), ಶಿವಲಿಂಗಪ್ಪ ಸಜ್ಜನಶೆಟ್ಟಿ (ಈಗ ಕಂಟ್ರಾಕ್ಟರ್), ಶಿವಪ್ರಸಾದ ಈರಪ್ಪ ಆರ್ಯ ಹಾಗೂ ದಿ॥ ಕಲ್ಲಪ್ಪ ಗುರಪ್ಪ ದೇವಣಿ ಇವರು ನಮ್ಮ ಊರ ಇತರ ಸಹಕಾರ್ಯಕರ್ತರು.

ಬಿಡುಗಡೆಯನಂತರ ನನ್ನ ಮನೆತನದ ಸ್ಥಿತಿ ತೀರ ಅಸ್ತವ್ಯಸ್ತವಾಗಿತ್ತು. 1956ರಲ್ಲಿ ನಾನು ಎಂ.ಎಲ್.ಸಿ. ಆದೆ. 1957ರಲ್ಲಿ ಆಳಂದ್‌ನಿಂದ ಮೈಸೂರು ವಿಧಾನ ಸಭೆಗೆ ಆಯ್ಕೆಗೊಂಡೆ. 1962 ಹಾಗೂ 1967ರಲ್ಲಿ ಬೀದರ್ ಕಾದಿರಿಸಿದ ಸ್ಥಾನದಿಂದ ಎರಡು ಬಾರಿ ಲೋಕಸಭೆಗೆ ಆಯ್ಕೆಗೊಂಡೆ.

ಹೈ.ಬಿ. 7

## ಪ್ರತ್ಯಕ್ಷದರ್ಶಿಯ ವರದಿ

ಭಾರತ ಸ್ವಾತಂತ್ರ್ಯ ಗಳಿಸಿದ ಸಮಯದಲ್ಲಿ ನಾನು ಕಲ್ಬುರ್ಗಿಯಲ್ಲಿ ಅಭ್ಯಾಸ ಮಾಡುತ್ತಿದ್ದೆ. ನನಗೆ ಈ ದಿನವು ಸಂತಸದ ದಿನವಾಗಿತ್ತು. ಯಾವದೋ ಕಾರಣದಿಂದ

ಶಾಲೆಗೆ ರಜೆ ಇದ್ದುದರಿಂದ ನಾನು ನಮ್ಮ ಸ್ವಂತ ಊರಾದ ಅಂಕಲಗಿಗೆ ಬಂದಿದ್ದೆ. ಇದು ಕಲ್ಬುರ್ಗಿ ಜಿಲ್ಲೆಯ ಜೇವರಗಿ ತಾಲೂಕಿನಲ್ಲಿದೆ. ಸ್ವಾತಂತ್ರ್ಯೋತ್ಸವಸಮಯದಲ್ಲಿ ಕೆಂಪುಕೋಟೆಯ ಮೇಲೆ ರಾಷ್ಟ್ರಧ್ವಜ ಹಾರಿಸಲಾಗುವದೆಂಬ ಸುದ್ದಿ ಪತ್ರಿಕೆಗಳಲ್ಲಿ ಬಂತು. ನಾನೂ ಊರಿನ ಚಾವಡಿಯ ಮೇಲೆ ತ್ರಿವರ್ಣಧ್ವಜ ಹಾರಿಸಬೇಕೆಂದು ನಿಶ್ಚಯಿಸಿ, ಹೇಗೋ ಪ್ರಯತ್ನಿಸಿ ಧ್ವಜವನ್ನು ಹೊಲಿಸಿ ಮಧ್ಯದಲ್ಲಿ ಅಶೋಕ ಚಕ್ರವನ್ನು ಬರೆದೆ. ಆದರೆ ಈ ಬಾವುಟವನ್ನು ಹಾರಿಸುವುದು ಅಪಾಯಕಾರಿ ಕೆಲಸವಾಗಿತ್ತು. ಮುಂಬಯಿ ಪ್ರಾಂತ್ಯಕ್ಕೆ ಹೊಂದಿಕೊಂಡು ಇದ್ದುದರಿಂದ ನಮ್ಮ ಊರಲ್ಲಿ ಒಂದು ಪೋಲಿಸ್ ಠಾಣ್ಯವಿತ್ತು. ಊರಲ್ಲಿ ನಡೆವ ಪ್ರತಿ ಘಟನೆಗಳ ಕಡೆಗೂ ಪೋಲಿಸರ ಗಮನವಿರುತ್ತಿತ್ತು. ಸರ್ಕಾರಿ ವಿರೋಧಿಗಳನ್ನು ನಿರ್ದಯತೆಯಿಂದ ಶಿಕ್ಷಿಸುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲೂ ನಾನು ಧೃತಿಗೆಡದೆ ಚಾವಡಿಯ ಮೇಲೆ ರಾತ್ರಿ ಹೊತ್ತಿನಲ್ಲಿ ಬಾವುಟ ಹಾರಿಸಿಯೇ ಬಿಟ್ಟೆ. ಬೆಳಗ್ಗೆ ಪೋಲಿಸರಿಗೆ ಸುದ್ದಿ ತಿಳಿದ ಕೂಡಲೇ ಧಾವಿಸಿ ಬಂದು ಧ್ವಜವನ್ನು ಕೆಳಕ್ಕಿಳಿಸಿ ತಮ್ಮ ವಶಕ್ಕೆ ತೆಗೆದುಕೊಂಡರು. ನಮ್ಮ ಊರಿನ ಹಾಗು ಸುತ್ತಮುತ್ತಲಿನ ಹಳ್ಳಿಗಳಿಗೆ ನನ್ನ ತಂದೆಯವರು ಕುಲಕರ್ಣಿಯಾಗಿದ್ದುದರಿಂದಲೂ ಪೋಲಿಸರೊಂದಿಗೆ ಅವರ ಪ್ರಭಾವವಿದ್ದುದರಿಂದಲೂ ಅವರು ಈ ಪ್ರಕರಣವನ್ನು ಮುಂದೆ ಹೋಗಲು ಬಿಡಲಿಲ್ಲ. ಆದರೂ ಊರ ಮುಸಲ್ಮಾನ ಗೌಡನು ನನ್ನ ಕಾರ್ಯವನ್ನು ಪೋಲಿಸರಿಗೆ ವರದಿ ಮಾಡಿದ್ದನು. ಸದ್ಯಕ್ಕೆ ಪರಿಸ್ಥಿತಿ ಶಾಂತವಾಗಿದ್ದರೂ ಮುಂದಿನದನ್ನು ನೆನೆದು ನಾನು ಕಲ್ಬುರ್ಗಿಗೆ ಬಂದು ಶಾಲೆಗೆ ಸೇರಿದೆ.

ಕಲ್ಬುರ್ಗಿಯಲ್ಲೂ ಪರಿಸ್ಥಿತಿ ಶಾಂತವಾಗಿರಲಿಲ್ಲ. ನಿಜಾಮನ ಸ್ವಾತಂತ್ರ್ಯಕಾಂಕ್ಷೆ ಜನತೆಯಲ್ಲಿ ರಾಜಕೀಯ ಜಾಗೃತಿಯನ್ನುಂಟುಮಾಡಿತ್ತು. ಹೈದರಾಬಾದ್ ಸ್ಟೇಟ್ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಸ್ವಾಮಿ ರಮಾನಂದ ತೀರ್ಥರು ಭಾರತದೊಡನೆ ಹೈದ್ರಾಬಾದ್‌ನ ಒಕ್ಕೂಟಕ್ಕಾಗಿ, ನಿಜಾಮನ ಆಳ್ವಿಕೆಯ ರದ್ದಿಗಾಗಿ ಚಳವಳಿ ಹೂಡಿ ಜನತೆಗೂ, ವಿದ್ಯಾರ್ಥಿಗಳಿಗೂ ಆಹ್ವಾನವಿತ್ತಿದ್ದರು. ಇದರ ಪರಿಣಾಮವಾಗಿ ಕಲ್ಬುರ್ಗಿಯ ವಿದ್ಯಾರ್ಥಿಗಳೂ ಚಳವಳಿಗೆ ಸೇರಿದರು. ಆಗ ಕಲ್ಬುರ್ಗಿಯ ನೂತನ ವಿದ್ಯಾಲಯವು ರಾಷ್ಟ್ರೀಯ ಶಿಕ್ಷಣದ ಕೇಂದ್ರ ಎಂದೇ ಹೆಸರಾಗಿತ್ತು. ನಾನು ಅಲ್ಲಿ ವಿದ್ಯಾರ್ಥಿಯಾಗಿದ್ದೆ. ರಾಜಕೀಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದೆ. ಈ ಶಾಲೆಯಲ್ಲಿ ಹಿಂದೂ ವಿದ್ಯಾರ್ಥಿಗಳೇ ಬಹಳ ಸಂಖ್ಯೆಯಲ್ಲಿದ್ದರು. ಕೆಲವರೇ ಇದ್ದ ಮುಸಲ್ಮಾನ್ ವಿದ್ಯಾರ್ಥಿಗಳು ನಮ್ಮ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದಿಲ್ಲ. ಅವರು ತಾವು ಆಳುವ ಜನಾಂಗದವರೆಂದು ಹೇಳುಕೊಳ್ಳುತ್ತಿದ್ದರು; "ಹೈದರಾಬಾದ್ ಕೂಡ ಪಾಕಿಸ್ತಾನವಾಗಿದೆ" ಎಂದು ಅನ್ನುತ್ತಿದ್ದರು. ಹೊರಗಿನ ಮುಸ್ಲಿಂ ಹುಡುಗರು ನಮ್ಮ ಮೇಲೆ ಆಕ್ರಮಣ ನಡೆಸುತ್ತಿದ್ದರು. ಶಾಲೆಯಿಂದ ಮನೆಗೆ ಹಿಂತಿರುಗುವದೇ ಪ್ರಯಾಸವಾಗುತ್ತಿತ್ತು, ಹೆಣ್ಣುಮಕ್ಕಳ ಪರಿಸ್ಥಿತಿ ಎಷ್ಟು ಹದಗೆಟ್ಟಿತ್ತೆಂದರೆ ಎಷ್ಟೋ ಪಾಲಕರು

ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ಕಳುಹಿಸುವುದನ್ನೇ ನಿಲ್ಲಿಸಿದರು. ನಮ್ಮ ಕೆಲವು ಶಿಕ್ಷಕರು ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಿಸಿದರು. ಅವರಲ್ಲಿ ಸದಾಶಿವರಾವ್ ಭೋಗಲೆ ಹಾಗು ವಾಸುದೇವ ದೀಕ್ಷಿತ ಎಂಬ ಉಪಾಧ್ಯಾಯರುಗಳು ಶಾಲಾ ವಿದ್ಯಾರ್ಥಿಗಳ ರಕ್ಷಣೆಗೆ ಯತ್ನಿಸಿ ಗೂಂಡಾಗಳ ಕೋಪಕ್ಕೆ ಹಾಗು ಅಪವಾದಕ್ಕೆ ಗುರಿಯಾದರು.

ನಿಜಾಮ್ ಸರ್ಕಾರವು ಅನೇಕ ಆಜ್ಞೆಗಳನ್ನು ಹೊರಡಿಸಿ ಸ್ವಾತಂತ್ರ್ಯ ಚಳವಳಿಯನ್ನು ಹತ್ತಿಕ್ಕಲು ಪ್ರಯತ್ನಿಸಿತು. ಪೋಲೀಸ್ ಅಧಿಕಾರಿಗಳಂತೂ ಬಹುತೇಕ ಅವರೇ ಆಗಿದ್ದರು. ಸಿಪಾಯಿಗಳು ಸಹ ತಮ್ಮನ್ನು ಆಳುವ ಜನಾಂಗದವರೆಂದು ಭಾವಿಸಿದ್ದರು ಅದರಂತೆ ದರ್ಪದಿಂದ ನಡೆಯುತ್ತಿದ್ದರು. ರಾಜ್ಯದ ಪ್ರತಿಯೊಬ್ಬ ಮುಸ್ಲಿಮನೂ ಒಂದಿಲ್ಲೊಂದು ರೀತಿಯಿಂದ ಸರ್ಕಾರದ ಸೇವೆಯಲ್ಲಿದ್ದನು. ಹಿಂದುಗಳು ಬಹುಸಂಖ್ಯೆಯಲ್ಲಿದ್ದರೂ ಅವರಿಗೆ ಯಾವ ಸ್ವಾತಂತ್ರ್ಯವಿರಲಿಲ್ಲ. ಸಾಮಾನ್ಯವಾಗಿ ಮೇಲುವರ್ಗವು ಮೊಗಲಾಯಿ ಸರ್ಕಾರದ ಮನೋವೃತ್ತಿಗೆ ಹೊಂದಿಕೊಂಡು ಬಂದಿತ್ತು. ಶಿಕ್ಷಣಾವಕಾಶವು ಅತ್ಯಂತ ಸೀಮಿತವಾಗಿತ್ತು. ಅಂದು ಅಲ್ಲಿ ಕೇವಲ ಇಂಟರ್‌ಮೀಡಿಯೆಟ್ ಕಾಲೇಜು ಇತ್ತು. ಶಿಕ್ಷಣಮಾಧ್ಯಮ ಉರ್ದು; ಕನ್ನಡ ಭಾಷೆಗೆ ಸರಿಯಾದ ಸ್ಥಾನ ಇರಲಿಲ್ಲ ; ಮರಾಠಿ ಮಾತ್ರ ಅಲ್ಪಸ್ವಲ್ಪ ತನ್ನ ಸ್ಥಾನವನ್ನುಳಿಸಿಕೊಂಡಿತ್ತು. ನಮಗೆ ಸಾಮಾನ್ಯವಾಗಿ ಮರಾಠಿಭಾಷೆಯ ರಾಷ್ಟ್ರೀಯಗ್ರಂಥಗಳು ಓದಲು ದೊರೆಯುತ್ತಿದ್ದವು. ನಾನು ಮಹಾತ್ಮಾ ಗಾಂಧಿ, ಟಿಳಕ್, ಸ್ವಾಮಿ ವಿವೇಕಾನಂದ ಇವರ ಗ್ರಂಥಗಳನ್ನು ಮರಾಠಿಯಲ್ಲಿಯೇ ಓದಿ ತಿಳಿದುಕೊಂಡಿದ್ದೆ.

ಇಂಥ ಪ್ರಸಂಗದಲ್ಲಿ ವಿದ್ಯಾರ್ಥಿಗಳು ಪರಿಸ್ಥಿತಿಯನ್ನು ಎದುರಿಸಲು ಮುಂದೆ ಬಂದರು. ಸ್ವಾಮಿ ರಮಾನಂದ ತೀರ್ಥರ ಆದೇಶವೇ ವಿದ್ಯಾರ್ಥಿಗಳಿಗೆ ಸ್ಫೂರ್ತಿದಾಯಕವಾಗಿತ್ತು. ನೂತನ ವಿದ್ಯಾಲಯದ ಹಿರಿಯ ವಿದ್ಯಾರ್ಥಿಗಳು ಗುಪ್ತವಾಗಿ ಸೇರಿ ರಾಜಕೀಯ ವಿಚಾರ ವಿನಿಮಯ ಮಾಡಿಕೊಳ್ಳುತ್ತಿದ್ದರು; ನಾನೂ ಈ ಗುಪ್ತಸಭೆಗಳಲ್ಲಿ ಭಾಗವಹಿಸುತ್ತಿದ್ದೆ. ವಿದ್ಯಾರ್ಥಿಗಳಲ್ಲಿ ಶಿಸ್ತು, ಸಂಘಟನೆ ಉಳಿಸಿಕೊಂಡು ಬರುವ ಉದ್ದೇಶದಿಂದ ಚರ್ಚೆ ನಡೆಯುತ್ತಿತ್ತು. ನನಗೆ ತಿಳಿದಮಟ್ಟಿಗೆ ಸ್ವಾಮಿ ರಮಾನಂದ ತೀರ್ಥರ ಹೆಸರಿನ ಜೊತೆಗೆ ಜನಾರ್ದನರಾವ್ ದೇಸಾಯಿ ಮತ್ತು ಜಗನ್ನಾಥರಾವ್ ಚಂದ್ರಿಕಿ ಮುಂತಾದವರ ಹೆಸರುಗಳನ್ನು ಕೇಳುತ್ತಿದ್ದೆವು. ನಾವು ನಮ್ಮ ಸಭೆಯನ್ನು ಆಗಾಗ್ಗೆ ನೂತನ ವಿದ್ಯಾಲಯದ ಆಟದ ಬಯಲಲ್ಲಿಯೇ ಸೇರಿಸುತ್ತಿದ್ದೆವು; ಸರ್ಕಾರದ ದಬ್ಬಾಳಿಕೆಯನ್ನು ಖಂಡಿಸುತ್ತಿದ್ದೆವು. ಒಮ್ಮೆ ಪೋಲೀಸರು ನಾಲ್ಕೂ ಕಡೆಯಿಂದ ನಮ್ಮನ್ನು ಮುತ್ತಿ ಎಲ್ಲರನ್ನೂ ಬಂಧಿಸಿದರು. ನಾನೂ ಬಂಧಿತನಾದೆ. ಪೋಲಿಸ್ ಠಾಣೆಯಲ್ಲಿ ರಾತ್ರಿ ಹನ್ನೆರಡರವರೆಗೆ ವಿಚಾರಣೆ ನಡೆಸಿದನಂತರ ಬಿಟ್ಟುಬಿಟ್ಟರು.

ಇದಾದನಂತರ ನಮ್ಮ ಶಾಲೆಯು ಸರಿಯಾಗಿ ನಡೆಯುವುದು ಕಷ್ಟವಾಯಿತು.

ರಾಜಕೀಯ ಚಳವಳಿ ದಿನಕಳೆದಂತೆ ಹೆಚ್ಚಾಯಿತು. ಅಂತೆಯೇ ನಿಜಾಮರ್ ಸರ್ಕಾರದ ದಬ್ಬಾಳಿಕೆಯೂ ಬೆಳೆಯಿತು. 'ರಜಾಕಾರ' ಎಂಬ ಹೆಸರಿನ ಸ್ವಯಂಸೇವಕರ ತಂಡಗಳು ಬಹುಬೇಗನೆ ಅಸ್ತಿತ್ವದಲ್ಲಿ ಬಂದು ರಾಜ್ಯದ ಎಲ್ಲೆಡೆಯಲ್ಲೂ ತನ್ನ ಶಾಖೆಗಳನ್ನು ವಿಸ್ತರಿಸಿತು. ಧರ್ಮದ ಹೆಸರಿನಲ್ಲಿ ಸ್ವಾರ್ಥಸಾಧನೆಯೇ ಇವರ ಗುರಿಯಾಗಿತ್ತು.

ಕಲ್ಬುರ್ಗಿಯಲ್ಲಿ ರಜಾಕಾರರ ಹಾವಳಿಯಿಂದ ಶಾಲೆಗಳು ಸರಿಯಾಗಿ ನಡೆಯದೆ ಹೋದುದರಿಂದ ನಾನು ನನ್ನ ಊರಾದ ಅಂಕಲಗಿಗೆ ಬಂದೆ. ಇದು ವಿಜಾಪುರ ಜಿಲ್ಲೆಯ ಗಡಿ ಪ್ರದೇಶವಲ್ಲಿದೆ. ಇಲ್ಲಿಯೂ ರಜಾಕಾರರ ಹಾವಳಿ ಹೆಚ್ಚಾಗಿತ್ತು. ಈ ರಜಾಕಾರರು ರಾಜ್ಯದ ರಕ್ಷಣೆಯ ಕಾರ್ಯದಲ್ಲಿ ತೊಡಗಿದ್ದರು. ಗಡಿ ಪ್ರದೇಶದಲ್ಲಿ ಸುತ್ತಾಡುತ್ತಾ, ಸಂದರ್ಭ ಸಾಧಿಸಿ ಜನರನ್ನು ಹಿಡಿಸಿ ಹಣ ಸುಲಿಯುತ್ತಿದ್ದರು; ಸುಲಿಗೆ, ಲೂಟಿ ನಡೆಸುತ್ತಿದ್ದರು. ಈ ಸಮಯದಲ್ಲಿ ಜೇವರಗಿ ತಾಲೂಕಿನ ದುಮ್ಮದ್ರಿ ಗ್ರಾಮದ ಶರಣಗೌಡ ಇನಾಮದಾರ ಎಂಬ ಸ್ವಾತಂತ್ರ್ಯಯೋಧರು ಮುಂದೆ ಬಂದು ನೂರಾರು ಜನರ ಸಹಕಾರದಿಂದ ನಿಜಾಮರ್ ಸರ್ಕಾರವನ್ನು ಧೈರ್ಯದಿಂದ ಎದುರಿಸಿದರು. ನಿಜಾಮರ್ ರಾಜ್ಯದ ಕಕ್ಕಳಮೇಲ ಗ್ರಾಮವನ್ನು ವಶಪಡಿಸಿಕೊಂಡರು. ಜೇವರಗಿ ತಾಲೂಕಿನ ಈ ಗ್ರಾಮದ ಗಡಿಯು ನಾಲ್ಕೂ ಕಡೆಯಿಂದಲೂ ವಿಜಾಪುರ ಜಿಲ್ಲೆಯ ಗಡಿಗಳಿಂದ ಆವೃತವಾಗಿತ್ತು. ಆದುದರಿಂದ ಶರಣಗೌಡರ ಕ್ರಾಂತಿಕಾರಿಗೆ ಇದೊಂದು ಸುರಕ್ಷಿತ ಸ್ಥಳವಾಗಿತ್ತು. ಅವರು ತಮ್ಮ ಶಿಬಿರವನ್ನು ಇಲ್ಲಿಯೇ ಸ್ಥಾಪಿಸಿದ್ದರು. ಅಂಕಲಗಿಯು ಇವರ ಸ್ಥಾನದಿಂದ ನಾಲ್ಕು ಹರದಾರಿಯ ಮೇಲೆ ಇದ್ದುದರಿಂದ, ಈ ಶಿಬಿರದ ಜನರು ರಜಾಕಾರರ ಕಣ್ಣು ತಪ್ಪಿಸಿ ನಿಜಾಮ್ ರಾಜ್ಯದ ಸೀಮೆಯೊಳಗೆ ನುಸುಳಿ ಜನತೆಯೊಂದಿಗೆ ಸಂಪರ್ಕವಿಟ್ಟುಕೊಂಡಿದ್ದರು. ಅವರಲ್ಲಿ ಕೆಲವರು ಆಗಾಗ್ಗೆ ತಮ್ಮ ಊರಿಗೆ ಬಂದು ಹೋಗುತ್ತಿದ್ದರು. ರಜಾಕಾರರ ಚಟುವಟಿಕೆಗಳ ಮೇಲೆ ಅವರ ಕಣ್ಣಿತ್ತು. ಇವರು ತಮ್ಮ ಚಟುವಟಿಕೆಗಳನ್ನು ನೆರವೇರಿಸಲು ಜನರಿಂದ ಹಣಸಂಗ್ರಹ ಮಾಡುತ್ತಿದ್ದರು. ನಮ್ಮೂರ ಸಮೀಪದ ಹುಲ್ಲೂರು ಗ್ರಾಮವು ಕೆಲವು ದೃಷ್ಟಿಯಿಂದ ಶಿಬಿರದ ಕ್ರಾಂತಿಕಾರರ ಚಟುವಟಿಕೆಯ ಒಂದು ಕೇಂದ್ರವಾಗಿತ್ತು.

ಇತ್ತ ನಮ್ಮೂರ ಪರಿಸ್ಥಿತಿ ಹದಗೆಟ್ಟಿತು. ಪೋಲಿಸ್ ಠಾಣೆಗೆ ಹೊಸ ಪೋಲಿಸರು ಬಂದರು; ಹಿಂದೂಗಳ ಮನೆಯಲ್ಲಿನ ಶಸ್ತ್ರಗಳಿಗಾಗಿ ಶೋಧ ನಡೆಸಿದರು. ನಮ್ಮ ಮನೆಯಲ್ಲಿದ್ದ ಮೂರು ಹಳೆಯ ಬಂದೂಕುಗಳು ಲೈಸೆನ್ಸ್ ಸಹಿತ ಅವರ ವಶವಾದವು.

ಲೂಟಿ, ಅಪಹರಣ, ಕೊಲೆ ಇವೇ ರಜಾಕಾರರ ನಿತ್ಯವ್ಯವಹಾರವಾಯಿತು. ನಿಜಾಮರ್ ಸರ್ಕಾರದ ಸೈನ್ಯ, ಪೋಲಿಸ್ ಇವರಿಂದ ನಮ್ಮ ಮನೆಯ ಹಿರಿಯರಿಗೆ, ಊರಿಗೆ ಸಾಕಷ್ಟು ತೊಂದರೆ ಆಯಿತು. ಅನೇಕ ಅರಬ್ಬರೂ ಸಹ ಸರ್ಕಾರದ ಸೇವೆಯಲ್ಲಿ ಸೇರಿಕೊಂಡರು. ಗ್ರಾಮಾಧಿಕಾರಿಯಾಗಿದ್ದ ನನ್ನ ತಂದೆಯವರು ಊರಿಗೆ ಬರುತ್ತಿದ್ದ ಇವರೆಲ್ಲರ ಊಟೋಪಚಾರದ ವೆಚ್ಚವನ್ನು ಭರಿಸಬೇಕಾಗಿ ಬಂದು; ನಮ್ಮ ಮನೆಯ

ಆರ್ಥಿಕ ಪರಿಸ್ಥಿತಿ ತುಂಬಾ ಕೆಟ್ಟಿತು. ನಾನು ದಿನಾಲು ಈ ಜನರ ನಡುವೆ ಇದ್ದು ಅವರ ವ್ಯವಹಾರ, ನಡೆನುಡಿ, ವಿಚಾರ, ಧೈರ್ಯ, ಸ್ಥೈರ್ಯ ಮುಂತಾದವನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದೆ. ಸಾಮಾನ್ಯವಾಗಿ ಅವರು ಗಡಿಯಾಚೆ ಇದ್ದ ಶರಣಗೌಡರ ಶಿಬಿರದ ಕ್ರಾಂತಿಕಾರರ ಚಟುವಟಿಕೆಗಳಿಗೆ ಹೆದರುತ್ತಿದ್ದರೆಂದು ತೋರುತ್ತಿತ್ತು. ರಜಾಕಾರರು ಪರಸ್ಥಳದಿಂದ ಬಂದವರಾಗಿದ್ದರು ; ಆದರೆ ಊರ ಕೆಲವು ಮುಸಲ್ಮಾನರು ಅವರಿಗೆ ಸಹಾಯಕರಾಗಿದ್ದರು. ಸರ್ಕಾರಕ್ಕೆ ಕೊಡಬೇಕಾಗಿದ್ದ ಕರವನ್ನು ತಮಗೆ ಒಪ್ಪಿಸಬೇಕೆಂದು ಶಿಬಿರದ ಕ್ರಾಂತಿಕಾರರು ವಾದಿಸುತ್ತಿದ್ದರು. ಇತ್ತ ಸರ್ಕಾರಿ ಅಧಿಕಾರಿಗಳು ಕರವನ್ನು ತೆರದಿದ್ದರೆ ಶಿಕ್ಷೆಯಾಗುವದೆಂದು ಬೆದರಿಸಿದ್ದರು. ಇದುವರೆಗೆ ಸಂಭಾವಿತರಂತೆ ಇದ್ದ ಮುಸ್ಲಿಮರೂ ರಜಾಕಾರಮನೋವೃತ್ತಿಯನ್ನು ಹೊಂದಿ ರೈತರಿಗೆ ಹಿಂಸೆಕೊಡಹತ್ತಿದರು. ನನ್ನ ತಂದೆಯವರು ಉಭಯಸಂಕಟಕ್ಕೆ ಸಿಕ್ಕಿದರು. ಕ್ರಾಂತಿಕಾರರ ಹೇಳಿಕೆಯಂತೆ ನಡೆದುಕೊಂಡರೆ ಸರ್ಕಾರದಿಂದ ಊರಿಗೆ ಅಪಾಯ ತಪ್ಪಿದ್ದಲ್ಲ; ಶಿಬಿರದವರೊಡನೆ ವೈಮನಸ್ಯ ತರವಲ್ಲ. ಏನಾದರೂ ಮಾಡಿ ಶಿಬಿರದವರೊಡನೆ ಸಂಧಾನ ಮಾಡಿಕೊಂಡು, ತಮ್ಮ ವಿಚಾರದ ಪ್ರಕಾರ ಜನತೆಯ ತೊಂದರೆ ಹೆಚ್ಚದಂತೆ ಮಾಡುವ ಉದ್ದೇಶದಿಂದ ಅವರ ನಾಯಕರನ್ನು ಭೇಟಿಮಾಡಲು ಹೋದರು. ಆದರೆ ಅದೇ ದಿನ ರಾತ್ರಿ 12 ಗಂಟೆಯ ಅನಂತರ ಕ್ರಾಂತಿಕಾರರು ಊರಿನ ಮೇಲೆ ದಾಳಿ ಮಾಡಿದರು. ಅವರು ಸುಮಾರು 150 ಜನರಿದ್ದರು. ರಾತ್ರಿ ಒಮ್ಮಿಂದೊಮ್ಮೆ ಗುಂಡಿನ ಸಪ್ಪಳ ಕೇಳಬರತೊಡಗಿತು. ಮನೆಯಲ್ಲಿ ನಾನು ಮತ್ತು ನನ್ನ ಸಮವಯಸ್ಕರಾದ ನನ್ನ ಕಕ್ಕ ರಾಮದಾಸರು ಇದ್ದೆವು. ಇಬ್ಬರೂ ಧೈರ್ಯಮಾಡಿ ಮನೆಯ ಸುಮಾರು ಇಪ್ಪತ್ತು ಮಂದಿ ಹೆಣ್ಣುಮಕ್ಕಳು ಹಾಗು ಹುಡುಗರನ್ನು ಕೂಡಲೇ ಮನೆಯ ಹಿಂಬಾಗಿಲಿನಿಂದ ಸುರಕ್ಷಿತ ಸ್ಥಾನಕ್ಕೆ ತೆಗೆದುಕೊಂಡು ಹೋಗಿ ಸೇರಿಸಿದೆವು. ಕ್ರಾಂತಿಕಾರರಲ್ಲಿಯೂ ಎಲ್ಲಾ ಪ್ರಕಾರದ ಜನರಿದ್ದುದೇ ಇದಕ್ಕೆ ಕಾರಣ. ಅನಂತರ ಅದೇ ಮಾರ್ಗದಿಂದ ಮನೆಗೆ ಬಂದು ಮುಂಬಾಗಿಲನ್ನು ತೆರೆದೆವು. ನಾನು ಕತ್ತಲೆಯಲ್ಲಿ ಮುಂದಾಗಿ ಹೊರಬಂದೆ. ಹೊರಗೆ ಅನೇಕರು ನಿಂತಿದ್ದರು. ಕತ್ತಲೆಯಲ್ಲಿ ಮುಖ ಚನ್ನಾಗಿ ಕಾಣಿಸುತ್ತಿರಲಿಲ್ಲ. ನನಗೆ ಅವರಲ್ಲಿ ಯಾರ ಪರಿಚಯವೂ ಇರಲಿಲ್ಲ. ಒಬ್ಬನು ಮುಂದೆ ಬಂದು ನನ್ನ ಎದೆಗೆ ಪಿಸ್ತೂಲು ಗುರಿಹಿಡಿದು, "ಸರ್ಕಾರದ ಎಲ್ಲಾ ಕಾಗದಪತ್ರಗಳನ್ನು ಸುಡಲು ಬಂದಿದ್ದೇವೆ; ಅವುಗಳನ್ನು ಬೇಗನೆ ಒಪ್ಪಿಸಬೇಕು" ಎಂದನು. ನಾನು ಕೂಡಲೇ ಸರಕಾರಿ ಕಾಗದಗಳಿದ್ದ ಸ್ಥಳವನ್ನು ತೋರಿಸಿದೆನು. ಅವರು ಮನೆಯನ್ನು ಪ್ರವೇಶಿಸಿ ನೂರಾರು ಸರಕಾರೀ ಕಾಗದಪತ್ರಗಳನ್ನು ಹೊರಹಾಕಿ ಬೆಂಕಿ ಹಚ್ಚಿದರು. ಶತಮಾನಗಳಿಂದ ಪರಂಪರಾಗತವಾಗಿ ಬಂದಿದ್ದ ಸರ್ಕಾರಿ ದಾಖಲೆಗಳು ಈ ರೀತಿ ಭಸ್ಮವಾದುದರ ಜೊತೆಗೆ, ಅನೇಕ ಧಾರ್ಮಿಕ ಗ್ರಂಥಗಳೂ ಬೆಂಕಿಯ ಪಾಲಾದವು. ಉಳಿದವರ ಮನೆಯ ಸರಕಾರಿ ಕಾಗದಪತ್ರಗಳ

ಗತಿಯೂ ಇದೇ ಆಯಿತು. ಅನಂತರ ಅವರು ನನ್ನನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಿ ಪೋಲಿಸ್ ಠಾಣೆಗೆ ಬೆಂಕಿಯಿಟ್ಟರು. ಈ ಮೊದಲೇ ಪೋಲಿಸರು ಠಾಣ್ಯವನ್ನು ತ್ಯಜಿಸಿ ಓಡಿಹೋಗಿದ್ದರು. ಕಡೆಗೆ, ಕ್ರಾಂತಿಕಾರರು ಊರಿನ ಹಿರಿಯ ರಜಾಕಾರನೊಬ್ಬನನ್ನು ಸಂಗಡ ಹಿಡಿದುಕೊಂಡು ಹೊರಟುಹೋದರು. ಈ ಘಟನೆಯು 1947ರ ಡಿಸೆಂಬರ್ ತಿಂಗಳಲ್ಲಿ ನಡೆಯಿತು.

ಶಿಬಿರದ ಕ್ರಾಂತಿಕಾರರ ಈ ಕೃತ್ಯವು ನಿಜಾಮನ ಪೋಲಿಸರಿಗೆ ಹಾಗು ಸೈನ್ಯಕ್ಕೆ ತಿಳಿದು ಪರಿಸ್ಥಿತಿ ಗಂಭೀರವಾಯಿತು. ಮರುದಿನ ಬಂದ ನಮ್ಮ ತಂದೆಯವರು ಪರಿವಾರದ ಎಲ್ಲ ಸದಸ್ಯರನ್ನೂ ಗಡಿಯಾಚೆಗಿದ್ದ ಸಿರಸಿಗಿ ಎಂಬ ಗ್ರಾಮಕ್ಕೆ ಕರೆದುಕೊಂಡು ಬಂದರು. ಅಲ್ಲಿಯೇ ಇದ್ದ ಶಿಬಿರದ ಕ್ರಾಂತಿಕಾರರು ನಮ್ಮನ್ನು ಸ್ವಾಗತಿಸಿದರು. ನಮ್ಮ ಊರಿನ ರಜಾಕಾರ ಪ್ರಮುಖನನ್ನೂ ಅಲ್ಲಿಯೇ ಬಂಧಿಸಿಟ್ಟಿದ್ದರು. ಸಿರಸಿಗಿಯಲ್ಲಿ ಹಲವಾರು ಚಳವಳಿದಾರರಿದ್ದರು. ಅವರಲ್ಲಿ ದಾಸರಾಮು, ಅರಳಗುಂಡಗಿ ನರಸಿಂಗ ರಾವ್, ಮುಂತಾದವರಿದ್ದರು. ನಾನು ಹಲವಾರು ಸಲ ಅವರಲ್ಲಿಗೆ ಹೋಗಿ ಅವರ ಮಾತುಗಳನ್ನು ಕೇಳುತ್ತಿದ್ದೆ. ಮುಂದೆ ಕೆಲವು ದಿವಸಗಳನಂತರ ನಾವೆಲ್ಲರೂ ಊರಿಗೆ ಹಿಂತಿರುಗಿದೆವು. ರಜಾಕಾರರ ಹಾವಳಿ ಎಂದಿನಂತೇ ಇದ್ದಿತು. ಸರ್ಕಾರಿ ಕಾಗದ ಪತ್ರಗಳನ್ನು ಸುಟ್ಟಮೇಲೆ ವಿಚಾರಿಸಲು ಯಾವ ಅಧಿಕಾರಿಯೂ ಬಂದಿರಲಿಲ್ಲ. ಆಗ ಒಬ್ಬ ಪೋಲಿಸ್ ಸಬ್‌ಇನ್ಸ್‌ಪೆಕ್ಟರ್ ಕೆಲ ಸಿಪಾಯಿಗಳೊಡನೆ ಬಂದನು. ಈತನು ಬೇರೆ ಕಡೆಗೆ ಇಳಿಯದೆ ಹನುಮಂತದೇವರ ಗುಡಿಯಲ್ಲಿ ಇಳಿದಿದ್ದನು; ಮಂದಿರದ ಅಂಗಳದಲ್ಲಿ ಕೋಳಿಯನ್ನು ಕೊಯ್ದು ಅಡಿಗೆ ಮಾಡಿಸಿದ್ದನು. ಯಾರೂ ಇದಕ್ಕೆ ಪ್ರತಿಭಟಿಸುವಂತಿರಲಿಲ್ಲ. ನಮ್ಮೂರಿನ ಮಾಲಿಗೌಡನು ಮುಸಲ್ಮಾನನಾಗಿದ್ದುದರಿಂದ ಪೋಲಿಸರಿಗೆ ಅನುಕೂಲವಾಗಿದ್ದನು. ಈತನು ನನ್ನ ಬಗ್ಗೆ ಪೋಲಿಸರಿಗೆ ಏನೇನೋ ತಿಳಿಸಿದ್ದನು. ಶರಣಗೌಡರ ಶಿಬಿರದವರಿಗೆ ನಾನು ಎಲ್ಲ ರೀತಿಯ ಸಹಾಯ ಮಾಡಿದುದಾಗಿಯೂ, ನನ್ನ ಪ್ರೇರಣೆಯಿಂದಲೇ ಅವರು ಊರಿಗೆ ಬಂದು ಸರ್ಕಾರಿ ಕಾಗದ ಪತ್ರಗಳು ಮತ್ತು ಪೋಲಿಸ್ ಠಾಣೆಯನ್ನು ಸುಟ್ಟುದಾಗಿಯೂ ತಿಳಿಸಿದ್ದನು. ಇದರ ಪರಿಣಾಮವಾಗಿ ಇನ್ಸ್‌ಪೆಕ್ಟರನು ನನಗೆ ಹೇಳಿಕಳುಹಿಸಿದನು. ತಂದೆಯವರೊಟ್ಟಿಗೆ ನಾನು ಹೋಗಿ ಅವನನ್ನು ಭೇಟಿಯಾದೆ. ಒಬ್ಬಿಬ್ಬ ಪಠಾಣರೂ ಸಹ ಶಿಬಿರದವರೊಡನೆ ನಡೆದ ಹೋರಾಟದಲ್ಲಿ ಸತ್ತಿದ್ದರು. ಸಿಟ್ಟನಲ್ಲಿದ್ದ ಆತನು ನಾನೇ ಚಳವಳಿಗಾರರಿಗೆ ಸಹಾಯ ಮಾಡಿದುದಾಗಿ ಆರೋಪಿಸಿದನು. ನಾನು ಅವನ ಅಭಿಪ್ರಾಯವನ್ನು ಅಲ್ಲಗಳೆದೆ. "ರಾತ್ರಿಯಲ್ಲಿ ದಾಳಿ ಮಾಡಿದ ಕಾಂಗ್ರೆಸ್ ಗೂಂಡಾಗಳ ವಿರುದ್ಧ ಪ್ರತೀಕಾರ ಏಕೆ ಮಾಡಲಿಲ್ಲ?" ಎಂದು ಕೇಳಲು, "ಶಾಲಾ ವಿದ್ಯಾರ್ಥಿಯಾದ ನಾನು ರಾತ್ರಿಯಲ್ಲಿ ನೂರಾರು ಜನರನ್ನು ಹೇಗೆ ಎದುರಿಸಲು ಸಾಧ್ಯ? ಶಸ್ತ್ರಧಾರಿಗಳಾದ ಅವರನ್ನು ನಿಶ್ಶಸ್ತ್ರನಾಗಿದ್ದ ನಾನೊಬ್ಬನೇ ಹೇಗೆ ಎದುರಿಸಲಿ? ಅಧಿಕಾರಿಗಳಾದ ನೀವೇ ಪೋಲಿಸ್

ಠಾಣ್ಯಾನನ್ನು ತ್ರೋಸಿದು ಓಡಿಹೋದಾಗ ನನ್ನಂಥವನ ಪರಿಸ್ಥಿತಿ ಏನು ?" ಎಂದು ಉತ್ತರಿಸಿದೆನು. ಇದು ಅವನಿಗೆ ಸಮಾಧಾನವಾಗಿರಬೇಕು; ಇಲ್ಲದಿದ್ದರೆ ನನಗೆ ಚಿತ್ರ ಹಿಂಸೆ ಕೊಡುತ್ತಿದ್ದರು. ಈ ವಿಚಾರಣೆಯನಂತರ ನನ್ನನ್ನು ಬಿಟ್ಟುಬಿಟ್ಟರು. ನಾನು ಗಾಂಧಿ ಟೊಪ್ಪಿಗೆ ಧರಿಸಿದ್ದುದರಿಂದ ಹಾಗೂ ಮನೆಯ ಹೊರಬಾಗಿಲ ಗೋಡೆಯ ಮೇಲೆ ರಾಷ್ಟ್ರಧ್ವಜವನ್ನು ಚಿತ್ರಿಸಿದ್ದುದರಿಂದ ಪೋಲಿಸ್ ಅಧಿಕಾರಿಗಳಿಗೆ ಅಸಮಾಧಾನವಾಗಿತ್ತು.

ಮುಂದೆ ಫೆಬ್ರವರಿ 1948ರ ಸುಮಾರಿಗೆ ಹೈದರಾಬಾದ್ ರಾಜ್ಯದಲ್ಲಿ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತು. ರಜಾಕಾರರ ಸಂಖ್ಯೆ ಹೆಚ್ಚಾಯಿತು. ಗಡಿ ರಕ್ಷಣೆಗಾಗಿ ಪಠಾಣರನ್ನು ನೇಮಿಸಿದರು. ಎತ್ತರವಾಗಿ ಕೆಂಪು ವರ್ಣದವರಾಗಿದ್ದ ಇವರು ಪಷ್ತೋ ಭಾಷೆಯನ್ನಾಡುತ್ತಿದ್ದರು, ಉರ್ದು ಬರುತ್ತಿರಲಿಲ್ಲ. ತಮ್ಮ ವೇಷವನ್ನು ಧರಿಸಿ, ಕೊರಳಿಗೆ ಅಡ್ಡವಾಗಿ ಗುಂಡಿನ ಸರಗಳನ್ನು ಧರಿಸಿ 303 ನಂಬರಿನ ಬಂದೂಕು ಹೊತ್ತು ಗಡಿಭಾಗದಲ್ಲಿ ಗಸ್ತು ತಿರುಗುತ್ತಿದ್ದರು; ಸಿಕ್ಕಿದ ಕುರಿಮೇಕೆಗಳನ್ನು ಹಿಡಿದು ತಿನ್ನುತ್ತಿದ್ದರು; ಹೆಣ್ಣುಮಕ್ಕಳು ಇವರ ಕಣ್ಣಿಗೆ ಬಿದ್ದರೆ ಬಹಳ ಅನರ್ಥವಾಗುತ್ತಿತ್ತು; ಕೊನೆಯ ಪಕ್ಷ ಅವರ ಕೊರಳ ಆಭರಣಗಳನ್ನಾದರೂ ಕಸಿದುಕೊಳ್ಳುತ್ತಿದ್ದರು.

ಈ ಪಠಾಣರು ಆಗಾಗ್ಗೆ ನಮ್ಮ ಮನೆಗೆ ಬರುತ್ತಿದ್ದರು. ಅವರಿಗೆ ಬಿಸಿಲು, ಸೆಕೆ ಎಂದರೆ ಆಗುತ್ತಿದ್ದಿಲ್ಲ. ಅವರಿಗಾಗಿ ಕುಡಿಯಲು ಮಜ್ಜಿಗೆಯ ವ್ಯವಸ್ಥೆ ಮಾಡಲಾಗಿತ್ತು. ನಾನು ಅವರ ಬಳಿ ಕುಳಿತು ಅನೇಕ ವಿಷಯಗಳನ್ನು ಸಂಗ್ರಹಿಸುತ್ತಿದ್ದೆ. ಆಗಾಗ್ಗೆ ಅವರ ಬಂದೂಕನ್ನು ತೆಗೆದುಕೊಂಡು ಗುಂಡುಹಾರಿಸುವ ವಿಧಾನವನ್ನು ಕಲಿತುಕೊಳ್ಳುತ್ತಿದ್ದೆ. ಅವರು ಶೂರರಾಗಿದ್ದರೂ ಇಲ್ಲಿಯ ಪ್ರತಿಕೂಲ ಹವಾಮಾನ, ಭೌಗೋಳಿಕ ಪರಿಸ್ಥಿತಿ, ಅಪರಿಚಿತ ಸ್ಥಳ, ಭಾಷಾ ತೊಂದರೆ ಇವುಗಳಿಂದ ಪೇಚಿನಲ್ಲಿ ಸಿಕ್ಕಿಬಿದ್ದಿದ್ದರು. ನಿಜಾಮ್ ಸರ್ಕಾರದ ಅಧಿಕಾರಿಗಳು ಸೀಮೆಯ ಸಮೀಪದ ಹಳ್ಳಿಗಳಲ್ಲಿ ಅಡ್ಡಾಡಲು ಭಯಪಡುತ್ತಿದ್ದು ಸ್ಥಳೀಯ ರಜಾಕಾರರು ಅವರಿಗೆ ಸಹಾಯಕರಾಗಿದ್ದರು.

ಊರ ಪರಿಸ್ಥಿತಿ ಕೆಟ್ಟಿದ್ದರಿಂದ ನಾನು ಮತ್ತೆ ಕಲ್ಬುರ್ಗಿಗೆ ಬಂದು ಶಾಲೆಗೆ ಸೇರಿದೆ. ಆದರೆ ಶಾಲೆಯಲ್ಲಿ ಅಭ್ಯಾಸದ ವಾತಾವರಣವಿರಲಿಲ್ಲ. ಇದೇ ಸಮಯದಲ್ಲಿ ಶಿಬಿರದ ಚಳವಳಿಕಾರರು ನಮ್ಮ ಊರಿನ ಮೇಲೆ ಹಠಾತ್ತನೆ ದಾಳಿಮಾಡಿ ಮೂವರು ರಜಾಕಾರರ ಸಹಕಾರಿಗಳಾದ ಮುಸಲ್ಮಾನರನ್ನು ರಾತ್ರಿಯಲ್ಲಿ ಹಿಡಿದುಕೊಂಡು ಹೋಗಿ, ದಾರಿಯಲ್ಲಿ ನಾರಾಯಣಪುರ ಎಂಬ ಗ್ರಾಮದ ಸಮೀಪ ಹುಲ್ಲೂರು ಸೀಮೆಯ ಹೊಲವೊಂದರಲ್ಲಿ ಗುಂಡಿಕ್ಕಿ ಕೊಂದು ಕಣಿವೆಯ ಬಣವೆಯಲ್ಲಿ ಹಾಕಿ ಸುಟ್ಟ ಸುದ್ದಿ ತಿಳಿಯಿತು. ಈ ಘಟನೆಯ ಪರಿಣಾಮವಾಗಿ ನನ್ನ ಹಾಗು ಸುತ್ತಮುತ್ತಲಿನ ಗ್ರಾಮಗಳ ಜನರು ತಮ್ಮ ಊರನ್ನು ಬಿಟ್ಟು ಗಡಿ ದಾಟಿ ವಿಜಾಪುರ ಜಿಲ್ಲೆಯ ಸೀಮೆಯ ಹಳ್ಳಿಗಳಲ್ಲಿ ಸೇರಿದರು. ನನ್ನ ತಂದೆತಾಯಿಗಳೂ ಪರಿವಾರಸಹಿತ ವಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ

ಕುಳಕುಮಟಗಿ ಗ್ರಾಮವನ್ನು ಸೇರಿದ್ದರು. ಇದರಿಂದ ನನಗೆ ಆರ್ಥಿಕ ಆಧಾರ ತಪ್ಪಿದಂತಾಯಿತು.

ನಮ್ಮ ಊರು ಸಂಪೂರ್ಣ ಖಾಲಿಯಾಗಿತ್ತು. ಕೆಲ ತಿಂಗಳುಗಳನಂತರ ನಾನು ಊರಿಗೆ ಬಂದಾಗ ಎಲ್ಲೆಡೆ ಕಾಡುಹುಲ್ಲು ಬೆಳೆದು ಊರು ಹಾವುಗಳ ವಾಸಸ್ಥಾನವಾಗಿ ಮಾರ್ಪಟ್ಟಿದ್ದುದನ್ನು ನೋಡಿದೆ. ಕಲ್ಬುರ್ಗಿಯಲ್ಲಿ ಇರಲು ಸಾಧ್ಯವಾಗದೆ ನನ್ನ ಅಕ್ಕನ ಭೆಟ್ಟಿಯಾಗಲು ಶಹಾಬಾದಿಗೆ ಬಂದೆ. ಇಲ್ಲಿ ಸ್ಟೇಷನ್ ಹೊರಗೆ ಕಾಸಿಂ ರಜ್ವಿಯ ಸೆಕ್ರೆಟರಿಯ ಸ್ವಾಗತಕ್ಕೆಂದು ಸಾವಿರಾರು ಸಂಖ್ಯೆಯಲ್ಲಿ ಮುಸಲ್ಮಾನರು ನೆರೆದಿದ್ದರು. ಸಾವಿರಾರು ಸಮವಸ್ತ್ರಧಾರಿ ರಜಾಕಾರರು ಲಾಠಿ, ಕತ್ತಿ, ಭರ್ಜಿ, ಚಾಕು, ಬಂದೂಕು ಮುಂತಾದ ಅನೇಕ ಬಗೆಯ ಆಯುಧಗಳನ್ನು ಹಿಡಿದು ಕಾಯುತ್ತಿದ್ದರು. ಈ ಸೆಕ್ರೆಟರಿಯು ಶಹಾಬಾದ್‌ನಲ್ಲಿ ಇಳಿದೊಡನೆ ರಜಾಕಾರರು ಅವನನ್ನು ಸ್ವಾಗತಿಸಿ, ಕಾರಿನಲ್ಲಿ ಕುಳ್ಳಿರಿಸಿಕೊಂಡು ಸಾಲಾಗಿ ಅವನ ಹಿಂದೆ ಹೋದರು. ನಾನು ಕಷ್ಟಪಟ್ಟು ನನ್ನ ಅಕ್ಕನ ಮನೆ ಸೇರಿದೆ. ಅಲ್ಲಿಯೂ ರಜಾಕಾರರ ಚಟುವಟಿಕೆಯನ್ನು ಕಂಡೆ. ಹಿಂದೂಗಳು ಉಚ್ಚ ಸ್ವರದಲ್ಲಿ ಭಜನೆ ಮಾಡುವುದೂ ಸಹ ಸಾಧ್ಯವಿರಲಿಲ್ಲ. ಯಾರೂ ರಾಜಕೀಯ ವಿಷಯ ಚರ್ಚಿಸುವಂತಿರಲಿಲ್ಲ. ಅಲ್ಲಲ್ಲಿ ರಜಾಕಾರರ ಅತ್ಯಾಚಾರದ ವರದಿಗಳು ಕೇಳಿಬರುತ್ತಿದ್ದವು. ಎಲ್ಲೆಡೆ ಭಯಾನಕ ವಾತಾವರಣವಿತ್ತು.

ಶಹಾಬಾದ್‌ನಿಂದ ಮರುದಿನವೇ ತಾಂಡೂರಿಗೆ ಹೊರಟೆ. (ಹಿಂದೆ ಕಲ್ಬುರ್ಗಿ ಜಿಲ್ಲೆಯಲ್ಲಿ ಇತ್ತು; ಈಗ ಕರ್ನಾಟಕದಲ್ಲಿ ಇಲ್ಲ. —ಸಂ||) ಇದು ವಾಡಿ–ಹೈದರಾಬಾದ್ ಮಾರ್ಗದಲ್ಲಿ 44 ಮೈಲು ದೂರದಲ್ಲಿದೆ. ಆಗ ಹೈದರಾಬಾದ್‌ನಿಂದ ವಾಡಿಯವರೆಗೆ ನಿಜಾಮನ ರೈಲ್ವೆ ಗಾಡಿಗಳು ಓಡಾಡುತ್ತಿದ್ದವು. ರಾಜಕೀಯ ಮತ್ತು ಇತರ ಕಾರಣಗಳಿಂದಾಗಿ ಆಗ ದಿನಕ್ಕೆ ಒಂದೇ ಗಾಡಿ ಹೈದರಾಬಾದ್‌ನಿಂದ ಬಂದು ಹೋಗುತ್ತಿತ್ತು. ಭಾರತ ರೈಲ್ವೆಯ ಗಾಡಿಗಳು ಮಿಲಿಟರಿ ರಕ್ಷಣೆಯಲ್ಲಿ ಓಡುತ್ತಿದ್ದವು; ಇದಕ್ಕೆ ಕಾರಣ ರಜಾಕಾರರು ಗುಲ್ಬರ್ಗಾ–ಸೊಲ್ಲಾಪುರ ಮಾರ್ಗದಲ್ಲಿದ್ದ ಗಾಣಗಾಪುರ ಸ್ಟೇಷನ್ ಸುಟ್ಟು ಮೇಲ್ ಗಾಡಿಯನ್ನು ಲೂಟಿ ಮಾಡಿದ್ದರು. ಪ್ರತಿದಿನ ಇದೊಂದೇ ಗಾಡಿಯಲ್ಲಿ ಸಾವಿರಾರು ಜನರು ಹೈದರಾಬಾದ್ ರಾಜ್ಯದಿಂದ ಹೊರಹೋಗುತ್ತಿದ್ದರು.

ಶಹಾಬಾದ್‌ನಿಂದ ವಾಡಿಗೆ ಬಂದೆ. ಮುಂದಿನ ಗಾಡಿ ಬರಲು ಇನ್ನೂ ಹನ್ನೆರಡು ತಾಸುಗಳ ಅವಧಿ ಇತ್ತು. ಪ್ಲಾಟ್‌ಫಾರ್ಮ್‌ನ ಮೇಲೆ ರಜಾಕಾರರ ಕಾವಲಿತ್ತು. ಯಾರ್‍ಯಾರು ಎಲ್ಲೆಲ್ಲಿಗೆ ಹೋಗುತ್ತಿದ್ದಾರೆಂದು ಅವರು ವಿಚಾರಿಸುತ್ತಿದ್ದರು. ಅನುಮಾನ ಬಂದವರ ಸಾಮಾನು ಬಿಚ್ಚಿ ನೋಡುತ್ತಿದ್ದರು. ಹೆಂಗಸರ ವಿಷಯವಾಗಿ ರಜಾಕಾರರ ವರ್ತನೆ ಅಸಹನೀಯವಾಗಿತ್ತು. ನಾನು ಗಾಂಧಿ ಟೊಪ್ಪಿಗೆಯನ್ನು ಧರಿಸಿ ಅಡ್ಡಾಡುತ್ತಿದ್ದುದರಿಂದ ಹಲವಾರು ರಜಾಕಾರರ ಗಮನ ಸೆಳೆದೆ. ಕೊನೆಗೆ ಇಬ್ಬರು ರಜಾಕಾರರು ನನ್ನ ತಪಾಸಣೆ ನಡೆಸಿದರು. ನಾನು ಸೊಲ್ಲಾಪುರದಿಂದ ಬರುತ್ತಿದ್ದ ಕಾಂಗ್ರೆಸ್

ಕಾರ್ಯಕರ್ತನೆಂದು ಅವರ ವಾದವಾಗಿತ್ತು. ನಾನು ನನ್ನ ಬಳಿ ಇದ್ದ ರೈಲ್ವೆ ಟಿಕೆಟ್ ತೋರಿಸಿ ಬಿಡುಗಡೆ ಹೊಂದಿದೆ. ಆದರೆ ನನ್ನೆದುರಿಗೆ ಹಿಂದೂ ಹೆಂಗಸರು ಮತ್ತು ಪುರುಷರಿಗೆ ರಜಾಕಾರರು ಕೊಡುತ್ತಿದ್ದ ಹಿಂಸೆ ಕಂಡು ಗಾಬರಿಗೊಂಡೆ. ಪೋಲಿಸರು ಈ ರಜಾಕಾರರನ್ನು ಏನೂ ಮಾಡುವಂತಿರಲಿಲ್ಲ. ಏಕೆಂದರೆ ರಜಾಕಾರರು ತಮ್ಮನ್ನು ತಡೆದ ಪ್ರತಿಯೊಬ್ಬರನ್ನೂ 'ಗದ್ದಾರ್' (ದೇಶದ್ರೋಹಿ) ಎಂದು ಕರೆಯುತ್ತಿದ್ದರು.

ಸಂಜೆಯಾದನಂತರ ನಾನು ಇಬ್ಬರು ಪ್ರವಾಸಿಗಳ ಸಹಿತವಾಗಿ ರೈಲ್ವೆ ನಿಲ್ದಾಣ ದಾಟಿ ಊರಲ್ಲಿಯ ಒಂದು ಬಾವಿಯ ಬಳಿಗೆ ಊಟಕ್ಕಾಗಿ ಬಂದೆ. ನಾವು ಊಟಕ್ಕೆ ಕುಳಿತ ಕೂಡಲೇ ಮೂವರು ರಜಾಕಾರರು ಅಲ್ಲಿಗೆ ಬಂದರು. ಅವರ ಪ್ರಮುಖನು ನಾವೆಲ್ಲ ಹಿಂದುಗಳೆಂಬುದನ್ನು ಖಚಿತಪಡಿಸಿಕೊಂಡು, ನಮ್ಮೆಲ್ಲರ ಬುತ್ತಿಗಳನ್ನೂ ಎತ್ತಿ ಬಿಸಾಡಿದನು. ಅನಂತರ ಎಲ್ಲರನ್ನೂ ಸಾಲಾಗಿ ನಿಲ್ಲುವಂತೆ ಅಪ್ಪಣೆಮಾಡಿ "ಇಸ್ ಕಾಫಿರೊಂಕೊ ಫೂಂಕ ದೋ" ಎಂದು ತನ್ನ ಹಿಂಬಾಲಕರಿಗೆ ಹೇಳಿದನು. ಕೂಡಲೇ ಅವರು ನಮ್ಮಗಳ ಎದೆಗೆ ಬಂದೂಕುಗಳನ್ನು ಗುರಿಹಿಡಿದು ನಿಂತರು. ಆದರೂ ನಾನು ಧೈರ್ಯವಾಗಿ ರಜಾಕಾರರ ಪ್ರಮುಖನನ್ನುದ್ದೇಶಿಸಿ, "ನನ್ನಲ್ಲಿ ಏನಾದರೂ ಆಕ್ಷೇಪಾರ್ಹ ವಸ್ತುವಿದ್ದರೆ ಪರೀಕ್ಷೆಮಾಡಿ, ಮುಂದೆ ಬೇಕಾದ್ದು ಮಾಡಿರಿ" ಎಂದು ಹೇಳಿದೆ. ಆ ಪ್ರಮುಖ ರಜಾಕಾರನು ತನ್ನ ಅನುಚರರಿಗೆ, "ಜರಾ ಠಹರೋ" ಎಂದು ಹೇಳಿದನು. ಎಲ್ಲರ ಸಾಮಾನುಗಳನ್ನು ತಪಾಸಣೆ ಮಾಡಿದರು. ನನ್ನ ಬಳಿ ಎರಡು ಬಟ್ಟೆಯ ಹೊರತು ಏನೂ ಇರಲಿಲ್ಲ. ಆದರೆ ನನ್ನ ಸಂಗಡ ಇದ್ದ ಹಿರಿಯರಿಬ್ಬರ ಬಳಿ ಬೆಲೆಬಾಳುವ ಬಟ್ಟೆಗಳೂ, ಹಣ ಮತ್ತು ಇತರ ವಸ್ತುಗಳೂ ಇದ್ದವು. ಅವರಿಗೆ ಚನ್ನಾಗಿ ಹೊಡೆದು ಅವೆಲ್ಲವನ್ನು ಕಿತ್ತುಕೊಂಡರು. ಕತ್ತಲಲ್ಲಿ ದಾರಿ ಹುಡುಕುತ್ತಾ ನಾನು ರೈಲ್ವೆ ಹಳಿಯ ಸಮೀಪ ಬಂದೆ. ಆಗ ಯಾರೋ ಇಬ್ಬರು, "ಕಾಫಿರ್‌ಕೊ ಪಕಡೋ" ಎನ್ನುತ್ತ ನನ್ನನ್ನು ಹಿಂಬಾಲಿಸಿದರು. ನಾನು ಕೂಡಲೇ ರೈಲ್ವೆ ಬೇಲಿಯನ್ನು ಹಾರಿ, ಎದುರು ಬರುತ್ತಿದ್ದ ಗೂಡ್ಸ್ ಗಾಡಿಯನ್ನು ಗಮನಿಸದೆ, ಮಾರ್ಗವನ್ನು ದಾಟಿ ಆಚೆಗೆ ನಿಂತೆ. ಅದರ ಪರಿಣಾಮವಾಗಿ ನನ್ನ ಹಾಗೂ ನನ್ನನ್ನು ಓಡಿಸಿಕೊಂಡು ಬಂದ ರಜಾಕಾರರ ನಡುವೆ ಗೂಡ್ಸ್ ಗಾಡಿ ನಿಂತಿತು. ನಾನು ಕೂಡಲೇ ಗೂಡ್ಸ್ ಗಾಡಿಯಲ್ಲಿದ್ದ ಗೂರ್ಖಾ ಸೈನಿಕರಿಗೆ ನನಗೆ ಸಂಭವಿಸಿದ ತೊಂದರೆಯನ್ನು ತಿಳಿಸಿದೆ. ಅವರು ಕೂಡಲೇ ಆಚೆ ಬದಿಯಲ್ಲಿದ್ದ ಗೂಂಡಾಗಳ ವಿರುದ್ಧ ತಮ್ಮ ಮಶೀನ್‌ಗನ್‌ಗಳನ್ನು ತಿರುಗಿಸಿದರು; ರಜಾಕಾರ ಗೂಂಡಾಗಳು ಪಲಾಯನ ಮಾಡಿದರು. ನಾನು ರೈಲ್ವೆ ನಿಲ್ದಾಣಕ್ಕೆ ಬಂದು ಪ್ರಾಣಕ್ಕೆ ಸಂಚಕಾರಿಯಾಗಿದ್ದ ಗಾಂಧೀ ಟೊಪ್ಪಿಗೆಯನ್ನು ತೆಗೆದು ಬೇರೆ ಬಟ್ಟೆಗಳನ್ನು ಧರಿಸಿದೆ. ಅನಂತರ ಸುರಕ್ಷಿತ ಸ್ಥಳವೊಂದರಲ್ಲಿ ಕುಳಿತೆ. ರಾತ್ರಿ ಗಾಡಿಯಲ್ಲಿ ಒಂದು ಮೂಲೆಯಲ್ಲಿ ಕುಳಿತು ಪ್ರಯಾಣ ಮಾಡಿ ಬೆಳಗ್ಗೆ ತಾಂಡೂರಿಗೆ ಬಂದೆ. ಮರುದಿನ ಅಲ್ಲಿಯ ಹೈಸ್ಕೂಲಿಗೆ ಸೇರಿದೆ.

ಇಲ್ಲಿಯ ಶಾಲೆಯ ಪರಿಸ್ಥಿತಿಯೆ ವಿಚಿತ್ರವಾಗಿತ್ತು. ಅನೇಕ ವಿದ್ಯಾರ್ಥಿಗಳು ರಜಾಕಾರ ಸದಸ್ಯರಾಗಿದ್ದರು. ಅವರಲ್ಲಿ ಕೆಲವರು ಶಸ್ತ್ರಧಾರಿಗಳಾಗಿ ಶಾಲೆಗೆ ಬರುತ್ತಿದ್ದರು. ಮುಖ್ಯೋಪಾಧ್ಯಾಯನು ಉತ್ತರ ಪ್ರದೇಶದ ರಾಮಪುರದವನು. ಇವನು ಮತಾಂಧನಾಗಿದ್ದನು. ಉತ್ತರ ಭಾರತದಿಂದ ಬಂದ ಮುಸ್ಲಿಂ ಅಧಿಕಾರಿಗಳು ಶ್ರೇಷ್ಠತಾಮನೋಭಾವವುಳ್ಳವರಾಗಿದ್ದು ಹಿಂದುಗಳನ್ನು ತುಚ್ಛವಾಗಿ ಕಾಣುತ್ತಿದ್ದರು; ಅಷ್ಟೇ ಏಕೆ, ಹೈದರಾಬಾದ್ ಮುಸ್ಲಿಮರನ್ನೂ ತಮಗಿಂತ ಕೀಳೆಂದು ಭಾವಿಸುತ್ತಿದ್ದರು. ಹೀಗೆಯೇ ಸಾವಿರಾರು ಪಠಾಣರೂ, ಅರಬ್ಬರೂ ಬಂದು ಹೈದರಾಬಾದ್ ರಾಜ್ಯದಲ್ಲಿ ಸೇರಿದ್ದರು. ಹೊರಗಿನಿಂದ ಮುಸ್ಲಿಮರನ್ನು ಕರೆಸಿಕೊಂಡು ಹೈದರಾಬಾದ್ ಮುಸ್ಲಿಂ ಬಹುಸಂಖ್ಯಾತ ರಾಜ್ಯವೆಂದು ಸಾಧಿಸುವುದು ನಿಜಾಮನ ಹಂಚಿಕೆಯಾಗಿತ್ತು.

ಈ ಶಾಲೆಯಲ್ಲಿ ಮುಸ್ಲಿಂ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿತ್ತು. ಸ್ವಾತಂತ್ರ್ಯ ಚಳವಳಿಯ ಯಾವದೇ ವಿಷಯದ ಬಗ್ಗೆ ಮಾತಾಡುವುದೂ ದೇಶದ್ರೋಹವೆನಿಸಿಕೊಳ್ಳುತ್ತಿತ್ತು. ಮುಖ್ಯೋಪಾಧ್ಯಾಯನು ದಿನಾಲು ರಜಾಕಾರರ ಚಟುವಟಿಕೆಗಳನ್ನು ಹಾಗು ರಜಾಕಾರ ಮುಂದಾಳುಗಳ ವಿಚಾರಗಳನ್ನು ಕರಿಹಲಗೆಯ ಮೇಲೆ ಬರೆದು ವಿದ್ಯಾರ್ಥಿಗಳಿಗೆಲ್ಲ ಕಾಣುವಂತೆ ಇರಿಸುತ್ತಿದ್ದನು. ಎಲ್ಲ ವಿದ್ಯಾರ್ಥಿಗಳೂ ಅದನ್ನು ಓದಲೇಬೇಕಾಗಿತ್ತು. ಇಂತಹ ವಾತಾವರಣದಲ್ಲಿ ಅಭ್ಯಾಸಮಾಡುವದು ದುಸ್ತರವಾಗಿತ್ತು.

1948ರ ಜುಲೈ ಹೊತ್ತಿಗೆ ರಾಜ್ಯದ ಪರಿಸ್ಥಿತಿ ವಿಕೋಪಕ್ಕೇರಿತು. ರಜಾಕಾರರು ಲೂಟಿ, ಖೂನಿ ಹಾಗೂ ಹೆಂಗಸರ ಮಾನಭಂಗ ಮಾಡುವುದು ಹೆಚ್ಚಾಯಿತು. ಸ್ವತಂತ್ರ ಭಾರತದಿಂದ ವೃತ್ತಪತ್ರಿಕೆಗಳನ್ನು ತರಿಸಿ ಓದುವದು ಗಂಡಾಂತರಕಾರಿ ಆಗಿತ್ತು. ರಾಜ್ಯದ ಹೊರಗಿನಿಂದ ಪತ್ರ ಬರುತ್ತಿದ್ದವರ ಮೇಲೆ ಹೆಚ್ಚು ನಿಗಾ ಇಟ್ಟಿದ್ದರು. ಅಂತೆಯೇ ನಮ್ಮ ಮೇಲೆ ಅವರು ಕಣ್ಣಿಟ್ಟಿದ್ದರು. ಹೈಸ್ಕೂಲ್ ಮುಖ್ಯೋಪಾಧ್ಯಾಯ ಮಿರ್ಜಾ ಮಹಮೂದ್ ಎಂಬುವನು ದಿನಾಲು ಭಾರತದ ನಾಯಕರನ್ನು ಅಖಂಡವಾಗಿ ಟೀಕಿಸುತ್ತಿದ್ದನು. ಹಿಂದೂಗಳ ಮೇಲೆ ಅಲ್ಪಸ್ವಲ್ಪ ದಯೆ ತೋರಿಸಿದ ಮುಸ್ಲಿಂ ಅಧಿಕಾರಿಗಳನ್ನು ರಜಾಕಾರರು 'ದೇಶದ್ರೋಹಿ' ಎಂದು ಕರೆಯುತ್ತಿದ್ದರು. ಇದರಿಂದ ಅಂಥವರು ಸುಮ್ಮನಿರುತ್ತಿದ್ದರು. ಒಟ್ಟಿನಲ್ಲಿ ನಿಜಾಮ್ ರಾಜ್ಯದ ರಕ್ಷಕರು ತಾವೇ ಎಂಬಂತೆ ರಜಾಕಾರರ ನಡವಳಿಕೆ ಇತ್ತು. 'ಮೀಜಾನ್' ಎಂಬ ಉರ್ದು ಪತ್ರಿಕೆ ರಜಾಕಾರರ ಮುಖಪತ್ರವಾಗಿತ್ತು. ರಜಾಕಾರರ ನಾಯಕ ಕಾಸಿಂ ರಜ್ವಿಯ ಭಾಷಣದ ವಿವರಗಳನ್ನು ಎಲ್ಲ ಮುಸ್ಲಿಮರೂ ಶ್ರದ್ಧೆಯಿಂದ ಓದುತ್ತಿದ್ದರು. 'ಇಮ್ರೋಜ' ಎಂಬ ಉರ್ದು ಪತ್ರಿಕೆಯ ವಿಚಾರಗಳನ್ನು ಮುಸ್ಲಿಮರು ಖಂಡಿಸುತ್ತಿದ್ದರು. ಅಲ್ಲದೆ, ಈ ಪತ್ರಿಕೆಯ ಸಂಪಾದಕ ಮಹಮ್ಮದ್ ಶೋಯಬ ಎಂಬುವನ ಕೈಗಳನ್ನು ರಜಾಕಾರರು ಕತ್ತರಿಸಿ ಕೊಂದಿದ್ದರು.

1948ರ ಆಗಸ್ಟನಿಂದ ಶಾಲೆಗೆ ಹೋಗುವುದೇ ದುಸ್ತರವಾಯಿತು. ಸಶಸ್ತ್ರ ರಜಾಕಾರರ ಹಾವಳಿಯಿಂದ ಜನರಿಗೆ ಪೇಟೆಯಲ್ಲಿ ತಿರುಗುವುದೇ ಅಸಾಧ್ಯವಾಯಿತು.

ರಜಾಕಾರರು ಹರಿಜನರನ್ನು ತಮ್ಮೆಡೆಗೆ ಸೇರಿಸಿಕೊಳ್ಳತೊಡಗಿದ್ದರು. ಅವರನ್ನು 'ಪಸ್ತ ಅಕ್ವಾಮ್' ಜನರೆಂದು ಸಂಬೋಧಿಸುತ್ತಿದ್ದರು. ಬಿ. ಎಸ್. ವೆಂಕಟರಾವ್ ಎಂಬ ಹರಿಜನ ಮುಖಂಡನು ನಿಜಾಮನ ಮಂತ್ರಿಯಾಗಿ ರಜಾಕಾರರಿಗೆ ಸಹಾಯಕನಾಗಿದ್ದನು.

ಈ ಸಮಯದಲ್ಲಿ ತಾಂಡೂರಿನಲ್ಲಿ ಒಂದು ಘಟನೆ ನಡೆಯಿತು. ಕಲಬುರ್ಗಿಯ ಖ್ವಾಜಾ ಬಂದೇ ನವಾಬನ ಉರ್ಸನ್ನು ಮುಗಿಸಿಕೊಂಡು ಹೈದರಾಬಾದ್‌ಗೆ ರೈಲ್ವೆ ಮುಖಾಂತರವಾಗಿ ಹೊರಟ ಯಾತ್ರಿಕರ ದೊಡ್ಡ ತಂಡವು ತಾಂಡೂರು ಸ್ಟೇಷನ್‌ನಲ್ಲಿ ಇಳಿಯಿತು. ಇದಕ್ಕೆ ಕಾರಣ ಭಾರತದ ಯುದ್ಧವಿಮಾನವೊಂದು ಅದರ ಮೇಲೆ ಹಾರುತ್ತಿದ್ದುದೇ ಆಗಿತ್ತು. ಗಾಡಿಯು ತಾಂಡೂರು ಸಮೀಪಿಸುತ್ತಿರುವಾಗ ಈ ವಿಮಾನದಿಂದ ಎಸೆದ ಬಾಂಬ್ ಸೇತುವೆಯ ಬಳಿ ಸ್ಫೋಟಗೊಂಡು ದೊಡ್ಡ ಗಾಳಿಯುಂಟಾಗಿತ್ತು. ಇದು ಯಾತ್ರಿಕರನ್ನು ಕಂಗಾಲಾಗಿ ಮಾಡಿತ್ತು. ಸ್ಟೇಷನ್ ನಮ್ಮ ಮನೆಗೆ ಸಮೀಪದಲ್ಲೇ ಇದ್ದುದರಿಂದ ನಾನು ಅಲ್ಲಿಗೆ ಹೊರಟೆ. ಈ ಸಮಯದಲ್ಲಿ ಸಂಜೆಗತ್ತಲ ಗಿತ್ತು. ನಿಜಾಮನ ಸೈನ್ಯದ ಒಂದು ಭಾಗವು ರೈಲ್ವೆ ನಿಲ್ದಾಣದ ಮೇಲೆ ಇದ್ದಿತು. ಪೋಲೀಸರು ಜಾಗೃತರಾಗಿದ್ದರು. ರಜಾಕಾರರು ಯಾತ್ರಿಕರನ್ನು ಸುರಕ್ಷಿತ ಸ್ಥಳಕ್ಕೆ ಕರೆದೊಯ್ಯುತ್ತಿದ್ದರು. ಮೊದಮೊದಲು ನಿಜಾಮನ ಸೈನಿಕರು ಈ ವಿಮಾನಗಳನ್ನು ತಮ್ಮವೇ ಎಂದು ತಪ್ಪು ತಿಳಿದಿದ್ದರು. ಆದರೆ ತಮ್ಮ ತಪ್ಪಿನ ಅರಿವಾದ ಕೂಡಲೇ ವಿಮಾನದ ವಿರುದ್ಧ ಮಷೀನ್ ಗನ್‌ನಿಂದ ಗುಂಡಿನ ಮಳೆಗರೆಯಲು ಪ್ರಾರಂಭಿಸಿದರು. ಗಾಬರಿಗೊಂಡಿದ್ದ ಯಾತ್ರಿಕರು, "ಯಾ ಅಲ್ಲಾ! ಯಾ ಖಾಜಾ! ಬಚಾವೋ" ಎಂದು ಗೋಳಿಡುತ್ತಿದ್ದರು. ಅನೇಕ ಹೆಂಗಸರೂ ಗಂಡಸರೂ ಸಿಕ್ಕಸಿಕ್ಕತ್ತ ಓಡುತ್ತಾ ಹೋಗಿ ಕೆಲವರು ರಸ್ತೆಯ ಬದಿಯಲ್ಲಿಯೇ ಇದ್ದ ನಮ್ಮ ಮನೆಗೆ ಆಶ್ರಯಕ್ಕಾಗಿ ನುಗ್ಗಿದರು. ಸುಮಾರು ಅರ್ಧಗಂಟೆಯ ನಂತರ ವಿಮಾನ ದಾಳಿ ನಿಂತಿತು. ಈ ಪ್ರವಾಸಿಗಳು ಮತ್ತೆ ರೈಲ್ವೆಯ ಮೂಲಕ ತಮ್ಮ ಪ್ರಯಾಣವನ್ನು ಮುಂದುವರಿಸಿದರು. ಈ ದಾಳಿಯ ವಿಶೇಷತೆ ಏನೆಂದರೆ ಯಾವುದೇ ಸಾರ್ವಜನಿಕ ಆಸ್ತಿಪಾಸ್ತಿಗಳ ಮೇಲೂ ಬಾಂಬ್‌ಗಳನ್ನು ಎಸೆಯದೆ ಬೇರೆ ಕಡೆ ಬಾಂಬ್‌ಗಳನ್ನೆಸೆದಿದ್ದರು.

ಈ ಘಟನೆಯ ಅನಂತರ ಭಯಾನಕ ವಾತಾವರಣ ಮೂಡಿತು. ರಜಾಕಾರರು ಯಾವದೋ ಗುಪ್ತ ಚಟುವಟಿಕೆಯ ಸಿದ್ಧತೆಯಲ್ಲಿ ತೊಡಗಿರುವಂತೆ ತೋರುತ್ತಿತ್ತು. ಸೆಪ್ಟೆಂಬರ್ 1948ರ ಎರಡನೆಯ ವಾರದೊಳಗಾಗಿ ಹಿಂದೂಗಳೆಲ್ಲರ ಕೊಲೆ ಮಾಡಿ ಮುಗಿಸುವ ರಹಸ್ಯ ಯೋಜನೆಯೊಂದು ಸಿದ್ಧವಾಗಿತ್ತು ಎಂದು ತಿಳಿಯಿತು. ತಾಂಡೂರಿನಲ್ಲಿ ನನಗೆ ತಿಳಿದ ಮಟ್ಟಿಗೆ ಯಾವುದೇ ಪ್ರಭಾವಶಾಲಿ ಹಿಂದೂ ಮುಖಂಡನಿರಲಿಲ್ಲ. ಹೆಚ್ಚಿನ ವಿದ್ಯಾವಂತರೂ ಇರಲಿಲ್ಲ. ರೈಲ್ವೆ ಗಾಡಿಗಳು ನಿಂತುಹೋಗಿದ್ದವು. ಮೋಟಾರ್‌ಗಳು ಹೆಚ್ಚಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಓಡಿ ಹೋಗುವುದಾದರೂ ಎಲ್ಲಿಗೆ? ಸ್ವತಂತ್ರ ಭಾರತದಿಂದ ಬರುತ್ತಿದ್ದ ಪತ್ರಿಕೆಗಳೂ ನಿಂತುಹೋಗಿದ್ದವು. ಹೈದರಾಬಾದ್‌ನಿಂದ ಹೊರಡುತ್ತಿದ್ದ ರಜಾಕಾರರ ವೃತ್ತಪತ್ರಿಕೆಗಳು ಸುಳ್ಳಿನ ಕಂತೆಯಾಗಿರುತ್ತಿದ್ದವು.

ಮುಸ್ಲಿಮರನ್ನು ಬಡಿದೆಬ್ಬಿಸಿ, ಹುರಿದುಂಬಿಸಿ, ಅವರನ್ನು ಹೋರಾಟಕ್ಕೆ ಸಿದ್ಧಗೊಳಿಸುವುದು ಅವುಗಳ ಕೆಲಸವಾಗಿತ್ತು. ಈ ಸಂದರ್ಭದಲ್ಲಿ ಭಾರತ ಸರ್ಕಾರ ಹೈದರಾಬಾದ್ ರಾಜ್ಯವನ್ನು ನಾಲ್ಕೂ ಕಡೆಗಳಿಂದ ಪೋಲಿಸ್ ಕಾರ್ಯಾಚರಣೆ ನಡೆಸಿ ಮುತ್ತಿತು. 1948ರ ಸೆಪ್ಟೆಂಬರ್ ಎರಡನೆಯ ವಾರದ ಹೊತ್ತಿಗೆ ರಜಾಕಾರರಿಗೂ ನಿಜಾಮನ ಸೈನ್ಯಕ್ಕೂ ಎಲ್ಲೆಡೆ ಸೋಲಾಗುತ್ತಿರುವ ಸಮಾಚಾರ ತಿಳಿಯಿತು.

ಇಷ್ಟರಲ್ಲಿ, ನನಗೆ ತಿಳಿದಮಟ್ಟಿಗೆ ಪ್ರತಿ ಮುಸಲ್ಮಾನನೂ ನಿರ್ದಿಷ್ಟ ಸಮಯಕ್ಕೆ ಸರಿಯಾಗಿ ಪೋಲಿಸ್ ಆದೇಶದ ಪ್ರಕಾರ ತನ್ನ ನೆರೆಯ ಹಿಂದೂಗಳನ್ನು ಕೊಲ್ಲಲು ಒಪ್ಪಿರುವನೆಂದು ತಿಳಿಯಿತು. ಇದರ ಸತ್ಯಾಂಶ ಏನೇ ಇರಲಿ, ಹಿಂದೂಗಳ ಮನೆಗೆ ನೆರೆಯ ಮುಸ್ಲಿಮರು ಭೇಟಿ ಕೊಡುವದು, ಅಸಂಬದ್ಧ ಪ್ರಶ್ನೆಗಳನ್ನು ಕೇಳಿ ಜಗಳ ಕೆರಳಿಸಲು ಯತ್ನಿಸುವದು ಹೆಚ್ಚಾಯಿತು. ನಮ್ಮ ಮನೆಗೆ ಬರುವವರಲ್ಲಿ ಕಾಸಿಂ ಅಲಿ ಎಂಬುವನಿದ್ದ. ಅವನು ಕೈಯಲ್ಲಿ ವರ್ತಮಾನಪತ್ರ ಹಿಡಿದುಕೊಂಡು ಬಂದು, ರಜಾಕಾರರ ಚಟುವಟಿಕೆಗಳನ್ನೂ, ಭಾರತದ ಸೈನ್ಯದ ಸೋಲನ್ನೂ ಕುರಿತು ವಿವರಿಸುತ್ತಿದ್ದನು. ಮಾತಿನಲ್ಲಿ ನಮ್ಮನ್ನು ರೇಗಿಸಿ ಪ್ರಸಂಗ ಬಂದರೆ ಹೊಡೆದಾಡುವ ವಿಚಾರ ಅವನದಿದ್ದಿತು. ಆದರೆ ನಾವು ಅದಕ್ಕೆ ಆಸ್ಪದವೀಯದೆ ರಾಜಕೀಯ ವಿಷಯಗಳನ್ನು ಚರ್ಚಿಸುವುದನ್ನೇ ತ್ಯಜಿಸಿದ್ದೆವು.

ಇದಾದ ಎರಡು ದಿನಗಳ ಅನಂತರ, ಬಹುಶಃ ಸೆಪ್ಟೆಂಬರ್ 12, 1948ರಂದು ಇರಬಹುದು, ನಮ್ಮ ಮನೆಯ ಪೋಲಿಸ್ ಸ್ಟೇಶನ್ ಎದುರಿಗೆ ಮಧ್ಯಾಹ್ನ ಸುಮಾರು ಮೂರು ಮೋಟರುಗಳು ತುಂಬ ಗಿಡದ ಟೊಂಗೆಗಳನ್ನು ಹೊದ್ದುಕೊಂಡು ಬಂದವು. ಇವುಗಳಲ್ಲಿ ಜಹೀರಾಬಾದ್ ಮಾರ್ಗವಾಗಿ ಹೈದರಾಬಾದ್‌ಗೆ ಹೊರಟ ಜೆ. ಎನ್. ಚೌಧರಿಯವರ ಸೈನ್ಯವನ್ನು ಎದುರಿಸಿ ಸೋತು ಗಾಯಗೊಂಡ ರಜಾಕಾರ ಹಾಗು ಸೈನಿಕ ತಂಡಗಳವರಿದ್ದರು. ಅವರ ಮುಖಗಳು ಗಂಭೀರವಾಗಿದ್ದವು.

ಅಂದೂ ರಾತ್ರಿ ಹನ್ನೆರಡರವರೆಗೆ ಕಾಸಿಂ ಅಲಿಯು ನಮ್ಮ ಮನೆಯಲ್ಲಿದ್ದನು. ಆತನು ಹೊರಟುಹೋದಮೇಲೆ ಕೆಲವು ವ್ಯಾನ್‌ಗಳು ಪೋಲಿಸ್ ಕಛೇರಿಯ ಎದುರು ಬಂದು ನಿಂತವು. ಕಿಟಕಿಯಿಂದ ನೋಡಿದಾಗ ನಿಜಾಮನ ಪೋಲಿಸರು, ಸೈನಿಕರು ಗಾಬರಿಯಿಂದ ಅಡ್ಡಾಡುತ್ತಿದ್ದರು.

ಮರುದಿನ ಬೆಳಗ್ಗೆ ನಿಜಾಮನು ಭಾರತ ಸೈನ್ಯಕ್ಕೆ ಶರಣಾಗತನಾಗಿದ್ದಾನೆಂದೂ, ಕಾಸಿಂ ರಜ್ವಿಯು ಬಂಧಿತನಾಗಿದ್ದಾನೆಂದೂ, ಜೆ. ಎನ್. ಚೌಧರಿಯು ಭಾರತ ಸರ್ಕಾರದ ಪರವಾಗಿ ಮಿಲಿಟರಿ ಗವರ್ನರ್ ಆಗಿ ನೇಮಿಸಲ್ಪಟ್ಟಿರುವರೆಂದೂ ತಿಳಿದು ಸಂತೋಷವಾಯಿತು. ಮರುದಿನ ನಾನು ಪೇಟೆಗೆ ಹೋದೆ. ರಜಾಕಾರರ ಕಛೇರಿ ಮುಚ್ಚಿತ್ತು; ಒಬ್ಬ ರಜಾಕಾರನೂ ಅಲ್ಲಿರಲಿಲ್ಲ. ಯಾವಾಗಲೂ ಕಬ್ಬಿಣದ ಟೊಪ್ಪಿಗೆ ಧರಿಸಿ ದರ್ಪದಿಂದ ತಿರುಗುತ್ತಿದ್ದವರು, ಅದೇ ರಾತ್ರಿ ತಮ್ಮ ಶಸ್ತ್ರಾಸ್ತ್ರಗಳನ್ನೂ ಕಬ್ಬಿಣದ

ಟೊಪ್ಪಿಗೆಗಳನ್ನೂ ಚೀಲಗಳಲ್ಲಿಟ್ಟು ಸಮೀಪದ ಕೆರೆಯಲ್ಲಿ ಒಗೆದಿದ್ದಾರೆಂದು ತಿಳಿಯಿತು. (ಮುಂದೆ ಇವುಗಳ ಶೋಧನಾಯಿತು.) ಇವರಂತೆಯೇ ಅರಬ್ಬರೂ, ಪಠಾಣರೂ ತಮ್ಮತಮ್ಮ ಶಸ್ತ್ರಗಳನ್ನು ಬಾವಿಗಳಲ್ಲಿ ಒಗೆದಿದ್ದರು ; ಕತ್ತಿ ಭರ್ಜಿಗಳನ್ನು ಹೂಳಿಟ್ಟಿದ್ದರು. (ಇವೂ ಮುಂದೆ ಹೊರಬಂದವು.) ಅನೇಕ ಮುಸಲ್ಮಾನರು ಜೋಲುಮುಖ ಹಾಕಿ ತಿರುಗಾಡುತ್ತಿದ್ದರು. ಅವರು ಶೇರಗೋಲಾ ರೂಮಿ (ಫೆಜ್) ಟೊಪ್ಪಿಗೆಗಳ ಸ್ಥಾನದಲ್ಲಿ ಗಾಂಧೀ ಟೊಪ್ಪಿಗೆಗಳನ್ನು ಧರಿಸಿದ್ದರು. ಶೇರ್‌ವಾನಿಯನ್ನು ತ್ಯಜಿಸಿದ್ದರು. ಅನೇಕರು ತಮ್ಮ ಎದೆಯ ಮೇಲೆ ರಾಷ್ಟ್ರಧ್ವಜವಾದ ತ್ರಿವರ್ಣಧ್ವಜದ ರಿಬ್ಬನ್ ಧರಿಸಿದ್ದರು. ಹಿಂದೂಗಳು ಕಂಡರೆ ಅವರನ್ನು 'ಜೈ ಹಿಂದ್' ಎಂದು ಸಂಬೋಧಿಸುತ್ತಿದ್ದರು. ಅನೇಕ ರಜಾಕಾರರು ತಮ್ಮ ಗಡ್ಡ ಬೋಳಿಸಿಕೊಂಡು ಗುರುತು ಸಿಗದಂತಾಗಿದ್ದರು. ಪಂಡಿತ್ ನೆಹ್ರೂ ಮುಂತಾದ ರಾಷ್ಟ್ರನಾಯಕರಿಗೆ ಜೈಕಾರ ಹಾಕುತ್ತಿದ್ದರು ! ಕೇವಲ ಒಂದೇ ರಾತ್ರಿಯಲ್ಲಿ ಅವರು ರಾಷ್ಟ್ರಪ್ರೇಮ, ಶಾಂತಪ್ರವೃತ್ತಿಗಳನ್ನು ಮೈಗೂಡಿಸಿಕೊಂಡಿದ್ದರಲ್ಲದೆ, ಈ ವಿಷಯಗಳಲ್ಲಿ ಹಿಂದೂಗಳನ್ನೂ ಹಿಂದೆ ಹಾಕಿದ್ದರು.

ಸ್ವಾತಂತ್ರ್ಯ ದೊರೆತ ನಾಲ್ಕೈದು ದಿನಗಳಲ್ಲಿ ಭಾರತದ ಸೈನ್ಯದ ಒಂದು ಭಾಗ ತಾಂಡೂರಿಗೆ ಬಂದಿತು. ಇವರನ್ನು ಸ್ವಾಗತಿಸಲು ಸ್ಟೇಶನ್ನಿಗೆ ಹೋಗಿದ್ದ ನಾಗರಿಕರೊಂದಿಗೆ ನಾನೂ ಇದ್ದೆ !

ಭಾರತ ಸೈನ್ಯಾಧಿಕಾರಿಗಳು, ಒಂದೆರಡು ದಿನಗಳನಂತರ, ಎಲ್ಲ ಶಸ್ತ್ರಾಸ್ತ್ರಗಳನ್ನೂ ತಮಗೆ ತಂದೊಪ್ಪಿಸಬೇಕೆಂದು ಆಜ್ಞೆ ಹೊರಡಿಸಿದರು. ಮೊದಲು ಇದಕ್ಕೆ ಯಾರೂ ಗಮನ ಕೊಡಲಿಲ್ಲ. ಆದರೆ ಸೈನಿಕರು ರಜಾಕಾರರ ಮನೆಗಳಲ್ಲಿ ಅಪಾರ ಶಸ್ತ್ರಾಸ್ತ್ರಗಳಿದ್ದುದನ್ನು ಪತ್ತೆಹಚ್ಚತೊಡಗಿದರು. ಇದರಿಂದಾಗಿ ಅನೇಕರು ತಾವೇ ತಮ್ಮ ಶಸ್ತ್ರ ಸಂಗ್ರಹವನ್ನು ಪೋಲಿಸ್ ಠಾಣೆಗೆ ಒಯ್ದರು. ಒಂದು ನಳಿಗೆಯ, ಜೋಡು ನಳಿಗೆಯ, ಅಗಲವಾದ ನಳಿಗೆಯ ಹೀಗೆ ನೂರಾರು ಸಂಖ್ಯೆಯಲ್ಲಿ ಬಂದೂಕುಗಳು ಬರತೊಡಗಿದವು. ಇಷ್ಟೇ ಅಲ್ಲದೆ, ಆಧುನಿಕ ಶಸ್ತ್ರಾಸ್ತ್ರಗಳೂ ಠಾಣೆಯ ವಶಕ್ಕೆ ಹೋದವು. ನಾನಾ ಪ್ರಕಾರದ ಕತ್ತಿಗಳೂ ಢಾಲುಗಳೂ ಭರ್ಜಿಗಳೂ ಚೂರಿಗಳೂ ಸಾವಿರಾರು ಸಂಖ್ಯೆಯಲ್ಲಿ ರಜಾಕಾರರ ಕಡೆಯಿಂದ ಬರತೊಡಗಿದವು. ಕೆಲವೊಮ್ಮೆ, ಸುತ್ತಲಿನ ಹಳ್ಳಿಗಳಿಂದ ಚಕ್ಕಡಿ ತುಂಬ ಈ ಬಗೆಯ ಶಸ್ತ್ರಾಸ್ತ್ರಗಳನ್ನು ತಂದು ಒಪ್ಪಿಸಲಾಗುತ್ತಿತ್ತು !

**ಪ್ರೊ|| ವಿ. ಎಸ್. ಕುಲಕರ್ಣಿ**

(ಪ್ರಿನ್ಸಿಪಾಲ್, ಜೂನಿಯರ್ ಕಾಲೇಜು, ಹುಮ್ನಾಬಾದ)

ಕ್ರಿ.ಸಂ. 1

# ಕಾಂಗ್ರೆಸ್ ಮತ್ತು ಸಂಸ್ಥಾನೀ ಪ್ರಜೆಗಳ ಹೋರಾಟ

1885ರಲ್ಲಿ ಕಾಂಗ್ರೆಸ್ಸು ಸ್ಥಾಪನೆಯಾದಾಗಿನಿಂದಲೇ ಅದರ ಅಧಿವೇಶನಗಳಿಗೆ ಸಂಸ್ಥಾನೀ ಪ್ರಜೆಗಳನೇಕರು ಹೋಗುತ್ತಿದ್ದು, ಅಂದಿನ ಆರಂಭದ ದಿನಗಳಲ್ಲೇ ಈಗ ಮಹಾರಾಷ್ಟ್ರದಲ್ಲಿರುವ ಈಚಲಕರಂಜಿಯಲ್ಲಿ (ಸಂಸ್ಥಾನ) ದಕ್ಷಿಣ ಸಂಸ್ಥಾನಗಳಿಗಾಗಿಯೇ ಒಂದು ಕಾಂಗ್ರೆಸ್ ಕಮಿಟಿಯನ್ನು ಸ್ಥಾಪಿಸಲಾಗಿತ್ತು. ಮುಂದೆ ಪ್ರಾಂತೀಯ ಕಮಿಟಿಗಳ ಸ್ಥಾಪನೆ ಆದಾಗ ಸಂಸ್ಥಾನಗಳಲ್ಲಿಯೂ ತಾಲ್ಲೂಕು ಮತ್ತು ಶಹರ ಕಮಿಟಿಗಳಾದವು. ಆದರೆ ಈ ಕಮಿಟಿಗಳು ಹರಿಜನೋದ್ಧಾರ, ಖಾದಿ ಕಾರ್ಯ ಮುಂತಾದ ರಚನಾತ್ಮಕ ಚಟುವಟಿಕೆಗಳನ್ನಷ್ಟೇ ಮಾಡುತ್ತಿದ್ದುವಲ್ಲದೆ ರಾಜಕೀಯ ಚಟುವಟಿಕೆಗಳನ್ನು ನಡೆಸುತ್ತಿರಲಿಲ್ಲ. ಕಾಂಗ್ರೆಸ್‌ನ ಘಟನೆಯಲ್ಲಿ ಸಂಸ್ಥಾನಗಳ ಸಮಸ್ಯೆಗಳಲ್ಲಿ ಕಾಂಗ್ರೆಸ್ ಪ್ರವೇಶಿಸಬಾರದು, ಎಂದಿತ್ತು. ಅಪರೂಪಕ್ಕೊಮ್ಮೆ ಕಾಂಗ್ರೆಸ್‌ನ ಅಧಿವೇಶನಗಳಲ್ಲಿ ಸಂಸ್ಥಾನೀ ಪ್ರಜೆಗಳ ವಿಚಾರ ಗೊತ್ತುವಳಿ ಆಗುತ್ತಿದ್ದವು. ಕಾಂಗ್ರೆಸ್ಸಿನ ಒಂಬತ್ತನೆಯ ಅಧಿವೇಶನದ ಅಧ್ಯಕ್ಷ ಜಿ. ಸುಬ್ರಹ್ಮಣ್ಯ ಅಯ್ಯರ್ ತಮ್ಮ ಭಾಷಣದಲ್ಲಿ "ಕೆಲವು ಸಂಸ್ಥಾನಿಕರ ದುರಾಡಳಿತದ ಬಗ್ಗೆ ಕಾಂಗ್ರೆಸ್ಸು ಏನನ್ನೂ ಮಾಡುತ್ತಿಲ್ಲವೆಂಬ ಭಾವನೆ ಬೆಳೆದಿದೆ" ಎಂದಿದ್ದರು. ಆದರೆ 1894ರ ಕಾಂಗ್ರೆಸ್ಸಿನಲ್ಲಿ ಮೈಸೂರು ಮಹಾರಾಜರ ನಿಧನದ ಬಗ್ಗೆ ಸಂತಾಪಸೂಚಕ ಗೊತ್ತುವಳಿ ಆಗಿತ್ತು. ರೆಸಿಡೆಂಟರ ಆಡಳಿತ ಇದ್ದ ಸಂಸ್ಥಾನಗಳಲ್ಲಿ ವೃತ್ತಪತ್ರಿಕೆಗಳ ಮೇಲೆ ಹೇರಿದ ನಿರ್ಬಂಧಗಳನ್ನು ಖಂಡಿಸುವ ಗೊತ್ತುವಳಿ 1896ರಲ್ಲಿ ಪಾಸಾಗಿತ್ತು "ದುರಾಡಳಿತ ಇಲ್ಲವೆ ದುರ್ನಡತೆಯ ಆಪಾದನೆಯ ಬಗ್ಗೆ ಯೋಗ್ಯ ಟ್ರಿಬ್ಯುನಲ್ ಮುಂದೆ ವಿಚಾರಣೆ ನಡೆಸಿ ಆಪಾದನೆ ಸಿದ್ಧ ಆಗದ ವಿನಾ ಯಾವುದೇ ಸಂಸ್ಥಾನಿಕರನ್ನು ಪದಚ್ಯುತಗೊಳಿಸಬಾರದು" ಎಂಬಾಶಯದ ಗೊತ್ತುವಳಿಗಳು 12ನೆಯ, 13ನೆಯ ಮತ್ತು 14ನೆಯ ಕಾಂಗ್ರೆಸ್ ಅಧಿವೇಶನಗಳಲ್ಲಿ ಪಾಸಾಗಿದ್ದವು. ಸಂಸ್ಥಾನಿಕರನ್ನು ಸೈನ್ಯದಲ್ಲಿ ಕಮಿಶನ್ಡ್ ಅಧಿಕಾರಿಗಳನ್ನಾಗಿ ಮಾಡುವ ಧೋರಣೆಯ ಬಗ್ಗೆ ಸರಕಾರವನ್ನು ಅಭಿನಂದಿಸುವ ಗೊತ್ತುವಳಿ 17ನೆಯ ಅಧಿವೇಶನದಲ್ಲಿ ಮಂಜೂರಾಗಿತ್ತು. ಆದರೆ ಸಂಸ್ಥಾನೀ ಪ್ರಜೆಗಳ ಸಮಸ್ಯೆಗಳ ಬಗ್ಗೆ 1920ರ ವರೆಗೆ ಒಂದೂ ಗೊತ್ತುವಳಿ ಕಾಂಗ್ರೆಸ್ಸಿನಲ್ಲಿ ಆಗಲಿಲ್ಲ. ಸಂಸ್ಥಾನಿಕರ ವಿರುದ್ಧವಾದ ಸರಕಾರದ ನೀತಿಯನ್ನು ಖಂಡಿಸಲಿಕ್ಕಷ್ಟೇ ಈ ಗೊತ್ತುವಳಿಗಳು ಬರುತ್ತಿದ್ದವು.

1919ರ ಮಾಂಟ್‌ಫರ್ಡ್ ಸುಧಾರಣೆಗಳಲ್ಲಿ, ಭಾರತದ (ಬ್ರಿಟಿಷ್) ಪ್ರಾಂತಗಳ ಹಾಗೂ ದೇಶೀಯ ಸಂಸ್ಥಾನಗಳ ಒಂದು ಸಂಯುಕ್ತ ವ್ಯವಸ್ಥೆ ಇಂದಲ್ಲ ನಾಳೆ ಅಸ್ತಿತ್ವಕ್ಕೆ

ಬರುವುದು ಕ್ರಮಪ್ರಾಪ್ತವೆಂದು ಹೇಳಲಾಗಿತ್ತು. ಇದರಿಂದ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆ ಆಗಬೇಕೆಂಬ ಗೊತ್ತುವಳಿ 1920ರ ನಾಗಪುರ ಕಾಂಗ್ರೆಸ್ಸಿನಲ್ಲಿ ಮೊದಲ ಬಾರಿ ಪಾಸಾಯಿತು. ಬಂಧಿತರಾದ ಅಧಿಕಾರಿಗಳನ್ನು ಬಿಡುಗಡೆ ಮಾಡಬೇಕೆಂಬ ಗೌಹಾತಿ ಕಾಂಗ್ರೆಸ್ಸಿನಲ್ಲಿ ಬಂದ ಗೊತ್ತುವಳಿಯು ಸಂಬಂಧವಾಗಿ ಬಿಸಿಬಿಸಿ ಚರ್ಚೆಯಾಗಿ ಭೀಕರ ಸಮಸ್ಯೆ ಬಗೆಹರಿಯಬೇಕಾದರೆ ಪದಚ್ಯುತ ನಾಭಾ ಸಂಸ್ಥಾನಿಕರನ್ನು ಮತ್ತೆ ಅಧಿಕಾರಕ್ಕೆ ತರಬೇಕೆಂಬ ಉಪಸೂಚನೆಯೊಂದಿಗೆ ಗೊತ್ತುವಳಿ ಪಾಸಾಯಿತು. ಆದರೆ ಗಾಂಧೀಜಿ ಮತ್ತು ಮೋತಿಲಾಲರು ಈ ಕಾಲಕ್ಕೆ ಹಾಜರಿರದ್ದರಿಂದ, ನಂತರ ಗಾಂಧೀಜಿ ಈ ಬಗ್ಗೆ ತೀವ್ರ ಆಕ್ಷೇಪವೆತ್ತಿದ್ದರು. ಕಡೆಗೆ ನಾಭಾ ಸಂಸ್ಥಾನಿಕರ ಬಗ್ಗೆ ಇದ್ದ ಉಲ್ಲೇಖವನ್ನು ಬಿಟ್ಟುಕೊಡುವ ಗೊತ್ತುವಳಿಯನ್ನು ತಿರುಗಿ ಪಾಸು ಮಾಡಲಾಯಿತು. ನಾಭಾ ಪ್ರಶ್ನೆಯನ್ನು ಕೂಲಂಕಷ ಪರಿಶೀಲನೆಗೆ ಕಾಂಗ್ರೆಸ್ ವರ್ಕಿಂಗ್ ಕಮಿಟಿಗೆ ಒಪ್ಪಿಸಲಾಯಿತು. ಆದರೆ ಅಧಿವೇಶನಾಧ್ಯಕ್ಷರು ತಮ್ಮ ಭಾಷಣದಲ್ಲಿ ಸಂಸ್ಥಾನೀ ಪ್ರಜೆಗಳ ಸಮಸ್ಯೆಗಳನ್ನು ಕಾಂಗ್ರೆಸ್ಸು ಎತ್ತಿಕೊಳ್ಳುವ ಬಗ್ಗೆ ಒತ್ತಿಹೇಳಿದರು.

ಸಂಸ್ಥಾನಗಳ ಬಗ್ಗೆ ಕಾಂಗ್ರೆಸ್ಸು ತಾಳಿದ ನಿರ್ಲಿಪ್ತ ಧೋರಣೆಯನ್ನು ಗಮನಿಸಿ, ಸಂಸ್ಥಾನಗಳ ಚಳವಳಿಯ ಆದ್ಯಪ್ರವರ್ತಕ ನ. ಚಿ. ಕೇಳಕರ ಹಾಗೂ ಗಣಪತರಾವ್ ಅಭ್ಯಂಕರ (ಸಾಂಗ್ಲಿ) ಹಾಗೂ ವಾಮನರಾವ್ ಪಟವರ್ಧನ್ (ಸಾಂಗ್ಲಿ) ಇವರು ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತನ್ನು ಸ್ಥಾಪಿಸಿ 5-3-1922ರಂದು ಮುಂಬೈಯಲ್ಲಿ ಬ್ಯಾ|| ಶುಕ್ಲ (ರಾಜಕೋಟೆ) ಇವರ ಅಧ್ಯಕ್ಷತೆಯಲ್ಲಿ ಪ್ರಮುಖ ಕಾರ್ಯಕರ್ತರ ಸಭೆ ಕರೆದು ಒಂದು ತಾತ್ಕಾಲಿಕ ಸಮಿತಿ ಸ್ಥಾಪಿಸಿದರು. ಕೊನೆಗೆ 1927ರ ಡಿ. 27 ಹಾಗೂ 28ಕ್ಕೆ ಎಲೋರಾದ ದಿ|| ಬ|| ಎಂ. ರಾಮಚಂದ್ರರಾವ್ ಇವರ ಅಧ್ಯಕ್ಷತೆಯಲ್ಲಿ ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತಿನ ಪ್ರಥಮಾಧಿವೇಶನ ಸೇರಿತು. ಈ ಅಧಿವೇಶನವು ಕಳುಹಿಸಿದ್ದ ಒಂದು ಶಿಷ್ಟಮಂಡಳವು ಮದ್ರಾಸ್‌ನಲ್ಲಿ ಆ ವರ್ಷ ನಡೆದ ಕಾಂಗ್ರೆಸ್ಸಿನಲ್ಲಿ ಮುಖಂಡರನ್ನು ಭೇಟಿಯಾಗಿ ಒತ್ತಡ ಹಾಕಿದ್ದರಿಂದ, "ಸಂಸ್ಥಾನಿಕರು ತಮ್ಮ ಸಂಸ್ಥಾನಗಳಲ್ಲಿ ಪ್ರಾತಿನಿಧಿಕ ಸಂಸ್ಥೆಗಳನ್ನು ಸ್ಥಾಪಿಸಿ ಜವಾಬ್ದಾರಿ ರಾಜ್ಯಪದ್ಧತಿ ಆರಂಭಿಸಬೇಕು ಎಂಬ ಗೊತ್ತುವಳಿ ಆಯಿತು. ಮುಂದೆ ಕಾಂಗ್ರೆಸ್ ಅಧಿವೇಶನಗಳ ಕಾಲಕ್ಕೇ ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತಿನ ಅಧಿವೇಶನಗಳೂ ನಡೆದವು. 1928ರ ಕಲ್ಕತ್ತಾ ಕಾಂಗ್ರೆಸ್ಸಿನಲ್ಲಿ, ಸಂಸ್ಥಾನಗಳ ಅಂತರ್ಗತ ವಿಷಯಗಳನ್ನು ಚರ್ಚಿಸಬಾರದೆಂಬ ಪ್ರತಿಬಂಧವನ್ನು ತೆಗೆದುಹಾಕಲಾಯಿತು; ಸಂಸ್ಥಾನೀ ಪ್ರಜೆಗಳ ಹೋರಾಟಕ್ಕೆ ಸಂಪೂರ್ಣ ಬೆಂಬಲ


ಗಣಪತರಾವ್ ಅಭ್ಯಂಕರ

ನೀಡಬೇಕೆಂದು ನಿರ್ಣಯಿಸಿತು. ನೆಹರೂ ರಿಪೋರ್ಟ್‌ನ ತಯಾರಿಯ ಹಿನ್ನೆಲೆಯೇ ಇದಕ್ಕೆ ಕಾರಣ. ಜವಾಬ್ದಾರಿ ಸರ್ಕಾರ ಸ್ಥಾಪನೆ, ಸಂಸ್ಥಾನೀ ಪ್ರಜೆಗಳ ವಿವಿಧ ಸ್ವಾತಂತ್ರ್ಯಗಳ ರಕ್ಷಣೆಗೆ ತಕ್ಷಣ ಕ್ರಮಕೈಕೊಳ್ಳಬೇಕೆಂಬ ಒತ್ತಾಯದ ಆಶಯವುಳ್ಳ ಠರಾವಾಯಿತು. ಸಂಸ್ಥಾನೀ ಪ್ರಜೆಗಳಿಗೆ ಜವಾಬ್ದಾರಿ ಸರಕಾರ ಒದಗಿಸಿಕೊಡುವ ಹೋರಾಟದಲ್ಲಿ ಕಾಂಗ್ರೆಸ್ಸಿನ ಸಹಾನುಭೂತಿ ಇದೆಯೆಂದು ಅಧ್ಯಕ್ಷ ಸತ್ಯಮೂರ್ತಿಯವರು ತಮ್ಮ ಭಾಷಣದಲ್ಲಿ ಹೇಳಿದರು. ಮುಂದೆ 1929ರ ಲಾಹೋರ ಕಾಂಗ್ರೆಸ್ಸಿನಲ್ಲಿ, "ಸಂಸ್ಥಾನಿಕರು ತಮ್ಮ ಸಂಸ್ಥಾನಗಳಲ್ಲಿ ಜವಾಬದಾರೀ ಸರಕಾರ ಸ್ಥಾಪಿಸುವ ಕಾಲ ಸನ್ನಿಹಿತವಾಗಿದೆ. ಸಂಸ್ಥಾನೀ ಪ್ರಜರಿಗೆ ಭಾಷಣಮಾಡುವ, ಸಭೆ ನಡೆಸುವ ಹಾಗೂ ನಾಗರಿಕ ಸ್ವಾತಂತ್ರ್ಯ ನೀಡುವ ಘೋಷಣೆಗಳನ್ನು ಸಂಸ್ಥಾನಿಕರು ಹೊರಡಿಸಬೇಕು" ಎಂಬರ್ಥದ ಗೊತ್ತುವಳಿ ಮಂಜೂರಾಯಿತು.

ದುಂಡುಮೇಜಿನ ಪರಿಷತ್ತಿನಲ್ಲಿ ಸಂಸ್ಥಾನೀ ಪ್ರಜೆಗಳ ಸಮಸ್ಯೆ ಚರ್ಚಿತವಾಗುವಂತೆ ಕಾಂಗ್ರೆಸ್ ಯತ್ನಿಸಬೇಕೆಂದು ಗಾಂಧೀಜಿಯವರನ್ನು ಕೆಲ ಪ್ರಮುಖರು (ಸತ್ಯಮೂರ್ತಿ, ಕೆ. ಟಿ. ಭಾಷ್ಯಂ, ಮುಂ.) ಭೇಟಿಯಾಗಿ ಕರಾಚಿ ಕಾಂಗ್ರೆಸ್‌ನ ಕಾಲಕ್ಕೆ ಕೇಳಿಕೊಂಡರು. ಕಾಂಗ್ರೆಸ್ಸಿನ ಬೇಡಿಕೆಗಳಿಗೆ ಅಡ್ಡವಾಗಿರುವ ಜಾತೀಯ ಹೊಂದಾಣಿಕೆಯಂಥ ಸಮಸ್ಯೆಗಳನ್ನು ಮೊದಲು ಬಗೆಹರಿಸಬೇಕು, ಸಂಸ್ಥಾನಿಕರನ್ನು ಮನವೊಲಿಸುವ ಕಾರ್ಯ ಮುಂದೆ ಆಗಬಹುದು, ಏಕಕಾಲದಲ್ಲಿ ಅನೇಕ ಜಟಿಲ ಸಮಸ್ಯೆಗಳನ್ನು ಎಬ್ಬಿಸಿದ್ದರಿಂದ ಗೊಂದಲವುಂಟಾಗಿ ಯಾವ ಸಮಸ್ಯೆಯ ಪರಿಹಾರವೂ ಆಗದೆ ಸ್ವರಾಜ್ಯ ದೂರ ಹೋಗಬಹುದು, ಎಂದು ಈ ಬಗ್ಗೆ ಗಾಂಧೀಜಿ ಅಭಿಪ್ರಾಯಪಟ್ಟರು. ದುಂಡುಮೇಜಿನ ಪರಿಷತ್ತಿಗೆ ಗಾಂಧೀಜಿಯ ಅನುಮತಿಯಂತೆ ಇಬ್ಬರು ಸಂಸ್ಥಾನಿಕ ಪ್ರಜೆಗಳು ಹೋಗಿದ್ದರಾದರೂ, ಇವರ ಈ ಶಿಷ್ಟಮಂಡಳ ಅಲ್ಲಿ ಏನನ್ನೂ ಮಾಡದಾಯಿತು.

1934ರಲ್ಲಿ ರಾಂಚಿಯಲ್ಲಿ ಸ್ವರಾಜ್ಯ ಪಕ್ಷದ ಸಭೆ ಸೇರಿದಾಗ ಮತ್ತೆ ತಮ್ಮ ಬೇಡಿಕೆಗಳ ಬಗ್ಗೆ ಸಂಸ್ಥಾನೀ ಪ್ರಜಾಪರಿಷತ್ತು ಕಾಂಗ್ರೆಸ್ಸಿನ ಗಮನ ಸೆಳೆಯಲು ಯತ್ನಿಸಿತು. ಇದರಿಂದ ಸಂಸ್ಥಾನೀ ಜನರ ಒಂದು ಶಿಷ್ಟಮಂಡಳ ನ. ಚಿ. ಕೇಳಕರರ ನೇತೃತ್ವದಲ್ಲಿ ಕಾಂಗ್ರೆಸ್ ಕಾರ್ಯಸಮಿತಿಯನ್ನು ಭೇಟಿಮಾಡುವಂತಾಯಿತು. "ಸಂಸ್ಥಾನೀ ಪ್ರಜೆಗಳಲ್ಲಿ ಸಾಕಷ್ಟು ಸಂಘಟನೆ ಹಾಗೂ ಕ್ಷಮತೆ ಇರದ್ದರಿಂದ ಸಂಸ್ಥಾನೀ ಪ್ರಜಾಜನರ ಸಮಸ್ಯೆಗಳನ್ನು ಕಾಂಗ್ರೆಸ್ಸಿನ ಕಾರ್ಯಕ್ರಮದಲ್ಲಿ ಸೇರಿಸಿಕೊಳ್ಳಲು ನನಗೆ ಇಷ್ಟವಿಲ್ಲ" ಎಂದು ಚರ್ಚೆಯನಂತರ ಗಾಂಧೀಜಿ ಹೇಳಿದರು. ಈ ಬಗ್ಗೆ ಮುಂದೆ ಜುಲೈ 1934ರಲ್ಲಿ ನ. ಚಿ. ಕೇಳಕರರಿಗೆ ಬರೆದ ಪತ್ರದಲ್ಲಿ ಸಂಸ್ಥಾನಗಳ ಸಮಸ್ಯೆಗಳನ್ನು ಎತ್ತಿಕೊಳ್ಳುವ ವಿಚಾರವಲ್ಲಿ ಕಾಂಗ್ರೆಸ್ಸಿನ ಅಸಹಾಯಕತೆಯನ್ನು ಗಾಂಧೀಜಿ ಸ್ಪಷ್ಟೀಕರಿಸಿದ್ದರು. ಈ ಬಗ್ಗೆ ಗಾಂಧೀಜಿ ಎತ್ತಿದ ಕೆಲವೊಂದು ಅಂಶಗಳು ಸರಿಯಾದುವಲ್ಲವೆಂದು ಈ ಬಗ್ಗೆ ಅ.ಭಾ. ಪ್ರಜಾಪರಿಷತ್ತಿನ ಕಾರ್ಯಕಾರಿ ಮಂಡಳವು ಠರಾವು ಮಾಡಿತು. ಸಂಸ್ಥಾನೀ

ಪ್ರಜೆಗಳ ಚಳವಳಿಗಳಿಗೆ ಬೆಂಬಲನೀಡುವುದು ಕಾಂಗ್ರೆಸ್ಸಿನ ಕರ್ತವ್ಯವೆಂದು ಠರಾವು ಒತ್ತಿ ಹೇಳಿತು. ಮುಂದೆ 1934ರ ಅಕ್ಟೋಬರ್‌ನಲ್ಲಿ, ಸಂಸ್ಥಾನೀ ಪ್ರಜೆಗಳ ಬೇಡಿಕೆಗಳ ಬಗ್ಗೆ ಜನಾಭಿಪ್ರಾಯ ರೂಪಿಸಲು 'ಸಂಸ್ಥಾನೀ ಪ್ರಜಾ ಸಪ್ತಾಹ'ವನ್ನು ಆಚರಿಸಲಾಯಿತಲ್ಲದೆ ಸಂಸ್ಥಾನೀ ಪ್ರಜೆಗಳ ಬೇಡಿಕೆಗಳನ್ನು ಸಾವಿರಾರು ಪ್ರಜೆಗಳ ಸಹಿ ಪಡೆದು ಕಾಂಗ್ರೆಸ್‌ನ ಅಧ್ಯಕ್ಷ ರಾಜೇಂದ್ರ ಪ್ರಸಾದರಿಗೆ ಕಳುಹಿಸಲಾಯಿತು. ಆ ವರ್ಷ ನಡೆಯುವ ಕಾಂಗ್ರೆಸ್ ಅಧಿವೇಶನದಲ್ಲಿ ಈ ಬಗ್ಗೆ ಚರ್ಚೆ ನಡೆಸಲಾಗುವುದೆಂದು ಗಾಂಧೀಜಿ ಹೇಳಿದ್ದರು. ಈ ಬಗ್ಗೆ ಮಹಾರಾಷ್ಟ್ರ ಹಾಗೂ ಕರ್ನಾಟಕ ಪಿ.ಸಿ.ಸಿ.ಗಳೂ ಗೊತ್ತುವಳಿಗಳನ್ನು ಮಂಜೂರು ಮಾಡಿದ್ದವು. ಆದರೆ 1934ರ ಮುಂಬೈ ಕಾಂಗ್ರೆಸ್ಸಿನಲ್ಲಿ ಸಂಸ್ಥಾನಗಳ ಜನರಿಗೆ ಅಪೇಕ್ಷಿತವಾದ ಏನೂ ನಡೆಯಲಿಲ್ಲ. ಮುಂದೆ ಈ ಬಗ್ಗೆ ವರ್ಧಾದಲ್ಲಿ ಜುಲೈ 29ಕ್ಕೆ (1935) ನಡೆದ ಕಾಂಗ್ರೆಸ್ ಕಾರ್ಯಸಮಿತಿಗೆ ಕಳುಹಿಸಿದ್ದ ಈ ಬಗೆಗಿನ ಗೊತ್ತುವಳಿಯೂ ಅಲ್ಲಿ ಚರ್ಚಿತವಾಗಲಿಲ್ಲ. ಅಧ್ಯಕ್ಷ ರಾಜೇಂದ್ರ ಪ್ರಸಾದರು ಒಂದು ಹೇಳಿಕೆ ನೀಡಿ, ಸಂಸ್ಥಾನೀ ಪ್ರಜೆಗಳ ನ್ಯಾಯಬದ್ಧ ಹಾಗೂ ಶಾಂತಿಯುತ ಚಳವಳಿಗೆ ಬೆಂಬಲ ನೀಡುವ ಕಲ್ಕತ್ತಾ ಕಾಂಗ್ರೆಸ್ಸಿನ ಗೊತ್ತುವಳಿಯ ಪುನರುಚ್ಚಾರ ಮಾಡಿದರು.

ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತಿನ ಕಾರ್ಯಸಮಿತಿಯು 11-8-1935ರಲ್ಲಿ ಸಭೆಸೇರಿ, ಸಂಸ್ಥಾನಗಳಲ್ಲಿ ಕಾಂಗ್ರೆಸ್ಸು ರಾಜಕೀಯ ಚಟುವಟಿಕೆಗಳನ್ನು ಕೈಕೊಳ್ಳಬೇಕು, ಭಾರತಕ್ಕೆ ಸಂವಿಧಾನ ರಚಿಸುವ ಪ್ರಶ್ನೆ ಬಂದಾಗ ಘಟನಾ ಸಮಿತಿಯನ್ನು ರಚಿಸುವುದಾದಲ್ಲಿ ಬ್ರಿಟಿಷ್ ಭಾರತದ ಪ್ರಜೆಗಳಂತೆಯೇ ಸಂಸ್ಥಾನೀ ಪ್ರಜೆಗಳಿಗೂ ಪ್ರಾತಿನಿಧ್ಯವಿರಬೇಕು, ಎಂದು ಮುಂತಾಗಿ ಠರಾವು ಮಾಡಿತು.

ಸ್ವತಂತ್ರ ಸಂಘಟನೆಯಾದ ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತಿಗೆ ದೇಶದಲ್ಲಿ ಕಾಂಗ್ರೆಸ್ಸಿನ ತರುವಾಯ ಮಹತ್ವ ಬರುವಂತೆ ಮಾಡಿದ ಶ್ರೇಯ ಗಣಪತರಾವ್ ಅಭ್ಯಂಕರ, ಮಣಿಶಂಕರ ತ್ರಿವೇದಿ, ದಿ|| ಬ|| ರಾಮಚಂದ್ರರಾವ್ ಹಾಗೂ ಡಾ|| ಪಟ್ಟಾಭಿ ಸೀತಾರಾಮಯ್ಯ ಇವರುಗಳಿಗೆ ಸಲ್ಲುತ್ತದೆ. ಸಂಸ್ಥಾನೀ ಪ್ರಜೆಗಳಲ್ಲಿ ಜಾಗೃತಿ, ಕಾಂಗ್ರೆಸ್ಸಿನ ಧೋರಣೆಯ ಪರಿವರ್ತನೆ ಹೀಗೆ ಎರಡೂ ವಿಷಯಗಳ ಪ್ರಗತಿಗೆ ಇವರು ದುಡಿದರು. 1927ರಿಂದ 1930ರ ವರೆಗೆ ರಾಮಚಂದ್ರರಾವ್ ಈ ಪರಿಷತ್ತಿನ ಅಧ್ಯಕ್ಷರಾಗಿದ್ದು 1936ರಲ್ಲಿ ಡಾ|| ಪಟ್ಟಾಭಿ ಸೀತಾರಾಮಯ್ಯ ಅದರ ಅಧ್ಯಕ್ಷರಾಗಿ ಅದರಲ್ಲಿ ಹೊಸ ಚೈತನ್ಯ ತುಂಬುವಲ್ಲಿ ಯಶಸ್ವಿಯಾದರು. ಗಣಪತರಾವ್ ಅಭ್ಯಂಕರರು 4-4-1935ರಲ್ಲೂ ರಾಮಚಂದ್ರರಾವ್ 22-2-1936ರಲ್ಲೂ ತೀರಿಕೊಂಡರು. ಮಣಿಲಾಲ್ ಕೋಠಾರಿ ಹಾಗೂ ಮಣಿಶಂಕರ ತ್ರಿವೇದಿ ಇದೇ ಕಾಲಕ್ಕೆ ನಿಧನರಾದರು. ಅಮೃತಲಾಲ್ ಶೇಠ ರಾಜಕೀಯ ಸಂನ್ಯಾಸ ಸ್ವೀಕರಿಸಿದರು. ಇಂಥ ಪರಿಸ್ಥಿತಿಯಲ್ಲಿ ಪಟ್ಟಾಭಿಯವರಂಥ ನಾಯಕರು ದೊರೆತುದು ಪರಿಷತ್ತಿನ ಭಾಗ್ಯ. ರಾಜಸ್ಥಾನದ

ಗೋಕುಳಭಾಯಿ ಭಟ್ಟ ಹಾಗೂ ಜಯನಾರಾಯಣ ವ್ಯಾಸ, ಸೌರಾಷ್ಟ್ರದ ಬಳವಂತರಾಯ ಮೆಹತಾ, ಮಿರಜೆಯ ಬಾಳಕೃಷ್ಣ ಪಂತ ಶಿಖರೆ, ಹೈದರಾಬಾದ್‌ನ ಸ್ವಾಮಿ ರಮಾನಂದ ತೀರ್ಥ ಹಾಗೂ ಮೈಸೂರಿನ ಕೆ. ಟಿ ಭಾಷ್ಯಂ ಮುಂತಾದ ನಾಯಕರ ನೆರವೂ ಅವರಿಗೆ ಸಿಕ್ಕಿತು. ಪಟ್ಟಾಭಿಯವರ ಯತ್ನದಿಂದ ಗಾಂಧೀಜಿ ಹಾಗೂ ಕಾಂಗ್ರೆಸ್ಸಿನ ನಿಲುವೂ ಬದಲಾಗುವಂತಾಯಿತು.

1936ರ ಅಧಿವೇಶನದ ಮೊದಲು ಕಾಂಗ್ರೆಸ್ ಕಾರ್ಯ ಸಮಿತಿಯು ಒಂದು ಠರಾವು ಮಾಡಿ ಸಂಸ್ಥಾನೀ ಮತ್ತು ಬ್ರಿಟಿಷ್ ಪ್ರಾಂತಗಳ ಪ್ರಜೆಗಳ ಹಕ್ಕು ಹಾಗೂ ಸ್ವಾತಂತ್ರ್ಯಗಳ ಸಂಬಂಧದಲ್ಲಿ ಯಾವುದೇ ಭೇದವನ್ನು ಅದು ಮಾನ್ಯಮಾಡದೆಂದು ಹೇಳಿತಲ್ಲದೆ, ಸಂಸ್ಥಾನಗಳಲ್ಲಿನ ಪ್ರಜೆಗಳ ಸ್ಥಿತಿ ಬ್ರಿಟಿಷ್ ಪ್ರಾಂತಗಳಲ್ಲಿದ್ದುದಕ್ಕಿಂತ ಕೆಲವೆಡೆ ತೀರ ಕೆಡುಕಿನದಾಗಿದೆಯೆಂಬ ಬಗ್ಗೆ ತೀವ್ರ ವಿಷಾದ ಸೂಚಿಸಿತು. ಅಧಿವೇಶನದ ಕಾಲದಲ್ಲಿ ಅಧ್ಯಕ್ಷ ಜವಾಹರಲಾಲರು ಸಂಸ್ಥಾನಿಕರು ನಡೆಸುತ್ತಿರುವ ನಿರಂಕುಶ ಆಡಳಿತವನ್ನು ಖಂಡಿಸಿದರು. ಮುಂದೆ 31-10-1937ರಲ್ಲಿ ಕಲ್ಕತ್ತಾದಲ್ಲಿ ನಡೆದ ಕಾಂಗ್ರೆಸ್ ಕಾರ್ಯಸಮಿತಿಯ ಸಭೆಯಲ್ಲಿ ಮೈಸೂರು ಸಂಸ್ಥಾನದಲ್ಲಿಯ ದಬ್ಬಾಳಿಕೆಯನ್ನು ಖಂಡಿಸುವ ಗೊತ್ತುವಳಿ ಪಾಸಾಯಿತು.

ಸಂಸ್ಥಾನಗಳ ಬಗ್ಗೆ ಕಾಂಗ್ರೆಸ್ಸಿನ ಧೋರಣೆ ಬದಲಾಗುತ್ತ ಸಾಗಿತು. ಗಾಂಧೀಜಿ ಕಾಂಗ್ರೆಸ್ಸಿನ ಸದಸ್ಯತ್ವಕ್ಕೆ ರಾಜೀನಾಮೆ ಕೊಡಲು ಕಾರಣವಾದ ಸಂಗತಿಗಳಲ್ಲಿ ಈ ಬದಲಾದ ಕಾಂಗ್ರೆಸ್ಸಿನ ಧೋರಣೆಯೂ ಒಂದು. ಈ ವಿಚಾರವನ್ನು ಡಾ|| ಪಟ್ಟಾಭಿಯವರು 15-2-1938ರಂದು ಗುಜರಾತಿನ ನವಸಾರಿಯಲ್ಲಿ ಕೂಡಿದ ಸಂಸ್ಥಾನೀ ಕಾರ್ಯಕರ್ತರ ಸಭೆಯಲ್ಲಿ ಹೇಳಿದರು. ಮುಂದೆ ಡಾ|| ಪಟ್ಟಾಭಿಯವರ ಯತ್ನದಿಂದಲೇ ಹರಿಪುರ ಕಾಂಗ್ರೆಸ್ಸಿನಲ್ಲಿ ಸಂಸ್ಥಾನಗಳಿಗೆ ತಕ್ಕಮಟ್ಟಿಗೆ ಅನುಕೂಲಕರವಾದ ಗೊತ್ತುವಳಿ ಆಯಿತು. ಸಂಸ್ಥಾನದಲ್ಲಿ ಸ್ವತಂತ್ರ ಪ್ರಜಾಸಂಘಟನೆಗಳನ್ನು ಮಾಡಿ ಚಳವಳಿ ನಡೆಸಲು ಕಾಂಗ್ರೆಸ್ಸು ಅನುಮತಿ ನೀಡುವುದಾದರೂ ಕಾಂಗ್ರೆಸ್ಸು ಈ ಚಳವಳಿಗಳನ್ನು ಬೆಂಬಲಿಸಲು ಸಮರ್ಥವಾಗುವುದಿಲ್ಲವೆಂದು ಠರಾವಿನಲ್ಲಿ ಹೇಳಲಾಗಿತ್ತು. ಕಾಂಗ್ರೆಸ್ಸಿಗರು ವೈಯಕ್ತಿಕವಾಗಿ ಈ ಚಳವಳಿಯಲ್ಲಿ ಭಾಗವಹಿಸಲು ಅನುಮತಿ ನೀಡಲಾಯಿತು. ಈ ಠರಾವಿನಿಂದ ಸಂಸ್ಥಾನೀ ಪ್ರಜೆಗಳಲ್ಲಿ ಜಾಗೃತಿ ಆಯಿತು. ಅನೇಕ ಸಂಸ್ಥಾನಿಕರೂ ಎಚ್ಚೆತ್ತು ಸುಧಾರಣೆಗಳಿಗಾಗಿ ಮುಂದಾದರು. 1939ರ ತ್ರಿಪುರಿ ಕಾಂಗ್ರೆಸಿನಲ್ಲಿ ಈ ಬಗ್ಗೆ ಆದ ಗೊತ್ತುವಳಿಯಲ್ಲಿ ಈ ವಿಷಯಗಳ ಉಲ್ಲೇಖವಿದೆ. ಸಂಸ್ಥಾನಿಕರು ತಮ್ಮಲ್ಲಿ ಆಗುವ ಚಳವಳಿಗಳನ್ನು ಹತ್ತಿಕ್ಕಲು ಬ್ರಿಟಿಷ್ ಸರಕಾರದ ಪೋಲಿಸರನ್ನೂ ಸೈನಿಕರನ್ನೂ ತರುವುದನ್ನು ಇದೇ ಠರಾವಿನಲ್ಲಿ ಖಂಡಿಸಲಾಯಿತು.

1938ರ ಹರಿಪುರ ಕಾಂಗ್ರೆಸ್ಸಿನ ಅನಂತರ ಗಾಂಧೀಜಿ, ನೆಹರು, ವಲ್ಲಭಭಾಯಿ, ಶಂಕರರಾವ್ ದೇವ್, ಗಂಗಾಧರರಾವ್ ದೇಶಪಾಂಡೆ, ದಿವಾಕರ, ಹಣಮಂತರಾವ್

ಕೌಜಲಗಿ ಮುಂತಾದ ಗಣ್ಯ ಕಾಂಗ್ರೆಸ್ ನಾಯಕರು ಸಂಸ್ಥಾನೀ ಚಳವಳಿಯಲ್ಲಿ ವೈಯಕ್ತಿಕವಾಗಿ ಭಾಗವಹಿಸಿದ್ದರು. 1939ರಲ್ಲಿ ಲುಧಿಯಾನಾದಲ್ಲಿ ನಡೆದ ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತಿನ ಅಧಿವೇಶನಕ್ಕೆ ಜವಾಹರಲಾಲರೇ ಅಧ್ಯಕ್ಷರಾದರು. ಇದೇ ಕಾಲದಲ್ಲಿ 'ಹರಿಜನ' ಪತ್ರಿಕೆಯಲ್ಲಿ ಗಾಂಧೀಜಿ ಸಂಸ್ಥಾನೀ ಪ್ರಜೆಗಳ ಬೇಡಿಕೆಗಳ ಬಗ್ಗೆ ಒಂದೇ ಸಮನೆ ಲೇಖನಗಳನ್ನು ಬರೆಯಲಾರಂಭಿಸಿದರು. (ಉದಾ: 13-7-1940ರ 'ಹರಿಜನ'ದಲ್ಲಿ "ಮೈಸೂರು ವಕೀಲರು" ಎಂಬುದಾಗಿ ಎಚ್. ಸಿ. ದಾಸಪ್ಪ ಮುಂತಾದವರ ವಕೀಲಿಸನದು ರದ್ದು ಮಾಡಿದ ಬಗ್ಗೆ ಖಂಡನೆಯ ಲೇಖನವನ್ನು ಗಾಂಧೀಜಿ ಬರೆದಿದ್ದಾರೆ. —ಸಂ||). ಮುಂದೆ ಪೋರಬಂದರ ಸಂಸ್ಥಾನದಲ್ಲಿ ಗಾಂಧೀಜಿ ಉಪವಾಸ ಮಾಡಿದ್ದು ವ್ಯರ್ಥವಾಯಿತು ; ಜವಾಹರಲಾಲರು ಕಾಶ್ಮೀರಕ್ಕೆ ಹೋದಾಗ ಗಡೀಪಾರು ಮಾಡಲ್ಪಟ್ಟರು. ಈ ಪ್ರಕರಣಗಳಿಂದ ಗಾಂಧೀಜಿ ಸಂಸ್ಥಾನಗಳ ಚಳವಳಿಗೆ ಸ್ವತಃ ತಾವೇ ಮಾರ್ಗದರ್ಶನ ಮಾಡುವಂತಾಯಿತು. ಔಂಧ ಸಂಸ್ಥಾನ ಸಿದ್ಧಪಡಿಸಿದ ಘಟನೆಗೆ ಅವರು ತಮ್ಮ ಒಪ್ಪಿಗೆ ಕೊಟ್ಟರು. ಮೈಸೂರು, ತಿರುವಾಂಕೂರು, ಕೊಲ್ಹಾಪುರಗಳಲ್ಲಿ ಚಳವಳಿಗಳನ್ನು ನಿಲ್ಲಿಸಲು ಸೂಚಿಸಿದರು. ಮುಂದೆ 1941ರ ವೈಯಕ್ತಿಕ ಸತ್ಯಾಗ್ರಹ ಸಂಸ್ಥಾನಗಳಲ್ಲಿ ನಡೆಯದಿದ್ದರೂ 'ಕ್ವಿಟ್ ಇಂಡಿಯಾ' ಚಳವಳಿ ಸಂಸ್ಥಾನಗಳಲ್ಲೂ ಆಯಿತು. ಮುಂದೆ 1947-48ರಲ್ಲಿ ಸಂಸ್ಥಾನಗಳಲ್ಲಿ ಆದ ಸಂಗತಿಗಳ ವಿಚಾರ ಇಲ್ಲಿ ಅಪ್ರಸ್ತುತ.

**ಡಾ|| ಜಯದೇವರಾವ್ ಕುಲಕರ್ಣಿ**
ಮಠ ಗಲ್ಲಿ, ಬೆಳಗಾವಿ

## ಕಿ.ಸಂ. 2 | *ದಕ್ಷಿಣ ಸಂಸ್ಥಾನಗಳ ಪ್ರಜಾಪರಿಷತ್ತು ಹಾಗು ದಕ್ಷಿಣ ಸಂಸ್ಥಾನಗಳ ಹಿತವರ್ಧಕ ಸಭೆ

ಹಿಂದಿನ ಮುಂಬಯಿ ಪ್ರಾಂತದಲ್ಲಿಯ ಸಂಸ್ಥಾನಗಳಲ್ಲಿ ಹಾಗೂ ಹೈದರಾಬಾದ್ ಸಂಸ್ಥಾನಗಳಲ್ಲಿ ಪ್ರಜಾಜನರ ಚಳವಳಿ ಸಂಘಟಿಸುವ ಉದ್ದೇಶದಿಂದ ಸಂಸ್ಥೆಯೊಂದನ್ನು ಸ್ಥಾಪಿಸಬೇಕೆಂದು 24 ಮತ್ತು 25 ಮೇ 1921ರಂದು ಕಾರ್ಯಕರ್ತರ ಒಂದು ಪರಿಷತ್ತನ್ನು ಪುಣೆಯಲ್ಲಿ ನಡೆಸಲು ನರಸಿಂಹ ಚಿಂತಾಮಣಿ ಕೇಳಕರ ಮತ್ತು ಸಾಂಗ್ಲಿಯ ವಾಮನರಾವ್ ಪಟವರ್ಧನ ಇವರುಗಳು ಒಂದು ವಿನಂತಿಪತ್ರ ಹೊರಡಿಸಿದರು. ಪರಿಷತ್ತಿನ

* ದಕ್ಷಿಣ ಎಂಬ ಶಬ್ದ ಇಲ್ಲಿ 'ಡೆಕ್ಕನ್' ಎಂಬ ಅರ್ಥದಲ್ಲಿ ಬಳಸಿದೆ. —ಸಂ||


ಬಾಳಕೃಷ್ಣ ವಿಠ್ಠಲ ಶಿಖರೆ

ಉದ್ದೇಶಗಳನ್ನು ಈ ಪತ್ರದಲ್ಲಿ ಹೀಗೆ ವಿವರಿಸಲಾಗಿತ್ತು : ಪ್ರತಿ ಸಂಸ್ಥಾನದ ಆದಾಯಕ್ಕನುಗುಣವಾಗಿ ಆಯಾ ಸಂಸ್ಥಾನಿಕರ ಖಾಸಗಿ ಖರ್ಚಿನ ಮೊತ್ತ ನಿರ್ಧರಿಸುವುದು ; ಆಡಳಿತ ವಿಷಯದಲ್ಲಿ ಬರಬಹುದಾದ ದೂರುಗಳನ್ನು ವಿಚಾರಿಸಲು ಪೊಲಿಟಿಕಲ್ ಏಜೆಂಟ್ ಮೊದಲಾದ ಅಧಿಕಾರಿಯ ಬದಲು ಹಾಯ್‌ಕೋರ್ಟ್ ಜಜ್ಜರಷ್ಟು ಅರ್ಹತೆಯುಳ್ಳವರಿಂದ ಬಹಿರಂಗ ವಿಚಾರಣೆ ನಡೆಸಬಲ್ಲ ಬೋರ್ಡ್ ಇರಬೇಕೆಂದು ಒತ್ತಾಯಿಸುವುದು ; ಕಾಯಿದೆ ಕಾನೂನುಗಳ ರಚನೆಗೆ ಶಾಸನಸಭೆಗಳಿರಬೇಕೆಂಬ ಬೇಡಿಕೆಯ ಮಂಡನೆ ಹಾಗೂ ಅವುಗಳ ರಚನೆಯ ಬಗ್ಗೆ ಸೂಚನೆಗಳ ಮಂಡನೆ ; ಕೆಲವು ಸಂಸ್ಥಾನಗಳಲ್ಲಿನ ಮೂಲ ಸಂಸ್ಥಾನಕ್ಕಿಂತ ದೂರವಿರುವ ಹಳ್ಳಿಗಳನ್ನು ಬ್ರಿಟಿಷ್ ಪ್ರಾಂತಗಳಲ್ಲಿನ ಹಳ್ಳಿಗಳ ಜೊತೆ ವಿನಿಮಯ ಮಾಡಿಕೊಂಡು, ಪ್ರತಿ ಸಂಸ್ಥಾನದ ಪ್ರದೇಶ ಒತ್ತಟ್ಟಿಗೇ ಬರುವಂತೆ ಮಾಡುವಿಕೆ ; ಬ್ರಿಟಿಷ್ ಪ್ರಾಂತಗಳಲ್ಲಿ ಹೇರಲಾದ ಕೆಲವು ಅಪ್ರತ್ಯಕ್ಷ ಕರಗಳ ಭಾರವು ಸಂಸ್ಥಾನೀ ಪ್ರಜೆಗಳ ಮೇಲೂ ಬೀಳುತ್ತಿದ್ದುದರಿಂದ, ಅಂಥ ಕರಗಳ ಉತ್ಪನ್ನದಲ್ಲಿ ಸಂಸ್ಥಾನಗಳಿಗೂ ಪಾಲು ನೀಡಬೇಕೆಂಬ ಬೇಡಿಕೆಯ ಮಂಡನೆ ; ಬ್ರಿಟಿಷ್ ಭಾರತದಲ್ಲಿ ಪಾಸಾಗುವ ಕಾಯಿದೆಗಳ ಪರಿಣಾಮ ಸಂಸ್ಥಾನೀ ಪ್ರಜೆಗಳ ಮೇಲೂ ಆಗುತ್ತಿದ್ದುದರಿಂದ, ಅಂಥ ಕಾಯಿದೆಗಳನ್ನು ಪಾಸುಮಾಡುವಾಗ ಸಂಸ್ಥಾನೀ ಪ್ರಜೆಗಳ ಪ್ರತಿನಿಧಿಗಳನ್ನು ಪ್ರಾಂತಿಕ ಕಾಯಿದೆ ಕೌನ್ಸಿಲಿನಲ್ಲಿ ತೆಗೆದುಕೊಳ್ಳುವ ವಿಚಾರ; ಚೇಂಬರ್ ಆಫ್ ಪ್ರಿನ್ಸಿಸ್‌ನಲ್ಲಿ ಸಂಸ್ಥಾನೀ ಪ್ರಜೆಗಳ ಪ್ರತಿನಿಧಿಗಳಿಗೂ ಸ್ಥಾನ ದೊರೆಯಬೇಕೆಂದು ಒತ್ತಾಯಿಸುವುದು. ಇವುಗಳ ಚರ್ಚೆ ಹಾಗೂ ಈಡೇರಿಕೆಗೆ ಯತ್ನವೇ ಪರಿಷತ್ತಿನ ಧ್ಯೇಯ.

ನಿಶ್ಚಿತ ದಿನ ಈ ಪರಿಷತ್ತು ಪುಣೆಯಲ್ಲಿ ರಾವಸಾಹೇಬ ಶಂಕರ ಭಾಲಚಂದ್ರ ಬಾಪಟರ ಅಧ್ಯಕ್ಷತೆಯಲ್ಲಿ ಸೇರಿತು. ನ. ಚಿ. ಕೇಳಕರ ಸ್ವಾಗತಾಧ್ಯಕ್ಷರು. 250 ಪ್ರತಿನಿಧಿಗಳು ನೆರೆದ ಈ ಪರಿಷತ್ತಿನಲ್ಲಿ, ಸಂಸ್ಥಾನಿಕರು ಪ್ರಜಾಪ್ರತಿನಿಧಿ ಸಭೆಗಳನ್ನು ಸ್ಥಾಪಿಸಿ ಅವುಗಳಿಗೆ ಕಾಯಿದೆಮಾಡುವ ಅಧಿಕಾರ ಕೊಡಬೇಕು, ಸಂಸ್ಥಾನಿಕರ ಖಾಸಗಿ ಖರ್ಚನ್ನುಳಿದು ಸಂಸ್ಥಾನದ ಸಂಪೂರ್ಣ ಮುಂಗಡಪತ್ರ ಚರ್ಚೆಗಾಗಿ ಈ ಶಾಸನಸಭೆಗಳ ಮುಂದೆ ಬರಬೇಕು, ನಾಗರಿಕ ಸ್ವಾತಂತ್ರ್ಯಕ್ಕೆ ಆತಂಕಕರವಾದ ಕಾಯಿದೆಗಳನ್ನು ರದ್ದು ಮಾಡಬೇಕು, ಸಂಸ್ಥಾನಿಕರಂತೆ ಸಂಸ್ಥಾನೀ ಪ್ರಜೆಗಳನ್ನೂ ಆಡಳಿತದಲ್ಲಿ ಸಹಭಾಗಿಗಳಾಗಿ ಮಾಡುವ ವಿಚಾರವನ್ನು ಬ್ರಿಟಿಷ್ ಸರಕಾರ ಮಾಡಿ ಅವರ ಪ್ರತಿನಿಧಿಗಳ ಸಭೆಯನ್ನು ಸ್ಥಾಪಿಸಬೇಕು ಎಂದು ಒತ್ತಾಯಿಸಲಾಯಿತು. ದಕ್ಷಿಣ ಸಂಸ್ಥಾನಗಳ ಹಿತವರ್ಧಕ

ಸಭೆಯನ್ನೂ ಆಗ (1921) ಸ್ಥಾಪಿಸಲಾಯಿತು. ಇಂಥದೇ ಎರಡನೆಯ ಪರಿಷತ್ತು ಪುಣೆಯಲ್ಲೇ ಮೇ 1922ರಲ್ಲೂ, ಮೂರನೆಯದು 1923ರ ಮೇಯಲ್ಲಿ ಬೆಳಗಾವಿಯಲ್ಲೂ ಸೇರಿದ್ದವು. ನಾಲ್ಕನೆಯ ಅಧಿವೇಶನವನ್ನು ಸಾಂಗ್ಲಿಯಲ್ಲಿ ಸೇರಿಸಬೇಕೆಂದಿದ್ದರೂ ಸಾಂಗಲಿ ಸಂಸ್ಥಾನ ಇದಕ್ಕೆ ಅನುಮತಿ ನೀಡದ್ದರಿಂದ, ಸಾಂಗಲಿ ಬಳಿಯ ಕುದವಾಡದಲ್ಲಿ ದಿ॥ ಛಾಪಖಾನೆ ವಕೀಲರ ಬಂಗ್ಲೆಯಲ್ಲಿ ಅದು ಸೇರಿತು. ಬ್ಯಾರಿಸ್ಟರ್ ಎಂ. ಆರ್. ಜಯಕರ ಇದರ ಅಧ್ಯಕ್ಷರು. 1930 ಮತ್ತು 1932ರಲ್ಲಿ ಕಾನೂನುಭಂಗ ಚಳವಳಿ ನಡೆಯುದರಿಂದ ಪರಿಷತ್ತು ಸೇರಲಿಲ್ಲ. ಆದರೆ 1933ರ ವರೆಗೆ 10 ಪರಿಷತ್ತುಗಳು ಆದುವು. 1933ರ ಪರಿಷತ್ತಿಗೆ ಅಣ್ಣಾಸಾಹೇಬ ಲಠ್ಠೆ ಅಧ್ಯಕ್ಷರು.

ದಕ್ಷಿಣ ಸಂಸ್ಥಾನಗಳಲ್ಲಿ ಆದ ಚಳವಳಿಯ ಪ್ರೇರಕಶಕ್ತಿ ಈ ಹಿತವರ್ಧಕ ಸಂಘವೇ ಆಗಿತ್ತು. ಅನೇಕ ಸಂಸ್ಥಾನಗಳಲ್ಲಿ ಮುಂದೆ ಸ್ಥಾಪನೆಗೊಂಡ ಪ್ರಜಾಪರಿಷತ್ತುಗಳು ಈ ಹಿತವರ್ಧಕ ಸಭೆಯ ಶಾಖೆಗಳಾಗಿರದಿದ್ದರೂ ಅವು ಈ ಸಂಸ್ಥೆಯ ಆದೇಶ, ಸಲಹೆಗಳಂತೆ ಕೆಲಸ ಮಾಡುತ್ತಿದ್ದವು. ರಾಜರ ಹಾಗೂ ಪ್ರಜೆಗಳ ನಡುವೆ ಸಂಧಾನ ನಡೆಯುವ ಪ್ರಸಂಗಗಳಲ್ಲಿ ಈ ಸಂಸ್ಥೆಯ ಮುಖಂಡರು ರಾಜರ ಮನವೊಲಿಸಲು ಶ್ರಮಿಸುತ್ತಿದ್ದರು. ಈ ಸಂಸ್ಥೆಯು ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತಿನ ಶಾಖೆಯಾಗಿರದಿದ್ದರೂ ಆ ಪರಿಷತ್ತಿನಿಂದ ಬಂದ ಆದೇಶದಂತೆ ಎಲ್ಲ ಕಾರ್ಯ ಸಾಗಿಸುತ್ತಿತ್ತು. 1931ರ ವರೆಗೆ ನ. ಚಿ ಕೇಳಕರ ಹಾಗೂ ವಾಮನರಾವ್ ಪಟವರ್ಧನರು ಈ ಹಿತವರ್ಧಕ ಸಭೆಯ ಕಾರ್ಯದರ್ಶಿಗಳಾಗಿ ಕೆಲಸ ಮಾಡಿದರು. 1931ರಲ್ಲಿ ಮಿರಜಿಯ ಬಾಳಕೃಷ್ಣ ವಿಠ್ಠಲ ಶಿಖರೆ ಇವರನ್ನು ಮೂರನೆಯ ಕಾರ್ಯದರ್ಶಿಯಾಗಿ ನೇಮಿಸಲು, ಆಗಿನಿಂದ ಅವರೇ ಸಂಸ್ಥೆಯ ಎಲ್ಲ ಕಾರ್ಯಗಳನ್ನು ಕಡೆಯತನಕ ನಿರ್ವಹಿಸಿದರು.

1931ರಲ್ಲಿ ಆ. 25ರಿಂದ 31ರ ವರೆಗೆ ಎಲ್ಲ ಸಂಸ್ಥಾನಗಳಲ್ಲಿ ಹಿತವರ್ಧಕ ಸಭೆಯ ಆದೇಶದಂತೆ ಪ್ರಜಾಸಪ್ತಾಹ ಆಚರಿಸಿ, ಪ್ರಜೆಗಳ ಬೇಡಿಕೆಗಳ ಬಗ್ಗೆ ಜನಾಭಿಪ್ರಾಯ ರೂಢಿಸಲು ಈ ಸಂಸ್ಥಾನಗಳಲ್ಲಿ ಒಟ್ಟು 102 ಸಭೆ ನಡೆಸಿದರಲ್ಲದೆ, ಈ ಬಗ್ಗೆ ಒಂದು ಮನವಿಯನ್ನು ಸಿದ್ಧಪಡಿಸಿ 16,002 ಜನರ ಸಹಿಯನ್ನು ಅದರಲ್ಲಿ ಪಡೆಯಲಾಯಿತು. ಅ.ಭಾ. ಪ್ರಜಾಪರಿಷತ್ತಿಗೆ 2427 ಸಭಾಸದರನ್ನು ನೋಂದಾಯಿಸಲಾಯಿತು. 1934ರ ಅಕ್ಟೋಬರ್‌ನಲ್ಲಿ ಎರಡನೆಯ ಸಪ್ತಾಹವನ್ನು (ದಿ. 10 ರಿಂದ 16) ಆಚರಿಸಿ, ಸಂಸ್ಥಾನಗಳಲ್ಲಿ 125 ಸಭೆಗಳನ್ನೂ ಮನವಿಪತ್ರಗಳಿಗೆ 6806 ಜನರ ಸಹಿಯನ್ನೂ ಪಡೆಯಲಾಯಿತು. ಈ ಮನವಿಯನ್ನು ಆಗಿನ ಕಾಂಗ್ರೆಸ್ ಅಧ್ಯಕ್ಷ ರಾಜೇಂದ್ರ ಪ್ರಸಾದರಿಗೆ ನೀಡಲಾಯಿತು. ಶಿಖರೆಯವರ ಅವಿಶ್ರಾಂತ ಶ್ರಮವೇ ಈ ಎರಡೂ ಸಪ್ತಾಹಗಳ ಯಶಸ್ಸಿಗೆ ಕಾರಣ. 1936ರ ಆ. ಕೊನೆಯ ವಾರದಲ್ಲಿ ಅ.ಭಾ. ಸಂ. ಪ್ರಜಾಪರಿಷತ್ತಿನ ಅಧ್ಯಕ್ಷ ಡಾ॥ ಪಟ್ಟಾಭಿ ಸೀತಾರಾಮಯ್ಯನವರ ದಕ್ಷಿಣ ಸಂಸ್ಥಾನಗಳ ಸಂಚಾರದ ಕಾರ್ಯಕ್ರಮವನ್ನು ಶಿಖರೆಯವರೇ ಸಂಘಟಿಸಿ 30 ಸ್ಥಳಗಳಲ್ಲಿ ಅವರ ಭಾಷಣ ಮಾಡಿಸಿದರು.

ಹಿತವರ್ಧಕ ಸಭೆಯು 1926ರಲ್ಲಿ 'ಸಂಸ್ಥಾನೀ ಸ್ವರಾಜ್ಯ' ಎಂಬ ಸಾಪ್ತಾಹಿಕವನ್ನು ಪ್ರಾರಂಭಿಸಲು ದಿ|| ವಾಮನರಾವ್ ಪಟವರ್ಧನ ಅದರ ಸಂಪಾದಕರಿದ್ದು, ಅವರ ನಿಧನಾನಂತರ ಅವರ ಮಗ ವಿಶ್ವನಾಥರಾವ್ ಪಟವರ್ಧನ ಅದರ ಸಂಪಾದಕರಾದರು. ಸಂಸ್ಥಾನೀ ದುರಾಡಳಿತದ ಪ್ರಕರಣಗಳು ಬಯಲಿಗೆ ಬರಲು ಈ ಪತ್ರಿಕೆ ಕಾರಣವಾಗಿ, ಪ್ರಜರ ಚಳವಳಿಗೆ ಇದರಿಂದ ಬಲ ಬಂತು. ಮರಾಠಿ, ಇಂಗ್ಲಿಷ್ ಭಾಷೆ ಎರಡರಲ್ಲೂ ಇದರಲ್ಲಿ ಬರಹಗಳಿರುತ್ತಿದ್ದವು. ಇಂಗ್ಲಿಷ್ ಲೇಖನಗಳನ್ನು ಗಣಪತರಾವ್ ಅಭ್ಯಂಕರ ಬರೆಯುತ್ತಿದ್ದರು.

ದುಂಡುಮೇಜಿನ ಪರಿಷತ್ತು, ಬ್ರಿಟಿಷ್ ಪಾರ್ಲಿಮೆಂಟಿನ ಜಾಯಿಂಟ್ ಕಮಿಟಿ, ಇಂಡಿಯನ್ ಸ್ಟ್ಯಾಂಡಿಂಗ್ ಕಮಿಟಿ, ಬಟ್ಲರ್ ಕಮಿಟಿ, ಕಾಂಗ್ರೆಸ್ ಅಧ್ಯಕ್ಷರು ಇವರುಗಳಿಗೆಲ್ಲ ಕಾಲಕಾಲಕ್ಕೆ ಮನವಿ ಒಪ್ಪಿಸಿ ಸಂಸ್ಥಾನೀ ಪ್ರಜರ ಬೇಡಿಕೆಗಳನ್ನು ಒತ್ತಾಯಿಸಲು ಹಿತವರ್ಧಕ ಸಂಘ ಶ್ರಮಿಸಿತು. ಕೇಳಕರ, ವಾಮನರಾವ್ ಪಟವರ್ಧನ ಹಾಗೂ ಗಣಪತರಾವ್ ಅಭ್ಯಂಕರ ಇದರ ಆರಂಭದ ಕಾರ್ಯಕರ್ತರಿದ್ದು, ಶಿಖರೆ ಅವರು ಅಭ್ಯಂಕರರ ನಿಧನಾನಂತರ ಗಣ್ಯಕಾರ್ಯಕರ್ತರಾದರು. ಸಂಸ್ಥಾನೀ ರಾಜಕಾರಣ, ಮುಧೋಳ ಸಂಸ್ಥಾನದ ಪ್ರಜರ ಕರುಣಕತೆ, ಮಿರಜ ಸಂಸ್ಥಾನದಲ್ಲಿ ಕರನಿರಾಕರಣ ಚಳವಳಿ, ಸಂಸ್ಥಾನಗಳ ಬಗ್ಗೆ ಶ್ರೀನಿವಾಸ ಶಾಸ್ತ್ರಿಯವರ ಎರಡು ಭಾಷಣಗಳು, Indian States' Committee's Report and Public Opinion Thereon, Indian States' Act 1922, Important Utterances on Indian States' Problem ಮೊದಲಾದ ಪುಸ್ತಕಗಳನ್ನು ಸಂಘ ಪ್ರಕಟಿಸಿತು. 'ಸಂಸ್ಥಾನಾತೀಲ ಲೋಕಶಾಹೀ ಚಾ ಲಢಾ' (ಸಂಸ್ಥಾನಗಳಲ್ಲಿಯ ಪ್ರಜಾಪ್ರಭುತ್ವದ ಹೋರಾಟ) ಎಂಬ ಮರಾಠಿ ಪುಸ್ತಕವನ್ನು ದಿ|| ವಿಶ್ವನಾಥರಾವ್ ಪಟವರ್ಧನ ಸಂಪಾದಿಸಿ ಪ್ರಕಟಿಸಿದ್ದರು. ಅದರಲ್ಲಿ 1940ರ ವರೆಗಿನ ಎಲ್ಲ ದಕ್ಷಿಣ ಸಂಸ್ಥಾನಗಳಲ್ಲಿನ ಚಳವಳಿಯ ಸಂಕ್ಷಿಪ್ತ ಇತಿಹಾಸವನ್ನು ಕೊಡಲಾಗಿದೆ.

ದಕ್ಷಿಣ ಸಂಸ್ಥಾನ ಪ್ರಜಾಹಿತವರ್ಧಕ ಸಭೆಯು ಹನ್ನೊಂದನೆಯ ಅಧಿವೇಶನವು ದಿ|| 5 ಮತ್ತು 6 ಜೂನ್ 1937ರಂದು ಬೆಳಗಾವಿ ಜಿ|| ಕುಡಚಿಯಲ್ಲಿ ಖ್ಯಾತ ಮುಖಂಡ ವೀರ ನರಿಮನ್‌ರ ಅಧ್ಯಕ್ಷತೆಯಲ್ಲಿ ಆಗಿ, ಹಿತವರ್ಧಕ ಸಭೆಯನ್ನು ವಿಸರ್ಜಿಸಿ ದಕ್ಷಿಣ ಸಂಸ್ಥಾನ ಪ್ರಜಾಪರಿಷತ್ತು ಎಂಬ ಸಂಸ್ಥೆಯನ್ನು ಅಲ್ಲಿ ಸ್ಥಾಪಿಸಲಾಯಿತು. ಬೇರೆಬೇರೆ ಸಂಸ್ಥಾನಗಳ ಪ್ರಜಾಪರಿಷತ್ತು, ಪ್ರಜಾಸಂಘ ಮೊದಲಾದ ಸಂಘಟನೆಗಳನ್ನು ಈ ಪರಿಷತ್ತಿಗೆ ಜೋಡಿಸಿಕೊಳ್ಳಲಾಯಿತು. ಡೆಕ್ಕನ್ ಸ್ಟೇಟ್ಸ್ ರೀಜನಲ್ ಕೌನ್ಸಿಲ್‌ನ್ನು (ದಕ್ಷಿಣ ಸಂಸ್ಥಾನಗಳ ವಿಭಾಗೀಯ ಮಂಡಳಿ) ಈ ಪರಿಷತ್ತಿನ ಸ್ಥಾಯೀ ಸಮಿತಿಯೆಂದು ರಚಿಸಲಾಯಿತು. ಇದು ಪ್ರಾತಿನಿಧಿಕ ಸ್ವರೂಪದ ಸಂಸ್ಥೆ. ಪ್ರಜಾಪರಿಷತ್ತಿನ 12ನೆಯ ಅಧಿವೇಶನ ಮೇ 1938ರಲ್ಲಿ ಸರ್ದಾರ್ ಪಟೇಲರ ಅಧ್ಯಕ್ಷತೆಯಲ್ಲಿ ಸೇರಿತು. ಡಾ||

ಪಟ್ಟಾಭಿ ಆಗ ಹಾಜರಿದ್ದರಲ್ಲದೆ ಆ ಕಾಲದಲ್ಲೇ ಸಂಸ್ಥಾನಗಳ ಹಿಂದಿನ ಮತ್ತು ಆಗಿನ ಶಾಸನಸಭಾ ಸದಸ್ಯರುಗಳ ಸಮ್ಮೇಳನವು ಭಾವುಸಾಹೇಬ ಸೋಮಣ (ಸತಾರಾ) ಅವರ ಅಧ್ಯಕ್ಷತೆಯಲ್ಲಿ ನಡೆಯಿತು. 1937–38ರ ನಂತರ ಸಂಸ್ಥಾನೀ ಚಳವಳಿಯ ಸೂತ್ರಗಳು ಅ ಭಾ. ಕಾಂಗ್ರೆಸ್ಸಿನ ಕೈಯಲ್ಲಿ ಬಂದವು ಅಲ್ಲಿಯವರೆಗೆ ದಕ್ಷಿಣ ಸಂಸ್ಥಾನ ಹಿತವರ್ಧಕ ಸಭೆಯ ಅಂಗಸಂಸ್ಥೆಯಾಗಿದ್ದ ಹೈದರಾಬಾದ್ ಪ್ರಜಾಚಳವಳಿಯು ಆ ವರ್ಷ ಆದ ಹೈದರಾಬಾದ್ ಕಾಂಗ್ರೆಸ್ಸಿನ ಸ್ಥಾಪನೆಯಿಂದಾಗಿ ಅ.ಭಾ. ಸಂಸ್ಥಾನೀ ಪ್ರಜಾಪರಿಷತ್ತಿನೊಂದಿಗೆ ನೇರ ಸಂಪರ್ಕ ಇಟ್ಟುಕೊಳ್ಳಲಾರಂಭಿಸಿತು. ಅದೇ ವರ್ಷ ಮೈಸೂರು ಕಾಂಗ್ರೆಸ್ಸಿನ ಸ್ಥಾಪನೆ ಆಗಿ, ಅಲ್ಲಿ ಪ್ರತ್ಯೇಕವಾಗಿ ಕೆಲಸ ಮಾಡುತ್ತಿದ್ದ ಪ್ರಜಾಸಂಯುಕ್ತ ಪಕ್ಷವು ಸಂಸ್ಥಾನದಲ್ಲಿದ್ದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಜೊತೆ ಕೈಜೋಡಿಸಿತು; ಪ್ರಜಾಪಕ್ಷವು ವಿಸರ್ಜಿತವಾಯಿತು.

ಎರಡನೆಯ ಮಹಾಯುದ್ಧ ಹಾಗೂ ಚಲೇ ಜಾವ್ ಚಳವಳಿಗಳಿಂದಾಗಿ ಪ್ರಜಾ ಪರಿಷತ್ತಿನ ಕಾರ್ಯ ಪ್ರತ್ಯೇಕವಾಗಿ ಅಷ್ಟೊಂದು ನಡೆಯಲಿಲ್ಲ. ಕೊಲ್ಹಾಪುರ, ಸಾಂಗಲಿ, ಜಮಖಂಡಿಗಳಲ್ಲಿ ವಿಧ್ವಂಸಕ ಚಟುವಟಿಕೆಗಳು ನಡೆದವು. ಕೊಲ್ಹಾಪುರ, ಸಾಂಗಲಿ, ಮಿರಜ, ಜಮಖಂಡಿಗಳಲ್ಲಿ ಭೂಗತ ಕಾರ್ಯಕರ್ತರು ಆಶ್ರಯಪಡೆದಿದ್ದರು. ಆದರೆ ಇವು ಬ್ರಿಟಿಷ್ ಸರಕಾರದ ವಿರುದ್ಧ ಆದ ಚಳವಳಿಗಳು.

1943ರಲ್ಲಿ ಚಿಕ್ಕ ಸಂಸ್ಥಾನಗಳ ಒಕ್ಕೂಟ ರಚಿಸುವ ಉದ್ದೇಶದಿಂದ ಸಂಸ್ಥಾನಿಕರ ಮನವೊಲಿಸಲು ಅನಂತರಾವ್ ಸಾಬಡೆ (ಜಮಖಂಡಿ), ಹರಿ ಗೋವಿಂದ ಟಿಳಕ (ಸಾಂಗಲಿ) ಹಾಗೂ ಅನಂತರಾವ್ ಗಾನೂ (ಕುರಂದವಾಡ) ಇವರದೊಂದು ಸಮಿತಿಯನ್ನು ಪರಿಷತ್ತಿನಿಂದ ನೇಮಿಸಲಾಗಿತ್ತು. ಅವರ ಯತ್ನ ಯಶಸ್ವಿ ಆಗಲಿಲ್ಲ. ಕಾಲಚಕ್ರ ವೇಗದಿಂದ ಉರುಳಿ, 1947ರಲ್ಲಿ ಸ್ವಾತಂತ್ರ್ಯ ಬಂದಾಗ, ತಮ್ಮ ಉಳಿವಿಗಾಗಿ ಇಂಥ ಒಕ್ಕೂಟದ ರಚನೆಗೆ ಸಂಸ್ಥಾನಿಕರು ಒಪ್ಪಿದರು. ಪ್ರಜಾಪರಿಷತ್ತಿನ ಧುರೀಣರೂ ಇದಕ್ಕೆ ಒಪ್ಪಿದರು. ಆದರೆ ಸಾಂಗಲಿ ಸಂಸ್ಥಾನದ ತರುಣ ಧುರೀಣರಾದ ಡಾ|| ದೇಶಪಾಂಡೆ, ಡಾ|| ಜಯದೇವರಾವ್ ಕುಲಕರ್ಣಿ, ವಸಂತರಾವ್ ಪಾಟೀಲ, ಸದಾಶಿವರಾವ್ ಭೋಸಲೆ, ತಾರಾಚಂದ ಷಾ ಮೊದಲಾದವರು ಆ ಸೂಚಿತ ಒಕ್ಕೂಟದ ವಿರುದ್ಧ ಭಾರೀ ಆಂದೋಲನ ಹೂಡಿದ್ದರಿಂದ ಅದರ ಕಲ್ಪನೆ ಕರಗಿಹೋಯಿತು. ಎಲ್ಲ ಸಂಸ್ಥಾನಗಳು ಭಾರತದಲ್ಲಿ ವಿಲೀನ ಆದವು. ಮುಂದೆ ಈ ಸಂಸ್ಥಾನಗಳ ಕನ್ನಡ ಪ್ರದೇಶಗಳು ಕರ್ನಾಟಕಕ್ಕೆ ಬಂದವು ಉತ್ತರ ಭಾರತದಲ್ಲಿ ಸಂಸ್ಥಾನೀ ಪ್ರಜೆಗಳ ಚಳವಳಿಯೇ ಇಲ್ಲದ ಕಾಲದಲ್ಲಿ ದಕ್ಷಿಣ ಸಂಸ್ಥಾನೀ ಪ್ರಜಾಹಿತವರ್ಧಕ ಸಭಾ ಕಾರ್ಯಾರಂಭ ಮಾಡಿದ್ದು ಗಮನಿಸಬೇಕಾದ ಅಂಶ.

ಡಾ|| ಜಯದೇವರಾವ್ ಕುಲಕರ್ಣಿ
ಮಠ ಗಲ್ಲಿ, ಬೆಳಗಾವಿ

## ಈ ಸಂಸ್ಥೆಯ ಕಕ್ಷೆಯಲ್ಲಿದ್ದ ಕನ್ನಡ ಪ್ರದೇಶಗಳಿದ್ದ ಸಂಸ್ಥಾನಗಳು

| ಸಂಸ್ಥಾನ | ವಿಸ್ತಾರ ಚದರ ಮೈ. | ಜನಸಂಖ್ಯೆ (1931) | ಉತ್ಪನ್ನ ರೂ.ಗಳಲ್ಲಿ | ಕನ್ನಡ ಪ್ರದೇಶ |
|---|---|---|---|---|
| 1. ಅಕ್ಕಲಕೋಟ | 498 | 92,605 | 6,37,000 | ಪೂರಾ |
| 2. ಔಂಧ | 501 | 76,507 | 3,79,000 | 1/3 |
| 3. ಕುರಂದವಾಡ (ಹಿರಿ) | 182½ | 44,204 | 2,49,000 | 2/3 |
| 4. ಕುರಂದವಾಡ (ಕಿರಿ) | 116 | 39,593 | 2,00,000 | ಪೂರಾ |
| 5. ಕೊಲ್ಲಾಪುರ | 3,217 | 9,57,137 | 53,92,000 | 1/4 |
| 6. ಜತ್ತ | 980 | 91,102 | 3,08,000 | ಪೂರಾ |
| 7. ಮಿರಜಿ (ಹಿರಿ) | 342 | 93,957 | 5,32,000 | 1/2 |
| 8. ಕಿರಿಮಿರಜಿ (ಬುಧಗಾಂವ) | 196 | 40,686 | 2,86,000 | ಪೂರಾ |
| 9. ಮುಧೋಳ | 368 | 62,860 | 3,35,000 | ,, |
| 10 ರಾಮದುರ್ಗ | 169 | 35,401 | 1,89,000 | ,, |
| 11. ಸಾಂಗಲಿ | 1,136 | 2,58,442 | 16,00,000 | 4/5 |
| 12. ಸವಣೂರ | 73 | 20,320 | 2,19,000 | ಪೂರಾ |
| 13. ಜಮುಖಂಡಿ* | 524 | 1,14,720 | ? | 3/4 |

* ಈ 13 ಪ್ರದೇಶಗಳಲ್ಲದೆ ಮೈಸೂರು, ಹೈದರಾಬಾದಿನ ಕನ್ನಡ ಜಿಲ್ಲೆಗಳು ಹಾಗೂ ಸೊಂಡೂರು ಕರ್ನಾಟಕದ ಅನ್ಯ ಕನ್ನಡ ಸಂಸ್ಥಾನೀ ಪ್ರದೇಶಗಳು. ಅಕ್ಕಲಕೋಟ, ಕುರಂದವಾಡ ಹಾಗೂ ಜತ್ತಗಳು ಈಗ ಪೂರ್ಣ ಮಹಾರಾಷ್ಟ್ರದಲ್ಲೇ ಇವೆ. ಔಂಧಕ್ಕೆ ಸೇರಿದ್ದ ಗುಣದಾಳ ಎಂಬ ಗ್ರಾಮಗಳ ಗುಂಪು ಈಗ ವಿಜಾಪುರ ಜಿಲ್ಲೆಗೆ ಸೇರಿದೆ. ಕುರಂದವಾಡ (ಕಿರಿ) ಎಂದರೆ ಬೆಳಗಾವಿ ಬಳಿಯ ಮದಗಾಂವ ಈಗ ಬೆಳಗಾವಿ ತಾಲೂಕಿಗೇ ಸೇರಿದೆ. ಕೊಲ್ಲಾಪುರಕ್ಕೆ ಸೇರಿದ್ದ ಕನ್ನಡ ಪ್ರದೇಶಗಳೆಂದರೆ ರಾಯಬಾಗ, ಕಟಕೋಳ, ತೊರಗಲ್ಲುಗಳು; ಈಗ ಬೆಳಗಾವಿ ಜಿಲ್ಲೆಯಲ್ಲಿವೆ. ಮಿರಜಿಗೆ ಸೇರಿದ್ದ ಲಕ್ಷ್ಮೇಶ್ವರ ಪ್ರದೇಶ ಧಾರವಾಡ ಜಿಲ್ಲೆಯಲ್ಲಿದೆ; ಕಿರಿಮಿರಜಿಯ ಭಾಗ ಗುಡಗೇರಿ ಪ್ರದೇಶವೂ ಈಗ ಧಾರವಾಡ ಜಿಲ್ಲೆಯಲ್ಲಿದೆ. ಮುಧೋಳ, ಜಮುಖಂಡಿಗಳು ವಿಜಾಪುರ ಜಿಲ್ಲೆಯಲ್ಲಿವೆ. ಜಮುಖಂಡಿಯ ಕುಂದಗೋಳ ಪ್ರದೇಶ ಧಾರವಾಡ ಜಿಲ್ಲೆಯಲ್ಲೂ ಚಿಪ್ಪಲಕಟ್ಟಿ ಪ್ರದೇಶ ಬೆಳಗಾವಿ ಜಿಲ್ಲೆಯಲ್ಲೂ ಸೇರಿವೆ. ಕೆಲವು ಪ್ರದೇಶಗಳು ಮಹಾರಾಷ್ಟ್ರಕ್ಕೆ ಸೇರಿವೆ. ರಾಮದುರ್ಗವು ಪೂರ್ತಿ ಬೆಳಗಾವಿ ಜಿಲ್ಲೆಯಲ್ಲೂ, ಸಾಂಗಲಿ ಸಂಸ್ಥಾನದ ಶಹಾಪುರ, ದೊಡ್ಡವಾಡಗಳು ಬೆಳಗಾವಿ ಜಿಲ್ಲೆಯಲ್ಲೂ, ಶಿರಹಟ್ಟಿ ಪ್ರದೇಶವು ಧಾರವಾಡ ಜಿಲ್ಲೆಯಲ್ಲೂ ತೇರದಾಳವು ಜಮಖಂಡಿ ತಾ॥ನಲ್ಲೂ ಸೇರಿವೆ. ಔಂಧ, ಮಿರಜಿ, ಸಾಂಗ್ಲಿ, ಕಿರಿಮಿರಜಿ ಹಾಗೂ ಕೊಲ್ಲಾಪುರದ ಕೇಂದ್ರಗಳ ಸುತ್ತಲ ಪ್ರದೇಶಗಳೆಲ್ಲ ಮಹಾರಾಷ್ಟ್ರಕ್ಕೆ ಸೇರಿವೆ. ಸೊಂಡೂರು ಬಳ್ಳಾರಿ ಜಿಲ್ಲೆಯಲ್ಲಿದೆ. —ಸಂ॥

ಕ್ರ.ಸಂ. 3 ಮು.

# ರಾಮಾಚಾರ್ಯ ಕಟ್ಟಿ

ಜನನ : 1892 | ಉದ್ಯೋಗ : ನಿವೃತ್ತ ಜೀವನ | ವಿಳಾಸ : ದೇಸಾಯಿ ಗಲ್ಲಿ ಮುಧೋಳ, ಜಿ॥ ವಿಜಾಪುರ



ಹಿಂದಣ ಮುಧೋಳ ಸಂಸ್ಥಾನದ ಒಟ್ಟು ಕ್ಷೇತ್ರ 369 ಚದರ ಮೈಲಿಗಳು. ಡೆಕ್ಕನ್ ಸಂಸ್ಥಾನಗಳಲ್ಲಿ ಕೊಲ್ಲಾಪುರದನಂತರ ಮುಧೋಳವು ದಬ್ಬಾಳಿಕೆಗೆ ಕುಪ್ರಸಿದ್ಧವಾಗಿತ್ತು. 1904ರಲ್ಲಿ ಅಧಿಕಾರಕ್ಕೆ ಬಂದ ಶ್ರೀಮಂತ ಮಾಲೋಜಿರಾವ್ ಘೋರ್ಪಡೆಯವರು ಸಂಸ್ಥಾನದಲ್ಲಿನ ಪ್ರಜಾಹಿತೈಷಿ ಅಧಿಕಾರಿಗಳನೇಕ ರನ್ನು ನಿವೃತ್ತಗೊಳಿಸಿ ಹೊರಗಿನ ಜುಲುಮಿ ಅಧಿ ಕಾರಿಗಳನ್ನು ನೇಮಿಸಿದ್ದರು. ಪ್ರಜರ ಚಳವಳಿಯನ್ನು ನಿರ್ದಾಕ್ಷಿಣ್ಯವಾಗಿ ಹತ್ತಿಕ್ಕುತ್ತಿದ್ದರು. ಅರಸರು ನಡೆಸಿದ್ದ ಅತ್ಯಾಚಾರಗಳ ವಿರುದ್ಧ ಪೊಲಿಟಿಕಲ್ ಏಜಂಟರಿಗೆ ದೂರು ನೀಡುವ ಸಲಹೆ ಯಿತ್ತ ಶ್ರೀಪತಿರಾವ್ ಕೌಜಲಗಿ (ಹಣಮಂತರಾವ್ ಕೌಜಲಗಿ ಅವರ ತಂದೆ) ಅವರ ಮೇಲೆ ನೊಕದ್ದಮೆ ಹೂಡುವ ವಿಚಾರದಿಂದ ವಾರಂಟ್ ಹೊರಡಿಸಲು, ಕೆಲವು ಕಾಲ ಅವರು ಊರು ಬಿಟ್ಟು ಹೋಗಬೇಕಾದ ಪ್ರಸಂಗ ಕೂಡ ಬಂದಿತ್ತು. ಈ ಶತಮಾನದ ಆರಂಭಕ್ಕೆ ಇಲ್ಲಿಂದ ಪುಣೆಗೆ ಕಲಿಯಲು ಹೋಗಿದ್ದ ವಿದ್ಯಾರ್ಥಿಗಳು ರಜಾಕಾಲಕ್ಕೆ ಬಂದಾಗ ಇಲ್ಲಿ ಶಿವಾಜಿ ಪ್ಲೇಯಿಂಗ್ ಕ್ಲಬ್ ಸ್ಥಾಪಿಸಿದರು. ಶಿವಾಜಿ ಉತ್ಸವ, ಗಣೇಶ ಉತ್ಸವ ನಡೆಸಲಾರಂಭಿಸಿದರು. ವಂಗಭಂಗ ಚಳವಳಿಯ ಕಾಲಕ್ಕೆ ತಾತ್ಯಾ ತಾಸಗಾಂವಕರ, ಅನಂತರಾವ್ ಬೆಳವಡಿ ಮೊದಲಾದವರು ಪೈಸಾ ಫಂಡ್, ಮುಷ್ಟಿ ಫಂಡ ಸಂಗ್ರಹಿಸುವುದು ಸ್ವದೇಶೀ ಪ್ರಚಾರ, 'ವಾಗ್ಬಾಣ' ಎಂಬ ಹಸ್ತಲಿಖಿತ ಪತ್ರಿಕೆ ಪ್ರಕಟಣೆ ಆರಂಭಿಸಿದರು. ಈ ಕಾಲದಲ್ಲಿ ಹಣಮಂತರಾವ್ ಕೌಜಲಗಿ ಹಾಗೂ ಅವರ ಸೋದರ ತಿರುಮಲರಾವ್ ಇವರು ವಿದ್ಯಾರ್ಥಿಗಳಲ್ಲಿ ಸ್ವದೇಶೀ ಪ್ರಚಾರ, ವಿದೇಶೀ ಬಹಿಷ್ಕಾರ ಚಳವಳಿ ನಡೆಸಿದರು. ಈ ಉದ್ದೇಶಕ್ಕಾಗಿ ಪ್ರಭಾತ್‌ಫೇರಿ ಹೊರಡಿಸು ತ್ತಿರಲು ಅವರಲ್ಲಿ ಬಾಲಕನಾಗಿದ್ದ ನಾನು ಪದಗಳನ್ನು ಹೇಳುತ್ತ ಮುಂಭಾಗದಲ್ಲಿ ಇರುತ್ತಿದ್ದೆನು. ಪರದೇಶೀ ವಸ್ತುಗಳ ಅಂಗಡಿ ಮುಂದೆ ಪಿಕೆಟಿಂಗ್ ಕೂಡ ನಡೆದಿರಲು ನಾನೂ ಅದರಲ್ಲಿ ಪಾಲುಗೊಳ್ಳುತ್ತಿದ್ದೆ. ಮುಧೋಳದಲ್ಲಿ ಹಣಮಂತರಾವ್ ಕೌಜಲಗಿ

ಮತ್ತು ಜಮಖಂಡಿಯಲ್ಲಿ ಕಾಕಾ ಕಾರಖಾನೀಸ ಇವರ ನೇತೃತ್ವದಲ್ಲಿ ವಿದ್ಯಾರ್ಥಿಗಳ ಸಂಘಟನೆಗಳು ಆಗ ಸಾಗಿದ್ದು ಎರಡೂ ತಂಡಗಳವರು ನಡುವಿನ ಒಂದು ಸಂಕೇತದ ಸ್ಥಳದಲ್ಲಿ ವಾರಕ್ಕೊಮ್ಮೆ ಸೇರಿ ಮುಂದಿನ ಕಾರ್ಯಕ್ರಮಗಳ ವಿಚಾರ ಚರ್ಚಿಸುತ್ತಿದ್ದರು ಹಣಮಂತರಾಯರು ಕಲ್ಲಳ್ಳಿ, ಬನಹಟ್ಟಿಗಳಿಗೂ ಹೋಗಿ ಆಗ ಪಿಕೆಟಿಂಗ್ ನಡೆಸುತ್ತಿದ್ದರು. ಸ್ವದೇಶೀ ವಸ್ತುಗಳ ಪ್ರಚಾರದ ಅಂಗವಾಗಿ ತೆಂಗಿನ ಕರಟೆಯಿಂದ ಗುಂಡಿ, ಕುದುರೆಬಾಲದ ಕೂದಲಿಂದ ಬ್ರಶ್ ಇವುಗಳನ್ನು ವಿದ್ಯಾರ್ಥಿವೃಂದವು ತಯಾರಿಸುತ್ತಲಿತ್ತು. 1906ರಿಂದ 1908ರ ವರೆಗೆ ಹೀಗೆ ಕೆಲಸ ಸಾಗಿತ್ತು.

1908ರಲ್ಲಿ ಲೋಕಮಾನ್ಯರಿಗೆ ಕಾರಾವಾಸದ ಶಿಕ್ಷೆ ಆದಾಗ, ಸರಕಾರದ ವಿರುದ್ಧ ಏನಾದರೂ ಮಾಡಬೇಕೆಂದು ಹಣಮಂತರಾವ್ ಅವರ ಸಂಗಡಿಗ ಗಂಗಾರಾಮ ಪೇಂಟರ್, ಶಿವಪ್ಪ ಪಾಟೀಲ. ವಿ. ಟಿ. ಕಟ್ಟಿ ಹಾಗೂ ಎಚ್. ಪಿ. ದೇಶಪಾಂಡೆ ಇವರ ಜೊತೆಗೂಡಿ ಬಾಂಬ್ ತಯಾರಿಸುವ ಹೊಂಚುಹಾಕಿದರು. ಆಗ ಜಮಖಂಡಿಯಲ್ಲಿದ್ದ ಕಾಕಾ ಕಾರಖಾನೀಸರು ಸ್ವಿತ್ಸರ್ಲಂಡಿನ ಕ್ರಾಂತಿಕಾರಿಗಳ ಜೊತೆ ಸಂಪರ್ಕಹೊಂದಿದ್ದರು. ಅವರೂ ಹಣಮಂತರಾಯರೂ ಮೇಲಿಂದಮೇಲೆ ಗುಪ್ತವಾಗಿ ಸೇರಿ ವಿಚಾರವಿನಿಮಯ ಮಾಡುತ್ತಿದ್ದರು. ಮುಧೋಳ ಸರಕಾರದ ಮದ್ದಿನ ಕಾರಖಾನೆಯಿಂದ ಮದ್ದನ್ನು ಕದ್ದು ತಂದು ಬಾಂಬ್ ತಯಾರಿಸಲಾಯಿತು. ಊರ ಕೆರೆಯ ಆಚೆಗಿನ ಸಯ್ಯದ್ ಸಾಹೇಬನ ಮರಡಿಯಲ್ಲಿ ಅದನ್ನು ಹಾರಿಸಿ ಪರೀಕ್ಷಿಸಲಾಯಿತು. ಪರಾಂಜಪೆ ಎಂಬವರ ಮನೆಯಲ್ಲಿದ್ದ ಸೋಶಲ್ ಕ್ಲಬ್‌ನಲ್ಲಿ ಕುಳಿತಿದ್ದ ಮಹಾರಾಜರೇ ಮುಂತಾದ ಅಧಿಕಾರಿಗಳಿಗೆ ಈ ಯಶಸ್ವೀ ಪ್ರಯೋಗದ ಸಪ್ಪಳ ಕೇಳಿಸಿತು. ಮಹಾರಾಜರು ಈ ಬಗ್ಗೆ ತಕ್ಷಣ ಚೌಕಶಿಗೆ ಹೊರಡಲು, “ಬಾವಿಗೆ ಇಟ್ಟ ಸುರಂಗ ಅದು” ಎಂದು ಅಲ್ಲಿ ಇದ್ದ ಬಾಬುರಾವ್ ಬಕ್ಷಿ ಮಹಾರಾಜರನ್ನು ತಡೆದು ನಿಲ್ಲಿಸಿದರಂತೆ. ಬಕ್ಷಿಯವರು ಹಣಮಂತರಾಯರ ಪರಮಸ್ನೇಹಿತ. ಈ ಸ್ಫೋಟದಲ್ಲಿ ಶಿವಪ್ಪ ಪಾಟೀಲ ಮಾತ್ರ ತನ್ನ ಬಲಗೈಯ ಒಂದು ಬೆರಳನ್ನು ಕಳೆದುಕೊಂಡ !

ಇದರ ಹಿಂದೆಯೇ ಜಮಖಂಡಿಯಿಂದ ಮುಧೋಳಕ್ಕೆ ಪೋಸ್ಟು ತರುವ ರನ್ನರ್‌ನಿಂದ ಬಾಂಬು ಎಸೆದು ಪೋಸ್ಟು ಕಸಿಯಬೇಕೆಂದು ನಮ್ಮ ಗೆಳೆಯರ ತಂಡದವರು ಯತ್ನಿಸಿ ವಿಫಲರಾದರು. ಒಗೆದ ಬಾಂಬು ಸಿಡಿಯದೇ, ಈ ಬಗ್ಗೆ ಊರೆಲ್ಲ ಸುದ್ದಿಯಾಗಿ, ಶಿವಪ್ಪ ಪಾಟೀಲ ಊರು ಬಿಟ್ಟ. ಕೌಜಲಗಿ ಸೋದರರು ವಿಜಾಪುರಕ್ಕೆ ಹೋದರು. ಶಿವಾಜಿ ಪ್ಲೇಯಿಂಗ್ ಕ್ಲಬ್ ಮುಚ್ಚಿಹೋಯಿತು. ಮುಂದೆ ಇಲ್ಲಿನ ಅರಸರ ಒತ್ತಡದಿಂದ ಸ್ವದೇಶೀ ಚಳವಳಿ, ವಿಧಾಯಕ ಕಾರ್ಯಗಳನ್ನು ನಡೆಸುವುದೂ ಕಷ್ಟವಾಯಿತು. ಕೊಲ್ಹಾಪುರದಂತೆ ಮುಧೋಳದಲ್ಲೂ ಅರಸರು ‘ವೇದೋಕ್ತ’ ಪ್ರಕರಣವೆಬ್ಬಿಸಿ (ತಮ್ಮ ಪುರೋಹಿತರು ತಮ್ಮ ಮನೆಯಲ್ಲಿನ ಎಲ್ಲ ವಿಧಿಗಳನ್ನು ವೇದೋಕ್ತ ವಿಧಾನದಿಂದ ಮಾಡಬೇಕೆಂದು ಒತ್ತಾಯ), ಇದಕ್ಕೆ ಒಪ್ಪದ ಬ್ರಾಹ್ಮಣ

ಪುರೋಹಿತರ ಮೇಲೆ ರಾಜದ್ರೋಹದ ಖಟ್ಲೆ ಹಾಕಿ ಅವರಿಗೆ ದೀರ್ಘಾವಧಿ ಶಿಕ್ಷೆ ವಿಧಿಸಿದರು. ಈ ಶಿಕ್ಷಿತರಿಗೆ ಕೆರೆ ತೋಡುವ ಕೆಲಸ ಹಚ್ಚಲಾಯಿತು. ಅಂಥವರ ತಲೆ ತಲಾಂತರಗಳಿಂದ ಬಂದ ವತನ ಜಮೀನುಗಳನ್ನು ಜಪ್ತಿಮಾಡಲಾಯಿತು. 1924ರಲ್ಲಿ ಬೆಳಗಾವಿ ಕಾಂಗ್ರೆಸ್ಸಿಗೆ ಪ್ರೇಕ್ಷಕರಾಗಿ ಹೋದ ಮೂರುನಾಲ್ಕು ಜನರನ್ನು ಸರಕಾರಿ ನೌಕರಿಯಿಂದ ವಜಾ ಮಾಡಿದರು. ಅಂಥವರಲ್ಲಿ ನಾನೂ ಒಬ್ಬ.

ಸಭೆಗಳಷ್ಟೇ ಅಲ್ಲ, ಭಜನೆ, ಕೀರ್ತನೆ, ಪುರಾಣ ಕಾರ್ಯಕ್ರಮಗಳ ಮೇಲೂ ಪ್ರತಿಬಂಧನನ್ನು ವಿಧಿಸಲಾಗಿತ್ತು. ನಾಲ್ಕು ಜನ ಒತ್ತಟ್ಟಿಗೆ ಸೇರಲು ಪ್ರತಿಬಂಧವಿತ್ತು. ದಬ್ಬಾಳಿಕೆಯ ಈ ನೀತಿಯಿಂದಾಗಿ ಅನೇಕ ಸುಶಿಕ್ಷಿತರು ಸಂಸ್ಥಾನವನ್ನೇ ಬಿಟ್ಟರು.

ಮುಧೋಳದವರೇ ಆಗಿದ್ದ ಹಣಮಂತರಾವ್ ಕೌಜಲಗಿಯವರು ಅಸಹಕಾರ ಚಳವಳಿಯ ಕಾಲಕ್ಕೆ ವಿಜಾಪುರದ ತಮ್ಮ ನೌಕರಿಯನ್ನು ತ್ಯಜಿಸಿ ಚರಖಾ ಸಂಘದ ಕೆಲಸಮಾಡುತ್ತಿದ್ದರು. ಭಂಟನೂರಿನ ರಾಮಣ್ಣ ಸೊನ್ನದ ಅವರನ್ನು ಖಾದಿಕೆಲಸದಲ್ಲಿ ಅವರು ತರಬೇತಿಮಾಡಿದ್ದರು. ಮುಧೋಳದ ಇನ್ನೊಬ್ಬ ನಾಗರಿಕ ವಿಷ್ಣು ಅನಂತ ಮುಸೂರಕರ ವಿಜಾಪುರದಲ್ಲಿ ವಕೀಲಿ ನಡೆಸುತ್ತಿದ್ದು 1924ರಲ್ಲಿ ವಿಶ್ರಾಂತಿಗೆಂದು ಮುಧೋಳಕ್ಕೆ ಬಂದಿರಲು, ಸರಕಾರದ ನೀತಿಯಿಂದ ತ್ರಸ್ತರಾದ ಕೆಲವರು ಆ ಬಗ್ಗೆ ಅವರಲ್ಲಿಗೆ ಹೋಗಿ ವಕೀಲಿ ನಡೆಸಲು ಕೇಳಿದರು. ಅವರು ಧೈರ್ಯದಿಂದ ವಕೀಲಿ ಹಿಡಿದು ಜನರಿಗೆ ನ್ಯಾಯ ದೊರಕಿಸಲು ಶ್ರಮಿಸಿದರು. ಜನ ಅವರ ಸುತ್ತ ಸೇರುವಂತಾಯಿತು.



ವಿಷ್ಣು ಅನಂತ ಮುಸೂರಕರ

1930ರಲ್ಲಿ ಗಾಂಧೀಜಿ ಕಾನೂನುಭಂಗ ಚಳವಳಿ ಶುರುಮಾಡಿದಾಗ ಜಮಖಂಡಿಯಲ್ಲಿ ಪ್ರಭಾತ್‌ಫೇರಿ ಆಗುತ್ತಿರಲು, ಇದನ್ನು ಕಂಡು ಮುಧೋಳ, ಮಹಾಲಿಂಗಪುರಗಳಲ್ಲೂ ಜನ ಫೇರಿ ಆರಂಭಿಸಿದರು. 20-8-1931ರಂದು ಮಹಾಲಿಂಗಪುರದಲ್ಲಿ ಒಂದು ಸಭೆ ಸೇರಿರಲು ನೆರೆದ ಜನರ ಮೇಲೆ ತನ್ನ ಕಾಲ್ದಳ (ಇನ್ಫಂಟ್ರಿ) ಹಾಗೂ ಪೋಲಿಸರಿಂದ ಲಾಠೀಚಾರ್ಜನ್ನು ಮಹಾರಾಜರು ಮಾಡಿಸಿದರು. ಈ ಘಟನೆಯನಂತರ ಜನರನ್ನು ಸಂತೈಸಲು, ಕೌಜಲಗಿ ಬಂಧುಗಳನ್ನು ಕರೆಯಿಸಿ, ಸಂಸ್ಥಾನದಲ್ಲಿ ಪ್ರಜಾಹಿತದ ಯೋಜನೆಗಳನ್ನೇನಾದರೂ ಆರಂಭಿಸಬೇಕೆಂದು ಕೇಳಿಕೊಂಡರು. ಕೌಜಲಗಿ ಹಣಮಂತರಾಯರು ತಕ್ಷಣ ಖಾದಿ ಕಾರ್ಯಕ್ರಮವನ್ನು ಮುಂದಿಟ್ಟಾಗ ಮಹಾರಾಜರು ತಕ್ಷಣ ಅದಕ್ಕೆ ಒಪ್ಪಿಗೆ ಇತ್ತರು. ಬಾಡಿಗೆಯಿಲ್ಲದ ಒಂದು ಕಟ್ಟಡ, ಬಡ್ಡಿಯಿಲ್ಲದ 4000 ರೂ. ಬಂಡವಾಳ ಕೊಟ್ಟು ತಲಾ 10 ರೂ.ಗಳ 125 ಖಾದಿ ಸಂಘದ ಷೇರುಗಳನ್ನು ಕೊಂಡರು. ರಾಮಣ್ಣ

ಸೊನ್ನದ ಅವರ ಅಧ್ಯಕ್ಷತೆಯಲ್ಲಿ ಮುಧೋಳ ಸಂಸ್ಥಾನದ ಖಾದಿ ಸಂಘ ಸ್ಥಾಪನೆ ಆಯಿತು. ಇದರಿಂದ ನೂಲುವ ಹೆಣ್ಣುಮಕ್ಕಳಿಗೂ ಉದ್ಯೋಗ ದೊರಕಿತು. ಖಾದಿ ಕಾರ್ಯಕರ್ತರಿಗೆ ಜನಸಂಪರ್ಕ ಸಾಧಿಸುವದು ಸುಲಭವಾಯಿತು. ನಾನು ಅದರ ಕಾರ್ಯಕರ್ತನಾಗಿ ಹಳ್ಳಿಹಳ್ಳಿ ಸುತ್ತಿದೆ.

ಇದೇ ಸಮಯದಲ್ಲಿ ಮಸೂರಕರರನ್ನು ಮುಧೋಳ ನಗರಪಾಲಿಕೆಯ ಸಭಾಸದ ರಾಗಿ ಮಹಾರಾಜರು ನೇಮಿಸಲು, ಅವರು ನಗರಪಾಲಿಕೆಯ ಅಧ್ಯಕ್ಷರೂ ಆಗಿ ಒಮ್ಮತ ದಿಂದ ಆರಿಸಿಬಂದರು. ನಗರಪಾಲಿಕೆಯಲ್ಲಿನ ಭಯಗ್ರಸ್ತ ವಾತಾವರಣವನ್ನು ದೂರೀ ಕರಿಸಲು ಹೆಣಗಿದ ಅವರು, ನಗರಪಾಲಿಕೆಗೆ ಸದಸ್ಯರನ್ನು ಚುನಾಯಿಸುವ ಪದ್ಧತಿ ಜಾರಿಗೆ ತರಬೇಕೆಂದು ಠರಾವು ಮಾಡಿದರು. ಆವರೆಗೆ ಸದಸ್ಯರನ್ನು ನಾಮಕರಣ ಮಾಡುವ ಪದ್ಧತಿ ಇತ್ತು. ಮನೆಪಟ್ಟಿ ಹೆಚ್ಚಿಸಿ ನಗರಸಭೆಯ ಆದಾಯ ಹೆಚ್ಚಿಸಿ, ಚೈನೀ ವಸ್ತುಗಳ ಮೇಲೆ ಹೆಚ್ಚಿನ ಜಕಾತಿ ಹೇರಿ, ಬಡವರ ಬಳಕೆಯ ವಸ್ತುಗಳ ಮೇಲೆ ಇದ್ದ ಜಕಾತಿ ಕಡಿಮೆ ಮಾಡಿದರು. ಅನೇಕ ವರ್ಷಗಳಿಂದ ವಸೂಲಾಗದೆ ಉಳಿದಿದ್ದ ಕರಗಳನ್ನು ವಸೂಲು ಮಾಡಿದರು. ಇದರಿಂದ ಕೆಲವು ಪಟ್ಟಭದ್ರ ಜನ ಅಸಮಾಧಾನ ಪಟ್ಟರು; ಮಸೂರಕರರ ವಿರುದ್ಧ ಕಾರಸ್ಥಾನ ನಡೆಸಿದರು. ಆಗಲೇ ಸಂಸ್ಥಾನದಲ್ಲಿ (ಚಳವಳಿಯ ಪರಿಣಾಮವಾಗಿ) ಒಂದು ರೈತ ಅಸೆಂಬ್ಲಿ ಸ್ಥಾಪಿತವಾಗಿದ್ದು ಗದಗಕರ ಎಂಬವರು ಅದರ ಅಧ್ಯಕ್ಷರು. ನಗರಪಾಲಿಕೆ ಈ ಅಸೆಂಬ್ಲಿಯ ನಿಯಂತ್ರಣದಲ್ಲಿ ಇತ್ತು. ಈ ಅಸೆಂಬ್ಲಿಯ ಅಧ್ಯಕ್ಷರು ಮಸೂರಕರರನ್ನು ಬೆಂಬಲಿಸಿದ್ದರು. ಮಸೂರಕರರ ವರ್ಚಸ್ಸು ಬೆಳೆಯುತ್ತಿರುವುದನ್ನು ಸಹಿಸದ ಮಹಾರಾಜರು ಒಂದು ಆಜ್ಞೆ ಹೊರಡಿಸಿ ನಗರಪಾಲಿಕೆಯನ್ನು ಅಸೆಂಬ್ಲಿಯ ನಿಯಂತ್ರಣದಿಂದ ಬಿಡಿಸಿ ದಿವಾಣರ ನಿಯಂತ್ರಣಕ್ಕೆ ಒಳಪಡಿಸಿದರು.

ಲೋಕಾಪುರ ಹಾಗೂ ಮುದ್ದಾಪುರಗಳ ದೇಸಾಯರು ಹಾಗೂ ಚನ್ನಾಳ ದೇಶ ಪಾಂಡೆಯವರು ಮಸೂರಕರರ ಪಕ್ಷಕಾರರು. ಇವರ ಕಂದಾಯವನ್ನು 15% ರಿಂದ 33%ಕ್ಕೆ ಅರಸರು ಏರಿಸಿದರು. ಈ ಬಗ್ಗೆ ಅವರು ಪೊಲಿಟಿಕಲ್ ಏಜಂಟರವರೆಗೆ ದೂರು ಒಯ್ದರು. ಮಹಾರಾಜರು ಇವರ ಜಮೀನು ಜಪ್ತಿಮಾಡಿಸಿದರು. ಈ ಪ್ರಕರಣಕ್ಕೆ ಮಸೂರಕರರೇ ಕಾರಣರೆಂದು ಅವರ ಮೇಲೆ ಮಹಾರಾಜರ ವಕ್ರದೃಷ್ಟಿ ಬಿತ್ತು. 1932ರಿಂದಲೇ ನಾನು 'ಸಂಸ್ಥಾನೀ ಸ್ವರಾಜ್ಯ' ಎಂಬ ಪುಣೆಯ ಪತ್ರಿಕೆಯಲ್ಲಿ ಈ ಬಗ್ಗೆ ಲೇಖನ ಬರೆಯುತ್ತಲಿದ್ದು, ರಾಜರ ದುರಾಡಳಿತವು ಬಯಲಿಗೆ ಬರುವ ಲೇಖನಗಳು ಪತ್ರಿಕೆಗಳಲ್ಲಿ ಬರುವುದನ್ನು ನೋಡಿ ರಾಜರು ಕುದಿಯಹತ್ತಿದರು. ಲೇಖನ ಬರೆಯು ವವರ ಶೋಧ ನಡೆಯಿತು. ಸರಕಾರಿ ನೌಕರರು, ವಕೀಲರು, ಅರ್ಜಿ ಬರೆಯುವವರು ಮೊದಲಾದವರ ಹಸ್ತಾಕ್ಷರಗಳನ್ನು ಸಂಗ್ರಹಿಸಲಾಯಿತು. ಈ ಅವಮಾನಕರ ಚೌಕಶಿ ಬಗ್ಗೆ ಒಬ್ಬರೂ ಚಕಾರ ಎತ್ತಲಿಲ್ಲ. ಅದುವರೆಗೆ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನ

ಗಳನ್ನು ಸಂಗ್ರಹಿಸಿ 'ಮುಧೋಳ ಸಂಸ್ಥಾನದ ಪ್ರಜೆಗಳ ಕರುಣಕಥೆ' ಎಂಬ ಹೊತ್ತಿಗೆಯನ್ನು 1936ರಲ್ಲಿ ಪ್ರಕಟಿಸಲಾಯಿತು. ಇದರ ಹಿಂದೆ ಮಸೂರಕರರ ಕೈವಾಡವಿದೆ ಎಂದು ಭಾವಿಸಿ ಅವರ ಹಾಗೂ ಅವರ ಮಿತ್ರ ವಿಠ್ಠಲಚಂದ ಅವರ ಮೇಲೆ ಮೊಕದ್ದಮೆ ಹೂಡಿದರು. ಲೇಖನ ಬರೆದವನು ನಾನಿದ್ದುದರಿಂದ, ಅದನ್ನು ಒಪ್ಪಿಕೊಂಡು ಮಸೂರರಕರರನ್ನು ಈ ತೊಂದರೆಯಿಂದ ಬಿಡುಗಡೆ ಮಾಡಬೇಕೆಂದು ಈ ವಿಚಾರವನ್ನು ಅವರಿಗೆ ತಿಳಿಸಿದೆ. "ನಾನು ಜೈಲು ಭೋಗಿಸಲು ಸಿದ್ಧನಿದ್ದೇನೆ. ಲೇಖನಗಳು ನಿಲ್ಲಬಾರದು. ನೀನು ಎಂದಿನಂತೆ ಬರೆಯುತ್ತಲೇ ಇರಬೇಕು" ಎಂದು ಅವರೆಂದರು. ಅವರಿಗೆ ಎರಡು ವರ್ಷ ಶಿಕ್ಷೆ ಆಯಿತು. ಖಾದಿ ಸಂಘವನ್ನೂ ಬಂದುಮಾಡಿಸಲಾಯಿತು.

ಮಸೂರಕರರು ಸೆರೆಮನೆ ಸೇರಿದರೂ 'ಸಂಸ್ಥಾನೀ ಸ್ವರಾಜ್ಯ'ದಲ್ಲಿಯ ಟೀಕಾಸ್ತ್ರ ನಿಲ್ಲಲಿಲ್ಲ. ದಕ್ಷಿಣ ಸಂಸ್ಥಾನ ಪ್ರಜಾಪರಿಷತ್ತಿನ ಅಭ್ಯಂಕರ ಮೊದಲಾದವರು ಮಸೂರಕರರಿಗೆ ಆದ ಅನ್ಯಾಯದ ಹಾಗೂ ಸಂಸ್ಥಾನದಲ್ಲಿನ ದಬ್ಬಾಳಿಕೆಯ ಬಗ್ಗೆ ವೈಸ್‌ರಾಯ್‌ರವರಿಗೆ ಹಾಗೂ ಬ್ರಿಟನ್‌ನಲ್ಲಿರುವ ಭಾರತ ಮಂತ್ರಿಯವರಿಗೆ ದೂರು ಒಯ್ದರು. ಮುಂದೆ ಮುಂಬೈ ರಾಜ್ಯದಲ್ಲಿ ಕಾಂಗ್ರೆಸ್ ಸರಕಾರ ಬಂತು. 9 ನವೆಂಬರ್ 1937 ರಂದು ಮುಧೋಳದ ಮಹಾರಾಜರು ರಾಜಸಂನ್ಯಾಸ ತಕ್ಕೊಳ್ಳಬೇಕಾಯಿತು. ಇದಾಗಿ ಒಂದು ವಾರದಲ್ಲಿ ಅವರು ಮುಂಬೈಯಲ್ಲಿ ಕಾಲವಶರಾದರು. ರಾಣೀಸಾಹೇಬರು ರೀಜಂಟರಾಗಿ ರಾಜ್ಯ ನಡೆಸಿದರು.

ತಮ್ಮ 33 ವರ್ಷಗಳ ಆಳಿಕೆಯಲ್ಲಿ ಅರಸರು ಸಂಸ್ಥಾನದಲ್ಲಿ ಯಾವ ಚಳವಳಿಯನ್ನೂ ನಡೆಯಗೊಡಲಿಲ್ಲ. 28-8-1930ರಲ್ಲಿ ಅವರು ಪ್ರಜಾಪ್ರತಿನಿಧಿ ಸಭೆಯನ್ನು ದಯಪಾಲಿಸಿದ್ದರೂ ಅದು ಯಾವ ಕೆಲಸವನ್ನೂ ಮಾಡುವಂತಿರಲಿಲ್ಲ. ಅರಸರ ನಿಧನಾನಂತರ ಪ್ರಜೆಗಳ ಹತ್ತಿಕ್ಕಿದ್ದ ಭಾವನೆಗಳು ಉಕ್ಕೇರಿಬಂದವು. ಮಸೂರಕರರ ಪ್ರಕೃತಿ ಕೆಟ್ಟಿದ್ದರಿಂದ ಅವಧಿಗೆ ಮೊದಲೇ 1938ರ ಜನವರಿಯಲ್ಲಿ ಅವರ ಬಿಡುಗಡೆ ಆಯಿತು. ಜನರ ಬೊಬ್ಬಾಟವೂ ಇದಕ್ಕೆ ಕಾರಣ. ಇದೇ ಕಾಲಕ್ಕೆ ಕ್ಷಾಮದಿಂದಾಗಿ ಬೆಳೆ ಕೆಟ್ಟಿದ್ದ ಹಳ್ಳಿಗಳಲ್ಲಿ ಬಲವಂತದಿಂದ ಕಂದಾಯ ವಸೂಲಿ ಮಾಡುತ್ತಿರಲು ಮಂಟೂರಿನ ಬಸಪ್ಪ ತಿಮಸಾನಿ, ಮಲ್ಲಪ್ಪ ಉತ್ತೂರ ಮೊದಲಾದವರು ಕಂದಾಯ ವಸೂಲಿ ಮುಂದೂಡಲು ಒತ್ತಾಯಿಸಿ ಚಳವಳಿ ಹೂಡಿದರು. ಮಸೂರಕರ ಹಾಗೂ ಬಂಟನೂರಿನ ಆರ್. ಬಿ. ಸೊನ್ನದ ಮುಂತಾದವರ ಸೂಚನೆಯಂತೆ ರೈತರು ಕರನಿರಾಕರಣ ನಡೆಸಿದರಲ್ಲದೆ ಈ ಬಗ್ಗೆ ಹೊಲ, ಮನೆಯಲ್ಲಿನ ವಸ್ತುಗಳು ಜಪ್ತಾದರೂ ಹಿಂಜರಿಯಲಿಲ್ಲ. ಮೈಸೂರು, ರಾಮದುರ್ಗಗಳ ಪ್ರಜಾ ಚಳವಳಿಯ ವಾರ್ತೆಗಳೂ ಬರಹತ್ತಿ ಮಂಟೂರ ರೈತರು ಇನ್ನಷ್ಟು ಉತ್ತೇಜಿತರಾದರು. ಮಂಟೂರ ಗಾಳಿ ಇತರ ಹಳ್ಳಿಗಳಿಗೂ ಹರಡಿತು. ರೆಸಿಡೆಂಟರ ಸಲಹೆಯಿಂದ ಕಂದಾಯ ವಸೂಲಿ ತಹಕೂಬ ಮಾಡಿ, ಆಡಳಿತವು ಜಪ್ತಾದ ವಸ್ತುಗಳನ್ನು ಮರಳಿಸಿತು.

ಈ ಮೊದಲ ವಿಜಯದಿಂದಲೇ ಸಮಾಧಾನಪಡದೆ, ಮುಧೋಳ ಸಂಸ್ಥಾನ ಪ್ರಜಾ ಸಭೆಯನ್ನು ಮುಧೋಳದ ನಾಗರಿಕರಾಗಿದ್ದ ಬಾಗಲಕೋಟೆಯ ವಕೀಲ ಗೋವಿಂದರಾವ್ ಬೆಳಗಲ್‌ರ ಅಧ್ಯಕ್ಷತೆಯಲ್ಲಿ ಸಂಘಟಿಸಲಾಯಿತು. ಡಾ|| ಎಚ್. ಎ. ದೇಸಾಯಿ (ಕಾರ್ಯದರ್ಶಿ), ಸೊನ್ನದ ರಾಮಣ್ಣ, ಮಹಾದೇವರಾವ್ ಘಾಟಗೆ, ಲಕ್ಷ್ಮಣ ರಾವ್ ಬೆಳಗಾಂವಕರ, ಕಟ್ಟಿ ಹಣಮಂತಾಚಾರ್ಯ ಮುಂತಾದವರು ಕಾರ್ಯಮಂಡಳ ಸದಸ್ಯರಾದರು. ಕೆಲವು ಹಳ್ಳಿಗಳಲ್ಲಿ ವಿಜಾಪುರದ ಕಣಬೂರ ವಕೀಲರ ಭಾಷಣ ಆದುವು. ಸಭಾಬಂಧಿ ಇದ್ದರೂ ಜನ ಸಭೆಗೆ ಬರುತ್ತಿದ್ದರು. 1938ರಲ್ಲಿ ಸಾಂಗಲಿಯಲ್ಲಿ ನಡೆದ ದಕ್ಷಿಣ ಸಂಸ್ಥಾನಗಳ ಪ್ರಜಾ ಪರಿಷತ್ತಿನ ಅಧಿವೇಶನಕ್ಕೆ ಮುಧೋಳ ಸಂಸ್ಥಾನ ದಿಂದ ಅನೇಕರು ತೆರಳಿದ್ದರು. ಮುಧೋಳ ಸಂಸ್ಥಾನದಲ್ಲಿನ ಕಾಲ್ದಳವನ್ನು (ಇನ್ಫಂಟ್ರಿ) ವಿಸರ್ಜಿಸಬೇಕೆಂದು ಡಾ|| ದೇಸಾಯಿ ತಂದ ಗೊತ್ತುವಳಿಯನ್ನು ಮಂಟೂರಿನ ಸೀತಾ ಬಾಯಿ ತಿಮಸಾನಿಯವರು ಬೆಂಬಲಿಸಿ ಮಾತನಾಡಿದರು. ಮುಂದೆ ಪ್ರಜಾಪರಿಷತ್ತಿನ ಶಾಖೆಗಳನ್ನು ಬೇರೆ ಹಳ್ಳಿಗಳಲ್ಲೂ ಸ್ಥಾಪಿಸಿದರು. ಮುಧೋಳದಲ್ಲಿ ಪ್ರಜಾಪ್ರತಿನಿಧಿ ಸಭೆಗೆ ರಾಮಣ್ಣ ಸೊನ್ನದ ಅವರು ಅಧ್ಯಕ್ಷರೂ ಆದರು. ಜನಜಾಗೃತಿಗಾಗಿ ರೈತರ ತೊಂದರೆಗಳ ಪಟ್ಟಿಯನ್ನು ಸಿದ್ಧಗೊಳಿಸಿ ಜವಾಬ್ದಾರಿ ರಾಜ್ಯ ಪದ್ಧತಿಗಾಗಿ ಪ್ರಚಾರ ಕಾರ್ಯ ಕೈಕೊಳ್ಳಲಾಯಿತು. ಲೋಕಾಪುರ ಮತ್ತು ಹೊಸಕೋಟೆಗಳಲ್ಲಿ ಪ್ರಭಾತ್ ಫೇರಿ, ಸಾಯಂಫೇರಿ ಶುರು ಆದವು. 1938ರ ಜುಲೈ ವೇಳೆಗೆ ಸಂಸ್ಥಾನದಲ್ಲಿ ಅತೀವ ಜಾಗೃತಿಯಾಗಿ ದಿವಾಣರು ಪ್ರಜಾಸಭೆಯ ಜೊತೆ ಮಾತುಕತೆಗೆ ಮುಂದಾದರು. ಮಾತುಕತೆ ಸಾಗುತ್ತಿದ್ದಂತೆ, ರೈತಸಂಘವೆಂಬ ಒಂದು ಪ್ರತಿಸಂಸ್ಥೆಯನ್ನು ಸ್ಥಾಪಿಸಿ ಪ್ರಜಾಪರಿಷತ್ತಿನ ಬೆನ್ನುಮುರಿಯುವ ಯತ್ನವನ್ನು ದರಬಾರಿನವರು ಮಾಡಿ ಅಪಯಶ ವನ್ನು ಕಂಡರು; ಅದಕ್ಕೆ ಜನಬೆಂಬಲ ದೊರೆಯಲಿಲ್ಲ. ನಿರುಪಾಯರಾಗಿ ಪ್ರಜಾ ಸಭೆಯ ಜೊತೆ ಮಾತುಕತೆ ನಡೆಸಿದರು. ಪ್ರಜಾಸಭೆಯ ಮಾರ್ಗದರ್ಶನಕ್ಕೆ ವಾಮನ ರಾವ್ ಪಟವರ್ಧನ (ಸಂಸ್ಥಾನೀ ಸ್ವರಾಜ್ಯ ಸಂಸ್ಥಾಪಕರು), ರಂಗರಾವ್ ದಿವಾಕರ, ಹಣಮಂತರಾವ್ ಕೌಜಲಗಿ ಅವರು ಮುಧೋಳಕ್ಕೆ ಬಂದರು. ಕಣಬೂರ ವಕೀಲ ಹಾಗೂ ವೀರನಗೌಡ ಪಾಟೀಲರ ನೆರವಿನಿಂದ ಪ್ರಜಾಸಭೆಯಲ್ಲಿ ರೈತಸಂಘ ಸೇರ್ಪಡೆ ಆಗಿ ಪ್ರಜಾ ಸಂಘ ಅಸ್ತಿತ್ವಕ್ಕೆ ಬಂತು. ದರಬಾರದ ಕಡೆ ಹೋಗುವ ಶಿಷ್ಟಮಂಡಳದಲ್ಲಿ ರೈತಸಂಘದ ಸಾಲೀಮಠ ಅವರೂ ಇದ್ದರು. ಪ್ರಜಾಸಂಘವು ಪ್ರಜೆಗಳ ಏಕಮಾತ್ರ ಪ್ರತಿನಿಧಿಯೆನ್ನುವಂತಾಯಿತು.

31–7–1938ರಲ್ಲಿ ಲೋಕಾಪುರ–ಹೊಸಕೋಟೆ ಭಾಗದ ಜನರು ರಾಷ್ಟ್ರಧ್ವಜ ಹಿಡಿದು ರಾಷ್ಟ್ರೀಯ ಪದಗಳನ್ನು ಹಾಡುತ್ತ ಮುಧೋಳಕ್ಕೆ ಬರುತ್ತಿರಲು ಸಂಸ್ಥಾನದ ಇನ್ಫಂಟ್ರಿ ಅದನ್ನು ತಡೆಯಿತು. ಸಂಸ್ಥಾನದ ಧ್ವಜ ಇರುವಾಗ ಬೇರೆ ಧ್ವಜ ಹಾಂಸಿದರೆ ಗೋಳೀಬಾರು ಮಾಡುವುದಾಗಿ ಬೆದರಿಸಿದರು. ಅದೇ ಆಗ ಸರ್ದಾರ್ ಪಟೇಲರು,

ಮೈಸೂರಲ್ಲಿ ಸಂಸ್ಥಾನದ ಧ್ವಜ ಹಾಗೂ ಕಾಂಗ್ರೆಸ್‌ಧ್ವಜ ಎರಡನ್ನೂ ಹಾರಿಸಬೇಕೆಂದು ಸೂಚನೆ ಕೊಟ್ಟದ್ದನ್ನು ಜ್ಞಾಪಿಸಿ, ಪ್ರಜಾಸಂಘಕ್ಕೆ ಸಲಹೆಗಾರರಾಗಿ ಬಂದ ಮುಖಂಡರು ಹಾಗೆ ಸೂಚಿಸಲು, ಉಭಯ ಪಕ್ಷಕ್ಕೂ ಒಪ್ಪಿಗೆ ಆಗಿ ಮುಧೋಳದಲ್ಲಿ ಮೊದಲ ಬಾರಿ ರಾಷ್ಟ್ರಧ್ವಜ ಹಾರಿತು. 1–8–1938ರಂದು ಹಳ್ಳಿಯಿಂದ ಬಂದ ಎಲ್ಲ ಜನರ ಜೊತೆ ಚರ್ಚೆ ನಡೆಸಿ, ದರಬಾರಿನ ಮುಂದೆ ಇಡಬೇಕಾದ ವಿಷಯಗಳ ನಿಷ್ಕರ್ಷೆಮಾಡಿದರು. ಕಂದಾಯವನ್ನು ಕಡಿಮೆ ಮಾಡಿದರೇನೇ ಮುಂದಿನ ಮಾತುಕತೆಗೆ ಜನರು ಸಿದ್ಧರಾಗಿದ್ದಾರೆಂದು ದಿವಾಣರಿಗೆ ಶಿಷ್ಟಮಂಡಳಿ ತಿಳಿಸಿತು. ದರಬಾರಿನಿಂದ ಇದಕ್ಕೆ ಒಪ್ಪಿಗೆ ಬಂತು. ಮುಂದೆ ಬೆಳೆಯ ಆಣೇವಾರಿಗೂ ನಾಗರಿಕ ಹಕ್ಕುಗಳನ್ನು ಕೊಡುವುದಕ್ಕೂ ದರಬಾರು ಒಪ್ಪಿತು. ಕನ್ನಡ ಶಾಲೆಗಳಾಗಬೇಕು, ಕೋರ್ಟುಕಚೇರಿಗಳಲ್ಲಿ ಕನ್ನಡವನ್ನೇ ಆಡಳಿತ ಭಾಷೆಯಾಗಿ ಮಾಡಬೇಕೆಂಬ ಬೇಡಿಕೆಗೂ ಒಪ್ಪಿಗೆ ದೊರೆಯಿತು. ಪ್ರತಿನಿಧಿಸಭೆಗೆ ಹೆಚ್ಚಿನ ಅಧಿಕಾರ, ಚುನಾಯಿತ ನಗರಪಾಲಿಕೆಯ ಸ್ಥಾಪನೆಗೂ ಒಪ್ಪಿಗೆ ಸಿಕ್ಕಿತು.

1939ರಲ್ಲಿ ಪ್ರಜಾಸಂಘದ ಚಟುವಟಿಕೆ ಶಿಥಿಲವಾಯಿತು. ಕಾಮಗಾರ ಸಂಘ ಎಂಬ ಪ್ರತಿಸಂಘಟನೆ ಮಾಡುವ ಯತ್ನವಾಯಿತು. ದರಬಾರವು ಕೊಟ್ಟ ಆಶ್ವಾಸನೆಗಳಲ್ಲಿ ಪ್ರತಿನಿಧಿಸಭೆಗೆ ಹೆಚ್ಚಿನ ಅಧಿಕಾರ ಕೊಡುವ ವಿಚಾರವನ್ನು ಗಮನಿಸಲಿಲ್ಲ. ಈ ಬಗ್ಗೆ ಹಣಮಂತರಾವ್ ಕೌಜಲಗಿಯವರ ನೇತೃತ್ವದಲ್ಲಿ ಒಂದು ಶಿಷ್ಟಮಂಡಳವನ್ನು ರೆಸಿಡೆಂಟರ ಕಡೆಗೆ ಕಳುಹಿಸಲಾಯಿತು. ರಾಮಣ್ಣ ಸೊನ್ನದ ಅವರು ಆಗ ಮಂತ್ರಿಯಾಗಿ ಕೆಲಸಮಾಡಿದರು. ಮುಧೋಳ ಸಂಸ್ಥಾನ ವಿಲೀನವಾಗುವ ತನಕ ಅವರು ಉತ್ತಮ ಕೆಲಸಮಾಡಿ, ಮರಾಠಿ ಶಾಲೆಗಳ ಬದಲು ಕನ್ನಡ ಶಾಲೆ ಸ್ಥಾಪಿಸಿದರು. ಅನೇಕರಿಗೆ ಸಂಸ್ಥಾನದಲ್ಲಿ ನೌಕರಿ ಕೊಟ್ಟರು. ಜನಸೇವೆ ಮಾಡಿ ಜನರ ಪ್ರೀತಿಗೆ ಪಾತ್ರರಾದರು.

ಮುಂದೆ 18-4-1940ರಂದು ಡಾ|| ನಾಗನಗೌಡ ಅವರ ಅಧ್ಯಕ್ಷತೆಯಲ್ಲಿ ಮುಧೋಳದಲ್ಲಿ ಪ್ರಜಾಪರಿಷತ್ತಿನ ಮೊದಲ ಅಧಿವೇಶನ ಆಗಿ ಪ್ರಜಾಸಂಘಕ್ಕೆ ಕಳೆ ಏರಿತು. 1942ರಲ್ಲಿ ಬೆಳಗಾವಿ ಜಿಲ್ಲೆಯ ಭೂಗತ ಕಾರ್ಯಕರ್ತರು ಒಬ್ಬಿಬ್ಬರು ಈ ಭಾಗದಲ್ಲಿ ಆಶ್ರಯವನ್ನು ಪಡೆದಿದ್ದರು. (ಸಂ. I, ಬೆಳ. 9 ನೋಡಿ. —ಸಂ||). ಸೊನ್ನದ ಅವರ ಊರಾದ ಭಂಟನೂರಲ್ಲಿ ಕಾಂಗ್ರೆಸ್ ಬುಲೆಟಿನ್ ಗುಪ್ತರೀತಿಯಲ್ಲಿ ತಯಾರಾಗುತ್ತಿದ್ದು, ಅಲ್ಲಿನ ಕಾರ್ಯಕರ್ತರ ಊಟೋಪಚಾರದ ವ್ಯವಸ್ಥೆಯನ್ನು ಸೊನ್ನದ ಅವರೇ ನೋಡಿಕೊಳ್ಳುತ್ತಿದ್ದರು.

ಕಿ.ಸಂ. 4 ಮು.

# ರಾಮಣ್ಣ ಸೊನ್ನದ

ಜನನ : ? ಉದ್ಯೋಗ : ಕೃಷಿ ವಿಳಾಸ : ಭಂಟನೂರ, ತಾ॥ ಮುಧೋಳ



ಸಂಸ್ಥಾನ ಕಾಲದ ಮುಧೋಳ ಅರಸರ ಆಡಳಿತವೆಂದರೆ ಬಹಳೇ ಬಿಗುವಿನ ಆಡಳಿತವೆಂದು ಪ್ರತೀತಿ ಇದೆ. ಪ್ರಜೆಗಳಿಗೆ ಆಗ ಯಾವುದೇ ಸ್ವಾತಂತ್ರ್ಯ ಇರಲಿಲ್ಲವೆಂಬ ಸಂಗತಿ ಈಗಿನವರಿಗೆ ಅಚ್ಚರಿ ಎನಿಸೀತು. ಇಂಥ ಕಾಲದಲ್ಲಿ ಕಾಂಗ್ರೆಸ್ಸಿನ ವಿಚಾರಗಳನ್ನು ಮನೆಮನೆಗೆ ಮುಟ್ಟಿಸಿದವರು ಹಣಮಂತರಾವ್ ಕೌಜಲಗಿ. ಭಂಟನೂರಿಗೆ ಬಂದು ನಮ್ಮಲ್ಲಿ ರಾಜಕೀಯ, ರಚನಾತ್ಮಕ ಕಾರ್ಯಗಳ ಬಗ್ಗೆ ಅವರು ಚರ್ಚೆ ನಡೆಸಿದರು. ಅವರ ಮಾರ್ಗದರ್ಶನದಿಂದ ಖಾದಿ ಕಾರ್ಯ ಆರಂಭವಾಗಿ, ರಾಮಾಚಾರ್ಯ ಕಟ್ಟಿ ಅವರು ಖಾದಿ ಕಾರ್ಯಕರ್ತರಾಗಿ ಪ್ರತಿಹಳ್ಳಿಯಲ್ಲೂ ಹೋಗಿ ಪ್ರಚಾರ ಮಾಡಿದರು. ಇದರಿಂದ ಖಾದಿ ಕಾರ್ಯ ಭರದಿಂದ ನಡೆಯಿತು.

1931ರಲ್ಲಿ ಬ್ರಿಟಿಷ್ ಹಿಂದೂಸ್ಥಾನದಲ್ಲಿನ ಚಳವಳಿಯ ಗಾಳಿ ಮುಧೋಳಕ್ಕೂ ಬೀಸಿ ಮಹಾಲಿಂಗಪುರದಲ್ಲಿ ರಾಷ್ಟ್ರೀಯ ಚಟುವಟಿಕೆ ಆರಂಭವಾಗಲು ಅದನ್ನು ಹತ್ತಿಕ್ಕಲು ನಮ್ಮ ಅರಸರು ಲಾಠೀಚಾರ್ಜು ಮಾಡಿಸಿದರು. ಆಗ ಜನರಲ್ಲಿ ಕ್ಷೋಭೆ ಆಗಿ ದಂಗೆಗಳಾಗುವ ಸಂಭವ ಕಾಣಿಸಿತು. ಆಗ ಅರಸರು ರಾಷ್ಟ್ರೀಯ ಚಟುವಟಿಕೆಗಳ ಧುರೀಣ ಹಣಮಂತರಾವ್ ಕೌಜಲಗಿಯವರೊಡನೆ ಸಂಧಾನ ನಡೆಸಿದರು. "ಖಾದಿ ಮತ್ತು ಗ್ರಾಮಕೈಗಾರಿಕೆಗಳಿಗೆ ಪ್ರೋತ್ಸಾಹ ಕೊಡಿರಿ. ಅದರಿಂದ ಜನ ಉದ್ಯೋಗವಂತರಾಗಿ ಶಾಂತ ಜೀವನ ನಡೆಸುತ್ತಾರೆ" ಎಂದು ಕೌಜಲಗಿಯವರು ಮಹಾರಾಜರಿಗೆ ಹೇಳಿದರು. ಇದಕ್ಕೆ ಮಹಾಜರು ಒಪ್ಪಿ ಖಾದಿ-ಗ್ರಾಮೋದ್ಯೋಗಗಳ ಪ್ರೋತ್ಸಾಹಾರ್ಥ ಕೆಲವೊಂದು ಹಣ ಕೊಟ್ಟರು. ಸಂಸ್ಥಾನದಲ್ಲಿ ಇದರಿಂದ ಖಾದಿಕಾರ್ಯ ಹಳ್ಳಿಗಳಲ್ಲಿ ನಡೆಯಲು ಅನುಕೂಲ ಆಯಿತು.

ಈ ರಾಷ್ಟ್ರೀಯ ಚಟುವಟಿಕೆಗಳ ಪರಿಣಾಮವಾಗಿ 1932ರಲ್ಲಿ ರೈತ ವಿಧಾನ ಸಭೆಯೊಂದನ್ನು ಅರಸರು ಸ್ಥಾಪಿಸಬೇಕಾಯಿತು. 1938ರ ವರೆಗೆ ಇದು ಅರಸರ ಕೈಗೊಂಬೆಗಳ ವಶದಲ್ಲಿತ್ತು. 1938ರಲ್ಲಿ ಕಾಂಗ್ರೆಸ್ ಮಾದರಿಯ ಪ್ರಜಾಸಂಘವನ್ನು

ಸ್ಥಾಪಿಸಿ ನನ್ನನ್ನೇ ಅಧ್ಯಕ್ಷನನ್ನಾಗಿ ಮಾಡಿದರು. ಸಂಸ್ಥಾನದ ಮುಂದಾಳುಗಳಾದ ದಿ|| ಮಸೂರಕರ ವಕೀಲ, ಬಿ. ಕೆ. ತಿಮಸಾನಿ, ರಾಮಾಚಾರ್ಯ ಕಟ್ಟಿ, ದಿ|| ಮಲ್ಲಪ್ಪ ಉತ್ತೂರ, ದಿ|| ಬಾಬುರಾವ್ ಜೆಳಗಲ್ ಇವರೆಲ್ಲ ಸಂಸ್ಥೆಯ ಕಾರ್ಯಗಳನ್ನು ಜೋರಾಗಿ ನಡೆಸಿದರು. 1938ರಲ್ಲಿ ರೈತ ವಿಧಾನ ಸಭೆಯ ಚುನಾವಣೆಯಲ್ಲಿ ನಾನೇ ಅಧ್ಯಕ್ಷನಾಗಿ ಆಯ್ಕೆಗೊಂಡೆ. ಸಂಸ್ಥಾನದ ಆಡಳಿತದ ಬಗ್ಗೆ ಆಳವಾಗಿ ಅಧ್ಯಯನಮಾಡಿ ಅನೇಕ ಮಾರ್ಪಾಡುಗಳನ್ನು ಮಾಡಿದೆ. ಕೇವಲ 17 ಗ್ರಾಮಗಳಲ್ಲಿ ಮಾತ್ರ ಇದ್ದ ಶಾಲೆಗಳನ್ನು 50 ಗ್ರಾಮಗಳಿಗೆ ವಿಸ್ತರಿಸಿ, 67 ಗ್ರಾಮಗಳವರಿಗೆ ಶಿಕ್ಷಣಸೌಲಭ್ಯ ದೊರೆಯುವಂತೆ ಮಾಡಿದೆ. (ತಾ||ನಲ್ಲಿ ಒಟ್ಟು 80 ಗ್ರಾಮಗಳಿದ್ದವು). ಕೇವಲ ನಾಲ್ಕನೆಯ ಇಯತ್ತೆ ಓದಿದ್ದ ಶಿಕ್ಷಕರಿಗೆ ಅಲ್ಪಾವಧಿಯ ವಿಶೇಷ ತರಬೇತಿ ಶಿಬಿರವನ್ನು ತಜ್ಞರ ನೆರವಿನಿಂದ ನಡೆಸಿದೆ. ಮೊದಲು 36 ಶಿಕ್ಷಕರಿದ್ದ ಸಂಸ್ಥಾನದಲ್ಲಿ 136 ಜನ ಶಿಕ್ಷಕರಾಗಿ ಸಾಕ್ಷರತೆ 5% ರಿಂದ 11%ಕ್ಕೆ ಏರಿತು. ಲೋಕೋಪಯೋಗಿ ಇಲಾಖೆಯ ದಕ್ಷತೆ ಹೆಚ್ಚಿಸಿ ಹಳ್ಳಿಗಳಲ್ಲಿ ಕುಡಿಯುವ ನೀರು ಹಾಗೂ ರಸ್ತೆಗಳ ವ್ಯವಸ್ಥೆ ಮಾಡಿಸಿದೆ. ಆದರೆ ಅಧಿಕಾರಿಗಳ ಕುಯುಕ್ತಿಯಿಂದ ಎರಡನೆಯ ಬಾರಿ ನಾನು ಗೆಲ್ಲಲಿಲ್ಲ.

1942ರ ಚಳವಳಿಯಿಂದ ಸಂಸ್ಥಾನದಲ್ಲಿ ಪೂರ್ತಿ ಜಾಗೃತಿ ಆಯಿತು. ಮುಧೋಳದ ಆಡಳಿತಕ್ಕೂ ಇದರ ಬಿಸಿ ತಟ್ಟಿತು. 1946ರಲ್ಲಿ ನೇಸ್ವಿಯವರ ಅಧ್ಯಕ್ಷತೆಯಲ್ಲಿ ಪ್ರಜಾ ಸಂಘದ ನೇತೃತ್ವದಲ್ಲಿ ಪ್ರಜಾಪರಿಷತ್ತು ಸೇರಿತು. ಡಿ. ಬಿ. ಟಂಕಸಾಲಿ ಸ್ವಾಗತಾಧ್ಯಕ್ಷರು. ಇದರಿಂದ ಹೊಣೆಗಾರ ಸರಕಾರದ ಸ್ಥಾಪನೆ ಆಗಿ, 1947ರಲ್ಲಿ ನಾನು ಮುಖ್ಯಮಂತ್ರಿ, ಟಂಕಸಾಲಿ ಶಿಕ್ಷಣಮಂತ್ರಿ ಆದೆವು. ನನ್ನ ಕಡೆ ಇದ್ದ ನಾಗರಿಕ ಪೂರೈಕೆ ಶಾಖೆಯ ನೆರವಿನಿಂದ ರೈತರಿಗೆ ಸಬ್ಸಿಡಿ ನೀಡಿದ್ದರಿಂದ ಆಹಾರಧಾನ್ಯ ಸಂಗ್ರಹ ಸಾಧ್ಯ ಆಯಿತು. ಇದರ ವಿತರಣೆಗೂ ಯೋಗ್ಯ ವ್ಯವಸ್ಥೆಯಾಗಿ ಬಡವರಿಗೆ ಅನುಕೂಲ ಆಯಿತು. ಜಕಾತಿ, ಹುಲ್ಲುಬನ್ನಿ ಸೂಟ್ ಬಿಟ್ಟೆವು. ಸರಕಾರಿ ನೌಕರರ ನೌಕರಿ ಕಾಯಂ ಮಾಡಲಾಯಿತು. ರೈತರಿಗೆ ಕಡಿಮೆ ಬಡ್ಡಿಯ ತಗಾಯಿ ವ್ಯವಸ್ಥೆ ಮಾಡಿದೆವು. ರಾಮಾಚಾರ್ಯ ಕಟ್ಟಿ ಅವರಿಗೆ ಖಾದಿ-ಗ್ರಾಮೋದ್ಯೋಗ, ಒಕ್ಕಲತನಗಳಿಗೆ ಸಂಬಂಧಿಸಿದ ಪ್ರಚಾರಶಾಖೆ ವಹಿಸಿದ್ದರಿಂದ ಈ ಉದ್ಯೋಗಗಳಿಗೆಲ್ಲ ಸರಕಾರದಿಂದ ಸಕಾಲಕ್ಕೆ ಸಹಾಯ ಸಿಕ್ಕು ಉದ್ಯೋಗಗಳು ಬೆಳೆದವು. ನಾಗರಿಕ ಪೂರೈಕೆ ಖಾತೆಯಿಂದ ಸರಕಾರಕ್ಕೆ 70,000 ರೂ. ಲಾಭ ಆಯಿತು. ಒಟ್ಟಿನಲ್ಲಿ ಹೊಣೆಗಾರ ಸರಕಾರ ಸಾಕಷ್ಟು ಪ್ರಜಾಹಿತ ಕಾರ್ಯ ಮಾಡಿತು.



ಕಿ.ಸಂ. 5 ರಾ.

## ರಾಮದುರ್ಗದ ದುರಂತ ಹೋರಾಟ

169 ಚದರ ಮೈಲು ವಿಸ್ತಾರದ ಚಿಕ್ಕ ಸಂಸ್ಥಾನವಾದ ರಾಮದುರ್ಗದ ಅರಸರು ಭಾವೆ ಮನೆತನದವರಾಗಿದ್ದು ನರಗುಂದ ಬಾಬಾಸಾಹೇಬನ ದಾಯಾದಿಗಳು. ಗೋಕಾಕ ತಾಲೂಕಿನಲ್ಲಿದ್ದ ಕೆಲವು ಹಳ್ಳಿಗಳನ್ನು ಸೇರಿಸಿ ರಾಮದುರ್ಗ ತಾಲೂಕಾಗಿ ಈಗ ಬೆಳಗಾವಿ ಜಿಲ್ಲೆಯ ಭಾಗವಾಗಿರುವ ಈ ಸಂಸ್ಥಾನದ ಬಹುಪಾಲು ಜನ ಅಪ್ಪಟ ಕನ್ನಡಿಗರೇ ಆಗಿದ್ದರೂ ಆಡಳಿತ, ಶಿಕ್ಷಣಗಳೆಲ್ಲ ಆಗ ಮರಾಠಿಯಲ್ಲೇ ನಡೆಯುತ್ತಿತ್ತು. ಇದರಿಂದ ಪ್ರಜೆಗಳೆಲ್ಲ ನಿರಕ್ಷರಕುಕ್ಷಿಗಳೇ ಆಗಿದ್ದರು.

1938ರ ಮಾರ್ಚ್‌ವರೆಗೆ ರಾಮದುರ್ಗ ಸಂಸ್ಥಾನದಲ್ಲಿ ಯಾವ ರೀತಿಯ ಪ್ರಜಾ ಚಳವಳಿ ಅಥವಾ ಸಂಘಟನೆ ಇರಲಿಲ್ಲ. 1931 ಮತ್ತು 1934ರ ಪ್ರಜಾಸಪ್ತಾಹಗಳ ಕಾಲಕ್ಕೆ ಮಾತ್ರ ಗ. ವಿ. ಕೇತಕರ ('ಮರಾಠಾ'ದ ಸಂಪಾದಕರು) ಹಾಗೂ ವಾಮನ ರಾವ್ ಪಟವರ್ಧನ ('ಸಂಸ್ಥಾನೀ ಸ್ವರಾಜ್ಯ'ದ ಸಂಪಾದಕರು) ಇವರ ವ್ಯಾಖ್ಯಾನಗಳು ರಾಮದುರ್ಗದಲ್ಲಿ ಆಗಿದ್ದವು. 1936ರಲ್ಲಿ ಅ.ಭಾ. ಪ್ರಜಾಪರಿಷತ್ತಿನ ಅಧ್ಯಕ್ಷರಾಗಿದ್ದ ಡಾ|| ಪಟ್ಟಾಭಿ ಸೀತಾರಾಮಯ್ಯ ಹಾಗೂ ಕಾರ್ಯದರ್ಶಿ ಬಳವಂತರಾಯ್ ಮೆಹತಾ ಸಂಸ್ಥಾನಕ್ಕೆ ಭೇಟಿ ನೀಡಿ ಹೋಗಿದ್ದರು. ಆದರೆ ಸಂಸ್ಥಾನದಲ್ಲಿ ಸತತವಾಗಿ ಬರಗಾಲ ಬಿದ್ದು ಅರಸರು ಕಂದಾಯದಲ್ಲಿ ವಿನಾಯಿತಿ ಕೊಡಲು ಸಿದ್ಧರಾಗದಿರಲು ಜನರು ಕಂಗೆಟ್ಟರು. 1915ರಲ್ಲಿ ಪಟ್ಟಕ್ಕೆ ಬಂದಿದ್ದ ಅರಸರು ತಮ್ಮ ಆಡಳಿತದ ಕಾಲದಲ್ಲಿ ರಾಜ್ಯದ ಆದಾಯವನ್ನು ಮೂರುಪಟ್ಟು ಏರಿಸಿದ್ದರು. ಭೂಕಂದಾಯವನ್ನು ಎಷ್ಟು ಏರಿಸಿದ್ದರೆಂದರೆ, ಅದು ಬ್ರಿಟಿಷ್ ಭಾರತಕ್ಕೂ ಹೆಚ್ಚಾಗಿತ್ತು. ವರಮಾನ ತೆರಿಗೆಯ ಕೆಳಮಿತಿ 500 ರೂ. ಆಗಿತ್ತು. ದೇಶದಲ್ಲೆಲ್ಲ ಪ್ರಜಾ ಚಳವಳಿ ಉಲ್ಬಣಗೊಂಡಾಗ ರಾಮದುರ್ಗದ ಪ್ರಜಾಜನರೂ ಎಚ್ಚತ್ತರು. ಭೂಕಂದಾಯದಲ್ಲಿ ವಿನಾಯಿತಿ ನೀಡ ಬೇಕೆಂದೂ ಕಂದಾಯ ವಸೂಲಿ ತಹಕೂಬಾಗಬೇಕೆಂದೂ ಬೇಡಿಕೆ ಮಂಡಿಸಿ ಹಳ್ಳಿಗರು ರಾಮದುರ್ಗಕ್ಕೆ ಬಂದರು. "ದಿವಾಣರು ಊರಲ್ಲಿಲ್ಲ. ಅವರು ಬಂದನಂತರ ವಿಚಾರಿಸಿ ಆಜ್ಞೆ ಹೊರಡಿಸುತ್ತೇನೆ" ಎಂದರು ಅರಸರು. ಆದರೆ ಈ ಆಜ್ಞೆ ಬಹಳ ದಿನವಾದರೂ ಹೊರಡಲಿಲ್ಲ. ಕಡೆಗೆ 28-3-1938ರಂದು ಹಳ್ಳಿಹಳ್ಳಿಗಳಿಂದ ಕೂಡಿದ ಜನರ ಗುಂಪು ರಾಮದುರ್ಗಕ್ಕೆ ಹೋಗಿ ಅರಸರನ್ನು ಕಂಡರು. ದರ್ಪೋಕ್ತಿಯ ಉತ್ತರ ಬಂದಿತು. ಜನ ಅರಮನೆಯ ಮುಂದೆ ಕುಳಿತರು. ಸಂಜೆ ಅರಸರು ಗಾಳಿಸಂಚಾರಕ್ಕೆ ಹೋದಾಗ ಜನ ಮತ್ತೆ ಬಿನ್ನವಿಸಬೇಕೆಂದು ಹೋದಾಗ ಅರಸರ ಕಾವಲುಪಡೆಯವರು ಅವರನ್ನು

ತಡೆದರು. ಕುದುರೆಸವಾರರಾಗಿದ್ದ ಶಾಪಲಿನವರ ಒಂದು ಕುದುರೆಯು ಒದೆತಕ್ಕೆ ಒಬ್ಬ ರೈತನು ಸಿಕ್ಕ. ಜನ ರೊಚ್ಚಿಗೆದ್ದರು. ಕರನಿರಾಕರಣ ಚಳವಳಿ ಆರಂಭಿಸ ಬೇಕೆಂದು ಯೋಚಿಸಿದರು.

ಆಗ ವಿಜಾಪುರ ಡಿ.ಸಿ.ಸಿ. ಅಧ್ಯಕ್ಷ ಮರುಳಾರಾಧ್ಯ ಶಾಸ್ತ್ರಿ ಅವರು ಸಂಸ್ಥಾನದಲ್ಲಿ ಸಂಚರಿಸಿದರು. ಅವರ ಭಾಷಣಗಳು ಪ್ರಕ್ಷೋಭಕವಾಗಿಯೇ ಆದವೆನ್ನಲಾಗುತ್ತದೆ. ಮುಂದೆ 13-5-1938ರಂದು ಮುನವಳ್ಳಿ ಅವರು ಅಧ್ಯಕ್ಷರಾಗಿರುವ ರಾಮದುರ್ಗ ಸಂಸ್ಥಾನ ಪ್ರಜಾಸಂಘ ಸ್ಥಾಪನೆಯಾಯಿತು. ರಾಮದುರ್ಗ ಹಾಗೂ ಸುತ್ತಲ ಹಳ್ಳಿಗಳಲ್ಲಿ ಪ್ರಭಾತ್‌ಫೇರಿ, ಮೆರವಣಿಗೆ, ಇವೆಲ್ಲ ನಡೆದವು. ದಿ. 25-4-1938ರಂದು ರಾಮದುರ್ಗದಲ್ಲಿ ಓಣಿಗಳಲ್ಲಿ ಬೀದಿ ದೀಪಗಳನ್ನು ಒಡೆದುಹಾಕಿದರು.

ಅರಸರು ವಿವೇಕದಿಂದ ವರ್ತಿಸುವ ಬದಲು ಸಭಾನಿಷೇಧಾಜ್ಞೆ ಹಾಗೂ ಸಂಸ್ಥೆಗಳ ನೋಂದಣಿ ಕಾನೂನು ಜಾರಿ ಮಾಡಿದರು. ಸಭಾನಿಷೇಧಾಜ್ಞೆ ಇದ್ದರೂ ಎಲ್ಲೆಡೆ ಸಭೆಗಳಾಗತೊಡಗಿದವು. ಈ ಕಾಲಕ್ಕೆ ಅರಸರು ಕಂದಾಯ ವಸೂಲಿ ಬಗ್ಗೆ ಕೆಲವೊಂದು ರಿಯಾಯಿತಿ ಹಾಗೂ ತಗಾವಿ ಸಾಲ ವಸೂಲಿ ತಹಕೂಬಿ ಬಗ್ಗೆ ಪ್ರಕಟಣೆ ಹೊರಡಿಸಿದರು. ಆದರೆ ಇದರಿಂದ ಕಂದಾಯ ತಗ್ಗಲಿಲ್ಲ. ಬಹುಪಾಲು ಜನರ ಬೇಡಿಕೆಗಳು ಹಾಗೆಯೇ ಉಳಿದವು. ಸರಕಾರ ವಿರೋಧೀ ಭಾವನೆಗಳು ಪ್ರಕ್ಷೋಭಕರವಾಗಿ ಹೆಚ್ಚಿದವು. ದಿ. 21-5-1938ರಂದು ಸುರೇಬಾನದ ಜಕಾತಿಕಟ್ಟೆ ಭಸ್ಮವಾಯಿತು.

12-5-1938ರಂದು ಸಾಂಗಲಿಯಲ್ಲಿ ಸರ್ದಾರ್ ಪಟೇಲರ ಅಧ್ಯಕ್ಷತೆಯಲ್ಲಿ ನಡೆದ ದಕ್ಷಿಣ ಸಂಸ್ಥಾನಗಳ ಪ್ರಜಾಪರಿಷತ್ತಿನ 12ನೆಯ ಅಧಿವೇಶನಕ್ಕೆ ಮುನವಳ್ಳಿ ಹಾಗೂ ಮರುಳಾರಾಧ್ಯ ಶಾಸ್ತ್ರಿಗಳು ಹೋಗಿ, ರಾಮದುರ್ಗದ ಪರಿಸ್ಥಿತಿಯನ್ನು ನಿವೇದಿಸಿದರು. ಕರನಿರಾಕರಣ ಚಳವಳಿ ನಡೆಸಲು ಅನುಮತಿ ಕೇಳಿದರು. ಆದರೆ ಅದಕ್ಕೆ ಅನುಮತಿ ಕೊಡಲಿಲ್ಲ. ರಾಮದುರ್ಗದ ಪರಿಸ್ಥಿತಿಯ ಪರಿಶೀಲನೆಗೆ ಶಂಕರರಾವ್ ದೇವ್, ಗಂಗಾಧರರಾವ್ ದೇಶಪಾಂಡೆ, ಗೋವಿಂದರಾವ್ ಕಣಬೂರ, ಕೆ. ಎಸ್. ಪಾಟೀಲ, ನೇಮುಚಂದ ಆರಿ, ಅಂದಾನಪ್ಪ ದೊಡ್ಡಮೇಟಿ ಇವರನ್ನೊಳಗೊಂಡ ಒಂದು ಕಮಿಟಿಯನ್ನು ಪರಿಷತ್ತು ನೇಮಿಸಿತು. ರಾಮದುರ್ಗ ಪ್ರಜಾಸಂಘದಿಂದ ಅಧಿಕಾರ ಮುಖತ್ಯಾರ ಪತ್ರ ಪಡೆದು ಶಂಕರರಾವ್ ದೇವ್ ಅವರು ಅರಸರ ಕೂಡ ಮಾತುಕತೆ ನಡೆಸಿದರು. ಕಡೆಗೆ 21-6-38ರಂದು ಅರಸರಿಗೂ ಶಂಕರರಾವ್ ದೇವ್‌ರಿಗೂ ಒಪ್ಪಂದವಾಗಿ ಒಂದು ಪ್ರಕಟಣೆ ಹೊರಟಿತು. ಅದರಂತೆ, ಸಂಸ್ಥಾನದಲ್ಲಿ ರಾಜಕೀಯ ಸುಧಾರಣೆಗಳನ್ನು ಸೂಚಿಸಲು ರಾಜ ಪ್ರಜರ ಪ್ರತಿನಿಧಿಗಳುಳ್ಳ ಸಮಿತಿ ನೇಮಿಸಲಾಗುವುದು; ಸಮಿತಿಯ ನಿರ್ಣಯ ಹೊರಬೀಳುವವರೆಗೆ ತಾತ್ಪೂರ್ತಿಕ ಸಲಹಾಮಂಡಳ ನೇಮಿಸಲಾಗುವುದು; ಹಿಂದಣ ಕಂದಾಯ ಬಾಕಿಯಲ್ಲಿ 29,000 ರೂ. ಪೂರ್ತಿ ವಿನಾಯಿತಿ; ಈಗಣ ಕಂದಾಯದಲ್ಲಿ ಕಾಲಂಶ ಕಡಿತ; ಉಳಿದ ಮುಕ್ಕಾಲಂಶಕ್ಕೆ ತಹಕೂಬಿ; ಹುಲ್ಲುಬನ್ನಿ

ರದ್ದು; ಕಂದಾಯದ ಪುನರ್ವಿಮರ್ಶೆಗೆ ಸಮಿತಿಯೊಂದರ ನೇಮಕದ ಸೂಚನೆ ; ನಗರ ಪಾಲಿಕೆಯಲ್ಲಿ ಚುನಾಯಿತ ಸದಸ್ಯರ ಸಂಖ್ಯೆ 2/3ಕ್ಕೆ ಏರಿಕೆ; ಅಧ್ಯಕ್ಷರ ಚುನಾವಣೆ; ವರಮಾನ ತೆರಿಗೆ ಕನಿಷ್ಠ ಮಿತಿ 500ರಿಂದ 700 ರೂ.ಗೆ ; ಆಡಳಿತ ಭಾಷೆ ಮರಾಠಿಯ ಬದಲು ಕನ್ನಡ; ಸ್ಥಾನಿಕ ಜನರಿಗೆ ಸರಕಾರಿ ನೌಕರಿ—ಇವು ಒಪ್ಪಂದದ ಮುಖ್ಯಾಂಶಗಳು. ತನ್ನ ಬಹುಪಾಲು ಬೇಡಿಕೆಗಳು ಮಾನ್ಯ ಆದ ಬಗ್ಗೆ ಜನಸಾಮಾನ್ಯರು ಸಮಾಧಾನ ಪಟ್ಟರಲ್ಲದೆ ದೇವ್ ಅವರನ್ನು ಈ ಬಗ್ಗೆ ಅಭಿನಂದಿಸಲಾಯಿತು.

ಆದರೆ ಪ್ರಜಾಸಂಘದ ಕಾರ್ಯಕರ್ತರು ಈ ಜಾಹೀರನಾಮೆಯನ್ನು ಕಟುವಾಗಿ ಟೀಕಿಸಿ, ಶಂಕರರಾವ್ ದೇವ್ ಹಾಗೂ ಗಂಗಾಧರರಾವ್ ದೇಶಪಾಂಡೆ ಬ್ರಾಹ್ಮಣರಿದ್ದು ಬ್ರಾಹ್ಮಣ ಅರಸರಿಂದ ಲಂಚ ತಿಂದು ಪ್ರಜೆಗಳಿಗೆ ಮೋಸಮಾಡಿದ್ದಾರೆಂದು ಪ್ರಚಾರ ಆರಂಭಿಸಿದರು. ತಮ್ಮ ಜೀವನದುದ್ದಕ್ಕೂ ಪ್ರಾಮಾಣಿಕರೆಂದು ಖ್ಯಾತರಾದ ಈ ನಾಯಕರ ಬಗ್ಗೆ ಲಂಚ, ಜಾತೀಯತೆಗಳ ಆಪಾದನೆಮಾಡಿದ್ದು ಅಚ್ಚರಿಯ ವಿಷಯವೇ. ಅರಸರು ಒಪ್ಪಂದಕ್ಕೆ ಅನುಗುಣವಾಗಿ ಹಣಮಂತರಾವ್ ಕೌಜಲಗಿ, ಅಪ್ಪಾಸಾಹೇಬ ಪಟವರ್ಧನ, ಮುನವಳ್ಳಿ, ಎಸ್. ಕೆ. ಜೋಶಿ ಹಾಗೂ ವಿ. ಎಸ್. ಪಾಟೀಲರನ್ನೊಳಗೊಂಡ ಸಲಹಾ ಮಂಡಳ ನೇಮಿಸಿದರಲ್ಲದೆ, ಭೂಕಂದಾಯದ ಪುನರ್ವಿಮರ್ಶೆಗೆ ಶಿಫಾರಸು ಮಾಡಲು ಗಂಗಾಧರರಾವ್ ದೇಶಪಾಂಡೆ (ಅಧ್ಯಕ್ಷ), ರಂಗರಾವ್ ದಿವಾಕರ, ಅಂದಾನಪ್ಪ ದೊಡ್ಡಮೇಟಿ, ಡಾ|| ಹರ್ಡೀಕರ, ವೀರನಗೌಡ ಪಾಟೀಲ ಹಾಗೂ ಮುನವಳ್ಳಿ ಇವರುಳ್ಳ ಸಮಿತಿ ನೇಮಿಸಿದರು. ಈ ಸಮಿತಿಯಲ್ಲಿ ಸಾಂಗಲಿ, ಜಮಖಂಡಿ ಹಾಗೂ ರಾಮದುರ್ಗಗಳ ದಿವಾಣರು ದರಬಾರಿನ ಪ್ರತಿನಿಧಿಗಳಾಗಿದ್ದರು. 3 12–1938 ರಂದು ಸಮಿತಿಯ ವರದಿ ಸಿದ್ಧವಾಗಿ, ಭೂಕಂದಾಯವು 1890ರ ಮೂಲ ಸೆಟ್ಲ್‌ಮೆಂಟಿನಂತೆ ಇರಬೇಕು, ಲೋಕಲ್ ಫಂಡ್‌ನ ಹಣ ಗ್ರಾಮೋದ್ಧಾರಕ್ಕೆ ಕಾದಿಡಬೇಕು, ಗ್ರಾಮೋದ್ಧಾರಕಾರ್ಯವನ್ನು ಪ್ರಜಾಸಂಘಕ್ಕೆ ಒಪ್ಪಿಸಬೇಕು, ಎಂದು ಸೂಚಿಸಲಾಯಿತು. ಇವನ್ನು ಅರಸರು ಒಪ್ಪಿ 23–12–1938ರಂದು ಜಾಹೀರನಾಮೆ ಹೊರಡಿಸಿದರು. ಆದರೆ ಈ ಪ್ರಕಟಣೆಯಿಂದ ಪ್ರಜಾಸಂಘ ಅಸಮಾಧಾನಗೊಂಡಿರಬಹುದು. ಮುನವಳ್ಳಿ, ಮರುಳಾರಾಧ್ಯ ಶಾಸ್ತ್ರಿ ಅವರು ಮತ್ತೆ ಅರಸರನ್ನು ಕಂಡು ಮಾತನಾಡಿ, ಇನ್ನೂ ಹೆಚ್ಚಿನ ಸವಲತ್ತುಗಳುಳ್ಳ ಒಂದು ಜಾಹೀರನಾಮೆಯನ್ನು 29–2–1939ರಂದು ಹೊರಡಿಸಿದರು. ಇದಕ್ಕೆ ಮುನವಳ್ಳಿ ಹಾಗೂ ಅರಸರ ಸಹಿ ಬಿದ್ದಿತ್ತು. ಇದರಿಂದಲೂ ಪರಿಸ್ಥಿತಿ ತಿಳಿಯಾದಂತಿರಲಿಲ್ಲ. ಪ್ರಕ್ಷೋಭಕರ ಭಾಷಣಗಳು ನಡೆದೇ ಇದ್ದವು.

5–4–1939ಕ್ಕೆ ರಾಮದುರ್ಗದ ನಡುಬೀದಿಯಲ್ಲಿದ್ದ ಧ್ವಜಸ್ತಂಭವನ್ನು ಹೊಸದಾಗಿ ಬಂದ ದಿವಾಣರು ಕೀಳಿಸಿದರು. ಜನರು ಪ್ರತಿಭಟಿಸಿದರು; ಗೊಂದಲವಾಯಿತು. 144ನೆಯ ಕಲಮು ಜಾರಿಮಾಡಿ, ಪ್ರಜಾಸಂಘವನ್ನು ಅಕ್ರಮಕೂಟವೆಂದು ಪ್ರಕಟಿಸಿದರು. ಹಿಂಸಾಚಾರವು ಮೊದಲಿಟ್ಟಿತು. ಪ್ರಜಾಸಂಘವು ಹಿಂಸಾಚಾರಕ್ಕೆ

ಹಾದಿಮಾಡಿಕೊಡುತ್ತಿದೆಯೆಂದು ಕಂಡುಕೊಂಡು, ಜನರ ಮನಸ್ಸನ್ನು ಶಾಂತಮಾರ್ಗದ ಕಡೆ ಒಲಿಸಲು ರಾಮಾಚಾರ್ಯ ಕಾಖಂಡಕಿ ಮುಂತಾದವರು ಸುಪ್ರಜಾಸಂಘ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಆದರೆ ಜಾತೀಯ ಕಾರಣವನ್ನು ಮುಂದೊಡ್ಡಿ ಕಲುಷಿತವಾದ ವಾತಾವರಣದಲ್ಲಿ ಅವರಿಗೆ ಯಶ ದೊರೆಯಲಿಲ್ಲ. 6-4-1939ರಂದು ಮುನವಳ್ಳಿ ಹಾಗೂ ದೇಶನೂರರ ಬಂಧನವಾಯಿತು. 7-4-1939ರಂದು ಸುರೇಬಾನ ಕಡೆಯಿಂದ ಮೂರುನಾಲ್ಕು ಸಾವಿರ ಜನ ರಾಮದುರ್ಗಕ್ಕೆ ಬಂದು ಜೈಲಿನ ಮೇಲೆ ದಾಳಿಮಾಡಿದರು. ಪೋಲಿಸರು ಗೋಳೀಬಾರು ಮಾಡಿದರು ; ಗುಂಡು ತೀರಿದಾಗ ಜನರ ಕೈಗೆ ಸಿಕ್ಕಿಬಿದ್ದರು. ಎಂಟು ಪೋಲಿಸರ ಸಜೀವ ದಹನವಾಯಿತು. ಜನ ಜೈಲಿಗೂ ಬೆಂಕಿ ಇಟ್ಟರು. ಸಂಜೆ ಕೊಲ್ಲಾಪುರದಿಂದ ಸೈನ್ಯ ಬಂತು.

ನ್ಯಾಯಮೂರ್ತಿ ಪಾಟಕರರನ್ನು ವಿಶೇಷ ನ್ಯಾಯಾಧೀಶರಾಗಿ ನೇಮಿಸಿ ವಿಚಾರಣೆ ಆಯಿತು. ಕೊಲೆ, ದಂಗೆಗಳ ಅಪಾದಿತರ ಪರ ಪಣ್ಣುಖಪ್ಪ ಅಂಗಡಿ, ಹಾಗೂ ಆರ್ಗ್ಯುಮೆಂಟಿಗೆ ಮುಂಬೈಯಿಂದ ವೀರ ನರಿಮನ್ ಬಂದಿದ್ದರು. ಕೊನೆಗೆ ಒಂಬತ್ತು ಜನರಿಗೆ ಫಾಶಿ, ಉಳಿದ ಅನೇಕರಿಗೆ ವಿವಿಧ ಅವಧಿಯ ಶಿಕ್ಷೆ ಆದುವು.

ಈ ದುರಂತದಿಂದ ರಾಮದುರ್ಗದಲ್ಲಿ ಚಳವಳಿಯೇ ಇಲ್ಲದಂತಾಯಿತು. ಸಂಸ್ಥಾನದಲ್ಲಿ ಆಂಗ್ಲ ಹಾಗೂ ಹೊರಗಿನ ಅಧಿಕಾರಿಗಳು ಬರುವಂತಾಯಿತು. ಈ ಚಿಕ್ಕ ಸಂಸ್ಥಾನಗಳ ರಕ್ಷಣೆಗೆ ಒಂದು ಕಾಮನ್ ಪೋಲಿಸ್ ಫೋರ್ಸ್ ಸ್ಥಾಪಿತವಾಯಿತು. ಇತರ ಸಂಸ್ಥಾನಗಳಲ್ಲಿ ಆದಂತೆ ರಾಮದುರ್ಗದಲ್ಲಿ ಜವಾಬ್ದಾರಿ ಸರಕಾರವೂ ಬರಲಿಲ್ಲ. ಸಂಸ್ಥಾನಗಳ ಪ್ರಜಾ ಚಳವಳಿಯಲ್ಲಾಗಲೀ ವಿಲೀನೀಕರಣದ ಚಳವಳಿಯಲ್ಲಾಗಲೀ ರಾಮದುರ್ಗ ಸಂಸ್ಥಾನದ ಸೊಲ್ಲೇ ಇಲ್ಲದಂತಹ ದುರಂತ ಕೂಡ ಇದರಿಂದ ಘಟಿಸಿತು. (ವಿವಿಧ ಮೂಲ ಹಾಗೂ ವ್ಯಕ್ತಿಗಳಿಂದ ಸಂಗ್ರಹಿತ).

**ಸುಶೀಲಾಬಾಯಿ ಜ. ಕುಲಕರ್ಣಿ**

ಮಠಗಲ್ಲಿ, ಬೆಳಗಾವಿ

ಕಿ.ಸ್ಮ. 6 ಮಿ.

## ಬಸವಕುಮಾರ ಮುಳಗುಂದಮಠ

ಜನನ : 1918 ಉದ್ಯೋಗ : ಸರ್ವೋದಯ ಕಾರ್ಯಕರ್ತ ವಿಳಾಸ : ಶಿಗ್ಲಿ, ತಾ॥ ಶಿರಹಟ್ಟಿ

---

ನನ್ನ ಊರಾದ ಶಿಗ್ಲಿಯು ಹಿಂದೆ ಮಿರಜಿ ಸಂಸ್ಥಾನಕ್ಕೆ ಸೇರಿದ ಹನ್ನೊಂದು ಗ್ರಾಮಗಳ ಲಕ್ಷ್ಮೇಶ್ವರ ತಾ॥ಗೆ ಸೇರಿತ್ತು. ಈಗ ಧಾರವಾಡ ಜಿಲ್ಲಾ ಶಿರಹಟ್ಟಿ ತಾ॥ನಲ್ಲಿದೆ. ಈ ಶಿರಹಟ್ಟಿ ತಾ॥ನಲ್ಲಿ ಈಗ ಹಳೆಯ ಸಂಸ್ಥಾನಿಕ ಪ್ರದೇಶಗಳಾದ ಸಾಂಗಲಿಗೆ ಸೇರಿದ

ಶಿರಹಟ್ಟಿಯ ಊರುಗಳೂ ಕಿರಿವೀರಜಿ (ಬುಧಗಾಂವ) ಇದಕ್ಕೆ ಸೇರಿದ ಗುಡಗೇರಿಯ ಗ್ರಾಮಗಳೂ ಸೇರಿವೆ.

ನೆರೆಯ ಶಿಗ್ಗಾಂವಿ ತಾಲ್ಲೂಕಿನ ಹುಲಗೂರಿನಲ್ಲಿ ಕೃಷ್ಣಾಬಾಯಿ ಪಂಜೀಕರರ ಅಧ್ಯಕ್ಷತೆಯಲ್ಲಿ ತಾಲೂಕು ರೈತ ಪರಿಷತ್ತು ನಡೆದಾಗ ಶಿಗ್ಲಿಯಿಂದ ಅಲ್ಲಿಗೆ ಹೋಗಿದ್ದ ನಾಲ್ಕಾರು ಹುಡುಗರು ಹುರಿದುಂಬಿ ನಮ್ಮ ಲಕ್ಷ್ಮೇಶ್ವರ ತಾ॥ ಬಗ್ಗೆಯೂ ಒಂದು ಠರಾವು ಮಂಡಿಸಿದರು. ಕಳೆದ ಮೂರು ವರ್ಷಗಳಿಂದ ಮಳೆಯೇ ಇಲ್ಲದೆ ನಾಪೀಕು ಆಗಿದ್ದರೂ ಅಧಿಕಾರಿಗಳು ಅನ್ಯಾಯದಿಂದ ಆಣೇವಾರಿ ಮಾಡಿದ್ದು, ಮುಂಬೈ ಸರಕಾರವು ಸತ್ಯವನ್ನು ತಿಳಿದುಕೊಂಡು ಲಕ್ಷ್ಮೇಶ್ವರ ತಾ॥ಗೆ ನ್ಯಾಯ ದೊರಕಿಸಿ ಕೊಡಬೇಕು, ಎಂಬುದೇ ಈ ಠರಾವು. ಆ ಪರಿಷತ್ತಿಗೆ ಬಂದಿದ್ದ ಕಳ್ಳೀ ತಿಪ್ಪಣ್ಣ ಶಾಸ್ತ್ರಿಗಳನ್ನು ಈ ಹುಡುಗರು ಶಿಗ್ಲಿಗೆ ಕರೆತಂದು ಅಲ್ಲಿ ಅವರ ಕೀರ್ತನೆ ಮಾಡಿಸಿದರು. ಇಡೀ ಊರಲ್ಲಿ ಜಾಗೃತಿ ಮೂಡಿತು. ಅವರು ಸರಿಯಾದ ಮಾರ್ಗದರ್ಶನ ಮಾಡಿದರು. ಊರ ಹಿರಿಯರಾದ ಮಹಾದೇವಪ್ಪ ಜನಿವಾರದ, ಸಿದ್ವೀರಪ್ಪ ಜಂಗಣ್ಣನವರ ಮೊದಲಾದವರನ್ನು ಹುರಿದುಂಬಿಸಿ ಗೋವಿಂದರಾವ್ ಕಣಬೂರ ಹಾಗೂ ಇಂದಿರಾ ಬಾಯಿ ಹರಪನಹಳ್ಳಿ (ಮುಳಗುಂದ) ಇವರ ಬಗ್ಗೆ ತಿಳಿಸಿ, ವಿಳಾಸವನ್ನೂ ಕೊಟ್ಟರು. ಈ ಉಭಯ ನಾಯಕರನ್ನು ಕರೆಸಿ, ಇಲ್ಲಿನ ಹುಡುಗರ ನೆರವಿನಿಂದ ಹಿರಿಯರ ಕೂಡೆ ಮಾತನಾಡಿ ಶಿಗ್ಲಿ ಪ್ರಜಾ ಸಂಘ ಸ್ಥಾಪಿಸಿದರು. ಅಮರಪ್ಪ ದಾಸಪ್ಪ ಹುಲಗೂರ ಇವರು ಹಿರಿತನ ಹೊರುವಂತೆ ಮಾಡಿದರು. ಪ್ರಜಾ ಸಂಘದ ಕಾರ್ಯಸಮಿತಿ ಹೀಗಿತ್ತು: ವೀರಪ್ಪ ಜಂಗಣ್ಣನವರ (ಅಧ್ಯಕ್ಷ), ಕೃಷ್ಣಾಸಾ ಬದಿ (ಉಪಾಧ್ಯಕ್ಷ), ಬಸವಕುಮಾರ ಮುಳಗುಂದಮಠ (ಕಾರ್ಯದರ್ಶಿ), ಆದಯ್ಯ ಹಿರೇಮಠ (ಜೊತೆಕಾರ್ಯದರ್ಶಿ), ಫಕೀರಪ್ಪ ಕಾತರಕಿ, ಚನ್ನಬಸಪ್ಪ ಕೋಗುಂದ, ಗುರುನಾಥಪ್ಪ ಹಾಳಕೇರಿ, ಧನಂಜಯ ಬಿದರಕಟ್ಟಿ ಹಾಗೂ ಕಲ್ಲಪ್ಪಪೂಜಾರ (ಸದಸ್ಯರು). (1941ರ ವರೆಗೂ ಈ ಸಂಘಟನೆ ಊರ ಸಮಸ್ಯೆಗಳ ಸಲುವಾಗಿ ಉತ್ತಮ ರೀತಿಯಲ್ಲಿ ದುಡಿಯಿತು. ರಾಷ್ಟ್ರೀಯ ಚಟುವಟಿಕೆಗಳಲ್ಲಿ ಮುಂದಾಗಿತ್ತು. 1942ರ ಚಳವಳಿಯಲ್ಲೂ 1947ರ ಮೈಸೂರು ಸತ್ಯಾಗ್ರಹದಲ್ಲೂ ನಮ್ಮ ಊರ ತರುಣರು ಉತ್ಸಾಹದಿಂದ ದುಡಿದರು.)

ಸಂಘಟನೆಯನ್ನು ಆರಂಭಿಸಿದ ಒಂದು ತಿಂಗಳಿನಲ್ಲಿಯೇ ಲಕ್ಷ್ಮೇಶ್ವರ ತಾಲೂಕು ಪ್ರಜಾ ಸಂಘದ ಸಮ್ಮೇಳನವನ್ನು ಅಂದಾನಪ್ಪ ದೊಡ್ಡಮೇಟಿಯವರ ಅಧ್ಯಕ್ಷತೆಯಲ್ಲಿ ನಡೆಸಿದೆವು. ಮರಬಸಪ್ಪ ಬಳ್ಳಾರಿ ಅವರು ಸೇವಾದಳವನ್ನು ಶಿಸ್ತಿನಿಂದ ಸಂಘಟಿಸಿ ಮೆರವಣಿಗೆಯನ್ನು ಹೊರಡಿಸಿದ್ದರು. ಊರಲ್ಲಿ ಸಭಾಬಂದಿ ಇದ್ದುದರಿಂದ ಊರ ಹೊರಗಿನ, ಬ್ರಿಟಿಷ್ ಹದ್ದಿಯ ಕನಕಾಪುರಕ್ಕೆ ದೊಡ್ಡಮೇಟಿಯವರನ್ನು ಊರ ಆಬಾಲವೃದ್ಧಸ್ತ್ರೀಪುರುಷರೆಲ್ಲ ಸೇರಿದ್ದ ಭಾರೀ ಸವಾದ್ಯ ಮೆರವಣಿಗೆಯಲ್ಲಿ ಒಯ್ದರು.

ಊರಲ್ಲಿ ಒಂದು ಪಿಳ್ಳೆಯೂ ಉಳಿಯಲಿಲ್ಲ. ಅಲ್ಲಿ ನಡೆದ ಭಾರೀ ಸಭೆಯಲ್ಲಿ ತಿಂಗಳೊಪ್ಪತ್ತಿನಲ್ಲಿ ಆದ ಈ ಭಾರೀ ಜಾಗೃತಿಯ ಬಗ್ಗೆ ದೊಡ್ಡಮೇಟಿಯವರು ಅತ್ಯಂತ ಸಂತಸ ಪ್ರಕಟಿಸಿದರು. ಗೋವಿಂದರಾವ್ ಕಣಬೂರ ವಕೀಲ ಹಾಗೂ ಇಂದಿರಾ ಬಾಯಿ ಹರಪನಹಳ್ಳಿಯವರೂ ವೀರಾವೇಶದ ಭಾಷಣಗಳನ್ನು ಮಾಡಿದರು. ಮುಂದಿನ ವಾರವೇ ಹಳ್ಳಿಕೇರಿ ಗುದ್ಲೆಪ್ಪ, ಮುದವೀಡು ಕೃಷ್ಣರಾಯರನ್ನು ಕರೆಸಿ ಶಿಗ್ಲಿಯ ಟಿಳಕ ಮೈದಾನದಲ್ಲಿ ಸಾರ್ವಜನಿಕ ಸಭೆನಡೆಸಿ ಸಭಾಬಂದಿ ಕಾಯದೇಭಂಗ ಮಾಡಲಾಯಿತು. ಹುರಿದುಂಬಿದ ನೂರಾರು ಸ್ತ್ರೀಪುರುಷರೊಡನೆ ಲಕ್ಷ್ಮೇಶ್ವರಕ್ಕೂ ಹೋಗಿ ಬಸ್ತಿಕೇರಿಯಲ್ಲಿ ರಾಮಪ್ಪ ಧರಣಪ್ಪ ಬಂಗಾರಿಯವರ ಅಧ್ಯಕ್ಷತೆಯಲ್ಲಿ ಪ್ರಚಂಡ ಸಾರ್ವಜನಿಕ ಸಭೆ ಆಯಿತು. ತಾ॥ನ ಹಿರಿಯ ವಕೀಲ ಗಾಡಗೋಳಿ, ಕೊಪ್ಪರ, ಅಭ್ಯಂಕರ, ಪೂಜಾರ ಮೊದಲಾದವರನ್ನು ಕೂಡಿ ಸಂಸ್ಥಾನದ ಮಿರಜ್, ಮೊಡಲಿಂಬ ತಾಲೂಕುಗಳಿಗೂ ಹೋಗಿ ಇಡೀ ಸಂಸ್ಥಾನದ ಜನಬೆಂಬಲವನ್ನು ಚಳವಳಿಗೆ ಒದಗಿಸಿಕೊಟ್ಟರು. ಸರಕಾರಕ್ಕೆ ಮಾಡಿದ ಹಸ್ತೆ ತಹಕೂಬಿ ಬಗೆಗಿನ ಮನವಿಗಳು ವ್ಯರ್ಥವಾಗಿ, ಮಿರಜ್ ಸಂಸ್ಥಾನದ ಪ್ರಜಾಪರಿಷತ್ತು ಕರಬಂದಿಯನ್ನೇ ಸಾರಿತು. ದಿವಾನ್‌ಸಾಹೇಬರೇ ಸ್ವತಃ ಶಿಗ್ಲಿಗೆ ಬಂದರು.

ಚಾವಡಿಯಲ್ಲಿ ಹಾಸಲಾಗಿತ್ತು. ದಿವಾಣರು ಕುಳಿತಿದ್ದರು. ಊರ ಒಂದು ಪಿಳ್ಳೆಯೂ ಅವರ ಮುಂದೆ ಬರಲಿಲ್ಲ. ಊರ ಗೌಡ ಯಶವಂತರಾವ್ ಪಾಟೀಲರು ಬಂದು ಕೈಮುಗಿದು ಮರಾಠಿಯಲ್ಲಿ ಹೇಳಿದರು : "ನಾವು ತಮ್ಮ ನೌಕರರೂ ಹೌದು, ಶಿಗ್ಲಿಯ ನಾಗರಿಕರೂ ಹೌದು. ಊರವರೆಲ್ಲ ಕೂಲಂಕಷ ವಿಚಾರಮಾಡಿ ನಿರ್ಧರಿಸಿದ್ದಾಗಿದೆ. ಊರವರ ಮಾತು ಮೀರಿ ನಾವು ಬಾಳುವಂತಿಲ್ಲ. ತಮಗೆ ಗುಟುಕು ನೀರು ಕೊಡಲಾಗದೆಂದು ನನಗೆ ಊರವರ ಕಟ್ಟಪ್ಪಣೆ ಆಗಿದೆ. ಇಲ್ಲಿಗೆ ಯಾರನ್ನೂ ಕರೆಸುವುದು ಅಸಂಭವ. ತಾವೂ ಇಲ್ಲಿ ಹೆಚ್ಚು ಸಮಯದವರೆಗೆ ನಿಲ್ಲಲಾಗದು. ಬೇಕಾದರೆ ಈ ದಫ್ತರ ಗಂಟನ್ನು ಕಟ್ಟಿಕೊಂಡು ದಯಮಾಡಿಸಬಹುದು." ಸರಕಾರ ಬಗ್ಗಲೇಬೇಕಾಯಿತು.

ಮಿರಜೆಯಿಂದ ಪ್ರಜಾ ಸಂಘದ ಶಿಖರೆಯವರೇ ಶಂಕರರಾವ್ ದೇವ್, ಗಂಗಾಧರ ರಾವ್ ದೇಶಪಾಂಡೆ, ಪುಂಡಲೀಕಜಿ ಕಾತ್‌ಗಡೆ, ರಾಮರಾವ್ ಹುಕ್ಕೇರಿಕರ್ ಮುಂತಾದವರೊಡನೆ ಜನರ ಸ್ಥಿತಿಯ ಪರಿಶೀಲನೆಗೆ ಬಂದರು. ಒಂದುನೂರಾ ಒಂದು ಎತ್ತಿನ ಬಂಡಿಗಳಲ್ಲಿ ಬಂದವರ ಮೆರವಣಿಗೆಯಾಯಿತು. ಟಿಳಕ ಮೈದಾನದಲ್ಲಿ ಸಭೆ. ಖಾದಿ ಟೊಪ್ಪಿಗೆಗಳದೇ ಸಾಗರ ಸೇರಿದಂತೆ ಇತ್ತು. ನಮ್ಮ ನಾಯಕ ಅಮರಪ್ಪ ದಾನಪ್ಪ ಹುಲಗೂರರನ್ನು ಬಂದ ನಾಯಕರು 'ಶಿಗ್ಲಿ ಸಿಂಹ' ಎಂದು ಕರೆದರು. ಇಲ್ಲಿ ಶಿಸ್ತು, ಸಂಯಮ, ಅಹಿಂಸೆಗಳಿಂದ ನಡೆದ ಸಂಗ್ರಾಮದಿಂದ ಶಿಗ್ಲಿಯು ಬಾರ್ಡೋಲಿಯಂತೆ ಆಯಿತು, ಎಂದೂ ಹೊಗಳಿದರು. ಈ ಹೋರಾಟಕ್ಕೆ ಸರಕಾರವು ಶರಣಾಯಿತು,

ಈ ಗುಣಗಳೇ ನಿಮ್ಮ ವಿಜಯದ ಗುಟ್ಟು, ಎಂದರು. ಮುಂದೆ ಸರಕಾರದ ಕೂಡ ಸಂಧಾನ ಮುಗಿಸಿದರು (1939).

(ಮಾನ್ಯ ಲೇಖಕರು 1942ರ ಚಳವಳಿಯಲ್ಲಿ ಜೈಲು ಕಂಡವರಿದ್ದು, ಈ ಬಗ್ಗೆ ಅವರ ಸ್ಮೃತಿ ಸಂ. Iರಲ್ಲಿ ಧಾರ. 35 ನೋಡಿ. —ಸಂ||)

ಕಿ.ಸಂ. 7 ಜ.

## ಜಮಖಂಡಿ ಸಂಸ್ಥಾನದ ಚಳವಳಿ

ಸಾಂಗಲಿ, ಮಿರಜ, ಕುರುಂದವಾಡ ಹಾಗೂ ಜಮಖಂಡಿ ಇವು ಆಗಿನ ನಾಲ್ಕು ಪಟವರ್ಧನ ಮನೆತನದ ಸಂಸ್ಥಾನಗಳು. ಮಿರಜ ಹಾಗೂ ಕುರುಂದವಾಡ ಇವು ವಿಭಜಿತವಾಗಿ ಹಿರಿ (ಸೀನಿಯರ್) ಹಾಗೂ ಕಿರಿ (ಜೂನಿಯರ್) ಎಂಬ ಎರಡು ಭಾಗಗಳಾಗಿ ಒಟ್ಟು ಆರು ಸಂಸ್ಥಾನಗಳಾದವು. ಆದರೆ ಈ ನಾಲ್ಕು ಮೂಲ ಸಂಸ್ಥಾನಗಳು 1811ರಲ್ಲಿ ಅಸ್ತಿತ್ವಕ್ಕೆ ಬಂದವುಗಳು. ಪರಶುರಾಮಪಂತ ಪಟವರ್ಧನ ಎಂಬ ಪೇಶ್ವೆಯರ ಖ್ಯಾತ ಸೇನಾನಿಗೆ 1763-64ರಲ್ಲಿ ನೀಡಿದ ತಾಸಗಾಂವ ಜಾಗೀರೇ 1811ರಲ್ಲಿ ಅವರ ಪುತ್ರರಲ್ಲಿ ವಿಭಜಿತವಾಗಿತ್ತು. ಪೇಶ್ವೆಯ ಪತನಾನಂತರ (1818) ಈ ಜಾಗೀರುಗಳು ಬ್ರಿಟಿಷರಿಗೆ ಆಶ್ರಿತವಾಗಿ, ಇವುಗಳ ಪ್ರಮುಖರಿಗೆ ಬ್ರಿಟಿಷರು 'ರಾಜಾ' ಎಂಬ ಬಿರುದು ನೀಡಿದ್ದರು. ಜಮಖಂಡಿ ಸಂಸ್ಥಾನದಲ್ಲೂ ಇಬ್ಭಾಗವಾಗಿ ಚಿಂಚಣಿ ಎಂಬ ಒಂದು ಸಂಸ್ಥಾನವಿತ್ತು. ಮುಂದೆ ಈ ಸಂಸ್ಥಾನ ಖಾಲಸಾ ಆಯಿತು. ಜಮಖಂಡಿ ಸಂಸ್ಥಾನದಲ್ಲಿ ಜಮಖಂಡಿ, ಕುಂದಗೋಳ, ಬನಹಟ್ಟಿ ಈ ಮೂರು ಪಟ್ಟಣಗಳನ್ನೊಳಗೊಂಡ 77 ಗ್ರಾಮಗಳೂ 11 ಉಪಗ್ರಾಮಗಳೂ ಇದ್ದವು. ಇದರಲ್ಲಿ ಜಮಖಂಡಿ, ಕುಂದಗೋಳ ಎರಡು ತಾಲ್ಲೂಕುಗಳೂ ಈಗ ಮಹಾರಾಷ್ಟ್ರದಲ್ಲಿರುವ ವಾಠಾರ (ಸಾತಾರಾ ಜಿ||), ಪಾಠಖಳ (ಸೊಲ್ಲಾಪುರ ಜಿ||), ಹಾಗೂ ಢವಳಪುರಿ (ಅಹ್ಮದನಗರ ಜಿ||) ಹೀಗೆ ಮೂರು ಠಾಣ್ಯಗಳಿದ್ದವು. ಸಂಸ್ಥಾನದ ಒಟ್ಟು ಕ್ಷೇತ್ರ 524 ಚ. ಮೈಲಿ.

ದಿ|| ಅಪ್ಪಾಸಾಹೇಬ (ಉ|| ಗಣಪತರಾವ್) ವಾಟವೆ ಹಾಗೂ ಸದಾಶಿವರಾವ್ ಪೇಂಡಸೆ ಮತ್ತು ಬನಹಟ್ಟಿಯ ತಮ್ಮಣ್ಣಪ್ಪ ಚಿಕ್ಕೋಡಿ ಇವರು ಸಂಸ್ಥಾನದಲ್ಲಿ ಈ ಶತಮಾನದ ಮೊದಲ ದಶಕಗಳಲ್ಲಿ ಜನರ ಕುಂದುಕೊರತೆಗಳನ್ನು ಕೇಳಿ ದರ್ಬಾರಿಗೆ ಮುಟ್ಟಿಸಿ ಪರಿಹಾರಕ್ಕೆ ಯತ್ನಿಸುವ ಸಾರ್ವಜನಿಕ ಕಾರ್ಯಕರ್ತರಾಗಿದ್ದರು. ಚಿಕ್ಕೋಡಿಯವರು ಕನ್ನಡಭಾಷೆಯ ಸಲುವಾಗಿ ವಿಶೇಷ ಯತ್ನ ಮಾಡುತ್ತಿದ್ದವರು. 1905ರಿಂದ 10ರ ವರೆಗೆ ವಾಟವೆ ಅವರು ನಗರಪಾಲಿಕೆಯ ಅಧ್ಯಕ್ಷರಾಗಿದ್ದರಲ್ಲದೆ, 1918ರಲ್ಲಿ ಚುನಾಯಿತ

ಅಧ್ಯಕ್ಷರನ್ನು ಆರಿಸುವ ಅಧಿಕಾರ ನಗರಪಾಲಿಕೆಗೆ ಬರಲು ಪೇಂಡಸೆಯವರು ಅಧ್ಯಕ್ಷ ರಾದರು. 1888ರಲ್ಲೇ ಜಮಖಂಡಿಯಲ್ಲಿ ಹೈಸ್ಕೂಲಾಗಿದ್ದರಿಂದ ಅನೇಕರು ಪುಣೆಗೆ ಉಚ್ಚ ಶಿಕ್ಷಣಕ್ಕೆ ಹೋಗಿ ಅಲ್ಲಿನ ರಾಜಕೀಯ ವಾತಾವರಣದಿಂದ ಪ್ರಭಾವಿತರಾಗಿದ್ದರು. ಆ ಪೈಕಿ ವಿನಾಯಕ ಪರಾಂಜಪೆ, ಸದಾಶಿವ ಕಾಳೆ, ರಂಗರಾವ್ ಕುಲಕರ್ಣಿ, ಭಿಕಾಜಿ ಫಡಕೆ ಇವರು ಜಮಖಂಡಿಗೆ ಬಂದಾಗಲೆಲ್ಲವೂ ನಾರಾಯಣ ದೀಕ್ಷಿತ, ಆಬಾ ಕಾಳೆ, ನರಸೋಪಂತ ದೇಸಾಯಿ ಮತ್ತು ಹರಿಭಾವು ಕಾಳೆ ಮೊದಲಾದವರ ನೆರವಿನಿಂದ ವಿದ್ಯಾಭಿರುಚಿನರ್ಧಕ ಸಂಘ ಎಂಬ ಸಂಸ್ಥೆ, ವಾಚನವಾಟಿಕಾ ಎಂಬ ವಾಚನಾಲಯ, ವಾಗ್ಧೈರ್ಯೋತ್ಪಾದಿನೀ ಎಂಬ ಭಾಷಣ ಏರ್ಪಡಿಸುವ ಶಾಖೆ ಇವುಗಳನ್ನು ಏರ್ಪಡಿಸಿ ಚಟುವಟಿಕೆ ಆರಂಭಿಸಿದರು. ಜನ ಕೇಸರಿ, ಮರಾಠಾಗಳಂಥ ಪತ್ರಿಕೆಗಳನ್ನು ಓದು ವಂತಾಯಿತು. ಅಂತಾಜಿ ಕಾಳೆ, ಜನಾರ್ದನ ಕರಂದೀಕರ, ತಮ್ಮಣ್ಣಾ ಚಿಕ್ಕೋಡಿ, ಸದಾಶಿವರಾವ್ ಪೇಂಡಸೆ, ಸಂಸ್ಥಾನೀ ಸ್ವರಾಜ್ಯ ಪತ್ರಿಕೆಯ ಸಂಪಾದಕ ವಾಮನರಾವ್ ಪಟವರ್ಧನ, ಅಪ್ಪಾಸಾಹೇಬ ವಾಟವೆ, ದತ್ತೋಪಂತ ಮಿರಜಕರ, ಶಂಕರರಾವ್ ಜೋಶಿ, ವಿಠ್ಠಲರಾವ್ ಶಿಂದೆ (ಖ್ಯಾತ ಸಮಾಜಸುಧಾರಕ) ಮೊದಲಾದವರ ಭಾಷಣ ಗಳು ಈ ಸಂಸ್ಥೆಗಳಿಂದ ಆದವು.

ವಂಗಭಂಗ ಕಾಲಕ್ಕೆ (1905-6) ಕೆಲ ತಿಂಗಳು ಜಮಖಂಡಿಯಲ್ಲಿ ದಾಮೋದರ ಹುಲ್ಯಾಳಕರ, ಶಂಕರರಾವ್ (ಉ|| ಕಾಕಾ) ಕಾರಖಾನೀಸ, ಅನಂತರಾವ್ ಜೋಶಿ, ವಿಠ್ಠಲರಾವ್ ಕೊಲ್ಲಟಕರ, ಬಾಬುರಾವ್ ಮ್ಹಸಕರ, ಬಂಡೋಪಂತ ವಾಟವೆ ಮೊದ ಲಾದ ವಿದ್ಯಾರ್ಥಿಗಳು ಸ್ವದೇಶಿ ಪ್ರಚಾರ, ಪೈಸಾ ಫಂಡ ಕೂಡಿಸಿ ತಳೇಗಾವ ಕಾಜಿನ ಕಾರ ಖಾನೆಗೆ ಕಳುಹಿಸುವದು, ಪತ್ರಿಕೆಗಳಲ್ಲಿ ಲೇಖನ ಬರೆಯುವದು ಇತ್ಯಾದಿ ಕಾರ್ಯಕ್ರಮ ನಡೆಸಿದರು. 1914ರಲ್ಲಿ ದಾಮೋದರ (ದಾಮು ಅಣ್ಣಾ) ಹುಲ್ಯಾಳಕರರು ಕಲ್ಕತ್ತಾ ನ್ಯಾಷನಲ್ ಮೆಡಿಕಲ್ ಕಾಲೇಜಿನಿಂದ ಶಿಕ್ಷಣ ಮುಗಿಸಿ ಜಮಖಂಡಿಗೆ ಬಂದನಂತರ ಚಟುವಟಿಕೆಗಳಿಗೆ ಮತ್ತೆ ಚಾಲನೆ ದೊರೆಯಿತು. ಗೋವಿಂದರಾವ್ ಕುಲಕರ್ಣಿ, ಶಂಕರರಾವ್ ಆಪಟೆ, ಫಡಕೆ ವಕೀಲ, ಸದಾಶಿವರಾವ್ ಪೇಂಡಸೆ ಮೊದಲಾದವರು 1915ರಲ್ಲಿ ಪುಣೆಯಲ್ಲಿ ಆದ ಮುಂಬೈ ಪ್ರಾಂತಿಕ ರಾಜಕೀಯ ಪರಿಷತ್ತಿಗೆ ಹೋಗಿ ದ್ದರು. 1916ರಲ್ಲಿ ಬೆಳಗಾವಿಯಲ್ಲಿ ನಡೆದ ಪರಿಷತ್ತಿಗೂ ಡಾ|| ಹುಲ್ಯಾಳಕರರ ಸಹಿತ ಅನೇಕರು ಹೋಗಿದ್ದರು. 1917ರಲ್ಲಿ ಹುಲ್ಯಾಳಕರರೇ ಪ್ರಜಾ ಸಭಾ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. 1927ರ ತನಕ ಈ ಸಂಸ್ಥೆ ಕೆಲಸಮಾಡಿತು. ಭಾಸ್ಕರರಾವ್ ಮಹಾಬಳ, ಶ್ರೀನಿವಾಸರಾವ್ ಅನಿಖಿಂಡಿ, ಯಶವಂತರಾವ್ ವಾಟವೆ, ಲಕ್ಷ್ಮಣ



ದಾಮೋದರ ಹುಲ್ಯಾಳಕರ

ರಾವ್ ಪರಾಂಜಪೆ, ರಾಚಪ್ಪ ಅಂಬಲಿ, ವಿಠ್ಠಲರಾವ್ ಫಾಟಕ, ಸದಾಶಿವರಾವ್ ಪೇಂಡಸೆ, ವಾಸುದೇವರಾವ್ ವಾಟವೆ, ಭೀಮಾಜಿ ಅವಟಿ, ಪುರುಷೋತ್ತಮ ಫಡಕೆ, ಮಾಧವರಾವ್ ದೇಶಪಾಂಡೆ ಮೊದಲಾದವರು ಪ್ರಜಾಸಭಾದ ಆರಂಭದ ಕಾರ್ಯ ಕರ್ತರು. ಪ್ರತಿವರ್ಷ ಜೂನ್ ತಿಂಗಳಲ್ಲಿ ರಾಜರು ದರಬಾರ ಕೂಡಿಸಿದಾಗ ಅದರಲ್ಲಿ ಜನರ ತೊಂದರೆಗಳನ್ನೂ ಬೇಡಿಕೆಗಳನ್ನೂ ಪ್ರಜಾಸಭೆಯಿಂದ ಮಂಡಿಸಲಾಗುತ್ತಿತ್ತು. ಆರಂಭದಲ್ಲಿ ಕೇವಲ 20–22 ಸದಸ್ಯರಿದ್ದ ಈ ಸಂಸ್ಥೆಯ ಸದಸ್ಯತ್ವ ಮುಂದೆರಡು ವರ್ಷ ಗಳಲ್ಲಿ 200ಕ್ಕೆ ಏರಿತು. ಜನರಿಗೆ ತೊಂದರೆಗಳಾದ ಪ್ರಸಂಗಗಳಲ್ಲಿ ಸಭೆಸೇರಿ ಠರಾವುಮಾಡಿ ಸರಕಾರಕ್ಕೆ ಕಳುಹಿಸಲಾಗುತ್ತಿತ್ತು. ಗೋವಧೆನಿರೋಧ, ಪಾನಪ್ರತಿಬಂಧ, ಕನ್ನಡ ಶಿಕ್ಷಣ ವಿಸ್ತರಣ, ಆಡಳಿತದಲ್ಲಿ ಕನ್ನಡದ ಬಳಕೆ ಇತ್ಯಾದಿ ಬೇಡಿಕೆಗಳನ್ನು ಮಂಡಿಸ ಲಾಗುತ್ತಿತ್ತು.

1917–18ರಲ್ಲಿ ಸಂಸ್ಥಾನದಲ್ಲಿ ರಿವಿಜನ್ ಸರ್ವೆ ಆಗಿ ಭೂಕಂದಾಯ ಏರಿಸಿದಾಗ ಕುಂದಗೋಳ ಭಾಗದ ಜನ ಈ ಬಗ್ಗೆ ತಮಗೆ ಅನ್ಯಾಯವಾಗಿದೆಯೆಂದು ಮನವಿ ಸಲ್ಲಿಸಿ ದರೂ ಏನೂ ಪ್ರಯೋಜನ ಆಗಲಿಲ್ಲ. ಆಗಲೇ ಜಮಖಂಡಿ, ಹುನ್ನೂರು, ಬನಹಟ್ಟಿ, ಕುಂದಗೋಳ, ಸಾಂವಶಿ ಹಾಗೂ ಕಮಡೊಳಿಗಳಲ್ಲಿ ಪುರಸಭೆಗಳಿದ್ದು ಜಮಖಂಡಿಯ ವಿನಾ ಉಳಿದೆಡೆ ಸರಕಾರ ನಿಯುಕ್ತ ಸದಸ್ಯರಿದ್ದರು. 1918ರಲ್ಲಿ ಜಮಖಂಡಿ ಪುರಸಭೆಯ 21 ಸದಸ್ಯರ ಪೈಕಿ 11 ಜನರನ್ನು ಚುನಾಯಿಸುವ ಅಧಿಕಾರವನ್ನು ಜನರಿಗೆ ನೀಡಿ, ಅಧ್ಯಕ್ಷ, ಉಪಾಧ್ಯಕ್ಷರ ಚುನಾವಣೆಯ ಅಧಿಕಾರ ನೀಡಲಾಯಿತು. ಆದರೆ ಮುನಿಸಿ ಪಾಲಿಟಿಯಲ್ಲಿ ಸ್ವಾರ್ಥಿಗಳೂ ದರಬಾರಿನ ಬಾಲಬಡಕರೂ ಹೆಚ್ಚಾಗಿದ್ದುದರಿಂದ ಜನರಿಗೆ ವಿಶೇಷ ಲಾಭ ಆಗಲಿಲ್ಲ.

ಕಾಂಗ್ರೆಸ್ಸು ಜಮಖಂಡಿಯನ್ನು ಮಹಾರಾಷ್ಟ್ರದ ಸತಾರಾ ಜಿ॥ ಪ್ರದೇಶಕ್ಕೆ ಸೇರಿ ಸಿದ್ದು, ಮುಂದೆ ಜಮಖಂಡಿಯಲ್ಲಿದ್ದ ಕಾಂಗ್ರೆಸ್ ಕಾರ್ಯಕರ್ತರು ಈ ಬಗ್ಗೆ ಅಸಮಾ ಧಾನ ಸೂಚಿಸಿದರು. ಈ ಬಗ್ಗೆ ಜಮಖಂಡಿಯ ಕಾಂಗ್ರೆಸ್ ಸದಸ್ಯರಲ್ಲಿ ಮತದಾನ ನಡೆ ಸಲು 300 ಜನ ಕರ್ನಾಟಕಕ್ಕೂ 50 ಮಹಾರಾಷ್ಟ್ರಕ್ಕೂ ಮತ ನೀಡಲು, ಜಮಖಂಡಿ ಯನ್ನು ಕಾಂಗ್ರೆಸ್ಸು ಕರ್ನಾಟಕ ಪಿ.ಸಿ.ಸಿ.ಯ ಕಕ್ಷೆಗೆ ಒಪ್ಪಿಸಿತು. 1921ರಲ್ಲಿ ಅಸಹ ಕಾರದ ಕಾಲಕ್ಕೆ ಬಿದರಿಯ ವಾಮನರಾವ್ ದೇಸಾಯಿ ಅವರು ಜಮಖಂಡಿಯ ಹಳ್ಳಿಗಳಲ್ಲಿ ಖಾದಿ ಪ್ರಚಾರಮಾಡಿ ಕೈನೂಲಿನ ಹುಟ್ಟುವಳಿಗೆ ಕಾರಣರಾದರು. ಎರಡು ಖಾದೀ ಭಂಡಾರಗಳನ್ನೂ ತೆರೆದರು. ಭಾಷಣ, ಕೀರ್ತನ ನಡೆಸಿ ಜನಜಾಗೃತಿ ಭರದಿಂದ ಆಯಿತು. ಸಂಸ್ಥಾನಿಕರು ಬೆದರಿ ಸಭಾಬಂದಿ ಹೇರಿದರು. ಕೀರ್ತನ, ಜೈಲಾಟ, ಸಂಗೀತ ಕಚೇರಿ ನಡೆಸಲೂ ಕೂಡ ಅಧಿಕಾರಿಗಳ ಅನುಮತಿ ಬೇಕಾಗಿತ್ತು. ಬಂದಿ ನಿಯಮ ಮೀರಿದರೆ ಆರು ತಿಂಗಳು ಶಿಕ್ಷೆ, 200 ರೂ. ದಂಡವನ್ನು ವಿಧಿಸಲಾಗುತ್ತಿತ್ತು. ಮುಂದೆ 1927ರಲ್ಲಿ ಜಮಖಂಡಿ ಸಂಸ್ಥಾನದ ಪ್ರಜಾಪರಿಷತ್ತು ಪುಣೆಯ ನ. ಚಿ.

ಕೇಳಕರರ ಅಧ್ಯಕ್ಷತೆಯಲ್ಲಿ ಸೇರಿತು. ಪ್ರಜಾಸಭಾ ಇದರಲ್ಲಿ ಆಗ ಐಕ್ಯವಾಯಿತು. ಶ್ರೀನಿವಾಸರಾವ್ ಆನಿಖಿಂಡಿ, ತಮ್ಮಣ್ಣಾ ಚಿಕ್ಕೋಡಿ, ವಾಮನರಾವ್ ಆಪಟೆ, ಡಾ|| ಹುಲ್ಯಾಳಕರ ಹಾಗೂ ಕೃಷ್ಣಾಜಿಪಂತ ರಾನಡೆ ಸ್ವಾಗತ ಸಮಿತಿಯಲ್ಲಿ ಇದ್ದರು. ಊರಲ್ಲಿ ಅಧ್ಯಕ್ಷರ ಮೆರವಣಿಗೆ ಆಯಿತಲ್ಲದೆ ನಗರಪಾಲಿಕೆ ಕೇಳಕರರಿಗೆ ಮಾನಪತ್ರವಿತ್ತಿತು. ನಗರಪಾಲಿಕೆಯಲ್ಲಿ ಚುನಾಯಿತರ ಪ್ರತಿನಿಧಿಗಳ ಹೆಚ್ಚಳ, ಕನ್ನಡದಲ್ಲಿ ಶಿಕ್ಷಣ ಹಾಗೂ ಆಡಳಿತದ ಸವಲತ್ತುಗಳ ಹೆಚ್ಚಳ, ಕಂದಾಯದ ಆಣೇವಾರಿ ಮತ್ತು ಮುಖ್ಯವಾಗಿ ಜವಾಬ್ದಾರಿ ಸರಕಾರದ ಗುರಿಯ ಬಗ್ಗೆ ಠರಾವುಗಳಾದವು. ಅಧ್ಯಕ್ಷ ಕೇಳಕರರೂ ಕನ್ನಡ ವನ್ನು ಪ್ರೋತ್ಸಾಹಿಸುವ ವಿಚಾರ ಒತ್ತಿಹೇಳಿದರು. ಮುಂದೆ ಹೀಗೆ ಪ್ರಜಾಪರಿಷತ್ತಿನ ಅಧಿವೇಶನಗಳಾದವು. 2ನೆಯದು: 13-14, ಫೆ. 1929, ಬನಹಟ್ಟಿಯಲ್ಲಿ; ಅಧ್ಯಕ್ಷರು ಕೇಂದ್ರ ಶಾಸಕ ಪಂಡಿತಪ್ಪ ಚಿಕ್ಕೋಡಿ. 3ನೆಯದು: 8-2-1931ಕ್ಕೆ ಹುನ್ನೂರಲ್ಲಿ; ಶ್ರೀನಿವಾಸರಾವ್ ಕೌಜಲಗಿಯವರ ಅಧ್ಯಕ್ಷತೆಯಲ್ಲಿ. 4ನೆಯದು: ಕುಂದಗೋಳದಲ್ಲಿ; 28-29 ಜ. 1933ಕ್ಕೆ ಕೇಂದ್ರ ಶಾಸಕ ವಿಶ್ವನಾಥ ಜೋಗರ ಅಧ್ಯಕ್ಷತೆಯಲ್ಲಿ; 5ನೆಯದು ಸಾವಳಗಿಯಲ್ಲಿ; 21-22 ಮಾ. 1935ಕ್ಕೆ; ನಾರಾಯಣರಾವ್ ಜೋಶಿ ವಕೀಲರ ಅಧ್ಯಕ್ಷತೆಯಲ್ಲಿ. 6ನೆಯದು: 30-31 ಮೇ 1938ಕ್ಕೆ; ಸಾಂವಶಿಯಲ್ಲಿ. ಏಳನೆ ಯದು: 3-4 ಜೂನ್ 1939 ಜಮಖಂಡಿಯಲ್ಲಿ; ಅಂದಾನಪ್ಪ ದೊಡ್ಡಮೇಟಿ ಅವರ ಅಧ್ಯಕ್ಷತೆಯಲ್ಲಿ.

1930ರ ಕಾನೂನುಭಂಗ ಚಳವಳಿಯಲ್ಲಿ ಜಮಖಂಡಿಯ ಬಾಬುರಾವ್, ಡಾ. ಹುಲ್ಯಾಳಕರ, ರಾಮಾಚಾರ್ಯ ಅಯಾಚಿತ, ವಾಮನರಾವ್ ದೇಶಪಾಂಡೆ, ಕುಲ ಕರ್ಣಿ ಪಂಡಿತ, ಚಿಮಡ ಮುಂತಾದವರು ಬ್ರಿಟಿಷ್ ಪ್ರದೇಶಗಳಲ್ಲಿ ಚಳವಳಿ ಸೇರಿ ಕಾರಾ ಗೃಹ ಕಂಡರು. 1931ರ ಸಂಸ್ಥಾನೀ ಪ್ರಜಾ ಸಪ್ತಾಹವು ಜಮಖಂಡಿಯಲ್ಲಿ ಉತ್ಸಾಹ ದಿಂದ ಆಚರಿತವಾಯಿತು.

1932ರಲ್ಲಿ ರಾಜರು (1926ರಲ್ಲಿ ಪಟ್ಟಕ್ಕೆ ಬಂದ ಶಂಕರರಾವ್ ಪಟವರ್ಧನ) ಕೊಡಮಾಡಿದ ಕಾಯದೇ ಮಂಡಳ 1934ರಲ್ಲಿ ರೂಪುತಾಳಿತಾದರೂ ಅದಕ್ಕೆ ವಿಶೇಷ ಅಧಿಕಾರಿಗಳು ಇರಲಿಲ್ಲ. ಕೆಲವು ಚುನಾಯಿತ ಸದಸ್ಯರು ಸರಕಾರದ ಬಾಲಬಡಕರಾಗಿದ್ದು ಪ್ರಜಾಹಿತ ಸಾಧನೆ ದೂರ ಉಳಿಯಿತು. ಕೋರ್ಟು ಕಚೇರಿಗಳಲ್ಲಿ ಕನ್ನಡವಿರಬೇಕೆಂಬ ಗೊತ್ತುವಳಿ ಬಹುಸಂಖ್ಯ ಸದಸ್ಯರು ಕನ್ನಡಿಗರಿದ್ದೂ ಕಾಯದೆ ಮಂಡಳದಲ್ಲಿ ಬಿದ್ದು ಹೋದುದಕ್ಕೆ ಸದಸ್ಯರ ಬಾಲಬಡಕನೀತಿಯೇ ಕಾರಣ. ಕಂದಾಯದ ಕಡಿತವಾಗ ಬೇಕೆಂದು ಡಾ|| ಹುಲ್ಯಾಳಕರರು ತಂದ ಸೂಚನೆ ಪಾಸಾದರೂ ಅದನ್ನು ಪಾಸು ಮಾಡುವ ಹಕ್ಕು ಮಂಡಳಕ್ಕೆ ಇಲ್ಲವೆಂದು ರಾಜಾಜ್ಞೆ ಹೊರಟಿತು. ಅವಸರದಿಂದ ಮರಸಾನ ತೆರಿಗೆ ಹೇರುವ ನಿರ್ಣಯವು ಪಾಸಾಯಿತು. ಇದರ ವಿರುದ್ಧ ಡಾ|| ಹುಲ್ಯಾಳಕರ, ಅನಂತರಾವ್ ಸಾಬಡೆ ವಕೀಲರು ಮಾಡಿದ ಪ್ರಚಾರ ವ್ಯರ್ಥವಾಯಿತು.

1936ರ ಚುನಾವಣೆಯ ಕಾಲಕ್ಕೆ ಅಧಿಕಾರಿಗಳ ಹಸ್ತಕ್ಷೇಪ ಅತಿಯಾಗಲು ಡಾ|| ಹುಲ್ಯಾಳಕರ, ಸಾಬಡೆ ಇವರು ಚುನಾವಣೆಯಿಂದ ಹೊರಬಿದ್ದರು. ಶಾಸನಸಭೆ (ಕಾಯದೆ ಮಂಡಳ) ಪ್ರಜಾಹಿತಕ್ಕಿಂತ ಪ್ರಜೆಗಳ ಹಿತವನ್ನು ಮೊಟಕುಗೊಳಿಸುವ ಕೆಲಸ ಮಾಡಿತು. ಕುಂದಗೋಳ ತಾ||ನಲ್ಲಿ ರೈತರ ಮೇಲೆ ದಬ್ಬಾಳಿಕೆ ಹೆಚ್ಚಲು ತಾಲೂಕಾ ಪರಿಷತ್ತನ್ನು ರಂ. ರಾ. ದಿವಾಕರರ ಅಧ್ಯಕ್ಷತೆಯಲ್ಲಿ ಕೂಡಿಸಲು ಯತ್ನವಾದಾಗ ಅದನ್ನು ಪ್ರತಿಬಂಧಿಸಿದರು. ಭಾರೀ ಪೋಲಿಸು ಬಂದೋಬಸ್ತು ಕುಂದಗೋಳದಲ್ಲಿ ಏರ್ಪಟ್ಟಿತು. 'ಸಂಸ್ಥಾನೀ ಸ್ವರಾಜ್ಯ' ಪತ್ರಿಕೆಯಲ್ಲಿ ಅರಸರ ಈ ನೀತಿಗಳ ಬಗ್ಗೆ ಕಟುಟೀಕೆ ಬಂತು. ಆಗ, 1938ರ ಮೇಯಲ್ಲಿ, ಕುಂದಗೋಳ ತಾ|| ಪರಿಷತ್ತು ಹಾಗೂ ಸಾಂವಶಿಯಲ್ಲಿ ಸಂಸ್ಥಾನೀ ಪ್ರಜಾ ಪರಿಷತ್ತುಗಳು ಸೇರಿದವು. ಆದರೆ 1938ರಲ್ಲಿ ಹರಿಪುರ ಕಾಂಗ್ರೆಸ್ ಗೊತ್ತುವಳಿ, ಕಾಂಗ್ರೆಸ್ ಕಾರ್ಯಕರ್ತರಿಂದ ಸಂಸ್ಥಾನೀ ಚಳವಳಿಗಳಲ್ಲಿ ವೈಯಕ್ತಿಕ ಪ್ರವೇಶಗಳಿಂದ ಹೊಸ ಗಾಳಿ ಬೀಸಿತು. ಲಕ್ಷ್ಮೇಶ್ವರದಲ್ಲಿ ಕರನಿರಾಕರಣ ಚಳವಳಿ ಆಯಿತು. ವಿದುರಾಶ್ವತ್ಥದ ಗೋಳೀಬಾರು, ರಾಮದುರ್ಗದ ಚಳವಳಿಗೆ ಆದ ಯಶ, ಸಾಂಗ್ಲಿಯಲ್ಲಿ ಸರ್ದಾರ್ ಪಟೇಲರ ಅಧ್ಯಕ್ಷತೆಯಲ್ಲಿ ಆದ ದ.ಸಂ.ಪ್ರ. ಪರಿಷತ್ತಿನ 12ನೆಯ ಅಧಿವೇಶನಗಳಿಂದ ಸಂಸ್ಥಾನಗಳ ಚಳವಳಿಗೆ ಹೆಚ್ಚಿನ ಬಲ ಬಂದಿರಲು, ಜಮಖಂಡಿಯ ಪ್ರಜಾಪರಿಷತ್ತಿನ ಸಾಂವಶಿ ಅಧಿವೇಶನದಲ್ಲಿ ಕರನಿರಾಕರಣದ ಮಾತೂ ಆಗ ಬಂತು. 8000 ರೈತರು ಸಾಂವಶಿಗೆ ಬಂದಿದ್ದರು. ಉದ್ಘಾಟಕರು ಡಾ|| ನಾ. ಭೀ. ಕಬ್ಬೂರ; ಅಧ್ಯಕ್ಷರು ದೊಡ್ಡಮೇಟಿ. ಭೂಕಂದಾಯ ಅರ್ಧಕ್ಕೆ ಇಳಿಯಬೇಕು, ಕನ್ನಡ ಆಡಳಿತ ಭಾಷೆಯಾಗಬೇಕು ಮುಂತಾದ 45 ಗೊತ್ತುವಳಿಗಳಾದವು. ಜವಾಬ್ದಾರಿ ಸರಕಾರದ ಬೇಡಿಕೆಯನ್ನು ಜೋರಾಗಿ ಮಂಡಿಸಲಾಯಿತಲ್ಲದೆ ಕಾಯದೆ ಮಂಡಳದ ಸದಸ್ಯರು ಇಂಥ ವ್ಯವಸ್ಥೆ ಆಗುವವರೆಗೆ ಮಂಡಳಕ್ಕೆ ಹೋಗಬಾರದೆಂಬ ಗೊತ್ತುವಳಿ ಆಯಿತು. ಇದರಿಂದ ಮಂಡಳಕ್ಕೆ ಸದಸ್ಯರಾದ ಶಿವರಾಮ ಕುಲಕರ್ಣಿ, ಆಪ್ಟೆ, ಪಂಚಪ್ಪ ಕೋರಿ, ಬಾಳಣ್ಣವರ, ಲಾಹೋಟಿ, ಹೊಸೂರ, ಮುಧೋಳ, ಸಾವಳಗಿ ಮುಂತಾದ ಸದಸ್ಯರು ರಾಜೀನಾಮೆ ಕೊಟ್ಟರು. ಇದರಿಂದ ಪ್ರಜಾಪರಿಷತ್ತಿನ ಬಲ ಇಮ್ಮಡಿಸಿತು. ಜೂನ್ 18–19ರಂದು ಅರಸರು ಪ್ರಜಾಪರಿಷತ್ತಿನ ಮುಖಂಡರನ್ನು ಮಾತುಕತೆಗೆ ಕರೆದರು. ದಿವಾಕರರು ಪರಿಷತ್ತಿನ ಪರವಾಗಿ ಅರಸರ ಕೂಡೆ ಮಾತನಾಡಿದರು. ಇದರ ಪರಿಣಾಮವಾಗಿ ಆದ ನಿರ್ಣಯಗಳನ್ನು ಅರಸರು 26–6–1938ರ ರಾಜ್ಯಾರೋಹಣದ ದರಬಾರಿನಲ್ಲಿ ಪ್ರಕಟಿಸಿದರು. ಆದರಂತೆ ಘಟನಾ ಸಮಿತಿಯೊಂದರ ನೇಮಕ, 1938–39ರಿಂದ ಕಂದಾಯದಲ್ಲಿ ಶೇಕಡಾ 25ರಷ್ಟು ಕಡಿತ, ಹುಲ್ಲುಬನ್ನಿ ರದ್ದತಿ, ಕುಂದಗೋಳ ತಾ||ನ ಐದು ಹಾಗೂ ಜಮಖಂಡಿ ತಾ||ನ ಎರಡು ಗ್ರಾಮಗಳ ಕಂದಾಯ ತಹಕೂಬಿ, ಬೆಳೆಯ ಆಣೇವಾರಿ ಪದ್ಧತಿ ಜಾರಿ, ನಗರಪಾಲಿಕೆಯಲ್ಲಿ ಮುಕ್ಕಾಲಂಶ ಸದಸ್ಯರ ಮತ್ತು ಅಧ್ಯಕ್ಷ, ಉಪಾಧ್ಯಕ್ಷರ ಚುನಾವಣೆಗೆ ಅವಕಾಶ, ಇವೆಲ್ಲ ಸಂಧಾನದ ಮುಖ್ಯಾಂಶಗಳು.

1939ರಲ್ಲಿ ದೊಡ್ಡಮೇಟಿಯವರ ಅಧ್ಯಕ್ಷತೆಯಲ್ಲೇ ಜಮಖಂಡಿಯಲ್ಲಿ ನಡೆದ ಏಳನೆಯ ಪರಿಷತ್ತು ಮತ್ತೆ ಜವಾಬ್ದಾರಿ ಸರಕಾರದ ಬೇಡಿಕೆಯನ್ನು ಮುಂದಿಟ್ಟಿತು. (1940ರಲ್ಲಿ ಮೈಸೂರಿನ ಎಚ್. ಸಿ. ದಾಸಪ್ಪ ಜಮಖಂಡಿ ಪ್ರಜಾಪರಿಷತ್ತಿನ ಅಧ್ಯಕ್ಷರಾಗಿದ್ದರೆಂದು ತೋರುತ್ತದೆ. —ಸಂ||).

1942ರಲ್ಲಿ ವಾಮನರಾವ್ ಬಿದರಿ ಅವರು ತಲೆತಪ್ಪಿಸಿಕೊಂಡು ಜಮಖಂಡಿಯಲ್ಲಿ ಇದ್ದು ಬೆಳಗಾವಿ ಜಿಲ್ಲೆಯಲ್ಲಿ ಚಳವಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಪ್ರಜಾ ಪರಿಷತ್ತಿನ ಕಾರ್ಯಕರ್ತರು ಅವರಿಗೆ ಸರ್ವವಿಧದಿಂದ ನೆರವಾದರು. ಮಹಾದೇವ ಮಠದ, ಶಂಕರ ಗ್ರಾಮೋಪಾಧ್ಯೆ ಬಿದರಿಯವರಲ್ಲಿಗೆ ಬಂದು ಸಲಹೆಸೂಚನೆ ಪಡೆದು ಬೆಳಗಾವಿ ಜಿಲ್ಲೆಯ ಕಾರ್ಯಕರ್ತರಿಗೆ ಮುಟ್ಟಿಸುತ್ತಿದ್ದರು. ಮುಂದೆ ಗಾಂಧೀಜಿಯವರು ಭೂಗತರಿಗೆ ಪ್ರಕಟರಾಗಲು ಕೊಟ್ಟ ಸೂಚನೆಯಂತೆ, ಎರಡು ವರ್ಷಗಳನಂತರ 9-8-1944ರಂದು ಬಿದರಿಯವರು ಬೆಳಗಾವಿಗೆ ಬಂದು ಬಂಧಿತರಾದರು. ಮುಂದೆ ಬಿಡುಗಡೆ ಆದಾಗ, 1945ರಲ್ಲಿ ಬಿ. ಜಿ. ಖೇರರ ಅಧ್ಯಕ್ಷತೆಯಲ್ಲಿ ನಡೆದ ಪ್ರಜಾಪರಿಷತ್ತಿನ ಅಧಿವೇಶನದ ಯಶಕ್ಕಾಗಿ ತೀರ ಜ್ವರ ಇದ್ದಾಗಲೇ ವಾಮನರಾವ್ ಬಿದರಿ ದುಡಿದರು ; ಮತ್ತು ಅಧಿವೇಶನ ಮುಗಿದಂತೆ ನ್ಯುಮೋನಿಯಾ ಪೀಡಿತರಾಗಿ ದಿವಂಗತರಾದರು.

ಈ ಪರಿಷತ್ತು ಪ್ರಜಾಸರಕಾರದ ಬೇಡಿಕೆಯನ್ನು ತೀವ್ರವಾಗಿ ಮಂಡಿಸಿತು. 'ಸಂಸ್ಥಾನೀ ಸ್ವರಾಜ್ಯ' ಪತ್ರಿಕೆಯಲ್ಲಿ ರಾಜರ ಆಡಳಿತ ವೈಖರಿಯ ಬಗ್ಗೆ ಅನಂತರಾವ್ ಸಾಬಡೆ ಅವರು ಆಗಾಗ ಉಗ್ರಲೇಖನ ಬರೆದರು. ಅವರ ಜನಪ್ರಿಯತೆ ಹಾಗೂ ತಮ್ಮ ಬಗ್ಗೆ ಬರೆದ ಟೀಕೆಗಳಿಂದ ರಾಜರು ಅವರ ಮೇಲೆ ತೀರ ದ್ವೇಷ ತಳೆದರು. ಸರಕಾರದ ಕೈವಾಡದಿಂದಲೇ ಕೆಲವು ಪುಂಡರು ಸಾಬಡೆಯವರ ಕೊಲೆ ಮಾಡಿದರು. ಪ್ರಜಾ ಹಿತರಕ್ಷಣೆಗೆ ದುಡಿಯುತ್ತ ಸಾಬಡೆ ಹುತಾತ್ಮರಾದರು. 1947ರಲ್ಲಿ ಪ್ರಜಾಪ್ರತಿನಿಧಿ ಸಭೆಯ ಘಟನೆಯನ್ನು ಅರಸರು ಘೋಷಿಸಿದರು. ಚುನಾವಣೆಗಳಾಗಿ ಬಿ. ಡಿ. ಜತ್ತಿ, ಪದ್ಮಾಪತಿ ವಾಮನರಾವ್ ಬಿದರಿ ಪ್ರಜಾ ಪರಿಷತ್ತಿನಿಂದ ಆರಿಸಿ ಬಂದರು. ಜತ್ತಿಯವರು ಮುಖ್ಯಮಂತ್ರಿಗಳಾದರು. ಮುಂದೆ ಸ್ವಾತಂತ್ರ್ಯ ಬಂದಾಗ ಜಮಖಂಡಿ ಸಂಸ್ಥಾನಿಕರು, ಎಲ್ಲ ಅರಸರಿಗೂ ಮೊದಲು, ಸಂಸ್ಥಾನದ ವಿಲೀನಕ್ಕೆ ಒಪ್ಪಿದರು. ಮುಂದೆ ಅವರಿಗೆ ಮುಂಬೈ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಒಂದು ಉನ್ನತ ಸ್ಥಾನ ನೀಡಲಾಯಿತು. (ದಿ|| ಸಾಬಡೆ ಅವರ ಲೇಖಗಳು ಹಾಗೂ ಡಾ|| ಜಯದೇವರಾವ್ ಕುಲಕರ್ಣಿ ನೀಡಿದ ಮಾಹಿತಿಯು ಆಧಾರ.)


ಅನಂತರಾವ್ ಸಾಬಡೆ

**ಮಂಗಲಾ ಬಾಜಿ**, ಮುಂಬೈ

ಕಿ.ಸಂ. 8 ಸಾಂ. | **ಶಿದ್ರಾಮಯ್ಯ ಶಿವಮೂರ್ತಯ್ಯ ಚರಂತಿಮಠ**

ಜನನ : 1923 ಉದ್ಯೋಗ : ಕೃಷಿ ವಿಳಾಸ : ದೊಡ್ಡವಾಡ, ತಾ॥ ಬೈಲಹೊಂಗಲ



ಸಾಂಗಲಿ ಸಂಸ್ಥಾನಕ್ಕೆ ಸೇರಿದ ಒಂದೇ ಒಂದು ಪ್ರತ್ಯೇಕ ಊರು ನಮ್ಮ ದೊಡ್ಡವಾಡ, ತಾಲೂಕು ಕೇಂದ್ರವಾದ ಬೆಳಗಾವಿ ಬಳಿಯು ಷಾಪುರಕ್ಕೂ ಹೊಂದಿರದೆ ಪ್ರತ್ಯೇಕವಾದದ್ದು. ಸಂಸ್ಥಾನದಲ್ಲಿ ಇದ್ದಾಗ ನಮ್ಮ ಊರ ಜನಸಂಖ್ಯೆ 5.000 ಮಾತ್ರ.

ನಾವು ಪ್ರಾಥಮಿಕ ಶಾಲೆಗೆ ಹೋಗುತ್ತಿದ್ದಾಗ ಸುತ್ತಲ ಬ್ರಿಟಿಷ್ ಹಳ್ಳಿಗಳಲ್ಲಿ ಉಪ್ಪಿನ ಸತ್ಯಾಗ್ರಹ, ಜಂಗಲ್ ಸತ್ಯಾಗ್ರಹ ನಡೆದಿದ್ದು ಗಾಂಧೀ ಗಾಳಿ ಊರಲ್ಲೆಲ್ಲ ಬೀಸುತ್ತಿತ್ತು. ನಮ್ಮ ದೊಡ್ಡಪ್ಪನವರು ನಮಗೆ ಬಾಲ್ಯದಿಂದಲೂ ಲೋಕಮಾನ್ಯ ಟಿಳಕ, ಶೌಕತ್ ಅಲಿ, ಮಹಮ್ಮದ ಅಲಿ, ಮಹಾತ್ಮಾ ಗಾಂಧಿ ಮುಂತಾದವರ ವಿಚಾರ ಹೇಳಿ ಹುರಿದುಂಬಿಸುತ್ತಿದ್ದರು. 1932ರ ಸುಮಾರಿಗೆ ನಾನು ಶಾಲೆಗೆ ಹೋಗುತ್ತಿರುವ ಕಾಲದಲ್ಲಿ ಶಾಲೆಯಲ್ಲಿ ಸಾಂಗಲಿ ಸಂಸ್ಥಾನದ ಮಹಾರಾಜರ ಯಶ ಚಿಂತನೆಯ ಪ್ರಾರ್ಥನೆ, ಅವರದೇ ಜಯಜಯಕಾರ ನಡೆದಿರಲು, ಹೊರಗೆ ನಡೆಯುತ್ತಿದ್ದ ಈಚಲಮರ ಕಡಿಯುವ ಸತ್ಯಾಗ್ರಹದಿಂದ ಪ್ರಭಾವಿತರಾದ ನಾವು ರಾಜೇಸಾಹೇಬರ ಜಯಜಯಕಾರದ ಬದಲು ಗಾಂಧೀಜಿ, ಭಾರತಮಾತೆಯ ಜಯಜಯಕಾರವನ್ನೂ ಭಾರತಮಾತೆಯ ಸ್ತೋತ್ರದ ಪ್ರಾರ್ಥನೆಯನ್ನೂ ಆರಂಭಿಸಿದೆವು. ನಮ್ಮ ಗುರುಗಳು ಇದಕ್ಕಾಗಿ ನಮ್ಮನ್ನು ಚನ್ನಾಗಿ ಥಳಿಸುತ್ತಿದ್ದರು. ಗಾಂಧೀ ಟೊಪ್ಪಿಗೆ ಹಾಕಿ ಶಾಲೆಗೆ ಹೋದರೂ ಆತಂಕಮಾಡಿ, "ಚೋಟು ಟೊಪ್ಪಿಗಿ ಸ್ವರಾಜ್ಯ ತರುತ್ತದೇನೋ ?" ಎಂದು ನಮ್ಮ ಕ್ಲಾಸ್‌ಮಾಸ್ತರರು ವ್ಯಂಗ್ಯವಾಗಿ ಒಮ್ಮೆ ಕೇಳಿದ್ದರು. "ಮುಳಗಳ್ಳಿ ಹುಳು ಸಂಣದಿದ್ದರೂ ಎಲ್ಲವನ್ನೂ ಸಂಹಾರಮಾಡುವಂತೆ, ಹೊತ್ತು ಬಂದರೆ ಈ ಟೊಪ್ಪಿ ಜಗತ್ತನ್ನೇ ಅಲ್ಲಾಡಿಸಬಲ್ಲುದು" ಎಂದು ದಿಟ್ಟತನದ ಉತ್ತರ ಕೊಟ್ಟಿದ್ದೆ. ಈ ನಮ್ಮ ಚಟುವಟಿಕೆಗಳಿಗಾಗಿ ನನ್ನನ್ನೂ ನನ್ನ ಗೆಳೆಯರಾದ ಫಕೀರಪ್ಪಾ ಪೆಂಟೇದ, ಮುರಗಯ್ಯಾ ಚರಂತಿಮಠ, ಪಾಂಡಪ್ಪಾ ಸವಣೂರ, ಫುಲಸಿಂಗ್ ಹಜೇರಿ ಇವರನ್ನೂ ಮಾಸ್ತರರು ಬಡಿದು ಬಡಿದು ಹಣ್ಣು ಮಾಡುತ್ತಿದ್ದರು. ನಾನು ಶಾಲೆಯನ್ನೇ ಬಿಟ್ಟೆನು. ಬ್ರಿಟಿಷರ ಆಳ್ವಿಕೆ ಕಿತ್ತೊಗೆದು

ಸಂಸ್ಥಾನಿಕರನ್ನು ಗಾದಿಯಿಂದ ಇಳಿಸಿದ ವಿನಾ ಪ್ರಜೆಗಳಿಗೆ ಸೌಖ್ಯ ಸಿಗಲಾರದೆಂದು ನಾವು ಆ ಬಗ್ಗೆ ವೀರಪ್ರತಿಜ್ಞೆ ಮಾಡಿದೆವು. ಈ ಕಾಲದಲ್ಲಿ ಶಾಲೆಯಲ್ಲಿ ನಿತ್ಯ ನಮ್ಮ ರಾಷ್ಟ್ರೀಯ ಚಟುವಟಿಕೆಗಳಿಗಾಗಿ ಗುರುಗಳು ನಮ್ಮನ್ನು ಥಳಿಸುತ್ತಿದ್ದರೂ ನಾವು ಬಲುದಿನ ಮನೆಯಲ್ಲಿ ಹೇಳಲಿಲ್ಲ. ಕಡೆಗೆ ನಮ್ಮ ದೊಡ್ಡಪ್ಪನವರಿಗೆ ತಿಳಿದಾಗ, ಅವರು ಶಾಲೆಯಿಂದ ಬಿಡಿಸಿದರು. ಹುಡುಗರನ್ನು ಏಕೆ ಬಡಿಯುತ್ತೀರೆಂದು ಕೇಳುವ ಧೈರ್ಯ 5000 ಜನರಿದ್ದ ಊರಲ್ಲಿ ಯಾರೂ ಮಾಡಲಿಲ್ಲ. ಇಷ್ಟೊಂದು ದಾಸ್ಯಭಾವ ನಮ್ಮ ಊರ ಜನರಲ್ಲಿ ಬಿಗಿಯಾಗಿತ್ತು.

ಸರಿಯಾದ ಸಮಯಕ್ಕಾಗಿ ದಾರಿ ಕಾಯುತ್ತಿದ್ದ ನಮಗೆ ಕ್ವಿಟ್ ಇಂಡಿಯಾ ಚಳವಳಿ ಒದಗಿಬಂತು. ನಮ್ಮ ಊರಿಂದ ಮೂರು ಮೈಲು ಅಂತರದ ಬುಡರಕಟ್ಟಿ ಊರಿನ ಫಕೀರಗೌಡರು ಮುಖಂಡತ್ವ ವಹಿಸಿ ಈ ಭಾಗದಲ್ಲಿ ಕೆಲಸ ಮಾಡುತ್ತಿದ್ದರು. ಚನ್ನಪ್ಪ ವಾಲಿಯವರು ಮಾರ್ಗದರ್ಶನ ಮಾಡುತ್ತಿದ್ದರು. ಪ್ರಸಂಗ ಬಂದಾಗ ವಾಲಿಯವರ ಜೊತೆಗೂ ಕೆಲಸ ಮಾಡುತ್ತಿದ್ದೆವು. ಸುತ್ತಲ ಊರುಗಳಲ್ಲಿ ವಿಧ್ವಂಸಕ ಕೃತ್ಯಗಳಲ್ಲಿ ಪಾಲುಗೊಂಡೆವಲ್ಲದೆ ಪೋಲಿಸ್ ಸ್ಟೇಶನದಲ್ಲಿಯ ಈ ಕಾಗದಪತ್ರ ಹಾಗೂ ಚಾವಡಿಯಲ್ಲಿಯ ಕಾಗದಪತ್ರ ಸುಟ್ಟೆವು. ಆಗ ಸಂಸ್ಥಾನದವರು 30-35 ಸ್ಟೇಟ್ ಗಾರ್ಡ್‌ಗಳನ್ನು ನಮ್ಮಲ್ಲಿ ನೇಮಿಸಿದರು. ನಮ್ಮ ಗುಂಪಿನವರು ಸಮಯಸಾಧಿಸಿ ಅವರ ಹ್ಯಾಟ್, ಬೂಟ್, ಲಾಠೀ ಇತ್ಯಾದಿ ಕಸಿದುಕೊಂಡೆವು. ಆಮೇಲೆ ಹಳಬರ ಮನೆಯ ಹತ್ಯಾರ ಮತ್ತು ಗೌಡರ ಮನೆಯ ಬಂದೂಕುಗಳನ್ನೂ ಕಸಿದುಕೊಂಡೆವು. ರಾತ್ರಿಯೆಲ್ಲ ಕೆಲಸಮಾಡಿ ಹಗಲುಹೊತ್ತು ಅಡವಿ ಸೇರಿ ಇರುತ್ತಿದ್ದೆವು. ಸಂಸ್ಥಾನೀ ಸರಕಾರವು ನಮ್ಮ ಮೇಲೆ ರೇಗಿ ನಮ್ಮ ಬಂಧನಕ್ಕೆ ಹೊಂಚುಹಾಕುತ್ತಲಿತ್ತು. ನಮ್ಮನ್ನು ಹಿಡಿದುಕೊಡಬೇಕೆಂದು ನಮ್ಮ ಊರ ಜನರನ್ನು ಬೆದರಿಸಿ ಊರಿಗೆ 28,000 ರೂ.ಗಳ ಪುಂಡುಗಂದಾಯ ಹಾಕಿದರು. ಸಾಂಗ್ಲಿಯಿಂದ ಸ್ಪೆಶಲ್ ಪೋಲಿಸ್ ಪಾರ್ಟಿ ಬಂದು ಮೂರು ದಿನಗಳಲ್ಲಿ ಅದನ್ನು ವಸೂಲುಮಾಡಿದರು. ಅದನ್ನು ಲೂಟಿಮಾಡಬೇಕೆಂದು ಹೊಂಚುಹಾಕಿ, ನಾನು ಉಧೋ ಅಂಬಾಬಾಯಿ ವೇಷದಲ್ಲಿ, ಇತರ ಕೆಲವರು ಮುರಗಯ್ಯ ಕುರುಬರ ವೇಷ, ಫಕೀರ-ಗೊಂಡಲಿಗನ ವೇಷ, ಹೀಗೆ ತೊಟ್ಟು ದಾಳಿಗೆ ಹೊಂಚುಹಾಕಿ ಕುಳಿತೆವು. ಆದರೆ ನಮ್ಮ ಜೊತೆಗೆ ಬರಬೇಕಾಗಿದ್ದ ವಾಲಿ ಮತ್ತು ಫಕೀರಗೌಡರೂ ಅವರ ತಂಡದವರೂ ಆ ದಿನ ಬರಲಿಲ್ಲ. ಆ ಕಾಲಕ್ಕೆ ನಮ್ಮವರೇ ಕೆಲವರು ನಮ್ಮ ಕೆಲವರನ್ನು ಹಿಡಿದುಕೊಟ್ಟರು. ಆಗ ನನ್ನ ಸಲುವಾಗಿ ನನ್ನ ದೊಡ್ಡಪ್ಪನವರನ್ನು ಬಂಧಿಸುವರೆಂದು ಕೇಳಿ ನಾನು ಆ ದಿನ ನಮ್ಮ ಮನೆಗೆ ಹೋದೆ. 1-4-1943ರ ರಾತ್ರಿ ಊರಲ್ಲಿ ಪ್ರತಿಬಂಧಕಾಜ್ಞೆ ಇದ್ದು, ಪೋಲಿಸರು ಗಾಳಿಯಲ್ಲಿ ಗುಂಡುಹಾರಿಸಿ, ನನ್ನ ಮನೆ ಮುತ್ತಿ ಹಿಡಿದರು. ಎರಡು-ಮೂರು ದಿನ ಗ್ರಾಮಚಾವಡಿಯಲ್ಲೇ ಇಟ್ಟು ಅಲ್ಲಿಂದ ಶಾಪುರಿಗೆ ಒಯ್ದು, ಕಡೆಗೆ ಸಾಂಗ್ಲಿ ಸೆಂಟ್ರಲ್ ಜೈಲಿನಲ್ಲಿ 26ನೆಯ ಕಲಮು

ಹಚ್ಚಿ ಇಟ್ಟರು. ನಮ್ಮ ಊರ ಇತರ ಬಂಧಿತರೆಂದರೆ, ಫಕೀರಪ್ಪ ಆ. ಪೆಂಟೇದ, ಮುಂಗಯ್ಯಾ ಈ. ಚರಂತಿಮಠ, ಫುಲಸಿಂಗ ಫಕೀರಸಿಂಗ ಹಜೇರಿ, ದಿ|| ಬಸಪ್ಪ ರಾಮಪ್ಪ ವನಹಳ್ಳಿ. ಅಲ್ಲದೆ ಅಕ್ಟೋಬರ್‌ದಲ್ಲಿ ಬಂಧಿತರಾದ ಪುಂಡಲೀಕಪ್ಪ ಅಕ್ಕಿ, ಚನ್ನಬಸಪ್ಪ ಮುರಗೋಡ ಅಲ್ಲದೆ ಷಾಪುರಿನ ಕಾಮತ ಎಂಬ ಯಜಮಾನರೂ ಅವರ ಇಬ್ಬರು ಮಕ್ಕಳೂ ಅಲ್ಲಿ ಜೈಲಿನಲ್ಲಿ ಇದ್ದದ್ದು ನೆನಪಿದೆ.

ಆ ಕಾಲಸಲ್ಲಿ ಸಾಂಗಲಿ ಸಂಸ್ಥಾನದ ಗಣ್ಯನಾಯಕ ವಸಂತರಾವ್ ಪಾಟೀಲರೂ ಜೈಲಿನಲ್ಲಿ ಇದ್ದು ಜೈಲಿನಿಂದ ಫರಾರಿ ಆಗುವ ಯೋಜನೆಯನ್ನು ಅವರು ಹಾಕಿದರು. ಹೊರಗಿದ್ದ ಖ್ಯಾತನಾಯಕರಾದ ನಾನಾ ಪಾಟೀಲ, ಯಶವಂತರಾವ್ ಚವ್ಹಾಣ ಇದಕ್ಕೆ ಬೆಂಬಲವಾಗಿದ್ದರು. ಕೈದಿಗಳಿಗೆ ಕ್ಷೌರಮಾಡುವವನೂ ಭಂಗಿಯೂ ದೇಶ ಭಕ್ತರಾಗಿದ್ದು ಅವರು ಹೊರಗಿನ ಸುದ್ದಿ ನಮಗೆ ತಿಳಿಸುತ್ತಿದ್ದರು ; ನಮ್ಮಿಂದ ಸುದ್ದಿ ಹೊರಗೆ ಒಯ್ಯುತ್ತಿದ್ದರು. ಹತ್ತಿರವೇ ಕೃಷ್ಣಾನದಿ ಹರಿಯುತ್ತಿದ್ದು, ಅದಕ್ಕೆ ಮಹಾ ಪೂರ ಬಂದಾಗ ಈಸಿ ದಾಟಿದರೆ, ಆಚೆಕಡೆಯೇ ನಮಗಾಗಿ ವಾಹನಗಳನ್ನು ಸಿದ್ಧವಾಗಿಡ ಲಾಗುವುದೆಂದು ತಿಳಿಸಲಾಗಿತ್ತು. ದಿನ ಗೊತ್ತಾಗಿತ್ತು. ಆದರೆ ಅದಕ್ಕೂ ಮೊದಲೇ ನನ್ನ ಬಿಡುಗಡೆ 4-10-1943ಕ್ಕೆ ಆಯಿತು. ಮುಂದೆ ಷಾಪುರದ ಬಾಬು ಕಾಶೇರು ಪತ್ರಾವಳಿ ಎಂಬವರು ನದಿಗೆ ಪೂರ ಬಂದಾಗ ಜೈಲಿನ ಗೋಡೆ ದಾಟಿ ಈಸಿ ಪಾರಾಗು ವಾಗ ಪೋಲಿಸರ ಗುಂಡು ಬಡಿದು ಸ್ವರ್ಗಸ್ಥರಾದರು. ಮುಂದೆ ಒಂದು ವರ್ಷ ನಾನು ಊರಲ್ಲಿ ಗೃಹಬಂಧನದಲ್ಲಿ ಇದ್ದೆ.

ನಮ್ಮ ಊರಿನಿಂದ ಅದಕ್ಕೂ ಮೊದಲು 1941ರಲ್ಲಿ ವಾಕ್‌ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲುಗೊಂಡು ಕೆಲವರು ಜೈಲು ಕಂಡರು. ಅವರೆಂದರೆ, ವೀರಪ್ಪ ಮಾಸ್ತರ ಬೋದನಕಟ್ಟಿ, ನರಸಪ್ಪ ಮಲ್ಲಪ್ಪ ಯಮೋಜಿ, ಭೀಮಪ್ಪ ಗಣಪತಿ ಯಮೋಜಿ. ಇವರೆಲ್ಲ ತೀರಿಕೊಂಡಿದ್ದಾರೆ. ಅದಲ್ಲದೆ ಸ್ತ್ರೀಯರಲ್ಲಿ ಪಕ್ಕವ್ವ ನರಸಪ್ಪ ಯಮೋಜಿ (ತೀರಿಕೊಂಡಿದ್ದಾರೆ) ಹಾಗೂ ಗಂಗವ್ವ ಶಿವಲಿಂಗಯ್ಯ ಪೂಜೇರ, ಸಾಮವ್ವ ಗಣಪತಿ ಯಮೋಜಿ, ಯಮನವ್ವ ಬಸಪ್ಪ ಸೋಂಟಕ್ಕೆ, ಗಂಗವ್ವ ಪಕ್ಕಪ್ಪ ಯಮೋಜಿ ಇವರೂ ಇದೇ ಸತ್ಯಾಗ್ರಹದಲ್ಲಿ ಜೈಲು ಕಂಡಿದ್ದರು.

|| ವಂದೇ ಮಾತರಂ ||

